ಕಥಾಲಾಪ, ಹರಿತತ್ವನಿರೂಪಣೆಯಲ್ಲಿ ನಿರತರಾಗಿರುತ್ತಿದ್ದರು. ಆ ಸಮಯದಲ್ಲಿ ಸಕಲ ಕಲಾಪ್ರವೀಣರೂ, ಅದ್ವೈತಾಬ್ಧಿಪಾರಂಗತರೂ, ವಾದಿಭಯಂಕರರೂ ಆದ, ತ್ರಿವಿಕ್ರಮರೆಂಬ ಪಂಡಿತೋತ್ತಮರು ಆಚಾರ್ಯರ ಮಹಿಮೆಯನ್ನು ಕೇಳಿ ಅವರ ಬಳಿಗೆ ಬಂದರು. ಇದೇ ಸುಸಂದರ್ಭವೆಂದು ಆಚಾರ್ಯರು ತಿಳಿದು ಚಾರ್ವಾಕಾದಿ ಸಮಸ್ತ ದುರ್ಮತಗಳನ್ನು ಖಂಡಿಸಿ, ನಾರಾಯಣನೇ ಸರ್ವೋತ್ತಮನೂ,ಅನಂತಕಲ್ಯಾಣಗುಣಪೂರ್ಣನೂ,ಬ್ರಹ್ಮಾಖ್ಯನೂ, ವೇದಗಮ್ಯನೂ, ಸೃಷ್ಟ್ಯಾದ್ಯಷ್ಟಕರ್ತನೆಂದೂ ಸಪ್ರಮಾಣವಾಗಿ ಸಾಧಿಸಿದರು. ದಿಗ್ದಂತಿಗಳ ಹೋರಾಟದಂತೆ ಅವರಿಬ್ಬರಿಗೆ 15 ದಿವಸ ವಾಕ್ಯಾರ್ಥವು ನಡೆಯಿತು. ಕೊನೆಗೆ ಪ್ರಶ್ನೆ ಕೇಳುವುದಕ್ಕೆ ಉತ್ತರ ಹೇಳುವುದಕ್ಕೆ ತೋರದೆ, ತ್ರಿವಿಕ್ರಮರು ಸುಮ್ಮನಾದರು. ಆಚಾರ್ಯರ ಪಾದತಲದಲ್ಲಿ ಬಿದ್ದು, "ಸ್ವಾಮಿ! ನನ್ನ ಚಾಪಲ್ಯವನ್ನು ಕ್ಷಮಿಸಬೇಕು; ತಮ್ಮ ಪಾದಧೂಳಿಯನ್ನು ಸೇವಿಸುವ ಭಾಗ್ಯವು ನನಗೆ ದೊರೆಯುವಂತೆ ಅನುಗ್ರಹಿಸಬೇಕೆ"ಂದು ಪ್ರಾರ್ಥಿಸಿದರು. ಆಚಾರ್ಯರು ಅವರಲ್ಲಿ ಪರಮಾನುಗ್ರಹ ಮಾಡಿ, ತಮ್ಮ ಭಾಷ್ಯವನ್ನು ಪಾಠಹೇಳಿ ಅವರಿಗೆ ಟೀಕೆಯನ್ನು ಬರೆಯುವುದಕ್ಕೆ ಆಜ್ಞೆ ಕೊಟ್ಟರು. ತ್ರಿವಿಕ್ರಮರು 'ತತ್ವಪ್ರದೀಪ'ವೆಂಬ ಟೀಕೆಯನ್ನು ಬರೆದರು. ಆಚಾರ್ಯರಲ್ಲಿ ಅತ್ಯಂತ ಭಕ್ತಿಭರಿತರಾಗಿ ಅವರ ಅವತಾರಗಳನ್ನು ವರ್ಣಿಸುವ 'ವಾಯುಸ್ತುತಿ' ಎಂಬ ಮಂತ್ರರೂಪವಾದ ಗ್ರಂಥವನ್ನು ರಚಿಸಿದರು. ಉಷಾಹರಣವೆಂಬ ದಿವ್ಯವಾದ ಕಾವ್ಯವನ್ನು ಇದುವರೆಗೆ ರಚಿಸಿದ್ದರು. ಆಚಾರ್ಯರ ಶಿಷ್ಯರಲ್ಲಿ ಜ್ಞಾನ, ಭಕ್ತಿ, ವೈರಾಗ್ಯಗಳಿಂದ ಅಗ್ರಗಣ್ಯರೆಂದೆನಿಸಿದರು. ಇವರ ಪ್ರಾರ್ಥನೆಯನ್ನು ಸ್ವೀಕರಿಸಿ, ಆಚಾರ್ಯರು ಬ್ರಹ್ಮಸೂತ್ರಗಳಿಗೆ ವ್ಯಾಖ್ಯಾನರೂಪವಾದ ಅನುವ್ಯಾಖ್ಯಾನವೆಂಬ ಗ್ರಂಥರಾಜವನ್ನು ಏಕಕಾಲದಲ್ಲಿ ನಾಲ್ಕು ಜನ ಶಿಷ್ಯರಿಗೆ ಹೇಳಿ ಬರೆಯಿಸಿದರು.

10. ಪಾಜಕದಲ್ಲಿಚಿಕ್ಕಮಗನ ಸಂರಕ್ಷಣೆಯಲ್ಲಿರುತ್ತಿದ್ದ ಮಧ್ಯಗೇಹರು, ಅವರ ಪತ್ನಿಯೂ ದಿವಂಗತರಾದರು. ಅವರ ಕ್ರಿಯೆಗಳನ್ನು ತೀರಿಸಿ ಆಚಾರ್ಯರ ತಮ್ಮನು ಸನ್ಯಾಸವನ್ನು ಬೇಡುವವರಾದರು. ಕೆಲವು ಕಾಲ ಕಳೆದ ನಂತರ ಆಚಾರ್ಯರೇ ಪಾಜಕಕ್ಕೆ ಹೋಗಿ ವಿರಕ್ತಶಿಖಾಮಣಿಯಾದ ತಮ್ಮನಿಗೆ ಸನ್ಯಾಸವನ್ನು ಕೊಟ್ಟು * ವಿಷ್ಣುತೀರ್ಥರೆಂಬ ಹೆಸರನ್ನಿತ್ತರು. ಆಚಾರ್ಯರ ಶಿಷ್ಯರ ಪೈಕಿ ಅನೇಕರು ಸನ್ಯಾಸವನ್ನು ಸ್ವೀಕರಿಸಿ, ಹರಿಗುರುಸೇವೆಯನ್ನು ವಿಧವಿಧದಿಂದ ಮಾಡುತ್ತಲಿದ್ದರು. ಗೋದಾವರಿಯಲ್ಲಿ ಪರಾಜಿತರಾದ ಶೋಭನಭಟ್ಟರು, ಪದ್ಮನಾಭತೀರ್ಥರೆಂಬ ಹೆಸರಿನಿಂದ ಸನ್ಯಾಸವನ್ನು ವಹಿಸಿ, ಆಚಾರ್ಯರಿಗೆ ಪರಮ ಪ್ರೀತಿಪಾತ್ರರಾದರು. ಇವರು ಅನುವ್ಯಾಖ್ಯಾನಕ್ಕೆ 'ನ್ಯಾಯರತ್ನಾವಲಿ' ಎಂಬ ಟೀಕೆಯನ್ನು ಬರೆದರು. ಹೃಷೀಕೇಶತೀರ್ಥರು, ಜನಾರ್ದನತೀರ್ಥರು, ನರಹರಿತೀರ್ಥರು, ಉಪೇಂದ್ರತೀರ್ಥರು, ವಾಮನತೀರ್ಥರು, ರಾಮತೀರ್ಥರು, ಅಧೋಕ್ಷಜತೀರ್ಥರು, ಹೀಗೆ ಅನೇಕ ಸನ್ಯಾಸಿ ಶಿಷ್ಯರು ಆಚಾರ್ಯರ ಮತವನ್ನು ಪ್ರಕಟಿಸುತ್ತಿದ್ದರು. ಇವರಲ್ಲದೆ ಗೃಹಸ್ಥ ಶಿಷ್ಯರು ಅನೇಕರಿದ್ದರು, ಇವರೆಲ್ಲರೂ ಗುಣಮಣಿಗಳೂ, ಸಚ್ಛಾಸ್ತ್ರಜ್ಞರೂ, ವಿಷ್ಣುದೀಕ್ಷಾವಂತರೂ ಆಗಿದ್ದರು.

11. ಆಚಾರ್ಯರು ಇನ್ನು ಕೆಲವು ಕಾಲ ಸಜ್ಜನೋದ್ಧಾರಕ್ಕಾಗಿ ದೇಶಾಟನವನ್ನು ಮಾಡಿಕೊಂಡು, ಅಲ್ಲಲ್ಲಿ ಉಪನ್ಯಾಸಗಳನ್ನು ಮಾಡುತ್ತಾ, ಗ್ರಂಥಗಳನ್ನು ರಚಿಸುತ್ತಾ, ಶಿಷ್ಯರಿಗೆ ಪಾಠಹೇಳುತ್ತಾ, ದ್ವೈತಮತವನ್ನು ಪ್ರಕಾಶಗೊಳಿಸಿದರು. ಆ ಮತವು ಜನರ ಹೃದಯದಲ್ಲಿ ಸುಸ್ಥಿರವಾಗಿ ನೆಲೆಗೊಂಡಿತು. ಆಚಾರ್ಯರು ಅವತಾರಮಾಡಿದ ಕಾರ್ಯವು ಸಿದ್ಧಿಸಿತು.

* ಇವರು ಶಿಷ್ಯೋತ್ತಮರು, ವಿಶೇಷತಃ ಶಮದಮಾದಿ ಗುಣಸಂಪನ್ನರೂ ಅಪಾರವಾದ ಪ್ರೀತಿಪಾತ್ರರೂ ಆಗಿದ್ದರು. (ಸೋದೇಮಠ.) ಇವರಿಗೆ ವ್ಯಾಸತೀರ್ಥ ಅನಿರುದ್ಧತೀರ್ಥ ಮೊದಲಾದ ಅನೇಕ ಮಂದಿ ಶಿಷ್ಯರು ಪ್ರಸಿದ್ಧರಾಗಿದ್ದರು.

ಸೋಽಹಮುಪಾಸನೆ ಹೋಗಿ ಹರಿದಾಸೋಽಹಂ ಎಂಬ ಉಪಾಸನೆಯು ವ್ಯಾಪಿಸಿತು. 1317ನೇ ಇಸವಿಗೆ ಸರಿಹೋಗುವ ಪಿಂಗಲ ಸಂವತ್ಸರ ಮಾಘ ಶುದ್ಧ ನವಮಿ ದಿವಸ ಆಚಾರ್ಯರು ಐತರೇಯೋಪನಿಷತ್ತನ್ನು ಪಾಠ ಹೇಳುತ್ತಿರಲು ಪುಷ್ಪವೃಷ್ಟಿ ಆಯಿತು. ಆಚಾರ್ಯರು ಮಂದ ದೃಷ್ಟಿಗೆ *ಅಗೋಚರರಾದರು. 79 ವರ್ಷ 3 ತಿಂಗಳು 29 ದಿವಸ ಭೂಮಿಯಲ್ಲಿ ಮನುಷ್ಯರ ದೃಷ್ಟಿಗೆ ಗೋಚರರಾಗಿದ್ದರು.

12. ಆಚಾರ್ಯರ ಚರಿತ್ರೆಯು ಯತ್ಕಿಂಚಿತ್ತು ಮಣಿಮಂಜರಿಯಲ್ಲು, ಸಂಕ್ಷೇಪದಿಂದ ಮಧ್ವವಿಜಯದಲ್ಲು ವರ್ಣಿತಗಳಾಗಿವೆ. ಮೇಲೆ ಆಚಾರ್ಯರೊಂದಿಗೆ ವಾದಮಾಡಿ ಪರಾಜಿತ ರಾಗಿ ಶಿಷ್ಯತ್ವವನ್ನು ವಹಿಸಿದರೆಂದು ಹೇಳಿದ ತ್ರಿವಿಕ್ರಮ ಪಂಡಿತಾಚಾರ್ಯರ ಮಕ್ಕಳಾದ ನಾರಾಯಣ ಪಂಡಿತಾಚಾರ್ಯರು ಈ ಗ್ರಂಥಗಳನ್ನು ರಚಿಸಿ ಪ್ರತಿಯೊಬ್ಬ ಮಾಧ್ವನನ್ನು ತನಗೆ ಋಣಿಯನ್ನಾಗಿ ಮಾಡಿಕೊಂಡರು. ಮಾಧ್ವವೃಂದಕ್ಕೆ ಮಾತ್ರವಲ್ಲ, ಮಹನೀಯರ ಚರಿತೆ ಯನ್ನು ತಿಳಿಯಲು ಇಚ್ಛಿಸುವ ಎಲ್ಲಾ ಸಜ್ಜನರಿಗೆ ಇವರು ಮಾಡಿದ ಪರಮೋಪಕಾರ ವರ್ಣಿಸ ಲಾಗದು. ಆಚಾರ್ಯರ ಪುಸ್ತಕಭಂಡಾರವನ್ನು ಇಟ್ಟುಕೊಂಡಿರುತ್ತಿದ್ದ ಶಂಕರಾರ್ಯರು ಇವರ ಚಿಕ್ಕತಂದೆ. ಆಚಾರ್ಯರ ಶಿಷ್ಯರಿಂದ ತಾವು ತಿಳಿದ ವಿಷಯಗಳನ್ನು ಯಥಾಶ್ರುತವಾಗಿ ವರ್ಣಿಸಿದ್ದಾರೆ. ಮಧ್ವವಿಜಯದ 10, 16ನೇ ಸರ್ಗಗಳಲ್ಲಿ ವರ್ಣಿಸಿದ ಅದ್ಭುತ ಕಾರ್ಯ ಗಳನ್ನು ಆಚಾರ್ಯರ ಶಿಷ್ಯರಲ್ಲೊಬ್ಬರು ಕಾವ್ಯರೂಪವಾಗಿ ರಚಿಸಿದ್ದರೆಂದು ತಿಳಿಯುತ್ತದೆ. ಇದಲ್ಲದೆ ಆಚಾರ್ಯರ ಚರಿತ್ರೆಯು ಆಚಾರ್ಯರ ಶಿಷ್ಯರಾದ ಹೃಷೀಕೇಶತೀರ್ಥರು ಬರೆದ ಸಂಪ್ರದಾಯ ಪದ್ಧತಿ ಎಂಬ ಗ್ರಂಥದಲ್ಲಿ ಕಂಡುಬರುತ್ತದೆ. ಇದು ಉಡುಪಿ ಶ್ರೀ ಮಧ್ವ ಸಿದ್ಧಾಂತ ಗ್ರಂಥಾಲಯದಲ್ಲಿ ಛಾಪೆ ಆಗಿದೆ. ಮಠಗಳಲ್ಲಿ ತಾಳೆವಾಲೆಗಳು ದೊರೆಯುತ್ತವೆ. ಇದಲ್ಲದೆ ವಾಯುಪುರಾಣ, ಗರುಡಪುರಾಣ (ಬ್ರಹ್ಮಕಾಂಡ) ಇನ್ನು ಕೆಲವು ಪುರಾಣಗಳಲ್ಲಿ ಆಚಾರ್ಯರ ಕಥೆಯು ಸ್ವಲ್ಪಮಟ್ಟಿಗೆ ಹೇಳಲ್ಪಟ್ಟದೆ. ಅಥವಾ ಸೂಚಿಸಲ್ಪಟ್ಟದೆ. ಆದರೆ ಮಧ್ವ ವಿಜಯವೇ ನಮಗೆ ಮುಖ್ಯ ಆಧಾರವು.

13. ಮಧ್ವವಿಜಯದಲ್ಲಿ ಅನೇಕವಾಗಿ ಜನರ ಹೆಸರುಗಳು, ಸ್ಥಳಗಳ ಹೆಸರುಗಳು ಸಂಸ್ಕೃತ ರೂಪಗಳಿಂದ ಹೇಳಲ್ಪಟ್ಟವೆ. ಅವುಗಳಿಗೆ ದೇಶಭಾಷೆಯಲ್ಲಿರುವ ಸ್ವಾಭಾವಿಕವಾದ ಹೆಸರುಗಳು ಹೇಳಲ್ಪಡಲಿಲ್ಲ. ದೇಶಭಾಷೆಯ ಹೆಸರುಗಳು ನಾರಾಯಣ ಪಂಡಿತಾಚಾರ್ಯರು ಬರೆದ ಭಾವದೀಪಿಕೆ ಎಂಬ ಮಧ್ವವಿಜಯದ ಟೀಕೆಯಲ್ಲಿ ಅವರಿಂದಲೇ ತಿಳಿಸಲ್ಪಟ್ಟದೆ. ಈ ಭಾವದೀಪಿಕೆಯು ಛಾಪೆಯಾಗಿದೆ. ದಕ್ಷಿಣಕನ್ನಡ ಜಿಲ್ಲೆಯಲ್ಲಿ ಆಚಾರ್ಯರು ಸಂಚಾರಮಾಡಿದ ಗ್ರಾಮಗಳ ಪೈಕಿ ಕೆಲವು ಈಗ ಇಲ್ಲವಾಗಿರಬಹುದು. ಇನ್ನು ಕೆಲವುಗಳ ಹೆಸರು ಮಾರಿ ಹೋಗಿರಬಹುದು. ಅಂತು ಆ ಗ್ರಾಮಗಳು ಇಂತಹುಗಳೇ ಎಂದು ನಿಶ್ಚಯಮಾಡಲು ಸುಲಭ ವಲ್ಲ. ಅದ್ಯಾಪಿ ಪ್ರಸಿದ್ಧಗಳಾದ ಅನಂತಶಯನ, ರಾಮೇಶ್ವರ, ಶ್ರೀರಂಗ, ಗೋವೆ, ರಾಜಮ ಹೇಂದ್ರಿ, ಕಾಶಿ, ಹಸ್ತಿನಾಪುರ ಇತ್ಯಾದಿ ಸ್ಥಳಗಳಿಗೆ ಆಚಾರ್ಯರು ವಿಜಯ ಮಾಡಿದ್ದರೆಂದು ಸ್ಪಷ್ಟ ತಿಳಿಯುತ್ತದೆ. ಗೋಮತೀತೀರದಲ್ಲಿ ಒಬ್ಬ ಶೂದ್ರರಾಜನು ವೇದಗಳು ಅಪ್ರಮಾಣ ಗಳೆಂದು ವಾದಿಸಿದನು. ಆಗ ಆಚಾರ್ಯರು ಕೈಯಲ್ಲಿ ಬೀಜಗಳನ್ನು ಹಿಡಿದು ಓಷಧಿಸೂಕ್ತವನ್ನು ಹೇಳಿ ಅಂಕುರವನ್ನುಂಟುಮಾಡಿ ವೇದಪ್ರಾಮಾಣ್ಯವನ್ನು ಸ್ಥಾಪಿಸಿದರು. ಗೋವೆಯಲ್ಲಿ ಗಾನ ಮಾಡಿ ಫಲಪುಷ್ಪಾದಿಗಳನ್ನು ಉಂಟುಮಾಡಿದರು. ಇನ್ನೊಂದೂರಿನಲ್ಲಿ ಅಕಾಲವೃಷ್ಟಿಯನ್ನು

* 'ಏಕೋನಾಶೀತಿ ವರ್ಷಾಣಿ ನೀತ್ವಾ ಮಾನುಷದೃಷ್ಟಿಗಃ। ಪಿಂಗಲಾಬ್ದೇ ಮಾಘ ಶುದ್ಧ ನವ ಮ್ಯಾಂ ಬದರೀಂ ಯಯೌ ॥' ಅಂದರೆ [illegible]

ತರಿಸಿ ಕೆರೆಯನ್ನು ತುಂಬಿಸಿದರು. ಮತ್ತೊಂದು ಕಡೆ ಹೊಳೆಗೆ ಅಡ್ಡವಾಗಿ ದೊಡ್ಡ ಬಂಡೆಯನ್ನು ಹೊತ್ತುಹಾಕಿ ಜನರಿಗೆ ಉಪಕಾರಮಾಡಿದರು. ಆಚಾರ್ಯರ ಮಹಿಮೆ ಸಂಪೂರ್ಣ ವರ್ಣಿಸ ಲಳವಲ್ಲ. ವಿದ್ವತ್ಸಭೆಗಳಲ್ಲಿ ತಾರೆಗಳ ಮಧ್ಯದಲ್ಲಿ ಚಂದ್ರನಂತೆ ಪ್ರಕಾಶಿಸುತ್ತಿದ್ದರು. ಸಾಮಾನ್ಯ ಜನರೊಡನೆ ಸಾಮಾನ್ಯಜನರಂತೆ ವ್ಯವಹರಿಸುತ್ತಿದ್ದರು. ಅವರಿಗೆ ಶಾಸ್ತ್ರಾರ್ಥಮಹಿಮೆ ತಿಳಿಯ ದಿರುವುದರಿಂದ ತನ್ನಲ್ಲಿ ಅವರಿಗೆ ಭಕ್ತಿ ಹುಟ್ಟುವಂತೆ ಆಶ್ಚರ್ಯ ಕೆಲಸಗಳನ್ನು ಮಾಡಿ ತೋರಿಸಿದರು. ಹತ್ತು ಐವತ್ತು ಜನ ಊಟಮಾಡಲಸಾಧ್ಯವಾದಷ್ಟು ಭೋಜನ ಪದಾರ್ಥಗಳನು ಭಕ್ತರು ತಂದರ್ಪಿಸಲು, ಒಬ್ಬರೇ ಅದನ್ನೆಲ್ಲಾ ಅನಾಯಾಸದಿಂದ ಸ್ವೀಕರಿಸಿದರು. ಐವತ್ತು ಜನರಿಂದ ಎತ್ತಲಸಾಧ್ಯವಾದ ಭಾರಗಳನ್ನು ಲಕ್ಷ್ಯವಿಲ್ಲದೆ ಒಂದೇ ಕೈಯಿಂದ ಎತ್ತಿದರು. ಕುಸ್ತಿ ಯಲ್ಲಿ, ಮುಷ್ಟಿಯುದ್ಧದಲ್ಲಿ, ಅಜೇಯರಾಗಿದ್ದರು. ಪಂಡಿತರಿಂದಲೂ, ಪಾಮರರಿಂದಲೂ ವಂದ್ಯ ರಾದರು. ಹೆಚ್ಚು ಏಕೆ? ಬುದ್ಧಿ, ಬಲ, ಯಶಸ್ಸು, ಧೈರ್ಯ, ಆರೋಗ್ಯ, ವಾಕ್ಪಾಟವಾದಿಗಳು ಅವರ ಸ್ಮರಣೆ ಮಾತ್ರದಿಂದಲೇ ಭಕ್ತರಿಗೆ ಲಭಿಸುವಂಥಾ ಮಹಾಮಹಿಮೆಯುಳ್ಳವರೆಂದರೆ ಸಾಲದೆ?

14. ಆಚಾರ್ಯರು ಒಟ್ಟು ಮೂವತ್ತೆರಡು ಸಹಸ್ರ (32000) ಗ್ರಂಥವಿಸ್ತಾರವಾದ ಮೂವತ್ತೇಳು (37) ಗ್ರಂಥಗಳನ್ನು ರಚಿಸಿದರು. ಮೂಲ ಮತ್ತು ಟೀಕಾಟಿಪ್ಪಣಿಗಳ ಪಟ್ಟಿ ಇದರೊಂದಿಗೆ ಸೇರಿಸಲ್ಪಟ್ಟಿದೆ.

15. ಆಚಾರ್ಯರ ಸಿದ್ಧಾಂತವು ಸ್ವಲ್ಪಮಟ್ಟಿಗೆ ಮುಂದೆ ವಿವರಿಸಲ್ಪಡುತ್ತದೆ. ಇಲ್ಲಿ ಒಂದೆರಡು ಮಾತುಗಳನ್ನು ಹೇಳಿ ಚರಿತ್ರೆಭಾಗವನ್ನು ಮುಗಿಸುವೆವು. ನಮಗೆ ದ್ವೈತಸಿದ್ಧಾಂತ ದಿಂದ ಉಂಟಾಗತಕ್ಕ ಪ್ರಯೋಜನವೇನೆಂದು ಕೇಳಬಹುದು. ಅದನ್ನು ಆಚಾರ್ಯರೇ ತಿಳಿಸಿರು ತ್ತಾರೆ. ಹರಿಸರ್ವೋತ್ತಮನೆಂದು ತಿಳಿಯುವುದೇ ಅಖಿಲ ಪುರುಷಾರ್ಥಸಿದ್ಧಿಗೆ ಮುಖ್ಯ ಹೇತುವು. ದ್ವಾದಶಸ್ತೋತ್ರದಲ್ಲಿ "ನನ್ನ ಉತ್ತಮವಾದ, ಪವಿತ್ರವಾದ, ಸತ್ಯವಾದ, ಬಾಹು ಗಳನ್ನೆತ್ತಿ ಪ್ರತಿಜ್ಞೆಮಾಡಿ ಹೇಳುವ ಮಾತನ್ನು ಕೇಳು. ಹರಿಗೆ ಸಮರು, ಅಧಿಕರು ಇಲ್ಲ. ಅವನೇ ಸರ್ವೋತ್ತಮನು." ಎಂದು ಅಪ್ಪಣೆಕೊಟ್ಟಿದ್ದಾರೆ. ಮತ್ತು ಮಹಾಭಾರತ ತಾತ್ಪರ್ಯ ನಿರ್ಣಯದಲ್ಲಿ ಇದೇ ಅರ್ಥವುಳ್ಳ ಭಾರತವಾಕ್ಯವನ್ನು ಉದಾಹರಿಸಿದ್ದಾರೆ. ಹರಿಯು ಸರ್ವೋತ್ತ ಮನೂ, ಸ್ವತಂತ್ರನೂ ಎಂದು ತಿಳಿಯುವವನು, ಸಕಲ ವೇದಾರ್ಥಗಳನ್ನು ತಿಳಿದವನು; ಅವನಿಗೆ ಭಯವಿಲ್ಲ, ಅವನಿಗೆ ದುಃಖವಿಲ್ಲ, ಅವನಿಗೆ ಕುಂದು ಇಲ್ಲ. ಅದು ಹೇಗೆಂದರೆ- ತಾಯಿಯ ತೊಡೆಯ ಮೇಲೆ ಮಲಗಿರುವ ಮಗುವಿಗೆ ಭಯವುಂಟೇ, ಕ್ಲೇಶವುಂಟೇ? ತನಗೆ ಆಪತ್ತು ಬಂದರೆ ಕಾಯುವುದಕ್ಕೆ ತಾಯಿ ಇದ್ದಾಳೆಂದು ಮಗುವು ನಿರಾತಂಕವಾಗಿ ಇರುವುದಲ್ಲವೇ? ಅದರಂತೆಯೇ "ಮಾಂ ರಕ್ಷತು ವಿಭುರ್ನಿತ್ಯಂ ಪುತ್ರೋಽಹಂ ಪರಮಾತ್ಮನಃ" (ಸೂತ್ರಭಾಷ್ಯ) ನಾನು ಪರಮಾತ್ಮನಿಗೆ ಮಗನು, ನನ್ನನ್ನು ಲೋಕನಾಯಕನು ಸದಾ ರಕ್ಷಿಸಲಿ! ಎಂದು ಚಿಂತೆ ಯನ್ನು ಬಿಟ್ಟರಬೇಕು. ಹರಿಯು ಎಲ್ಲಿದ್ದಾನೆ? ಎಡದಲ್ಲಿ ಬಲದಲ್ಲಿ, ಹಿಂದೆ ಮುಂದೆ, ಮೇಲೆ ಕೆಳಗೆ, ಒಳಗೆ ಹೊರಗೆ ಎಲ್ಲಾ ಅಂಗಗಳಲ್ಲಿ, ಎಲ್ಲಾ ಸೂಕ್ಷ್ಮದೇಹಗಳಲ್ಲಿ ಇದ್ದು ರಕ್ಷಿಸು ತ್ತಿದ್ದಾನೆ. ಹರಿಯ ಅನುಗ್ರಹದಿಂದಲೇ ಜೀವನು ನಿತ್ಯನು, ಅವಧ್ಯನು ಆಗಿರುತ್ತಾನೆ. "ದೇಹೀ ಕುತೋಽವಧ್ಯಃ ಯಸ್ಮಾದಯಮೀಶ್ವರಃ ಸರ್ವಸ್ಯ ಜೀವಸ್ಯ ಸೂಕ್ಷ್ಮೇ ಸ್ಥೂಲೇ ಚ ದೇಹೇ ರಕ್ಷಕತ್ವೇನಾವಸ್ಥಿತಃ ಅತ ಏವಾವಧ್ಯಃ" (ಗೀತಾತಾತ್ಪರ್ಯ). ದೇಹಿಯು ಹೇಗೆ ಅವಧ್ಯ ನಾದನು? ಯಾವ ಕಾರಣದಿಂದ ಜೀವನು ಪ್ರತಿ ಜೀವನ ಸೂಕ್ಷ್ಮ ಸ್ಥೂಲ ದೇಹಗಳಲ್ಲಿ ರಕ್ಷಿ ಸುತ್ತಾ ಇರುವವನೋ, ಆದರಿಂದಲೇ ಅವಧ್ಯನು. ಹಾಗಾದರೆ ದುಃಖಗಳು, ನಮಗೆ ಪ್ರಾಪ್ತ ವಾಗುತ್ತವಲ್ಲ! ಹರಿಯು ಅವುಗಳನ್ನು ಏಕೆ ನಿವಾರಿಸುವುದಿಲ್ಲ? ಅಂದರೆ ನಾವು ಅನಾಥರೆಂದು

ತಿಳಿದುಕೊಂಡರೆ ಮಾತ್ರ ಅವು ನಮ್ಮನ್ನು ಬಾಧಿಸುವವು. ಜಗನ್ನಾಥನಾದ ಸ್ವಾಮಿಯು ನಮಗೆ ನಾಥನಾಗಿದ್ದಾನೆಂದು ತಿಳಿದರೆ ಬಾಧಿಸುವದಿಲ್ಲ. ರೋಗ ಬಂದಾಗ ವೈದ್ಯನು ಕಠಿಣ ಪಥ್ಯ, ಕಹಿ ಔಷಧಗಳನ್ನು ಸೇವಿಸಬೇಕೆಂದರೆ ಅವನ ಕುರಿತು ದ್ವೇಷಮಾಡುವೆವೇ? ನಮ್ಮ ಹಿತಕ್ಕಾಗಿ ಚಿಕಿತ್ಸೆಯನ್ನು ಮಾಡುತ್ತಾನೆಂದು ಗ್ರಹಿಸಿ, ಅವನಲ್ಲಿ ಪ್ರೀತಿಮಾಡುವುದಿಲ್ಲವೇ? ಸಾಂಸಾರಿಕ ದುಃಖಗಳು ನಮ್ಮ ಕರ್ಮಾನುಸಾರವಾಗಿ ಬಂದಾಗ, ನಮ್ಮ ಭಾವನೆಯು ಹೀಗೆ ಇರಬೇಕು. ಅವುಗಳನ್ನು ಸಂತೋಷದಿಂದ ಅನುಭವಿಸಿ, ಪರಮಾತ್ಮನನ್ನು ಎಡೆಬಿಡದೆ ಚಿಂತಿಸುತ್ತಿದ್ದರೆ ದುಃಖಗಳನ್ನು ಪರಿಹರಿಸಿ, ತಪ್ಪದೆ ಶಾಶ್ವತ ಸುಖವನ್ನು ಕೊಡುವನು. ದಾಸರಾಯರು "ಗುಣವಾಯಿತು ಎನ್ನ ಭವರೋಗ ಕೃಷ್ಣನೆಂಬ ವೈದ್ಯ ದೊರಕಿದನು" ಎಂದು ಹಾಡಿರುವರು. ಜಗನ್ನಾಥದಾಸರು "ಯಾತರ ಭಯ ಶ್ರೀನಾಥನ ಸುಪ್ರೀತಿಯ ಪಡೆದವಗೆ" ಎಂದು ಹಾಡಿರುವರು. ಇವು ಔಪಚಾರಿಕ ನುಡಿಗಳಲ್ಲ. ಅನುಭವಸಿದ್ಧವಾದುವುಗಳು. ಪ್ರಹ್ಲಾದಾದಿ ಮಹಾಭಕ್ತರ ಚರಿತ್ರೆಯಿಂದಲೂ, ಆಚಾರ್ಯರ ಚರಿತ್ರೆಯಿಂದಲೂ, ಅವರ ಶಿಷ್ಯರ ಚರಿತ್ರೆಯಿಂದಲೂ, ಈ ಮಹಾವಾಕ್ಯಗಳು ಸತ್ಯಗಳೆಂದು ವಿಶದವಾಗುವುವು. ಗುರುಭಕ್ತಿಗೆ ಸಮವಾದ ಕವಚವಿಲ್ಲ. ಹರಿಭಕ್ತಿಗೆ ಸಮವಾದ ಖಡ್ಗವಿಲ್ಲ. ಇವುಗಳನ್ನು ಕೈಕೊಂಡು ಅರಿಷಡ್ವರ್ಗವನ್ನು ನಿರಾಯಾಸದಿಂದ ಜಯಿಸಬಹುದು. ತದನಂತರ ಕ್ರಮೇಣ ಭಕ್ತ್ಯತಿಶಯದಿಂದ ಸ್ವರೂಪಾನಂದಾವಿರ್ಭಾವರೂಪವಾದ ಮುಕ್ತಿಯನ್ನು ಪಡೆಯಬಹುದು. ಈ ಸದುಪಾಯಗಳನ್ನು ತೋರಿಸಿಕೊಟ್ಟ ಆಚಾರ್ಯವರ್ಯರಿಗೆ ಕೃತಜ್ಞತಾಪೂರ್ವಕ ವಂದನೆಗಳನ್ನಾಚರಿಸೋಣ.

ನಮಸ್ತೇ ಪ್ರಾಣೇಶ ಪ್ರಣತವಿಭವಾಯಾವನಿಮಗಾಃ
ನಮಃ ಸ್ವಾಮಿನ್ ರಾಮಪ್ರಿಯತಮ ಹನೂಮನ್ ಗುರುಗುಣ ।
ನಮಸ್ತುಭ್ಯಂ ಭೀಮ ಪ್ರಬಲತಮ ಕೃಷ್ಣೇಷ್ಟ ಭಗವನ್
ನಮಃ ಶ್ರೀಮನ್ಮಧ್ವ ಪ್ರದಿಶ ಸುದೃಶಂ ನೋ ಜಯ ಜಯ ॥

– ಮಧ್ವಮುನೀಂದ್ರದಾಸ.



ಶ್ರೀ

# ಉಪೋದ್ಘಾತವು.

## ದ್ವಿತೀಯ ಭಾಗ.

# ಶ್ರೀಮನ್ಮಧ್ವಾಚಾರ್ಯರ ಸಿದ್ಧಾಂತ ಸಂಗ್ರಹವು.

ಲಕ್ಷ್ಮೀಪತಿಂ ಸುಖಮುಖ್ಯೈರಖಿಲೈರ್ಗುಣೌಘೈಃ
ಪೂರ್ಣಂ ವ್ಯಪೇತ ನಿಖಿಲಾಘಮಚಿಂತ್ಯಶಕ್ತಿಂ ।
ಪ್ರಾಣಾದಿಸರ್ವಜಗತೋ ಜನಿಪೂರ್ವಹೇತುಂ
ಮೋಕ್ಷೈಕಹೇತುಮನಿಶಂ ಪ್ರಣಮಾಮಿ ವಿಷ್ಣುಂ ॥ ೧ ॥

ನಿಖಿಲಾದ್ವೈತಸಿದ್ಧಾಂತಪ್ರಾಪ್ತಾಜ್ಞಾನವಿನಾಶಕಃ ।
ಶ್ರೀಮದಾಚಾರ್ಯಸೂರ್ಯೋಽಯಂ ದದ್ಯಾತ್ತತ್ವಪ್ರಕಾಶನಂ ॥ ೨ ॥

ಪ್ರಣಮ್ಯ ಶ್ರೀಮದಾನಂದತೀರ್ಥಾದಿಗುರುಶೇಖರಾನ್ ।
ತತ್ಕೃಪಾಲವಮಾಶ್ರಿತ್ಯ ವ್ಯಾಕರೋಮಿ ಯಥಾಮತಿ ॥ ೩ ॥

ಶ್ರೀಮನ್ಮಧ್ವಮತೇ ಹರಿಃ ಪರತರಃ ಸತ್ಯಂ ಜಗತ್ತತ್ವತೋ
ಭೇದೋ ಜೀವಗಣಾ ಹರೇರನುಚರಾಃ ನೀಚೋಚ್ಚಭಾವಂ ಗತಾಃ ।
ಮುಕ್ತಿರ್ನೈಜಸುಖಾನುಭೂತಿರಮಲಾ ಭಕ್ತಿಶ್ಚ ತತ್ಸಾಧನಂ
ಹ್ಯಕ್ಷಾದಿತ್ರಿತಯಂ ಪ್ರಮಾಣಮಖಿಲಾಮ್ನಾಯೈಕವೇದ್ಯೋ ಹರಿಃ ॥

## ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರ ಸಿದ್ಧಾಂತದಲ್ಲಿ

೧. ಶ್ರೀ ಹರಿಯೇ ಸರ್ವೋತ್ತಮನು.
೨. ಪ್ರಪಂಚವು ಯಥಾರ್ಥವಾದುದು.
೩. ಪಾರಮಾರ್ಥಿಕವಾಗಿ ಭೇದವಿದೆ.
೪. ಜೀವರೆಲ್ಲರೂ ಶ್ರೀ ಪರಮಾತ್ಮನ ಸೇವಕರು.
೫. ನಿಚೋಚ್ಚಭಾವವನ್ನು ಅಂದರೆ ತಾರತಮ್ಯವನ್ನು ಹೊಂದಿರುವರು.
೬. ಸ್ವಾಭಾವಿಕವಾಗಿ ಸ್ವರೂಪಸುಖದ ಅನುಭವವೇ ಮುಕ್ತಿಯು.
೭. ನಿರ್ಮಲವಾದ ಭಕ್ತಿಯೇ ಆ ಮುಕ್ತಿಗೆ ಸಾಧನವು.
೮. ಪ್ರತ್ಯಕ್ಷ ಮೊದಲಾದ (೩) ಮೂರೇ ಪ್ರಮಾಣವು.
೯. ಶ್ರೀ ಹರಿಯೇ ಎಲ್ಲಾ ವೇದಗಳಿಂದಲೂ ಮುಖ್ಯವಾಗಿ ಪ್ರತಿಪಾದ್ಯನು.

ಚೈತನ್ಯಮತಾವಲಂಬಿಯಾದ ವಿದ್ಯಾಭೂಷಣ ಬಲದೇವನೆಂಬುವವನು ಶ್ರೀಮದಾಚಾರ್ಯರು ಸಮರ್ಥಿಸಿರುವ ಈ ೯ ರತ್ನಗಳನ್ನು ಜ್ಞಾನಿಗಳು ಅವಶ್ಯವಾಗಿ ಹೃದಯದಲ್ಲಿಧರಿಸಬೇಕೆಂದು ಪ್ರಮೇಯರತ್ನಾವಳಿ ಎಂಬುವ ಗ್ರಂಥದಲ್ಲಿ ಸಪ್ರಮಾಣವಾಗಿ ನಿರೂಪಿಸಿರುವನು. *

---

* ಆನಂದತೀರ್ಥೈರರಚಿತಾನಿ ಯಸ್ಯಾಂ ಪ್ರಮೇಯರತ್ನಾನಿ ನವೈವ ಸಂತಿ । ಪ್ರಮೇಯರತ್ನಾವಳಿರಾದರೇಣ ಪ್ರಧೀಭಿರೇಷಾ ಹೃದಯೇ ನಿಧೇಯಾ ॥

## ೮. ಪ್ರತ್ಯಕ್ಷ ಮೊದಲಾದ (೩) ಮೂರೇ ಪ್ರಮಾಣವು.

ಸರ್ವವಸ್ತುಗಳ ಜ್ಞಾನವು ಪ್ರಮಾಣಾಧೀನವಾದುದರಿಂದ ಪ್ರಥಮದಲ್ಲಿಯೇ ಅವುಗಳನ್ನು ವಿಚಾರಮಾಡಬೇಕಾಗಿಯದೆ.

(೧) ಪ್ರತ್ಯಕ್ಷ, (೨) ಅನುಮಾನ, (೩) ಆಗಮ ಎಂದು ಪ್ರಮಾಣಗಳು ಮೂರೇ ವಿಧವು. ಸಾಂಖ್ಯರು ಹೀಗೆಯೇ ಮೂರು ವಿಧವೆಂದು ಹೇಳುತ್ತಾರೆ. ಉಪಮಾನಾದಿಗಳು ಇವುಗಳಲ್ಲಿಯೇ ಅಂತರ್ಭೂತಗಳಾಗಿವೆ ಈ ವಿಷಯವು ಪ್ರಮಾಣಲಕ್ಷಣದಲ್ಲಿ (ಪು. ೧೩. ೨೧.) ವಿಶದೀಕೃತವಾಗಿಯದೆ. ಪ್ರಮಾಣವು ಪ್ರಮೇಯದಲ್ಲಿ ಅಂತರ್ಭೂತವಾದುದರಿಂದ ಪ್ರಮೇಯ ಗಳ ನಿರೂಪಣವೂ ಆವಶ್ಯಕವಾಗಿದೆ. (೧) ದ್ರವ್ಯ, (೨) ಗುಣ, (೩) ಕರ್ಮ, (೪) ಸಾಮಾನ್ಯ, (೫) ವಿಶೇಷ, (೬) ವಿಶಿಷ್ಟ, (೭) ಅಂಶಿ, (೮) ಶಕ್ತಿ, (೯) ಸಾದೃಶ್ಯ, (೧೦) ಅಭಾವ. ಹೀಗೆ ೧೦ **ಪದಾರ್ಥಗಳು**. (೧) ಪರಮಾತ್ಮ, (೨) ಲಕ್ಷ್ಮೀ, (೩) ಜೀವ, (೪) ಅವ್ಯಾಕೃತಾಕಾಶ, (೫) ಪ್ರಕೃತಿ, (೬) ಸತ್ವರಜಸ್ತಮೋಗುಣಗಳು, (೭) ಮಹತ್ತತ್ವ, (೮) ಅಹಂಕಾರತತ್ವ, (೯) ಬುದ್ಧಿ, (೧೦) ಮನಸ್ಸು, (೧೧) ಇಂದ್ರಿಯಗಳು, (೧೨) ಇಂದ್ರಿಯ ವಿಷಯಗಳು, (೧೩) ಪಂಚಭೂತಗಳು, (೧೪) ಬ್ರಹ್ಮಾಂಡ, (೧೫) ಅವಿದ್ಯಾ, (೧೬) ವರ್ಣ, (೧೭) ಅಂಧಕಾರ, (೧೮) ವಾಸನಾ. (೧೯) ಕಾಲ, (೨೦) ಪ್ರತಿಬಿಂಬ. ಈ ಪ್ರಕಾರ ೨೦ **ದ್ರವ್ಯಗಳು**. (೧) ರೂಪ, (೨) ರಸ, (೩) ಗಂಧ, (೪) ಸ್ಪರ್ಶ, (೫) ಸಂಖ್ಯಾ, (೬) ಪರಿಮಾಣ, (೭) ಸಂಯೋಗ (೮) ವಿಭಾಗ, (೯) ಪರತ್ವ, (೧೦) ಅಪರತ್ವ, (೧೧) ದ್ರವತ್ವ, (೧೨) ಗುರುತ್ವ, (೧೩) ಲಘುತ್ವ, (೧೪) ಮೃದುತ್ವ, (೧೫) ಕಾಠಿನ್ಯ, (೧೬) ಸ್ನೇಹ, (೧೭) ಶಬ್ದ, (೧೮) ಬುದ್ಧಿ, (೧೯) ಸುಖ, (೨೦) ದುಃಖ, (೨೧) ಇಚ್ಛಾ, (೨೨) ದ್ವೇಷ, (೨೩) ಪ್ರಯತ್ನ, (೨೪) ಧರ್ಮ, (೨೫) ಅಧರ್ಮ, (೨೬) ಸಂಸ್ಕಾರ, (೨೭) ಆಲೋಕ, (೨೮) ಶಮ, (೨೯) ದಮ, (೩೦) ಕೃಪಾ. (೩೧) ತಿತಿಕ್ಷಾ, (೩೨) ಬಲ, (೩೩) ಭಯ, (೩೪) ಲಜ್ಜಾ, (೩೫) ಗಾಂಭೀರ್ಯ, (೩೬) ಸೌಂದರ್ಯ, (೩೭) ಧೈರ್ಯ, (೩೮) ಸ್ಥೈರ್ಯ, (೩೯) ಶೌರ್ಯ, (೪೦) ಔದಾರ್ಯ, (೪೧) ಸೌಭಾಗ್ಯ ಮೊದಲಾದ ಅನೇಕ **ಗುಣಗಳು**. (೧) ವಿಹಿತ, (೨) ನಿಷಿದ್ಧ, (೩) ಉದಾಸೀನ ಎಂದು ೩ ವಿಧ **ಕರ್ಮಗಳು**. (೧) ನಿತ್ಯ, (೨) ಅನಿತ್ಯ ಎಂದಾಗಲೀ, ಜಾತಿ, ಉಪಾಧಿ ಎಂದಾಗಲೀ ಸಾಮಾನ್ಯವು ೨ ವಿಧವು. ಜೀವ ತ್ವಾದಿಗಳು ನಿತ್ಯಗಳು. ಬ್ರಾಹ್ಮಣತ್ವಾದಿಗಳು ಅನಿತ್ಯಗಳು. ಈಶ್ವರನಲ್ಲಿದ್ದ ಸರ್ವಜ್ಞತ್ವ ಮೊದಲಾದ ಉಪಾಧಿಯೂ ನಿತ್ಯವು. ಕುರ್ಚಿಮೊದಲಾದುವುಗಳಲ್ಲಿದ್ದ ಪ್ರಮೇಯತ್ವಾದಿಗಳು ಅನಿತ್ಯಗಳು. ಭೇದವಿಲ್ಲದಿದ್ದರೂ ಭೇದಕಾರ್ಯವನ್ನು (ವ್ಯವಹಾರವನ್ನು) ನಿರ್ವಹಮಾಡತ ಕ್ಕದ್ದು, ಅನಂತವಾದದ್ದು **ವಿಶೇಷವು**. ತಾರ್ಕಿಕರು ಅಂಗೀಕರಿಸತಕ್ಕ ಸಮವಾಯ ಸ್ವರೂ ಪವೇ ಅಪ್ರಾಮಾಣಿಕವು. ವಿಶೇಷಣ ಸಂಬಂಧದಿಂದ ವಿಶೇಷ್ಯದ ಆಕಾರಕ್ಕೆ **ವಿಶಿಷ್ಟ**ವೆಂದು ಹೆಸರು. ಸರ್ವಜ್ಞತ್ವದಿಂದ ವಿಶಿಷ್ಟವಾದ ಬ್ರಹ್ಮ ಮೊದಲಾದುದು ನಿತ್ಯವು. ದಂಡಾದಿಗಳಿಂದ ವಿಶಿಷ್ಟರಾದ ದಂಡ್ಯಾದಿಗಳು ಅನಿತ್ಯರು. ಹಸ್ತ ಮೊದಲಾದ ಅವಯವಗಳಿಂದ ಅತಿರಿಕ್ತವಾದ ಅವಯವಿಯು **ಅಂಶೀ** ಎನ್ನಿಸುತ್ತದೆ. (೧) ಅಚಿಂತ್ಯಶಕ್ತಿ, (೨) ಆಧೇಯಶಕ್ತಿ, (೩) ಸಹ ಜಶಕ್ತಿ, (೪) ಪದಶಕ್ತಿ ಎಂದು ೪ ವಿಧ ಶಕ್ತಿಯು.

೧. ಅಚಿಂತ್ಯಶಕ್ತಿಯು (ಕೂಡದಿರುವುದನ್ನು ಕೂಡಿಸುವುದರಲ್ಲಿ ಸಮರ್ಥವಾದುದು) ಲಕ್ಷ್ಮ್ಯಾದಿಗಳಿಗಿಂತ ಪರಮಾತ್ಮನಲ್ಲಿ ನಿರವಧಿಕವು. (೧) **ಆಸೀನೋ ದೂರಂ ವ್ರಜತಿ ಶಯಾ ನೋ ಯಾತಿ ಸರ್ವತಃ ।** (೨) **ಅಣೋರಣೀಯಾನ್ ಮಹತೋ ಮಹೀಯಾನ್ ॥**

(ಕಾಠ. ಪು. ೫೦.) (೩) **ವಿಚಿತ್ರಶಕ್ತಿಃ ಪುರುಷಃ ಪುರಾಣಃ** । (೪) **ಗುಣಾಃ ಶ್ರುತಾಸ್ಸುವಿರುದ್ಧಾಶ್ಚ ದೇವೇ** ॥ ಪುರಾತನನಾದ ಶ್ರೀ ಹರಿಯು ವಿಚಿತ್ರಶಕ್ತಿಯುಳ್ಳವನು, ಗುಣಪೂರ್ಣನು. ಶ್ರೀ ಹರಿಯಲ್ಲಿ ಅತಿ ವಿರುದ್ಧ ಗುಣಗಳೂ ಶ್ರುತಗಳಾಗಿವೆ. ಇತ್ಯಾದಿ ಶ್ರುತಿಗಳಿಂದ ಪೂರ್ಣಶಕ್ತನು ಶ್ರೀ ಹರಿಯೇಸರಿ. ಲಕ್ಷ್ಮ್ಯಾದಿಗಳಲ್ಲಿ ತಾರತಮ್ಯಾನುಸಾರವಾಗಿ ತಿಳಿಯತಕ್ಕದು. (೫) **ಸರ್ವೇಽಲ್ಪಶಕ್ತಯಶ್ಚೈವ ಪೂರ್ಣಶಕ್ತಿಃ ಪರೋ ಹರಿಃ** ॥ ಸರ್ವರೂಅಲ್ಪಶಕ್ತಿಯುಳ್ಳವರೇ, ಶ್ರೀ ಹರಿಯೊಬ್ಬನೇ ಪೂರ್ಣಶಕ್ತನು.

೨. ಇತರರದಿಂದ ಉಂಟಾದ ಶಕ್ತಿಯು ಆಧೇಯ ಶಕ್ತಿಯು. ಅದು ದೇವ ಪ್ರತಿಷ್ಠೆ ಮೊದಲಾದವುಗಳಿಂದ ಪ್ರತಿಮಾದಿಗಳಲ್ಲಿ. (೬) **ಪ್ರತಿಷ್ಠಿತಂ ಪೂಜಯೇತ್** (೭) **ಪ್ರತಿಮಾಯಾಂ ಸನ್ನಿಧಿಕೃತ್ ಶಿಷ್ಯೇ ಮಾಹಾತ್ಮ್ಯಕೃದ್ಭವೇತ್** । ಪ್ರತಿಷ್ಠಿತನಾದ ಶ್ರೀ ಹರಿಯನ್ನು ಪೂಜಿಸತಕ್ಕದು. ಪ್ರತಿಮೆಯಲ್ಲಿ ಸನ್ನಿಧಾನವನ್ನು ಮಾಡುವವನು ಶಿಷ್ಯನಲ್ಲಿಯೂ ಮಹಿಮೆಯನ್ನುಂಟುಮಾಡುವನು.

೩. ದಂಡಾದಿಗಳಲ್ಲಿ ಘಟಾದಿಕಾರ್ಯಕ್ಕೆ ಅನುಕೂಲವಾದ ಸ್ವಾಭಾವಿಕ ಶಕ್ತಿಯು ಸಹಜಶಕ್ತಿಯು. ಸರ್ವಪದಾರ್ಥಗಳಲ್ಲಿಯೂ ಇರತಕ್ಕದು. ೪. ಪದಕ್ಕೂ ಪದಾರ್ಥಕ್ಕೂ ವಾಚ್ಯವಾಚಕಭಾವ ಸಂಬಂಧವು (ಸ್ವಾಭಾವಿಕ ಸಂಬಂಧವು) ಪದಶಕ್ತಿಯು. ಸ್ವರ, ಧ್ವನಿ, ವರ್ಣ, ಪದ, ವಾಕ್ಯಗಳಲ್ಲಿರತಕ್ಕದು. (೮) **ಔತ್ಪತ್ತಿಕಸ್ತು ಶಬ್ದಸ್ಯಾರ್ಥೇನ ಸಂಬಂಧಸ್ತಸ್ಯ ಜ್ಞಾನಮುಪದೇಶಃ** (ಜೈಮಿ. ಸೂ.) ಶಬ್ದಕ್ಕೆ ಅರ್ಥದಿಂದೊಡಗೂಡಿ ಸಂಬಂಧವು ಸ್ವಾಭಾವಿಕವೇ, ತಜ್ಜ್ಞಾನವನ್ನು ವೇದವಾಕ್ಯವು ತಿಳಿಸಿಕೊಡುತ್ತದೆ. (೯) **ಶಕ್ತಿಶ್ಚೈವಾನ್ವಿತೇ ಸ್ವಾರ್ಥೇ ಶಬ್ದಾನಾಮನುಭೂಯತೇ** । ಯೋಗ್ಯವಾದ ಇತರದಿಂದ ಯುಕ್ತವಾದ ಸ್ವಾರ್ಥದಲ್ಲಿಯೇ ಪದಗಳಿಗೆ ಶಕ್ತಿಯು. (೧೦) **ಪ್ರತ್ಯಕ್ಷವಚ್ಚ ಪ್ರಾಮಾಣ್ಯಂ ಸ್ವತ ಏವಾಗಮಸ್ಯ ಹಿ** । ಆಗಮಕ್ಕೂ ಪ್ರತ್ಯಕ್ಷದಂತೆಯೇ ಸ್ವಾಭಾವಿಕ ಸಂಬಂಧದಿಂದಲೇ ಪ್ರಾಮಾಣ್ಯವು. (೧೧) **ನಿತ್ಯಯೋಗೋಽಪಿ ಶಬ್ದಾನಾಮರ್ಥೈರ್ನೈವ ವಿದುಷ್ಯತೇ** । ನಿತ್ಯಸಂಬಂಧವೂ ಕೂಡ ಶಬ್ದಗಳಿಗೆಅರ್ಥಗಳಿಂದ ದುಷ್ಟವಾಗುವುದಿಲ್ಲ. ತಾರ್ಕಿಕರು ಹೇಳುವಂತೆ ಜಾತಿವಿಶಿಷ್ಟವ್ಯಕ್ತಿಯಲ್ಲಿ ಶಕ್ತಿಯಲ್ಲ. ಅನ್ವಯ ಜ್ಞಾನವು ಕೆಲವು ಕಡೆ ಪದಾಧ್ಯಾಹಾರದಿಂದಲೂ ಆವೃತ್ತಿಯಿಂದಲೂ ತಾತ್ಪರ್ಯದಿಂದಲೂ ಆಗುವುದು.

೪. ಪದಶಕ್ತಿಯು (೧) ಮುಖ್ಯಾ (೨) ಪರಮ ಮುಖ್ಯಾ ಎಂದು ೨ ವಿಧವು. ಎಲ್ಲಾ ಶಬ್ದಗಳಿಗೂ ಪರಮಾತ್ಮನಲ್ಲಿ ಪರಮ ಮುಖ್ಯವೃತ್ತಿಯು. ಇತರರಲ್ಲಿ ಮುಖ್ಯವೃತ್ತಿಯು.

ಸಾದೃಶ್ಯವು ಬೇರೆ ಒಂದು ಪದಾರ್ಥವೇ. ಮುಖದಲ್ಲಿ ಚಂದ್ರಸಾದೃಶ್ಯವೆಂದರೆ ತಾರ್ಕಿಕರು ಹೇಳುವಂತೆಯೇ ಚಂದ್ರನಿಂದ ಭಿನ್ನವಾಗಿ ಚಂದ್ರನಲ್ಲಿದ್ದ ಅನೇಕ ಧರ್ಮವತ್ವರೂಪವಾದುದು ಅಲ್ಲವೇ ಅಲ್ಲ. (೧) ಪ್ರಾಗಭಾವ, (೨) ಪ್ರಧ್ವಂಸಾಭಾವ, (೩) ಅನ್ಯೋನ್ಯಾಭಾವ, (೪) ಅತ್ಯಂತಾಭಾವ. ಹೀಗೆ ಅಭಾವವು ೪ ವಿಧವು. ಈ ವಿಷಯವು ತತ್ವಸಂಖ್ಯಾನ, ತತ್ವವಿವೇಕಗಳಲ್ಲಿ (ಪು. ೧೬೫. ೨೨೨) ವಿಶದೀಕೃತವಾಗಿದೆ. (೧) **ಉಪಾದಾನಕಾರಣೀಭೂತವಾದುದು ದ್ರವ್ಯವೆನ್ನಿಸಿಕೊಳ್ಳುತ್ತದೆ.** (೨) ದೋಷಭಿನ್ನವಾದುದು **ಗುಣವೆನ್ನಿಸಿಕೊಳ್ಳುತ್ತದೆ.** ಬುದ್ಧಿಯು (ಜ್ಞಾನವು). ಎಲ್ಲಾ ವ್ಯವಹಾರಗಳಿಗೆ ಕಾರಣೀಭೂತವಾದ ಗುಣವು. ಅದು ೨ ವಿಧವು (೧) ಅನುಭವ (೨) ಸ್ಮೃತಿಯೆಂದು. (೧) ಪ್ರತ್ಯಕ್ಷ (೨) ಅನುಮಿತಿ (೩) ಶಾಬ್ದಗಳೆಂದು ಅನುಭವವು ೩ ವಿಧವು. ಇವುಗಳಿಗೆ ಕಾರಣವಾದುದು (೧) ಪ್ರತ್ಯಕ್ಷ (೨) ಅನುಮಾನ (೩) ಆಗಮ ಎಂದು ಹೀಗೆ ೩ ವಿಧ ಪ್ರಮಾಣವು, ತಥಾ ಚ ಯಥಾರ್ಥಜ್ಞಾನವನ್ನು ಹುಟ್ಟಿಸುವವುಗಳು

ಪ್ರಮಾಣಗಳು. ಅಯಥಾರ್ಥಜ್ಞಾನವನ್ನು ಹುಟ್ಟಿಸುವವುಗಳು ಅಪ್ರಮಾಣಗಳು. ಇದರಲ್ಲಿ ಆಗಮವು ಅನಾದಿನಿತ್ಯವಾದುದು. ತಾರ್ಕಿಕರು ಹೇಳುವಂತೆ ಈಶ್ವರಕೃತವಲ್ಲವು (೧) ಭಾರತಾದಿಗಳಿಗೆ ಕರ್ತೃನಿರ್ದೇಶವಿದ್ದಂತೆ ಶ್ರುತಿಗಳಿಗೆ ಕರ್ತೃನಿರ್ದೇಶವು ಕಾಣುವುದಿಲ್ಲ. ಅಂತೂ ವೇದಕರ್ತನು ಪ್ರಸಿದ್ಧನಲ್ಲ. ಕರ್ತನಿಗೆ ಪ್ರಸಿದ್ಧಿಯು ಇಲ್ಲದಿದ್ದರೂ ಕಲ್ಪಿಸಿದರೆ **ಕಲ್ಪನಾ ಗೌರವ** ವೆಂಬ ದೋಷವು. ಕಲ್ಪಿಸದಿದ್ದರೆ ಕರ್ತನಿಲ್ಲವೆಂದೇ ಸಿದ್ಧವಾಯಿತು. ಭಾರತಾದಿಗಳಂತೆ ವೇದಗಳಿಗೂ ಕರ್ತನಿದ್ದಾನೆಂದು ಹೇಳಕೂಡದು. ವೇದವ್ಯಾಸರು ಕರ್ತರು ಎಂದು ಭಾರತಾದಿಗಳಲ್ಲಿ ಪ್ರಸಿದ್ಧಿಯಿದೆ. ಶ್ರುತಿಗಳಲ್ಲಿ ಹಾಗೆ ಇಲ್ಲವು. ಆದುದರಿಂದ ಶ್ರುತಿಗಳು ಸ್ವತಃ ಪ್ರಮಾಣಗಳು. ಕೇವಲ ಅನುಮಾನವು ಕಾಮಚಾರಿಯಾದುದರಿಂದ ಅಪ್ರಾಮಾಣಿಕವು. ಶ್ರುತಿಯಾದರೂ ನಿತ್ಯತ್ವವನ್ನೇ ಉದ್ಘೋಷಿಸುತ್ತದೆ.

೧. **ತಸ್ಮೈ ನೂನಮಭಿದ್ಯವೇ ವಾಚಾ ವಿರೂಪ ನಿತ್ಯಯಾ ವೃಷ್ಣೇ ಚೋದಸ್ವ ಸುಷ್ಟುತಿಮ್ ।** (ಋಗ್ವೇದ. ಅಷ್ಟ. ೬. ಅಧ್ಯಾ-೫. ವರ್ಗ. ೨೫.) ವಿರೂಪನಾಮಕ ಋಷಿಯೇ? ವಿಶೇಷತಃ ಸೂರ್ಯಾದಿ ಪ್ರಕಾಶಕನೂ ಅತ್ಯಭೀಷ್ಟಪ್ರದನೂ ಆದ ಭಗವಂತನನ್ನುದ್ದೇಶಿಸಿ ಉತ್ಪತ್ತಿ ನಾಶಗಳು ಇಲ್ಲದಿರುವ ವೇದವಚನದಿಂದ ಚೆನ್ನಾಗಿ ಸ್ತುತಿಯನ್ನು ಮಾಡು.

೨. **ನಿತ್ಯಯಾನಿತ್ಯಯಾ ಸ್ತೌಮಿ ಪರಮಾತ್ಮಾನಮಚ್ಯುತಂ ।** ಅತಿಶಯವಾಗಿ ನಿತ್ಯತ್ವೋಪೇತವಾದ ವೇದವಚನದಿಂದ ಪರಮಾತ್ಮನನ್ನು ಸ್ತುತಿಸುತ್ತೇನೆ.

೩. **ವಾಗ್ವಾವ ನಿತ್ಯಾ ನ ಹ್ಯೇಷೋತ್ಪದ್ಯತೇ ಅಸ್ಯಾಂ ಹಿ ಶ್ರುತಿರವತಿಷ್ಠತೇ ।** ಇತಿ ಶ್ರುತಿಃ. ವೇದವಾಕ್ಯವು ಅನಾದಿನಿತ್ಯವು; ಯಾವಾಗಲೂ ಹುಟ್ಟಲಾರದು.

೪. **ಶ್ರುತಿರ್ವಾವ ನಿತ್ಯಾ ಅನಿತ್ಯಾ ವಾ ಸ್ಮೃತಯಃ ಯಾಶ್ಚಾನ್ಯಾ ವಾಚಃ ।** ಶ್ರುತಿಯು ನಿತ್ಯವಾದುದೇ. ಸ್ಮೃತಿಗಳೂ ಇತರ ವಾಕ್ಯಗಳೂ ಅನಿತ್ಯಗಳೇ, ಎಂದು ಪೈಂಗೀ ಶ್ರುತಿಯು.

೫. **ವಿಜ್ಞೇಯಂ ಪರಮಂ ಬ್ರಹ್ಮ ಜ್ಞಾಪಿಕಾ ಪರಮಾ ಶ್ರುತಿಃ । ಅನಾದಿ ನಿತ್ಯಾ ಸಾ ತಚ್ಚ ವಿನಾ ತಾಂ ನ ಸ ಗಮ್ಯತೇ ॥** ಇತಿ ಕಾತ್ಯಾಯನ ಶ್ರುತಿಃ. ಪರಬ್ರಹ್ಮನೇ ಮುಖ್ಯಜ್ಞೇಯನು. ಶ್ರುತಿಯೇ ಮುಖ್ಯವಾಗಿ ಭಗತ್ಸ್ವರೂಪ ಪ್ರತಿಪಾದಕವು. ಶ್ರುತಿಯೂ ಬ್ರಹ್ಮನೂ ಕೂಡ ಅನಾದಿ ನಿತ್ಯಗಳು. ಶ್ರುತಿಹೊರತು ಆ ಹರಿಯು ಜ್ಞೇಯನಲ್ಲ.

೬. **ಸಹಸ್ರಧಾ ಮಹಿಮಾನಃ ಸಹಸ್ರಂ ಯಾವದ್ಬ್ರಹ್ಮವಿಷ್ಠಿತಂ ತಾವತೀ ವಾಕ್ ।** (ಋ. ಅಷ್ಟ. ೮. ಅಧ್ಯಾ. ೬.ವ. ೧೭.)

೭. **ನಿತ್ಯಾ ವೇದಾಸ್ಸಮಸ್ತಾಶ್ಚ ಶಾಶ್ವತಾ ವಿಷ್ಣುಬುದ್ಧಿಗಾಃ ॥** ಸಮಸ್ತವೇದಗಳೂ ನಿತ್ಯಗಳು. ಸದಾ ಏಕಪ್ರಕಾರಗಳು. ವಿಷ್ಣುವಿನ ಬುದ್ಧಿಯಲ್ಲಿರುತ್ತವೆ ಎಂದು ಬ್ರಹ್ಮಾಂಡ ಪುರಾಣದಲ್ಲಿದೆ.

೮. **ಅನಾದಿನಿಧನಾ ನಿತ್ಯಾ ವಾಗುತ್ಸೃಷ್ಟಾ ಸ್ವಯಂಭುವಾ । ಋಷೀಣಾಂ ನಾಮಧೇಯಾನಿ ಯಾಶ್ಚ ವೇದೇಷು ದೃಷ್ಟಯಃ । ವೇದಶಬ್ದೇಭ್ಯ ಏವಾದೌ ನಿರ್ಮಮೇ ಸ ಮಹೇಶ್ವರಃ ॥** ಇತಿ ಸ್ಮೃತಿಃ. ಸ್ವತಂತ್ರನಾದ ವಿಷ್ಣುವಿನಿಂದ ಉತ್ಪತ್ತಿ ನಾಶ ರಹಿತವಾದ ನಿತ್ಯವೇ ಆದ ವೇದರೂಪವಾದ ಮಾತು ಉಚ್ಚರಿಸಲ್ಪಟ್ಟಿತು. ಅಂತಹ ವೇದಶಬ್ದಗಳಿಂದಲೇ ಶ್ರೀ ಹರಿಯು ಬ್ರಹ್ಮಾದಿ ದೇವತೆಗಳ ನಾಮಗಳನ್ನು ವೇದಗಳಲ್ಲಿ ಕಾಣುವ ರೂಪ

೯. **ನಿತ್ಯಯಾ ನಿತ್ಯಯಾ ಸ್ತೌಮಿ ಬ್ರಹ್ಮ ತತ್ಪರಮಂ ಪದಂ ।** ಇತಿ ಶ್ರುತಿಃ. ಮುಕ್ತಪ್ರಾಪ್ಯನಾದ ಸರ್ವೋತ್ತಮನಾದ, ಬ್ರಹ್ಮನನ್ನು ನಿತ್ಯವಾದ ವೇದದಿಂದ ಸ್ತುತಿಸುತ್ತೇನೆ. ಅಂತೂ ಪ್ರಮಾಣಗಳು ಮೂರೇ ಎಂದು ಸಿದ್ಧವಾಯಿತು. ಈ ಮೂರು ಪ್ರಮಾಣಗಳಲ್ಲಿಯೂ ಹರಿ ಸರ್ವೋತ್ತಮತ್ವ ಮೊದಲಾದ ಅತೀಂದ್ರಿಯ ವಿಷಯಗಳನ್ನು ತಿಳಿಯಬೇಕಾದರೆ ಆಗಮವು * ಮುಖ್ಯ ಬೇಕಾಗಿರುತ್ತದೆ.

## ೨. ಪ್ರಪಂಚವು ಯಥಾರ್ಥವಾದುದು.

ಪ್ರಮಾಣವು ಮೂರು ವಿಧವೆಂದು ಸಿದ್ಧವಾದ ಮೇಲೆ ಪ್ರಮಾಣಸಿದ್ಧವಾದ ಜಗತ್ಸತ್ಯತ್ವವನ್ನು ಸ್ಥಾಪಿಸಬೇಕಾಗಿದೆ. ಕೆಲವರು (ಶಾಂಕರರೂ, ಬೌದ್ಧರೂ) ಜಗತ್ತು ಮಿಥ್ಯೆಯೆಂದು ವಾದಿಸುವರು. ಇನ್ನು ಕೆಲವರು (ರಾಮಾನುಜರೂ ಮಾಧ್ವರೂ), ಜಗತ್ತು ಸತ್ಯವೆಂದು ವಾದಿಸುವರು. ಈ ೨ರಲ್ಲಿ ಯಾವ ವಾದವು ಯುಕ್ತವಾದುದೆಂಬುವುದನ್ನು ಪ್ರಮಾಣಗಳಿಂದಲೇ ನಿಶ್ಚಯಮಾಡಬೇಕಾಗಿದೆ. ಸರ್ವೋತ್ತಮವಾದ ಪ್ರಮಾಣವು ಶ್ರುತಿಯಾದ ಪ್ರಯುಕ್ತ ಅದರ ಸಹಾಯದಿಂದಲೇ ಇದನ್ನು ನಿಶ್ಚೈಸಬೇಕಾಗಿದೆ.

ಆಪಾತತಃ ಜಗನ್ಮಿಥ್ಯಾತ್ವವನ್ನು ಸಾಧಿಸುವುದಾಗಿ ತೋರುವ ಶ್ರುತಿಗಳು ೨, ೩ ಮಾತ್ರಗಳಿವೆ. ಅವುಗಳ ಪೈಕಿ ಮುಖ್ಯವಾದುದು. **ಪ್ರಪಂಚೋ ಯದಿ ವಿದ್ಯೇತ ನಿವರ್ತೇತ ನ ಸಂಶಯಃ । ಮಾಯಾಮಾತ್ರಮಿದಂ ದ್ವೈತಮದ್ವೈತಂ ಪರಮಾರ್ಥತಃ ॥** ಇದರ ನಿಜಾರ್ಥವು ಮಾಂಡೂಕೋಪನಿಷದ್ಭಾಷ್ಯದಲ್ಲಿ (ಪು. ೩೧೭ರಲ್ಲಿ) ವ್ಯಕ್ತವಾಗಿಯದೆ. ಕಾರಣ ಪ್ರತ್ಯಕ್ಷಾದಿ ಯಾವ ಪ್ರಮಾಣವೂ ಇಲ್ಲದಿರುವುದರಿಂದ ಮಿಥ್ಯಾತ್ವವನ್ನು ಹೇಳುವುದು ಕೇವಲ ಅನುಚಿತವು. ಸತ್ಯತ್ವಸಾಧಕಗಳಾದ ನಿರವಕಾಶ ಅನೇಕ ಶ್ರುತಿಗಳು ಸ್ಪಷ್ಟಗಳಾಗಿವೆ.

೧. **ಯಚ್ಚಿಕೇತ ಸತ್ಯಮಿತ್ತನ್ನಮೋಘಂ ವಸು ಸ್ಪಾರ್ಹಮುತ ಜೇತೋತ ದಾತಾ ॥** (ಋಗ್ವೇ. ಅಷ್ಟ. ೮. ಅಧ್ಯಾ. ೧. ವ. ೨೭) ಯಾವ ಜಗತ್ತನ್ನು ಸೃಷ್ಟಿಮಾಡಿದನೋ, ಅದೆಲ್ಲವೂ ಸತ್ಯವೇ. ಮಿಥ್ಯೆಯಲ್ಲ. ಏಕೆಂದರೆ ಬಲ್ಯಾದಿಗಳನ್ನು ಜಯಿಸಿ ಇಂದ್ರಾದಿಗಳಿಗೆ ಜಗದಾದಿವಸ್ತುಗಳನ್ನು ಕೊಟ್ಟಿದ್ದಾನೆಷ್ಟೆ?

೨. **ವಿಶ್ವಂ ಸತ್ಯಂ ಮಘವಾನಾ ಯುವೋರಿದಾಪಶ್ಚ ನ ಪ್ರಮಿನಂತಿ ವ್ರತಂ ವಾಂ ॥** (ಋ. ಅಷ್ಟ. ೨. ಅಧ್ಯಾ. ೭. ವ. ೩) ಇಂದ್ರಬೃಹಸ್ಪತಿಗಳಿರಾ ನೀವು ರಕ್ಷಿಸತಕ್ಕ ಜಗತ್ತೆಲ್ಲವೂ ಸತ್ಯವೇ, ಈ ವಿಷಯವನ್ನು ಎಲ್ಲಾ ದೇವತೆಗಳೂ ತಿಳಿಯುತ್ತಾರೆ.

೩. **ಪ್ರಘಾನ್ವಸ್ಯ ಮಹತೋ ಮಹಾನಿ ಸತ್ಯಾ ಸತ್ಯಸ್ಯ ಕರಣಾನಿ ವೋಚಂ ॥** (ಋ. ಅಷ್ಟ. ೨. ಅಧ್ಯಾ. ೬. ವ. ೧೫) ಸರ್ವನಿಯಾಮಕನಾದ, ಸರ್ವೋತ್ತಮನಾದ ಶ್ರೀಹರಿಯ ವ್ಯಾಪಾರವನ್ನು ಸತ್ಯಗಳನ್ನಾಗಿಯೇ ಹೇಳುವೆನು.

---

* 'ದ್ವಿವಿಧಂ ಬಲವತ್ತ್ವಂ ಚ ಬಹುತ್ವಾಚ್ಚ ಸ್ವಭಾವತಃ। ತಯೋಃ ಸ್ವಭಾವೋ ಬಲವಾನುಪಜೀವ್ಯಾದಿಕಶ್ಚಸಃ' ॥ (೧) ಬಾಹುಲ್ಯದಿಂದಲೂ, ಸ್ವಭಾವದಿಂದಲೂ ಬಲವು ೨ ವಿಧವು. ಅವುಗಳಲ್ಲಿ ಸ್ವಭಾವವೇ ಪ್ರಬಲವು. ಅದು ಉಪಜೀವ್ಯಾದಿರೂಪವು. 'ಪ್ರಾಬಲ್ಯಮಾಗಮಸ್ಯೈವ ಜಾತ್ಯಾ ತೇಷು ತ್ರಿಷು ಸ್ಮೃತಂ' ॥ ಆ ಪ್ರತ್ಯಕ್ಷಾದಿ ೩ ಪ್ರಮಾಣಗಳಲ್ಲಿ ಸ್ವಭಾವತಃ ಆಗಮಕ್ಕೇನೇ ಪ್ರಾಬಲ್ಯವು. ಅಂತೂ ದೃಷ್ಟಾರ್ಥದಲ್ಲಿ ಪ ತ.ಕ.ಕೆ, ಪ್ರಾಬಲ್ಯವು. ಅದೃಷ್ಟಾರ್ಥದಲ್ಲಿ ಆಗಮಕ್ಕೇನೇ ಪ್ರಾಬಲ್ಯವು.

೪. **ಸತ್ಯಃ ಸೋಽಅಸ್ಯ ಮಹಿಮಾ ಗೃಣೇ ಶವೋ ಯಜ್ಞೇಷು ವಿಪ್ರರಾಜ್ಯೇ ||** (ಋ. ) ಈ ನಾರಾಯಣನ ಜಗತ್ಸೃಷ್ಟಿ ಮೊದಲಾದ ಮಹಿಮೆಯು ಯಥಾರ್ಥವಾದುದೇ, ಯಾಗಗಳಲ್ಲಿ ಸುಖಾರ್ಥವಾಗಿ ಸ್ತುತಿಸುತ್ತೇನೆ.

೫. **ಸತ್ಯಮೇನಮನು ವಿಶ್ವೇ ಮದಂತಿ ರಾತಿಂ ದೇವಸ್ಯ ಗೃಣತೋ ಮಘೋನಃ||** (ಋ. ಅಷ್ಟ. ೩. ಅಧ್ಯಾ. ೫. ವ. ೨೧) ಸ್ತುತಿಸತಕ್ಕ ದೇವೇಂದ್ರನಿಗೆ ಅಭೀಷ್ಟವನ್ನು ಕೊಡುವ ಈ ಹರಿಯನ್ನು ಸತ್ಯಜಗತ್ತನ್ನು ಸೃಷ್ಟಿಮಾಡಿದವನನ್ನಾಗಿಯೇ ಎಲ್ಲಾ ದೇವತೆಗಳು ತಿಳಿದು ಸಂತೋಷ ಪಡುತ್ತಾರೆ.

೬. **ಸತ್ಯಮಿದ್ವಾ ಉತಂ ವಯಮಿಂದ್ರಂ ಸ್ತವಾಮ ನಾನೃತಂ ||** (ಋ. ಅಷ್ಟ. ೬. ಅಧ್ಯಾ. ೪. ವ. ೪೧.)

೭. **ಯೋಽಭೂತ್ಸೋಮ್ಯಸ್ಸತ್ಯಮದ್ವಾ ||** (ಋ. )

೮. **ಸತ್ಯೋಽಯಂ ಪೂರ್ವೇಚಿದ್ದೇವಾಸಶ್ಚಿದ್ಯಮೀಧಿರೇ ||**

೯. **ಋತಂ ಯತೀ ಸರಮಾಗಾ ಅವಿಂದದ್ವಿಶ್ವಾನಿ ಸತ್ಯಾಂಗಿರಾಶ್ಚಕಾರ ||**

೧೦. **ತಂ ನು ಸತ್ಯಂ ಪವಮಾನಸ್ಯಾಸ್ತು ||** (ಋ. ಅಷ್ಟ. ೭. ಅಧ್ಯಾ. ೪. ವ. ೨.)

೧೧. **ಯದಂಗದಾಶುಷೇತ್ವಮಗ್ನೇ ಭದ್ರಂ ಕರಿಷ್ಯಸಿ ತವೇತ್ತತ್ಸತ್ಯಮಂಗಿರಃ ||** (ಋ. ಅಷ್ಟ. ೧. ಅಧ್ಯಾ. ೧. ವ. ೨)

೧೨. **ಅಜೋ ನಕ್ಷಾಂ ದಾಧಾರ ಪೃಥಿವೀಂ ತಸ್ತಂಭ ದ್ಯಾಂ ಮಂತ್ರೇಭಿಸ್ಸತ್ಯೈಃ||** (ಋ. ಅಷ್ಟ. ೧. ಅಧ್ಯಾ. ೫. ವ. ೧೧.)

೧೩. **ಕೃಣ್ವನ್ನಿಶ್ವಾನ್ಯಪಾಂಸಿ ಸತ್ಯಾ ||** (ಋ. ಅಷ್ಟ. ೧. ಅಧ್ಯಾ. ೫. ವ. ೧೪)

೧೪. **ಶ್ಯೇನಂ ಸಶ್ಚದ್ದೇವೋ ದೇವಂ ಸತ್ಯಮಿಂದ್ರಂ ಸತ್ಯ ಇಂದುಃ ||** (ಋ. ಅಷ್ಟ. ೨. ಅಧ್ಯಾ. ೬. ವ. ೨೮.)

೧೫. **ಆದ್ವಾಂ ಬ್ರವಾಮ ಸತ್ಯಾನ್ಯುಕ್ಥಾ ||** (ಋ. )

೧೬. **ಋತಾವರೀ ಋತ ಜಾತಸ್ಯ ಸತ್ಯಾ ||** (ಋ. )

೧೭. **ಸತ್ಯಮಿದ್ವಾ ಉ ಅಶ್ವಿನಾ ||** (ಋ. ಅಷ್ಟ. ೪. ಅಧ್ಯಾ. ೪. ವ. ೧೨)

೧೮. **ಆಸತ್ಯಾಭಿರಿಂದ್ರಂ ದ್ಯುಮ್ನಹೂತಿಭಿಃ ||** (ಋ. ಅಷ್ಟ. ೨. ಅಧ್ಯಾ. ೧. ವ. ೧೭)

೧೯. **ಸ್ಥಾತುಶ್ಚ ಸತ್ಯಂ ಜಗತಶ್ಚ ಧರ್ಮಣಿ ||** (ಋ. ಅಷ್ಟ. ೨. ಅಧ್ಯಾ. ೩. ವ. ೨.) ಇವೇ ಮೊದಲಾದ ಅನೇಕ ಶ್ರುತಿಗಳಲ್ಲಿ ಮಂತ್ರ, ಜಗತ್ತು, ನೀರು ಇತ್ಯಾದಿಗಳಿಗೂ, ಕರ್ಮಗಳಿಗೂ, ದೇವತೆಗಳಿಗೂ, ಪೃಥಿವ್ಯಾದಿಗಳಿಗೂ ಸತ್ಯತ್ವವನ್ನೇ ಸಮರ್ಥಿಸಿರುತ್ತದೆ.

೨೦. **ಅನಾದ್ಯನಂತಂ ಜಗದೇತದೀದೃಕ್ಪ್ರವರ್ತತೇ ನಾತ್ರ ವಿಚಾರ್ಯಮಸ್ತಿ । ನ ಚಾನ್ಯಥಾ ಕ್ವಾಪಿ ಚ ಕಸ್ಯ ಚೇದಮಭೂತ್ಪುರಾ ನಾಪಿ ತಥಾಽಭವಿಷ್ಯತ್ ||** ಪ್ರವಾಹತಃ ಉತ್ಪತ್ತಿನಾಶಗಳಿಲ್ಲದಿರುವ, ನಾನಾವಿಧವಾದ ಜಗತ್ತು ಪ್ರತಿ ಕಲ್ಪದಲ್ಲಿಯೂ ಇರುತ್ತದೆ. ಈ ಅರ್ಥದಲ್ಲಿ ಇನ್ನು ಮೇಲೆ ನಿರ್ಣಯಿಸತಕ್ಕದು ಇಲ್ಲ. ಸರ್ವವೂ ನಿರ್ಣೀತವೇ ಆಗಿದೆ. ಸಂದೇಹವೂ ಇಲ್ಲ. ಈ ಜಗತ್ತು ಯಾವ ಕಾಲದಲ್ಲಿಯೂ, ಯಾವ ದೇಶದಲ್ಲಿಯೂ, ಯಾವ ಪುರುಷನಿಗೂ ಬಾಧಿತವಾಗಿ ಪೂರ್ವದಲ್ಲಿ ಆಗಲಿಲ್ಲ. ಮೇಲೆಯೂ ಬಾಧ್ಯವು (ಮಿಥ್ಯೆಯು) ಆಗಲಾರದು. ಇದರಿಂದ ಜಗತ್ತು ಪ್ರವಾಹತಃ ನಿತ್ಯವೆಂದೂ ಅಬಾಧ್ಯ (ಪಾರಮಾರ್ಥಿಕ ಸತ್ಯ)

೨೧. ಅಸತ್ಯಮಪ್ರತಿಷ್ಠಂತೇ ಜಗದಾಹುರನೀಶ್ವರಂ । ಅಪರಸ್ಪರಸಂಭೂತಂ ಕಿಮನ್ಯತ್ಕಾಮಹೈತುಕಂ ॥ ಏತಾಂ ದೃಷ್ಟಿಮವಷ್ಟಭ್ಯ ನಷ್ಟಾತ್ಮಾನೋಽಲ್ಪಬುದ್ಧಯಃ । ಪ್ರಭವಂತ್ಯುಗ್ರಕರ್ಮಾಣಃ ಕ್ಷಯಾಯ ಜಗತೋಽಹಿತಾಃ ॥ (ಗೀ. ಅಧ್ಯಾ. ೧೬. ಶ್ಲೋ. ೮, ೯.) ಅಸುರರು 'ಜಗತ್ತು ಅಸತ್ಯವೆಂದೂ, ಜ್ಞಾನಬಾಧ್ಯವೆಂದೂ, ಈಶ್ವರರಹಿತವೆಂದೂ ಪ್ರಕೃತಿಯಿಂದ ಮಹತ್ತತ್ವ, ಅದರಿಂದ ಅಹಂಕಾರತತ್ವ ಇತ್ಯಾದಿ ಕ್ರಮದಿಂದ ಹುಟ್ಟಿದ್ದಲ್ಲವೆಂದೂ' ಹೇಳುತ್ತಾರೆ. ಸತ್ಯವಲ್ಲದಿದ್ದರೆ ಅಸತ್ತೋ? ಅಪರಸ್ಪರಸಂಭೂತವಾದರೆ ನಿತ್ಯವೋ? ಎಂದಾಶಂಕಿಸಿದರೆ ಅನ್ಯತ್=ಸದಸದ್ವಿಲಕ್ಷಣವು. ಅವಿದ್ಯಾಪರಿಕಲ್ಪಿತವು. ಇಂತಹ ಜ್ಞಾನವನ್ನು ಹೊಂದಿ ದುರ್ಬುದ್ಧಿಯುಳ್ಳ ಅಲ್ಪಜ್ಞಾನಿಗಳು ಜಗತ್ತನ್ನೇ ವಿನಾಶಗೊಳಿಸುವುದಕ್ಕೋಸ್ಕರ ಕಲಿಯುಗಾದಿಯಲ್ಲಿ ಹುಟ್ಟುತ್ತಾರೆ. ಎಂದು ಕೃಷ್ಣನುಪದೇಶಿಸಿರುವುದರಿಂದ ಜಗತ್ಸತ್ಯತ್ವವೇ ಕೃಷ್ಣವ್ಯಾಸರಿಗೆ ಅಭಿಪ್ರೇತವಾದದ್ದೆಂದು ನಿಶ್ಚಿತವಾಯಿತು.

೨೨. ಅಸತ್ಯಮಾಹುರ್ಜಗದೇತದಜ್ಞಾಃ ಶಕ್ತಿಂ ಹರೇರ್ಯೇ ನ ವಿದುಃ ಪರಾಂ ಹಿ । ಯಸ್ಸತ್ಯರೂಪಂ ಜಗದೇತದೀದೃಕ್ಸ್ರಷ್ಟಾ ಸ್ವಭೂತ್ಸತ್ಯಕರ್ಮಾ ಮಹಾತ್ಮಾ ॥ ಯಾರು ಸರ್ವೋತ್ತಮವಾದ ಹರಿಶಕ್ತಿಯನ್ನು ತಿಳಿಯುವುದಿಲ್ಲವೋ, ಅಂತಹ ಅಜ್ಞರೇ ಜಗತ್ತನ್ನು ಪಾರಮಾರ್ಥಿಕ ಸತ್ಯವಲ್ಲವೆಂದು ಹೇಳುತ್ತಾರೆ. ಯಾವ ಶ್ರೀ ಹರಿಯು ಸತ್ಯವೇ ಆದ, ನಾನಾವಿಧವಾದ ಈ ಜಗತ್ತನ್ನು ಸೃಷ್ಟಿಸಿ ಸತ್ಯಕರ್ಮನಾದನೋ.

೨೩. ಅಥೈನಮಾಹುಃ ಸತ್ಯಕರ್ಮೇತಿ ಸತ್ಯಂ ಹ್ಯೇವೇದಂ ವಿಶ್ವಮಸೌ ಸೃಜತೇ॥ ಇತಿ ಶ್ರುತಿಃ ॥ ಈ ಹರಿಯು ಸತ್ಯವೇ ಆದ ಈ ತೋರುವ ಜಗತ್ತನ್ನು ಸೃಷ್ಟಿಸುತ್ತಾನೆ. ಆ ಕಾರಣ ಈ ಹರಿಯನ್ನು ಸತ್ಯಕರ್ಮನೆಂದೇ ಹೇಳುತ್ತಾರೆ.

೨೪. ಅಥೈನಮಾಹುರ್ನಿತ್ಯಕರ್ಮೇತಿ ನಿತ್ಯಂ ಹ್ಯೇವಾಸೌ ಕುರುತೇ ॥ ಇತಿ ಶ್ರುತಿಃ ॥ ಹರಿಯು ಅಬಾಧ್ಯವಾದ ಜಗತ್ತನ್ನೇ ಸೃಷ್ಟಿಸಿದನು. ಆದುದರಿಂದ ಇವನನ್ನು ನಿತ್ಯಕರ್ಮನೆನ್ನುತ್ತಾರೆ.

೨೫. ಕವಿರ್ಮನೀಷೀ ಪರಿಭೂಃ ಸ್ವಯಂಭೂರ್ಯಾಥಾತಥ್ಯತೋಽರ್ಥಾನ್ ವ್ಯದಧಾಚ್ಛಾಶ್ವತೀಭ್ಯಸ್ಸಮಾಭ್ಯಃ ॥ (ಈ ಶಾ. ಪು. ೧೦).

೨೬. ಸತ್ಯವ್ರತಂ ಸತ್ಯಪರಂ ತ್ರಿಸತ್ಯಂ ಸತ್ಯಸ್ಯ ಯೋನಿಂ ನಿಹಿತಂ ಚ ಸತ್ಯೇ । ಸತ್ಯಸ್ಯ ಸತ್ಯಮೃತ ಸತ್ಯನೇತ್ರಂ ಸತ್ಯಾತ್ಮಕಂ ತ್ವಾಂ ಶರಣಂ ಪ್ರಪನ್ನಾಃ ॥ (ಭಾ. ೧೦ ಸ್ಕಂಧ) ಸತ್ಯವೇ ಆದ ಜಗತ್ತನ್ನು ಸೃಷ್ಟಿಮಾಡಿದ ಶ್ರೀಮನ್ನಾರಾಯಣನನ್ನು ಮರೆ ಹೋಗುತ್ತೇವೆ.

ಮೇಲಿನ ಶ್ರುತಿಗಳು ಜಗತ್ತಿಗೆ ವ್ಯಾವಹಾರಿಕ ಸತ್ಯತ್ವವನ್ನು ವಾದಿಸುತ್ತವೆ ಎಂದು ಕೆಲವರು ಹೇಳುವರು. ವ್ಯಾವಹಾರಿಕ ಸತ್ಯವೆಂದೂ ಪಾರಮಾರ್ಥಿಕ ಸತ್ಯವೆಂದೂ ವಿಂಗಡಿಸಲಿಕ್ಕೆ ತಕ್ಕ ಕಾರಣಗಳು ಇರುವುದಿಲ್ಲ. ಈ ವಿಷಯವು ಖಂಡನತ್ರಯದಲ್ಲಿ ವಿಸ್ತಾರವಾಗಿ ಹೇಳಲ್ಪಟ್ಟಿದೆ. ಆದುದರಿಂದ ಜಗತ್ತು ಪಾರಮಾರ್ಥಿಕ ಸತ್ಯವೆಂದೇ ನಿಶ್ಚಯವಾಗುವುದು.

ಜಗತ್ತು ಮಿಥ್ಯೆಯೆಂಬ ವಿಷಯದಲ್ಲಿ ಪ್ರತ್ಯಕ್ಷಾದಿ ಯಾವ ಪ್ರಮಾಣವೂ ಇಲ್ಲದಿರುವುದರಿಂದ ಪಾರಮಾರ್ಥಿಕ ಸತ್ಯತ್ವಬೋಧಕಗಳಾದ ೧. ಪ್ರತ್ಯಕ್ಷ, ೨. ಅನುಮಾನ, ೩. ಆಗಮ ಪ್ರಮಾಣಗಳೆಲ್ಲವೂ ಜಾಗರೂಕಗಳಾಗಿರುವುದರಿಂದ ಜಗತ್ತಿಗೆ ಪಾರಮಾರ್ಥಿಕ ಸತ್ಯತ್ವವನ್ನೇ ಅಂಗೀಕರಿಸತಕ್ಕದ್ದು. ಅಂತೂ ಜಗತ್ತು ಸತ್ಯವೆಂದೇ ಸಿದ್ಧವಾಯಿತು.

## ೫. ಜೀವರೆಲ್ಲರೂ ನೀಚೋಚ್ಚಭಾವವನ್ನು ಹೊಂದಿರುವರು.

ಜೀವರು ನೀಚೋಚ್ಚಭಾವವನ್ನು ಅಂದರೆ ತಾರತಮ್ಯವನ್ನು ಹೊಂದಿರುತ್ತಾರೆ. ಈ ವಿಷಯವು ಸರ್ವರಿಗೂ ಅನುಭವಸಿದ್ಧವಾಗಿರುತ್ತದೆ. ೧೪ ಲೋಕಗಳನ್ನು ರಕ್ಷಿಸುವುದಕ್ಕೋಸ್ಕರ ಶ್ರೀ ನಾರಾಯಣನು ಬ್ರಹ್ಮಾದಿ ದೇವತೆಗಳನ್ನು ಸೃಷ್ಟಿ ಮಾಡಿ ಅವರಲ್ಲಿ ಅಂತರ್ಗತನಾಗಿ ಅವರಿಂದಲೇ ರಕ್ಷಣೆ ಮಾಡಿಸುತ್ತಾನೆ.

ಇವರೆಲ್ಲರೂ ಪರಸ್ಪರವಾಗಿ ತಾರತಮ್ಯವನ್ನು ಹೊಂದಿರುತ್ತಾರೆ. ಈ ವಿಷಯವು **ತಸ್ಯೇಯಂ ಪೃಥಿವೀ ಸರ್ವಾ ವಿತ್ತಸ್ಯ ಪೂರ್ಣಾ ಸ್ಯಾತ್** ॥ ಇತ್ಯಾದಿ ತೈತ್ತಿರೀಯ ಶ್ರುತಿಯಲ್ಲಿ (ಪು. ೧೪೨-೧೪೭.) ವಿಸ್ತಾರವಾಗಿ ವಿವರಿಸೋಣಾಗಿದೆ. ಮನುಷ್ಯರಲ್ಲಿ ತಾಮಸರಿಂದ ಮಧ್ಯಮರು, ಉತ್ತಮರು. ಮಧ್ಯಮರಿಂದ ಮುಕ್ತಿಯೋಗ್ಯರು, ಅವರಲ್ಲಿ ಸ್ಥಾವರ ಜೀವರು ನಿಕೃಷ್ಟರು. ಅವರಿಂದ ಜಂಗಮಗಳಾದ ಪಶುಪಕ್ಷಿಗಳು ಶ್ರೇಷ್ಠಗಳು. ಅವುಗಳಿಂದ ಮನುಷ್ಯರು ಉತ್ತಮರು. ಅವರಿಂದ ಬ್ರಾಹ್ಮಣರು, ಅವರಿಂದ ಚಕ್ರವರ್ತಿಗಳು, ಅವರಿಂದ ಮನುಷ್ಯ ಗಂಧರ್ವರು. ಅವರಿಂದ ದೇವಗಂಧರ್ವರು. ಅವರಿಂದ ಚಿರಪಿತೃಗಳು, ಅವರಿಂದ ಆಜಾನಜದೇವತೆಗಳು. ಅವರಿಂದ ಪಿತೃದೇವತೆಗಳು. ಇವರೂ ಕರ್ಮಜ ದೇವತೆಗಳೂ ಸಮಾನಿಕರೇ.

೧. **ಕಾರ್ತವೀರ್ಯಃ ಪೃಥುಶ್ಚೈವ ದೌಷ್ಯಂತಿರ್ಭರತಸ್ತಥಾ । ಶಶಬಿಂದುಶ್ಚ ಮಾಂಧಾತಾ ಕಕುತ್ಸ್ಥಾದ್ಯಾಸ್ತಥಾ ಪರೇ ॥ ಸರ್ವೇ ತೇ ವಿಷ್ಣುನಾವಿಷ್ಟಾ ವಿಷ್ಣೋರ್ಭಿನ್ನಾಸ್ಸದೈವ ತು । ಶತಾವರಾಶ್ಚ ದೇವೇಭ್ಯಃ ಕರ್ಮದೇವಾ ಇತಿ ಸ್ಮೃತಾಃ ॥ ಬಲಿಃ ಅದ್ಭುತಃ ಶಂಭುಃ ವಿಧೃತಃ ಋತುಧಾಮಾ ಬೃಹಸ್ಪತಿಃ ಶುಚಿಃ** ಇಷ್ಟು ಜನರೂ ಕರ್ಮಜ ದೇವತೆಗಳು. ಒಂಭತ್ತುಕೋಟಿ ದೇವಗಣಗಳೂ ಪಾವಕ ಪ್ರಹ್ಲಾದಾದಿಗಳೂ ಕರ್ಮಜ ದೇವತೆಗಳಿಗೆ ಸಮಾನಿಕರು. ತಾಪಸಾದಿ ೧೧ ಮನುಗಳೂ ಚ್ಯವನ ಉಚಥ್ಯಋಷಿಗಳೂ ಪ್ರಿಯವ್ರತಗಯರಾಜರೂ ಸಮಾನಿಕರೇ. ತುಂಬುರು ಮೊದಲಾದ ೮ ಗಂಧರ್ವರೂ, ೯೨ ಅಪ್ಸರಸ್ತ್ರೀಯರೂ, ಸನಕಾದಿಗಳೂ ಸಮಾನಿಕರು. ಅವರಿಂದ ವಿಷ್ವಕ್ಸೇನ ಅಶ್ವಿನೀದೇವತೆಗಳು ಗಣಪತಿ, ಕುಬೇರರು, ಸೋಮಾರ್ಹ ೧೦೦ ದೇವತೆಗಳು ಉತ್ತಮರು.

೨. **ಮರುದ್ರುದ್ರಾದಿತ್ಯವಸುವಿಶ್ವೇದೇವಾ ಬೃಹಸ್ಪತಿಃ । ಋಭ್ವಶ್ವಿನೌ ಚ ರೋದಸ್ಯೌ ಪಿತೃಪಾಶ್ಚ ಶತಂ ಸುರಾಃ** ॥ ೫೦ ಮರುತುಗಳು, ೧೧ ರುದ್ರರು, ೧೨ ಆದಿತ್ಯರು, ೮ ವಸುಗಳು, ೧೦ ವಿಶ್ವೇದೇವತೆಗಳು, ೧ ಬೃಹಸ್ಪತಿ, ೧ ಋಭುಗಣ, ೨ ದ್ಯಾವಾಪೃಥಿವಿಗಳು, ೨ ಅಶ್ವಿನೀದೇವತೆಗಳು, ೩ ಪಿತೃಪರು. ಇವರು ೧೦೦ ದೇವತೆಗಳು. ॥ ಗಣಪತ್ಯಾದಿಗಳಿಂದ ಮಿತ್ರಾದಿಗಳು ಉತ್ತಮರು.

೩. **ಉಷಾಃ ಸ್ವಾಹಾ ಚ ಪರ್ಜನ್ಯೋ ಮಿತ್ರೋಽಗ್ನಿರ್ವರುಣೋ ವಿಧುಃ । ಪ್ರವಹೋಽನಿರುದ್ಧ ಇಂದ್ರೋಽಮೋ ರುದ್ರೋ ವಾಣೀ ಚ ಮಾರುತಃ । ಉತ್ತರೋತ್ತರತಶ್ಚೈತೇ ಗುಣೈಃ ಸರ್ವೈಶ್ಚ ಮುಕ್ತಿಗಾಃ** ॥ ಮಿತ್ರಾದಿಗಳಿಂದ ಮರೀಚಿ ಅತ್ರಿ ಅಂಗಿರಾಃ, ಪುಲಸ್ತ್ಯರು, ಪುಲಹರು, ಕ್ರತು, ವಸಿಷ್ಠ, ಹೀಗೆ ೭ಋಷಿಗಳು, ವಿಶ್ವಾಮಿತ್ರ, ವೈವಸ್ವತಮನುವು ಹೀಗೆ ೯ ಜನರು ಉತ್ತಮರು. ಮರೀಚ್ಯಾದಿಗಳಿಂದ ಭೃಗುಋಷಿ, ಪ್ರಧಾನಾಗ್ನಿ,

ದನು ಉತ್ತಮನು. ನಾರದನಿಂದ ವರುಣನು. ಆತನಿಂದ ಸೂರ್ಯ, ಚಂದ್ರ, ಯಮರು, ಸ್ವಾಯಂಭುವನ ಪತ್ನಿಯು ಉತ್ತಮರು. ಇವರಿಂದ ಪ್ರವಹನು. ಆತನಿಂದ ಬೃಹಸ್ಪತಿ, ದಕ್ಷ, ಅನಿರುದ್ಧ, ಸ್ವಾಯಂಭುವಮನು, ಶಚೀದೇವಿ, ರತಿ ಈ ೬ ದೇವತೆಗಳು ಉತ್ತಮರು. ಅನಿರುದ್ಧಾದಿಗಳಿಂದ ಅಹಂಕಾರಾಭಿಮಾನಿಯಾದ ಪ್ರಾಣನು ಉತ್ತಮನು. ಅವನಿಂದ ಇಂದ್ರ ಕಾಮರು. ಇವರಿಂದ ಸೌಪರ್ಣೀ (ಗರುಡನ ಹೆಂಡತಿ) ವಾರುಣೀ (ಶೇಷನ ಹೆಂಡತಿ) ಪಾರ್ವತಿ (ರುದ್ರನ ಪತ್ನಿ) ಯರು ಉತ್ತಮರು. ಇವರಿಂದ (೧) ನೀಲಾ, (೨) ಭದ್ರಾ, (೩) ಮಿತ್ರ ವಿಂದಾ, (೪) ಕಾಲಿಂದೀ, (೫) ಲಕ್ಷ್ಮಣಾ, (೬) ಜಾಂಬವತೀ, ಎಂಬ ವಿಷ್ಣುವಿನ ಮಹಿಷಿಯರು ಉತ್ತಮರು. ಈ ೬ ಮಹಾಮಹಿಷಿಯರಿಂದ ಗರುಡ, ಶೇಷ, ರುದ್ರರು ಇವರಿಂದ ಬ್ರಹ್ಮವಾಯು ಗಳ ಭಾರ್ಯರಾದ ಸರಸ್ವತೀ ಭಾರತಿಯರು, ಇವರಿಂದ ಬ್ರಹ್ಮವಾಯುಗಳು, ಬ್ರಹ್ಮವಾಯು ಗಳಿಂದ ಲಕ್ಷ್ಮೀದೇವಿಯು ಕೋಟಿಗುಣೋತ್ತಮಳು.

೪. **ಏತೇಭ್ಯಃ ಶ್ರೀಸ್ತು ಮುಕ್ತೇಭ್ಯೋ ಗುಣೈಃ ಕೋಟಿಗುಣೋತ್ತರಾ** ॥ ಇತಿ ಶ್ರುತಿಃ ॥ ಲಕ್ಷ್ಮೀದೇವಿಯಿಂದ ಲಕ್ಷ್ಮೀಪತಿಯಾದ ಶ್ರೀ ನಾರಾಯಣನು ಅನಂತಾನಂತಗುಣೋ ತ್ತಮನು.

೫. **ವಿಷ್ಣುಮಾಹಾತ್ಮ್ಯಲೇಶಸ್ಯ ವಿಭಕ್ತಸ್ಯ ಚ ಕೋಟಿಧಾ । ಪುನಶ್ಚಾನಂತಧಾ ತಸ್ಯ ಪುನಶ್ಚಾಪಿ ಹ್ಯನಂತಧಾ । ನೈಕಾಂಶಸಮಮಾಹಾತ್ಮ್ಯಾಃ ಶ್ರೀ ಶೇಷ ಬ್ರಹ್ಮಶಂಕರಾಃ** ॥ ಇತಿ ಸ್ಮೃತಿಃ ॥ ಶ್ರೀ ಹರಿಯೇ ಉತ್ತಮತ್ವಕ್ಕೆ ಅವಧಿಭೂತನು. ಆ ಹರಿಯಿಂದ ಯಾರೊಬ್ಬನು ಅಧಿಕನೂ ಇಲ್ಲ.

೬. **ಸಾ ಕಾಷ್ಠಾ ಸಾ ಪರಾ ಗತಿಃ** ॥ ಆ ಹರಿಯೇ ಅವಧಿಯು, ಮುಖ್ಯಪ್ರಾಪ್ಯನು ಎಂಬ (ಕಾಠ. ಪು. ೫೫.) ಶ್ರುತಿಯಿಂದ.

೭. **ತತ್ಸಮೋ ನಾಸ್ತಿ ಪರಮೋ ಹರಿರೇವ ನ ಚಾಪರಃ** । ಆ ಪರಮಾತ್ಮನಿಗೆ ಸಮಾನಿಕನು ಇಲ್ಲವೇ ಇಲ್ಲ. ಆತನೇ ಸರ್ವೋತ್ತಮನು, ಇತರನಲ್ಲ. ಎಂಬ ಸ್ಮೃತಿಯು.

೮. **ಮುಕ್ತಾನಾಂ ಪತಯೋ ದೇವಾಃ ದೇವಾನಾಂ ಚ ಪ್ರಜಾಪತಿಃ । ತಸ್ಯ ವಿಷ್ಣುರ್ನಚೈವೇದಂ ಪಾರಾವರ್ಯಂ ವಿನಶ್ಯತಿ** ॥ ಇತಿ ಶ್ರುತಿಃ ॥ ಮುಕ್ತರಿಗೆ ಇಂದ್ರಾದಿ ದೇವತೆಗಳು ನಿಯಾಮಕರು. ಅವರಿಗೆ ಚತುರ್ಮುಖನು, ಆತನಿಗೆ ಶ್ರೀ ಹರಿಯು ನಿಯಾ ಮಕನು. ನೀಚೋಚ್ಚಭಾವವು ಮುಕ್ತಿಯಲ್ಲಿಯೂ ಸಹ ವಿನಾಶವಾಗುವುದಿಲ್ಲ. ಅಂತೂ ಲೋಕದಲ್ಲಿ ನೀಚೋಚ್ಚಭಾವವಿದ್ದಂತೆಯೇ ಸರ್ವದಾ ಮುಕ್ತಿಯಲ್ಲಿಯೂ ತಾರತಮ್ಯವಿದೆ ಯೆಂದು ಸಿದ್ಧವಾಯಿತು.

೯. **ತಾರತಮ್ಯಾಪರಿಜ್ಞಾನಾದನುತ್ಥಾನಂ ತಮೋ ವ್ರಜೇತ್** ॥ ತಾರತಮ್ಯ ವನ್ನು ತಿಳಿಯದಿದ್ದರೆ ನಿತ್ಯನರಕವನ್ನೇ ಹೊಂದುತ್ತಾನೆ. ಅಂತೂ ತಾರತಮ್ಯವನ್ನು ತಿಳಿಯ ದಿದ್ದರೆ ನರಕಾದ್ಯನರ್ಥ ಪ್ರಾಪ್ತಿಯಾಗುವುದರಿಂದಲೂ ತಾರತಮ್ಯಜ್ಞಾನದಿಂದ ಮುಕ್ತ್ಯಾದಿಪುರು ಷಾರ್ಥಗಳು ಸಿಗುವುದರಿಂದಲೂ ತಾರತಮ್ಯಜ್ಞಾನವನ್ನು ಅವಶ್ಯವಾಗಿ ಸಂಪಾದಿಸಬೇಕು.

## ೪. ಜೀವರೆಲ್ಲರೂ ಶ್ರೀ ಪರಮಾತ್ಮನ ಸೇವಕರು.

ಬ್ರಹ್ಮಾದಿ ಜೀವರಲ್ಲಿ ತಾರತಮ್ಯವಿದೆಯೆಂದು ಸಿದ್ಧವಾದ ಮೇಲೆ ಸೇವ್ಯ ಸೇವಕ ನಿಯಮ್ಯ ನಿಯಾಮಕಭಾವವನ್ನು ನಿರೂಪಿಸುವದಾವಶ್ಯಕವಾಗಿದೆ. ಆ ಕಾರಣ ಭಗವಂತನೇ ನಿಯಾಮ ಕನು. ಬ್ರಹ್ಮಾದಿಗಳೆಲ್ಲರೂ ಶ್ರೀ ಹರಿಯ ಸೇವಕರೆಂದು ನಿರೂಪಿಸಲ್ಪಡುತ್ತದೆ.

ಜೀವರು ಶ್ರೀ ಹರಿಯ ದಾಸಾನುದಾಸರು. ಕೆಲವರು ಕೇವಲ ಶಿವನ ದಾಸರೆಂದೂ, ಶಕ್ತಿಯ ದಾಸರೆಂದೂ, ಗಣಪತಿಯ ದಾಸರೆಂದೂ, ಕೆಲವರು ಇತರ ದೇವತೆಗಳ ದಾಸರೆಂದೂ ತಮ್ಮತಮ್ಮ ಮನಸ್ಸಿಗೆ ಬಂದಂತೆ ಹೇಳುತ್ತಾರೆ. ಅವುಗಳು ಪ್ರಮಾಣವಿರುದ್ಧಗಳೂ, ಪ್ರಮಾಣ ಶೂನ್ಯಗಳೂ ಆಗಿವೆ.

ಅನೇಕರಿಗೆ ಉತ್ತಮತ್ವವು ಕೂಡಲಾರದು. ಆ ಕಾರಣ ಶ್ರುತ್ಯಾದಿ ಪ್ರಮಾಣಗಳು ಶ್ರೀ ನಾರಾಯಣನಿಗೇನೇ ಸರ್ವೋತ್ತಮತ್ವವನ್ನು ಸಾಧಿಸುವುದರಿಂದ ಸರ್ವ ಜೀವರು ಶ್ರೀ ಹರಿಯ ಸೇವಕರೇ. ಪರಮೇಶ್ವರನಿಗೆ ನಿಯಾಮಕತ್ವಾದಿಗಳನ್ನು ಶ್ರುತಿಗಳು ಸಾಧಿಸುತ್ತವೆ.

೧. **ಕೃಣ್ವೇ ವೀರ ಉಗ್ರಮುಗ್ರಂ ದಮಾಯನ್ನನ್ಯಮನ್ಯಮತಿನೇನೀಯಮಾನಃ । ಏಧಮಾನದ್ವಿಳುಭಯಸ್ಯ ರಾಜಾ ಚೋಷ್ಕೂಯತೇ ವಿಶ ಇಂದ್ರೋ ಮನುಷ್ಯಾನ್ ॥** (ಋಗ್ವೇದ. ಅಷ್ಟ. ೪. ಅಧ್ಯಾ. ೭. ವ. ೩೩.) ಶ್ರೀ ಹರಿಯು ದುಷ್ಟರನ್ನು ನಿಗ್ರಹಿಸುವವನಾಗಿಯೂ ಸಜ್ಜನರನ್ನು ಉದ್ಧರಿಸುವವನಾಗಿಯೂ, ನಿತ್ಯಸಂಸಾರಿಗಳನ್ನು ತಿರಿಗಿಸುವವನಾಗಿಯೂ ಕೇಳಲ್ಪಡುತ್ತಾನೆ. ಇದರಿಂದ ನಿಯಾಮಕನೆಂದು ಸಿದ್ಧವಾಯಿತು.

೨. **ಚತುರ್ಭಿಸ್ಸಾಕಂ ನವತಿಂ ಚ ನಾಮಭಿಶ್ಚಕ್ರಂ ನ ವೃತ್ತಂ ವ್ಯತೀಂ ರವೀವಿಪತ್ ।** (ಋ. ಅಷ್ಟ. ೨. ಅಧ್ಯಾ. ೨ ವರ್ಗ ೨೫.) ಶ್ರೀ ನಾರಾಯಣನು ವಿಶೇಷತಃ ಅಧಿಕರಾದ ೯೪ ದೇವತೆಗಳನ್ನು ವರ್ತುಳವಾದ ಚಕ್ರದಂತೆ ತಿರುಗಿಸುತ್ತಾನೆ. ಇದರಿಂದ ಬ್ರಹ್ಮಾದಿಗಳಿಗೂ ಶ್ರೀ ಹರಿಯೇ ನಿಯಾಮಕನೆಂದು ಉಕ್ತವಾಯಿತು. ಅನೇಕರಿಗೆ ನಿಯಾಮಕತ್ವವು ಕೂಡಲಾರದು. ಒಬ್ಬ ಶ್ರೀ ಕೃಷ್ಣನಿಗೇನೇ ನಿಯಾಮಕತ್ವವೆಂಬುವುದು ವ್ಯಾಸರ ವಾಕ್ಯಗಳಿಂದ ಸಿದ್ಧವಾಗಿಯದೆ.

೩. **ಅಪೂರ್ಣೋಽಯಂ ಜೀವಸಂಘೋಽಸ್ವತಂತ್ರಃ ಪೂರ್ಣೋ ಹರಿರ್ಯಃ ಸ್ವತಂತ್ರಸ್ಸದೈವ । ನ ಹಿ ಸ್ವತಂತ್ರೋಽಪೂರ್ಣತಾಂ ಕಾಮಯೀತ ಪೂರ್ಣೋ ಯದಿ ಸ್ಯಾದಸ್ವತಂತ್ರಃ ಕುತಸ್ಸಃ ॥ ಇತಿ ಶ್ರುತಿಃ ॥** ಜೀವರೆಲ್ಲರೂ ಅಪೂರ್ಣರು, ಅಸ್ವತಂತ್ರರು, ಶ್ರೀ ಹರಿಯ ಸೇವಕರು. ಶ್ರೀ ಹರಿಯೊಬ್ಬನೇ ಪೂರ್ಣನು, ಸ್ವತಂತ್ರನು. ಸ್ವತಂತ್ರನು ಅಪೂರ್ಣತೆಯನ್ನು ಇಚ್ಛಿಸಲಾರನು. ಪೂರ್ಣನಾದರೆ ಅಸ್ವತಂತ್ರನು ಹೇಗೆ ಆದಾನು.

೪. **ಏಕಃ ಶಾಸ್ತಾ ನ ದ್ವಿತೀಯೋಽಸ್ತಿ ಶಾಸ್ತಾ ॥** (ಭಾಗ. ) ಶ್ರೀ ನಾರಾಯಣನೊಬ್ಬನೇ ಶಿಕ್ಷಕನು. ಇನ್ನೊಬ್ಬನು ಶಿಕ್ಷಕನಿಲ್ಲವೆಂಬುವುದು ಸರ್ವರಿಗೂ ಸರಿಯೇ. ಆತನೇ ಬಲಿಷ್ಠರಿಗೂ ಬಲಪ್ರದನು.

೫. **ವಯಂ ಮನುಚರಮುಖ್ಯಾಃ ಕರ್ಮಭಿಸ್ತೇ ಮನೋಜ್ಞೈಃ ॥** (ಭಾಗ ) ಎಲೋ ಕೃಷ್ಣನೇ ನಾವು ನಿನಗೆ ಪ್ರೀತಿಕರವಾದ ಕೃತ್ಯಗಳನ್ನು ಮಾಡುತ್ತಿರುವುದರಿಂದ ನಿನ್ನ ಸೇವಕರಲ್ಲಿ ಪ್ರಧಾನರಾಗಿದ್ದೇವೆ.

೬. **ಈಶ್ವರಃ ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ । ಭ್ರಾಮಯನ್ ಸರ್ವಭೂತಾನಿ ಯಂತ್ರಾರೂಢಾನಿ ಮಾಯಯಾ । ತಮೇವ ಶರಣಂ ಗಚ್ಛ ಸರ್ವಭಾವೇನ ಭಾರತ ॥** (ಗೀತಾ. ಅ. ೧೮. ಶ್ಲೋ. ೬೧.) ಎಲೈ ಅರ್ಜುನನೇ ಶ್ರೀ ಹರಿಯು ತನ ಶಕ್ತಿಯಿಂದ ಸರ್ವಪ್ರಾಣಿಗಳನ್ನು ಯಂತ್ರಾರೂಢಗಳಾದ ಗೊಂಬೆಗಳನ್ನೆಂಬಂತೆ ತಿರಿಗಿ

**೭. ತಮೇವ ವತ್ಸಾಶ್ರಯ ಸರ್ವನಾಥಂ ಸ್ವಭೃತ್ಯಸಂಸಾರತರೋಃ ಕುಠಾರಂ ॥** (ಭಾಗ.) ಎಲೈ ಬಾಲಕನೇ ತನ್ನ ಭೃತ್ಯರ ಸಂಸಾರವೆಂಬ ವೃಕ್ಷಕ್ಕೆ ಕುಠಾರದಂತಿರುವ ಬ್ರಹ್ಮಾದಿಗಳಿಗೆ ಸ್ವಾಮಿಯಾದ ಶ್ರೀ ನಾರಾಯಣನನ್ನೇ ಆಶ್ರಯಿಸು.

**೮. ದ್ರವ್ಯಂ ಕರ್ಮ ಚ ಕಾಲಶ್ಚ ಸ್ವಭಾವೋ ಜೀವ ಏವ ಚ । ಯದನುಗ್ರಹತಸ್ಸಂತಿ ನ ಸಂತಿ ಯದುಪೇಕ್ಷಯಾ ॥** (ಭಾಗ. ) ದ್ರವ್ಯಾದಿಗಳು, ಜೀವರು ಶ್ರೀ ಹರಿಯ ಅನುಗ್ರಹದಿಂದಲೇ ಇರುತ್ತಾರೆ. ಆತನನ್ನುಪೇಕ್ಷಿಸಿ ಇರಲಾರರು. ಅಂತೂ ಸರ್ವಸೇವ್ಯನು ನಾರಾಯಣನೊಬ್ಬನೆಂದೂ ಬ್ರಹ್ಮಾದಿಗಳೆಲ್ಲರೂ ಸೇವಕರೆಂದೂ ಸಿದ್ಧವಾಯಿತು.

## ೧. ಶ್ರೀ ಹರಿಯೇ ಸರ್ವೋತ್ತಮನು.

ದುಷ್ಟಸಂಹಾರಕನೂ ಭಕ್ತರ ಪಾಪಪರಿಹಾರಕನೂ ಆದ ಶ್ರೀ ನಾರಾಯಣನೇ ಬ್ರಹ್ಮರುದ್ರೇಂದ್ರಾದಿ ಸರ್ವ ಜೀವರಿಂದಲೂ ಅಕ್ಷರಶಬ್ದವಾಚ್ಯಳಾದ ಲಕ್ಷ್ಮೀದೇವಿಯಿಂದಲೂ ಅತ್ಯುತ್ತಮನು. **ದ್ವಾವಿಮೌ ಪುರುಷೌ ಲೋಕೇ ಕ್ಷರಶ್ಚಾಕ್ಷರ ಏವ ಚ । ಕ್ಷರಸ್ಸರ್ವಾಣಿ ಭೂತಾನಿ ಕೂಟಸ್ಥೋಽಕ್ಷರ ಉಚ್ಯತೇ ॥ ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ । ಯೋ ಲೋಕತ್ರಯಮಾವಿಶ್ಯ ಬಿಭರ್ತ್ಯವ್ಯಯ ಈಶ್ವರಃ ॥ ಯಸ್ಮಾತ್ ಕ್ಷರಮತೀತೋಽಹಮಕ್ಷರಾದಪಿ ಚೋತ್ತಮಃ । ಅತೋಽಸ್ಮಿ ಲೋಕೇ ವೇದೇ ಚ ಪ್ರಥಿತಃ ಪುರುಷೋತ್ತಮಃ ॥** (ಗೀ. ಅ. ೧೫ ಶ್ಲೋ. ೧೬, ೧೭, ೧೮.) ಲೋಕದಲ್ಲಿ ಕ್ಷರ, ಅಕ್ಷರರೆಂದು ಇಬ್ಬರು ಪುರುಷರು. ಬ್ರಹ್ಮಾದಿಗಳು ಕ್ಷರರು, ಲಕ್ಷ್ಮಿಯು ಅಕ್ಷರಳು. ಇವರಿಬ್ಬರಿಂದಲೂ ಭಿನ್ನನೂ, ಉತ್ತಮನೂ ಆದ ಪುರುಷನು ಪರಮಾತ್ಮನೆಂದು ಹೇಳಲ್ಪಡುತ್ತಾನೆ. ಈ ಅವಿನಾಶಿಯಾದ ಈಶ್ವರನೇ ೩ ಲೋಕಗಳನ್ನು ಪ್ರವೇಶಿಸಿ ಧರಿಸುತ್ತಾನೆ. ನಾನು ಕ್ಷರರನ್ನು ಅತಿಕ್ರಮಿಸಿದವನು, ಲಕ್ಷ್ಮಿಯಿಂದಲೂ ಉತ್ತಮನು. ಆದುದರಿಂದ ಲೋಕ, ವೇದಗಳಲ್ಲಿ ಪುರುಷೋತ್ತಮನೆಂದು ನಾನೇ ಪ್ರಸಿದ್ಧನು. ಎಂದು ಶ್ರೀ ಕೃಷ್ಣನುಪದೇಶಿಸಿರುವನು. ಸರ್ವ ಜಗತ್ತಿನ ಸೃಷ್ಟಿಮೊದಲಾದುವುಗಳನ್ನು ಮಾಡಿದ ಶ್ರೀ ನಾರಾಯಣನೇ ಸರ್ವೋತ್ತಮನೆಂದು ಶ್ರುತಿಗಳು ಸಾಧಿಸುತ್ತಿವೆ.

**೧. ಯತೋ ವಾ ಇಮಾನಿ ಭೂತಾನಿ ಜಾಯಂತೇ । ಯೇನ ಜಾತಾನಿ ಜೀವಂತಿ । ಯತ್ಪ್ರಯಂತ್ಯಭಿಸಂವಿಶಂತಿ । ತದ್ವಿಜಿಜ್ಞಾಸಸ್ವ ತದ್ಬ್ರಹ್ಮೇತಿ ॥** (ತೈ. ಉ. ಪು. ೧೬೪) ಯಾವ ವಿಷ್ಣುವಿನಿಂದಲೇ ಈ ಬ್ರಹ್ಮಾದಿಗಳು ಹುಟ್ಟುತ್ತಾರೋ, ಹುಟ್ಟಿದವರೂ ಯಾರಿಂದಲೇ ಜೀವಿಸುತ್ತಿರುತ್ತಾರೋ, ಯಾವಾತನನ್ನು ಪ್ರಲಯಕಾಲದಲ್ಲಿ ಪ್ರವೇಶಿಸುತ್ತಾರೋ, ಮುಕ್ತಿಯಲ್ಲಿಯೂ ಸ್ವೇಚ್ಛೆಯಿಂದ ಪ್ರವೇಶಿಸುತ್ತಾರೋ, ಆತನನ್ನೇ ವಿಶೇಷಾಕಾರವಾಗಿ ವಿಚಾರ ಮಾಡು. ಆತನೇ ಬ್ರಹ್ಮಶಬ್ದವಾಚ್ಯನು. ಹಾಗಾದರೆ ಬ್ರಹ್ಮಶಬ್ದವಾಚ್ಯರು ಚತುರ್ಮುಖ, ರುದ್ರಾದಿಗಳೂ ಆಗುವರು, ವಿಷ್ಣುವೇ ಎಂದು ನಿಶ್ಚಯವು ಹೇಗೆ ಆಗುವುದು? ಎಂದರೆ:-

**೨. ಬೃಹಂತೋ ಹ್ಯಸ್ಮಿನ್ ಗುಣಾಃ ॥ ಬ್ರಹ್ಮಶಬ್ದಃ ಪರೇ ವಿಷ್ಣೌ ನಾನ್ಯತ್ರ ಕ್ವಚಿದಿಷ್ಯತೇ ॥** ಇತ್ಯಾದಿ ಶ್ರುತಿಸ್ಮೃತಿಗಳಿಂದ ಅಮಿತಗುಣಭರಿತನಾದ ನಾರಾಯಣನೇ ಬ್ರಹ್ಮಶಬ್ದವಾಚ್ಯನು. ಆತನೇ ಸರ್ವರಿಗೂ ಸೃಷ್ಟಿಸ್ಥಿತಿಸಂಹಾರಾದಿಗಳನ್ನು ಮಾಡುವವನು. ಆ ಕಾರಣ ಆತನೇ ಸರ್ವೋತ್ತಮನು.

ಪೂರ್ವೋಕ್ತ ಶ್ರುತಿಗಳಲ್ಲಿ ವಿಷ್ಣುಪದವಿಲ್ಲದಿರುವುದರಿಂದ ಈ ಲಕ್ಷಣವು ಶ್ರೀ ವಿಷ್ಣುವಿಗೆ ಎಂಬುವುದು ಹೇಗೆ ಸಂಗತವಾಗುವುದೆಂದರೆ:

೩. **ವಿಷ್ಣೋರ್ನುಕಂ ವೀರ್ಯಾಣಿ ಪ್ರವೋಚಂ ಯಃ ಪಾರ್ಥಿವಾನಿ ವಿಮಮೇ ರಜಾಂಸಿ ॥** (ಋ. ಅಷ್ಟ. ೨. ಅಧ್ಯಾ. ೨. ವ. ೨೪.) ಯಾವಾತನು ನಾರಾಯಣನ ಸಾಮರ್ಥ್ಯಗಳನ್ನು ಸಂಪೂರ್ಣವಾಗಿ ಹೇಳುತ್ತಾನೆ. ಯಾವ ಚತುರ್ಮುಖನು ಪೃಥಿವೀ ಪರಮಾಣುಗಳನ್ನು ಎಣಿಕೆ ಮಾಡುತ್ತಾನೋ, ಅವನೂ ವರ್ಣಿಸಲಿಕ್ಕೆ ಅಶಕ್ತನು. ಅಂತೂ ಅಗಣಿತ ಗುಣ ಪರಿಪೂರ್ಣನು ವಿಷ್ಣುವೇ.

ವಿಷ್ಣು ಅಂದರೆ ವ್ಯಾಪಕನೆಂದರ್ಥವು. ಅಂತಹರು ರುದ್ರಾದಿಗಳೂ ಆಗುವುದರಿಂದ ನಾರಾಯಣನೇ ಸೃಷ್ಟ್ಯಾದಿಗಳನ್ನು ಮಾಡಿದ್ದೆಂದು ಹೇಗೆ ನಿಶ್ಚಯವಾಗಬಹುದೆಂದರೆ:

೪. **ಏಕೋ ನಾರಾಯಣ ಆಸೀನ್ನ ಬ್ರಹ್ಮಾ ನ ಚ ಶಂಕರಃ ॥** ನಾರಾಯಣನೊಬ್ಬನೇ ಪ್ರಳಯಕಾಲದಲ್ಲಿ ಸ್ವತಂತ್ರನಾಗಿದ್ದನು. ಚತುರ್ಮುಖನಾಗಲೀ ರುದ್ರನಾಗಲೀ ಇರಲಿಲ್ಲ. ಆ ಮೇಲೆ ಇವರನ್ನು ಸೃಷ್ಟಿಸುತ್ತೇನೆಂದು ಆಲೋಚಿಸಿ ಚತುರ್ಮುಖಾದಿ ದೇವತೆಗಳನ್ನು ಸೃಷ್ಟಿಸಿದನು. ಅಂತೂ ಚತುರ್ಮುಖಾದಿಗಳಿಗೂ ವಿಷ್ಣುಶಬ್ದವಾಚ್ಯನಾದ ನಾರಾಯಣನೇ ಸೃಷ್ಟಿಸುವವನು.

೫. **ನಾರಾಯಣಂ ಮಹಾಜ್ಞೇಯಂ ವಿಶ್ವಾತ್ಮಾನಂ ಪರಾಯಣಂ ॥** (ಮಹಾನಾ ೧೧) ತತ್ ವಿಶ್ವಂ=ಆ ಬ್ರಹ್ಮಾದಿ ಸರ್ವ ಜಗತ್ತು, ಮಹಾಜ್ಞೇಯಂ=ಸರ್ವೋತ್ತಮನೂ, ಜ್ಞೇಯನೂ ಆದ, ವಿಶ್ವಾತ್ಮಾನಂ=ಸರ್ವಸ್ವಾಮಿಯಾದ, ಪರಾಯಣಂ=ಮುಕ್ತರಿಗೂ ಆಶ್ರಯನಾದ ಶ್ರೀ ನಾರಾಯಣನನ್ನು, (ಆಶ್ರಯಿಸುತ್ತಿದೆ.)

೬. **ಸರ್ವಸ್ಯಾಧಿಪತಿಃ ಸರ್ವಸ್ಯೇಶಾನಃ ಸ ವಾ ಏಷಃ ನೇತಿ ನೇತಿ ॥** (ಬೃ. ೬. ೪-೨೨) ಸ ವಾ ಏಷಃ=ಆ ಈ ನಾರಾಯಣನು, ಸರ್ವಸ್ಯ=ಬ್ರಹ್ಮರುದ್ರಾದಿಗಳಿಗೆ, ಅಧಿಪತಿಃ=ಗುಣಾಧಿಕನೂ ಪಾಲಕನೂ, ಸರ್ವಸ್ಯ ಈಶಾನಃ=ಸರ್ವಜಗತ್ತಿಗೆ ಪಾಲಕರಾದ ಬ್ರಹ್ಮಾದಿಗಳಿಗೆ ಪ್ರೇರಕನು.

೭. **ಪ್ರಾಣೋ ವಾ ಆಶಾ ಯಾ ಭೂಯಾನ್ ವಿಷ್ಣುರ್ವೈ ದೇವೇಭ್ಯೋ ಭೂಯಾನ್ ತಸ್ಮಾದ್ಭೂಯಾನ್ನಾಮ ॥** (ಛಾಂ. ೭ ೧೫. ೧.) ಆಶಾಯಾಃ=ಭಾರತಿಯಿಂದ, ಪ್ರಾಣಃ=ಮುಖ್ಯಪ್ರಾಣನು, ಭೂಯಾನ್=ಗುಣಾದಿಗಳಿಂದ ಶ್ರೇಷ್ಠನು. ದೇವೇಭ್ಯಃ=ಬ್ರಹ್ಮಾದಿ ಸರ್ವದೇವತೆಗಳಿಂದಲೂ, ವಿಷ್ಣುಃ=ನಾರಾಯಣನೇ, ಭೂಯಾನ್=ಗುಣಾದಿಗಳಿಂದ ಶ್ರೇಷ್ಠನು. ತಸ್ಮಾತ್=ಆದುದರಿಂದಲೇ, ಭೂಯಾನ್ ನಾಮ=ಭೂಯಾನ್ ಎಂದು ಪ್ರಸಿದ್ಧನು.

೮. **ಅಯಂ ಚ ಲೋಕಃ ಪರಶ್ಚ ಲೋಕಃ ಸರ್ವಾಣಿ ಭೂತಾನಿ ದೇವಾಶ್ಚ ದಿವ್ಯಾನಿ ಚ ಲೋಕಾಶ್ಚ ಲೋಕಿನಶ್ಚ ಅಲೋಕಾಶ್ಚ ಅಲೋಕಿನಶ್ಚ ವಿಷ್ಣಾವೇವೋತಾಶ್ಚ ಪ್ರೋತಾಶ್ಚ ಭವಂತಿ ॥** (ಬೃ.        ) ಈ ಲೋಕವು, ಪರಲೋಕವು, ಎಲ್ಲಾ ಭೂತಗಳು, ದೇವತೆಗಳು. ಸರ್ವರೂ ಸರ್ವಪದಾರ್ಥಗಳೂ, ವಿಷ್ಣುವಿನಲ್ಲಿಯೇ ಆಶ್ರಿತಗಳಾಗಿವೆ. ಚೆನ್ನಾಗಿ ಸಂಬದ್ಧಗಳಾಗಿವೆ.

೯. **ಅಸ್ಯ ದೇವಸ್ಯ ಮೀಳ್ಹುಷೋ ವಯಾ ವಿಷ್ಣೋರೇಷಸ್ಯ ಪ್ರಭೃಥೇ ಹವಿ [illegible] ಗುದಿಯಂ ಮಹಿತ್ವಂ ಯಾಸಿಷ್ಟಂ ವರ್ತಿರಶ್ವಿನಾವಿರಾ**

ಏಳ್ವಪಃ=ಭಕ್ತರಿಗೆ ಅಭೀಷ್ಟಪ್ರದನಾದ, ಏವಸ್ಯ=ಚೆನ್ನಾಗಿ ಇಚ್ಛಾರೂಪನಾದ, ಅಸ್ಯ ವಿಷ್ಣೋಃ=ಈ ನಾರಾಯಣನಿಗೆ, ಹವಿರ್ಭಿಃ=ಹವಿರಾದಿಗಳಿಂದ, ಪ್ರಭೃಥೇ=ಪೂಜೆಯು, ಮಾಡಲ್ಪಡುತ್ತಿರಲು, ವಯಾಃ=ಬಂಧಕನಾದ, ರುದ್ರಃ=ರುದ್ರನು, ರುದ್ರಿಯಂ=ರುದ್ರಸಂಬಂಧಿಯಾದ, ಮಹಿತ್ವಂ=ಮಹಿಮೆಯನ್ನು, ವಿದೇಹಿ=ಹೊಂದಿರುವನು, ಅಶ್ವಿನಾ=ಅಶ್ವಿನೀ ದೇವತೆಗಳಿರಾ, ಇರಾವತ್=ಅನ್ನದಂತೆ, ವರ್ತಿಃ=ಇರುವಿಕೆಯನ್ನು, ಯಾಸಿಷ್ಟಂ=ಹೊಂದಿರುವಿರಿ. ಇದರಿಂದ ರುದ್ರಾದಿಗಳಿಂದ ಉತ್ತಮತ್ವವು ಸಿದ್ಧವಾಯಿತು.

೧೦. **ವಾಸುದೇವೋ ವಾ ಇದಮಗ್ರಆಸೀತ್ ನ ಬ್ರಹ್ಮಾ ನ ಚ ಶಂಕರಃ ॥** ಪ್ರಳಯಕಾಲದಲ್ಲಿ ವಾಸುದೇವನೊಬ್ಬನೇ ಇರುತ್ತಿದ್ದನು. ಚತುರ್ಮುಖನಾಗಲೀ, ರುದ್ರನಾಗಲೀ ಯಾರೂ ಇರಲಿಲ್ಲ. ಇದರಿಂದ ಶ್ರೀ ಹರಿಯೊಬ್ಬನೇ ಪ್ರಳಯಕಾಲದಲ್ಲಿ ಇರುತ್ತಿದ್ದನು. ಆಗ ಬ್ರಹ್ಮರುದ್ರೇಂದ್ರಾದಿಗಳು ಇರಲಿಲ್ಲ.

೧೧. **ಪರೋ ಮಾತ್ರಯಾ ತನ್ವಾ ವೃಧಾನ ನ ತೇ ಮಹಿತ್ವಮನ್ವಶ್ನುವಂತಿ । ನ ತೇ ವಿಷ್ಣೋ ಜಾಯಮಾನೋ ನ ಜಾತೋ ದೇವ ಮಹಿಮ್ನಃ ಪರಮಂತಮಾಪ ॥** (ಋ ಅ. ೫. ಅ. ೬. ವರ್ಗ. ೨೪). ಎಲೋ ವಿಷ್ಣುವೇ ನೀನು ಅಪರಿಮಿತ ಮಹಿಮೆಯುಳ್ಳವನು. ಸರ್ವಲೋಕ ವ್ಯಾಪ್ತನು. ನಿನ್ನ ಸಮಾನಿಕರೂ ಯಾರೂ ಇಲ್ಲ. ನಿನ್ನ ಗುಣಗಳನ್ನು ಸಂಪೂರ್ಣವಾಗಿ ತಿಳಿದವನೂ ಇಲ್ಲ.

೧೨. **ಯೋ ನಃ ಪಿತಾ ಜನಿತಾ ಯೋ ವಿಧಾತಾ ಧಾಮಾನಿ ವೇದ ಭುವನಾನಿ ವಿಶ್ವಾ ॥** (ಋ. ಅ. ೮. ಅ. ೪. ವ. ೧೬.) ಶ್ರೀ ನಾರಾಯಣನೇ ಸರ್ವಪ್ರಾಣಿಗಳಿಗೂ ತಂದೆಯಾಗಿಯೂ ರಕ್ಷಕನಾಗಿಯೂ ಸರ್ವಜಗತ್ತನ್ನು ನಿರ್ಮಾಣ ಮಾಡುವವನಾಗಿಯೂ ಸರ್ವಜ್ಞನಾಗಿಯೂ ಇರುವವನು.

೧೩. **ಏಷಃ ಸರ್ವಃ ಏಷ ಸರ್ವಗತಃ ಏಷ ಸರ್ವೇಶ್ವರಃ ಏಷೋಽಚಿಂತ್ಯಃ ಏಷ ಪರಮಃ ॥** ಇತಿ ಭಾಲ್ಲವೇಯ ಶ್ರುತಿಃ. ಈ ವಿಷ್ಣುವೇ ಸರ್ವಗುಣ ಪೂರ್ಣನು, ಸರ್ವ ವ್ಯಾಪ್ತನು. ಬ್ರಹ್ಮ ರುದ್ರಾದಿಗಳಿಗೆ ಅಧಿಪತಿಯು ಅಚಿಂತ್ಯನು ಸರ್ವೋತ್ತಮನು.

೧೪. **ಸರ್ವಂ ವಿಸೃಜತಿ ಸರ್ವಂ ವಿಲಾಪಯತಿ=ಅಂತರಸ್ಮಿನ್ನಿವಿಷ್ಟಃ ॥** ಆ ಹರಿಯೇ ಸರ್ವಾಂತರ್ಗತನಾಗಿ ಸರ್ವವನ್ನು ಸೃಷ್ಟಿಸುತ್ತಾನೆ. ಸರ್ವಕ್ಕೂ ಲಯವನ್ನು ಮಾಡುವವನು.

೧೫. **ವಾಸುದೇವಃ ಸಂಕರ್ಷಣಃ ಪ್ರದ್ಯುಮ್ನೋಽನಿರುದ್ಧೋಽಹಂ ಮತ್ಸ್ಯಃ ಕೂರ್ಮೋ ವರಾಹೋ ನಾರಸಿಂಹೋ ವಾಮನೋ ರಾಮೋ ರಾಮಃ ಕೃಷ್ಣೋ ಬುದ್ಧಃ ಕಲ್ಕಿರಹಂ ಶತಧಾಽಹಂ ಸಹಸ್ರಧಾಽಹಮಮಿತೋಽಹಮನಂತೋಽಹಂ ನೈವೈತೇ ಜಾಯಂತೇ ನ ಮ್ರಿಯಂತೇ ನೈಷಾಮಜ್ಞಾನಬಂಧೋ ನ ಮುಕ್ತಿಃ ಸರ್ವೇ ಹ್ಯೇತೇ ಪೂರ್ಣಾ ಅಜರಾ ಅಮೃತಾಃ ಪರಮಾಃ ಪರಾನಂದಾಃ ॥** ಇತಿ ಚತುರ್ವೇದಶಿಖಾಯಾಂ ॥ ಶ್ರೀ ಹರಿಯು ವಾಸುದೇವ ಮೊದಲಾದ ಅಪರಿಮಿತರೂಪವುಳ್ಳವನು. ಜನನಾದಿರಹಿತನು, ಆತನ ಎಲ್ಲಾ ರೂಪಗಳೂ ಪೂರ್ಣಗಳೇವೇ.

೧೬. **ಏಕಃ ಪುರಸ್ತಾದ್ಯ ಇದಂ ಬಭೂವ ಯತೋ ಬಭೂವ ಭುವನಸ್ಯ ಗೋಪ್ತಾಃ । ಯಮಪ್ಯೇತಿ ಭುವನಂ ಸಾಂಪರಾಯೇ ಸ ನೋ ಹರಿರ್ಘೃತಮಿಹಾಯಕ್ಷೇತ್ತು ದೇವಃ ॥** (ಯಜುಃ ಘೃತ ಸೂಕ್ತ.) ಶ್ರೀಹರಿಯೊಬ್ಬನೇ ಪ್ರಳಯಕಾಲದಲ್ಲಿರು

ಿದ್ದನು, ಇವನಿಂದಲೇ ಬ್ರಹ್ಮಾದಿಜಗತ್ತು ಹುಟ್ಟಿತು. ಇವನೊಬ್ಬನೇ ಮುಖ್ಯವಾಗಿ ಜಗದ್ರಕ್ಷಕನು, ಮುಕ್ತಿಪ್ರದನೂ ನಾಶಕಾರಕನೂ ಇವನೇ, ಆದುದರಿಂದಲೇ ಸರ್ವೋತ್ತಮನು. ತೈ. ಉ. ಅ. ೫.)

೧೭. ಯಚ್ಚ ಕಿಂಚಿಜ್ಜಗತ್ಸರ್ವಂ ದೃಶ್ಯತೇ ಶ್ರೂಯತೇಽಪಿ ಚ । ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣಃ ಸ್ಥಿತಃ ॥ ಸರ್ವ ಜಗತ್ತನ್ನು ಒಳಗೂ ಹೊರಗೂ ವ್ಯಾಪಿಸಿಕೊಂಡಿರುವವನು ನಾರಾಯಣನೇ. ರುದ್ರಾದಿಗಳು ಅಲ್ಲವೇ ಅಲ್ಲ.

೧೮. ಸ ಬ್ರಹ್ಮಣಾ ಸೃಜತಿ ರುದ್ರೇಣ ವಿಲಾಪಯತಿ ಸೋಽನುತ್ಪತ್ತಿಲಯಃ ಏಕ ಏವ ಹರಿಃ ಪರಃ ಪರಾನಂದಃ ॥ ಇತಿ ಮಹೋಪನಿಷತ್ ॥ ಸರ್ವೋತ್ತಮನಾದ ಶ್ರೀಹರಿಯು ಚತುರ್ಮುಖನಿಂದ ಸೃಷ್ಟಿಮಾಡಿಸುತ್ತಾನೆ. ರುದ್ರನಿಂದ ನಾಶಮಾಡಿಸುತ್ತಾನೆ. ಆತನೊಬ್ಬನೇ ಉತ್ಪತ್ತಿ ನಾಶವಿರಹಿತನು.

೧೯. ಪರಾಽಸ್ಯ ಶಕ್ತಿರ್ವಿವಿಧೈವ ಶ್ರೂಯತೇ ಸ್ವಾಭಾವಿಕೀ ಜ್ಞಾನಬಲಕ್ರಿಯಾ ಚ ॥ ಈ ಶ್ರೀ ಪರಮಾತ್ಮನಿಗೆ ನಿರವಧಿಕವಾದ ಶಕ್ತಿಯೂ ಜ್ಞಾನಾದಿಗಳೂ ಇವೆ.

೨೦. ಏತಸ್ಯೈವಾನಂದಸ್ಯಾನ್ಯಾನಿ ಭೂತಾನಿ ಮಾತ್ರಾಮುಪಜೀವಂತಿ ॥ ಬ್ರಹ್ಮಾದಿ ಪ್ರಾಣಿಗಳು ಶ್ರೀ ಹರಿಯ ಆನಂದಲೇಶವನ್ನೇ ಅನುಭವಿಸುತ್ತಾರೆ. ಇವರಿಂದ ಆನಂದಪೂರ್ಣನು ಶ್ರೀ ಹರಿಯೇ.

೨೧. ನ ತತ್ಪ್ರಭಾವಮೃಷಯಶ್ಚ ದೇವಾ ವಿದುಃ ಕುತೋಽನ್ಯೇಽಲ್ಪಧೃತಿ ಪ್ರಮಾಣಾಃ ॥ ಇತಿ ಋಗ್ವೇದಖಿಲೇಷು ॥ ಋಷಿಗಳೂ ದೇವತೆಗಳೂ ಕೂಡ ಆ ಹರಿಯ ಸಾಮರ್ಥ್ಯವನ್ನು ಹೇಳಲಾರರು. ಇತರರಿಗೆ ಸಾಮರ್ಥ್ಯವಿಲ್ಲವೆಂಬುವುದು ಸುತರಾಂಸಿದ್ಧವು. ಇದರಿಂದ ಅಪರಿಮಿತಸಾಮರ್ಥ್ಯವುಳ್ಳವನು ಶ್ರೀ ನಾರಾಯಣನೇ.

೨೨. ಪರಾತ್ಪರಂ ಯನ್ಮಹತೋ ಮಹಾಂತಂ ಯದೇಕಮವ್ಯಕ್ತಮನಂತ ರೂಪಂ ॥ ಇತಿ ಯಜುರ್ವೇದೇ ॥ ಬಹುರೂಪಿಯೂ ಸರ್ವೋತ್ತಮನೂ ಶ್ರೀ ಹರಿಯೇ.

೨೩. ಅವಾಚ್ಯೋತ್ಕರ್ಷೇ ಮಹತ್ವಾತ್ಸರ್ವವಾಚಾಂ ಸರ್ವನ್ಯಾಯಾನಾಂ ಚ ಮಹತ್ತತ್ಪರತ್ವಂ । ವಿಷ್ಣೋರನಂತಸ್ಯ ಪರಾತ್ಪರಸ್ಯ ತಚ್ಚಾಪಿ ಹ್ಯಸ್ತ್ಯೇವ ನ ಚಾತ್ರ ಶಂಕಾ ॥ ಇತಿ ಸೌಕರಾಯಣಶ್ರುತಿಃ ॥ ಇದರಿಂದಲೂ ಸರ್ವೋತ್ಕೃಷ್ಟತ್ವವು ಸಿದ್ಧವಾಗುತ್ತದೆ.

೨೪. ಸರ್ವೋತ್ಕರ್ಷೇ ದೇವದೇವಸ್ಯ ವಿಷ್ಣೋರ್ಮಹಾತಾತ್ಪರ್ಯಂ ನೈವ ಚಾನ್ಯತ್ರ ಸತ್ಯಂ । ಅವಾಂತರಂ ತತ್ಪರತ್ವಂ ತದನ್ಯತ್ಸರ್ವಾಗಮಾನಾಂ ಪುರುಷಾರ್ಥಸ್ತತೋಽತಃ ॥ ಇತಿ ಪೈಂಗಿ ಶ್ರುತಿಃ ॥ ಸರ್ವ ವೇದಗಳಿಗೂ ಬ್ರಹ್ಮಾದಿಗಳಿಗೆ ಅಧಿಪತಿಯಾದ ವಿಷ್ಣುವಿಗೆ ಸರ್ವೋತ್ಕೃಷ್ಟತ್ವದಲ್ಲಿಯೇ ಮುಖ್ಯತಾತ್ಪರ್ಯವು.

೨೫. ಮುಖ್ಯಂ ಚ ಸರ್ವವೇದಾನಾಂ ತಾತ್ಪರ್ಯಂ ಶ್ರೀಪತೇಃ ಪರಂ । ಉತ್ಕರ್ಷೇ ತು ತದನ್ಯತ್ರ ತಾತ್ಪರ್ಯಂ ಸ್ಯಾದವಾಂತರಂ ॥ ಇತಿ ಮಹಾವಾರಾಹೇ ॥ ಸರ್ವವೇದಗಳಿಗೆ, ವಿಷ್ಣುವಿಗೆ ಸರ್ವೋತ್ಕರ್ಷದಲ್ಲಿಯೇ ತಾತ್ಪರ್ಯವು. ಇತರರಲ್ಲಿ ಅಮುಖ್ಯ ತಾತ್ಪರ್ಯವು.

೨೬. ಉತ್ಪತ್ತಿಸ್ಥಿತಿಸಂಹಾರಾ ನಿಯತಿರ್ಜ್ಞಾನಮಾವೃತಿಃ । ಬಂಧಮೋಕ್ಷೌ ಚ

ಜ್ಞಾನಿನಾಂ ಮೋಕ್ಷದಶ್ಚ ಸಃ । ಆನಂದದಶ್ಚ ಮುಕ್ತಾನಾಂ ಸ ಏಕೋ ಜನಾರ್ದನಃ ॥ ಉತ್ಪತ್ತ್ಯಾದಿಗಳು ಯಾವ ಶ್ರೀ ಹರಿಯಿಂದ ಆಗುತ್ತವೋ. ಆತನೊಬ್ಬನೇ ಸರ್ವೋತ್ತಮನು. ಶ್ರೀ ಹರಿಯೇ ಅಜ್ಞರಿಗೆ ಜ್ಞಾನಪ್ರದನು. ಜ್ಞಾನಿಗಳಿಗೆ ಮುಕ್ತಿಪ್ರದನು. ಮುಕ್ತರಿಗೆ ಆನಂದದಾಯಕನು. ಕಾರಣ ಆತನೊಬ್ಬನೇ ಸರ್ವೋತ್ತಮನು.

೨೭. ಬಂಧಕೋ ಭವಪಾಶೇನ ಭವಪಾಶಾಚ್ಚ ಮೋಚಕಃ । ಕೈವಲ್ಯದಃ ಪರಂ ಬ್ರಹ್ಮ ವಿಷ್ಣುರೇವ ನ ಸಂಶಯಃ ॥ ಭಕ್ತರನ್ನು ಸಂಸಾರಬಂಧದಿಂದ ಬಿಡಿಸಿ ಮುಕ್ತಿಪ್ರದನಾದ ವಿಷ್ಣುವೇ ಸರ್ವೋತ್ತಮನು. ಸಂಶಯವಿಲ್ಲ. ಹೀಗೆ ಇನ್ನು ಸಾವಿರಾರುಶ್ರುತಿಗಳು ಜಗಜ್ಜನ್ಮಾದಿಕಾರಣನಾದ ಶ್ರೀ ನಾರಾಯಣನಿಗೇನೇ ಸರ್ವೋತ್ತಮತ್ವವನ್ನು ಸಾಧಿಸುತ್ತವೆ.

## ೯. ಶ್ರೀ ಹರಿಯೇ ಎಲ್ಲಾ ವೇದಗಳಿಂದಲೂ ಮುಖ್ಯವಾಗಿ ಪ್ರತಿಪಾದ್ಯನು.

ಜಗಜ್ಜನ್ಮಾದಿ ಕಾರಣನಾದ ಶ್ರೀ ನಾರಾಯಣನನ್ನು ಸದಾಗಮಗಳಿಂದಲೇ ತಿಳಿಯಬೇಕು. ಪ್ರತ್ಯಕ್ಷಾನುಮಾನಗಳಿಂದ ತಿಳಿಯಲು ಸಾಧ್ಯವಿಲ್ಲವು.

೧. ಸರ್ವೇ ವೇದಾ ಯತ್ಪದಮಾಮನಂತಿ ತಪಾಂಸಿ ಸರ್ವಾಣಿ ಚ ಯದ್ವದಂತಿ ॥ (ಕಾಠ. ಪು. ೪೮.) ಸರ್ವವೇದಗಳು ತಪಸ್ಸುಗಳು ಭಗವಂತನ ಸ್ವರೂಪವನ್ನೇ, ಪ್ರತಿಪಾದಿಸುತ್ತವೆ.

೨. ನಾನಾವೇದೈರಿತಿಹಾಸೈಃ ಪುರಾಣೈಃ ಸುಜ್ಞೇಯ ಏಕೋ ಭಗವಾನ್ ಯುಕ್ತಿಭಿಶ್ಚ ॥ ಶ್ರೀ ನಾರಾಯಣನೇ ಸರ್ವ ವೇದಗಳಿಂದಲೂ ಇತಿಹಾಸಪುರಾಣಗಳಿಂದಲೂ ಯುಕ್ತಿಗಳಿಂದಲೂ ಸುಜ್ಞೇಯನು.

೩. ನೇಂದ್ರಿಯಾಣಿ ನಾನುಮಾನಂ ವೇದಾ ಹ್ಯೇವೈನಂ ವೇದಯಂತಿ ತಸ್ಮಾದಾಹುರ್ವೇದಾಃ ॥ ಇತಿ ಪಿಪ್ಪಲಾದಶ್ರುತಿಃ ॥ ಚಕ್ಷುರಾದೀಂದ್ರಿಯಗಳಾಗಲೀ ಅನುಮಾನಗಳಾಗಲೀ ಭಗವಂತನನ್ನು ತಿಳಿಸುವುದಿಲ್ಲ. ವೇದಗಳುಮಾತ್ರ ಪರಮಾತ್ಮನನ್ನು ತಿಳಿಸುತ್ತವೆ. ಆದುದರಿಂದಲೇ ಅವುಗಳಿಗೆ ವೇದಗಳೆಂದು ಹೆಸರು.

೪. ನ ತಾದೃಶೀ ಪ್ರೀತಿರೀಡ್ಯಸ್ಯ ವಿಷ್ಣೋರ್ಗುಣೋತ್ಕರ್ಷಜ್ಞಾತರಿ ಯಾದೃಶೀ ಸ್ಯಾತ್ । ತತ್ಪ್ರೀಣನಾನ್ಮೋಕ್ಷಮಾಪ್ನೋತಿ ಸರ್ವಸ್ತತೋ ವೇದಾಸ್ತತ್ಪರಾಸ್ಸರ್ವ ಏವ ॥ ಇತಿ ಸೌಪರ್ಣಶ್ರುತಿಃ ॥ ಸರ್ವ ವಂದ್ಯನಾದ ಶ್ರೀ ಹರಿಗೆ ಗುಣೋತ್ಕರ್ಷವನ್ನು ತಿಳಿದವನಲ್ಲಿದ್ದಷ್ಟುಪ್ರೀತಿಯು ಯಾರಲ್ಲಿಯೂ ಇರುವುದಿಲ್ಲ. ಸರ್ವರೂ ಭಗವಂತನನ್ನು ಸಂತೋಷಪಡಿಸಿಯೇ ಮುಕ್ತಿಯನ್ನು ಹೊಂದುತ್ತಾರೆ. ಆಕಾರಣ ಸರ್ವ ವೇದಗಳು ಭಗವತ್ಪರಗಳೇವೆ. ಎಂದು ಸೌಪರ್ಣಶ್ರುತಿಯು.

೫. ಸರ್ವೇ ವೇದಾ ಯುಕ್ತಯಸ್ಸುಪ್ರಮಾಣಾಃ ಬ್ರಾಹ್ಮಂ ಜ್ಞಾನಂ ಪರಮಂ ತ್ವೇಕಮೇವ । ಪ್ರಕಾಶಯಂತೇ ನ ವಿರೋಧಃ ಕುತಶ್ಚಿದ್ವೇದೇಷು ಸರ್ವೇಷು ತಥೇತಿಹಾಸೇ ॥ ಇತಿ ಪೈಂಗಿಶ್ರುತಿಃ ॥ ಸರ್ವ ವೇದಗಳೂ ಸಪ್ರಮಾಣಗಳಾದ ಯುಕ್ತಿಗಳೂ ಎಲ್ಲವೂ ಪರಬ್ರಹ್ಮನ ಜ್ಞಾನವನ್ನೇ ಪ್ರಕಾಶಗೊಳಿಸುತ್ತವೆ. ಆ ಕಾರಣ ಎಲ್ಲಿಯೂ ವೇದ ಇತಿಹಾಸಾದಿಗಳಿಗೆ ಪರಸ್ಪರ ವಿರೋಧವೇ ಇಲ್ಲವಷ್ಟೆ. ಎಂದು ಪೈಂಗಿಶ್ರುತಿಯು.

೬. ನಾರಾಯಣ ಪರಾ ವೇದಾಃ ॥ ಇತಿ ಶ್ರುತಿಃ ॥ ಸರ್ವ ವೇದಗಳು ಶ್ರೀ ನಾರಾಯಣನನ್ನೇ ಪ್ರತಿಪಾದಿಸುತ್ತವೆ.

೭. ವಾಸುದೇವ ಪರಾ ವೇದಾಃ ॥ ವೇದಗಳೆಲ್ಲವೂ ವಾಸುದೇವ ಪ್ರತಿಪಾದಕಗಳು.

೮. ನಾಮಾನಿ ಸರ್ವಾಣಿ ಯಮಾವಿಶಂತಿ ತಂ ವೈ ವಿಷ್ಣುಂ ಪರಮಮುದಾಹರಂತಿ ॥ ಇತಿ ಭಾಲ್ಲವೇಯಶ್ರುತಿಃ ॥ ಸರ್ವ ನಾಮಗಳೂ ಸರ್ವೋತ್ತಮನಾದ ವಿಷ್ಣುವನ್ನೇ ಪ್ರತಿಪಾದಿಸುತ್ತವೆ.

೯. ನೈಷಾ ತರ್ಕೇಣ ಮತಿರಾಪನೇಯಾ ಪ್ರೋಕ್ತಾsನ್ಯೇನೈವ ಸುಜ್ಞಾನಾಯ ಪ್ರೇಷ್ಠ ॥ (ಕಾಠ. ಪು. ೪೬) ಭಗವಂತನ ಜ್ಞಾನವನ್ನು ಕೇವಲಾನುಮಾನದಿಂದ ಸಂಪಾದಿಸಲಿಕ್ಕೂ ತಿರಸ್ಕರಿಸಲಿಕ್ಕೂ ಸಾಧ್ಯವಿಲ್ಲ. ಸದ್ಗುರುಗಳಿಂದಲೇ ವೇದವನ್ನು ಉಪದೇಶ ಪಡೆದುಕೊಂಡು ಸಂಪಾದಿಸುವುದಕ್ಕೆ ಶಕ್ಯವು.

೧೦. ನಾವೇದವಿನ್ಮನುತೇದಂ ಬೃಹಂತಂ ಸರ್ವಾನುಭೂಮಾತ್ಮಾನಂ ಸಾಂಪರಾಯೇ ॥ ಸರ್ವಜ್ಞನೂ ಸರ್ವವ್ಯಾಪಕನೂ ಪೂರ್ಣನೂ ಆದ ಭಗವಂತನನ್ನು ವೇದವನ್ನರಿಯದ ಮನುಷ್ಯನು ತಿಳಿಯುವುದೇ ಇಲ್ಲವು.

೧೧. ವೇದೈಶ್ಚ ಸರ್ವೈರಹಮೇವ ವೇದ್ಯಃ ॥ (ಗೀ. ಅ. ೧೫. ಶ್ಲೋ. ೧೫.) ಸರ್ವ ವೇದಗಳಿಂದಲೂ ನಾನೊಬ್ಬನೇ ಮುಖ್ಯ ಜ್ಞೇಯನೆಂದು ಕೃಷ್ಣನ ನುಡಿಯು.

೧೨. ಶಾಸ್ತ್ರಯೋನಿತ್ವಾತ್ ॥ (ಬ್ರ. ಸೂ. ಅ. ೧. ಪಾ. ೧. ಸೂ. ೩.) ಪರಮಾತ್ಮನನ್ನು ತಿಳಿಯಲಿಕ್ಕೆ ಋಗಾದಿ ಶಾಸ್ತ್ರಗಳೇ ಮುಖ್ಯ ಕಾರಣವಾದುದರಿಂದ ಸಾಂಖ್ಯ ಪಾಶುಪತಾದಿ ಶಾಸ್ತ್ರಗಳ ಪ್ರಕಾರ ಪ್ರಧಾನ ರುದ್ರಾದಿಗಳು ಜಗತ್ಕಾರಣರೆಂದು ತಿಳಿಯಬಾರದು.

೧೩. ನ ಚ ಕೇವಲ ತರ್ಕೇಣ ನಾಕ್ಷಜೇನ ನ ಕೇನಚಿತ್ । ಕೇವಲಾಗಮವಿಜ್ಞೇಯೋ ಭಕ್ತೈರೇವ ನ ಚಾನ್ಯಥಾ ॥ ಇತಿ ಬ್ರಹ್ಮಾಂಡೇ ॥ ಭಗವಂತನನ್ನು ಕೇವಲ ಅನುಮಾನದಿಂದಾಗಲೀ, ಪ್ರತ್ಯಕ್ಷದಿಂದಾಗಲೀ, ಇತರ ಯಾವುದರಿಂದಲೂ ತಿಳಿಯಲಶಕ್ಯವು. ಭಕ್ತರು ಮಾತ್ರ ವೇದಗಳಿಂದಲೇ ತಿಳಿಯುತ್ತಾರೆ.

೧೪. ಯೋ ಮಾಮೇವಮಸಂಮೂಢೋ ಜಾನಾತಿ ಪುರುಷೋತ್ತಮಂ । ಸ ಸರ್ವವಿದ್ಭಜತಿ ಮಾಂ ಸರ್ವಭಾವೇನ ಭಾರತ ॥ (ಗೀ. ಅ. ೧೫. ಶ್ಲೋ. ೧೯.) ಯಾರು ತನ್ನನ್ನು ಸರ್ವೋತ್ತಮನನ್ನಾಗಿ ತಿಳಿಯುತ್ತಾನೋ ಆತನು ನನ್ನನ್ನು ಹೊಂದುತ್ತಾನೆ. ಅಂದರೆ ಮುಕ್ತನಾಗುತ್ತಾನೆ.

೧೫. ವೇದೇ ರಾಮಾಯಣೇ ಚೈವ ಪುರಾಣೇ ಭಾರತೇ ತಥಾ । ಆದಾವಂತೇ ಚ ಮಧ್ಯೇ ಚ ವಿಷ್ಣುಸ್ಸರ್ವತ್ರ ಗೀಯತೇ ॥ (ಆಥ. ಪು. ೨೪೮.)

೧೬. ವೇದೈಶ್ಚ ಪಂಚರಾತ್ರೈಶ್ಚ ಭಕ್ತ್ಯಾ ಯಜ್ಞೈಸ್ತಥೈವ ಚ । ದೃಶ್ಯೋsಹಂ ನಾನ್ಯಥಾ ದೃಶ್ಯೋ ವರ್ಷಕೋಟಿಶತೈರಪಿ ॥ ಇತಿ ವಾರಾಹೇ ॥ (ಪು. ೨೫೧.) ಕೆಲವರು ವೇದವನ್ನು ಜ್ಞಾನಕಾಂಡ, ಕರ್ಮಕಾಂಡವೆಂದು ವಿಭಾಗಮಾಡಿಕೊಂಡು ಜ್ಞಾನಕಾಂಡವೇ ಶ್ರೇಷ್ಠವೆಂದು ಹೇಳುವರು. ಅನಾದಿನಿತ್ಯವಾದ ವೇದದಲ್ಲಿ ಒಂದು ಭಾಗ ಶ್ರೇಷ್ಠವೆಂದೂ ಇನ್ನೊಂದು ಭಾಗ ಕನಿಷ್ಠವೆಂದೂ ಹೇಳುವುದು ಯುಕ್ತವಲ್ಲ. ಮತ್ತು ವೇದಗಳಿಗೆ ಮೂರು ಅರ್ಥಗಳಿರುವುದರಿಂದ ಎಲ್ಲಾ ವೇದಗಳಿಂದಲೂ ಪರಮಾತ್ಮನೇ ಪ್ರತಿಪಾದ್ಯನೆಂದು ಆಚಾರ್ಯರು ಸಮರ್ಥಿಸಿರುವರು. ಉದಾಹರಣೆಗಾಗಿ ಪರರು ಅಗ್ನ್ಯಾದಿ ದೇವತೆಗಳ ಪರವೆಂದು ಹೇಳುವ ಋಗ್ವೇದದ ೧-೪೧ ಸೂಕ್ತಗಳಿಗೆ ಪರಮಾತ್ಮನ ಪರವಾಗಿಯೇ ಅರ್ಥವನ್ನು ನಿರೂಪಣೆಮಾಡಿ ತೋರಿಸುವರು. ಆದುದರಿಂದ ಕರ್ಮಕಾಂಡದಲ್ಲಿಯೂ, ಜ್ಞಾನಕಾಂಡದಲ್ಲಿಯೂ ಶ್ರೀ ಹರಿಗೆ

## ೩. ಪಾರಮಾರ್ಥಿಕವಾಗಿ ಭೇದವಿದೆ.

ಭೇದವನ್ನು ಸಮರ್ಥಿಸದಿದ್ದರೆ ಪೂಜ್ಯಪೂಜಕಭಾವವು ಕೂಡಲಾರದು. ಆ ಕಾರಣ ಶ್ರುತ್ಯಾದಿಸಿದ್ಧವಾದ ಭೇದವು ಸಮರ್ಥಿಸಲ್ಪಡುತ್ತದೆ. ಭೇದವು ಯಥಾರ್ಥವಾದುದೇ ಸರಿ. ವ್ಯಾವಹಾರಿಕ ಪ್ರಾತಿಭಾಸಿಕ ಭೇದವೆಂಬುವುದು ಕೇವಲ ಅಪ್ರಾಮಾಣಿಕವು. ಮಾಯಾವಾದಿಗಳು ಜೀವ ಬ್ರಹ್ಮರಿಗೆ ಮುಕ್ತಿಯಲ್ಲಿ ಐಕ್ಯವನ್ನು ಸಂಸಾರದಶೆಯಲ್ಲಿ ವ್ಯಾವಹಾರಿಕ ಭೇದವನ್ನು ಅಂಗೀಕರಿಸುತ್ತಾರೆ. ಸಂಸಾರದಲ್ಲಿಯೂ ಮುಕ್ತಿಯಲ್ಲಿಯೂ ಯಥಾರ್ಥಭೇದವೇ ಪ್ರತ್ಯಕ್ಷ ಅನುಮಾನ ಆಗಮಗಳಿಂದ ಸಿದ್ಧವಾಗಿರುವುದರಿಂದ ಐಕ್ಯವೆಂದು ಪ್ರತಿಪಾದಿಸುವುದು ಪ್ರಮಾಣ ವಿರುದ್ಧವೂ ಪ್ರಮಾಣವಿರಹಿತವೂ ಆಗಿರುತ್ತದೆ. ಹಾಗಾದರೆ—

೧. **ಗತಾಃ ಕಲಾಃ ಪಂಚದಶ= =ಕರ್ಮಾಣಿ ವಿಜ್ಞಾನಮಯಶ್ಚ ಆತ್ಮಾ ಪರೇಽವ್ಯಯೇ ಸರ್ವ ಏಕೀಭವಂತಿ** ॥ (ಅಥರ್ವಣ. ಪು. ೨೮೫) ನಾಶರಹಿತನಾದ ಶ್ರೀಹರಿಯಲ್ಲಿ ಎಲ್ಲರೂ ಐಕ್ಯವನ್ನು ಹೊಂದುತ್ತಾರೆ ಎಂದು ಹೇಳಿರುವುದರಿಂದ ಪ್ರಮಾಣವಿರುದ್ಧವು ಹೇಗೆ ಆಗುವುದು. ಎಂದರೆ ಏಕೀಭವಂತಿ ಎಂಬುವುದರಿಂದ,

೨. **ಏಕೀಭೂತಾ ತು ಸಾ ಸೇನಾ ಪಾಂಡವಾನಭ್ಯವರ್ತತ** । ಕುರುಸೈನ್ಯವು ಐಕ್ಯವಾಗಿ ಅಂದರೆ ಒಂದೇ ಸ್ಥಾನದಲ್ಲಿ ಕೂಡಿದ್ದಾಗಿ ಪಾಂಡವರನ್ನು ಎದುರುಗೊಂಡಿತು ಎಂಬಂತೆ ಸ್ಥಾನೈಕ್ಯಾದಿಗಳನ್ನೇ ಅಂಗೀಕರಿಸತಕ್ಕದು. ಅದ್ವೈತಿಗಳು ಹೇಳುವಂತೆ ಐಕ್ಯವನ್ನು ಅಂಗೀಕರಿಸುವುದು ಕೇವಲ ಅನುಚಿತವೇ ಸರಿ.

೩. **ಜೀವಸ್ಯ ಪರಮೈಕ್ಯಂ ತು ಬುದ್ಧಿಸಾರೂಪ್ಯಮೇವ ತು । ಏಕಸ್ಥಾನನಿವಾಸೋ ವಾ ವ್ಯಕ್ತಿಸ್ಥಾನಮಪೇಕ್ಷ್ಯ ಸಃ । ನ ಸ್ವರೂಪೈಕತಾ ತಸ್ಯ ಮುಕ್ತಸ್ಯಾಪಿ ವಿರೂಪತಃ । ಸ್ವಾತಂತ್ರ್ಯ ಪೂರ್ಣತೇಽಲ್ಪತ್ವಪಾರತಂತ್ರ್ಯೇ ವಿರೂಪತಾ** ॥ ಇತಿ ಪರಮಶ್ರುತಿಃ ॥ ಜೀವರಿಗೆ ಪರಬ್ರಹ್ಮನಿಂದ ಐಕ್ಯವೆಂದರೆ ಬುದ್ಧಿಸಾಮ್ಯವೇ ಅಥವಾ ಒಂದೇ ಸ್ಥಾನದಲ್ಲಿ ಆವಾಸವು. ಮುಕ್ತನಿಗೂ ವಿರೂಪವಿದ್ದುದರಿಂದ ಪರಬ್ರಹ್ಮನಿಂದ ಸ್ವರೂಪೈಕ್ಯವಲ್ಲ ಪರಬ್ರಹ್ಮನಿಗೆ ಸ್ವಾತಂತ್ರ್ಯವೂ, ಪೂರ್ಣತ್ವವೂ ಜೀವನಿಗೆ (ಮುಕ್ತನಿಗೆ) ಅಲ್ಪತ್ವವೂ ಪರಾಧೀನತೆಯು. ಹೀಗೆ ಸಾಮಾನ್ಯವಾಗಿ ಐಕ್ಯಪರವಾಗಿ ತೋರುವ ಶ್ರುತಿಗೆ ನಿರವಕಾಶವಾದ ಪ್ರಮಾಣವನ್ನನುಸರಿಸಿ ಭೇದಪ್ರತಿಪಾದಕತ್ವವೇ ಉಚಿತವು.

೪. **ಸರ್ವೇ ವೇದಾ ಹರೇರ್ಭೇದಂ ಸರ್ವಸ್ಮಾಜ್ಜ್ಞಾಪಯಂತಿ ಹಿ** ॥ ಇತಿ ನಾರಾಯಣ ಶ್ರುತಿಃ ॥ ಎಲ್ಲಾ ವೇದಗಳೂ ಶ್ರೀ ಹರಿಗೆ ಸರ್ವವಸ್ತುಗಳಿಂದಲೂ ಭೇದವನ್ನೇ ತಿಳಿಸಿ ಕೊಡುತ್ತವೆ. ಹೀಗೆ ನಾರಾಯಣ ಶ್ರುತಿಯು. ಹೀಗೆ ನಿರವಕಾಶವಾದ ಪ್ರಮಾಣದಿಂದ ಭೇದವೇ ಸಿದ್ಧವಾಗುತ್ತದೆ.

೫. **ಯದಾ ಪಶ್ಯಃ ಪಶ್ಯತೇ= =ನಿರಂಜನಃ ಪರಮಂ ಸಾಮ್ಯಮುಪೈತಿ** ॥ (ಅಥ ಪು. ೨೭೭.) ಜೀವನು ಶ್ರೀ ಹರಿಯನ್ನು ನೋಡಿದ್ದಾಗ ದೋಷರಹಿತನಾಗಿ ಸಾಮ್ಯವನ್ನೇ ಹೊಂದುತ್ತಾನೆ. ಐಕ್ಯವನ್ನು ಹೊಂದುವುದೇ ಇಲ್ಲವು.

೬. **ಪರಾತ್ಪರಂ ಪುರುಷಮುಪೈತಿ ದಿವ್ಯಂ** ॥ ಸರ್ವೋತ್ತಮನಾದ ಭಗವಂತನ ಸಮೀಪಕ್ಕೆ ಹೋಗುತ್ತಾನೆ. (ಅಥ. ಪು. ೨೮೮.) ಐಕ್ಯಪರವಾಗಿದ್ದರೆ ಸಮೀಪಾರ್ಥಕವಾದ ಉಪಶಬ್ದವು ವ್ಯರ್ಥವಾಗಬೇಕಾಗುವುದು.

೭. **ದ್ವಾ ಸುಪರ್ಣಾ ಸಯುಜಾ ಸಖಾಯಾ ಸಮಾನಂ ವೃಕ್ಷಂ ಪರಿಷಸ್ವಜಾತೇ। ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತ್ಯನಶ್ನನ್ನನ್ಯೋಽಭಿ ಚಾಕಶೀತಿ ॥** (ಅಥ. ಪ್ರ. ೨೭೫. (ಋಗ್ವೇ. ಅ. ೨. ಅ. ೩. ವ. ೧೫.) ಪರಸ್ಪರ ಸಂಬಂಧವುಳ್ಳವುಗಳಾಗಿಯೂ ಸಖಿಗಳಾಗಿಯೂ ಇರುವ ಎರಡು ಹಕ್ಕಿಗಳು ದೇಹಾಖ್ಯವಾದ ಮರವನ್ನು ಆಶ್ರಯಿಸಿರುತ್ತವೆ. ಅವುಗಳಲ್ಲಿ ಒಂದು ಹಕ್ಕಿಯು ಕರ್ಮಫಲವನ್ನು ತಿನ್ನುತ್ತಿದೆ. ಮತ್ತೊಂದು ಭೋಜಿಸದೇನೇ ಚೆನ್ನಾಗಿ ಪ್ರಕಾಶಿಸುತ್ತಿದೆ. ಇದರಿಂದ ಭೇದವು ಸಿದ್ಧವಾಯಿತು.

೮. **ತಸ್ಮಾನ್ನ ಮುಕ್ತಾ ನ ಚ ಸಾ ನ ಕ್ವಚಿದ್ವಿಷ್ಣ್ವೈಭವಂ । ಪ್ರಾಪ್ನುವಂತಿ ಸ ಏವೈಕಃ ಸ್ವತಂತ್ರಃ ಪೂರ್ಣಷಡ್ಗುಣಃ ॥** ಇತಿ ಪರಮ ಶ್ರುತಿಃ ॥ ಆದಕಾರಣ ಮುಕ್ತರಾಗಲೀ ಲಕ್ಷ್ಮೀದೇವಿಯಾಗಲೀ ಎಲ್ಲಿಯೂ ವಿಷ್ಣುವಿನ ಐಶ್ವರ್ಯವನ್ನು ಹೊಂದಲಾರರು. ಆತನೊಬ್ಬನೇ ಸ್ವತಂತ್ರನು ಪೂರ್ಣಗುಣಗಳುಳ್ಳವನು ಎಂದು ಪರಮಶ್ರುತಿಯು.

೯. **ಜುಷ್ಟಂ ಯದಾ ಪಶ್ಯತ್ಯನ್ಯಮೀಶಮಸ್ಯ ಮಹಿಮಾನಮಿತಿ ವೀತಶೋಕಃ॥** (ಅಥ ಪ್ರ. ೨೭೬.) ಯಾವಾಗ ಸರ್ವಸೇವ್ಯನೂ ಸರ್ವಭಿನ್ನನೂ ಸರ್ವಸ್ವಾಮಿಯೂ ಆದ ಶ್ರೀ ಹರಿಯನ್ನು ನೋಡುತ್ತಾನೋ, ಆಗ ಶೋಕರಹಿತನು ಆಗುತ್ತಾನೆ.

೧೦. **ಸತ್ಯ ಆತ್ಮಾ ಸತ್ಯೋ ಜೀವಃ ಸತ್ಯಂ ಭಿದಾ ಸತ್ಯಂ ಭಿದಾ ॥** ಪೈಂಗಿ ಶ್ರುತಿಃ ॥ ಶ್ರೀ ಹರಿಯು ಸತ್ಯನು, ಜೀವನು ಸತ್ಯನು, ಭೇದವು ಸತ್ಯವೇ ಸರಿ. ಭೇದವು ಸತ್ಯವೇ ಸರಿ ಎಂದು ಪೈಂಗಿಶ್ರುತಿಯು. ಶ್ರುತಿಯು ತನಗೆ ಮುಖ್ಯತಾತ್ಪರ್ಯ ವಿಷಯೀಭೂತವಾಗಿದೆ ಎಂದು ತಿಳಿಸುವುದಕ್ಕೋಸ್ಕರ ಪುನರಾವರ್ತಿ ಸತ್ಯಭೇದವನ್ನೇ ಪ್ರತಿಪಾದಿಸಿಯದೆ. ಸರ್ವಶ್ರುತ್ಯರ್ಥನಿರ್ಣಾಯಕರಾದ ವೇದವ್ಯಾಸರು ಎಲ್ಲಾ ಸೂತ್ರಗಳಲ್ಲಿಯೂ ಭೇದವನ್ನೇ ಸಮರ್ಥಿಸಿರುವರು.

೧೧. **ಭೇದವ್ಯಪದೇಶಾಚ್ಚ ।** (ಬ್ರ. ಸೂ. ಅ. ೧ ಪಾ. ೧. ಸೂ. ೧೭.) ಆನಂದಮಯ ಪ್ರಕರಣದಲ್ಲಿ. 'ತೇ ಯೇ ಶತಂ ಪ್ರಜಾಪತೇರಾನಂದಾಃ' ॥ ಇತ್ಯಾದಿ ಸ್ಥಳಗಳಲ್ಲಿ ಚತುರ್ಮುಖಾದಿಗಳಿಗೆ ಅಲ್ಪವಾದ ಆನಂದವೂ ಶ್ರೀ ಪರಬ್ರಹ್ಮನಿಗೆ ಅಪರಿಮಿತಾನಂದ, ಜೀವ ಗುಣರಾಹಿತ್ಯ ಮೊದಲಾದ ಭೇದಕ ಧರ್ಮಗಳನ್ನು ಹೇಳಿರುವುದರಿಂದ ಆನಂದಮಯ ಶಬ್ದ ವಾಚ್ಯನು ಜೀವನಲ್ಲ. ಅಂತೂ ಭೇದವೇ.

೧೨. **ಭೇದವ್ಯಪದೇಶಾಚ್ಚಾನ್ಯಃ ।** (ಬ್ರ. ಸೂ. ಅ. ೧ ಪಾ. ೧. ಸೂ. ೨೧.) ಅಂತಶ್ಚಂದ್ರಮಸಿ ಇತ್ಯಾದಿ ಶ್ರುತಿಗಳಲ್ಲಿ ಅಂತಸ್ಥನು ಇಂದ್ರಾದಿಗಳಿಂದ ಭಿನ್ನನೇ, 'ಇಂದ್ರಸ್ಯಾತ್ಮಾ' ಇತ್ಯಾದಿ ಶ್ರುತಿಯಿಂದ ಅಂತಸ್ಥನಾದ ವಿಷ್ಣುವಿಗೆ ಇಂದ್ರಾದಿಗಳಿಂದ ಭೇದವನ್ನು ಹೇಳಿರುವುದರಿಂದ,–

೧೩. **ಭೇದವ್ಯಪದೇಶಾತ್ ॥** (ಬ್ರ. ಸೂ. ಅ. ೧. ಪಾ. ೩. ಸೂ. ೫.) **ಜುಷ್ಟಂ ಯದಾ ಪಶ್ಯತಿ ॥** ಎಂಬ ಶ್ರುತಿಯಲ್ಲಿ ಜೀವಬ್ರಹ್ಮರಿಗೆ ಭೇದವನ್ನು ಹೇಳಿರುವುದುದರಿಂದ ಭೇದವೇ ಸರಿ. ಐಕ್ಯವಲ್ಲ.

೧೪. **ಸ್ಥಿತ್ಯದನಾಭ್ಯಾಂಚ ।** (ಬ್ರ. ಸೂ. ಅ. ೧. ಪಾ. ೩. ಸೂ. ೭.) **ದ್ವಾ ಸುಪರ್ಣಾ** ಎಂಬ ಶ್ರುತಿಯಲ್ಲಿ ಹೇಳಿದ ಭೋಜಿಸದೇನೇ ಪ್ರಕಾಶಿಸುವಿಕೆಯು, ಭೋಜನ ಇವುಗ

೧೫. **ಪೃಥಗುಪದೇಶಾತ್** ॥ (ಬ್ರ. ಸೂ. ಅ. ೨. ಪಾ. ೩. ಸೂ. ೨೮.) **'ಭಿನ್ನೋಽಚಿಂತ್ಯಃ' 'ದ್ವಾ ಸುಪರ್ಣಾ'** ॥ ಇತ್ಯಾದಿ ಶ್ರುತಿಗಳಲ್ಲಿ ಭೇದವನ್ನೇ ಹೇಳಿರುವುದರಿಂದ ಜೀವನು ಶ್ರೀ ಪರಮಾತ್ಮನಿಂದ ಭಿನ್ನನೇ.

೧೬. **ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ** । (ಗೀ. ಅ. ೧೫. ಶ್ಲೋ. ೧೭.) ಕ್ಷರಾಕ್ಷರ ಪುರುಷರಿಂದ ಉತ್ತಮನೂ, ಗುಣಪೂರ್ಣನೂ, ಸರ್ವಭಿನ್ನನೂ ಆದವನು ಪರಮಾತ್ಮನೆಂದು ಹೇಳಲ್ಪಡುತ್ತಾನೆ.

೧೭. **ಪ್ರಪಂಚೋ ಯದಿ ವಿದ್ಯೇತ ನಿವರ್ತೇತ ನ ಸಂಶಯಃ** ॥ (ಮಾಂಡೂ. ಪ್ರ. ೩೧೭.) ೫ ವಿಧಭೇದಕ್ಕೆ ನಾಶವಿಲ್ಲದಿರುವುದರಿಂದ ಉತ್ಪತ್ತಿಯೂ ಇಲ್ಲ ನಿಶ್ಚಯವು.

ಇದು ಮೊದಲಾದ ಅನೇಕ ಶ್ರುತಿಗಳಲ್ಲಿಯೂ ಭೇದವನ್ನೇ ಸಮರ್ಥಿಸಿರುವುದರಿಂದ ಭೇದ ಸತ್ಯತ್ವವನ್ನೇ ಅಂಗೀಕರಿಸತಕ್ಕದು. ಮತ್ತು ಪರಮ ಶ್ರುತಿಯಲ್ಲಿ ಭೇದ ಪಂಚಕವನ್ನು ಭೇದ ಸತ್ಯತ್ವವನ್ನು ಸ್ಪಷ್ಟವಾಗಿ ಸಮರ್ಥಿಸಿಯದೆ.

೧೮. **ಜೀವೇಶ್ವರಭಿದಾ ಚೈವ ಜೀವಭೇದಃ ಪರಸ್ಪರಂ । ಜಡೇಶಯೋರ್ಜಡಾನಾಂ ಚ ಜಡಜೀವಭಿದಾ ತಥಾ । ಪಂಚಭೇದಾ ಇಮೇ ನಿತ್ಯಾಸ್ಸರ್ವಾವಸ್ಥಾಸು ಸರ್ವಶಃ । ಕಲ್ಪಿತಶ್ಚೇನ್ನಿವರ್ತೇತ ನ ಚಾಸೌ ವಿನಿವರ್ತತೇ । ದ್ವೈತಂ ನ ವಿದ್ಯತ ಇತಿ ತಸ್ಮಾದಜ್ಞಾನಿನಾಂ ಮತಂ । ಮತಂ ಹಿ ಜ್ಞಾನಿನಾಮೇತತ್ ಮಿತಂ ತ್ರಾತಂ ಚ ವಿಷ್ಣುನಾ । ತಸ್ಮಾತ್ಸತ್ಯಮಿತಿ ಪ್ರೋಕ್ತಂ ಪರಮೋ ಹರಿರೇವ ತು** ॥ ೧. ಬ್ರಹ್ಮಾದಿ ಜೀವರಿಗೂ ಈಶ್ವರನಿಗೂ ಭೇದವು. ೨. ಜೀವರೊಳಗೆ ಪರಸ್ಪರ ಭೇದವು. ೩. ಜಡಪದಾರ್ಥಗಳಿಗೂ ಈಶನಿಗೂ ಭೇದವು. ೪. ಜಡಗಳಿಗೆ ಪರಸ್ಪರ ಭೇದವು. ೫. ಜಡಗಳಿಗೂ ಜೀವರಿಗೂ ಭೇದವು. ಎಲ್ಲಾ ಅವಸ್ಥೆಗಳಲ್ಲಿಯೂ ಸರ್ವದಾ ಈ ೫ ಭೇದಗಳು ನಿತ್ಯಗಳು. ಈ ಭೇದಪಂಚಕವು ಕಲ್ಪಿತವಾಗಿದ್ದರೆ ನಾಶವಾಗುವುದು, ಇದು ನಾಶವಾಗುವುದಿಲ್ಲ. ಆದುದರಿಂದ ಬೇದವಿಲ್ಲವೆಂಬುದು ಕೇವಲ ಅಜ್ಞಾನಿಗಳದ್ದೇ ಮತವು. ಈ ಭೇದಪಂಚಕವು ಜ್ಞಾನಿಗಳಿಗೆ ಸಮ್ಮತವು. ವಿಷ್ಣುವಿನಿಂದಲೂ ತಿಳಿಯಲ್ಪಟ್ಟದ್ದಾಗಿ ರಕ್ಷಿತವಾಗಿದೆ. ಆದಕಾರಣ ಸತ್ಯವೆಂದೇ ಹೇಳಲ್ಪಟ್ಟದೆ. ಸರ್ವೋತ್ತಮನು ಹರಿಯೊಬ್ಬನೇ. ತಥಾ ಚ ಐಕ್ಯಪ್ರತಿಪಾದಕವಾದ ಯಾವುದೊಂದು ಶ್ರುತಿಯೂ ಇಲ್ಲ. ಭೇದಪ್ರತಿಪಾದಕಗಳಾದ ಸಾವಿರಾರು ನಿರವಕಾಶ ಶ್ರುತಿಗಳು ಜಾಗರೂಕಗಳಾಗಿರುವುದರಿಂದ ಶ್ರುತಿಸಿದ್ಧವಾದ ಭೇದವನ್ನೇ ಅಂಗೀಕರಿಸತಕ್ಕುದು.

## ೬. ಸ್ವಾಭಾವಿಕವಾಗಿ ಸ್ವರೂಪಸುಖದ ಅನುಭವವೇ ಮುಕ್ತಿಯು.

**ಪ್ರಯೋಜನಮನುದ್ದಿಶ್ಯ ನ ಮಂದೋಽಪಿ ಪ್ರವರ್ತತೇ** ॥ ಪ್ರಯೋಜನವನ್ನುದ್ದೇಶಿಸದೆ ಅಜ್ಞರಿಗೂ ಪ್ರವೃತ್ತಿ ಕೂಡಲಾರದು. ಆದಕಾರಣ ಸರ್ವೋತ್ತಮತ್ವ ಮೊದಲಾದ ಜ್ಞಾನಕ್ಕೆ ಪ್ರಯೋಜನವಾದ ಮುಕ್ತಿಯು ನಿರೂಪಿಸಲ್ಪಡುತ್ತದೆ. ಸ್ವರೂಪಸುಖಾನುಭವವೇ ಮುಕ್ತಿಯು. ತಾರ್ಕಿಕರು ೨೧ ದುಃಖಧ್ವಂಸವು ಮುಕ್ತಿಯೆಂದೂ ಮಾಯಾವಾದಿಗಳು ಜೀವಬ್ರಹ್ಮೈಕ್ಯವೇ ಮುಕ್ತಿಯೆಂದೂ ರಾಮಾನುಜರು ಜಗತ್ಕರ್ತೃತ್ವ ಲಕ್ಷ್ಮೀಪತಿತ್ವ ಹೊರತು ಬ್ರಹ್ಮನ ಸಾಮ್ಯವೇ ಮುಕ್ತಿಯೆಂದೂ ಇನ್ನು ಅದೃಷ್ಟಪದಾರ್ಥವನ್ನಂಗೀಕರಿಸುವ ಅನೇಕರು ಅನೇಕ ವಿಧವಾಗಿ ಮುಕ್ತಿಯುಕ್ರಮವನ್ನು ಹೇಳುತ್ತಾರೆ. ಅದು ಶ್ರುತ್ಯಾದಿ ಪ್ರಮಾಣವಿರುದ್ಧವಾದುದರಿಂದ ನಂಬಲಿಕ್ಕೆ ಅನರ್ಹವು

೧. ಬಲಮಾನಂದ ಓಜಶ್ಚ ಸಹೋ ಜ್ಞಾನಮನಾಕುಲಂ । ಸ್ವರೂಪಾಣ್ಯೇವ ಜೀವಸ್ಯ ವ್ಯಜ್ಯಂತೇ ಪರಮಾದ್ವಿಭೋಃ ॥ ಇತಿ ಶ್ರುತಿಃ ॥ ಜೀವನ ಸ್ವರೂಪಗಳೇ ಆದ ಸಾಮರ್ಥ್ಯ, ಆನಂದ, ಕಾಂತಿ, ಸಹನಶಕ್ತಿ, ಯಥಾರ್ಥಜ್ಞಾನಗಳು ಪರಬ್ರಹ್ಮನ ಪರಮಪ್ರಸಾದ ದಿಂದ ಅಭಿವ್ಯಕ್ತಗಳಾಗುತ್ತವೆ. ಇದೇ ಮುಕ್ತಿಯು. ಹೀಗೆ ಶ್ರುತಿಯು.

೨. ಪರಂ ಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ ॥ ಜೀವನು ಪರ ಬ್ರಹ್ಮನನ್ನು ಹೊಂದಿ ತನ್ನ ಸ್ವರೂಪಸುಖವನ್ನನುಭವಿಸುತ್ತಾನೆ ಎಂದು ಛಾಂದೋಗ್ಯ ಶ್ರುತಿಯು.

೩. ಸಂಪದ್ಯಾವಿರ್ಭಾವಃ ಸ್ವೇನ ಶಬ್ದಾತ್ ॥(ಬ್ರ. ಸೂ. ಅಧ್ಯಾ. ೪. ಪಾ. ೪. ಸೂ. ೧) ಜ್ಞಾನಿಯು ಪರಬ್ರಹ್ಮನನ್ನು ಹೊಂದಿ ಅವನನ್ನತಿಕ್ರಮಿಸದೇನೇ ಸ್ವಸ್ವರೂಪದಿಂದಿದ್ದವನಾಗಿ ಸರ್ವ ಭೋಗಗಳನ್ನು ಅನುಭವಿಸುತ್ತಾನೆ. ಸಯ ಏವಂ ವಿತ್ ಎಂಬ ಶ್ರುತಿಯಿಂದ.

೪. ಸ ಯ ಏವಂ ವಿದೇವಂ ಮನ್ವಾನಃ ಏವಂ ಪಶ್ಯನ್ನಾತ್ಮಾನಮಭಿಸಂಪದ್ಯೈ ತೇನಾತ್ಮನಾ ಯಥಾ ಕಾಮಂ ಸರ್ವಾನ್ಕಾಮಾನನುಭವತಿ ॥ ಇತಿ ಸೌಪರ್ಣ ಶ್ರುತಿಃ ॥ ಅಧಿಕಾರಿಯು ಪೂರ್ವೋಕ್ತಪ್ರಕಾರ ಪರಮಾತ್ಮನನ್ನು ತಿಳಿದವನಾಗಿ ವಿಚಾರಮಾಡುತ್ತಾ ಹೊಂದಿ ಈ ಪರಮಾತ್ಮನಿಂದೊಡಗೂಡಿ ಸರ್ವಭೋಗಗಳನ್ನು ಸ್ವೇಚ್ಛಾನುಸಾರವಾಗಿ ಅನುಭವಿಸುತ್ತಾನೆ.

೫. ಇಮಾಂ ಘೋರಾಮಶಿವಾಂ ನದೀಂ ತೀರ್ತ್ವಾ ಪರತಂ ಸೇತುಮಾಪ್ಯೈತೇ ನೈವ ಸೇತುನಾ ಮೋದತೇ ಪ್ರಮೋದತೇ ಆನಂದೀ ಭವತಿ ॥ ಇತಿ ಮೌದ್ಗಲ್ಯ ಶ್ರುತಿಃ ॥ ಈ ಅಮಂಗಲವಾದ ಸಂಸಾರಾಖ್ಯ ನದಿಯನ್ನು ದಾಟಿ ಸರ್ವಾಶ್ರಯನಾದ ಪರಮಾತ್ಮನನ್ನು ಹೊಂದಿ ಅವನಿಂದೊಡಗೂಡಿ ಮೋದಾದಿಗಳನ್ನು ಹೊಂದುತ್ತಾನೆ. (ಸ್ವರೂಪಸುಖವುಳ್ಳವ ನಾಗುತ್ತಾನೆ.)

೬. ಶತಂ ಚೈಕಾ ಚ ಹೃದಯಸ್ಯ ನಾಡ್ಯಸ್ತಾಸಾಂ ಮೂರ್ಧಾನಮಭಿನಿಃಸೃತೈಕಾ । ತಯೋರ್ಧ್ವಮಾಯನ್ನಮೃತತ್ವಮೇತಿ ವಿಷ್ವಗನ್ಯಾ ಉತ್ಕ್ರಮಣೇ ಭವಂತಿ ॥ (ಕಾಠಕ. ಪು. ೯೦.)

೭. ಅಥೈಕಯೋರ್ಧ್ವ ಉದಾನಃ ॥ ಇತಿ ಶ್ರುತಿಃ ॥ ಹೃದಯದಲ್ಲಿ ೧೦೧ ನಾಡಿಗಳು, ಅವುಗಳಲ್ಲಿ ೧ ಬ್ರಹ್ಮನಾಡಿಯು ಮೂಲವನ್ನಾರಂಭಿಸಿ ಶಿರಃಪರ್ಯಂತವಾಗಿ ಸರಳವಾಗಿ ಶರೀರ ದಲ್ಲಿದೆ. ಆ ಸುಸುಮ್ನಾ ನಾಡಿಯಿಂದ ಮೇಲೆ ಹೋದವನು ಮುಕ್ತಿಯನ್ನು ಹೊಂದುತ್ತಾನೆ. ಇತರ ನಾಡಿಗಳು ಲೋಕಾಂತರಗಳನ್ನು ಹೊಂದಿಸುತ್ತವೆ. ಆ ಸುಸುಮ್ನಾ ನಾಡಿಯಲ್ಲಿ ೫ ಪ್ರಭೇದಗಳು.

೮. ಮಧ್ಯೇ ಸುಷುಮ್ನಾ ವಿಜ್ಞೇಯಾ ವಜ್ರಿಕಾಽರ್ಯಾ ಪ್ರಕಾಶಿನೀ । ವೈದ್ಯುತಾ ಬ್ರಹ್ಮನಾಡೀತಿ ಸೈವ ಪಂಚಪ್ರಭೇದಿನೀ ॥ ಎಲ್ಲಾ ನಾಡಿಗಳ ಮಧ್ಯದಲ್ಲಿ ಸುಸುಮ್ನಾ ನಾಡಿಯು, ಅದು ೧ ವಜ್ರಿಕಾ, ೨ ಆರ್ಯಾ, ೩ ಪ್ರಕಾಶಿನೀ, ೪ ವೈದ್ಯುತಾ, ೫ ಬ್ರಹ್ಮನಾಡೀ, ಎಂದು ೫ ವಿಧವು.

೯. ಹೃದಿಸ್ಥೇನೈವ ಹರಿಣಾ ತಸ್ಯೈವಾನುಗ್ರಹೇಣ ತು । ಉತ್ಕ್ರಾಂತಿರ್ಬ್ರಹ್ಮ ರಂಧ್ರೇಣ ತಮೇವೋಪಾಸತೋ ಭವೇತ್ ॥ ಇತಿ ಶ್ರುತಿಃ ॥ ಆ ಹರಿಯನ್ನೇ ಉಪಾಸನೆ ಮಾಡತಕ್ಕವನಿಗೆ ಹೃದಯದಲ್ಲಿರತಕ್ಕ ಭಗವಂತನ ಅನುಗ್ರಹದಿಂದ ಶಿರೋಮಧ್ಯದಲ್ಲಿರತಕ್ಕ ಬ್ರಹ್ಮರಂಧ್ರದಿಂದ ಉತ್ಕ್ರಮಣವಾಗುವುದು. ಸುಸುಮ್ನಾ ನಾಡಿಯಿಂದ ಉತ್ಕ್ರಾಂತರಾದ ಕೆಲವರಿಗೆ ಪರಮಾತ್ಮಪ್ರಾಪ್ತಿಯು ಕೆಲವರಿಗೆ ವಾಯುದ್ವಾರಾ ಚತುರ್ಮುಖಪ್ರಾಪ್ತಿಯು,

[illegible]

೧೦. ಅಪ್ರತೀಕಾಶ್ರಯಾ ಯೇ ಹಿ ತೇ ಯಾಂತಿ ಪರಮೇವ ತು | ಸ್ವದೇಹೇ ಬ್ರಹ್ಮದೃಷ್ಟ್ಯೈವ ಗಚ್ಛೇದ್ಬ್ರಹ್ಮ ಸಲೋಕತಾಂ || ಅಪ್ರತೀಕಾಲಂಬನರು ಪರಬ್ರಹ್ಮನನ್ನೇ ಹೊಂದುತ್ತಾರೆ. ತಮ್ಮ ದೇಹದಲ್ಲಿ ಬ್ರಹ್ಮನನ್ನು ಪ್ರತ್ಯಕ್ಷೀಕರಿಸಿ ವೈಕುಂಠವನ್ನು ಹೊಂದುತ್ತಾರೆ. ತುರೀಯನಾಮಕಭಗವಂತನನ್ನು ಹೊಂದುತ್ತಾರೆ. ಇದೇ ಮುಕ್ತಿಯು. ಪ್ರತೀಕಾಲಂಬನರಿಗೆ ಅಂತ್ಯಕಾಲದಲ್ಲಿ ಭಗವಂತನ ಸ್ಮೃತಿಯಾಗಿ ಸುಷುಮ್ನಾ ನಾಡಿಯ ಪಾರ್ಶ್ವದಲ್ಲಿದ್ದ ನಾಡಿಯಿಂದ ಹೊರಟು ಅರ್ಚಿರಾದಿ ಲೋಕಪ್ರಾಪ್ತಿಯಾಗಿ ಕ್ರಮವಾಗಿ ವಾಯುಲೋಕಪ್ರಾಪ್ತಿಯಾಗುತ್ತದೆ. ವಾಯುವೇ ಚತುರ್ಮುಖಲೋಕವನ್ನು ಹೊಂದಿಸುತ್ತಾನೆ. ಆ ಚತುರ್ಮುಖನು ಮುಕ್ತಿಯನ್ನು ಹೊಂದಿಸುತ್ತಾನೆ.

೧೧. ಬ್ರಹ್ಮಣಾ ಸಹ ತೇ ಸರ್ವೇ ಸಂಪ್ರಾಪ್ತೇ ಪ್ರತಿಸಂಚರೇ | ಪರಸ್ಯಾಂತೇ ಪರಾತ್ಮಾನಃ ಪ್ರವಿಶಂತಿ ಪರಂ ಪದಂ || ಪ್ರತೀಕಾಲಂಬನರು ಚತುರ್ಮುಖನಿಂದೊಡಗೂಡಿ ಮುಕ್ತಿಯನ್ನು ಹೊಂದುತ್ತಾರೆ.

೧೨. ಪ್ರಣವೇನ ಹರಿಂ ಧ್ಯಾಯನ್ ಬ್ರಹ್ಮಲೋಕಂ ಸಮೇತ್ಯ ಚ | ಜ್ಞಾನಂ ಚತುರ್ಮುಖಾತ್ಪ್ರಾಪ್ಯ ಮುಚ್ಯತೇ ನಾತ್ರ ಸಂಶಯಃ || ಜ್ಞಾನಿಯು ಪ್ರಣವದಿಂದ ಶ್ರೀಹರಿಯನ್ನು ಧ್ಯಾನಮಾಡಿ ಬ್ರಹ್ಮಲೋಕವನ್ನು ಹೊಂದಿ ಚತುರ್ಮುಖನಿಂದ ಜ್ಞಾನವನ್ನು ಹೊಂದಿ ಮುಕ್ತನಾಗುತ್ತಾನೆ.

೧೩. ಬಹುನಾತ್ರ ಕಿಮುಕ್ತೇನ ಯಾವಚ್ಛ್ವೇತಂ ನ ಗಚ್ಛತಿ | ಯೋಗೀ ತಾವನ್ನ ಮುಕ್ತಃ ಸ್ಯಾದೇಷ ಶಾಸ್ತ್ರಸ್ಯ ನಿರ್ಣಯಃ || ಬಹುಮಾತಿನಿಂದ ಏನು ಪ್ರಯೋಜನವು, ಶ್ವೇತದ್ವೀಪಕ್ಕೆ ಹೋಗುವಪರ್ಯಂತ ಮುಕ್ತನಾಗಲಾರನು. ಇದೇ ಸರ್ವ ಶಾಸ್ತ್ರಾರ್ಥನಿರ್ಣಯವು.

೧೪. ಶ್ವೇತದ್ವೀಪಂ ತತೋ ಗತ್ವಾ ದೃಷ್ಟ್ವಾ ವಿಷ್ಣುಂ ಚ ತೇ ತತಃ | ಅನುಜ್ಞಾತಾಃ ಪ್ರಮೋದಂತೇ ನಿರ್ದುಃಖಾಸ್ತು ಧರಾದಿಷು || ಕೆಲವು ಮುಕ್ತರು ಶ್ವೇತದ್ವೀಪಕ್ಕೆ ಹೋಗಿ ವಿಷ್ಣುದರ್ಶನಮಾಡಿಕೊಂಡು ವಿಷ್ಣುವಿನಿಂದ ಆಜ್ಞಪ್ತರಾಗಿ ದುಃಖವಿರಹಿತರಾಗಿಯೇ ಭೂಮ್ಯಾದಿಗಳಲ್ಲಿ ಪ್ರಮೋದವನ್ನು ಹೊಂದಿಕೊಂಡು ಇರುತ್ತಾರೆ.

೧೫. ಮುಕ್ತಾಸ್ತು ಮಾನುಷಾ ದೇವಾನ್ ದೇವಾ ಇಂದ್ರಂ ಸಶಂಕರಂ | ಸ ಬ್ರಹ್ಮಾಣಂ ಕ್ರಮೇಣೈವ ತೇನ ಯಾಂತ್ಯಖಿಲಾ ಹರಿಂ | ಉತ್ತರೋತ್ತರವಶ್ಯಾಶ್ಚ ಮುಕ್ತಾ ರುದ್ರಪುರಸ್ಸರಾಃ || ಮನುಷ್ಯರು ಮುಕ್ತರಾಗಿ ದೇವತೆಗಳನ್ನು, ದೇವತೆಗಳು ಇಂದ್ರನನ್ನು, ಇಂದ್ರನು ರುದ್ರನನ್ನು, ರುದ್ರನು ಬ್ರಹ್ಮನನ್ನು, ತದ್ದ್ವಾರಾ ಹರಿಯನ್ನು ಹೊಂದುತ್ತಾರೆ. ಎಲ್ಲಾ ಮುಕ್ತರು ಉತ್ತರೋತ್ತರರ ಅಧೀನರು. ಇದೇ ರೀತಿಯಾಗಿ ಅಸುರರೂ ಮುಕ್ತರಾಗಿ ನಿತ್ಯನಿರಯವನ್ನು ಹೊಂದಿ ದುಃಖಾಧಿಕ್ಯವನ್ನೇ ಅನುಭವಿಸುತ್ತಿರುತ್ತಾರೆ.

೧೬. ಅಸುರಾಃ ಕಲಿಪರ್ಯಂತಾ ಏವಂ ದುಃಖೋತ್ತರೋತ್ತರಾಃ | ಕಲಿರ್ದುಃಖಾಧಿಕಸ್ತೇಷು ತೇಽಪ್ಯೇವಂ ಬ್ರಹ್ಮವದ್ಗಣಾಃ || ಕಲಿಪರ್ಯಂತರಾದ ಅಸುರರೂ ಹೀಗೆಯೇ ಮೇಲಿನವರು ದುಃಖಾಧಿಕ್ಯವುಳ್ಳವರು. ಅವರಲ್ಲಿ ಕಲಿಯು ದುಃಖಾಧಿಕ್ಯವುಳ್ಳವನು. ಬ್ರಹ್ಮನಂತೆ ಕಲಿಗಣಗಳು ಇವೆ. ಕೆಳಗಿನವರು ಉತ್ತರೋತ್ತರರ ಅಧೀನರು. ಪ್ರತಿದಿನದಲ್ಲಿಯೂ ದುರ್ಯೋಧನಾದಿಗಳ ರೂಪದಿಂದ ಹರಿಗುರುಗಳಲ್ಲಿ ಅಧಿಕದ್ವೇಷವನ್ನು ಸಂಪಾದಿಸಿ ತಮಸ್ಸಿನಲ್ಲಿ ದುಃಖಬಾಹುಲ್ಯವನ್ನು ಅನುಭವಿಸುವುದಕ್ಕೋಸ್ಕರ ಬ್ರಹ್ಮನಿಂದೊಡಗೂಡಿ ಲಿಂಗಭಂಗವಾಗುವುದು.

**೧೭. ಸಂಕರ್ಷಣಮುಖಜ್ವಾಲಾದಗ್ಧಂ ಭೂಮಂಡಲಂ ಯದಾ । ವಾಯೋರ್ಗದಾಪ್ರಹಾರೇಣ ತದಾ ತಲ್ಲಿಂಗಭಂಜನಂ ॥** ಭೂಮಂಡಲವು ಸಂಕರ್ಷಣನ ಮುಖದ ಜ್ವಾಲೆಯಿಂದ ಸುಟ್ಟುಹೋದಾಗ ವಾಯುದೇವರ ಗದಾಪ್ರಹಾರದಿಂದ ಕಲಿಯ ಲಿಂಗಭಂಗವಾಗುತ್ತದೆ. ಎಂದು ವಿಷ್ಣುರಹಸ್ಯದಲ್ಲಿದೆ. ಬ್ರಹ್ಮದೇವರು ಮುಕ್ತಿಗೆ ಹೋಗುವಕಾಲದಲ್ಲಿಯೇ ಸರ್ವ ಅಸುರರಿಗೂ ತಮಃಪ್ರಾಪ್ತಿಯೆಂದು ನಿಯಮವಿಲ್ಲ. ಬ್ರಹ್ಮನ ಪ್ರತಿದಿನದಲ್ಲಿಯೂ ಮಂಥರಾದಿ ದೈತ್ಯರಿಗೆ ತಮಃಪ್ರಾಪ್ತಿಯು ಪ್ರತಿಪಾದಿತವಾಗಿದೆ. ಆನಂದಾವಿರ್ಭಾವರೂಪವಾದ ಮುಕ್ತಿಯಾದರೂ ಬ್ರಹ್ಮದೇವರ ಸಂಗಡವೇ.

**೧೮. ಅನ್ಯೇ ತು ದೇವಾಂಶಭವಾಃ ಸಮಸ್ತಾಃ ಸ್ವಮೂಲರೂಪೈಕ್ಯಮವಾಪುರಾಶು । ದೇವಾಂಶಜಾ ಯೇ ತು ಸಮಸ್ತಶಸ್ತೇ ಸ್ವಮೂಲರೂಪಂ ಸಮವಾಪ್ಯ ಕಾಲೇ । ಸ್ವತಾರತಮ್ಯಾನುಸೃತಾಂ ವಿಮುಕ್ತಿಂ ಪ್ರಾಪ್ಸ್ಯಂತಿ ನಾತ್ರಾಪಿ ವಿಚಾರ್ಯಮಸ್ತಿ । ಪುನಶ್ಚ ತೇ ಸ್ಥಾನಮವಾಪ್ಯ ಸರ್ವೇ ಸ್ವೀಯಂ ಪರಾಂತೇ ತು ವಿಮುಕ್ತಿಮಾಪ್ನುಯುಃ ॥** ದೇವಾಂಶಸಂಭೂತರಾದವರೆಲ್ಲರೂ ಶೀಘ್ರನಾಗಿ ತಮ್ಮ ಮೂಲರೂಪಗಳಿಂದೈಕ್ಯವನ್ನು ಹೊಂದಿದರು. ದೇವಾಂಶದಿಂದ ಹುಟ್ಟಿದವರೆಲ್ಲರೂ ಮೂಲರೂಪವನ್ನು ಹೊಂದಿ ತಾರತಮ್ಯಾನುಸಾರವಾಗಿ ಮುಕ್ತಿಯನ್ನು ಹೊಂದುವರು. ಪುನಃ ಅವರೆಲ್ಲರೂ ತಮ್ಮ ಸ್ಥಾನವನ್ನು ಹೊಂದಿ ಬ್ರಹ್ಮದೇವರಸಂಗಡ ಮುಕ್ತಿಯನ್ನು ಹೊಂದುವರು.

**೧೯. ಪ್ರಾರಬ್ಧಕರ್ಮಶೇಷಸ್ತು ವಿರಜಾತರಣಾವಧಿಃ । ತಥಾಽಪಿ ಪ್ರಕೃತೇರ್ಬಂಧೋ ಬ್ರಹ್ಮಣಾ ಸಹ ಭಿದ್ಯತೇ ॥** ವಿರಜಾನದಿಯು ಪ್ರಕೃತಿ ಅವ್ಯಾಕೃತಾಕಾಶಗಳ ಮಧ್ಯದಲ್ಲಿರತಕ್ಕದು ಲಕ್ಷ್ಮ್ಯಾತ್ಮಕವು. ಅದನ್ನು ದಾಟುವವರೇಗೆ ಪ್ರಾರಬ್ಧವಾದ ಕರ್ಮದ ಶೇಷವಿರುತ್ತದೆ. ತಥಾಽಪಿ ಬ್ರಹ್ಮನಿಂದೊಡಗೂಡಿ ಪ್ರಕೃತಿಬಂಧವು ನಾಶವಾಗುವುದು.

**೨೦. ಶರೀರೇ ಪಾಪ್ಮನೋ ಹಿತ್ವಾ ಸರ್ವಾನ್ ಕಾಮಾನ್ ಸಮಶ್ನುತೇ ॥** ಶರೀರದಲ್ಲಿ ಪಾಪಗಳನ್ನು ಬಿಟ್ಟು ಸರ್ವ ಭೋಗಗಳನ್ನು ಅನುಭವಿಸುತ್ತಾನೆ.

**೨೧. ಸ ತೇಜಸಿ ಸೂರ್ಯೇ ಸಂಪನ್ನೋ ಯಥಾ ಪಾದೋದರಸ್ತ್ವಚಾ ವಿನಿರ್ಮುಚ್ಯತೇ ಏವಂ ಹ ವೈ ಪಾಪ್ಮನಾ ವಿನಿರ್ಮುಕ್ತಃ ಸಮಾಪ್ನೋತಿ ವಿರಜಾಂ ನದೀಂ ತತ್ಸುಕೃತದುಷ್ಕೃತೇ ವಿಧೂನತೇ ॥** ಆತನು ತೇಜೋರೂಪನಾದ ಸೂರ್ಯನಲ್ಲಿ ಸಂಗತನಾಗಿ ಹೇಗೆ ಸರ್ಪವು ಚರ್ಮದಿಂದ ಬಿಡಲ್ಪಡುತ್ತದೋ ಹೀಗೆಯೇ ಪಾಪದಿಂದ ಬಿಡಲ್ಪಟ್ಟವನಾಗಿ ವಿರಜಾನದಿಯನ್ನು ಹೊಂದಿ ಸುಕೃತದುಷ್ಕೃತಗಳನ್ನು ಬಿಡುತ್ತಾನೆ.

**೨೨. ವಿಧೇರ್ದೇಹಾಪಗಮೇ ಲಿಂಗಮಾತ್ರಶರೀರಿಣಃ । ವಿರಜಾಯಾಂ ಕೃತಸ್ನಾನಾಃ ಬ್ರಹ್ಮಣಾ ಸಹ ಸರ್ವಶಃ । ತ್ಯಕ್ತಲಿಂಗಾಸ್ತತಃ ಸರ್ವೇ ಸ್ವರೂಪೇಣ ವ್ಯವಸ್ಥಿತಾಃ ॥** ಮುಕ್ತರು ದೇಹವು ಹೋದಮೇಲೆ ಲಿಂಗಶರೀರವುಳ್ಳವರಾಗಿ ಬ್ರಹ್ಮನಿಂದೊಡಗೂಡಿಯೇ ವಿರಜಾನದಿಯಲ್ಲಿ ಸ್ನಾನಮಾಡಿ ಲಿಂಗಶರೀರವನ್ನು ಬಿಟ್ಟು ಸ್ವಸ್ವರೂಪದಿಂದ ಇರುತ್ತಾರೆ. ಎಂದು ವಿಷ್ಣುರಹಸ್ಯದಲ್ಲಿದೆ. ೧೦ ಇಂದ್ರಿಯಗಳು ಸೂಕ್ಷ್ಮರೂಪಗಳು, ೫ ಪ್ರಾಣಗಳು ಸೂಕ್ಷ್ಮರೂಪಗಳು, ೧ ಸೂಕ್ಷ್ಮರೂಪವಾದ ಮನಸ್ಸು, ಹೀಗೆ ೧೬ ಕಲೆಗಳಿಂದೊಡಗೂಡಿದ್ದು ಲಿಂಗ ಶರೀರವು, ಅದಕ್ಕೆ ಭಂಗವೆಂದರೆ ಜೀವಸಂಬಂಧನಾಶವು.

ಮುಕ್ತಿಯು ೪ ವಿಧವು. ೧ ಸಾಲೋಕ್ಯ, ೨ ಸಾಮೀಪ್ಯ, ೩ ಸಾರೂಪ್ಯ, ೪ ಸಾಯುಜ್ಯ,

೨೩. ಸಾಲೋಕ್ಯಂ ಚ ಸಮೀಪತ್ವಂ ಸಾರೂಪ್ಯಂ ಯೋಗ ಏವ ಚ । ಇಮಾಮಾರಭ್ಯ ಸರ್ವತ್ರ ಯಾವತ್ಸು ಕ್ಷೀರಸಾಗರೇ । ಪುರುಷೋಽನಂತಶಯನಃ ಶ್ರೀಮಾನ್ನಾರಾಯಣಾಭಿಧಃ ॥ ಸಾಲೋಕ್ಯಾದಿ ರೂಪವಾದುದು ೪ ವಿಧ ಮುಕ್ತಿಯು. ಈ ಭೂಮಿಯನ್ನಾರಂಭಿಸಿ ಕ್ಷೀರಸಾಗರಪರ್ಯಂತ ಎಲ್ಲಾ ಕಡೆಗಳಲ್ಲಿಯೂ ಶ್ರೀ ನಾರಾಯಣನು ಇದ್ದಾನೆ. ೧. ಕೆಲವರು ಯಾವುದಾದರೂ ಲೋಕಗಳಲ್ಲಿದ್ದು ಯಥೇಷ್ಟಭೋಗವುಳ್ಳವರು. ವೈಕುಂಠಾದಿ ೩ ಭಗವಲ್ಲೋಕಗಳಲ್ಲಿ ಮಾತ್ರ ಅವಸ್ಥಿತಿಯಿಲ್ಲದೆ ಸ್ವರ್ಗಾದಿಲೋಕಗಳಲ್ಲಿಯೇ ಇದ್ದು ಭಗವಂತನ ದರ್ಶನದಿಂದ ಭೋಗವೇ ಸಾಲೋಕ್ಯ ಮುಕ್ತಿಯು.

೨೪. ಕೇಚಿದತ್ರೈವ ಮುಚ್ಯಂತೇ ನೋತ್ಕ್ರಾಮಂತಿ ಕದಾಚನ । ಅತ್ರೈವ ಚ ಸ್ಥಿತಿಸ್ತೇಷಾಮಂತರಿಕ್ಷೇ ತು ಕೇಚನ । ಕೇಚಿತ್ಸ್ವರ್ಗೇ ಮಹರ್ಲೋಕೇ ಜನೇ ತಪಸಿ ಚಾಪರೇ । ಕೇಚಿತ್ಸತ್ಯೇ ಮಹಾಜ್ಞಾನಾ ಗಚ್ಛಂತಿ ಕ್ಷೀರಸಾಗರಂ ॥ ಕೆಲವರು ಭೂಮಿಯಲ್ಲಿಯೇ ಮುಕ್ತರಾಗಿರುತ್ತಾರೆ. ಕೆಲವರು ಅಂತರಿಕ್ಷದಲ್ಲಿಯೂ, ಸ್ವರ್ಗದಲ್ಲಿಯೂ, ಮಹರ್ಲೋಕದಲ್ಲಿಯೂ, ಜನಲೋಕದಲ್ಲಿಯೂ, ತಪೋಲೋಕದಲ್ಲಿಯೂ, ಸತ್ಯಲೋಕದಲ್ಲಿಯೂ ಇರುತ್ತಾರೆ. ಮಹಾಜ್ಞಾನಿಗಳು ಕ್ಷೀರಸಮುದ್ರಕ್ಕೆ ಹೋಗುವರು.

೨. ಕೆಲವು ಋಷ್ಯಾದಿಗಳು ಭಗವಂತನ ಸಮೀಪದಲ್ಲಿಯೇ ಯಥೇಷ್ಟ ಭೋಗವನ್ನನುಭವಿಸುತ್ತಾರೆ.

೨೫. ಉಪಾಸನಾಬಲಾನ್ಮುಕ್ತೋ ಭೋಗಾನ್ ಕರ್ಮಫಲಾನ್ ಸದಾ । ಭುಂಕ್ತೇ ವಿಷ್ಣೋಸ್ಸಮೀಪಸ್ಥಃ ಸರ್ವದೋಷವಿವರ್ಜಿತಃ ॥ ಉಪಾಸನಾ ಸಾಮರ್ಥ್ಯದಿಂದ ಮುಕ್ತನು ಸರ್ವ ದೋಷವಿರಹಿತನಾಗಿ ವಿಷ್ಣುವಿನ ಸಮೀಪದಲ್ಲಿದ್ದವನಾಗಿ ಸರ್ವಭೋಗಗಳನ್ನು ಭೋಗಿಸುತ್ತಾನೆ.

೩. ಜಯ ವಿಜಯ ಮೊದಲಾದ ಕೆಲವರು ೪ ಭುಜಗಳುಳ್ಳವರೂ ಶಂಖಚಕ್ರಾದ್ಯಾಯುಧವುಳ್ಳವರೂ ಯಥೇಷ್ಟಭೋಗವುಳ್ಳವರು.

೨೬. ಸರ್ವೇ ಚತುರ್ಬಾಹವ ಉನ್ಮಿಷನ್ಮಣಿ ಪ್ರವೇಕನಿಷ್ಕಾಭರಣಾಃ ಸುಪೇಶಸಃ ॥ ಸರ್ವರೂ ೪ ಭುಜಗಳುಳ್ಳವರೂ ಸುಂದರವಾದ ಕಾಂತಿಯುಳ್ಳವರಾಗಿರುತ್ತಾರೆ.

೪. ಕೆಲವರು (ದೇವತೆಗಳು) ಭಗವಂತನ ಶರೀರವನ್ನು ಪ್ರವೇಶಿಸಿ ಆತನ ಶರೀರದಿಂದಲೇ ಭೋಗಿಸುತ್ತಾರೆ.

೨೭. ಆದತ್ತೇ ಹರಿಹಸ್ತೇನ ಹರಿದೃಷ್ಟ್ಯೈವ ಪಶ್ಯತಿ । ಗಚ್ಛೇಚ್ಚ ಹರಿಪಾದೇನ ಮುಕ್ತಸ್ಯೈಷಾ ಸ್ಥಿತಿರ್ಭವೇತ್ ॥ ಸಾಯುಜ್ಯ ಮುಕ್ತನು ಭಗವಂತನ ಹಸ್ತದಿಂದ ಸ್ವೀಕರಿಸುತ್ತಾನೆ, ಹರಿಯ ದೃಷ್ಟಿಯಿಂದಲೇ ನೋಡುತ್ತಾನೆ, ಶ್ರೀ ಹರಿಯ ಚರಣದಿಂದಲೇ ಹೋಗುವನು, ಹೀಗೆ ಸ್ಥಿತಿಯು. ಹಾಗಾದರೆ ಭಗವಂತನಿಗೂ ಸಾಯುಜ್ಯ ಮುಕ್ತರಿಗೂ ಐಕ್ಯವು ಪ್ರಾಪ್ತವಾಗಬೇಕಾಯಿತೆಂದರೆ:-

೨೮. ಮರ್ತ್ಯಂ ದೇಹಂ ಪರಿತ್ಯಜ್ಯ ಚಿತಿಮಾತ್ರಾತ್ಮದೇಹಿನಃ । ಚಿತಿಮಾತ್ರೇಂದ್ರಿಯಾಶ್ಚೈವ ಪ್ರವಿಷ್ಟಾ ವಿಷ್ಣುಮವ್ಯಯಂ । ತದಂಗಾನುಗೃಹೀತೈಶ್ಚ ಸ್ವಾಂಗೈರೇವ ಪ್ರವರ್ತನಂ । ಕುರ್ವಂತಿ ಭುಂಜತೇ ಭೋಗಾಂಸ್ತದಂತರ್ಬಹಿರೇವ ವಾ । ಯಥೇಷ್ಟಂ ಪರಿವರ್ತಂತೇ ತಸ್ಯೈವಾನುಗ್ರಹೇರಿತಾಃ ॥ ವಿನಾಶಿಯಾದ ದೇಹವನ್ನು ಬಿಟ್ಟು ಜ್ಞಾನಾನಂದಾತ್ಮಕ ದೇಹೇಂದ್ರಿಯವುಳ್ಳವರಾಗಿ ವಿಷ್ಣುವನ್ನು ಪ್ರವೇಶಿಸಿ ವಿಷ್ಣುವಿನ ಅಂಗಗಳಿಂದ ಅನು

ಗೃಹೀತಗಳಾದ ಸ್ವಾಂಗಗಳಿಂದಲೇ ಪ್ರವೃತ್ತಿಯನ್ನು ಮಾಡುತ್ತಿರುತ್ತಾರೆ. ಆತನ ಒಳಗೂ ಹೊರಗೂ ಭೋಗಗಳನ್ನು ಭೋಗಿಸುತ್ತಾರೆ. ಆತನ ಅನುಗ್ರಹದಿಂದಲೇ ಯಥೇಷ್ಟವಾಗಿ ಸಂಚರಿಸುತ್ತಿರುತ್ತಾರೆ. ತಥಾಚ ಪರಮಾತ್ಮನ ಶರೀರವನ್ನು ಪ್ರವೇಶಿಸಿ ಆತನ ಆನಂದಾದಿಗಳನ್ನು ಬಿಟ್ಟು ಸ್ವಸ್ವರೂಪಾನಂದಾದಿಗಳನ್ನೇ ಭೋಗಿಸುತ್ತಾನೆ.

**೨೯. ಅಥ ವಿಮುಕ್ತಸ್ಯ ಚಿನ್ಮಾತ್ರ ಏವ ದೇಹೋ ಭವತಿ ಚಿನ್ಮಾತ್ರಾಣಿ ಕರಣಾನಿ ತೈರೀಶಾನುಗೃಹೀತೈರ್ಭೋಗಾನ್ ಭುಂಕ್ತೇ ॥** ಇತಿ ಶ್ರುತಿಃ ॥ ಮುಕ್ತನಿಗೆ ಆನಂದಾತ್ಮಕವಾದ ಶರೀರವು ಇಂದ್ರಿಯಗಳು ಆಗುತ್ತವೆ. ಈಶಾನುಗೃಹೀತಗಳಾದ ಅವುಗಳಿಂದಲೇ ಮುಕ್ತನು ಭೋಗಗಳನ್ನನುಭವಿಸುತ್ತಾನೆ.

**೩೦. ಜೀವಭೋಗ್ಯಸ್ಯ ಭೋಕ್ತೇಶೋ ಜೀವಸ್ತದ್ಭೋಗಭುಙ್ನ ತು ॥** ಶ್ರೀಹರಿಯು ಜೀವನಿಗೆ ಭೋಗ್ಯವಾದುದನ್ನು ಅನುಭವಿಸುತ್ತಾನೆ. ಜೀವನು ಆತನ ಭೋಗಗಳನ್ನು ಅನುಭವಿಸುವವನಲ್ಲ.

**೩೧. ಸ ತತ್ರ ಪರ್ಯೇತಿ ಜಕ್ಷನ್ ಕ್ರೀಡನ್ ರಮಮಾಣಃ ಸ್ತ್ರೀಭಿರ್ವಾ ಯಾನೈರ್ವಾ ಜ್ಞಾತಿಭಿರ್ವಾ ಅಜ್ಞಾತಿಭಿರ್ವಾ ॥** ಇತಿ ಶ್ರುತಿಃ ॥ ಮುಕ್ತನು, ಮುಕ್ತಿಯಲ್ಲಿ ಸ್ತ್ರೀಯರಿಂದ ರಮಿಸುತ್ತಾ ಭಕ್ಷಿಸುತ್ತಾ ಸಂಚರಿಸುತ್ತಾನೆ.

**೩೨. ಋಚಾಂ ತ್ವಃ ಪೋಷಮಾಸ್ತೇ ಪುಪುಷ್ವಾನ್ ಗಾಯತ್ರಂ ತ್ವೋ ಗಾಯತಿ ಶಕ್ವರೀಷು । ಬ್ರಹ್ಮಾ ತ್ವೋ ವದತಿ ಜಾತವಿದ್ಯಾಂ ಯಜ್ಞಸ್ಯ ಮಾತ್ರಾಂ ವಿಮಿಮೀತ ಉ ತ್ವಃ ॥** (ಋ. ಅಷ್ಟ. ೮. ಅಧ್ಯಾ. ೨. ವ. ೨೪.) ಒಬ್ಬ ಬ್ರಹ್ಮನು ಋಕ್ಕುಗಳನ್ನು ಪೋಷಿಸುತ್ತಾ, ಮತ್ತೊಬ್ಬನು ಶಕ್ವರೀ ಛಂದಸ್ಕ ಋಕ್ಕುಗಳಲ್ಲಿ ಗಾಯತ್ರಸಾಮವನ್ನು ಗಾಯನ ಮಾಡುತ್ತಾ ಇನ್ನೊಬ್ಬನು ವಿದ್ಯೆಯನ್ನುಪದೇಶಿಸುತ್ತಾ ಮತ್ತೊಬ್ಬನು ಯಾಗಾಂಶವನ್ನು ಉಚ್ಚರಿಸುತ್ತಿರುತ್ತಾನೆ. ಇದರಿಂದ ಮುಕ್ತಿಯಲ್ಲಿ ಅನಂತ ಬ್ರಹ್ಮರು ಇದ್ದಾರೆಂದು ಉಕ್ತವಾಯಿತು. ಐಕ್ಯವಲ್ಲ. ಮುಕ್ತರಿಗೆ ಸಂಕಲ್ಪದಿಂದಲೇ ಸರ್ವಭೋಗಗಳೂ ಪ್ರಾಪ್ತಗಳಾಗುತ್ತವೆ. ಅಲ್ಲಿಯೂ ದೇವತೆಗಳು ತಮ್ಮ ತಮ್ಮ ಅಧಿಕಾರದಲ್ಲಿದ್ದು ಸರ್ವಪೂಜ್ಯನಾದ ಚತುರ್ಮುಖನಿಗೆ ಪೂಜಾದಿಗಳನ್ನು ಮಾಡುತ್ತಿರುತ್ತಾರೆ. ಮುಕ್ತರಿಗೆ ಜಗತ್ಸೃಷ್ಟ್ಯಾದಿ ವ್ಯಾಪಾರಗಳು ಇಲ್ಲ. ಅವರ ನಿಯಾಮಕತ್ವವಿದೆ. ಪುನಃ ಯಾವಾಗಲೂ ಮುಕ್ತರು ಸಂಸಾರಿಗಳಾಗಲಾರರು.

**೩೩. ಪ್ರಾಪ್ಯ ನಾವೃತ್ತಿಮಾಯಾಂತಿ ಶಾಂತೀಭೂತಾ ನಿರಾಮಯಾಃ ॥**

**೩೪. ಯದ್ಗತ್ವಾ ನ ನಿವರ್ತಂತೇ ತದ್ಧಾಮ ಪರಮಂ ಮಮ ॥** (ಗೀ ಅ. ೧೫. ಶ್ಲೋ. ೬.) ದುಃಖರಹಿತರಾಗಿ ಮುಕ್ತಿಯನ್ನು ಹೊಂದಿ ಮರಳಿ ಬರುವುದಿಲ್ಲ. ಯಾವುದನ್ನು ಹೊಂದಿ ತಿರುಗಿ ಬರುವುದಿಲ್ಲವೋ, ಅದೇ ನನ್ನ ಮಂದಿರವು. ಮುಕ್ತಿಯಲ್ಲಿಯೂ ತಾರತಮ್ಯವಿದೆ. ಅಂತಹ ಮುಕ್ತಿಯಲ್ಲಿ ಪರಮಾತ್ಮನು ಸಕಲಭೋಗ ಯುಕ್ತನೂ ಮುಕ್ತಬ್ರಹ್ಮಾದಿಗಳಿಂದ ಸ್ತುತ್ಯನಾಗಿ ಲಕ್ಷ್ಮೀಸ್ವರೂಪವಾದ ಏಮುತವೆಂದು ಹೆಸರುಳ್ಳ ಪರ್ಯಂಕದಲ್ಲಿ ಮಲಗುತ್ತಾ ಇರುತ್ತಾನೆ. ಮಹಾಲಕ್ಷ್ಮಿಯು ಪ್ರಿಯಕರ್ಮವನ್ನು ಗಾನಮಾಡುತ್ತಾ ಅನೇಕ ವಿಭೂತಿಗಳಿಂದ ಬಹುಮಾನವನ್ನು ಮಾಡುತ್ತಾ ಇರುತ್ತಾಳೆ. ಇಂತಹ ಮುಕ್ತಿಯು ಜಿಜ್ಞಾಸಾ ನಿದಿಧ್ಯಾಸನ ಪರಮೇಶ್ವರನ ಅನುಗ್ರಹ, ಆತನ ದರ್ಶನ, ಪರಮಭಕ್ತಿ ಪರಮಾನುಗ್ರಹವಾಗಿ ಆಗುವುದು.

**೩೫. ತಾರತಮ್ಯಂ ತತೋ ಜ್ಞೇಯಂ ಸರ್ವೋಚ್ಚತ್ವಂ ಹರೇಸ್ತಥಾ । ಏತದ್ವಿನಾ ನ ಕಸ್ಯಾಪಿ ವಿಮುಕ್ತಿಃ ಸ್ಯಾತ್ಕಥಂಚನ ॥** ಜೀವರಲ್ಲಿ ನೀಚೋಚ್ಚಭಾವವನ್ನು ಶ್ರೀಹರಿಗೆ ಸರ್ವೋತ್ತಮತ್ವವನ್ನು ತಿಳಿಯದೆ ಯಾರಿಗೂ ಮುಕ್ತಿಯಾಗಲಾರದು.

೩೬. ಮಾನುಷಾದಿವಿರಿಂಚಾಂತಂ ತಾರತಮ್ಯಂ ವಿಮುಕ್ತಿಗಂ । ತತೋ ವಿಷ್ಣೋಃ ಪರೋತ್ಕರ್ಷಂ ಸಮ್ಯಕ್ ಜ್ಞಾತ್ವಾ ವಿಮುಚ್ಯತೇ ॥ (ಕೌರ್ಮಪುರಾಣ) ಮನುಷ್ಯರನ್ನಾರಂಭಿಸಿ ಚತುರ್ಮುಖ ಪರ್ಯಂತವಾಗಿಯೂ ಮುಕ್ತಿಯಲ್ಲಿಯೂ ತಾರತಮ್ಯವನ್ನು ವಿಷ್ಣುವಿಗೆ ಸರ್ವೋತ್ತಮತ್ವವನ್ನು ತಿಳಿದು ಮುಕ್ತನಾಗುತ್ತಾನೆ.

೩೭. ಧರ್ಮಾರ್ಥಕಾಮಾಸ್ಸರ್ವೇಽಪಿ ನ ನಿತ್ಯಾ ಮೋಕ್ಷ ಏವ ಹಿ। ನಿತ್ಯಸ್ತಸ್ಮಾತ್ತದರ್ಥಾಯ ಯತೇತ ಮತಿಮಾನ್ನರಃ ॥ ಇತಿ ಭಾಲ್ಲವೇಯ ಶ್ರುತಿಃ ॥ ಧರ್ಮಾರ್ಥಕಾಮಗಳೆಲ್ಲವೂ ಅನಿತ್ಯಗಳು, ಮುಕ್ತಿಯೊಂದೇ ನಿತ್ಯವು, ಆಕಾರಣ ಮುಕ್ತಿಗೋಸ್ಕರ ಬುದ್ಧಿವಂತನು ಪ್ರಯತ್ನಮಾಡಬೇಕು.

೩೮. ಯಸ್ಯ ಪ್ರಸಾದಾತ್ಪರಮಾರ್ತಿರೂಪಾದಸ್ಮಾತ್ಸಂಸಾರಾನ್ಮುಚ್ಯತೇ ನಾಪರೇಣ। ನಾರಾಯಣೋಽಸೌ ಪರಮೋ ವಿಚಿಂತ್ಯೋ ಮುಮುಕ್ಷುಭಿಃ ಕರ್ಮಪಾಶಾದಮುಷ್ಮಾತ್ ॥ ಇತಿ ನಾರಾಯಣಶ್ರುತಿಃ ॥ ಯಾವ ಶ್ರೀಹರಿಯ ಅನುಗ್ರಹದಿಂದ ದುಃಖಮಯವಾದ ಸಂಸಾರದಿಂದ ಮುಕ್ತನಾಗುತ್ತಾನೆ. ಇಂತಹ ನಾರಾಯಣನನ್ನು ಮುಮುಕ್ಷುಗಳು ಧ್ಯಾನಿಸಬೇಕು. ಅಂತೂ ಜ್ಞಾನಿಯು ಭಗವಂತನ ಪರಮಾನುಗ್ರಹದಿಂದ ಸ್ವಸ್ವರೂಪಸುಖ (ಮುಕ್ತಿ) ವನ್ನು ಹೊಂದುತ್ತಾನೆ.

## ೭. ನಿರ್ಮಲವಾದ ಭಕ್ತಿಯೇ ಆ ಮುಕ್ತಿಗೆ ಸಾಧನವು.

ಪೂರ್ವೋಕ್ತಮುಕ್ತಿಗೆ ಸಾಧನವು ಭಕ್ತಿಯು. ಸ್ನೇಹವಿಶೇಷವು. ಭಕ್ತಿಯು ಅನೇಕ ವಿಧವು.

೧. ವಿಷ್ಣುಭಕ್ತಿರ್ದೇವಭಕ್ತಿರ್ಗುರುಭಕ್ತಿಸ್ತಥೈವ ಚ । ತತ್ತಚ್ಛ್ರೈಷ್ಠ್ಯಾನುಸಾರೇಣ ಮುಕ್ತೌ ನಿಯತ ಸಾಧನಂ । ಭಕ್ತಿಪೂರ್ತೌ ಭವೇನ್ಮುಕ್ತಿಸ್ತದಭಾವೇ ಚ ನೋ ಭವೇತ್ ॥ ವಿಷ್ಣುಭಕ್ತಿಯು, ದೇವಭಕ್ತಿಯು, ಗುರುಭಕ್ತಿಯೂ ಕೂಡ ಅವರವರ ಶ್ರೇಷ್ಠತನವನ್ನನುಸರಿಸಿ ಮುಕ್ತಿಗೆ ಸಾಧನವು. ಭಕ್ತಿಯು ಪೂರ್ಣವಾದರೆ ಮುಕ್ತಿಯಾಗುವುದು. ಇಲ್ಲವಾದರೆ ಆಗಲಾರದು.

೨. ಯಸ್ಯ ದೇವೇ ಪರಾ ಭಕ್ತಿರ್ಯಥಾ ದೇವೇ ತಥಾ ಗುರೌ । ತಸ್ಯೈತೇ ಕಥಿತಾ ಹ್ಯರ್ಥಾಃ ಪ್ರಕಾಶಂತೇ ಮಹಾತ್ಮನಃ ॥ ಯಾವಾತನಿಗೆ ವಿಷ್ಣುವಿನಲ್ಲಿ ಪರಮಭಕ್ತಿಯು, ಬ್ರಹ್ಮಾದಿ ದೇವತೆಗಳಲ್ಲಿ ಯಥಾಯೋಗ್ಯವಾಗಿ ಭಕ್ತಿಯು, ಗುರುಗಳಲ್ಲಿಯೂ ತದ್ಯೋಗ್ಯವಾದ ಭಕ್ತಿಯೂ ಅದೆ. ಆತನಿಗೆ ಎಲ್ಲಾ ಅರ್ಥಗಳು ಪ್ರಕಾಶಿಸುತ್ತವೆ.

೩. ವಿಷ್ಣೌ ಭಕ್ತಿರ್ವಿಶೇಷೇಣ ಮೋಕ್ಷಾವಾಪ್ತೌ ಹಿ ಕಾರಣಂ । ತದ್ಭಕ್ತೇಷು ಕ್ರಮೇಣೈವ ರಮಾದ್ಯೇಷು ತ್ವನಂತರಂ ॥ ಮುಖ್ಯವಾಗಿ ವಿಷ್ಣುವಿನ ಭಕ್ತಿಯೇ ಮುಕ್ತಿಪ್ರಾಪ್ತಿಗೆ ಕಾರಣವು. ತದ್ಭಕ್ತರಾದ ರಮಾದಿಗಳಲ್ಲಿ ತತ್ತದಾಧಿಕ್ಯ ಕ್ರಮವಾಗಿ ಭಕ್ತಿಯನ್ನು ಮಾಡತಕ್ಕದು. ಶ್ರೀ ಪರಮಾತ್ಮನ ಭಕ್ತಿಯೇ ಮುಖ್ಯವಾಗಿ ಮುಕ್ತಿಗೆ ಕಾರಣವು.

೪. ಮಹಾತ್ಮ್ಯಜ್ಞಾನಪೂರ್ವಸ್ತು ಸುದೃಢಃ ಸರ್ವತೋಽಧಿಕಃ । ಸ್ನೇಹೋ ಭಕ್ತಿರಿತಿ ಪ್ರೋಕ್ತಸ್ತಯಾ ಮುಕ್ತಿರ್ನ ಚಾನ್ಯಥಾ ॥ ನಿರವಧಿಕ ಅನಂತ ಅನವದ್ಯ ಕಲ್ಯಾಣಗುಣತ್ವಜ್ಞಾನಪೂರ್ವಕವಾಗಿಯೂ, ಸರ್ವ ವಸ್ತುಗಳಿಂದಲೂ, ಅನೇಕ ಗುಣಗಳಿಂದ ಅಧಿಕವಾಗಿಯೂ, ಸಾವಿರಾರು ವಿಘ್ನಗಳಿಂದಲೂ ತಡಿಯಲ್ಪಡದಿರುವ ನಿರಂತರವಾದ ಸ್ನೇಹಪ್ರವಾಹವೇ

ಪರಮೇಶ್ವರನ ಭಕ್ತಿಯೆಂದು ಹೇಳಲ್ಪಟ್ಟಿದೆ. ಅದರಿಂದಲೇ ಮುಕ್ತಿಯು, ಬೇರೆ ಯಾವುದರಿಂದಲೂ ಅಲ್ಲ.

೫. **ಸರ್ವಸ್ಮಾದುತ್ತಮ ಇತಿ ಸಮ್ಯಕ್ಸ್ನೇಹಯುತಾ ಮತಿಃ । ಸುಸ್ಥಿರಾ ಭಕ್ತಿರುದ್ದಿಷ್ಟಾ ತಯಾ ಮುಕ್ತಿರ್ನಚಾನ್ಯತಃ ॥** ಶ್ರೀಹರಿಯು ಸರ್ವೋತ್ತಮನೆಂದು ಚೆನ್ನಾಗಿ ಸ್ನೇಹಯುಕ್ತವಾದ ಅತಿಸ್ಥಿರವಾದ ಬುದ್ಧಿಯೇ ಭಕ್ತಿಯೆಂದು ಹೇಳಲ್ಪಟ್ಟಿದೆ. ಅದರಿಂದಲೇ ಮುಕ್ತಿಯು ಇತರದಿಂದಲ್ಲ.

೬. **ಬ್ರಹ್ಮರುದ್ರರಮಾದಿಭ್ಯೋಽಪ್ಯುತ್ತಮತ್ವಂ ಸ್ವತಂತ್ರತಾಂ । ಸರ್ವಸ್ಯ ತದಧೀನತ್ವಂ ಸರ್ವಸದ್ಗುಣಪೂರ್ಣತಾಂ । ನಿರ್ದೋಷತ್ವಂ ಚ ವಿಜ್ಞಾಯ ವಿಷ್ಣೋಸ್ತತ್ರಾಖಿಲಾಧಿಕಃ । ಸ್ನೇಹೋ ಭಕ್ತಿರಿತಿ ಪ್ರೋಕ್ತಃ ಸರ್ವೋಪಾಯೋತ್ತಮೋತ್ತಮಃ ॥** ಶ್ರೀಹರಿಯು ಬ್ರಹ್ಮರುದ್ರರಮಾದಿಗಳಿಂದಲೂ ಉತ್ತಮನು, ಸ್ವತಂತ್ರನು, ಸರ್ವವೂ ಶ್ರೀಹರಿಯ ಅಧೀನವೇ, ಸರ್ವಸದ್ಗುಣಪೂರ್ಣನು, ನಿರ್ದೋಷನು ಎಂದು ತಿಳಿದು ಸರ್ವಾಧಿಕವಾಗಿಯೂ ಎಲ್ಲಾ ಉಪಾಯಗಳಲ್ಲಿ ಅತಿಶ್ರೇಷ್ಠವಾಗಿಯೂ ಇರುವ ನಿರಂತರ ಸ್ನೇಹವೇ ಭಕ್ತಿಯೆಂದು ಹೇಳಲ್ಪಟ್ಟಿದೆ. ಹಾಗಾದರೆ ತಮೋಯೋಗ್ಯರಿಗೂ ಸತ್ಸಂಗದಿಂದ ಭಕ್ತಿಯುಂಟಾಗಿ ಮುಕ್ತಿಯಾಗಬೇಕಾಗುವುದೆಂದರೆ ಸ್ವರೂಪಭೂತವಾದ ಅನಾದಿಯಾದ ಭಕ್ತಿಯೇ ಅಪರೋಕ್ಷಜ್ಞಾನಕ್ಕೂ ಮುಕ್ತಿಗೂ ಕಾರಣವಾದುದು.

೭. **ಭಕ್ತ್ಯಾ ಪ್ರಸನ್ನೋ ಭಗವಾನ್ ದದ್ಯಾಜ್ಜ್ಞಾನಮನಾಕುಲಂ । ತಯೈವ ದರ್ಶನಂ ಯಾತಃ ಪ್ರದದ್ಯಾನ್ಮುಕ್ತಿಮೇತಯಾ ॥** ಭಗವಂತನು ಭಕ್ತಿಯಿಂದ ಪ್ರಸನ್ನನಾಗಿ ಜ್ಞಾನವನ್ನು ಕೊಟ್ಟು ಅದರಿಂದಲೇ ಪ್ರತ್ಯಕ್ಷವನ್ನೂ ಮುಕ್ತಿಯನ್ನೂ ಕೊಡುವನು. ಎಂದು ಶ್ರುತಿಯು.

೮. **ಅನಿಮಿತ್ತಾ ಭಗವತಿ ಭಕ್ತಿಃ ಸಿದ್ಧೇರ್ಗರೀಯಸೀ । ಜರಯತ್ಯಾಶು ಯಾ ಕೋಶಂ ನಿಗೀರ್ಣಮನಲೋ ಯಥಾ ॥** ನಿರ್ನಿಮಿತ್ತ ಭಕ್ತಿಯೇ ಮುಕ್ತಿಗೆ ಕಾರಣವು. ಒಣಗಿದ ಕಟ್ಟಿಗೆಯನ್ನು ಬೆಂಕಿಯು ಸುಡುವಂತೆ ಈ ಭಕ್ತಿಯು ಲಿಂಗದೇಹವನ್ನು ಹೋಗಲಾಡಿಸುತ್ತದೆ. (ಭಾಗವತ.)

೯. **ನಾಯಮಾತ್ಮಾ ಪ್ರವಚನೇನ ಲಭ್ಯೋ ನ ಮೇಧಯಾ ನ ಬಹುನಾ ಶ್ರುತೇನ । ಯಮೇವೈಷ ವೃಣುತೇ ತೇನ ಲಭ್ಯಸ್ತಸ್ಯೈಷ ಆತ್ಮಾ ವಿವೃಣುತೇ ತನೂಂ ಸ್ವಾಂ ॥** (ಅಥರ್ವ. ಪು. ೨೮೩). ಪ್ರವಚನದಿಂದಲೂ, ಮೇಧೆಯಿಂದಲೂ, ಶಾಸ್ತ್ರಶ್ರವಣದಿಂದಲೂ ಪರಮಾತ್ಮನನ್ನು ಹೊಂದಲು ಸಾಧ್ಯವಿಲ್ಲ ಭಕ್ತಿಯೇ ಕಾರಣವು. ಯಾರ ಭಕ್ತಿಗೆ ಮೆಚ್ಚಿ ಪ್ರಸನ್ನನಾಗುತ್ತಾನೋ, ಆತನಿಗೇನೆ ತನ್ನ ಶರೀರವನ್ನು ತೋರಿಸುತ್ತಾನೆ. (ಮುಕ್ತಿಯನ್ನು ಕೊಡುತ್ತಾನೆ.)

೧೦. **ಭಕ್ತ್ಯಾ ತ್ವನನ್ಯಯಾ ಶಕ್ಯ ಅಹಮೇವಂವಿಧೋಽರ್ಜುನ । ಜ್ಞಾತುಂ ದೃಷ್ಟುಂ ಚ ತತ್ವೇನ ಪ್ರವೇಷ್ಟುಂ ಚ ಪರಂತಪ ॥** (ಗೀತಾ. ಅಧ್ಯಾ. ೧೧. ಶ್ಲೋ. ೫೪.) ಎಲೈ ಅರ್ಜುನನೇ ನನ್ನನ್ನು ತಿಳಿಯಲಿಕ್ಕೂ, ನೋಡಲಿಕ್ಕೂ, ಪ್ರವೇಶಿಸಲಿಕ್ಕೂ, ಭಕ್ತಿಯೊಂದೇ ಮುಖ್ಯಕಾರಣವು.

೧೧. **ಅಭ್ಯಾಸಪಾಟವಾತ್ಸ್ನೇಹಾದಶ್ರಮತ್ವಾದುಪಾಸನಾ । ಭಕ್ತಿಶ್ಚ ಸುಖರೂಪೈವ ಮುಕ್ತಾನಾಂ ನ ತು ಸಾಧನಂ ॥** ಇತಿ ಶ್ರುತಿಃ ॥ ಅಭ್ಯಾಸಾಧಿಕ್ಯದಿಂದಲೂ ಸ್ನೇಹ

ದಿಂದಲೂ ಶ್ರಮಾಭಾವದಿಂದಲೂ ಮುಕ್ತರಿಗೆ ಉಪಾಸನಾಭಕ್ತಿಗಳು ಸುಖರೂಪಗಳೇ, ಸಾಧನ ವಲ್ಲವು. ಅನೇಕವಿಧ ಸಾಂಸಾರಿಕದುಃಖಗಳನ್ನು ನೋಡಿ ಸತ್ಸಹವಾಸದಿಂದ ಫಲಭೋಗ ಗಳಲ್ಲಿ ವಿರಕ್ತಿಯು, ಶಮದಮಾದಿಗಳು, ಶ್ರವಣ ಮನನನಿದಿಧ್ಯಾಸನಗಳು, ಗುರುಭಕ್ತಿ, ಭಗ ವದ್ಭಕ್ತಿ, ಸ್ವಾಧಮರಾದ ಸಜ್ಜನರಲ್ಲಿ ದಯೆ, ಸಮರಲ್ಲಿಸ್ನೇಹವು, ಉತ್ತಮರಲ್ಲಿ ಭಕ್ತಿಯು, ನಿವೃತ್ತಕರ್ಮಾನುಷ್ಠಾನ, ನಿಷಿದ್ಧಪರಿತ್ಯಾಗ, ಸರ್ವಕರ್ಮ ಭಗವದರ್ಪಣವು, ತಾರತಮ್ಯಪರಿ ಜ್ಞಾನ, ಪಂಚಭೇದಜ್ಞಾನ, ಪ್ರಕೃತಿ ಪುರುಷವಿವೇಕಜ್ಞಾನ, ಉಪಾಸನಾ, ಇವುಗಳು ಮುಕ್ತಿಗೆ ಸಾಧನವಾದ ಅಪರೋಕ್ಷಜ್ಞಾನಕ್ಕೆ ಸಾಧನಗಳು.

ಈಪ್ರಕಾರ ಶ್ರೀಮದಾಚಾರ್ಯರ ಸಿದ್ಧಾಂತದೊಳಗಿನ ಕೆಲವು ವಿಷಯಗಳುಮಾತ್ರ ಸಪ್ರ ಮಾಣವಾಗಿ ನಿರೂಪಣೆಮಾಡಲ್ಪಟ್ಟಿತು. ಇವೇ ಮೊದಲಾದ ವಿಷಯಗಳು ಮುಂದೆ ಭಾಷೆ ಯಾಗಿರುವ ಗ್ರಂಥಗಳಲ್ಲಿ ಅಲ್ಲಲ್ಲಿ ವಿಸ್ತಾರವಾಗಿ ಹೇಳಲ್ಪಡುವುವು. ವಾಚಕರ ಮನಸ್ಸಿಗೆ ಸುಲಭದರೀತಿಯಿಂದ ಮುಖ್ಯಾಂಶವನ್ನು ತಿಳಿಸಿಕೊಡುವಬಗ್ಗೆ ಅತಿಸಂಕ್ಷೇಪದಿಂದ ಈ ಭಾಗವು ಬರಿಯಲ್ಪಟ್ಟಿತು.

ಸಿದ್ಧಾಂತತತ್ವಾನಿ ನವ್ಯೈವ ಪೂರ್ವೈರುಕ್ತಾನಿ ನಾರಾಯಣನಾಮಧೇಯಃ ।
ಉದ್ಧೃತ್ಯ ವೇದೋಕ್ತಿಭಿರೇವ ಭೂಯೋ ಜಗಾದ ತನ್ಮಧ್ವಪತೇರ್ಮದೇಸ್ತು ॥

ಶ್ರೀಮದಾನಂದತೀರ್ಥೀಯಸತ್ಪ್ರಮೇಯಸ್ಯ ಪದ್ಧತಿಂ ।
ಶ್ರುತ್ವಾ ವದಂತಿ ಯೇ ತೇಷಾಂ ಭಾರತೀಶೋ ಭವೇತ್ಪ್ರಿಯಃ ॥

ನಿಜಪೂರ್ಣಸುಖಾಮಿತಬೋಧತನುಃ ಪರಶಕ್ತಿರನಂತಗುಣಃ ಪರಮಃ ।
ಅಜರಾಮರಣಃ ಸಕಲಾರ್ತಿಹರಃ ಕಮಲಾಪತಿರೀಡ್ಯತಮೋಽವತು ನಃ ॥



॥ ಶ್ರೀಃ ॥

# ಸರ್ವಮೂಲ ಗ್ರಂಥಮಾಲಿಕಾ.

ಕೃಷ್ಣಂ ವಿದ್ಯಾಪತಿಂ ನತ್ವಾ ಪೂರ್ಣಬೋಧಾರ್ಯಸದ್ಗುರೂನ್ ।
ಜಯತೀರ್ಥಮುನೀನ್ನತ್ವಾ ವಕ್ಷ್ಯೇಽಹಂ ಗ್ರಂಥಮಾಲಿಕಾಂ ॥
ನಾರಾಯಣೇನ ವ್ಯಾಸೇನ ಪ್ರೇರಿತಸ್ತತ್ವಸಂವಿದೇ ।
ಗ್ರಂಥಾನ್ಮಧ್ವಶ್ಚಕಾರಾಸೌ ಸಪ್ತತ್ರಿಂಶದಮಂದಧೀಃ ॥

| ಸಂಖ್ಯಾ. | ಗ್ರಂಥದ ಹೆಸರು. | ಟೀಕೆಗಳು. | ಟಿಪ್ಪಣಿಗಳು. |
|---|---|---|---|
| ೧.<br>* | ಋಗ್ಭಾಷ್ಯ. | (1) ಶ್ರೀಮಜ್ಜಯತೀರ್ಥ ಶ್ರೀಮಚ್ಚರಣಕೃತಟೀಕಾ<br>(2) ಋಕ್ಸೂಚೀ<br>(3) ಜಗನ್ನಾಥ ತೀರ್ಥೀಯ* | (1) ನರಸಿಂಹ ವಿರಚಿತ ಟೀಕಾವಿವೃತಿಃ(ಛಲಾರೀಯ)<br>(2) ರಾಘವೇಂದ್ರಯತಿಕೃತಾ ಮಂತ್ರಾರ್ಥಸನ್ಮಂಜರೀ.<br>(3) ಶ್ರೀ ಕಂಬಾಲರಾಮಚಂದ್ರತೀರ್ಥೀಯ.* |
| ೨. | ಋಗ್ವೇದೀಯ ಐತರೇಯೋಪನಿಷದ್ಭಾಷ್ಯಂ. | (1) ರಾಘವೇಂದ್ರಯತಿಕೃತ ಉಪನಿಷತ್ಖಂಡಾರ್ಥ.<br>(2) ಐತರೇಯತಾಮ್ರಪರ್ಣೀಯಂ (ಐತರೇಯ ಭಾಷ್ಯರತ್ನ ಮಾಲಾ)<br>(3) ರಾಮಚಂದ್ರತೀರ್ಥೀಯ.*<br>(4) ವರದತೀರ್ಥೀಯ*<br>(5) ವಿಶ್ವೇಶತೀರ್ಥೀಯ* | (1) ಕೃಷ್ಣಾಚಾರ್ಯಕೃತಂ ಟಿಪ್ಪಣೀ. |
| ೩. | ಶುಕ್ಲಯಜುರ್ವೇದ ಸಂಹಿತೆಯ ಈಶಾವಾಸ್ಯೋಪನಿಷದ್ಭಾಷ್ಯಂ | (1) ಜಯತೀರ್ಥಭಿಕ್ಷುಕೃತ 'ಯಾಜ್ಞೀಯಮಂತ್ರ ಭಾಷ್ಯ ವಿವರಣಂ'<br>(2) ರಾಘವೇಂದ್ರಯತಿವಿರಚಿತ ಉಪನಿಷತ್ಖಂಡಾರ್ಥ.<br>(3) ವರದತೀರ್ಥೀಯ* | (1) ರಘುನಾಥಯತಿ ಕೃತಾ 'ಈಶಾವಾಸ್ಯಭಾಷ್ಯಟೀಕಾ ವಿವೃತಿಃ'<br>(2) ಭಾಷ್ಯಟಿಪ್ಪಣಿ (ಛಲಾರೀಯ) |
| ೪. | ಶುಕ್ಲಯಜುರ್ವೇದೀಯ 'ಬೃಹದಾರಣ್ಯಕೋಪನಿಷದ್ಭಾಷ್ಯಂ' | (1) ರಾಘವೇಂದ್ರಯತಿಕೃತ 'ಉಪನಿಷತ್ಖಂಡಾರ್ಥ'<br>(2) ರಘೂತ್ತಮ ಯತಿಕೃತ 'ಉಪನಿಷತ್ಖಂಡಾರ್ಥ'<br>(3) ರಘೂತ್ತಮ ಯತಿಕೃತ 'ಪರಬ್ರಹ್ಮ ಪ್ರಕಾಶಿಕಾ' (ಭಾವಬೋಧ)ಭಾಷ್ಯಾರ್ಥ.<br>(4) ವರದತೀರ್ಥೀಯ.* | |

*. ಈ ಗುರುತಿನ ಪುಸ್ತಕಗಳು ಛಾಪೆ ಆಗಲಿಲ್ಲ. ಇನ್ನೂ ಉಪಲಬ್ಧವಾಗದೆ ಇರುವ ಅನೇಕ ಟೀಕಾ ಟಿಪ್ಪಣಿಗಳು ಇರಬಹುದು.

| ಸಂಖ್ಯಾ. | ಗ್ರಂಥದ ಹೆಸರು. | ಟೀಕೆಗಳು. | ಟಿಪ್ಪಣಿಗಳು. |
|---|---|---|---|
| ೫. | ಕೃಷ್ಣ ಯಜುರ್ವೇದೀಯ<br>ಕಾಠಕೋಪನಿಷದ್ಭಾಷ್ಯಂ. | (1) ಜಯತೀರ್ಥ ಭಿಕ್ಷುಶಿಷ್ಯ ವ್ಯಾಸತೀರ್ಥ ವಿರಚಿತಾ ಟೀಕಾ.<br>(2) ವೇದೇಶತೀರ್ಥ ವಿರಚಿತಾ ಟೀಕಾ.<br>(3) ವೇದೇಶತೀರ್ಥವಿರಚಿತ ಉಪನಿಷತ್ಖಂಡಾರ್ಥ.<br>(4) ರಾಘವೇಂದ್ರಯತಿ ವಿರಚಿತ ಉಪನಿಷತ್ಖಂಡಾರ್ಥ.<br>(5) ವರದತೀರ್ಥೀಯ. * | (1) ಪ್ರಮೇಯಸಂಗ್ರಹಃ * |
| ೬. | ಕೃಷ್ಣ ಯಜುರ್ವೇದೀಯ<br>ತೈತ್ತಿರೀಯೋಪನಿಷದ್ಭಾಷ್ಯಂ. | (1) ವ್ಯಾಸತೀರ್ಥಯತಿಕೃತ ಭಾಷ್ಯವಿವರಣ ಟೀಕಾ.<br>(2) ಶ್ರೀನಿವಾಸತೀರ್ಥೀಯ ಉಪನಿಷತ್ಖಂಡಾರ್ಥ.<br>(3) ರಾಘವೇಂದ್ರಯತಿಕೃತ ಖಂಡಾರ್ಥ<br>(4) ಶ್ರೀನಿವಾಸತೀರ್ಥೀಯ ಪದಾರ್ಥದೀಪಿಕಾ ಟೀಕಾ.<br>(5) ವರದತೀರ್ಥೀಯ. *<br>(6) ಖಂಡಾರ್ಥಪ್ರಕಾಶಿಕಾನರಸಿಂಹಭಿಕ್ಷುವಿರಚಿತಾ* | (1)ಪ್ರಮೇಯಸಂಗ್ರಹಃ * |
| ೭. | ಸಾಮವೇದೀಯ<br>ಛಾಂದೋಗ್ಯೋಪನಿಷದ್ಭಾಷ್ಯಂ. | (1) ರಾಘವೇಂದ್ರೀಯ ಖಂಡಾರ್ಥ.<br>(2) ವೇದೇಶೀಯ ಟೀಕಾ ಪದಾರ್ಥ ಕೌಮುದೀ.<br>(3) ವೇದೇಶೀಯಖಂಡಾರ್ಥ.<br>(4) ವರದತೀರ್ಥೀಯ. * | (1) ಪ್ರಮೇಯಸಂಗ್ರಹಃ* |
| ೮. | ಸಾಮವೇದೀಯ<br>ತಲವಕಾರೋಪನಿಷದ್ಭಾಷ್ಯಂ. | (1) ರಾಘವೇಂದ್ರಯತಿಕೃತ ಖಂಡಾರ್ಥ.<br>(2)ವೇದೇಶೀಯ ಖಂಡಾರ್ಥ.<br>(3) ವೇದೇಶತೀರ್ಥವಿರಚಿತ ಭಾಷ್ಯವಿವರಣ.<br>(4) ವ್ಯಾಸತೀರ್ಥವಿರಚಿತ ಭಾಷ್ಯವಿವರಣ.<br>(5) ವರದತೀರ್ಥೀಯ.* | (1) ಪ್ರಮೇಯಸಂಗ್ರಹಃ* |
| ೯. | ಆಥರ್ವಣೀಯ<br>ಷಟ್ಪ್ರಶ್ನೋಪನಿಷದ್ಭಾಷ್ಯಂ. | (1) ರಾಘವೇಂದ್ರೀಯ ಖಂಡಾರ್ಥ.<br>(2)ಜಯತೀರ್ಥೀಯ'ಟೀಕಾ'<br>(3) ವರದತೀರ್ಥೀಯ. * | (1) ಮಂಕಾಲೀಯ ಭಾಷ್ಯ ಟೀಕಾ ಟಿಪ್ಪಣೀ.<br>(2) ಪ್ರಮೇಯಸಂಗ್ರಹಃ* |

| ಂಖ್ಯಾ. | ಗ್ರಂಥದ ಹೆಸರು. | ಟೀಕೆಗಳು. | ಟಿಪ್ಪಣಿಗಳು. |
|---|---|---|---|
| ೧೦. | ಆಥರ್ವಣೀಯ ಮಾಂಡೂಕೋಪನಿಷದ್ಭಾಷ್ಯಂ. | (1) ರಾಘವೇಂದ್ರೀಯ ಖಂಡಾರ್ಥಃ.<br>(2) ಶ್ರೀನಿವಾಸ ತೀರ್ಥೀಯ ಖಂಡಾರ್ಥಃ.<br>(3) ಶ್ರೀನಿವಾಸ ತೀರ್ಥೀಯ ಪದಾರ್ಥ ದೀಪಿಕಾ, ಭಾಷ್ಯಾರ್ಥ.<br>(4) ವ್ಯಾಸತೀರ್ಥೀಯ ಖಂಡಾರ್ಥ.<br>(5) ವ್ಯಾಸತೀರ್ಥೀಯ ಭಾಷ್ಯಾರ್ಥ.<br>(6) ವರದತೀರ್ಥೀಯ * | (1) ಪ್ರಮೇಯಸಂಗ್ರಹಃ* |
| ೧೧. | ಆಥರ್ವಣೀಯ ಆಥರ್ವಣೋಪನಿಷದ್ಭಾಷ್ಯಂ. | (1) ರಾಘವೇಂದ್ರೀಯ ಖಂಡಾರ್ಥಃ<br>(2) ಉಮರ್ಜೀಯ 'ಆಥರ್ವಣಭಾಷ್ಯವಿವರಣಂ'<br>(3) ವ್ಯಾಸತೀರ್ಥೀಯ 'ಭಾಷ್ಯಟೀಕಾ'<br>(4) ಕೃಷ್ಣಾಚಾರ್ಯಕೃತ 'ಉಪನಿಷದ್ಭಾಷ್ಯವಿವರಣಂ'*<br>(5) ವರದತೀರ್ಥೀಯ *<br>(6) ಶ್ರುತ್ಯರ್ಥಪ್ರಕಾಶಿಕಾ ನರಸಿಂಹಭಿಕ್ಷು ವಿರಚಿತಾ!* | (1) ಪ್ರಮೇಯಸಂಗ್ರಹಃ* |

## ಸೂತ್ರಪ್ರಸ್ಥಾನ.

| ಂಖ್ಯಾ. | ಗ್ರಂಥದ ಹೆಸರು. | ಟೀಕೆಗಳು. | ಟಿಪ್ಪಣಿಗಳು. |
|---|---|---|---|
| ೧೨. | ಶ್ರೀಬ್ರಹ್ಮಸೂತ್ರಭಾಷ್ಯಂ. | (1) ತ್ರಿವಿಕ್ರಮಪಂಡಿತಾಚಾರ್ಯವಿರಚಿತ 'ತತ್ವಪ್ರದೀಪಿಕಾ' ಟೀಕಾ.*<br>(2) ಜಯತೀರ್ಥಭಿಕ್ಷು ವಿರಚಿತ 'ತತ್ವಪ್ರಕಾಶಿಕಾ' ಟೀಕಾ.<br>(3) ರಾಘವೇಂದ್ರೀಯ 'ತಂತ್ರದೀಪಿಕಾ' ಸೂತ್ರಾರ್ಥ.<br>(4) ಜಗನ್ನಾಥಯತಿಕೃತ 'ಭಾಷ್ಯದೀಪಿಕಾ'<br>(5) ಶ್ರೀಮುಷ್ಣ ಸುಬ್ಬರಾಯ ಕೃತ 'ಸೂತ್ರಾರ್ಥ ಮಣಿಮಂಜರೀ' | ತತ್ವಪ್ರಕಾಶಿಕಾ<br>(1) ರಾಘವೇಂದ್ರಯತಿಕೃತ 'ಶ್ರೀಮದ್ಭಾಷ್ಯ ಟೀಕಾ ಭಾವದೀಪಃ' (ತತ್ವಪ್ರಕಾಶಿಕಾ ಟಿಪ್ಪಣಿ.)<br>(2) ಬಿದುರಹಳ್ಳಿ ಶ್ರೀನಿವಾಸ ತೀರ್ಥೀಯ *<br>(3) 'ವಾಕ್ಯಾರ್ಥಮಂಜರೀ' (ಶರ್ಕರಾ.) ಶ್ರೀನಿವಾಸ ತೀರ್ಥೀಯ<br>(4) ವಾದಿರಾಜತೀರ್ಥ ಕೃತ 'ಗುರ್ವರ್ಥದೀಪಿಕಾ' *<br>(5) ವ್ಯಾಸತೀರ್ಥಮುನಿಕೃತ 'ತಾತ್ಪರ್ಯಚಂದ್ರಿಕಾ' (ಇದು ಸೂತ್ರ, ಭಾಷ್ಯ, ಅಣು ಭಾಷ್ಯ, ಸನ್ಯಾಯವಿವರಣ |

| ಸಂಖ್ಯಾ. | ಗ್ರಂಥದ ಹೆಸರು. | ಟೀಕೆಗಳು. | ಟಿಪ್ಪಣಿಗಳು. |
|---|---|---|---|
| | | (6) 'ಭಾಷ್ಯಘಟಿಕ ಶ್ರುತ್ಯರ್ಥ ರತ್ನಮಾಲಾ'<br>(7) ವಾದಿರಾಜೀಯ ಶ್ರೀಬ್ರಹ್ಮ ಸೂತ್ರಾರ್ಥನಿಬದ್ಧ ಅಧಿಕರಣ ನಾಮಾವಲೀ.<br>(8) ಭಾವಪ್ರದೀಪ. *<br>(9) ವಿಜಯೀಂದ್ರತೀರ್ಥೀಯ *<br>(10) ಧೀರೇಂದ್ರಯತಿಕೃತ ವಿಷಯವಾಕ್ಯಸಂಗ್ರಹ *<br>(11) ದಾಸಾಚಾರ್ಯಕೃತ ಅಧಿಕರಣಾರ್ಥಸಂಗ್ರಹ.<br>(12) ರಾಘವೇಂದ್ರೀಯ ನ್ಯಾಯಮುಕ್ತಾವಳೀ<br>(13) ತತ್ವಮಾಣಿಕ್ಯ ಪೇಟಿಕಾ ವಿಜಯೀಂದ್ರತೀರ್ಥೀಯಾ | ತತ್ವಪ್ರಕಾಶಿಕಾ ಸುಧಾದಿ ಸರ್ವಗಳ ವಿವರಣ ರೂಪವಾಗಿದೆ.)<br>(6) ತತ್ವಪ್ರಕಾಶಿಕಾಸಾರ *<br>(7) ಭಾವರತ್ನಕೋಶ. *<br>(8) ಛಲಾರಿ. *<br>(9) ರಘೂತ್ತಮಯತಿಕೃತ ಭಾವಬೋಧ *<br>(10) ಅಭಿನವಚಂದ್ರಿಕಾ ಸತ್ಯನಾಥಯತಿಕೃತಾ *<br>(11) ಶಿಷ್ಯತಾತ್ಪರ್ಯ ಚಂದ್ರಿಕಾ ರಘುನಾಥ ಯತಿಕೃತಾ * |
| ೧೩. | ಶ್ರೀಮದಣುಭಾಷ್ಯಂ. | (1) ರಾಘವೇಂದ್ರಯತಿ ವಿರಚಿತ 'ತತ್ವಮಂಜರೀ' (ತತ್ವವಿವೃತಿ)<br>(2) ಶ್ರೀನಿವಾಸತೀರ್ಥೀಯ *<br>(3) ರಘುನಾಥತೀರ್ಥೀಯ * | |
| ೧೪. | ಶ್ರೀಮತ್ ಅನುವ್ಯಾಖ್ಯಾನಂ. | (1) ತ್ರಿವಿಕ್ರಮಪಂಡಿತಾಚಾರ್ಯವಿರಚಿತಾ 'ನಯಚಂದ್ರಿಕಾ' *<br>(2) ಪದ್ಮನಾಭತೀರ್ಥವಿರಚಿತಾ 'ಸನ್ನ್ಯಾಯರತ್ನಾವಳೀ' *<br>(3) ಜಯತೀರ್ಥಭಿಕ್ಷುವಿರಚಿತ 'ನ್ಯಾಯಸುಧಾ' | ನ್ಯಾಯಸುಧಾ<br>(1) ರಾಘವೇಂದ್ರಯತಿ ವಿರಚಿತ 'ಭಾವಬೋಧ' (ಪರಿಮಳಾ)<br>(2) ಯದುಪತ್ಯಾಚಾರ್ಯ ವಿರಚಿತ ಟಿಪ್ಪಣೀ. *<br>(3) ಶ್ರೀನಿವಾಸತೀರ್ಥೀಯ *<br>(4) ಶ್ರೀಮಧ್ವಾದಿರಾಜ ಯತಿವಿರಚಿತ. *<br>(5) 'ವಾಕ್ಯಾರ್ಥಚಂದ್ರಿಕಾ'<br>(6) ಶ್ರೀನಿಧಿತೀರ್ಥೀಯ *<br>(7) ಕುಂಡಲಗಿರಿ. *<br>(8) ವಿಟ್ಠಲಭಟ್ಟೀಯ *<br>(9) ಕಾಶಿಕಾ. *<br>(10) ಕಂಬಾಲೀ ರಾಮಚಂದ್ರ ತೀರ್ಥೀಯ *<br>(11) ಗುರುರಾಜೀಯ *<br>(12) ಚಷಕ *<br>(13) ಸುಧಾಸಾರ ಸಂಗ್ರಹ. * |

| ಸಂಖ್ಯಾ. | ಗ್ರಂಥದ ಹೆಸರು. | ಟೀಕೆಗಳು. | |
|---|---|---|---|
| ೧೫. | ಶ್ರೀಮನ್ನ್ಯಾಯವಿವರಣಂ. | (1) ಜಯತೀರ್ಥಭಿಕ್ಷು ವಿರಚಿತ 'ನ್ಯಾಯವಿವರಣ ಪಂಚಿಕಾ'<br>(2) ರಘೂತ್ತಮ ಯತಿಕೃತ 'ನ್ಯಾಯವಿವರಣ ಭಾವಬೋಧ' | (14) ಪ್ರದೀಪ.<br>(15) ವಿಶ್ವೋತ್ತಮ ತೀರ್ಥೀಯಾ * |

## ಭಾರತ ಗೀತಾಪ್ರಸ್ಥಾನ.

| | | | |
|---|---|---|---|
| ೧೬. | ಶ್ರೀ ಗೀತಾಭಾಷ್ಯಂ | (1) ರಾಘವೇಂದ್ರ ಯತಿಕೃತ 'ಗೀತಾವಿವೃತಿಃ'<br>(2) ಜಯತೀರ್ಥಭಿಕ್ಷುವಿರಚಿತ 'ಪ್ರಮೇಯದೀಪಿಕಾ'<br>(3) ವಾದಿರಾಜೀಯ ಭಾರತಲಕ್ಷಾಲಂಕಾರ.<br>(4) ಆಜಾಆಚಾರ್ಯಕೃತ ಗೀತಾವಿವೃತ್ತಿಃ. *<br>(5) ಕೊಯಮುತ್ತೂರು ಪದ್ಮನಾಭಾಚಾರ್ಯಕೃತ ವ್ಯಾಖ್ಯಾನ. | (1) ಕೃಷ್ಣಾಚಾರ್ಯ ವಿರ ವಿರಚಿತ 'ಪ್ರಮೇಯದೀಪಿಕಾಭಾವಪ್ರಕಾಶ. (ತಾಮ್ರಪರ್ಣೀ')<br>(2) ಶ್ರೀನಿವಾಸಸೂರಿ ವಿರಚಿತ'ಭಾವಪ್ರದೀಪಿಕಾ'<br>(3) ಭಾವಬೋಧಃ<br>(4) ರಾಘವೇಂದ್ರತೀರ್ಥೀಯ<br>(5) ಭಾವರತ್ನಕೋಷ<br>(6) ದುರ್ಬೋಧಸ್ಥಲೀ ಅಭಿನವ ಟಿಪ್ಪಣೀ.<br>(7) ವರದಾಚಾರ್ಯ ಕೃತ ಟಿಪ್ಪಣೀ,* |
| ೧೭. | ಗೀತಾ ತಾತ್ಪರ್ಯ ನಿರ್ಣಯ. | (1) ಜಯತೀರ್ಥಭಿಕ್ಷುವಿರಚಿತ 'ನ್ಯಾಯದೀಪಿಕಾ' | (1) ಶ್ರೀನಿವಾಸ ವಿರಚಿತ 'ನ್ಯಾಯದೀಪಕಿರಣಾವಳೀ'<br>(2) ರಾಘವೇಂದ್ರೀಯ* |
| ೧೮. | ಮಹಾಭಾರತ ತಾತ್ಪರ್ಯ ನಿರ್ಣಯ. | (1) ಶ್ರೀ ವಾದಿರಾಜ ಯತಿಕೃತ'ಭಾವಪ್ರಕಾಶಿಕಾ.'*<br>(2) ಜನಾರ್ಧನ ಭಟ್ಟ ವಿರಚಿತಪದಾರ್ಥ ದೀಪಿಕಾ'<br>(3) ವರದರಾಜೀಯ*<br>(4) ಶ್ರೀನಿವಾಸತೀರ್ಥೀಯ*<br>(5) ರಾಘವೇಂದ್ರಯತಿಕೃತಸಾರಸಂಗ್ರಹ*<br>(6) ವೇದಾಂಗತೀರ್ಥೀಯ * | |
| ೧೯. | ಯಮಕ ಭಾರತಂ. | (1) ವಿಜಯಧ್ವಜೀಯ.<br>(2) ತಮ್ಮಣ್ಣಭಟ್ಟೀಯ*<br>(3) ವೆಂಕಟೇಶ್ವರೀಯ* | |
| ೨೦. | ಭಾಗವತತಾತ್ಪರ್ಯನಿರ್ಣಯ | (1) ನರಹರ್ಯಾಚಾರ್ಯಕೃತ 'ಭಾಗವತತಾತ್ಪರ್ಯದೀಪಿಕಾ'*<br>(2) ಶ್ರೀನಿವಾಸ ತೀರ್ಥೀಯ.<br>(3) ಯದುಪತ್ಯಾಚಾರ್ಯಕೃತಟೀಕಾ.<br>(4 ವಿಜಯಧ್ವಜೀಯ. * | |

| ಸಂಖ್ಯಾ. | ಗ್ರಂಥದ ಹೆಸರು. | ಟೀಕೆಗಳು. | ಟಿಪ್ಪಣಿಗಳು. |
|---|---|---|---|
| | **ದಶ ಪ್ರಕರಣಗಳು.** | | |
| ೨೧. | ಪ್ರಮಾಣಲಕ್ಷಣಂ | (1) ಜಯತೀರ್ಥ ಯತಿಕೃತ ಟೀಕಾ. (2) ವಿಜಯೀಂದ್ರೀಯ.* (3) ರೊಟ್ಟೀ ವೆಂಕಟಾದ್ರಿ ಭಟ್ಟೀಯ * | (1) ರಾಘವೇಂದ್ರ ಯತಿ ಕೃತ 'ಭಾವದೀಪ' (2) ಶ್ರೀನಿವಾಸ ತೀರ್ಥೀಯ ಟಿಪ್ಪಣೀ. (3) ವೇದೇಶತೀರ್ಥೀಯ. * |
| ೨೨. | ಕಥಾಲಕ್ಷಣಂ | (1) ಜಯತೀರ್ಥೀಯ ಟೀಕಾ. (2) ವಿದ್ಯಾಧೀಶತೀರ್ಥೀಯ.* (3) ರೊಟ್ಟೀವೆಂಕಟಾದ್ರಿ ಭಟ್ಟೀಯಾ.* | (1) ವೇದೇಶತೀರ್ಥರಟಿಪ್ಪಣಿ. (2) ರಾಘವೇಂದ್ರಯತಿಕೃತ ಟಿಪ್ಪಣಿ (3) ರೊಟ್ಟೀವೆಂಕಟಾದ್ರಿ ಭಟ್ಟೀಯಾ* |
| ೨೩. | ಉಪಾಧಿಖಂಡನಂ. (ತತ್ವಪ್ರಕಾಶಿಕಾ.) | (1) ಶ್ರೀಜಯತೀರ್ಥೀಯಟೀಕಾ (2) ವಾದಿರಾಜತೀರ್ಥೀಯ ಉಪನ್ಯಾಸ ರತ್ನಮಾಲಾ.* (3) ರೊಟ್ಟೀವೆಂಕಟಾದ್ರಿ ಭಟ್ಟೀಯಾ.* | (1) ವ್ಯಾಸರಾಯರ 'ಮಂದಾರಮಂಜರೀ' (2) ಶ್ರೀನಿವಾಸತೀರ್ಥರ ಟಿಪ್ಪಣಿ. (3) ಸತ್ಯನಾಥಯತಿ ಕೃತ ಪರಶುನಾಮಕ ಟಿಪ್ಪಣಿ.* |
| ೨೪. | ಮಾಯಾವಾದ ಖಂಡನಂ. | (1) ಜಯತೀರ್ಥೀಯ 'ಮಾಯಾವಾದ ಖಂಡನ ವಿವರಣ. (2) ವಾದಿರಾಜತೀರ್ಥೀಯ ಉಪನ್ಯಾಸ ರತ್ನಮಾಲಾ.* (3) ರೊಟ್ಟೀವೆಂಕಟಾದ್ರಿ ಭಟ್ಟೀಯಾ.* | (1) ಶ್ರೀನಿವಾಸತೀರ್ಥೀಯ ಮಾಯಾವಾದ ಖಂಡನ ಪಂಚಿಕಾ. (2) ವ್ಯಾಸರಾಯ ಯತಿ ಕೃತ 'ಮಂದಾರ ಮಂಜರೀ' (ಮಾಯಾವಾದಖಂಡನ ಭಾವ ಪ್ರಕಾಶಿಕಾ). (3) ಸತ್ಯನಾಥ ಯತಿಕೃತ ಪರಶುನಾಮಕ ಟಿಪ್ಪಣೀ.* (4) ರೊಟ್ಟೀವೆಂಕಟಾದ್ರಿ ಭಟ್ಟೀಯಾ * |
| ೨೫. | ಪ್ರಪಂಚಮಿಥ್ಯಾತ್ವಾನುಮಾನ ಖಂಡನಂ. | (1) ಜಯತೀರ್ಥೀಯ ಟೀಕಾ. (2) ವಾದಿರಾಜ ತೀರ್ಥೀಯ ಉಪನ್ಯಾಸ ರತ್ನಮಾಲಾ* (3) ರೊಟ್ಟೀವೆಂಕಟಾದ್ರಿ ಭಟ್ಟೀಯಾ.* | (1) ವ್ಯಾಸರಾಯ ಕೃತ 'ಭಾವಪ್ರಕಾಶಿಕಾ ಟಿಪ್ಪಣೀ' (ಮಂದಾರಮಂಜರೀ) (2) ಶ್ರೀನಿವಾಸ ತೀರ್ಥರ 'ಖಂಡನ ಪಂಚಿಕಾ' (3) ಸತ್ಯನಾಥಯತಿ ಕೃತ 'ಪರಶುನಾಮಕ ಟಿಪ್ಪಣೀ' * |

| ಸಂಖ್ಯಾ. | ಗ್ರಂಥದ ಹೆಸರು. | ಟೀಕೆಗಳು. | ಟಿಪ್ಪಣಿಗಳು. |
|---|---|---|---|
| | | | (4) ಮಿಥ್ಯಾತ್ವಾನುಮಾನ ಖಂಡನದೀಪಿಕಾ.* |
| ೨೬. | ತತ್ವಸಂಖ್ಯಾನಂ. | (1) ಜಯತೀರ್ಥೀಯ ತಸಂಖ್ಯಾನ ವಿವರಣ (ಟೀಕಾ).<br>(2) ರೊಟ್ಟಿವೆಂಕಟಾದ್ರಿ ಭಟ್ಟೀಯಾ* | (1) ಶ್ರೀನಿವಾಸ ತೀರ್ಥೀಯ 'ಟೀಕಾ ವಿವರಣಂ'<br>(2) ರಾಘವೇಂದ್ರ ಯತಿ ಕೃತ 'ಟೀಕಾ ಭಾವದೀಪ'<br>(3) ಕಾಶಿಕಾ.<br>(4) ಸತ್ಯಧರ್ಮ ಯತಿ ಕೃತ ಟಿಪ್ಪಣಿ.*<br>(5) ಯದುಪತ್ಯಾಚಾರ್ಯ ಕೃತ ಟಿಪ್ಪಣಿ*<br>(6) ರೊಟ್ಟಿವೆಂಕಟಾದ್ರಿ ಭಟ್ಟೀಯಾ *<br>(7) ವಿಜಯೀಂದ್ರ ತೀರ್ಥೀಯ*<br>(8) ಕೇಶವ ಭಟ್ಟೀಯ (ಪಾಂಡುರಂಗೀಯ)* |
| ೨೭. | ತತ್ವವಿವೇಕ. | (1) ಜಯತೀರ್ಥೀಯ ತತ್ವ ವಿವೇಕ ವಿವರಣಂ.<br>(2) ರೊಟ್ಟಿವೆಂಕಟಾದ್ರಿ ಭಟ್ಟೀಯಾ* | (1) ಶ್ರೀನಿವಾಸತೀರ್ಥೀಯ ಟೀಕಾವಿವರಣಂ.<br>(2) ವ್ಯಾಸಮುನಿಕೃತ ತತ್ವ ವಿವೇಕ ಭಾವಪ್ರಕಾಶಿಕಾ. (ಮಂದಾರಮಂಜರೀ) |
| ೨೮. | ತತ್ವೋದ್ಯೋತ. | (1) ಜಯತೀರ್ಥೀಯ 'ತತ್ವೋದ್ಯೋತವಿವರಣಂ. ಟೀಕಾ.<br>(2) ರೊಟ್ಟಿವೆಂಕಟಾದ್ರಿ ಭಟ್ಟೀಯಾ* | (1) ರಾಘವೇಂದ್ರಯತಿಕೃತ ಟೀಕಾಭಾವದೀಪ.<br>(2) ಶ್ರೀನಿವಾಸತೀರ್ಥೀಯ ಟಿಪ್ಪಣಿ.<br>(3) ವೇದೇಶೀಯ ತತ್ವೋದ್ಯೋತಪಂಚಿಕಾ.<br>(4) ದ್ವೈತದ್ಯುಮಣಿ. *<br>(5) ಕಾಶಿಕಾ.*<br>(6) ರಾಘವೇಂದ್ರಶಿಷ್ಯಕೃತ ಟಿಪ್ಪಣೀ*<br>(7) ವಿಜಯೀಂದ್ರೀಯಾ* |
| ೨೯. | ಕರ್ಮನಿರ್ಣಯ | (1) ಜಯತೀರ್ಥೀಯ ಟೀಕಾ.<br>(2) ರೊಟ್ಟಿವೆಂಕಟಾದ್ರಿ ಭಟ್ಟೀಯಾ* | (1) ಶ್ರೀನಿವಾಸ ವಿರಚಿತ ಪಂಚಿಕಾ ವಿವರಣಂ.<br>(2) ರಾಘವೇಂದ್ರೀಯ.<br>(3) ರೊಟ್ಟಿವೆಂಕಟಾದ್ರಿ ಭಟ್ಟೀಯಾ* |

| ಸಂಖ್ಯಾ. | ಗ್ರಂಥದ ಹೆಸರು. | ಟೀಕೆಗಳು. | ಟಿಪ್ಪಣಿಗಳು. |
|---|---|---|---|
| ೩೦. | ವಿಷ್ಣುತತ್ವನಿರ್ಣಯ.. | (1) ಜಯತೀರ್ಥೀಯ ಟೀಕಾ<br>(2) ರೊಟ್ಟಿವೆಂಕಟಾದ್ರಿ ಭಟ್ಟೀಯಾ* | 1) ಶ್ರೀನಿವಾಸತೀರ್ಥೀಯ<br>(2) ರಾಘವೇಂದ್ರೀಯ ಟೀಕಾ ಭಾವದೀಪ.<br>(3) ವಿಜಯೀಂದ್ರೀಯ. *<br>(4) ಕೃಷ್ಣಾಚಾರ್ಯಕೃತ ತಾಮ್ರಪರ್ಣೀ.*<br>(5) ಗೂಢಕಕೃತ ಟಿಪ್ಪಣಿ* |
| ೩೧. | ನರಸಿಂಹನಖಸ್ತೋತ್ರ. | (1) ವಿಶ್ವಪತಿ ತೀರ್ಥೀಯವ್ಯಾಖ್ಯಾನ.<br>(2) ಛಲಾರಿ ಶೇಷಾಚಾರ್ಯರ ವ್ಯಾಖ್ಯಾನ.<br>(3) ವೇದಾತ್ಮಯತಿ ಕೃತ ವ್ಯಾಖ್ಯಾನ. * | |
| ೩೨. | ದ್ವಾದಶಸ್ತೋತ್ರ. | (1) ವಿಶಪತಿ ತೀರ್ಥೀಯ ವ್ಯಾಖ್ಯಾನ. *<br>(2) ಛಲಾರಿನರಸಿಂಹಾಚಾರ್ಯ ಕೃತ ವ್ಯಾಖ್ಯಾನ.<br>(3) ಜನಾರ್ಧನಭಟ್ಟೀಯ *<br>(4) ಕೊಯಮುತ್ತೂರು ಪದ್ಮನಾಭಾಚಾರ್ಯ ಕೃತವ್ಯಾಖ್ಯಾನ.<br>(5) ಪುಣ್ಯಶ್ರವಣ ತೀರ್ಥೀಯ. | |
| ೩೩. | ಕೃಷ್ಣಾಮೃತಮಹಾರ್ಣವ. | (1) ಕೃಷ್ಣಾಚಾರ್ಯ ಕೃತ ವ್ಯಾಖ್ಯಾನ. *<br>(2) ವಿಠಲಾಚಾರ್ಯ ಪುತ್ರ ಶ್ರೀನಿವಾಸ ವಿರಚಿತಟೀಕಾ. * | (1) ತಾಮ್ರಪರ್ಣೀ ಶ್ರೀನಿವಾಸತೀರ್ಥೀಯ. |
| ೩೪. | ತಂತ್ರಸಾರ. | (1) ಛಲಾರಿ ಶೇಷಾಚಾರ್ಯ ಕೃತ ವ್ಯಾಖ್ಯಾನ.<br>(2) ತಮ್ಮಣ್ಣೀಯ. *<br>(3) ಸುಮತೀಂದ್ರ ತೀರ್ಥೀಯ. *<br>(4) ತಂತ್ರಸಾರ ಸಂಗ್ರಹ ರೂಪ ಪದ್ಯಮಾಲಾ. * | (1) ವೇದವ್ಯಾಸ ವಿರಚಿರಚಿತ ಪದಭಾವ ಪ್ರಬೋಧಿನೀ. *<br>(2) ಶ್ರೀನಿವಾಸತೀರ್ಥ ಶಿಷ್ಯ ವೆಂಕಟಪತಿಯಾ. *<br>(3) ಶರ್ಕರಾ. * |

| ಸಂಖ್ಯಾಃ ಗ್ರಂಥದ ಹೆಸರು. | ಟೀಕೆಗಳು. | ಟಿಪ್ಪಣಿಗಳು. |
|---|---|---|
| ೩೫. ಸದಾಚಾರಸ್ಮೃತಿ. | (1) ನಾರಾಯಣಾಚಾರ್ಯಕೃತ ವೈಷ್ಣವಾಚಾರಪದ್ಧತಿ. * (2) ಶರ್ಕರಾ ಶ್ರೀನಿವಾಸ ತೀರ್ಥೀಯಾ. * (3) ಆಯಿನರಹರ್ಯಾಚಾರ್ಯಕೃತ ವ್ಯಾಖ್ಯಾರ್ಥವಿವೃತಿಃ. | (1) ಶ್ರೀನಿವಾಸ ಭಟ್ಟೀಯಾ * (2) ಶರ್ಕರಾ. * (3) ನರಹರ್ಯಾಚಾರ್ಯ ಕೃತ ಭಾವಪ್ರಬೋಧಿನೀ.* |
| ೩೬. ಯತಿಪ್ರಣವಕಲ್ಪಃ | | |
| ೩೭. ಜಯಂತೀನಿರ್ಣಯ. | | |

ಯಸ್ಯ ತ್ರೀಣ್ಯುದಿತಾನಿ ವೇದವಚನೇ ರೂಪಾಣಿ ದಿವ್ಯಾನ್ಯಲಂ ಬಟ್ತದ್ದರ್ಶತಮಿತ್ಥಮೇವ ನಿಹಿತಂ ದೇವಸ್ಯ ಭರ್ಗೋ ಮಹತ್ । ವಾಯೋ ರಾಮವಚೋನಯಂ ಪ್ರಥಮಕಂ ಪೃಕ್ಷೋ ದ್ವಿತೀಯಂ ವಪುರ್ಮಧ್ವೋ ಯತ್ತು ತೃತೀಯಮೇತದಮುನಾ ಗ್ರಂಥಃ ಕೃತಃ ಕೇಶವೇ ॥

ದ್ವಾಂತ್ರಿಶತ್ಸುಸಹಸ್ರಾಣಿ ವಿಷ್ಣು ತತ್ವಪ್ರಬೋಧಕಾನ್ ।
ಗ್ರಂಥಾನ್ ಹಿ ನಿರ್ಮಮೇ ಮಧ್ವಃ ಪರಿಶೀಲ್ಯಾಗಮಾದಿಕಾನ್ ॥
ಏತೇಷಾಂ ಪಾಠಮಾತ್ರೇಣ ಮಧ್ವೇಶಃ ಪ್ರೀಯತೇ ಹರಿಃ ॥

ತಂತ್ರಿನಾರಾಯಣೇನೈವಂ ಮಾಧ್ವೀಯಂ ಗ್ರಂಥಮಾಲಿಕಾ ।
ಸಂಗೃಹೀತಾ ಸತಾಂ ಪ್ರೀತ್ಯೈ ಭಾರತೀಶಪ್ರಸಾದತಃ ॥

॥ ಶ್ರೀ ಕೃಷ್ಣಾರ್ಪಣಮಸ್ತು. ಶ್ರೀಃ ॥



# ಉಪನಿಷತ್ತುಗಳಿಗೆ ಮುನ್ನುಡಿ.

**ಸತ್ಯಂ ಸತ್ಯಂ ಪುನಃ ಸತ್ಯಮುದ್ಧೃತ್ಯ ಭುಜಮುಚ್ಯತೇ ।**
**ವೇದಶಾಸ್ತ್ರಾತ್ಪರಂ ನಾಸ್ತಿ ನ ದೈವಂ ಕೇಶವಾತ್ಪರಮ್ ॥**

ವೇದಗಳು ಸ್ವತಃಪ್ರಮಾಣಗಳು, ಅನಾದಿನಿತ್ಯಗಳು, ಅಪೌರುಷೇಯಗಳು ಎಂಬುವುದು ಎಲ್ಲಾ ವೇದಾಂತಿಗಳು ಒಪ್ಪುವ ವಿಷಯವಾಗಿದೆ. ಅತೀಂದ್ರಿಯವಾದ ವಸ್ತುಗಳಕುರಿತು ಅಂದರೆ ಧರ್ಮಾಧರ್ಮ, ಸ್ವರ್ಗ, ನರಕ, ಪರಮಾತ್ಮ ಇಂತಹ ವಿಷಯಗಳ ಕುರಿತು ಪ್ರತ್ಯಕ್ಷವಾಗಲಿ, ಅನುಮಾನವಾಗಲಿ, ಯಥಾರ್ಥಜ್ಞಾನವನ್ನುಂಟುಮಾಡಲು ಸಮರ್ಥಗಳಲ್ಲ. ಅದು ಆಗಮ ದಿಂದಲೇ ಆಗಬೇಕು. ಪರಮಾತ್ಮನ ಕುರಿತು ನಮಗೇನಾದರೂ ಎಳ್ಳಷ್ಟು ಜ್ಞಾನಹುಟ್ಟಬೇಕಾದರೆ ಸದಾಗಮಗಳಿಂದಲೇ ಹುಟ್ಟಬೇಕು. ಇದೇ ವಿಷಯವನ್ನು ಸೂತ್ರಕಾರರು 'ಶಾಸ್ತ್ರಯೋನಿತ್ವಾತ್' ಎಂಬುವುದರಿಂದ ತಿಳಿಸಿರುವರು. ಮತ್ತು ವೇದಗಳಲ್ಲಿ 'ನಾವೇದವಿನ್ಮನುತೇದಂ (ತಂ) ಬೃಹಂತಂ,' 'ನೈಷಾ ತರ್ಕೇಣ ಮತಿರಾಪನೇಯಾ' ಇತ್ಯಾದಿಗಳಿಂದ ಪರಮಾತ್ಮನನ್ನು ವೇದಗಳ ವಿನಹ ತಿಳಿಯಲು ಅಸಾಧ್ಯವೆಂದು ಹೇಳಲ್ಪಟ್ಟದೆ. ಈಶ್ವರದತ್ತಜ್ಞಾನದ ಆವಶ್ಯಕತೆಯನ್ನು ಎಲ್ಲಾ ಆಸ್ತಿಕಮತದವರು ಅಂಗೀಕರಿಸಿರುವರು. ಕ್ರೈಸ್ತರು ಬೈಬಲನ್ನು ಮುಸಲ್ಮಾನರು ಕೊರಾನನ್ನು ಈಶ್ವರದತ್ತಜ್ಞಾನವೆಂದು ಹೇಳುವರು. ಕೊರಾನು ನಿತ್ಯವೆಂದು ಕೆಲವರು ಹೇಳುವರು. ಆದರೆ ಅವುಗಳು ಅಪೌರುಷೇಯಗಳೆಂದು ಹೇಳುವುದಿಲ್ಲ. ಅಪೌರುಷೇಯತ್ವವೇ ನಿತ್ಯತ್ವಕ್ಕೂ, ಸ್ವತಃ ಪ್ರಾಮಾಣ್ಯಕ್ಕೂ ಕಾರಣವಾದುದರಿಂದ ಅಪೌರುಷೇಯತ್ವವನ್ನು ಸಾಧಿಸದೆ ಯಾವ ಗ್ರಂಥಕ್ಕೂ ಅತೀಂದ್ರಿಯ ವಿಷಯಗಳಲ್ಲಿ ಪ್ರಾಮಾಣ್ಯವನ್ನು ಒಪ್ಪಲಾಗುವುದಿಲ್ಲ.

೨. ವೇದಗಳು ವಾಕ್ಯಸಮೂಹಗಳ,-ವಾಕ್ಯಗಳು ಪದಸಮೂಹಗಳ,-ಪದಗಳು ವರ್ಣಸಮೂಹಗಳು ಆಗಿವೆ. ಅಕಾರಾದಿ ವರ್ಣಗಳು ನಿತ್ಯಗಳು, ಸರ್ವ ವ್ಯಾಪ್ತಗಳೂ ಆದ ದ್ರವ್ಯಗಳೆಂದು ಶ್ರೀಮದಾಚಾರ್ಯರು ನಿರ್ಣೈಸಿರುತ್ತಾರೆ. ವರ್ಣವು ಉಚ್ಚಾರದಿಂದ ಹುಟ್ಟುವುದಿಲ್ಲ. ವ್ಯಕ್ತಿಮಾತ್ರ ಹೊಂದುತ್ತದೆ. ಹಾಗಲ್ಲದೆ ವರ್ಣಗಳಿಗೆ ಉತ್ಪತ್ತಿನಾಶಗಳನ್ನು ಒಪ್ಪಿದರೆ ಪ್ರತ್ಯಭಿಜ್ಞೆಗೆ ಕಾರಣವಿಲ್ಲದೆ ಹೋಗಬೇಕಾಗುವುದು. ಪ್ರತ್ಯಭಿಜ್ಞೆ ಅಂದರೆ ಹಿಂದೆ ಕೇಳಿದುದೇ, ಅಥವಾ ನೋಡಿದುದೇ ಇದು ಎಂದು ತಿಳುವಿಕೆಯು. 'ರಾಮ' ಎಂಬ ಶಬ್ದವನ್ನು ಹತ್ತಾವರ್ತಿ ಉಚ್ಚರಿಸಿದರೆ ಒಂದೇ ಶಬ್ದವನ್ನು ಉಚ್ಚಾರಮಾಡಿದನು ಎಂದು ಜ್ಞಾನಬರುತ್ತದೆ. ಹೊರತು ಹೋಲಿಕೆ ಇರುವ ಬೇರೆಬೇರೆ ಶಬ್ದಗಳನ್ನು ಉಚ್ಚರಿಸಿದೆನೆಂದು ಜ್ಞಾನಬರುವುದಿಲ್ಲ. ವರ್ಣಗಳು ನಿತ್ಯವಾದರೂ ಅವುಗಳ ಯೋಜನವು ನಿತ್ಯವೆಂದು ಹೇಳಲಾಗುವುದಿಲ್ಲ. 'ವನ' ವೆಂದಾಗಲೀ, 'ನವ' ಎಂದಾಗಲಿ ಹೇಳಬಹುದು. 'ರಸ' ವೆಂದಾಗಲೀ 'ಸರ' ವೆಂದಾಗಲೀ ಹೇಳಬಹುದು. ಅರ್ಥ ಬೇರೆಯಾಗುವುದು. ಮತ್ತು ಪದಗಳನ್ನು ವಾಕ್ಯವಾಗಿ ಯೋಜನೆ ಮಾಡುವುದು ಪುರುಷಾಧೀನವು. ಒಂದು ವಾಕ್ಯವು ಸತ್ಯವೋ, ಅಸತ್ಯವೋ ಆಗಬೇಕಾದರೆ ಪುರುಷಾಧೀನವಾದ ಯೋಜನವೇ ಕಾರಣವು. (1) ಮೊಲಕ್ಕೆ 'ಕಿವಿ' ಇದೆ, (2) ಮೊಲಕ್ಕೆ 'ಕೋಡು' ಇದೆ, (3) ದನಕ್ಕೆ ಕೋಡು ಇದೆ, ಈ ಮೂರುವಾಕ್ಯಗಳಲ್ಲಿ ಎರಡನೇ ವಾಕ್ಯವು ಸುಳ್ಳು. ಒಂದು ಮೂರನೆಯವು ಯಥಾರ್ಥಗಳು. ಅದು ಏಕೆ? ಎರಡನೆ ವಾಕ್ಯದಲ್ಲಿರುವ ಪದಗಳೆಲ್ಲವು ಪ್ರತ್ಯೇಕ ಪ್ರತ್ಯೇಕವಾಗಿ ನಿಜವಾದ ಅರ್ಥವನ್ನು ಬೋಧಿಸುವ ಸಾಮರ್ಥ್ಯ ಇದ್ದವುಗಳಾ

ದರೂ, ಅಸಂಗತವಾದ ಅನುಭವವಿರೋಧವಾದ ಅರ್ಥವನ್ನು ಬೋಧಿಸುವಂತೆ ಅವುಗಳನ್ನು ಯೋಜನೆಮಾಡಿದುದೇ ಕಾರಣವು. ಇದು ಕೇವಲ ಪುರುಷಾಶ್ರಿತದೋಷವು. ಆದುದರಿಂದ ಯಾವ ವಾಕ್ಯವು ಪೌರುಷೇಯುವೋ ಅದು ಸ್ವತಃ ಪ್ರಮಾಣವಾಗಲಾರದು. ಆಪ್ತನಾದರೆ ಮಾತ್ರ ಆಪ್ತಿಮೂಲಕವಾಗಿ ಪ್ರಮಾಣವಾಗುವುದು. ಅಪೌರುಷೇಯವಾಕ್ಯವು ಹಾಗಲ್ಲ. ಪುರುಷಸಂಬಂಧವಿಲ್ಲದಿರುವುದರಿಂದ ದೋಷರಹಿತವಾಗುವುದು. ಅನ್ಯಥಾಜ್ಞಾನ ಇತ್ಯಾದಿಗಳನ್ನು ತಿಳಿಸಲಾರದು. ನಿಯಮವಾಗಿ ಸತ್ಯವೇ ಆಗುವುದು. ಆಗಲಿ, ವೇದಗಳು ಇಂತಹ ಅಪೌರುಷೇಯಗಳೆಂಬ ವಿಷಯದಲ್ಲಿ ಏನುಪ್ರಮಾಣವಿರುವುದು? ಒಂದು ಗ್ರಂಥಕ್ಕೆ ಜ್ಞಾತನೋ ಅಥವಾ ಅಜ್ಞಾತನೋ ಆದ ಒಬ್ಬ ಕರ್ತನು ಇರಬೇಕಲ್ಲವೇ? ಜ್ಞಾತ, ಅಜ್ಞಾತರಾದ ಕರ್ತರು ಯಾರೂ ಇಲ್ಲವಾದರೆ ಗ್ರಂಥವು ಅಪೌರುಷೇಯವೆನಿಸುವುದು. ಪ್ರಕೃತ ವೇದಗಳಿಗೆ ಜ್ಞಾತ ಕರ್ತನಿಲ್ಲವೆಂಬುವುದು ಸುಪ್ರಸಿದ್ಧವಷ್ಟೆ. ಯಾರಾದರೂ ವೇದವನ್ನು ತಾನು ರಚಿಸಿದೆನೆಂದು ಹೇಳಿಕೊಂಡವರಿಲ್ಲ. ವೇದವು ಶ್ರುತವೆಂದು, ದೃಷ್ಟವೆಂದು ಪ್ರಸಿದ್ಧಿಯಾಗಿದೆ. ಅಜ್ಞಾತನಾದ ಕರ್ತನು ಏಕೆ ಇರಬಾರದೆಂದು ಆಕ್ಷೇಪಿಸಿದರೆ, ವೇದವು ಇತರ ಅಜ್ಞಾತಕರ್ತೃಕಗಳಾದ ಗ್ರಂಥಗಳಂತೆ ಅಲ್ಲ. ಅವುಗಳಿಗೆ, ಕರ್ತನು ತಿಳಿಯದಿದ್ದರೂ ಅಪೌರುಷೇಯಗಳೆಂದು ಪರಂಪರೆಯು ಬರಲಿಲ್ಲ. ವೇದಕ್ಕೆಮಾತ್ರ ಅಪೌರುಷೇಯವೆಂದೂ, ಶ್ರುತಿ ಎಂದೂ, ಋಷಿದೃಷ್ಟವೆಂದೂ, ಪರಂಪರೆ ಇರುವುದು. ಈಪ್ರಕಾರ ವೇದಕ್ಕೆ ಅಪೌರುಷೇಯತ್ವವನ್ನು ಸಾಧಿಸಿದಕೂಡಲೇ ನಿತ್ಯತ್ವವೂ ಪ್ರಾಮಾಣ್ಯವೂ ಸ್ವತ ಏವ ಸಿದ್ಧಿಸುವುವು.

೩. ವೇದಗಳನ್ನು ಕೆಲವರು ಜ್ಞಾನಕಾಂಡವೆಂದೂ, ಕರ್ಮಕಾಂಡವೆಂದೂ, ವಿಭಾಗಿಸಿರುವರು. ಎರಡನೆಯದು ಯಾಗಾದಿಗಳನ್ನೂ, ತತ್ತದ್ದೇವತೆಗಳನ್ನೂ, ಫಲಗಳನ್ನೂ ಬೋಧಿಸುವದೆಂದು. ಒಂದನೆಯದು ಕೇವಲ ಬ್ರಹ್ಮವಿದ್ಯೆಯನ್ನೂ, ಮೋಕ್ಷಮಾರ್ಗವನ್ನೂ ತಿಳಿಸುವುದೆಂದು, ಆದ ಪ್ರಯುಕ್ತ ಜ್ಞಾನಕಾಂಡವು ಕರ್ಮಕಾಂಡಕ್ಕಿಂತ ಶ್ರೇಷ್ಠವೆಂದು ಹೇಳುವರು. ಶ್ರೀಮದಾಚಾರ್ಯರು ಇದನ್ನು ನಿರಾಕರಿಸಿ ವೇದಗಳೆಲ್ಲಕ್ಕೂ ಕೂಡ ಸಮಾನ ಪ್ರಾಮಾಣ್ಯವೇ, ಅದರಲ್ಲಿ ಒಂದು ಭಾಗವು ಶ್ರೇಷ್ಠವು ಇನ್ನೊಂದು ಭಾಗವು ಕನಿಷ್ಠವೆಂದು ಹೇಳಲಾಗುವುದಿಲ್ಲ, ವೇದಗಳಿಗೆ ಮೂರು ಅರ್ಥಗಳಿರುವುವು, ಕರ್ಮಕಾಂಡದಲ್ಲಿ ಯಾಗಾದಿಗಳು ಪ್ರತಿಪಾದಿಸಲ್ಪಟ್ಟರೂ ಭಗವನ್ಮಾಹಾತ್ಮ್ಯವು ಇರುತ್ತದೆ, ವೇದದ ಆದಿಯಲ್ಲಿ, ಮಧ್ಯದಲ್ಲಿ, ಅಂತ್ಯದಲ್ಲಿ, ಮತ್ತು ಎಲ್ಲಾ ಸ್ಥಳದಲ್ಲಿ ವಿಷ್ಣುವೇ ಪ್ರತಿಪಾದಿಸಲ್ಪಡುತ್ತಾನೆ ಎಂದು ಸಮರ್ಥಿಸಿರುತ್ತಾರೆ. ಸ್ಕಾಂದಪುರಾಣದಲ್ಲಿ ಹೇಳಿದಂತೆ ವೇದವು ಮೂರುಭಾಗವುಳ್ಳದ್ದಾಗಿದೆ. ಮಂತ್ರಭಾಗವು ಅಧಿದೈವವೆನಿಸುವುದು. ಬ್ರಾಹ್ಮಣವು ಅಧಿಯಜ್ಞವೆನಿಸುವುದು. ಉಪನಿಷತ್ತುಗಳು ಅಧ್ಯಾತ್ಮಗಳೆನಿಸುವುವು. ಈ ವಿಭಾಗವು ವೇದದಲ್ಲಿ ನೀಚೋಚ್ಚವನ್ನು ತಿಳಿಸುವುದಕ್ಕಾಗಿ ಹೊರಡಲಿಲ್ಲ. ಅವುಗಳಿಂದ ನಮಗೆ ಆಗ ಬಹುದಾದ ಪ್ರಯೋಜನವನ್ನು ನಿರೂಪಿಸುವುದಕ್ಕೆ ಮಾತ್ರ ಮಾಡಲ್ಪಟ್ಟಿದೆ. ಮೋಕ್ಷಾಖ್ಯ ಪುರುಷಾರ್ಥವೇ ಸರ್ವೋತ್ತಮವಾದ ಪ್ರಯುಕ್ತ ಅಂತಹ ಪುರುಷಾರ್ಥಕ್ಕೆ ಮುಖ್ಯಕಾರಣವಾದ ಬ್ರಹ್ಮಜ್ಞಾನವನ್ನು ಉಪದೇಶಿಸುವ ಉಪನಿಷತ್ತುಗಳನ್ನು ಅಧಿಕಾರಿಯು ವಿಶೇಷವಾಗಿ ವ್ಯಾಸಂಗ ಮಾಡಬೇಕೆಂದು ಅದೇ ಪುರಾಣದಲ್ಲಿ ಹೇಳಲ್ಪಟ್ಟಿದೆ.

೪. ಸಂಹಿತೆಗಳೇ ವೇದಗಳು, ಬ್ರಾಹ್ಮಣಗಳು ಉಪನಿಷತ್ತುಗಳು ವೇದಗಳಲ್ಲ, ಅವುಗಳು ಪುರುಷಕೃತ ವ್ಯಾಖ್ಯಾನಗಳೆಂಬುವ ವಾದ ಒಂದು ಈಗ ಹೊರಟಿದೆ. ಇದಕ್ಕೆ ಆರ್ಯಸಮಾಜ ಪ್ರತಿಷ್ಠಾಪನಾಚಾರ್ಯರಾದ ದಯಾನಂದ ಸರಸ್ವತಿಗಳು ಮೂಲಭೂತರು. ಮೇಲೆ

ಹೇಳಿದಂತೆ ಸಂಹಿತೆಗಳಿಗಾಗಲಿ, ಉಪನಿಷತ್ತುಗಳಿಗಾಗಲೀ ಅಪೌರುಷೇಯತ್ವವನ್ನು ನಿರ್ಣೈಸಬೇಕಾದರೆ ಪರಂಪರೆಯನ್ನು ಬಿಟ್ಟು ಮಾತಾಡುವುದು ಶಕ್ಯವಲ್ಲ. ಪರಂಪರೆಯನ್ನು ತ್ಯಜಿಸಿದರೆ ಸಂಹಿತೆಗಳಿಗಾಗಲೀ ಅಪೌರುಷೇಯತ್ವವನ್ನು ಸಾಧಿಸಲು ಶಕ್ಯವಾಗದು. ಶ್ರೀ ವೇದವ್ಯಾಸರು ಬ್ರಹ್ಮಸೂತ್ರಗಳನ್ನು ನಿರ್ಮಿಸಬೇಕಾದರೆ ಉಪನಿಷತ್ತುಗಳನ್ನು ಶ್ರುತಿಗಳೆಂದೇ ಗ್ರಹಣಮಾಡಿ ಅವುಗಳ ಅರ್ಥವನ್ನು ನಿಶ್ಚಯಿಸಿರುತ್ತಾರೆ. ಆದುದರಿಂದ ಆ ಸೂತ್ರಗಳಿಗೆ ವೇದಾಂತಸೂತ್ರಗಳೆಂದು ಹೆಸರು ಬಂದಿದೆ. ಶ್ರೀ ಶಂಕರಾಚಾರ್ಯರ್ಪ್ರಭೃತಿಗಳು, ಉಪನಿಷತ್ತುಗಳನ್ನು ವೇದಗಳೆಂದೇ ಗಣನೆ ಮಾಡಿರುತ್ತಾರೆ. ಸರ್ವಸಮ್ಮತವಾದ ವಿಷಯದಲ್ಲಿ ದಯಾನಂದ ಸರಸ್ವತಿಗಳಿಗೆ ಭಿನ್ನಾಭಿಪ್ರಾಯ ಹುಟ್ಟಿದುದು ಆಶ್ಚರ್ಯವೇ ಸರಿ. ಈ ವಿಷಯದಲ್ಲಿ ಹೆಚ್ಚು ವಿಚಾರಮಾಡಲು ಅಗತ್ಯವಿಲ್ಲ.

೫. ಉಪನಿಷತ್ತು ಅಂದರೆ ಗುಹ್ಯಾದೇಶ. ರಹಸ್ಯವಾದ ಉಪದೇಶವೆಂದು ಅರ್ಥ. ಋಗಾದಿ ನಾಲ್ಕು ವೇದಗಳಲ್ಲೂ ಮೂರು ವಿಭಾಗಗಳಿವೆ. ಒಂದು ಸಂಹಿತೆ ಅಥವಾ ಮಂತ್ರಭಾಗ, ಎರಡು ಬ್ರಾಹ್ಮಣಗಳು, ಮೂರು ಆರಣ್ಯಕಗಳು. ಹೆಚ್ಚಾಗಿ ಉಪನಿಷತ್ತುಗಳು ಆರಣ್ಯಕಗಳಲ್ಲಿ ಸೇರಿವೆ. ಈಶಾವಾಸ್ಯೋಪನಿಷತ್ತು, ಶುಕ್ಲ ಯಜುರ್ವೇದದ ಮಂತ್ರಭಾಗದಲ್ಲಿ ನಾಲ್ವತ್ತನೇ ಅಧ್ಯಾಯವು. ಬೃಹದಾರಣ್ಯಕವು ಶುಕ್ಲ ಯಜುರ್ವೇದದ ಬ್ರಾಹ್ಮಣವಾದ ಶತಪಥ ಬ್ರಾಹ್ಮಣದ ಅಂತಿಮಾಧ್ಯಾಯಗಳು. ಹೀಗೆ ಕೆಲವು ಉಪನಿಷತ್ತುಗಳು ಬ್ರಾಹ್ಮಣಗಳಲ್ಲು ಇರುವುದುಂಟು. ಉಪನಿಷತ್ತುಗಳು ಅನೇಕ ವಿರುವುವು. ಹತ್ತು ಅಥವಾ ಹನ್ನೆರಡು ಪ್ರಸಿದ್ಧಗಳಾಗಿವೆ. (1) ಐತರೇಯ, (2) ಕೌಷೀತಕಿ, (3) ಈಶಾವಾಸ್ಯ, (೪) ಕಾಠಕ, (5) ಬೃಹದಾರಣ್ಯಕ, (6) ತ್ತೈತ್ತಿರೀಯ, (7) ಶ್ವೇತಾಶ್ವತರ, (8) ತಲವಕಾರ, (9) ಛಾಂದೋಗ್ಯ, (10) ಷಟ್ಪ್ರಶ್ನ, (11) ಮಾಂಡೂಕ, (12) ಆಥರ್ವಣ,

ಇವುಗಳ ಪೈಕಿ (1), (2) ಋಗ್ವೇದದ ಉಪನಿಷತ್ತುಗಳು. (3), (4), (5), (6), (7) ಯಜುರ್ವೇದದ ಉಪನಿಷತ್ತುಗಳು. (8), (9) ಸಾಮವೇದದ ಉಪನಿಷತ್ತುಗಳು. (10), (11), (12) ಅಥರ್ವವೇದದ ಉಪನಿಷತ್ತುಗಳು. ಕೆಲವು ಪದ್ಯರೂಪಗಳಾಗಿವೆ. ಕೆಲವು ಗದ್ಯರೂಪಗಳಾಗಿವೆ. ಕೆಲವುಗಳ ಶೈಲಿ (ಕಾಠಕ, ಆಥರ್ವಣ) ಸುಲಭವಾಗಿದೆ. ಮತ್ತು ಕೆಲವು (ಬೃಹದಾರಣ್ಯಕ, ಐತರೇಯ) ಅತಿ ಕಠಿನವಾಗಿವೆ. ಸದ್ಯಃ ಈ ಸಂಚಿಕೆಯಲ್ಲಿ 8 ಉಪನಿಷತ್ತುಗಳನ್ನು ಮಾತ್ರ ಸೇರಿಸೋಣಾಗಿದೆ. ಕೌಷೀತಕಿ, ಶ್ವೇತಾಶ್ವತರ ಇವುಗಳಿಗೆ ತ್ರಿಮತಸ್ಥಾಪನಾಚಾರ್ಯರು ಭಾಷ್ಯಗಳನ್ನು ನಿರ್ಮಿಸಲಿಲ್ಲ. ಉಪನಿಷತ್ತುಗಳು ಬ್ರಹ್ಮವಿದ್ಯೆಯನ್ನು ಬೋಧಿಸುತ್ತವೆ ಎಂಬುವದು ವೇದಾಂತಿಗಳಿಗೆಲ್ಲರಿಗೂ ಸಮ್ಮತವಾದ ವಿಷಯವಾಗಿದೆ. ಇವುಗಳ ಅರ್ಥವನ್ನು ಬ್ರಹ್ಮಸೂತ್ರಗಳಲ್ಲಿ ವೇದವ್ಯಾಸರು ನಿಶ್ಚಯಿಸಿರುತ್ತಾರೆಂದು ಎಲ್ಲರ ಒಪ್ಪಿಗೆ ಆಗಿದೆ. ಶ್ರೀಶಂಕರಾಚಾರ್ಯರು, ಉಪನಿಷತ್ತುಗಳು ಹಾಗೂ ಬ್ರಹ್ಮಸೂತ್ರಗಳು, ಜೀವಬ್ರಹ್ಮೈಕ್ಯವು, ಜಗನ್ಮಿಥ್ಯಾತ್ವವು ಬೋಧಿಸುವವೆಂದು ತಮ್ಮ ಭಾಷ್ಯಗಳಿಂದ ತಿಳಿಸಿರುತ್ತಾರೆ. ಶ್ರೀರಾಮಾನುಜಾಚಾರ್ಯರು ಶ್ರೀಶಂಕರಾಚಾರ್ಯರ ಭಾಷ್ಯವನ್ನು ಖಂಡಿಸಿ ತಮ್ಮ ವಿಶಿಷ್ಟಾದ್ವೈತವನ್ನು ತಿಳಿಸುವ ಭಾಷ್ಯಗಳನ್ನು ರಚಿಸಿದರು. ಅವರು ಜಗತ್ತು ಸತ್ಯವೇ ಹೊರತು ಮಾಯಾ ನಿರ್ಮಿತವಲ್ಲ. ವಿಷ್ಣುವೇ ಸರ್ವೋತ್ತಮನು, ಜೀವಬ್ರಹ್ಮರಿಗೆ ಐಕ್ಯವಿಲ್ಲವಾದರೂ, ಮುಕ್ತಿಯಲ್ಲಿ ಸಾಮ್ಯವಿರುವುದು ಎಂದು ಬೋಧಿಸಿದರು. ಶ್ರೀಮದಾಚಾರ್ಯರು ಅದ್ವೈತ, ವಿಶಿಷ್ಟಾದ್ವೈತ ಮತ್ತು ಇತರ ಎಲ್ಲಾ ವಾದಗಳನ್ನೂ ಖಂಡಿಸಿ ಹರಿಯೇ ಸರ್ವೋತ್ತಮನು, ಜೀವರು ಮುಕ್ತಾಮುಕ್ತಾವಸ್ಥೆಯಲ್ಲಿ ತದಧೀನರು, ನಿಯಮ್ಯರು, ಜಗತ್ತು ಸತ್ಯ, ಇತ್ಯಾದಿ ವಿಷಯಗಳನ್ನು ಸಪ್ರಮಾಣವಾಗಿ ಬೋಧಿಸಿದರು. ಆಸಾ

ತತಃ ಅದ್ವೈತವನ್ನು ಜಗನ್ಮಿಥ್ಯಾತ್ವವನ್ನು ಪ್ರತಿಪಾದಿಸುವಂತೆ ಇರುವ ವಾಕ್ಯಗಳು ಉಪನಿಷತ್ತುಗಳಲ್ಲಿ ಅಲ್ಲಲ್ಲಿ ಕಂಡು ಬರುತ್ತವೆ. ಮಂತ್ರಭಾಗದಲ್ಲೆಲ್ಲಾದರು ಜಗತ್ತು ಅಸತ್ಯವೆಂದಾಗಲೀ, ಜೀವಬ್ರಹ್ಮರಿಗೈಕ್ಯವೆಂದಾಗಲೀ ಹೇಳಲಿಲ್ಲ.

೬. ಅದ್ವೈತಿಗಳು ಮಹಾವಾಕ್ಯಗಳು ಎಂದು ಹೇಳುವ 'ಅಹಂ ಬ್ರಹ್ಮಾಸ್ಮಿ' 'ತತ್ವಮಸಿ' 'ಸೋऽಹಮಸ್ಮಿ' 'ಸರ್ವಂ ಖಲ್ವಿದಂ ಬ್ರಹ್ಮ' ಇತ್ಯಾದಿಗಳೆಲ್ಲವು ಉಪನಿಷತ್ತುಗಳಲ್ಲಿ ಸಿಕ್ಕುವವಲ್ಲದೆ ಸಂಹಿತೆಗಳಲ್ಲಿರುವವಲ್ಲ. ಅಂದರೆ ಇವುಗಳು ಪ್ರಮಾಣಗಳಲ್ಲವೆಂದಾಗಲೀ, ಅಥವಾ ಇವುಗಳಿಗೆ ಪ್ರಾಮಾಣ್ಯವು ಸಂಹಿತೆಗಳಿಗಿಂತ ಕಡಿಮೆಎಂದಾಗಲೀ ಹೇಳುವುದಲ್ಲ. ಅದ್ವೈತವೇ ವೇದದ ಮುಖ್ಯೋದ್ದೇಶವಾಗಿದ್ದರೆ, ಎಲ್ಲಾ ಭಾಗಗಳಲ್ಲಿ ಅದು ಸ್ವಲ್ಪ ಸ್ವಲ್ಪವಾದರೂ ಪ್ರತಿಪಾದಿಸಲ್ಪಡುತ್ತಿತ್ತು. ಹಾಗಲ್ಲದೆ ಸಂಹಿತೆಯಲ್ಲಿ ದ್ವೈತವು, ಉಪನಿಷತ್ತಿನಲ್ಲಿ ಅದ್ವೈತವು, ಬೋಧಿಸಿದರೆ, ವೇದವು ಉನ್ಮತ್ತಪ್ರಲಾಪವೆನಿಸುವದೇ ಹೊರತು ಪ್ರಮಾಣವೆನಿಸಲಾರದು. ಅವುಗಳಿಗೆ ಏಕವಾಕ್ಯತಾ ಕಲ್ಪಿಸಬೇಕು.

**ವಿರೋಧೋ ವಾಕ್ಯಯೋರ್ಯತ್ರ ನಾಪ್ರಾಮಾಣ್ಯಂ ತದೇಷ್ಯತೇ ।**
**ಯಥಾ ವಿರುದ್ಧತಾ ನ ಸ್ಯಾತ್ತಥಾರ್ಥಃ ಕಲ್ಪ್ಯ ಏತಯೋಃ ॥**

ವೇದ ವಾಕ್ಯಗಳಿಗೆ ಪರಸ್ಪರ ವಿರೋಧ ಬಂದರೆ ಅವುಗಳು ಅಪ್ರಮಾಣಗಳೆಂದು ಹೇಳಬಾರದು. ಅವುಗಳಿಗೆ ವಿರೋಧಬಾರದಂತೆ ಅರ್ಥಕಲ್ಪಿಸಬೇಕೆಂದು ಹೇಳುವ ಕೂರ್ಮಪುರಾಣವಾಕ್ಯವನ್ನು ಆಚಾರ್ಯರು ಬ್ರಹ್ಮಸೂತ್ರ ಭಾಷ್ಯದಲ್ಲಿ ತೋರಿಸಿರುತ್ತಾರೆ. ಮತ್ತು ಸಂದಿಗ್ಧ ವಿಪರೀತಾರ್ಥಗಳನ್ನು ತಿಳಿಸುವ ವಾಕ್ಯಗಳಿಗೆ ಉಪಕ್ರಮಾದಿ ಲಿಂಗಗಳಿಂದ ನಿಜವಾದ ಅರ್ಥವನ್ನು ನಿಶ್ಚಯಮಾಡಬೇಕೆಂದು ತಿಳಿಸಿರುವರು.

೭. ಶ್ರೀಮದಾಚಾಚಾರ್ಯರ ಭಾಷ್ಯರಚನೆ ಕ್ರಮಕ್ಕೂ, ಇತರ ಭಾಷ್ಯಕಾರರ ರಚನೆ ಕ್ರಮಕ್ಕೂ ಬಹಳ ವ್ಯತ್ಯಾಸವಿದೆ. ತಾವು ಹೇಳುವ ಎಲ್ಲಾ ಅರ್ಥಗಳು ಸಪ್ರಮಾಣವಾಗಿವೆ ಎಂಬುವದನ್ನು ದೃಢಪಡಿಸುವುದಕ್ಕಾಗಿ, ಆಚಾರ್ಯರ ಭಾಷ್ಯಗಳಲ್ಲಿ ಪ್ರಮಾಣಗಳು ವಿಸ್ತಾರವಾಗಿ ತುಂಬಿಸಲ್ಪಟ್ಟಿರುವುವು. ಆಚಾರ್ಯರ ವಾಕ್ಯಗಳು ಬಹಳ ಕಡಿಮೆ. ತಲವಕಾರ ಭಾಷ್ಯವು ಕೊನೆಯ ನಾಲ್ಕು ಪಂಕ್ತಿಗಳು ಬಿಟ್ಟರೆ, ಮಿಕ್ಕಿದ್ದೆಲ್ಲವು 'ಬ್ರಹ್ಮಸಾರ' ವೆಂಬ ಒಂದು ಗ್ರಂಥದಿಂದ ಉದ್ಧೃತವಾದ ಪ್ರಮಾಣವಾಗಿದೆ. ತೈತ್ತಿರೀಯ ಭಾಷ್ಯದಲ್ಲಿ ಯಜುಸ್ಸಹಿಂತೆ ಎಂಬ ಗ್ರಂಥ ಅನೇಕ ಪ್ರಮಾಣಗಳು ಉದಾಹೃತಗಳಾಗಿವೆ. ಹಾಗೆಯೇ ಐತರೇಯ ಭಾಷ್ಯದಲ್ಲಿ ಐತರೇಯ ಸಂಹಿತೆ, ಋಕ್ಸಂಹಿತೆ ಇವುಗಳಿಂದ ಅನೇಕ ಪ್ರಮಾಣಗಳು ಉದಾಹೃತಗಳಾಗಿವೆ. ಇವೆಲ್ಲವೂ ನೋಡಲು ಆಚಾರ್ಯರ ದ್ವೈತವಾದವು ಬಹು ಪೂರ್ವದಲ್ಲೇ ಇದ್ದಿತ್ತೆಂದು ನಿಶ್ಚಯವಾಗುವುದು. ದ್ವೈತಮಾತ್ರವಲ್ಲ, ಅದ್ವೈತವು ಕೂಡ ಪ್ರಾಚೀನ ಮತವೆ. ಇವುಗಳೆರಡು ಪ್ರಾಚೀನಮತಗಳಾದರೂ ಒಂದು ಮಾತ್ರವೇ ವೇದವ್ಯಾಸರಿಗೆ ಸಮ್ಮತವಾದದ್ದು. ಬ್ರಹ್ಮಸೂತ್ರಗಳಲ್ಲಿ ಅದ್ವೈತವಾದವು ಮಾಯಾವಾದವು ಪ್ರತಿಪಾದಿತ ವಾಗಲಿಲ್ಲವೆಂದು ಪಾಶ್ಚಾತ್ಯ ವಿದ್ವಾಂಸರು ಸಹ ಒಪ್ಪುತ್ತಾರೆ. ಡಾಕ್ಟರ್ ತಿಬೋ (Dr. G. Thibant) ಎಂಬವರು ಶ್ರೀ ಶಂಕರ ಸೂತ್ರ ಭಾಷ್ಯದ ಪರಿವರ್ತನದ ಪ್ರಸ್ತಾವನೆಯಲ್ಲಿ ಶಂಕರಾಚಾರ್ಯರ ಭಾಷ್ಯವು ಬ್ರಹ್ಮಸೂತ್ರಗಳ ಅರ್ಥವನ್ನು ಯೋಗ್ಯರೀತಿಯಿಂದ ತಿಳಿಸುವುದಿಲ್ಲ. ರಾಮಾನುಜಾಚಾರ್ಯರ ಭಾಷ್ಯವು ಬ್ರಹ್ಮಸೂತ್ರಗಳಿಗೆ ಅನುಗುಣವಾಗಿದೆ ಎಂದು ಹೇಳಿದ್ದಾರೆ. ಆದರೆ ಈ ಮಹನೀಯರು ಉಪನಿಷದರ್ಥವನ್ನು ನಿರೂಪಣೆ ಮಾಡುವುದರಲ್ಲಿ ಬ್ರಹ್ಮಸೂತ್ರ ಗ್ರಂಥಕರ್ತರಾದ ಬಾದರಾಯಣ

ರಿಗಿಂತಲೂ, ಶಂಕರಾಚಾರ್ಯರೇ ಸಮರ್ಥರೆಂದು ಅರ್ಥವಾಗುವಂತೆ ಬರೆದಿದ್ದಾರೆ. ಅಶೇಷ ವೇದಾಂತಿಗಳಿಗೆ ಅಸಮ್ಮತವಾದ ಅರ್ಥವನ್ನು ಇವರು ಹೇಳಿದುದು ಆಶ್ಚರ್ಯವಾಗಿರುತ್ತದೆ. ಶ್ರೀ ಶಂಕರಾಚಾರ್ಯರಿಗೂ ಇದು ಅನಭಿಮತವೆಂದು ತಿಳಿಯಬೇಕಾಗುತ್ತದೆ. ಅವರ (ಡಾ. ತೀಬೂ) ಅಭಿಪ್ರಾಯವು ಅದ್ವೈತಕ್ಕೆ ಬ್ರಹ್ಮಸೂತ್ರಗಳ ಸಮ್ಮತಿ ದೊರೆಯದಿದ್ದರೂ, ಉಪನಿಷತ್ತುಗಳ ಸಮ್ಮತಿ ಇರುವದೆಂದಾಗಿರುತ್ತದೆ. ಪಾಶ್ಚಾತ್ಯ ವಿಜ್ಞಾನಿಗಳಿಗೆ, ಶ್ರೀ ಶಂಕರಾಚಾರ್ಯರ ಅದ್ವೈತದಲ್ಲಿ ವಿಶ್ವಾಸವೂ, ಪ್ರೀತಿಯೂ ಉಂಟಾಗುವುದು ಆಶ್ಚರ್ಯವಲ್ಲ. ಪ್ರಥಮ ದೃಷಿಯಲ್ಲಿ ಉಪನಿಷತ್ತುಗಳು ಅದ್ವೈತವನ್ನು ನಿರೂಪಿಸುತ್ತವೆ ಎಂಬ ಭ್ರಾಂತಿ ಉಂಟಾದರೆ ಅದನ್ನು ಕಳೆದುಕೊಳ್ಳುವುದು ಅನಂತರ ಕಷ್ಟಸಾಧ್ಯವಾಗುತ್ತದೆ. ಈ ಮುನ್ನುಡಿಯಲ್ಲಿ ಒಂದೆರಡು ವಿಷಯಗಳ ವಿಚಾರವನ್ನು ಮಾತ್ರ ಮಾಡಲು ಸ್ಥಳವಿರುವುದರಿಂದ ಹೆಚ್ಚಿಗೆ ಬರೆಯಲು ಸಾಧ್ಯವಿಲ್ಲ.

೮. ಎಲ್ಲಾ ಉಪನಿಷತ್ತುಗಳು ಬ್ರಹ್ಮಜ್ಞಾನವನ್ನು ಉಪದೇಶಿಸುವುದಕ್ಕೆ ಪ್ರವರ್ತವಾಗಿದ್ದರೂ, ಪರಮಾತ್ಮನ ಬೇರೆ ಬೇರೆ ಧರ್ಮಗಳನ್ನೂ, ಗುಣಗಳನ್ನೂ ತಿಳಿಸುವುದರಲ್ಲಿ ಒಂದೊಂದಕ್ಕೆ ಮುಖ್ಯೋದ್ದೇಶವಿದ್ದಂತೆ ತೋರುವುದು. ಹೇಗೆಂದರೆ:- ಈಶಾವಾಸ್ಯೋಪನಿಷತ್ತಿನಲ್ಲಿ ಮುಖ್ಯವಾಗಿ, ಪರಬ್ರಹ್ಮನು ಸರ್ವವ್ಯಾಪಿಯು, ಸರ್ವಾಂತರ್ಯಾಮಿಯು, ಸರ್ವಜಗತ್ಪ್ರವರ್ತಕನು, ಸರ್ವಸೃಷ್ಟಿಕರ್ತನು, ಸರ್ವಸಂಹಾರಕನು, ಸರ್ವಜ್ಞನು ಎಂದು ಬೋಧಿಸಲ್ಪಟ್ಟಿದೆ. ತಲವಕಾರದಲ್ಲಿ (ಇದಕ್ಕೆ ಕೇನೋಪನಿಷತ್ತೆಂದು, ಬ್ರಹ್ಮೋಪನಿಷತ್ತೆಂದು ಕೆಲವರು ಹೇಳುವರು) ಪರಮಾತ್ಮನು ನಮ್ಮ ಇಂದ್ರಿಯಾದಿಗಳಲ್ಲಿದ್ದು, ಸರ್ವವ್ಯಾಪಾರಗಳನ್ನು ನಡಿಸುವವನಾಗಿ, ಇಂದ್ರಿಯಾದಿಗಳಿಗೂ ತದಭಿಮಾನಿಗಳಾದ ದೇವತೆಗಳಿಗೂ ಶಕ್ತಿಪ್ರದನಾಗಿ ಇರುವನೆಂದು ತಿಳಿಸಲ್ಪಟ್ಟಿದೆ. ಕಾಠಕದಲ್ಲಿ ಪರಮಾತ್ಮನು ಸಾಂಸಾರಿಕ ಜೀವರಿಗೂ ಮತ್ತು ಮುಕ್ತಜೀವರಿಗೂ ಕೂಡ ನಿಯಾಮಕನಾಗಿ, ಅವರಿಗೆ ಒಡೆಯನಾಗಿ ಅವರಿಂದ ಸ್ತುತ್ಯನಾಗಿ ಸರ್ವದಾ ಅವರಿಂದ ಭಿನ್ನನಾಗಿ ಇರುತ್ತಾನೆಂದು ತಿಳಿಸಲ್ಪಟ್ಟಿದೆ. ಮಾಂಡೂಕದಲ್ಲಿ ಓಂಕಾರ ಪ್ರತಿಪಾದ್ಯನಾದ ಪರಮಾತ್ಮನು ನಾಲ್ಕುರೂಪದಿಂದ ಜೀವನ ನಾಲ್ಕವಸ್ಥೆಗಳಲ್ಲಿಯೂ, ಪ್ರೇರಕನು ರಕ್ಷಕನಾಗಿ ಇರುತ್ತಾನೆಂದು ತಿಳಿಸಲ್ಪಟ್ಟಿದೆ ಹೀಗೆ ಒಂದೊಂದು ಉಪನಿಷತ್ತಿನಲ್ಲಿ ಒಂದೊಂದು ವಿಶೇಷವು ಹೇಳಲ್ಪಟ್ಟಿದೆ. ಬ್ರಹ್ಮಜ್ಞಾನವನ್ನು ಇಚ್ಛಿಸುವ ಅಧಿಕಾರಿಗೆ ವೈರಾಗ್ಯವು ಪ್ರಥಮ ಸೋಪಾನವಾಗಿರುವುದೆಂದು, ತಿಳಿಯುತ್ತದೆ. ಈಶಾವಾಸ್ಯದಲ್ಲಿ ಒಂದನೆ ಮಂತ್ರದಲ್ಲಿ ಬುಭುತ್ಸುವು ವಿರಕ್ತನಾಗಿರಬೇಕೆಂದು ಯದೃಚ್ಛಾಲಾಭ ಸಂತುಷ್ಟನಾಗಿರಬೇಕೆಂದು ಹೇಳಲ್ಪಟ್ಟಿದೆ. ಹಾಗೆಯೇ ಕಾಠಕದಲ್ಲಿ, ಯಮದೇವರು ಬ್ರಹ್ಮಜ್ಞಾನೋಪದೇಶವನ್ನು ಮಾಡುವುದಕ್ಕೆ, ಪೂರ್ವದಲ್ಲಿ ನಾಚಿಕೇತರ ವೈರಾಗ್ಯ ಪರೀಕ್ಷೆಯನ್ನು ಮಾಡಿದ್ದಾರೆ. ಮತ್ತು ಬ್ರಹ್ಮಜ್ಞಾನವು ಸದ್ಗುರುವಿನ ಉಪದೇಶವಿನಹ ಉಂಟಾಗಲಾರದೆಂದು ತಿಳಿಯುತ್ತದೆ. ಪುರಂದರದಾಸರು ಹೇಳಿದಂತೆ 'ಗುರುವಿನ ಗುಲಾಮನಾಗುವ ತನಕ ದೊರೆಯದಣ್ಣ ಮುಕುತಿ.' ವಿರಕ್ತರಾದ ಸುಕೇಶಾದಿ ಋಷಿಪುತ್ರರಿಗೂ ಕೂಡ ಒಂದು ವರ್ಷ ಹೆಚ್ಚಿನ ಬ್ರಹ್ಮಚರ್ಯವನ್ನು ಅನುಷ್ಠಿಸಿದ ಮೇಲೆ ಬ್ರಹ್ಮಜ್ಞಾನವು ಕೊಡಲ್ಪಟ್ಟಿತೆಂದು ತಿಳಿಯುತ್ತದೆ. ಗೃಹಸ್ಥಾಶ್ರಮಿಯಾದ ಉದ್ದಾಲಕರು (ಶ್ವೇತಕೇತುಗಳ ತಂದೆ) ಪ್ರವಾಹಣ ಜಾಬಾಲಿ ಎಂಬ ರಾಜನಲ್ಲಿ ಬ್ರಹ್ಮಚರ್ಯವನ್ನು ವಹಿಸಿ ಬ್ರಹ್ಮಜ್ಞಾನವನ್ನು ಪಡೆದರೆಂದು ಛಾಂದೋಗ್ಯದಲ್ಲಿ ವರ್ಣಿತವಾಗಿದೆ. ಮತ್ತು ಒಮ್ಮಿಂದೊಮ್ಮೆಯೇ ಬ್ರಹ್ಮಜ್ಞಾನವು ಹುಟ್ಟುವುದಿಲ್ಲ. ಸಂಶಯಗಳು ಬಂದಹಾಗೆಲ್ಲಾ ಗುರುಮುಖದಿಂದ ಅವುಗಳನ್ನು ನಿವೃತ್ತಿ ಮಾಡಿಕೊಳ್ಳಬೇಕೆಂದು ತೈತ್ತಿರೀಯದಲ್ಲಿ ಭೃಗುಋಷಿಗಳು ತಂದೆಯಾದ ವರುಣನನ್ನು ಅನೇಕಾವರ್ತಿ ಉಪದೇಶಕೇಳಿದರೆಂದಿದೆ. ಛಾಂದೋಗ್ಯದಲ್ಲಿ ಬ್ರಹ್ಮದೇವರನ್ನು ಇಂದ್ರನು ಹಾಗೆ

ಅನೇಕಾವರ್ತಿ ಪ್ರಶ್ನೆಮಾಡಿದಂತೆ ತೋರುತ್ತದೆ. ಎಲ್ಲಾ ಉಪನಿಷತ್ತುಗಳ ಮುಖ್ಯತಾತ್ಪರ್ಯ ವೇನೆಂದರೆ ಪರಮಾತ್ಮನು ಸಕಲ ಕಲ್ಯಾಣಗುಣಪೂರ್ಣನು, ಅಶೇಷ ದೋಷವರ್ಜಿತನು, ಸರ್ವ ಸ್ವತಂತ್ರನು, ಸರ್ವಜ್ಞನು, ಸರ್ವಶಕ್ತನು, ಆನಂದ ಸ್ವರೂಪನು, ಸರ್ವರಿಂದ ಭಿನ್ನನು, ಮುಕ್ತ ರಿಂದಲೂ ಪೂಜ್ಯನು, ಸಮರೂ ಅಧಿಕರೂ ಇಲ್ಲದವನು ಎಂದಾಗಿರುತ್ತದೆ. ಇಂತಹ ಪರಮಾ ತ್ಮನು ತನ್ನ ಇಚ್ಛೆಯಿಂದಲೇ ಈ ಜಗತ್ತನ್ನು ಸೃಷ್ಟಿಸಿದನು. ಪ್ರಕೃತಿಯೇ ಅದಕ್ಕೆ ಉಪಾದಾನ ಕಾರಣವು. ಆ ಬ್ರಹ್ಮ ಸ್ತಂಬಪರ್ಯಂತ ಜೀವರು, ಪರಮಾತ್ಮನ ಇಚ್ಛೆಯಿಂದಲೇ ಸಂಸಾರ ವೆನ್ನುವ ಬಂಧದಲ್ಲಿ ತಗಲಿರುವರು. ಅವನ ಪರಮ ಪ್ರಸಾದದಿಂದಲೇ ಯೋಗ್ಯರಾದವರು ಮುಕ್ತಿಯನ್ನು ಪಡೆಯುವರು. ಆ ಪರಮಾತ್ಮನ ನಿಯಮಗಳನ್ನು ಅತಿಕ್ರಮಿಸುವುದಕ್ಕೆ ಯಾರಿಗೂ ಸಾಧ್ಯವಾಗುವುದಿಲ್ಲ. ದೃಶ್ಯಮಾನವಾದ ಈ ಜಗತ್ತು ಸತ್ಯವೋ, ಸುಳ್ಳೋ ಎಂದು ಪ್ರಶ್ನೆಬಂದರೆ, ಉಪನಿಷತ್ತುಗಳು ಜಗತ್ತು ಸತ್ಯವೆಂದೇ ಸಾರುತ್ತಿವೆ. ಈಶಾವಾಸ್ಯ (ಪುಟ ೧೦)ದಲ್ಲಿ 'ಯಾಥಾ ತಥ್ಯತೋಽರ್ಥಾನ್ ವ್ಯದಧಾಚ್ಛಾಶ್ವತೀಭ್ಯಸ್ಸಮಾಭ್ಯಃ' ಎಂದು ಯಥಾರ್ಥವಾದ ಪದಾರ್ಥಗಳ ನಿರ್ಮಾಣವು ಹೇಳಲ್ಪಟ್ಟದೆ. ಷಟ್ಪ್ರಶ್ನೋಪನಿಷತ್ತಿನಲ್ಲಿ ಸೃಷ್ಟಿಕ್ರಮವು ವರ್ಣಿತವಾಗಿದೆ. ಆದರೆ ಎಲ್ಲಿಯೂ ಈ ಜಗತ್ತು ಮಾಯಾ ನಿರ್ಮಿತವೆಂದು ಹೇಳಲಿಲ್ಲ. ಆರನೇ ಪ್ರಶ್ನೆ, 3ನೇ ಮಂತ್ರ ದಲ್ಲಿ (ಪುಟ 238) ಹೇಳಿದ ಉದಾಹರಣೆಯು, ನದಿಗಳು ಸಮುದ್ರವನ್ನು ಸೇರಿ ನಾಮರೂಪ ವರ್ಜಿತಗಳಾಗುತ್ತವೆ ಎಂಬುವುದು, ಜೀವ ಬ್ರಹ್ಮೈಕ್ಯಕ್ಕೆ ಉದಾಹರಣೆ ಆಗಬಹುದೇ ಹೊರತು ಜಗನ್ಮಿಥ್ಯಾತ್ವಕ್ಕೆ ಆಗಲಾರದು. ಆಥರ್ವಣೋಪನಿಷತ್ತಿನಲ್ಲಿ ಹೇಳಿದ ದೃಷ್ಟಾಂತಗಳು (ಪುಟ 253) ಪರಿಣಾಮವಾದಕ್ಕೆ ಒಂದುವೇಳೆ ಸಹಾಯವಾಗಬಹುದು. ಮಾಯಾವಾದಕ್ಕೆ ಸಹಾಯ ವಾಗಲಾರದು. ಯಾವದಾದರೂ ಮಾಯಾವಾದಕ್ಕೆ ಪ್ರಮಾಣವೆಂದು ಹೇಳಬಹುದಾದರೆ ಮಾಂಡೂಕ ಕಾ೧, ಮಂತ್ರ ೧೩ (ಪುಟ, 317) ಹೇಳಬೇಕು. ಅಲ್ಲಿ ಮಾಯಾ ಎಂಬ ಪದ ವಿದ್ದರೂ ಮಾಯಾವಾದಕ್ಕೆ ಅನುಕೂಲವಾಗುವುದಿಲ್ಲ. ಮೂಲವು ಭಾಷ್ಯವು ನೋಡಿದರೆ ಇದು ಸ್ಪಷ್ಟವಾಗುತ್ತದೆ. ಇದು ಗೌಡಪಾದರ ಕಾರಿಕೆಯು ಶ್ರುತಿಯಲ್ಲವೆಂದು ಅದ್ವೈತಿಗಳು ಹೇಳು ವುದರಿಂದ, ಅವರಿಗೆ ಮಾಯಾವಾದಕ್ಕೆ ಬೇಕಾದ ಪ್ರಮಾಣಗಳು ಇಲ್ಲವೆಂದು ನಿಶ್ಚಯವಾಗು ತ್ತದೆ. ಜಗತ್ಸತ್ಯತ್ವವನ್ನು ವಾದಿಸುವವರಿಗೆ ಅನೇಕ ಪ್ರಮಾಣಗಳಿರುವವು. ಅವುಗಳು ಉಪೋದ್ಘಾತದಲ್ಲಿ ನಿರೂಪಿಸಲ್ಪಟ್ಟದೆ...... 'ಸರ್ವಂ ಖಲ್ವಿದಂ ಬ್ರಹ್ಮ' ಎಂಬ ಛಾಂದೋಗ್ಯ ವಾಕ್ಯವು ಕೂಡ, ಪರಿಣಾಮವಾದಕ್ಕೆ ಅನುಕೂಲವಾಗಬಹುದೇ ಹೊರತು ಮಾಯಾವಾದ (ವಿವೃತವಾದಕ್ಕೆ) ಪ್ರಮಾಣವಾಗಲಾರದು.

೯. ಇನ್ನು ಜೀವೇಶ್ವರೈಕ್ಯಕ್ಕೂ ಪ್ರಮಾಣಗಳು ನಿಸ್ಸಂದೇಹವಾದವುಗಳಿರುವುದಿಲ್ಲ. 'ಅಹಂ ಬ್ರಹ್ಮಾಸ್ಮಿ', 'ತತ್ವಮಸಿ' ಇವುಗಳು ಈ ಸಂಚಿಕೆಯಲ್ಲಿ ಸೇರದ ಉಪನಿಷದ್ವಾಕ್ಯಗಳಲ್ಲವಾದುದ ರಿಂದ ಅವುಗಳ ವಿಚಾರವು ಪ್ರಕೃತಕ್ಕೆ ಪ್ರಯೋಜನವಿಲ್ಲ. ಆದರೆ ಇಲ್ಲಿ ಸೇರಿಸಿರುವ ಉಪನಿಷತ್ತುಗ ಳಲ್ಲಿ ಅದ್ವೈತವಾಕ್ಯಗಳಿಲ್ಲವೆಂದಲ್ಲ. ಈಶಾವಾಸ್ಯದಲ್ಲಿ, 'ಯೋಽಸಾವಸೌ ಪುರುಷಃ ಸೋಽಹ ಮಸ್ಮಿ' (ಪುಟ 17.) ಕಾಠಕದಲ್ಲಿ 'ಯಥೋದಕಂ ಶುದ್ಧೇ ಶುದ್ಧ ಮಾಸಿಕ್ತಂ ತಾದೃಗೇವ ಭವತಿ' (ಪುಟ 70), 'ಏಕೋ ವಶೀ ಸರ್ವಭೂತಾಂತರಾತ್ಮಾ ಏಕಂ ರೂಪಂ ಬಹುಧಾ ಯಃ ಕರೋತಿ' (ಪುಟ 80). ಆಥರ್ವಣದಲ್ಲಿ 'ಪರೇಽವ್ಯಯೇ ಸರ್ವ ಏಕೀಭವಂತಿ' (ಪುಟ. 285), 'ಬ್ರಹ್ಮೈವ ಭವತಿ' (ಪುಣ. 289) ಇತ್ಯಾದಿ ವಾಕ್ಯಗಳು ಕಾಣುತ್ತವೆ. ಆದಾಗ್ಯೂ ಇವುಗಳಿಗೆ ದ್ವೈತಪರ ವಾಗಿ ಅರ್ಥಮಾಡಲು ಸಾಧ್ಯವಾಗುತ್ತವೆ. ಪೂರ್ವಾಪರ ವಿರೋಧ ಬಾರದಂತೆ ಶ್ರುತಿಗಳಿಗೆ

ಅರ್ಥಮಾಡಬೇಕಾದ ಕಾರಣ 'ದ್ವಾ ಸುಪರ್ಣಾ ಸಯುಜಾ ಸಖಾಯಾ, (ಪುಟ 275)'ನಿರಂಜನಃ ಪರಮಂ ಸಾಮ್ಯಮುಪೈತಿ' (ಪುಟ. 277) ಇತ್ಯಾದಿಗಳಿಗೆ ಅದ್ವೈತಪರವಾಗಿ ಅರ್ಥವು ಸಾಧ್ಯವಲ್ಲವಾದ ಕಾರಣ ಉಪನಿಷತ್ತುಗಳಿಗೆ, ಭೇದದಲ್ಲಿ ತಾತ್ಪರ್ಯವೆಂದು ತಿಳಿಯುತ್ತದೆ. ಆದುದರಿಂದ ಸಂಸಾರ ಸಾಗರವನ್ನು ದಾಟಲು ಇಚ್ಛಿಸುವ ಅಧಿಕಾರಿಯು ದಾಸೋऽಹಂ ಎಂದು ಪರಮಾತ್ಮನ ಗುಣಾತಿಶಯಗಳನ್ನು ಕೊಂಡಾಡಬೇಕಲ್ಲದೆ ಸರ್ವಥಾ ಸೋऽಹಂ ಎಂದು ಉಪಾಸನೆ ಮಾಡಬಾರದು. ಆದುದರಿಂದ ಶ್ರೀಮದಾಚಾರ್ಯರು ಅಪ್ಪಣೆಕೊಡಿಸುತ್ತಾರೆ.

ಶೃಣುತಾಮಲಸತ್ಯವಚಃ ಪರಮಂ
ಶಪಥೇರಿತಮುಚ್ಛ್ರಿತಬಾಹುಯುಗಂ ।
ನ ಹರೇಃ ಪರಮೋ ನ ಹರೇಃ ಸದೃಶಃ
ಪರಮಃ ಸ ತು ಸರ್ವಚಿದಾತ್ಮಗಣಾತ್ ॥
ಯದಿ ನಾಮ ಪರೋ ನ ಭವೇತ್ಸ ಹರಿಃ
ಕಥಮಸ್ಯ ವಶೇ ಜಗದೇತದಭೂತ್ ।
ಯದಿ ನಾಮ ನ ತಸ್ಯ ವಶೇ ಸಕಲಂ
ಕಥಮೇವ ತು ನಿತ್ಯಸುಖಂ ನ ಭವೇತ್ ॥

॥ ಶ್ರೀ ಕೃಷ್ಣಾರ್ಪಣಮಸ್ತು ॥

ಮಧ್ವಮುನೀಂದ್ರದಾಸ



# ಸಭಾಷ್ಯ ಈಶಾವಾಸ್ಯೋಪನಿಷತ್ತು.

ಶ್ರೀಪ್ರಾಣಪತಿಮಾನಮ್ಯ ಪೂರ್ಣಬೋಧಾದಿದೇಶಿಕಾನ್ ।
ಈಶಾವಾಸ್ಯೋಪನಿಷದಃ ಕರಿಷ್ಯಾಮ್ಯರ್ಥಸಂಗ್ರಹಂ ॥

**ಶ್ರೀಮದ್ಧನುಮದ್ಭೀಮಮಧ್ವಾಂತರ್ಗತ ರಾಮಕೃಷ್ಣವೇದವ್ಯಾಸಾತ್ಮಕ**
**ಲಕ್ಷ್ಮೀಹಯಗ್ರೀವಾಯ ನಮಃ ॥ ಹರಿಃ ಓಂ ॥**

**ಭಾ** ॥ ನಿತ್ಯಾನಿತ್ಯಜಗದ್ಧಾತ್ರೇ ನಿತ್ಯಾಯ ಜ್ಞಾನಮೂರ್ತಯೇ ।
ಪೂರ್ಣಾನಂದಾಯ ಹರಯೇ ಸರ್ವಯಜ್ಞಭುಜೇ ನಮಃ ॥

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರು ಈಶಾವಾಸ್ಯೋಪನಿಷತ್ತಿಗೆ ವ್ಯಾಖ್ಯಾನ ರೂಪವಾದ ಭಾಷ್ಯವನ್ನು ಮಾಡುವವರಾಗಿ ಆದಿಯಲ್ಲಿ ಇಷ್ಟದೇವತಾನಮನರೂಪವಾದ ಮಂಗಳವನ್ನು ಮಾಡಿದರು.

**ಅರ್ಥ**—ನಿತ್ಯ=ನಾಶವಿಲ್ಲದ, ಅನಿತ್ಯ=ನಾಶವಿರುವ, ಜಗತ್=ಪ್ರಪಂಚಕ್ಕೆ,ಧಾತ್ರೇ=ಪೋಷಕನಾದ, ನಿತ್ಯಾಯ=ಅನಿತ್ಯತ್ವ, ದೇಹಹಾನಿ, ದುಃಖಪ್ರಾಪ್ತಿ, ಅಪೂರ್ಣತಾ—ಹೀಗೆ ನಾಲ್ಕು ವಿಧ ನಾಶದಿಂದ ರಹಿತನಾದ, ಜ್ಞಾನಮೂರ್ತಯೇ=ಜ್ಞಾನವೇ ಶರೀರವಾಗಿ ಉಳ್ಳ, ಪೂರ್ಣಾನಂದಾಯ=ಸಂಪೂರ್ಣಸುಖವುಳ್ಳ, ಹರಯೇ=ಪಾಪಪರಿಹಾರಕನಾದ, ಸರ್ವಯಜ್ಞಭುಜೇ= ಸಮಸ್ತ ಯಜ್ಞಗಳನ್ನು ಭೋಜಿಸತಕ್ಕ ಯಜ್ಞನಾಮಕ ಶ್ರೀಪರಮಾತ್ಮನಿಗೋಸ್ಕರ, ನಮಃ= ನಮಸ್ಕಾರವು. (ಅಸ್ತು=ಆಗಲಿ.)

ಇಷ್ಟದೇವತೆಯ ನಮನಾನಂತರದಲ್ಲಿ ಗುರುವಂದನೆಯನ್ನೂ ಮಾಡಬೇಕಾದುದರಿಂದ ತನಗೆ ಶ್ರೀ ಪರಮಾತ್ಮನೇ ಗುರುವಾಗಿರುವುದರಿಂದ ಗುರುತ್ವೇನ ಕೂಡಾ ಶ್ರೀ ಪರಮಾತ್ಮನನ್ನು ನಮಸ್ಕರಿಸುತ್ತಾರೆ.

**ಭಾ** ॥ ಯಸ್ಮಾದ್ಬ್ರಹ್ಮೇಂದ್ರರುದ್ರಾದಿದೇವತಾನಾಂ ಶ್ರಿಯೋಽಪಿ ಚ ।
ಜ್ಞಾನಸ್ಫೂರ್ತಿಸ್ಸದಾ ತಸ್ಮೈ ಹರಯೇ ಗುರವೇ ನಮಃ ॥

ಅ॥ ಯಸ್ಮಾತ್=ಯಾವಪರಮಾತ್ಮನ ದೆಶೆಯಿಂದ, ಬ್ರಹ್ಮ=ಚತುರ್ಮುಖನು, ಇಂದ್ರ= ಪುರಂದರನು, ರುದ್ರ=ಸದಾಶಿವನು, ಆದಿ=ಮೊದಲಾಗಿವುಳ್ಳ, ದೇವತಾನಾಂ=ದೇವತೆಗಳಿಗೆ, ಶ್ರಿಯೋಽಪಿ ಚ=ಲಕ್ಷ್ಮೀದೇವಿಗೂ, ಜ್ಞಾನಸ್ಫೂರ್ತಿಃ, ಜ್ಞಾನ=ತಿಳುವಳಿಕೆಯ, ಸ್ಫೂರ್ತಿಃ=ವಿಶೇಷವು, ಸದಾ=ಸರ್ವ ಕಾಲದಲ್ಲಿಯೂ, (ಭವೇತ್=ಆಗುತ್ತದೋ,) ತಸ್ಮೈ=ಅಂತಹ, ಗುರವೇ=ಜ್ಞಾನೋಪದೇಶಕನಾದ, ಹರಯೇ=ಶ್ರೀ ಪರಮಾತ್ಮನಿಗೆ, ನಮಃ=ನಮಸ್ಕಾರವು. (ಅಸ್ತು=ಆಗಲಿ.)

**ತಾ**॥ ಲಕ್ಷ್ಮೀದೇವಿಗೆ ಸರ್ವವಸ್ತು ವಿಷಯಕ ಜ್ಞಾನವು ಸರ್ವದಾ ಇದ್ದರೂ ತನ್ನಲ್ಲಿರುವ ಅನಂತಾನಂತ ಗುಣಗಳನ್ನು ಸ್ಪಷ್ಟವಾಗಿ ತಿಳಿಸುವುದಕ್ಕಾಗಿಯೂ, ಬ್ರಹ್ಮವಾಯುಗಳಿಗೆ ನಿತ್ಯವಾಗಿರುವ ಜ್ಞಾನಕ್ಕೆ ಅತಿಶಯವನ್ನುಂಟು ಮಾಡುವುದಕ್ಕಾಗಿಯೂ, ರುದ್ರಾದಿಗಳಿಗೆ ತಿರೋಹಿತವಾ

ಗಿರುವ ಜ್ಞಾನಾಂಶವನ್ನುಂಟುಮಾಡುವುದಕ್ಕಾಗಿಯೂ, ಮೂಲರೂಪದಿಂದಲೂ ಹಯಗ್ರೀವ, ದತ್ತ, ಕಪಿಲ, ವ್ಯಾಸಾದ್ಯವತಾರ ರೂಪಗಳಿಂದಲೂ ಜ್ಞಾನೋಪದೇಶ ಮಾಡುವವನಾದು ದರಿಂದ ಸಮಸ್ತ ಜಗತ್ತಿಗೂ ಗುರುವಾದ ಶ್ರೀ ಪರಮಾತ್ಮನಿಗೆ ವಂದನೆ ಮಾಡುವರು.

ಸಮಸ್ತ ವೇದಮಂತ್ರಗಳಿಗೂ ಮಂತ್ರದ್ರಷ್ಟೃಗಳಾದ ಋಷಿಗಳು, ಛಂದಸ್ಸು, ಪ್ರತಿಪಾದ್ಯ ದೇವತಾ ಇವುಗಳನ್ನು ತಿಳಿದುಕೊಳ್ಳದೆ ಯಜ್ಞಾದಿ ಕರ್ಮಗಳನ್ನಾಗಲೀ ಅಧ್ಯಯನವನ್ನಾಗಲೀ ಮಾಡಿದರೆ ಬಹಳ ಅನರ್ಥಪ್ರಾಪ್ತಿ ಇದೆಯೆಂಬದಾಗಿ ಛಾಂದೋಗ್ಯ ಬ್ರಾಹ್ಮಣದಲ್ಲಿ ಹೇಳಿರುವುದ ರಿಂದ, ಈಶಾವಾಸ್ಯೋಪನಿಷತ್ತಿಗೂ ಛಂದಸ್ಸನ್ನು ಆಯಾ ಮಂತ್ರಗಳ ಅಕ್ಷರ ಗಣನೆಯಿಂದ ತಿಳಿಯಬಹುದಾದುದರಿಂದ ಅದನ್ನು ಬಿಟ್ಟು ಋಷಿದೇವತೆಗಳನ್ನು ಮಾತ್ರ ಹೇಳುತ್ತಾರೆ.

ಭಾ || ಸ್ವಾಯಂಭುವೋ ಮನುರೇತೈರ್ಮಂತ್ರೈರ್ಭಗವಂತಮಾಕೂತಿ
ಸೂನುಂ ಯಜ್ಞನಾಮಾನಂ ವಿಷ್ಣುಂ ತುಷ್ಟಾವ ।

ಅ || ಸ್ವಾಯಂಭುವಃ=ಬ್ರಹ್ಮದೇವರ ಮಗನಾದ, ಮನುಃ=ಮನುವು, ಏತೈಃಮಂತ್ರೈಃ= ಈ ಮಂತ್ರಗಳಿಂದ, ಭಗವಂತಂ=ಷಡ್ಗುಣೈಶ್ವರ್ಯಸಂಪನ್ನನಾದ, ಆಕೂತಿಸೂನುಂ, ಆಕೂತಿ= ಆಕೂತಿದೇವಿಯ, ಸೂನುಂ=ಮಗನಾದ, ಯಜ್ಞನಾಮಾನಂ=ಯಜ್ಞನೆಂಬ ಹೆಸರುಳ್ಳ, ವಿಷ್ಣುಂ= ಶ್ರೀ ಪರಮಾತ್ಮನನ್ನು, ತುಷ್ಟಾವ=ಸ್ತೋತ್ರಮಾಡಿದನು.

ತಾ || ಚತುರ್ಮುಖ ಪುತ್ರನಾದ ಸ್ವಾಯಂಭುವ ನಾಮಕನಾದ ಆದಿಮನುವು ತನ್ನ ಮಗಳು ಆಕೂತಿದೇವಿಯಲ್ಲಿ ಅವತರಿಸಿದ ಯಜ್ಞನೆಂಬ ಹೆಸರುಳ್ಳ ಶ್ರೀ ಪರಮಾತ್ಮನನ್ನು, ಈಶಾವಾಸ್ಯ ಮಂತ್ರಗಳಿಂದ ಸ್ತುತಿಸಿದನು. ಇದಕ್ಕೆ ಪ್ರಮಾಣವು—

ಭಾ || "ಸ್ವಾಯಂಭುವಸ್ಸ್ವದೌಹಿತ್ರಂ ವಿಷ್ಣುಂ ಯಜ್ಞಾಭಿಧಂ ಮನುಃ ।
ಈಶಾವಾಸ್ಯಾದಿಭಿರ್ಮಂತ್ರೈಸ್ತುಷ್ಟಾವಾಽವಹಿತಾತ್ಮನಾ ।
ರಕ್ಷೋಭಿರುಗ್ರೈಸ್ಸಂಪ್ರಾಪ್ತಃ ಖಾದಿತುಂ ಮೋಚಿತಸ್ತದಾ ।
ಸ್ತೋತ್ರಂ ಶ್ರುತ್ವೈವ ಯಜ್ಞೇನ ತಾನ್ಹತ್ವಾಽವಧ್ಯತಾಂ ಗತಾನ್ ।
ಪ್ರಾದಾದ್ಧಿ ಭಗವಾಂಸ್ತೇಷಾಮವಧ್ಯತ್ವಂ ಹರಃ ಪ್ರಭುಃ ।
ತೈರ್ವಧ್ಯತ್ವಂ ತಥಾನ್ಯೇಷಾಮತಃ ಕೋಽನ್ಯೋ ಹರೇಃ ಪ್ರಭುಃ ।"
–ಇತಿ ಬ್ರಹ್ಮಾಂಡೇ

ಅ|| ಸ್ವಾಯಂಭುವಃ=ಸ್ವಾಯಂಭುವನೆಂದು ಹೆಸರುಳ್ಳ, ಮನುಃ=ಮನುವು, ಸ್ವದೌ ಹಿತ್ರಂ, ಸ್ವ=ತನ್ನ, ದೌಹಿತ್ರಂ=ಮಗಳ ಮಗನಾದ, ಯಜ್ಞಾಭಿಧಂ=ಯಜ್ಞನೆಂತ ಹೆಸರುಳ್ಳ, ವಿಷ್ಣುಂ=ಶ್ರೀಪರಮಾತ್ಮನನ್ನು, ಅವಹಿತಾತ್ಮನಾ=ಸಾವಧಾನ ಮನಸ್ಸಿನಿಂದ, ಈಶಾವಾಸ್ಯಾ ದಿಭಿಃ=ಈಶಾವಾಸ್ಯೋಪನಿಷತ್ತಿನಲ್ಲಿರುವ ಪ್ರಥಮ ಮಂತ್ರವೆ ಮೊದಲಾಗಿವುಳ್ಳ, ಮಂತ್ರೈಃ=ಮಂ ತ್ರಗಳಿಂದ, ತುಷ್ಟಾವ=ಸ್ತೋತ್ರಮಾಡಿದನು, ತದಾ=ಆಗ, ಅಂದರೆ ಸ್ತುತಿ ಮಾಡುವ ಕಾಲ ದಲ್ಲಿ, ಸ್ತೋತ್ರಂ=ಸ್ತುತಿಯನ್ನು, ಶ್ರುತ್ವೈವ=ಕೇಳಿಯೆ, ಉಗ್ರೈಃ=ಕ್ರೂರರಾದ, ಅಥವಾ ಸಹಿಸಲಾರದ, ರಕ್ಷೋಭಿಃ=ರಾಕ್ಷಸರಿಂದ, ಖಾದಿತುಂ=ತಿನ್ನುವದಕ್ಕೋಸ್ಕರ, ಸಂಪ್ರಾಪ್ತಃ= ಹೊಂದಲ್ಪಟ್ಟವನಾಗಿ, ಯಜ್ಞೇನ=ಯಜ್ಞನಾಮಕ ಪರಮಾತ್ಮನಿಂದ, ಅವಧ್ಯತಾಂ=ಕೊಲ್ಲ ಲಿಕ್ಕಾಗದಿರುವಿಕೆಯನ್ನು, ಗತಾನ್=ಹೊಂದಿದ, ತಾನ್=ಆ ರಾಕ್ಷಸರನ್ನು, ಹತ್ವಾ=ಸಂಹ ರಿಸಿ, ಮೋಚಿತಃ=(ಸ್ವಾಯಂಭುವ ಮನುವು) ಬಿಡಿಸಲ್ಪಟ್ಟನು, ತೇಷಾಂ=ಆ ರಾಕ್ಷಸರಿಗೆ, ಭಗ

ವಾನ್=ಪೂಜ್ಯನಾದ, ಪ್ರಭುಃ=ಸಮರ್ಥನಾದ, ಹರಃ=ರುದ್ರನು, ಅವಧ್ಯತ್ವಂ=ನಾಶವಿಲ್ಲದಿರುವಿಕೆಯನ್ನು, ತಥಾ=ಹಾಗೆ, ತೈಃ=ಆ ರಾಕ್ಷಸರಿಂದ, ಅನ್ಯೇಷಾಂ=ಇತರರಿಗೆ, ವಧ್ಯತ್ವಂ=ನಾಶವನ್ನು, ಪ್ರಾದಾತ್=ಕೊಟ್ಟಿದ್ದನು, ಅತಃ=ಆ ಕಾರಣದಿಂದ, ಹರೇಃ=ಶ್ರೀಪರಮಾತ್ಮನ ದೆಸೆಯಿಂದ, ಅನ್ಯಃ=ಇತರನು, ಪ್ರಭುಃ=ಸಮರ್ಥನು, ಕಃ=ಯಾರು, ಇತಿ=ಹೀಗೆ, ಬ್ರಹ್ಮಾಂಡೇ=ಬ್ರಹ್ಮಾಂಡಪುರಾಣದಲ್ಲಿ (ಹೇಳಲ್ಪಟ್ಟಿದೆ.)

ತಾ || ಬ್ರಹ್ಮಪುತ್ರನಾದ ಸ್ವಾಯಂಭುವನಾಮಕ ಮನುವು ತನ್ನ ಮಗಳು ಆಕೂತಿಯೆಂಬವಳಲ್ಲಿ ಅವತರಿಸಿದ ಯಜ್ಞನೆಂಬ ಹೆಸರುಳ್ಳ ಶ್ರೀಪರಮಾತ್ಮನನ್ನು ಈಶಾವಾಸ್ಯಾದಿ ಮಂತ್ರಗಳಿಂದ ಭಕ್ತಿಪೂರ್ವಕವಾಗಿ ಸ್ತೋತ್ರಮಾಡುವಾಗ ಈ ಸ್ತೋತ್ರಗಳನ್ನು ಕೇಳಿ ಸಹಿಸಲಶಕ್ತರಾದ ಕ್ರೂರರಾದ ರಾಕ್ಷಸರು ಇವನನ್ನು ಹಿಡಿದು ತಿನ್ನುವದಕ್ಕೆ ಉದ್ಯೋಗಮಾಡಲು, ಆ ರಾಕ್ಷಸರು ತಮಗೆ ಯಾರಿಂದಲೂ ಮರಣ ಬರಬಾರದೆಂತಲೂ, ತಮಗೆ ಇತರರನ್ನು ಕೊಲ್ಲುವ ಶಕ್ತಿಯು ಬರಬೇಕೆಂತಲೂ, ರುದ್ರದೇವರನ್ನು ಭಜಿಸಿ ವರವನ್ನು ಪಡೆದು ಸಮರ್ಥರಾಗಿದ್ದರೂ, ಶ್ರೀ ಪರಮಾತ್ಮನು ಈ ಸ್ತೋತ್ರದಿಂದ ಸಂತುಷ್ಟನಾಗಿ ಭಕ್ತರನ್ನು ಬಾಧಿಸುವ ಆ ರಾಕ್ಷಸರನ್ನು ಸಂಹಾರಮಾಡಿ ಸ್ವಾಯಂಭುವನನ್ನು ಕಾಪಾಡಿದನು.

ಭಾ || ಭಾಗವತೇ ಚಾಯಮೇವಾರ್ಥ ಉಕ್ತಃ |

ಅ|| ಭಾಗವತೇ ಚ=ಭಾಗವತದಲ್ಲಿಯೂ, ಅಯಮೇವಾರ್ಥಃ=ಇದೇ ಅರ್ಥವು, ಉಕ್ತಃ=ಹೇಳಲ್ಪಟ್ಟಿದೆ.

ತಾ || ಬ್ರಹ್ಮಾಂಡದಲ್ಲಿ ಹೇಳಿದ ಅರ್ಥವು ಭಾಗವತ ಪುರಾಣದಲ್ಲಿಯೂ, ಅಷ್ಟಮ ಸ್ಕಂಧ ಪ್ರಥಮಾಧ್ಯಾಯದಲ್ಲಿ ನಿರೂಪಿತವಾಗಿದೆ.

(ಭಾಗವತಂ || "ಆತ್ಮಾವಾಸ್ಯಮಿದಂ ಸರ್ವಂ ಯಜ್ಜಗತ್ಯಾಂ ಜಗನ್ಮನಃ |
ತೇನ ತ್ಯಕ್ತೇನ ಭುಂಜೀಥಾಃ ಮಾಗೃಧಃ ಕಸ್ಯಸ್ವಿದ್ಧನವ್ ||
* * * * * * * *
ಇತಿ ಮಂತ್ರೋಪನಿಷದಂ ವ್ಯಾಹರಂತಂ ಸಮಾಹಿತಂ |
ದೃಷ್ಟ್ವಾಽಸುರಾ ಯಾತುಧಾನಾ ಜಗ್ಧುಮಭ್ಯದ್ರವನ್‌ಕ್ಷು(ಕ್ರು)ಧಾ|
ತಾಂಸ್ತಥಾಽವಸಿತಾನ್ವೀಕ್ಷ್ಯ ಯಜ್ಞಃ ಸರ್ವಗತೋ ಹರಿಃ||"
ಇತ್ಯಾದಿ.)

ಈ ಭಾಗವತಸಮ್ಮತಿಯಿಂದ ಸ್ತೋತ್ರಮಾಡುವ ಸ್ವಾಯಂಭುವ ಮನುವೇ ಋಷಿಯೆಂತಲೂ, ಸ್ತುತ್ಯನಾದ ಯಜ್ಞನಾಮಕ ಶ್ರೀ ಪರಮಾತ್ಮನೇ ದೇವತೆಯೆಂತಲೂ ಸಿದ್ಧವಾಗುವದಲ್ಲದೆ, ಶ್ರೀ ಪರಮಾತ್ಮನೇ ವಿಷಯನೆಂತಲೂ, ಮೋಕ್ಷ ಮತ್ತು ರಾಕ್ಷಸೋಪದ್ರವ ಪರಿಹಾರವೇ ಪ್ರಯೋಜನವೆಂತಲೂ, ಮನ್ವಾದಿಗಳೇ ಅಧಿಕಾರಿಗಳೆಂತಲೂ ಸಿದ್ಧವಾಯಿತು. ಅವುಗಳಿಗೆ ಸಂಬಂಧವು ಯಥಾಯೋಗ್ಯವಾಗಿ ಊಹಿಸಬೇಕಾದುದರಿಂದ ವಿಷಯ ಪ್ರಯೋಜನಾಧಿಕಾರಿ ಸಂಬಂಧ ಚತುಷ್ಟಯವು ಹೇಳಲ್ಪಟ್ಟಿತು.

**ಮಂ || ಈಶಾವಾಸ್ಯಮಿದꣳ ಸರ್ವಂ ಯತ್ಕಿಂಚ ಜಗತ್ಯಾಂ ಜಗತ್ |**
**ತೇನ ತ್ಯಕ್ತೇನ ಭುಂಜೀಥಾ ಮಾ ಗೃಧಃ ಕಸ್ಯಸ್ವಿದ್ಧನಂ || ೧ ||**

ಅ || ಯತ್ಕಿಂಚ=ಯಾವದೊಂದು, ಇದಂ=ಈ, ಜಗತ್=ಪ್ರಪಂಚವು, ಈಶಾವಾಸ್ಯಂ=ಶ್ರೀಪರಮಾತ್ಮನ ಆವಾಸಕ್ಕೆ ಯೋಗ್ಯವು, ಇದಂ ಸರ್ವಂ=ಈ ಸಮಸ್ತ ಪ್ರಪಂಚವೂ, ಜಗತ್ಯಾಂ=ಪ್ರಕೃತಿಯಲ್ಲಿ (ಆಶ್ರಯಿಸಿಕೊಂಡಿದೆ), ತೇನ=ಆ ಕಾರಣದಿಂದ, (ತೇನ=

ಪರಮಾತ್ಮನಿಂದ), ತ್ಯಕ್ತೇನ=ಕೊಡಲ್ಪಟ್ಟ ದ್ರವ್ಯದಿಂದ, ಭುಂಜೀಥಾಃ=ಭೋಗಿಸು, ಕಸ್ಯ ಸ್ವಿತ್=ಯಾವನೊಬ್ಬ ರಾಜಾದಿಗಳ ದೆಸೆಯಿಂದ, ಧನಂ=ದ್ರವ್ಯವನ್ನು, ಮಾಗೃಧಃ=ಇಚ್ಛಿಸಬೇಡ.

ಭಾ॥ ಈಶಸ್ಯಾವಾಸಯೋಗ್ಯಮೀಶಾವಾಸ್ಯಂ । ಜಗತ್ಯಾಂ ಪ್ರಕೃತೌ ।
ತೇನ ಈಶೇನ ತ್ಯಕ್ತೇನ ದತ್ತೇನ ಭುಂಜೀಥಾಃ ।
"ಸ್ವತಃ ಪ್ರವೃತ್ತ್ಯಶಕ್ತತ್ವಾದೀಶಾವಾಸ್ಯಮಿದಂ ಜಗತ್ ।
ಪ್ರವೃತ್ತಯೇ ಪ್ರಕೃತಿಗಂ ಯಸ್ಮಾತ್ಸ ಪ್ರಕೃತೀಶ್ವರಃ ।
ತದಧೀನಪ್ರವೃತ್ತಿತ್ವಾತ್ತದೀಯಂ ಸರ್ವಮೇವ ಯತ್ ।
ತದ್ದತ್ತೇನೈವ ಭುಂಜೀಥಾ ಅತೋ ನಾನ್ಯಂ ಪ್ರಯಾಚಯೇತ್ ॥"

- ಇತಿ ಬ್ರಹ್ಮಾಂಡೇ.

ಅ॥ ಈಶಸ್ಯ=ಶ್ರೀಪರಮಾತ್ಮನಿಗೆ, ಆವಾಸಯೋಗ್ಯಂ=ಆವಾಸಮಾಡಲಿಕ್ಕೆ ಯೋಗ್ಯವು. (ಆದುದರಿಂದ) ಈಶಾವಾಸ್ಯಂ, ಜಗತ್ಯಾಂ=ಪ್ರಕೃತೌ=ಪ್ರಕೃತಿಗೆ ಅಭಿಮಾನಿಯಾದ ಮಹಾಲಕ್ಷ್ಮೀ ದೇವಿಯಲ್ಲಿ, ತೇನ=ಈಶೇನ=ಪರಮಾತ್ಮನಿಂದ, ತ್ಯಕ್ತೇನ=ದತ್ತೇನ=ಕೊಡಲ್ಪಟ್ಟ, ಭುಂಜೀಥಾಃ= ಭೋಗಿಸಿಕೊಂಡು ಇರು, ಇದಂ ಜಗತ್=ಈ ಪ್ರಪಂಚವು, ಸ್ವತಃ=ತಾನಾಗಿ, ಪ್ರವೃತ್ತ್ಯಶಕ್ತತ್ವಾತ್, ಪ್ರವೃತ್ತಿ=ಕೆಲಸಮಾಡುವದರಲ್ಲಿ, ಅಶಕ್ತತ್ವಾತ್=ಶಕ್ತಿಯಿಲ್ಲದಿರುವುದರಿಂದ, ಈಶಾವಾಸ್ಯಂ=ಶ್ರೀ ಪರಮಾತ್ಮನ ಆವಾಸಕ್ಕೆ ಯೋಗ್ಯವಾದುದು, ಯಸ್ಮಾತ್=ಯಾವ ಕಾರಣದಿಂದ, ಇದಂ=ಈ ಪ್ರಪಂಚವು, ಪ್ರಕೃತಿಗಂ=ಲಕ್ಷ್ಮೀದೇವಿಯಲ್ಲಿ ವಿದ್ಯಮಾನವಾಗಿಯದೋ, ಯತ್ = ಯಾವ ಕಾರಣದಿಂದ, ಸಃ=ಶ್ರೀಪರಮಾತ್ಮನು, ಪ್ರಕೃತೀಶ್ವರಃ=ಲಕ್ಷ್ಮೀದೇವಿಗೂ ಸ್ವಾಮಿಯೋ, ತದಧೀನ ಪ್ರವೃತ್ತಿತ್ವಾತ್, ತತ್=ಆ ಪರಮಾತ್ಮನ, ಅಧೀನ=ವಿಧೇಯವಾದ, ಪ್ರವೃತ್ತಿತ್ವಾತ್= ಚೇಷ್ಟೆವುಳ್ಳದ್ದಾದುದರಿಂದ, ಸರ್ವಂ=ಸಮಸ್ತವೂ, ತದೀಯಮೇವ=ಶ್ರೀ ಪರಮಾತ್ಮನದ್ದೇ ಸರಿ, ತತ್ ದತ್ತೇನೈವ=ಅವನಿಂದ ಕೊಡಲ್ಪಟ್ಟ ದ್ರವ್ಯದಿಂದಲೇವೇ, ಭುಂಜೀಥಾಃ=ಭೋಗಿಸು, ಅತಃ= ಪರಮಾತ್ಮನಿಂದ, ಅನ್ಯಂ=ಬೇರೆಯವನನ್ನು, ನಪ್ರಯಾಚಯೇತ್=ಬೇಡಬಾರದು. ಇತಿ=ಹೀಗೆ, ಬ್ರಹ್ಮಾಂಡೇ=ಬ್ರಹ್ಮಾಂಡಪುರಾಣದಲ್ಲಿ ಹೇಳಲ್ಪಟ್ಟಿದೆ.

ತಾ॥ ಚೇತನಾಚೇತನಾತ್ಮಕನಾದ ಸಕಲ ಪ್ರಪಂಚವೂ ತಾನಾಗಿಯೆ ಒಂದು ಕಾರ್ಯವನ್ನು ಮಾಡಲು ಸಮರ್ಥವಾಗಿರುವುದಿಲ್ಲ. ಆದುದರಿಂದ ಅವುಗಳಿಗೆ ಪ್ರವೃತ್ತಿಯುಂಟಾಗುವದಕ್ಕಾಗಿ ಸರ್ವನಿಯಾಮಕನಾದ ಶ್ರೀಪರಮಾತ್ಮನು ಅವುಗಳನ್ನು ಪ್ರವೇಶಿಸಿ ಅವುಗಳಿಗೆ ಪ್ರವೃತ್ತಿ ಶಕ್ತಿಯನ್ನು ಕೊಡುತ್ತಾನೆ. ಮತ್ತು ಈಸಮಸ್ತ ಜಗತ್ತು ತನ್ನ ಮೂಲಕಾರಣವಾದ ಪ್ರಕೃತಿಯನ್ನು ಆಶ್ರಯಿಸಿಕೊಂಡಿದೆ. ಆ ಪ್ರಕೃತಿಯು ಪರಮಾತ್ಮನಾಧೀನವೇ ಆದುದರಿಂದ ಶ್ರೀ ಪರಮಾತ್ಮನೇ ಈ ಸಮಸ್ತ ಜಗತ್ತಿಗೆ ಸ್ವತಂತ್ರ ನಿಯಾಮಕನು, ಆದುದರಿಂದ ಆ ಶ್ರೀಪರ ಮಾತ್ಮನ ಪ್ರೇರಣೆಯಿಂದ ಲಭಿಸತಕ್ಕ ಧನದಿಂದಲೇ ಭೋಗಿಸಬೇಕಲ್ಲದೆ ಧನಕ್ಕೆ ನಿಜವಾಗಿ ಸ್ವಾಮಿಗಳಲ್ಲದ ರಾಜಾದಿಗಳ ಕಡೆಯಿಂದ ಧನವನ್ನು ಬೇಡಬಾರದು. ॥ ೧ ॥

**ಮಂ ॥ ಕುರ್ವನ್ನೇವೇಹ ಕರ್ಮಾಣಿ ಜಿಜೀವಿಷೇಚ್ಛತಂ ಸಮಾಃ ॥**
**ಏವಂ ತ್ವಯಿ ನಾನ್ಯಥೇತೋಽಸ್ತಿ ನ ಕರ್ಮ ಲಿಪ್ಯತೇ ನರೇ ॥ ೨ ॥**

ಅ॥ ಶತಂ ಸಮಾಃ=ನೂರುವರ್ಷ ಪರ್ಯಂತ, (ಯತ್=ಯಾವ ಚೇತನವರ್ಗವು) ಇಹ=ಮಾನುಷಜನ್ಮದಲ್ಲಿ, ಜಿಜೀವಿಷೇತ್=ಬದುಕುವದಕ್ಕಾಗಿಚ್ಛಿಸುವದೋ, ತತ್=ಆ ಸಮು

ದಾಯುವು, ಕರ್ಮಾಣಿ=ಪ್ರತಿಭಾರಹಿತ ಭಗವತ್ಪೂಜಾತ್ಮಕವಾದ ಸ್ವೋಚಿತ ಕರ್ಮ ಗಳನ್ನು, ಕುರ್ವನ್ನೇವ=ಮಾಡಿಕೊಂಡೇ ಇರಬೇಕು. ಏವಂ=ಈ ಪ್ರಕಾರವಾಗಿ, ಕರ್ಮಾಣಿ= ಕರ್ಮಗಳನ್ನು, ಕುರ್ವತಿ=ಮಾಡಿಕೊಂಡಿರತಕ್ಕ, ನರೇ=ಕೇವಲ ಮನುಷ್ಯನಾದ, ತ್ವಯಿ= ನಿನ್ನಲ್ಲಿ, ಕರ್ಮ=ಪಾಪಕರ್ಮವು, ನ ಲಿಪ್ಯತೇ=ಲೇಪಿಸುವುದಿಲ್ಲ, ಇತಃ=ಕರ್ಮ ಮಾಡುವುದ ರಿಂದ, ಅನ್ಯಥಾ=ಕರ್ಮಾಚರಣೆಯಿಲ್ಲದಿದ್ದರೆ, ಕರ್ಮ=ಪಾಪಕರ್ಮವು, ನೇತಿ=ಇಲ್ಲವೆಂಬುದು, ನಾಸ್ತಿ=ಇಲ್ಲ, (ಪಾಪಕರ್ಮಲೇಪವು ಆಗಿಯೇ ಆಗುತ್ತದೆ.)

**ಭಾ ||** ಅಕುರ್ವತಃ ಕರ್ಮ ನ ಲಿಪ್ಯತ ಇತಿ ನಾಸ್ತಿ.

**ಅ ||** ಕರ್ಮ ಮಾಡದೇ ಇದ್ದವನಿಗೆ ಕರ್ಮಲೇಪವು ಇಲ್ಲವೆಂದಿಲ್ಲ—ಅಂದರೆ ವಿಹಿತ ಕರ್ಮ ಬಿಟ್ಟವನಿಗೆ ದೋಷ ಉಂಟೆಂದರ್ಥ.

**ಭಾ ||** "ಅಜ್ಞಸ್ಯ ಕರ್ಮ ಲಿಪ್ಯೇತ ಕೃಷ್ಣೋಪಾಸ್ತಿಮಕುರ್ವತಃ |
ಜ್ಞಾನಿನೋಽಪಿ ಯತೋ ಹ್ರಾಸ ಆನಂದಸ್ಯ ಭವೇದ್ಧ್ರುವಂ |
ಅತೋಽಲೇಪೇಽಪಿ ಲೇಪಸ್ಸ್ಯಾದತಃ ಕಾರ್ಯೈವ ಸಾ ಸದಾ |"
- ಇತಿ ನಾರದೀಯೇ || ೨ ||

**ಅ ||** ಕೃಷ್ಣೋಪಾಸ್ತಿಂ=ಕೃಷ್ಣ=ಶ್ರೀಪರಮಾತ್ಮನ, ಉಪಾಸ್ತಿಂ=ಸೇವೆಯನ್ನು, ಅಕು ರ್ವತಃ=ಮಾಡದಿರುವ, ಅಜ್ಞಸ್ಯ=ಅಜ್ಞಾನಿಗೂ, ಕರ್ಮ=ಪಾಪವು, ಲಿಪ್ಯೇತ=ಲೇಪಿಸುತ್ತದೆ, ಯತಃ=ಯಾವ ಕಾರಣದಿಂದ, ಜ್ಞಾನಿನೋಽಪಿ=ಅಪರೋಕ್ಷ ಜ್ಞಾನಿಗೂ, ಆನಂದಸ್ಯ=ಸುಖಕ್ಕೆ, ಹ್ರಾಸಃ=ನ್ಯೂನತೆಯು, ಧ್ರುವಂ=ನಿಶ್ಚಯವಾಗಿ, ಭವೇತ್=ಆಗುತ್ತದೋ, ಅತಃ=ಆ ಕಾರಣ ದಿಂದ, ಅಲೇಪೇಽಪಿ=ಲೇಪವಿಲ್ಲದೆಯಿದ್ದರೂ, ಲೇಪಃ=ಸಂಬಂಧವು, ಸ್ಯಾತ್=ಆಗುತ್ತದೆ, ಅತಃ= ಆ ಕಾರಣದಿಂದ, ಸಾ=ಕೃಷ್ಣಪೂಜಾರೂಪ ಸೇವೆಯು, ಸದಾ=ಸರ್ವಕಾಲದಲ್ಲಿ, ಕಾರ್ಯೈವ= ಮಾಡತಕ್ಕದ್ದೇ ಸರಿ, ಇತಿ=ಹೀಗೆ, ನಾರದೀಯೇ=ನಾರದೀಯ ಪುರಾಣದಲ್ಲಿ ಹೇಳಿದೆ. || ೨ ||

**ಮಂ ||** **ಅಸುರ್ಯಾ ನಾಮ ತೇ ಲೋಕಾ ಅಂಧೇನ ತಮಸಾವೃತಾಃ |**
**ತಾಂಸ್ತೇ ಪ್ರೇತ್ಯಾಭಿಗಚ್ಛಂತಿ ಯೇ ಕೇ ಚಾತ್ಮಹನೋ ಜನಾಃ || ೩ ||**

**ಅ ||** ಅಸುರ್ಯಾಃ=ಮಹಾ ದುಃಖಪ್ರದಗಳಾದ, ಅಂಧೇನ ತಮಸಾ=ಗಾಢಾಂಧಕಾರ ದಿಂದ, ಆವೃತಾಃ=ಆವರಿಸಿಕೊಂಡಿರುವ, ತೇ=ಪ್ರಸಿದ್ಧಗಳಾದ, ಲೋಕಾಃ=ಸ್ಥಾನಗಳೋ, ತಾನ್=ಆ ಸ್ಥಾನವಿಶೇಷಗಳನ್ನು, ಆತ್ಮಹನಃ=ಪರಮಾತ್ಮನನ್ನು ಇದ್ದಹಾಗೆ ತಿಳಿದುಕೊಳ್ಳದೆ ವಿಪರೀತವಾಗಿ ತಿಳಿದುಕೊಂಡವರು, ಯೇ ಕೇ ಚ ಜನಾಃ=ಯಾವ ಪುರುಷರೋ, ತೇ=ಅವರು, ಪ್ರೇತ್ಯ=ಮೃತರಾದ ಮೇಲೆ, ಅಭಿಗಚ್ಛಂತಿ=ಹೊಂದುತ್ತಾರೆ, ನಾಮ=ನಿಶ್ಚಯ.

**ಭಾ ||** ಸುಷ್ಠು ರಮಣ ವಿರುದ್ಧತ್ವಾದಸುರಾಣಾಂ ಪ್ರಾಪ್ಯತ್ವಾಚ್ಚಾಸುರ್ಯಾಃ |
ನ ಚ ರಮಂತ್ಯಹೋ ಅಸದುಪಾಸನಯಾತ್ಮಹನ ಇತ್ಯುಕ್ತತ್ವಾತ್ |
"ಮಹಾದುಃಖೈಕಹೇತುತ್ವಾತ್ಪ್ರಾಪ್ಯತ್ವಾದಸುರೈಸ್ತಥಾ |
ಅಸುರ್ಯಾ ನಾಮ ತೇ ಲೋಕಾಸ್ತಾನ್ಯಾಂತಿ ವಿಮುಖಾ ಹರೌ ||"
ಇತಿ ವಾಮನೇ || ಯೇಕೇ ಚೇತಿ ನಿಯಮ ಉಕ್ತಃ |
"ನಿಯಮೇನ ತಮೋ ಯಾಂತಿ ಸರ್ವೇಽಪಿ ವಿಮುಖಾ ಹರಾ" ವಿತಿಚ ||೩||

ಅ|| ಸುಷ್ಠು=ಸಮೀಚೀನವಾದ, ರಮಣ=ಸುಖಕ್ಕೆ, ವಿರುದ್ಧತ್ವಾತ್=ವಿರೋಧಿಯಾದುದರಿಂದಲೂ, ಅಸುರಾಣಾಂ=ದೈತ್ಯರಿಗೆ, ಪ್ರಾಪ್ಯತ್ವಾತ್=ಹೊಂದಲಿಕ್ಕೆ ಯೋಗ್ಯವಾದುದರಿಂದಲೂ, ಅಸುರ್ಯಾಃ=ಅಸುರ್ಯಾ ಯೆಂತ ಪ್ರಸಿದ್ಧಗಳು.

ಹೀಗೆ ಅರ್ಥವೆಂಬುದಕ್ಕೆ ಭಾಗವತ ದಶಮಸ್ಕಂಧದಲ್ಲಿ ಶ್ರುತಿಗೀತೆಯ ವಚನವನ್ನುದಾಹರಿಸುತ್ತಾರೆ.

ಅ|| ಆತ್ಮಹನಃ=ಪರಮಾತ್ಮಹಂತೃಗಳು ಅಂದರೆ ಇದ್ದಹಾಗೆ ತಿಳಿದುಕೊಳ್ಳದೆ ವಿಪರೀತವಾಗಿ ತಿಳಿದುಕೊಂಡಿರುವವರು, ಅಸದುಪಾಸನಯಾ=ಅವಿದ್ಯಮಾನೋಪಾಸನೆಯಿಂದ, ನ ಚ ರಮಂತಿ=ಸುಖಪಡೆಯುವುದಿಲ್ಲ, ಚಶಬ್ದದಿಂದ ಮಹಾದುಃಖವನ್ನೇ ಅನುಭವಿಸುತ್ತಾರೆಂಬ ಅರ್ಥವು.

ಅ|| ಮಹಾದುಃಖೈಕಹೇತುತ್ವಾತ್, ಮಹತ್=ಅಪರಿಮಿತವಾದ, ದುಃಖ=ಕಷ್ಟಕ್ಕೆ, ಏಕ=ಮುಖ್ಯವಾಗಿ, ಹೇತುತ್ವಾತ್=ಕಾರಣವಾಗಿರುವದರಿಂದ, ತಥಾ=ಹಾಗೆ, ಅಸುರೈಃ=ದೈತ್ಯರಿಂದ, ಪ್ರಾಪ್ಯತ್ವಾತ್=ಹೊಂದಲಿಕ್ಕೆ ಯೋಗ್ಯವಾದುದರಿಂದ, ಅಸುರ್ಯಾಃ=ಅಸುರ್ಯಾ ಎಂತ ಪ್ರಸಿದ್ಧಗಳಾದ, ತೇ=ಯಾವ, ಲೋಕಾಃ=ಸ್ಥಾನಗಳೋ, ತಾನ್=ಆ ಸ್ಥಾನಗಳನ್ನು ಕುರಿತು, ಹರೌ=ಶ್ರೀ ಪರಮಾತ್ಮನಲ್ಲಿ, ವಿಮುಖಾಃ=ದ್ವೇಷಿಗಳು, ಯಾಂತಿ=ಹೋಗುತ್ತಾರೇ ಇತಿ=ಈ ಪ್ರಕಾರ, ವಾಮನೇ=ವಾಮನಪುರಾಣದಲ್ಲಿ (ಹೇಳಿಯದೆ.) ಈ ಮಂತ್ರದಲ್ಲಿ ಯೇಕೇ ಚ-ಎಂಬ ಪದದಿಂದ, ನಿಯಮಃ=ನಿಯಮವು, ಉಕ್ತಃ=ಹೇಳಲ್ಪಟ್ಟಿತು (ಎಂಬ ಅರ್ಥವನ್ನು ಪ್ರಮಾಣೋದಾಹರಣೆಯಿಂದ ದೃಢೀಕರಿಸುತ್ತಾರೆ.)

ಅ|| ನಿಯಮೇನ=ನಿಶ್ಚಯವಾಗಿ, ಹರೌ=ಶ್ರೀಪರಮಾತ್ಮನಲ್ಲಿ, ವಿಮುಖಾಃ=ದ್ವೇಷಿಗಳಾದ, ಸರ್ವೇಽಪಿ=ಸಮಸ್ತರೂ, ತಮಃ=ಅಂಧಂತಮಸ್ಸನ್ನು, ಯಾಂತಿ=ಹೊಂದುತ್ತಾರೆ, ಇತಿ ಚ=ಮತ್ತು.

ತಾ|| ಸುಖಕ್ಕೆ ವಿರುದ್ಧವಾಗಿ ಮಹಾದುಃಖಕ್ಕೆ ಕಾರಣವಾದುದರಿಂದಲೂ ಅಸುರರಿಂದ ಹೊಂದಲ್ಪಡುವುದಾದುದರಿಂದಲೂ ಅಸುರ್ಯವೆಂದು ಪ್ರಸಿದ್ಧಗಳಾದ ಗಾಢಾಂಧಕಾರದಿಂದ ವ್ಯಾಪ್ತವಾದ ಲೋಕಗಳನ್ನು ಸರಿಯಾಗಿ ಶ್ರೀಪರಮಾತ್ಮಸ್ವರೂಪವನ್ನು ತಿಳಿಯದೆ ಅನ್ಯಥೋಪಾಸನೆ ಮಾಡುವುದರಿಂದ ಆತ್ಮಹಂತೃಗಳೆನ್ನಿಸಿಕೊಳ್ಳುವ ಜನರೆಲ್ಲರೂ ನಿಯಮದಿಂದ ಹೊಂದುತ್ತಾರೆ, ಎಂಬ ಅರ್ಥವು ಭಾಗವತ ಶ್ರುತಿಗೀತಾ ವಾಮನಪುರಾಣೋದಾಹರಣ ಪೂರ್ವಕವಾಗಿ ನಿರೂಪಿತವಾಗಿಯದೆ ॥ ೩ ॥

**ಮಂ ॥ ಅನೇಜದೇಕಂ ಮನಸೋ ಜವೀಯೋ ನೈನದ್ದೇವಾ ಆಪ್ನುವನ್ಪೂರ್ವಮರ್ಷತ್ ।**
**ತದ್ಧಾವತೋಽನ್ಯಾನತ್ಯೇತಿತಿಷ್ಠತ್ತಸ್ಮಿನ್ನಪೋ ಮಾತರಿಶ್ವಾದಧಾತಿ॥೪॥**

ಅ|| ತತ್=ಪರಮಾತ್ಮಸ್ವರೂಪವು, ಅನೇಜತ್=ಭಯರಹಿತವಾದದ್ದು, ಏಕಂ=ಪ್ರಧಾನವಾದದ್ದು, ಮನಸಃ=ಮನಸ್ಸಿನಿಂದಲೂ, ಜವೀಯಃ=ಅತಿವೇಗವುಳ್ಳದ್ದು, ಏನತ್=ಈ ಪರಮಾತ್ಮಸ್ವರೂಪವನ್ನು, ದೇವಾಃ=ದೇವತೆಗಳು, ನಾಪ್ನುವನ್=ಸಂಪೂರ್ಣವಾಗಿ ತಿಳಿಯಲಿಲ್ಲ, ತತ್=ಪರಬ್ರಹ್ಮನು, ಪೂರ್ವಂ=ಅನಾದಿಕಾಲದಿಂದ, ಅರ್ಷತ್=ತಿಳಿದಿದ್ದಾನೆ, ತತ್=ಆ ಪರಬ್ರಹ್ಮನು, ತಿಷ್ಠತ್=ಒಂದು ಕಡೆಯಲ್ಲಿದ್ದುಕೊಂಡೇ, ಧಾವತಃ=ಓಡತಕ್ಕ, ಅನ್ಯಾನ್=ಇತರ ಜನರನ್ನು, ಅತ್ಯೇತಿ=ಅತಿಕ್ರಮಿಸಿಕೊಂಡಿದ್ದಾನೆ, ತಸ್ಮಿನ್=

ಆ ಪರಮಾತ್ಮನಲ್ಲಿ, ಮಾತರಿಶ್ವಾ=ವಾಯುದೇವರು, ಅಪಃ=ಕರ್ಮಗಳನ್ನು, ದಧಾತಿ=ಸಮರ್ಪಿಸುತ್ತಾರೆ.

ಭಾ || "ಅನೇಜನ್ನಿರ್ಭಯತ್ವಾತ್ತದೇಕಂ ಪ್ರಾಧಾನ್ಯತಸ್ತಥಾ |
ಸಮ್ಯಗ್ಜ್ಞಾತುಮಶಕ್ಯತ್ವಾದಗಮ್ಯಂ ತತ್ಸುರೈರಪಿ |
ಸ್ವಯಂ ತು ಸರ್ವಾನಗಮತ್ಪೂರ್ವಮೇವ ಸ್ವಭಾವತಃ |
ಅಚಿಂತ್ಯಶಕ್ತಿತಶ್ಚೈವ ಸರ್ವಗತ್ವಾಚ್ಚ ತತ್ಪರಂ |
ದ್ರವತೋಽತ್ಯೇತಿ ಸಂತಿಷ್ಠತ್ತಸ್ಮಿನ್ಕರ್ಮಾಣ್ಯಧಾನ್ಮರುತ್ ||
ಮಾರುತ್ಯೇವ ಯತಶ್ಚೇಷ್ಟಾ ಸರ್ವಾ ತಾಂ ಹರಯೇಽರ್ಪಯೇತ್" ||
- ಇತಿ ಬ್ರಹ್ಮಾಂಡೇ || ಋಷ ಜ್ಞಾನೇ ||೪||

ಅ || ತತ್=ಪರಬ್ರಹ್ಮಸ್ವರೂಪವು, ನಿರ್ಭಯತ್ವಾತ್=ಭಯರಹಿತವಾದುದರಿಂದ, ಅನೇಜತ್=ಕಂಪಿಸುವದಿಲ್ಲ, ತಥಾ=ಹಾಗೆ, ಪ್ರಾಧಾನ್ಯತಃ=ಮುಖ್ಯವಾದುದರಿಂದ, ಏಕಂ=ಶ್ರೇಷ್ಠವಾಗಿದೆ, ತತ್=ಆಸ್ವರೂಪವು, ಸಮ್ಯಕ್=ಚನ್ನಾಗಿ, ಜ್ಞಾತುಂ=ತಿಳಿಯುವುದಕ್ಕೆ, ಅಶಕ್ಯತ್ವಾತ್=ಶಕ್ಯವಾಗದೆ ಇರುವುದರಿಂದ, ಸುರೈರಪಿ=ದೇವತೆಗಳಿಂದಲೂ, ಅಗಮ್ಯಂ=ಸಂಪೂರ್ಣ ತಿಳಿಯಲಿಕ್ಕೆ ಅಸಾಧ್ಯವು, ಸ್ವಯಂ ತು=ತಾನಾದರೂ, ಸ್ವಭಾವತಃ=ತನ್ನ ಸ್ವಕೀಯ ಶಕ್ತಿಯಿಂದ, ಪೂರ್ವಮೇವ=ಮೊದಲಿನಿಂದಲೂ, ಸರ್ವಾನ್=ಸಮಸ್ತಗಳನ್ನು, ಅಗಮತ್=ತಿಳಿದಿದ್ದಾನೆ, ತತ್=ಆ ಪರಬ್ರಹ್ಮನು, ಅಚಿಂತ್ಯಶಕ್ತಿತಶ್ಚೈವ=ಅಚಿಂತ್ಯ=ಆಲೋಚಿಸಲಶಕ್ಯವಾದ, ಶಕ್ತಿತಶ್ಚೈವ=ಸಾಮರ್ಥ್ಯವಿರುವುದರಿಂದಲೂ, ಸರ್ವಗತ್ವಾಚ್ಚ=ಸರ್ವತ್ರ ವ್ಯಾಪಿಸಿಕೊಂಡಿರುವವನಾದುದರಿಂದಲೂ, ಸಂತಿಷ್ಠತ್=ಒಂದು ಕಡೆಯಲ್ಲಿದ್ದುಕೊಂಡೇ, ದ್ರವತಃ=ಓಡತಕ್ಕವರನ್ನು, ಅತ್ಯೇತಿ=ಮೀರಿಕೊಂಡಿದ್ದಾನೆ, ತಸ್ಮಿನ್=ಆ ಪರಮಾತ್ಮನಲ್ಲಿ, ಮರುತ್=ವಾಯುದೇವರು, ಕರ್ಮಾಣಿ=ಪುಣ್ಯಕರ್ಮಗಳನ್ನು, ಅಧಾತ್=ಸಮರ್ಪಿಸಿದನು, ಯತಃ=ಯಾವ ಕಾರಣದಿಂದ, ಸರ್ವಾ=ಸಮಸ್ತವಾದ, ಚೇಷ್ಟಾ=ವ್ಯಾಪಾರವು, ಮಾರುತ್ಯೇವ=ವಾಯುದೇವರ ಸಂಬಂಧಿಕವಾದದ್ದೇಯೋ, (ಅತಃ=ಆ ಕಾರಣದಿಂದ,) ತಾಂ=ಆಚೇಷ್ಟೆಯನ್ನು, ಹರಯೇ=ಶ್ರೀಪರಮಾತ್ಮನಿಗೋಸ್ಕರ, ಅರ್ಪಯೇತ್=ಸಮರ್ಪಿಸಬೇಕು, ಇತಿ=ಹೀಗೆಂದು, ಬ್ರಹ್ಮಾಂಡೇ=ಬ್ರಹ್ಮಾಂಡಪುರಾಣದಲ್ಲಿ ಹೇಳಿಯದೆ.

ತಾ || ಇಲ್ಲಿ ಅರ್ಷತ್-ಎಂಬುದು "ಋಷ=ಜ್ಞಾನೇ" ಎಂಬ ಧಾತು ವ್ಯಾಖ್ಯಾನದಿಂದ ಜ್ಞಾನವೆಂಬ ಅರ್ಥವುಳ್ಳದ್ದು. || ೪ ||

**ಮಂ || ತದೇಜತಿ ತನ್ನೇಜತಿ ತದ್ದೂರೇ ತದ್ವಂತಿಕೇ |**
**ತದಂತರಸ್ಯ ಸರ್ವಸ್ಯ ತದು ಸರ್ವಸ್ಯ ಬಾಹ್ಯತಃ || ೫ ||**

ಅ || ಜಗತ್=ಪ್ರಪಂಚವು, ತತ್=ಪರಮಾತ್ಮನ ದೆಸೆಯಿಂದ, ಏಜತಿ=ಹೆದರಿಕೊಂಡಿದೆ, ತತ್=ಆ ಪರಬ್ರಹ್ಮನು, ನೇಜತಿ=ಹೆದರುವದಿಲ್ಲ, ತದು=(ತತ್, ಉ,) ಪರಬ್ರಹ್ಮನೇ, ದೂರೇ=ದೂರದೇಶದಲ್ಲಿದ್ದಾನೆ, ತದು=(ತತ್, ಉ,) ಅವನೇ, ಅಂತಿಕೇ=ಸಮೀಪದಲ್ಲಿಯೂ ಇದ್ದಾನೆ, ತತ್=ಆ ಪರಬ್ರಹ್ಮನು, ಅಸ್ಯ=ಈ ಲೋಕದ, ಅಂತಃ=ಒಳಗೆ ಇದ್ದಾನೆ, ತದು=(ತತ್, ಉ,) ಅವನೇ ಸರ್ವಸ್ಯ=ಸಮಸ್ತ ಪ್ರಪಂಚದ, ಬಾಹ್ಯತಃ=ಹೊರಗೂ ಇದ್ದಾನೆ.

**ಭಾ ॥** ತದೇಜತಿ ತತ ಏವ ಏಜತ್ಯನ್ಯತ್ । ತತ್ ಸ್ವಯಂ ನೇಜತಿ ।
"ತತೋ ಬಿಭೇತಿ ಸರ್ವೋऽಪಿ ನ ಬಿಭೇತಿ ಹರಿಃ ಸ್ವಯಂ ।
ಸರ್ವಗತ್ವಾತ್ಸದೂರೇ ಚ ಬಾಹ್ಯೇऽಂತಶ್ಚ ಸಮೀಪತಃ(ಗ) ॥"
- ಇತಿ ತತ್ತ್ವಸಂಹಿತಾಯಾಂ

**ಅ ॥** ತದೇಜತಿ=ತತ, ಏವ = ಆ ಪರಬ್ರಹ್ಮನ ದೆಸೆಯಿಂದಲೇ, ಅನ್ಯತ್=ಇತರವಾದ ಪ್ರಪಂಚವು, ಏಜತಿ=ಹೆದರುತ್ತದೆ, ತತ್=ಆ ಪರಬ್ರಹ್ಮನು, ಸ್ವಯಂ=ತಾನು, ನೇಜತಿ=ಹೆದರುವದಿಲ್ಲ, ಸರ್ವೋऽಪಿ=ಸಮಸ್ತ ಲೋಕವು, ತತಃ=ಆ ಪರಮಾತ್ಮನ ದೆಸೆಯಿಂದ, ಬಿಭೇತಿ=ಹೆದರಿಕೊಂಡಿದೆ, ಹರಿಃ=ಹರಿಯು, ಸ್ವಯಂ=ತಾನು, ನ ಬಿಭೇತಿ=ಹೆದರುವದಿಲ್ಲ, ಸರ್ವಗತ್ವಾತ್=ಎಲ್ಲ ಕಡೆಯಲ್ಲಿಯೂ ವ್ಯಾಪಿಸಿಕೊಂಡಿರುವವನಾದುದರಿಂದ,ಸಃ=ಆ ಪರಮಾತ್ಮನು, ದೂರೇ=ದೂರದೇಶದಲ್ಲಿಯೂ, ಸಮೀಪತಃ=ಹತ್ತಿರದಲ್ಲಿಯೂ, ಬಾಹ್ಯೇ=ಹೊರಗೂ, ಅಂತಶ್ಚ=ಒಳಗೂ ಇದ್ದಾನೆ, ಇತಿ=ಹೀಗೆಂದು, ತತ್ತ್ವಸಂಹಿತಾಯಾಂ "ತತ್ತ್ವಸಂಹಿತಾ" ಎಂಬ ಪಂಚರಾತ್ರೈಕ ದೇಶದಲ್ಲಿ ಹೇಳಲ್ಪಟ್ಟಿದೆ. ॥ ೫ ॥

**ತಾ ॥** ಸಮಸ್ತ ಪ್ರಪಂಚವೂ ಶ್ರೀಪರಮಾತ್ಮನ ಅಧೀನವಾದುದರಿಂದ ಅವನಿಗೆ ಭಯಪಡುತ್ತದೆ. ಅವನು ಸ್ವತಂತ್ರನಾದುದರಿಂದ ಯಾರಿಗೂ ಹೆದರುವದಿಲ್ಲ. ಮತ್ತು ಸರ್ವದೇಶದಲ್ಲಿ ವ್ಯಾಪಿಸಿಕೊಂಡಿರುವದರಿಂದ ದ್ವೇಷಿಗಳಿಗೆ ದೂರದಲ್ಲಿಯೂ, ಭಕ್ತರಿಗೆ ಸಮೀಪದಲ್ಲಿಯೂ ಪ್ರೇರಕನಾಗಿ ಸಮಸ್ತ ಪ್ರಪಂಚದ ಒಳಗೂ ಹೊರಗೂ ವ್ಯಾಪಿಸಿಕೊಂಡು ಸಮಸ್ತ ಪುಣ್ಯಪಾಪಾದಿ ಕರ್ಮಗಳನ್ನು ಜೀವರಿಂದ ಮಾಡಿಸಿಕೊಂಡಿದ್ದಾನೆ. ॥ ೫ ॥ ಈ ರೀತಿಯಾಗಿ ತಿಳಿದವನಿಗೆ ಆಗುವ ಫಲವು ಮುಂದಿನ ಎರಡು ಮಂತ್ರಗಳಲ್ಲಿ ನಿರೂಪಿಸಲ್ಪಡುತ್ತದೆ.

**ಮಂ ॥ ಯಸ್ತು ಸರ್ವಾಣಿ ಭೂತಾನ್ಯಾತ್ಮನ್ಯೇವಾನುಪಶ್ಯತಿ ।**
**ಸರ್ವಭೂತೇಷು ಚಾತ್ಮಾನಂ ತತೋ ನ ವಿಜುಗುಪ್ಸತೇ ॥ ೬ ॥**

**ಅ ॥** ಸರ್ವಾಣಿ=ಸಮಸ್ತಗಳಾದ, ಭೂತಾನಿ=ಪ್ರಾಣಿಗಳು, ಆತ್ಮನ್ಯೇವ=ಶ್ರೀ ಪರಮಾತ್ಮನಲ್ಲಿಯೇ, (ಸಂತೀತಿ=ಆಶ್ರಯಿಸಿಕೊಂಡಿವೆ ಇಂತೆಂದು,) ಸರ್ವಭೂತೇಷು ಚ=ಸಮಸ್ತ ಪ್ರಾಣಿಗಳಲ್ಲಿಯೂ, (ಸ್ಥಿತಂ=ನಿಯಾಮಕನಾಗಿರುವ,) ಆತ್ಮಾನಂ=ಶ್ರೀ ಪರಮಾತ್ಮನನ್ನು, ಯಃ=ಯಾವಾತನು, ಅನು=ನಿಸ್ಸಂದೇಹವಾಗಿ, ಪಶ್ಯತಿ=ತಿಳಿಯುತ್ತಾನೋ, ಸಃ=ಆ ಮನುಷ್ಯನು, ತತಃ=ಆ ಪರಮಾತ್ಮಸ್ವರೂಪ ಜ್ಞಾನಿಯಾದುದರಿಂದ, ನ ವಿಜುಗುಪ್ಸತೇ=ತನ್ನನ್ನು ರಕ್ಷಿಸಿ ಕೊಳ್ಳುವುದಕ್ಕಾಗಿ ಇಚ್ಛಿಸುವುದಿಲ್ಲ. ॥ ೨ ॥

**ಭಾ ॥** ಸರ್ವಗಂ ಪರಮಾತ್ಮಾನಂ ಸರ್ವಂಚ ಪರಮಾತ್ಮನಿ ।
ಯಃಪಶ್ಯೇತ್ಸಭಯಾಭಾವಾನ್ನಾತ್ಮಾನಂ ಗೋಪ್ತುಮಿಚ್ಛತಿ ।
- ಇತಿ ಸೌಕರಾಯಣ ಶ್ರುತಿಃ ॥೬॥

**ಅ ॥** ಸರ್ವಗಂ=ಸರ್ವತ್ರವಿರುವ, ಪರಮಾತ್ಮಾನಂ=ಶ್ರೀ ಪರಮಾತ್ಮನನ್ನು, ಸರ್ವಂ ಚ=ಸಮಸ್ತವನ್ನು, ಪರಮಾತ್ಮನಿ=ಶ್ರೀ ಪರಮಾನ್ಮನಲ್ಲಿ, ಯಃ=ಯಾವನು, ಪಶ್ಯೇತ್=ತಿಳಿಯುತ್ತಾನೋ, ಸಃ=ಅವನು, ಭಯಾಭಾವಾತ್=ಹೆದರಿಕೆ ಯಿಲ್ಲದಿರುವದರಿಂದ, ಆತ್ಮಾನಂ=ತನ್ನನ್ನು, ಗೋಪ್ತುಂ=ರಕ್ಷಿಸಿ ಕೊಳ್ಳುವದಕ್ಕಾಗಿ, ನೇಚ್ಛತಿ=ಇಚ್ಛಿಸುವದಿಲ್ಲ, ಇತಿ=ಹೀಗೆಂದು, ಸೌಕರಾಯಣ ಶ್ರುತಿಯು ॥ ೬ ॥

**ಮಂ ॥ ಯಸ್ಮಿನ್ಸರ್ವಾಣಿ ಭೂತಾನ್ಯಾತ್ಮೈವಾಭೂದ್ವಿಜಾನತಃ ।**
**ತತ್ರ ಕೋ ಮೋಹಃ ಕಶ್ಶೋಕ ಏಕತ್ವಮನುಪಶ್ಯತಃ ॥**

ಅ ॥ ಯಸ್ಮಿನ್=ಯಾವ ಪರಮಾತ್ಮನಲ್ಲಿ, ಸರ್ವಾಣಿ=ಸಮಸ್ತಗಳಾದ, ಭೂತಾನಿ=ಪ್ರಾಣಿಗಳು, (ತಿಷ್ಠಂತಿ=ಇರುತ್ತವೋ), (ಸಃ=ಅಂಥ), ಆತ್ಮೈವ=ಶ್ರೀಪರಮಾತ್ಮನೇ, ತತ್ರ=ಸಮಸ್ತ ಪ್ರಾಣಿಗಳಲ್ಲಿ, ಅಭೂತ್=ಇದ್ದಾನೆ, ಏವಂ=ಈ ಪ್ರಕಾರವಾಗಿ, ವಿಜಾನತಃ=ಚೆನ್ನಾಗಿ ತಿಳಿಯುವವನಿಗೆ, (ತಥಾ=ಹಾಗೆ) ಏಕತ್ವಂಚ=ಐಕ್ಯವನ್ನು, ಅನುಪಶ್ಯತಃ=ತಿಳಿಯುವವನಿಗೆ, ಕೋ ಮೋಹಃ=ಏನು ಅಜ್ಞಾನವು? ಕಃ= ಯಾವ, ಶೋಕಃ = ದುಃಖವು? (ಯಾವದೂ ಇಲ್ಲ) ॥ ೭ ॥

ಭಾ ॥ ಯಸ್ಮಿನ್ಪರಮಾತ್ಮನಿ ಸರ್ವಭೂತಾನಿ । ಸ ಪರಮಾತ್ಮೈವ ತತ್ರ ಸರ್ವಭೂತೇಷ್ವಭೂತ್ ॥ ಏವಂ ಸರ್ವಭೂತೇಷ್ವೇಕತ್ವೇನ ಪರಮಾತ್ಮಾನಂ ವಿಜಾನತಃ ಕೋ ಮೋಹಃ ॥ "ಯಸ್ಮಿನ್ಸರ್ವಾಣಿ ಭೂತಾನಿ ಸ ಆತ್ಮಾ ಸರ್ವಭೂತಗಃ । ಏವಂ ಸರ್ವತ್ರ ಯೋ ವಿಷ್ಣುಂ ಪಶ್ಯೇತ್ತಸ್ಯ ವಿಜಾನತಃ । ಕೋ ಮೋಹಃ ಕೋಽಥವಾ ಶೋಕಃ ಸ ವಿಷ್ಣುಂ ಪರ್ಯಗಾದ್ಯತ" -ಇತಿ ಪಿಪ್ಪಲಾದಶಾಖಾಯಾಂ.

ಪೂರ್ವೋಕ್ತಾನುವಾದೇನ ಶೋಕಮೋಹಾಭಾವೋಽಪಿ ವಿಜಾನತ
ಶ್ಚಾತ್ರೋಚ್ಯತೇ
ಅಭ್ಯಾಸಶ್ಚ ಸರ್ವಗತತ್ವಸ್ಯ ತಾತ್ಪರ್ಯದ್ಯೋತನಾಥ

ಅ ॥ ಯಸ್ಮಿನ್=ಯಾವ, ಪರಮಾತ್ಮನಿ=ಶ್ರೀ ಪರಮಾತ್ಮನಲ್ಲಿ, ಸರ್ವಭೂತಾನಿ=ಸಮಸ್ತ ಪ್ರಾಣಿಗಳೂ, (ತಿಷ್ಠಂತಿ=ಇರುತ್ತವೋ,) ಸಃ=ಅಂಥ, ಪರಮಾತ್ಮೈವ=ಶ್ರೀ ಪರಮಾತ್ಮನೇ, ತತ್ರ=ಆ, ಸರ್ವಭೂತೇಷು=ಸಮಸ್ತ ಪ್ರಾಣಿಗಳಲ್ಲಿ, ಅಭೂತ್=ಇದ್ದಾನೆ, ಏವಂ=ಈ ಪ್ರಕಾರವಾಗಿ, ಸರ್ವಭೂತೇಷು=ಸಮಸ್ತ ಪ್ರಾಣಿಗಳಲ್ಲಿ, (ಸ್ಥಿತಂ=ಇರುವ), ಪರಮಾತ್ಮಾನಂ=ಶ್ರೀಪರಮಾತ್ಮನನ್ನು, ಏಕತ್ವೇನ=ಒಬ್ಬನೇ ಆಗಿದ್ದಾನೆಂದು, ವಿಜಾನತಃ=ವಿಶೇಷವಾಗಿ ತಿಳಿಯುವವನಿಗೆ, ಕೋ ಮೋಹಃ=ಏನು ಅಜ್ಞಾನವು?

ಯಸ್ಮಿನ್=ಯಾವ ಪರಮಾತ್ಮನಲ್ಲಿ, ಸರ್ವಾಣಿ=ಸಮಸ್ತಗಳಾದ, ಭೂತಾನಿ=ಪ್ರಾಣಿಗಳು, (ತಿಷ್ಠಂತಿ=ಇರುವವೋ)ಸಃ=ಆ, ಆತ್ಮಾ=ಪರಮಾತ್ಮನು, ಸರ್ವಭೂತಗಃ,ಸರ್ವ=ಸಮಸ್ತಗಳಾದ, ಭೂತ=ಪ್ರಾಣಿಗಳಲ್ಲಿ, ಗಃ=ಇರುವವನು, ಏವಂ=ಈ ಪ್ರಕಾರವಾಗಿ, ಸರ್ವತ್ರ=ಸಮಸ್ತ ಪ್ರಾಣಿಗಳಲ್ಲಿ, (ಸ್ಥಿತಂ=ಇರುವ), ವಿಷ್ಣುಂ=ಶ್ರೀಪರಮಾತ್ಮನನ್ನು, ಯಃ=ಯಾವನು, ಪಶ್ಯೇತ್=ತಿಳಿಯುತ್ತಾನೋ, ಏವಂ=ಈ ಪ್ರಕಾರವಾಗಿ, ವಿಜಾನತಃ ತಸ್ಯ=ವಿಶೇಷವಾಗಿ ತಿಳಿದವನಿಗೆ, ಕಃ=ಯಾವ, ಶೋಕಃ=ದುಃಖವು? ಸಃ=ಆ ಯಾವಜ್ಞಾನಿಯು, ಯತಃ=ಯಾವ ಕಾರಣದಿಂದ, ವಿಷ್ಣುಂ=ಶ್ರೀಪರಮಾತ್ಮನನ್ನು, ಪರ್ಯಗಾತ್=ಚೆನ್ನಾಗಿ ಹೊಂದಿದ್ದಾನೊ, ಅತಃ=ಆ ಕಾರಣದಿಂದ ದುಃಖವಿಲ್ಲ, ಇತಿ=ಹೀಗೆಂದು, ಪಿಪ್ಪಲಾದಶಾಖಾಯಾಂ=ಪಿಪ್ಪಲಾದ ಶಾಖೆಯಲ್ಲಿ ॥ ೭ ॥

**(ಇಲ್ಲಿ ಎರಡು ಮಂತ್ರಗಳಿಗೂ ಸಮಾನಾರ್ಥವಾದರೂ ಪುನರುಕ್ತಿ ಬರುವದಿಲ್ಲವೆಂದು ಹೇಳುತ್ತಾರೆ)**

ಪೂರ್ವೋಕ್ತಾನುವಾದೇನ=ಪೂರ್ವ=ಮೊದಲನೆ ಮಂತ್ರದಲ್ಲಿ, ಉಕ್ತ=ಹೇಳಿದ ಅರ್ಥ ವನ್ನೇ, ಅನುವಾದೇನ = ಮತ್ತೊಮ್ಮೆ ಹೇಳಿದುದರಿಂದ, ಶೋಕಮೋಹಾಭಾವೋಽಪಿ =ಶೋಕ= ದುಃಖವು, ಮೋಹ=ಅಜ್ಞಾನವು, ಇವುಗಳ, ಅಭಾವೋಽಪಿ=ಇಲ್ಲದೆ ಇರುವದು, ವಿಜಾನತಶ್ಚ= ವಿಶೇಷವಾಗಿ ತಿಳಿದವನಿಗೆ, (ಏಳನೆಯ) ಈ ಮಂತ್ರದಲ್ಲಿ, ಉಚ್ಯತೆ=ಹೇಳಲ್ಪಡುತ್ತದೆ, ಆದುದ ರಿಂದ ಪುನರುಕ್ತಿರೂಪ ದೋಷವಿಲ್ಲ. ಇಲ್ಲಿ ಪುನರುಕ್ತಿ ಬಾರದೆ ಇದ್ದರೂ ೪-೫ ಮಂತ್ರಗಳಲ್ಲಿ ತದ್ಧಾವತಃ (ತದ್ದೂರೇ) ಎಂಬ ಪದಗಳಿಗೆ ಪುನರುಕ್ತಿ ಬರುತ್ತದೆಂಬ ಶಂಕೆಗೆ ಸಮಾಧಾನ ಹೇಳುತ್ತಾರೆ.

ಅಭ್ಯಾಸಶ್ಚ=ಒಂದೇ ರೀತಿಯಾಗಿ ಎರಡಾವರ್ತಿ ಹೇಳುವದು, ಸರ್ವಗತತ್ವಸ್ಯ=ಸರ್ವ= ಸಮಸ್ತ ಪ್ರಾಣಿಗಳಲ್ಲಿ, ಗತತ್ವಸ್ಯ=ಇರುವದರ, ತಾತ್ಪರ್ಯ=ಅಭಿಪ್ರಾಯದ, ದ್ಯೋತನಾರ್ಥಃ= ಜ್ಞಾಪನವೇ ಪ್ರಯೋಜನವಾಗಿ ಉಳ್ಳದ್ದು.

ತಾ|| ಯಾವ ಶ್ರೀಪರಮಾತ್ಮನಲ್ಲಿ ಸಮಸ್ತ ಜಗತ್ತು ಆಶ್ರಯಿಸಿಕೊಂಡಿರುವದೋ, ಅಂತಹ ಶ್ರೀ ಪರಮಾತ್ಮನು ತನ್ನನ್ನು ಆಶ್ರಯಿಸಿರುವ ಸಮಸ್ತ ಜಗತ್ತಿನಲ್ಲಿಯೂ ಅನಾದಿ ಕಾಲ ದಿಂದಲೂ ಇದ್ದಾನೆ. ಹೀಗೆ ಸರ್ವಾಧಾರನಾಗಿ ಸಮಸ್ತ ಜಗತ್ತಿನಲ್ಲಿಯೂ ಶ್ರೀಪರಮಾತ್ಮನೇ ಇದ್ದಾನೆಂದು ವಿಶೇಷವಾಗಿ ತಿಳಿದು ಮತ್ತು ಸರ್ವ ಪ್ರಾಣಿಗಳಲ್ಲಿ ನಿಯಾಮಕನಾಗಿರುವ ಶ್ರೀ ಪರಮಾತ್ಮನು ಒಬ್ಬನೇ ಎಂದು ವಿಶೇಷವಾಗಿ ತಿಳಿದವನಿಗೆ ಅನ್ಯಥಾ ಜ್ಞಾನವೂ ದುಃಖವೂ ಇರುವದಿಲ್ಲ ॥ ೭ ॥

ಶ್ರೀ ಪರಮಾತ್ಮನನ್ನು ಹೊಂದಿದ ಜ್ಞಾನಿಗೆ ಶೋಕಮೋಹವು ಇಲ್ಲದಿರಲು ಕಾರಣವೇ ನೆಂಬ ಶಂಕೆ ಬಂದರೆ ಆ ಶ್ರೀ ಪರಮಾತ್ಮನ ಮಹಿಮೆಯು ಹೇಳಲ್ಪಡುತ್ತದೆ.

**ಮಂ|| ಸ ಪರ್ಯಗಾಚ್ಛುಕ್ರಮಕಾಯಮವ್ರಣ**
**ಮಸ್ನಾವಿರꣳ ಶುದ್ಧಮಪಾಪವಿದ್ಧಂ ।**
**ಕವಿರ್ಮನೀಷೀ ಪರಿಭೂಸ್ಸ್ವಯಂ**
**ಭೂರ್ಯಾಥಾತಥ್ಯತೋಽರ್ಥಾನ್ವ್ಯದಧಾಚ್ಛಾಶ್ವತೀಭ್ಯಸ್ಸಮಾಭ್ಯಃ ||೮||**

ಅ || ಸಃ = ಆ ಜ್ಞಾನಿಯು, ಬ್ರಹ್ಮ = ಪರಮಾತ್ಮನನ್ನು, ಪರ್ಯಗಾತ್= ಪ್ರಾಪಿಸುವ ನಾಗುತ್ತಾನೆ. ತತ್ = ಆ ಪರಬ್ರಹ್ಮನು, ಶುಕ್ರಂ = ಶೋಕರಹಿತನು, ಅಕಾಯಂ = ಲಿಂಗ ದೇಹರಹಿತನು, ಅವ್ರಣಂ = (ಸ್ತೋಕರಹಿತನು) ಪೂರ್ಣನು, ಅಸ್ನಾವಿರಂ = ಸ್ಥೂಲದೇಹರಹಿ ತನು, ಶುದ್ಧಂ = ಪವಿತ್ರನು, ಅಪಾಪವಿದ್ಧಂ = ಪಾಪಲೇಪರಹಿತನು, ಕವಿಃ= ಸರ್ವಜ್ಞನು, ಮನೀಷೀ = ಮನಸ್ಸಿಗೆ ಪ್ರೇರಕನು, ಪರಿಭೂಃ = ಸಮಸ್ತವನ್ನು ವಶೀಕರಿಸುವವನು, ಸ್ವಯಂ ಭೂಃ = ಅನ್ಯರನ್ನು ಆಶ್ರಯಿಸದೆ ಇರುವವನು ಆದ ಶ್ರೀಪರಮಾತ್ಮನು, ಶಾಶ್ವತೀಭ್ಯಃ = ಅನಾ ದಿಗಳಾದ, ಸಮಾಭ್ಯಃ = ಸಂವತ್ಸರಗಳಲ್ಲಿ, ಯಾಥಾತಥ್ಯತಃ = ಯಥಾರ್ಥವಾಗಿರುವ, ಅರ್ಥಾನ್ = ಪದಾರ್ಥಗಳನ್ನು, ವ್ಯದಧಾತ್ = ನಿರ್ಮಾಣ ಮಾಡಿದನು.

ಭಾ|| "ಶುಕ್ರಂ ತಚ್ಛೋಕರಾಹಿತ್ಯಾದವ್ರಣಂ ನಿತ್ಯಪೂರ್ಣತಃ ।
ಪಾವನತ್ವಾತ್ತದಾ ಶುದ್ಧಮಕಾಯಂ ಲಿಂಗವರ್ಜನಾತ್ ॥
ಸ್ಥೂಲದೇಹಸ್ಯ ರಾಹಿತ್ಯಾದಸ್ನಾವಿರಮುದಾಹೃತಂ ।
ಏವಂ ಭೂತೋಽಪಿ ಸಾರ್ವಜ್ಞ್ಯಾತ್ಕವಿರಿತ್ಯೇವ ಶಬ್ದ್ಯತೇ ॥

ಬ್ರಹ್ಮಾದಿ ಸರ್ವಮನಸಾಂ ಪ್ರಕೃತೇರ್ಮನಸೋಽಪಿ ಚ ।
ಈಶಿತೃತ್ವಾನ್ಮನೀಷೀ ಸ ಪರಿಭೂಸ್ಸರ್ವತೋ ವರಃ ॥
ಸದಾಽನನ್ಯಾಶ್ರಯತ್ವಾಚ್ಚ ಸ್ವಯಂಭೂಃ ಪರಿಕೀರ್ತಿತಃ ।
ಸ ಸತ್ಯಂ ಜಗದೇತಾದೃಙ್ನಿತ್ಯಮೇವ ಪ್ರವಾಹತಃ ॥
ಅನಾದ್ಯನಂತಕಾಲೇಷು ಪ್ರವಾಹೈಕಪ್ರಕಾರತಃ ।
ನಿಯಮೇನೈವ ಸಸೃಜೇ ಭಗವಾನ್ಪುರುಷೋತ್ತಮಃ ॥
ಸಜ್ಜ್ಞಾನಾನಂದಶೀರ್ಷೋಽಸೌ ಸಜ್ಜ್ಞಾನಾನಂದಬಾಹುಕಃ ।
ಸಜ್ಜ್ಞಾನಾನಂದದೇಹಶ್ಚ ಸಜ್ಜ್ಞಾನಾನಂದಪಾದವಾನ್ ॥
ಏವಂ ಭೂತೋ ಮಹಾವಿಷ್ಣುರ್ಯಥಾರ್ಥಂ ಜಗದೀದೃಶಂ ।
ಅನಾದ್ಯನಂತಕಾಲೀನಂ ಸಸರ್ಜಾತ್ಮೇಚ್ಛಯಾ ಪ್ರಭುಃ”
ಇತಿ ವಾರಾಹೇ ॥ ೮ ॥

**ಅ ॥** ತತ್=ಪರಬ್ರಹ್ಮನು, ಶೋಕರಾಹಿತ್ಯಾತ್ ಶೋಕ=ದುಃಖವು, ರಾಹಿತ್ಯಾತ್= **ಇಲ್ಲದೆ** ಇರುವುದರಿಂದ, ಶುಕ್ರಂ=ಶುಕ್ರವೆಂಬ ಹೆಸರುಳ್ಳವನು, ನಿತ್ಯಪೂರ್ಣತಃ, ನಿತ್ಯ= **ಸರ್ವದಾ**-ಏಕ ಪ್ರಕಾರನಾಗಿಯೂ, ಪೂರ್ಣತಃ = ಗುಣಪೂರ್ಣನಾಗಿಯೂ ಇರುವುದರಿಂದ **ಅವ್ರಣಂ**=(ಸ್ತೋಕ) ಅಲ್ಪನಲ್ಲ, ಪಾವನತ್ವಾತ್=ಪರಿಶುದ್ಧಿಯನ್ನುಂಟುಮಾಡುವುದರಿಂದ, **ಸದಾ**=ಸರ್ವಕಾಲದಲ್ಲಿ, ಶುದ್ಧಂ=ನಿರ್ಮಲನು, ಲಿಂಗವರ್ಜನಾತ್=ಲಿಂಗದೇಹವಿಲ್ಲದೆ ಇರುವುದರಿಂದ, **ಅಕಾಯಂ**=ಶರೀರರಹಿತನು, ಸ್ಥೂಲದೇಹಸ್ಯ, ಸ್ಥೂಲ=ಪ್ರಾಕೃತ, ದೇಹಸ್ಯ=ಶರೀರದ, **ರಾಹಿತ್ಯಾತ್**=(ಪರಿತ್ಯಾಗ) ವರ್ಜನದೆಶೆಯಿಂದ, ಅಸ್ನಾವಿರಂ=ಸಪ್ತಧಾತುಮಯ **ಶರೀರರಹಿತನು**, ಇತಿ=ಹೀಗೆ, ಉದಾಹೃತಂ=ಹೇಳಲ್ಪಟ್ಟಿದೆ. ಏವಂ ಭೂತೋಽಪಿ=ಈ ಪ್ರಕಾರ ಶರೀರರಹಿತನಾದರೂ, ಸಃ=ಪೂರ್ವೋಕ್ತನಾದ, ಪುರುಷೋತ್ತಮಃ=ಕ್ಷರಾಕ್ಷರ **ಪುರುಷರಿಂದ ಉತ್ತಮನಾದ** ಶ್ರೀಪರಮಾತ್ಮನು, ಸಾರ್ವಜ್ಞ್ಯಾತ್=ಎಲ್ಲವನ್ನೂ ತಿಳಿದಿರುವುದರಿಂದ ಕವಿರಿತಿ=ಕವಿಯೆಂದು, ಶಬ್ದ್ಯತೇ=ಹೇಳಿಸಿಕೊಳ್ಳಲ್ಪಡುತ್ತಾನೆ. ಬ್ರಹ್ಮಾದಿ ಸರ್ವ **ಮನಸಾಂ** ಬ್ರಹ್ಮ=ಚತುರ್ಮುಖನೆ, ಆದಿ=ಮೊದಲಾಗಿವುಳ್ಳ, ಸರ್ವ=ಸಮಸ್ತ ಚೇತನಗಳ, **ಮನಸಾಂ**=ಮನಸ್ಸುಗಳಿಗೆ, ಪ್ರಕೃತೇಃ=ಲಕ್ಷ್ಮೀದೇವಿಯ, ಮನಸೋಽಪಿ ಚ =ಮನಸ್ಸಿಗೂ, **ಈಶಿತೃತ್ವಾತ್**=ಪ್ರೇರಕನಾಗಿರುವುದರಿಂದ, ಮನೀಷೀ=ಮನೀಷಿಯೆಂತ ಪ್ರಸಿದ್ಧನು, ಸರ್ವತಃ= **ಸಮಸ್ತ** ಚೇತನದೆಸೆಯಿಂದ, ವರಃ=ಶ್ರೇಷ್ಠನು, ಅತಃ=ಆದುದರಿಂದ, ಪರಿಭೂಃ=ಪರಿಭೂ **ಅನಿಸಿಕೊಳ್ಳುತ್ತಾನೆ.** ಸದಾ=ಸರ್ವಕಾಲದಲ್ಲಿ, ಅನನ್ಯಾಶ್ರಯತ್ವಾಚ್ಚ=ಅನ್ಯರ ಆಶ್ರಯ **ಇಲ್ಲದೆ ಇರುವುದರಿಂದ**, ಸ್ವಯಂಭೂಃ=ತಾನಾಗಿರುವವನೆಂದು, ಪರಿಕೀರ್ತಿತಃ=ಹೇಳಿಸಿಕೊ**ಳ್ಳಲ್ಪಟ್ಟವನು**, ಭಗವಾನ್=ಷಡ್ಗುಣೈಶ್ವರ್ಯಸಂಪನ್ನನಾದ, ಸಃ=ಶ್ರೀಪರಮಾತ್ಮನು, ಪ್ರವಾ**ಹತಃ**=ಪರಂಪರೆಯಿಂದ, ನಿತ್ಯಮೇವ=ಯಾವಾಗಲೂ ಇರುವ, ಏತಾದೃಕ್=ಪೂರ್ವೋಕ್ತ **ಪ್ರಕಾರವಾಗಿ** ಪ್ರಮಾಣದಿಂದ ಸಿದ್ಧವಾದ, ಸತ್ಯಂ=ಯಥಾರ್ಥವಾದ, ಜಗತ್=(ಲೋಕ) **ಪ್ರಪಂಚವನ್ನು**, ಅನಾದ್ಯನಂತಕಾಲೇಷು=ಕೊನೆಮೊದಲಿಲ್ಲದ ಕಾಲಗಳಲ್ಲಿ, ಪ್ರವಾಹೈಕಪ್ರಕಾ**ರತಃ**=ಪ್ರವಾಹ-ಪರಂಪರೆಯೇ, ಏಕ=ಒಂದಾದ, ಪ್ರಕಾರತಃ-(ಪ್ರಕಾರದಿಂದ) ರೀತಿಯಿಂದ, **ನಿಯಮೇನೈವ**=ನಿಯುತವಾಗಿ, ಸಸೃಜೇ=ಸೃಷ್ಟಿ ಮಾಡಿದನು. ಅಸೌ=ಈ ಪರಮಾತ್ಮನು, **ಸಜ್ಜ್ಞಾನಾನಂದಶೀರ್ಷಃ**=ಸತ್=ನಿರ್ದುಷ್ಟವಾದ, ಜ್ಞಾನ=ಜ್ಞಾನವು, ಆನಂದ=ಸುಖವು, ಇವುಗಳೇ **ಶೀರ್ಷಃ-ಶಿರಸ್ಸುಆಗಿವುಳ್ಳವನು**, ಸಜ್ಜ್ಞಾನಾನಂದ ಬಾಹುಕಃ=ನಿರ್ದುಷ್ಟವಾದ ಜ್ಞಾನ ಸುಖ

ಮಯವಾದ ಭುಜಗಳುಳ್ಳವನು, ಸಜ್ಞಾನಾನಂದ ದೇಹಶ್ಚ=ಸಮೀಚೀನವಾದ ಜ್ಞಾನಸುಖ ಮಯವಾದ ಶರೀರವುಳ್ಳವನು, ಸಜ್ಞಾನಾನಂದ ಪಾದವಾನ್=ಉತ್ತಮಜ್ಞಾನ ಸುಖಮಯವಾದ ಪಾದಗಳುಳ್ಳವನು, ಏವಂ ಭೂತಃ=ಹೀಗಿರುವ, ಪ್ರಭುಃ=ಪ್ರಭುವಾದ, ಮಹಾವಿಷ್ಣುಃ ಮಹಾನ್=ಮಹಾನುಭಾವನಾದ,ವಿಷ್ಣುಃ=ಶ್ರೀಪರಮಾತ್ಮನು, ಯಥಾರ್ಥಂ=ಸತ್ಯವಾಗಿರುವ, ಈದೃಶಂ=ಇಂತಹ, ಅನಾದ್ಯನಂತಕಾಲೀನಂ=ಆದ್ಯಂತರಹಿತವಾದ ಕಾಲದಲ್ಲಿರತಕ್ಕ, ಜಗತ್=(ಚೇತನಾಚೇತನಾತ್ಮಕ ದ್ವಿವಿಧ) ಪ್ರಪಂಚವನ್ನು, ಆತ್ಮೇಚ್ಛಯಾ=ತನ್ನ ಇಚ್ಛೆಯಿಂದಲೇ, ಸಸರ್ಜ=ಸೃಷ್ಟಿ ಮಾಡಿದನು. ಇತಿ=ಈ ಪ್ರಕಾರ, ವಾರಾಹೇ=ವಾರಾಹ ಪುರಾಣದಲ್ಲಿ ಹೇಳಲ್ಪಟ್ಟದೆ. ॥ ೮ ॥

**ಮಂ॥ ಅಂಧಂತಮಃ ಪ್ರವಿಶಂತಿ ಯೇಽವಿದ್ಯಾಮುಪಾಸತೇ ।**
**ತತೋ ಭೂಯ ಇವ ತೇ ತಮೋ ಯ ಉ ವಿದ್ಯಾಯಾꣳರತಾಃ ॥ ೯ ॥**

ಅ ॥ ಯೇ=ಯಾರು, ಅವಿದ್ಯಾಂ=ಅವಿದ್ಯೆಯನ್ನು, ಅಂದರೆ ಪರಮಾತ್ಮನ ಯಥಾರ್ಥ ಸ್ವರೂಪವನ್ನು ಬಿಟ್ಟು ತದ್ವಿರುದ್ಧವಾದ ಆಕಾರವನ್ನು, ಉಪಾಸತೇ=ಧ್ಯಾನ ಮಾಡುತ್ತಾರೊ, ತೇ=ಅವರು, ಅಂಧಂತಮಃ = ಅಂಧಂತಮಸ್ಸನ್ನು, ಪ್ರವಿಶಂತಿ=ಪ್ರವೇಶ ಮಾಡುತ್ತಾರೆ, ಯೇ=ಯಾರು, ವಿದ್ಯಾಯಾಂ ಉ=ತತ್ವಜ್ಞಾನದಲ್ಲಿಯೇ, ರತಾಃ=ಆಸಕ್ತರಾಗಿರುತ್ತಾರೋ (ಮಿಥ್ಯಾಜ್ಞಾನಿಗಳ ನಿಂದಕರಾಗುವದಿಲ್ಲವೋ), ತೇ=ಅವರು, ತತಃ=ಮಿಥ್ಯಾಜ್ಞಾನಿಗಳು ಹೊಂದತಕ್ಕ ತಮಸ್ಸಿಗಿಂತಲೂ, ಭೂಯಃ=ಅಧಿಕವಾದ, ತಮಃ=ಅಂಧಂತಮಸ್ಸನ್ನು, ಇವ=ನಿಸ್ಸಂಶಯವಾಗಿ, (ಪ್ರವಿಶಂತಿ=ಪ್ರವೇಶಮಾಡುತ್ತಾರೆ) ॥ ೯ ॥

**ಮಂ॥ ಅನ್ಯದೇವಾಹುರ್ವಿದ್ಯಯಾ ಅನ್ಯದಾಹುರವಿದ್ಯಯಾ ।**
**ಇತಿ ಶುಶ್ರುಮ ಧೀರಾಣಾಂ ಯೇ ನಸ್ತದ್ವಿಚಚಕ್ಷಿರೇ ॥ ೧೦ ॥**

ಅ ॥ ವಿದ್ಯಯಾ=ತತ್ವಜ್ಞಾನದಿಂದ, ಅನ್ಯದೇವ=(ಅನ್ಯತ್, ಏವ,) ಮೋಕ್ಷರೂಪ ಫಲದಲ್ಲಿ ಏಕದೇಶವೇ, (ಪ್ರಾಪ್ಯಂ=ಹೊಂದತಕ್ಕುದೆಂದು, ವೃದ್ಧಾಃ=ಜ್ಞಾನಿಗಳು) ಆಹುಃ=ಹೇಳುತ್ತಾರೆ, ಅವಿದ್ಯಯಾ=ಅನ್ಯಥಾಜ್ಞಾನಿ ನಿಂದೆಯಿಂದ, ಅನ್ಯತ್=ಮೋಕ್ಷಫಲದಲ್ಲಿ ಏಕದೇಶವೇ (ಪ್ರಾಪ್ಯಂ=ಹೊಂದತಕ್ಕುದೆಂದು ಜ್ಞಾನಿಗಳು) ಆಹುಃ=ಹೇಳುತ್ತಾರೆ, ಯೇ=ಯಾವ ಧೀರರು, ನಃ=ನಮಗೆ, ತತ್=ಮೋಕ್ಷ ಸಾಧನವನ್ನು, ವಿಚಚಕ್ಷಿರೇ=ಸ್ಪಷ್ಟವಾಗಿ ಹೇಳಿದ್ದಾರೊ, (ತೇಷಾಂ=ಆ,) ಧೀರಾಣಾಂ=ಜ್ಞಾನಿಗಳ ಮುಖದಿಂದ, ಇತಿ=ಹೀಗೆಂದು, ಶುಶ್ರುಮ=ಕೇಳಿದ್ದೇವೆ ॥ ೧೦ ॥

**ಮಂ॥ ವಿದ್ಯಾಂ ಚಾವಿದ್ಯಾಂ ಚ ಯಸ್ತದ್ವೇದೋಭಯꣳಸಹ ।**
**ಅವಿದ್ಯಯಾ ಮೃತ್ಯುಂ ತೀರ್ತ್ವಾ ವಿದ್ಯಯಾಽಮೃತಮಶ್ನುತೇ ॥ ೧೧ ॥**

ಅ ॥ ವಿದ್ಯಾಂ=ಪರಮಾತ್ಮನ ಯಥಾರ್ಥ ಜ್ಞಾನವನ್ನೂ, ಅವಿದ್ಯಾಂ ಚ=ಮಿಥ್ಯಾಜ್ಞಾನದ ನಿಂದನವನ್ನೂ, ತದುಭಯಂ=ಈಯೆರಡನ್ನೂ, ಸಹ=ಒಂದೇ ಮೋಕ್ಷಾಖ್ಯ ಪುರುಷಾರ್ಥಕ್ಕೆ, ತತ್=ಸಾಧನವೆಂಬದಾಗಿ, ಯಃ=ಯಾವಾತನು, ವೇದ = ತಿಳಿಯುತ್ತಾನೋ, (ಸಃ=ಅವನು.) ಅವಿದ್ಯಯಾ=ಅನ್ಯಥಾಜ್ಞಾನದನಿಂದನದಿಂದ, ಮೃತ್ಯುಂ=ದುಃಖಾಜ್ಞಾನಾದ್ಯನಿಷ್ಟವನ್ನು, ತೀರ್ತ್ವಾ=ದಾಟಿ, ವಿದ್ಯಯಾ=ಸಮ್ಯಕ್ಜ್ಞಾನದಿಂದ, ಅಮೃತಂ=ಆನಂದಾನುಭವ ರೂಪವಾದ ಮೋಕ್ಷವನ್ನು, ಅಶ್ನುತೇ=ಹೊಂದುತ್ತಾನೆ ॥

ತಾ॥ ಸಮ್ಯಕ್ಜ್ಞಾನಕ್ಕೆ ಆನಂದಾನುಭವವೂ ಅನ್ಯಥಾಜ್ಞಾನನಿಂದನಕ್ಕೆ ದುಃಖಾದ್ಯನಿಷ್ಟ ನಿವೃತ್ತಿಯೂ ಫಲವಾಗಿರುವದರಿಂದ ಈ ಎರಡು ಫಲಗಳಿಂದಲೂ ಕೂಡಿರುವ ಮೋಕ್ಷಕ್ಕಾಗಿ ಸಮ್ಯಕ್ಜ್ಞಾನವೂ ಅನ್ಯಥಾ ಜ್ಞಾನನಿಂದನವೂ ಅವಶ್ಯಕವು. ॥ ೧೧ ॥

ಭಾ ॥ "ಅನ್ಯಥೋಪಾಸಕಾ ಯೇ ತು ತಮೋಽಂಧಂ ಯಾಂತ್ಯಸಂಶಯಂ ।
ತತೋಽಧಿಕಮಿವ ವ್ಯಕ್ತಂ ಯಾಂತಿ ತೇಷಾಮನಿಂದಕಾಃ ॥
ತಸ್ಮಾದ್ಯಥಾ ಸ್ವರೂಪಂ ತು ನಾರಾಯಣಮನಾಮಯಂ ।
ಅಯಥಾರ್ಥಸ್ಯ ನಿಂದಾಂ ಚ ಯೇ ವಿದುಃ ಸಹ ಸಜ್ಜನಾಃ ॥
ತೇ ನಿಂದಯಾಽಯಥಾರ್ಥಸ್ಯ ದುಃಖಾಜ್ಞಾನಾದಿರೂಪಿಣಃ ।
ದುಃಖಾಜ್ಞಾನಾದಿಸಂತೀರ್ಣಾಃ ಸುಖಜ್ಞಾನಾದಿರೂಪಿಣಃ ॥
ಯಥಾರ್ಥಸ್ಯ ಪರಿಜ್ಞಾನಾತ್ಸುಖಜ್ಞಾನಾದಿರೂಪತಾಂ"॥ಯಾಂತಿ॥೧೧॥

ಅ ॥ ಯೇತು = ಯಾವ ಪುರುಷರು, ಅನ್ಯಥೋಪಾಸಕಾಃ, ಅನ್ಯಥಾ= ಇದ್ದುದಕ್ಕೆ ವಿರುದ್ಧವಾಗಿ, ಉಪಾಸಕಾಃ = ತಿಳಿದುಕೊಂಡು ಧ್ಯಾನಮಾಡುತ್ತಾರೊ, ತೇ = ಅವರು, ಅಂಧಂತಮಃ=ಅಂಧಂತಮಸ್ಸನ್ನು, ಅಸಂಶಯಂ=ಸಂಶಯವಿಲ್ಲದೆ, ಯಾಂತಿ=ಹೊಂದು ತ್ತಾರೆ, ತತಃ=ಅನ್ಯಥಾ ಜ್ಞಾನಿಗಳು ಹೊಂದುವ ತಮಸ್ಸಿಗಿಂತ, ಅಧಿಕಂ=ಹೆಚ್ಚಾಗಿರುವ, ಇವ ವ್ಯಕ್ತಂ=ಸ್ಪಷ್ಟವಾಗಿರುವ ತಮಸ್ಸನ್ನು, ತೇಷಾಂ=ಅನ್ಯಥಾ ಜ್ಞಾನಿಗಳನ್ನು, ಅನಿಂದಕಾಃ= ನಿಂದೆ ಮಾಡದಿರುವವರು, ಯಾಂತಿ=ಹೊಂದುತ್ತಾರೆ, ತಸ್ಮಾತ್=ಆ ಕಾರಣದಿಂದ, ಅನಾಮಯಂ=ದೋಷರಹಿತನಾದ, ನಾರಾಯಣಂ=ಶ್ರೀ ಪರಮಾತ್ಮನನ್ನು, ಯಥಾಸ್ವ ರೂಪಂ=ಯಾದೃಶ ರೂಪವುಳ್ಳವನೋ ಆ ಪ್ರಕಾರವಾಗಿ, ಅಯಥಾರ್ಥಸ್ಯ=ಮಿಥ್ಯಾಜ್ಞಾನದ, ನಿಂದಾಂ ಚ=ನಿಂದೆಯನ್ನು, ಸಹ=ಕೂಡಿಕೊಂಡು, ಯೇ=ಯಾವ, ಸಜ್ಜನಾಃ=ಸಾತ್ತ್ವಿ ಕರು, ವಿದುಃ=ತಿಳಿಯುತ್ತಾರೊ, ತೇ=ಅವರು, ದುಃಖಾಜ್ಞಾನಾದಿರೂಪಿಣಃ=ದುಃಖಾಜ್ಞಾ ನಾದಿಯೇ ಸ್ವರೂಪವಾಗಿ ಉಳ್ಳ, ಅಯಥಾರ್ಥಸ್ಯ=ಅಯಥಾರ್ಥ ಜ್ಞಾನದ, ನಿಂದಯಾ= ನಿಂದೆಯಿಂದ, ದುಃಖಾಜ್ಞಾನಾದಿ ಸಂತೀರ್ಣಾಃ=ದುಃಖ=ವ್ಯಥೆಯು, ಅಜ್ಞಾನ=ತಿಳಿಯದಿರು ವಿಕೆಯು ಇವುಗಳೆ, ಆದಿ=ಮೊದಲಾಗಿವುಳ್ಳ ಕಷ್ಟವನ್ನು, ಸಂತೀರ್ಣಾಃ=ದಾಟದವರಾಗಿ, ಸುಖಜ್ಞಾನಾದಿರೂಪಿಣಃ=ಸುಖಜ್ಞಾನಾದಿಯೇ ಸ್ವರೂಪವಾಗಿವುಳ್ಳ, ಯಥಾರ್ಥಸ್ಯ=ಸಮ್ಯಕ್= ಜ್ಞಾನದ, ಪರಿಜ್ಞಾನಾತ್=ತಿಳುವಳಿಕೆಯಿಂದ, ಸುಖಜ್ಞಾನಾದಿರೂಪತಾಂ=ಸುಖ=ಸಂತೋ ಷವು, ಜ್ಞಾನ = ಜ್ಞಾನವು ಇವುಗಳೇ, ಆದಿ = ಮೊದಲಾಗಿವುಳ್ಳ, ರೂಪತಾಂ = ಸ್ವರೂಪವುಳ್ಳ ತನವನ್ನು, ಯಾಂತಿ=ಹೊಂದುತ್ತಾರೆ. ॥೧೧

ತಾ॥ ೯, ೧೦, ೧೧ ಈ ಮೂರು ಮಂತ್ರಗಳಲ್ಲಿ, ವಿದ್ಯೆ ಅವಿದ್ಯೆ, ಇವುಗಳ ವಿಷಯವು ಹೇಳಲ್ಪಟ್ಟಿದೆ. ಅವಿದ್ಯೆಗೆ ಅನ್ಯಥಾಜ್ಞಾನ, ಅಥವಾ ಮಿಥ್ಯಾಜ್ಞಾನ, ಪರಮಾತ್ಮನ ವಿಷಯದಲ್ಲಿ ತಪ್ಪುಜ್ಞಾನವೆಂದರ್ಥ. ವಿದ್ಯೆಯೆಂದರೆ, ಪರಮಾತ್ಮನ ಕುರಿತು ಯಥಾರ್ಥ ಜ್ಞಾನ. ೯ನೇ ಮಂತ್ರ ದಲ್ಲಿ ಅನ್ಯಥಾ ಜ್ಞಾನವು ನರಕಹೇತುವೆಂತಲೂ, ಅನ್ಯಥಾ ಜ್ಞಾನವನ್ನು ದೂಷಿಸದೆ, ಕೇವಲ ವಿದ್ಯೆ ಯಲ್ಲಿ ಆಸಕ್ತರಾಗಿರುವವರೂ ನರಕವನ್ನೇ ಸೇರುವರು ಎಂದು ಹೇಳಲ್ಪಟ್ಟಿದೆ. ಆದುದರಿಂದ ಮಿಥ್ಯಾಜ್ಞಾನದ ದೂಷಣೆಯೂ, ಯಥಾರ್ಥ ಜ್ಞಾನವೂ, ಈ ಎರಡೂ ಮೋಕ್ಷಕ್ಕೆ ಹೇತುಗಳು. ಒಂದೇ ಸಾಲದು. ಅವುಗಳ ಫಲಗಳು ಬೇರೆಬೇರೆಯಾಗಿ ಇರುವವು. ಮಿಥ್ಯಾಜ್ಞಾನದ ದೂಷಣೆ

ಯಿಂದ ದುಃಖಾಜ್ಞಾನಾದಿ ಅನಿಷ್ಟನಿವೃತ್ತಿಯಾಗುವುದು. ಯಥಾರ್ಥಜ್ಞಾನದಿಂದ ಆನಂದಾವಿರ್ಭಾವವು ಆಗುವುದು. ಮಿಥ್ಯಾಜ್ಞಾನವನ್ನು ನಿಂದಿಸುವದೆಂದರೆ, ಮಿಥ್ಯಾಜ್ಞಾನಿಗಳನ್ನು ಬಯ್ಯುವುದೆಂತಲ್ಲ. ಮಿಥ್ಯಾಜ್ಞಾನದಲ್ಲಿ ಅಸಹ್ಯವು ಅನಾದರವು ತನಗೂ ಇತರರಿಗೂ ಉಂಟಾಗುವಂತೆ ತತ್ವಜ್ಞಾನವನ್ನು ತಿಳಿಯುವದೂ ಬೋಧಿಸುವದೂ ಮಿಥ್ಯಾಜ್ಞಾನದ ದೂಷಣೆಯಾಗಿರುತ್ತದೆ. ॥ ೯ ॥ ೧೦ ॥ ೧೧ ॥

**ಮಂ ॥ ಅಂಧಂತಮಃ ಪ್ರವಿಶಂತಿ ಯೇಽಸಂಭೂತಿಮುಪಾಸತೇ ।**
**ತತೋ ಭೂಯ ಇವ ತೇ ತಮೋ ಯ ಉ ಸಂಭೂತ್ಯಾꣳ ರತಾಃ ॥ ೧೨ ॥**

ಅ ॥ ಯೇ=ಯಾರು, (ಶ್ರೀಪರಮಾತ್ಮನನ್ನು) ಅಸಂಭೂತಿಂ=ಜಗತ್ತಿಗೆ ಸೃಷ್ಟಿಕರ್ತನಲ್ಲದವನನ್ನಾಗಿ (ತಿಳಿದುಕೊಂಡು) ಉಪಾಸತೇ=ಧ್ಯಾನಮಾಡುತ್ತಾರೊ, ತೇ=ಅವರು, ಅಂಧಂತಮಃ=ಮೊದಲು ಹೇಳಿದ ನರಕವನ್ನೇ, ಪ್ರವಿಶಂತಿ=ಹೊಂದುತ್ತಾರೆ, ತತಃ=ಅದಕ್ಕಿಂತಲೂ, ಭೂಯಃ=ಅಧಿಕವಾಗಿ, ಇವ=ತೋರುವ, ತಮಃ=ನರಕವನ್ನು, ಯೇ=ಯಾರು, ಸಂಭೂತ್ಯಾಂ ಉ=ಸೃಷ್ಟಿಕರ್ತೃತ್ವದಲ್ಲಿ ಮಾತ್ರ, ರತಾಃ=ಆಸಕ್ತರಾಗಿರುತ್ತಾರೊ, (ತೇ=ಅವರು, ಪ್ರವಿಶಂತಿ=ಹೊಂದುತ್ತಾರೆ.) ॥ ೧೨ ॥

**ಮಂ ॥ ಅನ್ಯದೇವಾಹುಸ್ಸಂಭವಾದನ್ಯದಾಹುರಸಂಭವಾತ್ ।**
**ಇತಿ ಶುಶ್ರುಮ ಧೀರಾಣಾಂ ಯೇ ನಸ್ತದ್ವಿಚಚಕ್ಷಿರೇ ॥ ೧೩ ॥**

ಅ ॥ (ವಿಷ್ಣೋಃ=ಶ್ರೀಪರಮಾತ್ಮನಿಗೆ) ಸಂಭವಾತ್=ಸೃಷ್ಟಿಕರ್ತೃತ್ವಜ್ಞಾನದಿಂದ, ಅನ್ಯದೇವ=(ಅನ್ಯತ್, ಏವ)=ಮೋಕ್ಷದಲ್ಲಿ ಏಕದೇಶವೇ ಫಲವೆಂದು, (ವೃದ್ಧಾಃ=ಜ್ಞಾನಿಗಳು) ಆಹುಃ=ಹೇಳುತ್ತಾರೆ, ಅಸಂಭವಾತ್ = ಸಂಹಾರಕರ್ತೃತ್ವಜ್ಞಾನದಿಂದ, ಅನ್ಯತ್=ಮೋಕ್ಷದಲ್ಲಿ ಬೇರೆ ಏಕದೇಶವೇ ಫಲವೆಂದು, ಆಹುಃ=ಹೇಳುತ್ತಾರೆ, ಇತಿ=ಈ ಪ್ರಕಾರ, ಯೇ=ಯಾವ ಜ್ಞಾನಿಗಳು, ನಃ=ನಮಗೆ, ತತ್=ಆಮೋಕ್ಷಸಾಧನವನ್ನು, ವಿಚಚಕ್ಷಿರೇ=ಸ್ಪಷ್ಟವಾಗಿ ಹೇಳಿದ್ದಾರೆಯೋ, ತೇಷಾಂ=ಅಂಥಾ, ಧೀರಾಣಾಂ=ಜ್ಞಾನಿಗಳ ಮುಖದಿಂದ, ಶುಶ್ರುಮ=ಕೇಳಿದ್ದೇವೆ ॥ ೧೩ ॥

**ಮಂ ॥ ಸಂಭೂತಿಂ ಚ ವಿನಾಶಂ ಚ ಯಸ್ತದ್ವೇದೋಭಯꣳ ಸಹ ।**
**ವಿನಾಶೇನ ಮೃತ್ಯುಂ ತೀರ್ತ್ವಾ ಸಂಭೂತ್ಯಾಽಮೃತಮಶ್ನುತೇ ॥ ೧೪ ॥**

ಅ ॥ ಸಂಭೂತಿಂ ಚ=ಸೃಷ್ಟಿಕರ್ತೃತ್ವವನ್ನು, ವಿನಾಶಂ ಚ=ಸಂಹಾರಕರ್ತೃತ್ವವನ್ನು, ತದುಭಯಂ=ಈ ಎರಡನ್ನೂ, ಸಹ=ಒಂದೇ ಮೋಕ್ಷಾಖ್ಯಪುರುಷಾರ್ಥಕ್ಕೆ ಸಾಧನೆ ಎಂಬದಾಗಿ, ಯಃ=ಯಾವನು, ವೇದ=ತಿಳಿಯುತ್ತಾನೊ, (ಸಃ=ಅವನು), ವಿನಾಶೇನ=ಸಂಹಾರಕರ್ತೃತ್ವಜ್ಞಾನದಿಂದ, ಮೃತ್ಯುಂ=ದುಃಖಾಜ್ಞಾನಾದ್ಯನಿಷ್ಟವನ್ನು, ತೀರ್ತ್ವಾ=ದಾಟಿ, ಸಂಭೂತ್ಯಾ=ಸೃಷ್ಟಿಕರ್ತೃತ್ವಜ್ಞಾನದಿಂದ, ಅಮೃತಂ=ಆನಂದಾನುಭವರೂಪವಾದ ಮೋಕ್ಷೈಕದೇಶವನ್ನು, ಅಶ್ನುತೆ=ಹೊಂದುತ್ತಾನೆ ॥ ೧೪ ॥

ಭಾ ॥ "ಏವಂ ಸೃಷ್ಟಿಕರ್ತೃತ್ವಂ ನಾಂಗೀಕುರ್ವಂತಿ ಯೇ ಹರೇಃ ।
ತೇಽಪಿ ಯಾಂತಿ ತಮೋ ಘೋರಂ ತಥಾ ಸಂಹಾರಕರ್ತೃತಾಂ ॥
ನಾಂಗೀಕುರ್ವಂತಿ ತೇಽಪ್ಯೇವಂ ತಸ್ಮಾತ್ಸರ್ವಗುಣಾತ್ಮಕಂ ।
ಸರ್ವಕರ್ತಾರಮೀಶೇಶಂ ಸರ್ವಸಂಹಾರಕಾರಕ(ಣ)ಂ ॥

ಯೋ ವೇದ ಸಂಹೃತಿಜ್ಞಾನಾದ್ದೇಹಬಂಧಾದ್ವಿಮುಚ್ಯತೇ ।
ಸುಖಜ್ಞಾನಾದಿಕರ್ತೃತ್ವಜ್ಞಾನಾತ್ತದ್ವ್ಯಕ್ತಿಮಾವ್ರಜೇತ್ ॥
ಸರ್ವದೋಷವಿನಿರ್ಮುಕ್ತಂ ಗುಣರೂಪಂ ಜನಾರ್ದನಂ ।
ಜಾನೀಯಾನ್ನಗುಣಾನಾಂ ಚ ಭಾಗಹಾನಿಂ ಪ್ರಕಲ್ಪಯೇತ್ ॥
ನ ಮುಕ್ತಾನಾಮಪಿ ಹರೇಃ ಸಾಮ್ಯಂ ವಿಷ್ಣೋರಭಿನ್ನತಾಂ ।
ನ ವೈ (ನೈವ) ಪ್ರಚಿಂತಯೇತ್ತಸ್ಮಾದ್ಬ್ರಹ್ಮಾದೇಸ್ಸಾಮ್ಯಮೇವ ವಾ ॥
ಮಾನುಷಾದಿವಿರಿಂಚಾಂತಂ ತಾರತಮ್ಯಂ ವಿಮುಕ್ತಿಗಂ ।
ತತೋ ವಿಷ್ಣೋಃ ಪರೋತ್ಕರ್ಷಂ ಸಮ್ಯಗ್ಜ್ಞಾತ್ವಾ ವಿಮುಚ್ಯತೇ ॥"

– ಇತಿ ಕೌರ್ಮೇ.

ಅ॥ ಏವಂ=ಮೊದಲು ಹೇಳಿದಂತೆಯೆ, ಯೇ=ಯಾರು, ಹರೇಃ=ಶ್ರೀ ಪರಮಾತ್ಮನ, ಸೃಷ್ಟಿಕರ್ತೃತ್ವಂ=ಜಗತ್ತಿಗೆ ಉತ್ಪಾದಕನಾಗಿರುವಿಕೆಯನ್ನು, ನಾಂಗೀಕುರ್ವಂತಿ=ಒಪ್ಪುವದಿಲ್ಲವೋ, ತೇಽಪಿ=ಅವರು ಕೂಡ, ಘೋರಂ=ಭಯಂಕರವಾದ, ತಮಃ=ನರಕವನ್ನು, ಯಾಂತಿ=ಹೊಂದುತ್ತಾರೆ. ತಥಾ = ಹಾಗೆ, ಸಂಹಾರ ಕರ್ತೃತಾಂ = ಜಗತ್ತಿಗೆ ನಾಶಕನಾಗಿರುವಿಕೆಯನ್ನು, ನಾಂಗೀಕುರ್ವಂತಿ=ಒಪ್ಪುವುದಿಲ್ಲವೋ, ತೇಽಪಿ=ಅವರು ಕೂಡ, ಏವಂ=ಮೊದಲು ಹೇಳಿದಂತೆ, (ನರಕವನ್ನು ಹೊಂದುತ್ತಾರೆ.) ತಸ್ಮಾತ್=ಆದುದರಿಂದ, ಸರ್ವಗುಣಾತ್ಮಕಂ=ಸರ್ವ=ಸಮಸ್ತಗಳಾದ, ಗುಣ=ಜ್ಞಾನಾನಂದಾದಿಗಳೇ ಆತ್ಮಕಂ=ಸ್ವರೂಪವಾಗಿ ಉಳ್ಳ, ಈಶೇಶಂ=ಈಶ=ಇತರ ಪ್ರೇರಕರಾದ ರಮಾದಿಗಳಿಗೂ, ಈಶಂ=ಸ್ವಾಮಿಯಾದ, ಸರ್ವಕರ್ತಾರಂ=ಸರ್ವ=ಸಮಸ್ತಜಗತ್ತಿಗೂ, ಕರ್ತಾರಂ=ಉತ್ಪಾದಕನಾದ ಸರ್ವಸಂಹಾರಕಾರಕಂ=ಸರ್ವ=ಸಮಸ್ತ ಜಗತ್ತಿನ, ಸಂಹಾರ=ನಾಶಕ್ಕೆ, ಕಾರಕಂ=ಕಾರಣನಾದ ಶ್ರೀಪರಮಾತ್ಮನನ್ನು, (ವಿದ್ಯಾತ್ = ತಿಳಿಯಬೇಕು, ಇತಿ = ಈ ಪ್ರಕಾರವಾಗಿ) ಯಃ=ಯಾವನು, ವೇದ=ತಿಳಿಯುತ್ತಾನೋ, ಸಃ=ಅವನು, ಸಂಹೃತಿಜ್ಞಾನಾತ್=ನಾಶಕನಾಗಿದ್ದಾನೆಂಬ ಜ್ಞಾನದಿಂದ, ದೇಹಬಂಧಾತ್=ಸಂಸಾರಬಂಧದಿಂದ, ವಿಮುಚ್ಯತೇ=ಬಿಡುಗಡೆಹೊಂದುತ್ತಾನೆ.

ಸುಖಜ್ಞಾನಾದಿ ಕರ್ತೃತ್ವಜ್ಞಾನಾತ್=ಸುಖ=ಸಂತೋಷವು, ಜ್ಞಾನ=ಜ್ಞಾನವು ಇವುಗಳೆ, ಆದಿ = ಮೊದಲಾಗಿ ಉಳ್ಳಧರ್ಮಗಳಿಗೂ, ಕರ್ತೃತ್ವ=ಉತ್ಪಾದಕನಾಗಿರುವುದನ್ನು, ಜ್ಞಾನಾತ್=ತಿಳಿಯೋಣದರಿಂದ, ತದ್ವ್ಯಕ್ತಿಂ=ತತ್=ಸುಖಜ್ಞಾನಾದಿಗಳ, ವ್ಯಕ್ತಿಂ=(ಅಭಿವ್ಯಕ್ತಿ) ಅನುಭವವನ್ನು, ಆವ್ರಜೇತ್=ಹೊಂದುತ್ತಾನೆ, ತಸ್ಮಾತ್=ಆಕಾರಣದಿಂದ, ಜನಾರ್ದನಂ=ಪರಮಾತ್ಮನನ್ನು, ಸರ್ವದೋಷವಿನಿರ್ಮುಕ್ತಂ=ಸರ್ವ=ಸಮಸ್ತಗಳಾದ, ದೋಷ=ಪಾರತಂತ್ರ್ಯಾದಿ ದೋಷಗಳಿಂದ, ವಿನಿರ್ಮುಕ್ತಂ=ರಹಿತನಾದವನನ್ನಾಗಿ, ಗುಣರೂಪಂ=ಗುಣ=ಜ್ಞಾನಾನಂದಾದಿಗಳೆ, ರೂಪಂ=ಸ್ವರೂಪಉಳ್ಳವನನ್ನಾಗಿ, ಜಾನೀಯಾತ್=ತಿಳಿದುಕೊಳ್ಳತಕ್ಕದ್ದು, ಹರೇಃ=ಶ್ರೀ ಪರಮಾತ್ಮನ, ಗುಣಾನಾಂ ಚ=ಜ್ಞಾನಾನಂದಾದಿ ಗುಣಗಳಮಧ್ಯದಲ್ಲಿ, ಭಾಗಹಾನಿಂ=ಭಾಗ=ಕೆಲವು ಅಂಶದಲ್ಲಿ, ಹಾನಿಂ=ಅಭಾವವನ್ನು (ಇಲ್ಲದಿರುವಿಕೆಯನ್ನು), ನ ಪ್ರಕಲ್ಪಯೇತ್=ಕಲ್ಪಿಸಬಾರದು, ಮುಕ್ತಾನಾಮಪಿ=ಮುಕ್ತಿಯನ್ನು ಹೊಂದಿದವರಿಗೂ, ಹರೇಃ=ಶ್ರೀ ಪರಮಾತ್ಮನ, ಸಾಮ್ಯಂ=ಸಮತ್ವವನ್ನು, ಅಭಿನ್ನತಾಂ ಚ=ಅಭೇದವನ್ನುಕೂಡಾ, ಬ್ರಹ್ಮಾದೇಃ=ಚತುರ್ಮುಖಾದಿಗಳಿಗೂ, ಸಾಮ್ಯಮೇವ ವಾ=ಸಮತ್ವವನ್ನುಆಗಲೀ, ನ ವೈ ಪ್ರಚಿಂತಯೇತ್=ಸರ್ವಥಾ

ತಿಳಿಯಬಾರದು, ಮಾನುಷಾದಿವಿರಿಂಚಾಂತಂ= ಮಾನುಷ = ಅಧಮಾಧಿಕಾರಿಗಳಾದ ಮನುಷ್ಯೋತ್ತಮರನ್ನು, ಆದಿ=ಆರಂಭಿಸಿಕೊಂಡು, ವಿರಿಂಚಾಂತಂ = ವಿರಿಂಚ = ಚತುರ್ಮುಖನು ಅಂತಂ=ಪರ್ಯಂತವಾಗಿರತಕ್ಕ, ವಿಮುಕ್ತಿಗಂ=ಮೋಕ್ಷದಲ್ಲಿರುವ, ತಾರತಮ್ಯಂ=ಉಚ್ಚ ನೀಚ ಭಾವವನ್ನು, ತತಃ=ಮುಕ್ತಾಮುಕ್ತಗಣದಿಂದ, ವಿಷ್ಣೋಃ=ಶ್ರೀ ಪರಮಾತ್ಮನಿಗೆ, ಪರೋತ್ಕರ್ಷಂ ಚ=ನಿರವಧಿಕೋತ್ತಮತ್ವವನ್ನು, ಸಮ್ಯಕ್=ಚನ್ನಾಗಿ, (ಭಕ್ತಿಪೂರ್ವಕವಾಗಿ), ಜ್ಞಾತ್ವಾ=ತಿಳಿದು, ವಿಮುಚ್ಯತೇ=ಮೋಕ್ಷವನ್ನು ಹೊಂದುತ್ತಾನೆ, ಇತಿ=ಹೀಗೆ, ಕೌರ್ಮೇ=ಕೂರ್ಮಪುರಾಣದಲ್ಲಿ.

**ತಾ ॥** ಪರಮಾತ್ಮನಲ್ಲಿ ಸೃಷ್ಟಿಕರ್ತೃತ್ವವಿಲ್ಲವೆಂದು ಉಪಾಸನೆಮಾಡತಕ್ಕವರು ಅಂಧತಮಸ್ಸೆಂಬ ನರಕವನ್ನುಹೊಂದುತ್ತಾರೆ; ಅದಕ್ಕಿಂತಲೂ ಹೆಚ್ಚಾದ ದುಃಖಕರವಾದ ನರಕವನ್ನು, ಪರಮಾತ್ಮನಲ್ಲಿ ಸೃಷ್ಟಿಕರ್ತೃತ್ವವು ಮಾತ್ರವಿದೆ, ಸಂಹಾರ ಕರ್ತೃತ್ವಾದೀತರ ಗುಣಗಳಿಲ್ಲವೆಂದು ತಿಳಿಯುತಕ್ಕವರು ಹೊಂದುತ್ತಾರೆ, ಅಲ್ಲದೆ ಸೃಷ್ಟಿಕರ್ತೃತ್ವದ ಜ್ಞಾನದದೆಸೆಯಿಂದ ಮೋಕ್ಷದಲ್ಲಿ ಒಂದುಭಾಗವಾದ ಫಲವು ಬೇರೆಯಿದೆಯೆಂತಲೂ, ಸಂಹಾರಕರ್ತೃತ್ವಾದಿ ಜ್ಞಾನದಿಂದ ಬೇರೆಫಲವಿದೆಯೆಂತಲೂ ವೃದ್ಧರು ಹೇಳುವರೆಂಬದಾಗಿ ನಾವು ಮೋಕ್ಷಸಾಧನವನ್ನುಪದೇಶಿಸಿದವರ ಮುಖದಿಂದ ಕೇಳಿದ್ದೇವೆ. ಆದುದರಿಂದ, ಸೃಷ್ಟಿಕರ್ತೃತ್ವವನ್ನು ಸಂಹಾರಕರ್ತೃತ್ವಾದಿ ಸಕಲಗುಣಗಳನ್ನು ತಿಳಿಯುವದು ಮೋಕ್ಷಹೊಂದುವದಕ್ಕೆ ಆವಶ್ಯಕವೆಂದು ಎರಡನ್ನೂ ಉಪಾಸನೆ ಮಾಡತಕ್ಕ ಪುರುಷನು ಸಂಹಾರ ಕರ್ತೃತ್ವದ ಜ್ಞಾನದಿಂದ ದುಃಖಾಜ್ಞಾನಾದ್ಯನಿಷ್ಟಗಳನ್ನೂ ಪರಿಹರಿಸಿಕೊಂಡು ಸೃಷ್ಟಿಕರ್ತೃತ್ವದ ಜ್ಞಾನದಿಂದ (ಆನಂದಾನುಭವಲಕ್ಷಣವಾದ) ಮೋಕ್ಷವನ್ನು ಹೊಂದುತ್ತಾನೆ. ಆದುದರಿಂದ, ಶ್ರೀಪರಮಾತ್ಮನಲ್ಲಿ ಒಂದು ಗುಣವಿದೆ, ಇತರಗುಣವಿಲ್ಲವೆಂದು ತಿಳಿಯಬಾರದು. ಶ್ರೀ ಪರಮಾತ್ಮನು ಇತರ ಸರ್ವದೇವತೆಗಳಿಗಿಂತಲೂ ಉತ್ತಮನೆಂತಲೂ, ಇತರ ಸರ್ವಜೀವರು ಮುಕ್ತಿಯಲ್ಲಿ ಸಂಸಾರದಲ್ಲಿ ಕೂಡಾ ತಾರತಮ್ಯವಂತರಾಗಿದ್ದಾರೆ ಎಂತಲೂ, ಮುಕ್ತಿಯಲ್ಲಿ ಆಗಲೀ ಸಂಸಾರದಲ್ಲಿ ಆಗಲೀ ಶ್ರೀ ಪರಮಾತ್ಮನಿಂದ ಅಭೇದವು ಅಥವಾ ಸಾಮ್ಯಾಧಿಕ್ಯಗಳೂ ಯಾರಿಗೂ ಇಲ್ಲವೆಂತಲೂ ತಿಳಿಯಬೇಕು. ಇಂತಹ ಸರ್ವೋತ್ತಮತ್ವಜ್ಞಾನದಿಂದ ಮುಕ್ತಿಯಾಗುತ್ತದೆ. ॥ ೧೪ ॥

೧೨-೧೩-೧೪ ಮಂತ್ರಗಳಲ್ಲಿ ಹೇಳಿದ ಮೋಕ್ಷವು ಭಗವತ್ಪ್ರಸಾದದಿಂದಲೇ ಆಗಬೇಕು; ಅಂತಹ ಪ್ರಸಾದಕ್ಕೆ ಕಾರಣವಾದ ಭಗವತ್ಪ್ರಾರ್ಥನೆಯು ಮಂತ್ರಪಂಚಕದಲ್ಲಿ ಪ್ರತಿಪಾದಿತವಾಗಿದೆ.

**ಮಂ ॥ ಹಿರಣ್ಮಯೇನ ಪಾತ್ರೇಣ ಸತ್ಯಸ್ಯಾಪಿಹಿತಂ ಮುಖಂ ।**
**ತತ್ತ್ವಂ ಪೂಷನ್ನಪಾವೃಣು ಸತ್ಯಧರ್ಮಾಯ ದೃಷ್ಟಯೇ ॥ ೧೫ ॥**

**ಅ ॥** ಹಿರಣ್ಮಯೇನ=ಸುವರ್ಣದಂತೆ ಪ್ರಕಾಶಮಾನವಾದ, ಪಾತ್ರೇಣ= (ಭೂಮಿಯ ರಸಗಳನ್ನು ಪಾನಮಾಡಿ ರಕ್ಷಿಸುವದರಿಂದ) ಪಾತ್ರವೆನ್ನಿಸಿಕೊಳ್ಳುವ ಸೂರ್ಯಮಂಡಲದಿಂದ, ಸತ್ಯಸ್ಯ=ಸದ್ಗುಣಪೂರ್ಣನಾದ (ಸೂರ್ಯ ಮಂಡಲಸ್ಥನಾದ), (ತವ=ನಿನ್ನ), ಮುಖಂ=ಶರೀರವು, ಅಪಿಹಿತಂ=ಮುಚ್ಚಿಕೊಂಡಿರುವುದು, ಹೇ, ಪೂಷನ್!=ಎಲೈ ಪೂರ್ಣನಾದ ಶ್ರೀಪರಮಾತ್ಮನೇ, ತ್ವಂ=ನೀನು, ತತ್=ಆ ಶರೀರವನ್ನು, ಸತ್ಯಧರ್ಮಾಯ, ಸತ್ಯ= ಸದ್ಗುಣಪೂರ್ಣನಾದ ನಿನ್ನನ್ನು, ಧರ್ಮಾಯ=ಧರಿಸಿದ, (ಮಹ್ಯಂ=ನನಗೋಸ್ಕರ) ದೃಷ್ಟಯೇ=ನಿನ್ನ ಸಂದರ್ಶನಕ್ಕೋಸ್ಕರ, ಅಪಾವೃಣು=ತೆರೆ. ॥ ೧೫ ॥

**ಮಂ ॥ ಪೂಷನ್ನೇಕರ್ಷೇ ಯಮ ಸೂರ್ಯ ಪ್ರಾಜಾಪತ್ಯ ವ್ಯೂಹ ರಶ್ಮೀನ್ಸಮೂಹ ತೇಜೋ ಯತ್ತೇರೂಪಂ ಕಲ್ಯಾಣತಮಂ ತತ್ತೇ ಪಶ್ಯಾಮಿ॥೧೬॥**

ಅ || ಹೇ ಪೂಷನ್=ಎಲ್ಲೈ ಪೂರ್ಣನೆ, ಏಕರ್ಷೇ=ಪ್ರಧಾನ ಜ್ಞಾನವುಳ್ಳವನಾಗಿ ಏಕರ್ಷಿ ಯೆಂದೆನ್ನಿಸಿಕೊಂಡು, ಏಕರ್ಷಿನಾಮಕ ಮುನಿಯಲ್ಲಿ ಅಂತರ್ಯಾಮಿಯಾಗಿರುವವನೇ, ಯಮ=ಯಮನಾಮಕನಾಗಿ ಯಮನಲ್ಲಿ ಅಂತರ್ಯಾಮಿಯಾಗಿರುವವನೇ, ಸೂರ್ಯ=ಸೂರ್ಯಾಂತರ್ಗತನಾಗಿ ಸೂರ್ಯಶಬ್ದ ವಾಚ್ಯನಾದವನೇ, ಪ್ರಾಜಾಪತ್ಯ=ಬ್ರಹ್ಮದೇವರಿಗೆ ಪ್ರಾಪ್ಯನಾದುದರಿಂದ ಪ್ರಾಜಾಪತ್ಯನಾಮವುಳ್ಳವನೇ, ನೀನು, ರಶ್ಮೀನ್=ನನ್ನ ಸ್ವರೂಪಜ್ಞಾನವನ್ನು, ವ್ಯೂಹ=ವಿಸ್ತರಿಸು, ತೇಜಃ=ಬಾಹ್ಯಜ್ಞಾನವನ್ನು, ಸಮೂಹ=ವಿಸ್ತರಿಸು, ಯತ್=ಯಾವ, ತೇ=ನಿನ್ನ, ಕಲ್ಯಾಣತಮಂ=ಅತ್ಯಂತ ಮಂಗಳವಾದ, ರೂಪಂ=ಸ್ವರೂಪವೋ, ತತ್=ಆ ರೂಪವನ್ನು, ತೇ=ನಿನ್ನ(ಪ್ರಸಾದದೆಸೆಯಿಂದ), ಪಶ್ಯಾಮಿ=ನೋಡುತ್ತೇನೆ. ॥ ೧೬ ॥

**ಮಂ ॥ ಯೋಽಸಾವಸೌ ಪುರುಷಃ ಸೋಽಹಮಸ್ಮಿ ॥ ೧೭ ॥**

ಅ || ಯೋಽಸೌ=ಪ್ರಸಿದ್ಧನಾದ, ಅಸೌ=ಮುಖ್ಯವಾಯು ದೇವರಲ್ಲಿ, (ಸ್ಥಿತಃ=ಇರತಕ್ಕ) ಪುರುಷಃ=ಶ್ರೀ ಪರಮಾತ್ಮನೋ, ಸಃ=ಅವನು, ಅಹಂ=(ಹೇಯನಲ್ಲದೆ ಇರುವದರಿಂದ) "ಅಹಂ" ಶಬ್ದವಾಚ್ಯನು, ಅಸ್ಮಿ=ಸದಾ ಇರತಕ್ಕವನೂ ಜ್ಞಾನವಿಷಯನೂ ಆದುದರಿಂದ "ಅಸ್ಮಿ" ಎಂಬ ಶಬ್ದವಾಚ್ಯನು ॥

ಅಥವಾ, ಯೋಽಸೌ=ಪ್ರಸಿದ್ಧನಾದ, ಅಸೌ ಪುರುಷಃ=ಪ್ರಾಣಾದಿ ಪ್ರತೀಕಗಳಲ್ಲಿ, (ಸ್ಥಿತಃ=ಇರತಕ್ಕವನೋ), ಸಃ=ಅವನು, ಅಹಮಸ್ಮಿ=ನನ್ನ ಅಂತರ್ಯಾಮಿಯು ಆಗಿದ್ದಾನೆ. ಪ್ರಾಣಾದಿ ಸರ್ವ ಪ್ರತೀಕಗಳಲ್ಲಿಯೂ, ನನ್ನಲ್ಲಿಯೂ ಅಂತರ್ಯಾಮಿಯಾಗಿರುವ ಶ್ರೀಪರಮಾತ್ಮನು ಒಬ್ಬನೇ ಆಗಿದ್ದಾನೆ. ॥ ೧೭ ॥

**ಮಂ ॥ ವಾಯುರನಿಲಮಮೃತಮಥೇದಂ ಭಸ್ಮಾಂತಂ ಶರೀರಂ ॥ ೧೮ ॥**

ಅ || ಇದಂ=ಈ, ಶರೀರಂ=ದೇಹವು, ಭಸ್ಮಾಂತಂ=ಭಸ್ಮ=ವಿಭೂತಿಯೆ, ಅಂತಂ=ಅವಸಾನವುಳ್ಳದ್ದು, ತಥಾಪಿ=ಆದಾಗ್ಯೂ (ತದಂತರ್ಗತಪರಮಾತ್ಮನಿಗೆ ಮರಣಾದಿ ದೋಷವಿಲ್ಲ.) ಅದು ಯಾವುದರಿಂದ ಅಂದರೆ ಅನಿಲಂ=ಅನಿಲಃ=ಪರಬ್ರಹ್ಮನೇ ಆಶ್ರಯವಾಗಿ ಉಳ್ಳ, ವಾಯುರಪಿ=ವಾಯುದೇವರು ಕೂಡಾ, ಯದಾ=ಯಾವಾಗ, ಅಮೃತಂ=ಅಮೃತಃ=ಮೃತಿ ರಹಿತನೋ, ಅಥ=ಆವಾಗ, ಶ್ರೀಪರಮಾತ್ಮನು ಅಮೃತನು ಎಂದು ಏನು ಹೇಳತಕ್ಕದ್ದು? ॥ ೧೮ ॥

**ಮಂ ॥ ಓಂ ಕ್ರತೋ ಸ್ಮರ ಕೃತಂ ಸ್ಮರ । ಓಂ ಕ್ರತೋ ಸ್ಮರ ಕೃತಂ ಸ್ಮರ ॥ ೧೯ ॥**

ಅ || ಓಂ=(ಓತತ್ವಾದಿಗುಣ) ಗುಣಪೂರ್ಣನಾದುದರಿಂದ ಓಂಕಾರ ಶಬ್ದವಾಚ್ಯನಾದ, ಕ್ರತೋ=ಜ್ಞಾನರೂಪನಾದ ಪರಮಾತ್ಮನೇ, ಸ್ಮರ=ಅನುಗ್ರಹಿಸು, ಕೃತಂ=ನನ್ನ ಧ್ಯಾನಾದಿ ಕರ್ಮವನ್ನು, ಸ್ಮರ=ಸ್ಮರಿಸು (ನನ್ನಿಂದ ಮಾಡಲ್ಪಟ್ಟ ಧ್ಯಾನಾದಿ ಕರ್ಮದಿಂದ ನನ್ನಲ್ಲಿ ಅನುಗ್ರಹೋನ್ಮುಖನಾಗು) ಉಕ್ತಾರ್ಥದಲ್ಲಿ ತಾತ್ಪರ್ಯವದೆ ಎಂದು ತೋರಿಸಲಿಕ್ಕೆ ಪುನರುಕ್ತಿಯು. (ಈ ಮಂತ್ರಪಂಚಕಕ್ಕೆ ವ್ಯಾಖ್ಯಾನರೂಪವಾದ ಸ್ಮೃತಿಯನ್ನುದಾಹರಿಸುತ್ತಾರೆ.)

ಭಾ॥ "ಪಾತ್ರಂ ಹಿರಣ್ಮಯಂ ಸೂರ್ಯಮಂಡಲಂ ಸಮುದಾಹೃತಂ ।
ವಿಷ್ಣೋಸ್ಸತ್ಯಸ್ಯ ತೇನೈವ ಸರ್ವದಾಽಪಿಹಿತಂ ಮುಖಂ ।
ತತ್ತು ಪೂರ್ಣತ್ವತಃ ಪೂಷಾ ವಿಷ್ಣುರ್ದರ್ಶಯತಿಸ್ವಯಂ ।
ಸತ್ಯಧರ್ಮಾಯ ಭಕ್ತಾಯ (೧೫) ಪ್ರಧಾನಜ್ಞಾನರೂಪತಃ ।
ವಿಷ್ಣುರೇಕಋಷಿರ್ಜ್ಞೇಯೋ ಯಮೋ ನಿಯಮನಾದ್ಧರಿಃ ।

ಸೂರ್ಯಸ್ಸ ಸೂರಿಗಮ್ಯತ್ವಾತ್ಪ್ರಾಜಾಪತ್ಯಃ ಪ್ರಜಾಪತೇಃ ।
ವಿಶೇಷೇಣೈವ ಗಮ್ಯತ್ವಾತ್ (೧೬) ಅಹಂ ಚಾಸಾವಹೇ ಯತಃ ।
ಅಸ್ಮಿ ನಿತ್ಯಾಸ್ತಿತಾಮಾನಾತ್ಸರ್ವಜೀವೇಷು ಸಂಸ್ಥಿತಃ ।
ಸ್ವಯಂ ತು ಸರ್ವಜೀವೇಭ್ಯೋ ವ್ಯತಿರಿಕ್ತಃ ಪರೋ ಹರಿಃ ।
ಸಕ್ರತುಜ್ಞಾನರೂಪತ್ವಾದಗ್ನಿರಂಗಪ್ರಣೇತೃತ" ಇತಿ ಬ್ರಹ್ಮಾಂಡೇ ॥
ಸತ್ಯಂ ಬ್ರಹ್ಮ ಹೃದಯೇ ಧಾರಯತೀತಿ ಸತ್ಯಧರ್ಮಾ ಏಕೋಽಸೌಶಬ್ದಃ
ಪ್ರಾಣೇಸ್ಥಿತ ಇತಿ। (೧೭) ಯಸ್ಮಿನ್ನಯಂ ಸ್ಥಿತಃ ಸೋಽಸ್ಯಮೃತಃ
ಕಿಮು ಪರಃ । ಅಃಬ್ರಹ್ಮೈವನಿಲಯನಂ ಯಸ್ಯ ವಾಯೋಃ ಸೋಽನಿಲಂ।
"ಅತಿರೋಹಿತ ವಿಜ್ಞಾನಾದ್ವಾಯುರಪ್ಯಮೃತಃ ಸ್ಮೃತಃ ।
ಮುಖ್ಯಾಮೃತಃ ಸ್ವಯಂ ರಾಮಃ ಪರಮಾತ್ಮಾ ಸನಾತನಃ" ।
- ಇತಿ ರಾಮಸಂಹಿತಾಯಾಂ ॥ ೧೮ ॥

"ಭಕ್ತಾನಾಂ ಸ್ಮರಣಂ ವಿಷ್ಣೋರ್ನಿತ್ಯಜ್ಞಪ್ತಿಸ್ವರೂಪತಃ ।
ಅನುಗ್ರಹೋನ್ಮುಖತ್ವಂ ತು ನೈವಾನ್ಯತ್ಕ್ವಚಿದಿಷ್ಯತೇ" ।
- ಇತಿ ಬ್ರಹ್ಮತರ್ಕೇ ॥ ೧೯ ॥

ಅ ॥ ಹಿರಣ್ಮಯಂ=ಸುವರ್ಣದಂತೆ ಪ್ರಕಾಶಮಾನವಾದ, ಪಾತ್ರಂ=ರಸಗಳನ್ನು ಪಾನ ಮಾಡಿ ಜಗತ್ತನ್ನು ರಕ್ಷಿಸುವವನಾದುದರಿಂದ ಪಾತ್ರವೆಂತೆನ್ನಿಸಿಕೊಳ್ಳುವ, ಸೂರ್ಯಮಂಡಲಂ-ಸೂರ್ಯ=ಸೂರ್ಯದೇವರ, ಮಂಡಲಂ=ತೇಜಸ್ಸಿನ ಪುಂಜವು, ಸತ್ಯಸ್ಯ=ಪೂರ್ಣಷಡ್ಗುಣನಾದ, ವಿಷ್ಣೋಃ=ಶ್ರೀ ಪರಮಾತ್ಮನಿಗೆ (ಆಚ್ಛಾದಕವೆಂದು), ಸಮುದಾಹೃತಂ=ಹೇಳಲ್ಪಟ್ಟದೆ, ತೇನೈವ=ಅದೇ ಸೂರ್ಯಮಂಡಲದಿಂದ, ಮುಖಂ=ಮುಖೋಪಲಕ್ಷಿತ ಸರ್ವಶರೀರವು, ಸರ್ವದಾ=ಸರ್ವಕಾಲದಲ್ಲಿ, ಅಪಿಹಿತಂ=ಆಚ್ಛನ್ನವಾಗಿಯದೆ, ತತ್ತು=ಆಶರೀರವನ್ನು ಪೂರ್ಣತ್ವತಃ=ಗುಣಪೂರ್ಣನಾದುದರಿಂದ, ಪೂಷಾ=ಪೂರ್ಷಶಬ್ದವಾಚ್ಯನಾದ, ವಿಷ್ಣುಃ=ಶ್ರೀಪರಮಾತ್ಮನು, ಸ್ವಯಂ=ತಾನಾಗಿ, ಸತ್ಯಧರ್ಮಾಯ-ಸತ್ಯ=ಪೂರ್ಣಷಡ್ಗುಣನಾದ ಶ್ರೀಪರಮಾತ್ಮನನ್ನು, ಧರ್ಮಾಯ=ಹೃದಯದಲ್ಲಿ ಧರಿಸಿದ, ಭಕ್ತಾಯ=ಭಕ್ತನಿಗೋಸ್ಕರ, ದರ್ಶಯತಿ=ತೋರಿಸುತ್ತಾನೆ ॥ ೧೫ ॥

ಪ್ರಧಾನ ಜ್ಞಾನರೂಪತಃ=ಪ್ರಧಾನ=ಮುಖ್ಯವಾದ, ಜ್ಞಾನರೂಪತಃ-ಜ್ಞಾನಸ್ವರೂಪನಾದುದರಿಂದ, ವಿಷ್ಣುಃ=ಶ್ರೀ ಪರಮಾತ್ಮನು, ಏಕಋಷಿಃ=ಏಕಋಷಿಯೆಂಬ ಹೆಸರುಳ್ಳವನು, ಹರಿಃ=ಶ್ರೀ ಪರಮಾತ್ಮನು, ನಿಯಮನಾತ್=ಸಮಸ್ತ ಜಗತ್ತಿಗೆ ಪ್ರೇರಕನಾಗಿರುವದರಿಂದ, ಯಮಃ=ಯಮಶಬ್ದವಾಚ್ಯನು, ಸಃ=ಶ್ರೀ ಪರಮಾತ್ಮನು, ಸೂರಿಗಮ್ಯತ್ವಾತ್-ಸೂರಿ=ಜ್ಞಾನಿಗಳಿಂದ, ಗಮ್ಯತ್ವಾತ್=ಹೊಂದಲಿಕ್ಕೆ ಯೋಗ್ಯನಾಗಿರುವದರಿಂದ, ಸೂರ್ಯಃ=ಸೂರ್ಯಶಬ್ದವಾಚ್ಯನು. ಪ್ರಜಾಪತೇಃ=ಚತುರ್ಮುಖನಿಗೆ, ವಿಶೇಷೇಣೈವ=ವಿಶೇಷಾಕಾರವಾಗಿ, ಗಮ್ಯತ್ವಾತ್=ಹೊಂದಲಿಕ್ಕೆ ಯೋಗ್ಯನಾಗಿರುವದರಿಂದ, ಪ್ರಾಜಾಪತ್ಯಃ=ಪ್ರಾಜಾಪತ್ಯಶಬ್ದವಾಚ್ಯನು. ॥ ೧೬ ॥

ಅಹೇಯತಃ=ಪರಿತ್ಯಾಗಮಾಡಲಿಕ್ಕೆ ಯೋಗ್ಯನಲ್ಲದೆ ಇರುವದರಿಂದ,-ಅಸೌ=ಈ ಪರಮಾತ್ಮನು, ಅಹಂ ಚ=ಅಹಂ ಯೆಂಬ ಶಬ್ದವಾಚ್ಯನು, ಸರ್ವಜೀವೇಷು-ಸರ್ವ=ಸಮಸ್ತಗಳಾದ, ಜೀವೇಷು=ಪ್ರಾಣಿಗಳಲ್ಲಿ, ಸಂಸ್ಥಿತಃ=ಅಂತರ್ಯಾಮಿಯಾಗಿರುವ, ಹರಿಃ=ಶ್ರೀ ಪರಮಾತ್ಮನು, ನಿತ್ಯಾಸ್ತಿತಾಮಾನಾತ್-ನಿತ್ಯ=ನಿರಂತರದಲ್ಲಿ ಅಸ್ತಿತಾ=ಇರುವಿಕೆಯ(ವಿಷಯದಲ್ಲಿ), ಮಾನಾತ್=ಪ್ರಮಾಣವಿರುವಪರಿಂದ, ಅಸ್ಮಿ=ಅಸ್ಮಿಯೆಂಬ ಶಬ್ದವಾಚ್ಯನು, ಸ್ವಯಂ ತು=ತಾನಾದರೂ, ಸರ್ವಜೀವೇಭ್ಯಃ=ಸಮಸ್ತ ಪ್ರಾಣಿಗಳಿಂದಲೂ, ವ್ಯತಿರಿಕ್ತಃ=ಭಿನ್ನನು, ಪರಃ=ಶ್ರೇಷ್ಠನು, ಇತಿ=ಈ ಪ್ರಕಾರ, ಜ್ಞೇಯಃ=ತಿಳಿಯಲಿಕ್ಕೆ ಯೋಗ್ಯನು, ಸಃ=ಶ್ರೀಪರಮಾತ್ಮನು, ಜ್ಞಾನರೂಪತ್ವಾತ್=ಜ್ಞಾನಸ್ವರೂಪಿಯಾದುದರಿಂದ, ಕ್ರತುಃ=ಕ್ರತುಶಬ್ದವಾಚ್ಯನು, ಅಂಗಪ್ರಣೇತೃತಃ-ಅಂಗ=ಶರೀರಕ್ಕೆ, ಪ್ರ=ಚನ್ನಾಗಿ, ನೇತೃತಃ=ನಿಯಾಮಕನಾಗಿರುವದರಿಂದ, ಅಗ್ನಿಃ=ಅಗ್ನಿಶಬ್ದವಾಚ್ಯನು ॥ ೧೭ ॥

ಅ ॥ ಸತ್ಯಂ ಬ್ರಹ್ಮೇತಿ-ಸತ್ಯಂ=ಷಡ್ಗುಣಪೂರ್ಣನಾದ, ಬ್ರಹ್ಮ=ಶ್ರೀ ಪರಮಾತ್ಮನನ್ನು, ಹೃದಯೇ=ಮನಸ್ಸಿನಲ್ಲಿ, ಧಾರಯತಿ=ಧಾರಣಮಾಡುತ್ತಾನೆ, ಇತಿ=ಇಂತೆಂದು, ಸತ್ಯಧರ್ಮಾ=ಭಕ್ತನು.

"ಯೋಽಸಾವಸೌ ಪುರುಷ" ಎಂಬಲ್ಲಿ ಎರಡಾವರ್ತಿ ಅಸೌ ಎಂಬುದಕ್ಕೆ ಅರ್ಥ ಭೇದವನ್ನು ಹೇಳುತ್ತಾರೆ.—

ಅ ॥ ಏಕಃ=ಒಂದಾದ, ಅಸೌ=ಅಸೌ ಎಂಬ, ಶಬ್ದಃ=ಶಬ್ದವು, ಪ್ರಾಣೇ=ಮುಖ್ಯಪ್ರಾಣನಲ್ಲಿ, ಸ್ಥಿತಃ=ವಿದ್ಯಮಾನನಾದವನು, ಇತಿ=ಇಂತೆಂದು, ವಕ್ತಿ=ಹೇಳುತ್ತದೆ ॥ ೧೭ ॥

ವಾಯುರನಿಲಂ ಎಂಬಲ್ಲಿ ಪುನರುಕ್ತಿರೂಪ ದೋಷವನ್ನು ಪರಿಹರಿಸುತ್ತಾರೆ.—

ಅ ॥ ಯಸ್ಮಿನ್=ಯಾವ ವಾಯುದೇವರಲ್ಲಿ, ಅಯಂ=ಶ್ರೀ ಪರಮಾತ್ಮನು, ಸ್ಥಿತಃ=ಇರುವನೋ, ಸೋಽಪಿ=ಆ ವಾಯು, ಅಮೃತಃ=ನಿತ್ಯನು, ಪರಃ=ಶ್ರೀ ಪರಮಾತ್ಮನು, ಕಿಮು=ನಿತ್ಯನು ಎಂದು ಏನು ಹೇಳತಕ್ಕದ್ದು?

ವಾಯುದೇವರಿಗೆ ನಿತ್ಯತ್ವ ಹೇಳಿದುದರಿಂದ ಪರಮಾತ್ಮನಿಗೆ ನಿತ್ಯತ್ವವು ಸಿದ್ಧವಾದರೂ ಪೂರ್ವೋಕ್ತಾರ್ಥವು ಹೇಗೆ ಲಬ್ಧವಾಯಿತೆಂಬ ಶಂಕಾ ಬಂದರೆ ಅನಿಲ ಪದದಿಂದ ಲಬ್ಧವಾಯಿತೆಂದು ನಿರ್ವಚನಮಾಡುತ್ತಾರೆ.—

ಅ ॥ ಅಃ=ಅಕಾರಶಬ್ದವಾಚ್ಯನಾದ, ಬ್ರಹ್ಮೈವ=ಶ್ರೀ ಪರಮಾತ್ಮನೇ, ನಿಲಯನಂ=ಆಶ್ರಯವು, ಯಸ್ಯ=ಯಾವ, ವಾಯೋಃ=ವಾಯುದೇವರಿಗೆ, (ಅಸ್ತಿ=ಅದೆಯೋ), ಸಃ=ಆ ವಾಯು, ಅನಿಲಂ=ಅನಿಲಶಬ್ದವಾಚ್ಯನು, ಇದರಿಂದ ಪುನರುಕ್ತಿದೋಷವು ಪರಿಹೃತವಾಯಿತು.

ಸಂಸಾರಿಯಾದ ವಾಯುದೇವರಿಗೆ ಅಮೃತತ್ವವು ಹೇಗೆ ಕೂಡುತ್ತದೆ? ಎಂಬ ಶಂಕಾ ಬಂದರೆ ಆ ಶಂಕಾವನ್ನು ಸ್ಮೃತಿವಚನದಿಂದಲೇ ಪರಿಹರಿಸುತ್ತಾರೆ.—

ಅ ॥ ಅತಿರೋಹಿತ ವಿಜ್ಞಾನಾತ್-(ಪ್ರಳಯಕಾಲದಲ್ಲಿ ದೇಹನಾಶವಾದರೂ) ಅತಿರೋಹಿತ= (ತಿರೋಭಾವ) ಲೋಪವಿಲ್ಲದೆಯಿರುವ, ವಿಜ್ಞಾನಾತ್=ವೃತ್ತಿರೂಪವಾದ ವಿಶೇಷಜ್ಞಾನವಿರುವದರಿಂದ, ವಾಯುರಪಿ = ವಾಯುವು ಕೂಡಾ, ಅಮೃತಃ=ನಿತ್ಯನು, (ಇತಿ = ಇಂತೆಂದು) ಸ್ಮೃತಃ=ಪ್ರಸಿದ್ಧನು, ರಾಮಃ=ಶ್ರೀ ಪರಮಾತ್ಮನು, ಸ್ವಯಂ=ತಾನು, ಪರಮಾತ್ಮಾ=ಉತ್ಕೃಷ್ಟಚೇತನನೋ, ಸನಾತನಃ-ಸನಾದನಃ=ದೇಹನಾಶಾದಿ ರಹಿತನೆಂತೆಂದು ಶ್ರುತಿಪ್ರಸಿದ್ಧನು, ಮುಖ್ಯಾಮೃತಃ-ಮುಖ್ಯ=ಮುಖ್ಯವಾಗಿ, ಅಮೃತಃ=ದೇಹನಾಶರಹಿತನು, ಇತಿ=ಈ ಪ್ರಕಾರ, ರಾಮಸಂಹಿತಾಯಾಂ=ರಾಮಸಂಹಿತೆ ಎಂಬ ಪಂಚರಾತ್ರೈಕದೇಶದಲ್ಲಿ (ಉಚ್ಯತೇ=ಹೇಳಲ್ಪಟ್ಟದೆ) ॥ ೧೮ ॥ ("ಓಂ ಕ್ರತೋಸ್ಮರ" ಎಂಬಲ್ಲಿ ಸ್ಮರಶಬ್ದವನ್ನು ಸ್ಮೃತಿಯಿಂದ ವ್ಯಾಖ್ಯಾನ ಮಾಡುತ್ತಾರೆ.)

ಅ || ಭಕ್ತಾನಾಂ=ಭಕ್ತರ, ಸ್ಮರಣಂ=ಸ್ಮೃತಿಯು, ವಿಷ್ಣೋಃ=ಶ್ರೀ ಪರಮಾತ್ಮನಿಗೆ, ನಿತ್ಯಜ್ಞಪ್ತಿಸ್ವರೂಪತಃ=ನಿತ್ಯ=ನಾಶರಹಿತವಾದ, ಜ್ಞಪ್ತಿ=ಜ್ಞಾನವೇ, ಸ್ವರೂಪತಃ=ಸ್ವರೂಪವಾಗಿ ರುವದರಿಂದ, ಅನುಗ್ರಹೋನ್ಮುಖತ್ವಂ=ಅನುಗ್ರಹ=ಪ್ರಸಾದದ, ಉನ್ಮುಖತ್ವಂ=ಅಭಿಮುಖೀ ಕರಿಸೋಣವು, ತು=ಸರಿ, ಅನ್ಯತ್=ತದತಿರಿಕ್ತ ಸಂಸ್ಕಾರಕಾರಣವಾದ ಸ್ಮರಣವು, ಕ್ವಚಿತ್= ಎಲ್ಲಿಯೂ, ನೈವೇಷ್ಯತೇ=ಅಂಗೀಕರಿಸುವದಿಲ್ಲ, ಇತಿ=ಈ ಪ್ರಕಾರ, ಬ್ರಹ್ಮತರ್ಕೇ=ಬ್ರಹ್ಮತರ್ಕ ಎಂಬ ಗ್ರಂಥದಲ್ಲಿ (ಹೇಳಲ್ಪಟ್ಟದೆ,) || ೧೯ ||

ತಾ|| ಭಗವತ್ಸಾಕ್ಷಾತ್ಕಾರಾನಂತರದಲ್ಲಿಯೂ ಮೋಕ್ಷಪ್ರಾಪ್ತಿಗೋಸ್ಕರ ಭಗವದುಪಾಸನೆ ಮಾಡಬೇಕು ಎಂಬ ಅಭಿಪ್ರಾಯದಿಂದ ಅಗ್ನಿಪ್ರತೀಕಸ್ಥ ಭಗವತ್ಪ್ರಾರ್ಥನಾ ಪ್ರಕಾರವು ವಿಧಾನ ಮಾಡಲ್ಪಡುತ್ತದೆ.

**ಮಂ || ಅಗ್ನೇ ನಯ ಸುಪಥಾ ರಾಯೇ ಅಸ್ಮಾನ್ವಿಶ್ವಾನಿ**
**ದೇವ ವಯುನಾನಿ ವಿದ್ವಾನ್ ।**
**ಯುಯೋಧ್ಯಸ್ಮಜ್ಜುಹುರಾಣಮೇನೋ**
**ಭೂಯಿಷ್ಠಾಂ ತೇ ನಮ ಉಕ್ತಿಂ ವಿಧೇಮ || ೨೦ ||**

ಅ || ಅಗ್ನೇ=ಅಂಗಂ=ದೇಹವನ್ನು, ನಯತಿ=ಪ್ರೇರಿಸುತ್ತಾನಾದುದರಿಂದ ಅಗ್ನಿಪದ ವಾಚ್ಯನಾಗಿ ಅಗ್ನಿಯಲ್ಲಿ ವಿದ್ಯಮಾನನಾದ ಶ್ರೀ ಪರಮಾತ್ಮನೇ, ಅಸ್ಮಾನ್=ನಮ್ಮಗಳನ್ನು, ಸುಪಥಾ=ಸು=ಶೋಭನವಾದ, ಪಥಾ-ಅರ್ಚಿರಾದಿ ಮಾರ್ಗದಿಂದ, ರಾಯೆ=ಮೋಕ್ಷಾಖ್ಯ ವಿತ್ತಕ್ಕೋಸ್ಕರ, ನಯ=ಕರೆದುಕೊಂಡುಹೋಗು, ಹೇ ದೇವ=ಎಲೈ ಶ್ರೀ ಪರಮಾತ್ಮನೇ, ವಿಶ್ವಾನಿ=ಸಂಪೂರ್ಣಗಳಾದ, ವಯುನಾನಿ=ಜ್ಞಾನಗಳನ್ನು, (ಭವಾನ್=ನೀನು), ವಿದ್ವಾನ್= ತಿಳದವನು. (ನಮ್ಮಗಳನ್ನು) ಜುಹುರಾಣಂ=ಅಲ್ಪರನ್ನಾಗಿ ಮಾಡುವ, ಏನಃ=ಪಾಪವನ್ನು, ಅಸ್ಮತ್=ನಮ್ಮದೆಸೆಯಿಂದ, ಯುಯೋಧಿ=ವಿಯೋಜಿಸು, (ವಯಂ ತು=ನಾವಾದರೂ), ತೇ= ನಿನಗೋಸ್ಕರ, ಭೂಯಿಷ್ಠಾಂ=ಭಕ್ತಿಜ್ಞಾನೋಪೇತವಾದ, ನಮಉಕ್ತಿಂ=ನಮ ಇತಿ=ನಮಸ್ಕಾರ ವಾಗಲಿ ಇಂತೆಂದು, ಉಕ್ತಿಂ=ವಚನವನ್ನು, ವಿಧೇಮ=ಮಾಡುತ್ತೇವೆ. || ೨೦ ||

ಇಲ್ಲಿ ವಯುನ ಪದಕ್ಕೆ ಕರ್ಮವು ಅರ್ಥವಲ್ಲ. ಮತ್ತು ಜ್ಞಾನವೆಂಬ ಅರ್ಥವು. ಅದಕ್ಕೆ ಭಾಗವತ ಚತುರ್ಥಸ್ಕಂಧ ಧ್ರುವೋಪಾಖ್ಯಾನದ ಸಮ್ಮತಿ ಕೊಡುತ್ತಾರೆ.

ಭಾ || ವಯುನಂ ಜ್ಞಾನಂ । ತ್ವದ್ದತ್ತಯಾ ವಯುನಯೇದಮಚಷ್ಟವಿಶ್ವ
ಮಿತಿ ವಚನಾತ್ । ಜುಹುರಾಣಂ ಅಸ್ಮಾನಲ್ಪೀಕುರ್ವತ್ ।
ಯುಯೋಧಿ ವಿಯೋಜಯ । "ಯದಸ್ಮಾನ್ ಕುರುತೇಽ
ತ್ಯಲ್ಪಾಂಸ್ತದೇನೋಽಸ್ಮದ್ವಿಯೋಜಯ । ನಯನೋ ಮೋಕ್ಷವಿತ್ತಾ
ಯೇತ್ಯಸೌದ್ಯಜ್ಞಂಮನುಸ್ಸ್ವರಾ"ಡಿತಿಸ್ಕಾಂದೇ ।
ಯುಯುವಿಯೋಗ ಇತಿ ಧಾತುಃ ।
ಭಕ್ತಿಜ್ಞಾನಾಭ್ಯಾಂ ಭೂಯಿಷ್ಠಾಂ ನಮಉಕ್ತಿಂ ವಿಧೇಮ || ೨೦ ||

ಅ || ತ್ವದ್ದತ್ತಯಾ = ತ್ವತ್ = ನಿನ್ನಿಂದ, ದತ್ತಯಾ=ಕೊಡಲ್ಪಟ್ಟ ವಯುನಯಾ= ಜ್ಞಾನದಿಂದ, ಇದಂ=ಪರಿದೃಶ್ಯಮಾನವಾದ, ವಿಶ್ವಂ=ಜಗತ್ತನ್ನು, ಅಚಷ್ಟ=ನೋಡಿದೆನು, ಇತಿ=

ಈಪ್ರಕಾರ, ವಚನಾತ್=ಭಾಗವತವಚನದಿಂದ, ವಯುನಂ=ವಯುನವೆಂದರೆ, ಜ್ಞಾನಂ=ಜ್ಞಾನವು, ಜುಹುರಾಣಂ=(ಈ ಪದಕ್ಕೆ) ಅಸ್ಮಾನಲ್ಪೀಕುರ್ವತ್=ನಮ್ಮನ್ನು ಅಲ್ಪರನ್ನಾಗಿಮಾಡುವದು ಎಂಬ ರ್ಥವು, ಯುಯೋಧಿ=(ಈ ಪದಕ್ಕೆ) ವಿಯೋಜಯ=ಬಿಡಿಸು (ಎಂಬ ಅರ್ಥವು) (ಈ ಎರಡು ಪದಗಳಿಗೆ ಇವೇ ಅರ್ಥಯೆಂಬ ವಿಷಯದಲ್ಲಿ ಸಮಾಖ್ಯಾವಚನವನ್ನುದಾಹರಿಸುತ್ತಾರೆ), ಯದ ಸ್ಮಾನಿತಿ=ಯತ್=ಯಾವ ಪಾಪವು, ಅಸ್ಮಾನ್=ನಮ್ಮನ್ನು, ಅತ್ಯಲ್ಪಾನ್=ಅಧಮರನ್ನಾಗಿ, ಕುರುತೇ=ಮಾಡುತ್ತದೋ, ತತ್=ಅಂತಹ, ಏನಃ=ಪಾಪವನ್ನು, ಅಸ್ಮತ್=ನಮ್ಮದೆಸೆಯಿಂದ, ವಿಯೋಜಯ=ಬಿಡುಗಡೆಮಾಡು, ನಃ=ನಮ್ಮಗಳನ್ನು, ಮೋಕ್ಷವಿತ್ತಾಯ=ಮೋಕ್ಷಾಖ್ಯಸಂಪತ್ತಿ ಗೋಸ್ಕರ, ನಯ=ಕರೆದುಕೊಂಡುಹೋಗು, ಇತಿ=ಈ ಪ್ರಕಾರ, ಸ್ವರಾಟ್=ಸಾರ್ವಭೌಮನಾದ, ಮನುಃ=ಸ್ವಾಯಂಭುವನಾಮಕನಾದ ಮನುವು, ಯಜ್ಞಂ=ಯಜ್ಞನಾಮಕ ಶ್ರೀಪರಮಾತ್ಮನನ್ನು, ಅಸ್ತೌತ್=ಸ್ತೋತ್ರಮಾಡಿದನು. ಇತಿ ಸ್ಕಾಂದೇ=ಹೀಗೆ ಸ್ಕಾಂದ ಪುರಾಣದಲ್ಲಿ. ಯುಯೋಧಿ ಯೆಂಬದು, ಯುಯುವಿಯೋಗ, ಇತಿ ಧಾತುಃ । ಯುಯುಯೆಂಬದು ವಿಯೋಗೆ=ವಿಯೋಜನ ರೂಪಾರ್ಥದಲ್ಲಿಉಂಟು ಇತಿ=ಈ ಪ್ರಕಾರ, ಧಾತುಃ=ಧಾತುವು.

ಭಕ್ತಿಜ್ಞಾನಾಭ್ಯಾಂ=ಭಕ್ತಿ=ಸುದೃಢಸ್ನೇಹವೂ, ಜ್ಞಾನ=ಜ್ಞಾನವು ಇವುಗಳಿಂದ, ಭೂಯಿ ಷ್ಠಾಂ=ಅಭ್ಯಧಿಕವಾದ, ನಮಉಕ್ತಿಂ-ನಮಃ=ನಮಸ್ಕಾರವು, (ಇತಿ=ಎಂತೆಂಬ,) ಉಕ್ತಿಂ=ವಚನ ವನ್ನು, ವಿಧೇಮ=ಮಾಡುತ್ತೇವೆ. ॥ ೨೦ ॥

ಭಾ ॥ ಪೂರ್ಣಶಕ್ತಿ ಚಿದಾನಂದ ಶ್ರೀತೇಜಃ ಸ್ಪಷ್ಟಮೂರ್ತಯೆ ।
ಮಮಾಭ್ಯಧಿಕಮಿತ್ರಾಯ ನಮೋ ನಾರಾಯಣಾಯ ತೇ ॥

ಅ ॥ ಪೂರ್ಣ=ಸಂಪೂರ್ಣವಾದ, ಶಕ್ತಿ=ಸಾಮರ್ಥ್ಯವು, ಚಿತ್=ಜ್ಞಾನವು, ಆನಂದ= ಸಂತೋಷವು, ಶ್ರೀ=ಸಂಪತ್ತು, ತೇಜಃ=ಕಾಂತಿಯು, ಇವುಗಳೇ, ಸ್ಪಷ್ಟ=ವಿಶದವಾದ, ಮೂರ್ತ ಯೇ=ಶರೀರವಾಗಿ ಉಳ್ಳ, ಮಮ=ನನಗೆ, ಅಭ್ಯಧಿಕಮಿತ್ರಾಯ=ಅಭ್ಯಧಿಕ=ನಿರತಿಶಯವಾದ, ಮಿತ್ರಾಯ=ಉಪಕಾರಕನಾದ ಮತ್ತು ಪ್ರೀತಿಪಾತ್ರನಾದ, ನಾರಾಯಣಾಯ=ಗುಣಪರಿಪೂರ್ಣ ನಾದ, ತೇ=ನಿನಗೋಸ್ಕರ, ನಮಃ=ನಮಸ್ಕಾರವು, (ಅಸ್ತು=ಆಗಲಿ).

ಸಮಸ್ತ ಗುಣಪೂರ್ಣಾಯ ದೋಷದೂರಾಯ ವಿಷ್ಣವೆ ।
ನಮಃ ಶ್ರೀಪ್ರಾಣನಾಥಾಯ ಭಕ್ತಾಭೀಷ್ಟಪ್ರದಾಯಿನೆ ॥

**ಇಂತು ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯ ವಿರಚಿತ**

**ಈಶಾವಾಸ್ಯೋಪನಿಷದ್ಭಾಷ್ಯದ ಕನ್ನಡ ವ್ಯಾಖ್ಯಾನ ಮುಗಿದುದು.**

**॥ ಶ್ರೀ ಕೃಷ್ಣಾರ್ಪಣಮಸ್ತು ॥**



# ಸಭಾಷ್ಯ ಕಾಠಕೋಪನಿಷತ್ತು.

ಓಂ || ಸಮಸ್ತಗುಣಪೂರ್ಣಾಯ ದೋಷದೂರಾಯ ವಿಷ್ಣವೇ ।
ನಮಃ ಶ್ರೀಪ್ರಾಣನಾಥಾಯ ವಾಮನಾಯೇಷ್ಟದಾಯಿನೇ ॥
ಪ್ರಣಮ್ಯ ವಾಮನಂ ದೇವಂ ಶ್ರಿಯಂ ಮಧ್ವಂ ಗುರೂಂಸ್ತಥಾ ।
ಕಾಠಕೋಪನಿಷದ್ಭಾಷ್ಯವ್ಯಾಖ್ಯಾನಂ ಕ್ರಿಯತೇ ಮಯಾ ॥ ೨ ॥

**ಶ್ರೀಮದ್ಧನುಮದ್ಭೀಮಮಧ್ವಾಂತರ್ಗತ ರಾಮಕೃಷ್ಣವೇದವ್ಯಾಸಾತ್ಮಕ ಲಕ್ಷ್ಮೀಹಯಗ್ರೀವಾಯ ನಮಃ || ಹರಿಃ ಓಂ ||**

**ಭಾ ||** ನಮೋ ಭಗವತೇ ತಸ್ಮೈ ಸರ್ವತಃ ಪರಮಾಯ ತೇ ।
ಸರ್ವಪ್ರಾಣಿ ಹೃದಿಸ್ಥಾಯ ವಾಮನಾಯ ನಮೋ ನಮಃ || ೧ ||

ಅ || ಭಗವತೇ=ಐಶ್ವರ್ಯಾದಿ ಷಡ್ಗುಣಸಂಪನ್ನನಾದ, ತಸ್ಮೈ=ವೇದಾದಿ ಪ್ರಸಿದ್ಧನಾದ ಪರಮಾತ್ಮನಿಗೋಸ್ಕರ, ನಮಃ=ನಮಸ್ಕಾರವು, ಸರ್ವತಃ=ಸಮಸ್ತ ಜಗತ್ತಿನ ದೆಶೆಯಿಂದ, ಪರಮಾಯ=ಉತ್ತಮನಾದ, ಸರ್ವಪ್ರಾಣಿಹೃದಿಸ್ಥಾಯ-ಸರ್ವ=ಸಮಸ್ತಗಳಾದ, ಪ್ರಾಣಿ=ದೇಹ ಧಾರಿಗಳ, ಹೃದಿಸ್ಥಾಯ=ಹೃದಯದಲ್ಲಿ ಆವಾಸ ಮಾಡಿಕೊಂಡಿರುವ, ವಾಮನಾಯ=ವಾಮನ ನಾಮಕನಾದ, ತೇ=ನಿನಗೋಸ್ಕರ, ನಮೋ ನಮಃ=ನಮಸ್ಕಾರವು.

ಮಂಗಳಾಚರಣೆಯಲ್ಲಿ ಈ ಉಪನಿಷತ್ತಿನಲ್ಲಿ ಪ್ರತಿಪಾದ್ಯನಾದ ವಾಮನದೇವರಿಗೆ ಆದಿಯಲ್ಲಿ ನಮಃ ಎಂಬುದರಿಂದ ಪರೋಕ್ಷತಃ ಒಂದಾವರ್ತಿ ನಮಸ್ಕರಿಸಿ ಅಪರೋಕ್ಷವಾಗಿಯೂ ನಮಸ್ಕರಿಸುತ್ತಾರೆ; ತೇ, ನಮೋ ನಮಃ ಎಂಬುದರಿಂದ,-ಎರಡಾವರ್ತಿ ನಮನದಿಂದ ಭಕ್ತ್ಯತಿಶಯವನ್ನು ಸೂಚಿಸುವದು. ಇದರಿಂದ ವಾಮನದೇವರೇ ಈ ಗ್ರಂಥದಲ್ಲಿ ಪ್ರತಿಪಾದ್ಯ ದೇವತೆಯೆಂತಲೂ, ಯಮಾದಿಗಳೇ ಋಷಿಗಳೆಂತಲೂ ಸಿದ್ಧವಾಗುತ್ತದೆ.

**ಮಂ ||** **ಉಶನ್ಹ ವೈ ವಾಜಶ್ರವಸಃ ಸರ್ವವೇದಸಂ ದದೌ । ತಸ್ಯ ಹ ನಚಿಕೇತಾ ನಾಮ ಪುತ್ರ ಆಸ । ತಂ ಹ ಕುಮಾರಂ ಸಂತಂ ದಕ್ಷಿಣಾಸು ನೀಯಮಾನಾಸು ಶ್ರದ್ಧಾ ವಿವೇಶ ॥ ೧ ||**

ಅ || ವಾಜಶ್ರವಸಃ=ವಾಜಶ್ರವಸ್ ಎಂಬುವ ಋಷಿಗಳ ಗೋತ್ರದಲ್ಲಿ ಹುಟ್ಟಿದ ಉದ್ದಾಲಕರೆಂಬುವ ಋಷಿಗಳು, ಉಶನ್=ಸ್ವರ್ಗಲೋಕವನ್ನು ಇಚ್ಛಿಸದವರಾಗಿ, ಸರ್ವವೇದಸಂ=ತಮಗಿದ್ದ ಸಮಸ್ತ ವಸ್ತುಗಳನ್ನು (ದಕ್ಷಿಣೆಯಾಗಿ ಬ್ರಾಹ್ಮಣರಿಗೆ), ದದೌ=ಕೊಟ್ಟರು, ಹವೈ=ಇದು ಪ್ರಸಿದ್ಧವು, ತಸ್ಯಹ=ಆ ಮಹಾ ಪ್ರಸಿದ್ಧರಾದ ಉದ್ದಾಲಕರಿಗೆ, ನಚಿಕೇತಾ ನಾಮ=ನಚಿಕೇತ ಎಂದು ಪ್ರಸಿದ್ಧನಾದ, ಪುತ್ರಃ=ಮಗನು, ಆಸ=ಇರುತಿದ್ದನು, ಕುಮಾರಂ ಸಂತಂ=ಚಿಕ್ಕ ವಯಸ್ಸಿನಲ್ಲಿರತಕ್ಕವರಾದಾಗ್ಯೂ, ತಂ=ಆ ನಾಚಿಕೇತರನ್ನು, ದಕ್ಷಿಣಾಸು ನೀಯಮಾನಾಸು=ಸರ್ವಸ್ವವನ್ನು ದಕ್ಷಿಣೆಯನ್ನಾಗಿ ಕೊಡುವಾಗ, ಶ್ರದ್ಧಾ=ಆಸ್ತಿಕ್ಯ ಬುದ್ಧಿಯು, ವಿವೇಶ=ಪ್ರವೇಶಮಾಡಿತು, ಹ=ಆಶ್ಚರ್ಯವು.

ತಾ || ವಾಜಶ್ರವಸ್ ಎಂಬ ಋಷಿಗಳ ವಂಶದಲ್ಲಿ ಹುಟ್ಟಿದ್ದ ಉದ್ದಾಲಕರೆಂಬುವ ಹೆಸರುಳ್ಳ ಋಷಿಗಳು ತನಗೆ ಸ್ವರ್ಗಲೋಕ ಪ್ರಾಪ್ತಿಯಾಗಬೇಕೆಂಬ ಇಚ್ಛೆಯಿಂದ ಬ್ರಾಹ್ಮಣರಿಗೆ ತನ್ನ ಮನೆಯಲ್ಲಿರುತ್ತಿದ್ದ ಸಮಸ್ತ ಪದಾರ್ಥಗಳನ್ನು ಕೊಡುವುದಾಗಿ ನಿಶ್ಚಯಿಸಿ ಉಪಕ್ರಮಿಸಿದರು. ಆ ವಸ್ತುಗಳಲ್ಲಿ ಕೆಲವು ಉಪಯುಕ್ತ ಕೆಲವು ಅನುಪಯುಕ್ತ ಪದಾರ್ಥಗಳೂ ಇರುತ್ತಿದ್ದುವು. ಇದನ್ನು ಅವರ ಮಗನಾದ ನಚಿಕೇತರೆಂಬುವರು ಈ ಅನುಪಯುಕ್ತ ಪದಾರ್ಥಗಳನ್ನು ಬ್ರಾಹ್ಮಣರಿಗೆ ಕೊಡುವುದರಿಂದ ತಂದೆಗೆ ಸ್ವರ್ಗವಾಗಲಾರದು; ಮತ್ತು ನರಕಾದ್ಯನರ್ಥವೇ ಆದೀತು, ಆದುದರಿಂದ ಇದನ್ನು ತಂದೆಗೆ ಹೇಳಬೇಕೆಂಬ ಅಭಿಪ್ರಾಯ ಉಂಟಾಯಿತು.

**ಮಂ || ಪೀತೋದಕಾ ಜಗ್ಧತೃಣಾ ದುಗ್ಧದೋಹಾ ನಿರಿಂದ್ರಿಯಾಃ ।**
**ಅನಂದಾ ನಾಮ ತೇ ಲೋಕಾಸ್ತಾನ್ಸಗಚ್ಛತಿ ತಾ ದದತ್ || ೨ ||**

ಅ || ಪೀತೋದಕಾಃ=ಕುಡಿಯಲ್ಪಟ್ಟ ನೀರುಳ್ಳಂಥಾ, ಜಗ್ಧತೃಣಾಃ=ತಿನ್ನಲ್ಪಟ್ಟ ಹುಲ್ಲುವುಳ್ಳಂಥಾ, ದುಗ್ಧದೋಹಾಃ=ಕರೆಯಲ್ಪಟ್ಟ ಹಾಲುವುಳ್ಳಂಥಾ, ನಿರಿಂದ್ರಿಯಾಃ=ಇಂದ್ರಿಯಪಾಟವತಪ್ಪಿದಂಥಾ, ತಾಃ=ಅಂಥಾ ಆಕಳುಗಳನ್ನು, ದದತ್=ದಾನಕೊಡುವ, ಸಃ=ಆವನು, ತೇ=ಆ, ಅನಂದಾನಾಮ=ಸುಖಶೂನ್ಯಗಳಾದ, ಲೋಕಾಃ=ಯಾವ ಲೋಕಗಳಿರುವುವೋ, ತಾನ್=ಅವುಗಳನ್ನು, ಗಚ್ಛತಿ=ಸೇರುತ್ತಾನೆ.

ತಾ || ಅತಿ ದುರ್ಬಲಗಳಾಗಿ ಹಿಂದೆ ನೀರು ಕುಡಿದದ್ದು ಹೊರತು ಇನ್ನುಮುಂದೆ ನೀರು ಕುಡಿಯುವುದಕ್ಕೂ, ಹುಲ್ಲು ತಿನ್ನುವುದಕ್ಕೂ ಹಾಲುಕೊಡುವುದಕ್ಕೂ ಶಕ್ತಿ ಇಲ್ಲದೆ ಇರುವ ಗೋವೇಮೊದಲಾಗಿ ಉಳ್ಳ ಅನುಪಯುಕ್ತ ವಸ್ತುಗಳನ್ನು ದಾನಮಾಡುವುದರಿಂದ ಸ್ವರ್ಗಸುಖವಿಲ್ಲದಿರುವುದು ಮಾತ್ರವಲ್ಲ-ನರಕಾದ್ಯನರ್ಥವೂ ಪ್ರಾಪ್ತಿಯಾಗುತ್ತದೆ ಎಂಬುದಾಗಿ ನಚಿಕೇತರಿಗೆ ಅಭಿಪ್ರಾಯ ಉಂಟಾಯಿತು.

**ಮಂ || ಸ ಹೋವಾಚ ಪಿತರಂ ತತ ಕಸ್ಮೈಮಾಂ ದಾಸ್ಯಸೀತಿ**
**ದ್ವಿತೀಯಂ ತೃತೀಯಂ। ತಂ ಹೋವಾಚ ಮೃತ್ಯವೇ ತ್ವಾ ದದಾನೀತಿ॥**

ಅ || ಹೇ ತತ=ಎಲೋ ತಂದೆಯೇ, ಮಾಂ=ನನ್ನನ್ನು, ಕಸ್ಮೈ=ಯಾರಿಗೋಸ್ಕರ, ದಾಸ್ಯಸಿ=ಕೊಡುತ್ತೀರಿ, ಇತಿ=ಈ ಪ್ರಕಾರವಾಗಿ, ದ್ವಿತೀಯಂ ತೃತೀಯಂ=ಎರಡುಮೂರಾವರ್ತಿ, ಪಿತರಂ=ತಂದೆಯನ್ನು ಕುರಿತು, ಸಃ=ಆ ನಚಿಕೇತನು, ಉವಾಚಹ=ಹೇಳಿದನು, ತಂ=ಆ ಮಗನನ್ನು ಕುರಿತು, ತ್ವಾ=ನಿನ್ನನ್ನು, ಮೃತ್ಯವೇ=ಯಮನಿಗೋಸ್ಕರ, ದದಾನಿ=ಕೊಡುತ್ತೇನೆ, ಇತಿ=ಈರೀತಿಯಾಗಿ, ಉವಾಚಹ=ಹೇಳಿದನು.

ತಾ || ಆ ನಚಿಕೇತನು ಎಲೋ ತಂದೆಯೇ ನನ್ನನ್ನು ಕೊಟ್ಟಾದರೂ ಸರ್ವಸ್ವ ದಾನ ಮಾಡುತ್ತೇನೆಂಬ ಪ್ರತಿಜ್ಞೆಯನ್ನು ಪೂರ್ತಿಕರಿಸು; ಇಂಥಾಗೋವುಗಳನ್ನುಕೊಟ್ಟು ಪ್ರಯೋಜನವಿಲ್ಲ ಎಂಬದಾಗಿ ಎರಡು ಮೂರಾವರ್ತಿ ಹೇಳುವ ಮಾತನ್ನುಕೇಳಿ ಕುಪಿತನಾದ ತಂದೆಯು ಮಗನನ್ನು ಕುರಿತು ನಿನ್ನನ್ನು ಯಮದೇವರಿಗೆ ಕೊಡುತ್ತೇನೆ, ಅಂದರೆ ನೀನು ಸತ್ತುಹೋಗು ಎಂಬುದಾಗಿ ಶಾಪಕೊಟ್ಟರು. ॥ ೩ ॥

**ಮಂ || ಬಹೂನಾಮೇಮಿ ಪ್ರಥಮೋ ಬಹೂನಾಮೇಮಿ ಮಧ್ಯಮಃ ॥**
**ಕಿಂಸ್ವಿದ್ಯಮಸ್ಯ ಕರ್ತವ್ಯಂ ಯನ್ಮಯಾದ್ಯ ಕರಿಷ್ಯತಿ || ೪ ||**

ಅ || ಬಹೂನಾಂ=ಅನೇಕರಲ್ಲಿ, ಪ್ರಥಮಃ=ಮೊದಲನೆಯವನಾಗಿ, (ಯಮಂ=ಯಮದೇವರನ್ನು), ಏಮಿ=ಸೇರುತ್ತೇನೆ, ಬಹೂನಾಂ=ಅನೇಕರಲ್ಲಿ, ಮಧ್ಯಮಃ=ಮಧ್ಯಸ್ಥನಾಗಿ,

ಏಮಿ=ಸೇರುತ್ತೇನೆ, ಯಮಸ್ಯ=ಯಮದೇವರಿಗೆ, ಮಯಾ=ನನ್ನಿಂದ, ಕಿಂಸ್ವಿತ್=ಯಾವದು, ಕರ್ತವ್ಯಂ=ಮಾಡತಕ್ಕದ್ದು, ಯತ್=ಯಾವದು, ಮಯಾ=ನನ್ನಿಂದ, ಅದ್ಯ=ಈಗ, (ಆ ಯಮ ದೇವರು) ಕರಿಷ್ಯತಿ=ಮಾಡುವರೋ.

ತಾ॥ ಸಾಯಲಿಕ್ಕಿರುವವರು ಅನೇಕರು, ಸತ್ತವರೂ ಅನೇಕರು, ನಚಿಕೇತರು ತಾನು ಸಾಯಲಿಕ್ಕಿರುವವರಲ್ಲಿ ಪ್ರಥಮರೆಂದೂ ಸತ್ತವರಲ್ಲಿ ಮಧ್ಯಮರೆಂದೂ ಹೇಳಿ, ತನ್ನಿಂದ ಯಮದೇವರಿಗೆ ಆಗತಕ್ಕ ಪ್ರಯೋಜನವು ಯಾವುದೂ ಇಲ್ಲವೆಂದು ಹೇಳಿ, ಸಿದ್ಧವಾದ ಮರಣ ವನ್ನು ಶಾಪತ್ವೇನ ತಂದೆಗಳು ಕೋಪಾವಿಷ್ಟರಾಗಿ ಕೊಟ್ಟದ್ದಕ್ಕೆ ಆಶ್ಚರ್ಯಪಟ್ಟರು.

**ಮಂ॥ ಅನುಪಶ್ಯ ಯಥಾ ಪೂರ್ವೇ ಪ್ರತಿಪಶ್ಯ ತಥಾಪರೇ।**
**ಸಸ್ಯಮಿವ ಮರ್ತ್ಯಃ ಪಚ್ಯತೆ ಸಸ್ಯಮಿವ ಜಾಯತೆ ಪುನಃ॥ ೫॥**

ಅ॥ ಪೂರ್ವೇ=ಮೊದಲಿನವರು, ಯಥಾ=ಹ್ಯಾಗೆ, (ಮೃತರಾದರೊ) (ಅವರನ್ನು) ಅನುಪಶ್ಯ=ನೋಡಿ, ತಥಾ=ಹಾಗೆಯೇ, ಪರೇ=ಮುಂದಿನವರು ಸಾಯುವರು ಎಂದು, ಪ್ರತಿಪಶ್ಯ= ತಿಳಿದುಕೊಂಡು, ಯಮನನ್ನು ಸೇರುವದರಲ್ಲಿ ದುಃಖಿಸುವದಿಲ್ಲ, ಮರ್ತ್ಯಃ=ಮನುಷ್ಯನು, ಸಸ್ಯಮಿವ=ಪೈರಿನಂತೆ, ಪಚ್ಯತೆ=ಪಕ್ವವಾಗಿ ಸಾಯುತ್ತಾನೆ, ಪುನಃ=ಮತ್ತು, ಸಸ್ಯಮಿವ=ಪೈರಿ ನಂತೆ, ಜಾಯತೆ=ಹುಟ್ಟುತ್ತಾನೆ. ಜನ್ಮ ಮರಣಗಳು ನಿಯತಗಳಾದುದರಿಂದ ವಿಚಾರಪರನು ಅವುಗಳಿಗಾಗಿ ದುಃಖಿಸನು. ಆದುದರಿಂದ ನಚಿಕೇತರು ತಂದೆ ಕೊಟ್ಟ ಶಾಪವನ್ನು ಸಂತೋಷ ದಿಂದ ಸ್ವೀಕಾರಮಾಡಿ ಯಮಪುರಿಯನ್ನು ಕುರಿತು ತೆರಳಿದರು.

**ಮಂ॥ ವೈಶ್ವಾನರಃ ಪ್ರವಿಶತ್ಯತಿಥಿರ್ಬ್ರಾಹ್ಮಣೋ ಗೃಹಾನ್।**
**ತಸ್ಯೈತಾಂ ಶಾಂತಿಂ ಕುರ್ವಂತಿ ಹರ ವೈವಸ್ವತೋದಕಂ॥ ೬॥**

ಅ॥ ಅತಿಥಿಃ=ಅಪೂರ್ವವಾಗಿ ಬಂದ, ಬ್ರಾಹ್ಮಣಃ=ಬ್ರಹ್ಮಜ್ಞಾನಿಯು, ವೈಶ್ವಾನರಃ= ಅಗ್ನಿಯಾಗಿ, ಗೃಹಾನ್=ಮನೆಗಳನ್ನು, ಪ್ರವಿಶತಿ=ಪ್ರವೇಶ ಮಾಡುತ್ತಾನೆ, ತಸ್ಯ=ಆತನಿಗೆ, ಏತಾಂ=ಶಾಸ್ತ್ರೀಯವಾದ, ಶಾಂತಿಂ=ಅರ್ಘ್ಯಾದಿರೂಪ ಮನಸ್ತೃಪ್ತಿಯನ್ನು, ಕುರ್ವಂತಿ= ಮಾಡುತ್ತಾರೆ, (ಕಾರಣ) ಹೇ ವೈವಸ್ವತ=ಎಲೋ ಸೂರ್ಯಪುತ್ರನಾದ ಯಮದೇವರೆ, ಉದಕಂ=ನೀರನ್ನು, ಹರ=ತೆಗದುಕೊಂಡು ಬಾ, ಅಥವಾ ಅರ್ಘ್ಯಾದಿ ಪೂಜೆಯನ್ನು ಮಾಡು.

ತಾ॥ ಬ್ರಹ್ಮಜ್ಞಾನಿಗಳಾದ ಬ್ರಾಹ್ಮಣರು ಅಗ್ನಿದೇವರಿಗೆ ಸಮಾನರು. ಅವರು ಗೃಹಸ್ಥರ ಮನೆಗೆ ಬಂದರೆ ಅತಿಥಿ ಸತ್ಕಾರವು ಮಾಡಬೇಕು. ಇಲ್ಲದಿದ್ದರೆ ಮನೆಯಲ್ಲಿ ಬೆಂಕಿ ಬಿದ್ದ ಹಾಗೆ ಆಗುತ್ತದೆ. ಪ್ರಕೃತ ನಚಿಕೇತರು ಯಮದೇವರ ಮನೆಯಲ್ಲಿ ಮೂರು ದಿನ ಉಪವಾಸ ಮಾಡಿ ಕೊಂಡಿದ್ದರು. ಆದುದರಿಂದ ಯಮದೇವರು ಬಂದ ಕೂಡಲೇ ಅವರ ಹೆಂಡತಿ ಶ್ಯಾಮಳಾ ದೇವಿ ತಕ್ಷಣವೇ ಅತಿಥಿ ಸತ್ಕಾರವನ್ನು ಮಾಡು ಎಂದು ತನ್ನ ಗಂಡನೊಡನೆ ಹೇಳಿದಳು.

**ಮಂ॥ ಆಶಾಪ್ರತೀಕ್ಷೆ ಸಂಗತಂ ಸೂನೃತಾಂ ಚೇಷ್ಟಾಪೂರ್ತೆ ಪುತ್ರಪಶೂಂಶ್ಚ ಸರ್ವಾನ್। ಏತದ್ವೃಂಕ್ತೇ ಪುರುಷಸ್ಯಾಲ್ಪಮೇಧಸೊ ಯಸ್ಯಾನಶ್ನನ್ವ ಸತಿಬ್ರಾಹ್ಮಣೊ ಗೃಹೆ॥ ೭॥**

ಅ॥ ಅಲ್ಪಮೇಧಸಃ=ಅಲ್ಪ=ಮಂದವಾದ, ಮೇಧಸಃ=ಬುದ್ಧಿಯುಳ್ಳ, ಯಸ್ಯ=ಯಾವ, ಪುರುಷಸ್ಯ=ಗ್ರಹಸ್ಥನ, ಗೃಹೇ=ಮನೆಯಲ್ಲಿ, ಬ್ರಾಹ್ಮಣಃ=ಬ್ರಹ್ಮಜ್ಞಾನಿಯು, ಅನಶ್ನನ್=ಊಟ

ಮಾಡದೆ ಇದ್ದವನಾಗಿ, ವಸತಿ=ಇರುತ್ತಾನೋ, ಆತನ ಆಶಾಪ್ರತೀಕ್ಷೆ-ಆಶಾ=ಪ್ರಾಪ್ತವಾಗಿರುವ ಪದಾರ್ಥಗಳಲ್ಲಿರುವ ಇಚ್ಛೆಯು, ಪ್ರತೀಕ್ಷಾ=ಅಪ್ರಾಪ್ತವಾಗಿರುವ ಪದಾರ್ಥಗಳಲ್ಲಿ ಮಾಡುವ ಇಚ್ಛೆಯು, ಸಂಗತಂ=ಸುಹೃತ್ಸಂಬಂಧವನ್ನು, ಸೂನೃತಾಂಚ=ಸತ್ಕೀರ್ತಿಯನ್ನು, ಇಷ್ಟಾಪೂರ್ತೇ=ಯಾಗಗಳು ತಟಾಕಾದಿ ನಿರ್ಮಾಣಗಳು, ಪುತ್ರಪಶೂಂಶ್ಚ=ಮಕ್ಕಳು ಪಶುಗಳು ಇವುಗಳನ್ನು, ಸರ್ವಾನ್=ಎಲ್ಲವನ್ನು, ಏತತ್=ಉಪವಾಸವಾಗಿ ಬ್ರಾಹ್ಮಣನ ಇರುವಿಕೆಯು, ವೃಂಕ್ತೇ=ನಾಶ ಮಾಡುತ್ತದೆ.

ತಾ || ಅತಿಥಿಯು ಮನೆಯಲ್ಲಿ ಉಪವಾಸಿಯಾಗಿದ್ದರೆ ಗೃಹಸ್ಥನ ಯೋಗಕ್ಷೇಮಗಳಿಗೆ ಹಾನಿ ಬರುವುದು. ಮತ್ತು ಆ ವರೆಗೆ ಅವನು ಸಂಪಾದಿಸಿರುವ ಪುಣ್ಯವು ನಷ್ಟವಾಗುತ್ತದೆ. ಆದುದರಿಂದ ಅವಶ್ಯವಾಗಿ ಅತಿಥಿ ಸತ್ಕಾರವನ್ನು ಮಾಡಬೇಕು; ಎಂಬದಾಗಿ ಶ್ಯಾಮಳಾ ದೇವಿಯು ಹೇಳಿದಳು. || ೭ ||

**ಮಂ || ತಿಸ್ರೋ ರಾತ್ರೀರ್ಯದವಾತ್ಸೀರ್ಗೃಹೇ ಮೇ ಅನಶ್ನನ್ ಬ್ರಹ್ಮನ್ನತಿಥಿರ್ನಮಸ್ಯಃ | ನಮಸ್ತೇಽಸ್ತು ಬ್ರಹ್ಮನ್ ಸ್ವಸ್ತಿ ಮೇಽಸ್ತು ತಸ್ಮಾತ್ಪ್ರತಿ ತ್ರೀನ್ವರಾನ್ವೃಣೀಷ್ವ || ೮ ||**

ಅ || (ಹೆ)ಬ್ರಹ್ಮನ್=ಎಲೊಪೂಜ್ಯನಚಿಕೇತರೇ, ನಮಸ್ಯಃ=ವಂದನಾರ್ಹರಾದ, ಅತಿಥಿಃ=ಅತಿಥಿಯಾದ ತಾವು, ಅನಶ್ನನ್=ಊಟಮಾಡದೆ ಇರುವವರಾಗಿ, ಮೇ=ನನ್ನ, ಗೃಹೇ=ಮನೆಯಲ್ಲಿ, ತಿಸ್ರಃ=ಮೂರು, ರಾತ್ರೀಃ=ದಿನಗಳಲ್ಲಿ, ಅವಾತ್ಸೀತ್‌ಯತ್=ವಾಸಮಾಡಿದ್ದಕ್ಕಾಗಿ, ತಸ್ಮಾತ್‌ಪ್ರತಿ=ಆ ದೋಷಪರಿಹಾರಕ್ಕಾಗಿ, ತ್ರೀನ್=ಮೂರು, ವರಾನ್=ವರಗಳನ್ನು, ವೃಣೀಷ್ವ=ಸ್ವೀಕರಿಸಿರಿ, ಬ್ರಹ್ಮನ್=ಪೂಜ್ಯರೇ, ತೇ=ನಿನಗೋಸ್ಕರ, ನಮಃ=ನಮಸ್ಕಾರವು,(ಅಸ್ತು=ಆಗಲಿ)ಮೆ=ನನಗೆ, ಸ್ವಸ್ತಿ=ಮಂಗಲವು, ಅಸ್ತು=ಆಗಲಿ, (ಈ ಪ್ರಕಾರ ಯಮದೇವರು ಹೇಳಿಕೊಂಡರು) ||೮||

ತಾ || ಈ ಎಂಟು ಮಂತ್ರಗಳ ಸಾರಾಂಶವು-ಯಮಕಿಂಕರರ ಬಾಧೆಯು ಅಯೋಗ್ಯರಿಗೆ ಹೊರತು ಬ್ರಹ್ಮಜ್ಞಾನಿಗಳಿಗೆ ಇಲ್ಲ. ಆದುದರಿಂದಲೆ ನಚಿಕೇತರು ಮಿಕ್ಕವರಂತೆ ಯಮದೇವರ ನಿರ್ಬಂಧದಿಂದ ಹೋಗಿ ಕೈ ಕಟ್ಟಿಕೊಂಡು ನಿಲ್ಲಲಿಲ್ಲ. ಸ್ವತಂತ್ರವಾಗಿ ಹೊರಟು ಹೋದರು. ಅಲ್ಲಿಯೂ ಇವರಿಗೆ ಯೋಗ್ಯವಾದ ಉಪಚಾರವೇ ನಡೆಯಿತು. ತನಗಿಂತ ಉತ್ತಮರಾದ ಅತಿಥಿಗಳಿಗೆ ಪೂಜೆಮಾಡಬೇಕೆಂಬುದು ಮಾತ್ರವಲ್ಲ, ತಾನುಯೋಗ್ಯತೆಯಲ್ಲಿ ಹೆಚ್ಚಾಗಿದ್ದರೂ ಅತಿಥಿಗಳಾಗಿ ಬಂದವರಿಗೆ ಪುರುಷರು ಸ್ತ್ರೀಯರು ಯಾರಾದರೂ ತಮ್ಮ ಯೋಗ್ಯತಾನುಸಾರವಾಗಿ ಪೂಜೆಮಾಡತಕ್ಕದ್ದು. || ೧-೮ ||

**ಮಂ || ಶಾಂತಸಂಕಲ್ಪಃ ಸುಮನಾ ಯಥಾ ಸ್ಯಾದ್ವೀತಮನ್ಯುರ್ಗೌತಮೊ ಮಾಽಭಿಮೃತ್ಯೋ | ತ್ವತ್ಪ್ರಸೃಷ್ಟಂ ಮಾಽಭಿವದೇತ್ಪ್ರತೀತ ಏತತ್ತ್ರಯಾಣಾಂ ಪ್ರಥಮಂ ವರಂ ವೃಣೆ || ೯ ||**

ಅ || (ಹೆ) ಮೃತ್ಯೋ=ಎಲೋ ಯಮದೇವರೆ, ಗೌತಮಃ=ನನ್ನ ತಂದೆಗಳು, ಶಾಂತ ಸಂಕಲ್ಪಃ=ನನಗೆ ಅನಿಷ್ಟವಾಗುವದರಲ್ಲಿ ಶಾಂತವಾದ ಅಭಿಪ್ರಾಯವುಳ್ಳವರಾಗಿ, ಸುಮನಾಃ=ಒಳ್ಳೆಮನಸ್ಸುಳ್ಳವರಾಗಿ, ಮಾ ಅಭಿ=ನನ್ನವಿಷಯದಲ್ಲಿ, ವೀತಮನ್ಯುಃ=ಕ್ರೋಧಬಿಟ್ಟವರಾಗಿ,ಯಥಾ ಸ್ಯಾತ್=ಹೇಗೆ ಆಗುವರೋ, ತ್ವತ್ಪ್ರಸೃಷ್ಟಂ=ತಮ್ಮಿಂದ ಬಿಡುಗಡೆ ಹೊಂದಿದ, ಮಾ ಅಭಿ=ನನ್ನನ್ನು ಕುರಿತು, ಪ್ರತೀತಃ=ಇವನು ನನ್ನಮಗನೇಯೆಂಬುವ ಜ್ಞಾನವುಳ್ಳವರಾಗಿಯೂ ಹೇಗೆ, ವದೇತ್=ಹೇಳುವರೊ, ಏತತ್=ಇದನ್ನು, ತ್ರಯಾಣಾಂ=ಮೂರು ವರಗಳ ಮಧ್ಯದಲ್ಲಿ, ಪ್ರಥಮಂ=ಮೊದಲನೆಯಾದ, ವರಂ=ವರವನ್ನಾಗಿ, ವೃಣೆ=ಬೇಡಿಕೊಳ್ಳುತ್ತೇನೆ.

ತಾ. ॥ ಸ್ವಾಮಿ ಯಮದೇವರೆ, ನಮ್ಮ ತಂದೆಗಳಿಗೆ ನನ್ನ ಮೇಲೆ ಉಂಟಾದ ಆಗ್ರಹವು ಸಂಪೂರ್ಣ ಶಾಂತವಾಗಬೇಕು. ನಾನು ಇಲ್ಲಿಂದ ಅವರ ಬಳಿಗೆ ಹೋದ ಮೇಲೆ ತಂದೆ ತಾಯಿ ಮೊದಲಾದವರು ಯಾರು ಇವನು ಹೊಸದಾಗಿ ಬಂದಿದ್ದಾನೆ, ಎಂಬದಾಗಿಯೂ, ಅಥವಾ ಸತ್ತವನು ಪುನಃ ಬಂದಿದ್ದಾನೆ ಎಂಬುವದಾಗಿಯೂ ತಿಳಕೊಳ್ಳಬಾರದು. ಇದನ್ನು ಮೊದಲನೆ ವರವನ್ನಾಗಿ ಕೇಳಿಕೊಳ್ಳುತ್ತೇನೆ ಎಂದು ನಚಿಕೇತರು ಹೇಳಿದರು. ॥ ೯ ॥

**ಮಂ ॥ ಯಥಾ ಪುರಸ್ತಾದ್ಭವಿತಾ ಪ್ರತೀತ ಔದ್ದಾಲಕಿರಾರುಣಿರ್ಮತ್ಪ್ರಸೃಷ್ಟಃ। ಸುಖಂ ರಾತ್ರೀಃ ಶಯಿತಾ ವೀತಮನ್ಯುಸ್ತ್ವಾಂ ದದೃಶಿವಾನ್ಮೃತ್ಯುಮುಖಾತ್ಪ್ರಮುಕ್ತಂ ॥ ೧೦ ॥**

ಅ॥ ಔದ್ದಾಲಕಿಃ=ಉದ್ದಾಲಕ ಪುತ್ರರಾದ, ಆರುಣಿಃ=ಅರುಣಾದೇವಿಯ ಮಗನಾದ, ನೀವು ಮತ್ಪ್ರಸೃಷ್ಟಃ=ನನ್ನಿಂದ ಬಿಡಲ್ಪಟ್ಟವರಾಗಿ, ಯಥಾ ಪುರಸ್ತಾತ್=ದೇಶಾಂತರದಿಂದ ಬಂದವರಂತೆ, ಪ್ರತೀತಃ=ಇವನು ನನ್ನ ಮಗನೆಂದು ತಿಳದವರಾಗಿ, ಭವಿತಾ=ಆಗುವಿರಿ (ನಿಮ್ಮ ತಂದೆಗಳು), ರಾತ್ರೀಃ=ರಾತ್ರಿಕಾಲಗಳಲ್ಲಿ, ಸುಖಂ=ಸುಖವಾಗಿ, ಶಯಿತಾ=ನಿದ್ರೆಮಾಡುವರು. ಮೃತ್ಯುಮುಖಾತ್=ಮೃತ್ಯುದೇವತೆಯ ಬಾಯಿಯಿಂದ, ಪ್ರಮುಕ್ತಂ=ಬಿಡಲ್ಪಟ್ಟ, ತ್ವಾಂ=ನಿನ್ನನ್ನು, ವೀತಮನ್ಯುಃ=ಕೋಪರಹಿತರಾಗಿ, ದದೃಶಿವಾನ್=ನೋಡುತ್ತಾರೆ.

ತಾ ॥ ಉದ್ದಾಲಕರಿಂದ ಅರುಣಾಯೆಂಬ ಹೆಸರುಳ್ಳ ಭಾರ್ಯೆಯಲ್ಲಿ ಹುಟ್ಟಿದ ನಚಿಕೇತರೆ, ನೀವು ಇಲ್ಲಿಂದ ಭೂಲೋಕಕ್ಕೆ ನಿಮ್ಮ ಮನೆಗೆ ಹೋಗಿರಿ. ಅಲ್ಲಿ ನಿಮ್ಮ ತಂದೆಗಳು ಮುಂತಾದವರು ನಿಮ್ಮನ್ನು ಗ್ರಾಮಾಂತರಕ್ಕೆ ಹೋಗಿ ಬಂದವನ ಹಾಗೆ ತಿಳಕೊಳ್ಳುತ್ತಾರೆ. ಅವರು ನಿಮ್ಮ ಮೇಲೆ ಉಂಟಾಗಿರುವ ಕೋಪದಿಂದ ರಾತ್ರಿಗಳಲ್ಲಿ ನಿದ್ರೆ ಬಾರದೆ ಇದ್ದವರು ಸುಖವಾಗಿ ನಿದ್ರೆ ಮಾಡುವರು. ಮೃತ್ಯುವಾದ ನನ್ನ ಬಾಯಿಗೆ ಗ್ರಾಸವಾಗಿ ಬಂದ ನೀವು ಈಗ ನನ್ನ ಅನುಗ್ರಹದಿಂದ ಬದುಕಿದ್ಧೀರಿ. ಅಂಥಹ ನಿಮ್ಮನ್ನು ಸೌಮ್ಯದೃಷ್ಟಿಯಿಂದ ನೋಡಿ ಸಂತೋಷಪಡುತ್ತಾರೆ, ನಿಮಗೆ ಕ್ಷೇಮವು ಆಗುತ್ತಿದೆ ಎಂದು ಹೇಳಿ ಮೊದಲನೇ ವರವನ್ನು ಕೊಟ್ಟರು. ॥ ೧೦ ॥

**ಮಂ ॥ ಸ್ವರ್ಗೇ ಲೋಕೇ ನ ಭಯಂ ಕಿಂಚನಾಸ್ತಿ ನ ತತ್ರ ತ್ವಂ ಜರಯಾ ಬಿಭೇತಿ। ಉಭೇ ತೀರ್ತ್ವಾ ಅಶನಾಯಾಪಿಪಾಸೆ ಶೋಕಾತಿಗೋ ಮೋದತೇ ಸ್ವರ್ಗಲೋಕೇ ॥ ೧೧ ॥**

ಅ॥ ಸ್ವರ್ಗೇಲೋಕೆ=ಭಗವಂತನ ಲೋಕದಲ್ಲಿ, ಕಿಂಚನ=ಯಾವುದೊಂದು, ಭಯಂ=ಭೀತಿಯು, ನಾಸ್ತಿ=ಇರುವುದಿಲ್ಲ, ತತ್ರ=ಆ ಸ್ವರ್ಗಲೋಕದಲ್ಲಿ, ತ್ವಂ=ನೀನು, ನಾಸ್ತಿ=(ಶಿಕ್ಷಕನಾಗಿ)ಇರುವುದಿಲ್ಲ, (ಆ ಲೋಕವನ್ನು ಹೊಂದಿದವನು), ಜರಯಾ=ವಾರ್ಧಿಕ್ಯದಿಂದ, ನಬಿಭೇತಿ=ಭಯಗ್ರಸ್ತನಾಗುವದಿಲ್ಲ, ಸ್ವರ್ಗಲೋಕೆ=ಅಂಥಾ ಸ್ವರ್ಗಲೋಕದಲ್ಲಿ (ಇರತಕ್ಕವನು) ಅಶನಾಯಾಪಿಪಾಸೆ=ಹಸಿವೆನೀರಡಿಕೆಯೆಂಬುವ, ಉಭೆ=ಎರಡನ್ನು, ತೀರ್ತ್ವಾ=ದಾಟಿ, ಶೋಕಾತಿಗಃ=ವ್ಯಸನಗಳನ್ನು ದಾಟದವನಾಗಿ, ಮೋದತೆ=ಸಂತೋಷಪಡುತ್ತಾನೆ.

ತಾ॥ ಸ್ವರ್ಗಲೋಕದಲ್ಲಿ ಯಾವ ವಿಧವಾದ ಭೀತಿಯೂ ಇಲ್ಲ. ಅಲ್ಲಿ ನಿಮ್ಮ ಅಧಿಕಾರವೇ ಇಲ್ಲ. ಆದುದರಿಂದ ಮರಣವು ಎಲ್ಲಿಂದ ಬರುವದು? ಅದಲ್ಲದೆ ವಾರ್ಧಿಕ್ಯಾವಸ್ಥೆಯೂ ಇಲ್ಲ. ಮತ್ತು ಹಸಿವೆ ನೀರಡಿಕೆಗಳೆಂಬ ಎರಡು ಕಷ್ಟಗಳೂ ಇಲ್ಲ. ಅಲ್ಲಿಗೆ ಹೋದವರು ಯಾವ ವಿಧಗಳಾದ ವ್ಯಸನಗಳಿಲ್ಲದೆ ಸುಖವಾಗಿ ವಾಸಮಾಡುತ್ತಾರೆಂದು ಕೇಳಿದ್ಧೇನೆ. ॥ ೧೧ ॥

**ಮಂ || ಸ ತ್ವಮಗ್ನಿಂ ಸ್ವರ್ಗ್ಯಮಧ್ಯೇಷಿ ಮೃತ್ಯೋ ಪ್ರಬ್ರೂಹಿ ತಂ ಶ್ರದ್ದಧಾನಾಯ ಮಹ್ಯಂ । ಸ್ವರ್ಗಲೋಕಾ ಅಮೃತತ್ವಂ ಭಜಂತೇ ಏತದ್ದ್ವಿತೀಯೇನ ವೃಣೇ ವರೇಣ || ೧೨ ||**

ಅ || ಹೆ ಮೃತ್ಯೋ=ಯಮದೇವರೆ, ಸ ತ್ವಂ=ನನಗೆ ವರವನ್ನುಕೊಟ್ಟ ನೀವು, ಸ್ವರ್ಗ್ಯಂ=ಹಿಂದೆ ಹೇಳಿದ ಸ್ವರ್ಗಲೋಕಕ್ಕೆ ಸಾಧನವಾದ, ಅಗ್ನಿಂ=ಅಗ್ನಿಯನ್ನು, ತದಂತರ್ಯಾಮಿಯಾದ ಅಗ್ನಿಶಬ್ದವಾಚ್ಯನಾದ ಪರಮಾತ್ಮನನ್ನು, ಅಧ್ಯೇಷಿ=ತಿಳಿದವರಾಗಿರುತ್ತೀರಿ, ಸ್ವರ್ಗಲೋಕಾಃ=ಸ್ವರ್ಗಲೋಕವನ್ನು ಸೇರಿದವರು, ಅಮೃತತ್ವಂ=ಮುಕ್ತಿಯನ್ನು, ಭಜಂತೆ=ಪಡಿಯುವರು, ಶ್ರದ್ದಧಾನಾಯ=ಆಸ್ತಿಕ್ಯ ಬುದ್ಧಿವುಳ್ಳ, ಮಹ್ಯಂ=ನನಗೋಸ್ಕರ, ತಂ=ಆ ಅಗ್ನಿನಾಮಕ ಪರಮಾತ್ಮನ ಸ್ವರೂಪವನ್ನು, ಪ್ರಬ್ರೂಹಿ=ಉಪದೇಶಿಸಿರಿ, ಏತತ್=ಇದನ್ನು, ದ್ವಿತೀಯೇನ=ಎರಡನೆಯಾದ, ವರೇಣ=ವರದಿಂದ (ವರವನ್ನಾಗಿ), ವೃಣೇ=ಬೇಡಿಕೊಳ್ಳುತ್ತೇನೆ.

ತಾ || ಅಂಥಾ ಸ್ವರ್ಗವನ್ನು ಮತ್ತು ಮೋಕ್ಷವನ್ನು ಕೊಡತಕ್ಕ ಅಗ್ನಿಯ ಸ್ವರೂಪವನ್ನು ಆ ಅಗ್ನ್ಯಂತರ್ಗತ ಪರಮಾತ್ಮಸ್ವರೂಪವನ್ನು ನೀವು ತಿಳಕೊಂಡಿದ್ದೀರಿ. ಅದನ್ನು ನನಗೆ ಉಪದೇಶಮಾಡಿರಿ. ಸ್ವರ್ಗವನ್ನು ಹೊಂದಿದವರು ಅಲ್ಲಿ ಮನ್ವಂತರಕಾಲಪರಿಯಂತವಾಗಿ ಇದ್ದು ಕ್ರಮೇಣ ಮೋಕ್ಷವನ್ನು ಹೊಂದಬಹುದೆಂದು ಕೇಳಿದ್ದೇನೆ. ಆದುದರಿಂದ ಇದು ನನಗೆ ಎರಡನೆಯ ವರವಾಗಿರಲಿ ಎಂದು ನಚಿಕೇತರು ಯಮದೇವರನ್ನು ಕುರಿತು ಹೇಳಿದರು. || ೧೨ ||

**ಮಂ || ಪ್ರ ತೇ ಬ್ರವೀಮಿ ತದು ಮೇ ನಿಬೋಧ ಸ್ವರ್ಗ್ಯಮಗ್ನಿಂ ನಚಿಕೇತಃ ಪ್ರಜಾನನ್ । ಅನಂತ ಲೋಕಾಪ್ತಿಮಥೋ ಪ್ರತಿಷ್ಠಾಂ ವಿದ್ಧಿ ತ್ವಮೇತಂ ನಿಹಿತಂ ಗುಹಾಯಾಂ || ೧೩ ||**

ಅ || ನಚಿಕೇತಃ=ನಚಿಕೇತರೆ, ಸ್ವರ್ಗ್ಯಂ=ಸ್ವರ್ಗಸಾಧನವಾದ, ಅಗ್ನಿಂ=ಅಗ್ನಿನಾಮಕ ಪರಮಾತ್ಮನನ್ನು, ಪ್ರಜಾನನ್=ತಿಳಕೊಂಡಿರುವ ನಾನು, ತೇ=ನಿಮಗೋಸ್ಕರ, ಪ್ರಬ್ರವೀಮಿ=ಚೆನ್ನಾಗಿ ಹೇಳುತ್ತೇನೆ, ತದು=ಆ ಪರಮಾತ್ಮನಸ್ವರೂಪವನ್ನು, ಮೇ=ನನ್ನ ದೆಶೆಯಿಂದ, ನಿಬೋಧ=ತಿಳಿಯಿರಿ, ಅನಂತಲೋಕಾಪ್ತಿಂ = ವಿಷ್ಣುಲೋಕವನ್ನು ಹೊಂದಿಸುವ, ಅಥೊ = ಮತ್ತು, ಪ್ರತಿಷ್ಠಾಂ=ಸರ್ವಲೋಕಕ್ಕೂ ಧಾರಕನಾದ, ಗುಹಾಯಾಂ=ಸರ್ವ ಪ್ರಾಣಿಗಳ ಹೃದಯದಲ್ಲಿ, ನಿಹಿತಂ=ವಾಸಮಾಡುವ, ಏತಂ=ಪರಮಾತ್ಮನನ್ನು, ತ್ವಂ=ನೀವು, ವಿದ್ಧಿ=ತಿಳಿಯಿರಿ. || ೧೩ ||

**ಮಂ || ಲೋಕಾದಿಮಗ್ನಿಂ ತಮುವಾಚ ತಸ್ಮೈ ಯಾ ಇಷ್ಟಕಾ ಯಾವತೀರ್ವಾ ಯಥಾ ವಾ । ಸ ಚಾಪಿ ತತ್ಪ್ರತ್ಯವದದ್ಯಥೋಕ್ತಮಥಾಸ್ಯ ಮೃತ್ಯುಃ ಪುನರಾಹ ತುಷ್ಟಃ || ೧೪ ||**

ಅ || ಲೋಕಾದಿಂ=ಸರ್ವ ಲೋಕಕ್ಕೂ ಸೃಷ್ಟಿಕರ್ತನಾದ, ತಂ=ಆ, ಅಗ್ನಿಂ=ಅಗ್ನ್ಯಂತರ್ಗತ ಅಗ್ನಿನಾಮಕ ಪರಮಾತ್ಮನನ್ನು, ತಸ್ಮೈ=ಆ ನಚಿಕೇತರಿಗೋಸ್ಕರ, ಉವಾಚ=ಹೇಳಿದರು, ಯಾಃ=ಯಾವ, ಇಷ್ಟಕಾಃ=ಚಯನಸ್ಥ ಇಟ್ಟಿಕೆಗಳ ದೇವತೆಗಳನ್ನು, ಯಾವತೀಃ=ಎಷ್ಟು ಸಂಖ್ಯೆವುಳ್ಳವುಗಳೊ, ಯಥಾವಾ=ಅವುಗಳ ಪರಿಮಾಣಗಳನ್ನೂ, (ಉವಾಚ = ಹೇಳಿದರು), ಸಚಾಪಿ=ಆ ನಚಿಕೇತರಾದರೂ, ಯಥೋಕ್ತಂ=ಹ್ಯಾಗೆ ಹೇಳಲ್ಪಟ್ಟದೋ ಯಮದೇವರಿಂದ, (ತಥಾ=ಹಾಗೆ), ಪ್ರತ್ಯವದತ್=ಅನುವಾದ ಮಾಡಿದರು, ತಿರುಗಿ ಹೇಳಿದರು, ಅಥ=ಅನಂತರದಲ್ಲಿ, ಅಸ್ಯ=ಈ ನಚಿಕೇತರಿಗೆ, ತುಷ್ಟಃ=ತೃಪ್ತರಾದ, ಮೃತ್ಯುಃ=ಯಮದೇವರು, ಪುನಃ=ಮತ್ತು, ಆಹ=ಹೇಳಿದರು.

ತಾ ॥ ಓ ನಚಿಕೇತರೆ, ಸ್ವರ್ಗಾಗ್ನಿಯ ಸ್ವರೂಪವು ನನಗೆ ತಿಳಿದಿರುವುದು. ನಾನು ನಿಮಗೆ ಹೇಳುತ್ತೇನೆ ತಿಳಕೊಳ್ಳಿರಿ. ನೀವು ಪ್ರಶ್ನೆ ಮಾಡಿದ ಅಗ್ನ್ಯಂತರ್ಗತ ಪರಮಾತ್ಮನು ನಾಶರಹಿತವಾದ ವೈಕುಂಠ ಲೋಕಕ್ಕೆ ಹೋಗುವದಕ್ಕೆ ಕಾರಣನು. ಸರ್ವ ಜಗತ್ತಿಗೂ ಸ್ಥಿತಿ ಕಾರಣನೂ ಸರ್ವ ಪ್ರಾಣಿಗಳ ಹೃದಯಗಳಲ್ಲಿಯೂ ವಾಸ ಮಾಡುತ್ತಾನೆ. ॥ ೧೪ ॥ ಮತ್ತು ಆ ಅಗ್ನಿನಾಮಕ ಪರಮಾತ್ಮನು ಸರ್ವ ಪ್ರಪಂಚಕ್ಕೂ ಆದಿಕಾರಣನು ಎಂಬುದಾಗಿ ನಚಿಕೇತರು ಮಾಡಿದ ಪ್ರಶ್ನೆಗೆ ಉತ್ತರ ಹೇಳಿ ಮತ್ತು ಅಗ್ನಿಚಯನಕ್ಕೆ ಉಪಯುಕ್ತವಾದ ಇಟ್ಟಿಗೆಗಳು ಮುನ್ನೂರ ಅರವತ್ತು (360) ಅಪೇಕ್ಷಿತವೆಂತಲೂ, ಆ ಇಟ್ಟಿಗೆಗಳಿಗೆ ಮುನ್ನೂರ ಅರವತ್ತು ದೇವತೆಗಳು ಅಭಿಮಾನಿಗಳೆಂತಲೂ ಹೇಳಿ ಆ ದೇವತೆಗಳ ಸ್ವರೂಪಗಳನ್ನೂ ಮಹಿಮೆಗಳನ್ನೂ ಪರಿಮಾಣಗಳನ್ನೂ ಹೇಳಿದರು. ಆಮೇಲೆ ಈ ರೀತಿಯಾಗಿ ಯಮದೇವರಿಂದ ಉಪದೇಶ ಮಾಡಲ್ಪಟ್ಟ ಪ್ರಮೇಯವನ್ನು ನಚಿಕೇತರು ಅವರು ಹೇಳಿದಂತೆ ಹೆಚ್ಚು ಕಡಿಮೆ ಇಲ್ಲದೆ ಅನುವಾದ ಮಾಡಿದರು. ಅದನ್ನು ಯಮದೇವರು ಕೇಳಿ ಸಂತೋಷದಿಂದ ಅವರನ್ನು ಕುರಿತು ಮಾತನಾಡಿದರು. ॥ ೧೫ ॥

ಮಂ ॥ **ತಮಬ್ರವೀತ್ಪ್ರೀಯಮಾಣೋ ಮಹಾತ್ಮಾ ವರಂ ತವೇಹಾದ್ಯ**
**ದದಾಮಿ ಭೂಯಃ । ತವೈವ ನಾಮ್ನಾ ಭವಿತಾಯಮಗ್ನಿಃ**
**ಶೃಂಕಾಂ ಚೇಮಾಮನೇಕರೂಪಾಂ ಗೃಹಾಣ ॥ ೧೬ ॥**

ಅ ॥ ತಂ=ಆ ನಚಿಕೇತರನ್ನು ಕುರಿತು, ಪ್ರೀಯಮಾಣಃ=(ಸನ್)=ಸಂತೋಷವನ್ನು ಹೊಂದಿದವರಾಗಿ, ಮಹಾತ್ಮಾ=ಮಹಾಮನಸ್ಸುಳ್ಳ ಯಮದೇವರು, ತವ=ನಿಮಗೆ, ಅದ್ಯ=ಈಗ, ಇಹ=ಈ ಚಿತಿವಿಷಯದಲ್ಲಿ, ಭೂಯಃ=ಮತ್ತು, ವರಂ=ಒಂದು ವರವನ್ನು, ದದಾಮಿ=ಕೊಡುತ್ತೇನೆ, ಅಯಂ=ಈ, ಅಗ್ನಿಃ=ಚಯನಾಗ್ನಿಯು, ತವ=ನಿಮ್ಮ, ನಾಮ್ನೈವ=ಹೆಸರಿನಿಂದಲೇ, ಭವಿತಾ=ಪ್ರಸಿದ್ಧನಾಗಿರುತ್ತಾನೆ, ಅನೇಕರೂಪಾಂ=ಸ್ವರ್ಣಮಯವಾದ, ಇಮಾಂ=ಈ, ಶೃಂಕಾಂ ಚ=ಕಂಠಮಾಲಿಕೆಯನ್ನು ಕೂಡಾ, ಗೃಹಾಣ=ತೆಗೆದುಕೊಳ್ಳಿರಿ, (ಇತಿ=ಈ ಪ್ರಕಾರವಾಗಿ), ಅಬ್ರವಿತ್=ಹೇಳಿದರು. ॥ ೧೬ ॥

ತಾ ॥ ಯಮದೇವರು ನಚಿಕೇತರನ್ನು ಕುರಿತು, ನನಗೆ ನಿಮ್ಮಲ್ಲಿ ಬಹಳ ಪ್ರೀತಿವುಂಟಾಗಿರುವುದು. ಹಿಂದೆ ನಿಮಗೆ ಕೊಡುವುದಾಗಿ ಹೇಳಿದ ಮೂರು ವರಗಳು ಅಲ್ಲದೆ ಮತ್ತೊಂದು ಅವಾಂತರ ವರವನ್ನು ನಿಮಗೆ ಕೊಡುತ್ತೇನೆ. ಚಯನಸ್ಥ ಅಗ್ನಿಗೆ ನಿಮ್ಮ ಸಂಬಂಧವುಳ್ಳ ನಾಚಿಕೇತಾಗ್ನಿಯೆಂದು ಹೆಸರು ಉಂಟಾಗಲಿ. ಮತ್ತು ಈ ಸುವರ್ಣಹಾರವನ್ನು ಕೊಡುತ್ತೇನೆ, ತೆಗೆದುಕೊಳ್ಳಿರಿ. ॥ ೧೬ ॥

ಮಂ ॥ **ತ್ರಿನಾಚಿಕೇತಸ್ತ್ರಿಭಿರೇತ್ಯ ಸಂಧಿಂ ತ್ರಿಕರ್ಮಕೃತ್ತರತಿ ಜನ್ಮಮೃತ್ಯೂ ।**
**ಬ್ರಹ್ಮಜಜ್ಞಂ ದೇವಮೀಡ್ಯಂ ವಿದಿತ್ವಾ**
**ನಿಚಾಯ್ಯೇಮಾಂ ಶಾಂತಿಮತ್ಯಂತಮೇತಿ ॥ ೧೭ ॥**

ಅ ॥ ತ್ರಿನಾಚಿಕೇತಃ=ಮೂರಾವರ್ತಿ ನಾಚಿಕೇತಾಗ್ನಿಚಯನವನ್ನು ಮಾಡುವ ಪುರುಷನು, ತ್ರಿಭಿಃ=ಮೂರು ವೇದಗಳಿಂದ, ಸಂಧಿಂ=ಸಂಧಾನವನ್ನು, ಏತ್ಯ=ಪ್ರಾಪಿಸಿ, ತ್ರಿಕರ್ಮಕೃತ್=ಯಜ್ಞ-ದಾನ-ತಪಸ್ಸು ಎಂಬುವ ಮೂರು ಕರ್ಮಗಳನ್ನು ಮಾಡುವವನು, ಜನ್ಮಮೃತ್ಯೂ=ಜನ್ಮ=ಉತ್ಪತ್ತಿಯು, ಮೃತ್ಯೂ=ಮರಣವು, ಇವುಗಳನ್ನು, ತರತಿ=ದಾಟುತ್ತಾನೆ, ಬ್ರಹ್ಮಜಜ್ಞಂ=ವೇದಗಳಿಂದ ಉದ್ಭವಿಸಿದವನೂ ಸರ್ವಜ್ಞನೂ ಆಗಿ ಇರುವ, ದೇವಂ=ಕ್ರೀಡಾದಿ ಗುಣಸಂಪನ್ನ

ನಾದ, ಈಡ್ಯಂ=ಸ್ತೋತ್ರಾರ್ಹನಾದ ಪರಮಾತ್ಮನನ್ನು, ನಿಚಾಯ್ಯ=ವಿಚಾರ ಮಾಡಿಯೂ, ವಿದಿತ್ವಾ ಚ=ಸಾಕ್ಷಾತ್ಕರಿಸಿಕೊಂಡು, ಇಮಾಂ=ಇಂತಹ (ಪೂರ್ವೋಕ್ತ ಜನ್ಮಮೃತ್ಯುತ್ತರಣ ರೂಪವಾದ) ಶಾಂತಿಂ=ಅತ್ಯಂತ ಸುಖರೂಪವಾದ ಮೋಕ್ಷವನ್ನು, ಅತ್ಯಂತಂ=ನಿಶ್ಚಯವಾಗಿ, ಏತಿ=ಹೊಂದುತ್ತಾನೆ.

ತಾ ॥ ನಾಚಿಕೇತಾಗ್ನಿಚಯನವನ್ನು ಮೂರಾವರ್ತಿ ಮಾಡಿ ಋಗ್ಯಜುಸ್ಸಾಮಗಳೆಂಬುವ ಮೂರು ವೇದಗಳಲ್ಲಿ ಹೇಳಿದ ಪ್ರಕಾರ ಯಜ್ಞದಾನ ತಪಸ್ಸುಗಳನ್ನು ಮಾಡುತ್ತಾ ಇರುವ ಪುರುಷನು ಜನನ ಮರಣ ರಹಿತನಾಗುತ್ತಾನೆ; ಮಾತ್ರವಲ್ಲ, ಹಿಂದೆ ಹೇಳಿದ ಚಯನಾದಿ ಕರ್ಮಗಳಿಂದ ವೇದಾದಿಗಳಿಂದಲೇ ತಿಳಿಯಲಿಕ್ಕೆ ಯೋಗ್ಯನಾಗಿಯೂ, ಸರ್ವಜ್ಞನಾಗಿಯೂ, ಸ್ತುತ್ಯನಾಗಿ ಇರತಕ್ಕ ಪರಮಾತ್ಮನನ್ನು ಸಾಕ್ಷಾತ್ಕರಿಸಿ ಅವನನ್ನು ಧ್ಯಾನಮಾಡುತ್ತಾ ಇದ್ದರೆ ಅತ್ಯಂತ ಸುಖರೂಪವಾದ ಮೋಕ್ಷವನ್ನು ಪ್ರಾಪಿಸುತ್ತಾನೆ. ॥ ೧೭ ॥

**ಮಂ ॥ ತ್ರಿನಾಚಿಕೇತಸ್ತ್ರಯಮೇತದ್ವಿದಿತ್ವಾ ಯ ಏವಂ ವಿದ್ವಾಂಶ್ಚಿನುತೇ ನಾಚಿಕೇತಂ । ಸ ಮೃತ್ಯುಪಾಶಾನ್ಪುರತಃ ಪ್ರಣೋದ್ಯ ಶೋಕಾತಿಗೋ ಮೋದತೇ ಸ್ವರ್ಗಲೋಕೇ ॥ ೧೭ ॥**

ಅ ॥ ಯಃ=ಯಾವ, ವಿದ್ವಾನ್=ಬ್ರಹ್ಮಜ್ಞಾನಿಯು, ತ್ರಿನಾಚಿಕೇತಃ=ಮೂರಾವರ್ತಿ ನಾಚಿಕೇತಾಗ್ನಿಚಯನವನ್ನು ಮಾಡುವವನಾಗಿ, ಏತತ್ತ್ರಯಂ=ಈ ಮೂರನ್ನು ಅಂದರೆ ಚಯನಸ್ಥ ಇಟ್ಟಿ ಕಲ್ಲುಗಳ ದೇವತೆಗಳನ್ನು, ಅವುಗಳ ಸಂಖ್ಯೆಯನ್ನು, ಅವುಗಳ ಪರಿಮಾಣವನ್ನು, ವಿದಿತ್ವಾ=ತಿಳಿದುಕೊಂಡು, ಏವಂ=ಪೂರ್ವೋಕ್ತ ಪ್ರಕಾರ, ನಾಚಿಕೇತಂ=ನಾಚಿಕೇತಾಗ್ನಿಚಯನವನ್ನು, ಚಿನುತೇ=ಮಾಡುವನೊ, ಸಃ=ಅವನು, ಪುರತಃ=ಮುಂದೆಯಿರುವ, ಮೃತ್ಯುಪಾಶಾನ್=ಯಮಪಾಶಗಳನ್ನು, ಪ್ರಣೋದ್ಯ=ನಿರಾಕರಿಸಿ, ಸ್ವರ್ಗಲೋಕೇ=ವಿಷ್ಣುಲೋಕದಲ್ಲಿ, ಶೋಕಾತಿಗಃ=ವ್ಯಸನಗಳನ್ನು ದಾಟಿದವನಾಗಿ, ಮೋದತೇ=ಸುಖವನ್ನು ಅನುಭವಿಸುತ್ತಾನೆ. ॥ ೧೭ ॥

**ಮಂ ॥ ಏಷ ತೇಽಗ್ನಿರ್ನಾಚಿಕೇತಃ ಸ್ವರ್ಗ್ಯೋ ಯಮವೃಣೀಥಾ ದ್ವಿತೀಯೇನ ವರೇಣ । ಏತಮಗ್ನಿಂ ತವೈವ ಪ್ರವಕ್ಷ್ಯಂತಿ ಜನಾಸಸ್ತೃತೀಯಂ ವರಂ ನಚಿಕೇತೋ ವೃಣೀಷ್ವ ॥ ೧೮ ॥**

ಅ ॥ ದ್ವಿತೀಯೇನ=ಎರಡನೇದಾದ, ವರೇಣ=ವರದಿಂದ, ಯಂ=ಯಾವದನ್ನು, ಅವೃಣೀಥಾಃ=ಪಶ್ನೆಮಾಡಿದಿರೋ,ಏಷಃ=ಈ, ಸ್ವರ್ಗ್ಯಃ=ಸ್ವರ್ಗಸಾಧನವಾದ,ನಾಚಿಕೇತಃ ಅಗ್ನಿಃ=ನಾಚಿಕೇತಾಗ್ನ್ಯಂತರ್ಗತನಾದ ಪರಮಾತ್ಮನು, ತೇ=ನಿಮಗೋಸ್ಕರ (ಹೇಳಲ್ಪಟ್ಟನು), ಏತಂ=ಈ, ಅಗ್ನಿಂ=ಅಗ್ನಿಯನ್ನು, ಜನಾಸಃ=ಜನರುಗಳು, ತವ=ನಿಮ್ಮಗಳ, ನಾಮ್ನೈವ=ಹೆಸರಿನಿಂದಲೇ, ಪ್ರವಕ್ಷ್ಯಂತಿ=ಹೇಳುತ್ತಾರೆ, ನಚಿಕೇತಃ=ಎಲೋ ನಚಿಕೇತರೆ, ತೃತೀಯಂ=ಮೂರನೆದಾದ, ವರಂ=ವರವನ್ನು, ವೃಣೀಷ್ವ=ಬೇಡಿಕೊಳ್ಳಿರಿ.

ತಾ ॥ ನಚಿಕೇತರೇ, ನೀವು ಎರಡನೇ ವರ ಕೇಳಿಕೊಂಡದ್ದಕ್ಕೆ ನಾಚಿಕೇತಾಗ್ನಿ ಸ್ವರೂಪವನ್ನು ನಿಮಗೆ ಉಪದೇಶ ಮಾಡಿದೆನು. ಈ ಅಗ್ನಿಯನ್ನು ಮೊದಲು ತಿಳಕೊಂಡವರು ನೀವೆ ಆದುದರಿಂದ ಈದಿನ ಮೊದಲು ಚಯನಾಗ್ನಿಯನ್ನು ನಾಚಿಕೇತಾಗ್ನಿಯೆಂದು ಜನರು ಹೇಳುವರು. ಎರಡನೆ ವರವಾಯಿತು. ಮೂರನೆ ವರವನ್ನು ಕೇಳಿಕೊಳ್ಳಿರಿ ಎಂದು ಯಮದೇವರು ಹೇಳಿದರು. ॥ ೧೮ ॥

ಮಂ || ಯೇಯಂ ಪ್ರೇತೇ ವಿಚಿಕಿತ್ಸಾ ಮನುಷ್ಯೇ ಅಸ್ತೀತ್ಯೇಕೇ ನಾಯಮ ಸ್ತೀತಿ ಚೈಕೇ । ಏತದ್ವಿದ್ಯಾಮನುಶಿಷ್ಟಸ್ತ್ವಯಾಹಂ ವರಾಣಾಮೇಷ ವೃತಸ್ತೃತೀಯಃ || ೧೯

- || ಪ್ರೇತೇ=ಮೃತನಾದ ಮತ್ತು ಮುಕ್ತನಾದ, ಮನುಷ್ಯೇ=ಪುರುಷನ ವಿಷಯದಲ್ಲಿ, (ಶ್ರೀ ಪರಮಾತ್ಮನು ನಿಯಾಮಕನಾಗಿ), ಅಸ್ತಿ=ಇದ್ದಾನೆ, ಇತಿ=ಈಪ್ರಕಾರವಾಗಿ, ಏಕೇ= ಕೆಲವರು ಹೇಳುತ್ತಾರೆ, ಅಯಂ=ಈ ಪರಮಾತ್ಮನು, ನಾಸ್ತೀತಿ=ನಿಯಾಮಕನಲ್ಲವೆಂದು, ಏಕೇ=ಕೆಲವರು ಹೇಳುತ್ತಾರೆ, (ಇತಿ=ಈಪ್ರಕಾರವಾದ), ಯೇಯಂ=ಈ, ವಿಚಿಕಿತ್ಸಾ=ಸಂದೇ ಹವು, ಏತತ್=ಈ ಸಂದೇಹವಿಷಯವಾದ ಮೃತ ಮತ್ತು ಮುಕ್ತನಾದ ಪುರುಷನಿಗೆ ಪ್ರೇರಕ ನಾದ ಶ್ರೀಪರಮಾತ್ಮನ ಸ್ವರೂಪವನ್ನು, ಅಹಂ=ನಾನು, ತ್ವಯಾ=ನಿಮ್ಮಿಂದ, ಅನುಶಿಷ್ಟಃ=ಶಿಕ್ಷಿತ ನಾಗಿ, ವಿದ್ಯಾಂ=ತಿಳಕೊಳ್ಳುತ್ತೇನೆ, ವರಾಣಾಂ=ವರಗಳ ಮಧ್ಯದಲ್ಲಿ, ಏಷಃ=ಇದು, ತೃತೀಯಃ= ಮೂರನೇಯದಾಗಿ, ವೃತಃ=ಕೇಳಿಕೊಳ್ಳಲ್ಪಟ್ಟಿತು. || ೧೯ ||

ತಾ || ಸ್ಥೂಲದೇಹವನ್ನು ಬಿಟ್ಟು ಮೃತನಾದ ಜೀವನು, ಸೂಕ್ಷ್ಮದೇಹವನ್ನು ಬಿಟ್ಟು ಮುಕ್ತನಾದ ಜೀವನು, ಇವರುಗಳಲ್ಲಿ ಶ್ರೀ ಪರಮಾತ್ಮನು ನಿಯಾಮಕನಾಗಿರುತ್ತಾನೆ, ಎಂದು ಕೆಲವರು ಹೇಳುತ್ತಾರೆ, ಮತ್ತು ಕೆಲವರು ಇಲ್ಲವೆಂದು ಹೇಳುತ್ತಾರೆ. ಹೀಗೆ ಸಂಶಯಾಸ್ಪದ ನಾದ ಮೃತ ಮತ್ತು ಮುಕ್ತಜೀವ ನಿಯಾಮಕನಾದ ಪರಮಾತ್ಮನ ಸ್ವರೂಪವನ್ನು ನನಗೆ ಉಪದೇಶಮಾಡಿರಿ. ಇದನ್ನು ಮೂರನೇ ವರವನ್ನಾಗಿ ಕೇಳಿಕೊಳ್ಳುತ್ತೇನೆ. ಎಂಬುದಾಗಿ ಪ್ರಾರ್ಥನೆ ಮಾಡಿಕೊಂಡರು. || ೧೯ ||

ಮಂ || ದೇವೈರತ್ರಾಪಿ ವಿಚಿಕಿತ್ಸಿತಂ ಪುರಾ ನ ಹಿ ಸುಜ್ಞೇಯೋಽಣುರೇಷ— ಧರ್ಮಃ। ಅನ್ಯಂ ವರಂ ನಚಿಕೇತೋ ವೃಣೀಷ್ವ ಮಾ ಮೋಪರೋ ತ್ಸೀರತಿಮಾ ಸೃಜೈವ(ನ)ಂ || ೨೦ ||

ಅ || ಹೇ ನಚಿಕೇತಃ=ಎಲೋ ನಚಿಕೇತರೇ, ಪುರಾ=ಪೂರ್ವದಲ್ಲಿ, ಅತ್ರ=ಈ ವಿಷಯ ದಲ್ಲಿ, ದೇವೈರಪಿ=ದೇವತೆಗಳಿಂದಲೂ, ವಿಚಿಕಿತ್ಸಿತಂ=ಸಂದೇಹದಿಂದ ವಿಚಾರಮಾಡಲ್ಪಟ್ಟಿದೆ, ಅಂದರೆ ದೇವತೆಗಳಿಗೂ ಸಂದೇಹಗ್ರಸ್ತವಾಗಿತ್ತು, ಏಷಃ=ಈ ಪರಮಾತ್ಮನು, ಅಣುಃ=ಸೂಕ್ಷ್ಮ ಸ್ವರೂಪನಾದವನು, ಧರ್ಮಃ=ಸಕಲ ಪ್ರಪಂಚಧಾರಕನು, ಸುಜ್ಞೇಯಃ=ಸುಲಭವಾಗಿ ತಿಳಿ ಯಲು ಶಕ್ಯನು, ನ=ಅಲ್ಲ, ಹಿ=ನಿಶ್ಚಯವು, ಅನ್ಯಂ=ಇತರವಾದ, ವರಂ=ವರವನ್ನು, ವೃಣೀಷ್ವ =ಬೇಡಿಕೊಳ್ಳಿರಿ, ಮಾ=ನನ್ನನ್ನು, ಮೋಪರೋತ್ಸೀಃ= (ಈ ಪ್ರಶ್ನೆ ವಿಚಾರವನ್ನೇ ಹೇಳಿರೆಂದು) ನಿರ್ಬಂಧ ಮಾಡಬೇಡಿರಿ, (ಈ ಪ್ರಕಾರವಾಗಿ ಯಮದೇವರಿಂದ ಹೇಳಿಕೊಳ್ಳಲ್ಪಟ್ಟ ಆ ನಚಿ ಕೇತರು), ಏವಂ=ಪೂರ್ವೋಕ್ತಪ್ರಕಾರವಾಗಿ, ಮಾತಿಸೃಜ=ಪರಿತ್ಯಾಗಮಾಡಬೇಡಿರಿ ಎಂದು ನುಡಿದರು. ಅಥವಾ— ಏನಂ=ಈ ವರವನ್ನು, ಮಾ=ನನ್ನನ್ನು, ಅತಿಸೃಜ=ಕೇಳುವುದು ಬಿಡಿರಿ- ಎಂದು ಯಮದೇವರು ನುಡಿದರು.

ಮಂ || ದೇವೈರತ್ರಾಪಿ ವಿಚಿಕಿತ್ಸಿತಂ ಕಿಲ ತ್ವಂ ಚ ಮೃತ್ಯೋ ಯನ್ನ ಸುಜ್ಞೇ ಯಮಾತ್ಥ । ವಕ್ತಾ ಚಾಸ್ಯ ತ್ವಾದೃಗನ್ಯೋ ನ ಲಭ್ಯೋ ನಾನ್ಯೋ ವರಸ್ತುಲ್ಯ ಏತಸ್ಯ ಕಶ್ಚಿತ್ || ೨೧ ||

ಅ ॥ ಮೃತ್ಯೋ=ಯಮದೇವರೆ, ತ್ವಂಚ=ನೀವೆ, ಯತ್=ಯಾವ ಕಾರಣದಿಂದ, ಅತ್ರ=ಈ ಭಗವಜ್ಞಾನ ವಿಷಯದಲ್ಲಿ, ದೇವೈರಪಿ=ದೇವತೆಗಳಿಂದಲೂಕೂಡ, ವಿಚಿಕಿತ್ಸಿತಂ=ಸಂದೇಹದಿಂದ ವಿಚಾರಮಾಡಲ್ಪಟ್ಟದೆ, ಅತಃ=ಆ ಕಾರಣದಿಂದ, ಸುಜ್ಞೇಯಂ=ಸುಲಭದಿಂದ ತಿಳಿಯುವದಕ್ಕೆ ಸಾಧ್ಯವು, ನ=ಅಲ್ಲ, (ಇತಿ=ಈ ಪ್ರಕಾರವಾಗಿ) ಆತ್ಥಕಿಲ=ಹೇಳಿದ್ದೀರೊ, ಆದುದರಿಂದ ಅಸ್ಯ=ಈ ಪ್ರಮೇಯವನ್ನು, ವಕ್ತಾ=ಹೇಳುವವನು, ತ್ವಾದೃಗನ್ಯಃ=ತಮಗೆ ಸದೃಶರಾದ ಮತ್ತೊಬ್ಬರು, ನಲಭ್ಯಃ=ಸಿಗಲಾರರು, ಏತಸ್ಯ=ಈ ವರಕ್ಕೆ, ತುಲ್ಯಃ=ಸದೃಶವಾದ, ಅನ್ಯೋವರಃ=ಮತ್ತೊಂದು ವರವು, ಕಶ್ಚಿತ್=ಯಾವದೂ, ನ=ಇಲ್ಲ. ॥ ೨೧ ॥

ತಾ ॥ ಓ ಯಮದೇವರೆ, ಈ ವಿಷಯದಲ್ಲಿ ದೇವತೆಗಳು ಸಹ ಸಂಶಯಪಟ್ಟು ವಿಚಾರ ಮಾಡಿದ್ದಾರೆ ಎಂಬುವದಾಗಿ ನೀವೆ ಹೇಳುತ್ತೀರಿ. ನಿಮ್ಮಂತೆ ಉಪದೇಶಮಾಡುವವರು ನನಗೆ ಬೇರೆ ಯಾರೂ ಸಿಗಲಾರರು. ಈ ವಿಷಯವನ್ನು ನೀವೆ ಹೇಳಬೇಕು. ಇದಕ್ಕೆ ಸದೃಶವಾದ ಬೇರೇ ವರವು ಯಾವುದೂ ಇಲ್ಲವು ಎಂಬುವದಾಗಿ ನಚಿಕೇತರು ಹೇಳಿದರು. ॥ ೨೧ ॥

**ಮಂ ॥ ಶತಾಯುಷಃ ಪುತ್ರಪೌತ್ರಾನ್ವೃಣೀಷ್ವ ಬಹೂನ್ಪಶೂನ್ಹಸ್ತಿ ಹಿರಣ್ಯಮಶ್ವಾನ್ । ಭೂಮೇರ್ಮಹದಾಯತನಂ ವೃಣೀಷ್ವ ಸ್ವಯಂ ಚ ಜೀವ ಶರದೋ ಯಾವದಿಚ್ಛಸಿ ॥ ೨೨ ॥**

ಅ ॥ ಶತಾಯುಷಃ=ನೂರು ವರುಷ ಆಯುಸ್ಸುವುಳ್ಳ, ಪುತ್ರಪೌತ್ರಾನ್=ಮಕ್ಕಳು ಮೊಮ್ಮಕ್ಕಳನ್ನು, ವೃಣೀಷ್ವ=ಬೇಡಿಕೊಳ್ಳಿರಿ, ಬಹೂನ್=ಅನೇಕ ವಿಧಗಳಾದ, ಪಶೂನ್=ಗೋವು ಮುಂತಾದ ಪಶುಗಳನ್ನು, ಹಸ್ತಿ ಹಿರಣ್ಯಂ=ಆನೆಗಳನ್ನು ಸುವರ್ಣಾದಿಗಳನ್ನು, ಅಶ್ವಾನ್=ಕುದುರೆಗಳನ್ನು, ಭೂಮೇಃ=ಭೂಮಿಯ, ಮಹದಾಯತನಂ=ಮಹಾರಾಜ್ಯಾಧಿಪತ್ಯವನ್ನು, ವೃಣೀಷ್ವ=ಬೇಡಿಕೊಳ್ಳಿರಿ, ಯಾವತ್=ಎಷ್ಟು ಕಾಲಪರ್ಯಂತವಾಗಿ ಬದುಕುವದಕ್ಕೋಸ್ಕರ, ಇಚ್ಛಸಿ=ಇಚ್ಛಿಸುತ್ತೀರೋ, ಶರದಃ=ಅಷ್ಟು ವರ್ಷಕಾಲದಲ್ಲಿ, ಸ್ವಯಂ ಚ=ನೀವು, ಜೀವ=ಬದುಕಿಕೊಂಡು ಇರರಿ. ॥ ೨೨ ॥

ತಾ ॥ ಆ ಮಾತುಗಳನ್ನು ಯಮದೇವರು ಕೇಳಿ ನಚಿಕೇತರನ್ನು ಕುರಿತು ಅವರಿಗೆ ವಿಷಯಗಳಲ್ಲಿ ಆಶೆಯುಂಟಾಗುವಂತೆ ಹೇಳುತ್ತಾರೆ. ನಿಮಗೆ ದೀರ್ಘಾಯುಸ್ಸುಗಳಾದ ಮಕ್ಕಳನ್ನೂ ಮೊಮ್ಮಕ್ಕಳನ್ನೂ ಕೊಡುತ್ತೇನೆ. ಅನೇಕ ಗೋವುಗಳು, ಆನೆಗಳು, ಕುದುರೆಗಳು, ಭಂಗಾರಗಳು ಇವುಗಳನ್ನು ಕೊಡುತ್ತೇನೆ. ಅಖಂಡ ಭೂಮಂಡಲದ ಸಾಮ್ರಾಜ್ಯವನ್ನು ಕೊಡುತ್ತೇನೆ. ನಿಮಗೆ ಎಷ್ಟು ಕಾಲದ ವರೆಗೆ ಬದುಕಬೇಕೆಂಬುವ ಇಚ್ಛೆಯಿದೆಯೊ ಆ ಪರಿಯಂತ ಬದುಕುವಿಕೆಯೂ ಇರಲಿ. ಎಂದು ಹೇಳಿದರು. ॥ ೨೨ ॥

**ಮಂ ॥ ಏತತ್ತುಲ್ಯಂ ಯದಿ ಮನ್ಯಸೇ ವರಂ ವೃಣೀಷ್ವ ವಿತ್ತಂ ಚಿರಜೀವಿಕಾಂ ಚ । ಮಹಾಭೂಮೌ ನಚಿಕೇತಸ್ತ್ವಮೇಧಿ ಕಾಮಾನಾಂ ತ್ವಾ ಕಾಮಭಾಜಂ ಕರೋಮಿ ॥ ೨೩**

ಅ ॥ ಏತತ್ತುಲ್ಯಂ=ಇದಕ್ಕೆ ಸದೃಶವಾದ, ವರಂ=ವರವನ್ನು, ಮನ್ಯಸೇ ಯದಿ=ತಿಳಿಯುತ್ತೀರಾದರೆ, ವೃಣೀಷ್ವ=ಕೇಳಿರಿ, ವಿತ್ತಂ=ದ್ರವ್ಯವನ್ನು, ಚಿರಜೀವಿಕಾಂಚ=ಬಹುಕಾಲ ಬದುಕಿರೋಣವನ್ನು, (ಬೇಡಿಕೊಳ್ಳಿರಿ.) ಹೇ ನಚಿಕೇತಃ=ಎಲೋ ನಚಿಕೇತರೇ, ಮಹಾ

ಭೂಮೌ=ಪುಣ್ಯಭೂಮಿಯಲ್ಲಿ, ತ್ವಂ=ನೀವು, ಏಧಿ=ಅಭಿವೃದ್ಧರಾಗಿರಿ, ಕಾಮಾನಾಂ=ಅಪೇಕ್ಷಿತ ಪದಾರ್ಥಗಳ ಮಧ್ಯದಲ್ಲಿ, ತ್ವಾ=ನಿಮ್ಮನ್ನು, ಕಾಮಭಾಜಂ=ಅಪೇಕ್ಷಿತ ಪದಾರ್ಥಗಳನ್ನು ಹೊಂದಿದವರನ್ನಾಗಿ, ಕರೋಮಿ=ಮಾಡುತ್ತೇನೆ. ॥ ೨೩ ॥

ತಾ ॥ ಅಥವಾ ಹಿಂದೆ ಹೇಳಿದವುಗಳಿಗೆ ಸಮಾನವಾದ ಬೇರೆ ಯಾವ ವರವನ್ನೂ ಅಪೇಕ್ಷಿಸಿದರೂ ಕೊಡುತ್ತೇನೆ. ಅಥವಾ ಉತ್ತಮವಾದ ಪುಣ್ಯಭೂಮಿಯಲ್ಲಿ ಜನನವನ್ನು ಬೇಡಿರಿ, ಕೊಡುತ್ತೇನೆ. ಲೋಕದಲ್ಲಿ ಮನುಷ್ಯರು ಅಪೇಕ್ಷಿಸತಕ್ಕದ್ದು ಯಾವದಿದೆಯೊ, ಅವುಗಳೆಲ್ಲವನ್ನೂ ಕೇಳಿರಿ, ಕೊಡುತ್ತೇನೆ. ಎಂದು ಹೇಳಿದರು. ॥ ೨೩ ॥

**ಮಂ ॥ ಯೇ ಯೇ ಕಾಮಾ ದುರ್ಲಭಾ ಮರ್ತ್ಯಲೋಕೇ ಸರ್ವಾನ್ಕಾಮಾಂಶ್ಛಂದತಃ ಪ್ರಾರ್ಥಯಸ್ವ । ಇಮಾ ರಾಮಾಃ ಸರಥಾಃ ಸತೂರ್ಯಾ ನ ಹೀದೃಶಾ ಲಂಭನೀಯಾ ಮನುಷ್ಯೈಃ । ಆಭಿರ್ಮತ್ಪ್ರತ್ತಾಭಿಃ ಪರಿಚಾರಯಸ್ವ ನಚಿಕೇತೋ ಮರಣಂ ಮಾನುಪ್ರಾಕ್ಷೀಃ ॥ ೨೪ ॥**

ಅ ॥ ಮರ್ತ್ಯಲೋಕೇ=ಈ ಭೂಲೋಕದಲ್ಲಿ ಅಥವಾ ಮನುಷ್ಯದೇಹದಲ್ಲಿ, ಯೇ ಯೇ=ಯಾವ ಯಾವ, ಕಾಮಾಃ=ಅಪೇಕ್ಷಿತ ಪದಾರ್ಥಗಳು, ದುರ್ಲಭಾಃ=ಹೊಂದಲಶಕ್ಯಗಳೋ, ಸರ್ವಾನ್=ಸಮಸ್ತಗಳಾದ, ಕಾಮಾನ್=ಪದಾರ್ಥಗಳನ್ನು, ಛಂದತಃ=ಇಚ್ಛಾನುಸಾರವಾಗಿ, ಪ್ರಾರ್ಥಯಸ್ವ=ಬೇಡಿಕೊಳ್ಳಿರಿ, ಇಮಾಃ=ಈ ಲೋಕಸ್ಥರಾದ, ಸತೂರ್ಯಾಃ=ವಾದ್ಯವಿಶೇಷಗಳಲ್ಲಿ ನಿಪುಣರಾದ, ಸರಥಾಃ=ರಥಗಳಿಂದ ಯುಕ್ತರಾದ, ರಾಮಾಃ=ರಮಣೀಯರಾದ ಸ್ತ್ರೀಯರನ್ನು, ಪ್ರಾರ್ಥಯಸ್ವ=ಬೇಡಿಕೊಳ್ಳಿರಿ, ಈದೃಶಾಃ=ಇಂಥಹ ಸ್ತ್ರೀಯರು, ಮನುಷ್ಯೈಃ=ಮನುಷ್ಯರುಗಳಿಂದ, ಲಂಭನೀಯಾಃ=ಪ್ರಾಪಿಸಲಿಕ್ಕೆ ಶಕ್ಯರು, ನಹಿ=ಅಲ್ಲ, ಮತ್ಪ್ರತ್ತಾಭಿಃ=ನನ್ನಿಂದ ಕೊಡಲ್ಪಟ್ಟ, ಆಭಿಃ=ಈ ಸ್ತ್ರೀಯರಿಂದ, ಪರಿಚಾರಯಸ್ವ=ಸೇವೆಯನ್ನು ಮಾಡಿಸಿಕೊಳ್ಳಿರಿ, ಹೇ ನಚಿಕೇತಃ=ಓ ನಚಿಕೇತರೆ, ಮರಣಂ=ಮರಣನಿಯಾಮಕನಾದ ಭಗವತ್ಸ್ವರೂಪವನ್ನು, ಮಾನುಪ್ರಾಕ್ಷೀಃ=ಪ್ರಶ್ನೆ ಮಾಡಬೇಡಿರಿ. ॥ ೨೪ ॥

**ಮಂ ॥ ಶ್ವೋಭಾವಾ ಮರ್ತ್ಯಸ್ಯ ಯದಂತಕೈತತ್ಸರ್ವೇಂದ್ರಿಯಾಣಾಂ ಜರಯಂತಿ ತೇಜಃ । ಅಪಿ ಸರ್ವಂ ಜೀವಿತಮಲ್ಪಮೇವ ತವೈವ ವಾಹಾಸ್ತವ ನೃತ್ತಗೀತಂ ॥ ೨೫ ॥**

ಅ ॥ ಹೇ ಅಂತಕ=ಎಲೋ ಯಮದೇವರೆ, ಮರ್ತ್ಯಸ್ಯ=ಮನುಷ್ಯನಿಗೆ, ಯದೇತತ್=ಪುತ್ರಪೌತ್ರಪಶ್ವಾದಿಗಳು, ಶ್ವಃ=ನಾಳೆ, ಅಭಾವಾಃ=ಇಲ್ಲದೆ ಹೋಗುವವರು, ಸರ್ವೇಂದ್ರಿಯಾಣಾಂ=ಸಮಸ್ತ ಇಂದ್ರಿಯಗಳ, ತೇಜಃ=ಸಾಮರ್ಥ್ಯಗಳನ್ನು, ಜರಯಂತಿ=ಕಡಿಮೆ ಮಾಡುತ್ತಾವೆ. ಆದುದರಿಂದ ಅವುಗಳು ನನಗೆ ಬೇಡ. ಸರ್ವಂ=(ಸಮಸ್ತ) ಪೂರ್ಣವಾದ, ಜೀವಿತಮಪಿ=ಆಯುಸ್ಸು ಕೂಡಾ, ಅಲ್ಪಮೇವ=ಸ್ವಲ್ಪವೇ ಸರಿ, ವಾಹಾಃ=ರಥಾದಿಗಳು, ತವೈವ=ನಿಮಗೇನೆ ಇರಲಿ, ನೃತ್ತಗೀತಂ=ನರ್ತನಗಾನಾದಿಗಳು, ತವೈವ=ನಿಮಗೇವೆ ಇರಲಿ. ॥ ೨೫ ॥

ತಾ ॥ ಯಮದೇವರೇ, ನನಗೆ ಮಕ್ಕಳು, ಮೊಮ್ಮಕ್ಕಳನ್ನು ಕೊಡುತ್ತೀರೋ, ಅವರೆಲ್ಲರೂ ನಾಳೆ ಬದುಕಿರುವರೆಂಬುದು ನಿಶ್ಚಯವಿಲ್ಲವಲ್ಲವೇ? ಅವರುಗಳಿಗೆ ದೀರ್ಘಾಯುಸ್ಸನ್ನು ನೀವು ಕೊಟ್ಟರೂ ಅವರುಗಳ ರಕ್ಷಣೆಗೋಸ್ಕರ ಶ್ರಮಪಡುವುದರಿಂದಲೇ ನನ್ನ ಸರ್ವೇಂದ್ರಿಯಗಳು ಶಕ್ತಿಹೀನಗಳಾಗುತ್ತವೆ. ದೇಹದಾರ್ಢ್ಯದಿಂದ ಯುಕ್ತವಾದ ದೀರ್ಘಾಯುಸ್ಸನ್ನು ಕೊಟ್ಟರೂ

ಅದು ಅಲ್ಪವೇ ಸರಿ. ಆದುದರಿಂದ ಅವುಗಳು ಯಾವುವೂ ನನಗೆ ಬೇಡ. ತಮ್ಮ ರಥಗಜಾದಿ ವಾಹನಗಳೂ, ಅಪ್ಸರ ಸ್ತ್ರೀಯರುಗಳೂ, ಅವರುಗಳ ನೃತ್ತಗೀತಾದಿಗಳೂ, ಅವುಗಳಿಂದ ಆಗುವ ಸುಖಗಳೆಲ್ಲವೂ ನಿಮಗೇ ಇರಲಿ. ನನಗೆ ಬೇಡ ಎಂಬುದಾಗಿ ಹೇಳಿದರು. ॥ ೨೫ ॥

ವೃಣೀಷ್ವವಿತ್ತಂ ಎಂದು ಹೇಳಿದ್ದಕ್ಕೆ ಉತ್ತರವನ್ನು ಹೇಳುತ್ತಾರೆ-"ನವಿತ್ತೇನೇತಿ"

**ಮಂ ॥ ನ ವಿತ್ತೇನ ತರ್ಪಣೀಯೋ ಮನುಷ್ಯೋ ಲಪ್ಸ್ಯಾಮಹೇ ವಿತ್ತಮ ದ್ರಾಕ್ಷ್ಮ ಚೇತ್ವಾಂ । ಜೀವಿಷ್ಯಾಮೋ ಯಾವದೀಶಿಷ್ಯಸಿ ತ್ವಂ ವರಸ್ತು ಮೇ ವರಣೀಯಃ ಸ ಏವ ॥ ೨೬ ॥**

ಅ ॥ ಮನುಷ್ಯಃ=ಮನುಜನು, ವಿತ್ತೇನ=ದ್ರವ್ಯದಿಂದ, ನ ತರ್ಪಣೀಯಃ=ತೃಪ್ತಿಪಡಿಸ ಲಶಕ್ಯನು, ತ್ವಾಂ=ನಿಮ್ಮನ್ನು, ಅದ್ರಾಕ್ಷ್ಮಚೇತ್=ನೋಡಿದ್ದಾದರೆ, ವಿತ್ತಂ=ದ್ರವ್ಯವನ್ನು, ಲಪ್ಸ್ಯಾಮಹೇ=ಹೊಂದುವೆವು, ತ್ವಂ=ನೀವು, ಯಾವತ್=ಎಷ್ಟುಕಾಲ, ಈಶಿಷ್ಯಸಿ=ನಿಯಾಮಕರಾಗಿರುವಿರೋ, ಆ ಪರಿಯಂತ, ಜೀವಿಷ್ಯಾಮಃ=ಬದುಕಿರುತ್ತೇವೆ, ಸ ತು=ಹಿಂದೆ ಹೇಳಿರುವ, ವರ ಏವ=ವರವೇ, ಮೇ=ನನ್ನಿಂದ, ವರಣೀಯಃ=ಬೇಡಲ್ಪಡುವದು. ॥ ೨೬ ॥

ತಾ ॥ ದ್ರವ್ಯವನ್ನು ಕೊಟ್ಟು ಮನುಷ್ಯರನ್ನು ಸಂತೋಷಪಡಿಸಲು ಸಾಧ್ಯವಿಲ್ಲ. ದೀರ್ಘಾಯುಸ್ಸು ಮತ್ತು ದ್ರವ್ಯಾದಿಗಳನ್ನೂ ನಾನು ಕೇಳುವದಿಲ್ಲ. ಯಾವಾಗ ತಮ್ಮ ಸಂದರ್ಶನವಾಯಿತೊ, ಆವಾಗಲೇ ಅವುಗಳೆಲ್ಲವೂ ತಮ್ಮ ಅನುಗ್ರಹದಿಂದಲೇ ನನ್ನಿಂದ ಅವುಗಳು ಅಪೇಕ್ಷಿತಗಳಲ್ಲದೆ ಇದ್ದರೂ ನನಗೆ ಸಿಗುವದು. ಆದುದರಿಂದ ನಾನು ಕೇಳಿದ ವರವನ್ನೇ ನನಗೆ ಕೊಡಬೇಕು. ॥ ೨೬ ॥

**ಮಂ ॥ ಅಜೀರ್ಯತಾಮಮೃತಾನಾಮುಪೇತ್ಯ ಜೀರ್ಯನ್ಮರ್ತ್ಯಃ ಕ್ವಾಧಸ್ಥಃ ಪ್ರಜಾನನ್ । ಅಭಿಧ್ಯಾಯನ್ವರ್ಣರತಿಪ್ರಮೋದಾನತಿದೀರ್ಘೇ ಜೀವಿತೇ ಕೋ ರಮೇತ ॥ ೨೭ ॥**

ಅ ॥ ಹೆ ಪ್ರಜಾನನ್=ಓ ಜ್ಞಾನಿಗಳಾದ ಯಮದೇವರೇ, ಅಜೀರ್ಯತಾಂ=ವಾರ್ಧಿಕ್ಯ ರಹಿತರಾಗಿಯೂ, ಅಮೃತಾನಾಂ=ಮರಣರಹಿತರಾಗಿಯೂ ಇರುವ ದೇವತೆಗಳ (ಸಮೀಪವನ್ನು), ಉಪೇತ್ಯ=ಪ್ರಾಪಿಸಿ, ಜೀರ್ಯನ್=ಮೃತನಾಗಿ, ಅಧಸ್ಥಃ=ತಮಸ್ಸನ್ನು ಹೊಂದಿದ, ಮರ್ತ್ಯಃ=ಮನುಷ್ಯನು, ಕ್ವ=ಎಲ್ಲಿ(ಇದ್ದಾನೆ), ಜೀವಿತೆ=ಬದುಕಿಕೊಂಡಿರುವದು, ಅತಿದೀರ್ಘೇ ಸತಿ=ಬಹುಕಾಲೀನವಾದರೆ, ವರ್ಣರತಿಪ್ರಮೋದಾನ್=ವರ್ಣ=ಸ್ತ್ರೀಯ:ರಸೌಂದರ್ಯವು, ರತಿ=ಕ್ರೀಡೆಯು, ಇವುಗಳಿಂದ ಉಂಟಾಗುವ, ಪ್ರಮೋದಾನ್=ಸಂತೋಷವು, ಇವುಗಳನ್ನು, ಅಭಿಧ್ಯಾಯನ್=ಸ್ಮರಿಸುವವನಾಗಿ, ಕಃ=ಯಾವನು, ರಮೇತ=ರಮಿಸಬಲ್ಲನು. ॥ ೨೭ ॥

ತಾ ॥ ಮತ್ತೂ ಮತ್ತು ಹುಟ್ಟುವದು, ಮುದಿಯಾಗುವದು, ಸಾಯುವದು,-ಇವುಗಳೇ ಸ್ವಭಾವವಾಗಿವುಳ್ಳ ಮನುಷ್ಯರು, ತಾದೃಶ ಜರಾದಿಗಳು ಮರಣವು ಇಲ್ಲದಿರುವ ತಮ್ಮಂಥಾ ದೇವತೆಗಳನ್ನು ಹೊಂದಿ ತುಚ್ಛಗಳಾದ ಐಹಿಕ ವಿಷಯಗಳನ್ನು ಬೇಡುವದುಂಟೇ? ಮತ್ತು ಮನುಷ್ಯನು ಬಹುಕಾಲ ಬದುಕಿದ್ದರೆ ನಷ್ಟರಾಗಿ ಹೋದ ಅಥವಾ ಇದ್ದರೂ ಉಪಭೋಗಾದಿಗಳಿಗೆ ಯೋಗ್ಯತೆ ಇಲ್ಲದಿರುವ ಸ್ತ್ರೀಯರು, ಮಕ್ಕಳು ಮೊದಲಾದ ಪದಾರ್ಥಗಳನ್ನೂ ಮತ್ತೆ ಅವುಗಳ ರೂಪ ಲಾವಣ್ಯಾದಿಗಳನ್ನೂ ಮತ್ತು ಅವುಗಳಿಂದ ಹಿಂದೆ ಉಂಟಾದ ಆನಂದವನ್ನೂ ಸ್ಮರಿಸಿಕೊಂಡು ದುಃಖವನ್ನೇ ಅನುಭವಿಸುವನು. ॥ ೨೭ ॥

**ಮಂ ॥ ಯಸ್ಮಿನ್ನಿದಂ ವಿಚಿಕಿತ್ಸಂತಿ ಮೃತ್ಯೋ ಸಾಂಪರಾಯೇ ಮಹತಿ ಬ್ರೂಹಿ ನಸ್ತತ್ । ಯೋಽಯಂ ವರೋ ಗೂಢಮನುಪ್ರವಿಷ್ಟೋ ನಾನ್ಯಂ ತಸ್ಮಾನ್ನಚಿಕೇತಾ ವೃಣೀತೇ ॥ ೨೮ ॥**

ಅ ॥ ಹೇ ಮೃತ್ಯೋ=ಓ ಯಮದೇವರೆ, ಯಸ್ಮಿನ್=ಯಾವ ಮೃತ ಮತ್ತು ಮುಕ್ತರ ವಿಷಯದಲ್ಲಿ, ಇದಂ=ಪ್ರೇರಕನಾಗಿ ಪರಮಾತ್ಮನು ಇದ್ದಾನೊ, ಇಲ್ಲವೊ-ಎಂಬೀ ಪ್ರಕಾರವಾಗಿ ಸಂದೇಹದಿಂದ, ವಿಚಿಕಿತ್ಸಂತಿ=ವಿಚಾರ ಮಾಡುತ್ತಾರೊ, ತತ್=ಆ ಭಗವತ್ಸ್ವರೂಪವನ್ನು, ಮಹತಿ=ಮಹತ್ತಾದ, ಸಾಂಪರಾಯೆ=ಮುಕ್ತಿಗೋಸ್ಕರ, ನಃ=ನಮಗೆ, ಬ್ರೂಹಿ=ಉಪದೇಶ ಮಾಡಿರಿ, ಯೋಽಯಂ=ಅಯಿೂ ದಾವ, ವರಃ=ಮೃತ ಮತ್ತು ಮುಕ್ತನಿಯಾಮಕ ಭಗವತ್ಸ್ವರೂಪ ವನ್ನು ತಿಳಿಸಬೇಕೆಂದು ಪ್ರಾರ್ಥನೆರೂಪವಾದ ವರವು, ಗೂಢಂ=ಅತಿ ಗೋಪ್ಯತ್ವವನ್ನು, ಅನು ಪ್ರವಿಷ್ಟಃ=ಪ್ರಾಪಿಸಿಯದೊ, ತಸ್ಮಾತ್=ಆ ವರದ್ದೆಶೆಯಿಂದ, ಅನ್ಯಂ=ಬೇರೆ ವರವನ್ನು, ನಚಿಕೇತಾಃ=ಈ ನಚಿಕೇತನು, ನ ವೃಣೀತೆ=ಅಪೇಕ್ಷಿಸಲಾರನು ಎಂಬುದಾಗಿ ನಚಿಕೇತರು ಹೇಳಿದರು. ॥ ೨೮ ॥

ತಾ॥ ಯಾವ ಮೃತ ಮತ್ತು ಮುಕ್ತನಿಯಾಮಕನಾದ ಪರಮಾತ್ಮನ ಸ್ವರೂಪವನ್ನೂ ಮಹಿಮೆಯನ್ನೂ ತಿಳಿಯಬೇಕೆಂದುಜ್ಞಾನಿಗಳು ಸಹ ವಿಚಾರಮಾಡಿಕೊಂಡಿದ್ದಾರೆ. ಆದುದರಿಂದ ಅತಿರಹಸ್ಯವಾಗಿರುವದರಿಂದ ಗೋಪ್ಯವಾಗಿಯದೆ ಎಂದು ನೀವೆ ಹೇಳಿದಿರಷ್ಟೆ. ಆದುದರಿಂದ ಅದನ್ನೇ ನನಗೆ ಮೋಕ್ಷಾದಿ ಪುರುಷಾರ್ಥ ಪ್ರಾಪ್ತಿಗೋಸ್ಕರ ತಾವು ಉಪದೇಶ ಮಾಡಬೇಕು. ಅದನ್ನು ಬಿಟ್ಟು ಬೇರೆ ವರವನ್ನು ನಾನು ಸರ್ವಥಾ ಬೇಡಲಾರೆನು ಎಂಬುದಾಗಿ ನಚಿಕೇತರು ಯಮದೇವರನ್ನು ಕುರಿತು ಪ್ರಾರ್ಥನೆ ಮಾಡಿಕೊಂಡರು. ॥ ೨೮ ॥

**॥ ಇಲ್ಲಿಗೆ ಪ್ರಥಮಾಧ್ಯಾಯದಲ್ಲಿ ಪ್ರಥಮಾವಲ್ಲಿಯು ಸಮಾಪ್ತನಾಯಿತು. ಶ್ರೀರಸ್ತು.॥**



ಈ ವರೆಗೆ ಹೇಳಿರುವ ಮಂತ್ರಗಳಲ್ಲಿ "ಸ್ವರ್ಗೇ ಲೋಕೆ ನ ಭಯಂ ಕಿಂಚನಾಸ್ತಿ" ಇತ್ಯಾದಿ ಮಂತ್ರಗಳಿಂದ ಸ್ವರ್ಗಲೋಕವನ್ನು ಪ್ರಶಂಸೆಮಾಡಿ "ಸತ್ವಮಗ್ನಿಂ ಸ್ವರ್ಗ್ಯಮಧ್ಯೇಷಿ ಮೃತ್ಯೋ" ಎಂಬಲ್ಲಿ ಅಗ್ನಿಗೆ ಸ್ವರ್ಗಸಾಧನತ್ವವು ಹೇಳಲ್ಪಟ್ಟಿತು.

ಕೇವಲ ಅಗ್ನಿದೇವತೆಗಾಗಲಿ, ಭೂತ ಅಗ್ನಿಗಾಗಲಿ, ಸ್ವರ್ಗಸಾಧನತ್ವವು ಕೂಡುವುದಿಲ್ಲ. ಆದುದರಿಂದ ಅಗ್ನಿಶಬ್ದಕ್ಕೆ ಅಗ್ನಿಶಬ್ದವಾಚ್ಯನಾದ ಪರಮಾತ್ಮನೆಂದು ಅರ್ಥಮಾಡಲ್ಪಟ್ಟಿತು. ಹಾಗೆ ಅರ್ಥಮಾಡುವುದಕ್ಕೆ ಪ್ರಮಾಣವನ್ನು ಶ್ರೀಮದಾಚಾರ್ಯರು ಭಾಷ್ಯಾದಿಯಲ್ಲಿ ಹೇಳುತ್ತಾರೆ. ಮೊದಲು ಈ ಮಂತ್ರಕ್ಕೆ ವ್ಯಾಖ್ಯಾನಮಾಡುವುದರಿಂದ ಇದು ಬ್ರಹ್ಮಜ್ಞಾನವನ್ನೇ ಉಪದೇಶಿಸುವದೆಂದು ಸೂಚಿಸುತ್ತಾರೆ.

**ಭಾ ॥** "ಅಗ್ನೌ ವಿಷ್ಣುಂ ಸದಾ ಧ್ಯಾಯಂ ಸ್ತ್ರಿಶೋಽಗ್ನಿಂ ನಾಚಿಕೇತಕಂ ।
ಯಶ್ಚಯಿೂತ ಸ ತು ಪ್ರಾಪ್ಯ ಸ್ವರ್ಗಂ ತತ್ರ ಭಯಾತಿಗಃ ॥
ಉಷ್ಯ ಮನ್ವಂತರಂ ಕಾಲಮಮೃತತ್ವಂ ಭಜೇತ್ಕ್ರಮಾತ್" ॥

ಇತಿ ಬ್ರಹ್ಮಸಾರೇ ॥ (೧೨, ೧೩)

ಅ || ಯಃ=ಯಾವ ಅಧಿಕಾರಿಯು, ಅಗ್ನೌ=ಅಗ್ನಿಯಲ್ಲಿ, ವಿಷ್ಣುಂ=ಅಂತರ್ಗತನಾದ ಶ್ರೀ ಪರಮಾತ್ಮನನ್ನು, ಧ್ಯಾಯನ್=ಧ್ಯಾನ ಮಾಡುವವನಾಗಿ, ನಾಚಿಕೇತಕಂ=ನಾಚಿಕೇತ ನಾಮಕ ವಾದ, ಅಗ್ನಿಂ=ಅಗ್ನಿಯನ್ನು ಕುರಿತು, ತ್ರಿಃ=ಮೂರಾವರ್ತಿ, ಚಯಿತ=ಚಯನ ಮಾಡು ತ್ತಾನೋ, ಸ ತು=ಆ ಪುರುಷನು, ಸ್ವರ್ಗಂ=ಸ್ವರ್ಗಲೋಕವನ್ನು, ಪ್ರಾಪ್ಯ=ಹೊಂದಿ, ತತ್ರ=ಆ ಸ್ವರ್ಗಲೋಕದಲ್ಲಿ, ಭಯಾತಿಗಃ=ಭಯವನ್ನು ದಾಟಿದವನಾಗಿ, ಮನ್ವಂತರಂ ಕಾಲಂ=ಒಂದು ಮನ್ವಂತರ ಕಾಲ ಪರಿಯಂತ, ಉಷ್ಯ=ಆವಾಸ ಮಾಡಿ, ಕ್ರಮಾತ್=ಕ್ರಮದಿಂದ, ಅಮೃತತ್ವಂ= ಮೋಕ್ಷವನ್ನು, ಭಜೇತ್=ಹೊಂದುತ್ತಾನೆ.

ಭಾ ॥ "ಇಚ್ಛನ್ವಾಜಶ್ರವೋನಪ್ತಾ ದದೌ ಸರ್ವಸ್ವದಕ್ಷಿಣಾಂ |
ಉದ್ದಾಲಕಸ್ಸ್ವರ್ಗಲೋಕಂ ದದೌ ಗಾಶ್ಚ ನಿರಿಂದ್ರಿಯಾಃ |
ಮಾಂ ದತ್ವಾಪಿ ನ ತೇ ಗಾವೋ ದಾತವ್ಯಾ ಈದೃಶಾ ಇತಿ |
ಉವಾಚ ಪುತ್ರಸ್ತಂ ಬಾಲಸ್ತಂ ಶಶಾಪ ಪಿತಾ ಸ್ವಯಂ |
ಸ ಜಗಾಮ ಯಮಂ ಬಾಲೋ ಬ್ರಹ್ಮಚಾರೀ ಯಮಸ್ಯ ತು |
ಪತ್ನ್ಯಾ ಸಂಪೂಜ್ಯಮಾನೋಽಪಿ ಜಗ್ರಾಹಾರ್ಘ್ಯಾದಿಕಂ ನ ತು |
ಆಗತೇ ತು ಯಮೇ ಪ್ರಾಹ ಯಮಂ ಸೋದಕಮಾಹರ |
ಇತ್ಯುಕ್ತಸ್ಸ ಯಮಸ್ತಂ ತು ಸಂಪೂಜ್ಯಾದಾದ್ವರತ್ರಯಂ |
ಸೌಮನಸ್ಯಂ ಪಿತುಶ್ಚೈವ ನಾಚಿಕೇತಾಗ್ನಿಗಂ ಹರಿಂ |
ಮುಕ್ತೇ ಸ್ಥಿತಂ ಚ ತಂ ವಿಷ್ಣುಮಿತಿಪ್ರಾದಾದ್ವರತ್ರಯಂ" ||

—ಇತಿ ಗತಿಸಾರೇ || ೮ ||

ಅ || ವಾಜಶ್ರವೋನಪ್ತಾ=ವಾಜಸ್ರವಸ್ ಎಂಬ ಹೆಸರುಳ್ಳ ಋಷಿಗಳ ಮೊಮ್ಮಗನಾದ, ಉದ್ಧಾಲಕಃ=ಉದ್ಧಾಲಕರೆಂಬವರು, ಸ್ವರ್ಗಲೋಕಂ=ಸ್ವರ್ಗಲೋಕವನ್ನು, ಇಚ್ಛನ್=ಇಚ್ಛಿಸು ವವರಾಗಿ, ಸರ್ವಸ್ವದಕ್ಷಿಣಾಂ=ಸಮಸ್ತ ಪದಾರ್ಥಗಳನ್ನು ದಕ್ಷಿಣೆಯಾಗಿ, ದದೌ=ಕೊಟ್ಟರು, ನಿರಿಂದ್ರಿಯಾಃ=ಹೋಗಲ್ಪಟ್ಟ ಇಂದ್ರಿಯಶಕ್ತಿಯುಳ್ಳ, (ಅಂದರೆ ನೀರು ಕುಡಿಯಲಿಕ್ಕೂ, ಹುಲ್ಲು ತಿನ್ನಲಿಕ್ಕೂ, ನಡಿಯಲಿಕ್ಕೂ ಶಕ್ತಿ ಇಲ್ಲದೆಯಿರುವ), ಗಾಶ್ಚ=ಗೋವುಗಳನ್ನು, ದದೌ=ದಾನಮಾಡಿ ದರು, ಬಾಲಃ=ಬಾಲಕನಾದ, ಪುತ್ರಃ=ಮಗನಾದ ನಚಿಕೇತರು, ತಂ=ಆ ಉದ್ಧಾಲಕರನ್ನು ಕುರಿತು ಎಲೋ ತಂದೆಯೇ, ತೇ=ನಿನ್ನಿಂದ, ಮಾಂ ದತ್ವಾಪಿ=ನನ್ನನ್ನುಕೊಟ್ಟಾದರೂ, ಈದೃಶಾಃ= ಈ ಮುದಿಗಳಾದ, ಗಾವಃ=ಗೋವುಗಳು, ನ ದಾತವ್ಯಾಃ=ದಾನಮಾಡತಕ್ಕವುಗಳಲ್ಲ, ಇತಿ=ಈ ಪ್ರಕಾರವಾಗಿ, ಉವಾಚ=ಹೇಳಿದರು, ಪಿತಾ=ತಂದೆಯು, ಸ್ವಯಂ=ತಾನಾಗಿ, ತಂ=ಆ ಮಗ ನನ್ನು, ಶಶಾಪ=ಶಪಿಸಿದನು, ಸಃ=ಆ,ಬಾಲಃ=ಬಾಲಕನು,ಯಮಂ=ಯಮದೇವರನ್ನು ಕುರಿತು, ಜಗಾಮ=ಹೋದನು, ಸಃ=ಆ, ಬ್ರಹ್ಮಚಾರೀ=ಬ್ರಹ್ಮಚರ್ಯವ್ರತದಲ್ಲಿರುವ ನಚಿಕೇತರು, ಯಮಸ್ಯ=ಯಮದೇವರ, ಪತ್ನ್ಯಾ=ಭಾರ್ಯೆಯಿಂದ, ಸಂಪೂಜ್ಯಮಾನೋಽಪಿ=ಚೆನ್ನಾಗಿ ಆದರಿ ಸಿಕೊಳ್ಳಲ್ಪಟ್ಟವನಾದಾಗ್ಯೂ, ಅರ್ಘ್ಯಾದಿಕಂ=ಅರ್ಘ್ಯಪಾದ್ಯಾದ್ಯುಪಚಾರವನ್ನು, ನ ತು ಜಗ್ರಾಹ= ಸ್ವೀಕರಿಸಲಿಲ್ಲ, ಯಮೇ=ಯಮದೇವರು, ಆಗತೇ ಸತಿ=ಬರುತ್ತಿರಲು, ಸಾ=ಯಮಭಾರ್ಯೆಯು, ಉದಕಂ=ನೀರನ್ನು, ಆಹರ=ತೆಗೆದುಕೊಂಡು ಬಾ, ಇತಿ=ಈ ಪ್ರಕಾರ, ಯಮಂ=ಯಮ ದೇವರನ್ನು ಕುರಿತು, ಪ್ರಾಹ=ಹೇಳಿದಳು, ಸಃ=ಆ, ಯಮಃ=ಯಮದೇವರು, ಇತ್ಯುಕ್ತಃ=ಈ ಪ್ರಕಾರ ಹೇಳಿಕೊಳ್ಳಲ್ಪಟ್ಟವರಾಗಿ, ತಂ ತು=ಆ ನಚಿಕೇತರನ್ನು, ಸಂಪೂಜ್ಯ=ಚೆನ್ನಾಗಿ ಉಪಚ

ರಿಸಿ, ವರತ್ರಯಂ=ಮೂರುವರಗಳನ್ನು, ಅದಾತ್=ಕೊಟ್ಟನು, ಪಿತುಃ=ತಂದೆಯಾದ ಉದ್ದಾಲಕರ, ಸೌಮನಸ್ಯಂ=ಮನಸ್ಸಂತೋಷವನ್ನು, ನಾಚಿಕೇತಾಗ್ನಿಗಂ=ನಾಚಿಕೇತಾನಾಮಕ ಅಗ್ನ್ಯಂತರ್ಗತನಾದ, ಹರಿಂ=ಶ್ರೀ ಪರಮಾತ್ಮನನ್ನು, ಮುಕ್ತೇಸ್ಥಿತಂಚ=ಮೃತ ಮತ್ತು ಮುಕ್ತನಲ್ಲಿ ನಿಯಾಮಕನಾಗಿರುವ, ತಂ=ಪ್ರಸಿದ್ಧನಾದ, ವಿಷ್ಣುಂ=ಶ್ರೀ ಪರಮಾತ್ಮನನ್ನು, ಇತಿ=ಈಪ್ರಕಾರವಾಗಿ, ವರತ್ರಯಂ=ಮೂರು ವರಗಳನ್ನು, ಪ್ರಾದಾತ್=ಉಪದೇಶ ಮಾಡಿದನು, ಇತಿ=ಈ ಪ್ರಕಾರ ಗತಿಸಾರವೆಂಬ ಗ್ರಂಥದಲ್ಲಿ ಹೇಳುತ್ತದೆ.

ಭಾ || "ಅಗ್ರ್ಯತ್ವಾದಗ್ನಿನಾಮಾಽಸೌ ನಾಚಿಕೇತಾಗ್ನಿಗೋ ಹರಿಃ |
ಲೋಕೋ ವಿಷ್ಣೋರನಂತಸ್ಯ ತಜ್ಜ್ಞಾನಾನ್ನಿತ್ಯ ಆಪ್ಯತೇ |
ಪ್ರತಿಷ್ಠಾ ಸರ್ವಲೋಕಸ್ಯ ಸ ವಿಷ್ಣುಸ್ಸರ್ವಹೃದ್ಗತಃ |
ಸ ಏವ ಸರ್ವಲೋಕಾದಿಸ್ತಂ ಜ್ಞಾತ್ವಾ ಮುಚ್ಯತೇ ಧ್ರುವಮಿತಿ" ಚ |
(೧೭-೧೩) ||

ಅ || ಅಸೌ=ಪೂರ್ವೋಕ್ತನಾದ, ನಾಚಿಕೇತಾಗ್ನಿಗಃ=ನಾಚಿಕೇತನಾಮಕ ಅಗ್ನಿಯಲ್ಲಿರತಕ್ಕ, ಹರಿಃ=ಶ್ರೀ ಪರಮಾತ್ಮನು, ಅಗ್ರ್ಯತ್ವಾತ್=ಉತ್ತಮನಾಗಿರುವದರಿಂದಲೂ, ಅಗ್ನಿನಾಮಾ=ಅಗ್ನಿ ಎಂಬ ಹೆಸರುಳ್ಳವನು, ಅನಂತಸ್ಯ=ನಾಶರಹಿತನಾದ, ವಿಷ್ಣೋಃ=ಶ್ರೀ ಪರಮಾತ್ಮನ, ನಿತ್ಯಃ=ಶಾಶ್ವತವಾದ, ಲೋಕಃ=ವೈಕುಂಠಲೋಕವು, ತತ್ಜ್ಞಾನಾತ್=ಆ ಶ್ರೀಪರಮಾತ್ಮನ ಜ್ಞಾನದಿಂದ, ಆಪ್ಯತೇ=ಪ್ರಾಪಿಸಲ್ಪಡುತ್ತದೆ, ಸ ವಿಷ್ಣುಃ=ಆ ಶ್ರೀಪರಮಾತ್ಮನು, ಸರ್ವಲೋಕಸ್ಯ=ಸಮಸ್ತ ಲೋಕಕ್ಕೂ, ಪ್ರತಿಷ್ಠಾ=ಧಾರಕನು, ಸರ್ವಹೃದ್ಗತಃ=ಸಮಸ್ತ ಪ್ರಾಣಿಗಳ ಹೃದಯದಲ್ಲಿರತಕ್ಕವನು, ಸ ಏವ=ಆ ಶ್ರೀಪರಮಾತ್ಮನೇವೆ, ಸರ್ವಲೋಕಾದಿಃ=ಸಮಸ್ತ ಲೋಕಗಳಿಗೂ ಕಾರಣಭೂತನು, ತಂ=ಆ ಪರಮಾತ್ಮನನ್ನು, ಜ್ಞಾತ್ವಾ=ತಿಳಿದು, ಮುಚ್ಯತೇ=ಮೋಕ್ಷವನ್ನು ಹೊಂದುತ್ತಾನೆ, ಧ್ರುವಂ=ನಿಶ್ಚಯವು.

ಭಾ || ಯಾ ಇಷ್ಟಕಾ, ಯಾ ಇಷ್ಟಕಾ ದೇವತಾಃ |
"ಇಷ್ಟಕಾ ದೇವತಾಂ ವಿಷ್ಣುಂ ಷಷ್ಟ್ಯುತ್ತರ ಶತತ್ರಿಕಂ |
ಯಥಾವದೇವ ವಿಜ್ಞಾಯ ಮುಚ್ಯತೇ ಕರ್ಮಬಂಧನಾದಿತಿ" ಚ ||೧೪||

ಅ|| ಯಾಃ=ಯಾವ, ಇಷ್ಟಕಾಃ=ಇಟ್ಟಿಕಲ್ಲುಗಳೋ ಎಂಬ ಮೂಲವನ್ನು ಅನುವಾದ ಮಾಡಿಕೊಂಡು ಅದಕ್ಕೆ ಅರ್ಥ ಹೇಳುತ್ತಾರೆ. ಯಾ ಇಷ್ಟಕಾದೇವತಾಃ=ಯಾವ ಇಟ್ಟಿಕಲ್ಲುಗಳಲ್ಲಿರತಕ್ಕ ದೇವತೆಗಳೋ, ಇಷ್ಟಕಾದೇವತಾಂ=ಇಟ್ಟಿಕಲ್ಲುಗಳಿಗೆ ಅಭಿಮಾನಿ ದೇವತೆಗಳಾಗಿರುವ, ಷಷ್ಟ್ಯುತ್ತರ ಶತತ್ರಯಂ=ಮುನ್ನೂರ ಅರವತ್ತು ಸ್ವರೂಪವುಳ್ಳ, ವಿಷ್ಣುಂ=ಶ್ರೀಪರಮಾತ್ಮನನ್ನು, ಯಥಾವದೇವ=ಯಥಾರ್ಥವಾಗಿ, ವಿಜ್ಞಾಯ=ತಿಳಕೊಂಡರೆ, ಕರ್ಮಬಂಧನಾತ್=ಸಂಸಾರಬಂಧನದಿಂದ, ಮುಚ್ಯತೇ=ಮುಕ್ತನಾಗುತ್ತಾನೆ, ಇತಿ ಚ=ಹೀಗೂ ಹೇಳಲ್ಪಟ್ಟಿದೆ.

ಭಾ || ತ್ರಿಭಿರೇತ್ಯಸಂಧಿಂ ವೇದೈರವಿರುದ್ಧಃ ವೇದೋಕ್ತಪ್ರಕಾರೇಣ
ಭಗವತ್ತತ್ವಾದಿಕಂ ಜಾನನ್ನಿತ್ಯರ್ಥಃ || ೧೭ ||

ಅ || ತ್ರಿಭಿಃ=ಋಗ್ಯಜುಸ್ಸಾಮಗಳೆಂಬ ಮೂರು ವೇದಗಳಿಂದ, ಸಂಧಿಂ=ಸಂಬಂಧವನ್ನು, ಏತ್ಯ=ಪ್ರಾಪಿಸಿ, ಅಂದರೆ, ವೇದೈರವಿರುದ್ಧಃ=ವೇದಗಳಿಂದ ವಿರೋಧ ಇಲ್ಲದೆ ಇರುವವನು ಅಂದರೆ, ವೇದೋಕ್ತಪ್ರಕಾರೇಣ=ಮೂರು ವೇದಗಳಲ್ಲಿ ಹೇಳಿದ ಪ್ರಕಾರವಾಗಿ, ಭಗವತ್ತ

ತ್ವಾದಿಕಂ=ಪರಮಾತ್ಮಸ್ವರೂಪವೇ ಮೊದಲಾಗಿ ಉಳ್ಳದ್ದನ್ನು, ಜಾನನ್=ತಿಳಿದವನು, ಇತ್ಯರ್ಥಃ= ಈ ಪ್ರಕಾರ ಅರ್ಥವು.

**ಭಾ** || ತ್ರಿಕರ್ಮಕೃತ್ ಯಜ್ಞದಾನತಪಃ ಕರ್ತಾ । "ಯಜ್ಞದಾನ ತಪಃ ಕರ್ಮ ನ ತ್ಯಾಜ್ಯಂ ಕಾರ್ಯಮೇವ ತತ್" || ಇತಿ ವಚನಾತ್ || ೧೬ ||

ಅ|| ತ್ರಿಕರ್ಮಕೃತ್=ಮೂರು ಕರ್ಮಗಳನ್ನು ಮಾಡುವವನು, ಅಂದರೆ ಯಜ್ಞವು, ದಾನವು, ತಪಸ್ಸು,- ಇವುಗಳನ್ನು ಮಾಡುವವನು, ಯಜ್ಞ=ದೇವತೆಗಳನ್ನು ಉದ್ದೇಶೀಕರಿಸಿ ಕೊಂಡು ಹವಿರಾದಿ ಪದಾರ್ಥಗಳನ್ನು ಅಗ್ನಿಯಲ್ಲಿ ಹೋಮಿಸುವದು, ದಾನ=ಸತ್ಪಾತ್ರದಲ್ಲಿ ಯೋಗ್ಯವಾದ ವಸ್ತುಗಳನ್ನು ಕೊಡುವದು, ತಪಃ=ದೇವಪೂಜಾದಿ ಶರೀರಸಂಬಂಧಿ ಕಾರ್ಯವೂ, ಸತ್ಯವಚನವೇ ಮೊದಲಾದ ವಾಙ್ಮಯ ಕಾರ್ಯವೂ, ಮನಃಪ್ರಸಾದವೇ ಮೊದಲಾದ ಮಾನಸ ಕಾರ್ಯವೂ,- ಇವುಗಳೇ ಮೊದಲಾದ, ಕರ್ಮ=ಕರ್ಮವು (ಮನುಷ್ಯರಿಂದ), ನ ತ್ಯಾಜ್ಯಂ=ಪರಿ ತ್ಯಾಗ ಮಾಡತಕ್ಕದ್ದಲ್ಲ, ತತ್=ಮೊದಲು ಹೇಳಿದ ಕರ್ಮವು, ಕಾರ್ಯಮೇವ=ಮಾಡತಕ್ಕದ್ದೇ ಸರಿ, ಇತಿ ವಚನಾತ್=ಈ ಪ್ರಕಾರ ಗೀತಾವಚನ ಇರುವದರಿಂದ,

**ಭಾ** || ತ್ರಯಮೇತದ್ಯಾ ಇಷ್ಟಕಾ ಇತ್ಯಾದಿ || ೧೭ ||

ಅ || ಏತತ್ರಯಂ=ಈ ಮೂರು, ಅಂದರೆ ಯಾ ಇಷ್ಟಕಾ ಇತ್ಯಾದಿ=ಯಾವ ಇಟ್ಟಿಕಲ್ಲುಗಳ ದೇವತೆಗಳು ಅವುಗಳ ಸಂಖ್ಯಾ ಪರಿಮಾಣ ಈ ಮೂರು.

**ಭಾ** || "ಬ್ರಹ್ಮೇತಿ ವೇದ ಉದ್ದಿಷ್ಟಸ್ತಸ್ಮಾದ್ವ್ಯಕ್ತೋ ಯತೋ ಹರಿಃ ।
ಬ್ರಹ್ಮಜಸ್ತೇನ ಕಥಿತ ಸ್ಸಏವ ಜ್ಞೋಽಖಿಲಜ್ಞತಃ" ||
ಇತಿ ನಾಮನಿರುಕ್ತೌ || ೧೭ ||

ಅ || ವೇದಃ=ಶ್ರುತಿಯು, ಬ್ರಹ್ಮೇತಿ=ಬ್ರಹ್ಮವೆಂಬ ನಾಮದಿಂದ, ಉದ್ದಿಷ್ಟಃ=ಪ್ರಸಿದ್ಧವಾಗಿ ಯದೆ, ಯತಃ=ಯಾವ ಕಾರಣದಿಂದ, ಹರಿಃ=ಶ್ರೀ ಪರಮಾತ್ಮನು, ತಸ್ಮಾತ್=ಆ ವೇದದ ದೆಶೆಯಿಂದ, ವ್ಯಕ್ತಃ=ತಿಳಿಯಲ್ಪಡುವನೋ, ತೇನ=ಆ ಕಾರಣದಿಂದ, ಬ್ರಹ್ಮಜಃ=ಬ್ರಹ್ಮಜನೆಂದು, ಕಥಿತಃ=ಹೇಳಿಸಿಕೊಳ್ಳಲ್ಪಟ್ಟಿದ್ದಾನೆ, ಸ ಏವ=ಆ ಪರಮಾತ್ಮನೇವೆ, ಅಖಿಲಜ್ಞತಃ=ಸಮಸ್ತವನ್ನೂ ತಿಳಕೊಂಡವನಾದುದರಿಂದ, ಜ್ಞಃ=ಜ್ಞಶಬ್ದವಾಚ್ಯನು ಆದುದರಿಂದ ಬ್ರಹ್ಮಜಜ್ಞನು ಅವನೇ.

**ಭಾ** || ಅನೇಕರೂಪಾಂ ಸ್ವರ್ಣಮಯೀಂ । "ಬಹುರೂಪಂ ಚ ಪುರಟಂ ಕಾರ್ತಸ್ವರಮಿತೀರ್ಯತ" ಇತ್ಯಭಿಧಾನಾತ್ || ೧೫ ||

ಅ || ಅನೇಕರೂಪಾಂ=ಎಂಬುವಪದಕ್ಕೆ, ಸ್ವರ್ಣಮಯೀಂ=ಭಂಗಾರದಿಂದ ಮಾಡಲ್ಪಟ್ಟದ್ದು ಎಂಬ ಅರ್ಥವು, ಬಹುರೂಪಂ, ಪುರಟಂ, ಕಾರ್ತಸ್ವರಂ, ಇತಿ=ಈಪ್ರಕಾರ, ಈರ್ಯತೆ= ಹೇಳಲ್ಪಡುತ್ತದೆ . (ಇವುಗಳೆಲ್ಲ ಪರ್ಯಾಯಪದಗಳು). ಇತಿ=ಹೀಗೆ, ಅಭಿಧಾನಾತ್=ಅಭಿಧಾನವೆಂಬುವ ಗ್ರಂಥದಿಂದ.

**ಭಾ** || "ಯಮೋಽನುವಾದಸಂತುಷ್ಟೋ ವಹ್ನೇಸ್ತನ್ನಾಮತಾಮಪಿ ।
ಶೃಂಕಾಂ ಸ್ವರ್ಣಮಯೀಂ ಚೈವ ಕಂಠಮಾಲಾಮದಾದ್ವಿಭುಃ" ।
|| ಇತಿ ಪಾದ್ಮೆ || || ೧೫ ||

ಅ || ವಿಭುಃ=ಸಮರ್ಥರಾದ, ಯಮಃ=ಯಮದೇವರು, ಅನುವಾದಸಂತುಷ್ಟಃ= ನಚಿಕೇತರು ಮಾಡಿದ ಅನುವಾದದಿಂದ ಸಂತೋಷಉಳ್ಳವರಾಗಿ, ವಹ್ನೇಃ=ಅಗ್ನಿಗೆ, ತನ್ನಾಮ

ತಾಂ=ನಾಚಿಕೇತಾಗ್ನಿ ಎಂಬುವ ಹೆಸರನ್ನು, ಸ್ವರ್ಣಮಯೀಂ=ಭಂಗಾರದಿಂದ ಮಾಡಲ್ಪಟ್ಟ, ಕಂಠಮಾಲಾಂ=ಕಂಠದಲ್ಲಿ ಧರಿಸತಕ್ಕ, ಶೃಂಕಾಂ ಚ=ಮಾಲಿಕೆಯನ್ನೂ ಕೂಡ, ದದಾತ್=ಕೊಟ್ಟರು.

**ಭಾ** ॥ ಲೋಕಾದಿಃ ಪ್ರತಿಷ್ಠಾ ಬ್ರಹ್ಮಜಜ್ಞೋಽನಂತಲೋಕಾಪ್ತಿರಿತ್ಯಾದಿ ವಿಶೇಷಣೈಶ್ಚ ಭಗವಾನೇವ ॥ ೧೩,೧೭ ॥

ಅ ॥ ಇವೇ ಮೊದಲಾದ ವಿಶೇಷಣಗಳಿಂದಲೂ ಪರಮಾತ್ಮನೇ ಈ ಪ್ರಕರಣದಲ್ಲಿ ಪ್ರತಿಪಾದ್ಯನು.

**ಭಾ** ॥ ಸ್ತೋಮಮಹದುರುಗಾಯಂ ಪ್ರತಿಷ್ಠಾಮಿತಿ ಪರಾಮರ್ಶಾಚ್ಚ ।
॥ ಅ ೧ ವ,೨ ಮಂ, ೧೧ ॥

ಅ ॥ ಮೇಲೆ ಹೇಳುವ- (ಪ್ರತಿಷ್ಠಾತ್ವ-ಅನಂತಲೋಕಾಪ್ತಿತ್ವಾದೀನಾಂ) ಈ ವಾಕ್ಯಗಳಿಗೆ ಮುಂದಿನ ವಾಕ್ಯಇರುವುದರಿಂದಲೂ, ಈ ಪ್ರಕರಣವು ಅಗ್ನ್ಯಂತರ್ಗತ ಪರಮಾತ್ಮಪರವು.

**ಭಾ** ॥ ಭಗವತೋಹ್ಯುರುಗಾಯ ನಾಮ ಪ್ರಸಿದ್ಧಂ । ಗುಹಾನಿಹಿತತ್ವಂ ಚ ತಸ್ಯೈವ ವಿಶೇಷತಃ ಪ್ರಸಿದ್ಧಂ ॥ ೧೩ ॥

ಅ ॥ ಹಿ=ಯಾವ ಕಾರಣದಿಂದ, ಭಗವತಃ=ಪರಮಾತ್ಮನಿಗೆ, ಉರುಗಾಯನಾಮ=ಉರುಗಾಯನೆಂಬ ಹೆಸರು ಪ್ರಸಿದ್ಧವಾದದ್ದೋ, ತಸ್ಯೈವ=ಆ ಪರಮಾತ್ಮನಿಗೇವೆ, ಗುಹಾನಿಹಿತತ್ವಂ ಚ=ಹೃದಯ ಗುಹೆಯಲ್ಲಿ ಆವಾಸಮಾಡಿಕೊಂಡು ಇದ್ದೋಣವು, ವಿಶೇಷತಃ=ವಿಶೇಷಾಕಾರವಾಗಿ, ಪ್ರಸಿದ್ಧಂ=ಪ್ರಸಿದ್ಧವಾದದ್ದು.

**ಭಾ** ॥ ನ ಚಾಗ್ನಿಪರಿಜ್ಞಾನ ಮಾತ್ರೇಣಾನಂತಲೋಕಾಪ್ತಿರ್ಭಗವಜ್ಜ್ಞಾನಂ ವಿನಾ ॥ ೧೩ ॥

ಅ ॥ ಭಗವಜ್ಜ್ಞಾನಂ=ಶ್ರೀಪರಮಾತ್ಮತತ್ವಜ್ಞಾನವನ್ನು, ವಿನಾ=ಹೊರತು, ಅಗ್ನಿಪರಿಜ್ಞಾನಮಾತ್ರೇಣ=ಅಗ್ನಿಯನ್ನು ತಿಳಕೊಂಡಿರುವುದರಿಂದ ಮಾತ್ರವಾಗಿ, ಅನಂತಲೋಕಾಪ್ತಿಃ=ವಿಷ್ಣುಲೋಕ ಪ್ರಾಪ್ತಿಯು, ನ ಚ=ಆಗುವುದಿಲ್ಲ.

**ಭಾ** ॥ "ತದ್ವಾ ಏತದಕ್ಷರಂ ಗಾರ್ಗ್ಯವಿದಿತ್ವಾಽಸ್ಮಿನ್ ಲೋಕೇ ಜುಹೋತಿ ಯಜತೇ ತಪಸ್ತಪ್ಯತೇ । ಬಹೂನಿ ವರ್ಷಸಹಸ್ರಾಣ್ಯಂತವದೇವಾಸ್ಯ ತದ್ಭವತೀ"ತ್ಯಾದಿ ಶ್ರುತೇಃ ॥

ಅ ॥ ಹೇ ಗಾರ್ಗಿ=ಎಲೇ ಗಾರ್ಗಿಯೇ, ತದೇತತ್=ಆಯಿದಾವ, ಅಕ್ಷರಂ=ನಾಶರಹಿತನಾದ ಪರಮಾತ್ಮನನ್ನು, ಅವಿದಿತ್ವಾ=ತಿಳಕೊಳ್ಳದೆ, ಯತ್=ಯಾವುದು, ಅಸ್ಮಿನ್‌ಲೋಕೇ=ಈ ಲೋಕದಲ್ಲಿ, ಜುಹೋತಿ=ವೈಶ್ವದೇವಾದಿ ಹೋಮಗಳನ್ನು ಮಾಡುತ್ತಾನೋ, ಯಜತೇ=ಅಶ್ವಮೇಧಾದಿ ಯಜ್ಞಗಳನ್ನು ಮಾಡುತ್ತಾನೋ, ಬಹೂನಿವರ್ಷ ಸಹಸ್ರಾಣಿ=ಬಹು ಸಹಸ್ರ ವರ್ಷಗಳಲ್ಲಿ, ತಪಃ=ತಪಸ್ಸು, ತಪ್ಯತೆ=ಮಾಡುವನೋ, ಅಸ್ಯ=ಪರಮಾತ್ಮನ ಜ್ಞಾನವಿಲ್ಲದೆ ಇರುವವನಿಗೆ, ತತ್=ಹೋಮಾದಿ ಸಮಸ್ತಕರ್ಮವು, ಅಂತವದೇವ=ನಾಶ ಸಹಿತವಾದ ಸ್ವರ್ಗಾದಿ ರೂಪಫಲವುಳ್ಳದ್ದೇ, ಭವತಿ=ಆಗುತ್ತದೆ. (ಈ ಪ್ರಕಾರ ಬೃಹದಾರಣ್ಯಕದಲ್ಲಿ ಹೇಳಲ್ಪಟ್ಟದೆ.)

**ಭಾ** ॥ ನ ಚಮುಖ್ಯೇ ಸತ್ಯಮುಖ್ಯಾರ್ಥೋ ಯುಜ್ಯತೇ ॥ ೧೩ ॥

ಅ ॥ ಮುಖ್ಯಾರ್ಥವು ಕೂಡಿರುವಾಗ ಬಾಧಕವಿಲ್ಲದೆ ಅಮುಖ್ಯಾರ್ಥವು ಹೇಳುವದು ನ್ಯಾಯಸಿದ್ಧವಲ್ಲ.

ಭಾ ॥ ಪ್ರೇತೇ ಮುಕ್ತೇ ಮನುಷ್ಯೇ ನಿಯಾಮಕತ್ವೇನ ಭಗವಾನಸ್ತೀತಿ
ಜ್ಞಾನಿನೋ ವದಂತಿ ನಾಸ್ತೀತ್ಯಜ್ಞಾಃ ॥ ೧೯ ॥

ಅ ॥ ಪ್ರೇತೇ=ಮೃತನಾದ, ಮುಕ್ತೇ=ಲಿಂಗದೇಹವನ್ನು ಬಿಟ್ಟಿರುವ, ಮನುಷ್ಯೇ=ಚೇತನ ಸಾಮಾನ್ಯದಲ್ಲಿ, ಭಗವಾನ್=ಶ್ರೀ ಪರಮಾತ್ಮನು, ನಿಯಾಮಕತ್ವೇನ=ಪ್ರೇರಕನಾಗಿ, ಅಸ್ತೀತಿ=ಇದ್ದಾನೆಯೆಂದು, ಜ್ಞಾನಿನಃ=ವಿದ್ವಾಂಸರು, ವದಂತಿ=ಹೇಳುತ್ತಾರೆ, ನಾಸ್ತೀತಿ=ಇಲ್ಲವೆಂದು, ಅಜ್ಞಾಃ=ತಿಳಿಯದೆ ಇದ್ದವರು, ವದಂತಿ=ಹೇಳುತ್ತಾರೆ.

ಭಾ ॥ ತಸ್ಯ ನಿಯಾಮಕಸ್ಯ ಸ್ವರೂಪಂ ಯಥಾವದಹಂ ವಿದ್ಯಾಂ ॥ ೧೯ ॥

ಅ ॥ ತಸ್ಯ=ಆ, ನಿಯಾಮಕಸ್ಯ=ಪ್ರೇರಕನಾಗಿರುವ ಪರಮಾತ್ಮನ, ಸ್ವರೂಪಂ=ತತ್ವವನ್ನು, ಅಹಂ=ನಾನು, ಯಥಾವತ್=ಯಥಾರ್ಥವಾಗಿ, ವಿದ್ಯಾಂ=ತಿಳಿಯುತ್ತೇನೆ.

ಭಾ ॥ ಅಸ್ಯ ವಿಸ್ರಂಸಮಾನಸ್ಯ ಶರೀರಸ್ಥಸ್ಯ ದೇಹಿನಃ ।
ದೇಹಾದ್ವಿಮುಚ್ಯಮಾನಸ್ಯ ಕಿಮತ್ರ ಪರಿಶಿಷ್ಯತೇ ।
ಏತದ್ವೈತದಿತಿ ಪರಿಹಾರಾಚ್ಚ ಮುಕ್ತೇ ಸ್ಥಿತೋ ಭಗವಾನ್ಪೃಚ್ಛ್ಯತ ।
ಇತಿ ಸಿದ್ಧಂ॥ ಅ. ೨ ವ. ೨ ಮ. ೪ ॥

ಅ ॥ ಶರೀರಸ್ಥಸ್ಯ=ಶರೀರದಲ್ಲಿ ವಿದ್ಯಮಾನನಾದ, ಅಸ್ಯ=ಈ ದಾವ, ದೇಹಿನಃ=ಜೀವನಿಗೆ, ವಿಸ್ರಂಸಮಾನಸ್ಯ=ಸ್ಥೂಲ ದೇಹವನ್ನು ಪರಿತ್ಯಾಗಮಾಡತಕ್ಕವನಿಗೂ, ದೇಹಾತ್ ಸೂಕ್ಷ್ಮದೇಹದ್ದೆಶೆಯಿಂದ, ವಿಮುಚ್ಯಮಾನಸ್ಯ=ಪರಿತ್ಯಾಗಮಾಡತಕ್ಕವನಿಗೂ, ಅತ್ರ=ಮುಕ್ತಿಯಲ್ಲಿ ನಿಯಾಮಕವಾದದ್ದು, ಕಿಂ=ಯಾವದು, ಪರಿಶಿಷ್ಯತೇ=ಅವಶಿಷ್ಟವಾಗಿರುತ್ತದೆ ಎಂಬುವ ಪ್ರಶ್ನೆಗೆ, ಏತದ್ವೈತತ್=ನಿನ್ನಿಂದ ಪ್ರಶ್ನೆಮಾಡಲ್ಪಟ್ಟ, ತತ್=ಆ ವಸ್ತುವು, ಏತತ್ ವೈ=ಮೇಲೆ ಹೇಳತಕ್ಕ ಗುಣವಿಶಿಷ್ಟವಾದದ್ದೇ ಸರಿ. ಈ ಪ್ರಕಾರ ಪರಿಹಾರ ಮಾಡಿರುವುದರಿಂದಲೂ, ಮುಕ್ತನಿಯಾಮಕನಾದ ಪರಮಾತ್ಮನೇ ಪ್ರಶ್ನೆಗೆ ವಿಷಯನು ಎಂಬುವದು ಸಿದ್ಧವಾಯಿತು.

ಭಾ ॥ ದೇಹಾದ್ವಿಶೇಷೇಣ ಮೋಚನಂ ನಾಮ ಮುಕ್ತಿರೇವ । ಮುಕ್ತೇರಪಿ
ಮರಣಾತ್ಮಕತ್ವಾನ್ಮರಣಮಿತ್ಯಪಿ ಭವತಿ । ಸ್ಥೂಲದೇಹ
ಪರಿತ್ಯಾಗಸ್ತು ವಿಸ್ರಂಸಮಾನಸ್ಯೇತ್ಯನೇನೈವೋಕ್ತೋ ಭವತಿ ॥

ಅ॥ ಶರೀರ ದೆಶೆಯಿಂದ ವಿಶೇಷಾಕಾರವಾದ ಮೋಚನವೆಂತೆಂದರೆ ಮೋಕ್ಷವೇ ಸರಿ. ಮೋಕ್ಷವು ಕೂಡಾ ಮರಣಸ್ವರೂಪವಾದುದರಿಂದ ಮರಣವೆಂತಲೂ ಹೇಳಲ್ಪಡುತ್ತದೆ. ಸ್ಥೂಲ ದೇಹ ಪರಿತ್ಯಾಗವಾದರೂ "ವಿಸ್ರಂಸಮಾನಸ್ಯ" ಎಂಬುವದರಿಂದಲೇ ಹೇಳಿದ ಹಾಗಾಯಿತು.

(ಈ ವಿಷಯದಲ್ಲಿ ಪ್ರಮಾಣವನ್ನು ಉದಾಹರಿಸುತ್ತಾರೆ.)

ಭಾ ॥ "ಅಗ್ನಿಸ್ಥಂ ಪರಮಾತ್ಮಾನಂ ಸಾಮಾನ್ಯಾಜ್ಞಾ ನತೋಽಪಿ ತು ।
ಅಜಾನತಸ್ತು ಮುಕ್ತೌ ಚ ಜೀವಾಂತಃ ಸ್ಥಿತಮೀಶ್ವರಂ ।
ನಿಯಾಮಕಂ ಚ ಜೀವಾನಾಂ ಮುಕ್ತಾನಾಮಪಿ ಸರ್ವದಾ ॥
ಗುಣಾನ್ಸರ್ವೋತ್ತಮತ್ವಾದೀನವಿಜ್ಞಾಯ ಹರೇಸ್ತಥಾ ॥

ನ್ನೈವ ಮುಕ್ತಿರ್ಭವೇತ್ತಸ್ಮಾತ್ಕೃಚ್ಛ್ರಾತ್ತದವದದ್ಯಮಃ ||
ತಸ್ಯ ಗೋಪ್ಯತ್ವ ವಿಜ್ಞಪ್ತ್ಯೈ ತಥಾಪ್ಯಗ್ನಿಸ್ಥ ವೇದನಾತ್ |
ಸುಖಾಧಿಕ್ಯಂ ಭವೇನ್ಮುಕ್ತೌ ತಸ್ಮಾತ್ತತ್ಪೃಥಗೀರಿತಂ"||ಇತಿತತ್ವಸಾರೆ||

ಅ|| ಅಗ್ನ್ಯಂತರ್ಗತನಾಗಿರುವ ಪರಮಾತ್ಮನನ್ನು ಸಾಮಾನ್ಯಾಕಾರವಾಗಿ ತಿಳಿದವನಿಗೂ ಮುಕ್ತಿಯೆಂಬುದು ಆಗುತ್ತದೆಯೇ ಸರಿ. ಮುಕ್ತೌ ಚ=ಮೋಕ್ಷದಲ್ಲಿ ಕೂಡಾ, ಜೀವಾಂತಃಸ್ಥಿತಂ=ಚೇತನಸಾಮಾನ್ಯದಲ್ಲಿ ಅಂತರ್ಗತನಾಗಿರುವ, ಈಶ್ವರಂ=ಶ್ರೀಪರಮಾತ್ಮನನ್ನು, ಅಜಾನತಸ್ತು=ತಿಳಿಯದೆ ಇದ್ದವನಿಗೆ ಆದರೂ, ಮುಕ್ತಾನಾಂ ಜೀವಾನಾಂ=ಮುಕ್ತಜೀವರಿಗೆ, ಸರ್ವದಾ=ಸದಾಕಾಲದಲ್ಲಿಯೂ, ನಿಯಾಮಕಂ ಚ=ಪ್ರೇರಕನನ್ನಾಗಿಯೂ, ತಥಾ=ಹಾಗೆಯೇ, ಹರೇಃ=ಶ್ರೀಪರಮಾತ್ಮನ, ಸರ್ವೋತ್ತಮತ್ವಾದೀನ್=ಸರ್ವೋತ್ತಮತ್ವವೆ ಮೊದಲಾದ, ಗುಣಾನ್=ಗುಣಗಳನ್ನು, ಅವಿಜ್ಞಾಯ=ತಿಳಿಯದೆ, ಮುಕ್ತಿಃ=ಮೋಕ್ಷವು, ನೈವಭವೇತ್=ಪ್ರಾಪ್ತಿಯಾಗಲಾರದು, ತಸ್ಮಾತ್=ಆ ಕಾರಣದಿಂದ, ಯಮಃ=ಯಮದೇವರು, ತತ್=ಮೂರನೇ ಪ್ರಶ್ನೆ ವಿಷಯವನ್ನು, ಕೃಚ್ಛ್ರಾತ್=ಬಹು ಕಷ್ಟದಿಂದ, (ತಸ್ಯ=ಆ ಪ್ರಶ್ನೋತ್ತರಕ್ಕೆ, ಗೋಪ್ಯತ್ವ ವಿಜ್ಞಪ್ತ್ಯೈ=ಅತಿಗುಹ್ಯವಾದ ಪ್ರಮೇಯವೆಂತ ತಿಳಿಸುವುದಕ್ಕೋಸ್ಕರ), ಅವದತ್=ಉಪದೇಶ ಮಾಡಿದನು.

(ಹಾಗಾದರೆ ಅಗ್ನಿಸ್ಥ ಭಗವಜ್ಜ್ಞಾನಕ್ಕೆ ಮೋಕ್ಷಸಾಧನತ್ವ ಇಲ್ಲವೋ ಎಂದರೆ ಹೇಳುತ್ತಾರೆ.)

ತಥಾಪಿ=ಹಾಗಾದಾಗ್ಯೂ, ಅಗ್ನಿಸ್ಥ ವೇದನಾತ್=ಅಗ್ನ್ಯಂತರ್ಗತ ಪರಮಾತ್ಮನನ್ನು ತಿಳಿಯುವುದರಿಂದ, ಮುಕ್ತೌ=ಮೋಕ್ಷದಲ್ಲಿ, ಸುಖಾಧಿಕ್ಯಂ=ಆನಂದೋದ್ರೇಕವು, ಭವೇತ್=ಉಂಟಾಗುತ್ತದೆ, ತಸ್ಮಾತ್=ಆ ಕಾರಣದಿಂದ, ತತ್=ಅಗ್ನಿಸ್ಥ ಭಗವಜ್ಜ್ಞಾನವು, ಪೃಥಗೀರಿತಂ=ಪ್ರತ್ಯೇಕವಾಗಿ ಹೇಳಲ್ಪಟ್ಟಿತು. ಹೀಗೆ ತತ್ವಸಾರದಲ್ಲಿ.

(ಮೂರನೆ ಪ್ರಶ್ನೆಯು ಭಗವದ್ವಿಷಯವೇ ಸರಿ ಎಂಬುವದರಲ್ಲಿ ಜ್ಞಾಪಕಾಂತರ ಹೇಳುತ್ತಾರೆ.)

**ಭಾ.** || "ಸ್ಥಾಣುಮನ್ಯೇಽನು ಸಂಯಂತಿ ಯಥಾ ಕರ್ಮ ಯಥಾ ಶ್ರುತಂ" ಇತ್ಯುಕ್ತ್ವಾ "ಯ ಏಷು ಸುಪ್ತೇಷು ಜಾಗರ್ತಿ ಕಾಮಂ ಕಾಮಂ ಪುರುಷೋ ನಿರ್ಮಮಾಣ" ಇತಿ ವಚನಾಚ್ಚ ಜೀವೇಷು ಸ್ಥಿತೋ ಭಗವಾನ್ಪೃಚ್ಛ್ಯತ ಇತಿ ಸಿದ್ಧಂ ||

ಅ|| (ಪುರುಷರಿಂದ) ಯಥಾಕರ್ಮಕೃತಂ=ಹ್ಯಾಗೆ ಕರ್ಮ ಮಾಡಲ್ಪಡುತ್ತದೋ ಯಥಾ=ಹ್ಯಾಗೆ, ಶ್ರುತಂ=ಕೇಳಲ್ಪಡುವುದೊ, ತಥಾ=ಹಾಗೆ, ಅನ್ಯೇ=ಕೆಲವು ಪುರುಷರು, ಸ್ಥಾಣುಂ=ಸ್ಥಾವರಾದಿ ಜನ್ಮಗಳನ್ನು, ಅನುಸಂಯಂತಿ=ಅನುಸರಿಸಿ ಹೋಗುತ್ತಾರೆ, ಇತ್ಯುಕ್ತ್ವಾ=ಈ ಪ್ರಕಾರ ಹೇಳಿ, ಯಃ ಪುರುಷಃ=ಯಾವ ಶ್ರೀಪರಮಾತ್ಮನು, ಏಷು=ಯಾವ ಪ್ರಾಣಿಗಳು, ಸುಪ್ತೇಷುಸತ್ಸು=ನಿದ್ರಿತರಾಗಿರಲು, ಕಾಮಂ ಕಾಮಂ=ಇಚ್ಛಾನುಸಾರ ಕಾಮ್ಯಗಳಾದ ಸ್ವಾಪ್ನ ಪದಾರ್ಥಗಳನ್ನು, ನಿರ್ಮಮಾಣಃ=ನಿರ್ಮಿಸುವವನಾಗಿ, ಜಾಗರ್ತಿ=ನಿದ್ರೆಯಿಲ್ಲದೆ ಪ್ರೇರಕನಾಗಿರುತ್ತಾನೆ. ಇತಿ ವಚನಾಚ್ಚ=ಈ ಪ್ರಕಾರ ಉತ್ತರತ್ರದಲ್ಲಿ ಹೇಳಿರುವದರಿಂದಲೂ, ಜೀವೇಷು=ಜೀವರುಗಳಲ್ಲಿ, ಸ್ಥಿತಃ=ಅಂತರ್ಗತನಾಗಿರುವ, ಭಗವಾನ್=ಶ್ರೀಪರಮಾತ್ಮನು, ಪೃಚ್ಛ್ಯತೆ=ಪ್ರಶ್ನೆಮಾಡಿಸಿಕೊಳ್ಳಲ್ಪಡುತ್ತಾನೆ, ಇತಿ=ಎಂಬುವದು,ಸಿದ್ಧಂ=ಸಿದ್ಧವಾಯಿತು.

ಮೊದಲು ಮುಕ್ತನಲ್ಲಿ ಇರತಕ್ಕ ಪರಮಾತ್ಮನು ಪ್ರಶ್ನಿಮಾಡಿಸಿಕೊಳ್ಳಲ್ಪಟ್ಟನೆಂದು ಹೇಳಿ ಈಗ ಜೀವರುಗಳಲ್ಲಿರತಕ್ಕ ಪರಮಾತ್ಮನು ಎಂದು ಹೇಳಿದರೆ ಪೂರ್ವೋತ್ತರ ವಿರೋಧ ಬರುತ್ತದೆಯಲ್ಲ ಎಂಬುದಾಗಿ ಶಂಕಾ ಬಂದರೆ ಆ ವಿರೋಧವನ್ನು ಪ್ರಶ್ನಿವಾಕ್ಯವನ್ನುದಾಹರಿಸಿಕೊಂಡು ಪರಿಹರಿಸುತ್ತಾರೆ.

ಭಾ || ಮೃತಜೀವೇ ಸ್ಥಿತೋ ಮುಕ್ತಜೀವೇ ಸ್ಥಿತಶ್ಚೋಭಯಾತ್ಮಕೋ ಭಗವಾನ್ವಿವಕ್ಷಿತ ಇತ್ಯೇತಸ್ಮಾಚ್ಚಾ ವಿರೋಧಃ ||

ಅ || ಮೃತರಾದವರಲ್ಲಿಯೂ, ಮುಕ್ತರಲ್ಲಿಯೂ ವಿದ್ಯಮಾನನಾಗಿ ಎರಡು ವಿಧದಿಂದ ನಿಯಾಮಕನಾಗಿರುವ ಶ್ರೀಪರಮಾತ್ಮನು ಪ್ರಶ್ನೆಯಲ್ಲಿ ವಿವಕ್ಷಿತನಾಗಿದ್ದಾನೆ. ಆದುದರಿಂದಲೂ ವಿರೋಧವಿಲ್ಲವೆಂದು ತಾತ್ಪರ್ಯವು.

ಭಾ || "ಗುಹ್ಯಂ ತತ್ಪರಮಂ ಬ್ರಹ್ಮ ಶೀರ್ಯಮಾಣಂ ಶರೀರಿಣಂ |
ಸಂಪ್ರಾಪ್ತಮಪಿ ಜೀವೇಷು ಜಾಗರ್ತಿ ಸ್ವಪಿತೇಷ್ವಪಿ ||"

ಇತಿ ಬ್ರಹ್ಮಾಂಡೇ ||

ಅ || ಶೀರ್ಯಮಾಣಂ=ಮರಣವನ್ನು ಹೊಂದತಕ್ಕ, ಶರೀರಿಣಂ=ಜೀವವನ್ನು, ಸಂಪ್ರಾಪ್ತಮಪಿ=ಚೆನ್ನಾಗಿ ಅಂತಃಪ್ರೇರಕನಾಗಿ, ಪ್ರಾಪಿಸಿಕೊಂಡು ಇರತಕ್ಕವನಾದರೂ, ಗುಹ್ಯಂ=ಅತಿರಹಸ್ಯನಾದ, ತತ್=ಪ್ರಸಿದ್ಧನಾದ, ಪರಮಂ ಬ್ರಹ್ಮ=ಶ್ರೀ ಪರಮಾತ್ಮನು, ಜೀವೇಷು=ಜೀವರು, ಸ್ವಪಿತೇಷ್ವಪಿ ನಿದ್ರಿತರಾಗಿರಲೂ, ಜಾಗರ್ತಿ=ಜಾಗ್ರದವಸ್ಥಾಪನ್ನನಾಗಿರುತ್ತಾನೆ. (ಈ ಪ್ರಕಾರ ಬ್ರಹ್ಮಾಂಡಪುರಾಣದಲ್ಲಿ ಹೇಳುತ್ತದೆ)

ಭಾ || ಧಾರಕತ್ವಾದ್ಧರ್ಮೋ ಭಗವಾನ್ || ೨೦ || ಮರಣೇ ಸ್ಥಿತಂ ಭಗವಂತಂ ಮಾನುಪ್ರಾಕ್ಷೀಃ || ೨೪ || ಮಹತಿ ಸಾಂಪರಾಯೇ ಮುಕ್ತೌ || ೨೮ ||

**|| ಇತಿ ಕಾಠಕೋಪನಿಷದಿ ಪ್ರಥಮಾಧ್ಯಾಯಸ್ಯ ಪ್ರಥಮಾವಲ್ಲೀ ಸಮಾಪ್ತಾ ||**

ಅ || ಸಮಸ್ತ ಜಗತ್ತಿಗೂ ಧಾರಕನಾಗಿರುವದರಿಂದ ಶ್ರೀ ಪರಮಾತ್ಮನು ಧರ್ಮಶಬ್ದ ವಾಚ್ಯನು ಆಗಿದ್ದಾನೆ. ಸಾಯಲಿಕ್ಕೆ ಇರುವವನಲ್ಲಿ ಸತ್ತುಹೋದವನಲ್ಲಿಯೂ ಇರತಕ್ಕ ಪರಮಾತ್ಮನನ್ನು ಕುರಿತು (ಮಾನುಪ್ರಾಕ್ಷೀಃ) ಪ್ರಶ್ನಿಮಾಡಬೇಡವೆಂದು ತಾತ್ಪರ್ಯವು. ಮಹತಿ ಸಾಂಪರಾಯೇ ಎಂಬುವದಕ್ಕೆ ಮೋಕ್ಷದಲ್ಲಿ ಎಂಬ ಅರ್ಥವು ಆಗಿರುತ್ತದೆ.

**ಕಾಠಕ ಭಾಷ್ಯದಲ್ಲಿ ಪ್ರಥಮಾಧ್ಯಾಯದಲ್ಲಿ ಪ್ರಥಮಾವಲ್ಲಿ ಸಮಾಪ್ತವಾಯಿತು.**

|| ಶ್ರೀರಸ್ತು ಶ್ರೀಃ ||



## ದ್ವಿತೀಯ ವಲ್ಲಿ.

**ಮಂ ॥ ಅನ್ಯಚ್ಛ್ರೇಯೋಽನ್ಯದುತೇವ ಪ್ರೇಯಃ ತೇ ಉಭೇ ನಾನಾರ್ಥೇ ಪುರುಷಂ ಸಿನೀತಃ । ತಯೋಃ ಶ್ರೇಯ ಆದದಾನಸ್ಯ ಸಾಧು ಭವತಿ ಹೀಯತೇಽರ್ಥಾದ್ಯ ಉ ಪ್ರೇಯೋ ವೃಣೀತೇ ॥ ೧ ॥**

ಅ ॥ ಶ್ರೇಯಃ=ಅತಿಪ್ರಶಸ್ತವಾದ ಬ್ರಹ್ಮಜ್ಞಾನವು, ಅನ್ಯತ್=ಬೇರೆಯಾಗಿದೆ, ಪ್ರೇಯಃ ಉತ=ಅತ್ಯಂತ ಪ್ರೀತಿವಿಷಯವಾದ ಹೆಂಡತಿ ಮಕ್ಕಳು ಮೊದಲಾದ ವಸ್ತುವು ಕೂಡ, ಅನ್ಯದಿವ= ಬೇರೆಯಾದದ್ದೇ ಸರಿ, ತೆ ಉಭೆ=ಇವೆರಡುಗಳು, ನಾನಾರ್ಥೆ=ಬೇರೆ ಬೇರೆ ಪ್ರಯೋಜನವುಳ್ಳವು ಗಳಾಗಿ, ಪುರುಷಂ=ಮನುಷ್ಯನನ್ನು, ಸಿನೀತಃ=ಬಂಧನೆ ಮಾಡುತ್ತವೆ, ತಯೋಃ=ಇವುಗಳಲ್ಲಿ, ಶ್ರೇಯಃ=ಬ್ರಹ್ಮಜ್ಞಾನವನ್ನು, ಆದದಾನಸ್ಯ=ಸಂಪಾದಿಸಿಕೊಂಡಿದ್ದವನಿಗೆ, ಸಾಧು=ಸಮೀಚೀನ ವಾದ ಮಂಗಳವು (ಅಂದರೆ ಸಂಸಾರವಿಮೋಚನವು), ಭವತಿ=ಆಗುತ್ತದೆ, ಯ ಉ=ಯಾವಮನು ಷ್ಯನು, ಪ್ರೇಯಃ=ಹೆಂಡತಿ ಮಕ್ಕಳು ಮೊದಲಾದ ಕಾಮ್ಯವಸ್ತುವನ್ನು, ವೃಣೀತೆ=ಅಪೇಕ್ಷಿಸು ವನೋ, ಸಃ=ಅವನು, ಅರ್ಥಾತ್=ಪರಮಪುರುಷಾರ್ಥದಿಂದ, ಹೀಯತೆ=ಹೀನನಾಗುವನು, ಸಂಸಾರದಲ್ಲಿಯೇ ಮಗ್ನನಾಗುವನು ಎಂದು ತಾತ್ಪರ್ಯವು. ॥ ೧ ॥

(ಹೇಳಿದ ಪ್ರಮೇಯವನ್ನೇ ಅನುವಾದ ಮಾಡಿಕೊಂಡು ಜ್ಞಾನಿಯ ಸ್ಥಿತಿಯನ್ನು ಹೇಳು ತ್ತಾರೆ. "ಶ್ರೇಯಶ್ಚೇತಿ")

**ಮಂ ॥ ಶ್ರೇಯಶ್ಚ ಪ್ರೇಯಶ್ಚ ಮನುಷ್ಯಮೇತಸ್ತೌ ಸಂಪರೀತ್ಯ ವಿವಿನಕ್ತಿ ಧೀರಃ । ಶ್ರೇಯೋ ಧೀರೋಽಭಿಪ್ರೇಯಸೋ ವೃಣೀತೇ ಪ್ರೇಯೋ ಮಂದೋ ಯೋಗಕ್ಷೇಮಾದ್ವೃಣೀತೇ ॥ ೨ ॥**

ಅ ॥ ಶ್ರೇಯಶ್ಚ ಪ್ರೇಯಶ್ಚ=ಮೊದಲು ಹೇಳಿದ, ದ್ವೇ=ಇವೆರಡು, ಮನುಷ್ಯಂ= ಚೇತನಸಾಮಾನ್ಯವನ್ನು, ಏತಃ=ಪ್ರಾಪಿಸಿಕೊಂಡು ಇದ್ದಾವೆ, ಧೀರಃ=ಜ್ಞಾನಿಯಾದವನು, ತೌ= ಮೊದಲು ಹೇಳಿದ ಬ್ರಹ್ಮಜ್ಞಾನ ಮತ್ತು ಕಾಮ್ಯಪದಾರ್ಥವನ್ನು, ಸಂಪರೀತ್ಯ=ಚನ್ನಾಗಿ ತಿಳಕೊಂ ಡು, ವಿವಿನಕ್ತಿ=ವಿವೇಕಮಾಡುತ್ತಾನೆ, ಧೀರಃ=ಈರೀತಿಯಾಗಿ ವಿವೇಕಿಯಾದ ಪುರುಷನು, ಪ್ರೇಯ ಸಃ=ಅತ್ಯಂತ ಪ್ರೇಮಾಸ್ಪದಗಳಾದ ದಾರಾಪತ್ಯಕಾಮಾದಿಗಳನ್ನು, ಅಭಿ=ತಿರಸ್ಕರಿಸಿ, ಶ್ರೇಯಃ= ಬ್ರಹ್ಮವಿದ್ಯೆಯನ್ನು, ವೃಣೀತೆ=ಅಪೇಕ್ಷಿಸುವವನು, ಮಂದಃ=ವಿವೇಕಹೀನನಾದ ಮನುಷ್ಯನು, ಯೋಗಕ್ಷೇಮಾನ್=ಈ ವರೇಗೆ ಲಭಿಸದೆ ಇರುವ ಕಾಮ್ಯವಸ್ತುವಿನ ಪ್ರಾಪ್ತಿಯು, ಮೊದಲಿಂದ ಇರುತ್ತಿದ್ದ ಪದಾರ್ಥಗಳ ಇರುವಿಕೆಯು ಇವುಗಳನ್ನು, ವೃಣೀತೆ=ಅಪೇಕ್ಷಿಸಿಕೊಂಡೇ ಇರು ತ್ತಾನೆ. ॥ ೨ ॥

**ಮಂ ॥ ಸ ತ್ವಂ ಪ್ರಿಯಾನ್ ಪ್ರಿಯರೂಪಾಂಶ್ಚ ಕಾಮಾನಭಿಧ್ಯಾಯನ್ನಚಿ ಕೇತೋಽತ್ಯಸ್ರಾಕ್ಷೀಃ । ನೈತಾಂ ಶೃಂಕಾಂ ವಿತ್ತಮಯೀಮವಾಪ್ತೋ ಯಸ್ಯಾಂ ಮಜ್ಜಂತಿ ಬಹವೋ ಮನುಷ್ಯಾಃ ॥ ೩ ॥**

ಅ ॥ ಹೇ ನಚಿಕೇತಃ=ಎಲೋ ನಚಿಕೇತರೆ, ಸತ್ವಂ=ನೀವು, ಪ್ರಿಯಾನ್=ದಾರಾ ಪತ್ಯಾದಿಗಳನ್ನು, ಪ್ರಿಯರೂಪಾಂಶ್ಚ=ಗೃಹಾರಾಮ ಕ್ಷೇತ್ರಾದಿಗಳನ್ನು, ಕಾಮಾನ್=ಅಪೇ ಕ್ಷಣೀಯಗಳಾಗಿರುವ ವಸ್ತುಗಳನ್ನು, ಅಭಿಧ್ಯಾಯನ್=ಅಸ್ಥಿರಗಳೆಂಬ ಭಾವನೆಯಿಂದ (ತಿರಸ್ಕರಿಸುವವನಾಗಿ), ಅತ್ಯಸ್ರಾಕ್ಷೀಃ=ಪರಿತ್ಯಾಗ ಮಾಡುವವನಾಗಿದ್ದೀ, ವಿತ್ತಮಯೀಂ=

ಪ್ರವ್ಯಮಯವಾದ, ಏತಾಂ=ಇಂತಹ, ಶೃಂಕಾಂ=ಸರಪಣಿಯನ್ನು, ನಾವಾಪ್ತಃ=ಹೊಂದುವ ವನಾಗಲಿಲ್ಲ, ಯಸ್ಯಾಂ=ಯಾವಶೃಂಖಲೆಯಲ್ಲಿ-ಯಾವಬಂಧನೆಯಲ್ಲಿ, ಬಹವಃ=ಬಹುಸಂಖ್ಯಾ ಕರಾದ, ಮನುಷ್ಯಾಃ=ಪುರುಷರು, ಮಜ್ಜಂತಿ=ಆಸಕ್ತರಾಗಿದ್ದಾರೆ.

ತಾ ॥ ಹೆಂಡತಿ, ಮಕ್ಕಳು, ಮನೆ, ಉಪವನ ಮುಂತಾದ ಎಲ್ಲರಿಂದಲೂ ಅಪೇಕ್ಷಣೀ ಯಗಳಾಗಿರುವ ಸಮಸ್ತ ವಸ್ತುಗಳನ್ನು ನಾನು ಕೊಡುತ್ತೇನೆಂಬದಾಗಿ ಹೇಳಿದರೂ ನೀವು ಅವುಗಳನ್ನೆಲ್ಲಾ ಅಪೇಕ್ಷಿಸದೆ ಬ್ರಹ್ಮಜ್ಞಾನವನ್ನೇ ಅಪೇಕ್ಷಿಸಿದಿರಿ, ಆದಕಾರಣ ನೀವು ಬಹುಯೋ ಗ್ಯರಾಗಿದ್ದೀರಿ ಎಂದು ಹೇಳಿದರು. ॥ ೩ ॥

**ಮಂ ॥ ದೂರಮೇತೇ ವಿಪರೀತೇ ವಿಷೂಚೀ ಅವಿದ್ಯಾ ಯಾ ಚ ವಿದ್ಯೇತಿ ಜ್ಞಾತಾ । ವಿದ್ಯಾಭೀಪ್ಸಿತಂ ನಚಿಕೇತಸಂ ಮನ್ಯೇ ನ ತ್ವಾ ಕಾಮಾ ಬಹವೋ ಲೋಲುಪಂತಃ ॥ ೪ ॥**

ಅ ॥ ಯಾ=ಯಾವ, ಅವಿದ್ಯಾ=ಬ್ರಹ್ಮಜ್ಞಾನದಿಂದ ಇತರವಾದದ್ದು, (ಅಂದರೆ ಐಹಿಕ ಸುಖಸಾಧನವಾದದ್ದು), ಜ್ಞಾತಾ=ತಿಳಿಯಲ್ಪಟ್ಟದೋ, ಯಾಚ=ಯಾವಬ್ರಹ್ಮಜ್ಞಾನವು, ವಿದ್ಯೇ ತಿಜ್ಞಾತಾ=ವಿದ್ಯೆಯೆಂಬುದಾಗಿ ತಿಳಿಯಲ್ಪಡುವದೋ, ಏತೇ=ಇವುಗಳು, ದೂರಂ=ಒಂದರಿಂದ ಇನ್ನೊಂದು ದೂರದಲ್ಲಿಯೇ ಇರತಕ್ಕವುಗಳು, ವಿಪರೀತೆ=ಪರಸ್ಪರ ವಿರುದ್ಧಗಳು, ವಿಷೂಚೀ= ವಿರುದ್ಧಫಲಗಳಿಗೆ ಕಾರಣೀಭೂತಗಳು, ನಚಿಕೇತಸಂ ತ್ವಾ=ನಚಿಕೇತನಾಮಕರಾದ ನಿಮ್ಮನ್ನು ವಿದ್ಯಾಭೀಪ್ಸಿತಂ=ಬ್ರಹ್ಮಜ್ಞಾನದಲ್ಲಿ ಅಭಿಲಾಷೆವುಳ್ಳವರನ್ನಾಗಿ, ಮನ್ಯೆ=ತಿಳಿಯುತ್ತೇನೆ, ಬಹವಃ= ಬಹುಸಂಖ್ಯಾಕಗಳಾದ, ಕಾಮಾಃ=ಅಪೇಕ್ಷಿಸಲಿಕ್ಕೆ ಯೋಗ್ಯಗಳಾದ ಪದಾರ್ಥಗಳು, ತ್ವಾ= ನಿಮ್ಮನ್ನು, ಲೋಲುಪಂತಃ=ಅಪೇಕ್ಷೆಯನ್ನು ಹುಟ್ಟಿಸುವವುಗಳಾಗಿ, ನ ವರ್ತಂತೆ=ಇರುವು ದಿಲ್ಲವು. ॥ ೪ ॥

ತಾ ॥ ಅವಿದ್ಯೆಯು ಐಹಿಕಸುಖಕ್ಕೂ ಬ್ರಹ್ಮಜ್ಞಾನವು ಪಾರತ್ರಿಕಸುಖಕ್ಕೂ ಕಾರಣ ವಾಗಿಯದೆ.

**ಮಂ ॥ ಅವಿದ್ಯಾಯಾಮಂತರೇ ವರ್ತಮಾನಾಃ ಸ್ವಯಂಧೀರಾಃ ಪಂಡಿತಂ ಮನ್ಯಮಾನಾಃ । ದಂದ್ರಮ್ಯಮಾಣಾಃ ಪರಿಯಂತಿ ಮೂಢಾ ಅಂಧೇ ನೈವ ನೀಯಮಾನಾ ಯಥಾಂಧಾಃ ॥ ೫ ॥**

ಅ ॥ ಅವಿದ್ಯಾಯಾಂ=ಬ್ರಹ್ಮವಿದ್ಯೆಯಿಂದ ಭಿನ್ನವಾಗಿರುವ ಐಹಿಕಸುಖಭೋಗದ, ಅಂತರೆ=ಮಧ್ಯದಲ್ಲಿ, ವರ್ತಮಾನಾಃ=ವಿದ್ಯಮಾನರಾದ ಪುರುಷರು, ಸ್ವಯಂ=ತಾವೆ, ಧೀರಾಃ =ಬುದ್ಧಿಶಾಲಿಗಳೆಂಬದಾಗಿ ಹೇಳುವವರಾಗಿ, (ಆತ್ಮಾನಂ=ತನ್ನನ್ನು), ಪಂಡಿತಂ=ವಿದ್ವಾಂಸ ನನ್ನಾಗಿ, ಮನ್ಯಮಾನಾಃ=ತಿಳಕೊಂಡವರಾಗಿ, ದಂದ್ರಮ್ಯಮಾಣಾಃ=ವಕ್ರಗತಿವುಳ್ಳವರಾಗಿ, ಮೂಢಾಃ=ಕಾಮಭೋಗದಿಂದ ಮೋಹಿತರಾಗಿ, ಅಂಧೇನೈವ=ಕುರುಡಮನುಷ್ಯನಿಂದ, ನೀಯ ಮಾನಾಃ=ಕರಕೊಂಡುಹೋಗಲ್ಪಟ್ಟ, ಅಂಧಾ ಇವ=ಕುರುಡರಂತೆ, ಪರಿಯಂತಿ=ಮತ್ತೂ ಮತ್ತೂ ಸ್ವರ್ಗನರಕ ಭೂಲೋಕಗಳಲ್ಲಿ ಸಂಚರಿಸುತ್ತಾರೆ.

**ಮಂ॥ ನ ಸಾಂಪರಾಯಃ ಪ್ರತಿಭಾತಿ ಬಾಲಂ ಪ್ರಮಾದ್ಯಂತಂ ವಿತ್ತಮೋ ಹೇನ ಮೂಢಂ । ಅಯಂ ಲೋಕೋ ನಾಸ್ತಿ ಪರ ಇತಿ ಮಾನೀ ಪುನಃ ಪುನರ್ವಶಮಾಪದ್ಯತೇ ಮೇ ॥ ೬ ॥**

ಅ ॥ ಸಾಂಪರಾಯಃ=ಶ್ರೇಯಸ್ಸಿಗೆ ಸಾಧನಭೂತನಾದ ಶ್ರೀ ಪರಮಾತ್ಮನು, ಬಾಲಂ=ಬಾಲಕನಂತಿರುವ, ವಿತ್ತಮೋಹೇನ-ವಿತ್ತ=ಐಶ್ವರ್ಯದಲ್ಲಿ, ಮೋಹೇನ=ಅಭಿಲಾಷೆಯಿಂದ, ಮೂಢಂ=ಮೂಢನಾದ, ಪ್ರಮಾದ್ಯಂತಂ=ಅವಿವೇಕಿಗೆ, ನ ಭಾತಿ=ತೋರುವದಿಲ್ಲ, (ಆತನ ಜ್ಞಾನಕ್ಕೆ ವಿಷಯನಾಗುವದಿಲ್ಲ), ಅಯಂ ಲೋಕಃ=ಈ ಲೋಕಮಾತ್ರ, (ಅಸ್ತಿ=ಅದೆ), ಪರಃ=ಪರಲೋಕವು, ನಾಸ್ತಿ=ಇಲ್ಲವು, ಇತಿ=ಎಂಬುದಾಗಿ, ಮಾನೀ=ಅಭಿಮಾನವುಳ್ಳವನಾಗಿ, ಪುನಃ ಪುನಃ=ಮತ್ತೂ ಮತ್ತೂ, ಮೇ=ನನ್ನ, ವಶಂ=ಅಧೀನವನ್ನು, ಆಪದ್ಯತೆ=ಹೊಂದುತ್ತಾನೆ. ॥ ೬ ॥

ಮಂ ॥ ಶ್ರವಣಾಯಾಪಿ ಬಹುಭಿರ್ಯೋ ನ ಲಭ್ಯಃ ಶೃಣ್ವಂತೋಽಪಿ ಬಹವೋ ಯಂ ನ ವಿದ್ಯುಃ । ಆಶ್ಚರ್ಯೋಽಸ್ಯ ವಕ್ತಾ ಕುಶಲೋಽಸ್ಯ ಲಬ್ಧಾ ಆಶ್ಚರ್ಯೋ ಜ್ಞಾತಾ ಕುಶಲಾನುಶಿಷ್ಟಃ ॥ ೭ ॥

ಅ ॥ ಯಃ=ಯಾವಪರಮಾತ್ಮನು, ಬಹುಭಿಃ=ಬಹುಜನರಿಂದ, ಶ್ರವಣಾಯ=ಕೇಳುವದಕ್ಕೋಸ್ಕರ, ನ ಲಭ್ಯಃ=ಲಭ್ಯನಾಗುವದಿಲ್ಲ, ಶ್ರಣ್ವಂತೋಽಪಿ=ಕಿವಿಯಿಂದ ಆತನನ್ನು ಕೇಳಿದವರಾದಾಗ್ಯೂ, ಬಹವಃ=ಬಹುಜನರು, ಯಂ=ಯಾವ ಶ್ರೀ ಪರಮಾತ್ಮನನ್ನು , ನ ವಿದ್ಯುಃ=ತಿಳಿಯುವವರಾಗುವದಿಲ್ಲವು, ಅಸ್ಯ=ಈ ಪರಮಾತ್ಮನ, ಕುಶಲೋವಕ್ತಾ=ಯಥಾರ್ಥವಾಗಿ ಆತನ ಸ್ವರೂಪವನ್ನು ತಿಳಿಯುವಂತೆ ಉಪದೇಶಮಾಡಲು ಶಕ್ತನಾದವನು, ಆಶ್ಚರ್ಯಃ=ದುರ್ಲಭನು, ಕುಶಲಾನುಶಿಷ್ಟಃ=ಯಥಾವದನು ಶಿಕ್ಷಿತನಾದವನು, ಅಸ್ಯ=ಉಪದೇಶಮಾಡುವವನಿಗೆ, ಲಬ್ಧಾ=ಲಭಿಸುವವನು, ಆಶ್ಚರ್ಯಃ=ದುರ್ಲಭನು, ಜ್ಞಾತಾ=ಯಥಾರ್ಥವಾಗಿ ತಿಳಕೊಳ್ಳುವವನು ಕೂಡಾ, ಆಶ್ಚರ್ಯಃ=ದುರ್ಲಭನು. ॥ ೭ ॥

ತಾ ॥ ಲೋಕದಲ್ಲಿ ಪರಮಾತ್ಮನ ವಿಷಯವನ್ನು ಕಿವಿಯಲ್ಲಾದರೂ ಕೇಳದೆ ಇರುವವರು ಅನೇಕರು ಇರುತ್ತಾರೆ. ಕೇಳಿದ್ದವರಲ್ಲಿ ಕೂಡ ಬಹುಮಂದಿ ಅವನ ತತ್ವವನ್ನು ತಿಳದವರಲ್ಲ. ಯಥಾರ್ಥವಾಗಿ ಪರಮಾತ್ಮಜ್ಞಾನವನ್ನು ಬೋಧಿಸುವ ಗುರುವು ಸಿಗುವದು ಅತಿಕಷ್ಟವು. ಮತ್ತು ತಕ್ಕಗುರುವು ಸಿಕ್ಕರೂ, ಶಿಕ್ಷೆಗೆ ಯೋಗ್ಯರಾದ ಶಿಷ್ಯರು ಸಿಕ್ಕುವದೂ ಕಷ್ಟ. ಹಾಗೆ ಗುರುಶಿಷ್ಯರು ಯೋಗ್ಯರಾಗಿ ಸಿಕ್ಕಿದರೆ ಮಾತ್ರ ಯಥಾರ್ಥಬ್ರಹ್ಮಜ್ಞಾನವುಂಟಾಗುವದು. ॥ ೭ ॥

ಮಂ ॥ ನ ನರೇಣಾವರಃ ಪ್ರೋಕ್ತ ಏಷ ಸುಜ್ಞೇಯೋ ಬಹುಧಾ ಚಿಂತ್ಯಮಾನಃ । ಅನನ್ಯಪ್ರೋಕ್ತೇ ಗತಿರತ್ರ ನಾಸ್ತಿ ಅಣೀಯಾನ್ಹ್ಯತರ್ಕ್ಯಮಣುಪ್ರಮಾಣಾತ್ ॥ ೮ ॥

ಅ ॥ ನರೇಣ=(ಅಜ್ಞ)ಮನುಷ್ಯನಿಂದ, ಪ್ರೋಕ್ತಃ=ಉಪದೇಶಿಸಲ್ಪಟ್ಟ, ಏಷಃ=ಶ್ರೀಪರಮಾತ್ಮನು, ಬಹುಧಾ=ನಾನಾ ಪ್ರಕಾರವಾಗಿ, ಚಿಂತ್ಯಮಾನಃ=ಉಪಾಸನೆ ಮಾಡಿಸಿಕೊಳ್ಳಲ್ಪಟ್ಟವನಾಗಿ,(ತೈಃ=ಆ ಅಜ್ಞಾನಿಗಳಿಂದ,) ಸು=ಚೆನ್ನಾಗಿ, ಜ್ಞೇಯಃ=ತಿಳಿಯಲಿಕ್ಕೆ ಶಕ್ಯನು, ನಭವತಿ=ಆಗುವದಿಲ್ಲ, ಆ ಉಪದೇಶವು, ಅವರಃ=ಪ್ರಶಸ್ತವಲ್ಲ. ಅನನ್ಯಪ್ರೋಕ್ತೆ=ಅದ್ವೈತಿಯಿಂದ ಹೇಳಲ್ಪಟ್ಟ, ಅತ್ರ=ಬ್ರಹ್ಮವಿಷಯದಲ್ಲಿ, ಗತಿಃ=ಜ್ಞಾನವು, ನಾಸ್ತಿ=ಇಲ್ಲ, ಹಿ=ಯಾವ ಕಾರಣದಿಂದ, ಅಣುಪ್ರಮಾಣಾತ್=ಬಹು ಸಣ್ಣದಾಗಿರುವ ವಸ್ತುವಿನಿಂದಲೂ, ಅಣೀಯಾನ್=ಅತಿ ಸೂಕ್ಷ್ಮವಾದದ್ದು (ಆದುದರಿಂದ, ಕಣ್ಣಿಗೆ ಕಾಣತಕ್ಕವನಲ್ಲ), ಅತರ್ಕ್ಯಂ=ಅನುಮೇಯಿಸಲಿಕ್ಕೆ ಯೋಗ್ಯನಲ್ಲ.

**ತಾ||** ಹಿಂದಿನ ಮಂತ್ರದ ಭಾವವನ್ನು ಈ ಮಂತ್ರದಲ್ಲಿ ದೃಢೀಕರಿಸುತ್ತಾರೆ. ಪರಮಾತ್ಮನು ಪ್ರತ್ಯಕ್ಷಾನುಮಾನಗಳಿಗೆ ಗೋಚರನಲ್ಲ. ಆದುದರಿಂದ ಉಪದೇಶದಿಂದಲೇ ತಿಳಿಯಬೇಕು. ತತ್ವವನ್ನರಿಯದ ಶೈವ, ಪಾಶುಪತ ಇತ್ಯಾದಿ ಜನರಿಂದ ಬೋಧಿಸಲ್ಪಡುವ ಪರಮಾತ್ಮನು ಗೋಚರನಾಗುವುದಿಲ್ಲ. ಆ ಉಪದೇಶವು ನಿಕೃಷ್ಟವಾದದ್ದು ಮತ್ತು ಜೀವಬ್ರಹ್ಮೈಕ್ಯವನ್ನು ಹೇಳುವ ಅದ್ವೈತಿಗಳ ಉಪದೇಶದಿಂದಲೂ ಜ್ಞಾನವು ಹುಟ್ಟುವುದಿಲ್ಲ. ಜೀವೇತರವಾದ ಬ್ರಹ್ಮವಿಲ್ಲವೆಂದು ಅವರು ಹೇಳುವದರಿಂದ ಬ್ರಹ್ಮಜ್ಞಾನವು ಆಗಲಿಕ್ಕೆ ಕಾರಣವಿಲ್ಲ. ಆದುದರಿಂದ ತಕ್ಕ ಗುರುಗಳನ್ನು ಪಡೆಯದೆ ಬ್ರಹ್ಮಜ್ಞಾನವು ಲಭಿಸುವದಿಲ್ಲ. ॥ ೮ ॥

**ಮಂ ॥ ನೈಷಾ ತರ್ಕೇಣ ಮತಿರಾಪನೇಯಾ ಪ್ರೋಕ್ತಾನ್ಯೇನೈವ ಸುಜ್ಞಾನಾಯ ಪ್ರೇಷ್ಠ । ಯಾಂ ತ್ವಮಾಪಃ ಸತ್ಯಧೃತಿರ್ಬತಾಸಿ ತ್ವಾದೃಙ್ನೋ ಭೂಯಾನ್ನಚಿಕೇತಃ ಪ್ರಷ್ಟಾ ॥ ೯ ॥**

**ಅ||** ಹೇ ನಚಿಕೇತಃ=ಎಲೋ ನಚಿಕೇತರೆ, ತ್ವಂ=ನೀವು, ಯಾಂ=ಯಾವ ಬುದ್ಧಿಯನ್ನು, ಆಪಃ=ಪ್ರಾಪಿಸಿದ್ದೀರೋ, ಏಷಾ ಮತಿಃ=ಬ್ರಹ್ಮವಿಷಯಕ ಮತಿಯು, ತರ್ಕೇಣ=ಕೇವಲ ಅನುಮಾನದಿಂದ, ಆನೇಯಾ=ಪ್ರಾಪಿಸಲಿಕ್ಕೆ ಯೋಗ್ಯವೂ, ಅಪನೇಯಾಚ=ನಿರಾಕರಿಸಲಿಕ್ಕೆ ಯೋಗ್ಯವೂ, ನಭವತಿ=ಆಗುವದಿಲ್ಲವು, ಅನ್ಯೇನ=ಬ್ರಹ್ಮನಿಂದ ನಾನು ಅತ್ಯಂತ ಭಿನ್ನನು ಎಂಬುವದಾಗಿ (ತಿಳಿದವರಿಂದ), ಪ್ರೋಕ್ತಾ=ಉಪದೇಶ ಮಾಡಲ್ಪಟ್ಟ (ಬುದ್ಧಿಯು), ಸುಜ್ಞಾನಾಯ=ಯಥಾರ್ಥ ಜ್ಞಾನಕ್ಕೋಸ್ಕರ, ಭವತಿ=ಆಗುತ್ತದೆ, ಹೇ ಪ್ರೇಷ್ಠ=ಎಲೊ ಅತಿಪ್ರೀತಿ ವಿಷಯರಾದ ನಚಿಕೇತರೆ, ತ್ವಂ=ನೀವು, ಸತ್ಯಧೃತಿಃ=ಕದಲಿಸಲಿಕ್ಕೆ ಅಶಕ್ಯವಾದ ಧೈರ್ಯವುಳ್ಳವರಾಗಿದ್ದೀರಿ, ಬತ=ಆಶ್ಚರ್ಯವು, ನಃ=ನಮ್ಮನ್ನು, ಪ್ರಷ್ಟಾ=ಪ್ರಶ್ನೆಮಾಡುವವನು, ತ್ವಾದೃಕ್=ನಿಮಗೆ ಸದೃಶನಾದವನು, ನೊ ಭೂಯಾತ್=ಇರಲಿಕ್ಕೆ ಇಲ್ಲವು. ॥ ೯ ॥

**ತಾ॥** ಪರಬ್ರಹ್ಮ ವಿಷಯವಾದ ಬುದ್ಧಿಯು ಕೇವಲ ಅನುಮಾನದಿಂದ ಸಂಪಾದಿಸಲಿಕ್ಕಾಗಲೀ, ನಿರಾಕರಿಸಲಿಕ್ಕಾಗಲೀ ಆಗುವದಿಲ್ಲ. ಮತ್ತು ತಾನು ಅಲ್ಪಜ್ಞನು, ಅಸ್ವತಂತ್ರನು. ಶ್ರೀಪರಮಾತ್ಮನು ಸರ್ವಜ್ಞನು, ಸ್ವತಂತ್ರನು.- ಇನೇ ಮೊದಲಾದ ಗುಣಗಳನ್ನು ತಿಳಕೊಂಡಿರುವ ಜ್ಞಾನಿಗಳ ಉಪದೇಶದಿಂದ ಹುಟ್ಟಿರುವ ಬುದ್ಧಿಯೇ ಯಥಾರ್ಥ ಜ್ಞಾನಕ್ಕೆ ಕಾರಣವಾಗುತ್ತದೆ. ಎಲೋ ನಚಿಕೇತರೆ, ನಿಮ್ಮ ಬುದ್ಧಿಯಾದರೂ ನಿಶ್ಚಲವಾದದ್ದು. ನನ್ನನ್ನು ಕುರಿತು ಪ್ರಶ್ನೆ ಮಾಡಿದವರಲ್ಲಿ ನಿಮಗೆ ಸದೃಶರು ಯಾರೂ ಸಿಗಲಾರರು. ॥ ೯ ॥

**ಮಂ ॥ ಜಾನಾಮ್ಯಹಂ ಶೇವಧಿರಿತ್ಯನಿತ್ಯಂ ನ ಹ್ಯಧ್ರುವೈಃ ಪ್ರಾಪ್ಯತೇ ಹಿ ಧ್ರುವಂ ತತ್ । ತತೋ ಮಯಾ ನಚಿಕೇತಶ್ಚಿತೋಽಗ್ನಿರನಿತ್ಯದ್ರವ್ಯೈಃ ಪ್ರಾಪ್ತವಾನಸ್ಮಿ ನಿತ್ಯಂ ॥ ೧೦ ॥**

**ಅ ॥** ಅನಿತ್ಯಂ- ಅ=ಅಕಾರ ವಾಚ್ಯನಾದ, ನಿತ್ಯಂ=ಶಾಶ್ವತನಾದ ಪರಬ್ರಹ್ಮನು, ಶೇವಧಿಃ=ನಿಧಿಯೆಂಬದಾಗಿ, ಅಹಂ=ನಾನು, ಜಾನಾಮಿ=ತಿಳಿದಿದ್ದೇನೆ, ಧ್ರುವಂ=ಶಾಶ್ವತನಾದ ಪರಬ್ರಹ್ಮನು, ಅಧ್ರುವೈಃ=ಅವಿದ್ಯಮಾನವಾದ ಧ್ರುವಶಬ್ದವಾಚ್ಯನಾದ ಬ್ರಹ್ಮವುಳ್ಳವರಿಂದ, (ಅಂದರೆ ಪರಬ್ರಹ್ಮನ ಜ್ಞಾನ ಭಕ್ತಿ ಮೊದಲಾದ ಗುಣಗಳಿಲ್ಲದೆಯಿರುವವರಿಂದ), ಹಿ=ಯಾವ ಕಾರಣದಿಂದ, ನ ಪ್ರಾಪ್ಯತೇ=ಪ್ರಾಪಿಸಿಕೊಳ್ಳಲ್ಪಡುವದಿಲ್ಲವೋ, ತಸ್ಮಾತ್=ಆ ಕಾರಣದಿಂದ, ಮಯಾ=

ನನ್ನಿಂದ, ಅನಿತ್ಯದ್ರವ್ಯೈಃ-ಅ=ಅಕಾರಶಬ್ದವಾಚ್ಯನಾದ ಪರಮಾತ್ಮನು, ನಿತ್ಯ=ನಿರಂತರ ದಲ್ಲಿಯೂ ಉಳ್ಳ, ದ್ರವ್ಯೈಃ=ಮನಸ್ಸೇ ಮೊದಲಾದವುಗಳಿಂದ, ಹೇ ನಚಿಕೇತಃ=ಎಲೋ ನಚಿಕೇತರೇ, ಅಗ್ನಿಃ=ಅಗ್ನಿಯು, ಚಿತಃ=ಚಯನಮಾಡಲ್ಪಟ್ಟತು, (ತೇನ ಚ=ಅದರಿಂದ,) ನಿತ್ಯಂ=ಶಾಶ್ವತನಾದ ಪರಬ್ರಹ್ಮನನ್ನು, ಆಪ್ತವಾನಸ್ಮಿ=ಪ್ರಾಪಿಸಿದವನಾಗಿದ್ದೇನೆ. ॥ ೧೦ ॥

ತಾ ॥ ಅಕಾರಶಬ್ದವಾಚ್ಯನಾಗಿ ಶಾಶ್ವತವಾಗಿರುವ ಪರಮಾತ್ಮನು ಪರಮಪುರುಷಾರ್ಥಕ್ಕೆ ಕಾರಣನು ಎಂಬುದಾಗಿ ನಾನು ತಿಳಿದಿದ್ದೇನೆ. ಆ ಪರಮಾತ್ಮನು ಶಾಶ್ವತನಾದ ಜ್ಞಾನ ಭಕ್ತ್ಯಾದಿ ಗುಣಗಳಿಲ್ಲದವರಿಂದ ತಿಳಿಯಲು ಅಶಕ್ಯನು. ಆದುದರಿಂದಲೇ ನಾನು ಭಗವದ್ವಿಷಯಕಗಳಾದ ಮನಸ್ಸೇ ಮೊದಲಾದ ಸಾಮಗ್ರಿಗಳಿಂದ ಅಗ್ನಿಯಲ್ಲಿ ಚಯನಮಾಡಿ ಅಗ್ನ್ಯಂತರ್ಗತನಾದ ಪರಮಾತ್ಮನನ್ನು ತಿಳಿದವನಾಗಿದ್ದೇನೆ. ॥ ೧೦ ॥

**ಮಂ ॥ ಕಾಮಸ್ಯಾಪ್ತಿಂ ಜಗತಃ ಪ್ರತಿಷ್ಠಾಂ ಕ್ರತೋರಾನಂತ್ಯಮಭಯಸ್ಯ ಪಾರಂ । ಸ್ತೋಮಮಹದುರುಗಾಯಂ ಪ್ರತಿಷ್ಠಾಂ ದೃಷ್ಟ್ವಾ ಧೃತ್ಯಾ ಧೀರೋ ನಚಿಕೇತೋಽತ್ಯಸ್ರಾಕ್ಷೀಃ ॥ ೧೧ ॥**

ಅ ॥ ಹೇ ನಚಿಕೇತಃ=ಎಲೋ ನಚಿಕೇತರೇ, ಧೀರಃ=ಬುದ್ಧಿಶಾಲಿಯಾದ ನೀವು, ಜಗತಃ=ಸಮಸ್ತಲೋಕಕ್ಕೆ, ಪ್ರತಿಷ್ಠಾಂ=ಧಾರಕನಾದ, ಕ್ರತೋಃ=ಭಗವತ್ಸಂಬಂಧಿಯಾದ ಕರ್ಮಕ್ಕೆ, ಆನಂತ್ಯಂ=ಅಕ್ಷಯ್ಯ ಫಲವನ್ನು ಕೊಡುವ, ಅಭಯಸ್ಯ ಪಾರಂ=ಅಭಯವನ್ನು ಕೊಡುವ, ಸ್ತೋಮಮಹತ್-ಸ್ತೋಮ=ಸ್ತೋತ್ರ ಸಾಧನಭೂತಗಳಾದ ಮಂತ್ರಗಳಿಂದ, ಮಹತ್=ಮಹತ್ತಾದ, ಉರುಗಾಯಂ-ಉರು=ಉತ್ಕೃಷ್ಟರಾದ ಬ್ರಹ್ಮಾದಿ ದೇವತೆಗಳಿಂದ, ಗಾಯಂ=ಗಾನಮಾಡಿಸಿಕೊಳ್ಳುವ, ಪ್ರತಿಷ್ಠಾಂ=ಮುಕ್ತಾಶ್ರಯನಾದ ಶ್ರೀ ಪರಮಾತ್ಮನನ್ನು, ದೃಷ್ಟ್ವಾ=ತಿಳಕೊಂಡು, ಕಾಮಸ್ಯ=ಕಾಮ್ಯಮಾನವಾದ ವಿತ್ತಾದಿಯ, ಆಪ್ತಿಂ=ಪ್ರಾಪ್ತಿಯನ್ನು, ಧೃತ್ಯಾ=ಧೈರ್ಯದಿಂದ, ಅತ್ಯಸ್ರಾಕ್ಷೀಃ=ಅತ್ಯಂತವಾಗಿ ಪರಿತ್ಯಾಗಮಾಡುವವರಾದಿರಿ. ॥ ೧೧ ॥

ತಾ ॥ ಚೇತನಾಚೇತನಾತ್ಮಕ ಎರಡು ವಿಧವಾದ ಜಗತ್ತಿಗೂ ಪಾಲಕನಾದ, ಭಕ್ತರಿಂದ ಜ್ಞಾನಪೂರ್ವಕವಾಗಿ ಮಾಡಲ್ಪಟ್ಟ ಕರ್ಮಕ್ಕೂ ಜ್ಞಾನಕ್ಕೂ ಮೋಕ್ಷಾದಿ ನಾಶರಹಿತವಾದ ಫಲವನ್ನು ಕೊಡುವ, ಭಕ್ತರಿಗೆ ಭಯ ಪರಿಹಾರಕನಾದ, ಸ್ತೋತ್ರಕ್ಕೆ ಸಾಧನಗಳಾದ ಮಂತ್ರಸಮುದಾಯದಿಂದಲೂ, ಸಾಕಲ್ಯೇನ ಪ್ರತಿಪಾದನೆ ಮಾಡಲಿಕ್ಕೆ ಅಶಕ್ಯನಾದ, ಬ್ರಹ್ಮಾದಿಗಳಿಂದ ಸ್ತುತ್ಯನಾದ, ಮುಕ್ತರಿಗೂ ಆಶ್ರಯನಾದ, ಶ್ರೀ ಪರಮಾತ್ಮನನ್ನು ನೀವು ತಿಳದು ಇದ್ದುದರಿಂದ, ಕ್ಷುದ್ರಗಳಾದ ವಿತ್ತಾದಿ ಕಾಮ್ಯವಸ್ತುಗಳನ್ನು ಬೇಡುವವರಾಗಲಿಲ್ಲ. ॥ ೧೧ ॥

**ಮಂ ॥ ತಂ ದುರ್ದರ್ಶಂ ಗೂಢಮನುಪ್ರವಿಷ್ಟಂ ಗುಹಾಹಿತಂ ಗಹ್ವರೇಷ್ಠಂ ಪುರಾಣಂ । ಅಧ್ಯಾತ್ಮಯೋಗಾಧಿಗಮೇನ ದೇವಂ ಮತ್ವಾ ಧೀರೋ ಹರ್ಷಶೋಕೌ ಜಹಾತಿ ॥ ೧೨ ॥**

ಅ ॥ ದುರ್ದರ್ಶಂ=ಅತಿಪ್ರಯತ್ನದಿಂದ ತಿಳಿಯಲಿಕ್ಕೆ ಯೋಗ್ಯನಾದ, ಗೂಢಂ=ಅಭಿವ್ಯಕ್ತನಾಗದಿರುವ, ಅನುಪ್ರವಿಷ್ಟಂ=ಪ್ರೇರಕನಾಗಿ ಸಮಸ್ತಜಗತ್ತಿನೊಳಗೆ ಪ್ರವೇಶಮಾಡಿಕೊಂಡಿರುವ. ಗುಹಾಹಿತಂ=ಸಮಸ್ತ ಪ್ರಾಣಿಗಳ ಹೃದಯಗುಹೆಯಲ್ಲಿ ಇರುವ, ಗಹ್ವರೇಷ್ಠಂ=ಮುಕ್ತಜೀವರುಗಳಲ್ಲಿ ಇರುವವನಾದ, ಪುರಾಣಂ=ಪುರಾತನನಾದ, ಅಧ್ಯಾತ್ಮಯೋಗಾಧಿಗಮೇನ-ಅಧ್ಯಾತ್ಮಯೋಗ=ಧ್ಯಾನಯೋಗದಿಂದ ಉತ್ಪನ್ನವಾದ, ಅಧಿಗಮೇನ=ಜ್ಞಾನದಿಂದ,

ದೇವಂ=ಕ್ರೀಡಾದಿಗುಣವಿಶಿಷ್ಟನಾದ, ತಂ=ಶ್ರೀ ಪರಮಾತ್ಮನನ್ನು, ಮತ್ವಾ=ತಿಳದುಕೊಂಡು, ಧೀರಃ=ಬುದ್ಧಿಶಾಲಿಯಾದವನು, ಹರ್ಷಶೋಕೌ-ಹರ್ಷ=ಸಂತೋಷವು, ಶೋಕೌ=ದುಃಖವು ಇವುಗಳನ್ನು, ಜಹಾತಿ=ಪರಿತ್ಯಾಗಮಾಡುತ್ತಾನೆ. ॥ ೧೨ ॥

**ಮಂ ॥ ಏತಚ್ಛ್ರುತ್ವಾ ಸಂಪರಿಗೃಹ್ಯ ಮರ್ತ್ಯಃ ಪ್ರವೃಹ್ಯ ಧರ್ಮ್ಯಮಣು ಮೇನಮಾಪ್ಯ । ಸ ಮೋದತೇ ಮೋದನೀಯಂ ಹಿ ಲಬ್ಧ್ವಾ ವಿವೃತಂ ಸದ್ಮ ನಚಿಕೇತಸಂ ಮನ್ಯೇ ॥ ೧೩ ॥**

ಅ ॥ ಮರ್ತ್ಯಃ=ಯಾವ ಮನುಷ್ಯನು, ಏತತ್=ಈ ಪರಬ್ರಹ್ಮನನ್ನು (ಮಹಾನುಭಾವ ರಾದ ಜ್ಞಾನಿಗಳ ಮುಖದಿಂದ), ಶ್ರುತ್ವಾ=ಉಪದೇಶಮಾಡಿಕೊಂಡು, ಧರ್ಮ್ಯಂ=ಜಗದ್ಧಾರಕ ನಾದ, ಅಣುಂ=ಸೂಕ್ಷ್ಮರೂಪನಾದ ಶ್ರೀಪರಮಾತ್ಮನನ್ನು, ಪ್ರವೃಹ್ಯ=ಜೀವನಿಂದ ಪೃಥಕ್ಕ ರಿಸಿ, ಸಂಪರಿಗೃಹ್ಯ=ಚನ್ನಾಗಿ ತಿಳಕೊಂಡು, ಮೋದನೀಯಂ=ಸಂತೋಷಾಸ್ಪದನಾದವನನ್ನು ಲಬ್ಧ್ವಾ=ಪ್ರಾಪಿಸಿಕೊಂಡು, ಆಸ್ತೆ=ಇರುತ್ತಾನೊ, ಸಃ=ಅವನು, ಏನಂ=ಶ್ರೀಪರಮಾತ್ಮನನ್ನು, ಆಪ್ಯ=ಸೇರಿ, ಮೋದತೇ=ಸಂತೋಷಪಡುತ್ತಾನೆ, ಏನಂ=ಶ್ರೀ ಪರಮಾತ್ಮನನ್ನು, ಲಬ್ಧ್ವಾ=ತಿಳ ಕೊಂಡು (ವಿದ್ಯಮಾನನಾಗಿರುವ), ನಚಿಕೇತಸಂ=ನಚಿಕೇತನಾಮಕರಾದ ನಿಮ್ಮನ್ನು ಕುರಿತು, ಸದ್ಮ=ವೈಕುಂಠದ್ವಾರವು, ವಿವೃತಂ=ತೆರದದ್ದಾಗಿ (ನಾನು) ಮನ್ಯೇ=ತಿಳಿಯುತ್ತೇನೆ. ॥ ೧೩ ॥

**ಮಂ ॥ ಅನ್ಯತ್ರ ಧರ್ಮಾದನ್ಯತ್ರಾಧರ್ಮಾದನ್ಯತ್ರಾಸ್ಮಾತ್ಕೃತಾಕೃತಾತ್ । ಅನ್ಯತ್ರ ಭೂತಾಚ್ಚ ಭವ್ಯಾಚ್ಚ ಯತ್ತತ್ಪಶ್ಯಸಿ ತದ್ವದ ॥ ೧೪ ॥**

ಅ ॥ ಧರ್ಮಾದನ್ಯತ್ರ=ಧರ್ಮದಿಂದ ಭಿನ್ನವಾದದ್ದು, ಅಧರ್ಮಾದನ್ಯತ್ರ=ಅಧರ್ಮರ ಹಿತವಾದದ್ದು, ಅಂದರೆ ಪಾಪ ಪುಣ್ಯ ಇವೆರಡರಿಂದಲೂ ರಹಿತವಾದ, ಅಸ್ಮಾತ್=ಈ, ಕೃತಾ ಕೃತಾತ್ ಅನ್ಯತ್ರ=ಕಾರ್ಯಕಾರಣಗಳಿಂದ ಭಿನ್ನವಾದ, (ಅಂದರೆ ತದುಭಯವಿಲಕ್ಷಣವಾದ), ಭೂತಾಚ್ಚ=ಅತೀತವಾದ ವಸ್ತುವಿನಿಂದ, ಭವ್ಯಾಚ್ಚ=ಆಗಾಮಿವಸ್ತುವಿನಿಂದಲೂ, ಅನ್ಯತ್ರ= ಭಿನ್ನವಾದ, (ಎರಡರಿಂದಲೂ ವಿಲಕ್ಷಣವಾದ), ತತ್=ಲೋಕವಿಲಕ್ಷಣತಯಾ ಪ್ರಸಿದ್ಧವಾದ, ಯತ್=ಯಾವ ವಸ್ತುವನ್ನು, ತ್ವಂ=ನೀವು, ಪಶ್ಯಸಿ=ತಿಳಿದಿದ್ಧೀರೊ, ತತ್=ಆ ವಸ್ತುವನ್ನು, ವದ=ಹೇಳಿರಿ. ॥ ೧೪ ॥

**ಮಂ ॥ ಸರ್ವೇ ವೇದಾ ಯತ್ಪದಮಾಮನಂತಿ ತಪಾಂಸಿ ಸರ್ವಾಣಿ ಚ ಯದ್ವದಂತಿ । ಯದಿಚ್ಛಂತೋ ಬ್ರಹ್ಮಚರ್ಯಂ ಚರಂತಿ ತತ್ತೇ ಪದಂ ಸಂಗ್ರಹೇಣ ಬ್ರವೀಮಿ । ಓಮಿತ್ಯೇತತ್ ॥ ೧೫ ॥**

ಅ ॥ ಸರ್ವೇ=ಸಮಸ್ತಗಳಾದ, ವೇದಾಃ=ಶ್ರುತಿಗಳು, ಯತ್ಪದಂ=ಯಾವ ಪರಬ್ರ ಹ್ಮಸ್ವರೂಪವನ್ನು, ಆಮನಂತಿ=ಮುಖ್ಯವೃತ್ತಿಯಿಂದ ಬೋಧಿಸುತ್ತವೊ, ತಪಾಂಸಿ=ಕೃಛ್ರ ಚಾಂದ್ರಾಯಣಾದಿಗಳು, ಸರ್ವಾಣಿ ಚ=ಸಮಸ್ತಗಳೂ ಕೂಡಾ, ಯತ್=ಯಾವಪರಮಾತ್ಮ ನನ್ನು ಉದ್ದೇಶಿಸಿ, ಯತ್=ಯಾವ ಶ್ರೀ ಪರಮಾತ್ಮನ ಪ್ರೀತಿಗೋಸ್ಕರವಾಗಿ ಮಾಡತಕ್ಕವುಗಳೆಂ ದು, (ವೇದಾಃ=ವೇದಗಳು), ವದಂತಿ=ಹೇಳುತ್ತವೊ, ಯತ್=ಯಾವಪರಮಾತ್ಮನ ಪ್ರೀತಿಯು ನ್ನು, ಇಚ್ಛಂತಃ=ಅಪೇಕ್ಷಿಸುವ ಜ್ಞಾನಿಗಳು, ಬ್ರಹ್ಮಚರ್ಯಂ=ಬ್ರಹ್ಮಚರ್ಯವು ಪರಮಾತ್ಮವಿಷ ಯಕ ಶಾಸ್ತ್ರಶ್ರವಣಾದಿಯನ್ನು. ಚರಂತಿ=ಮಾಡುತ್ತಾರೋ, ತತ್ಪದಂ=ಆ ಪರಮಾತ್ಮಸ್ವರೂಪವ ನ್ನು, ತೇ=ನಿಮಗೋಸ್ಕರ, ಸಂಗ್ರಹೇಣ=ಸಂಕ್ಷೇಪದಿಂದ, ಬ್ರವೀಮಿ=ಹೇಳುತ್ತೇನೆ. ಏತತ್= ಈ ಬ್ರಹ್ಮಸ್ವರೂಪವು, ಓಮಿತಿ='ಓಮ್' ಎಂಬುವ ಪ್ರಣವಪ್ರತಿಪಾದ್ಯವೆಂದು, (ತಿಳಿಯಿರಿ) ॥೧೫॥

**ಮಂ ॥ ಏತದ್ಧ್ಯೇವಾಕ್ಷರಂ ಬ್ರಹ್ಮ ಏತದ್ಧ್ಯೇವಾಕ್ಷರಂ ಪರಂ । ಏತದ್ಧ್ಯೇ ವಾಕ್ಷರಂ ಜ್ಞಾತ್ವಾ ಯೋ ಯದಿಚ್ಛತಿ ತಸ್ಯ ತತ್ ॥ ಏತದಾಲಂಬನಂ ಶ್ರೇಷ್ಠಮೇತದಾಲಂಬನಂ ಪರಂ । ಏತದಾಲಂಬನಂ ಜ್ಞಾತ್ವಾ ಬ್ರಹ್ಮ ಲೋಕೇ ಮಹೀಯತೇ ॥ ೧೭ ॥**

**ಅ ॥** ಏತತ್=ನಿನ್ನಿಂದ ಕೇಳಲ್ಪಟ್ಟವಸ್ತುವು, ಅಕ್ಷರಂ=ನಾಶರಹಿತವಾದ, ಬ್ರಹ್ಮೈವ =ಪರಬ್ರಹ್ಮನೇಸರಿ, ಏತದೇವ=ಈ ಪರಬ್ರಹ್ಮನೇ, ಪರಂ ಅಕ್ಷರಂ=ಪರಮಾಕ್ಷರನಾಮಕನು, ಹಿ=ಪ್ರಸಿದ್ಧವು, ಯಃ=ಯಾವ ಅಧಿಕಾರಿಯು, (ಈಪ್ರಕಾರವಾಗಿ), ಜ್ಞಾತ್ವಾ=ತಿಳಕೊಂಡು, ಯತ್=ಯಾವ ಅಭಿಲಷಿತವನ್ನು, ಇಚ್ಛತಿ=ಅಪೇಕ್ಷಿಸುವನೋ, ತಸ್ಯ=ಅವನಿಗೆ, ತತ್=ಆ ಇಷ್ಟಪದಾರ್ಥವು, (ನಿಶ್ಚಯವಾಗಿಯೇ ಆಗುತ್ತದೆ). ॥ ೧೬ ॥ ಏತತ್ ಶ್ರೇಷ್ಠಮಾಲಂಬನಂ= ಜನರಿಂದ ಆಶ್ರಯಮಾಡಬಹುದಾದ ಪದಾರ್ಥಗಳಲ್ಲಿ ಅತ್ಯುತ್ತಮವಾದ ಆಶ್ರಯವು, ಪರಮಾ ಲಂಬನಂ=ವಿಲಕ್ಷಣಾಶ್ರಯಭೂತವಾದದ್ದು, ಏತದಾಲಂಬನಂ=ಈ ಮುಖ್ಯಾಶ್ರಯನಾದ ಪರ ಬ್ರಹ್ಮನನ್ನು, ಜ್ಞಾತ್ವಾ=ತಿಳಕೊಂಡು, ಬ್ರಹ್ಮಲೋಕೇ=ಶ್ರೀ ಪರಮಾತ್ಮನ ಲೋಕದಲ್ಲಿ, ಮಹೀ ಯತೇ=ಪೂಜ್ಯನಾಗುತ್ತಾನೆ. ॥ ೧೭ ॥

**ತಾ ॥** ಎಲೋ ನಚಿಕೇತರೇ, ನೀವು ನನ್ನನ್ನು ಕುರಿತು ತಿಳಿಯಬೇಕೆಂಬುದಾಗಿ ಕೇಳಿದ ಪರಬ್ರಹ್ಮನು ನಾಶರಹಿತನಾದವನು. ಸಮಸ್ತ ಬ್ರಹ್ಮಾದಿದೇವತೆಗಳಿಗೂ ಮುಕ್ತರಾದವರಿಗೂ ಮುಖ್ಯಾಶ್ರಯನಾದವನು, ಏತಾದೃಶ ಮಹಿಮೋಪೇತನಾದ ಶ್ರೀ ಪರಮಾತ್ಮನನ್ನು ಯಥಾರ್ಥ ವಾಗಿ ತಿಳಕೊಂಡರೆ ತನಗೆ ಯೋಗ್ಯತಾನುಗುಣವಾದ ಅಭೀಷ್ಟವನ್ನು ಹೊಂದಿ ವೈಕುಂಠಲೋಕ ದಲ್ಲಿ ಪೂಜ್ಯನಾಗಿರುತ್ತಾನೆ. ॥ ೧೭ ॥

**ಮಂ ॥ ನ ಜಾಯತೇ ಮ್ರಿಯತೇ ವಾ ವಿಪಶ್ಚಿನ್ನಾಯಂ ಕುತಶ್ಚಿನ್ನ ಬಭೂವ ಕಶ್ಚಿತ್ । ಅಜೋ ನಿತ್ಯಶ್ಶಾಶ್ವತೋಽಯಂ ಪುರಾಣೋ ನ ಹನ್ಯತೇ ಹನ್ಯಮಾನೇಽಪಿ ದೇಹೇ ॥ ೧೮ ॥**

**ಅ ॥** ಅಯಂ=ಈ ಪರಮಾತ್ಮನು, ಕುತಶ್ಚಿದಪಿ=ಯಾವಕಾರಣದಿಂದಲೂ, ನ ಜಾ ಯತೇ=ಹುಟ್ಟುವದಿಲ್ಲ, ನ ಮ್ರಿಯತೇ=ಸಾಯುವದಿಲ್ಲವು (ಆ ಕಾರಣದಿಂದ), ವಿಪಶ್ಚಿದಪಿ=ಆ ಪರಮಾತ್ಮನನ್ನು ತಿಳದವನೂ ಕೂಡ, (ನಜಾಯತೇ ನಮ್ರಿಯತೇ=ಜನನ ಮರಣರಹಿತನಾಗಿರು ತ್ತಾನೆ), ಅಯಂ=ಈ ಜೀವನು, ಪುರಾಣಃ=ದೇಹವನ್ನು ಹೊಂದುವವನಾದರೂ, (ದೇಹಬಂಧ ಯುಕ್ತನಾದರೂ), ಅಜಃ ನಿತ್ಯಃ ಸ್ವರೂಪತಃ=ಜನನ ಮರಣರಹಿತನು, ಶಾಶ್ವತಶ್ಚ=ವಿಕಾರರಹಿ ತನು, ಕಶ್ಚಿದಪಿ=ಯಾವಜೀವನೂ, ನಬಭೂವ=ಹುಟ್ಟುವದಿಲ್ಲ, ಅಸ್ಯ=ಈ ಜೀವನ, ದೇಹೇ= ಶರೀರವು, ಹನ್ಯಮಾನೇಽಪಿ=ಸಂಹರಿಸಲ್ಪಟ್ಟರೂ, (ಅಯಂ=ಈ ಜೀವನು), ನ ಹನ್ಯತೇ= ಸಂಹೃತನಾಗುವದಿಲ್ಲವು. ॥ ೧೮ ॥

**ಮಂ ॥ ಹಂತಾ ಚೇನ್ಮನ್ಯತೇ ಹಂತುಂ ಹತಶ್ಚೇನ್ಮನ್ಯತೇ ಹತಂ । ಉಭೌ ತೌ ನ ವಿಜಾನೀತೋ ನಾಯಂ ಹಂತಿ ನ ಹನ್ಯತೇ ॥ ೧೯ ॥**

**ಅ ॥** ಹಂತಾ=ಕೊಲ್ಲುವವನು, ಹಂತುಂ=ಕೊಲ್ಲುತ್ತೇನೆಂದು, ಮನ್ಯತೇಚೇತ್=ತಿಳಿ ಯುವದಾದರೆ, ಹತಶ್ಚ=ಸಂಹೃತನಾದವನು,ಹತಂ=ಕೊಲ್ಲಿಸಿಕೊಳ್ಳಲ್ಪಟ್ಟನೆಂದು, ಮನ್ಯತೇಚೇತ್ =ತಿಳಿಯುವದಾದರೂ, ತೌಉಭೌ=ಅವರಿಬ್ಬರೂ, ನ ವಿಜಾನೀತಃ=ತತ್ವವನ್ನು ತಿಳಿಯುವವರಾಗ

ಲಿಲ್ಲ, ಅಯಂ=ಈ ಕೊಲೆಮಾಡುವವನು, ನ ಹಂತಿ=ಜೀವನಸ್ವರೂಪವನ್ನು ನಾಶಮಾಡುವ ವದಿಲ್ಲ, ಅಯಂ=ಈ ಕೊಲೆಮಾಡಿಸಿಕೊಂಡವನೂ, ನ ಹನ್ಯತೆ=ಸ್ವರೂಪತಃ ತನ್ನ ನಾಶವನ್ನು ಹೊಂದುವದಿಲ್ಲ. ॥ ೧೯ ॥

ತಾ ॥ ಒಬ್ಬ ಮನುಷ್ಯನು ಇನ್ನೊಬ್ಬನನ್ನು ಕೊಂದರೂ ಅವನ ದೇಹಮಾತ್ರ ನಷ್ಟವಾಯಿತಲ್ಲದೆ ಅವನ ಸ್ವರೂಪಕ್ಕೆ ನಾಶವಿಲ್ಲ. ಇನ್ನೊಬ್ಬನ ಸ್ವರೂಪವನ್ನೇ ನಾಶಮಾಡಿದನೆಂತಲೂ ತನ್ನಸ್ವರೂಪವೇ ನಷ್ಟವಾಗುತ್ತದೆಂತಲೂ ತಿಳಿಯುವರಿಬ್ಬರೂ ಪಾರಮಾರ್ಥಿಕವನ್ನು ತಿಳಿಯುವವರಾಗಲಿಲ್ಲ. ಅಂದರೆ, ಸರ್ವಜೀವರುಗಳ ಸ್ವರೂಪವೂ ನಿತ್ಯವಾದುದರಿಂದ, ಅವರ ಶರೀರಕ್ಕೆ ನಾಶಹೊರತು ಜೀವಸ್ವರೂಪಕ್ಕೆ ಸರ್ವಥಾ ನಾಶವಿಲ್ಲವೆಂಬ ತಾತ್ಪರ್ಯವು. ॥ ೧೯ ॥

ಈ ಪ್ರಕಾರ ಬ್ರಹ್ಮಜ್ಞಾನಿಗೆ ಆಗುವ ಫಲವನ್ನು ಹೇಳಿ ಪ್ರೇತ ಜೀವರುಗಳಿಗೆ ನಿಯಾಮಕನಾದ ಪರಬ್ರಹ್ಮಸ್ವರೂಪವನ್ನು ಉಪದೇಶ ಮಾಡುತ್ತಾರೆ:—

**ಮಂ ॥ ಅಣೋರಣೀಯಾನ್ಮಹತೋ ಮಹೀಯಾನಾತ್ಮಾಸ್ಯ ಜಂತೋರ್ನಿಹಿತೋ ಗುಹಾಯಾಂ। ತಮಕ್ರತುಃ ಪಶ್ಯತಿ ವೀತಶೋಕೋ ಧಾತುಃ ಪ್ರಸಾದಾನ್ಮಹಿಮಾನಮಾತ್ಮನಃ ॥ ೨೦ ॥**

ಅ ॥ ಆತ್ಮಾ=ಶ್ರೀ ಪರಮಾತ್ಮನು, ಅಣೋಃ=ಅತಿ ಸೂಕ್ಷ್ಮವಾದ ವಸ್ತುವಿನಿಂದ, ಅಣೀಯಾನ್=ಅತಿ ಸೂಕ್ಷ್ಮನಾದವನು, ಮಹತಃ=ದೊಡ್ಡದಾಗಿರುವ ವಸ್ತುವಿನಿಂದಲೂ, ಮಹೀಯಾನ್=ಅತ್ಯಂತದೊಡ್ಡದಾಗಿರುವವನು, ಅಸ್ಯ=ಈ, ಜಂತೋಃ=ಜೀವನ, ಗುಹಾಯಾಂ=ಹೃದಯದಲ್ಲಿ, ನಿಹಿತಃ=(ಪ್ರೇರಕನಾಗಿ) ಚನ್ನಾಗಿ ಇರುವವನು, ತಂ=ಏತಾದೃಶ ಮಹಿಮೋಪೇತನಾದ, ಆತ್ಮನಃ=ತನ್ನಿಂದ, ಮಹಿಮಾನಂ=ಮಹತ್ತ್ವಾದಿಗುಣವು ಪರಿಮಾಣವು ಇವುಗಳುಳ್ಳ ಶ್ರೀ ಪರಮಾತ್ಮನನ್ನು, ಅಕ್ರತುಃ=ಪರಮಾತ್ಮವಿಷಯಕ ನಿಶ್ಚಯವುಳ್ಳವನು, ಧಾತುಃ=ಶ್ರೀ ಪರಮಾತ್ಮನ, ಪ್ರಸಾದಾತ್=ಅನುಗ್ರಹದಿಂದ, ಪಶ್ಯತಿ=ಅಪರೋಕ್ಷೀಕರಿಸುತ್ತಾನೆ, (ಅನಂತರದಲ್ಲಿ), ವೀತಶೋಕಃ=ಹೋಗಲ್ಪಟ್ಟ ವ್ಯಸನಉಳ್ಳವನಾಗುತ್ತಾನೆ. ॥ ೨೦ ॥

**ಮಂ ॥ ಆಸೀನೋ ದೂರಂ ವ್ರಜತಿ ಶಯಾನೋ ಯಾತಿ ಸರ್ವತಃ। ಕಸ್ತಂ ಮದಾಮದಂ ದೇವಂ ಮದನ್ಯೋ ಜ್ಞಾತುಮರ್ಹತಿ ॥ ಅಶರೀರಂ ಶರೀರೇಷು ಅನವಸ್ಥೇಷ್ವವಸ್ಥಿತಂ। ಮಹಾಂತಂ ವಿಭುಮಾತ್ಮಾನಂ ಮತ್ವಾ ಧೀರೋ ನ ಶೋಚತಿ ॥ ೨೨ ॥**

ಅ ॥ ಆಸೀನಃ=ಕೂತುಕೊಂಡಿದ್ದವನಾಗಿ, ದೂರಂ=ದೂರಪ್ರದೇಶವನ್ನು ಕುರಿತು, ವ್ರಜತಿ=ಹೋಗುತ್ತಾನೆ, (ಸಃ=ಆ ಪರಮಾತ್ಮನು), ಶಯಾನಃ=ಮಲಗಿಕೊಂಡು ಇದ್ದವನಾಗಿಯೇ, ಸರ್ವತಃ=ಎಲ್ಲಾ ಪ್ರದೇಶಕ್ಕೂ, ಯಾತಿ=ಹೋಗುತ್ತಾನೆ, ಮದಾಮದಂ=ಸುಖದುಃಖಗಳಿಗೆ ಕಾರಣನಾದ, ತಂ=ಪೂರ್ವೋಕ್ತನಾದ, ದೇವಂ=ಶ್ರೀ ಪರಮಾತ್ಮನನ್ನು, ಮದನ್ಯಃ=ನನ್ನಿಂದ ಅತಿರಿಕ್ತನಾದ, ಕಃ=ಯಾವ ಪುರುಷನು, ಜ್ಞಾತುಂ=ತಿಳಿಯುವುದಕ್ಕೋಸ್ಕರ, ಅರ್ಹತಿ=ಯೋಗ್ಯನಾಗುತ್ತಾನೆ. ॥ ೨೧ ॥ ಅನವಸ್ಥೇಷು=ನಶ್ವರಗಳಾದ, ಶರೀರೇಷು=ದೇಹಗಳಲ್ಲಿ, ಅಶರೀರಂ=ಶರೀರನಿಮಿತ್ತಕ ವಿಕಾರರಹಿತನಾದ, ಮಹಾಂತಂ=ದೇಶ

ಕಾಲಗುಣಗಳಿಂದ ಮಹತ್ತಾದ, ವಿಭುಂ=ಸಮರ್ಥನಾದ, ಆತ್ಮಾನಂ=ಸ್ವಾಮಿಯಾದ ಶ್ರೀ ಪರಮಾತ್ಮನನ್ನು, ಮತ್ವಾ=ತಿಳಕೊಂಡು, ಧೀರಃ=ಬುದ್ಧಿಶಾಲಿಯಾದ ಜ್ಞಾನಿಯು, ನ ಶೋಚತಿ=ದುಃಖಪಡುವದಿಲ್ಲ, ಮುಕ್ತನಾಗುತ್ತಾನೆಂಬರ್ಥವು. ॥ ೨೨ ॥

**ಮಂ ॥ ನಾಯಮಾತ್ಮಾ ಪ್ರವಚನೇನ ಲಭ್ಯೋ ನ ಮೇಧಯಾ ನ ಬಹುನಾ ಶ್ರುತೇನ। ಯಮೇವೈಷ ವೃಣುತೇ ತೇನ ಲಭ್ಯಸ್ತಸ್ಯೈಷ ಆತ್ಮಾ ವಿವೃಣುತೇ ತನೂಂ ಸ್ವಾಂ ॥ ೨೩ ॥**

ಅ ॥ ಅಯಂ=ಈ, ಆತ್ಮಾ=ಶ್ರೀ ಪರಮಾತ್ಮನು, ಪ್ರವಚನೇನ=ವ್ಯಾಖ್ಯಾನದಿಂದ, ನ ಲಭ್ಯಃ=ಹೊಂದಲು ಶಕ್ಯನಲ್ಲ, ಮೇಧಯಾ=ಪ್ರಜ್ಞಾಬಲದಿಂದ, ನ=ಶಕ್ಯನಾಗುವದಿಲ್ಲ, ಬಹುನಾ=ಬಹಳವಾದ, ಶ್ರುತೇನ=ಶ್ರವಣದಿಂದ, ನ=ಆಗುವದಿಲ್ಲ, ಯಂ=ಯಾವ ಪುರುಷನನ್ನು, ಏಷಃ=ಈ ಪರಮಾತ್ಮನು, ವೃಣುತೇ=ಸ್ವೀಕಾರ ಮಾಡುತ್ತಾನೋ, ತೇನ=ಆ ಪುರುಷನಿಂದ, ಲಭ್ಯಃ=ಹೊಂದಲು ಶಕ್ಯನು, ತಸ್ಯ=ಆ ಪುರುಷನಿಗೆ, ಏಷ ಆತ್ಮಾ=ಈ ಪರಮಾತ್ಮನು, ಸ್ವಾಂ ತನುಂ=ತನ್ನಶರೀರವನ್ನು, ವಿವೃಣುತೇ=ತೋರಿಸುತ್ತಾನೆ. ॥ ೨೩ ॥

ತಾ ॥ ಶಿಷ್ಯರಿಗೆ ತತ್ವೋಪದೇಶ ಮಾಡುವದರಿಂದಾಗಲೀ, ಪ್ರಜ್ಞಾಬಲದಿಂದಾಗಲೀ, ಬಹಳಾವರ್ತಿ ಶಾಸ್ತ್ರಶ್ರವಣ ಮಾಡುವದರಿಂದಾಗಲೀ ತನ್ನ ಕಣ್ಣಿಗೆ ಶ್ರೀ ಪರಮಾತ್ಮನು ಗೋಚರನಾಗುವವನಲ್ಲ. ಯಾವನನ್ನು ತನ್ನ ಭಕ್ತನನ್ನಾಗಿ ಅಂಗೀಕರಿಸಿ ಆತನಲ್ಲಿ ಪ್ರಸನ್ನನಾಗುವನೋ, ಆತನಿಗೇನೇ ಶ್ರೀ ಪರಮಾತ್ಮನು ತನ್ನ ಚಿದಾನಂದಾದ್ಯಾತ್ಮಕ ವಿಗ್ರಹವನ್ನು ಸ್ಪಷ್ಟವಾಗಿ ತೋರಿಸುತ್ತಾನೆ. ॥ ೨೩ ॥

**ಮಂ ॥ ನಾವಿರತೋ ದುಶ್ಚರಿತಾನ್ನಾಶಾಂತೋ ನಾಸಮಾಹಿತಃ। ನಾಶಾಂತಮಾನಸೋ ವಾಪಿ ಪ್ರಜ್ಞಾನೇನೈನಮಾಪ್ನುಯಾತ್ ॥ ೨೪ ॥**

ಅ ॥ ದುಶ್ಚರಿತಾತ್=ದುರಾಚಾರದಿಂದ, ಅವಿರತಃ=ಅನಿವೃತ್ತನಾದವನು, ಏನಂ=ಈ ಪರಮಾತ್ಮನನ್ನು, ನಾಪ್ನುಯಾತ್=ಪ್ರಾಪಿಸುವದಿಲ್ಲ, ಅಶಾಂತಃ=ಶ್ರವಣ ಮನನ ಧ್ಯಾನಗಳಿಂದ ಭಗವನ್ನಿಷ್ಠಾರಹಿತನಾದವನೂ, ನ=ಪ್ರಾಪಿಸುವದಿಲ್ಲ, ಅಸಮಾಹಿತಃ=ಯಥಾರ್ಥಜ್ಞಾನಹೀನನಾದವನೂ, ನ=ಪ್ರಾಪಿಸುವದಿಲ್ಲ, ಅಶಾಂತಮಾನಸಃ=ವಿಷಯಭೋಗದಲ್ಲಿ ಅಲಂಬುದ್ಧಿರಹಿತನಾದವನು, ನ=ಪ್ರಾಪಿಸುವದಿಲ್ಲ, ಆದರೆ, ಪ್ರಜ್ಞಾನೇನ ವಾ=ಭಗವದಪರೋಕ್ಷಜ್ಞಾನದಿಂದಲೇ ಹೊಂದುತ್ತಾನೆ. ॥ ೨೪ ॥

ತಾ ॥ ದುರಾಚಾರಿಯು, ಪರಮಾತ್ಮದ್ವೇಷಿಯು, ಶಾಸ್ತ್ರಶ್ರವಣ ಮಾಡದವನು, ಇಂದ್ರಿಯ ನಿಗ್ರಹವಿಲ್ಲದವನು, ಪರಮಾತ್ಮನನ್ನು ಹೊಂದಲಾರನು. ಆದರೆ ಸದಾಚಾರಿಯಾಗಿ ಪರಮಾತ್ಮನಲ್ಲಿ ಭಕ್ತಿಮಾಡಿ ತದ್ವಿಷಯಕ ಶಾಸ್ತ್ರದಲ್ಲಿ ವಿಚಾರಪರನಾಗಿ ಇಂದ್ರಿಯನಿಗ್ರಹವುಳ್ಳವನಾದ ಸತ್ಪುರುಷನಿಂದ ಅಪರೋಕ್ಷಜ್ಞಾನದ್ವಾರಾ ಹೊಂದಲ್ಪಡುವನು. ॥ ೨೪ ॥

**ಮಂ ॥ ಯಸ್ಯ ಬ್ರಹ್ಮ ಚ ಕ್ಷತ್ರಂ ಚೋಭೇ ಭವತ ಓದನಃ। ಮೃತ್ಯುರ್ಯಸ್ಯೋಪಸೇಚನಂ ಕ ಇತ್ಥಾ ವೇದ ಯತ್ರ ಸಃ ॥ ೨೫ ॥**

ಅ ॥ ಯಸ್ಯ=ಯಾವ ಶ್ರೀ ಪರಮಾತ್ಮನಿಗೆ, ಬ್ರಹ್ಮ=ಚತುರ್ಮುಖನು, ಕ್ಷತ್ರಂ=ಮುಖ್ಯಪ್ರಾಣನು, ಉಭೆ=ಇವರಿಬ್ಬರು, ಓದನಃ=ಅನ್ನವು, ಭವತಃ=ಆಗುತ್ತಾರೆ, ಯಸ್ಯ=ಯಾವ ಪರಮಾತ್ಮನಿಗೆ, ಮೃತ್ಯುಃ=ರುದ್ರನು, ಉಪಸೇಚನಂ=ಉಪ್ಪಿನಕಾಯಿ, ಸಃ=ಅಂತಹ

ಪರಮಾತ್ಮನು, ಯತ್ರ=ಯಾವ ದೇಶದಲ್ಲಿ, ಇತ್ಥಾ=ಈಪ್ರಕಾರವಾಗಿ ಇದ್ದಾನೆಂದು, ಕಃ= ಯಾವ ಪುರುಷನು, ವೇದ=ತಿಳಿಯುತ್ತಾನೆ. ॥ ೨೫ ॥

ತಾ ॥ ಬ್ರಾಹ್ಮಣಜಾತ್ಯಭಿಮಾನಿ ದೇವತೆಯು ಚತುರ್ಮುಖ ಬ್ರಹ್ಮನು. ಕ್ಷತ್ರಿಯ ಜಾತ್ಯಭಿಮಾನಿ ದೇವತೆಯು ಮುಖ್ಯಪ್ರಾಣನು. ಮೃತ್ಯುವೆಂದು ರುದ್ರನು ಪ್ರಸಿದ್ಧನು. ಈ ಪ್ರಸಿದ್ಧ ಮೂರು ದೇವತೆಗಳು ಪರಮಾತ್ಮನಿಂದ ಬಹಳ ಕಡಿಮೆಯಾದವರು ಎಂದು ಸೂಚಿ ಸಲ್ಪಟ್ಟಿದೆ. ಮತ್ತು ಇವರನ್ನು ಅನಾಯಾಸೇನ ಸಂಹರಿಸುವ ಶಕ್ತಿ ಉಳ್ಳ ಪರಮಾತ್ಮನ ಮಹಿಮೆ ತಿಳಿಯಲು ಸಾಧ್ಯವಲ್ಲ. ॥ ೨೫ ॥

ಭಾ ॥ ಅನ್ಯೋ ಭಗವಾನ್ ಅನ್ಯೋಽಹಮಿತ್ಯಜಾನನ್ನನನ್ಯಃ ।
ತೇನ ಪ್ರೋಕ್ತೇ ಗತಿರ್ಜ್ಞಾನಂ ನಾಸ್ತಿ ।
ಪ್ರೋಕ್ತಾನ್ಯೇನೈವ ಸುಜ್ಞಾನಾಯ ಪ್ರೇಷ್ಠೇತಿ ವಾಕ್ಯಶೇಷಾತ್ ॥ ೮ ॥

ಅ ॥ ಪರಮಾತ್ಮನು ತನ್ನಿಂದ ಭಿನ್ನನು, ತಾನು ಆಪರಮಾತ್ಮನಿಂದ ಭಿನ್ನನು, ಎಂಬು ದಾಗಿ ತಿಳಿಯದೆ ಇರುವವನು ಅನನ್ಯನು. "ತೇನ ಪ್ರೋಕ್ತೇ" ಇತ್ಯಾದಿ ವಾಕ್ಯಶೇಷದಿಂದ ಈ ಅರ್ಥವೇ ಸಿದ್ಧವಾಗುತ್ತದೆ. ॥ ೮ ॥

ಭಾ ॥ ಜೀವಾನಾಂ ಚೈವ ವಿಷ್ಣೋಶ್ಚ ಯೋ ನ ವೇತ್ತಿ ಭಿದಾಂ ಪುಮಾನ್ ।
ತದನುವ್ರತಾಶ್ಚ ಯೇ ಕೇಚಿತ್ತೇಷಾಂ ಜ್ಞಾನಂ ನ ಜಾಯತೇ ॥ ೯ ॥
– ಇತಿ ಬ್ರಹ್ಮವೈವರ್ತೆ ॥

ಅ ॥ ಜೀವರುಗಳಿಗೂ, ಶ್ರೀ ಪರಮಾತ್ಮನಿಗೂ, ಇರುವ ಭೇದವನ್ನು ಯಾವ ಪುರು ಷನು ತಿಳಿಯುವದಿಲ್ಲವೋ, ಅಭೇದವನ್ನು ತಿಳಿಯುತ್ತಾನೋ, ಇನ್ನುಕೆಲವರು ಭೇದವನ್ನು ತಿಳಿಯದೆಯೂ ಅಭೇದವನ್ನು ತಿಳಕೊಂಡು ಇರುವವರನ್ನು ಅನುಸರಿಸಿಕೊಂಡಿರುವವರೂ ಕೂಡ, ಅಂದರೆ ಅವರಿಂದ ಉಪದೇಶಮಾಡಿಸಿಕೊಂಡು ತನ್ಮತಾವಲಂಬಿಗಳಾಗಿ ಯಾರು ಇರುತ್ತಾರೋ ಅವರುಗಳಿಗೆ ಯಥಾರ್ಥಜ್ಞಾನವು ಹುಟ್ಟುವದಿಲ್ಲವು. ॥ ೯ ॥

ಭಾ ॥ ಆಖ್ಯಂ ವಿಷ್ಣ್ವಾಖ್ಯಂ ನಿತ್ಯಂ ಶೇವಧಿರಿತಿ ಜಾನಾಮಿ ।
ನಿತ್ಯಮಾಖ್ಯ ವಿಷ್ಣು ವಿಷಯೈರ್ದ್ರವ್ಯೈಃ ಮನಆದಿಭಿಃ ।
ಆಖ್ಯನಿತ್ಯ ವಿಷಯೈಃ ವಿಷ್ಣ್ವಾಖ್ಯನಿತ್ಯ ವಿಷಯೈಃ ದ್ರವ್ಯೈಃ ।
ನಿತ್ಯಂ ಭಗವಂತಂ ಪ್ರಾಪ್ತವಾನಸ್ಮಿ ಧ್ರುವೋ ಭಗವಾನ್ ।
ಅಧ್ರುವೈಃ ತದ್ಭಕ್ತಿವರ್ಜಿತೈಃ ನ ಪ್ರಾಪ್ಯತೇ ॥ ೧೦ ॥

ಅ ॥ ಅಕಾರಶಬ್ದವಾಚ್ಯನಾದುದರಿಂದ ಶ್ರೀ ಪರಮಾತ್ಮನೇ ನಿರಂತರದಲ್ಲಿ ಶೇವಧಿಃ ಅಂದರೆ-ನಿಧಿ ಎಂಬುದಾಗಿ ನಾನು ತಿಳಿದಿದ್ದೇನೆ. ಪರಮಾತ್ಮನ ವಿಷಯಕಗಳಾದ ದ್ರವ್ಯಗಳಿಂದ ಅಂದರೆ, ಮನಸ್ಸೇ ಮೊದಲಾದ ದ್ರವ್ಯಗಳಿಂದ, ಶಾಶ್ವತನಾದ ಪರಮಾತ್ಮನನ್ನು ಪ್ರಾಪಿಸುವನಾಗಿ ದ್ದೇನೆ. ಧ್ರುವ ಶಬ್ದವಾಚ್ಯನಾದ ಶ್ರೀ ಪರಮಾತ್ಮನು ಅಧ್ರುವೈಃ ಅಂದರೆ ಆತನ ಭಕ್ತಿರಹಿತ ರಾದ ಪುರುಷರಿಂದ ಪ್ರಾಪಿಸಿ ಕೊಳ್ಳಲ್ಪಡುವುದಿಲ್ಲವೆಂಬರ್ಥವು. ॥ ೧೦ ॥

**ಭಾ ||** ಕ್ರತೋರಾನಂತ್ಯ ಹೇತುಂ ।
ಸ್ತೋಮೈರಪಿ ಸರ್ವಾತ್ಮನಾ ಪ್ರಾಪ್ತುಮಶಕ್ಯಂ ।
ಸ್ತೋಮೇಭ್ಯೋಽಪಿ ಮಹಾಂತಂ ।
ಉರುಗಾಯಮಿತ್ಯುಕ್ತತ್ವಾಚ್ಚ ನ ಜೀವವಿಷಯೋಽಯಂ ಪ್ರಶ್ನಃ ।
ಶರೋ ಹ್ಯಾತ್ಮಾ ಬ್ರಹ್ಮ ತಲ್ಲಕ್ಷ್ಯಮುಚ್ಯತೇ
ಶರವತ್ತನ್ಮಯೋ ಭವೇತ್ ।
ಅಭಯಂ ತಿತೀರ್ಷತಾಂ ಪಾರಂ ।
ತಾದೃಗೇವ ಭವತೀತ್ಯಾದೌ ಸರ್ವತ್ರ ಭೇದಸ್ಯೈವೋಕ್ತೇಶ್ಚ
ನಜೀವಾಭೇದಃ । ನಾಚಿಕೇತಂ ಶಕೇಮಹೀತ್ಯುಕ್ತತ್ವಾಚ್ಚ ॥ ೧೧ ॥

(ಅ-೧. ವ-೩. ಮಂ-೨).

**ಭಾ ||** ನಾಚಿಕೇತಾಗ್ನಿಸ್ಥೋಭಗವಾನೇವೋಚ್ಯತ ಇತಿ ಸಿದ್ಧಂ ।
ಉರುಗಾಯಂ ದೃಷ್ಟ್ವಾ ಕಾಮಸ್ಯಾಪ್ತಿ ಮತ್ಯಸ್ರಾಕ್ಷೀಃ ।
ನ ಚ ಮೃತ್ವಾ ಯಮಂಪ್ರಾಪ್ತಸ್ಯ ನಚಿಕೇತಸೊ ಮೃತೋಽಸ್ತಿ
ನವೇತಿ ಸಂಶಯೋ ಯುಜ್ಯತೇ ॥

(ಅ-೧. ವ-೧. ಮಂ-೧೯).

ಅ || ಕ್ರತೋರಾನಂತ್ಯಹೇತುಂ=ಭಗವತ್ಸಂಬಂಧಿಕವಾದ ಕರ್ಮಕ್ಕೂ ಜ್ಞಾನಕ್ಕೂ ಅಕ್ಷಯ ಫಲವನ್ನು ಕೊಡುವವನು, 'ಸ್ತೋಮೈರಪಿ ಸರ್ವಾತ್ಮನಾಪ್ರಾಪ್ತುಮಶಕ್ಯಂ=ವೇದಸಮೂಹಗಳಿಂದಲೂ ಸರ್ವಪ್ರಕಾರದಿಂದ ತಿಳಿಯಲಿಕ್ಕೆ ಅಶಕ್ಯಂಸ್ತೋಮೇಭ್ಯೋಪಿಮಹಾಂತಂ=ವೇದಮಂತ್ರಗಳು ಅಂದರೆ ಸ್ತೋತ್ರಸಾಧನಗಳಾದ ಮಂತ್ರರಾಶಿಗಳಿಂದಲೂ ಮಹತ್ತಾದವನು, 'ಉರುಗಾಯಮಿತ್ಯುಕ್ತತ್ವಾಚ್ಚ ನ ಜೀವವಿಷಯೋಽಯಂಪಶ್ನಃ=ಉರುಗಾಯವೆಂಬುವದು ಪರಮಾತ್ಮನಿಗೇ ವಿಶೇಷಣವೆಂಬುದಾಗಿ ಹೇಳಿರುವದರಿಂದಲೂ ಮೂರನೇ ಪ್ರಶ್ನೆಯು ಜೀವವಿಷಯಕವಲ್ಲವೆಂಬುವದು ಸ್ಪಷ್ಟವಾಗುತ್ತದೆ. 'ಶರೊಹ್ಯಾತ್ಮಾ ಬಹ್ಮ ತಲ್ಲಕ್ಷ್ಯಮುಚ್ಯತೇ=ಆತ್ಮಾ ಜೀವನು ಶರಸ್ಥಾನೀಯನು. ಪರಬ್ರಹ್ಮನು ಆ ಶರಕ್ಕೆ ಲಕ್ಷ್ಯಭೂತನೆಂದು, ಉಚ್ಯತೇ=ಹೇಳಲ್ಪಟ್ಟದೆ, ಶರವತ್ತನ್ಮಯೋ ಭವೇತ್=ಬಾಣದಂತೆ ಜೀವನು ಬ್ರಹ್ಮನಲ್ಲಿ ಸಂಬದ್ಧವಾದ ಮನಸ್ಸುಳ್ಳವನು ಎಂಬ ಅರ್ಥವೇ ಹೊರತು,ಬಾಣಕ್ಕೂ ಲಕ್ಷ್ಯಕ್ಕೂ ಅಭೇದ ಕೂಡಲಾರದು. "ಅಭಯಂ ತಿತೀರ್ಷತಾಂ ಪಾರಂ ತಾದೃಗೇವಭವತೀತ್ಯಾದೌ" (ಸಂಸಾರವನ್ನು ದಾಟಬೇಕೆಂಬ ಅಪೇಕ್ಷೆಯುಳ್ಳವರಿಗೆ ಅಭಯವನ್ನು ಕೊಡುವವನು-ಪರಬ್ರಹ್ಮನನ್ನು ತಿಳಿದವನು— ಅವನ ಸದೃಶನಾಗುತ್ತಾನೆ). ಇದೇ ಮೊದಲಾದ ವಾಕ್ಯಗಳಲ್ಲಿ, 'ಸರ್ವತ್ರ ಭೇದಸ್ಯೈವೊಕ್ತೇಶ್ಚ ನ ಜೀವಾಭೇದಃ,=ಎಲ್ಲಾ ಕಡೆಯಲ್ಲಿಯೂ ಜೀವೇಶ್ವರರುಗಳಿಗೆ ಭೇದವನ್ನೇ ಹೇಳಿರುವದರಿಂದ, ಈಶ್ವರನಿಗೆ ಜೀವಾದಿಗಳಿಂದ ಅಭೇದವು ಯಾವ ಪ್ರಕಾರದಿಂದಲೂ ಹೇಳುವದು ಉಚಿತವಲ್ಲವೆಂದು ತಾತ್ಪರ್ಯವು.

(ಎರಡನೇ ಪ್ರಶ್ನೆಯು ಭಗವದ್ವಿಷಯವೇ ಸರಿ ಎಂಬುವುದರಲ್ಲಿ ಯುಕ್ತಿಯನ್ನು ಹೇಳುತ್ತಾರೆ)—

"ನಾಚಿಕೇತಂ ಶಕೇಮಹಿ" ನಚಿಕೇತರನ್ನು ಕುರಿತು ಸಾಧನವನ್ನು ಹೇಳುವದರಲ್ಲಿ ಸಮರ್ಥರಾಗಿದ್ದೇವೆಂಬ ಅರ್ಥ. "ಇತ್ಯುಕ್ತತ್ವಾಚ್ಚನಾಚಿಕೇತಾಗ್ನಿಸ್ಥೋ ಭಗವಾನೇವೋಚ್ಯತ ಇತಿ

·ಸಿದ್ಧಂ। ಈಪ್ರಕಾರ ಹೇಳಿರುವದರಿಂದಲೂ, ನಾಚಿಕೇತನಾಮಕಾಗ್ನಿಯಲ್ಲಿ ಅಂತರ್ಗತನಾಗಿರುವ ಶ್ರೀ ಪರಮಾತ್ಮನೇ ಹೇಳಲ್ಪಡುತ್ತಾನೆಂಬುವದು ಸಿದ್ಧವಾಯಿತು. "ಉರುಗಾಯಂ ದೃಷ್ಟ್ವಾ ಕಾಮಸ್ಯಾಪ್ತಿಮತ್ಯಸ್ರಾಕ್ಷೀಃ।ಬ್ರಹ್ಮಾದಿದೇವತೆಗಳಿಂದ ಸ್ತುತ್ಯನಾದ ಶ್ರೀಪರಮಾತ್ಮನನ್ನು ನೋಡಿ ಕಾಮ್ಯಗಳಾದ ನಶ್ವರ ಫಲಗಳನ್ನು ಪರಿತ್ಯಾಗ ಮಾಡುವವನಾದಿ.

(ಮೂರನೇ ಪ್ರಶ್ನೆಯು ಮೃತಜೀವವಿಷಯವೆಂತ ಹೇಳಿದರೆ ಬಾಧಕವನ್ನು ಹೇಳುತ್ತಾರೆ.)—

ಮೃತರಾಗಿ ಯಮಲೋಕವನ್ನು ಕುರಿತು ಹೋಗಿರುವ ನಚಿಕೇತರಿಗೆ ಮೃತನಾಗಿದ್ದಾನೋ, ಇಲ್ಲವೋ ಎಂಬ ಸಂದೇಹವೇ ಕೂಡಲಾರದು. ಆದುದರಿಂದ ಭಗವದ್ವಿಷಯದಲ್ಲಿಯೇ ನಚಿಕೇತರು ಪ್ರಶ್ನೆಮಾಡಿದ್ದೆಂಬದು ಸಿದ್ಧವೆ.

**ಭಾ ||** ಗಹ್ವರೇ ಮುಕ್ತಜೀವೇ ಸ್ಥಿತಂ || ೧೨ ||

ಮುಕ್ತರಾದ ಜೀವರುಗಳಲ್ಲಿ ಇರುವವನು. (ಅಂದರೆ ಸಂಸಾರದಲ್ಲಿ ಇರುವವರಿಂದ ಪ್ರಾಪಿಸಲಿಕ್ಕೆ ಅಶಕ್ಯನಾದುದರಿಂದ ಮುಕ್ತನು ಗಹ್ವರೆನೆಂದಿಸುವನು).

**ಭಾ ||** ಪ್ರವೃಹ್ಯ ಜೀವಾತ್ಪ್ರಥಕ್ಕೃತ್ಯ || ೧೩ ||

ಜೀವರಿಂದ ಪರಮಾತ್ಮನನ್ನು ಭಿನ್ನನನ್ನಾಗಿತಿಳಕೊಂಡು.

**ಭಾ ||** "ಮುಕ್ತಜೀವೇ ಸ್ಥಿತಂ ವಿಷ್ಣುಂ ವಿದಿತ್ವಾ ಜೀವತಃ ಪೃಥಕ್ ।
ಮೋದತೇ ಮೋದನೀಯಂ ತಂ ಪ್ರಾಪ್ಯ ಮುಕ್ತಸ್ಸ ದೈವಚ" ||
- ಇತಿ ಮಹಾವಾರಾಹೇ.

**ಅ||** (ಅಯಂ=ಈ ಪುರುಷನು), ಮುಕ್ತಜೀವೇ ಸ್ಥಿತಂ=ಮುಕ್ತಜೀವರುಗಳಲ್ಲಿ ಅಂತರ್ಗತನಾಗಿರುವ, ವಿಷ್ಣುಂ=ಶ್ರೀಪರಮಾತ್ಮನನ್ನು, ಜೀವತಃ=ಜೀವರಿಂದ, ಪೃಥಕ್=ಬೇರೆಯಾಗಿ, ವಿದಿತ್ವಾ=ತಿಳಕೊಂಡು, ಮೋದನೀಯಂ=ಸಂತೋಷವನ್ನು ಕೊಡುವ, ತಂ=ಆ ಪರಮಾತ್ಮನನ್ನು, ಪ್ರಾಪ್ಯ=ಹೊಂದಿ, ಮುಕ್ತಃ=ಮೋಕ್ಷವನ್ನು ಹೊಂದಿದವನಾಗಿ, ಸದೈವ=ಸರ್ವಕಾಲದಲ್ಲಿಯೂ, ಮೋದತೆ=ಸಂತೋಷಪಡುತ್ತಾನೆ. ಈ ಪ್ರಕಾರ ವರಾಹಪುರಾಣದಲ್ಲಿ ಹೇಳಿರುತ್ತದೆ.

**ಭಾ ||** "ಏತದ್ಧ್ಯೇವಾಕ್ಷರಂ ಬ್ರಹ್ಮ ವಿಷ್ಣ್ವಾಖ್ಯಂ ಪರಮವ್ಯಯಂ ।
ಸರ್ವಸ್ಯಾಲಂಬನಂ ಜ್ಞಾತ್ವಾ ಮುಚ್ಯತೇ ನಾತ್ರ ಸಂಶಯಃ" || ಇತಿ ಚ ||

**ಅ ||** ಏತತ್=ಈ ಮೊದಲು ಹೇಳಿದ, ಅಕ್ಷರಂ=ಅಕ್ಷರಶಬ್ದವಾಚ್ಯವಾದ, ಬ್ರಹ್ಮೈವ=ಪರಬ್ರಹ್ಮವೆ, ವಿಷ್ಣ್ವಾಖ್ಯಂ=ವಿಷ್ಣುವೆಂತ ನಾಮಧೇಯವುಳ್ಳದ್ದು, ಪರಂ=ಉತ್ತಮವಾದದ್ದು, ಅವ್ಯಯಂ=ನಾಶರಹಿತವಾದದ್ದು, ಸರ್ವಸ್ಯಾಲಂಬನಂ=ಸಮಸ್ತ ಜಗತ್ತಿಗೂ ಮುಖ್ಯಾಶ್ರಯಭೂತವಾದದ್ದು, ಏತತ್=ಈ ಪರಬ್ರಹ್ಮನನ್ನು, ಜ್ಞಾತ್ವಾ=ತಿಳಿದರೆ, ಮುಚ್ಯತೇ=ಮುಕ್ತನಾಗುವನು, ಅತ್ರ=ಈ ವಿಷಯದಲ್ಲಿ, ಸಂಶಯಃ=ಸಂದೇಹವು, ನ=ಇರುವದಿಲ್ಲವು.

ಭಾ ॥ “ದೇಹೋತ್ಪತ್ತಿ ವಿನಾಶಾಖ್ಯೌ ಜ್ಞಾನಿನೋಽಪ್ಯುದ್ಭವಾಭವೌ ।
ನ ಕುತಶ್ಚಿದ್ಯತೋ ವಿಷ್ಣುರ್ಜಾಯತೇಽತಸ್ತದೀಕ್ಷಣಾತ್ ॥
ಭಾವಾಭಾವೌ ನ ವಿದುಷೋ ಯಸ್ಮಾಜ್ಜೀವೋ ನ ಕಶ್ಚನ ।
ಜಾಯತೇ ಮ್ರಿಯತೇ ವಾಪಿ ಸ್ವರೂಪೇಣ ಕಥಂಚನ ।
ಅಜೋ ನಿತ್ಯೋಽವಿಕಾರಶ್ಚ ಜೀವಃ ಪುರಮಣನ್ನಪೀ”ತಿ ಚ ॥

ಅ ॥ ಯತಃ=ಯಾವ ಕಾರಣದಿಂದ, ವಿಷ್ಣುಃ=ಶ್ರೀಪರಮಾತ್ಮನು, ಕುತಶ್ಚಿತ್=ಯಾವ ಕಾರಣದಿಂದಲೂ, ನ ಜಾಯತೆ=ಹುಟ್ಟುವದಿಲ್ಲ, (ನ ಮ್ರಿಯತೇಚ=ನಾಶ ಹೊಂದುವದೂ ಇಲ್ಲ), ಅತಃ=ಆ ಕಾರಣದಿಂದ, ತದೀಕ್ಷಣಾತ್=ಆ ಪರಮಾತ್ಮವಿಷಯಕ ಜ್ಞಾನದಿಂದ, ಜ್ಞಾನಿನೋಽಪಿ=ಅಪರೋಕ್ಷಜ್ಞಾನಿಗೂ ಕೂಡ, ಉದ್ಭವಾಭವೌ=ಉತ್ಪತ್ತಿ ನಾಶಗಳು, ದೇಹೋತ್ಪತ್ತಿ ವಿನಾಶಾಖ್ಯೌ=ಶರೀರಕ್ಕೆ ಉತ್ಪತ್ತಿನಾಶಗಳೆರಡು, ನ ಸ್ತಃ=ಇರುವದಿಲ್ಲವು, ಯಸ್ಮಾತ್=ಯಾವ ಕಾರಣದಿಂದ, ಜೀವಃ=ಜೀವನು, ಕಶ್ಚನ=ಯಾರೊಬ್ಬರೂ, ಸ್ವರೂಪೇಣ=ಸ್ವರೂಪದಿಂದ, ಕಥಂಚನ=ಯಾವ ವಿಧದಿಂದಲೂ, ನ ಜಾಯತೆ=ಹುಟ್ಟುವದಿಲ್ಲ, ನ ಮ್ರಿಯತೆ=ಸಾಯುವುದಿಲ್ಲ, (ತಸ್ಮಾತ್=ಆ ಕಾರಣದಿಂದ), ವಿದುಷಃ=ಜ್ಞಾನಿಗೆ, ಭಾವಾಭಾವೌ=ದೇಹೋತ್ಪತ್ತಿ ನಾಶಗಳು, ನ ಸ್ತಃ=ಇರುವದಿಲ್ಲವು, ಜೀವಃ=ಜೀವನು, ಪುರಂ=ದೇಹವನ್ನು, ಅಣನ್ನಪಿ=ಪ್ರಾಪಿಸಿದವನಾದಾಗ್ಯೂ, ಅಜಃ=ಸ್ವರೂಪತಃ ಉತ್ಪತ್ತಿಶೂನ್ಯನು, ನಿತ್ಯಃ=ನಾಶರಹಿತನು, ಅವಿಕಾರಃ=ವಿಕಾರರಹಿತನಾದವನು ॥

ಭಾ ॥ ಅಯಂ ಭಗವಾನ್ ಕುತೋಽಪಿ ನ ಬಭೂವ ಯಸ್ಮಾದತಸ್ತದ್ವೇತ್ತಾಪಿ ವಿಪಶ್ಚಿನ್ನ ಜಾಯತೇ ನ ಮ್ರಿಯತೇ ಚ । ಯತಃ ಕಶ್ಚಿಜ್ಜೀವಃ ಸ್ವತೋ ನ ಬಭೂವ । ದೇಹಸಂಬಂಧಾದ್ಧಿ ಜಾಯತೇ ವಿಪಶ್ಚಿತಸ್ತು ದೇಹಸಂಬಂಧಾಭಾವಾನ್ನಜಾಯತೇ ನ ಮ್ರಿಯತೇ ಚ । ಜೀವಸ್ಯಾಪಿ ಸ್ವತೋ ಮರಣಾಭಾವಾದುಭೌ ತೌ ನ ವಿಜಾನೀತಃ ॥ ೧೮, ೧೯ ॥

ಅ ॥ ಯಾವ ಕಾರಣದಿಂದ ಈ ಪರಮಾತ್ಮನು ಯಾವ ವಿಧದಿಂದಲೂ ಉತ್ಪತ್ತಿನಾಶವುಳ್ಳವನಲ್ಲವೋ, ಆ ಕಾರಣದಿಂದ ಆ ಶ್ರೀಪರಮಾತ್ಮನನ್ನು ತಿಳಿದ ಜ್ಞಾನಿಯೂ ಉತ್ಪತ್ತಿನಾಶರಹಿತನು. ಯಾವ ಕಾರಣದಿಂದ ಯಾವೊಬ್ಬ ಜೀವನು ಸ್ವರೂಪತಃ ಹುಟ್ಟುವುದಿಲ್ಲ; ಮತ್ತು ದೇಹಸಂಬಂಧದಿಂದ ಹುಟ್ಟುತ್ತಾನೋ, ಆದುದರಿಂದ ಜ್ಞಾನಿಯಾದರೂ ದೇಹಸಂಬಂಧ ಇಲ್ಲದೆ ಇರುವದರಿಂದ ಹುಟ್ಟುವುದಿಲ್ಲ, ಸಾಯುವುದಿಲ್ಲ. ಜೀವನಿಗೂ ಸ್ವರೂಪತಃ ಮರಣ ಇಲ್ಲದೆ ಇರುವದರಿಂದ ತಾವುಭೌ=ಒಬ್ಬನಿಂದ ಸಂಹೃತನೂ, ಇನ್ನೊಬ್ಬನಿಗೂ ಸಂಹಾರಕನೂ ಇವರಿಬ್ಬರೂ, ನ ವಿಜಾನೀತಃ=ತಿಳಿಯುವವರಾಗಲಿಲ್ಲವು.

ಭಾ ॥ ಏವಂ ನಿತ್ಯಸ್ಯ ಜಂತೋರ್ಗುಹಾಯಾಂ ನಿಹಿತಃ । ಏ ವಿಷ್ಣೌ ಕ್ರತುರ್ಯಸ್ಯಸೋಽಕ್ರತುಸ್ತನ್ನಿಶ್ಚಯಃ । ಆತ್ಮನಸ್ಸಕಾಶಾನ್ಮಹಿಮಾನಂ ಮಹಾಮಾನಂ । ಜೀವಾದ್ಗುಣಪರೀಮಾಣಂ ಯಸ್ಮಾದ್ವಿಷ್ಣೋರ್ಮಹತ್ತರಂ । ತಸ್ಮಾಜ್ಜೀವಾತ್ಸಮಹಿಮಾ ವಿಷ್ಣುರಿತ್ಯುಚ್ಯತೇ ಶ್ರುತಾವಿತಿ ಚ॥

ಅ॥ ಈ ಪ್ರಕಾರ ಅನಾದಿ ನಿತ್ಯನಾದ ಜೀವನ ಹೃದಯಗುಹೆಯಲ್ಲಿ ಪ್ರೇರಕನಾಗಿ ಇರುವನು.

ಅ || ಅಕಾರ ಶಬ್ದವಾಚ್ಯನಾದ ಶ್ರೀ ಪರಮಾತ್ಮನಲ್ಲಿ ಕ್ರತುಶಬ್ದವಾಚ್ಯವಾದ ನಿಶ್ಚಯವು ಯಾವನಿಗೋ ಅವನು ಪರಮಾತ್ಮವಿಷಯಕ ನಿಶ್ಚಯವುಳ್ಳವನು. ತನ್ನ ಸಕಾಶದಿಂದ ಯಿಂದ ಮಹತ್ತಾದ ಪರಿಮಾಣ ಉಳ್ಳವನು. ಜೀವಾತ್=ಜೀವನಿಂದ, ಗುಣಪರೀಮಾಣಂ=ಆನಂದಾದಿ ಗುಣಗಳ ಪರಿಮಾಣವು, ಯಸ್ಮಾತ್=ಯಾವಕಾರಣದಿಂದ, ವಿಷ್ಣೋಃ=ಶ್ರೀ ಪರಮಾತ್ಮನಿಗೆ, ಮಹತ್ತರಂ=ಅತ್ಯಂತ ಮಹತ್ತಾದದ್ದೋ, ತಸ್ಮಾತ್=ಆ ಕಾರಣದಿಂದ, ಜೀವಾತ್=ಜೀವನಿಂದ, ಸಃ ವಿಷ್ಣುಃ=ಆ ಶ್ರೀ ಪರಮಾತ್ಮನು, ಶ್ರುತೌ=ವೇದದಲ್ಲಿ, ಮಹಿಮೇತಿ=ಮಹಾನುಭಾವನೆಂದು, ಉಚ್ಯತೇ=ಹೇಳಲ್ಪಡುತ್ತಾನೆ. || ೨೦ ||

**ಭಾ ||** ಐಶ್ವರ್ಯಾದೇವಾಸೀನೋ ದೂರಂ ವ್ರಜತೀತ್ಯಾದಿ |
"ಆಸೀನೋ ದೂರಂ ವ್ರಜತಿ ಶಯಾನೋ ಯಾತಿ ಸರ್ವತಃ" |
ಐಶ್ವರ್ಯಾದ್ಭಗವಾನ್ವಿಷ್ಣುರ್ವಿರುದ್ಧಂ ಘಟಯತ್ಯಸಾವಿತಿಚ || ೨೧ ||

ಅ || ಐಶ್ವರ್ಯದಿಂದಲೇ ಕೂತುಕೊಂಡವನೇ ದೂರದೇಶವನ್ನು ಕುರಿತು ಹೋಗುತ್ತಾನೆಂಬವುಗಳೆಲ್ಲ ಕೂಡುತ್ತವೆ. ಭಗವಾನ್=ಷಡ್ಗುಣೈಶ್ವರ್ಯ ಸಂಪನ್ನನಾದ, ವಿಷ್ಣುಃ=ಶ್ರೀ ಪರಮಾತ್ಮನು, ಆಸೀನಃ=ಕೂತುಕೊಂಡವನಾಗಿಯೆ, ದೂರಂ=ದೂರದೇಶವನ್ನು ಕುರಿತು, ವ್ರಜತಿ=ಹೋಗುತ್ತಾನೆ, ಶಯಾನಃ=ಮಲಗಿದವನಾಗಿಯೇ, ಸರ್ವತಃ=ಎಲ್ಲಾ ಕಡೆಗೂ, ಯಾತಿ=ಹೋಗುತ್ತಾನೆ, ಅಸೌ=ಈ ಪರಮಾತ್ಮನು, ಐಶ್ವರ್ಯಾತ್=ಈಶ್ವರತ್ವ ಶಕ್ತಿಯಿಂದ ವಿರುದ್ಧಂ=ಪರಸ್ಪರ ವಿರುದ್ಧವಾದ ಪ್ರಮೇಯವನ್ನು, ಘಟಯತಿ=ಘಟನೆಮಾಡಿ ಕೊಡುತ್ತಾನೆ. ಆದುದರಿಂದಲೇ ಶ್ರೀ ಪರಮಾತ್ಮನು ಅಚಿಂತ್ಯಾದ್ಭುತಶಕ್ತಿ ಉಳ್ಳವನೆಂತಲೂ, ಅಘಟಿತ ಘಟಕ ಲಕ್ಷಣಸಾಮರ್ಥ್ಯವುಳ್ಳವನೆಂತಲೂ ಹೇಳಿಸಿಕೊಳ್ಳಲ್ಪಟ್ಟದ್ದಾನೆ.

**ಇಲ್ಲಿಗೆ ಕಾಠಕೋಪನಿಷತ್ತಿನಲ್ಲಿ ಪ್ರಥಮಾಧ್ಯಾಯದಲ್ಲಿ ಎರಡನೇ ವಲ್ಲಿಯು ಸಮಾಪ್ತವಾಯಿತು.**



## ತೃತೀಯಾವಲ್ಲೀ.

ಹಿಂದೆ "ಅಧ್ಯಾತ್ಮಯೋಗಾಧಿಗಮೇನ ದೇವಂ" ಎಂಬಲ್ಲಿ ಶ್ರೀ ಪರಮಾತ್ಮನ ಧ್ಯಾನವು ಹೇಳಲ್ಪಟ್ಟಿದೆ. ಆ ಧ್ಯಾನಮಾಡುವದರಲ್ಲಿ ಅಧಿಷ್ಠಾನವನ್ನು ಹೇಳುತ್ತಾರೆ:—

**ಮಂ || ಋತಂ ಪಿಬಂತೌ ಸುಕೃತಸ್ಯ ಲೋಕೇ ಗುಹಾಂ ಪ್ರವಿಷ್ಟೌ ಪರಮೇ ಪರಾರ್ಧೇ | ಛಾಯಾತಪೌ ಬ್ರಹ್ಮವಿದೋ ವದಂತಿ ಪಂಚಾಗ್ನಯೋ ಯೇ ಚ ತ್ರಿನಾಚಿಕೇತಾಃ || ೧ ||**

ಅ || ಸುಕೃತಸ್ಯ ಲೋಕೇ=ಪುಣ್ಯದಿಂದ ನಿರ್ಮಿತವಾದ ಶರೀರದಲ್ಲಿ, ಗುಹಾಂ=ಹೃದಯ ಗುಹೆಯನ್ನು, ಪ್ರವಿಷ್ಟೌ=ಪ್ರವೇಶ ಮಾಡಿದ, ಪರಮೇ=ಸರ್ವಜೀವೋತ್ತಮನಾದ, ಪರಾರ್ಧೇ=ಪರ=ಅನ್ಯರಿಂದ, ಅರ್ಧೆ=ಅಭಿವೃದ್ಧನಾದ ಮುಖ್ಯಪ್ರಾಣದೇವರಲ್ಲಿ, ಪ್ರವಿಷ್ಟೌ=ಪ್ರವೇಶ ಮಾಡಿಕೊಂಡಿರುವ, ಋತಂ=ಸುಕೃತಫಲವನ್ನು, ಪಿಬಂತೌ=ಭೋಜನಮಾಡತಕ್ಕ, ಆತ್ಮಾಂತರಾತ್ಮಾಎಂಬುವ ವಿಷ್ಣುರೂಪಗಳನ್ನು, ಬ್ರಹ್ಮವಿದಃ=ಬ್ರಹ್ಮಜ್ಞಾನಿಗಳಾದ, ಪಂಚಾಗ್ನಯಃ=

ಪಂಚಮಹಾಯಜ್ಞಗಳನ್ನು ಮಾಡುವ, ತ್ರಿನಾಚಿಕೇತಾಃ=ಮೂರಾವರ್ತಿ ಮಾಡಲ್ಪಟ್ಟ ನಚಿಕೇತ ನಾಮಕ ಚಯನವುಳ್ಳ, ಏತೇ=ಆ ಪ್ರಸಿದ್ಧರು, ಛಾಯಾತಪೌ=ಸಾಧ್ವಸಾಧುಗಳಿಗೆ, ಛಾಯಾ ತಪಗಳಂತೆ ಸುಖದುಃಖಗಳನ್ನು ಕೊಡುವವರನ್ನಾಗಿ, ವದಂತಿ=ಹೇಳುತ್ತಾರೆ. ॥ ೧ ॥

ತಾ ॥ ಪೂರ್ವಪುಣ್ಯದಿಂದ ನಿರ್ಮಿತ ಶರೀರದಲ್ಲಿ ಹೃದಯದಲ್ಲಿರತಕ್ಕ ಅದರಲ್ಲಿಯೂ ಸರ್ವಜೀವೋತ್ತಮನಾಗಿಯೂ ರುದ್ರಾದಿಗಳಿಂದ ಜ್ಞಾನಾದಿಗುಣಗಳಿಂದ ಪೂರ್ಣನಾಗಿಯೂ, ಇರುವ ವಾಯುದೇವರಲ್ಲಿ ಆತ್ಮಾಂತರಾತ್ಮಗಳೆಂಬ ಭಗವದ್ರೂಪಗಳನ್ನು ಧ್ಯಾನ ಮಾಡಬೇಕೆಂದು ಜ್ಞಾನಿಗಳು ಹೇಳಿದ್ದಾರೆ. ॥ ೧ ॥

**ಮಂ ॥ ಯಃ ಸೇತುರೀಜಾನಾನಾಮಕ್ಷರಂ ಬ್ರಹ್ಮ ತತ್ಪರಂ । ಅಭಯಂ ತಿತೀರ್ಷತಾಂ ಪಾರಂ ನಾಚಿಕೇತಂ ಶಕೇಮಹಿ ॥ ೨ ॥**

ಅ ॥ ಈಜಾನಾನಾಂ=ಶ್ರೀ ಪರಮಾತ್ಮನ ಉದ್ದೇಶದಿಂದ ಯಜ್ಞಾದಿ ಕರ್ಮಗಳನ್ನು ಮಾಡುವವರಿಗೆ, (ಯಃ=ಯಾವ ಪರಮಾತ್ಮನು), ಸೇತುಃ=ಅವಧಿಯೋ, (ಯತ್=ಯಾವ) ಅಕ್ಷರಂ=ನಾಶರಹಿತವಾದ, ಬ್ರಹ್ಮ=ಶ್ರೀ ಪರಮಾತ್ಮನು, ಉತ್ತಮಂ=ಶ್ರೇಷ್ಠನೋ, ತಿತೀರ್ಷ ತಾಂ=ಸಂಸಾರ ಸಮುದ್ರವನ್ನು ದಾಟಬೇಕೆಂಬ ಇಚ್ಛೆಯುಳ್ಳವರಿಗೆ, ಅಭಯಂ=ಅಭಯಪ್ರದ ವಾದ, ಪಾರಂ=ತೀರವೋ, (ತಂ=ಆ ಪರಮಾತ್ಮನನ್ನು ಧ್ಯಾತುಂ=ಧ್ಯಾನಮಾಡುವದಕ್ಕೋ ಸ್ಕರ), ನಾಚಿಕೇತಂ=ನಚಿಕೇತರನ್ನು ಕುರಿತು, (ಸಾಧನಂ=ಸಾಧನವನ್ನು, ವಕ್ತುಂ=ಹೇಳುವ ದಕ್ಕೋಸ್ಕರ), ಶಕೇಮಹಿ=ಶಕ್ತರಾಗಿದ್ದೇವೆ. ॥ ೨ ॥

ತಾ ॥ ತನ್ನನ್ನೇ ನಂಬಿಕೊಂಡು ಯಜ್ಞಾದಿ ಕರ್ಮಗಳನ್ನಾಚರಿಸುತ್ತಾ ಸಂಸಾರ ಸಮುದ್ರವನ್ನು ದಾಟಲು ಇಚ್ಛೆಯುಳ್ಳವರಿಗೆ ಪಾರವನ್ನು ಹೊಂದಿಸುವ ನಾಶರಹಿತನಾದ ಸರ್ವೋತ್ತಮನಾದ ಶ್ರೀ ಪರಮಾತ್ಮನನ್ನು ಮೊದಲು ಹೇಳಿದ ಅಧಿಷ್ಠಾನದಲ್ಲಿ ಧ್ಯಾನಮಾಡುವದಕ್ಕೋಸ್ಕರ ಯಾವ ಪ್ರತ್ಯಾಹಾರವೆಂಬ ಸಾಧನವು ಮುಖ್ಯವೋ, ಅದನ್ನು ನಚಿಕೇತರನ್ನು ಕುರಿತು ಉಪದೇಶಮಾಡುವದರಲ್ಲಿ ನಾನು ಸಮರ್ಥನು ಎಂಬದಾಗಿ ಯಮದೇವರು ಹೇಳಿದರು. ॥ ೨ ॥

**ಮಂ ॥ ಆತ್ಮಾನಂ ರಥಿನಂ ವಿದ್ಧಿ ಶರೀರಂ ರಥಮೇವ ಚ । ಬುದ್ಧಿಂ ತು ಸಾರಥಿಂ ವಿದ್ಧಿ ಮನಃ ಪ್ರಗ್ರಹಮೇವ ಚ ॥ ಇಂದ್ರಿಯಾಣಿ ಹಯಾನಾಹುರ್ವಿಷಯಾಂಸ್ತೇಷು ಗೋಚರಾನ್ । ಆತ್ಮೇಂದ್ರಿಯಮನೋಯುಕ್ತಂ ಭೋಕ್ತೇತ್ಯಾಹುರ್ಮನೀಷಿಣಃ ॥ ೪ ॥**

ಅ ॥ ಆತ್ಮಾನಂ=ಶರೀರದ ಒಳಗೆ ಇರತಕ್ಕ ಜೀವನನ್ನು, ರಥಿನಂ=ರಥಾಧಿಪತಿಯನ್ನಾಗಿ, ವಿದ್ಧಿ=ತಿಳಕೊ, ಶರೀರಂ ಚ=ದೇಹವನ್ನಾದರೋ, ರಥಮೇವ=ರಥವನ್ನಾಗಿಯೂ, ಬುದ್ಧಿಂ=ಬುದ್ಧಿಯನ್ನು, ಸಾರಥಿಂ=ಸಾರಥಿಯನ್ನಾಗಿಯೂ, ಮನಃ=ಮನಸ್ಸನ್ನು, ಪ್ರಗ್ರಹಂ=ರಜ್ಜುವೆಂಬದಾಗಿಯೂ (ಲಗಾಮು), ವಿದ್ಧಿ=ತಿಳಕೊಳ್ಳು. ॥ ೩ ॥ ಇಂದ್ರಿಯಾಣಿ= ಶ್ರೋತ್ರಾದೀಂದ್ರಿಯಗಳನ್ನು, ಹಯಾನ್=ಕುದುರೆಗಳೆಂಬದಾಗಿ, ಆಹುಃ=ಹೇಳುತ್ತಾರೆ, ತೇಷು=ಕುದುರೆಗಳೆಂಬ ಇಂದ್ರಿಯಗಳಿಗೆ, ಗೋಚರಾನ್=ವಿಷಯಭೂತಗಳಾದ ರೂಪರಸಾದಿಗಳನ್ನು, ವಿಷಯಾನ್=ಕುದುರೆಗಳಿಗೆ ಸಂಚಾರಮಾಡಲಿಕ್ಕೆ ಅನುಕೂಲ ಪ್ರದೇಶಗಳನ್ನಾಗಿಯೂ, ಆತ್ಮಾ=ಜೀವನನ್ನು ಇಂದ್ರಿಯಮನೋಯುಕ್ತಂ=ಇಂದ್ರಿಯಗಳು ಮನಸ್ಸು ಇವುಗಳಿಂದ ಕೂಡಿಕೊಂಡಿರುವವನನ್ನು, ಭೋಕ್ತೇತಿ=ಸುಖದುಃಖಗಳನ್ನು ಅನುಭವಿಸುವವನನ್ನಾಗಿ, ಮನೀಷಿಣಃ=ಜ್ಞಾನಿಗಳು, ಆಹುಃ=ಹೇಳುತ್ತಾರೆ. ॥ ೪ ॥

ತಾ || ಜೀವನಿಗೆ ಶರೀರವೇ ರಥವು, ಬುದ್ಧಿಯೇ ಸಾರಥಿಯು, ಮನಸ್ಸು ಕುದುರೇ ಲಗಾಮು, ಚಕ್ಷುರಾದೀಂದ್ರಿಯಗಳೇ ಕುದುರೆಗಳು, ಶಬ್ದಾದಿ ವಿಷಯಗಳೇ ಆ ಕುದುರೆಗಳಿಗೆ ಸಂಚಾರಕ್ಕೆ ಬೇಕಾದ ದೇಶಗಳು; ಏತಾದೃಶನಾದ ರಥಿಕನೆಂಬ ಆತ್ಮನು ಇಂದ್ರಿಯ ಮನಸ್ಸು ಗಳಿಂದ ಕೂಡಿ ಸುಖದುಃಖಾನುಭವದಿಂದ ಉಚ್ಚ ನೀಚ ಅವಸ್ಥೆಗಳಿಗೆ ಪಾತ್ರನಾಗುವನು. || ೩ || ೪ ||

**ಮಂ || ಯಸ್ತ್ವವಿಜ್ಞಾನವಾನ್ ಭವತ್ಯಯುಕ್ತೇನ ಮನಸಾ ಸದಾ | ತಸ್ಯೇಂದ್ರಿಯಾಣ್ಯವಶ್ಯಾನಿ ದುಷ್ಟಾಶ್ವಾ ಇವ ಸಾರಥೇಃ || ಯಸ್ತು ವಿಜ್ಞಾನವಾನ್ ಭವತಿ ಯುಕ್ತೇನ ಮನಸಾ ಸದಾ | ತಸ್ಯೇಂದ್ರಿಯಾಣಿ ವಶ್ಯಾನಿ ಸದಶ್ವಾ ಇವ ಸಾರಥೇಃ || ೬ ||**

ಅ || ಯಃ=ಯಾವ ಪುರುಷನು, ಸದಾ=ಸರ್ವಕಾಲದಲ್ಲಿಯೂ, ಅಯುಕ್ತೇನ ಮನಸಾ=ನಿಗ್ರಹಿಸಲ್ಪಡದೆ ಇರುವ ಮನಸ್ಸಿನಿಂದ, ಅವಿಜ್ಞಾನವಾನ್=ವಿವೇಕರಹಿತನು, ಭವತಿ=ಆಗುತ್ತಾನೋ, ತಸ್ಯ=ಆತನಿಗೆ, ಇಂದ್ರಿಯಾಣಿ=ಚಕ್ಷುರಾದಿಗಳು, ಸಾರಥೇಃ=ಸಾರಥಿಗೆ, ದುಷ್ಟಾಶ್ವಾ ಇವ=ದುಷ್ಟ ಕುದುರೆಗಳಂತೆ, ಅವಶ್ಯಾನಿ=ಅನಧೀನಗಳಾಗಿರುತ್ತವೆ, (ಹೇಳಿದಂತೆ ಇರುವುದಿಲ್ಲ). || ೫ || ಯಃ=ಯಾವಾತನು, ಸದಾ=ಯಾವಾಗಲೂ, ಯುಕ್ತೇನ ಮನಸಾ=ನಿಗೃಹೀತವಾದ ಮನಸ್ಸಿನಿಂದ, ವಿಜ್ಞಾನವಾನ್=ಸಾರಾಸಾರ ವಿವೇಕವುಳ್ಳವನು, ಭವತಿ=ಆಗುತ್ತಾನೋ, ತಸ್ಯ=ಆತನಿಗೆ, ಇಂದ್ರಿಯಾಣಿ=ಚಕ್ಷುರಾದೀಂದ್ರಿಯಗಳು, ಸಾರಥೇಃ=ಸಾರಥೀಗೆ, ಸದಶ್ವಾ ಇವ=ಒಳ್ಳೇ ಕುದುರೆಗಳಂತೆ, ವಶ್ಯಾನಿ=ಅಧೀನಗಳು, ಭವಂತಿ=ಆಗುತ್ತವೆ. || ೬ ||

**ಮಂ || ಯಸ್ತ್ವವಿಜ್ಞಾನವಾನ್ ಭವತ್ಯಮನಸ್ಕಃ ಸದಾಽಶುಚಿಃ | ನ ಸ ತತ್ಪದಮಾಪ್ನೋತಿ ಸಂಸಾರಂ ಚಾಧಿಗಚ್ಛತಿ || ಯಸ್ತು ವಿಜ್ಞಾನವಾನ್ ಭವತಿ ಸಮನಸ್ಕಃ ಸದಾ ಶುಚಿಃ | ಸ ತು ತತ್ಪದಮಾಪ್ನೋತಿ ಯಸ್ಮಾದ್ಭೂಯೋ ನ ಜಾಯತೇ || ೮ ||**

ಅ || ಯಸ್ತು=ಯಾವ ಪುರುಷನು, ಅವಿಜ್ಞಾನವಾನ್=ವಿವೇಕವೆಂಬ ಬುದ್ಧಿರೂಪ ಸಾರಥಿಹೀನನಾಗಿರುತ್ತಾನೋ, ಸಃ=ಅವನು, ಅಮನಸ್ಕಃ=ವಶೀಕರಿಸಲಿಕ್ಕೆ ಅಶಕ್ಯವಾದ ಮನಸ್ಸುಳ್ಳವನಾಗಿ, ಸದಾ=ಸರ್ವಕಾಲದಲ್ಲಿಯೂ, ಅಶುಚಿಃ=ವಿಷಯಲೋಲುಪನಾಗಿರುವದರಿಂದ ಅಶುದ್ಧನಾಗಿ, ತತ್ಪದಂ=ಪರಬ್ರಹ್ಮಸ್ವರೂಪವನ್ನು, ನಾಪ್ನೋತಿ=ಪ್ರಾಪಿಸುವದಿಲ್ಲ, ಸಂಸಾರಂ ಚ=ಸಂಸಾರವನ್ನಾದರೂ, ಅಧಿಗಚ್ಛತಿ=ಪ್ರಾಪಿಸುತ್ತಾನೆ. || ೭ || ಯಸ್ತು=ಯಾವಾತನು, ವಿಜ್ಞಾನವಾನ್=ಬುದ್ಧಿರೂಪ ಸಾರಥಿಯುಕ್ತನೋ, ಸಃ=ಅವನು, ಸಮನಸ್ಕಃ=ವಶೀಕರಿಸಲ್ಪಟ್ಟ ಮನಸ್ಸುಳ್ಳವನಾಗಿ, ಸದಾ=ಸರ್ವಕಾಲದಲ್ಲಿಯೂ, ಶುಚಿಃ=ವಿಷಯಾಸಕ್ತಿಯಿಲ್ಲದೆ ಇರುವದರಿಂದ ಪರಿಶುದ್ಧನಾಗಿ, ಯಸ್ಮಾತ್=ಯಾವಕಾರಣದಿಂದ, ಭೂಯಃ=ಎರಡನೇ, ನ ಜಾಯತೇ=ಹುಟ್ಟುವದಿಲ್ಲವೋ, ತತ್=ಆ ಕಾರಣದಿಂದ, ತತ್ಪದಂ=ವೈಕುಂಠಲೋಕವನ್ನು, ಆಪ್ನೋತಿ=ಪ್ರಾಪಿಸುತ್ತಾನೆ. || ೮ ||

**ಮಂ || ವಿಜ್ಞಾನಸಾರಥಿರ್ಯಸ್ತು ಮನಃಪ್ರಗ್ರಹವಾನ್ನರಃ | ಸೋಽಧ್ವನಃ ಪಾರಮಾಪ್ನೋತಿ ತದ್ವಿಷ್ಣೋಃ ಪರಮಂ ಪದಂ || ೯ ||**

ಅ || ಯಸ್ತು=ಯಾವ, ನರಃ=ಮನುಷ್ಯನು, ವಿಜ್ಞಾನಸಾರಥಿಃ=ಸಾರಾಸಾರ ವಿವೇಕ ರೂಪವಾದ ಬುದ್ಧಿಯೆಂಬ ಸಾರಥಿಯುಳ್ಳವನಾಗಿ, ಮನಃಪ್ರಗ್ರಹವಾನ್=ಮನಸ್ಸೆಂಬ ರಜ್ಜು ವುಳ್ಳವನೋ, ಸಃ=ಆ ಪುರುಷನು, ಅಧ್ವನಃ=ಮಾರ್ಗದ, ಪಾರಂ=ಕೊನೆಯಾದ, ತತ್= ಪ್ರಸಿದ್ಧವಾದ, ವಿಷ್ಣೋಃ=ಶ್ರೀ ಪರಮಾತ್ಮನ, ಪರಮಂ ಪದಂ=ಉತ್ತಮ ಲೋಕವನ್ನು, ಆಪ್ನೋತಿ=ಸೇರುತ್ತಾನೆ. ॥ ೯ ॥

ತಾ || ಅಧಿಕಾರಿಯು ವಿಷಯಗಳಲ್ಲಿ ಓಡತಕ್ಕ ಚಕ್ಷುರಾದಿ ಇಂದ್ರಿಯಗಳನ್ನು ಮನಸ್ಸೆಂಬ ಹಗ್ಗಗಳಿಂದ ವಶೀಕರಿಸಿಕೊಳ್ಳುವ ಸಾಮರ್ಥ್ಯವುಳ್ಳ ಬುದ್ಧಿಯೆಂಬ ಸಾರಥಿಯಿಂದ ಸಹಿತನಾಗಿ ಇದ್ದರೆ ಈ ಸಂಸಾರದುಃಖಕ್ಕೆ ಪಾರವನ್ನು ಕೊಡುವ ಶ್ರೀ ಪರಮಾತ್ಮನನ್ನು ಪ್ರಾಪಿ ಸುತ್ತಾನೆ. ॥ ೯ ॥

**ಮಂ ॥ ಇಂದ್ರಿಯೇಭ್ಯಃ ಪರಾ ಹ್ಯರ್ಥಾ ಅರ್ಥೇಭ್ಯಶ್ಚ ಪರಂ ಮನಃ । ಮನ ಸಸ್ತು ಪರಾ ಬುದ್ಧಿರ್ಬುದ್ಧೇರಾತ್ಮಾ ಮಹಾನ್ಪರಃ ॥ ೧೦ ॥**

ಅ ॥ ಇಂದ್ರಿಯೇಭ್ಯಃ=ಇಂದ್ರಿಯಾಭಿಮಾನಿಗಳಿಂದ, ಅರ್ಥಾಃ=ವಿಷಯಾಭಿಮಾನಿಗಳು, ಪರಾಃ=ಉತ್ತಮರು, ಅರ್ಥೇಭ್ಯಃ=ಅರ್ಥಾಭಿಮಾನಿಗಳಿಂದ, ಮನಃ=ಮನಸ್ಸಿಗೆ ಅಭಿಮಾನಿ ಗಳು, ಪರಂ=ಉತ್ತಮರು, ಮನಸಸ್ತು=ಮನೋಭಿಮಾನಿಗಳಿಂದ, ಬುದ್ಧಿಃ=ಬುದ್ಧಿತತ್ವಾಭಿ ಮಾನಿಗಳು, ಪರಾ=ಉತ್ತಮರು, ಬುದ್ಧೇಃ=ಬುದ್ಧಿಗೆ ಅಭಿಮಾನಿಯಾದವರಿಂದ, ಮಹಾನ್= ಮಹತ್ತತ್ವಾಭಿಮಾನಿಯರಾದ, ಆತ್ಮಾ=ಬ್ರಹ್ಮದೇವರು, ಪರಃ=ಉತ್ತಮರು. ॥ ೧೦ ॥

**ಮಂ ॥ ಮಹತಃ ಪರಮವ್ಯಕ್ತಮವ್ಯಕ್ತಾತ್ಪುರುಷಃ ಪರಃ । ಪುರುಷಾನ್ನಪರಂ ಕಿಂಚಿತ್ಸಾ ಕಾಷ್ಠಾ ಸಾ ಪರಾ ಗತಿಃ ॥ ೧೧ ॥**

ಅ || ಮಹತಃ=ಮಹತ್ತತ್ವಾಭಿಮಾನಿಯರಾದ ಬ್ರಹ್ಮದೇವರಿಂದ, ಅವ್ಯಕ್ತಂ=ಪ್ರಕೃತಿಗೆ ಅಭಿಮಾನಿಯಾದ ರಮಾದೇವಿಯು, ಪರಂ=ಉತ್ತಮಳು, ಅವ್ಯಕ್ತಾತ್=ಪ್ರಕೃತ್ಯಭಿಮಾನಿ ಯಾದ ಶ್ರೀತತ್ವದಿಂದ, ಪುರುಷಃ=ಷಡ್ಗುಣಗಳಿಂದ ಪೂರ್ಣನಾದ ಶ್ರೀ ಪರಮಾತ್ಮನು, ಪರಃ= ಉತ್ತಮನು, ಪುರುಷಾತ್=ಪುರುಷನಾಮಕ ವಿಷ್ಣುವಿನದೆಶೆಯಿಂದ, ಪರಂ=ಉತ್ತಮವಾದದ್ದು, ಕಿಂಚಿತ್=ಯಾವದೂ, ನಾಸ್ತಿ=ಇಲ್ಲವು, ಸಾ=ಆ ಪುರುಷಶಬ್ದವಾಚ್ಯನಾದ ಶ್ರೀ ಪರಮಾತ್ಮನು, ಕಾಷ್ಠಾ=ಅವಧಿಯು (ದೇವತಾ ತಾರತಮ್ಯಕ್ಕೆ ವಿಶ್ರಾಂತಿ ಭೂಮಿಯು), ಪರಾ ಗತಿಃ=ಪರಮ ಪ್ರಾಪ್ಯನು. ॥ ೧೧ ॥

**ಮಂ || ಏಷ ಸರ್ವೇಷು ಭೂತೇಷು ಗೂಢೋಽತ್ಮಾ ನ ಪ್ರಕಾಶತೇ । ದೃಶ್ಯತೇ ತ್ವಗ್ರ್ಯಯಾ ಬುಧ್ಯಾ ಸೂಕ್ಷ್ಮಯಾ ಸೂಕ್ಷ್ಮದರ್ಶಿಭಿಃ ॥ ೧೨ ॥**

ಅ || ಏಷಃ=ಈ ಶ್ರೀ ಪರಮಾತ್ಮನು, ಸರ್ವೇಷು=ಸಮಸ್ತಗಳಾದ, ಭೂತೇಷು= ಪ್ರಾಣಿಗಳಲ್ಲಿ, ಗೂಢೋಽತ್ಮಾ=ಅಂತರ್ಹಿತ ಸ್ವರೂಪವುಳ್ಳವನಾಗಿ, ನ ಪ್ರಕಾಶತೆ=ತೋರುವ ದಿಲ್ಲ, ಅಗ್ರ್ಯಯಾ=ಶ್ರವಣಾದಿಜನಿತವಾದ, ಸೂಕ್ಷ್ಮಯಾ=ಸೂಕ್ಷ್ಮರೂಪವಾದ, ಬುಧ್ಯಾ= ಬುದ್ಧಿಯಿಂದ, ಸೂಕ್ಷ್ಮದರ್ಶಿಭಿಃ=ಸೂಕ್ಷ್ಮದ್ರಷ್ಟೃಗಳಿಂದ, ದೃಶ್ಯತೇ=ಕಾಣಿಸಿಕೊಳ್ಳಲ್ಪಡು ತ್ತಾನೆ. ॥ ೧೨ ॥

ತಾ ॥ ಶ್ರೀ ಪರಮಾತ್ಮನು ಸಮಸ್ತಪ್ರಾಣಿಗಳ ಹೃದಯದಲ್ಲಿ ಅಂತರ್ನಿಯಾಮಕನಾಗಿ ಗೂಢನಾಗಿ ಇರುತ್ತಾನೆ. ಆದುದರಿಂದ ಎಲ್ಲರಿಂದಲೂ ಕಾಣಿಸಿಕೊಳ್ಳಲ್ಪಡುವದಿಲ್ಲ. ಮತ್ತೂ ಆತನನ್ನು ಪ್ರತಿಪಾದನ ಮಾಡತಕ್ಕ ವೇದ ವೇದಾಂತಾದಿ ಶಾಸ್ತ್ರಗಳನ್ನು ಶ್ರವಣಮಾಡಿ, ಅವುಗಳನ್ನು ಮನನ ಮಾಡಿ ಸಂಶಯಾದಿಗಳನ್ನು ಪರಿಹರಿಸಿಕೊಂಡು, ಆತನಲ್ಲಿರತಕ್ಕ ಗುಣಗಳಲ್ಲಿ ತನ್ನ ಯೋಗ್ಯತಾನುಸಾರವಾಗಿ ಗುಣವಿಶಿಷ್ಟ ಭಗವದ್ರೂಪವನ್ನು ಧ್ಯಾನಮಾಡಿಕೊಂಡಿರುವ ಸೂಕ್ಷ್ಮದ್ರಷ್ಟೃಗಳಿಗೆ ಆತನ ಪ್ರಸಾದ ಸಹಕಾರಿಯಾದ ಅಪರೋಕ್ಷ ಜ್ಞಾನ ಉಂಟಾಗುತ್ತದೆ, ಅಂದರೆ ಆತನು ಕಾಣಿಸಿಕೊಳ್ಳಲ್ಪಡುತ್ತಾನೆ. ॥ ೪೨ ॥

**ಮಂ ॥ ಯಚ್ಛೇದ್ವಾಙ್ಮನಸೀ ಪ್ರಾಜ್ಞಸ್ತದ್ಯಚ್ಛೇಜ್ಜ್ಞಾನ ಆತ್ಮನಿ । ಜ್ಞಾನಮಾತ್ಮನಿ ಮಹತಿ ತದ್ಯಚ್ಛೇಚ್ಛಾಂತ ಆತ್ಮನಿ ॥ ೧೩ ॥**

ಅ ॥ ಪ್ರಾಜ್ಞಃ=ಜ್ಞಾನಿಯಾದವನು (ಇಂದ್ರಿಯಾಭಿಮಾನಿಗಳಾದ ಸೋಮಾದಿದೇವತೆಗಳನ್ನು, ವಾಗಭಿಮಾನಿಗಳಾದ ಪಾರ್ವತ್ಯಾದಿಗಳಲ್ಲಿ ಅಧೀನರಾಗಿದ್ದಾರೆಂಬದಾಗಿ ಧ್ಯಾನಮಾಡಬೇಕು), ವಾಕ್=(ವಾಚಂ) ವಾಗಭಿಮಾನಿದೇವತೆಯರಾದ ಪಾರ್ವತ್ಯಾದಿಗಳನ್ನು, ಮನಸಿ=ಮನೋಭಿಮಾನಿಗಳಾದ ಶಿವಶೇಷಸುಪರ್ಣನಾಮಕ ದೇವತೆಗಳಲ್ಲಿ, ಯಚ್ಛೇತ್=ಇವರ ಅಧೀನರನ್ನಾಗಿ ಚಿಂತನೆ ಮಾಡಬೇಕು, ತತ್=ಆ ಮನೋಭಿಮಾನಿಗಳಾದ ರುದ್ರಾದಿಗಳನ್ನು, ಜ್ಞಾನೆ ಆತ್ಮನಿ=ಜ್ಞಾನಾಭಿಮಾನಿಗಳಾದ ಸರಸ್ವತೀ ಭಾರತಿಯರಲ್ಲಿ, ಯಚ್ಛೇತ್=ಅಧೀನರನ್ನಾಗಿ ಚಿಂತನೆಮಾಡಬೇಕು, ಜ್ಞಾನಂ=ಜ್ಞಾನಾಭಿಮಾನಿಯರಾದ ಸರಸ್ವತೀ ಭಾರತಿಯರನ್ನು, ಮಹತಿ=ಮಹತ್ತತ್ವಾಭಿಮಾನಿಗಳಾದ, ಆತ್ಮನಿ=ಆತ್ಮಶಬ್ದವಾಚ್ಯರಾದ, ವಿರಿಂಚವಾಯುಗಳಲ್ಲಿ, ಯಚ್ಛೇತ್=ಅಧೀನರನ್ನಾಗಿ ಧ್ಯಾನಮಾಡಬೇಕು, ತತ್=ಮಹತ್ತತ್ವಾಭಿಮಾನಿಗಳಾದ ಬ್ರಹವಾಯುಗಳನ್ನು, ಶಾಂತೇ=ಸುಖರೂಪನಾದ, ಆತ್ಮನಿ=ಶ್ರೀ ಪರಮಾತ್ಮನಲ್ಲಿ, ಯಚ್ಛೇತ್=ಅಧೀನರನ್ನಾಗಿ ಧ್ಯಾನಮಾಡಬೇಕು. ॥ ೧೩ ॥

ಈ ಪ್ರಕಾರ ಯಮ ನಚಿಕೇತರ ಸಂವಾದವನ್ನು ಅನುವಾದ ಮಾಡಿ ವೇದಪುರುಷನು ಸಜ್ಜನರಿಗೆ ಹಿತೋಪದೇಶಮಾಡುತ್ತಾನೆ.—

**ಮಂ ॥ ಉತ್ತಿಷ್ಠತ ಜಾಗ್ರತ ಪ್ರಾಪ್ಯ ವರಾನ್ನಿಬೋಧತ । ಕ್ಷುರಸ್ಯ ಧಾರಾ ನಿಶಿತಾ ದುರತ್ಯಯಾ ದುರ್ಗಂ ಪಥಸ್ತತ್ಕವಯೋ ವದಂತಿ ॥ ೧೪ ॥**

ಅ ॥ (ಹೇ ಸಾಧವಃ=ಎಲೋ ಸಾಧುಗಳಿರಾ), ಉತ್ತಿಷ್ಠತ=ಅನೇಕ ವಿಧಗಳಾದ ವಿಷಯ ಚಿಂತನೆಗಳಿಂದ ನಿವೃತ್ತರಾಗಿರಿ, ಜಾಗ್ರತ=ಆಲಸ್ಯ ಮಾಡಬೇಡಿರಿ, ವರಾನ್=ಶ್ರೇಷ್ಠರಾದ ಆಚಾರ್ಯರನ್ನು, ಪ್ರಾಪ್ಯ=ಪ್ರಾಪಿಸಿ, ( ಶ್ರೀ ಪರಮಾತ್ಮನನ್ನು) ನಿಬೋಧತ=ಚೆನ್ನಾಗಿ ತಿಳಿಯಿರಿ, (ಸಂಸೃತಿಃ=ಸಂಸಾರವು), ಕ್ಷುರಸ್ಯ=ಕ್ಷೌರಕತ್ತಿಯ, ಧಾರಾ=ಅಂಚಿನಂತೆ, ನಿಶಿತಾ=ಅತಿತೀಕ್ಷ್ಣವಾದದ್ದು, ದುರತ್ಯಯಾ=ದಾಟಲಿಕ್ಕೆ ಅಶಕ್ಯವಾದದ್ದು, ತತ್=ಆದುದರಿಂದ, ಪಥಃ=ಮೋಕ್ಷಮಾರ್ಗವನ್ನು, ದುರ್ಗಂ=ಶ್ರಮಸಾಧ್ಯವೆಂದು, ಅಂದರೆ ಆಚಾರ್ಯರಿಂದ ಉಪದೇಶವಿಲ್ಲದೇ ತಿಳಿಯಲಸಾಧ್ಯವೆಂದು, ಇತಿ=ಈ ಪ್ರಕಾರ, ಕವಯಃ=ಜ್ಞಾನಿಗಳು, ವದಂತಿ=ಹೇಳುತ್ತಾರೆ. ॥ ೧೪ ॥

**ಮಂ ॥ ಅಶಬ್ದಮಸ್ಪರ್ಶಮರೂಪಮವ್ಯಯಂ ತಥಾಽರಸಂ ನಿತ್ಯಮಗಂಧವಚ್ಚ ಯತ್ । ಅನಾದ್ಯನಂತಂ ಮಹತಃ ಪರಂ ಧ್ರುವಂ ನಿಚಾಯ್ಯ ತಂ ಮೃತ್ಯುಮುಖಾತ್ಪ್ರಮುಚ್ಯತೇ ॥ ೧೫ ॥**

ಅ || ತತ್=ಆ ಪರಬ್ರಹ್ಮನು, ಅಶಬ್ದಂ=ಶಬ್ದವೆಂಬ ಗುಣರಹಿತನು, ಶಬ್ದದಿಂದ ಅವೇದ್ಯನು, ಅಸ್ಪರ್ಶಂ=ಸ್ಪರ್ಶವೆಂಬ ಗುಣಹೀನನು, ನಮ್ಮ ತ್ವಗಿಂದ್ರಿಯಕ್ಕೂ ಅವಿಷಯನು, ಅರೂಪಂ=ಚಕ್ಷುರಗೋಚರನು, ಅವ್ಯಯಂ=ನಾಶರಹಿತನು, ತಥಾ=ಹಾಗೆ, ಅರಸಂ=ರಸವರ್ಜಿತನು, ರಸನೇಂದ್ರಿಯಕ್ಕೂ ಅವಿಷಯನು, ನಿತ್ಯಂ ಅಗಂಧವತ್=ಗಂಧವೆಂಬ ಗುಣವುಳ್ಳವನಲ್ಲ, ಘ್ರಾಣೇಂದ್ರಿಯಕ್ಕೂ ಅವಿಷಯನು, ಅನಾದ್ಯನಂತಂ=ಆದ್ಯಂತ ಶೂನ್ಯನಾದ, ಮಹತಃ=ಮಹತ್ತತ್ವಾಭಿಮಾನಿಯಾದ ಚತುರ್ಮುಖನ ದೆಶೆಯಿಂದ, ಪರಂ=ಉತ್ತಮನಾದ, ಧ್ರುವಂ=ಶಶ್ವದೇಕಪ್ರಕಾರನಾದ, ತಂ=ಪೂರ್ವೋಕ್ತನಾದ ಶ್ರೀ ಪರಮಾತ್ಮನನ್ನು, ನಿಚಾಯ್ಯ=ಶ್ರವಣಾದಿಗಳ ವಿಚಾರದಿಂದ ನಿಶ್ಚಯಮಾಡಿ, ಮೃತ್ಯುಮುಖಾತ್=ಸಂಸಾರ ಬಂಧದಿಂದ, ಪ್ರಮುಚ್ಯತೇ=ಮುಕ್ತನಾಗುತ್ತಾನೆ. || ೧೫ ||

ತಾ || ಶ್ರೀ ಪರಮಾತ್ಮನು ನಮ್ಮ ಶ್ರೋತ್ರಾದಿ ಇಂದ್ರಿಯಗಳಿಗೆ ಗೋಚರನಾಗದೆ ಇದ್ದರೂ, ಸದ್ಗುರುಗಳ ಸಹಾಯದಿಂದ ಲಬ್ಧವಾದ ಶಾಸ್ತ್ರ ಶ್ರವಣ ಮನನ ಧ್ಯಾನಗಳ ಆವೃತ್ತಿಯಿಂದ ಪ್ರಸನ್ನನಾಗಿ ತನ್ನ ಅಪರೋಕ್ಷವನ್ನು ಕೊಟ್ಟು ಈ ಸಂಸಾರ ಬಂಧದಿಂದ ಮುಕ್ತಿಯನ್ನು ಕೊಡುತ್ತಾನೆ.

ಈ ಪ್ರಕಾರ ವೇದ ಪುರುಷನು ಯಮನಚಿಕೇತರ ಸಂವಾದವನ್ನು ಅನುವಾದ ಮಾಡಿ ಸಾಧು ಶಿಕ್ಷೆಯನ್ನು ಮಾಡಿ ಈ ವಿದ್ಯೆಯ ಪಾಠಪ್ರವಚನೆಗಳ ಫಲವನ್ನು ಹೇಳಿ ಉಪಸಂಹಾರ ಮಾಡುತ್ತಾನೆ.—

**ಮಂ || ನಾಚಿಕೇತಮುಪಾಖ್ಯಾನಂ ಮೃತ್ಯುಪ್ರೋಕ್ತಂ ಸನಾತನಂ | ಉಕ್ತ್ವಾ ಶ್ರುತ್ವಾ ಚ ಮೇಧಾವೀ ಬ್ರಹ್ಮಲೋಕೇ ಮಹೀಯತೇ || ಯ ಇದಂ ಪರಮಂ ಗುಹ್ಯಂ ಶ್ರಾವಯೇದ್ಬ್ರಹ್ಮಸಂಸದಿ | ಪ್ರಯತಃ ಶ್ರಾದ್ಧಕಾಲೇ ವಾ ತದಾನಂತ್ಯಾಯ ಕಲ್ಪತೇ | ತದಾನಂತ್ಯಾಯ ಕಲ್ಪತ ಇತಿ || ೧೭ ||**

ಅ || ನಾಚಿಕೇತಂ=ನಚಿಕೇತಸಂಬಂಧಿಯಾದ, ಉಪಾಖ್ಯಾನಂ=ಆತನಚರಿತ ಪ್ರತಿಪಾದಕವಾದ ಗ್ರಂಥಸಂದರ್ಭವನ್ನು, ಸನಾತನಂ=ನಿತ್ಯವಾದ, ಮೃತ್ಯುಪ್ರೋಕ್ತಂ=ಯಮದೇವರಿಂದ ಹೇಳಲ್ಪಟ್ಟದ್ದನ್ನು, ಉಕ್ತ್ವಾ=ಇನ್ನೊಬ್ಬರಿಗೆ ಹೇಳಿ, ಶ್ರುತ್ವಾಚ=ಕೇಳಿಯಾದರೂ, ಮೇಧಾವೀ=ಜ್ಞಾನಿಯಾದವನು, ಬ್ರಹ್ಮಲೋಕೇ=ವಿಷ್ಣುಲೋಕದಲ್ಲಿ, ಮಹೀಯತೆ=ಪೂಜ್ಯನಾಗಿ ಇರುತ್ತಾನೆ. ಯಃ=ಯಾವಪುರುಷನು, ಪರಮಂ=ಉತ್ತಮವಾದ, ಗುಹ್ಯಂ=ಗೋಪ್ಯವಾದ, ಇದಂ=ಈ ಗ್ರಂಥವನ್ನು, ಬ್ರಹ್ಮಸಂಸದಿ=ಬ್ರಾಹ್ಮಣರ ಸಭೆಯಲ್ಲಿ, ಶ್ರಾವಯೇತ್=ಶ್ರವಣ ಮಾಡಿಸುತ್ತಾನೋ, ಪ್ರಯತಃ=ಪ್ರಯತ್ನವಿಶಿಷ್ಟನಾಗಿ, ಶ್ರಾದ್ಧಕಾಲೇ ವಾ=ಶ್ರಾದ್ಧ ಸಮಯದಲ್ಲಿಯಾದರೂ, ಶ್ರಾವಯೇತ್=ಶ್ರವಣಮಾಡಿಸುತ್ತಾನೋ, ತತ್=ಆ ಶ್ರವಣವು, ಆನಂತ್ಯಾಯ=ನಾಶರಹಿತವಾದ ಫಲಪ್ರಾಪ್ತಿಗೋಸ್ಕರ, ಕಲ್ಪತೇ=ಸಮರ್ಥವಾಗುತ್ತದೆ. ಅಧ್ಯಾಯಾಂತ್ಯದಲ್ಲಿ ಎರಡಾವರ್ತಿ ಹೇಳೋಣವು ಅಧ್ಯಾಯದಲ್ಲಿ ಹೇಳಿದ ಸಮಸ್ತ ಪ್ರಮೇಯವು ನಿಶ್ಚಯರೂಪವಾದದ್ದು ಎಂಬ ಅರ್ಥವನ್ನು ಸೂಚಿಸುತ್ತದೆ. || ೧೬ ||

**|| ಇತಿ ಪ್ರಥಮೋಧ್ಯಾಯಃ ||**



## ತೃತೀಯವಲ್ಲೀ ಭಾಷ್ಯಂ.

"ಅಧ್ಯಾತ್ಮಯೋಗಾಧಿಗಮೇನ "ಎಂಬಲ್ಲಿ ಶ್ರೀಪರಮಾತ್ಮನ ಧ್ಯಾನವು ಹೇಳಲ್ಪಟ್ಟಿತು.

ಆ ಪರಮಾತ್ಮನನ್ನು ಎಲ್ಲಿ ಧ್ಯಾನ ಮಾಡಬೇಕೆಂದರೆ, ಅಧಿಷ್ಠಾನವನ್ನು ನಿರೂಪಣಮಾಡುವವರಾಗಿ ಭಗವನ್ಮಾಹಾತ್ಮ್ಯವನ್ನು ಹೇಳುತ್ತಾರೆ. "ಋತಮಿತ್ಯಾದಿನಾ" ಈ ಮಂತ್ರಗಳನ್ನು ಪ್ರಮಾಣೋದಾಹರಣ ಪೂರ್ವಕವಾಗಿ ವ್ಯಾಖ್ಯಾನ ಮಾಡುತ್ತಾರೆ —

ಭಾ || "ಆತ್ಮಾಂತರಾತ್ಮೇತಿ ವಿಭುರೇಕ ಏವ ದ್ವಿಧಾ ಸ್ಥಿತಃ ||
ಸ ವಿಷ್ಣುಃ ಪರಮೇ ವಾಯೌ ಪರೇಭ್ಯೋಽಪ್ಯೃದ್ಧರೂಪಕೇ || ೧ ||
ಶುಭಾನ್ ಪಿಬತಿ ಭೋಗಾನ್ ಸ ಛಾಯೇವ ವಿದುಷಾಂ ಪ್ರಭುಃ |
ಆತಪಃ ಪಾಪಿನಾಂ ನಿತ್ಯಂ ಮರ್ಯಾದಾವಿಷ್ಣುಯಾಜಿನಾಂ || ೨ ||
ಸಂಸಾರಸ್ಯ ಚ ಸಾರಸ್ಥಃ ಸ ವಿಷ್ಣುರ್ದ್ವಿಸ್ವರೂಪಕಃ ||

ಅ || ವಿಭುಃ=ಶ್ರೀ ಪರಮಾತ್ಮನು, ಏಕ ಏವ=ಒಬ್ಬನೇ, ಆತ್ಮಾಂತರಾತ್ಮೇತಿ=ಆತ್ಮನೆಂತಲೂ ಅಂತರಾತ್ಮನೆಂತಲೂ, ದ್ವಿಧಾ=ಎರಡು ರೂಪದಿಂದ, (ಹೃದಯೇ=ಜೀವರ ಹೃದಯದಲ್ಲಿ), ಸ್ಥಿತಃ=ವಿದ್ಯಮಾನನಾಗಿದ್ದಾನೆ, ಸಃ=ಆ, ವಿಷ್ಣುಃ=ಶ್ರೀ ಪರಮಾತ್ಮನು, ಪರಮೇ=ಸರ್ವಜೀವೋತ್ತಮರಾದ,ಪರೇಭ್ಯೋಽಪಿ=ರುದ್ರಾದಿಗಳಿಂದಲೂ, ಋದ್ಧರೂಪಕೇ=ಪರಿಪೂರ್ಣಸ್ವರೂಪನಾದ, ವಾಯೌ=ವಾಯುದೇವರಲ್ಲಿ, ಸ್ಥಿತಃ=ವಿದ್ಯಮಾನನಾಗಿದ್ದಾನೆ, ಸಃ=ಆ, ಪ್ರಭುಃ=ಸಮರ್ಥನಾದ ಶ್ರೀ ಪರಮಾತ್ಮನು, ಶುಭಾನ್=ಶೋಭನಗಳಾದ, ಭೋಗಾನ್=ವಿಷಯಗಳನ್ನು, ಪಿಬತಿ=ಅನುಭವಿಸುತ್ತಾನೆ, ಸಃ=ಅವನು, ವಿದುಷಾಂ=ಜ್ಞಾನಿಗಳಿಗೆ, ಛಾಯೇವ=ನೆರಳಿನಂತೆ ಸುಖಪ್ರದನು, ಪಾಪಿನಾಂ=ಪಾಪಿಷ್ಠರಿಗೆ, ನಿತ್ಯಂ=ನಿರಂತರದಲ್ಲಿ, ಆತಪಃ=ಸೂರ್ಯಕಿರಣದಂತೆ ದುಃಖಪ್ರದನು, ವಿಷ್ಣುಯಾಜಿನಾಂ=ತನ್ನನ್ನು ಉದ್ದೇಶೀಕರಿಸಿಕೊಂಡು ಯಜ್ಞಾದಿಕರ್ಮಗಳನ್ನು ಮಾಡುವವರಿಗೆ, ಮರ್ಯಾದಾ=ಆಶ್ರಯಭೂತನು, ದ್ವಿಸ್ವರೂಪಕಃ=ಎರಡು ರೂಪಉಳ್ಳ, ಸಃ=ಶ್ರೀ ಪರಮಾತ್ಮನು, ಸಂಸಾರಸ್ಯ ಚ=ಸಂಸಾರಕ್ಕೂ ಕೂಡ, ಪಾರಸ್ಥಃ=ಪಾರಭೂತವಾದ ಮೋಕ್ಷದಲ್ಲಿ ಇರತಕ್ಕವನು ಆಗಿದ್ದಾನೆ. || ೨ ||

ಭಾ || "ದೇವೇಭ್ಯಃ ಇಂದ್ರಿಯಾತ್ಮಭ್ಯೋ ಜ್ಯಾಯಾಂಸೋಽರ್ಥಾಭಿಮಾನಿನಃ ||
ಸೋಮವಿತ್ತಪ ಸೂರ್ಯಾಪ್ಪಾ ಅಶ್ವ್ಯಗ್ನಿರ್ದ್ರೇಂದ್ರ ಸೂನವಃ |
ಯಮೋದಕ್ಷಶ್ಚೇಂದ್ರಿಯೇಶಾಃ ಸುಪರ್ಣೀ ವಾರುಣೀ ತಥಾ || ೪ ||
ಉಮೇತಿ ಚಾರ್ಥಮಾನಿನ್ಯಸ್ತ್ರಿಸ್ರೋದ್ವಿದ್ವ್ಯೇಕ ದೇವತಾಃ |
ಮನೋಭಿಮಾನಿನೋ ರುದ್ರವೀಂದ್ರಶೇಷಾಸ್ತ್ರಯೋಽಪಿ ತು || ೫ ||
ತೇ ಶ್ರೇಷ್ಠಾ ಅರ್ಥಮಾನಿಭ್ಯಸ್ತೇಭ್ಯೋ ಬುದ್ಧಿಃ ಸರಸ್ವತೀ |
ತಸ್ಯಾ ಬ್ರಹ್ಮಾ ಮಹಾನಾತ್ಮಾ ತತೋಽವ್ಯಕ್ತಾಭಿಧಾ ರಮಾ || ೬ ||
ತಸ್ಯಾಸ್ತು ಪುರುಷೋವಿಷ್ಣುಃ ಪೂರ್ಣತ್ವಾನ್ನೈವ ತತ್ಸಮಃ
ಕಶ್ಚಿತ್ ಕುತಶ್ಚಿಚ್ಛ್ರೇಷ್ಠಸ್ತು ನಾಸ್ತೀತಿ ಕಿಮು ಸಾ ಕಥಾ || ೭ ||
ತಸ್ಮಾದ್ವಾಗಾತ್ಮಿಕಾ ದೇವೀ ರುಮಾದ್ಯಾಸ್ತು ಶಿವಾದಿಷು |
ಶಿವಾದೀನ್ ಬ್ರಹ್ಮವಾಯ್ವೋಸ್ತು ನಿಯಚ್ಛೇನ್ಮಹದಾತ್ಮನೋಃ || ೮ ||

ತ್ರೌ ರಮಾಯಾಂ ಪರಾನಂದೇ ತಾಂ ವಿಷ್ಣೌ ಪರಮಾತ್ಮನಿ ।
ತದ್ವಶತ್ವೇನ ತದ್ಧ್ಯಾನಂ ನಿಯಮೋ ನಾಮ ನಾಪರಃ ॥ ೯ ॥
ಕುತಸ್ತು ಮಾನುಷೋದೇವಾನ್ನಿಯಚ್ಛೇದ್ವಿನಿಯಾಮಕಾನಿತಿ" ಚ ॥

ಅ ॥ ಇಂದ್ರಿಯಾತ್ಮಭ್ಯಃ=ಇಂದ್ರಿಯಾಭಿಮಾನಿಗಳಾದ, ದೇವೇಭ್ಯಃ=ದೇವತೆಗಳಿಂದ, ಅರ್ಥಾಭಿಮಾನಿನಃ=ಅರ್ಥಾಭಿಮಾನಿಗಳಾದ ದೇವತೆಗಳು, ಜ್ಯಾಯಾಂಸಃ=ಉತ್ತಮರು, ಈ ಎರಡರ ಅಭಿಮಾನಿ ದೇವತೆಗಳ ನಾಮವನ್ನು ಹೇಳುತ್ತಾರೆ.

ಸೋಮ, ವಿತ್ತಪ ಸೂರ್ಯಾಪ್ಪಾ ಅಶ್ವ್ಯಗ್ನೀಂದ್ರೇಂದ್ರಸೂನವಃ ।
ಯಮೋದಕ್ಷಶ್ಚೇಂದ್ರಿಯೇಶಾಃ ॥

ಶ್ರೋತ್ರೇಂದ್ರಿಯಕ್ಕೆ ಸೋಮನು, ತ್ವಗಿಂದ್ರಿಯಕ್ಕೆ (ವಿತ್ತಪ) ಕುಬೇರನು, ಚಕ್ಷುಸ್ಸಿಗೆ ಸೂರ್ಯನು, ರಸನಕ್ಕೆ ಅಪ್ಪ (ವರುಣನು), ಘ್ರಾಣಕ್ಕೆ ಅಶ್ವಿನೀದೇವತೆಗಳು, ವಾಗಿಂದ್ರಿಯಕ್ಕೆ ಅಗ್ನಿಯು, ಪಾಣಿಗೆ (ಹಸ್ತಕ್ಕೆ) ಇಂದ್ರನು, ಪಾದಕ್ಕೆ ಇಂದ್ರಪುತ್ರನಾದ ಜಯಂತನು, ಪಾಯು ನಾಮಕ ಇಂದ್ರಿಯಕ್ಕೆ ಯಮನು, ಗುಹ್ಯೇಂದ್ರಿಯಕ್ಕೆ ದಕ್ಷಪ್ರಜಾಪತಿಯು, ಈ ಪ್ರಕಾರ ಹತ್ತು ಇಂದ್ರಿಯಗಳಿಗೆ ಹತ್ತುಮಂದಿ ದೇವತೆಗಳು ಅಭಿಮಾನಿಗಳಾಗಿದ್ಧಾರೆ.

ಸುಪರ್ಣೀ ವಾರುಣೀ ತಥಾ । ಉಮೇತಿ ಚಾರ್ಥ ಮಾನಿನ್ಯಃ ॥

ಗರುಡ ಭಾರ್ಯಳಾದ ಸೌಪರ್ಣೀದೇವಿಯು, ಶೇಷಭಾರ್ಯಳಾದ ವಾರುಣೀದೇವಿಯು, ರುದ್ರಭಾರ್ಯಳಾದ ಪಾರ್ವತೀ ದೇವಿಯು, ತಿಸ್ರೋದ್ವಿದ್ವ್ಯೇಕ ದೇವತಾಃ=ಹೀಗೆ ಮೂರು ಮಂದಿ ಸ್ತ್ರೀಯರು, ಶಬ್ದ, ಸ್ಪರ್ಶ, ರೂಪ, ರಸ, ಗಂಧ,-ಹೀಗೆ ಐದು ಅರ್ಥ (ವಿಷಯ) ಗಳಿಗೆ ಅಭಿಮಾನಿಗಳು, ಅದರಲ್ಲಿಯೂ ಶಬ್ದ, ಸ್ಪರ್ಶ,-ಇವೆರಡಕ್ಕೆ ಸೌಪರ್ಣಿಯು, ರೂಪ, ರಸ,-ಇವೆರಡಕ್ಕೆ ವಾರುಣಿಯು, ಗಂಧಕ್ಕೆ ಉಮಾದೇವಿಯು, ಅಭಿಮಾನಿ ದೇವತೆಗಳು.

ಅ ॥ ರುದ್ರವೀಂದ್ರ ಶೇಷಾಃತ್ರಯೋಽಪಿತು=ಶೇಷ, ರುದ್ರ ಗರುಡರು,- ಈ ಮೂರು ಮಂದಿ ದೇವತೆಗಳು, ಮನೋಭಿಮಾನಿನಃ=ಮನಸ್ಸಿಗೆ ಅಭಿಮಾನಿ ದೇವತೆಗಳು, ತೇ=ಅವರು, ಅರ್ಥಮಾನಿಭ್ಯಃ=ಅರ್ಥಾಭಿಮಾನಿಗಳಾದ ಪಾರ್ವತ್ಯಾದಿಗಳಿಂದ, ಶ್ರೇಷ್ಠಾಃ=ಉತ್ತಮರು, ತೇಭ್ಯಃ=ಮನೋಭಿಮಾನಿಗಳಾದ ರುದ್ರಾದಿಗಳಿಂದ, ಬುದ್ಧಿಃ=ಬುದ್ಧಿ ತತ್ವಾಭಿಮಾನಿಯಳಾದ ಸರಸ್ವತೀದೇವಿಯು ಉತ್ತಮಳು, ತಸ್ಯಾಃ=ಆ ಸರಸ್ವತೀದೇವಿಯರಿಂದ, ಮಹಾನ್=ಮಹತ್ತತ್ವಾಭಿಮಾನಿಯರಾದ, ಆತ್ಮಾ=ಆತ್ಮಶಬ್ದ ವಾಚ್ಯರಾದ ಬ್ರಹ್ಮದೇವರು ಉತ್ತಮರು, ತತಃ=ಆ ಬ್ರಹ್ಮದೇವರಿಂದ, ಅವ್ಯಕ್ತಾಭಿಧಾ=ಪ್ರಕೃತ್ಯಭಿಮಾನಿಯಾದ ಅವ್ಯಕ್ತಶಬ್ದವಾಚ್ಯಳಾದ, ರಮಾ=ಲಕ್ಷ್ಮೀದೇವಿಯು, (ಶ್ರೇಷ್ಠಾ=ಉತ್ತಮಳು,) ತಸ್ಯಾಃ=ಆ ಲಕ್ಷ್ಮೀದೇವಿಯಿಂದ, ಪೂರ್ಣತ್ವಾತ್=ಪೂರ್ಣಷಡ್ಗುಣನಾದುದರಿಂದ, ಪುರುಷಃ=ಪುರುಷ ಶಬ್ದವಾಚ್ಯನಾದ ಶ್ರೀ ಪರಮಾತ್ಮನು, ಶ್ರೇಷ್ಠಃ=ಉತ್ತಮನು, ತತ್ಸಮಃ=ಆ ಶ್ರೀ ಪರಮಾತ್ಮನಿಗೆ ಸಮಾನಿಕನಾಗಿರುವವನು, ಕಶ್ಚಿತ್=ಯಾರೊಬ್ಬನು, ಕುತಶ್ಚಿತ್=ಯಾವಕಾರಣದಿಂದಲೂ, ಕುತ್ರಾಪಿ=ಯಾವದೇಶದಲ್ಲಿಯೂ, ಕಾಲದಲ್ಲಿಯೂ, ನೈವ=ಇಲ್ಲವೇ ಇಲ್ಲ, ಶ್ರೇಷ್ಠಸ್ತು=ಉತ್ತಮನಾದರೂ, ನಾಸ್ತೀತಿ=ಇಲ್ಲವೆಂಬದು, ಸಾ ಕಥಾ=ಆ ಕಥೆಯು, ಕಿಮು=ಏನು ಹೇಳತಕ್ಕದ್ದಿದೆ.

ತಾ ॥ ಈ ವರೆಗೆ ಹೇಳಿದ ಯುಕ್ತಿಗಳಿಂದ ವಿರುದ್ಧವಾದುದರಿಂದ ಶ್ರೀ ಪರಮಾತ್ಮನಿಗೆ ಸಮಾನಿಕನಾಗಲೀ ಉತ್ತಮನಾಗಲೀ ಇದ್ಧಾನೆಂಬ ಕಥೆಯು ಹೇಗೆ ಸಂಗತವಾದೀತು? ಸರ್ವಥಾ ಅನುಪಪನ್ನವೇ ಸರಿಯೆಂದು ತಾತ್ಪರ್ಯವು.

ಅ ॥ ತಸ್ಮಾತ್=ಆ ಕಾರಣದಿಂದ, ವಾಗಾತ್ಮಿಕಾಃ=ವಾಗಿಂದ್ರಿಯಾಭಿಮಾನಿಗಳಾದ, ಉಮಾದ್ಯಾಃ=ಪಾರ್ವತಿಯೇ ಮೊದಲಾದ, ದೇವಿಃ=ಮೂರುಮಂದಿ ದೇವಸ್ತ್ರೀಯರನ್ನು, ಶಿವಾದಿಷು=ರುದ್ರದೇವರೇ ಮೊದಲಾದ ಮೂರುಮಂದಿ ದೇವತೆಗಳಲ್ಲಿ, ನಿಯಚ್ಛೇತ್=ಅಧೀನರನ್ನಾಗಿ ಚಿಂತನೆಮಾಡಬೇಕು, ಶಿವಾದೀನ್=ರುದ್ರ, ಶೇಷ, ಗರುಡರನ್ನು, ಮಹದಾತ್ಮನೋಃ=ಮಹತ್ತತ್ವಾಭಿಮಾನಿಗಳಾದ, ಬ್ರಹ್ಮವಾಯ್ವೋಸ್ತು=ಬ್ರಹ್ಮ ವಾಯುದೇವರಲ್ಲಿಯೂ, ತೌ=ಆ ಬ್ರಹ್ಮವಾಯುಗಳನ್ನು, ರಮಾಯಾಂ=ಲಕ್ಷ್ಮೀದೇವಿಯಲ್ಲಿಯೂ, ತಾಂ=ಆ ಲಕ್ಷ್ಮೀದೇವಿಯನ್ನು, ಪರಾನಂದೇ=ಶ್ರೇಷ್ಠ ಸುಖರೂಪನಾದ, ವಿಷ್ಣೌ=ಸರ್ವತ್ರ ವ್ಯಾಪ್ತನಾದ, ಪರಮಾತ್ಮನಿ=ಶ್ರೀ ಪರಮಾತ್ಮನಲ್ಲಿ, ನಿಯಚ್ಛೇತ್=ಅಧೀನರನ್ನಾಗಿ ತಿಳಕೊಂಡು ಧ್ಯಾನಮಾಡಬೇಕು, ನಿಯಮೋನಾಮ=ನಿಯಮವೆಂದರೆ, ತದ್ವಶತ್ವೇನ=ಅವರ ಅಧೀನರನ್ನಾಗಿ, ತಧ್ಧ್ಯಾನಂ=ಅವರ ಚಿಂತನೆಯು, ನಾಪರಃ=ಬೇರೆಅಲ್ಲ, ಮಾನುಷಃ=ಮನುಷ್ಯನು, ವಿನಿಯಾಮಕಾನ್=ನಿಯಾಮಕರಾಗಿರುವ, ದೇವಾನ್=ದೇವತೆಗಳನ್ನು, ಕುತಸ್ತು=ಯಾವಕಾರಣದಿಂದ, ನಿಯಚ್ಛೇತ್=ನಿಯಮಿಸುವನು. ಆದುದರಿಂದ, ನಿಯಚ್ಛೇತ್ ಎಂಬುವದಕ್ಕೆ ನಿಯಮಿಸುವದು ಎಂಬ ಅರ್ಥವಲ್ಲ. ಮತ್ತು ಅವರರಾದವರು ತಮ್ಮಿಂದ ಉತ್ತಮರಾದ ದೇವತೆಗಳ ಅಧೀನರಾಗಿದ್ದಾರೆ ಎಂಬವದಾಗಿ ತಿಳಕೊಂಡು ಅಧಿಕಾರಿಯು ಧ್ಯಾನಮಾಡಬೇಕೆಂಬುದಾಗಿ ತಾತ್ಪರ್ಯವು.

ಭಾ ॥ ಸ್ವಭಾರ್ಯಾಯಾಃ ಪರತ್ವಂ ಸಿದ್ಧಮಿತಿ ಮಹತಃ ಪರಮಿತ್ಯೇ
ವೋಕ್ತಂ ॥ ೧೫ ॥

ಅ॥ ತನ್ನ ಭಾರ್ಯೆಳಾದ ಲಕ್ಷ್ಮೀದೇವಿಯಿಂದ ತನಗೆ ಉತ್ತಮತ್ವವು ಸಿದ್ಧವಾದದ್ದು ಎಂಬ ಅಭಿಪ್ರಾಯದಿಂದ ಮಹತಃ ಪರಂ=ಮಹತ್ತತ್ವಾಭಿಮಾನಿ ಚತುರ್ಮುಖನಿಂದಉತ್ತಮತ್ವವು, ಇತಿ=ಈ ಪ್ರಕಾರವಾಗಿ, ಉಕ್ತಂ=ಹೇಳಲ್ಪಟ್ಟಿತು.

ಆದುದರಿಂದ ಸಮಸ್ತ ಜಗತ್ತಿನಿಂದಲೂ ಉತ್ತಮನಾಗಿದ್ದಾನೆ ಏತಾದೃಶಮಹಿಮೋಪೇತನಾದ ಶ್ರೀ ಪರಮಾತ್ಮನ ಅಪರೋಕ್ಷಜ್ಞಾನದಿಂದ ಮೃತ್ಯುರೂಪವಾದ ಈ ಸಂಸಾರಬಂಧನದಿಂದ ಮುಕ್ತನಾಗುತ್ತಾನೆಯೇ ಹೊರತು ಇತರ ದೇವತೆಗಳ ಜ್ಞಾನದಿಂದ ಮುಕ್ತಿಯು ಲಭ್ಯವಾಗಲಾರದು. ಆದುದರಿಂದ ಶ್ರೀ ಪರಮಾತ್ಮನೇ ಈ ಮಂತ್ರಗಳಿಂದ ಪ್ರತಿಪಾದ್ಯನಾದವನು ಎಂಬುವದಾಗಿ ತಾತ್ಪರ್ಯವು.

**ಇತಿ ಕಾಠಕೋಪನಿಷದಿ ಪ್ರಥಮಾಧ್ಯಾಯಸ್ಯ ತೃತೀಯಾವಲ್ಲೀ ಪ್ರಥಮಾಧ್ಯಾಯಃ**

॥ ಸಮಾಪ್ತಃ ॥

ಈ ಪ್ರಕಾರ ಕಾಠಕೋಪನಿಷತ್ತಿನಲ್ಲಿ ಅದರ ಭಾಷ್ಯದಲ್ಲಿಯೂ ಮೊದಲನೇ ಅಧ್ಯಾಯದಲ್ಲಿ ಮೂರನೇ ವಲ್ಲಿಯು ಸಮಾಪ್ತಿಯಾಯಿತು.

॥ ಇಲ್ಲಿಗೆ ಒಂದನೆ ಅಧ್ಯಾಯವು ಸಮಾಪ್ತಿಯಾಯಿತು ॥

**॥ ಶ್ರೀ ಕೃಷ್ಣಾರ್ಪಣಮಸ್ತು ॥**

ಈ ಎರಡನೇ ಅಧ್ಯಾಯದಲ್ಲಿಯೂ ಪರಬ್ರಹ್ಮ ವಿಷಯಕ ವಿದ್ಯೆಯನ್ನು ಹೇಳುವು ದಕ್ಕಾಗಿ ಅಂಗಭೂತವಾದ ವೈರಾಗ್ಯವು ಅವಶ್ಯವಾಗಿ ಸಂಪಾದ್ಯವೆಂಬ ಅಭಿಪ್ರಾಯದಿಂದ ಹೇಳುತ್ತಾರೆ.

**ಮಂ॥ ಪರಾಂಚಿ ಖಾನಿ ವ್ಯತೃಣಾತ್ಸ್ವಯಂಭೂಸ್ತಸ್ಮಾತ್ಪರಾಙ್ ಪಶ್ಯತಿ ನಾಂತ ರಾತ್ಮನ್ । ಕಶ್ಚಿದ್ಧೀರಃ ಪ್ರತ್ಯಗಾತ್ಮಾನಮೈಕ್ಷದಾವೃತ್ತಚಕ್ಷುರಮೃತ ತ್ವಮಿಚ್ಛನ್ ॥ ೧ ॥**

ಅ ॥ ಸ್ವಯಂಭೂಃ=ಸ್ವತಂತ್ರನಾದ ಶ್ರೀಪರಮಾತ್ಮನು (ಅಥವಾ ಚತುರ್ಮುಖನು), ಖಾನಿ=ಇಂದ್ರಿಯಗಳನ್ನು, ಪರಾಂಚಿ=ಪರಾಙ್ಮುಖಗಳನ್ನಾಗಿ, ಅಂದರೆ ವಿಷಯಾಸಕ್ತಗಳನ್ನಾಗಿ, ವ್ಯತೃಣಾತ್=ಕುತ್ಸಿತಗಳನ್ನಾಗಿ ಮಾಡಿದನು, ತಸ್ಮಾತ್=ಆ ಕಾರಣದಿಂದ, (ಪುರುಷನು) ಪರಾಙ್=ಬಾಹ್ಯವಿಷಯಗಳನ್ನು, ಪಶ್ಯತಿ=ನೋಡುತ್ತಾನೆ, ಆತ್ಮನ್=ತನ್ನ, ಅಂತಃ=ಒಳಗೆ, ನ ಪಶ್ಯತಿ=ನೋಡುವದಿಲ್ಲ, ಕಶ್ಚಿತ್=ಒಬ್ಬಾನೊಬ್ಬ, ಧೀರಃ=ಜ್ಞಾನಿಯಾದವನು, ಅಮೃತತ್ವಂ=ಮೋಕ್ಷವನ್ನು, ಇಚ್ಛನ್=ಇಚ್ಛಿಸುವವನು, ಆವೃತ್ತಚಕ್ಷುಃ=ವಿಷಯಗಳಿಂದ ತಿರುಗಿಬಂದ ಚಕ್ಷುರಾದಿ ಇಂದ್ರಿಯಗಳುಳ್ಳವನಾಗಿ, ಪ್ರತ್ಯಕ್=ಒಳಗೆ, ಆತ್ಮಾನಂ=ಅಂತರ್ಯಾಮಿಯಾದ ಪರಮಾತ್ಮನನ್ನು, ಐಕ್ಷತ್=ನೋಡುತ್ತಾನೆ ॥ ೧ ॥

**ಮಂ ॥ ಪರಾಚಃ ಕಾಮಾನನುಯಂತಿ ಬಾಲಾಸ್ತೇ ಮೃತ್ಯೋರ್ಯಂತಿ ವಿತ ತಸ್ಯ ಪಾಶಂ । ಅಥ ಧೀರಾ ಅಮೃತತ್ವಂ ವಿದಿತ್ವಾ ಧ್ರುವಮಧ್ರುವೇ ಷ್ವಿಹ ನ ಪ್ರಾರ್ಥಯಂತೇ ॥ ೨ ॥**

ಅ ॥ ಯೇ ಬಾಲಾಃ=ಯಾವ ಬಾಲಕರಂತಿರುವ ಅವಿವೇಕಿ ಜನರು, ಪರಾಚಃ=ಬಾಹ್ಯಗಳಾದ, ಕಾಮಾನ್=ಕಾಮ್ಯ ವಿಷಯಗಳನ್ನು, ಅನುಯಂತಿ=ಅನುಸರಿಸಿಕೊಂಡಿರು ತ್ತಾರೋ, ತೇ=ಆ ಮನುಷ್ಯರು, ವಿತತಸ್ಯ=ಬಹುಕಾಲೀನವಾದ, ಮೃತ್ಯೋಃ=ಅವಿದ್ಯಾಕಾಮ ಕರ್ಮಾದಿಯ, ಪಾಶಂ=ಬಂಧವನ್ನು, ಅಂದರೆ ಅದರಿಂದ ಉಂಟಾದ ದುಃಖವನ್ನು, ಯಂತಿ=ಪ್ರಾಪಿಸುತ್ತಾರೆ, ಅಥ=ಆ ಕಾರಣದಿಂದ, ಇಹ=ಈ ಲೋಕದಲ್ಲಿ, ಧೀರಾಃ=ವಿವೇಕಿಗಳಾ ದವರು, ಧ್ರುವಂ=ಶಾಶ್ವತವಾದ, ಅಮೃತತ್ವಂ=ಮೋಕ್ಷವನ್ನು, ವಿದಿತ್ವಾ=ತಿಳದು, ಅಧ್ರುವೇಷು=ಅಸ್ಥಿರಗಳಾದ ವಿತ್ತಾದಿಗಳ ವಿಷಯದಲ್ಲಿ, ನ ಪ್ರಾರ್ಥಯಂತೇ=ಪ್ರಾರ್ಥನೆಮಾಡುವ ದಿಲ್ಲ ॥ ೨ ॥

ತಾ ॥ ಕಾರ್ಯಾಕಾರ್ಯಗಳಲ್ಲಿ ವಿವೇಕ ಇಲ್ಲದೆ ಇರುವವರು, ಸ್ತ್ರೀ ಸಂಭೋಗಾದಿ ವಿಷಯಗಳ ಭೋಗದಲ್ಲಿಯೇ ಆಸಕ್ತರಾಗಿ, ಅನಾದಿಯಿಂದ ತನ್ನನ್ನು ಅನುಸರಿಸಿಬಂದ, ಅಜ್ಞಾನ ಮತ್ತು ಕಾಮುಕರ್ಮ ಇವುಗಳ ಸಂಬಂಧದಿಂದ ಮತ್ತೂ ಮತ್ತೂ ಸಂಸಾರ ದುಃಖವನ್ನೇ ಅನು ಭವಿಸುತ್ತಾರೆ. ವಿವೇಕಿಗಳಾದರೂ ಅಸ್ಥಿರಗಳಾದ ಸಂಪದಾದಿಗಳನ್ನು ಇಚ್ಛಿಸದೆ ಶಾಶ್ವತ ಸುಖ ರೂಪವಾದ ಮೋಕ್ಷವೆಂಬ ಪುರುಷಾರ್ಥವನ್ನೇ ಅಪೇಕ್ಷಿಸುತ್ತಾರೆ ॥ ೨ ॥

**ಮಂ ॥ ಯೇನ ರೂಪಂ ರಸಂ ಗಂಧಂ ಶಬ್ದಾನ್ಸ್ಪರ್ಶಾಂಶ್ಚ ಮೈಥುನಾನ್ । ಏತೇನೈವ ವಿಜಾನಾತಿ ಕಿಮತ್ರ ಪರಿಶಿಷ್ಯತೇ ॥ "ಏತದ್ವೈತತ್" ॥ ೩ ॥**

ಅ ॥ ಯೇನ ಏತೇನೈವ=ಯಾವ ಈ ಪರಬ್ರಹ್ಮನಿಂದಲೇ, (ಪ್ರೇರಣ ಮಾಡಿಕೊಳ್ಳಲ್ಪಟ್ಟ ಜೀವನು), ರೂಪಂ=ರೂಪವನ್ನು, ರಸಂ=ಮಧುರಾದಿ ರಸವನ್ನು, ಗಂಧಂ=ಪರಿಮಳವನ್ನು,

ಶಬ್ದಾನ್=ಧ್ವನ್ಯಾದಿಗಳನ್ನು, ಸ್ಪರ್ಶಾನ್=ಶೀತೋಷ್ಣಾದಿಗಳನ್ನು, ಮೈಥುನಾನ್=ಮಿಥುನೀಭಾವಾದಿಸುಖಗಳನ್ನು, ವಿಜಾನಾತಿ=ತಿಳಿಯುತ್ತಾನೋ, ತದೇತತ್=ಆ ಈ ಜೀವಪ್ರೇರಕನಾದ ಪರಬ್ರಹ್ಮನು, ಅತ್ರ=ಮೋಕ್ಷದಲ್ಲಿ, ಪರಿಶಿಷ್ಯತೇ ಕಿಂ=ಮುಕ್ತಜೀವಪ್ರೇರಕನಾಗಿ ಇರುತ್ತಾನೆಯೊ ಏನು, (ಈ ಪ್ರಕಾರ ನಚಿಕೇತರಿಂದ ಪ್ರಶ್ನೆ ಮಾಡಿಸಿಕೊಳ್ಳಲ್ಪಟ್ಟ ಯಮದೇವರು ಉತ್ತರ ಕೊಡುತ್ತಾರೆ)"ಏತದ್ವೈತದಿತಿ" ತತ್=ನಿನ್ನಿಂದ, ಮುಕ್ತನಿಯಾಮಕನಾದ ಬ್ರಹ್ಮನು ಇದ್ದಾನೋ ಏನೋ ಎಂಬದಾಗಿ ಕೇಳಲ್ಪಟ್ಟ ಪರಬ್ರಹ್ಮನು, ಏತದ್ವೈ=ಈ ಮೊದಲು ಹೇಳಿದ ಗುಣವುಳ್ಳವನಾಗಿ, ಪರಿಶಿಷ್ಯತೇ=ಇದ್ದಾನೆಯೇ ಸರಿ, ವೈ=ಈ ವಿಷಯದಲ್ಲಿ ಸಂದೇಹವಿಲ್ಲ. ॥ ೩ ॥

**ಮಂ ॥ ಸ್ವಪ್ನಾಂತಂ ಜಾಗರಿತಾಂತಂ ಚೋಭೌ ಯೇನಾನುಪಶ್ಯತಿ । ಮಹಾಂತಂ ವಿಭುಮಾತ್ಮಾನಂ ಮತ್ವಾ ಧೀರೋ ನ ಶೋಚತಿ ॥ ೪ ॥**

ಅ ॥ ಸ್ವಪ್ನಾಂತಂ=ಸುಷುಪ್ತಿಯನ್ನು, ಜಾಗರಿತಾಂತಂ=ಸ್ವಪ್ನವನ್ನು, ಉಭೌ ಚ=ಈ ಎರಡನ್ನೂ, ಯೇನ=ಯಾವ ಶ್ರೀ ಪರಮಾತ್ಮನಿಂದ(ಪ್ರೇರಿತನಾದ ಜೀವನು), ಪಶ್ಯತಿ=ನೋಡುತ್ತಾನೋ, ತಂ=ಆ, ಮಹಾಂತಂ=ಮಹಾನುಭಾವನಾದ, ವಿಭುಂ=ವ್ಯಾಪ್ತನಾದ, ಆತ್ಮಾನಂ=ಶ್ರೀ ಪರಮಾತ್ಮನನ್ನು, ಮತ್ವಾ=ತಿಳಕೊಂಡು, ಧೀರಃ=ಜ್ಞಾನಿಯಾದವನು, ನ ಶೋಚತಿ=ದುಃಖಪಡುವುದಿಲ್ಲ. ॥ ೪ ॥

ತಾ ॥ ಜೀವನಿಗೆ ಜಾಗ್ರದವಸ್ಥಾ, ಸ್ವಪ್ನಾವಸ್ಥಾ, ಸುಷುಪ್ತ್ಯವಸ್ಥಾ ಹೀಗೆ ಮೂರು ಅವಸ್ಥೆಗಳನ್ನು ಕೊಡತಕ್ಕವನೂ ಶ್ರೀ ಪರಮಾತ್ಮನೇ. ಹೀಗೆ ಈ ಅವಸ್ಥಾತ್ರಯದಲ್ಲಿಯೂ ಪ್ರೇರಕನಾಗಿರುವ ಶ್ರೀ ಪರಮಾತ್ಮನನ್ನು ತಿಳಿದು ಇರುವ ಜ್ಞಾನಿಗಳಿಗೆ ಸಾಂಸಾರಿಕ ದುಃಖವು ಸರ್ವಥಾ ಇಲ್ಲವೆಂದು ತಾತ್ಪರ್ಯವು. ॥ ೪ ॥

**ಮಂ ॥ ಯ ಇದಂ ಮಧ್ವದಂ ವೇದಾತ್ಮಾನಂ ಜೀವಮಂತಿಕಾತ್ । ಈಶಾನಂ ಭೂತಭವ್ಯಸ್ಯ ನ ತತೋ ವಿಜುಗುಪ್ಸತೇ ॥ ಏತದ್ವೈತತ್ ॥ ೫ ॥**

ಅ ॥ ಯಃ=ಯಾವ ಅಧಿಕಾರಿಯು, ಇದಂ(ಇಮಂ)=ಈ, ಮಧ್ವದಂ=ಸುಖವನ್ನು ಅನುಭವಿಸುವ, (ಮಧು=ಸುಖಂ ಅತ್ತೀತಿ ಮಧ್ವದಃ ತಂ) ಜೀವಮಂತಿಕಾತ್=ಜೀವಸಮೀಪದಲ್ಲಿ, (ನಿಯಾಮಕನಾಗಿ ಇರುವ) ಆತ್ಮಾನಂ=ಶ್ರೀ ಪರಮಾತ್ಮನನ್ನು, ಭೂತಭವ್ಯಸ್ಯ=ಈ ಮೊದಲು ವಿದ್ಯಮಾನವಾದದ್ದಕ್ಕೂ ಇನ್ನುಮುಂದೆ ಹುಟ್ಟತಕ್ಕವರಿಗೂ, ಈಶಾನಂ=ಪ್ರೇರಕನನ್ನಾಗಿಯೂ, ವೇದ=ತಿಳಿಯುತ್ತಾನೆಯೋ, ಸಃ=ಆ ಪುರುಷನು, ತತಃ=ತನಗೆ ನಿಯಾಮಕನನ್ನಾಗಿತಿಳಕೊಂಡು ಇರುವದರಿಂದ, ನ ವಿಜುಗುಪ್ಸತೇ=ತನ್ನನ್ನು ರಕ್ಷಿಸುವದಕ್ಕಾಗಿ, ಇಚ್ಛಿಸುವದಿಲ್ಲವು ಅಂದರೆ ಶ್ರೀ ಪರಮಾತ್ಮನೇ ಸರ್ವಕಾಲದಲ್ಲಿಯೂ ಎಲ್ಲಾ ಕಡೆಯಲ್ಲಿಯೂ ತನಗೆ ರಕ್ಷಕನಾಗಿದ್ದಾನೆ ಎಂಬುವದಾಗಿ ತಿಳಕೊಂಡು ಇರುವದರಿಂದ ತನ್ನರಕ್ಷಣೆಗೋಸ್ಕರ ಪ್ರಯತ್ನ ಮಾಡುವದಿಲ್ಲ, ಏತದ್ವೈತತ್-ಯತ್=ಯಾವದು ನಿನ್ನಿಂದ, ಪೃಷ್ಟಂ=ಕೇಳಲ್ಪಟ್ಟಿತೋ, ತತ್=ಆಪರಬ್ರಹ್ಮನು, ಏತದ್ವೈ=ಮೊದಲುಹೇಳಿದ ಗುಣಗಳುಳ್ಳದ್ದೇಸರಿ, ವೈ=ನಿಶ್ಚಯವು ॥ ೫ ॥

**ಮಂ ॥ ಯಃ ಪೂರ್ವಂ ತಪಸೋ ಜಾತಮದ್ಭ್ಯಃ ಪೂರ್ವಮಜಾಯತ । ಗುಹಾಂ ಪ್ರವಿಶ್ಯ ತಿಷ್ಠಂತಂ ಯೋ ಭೂತೇಭಿರ್ವ್ಯಪಶ್ಯತಿ ॥**

**॥ ಏತದ್ವೈತತ್ ॥ ೬**

ಅ || ಯಃ=ಯಾವ ಶ್ರೀಪರಮಾತ್ಮನು, ಅಜಾತಂ=ಈ ಮೊದಲು ಯಾರಿಂದಲೂ ಹುಟ್ಟದೆ ಇರುವ ಚತುರ್ಮುಖನನ್ನು, ತಪಸಃ=ತಪೋನಾಮಕನಾದ ರುದ್ರನದೆಶೆಯಿಂದ, ಪೂರ್ವಂ=ಮೊದಲು, ಅದ್ಭ್ಯಃ=ಅಪ್ ಎಂಬ ಹೆಸರುಳ್ಳ ಭೂತಗಳಿಂದಲೂ, ಪೂರ್ವಂ=ಮೊದಲು, ಅಜಾಯತ=(ಅಜನಯತ್) ಹುಟ್ಟಿಸಿದನೋ, ಯಃ=ಯಾವ ಪರಮಾತ್ಮನು, ಗುಹಾಂ=ಹೃದಯ ಗುಹೆಯನ್ನು, ಪ್ರವಿಶ್ಯ=ಪ್ರವೇಶಮಾಡಿ, ತಿಷ್ಠಂತಂ=ಇರತಕ್ಕ, ಸ್ವಾತ್ಮಾನಂ=ತನ್ನನ್ನು, ಭೂತೇಭಿಃ=ಭೂತಗಳಿಂದ ಕೂಡಿಕೊಂಡು, ವ್ಯಪಶ್ಯತಿ=ವಿಶೇಷವಾಗಿ ನೋಡುತ್ತಾನೋ, ಏತದ್ವೈ ತತ್-ಯತ್=ಯಾವದು, ತ್ವಯಾ=ನಿನ್ನಿಂದ, ಪೃಷ್ಟಂ=ಕೇಳಲ್ಪಟ್ಟಿತೋ, ತತ್=ಆ ಪರಬ್ರಹ್ಮನು, ಏತದ್ವೈ=ಈ ರೀತಿಯಾಗಿ ಹೇಳಿದ ಗುಣಗಳುಳ್ಳದ್ದೇ ಸರಿ, ವೈ=ನಿಶ್ಚಯವು. || ೬ ||

ತಾ || ಇಂದ್ರಾದಿದೇವತೆಗಳು ಪರಮಾತ್ಮನ ಮುಖಾದ್ಯವಯವಗಳಿಂದ ಒಂದಾವರ್ತಿ ಹುಟ್ಟಿದವರೇ ಪುನಃ ಕಶ್ಯಪರಿಂದ ಹುಟ್ಟುತ್ತಾರೆ. ಬ್ರಹ್ಮನು ಹಾಗೆ ಅಲ್ಲವೆಂಬುದಾಗಿ "ಅಜಾತಂ" ಎಂಬ ವಿಶೇಷಣದಿಂದ ಹೇಳುತ್ತದೆ. || ೬ ||

**ಮಂ || ಯಾ ಪ್ರಾಣೇನ ಸಂವಿಶತ್ಯದಿತಿರ್ದೇವತಾಮಯೀ । ಗುಹಾಂ ಪ್ರವಿಶ್ಯ ತಿಷ್ಠಂತೀಂ ಯಾ ಭೂತೇಭಿರ್ವ್ಯಜಾಯತ || ಏತದ್ವೈತತ್ || ೭ ||**

ಅ || ಅದಿತಿಃ=(ಅದನಾತ್=ಸಮಸ್ತ ಜಗತ್ತನ್ನು ಭಕ್ಷಣ ಮಾಡುವದರಿಂದ) ಅದಿತಿ ಎಂಬ ಹೆಸರುಳ್ಳ, ದೇವತಾಮಯೀ=ಸಮಸ್ತ ದೇವತೆಗಳಿಂದ ಉತ್ತಮವಾದ, ಯಾ=ಯಾವ ಪರಮಾತ್ಮ ಶರೀರವು, ಪ್ರಾಣೇನ=ಮುಖ್ಯ ವಾಯುದೇವರಿಂದ (ಕೂಡಿಕೊಂಡು), ಸಂವಿಶತಿ=ಪ್ರವೇಶಮಾಡುತ್ತದೆ, ಯಾ=ಯಾವ ಪರಮಾತ್ಮ ಶರೀರವು, ಗುಹಾಂ=ಹೃದಯ ಗುಹೆಯನ್ನು, ಪ್ರವಿಶ್ಯ=ಪ್ರವೇಶಮಾಡಿಕೊಂಡು, ತಿಷ್ಠಂತೀಂ=ಇರತಕ್ಕ ತನ್ನ ಶರೀರವನ್ನೇ, ಭೂತೇಭಿಃ=ಪ್ರಾಣಿಗಳಿಂದ, (ಕೂಡಿಕೊಂಡು) ವ್ಯಜಾಯತ=(ಜನಯಾಮಾಸ) ಹುಟ್ಟಿಸಿತೋ, ತಾನೇ ಮತ್ಸ್ಯಾದಿ ನಾನಾ ರೂಪವುಳ್ಳವನಾಗಿ ಪ್ರಾದುರ್ಭವಿಸುವವನಾದನು, ಪ್ರಾಣಿಗಳನ್ನಾದರೂ ದೇಹ ಸಂಬಂಧದಿಂದ ನಾನಾ ಪ್ರಕಾರವಾಗಿ ಹುಟ್ಟಿಸುವವನಾದನು, ಏತದ್ವೈ ತತ್=ನಿನ್ನಿಂದ ಕೇಳಲ್ಪಟ್ಟ ಬ್ರಹ್ಮನು ಏತಾದೃಶಗುಣವುಳ್ಳವನೇ ಸರಿ, ನಿಶ್ಚಯವು || ೭ ||

ತಾ || ಪ್ರಳಯ ಕಾಲದಲ್ಲಿರುವ ಸಮಸ್ತ ಪ್ರಾಣಿಗಳನ್ನು ತಿನ್ನತಕ್ಕವನಾದುದರಿಂದ ಅದಿತಿ ಎಂತ ಪ್ರಸಿದ್ಧನಾದ ಶ್ರೀ ಪರಮಾತ್ಮನೇ ಸಮಸ್ತರ ಹೃದಯಗುಹೆಯಲ್ಲಿ ಮುಖ್ಯ ವಾಯು ದೇವರಿಂದಲೂ ತತ್ವಾಭಿಮಾನಿಗಳಿಂದಲೂ ಒಟ್ಟಿಗೆಯೂ-ಹೊರಗೆ ಮತ್ಸ್ಯಾದಿರೂಪಗಳಿಂದಲೂ ಇರುತ್ತಾನೆ. || ೭ ||

**ಮಂ || ಅರಣ್ಯೋರ್ನಿಹಿತೋ ಜಾತವೇದಾ ಗರ್ಭ ಇವ ಸುಭೃತೋ ಗರ್ಭಿಣೀಭಿಃ । ದಿವೇದಿವ ಈಡ್ಯೋ ಜಾಗೃವದ್ಭಿರ್ಹವಿಷ್ಮದ್ಭಿರ್ಮನುಷ್ಯೇಭಿರಗ್ನಿಃ || ೮ ||**

ಅ || ಅರಣ್ಯೋಃ=(ಅರಃ=ಜ್ಞಾಯಮಾನನಾದ, ಣಾಃ=ಸುಖರೂಪನಾದ, ಪರಮಾತ್ಮನು, ಯಾಭ್ಯಾಂ=ಯಾವ ಗುರುಶಿಷ್ಯರಿಂದ, ತೌ=ಆ ಗುರುಶಿಷ್ಯರು, ಅರಣಿಶಬ್ದವಾಚ್ಯರು, ಅಂದರೆ ಯಾವ ಗುರು ಶಿಷ್ಯರಿಂದ ಸುಖರೂಪನಾದ ಶ್ರೀ ಪರಮಾತ್ಮನು ತಿಳಿಯಲ್ಪಡುತ್ತಾನೋ ಆ ಗುರು ಶಿಷ್ಯರು ಅರಣಿಎಂತ ಹೇಳಲ್ಪಡುವರು, ಗುರು ಶಿಷ್ಯರಲ್ಲಿ, ಜಾತವೇದಾಃ=(ಜಾತಂ ಸರ್ವಂ ವೇತ್ತೀತಿ ಜಾತವೇದಾಃ) ಸರ್ವಜ್ಞನಾದ ಶ್ರೀ ಪರಮಾತ್ಮನು, ಗರ್ಭಿಣೀಭಿಃ=ಸ್ತ್ರೀಯರಿಂದ,

ಸುಭೃತಃ=ಚನ್ನಾಗಿ ಧಾರಣೆಮಾಡಲ್ಪಟ್ಟ, ಗರ್ಭ ಇವ=ಗರ್ಭದಂತೆ, ನಿಹಿತಃ=ಆವಾಸಮಾಡಿಕೊಂಡು ಇದ್ದಾನೆ, ಸಃ=ಆ, ಅಗ್ನಿಃ=ಸಮಸ್ತವನ್ನು ತಿನ್ನತಕ್ಕವನಾದುದರಿಂದ ಅಗ್ನಿನಾಮಕನಾದ ಶ್ರೀ ಪರಮಾತ್ಮನು, ಜಾಗೃವದ್ಭಿಃ=ಭಗವಜ್ಜ್ಞಾನವುಳ್ಳ, ಹವಿಷ್ಮದ್ಭಿಃ=ಯಜ್ಞಸಾಧನವುಳ್ಳ, ಮನುಷ್ಯೇಭಿಃ=ಮನುಷ್ಯರಿಂದ, ದಿವೇದಿವೇ=ಪ್ರತಿದಿವಸದಲ್ಲಿಯೂ, ಈಡ್ಯಃ=ಸ್ತೋತ್ರಮಾಡಿಕೊಳ್ಳಲ್ಪಟ್ಟವನಾಗಿ ಇದ್ದಾನೆ ॥ ೮ ॥

ತಾ ॥ ಗರ್ಭಿಣಿಯರು ತಮ್ಮ ಗರ್ಭವನ್ನು ಜಾಗರೂಕರಾಗಿ ಕಾಪಾಡುವಂದದಿ, ಗುರುಶಿಷ್ಯರ ಸಂವಾದದಿಂದ ಉತ್ಪನ್ನನಾದ ಶ್ರೀಹರಿಯು ಅವರ ಮನಸ್ಸಿನಲ್ಲಿ ಧಾರಣೆಮಾಡಿಸಿಕೊಳ್ಳಲ್ಪಡುತ್ತಾನೆ. ಈ ಹರಿಯನ್ನು ಯಜ್ಞಾದಿ ಕರ್ಮಗಳನ್ನು ಮಾಡುವ ಜ್ಞಾನಿಗಳು ಸದಾ ಸ್ತೋತ್ರಮಾಡುತ್ತಿರುವರು. ಹೇಗೆ ಗರ್ಭವು ಗರ್ಭಿಣಿಯನ್ನಗಲಿ ಇರದೋ, ಅದರಂತೆಯೇ ಜ್ಞಾನಿಗಳು ಪರಮಾತ್ಮನು ತಮ್ಮ ಮನಸ್ಸನ್ನಗಲಿರದಂತೆ ಸದಾ ಧ್ಯಾನಮಾಡುತ್ತಲಿರುವರು. ॥ ೮ ॥

**ಮಂ ॥ ಯತಶ್ಚೋದೇತಿ ಸೂರ್ಯೋಽಸ್ತಂ ಯತ್ರ ಚ ಗಚ್ಛತಿ । ತಂ ದೇವಾಸ್ಸರ್ವೇ ಅರ್ಪಿತಾಸ್ತದು ನಾತ್ಯೇತಿ ಕಶ್ಚನ ॥ ಏತದ್ವೈತತ್ ॥ ೯ ॥**

ಅ ॥ ಸೂರ್ಯಃ=ಆದಿತ್ಯನು, (ಸೃಷ್ಟಿಕಾಲದಲ್ಲಿ) ಯತಃ=ಯಾವ ಪರಮಾತ್ಮನಿಂದ, ಉದೇತಿ=ಉತ್ಪನ್ನನಾಗಿದ್ಧಾನೋ, ಯತ್ರ ಚ=ಯಾವ ಪರಮಾತ್ಮನಲ್ಲಿ (ಪ್ರಳಯಕಾಲದಲ್ಲಿ), ಅಸ್ತಂ=ಅದರ್ಶನವನ್ನು, ಗಚ್ಛತಿ=ಪ್ರಾಪಿಸುತ್ತಾನೋ, ತಂ=ಆ ಪರಮಾತ್ಮನನ್ನು, ಸರ್ವೇ ದೇವಾಃ=ಸಮಸ್ತ ದೇವತೆಗಳೂ, ಅರ್ಪಿತಾಃ=ಆಶ್ರಯಿಸಿಕೊಂಡು ಇದ್ಧಾರೆ, ತತ್=(ತಂ) ಸರ್ವದೇವಾಶ್ರಯನಾದ ಶ್ರೀ ಪರಮಾತ್ಮನನ್ನು, (ಗುಣಗಳಿಂದಾಗಲೀ ಸ್ವರೂಪದಿಂದಾಗಲೀ) ಕಶ್ಚನ=ಯಾರೊಬ್ಬರೂ, ನ ಉ ಅತ್ಯೇತಿ=ಅತಿಕ್ರಮಿಸಿಕೊಂಡು ಇರುವುದಿಲ್ಲ. ಏತದ್ವೈತತ್=ನೀನು ಪ್ರಶ್ನೆಮಾಡಿದ ಶ್ರೀ ಪರಮಾತ್ಮನು ಈ ರೀತಿಯಾಗಿ ಗುಣಗಳಿಂದ ಪೂರ್ಣನಾಗಿದ್ಧಾನೆಯೇ ಸರಿ. ॥ ೯ ॥

ತಾ ॥ ಜ್ಞಾನಿಗಳಿಂದ ಉಪಾಸನೆ ಮಾಡಿಸಿಕೊಳ್ಳಲ್ಪಟ್ಟ ಸರ್ವರಿಗೂ ಪ್ರತ್ಯಕ್ಷಸಿದ್ಧನಾದ ಆದಿತ್ಯನು ಸೃಷ್ಟಿಕಾಲದಲ್ಲಿ ಶ್ರೀ ಪರಮಾತ್ಮನಿಂದಲೇ ಹುಟ್ಟುತ್ತಾನೆ. ಪ್ರಳಯ ಕಾಲದಲ್ಲಿ ಲಯವನ್ನು ಹೊಂದುತ್ತಾನೆ. ಇದರಂತೆಯೇ ಎಲ್ಲಾ ದೇವತೆಗಳಿಗೂ ಸೃಷ್ಟಿ ಲಯಗಳನ್ನು ಕೊಡತಕ್ಕವನಾದುದರಿಂದ ಅವನನ್ನು ಯಾರೊಬ್ಬರೂ ಗುಣಗಳಿಂದಾಗಲೀ ಸ್ವರೂಪದಿಂದಾಗಲೀ ದಾಟಿಕೊಂಡು ಇರತಕ್ಕವರು ಇಲ್ಲ (ಅಂದರೆ ಅವನಿಗೆ ಸಮಾನಿಕರೂ ಉತ್ತಮರೂ ಇಲ್ಲವೆಂದು ತಾತ್ಪರ್ಯ). ॥ ೯ ॥

**ಮಂ ॥ ಯದೇವೇಹ ತದಮುತ್ರ ಯದಮುತ್ರ ತದನ್ವಿಹ । ಮೃತ್ಯೋಸ್ಸ ಮೃತ್ಯುಮಾಪ್ನೋತಿ ಯ ಇಹ ನಾನೇವ ಪಶ್ಯತಿ ॥ ೧೦ ॥**

ಅ ॥ ಇಹ=ಪರಿದೃಶ್ಯಮಾನ ದೇಹಾದಿಗಳಲ್ಲಿ, ಯದೇವ=ಮತ್ಸ್ಯಾದ್ಯವತಾರ ಸಮೂಹವು, (ಅದೆಯೊ) ತದೇವ=ಅದೇವೆ, ಅಮುತ್ರ=ವೈಕುಂಠಾದಿ ಲೋಕಗಳಲ್ಲಿ ಅವತಾರರೂಪಕ್ಕೂ ಮೂಲರೂಪಕ್ಕೂ ಯಾವ ವಿಧವಾದ ಭೇದವೂ ಇಲ್ಲವೆಂದು ಅರ್ಥವು. (ಇಂದ್ರಾರ್ಜುನಾದಿಗಳಂತೆ ಅವಾಂತರ ವಿಶೇಷವು ಇಲ್ಲವೆಂದು ಹೇಳುತ್ತಾರೆ.) ಯತ್=ಯಾವರೂಪವು, ಅಮುತ್ರ=ವೈಕುಂಠಾದಿಗಳಲ್ಲಿ (ಅದೆಯೊ), ತದನು=ಅದೇರೂಪವೇ, ಇಹ=ದೇಹಾದಿಗಳಲ್ಲಿ, ವಿದ್ಯಮಾನವಾದ ಅವತಾರ ರೂಪವು(ಗುಣಗಳಿಂದಾಗಲೀ ಸ್ವರೂಪದಿಂದಾಗಲೀ ಸ್ವಲ್ಪವಾದರೂ ವಿಶೇಷವಿಲ್ಲ.) (ಭೇದವನ್ನಾಗಲೀ ಭೇದಾಭೇದವನ್ನಾಗಲೀ ತಿಳಕೊಂಡವರಿಗೆ ಅನರ್ಥವು ಸಂಭವಿ

ಸುತ್ತದೆ ಎಂದು ಹೇಳುತ್ತಾರೆ, ಯಃ=ಯಾವ ಪುರುಷನು, ಇಹ=ಮೂಲರೂಪ ಅವತಾರ ರೂಪಗಳಲ್ಲಿ, ನಾನಾ=ಭೇದವನ್ನು, ಇವ=ಭೇದಾಭೇದವನ್ನು, ಪಶ್ಯತಿ=ತಿಳಿಯುತ್ತಾನೋ, ಸಃ=ಆತನು, ಮೃತ್ಯೋಃ=ಮಾರಕದಿಂದ, ಮೃತ್ಯುಂ=ಮರಣವನು (ಅಂದರೆ ಅಂಧಂತ ಮಸ್ಸನ್ನು) ಪ್ರಾಪ್ನೋತಿ=ಪ್ರಾಪಿಸುತ್ತಾನೆ. ॥ ೧೦ ॥

**ಮಂ ॥ ಮನಸೈವೇದಮಾಪ್ತವ್ಯಂ ನೇಹ ನಾನಾಸ್ತಿ ಕಿಂಚನ । ಮೃತ್ಯೋಸ್ಸ ಮೃತ್ಯುಂ ಗಚ್ಛತಿ ಯ ಇಹ ನಾನೇವ ಪಶ್ಯತಿ ॥ ೧೧ ॥**

ಅ ॥ ಇಹ=ಈ ಮೂಲರೂಪದಲ್ಲಿಯೂ, ಅವತಾರರೂಪಗಳಲ್ಲಿಯೂ, ಕಿಂಚನ=ಯಾವ ದೊಂದು ಗುಣವಾಗಲೀ ಕರ್ಮವಾಗಲೀ, ನಾನಾ=ಭಿನ್ನವಾದದ್ದು, ನಾಸ್ತಿ=ಇಲ್ಲ, ಇದಂ= ರೂಪಾದಿಗಳಲ್ಲಿ ಭೇದಾದಿಯು ಇಲ್ಲವೆಂಬ ಪ್ರಮೇಯವು, ಮನಸೈವ=ಮನನಸಮರ್ಥವಾದ ಅಂತಃಕರಣದಿಂದಲ್ಲೇವೇ, ಆಪ್ತವ್ಯಂ=ತಿಳಿಯತಕ್ಕದ್ದು, (ಭೇದದಿಂದ ಉಂಟಾದ ವ್ಯವಹಾರದಿಂದ ಅಪಲಾಪಮಾಡಲಿಕ್ಕೆ ಯೋಗ್ಯವಲ್ಲ,) (ಈ ಪ್ರಕಾರವಾಗಿ ತಿಳಿಯದೆ ವಿರುದ್ಧವಾಗಿ ತಿಳಕೊಂಡ ವರಿಗೆ ಅನರ್ಥವದೆಯೆಂಬುವದಾಗಿ ಹೇಳುತ್ತಾರೆ), ಇಹ=ಗುಣಕರ್ಮಾದಿಗಳಲ್ಲಿ, ಯಃ= ಯಾವಾತನು, ನಾನೇವ=ಭಿನ್ನವನ್ನು, ಭಿನ್ನಾಭಿನ್ನವನ್ನು, ಪಶ್ಯತಿ=ತಿಳಿಯುತ್ತಾನೊ, ಸಃ=ಆ ಪುರುಷನು, ಮೃತ್ಯೋಃ=ಮಾರಕನಿಂದ, ಮೃತ್ಯುಂ=ಅತಿಶಯ ದುಃಖಪ್ರದವಾದ ತಮಸ್ಸನ್ನು, ಗಚ್ಛತಿ=ಹೊಂದುತ್ತಾನೆ. ॥ ೧೧ ॥

ತಾ ॥ ಮೂಲರೂಪಾವತಾರರೂಪಗಳಿಗೆ ಹೇಗೆ ಭೇದವಿಲ್ಲವೋ, ಹಾಗೆ ಮೂಲರೂಪ ಅವತಾರರೂಪಗಳಲ್ಲಿರತಕ್ಕ ಗುಣಕರ್ಮಾದಿಗಳಿಗೂ ಭೇದವಾಗಲೀ ಭೇದಾಭೇದವಾಗಲೀ ಇರುವದಿಲ್ಲ; ಇದಕ್ಕೆ ವಿರುದ್ಧವಾಗಿ ತಿಳಕೊಂಡವರಿಗೆ ಅಂಧಂತಮಸ್ಸು ಪ್ರಾಪ್ತಿಯಾಗುತ್ತದೆ ॥೧೧॥

**ಮಂ ॥ ಅಂಗುಷ್ಠಮಾತ್ರಃ ಪುರುಷೋ ಮಧ್ಯ ಆತ್ಮನಿ ತಿಷ್ಠತಿ । ಈಶಾನೋ ಭೂತಭವ್ಯಸ್ಯ ನ ತತೋ ವಿಜುಗುಪ್ಸತೇ ॥ ಏತದ್ವೈತತ್ ॥ ೧೨ ॥**

ಅ ॥ ಆತ್ಮನಿ=(ಆತ್ಮನಃ)=ದೇಹದ ಅಥವಾ ಜೀವನ, ಮಧ್ಯೇ=ಹೃದಯದಲ್ಲಿ, ಪುರುಷಃ=(ಪುರಿ=ಶೇತ ಇತಿ ಪುರುಷಃ)=ಹೃದಯದಲ್ಲಿ ಶಯನಮಾಡಿಕೊಂಡು ಇರುವದರಿಂದ ಪುರುಷಶಬ್ದವಾಚ್ಯನಾದ, ಭೂತಭವ್ಯಸ್ಯ=ಹಿಂದೆ ಹುಟ್ಟಿರುವ ಪ್ರಾಣಿಗಳಿಗೂ, ಮುಂದೆ ಹುಟ್ಟ ತಕ್ಕ ಪ್ರಾಣಿಗಳಿಗೂ, ಈಶಾನಃ=ಪ್ರೇರಕನಾದ ಶ್ರೀ ಪರಮಾತ್ಮನು, ಅಂಗುಷ್ಠಮಾತ್ರಃ=ಈ ದೇಹದ ಅಂಗುಷ್ಠಪರಿಮಿತನಾಗಿ, ತಿಷ್ಠತಿ=ಇರುತ್ತಾನೆ, ತತಃ=ಈ ಪ್ರಕಾರ ಹೃದಯದಲ್ಲಿರ ತಕ್ಕ ಪರಮಾತ್ಮನಿಗೆ ಪ್ರೇರಕತ್ವ ಇರುವದರಿಂದ, (ತತ್ ಜ್ಞಾನೀ=ಅವನನ್ನು ತಿಳದವನು), ನ ವಿಜುಗುಪ್ಸತೇ=ತನ್ನ ರಕ್ಷಣೆಗೋಸ್ಕರ ಪ್ರಯತ್ನ ಮಾಡುವದಿಲ್ಲ, ಏತದ್ವೈತತ್=ನಿನ್ನಿಂದ ಕೇಳ ಲ್ಪಟ್ಟ ವಸ್ತುವು ಈ ಪ್ರಕಾರ ಗುಣಗಳುಳ್ಳದ್ದೇ ಸರಿ. ॥ ೧೨ ॥

ತಾ ॥ ಶ್ರೀ ಪರಮಾತ್ಮನು ಸರ್ವದೇಶಕಾಲಗಳಲ್ಲಿ ವ್ಯಾಪ್ತನಾದಾಗ್ಯೂ ಜೀವರ ಬಾಹ್ಯ ದೇಹದಲ್ಲಿ ದೇಹಾಂಗುಷ್ಠದ ಪರಿಮಾಣ ವಿಶಿಷ್ಟನಾಗಿಯೂ, ಜೀವದೇಹದಲ್ಲಿ ಜೀವಾಂಗುಷ್ಠದ ಪರಿಮಾಣ ವಿಶಿಷ್ಟನಾಗಿಯೂ ಇದ್ದು, ಅಂತಃಪ್ರೇರಕನಾಗಿಯೂ, ಕಾಲತ್ರಯದಲ್ಲಿ ಹುಟ್ಟತಕ್ಕ ಸಮಸ್ತ ಪ್ರಾಣಿಗಳಿಗೂ ನಿಯಾಮಕನಾಗಿಯೂ ಇರುತ್ತಾನೆ ಎಂಬುವದಾಗಿ ತಿಳಕೊಂಡಿರುವ ಪುರುಷನಿಗೆ ತನ್ನ ರಕ್ಷಣೆ ವಿಷಯದಲ್ಲಿ ಬೇರೆ ಪ್ರಯತ್ನ ಬೇಡ; ಅವನೇ ಸದಾರಕ್ಷಕನಾಗಿರು ತ್ತಾನೆ. ॥ ೧೨ ॥

**ಮಂ ॥ ಅಂಗುಷ್ಠಮಾತ್ರಃ ಪುರುಷೋ ಜ್ಯೋತಿರಿವಾಧೂಮಕಃ । ಈಶಾನೋ ಭೂತಭವ್ಯಸ್ಯ ಸ ಏವಾದ್ಯ ಸ ಉ ಶ್ವಃ ॥ ಏತದ್ವೈತತ್ ॥ ೧೩ ॥**

ಅ ॥ ಅಧೂಮಕಃ=ಧೂಮರಹಿತವಾದ, ಜ್ಯೋತಿರಿವ=ಅಗ್ನಿಯಂತೆ ಪ್ರಕಾಶರೂಪ ನಾದ, ಅಂಗುಷ್ಠಮಾತ್ರಃ=ಅಂಗುಷ್ಠಪರಿಮಿತನಾದ, ಭೂತಭವ್ಯಸ್ಯ=ಮೊದಲು ಹುಟ್ಟಿರುವ ಪ್ರಾಣಿಗಳಿಗೂ, ಮುಂದೆ ಹುಟ್ಟತಕ್ಕ ಪ್ರಾಣಿವರ್ಗಕ್ಕೂ, ಈಶಾನಃ=ಪ್ರೇರಕನಾಗಿರುವ ಶ್ರೀ ಪರಮಾತ್ಮನೇ, ಪುರುಷಃ=ಪ್ರಾಣಿಗಳ ಹೃದಯ ಗುಹೆಯನ್ನು ಆಶ್ರಯಿಸಿಕೊಂಡು ಇರುವವನು, ಸ ಏವ=ಅವನೇವೇ, ಅದ್ಯ=ಈಗಲೂ, ವರ್ತತೇ=ಇದ್ದಾನೆ, ಸ ಉ=ಅವನೇವೇ, ಶ್ವಃ=ಮುಂದಿನ ಕಾಲದಲ್ಲಿಯೂ ಇರುತ್ತಾನೆ (ಆತನು ಅನಾದಿ ನಿತ್ಯನು ಎಂಬ ಅರ್ಥ), ಏತದ್ವೈತತ್=ನೀನು ಪ್ರಶ್ನೆಮಾಡಿದ ಪರಬ್ರಹ್ಮನು ಏತಾದೃಶ ಮಹಿಮೋಪೇತನೇ ಸರಿ. ॥ ೧೩ ॥

**ಮಂ ॥ ಯಥೋದಕಂ ದುರ್ಗೇ ವೃಷ್ಟಂ ಪರ್ವತೇಷು ವಿಧಾವತಿ । ಏವಂ ಧರ್ಮಾನ್ಪೃಥಕ್ಪಶ್ಯಂಸ್ತಾನೇವಾನು ವಿಧಾವತಿ ॥ ೧೪ ॥**

ಅ ॥ ಪರ್ವತೇಷು=ಪರ್ವತಗಳಲ್ಲಿ, ದುರ್ಗೇ=ಶಿಖರದಲ್ಲಿ, ವೃಷ್ಟಂ=ವೃಷ್ಟೀಕರಿಸ ಲ್ಪಟ್ಟ, ಉದಕಂ=ನೀರು, ಯಥಾ=ಹೇಗೆ (ಅಧೋಭಾಗಕ್ಕೆ), ವಿ=ನಾನಾಪ್ರಕಾರವಾಗಿ, ಧಾವತಿ=ಹೋಗುತ್ತದೆಯೋ, ಏವಂ=ಈ ರೀತಿಯಾಗಿ, ವಿಷ್ಣೋಃ=ಶ್ರೀ ಪರಮಾತ್ಮನ, ಧರ್ಮಾನ್=ಗುಣಕ್ರಿಯಾದಿಗಳನ್ನು, ಪೃಥಕ್=ಆಶ್ರಯದಿಂದ ಅನ್ಯೋನ್ಯವಾಗಲೀ (ಭೇದ ದಿಂದ), ಪಶ್ಯನ್=ತಿಳದವನು, ತಾನೇವ=ಭೇದದಿಂದ ತಿಳದವುಗಳನ್ನೇವೇ, ಅನು=ಅದನ್ನು ತಿಳ ಕೊಂಡ ಅನಂತರದಲ್ಲಿಯೇ, ವಿಧಾವತಿ=ತಮಸ್ಸನ್ನು ಪ್ರಾಪಿಸುತ್ತಾನೆ. ॥ ೧೪ ॥

ತಾ ॥ ಶ್ರೀ ಪರಮಾತ್ಮನಲ್ಲಿ ಇರತಕ್ಕ ಜ್ಞಾನಾನಂದಾದಿಗುಣಗಳೂ, ಜಗತ್ಸರ್ಜನಾದಿ ಕ್ರಿಯೆಗಳೂ ಶ್ರೀ ಪರಮಾತ್ಮನಿಂದ ಅಭಿನ್ನಗಳಾಗಿದ್ದಾವೆ. ಅವುಗಳು ಪರಸ್ಪರವಾಗಿಯೂ ಅಭಿನ್ನಗಳಾಗಿದ್ದಾವೆ. ಅವುಗಳು ಶ್ರೀ ಪರಮಾತ್ಮನಿಂದಲೂ, ಪರಸ್ಪರವಾಗಿಯೂ, ಭಿನ್ನಗಳಾ ಗಿದ್ದಾವೆ ಎಂಬುದಾಗಿ ತಿಳಕೊಂಡವನಿಗೆ, ಪರ್ವತ ಶಿಖರಗಳಲ್ಲಿ ಬಿದ್ದ ನೀರು ಹೇಗೆ ಅದೇಕ್ಷಣ ದಲ್ಲಿ ಅಧಃಪ್ರದೇಶಕ್ಕೆ ಓಡಿ ಹೋಗುತ್ತದೆಯೋ, ಹಾಗೆಯೇ ಇವುಗಳ ಭೇದ ಜ್ಞಾನಾನಂತರದ ಲ್ಲಿಯೇ ತಮಸ್ಸು ಪ್ರಾಪ್ತವಾಗುತ್ತದೆಯೇ ಸರಿ. ॥ ೧೪ ॥

**ಮಂ ॥ ಯಥೋದಕಂ ಶುದ್ಧೇ ಶುದ್ಧಮಾಸಿಕ್ತಂ ತಾದೃಗೇವ ಭವತಿ । ಏವಂ ಮುನೇರ್ವಿಜಾನತ ಆತ್ಮಾ ಭವತಿ ಗೌತಮ ॥ ೧೫ ॥**

ಅ ॥ ಹೆ ಗೌತಮ=ನಚಿಕೇತರೇ! ಯಥಾ=ಹೇಗೆ, ಶುದ್ಧಂ=ನಿರ್ಮಲವಾದ, ಉದ ಕಂ=ಜಲವು, ಶುದ್ಧೇ=ನಿರ್ಮಲವಾದ ಜಲದಲ್ಲಿ, ಸಿಕ್ತಂ=ಹಾಕಲ್ಪಟ್ಟದ್ದು, ತಾದೃಗೇವ= ಅದರ ಸದೃಶವಾದದ್ದೇ ಆಗುತ್ತದೆ (ಹೊರತು ಅದೇ ಆಗುವದಿಲ್ಲ), ವಿಜಾನತಃ=(ವಿಜಾ ನತಾಂ)=ವಿಶೇಷಾರ್ಥಜ್ಞಾನಿಗಳಾದ, ಮುನೇಃ=ಮನನ ಶೀಲರಾದ ದೇವತೆಗಳಿಗೆ, ಆತ್ಮಾ= ನಿಯಾಮಕನಾದ ಮುಕ್ತನಾದ ಚತುರ್ಮುಖನು, ಏವಂ ಭವತಿ=ಭಗವತ್ಸದೃಶನೇ ಆಗು ತ್ತಾನೆ ಹೊರತು ಅವನ ಅಭೇದವನ್ನು ಪ್ರಾಪಿಸುವದಿಲ್ಲ. ಇತರ ಜೀವರು ಭಗವದೈಕ್ಯವನ್ನು ಹೊಂದುವದಿಲ್ಲವೆಂದು ಏನು ಹೇಳತಕ್ಕದ್ದು. ॥ ೧೫ ॥

**ಇತಿ ದ್ವಿತೀಯಾಧ್ಯಾಯಸ್ಯ ಪ್ರಥಮಾ ವಲ್ಲೀ.**

ತಾ || ಸಮಸ್ತ ದೇವತೆಗಳಿಗೆ ನಿಯಾಮಕನಾದ ಚತುರ್ಮುಖನೂ ಕೂಡ ಶ್ರೀ ಪರಮಾತ್ಮನನ್ನು ಪ್ರವೇಶಮಾಡಿದರೂ ತತ್ಸದೃಶನಾಗಿರುತ್ತಾನೆಯೇ ಹೊರತು ಅವನಿಂದ ಐಕ್ಯವನ್ನು ಹೊಂದುವದಿಲ್ಲ.

**ಎರಡನೇ ಅಧ್ಯಾಯದಲ್ಲಿ ಒಂದನೇ ವಲ್ಲಿಯು ಸಮಾಪ್ತವಾಯಿತು.**



## ದ್ವಿತೀಯಾಧ್ಯಾಯೇ ಪ್ರಥಮಾ ವಲ್ಲೀ ಭಾಷ್ಯಂ.

**ಭಾ** || ತೃಣು ಕಾತ್ಕರಣ ಇತಿಧಾತುಃ ||

**ಅ** || ತೃಣು ಎಂಬ ಧಾತುವು, ಕಾತ್ಕರಣೆ=ನಿಂದಿತವನ್ನಾಗಿ ಮಾಡುವದರಲ್ಲಿ ಎಂಬುವ ಅರ್ಥದಲ್ಲಿರುತ್ತದೆ. ಮಾಯಾವಾದಿಗಳು ಈ ಅಧ್ಯಾಯದಲ್ಲಿ "ಯಇದಂ ಮಧ್ವದಂ ವೇದಾತ್ಮಾನಂ ಜೀವ" ಎಂದು ಸಾಮಾನಾಧಿಕರಣ್ಯ ಇರುವದರಿಂದಲೂ, "ಯದೇವೇಹ ತದಮುತ್ರ" ಇತ್ಯಾದಿ ವಾಕ್ಯಗಳಿಂದಲೂ, ಜೀವೇಶ್ವರಾಭೇದವನ್ನು ಅಂಗೀಕರಿಸತಕ್ಕದ್ದೆಂದು ಹೇಳುತ್ತಾರೆ. ಅದು ಅಸಂಗತವು. "ಹಂತ ತ ಇದಂ ಪ್ರವಕ್ಷ್ಯಾಮಿ ಗುಹ್ಯಂ ಬ್ರಹ್ಮ ಸನಾತನಂ" "ಯಥಾ ಮರಣಂ ಪ್ರಾಪ್ಯ ಆತ್ಮಾ ಭವತಿ ಗೌತಮ" ಇತ್ಯಾದಿವಾಕ್ಯಗಳಿಂದ ಮೇಲೆ ಜೀವರುಗಳಿಗೆ ಭೇದವೇ ಸ್ಪಷ್ಟವಾಗಿ ಹೇಳುವದರಿಂದ ಆ ವಾಕ್ಯಗಳಿಗೆ ಆಪಾತತಃ-ತೋರತಕ್ಕ ಅರ್ಥವಲ್ಲ ಎಂಬೀ ಅಭಿಪ್ರಾಯದಿಂದ ಬೇರೆ ವಿಧವಾಗಿ ವ್ಯಾಖ್ಯಾನ ಮಾಡುತ್ತಾರೆ.

**ಭಾ** || ಇದಂ ಗುಹ್ಯಂ ಬ್ರಹ್ಮ ಪ್ರವಕ್ಷ್ಯಾಮಿ ಯಥಾ ಮರಣಂ ಪ್ರಾಪ್ಯ
ಜೀವೋ ಭವತಿ ತಚ್ಚ ಪ್ರವಕ್ಷ್ಯಾಮಿ ಜೀವೇಶ್ವರಭೇದಜ್ಞಾಪನಾಯ ||
-ಅ ೨ || ವ ೨ || ಮಂ || ೬ ||

**ಅ** || ಅತಿ ಗೋಪ್ಯವಾದ ಈ ಪರಬ್ರಹ್ಮನನ್ನು ಹೇಳುತ್ತೇನೆ, ಜೀವನು ಮರಣವನ್ನು ಪ್ರಾಪಿಸಿದ ಮೇಲೆ ಹೇಗೆ ಇರುತ್ತಾನೋ ಅದನ್ನು ಹೇಳುತ್ತೇನೆ, ಜೀವೇಶ್ವರಗಳಿಗೆ ಭೇದವದೆ ಎಂದು ತಿಳಿಸುವದಕ್ಕಾಗಿಯೇ ಸರಿ.

**ಭಾ** || ಯಃ ಕರ್ಮಫಲ ಭೋಕ್ತಾ ಸುಪ್ತ್ಯಾದಿಮಾನ್ ಸ ಜೀವಃ |
ಯಃ ಪ್ರಲಯಾದಿಷು ಜೀವೇಷು ಸುಪ್ತೇಷು ಜಾಗರ್ತಿ
ಸ ವಿಷ್ಣುಃ ಪರಂಬ್ರಹ್ಮೇತ್ಯರ್ಥಃ ||
-ಅ ೨ || ವ ೨ || ಮಂ-|| ೭-೮ ||

**ಅ** || ಯಃ=ಯಾವಾತನು, ಕರ್ಮಫಲಭೋಕ್ತಾ=ತಾನು ಮಾಡಿದ ಪುಣ್ಯಪಾಪರೂಪವಾದ ಕರ್ಮಗಳ ಫಲವನ್ನು ಭೋಗಿಸತಕ್ಕವನೋ, ಸುಪ್ತ್ಯಾದಿಮಾನ್=ಜಾಗ್ರತ್ಸ್ವಪ್ನ ಸುಷುಪ್ತಿ ಹೀಗೆ ಮೂರು ಅವಸ್ಥೆಗಳುಳ್ಳವನೋ, ಸಃ=ಅವನು, ಜೀವಃ=ಜೀವನು, ಯಃ=ಯಾವಾತನು, ಪ್ರಳಯಾದಿಷು=ಪ್ರಳಯಕಾಲವೇ ಮೊದಲಾದ ಕಾಲಗಳಲ್ಲಿ, ಜೀವೇಷು=ಜೀವರುಗಳು, ಸುಪ್ತೇಷು=ಸುಷುಪ್ತ್ಯವಸ್ಥೆಯಲ್ಲಿ ಇರಲು, ಜಾಗರ್ತಿ=ಜಾಗ್ರದವಸ್ಥೆಯಲ್ಲಿ ಇರುತ್ತಾನೋ, ಸಃ=ಆ, ವಿಷ್ಣುಃ=ಶ್ರೀ ಪರಮಾತ್ಮನು, ಪರಂಬ್ರಹ್ಮ=ಪರಬ್ರಹ್ಮ ಶಬ್ದವಾಚ್ಯನು, ಎಂಬುವ ಅರ್ಥವು. ಜೀವನಿಗೆ ಆಗುವ ಯೋನ್ಯಾದಿಗಮನವು ಪರಬ್ರಹ್ಮನಿಗೆ ಇಲ್ಲ. ಆದುದರಿಂದಲೂ ಜೀವೇಶ್ವರರಿಗೆ ಭೇದವು ಸಿದ್ಧವಾಗುತ್ತದೆ.

**ಭಾ** ॥ ನ ಹಿ ಜೀವಸ್ಯ ಯೋನ್ಯಾದಿಗಮನಂ ಬ್ರಹ್ಮ ॥ (ಪ್ರಾಪ್ನೋತೀತಿ ಶೇಷಃ)

**ಅ** ॥ ಜೀವನಿಗೆ ಇರುವ ಅಂದರೆ ಜೀವರಿಗೆ ತಮ್ಮಿಂದ ಆರ್ಜಿತವಾದ ಕರ್ಮಾನುಸಾರ ವಾಗಿ ಇತರ ಯೋನಿಗಳಲ್ಲಿಯೂ ಸ್ಥಾವರಾದಿಗಳಲ್ಲಿಯೂ ಪ್ರವೇಶವಿದೆ. ಅದರಂತೆ ಪರಬ್ರಹ್ಮ ನಿಗೆ ಇಲ್ಲ. ಜೀವರಿಗೆ ನಿಯಾಮಕನಾಗಿ ಇರುತ್ತಾನೆಯೇ ಹೊರತು ಕರ್ಮಾರ್ಜಿತವಾದ ಶರೀರ ಪ್ರಾಪ್ತಿ ಇರುವದಿಲ್ಲ. ಆದುದರಿಂದ ಜೀವನಂತೆ ಯೋನ್ಯಾದಿಗಮನವಿಲ್ಲವೆಂಬುವ ಅರ್ಥವು ॥ ಜೀವೇಶ್ವರ ಭೇದವು ನಚಿಕೇತರಿಂದ ಪೃಷ್ಟವಾಗದೆ ಇರುವದರಿಂದ ಅದನ್ನು ತಿಳಿಸುವದು ಯುಕ್ತವಲ್ಲವೆಂಬ ಶಂಕಾ ಸಮಾಧಾನಾರ್ಥವಾಗಿ ಹೇಳುತ್ತಾರೆ.

**ಭಾ** ॥ ಜೀವಾದ್ಭೇದೇನ ಜ್ಞಾತಂ ಹಿ ಬ್ರಹ್ಮ ಯಥಾವತ್ ಜ್ಞಾತಂ ಭವತಿ ॥

**ಅ** ॥ ಜೀವರಿಂದ ಪರಬ್ರಹ್ಮನು ಭಿನ್ನನಾಗಿರುತ್ತಾನೆ ಎಂಬುವದಾಗಿ ತಿಳಕೊಳ್ಳುವದೇ ಯಥಾರ್ಥ ಜ್ಞಾನವೆಂದು ಅನ್ನಲ್ಪಡುತ್ತದೆ, ಪರಬ್ರಹ್ಮನ ಯಥಾರ್ಥ ಜ್ಞಾನವಾದರೂ ನಚಿಕೇತ ರಿಂದ ತಿಳಿಯಬೇಕೆಂಬುದಾಗಿ ಪ್ರಾರ್ಥಿತವಾಗಿಯದೆ, ಆದುದರಿಂದ ಯುಕ್ತವೇ ಸರಿ.

**ಭಾ** ॥ "ಜೀವಸ್ಯಾಂತಿಕೆ" ನ ಹಿ ಸ್ವಸ್ಯ ಸ್ವಯಂ ಜೀವೋ ಅಂತಿಕೇ ಭವತಿ ।
ವಸ್ತ್ವಂತರಸ್ಯ ಹಿ ದೂರತ್ವಮಂತಿಕತ್ವಂ ವಾ ॥ ೫ ॥

**ಅ** ॥ ಜೀವಮಂತಿಕಾತ್ ಎಂಬುವಲ್ಲಿ (ದ್ವಿತೀಯಾ ವಿಭಕ್ತಿಯು ಷಷ್ಟ್ಯರ್ಥಕವು। ಅಂತಿಕಾತ್ ಎಂಬುವ ಪಂಚಮೀ ಸಪ್ತಮ್ಯರ್ಥಕವು, ಜೀವನ ಸಮೀಪದಲ್ಲಿ ಎಂಬುವ ಅರ್ಥವು ॥ ಜೀವನು ತಾನೆ ತನ್ನ ಸಮೀಪದಲ್ಲಿರುತ್ತಾನೆ ಎಂಬುವದು ಕೂಡುವದಿಲ್ಲ. ಬೇರೆಯಾದ ವಸ್ತು ವಿಗೇನೇ ದೂರತ್ವವೂ ಅಂತಿಕತ್ವವೂ ಇರುವದು. ಆದುದರಿಂದಲೂ ಭೇದವೇ ಸಿದ್ಧವಾಯಿತು॥೫॥

**ಭಾ** ॥ ಅಮ್ನಾಮಭ್ಯಶ್ಚ ಭೂತೇಭ್ಯಸ್ತಪೋನಾಮ್ನಃ ಶಿವಾದಪಿ ।
ಪೂರ್ವಂ ಯೋ ಜನಯಾಮಾಸ ಪೂರ್ವಾಜಾತಂ ಚತುರ್ಮುಖಂ ॥
ಸ್ವಾತ್ಮಾನಂ ಚ ಗುಹಾಸಂಸ್ಥಂ ಸರ್ವಭೂತೈಸ್ಸಹಾಭಿಭೂಃ ।
ಯಃ ಪಶ್ಯತಿ ಸದಾ ವಿಷ್ಣುಸ್ಸಏಷ ಹೃದಿ ಸಂಸ್ಥಿತ ಇತಿ ಚ ॥

**ಅ** ॥ ಅಮ್ನಾಮಭ್ಯಃ=ಅಪ್ ಎಂತ ನಾಮಧೇಯವುಳ್ಳ, ಭೂತೇಭ್ಯಶ್ಚ=ಪ್ರಾಣಿ ಗಳಿಂದಲೂ, ತಪೋನಾಮ್ನಃ=ತಪಸ್ಸೆಂಬ ನಾಮಧೇಯವುಳ್ಳ, ಶಿವಾದಪಿ=ರುದ್ರದೇವರಿಂದಲೂ, ಪೂರ್ವಂ=ಪ್ರಥಮದಲ್ಲಿ, ಪೂರ್ವಾಜಾತಂ=ಮೊದಲು ಹುಟ್ಟದೆ ಇರುವ, ಚತುರ್ಮುಖಂ= ಬ್ರಹ್ಮನನ್ನು, ಯಃ=ಯಾವ ಶ್ರೀ ಪರಮಾತ್ಮನು, ಜನಯಾಮಾಸ=ಹುಟ್ಟಿಸಿದನೋ, ಯಃ= ಯಾವ, ವಿಷ್ಣುಃ=ಶ್ರೀ ಪರಮಾತ್ಮನು, ಗುಹಾಸಂಸ್ಥಂ=ಹೃದಯ ಗುಹೆಯಲ್ಲಿ ವಿದ್ಯಮಾನನಾದ, ಸ್ವಾತ್ಮಾನಂ ಚ=ತನ್ನನ್ನೂ ಕೂಡ, ಸರ್ವಭೂತೈಃ=ಸಮಸ್ತ ಪ್ರಾಣಿಗಳಿಂದ, ಸಹ=ಕೂಡಿ ಕೊಂಡು, ಅಭಿಭೂಃ=ಪರಾಜಯಶೂನ್ಯನಾಗಿ, ಸದಾ=ಸರ್ವಕಾಲದಲ್ಲಿ, ಪಶ್ಯತಿ=ನೋಡು ತ್ತಾನೆಯೋ, ಸ ಏಷಃ=ಆ ಶ್ರೀ ಪರಮಾತ್ಮನು, ಹೃದಿ=ಹೃದಯದಲ್ಲಿ, ಸಂಸ್ಥಿತಃ=ವಿದ್ಯಮಾನ ನಾದವನು, ಇತಿ ಚ ॥

**ಭಾ** ॥ ಯಥಾ ಮುಖಾದಿಂದ್ರಶ್ಚಾಗ್ನಿಶ್ಚೇತ್ಯಾದಿನಾ ಜಾತಾ
ಏವೇಂದ್ರಾದಯಃ ಕಶ್ಯಪಾತ್ಪುನರ್ಜಾಯಂತೆ । ನ ತಥಾ ಭಗವತೋ

ಬ್ರಹ್ಮಾ । ಕಿಂತ್ವ ಜಾತ ಮೇವ ಅದ್ಭ್ಯಃ ಪೂರ್ವಂ ಅಜಾಯತ
ಜನಯಾಮಾಸ ॥ ೬ ॥

ಅ ॥ ಹೇಗೆ "ಮುಖಾದಿಂದ್ರಶ್ಚಾಗ್ನಿಶ್ಚೇತ್ಯಾದಿನಾ ಈ ಪರಮಾತ್ಮನ ಮುಖದಿಂದ ಇಂದ್ರನೂ ಅಗ್ನಿಯೂ ಹುಟ್ಟಿದರು ಎಂಬದಾಗಿ ಹೇಳುವ ಪ್ರಕಾರ ಜಾತಾ ಏವ=ಒಂದಾವರ್ತಿ ಹುಟ್ಟಿದವರೆ, ಇಂದ್ರಾದಯಃ=ಇಂದ್ರಾದಿ ದೇವತೆಗಳು, ಕಶ್ಯಪಾತ್=ಕಶ್ಯಪರಿಂದ, ಜಾಯಂತೆ=ಹುಟ್ಟುತ್ತಾರೆಯೊ, ತಥಾ=ಹಾಗೆ, ಬ್ರಹ್ಮಾ=ಚತುರ್ಮುಖನು, ಭಗವತಃ=ಶ್ರೀ ಪರಮಾತ್ಮನಿಂದ, ನ ಜಾಯತೆ=ಹುಟ್ಟುವದಿಲ್ಲವು, ಕಿಂತು=ಮತ್ತು, ಅಜಾತಮೇವ=ಹುಟ್ಟದೆ ಇರತಕ್ಕ ಚತುರ್ಮುಖನನ್ನು, ಅದ್ಭ್ಯಃ=ಭೂತಗಳಿಂದ, ಪೂರ್ವಂ=ಪ್ರಥಮದಲ್ಲಿ, ಅಜಾಯತ=ಜನಯಾಮಾಸ=ಹುಟ್ಟಿಸಿದನು ॥ ೬ ॥

ಭಾ ॥ ಅಜಾಯತೇತಿ ಜಜ್ಞೇ ಬಹುಜ್ಞಮಿತಿವದಂತರ್ಣೀತಣಿಚ್ ॥ ೬ ॥

ಅ ॥ ಅಜಾಯತ ಎಂಬುವ ಪದಕ್ಕೆ ಹುಟ್ಟಿದನು ಎಂಬುವ ಅರ್ಥವಲ್ಲ, ಮತ್ತು ಹುಟ್ಟಿಸಿದನು ಎಂಬುವ ಅರ್ಥವು ಇದಕ್ಕೆ ದೃಷ್ಟಾಂತವು. "ಜಜ್ಞೇ ಬಹುಜ್ಞಂ" ಎಂಬುವಲ್ಲಿ ಜಜ್ಞೇ ಎಂಬುವದಕ್ಕೆ ಹುಟ್ಟಿದನು ಎಂಬುವ ಅರ್ಥ ತೋರಿದರೂ, ಹುಟ್ಟಿಸಿದನು ಎಂಬುವ ಅರ್ಥವು ಹಾಗೋ-ಹಾಗೆಯೇ ॥ ೬ ॥

ಭಾ ॥ ಅದನಾದದಿತಿರ್ವಿಷ್ಣುರ್ಯಃ ಪ್ರಾಣಸಹಿತಃ ಸ್ಥಿತಃ ।
ಉತ್ತಮೋ ದೇವತಾಭ್ಯಶ್ಚ ಸೋತ್ಮಾನಂ ವಿವಿಧಾತ್ಮನಾ ॥
ಮತ್ಸ್ಯಕೂರ್ಮಾದಿರೂಪೇಣ ಗುಹಾಸಂಸ್ಥಮಜೀಜನತ್ ।
ಭೂತ್ಯೈಃ ಸಹ ಮಹಾವಿಷ್ಣುಃ ಪರಮಾತ್ಮಾ ಯುಗೇ ಯುಗ ಇತಿ ಚ ॥ ೭ ॥

ಅ ॥ ಅದನಾತ್=ಭಕ್ಷಣಮಾಡುವದರಿಂದ, ಅದಿತಿಃ=ಅದಿತಿಶಬ್ದವಾಚ್ಯನಾದ, ಯಃ=ಯಾವ, ವಿಷ್ಣುಃ=ಶ್ರೀಪರಮಾತ್ಮನು, ಪ್ರಾಣಸಹಿತಃ=ಮುಖ್ಯಪ್ರಾಣನಿಂದ ಕೂಡಿಕೊಂಡವನಾಗಿ, ಸ್ಥಿತಃ=ವಿದ್ಯಮಾನನಾಗಿದ್ದಾನೆಯೋ, ದೇವತಾಭ್ಯಶ್ಚ=ಸಮಸ್ತ ದೇವತೆಗಳಿಂದಲೂ, ಉತ್ತಮಃ=ಶ್ರೇಷ್ಠನೋ, ಸಃ=ಆ, ಮಹಾವಿಷ್ಣುಃ=ಮಹತ್ಪರಿಮಾಣವಿಶಿಷ್ಟನಾಗಿ ಸರ್ವತ್ರ ವ್ಯಾಪ್ತನಾದ, ಪರಮಾತ್ಮಾ=ಶ್ರೀಪರಮಾತ್ಮನು, ಭೂತ್ಯೈಃ ಸಹ=ಪ್ರಾಣಿಗಳಿಂದ ಕೂಡಿಕೊಂಡು, ಗುಹಾಸಂಸ್ಥಂ=ಹೃದಯದಲ್ಲಿರತಕ್ಕ, ಆತ್ಮಾನಂ=ತನ್ನನ್ನು, ಯುಗೇ ಯುಗೇ=ಪ್ರತಿ ಯುಗಗಳಲ್ಲಿ, ಮತ್ಸ್ಯ ಕೂರ್ಮಾದಿರೂಪೇಣ=ಮತ್ಸ್ಯ ಕೂರ್ಮವೇ ಮೊದಲಾದ ರೂಪದಿಂದ, ವಿವಿಧಾತ್ಮನಾ=ನಾನಾಪ್ರಕಾರವಾಗಿ, ಅಜೀಜನತ್=ಜನಯಾಮಾಸ,=ಅಭಿವ್ಯಕ್ತೀಕರಿಸಿಕೊಂಡನು. (ತೋರಿಸಿಕೊಂಡನೆಂಬ ಅರ್ಥವು.) ॥ ೭ ॥

ಭಾ ॥ ದೇವತಾಮಯಿ ದೇವತೋತ್ತಮಾ ॥

ದೇವತಾಮಯಿ ಎಂಬುವ ಪದಕ್ಕೆ ದೇವತೆಗಳಲ್ಲಿ ಉತ್ತಮವಾದದ್ದು ಎಂಬುವ ಅರ್ಥವು. (ಮಯಟ್ ಪ್ರತ್ಯಯವು ಪ್ರಾಧಾನ್ಯಾರ್ಥಕವು.)

ಭಾ ॥ ಪ್ರಾಣೇನ ಸಹಿತೋ ಭವತಿ । ಗುಹಾಂ ಪ್ರವಿಶ್ಯ ತಿಷ್ಠಂತಂ
ಸ್ವಾತ್ಮಾನಂ ಭೂತ್ಯೈಃ ಸಹ ವಿವಿಧಂ ಜನಯಾಮಾಸ ॥ ೭ ॥

ಅ ॥ ಮುಖ್ಯಪ್ರಾಣ ದೇವರಿಂದ ಕೂಡಿಕೊಂಡಿದ್ದಾನೆ. ಹೃದಯದಲ್ಲಿ ಪ್ರವೇಶಿಸಿಕೊಂಡು ಇರುವ ತನ್ನ ರೂಪವನ್ನೇ ಇತರ ಪ್ರಾಣಿಗಳಿಂದ ಕೂಡಿಕೊಂಡು ಮತ್ಸ್ಯ ಕೂರ್ಮಾದಿ ನಾನಾ ವಿಧಗಳಾದ ರೂಪಗಳಿಂದ ಅಭಿವ್ಯಕ್ತೀಕರಿಸಿದನು. ॥

ಭಾ || ಸರ್ವಜ್ಞೋ ಭಗವಾನ್ವಿಷ್ಣುರರಣ್ಯೋರ್ಗುರುಶಿಷ್ಯಯೋಃ |
ಸುಭೃತಃಸ್ತೂಯತೇ ನಿತ್ಯಂ ಜಾಗೃವದ್ಭಿಃ ಪುರುಷೋತ್ತಮ ಇತಿ ಚ ||

ಅ|| ಅರಣ್ಯೋಃ=ಅರಣೀನಾಮಕರಾದ, ಗುರುಶಿಷ್ಯಯೋಃ=ಗುರುಶಿಷ್ಯರಲ್ಲಿ, ಸುಭೃತಃ=ಸನ್ನಿಹಿತನಾದ, ಸರ್ವಜ್ಞಃ=ಸರ್ವ ವಿಷಯಕ ಜ್ಞಾನವುಳ್ಳ, ಪುರುಷೋತ್ತಮಃ=ಕ್ಷರಾಕ್ಷರ ಪುರುಷರಿಂದ ಉತ್ತಮನಾದ, ಭಗವಾನ್=ಷಡ್ಗುಣೈಶ್ವರ್ಯ ಸಂಪನ್ನನಾದ, ವಿಷ್ಣುಃ=ಶ್ರೀಪರಮಾತ್ಮನು, ನಿತ್ಯಂ=ನಿರಂತರದಲ್ಲಿ, ಜಾಗೃವದ್ಭಿಃ=ತಿಳಕೊಂಡಿರುವ ದೇವತೆಗಳಿಂದ, ಸ್ತೂಯತೇ=ಸ್ತೋತ್ರ ಮಾಡಿಸಿಕೊಳ್ಳಲ್ಪಡುತ್ತಾನೆ.

ಭಾ || ಅರ್ಯತೇ ಣ ಆಭ್ಯಾಮಿತ್ಯರಣೀ ||

ಅ || ಆಭ್ಯಾಂ=ಗುರು ಶಿಷ್ಯರಿಂದ, ಣಃ=ಆನಂದ ರೂಪನಾದ ಶ್ರೀಪರಮಾತ್ಮನು, ಅರ್ಯತೆ=ತಿಳಿಯಲ್ಪಡುತ್ತಾನೆ. ಆದುದರಿಂದ ಅರಣಿ ಎಂಬುವ ಶಬ್ದದಿಂದ ಗುರುಶಿಷ್ಯರು ವಾಚ್ಯರು ಆಗುತ್ತಾರೆ.

ಭಾ || ಯಃ ಪ್ರಾದುರ್ಭಾವಗೋ ವಿಷ್ಣುರ್ದೇಹಾದಿಷು ಚ ಸಂಸ್ಥಿತಃ |
ಸ ಏವ ಮೂಲರೂಪಶ್ಚ ಸಾಕ್ಷಾನ್ನಾರಾಯಣಾಭಿಧಃ ||
ಮೂಲರೂಪಶ್ಚ ಯೋ ವಿಷ್ಣುಃ ಪ್ರಾದುರ್ಭಾವಾದಿಗಶ್ಚ ಸಃ |
ಗುಣತಃ ಸ್ವರೂಪತೋವಾಽಪಿ ವಿಶೇಷಂ ಯೋಽತ್ರ ಪಶ್ಯತಿ |
ಅತ್ಯಲ್ಪಮಪಿ ಮೃತ್ವಾ ಸ ತಮೋಂಧಂ ಯಾತ್ಯಸಂಶಯಂ ||
ಭೇದಾಭೇದ ವಿದಶ್ಚಾತ್ರ ತಮೋ ಯಾಂತಿ ನ ಸಂಶಯಃ |
ತಥೈವಾವಯವಾನಾಂ ಚ ಗುಣಾನಾಂ ಚ ಪರಸ್ಪರಂ |
ಕ್ರಿಯಾಣಾಂ ತೇನಚೈತೇಷಾಂ ಭೇದವಿಚ್ಛೋಭಯಂ ವಿದಃ |
ಯಾಂತ್ಯೇವಾಂಧಂತಮೋ ನಾತ್ರ ಕಾರ್ಯಾ ಕಾಚಿದ್ವಿಚಾರಣೇತಿ ಚ ||

ಅ|| ಯಃ=ಯಾವ, ವಿಷ್ಣುಃ=ಶ್ರೀಪರಮಾತ್ಮನು, ಪ್ರಾದುರ್ಭಾವಗಃ=ಮತ್ಸ್ಯಾದ್ಯವತಾರವುಳ್ಳವನೋ, ಯಃ=ಯಾವಾತನು, ದೇಹಾದಿಷು ಚ=ಶರೀರಾದಿಗಳಲ್ಲಿಯೂ, ಸಂಸ್ಥಿತಃ=ವಿದ್ಯಮಾನನಾದವನೋ, ಸಃ=ಅವನೇವೆ, ಮೂಲರೂಪಃ=ಮೂಲರೂಪಿಯಾದ, ಸಾಕ್ಷಾತ್=ಕೇವಲವಾಗಿ, ನಾರಾಯಣಾಭಿಧಃ=ನಾರಾಯಣ ಎಂಬ ನಾಮಧೇಯವುಳ್ಳವನು, ಮೂಲರೂಪಶ್ಚ=ಮೂಲರೂಪಿಯಾದ, ಯೋ ವಿಷ್ಣುಃ=ಯಾವ ಶ್ರೀ ಪರಮಾತ್ಮನೊ, ಸಃ=ಅವನೇವೆ, ಪ್ರಾದುರ್ಭಾವಾದಿಗಶ್ಚ=ಅವತಾರಾದಿಗಳನ್ನು ಪ್ರಾಪಿಸುವನನು, ಯಃ=ಯಾವಾತನು, ಅತ್ರ=ಈ ಮೂಲರೂಪ ಮತ್ತು ಅವತಾರಾದಿ ರೂಪಗಳಲ್ಲಿ, ಅತ್ಯಲ್ಪಮಪಿ=ಸ್ವಲ್ಪವಾದರೂ, ಗುಣತಃ=ಜ್ಞಾನಾನಂದಾದಿ ಗುಣಗಳಿಂದಾಗಲೀ, ಸ್ವರೂಪತೋವಾಪಿ=ಸ್ವರೂಪದಿಂದಾಗಲೀ, ವಿಶೇಷಂ=ನ್ಯೂನಾಧಿಕ ಭಾವವನ್ನು (ಅಂದರೆ ಹೆಚ್ಚುಕಡಿಮೆ ಉಂಟೆಂದು), ಪಶ್ಯತಿ=ತಿಳಿಯುತ್ತಾನೆಯೋ, ಸಃ=ಆತನು, ಮೃತ್ವಾ=ಮರಣಾನಂತರದಲ್ಲಿ, ಅಸಂಶಯಂ=ಸಂಶಯವಿಲ್ಲದೆ, ಅಂಧಂತಮಃ=ಅಂಧಂತಮಸ್ಸನ್ನು, ಯಾತಿ=ಪ್ರಾಪಿಸುತ್ತಾನೆ, ಅತ್ರ=ಅವತಾರ ಮೂಲರೂಪಗಳಿಗೆ, ಭೇದಾಭೇದವಿದಶ್ಚ=ಭೇದಾಭೇದವುಂಟೆಂದು ತಿಳಕೊಂಡವರೂ ಕೂಡ, ತಮಃ=ಅಂಧಂತಮಸ್ಸನ್ನು ಯಾಂತಿ=ಹೊಂದುತ್ತಾರೆ (ಅತ್ರ=ಈ ವಿಷಯದಲ್ಲಿ), ಸಂಶಯಃ=ಸಂದೇಹವು, ನಾಸ್ತಿ=ಇರು

ವದಿಲ್ಲ, ತಥೈವ=ಹಾಗೆಯೆ, ಅವಯವಾನಾಂ=ಹಸ್ತಪಾದಾದ್ಯಂಗಗಳಿಗೆ, ಗುಣಾನಾಂ=ಜ್ಞಾನಾದಿ ಗುಣಗಳಿಗೂ, ಕ್ರಿಯಾಣಾಂ=ಕರ್ಮಗಳಿಗೂ, ತೇನ=ಆ ಶ್ರೀಪರಮಾತ್ಮನಿಂದ, ಏತೇಷಾಂ ಚ= ಅವಯವಾದಿಗಳಿಗೂ, ಭೇದವಿತ್=ಭೇದವನ್ನು ತಿಳಕೊಂಡವನು, ಉಭಯಂವಿದಶ್ಚ=ಭೇದಾ ಭೇದವನ್ನು ತಿಳಕೊಂಡವರೂ ಕೂಡ, ಅಂಧಂತಮಃ=ಅಂಧಂತಮಸ್ಸನ್ನು, ಯಾಂತ್ಯೇವ= ಪ್ರಾಪಿಸುತ್ತಾರೆಯೇ ಸರಿ, ಅತ್ರ=ಈ ವಿಷಯದಲ್ಲಿ, ಕಾಚಿತ್=ಯಾವುದೊಂದು, ವಿಚಾರಣಾ= ಸಂದೇಹವು, ನ ಕಾರ್ಯಾ=ಮಾಡತಕ್ಕದ್ದಲ್ಲ ॥ ಎಂದೂ ಮಹಾವಾರಾಹದಲ್ಲಿ.

ಭಾ ॥ "ಭವೇದೇಕತ್ರ ಸಂಯೋಗ ಇವ ಶಬ್ದೋ ವಿರುದ್ಧಯೋಃ ।
ಧರ್ಮಯೋರುಪಮಾಯಾಂ ವಾ ಸ್ವಲ್ಪತ್ವೇ ವಾ ವಿವಕ್ಷಿತಃ ॥"

ಇತಿ ಶಬ್ದನಿರ್ಣಯೇ.

ಅತೋಽನಾನೇವೇತೀವಶಬ್ದೋಽತ್ಯಲ್ಪವಿಷಯೋ ಭೇದಾಭೇದ
ವಿಷಯಶ್ಚ ॥ ೧೦ ॥

ಅ ॥ ವಿರುದ್ಧಯೋಃ=ಪರಸ್ಪರ ವಿರೋಧಿಗಳಾದ, ಧರ್ಮಯೋಃ=ಧರ್ಮಗಳಿಗೆ, ಏಕತ್ರ=ಒಂದು ಧರ್ಮಿಯಲ್ಲಿ, ಸಂಯೋಗೇ=ಸಂಬಂಧವು (ವಿವಕ್ಷಿತವಾಗುತ್ತಿರಲು), ಇವ ಶಬ್ದಃ=ಇವ ಎಂಬುವ ಶಬ್ದವು; ಭವೇತ್=ಆಗುತ್ತದೆ, ಅಂದರೆ ಒಂದು ವಿರೋಧಿ ವಾಚಕ ಶಬ್ದದ ಮೇಲೆ ಇವಶಬ್ದವು ಪ್ರಯೋಗಿಸಲ್ಪಡುತ್ತದೆ. ಉಪಮಾಯಾಂ ವಾ=ಉಪಮೆಯಲ್ಲಾ ಗಲೀ, ಸ್ವಲ್ಪತ್ವೇವಾ=ಅಲ್ಪವಾದ ಅರ್ಥದಲ್ಲಿಯೂ ಇವ ಶಬ್ದವು ಬರುತ್ತದೆ. ಈ ಪ್ರಕಾರ ಶಬ್ದ ನಿರ್ಣಯವೆಂಬ ಗ್ರಂಥದಲ್ಲಿ ಹೇಳಿಯದೆ. ಅತಃ=ಆದುದರಿಂದ, ನಾನೇವೇತೀವಶಬ್ದಃ=ನಾ ನೇವ ಎಂಬುವಲ್ಲಿರುವ ಇವ ಶಬ್ದವು ಅತ್ಯಲ್ಪ ವಿಷಯವು, ಭೇದಾಭೇದ ವಿಷಯವು,ಚ ಶಬ್ದದಿಂದ ಉಪಮಾದ್ಯರ್ಥಕವು ಆಗುತ್ತದೆ ॥ ಪೂರ್ವೋತ್ತರ ವಾಕ್ಯಗಳಿಗೆ ತಾತ್ಪರ್ಯ ಹೇಳುತ್ತಾರೆ.

ಭಾ ॥ ಪ್ರಥಮಂ ಯ ಇಹ ನಾನೇವ ಪಶ್ಯತೀತಿಸ್ವರೂಪಭೇದನಿಷೇಧಾರ್ಥಂ।
ನೇಹನಾ ನಾಸ್ತಿ ಕಿಂಚನೇತಿ ಕಿಂಚನ ಶಬ್ದಾದವಯವಾನಾಂ
ಗುಣಾನಾಂ ಕ್ರಿಯಾಣಾಂ ಚ ಪರಸ್ಪರಂ ತದ್ವತಾಂ ಚ
ಭೇದನಿಷೇಧಾರ್ಥಂ ॥ ೧೧ ॥
ಭೇದಾಭೇದ ಏವ ನಿಷಿಧ್ಯತೇ ನ ತು ಭೇದಇತ್ಯಾಶಂಕಾಂ
ನಿವಾರಯಿತುಂ ।
ಏವಂ ಧರ್ಮಾನ್ ಪೃಥಕ್ ಪಶ್ಯನ್ ಇತಿ ಭಗವದ್ಧರ್ಮಾಣಾ
ಮವಯವಗುಣಕರ್ಮಣಾಂ ॥ ೧೨ ॥
ಭೇದದರ್ಶನೇ ಪೃಥಕ್ ದೋಷಮಾಹ ಪರ್ವತೇಷು ದುರ್ಗೇ
ಶಿಖರೇ ವೃಷ್ಟಮುಧೋವಿಧಾವತಿ ।
ಏವಂ ವಿಷ್ಣೋಶ್ಚ ಧರ್ಮಾನ್ ಪೃಥಕ್ಪಶ್ಯನ್ನಂಧಂ
ತಮೋವಿಧಾವತಿ ॥ ೧೩ ॥

ಅ ॥ ಆರಂಭದಲ್ಲಿ "ಯ ಇಹ ನಾನೇವ ಪಶ್ಯತಿ,, ಎಂಬುವ ವಾಕ್ಯವು ಪರಬ್ರಹ್ಮ ಸ್ವರೂಪ ಅಂದರೆ ಮೂಲರೂಪಕ್ಕೂ ಅವತಾರ ರೂಪಗಳಿಗೂ ಭೇದವಿಲ್ಲವೆಂಬುದಾಗಿ ಹೇಳು

ವದಕ್ಕೋಸ್ಕರ ಪ್ರವೃತ್ತವಾಯಿತು, "ನೇಹ ನಾನಾಸ್ತಿ ಕಿಂಚನ'' ಎಂಬುವ ವಾಕ್ಯವು ಕಿಂಚನ ವೆಂಬ ಶಬ್ದದಿಂದ ಪರಮಾತ್ಮನ ಅವಯವಗಳಿಗೂ, ಗುಣಗಳಿಗೂ, ಕ್ರಿಯೆಗಳಿಗೂ, ಪರಸ್ಪರವು ಇವುಗಳುಳ್ಳವುಗಳಿಗೂ ಭೇದವನ್ನು ನಿಷೇಧ ಮಾಡುವದಕ್ಕಾಗಿ ಪ್ರವೃತ್ತವಾಗಿಯದೆ, ಭೇದಾ ಭೇದವೇ ನಿಷೇಧಿಸಲ್ಪಡುತ್ತದೆ. ಭೇದವು ನಿಷೇಧಿಸಲ್ಪಡುವುದಿಲ್ಲವೆಂಬುವದಾಗಿ ಶಂಕಾವನ್ನು ನಿವಾರಣೆ ಮಾಡುವದಕ್ಕೋಸ್ಕರ "ಏವಂ ಧರ್ಮಾನ್ ಪೃಥಕ್ ಪಶ್ಯನ್ನಿತಿ" ಭಗವನ್ನಿಷ್ಠ ಧರ್ಮ ಗಳಿಗೂ, ಅವಯವ ಗುಣಕರ್ಮಗಳಿಗೂ ಭೇದವದೆ ಎಂಬುದಾಗಿ ತಿಳಕೊಂಡರೆ ದೋಷವನ್ನು ಹೇಳುತ್ತಾರೆ. "ಪರ್ವತೇಷು" ಪರ್ವತಗಳ ಮೇಲೆ ಸುರಿಸಲ್ಪಟ್ಟ ನೀರು ಹೇಗೆ ಬೇಗನೇ ಕೆಳಗೆ ಓಡಿ ಬರುತ್ತದೆಯೋ, ಅದರಂತೆ ಶ್ರೀ ಪರಮಾತ್ಮನಿಗೂ ಅವನಲ್ಲಿರತಕ್ಕ ಧರ್ಮಾದಿಗ ಳಿಗೂ ಭೇದವದೆ ಎಂಬುವದಾಗಿ ತಿಳಕೊಳ್ಳುವ ಮನುಷ್ಯನು ಅಂಧಂತಮಸ್ಸನ್ನು ಕುರಿತು ಓಡಿಹೋಗುತ್ತಾನೆ.

ಭಾ ॥ ವಿಜಾನತೋ ಮುನೇರಾತ್ಮಾ ವಾಯುರಪಿ ತಾದೃಗೇವ ಭವತಿ ।
ನ ತು ಸ ಏವ ಭವತಿ । ಕಿಮ್ವನ್ಯೇ ಜೀವಾಃ ॥ ೧೫ ॥

ಅ ॥ ವಿಶೇಷವಾಗಿ ತಿಳಕೊಂಡು ಮನನಶೀಲರಾಗಿರುವ ಜ್ಞಾನಿಗಳಿಗೆ ಸ್ವಾಮಿಯಾದ ಮುಕ್ತನಾದ ಬ್ರಹ್ಮನೂ ಕೂಡ ಶ್ರೀ ಪರಮಾತ್ಮರೂಪ ಸದೃಶರೂಪವುಳ್ಳವನಾಗುತ್ತಾನೆಯೋ ಹೊರತು ಶ್ರೀ ಪರಮಾತ್ಮನೇ ಆಗುವುದಿಲ್ಲ, ಅತಿರಿಕ್ತರಾದ ಜೀವರು ಆಗುವುದಿಲ್ಲವೆಂಬುವದು ಏನು ಹೇಳತಕ್ಕದ್ದು.

ಭಾ ॥ "ಸರ್ವೇಷಾಂ ಜ್ಞಾನಿನಾಮಾತ್ಮಾ ದೇವಾನಾಂ ಚ ವಿಶೇಷತಃ ।
ಮುಕ್ತೋ ವಾಯುಶ್ಚ ಸಾದೃಶ್ಯಮೇವ ವಿಷ್ಣೋಸ್ತು ಗಚ್ಛತಿ ।
ನ ತು ತದ್ರೂಪತಾಂ ಯಾತಿ ಕಿಮ್ವನ್ಯೇ ದೇವ ಮಾನುಷಾಃ ।
ಆಭಾಸಾಭಾಸರೂಪಾಸ್ತು ವಾಯೋರ್ದೇವಸ್ಯ ಸರ್ವಶಃ" ॥ ೧೬ ॥
-ಇತಿ ಭವಿಷ್ಯತ್ಪರ್ವಣಿ ॥

ಅ ॥ ಸರ್ವೇಷಾಂ=ಸಮಸ್ತರಾದ, ಜ್ಞಾನಿನಾಂ=ಜ್ಞಾನಿಗಳಿಗೆ, ದೇವಾನಾಂ ಚ=ದೇವ ತೆಗಳಿಗೂ, ವಿಶೇಷತಃ=ವಿಶೇಷಾಕಾರವಾಗಿ, ಆತ್ಮಾ=ಸ್ವಾಮಿಯಾದ, ಮುಕ್ತಃ=ಮುಕ್ತಿಯನ್ನು ಹೊಂದಿದ, ವಾಯುಶ್ಚ=ಬ್ರಹ್ಮದೇವರೂ ಕೂಡ, ವಿಷ್ಣೋಃ=ಶ್ರೀ ಪರಮಾತ್ಮನ, ಸಾದೃಶ್ಯ ಮೇವ=ಸರೂಪತ್ವವನ್ನೇ, ಗಚ್ಛತಿ=ಪ್ರಾಪಿಸುತ್ತಾನೆ, ತದ್ರೂಪತಾಂ=ಆತನ ಸ್ವರೂಪವನ್ನು, ನ ತು ಯಾತಿ=ಪ್ರಾಪಿಸುವುದಿಲ್ಲ, ಅನ್ಯೇ=ಅತಿರಿಕ್ತರಾದ, ದೇವ ಮಾನುಷಾಃ=ದೇವತೆಗಳೂ ಮನುಷ್ಯರೂ, (ಪ್ರಾಪಿಸುವದಿಲ್ಲವೆಂಬುದು), ಕಿಮು=ಏನು ಹೇಳತಕ್ಕದ್ದಿದೆ, ದೇವಸ್ಯ=ಕ್ರೀಡಾದಿ ಗುಣ ವಿಶಿಷ್ಟನಾದ, ವಾಯೋಃ=ಬ್ರಹ್ಮದೇವರಿಗೆ, ಸರ್ವಶಃ=ಸಮಸ್ತರಾದ ರುದ್ರಾದಿಗಳು, ಆ ಭಾಸಾಭಾಸರೂಪಾಃ=ಒಬ್ಬರಿಗೊಬ್ಬರು ಪ್ರತಿಬಿಂಬಭೂತರು, ಅಂದರೆ ಉತ್ತಮರಾದವರಿಗೆ ಅಧಮಾಧಮರು ಪ್ರತಿಬಿಂಬಭೂತರಾಗಿದ್ದಾರೆ. ಭವಿಷ್ಯತ್ಪರ್ವವೆಂಬುವ ಉಪಪುರಾಣದಲ್ಲಿ ಈ ಅರ್ಥವು ಹೇಳಲ್ಪಟ್ಟದೆ.

**॥ ದ್ವಿತೀಯಾಧ್ಯಾಯೇ ಪ್ರಥಮಾವಲ್ಲೀ ಭಾಷ್ಯಂ ಸಮಾಪ್ತಂ ॥**

## ದ್ವಿತೀಯಾಧ್ಯಾಯಸ್ಯ ದ್ವಿತೀಯಾವಲ್ಲೀ ಪ್ರಾರಂಭಃ ||

ಅ || ನಮ್ಮ ಶರೀರೇಂದ್ರಿಯಾದಿಗಳು ಭಗವದಧೀನವಾಗಿಯವೆ ಎಂಬುದಾಗಿ ತಿಳಕೊಂಡು ಮಮತೆಯನ್ನು ಪರಿತ್ಯಾಗಮಾಡಬೇಕೆಂಬುವ ಅಭಿಪ್ರಾಯದಿಂದ ಮಮತೆಯನ್ನು ಬಿಟ್ಟವರಿಗೆ ಸೌಖ್ಯವದೆಯೆಂಬುವದಾಗಿ ಹೇಳುತ್ತಾರೆ.

**ಮಂ || ಪುರಮೇಕಾದಶದ್ವಾರಮಜಸ್ಯಾವಕ್ರಚೇತಸಃ | ಅನುಷ್ಠಾಯ ನ ಶೋಚತಿ ವಿಮುಕ್ತಶ್ಚ ವಿಮುಚ್ಯತೇ || ಏತದ್ವೈತತ್ || ೧ ||**

ಅ || ಏಕಾದಶದ್ವಾರಂ=ಕಿವಿಗಳು (೨), ಕಣ್ಣು (೨), ಮೂಗು (೨), ಬಾಯಿ (೧), ಪಾಯು, ಉಪಸ್ಥಗಳೆಂಬ ಗುಹ್ಯೇಂದ್ರಿಯಗಳು (೨), ಮನಸ್ಸು (೧), ಬುದ್ಧಿ (೧), ಹೀಗೆ ಹನ್ನೊಂದು ದ್ವಾರಗಳುಳ್ಳ, ಪುರಂ=ದೇಹವನ್ನು, ಅವಕ್ರಚೇತಸಃ=ಸರ್ವತ್ರ ಸಮಚಿತ್ತನಾದ, ಅಜಸ್ಯ=ಶ್ರೀ ಪರಮಾತ್ಮನ, ಅನುಷ್ಠಾಯ=(ಅಧೀನವಾಗಿಯದೆಂದು) ನಿಶ್ಚಯಿಸಿಕೊಂಡು, (ಮಮತಾತ್ಯಾಗಿಯಾದರೆ), ನ ಶೋಚತಿ=ದುಃಖಪಡುವದಿಲ್ಲ, ವಿಮುಕ್ತಃ=ದೇಹಾಭಿಮಾನವಿಲ್ಲದೆ ಇರುವದರಿಂದ ಪೂರ್ವದಲ್ಲಿಯೇ ವಿಮುಕ್ತನಾದ ಅಪರೋಕ್ಷ ಜ್ಞಾನಿಯು (ಪ್ರಾರಬ್ಧಾವಸಾನದಲ್ಲಿ), ವಿಮುಚ್ಯತೆ=ಮುಖ್ಯವಾದ ವಿಮುಕ್ತಿವುಳ್ಳವನಾಗುತ್ತಾನೆ, ತತ್=ನಿನ್ನಿಂದ ಪ್ರಶ್ನೆ ಮಾಡಿಸಿಕೊಳ್ಳಲ್ಪಟ್ಟ ಪರಬ್ರಹ್ಮನು, ಏತದ್ವೈ=ಶರೀರೇಂದ್ರಿಯಾದಿ ಪ್ರೇರಕತ್ವ ಮುಕ್ತಿಪ್ರದತ್ವಾದಿಗುಣಗಳುಳ್ಳವನೇ ಸರಿ. || ೧ ||

**ಮಂ || ಹಂ‌ಸಃ ಶುಚಿಷದ್ವಸುರಂತರಿಕ್ಷಸದ್ಧೋತಾ ವೇದಿಷದತಿಥಿರ್ದುರೋಣಸತ್ | ನೃಷದ್ವರಸದೃತಸದ್ವ್ಯೋಮಸದಬ್ಜಾ ಗೋಜಾ ಋತಜಾ ಅದ್ರಿಜಾ ಋತಂ ಬೃಹತ್ || ೨ ||**

ಅ || ಹಂಸಃ=ಹಂ=ದೋಷಹೀನನಾದ, ಸಃ=ಸಾರರೂಪನಾದ ಶ್ರೀ ಪರಮಾತ್ಮನು, ಶುಚಿಷತ್=ಶುಚಿ ಶಬ್ದವಾಚ್ಯರಾದ ವಾಯುದೇವರಲ್ಲಿ ವಿದ್ಯಮಾನನಾದವನು, ವಸುಃ=ಶ್ರೇಷ್ಠವಾದ ಸುಖವುಳ್ಳವನು, ಅಂತರಿಕ್ಷಸತ್=ಅಂತರಿಕ್ಷದಲ್ಲಿರುವವನು, ಹೋತಾ=ಇಂದ್ರಿಯಗಳಲ್ಲಿದ್ದು ಶಬ್ದಾದಿಗಳನ್ನು ಅನುಭವಿಸುವವನು, ವೇದಿಷತ್=ವೇದಿಯಲ್ಲಿ ಪೂಜ್ಯನಾಗಿರುವವನ್ನು ಅತಿಥಿಃ=ಅತಿಶಯಿತವಾದ ಅನ್ನವುಳ್ಳವನು, ದುರೋಣಸತ್=ದ್ರೋಣಕಲಶದಲ್ಲಿ ಅಂದರೆ ಸೋಮರಸ ಪಾತ್ರದಲ್ಲಿ ಇರುವವನು, ನೃಷತ್=ಮನುಷ್ಯರಲ್ಲಿರುವವನು, ವರಸತ್=ಶ್ರೇಷ್ಠರಾದ ಬ್ರಹ್ಮಾದಿಗಳಲ್ಲಿಯೂ ಇರುವವನು, ಋತಸತ್=ಋತ ಶಬ್ದವಾಚ್ಯಗಳಾದ ವೇದಗಳಲ್ಲಿ ಇರುವವನು, ವ್ಯೋಮಸತ್=ವ್ಯೋಮಶಬ್ದ ವಾಚ್ಯಳಾದ ಮಹಾಲಕ್ಷ್ಮೀದೇವಿಯಲ್ಲಿ ಇರುವವನು, ಅಬ್ಜಾಃ=ನೀರಿನಲ್ಲಿ ಹುಟ್ಟಿದ ವಸ್ತುಗಳಲ್ಲಿರುವವನು. ಗೋಜಾಃ=ಭೂಮಿಯಲ್ಲಿ ಹುಟ್ಟಿದ ವಸ್ತುಗಳಲ್ಲಿರುವವನು (ಸಸ್ಯಾದಿಗಳಲ್ಲಿ ಇರುವವನು), ಋತಜಾಃ=ಮುಕ್ತರಲ್ಲಿರುವವನು, ಅದ್ರಿಜಾಃ=ಪರ್ವತಗಳಲ್ಲಿ ಹುಟ್ಟಿದ ಪದಾರ್ಥಗಳಲ್ಲಿಯೂ ಇರುವವನು, ಋತಂ=ಮುಖ್ಯವಾಗಿ ವೇದ ಪ್ರತಿಪಾದ್ಯನು, ಬೃಹತ್=ಪರಿಪೂರ್ಣಗಳಾದ ಗುಣಗಳುಳ್ಳವನು. || ೨ ||

**ಮಂ || ಊರ್ಧ್ವಂ ಪ್ರಾಣಮುನ್ನಯತ್ಯಪಾನಂ ಪ್ರತ್ಯಗಸ್ಯತಿ | ಮಧ್ಯೇ ವಾಮನಮಾಸೀನಂ ವಿಶ್ವೇದೇವಾ ಉಪಾಸತೇ || ೩ ||**

ಅ || ಯಃ=ಶ್ರೀ ಪರಮಾತ್ಮನು, ಪ್ರಾಣಂ=ಪ್ರಾಣನಾಮಕ ವಾಯುವನ್ನು, ಊರ್ಧ್ವಂ=ಮೇಲಕ್ಕೆ ಗಮನವುಳ್ಳವನನ್ನಾಗಿ, ಉನ್ನಯತಿ=ಪ್ರೇರಿಸುತ್ತಾನೆಯೋ, ಅಪಾನಂ=

ಅಪಾನನಾಮಕ ವಾಯುವನ್ನು, ಪ್ರತ್ಯಕ್=ಅಧೋಭಾಗದಲ್ಲಿ (ವಿಣ್ಮೂತ್ರವನ್ನು ಹೊರಡಿಸುವ ವಿಷಯದಲ್ಲಿ), ಅಸ್ಯತಿ=ಪ್ರೇರಿಸುತ್ತಾನೆಯೋ, ತಂ=ಆ, ಮಧ್ಯೇ=ಹೃದಯಮಧ್ಯದಲ್ಲಿ, ಆಸೀನಂ=ಕೂತುಕೊಂಡಿರುವ, ವಾಮನಂ=ಶ್ರೀ ಪರಮಾತ್ಮನನ್ನು, ವಿಶ್ವೇದೇವಾಃ=ಸಮಸ್ತ ದೇವತೆಗಳು, ಉಪಾಸತೇ=ಉಪಾಸನಾ ಮಾಡುತ್ತಾರೆ. ॥ ೩ ॥

ತಾ ॥ ಪ್ರಾಣಾಪಾನಾದಿ ವಾಯುಗಳಿಗೂ ಪ್ರೇರಕನಾಗಿದ್ದಾನೆ ಎಂಬುವದಾಗಿ ಹೇಳಿದುದರಿಂದ ಮೊದಲು ಹೇಳಿದ ಈಶಾನನು ಮುಖ್ಯಪ್ರಾಣನಲ್ಲ. ಶ್ರೀ ಪರಮಾತ್ಮನೇ ಸರಿ ಎಂಬುವದಾಗಿ ವಾಮನ ಶ್ರುತಿಯಿಂದಲೂ ಸಿದ್ಧವಾಯಿತು. ॥ ೩ ॥

**ಮಂ ॥ ಅಸ್ಯ ವಿಸ್ರಂಸಮಾನಸ್ಯ ಶರೀರಸ್ಥಸ್ಯ ದೇಹಿನಃ । ದೇಹಾದ್ವಿಮುಚ್ಯಮಾನಸ್ಯ ಕಿಮತ್ರ ಪರಿಶಿಷ್ಯತೇ॥ ಏತದ್ವೈತತ್ ॥ ೪ ॥**

ಅ ॥ ಶರೀರಸ್ಥಸ್ಯ=ಶರೀರದಲ್ಲಿ ಆವಾಸಮಾಡಿಕೊಂಡಿರುವ, ಅಸ್ಯ=ಈ, ದೇಹಿನಃ=ಜೀವನಿಗೆ, ವಿಸ್ರಂಸಮಾನಸ್ಯ=ಸ್ಥೂಲದೇಹವನ್ನು ಪರಿತ್ಯಾಗ ಮಾಡತಕ್ಕವನಿಗೂ, ದೇಹಾತ್=ಸೂಕ್ಷ್ಮ ಶರೀರದಿಂದ, ವಿಮುಚ್ಯಮಾನಸ್ಯ=ಪರಿತ್ಯಕ್ತನಾದವನಿಗೆ, ಅತ್ರ=ಮುಕ್ತಿಯಲ್ಲಿ (ಪ್ರೇರಕವಾದದ್ದು), ಕಿಂ=ಯಾವ ವಸ್ತುವು, ಸರಿಶಿಷ್ಯತೇ=ಅವಶಿಷ್ಟವಾಗಿರುತ್ತದೆ, (ಈರೀತಿ ಪ್ರಶ್ನೆಮಾಡೋಣ ಉತ್ತರಹೇಳುತ್ತಾರೆ ಯಮದೇವರು), ಏತದ್ವೈತದಿತಿ=(ನಿನ್ನಿಂದ ಪ್ರಶ್ನೆಮಾಡಿಕೊಳ್ಳಲ್ಪಟ್ಟ), ತತ್=ವಸ್ತುವು, ಏತದ್ವೈ=ಮೇಲೆ ಹೇಳತಕ್ಕ ಗುಣವುಳ್ಳದ್ದಾಗಿರುವ ಪರಬ್ರಹ್ಮನೇ ॥೪॥

ತಾ ॥ ಭಗವದಪರೋಕ್ಷ ಜ್ಞಾನದಿಂದ ಲಿಂಗದೇಹವನ್ನು ಬಿಟ್ಟು ಮೋಕ್ಷವನ್ನು ಪ್ರಾಪಿಸಿದ ಅನಂತರದಲ್ಲಿಯೂ ಜೀವರುಗಳಿಗೆ ನಿಯಾಮಕನಾಗಿರುವವನು ಯಾರು ಎಂಬುವದಾಗಿ ನಚಿಕೇತರು ಪ್ರಶ್ನೆಮಾಡೋಣ ಯಮದೇವರು ಇನ್ನುಮೇಲೆಯೂ ನನ್ನಿಂದ ಹೇಳಲ್ಪಡುವ ಗುಣಗಳುಳ್ಳ ಶ್ರೀ ಪರಮಾತ್ಮನೇ ನಿಯಾಮಕನು ಎಂಬುವದಾಗಿ ಉತ್ತರ ಹೇಳುತ್ತಾರೆ. ॥ ೪ ॥

**ಮಂ ॥ ನ ಪ್ರಾಣೇನ ನಾಪಾನೇನ ಮರ್ತ್ಯೋ ಜೀವತಿ ಕಶ್ಚನ। ಇತರೇಣ ತು ಜೀವಂತಿ ಯಸ್ಮಿನ್ನೇತಾವುಪಾಶ್ರಿತೌ ॥ ೫ ॥**

ಅ ॥ ಕಶ್ಚನ=ಯಾವ, ಮರ್ತ್ಯಃ=ಮನುಷ್ಯನೂ, ಪ್ರಾಣೇನ=ಮುಖ್ಯಪ್ರಾಣರೂಪವಾದ ಪ್ರಾಣವಾಯುವಿನಿಂದ, ನ ಜೀವತಿ=ಜೀವಿಸುವುದಿಲ್ಲ, ಅಪಾನೇನ=ಅಪಾನನಾಮಕನಾದ ವಾಯುವಿನಿಂದಲೂ, ನ ಜೀವತಿ=ಜೀವಿಸುವುದಿಲ್ಲ, ಯಸ್ಮಿನ್=ಯಾವ ಶ್ರೀ ಪರಮಾತ್ಮನಲ್ಲಿ, ಏತೌ=ಈ ಪ್ರಾಣಾಪಾನನಾಮಕರಾದ ವಾಯುರೂಪಗಳು, ಉಪಾಶ್ರಿತೌ=ಆಶ್ರಯಿಸಿಕೊಂಡು ಇರುತ್ತಾರೋ, (ತೇನ=ಆ) ಇತರೇಣ=ಪ್ರಾಣಾಪಾನರಿಂದ ಭಿನ್ನನಾಗಿ ಅವರಿಗೆ ನಿಯಾಮಕನಾದ ಶ್ರೀಪರಮಾತ್ಮನಿಂದ, ಜೀವತಿ=ಜೀವಿಸುತ್ತಾನೆ. ॥ ೫ ॥

ತಾ ॥ ಸಮಸ್ತ ಚೇತನರಾಶಿಯಲ್ಲಿಯೂ ಪ್ರೇರಕರಾಗಿರುವ ಪ್ರಾಣಾಪಾನಾದಿಗಳಿಗೂ ಶ್ರೀಪರಮಾತ್ಮನೇ ಪ್ರೇರಕನಾಗಿದ್ದಾನೆ. ಆದುದರಿಂದ ಭಗವತ್ಪ್ರೇರಿತರಾದ ಪ್ರಾಣಾಪಾನಾದಿಗಳಿಂದಲೇ ಚೇತನರಾಶಿಯು ಜೀವಿಸಿಕೊಂಡಿದೆ. ಆದುದರಿಂದ ಅವರಿಗೆ ಸ್ವಾತಂತ್ರ್ಯವಿಲ್ಲ. ಶ್ರೀಪರಮಾತ್ಮನು ಒಬ್ಬನೇ ಸ್ವತಂತ್ರನಾದವನು. ॥ ೫ ॥

**ಮಂ ॥ ಹಂತ ತ ಇದಂ ಪ್ರವಕ್ಷ್ಯಾಮಿ ಗುಹ್ಯಂ ಬ್ರಹ್ಮ ಸನಾತನಂ । ಯಥಾ ಮರಣಂ ಪ್ರಾಪ್ಯಾತ್ಮಾ ಭವತಿ ಗೌತಮ ॥ ೬ ॥**

ಅ ॥ ಹೇ ಗೌತಮ=ಎಲೋ ನಚಿಕೇತರೇ, ಗುಹ್ಯಂ=ಅತಿಗೋಪ್ಯನಾದ, ಸನಾತನಂ=ಏಕರೂಪನಾಗಿರುವ, ಇದಂ ಬ್ರಹ್ಮ=ಈ ಪರಬ್ರಹ್ಮನನ್ನು, ತೇ=ನಿನಗೆ, ಪ್ರವಕ್ಷ್ಯಾಮಿ=ಹೇಳುತ್ತೇನೆ, ಆತ್ಮಾ=ಜೀವನು, ಮರಣಂ=ಮೃತಿಯನ್ನು, ಪ್ರಾಪ್ಯ=ಹೊಂದಿ, ಯಥಾ=ಹೇಗೆ, ಭವತಿ=ಆಗುತ್ತಾನೆಯೋ, ತಥಾ=ಹಾಗೆ, ಪ್ರವಕ್ಷ್ಯಾಮಿ=ಹೇಳುತ್ತೇನೆ. ॥ ೬ ॥

ತಾ ॥ ಅತಿಗೋಪ್ಯವಾದ ಶಶ್ವದೇಕಪ್ರಕಾರವಾದ ಪರಬ್ರಹ್ಮರೂಪವನ್ನೂ, ಪ್ರಾಣಿಗಳು ಮೃತರಾದ ಮೇಲೆ ಅವರಿಗೆ ಆಗುವ ಅವಸ್ಥಾವಿಶೇಷವನ್ನೂ ಹೇಳುತ್ತೇನೆ. ಎಂಬುವದಾಗಿ ಯಮದೇವರು ನಚಿಕೇತರನ್ನು ಕುರಿತು ಪ್ರತಿಜ್ಞೆಮಾಡಿದರು. ॥ ೬ ॥

**ಮಂ ॥ ಯೋನಿಮನ್ಯೇ ಪ್ರಪದ್ಯಂತೇ ಶರೀರತ್ವಾಯ ದೇಹಿನಃ । ಸ್ಥಾಣುಮನ್ಯೇಽನುಸಂಯಂತಿ ಯಥಾಕರ್ಮ ಯಥಾಶ್ರುತಂ ॥ ೭ ॥**

ಅ ॥ ದೇಹಿನಃ=ಶರೀರ ಧಾರಣೆಮಾಡಲಿಕ್ಕೆ ಯೋಗ್ಯರಾದ ಜೀವರು, ಶರೀರತ್ವಾಯ=ಶರೀರವನ್ನು ಹೊಂದುವುದಕ್ಕೋಸ್ಕರ, ಯಥಾಕರ್ಮ ಯಥಾಶ್ರುತಂ=ತಂತಮ್ಮ ಜ್ಞಾನಕರ್ಮಗಳನ್ನನುಸರಿಸಿ, ತಥಾ=ಹಾಗೆ, ಯೋನಿಂ=ಮನುಷ್ಯಾದಿ ಜನ್ಮವನ್ನು, ಪ್ರಪದ್ಯಂತೇ=ಪ್ರಾಪಿಸುತ್ತಾರೆ, ಅನ್ಯೇ=ಕೆಲವರು, ಸ್ಥಾಣುಂ=ಸ್ಥಾವರ ದೇಹವನ್ನು, ಸಂಯಂತಿ=ಪ್ರಾಪಿಸುತ್ತಾರೆ. ॥ ೭ ॥

**ಮಂ ॥ ಯ ಏಷು ಸುಪ್ತೇಷು ಜಾಗರ್ತಿ ಕಾಮಂಕಾಮಂ ಪುರುಷೋ ನಿರ್ಮಮಾಣಃ । ತದೇವ ಶುಕ್ರಂ ತದ್ಬ್ರಹ್ಮ ತದೇವಾಮೃತಮುಚ್ಯತೇ । ತಸ್ಮಿಂಲ್ಲೋಕಾಃ ಶ್ರಿತಾಃ ಸರ್ವೇ ತದು ನಾತ್ಯೇತಿ ಕಶ್ಚನ ಏತದ್ವೈತತ್ ॥ ೮**

ಅ ॥ ಯ ಏಷಃ=ಆ ಈ, ಪುರುಷಃ=ಶ್ರೀ ಪರಮಾತ್ಮನು, ಸುಪ್ತೇಷು=ನಿದ್ರಿತರಾದ ಜೀವರಲ್ಲಿ, ಕಾಮಂ ಕಾಮಂ=ತಮ್ಮಿಂದ ಕಾಮ್ಯಗಳಾದ ಸ್ವಾಪ್ನಪದಾರ್ಥ ಸಮುದಾಯವನ್ನು, ನಿರ್ಮಮಾಣಃ=ನಿರ್ಮಾಣ ಮಾಡುವವನಾಗಿ, ಜಾಗರ್ತಿ=ಜಾಗರೂಕನಾಗಿರುತ್ತಾನೆಯೋ, ತದೇವ=ಆ ಪರಬ್ರಹ್ಮನೇವೆ, ಶುಕ್ರಂ=ಶೋಕರಹಿತನು, ತದ್ಬ್ರಹ್ಮ=ಅವನೇ ಪೂರ್ಣಗುಣವುಳ್ಳವನು, ತದೇವ=ಆ ಪರಬ್ರಹ್ಮನೇ, ಅಮೃತಂ=ನಾಶರಹಿತನಾದವನು, (ಎಂಬುವದಾಗಿ) ಉಚ್ಯತೇ=ಹೇಳಿಕೊಳ್ಳಲ್ಪಡುತ್ತಾನೆ, ತಸ್ಮಿನ್=ಆ ಪರಮಾತ್ಮನಲ್ಲಿ, ಸರ್ವೇ=ಸಮಸ್ತಗಳಾದ, ಲೋಕಾಃ=ಪ್ರಾಣಿಗಳು, ಶ್ರಿತಾಃ=ಆಶ್ರಯಿಕೊಂಡು ಇದ್ದಾರೆ, ತದು=ಆ ಪರಬ್ರಹ್ಮನನ್ನು, ಕಶ್ಚನ=ಯಾವಾತನೂ, ನಾತ್ಯೇತಿ=ಅತಿಕ್ರಮಿಸುವುದಿಲ್ಲ, ಏತದ್ವೈತತ್=ನೀನು ಪ್ರಶ್ನೆಮಾಡಿದ ಪರಬ್ರಹ್ಮನು ಈ ಪ್ರಕಾರ ಗುಣಗಳಿಂದ ಪೂರ್ಣನಾದವನೇ ಸರಿ. ॥ ೮ ॥

**ಮಂ ॥ ಅಗ್ನಿರ್ಯಥೈಕೋ ಭುವನಂ ಪ್ರವಿಷ್ಟೋ ರೂಪಂರೂಪಂ ಪ್ರತಿರೂಪೋ ಬಭೂವ । ಏಕಸ್ತಥಾ ಸರ್ವಭೂತಾಂತರಾತ್ಮಾ ರೂಪಂ ರೂಪಂ ಪ್ರತಿರೂಪೋ ಬಹಿಶ್ಚ ॥ ೯ ॥ ವಾಯುರ್ಯಥೈಕೋ ಭುವನಂ ಪ್ರವಿಷ್ಟೋ ರೂಪಂರೂಪಂ ಪ್ರತಿರೂಪೋ ಬಭೂವ । ಏಕಸ್ತಥಾ ಸರ್ವಭೂತಾಂತರಾತ್ಮಾ ರೂಪಂರೂಪಂ ಪ್ರತಿರೂಪೋ ಬಹಿಶ್ಚ ॥ ೧೦ ॥**

ಅ ॥ ಯಥಾ=ಹ್ಯಾಗೆ, ಭುವನಂ=ಲೋಕವನ್ನು, ಪ್ರವಿಷ್ಟಃ=ಪ್ರವೇಶಮಾಡಿಕೊಂಡಿರುವ, ಅಗ್ನಿಃ=ಚೇತನಾಗ್ನಿಯು, ಏಕಃ=ಒಬ್ಬನೆ, (ಪಾಕಾದಿಕರ್ತಾ=ಪಾಕಾದಿಗಳನ್ನು ಮಾಡು

ವವನೋ) ತಥಾಪಿ=ಹಾಗಾದಾಗ್ಯೂ, (ಅಸ್ಯ=ಚೆತನಾಗ್ನಿಯು), ರೂಪಂಪ್ರತಿ=ಪ್ರತಿಒಂದು ರೂಪವನ್ನು ಕುರಿತು, ಪ್ರತಿರೂಪಃ=ಪ್ರತಿಬಿಂಬವು, ಬಭೂವ=ಆಯಿತು, ತಥಾ=ಹಾಗೆ, ಸರ್ವಭೂತಾಂತರಾತ್ಮಾ=ಸಮಸ್ತ ಪ್ರಾಣಿಗಳಲ್ಲಿ ಪ್ರವೇಶಮಾಡಿಕೊಂಡಿರುವ ಶ್ರೀ ಪರಮಾತ್ಮನು, ಏಕಃ=ಒಬ್ಬನೇ ಸ್ವತಂತ್ರನು, (ಅಸ್ಯ=ಈ ಪರಮಾತ್ಮನಿಗೆ), ಜೀವಃ=ಜೀವನು, ರೂಪಂ ರೂಪಂ ಪ್ರತಿ=ಎಲ್ಲಾ ರೂಪವನ್ನು ಕುರಿತು, ಪ್ರತಿರೂಪಃ=ಪ್ರತಿಬಿಂಬಭೂತನು, ಬಭೂವ=ಆದನು, ಬಹಿಶ್ಚ=ಬಿಂಬಭೂತನಾದ ಪರಮಾತ್ಮನಿಂದ ಬಹಿರ್ಭೂತನು. ॥ ೯ ॥

ಅ ॥ ಯಥಾ=ಹೇಗೆ, ಭುವನಂ=ಲೋಕವನ್ನು, ಪ್ರವಿಷ್ಟಃ=ಪ್ರವೇಶಮಾಡಿಕೊಂಡಿರುವ, ವಾಯುಃ=ಚೇತನವಾಯುವು, ಏಕಃ=ಒಬ್ಬನೆ, ತಥಾಪಿ=ಹಾಗಾದಾಗ್ಯೂ, (ಅಸ್ಯ=ಚೇತನವಾಯುವಿನ), ರೂಪಂ ರೂಪಂಪ್ರತಿ=ಪ್ರತಿ ಒಂದು ರೂಪವನ್ನು ಕುರಿತು, (ಅಚೇತನ ವಾಯುಃ=ಭೂತವಾಯುವು,) ಪ್ರತಿರೂಪಃ=ಪ್ರತಿಬಿಂಬವು, ಬಭೂವ=ಆಯಿತು, ತಥಾ=ಹಾಗೆ, ಸರ್ವಭೂತಾಂತರಾತ್ಮಾ=ಸಮಸ್ತ ಪ್ರಾಣಿಗಳ ಹೃದಯದಲ್ಲಿ ಆವಾಸಮಾಡಿಕೊಂಡಿರುವ ಶ್ರೀಪರಮಾತ್ಮನು, ಏಕಃ=ಒಬ್ಬನೇ ಸ್ವತಂತ್ರನು, (ಅಸ್ಯ=ಈ ಪರಮಾತ್ಮನಿಗೆ), ಜೀವಃ=ಜೀವನು, ರೂಪಂ ರೂಪಂಪ್ರತಿ=ಸಮಸ್ತ ರೂಪವನ್ನುಕುರಿತು, ಪ್ರತಿರೂಪಃ=ಪ್ರತಿಬಿಂಬಭೂತನು, ಬಭೂವ=ಆದನು, ಬಹಿಶ್ಚ=ಬಿಂಬಭೂತನಾದ ಶ್ರೀಪರಮಾತ್ಮನಿಂದ ಬಹಿರ್ಭೂತನು ಕೂಡಾ ಆಗಿದ್ದಾನೆ. ॥ ೧೦ ॥

**ಮಂ ॥ ಸೂರ್ಯೋ ಯಥಾ ಸರ್ವಲೋಕಸ್ಯ ಚಕ್ಷುರ್ನಲಿಪ್ಯತೇ ಚಾಕ್ಷುಷೈರ್ಬಾಹ್ಯದೋಷೈಃ । ಏಕಸ್ತಥಾ ಸರ್ವಭೂತಾಂತರಾತ್ಮಾ ನ ಲಿಪ್ಯತೇ ಲೋಕದುಃಖೇನ ಬಾಹ್ಯಃ ॥ ೧೧ ॥**

ಅ ॥ ಯಥಾ=ಹೇಗೆ, ಸೂರ್ಯಃ=ಆದಿತ್ಯನು, ಸರ್ವಲೋಕಸ್ಯ=ಸಮಸ್ತ ಪ್ರಾಣಿಸಮುದಾಯಕ್ಕೆ ಚಕ್ಷುಃ=ನೇತ್ರಕ್ಕೆಪ್ರೇರಕನಾಗಿ ಚಕ್ಷುರ್ನಾಮಕನಾಗಿ, ಚಕ್ಷುಸ್ಸಿನ ಒಳಗೆ ಇದ್ದವನಾದಾಗ್ಯೂ, ಚಾಕ್ಷುಷೈಃ=ಕಣ್ಣಿನಲ್ಲಿ ಹುಟ್ಟತಕ್ಕ, ಬಾಹ್ಯದೋಷೈಃ=ಬಾಹ್ಯಚಕ್ಷುಸ್ಸು ಅಂದರೆ ಜಡವಾದ ಚಕ್ಷುಸ್ಸಂಬಂಧಿ ದೋಷಗಳಿಂದ, ನ ಲಿಪ್ಯತೇ=ಲೇಪವುಳ್ಳವನಾಗವದಿಲ್ಲವೋ, ತಥಾ=ಹಾಗೆಯೇ, ಏಕಃ=ಸ್ವತಂತ್ರನಾದ, ಬಾಹ್ಯಃ=ಜೀವರಿಂದ ಭಿನ್ನನಾದ, ಸರ್ವಭೂತಾಂತರಾತ್ಮಾ=ಸಮಸ್ತ ಪ್ರಾಣಿಗಳಿಗೆ ಅಂತರ್ನಿಯಾಮಕನಾದ ಶ್ರೀ ಪರಮಾತ್ಮನು, ಲೋಕದುಃಖೇನ=ಪ್ರಾಣಿಗಳಿಗೆ ಆಗುವ ದುಃಖದಿಂದ, ನ ಲಿಪ್ಯತೇ=ಲೇಪವುಳ್ಳವನಾಗುವದಿಲ್ಲ. ॥ ೧೧ ॥

**ಮಂ ॥ ಏಕೋ ವಶೀ ಸರ್ವಭೂತಾಂತರಾತ್ಮಾ ಏಕಂ ರೂಪಂ ಬಹುಧಾ ಯಃ ಕರೋತಿ । ತಮಾತ್ಮಸ್ಥಂ ಯೇಽನುಪಶ್ಯಂತಿ ಧೀರಾಸ್ತೇಷಾಂ ಸುಖಂ ಶಾಶ್ವತಂ ನೇತರೇಷಾಂ ॥ ೧೨ ॥**

ಅ॥ ಏಕಃ=ಸ್ವತಂತ್ರನಾದ, ವಶೀ=ಸರ್ವರನ್ನೂ ತನ್ನ ಅಧೀನದಲ್ಲಿ ಇಟ್ಟುಕೊಂಡಿರುವ, ಸರ್ವಭೂತಾಂತರಾತ್ಮಾ=ಸಮಸ್ತ ಪ್ರಾಣಿಗಳಿಗೆ ಅಂತರ್ನಿಯಾಮಕನಾದ, ಯಃ=ಶ್ರೀಪರಮಾತ್ಮನು, ಏಕಂರೂಪಂ=ಒಂದೇ ರೂಪವನ್ನು, ಬಹುಧಾ=ಬಹು ಪ್ರಕಾರವಾಗಿ, ಕರೋತಿ=ಮಾಡುತ್ತಾನೆಯೋ, ತಂ=ಆ, ಆತ್ಮಸ್ಥಂ=ತಮ್ಮ ಹೃದಯದಲ್ಲಿರುವ ಶ್ರೀಪರಮಾತ್ಮನನ್ನು, ಯೇ=ಯಾವ, ಧೀರಾಃ=ಜ್ಞಾನಿಗಳು, ಅನುಪಶ್ಯಂತಿ=ನೋಡುತ್ತಾರೋ, ತೇಷಾಂ=ಅವರುಗಳಿಗೆ, ಶಾಶ್ವತಂ=ನಿತ್ಯವಾದ, ಸುಖಂ=ಆನಂದವು, ಇತರೇಷಾಂ=ಈ ಪ್ರಕಾರ ತಿಳಕೊಳ್ಳದೆ ಇರುವವರಿಗೆ, ಸುಖಂ=ಸುಖವು, ನ=ಆಗುವುದಿಲ್ಲ. ॥ ೧೨ ॥

ಮಂ ॥ ನಿತ್ಯೋ ನಿತ್ಯಾನಾಂ ಚೇತನಶ್ಚೇತನಾನಾಮೇಕೋ ಬಹೂನಾಂ ಯೋ ವಿದಧಾತಿ ಕಾಮಾನ್ । ತಮಾತ್ಮಸ್ಥಂ ಯೇಽನುಪಶ್ಯಂತಿ ಧೀರಾಸ್ತೇಷಾಂ ಶಾಂತಿಃ ಶಾಶ್ವತೀ ನೇತರೇಷಾಂ ॥ ೧೩ ॥

ಅ॥ ನಿತ್ಯಾನಾಂ=ನಾಶರಹಿತಗಳಾದ ವಸ್ತುಗಳಿಗೂ, ನಿತ್ಯಃ=ಅತಿಶಯ ನಿತ್ಯನಾದ, ಚೇತನಾನಾಂ=ಜ್ಞಾನಾಶ್ರಯರಾದ ಸರ್ವಜೀವರಿಗೂ, ಚೇತನಃ=ಮುಖ್ಯಚೇತನನಾದ, ಯಃ= ಯಾವ ಶ್ರೀಪರಮಾತ್ಮನು, ಏಕಃ=ಒಬ್ಬನೇ, ಬಹೂನಾಂ=ಬಹುಮಂದಿ ಜೀವರಿಗೂ, ಕಾಮಾನ್=ಅಭೀಷ್ಟಗಳನ್ನು, ವಿದಧಾತಿ=ಮಾಡುತ್ತಾನೆಯೋ, ತಮಾತ್ಮಸ್ಥಂ ಯೇ ಧೀರಾಃ ಅನುಪಶ್ಯಂತಿ=ಆ ಶ್ರೀಪರಮಾತ್ಮನನ್ನು ಯಾವ ಜ್ಞಾನಿಗಳು ನೋಡುತ್ತಾರೆಯೋ, ತೇಷಾಂ=ಅವರಿಗೆ, ಶಾಶ್ವತೀ=ಶಾಶ್ವತವಾದ, ಶಾಂತಿಃ=ಸುಖವು, (ಭವತಿ=ಆಗುತ್ತದೆ), ನೇತರೇಷಾಂ=ಇತರರಿಗೆ ಆಗುವುದಿಲ್ಲ. ॥ ೧೩ ॥

ಮಂ ॥ ತದೇತದಿತಿ ಮನ್ಯಂತೇಽನಿರ್ದೇಶ್ಯಂ ಪರಮಂ ಸುಖಂ । ಕಥಂ ನು ತದ್ವಿಜಾನೀಯಾಂ ಕಿಮು ಭಾತಿ ನ ಭಾತಿ ವಾ ॥ ೧೪ ॥

ಅ ॥ ತದೇತತ್=ಆ ಈದಾವ ಬ್ರಹ್ಮರೂಪವು, ಅನಿರ್ದೇಶ್ಯಂ=ಹೀಗೆಯೆಂದು ಹೇಳಲಿಕ್ಕೆ ಅಶಕ್ಯವಾದದ್ದು, ಪರಮಂ ಸುಖಂ=ಉತ್ಕೃಷ್ಟವಾದ ಸುಖರೂಪವು, ಇತಿ=ಈ ಪ್ರಕಾರವಾಗಿ (ಜ್ಞಾನಿಗಳು), ಮನ್ಯಂತೇ=ತಿಳಿದಿದ್ದಾರೆ, ತತ್=ಆ ಭಗವದ್ರೂಪವನ್ನು, ಕಥಂ ನು= ಹ್ಯಾಗೆ, ಜಾನೀಯಾಂ=ತಿಳಿದೇನು, ಭಾತಿ ಕಿಂ=ತೋರುತ್ತದೆಯೆ ಏನು, ನ ಭಾತಿ ವಾ=ತೋರುವದಿಲ್ಲವೋ, ಆತನ ಅನುಗ್ರಹವಿಲ್ಲದೆ ತಾದೃಶಸುಖಾತ್ಮಕವಾದ ರೂಪವು ತೋರುವುದಿಲ್ಲ. ಶ್ರೀಪರಮಾತ್ಮನ ಪ್ರಸಾದದಿಂದಲೇ ಅವನ ಸಂದರ್ಶನವಾಗಲಿ, ಸುಖಪ್ರಾಪ್ತಿಯಾಗಲೀ ಆಗಬೇಕು. ॥೧೪॥

ಮಂ ॥ ನ ತತ್ರ ಸೂರ್ಯೋ ಭಾತಿ ನ ಚಂದ್ರತಾರಕಂ ನೇಮಾ ವಿದ್ಯುತೋ ಭಾಂತಿ ಕುತೋಽಯಮಗ್ನಿಃ । ತಮೇವ ಭಾಂತಮನುಭಾತಿ ಸರ್ವಂ ತಸ್ಯ ಭಾಸಾ ಸರ್ವಮಿದಂ ವಿಭಾತಿ ॥ ೧೫ ॥

ಅ॥ ತತ್ರ=ಪೂರ್ವೋಕ್ತಗುಣವಿಶಿಷ್ಟನಾದ ಪರಬ್ರಹ್ಮನ ವಿಷಯದಲ್ಲಿ, ಸೂರ್ಯಃ= ಸೂರ್ಯನು, ನ ಭಾತಿ=ಪ್ರಕಾಶಕನಾಗುವುದಿಲ್ಲ, ಚಂದ್ರತಾರಕಂ=ಸೋಮನೂ ನಕ್ಷತ್ರಗಳೂ, ನ=ಪ್ರಕಾಶಿಸುವುದಿಲ್ಲ, ಇಮಾಃ ವಿದ್ಯುತಃ=ಪರಿದೃಶ್ಯಮಾನಗಳಾದ ಮಿಂಚುಗಳು, ನ ಭಾಂತಿ= ಪ್ರಕಾಶಕಗಳಾಗುವುದಿಲ್ಲ, ಅಗ್ನಿಃ=ಅಗ್ನಿಯು, ನೇತಿ=ಪ್ರಕಾಶಕನಾಗುವುದಿಲ್ಲವೆಂಬುವುದು, ಕುತಃ=ಏನು ಹೇಳತಕ್ಕದ್ದು, ಭಾಂತಂ=ಸಮಸ್ತ ವಸ್ತುವನ್ನು ಪ್ರಕಾಶಿಸುವ, ತಮೇವ=ಆ ಶ್ರೀ ಪರಮಾತ್ಮನನ್ನೇ, ಅನು=ಅನುಸರಿಸಿಕೊಂಡು, ಸರ್ವಂ=ಸಮಸ್ತ ಸೂರ್ಯಾದಿಗಳ ತೇಜಸ್ಸಮುದಾಯವು, ಭಾತಿ=ಪ್ರಕಾಶಿಸುತ್ತದೆ, ತಸ್ಯ=ಆ ಶ್ರೀ ಪರಮಾತ್ಮನ, ಭಾಸಾ=ತೇಜಸ್ಸಿನಿಂದ, ಸರ್ವಂ=ಸಮಸ್ತವಾದ, ಇದಂ=ಈ ಜಗತ್ತು, ವಿಭಾತಿ=ಪ್ರಕಾಶಿಸುತ್ತದೆ. ॥ ೧೫ ॥

ತಾ ॥ ಸೂರ್ಯ, ಚಂದ್ರ, ಅಗ್ನಿ, ನಕ್ಷತ್ರಗಳು, ಮಿಂಚು ಮೊದಲಾದ ಪ್ರಕಾಶಕ ವಸ್ತುಗಳಿಗೂ ಪ್ರಕಾಶ ಶಕ್ತಿಪ್ರದನಾದವನೂ ಶ್ರೀ ಪರಮಾತ್ಮನೇ ಆಗಿರುವಾಗ ಆತನನ್ನು ಪ್ರಕಾಶಿಸುವ ಶಕ್ತಿ ಅವುಗಳಿಗೆ ಇಲ್ಲ.

॥ ಇತಿ ಶ್ರೀಕಾಠಕೋಪನಿಷದಿ ದ್ವಿತೀಯಾಧ್ಯಾಯಸ್ಯ ದ್ವಿತೀಯಾವಲ್ಲೀ ಸಮಾಪ್ತಾ ॥

**ಭಾ ||** ಇದಂ ಪುರಂ ಭಗವದಧೀನಮಿತ್ಯಭಿಪ್ರಾಯ ||
ಅಜಸ್ಯೇದಂ ಪುರಮಿತಿ ಸ್ಥಿತಿಂ ಕೃತ್ವಾ ||

ಅ|| ಇದಂಪುರಂವೆಂಬುವ ಮೂಲಕ್ಕೆ ಅಂದರೆ ಈ ಶರೀರವು ಭಗವದಧೀನವೆಂಬುವದಾಗಿ ಅಭಿಪ್ರಾಯ. ಈ ಶರೀರವು ಶ್ರೀಪರಮಾತ್ಮನ ಸಂಬಂಧಿಕವಾಗಿಯದೆ ಎಂಬುವದಾಗಿ ನಿಶ್ಚಯಿಸಿಕೊಂಡು ಅಜಸ್ಯ ಎಂಬುವಲ್ಲಿ ಷಷ್ಠೀವಿಭಕ್ತಿಯಿಂದ ಅಧೀನವೆಂಬುವ ಅರ್ಥವು ಸಿದ್ಧವಾಗುತ್ತದೆ.

**ಭಾ ||** "ವಿಮುಕ್ತೋ ನಿರಭಿಮಾನಾತ್ಪೂರ್ವಮೇವಾಪರೋಕ್ಷವಿತ್ ।
ಮುಖ್ಯತೋ ಮುಚ್ಯತೇ ಪಶ್ಚಾದ್ದುಃಖಾದ್ಯಾಭಾಸಹಾನತಃ" || ಇತಿ ಚ ||

ಅ|| ಅಪರೋಕ್ಷ ಜ್ಞಾನಿಯು ತನಗೆ ಜ್ಞಾನೋತ್ಪತ್ತಿಯಾದ ಮೇಲೆ ಸಾಂಸಾರಿಕ ಸುಖಾದಿಗಳಲ್ಲಿ ಅಭಿಮಾನರಹಿತನಾಗಿ ಇರುವುದರಿಂದ ಮೊದಲೇ ವಿಮುಕ್ತನೆಂಬುವದಾಗಿ ಹೇಳಿಕೊಳ್ಳಲ್ಪಡುತ್ತಾನೆ. ಅನಂತರದಲ್ಲಿ ಪ್ರಾರಬ್ಧಭೋಗಾವಸ್ಥೆಯಲ್ಲಿ ಸಂಭವಿಸುವ ದುಃಖಾದ್ಯಾಭಾಸಗಳನ್ನೂ ಪರಿತ್ಯಾಗಮಾಡುವವನಾದುದರಿಂದ ಲಿಂಗದೇಹ ಭಂಗಾನಂತರದಲ್ಲಿ ಮುಖ್ಯವಾಗಿ ಮುಕ್ತನಾಗುತ್ತಾನೆ.

**ಭಾ ||** "ನಿತ್ಯಂ ಹೀನೋಽಖಿಲೈರ್ದೋಷೈಸ್ಸಾರರೂಪೋ ಯತೋ ಹರಿಃ ।
ಹಂಸ ಇತ್ಯುಚ್ಯತೇ ತಸ್ಮಾದ್ವಾಯುಸ್ಥಃ ಶುಚಿಷತ್ಸ್ಮೃತಃ ||
ವರಸುರ್ವಸುರಿತ್ಯುಕ್ತಸ್ಸ ಏವಾಪ್ಯಂತರಿಕ್ಷಗಃ ।
ಹೋತಾ ಸರ್ವೇಂದ್ರಿಯಾದಿಸ್ಥೋ ವೇದ್ಯಾಂ ಪೂಜ್ಯಶ್ಚ ವೇದಿಷತ್ ।
ಅತ್ಯನ್ನಶ್ಚಾತಿಥಿಃ ಪ್ರೋಕ್ತೋ ಯಸ್ಮಾದನ್ನಂ ಘಮುಚ್ಯತೇ ||
ಸ ದ್ರೋಣಕಲಶೇ ಸೋಮೇ ಸ್ಥಿತ ಉಕ್ತೋ ದುರೋಣಸತ್ ।
ನೃಷು ಸ್ಥಿತಶ್ಚ ದೇವೇಷು ವರೇಷ್ವಪಿ ಸ ಏವ ತು ||
ಋತರೂಪೇ ತಥಾ ವೇದೇ ವ್ಯೋಮಾಖ್ಯಪ್ರಕೃತಾವಪಿ ।
ವ್ಯೋತಂ ಜಗದಿದಂ ಯಸ್ಯಾಂ ಸಾ ವ್ಯೋಮ ಶ್ರೀರುದಾಹೃತಾ ||
ಅಬ್ಜಗೋಜಾದ್ರಿಜೇಷ್ವೇವಮಾಸ್ತೇ ಸೋಽಬ್ಜಾದಿಗಸ್ತತಃ ।
ತಥೈವರ್ತೇಷು ಮುಕ್ತೇಷು ಗತಾಸ್ತೇ ವಿಷ್ಣುಮಿತ್ಯೃತಾಃ ||
ವೇದೈರ್ಮುಖ್ಯತಯಾ ಪ್ರೋಕ್ತ ಋತಮಿತ್ಯೇವ ಚೋಚ್ಯತೇ ।
ಬೃಹತ್ಪೂರ್ಣಗುಣತ್ವಾಚ್ಚ ಸ ಏವ ಪುರುಷೋತ್ತಮಃ" || ೨ ||

ಅ || ಯಾವ ಕಾರಣದಿಂದ ಶ್ರೀ ಪರಮಾತ್ಮನು ಶ್ರೇಷ್ಠರೂಪನೋ, ನಿರಂತರದಲ್ಲಿಯೂ ಸಮಸ್ತ ದೋಷಗಳಿಂದ ರಹಿತನೋ, ಆದುದರಿಂದ 'ಹಂಸ' ಎಂಬುವದಾಗಿ ಹೇಳಿಕೊಳ್ಳಲ್ಪಡುತ್ತಾನೆ. ಶುಚಿಶಬ್ದವಾಚ್ಯರಾದ ವಾಯುದೇವರಲ್ಲಿ ಇರುವವನಾದುದರಿಂದ 'ಶುಚಿಷತ್' ಎಂಬುವದಾಗಿ ಪ್ರಸಿದ್ಧನಾಗಿದ್ದಾನೆ, ಶ್ರೇಷ್ಠವಾದ ಸುಖರೂಪನಾದುದರಿಂದ 'ವಸುಃ' ಎಂಬುವದಾಗಿ ಪ್ರಸಿದ್ಧನು, ಅವನೇ ಅಂತರಿಕ್ಷದಲ್ಲಿ ಇರುವವನಾದುದರಿಂದ 'ಅಂತರಿಕ್ಷಸತ್' ಎಂತ ಪ್ರಸಿದ್ಧನು, ಸಮಸ್ತ ಇಂದ್ರಿಯಗಳಲ್ಲಿದ್ದು ವಿಷಯಗಳನ್ನು ಅನುಭವಿಸುವವನಾದುದರಿಂದ ಹೋತಶಬ್ದವಾಚ್ಯನು, ವೇದಿ (ಅಂದರೆ) ಅಗ್ನಿಕುಂಡದಲ್ಲಿ ಪೂಜ್ಯನಾದುದರಿಂದ 'ವೇದಿಷತ್' ಎಂತಲೂ

ಪ್ರಸಿದ್ಧನು, ಯಾವ ಕಾರಣದಿಂದ ಅನ್ನವು "ಥಂ" ಎಂತ ಪ್ರಸಿದ್ಧವಾಗಿಯದೋ, ಅತಿಶಯಿತವಾದ ಅನ್ನವನ್ನು ಭುಂಜಿಸುವವನಾದುದರಿಂದ 'ಅತಿಥಿ' ಎಂತಲೂ ಹೇಳಿಕೊಳ್ಳಲ್ಪಡುವನು. ದ್ರೋಣಕಲಶದಲ್ಲಿ (ಸೋಮರಸದಲ್ಲಿ) ಇರುವವನಾದುದರಿಂದ 'ದುರೋಣಸತ್' ಎಂತಲೂ, ಮನುಷ್ಯರಲ್ಲಿ ಇರುವವನಾದುದರಿಂದ 'ನೃಷತ್' ಎಂತಲೂ, ಶ್ರೇಷ್ಠರಾದ ಬ್ರಹ್ಮಾದಿ ದೇವತೆಗಳಲ್ಲಿಯೂ ಇರುವವನಾದುದುರಿಂದ 'ವರಸತ್' ಎಂತಲೂ, ಸತ್ಯರೂಪವಾದ ವೇದದಲ್ಲಿ ಇರುವವನಾದುದರಿಂದ 'ಋತಸತ್' ಎಂತಲೂ, ಸಮಸ್ತ ಜಗತ್ತು ಯಾವ ಲಕ್ಷ್ಮೀದೇವಿಯಲ್ಲಿ ಪ್ರವಿಷ್ಟವಾಗಿಯದೋ ಆದುದರಿಂದ ಆ ಲಕ್ಷ್ಮೀದೇವಿಯು ವ್ಯೋಮಶಬ್ದವಾಚ್ಯಳಾಗಿದ್ದಾಳೆ. ಅವಳಲ್ಲಿ ಇರುವವನಾದುದರಿಂದ 'ವ್ಯೋಮಸತ್' ಎಂತಲೂ, ನೀರಿನಲ್ಲಿ ಹುಟ್ಟತಕ್ಕ ಶಂಖಾದಿಗಳಲ್ಲಿರುವವನಾದುದರಿಂದ 'ಅಬ್ಜಾ' ಎಂತಲೂ, ಭೂಮಿಯಲ್ಲಿ ಹುಟ್ಟುವ ವ್ರೀಹ್ಯಾದಿ ಧಾನ್ಯಗಳಲ್ಲಿರುವವನಾದುದರಿಂದ 'ಗೋಜಾ' ಎಂಬುವದಾಗಿಯೂ, ಸತ್ಯಶಬ್ದವಾಚ್ಯನಾದ ಶ್ರೀಪರಮಾತ್ಮನನ್ನು ಪ್ರಾಪಿಸಿದ ಮುಕ್ತರಲ್ಲಿರುವ ಜ್ಞಾನಾದಿಗಳಲ್ಲಿ ಇರುವವನಾದುದರಿಂದ 'ಋತಜಾ' ಎಂಬುವದಾಗಿಯೂ, ಪರ್ವತಗಳಿಂದ ಹುಟ್ಟುವ ನದ್ಯಾದಿಗಳಲ್ಲಿಯೂ ಇರುವವನಾದುದರಿಂದ 'ಅದ್ರಿಜಾ' ಎಂಬುವದಾಗಿಯೂ, ವೇದಗಳಿಂದ ಮುಖ್ಯವಾಗಿ ವಾಚ್ಯನಾಗಿರುವವನಾದುದರಿಂದ 'ಋತಂ' ಎಂಬುವದಾಗಿಯೂ, ಪರಿಪೂರ್ಣಗುಣಗಳುಳ್ಳವನಾದುದರಿಂದ 'ಬೃಹತ್' ಎಂಬುವದಾಗಿಯೂ, ಶ್ರೀಪರಮಾತ್ಮನು ಒಬ್ಬನೇ ನಾನಾವಿಧ ನಾಮಗಳಿಂದ ಹೇಳಿಕೊಳ್ಳಲ್ಪಡುತ್ತಾನೆಯೇ ಸರಿ. ॥ ೨ ॥

ಭಾ ॥ "ನ ಕೇವಲಂ ಪ್ರಾಣ ಏವ ಚೇತನಾನಾಂ ವಿಧಾರಕಃ ।
ಕಿಂತು ವಿಷ್ಣುಂ ಸಮಾಶ್ರಿತ್ಯ ಪ್ರಾಣೋ ಜೀವಾನ್ ಬಿಭರ್ತ್ಯಯಂ ।
ಅತೋ ಮುಖ್ಯಾಶ್ರಯೋ ವಿಷ್ಣುಶ್ಚೇತನಾನಾಂ ಸ್ವತಂತ್ರತಃ" ॥ ೫ ॥

ಅ ॥ ಸಮಸ್ತ ಚೇತನಗಳಿಗೂ ಧಾರಕನಾದವನು ಮುಖ್ಯಪ್ರಾಣದೇವರು ಮಾತ್ರವಲ್ಲ, ಮತ್ತೂ ಶ್ರೀಪರಮಾತ್ಮನನ್ನು ಆಶ್ರಯಿಸಿಕೊಂಡು ಮುಖ್ಯಪ್ರಾಣದೇವರು ಚೇತನಗಳನ್ನು ಧಾರಣೆ ಮಾಡಿಕೊಂಡಿದ್ದಾರೆ. ಆದುದರಿಂದ ಸಮಸ್ತ ಪ್ರಾಣಿಗಳಿಗೂ ಸ್ವತಂತ್ರವಾಗಿ ಶ್ರೀಪರಮಾತ್ಮನೇ ಮುಖ್ಯಾಶ್ರಯನಾಗಿರುತ್ತಾನೆ.

ಭಾ ॥ "ಅಗ್ನಿರ್ಯಥೈಕೋ ಲೋಕೇಷು ಪ್ರವಿಷ್ಟೋಽನ್ಯೋ ನ ವಿದ್ಯತೇ ।
ಪಾಕಾದಿಕರ್ತಾಽಥಾಪ್ಯಸ್ಯ ದೇವಸ್ಯ ಪ್ರತಿರೂಪಕಾಃ ।
ರೂಪಂ ರೂಪಂ ಪ್ರತಿಹ್ಯೇತೇ ಸಂತ್ಯಚೇತನವಹ್ನಯಃ ।
ಏವಂ ದೇವೋ ವಾಯುರಪಿ ಧಾರಕೋಽನ್ಯೋ ನ ವಿದ್ಯತೇ ।
ರೂಪಂ ರೂಪಂ ತಥಾಪ್ಯಸ್ಯ ಪ್ರತ್ಯಭೂತ್ಪ್ರತಿರೂಪಕಃ ।
ಅಚೇತನಃಸ್ಪರ್ಶಗಮ್ಯೋ ಯೋಽಯಮೇವಂ ಜನಾರ್ದನಃ" ॥ ೬ ॥

ಅ ॥ ಸಮಸ್ತಲೋಕಗಳಲ್ಲಿ ಪ್ರವಿಷ್ಟನಾಗಿ ಪಾಕಾದಿಗಳನ್ನು ಮಾಡುವ ಅಗ್ನಿದೇವತೆಯು ಒಬ್ಬನೇ ಆಗಿದ್ದಾನೆ. ಆದರೂ ಆ ಅಗ್ನಿದೇವತೆಯ ಪ್ರತಿಬಿಂಬಗಳಾದ ಅಚೇತನಗಳಾಗಿರುವ ಅಗ್ನಿಗಳು ಬಹಳ ಹೇಗೆ ಇರುತ್ತವೆಯೋ ಹಾಗೆ ಚೇತನವಾದ ವಾಯುದೇವತೆಯು ಸಮಸ್ತಕ್ಕೆ ಧಾರಕನಾದವನು ಒಬ್ಬನೇ ಆದರೂ ಲೋಕದಲ್ಲಿ ಸರ್ವತ್ರದಲ್ಲಿರುವ ಅಚೇತನ ವಾಯುವಿಗೆ ಬಿಂಬಭೂತನಾಗಿ ಒಬ್ಬನೇ ಇರುತ್ತಾನೆ. ಅವನ ಅಧೀನಗಳಾಗಿ ಅವನ ಅಂಶಗಳ

ಸದೃಶಗಳಾಗಿ ತ್ವಗಿಂದ್ರಿಯ ಪ್ರತ್ಯಕ್ಷಗಮ್ಯಗಳಾದ ಅಚೇತನ ವಾಯುಗಳು ಅವನ ಪ್ರತಿಬಿಂಬ ಗಳಾಗಿರುತ್ತವೆಯೋ ಈ ಪ್ರಕಾರವೇ ಶ್ರೀ ಹರಿಯು ಇದ್ದಾನೆ.

ಭಾ || "ಏಕಃಸ್ವತಂತ್ರೋ ನಾನ್ಯೋಽಸ್ತಿ ಸರ್ವಜೀವಾಂತರಸ್ಥಿತಃ |
ರೂಪಂ ರೂಪಂ ಪ್ರತಿಹ್ಯಸ್ಯ ಪ್ರತಿಬಿಂಬಾಶ್ಚ ಚೇತನಾಃ |
ಬಾಹ್ಯಾಶ್ಚ ತೇ ತತೋ ನಾಸ್ಯ ಸ್ವರೂಪಂ ತೇ ಕಥಂಚನ |
ಅನಾದಿಪ್ರತಿಬಿಂಬಾಶ್ಚ ಬಭೂವುಸ್ತೇ ಹ್ಯನಂತಕಾಃ" || ೯ ||

ಅ || ಸಮಸ್ತ ಪ್ರಾಣಿಗಳ ಹೃದಯಕಮಲದಲ್ಲಿ ಆವಾಸಮಾಡಿಕೊಂಡಿರುವ ಶ್ರೀ ಪರ ಮಾತ್ಮನು ಒಬ್ಬನೇ ಸ್ವತಂತ್ರನು. ಅವನಿಂದ ಅತಿರಿಕ್ತರು ಯಾರೂ ಸ್ವತಂತ್ರರಿಲ್ಲ. ಆ ಶ್ರೀ ಪರಮಾ ತ್ಮನ ಪ್ರತಿರೂಪವನ್ನು ಅನುಸರಿಸಿಕೊಂಡು ಸಮಸ್ತ ಜೀವರು ಪ್ರತಿಬಿಂಬ ಭೂತರಾಗಿದ್ದಾರೆ. ಆ ಶ್ರೀ ಪರಮಾತ್ಮನಿಂದ ಬಹಿಃಪ್ರದೇಶದಲ್ಲಿ ಇರುವವರು, ಆ ಜೀವರು ಯಾವಕಾರಣದಿಂದಲೂ ಆತನ ಸ್ವರೂಪಭೂತರಾಗಲಾರರು. ಅನಂತಾನಂತ ಪ್ರಾಣಿಗಳೂ ಕೂಡ ಅನಾದಿಕಾಲದಿಂದ ಪ್ರತಿಬಿಂಬಭೂತರೇ ಆಗಿರುತ್ತಾರೆ || ೧೦ ||

ಭಾ || "ಸೂರ್ಯೋಯಥಾಂತರಂ ಚಕ್ಷುಃ ಪ್ರತಿಬಿಂಬೋಽಸ್ಯ ಬಾಹ್ಯಕಂ |
ಬಾಹ್ಯಚಕ್ಷುರ್ಗತೈರ್ದೋಷೈರಂತಶ್ಚಕ್ಷುರ್ನ ಲಿಪ್ಯತೇ |
ಅಂತಶ್ಚಕ್ಷುರ್ದೇವತಾ ತು ಬಾಹ್ಯಂ ಚಕ್ಷುರಚೇತನಂ |
ಏವಂ ಬಾಹ್ಯಸ್ವತಂತ್ರತ್ವಾಜ್ಜೀವೇಭ್ಯಃ ಪುರುಷೋತ್ತಮಃ |
ಅಸ್ವತಂತ್ರಸ್ಯ ಜೀವಸ್ಯ ದುಃಖೈರ್ನೈವ ಹಿ ಲಿಪ್ಯತೇ |
ಚೇತನಾಭಾಸಕೋ ಜೀವಃ ಪರಮಶ್ಚೇತನೋ ಹರಿಃ |
ಸ್ವತಂತ್ರತ್ವಾತ್ಸ್ವತಂತ್ರೋ ಹಿ ನೈವ ದೋಷೇಣ ಲಿಪ್ಯತೇ" ||
- ಇತಿ ಕೌರ್ಮೇ ||

ಅ || ಹೇಗೆ ಅಂತರ್ವಿದ್ಯಮಾನವಾದ ಚಕ್ಷುಸ್ಸಿಗೆ ಅಭಿಮಾನಿ ದೇವತೆಯಾದ ಸೂರ್ಯ ನಿಗೆ ಬಹಿರ್ವಿದ್ಯಮಾನವಾದ ಚಕ್ಷುಸ್ಸು ಪ್ರತಿಬಿಂಬಭೂತವಾದರೂ ಆ ಬಾಹ್ಯಚಕ್ಷುರ್ಗತ ದೋಷ ಗಳಿಂದ ಅಂತರ್ವಿದ್ಯಮಾನನಾದ ಸೂರ್ಯನು ಲೇಪವುಳ್ಳವನಾಗುವುದಿಲ್ಲವೋ, ಅಂತರ್ವಿದ್ಯ ಮಾನವಾದ ಚಕ್ಷುಶ್ಶಬ್ದವಾಚ್ಯನಾದವನು ಅಭಿಮಾನಿಯಾದ ಸೂರ್ಯನು, ಬಹಿರ್ವಿದ್ಯಮಾನ ವಾದ ಚಕ್ಷುಸ್ಸು ಅಚೇತನ ಅಂದರೆ ಜಡವಾದದ್ದೆಯೋ, ಹಾಗೆಯೇ ಜೀವರಿಂದ ಭಿನ್ನನಾಗಿರುವ ಶ್ರೀ ಪರಮಾತ್ಮನು ಸ್ವತಂತ್ರನಾಗಿರುವದರಿಂದ ಅಸ್ವತಂತ್ರನಾಗಿರುವ ಜೀವನ ದುಃಖಗಳಿಂದ ಲೇಪವುಳ್ಳವನಾಗುವುದಿಲ್ಲ. ಜೀವನು ಚೇತನಾಭಾಸರೂಪನು, ಶ್ರೀ ಪರಮಾತ್ಮನಾದರೂ ಉತ್ಕೃಷ್ಟ ಚೇತನರೂಪನು, ಸ್ವತಂತ್ರನಾಗಿರುವದರಿಂದ ದೋಷದಿಂದ ಲೇಪವುಳ್ಳವನಾಗುವು ದಿಲ್ಲ. ಹೀಗೆ ಕೌರ್ಮಪುರಾಣದಲ್ಲಿ ದುಃಖವಿಲ್ಲವೆಂಬುವದಾಗಿ ಹೇಳಿದ್ದರಿಂದ ಅಜ್ಞಾನಾದಿಗಳು ಯಾವದೂ ಇಲ್ಲವೆಂಬುವ ತಾತ್ಪರ್ಯವು. || ೧೨ ||

ಭಾ || ಸ ಏಕ ಏವ ಸರ್ವಭೂತಾಂತರಾತ್ಮಾ |
ತಸ್ಯ ರೂಪಂ ರೂಪಂ ಪ್ರತಿರೂಪಾಖ್ಯೋ ಜೀವೋ ಬಭೂವ |
ಬಹಿಶ್ಚಾಸೌ ಪರಮಾತ್ಮನೋ ನಿತರಾಂ ಭಿನ್ನಃ | ಪರತಂತ್ರತ್ವಾತ್ ||

ಅ || ಶ್ರೀಪರಮಾತ್ಮನು ಒಬ್ಬನೇ ಸಮಸ್ತ ಪ್ರಾಣಿಗಳಿಗೆ ಅಂತರ್ನಿಯಾಮಕನು, ಆತನ ಪ್ರತಿ ಒಂದು ರೂಪವನ್ನು ಕುರಿತು ಜೀವನು ಪ್ರತಿಬಿಂಬ ರೂಪನಾಗಿದ್ದಾನೆ, ಈ ಜೀವನು ಬಹಿಃ ಅಂದರೆ ಪರಾಧೀನನಾದುದರಿಂದ ಪರಮಾತ್ಮನಿಂದ ಅತ್ಯಂತ ಭಿನ್ನನಾಗಿದ್ದಾನೆಯೇ ಸರಿ. ||

**ಭಾ** || ಆತ್ಮೈವೇದಮಗ್ರ ಆಸೀದಿತ್ಯಾದಿವದನಾದಿತ್ವಾಪೇಕ್ಷಯಾ ||

ಅ|| ಇದೇ ರೀತಿ ಸರ್ವಕಾಲದಲ್ಲಿಯೂ ಆಗಿರುತ್ತದೆಯಾದುದರಿಂದ ಪ್ರಳಯಕಾಲದಲ್ಲಿ ಶ್ರೀಪರಮಾತ್ಮನು ಒಬ್ಬನೇ ಆಗಿದ್ದನು ಎಂಬುವ ಪ್ರಯೋಗದಂತೆ ಬಭೂವ ಎಂಬುವದೂ ಕೂಡಬಹುದು.

**ಭಾ** || "ಆತ್ಮನಿಷ್ಠಂ ಹರಿಂ ಜಾನನ್ ಮುಚ್ಯತೇ ನಾತ್ರ ಸಂಶಯಃ |
ಜೀವೈಕ್ಯೇನ ತು ತಂ ಧ್ಯಾಯಂಸ್ತಮಸ್ಯಂಧೇ ಪತೇದ್ಧ್ರುವಂ" ||
ಇತಿ ಚ || ೧೨ ||

ಅ|| ತನ್ನ ಹೃದಯದಲ್ಲಿ ನಿಯಾಮಕನಾಗಿರುವ ಶ್ರೀಪರಮಾತ್ಮನನ್ನು ತಿಳಿದವನು ಮುಕ್ತನಾಗುತ್ತಾನೆ, ಈ ವಿಷಯದಲ್ಲಿ ಸಂದೇಹವಿಲ್ಲ. ಜೀವರಿಂದ ಅಭಿನ್ನನಾಗಿದ್ದಾನೆ ಅಂದರೆ ತಾನೂ ಪರಮಾತ್ಮನೂ ಒಬ್ಬನೇ ಎಂಬುವುದಾಗಿ ತಿಳಕೊಂಡು ಧ್ಯಾನಮಾಡಿದರೆ ನಿಶ್ಚಯವಾಗಿ ಅಂಧಂತಮಸ್ಸಿನಲ್ಲಿ ಬೀಳುತ್ತಾನೆ. ಶಾಶ್ವತವಾಗಿ ದುಃಖವನ್ನು ಅನುಭವಿಸುತ್ತಾನೆ.

**ಭಾ** || ಏತದೇವ ಭಗವದ್ರೂಪಂ ಪರಮಂ ಸುಖಂ |
ಜ್ಞಾನಿಸುಖಂ ತು ತದ್ವಿಪ್ರುಣ್ಮಾತ್ರಂ ||

ಅ|| ಈ ಪ್ರಕಾರವಾಗಿ ಹೇಳಿದ ಶ್ರೀಪರಮಾತ್ಮನ ಸ್ವರೂಪವೇ ಪರಮಸುಖರೂಪವಾದದ್ದು. ಜ್ಞಾನಿಗಳಿಗೆ ಆಗುವ ಸುಖವಾದರೂ ಶ್ರೀಪರಮಾತ್ಮನ ಸುಖಕ್ಕೆ ಆಭಾಸರೂಪವಾದುದರಿಂದ ಅತ್ಯಲ್ಪವೇ ಸರಿ.

**ಭಾ** || "ಬ್ರಹ್ಮಾದೀನಾಂ ಚ ಮುಕ್ತಾನಾಂ ಸುಖಂ ವಿಷ್ಣುಸುಖಸ್ಯ ತು ||
ಪ್ರತಿಬಿಂಬಸ್ತು ವಿಪ್ರುಟ್ಕೋ ವಿಷ್ಣೋರೇವ ಪರಂ ಸುಖಂ" ||

ಅ || ಮುಕ್ತರಾದ ಬ್ರಹ್ಮಾದಿದೇವತೆಗಳಿಗೆ ಆಗುವ ಸುಖವೂ ಶ್ರೀಪರಮಾತ್ಮನ ಸುಖಕ್ಕೆ ಪ್ರತಿಬಿಂಬ ಅಂದರೆ ಆಭಾಸರೂಪವಾದುದರಿಂದ ಅದರ ಏಕದೇಶವೇ ಸರಿ, ಶ್ರೀಪರಮಾತ್ಮನಿಗೇನೇ ಉತ್ಕೃಷ್ಟ ಸುಖವು.

**ಭಾ** || "ಸಮ್ಯಗ್ಭಾತಿ ನ ಭಾತೀತಿ ಜಾನೀಯಾಂ ತತ್ಕಥಂ ನ್ವಹಂ |
ತತ್ಪ್ರಸಾದಮೃತೇ ದಿವ್ಯಮನಿರ್ದೇಶ್ಯಂ ಪರಂ ಸುಖಂ" ||
ಇತಿ ಚ ಮಹಾವಾರಾಹೇ || ೧೪ ||

ಅ || ಶ್ರೀಪರಮಾತ್ಮನ ಸ್ವರೂಪವು ಚನ್ನಾಗಿ ತೋರುತ್ತದೆಯೋ ಎಂದು ಕೇಳಿದರೆ ತೋರುವದಿಲ್ಲ. ಆದುದರಿಂದ ಅದನ್ನು ನಾನು ಹೇಗೆ ಚೆನ್ನಾಗಿ ತಿಳಿಯಲಿ, ಹೀಗೆಯೇ ಅದೆ ಎಂಬುವುದಾಗಿ ನಿರ್ದೇಶ ಮಾಡಲಿಕ್ಕೆ ಅಶಕ್ಯವಾಗಿಯದೆ, ಪರಮಸುಖರೂಪವಾದದ್ದು ಅಲೌಕಿಕವಾದದ್ದು, ಆತನ ಅನುಗ್ರಹವಿಲ್ಲದೆ ತಿಳಿಯಲಶಕ್ಯವು. ಶ್ರೀಪರಮಾತ್ಮನ ಅನುಗ್ರಹದಿಂದಲೇ ಅಪರೋಕ್ಷವಾಗಲೀ ಮುಕ್ತಿಯಾಗಲೀ ಆದೀತಲ್ಲದೆ ಬೇರೆ ಉಪಾಯಗಳಿಂದ ಆಗಲಾರದೆಂದು ತಾತ್ಪರ್ಯ.

|| **ಕಾಠಕಭಾಷ್ಯೇ ದ್ವಿತೀಯಾಧ್ಯಾಯಸ್ಯ ದ್ವಿತೀಯಾವಲ್ಲೀ ಸಮಾಪ್ತಾ.**

## ದ್ವಿತೀಯಾಧ್ಯಾಯಸ್ಯ ತೃತೀಯಾವಲ್ಲೀ ಆರಭ್ಯತೇ.

ಶ್ರೀ ಪರಮಾತ್ಮನ ಮಹಿಮೆಗಳನ್ನು ಸಾಧುಗಳಿಗೆ ಬುದ್ಧಿಯಲ್ಲಿ ಧೃಢವಾಗುವದಕ್ಕಾಗಿ ಲೋಕದಲ್ಲಿ ಪ್ರಸಿದ್ಧವಾದ ವಸ್ತುವಿನ ಸಾಮ್ಯದಿಂದ ಮಹಿಮೆಗಳನ್ನು ಹೇಳುತ್ತಾರೆ.

**ಮಂ ॥ ಊರ್ಧ್ವಮೂಲೋಽವಾರ್ಕ್‌ಶಾಖ ಏಷೋಽಶ್ವತ್ಥಃ ಸನಾತನಃ। ತದೇವ ಶುಕ್ರಂ ತದ್ಬ್ರಹ್ಮ ತದೇವಾಮೃತಮುಚ್ಯತೇ। ತಸ್ಮಿಂಲ್ಲೋಕಾಃ ಶ್ರಿತಾಃ ಸರ್ವೇ ತದು ನಾತ್ಯೇತಿ ಕಶ್ಚನ। ಏತದ್ವೈತತ್ ॥ ೧ ॥**

ಅ॥ ಊರ್ಧ್ವ=ಸರ್ವಶ್ರೇಷ್ಠನಾದ ಶ್ರೀ ಪರಮಾತ್ಮನು, ಮೂಲಃ=ಬುಡವಾಗಿವುಳ್ಳ ಅವಾರ್ಕ್‌ಶಾಖಃ-ಅವಾರ್ಕ್=ಅಧಮರಾದ ಬ್ರಹ್ಮಾದಿದೇವತೆಗಳೇ, ಶಾಖಃ=ಗೆಲ್ಲಗಳಾಗಿ ಉಳ್ಳ; ಏಷಃ=ಪ್ರಸಿದ್ಧನಾದ, ಅಶ್ವತ್ಥಃ=ಜಗದಾಖ್ಯ ವೃಕ್ಷವು, ಸನಾತನಃ=ಪ್ರವಾಹತಃ ಅನಾದಿಯಾದುದು, ತದೇವ ಬ್ರಹ್ಮ=ಆ ಶ್ರೀಪರಮಾತ್ಮನೇ, ಶುಕ್ರಂ=ಶೋಕರಹಿತನು, ತದೇವಾಮೃತ ಮುಚ್ಯತೇ=ಅವನೇ ನಾಶರಹಿತನೆಂದು ಹೇಳಲ್ಪಡುತ್ತಾನೆ, ಸರ್ವೇಲೋಕಾಃ=ಸಮಸ್ತಪ್ರಾಣಿಗಳು, ತಸ್ಮಿನ್=ಆ ಶ್ರೀ ಪರಮಾತ್ಮನಲ್ಲಿ, ಶ್ರಿತಾಃ=ಆಶ್ರಯಿಸಿಕೊಂಡು ಇರುವವರು, ತದು=ಆ ಪರಬ್ರಹ್ಮನನ್ನು, ಕಶ್ಚನ=ಯಾರಾದರೂ, ನಾತ್ಯೇತಿ=ಅತಿಕ್ರಮಿಸಿಕೊಂಡು ಇರುವದಿಲ್ಲ, ಏತದ್ವೈತತ್=ನೀನು ಪ್ರಶ್ನೆಮಾಡಿದ ಶ್ರೀಪರಮಾತ್ಮನಸ್ವರೂಪವು ಈ ಪ್ರಕಾರ ಹೇಳಲ್ಪಟ್ಟ ಗುಣಗಳುಳ್ಳದ್ದೇಸರಿ. ॥ ೧ ॥

**ಮಂ ॥ ಯದಿದಂ ಕಿಂಚ ಜಗತ್ಸರ್ವಂ ಪ್ರಾಣ ಏಜತಿ ನಿಃಸೃತಂ। ಮಹದ್ಭಯಂ ವಜ್ರಮುದ್ಯತಂ ಯ ಏತದ್ವಿದುರಮೃತಾಸ್ತೇ ಭವಂತಿ ॥ ೨ ॥**

ಅ॥ ಯದಿದಂ=ಆ ಈ ದಾವ, ಸರ್ವಂ=ಸಮಸ್ತವಾದ, ಜಗತ್=ಲೋಕವು, ಪ್ರಾಣೇ=ಪ್ರಾಣಶಬ್ದವಾಚ್ಯನಾದ ಶ್ರೀಪರಮಾತ್ಮನಲ್ಲಿ, (ಸ್ಥಿತಂ=ವಿದ್ಯಮಾನವಾಗಿಯದೋ), (ಪ್ರಾಣಾತ್=ಪ್ರಾಣಶಬ್ದವಾಚ್ಯನಾದ ಶ್ರೀಪರಮಾತ್ಮನಿಂದ), ನಿಃಸೃತಂ=ಉತ್ಪನ್ನವಾಗಿಯದೋ, (ತದಿದಂ=ಆ ಈ ದಾವ ಜಗತ್ತು), (ಯಸ್ಮಾತ್=ಯಾವ ಶ್ರೀಪರಮಾತ್ಮನಿಂದ), ಏಜತಿ=ಚೇಷ್ಟಾಯುಕ್ತವಾಗಿಯದೋ, (ತತ್=ಆ ಶ್ರೀಪರಮಾತ್ಮನು), ವಜ್ರಂ=ವಜ್ರದಂತೆ, ಮಹದ್ಭಯಂ=ಮಹತ್ತಾದ ಭಯವನ್ನು ಕೊಡುವದು, ಉದ್ಯತಂ=ಉತ್ಕೃಷ್ಟವಾದ ಪ್ರಯತ್ನವುಳ್ಳದ್ದು, ಏತತ್=ಈ ಪರಬ್ರಹ್ಮನನ್ನು, ಯೇ=ಯಾವ ಪುರುಷರು, ವಿದುಃ=ತಿಳಿಯುತ್ತಾರೊ, ತೇ=ಅವರು, ಅಮೃತಾಃ=ಮುಕ್ತರು, ಭವಂತಿ=ಆಗುತ್ತಾರೆ.

**ಮಂ ॥ ಭಯಾದಸ್ಯಾಗ್ನಿಸ್ತಪತಿ ಭಯಾತ್ತಪತಿ ಸೂರ್ಯಃ। ಭಯಾದಿಂದ್ರಶ್ಚ ವಾಯುಶ್ಚ ಮೃತ್ಯುರ್ಧಾವತಿ ಪಂಚಮಃ ॥ ೩ ॥**

ಅ॥ ಅಸ್ಯ=ಈ ಪರಮಾತ್ಮನ, ಭಯಾತ್=ಭೀತಿಯಿಂದ, ಅಗ್ನಿಃ=ಅಗ್ನಿಯು, ತಪತಿ=ಪ್ರಕಾಶಿಸುತ್ತಾನೆ, ಸೂರ್ಯಃ=ಆದಿತ್ಯನು, ಭಯಾತ್=ಹೆದರಿಕೆಯಿಂದ, ತಪತಿ=ಸುಡುವವನಾಗಿದ್ದಾನೆ, ಹಾಗೆ, ಇಂದ್ರಶ್ಚ=ಇಂದ್ರನೂ ಕೂಡ, ಭಯಾತ್=ಭೀತಿಯಿಂದ, ವರ್ಷತಿ=ಮಳೆ ಸುರಿಸುತ್ತಾನೆ, ವಾಯುಶ್ಚ=ಕೋಣಾಧಿಪನಾದ ವಾಯುವು ಕೂಡ, ವಾತಿ=ಘಾಳಿಯನ್ನು ವೀಜಿಸುತ್ತಾನೆ, ಪಂಚಮಃ=ಐದನೆಯವನಾದ, ಮೃತ್ಯುಶ್ಚ=ಯಮನೂ ಕೂಡ, ಭಯಾತ್=ಭೀತಿಯಿಂದ, ಧಾವತಿ=ತನ್ನ ವ್ಯಾಪಾರದಲ್ಲಿ ಅತಿ ತ್ವರೆ ಉಳ್ಳವನಾಗಿದ್ದಾನೆ. ॥ ೩ ॥

ಮಂ ॥ ಇಹ ಚೇದಶಕದ್ಬೋದ್ಧುಂ ಪ್ರಾಕ್ಶರೀರಸ್ಯ ವಿಸ್ರಸಃ। ತತಃ ಸ್ವರ್ಗೇಷು ಲೋಕೇಷು ಶರೀರತ್ವಾಯ ಕಲ್ಪತೇ ॥ ೪ ॥

ಅ॥ ಇಹ=ಮನುಷ್ಯ ದೇಹದಲ್ಲಿ, ಶರೀರಸ್ಯ=ಪಾಂಚ ಭೌತಿಕ ದೇಹದ, ವಿಸ್ರಸಃ= ಪರಿತ್ಯಾಗ ದೆಸೆಯಿಂದ, ಪ್ರಾಕ್=ಪೂರ್ವದಲ್ಲಿ, ಬೋದ್ಧುಂ=ತಿಳಿಯುವದಕ್ಕೋಸ್ಕರ, ಅಶಕತ್ ಚೇತ್=ಶಕ್ತನಾದರೆ, ಸಃ=ಆ ಮನುಷ್ಯನು, ತತಃ=ಮೃತ್ಯು ನಂತರದಲ್ಲಿ, ಸ್ವರ್ಗೇಷುಲೋಕೇಷು= ವೈಕುಂಠಾದಿ ಲೋಕಗಳಲ್ಲಿ, ಶರೀರತ್ವಾಯ=ಜ್ಞಾನಾನಂದಾತ್ಮಕ ದೇಹವನು ಪ್ರಾಪಿಸುವು ದಕ್ಕೆ, ಕಲ್ಪತೇ =ಯೋಗ್ಯನಾಗುತ್ತಾನೆ ॥ ೪ ॥

ಮಂ ॥ ಯಥಾಽಽದರ್ಶೇ ತಥಾಽಽತ್ಮನಿ ಯಥಾ ಸ್ವಪ್ನೇ ತಥಾ ಪಿತೃಲೋಕೇ। ಯಥಾಽಪ್ಸು ಪರೀವ ದೃಶ್ಯತೇ ತಥಾ ಗಂಧರ್ವಲೋಕೇ। ಛಾಯಾ ತಪಯೋರಿವ ಬ್ರಹ್ಮಲೋಕೇ ॥ ೫ ॥

ಅ ॥ ಆತ್ಮನಿ=ಜೀವನಲ್ಲಿ (ವಿದ್ಯಮಾನನಾದ ಶ್ರೀ ಪರಮಾತ್ಮನು), ಆದರ್ಶೇ=ದರ್ಪಣ ದಲ್ಲಿ, ಯಥಾ=ಹೇಗೆ, ದೃಶ್ಯತೇ=ಕಾಣಿಸಿಕೊಳ್ಳಲ್ಪಡುವುದೋ, ತಥಾ=ಹಾಗೆ ಸ್ಪಷ್ಟವಾಗಿ ಜ್ಞಾನದೃಷ್ಟಿಗಳಿಂದ ಕಾಣಿಸಿಕೊಳ್ಳಲ್ಪಡುತ್ತಾನೆ, ಯಥಾ=ಹೇಗೆ, ಸ್ವಪ್ನೇ=ಸ್ವಪ್ನಾವಸ್ಥೆಯಲ್ಲಿ, (ಪದಾರ್ಥವು ಅಸ್ಪಷ್ಟವಾಗಿ ಕಾಣಿಸಿಕೊಳಲ್ಪಡುತ್ತದೋ), ತಥಾ=ಹಾಗೆ, ಪಿತೃಲೋಕೇ=ಪಿತೃ ಲೋಕದಲ್ಲಿ, (ದೃಶ್ಯತೇ=ಕಾಣಿಸಿಕೊಳ್ಳಲ್ಪಡುತ್ತದೆ), ಯಥಾ=ಹೇಗೆ, ಅಪ್ಸು=ಜಲಗಳಲ್ಲಿ, ಪರೀವ= ಪ್ರತಿಮುಖವು (ಕಾಣಿಸಿಕೊಳ್ಳಲ್ಪಡುತ್ತದೆಯೊ) ತಥಾ=ಹಾಗೆ, ಗಂಧರ್ವ ಲೋಕೇ=ಗಂಧರ್ವ ಲೋಕದಲ್ಲಿ, (ಸ್ವಲ್ಪ ಸ್ಪಷ್ಟವಾಗಿ ತೋರುತ್ತದೆ), ಬ್ರಹ್ಮ ಲೋಕೇತು=ಸತ್ಯ ಲೋಕದಲ್ಲಿ ಆದರೂ, ಛಾಯಾತಪಯೋಃ=ನೆರಳು ಬೆಳಕು ಕೂಡಿದ ಪ್ರದೇಶದಲ್ಲಿ ಹಗಲಿನಲ್ಲಿ ಪದಾರ್ಥವು ಹೇಗೆ ತೋರುತ್ತದೆಯೋ, ಹಾಗೆ ಶ್ರೀ ಪರಮಾತ್ಮನು ಕಾಣಿಸಿಕೊಳ್ಳಲ್ಪಡುತ್ತಾನೆ.

ಮಂ ॥ ಇಂದ್ರಿಯಾಣಾಂ ಪೃಥಗ್ಭಾವಮುದಯಾಸ್ತಮಯೌ ಚ ಯತ್। ಪೃಥಗುತ್ಪದ್ಯಮಾನಾನಾಂ ಮತ್ವಾ ಧೀರೋ ನ ಶೋಚತಿ ॥ ೬ ॥

ಅ ॥ ಯತ್=ಯಾವ, ಇಂದ್ರಿಯಾಣಾಂ=ಚಕ್ಷುರಾದಿಂದ್ರಿಯಗಳಿಗೆ, ಪೃಥಗ್ಭಾವಂ= ತಾರತಮ್ಯವು, ಉದಯಾಸ್ತಮಯೌ=ಉತ್ಪತ್ತಿ ನಾಶಗಳು ಕೂಡ, ಭವತಃ=ಆಗುತ್ತವೆಯೋ, ಪೃಥಕ್=ನಾನಾಪ್ರಕಾರವಾಗಿ, ಉತ್ಪದ್ಯಮಾನಾನಾಂ=ಹುಟ್ಟತಕ್ಕ ಇಂದ್ರಿಯಾದಿಗಳಿಗೂ, ಸತ್ತಾಪ್ರತೀತ್ಯಾದಿಗಳನ್ನೂ, ಮತ್ವಾ=ಭಗವದಧೀನವೆಂದು ತಿಳಕೊಂಡು, ಧೀರಃ=ಜ್ಞಾನಿಯು, ನ ಶೋಚತಿ=ದುಃಖಪಡುವದಿಲ್ಲ. ॥ ೬ ॥

ಮಂ ॥ ಇಂದ್ರಿಯೇಭ್ಯಃ ಪರಂ ಮನೋ ಮನಸಸ್ಸತ್ವಮುತ್ತಮಂ। ಸತ್ವಾ ದಧಿ ಮಹಾನಾತ್ಮಾ ಮಹತೋಽವ್ಯಕ್ತಮುತ್ತಮಂ ॥ ೭ ॥ ಅವ್ಯಕ್ತಾ ತ್ತು ಪರಃ ಪುರುಷೋ ವ್ಯಾಪಕೋಽಲಿಂಗ ಏವ ಚ । ತಂ ಜ್ಞಾತ್ವಾ ಮುಚ್ಯತೇ ಜಂತುರಮೃತತ್ವಂ ಚ ಗಚ್ಛತಿ ॥ ೮ ॥

ಅ ॥ ಇಂದ್ರಿಯೇಭ್ಯಃ=ಚಕ್ಷುರಾದಿಂದ್ರಿಯಗಳಿಂದ, ಮನಃ=ಮನಸ್ಸು, ಪರಂ= ಶ್ರೇಷ್ಠವಾದದ್ದು, ಮನಸಃ=ಮನಸ್ಸಿನಿಂದ, ಸತ್ವಂ=ಬುದ್ಧಿಯು, ಉತ್ತಮಂ=ಶ್ರೇಷ್ಠವಾದದ್ದು, ಸತ್ವಾತ್=ಬುದ್ಧಿಯಿಂದ, ಅಂದರೆ ಬುದ್ಧಿ ತತ್ವಾಭಿಮಾನಿ ಸರಸ್ವತಿಯಿಂದ, ಮಹಾನ್=ಮಹ

ತ್ತತ್ವಾಭಿಮಾನಿಯಾದ ಚತುರ್ಮುಖನು, ಅಧಿ=ಉತ್ತಮನು, ಮಹತಃ=ಆ ಚತುರ್ಮುಖ ನಿಂದ, ಅವ್ಯಕ್ತಂ=ರಮಾದೇವಿಯು, ಉತ್ತಮಂ=ಶ್ರೇಷ್ಠಳು, ಅವ್ಯಕ್ತಾತ್=ರಮಾ ದೇವಿಯಿಂದ, ಪುರುಷಃ=ಶ್ರೀಪರಮಾತ್ಮನು, ಪರಃ=ಉತ್ತಮನು, ಸಃ=ಆ ಪರಮಾತ್ಮನು, ವ್ಯಾಪಕಃ=ಅಪರಿಚ್ಛಿನ್ನನು, ಅಲಿಂಗಃ=ಪ್ರಾಕೃತ ಭೌತಿಕ ದೇಹರಹಿತನು, ತಂ=ಆ ಶ್ರೀಪರ ಮಾತ್ಮನನ್ನು, ಜ್ಞಾತ್ವಾ=ತಿಳಿದು, ಮುಚ್ಯತೇ=ಸಂಸಾರಪಾಶದಿಂದ ಮುಕ್ತನಾಗುತ್ತಾನೆ; ಜಂತುಃ= (ಈ ಪ್ರಕಾರ ಸಂಸಾರದಿಂದ ಬಿಡುಗಡೆ ಹೊಂದಿದ) ಜೀವನು, ಅಮೃತತ್ವಂ ಚ=ಶಾಶ್ವತಸುಖವನ್ನು ಪ್ರಾಪಿಸುತ್ತಾನೆ. ॥ ೭-೮ ॥

**ಮಂ ॥ ನ ಸಂದೃಶೇ ತಿಷ್ಠತಿ ರೂಪಮಸ್ಯ ನ ಚಕ್ಷುಷಾ ಪಶ್ಯತಿ ಕಶ್ಚಿದೇನಂ ।**
**ಹೃದಾ ಮನೀಷಾ ಮನಸಾಽಭಿಕ್ಲಪ್ತೋ ಯ ಏನಂ ವಿದುರಮೃ**
**ತಾಸ್ತೇ ಭವಂತಿ ॥ ೯ ॥**

ಅ ॥ ಸಂದೃಶೇ=ಸಮ್ಯಕ್‌ಜ್ಞಾನಕ್ಕೋಸ್ಕರ, ಅಸ್ಯ=ನಾನಾವತಾರ ಕಾರಣಭೂತನಾದ ಮೂಲರೂಪಿಯಾದ ಶ್ರೀಪರಮಾತ್ಮನ, ರೂಪಂ=ಸ್ವರೂಪವು, ನ ತಿಷ್ಠತಿ=ಇರುವುದಿಲ್ಲ, ಕಶ್ಚಿ ದಪಿ=ಯಾವನೊಬ್ಬನೂ, ಏನಂ=ಶ್ರೀಪರಮಾತ್ಮನನ್ನು, ಚಕ್ಷುಷಾ=ಚಕ್ಷುರಾದಿಂದ್ರಿಯಗ ಳಿಂದ, ನ ಪಶ್ಯತಿ=ನೋಡುವದಿಲ್ಲ, ಹೃದಾ=ಶಾಸ್ತ್ರಶ್ರವಣಮನನಧ್ಯಾನ ಭಕ್ತ್ಯಾದಿ ಸಾಧನಗ ಳಿಂದ ಯುಕ್ತವಾದ ಮನಸ್ಸಿನಿಂದ, ಮನೀಷಾ=ಜ್ಞಾನಿರೂಪಿಯಾದ ಶ್ರೀಪರಮಾತ್ಮನು, ಅಭಿ ಕ್ಲಪ್ತಃ=ವಿಷಯೀಕೃತನು, ಯೇ=ಯಾವ ಪುರುಷರು, ಏನಂ=ಏತಾದೃಶಮಹಿಮೋಪೇತ ನಾದ ಶ್ರೀಪರಮಾತ್ಮನನ್ನು, ವಿದುಃ=ಮೊದಲು ಹೇಳಿದರೀತಿಯಿಂದ ತಿಳಿಯುತ್ತಾರೊ, ತೇ= ಅವರು, ಅಮೃತಾಃ=ಮುಕ್ತರು, ಭವಂತಿ=ಆಗುತ್ತಾರೆ ॥ ೯ ॥

**ಮಂ ॥ ಯದಾ ಪಂಚಾವತಿಷ್ಠಂತೇ ಜ್ಞಾನಾನಿ ಮನಸಾ ಸಹ । ಬುದ್ಧಿಶ್ಚ**
**ನ ವಿಚೇಷ್ಟತಿ ತಾಮಾಹುಃ ಪರಮಾಂ ಗತಿಂ ॥ ೧೦ ॥**

ಅ ॥ ಜ್ಞಾನಾನಿ=ಜ್ಞಾನಸಾಧನಗಳಾದ, ಪಂಚ=ಐದು ಚಕ್ಷುರಾದಿಂದ್ರಿಯಗಳು, ಮನಸಾ=ಮನೋನಾಮಕ ಇಂದ್ರಿಯದಿಂದ, ಸಹ=ಕೂಡಿಕೊಂಡು, ಯದಾ=ಯಾವಾಗ ಅವತಿಷ್ಠಂತೇ=ವಿಷಯಗಳಿಂದ ವ್ಯಾವೃತ್ತಗಳಾಗಿರುತ್ತಾವೋ, ಬುದ್ಧಿಶ್ಚ=ಬುದ್ಧಿಯು ಕೂಡಾ, ನ ವಿಚೇಷ್ಟತಿ=ವಿಷಯಗಳನ್ನು ಕುರಿತು ಪ್ರವರ್ತಿಸುವುದಿಲ್ಲವೋ, ತಾಂ=ಇಂದ್ರಿಯಧಾರಣೆ ಯನ್ನು, ಪರಮಾಂ ಗತಿಂ=ಉತ್ತಮವಾದ ಸಾಧನವೆಂಬುವದಾಗಿ, ಆಹುಃ=ಹೇಳಿದ್ದಾರೆ. ॥೧೦॥

**ಮಂ ॥ ತಾಂ ಯೋಗಮಿತಿ ಮನ್ಯಂತೇ ಸ್ಥಿರಾಮಿಂದ್ರಿಯಧಾರಣಾಂ । ಅಪ್ರ**
**ಮತ್ತಸ್ತದಾ ಭವತಿ ಯೋಗೋ ಹಿ ಪ್ರಭವಾಪ್ಯಯೌ ॥ ೧೧ ॥**

ಅ ॥ ತಾಂ=ಪೂರ್ವೋಕ್ತವಾದ, ಸ್ಥಿರಾಂ=ಚಲನರಹಿತವಾದ, ಇಂದ್ರಿಯಧಾರಣಾಂ= ಇಂದ್ರಿಯಗಳನ್ನು ವಿಷಯಗಳಿಂದ ತಿರುಗಿಸಿ ಭಗವಂತನಲ್ಲಿ ನಿಲ್ಲಿಸುವಿಕೆಯು, ಯೋಗಮಿತಿ= ಧ್ಯಾನಸಮಾಧಿಲಕ್ಷಣವಾದ ಯೋಗವೆಂದು, (ಪ್ರಾಜ್ಞಾಃ=ಜ್ಞಾನಿಗಳು,) ಮನ್ಯಂತೇ=ತಿಳಿಯು ತ್ತಾರೆ, ತದಾ=ಆ ಸಮಯದಲ್ಲಿ, ಅಪ್ರಮತ್ತಃ=ಭಗವಜ್ಜ್ಞಾನಿಯು, ಭವತಿ=ಆಗುತ್ತಾನೆ, ಪ್ರಭವಾಪ್ಯಯೌ=ಉತ್ಪತ್ತಿವಿನಾಶಗಳು, ಜಗತಃ=ಲೋಕಕ್ಕೆ, (ಭಗವತ್ಪ್ರಕಾಶದಿಂದ) ಭವತಃ= ಆಗುತ್ತವೆ, ಇತ್ಯೇತತ್=ಈ ಪ್ರಕಾರ ತಿಳಕೊಳ್ಳುವುದೇ, ಯೋಗೋ ಹಿ=ಧ್ಯಾನರೂಪ ಭಗವ ದ್ಯೋಗವಿಷಯವು. ॥ ೧೧ ॥

ಮಂ || ನೈವ ವಾಚಾ ನ ಮನಸಾ ಪ್ರಾಪ್ತುಂ ಶಕ್ಯೋ ನ ಚಕ್ಷುಷಾ | ಅಸ್ತೀತಿ ಬ್ರುವತೋಽನ್ಯತ್ರ ಕಥಂ ತದುಪಲಭ್ಯತೇ || ೧೨ ||

ಅ || ಪುರುಷಃ=ಶ್ರೀಪರಮಾತ್ಮನು, ವಾಚಾ=ವಾಗಿಂದ್ರಿಯದಿಂದ, ಪ್ರಾಪ್ತುಂ=ತಿಳಿಯುವದಕ್ಕೋಸ್ಕರ, ನೈವ ಶಕ್ಯಃ=ಶಕ್ಯನಲ್ಲ, ಮನಸಾ=ಮನೋನಾಮಕೇಂದ್ರಿಯದಿಂದ, ನ=ಅಲ್ಲ, ಚಕ್ಷುಷಾ=ಚಕ್ಷುರಿಂದ್ರಿಯದಿಂದ, ನ ಶಕ್ಯಃ=ಶಕ್ಯನಲ್ಲ, ಅಸ್ತೀತಿ=ಪುರುಷನಾಮಕ ಶ್ರೀಪರಮಾತ್ಮನು ಇದ್ದಾನೆ ಎಂಬುವದಾಗಿ, ಬ್ರುವತಃ=ಉಪದೇಶಮಾಡುವ ಗುರುಗಳಿಂದ, ಅನ್ಯತ್ರ=ಬೇರೆ ಉಪಾಯದಿಂದ ಅಂದರೆ ಗುರೂಪದೇಶವನ್ನು ಹೊರತು, ತತ್=ಆ ಶ್ರೀಪರಮಾತ್ಮನ ರೂಪವು, ಕಥಂ=ಹೇಗೆ, ಉಪಲಭ್ಯತೇ=ಪ್ರತ್ಯಕ್ಷವಾಗಿತೋರೀತು, ಗುರುಗಳು ಪ್ರೀತಿಪೂರ್ವಕವಾಗಿ ಉಪದೇಶಮಾಡಿದರೆ, ಶಾಸ್ತ್ರಶ್ರವಣಮನನಾದಿ ಸ್ವಪ್ರಯತ್ನದಿಂದ ಸಹಿತವಾದ ಗುರುಪ್ರಸಾದದಿಂದ ಶ್ರೀಪರಮಾತ್ಮನು ಪ್ರಸನ್ನನಾಗಿ ತನ್ನ ರೂಪವನ್ನು ತೋರಿಸಿಕೊಳ್ಳುತ್ತಾನೆಯೋ ಹೊರತು ಬೇರೆ ವಿಧದಿಂದ ಆಗಲಾರದು. || ೧೨ ||

ಮಂ || ಅಸ್ತೀತ್ಯೇವೋಪಲಬ್ಧವ್ಯಸ್ತತ್ತ್ವಭಾವೇನ ಚೋಭಯೋಃ | ಅಸ್ತೀತ್ಯೇವೋಪಲಬ್ಧಸ್ಯ ತತ್ತ್ವಭಾವಃ ಪ್ರಸೀದತಿ || ೧೩ ||

ಅ || ಉಭಯೋಃ=ಪ್ರಕೃತಿ ಪುರುಷರ, ತತ್ತ್ವಭಾವೇನ ಚ=ಯಾಥಾರ್ಥ್ಯವನ್ನು ತಿಳಿಸಿಕೊಡುವ ಶ್ರೀಹರಿಯ ಅನುಗ್ರಹದಿಂದಲೇ, ಅಸ್ತೀತ್ಯೇವ=ಶ್ರೀ ಹರಿಯು ಸರ್ವೋತ್ತಮನಾಗಿದ್ದಾನೆಂದು, ಉಪಲಬ್ಧವ್ಯಃ=ತಿಳಿಯತಕ್ಕದ್ದು, ತತ್ತ್ವಭಾವಃ=ಯಾಥಾರ್ಥ್ಯವನ್ನು ತಿಳಿಸುವ ಹರಿಯು, ಅಸ್ತೀತಿ=ಸರ್ವೋತ್ತಮನಾಗಿದ್ದಾನೆಂದು, ಉಪಲಬ್ಧಸ್ಯೈವ=ಹೊಂದಿದವನಿಗೇನೇ, ಪ್ರಸೀದತಿ=ಪ್ರಸನ್ನನಾಗುತ್ತಾನೆ. || ೧೩ ||

ತಾ || ಪರಮಾತ್ಮನ ಅನುಗ್ರಹದಿಂದಲೇ ಜೀವನಿಗೆ ಪ್ರಕೃತಿಪುರುಷರ ಅಥವಾ ಪ್ರಪಂಚದ ಜ್ಞಾನವು ಉಂಟಾಗುವುದು. ಅಂತಹ ಪರಮಾತ್ಮನನ್ನು ಸರ್ವೋತ್ತಮನೆಂದು ತಿಳಿದವನಿಗೆ ಮಾತ್ರ ಪರಮಾತ್ಮನು ಪ್ರಸನ್ನನಾಗುವನು.

ಮಂ || ಯದಾ ಸರ್ವೇ ಪ್ರಮುಚ್ಯಂತೇ ಕಾಮಾ ಯೇಽಸ್ಯ ಹೃದಿ ಸ್ಥಿತಾಃ | ಅಥ ಮರ್ತ್ಯೋಽಮೃತೋ ಭವತ್ಯತ್ರ ಬ್ರಹ್ಮ ಸಮಶ್ನುತೇ || ೧೪ ||

ಅ || ಅಸ್ಯ=ಭಗವತ್ಪ್ರಸಾದಯುಕ್ತನಾದ ಪುರುಷನ, ಹೃದಿ=ಮನಸ್ಸಿನಲ್ಲಿ, ಸ್ಥಿತಾಃ=ವಿದ್ಯಮಾನಗಳಾದ, ಸರ್ವೇ=ಸಮಸ್ತಗಳಾದ, ಕಾಮಾಃ=ಮನೋರಥಗಳು, ಯೇ=ಯಾವವೋ ತೇ=ಅವುಗಳು, ಯದಾ=ಯಾವಾಗ, ಪ್ರಮುಚ್ಯಂತೇ=ಬಿಟ್ಟುಹೋಗುತ್ತಾವೆಯೋ, (ತದಾ=ಆವಾಗ), ಅಥ=ಅನಂತರದಲ್ಲಿ, ಮರ್ತ್ಯಃ=ಮನುಷ್ಯನು, ಅಮೃತಃ=ಮರಣರಹಿತನು, ಭವತಿ=ಆಗುತ್ತಾನೆ, ಅತ್ರ=ಶ್ವೇತದ್ವೀಪಾದಿ ಸ್ಥಾನಗಳಲ್ಲಿ, ಬ್ರಹ್ಮ=ಶ್ರೀ ಪರಮಾತ್ಮನನ್ನು, ಸಮಶ್ನುತೇ=ಪ್ರಾಪಿಸುತ್ತಾನೆ. || ೧೪ ||

ಮಂ || ಯದಾ ಸರ್ವೇ ಪ್ರಭಿದ್ಯಂತೇ ಹೃದಯಸ್ಯೇಹ ಗ್ರಂಥಯಃ | ಅಥ ಮರ್ತ್ಯೋಽಮೃತೋ ಭವತಿ ಏತಾವದನುಶಾಸನಂ || ೧೫ ||

ಅ || ಇಹ=ಮನುಷ್ಯ ಶರೀರದಲ್ಲಿ, ಹೃದಯಸ್ಯ=ಮನಸ್ಸಿನ, ಸರ್ವೇ ಗ್ರಂಥಯಃ=ಎಲ್ಲಾ ಗಂಟುಗಳು, ಯದಾ=ಯಾವಾಗ, ಪ್ರಭಿದ್ಯಂತೇ=ಬಿಚ್ಚಿಹೋಗುತ್ತವೋ, ಅಥ=

ಆ ಸಮಯದಲ್ಲಿ, ಮರ್ತ್ಯಃ=ಮನುಷ್ಯನು, ಅಮೃತಃ=ಮುಕ್ತನು, ಭವತಿ=ಆಗುತ್ತಾನೆ, ಏತಾವದನುಶಾಸನಂ=ಮೇಲೆ ಹೇಳಿದುದು ಶಾಸ್ತ್ರದ ವಿಧಿಯು.

**ಮಂ ॥ ಶತಂ ಚೈಕಾ ಚ ಹೃದಯಸ್ಯ ನಾಡ್ಯಸ್ತಾಸಾಂ ಮೂರ್ಧಾನಮಭಿನಿಃಸೃತೈಕಾ । ತಯೋರ್ಧ್ವಮಾಯನ್ನಮೃತತ್ವಮೇತಿ ವಿಷ್ವಗನ್ಯಾ ಉತ್ಕ್ರಮಣೇ ಭವಂತಿ ॥ ೧೬ ॥**

ಅ ॥ ಹೃದಯಸ್ಯ=ಹೃದಯಸಂಬಂಧಿಗಳಾದ, ನಾಡ್ಯಃ=ನಾಡಿಗಳು, ಶತಂ ಚೈಕಾ ಚ=ನೂರ ಒಂದು ನಾಡಿಗಳು, ಭವಂತಿ=ಇರುತ್ತವೆ, ತಾಸಾಂ=ಅವುಗಳ ಮಧ್ಯದಲ್ಲಿ, ಏಕಾ=ಒಂದು ನಾಡಿಯು, ಮೂರ್ಧಾನಮಭಿ=ತಲೆಯನ್ನು ಕುರಿತು, ನಿಃಸೃತಾ=ಹೊರಟದೆ, ಅಂದರೆ ತಲೆಯ ಪರಿಯಂತ ವ್ಯಾಪಿಸಿಯದೆ, ತಯಾ=ಆ ಸುಷುಮ್ನಾನಾಮಕ ನಾಡಿಯಿಂದ, ಊರ್ಧ್ವಂ=ಊರ್ಧ್ವಭಾಗವನ್ನು, ಗಚ್ಛನ್=ಹೋಗತಕ್ಕವನು, ಅಮೃತತ್ವಂ=ಮೋಕ್ಷವನ್ನು (ಕುರಿತು), ಏತಿ=ಪ್ರಾಪಿಸುತ್ತಾನೆ, ಅನ್ಯಾಃ=ಅದರಿಂದ ಅತಿರಿಕ್ತಗಳಾದ ನೂರು ನಾಡಿಗಳು, ವಿಷ್ವಗುತ್ಕ್ರಮಣೇ=ಲೋಕಾಂತರವನ್ನು ಕುರಿತು ಹೋಗಲಿಕ್ಕೆ, ಭವಂತಿ=ಕಾರಣಗಳಾಗುತ್ತವೆ. ॥ ೧೬ ॥

**ಮಂ ॥ ಅಂಗುಷ್ಠಮಾತ್ರಃ ಪುರುಷೋಽಂತರಾತ್ಮಾ ಸದಾ ಜನಾನಾಂ ಹೃದಯೇ ಸಂನಿವಿಷ್ಟಃ । ತಂ ಸ್ವಾಚ್ಛರೀರಾತ್ಪ್ರವೃಹೇನ್ಮುಂಜಾದಿವೇಷೀಕಾಂ ಧೈರ್ಯೇಣ । ತಂ ವಿದ್ಯಾಚ್ಛುಕ್ರಮಮೃತಂ ವಿದ್ಯಾಚ್ಛುಕ್ರಮಮೃತಮಿತಿ ॥ ೧೭ ॥**

ಅ ॥ ಅಂಗುಷ್ಠಮಾತ್ರಃ=ಅಂಗುಷ್ಠ ಪರಿಮಿತನಾದ, ಪುರುಷಃ=ಶ್ರೀಪರಮಾತ್ಮನು, ಅಂತರಾತ್ಮಾ=ಅಂತಃಪ್ರೇರಕನಾಗಿ, ಜನಾನಾಂ=ಮಾನುಷಾದಿ ಚೇತನಗಳ, ಹೃದಯೇ=ಹೃದಯಕಮಲದಲ್ಲಿ, ಸದಾ=ಸರ್ವಕಾಲದಲ್ಲಿಯೂ, ಸಮ್(ಸಮ್ಯಕ್)=ಸುಖದಿಂದ, ನಿವಿಷ್ಟಃ=ವಿದ್ಯಮಾನನಾಗಿದ್ದಾನೆ, ತಂ=ಆ ಶ್ರೀಪರಮಾತ್ಮನನ್ನು, ಸ್ವಾತ್=ಸ್ವಕೀಯವಾದ, ಶರೀರಾತ್=ಜೀವರೂಪಶರೀರದಿಂದ, ಮುಂಜಾತ್=ಮುಂಜನಾಮಕ ತೃಣವಿಶೇಷಗಳ ಪುಂಜದ ಮಧ್ಯದಿಂದ, ಇಷೀಕಾಂ(ಇವ)=ಇಷೀಕಾನಾಮಕ (ಮುಳಿಹುಲ್ಲು) ತೃಣವಿಶೇಷಗಳಂತೆ, ಧೈರ್ಯೇಣ=ಸೂಕ್ಷ್ಮದೃಷ್ಟಿಯಿಂದ, ಪ್ರವೃಹೇತ್(ವಿವೇಚಯೇತ್)=ಭೇದದಿಂದ ತಿಳಿಯಬೇಕು, ತಂ=ಆ ಶ್ರೀಪರಮಾತ್ಮನನ್ನು, ಶುಕ್ರಂ=ದುಃಖಾದಿದೋಷರಹಿತನನ್ನಾಗಿಯೂ, ಅಮೃತಂ=ನಿತ್ಯಮುಕ್ತನನ್ನಾಗಿಯೂ, ವಿದ್ಯಾತ್=ತಿಳಿಯತಕ್ಕದ್ದು, ಎರಡನೆ "ತಂ ವಿದ್ಯಾಚ್ಛುಕ್ರಮಮೃತಂ" ಎಂಬುವ ವಾಕ್ಯವು ತಾತ್ಪರ್ಯದ್ಯೋತನಾರ್ಥವು. ॥ ೧೭ ॥

**ಮಂ ॥ ಮೃತ್ಯುಪ್ರೋಕ್ತಾಂ ನಾಚಿಕೇತೋಽಥ ಲಬ್ಧ್ವಾ ವಿದ್ಯಾಮೇತಾಂ ಯೋಗವಿಧಿಂ ಚ ಕೃತ್ಸ್ನಂ । ಬ್ರಹ್ಮಪ್ರಾಪ್ತೋ ವಿರಜೋಽಭೂದ್ವಿಮೃತ್ಯುರನ್ಯೋಽಪ್ಯೇವಂ ಯೋ ವಿದಧ್ಯಾತ್ಮಮೇವ ॥ ೧೮ ॥**

ಅ ॥ ನಾಚಿಕೇತಃ=ನಚಿಕೇತರು, ಮೃತ್ಯುಪ್ರೋಕ್ತಾಂ=ಯಮದೇವರಿಂದ ಉಪದೇಶಿಸಲ್ಪಟ್ಟ, ಏತಾಂ=ಈ ವರೆಗೆ ಹೇಳಿದ, ವಿದ್ಯಾಂ=ಪರಬ್ರಹ್ಮವಿದ್ಯೆಯನ್ನು, ಲಬ್ಧ್ವಾ=ಪ್ರಾಪಿಸಿ, ಅಥ=ಅನಂತರದಲ್ಲಿ, ಕೃತ್ಸ್ನಂ=ಸಮಸ್ತವಾದ, ಯೋಗವಿಧಿಂ ಚ=ಭಗವಜ್ಜ್ಞಾನೋಪಾಯವಿಧಿಯನ್ನೂ, ಲಬ್ಧ್ವಾ=ಅನುಷ್ಠಾನ ಮಾಡಿ, ವಿರಜಃ=ಹೋಗಲ್ಪಟ್ಟ ಪಾಪವುಳ್ಳವನಾಗಿ, ಬ್ರಹ್ಮ=

ಪರಬ್ರಹ್ಮನನ್ನು, ಪ್ರಾಪ್ತಃ=ಹೊಂದಿದವನಾಗಿ, ವಿಮೃತ್ಯುಃ=ಮರಣರಹಿತನಾಗಿ, ಅಂದರೆ ಮುಕ್ತನು, ಅಭೂತ್=ಆದನು, ಅನ್ಯೋಽಪಿ=ಬೇರೆಯವನಾದರೂ, ಯಃ=ಯಾವಾತನು, ಏವಂ=ಈ ಮೊದಲುಹೇಳಿದಂತೆ, ಅಧ್ಯಾತ್ಮಂ=ಸರ್ವೋತ್ತಮನಾದ ಶ್ರೀ ಪರಮಾತ್ಮನನ್ನು, ವಿತ್=ತಿಳಿಯುತ್ತಾನೆಯೋ, ಸೋಽಪಿ=ಅವನೂ, ಏವಮೇವ=ಈ ನಚಿಕೇತರಂತೆ, ಭವತ್ಯೇವ=ಮುಕ್ತನಾಗುತ್ತಾನೆಯೇ ಸರಿ, ಈ ವಿಷಯದಲ್ಲಿ ಸಂದೇಹವಿಲ್ಲವೆಂಬುವ ಅರ್ಥವು. ॥ ೧೮ ॥

ಇತಿ ಶ್ರೀ ಕಾಠಕೋಪನಿಷದಿ ದ್ವಿತೀಯಾಧ್ಯಾಯಸ್ಯ ತೃತೀಯಾ ವಲ್ಲೀ.

ಕಾಠಕೋಪನಿಷತ್ಸಂಪೂರ್ಣಂ

**ಇಲ್ಲಿಗೆ ಕಾಠಕನಾಮಕ ಉಪನಿಷತ್ತಿನಲ್ಲಿ ಎರಡನೆಯ ಅಧ್ಯಾಯದಲ್ಲಿ ಮೂರನೆಯ ವಲ್ಲಿಯು ಮುಗಿಯಿತು. ಈ ಉಪನಿಷತ್ತು ಸಂಪೂರ್ಣವಾಯಿತು. ॥ ೨-೩ ॥**



## ದ್ವಿತೀಯಾಧ್ಯಾಯಸ್ಯ ತೃತೀಯಾವಲ್ಲೀ ಭಾಷ್ಯಂ.

**ಭಾ ॥** "ಸರ್ವೋಚ್ಚೋ ಭಗವಾನ್ವಿಷ್ಣುರ್ಮೂಲಂ ಭೂಮಿವದಸ್ಯ ತು ।
ಜಗದಾಖ್ಯಸ್ಯ ವೃಕ್ಷಸ್ಯ ಶಾಖಾದೇವಾಸ್ತತೋಽವರಾಃ ।
ವೃಕ್ಷಮೂಲಂ ರಮಾ ದೇವೀ ಸೋಽಶ್ವ ಆಶುಗತೇರ್ಹರಿಃ ।
ತದ್ವ್ಯಾಪ್ತತ್ವಾತ್ತದನ್ನತ್ವಾದಶ್ವತ್ಥೋಽಯಂಪ್ರಕೀರ್ತಿತಃ ।
ಪ್ರವಾಹತಸ್ತ್ವನಾದಿಶ್ಚ ಮುಖ್ಯತಸ್ತ್ವಮೃತೋ ಹರಿಃ ।
ಮುಖ್ಯಾಮೃತಸ್ಸಏವೈಕೋ ಜಗನ್ನಿತ್ಯಂ ಪ್ರವಾಹತಃ" ॥ ೧ ॥

ಅ ॥ ಸಮಸ್ತ ಜಗತ್ತೆಂಬ ವೃಕ್ಷಕ್ಕೆ ಸರ್ವಶ್ರೇಷ್ಠನಾದ ಶ್ರೀ ಪರಮಾತ್ಮನು ಭೂಮಿಯಂತೆ ಮೂಲಭೂತನು, ಆ ಪರಮಾತ್ಮನಿಂದ ಅವರರಾದ ಬ್ರಹ್ಮಾದಿ ದೇವತೆಗಳು ಶಾಖಾ ಅಂದರೆ ಗೆಲ್ಲುಗಳಂತೆ ಇರುವವರು. ಈ ವೃಕ್ಷಕ್ಕೆ ಲಕ್ಷ್ಮೀದೇವಿಯು ಮೂಲ ಅಂದರೆ ಬುಡದ ಹಾಗೆ ಇರುವವಳು, ಶ್ರೀ ಪರಮಾತ್ಮನು ಶೀಘ್ರವಾದ ಗಮನವುಳ್ಳವನಾದುದರಿಂದ ಅಶ್ವವೆಂಬ ನಾಮವುಳ್ಳವನು, ಅಂಥಾ ಪರಮಾತ್ಮನಿಂದ ವ್ಯಾಪ್ತನಾಗಿ ಇರುವುದರಿಂದಲೂ ಶ್ರೀ ಪರಮಾತ್ಮನಿಗೆ ಅನ್ನದ ಹಾಗೆ ತಿನ್ನಲಿಕ್ಕೆ ಯೋಗ್ಯವಾಗಿ ಇರುವುದರಿಂದಲೂ ಈ ಜಗದಾಖ್ಯ ವೃಕ್ಷವು ಅಶ್ವತ್ಥವೆಂಬುವ ನಾಮದಿಂದ ಪ್ರಸಿದ್ಧವಾಗಿಯದೆ. ಈ ಜಗದಾಖ್ಯವೃಕ್ಷವು ಪ್ರವಾಹದಿಂದ ಅನಾದಿ ನಿತ್ಯವಾದದ್ದು; ಶ್ರೀ ಪರಮಾತ್ಮನಾದರೂ ಮುಖ್ಯವಾಗಿ ಅನಾದಿನಿತ್ಯನು, ಶ್ರೀ ಪರಮಾತ್ಮನೊಬ್ಬನೇ ಮುಖ್ಯಾಮೃತ ಶಬ್ದವಾಚ್ಯನಾಗಿದ್ದಾನೆ. ಜಗತ್ತು (ಆದ್ಯಂತವಿದ್ದದಾದರೂ) ಪ್ರವಾಹರೂಪದಿಂದ ನಿತ್ಯವಾದದ್ದು.

ತಾ ॥ ವೃಕ್ಷಗಳ ಸ್ಥಿತಿಗತಿಗಳಿಗೆ ಭೂಮಿಯು ಆಧಾರವಾಗಿರುವಂತೆ ಪರಮಾತ್ಮನು ಸಮಸ್ತ ಜಗತ್ತಿಗೂ ಆಧಾರಭೂತನಾಗಿರುವನು. ಲಕ್ಷ್ಮೀದೇವಿಯು ವೃಕ್ಷಕ್ಕೆ ಬೇರುಗಳಂತೆ ಪ್ರಪಂಚಕ್ಕೆ ಆಧಾರಭೂತಳಾಗಿದ್ದಾಳೆ. ಆಕೆಗೂ ಶ್ರೀ ಪರಮಾತ್ಮನೇ ಆಶ್ರಯನು.

**ಭಾ ॥** "ಪ್ರಾಣಾಖ್ಯೇ ತು ಹರೌ ಸರ್ವಮೇಜತ್ಯಸ್ಮಾತ್ತು ನಿಃಸೃತಂ ।
ವಜ್ರವದ್ಭಯದಂ ಚೈವ ಸ್ವಧರ್ಮಸ್ಯಾತಿಲಂಘನೇ" ॥ ೨ ॥

ಅ ॥ ಸಮಸ್ತ ಲೋಕವು ಪ್ರಾಣಶಬ್ದವಾಚ್ಯನಾದ ಶ್ರೀ ಪರಮಾತ್ಮನಲ್ಲಿ ವಿದ್ಯಮಾನವಾಗಿದೆಯೋ, ಅವನಿಂದಲೇ ಉತ್ಪನ್ನವಾಗಿಯದೆ. ಅವನಿಂದಲೇ ಚೇಷ್ಟಾಯುಕ್ತವಾಗಿಯದೆ, ಆ ಶ್ರೀ ಪರಮಾತ್ಮನು ವರ್ಣಾಶ್ರಮೋಚಿತವಾದ ಧರ್ಮವನ್ನು ಆಚರಿಸದೆ ಇದ್ದವರಿಗೆ ವಜ್ರಾಯುಧದಂತೆ ಭಯಪ್ರದನಾಗಿದ್ದಾನೆ. ॥ ೨ ॥

ಭಾ ॥ "ಜೀವೇ ಸ್ಥಿತಸ್ತು ಭಗವಾನ್ ದೃಶ್ಯತೇ ಜ್ಞಾನದೃಷ್ಟಿಭಿಃ ।
ಆದರ್ಶೇಮುಖವತ್ಸಮ್ಯಕ್ ನ ತಥಾ ಪಿತೃಲೋಕಗಃ ।
ತತಃ ಕಿಂಚಿತ್ ಸ್ಪಷ್ಟತಯಾ ಗಾಂಧರ್ವೇ ದೃಶ್ಯತೇ ಹರಿಃ ।
ನಾತ್ಯಾತಪೇ ನ ಛಾಯಾಯಾಂ ಯಥೈವಾಹನಿ ದೃಶ್ಯತೇ ।
ಸ್ಪಷ್ಟಂ ತಥಾ ಬ್ರಹ್ಮಲೋಕೇ ದೃಶ್ಯತೇ ಪುರುಷೋತ್ತಮಃ"॥ ಇತಿ ಚ॥೫॥

ಅ ॥ ಜೀವರಲ್ಲಿ ಅಂತರ್ಗತನಾಗಿರುವ ಶ್ರೀ ಪರಮಾತ್ಮನು ಕನ್ನಡಿಯಲ್ಲಿ ಮುಖವು ತೋರಿದಂತೆ ಚೆನ್ನಾಗಿ ಜ್ಞಾನಿಗಳಿಂದ ತೋರಿಸಿಕೊಳ್ಳುತ್ತಾನೆ, ಪಿತೃಲೋಕದಲ್ಲಿ ಹಾಗೆ ತೋರಿಸಿಕೊಳ್ಳುವುದಿಲ್ಲ, ಅದಕ್ಕಿಂತ ಸ್ಪಷ್ಟನಾಗಿ ಗಂಧರ್ವಲೋಕದಲ್ಲಿ ತೋರಿಸಿಕೊಳ್ಳುತ್ತಾನೆ, ಬಹಳ ಬಿಸಿಲಿನಲ್ಲಿಯೂ ಬಹಳವಾದ ನೆರಳು ಇರುವ ಪ್ರದೇಶದಲ್ಲಿಯೂ ಪದಾರ್ಥವು ಕಾಣಿಸಿಕೊಳ್ಳಲ್ಪಡುವುದಿಲ್ಲ. ಆದುದರಿಂದ ಹಗಲಿನಲ್ಲಿ ಒಳ್ಳೇ ಪ್ರಕಾಶವಿರುವ ನೆರಳು ಪ್ರದೇಶದಲ್ಲಿ ಪದಾರ್ಥವು ಹೇಗೆ ಸ್ಪಷ್ಟವಾಗಿ ಕಾಣಿಸಿಕೊಳ್ಳುವುದೋ ಹಾಗೆಯೇ ಶ್ರೀ ಪರಮಾತ್ಮನು ಬ್ರಹ್ಮಲೋಕದಲ್ಲಿ ಇರುವವರಿಂದ ಕಾಣಿಸಿಕೊಳ್ಳಲ್ಪಡುತ್ತಾನೆ. ॥ ೫ ॥

ಭಾ ॥ ಪುನರಿಂದ್ರಿಯೇಭ್ಯಃ ಪರಂ ಮನ ಇತ್ಯಾದಿ
ದೇವತಾತಾರತಮ್ಯ ಜ್ಞಾನಪೂರ್ವಕಂ ಭಗವತಃ
ಸರ್ವೋತ್ತಮತ್ವಜ್ಞಾನ ಏವ ಸರ್ವವಾಕ್ಯಾನಾಂ
ಮಹಾ ತಾತ್ಪರ್ಯಮಿತಿ ಜ್ಞಾಪಯಿತುಂ ॥

ಅ ॥ ಒಂದಾವರ್ತಿ ಹೇಳಿದಾಗ್ಯೂ ಪುನಃ ಅದೇ ವಾಕ್ಯವು ಇಂದ್ರಿಯಾದ್ಯಭಿಮಾನಿದೇವತೆಗಳ ತಾರತಮ್ಯವನ್ನು ತಿಳಕೊಂಡು ಶ್ರೀಪರಮಾತ್ಮನು ಒಬ್ಬನೇ ಸರ್ವೋತ್ತಮನಾಗಿದ್ದಾನೆ ಎಂಬುದಾಗಿ ಹುಟ್ಟುವ ಜ್ಞಾನವೇ ಸಮಸ್ತ ವೇದವಾಕ್ಯಗಳಿಗೆ ಮಹಾತಾತ್ಪರ್ಯವೆಂಬುವದಾಗಿ ತಿಳಿಸುವದಕ್ಕೆ

ಭಾ ॥ "ತಾರತಮ್ಯಪರಿಜ್ಞಾನಪೂರ್ವಕಂ ಸರ್ವತೋ ಹರೇಃ ।
ಆಧಿಕ್ಯೇ ಸರ್ವವಾಕ್ಯಾನಾಂ ತಾತ್ಪರ್ಯಂ ಮಹದಿಷ್ಯತ" ಇತಿ ಚ ॥೭-೮॥

ಅ॥ ಸಮಸ್ತ ವೇದವಾಕ್ಯಗಳಿಗೂ ದೇವತಾ ತಾರತಮ್ಯಜ್ಞಾನಪೂರ್ವಕವಾಗಿ ಸರ್ವರಿಂದಲೂ ಶ್ರೀಪರಮಾತ್ಮನಿಗೆ ಉತ್ತಮತ್ವ ವಿಷಯದಲ್ಲಿಯೇ ಮಹಾತಾತ್ಪರ್ಯವೆಂತ ಜ್ಞಾನಿಗಳಿಂದ ಅಂಗೀಕೃತವಾಗಿಯದೆ.

ಭಾ ॥ "ಪ್ರಾದುರ್ಭಾವಾನ್ಯತೇ ವಿಷ್ಣುಮಿಂದ್ರಿಯೈರ್ನೈವ ಪಶ್ಯತಿ ।
ಪ್ರಾದುರ್ಭಾವಾನಪಿ ಯದಾ ಜ್ಞಾನದೃಷ್ಟ್ಯೈವ ಪಶ್ಯತಿ ॥
ತದೈವ ಮುಚ್ಯತೇ ಯೋಗೀ ನ ದೃಷ್ಟೈರಿಂದ್ರಿಯೈಃ ಕ್ವಚಿದಿತಿ" ಚ ॥೯॥

ಅ॥ ಮತ್ಸ್ಯಕೂರ್ಮಾದಿ ಅವತಾರಗಳನ್ನು ಹೊರತು ಮೂಲರೂಪಿಯಾದ ಶ್ರೀ ಪರಮಾತ್ಮನನ್ನು ಜ್ಞಾನಿಯು ಚಕ್ಷುರಾದಿಂದ್ರಿಯಗಳಿಂದ ಪ್ರತ್ಯಕ್ಷವಾಗಿ ನೋಡುವದಿಲ್ಲ. ಅವತಾರ ರೂಪಗಳನ್ನು ಕೂಡ ಯಾವಾಗ ಜ್ಞಾನದೃಷ್ಟಿಯಿಂದ ಅಂದರೆ ಹೃದಯದಲ್ಲಿ ಉಪಾಸನಾ ಮಾಡುವದರಿಂದಲೇ ಅಪರೋಕ್ಷತಯಾ ನೋಡುತ್ತಾನೋ ಆವಾಗಲೇ ಜ್ಞಾನಿಯು ಮುಕ್ತನಾಗುತ್ತಾನೆ, ಚಕ್ಷುರಾದಿ ಪ್ರಾಕೃತೇಂದ್ರಿಯಗಳಿಂದ ಕಾಣಿಸಿಕೊಳ್ಳುವ ರಾಮಕೃಷ್ಣಾದಿ ರೂಪಗಳ ಸಂದರ್ಶನ ಮಾತ್ರದಿಂದ ಮುಕ್ತಿಯಾಗಲಾರದು. ॥ ೯ ॥

ಭಾ ॥ ಪ್ರಭವಾಪ್ಯಯೌ ಹಿ ಯೋಗಃ। ಭಗವತ್ಸಕಾಶಾತ್ಪ್ರಭವಾಪ್ಯಯೌ ॥೧೧॥

ಅ॥ ಶ್ರೀ ಪರಮಾತ್ಮನಿಂದ ಸಮಸ್ತಜಗತ್ತಿಗೂ ಉತ್ಪತ್ತಿನಾಶಗಳು ಆಗುತ್ತವೆ ಎಂಬುವದಾಗಿ ಅಂದರೆ ಜಗತ್ತಿಗೆ ಉತ್ಪತ್ತಿ ವಿನಾಶಗಳಿಗೆ ಕರ್ತೃಭೂತನಾದವನು ಶ್ರೀಪರಮಾತ್ಮನೇ ಎಂಬುವದಾಗಿ ಧ್ಯಾನಮಾಡುವದೇ ಭಗವದ್ಯೋಗವೆಂದು ಅನ್ನಿಸಿಕೊಳ್ಳುವದು. ॥ ೧೧ ॥

ಭಾ॥ "ಅಧಿಕಸ್ಸತೋಽಯಂ ಭಗವಾನ್ ಸರ್ವಸ್ಮಾದಪಿ ಕೇಶವಃ।
ಅಸ್ತೀತಿ ನಾಮಕಸ್ತಸ್ಮಾತ್ ಜ್ಞಾತವ್ಯಸ್ಸ ತಥೈವ ಚ।
ಅನಾಧಿಕ್ಯಂ ಜಾನತಾಂ ತು ಕಥಂ ಸ ಉಪಲಭ್ಯತೇ।
ಪ್ರಕೃತೇಃ ಪುರುಷಾಣಾಂ ಚ ತತ್ತ್ವಂ ಭಾವಯತಿ ಸ್ಫುಟಂ।
ತತ್ತ್ವಭಾವಸ್ತತೋ ವಿಷ್ಣುಸ್ತತ್ಪ್ರಸಾದಾತ್ತು ತಸ್ಯ ಹಿ।
ಆಧಿಕ್ಯಂ ಜ್ಞಾಯತೇ ಸತ್ತಃ ಪ್ರಸಾದಶ್ಚ ತಥಾ ವಿಧಃ।
ಅನಾದಿಕಾಲಾದಾಧಿಕ್ಯಂ ಸರ್ವಸ್ಮಾಜ್ಜ್ಞಾನತೋ ಹರೇಃ।
ಪುನಃ ಪುನರ್ವೃದ್ಧಿಮೇತಿ ತಜ್ಜ್ಞಾನಂ ಹಿ ಭವೇಭವೇ।
ಯೇಷಾಮಾಧಿಕ್ಯ ವಿಜ್ಞಾನಂ ನೈವ ಪೂರ್ವಂ ಹರೇರ್ಭವೇತ್।
ತೇಷಾಂ ಪಶ್ಚಾಚ್ಚ ನೈವ ಸ್ಯಾದಭಿಭೂತಂ ತು ತತ್ಪುನಃ।
ವ್ಯಂಜಕಾದ್ವ್ಯಕ್ತಿಮಭ್ಯೇತಿತಸ್ಮಾತ್ತಜ್ಜ್ಞಾನಮುತ್ತಮಮಿತಿಚ" ॥೧೩॥

ಅ ॥ ಯಾವ ಕಾರಣದಿಂದ ಶ್ರೀಪರಮಾತ್ಮನು ಸಮಸ್ತಜಗತ್ತಿನಿಂದ ಅಧಿಕವಾದ ಸತ್ವವುಳ್ಳವನೋ, ಆದುದರಿಂದ ಅಸ್ತಿ ಎಂಬುವ ನಾಮವುಳ್ಳವನಾಗಿದ್ದಾನೆ, ಅದೇ ಪ್ರಕಾರವಾಗಿ ಶ್ರೀಪರಮಾತ್ಮನು ಜ್ಞಾನಿಯಿಂದ ತಿಳಕೊಳ್ಳಲಿಕ್ಕೆ ಯೋಗ್ಯನು. ಸಮಸ್ತರಿಂದ ಉತ್ತಮನಲ್ಲವೆಂಬುದಾಗಿ ತಿಳಿದುಕೊಂಡವರಿಗೆ ಆ ಶ್ರೀಪರಮಾತ್ಮನು ಹೇಗೆ ಪ್ರತ್ಯಕ್ಷನಾದಾನು? ಪ್ರಕೃತಿಗೂ ಪುರುಷರಿಗೂ ಪ್ರಾಮಾಣಿಕತ್ವವನ್ನು ಚನ್ನಾಗಿ ಸಂಪಾದನೆ ಮಾಡಿಕೊಡುತ್ತಾನೆ ಆದುದರಿಂದ ಶ್ರೀಪರಮಾತ್ಮನು ತತ್ವಭಾವಶಬ್ದವಾಚ್ಯನಾಗಿದ್ದಾನೆ. ಆತನಿಗೆ ಆಧಿಕ್ಯವು ಕೂಡ ಅವನ ಅನುಗ್ರಹದಿಂದಲೇ ತಿಳಿಯುತ್ತದೆ. ಆಧಿಕ್ಯವನ್ನು ತಿಳದವನಿಗೆ ಅನುಗ್ರಹವಾಗುತ್ತದೆ. ಅನಾದಿ ಕಾಲವನ್ನು ಆರಂಭಿಸಿಕೊಂಡು ಸಮಸ್ತಜಗತ್ತಿನಿಂದಲೂ ಆಧಿಕ್ಯವನ್ನು ತಿಳಿಯುವವನಿಗೆ ಮತ್ತೂ ಮತ್ತೂ ಪ್ರತಿ ಒಂದು ಜನ್ಮದಲ್ಲಿಯೂ ಭಗವಜ್ಜ್ಞಾನವು ಅಭಿವೃದ್ಧಿಯನ್ನು ಹೊಂದುತ್ತದೆ. ಮೊದಲು ಯಾವ ಪುರುಷರಿಗೆ ಶ್ರೀಪರಮಾತ್ಮನ ಸರ್ವೋತ್ತಮತ್ವ ಜ್ಞಾನವು ಇರುವದಿಲ್ಲವೋ, ಅವರಿಗೆ ಅನಂತರದಲ್ಲಿಯೂ ಇರುವದಿಲ್ಲ. ಕೆಲವರು ಯೋಗ್ಯರಾದವರಿಗೆ ಮೊದಲು ಭಗವಜ್ಜ್ಞಾನವು ತಿರಸ್ಕೃತವಾಗಿದ್ದರೂ ಅದು ಪುನಃ ಶಾಸ್ತ್ರಶ್ರವಣಾದಿಗಳಿಂದ ಅಭಿವ್ಯಕ್ತವಾಗುತ್ತದೆ. ಆದುದರಿಂದ ಆ ಶ್ರೀಪರಮಾತ್ಮನ ಜ್ಞಾನವು ಉತ್ತಮವಾದದ್ದು ॥ ೧೩ ॥

**ಭಾ** ॥ "ಅಂತಃಕರಣಕಾಮಾನಾಂ ತ್ಯಾಗೋ ವ್ಯಕ್ತಿಶ್ಚಿದಾತ್ಮನಾಂ ।
ಕಾಮಾನಾಂ ತು ತದಾ ಮುಕ್ತೌ ಮೃತಿಂ ನೈವಾಭಿಯಾಸ್ಯತಿ ॥
ಮಿಥ್ಯಾಜ್ಞಾನಗ್ರಂಥಿಭಿಸ್ತು ನಿತರಾಂ ಮುಚ್ಯತೇ ಯದಾ ।
ತದಾಽಮೃತತ್ವಮೇತ್ಯೇತಿ ತದರ್ಥಂ ಚಾನುಶಾಸನಂ" ॥ ೧೪-೧೫ ॥

ಅ ॥ ಯಾವಾಗ ಅಂತಃಕರಣಗತಕಾಮಗಳನ್ನು ಪರಿತ್ಯಾಗಮಾಡಿ ಸ್ವರೂಪಭೂತಗಳಾದ ಕಾಮಗಳಿಗೆ ಅಭಿವ್ಯಕ್ತಿ ಆಗುತ್ತದೆಯೋ, ಆವಾಗ ಮುಕ್ತಿಯಲ್ಲಿ ಮರಣವನ್ನು ಸರ್ವಥಾ ಪ್ರಾಪಿಸುವುದಿಲ್ಲ. ॥ ೧೪ ॥

ಈ ಮಾನುಷ ದೇಹದಲ್ಲಿ ಅಂತಃಕರಣಗತಗಳಾದ ವಿಪರೀತ ಜ್ಞಾನಗ್ರಂಥಿಗಳಿಂದ ಜೀವನು ಯಾವಾಗ ಚನ್ನಾಗಿ ವಿಮುಕ್ತನಾಗುತ್ತಾನೋ, ಆವಾಗ ಸ್ವರೂಪ ಸುಖಕ್ಕೆ ಆವಿರ್ಭಾವ ರೂಪವಾದ ಮೋಕ್ಷವನ್ನು ಪ್ರಾಪಿಸುತ್ತಾನೆ, ಮಿಥ್ಯಾಜ್ಞಾನ ಗ್ರಂಥಿನಿರಾಸಕ್ಕೋಸ್ಕರವೇ ಶ್ರವಣಾದಿಕರ್ತವ್ಯ ತಾ ಪ್ರತಿಪಾದಕವಾದ ಶಾಸ್ತ್ರವು. ॥ ೧೫ ॥

**ಭಾ** ॥ "ಶರೀರಭೂತೋ ವಿಷ್ಣೋಽಸ್ತು ಜೀವಸ್ತದ್ವಶಗೋ ಯತಃ ।
ಅಧಿಷ್ಠಿತಶ್ಚ ತೇನೈವ ವಿಜಾನೀಯಾತ್ಪೃಥಕ್ತತಃ ।
ಸ್ವಾಖ್ಯಾಚ್ಛರೀರಾಜ್ಜೀವಾತ್ತು ಪ್ರವೃಹೇದ್ವಿಷ್ಣುಮವ್ಯಯಮಿತಿ"ಚ॥೧೭॥

ಅ ॥ ಯಾವ ಕಾರಣದಿಂದ ಜೀವನು ಶ್ರೀ ಪರಮಾತ್ಮನ ಅಧೀನನಾಗಿದ್ದಾನೆಯೋ ಶ್ರೀ ಪರಮಾತ್ಮನಿಂದಲೇ ಅಧಿಷ್ಠಿತನಾಗಿದ್ದಾನೆಯೋ, ಆದುದರಿಂದ ಶ್ರೀ ಪರಮಾತ್ಮನಿಗೆ ಶರೀರಭೂತನು, ಆದುದರಿಂದ ಸ್ವಕೀಯ ಶರೀರಭೂತನಾದ ಜೀವನಿಂದ ನಾಶರಹಿತನಾದ ಶ್ರೀಪರಮಾತ್ಮನನ್ನು (ಪ್ರವೃಹೇತ್) ಅಂದರೆ ಭಿನ್ನನಾಗಿದ್ದಾನೆ ಎಂಬುವದಾಗಿ ತಿಳಿಯತಕ್ಕವನಾಗಬೇಕು ॥೧೭॥

**ಭಾ** ॥ ಯಸ್ಯಾತ್ಮಾ ಶರೀರಂ । ಯ ಆತ್ಮಾನಮಂತರೋ ಯಮಯತೀತಿ ಚ ॥

ಅ ॥ ಯಾವ ಶ್ರೀ ಪರಮಾತ್ಮನಿಗೆ ಜೀವನು ಶರೀರಭೂತನು, ಯಾವ ಶ್ರೀ ಪರಮಾತ್ಮನು ಅಂತರ್ಗತನಾಗಿ ಜೀವನನ್ನು ಸಮಸ್ತವ್ಯಾಪಾರಗಳಲ್ಲಿಯೂ ಪ್ರೇರಿಸುತ್ತಾನೆ. ॥

**ಭಾ** ॥ ಜನಾನಾಂ ಹೃದಯಇತ್ಯುಕ್ತತ್ವಾಚ್ಚ ಜೀವಾತ್ಪೃಥಗ್ಘರಿರಿತಿ ಸಿದ್ಧಂ ॥

ಅ ॥ ಜೀವರುಗಳ ಹೃದಯದಲ್ಲಿ ಸನ್ನಿವಿಷ್ಟನಾಗಿದ್ದಾನೆ ಎಂಬುವದಾಗಿ ಪೂರ್ವಮಂತ್ರದಲ್ಲಿ ಹೇಳಿರುವುದರಿಂದಲೂ ಜೀವರಿಂದ ಶ್ರೀ ಪರಮಾತ್ಮನು ಅತ್ಯಂತ ಭಿನ್ನನೆಂಬುವುದು ಸಿದ್ಧವು.

**ಭಾ** ॥ "ದೇಹಾಂಗುಷ್ಠಮಿತೋದೇಹೇ ಜೀವಾಂಗುಷ್ಠ ಮಿತೋ ಹೃದಿ ।
ಜೀವಸ್ಯ ಸ ತು ವಿಜ್ಞೇಯೋ ಜೀವಾದ್ಭೇದೇನ ಮುಕ್ತಯೇ"ಇತಿ ಚ ॥೧೭॥

ಅ ॥ ಜೀವನ ದೇಹದಲ್ಲಿ ದೇಹದ ಅಂಗುಷ್ಠದ ಪರಿಮಿತನಾಗಿಯೂ ಜೀವನ ಹೃದಯದಲ್ಲಿ ಜೀವನ ಅಂಗುಷ್ಠ ಪರಿಮಿತನಾಗಿದ್ದಾನೆ. ಶ್ರೀ ಪರಮಾತ್ಮನು ಅವನು ಮುಕ್ತಿಗೋಸ್ಕರ ಜೀವನಿಂದ ಅತ್ಯಂತ ಭಿನ್ನನಾಗಿದ್ದಾನೆ ಎಂಬುವುದಾಗಿ ಜ್ಞಾನಿಯಿಂದ ತಿಳಿಯತಕ್ಕದ್ದು. ॥ ೧೭ ॥

**ಭಾ** ॥ ಸಂಸಾರೀಶರೀರೇಣಾಭೇದೋ ವಾದಿನಾ ಕೇನಾಪಿ ನಾಂಗೀಕೃತಃ ।
ನ ಚ ಲೋಕಸಿದ್ಧಃ । ಜನಾನಾಮಿತಿ ಭೇದಾತ್ ।

ನ ಜೀವೋಂಗುಷ್ಠಮಾತ್ರಃ
ಅತೋವಿಷ್ಣೋರ್ಜೀವಾದ್ಭೇದ ಉಕ್ತ
ಅತಃ ಸರ್ವೋತ್ತಮೋ ವಿಷ್ಣುರಿತಿ ಸಿದ್ಧಂ ॥

ಅ ॥ ಶ್ರೀ ಪರಮಾತ್ಮನಿಗೆ ಸಂಸಾರಿ ಶರೀರದಿಂದ ಅಭೇದವು ಯಾವವಾದಿಯಿಂದಲೂ ಅಂಗೀಕಾರ ಮಾಡಲ್ಪಡಲಿಲ್ಲ. ಲೋಕದಲ್ಲಿ ಸಿದ್ಧವಾದದ್ದು ಅಲ್ಲ. (ಜನಾನಾಂ) ಜನರುಗಳ ಹೃದಯದಲ್ಲಿ ವಿದ್ಯಮಾನನಾಗಿದ್ದಾನೆ ಎಂಬುವುದಾಗಿ ಹೇಳಿದ್ದರಿಂದ ಭೇದವೇ ಸ್ಪಷ್ಟವಾಗಿ ಹೇಳಿದಹಾಗಾಯಿತು.

ಅ ॥ ಜೀವನು ಅಣುಭೂತನಾದುದರಿಂದ ಅಂಗುಷ್ಠಪರಿಮಿತತ್ವವು ಕೂಡುವದಿಲ್ಲ. ಆದುದರಿಂದ ಜೀವನಿಂದ ಶ್ರೀಪರಮಾತ್ಮನಿಗೆ ಭೇದವು ಸಿದ್ಧವಾಯಿತು. ಶ್ರೀಪರಮಾತ್ಮನಿಗೆ ಈ ವರೆಗೆ ಹೇಳಿದ ಗುಣಗಳ ಸಮುದಾಯವು ಸರ್ವೋತ್ತಮತ್ವವನ್ನು ಹೊರತು ಕೂಡುವದಿಲ್ಲ; ಆದುದರಿಂದ ಶ್ರೀಪರಮಾತ್ಮನು ರಮಾಬ್ರಹ್ಮಾದಿ ಸಮಸ್ತರಿಂದ ಉತ್ತಮನಾಗಿದ್ದಾನೆ ಎಂಬುವ ಅರ್ಥವು ಸಿದ್ಧವಾಯಿತು. ॥

ಭಾ ॥ ನಮೋ ಭಗವತೇ ತಸ್ಮೈ ವಿಷ್ಣವೇ ಪ್ರಭವಿಷ್ಣವೇ ।
ಯಸ್ಯಾಹಮಾಪ್ತ ಆಪ್ತೇಭ್ಯೋ ಯೋ ಮ ಆಪ್ತತಮಸ್ಸದಾ ॥

**ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯ ವಿರಚಿತ**

## ಶ್ರೀ ಕಾಠಕೋಪನಿಷದ್ಭಾಷ್ಯಂ ಸಮಾಪ್ತಂ.

ಅ ॥ ಯಾವ ಶ್ರೀಪರಮಾತ್ಮನಿಗೆ ಆಪ್ತರಾದ ಶೇಷಾದಿ ದೇವತೆಗಳಿಂದ ನಾನು ಆಪ್ತನಾಗಿದ್ದೇನೋ, ಯಾವ ಶ್ರೀಪರಮಾತ್ಮನು ಸರ್ವಕಾಲದಲ್ಲಿಯೂ ನನಗೆ ಅತ್ಯಂತ ಆಪ್ತನಾದವನೋ, ಅಂಥಾ ಪ್ರಭವನ ಶೀಲನಾದ ಸರ್ವದೇಶಕಾಲಗಳಲ್ಲಿಯೂ ವ್ಯಾಪ್ತನಾಗಿರುವ ಷಡ್ಗುಣ್ಯೈಶ್ವರ್ಯ ಸಂಪನ್ನನಾದ ಶ್ರೀಪರಮಾತ್ಮನಿಗೋಸ್ಕರ ನಮಸ್ಕಾರವಾಗಲಿ! ಅಂದರೆ ನಮಸ್ಕಾರ ಮಾಡುತ್ತೇನೆಂಬುವ ಅರ್ಥವು.

**ಈ ಪ್ರಕಾರವಾಗಿ ಶ್ರೀಮದಾಚಾರ್ಯರು ಮಾಡಿದ ಕಾಠಕನಾಮಕೋಪನಿಷತ್ತಿನ ಭಾಷ್ಯದಲ್ಲಿ ಎರಡನೆಯ ಅಧ್ಯಾಯವು ಸಮಾಪ್ತವಾಯಿತು.**

॥ ಶ್ರೀ ಕೃಷ್ಣಾರ್ಪಣಮಸ್ತು ॥

॥ ಶ್ರೀರಸ್ತು ॥ ಮಂಗಲಂ ॥ ಶ್ರೀಃ ॥

ನಿರ್ದೋಷಗುಣಪೂರ್ಣಾಯ ದೋಷದೂರಾಯ ವಿಷ್ಣವೇ ।
ನಮಃ ಶ್ರೀ ಪ್ರಾಣನಾಥಾಯ ಭಕ್ತಾಭೀಷ್ಟಪ್ರದಾಯಿನೇ ॥ ೧ ॥
ಗುರುಸ್ವಾನಂದತೀರ್ಥಾರ್ಯ ಹೃತ್ಪಂಕಜಗತೋ ಹರಿಃ ।
ನಿರ್ದೋಷಗುಣಸಂಪೂರ್ಣಃ ಪ್ರೀಯತಾಮಿಂದಿರಾಪತಿಃ ॥ ೨ ॥

ಪ್ರಭವೇಽಬ್ದೇ ಮಾರ್ಗ ಶುಕ್ಲ ದಶಮ್ಯಾಂ ಭಾನುವಾಸರೇ ।
ಕಾಠಕೋಪನಿಷದ್ಭಾಷ್ಯ ವ್ಯಾಖ್ಯಾನಸ್ಯ ಪ್ರಪಂಚಿಕಾ ।
ಲಿಖಿತಾ ಶ್ರೀನಿವಾಸೇನ ಪ್ರೀತ್ಯೈ ಮಾಧವಮಧ್ವಯೋಃ ॥ ಶ್ರೀಃ ॥

# ಸಭಾಷ್ಯ ತೈತ್ತಿರೀಯೋಪನಿಷತ್ತು.



ರಮಾರಮಣಮಾನಮ್ಯ ಪೂರ್ಣಬೋಧಮನಂತರಂ ।
ತೈತ್ತಿರೀಯೋಪನಿಷದ್ಭಾಷ್ಯ ಸಂಬಂಧಃ ಕ್ರಿಯತೇ ಮಯಾ ॥

**ಶ್ರೀಮದ್ಧನುಮದ್ಭೀಮಮಧ್ವಾಂತರ್ಗತ ರಾಮಕೃಷ್ಣವೇದವ್ಯಾಸಾತ್ಮಕ ಲಕ್ಷ್ಮೀಹಯಗ್ರೀವಾಯ ನಮಃ ॥ ಹರಿಃ ಓಂ ॥**

ಭಾ ॥ ಸತ್ಯಂ ಜ್ಞಾನಮನಂತಮಾನಂದಂ ಬ್ರಹ್ಮ ಸರ್ವಶಕ್ತ್ಯೇಕಂ ।
ಸರ್ವೈರ್ದೇವೈರೀಡ್ಯಂ ವಿಷ್ಣ್ವಾಖ್ಯಂ ಸರ್ವದೈಮಿ ಸುಪ್ರೇಷ್ಠಮ್ ॥

ಟೀ ॥ ಸತ್ಯಜ್ಞಾನಾನಂದ ಸ್ವರೂಪನೂ, ನಾಶಶೂನ್ಯನೂ, ಜಗತ್ಸೃಷ್ಟ್ಯಾದಿ ಸಮಸ್ತ ಕಾರ್ಯಗಳಲ್ಲಿ ಶಕ್ತನೂ, ಸ್ವಾವಯವ ಗುಣಾದಿಗಳಿಂದ ಅಭಿನ್ನನೂ, ಉಪನಿಷತ್ಪ್ರವರ್ತಕರಾದ ಬ್ರಹ್ಮವರುಣಾದಿಗಳಿಂದ ಸ್ತುತ್ಯನೂ ನನಗೆ ಅತ್ಯಂತಪ್ರಿಯನೂ ಆದ ವಿಷ್ಣುವೆಂದು ಪ್ರಸಿದ್ಧನಾದ ಬ್ರಹ್ಮನನ್ನು ಯಾವಾಗಲೂ ಮೊರೆಹೋಗುವೆನು.

ಈ ಉಪನಿಷತ್ತಿನಲ್ಲಿ ವಿಷ್ಣು, ಬ್ರಹ್ಮ, ವರುಣ, ಭೃಗುಋಷಿಗಳೆಂಬ ನಾಲ್ಕು ಜನರು ಋಷಿಗಳು. ಅನ್ನಮಯಾದಿ ಪಂಚಸ್ವರೂಪಿಯಾದ ಶ್ರೀ ಹರಿಯು ದೇವತೆಯು. ಬ್ರಹ್ಮವಿದ್ಯಾರಂಭವನ್ನು ಮಾಡುವ ಭೃಗುಋಷಿಯು ವಿಘ್ನಪರಿಹಾರಕ್ಕೋಸ್ಕರ ಈ ವಿದ್ಯಾಪ್ರವರ್ತಕರೂ ಪ್ರತಿಪಾದ್ಯರೂ ಇಂದ್ರಿಯಾದಿ ಪ್ರೇರಕರೂ ಆದ ಮಿತ್ರಾದಿದೇವತೆಗಳನ್ನು "ಶನ್ನೋ ಮಿತ್ರಃ" ಎಂಬಿತ್ಯಾದಿ ಶ್ರುತಿವಾಕ್ಯಗಳಿಂದಲೇ ಪ್ರಾರ್ಥಿಸುತ್ತಾನೆ.

**ಮಂ ॥ ಓಂ ॥ ಓಂ ಶನ್ನೋ ಮಿತ್ರಃ ಶಂ ವರುಣಃ । ಶನ್ನೋ ಭವತ್ವರ್ಯಮಾ । ಶನ್ನ ಇಂದ್ರೋ ಬೃಹಸ್ಪತಿಃ । ಶನ್ನೋ ವಿಷ್ಣುರುರುಕ್ರಮಃ । ನಮೋ ಬ್ರಹ್ಮಣೇ । ನಮಸ್ತೇ ವಾಯೋ । ತ್ವಮೇವ ಪ್ರತ್ಯಕ್ಷಂ ಬ್ರಹ್ಮಾಸಿ । ತ್ವಮೇವ ಪ್ರತ್ಯಕ್ಷಂ ಬ್ರಹ್ಮವದಿಷ್ಯಾಮಿ । ಋತಂ ವದಿಷ್ಯಾಮಿ । ಸತ್ಯಂ ವದಿಷ್ಯಾಮಿ । ತನ್ಮಾಮವತು । ತದ್ವಕ್ತಾರಮವತು । ಅವತು ಮಾಂ । ಅವತು ವಕ್ತಾರಂ । ಓಂ ಶಾಂತಿಃ ಶಾಂತಿಃ ಶಾಂತಿಃ ॥ ೧ ॥**

ಅ ॥ ಮಿತ್ರಃ=ಮಿತ್ರಾಖ್ಯಸೂರ್ಯನು, ನಃ=ನಮಗೆ, ಶಂ=ಸುಖಕರನು, (ಭವತು=ಆಗಲಿ) ವರುಣಃ=ವರುಣನು, ಶಂ=ಸುಖಕರನು (ಆಗಲಿ), ಅರ್ಯಮಾ=ಅರ್ಯಮಾಖ್ಯಸೂರ್ಯನು, ನಃ=ನಮಗೆ, ಶಂ=ಸುಖಕರನು, ಭವ=ಆಗಲಿ, ಬೃಹಸ್ಪತಿಃ=ದೇವತೆಗಳಿಗೆ

ಸ್ವಾಮಿಯಾದ, ಇಂದ್ರಃ=ಇಂದ್ರನು, ನಃ=ನಮಗೆ, ಶಂ=ಸುಖಕರನು, (ಆಗಲಿ) ಉರುಕ್ರಮಃ= ಬಹು ಪರಾಕ್ರಮವುಳ್ಳ, ವಿಷ್ಣುಃ=ಹರಿಯು, ನಃ=ನಮಗೆ, ಶಂ=ಸುಖಕರನು, (ಆಗಲಿ) ಬ್ರಹ್ಮಣೇ=ಚತುರ್ಮುಖನಿಗೋಸ್ಕರ, ನಮಃ=ನಮಸ್ಕಾರವು, ವಾಯೋ!=ಎಲೋ ಮುಖ್ಯ ಪ್ರಾಣನೆ!, ತೇ=ನಿನಗೋಸ್ಕರ, ನಮಃ=ನಮಸ್ಕಾರವು, ತ್ವಮೇವ=ನೀನೇ, ಪ್ರತ್ಯಕ್ಷಂ=ನಿಖಿಲೇಂದ್ರಿಯಗಳಿಗೂ ಪ್ರೇರಕನಾಗಿದ್ದವನೂ, ಬ್ರಹ್ಮ=ಪರಬ್ರಹ್ಮಾಧಿಷ್ಠಾನನೂ, ಅಸಿ=ಆಗಿರುತ್ತೀ, ತ್ವಮೇವ=ನಿನ್ನನ್ನೇ, ಪ್ರತ್ಯಕ್ಷಂ=ನಿಖಿಲೇಂದ್ರಿಯಗಳಿಗೂ ಪ್ರೇರಕನಾಗಿರತಕ್ಕ, ಬ್ರಹ್ಮ= ಬ್ರಹ್ಮನನ್ನಾಗಿ, ವದಿಷ್ಯಾಮಿ=ಹೇಳುವೆನು, ಋತಂ=ಯಥಾರ್ಥ ಜ್ಞಾನವುಳ್ಳವನನ್ನಾಗಿ, ವ ಷ್ಯಾಮಿ=ಹೇಳುವೆನು, ಸತ್ಯಂ=ಯಥಾರ್ಥ ಜ್ಞಾನಪೂರ್ವಕವಾಗಿ ಹೇಳತಕ್ಕವನನ್ನಾಗಿ, ವದಿಷ್ಯಾಮಿ=ಹೇಳುವೆನು, ತತ್=ಆದುದರಿಂದ, ಮಾಂ=ನನ್ನನ್ನು, ಅವತು=ರಕ್ಷಿಸಲಿ, ತತ್= ವಾಯುರೂಪನಾದ ಬ್ರಹ್ಮನು. ವಕ್ತಾರಂ=ವಿದ್ಯೋಪದೇಶಕರನ್ನು, ಅವತು=ರಕ್ಷಿಸಲಿ, ಮಾಂ=ನನ್ನನ್ನು, ಅವತು=ರಕ್ಷಿಸಲಿ, ವಕ್ತಾರಂ=ಆಚಾರ್ಯರನ್ನು, ಅವತು=ರಕ್ಷಿಸಲಿ, ಓಂ=ವ್ಯಾಪ್ತನಾದ ವಿಷ್ಣುವಿನಿಂದ, ಶಾಂತಿಃ ಶಾಂತಿಃ ಶಾಂತಿಃ=ಸ್ವರ್ಗ ಅಂತರಿಕ್ಷ ಭೂಗತ ಅನಿಷ್ಟನಿರಾಸವಾಗಲಿ, ಅಥವಾ ಆಧ್ಯಾತ್ಮಿಕ, ಆಧಿಭೌತಿಕ, ಆಧಿದೈವಿಕ ಅನಿಷ್ಟಗಳು ಪರಿಹಾರ ವಾಗಲಿ.

ತಾ || ಬ್ರಹ್ಮವಿದ್ಯಾಪ್ರವರ್ತಕರಲ್ಲಿ ಪ್ರಧಾನರಾದುದರಿಂದಲೂ ಪರಬ್ರಹ್ಮನಿಗೆ ಮುಖ್ಯ ಅಧಿಷ್ಠಾನನಾದುದರಿಂದಲೂ ಮೇಲೆ ಹೇಳುವ ಐದು ಅಧಿಕರಣಗಳಲ್ಲಿ ವಿಶೇಷವಾಗಿ ಪ್ರತಿಪಾದ್ಯ ನಾಗುವದರಿಂದಲೂ ಹಿಂದಿನ ವಾಕ್ಯದಲ್ಲಿ ನಮಸ್ಕಾರ ಮಾಡಿದರೂ ತಿರುಗಿ ಪ್ರತ್ಯಕ್ಷವಾಗಿ ಪ್ರಾರ್ಥಿಸುತ್ತಾರೆ.

ಭಾ||(a) ಆದಿತ್ಯಸಂಸ್ಥಿತಾದ್ವಿಷ್ಣೋಃ ಶ್ರುತ್ವಾ ಬ್ರಹ್ಮಾ ಯಥಾ ಹರಿಂ |
ತುಷ್ಟಾವ ತತ್ಪ್ರಕಾರೇಣ ವರುಣೋಕ್ತೇನ ವೈ ಭೃಗುಃ ||
ವಿಷ್ಣುಮಸ್ತೌತ್ತಥಾ ಪ್ರಾಹ ಶನ್ನೋಮಿತ್ರಾದಿಕಾ ಶ್ರುತಿಃ |
(b) ಯದುವಾಚ ಹರಿಃ ಸೂರ್ಯಮಂಡಲಸ್ಥಃ ಪರಃ ಪುಮಾನ್ |
ಬ್ರಹ್ಮಾ ತದಾಹ ವರುಣೇ ವರುಣೋ ಭೃಗವೇಽಪಿ ತು |
(c) ಶನ್ನೋಮಿತ್ರಾದಿಭಿರ್ವಾಕ್ಯೈಸ್ತೈರೇವ ಹರಿಮಸ್ತುವತ್ ||
ಭೃಗುಃ ಪಂಚಾತ್ಮಕಂ ಪೂರ್ಣಮನ್ನಾದಿಮಯಮಚ್ಯುತಂ |
ಮುಕ್ತಗೀತಾಖ್ಯಸಾಮ್ನೈಸ್ತು ಸ್ತುತಸ್ತೇನ ಜನಾರ್ದನಃ |
(d) ಸುಪ್ರೀತಃ ಪ್ರದದೌ ಜ್ಞಾನಂ ಸ್ವಾತ್ಮಭಕ್ತಿಂ ಚ ಶಾಶ್ವತೀಂ ||
ಇತ್ಯಾದಿ ಯಜುಸ್ಸಂಹಿತಾಯಾಂ ||
(e) ಭೃಗುವಾಕ್ಯತಥಾ ವಾಯುನಮಸ್ಕಾರಾದಿಕಂ ಹರಿಃ |
ಪ್ರೋವಾಚ ಬ್ರಹ್ಮಣೇ ಚೈವಂ ವಚಸ್ಸುಬಹುದರ್ಶಿಷ್ವಿತಿ ಚ || ೧ ||

ಅ|| (a) ಚತುರ್ಮುಖನು ಆದಿತ್ಯಾಂತರ್ಯಾಮಿಯಾದ ವಿಷ್ಣುವಿನಿಂದ ಭಗವತ್ಸ್ವರೂಪವನ್ನು ಕೇಳಿ ಶ್ರೀಪರಮಾತ್ಮನನ್ನು ಸ್ತೋತ್ರಮಾಡಿದನು. ಅನಂತರ ಬ್ರಹ್ಮನು ತಾನು ಸ್ತೋತ್ರ ಮಾಡಿದ ರೀತಿಯನ್ನು ವರುಣನಿಗೆ ಉಪದೇಶಿಸಿದನು. ಆತನು ತನ್ನ ಮಗನಾದ ಭೃಗುಋಷಿಗೆ ಉಪದೇಶಿಸಿದನು. ಭೃಗುಋಷಿಯು ವರುಣನುಪದೇಶಿಸಿದ ಪ್ರಕಾರ ವಿಷ್ಣುವನ್ನು ಸ್ತೋತ್ರ

ಮಾಡಿದನು. ಅದೇ ಪ್ರಕಾರವನ್ನು "ಶನ್ನೋಮಿತ್ರಃ ಶಂ ವರುಣಃ" ಇತ್ಯಾದಿ ಶ್ರುತಿಯು ಹೇಳು ತ್ತದೆ. (b) ಸೂರ್ಯಮಂಡಲಾಂತರ್ಗತನೂ, ಸರ್ವೋತ್ತಮನೂ, ಗುಣಪರಿಪೂರ್ಣನೂ ಆದ ಶ್ರೀಹರಿಯು ಚತುರ್ಮುಖನಿಗೆ ಯಾವ "ಶನ್ನೋಮಿತ್ರಃ" ಇತ್ಯಾದಿ ವಾಕ್ಯಗಳನ್ನು ಉಪದೇಶ ಕೊಟ್ಟನೋ, ಅವುಗಳನ್ನು ಚತುರ್ಮುಖನು ವರುಣನಿಗೆ ಉಪದೇಶಿಸಿದನು. ವರುಣನು ಭೃಗು ವಿಗೆ ಉಪದೇಶಿಸಿದನು. (c) ಭೃಗುವು ವರುಣೋಪದಿಷ್ಟಗಳಾದ "ಶನ್ನೋ ಮಿತ್ರಃ" ಎಂದಾರಂ ಭಿಸಿ, ಮುಕ್ತರು ಗಾನಮಾಡುವ ಪ್ರಕಾರವನ್ನು ತೋರಿಸುವ "ಹಾ೩ಉ೩ಹಾ೩ಉ೩" ಎಂಬ ಮಂತ್ರಪರ್ಯಂತವಾದ ವಾಕ್ಯಗಳಿಂದ ಗುಣಪರಿಪೂರ್ಣನೂ, ನಾಶಶೂನ್ಯನೂ ಆದ ಅನ್ನ ಮಯಾದಿ ಐದು ಸ್ವರೂಪಗಳುಳ್ಳ ಪರಮಾತ್ಮನನ್ನು ಸ್ತುತಿಸಿದನು. (d) ಹೀಗೆ ಭೃಗುವಿನಿಂದ ಸ್ತೋತ್ರಮಾಡಿಸಿಕೊಳ್ಳಲ್ಪಟ್ಟ ಶ್ರೀಜನಾರ್ದನನು ಸಂತುಷ್ಟನಾಗಿ ಜ್ಞಾನವನ್ನೂ, ತನ್ನಲ್ಲಿ ದೃಢಭಕ್ತಿ ಯನ್ನೂ ಕೊಟ್ಟನು ಎಂಬಿತ್ಯಾದಿ ವಿಷಯವು ಯಜುಸ್ಸಂಹಿತೆಯಲ್ಲಿ ಹೇಳಲ್ಪಟ್ಟಿದೆ. (e) ಹರಿ ಯು ಭೃಗುವಾಕ್ಯಗಳನ್ನನುಸರಿಸಿ, ವಾಯುನಮಸ್ಕಾರಾದಿಗಳನ್ನು ಚತುರ್ಮುಖನಿಗೋಸ್ಕರ ಹೇಳಿದನು. ಪ್ರಾಜ್ಞರ ಮಾತುಗಳನ್ನು ಮೇಲಿನ ರೀತಿಯಲ್ಲಿ ತಿಳಿಯುವುದು. ಹಾಗೂ ಹೇಳಿಯದೆ.

ತಾ|| "ಶನ್ನೋಮಿತ್ರಃ" ಇತ್ಯಾದಿ ವಾಕ್ಯಗಳಿಂದ ಮಿತ್ರವಾಯ್ವಾದಿ ಅವರ ದೇವತೆಗಳ ಪ್ರಾರ್ಥನೆಯನ್ನು ಮಾಡಿರುವದರಿಂದ ಈ ಉಪನಿಷತ್ತಿನಲ್ಲಿ ವಿಷ್ಣುವು ಋಷಿಯಾಗಲರ್ಹನಲ್ಲವೆಂದು ತಿಳಿಯಕೂಡದು. ಬ್ರಹ್ಮವಿದ್ಯಾನುಷ್ಠಾನದಲ್ಲಾಸಕ್ತನಾದ ಭೃಗುವು ವಿಘ್ನಪರಿಹಾರಾರ್ಥವಾಗಿ ವಾಯ್ವಾದಿ ನಮಸ್ಕಾರ ಮಾಡುವನೆಂದು ನಿಶ್ಚಯ ತಿಳಿದ ತ್ರಿಕಾಲಜ್ಞನಾದ ಹರಿಯು ಭೃಗು ವಾಕ್ಯಾನುವಾದರೂಪದಿಂದ ಬ್ರಹ್ಮನಿಗೆ ಉಪದೇಶ ಕೊಟ್ಟನು. ಅಂದರೆ ಭೃಗುವು ಮುಂದೆ ಯಾವ ಪ್ರಾರ್ಥನೆಯು ಮಾಡುವನೋ ಅದನ್ನೇ ಪರಮಾತ್ಮನು ಬ್ರಹ್ಮನಿಗೆ ತಿಳಿಸಿದನು. ಉತ್ತ ಮರು ಋಷಿಗಳಾಗಿ ತಮಗಿಂತಲೂ ಕಡಿಮೆಯಾದ ದೇವತೆಗಳನ್ನು ಪ್ರಾರ್ಥಿಸಿದ್ದರೆ ಅದು ಇತರ ಅಧಿಕಾರಿಗಳ ಪ್ರಯೋಜನಾರ್ಥವಾಗಿ ಸೂಚಿಸಿದ್ದೆಂದು ತಿಳಿಯಬೇಕು.

**ಮಂ || ಶೀಕ್ಷಾಂ ವ್ಯಾಖ್ಯಾಸ್ಯಾಮಃ । ವರ್ಣಃ ಸ್ವರಃ । ಮಾತ್ರಾ ಬಲಂ।**

**ಸಾಮ ಸಂತಾನಃ । ಇತ್ಯುಕ್ತಃ ಶೀಕ್ಷಾಧ್ಯಾಯಃ || ೨ ||**

ಅ|| ಬ್ರಹ್ಮವಿದ್ಯೆಯನ್ನು ಅಭ್ಯಾಸಿಸಲಿಚ್ಛಿಸುವ ಅಧಿಕಾರಿಯು ಮೊದಲು ಯಾವ ವಿಷಯ ವನ್ನು ತಿಳಕೊಳ್ಳಬೇಕೋ ಅದನ್ನು ಋಷಿಗಳು ಪ್ರತಿಜ್ಞಾ ಮಾಡುತ್ತಾರೆ. ಶೀಕ್ಷಾಂ=ತಿಳು ಕೊಳ್ಳಬೇಕಾದ ವಿಷಯವನ್ನು, ವ್ಯಾಖ್ಯಾಸ್ಯಾಮಃ=ವಿವರಿಸಿ ಹೇಳುತ್ತೇವೆ. ವರ್ಣಃ=ಅಕಾರಾದಿ ವರ್ಣೋಚ್ಚಾರಸ್ಥಾನಗಳಾದ ಕಂಠತಾಲ್ವಾದಿಗಳು, ಸ್ವರಃ=ಉದಾತ್ತಾದಿಯು, ಮಾತ್ರಾ= ಏಕಮಾತ್ರಾದಿಯು, ಬಲಂ=ವಿವೃತಾದಿ ಪ್ರಯತ್ನವು, ಸಾಮ=ವರ್ಣಗಳ ಸಂಧಿಯು, ಸಂತಾನಃ=ವರ್ಣಪರಂಪರೆಯು, (ಇವುಗಳನ್ನು ತಿಳಕೊಳ್ಳತಕ್ಕದು.) ಬ್ರಹ್ಮವಿದ್ಯಾಧಿಕಾರಿ ಶಿಕ್ಷಾ ಪರವಾಗಿರುವ, ಈ ವರ್ಣಸ್ವರಾದಿ ಶಬ್ದಗಳು ಸಾಕ್ಷಾತ್ ಬ್ರಹ್ಮಪರವಾಗಿಯೂ ಇವೆಯೆಂದು ತಿಳ ಕೊಳ್ಳತಕ್ಕದು. ಹೇಗೆಂದರೆ- ವರ್ಣಃ=ವರಣೀಯವಾದುದರಿಂದ ವರ್ಣ (ಅಕ್ಷರ)ದಲ್ಲಿರತಕ್ಕ, ವರ್ಣವಾಚ್ಯವಾದ, ಪುರುಷನಲ್ಲಿ ವರ್ಣೋಚ್ಚಾರಣ ಶಕ್ತಿಪ್ರದವಾದ ವಿಷ್ಣುರೂಪವು 'ವರ್ಣ'ವೆಂದೆ ನಿಸುವುದು. ಸ್ವರಃ=ಸ್ವರಮಣನಾದುದರಿಂದ ಸ್ವರದಲ್ಲಿರತಕ್ಕ, ಸ್ವರವಾಚ್ಯವಾದ, ಸ್ವರೋ ಚ್ಚಾರಣ ಶಕ್ತಿಪ್ರದವಾದ ವಿಷ್ಣುರೂಪವು 'ಸ್ವರ'ವೆಂದೆನಿಸುವುದು. ಮಾತ್ರಾ=ಜ್ಞಾನವನ್ನು ಕೊಟ್ಟು ರಕ್ಷಿಸುವುದರಿಂದ 'ಮಾತ್ರಾ' ಎಂದೂ, ಬಲಂ=ಬಲರೂಪನಾದುದರಿಂದ 'ಬಲ'ವೆಂದೂ, ಸಾಮ=

ಸರ್ವರೂಪಗಳಲ್ಲಿಯೂ ಸಾಮ್ಯ ಇರುವುದರಿಂದ 'ಸಾಮ'ವೆಂದೂ, ಸಂತಾನಃ=ಗುಣವ್ಯಾಪ್ತ ವಾದುದರಿಂದ 'ಸಂತಾನ'ವೆಂದೂ ಅನ್ನಿಸಿಕೊಳ್ಳುತ್ತದೆ.

ಶೀಕ್ಷಾಧ್ಯಾಯಃ=ಶಿಕ್ಷಣೀಯಾರ್ಥ ಪ್ರತಿಪಾದಕವಾದ ಸಂದರ್ಭವು, ಇತಿ=ಹೀಗೆ, ಉಕ್ತಃ=ಹೇಳಲ್ಪಟ್ಟಿತು.

ಭಾ ॥(a) ವರಣೀಯೋ ವರ್ಣಃ । ಸ್ವರತೇಸ್ತು ಸ್ವರಃ ।
ಮಾನಾತ್ತ್ರಾತಾ ಮಾತ್ರಾ । ಬಲರೂಪಃ ।
ಸಮಶ್ಚ ಸರ್ವರೂಪೇಷು । ಸಂತತಶ್ಚ ॥
(b) ವರ್ಣಾದಿವಾಚಕಂ ರೂಪಂ ಜ್ಞೇಯಂ ವರ್ಣಾದಿನಾಮಕಂ ।
ವಿಷ್ಣೋರ್ವರ್ಣಾದಿಸಂಸ್ಥಂಚ ಪುಂಸು ತತ್ತತ್ಕ್ರಿಯಾಪ್ರದಂ ॥೨॥

ಅ ॥ (a) (ಸರ್ವಭಕ್ತರಿಂದಲೂ) ಭಜನೀಯನಾದುದರಿಂದ ವರ್ಣನೆಂದೂ, ಸ್ವರಮಣ ನಾದುದರಿಂದ ಸ್ವರನೆಂದೂ, ಜ್ಞಾನವನ್ನುಕೊಟ್ಟು ರಕ್ಷಿಸುವವನಾದುದರಿಂದ ಮಾತ್ರಾಎಂದೂ ಬಲರೂಪನಾದುದರಿಂದ ಬಲನೆಂದೂ, ಸರ್ವರೂಪಗಳಲ್ಲಿ ಸಮನಾದುದರಿಂದ ಸಾಮನೆಂದೂ, ವ್ಯಾಪ್ತನಾದುದರಿಂದ ಸಂತಾನನೆಂದೂ ಪರಮಾತ್ಮನು ಹೇಳಲ್ಪಡುತ್ತಾನೆ.

(b) ವಿಷ್ಣುವಿನ ರೂಪವು ವರ್ಣಸ್ವರಾದಿಶಬ್ದಗಳಿಂದ ವಾಚ್ಯವಾಗಿಯೂ, ತತ್ತನ್ನಾಮಕ ವಾಗಿಯೂ ಆಯಾಯದರಲ್ಲಿ ಇರತಕ್ಕದಾಗಿಯೂ, ಪುರುಷರಿಗೆ ಆಯಾಯ ಶಕ್ತಿಪ್ರದವಾಗಿಯೂ ಇರತಕ್ಕದು. ॥

**ಮಂ ॥ ಸ ಹ ನೌ ಯಶಃ । ಸ ಹ ನೌ ಬ್ರಹ್ಮವರ್ಚಸಂ । ಅಥಾತಃ ಸꣳಹಿ ತಾಯಾ ಉಪನಿಷದಂ ವ್ಯಾಖ್ಯಾಸ್ಯಾಮಃ । ಪಂಚಸ್ವಧಿಕರಣೇಷು । ಅಧಿಲೋಕಮಧಿಜ್ಯೌತಿಷಮಧಿವಿದ್ಯಮಧಿಪ್ರಜಮಧ್ಯಾತ್ಮಂ । ತಾ ಮಹಾಸꣳಹಿತಾ ಇತ್ಯಾಚಕ್ಷತೇ ॥ ೩ ॥**

ಅ ॥ ಸಹ=ಪ್ರಸಿದ್ಧರಾದ ಮಿತ್ರಾದಿಗಳು, ನೌ=ಗುರುಶಿಷ್ಯರಿಗೆ, ಯಶಃ=ಯಶಸ್ಕರರು (ಆಗಲಿ), ಸಹ=ಅವರು, ನೌ=ನಮಗೆ, ಬ್ರಹ್ಮವರ್ಚಸಂ=ಬ್ರಹ್ಮವರ್ಚಸ್ಕರರು (ಆಗಲಿ), ಅಥ=ಶಿಕ್ಷಾಹೇಳಿದಮೇಲೆ, ಅತಃ=ಸಫಲವಾದುದರಿಂದ, ಸಂಹಿತಾಯಾಃ=ವರ್ಣಸಂಧಿಯ, ಉಪನಿಷದಂ=ರಹಸ್ಯವನ್ನು, ಅಧಿಲೋಕಂ=ಲೋಕವನ್ನಧಿಕರಿಸಿಕೊಂಡು ಪ್ರವರ್ತವಾದ ಪ್ರಕರಣವು, ಅಧಿಜ್ಯೌತಿಷಂ=ಜ್ಯೋತಿಃ ಪ್ರಕರಣವು, ಅಧಿವಿದ್ಯಂ=ವಿದ್ಯಾಪ್ರಕರಣವು, ಅಧಿಪ್ರಜಂ=ಪ್ರಜಾಪ್ರಕರಣವು, ಅಧ್ಯಾತ್ಮಂ=ಆತ್ಮಪ್ರಕರಣವು, ಎಂಬ ಪಂಚಸು=ಐದು, ಅಧಿಕರಣೇಷು=ಪ್ರಕರಣಗಳಲ್ಲಿ, ವ್ಯಾಖ್ಯಾಸ್ಯಾಮಃ=ಹೇಳುವೆವು, ತಾಃ=ಆ ಸಂಹಿತೆಗಳನ್ನು, ಮಹಾಸಂಹಿತಾ ಇತಿ=ಪರಬ್ರಹ್ಮಪ್ರತಿಪಾದಕವಾದುದರಿಂದ ಮಹಾಸಂಹಿತೆಗಳೆಂದು, ಆಚಕ್ಷತೇ=ಹೇಳುತ್ತಾರೆ. ॥ ೩ ॥

**ಮಂ ॥ ಅಥಾಧಿಲೋಕಂ । ಪೃಥಿವೀ ಪೂರ್ವರೂಪಂ । ದ್ಯೌರುತ್ತರರೂಪಂ । ಆಕಾಶಃ ಸಂಧಿಃ । ವಾಯುಃ ಸಂಧಾನಂ । ಇತ್ಯಧಿಲೋಕಂ ॥ ೪ ॥**

ಅ || ಅಧಿಲೋಕಂ=ಲೋಕದಲ್ಲಿದ್ದ ಭಗವದ್ರೂಪಚತುಷ್ಟಯುವನ್ನು, ಅಥ=ಮಹಾ ಸಂಹಿತೆಯಾದುದರಿಂದ, (ವ್ಯಾಖ್ಯಾಸ್ಯಾಮಃ=ಹೇಳುತ್ತೇವೆ), ಪೃಥಿವೀ=ಪೃಥಿವಿಯಲ್ಲಿದ್ದ ಪೃಥಿವೀನಾಮಕವಾದ ನಾರಾಯಣನ ವಾಸುದೇವಾಖ್ಯರೂಪವು, ಪೂರ್ವರೂಪಂ=ಸಂಹಿತೆಯ ಪೂರ್ವವರ್ಣದಿಂದ ಪ್ರತಿಪಾದಿಸಿಕೊಳ್ಳಲ್ಪಡತಕ್ಕದು, ದ್ಯೌಃ=ದ್ಯುಲೋಕದಲ್ಲಿರತಕ್ಕ 'ದ್ಯೌಃ' ಎಂದು ಹೆಸರುಳ್ಳ ನಾರಾಯಣನ ಸಂಕರ್ಷಣಾಖ್ಯರೂಪವು, ಉತ್ತರ ರೂಪಂ=ಸಂಹಿತೆಯ ಉತ್ತರವರ್ಣಪ್ರತಿಪಾದ್ಯವು, ಆಕಾಶಃ=ಆಕಾಶಸ್ಥವಾದ ಆಕಾಶವೆಂದು ಹೆಸರುಳ್ಳ ನಾರಾಯಣನ ಪ್ರದ್ಯುಮ್ನಾಖ್ಯರೂಪವು, ಸಂಧಿಃ=ಸನ್ನಿಕರ್ಷಪ್ರತಿಪಾದ್ಯವು, ವಾಯುಃ=ವಾಯುಸ್ಥವಾದ ವಾಯುನಾಮಕವಾದ ನಾರಾಯಣನ ಅನಿರುದ್ಧಾಖ್ಯರೂಪವು, ಸಂಧಾನಂ=ಸಂಧಿಕಾರ್ಯ ಪ್ರತಿಪಾದ್ಯವು,ಅಧಿಲೋಕಂ=ಲೋಕಗತ ರೂಪಚತುಷ್ಟಯವು, ಇತಿ=ವ್ಯಾಖ್ಯಾತವಾಯಿತು. ||

**ಮಂ || ಅಥಾಧಿಜ್ಯೌತಿಷಂ | ಅಗ್ನಿಃ ಪೂರ್ವರೂಪಂ | ಆದಿತ್ಯ ಉತ್ತರರೂಪಂ | ಆಪಃ ಸಂಧಿಃ | ವೈದ್ಯುತಃ ಸಂಧಾನಂ | ಇತ್ಯಧಿಜ್ಯೌತಿಷಂ || ೫ ||**

ಅ || ಅಥ=ಆ ಮೇಲೆ, ಅಧಿಜ್ಯೌತಿಷಂ=ಜ್ಯೋತಿರ್ಗತರೂಪಚತುಷ್ಟಯುವನ್ನು, (ಹೇಳುವೆವು), ಅಗ್ನಿಃ=ಪಾರ್ಥಿವಾಗ್ನಿಯಲ್ಲಿರತಕ್ಕ ಅಗ್ನಿನಾಮಕವಾದ ವಾಸುದೇವನ ವಾಸು ದೇವಾಖ್ಯರೂಪವು, ಪೂರ್ವರೂಪಂ=ಸಂಹಿತೆಯ ಪೂರ್ವವರ್ಣಪ್ರತಿಪಾದ್ಯವು, (ಪೂರ್ವರೂಪೋ ತ್ತರರೂಪ, ಸಂಧಿ, ಸಂಧಾನ, ಈ ಶಬ್ದಗಳ ಅರ್ಥವನ್ನು ಇದೇ ರೀತಿ ಇನ್ನೂ ತಿಳಕೊಳ್ಳ ತಕ್ಕುದು), ಆದಿತ್ಯಃ=ದ್ಯುಲೋಕಗತ ಆದಿತ್ಯನಲ್ಲಿರುವ ಆದಿತ್ಯನಾಮಕವಾದ ವಾಸುದೇವನ ಸಂಕರ್ಷಣಾಖ್ಯರೂಪವು, ಉತ್ತರರೂಪಂ, ಆಪಃ=ಜಲಗತವಾದ ಅಮ್ನಾಮಕವಾದ ವಾಸು ದೇವನ ಪ್ರದ್ಯುಮ್ನಾಖ್ಯರೂಪವು, ಸಂಧಿಃ, ವೈದ್ಯುತಃ=ವಿದ್ಯುತ್ಸಮೂಹಗತನಾದ ವೈದ್ಯುತಾಖ್ಯ ವಾದ ವಾಸುದೇವನ ಅನಿರುದ್ಧಾಖ್ಯರೂಪವು, ಸಂಧಾನಂ, ಅಧಿಜ್ಯೌತಿಷಂ=ಜ್ಯೋತಿಃ ಪ್ರಕರ ಣವು, ಇತಿ=ಮುಗಿದುದು. || ೫ ||

**ಮಂ || ಅಥಾಧಿವಿದ್ಯಂ | ಆಚಾರ್ಯಃ ಪೂರ್ವರೂಪಂ | ಅಂತೇವಾಸ್ಯುತ್ತರ ರೂಪಂ | ವಿದ್ಯಾ ಸಂಧಿಃ | ಪ್ರವಚನಂ ಸಂಧಾನಂ | ಇತ್ಯಧಿವಿದ್ಯಂ || ೬ ||**

ಅ || ಅಥ=ಆ ಮೇಲೆ, ಅಧಿವಿದ್ಯಂ=ವಿದ್ಯಾಗತವಾದ ರೂಪಚತುಷ್ಟಯುವನ್ನು (ಹೇಳು ತ್ತೇವೆ), ಆಚಾರ್ಯಃ=ಆಚಾರ್ಯಸ್ಥವಾದ ಆಚಾರ್ಯನಾಮಕವಾದ ಸಂಕರ್ಷಣನ ವಾಸು ದೇವಾಖ್ಯರೂಪವು, ಪೂರ್ವರೂಪಂ, ಅಂತೇವಾಸೀ=ಅಂತೇವಾಸಿಯಲ್ಲಿರುವ ಅಂತೇವಾಸಿ ನಾಮಕವಾದ ಸಂಕರ್ಷಣನ ಸಂಕರ್ಷಣ ರೂಪವು ಉತ್ತರರೂಪಂ, ವಿದ್ಯಾ=ವಿದ್ಯಾಸ್ಥವಾದ ವಿದ್ಯಾನಾಮಕವಾದ ಸಂಕರ್ಷಣನ ಪ್ರದ್ಯುಮ್ನಾಖ್ಯರೂಪವು, ಸಂಧಿಃ, ಪ್ರವಚನಂ=ಪ್ರವಚನ ದಲ್ಲಿರುವ ಪ್ರವಚನನಾಮಕವಾದ ಸಂಕರ್ಷಣಾನಿರುದ್ಧಾಖ್ಯರೂಪವು, ಸಂಧಾನಂ, ಅಧಿವಿದ್ಯಂ= ವಿದ್ಯಾಪ್ರಕರಣವು, ಇತಿ=ಮುಗಿದುದು. || ೬ ||

**ಮಂ || ಅಥಾಧಿಪ್ರಜಂ | ಮಾತಾ ಪೂರ್ವರೂಪಂ | ಪಿತೋತ್ತರರೂಪಂ | ಪ್ರಜಾ ಸಂಧಿಃ | ಪ್ರಜನನಂ ಸಂಧಾನಂ | ಇತ್ಯಧಿಪ್ರಜಂ || ೭ |**

ಅ ॥ ಅಥ=ಆ ಮೇಲೆ, ಅಧಿಪ್ರಜಂ=ಪ್ರಜಾಸ್ಥವಾದ ರೂಪಚತುಷ್ಟಯವನ್ನು (ಹೇಳುತ್ತೇವೆ), ಮಾತಾ=ಮಾತೃಗತವಾದ ಮಾತೃನಾಮಕವಾದ ಪ್ರದ್ಯುಮ್ನ ವಾಸುದೇವಾಖ್ಯರೂಪವು, ಪೂರ್ವರೂಪಂ, ಪಿತಾ=ಪಿತೃಗತವಾದಪಿತೃನಾಮಕವಾದ ಪ್ರದ್ಯುಮ್ನ ಸಂಕರ್ಷಣಾಖ್ಯರೂಪವು, ಉತ್ತರರೂಪಂ, ಪ್ರಜಾ=ಪ್ರಜಾಗತವಾದ ಪ್ರಜಾನಾಮಕವಾದ ಪ್ರದ್ಯುಮ್ನಪ್ರದ್ಯುಮ್ನಾಖ್ಯರೂಪವು, ಸಂಧಿಃ, ಪ್ರಜನನಂ=ಪ್ರಜನನಗತವಾದ ಪ್ರಜನನನಾಮಕವಾದ, ಪ್ರದ್ಯುಮ್ನಾನಿರುದ್ಧಾಖ್ಯರೂಪವು, ಸಂಧಾನಂ, ಅಧಿಪ್ರಜಂ=ಪ್ರಜಾಪ್ರಕರಣವು, ಇತಿ=ಮುಗಿದುದು. ॥ ೭ ॥

**ಮಂ ॥ ಅಥಾಧ್ಯಾತ್ಮಂ । ಅಧರಾಹನುಃ ಪೂರ್ವರೂಪಂ । ಉತ್ತರಾಹನುರುತ್ತರರೂಪಂ । ವಾಕ್ಸಂಧಿಃ । ಜಿಹ್ವಾ ಸಂಧಾನಂ । ಇತ್ಯಧ್ಯಾತ್ಮಂ । ಇತೀಮಾ ಮಹಾಸꣳಹಿತಾಃ । ಯ ಏವಮೇತಾ ಮಹಾಸꣳಹಿತಾ ವ್ಯಾಖ್ಯಾತಾ ವೇದ । ಸಂಧೀಯತೇ ಪ್ರಜಯಾ ಪಶುಭಿಃ । ಬ್ರಹ್ಮವರ್ಚಸೇನಾನ್ನಾದ್ಯೇನ ಸುವರ್ಗೇಣ ಲೋಕೇನ ॥ ೮ ॥**

ಅ ॥ ಅಥ=ಆ ಮೇಲೆ, ಅಧ್ಯಾತ್ಮಂ=ದೇಹಗತರೂಪಚತುಷ್ಟಯವನ್ನು ಹೇಳುತ್ತೇವೆ, ಅಧರಾಹನುಃ=ಕೆಳಗಿನತುಟಿ, ತದ್ಗತವಾದ ಅಧರಾಹನುನಾಮಕವಾದ ಅನಿರುದ್ಧವಾಸುದೇವಾಖ್ಯರೂಪವು, ಪೂರ್ವರೂಪಂ । ಉತ್ತರಾಹನುಃ=ಮೇಲಿನ ತುಟಿ ತದ್ಗತವಾದ ತನ್ನಾಮಕವಾದ ಅನಿರುದ್ಧಸಂಕರ್ಷಣಾಖ್ಯರೂಪವು, ಉತ್ತರರೂಪಂ । ವಾಕ್=ವಾಗಿಂದ್ರಿಯಗತವಾದ ವಾಗೆಂದು ಹೆಸರುಳ್ಳ ಅನಿರುದ್ಧ ಪ್ರದ್ಯುಮ್ನಾಖ್ಯರೂಪವು, ಸಂಧಿಃ । ಜಿಹ್ವಾ=ನಾಲಿಗೆ ಜಿಹ್ವಾಗತವಾದ ಜಿಹ್ವಾನಾಮಕವಾದ ಅನಿದ್ಧಾನಿರುದ್ಧಾಖ್ಯರೂಪವು, ಸಂಧಾನಂ । ಅಧ್ಯಾತ್ಮಂ=ಆತ್ಮಪ್ರಕರಣವು, ಇತಿ=ಮುಗಿದುದು. ಇಮಾಃ=ಈದಾವ ಮಹಾಸಂಹಿತಾಃ=ವಿಷ್ಣುವೆಂಬ ಮಹಾರ್ಥಪ್ರತಿಪಾದಕಗಳಾದ ಮಹಾಸಂಹಿತೆಗಳು, ಇತಿ=ವ್ಯಾಖ್ಯಾನಿಸಲ್ಪಟ್ಟವು, ಯಃ=ಯಾವ ಅಧಿಕಾರಿಯು, ಏವಂ=ಹೀಗೆ, ವ್ಯಾಖ್ಯಾತಾಃ=ವಿವರಿಸಲ್ಪಟ್ಟ, ಮಹಾಸಂಹಿತಾಃ=ಮಹಾಸಂಹಿತೆರೂಪಗಳನ್ನು, ವೇದ=ಉಪಾಸನೆಮಾಡಿ ಸಾಕ್ಷಾತ್ಕರಿಸಿಕೊಳ್ಳುತ್ತಾನೋ, ಸಃ=ಅಂತಹನು, ಸುವರ್ಗೇಣ ಲೋಕೇನ=ವೈಕುಂಠಾದಿಲೋಕದಿಂದ, ಪ್ರಜಯಾ=ಪ್ರಕೃಷ್ಟ ಜ್ಞಾನದಿಂದಲೂ, ಪುತ್ರಾದಿಸಂಪತ್ತಿನಿಂದಲೂ, ಪಶುಭಿಃ=ವೇದಗಳಿಂದಲೂ, ಪಶುಗಳಿಂದಲೂ, ಬ್ರಹ್ಮವರ್ಚಸೇನ=ಬ್ರಹ್ಮತೇಜಸ್ಸಿನಿಂದಲೂ, ಅನ್ನಾದ್ಯೇನ=ಅನ್ನಾದಿ ಸ್ವಯೋಗ್ಯ ಸರ್ವಭೋಗದಿಂದಲೂ, ಸಂಧೀಯತೇ=ಯುಕ್ತನಾಗುತ್ತಾನೆ.

**ಭಾ** ॥(*a*) ನಾರಾಯಣಾದಿರೂಪಾಣಿ ಲೋಕಾದಿಷು ಚ ಪಂಚಸು ।
ಅನಿರುದ್ಧಾವಸಾನಾನಿ ಧ್ಯೇಯಾನಿ ಚತುರಾತ್ಮನಾ ॥
(*b*) ವಾಸುದೇವಾದಿಕಾನ್ಯೇವ ತಾನಿಪೂರ್ವೋತ್ತರಾರ್ಣಯೋಃ ।
ಸಂಹಿತಾಯಾಸ್ತಥಾ ಸಂಧೌ ಸಂಧಾನೇ ಚಾಪಿ ಕೃತ್ಸ್ನಶಃ ॥
(*c*) ಯೋವೇದೈತಾನಿ ರೂಪಾಣಿ ಸರ್ವಭೋಗಸಮನ್ವಿತಃ ।
ಪ್ರಾಪ್ನೋತಿ ವೈಷ್ಣವಂ ಸ್ಥಾನಂ ಮುಕ್ತಃ ಸ್ವರ್ಗಾಭಿಧಂ ಪರಂ ॥

ಅ ॥ *(a)* ಲೋಕ, ಜ್ಯೋತಿಸ್ಸು, ವಿದ್ಯಾ, ಪ್ರಜಾ, ಆತ್ಮಾ, ಈ ಐದರಲ್ಲಿ ಕ್ರಮದಿಂದ ನಾರಾಯಣ, ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ, ಹೀಗೆ ಐದು ರೂಪಗಳನ್ನು ಧ್ಯಾನಿಸತಕ್ಕದ್ದು. *(b)* ಇದಲ್ಲದೆ, ಪ್ರತಿಯೊಂದರಲ್ಲಿಯೂ ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ ಈ ನಾಲ್ಕು ರೂಪಗಳನ್ನು ಪ್ರತಿಯೊಂದು ಸಂಹಿತೆಯ ಪೂರ್ವವರ್ಣ, ಉತ್ತರ ವರ್ಣ, ಸಂಧಿ, ಸಂಧಾನ,- ಇವುಗಳಲ್ಲಿ ಇರುತ್ತವೆಯೆಂದು ಧ್ಯಾನಿಸತಕ್ಕದ್ದು. *(c)* ಹೀಗೆ ಯಾವ ಯೋಗ್ಯಾಧಿಕಾರಿಯು ವಿವೇಚಿಸಿ ಪರಮಾತ್ಮನ ರೂಪಗಳನ್ನು ತಿಳಿದುಕೊಳ್ಳುತ್ತಾನೋ, ಆತನು ಈ ಲೋಕದಲ್ಲಿ ಪುತ್ರದಾರಾದಿಭೋಗಗಳನ್ನನುಭವಿಸಿ ಅಂತ್ಯಕ್ಕೆ ಸಂಸಾರದಿಂದ ಬಿಡುಗಡೆಹೊಂದಿ ಸ್ವರ್ಗವೆಂದು ಹೆಸರುಳ್ಳವೈಕುಂಠಲೋಕವನ್ನು ಹೊಂದಿ ಸಮಸ್ತ ಭೋಗಗಳನ್ನೂ ಅನುಭವಿಸುತ್ತಾನೆ. ॥ ೮ ॥

ಮಂ ॥ ಯಶ್ಛಂದಸಾಮೃಷಭೋ ವಿಶ್ವರೂಪಃ । ಛಂದೋಭ್ಯೋಽಧ್ಯಮೃತಾತ್ಸಂಬಭೂವ । ಸಮೇಂದ್ರೋ ಮೇಧಯಾ ಸ್ಪೃಣೋತು । ಅಮೃತಸ್ಯ ದೇವ ಧಾರಣೋ ಭೂಯಾಸಂ । ಶರೀರಂ ಮೇ ವಿಚರ್ಷಣಂ । ಜಿಹ್ವಾ ಮೇ ಮಧುಮತ್ತಮಾ । ಕರ್ಣಾಭ್ಯಾಂ ಭೂರಿ ವಿಶ್ರುವಂ । ಬ್ರಹ್ಮಣಃ ಕೋಶೋಽಸಿ ಮೇಧಯಾಪಿಹಿತಃ । ಶ್ರುತಂ ಮೇ ಗೋಪಾಯ ॥ ೯ ॥

ಅ ॥ ವಿದ್ಯಾಭ್ಯಾಸಿಗೆ ಮೇಧಾ ಆವಶ್ಯಕವಾದುದರಿಂದ ತದುಪಯುಕ್ತವಾದ ವಿದ್ಯೆಯನ್ನು ನಿರೂಪಿಸುತ್ತಾರೆ.

ಅ ॥ ಛಂದಸಾಂ=ವೇದಗಳಿಗೆ, ಋಷಭಃ=ಅಧಿಪತಿಯಾದ, ವಿಶ್ವರೂಪಃ=ಪೂರ್ಣ ರೂಪನಾದ, ಯಃ=ಯಾವಾತನು, ಅಮೃತಾತ್=ನಿತ್ಯಗಳಾದ, ಛಂದೋಭ್ಯಃ=ವೇದಗಳಿಂದ, ಅಧಿ=ಅಧಿಕವಾಗಿ, ಸಂಬಭೂವ=ಅಭಿವ್ಯಕ್ತನಾದನೋ, ಸಃ=ಆ, ಇಂದ್ರಃ=ಭಕ್ತಾಭೀಷ್ಟಪ್ರದರಾದ ವೇದವ್ಯಾಸರು, ಮಾ=ನನ್ನನ್ನು, ಮೇಧಯಾ=ಪ್ರಜ್ಞೆಯಿಂದ, ಸ್ಪೃಣೋತು=ಸಮರ್ಥನನ್ನಾಗಿ ಮಾಡಲಿ, ದೇವ!=ವೇದವ್ಯಾಸರೇ, ಅಮೃತಸ್ಯ=ನಿತ್ಯವಾದ ವೇದದ, ಧಾರಣಃ=ಧಾರಕನು, ಭೂಯಾಸಂ=ಆಗುವೆನು, (ಅಂದರೆ ಮೋಕ್ಷಕ್ಕೋಸ್ಕರ ವೇದವಿದ್ಯೆಯಿಂದುಂಟಾದ ತತ್ವಜ್ಞಾನವುಳ್ಳವನಾಗುವೆನು), ಮೇ=ನನ್ನ, ಶರೀರಂ=ಶರೀರವು, ವಿಚರ್ಷಣಂ=ವಿಶಿಷ್ಟಶಿಷ್ಯಪ್ರಜಾಯುಕ್ತವು (ಆಗಲಿ), ಮೇ=ನನ್ನ, ಜಿಹ್ವಾ=ನಾಲಗೆಯು, ಮಧುಮತ್ತಮಾ=ಮಧುರಭಾಷಿಣಿಯು (ಅಂದರೆ ಭಗವದ್ಬೋಧಕವೇದವನ್ನುಚ್ಚರಿಸತಕ್ಕುದು) ಆಗಲಿ, ಕರ್ಣಾಭ್ಯಾಂ=ಕಿವಿಗಳಿಂದ, ಭೂರಿ=ಪೂರ್ಣನಾದ ಬ್ರಹ್ಮನನ್ನು, ವಿಶ್ರುವಂ=ವಿಶೇಷವಾಗಿ ಕೇಳುವೆನು, ಬ್ರಹ್ಮಣಃ=ವೇದಕ್ಕೆ, ಕೋಶಃ=ಆವಾಸನು, ಅಸಿ=ಆಗಿರುತ್ತೀರಿ, ಮೇಧಯಾ=ಪ್ರಜ್ಞೆಯಿಂದ ಅಪಿಹಿತಃ=ಆಚ್ಛಾದಿತನು (ಜ್ಞಾನಮಯನು), ಅಸಿ=ಆಗಿರುತ್ತೀರಿ, ಮೇ=ನನ್ನಿಂದ, ಶ್ರುತಂ=ಕೇಳಲ್ಪಟ್ಟ ದಿವ್ಯವೇದಾರ್ಥವನ್ನು, ಗೋಪಾಯ=ರಕ್ಷಿಸು. ॥ ೯ ॥

ಮಂ ॥ ಆವಹಂತೀ ವಿತನ್ವಾನಾ । ಕುರ್ವಾಣಾಚೀರಮಾತ್ಮನಃ । ವಾಸಾಂಸಿ ಮಮ ಗಾವಶ್ಚ । ಅನ್ನಪಾನೇ ಚ ಸರ್ವದಾ । ತತೋ ಮೇ ಶ್ರಿಯಮಾವಹ । ಲೋಮಶಾಂ ಪಶುಭಿಃ ಸಹ ಸ್ವಾಹಾ ॥

ಅ ॥ ವಿದ್ಯಾಭ್ಯಾಸಿಯ ಮನಸ್ಸಿನ ಕಳವಳ ನಿರಾಸಾರ್ಥವಾಗಿ ಅನ್ನಾದಿಗಳು ಆವಶ್ಯಕವೆಂದು ತದುಪಯುಕ್ತವಾದ ವಿದ್ಯೆಯನ್ನು ಹೇಳುತ್ತಾರೆ.

ಅ ॥ ಆತ್ಮನಃ=ಜೀವಸಮುದಾಯಕ್ಕೆ, ಚೀರಂ=ಬಹುಕಾಲದಲ್ಲಿ ನಿಖಿಲ ಭೋಗಗಳನ್ನು, ಆವಹಂತೀ=ತಂದುಕೊಡುವ, ವಿತನ್ವಾನಾ=ಪುರಾತನಳಾದ ಲಕ್ಷ್ಮಿಯು, ಮಮ=ನನಗೆ,ವಾಸಾಂಸಿ=ವಸ್ತ್ರಗಳನ್ನೂ, ಗಾವಶ್ಚ=ಗೋವುಗಳನ್ನೂ, ಅನ್ನಪಾನೇ=ಅನ್ನಪಾನಗಳನ್ನೂ, ಸರ್ವದಾ=ಯಾವಾಗಲೂ, ಕುರ್ವಾಣಾ=ಮಾಡುತ್ತಿರುವಳೋ, ತತಃ=ಆದುದರಿಂದ, ಸ್ವಾಹಾ=ವೇದಪ್ರತಿಪಾದ್ಯನಾದ ಜನಾರ್ದನನೇ, ಲೋಮಶಾಂ=ಬಹುಕೇಶಗಳುಳ್ಳ, ಶ್ರಿಯಂ=ಸಂಪತ್ತನ್ನು, ಪಶುಭಿಃ ಸಹ=ಪಶುಗಳಿಂದ ಕೂಡಿ, ಮೇ=ನನ್ನಲ್ಲಿ, ಆವಹ=ಪ್ರಾಪಿಸಿಕೊಡು.

ತಾ ॥ ಅನ್ನಾದಿಸಂಪತ್ತನ್ನು ಕೊಡುತ್ತಿರುವ ಲಕ್ಷ್ಮಿಯನ್ನು ಇನ್ನೂ ವಿಶೇಷವಾಗಿ ನಿರಂತರವೂ ಕೊಡುತ್ತಿರುವಂತೆ ಅನುಗ್ರಹಿಸು ಎಂದು ಪ್ರಾರ್ಥನೆಯು.

ಮಂ ॥ ಆ ಮಾ ಯಂತು ಬ್ರಹ್ಮಚಾರಿಣಃ ಸ್ವಾಹಾ । ವಿ ಮಾ ಯಂತು ಬ್ರಹ್ಮಚಾರಿಣಃ ಸ್ವಾಹಾ । ಪ್ರ ಮಾ ಯಂತು ಬ್ರಹ್ಮಚಾರಿಣಃ ಸ್ವಾಹಾ । ದಮಾ ಯಂತು ಬ್ರಹ್ಮಚಾರಿಣಃ ಸ್ವಾಹಾ । ಶಮಾ ಯಂತು ಬ್ರಹ್ಮಚಾರಿಣಃ ಸ್ವಾಹಾ । ಯಶೋ ಜನೇಽಸಾನಿ ಸ್ವಾಹಾ । ಶ್ರೇಯಾನ್ ವಸ್ಯಸೋಽಸಾನಿ ಸ್ವಾಹಾ । ತಂ ತ್ವಾ ಭಗ ಪ್ರವಿಶಾನಿ ಸ್ವಾಹಾ । ಸ ಮಾ ಭಗ ಪ್ರವಿಶ ಸ್ವಾಹಾ । ತಸ್ಮಿನ್ ಸಹಸ್ರಶಾಖೇ । ನಿಭಗಾಹಂ ತ್ವಯಿ ಮೃಜೇ ಸ್ವಾಹಾ ॥ ೧೧ ॥

ಅಭ್ಯಸ್ತವಿದ್ಯೆಯು ಯೋಗ್ಯರಿಗೆ ಉಪದೇಶ ಕೊಟ್ಟರೇನೇ ಸಾರ್ಥಕವಾಗುವುದರಿಂದ ಅದಕ್ಕೆ ಬೇಕಾದ ಶಿಷ್ಯಸಂಪತ್ತನ್ನು ಪ್ರಾರ್ಥಿಸುತ್ತಾರೆ.

ಅ ॥ ಸ್ವಾಹಾ!=ವೇದಪ್ರತಿಪಾದ್ಯನಾದ ಜನಾರ್ದನನೇ!, ಬ್ರಹ್ಮಚಾರಿಣಃ=ಶಿಷ್ಯರು,ಮಾ=ನನ್ನನ್ನು ಕುರಿತು, ಆಯಾಂತು=ಬರಲಿ, (ಸ್ವಾಹಾ!=ಮೊದಲಿನಂತೆ ಅರ್ಥ), ವಿ=ನಾನಾ ಗೋತ್ರೋತ್ಪನ್ನರಾದ, ಬ್ರಹ್ಮಚಾರಿಣಃ-ಮಾ-ಯಂತು, ಸ್ವಾಹಾ!=ಪ್ರ=ಪ್ರಕೃಷ್ಟಜ್ಞಾನವುಳ್ಳ, ಬ್ರಹ್ಮಚಾರಿಣಃ-ಮಾ-ಯಂತು, ಸ್ವಾಹಾ! ದಮಾಃ=ಇಂದ್ರಿಯನಿಗ್ರಹಉಳ್ಳ, ಬ್ರಹ್ಮಚಾರಿಣಃ -ಯಂತು -ಸ್ವಾಹಾ!, ಶಮಾಃ=ಭಗವನ್ನಿಷ್ಠರಾದ, ಬ್ರಹ್ಮಚಾರಿಣಃ ಯಂತು, ಸ್ವಾಹಾ! ಜನೇ=ವ್ಯಾಖ್ಯಾತೃಜನರ ಮಧ್ಯದಲ್ಲಿ, ಯಶಃ=ಕೀರ್ತಿಯುಳ್ಳವನು, ಅಸಾನಿ=ಆಗುವೆನು, ಸ್ವಾಹಾ! ವಸ್ಯಸಃ=

ಸುಖವಿಷಯದಲ್ಲಿ, ಶ್ರೇಯಾನ್=ಶ್ರೇಷ್ಠನು, ಅಸಾನಿ=ಆಗುವೆನು, ಭಗ=ಷಡ್ಗುಣಪರಿಪೂರ್ಣ ನಾದ, ಸ್ವಾಹಾ!=ಜನಾರ್ದನನೇ!, ತಂ ತ್ವಾ=ಅಂಥಾ ನಿನ್ನನ್ನು, ಪ್ರವಿಶಾನಿ=(ಮನಸ್ಸಿನಿಂದ) ಪ್ರವೇಶಿಸುವೆನು, ಭಗ-ಸ್ವಾಹಾ=ಸಃ=ಅಂಥಾವನು, ಮಾ=ನನ್ನನ್ನು, ಪ್ರವಿಶ=ಪ್ರವೇಶಿಸು, ಭಗ-ಸ್ವಾಹಾ! ಸಹಸ್ರಶಾಖೇ=ಬಹುರೂಪವುಳ್ಳ, ತಸ್ಮಿನ್=ಅಂಥ ತ್ವಯಿ=ನಿನ್ನಲ್ಲಿ (ಪ್ರವಿಷ್ಟನಾದ) ಅಹಂ=ನಾನು, ನಿಮೃಜೇ=(ಪಾಪವನ್ನು) ಕಳೆದುಕೊಳ್ಳುತ್ತೇನೆ. ॥ ೧೧ ॥

ಮಂ ॥ ಯಥಾಪಃ ಪ್ರವತಾ ಯಂತಿ । ಯಥಾ ಮಾಸಾ ಅಹರ್ಜರಂ । ಏವಂ ಮಾಂ ಬ್ರಹ್ಮಚಾರಿಣಃ । ಧಾತರಾಯಂತು ಸರ್ವತಃ ಸ್ವಾಹಾ । ಪ್ರತಿವೇಶೋಽಸಿ ಪ್ರ ಮಾ ಭಾಹಿ ಪ್ರ ಮಾ ಪದ್ಯಸ್ವ ॥ ೧೨ ॥

ಅ ॥ ಯಥಾ=ಹೇಗೆ, ಪ್ರವತಾಃ=ತಗ್ಗುಪ್ರದೇಶಗಳಿಗೆ, ಆಪಃ=ನೀರು, ಯಂತಿ= ಹೋಗುತ್ತದೋ, ಅಹರ್ಜರಂ=ಸಂವತ್ಸರಕ್ಕೆ, ಯಥಾ=ಹೇಗೆ, ಮಾಸಾಃ=ಮಾಸಗಳು (ಹೋಗುತ್ತಾವೋ), ಏವಂ=ಹೀಗೆ, ಧಾತಃ=ಸರ್ವಜಗದ್ಧಾರಕನಾದ, ಸ್ವಾಹಾ=ಜನಾರ್ದನನೇ, ಮಾಂ=ನನ್ನನ್ನು ಕುರಿತು, ಬ್ರಹ್ಮಚಾರಿಣಃ=ಶಿಷ್ಯರು, ಸರ್ವತಃ=ಎಲ್ಲಾ ಕಡೆಗಳಿಂದಲೂ, ಆ ಯಂತು=ಬರಲಿ, ಪ್ರತಿವೇಶಃ=ಪ್ರವೇಶಿಸಲರ್ಹನು, ಅಸಿ=ಆಗಿರುತ್ತೀ, ಮಾ=ನನಗೆ, ಪ್ರಭಾಹಿ=ಪ್ರಕಟನಾಗು, ಮಾ=ನನ್ನಲ್ಲಿ, ಪ್ರಪದ್ಯಸ್ವ=ಸನ್ನಿಧಾನಯುಕ್ತನಾಗು

ಭಾ ॥ (a) ಯೋ ವಿಶ್ವರೂಪೋ ಭಗವಾಂಶ್ಛಂದಸಾಮುಧಿಪೋ ಹರಿಃ ।
ಛಂದೋಭ್ಯೋಽಮೃತರೂಪೇಭ್ಯಸ್ಸಂವ್ಯಕ್ತಸ್ತದುಪಾಸನಾತ್ ।
ಮೇಧಾವೀ ತತ್ವವಿಜ್ಞಾನೀ ಭೂತ್ವಾ ಕ್ಷಿಪ್ರಂ ಪ್ರಮುಚ್ಯತ ಇತಿ ಚ ॥
(b) ವೇದಾವಾಸತ್ವತೋ ವಿಷ್ಣುಃ ಬ್ರಹ್ಮಕೋಶ ಇತಿ ಸ್ಮೃತಃ ।
ಭಗಸ್ಷಡ್ಗುಣಪೂರ್ಣತ್ವಾತ್ ಬಹುರೂಪತ್ವತೋ ವಿಭುಃ ।
ಸಹಸ್ರಶಾಖ ಇತ್ಯುಕ್ತಸ್ತಮುಪಾಸ್ಯ ಜನಾರ್ದನಂ ।
ಮುಚ್ಯತೇ ನಾತ್ರ ಸಂದೇಹಃ ಸರ್ವಭೋಗೈಶ್ಚ ಪೂಜ್ಯತೇ ॥
ಇತಿ ಪ್ರಕಾಶೇ ॥
(c) ಆವಹಂತೀ ಚಿರಂ ಸರ್ವಭೋಗಾನ್ ಯಾ ಶ್ರೀಸ್ಸನಾತನೀ ।
ತಾಂ ಮಯ್ಯಾವಹ ಗೋವಿಂದ ಸುಶಿಖಂಡೋಪಶೋಭಿತಾಂ ॥
ಇತಿ ಚ ॥ ೧೨ ॥

ಅ ॥ (a) ಅನಂತರೂಪನಾಗಿಯೂ, ಪೂಜ್ಯನಾಗಿಯೂ, ಸಮಸ್ತವೇದಗಳಿಗೆ ನಿಯಾಮಕನಾಗಿಯೂ ಇರುವ ಶ್ರೀ ವೇದವ್ಯಾಸರು ನಿತ್ಯಗಳಾದ ವೇದಗಳಿಂದ ಪ್ರತಿಪಾದ್ಯರಾಗಿ ತಿಳಿಯಲ್ಪಟ್ಟಿದ್ದಾರೋ, ಅಂತಹ ವೇದವ್ಯಾಸರ ಉಪಾಸನೆಯಿಂದ ಅಧಿಕಾರಿಯು ಪ್ರತಿಭಾಸಂಪನ್ನನೂ ತತ್ವಜ್ಞಾನಿಯೂ ಆಗಿ ಸಂಸಾರದಿಂದ ಬೇಗನೇ ಬಿಡಲ್ಪಡುವನು. (b) ವೇದಗಳಿಂದೆಲ್ಲಾ ಪ್ರತಿಪಾದ್ಯನಾಗಿ ಅವುಗಳಿಗೆ ಆವಾಸಭೂತನಾದುದರಿಂದ ವಿಷ್ಣುವು 'ಬ್ರಹ್ಮಕೋಶ' ನೆಂದು ಹೇಳಲ್ಪಡುತ್ತಾನೆ. ಐಶ್ವರ್ಯಾದಿ ಆರು ಗುಣ ಪರಿಪೂರ್ಣನಾದುದರಿಂದ 'ಭಗ'ನೆಂದೆನಿಸುತ್ತಾನೆ. ಅಪರಿಮಿತ ರೂಪಗಳಿರುವುದರಿಂದ ವ್ಯಾಪ್ತನಾದ ಜನಾರ್ದನನು ಸಹಸ್ರಶಾಖನೆಂದೆನಿ

ಸುತ್ತಾನೆ ಅಂತಹ ಶ್ರೀ ಜನಾರ್ದನನನ್ನು ಉಪಾಸನೆ ಮಾಡಿ ಮುಕ್ತನಾಗಿ ಸ್ವಯೋಗ್ಯ ಭೋಗ ಸಂಪನ್ನನಾಗಿ ಪೂಜಿಸಲ್ಪಡುವನು. ಈ ವಿಷಯದಲ್ಲಿ ಸಂದೇಹವಿರುವುದಿಲ್ಲ. ಹೀಗೆ ಪ್ರಕ್ಷಿಪ್ತ ದಲ್ಲಿ ಹೇಳಿಯದೆ. (೮) ಎಲೈ ಗೋವಿಂದನೇ! ಸನಾತನಳಾದ ಯಾವ ಲಕ್ಷ್ಮಿಯು ಯಾವಾಗಲೂ ನಿಖಿಲಭೋಗಗಳನ್ನು ಪ್ರಾಪಿಸಿಕೊಡುತ್ತಾಳೋ, ಅಂತಹ ಹೆಚ್ಚಾದ ಕೇಶಕಲಾಪ ಗಳಿಂದ ಶೋಭಿಸುವ ಲಕ್ಷ್ಮಿಯನ್ನು ಯಾವಾಗಲೂ ನನ್ನಲ್ಲಿ ಆವಾಸಗೊಳಿಸು ॥ ೧೨ ॥

ಮಂ ॥ ಭೂರ್ಭುವಃ ಸುವರಿತಿ ವಾ ಏತಾಸ್ತಿಸ್ರೋ ವ್ಯಾಹೃತಯಃ । ತಾಸಾಮುಹಸ್ಮೈ ತಾಂ ಚತುರ್ಥೀಂ । ಮಾಹಾಚಮಸ್ಯಃ ಪ್ರವೇದಯತೇ । ಮಹ ಇತಿ । ತದ್ಬ್ರಹ್ಮ । ಸ ಆತ್ಮಾ । ಅಂಗಾನ್ಯನ್ಯಾ ದೇವತಾಃ ॥ ೧೩ ॥

ವಿ. ಅ॥ ವಿದ್ಯಾಭ್ಯಾಸಕ್ಕೆ ಉಪಯುಕ್ತವಾದ ವ್ಯಾಹೃತಿಯ ಉಪಾಸನಾ ಪ್ರಕಾರವನ್ನು ಮೊದಲು ಹೇಳುತ್ತಾರೆ.

ಅ ॥ ಭೂಃ ಭುವಃ ಸುವಃ ಇತಿ=ಈ ಪ್ರಕಾರ ಹೇಳಲ್ಪಡುವ, ಏತಾಃ ತಿಸ್ರಃ=ಈ ಮೂರು ಶಬ್ದಗಳು, ವ್ಯಾಹೃತಯಃ=ಅನಿರುದ್ಧಾದಿ ನಾಲ್ಕುರೂಪಗಳುಳ್ಳ ಶ್ರೀಪರಮಾತ್ಮನನ್ನು ಹೇಳುವ ಪ್ರಯುಕ್ತ ವ್ಯಾಹೃತಿಗಳೆನಿಸಲ್ಪಡುವವು. ತಾಸಾಂ=ಈ ಮೂರರಲ್ಲಿ ಮಹ ಇತಿ ಏತಾಂ=ಮಹಃ ಎಂಬುವವ್ಯಾಹೃತಿಯನ್ನು ಚತುರ್ಥೀಂ=ನಾಲ್ಕನೇದನ್ನಾಗಿ, ಮಾಹಾಚಮಸ್ಯಃ= ವಿಷ್ಣುವನ್ನು ತಿಳಿದ ಬ್ರಹ್ಮನು, ಪ್ರವೇದಯತೇ=ತಿಳಿಯುತ್ತಾನೆ, ತತ್=ಆ ಅನಿರುದ್ಧಾದಿ ನಾಲ್ಕು ರೂಪವು, ಬ್ರಹ್ಮ=ಗುಣಪರಿಪೂರ್ಣವು, ಸಃ=ಆ ನಾಲ್ಕು ರೂಪವು, ಆತ್ಮಾ=ನಿಖಿಲ ದೇವತೆ ಗಳಿಗೂ ಸ್ವಾಮಿಯು, ಅನ್ಯಾಃ ದೇವತಾಃ=ಇತರರಾದ ಬ್ರಹ್ಮಾದಿಗಳು, ಅಂಗಾನಿ= ಪರಿವಾರಭೂತರು, ಉಹ ಸ್ಮ=ಈ ಅರ್ಥವು ಸುಪ್ರಸಿದ್ಧವು. ॥ ೧೩ ॥

ಮಂ ॥ ಭೂರಿತಿ ವಾ ಅಯಂ ಲೋಕಃ । ಭುವ ಇತ್ಯಂತರಿಕ್ಷಂ । ಸುವರಿತ್ಯಸೌ ಲೋಕಃ । ಮಹ ಇತ್ಯಾದಿತ್ಯಃ । ಆದಿತ್ಯೇನ ವಾವ ಸರ್ವೇ ಲೋಕಾ ಮಹೀಯಂತೇ । ಭೂರಿತಿ ವಾ ಅಗ್ನಿಃ । ಭುವ ಇತಿ ವಾಯುಃ । ಸುವರಿತ್ಯಾದಿತ್ಯಃ । ಮಹ ಇತಿ ಚಂದ್ರಮಾಃ । ಚಂದ್ರಮಸಾ ವಾವ ಸರ್ವಾಣಿ ಜ್ಯೋತೀಂಷಿ ಮಹೀಯಂತೇ । ಭೂರಿತಿ ವಾ ಋಚಃ । ಭುವ ಇತಿ ಸಾಮಾನಿ । ಸುವರಿತಿ ಯಜೂಂಷಿ । ಮಹ ಇತಿ ಬ್ರಹ್ಮ । ಬ್ರಹ್ಮಣಾ ವಾವ ಸರ್ವೇ ವೇದಾ ಮಹೀಯಂತೇ । ಭೂರಿತಿ ವೈ ಪ್ರಾಣಃ । ಭುವ ಇತ್ಯಪಾನಃ । ಸುವರಿತಿ ವ್ಯಾನಃ । ಮಹ ಇತ್ಯನ್ನಂ ।

ಅನ್ನೇನ ವಾವ ಸರ್ವೇ ಪ್ರಾಣಾ ಮಹೀಯಂತೇ । ತಾ ವಾ ಏತಾ
ಶ್ಚತಸ್ರಶ್ಚತುರ್ಧಾ । ಚತಸ್ರಶ್ಚತಸ್ರೋ ವ್ಯಾಹೃತಯಃ । ತಾ ಯೋ
ವೇದ । ಸ ವೇದ ಬ್ರಹ್ಮ । ಸರ್ವೇಽಸ್ಮೈ ದೇವಾ ಬಲಿಮಾವಹಂತಿ॥೧೪॥

ಅ ॥ ಅಯಂ ಲೋಕಃ=ಭೂಲೋಕದಲ್ಲಿರತಕ್ಕ ಅನಿರುದ್ಧನು, ಭೂರಿತಿವೈ= 'ಭೂಃ' ಎಂಬ ವ್ಯಾಹೃತಿವಾಚ್ಯನಾದ ಅನಿರುದ್ಧನೇ, ಅಂತರಿಕ್ಷಂ=ಅಂತರಿಕ್ಷದಲ್ಲಿರತಕ್ಕ ಅನಿರುದ್ಧನು, ಭುವಃ ಇತಿ='ಭುವಃ' ಎಂಬ ವ್ಯಾಹೃತಿವಾಚ್ಯ ಪ್ರದ್ಯುಮ್ನನು, ಅಸೌ ಲೋಕಃ= ದ್ಯುಲೋಕದಲ್ಲಿದ್ದ ಅನಿರುದ್ಧನು, ಸುವಃ ಇತಿ='ಸುವ'ರೆಂಬ ವ್ಯಾಹೃತಿವಾಚ್ಯ ಸಂಕರ್ಷಣ ಸ್ವರೂಪನು, ಆದಿತ್ಯಃ=ಆದಿತ್ಯನಲ್ಲಿದ್ದ ಅನಿರುದ್ಧನು, ಮಹ ಇತಿ='ಮಹಃ' ಎಂಬ ವ್ಯಾಹೃತಿ ವಾಚ್ಯ ವಾಸುದೇವಸ್ವರೂಪನು, ಆದಿತ್ಯೇನ ವಾವ=ಆದಿತ್ಯನಲ್ಲಿದ್ದ ಅನಿರುದ್ಧ ವಾಸುದೇವ ನಿಂದ, ಸರ್ವೇಲೋಕಾಃ=ಲೋಕತ್ರಯದಲ್ಲಿದ್ದ ಅನಿರುದ್ಧಾನಿರುದ್ಧ, ಅನಿರುದ್ಧ ಪ್ರದ್ಯುಮ್ನ, ಅನಿರುದ್ಧ ಸಂಕರ್ಷಣ ಎಂಬ ಭಗವನ್ಮೂರ್ತಿಗಳು, ಮಹೀಯಂತೇ=ಪೂಜಿಸಲ್ಪಡುತ್ತಾವೆ, ಅಗ್ನಿಃ=ಅಗ್ನಿಯಲ್ಲಿದ್ದ ಪ್ರದ್ಯುಮ್ನನು, ಭೂರಿತಿವೈ='ಭೂ' ಎಂಬ ವ್ಯಾಹೃತಿವಾಚ್ಯ ಅನಿರುದ್ಧನು, ವಾಯುಃ=ವಾಯುವಿನಲ್ಲಿದ್ದ ಪ್ರದ್ಯುಮ್ನನು, ಭುವ ಇತಿ='ಭುವಃ' ಎಂಬ ವ್ಯಾಹೃತಿ ವಾಚ್ಯ ಪ್ರದ್ಯುಮ್ನನೇ, ಆದಿತ್ಯಃ=ಆದಿತ್ಯನಲ್ಲಿದ್ದ ಪ್ರದ್ಯುಮ್ನನು, ಸುವರಿತಿ='ಸುವ'ರೆಂಬ ವ್ಯಾಹೃತಿವಾಚ್ಯ ಸಂಕರ್ಷಣಸ್ವರೂಪನು, ಚಂದ್ರಮಾಃ=ಚಂದ್ರನಲ್ಲಿದ್ದ ಪ್ರದ್ಯುಮ್ನನು, ಮಹ ಇತಿ= 'ಮಹಃ' ಎಂಬ ವ್ಯಾಹೃತಿವಾಚ್ಯ ವಾಸುದೇವ ಸ್ವರೂಪನು, ಚಂದ್ರಮಸಾ ವಾವ=ಚಂದ್ರಗತ ನಾದ ಪದ್ಯುಮ್ನ ವಾಸುದೇವನಿಂದಲೇ, ಸರ್ವಾಣಿ ಜ್ಯೋತೀಂಷಿ=ಅಗ್ನಿ, ವಾಯು, ಆದಿತ್ಯ ಈ ಮೂವರಲ್ಲಿದ್ದ ಪ್ರದ್ಯುಮ್ನಾನಿರುದ್ಧ, ಪ್ರದ್ಯುಮ್ನಪ್ರದ್ಯುಮ್ನ ಪ್ರದ್ಯುಮ್ನಸಂಕರ್ಷಣ ಎಂಬ ಮೂರು ರೂಪಗಳು, ಮಹೀಯಂತೇ=ಪೂಜಿಸಲ್ಪಡುತ್ತಾವೆ, ಋಚಃ=ಋಕ್ಕಿನಲ್ಲಿದ್ದ ಋಙ್ನಾಮಕನಾದ ಸಂಕರ್ಷಣನು, ಭೂರಿತಿ='ಭೂಃ' ಎಂಬ ವ್ಯಾಹೃತಿವಾಚ್ಯ ಅನಿರುದ್ಧನು. ವೈ=ಪ್ರಸಿದ್ಧವು, ಸಾಮಾನಿ=ಸಾಮದಲ್ಲಿದ್ದ ಸಂಕರ್ಷಣನು, 'ಭುವ' ಇತಿ=ಭುವಃ, ಎಂಬ ವಾಹೃತಿವಾಚ್ಯ ಪ್ರದ್ಯುಮ್ನನು, ಯಜೂಂಷಿ=ಯಜುಸ್ಸಿನಲ್ಲಿದ್ದ ಸಂಕರ್ಷಣನು, ಸುವರಿತಿ='ಸುವಃ' ಎಂಬ ವ್ಯಾಹೃತಿ ವಾಚ್ಯ ಸಂಕರ್ಷಣನೇ, ಬ್ರಹ್ಮ=ನಿಖಿಲವೇದ ಸಮುದಾಯದಲ್ಲಿದ್ದ ಸಂಕರ್ಷಣನು, ಮಹಇತಿ= 'ಮಹಃ' ಎಂಬ ವ್ಯಾಹೃತಿವಾಚ್ಯ ವಾಸುದೇವಸ್ವರೂಪನು, ಬ್ರಹ್ಮಣಾ ವಾವ=ಸಂಕರ್ಷಣ ವಾಸುದೇವನಿಂದಲೇ, ಸರ್ವೇ ವೇದಾಃ=ಋಕ್ಸಾಮಯಜುರ್ಗತಗಳಾದ, ಸಂಕರ್ಷಣಾನಿರುದ್ಧ, ಸಂಕರ್ಷಣಪ್ರದ್ಯುಮ್ನ, ಸಂಕರ್ಷಣಸಂಕರ್ಷಣ ಈ ಮೂರು ರೂಪಗಳು, ಮಹೀಯಂತೇ= ಪೂಜಿಸಲ್ಪಡುತ್ತಾವೆ, ಪ್ರಾಣಃ=ಪ್ರಾಣನಲ್ಲಿದ್ದ ವಾಸುದೇವನು, ಭೂರಿತಿ ವೈ='ಭೂಃ' ಎಂಬ ವ್ಯಾಹೃತಿವಾಚ್ಯ ಅನಿರುದ್ಧನು, ಅಪಾನಃ=ಅಪಾನನಲ್ಲಿದ್ದ ವಾಸುದೇವನು, ಭುವಃ='ಭುವಃ' ಎಂಬ ವ್ಯಾಹೃತಿವಾಚ್ಯ ಪ್ರದ್ಯುಮ್ನನು, ವ್ಯಾನಃ=ವ್ಯಾನನಲ್ಲಿದ್ದ ವಾಸುದೇವನು, ಸುವರಿತಿ= 'ಸುವಃ' ಎಂಬ ವ್ಯಾಹೃತಿವಾಚ್ಯ ಸಂಕರ್ಷಣನು, ಅನ್ನಂ=ಅನ್ನದಲ್ಲಿದ್ದ ವಾಸುದೇವನು, ಮಹ ಇತಿ='ಮಹಃ' ಎಂಬ ವ್ಯಾಹೃತಿವಾಚ್ಯ ವಾಸುದೇವಸ್ವರೂಪನೇ, ಅನ್ನೇನ ವಾವ=ಅನ್ನದಲ್ಲಿದ್ದ ವಾಸುದೇವವಾಸುದೇವನಿಂದಲೇ, ಸರ್ವೇಪ್ರಾಣಾಃ=ಪ್ರಾಣಾಪಾನವ್ಯಾನರಲ್ಲಿದ್ದ ವಾಸುದೇವಾನಿರುದ್ಧ, ವಾಸುದೇವಪ್ರದ್ಯುಮ್ನ, ವಾಸುದೇವಸಂಕರ್ಷಣ ಎಂಬೀಮೂರು ರೂಪಗಳು, ಮಹೀಯಂತೇ=ಪೂಜಿಸಲ್ಪಡುತ್ತವೆ, ತಾ ವಾ=ಭೂರ್ಭುವಃ ಸುವಃ ಎಂಬುದಲ್ಲಿ ಹೇಳಲ್ಪಟ್ಟ,

ಏತಾಃ="ಭೂರಿತಿವಾ ಅಯಂ ಲೋಕಃ" ಎಂಬಿತ್ಯಾದಿಗಳಲ್ಲಿ ಹೇಳಲ್ಪಟ್ಟ, ಚತಸ್ರಃ=ಭೂರಾದಿ ವ್ಯಾಹೃತಿವಾಚ್ಯ ಅನಿರುದ್ಧಾದಿಗಳು, ಚತುರ್ಧಾ=(ಪ್ರತಿಯೊಂದೂ ಅನಿರುದ್ಧಾದಿಭೇದದಿಂದ) ನಾಲ್ಕು ಪ್ರಕಾರಗಳಾಗುತ್ತವೆ, ವ್ಯಾಹೃತಯಃ=ವ್ಯಾಹೃತಿವಾಚ್ಯ ಭಗವನ್ಮೂರ್ತಿಗಳು, ಚತಸ್ರಶ್ಚತಸ್ರಃ=ಹದಿನಾರು, ತಾಃ=ಹದಿನಾರು ಮೂರ್ತಿಗಳನ್ನು, ಯಃ=ಯಾವಾತನು, ವೇದ=ತಿಳಿಯುತ್ತಾನೋ, ಸಃ=ಅವನೇ, ಬ್ರಹ್ಮ=ಗುಣಪರಿಪೂರ್ಣನಾದ ವಿಷ್ಣುವನ್ನು, ವೇದ=ತಿಳಿಯುತ್ತಾನೆ, ಅಸ್ಮೈ=ಈ ಮುಕ್ತಬ್ರಹ್ಮನಿಗೋಸ್ಕರ, ಸರ್ವೇ=ಮುಕ್ತಿಯಲ್ಲಿದ್ದ, ದೇವಾಃ=ದೇವತೆಗಳು, ಬಲಿಂ=ಪೂಜೆಯನ್ನು, ಆವಹಂತಿ=ಮಾಡುತ್ತಾರೆ.

ಭಾ ||(a) (೧) ಭೂರಾದಿವ್ಯಾಹೃತೀಭಿಸ್ತು ವಾಚ್ಯಂ ಮೂರ್ತಿಚತುಷ್ಟಯಂ |
ಅನಿರುದ್ಧಾದಿಕಂ ವಾಸುದೇವಾಂತಂ (೨) ದೇಹಮಧ್ಯಗಃ ||
ವಾಸುದೇವೋ ಮಹೋನಾಮಾತ್ಮನಿರುದ್ಧಃ ಶಿರೋ ಮತಃ |
ಭೂರ್ನಾಮಾಥ ಭುವೋನಾಮಾ ಬಾಹೂ ಪ್ರದ್ಯುಮ್ನ ಈರಿತಃ ||
ಸಂಕರ್ಷಣಃ ಸುವರ್ನಾಮಾ ಪಾದೌ ತಸ್ಯ ಮಹಾತ್ಮನಃ |
(೩) ಅನನ್ಯೋಽಪ್ಯನ್ಯಶಬ್ದೇನ ಚತುರಾತ್ಮಾ ಪ್ರಕೀರ್ತ್ಯತೇ ||
ನಿರ್ವಿಶೇಷೋಽಪಿ ಭಗವಾನ್ಸಂಖ್ಯಾಮಾತ್ರವಿಶೇಷತಃ |

(b) (೧) ಲೋಕಜ್ಯೋತಿಃ ಪ್ರಾಣವೇದೇಷ್ವೇಕಃ ಸ ಪುರುಷೋತ್ತಮಃ ||
ಪ್ರತ್ಯೇಕಶಶ್ಚಾತುರಾತ್ಮ್ಯಾತ್ಷೋಡಶಾತ್ಮಾ ಪ್ರಕೀರ್ತಿತಃ |
(೨) ಮಹೀಯತೇ ಮಹತಿ ಚ ಸ್ವಯಂ ಸ ಭಗವಾನ್ ಹರಿಃ ||
ಪೂಜ್ಯಪೂಜಕ ಭೇದೋಽತ್ರ ನೈವ ಕಶ್ಚಿದಪೀಷ್ಯತೇ |

(c) (೧) ನಾಮಪ್ರವೃತ್ತಿಹೇತುತ್ವಾನ್ನಾಮ ಲೋಕಾದಿಕಂ ಹರೇಃ ||
ಅಯಂ ಸಮೀಪಸ್ಥತಯಾ ತ್ವಸೌ ಪ್ರಾಣೇ ಸ್ಥಿತತ್ವತಃ |
ಈಕ್ಷಣಾದಂತರಿಕ್ಷಂ ಚಾಥಾದಿತ್ಯಸ್ಥೋಽದಿತೇಃ ಸುತಃ |
ಅಗ್ನಿರಗ್ರ್ಯೇ ಸ್ಥಿತತ್ವಾಚ್ಚ ವಾಯುರ್ವಯತಿ ಯಜ್ಜಗತ್ |
ಚಂದ್ರ ಆಹ್ಲಾದರೂಪತ್ವಾದ್ಯಗಚ್ಛತ್ವಾಜ್ಜನಾರ್ದನಃ |
(೩) ಯಜುರ್ಯಜ್ಯಸ್ವರೂಪತ್ವಾತ್ ಸಾಮ ಚಾಸೌ ಸಮತ್ವತಃ |
ಬೃಹತ್ವಾದ್ಬ್ರಹ್ಮ ವೇದಾನಾಂ ಸಮುದಾಯೇಽಖಿಲೇ ಸ್ಥಿತಃ |
(೪) ತತ್ಸಂಬಂಧಾದ್ವೇದರಾಶಿಃ ಬ್ರಹ್ಮಶಬ್ದೇನ ಕೀರ್ತಿತಃ |
ಪ್ರಕೃಷ್ಟನಯನಾತ್ಪ್ರಾಣೋಽಪಾನೋಽವಾಙ್ನಯನಾದ್ಧರಿಃ ||
ವಿವಿಧಂ ನಯನಾದ್ವ್ಯಾನಃ ಸೋಽನ್ನಂ ಸರ್ವೋಪಜೀವ್ಯತಃ |
ಏವಂ ಷೋಡಶರೂಪೋಽಸೌ ಚತುರಾತ್ಮಾ ವ್ಯವಸ್ಥಿತಃ ||

(d) ಮಹಾಚಮಸನಾಮಾಸೌ ಯಸ್ಮಾದತಿಚಮತ್ಕೃತಿಃ |
ಮಾಹಾಚಮಸ್ಯಸ್ತಜ್ಜ್ಞಾನೀ ಬ್ರಹ್ಮಾ ಸಂಪರಿಕೀರ್ತಿತಃ |
ಏವಂ ಷೋಡಶರೂಪಾಣಾಂ ಜ್ಞಾನಯೋಗ್ಯಶ್ಚತುರ್ಮುಖಃ |
(೨) ಸ ಏವ ಬ್ರಹ್ಮವಿತ್ತಸ್ಮಾತ್ಪೂಜ್ಯತೇ ಮುಕ್ತಿಗೋಽಪಿ ಸನ್ |

ಸರ್ವದೇವೈರತಿತರಾಂ ಯಃ ಸಮ್ಯಕ್ಷೋಡಶಾತ್ಮವಿತ್ ||
- ಇತಿ ವ್ಯಾಹೃತಿತತ್ವೇ ||

ತಸ್ಯ ಭೂರಿತಿ ಶಿರಃ | ಏಕಂ ಶಿರಃ | ಏಕಮೇತದಕ್ಷರಂ |
ಭುವ ಇತಿ ಬಾಹೂ | ದ್ವಾ ಬಾಹೂ | ದ್ವೇ ಏತೇ ಅಕ್ಷರೇ |
ಸುವರಿತಿ ಪ್ರತಿಷ್ಠೇ | ದ್ವೇ ಪ್ರತಿಷ್ಠೇ | ದ್ವೇ ಏತೇ ಅಕ್ಷರೇ |
- ಇತ್ಯಾದಿ ಶ್ರುತೇಃ ||

ಸರ್ವವ್ಯಾಹೃತೀನಾಂ ಪ್ರವೇತ್ತಾ ಮಹಾಂಶ್ಚಮುಸ್ಯಶ್ಚತುರ್ಥೀ
ತ್ವೇನೈತಾಂ ಪ್ರವೇದಯತ ಇತಿ ವಿಶೇಷಃ ||
(೧) ಭೂರ್ನಾಮಾ ಸ್ಫೂರ್ತಿರೂಪತ್ವಾದ್ಭೂರಿವೀರ್ಯತ್ವತೋಭುವಃ|
ಸುವಃ ಸುಬಲರೂಪತ್ವಾನ್ಮಹಃ ಪೂರ್ಣತ್ವತೋ ವಿಭುಃ ||
(೨) ತದೇತಚ್ಚತುರಾಕಾರಂ ಬ್ರಹ್ಮೋಕ್ತಂ ಗುಣಬೃಂಹಣಾತ್ |
ಸ ಆತ್ಮಾ ಸರ್ವದೇವಾನಾಂ ಚತುರಾತ್ಮಾ ಜನಾರ್ದನಃ |
(೩) ತಸ್ಯ ಬ್ರಹ್ಮಾದಯೋ ದೇವಾ ಅಂಗವಾಗಂತುಕತ್ವತಃ |
ವಾಸುದೇವಾದಿರೂಪೋಽಸೌ ಷೋಡಶಾತ್ಮಾ ಚತುಶ್ಚತುಃ |
ಸ ಏವ ಸರ್ವವೇದೋಕ್ತಃ ಸರ್ವವಿದ್ಯಾಸು ಚೇಶ್ವರಃ |
(೧) ಪ್ರಣವಾರ್ಥಾ ವ್ಯಾಹೃತಯೋ ವ್ಯಾಹೃತ್ಯರ್ಥಾ ಋಗಾದಯಃ|
ಇತಿಹಾಸಃ ಪುರಾಣಂ ಚ ಪಂಚರಾತ್ರಂ ಚ ಸರ್ವಶಃ |
(೨) ಸಮ್ಯಗ್ವ್ಯಾಹರಣಾದ್ವಿಷ್ಣೋಃ ಶ್ರುತಾ ವ್ಯಾಹೃತಯಸ್ತ್ವಿತಿ |
ಸರ್ವವೇದೋಕ್ತಸರ್ವಸ್ವವ್ಯಾಹೃತೇರ್ವ್ಯಾಹೃತಿತ್ವಮು॰|
ವಿಶೇಷೇಣಾಹರಂತೀಮಂ ವಿಷ್ಣುಮಿತ್ಯಥವಾ ಸ್ಮೃತಾಃ |
- ಇತಿ ವ್ಯಾಹೃತಿಸಾರೇ || ೧೩-೧೪ ||

ಅ || *(a)* ಅನಿರುದ್ಧ, ಪ್ರದ್ಯುಮ್ನ, ಸಂಕರ್ಷಣ, ವಾಸುದೇವ ಎಂಬೀ ನಾಲ್ಕು ಭಗವದ್ರೂಪಗಳು ಭೂಃ, ಭುವಃ, ಸುವಃ, ಮಹಃ ಎಂಬೀನಾಲ್ಕು ವ್ಯಾಹೃತಿಗಳಿಂದ ಪ್ರತಿಪಾದಿಸಲ್ಪಡುತ್ತವೆ. (೨) ಮಹಃ ಎಂತ ಹೆಸರುಳ್ಳ ವಾಸುದೇವನು ಮೂಲರೂಪಿಯಾದ ಪರಮಾತ್ಮನಿಗೆ ಮಧ್ಯಸ್ಥಾನೀಯನು; ಮಹಾನುಭಾವನಾದ ವಾಸುದೇವರೂಪಿಗೆ ಭೂರ್ನಾಮಕನಾದ ಅನಿರುದ್ಧನು ಶಿರಸ್ಥಾನೀಯನು; 'ಭುವಃ' ಎಂತ ಹೆಸರುಳ್ಳ ಪ್ರದ್ಯುಮ್ನನು ಭಾಹುಸ್ಥಾನೀಯನು; ಸುವರ್ನಾಮಕನಾದ ಸಂಕರ್ಷಣನು ಪಾದಸ್ಥಾನೀಯನು; (೩) ಪರಮಾರ್ಥತಃ ಭೇದಶೂನ್ಯನಾಗಿದ್ದರೂ ಚತುಸ್ವರೂಪಿಯಾದ ಶ್ರೀ ಪರಮಾತ್ಮನು ಶ್ರುತಿಯಲ್ಲಿ ಬೇರೆ ಬೇರೆಯಾಗಿ ಹೇಳಲ್ಪಡುತ್ತಾನೆ. ಉಚ್ಚತ್ವ ನೀಚತ್ವ ರಹಿತನಾದರೂ ಐಶ್ವರ್ಯಸಂಪನ್ನನಾದ್ದರಿಂದ ಶ್ರೀ ಹರಿಯು ಒಬ್ಬನು ಮಧ್ಯನೆಂತಲೂ ಇತರರು ಅಂಗಗಳೆಂತಲೂ ಹೇಳಲ್ಪಡುತ್ತಾನೆ. ಎರಡು ರೂಪಗಳುಳ್ಳವನು, ನಾಲ್ಕುರೂಪಗಳುಳ್ಳವನು ಎಂಬಿತ್ಯಾದಿ ಸಂಖ್ಯಾಮಾತ್ರವಿಶೇಷದಿಂದ ಸರ್ವರೂಪಗಳಿಂದ ಅಭಿನ್ನನಾಗಿದ್ದರೂ ಶ್ರೀ ಪರಮಾತ್ಮನು ಆ ರೀತಿ ವ್ಯಹರಿಸಲ್ಪಡುತ್ತಾನೆ. *(b)* (೧) ಕ್ಷರಾಕ್ಷರ ಪುರುಷರಿಂದ ಶ್ರೇಷ್ಠನಾದ ಶ್ರೀ ಪರಮಾತ್ಮನು ಲೋಕ, ಜ್ಯೋತಿಸ್ಸು, ವೇದ, ಪ್ರಾಣ ಈ ನಾಲ್ಕರಲ್ಲಿ ಪ್ರತಿಯೊಂದರಲ್ಲಿಯೂ ನಾಲ್ಕು ನಾಲ್ಕು ರೂಪಗಳಿಂದ ಇದ್ದಾನೆ. ಅಂತೂ ಹದಿನಾರು

ಸ್ವರೂಪಗಳುಳ್ಳವನಾಗುತ್ತಾನೆ. ಐಶ್ವರ್ಯಸಂಪನ್ನನಾದ ಶ್ರೀ ಹರಿಯು ಕ್ರೀಡಾರ್ಥವಾಗಿ ಪೂಜ್ಯನಂತೆಯೂ ಪೂಜಕನಂತೆಯೂ ತೋರಿಸಿ ಕೊಳ್ಳುತ್ತಾನಲ್ಲದೆ ಲೋಕದಲ್ಲಿದ್ದಂತೆ ಪೂಜ್ಯ ಪೂಜಕಭೇದವು ಲೇಶಮಾತ್ರವೂ ಇರುವುದಿಲ್ಲ. (c) (೧) 'ಅಯಂ' 'ಲೋಕಃ' ಎಂಬಿತ್ಯಾದಿ ನಾಮಗಳ ಪ್ರವೃತ್ತಿ ನಿಮಿತ್ತವು ಪರಮಾತ್ಮನಿಗಿರುವದರಿಂದ ಅಂತಹ 'ಅಯಂ' 'ಲೋಕಃ' ಎಂಬಿತ್ಯಾದಿ ಶಬ್ದಗಳು ಆತನಿಗೆ ನಾಮಗಳೂ ಆಗಿವೆ. ಅದು ಹೇಗೆಂದರೆ- ಸರ್ವರಿಗೂ ಸಮೀಪದಲ್ಲಿರುವುದರಿಂದ 'ಅಯಂ' ಎಂಬ ಶಬ್ದವಾಚ್ಯನು, ಪ್ರಾಣನಲ್ಲಿರುವದರಿಂದ 'ಅಸೌ' ಶಬ್ದವಾಚ್ಯನು, ಮನಸ್ಸಿನಿಂದಲೇ ಈಕ್ಷಣಾರ್ಹನಾದುದರಿಂದ 'ಅಂತರಿಕ್ಷಂ' ಎನ್ನಿಸಿಕೊಳ್ಳು ತ್ತಾನೆ, ವಾಮನ ರೂಪದಿಂದ ಅದಿತಿಯ ಮಗನಾಗಿದ್ದುದರಿಂದ 'ಆದಿತ್ಯ' ಎಂದೆನ್ನಿಸುತ್ತಾನೆ, ಅಗ್ನಿಯಲ್ಲಿ ನಿಯಾಮಕನಾಗಿದ್ದುದರಿಂದ 'ಅಗ್ನಿ' ಎಂದೆನ್ನಿಸುತ್ತಾನೆ, ಜಗತ್ತನ್ನು ತನ್ನಧೀನ ದಲ್ಲಿಟ್ಟುಕೊಳ್ಳುವುದರಿಂದ 'ವಾಯು' ಎಂದೆನಿಸುತ್ತಾನೆ; ಸುಖರೂಪನಾದುದರಿಂದ 'ಚಂದ್ರ' ಎಂದೆನಿಸುತ್ತಾನೆ, ಜನಾರ್ದನನು ಸರ್ವರಿಂದಲೂ ಪೂಜ್ಯನಾದುದರಿಂದ 'ಋಕ್' ಎಂದೆನಿಸು ತ್ತಾನೆ, (೩) ಪೂಜ್ಯಸ್ವರೂಪನಾದುದರಿಂದಲೇ 'ಋಜುಸ್' ಎಂದೂ ಕರೆಯಲ್ಪಡುತ್ತಾನೆ, ಸರ್ವ ರೂಪಗಳಲ್ಲಿಯೂ ಸಾಮ್ಯ ಇರುವುದರಿಂದ 'ಸಾಮ' ಎಂದೆನಿಸುತ್ತಾನೆ, ವೇದಗಳಲ್ಲೆಲ್ಲಾ ಪ್ರತಿಪಾದ್ಯನಾದ ಶ್ರೀ ಹರಿಯು ಗುಣಪರಿಪೂರ್ಣನಾದುದರಿಂದ 'ಬ್ರಹ್ಮ' ಎಂದೆನಿಸುತ್ತಾನೆ, (೪) ಅಂತಹ ಪರಮಾತ್ಮ ಸಂಬಂಧದಿಂದ ವೇದಸಮುದಾಯಕ್ಕೂ 'ಬ್ರಹ್ಮ' ಎಂಬ ಹೆಸರಿದೆ. ಯೋಗ್ಯರನ್ನು ಉತ್ತಮಗತಿಗೆ ಒಯ್ಯುವನಾದುದರಿಂದ 'ಪ್ರಾಣ' ಎಂದೆನಿಸುತ್ತಾನೆ, ಅಯೋ ಗ್ಯರನ್ನು ಅಧೋಗತಿಗೆಳೆಯುವ ಪ್ರಯುಕ್ತ ಹರಿಯು 'ಅಪಾನ'ನೆನಿಸುತ್ತಾನೆ, ಅನೇಕರೀತಿ ಯಿಂದ ಪ್ರೇರಿಸುವುದರಿಂದ 'ವ್ಯಾನ'ನೆನಿಸುತ್ತಾನೆ, ಸರ್ವರಿಗೂ ಜೀವನಸ್ವರೂಪನಾದುದರಿಂದ 'ಅನ್ನ'ನೆನಿಸುತ್ತಾನೆ, ಅಂತೂ ಪೂರ್ವೋಕ್ತ ಪ್ರಕಾರವಾಗಿ ಚತುಃ ಸ್ವರೂಪನಾದ ಪರಮಾತ್ಮನು ಹದಿನಾರು ಸ್ವರೂಪಗಳುಳ್ಳವನಾಗಿ ವಿವೇಚಿಸಲ್ಪಟ್ಟಿದ್ದಾನೆ. (d) (೧) ಅತಿ ಚಮತ್ಕಾರಪೂರ್ವಕ ವಾಗಿ ನಿಖಿಲ ಕಾರ್ಯಗಳನ್ನೂ ಮಾಡುವ ಪ್ರಯುಕ್ತ ಹರಿಯು 'ಮಹಾಚಮಸ' ಎಂದು ಹೆಸ ರುಳ್ಳವನು, ಅಂತಹ ಹರಿಯನ್ನು ವಿಶೇಷವಾಗಿ ತಿಳಿದುಕೊಂಡ ಬ್ರಹ್ಮನು 'ಮಾಹಾಚಮಸ್ಯ'ನೆನಿಸಿ ಕೊಳ್ಳುತ್ತಾನೆ, (೨) ಹಿಂದೆ ಹೇಳಿದ ಹದಿನಾರು ರೂಪಗಳನ್ನು ತಿಳಿದುಕೊಳ್ಳಲರ್ಹನು ಚತು ರ್ಮುಖನು, ಅವನೇ ಬ್ರಹ್ಮಜ್ಞಾನಿಯು, ಈ ಎಲ್ಲಾ ರೂಪಗಳನ್ನೂ ಚೆನ್ನಾಗಿ ತಿಳಿದ ಪ್ರಯುಕ್ತ ಮುಕ್ತಿಯಲ್ಲಿಯೂ ಸಮಸ್ತ ದೇವತೆಗಳಿಂದಲೂ ಪೂಜಿಸಲ್ಪಡುತ್ತಾನೆ. ಹೀಗೆಂದು ವ್ಯಾಹೃತಿ ತತ್ವದಲ್ಲಿ ಹೇಳಲ್ಪಟ್ಟಿದೆ.

(e) ವಾಸುದೇವನಿಗೆ ಭೂರ್ನಾಮಕನಾದ ಅನಿರುದ್ಧನು ಶಿರಸ್ಥಾನೀಯನು. ಏಕೆಂದರೆ, ಶಿರಸ್ಸು ಒಂದೇ ಆದುದರಿಂದ 'ಭೂಃ' ಎಂಬ ಒಂದೇ ಅಕ್ಷರದಿಂದ ಪ್ರತಿಪಾದ್ಯನಾದ ಅನಿರು ದ್ಧನು ಶಿರಸ್ಥಾನೀಯನಾಗಿದ್ದಾನೆ, 'ಭುವಃ' ಎಂಬ ಎರಡಕ್ಷರಡಿಂದ ಪ್ರತಿಪಾದ್ಯನಾದ ಪ್ರದ್ಯು ಮ್ನನು ಬಾಹುಗಳು ಎರಡಾದಪ್ರಯುಕ್ತ ಬಾಹುಸ್ಥಾನೀಯನು 'ಸುವಃ' ಎಂಬ ಎರಡಕ್ಷರದಿಂದ ಪ್ರತಿಪಾದ್ಯನಾದ ಸಂಕರ್ಷಣನು ಪಾದಗಳೆರಡಾದ ಪ್ರಯುಕ್ತ ಪಾದಸ್ಥಾನೀಯನು, ಇತ್ಯಾದಿ ಬೃಹದಾರಣ್ಯಕ ಶ್ರುತಿಯ ವಾಕ್ಯವೂ ಈ ವಿಷಯದಲ್ಲಿ ಪ್ರಮಾಣವಾಗಿದೆ.

(f) ಭೂರಾದಿ ವ್ಯಾಹೃತಿತ್ರಯವನ್ನು ತಿಳುಕೊಂಡಿದ್ದರೂ ಚತುರ್ಮುಖನು 'ಮಹಃ' ಎಂಬ ವ್ಯಾಹೃತಿಯನ್ನು ನಾಲ್ಕನೇದನ್ನಾಗಿ ವಿಶೇಷವಾಗಿ ತಿಳಿದುಕೊಳ್ಳುವ ಪ್ರಯುಕ್ತ 'ಮಾಹಾ ಚಮಸ್ಯಃ ಪ್ರವೇದಯತೇ' ಎಂಬ ವಿಶೇಷೋಕ್ತಿಯು ಕೂಡುತ್ತದೆ.

*(g)* (೧) ಹರಿಯು ಸ್ವಪ್ರಕಾಶನಾದುದರಿಂದ 'ಭೂಃ' ಎಂತ ಹೆಸರುಳ್ಳವನು, ಬಹಳ ಪರಾಕ್ರಮಿಯಾದುದರಿಂದ 'ಭುವಃ' ಎಂದೆನಿಸುತ್ತಾನೆ, ಬಲಿಷ್ಠನಾದುದರಿಂದ 'ಸುವಃ' ಎಂದೆನಿಸುತ್ತಾನೆ, ಗುಣಪರಿಪೂರ್ಣನಾದುದರಿಂದ 'ಮಹಃ' ಎನ್ನಿಸಿಕೊಳ್ಳುತ್ತಾನೆ, (೨) ಆ ಯೀ ಭೂರಾದಿ ಶಬ್ದದಿಂದ ಹೇಳಲ್ಪಡತಕ್ಕ ಅನಿರುದ್ಧಾದಿ ಸ್ವರೂಪಗಳು ಗುಣಪರಿಪೂರ್ಣಗಳಾದುದರಿಂದ 'ಬ್ರಹ್ಮ' ಎಂದೆನಿಸುತ್ತವೆ, ಆ ಚತುಃಸ್ವರೂಪಿಯಾದ ಜನಾರ್ದನನು ಸಮಸ್ತ ದೇವತೆಗಳಿಗೂ ಸ್ವಾಮಿಯು, (೩) ಇಂತಹ ಜನಾರ್ದನನಿಗೆ ಬ್ರಹ್ಮಾದಿ ದೇವತೆಗಳು ಪರಮಾತ್ಮನಿಂದ ಜಾತರಾದುದರಿಂದ ಪರಿವಾರಭೂತರಾಗಿದ್ದಾರೆ, ವಾಸುದೇವಾದಿ ಸ್ವರೂಪಿಯಾದ ಜನಾರ್ದನನು ಪ್ರತಿಯೊಂದರಲ್ಲಿಯೂ ನಾಲ್ಕು ನಾಲ್ಕು ರೂಪಿಯಾದ ಪ್ರಯುಕ್ತವೇ ಹದಿನಾರು ರೂಪವುಳ್ಳವನಾಗಿದ್ದಾನೆ, ಅವನೇ ನಿಖಿಲ ವೇದಗಳಲ್ಲಿಯೂ (ಪ್ರತಿಪಾದ್ಯನೂ) ನಿಖಿಲ ವಿದ್ಯೆಗಳಲ್ಲಿಯೂ (ಇವನೇ) ಮುಖ್ಯ ಪ್ರತಿಪಾದ್ಯನಾಗಿದ್ದಾನೆ.

*(h)* (೧) ಭೂರಾದಿ ವ್ಯಾಹೃತಿಗಳು ಪ್ರಣವದ (ಓಂ) ಅರ್ಥಭೂತಗಳು. ಸಮಸ್ತ ವೇದಗಳೂ ಇತಿಹಾಸ, ಪುರಾಣ, ಪಂಚರಾತ್ರಗಳೂ ಇವುಗಳೆಲ್ಲವೂ ವ್ಯಾಹೃತಿಯ ಅರ್ಥಭೂತಗಳು, (೨) ಭೂರಾದಿಗಳು ಚೆನ್ನಾಗಿ ವಿಷ್ಣುವನ್ನು ಪ್ರತಿಪಾದನೆ ಮಾಡುವುದರಿಂದ 'ವ್ಯಾಹೃತಿ' ಗಳೆಂದು ಶ್ರುತಿಯಲ್ಲಿ ಹೇಳಲ್ಪಟ್ಟವೆ, ವೇದಗಳಲ್ಲಿ ಹೇಳಲ್ಪಡುವ ಬಹುವೀರ್ಯತ್ವಾದಿಗಳನು ವಿಶೇಷವಾಗಿ ಹೇಳುವುದರಿಂದಲೂ ಅನಿರುದ್ಧಾದಿ ಸ್ವರೂಪವುಳ್ಳ ಹರಿಯನ್ನು ವಿಶೇಷವಾಗಿ ಇವುಗಳೇ ಭಕ್ತರಿಗೆ ಪ್ರಾಪಿಸಿಕೊಡುವುದರಿಂದಲೂ 'ವ್ಯಾಹೃತಿ'ಗಳೆನಿಸಲ್ಪಡುತ್ತವೆ. ಹೀಗೆ ವ್ಯಾಹೃತಿ ಸಾರದಲ್ಲಿ ಉಕ್ತವಾಗಿದೆ. ॥ ೧೩-೧೪ ॥

**ಮಂ ॥ ಸ ಯ ಏಷೋಽನ್ತರ್ಹೃದಯ ಆಕಾಶಃ । ತಸ್ಮಿನ್ನಯಂ ಪುರುಷೋ ಮನೋಮಯಃ । ಅಮೃತೋ ಹಿರಣ್ಮಯಃ । ಅಂತರೇಣ ತಾಲುಕೇ । ಯ ಏಷಸ್ತನ ಇವಾವಲಂಬತೇ । ಸೇಂದ್ರಯೋನಿಃ । ಯತ್ರಾಸೌ ಕೇಶಾಂತೋ ವಿವರ್ತತೇ । ವ್ಯಪೋಹ್ಯಶೀರ್ಷಕಪಾಲೇ ॥ ೧೫ ॥**

ಅ ॥ ಸಃ=ಪ್ರಸಿದ್ಧನಾದ, ಯ ಏಷಃ=ಯಾವ, ಹೃದಯೇ ಅಂತಃ=ಹೃದಯದ ಒಳಗೆ **ಆಕಾಶಃ**=ಆಕಾಶರೂಪಿಯು (ಇದ್ದಾನೋ), ತಸ್ಮಿನ್=ಆತನಲ್ಲಿ, ಅಯಂ=ಭೂಃ ಎಂಬ ವ್ಯಾಹೃತಿಯಿಂದ ಹೇಳಲ್ಪಟ್ಟ, ಮನೋಮಯಃ=ಜ್ಞಾನಾತ್ಮಕನಾದ, ಅಮೃತಃ=ನಿತ್ಯನಾದ, ಹಿರಣ್ಮಯಃ=ವಿಲಕ್ಷಣಾನಂದಮಯನಾದ, ಪುರುಷಃ=ಅನಿರುದ್ಧನು, (ವರ್ತತೇ=ಇರುತ್ತಾನೆ), ತಾಲುಕೇ=ತಾಲುಗಳ, ಅಂತರೇಣ=ಮಧ್ಯದಲ್ಲಿ, ಯ ಏಷಃ=ಯಾವುದೊಂದು, ಸ್ತನ ಇವ=ಕುಚದಂತೆ, ಅವಲಂಬತೇ=ಜೋತಾಡಿಕೊಂಡುಂಟೋ, ಸಾ=ಅದು, ಇಂದ್ರಯೋನಿಃ=ಪ್ರದ್ಯುಮ್ನನಿಗೆ ಸ್ಥಾನವು, ಯತ್ರ=ಎಲ್ಲಿ, ಅಸೌ=ಈದಾವ, ಕೇಶಾಂತಃ=ಕೇಶಮೂಲವು, (ಉಂಟೋ) (ಅಲ್ಲಿ), ವಿ=ಸುವರ್ಣರೂಪನಾದ ಸಂಕರ್ಷಣನು, ವರ್ತತೇ=ಇರುತ್ತಾನೆ, ಅಶೀರ್ಷಕಪಾಲೇ=ಶಿರಸ್ಸಿನ ಕಪಾಲದ ಮೇಲುಗಡೆಗೆ, ವ್ಯಪಃ=ವಾಸುದೇವನು (ಇದ್ದಾನೆ).

**ಭಾ** ॥*(a)* ಯ ಏಷ ಹೃದಯಾಕಾಶಸ್ತ್ವನಿರುದ್ಧಸ್ತು ತದ್ಗತಃ ।
ಪ್ರದ್ಯುಮ್ನಸ್ತಾಲುಮಧ್ಯಸ್ಥೋ ಲಂಬಿನ್ಯಾಮಿಂದ್ರನಾಮಕಃ ।

(b) ವ್ಯಾಖ್ಯಾಃ ಸುಪರ್ಣರೂಪತ್ವಾತ್ಕೇಶಾಂತೇ ವರ್ತತೇ ತು ಯಃ ।
(c) ಸಂಕರ್ಷಣಃ ಸುಪರ್ಣಾತ್ಮಾ ವಾಸುದೇವೋ ವ್ಯಪಃ ಸ್ಮೃತಃ ।
ಯಸ್ಮಾದ್ವ್ಯಪಗತಸ್ಥಾತಾ ಜಗತಿ ಪ್ರಲಯೇ ವಿಭುಃ ।
ಅಶೀರ್ಷಕಕಪಾಲೋऽಸೌ ಕಪಾಲಾದುಪರಿ ಸ್ಥಿತಃ ॥ ೧೫ ॥

ಅ ॥(a) ಯಾವುದೊಂದು ಹೃದಯಾಕಾಶವಿದೆಯೋ ಅದರಲ್ಲಿ ಅನಿರುದ್ಧರೂಪಿಯು ಸನ್ನಿಹಿತನಾಗಿರುತ್ತಾನೆ, ಇಂದ್ರನಾಮಕನಾದ ಪ್ರದ್ಯುಮ್ನರೂಪಿಯು ಎರಡುತಾಲುಗಳ ನಡುವೆ ಜೋತಾಡುತ್ತಿರುವ ಕಿರಿನಾಲಗೆಯಲ್ಲಿ ಸನ್ನಿಹಿತನಾಗಿದ್ದಾನೆ, (b) ಸುಪರ್ಣರೂಪನಾದುದರಿಂದ 'ವಿಃ' ಎಂದು ಹೆಸರುಳ್ಳ ಯಾವ ಸುಪರ್ಣಾತ್ಮನಾದ ಸಂಕರ್ಷಣನಿದ್ದಾನೋ ಆತನು ಕೂದಲುಗಳ ಬುಡದಲ್ಲಿ ಸನ್ನಿಹಿತನಾಗಿರುತ್ತಾನೆ, (c) ಪ್ರಲಯಕಾಲದಲ್ಲಿ ಜಗತ್ತು ನಷ್ಟವಾದರೂ ತಾನು ಸ್ಥಿರವಾಗಿರುವುದರಿಂದ 'ವ್ಯಪಃ' ಎಂದು ಪ್ರಸಿದ್ಧನಾದ ವ್ಯಾಪಕನಾದ ವಾಸುದೇವನು ಶಿರಸ್ಸು, ಕಪಾಲ ಇವುಗಳಿಂದ ಹೊರತಾದ ಕಪಾಲದ ಮೇಲುಭಾಗದಲ್ಲಿ ಸನ್ನಿಹಿತನಾಗಿರುತ್ತಾನೆ ॥ ೧೫ ॥

**ಮಂ ॥ ಭೂರಿತ್ಯಗ್ನೌ ಪ್ರತಿತಿಷ್ಠತಿ । ಭುವ ಇತಿ ವಾಯೌ । ಸುವರಿತ್ಯಾದಿತ್ಯೇ । ಮಹ ಇತಿ ಬ್ರಹ್ಮಣಿ । ಆಪ್ನೋತಿ ಸ್ವಾರಾಜ್ಯಂ । ಆಪ್ನೋತಿ ಮನಸಸ್ಪತಿಂ । ವಾಕ್ಪತಿಶ್ಚಕ್ಷುಷ್ಪತಿಃ । ಶ್ರೋತ್ರಪತಿರ್ವಿಜ್ಞಾನಪತಿಃ । ಏತತ್ತತೋ ಭವತಿ ॥ ೧೬ ॥**

ಅ ॥ ಭೂರಿತಿ='ಭೂಃ' ಎಂಬ ಶಬ್ದವಾಚ್ಯ ಅನಿರುದ್ಧನು, ಅಗ್ನೌ=ಅಗ್ನಿಯಲ್ಲಿ, ಪ್ರತಿತಿಷ್ಠತಿ=ಇರುತ್ತಾನೆ, ಭುವ ಇತಿ=ಭುವಃ ಎಂಬುದರಿಂದ ವಾಚ್ಯನಾದ ಪ್ರದ್ಯುಮ್ನನು, ವಾಯೌ=ವಾಯುವಿನಲ್ಲಿ, ಸುವರಿತಿ=ಸುವಃ ಎಂಬ ಶಬ್ದವಾಚ್ಯನಾದ ಸಂಕರ್ಷಣನು ಆದಿತ್ಯೇ=ಆದಿತ್ಯನಲ್ಲಿ, ಮಹಃ ಇತಿ=ಮಹಃ ಎಂಬುದರಿಂದ ವಾಚ್ಯನಾದ ವಾಸುದೇವನು, ಬ್ರಹ್ಮಣಿ=ಚತುರ್ಮುಖನಲ್ಲಿ, (ವಾಸುದೇವನು), ಸ್ವಾರಾಜ್ಯಂ=ಜಗತ್ತನ್ನು, ಆಪ್ನೋತಿ=ವ್ಯಾಪಿಸಿಕೊಂಡಿರುತ್ತಾನೆ, ಮನಸಸ್ಪತಿಂ=ಅನಿರುದ್ಧನನ್ನು, ಆಪ್ನೋತಿ=ವ್ಯಾಪಿಸಿಕೊಂಡಿರುತ್ತಾನೆ, ವಾಕ್ಪತಿಃ=ವಾಗಿಂದ್ರಿಯಕ್ಕೆ ನಿಯಾಮಕನಾಗಿದ್ದಾನೆ. ಚಕ್ಷುಷ್ಪತಿಃ=ಚಕ್ಷುರಿಂದ್ರಿಯನಿಯಾಮಕನಾಗಿರುತ್ತಾನೆ, ಶ್ರೋತ್ರಪತಿಃ=ಶ್ರೋತ್ರೇಂದ್ರಿಯನಿಯಾಮಕನಾಗಿರುತ್ತಾನೆ, ವಿಜ್ಞಾನಪತಿಃ=ಬುದ್ಧೀಂದ್ರಿಯನಿಯಾಮಕನಾಗಿರುತ್ತಾನೆ, ತತಃ=ಆದುದರಿಂದ, ಏತತ್=ಪೂರ್ವೋಕ್ತವಾಗಾದೀಂದ್ರಿಯಗಳಲ್ಲಿ, ತತಃ=ನಿರಂತರವೂ, ಭವತಿ=ಇರುತ್ತಾನೆ.

ಭಾ ॥(a) ಅನಿರುದ್ಧಸ್ತು ಭೂರ್ನಾಮಾ ಹುತಾಶೇಸಂವ್ಯವಸ್ಥಿತಃ ।
ಪ್ರದ್ಯುಮ್ನೋ ಭಗವಾನ್ ವಾಯೌ ಭುವ ಇತ್ಯೇವ ಕೀರ್ತಿತಃ ।
(b) ಸಂಕರ್ಷಣಃ ಸುವರ್ನಾಮಾ ಸೂರ್ಯೇ ತಿಷ್ಠತಿ ಕೇಶವಃ ।
ಮಹೋ ನಾಮಾ ವಾಸುದೇವೋ ಬ್ರಹ್ಮಣಿ ಸ್ಥಿತಶ್ಚತುರ್ಮುಖೇ ॥
(c) ಸ ವಾಸುದೇವಃ ಸ್ವಾರಾಜ್ಯಂ ವ್ಯಾಪ್ಯಾಸ್ಮಿನ್ ಮನಸಸ್ಪತೌ ।
ಅನಿರುದ್ಧೇ ಚ ಸಂವ್ಯಾಪ್ತಃ ತತೋ ವಾಗಾದಿನಾಂ ಪತಿಃ ॥
(d) ವಾಗಾದಿಷು ಸ್ಥಿತೋ ನಿತ್ಯಂ ಭವತ್ಯೇವ ಜನಾರ್ದನಃ ।
ಸ್ವವ್ಯಾಪೀ ಚ ಜಗದ್ವ್ಯಾಪೀ ನಿತ್ಯೈಶ್ವರ್ಯಾತ್ಸ ಈಶ್ವರಃ ॥ ೧೬ ॥

ಅ ॥(*a*) ಭೂರ್ನಾಮಕನಾದ ಅನಿರುದ್ಧನು ಅಗ್ನಿಯಲ್ಲಿ ಸನ್ನಿಹಿತನಾಗಿರುತ್ತಾನೆ. ಭುವನಾಮಕನಾದ ಪೂಜ್ಯನಾದ ಪ್ರದ್ಯುಮ್ನನು ವಾಯುವಿನಲ್ಲಿ ಸನ್ನಿಹಿತನಾಗಿರುತ್ತಾನೆ. (*b*) ಸುವರ್ನಾಮಕನಾದ ಸಂಕರ್ಷಣನು ಸೂರ್ಯನಲ್ಲಿರುತ್ತಾನೆ. ಮಹೋನಾಮಕನಾದ ವಾಸುದೇವನು ಚತುರ್ಮುಖಬ್ರಹ್ಮನಲ್ಲಿರುತ್ತಾನೆ. ಆ ವಾಸುದೇವನು ನಿಖಿಲ ಜಗತ್ತನ್ನು ವ್ಯಾಪಿಸಿ ಮನೋಧಿಪತಿಯಾದ ಅನಿರುದ್ಧನಲ್ಲಿಯೂ ವ್ಯಾಪ್ತನಾಗಿದ್ದಾನೆ. ಅಲ್ಲದೆ ಮನಸ್ಸಿಗಧಿಪತಿಯಾದುದರಿಂದಲೇ ವಾಗಾದಿ ಇಂದ್ರಿಯಗಳಿಗೂ ಅಧಿಪತಿಯಾಗಿರುತ್ತಾನೆ. (*d*) ಅಲ್ಲದೆ ನಿರಂತರವೂ ಅವುಗಳಲ್ಲಿ ಸನ್ನಿಹಿತನಾಗಿರುತ್ತಾನೆ. ನಿತ್ಯೈಶ್ವರ್ಯಯುಕ್ತನಾದುದರಿಂದ ಸರ್ವಸ್ವತಂತ್ರನಾದಶ್ರೀ ವಾಸುದೇವನು ತನ್ನ ಅನಿರುದ್ಧಾದಿ ರೂಪಗಳನ್ನೂ ನಿಖಿಲ ಜಗತ್ತನ್ನೂ ವ್ಯಾಪಿಸಿಕೊಂಡಿರುತ್ತಾನೆ.

**ಮಂ ॥ ಆಕಾಶಶರೀರಂ ಬ್ರಹ್ಮ । ಸತ್ಯಾತ್ಮಪ್ರಾಣಾರಾಮಂ ಮನಆನಂದಂ । ಶಾಂತಿಸಮೃದ್ಧಮಮೃತಂ । ಇತಿ ಪ್ರಾಚೀನಯೋಗ್ಯೋಪಾಸ್ವ ।೧೭॥**

ಅ ॥ ಬ್ರಹ್ಮ=ವಾಸುದೇವಾಖ್ಯಬ್ರಹ್ಮವು, ಆಕಾಶಶರೀರಂ=ಆಕಾಶದಂತೆ ವ್ಯಾಪ್ತಶರೀರವುಳ್ಳದ್ದು, ಸತ್ಯಾತ್ಮ=ಸಾಧುಗುಣಪೂರ್ಣವಾದುದು, ಪ್ರಾಣಾರಾಮಂ=ವಾಯುದೇವರಿಗೆ ವಿಶೇಷವಾಗಿ ಆನಂದಪ್ರದವಾದುದು, ಮನಆನಂದಂ=ಜ್ಞಾನಾನಂದಾತ್ಮಕವು, ಶಾಂತಿ=ಸುಖರೂಪವು, ಸಮೃದ್ಧಂ=ಪೂರ್ಣವು, ಅಮೃತಂ=ನಿತ್ಯವು, ಇತಿ=ಹೀಗೆ, ಪ್ರಾಚೀನಯೋಗ್ಯ=ಅಧಿಕಾರಿಗಳಿಗೆ ಪ್ರಥಮನಾದ ಚತುರ್ಮುಖನೇ! ಉಪಾಸ್ವ=ಉಪಾಸನೆಮಾಡು.

ಭಾ ॥(*a*) ಆಕಾಶವದ್ವ್ಯಾಪ್ತದೇಹಸ್ಸತ್ಯಾತ್ಮಾ ಗುಣಪೂರ್ತಿತಃ ।
ವಾಯೋರ್ವಿಶೇಷರಮಕೋ ಬಲಾನಂದಸ್ವರೂಪವಾನ್ ।
(*b*) ಜ್ಞಾನಾನಂದಸ್ವರೂಪೋಽಸೌ ಶಾಂತಿನಾಮಾ ಸುಖೋನ್ನತೇಃ ।
ಅಂತಗತ್ವಾತ್ಸ್ವತಃ ಪೂರ್ತೇಸ್ಸಮೃದ್ಧಂ ತತ್ರಕೀರ್ತಿತಂ ॥
(*c*) ಇತ್ಯುಪಾಸ್ವ ಪ್ರಾಥಮಿಕೋ ಯೋಗ್ಯಸ್ತ್ವಂ ಮದುಪಾಸನೇ ।
ಪ್ರಾಧಾನ್ಯಾದಿತಿ ಪೂರ್ವಂ ಹಿ ಪ್ರಾಹ ವಿಷ್ಣುಶ್ಚತುರ್ಮುಖಮ್ ॥
– ಇತಿ ಬ್ರಹ್ಮಸಾರೇ ॥ ೧೭ ॥

ಅ ॥ (*a*) ವಾಸುದೇವನು ಆಕಾಶದಂತೆ ವ್ಯಾಪ್ತವಾದ ಶರೀರವುಳ್ಳವನು. ಗುಣಪೂರ್ಣನಾದುದರಿಂದ ಸತ್ಯಸ್ವರೂಪನು, ಅಧಿಕಾರಿಗಳವರ್ಗದಲ್ಲಿ ಮುಖ್ಯಪ್ರಾಣನಿಗೇನೇ ಅಧಿಕವಾದ ಆನಂದವನ್ನು ಕೊಡತಕ್ಕವನೂ ಬಲಾನಂದ ಸ್ವರೂಪನೂ ಆಗಿರುತ್ತಾನೆ. (*b*) ಅಲ್ಲದೆ ಜ್ಞಾನಮಯನೂ ಆನಂದಮಯನೂ ಆಗಿರುತ್ತಾನೆ, ಅವಧಿಯಿಲ್ಲದ ಸುಖಾಧಿಕ್ಯ ಇರುವದರಿಂದ ಶಾಂತಿನಾಮಕನು, ಪರಾಪೇಕ್ಷೆಯಿಲ್ಲದೇನೇ ಪರಿಪೂರ್ಣನಾದುದರಿಂದ ಸಮೃದ್ಧನಾಮಕನಾಗಿದ್ದಾನೆ, (*c*) ಅಧಿಕಾರಿವರ್ಗದಲ್ಲಿ ಪ್ರಧಾನನಾದುದರಿಂದ ನನ್ನ ಉಪಾಸನೆಯಲ್ಲಿ ನೀನೇ ಮೊದಲನೆಯವನಿರುತ್ತೀ, ಆದಕಾರಣ ಪೂರ್ವೋಕ್ತ ರೀತಿಯಲ್ಲಿ ನನ್ನನ್ನು ಉಪಾಸನೆ ಮಾಡು; ಇಂತೆಂದು ಪೂರ್ವದಲ್ಲಿ ವಿಷ್ಣುವು ಚತುರ್ಮುಖನಿಗೆ ಹೇಳಿದನು ಎಂದುಬ್ರಹ್ಮಸಾರ ಗ್ರಂಥದಲ್ಲಿ ಉಕ್ತವಾಗಿದೆ. ॥ ೧೭ ॥

**ಮಂ ॥ ಪೃಥಿವ್ಯಂತರಿಕ್ಷಂ ದ್ಯೌರ್ದಿಶೋಽವಾಂತರದಿಶಾಃ । ಅಗ್ನಿರ್ವಾಯುರಾದಿತ್ಯಶ್ಚಂದ್ರಮಾ ನಕ್ಷತ್ರಾಣಿ । ಆಪ ಓಷಧಯೋ ವನಸ್ಪತಯ**

ಆಕಾಶ ಆತ್ಮಾ । ಇತ್ಯಧಿಭೂತಂ । ಅಥಾಧ್ಯಾತ್ಮಂ । ಪ್ರಾಣೋ ವ್ಯಾನೋಽಪಾನ ಉದಾನಃ ಸಮಾನಃ । ಚಕ್ಷುಃ ಶ್ರೋತ್ರಂ ಮನೋ ವಾಕ್ತ್ವಕ್ । ಚರ್ಮಮಾಗ್ಂಸಗ್ಂಸ್ನಾವಾಸ್ಥಿ ಮಜ್ಜಾ । ಏತದಧಿವಿಧಾಯ ಋಷಿರವೋಚತ್ । ಪಾಙ್ಕ್ತಂ ವಾ ಇದಗ್ಂಸರ್ವಂ । ಪಾಙ್ಕ್ತೇನೈವ ಪಾಙ್ಕ್ತಗ್ಂ ಸ್ಪೃಣೋತೀತಿ ॥ ೧೮ ॥

ಅ ॥ ಪೃಥಿವೀ=ಪೃಥಿವಿಯು, ಅಂತರಿಕ್ಷಂ=ಅಂತರಿಕ್ಷಲೋಕವು, ದ್ಯೌಃ=ಸ್ವರ್ಗಲೋಕವು, ದಿಶಃ=ಪ್ರಾಚ್ಯಾದಿ ದಿಕ್ಕುಗಳು, ಅವಾಂತರದಿಶಃ=ವಿದಿಕ್ಕುಗಳು, ಅಗ್ನಿಃ=ಅಗ್ನಿಯು, ವಾಯುಃ=ವಾಯುವು, ಆದಿತ್ಯಃ=ಸೂರ್ಯನು, ಚಂದ್ರಮಾಃ=ಚಂದ್ರನು, ನಕ್ಷತ್ರಾಣಿ=ನಕ್ಷತ್ರಗಳು, ಆಪಃ=ಜಲವು, ಓಷಧಯಃ=ವ್ರೀಹ್ಯಾದಿಗಳು, ವನಸ್ಪತಯಃ=ಅಶ್ವತ್ಥಾದಿಗಳು, ಆಕಾಶಃ=ಆಕಾಶವು, ಆತ್ಮಾ=ಅಹಂಕಾರತತ್ವವು, ಈ ರೀತಿಯಾಗಿ ಭೂತಪಂಚತ್ರಯದಲ್ಲಿದ್ದ ಐದೈದುರೂಪಗಳು ಹೇಳಲ್ಪಟ್ಟವು, ಅಥ=ಆ ಮೇಲೆ, ಅಧ್ಯಾತ್ಮಂ=ದೇಹದಲ್ಲಿರುವ ನಾರಾಯಣಾದಿ ರೂಪಗಳನ್ನೂ ಅಧಿಷ್ಠಾನಗಳನ್ನೂ ಹೇಳುತ್ತೇವೆ. ಪ್ರಾಣಃ, ವ್ಯಾನಃ, ಅಪಾನಃ, ಉದಾನಃ, ಸಮಾನಃ=ಈ ಪ್ರಕಾರ ಪಂಚಪ್ರಾಣರು, ಚಕ್ಷುಃ=ಕಣ್ಣು, ಶ್ರೋತ್ರಂ=ಕಿವಿಯು, ಮನಃ=ಮನಸ್ಸು, ವಾಕ್=ವಾಗಿಂದ್ರಿಯ, ತ್ವಕ್=ತ್ವಗಿಂದ್ರಿಯವು, ಚರ್ಮ, ಮಾಂಸ, ಸ್ನಾವಾ, ಅಸ್ಥಿ, ಮಜ್ಜಾ=ಇವುಗಳೈದು. (ಇವಿಷ್ಟೂ ಅಂದರೆ ಪೃಥಿವ್ಯಾದಿ ಪಂಚಕ, ಅಗ್ನ್ಯಾದಿ ಪಂಚಕ, ಜಲಾದಿಪಂಚಕ, ಪ್ರಾಣಾದಿಪಂಚಕ, ಚಕ್ಷುರಾದಿಪಂಚಕ, ಚರ್ಮಾದಿಪಂಚಕ ಹೀಗೆ ಪ್ರತಿಯೊಂದು ಪಂಚಕವೂ ನಾರಾಯಣಾದಿ ಐದೈದು ಭಗವದ್ರೂಪಗಳಿಗೆ ಅಧಿಷ್ಠಾನವಾಗಿದೆ).

ಏತತ್=ಈ ಪೂರ್ವೋಕ್ತ ಪಂಚಕಗಳ ಆರನ್ನು, ಅಧಿವಿಧಾಯ=ಅಧಿಕರಿಸಿಕೊಂಡು, ಋಷಿಃ=ವಿಷ್ಣುವು, ಇದಂ ಸರ್ವಂ=ಈ ಪೃಥಿವ್ಯಾದಿ ವರ್ಗಗಳು ಆರು, ಪಾಙ್ಕ್ತಂ=ಐದೈದು ಸಂಖ್ಯೆಯುಳ್ಳದ್ದು, ವೈ=ನಿಶ್ಚಯವು, ಪಾಙ್ಕ್ತೇನೈವ=ನಾರಾಯಣಾದಿ ಐದುರೂಪದಿಂದಲೇ, ಪಾಙ್ಕ್ತಂ=ಪೃಥಿವ್ಯಾದಿ ಪಂಚಕಷಟ್ಕವನ್ನು, ಸ್ಪೃಣೋತಿ=ತಮ್ಮ ತಮ್ಮ ಕಾರ್ಯಗಳಲ್ಲಿ, ಶಕ್ತವಾದುದನ್ನಾಗಿ ಮಾಡುತ್ತಾನೆ, ಇತಿ=ಹೀಗೆ, ಅವೋಚತ್=ಹೇಳಿದನು.

ಭಾ ॥ ಪೃಥಿವ್ಯಾದ್ಯಂ ಪಾಙ್ಕ್ತಷಟ್ಕಂ ಪಾಙ್ಕ್ತೇನೈವ ಸ್ವಯಂ ಹರಿಃ ।
ನಾರಾಯಣಾದಿರೂಪೇಣ ಬಲಯತ್ಯಂಜಸಾ ಪ್ರಭುಃ ।
ಇತ್ಯುವಾಚ ಸ್ವಯಂ ವಿಷ್ಣುಃ ವೇದದ್ರಷ್ಟಾ ಗುಣಾಧಿಕಃ ॥
ಇತಿ ತತ್ವಸಂಹಿತಾಯಾಂ ॥ ಆತ್ಮಾ ಅಹಂಕಾರತತ್ವಂ ॥ ೧೮ ॥

ಅ ॥ ಪೃಥಿವ್ಯಾದಿ ಐದೈದರ ಆರು ಸಮೂಹಗಳನ್ನು ನಾರಾಯಣ ವಾಸುದೇವ ಸಂಕರ್ಷಣ ಪ್ರದ್ಯುಮ್ನಾನಿರುದ್ಧ ನಾಮಕಗಳಾದ ಐದುರೂಪಗಳಿಂದ ಸಮರ್ಥನಾದ ಶ್ರೀ ಹರಿಯು ಆಯಾನಾಮಗಳಿಂದ ಅಲ್ಲಲ್ಲಿದ್ದು ಅವುಗಳನ್ನು ಕಾರ್ಯಸಮರ್ಥಗಳನ್ನಾಗಿ ಮಾಡುತ್ತಾನೆ. ಈ ಪ್ರಕಾರವಾಗಿ ಗುಣಪರಿಪೂರ್ಣನಾದ ವೇದದರ್ಶಿಯಾದ ಶ್ರೀ ಹರಿಯು ಹೇಳಿದನು. ಎಂದು ತತ್ವಸಂಹಿತೆಯಲ್ಲಿ ಹೇಳಿಯದೆ. ಆತ್ಮ ಎಂದರೆ ಅಹಂಕಾರತತ್ವವು. ॥ ೧೮ ॥

ಮಂ ॥ ಓಮಿತಿ ಬ್ರಹ್ಮ । ಓಮಿತೀದꣳಸರ್ವಂ । ಓಮಿತ್ಯೇತದನುಕೃತಿ ಹ ಸ್ಮ ವಾ ಅಪ್ಯೋ ಶ್ರಾವಯೇತ್ಯಾಶ್ರಾವಯಂತಿ । ಓಮಿತಿ ಸಾಮಾನಿ ಗಾಯಂತಿ । ಓꣳಶೋಮಿತಿ ಶಸ್ತ್ರಾಣಿ ಶꣳಸಂತಿ । ಓಮಿತ್ಯಧ್ವರ್ಯುಃ ಪ್ರತಿಗರಂ ಪ್ರತಿಗೃಣಾತಿ । ಓಮಿತಿ ಬ್ರಹ್ಮಾ ಪ್ರಸೌತಿ । ಓಮಿತ್ಯಗ್ನಿಹೋತ್ರಮನುಜಾನಾತಿ । ಓಮಿತಿ ಬ್ರಾಹ್ಮಣಃ ಪ್ರವಕ್ಷ್ಯನ್ನಾಹ ಬ್ರಹ್ಮೋಪಾಪ್ನವಾನೀತಿ । ಬ್ರಹ್ಮೈವೋಪಾಪ್ನೋತಿ ॥ ೧೯ ॥

ಅ॥ ಬ್ರಹ್ಮ=ಮೂಲರೂಪವು, ಓಮಿತಿ=ಓಂಕಾರವಾಚ್ಯವು, ಇದಂ ಸರ್ವಂ=ಮತ್ಸ್ಯಾದಿ ಸರ್ವ ಅವತಾರ ರೂಪವು, ಓಮಿತಿ=ಓಂಕಾರವಾಚ್ಯವು, ಓ=ಪರಮಾತ್ಮನೇ, ಶ್ರಾವಯ=ಮೂಲರೂಪವನ್ನು ಕೇಳಿಸು, ಇತಿ=ಹೀಗೆ, ಆಶ್ರಾವಯಂತಿ=(ಅಧ್ವರ್ಯುಗಳು) ಘಟ್ಟಿಯಾಗಿ ಉಚ್ಚರಿಸುತ್ತಾರೆ, ('ಓ'ಎಂಬುದು) ಓಮಿತ್ಯೇತದನುಕೃತಿ='ಓಂ' ಎಂಬ ಅಕ್ಷರ ಸಮಾನವು, ಹ ಸ್ಮವೈ=ಪ್ರಸಿದ್ಧವು (ಉದ್ಗಾತೃಗಳು), ಓಂಇತಿ=ವಿಷ್ಣುವನ್ನುದ್ದೇಶಿಸಿ, ಸಾಮಾನಿ=ಸಾಮಗಳನ್ನು, ಗಾಯಂತಿ=ಗಾನಮಾಡುತ್ತಾರೆ (ಹೋತೃಗಳು), ಓಂ=ಅಧಿಕೋಚ್ಚನಾದ, ಶ=ಸುಖರೂಪನಾದ ವಿಷ್ಣುವೇ, ಅವ=ರಕ್ಷಿಸು, ಇತಿ=ಹೀಗೆ ಹೇಳಿ, ಶಸ್ತ್ರಾಣಿ='ಓಂ ಶೋಂಶಾವ'ಎಂಬ ಮಂತ್ರ ವಿಶೇಷಗಳನ್ನು, ಶಂಸಂತಿ=ಪಠನೆಮಾಡುತ್ತಾರೆ, ಅಧ್ವರ್ಯುಃ=ಅಧ್ವರ್ಯುವು, ಓಮಿತಿ=ವಿಷ್ಣುವನ್ನುದ್ದೇಶಿಸಿ, ಪ್ರತಿಗರಂ='ಓಥಾಮೋದೇವ' ಎಂಬ ಪ್ರತಿಗರ ಮಂತ್ರವನ್ನು, ಪ್ರತಿಗೃಣಾತಿ=ಉಚ್ಚರಿಸುತ್ತಾನೆ.

ಓಮಿತಿ=ವಿಷ್ಣುವನ್ನುದ್ದೇಶಿಸಿಕೊಂಡು, ಬ್ರಹ್ಮಾ=ಬ್ರಹ್ಮನೆಂಬ ಋತ್ವಿಕ್ಕು, ಪ್ರಸೌತಿ=ಸೋಮಲತೆಯನ್ನು ಹಿಂಡುತ್ತಾನೆ, ಓಮಿತಿ='ಓಂ' ಎಂತ, ಅಗ್ನಿಹೋತ್ರಂ=ಅಗ್ನಿಹೋತ್ರವನ್ನು ಮಾಡುವ ವಿಷಯದಲ್ಲಿ, ಅನುಜಾನಾತಿ=ಅನುಜ್ಞೆಮಾಡುತ್ತಾನೆ, ಬ್ರಾಹ್ಮಣಃ=ಬ್ರಾಹ್ಮಣನು, ಪ್ರವಕ್ಷ್ಯನ್=ಅಧ್ಯಯನಾದಿಗಳನ್ನು ಮಾಡುತ್ತಾ, ಬ್ರಹ್ಮ=ವಿಷ್ಣುವನ್ನು, ಉಪಾಪ್ನವಾನಿ=ಹೊಂದುತ್ತೇನೆ, ಇತಿ=ಈ ಅಭಿಪ್ರಾಯದಿಂದ, ಓಮಿತಿ='ಓಂ' ಎಂತ, ಆಹ=ಹೇಳಿದನು, ಬ್ರಹ್ಮೈವ=ಬ್ರಹ್ಮನನ್ನೇ, ಉಪಾಪ್ನೋತಿ=ಹೊಂದುತ್ತಾನೆ.

ಭಾ ॥(*a*) ಓನ್ನಾಮಾ ಭಗವಾನ್ ವಿಷ್ಣುಃ ಅಧಿಕೋಚ್ಚಗುಣತ್ವತಃ ।
ಯದ್ಯದ್ರೂಪಂ ಭಗವತಃ ತದಿದಂ ಸರ್ವಮೇವ ಚ ॥
ಓಮೇವಾಧಿಕಪೂರ್ಣತ್ವಾತ್ತಸ್ಮಾದ್ಯಜ್ಞೇಷು ಚರ್ತ್ವಿಜಃ ।
ಓಮಿತ್ಯೇವ ಸ್ವಕರ್ಮಾಣಿ ಕುರ್ವಂತ್ಯುದ್ದಿಶ್ಯ ಕೇಶವಂ ॥

(*b*) ಅಧಿಕೋಚ್ಚ ಶೃಣುಷ್ವೇತಿ ಹರಿಮಧ್ವರ್ಯುರಾಹ ಹಿ ।
ಅಧಿಕೋಚ್ಚ ಮಹಾಧಾಮಾ ಸೂಚ್ಚದೇವೇತಿಚಾದರಾತ್ ।
ಪ್ರತಿಪ್ರತಿಗೃಣಾತ್ಯೇನಂ ಶಂರೂಪಾತ್ತ್ವುಚ್ಚಶಾವನಾ।
ಇತ್ಯಾಹ ಹೋತಾ ಶಸ್ತ್ರೇಷು ತಥೈವಾನ್ಯೇಽಪಿ ಚರ್ತ್ವಿಜಃ ॥

(*c*) ಏವಂ ಸ್ವಾಧ್ಯಾಯ ಕೃಚ್ಚಾಹ ಬ್ರಹ್ಮಪ್ರಾಪ್ತ್ಯರ್ಥಮಂಜಸಾ ।

ಏವಂ ಜಾನಂತ ಏತೇ ತು ಪ್ರಾಪ್ನುವಂತ್ಯೇವ ತತ್ಪರಂ ।
ಇತಿ ಚ ॥ ೧೯ ॥

ಅ ॥ (*a*) ಪೂಜ್ಯನಾದ ಮೂಲರೂಪಿಯು ಬಹಳ ಉತ್ಕೃಷ್ಟ ಗುಣಗಳಿರುವುದರಿಂದ 'ಓಂ' ಎಂತ ಹೆಸರುಳ್ಳವನು. ಅದಲ್ಲದೆ, ಪರಮಾತ್ಮನ ಯಾವ ಯಾವ ರೂಪಗಳಿರುತ್ತಾವೋ ಆ ಮತ್ಸ್ಯಾದಿರೂಪಗಳೆಲ್ಲವೂ ಗುಣಪೂರ್ಣಗಳಾದುದರಿಂದ 'ಓಂ' ಎಂತಲೇ ಹೇಳಲ್ಪಡುತ್ತವೆ. ಆದುದರಿಂದಲೇ ಋತ್ವಿಜರು ಯಾಗಗಳಲ್ಲಿ 'ಓಂ' ಎಂತ ಉಚ್ಚರಿಸಿ ಕೇಶವನನ್ನುದ್ದೇಶಿಸಿ ತಮ್ಮ ತಮ್ಮ ಕರ್ಮಗಳನ್ನು ಮಾಡುತ್ತಾರೆ.

(*b*) 'ಅತ್ಯಂತ ಶ್ರೇಷ್ಠನಾದ ಹೋತೃವಿನಲ್ಲಿದ್ದ ಹರಿಯೇ! ನೀನು ನಿನ್ನ ಮೂಲರೂಪವನ್ನು ತೋರಿಸು' ಎಂದು ಹರಿಯನ್ನು ಪ್ರಾರ್ಥಿಸತಕ್ಕ ಆಶ್ರಾವ ಮಂತ್ರವನ್ನು ಅಧ್ವರ್ಯುವು ಪಠಿಸುತ್ತಾನೆ. ಅತ್ಯುತ್ತಮನೂ 'ಮಹಾತೇಜಸ್ಸುಳ್ಳವನೂ ಬ್ರಹ್ಮಾದಿಗಳಿಂದ ಉತ್ಕೃಷ್ಟನೂ ಆದ ಹರಿಯೇ' ಎಂದರ್ಥ ಉಳ್ಳ ಪ್ರತಿಗರ ಮಂತ್ರವನ್ನು ಹರಿಯನ್ನುದ್ದೇಶಿಸಿ ಅಧ್ವರ್ಯುವು ಆದರದಿಂದ ಪಠಿಸುತ್ತಾನೆ. 'ಸುಖರೂಪನೇ ಅತ್ಯುತ್ಕೃಷ್ಟನೇ ಸುಖಪ್ರದನಾದ ವಿಷ್ಣುವೇ ರಕ್ಷಕನೇ' ಎಂದು ಹೋತೃವು ಶಸ್ತ್ರಮಂತ್ರಗಳಲ್ಲಿ ಹೇಳುತ್ತಾನೆ. ಇದೇ ರೀತ್ಯಾಗಿ ಇತರ ಋತ್ವಿಜರೂ ಹರಿಯನ್ನು ಸ್ತೋತ್ರ ಮಾಡುವರು.

(*c*) ಇವರಂತೆಯೇ ವೇದಾಧ್ಯಯನಾದಿಗಳನ್ನು ಮಾಡತಕ್ಕವರೂ ಬ್ರಹ್ಮನನ್ನು ಹೊಂದಲಿಚ್ಛಿಸಿಕೊಂಡು 'ಓಂ' ಎಂತ ಉಚ್ಚರಿಸಿಕೊಂಡೇ ಆರಂಭಮಾಡುತ್ತಾರೆ. ಆದಕಾರಣ ಹೀಗೆಯೇ ಓಂಕಾರವು ಭಗವದ್ವಾಚಕವೆಂದು ತಿಳಿದು 'ಓಂ' ಎಂದು ಉಚ್ಚರಿಸಿಯೇ ಕರ್ಮವನ್ನು ಮಾಡುವವರು ಆತನನ್ನೇ ಹೊಂದುವರು. ಹೀಗೆಂದೂ ಬ್ರಹ್ಮಸಾರದಲ್ಲಿ ಹೇಳಿಯದೆ. ॥ ೧೯ ॥

**ಮೂಂ ॥ ಋತಂ ಚ ಸ್ವಾಧ್ಯಾಯಪ್ರವಚನೇ ಚ । ಸತ್ಯಂ ಚ ಸ್ವಾಧ್ಯಾಯಪ್ರವಚನೇ ಚ । ತಪಶ್ಚ ಸ್ವಾಧ್ಯಾಯಪ್ರವಚನೇ ಚ । ದಮಶ್ಚ ಸ್ವಾಧ್ಯಾಯಪ್ರವಚನೇ ಚ । ಶಮಶ್ಚ ಸ್ವಾಧ್ಯಾಯಪ್ರವಚನೇ ಚ । ಅಗ್ನಯಶ್ಚ ಸ್ವಾಧ್ಯಾಯಪ್ರವಚನೇ ಚ । ಅಗ್ನಿಹೋತ್ರಂ ಚ ಸ್ವಾಧ್ಯಾಯಪ್ರವಚನೇ ಚ । ಅತಿಥಯಶ್ಚ ಸ್ವಾಧ್ಯಾಯಪ್ರವಚನೇ ಚ । ಮಾನುಷಂ ಚ ಸ್ವಾಧ್ಯಾಯಪ್ರವಚನೇ ಚ । ಪ್ರಜಾ ಚ ಸ್ವಾಧ್ಯಾಯಪ್ರವಚನೇ ಚ । ಪ್ರಜನಶ್ಚ ಸ್ವಾಧ್ಯಾಯಪ್ರವಚನೇ ಚ । ಪ್ರಜಾತಿಶ್ಚ ಸ್ವಾಧ್ಯಾಯಪ್ರವಚನೇ ಚ ॥ ೨೦ ॥**

ಅ ॥ ಋತಂ ಚ=ಯಥಾರ್ಥಜ್ಞಾನವು, ಸ್ವಾಧ್ಯಾಯಪ್ರವಚನೇಚ=ವೇದವನ್ನು ಉಪದೇಶ ತೆಗೆದು ಕೊಳ್ಳುವುದು, ಶಿಷ್ಯರಿಗೆ ಉಪದೇಶಕೊಡುವುದು, (ಈ ಶಬ್ದಕ್ಕೆ ಮೇಲೆಯೂ ಇದೇ ಅರ್ಥವನ್ನು ತಿಳಕೊಳ್ಳತಕ್ಕದ್ದು), ಸತ್ಯಂ=ಪಾರಮಾರ್ಥಿಕವಾದ ನಡೆನುಡಿಗಳು, ತಪಶ್ಚ=ಧ್ಯಾನಾದಿಗಳು, ದಮಶ್ಚ=ಇಂದ್ರಿಯನಿಗ್ರಹವು, ಶಮಶ್ಚ=ದೈವಭಕ್ತಿಯು, ಅಗ್ನ

ಯಶ್ಚ=ಅಗ್ನಿಪೂಜೆಯು, ಅಗ್ನಿಹೋತ್ರಂ ಚ=ಅಗ್ನಿಹೋತ್ರಯಾಗ ಮಾಡೋಣ, ಅತಿಥ ಯಶ್ಚ=ಅತಿಥಿಸತ್ಕಾರವು, ಮಾನುಷಂ ಚ=ಮಾನವಸಾಮಾನ್ಯ ಧರ್ಮವು, ಪ್ರಜಾ ಚ=ಶಿಷ್ಯ ಪುತ್ರಾದಿಗಳ ಪಾಲನೆಯು, ಪ್ರಜನಶ್ಚ=ಸಂತತ್ಯುತ್ಪಾದನವು, ಪ್ರಜಾತಿಶ್ಚ=ಉಪನಯನಾದಿ ಸಂಸ್ಕಾರಗಳಿಂದ ವರ್ಣ ಧರ್ಮಗಳನ್ನು ಕಾಪಾಡುವಿಕೆ, (ಇವೆಲ್ಲವನ್ನೂ ಅವಶ್ಯವಾಗಿ ಮಾಡತಕ್ಕದ್ದು) ॥ ೨೦ ॥

**ಮಂ ॥ ಸತ್ಯಮಿತಿ ಸತ್ಯವಚಾ ರಾಥೀತರಃ । ತಪ ಇತಿ ತಪೋನಿತ್ಯಃ ಪೌರುಶಿಷ್ಟಿಃ । ಸ್ವಾಧ್ಯಾಯಪ್ರವಚನೇ ಏವೇತಿ ನಾಕೋ ಮೌದ್ಗಲ್ಯಃ ॥ ತದ್ಧಿ ತಪಸ್ತದ್ಧಿ ತಪಃ ॥ ೨೧ ॥**

ಅ ॥ ಸತ್ಯವಚಾಃ=ಯಥಾರ್ಥವಾದಿಯಾದ, ರಾಥೀತರಃ=ರಾಥೀತರನೆಂಬ ಋಷಿಯು, ಸತ್ಯಮಿತಿ=ಸತ್ಯವೇ ಶ್ರೇಷ್ಠವೆಂದು ಹೇಳುತ್ತಾನೆ, ತಪೋನಿತ್ಯಃ=ನಿರಂತರವೂ ತಪಸ್ಸಿನಲ್ಲೇ ಆಸಕ್ತನಾದ, ಪೌರುಶಿಷ್ಟಿಃ=ಈ ಹೆಸರಿನ ಋಷಿಯು, ತಪ ಇತಿ=ತಪಸ್ಸೇ ಶ್ರೇಷ್ಠವೆನ್ನುತ್ತಾನೆ, ಮೌದ್ಗಲ್ಯಃ=ಮುದ್ಗಲಪುತ್ರನಾದ, ನಾಕಃ=ನಾಕನೆಂಬ ಋಷಿಯು, ಸ್ವಾಧ್ಯಾಯಪ್ರವಚನೇ ಏವ ಇತಿ=ಸ್ವಾಧ್ಯಾಯಪ್ರವಚನಗಳನ್ನೇ ಶ್ರೇಷ್ಠಗಳನ್ನಾಗಿ ಹೇಳುತ್ತಾನೆ, ತದ್ಧಿ=ಸ್ವಾಧ್ಯಾಯಪ್ರವಚನಗಳೇ, ತಪಃ=ತಪಸ್ಸು.

ಭಾ ॥(*a*) ಋತಂ ಚ ಸ್ವಾಧ್ಯಾಯಪ್ರವಚನೇ ಚ ಕರ್ತವ್ಯಾನಿ ।
ಪ್ರವಚನಂ ವ್ಯಾಖ್ಯಾನಂ । ಯಥಾರ್ಥಜ್ಞಾನಂ ಋತಂ ।
ತತ್ಪೂರ್ವಕಂ ಯಥಾರ್ಥವಚನಂ ಕರಣಂ ಚ ಸತ್ಯಂ ।
"ಋತಂ ಯಥಾರ್ಥವಿಜ್ಞಾನಂ ಸತ್ಯಂ ತತ್ಪೂರ್ವಿಕಾ ಕೃತಿಃ ।
ಧ್ಯಾನಸತ್ಯೇ ಪೂಜ್ಯಪೂಜಾ ತಪ ಇತ್ಯಭಿಧೀಯತೇ ।"
- ಇತಿ ಶಬ್ದನಿರ್ಣಯೇ ॥

(*b*) ಸರ್ವಕರ್ಮಕೃತಿ ಕಾಲೇಷ್ವಪಿ ಸ್ವಾಧ್ಯಾಯಪ್ರವಚನಯೋಃ
ಕರ್ತವ್ಯತ್ವಾತ್ ತಯೋಃ ಸರ್ವತ್ರಾನುಷಂಗಃ ॥
ಮಂತ್ರೋ ಮಂತ್ರಾರ್ಥವಚನಂ ಅನ್ಯಸ್ಯ ಸ್ವಾತ್ಮನೋಽಪಿ ವಾ ।
ಸರ್ವಕರ್ಮಸು ಕರ್ತವ್ಯೌ ಸರ್ವಕರ್ಮಾತ್ಮಕೌ ಯತಃ ।
- ಇತಿ ಕರ್ಮತತ್ವೇ ॥

(*c*) ಆತ್ಮನಶ್ಚೇನ್ಮನಸ್ಯೈವಾರ್ಥವಚನಂ ।
ಮಾನುಷಂ ಮಾನುಷೋ ಧರ್ಮೋ ದೇವಾ ಅಪಿ ಹಿ ಮಾನುಷೇ ।
ಮನುಷ್ಯವತ್ಪ್ರವರ್ತಂತೇ ಸ್ವೈಶ್ವೈಶ್ವರ್ಯಪ್ರಕಾಶಿನಃ ॥ ಇತಿ ಚ ॥

(*d*) ಪ್ರಜಾಯಾ ರಕ್ಷಣಂ ಚೈವ ಪುನಃ ಪ್ರಜನನಂ ತಥಾ ।
ಪ್ರಕೃಷ್ಟಜಾತಿಕರಣಂ ಕರ್ಮಭಿಸ್ತನಯೇ ಪಿತುಃ ॥ ಇತಿ ಚ ॥

(*e*) ಸತ್ಯೇ ತಪಸಿ ವಾ ಚೇಣ್ಣೇ ಸರ್ವಕರ್ಮ ಕೃತಂ ಭವೇತ್ ।
ಸ್ವಾಧ್ಯಾಯೇ ಚ ಪ್ರವಚನೇ ಹ್ಯಂತರ್ಭಾವೋ ವಿಶೇಷತಃ ॥ ಇತಿ ಚ ॥

ಯಂ ಯಂ ಕ್ರತುಮಧೀತೇ ತೇನ ತೇನಾಸ್ಯೇಷ್ಟಂ ಭವತಿ
- ಇತಿಚ ಶ್ರುತಿಃ

(*f*) ಜಪ್ಯೇನೈವ ತು ಸಂಸಿಧ್ಯೇದ್ಬ್ರಾಹ್ಮಣೋ ನಾತ್ರ ಸಂಶಯಃ
ಕುರ್ಯಾದನ್ಯನ್ನವಾ ಕುರ್ಯಾನ್ಮೈತ್ರೋ ಬ್ರಾಹ್ಮಣ ಉಚ್ಯತೇ ।
- ಇತಿ ಭಾರತೇ ॥

(*g*) ಸಮ್ಯಕ್ ಜ್ಞಾತ್ವಾ ತು ಯೋ ವಿಷ್ಣುಂ ವ್ಯಾಖ್ಯಾಯೀತ ಜಪೇತ ಚ।
ನ ತಸ್ಯ ಕಿಂಚಿದಕೃತಂ ಕರ್ತವ್ಯಂ ಮುಚ್ಯತೇ ಚ ಸಃ ।
ಇತಿ ಕರ್ಮತತ್ವೇ ॥ ೨೦—೨೧ ॥

ಅ ॥ (*a*) ಯಥಾರ್ಥಜ್ಞಾನವನ್ನು ಸಂಪಾದಿಸಿಕೊಳ್ಳತಕ್ಕದ್ದು, ಸ್ವಾಧ್ಯಾಯಪ್ರವಚನಾದಿಗಳನ್ನು ಮಾಡತಕ್ಕದ್ದು, ಪ್ರವಚನವೆಂದರೆ ಪಾಠವನ್ನು ಹೇಳುವಿಕೆ, 'ಋತವೆಂದರೆ, ಯಥಾರ್ಥಜ್ಞಾನವು, ಯಥಾರ್ಥಜ್ಞಾನದಿಂದ ಕೂಡಿದ ಆಚರಣೆಯೂ, ಯಥಾರ್ಥ ಮಾತೂ ಇವೆರಡೂ ಸತ್ಯವೆನಿಸುವುವು, ಋತಂ ಅಂದರೆ ಯಥಾರ್ಥವಿಜ್ಞಾನವು, ಸತ್ಯವೆಂದರೆ ತತ್ಪೂರ್ವಕ ಕರಣವು, ಭಗವದ್ಧ್ಯಾನವೂ, ಸತ್ಯವೂ, ಗುರುಪೂಜೆಯೂ, ಈ ಮೂರೂ ತಪಸ್ಸೆಂದು ಹೇಳಲ್ಪಡುತ್ತವೆ. ಹೀಗೆ ಶಬ್ದನಿರ್ಣಯದಲ್ಲಿ ಹೇಳಲ್ಪಟ್ಟಿದೆ.

(*b*) ಸರ್ವಕರ್ಮಗಳನ್ನು ಮಾಡುವಕಾಲಗಳಲ್ಲಿ ಸ್ವಾಧ್ಯಾಯಪ್ರವಚನಗಳು ಕರ್ತವ್ಯಗಳಾದುದರಿಂದ ಎಲ್ಲಾ ಕಡೆಯಲ್ಲೂ ಆವೃತ್ತಿಮಾಡಿದ್ದಾರೆ. 'ವೇದಾಧ್ಯಯನವೂ ವೇದಾರ್ಥಪ್ರವಚನವೂ ಎಲ್ಲಾ ಕರ್ಮಗಳಲ್ಲಿಯೂ ಪ್ರಧಾನವಾದುದರಿಂದ ಇತರರಿಗಾಗಲೀ ತನಗಾಗಲೀ ನಿಖಿಲಕರ್ಮಗಳನ್ನು ಮಾಡುವ ಕಾಲದಲ್ಲಿಯೂ ಅವಶ್ಯವಾಗಿ ಆಚರಣೀಯಗಳಾಗಿವೆ' ಎಂದು ಕರ್ಮತತ್ವದಲ್ಲಿ ಹೇಳಿಯದೆ.

(*c*) ವೇದಾರ್ಥಪ್ರವಚನವು ತನಗಾದರೆ ಮನಸ್ಸಿನಿಂದಲೇ ಯುಕ್ತಿಗಳಿಂದ ಅರ್ಥವನ್ನು ಅನುಸಂಧಾನ ಮಾಡುವಿಕೆ, 'ಮಾನುಷವೆಂದರೆ ಮಾನವಸಾಮಾನ್ಯಧರ್ಮವು, ಅದು ಹೇಗೆಂದರೆ, ದೇವತೆಗಳಾದರೂ ಮನುಷ್ಯರಾಗಿ ಭೂಮಿಯಲ್ಲಿ ಹುಟ್ಟಿದರೆ ಅವರಂತೆಯೇ ಆಚರಿಸುತ್ತಾರೆ, ತಮ್ಮ ದೈವೀಶಕ್ತಿಯನ್ನು ಪ್ರಕಾಶಗೊಳಿಸಲಾರರು ಎಂದೂ ಕರ್ಮತತ್ವದಲ್ಲಿ ಹೇಳಿಯದೆ.

(*d*) 'ಶಿಷ್ಯಪುತ್ರಾದಿ ಪ್ರಜಾಪಾಲನೆಯೂ, (ಧರ್ಮದಿಂದ) ಪ್ರಜೋತ್ಪಾದನೆಯೂ, ತಂದೆಯಾದವನು ಶಿಷ್ಯಪುತ್ರಾದಿಗಳಿಗೆ ಉಪನಯನಾದಿಗಳಿಂದ ಉತ್ಕೃಷ್ಟಜಾತಿಯನ್ನು ಉಂಟುಮಾಡೋಣವು, ಎಂದೂ ಕರ್ಮತತ್ವದಲ್ಲಿ ಹೇಳಿಯದೆ.

(*e*) 'ಸತ್ಯವನ್ನಾದರೂ ತಪಸ್ಸನ್ನಾದರೂ ಆಚರಿಸಿದರೆ ಉಳಿದವು ಅವುಗಳಲ್ಲಿಯೇ ಬಂದು ಹೋಗುವವೆಂದು ಹೇಳಬಹುದು. ಆದರೂ ಸ್ವಾಧ್ಯಾಯಪ್ರವಚನಗಳಲ್ಲಿಯೇ ವಿಶೇಷವಾಗಿ ಸರ್ವಕರ್ಮವೂ ಆಚರಿಸಲ್ಪಡುತ್ತದೆ' ಎಂದೂ ಕರ್ಮತತ್ವದಲ್ಲಿ ಹೇಳಿಯದೆ. 'ಜ್ಞಾನೋತ್ಪಾದಕಗಳಾದ ಯಾವ ಯಾವ ಶಾಸ್ತ್ರವನ್ನು ಅಭ್ಯಾಸಮಾಡಿದರೂ ಕಲಿಸಿದರೂ ಆಯಾ ಅಧ್ಯಯನಾಧ್ಯಾಪನಗಳಿಂದಲೇ ಕರ್ತೃವಿಗೆ ಯಾಗಾದಿ ಕರ್ಮಗಳು ಮಾಡಿದಂತಾಗುತ್ತವೆ' ಎಂದು ಶ್ರುತಿ ಇರುತ್ತದೆ.

(*f*) 'ಬ್ರಾಹ್ಮಣನಾದವನು ತಪ ಆದಿಗಳನ್ನು ಆಚರಿಸಲಿ ಯಾ ಬಿಡಲಿ ಸ್ವಾಧ್ಯಾಯ ಪ್ರವಚನಗಳನ್ನು ಸರಿಯಾಗಿ ಮಾಡುತ್ತಿದ್ದರೆ ಸರ್ವವೂ ಸಿದ್ಧಿಸುತ್ತದೆ. ಅದರಲ್ಲಿ ಸಂದೇಹವಿಲ್ಲ. ಬ್ರಾಹ್ಮಣ

ನೆಂದರೆ ಗಾಯತ್ರೀ ಜಪವನ್ನು ವಿಧಿಪೂರ್ವಕವಾಗಿ ಅಧಿಕಾರವಿದ್ದು ಮಾಡತಕ್ಕವನು' ಎಂದು ಭಾರತದಲ್ಲಿ ಹೇಳಿಯದೆ.

(೪) ಯಾವ ಅಧಿಕಾರಿಯು ವಿಷ್ಣುಸ್ವರೂಪವನ್ನು ತಿಳಿದು ಸ್ವಾಧ್ಯಾಯಪ್ರವಚನೆಗಳನ್ನು ಮಾಡುತ್ತಾನೋ ಆತನು ಯಾವ ತಪಸ್ಸು ಮೊದಲಾದ ಕರ್ಮಗಳನ್ನು ಮಾಡದಿದ್ದರೂ ಮಾಡ ತಕ್ಕುದಿರುವುದಿಲ್ಲ ಆತನು ಸಂಸಾರದಿಂದ ಮುಕ್ತನೂ ಆಗುತ್ತಾನೆ' ಎಂದು ಕರ್ಮತತ್ವದಲ್ಲಿ ಉಕ್ತವಾಗಿಯದೆ. ॥ ೨೦-೨೧ ॥

**ಮಂ ॥ ಅಹಂ ವೃಕ್ಷಸ್ಯ ರೇರಿವ । ಕೀರ್ತಿಃ ಪೃಷ್ಠಂ ಗಿರೇರಿವ । ಊರ್ಧ್ವ ಪವಿತ್ರೋ ವಾಜಿನೀವಸ್ವಮೃತಮಸ್ಮಿ । ದ್ರವಿಣಂ ಸವರ್ಚಸಂ । ಸುಮೇಧಾ ಅಮೃತೋಕ್ಷಿತಃ । ಇತಿ ತ್ರಿಶಂಕೋರ್ವೇದಾನುವಚನಂ ॥ ೨೨ ॥**

ಅ ॥ ಅಹಂ=ನಾನು, ವೃಕ್ಷಸ್ಯ=ಸಂಸಾರ ವೃಕ್ಷವನ್ನು, ರೇರಿವ=ಛೇದಿಸತಕ್ಕವನು, ಕೀರ್ತಿಃ=ಯಶಸ್ಸು, ಗಿರೇಃ=ಪರ್ವತದ, ಪೃಷ್ಠಮಿವ=ಬೆನ್ನಿನಂತೆ, ವಿಸ್ತಾರವಾದುದು. ಊರ್ಧ್ವ ಪವಿತ್ರಃ=ಉತ್ಕೃಷ್ಟನಾದ ಹರಿಯಿಂದ ಪವಿತ್ರೀಕರಿಸಲ್ಪಟ್ಟವನು, ವಾಜಿನೀವಸ್ವಮೃತಂ ವಾಜಿನೀ ವಸು=ವಿಷ್ಣುವಿನಿಂದ, ಅಮೃತಂ=ಪ್ರಾರಬ್ಧಕರ್ಮದಿಂದ ಬಿಡಲ್ಪಟ್ಟವನು, ಸುವರ್ಚಸಂ= ತೇಜೋವಂತನಾದ, ದ್ರವಿಣಂ=ಸುವರ್ಣದಂತೆ ಇರತಕ್ಕವನು, ಸುಮೇಧಾಃ=ಅಭಿವ್ಯಕ್ತವಾದ ಜ್ಞಾನಉಳ್ಳವನು, ಅಮೃತೋಕ್ಷಿತಃ=ವಿಷ್ಣುಸನ್ನಿಧಾನ ವಿಶೇಷಯುಕ್ತನೂ, ಅಸ್ಮಿ=ಆಗಿರುತ್ತೇನೆ, ಇತಿ=ಹೀಗೆ, ತ್ರಿಶಂಕೋಃ=ತ್ರಿಶಂಕುರಾಜನಿಗೆ, ವೇದಾನುವಚನಂ=ವೇದಪ್ರವಚನ ಫಲವು, ನಿರೂಪಿಸಲ್ಪಟ್ಟಿತು.

ಭಾ ॥(*a*) ಸಂಸಾರವೃಕ್ಷಚ್ಛೇತ್ತಾಹಂ ಮತ್ಕೀರ್ತಿಃ ಪರ್ವತೋಪಮಾ ।
ಅತ್ಯುತ್ಕೃಷ್ಟೇನ ಹರಿಣಾ ಪಾವಿತೋಽಸ್ಮಿ ಯತಃ ಸ್ಫುಟಂ ॥

(*b*) ವಾಜಿರೂಪಶ್ಚ ನೇತಾ ಚ ವಾಜಿನೀಃ ಸೂರ್ಯ ಉಚ್ಯತೇ ।
ತತ್ರಸ್ಥೋ ಭಗವಾನ್ ವಿಷ್ಣುಃ ಸಂಪ್ರೋಕ್ತೋ ವಾಜಿನೀವಸುಃ ।
ತೇನಾಮೃತೋಽಸ್ಮಿ ದ್ರವಿಣಂ ನಿತ್ಯಾನಂದಸ್ವರೂಪತಃ ॥

(*c*) ತೇನಾಮೃತೇನ ಸಿಕ್ತೋಽಹಂ ತೇನ ವ್ಯಾಪ್ತೋ ಯತಃ ಸದಾ ।
ಇತ್ಯಾಹ ಮಂತ್ರದೃಕ್ಪೂರ್ವಂ ತ್ರಿಶಂಕುರ್ಮಾನವೋ ನೃಪಃ ॥
ಇತಿ ಯಜುರ್ವಿವೇಕೇ ॥

ಅ ॥(*a*) ವೃಕ್ಷದಂತಿರುವ ಲಿಂಗದೇಹವನ್ನು ನಾನು ಛೇದಿಸಿಕೊಂಡವನು. ಪರ್ವತ ಪೃಷ್ಠಭಾಗದಂತೆ ನನ್ನ ಕೀರ್ತಿಯು ಎಲ್ಲೆಡೆಯೂ ಹಬ್ಬಿದೆ. ಏಕೆಂದರೆ ಅತ್ಯುತ್ತಮನಾದ ಹರಿ ಯಿಂದ ನಾನು ಪವಿತ್ರೀಕರಿಸಲ್ಪಟ್ಟಿದ್ದೇನೆ.

(*b*) ಅಶ್ವರೂಪನಾಗಿ ಒಯ್ಯುವ ಪ್ರಯುಕ್ತ ಸೂರ್ಯನು ವಾಜಿನೀ ಎನ್ನಿಸಿಕೊಳ್ಳು ತ್ತಾನೆ. ಅಲ್ಲಿ ನಿಯಾಮಕನಾಗಿದ್ದ ಪೂಜ್ಯನಾದ ವಿಷ್ಣುವು ವಾಜಿನೀವಸುವೆಂದು ಹೇಳಲ್ಪಟ್ಟಿ ದ್ದಾನೆ. ಆತನಿಂದ ನಾನು ಪ್ರಾರಬ್ಧಕರ್ಮದಿಂದ ಮುಕ್ತನಾಗಿದ್ದೇನೆ. ನಿತ್ಯಾನಂದಸ್ವರೂಪನಾ ದುದರಿಂದ ಸ್ವರ್ಣದಂತೆ ಕಾಂತಿಯುಕ್ತನಾಗಿದ್ದೇನೆ.

(೮) ನಾಶಶೂನ್ಯನಾದ ವಿಷ್ಣುವಿನಿಂದ ಸಿಕ್ತನಾಗಿದ್ದೇನೆ. ಅಂದರೆ ಯಾವಾಗಲೂ ಆತನ ಸನ್ನಿಧಾನವಿಶೇಷಯುಕ್ತನಾಗಿದ್ದೇನೆ. ಹೀಗೆ ತ್ರಿಶಂಕುವೆಂಬ ಮಂತ್ರದರ್ಶಿಯಾದ ನರ ರಾಜನು ಪೂರ್ವದಲ್ಲಿ ಹೇಳಿದ್ದನು. ಎಂದು ಯಜುರ್ವೇಕವೆಂಬ ಸ್ಮೃತಿಯಲ್ಲುಕ್ತವಾಗಿದೆ. ॥ ೨೨ ॥

ಮಂ ॥ ವೇದಮನೂಚ್ಯಾಚಾರ್ಯೋಽನ್ತೇವಾಸಿನಮನುಶಾಸ್ತಿ । ಸತ್ಯಂ ವದ। ಧರ್ಮಂ ಚರ। ಸ್ವಾಧ್ಯಾಯಾನ್ಮಾಪ್ರಮದಃ। ಆಚಾರ್ಯಾಯ ಪ್ರಿಯಂ ಧನಮಾಹೃತ್ಯ ಪ್ರಜಾತಂತುಂ ಮಾ ವ್ಯವಚ್ಛೇತ್ಸೀಃ। ಸತ್ಯಾನ್ನ ಪ್ರಮದಿತವ್ಯಂ। ಧರ್ಮಾನ್ನ ಪ್ರಮದಿತವ್ಯಂ । ಕುಶಲಾನ್ನ ಪ್ರಮದಿತವ್ಯಂ । ಭೂತ್ಯೈ ನ ಪ್ರಮದಿತವ್ಯಂ। ಸ್ವಾಧ್ಯಾಯಪ್ರವಚನಾಭ್ಯಾಂ ನ ಪ್ರಮದಿತವ್ಯಂ । ದೇವಪಿತೃಕಾರ್ಯಾಭ್ಯಾಂ ನ ಪ್ರಮದಿತವ್ಯಂ । ಮಾತೃದೇವೋ ಭವ। ಪಿತೃದೇವೋ ಭವ । ಆಚಾರ್ಯದೇವೋ ಭವ । ಅತಿಥಿದೇವೋ ಭವ । ಯಾನ್ಯನವದ್ಯಾನಿ ಕರ್ಮಾಣಿ । ತಾನಿ ಸೇವಿತವ್ಯಾನಿ। ನೋ ಇತರಾಣಿ। ಯಾನ್ಯಸ್ಮಾಕꣳಸುಚರಿತಾನಿ। ತಾನಿ ತ್ವಯೋಪಾಸ್ಯಾನಿ। ನೋ ಇತರಾಣಿ। ಯೇ ಕೇ ಚಾಸ್ಮಚ್ಛ್ರೇಯಾꣳಸೋ ಬ್ರಾಹ್ಮಣಾಃ। ತೇಷಾಂ ತ್ವಯಾಸನೇನ ಪ್ರಶ್ವಸಿತವ್ಯಂ। ಶ್ರದ್ಧಯಾ ದೇಯಂ । ಅಶ್ರದ್ಧಯಾ ದೇಯಂ। ಶ್ರಿಯಾ ದೇಯಂ। ಹ್ರಿಯಾ ದೇಯಂ। ಭಿಯಾ ದೇಯಂ। ಸಂವಿದಾ ದೇಯಂ ॥೨೩॥

ಅ ॥ ವೇದಂ=ಶ್ರುತಿಯನ್ನು, ಅನೂಚ್ಯ=ಪ್ರವಚನ ಮಾಡಿ, ಆಚಾರ್ಯಃ=ಗುರುವು, ಅಂತೇವಾಸಿನಂ=ಶಿಷ್ಯನನ್ನು, ಅನುಶಾಸ್ತಿ=ಶಿಕ್ಷಿಸುತ್ತಾನೆ, ಸತ್ಯಂ=ಸತ್ಯವಚನವನ್ನೇ, ವದ=ಹೇಳು, ಧರ್ಮಂ=ಧರ್ಮವನ್ನು, ಚರ=ಮಾಡು, ಸ್ವಾಧ್ಯಾಯಾತ್=ಈಗ ಅಭ್ಯಾಸ ಮಾಡಿದ ವೇದಾದಿ ಶಾಸ್ತ್ರದಿಂದ, ಮಾ ಪ್ರಮದಃ=ಪ್ರಮಾದಗೊಳ್ಳಬೇಡ, ಆಚಾರ್ಯಾಯ=ಗುರುಗಳಿಗೆ, ಪ್ರಿಯಂ=ಇಷ್ಟವಾದ, ಧನಂ=ವಸ್ತುವನ್ನು, ಆಹೃತ್ಯ=ಕಾಣಿಕೆಯಾಗಿ ಕೊಟ್ಟು, ಪ್ರಜಾತಂತುಂ =ಪ್ರಜಾಪರಂಪರೆಯನ್ನು, ಮಾ ವ್ಯವಚ್ಛೇತ್ಸೀಃ=ಹಾಳುಮಾಡಿಕೊಳ್ಳಬೇಡ, (ಅಂದರೆ ಗುರು ಕಾಣಿಕೆಯನ್ನರ್ಪಿಸಿ ಅವರ ಅನುಜ್ಞೆಯಿಂದ ವಿವಾಹವನ್ನು ಮಾಡಿಕೊಳ್ಳು ಎಂದರ್ಥ) ಸತ್ಯಾತ್=ಸತ್ಯವನ್ನು, ನಪ್ರಮದಿತವ್ಯಂ=ಮರೆಯಬಾರದು, ಕುಶಲಾತ್=ಶ್ರೇಯಸ್ಕರವಾದ ಉದ್ಯೋಗಗಳನ್ನು, ಭೂತ್ಯೈ=ಐಶ್ವರ್ಯಕ್ಕೋಸ್ಕರ, ನಪ್ರಮದಿತವ್ಯಂ=ಧರ್ಮವನ್ನು ಮರೆಯಬೇಡ, ಸ್ವಾಧ್ಯಾಯಪ್ರವಚನಾಭ್ಯಾಂ ನ ಪ್ರಮದಿತವ್ಯಂ=ಸ್ವಾಧ್ಯಾಯಪ್ರವಚನಗಳನ್ನು

ಮರೆಯಬಾರದು, ದೇವಪಿತೃಕಾರ್ಯಾಭ್ಯಾಂ ನಪ್ರಮದಿತವ್ಯಂ=ದೇವತೆಗಳನ್ನೂ ಪಿತೃಗಳನ್ನೂ
ಉದ್ದೇಶಿಸಿ ಮಾಡತಕ್ಕ ಕಾರ್ಯಗಳನ್ನು ಮರೆಯಬೇಡ, ಮಾತೃದೇವಃ=ತಾಯಿಯನ್ನು ದೇವ
ರೆಂದು ತಿಳಿಯತಕ್ಕವನು, ಭವ=ಆಗು, ಪಿತೃದೇವಃ=ತಂದೆಯನ್ನು ದೇವರಂತೆ ಪೂಜಿಸುವ
ವನು, ಭವ=ಆಗು, ಆಚಾರ್ಯದೇವಃ=ಗುರುಗಳನ್ನು ದೇವರಂತೆ ಪೂಜಿಸುವವನು, ಭವ=
ಆಗು, ಅಥಿತಿ ದೇವಃ=ಅತಿಥಿಪೂಜಕನು, ಭವ=ಆಗು, ಯಾನಿ=ಯಾವುಗಳು ಅನವದ್ಯಾನಿ=
ಅನಿಂದಿತಗಳಾದ, ಕರ್ಮಾಣಿ=ಕರ್ಮಗಳೋ, ತಾನಿ=ಅವುಗಳೇ, ಸೇವಿತವ್ಯಾನಿ=ಮಾಡಕ್ಕವು
ಗಳು, ಇತರಾಣಿ=ತದಿತರಕರ್ಮಗಳು, ನೋ=ಮಾಡತಕ್ಕವುಗಳಲ್ಲ. ಯಾನಿ=ಯಾವುಗಳು,
ಅಸ್ಮಾಕಂ=ನಮಗೆ, ಸುಚರಿತಾನಿ=ಶೋಭನಾಚಾರಗಳೋ, ತಾನಿ=ಅವುಗಳೇ, ತ್ವಯಾ=
ನಿನ್ನಿಂದ, ಉಪಾಸ್ಯಾನಿ=ಮಾಡತಕ್ಕವುಗಳು, ಇತರಾಣಿ=ಇತರ ಕರ್ಮಗಳು, ನೋ=ಮಾಡ
ಲರ್ಹಗಳಲ್ಲ, ಯೇ ಕೇ ಚ=ಯಾವ, ಬ್ರಾಹ್ಮಣಾಃ=ಬ್ರಹ್ಮಜ್ಞಾನಿಗಳು, ಅಸ್ಮಚ್ಛ್ರೇಯಾಂಸಃ=
ನಮ್ಮಿಂದ ಶ್ರೇಷ್ಠರಿದ್ದಾರೋ, ತೇಷಾಂ=ಅವರಿಗೆ, ತ್ವಯಾ=ನಿನ್ನಿಂದ, ಆಸನೇನ=ಆಸನಾದ್ಯು
ಪಚಾರದಿಂದ, ಪ್ರಶ್ವಸಿತವ್ಯಂ=ಸತ್ಕರಿಸತಕ್ಕದ್ದು, ಶ್ರದ್ಧಯಾ=ಆಸ್ತಿಕ್ಯಬುದ್ಧಿಯಿಂದ, ದೇಯಂ=
ಕೊಡತಕ್ಕದ್ದು, ಅಶ್ರದ್ಧಯಾ=ಅವಿಶ್ವಾಸದಿಂದಲಾದರೂ, ದೇಯಂ=ಕೊಡತಕ್ಕದ್ದೇ, ಶ್ರಿಯಾ=
ಪ್ರಸನ್ನತೆಯಿಂದ, ದೇಯಂ=ಕೊಡತಕ್ಕದ್ದು, ಹ್ರಿಯಾ=ಲಜ್ಜೆಯಿಂದಲಾದರೂ, ದೇಯಂ=
ಕೊಡತಕ್ಕದ್ದು, ಭಿಯಾ=ಭೀತಿಯಿಂದಲಾದರೂ, ದೇಯಂ=ಕೊಡತಕ್ಕದ್ದು, ಸಂವಿದಾ=ಪಾತ್ರಾ
ಪಾತ್ರವಿಚಾರದಿಂದ, ದೇಯಂ=ಕೊಡತಕ್ಕದ್ದು. ॥ ೨೩ ॥

ವಾಂ ॥ ಅಥ ಯದಿ ತೇ ಕರ್ಮವಿಚಿಕಿತ್ಸಾ ವಾ ವೃತ್ತವಿಚಿಕಿತ್ಸಾ ವಾ
ಸ್ಯಾತ್ । ಯೇ ತತ್ರ ಬ್ರಾಹ್ಮಣಾಃ ಸಮ್ಮರ್ಶಿನಃ । ಯುಕ್ತಾ ಆಯುಕ್ತಾಃ ।
ಅಲೂಕ್ಷಾ ಧರ್ಮಕಾಮಾಃ ಸ್ಯುಃ । ಯಥಾ ತೇ ತತ್ರ ವರ್ತೇರನ್ ।
ತಥಾ ತತ್ರ ವರ್ತೇಥಾಃ । ಅಥಾಭ್ಯಾಖ್ಯಾತೇಷು । ಯೇ ತತ್ರ
ಬ್ರಾಹ್ಮಣಾಃ ಸಮ್ಮರ್ಶಿನಃ । ಯುಕ್ತಾ ಆಯುಕ್ತಾಃ । ಅಲೂಕ್ಷಾ
ಧರ್ಮಕಾಮಾಃ ಸ್ಯುಃ । ಯಥಾ ತೇ ತೇಷು ವರ್ತೇರನ್ । ತಥಾ
ತೇಷು ವರ್ತೇಥಾಃ । ಏಷ ಆದೇಶಃ । ಏಷ ಉಪದೇಶಃ । ಏಷಾ
ವೇದೋಪನಿಷತ್ । ಏತದನುಶಾಸನಂ । ಏವಮುಪಾಸಿತವ್ಯಂ ।
ಏವಮು ಚೈತದುಪಾಸ್ಯಂ । ಶನ್ನೋ ಮಿತ್ರಃ ಶಂ ವರುಣಃ । ಶನ್ನೋ
ಭವತ್ವರ್ಯಮಾ । ಶನ್ನ ಇಂದ್ರೋ ಬೃಹಸ್ಪತಿಃ । ಶನ್ನೋ ವಿಷ್ಣುರುರು
ಕ್ರಮಃ । ನಮೋ ಬ್ರಹ್ಮಣೇ । ನಮಸ್ತೇ ವಾಯೋ । ತ್ವಮೇವ
ಪ್ರತ್ಯಕ್ಷಂ ಬ್ರಹ್ಮಾಸಿ । ತ್ವಾಮೇವ ಪ್ರತ್ಯಕ್ಷಂ ಬ್ರಹ್ಮಾವಾದಿಷಂ । ಋತ

ಮವಾದಿಷಂ । ಸತ್ಯಮವಾದಿಷಂ । ತನ್ಮಾಮಾವೀತ್ । ತದ್ವಕ್ತಾರಮಾವೀತ್ । ಆವೀನ್ಮಾಂ । ಆವೀದ್ವಕ್ತಾರಂ । ಓಂ ಶಾಂತಿಃ ಶಾಂತಿಃ ಶಾಂತಿಃ ॥ ೨೪ ॥

ಅ ॥ ಅಥ=ಹಾಗೆಯೇ, ತೇ=ನಿನಗೆ, ಕರ್ಮವಿಚಿಕಿತ್ಸಾ, ಕರ್ಮ=ಯಜ್ಞಾದಿ ಕರ್ಮಗಳಲ್ಲಿ, ವಿಚಿಕಿತ್ಸಾವಾ=ಸಂಶಯವು, ವೃತ್ತಚಿಕಿತ್ಸಾವಾ=ಆಚಾರ ವಿಷಯಗಳಲ್ಲಿ ಸಂದೇಹವು, ಸ್ಯಾತ್ ಯದಿ=ಉಂಟಾದರೆ, ಸಮ್ಮರ್ಶಿನಃ=ವಿಚಾರಶೀಲರಾದ, ಯುಕ್ತಾಃ=ಯೋಗಯುಕ್ತರಾದ, ಆಯುಕ್ತಾಃ=ಸ್ವಧರ್ಮಾಚರಣೆಯಲ್ಲಿ ಆಗ್ರಹಯುಕ್ತರಾದ, ಅಲೂಕ್ಷಾಃ=ನಿಗರ್ವಿಗಳಾದ, ಧರ್ಮಕಾಮಾಃ=ಧರ್ಮಶ್ರದ್ಧಾಳುಗಳಾದ, ಯೇ=ಯಾವ, ಬ್ರಾಹ್ಮಣಾಃ=ಬ್ರಹ್ಮಜ್ಞಾನಿಗಳು, ತತ್ರ=ಆಯಾಸ್ಥಳದಲ್ಲಿ, ಸ್ಯುಃ=ಇರುತ್ತಾರೋ, ತೇ=ಅಂತಹ ಮಹಾತ್ಮರು, ತತ್ರ=(ನೀನು ಸಂಶಯಗೊಂಡ ಕರ್ಮವೃತ್ತಗಳಲ್ಲಿ, ಯಥಾ=ಹೇಗೆ, ವರ್ತೇರನ್=ಇರುತ್ತಾರೋ, ತಥಾ=ಹಾಗೆಯೇ, ತತ್ರ=ಆ ವಿಷಯಗಳಲ್ಲಿ, ವರ್ತೇಥಾಃ=ಇರು. ಅಥ=ಅಲ್ಲದೆ, ಅಭ್ಯಾಖ್ಯಾತೇಷು=ನಿಂದಿತನಾದ ಅಧರ್ಮ ವಿಷಯದಲ್ಲಿ, (ಸಂದೇಹ ಉಂಟಾದರೆ) ಯೇ ತತ್ರ ಬ್ರಾಹ್ಮಣಾಃ ಸಮ್ಮರ್ಶಿನಃ ಯುಕ್ತಾ ಅಯುಕ್ತಾಃ ಅಲೂಕ್ಷಾ ಧರ್ಮಕಾಮಾಸ್ಯುಃ ಯಥಾ ತೇ ತೇಷು ವರ್ತೇರನ್ । ತಥಾ ತೇಷು ವರ್ತೇಥಾಃ । (ಈ ವಾಕ್ಯಗಳಿಗೆ ಪೂರ್ವೋಕ್ತವಾದ ಅರ್ಥವನ್ನೇ ತಿಳಕೊಳ್ಳಬೇಕು.) ಏಷಃ='ಸತ್ಯಂ ವದ' ಇತ್ಯಾದಿಯು, ಆದೇಶಃ=ಭಗವದಾಜ್ಞೆಯು, ಏಷಃ=ಇದು, ಉಪದೇಶಃ=ಬ್ರಹ್ಮಾದಿ ಪರಂಪರಾ ಪ್ರಾಪ್ತವಾದುದು. ಏಷಾ=ಇದು ವೇದೋಪನಿಷತ್, ವೇದ=ನಿಖಿಲ ವೇದಗಳ, ಉಪನಿಷತ್=ರಹಸ್ಯವು (ಗೋಪ್ಯವಾದ ಪ್ರಮೇಯವು) ಏತತ್=ಇದು, ಅನುಶಾಸನಂ=ಶಿಕ್ಷೆಯು, ಏವಂ=ಹೀಗೆ, ಉಪಾಸಿತವ್ಯಂ=ಅವಶ್ಯಾನುಷ್ಠೇಯವು. ಏವಮುಚ=ಹೀಗೆಯೇ, ಏತತ್=ಇದು, ಉಪಾಸ್ಯಂ=ಅನುಷ್ಠೇಯವು.

'ಶನ್ನೋಮಿತ್ರಃ' ಎಂಬ ವಾಕ್ಯವನ್ನಾರಂಭಿಸಿದ ತ್ವಮೇವ ಪ್ರತ್ಯಕ್ಷಂ ಬ್ರಹ್ಮಾಸಿ ಎಂಬ ವಾಕ್ಯಗಳಿಗೆ ಹಿಂದೆ ಹೇಳಿದ ಅರ್ಥವನ್ನೇ ತಿಳಿಯತಕ್ಕದ್ದು. ತ್ವಾಮೇವ=ನಿನ್ನನ್ನೇ, ಪ್ರತ್ಯಕ್ಷಂ=ಮುಖ್ಯವಾಗಿ ಬ್ರಹ್ಮ=ಬ್ರಹ್ಮಾಧಿಷ್ಠಾನ ಯೋಗ್ಯನನ್ನಾಗಿ, ಅವಾದಿಷಂ=ಹೇಳಿದೆನು. ಇನ್ನು ಮೇಲಿನ ವಾಕ್ಯಗಳಿಗೂ ಹಿಂದಿನ ಅರ್ಥವನ್ನು ಇಟ್ಟುಕೊಳ್ಳಬೇಕು.

ಭಾ ॥(a) ಸಂಹಿತಾಯಾಃ ಪಂಚಾಧಿಕರಣಾಭಿಮಾನಿತ್ವಂ ಪ್ರಾಣಾದಿರೂಪಸ್ಯ ವಾಯೋರಪಿ ಭವತಿ ।

ಪೃಥಿವ್ಯಂತರಿಕ್ಷಮಿತ್ಯುಕ್ತ ಪಾಜ್ಞತ್ವಂ ಚ ।

(b) ಅತಃ ಉಪಕ್ರಮೋಪಸಂಹಾರಯೋಃ ತ್ವಮೇವ ಪ್ರತ್ಯಕ್ಷಂ ಬ್ರಹ್ಮ ವದಿಷ್ಯಾಮಿ ತ್ವಾಮೇವ ಪ್ರತ್ಯಕ್ಷಂ ಬ್ರಹ್ಮಾವಾದಿಷಂ ।

ಇತಿ ಯುಜ್ಯತೇ ॥ ೨೪ ॥

**ಇತಿ ತೈತ್ತಿರೀಯೋಪನಿಷದ್ಭಾಷ್ಯೇ ಶೀಕ್ಷಾವಲ್ಲೀ ಸಂಪೂರ್ಣಾ.**

ಅ ॥(a) ಸಂಹಿತೆಯ ಅಧಿಲೋಕಾದಿ ಐದು ಅಧಿಕರಣಗಳ ಅಭಿಮಾನಿತನವು ಪ್ರಾಣಾಪಾನಾದಿ ಐದು ರೂಪವುಳ್ಳ ವಾಯುದೇವರಿಗೂ ಕೂಡುತ್ತದೆ. "ಪೃಥಿವ್ಯಂತರಿಕ್ಷಂ" ಎಂಬ

ತ್ಯಾದಿಗಳಲ್ಲಿ ಹೇಳಲ್ಪಟ್ಟ (ಮೂರು ಭೂತಪಂಚಕಗಳು ಮತ್ತು ಮೂರು ಆತ್ಮಪಂಚಕಗಳು ಹೀಗೆ) ಪ್ರತಿಯೊಂದು ಪಂಚಕಗಳಿಗೂ ಪ್ರಾಣಾಪಾನಾದಿ ಐದು ರೂಪವುಳ್ಳ ವಾಯುದೇವರು ಅಭಿಮಾನಿಗಳಾಗಿದ್ದಾರೆ. (6) ಆದುದರಿಂದಲೇ ಆದ್ಯಂತ್ಯಗಳಲ್ಲಿ 'ಎಲೈ ವಾಯುವೇ! ನಿನ್ನನ್ನೇ ಪ್ರತ್ಯಕ್ಷಬ್ರಹ್ಮನನ್ನಾಗಿ ಹೇಳುವೆನು' 'ನಿನ್ನನ್ನೇ ಪ್ರತ್ಯಕ್ಷಬ್ರಹ್ಮನನ್ನಾಗಿ ಹೇಳಿದೆನು' ಎಂಬ ಮಾತು ಕೂಡುತ್ತದೆ. ॥ ೨೪ ॥

ಈ ಪ್ರಥಮ ವಲ್ಲಿಯಲ್ಲಿ ಅಧಿಲೋಕಾದಿ ಪಂಚಪ್ರಕರಣಗಳಲ್ಲಿಯೂ ಪೃಥಿವ್ಯಾದಿ ಭೂತ ಆತ್ಮ ಪಂಚಕಗಳಲ್ಲಿಯೂ ಪಂಚಸ್ವರೂಪಿಯಾದ ಹರಿಯೂ ಪಂಚಸ್ವರೂಪಿಯಾದ ಮುಖ್ಯಪ್ರಾಣನೂ ಅಭಿಮಾನಿಗಳಾಗಿದ್ದಾರೆಂದು ತಿಳಿಯತಕ್ಕದ್ದು.

**ತೈತ್ತಿರೀಯೋಪನಿಷದ್ಭಾಷ್ಯದಲ್ಲಿ ಪ್ರಥಮ ವಲ್ಲಿಯು ಸಂಪೂರ್ಣವಾಯಿತು.**

## ॥ ಅಥ ದ್ವಿತೀಯಾ ವಲ್ಲೀ ಪ್ರಾರಭ್ಯತೇ ॥

**ಮಂ ॥ ಓಂ ಸಹ ನಾ ವವತು । ಸಹ ನೌ ಭುನಕ್ತು ಸಹ ವೀರ್ಯಂ**
**ಕರವಾವ ಹೈ । ತೇಜಸ್ವಿನಾವಧೀತಮಸ್ತು ಮಾ ವಿದ್ವಿಷಾವ ಹೈ**
**ಓಂ ಶಾಂತಿಃ ಶಾಂತಿಃ ಶಾಂತಿಃ ॥ ೧ ॥**

ಅ॥ ಸಹ=ಮಿತ್ರಾದಿಗಳು, ನೌ=ಗುರುಶಿಷ್ಯರನ್ನು, ಅವತು=ಪ್ರವೇಶಿಸಲಿ ಅಂದರೆ ನಮ್ಮಲ್ಲಿ ಸನ್ನಿಹಿತರಾಗಲಿ, ನೌ=ನಮ್ಮನ್ನು, ಸಹೈವ=ಒಟ್ಟಿಗೇನೇ, ಭುನಕ್ತು=ಪಾಲಿಸಲಿ. ವೀರ್ಯಂ=ಸಾಮರ್ಥ್ಯವನ್ನು, ಸಹ=ಒಟ್ಟಿಗೇನೇ, ಕರವಾವ ಹೈ=ಮಾಡುವೆವು. ನೌ= ನಮ್ಮಿಂದ, ಅಧೀತಂ=ಕಲಿಯಲ್ಪಟ್ಟದ್ದು, ತೇಜಸ್ವಿ=ಪ್ರಕಾಶಗೊಂಡದ್ದು, ಅಸ್ತು=ಆಗಲಿ. ಮಾ ವಿದ್ವಿಷಾವಹೈ=ನಮ್ಮೊಳಗೆ ಅಂದರೆ ಗುರುಶಿಷ್ಯರಲ್ಲಿ ದ್ವೇಷವುಂಟಾಗದಿರಲಿ; ಓಂ ಶಾಂತಿಃ ಶಾಂತಿಃ ಶಾಂತಿಃ=ಹಿಂದೆ ಹೇಳಿದುದೇ ಅರ್ಥ. ॥ ೧ ॥

**ಮಂ ॥ ಓಂ ಬ್ರಹ್ಮವಿದಾಪ್ನೋತಿ ಪರಂ । ತದೇಷಾಭ್ಯುಕ್ತಾ । ಸತ್ಯಂ ಜ್ಞಾನ**
**ಮನಂತಂ ಬ್ರಹ್ಮ । ಯೋ ವೇದ ನಿಹಿತಂ ಗುಹಾಯಾಂ ಪರಮೇ**
**ವ್ಯೋಮನ್ ಸೋಽಶ್ನುತೇ ಸರ್ವಾನ್ ಕಾಮಾನ್ ಸಹ । ಬ್ರಹ್ಮಣಾ**
**ವಿಪಶ್ಚಿತೇತಿ ॥ ೨ ॥**

ಅ ॥ ಬ್ರಹ್ಮವಿತ್=ಪರಬ್ರಹ್ಮಜ್ಞಾನಿಯು, ಪರಂ=ಪರಬ್ರಹ್ಮನನ್ನು, ಆಪ್ನೋತಿ=ಹೊಂದುತ್ತಾನೆ, ತತ್ ಅಭಿ=ಆ ವಾಕ್ಯದಿಂದುಂಟಾದ ಶಂಕಾತ್ರಯಕ್ಕೆ, (ಅಂದರೆ (೧.) ಬ್ರಹ್ಮನು ಎಂತಹನು? (೨.) ಆತನನ್ನು ತಿಳಿಯುವುದು ಹೇಗೆ? (೩) ಅವನ ಪ್ರಾಪ್ತಿಯು ಎಂತಹುದು?) ಏಷಾ=ಮಂತ್ರವರ್ಣರೂಪವಾದ ಋಕ್ಕು, ಉಕ್ತಾ=ಉತ್ತರವಾಗಿ ಹೇಳಲ್ಪಟ್ಟಿದೆ, ಬ್ರಹ್ಮ=ಪರಬ್ರಹ್ಮವು, ಸತ್ಯಂ=ಜಗತ್ತಿಗೆ ಸೃಷ್ಟ್ಯಾದಿಗಳನ್ನು ಮಾಡತಕ್ಕುದು. ಜ್ಞಾನಂ=ಸಮಸ್ತರಲ್ಲಿದ್ದ ನಿಖಿಲ ಸಾಮಾನ್ಯ ವಿಶೇಷ ವಿಷಯಕ ಜ್ಞಾನರೂಪನು. ಅನಂತಂ=ದೇಶಕಾಲಗುಣಾದಿಗಳಿಂದ ವ್ಯಾಪ್ತನು. ಯಃ=ಯಾವ ಅಧಿಕಾರಿಯು, ಗುಹಾಯಾಂ=ಹೃದಯ ಗುಹೆಯಲ್ಲಿ, ಪರಮೇ=ಉತ್ತಮವಾದ, ವ್ಯೋಮನ್=ಆಕಾಶದಲ್ಲಿ, ನಿಹಿತಂ=ವಿದ್ಯಮಾನವಾದುದನ್ನು, ವೇದ=ತಿಳಿಯುತ್ತಾನೋ, ಸಃ=ಅವನು, ವಿಪಶ್ಚಿತಾ=ಸರ್ವಜ್ಞನಾದ, ಬ್ರಹ್ಮಣಾ=ಪರಬ್ರಹ್ಮನಿಂದ, ಚತುರ್ಮುಖನಿಂದಾಗಲಿ, ಸಹ=ಕೂಡಿಕೊಂಡು, ಸರ್ವಾನ್ ಕಾಮಾನ್=ಸಮಸ್ತವಾದ ಸ್ವಯೋಗ್ಯ ಭೋಗಗಳನ್ನು, ಅಶ್ನುತೇ=ಅನುಭವಿಸುತ್ತಾನೆ. ॥ ೨ ॥

**ಮಂ ॥ ತಸ್ಮಾದ್ವಾ ಏತಸ್ಮಾದಾತ್ಮನ ಆಕಾಶಃ ಸಂಭೂತಃ । ಆಕಾಶಾದ್ವಾಯುಃ । ವಾಯೋರಗ್ನಿಃ । ಅಗ್ನೇರಾಪಃ । ಅದ್ಭ್ಯಃ ಪೃಥಿವೀ । ಪೃಥಿವ್ಯಾ ಓಷಧಯಃ । ಓಷಧೀಭ್ಯೋಽನ್ನಂ । ಅನ್ನಾತ್ಪುರುಷಃ ॥ ೩ ॥**

ಅ ॥ ತಸ್ಮಾತ್ವೈ=ತಿಳಿಯತಕ್ಕವನೆಂದು ಹೇಳಲ್ಪಟ್ಟ, ಏತಸ್ಮಾತ್=ಲಕ್ಷಣಯುಕನಾದ, ಆತ್ಮನಃ=ಪರಮಾತ್ಮನಿಂದ, ಆಕಾಶಃ=ಭೂತಾಕಾಶವೂ ತದಭಿಮಾನಿಯೂ, ಅದರ ಶರೀರವೂ ಇವುಗಳಲ್ಲಿ ಗತನಾದ ಹರಿಯು, (ಹೀಗೆ ಇನ್ನು ಮೇಲಿನ ವಾಯ್ವಾದಿ ಶಬ್ದಗಳಲ್ಲಿ ತಿಳಿಯಬೇಕು.) ಸಂಭೂತಃ=ಉತ್ಪನ್ನವಾಯಿತು. ಆಕಾಶಾತ್=ಆಕಾಶದ್ದೆಸೆಯಿಂದ, ವಾಯುಃ=ಭೂತವಾಯುವು, (ಹುಟ್ಟಿತು.) ವಾಯೋಃ=ವಾಯುವಿನಿಂದ, ಅಗ್ನಿಃ=ಅಗ್ನಿಯು, (ಹುಟ್ಟಿತು.) ಅಗ್ನೇಃ=ಅಗ್ನಿಯಿಂದ, ಆಪಃ=ಜಲವು, (ಹುಟ್ಟಿತು.) ಅದ್ಭ್ಯಃ=ಜಲದಿಂದ, ಪೃಥಿವೀ=ಭೂಮಿಯು, (ಹುಟ್ಟಿತು.) ಪೃಥಿವ್ಯಾಃ=ಭೂಮಿಯಿಂದ, ಓಷಧಯಃ=ವ್ರೀಹ್ಯಾದಿಗಳು, (ಹುಟ್ಟಿದವು.) ಓಷಧೀಭ್ಯಃ=ಓಷಧಿಗಳಿಂದ, ಅನ್ನಂ=ಅನ್ನವು, (ಹುಟ್ಟಿತು.) ಅನ್ನಾತ್=ಅನ್ನದಿಂದ, ಪುರುಷಃ=ದೇಹವೂ, ತದಭಿಮಾನಿ ಜೀವನೂ. ॥ ೩ ॥

**ಮಂ ॥ ಸ ವಾ ಏಷ ಪುರುಷೋಽನ್ನರಸಮಯಃ । ತಸ್ಯೇದಮೇವ ಶಿರಃ । ಅಯಂ ದಕ್ಷಿಣಃ ಪಕ್ಷಃ । ಅಯಮುತ್ತರಃ ಪಕ್ಷಃ । ಅಯಮಾತ್ಮಾ । ಇದಂ ಪುಚ್ಛಂ ಪ್ರತಿಷ್ಠಾ ॥ ೪ ॥**

ಅ ॥ ಸ ವೈ=ನಿಖಿಲ ಭೂತಗಳಿಗೂ ಕಾರಣನಾದ, ಏಷಃ=ಆಕಾಶಾದಿ ಪದಗಳಿಗೆ ಮುಖ್ಯಾರ್ಥಭೂತನಾದ, ಪುರುಷಃ=ಜೀವ ದೇಹದಲ್ಲಿದ್ದ ಪುರುಷನಾಮಕ ಹರಿಯು, ಅನ್ನರಸಮಯಃ=ಅನ್ನವಿಕಾರವಾದ ಶರೀರದಲ್ಲಿದ್ದ ಅನಿರುದ್ಧನು. ತಸ್ಯ=ಆ ಅನಿರುದ್ಧನಿಗೆ, ಇದಮೇವ=ಅನ್ನವಿಕಾರಭೂತವಾದ ಶರೀರದ ಶಿರಸ್ಸೇ, ಶಿರಃ=ಶಿರಸ್ಸು. ಅಯಂ=ಈ ಶರೀರದ ಬಲಭುಜವೇ, ದಕ್ಷಿಣಃ ಪಕ್ಷಃ=ಬಲಭುಜವು. ಅಯಂ=ಈ ಶರೀರದ ಎಡಭುಜವೇ, ಉತ್ತರಃ ಪಕ್ಷಃ=ಎಡಭುಜವು. ಅಯಂ=ಈ ಶರೀರದ ಮಧ್ಯಪ್ರದೇಶವು, ಆತ್ಮಾ=ಮಧ್ಯ ದೇಹವು. ಇದಂ=ಈ ಶರೀರದ ಪಾದವು, ಪುಚ್ಛಂ=ಪುಚ್ಛವೆಂದು ಪ್ರಸಿದ್ಧವಾದ, ಪ್ರತಿಷ್ಠಾ=ಪಾದವು. ॥ ೪ ॥

ಮಂ || ತದಪ್ಯೇಷ ಶ್ಲೋಕೋ ಭವತಿ | ಅನ್ನಾದ್ವೈ ಪ್ರಜಾಃ ಪ್ರಜಾಯಂತೇ | ಯಾಃ ಕಾಶ್ಚ ಪೃಥಿವೀಂಶ್ರಿತಾಃ | ಅಥೋ ಅನ್ನೇನೈವ ಜೀವಂತಿ | ಅಥೈನದಪಿಯಂತ್ಯಂತತಃ | ಅನ್ನಂ ಹಿ ಭೂತಾನಾಂ ಜ್ಯೇಷ್ಠಂ | ತಸ್ಮಾತ್ಸರ್ವೌಷಧಮುಚ್ಯತೇ | ಸರ್ವಂ ವೈ ತೇಽನ್ನಮಾಪ್ನುವಂತಿ | ಯೇಽನ್ನಂ ಬ್ರಹ್ಮೋಪಾಸತೇ | ಅನ್ನಂ ಹಿ ಭೂತಾನಾಂ ಜ್ಯೇಷ್ಠಂ | ತಸ್ಮಾತ್ಸರ್ವೌಷಧಮುಚ್ಯತೇ | ಅನ್ನಾದ್ಭೂತಾನಿ ಜಾಯಂತೇ | ಜಾತಾನ್ಯನ್ನೇನ ವರ್ಧಂತೇ | ಅದ್ಯತೇಽತ್ತಿ ಚ ಭೂತಾನಿ | ತಸ್ಮಾದನ್ನಂ ತದುಚ್ಯತ ಇತಿ || ೫ ||

ಅ|| ತತ್=ಆ ಹಿಂದೆ ಹೇಳಿದ ವಿಷಯದಲ್ಲಿ, ಏಷಃ=ಮೇಲೆ ಹೇಳುವ, ಶ್ಲೋಕೋಽಪಿ=ಮಂತ್ರವು, ಭವತಿ=ಸಮ್ಮತಿಯಾಗಿರುತ್ತದೆ. ಅನ್ನಾದ್ವೈ=ಅನ್ನರಸಮಯನಾಮಕನಾದ ಅನಿರುದ್ಧನಿಂದಲೇ, ಪ್ರಜಾಃ=ಪ್ರಜೆಗಳು, ಪ್ರಜಾಯಂತೇ=ಹುಟ್ಟುತ್ತಾರೆ. ಯಾಃಕಾಶ್ಚ=ಯಾರು ಯಾರು, ಪೃಥಿವೀಂ=ಭೂಮಿಯನ್ನು, ಶ್ರಿತಾಃ=ಆಶ್ರಯಿಸಿದ್ದಾರೋ. ಅಥೋ=ಹುಟ್ಟಿದ ಮೇಲೆ, ಅನ್ನೇನೈವ=ಅನ್ನರಸಮಯನಾಮಕನಾದ ಅನಿರುದ್ಧನಿಂದಲೇ, ಜೀವಂತಿ=ಬದುಕುತ್ತಾರೆ. ಅಥ=ಆ ಮೇಲೆ, ಅಂತತಃ=ಪ್ರಳಯಕಾಲದಲ್ಲಿ, ಏನತ್=ಆ ಅನಿರುದ್ಧನನ್ನೇ, ಅಪಿಯಂತಿ=(ಉದರವನ್ನು) ಪ್ರವೇಶಿಸುತ್ತಾರೆ. ಹಿ=ಯಾವಕಾರಣದಿಂದ, ಅನ್ನಂ=ಅನ್ನರಸಮಯನಾಮಕನಾದ ಅನಿರುದ್ಧನು, ಭೂತಾನಾಂ=ಸಮಸ್ತ ಪ್ರಾಣಿವರ್ಗದಿಂದ, ಜ್ಯೇಷ್ಠಂ=ಶ್ರೇಷ್ಠನೋ, ತಸ್ಮಾತ್=ಆದುದರಿಂದ, ಸರ್ವೌಷಧಂ=ಸರ್ವರಿಗೂ ಸಂಸಾರಭಯನಿವಾರಣೌಷಧನಾಗಿ, ಉಚ್ಯತೇ=ಹೇಳಲ್ಪಡುತ್ತಾನೆ. ಯೇ=ಯಾವ ಅಧಿಕಾರಿಗಳು, ಅನ್ನಂ=ಆ ಅನಿರುದ್ಧನನ್ನು, ಬ್ರಹ್ಮ=ಗುಣಪೂರ್ಣನನ್ನಾಗಿ, ಉಪಾಸತೇ=ಉಪಾಸನಾಮಾಡುತ್ತಾರೋ, ತೇ=ಅವರು, ಸರ್ವಂ=ಪೂರ್ಣವಾದ, ಅನ್ನಂ ವೈ=ಆ ಹರಿಯನ್ನೇ, ಆಪ್ನುವಂತಿ=ಹೊಂದುತ್ತಾರೆ, ಹಿ ಅನ್ನಂ ಭೂತಾನಾಂ ಜ್ಯೇಷ್ಠಂ ತಸ್ಮಾತ್ ಸರ್ವೌಷಧಂ ಉಚ್ಯತೇ=(ಹಿಂದಿನದ್ದೇ ಅರ್ಥ). ಅನ್ನಾತ್=ಆ ಅನಿರುದ್ಧನಿಂದಲೇ, ಭೂತಾನಿ=ಪ್ರಾಣಿಗಳು, ಜಾಯಂತೇ=ಹುಟ್ಟುತ್ತಾವೆ. ಜಾತಾನಿ=ಹುಟ್ಟಿದವುಗಳು, ಅನ್ನೇನ=ಅನಿರುದ್ಧನಿಂದ, ವರ್ಧಂತೇ=ಬೆಳೆಯುತ್ತಾವೆ. ಅದ್ಯತೇ=ಉಪಜೀವಿಸಲ್ಪಡುತ್ತಾನೆ. (ಅಂದರೆ ಸರ್ವಪ್ರಾಣಿಗಳಿಗೂ ಜೀವನಾದಿಗಳನ್ನು ಕೊಡುತ್ತಿದ್ದಾನೆ). ಭೂತಾನಿ=ಪ್ರಾಣಿವರ್ಗವನ್ನು, ಅತ್ತಿ ಚ=ತಿನ್ನುತ್ತಾನೆ. ತಸ್ಮಾತ್=ಆದುದರಿಂದ, ತತ್=ಅವನು, ಅನ್ನಂ=ಅನ್ನನಾಮಕನಾಗಿ, ಉಚ್ಯತೇ=ಹೇಳಲ್ಪಡುತ್ತಾನೆ. ಇತಿ=ಅನ್ನಮಯಪ್ರಕರಣವು ಸಮಾಪ್ತವಾಯಿತು. || ೫ ||

ಮಂ || ತಸ್ಮಾದ್ವಾ ಏತಸ್ಮಾದನ್ನರಸಮಯಾತ್ | ಅನ್ಯೋಂಽತರ ಆತ್ಮಾ ಪ್ರಾಣಮಯಃ | ತೇನೈಷಪೂರ್ಣಃ | ಸ ವಾ ಏಷ ಪುರುಷವಿಧ ಏವ | ತಸ್ಯ ಪುರುಷವಿಧತಾಂ | ಅನ್ವಯಂ ಪುರುಷವಿಧಃ | ತಸ್ಯ ಪ್ರಾಣ ಏವ ಶಿರಃ |

ವ್ಯಾನೋ ದಕ್ಷಿಣಃ ಪಕ್ಷಃ । ಅಪಾನ ಉತ್ತರಃ ಪಕ್ಷಃ । ಆಕಾಶ ಆತ್ಮಾ ಪೃಥಿವೀ ಪುಚ್ಛಂ ಪ್ರತಿಷ್ಠಾ ॥ ೬ ॥

ಅ॥ ತಸ್ಮಾದ್ವೈ=ಆ ಲಕ್ಷಣಯುಕ್ತನಾದ, ಏತಸ್ಮಾತ್=ಈ ಎರಡು ಪ್ರಕರಣದಲ್ಲಿ ಹೇಳಲ್ಪಟ್ಟ, ಅನ್ನರಸಮಯಾತ್=ದೇಹದಲ್ಲಿ ನಿಯಾಮಕನಾಗಿದ್ದ ಅನ್ನರಸಮಯನಾಮಕನಾದ ಅನಿರುದ್ಧನಿಂದ, ಅನ್ಯಃ=ಇತರನಾದ, ಪ್ರಾಣಮಯಃ=ವಾಯುವಿಕಾರವಾದ ಪ್ರಾಣಮಯಕೋಶದಲ್ಲಿದ್ದ, ಆತ್ಮಾ=ನಿಯಾಮಕನಾದ ಪ್ರದ್ಯುಮ್ನನು, ಅಂತರಃ=ಅನಿರುದ್ಧನ ಒಳಗೆ ಇರುವವನು. ತೇನ=ಪ್ರಾಣಮಯಕೋಶದಲ್ಲಿದ್ದ ಪ್ರದ್ಯುಮ್ನನಿಂದ, ಏಷಃ=ಅನ್ನಮಯಕೋಶದಲ್ಲಿದ್ದ ಅನಿರುದ್ಧನು, ಪೂರ್ಣಃ=ನಿಬಿಡವಾಗಿ ವ್ಯಾಪ್ತನಾಗಿದ್ದಾನೆ. ಸ ವೈ ಏಷಃ=ಆ ಪ್ರಾಣಮಯಕೋಶದಲ್ಲಿದ್ದ ಪ್ರದ್ಯುಮ್ನನು, ಪುರುಷವಿಧ ಏವ=ಪುರುಷಾಕಾರನೇ. ತಸ್ಯ=ಆ ಪ್ರದ್ಯುಮ್ನನ, ಪುರುಷವಿಧತಾಂ-ಅನು=ಪುರುಷಾಕಾರವನ್ನನುಸರಿಸಿ, ಅಯಂ=ಈ ಅನ್ನಮಯಕೋಶದಲ್ಲಿದ್ದ ಅನಿರುದ್ಧನು, ಪುರುಷವಿಧಃ=ಪುರುಷಾಕಾರನು. ತಸ್ಯ=ಆ ಪ್ರದ್ಯುಮ್ನನಿಗೆ, ಶಿರಃ=ಶಿರಸ್ಸು, ಪ್ರಾಣ ಏವ=ಪ್ರಾಣನಾಮಕವೇ, ದಕ್ಷಿಣಃ-ಪಕ್ಷಃ=ಬಲಭುಜವು, ವ್ಯಾನಃ=ವ್ಯಾನನಾಮಕವು. ಉತ್ತರಃ-ಪಕ್ಷಃ=ಎಡಭುಜವು, ಅಪಾನಃ=ಅಪಾನನಾಮಕವು, ಆತ್ಮಾ=ಮಧ್ಯದೇಹವು, ಆಕಾಶಃ=ಉದಾನನಾಮಕವು. ಪುಚ್ಛಂ=ಪುಚ್ಛನಾಮಕವಾದ, ಪ್ರತಿಷ್ಠಾ=ಪಾದವು, ಪೃಥಿವೀ=ಸಮಾನನಾಮಕವು. ॥ ೬ ॥

ಮಂ ॥ ತದಪ್ಯೇಷ ಶ್ಲೋಕೋ ಭವತಿ । ಪ್ರಾಣಂ ದೇವಾ ಅನು ಪ್ರಾಣಂತಿ । ಮನುಷ್ಯಾಃ ಪಶವಶ್ಚ ಯೇ । ಪ್ರಾಣೋ ಹಿ ಭೂತಾನಾಮಾಯುಃ । ತಸ್ಮಾತ್ಸರ್ವಾಯುಷಮುಚ್ಯತೇ । ಸರ್ವಮೇವತ ಆಯುರ್ಯಂತಿ । ಯೇ ಪ್ರಾಣಂ ಬ್ರಹ್ಮೋಪಾಸತೇ । ಪ್ರಾಣೋ ಹಿ ಭೂತಾನಾಮಾಯುಃ । ತಸ್ಮಾತ್ಸರ್ವಾಯುಷಮುಚ್ಯತ ಇತಿ । ತಸ್ಯೈಷ ಏವ ಶಾರೀರ ಆತ್ಮಾ । ಯಃ ಪೂರ್ವಸ್ಯ ॥ ೭ ॥

ಅ॥ ತತ್ ಅಪಿ ಏಷ ಶ್ಲೋಕೋ ಭವತಿ= (ಮೇಲಿನದ್ದೇ ಅರ್ಥ). ಯೇ=ಯಾವ, ಮನುಷ್ಯಾಃ=ಮನುಷ್ಯರು, ಪಶವಃ=ಪಶುಗಳು, ದೇವಾಶ್ಚ=ದೇವತೆಗಳೂ (ಇದ್ದಾರೋ ಅವರು), ಪ್ರಾಣಮನು=ಪ್ರಾಣನಾಮಕನಾದ ಪ್ರದ್ಯುಮ್ನನನ್ನನುಸರಿಸಿ, ಪ್ರಾಣಂತಿ=ಪ್ರವರ್ತಿಸುತ್ತಾರೆ. ಹಿ=ಯಾವುದರಿಂದ, ಪ್ರಾಣಃ=ಪ್ರದ್ಯುಮ್ನನು, ಭೂತಾನಾಂ=ನಿಖಿಲಪ್ರಾಣಿಗಳಿಗೂ, ಆಯುಃ=ಆಯುಷ್ಯಪ್ರದನೋ, ತಸ್ಮಾತ್=ಆದುದರಿಂದ, ಸರ್ವಾಯುಷಂ=ಸರ್ವಾಯುಷನೆಂದು, ಉಚ್ಯತೇ=ಹೇಳಲ್ಪಡುತ್ತಾನೆ. ಯೇ=ಯಾರು, ಪ್ರಾಣಂ=ಪ್ರದ್ಯುಮ್ನನನ್ನು, ಬ್ರಹ್ಮ=ಸರ್ವರಿಗೂ ಆಯುಷ್ಯಪ್ರದತ್ವಾದಿಗುಣಗಳಿಂದ ಪೂರ್ಣನನ್ನಾಗಿ, ಉಪಾಸತೇ=ತಿಳಿಯುತ್ತಾರೋ, ತೇ=ಅವರು, ಸರ್ವಮೇವ ಆಯುಃ=ಮೋಕ್ಷವನ್ನೇ, ಯಂತಿ=ಹೊಂದುತ್ತಾರೆ. ಪ್ರಾಣೋ ಹಿ ಭೂತಾನಾಂ ಆಯುಃ ತಸ್ಮಾತ್ ಸರ್ವಾಯುಷಮುಚ್ಯತೇ ಇತಿ=(ಹಿಂದೆ ಹೇಳಿದುದೇ ಅರ್ಥ.) ಪೂರ್ವಸ್ಯ=ಅನ್ನವಿಕಾರಕೋಶಕ್ಕೆ, ಯಃ=ಯಾವ ಅನಿರುದ್ಧನು (ಆತ್ಮನೋ), ತಸ್ಯ=ಅಂತಹ ಅನಿರುದ್ಧನಿಗೆ, ಏಷ ಏವ=ಪ್ರಾಣಮಯ ಕೋಶದಲ್ಲಿದ್ದ ಪ್ರದ್ಯುಮ್ನನು, ಶಾರೀರ ಆತ್ಮಾ=ದೇಹರೂಪ ಆತ್ಮನು. ॥ ೭ ॥

ಮಂ || ತಸ್ಮಾದ್ವಾ ಏತಸ್ಮಾತ್ಪ್ರಾಣಮಯಾತ್ । ಅನ್ಯೋಽಂತರ ಆತ್ಮಾ ಮನೋಮಯಃ । ತೇನೈಷ ಪೂರ್ಣಃ । ಸ ವಾ ಏಷ ಪುರುಷವಿಧ ಏವ । ತಸ್ಯ ಪುರುಷವಿಧತಾಂ । ಅನ್ವಯಂ ಪುರುಷವಿಧಃ । ತಸ್ಯ ಯಜುರೇವ ಶಿರಃ । ಋಗ್ದಕ್ಷಿಣಃ ಪಕ್ಷಃ । ಸಾಮೋತ್ತರಃ ಪಕ್ಷಃ । ಆದೇಶ ಆತ್ಮಾ । ಅಥರ್ವಾಂಗಿರಸಃ ಪುಚ್ಛಂ ಪ್ರತಿಷ್ಠಾ ॥ ೮ ॥

ಅ|| ತಸ್ಮಾದ್ವೈ=ಆ ಲಕ್ಷಣಯುಕ್ತನಾದ, ಏತಸ್ಮಾತ್ ಪ್ರಾಣಮಯಾತ್=ಈ ಪ್ರಾಣಮಯ ಕೋಶದಲ್ಲಿದ್ದ ಪ್ರದ್ಯುಮ್ನನಿಂದ, ಅನ್ಯಃ=ಇತರನಾದ, ಆತ್ಮಾ=ವ್ಯಾಪ್ತನಾದ, ಮನೋಮಯಃ=ಮನೋಮಯ ಕೋಶಗತನಾದ ಸಂಕರ್ಷಣನು, ಅಂತರಃ=ಪ್ರದ್ಯುಮ್ನನ ಅಂತರ್ಗತನು. ತೇನ=ಆ ಸಂಕರ್ಷಣನಿಂದ, ಏಷಃ=ಈ ಪ್ರದ್ಯುಮ್ನನು, ಪೂರ್ಣಃ=ನಿಬಿಡನಾಗಿ ವ್ಯಾಪ್ತನು. ಸ ವೈ=ಆ, ಏಷಃ=ಸಂಕರ್ಷಣನು, ಪುರುಷವಿಧ ಏವ ತಸ್ಯ ಪುರುಷವಿಧತಾಂ ಅನು ಅಯಂ ಪುರುಷವಿಧಃ=(ಹಿಂದಿನದ್ದೇ ಅರ್ಥ). ತಸ್ಯ=ಮನೋಮಯ ಕೋಶದಲ್ಲಿದ್ದ ಸಂಕರ್ಷಣನಿಗೆ, ಶಿರಃ=ಶಿರಸ್ಸು, ಯಜುರೇವ=ಯಜುರ್ನಾಮಕವು. ದಕ್ಷಿಣಃ ಪಕ್ಷಃ=ಬಲಭುಜವು, ಋಕ್=ಋಙ್ನಾಮಕವು. ಉತ್ತರಃ ಪಕ್ಷಃ=ಎಡಭುಜವು, ಸಾಮ=ಸಾಮನಾಮಕವು. ಆತ್ಮಾ=ಮಧ್ಯದೇಹವು, ಆದೇಶಃ=ಪಂಚರಾತ್ರಾಗಮವು. ಪುಚ್ಛಂ=ಪುಚ್ಛವೆನಿಸುವ, ಪ್ರತಿಷ್ಠಾ=ಪಾದವು, ಅಥರ್ವಾಂಗಿರಸಃ=ಅಥರ್ವ ಮತ್ತು ಅಂಗಿರಸನಾಮಕವು. ॥ ೮ ॥

ಮಂ || ತದಪ್ಯೇಷ ಶ್ಲೋಕೋ ಭವತಿ । ಯತೋ ವಾಚೋ ನಿವರ್ತಂತೇ । ಅಪ್ರಾಪ್ಯ ಮನಸಾ ಸಹ । ಆನಂದಂ ಬ್ರಹ್ಮಣೋ ವಿದ್ವಾನ್ । ನ ಬಿಭೇತಿ ಕದಾಚನೇತಿ । ತಸ್ಯೈಷ ಏವ ಶಾರೀರ ಆತ್ಮಾ । ಯಃ ಪೂರ್ವಸ್ಯ ॥ ೯ ॥

ಅ|| ತತ್ ಅಪಿ ಏಷ ಶ್ಲೋಕಃ ಭವತಿ=(ಹಿಂದಿನದ್ದೇ ಅರ್ಥ). ಯತಃ=ಮನೋಮಯನಾಮಕ ಸಂಕರ್ಷಣನಿಂದ, ವಾಚಃ=ವೇದವಚನಗಳು, ಮನಸಾ ಸಹ=ಮನಸ್ಸಿನಿಂದೊಡಗೂಡಿ, ಅಪ್ರಾಪ್ಯ=ಸಂಪೂರ್ಣವಾಗಿ ಪ್ರತಿಪಾದಿಸದೆ, ನಿವರ್ತಂತೇ=ಇರುತ್ತಾವೋ, ಬ್ರಹ್ಮಣಃ=ಅಂತಹ ಮನೋಮಯ ಕೋಶದಲ್ಲಿದ್ದ ಸಂಕರ್ಷಣನಿಗೆ, ಆನಂದಂ=ಆನಂದಸ್ವರೂಪವನ್ನು, ವಿದ್ವಾನ್=ತಿಳಿದವನು, ಕದಾಚನ=ಯಾವಾಗಲೂ, ನ ಬಿಭೇತಿ=ಭಯಪಡುವುದಿಲ್ಲ. ಪೂರ್ವಸ್ಯ=ಅನಿರುದ್ಧನಿಗೆ, ಯಃ=ಯಾವ ಪ್ರದ್ಯುಮ್ನನು (ಆತ್ಮನೋ), ತಸ್ಯ=ಆ ಪ್ರದ್ಯುಮ್ನನಿಗೆ, ಏಷ ಏವ=ಈ ಸಂಕರ್ಷಣನು, ಶಾರೀರಃ ಆತ್ಮಾ=ದೇಹಿಯಾಗಿದ್ದಾನೆ. ॥ ೯ ॥

ಮಂ || ತಸ್ಮಾದ್ವಾ ಏತಸ್ಮಾನ್ಮನೋಮಯಾತ್ । ಅನ್ಯೋಽಂತರ ಆತ್ಮಾ ವಿಜ್ಞಾನಮಯಃ । ತೇನೈಷ ಪೂರ್ಣಃ । ಸ ವಾ ಏಷ ಪುರುಷವಿಧ ಏವ । ತಸ್ಯ ಪುರುಷವಿಧತಾಂ । ಅನ್ವಯಂ ಪುರುಷವಿಧಃ । ತಸ್ಯ ಶ್ರದ್ಧೈವ ಶಿರಃ । ಋತಂ ದಕ್ಷಿಣಃ ಪಕ್ಷಃ । ಸತ್ಯಮುತ್ತರಃ ಪಕ್ಷಃ । ಯೋಗ ಆತ್ಮಾ । ಮಹಃ ಪುಚ್ಛಂ ಪ್ರತಿಷ್ಠಾ ॥ ೧೦ ॥

ಅ|| ತಸ್ಮಾತ್=ಲಕ್ಷಣಯುಕ್ತನಾದ, ಏತಸ್ಮಾತ್=ಈ ದಾವ, ಮನೋಮಯಾತ್=ಸಂಕರ್ಷಣನಿಂದ, ಅನ್ಯಃ=ಇತರನಾದ, ಆತ್ಮಾ=ವ್ಯಾಪ್ತನಾದ, ವಿಜ್ಞಾನಮಯಃ=ವಿಜ್ಞಾನಮಯ ಕೋಶದಲ್ಲಿದ್ದ ವಾಸುದೇವನು, ಅಂತರಃ=ಸಂಕರ್ಷಣಾಂತರ್ಗತನು. ತೇನ=ಆ ವಾಸುದೇವನಿಂದ, ಏಷಃ=ಸಂಕರ್ಷಣನು, ಪೂರ್ಣಃ=ವ್ಯಾಪ್ತನು. ಸ ವಾ ಏಷ ಪುರುಷವಿಧ ಏವ ತಸ್ಯ ಪುರುಷವಿಧತಾಂ ಅನು ಅಯಂ ಪುರುಷವಿಧಃ=(ಹಿಂದಿನದ್ದೇ ಅರ್ಥ.) ತಸ್ಯ=ಆ ವಾಸುದೇವನಿಗೆ, ಶಿರಃ=ಶಿರಸ್ಸು, ಶ್ರದ್ಧೈವ=ಶ್ರದ್ಧಾನಾಮಕವೇ. ದಕ್ಷಿಣಃ ಪಕ್ಷಃ=ಬಲಭುಜವು, ಋತಂ=ಋತನಾಮಕವು. ಉತ್ತರಃ ಪಕ್ಷಃ=ಎಡಭುಜವು, ಸತ್ಯಂ=ಸತ್ಯನಾಮಕವು. ಆತ್ಮಾ=ಮಧ್ಯದೇಹವು, ಯೋಗಃ=ಯೋಗನಾಮಕವು. ಪುಚ್ಛಂ=ಪುಚ್ಛವೆನಿಸುವ, ಪ್ರತಿಷ್ಠಾ=ಪಾದವು, ಮಹಃ=ಮಹನ್ನಾಮಕವು. ॥ ೧೦ ॥

**ಮಂ || ತದಪ್ಯೇಷ ಶ್ಲೋಕೋ ಭವತಿ । ವಿಜ್ಞಾನಂ ಯಜ್ಞಂ ತನುತೇ । ಕರ್ಮಾಣಿ ತನುತೇಽಪಿ ಚ । ವಿಜ್ಞಾನಂ ದೇವಾಃ ಸರ್ವೇ । ಬ್ರಹ್ಮ ಜ್ಯೇಷ್ಠಮುಪಾಸತೇ । ವಿಜ್ಞಾನಂ ಬ್ರಹ್ಮ ಚೇದ್ವೇದ । ತಸ್ಮಾಚ್ಚೇನ್ನ ಪ್ರಮಾದ್ಯತಿ । ಶರೀರೇ ಪಾಪ್ಮನೋ ಹಿತ್ವಾ । ಸರ್ವಾನ್ ಕಾಮಾನ್ ಸಮಶ್ನುತ ಇತಿ । ತಸ್ಯೈಷ ಏವ ಶಾರೀರ ಆತ್ಮಾ । ಯಃ ಪೂರ್ವಸ್ಯ || ೧೧ ||**

ಅ|| ತತ್ ಅಪಿ ಏಷಃ ಶ್ಲೋಕಃ ಭವತಿ=(ಹಿಂದಿನದ್ದೇ ಅರ್ಥ). ವಿಜ್ಞಾನಂ=ವಿಜ್ಞಾನಮಯ ಕೋಶದಲ್ಲಿದ್ದ ವಾಸುದೇವನು, ಯಜ್ಞಂ=ಅಶ್ವಮೇಧಾದಿ ಯಾಗವನ್ನು, ತನುತೇ=ಮಾಡುತ್ತಾನೆ. ಕರ್ಮಾಣ್ಯಪಿ ಚ=ನಿತ್ಯನೈಮಿತ್ತಿಕ ಕರ್ಮಗಳನ್ನು, ತನುತೇ=ಮಾಡುತ್ತಾನೆ. ಸರ್ವೇ ದೇವಾಃ=ಸಮಸ್ತದೇವತೆಗಳೂ, ವಿಜ್ಞಾನಂ=ವಿಜ್ಞಾನಮಯ ಕೋಶದಲ್ಲಿದ್ದ ವಾಸುದೇವನನ್ನು, ಜ್ಯೇಷ್ಠಂ=ಶ್ರೇಷ್ಠನನ್ನಾಗಿಯೂ, ಬ್ರಹ್ಮ=ಗುಣಪೂರ್ಣನನ್ನಾಗಿಯೂ, ಉಪಾಸತೇ=ತಿಳಿಯುತ್ತಾರೆ. ವಿಜ್ಞಾನಂ=ಆ ವಾಸುದೇವನನ್ನು, ಬ್ರಹ್ಮ=ಗುಣಪೂರ್ಣನನ್ನಾಗಿ, ವೇದ ಚೇತ್=ತಿಳಿದುಕೊಂಡ ಪಕ್ಷದಲ್ಲಿಯೂ, ತಸ್ಮಾತ್=ಆ ಜ್ಞಾನದಿಂದ, ನ ಪ್ರಮಾದ್ಯತಿ ಚೇತ್=ವಿಸ್ಮೃತಿಯನ್ನು ಹೊಂದದಿದ್ದ ಪಕ್ಷದಲ್ಲಿ, ಶರೀರೇ=ಶರೀರ ಇರುವಾಗ ಸಂಪಾದಿತಗಳಾದ, ಪಾಪ್ಮನಃ=ಪಾಪಗಳನ್ನು, ಹಿತ್ವಾ=ಬಿಟ್ಟು, ಸರ್ವಾನ್ ಕಾಮಾನ್=ಸ್ವಯೋಗ್ಯ ನಿಖಿಲ ಭೋಗಗಳನ್ನು, ಸಮಶ್ನುತೇ=ಅನುಭವಿಸುತ್ತಾನೆ. ಪೂರ್ವಸ್ಯ=ಪ್ರದ್ಯುಮ್ನನಿಗೆ, ಯಃ=ಯಾವ ಸಂಕರ್ಷಣನು (ಆತ್ಮನೋ), ತಸ್ಯ=ಆ ಮನೋಮಯ ಸಂಕರ್ಷಣನಿಗೆ, ಏಷಃ=ಈ ವಿಜ್ಞಾನಮಯ ಕೋಶಗತನಾದ ವಾಸುದೇವನು, ಶಾರೀರ ಆತ್ಮೈವ=ದೇಹಿಭೂತನು. ॥ ೧೧ ॥

**ಮಂ || ತಸ್ಮಾದ್ವಾ ಏತಸ್ಮಾದ್ವಿಜ್ಞಾನಮಯಾತ್ । ಅನ್ಯೋಽಂತರ ಆತ್ಮಾನಂದಮಯಃ । ತೇನೈಷ ಪೂರ್ಣಃ । ಸ ವಾ ಏಷ ಪುರುಷವಿಧ ಏವ । ತಸ್ಯ ಪುರುಷವಿಧತಾಂ । ಅನ್ವಯಂ ಪುರುಷವಿಧಃ । ತಸ್ಯ ಪ್ರಿಯಮೇವ ಶಿರಃ । ಮೋದೋ ದಕ್ಷಿಣಃ ಪಕ್ಷಃ । ಪ್ರಮೋದ ಉತ್ತರಃ ಪಕ್ಷಃ । ಆನಂದ ಆತ್ಮಾ । ಬ್ರಹ್ಮ**

ಪುಚ್ಛಂ ಪ್ರತಿಷ್ಠಾ ॥ ತದಪ್ಯೇಷ ಶ್ಲೋಕೋ ಭವತಿ । ಅಸನ್ನೇವ ಸ ಭವತಿ ।
ಅಸದ್ಬ್ರಹ್ಮೇತಿ ವೇದ ಚೇತ್ । ಅಸ್ತಿ ಬ್ರಹ್ಮೇತಿ ಚೇದ್ವೇದ । ಸಂತಮೇನಂ
ತತೋ ವಿದುರಿತಿ । ತಸ್ಯೈಷ ಏವ ಶಾರೀರ ಆತ್ಮಾ । ಯಃ ಪೂರ್ವಸ್ಯ ॥೧೨॥

ಅ ॥ ತಸ್ಮಾತ್=ಅದಾವ, ಏತಸ್ಮಾತ್ ವಿಜ್ಞಾನಮಯಾದ್ವೈ=ಈ ವಿಜ್ಞಾನಮಯ ಕೋಶದಲ್ಲಿದ್ದ ವಾಸುದೇವನಿಂದ, ಅನ್ಯಃ=ಇತರನಾದ, ಆತ್ಮಾ=ವ್ಯಾಪ್ತನಾದ, ಆನಂದಮಯಃ= ಆನಂದಮಯ ಕೋಶದಲ್ಲಿದ್ದ ನಾರಾಯಣನು, ಅಂತರಃ=ವಾಸುದೇವಾಂತರ್ಗತನು. ತೇನ= ಆ ನಾರಾಯಣನಿಂದ, ಏಷಃ=ಈ ವಾಸುದೇವನು, ಪೂರ್ಣಃ=ವ್ಯಾಪ್ತನು, ಸ ವಾ ಏಷ ಪುರುಷ ವಿಧ ಏವ ತಸ್ಯ ಪುರುಷವಿಧತಾಂ ಅನು ಅಯಂ ಪುರುಷವಿಧಃ=(ಹಿಂದಿನದ್ದೇ ಅರ್ಥ.) ತಸ್ಯ= ಆ ನಾರಾಯಣನಿಗೆ, ಶಿರಃ=ಶಿರಸ್ಸು, ಪ್ರಿಯಮೇವ=ಪ್ರಿಯನಾಮಕವು. ದಕ್ಷಿಣಃ ಪಕ್ಷಃ=ಬಲ ಭುಜವು, ಮೋದಃ=ಮೋದನಾಮಕವು. ಉತ್ತರಃ ಪಕ್ಷಃ=ಎಡಭುಜವು, ಪ್ರಮೋದಃ= ಪ್ರಮೋದನಾಮಕವು. ಆತ್ಮಾ = ಮಧ್ಯದೇಹವು, ಆನಂದಃ = ಸ್ವರೂಪಾನಂದನಾಮಕವು. ಪುಚ್ಛಂ=ಪುಚ್ಛವೆನಿಸುವ, ಪ್ರತಿಷ್ಠಾ=ಪಾದವು, ಬ್ರಹ್ಮ=ಬ್ರಹ್ಮನಾಮಕವು.

ತತ್ ಅಪಿ ಏಷಃ ಶ್ಲೋಕಃ ಭವತಿ=(ಹಿಂದಿನದ್ದೇ ಅರ್ಥ.) ಬ್ರಹ್ಮ=ಪರಬ್ರಹ್ಮವು, ಅಸ ದಿತಿ=ಜೀವನಿಂದ ಬೇರೆಯಾದುದು ಇಲ್ಲವೆಂದು, ವೇದ ಚೇತ್=ತಿಳಿದರೆ, ಸಃ=ಆತನು, ಅಸ ನ್ನೇವ=ದುಃಖಿಯೇ, ಭವತಿ=ಆಗುತ್ತಾನೆ. ಬ್ರಹ್ಮ=ಪಂಚಸ್ವರೂಪವುಳ್ಳ ಬ್ರಹ್ಮವು, ಅಸ್ತೀತಿ= ಜೀವನಿಂದ ಬೇರಾದುದುಂಟೆಂದು, ವೇದಚೇತ್=ತಿಳುಕೊಂಡರೆ, ತತಃ=ಅದರಿಂದ, ಏನಂ= ಈ ತಿಳುಕೊಂಡವನನ್ನು, ಸಂತಂ=ಸುಖಿಯನ್ನಾಗಿ (ಪ್ರಾಜ್ಞರು), ವಿದುಃ=ತಿಳಿಯುತ್ತಾರೆ. ಪೂರ್ವಸ್ಯ=ಮನೋಮಯ ಸಂಕರ್ಷಣನಿಗೆ, ಯಃ=ಯಾವ ವಿಜ್ಞಾನಮಯ ವಾಸುದೇವನು (ಆತ್ಮನೋ), ತಸ್ಯ=ಆ ವಿಜ್ಞಾನಮಯ ವಾಸುದೇವನಿಗೆ, ಏಷ ಏವ=ಈ ಆನಂದಮಯ ಕೋಶಗತ ನಾರಾಯಣನೇ, ಶಾರೀರ ಆತ್ಮಾ=ದೇಹಿಭೂತನು. ॥ ೧೨ ॥

ಭಾ ॥ ಸ್ವಯೋಗ್ಯಂ ಬ್ರಹ್ಮವಿದ್ಭುಙ್ಕ್ತೇ ವಿರಿಂಚೇನ ಪರೇಣ ಚ ।
ಬ್ರಹ್ಮಣಾ ಸಹ ತದ್ವಶ್ಯಃ ಸುಖಮೇವ ನ ದುಷ್ಕೃತಂ ॥ ಇತಿ ಚ ॥ ೨ ॥

ಅ ॥ ಬ್ರಹ್ಮಜ್ಞಾನಿಯು ಚತುರ್ಮುಖನಿಂದಲೂ ಪರಬ್ರಹ್ಮನಿಂದಲೂ ಕೂಡಿಕೊಂಡು ಅವರ ಅಧೀನನಾಗಿಯೇ ಇದ್ದು ತನಗೆ ಯೋಗ್ಯವಾದ ಸುಖಭೋಗಗಳನ್ನೇ ಅನುಭವಿಸುತ್ತಾ ನಲ್ಲದೆ ದುಷ್ಕೃತವನ್ನನುಭವಿಸುವುದಿಲ್ಲ.

ಭಾ ॥ ಯ ಏಷ ಭಗವಾನ್ ವಿಷ್ಣುರ್ಭೂತಸ್ರಷ್ಟಾ ಗುಣಾಧಿಕಃ ।
ಸ ಏವಾನ್ನಾತ್ಪುನರ್ಜಾತೋ ಹ್ಯಜಾತೋಽಪಿ ಯತೋ ವಿಭುಃ ।
ಅನ್ನಾತ್ಮನಿ ಶರೀರೇಽಸೌ ವ್ಯಜ್ಯತೇ ಸುವಿವೇಕಿಭಿಃ ॥ ೩ ॥

ಅ ॥ ಗುಣಪರಿಪೂರ್ಣನಾಗಿಯೂ ಪೂಜ್ಯನಾಗಿಯೂ ಇರುವ ಯಾವ ಪರಮಾತ್ಮನು ನಿಖಿಲ ಭೂತಗಳನ್ನೂ ಸೃಷ್ಟಿಸಿದ್ದಾನೋ ಅವನೇ ಸ್ವಭಾವತಃ ಉತ್ಪತ್ತಿಶೂನ್ಯನಾಗಿದ್ದರೂ, ಅನ್ನ ದಿಂದ ಉತ್ಪತ್ತಿಯನ್ನು ಹೊಂದುತ್ತಾನೆ. ಅಂದರೆ ವಿವೇಕಿಗಳ ಅನ್ನವಿಕಾರಭೂತವಾದ ಶರೀರ ದಲ್ಲಿ ಅಭಿವ್ಯಕ್ತಿಯನ್ನು ಹೊಂದುತ್ತಾನೆ.

ಭಾ ॥ ಅನ್ನಸ್ಯ ಸಾರಭೂತೋಽಯಂ ಶರೀರಸ್ಯ ಚ ಕೇಶವಃ ॥ ೪ ॥

ಅ ॥ ಶ್ರೀಹರಿಯು ಅನ್ನದ ಸಾರಭೂತನು; ಅಂದರೆ ಸಾರಪದದಾರ್ಥವನ್ನೇ ಸ್ವೀಕರಿಸುವವನು. ಮತ್ತು ಇವನು ಬ್ರಹ್ಮಾದಿಗಳಿಗೂ ಉಪಜೀವ್ಯನಾಗಿದ್ದಾನೆ. ಹಾಗೇ ಶರೀರದ ಸಾರಭೂತನು; ಅಂದರೆ ಅನ್ನವಿಕಾರವಾದ ಶರೀರದಲ್ಲಿದ್ದು ಸಾರವನ್ನು ಸ್ವೀಕರಿಸುವವನು.

ಭಾ ॥ ಅನ್ನನಾಮಾ ಚಾನ್ನಸಂಸ್ಥಃ ಶರೀರೇಷು ಚ ಸಂಸ್ಥಿತಃ ॥ ೫ ॥

ಅ ॥ ಹರಿಯು ಅನ್ನವೆಂಬ ಹೆಸರುಳ್ಳವನು. ಅನ್ನದಲ್ಲಿಯೂ ತದ್ವಿಕಾರಭೂತವಾದ ಶರೀರದಲ್ಲಿಯೂ ಇರುವವನು.

ಭಾ ॥ ಅತ್ತೃತ್ವಾತ್ಸರ್ವಲೋಕಾನಾಂ ಅನ್ನಮಿತ್ಯುಚ್ಯತೇ ಹರಿಃ ।
ಉಪಜೀವ್ಯಶ್ಚ ಭೂತಾನಾಂ ಇತಿ ಚಾನ್ನಂ ಜನಾರ್ದನಃ ॥

ಅ ॥ ಶ್ರೀ ಜನಾರ್ದನನು ಸರ್ವ ಲೋಕಗಳನ್ನೂ ನಾಶಮಾಡುವುದರಿಂದಲೂ ಎಲ್ಲಾ ಪ್ರಜೆಗಳಿಗೂ ಇವನಿಂದಲೇ ಜೀವನವಾಗುವುದರಿಂದಲೂ ಅನ್ನನೆಂದೆನಿಸುತ್ತಾನೆ.

ಭಾ ॥ ಸ ಜ್ಯಾಯಾನ್ ಸರ್ವಭೂತೇಭ್ಯಸ್ತಸ್ಮಾತ್ಸರ್ವೌಷಧಂ ಸ್ಮೃತಃ ।
ಸಂಸಾರೇ ದಹ್ಯಮಾನಾನಾಮಾಶ್ರಯತ್ವಾತ್ಸ ಔಷಧಮ್ ॥

ಅ ॥ ಶ್ರೀಹರಿಯು ಸರ್ವ ಭೂತಗಳಲ್ಲಿಯೂ ಶ್ರೇಷ್ಠನಾದುದರಿಂದ ಸರ್ವೌಷಧನೆಂದು ಪ್ರಸಿದ್ಧನಾಗಿದ್ದಾನೆ. ಅಲ್ಲದೆ ಸಂಸಾರತಾಪದಿಂದ ಸುಟ್ಟು ಬಳಲುವವರಿಗೆ ಅತ್ಯಂತ ಆಶ್ರಯನಾದುದರಿಂದಲೂ ಆತನು ಔಷಧರೂಪನಾಗಿದ್ದಾನೆ.

ಭಾ ॥ ಪ್ರಚುರಂ ಮಯ ಇತ್ಯುಕ್ತಂ ಪ್ರಚುರಾತ್ತಾ ಯತೋ ಹರಿಃ ।
ಪ್ರಚುರೈಃ ಸೇವ್ಯತೇ ನಿತ್ಯಂ ಅತೋಽನ್ನಮಯ ಈರಿತಃ ॥ ೪ ॥

ಅ ॥ ಮಯವೆಂದರೆ ಆಧಿಕ್ಯವು. ಶ್ರೇಷ್ಠವಾದ ವಸ್ತುಗಳನ್ನು ಅಧಿಕವಾಗಿ ಸ್ವೀಕಾರ ಮಾಡುವುದರಿಂದಲೂ ಉತ್ತಮರಿಂದ ಅಧಿಕವಾಗಿ ಸೇವಿಸಲ್ಪಡುವುದರಿಂದಲೂ ಶ್ರೀ ಹರಿಯು ಅನ್ನಮಯನೆನಿಸಿಕೊಂಡಿದ್ದಾನೆ.

ಭಾ ॥ ದೇಹಸ್ಯೈವ ಶಿರಸ್ಯಸ್ಯ ಶಿರೋ ವಿಷ್ಣೋಃ ಪ್ರತಿಷ್ಠಿತಂ ।
ಬಾಹ್ವೋಃ ಪಕ್ಷೌ ತಥಾ ಮಧ್ಯೇ ಮಧ್ಯಂ ಪಶ್ಚಾತ್ತನೌ ತಥಾ ।
ಪುಚ್ಛಮಿತ್ಯೇಷ ಭಗವಾನನಿರುದ್ಧಃ ಸ್ವಯಂ ಹರಿಃ ॥ ೪ ॥

ಅ ॥ ಈ ಪ್ರತ್ಯಕ್ಷಭೂತವಾದ ಜೀವನ ಶರೀರದ ಶಿರಸ್ಸು ಭುಜಗಳು ಮಧ್ಯಪ್ರದೇಶವು ಪಾದಗಳು ಇವುಗಳಲ್ಲಿ ಅನ್ನಮಯನಾಮಕನಾದ ಅನಿರುದ್ಧಾಖ್ಯ ಶ್ರೀ ಹರಿಯ ಶಿರಸ್ಸು ಭುಜಗಳು ಮಧ್ಯಪ್ರದೇಶವು ಪಾದಗಳು ಸನ್ನಿಹಿತಗಳಾಗಿದ್ದು ತತ್ತತ್ಕಾರ್ಯಗಳನ್ನು ಮಾಡಿಸುತ್ತವೆ.

ಭಾ ॥ ತಸ್ಯಾಂತರಂ ಪರಂ ರೂಪಂ ಅಭಿನ್ನಮಪಿ ಭಿನ್ನವತ್ ।
ಪ್ರದ್ಯುಮ್ನಾಖ್ಯಂ ಪ್ರಾಣಮಯಂ ಪ್ರಣೇತೃತ್ವಾತ್ಪ್ರಕೀರ್ತಿತಂ ॥ ೬ ॥

ಅ ॥ ಅನ್ನಮಯನಾಮಕನಾದ ಅನಿರುದ್ಧನ ಒಳಗೆ ಪ್ರಾಣನಾಮಕವಾದ ಪ್ರದ್ಯುಮ್ನನ ರೂಪವಿರುತ್ತದೆ. ಒಳಹೊರಗಿನ ರೂಪಗಳಿಗೆ ಸ್ವಭಾವತಃ ಭೇದವಿಲ್ಲದಿದ್ದರೂ ಭೇದವಿದ್ದಂತೆ

ತೋರಿಸಿಕೊಳ್ಳುತ್ತಾನೆ. ಪ್ರದ್ಯುಮ್ನಾಖ್ಯ ಭಗವದ್ರೂಪವು ಜಗತ್ತನ್ನು ಪ್ರೇರಿಸುವುದರಿಂದ, 'ಪ್ರಾಣಮಯ'ನೆಸಿಕೊಂಡದೆ.

ಭಾ ॥ ಶಿರಸ್ತಸ್ಯ ಪ್ರಾಣಗತಂ ಪ್ರಾಣ ಇತ್ಯೇವ ನಾಮತಃ ।
ವ್ಯಾನಾಖ್ಯೋ ದಕ್ಷಿಣಃ ಪಕ್ಷೋ ವ್ಯಾನಗಶ್ಚೋತ್ತರಸ್ತಥಾ ॥
ಅಪಾನಾಖ್ಯೋಽಪಾನಗತಃ ಆಕಾಶಸ್ಥಂ ಚ ಮಧ್ಯಮಂ ।
ಆಕಾಶಾಖ್ಯಂ ತಥಾ ಪುಚ್ಛಂ ಪೃಥ್ವ್ಯಾಂ ಪೃಥಿವಿನಾಮಕಂ ॥
ಉದಾನ ಆಕಾಶನಾಮಾ ಸಮಾನಃ ಪೃಥಿವೀತಿ ಚ ॥ ೬ ॥

ಅ॥ ಪ್ರದ್ಯುಮ್ನನ ಶಿರಸ್ಸು ಪ್ರಾಣನಲ್ಲಿದ್ದು, 'ಪ್ರಾಣ' ಎಂತ ಹೆಸರುಳ್ಳದ್ದು; ಬಲಗೈಯು ವ್ಯಾನವಾಯುವಿನಲ್ಲಿರತಕ್ಕದ್ದು. ಹಾಗೂ 'ವ್ಯಾನ' ಎಂತ ಹೆಸರುಳ್ಳದ್ದಾಗಿದೆ; ಎಡಗೈಯು ಅಪಾನನಲ್ಲಿರತಕ್ಕದ್ದು. 'ಅಪಾನ' ಎಂದು ಹೆಸರುಳ್ಳದ್ದು; ಮಧ್ಯಪ್ರದೇಶವು ಆಕಾಶದಲ್ಲಿರತಕ್ಕದ್ದು. 'ಆಕಾಶ' ಎಂದು ಹೆಸರುಳ್ಳದ್ದು; ಪಾದವು ಪೃಥಿವಿಯಲ್ಲಿರತಕ್ಕದ್ದು. 'ಪೃಥಿವೀ' ಎಂದು ಹೆಸರುಳ್ಳದ್ದು; ಆಕಾಶವೆಂದರೆ ಉದಾನನು. ಪೃಥಿವೀ ಯೆಂದರೆ ಸಮಾನನು.

ಭಾ ॥ (೧) ಪ್ರಣೇತೃತ್ವಾತ್ಪ್ರಾಣನಾಮ ಶಿರೋ ವಿಷ್ಣೋಃ ಪ್ರಕೀರ್ತಿತಂ ।
ವಿಶೇಷಾಚ್ಚೇಷ್ಟಯೇದ್ಯಸ್ಮಾತ್ ವ್ಯಾನಾಖ್ಯೋ ದಕ್ಷಿಣಃ ಕರಃ ॥
(೨) ಯಸ್ಮಾದಪನಯೇದ್ದೋಷಾನ್ ಅಪಾನಃ ಸವ್ಯ ಉಚ್ಯತೇ ।
ಆಕಾಶಸ್ತ್ವವಕಾಶತ್ವಾನ್ಮಧ್ಯದೇಹೋ ಮಹಾತ್ಮನಃ ।
ಪೃಥಿವೀ ಪುಚ್ಛಮಸ್ಯೋಕ್ತಂ ಸರ್ವಸ್ಯಾಪಿ ಪ್ರಧಾರಣಾತ್ ॥ ೭ ॥

ಅ ॥ (೧) ಪರಮಾತ್ಮನ ಶಿರಸ್ಸು ನಿಖಿಲ ಜಗತ್ತನ್ನೂ ಪ್ರೇರಿಸಿರುವುದರಿಂದ 'ಪ್ರಾಣ' ನೆನಿಸಿಕೊಂಡದೆ. ಆತನ ಬಲಗೈಯು ವಿಶೇಷವಾಗಿ ಪ್ರವರ್ತಿಸುವುದರಿಂದ 'ವ್ಯಾನ'ನೆಂದು ಹೆಸರುಳ್ಳದ್ದು. (೨) ಎಡಗೈಯು ದೋಷಗಳನ್ನು ಪರಿಹರಿಸುವುದರಿಂದ 'ಅಪಾನ'ನೆಂದು ಕರಿಯಲ್ಪಡುತ್ತದೆ. ಅಂತಹ ಮಹಾತ್ಮನ ಮಧ್ಯದೇಹವು ಅವಕಾಶಪ್ರದವಾದುದರಿಂದ 'ಆಕಾಶ' ವೆನ್ನಿಸಿಕೊಂಡದೆ. ಇವನ ಪಾದವು ನಿಖಿಲ ವಸ್ತುವನ್ನು ಧರಿಸಿಕೊಂಡಿರುವುದರಿಂದ 'ಪೃಥಿವಿ' ಎನ್ನಿಸಿಕೊಂಡದೆ.

ಭಾ ॥(*a*) ಸ ಏಷ ಜಗತಾಮಾಯುಃ ತಸ್ಮಿನ್ ಸಂಕರ್ಷಣಃ ಸ್ಥಿತಃ ॥ ೭ ॥
(*b*) ಶಿರಸ್ತಸ್ಯ ಯಜುರ್ನಾಮ ಯಜ್ಞಾನಾಂ ಹರಣಾತ್ ಸ್ಮೃತಂ ।
ಯಜುಃ ಸಂಸ್ಥಂ ಚ ಬಾಹೂ ತು ಋಕ್ಸಾಮಾಂತಃ ಸ್ಥಿತೌ ಸದಾ ।
ಋಗರ್ಚನಾಯಾಃ ಸ್ವೀಕಾರಾತ್ಸಾಮದೋಷಾತ್ಸಮೀಕೃತೇಃ ।
(*c*) ಪಂಚರಾತ್ರಗತಂ ಮಧ್ಯಮಾದೇಶಾಖ್ಯಂ ಸುವಿಸ್ತೃತೇಃ ॥
(*d*) ಅಥರ್ವಾಖ್ಯಂ ತಥಾ ಪುಚ್ಛಂ ಅಥರಂ ಚಾಂಗಿನಾಂ ರಸಃ ॥ ೮ ॥

ಅ ॥ (*a*) ಈ ಪ್ರಾಣಮಯನಾಮಕನಾದ ಪ್ರದ್ಯುಮ್ನನು ಹುಟ್ಟಿದ ಪ್ರಾಣಿಗಳಿಗೆ ಆಯುಸ್ಸನ್ನು ಕೊಡತಕ್ಕವನು. ಆತನಲ್ಲಿ ಮನೋಮಯನಾಮಕನಾದ ಸಂಕರ್ಷಣನು ಇರುತ್ತಾನೆ. ॥ ೭ ॥

*(b)* ಅಂತಹ ಸಂಕರ್ಷಣನ ಶಿರಸ್ಸು ಯಜ್ಞಭಾಗಗಳನ್ನು ಸ್ವೀಕರಿಸುವುದರಿಂದ ಯಜುರ್ವೇದದಲ್ಲಿ ಮುಖ್ಯವಾಗಿ ಪ್ರತಿಪಾದ್ಯವಾಗಿ 'ಯಜುಃ' ಎಂಬ ಹೆಸರುಳ್ಳದ್ದಾಗಿದೆ. ಆತನ ಬಾಹುಗಳು ಋಕ್ಸಾಮಗಳಲ್ಲಿ ಪ್ರತಿಪಾದ್ಯಗಳಾಗಿವೆ. ಬಲಗೈಯ್ಯು ಪೂಜೆಯನ್ನು ಸ್ವೀಕರಿಸುವುದಾದುದರಿಂದ 'ಋಕ್' ಎನ್ನಿಸಿಕೊಂಡಿದೆ. ಎಡಗೈಯ್ಯು ಭಕ್ತರ ಪಾಪವನ್ನು ಪರಿಹರಿಸುವುದರಿಂದ 'ಸಾಮ' ವೆನಿಸಿದೆ. *(c)* ಆ ಸಂಕರ್ಷಣನ ಮಧ್ಯಪ್ರದೇಶವು ಪಂಚರಾತ್ರಪ್ರತಿಪಾದ್ಯವಾಗಿ ಅತಿವಿಸ್ತಾರವಾಗಿರುವುದರಿಂದ 'ಆದೇಶ'ವೆನಿಸಿಕೊಂಡಿದೆ. ಆತನ ಪಾದವು ಪಾತಾಲಾದಿಯಲ್ಲಿದ್ದ ಪ್ರಾಣಿವರ್ಗವನ್ನು ಪ್ರವರ್ತನೆ ಮಾಡಿಸುವುದರಿಂದ 'ಅಥರ್ವ'ವೆನಿಸಿಕೊಂಡಿದೆ. ಪ್ರಧಾನ ದೇವತೆಗಳಲ್ಲಿಯೂ ಶ್ರೇಷ್ಠವಾದುದರಿಂದ 'ಅಂಗಿರಸ'ವೆಂತಲೂ ಹೇಳಲ್ಪಟ್ಟಿದೆ. ॥ ೮ ॥

ಭಾ ॥ ಮನೋವಾಚಾಮಗಮ್ಯಂ ತಂ ಜ್ಞಾತ್ವಾನಂದಸ್ವರೂಪಿಣಂ ।
ಕುತಶ್ಚಿನ್ನಬಿಭೇತ್ಯೇವ ವಾಸುದೇವೋಂತರಸ್ತತಃ ॥ ೯ ॥

ಅ ॥ ಅಧಿಕಾರಿಯು ಸಂಪೂರ್ಣವಾಗಿ ಮನ ಆದಿ ಯಾವ ಇಂದ್ರಿಯಕ್ಕೂ ಗೋಚರನಾಗದೆ ಇರುವ ಆನಂದ ಸ್ವರೂಪಿಯಾದ ಸಂಕರ್ಷಣನನ್ನು ತಿಳಿದುಕೊಂಡರೆ ಯಾವದಕ್ಕೂ ಭಯಪಡಬೇಕಿಲ್ಲ. ಆ ಸಂಕರ್ಷಣನ ಒಳಗೆ ವಿಜ್ಞಾನಮಯನಾದ ವಾಸುದೇವರೂಪಿ ಶ್ರೀ ಪರಮಾತ್ಮನು ಇರುತ್ತಾನೆ. ॥ ೯ ॥

ಭಾ ॥*(a)* ಶ್ರದ್ಧಾಖ್ಯಂ ಶ್ರುತಿಧರ್ತೃತ್ವಾತ್ ಶ್ರದ್ಧಾಯಾಂ ತಚ್ಛಿರಃ ಸ್ಥಿತಂ ।
ಋತಂ ಜ್ಞಾನತತೇರ್ದಾತಾ ಚರ್ತಸ್ಥೋ ದಕ್ಷಿಣಃ ಕರಃ ॥
*(b)* ವಾಮಸ್ಸತ್ಯಸ್ಥಿತಸ್ಸತ್ಯಂ ಸತಾಂ ಯಸ್ಮಾನ್ನಿಯಾಮಕಃ ॥
ಯೋಗಾಖ್ಯಂ ಸರ್ವಲೋಕಸ್ಯ ಯೋಗಾದತ್ರೈವ ಯೋಗಗಂ ॥
*(c)* ಮಧ್ಯಂ ಪುಚ್ಛಂ ಮಹೋನಾಮ ಮಹನೀಯತ್ವತಸ್ಸದಾ ॥ ೧೦ ॥

ಅ ॥*(a)* ಆ ವಾಸುದೇವನ ಶಿರಸ್ಸು ಶ್ರುತಿಯನ್ನು ಧರಿಸುವುದರಿಂದ "ಶ್ರದ್ಧಾ" ಎಂತ ಹೆಸರುಳ್ಳದ್ದು. ಶ್ರದ್ಧೆ (ಆಸ್ತಿಕ್ಯ ಬುದ್ಧಿಯಾ ಭಾರತಿ) ಯಲ್ಲಿರತಕ್ಕದ್ದು. ಬಲಗೈಯ್ಯು ಜ್ಞಾನ ಸಮುದಾಯವನ್ನು ಕೊಡುವುದರಿಂದ "ಋತ" ಎಂತ ಹೆಸರುಳ್ಳದ್ದು. ಋತ(ಯಥಾರ್ಥಜ್ಞಾನ)ದಲ್ಲಿರತಕ್ಕದು. *(c)* ಎಡಗೈಯ್ಯು ಸಜ್ಜನರಿಗೆ ನಿಯಾಮಕನಾದುದರಿಂದ ಸತ್ಯವೆಂದೆನಿಸಿಕೊಂಡು ಸತ್ಯದಲ್ಲಿರತಕ್ಕದ್ದು. ಮಧ್ಯಪ್ರದೇಶವು ನಿಖಿಲ ಜಗತ್ತಿಗೂ ಆಶ್ರಯವಾಗಿರುವುದರಿಂದ "ಯೋಗ"ವೆಂದೆನಿಸಿಕೊಂಡು ಯೋಗದಲ್ಲಿರತಕ್ಕದ್ದು. *(c)* ಅತನ ಪಾದವು ಸದಾ ಸರ್ವರಿಂದಲೂ ಪೂಜ್ಯನಾದುದರಿಂದ "ಮಹಃ" ಎಂತ ಹೆಸರುಗೊಂಡು ಸೂರ್ಯಾದಿ ತೇಜಸ್ಸಿನಲ್ಲಿರುವದು. ॥ ೧೦ ॥

ಭಾ ॥ ತಸ್ಮಿನ್ನಾನಂದರೂಪೋಽಸೌ ಸ್ಥಿತೋ ನಾರಾಯಣಸ್ಸದಾ ॥ ೧೧ ॥

ಅ ॥ ಆ ವಿಜ್ಞಾನಮಯನಾದ ವಾಸುದೇವನ ಒಳಗೆ ಆನಂದ ಸ್ವರೂಪಿಯಾದ ನಾರಾಯಣನು ಇರುತ್ತಾನೆ.

ಭಾ ॥ ಶಿರಃ ಪ್ರಿಯೇ ಸ್ಥಿತಂ ತಸ್ಯ ಪರೇಯಂ ಪ್ರಿಯನಾಮಕಂ ।
ಮೋದಪ್ರಮೋದಯೋರ್ಬಾಹೂ ಮೋದನಾಚ್ಚ ಪ್ರಮೋದನಾತ್ ॥

ಮೋದಪ್ರಮೋದನಾಮಾನಾವಾನಂದಸ್ತ್ವತತತ್ವತಃ ||
ಮಧ್ಯಮಾನಂದಸಂಸ್ಥಂ ಚ ಬೃಹ್ಮಸೃಷ್ಟ್ಯಾ ತು ಬೃಂಹಯೇತ್ |
ಪುಚ್ಛಂ ಪ್ರಧಾನವಾಯೌ ಚ ಬ್ರಹ್ಮಾಖ್ಯೇ ಸಂಸ್ಥಿತಂ ಸದಾ || ೧೨ ||

ಅ || ನಾರಾಯಣನ ಶಿರಸ್ಸು ಮುಕ್ತರಿಂದ ಪ್ರಾಪ್ಯವಾದುದರಿಂದ ಪ್ರಿಯವೆಂಬ ಹೆಸರು ಗೊಂಡು ಪ್ರಿಯ ವಸ್ತುವಿನಲ್ಲಿರತಕ್ಕದ್ದು. ಆತನ ಬಾಹುಗಳು ಮೋದ (ನಿಕೃಷ್ಟವಿಷಯದಿಂದು ಟಾದ ಸಂತೋಷ) ಪ್ರಮೋದ (ಪ್ರಕೃಷ್ಟ ವಿಷಯದಿಂದುಂಟಾದ ಸಂತೋಷ)ಗಳನ್ನು ಕೊಡುವು ದರಿಂದ ಮೋದ ಪ್ರಮೋದ ನಾಮಕಗಳಾಗಿ ಅವುಗಳಲ್ಲಿರತಕ್ಕವುಗಳು. ಆತನ ಮಧ್ಯಪ್ರದೇ ಶವು ವಿಸ್ತೃತವಾದುದರಿಂದ ಆನಂದ ನಾಮಕವಾಗಿ ಆನಂದದಲ್ಲಿರತಕ್ಕದ್ದು. ಆತನ ಪಾದವು ಭಕ್ತರಿಗೆ ಮುಕ್ತಿಯನ್ನು ಕೊಟ್ಟು ಜ್ಞಾನಾನಂದಾದಿಗಳನ್ನು ಪೂರ್ಣೀಕರಿಸುವುದರಿಂದ ಬ್ರಹ್ಮ ನಾಮಕವಾಗಿ ಬ್ರಹ್ಮಾಖ್ಯ ಪ್ರಧಾನ ವಾಯುವಿನಲ್ಲಿರತಕ್ಕದ್ದು. || ೧೨ ||

ಭಾ || ಅಭೇದೋಽಸ್ಯವಿಶೇಷೋಽಪಿ ಪರಮೈಶ್ವರ್ಯಯೋಗತಃ |
ದೇಹದೇಹಿವದೇವಾಸೌ ಪಂಚಧಾವಸ್ಥಿತೋ ಹರಿಃ ||

ಅ || ಶ್ರೀ ಹರಿಯು ಸ್ವಭಾವತಃ ತನ್ನ ರೂಪಗಳಲ್ಲಿ ಪರಸ್ಪರ ಭೇದವಿಲ್ಲದಿದ್ದರೂ ನಿಯ ಮ್ಯನಿಯಾಮಕತ್ವಾದಿ ವಿಶೇಷವಿಲ್ಲದಿದ್ದಗೂ ಒಂದು ರೂಪದಿಂದ ದೇಹದಂತೆಯೂ ಮತ್ತೊಂದು ರೂಪದಿಂದ ದೇಹಿಯಂತೆಯೂ ತೋರಿಸಿಕೊಳ್ಳುತ್ತಾ ಐದು ರೂಪಗಳಿಂದಿರುತ್ತಾನೆ.

ಭಾ || ಬಹಿಸ್ಥೋ ದೇಹವದ್ವಿಷ್ಣುಃ ಅಂತಸ್ಥೋ ದೇಹಿವತ್ಸ್ಮೃತಃ |
ಅಂತರ್ವ್ಯಾಪ್ತಿವಿಶೇಷೇಣ ನತ್ವಶಕ್ತತ್ವತೋ ಬಹಿಃ ||

ಅ || ಹೊರಗಿನ ರೂಪವನ್ನು ದೇಹದಂತೆಯೂ ಒಳಗಿನ ರೂಪವನ್ನು ದೇಹಿಯಂತೆಯೂ ತಿಳುಕೊಳ್ಳತಕ್ಕದ್ದು. ಹರಿಯು ಒಂದು ರೂಪದಲ್ಲಿ ಒಳಕಡೆಗೇ ವ್ಯಾಪ್ತನಾಗಿದ್ದುದರಿಂದಲೇ ದೇಹಿಯಾಗಿದ್ದಾನಲ್ಲದೆ ಬಾಹ್ಯವಸ್ತು ಸ್ವೀಕಾರಾದಿಗಳಲ್ಲಿ ಅಶಕ್ತನಾದುದರಿಂದಲ್ಲ.

ಭಾ || ಸರ್ವೇಽಪಿ ಪುರುಷಾಕಾರಾ ಉತ್ತರಾತ್ಪೂರ್ವಸಂಭವಃ |
ಉತ್ತರೈಃ ಪೂರಿತಾಃ ಪೂರ್ವೇ ನಿಶ್ಛಿದ್ರತ್ವೇನ ಸರ್ವಶಃ ||

ಅ || ಶ್ರೀ ಹರಿಯ ಸರ್ವರೂಪಗಳೂ ಪುರುಷಾಕಾರಗಳಾಗಿರುತ್ತವೆ. ಉತ್ತರೋ ತ್ತರಗಳಿಂದ ಪೂರ್ವ ಪೂರ್ವರೂಪಗಳಿಗೆ ಆವಿರ್ಭಾವವಾಗಿರುತ್ತದೆ. ಉತ್ತರೋತ್ತರ ರೂಪ ಗಳಿಂದ ಪೂರ್ವ ಪೂರ್ವರೂಪಗಳೆಲ್ಲವೂ ನಿಬಿಡವಾಗಿ ಪೂರ್ಣವಾಗಿವೆ.

ಭಾ || ಅತ್ತೃತ್ವಂ ಚ ಪ್ರಣೇತೃತ್ವಂ ಬೋಧೋ ವಿವಿಧವೇತ್ತೃತಾ |
ಆನಂದಶ್ಚ ಯತಃ ಪೂರ್ಣಃ ತತೋಽನ್ನಾದಿಮಯಾಃ ಸ್ಮೃತಾಃ ||

ಅ || ಅತ್ತೃತ್ವ ಪ್ರೇರಣಾ ಜ್ಞಾನ ವಿಜ್ಞಾನ ಆನಂದ ಇವುಗಳು ಪೂರ್ಣವಾಗಿರುವುದ ರಿಂದ ಶ್ರೀ ಹರಿಯು ಅನ್ನಮಯಾದಿ ಐದು ಶಬ್ದಗಳಿಂದ ವಾಚ್ಯನಾಗಿದ್ದಾನೆ.

ಭಾ || ಅತ್ತ್ಯಾದಿದಾಸ್ತೇ ಪ್ರತ್ಯೇಕಂ ಸರ್ವೇ ಸರ್ವಗುಣಾ ಅಪಿ |
ನಾಮಭೇದಸ್ತತಸ್ತೂಕ್ತಃ ಸರ್ವನಾಮವತಾಮಪಿ ||

ಅ ॥ ಸರ್ವರೂಪಗಳಲ್ಲಿಯೂ ಸರ್ವ ಧರ್ಮಗಳೂ ಪೂರ್ಣವಾಗಿದ್ದರೂ ತತ್ತದಧಿಕಾರಿಗಳಿಗನುಸಾರವಾಗಿ ಅತ್ತೃತ್ವಾದಿಗಳನ್ನು ಕೊಡುವ ಪ್ರಯುಕ್ತವೇ ಸರ್ವನಾಮವಾಚ್ಯಗಳಾದವನ ರೂಪಗಳಿಗೆ ನಾಮಭೇದವು ಕೊಡುತ್ತಿದೆ.

ಭಾ ॥ ಪಂಚರೂಪಂ ಚ ತದ್ಬ್ರಹ್ಮಜೀವಾದನ್ಯನ್ನ ವಿದ್ಯತೇ ।
ಇತಿ ಯೇ ತು ವಿಜಾನಂತಿ ತೇಽಸಂತಸ್ತಮಆಲಯಾಃ ॥

ಅ ॥ ಇಂತಹ ಶ್ರೀ ಹರಿಯ ಐದು ರೂಪಗಳನ್ನು ಜೀವನಿಂದ ಭಿನ್ನವಲ್ಲವೆಂದು ಯಾರು ತಿಳಿದುಕೊಳ್ಳುತ್ತಾರೋ ಅವರು ಅಸಜ್ಜನರು ಹಾಗೆಯೇ ತಮಸ್ಸಿಗೆ ಹೋಗಿ ದುಃಖವನ್ನನುಭವಿಸುವವರು.

ಭಾ ॥ ಜೀವಾದನ್ಯತ್ಪರಂ ಬ್ರಹ್ಮ ಪಂಚರೂಪಂ ಚ ಯೇ ವಿದುಃ ।
ಸಂತಸ್ತ ಇತಿ ವಿಜ್ಞೇಯಾ ಮುಕ್ತಿ ಯೋಗ್ಯಾ ಹಿ ತೇ ಧ್ರುವಂ ॥

ಅ ॥ (ಹೀಗಲ್ಲದೆ) ಯಾರು ಈ ಐದು ರೂಪಗಳುಳ್ಳ ಪರಬ್ರಹ್ಮನನ್ನು ಜೀವನಿಂದ ಬೇರೆ ಎಂದು ತಿಳಕೊಳ್ಳುತ್ತಾರೋ ಅಂಥವರು ಸಜ್ಜನರು (ಸುಖಿಗಳು), ಅವರೇ ನಿಶ್ಚಯವಾಗಿ ಮೋಕ್ಷಯೋಗ್ಯರೆಂದು ತಿಳಕೊಳ್ಳಬೇಕು.

**ಮಂ ॥ ಅಥಾತೋಽನುಪ್ರಶ್ನಾಃ । ಉತಾವಿದ್ವಾನಮುಂ ಲೋಕಂ ಪ್ರೇತ್ಯ । ಕಶ್ಚನ ಗಚ್ಛತೀ೩ ।  ಆಹೋ ವಿದ್ವಾನಮುಂ ಲೋಕಂ ಪ್ರೇತ್ಯ । ಕಶ್ಚಿತ್ಸಮಶ್ನುತಾ೩ ಉ ॥ ೧೩ ॥**

ಅ ॥ ಅಥ=ಆಮೇಲೆ, ಅತಃ=ಪ್ರಶ್ನೆಮಾಡಲಿಕ್ಕೆ ಕಾರಣವಿರುವದರಿಂದ, ಅನುಪ್ರಶ್ನಾಃ=ಬ್ರಹ್ಮನ ವಚನಕ್ಕೆ ಅನುಸಾರಿಯಾದ ಪ್ರಶ್ನೆಗಳು (ವರುಣನಿಂದ ಮಾಡಲ್ಪಟ್ಟವು), ಅವಿದ್ವಾನುತ = ತಿಳಿಯದಿದ್ದವನು, ಕಶ್ಚನ=ಯಾವನೊಬ್ಬನೂ, ಪ್ರೇತ್ಯ=ಮೃತನಾಗಿ, ಅಮುಂ ಲೋಕಂ=ಪರಲೋಕವನ್ನು, ಗಚ್ಛತಿ=ಹೋಗುತ್ತಾನೋ, ಆಹೋ=ಅಥವಾ, ವಿದ್ವಾನ್=ವಿದ್ವಾಂಸನು, ಪ್ರೇತ್ಯ=ಮೃತನಾಗಿ, ಅಮುಂ ಲೋಕಂ=ವೈಕುಂಠಲೋಕವನ್ನು, ಗಚ್ಛತಿ=ಹೋಗುವನೋ, ಕಶ್ಚಿತ್=ಒಬ್ಬನೆ, ಸಮಶ್ನುತೇ=ಚೆನ್ನಾಗಿ ಪ್ರಾಪಿಸುತ್ತಾನೋ, ಉ=ಹೌದು (ಅಂದರೆ ಒಬ್ಬನೇ ಬ್ರಹ್ಮನನ್ನು ಚೆನ್ನಾಗಿ ಪ್ರಾಪಿಸುತ್ತಾನೆ.)

ಭಾ ॥(a) ಇತ್ಯುಕ್ತೇ ಬ್ರಹ್ಮಣಾ ಪೂರ್ವಂ ಪಪ್ರಚ್ಛ ವರುಣೋ ವಿಭುಂ ।
ಅವಿದ್ವಾನಪಿ ಯಃ ಕಶ್ಚಿದ್ಬ್ರಹ್ಮಾಪ್ನೋತಿ ಕಥಂಚನ ॥
ವಿದ್ವಾನೇವೋತ ತತ್ರಾಪಿ ಸರ್ವೋ ವಾಥೈವ ಕೇಚನ ।
(b) ಯದಿ ಸರ್ವೇಽಥ ತತ್ರಾಪಿ ಸರ್ವೇ ಸಮ್ಯಕ್ಸಮಾಪ್ನುಯುಃ ।
ಕೇಚಿದೇವೋತ ಸಮ್ಯಕ್ತದಸಮ್ಯಗಪರೇ ಜನಾಃ ।
(c) ಜ್ಞಾನಿನೋಽಪೀತಿ ಪೃಷ್ಟಸ್ಸನ್ ಬ್ರಹ್ಮಾ ಪ್ರಾಹ ಚತುರ್ಮುಖಃ ।
ಅಜ್ಞಾನ ಪ್ರಾಪ್ನುಯುರ್ಬ್ರಹ್ಮ ಪ್ರಾಪ್ನುಯುರ್ಜ್ಞಾನಿನೋಽಖಿಲಾಃ ॥

(*d*) ತತ್ರಾಪಿ ಸಮ್ಯಕ್ಪ್ರಾಪ್ತಿಸ್ತು ವಿರಿಂಚಸ್ಯೈವ ಸರ್ವದಾ ।
ಅನ್ಯೇಷಾಂ ತಾರತಮ್ಯೇನ ಪ್ರಾಪ್ತಿಸ್ಸುಖವಿಶೇಷತಃ ।
(*e*) ಇತ್ಯಭಿಪ್ರಾಯವಾನ್ ಬ್ರಹ್ಮಾ ಹ್ಯುಕಾರೇಣ ಸಮಾಸತಃ ।
ಉಕ್ತ್ವಾ ಪ್ರಶ್ನೋತ್ತರಂ ಪಶ್ಚಾದ್ವಿಸ್ತರೇಣ ಜಗಾದ ಹ ॥
(*f*) ಕಶ್ಚಿದೇವೋಽಥ ಸಮ್ಯಕ್ತದಾಪ್ನುಯಾದಿತಿ ವಾಕ್ಯತಃ ।
ಅನಂತರಂ ತಥೈವೇತಿ ಬ್ರಹ್ಮೋಕಾರ ಮುವಾಚ ಹ ॥ ೧೩ ॥

ಅ ॥(*a*) ಪೂರ್ವದಲ್ಲಿ ಚತುರ್ಮುಖನು ವರುಣನ ಹತ್ತಿರ ಬ್ರಹ್ಮಜ್ಞಾನಿಯು ಪ ಬ್ರಹ್ಮನನ್ನು ಹೊಂದುತ್ತಾನೆಂದು ಹೇಳಿದನು ಆಗ ವರುಣನು ಅಗತ್ಯವಾಗಿ ಕೇಳಬೇಕಾದ ಕೆಲವು ಪ್ರಶ್ನೆಗಳಿಗೆ ಚತುರ್ಮುಖನು ಪ್ರತ್ಯುತ್ತರ ಕೊಡಲಿಕ್ಕೆ ಸಮರ್ಥನೆಂದು ಭಾವಿಸಿ ಚತು ರ್ಮುಖನ ಹತ್ತಿರ ಪ್ರಶ್ನೆಮಾಡಿದನು. (1) ಅಜ್ಞಾನಿಗಳು ಯಾವರೀತಿಯಿಂದಲಾಗಲಿ ಪರಬ್ರಹ್ಮ ನನ್ನು ಹೊಂದುತ್ತಾರೋ ಯಾ ವಿದ್ವಾಂಸರು ಮಾತ್ರ ಹೊಂದುವರೋ (2) ವಿದ್ವಾಂಸರು ಎಂಬ ಕಲ್ಪದಲ್ಲಿಯೂ ಎಲ್ಲರೂ ಹೊಂದುತ್ತಾರೋ ಕೆಲವರು ಮಾತ್ರ ಹೊಂದುವರೋ (*b*) (3) ಎಲ್ಲರೂ ಹೊಂದುತ್ತಾರೆ ಎಂಬ ಕಲ್ಪದಲ್ಲಿಯೂ ಎಲ್ಲರೂ ಚೆನ್ನಾಗಿ ಸಂಪೂರ್ಣ ಸುಖವನು ಅನುಭವಿಸುತ್ತಾರೋ, ಯಾ ಕೆಲವರು ಮಾತ್ರ ಪೂರ್ಣ ಸುಖವನ್ನನುಭವಿಸುತ್ತಾರೋ, ಇತರರು ಜ್ಞಾನಿಗಳೂ ಸಹ ಚೆನ್ನಾಗಿ ಸುಖಭೋಗಗಳನ್ನನುಭವಿಸುವದಿಲ್ಲವೋ (*c*) ಹೀಗೆ ವರುಣ ನಿಂದ ಪ್ರಶ್ನೆ ಮಾಡಲ್ಪಟ್ಟ ಚತುರ್ಮುಖ ಬ್ರಹ್ಮನು ಪ್ರತ್ಯುತ್ತರವನ್ನು ಗೈದನು. ಎಲೋ ವರು ಣನೇ ಅಜ್ಞಾನಿಗಳು ಪರಬ್ರಹ್ಮನನ್ನು ಎಷ್ಟು ಮಾತ್ರಕ್ಕೂ ಹೊಂದುವದಿಲ್ಲ. ಜ್ಞಾನಿಗಳೆಲ್ಲರೂ ಪರಬ್ರಹ್ಮನನ್ನು ಹೊಂದುತ್ತಾರೆ. (*d*) ಅದರಲ್ಲಿಯೂ ಚತುರ್ಮುಖನಿಗೆ ಮಾತ್ರ ಯಾವಾ ಗಲೂ ಚೆನ್ನಾಗಿ ಪರಬ್ರಹ್ಮಪ್ರಾಪ್ತಿಯಾಗುತ್ತದೆ. ಇತರ ಮುಕ್ತರಿಗೆ ಸುಖದಲ್ಲಿ ವೈಚಿತ್ರ್ಯವಿರು ವುದರಿಂದ ತಾರತಮ್ಯಾನುಸಾರವಾಗಿ ಪರಬ್ರಹ್ಮಪ್ರಾಪ್ತಿಯಾಗುತ್ತದೆ. (*e*) ಹೀಗೆ ಅಭಿಪ್ರಾ ಯವುಳ್ಳ ಚತುರ್ಮುಖನು ಸಂಕೋಚವಾಗಿ ಉಕಾರದಿಂದ ಪಶ್ನೆಗೆ ಉತ್ತರವನ್ನು ಕೊಟ್ಟ ಮೇಲೆ ವಿಸ್ತರದಿಂದ ಉತ್ತರವನ್ನು ಕೊಟ್ಟನು. (*f*) ಒಬ್ಬನೇ ಚೆನ್ನಾಗಿ ಬ್ರಹ್ಮನನ್ನು ಹೊಂದುತ್ತಾನೋ ಎಂಬೀ ವಾಕ್ಯದ ಮೇಲೆಯೇ "ಹಾಗೆಯೇ ಸರಿ" ಎಂದರ್ಥ ಉಳ್ಳ ಉಕಾರವನ್ನು ಬ್ರಹ್ಮನು ಹೇಳಿದನು. ॥ ೧೩ ॥

**ಮಂ ॥ ಸೋಽಕಾಮಯತ । ಬಹುಃ ಸ್ಯಾಂ ಪ್ರಜಾಯೇಯೇತಿ। ಸ ತಪೋಽ ತಪ್ಯತ । ಸ ತಪಸ್ತಪ್ತ್ವಾ । ಇದಂಸರ್ವಮಸೃಜತ । ಯದಿದಂ ಕಿಂ ಚ । ತತ್ಸೃಷ್ಟ್ವಾ । ತದೇವಾನು ಪ್ರಾವಿಶತ್ । ತದನು ಪ್ರವಿಶ್ಯ । ಸಚ್ಚತ್ಯಚ್ಚಾಭವತ್ । ನಿರುಕ್ತಂ ಚಾನಿರುಕ್ತಂ ಚ । ನಿಲಯನಂ ಚಾ ನಿಲಯನಂ ಚ । ವಿಜ್ಞಾನಂ ಚಾ ವಿಜ್ಞಾನಂಚ । ಸತ್ಯಂ ಚಾನೃತಂ ಚ ಸತ್ಯಮಭವತ್ । ಯದಿದಂ ಕಿಂಚ। ತತ್ಸತ್ಯಮಿತ್ಯಾಚಕ್ಷತೇ ॥೧೪॥**

ಅ ॥ ಸಃ=ನಾರಾಯಣನು, ಪ್ರಜಾಯೇಯ=ಜಗತ್ತನ್ನು ಸೃಷ್ಟಿಸುವೆನು, ಬಹುಃ= ಬಹುರೂಪವುಳ್ಳವನು, ಸ್ಯಾಂ=ಆಗುವೆನು, ಇತಿ=ಹೀಗೆ, ಅಕಾಮಯತ=ಇಚ್ಛಿಸಿದನು, ಸಃ= ಅವನು, ತಪಃ=ಆಲೋಚನೆಯನ್ನು, ಅತಪ್ಯತ=ಮಾಡಿದನು, ಸಃ=ಆತನು, ತಪಃ ತಪ್ತ್ವಾ= ಪರ್ಯಾಲೋಚಿಸಿ, ಯದಿದಂ ಕಿಂಚ=ಯಾವದು ಯಾವದಿದೆಯೋ, ಇದಂ ಸರ್ವಂ=ಈ ಎಲ್ಲಾದನ್ನೂ, ಅಸೃಜತ=ಸೃಷ್ಟಿಸಿದನು, ತತ್=ಆ ಜಗತ್ತನ್ನು, ಸೃಷ್ಟ್ವಾ=ಸೃಷ್ಟಿಮಾಡಿ, ತದೇವಾನು=ಅದನ್ನೇ ಅನುಸರಿಸಿ, ಪ್ರಾವಿಶತ್=ಪ್ರವೇಶಮಾಡಿದನು, ತದನು=ಅದನ್ನನು ಸರಿಸಿ, ಪ್ರವಿಶ್ಯ=ಪ್ರವೇಶಿಸಿ, ಸಚ್ಚ=ಸನ್ನಾಮಕನೂ, ಸತ್ ಎಂತ ಹೆಸರುಳ್ಳ ಜಗದ್ಗತನು, ಅಭವತ್=ಆದನು. ತ್ಯತ್=ತ್ಯತ್ ಎಂತ ಹೆಸರಿದ್ದವನೂ, ತ್ಯನ್ನಾಮಕ ಜಗದ್ಗತನು, ನಿರುಕ್ತಂ ಚ=ನಿರುಕ್ತನಾಮಕನೂ, ನಿರುಕ್ತವಸ್ತುಗತನು, ಅನಿರುಕ್ತಂ ಚ=ಅನಿರುಕ್ತನಾಮಕನೂ, ಅನಿರುಕ್ತ ಜಗದ್ಗತನು, ನಿಲಯನಂಚ=ನಿಲಯನನಾಮಕನೂ, ನಿಲಯನ ಜಗದ್ಗತನು, ಅನಿಲ ಯನಂ ಚ=ಅನಿಲಯನನಾಮಕನೂ, ಅನಿಲಯನ ವಸ್ತುಗತನೂ, ವಿಜ್ಞಾನಂ ಚ=ವಿಜ್ಞಾನ ನಾಮಕನೂ, ವಿಜ್ಞಾನನಾಮಕ ವಸ್ತುಗತನೂ, ಅವಿಜ್ಞಾನಂ ಚ=ಅವಿಜ್ಞಾನನಾಮಕನೂ, ಅವಿಜ್ಞಾನನಾಮಕ ವಸ್ತುಗತನೂ, ಸತ್ಯಂ ಚ=ಸತ್ಯನಾಮಕನೂ, ಸತ್ಯನಾಮಕ ವಸ್ತು ಗತನೂ, ಅನೃತಂ ಚ=ಅನೃತನಾಮಕನೂ, ಅನೃತನಾಮಕ ವಸ್ತುಗತನೂ, ಸತ್ಯಂಚ= ನಿರ್ದೋಷಸ್ವರೂಪವಾಗಿ ಸತ್ಯನಾಮಕವು, ಅಭವತ್=ಆಯಿತು, ಯದಿದಂ ಕಿಂಚ=ಯಾವುದು ಹೇಳಲ್ಪಟ್ಟಿತೋ, ತತ್=ಅದೆಲ್ಲವನ್ನೂ, ಸತ್ಯಂ ಇತಿ=ಸಾಧುವನ್ನಾಗಿ ಆಚಕ್ಷತೇ=ಹೇಳುತ್ತಾರೆ.

ಭಾ ॥ (*a*) ಅಜ್ಞೋ ನೈವ ತದಾಪ್ನೋತಿ ಜ್ಞಾನ್ಯೇವೈತದವಾಪ್ನುತೇ ।
ಇತಿ ಜ್ಞಾಪಯಿತುಂ ವಿಷ್ಣೋಃ ಸ್ವಾತಂತ್ರ್ಯಜ್ಞಾಪನಾಯ ತು ।
ಆಹ ಸೃಷ್ಟಿಂ ಪ್ರವೇಶಂ ಚ ಮಾಹಾತ್ಮ್ಯಜ್ಞಾನತೋ ಯತಃ ।
ಪ್ರೀತಿಂ ಯಾಂತಿ ಮಹಾಂತಸ್ತು (*b*) ತದ್ವಶಾ ಏವ ಚೇಶ್ವರಾಃ ।
ಅಗ್ನ್ಯಾದಯೋಽಪಿ ಕಿಮುತ ತದನ್ಯೇ ಮುಕ್ತಿದಸ್ತತಃ ।
ಸ ಏವೈಕಃ ಸ ವಿಜ್ಞೇಯಃ ಪೂರ್ಣೈಶ್ವರ್ಯಾದಿ ರೂಪವಾನ್ ।
ಇತಿ ತಸ್ಯ ಮಹೈಶ್ವರ್ಯ ಮುಚ್ಯತೇ (*c*) ಸತ್ಯಕಾಮಯತ್ ।
ಸೃಷ್ಟ್ವಾ ಜಗದಿದಂ ಸರ್ವಂ ನಿಯಾಮಕತಯಾಸ್ಯ ತು ।
ಬಹುರೂಪೋ ಭವಾನೀತಿ ಸ್ಯಾಜ್ಜಗಚ್ಚೇತ್ಯಚಿಂತಯತ್ ॥

ಅ ॥ (*a*) ಅಜ್ಞನು ಬ್ರಹ್ಮನನ್ನು ಹೊಂದುವುದಿಲ್ಲ. ಜ್ಞಾನಿಯಾದವನೇ ಬ್ರಹ್ಮನನ್ನು ಹೊಂದುತ್ತಾನೆಂಬೀ ವಿಷಯವನ್ನು ತಿಳಿಸುವದಕ್ಕೋಸ್ಕರವೂ, ಹರಿಗೆ ಸ್ವಾತಂತ್ರ್ಯಾದ್ಯನೇಕ ಮಾಹಾತ್ಮ್ಯಗಳಿರುವವೆಂದು ಭಕ್ತರಿಗೆ ತಿಳಿಸುವುದಕ್ಕೂ, ಸೃಷ್ಟಿಯನ್ನೂ ಸೃಷ್ಟಪದಾರ್ಥಗಳಲ್ಲಿ ಪ್ರವೇಶವನ್ನೂ ಹೇಳುವರಾದರು. ಅಲ್ಲದೆ ಮಹಾತ್ಮರು ಅವರ ಗುಣ ಮಹಿಮೆಗಳನ್ನು ತಿಳಿದು ಸ್ತುತಿಸಿದರೆ ಸಂತುಷ್ಟರಾಗುತ್ತಾರಷ್ಟೆ. (*b*) ಪಚನಾದಿ ವ್ಯಾಪಾರ ಸಮರ್ಥರಾದ ಅಗ್ನ್ಯಾದಿ ಗಳೂ ಆ ಹರಿಯ ಅಧೀನರಾಗಿರುವಾಗ ತದಿತರರಾದ ದೇವತೆಗಳು ಅವನ ಅಧೀನರೇ, ಹೇಳತಕ್ಕು ದೇನು! ಆ ಕಾರಣ ಮುಕ್ತಿಯನ್ನು ಕೊಡತಕ್ಕವನು ಅವನೊಬ್ಬನೇ. ಅವನೊಬ್ಬನೇ ಸ್ರಷ್ಟೃ ತ್ವಾದಿ ನಿಖಿಲೈಶ್ವರ್ಯಸಂಪನ್ನನೆಂದು ಮುಖ್ಯವಾಗಿ ತಿಳಿದುಕೊಳ್ಳಬೇಕಾದವನು. ಎಂದು 'ಸೋಽಕಾಮಯತ' ಎಂಬಿತ್ಯಾದಿ ವಾಕ್ಯಗಳಲ್ಲಿ ಶ್ರೀಹರಿಗೆ ಜಗತ್ಸ್ರಷ್ಟೃತ್ವಾದಿ ಮಾಹಾತ್ಮ್ಯ

ಗಳು ವರ್ಣಿಸಲ್ಪಡುತ್ತವೆ. (c) ಇಂತಹ ಹರಿಯು ನಿಖಿಲ ಜಗತ್ತನ್ನು ಸೃಷ್ಟಿಸಿ ಅದಕ್ಕೆ ನಿಯಾಮಕನಾಗಿ ನಾನು ಬಹುರೂಪವುಳ್ಳವನಾಗುವೆನು. ಜಗತ್ತು ಅನೇಕ ವಿಧವಾಗಲಿ. ಎಂದು ಆಲೋಚಿಸಿದನು.

**ಭಾ ||** ಸ್ಯಾದಿತ್ಯಾಲೋಚನಾನ್ನಾನ್ಯತ್ತಪೋ ವಿಷ್ಣೋಃ ಕದಾಚನ |
ಅವತಾರೇಷ್ವನುಕೃತಿರ್ಬಾಹ್ಯವೃತ್ತ್ಯಾ ತಪಸ್ವಿನಾಂ ||

ಅ || ವಿಷ್ಣುವಿಗೆ ತಪಸ್ಸೆಂದರೆ ಜ್ಞಾನರೂಪವಾದ ಆಲೋಚನೆಯಿಂದ ವ್ಯತಿರಿಕ್ತವಾದ ಸಂತಾಪಾತ್ಮಕವಾಗಲೀ ವಿಚಾರಾತ್ಮಕವಾಗಲೀ ತಪಸ್ಸಿರುವುದಿಲ್ಲ. ಕೃಷ್ಣಾದ್ಯವತಾರಗಳಲ್ಲಿ ಇತರರನ್ನು ಕುರಿತು ತಪಸ್ಸುಮಾಡಿದ್ದರೆ ಅದು ತಪಸ್ವಿಜನರ ಅನುಕರಣವೆಂದೂ, ಹಾಗೆ ಹೊರಗಡೆಗೆ ತೋರಿಸಿಕೊಂಡುದೇ ವಿನಹಾ ಮನಃಪೂರ್ವಕ ಅಲ್ಲವೆಂದೂ ತಿಳಿಯತಕ್ಕದ್ದು.

**ಭಾ ||** ಸೃಷ್ಟಿರ್ನಾಮ ಸ್ವರೂಪಾತ್ತು ಬಹಿರ್ನಿಷ್ಕ್ರಮಣಂ ಸ್ಮೃತಂ ||

ಅ || ಪರಮಾತ್ಮನು ಸೃಷ್ಟಿಮಾಡುವುದೆಂದರೆ ಪ್ರಲಯದಲ್ಲಿ ತನ್ನ ಉದರದಲ್ಲಿಟ್ಟುಕೊಂಡುದನ್ನು ಜಾಡರಹುಳುವಿನಂತೆ ಕ್ರಮೇಣ ಹೊರಗೆಡುವುದೇ ಎಂದು ತಿಳಿಯತಕ್ಕದು.

**ಭಾ ||** ಯದ್ಯಪೀದಂ ಜಗತ್ಸರ್ವಂ ಸ್ವೋದರಸ್ಥಂ ಮಹಾತ್ಮನಃ |
ತಥಾಪ್ಯೇಷ ದ್ವಿತೀಯೇನ ರೂಪೇಣ ಬಹಿರಾಕ್ಷಿಪೇತ್ |
ರೂಪಾಂತರೇಣಾವಿಶಚ್ಚ ಜಗತ್ಸರ್ವಂ ಜನಾರ್ದನಃ ||

ಅ || ಯದ್ಯಪಿ ಈ ಸಮಸ್ತ ಜಗತ್ತನ್ನೂ ತನ್ನ ಹೊಟ್ಟೆಯೊಳಗಿದ್ದುದನ್ನು ಸೃಷ್ಟಿಸಲಿಕ್ಕೆ ಮೂಲರೂಪಿಗೇನೇ ಶಕ್ತಿಯುಂಟು. ಆದರೂ ಈ ಶ್ರೀಹರಿಯು ವಾಸುದೇವಾದಿ ಎರಡನೇ ರೂಪಗಳಿಂದ ಸೃಷ್ಟಿಸುತ್ತಾನೆ. ಹಾಗೆ ಸೃಷ್ಟಿಸಿದ ಸಮಸ್ತ ಜಗತ್ತನ್ನೂ ಶ್ರೀಜನಾರ್ದನನು ಅನಿರುದ್ಧಾದಿ ರೂಪಾಂತರಗಳಿಂದ ಪ್ರವೇಶಮಾಡಿದನು.

**ಭಾ ||** ತ್ಯಚ್ಚಾನಿರುಕ್ತಂ ವಿಜ್ಞಾನಂ ತಥಾ ನಿಲಯನಂ ಮಹಾನ್ |
ಸತ್ಯಂ ಪ್ರಾಣಸ್ತಥಾ ಶ್ರೀಶ್ಚ (b) ಸನ್ನಿರುಕ್ತಂ ತಥಾನೃತಂ ||
ಅವಿಜ್ಞಾನಂ ಚಾನಿಲಯನಂ ಪ್ರಕೃತಿ ಪ್ರಾಣಯೋಃ ಪರಂ |
(c) ತದ್ಗವಿಷ್ಣೋಸ್ತು ಸಂಬಂಧಾತ್ತ್ಯತಸ್ತನ್ನಾಮಕೋ ಹರಿಃ ||

ಅ || (a) ತ್ಯತ್, ಅನಿರುಕ್ತ, ವಿಜ್ಞಾನ, ನಿಲಯನ, ಸತ್ಯ ಎಂಬೀ ಐದು ಶಬ್ದಗಳಿಂದ ಮಹತ್ತತ್ವಾಭಿಮಾನಿಯಾದ ಚತುರ್ಮುಖನು, ಮುಖ್ಯಪ್ರಾಣನು, ಲಕ್ಷ್ಮಿಯು ಈ ಮೂರು ಜನರು ಹೇಳಲ್ಪಡುತ್ತಾರೆ. (b) ಹಾಗೆಯೇ ಸತ್, ನಿರುಕ್ತ, ಅನೃತ, ಅವಿಜ್ಞಾನ, ಅನಿಲಯನ ಎಂಬೀ ಐದು ಶಬ್ದಗಳಿಂದ ಲಕ್ಷ್ಮೀ, ಪ್ರಾಣ, ಚತುರ್ಮುಖ ಇವರಿಂದ ಇತರವಾದ ಜಗತ್ತು ಹೇಳಲ್ಪಡುತ್ತದೆ. (c) ಜಗದಂತರ್ಗತನಾದ ವಿಷ್ಣುಸಂಬಂಧದಿಂದಲೇ ಪ್ರಕೃತ್ಯಾದಿ ಜಗತ್ತು ತ್ಯದಾದಿ ಶಬ್ದವಾಚ್ಯವಾಗಿದೆ. ಸ್ವಾತಂತ್ರ್ಯವಾಗಿ ತತ್ತನ್ನಾಮಗಳುಳ್ಳವನು ಶ್ರೀಹರಿಯೊಬ್ಬನೇ.

**ಭಾ ||** ತತೋ ನಿಯಾಮಕಶ್ಚೇತಿ ತ್ಯದಾನಂತ್ಯಾದವಾಚ್ಯತಃ |
ಅನಿರುಕ್ತಂ ನಿಲಯನಂ ಸರ್ವಾಧಾರತ್ವತೋ ಹರಿಃ |
ವಿಜ್ಞಾನಂ ಸರ್ವವಿಜ್ಞಾನಾತ್ಸತ್ಯಂ ಸಾಧುಸ್ವರೂಪತಃ ||

ಅ ॥ ವ್ಯಾಪ್ತನೂ ನಿಯಾಮಕನೂ ಆದ್ದರಿಂದ 'ತ್ಯತ್' ಎಂತಲೂ. ಅಪಾರಮಹಿಮನಾದುದರಿಂದ ಸಂಪೂರ್ಣವಾಗಿ ವರ್ಣಿಸಲಸಾಧ್ಯನಾದ್ದರಿಂದ 'ಅನಿರುಕ್ತ'ನೆಂತಲೂ, ಸರ್ವಾಶ್ರಯನಾದುದರಿಂದ 'ನಿಲಯನ'ನೆಂತಲೂ, ಸರ್ವಜ್ಞನಾದುದರಿಂದ 'ವಿಜ್ಞಾನ'ವೆಂತಲೂ, ಸಾಧುಗುಣಸ್ವರೂಪನಾದುದರಿಂದ 'ಸತ್ಯ'ನೆಂತಲೂ ಶ್ರೀಹರಿಯು ಹೇಳಲ್ಪಡುತ್ತಾನೆ.

ಭಾ ॥ ಅವಸಾದ ಸುವಾಚ್ಯತ್ವ-ದೌರ್ಬಲ್ಯಾ-ಜ್ಞಪ್ತ್ಯ-ಸಾಧುತಾಃ ।
ಪ್ರಕೃತಿಪ್ರಾಣತೋಽನ್ಯತ್ರ ಕುರ್ವಂಸ್ತನ್ನಾಮಕೋ ಹರಿಃ ॥

ಅ ॥ ಪ್ರಕೃತಿ, ಪ್ರಾಣ, ಚತುರ್ಮುಖರಿಂದ ವ್ಯತಿರಿಕ್ತವಾದ ಜಗತ್ತಿಗೆ ಭೇದ, ವರ್ಣಿಸಿಕೊಳ್ಳುವಿಕೆ, ಅಸಾಮರ್ಥ್ಯ, ಅಜ್ಞಾನ, ಅಸಾಧುತ್ವ ಇವುಗಳನ್ನು ಪ್ರಾಪಿಸಿಕೊಡುತ್ತಿರುವುದರಿಂದ ಶ್ರೀಹರಿಯು ಕ್ರಮೇಣ ಸತ್, ನಿರುಕ್ತ, ಅನೃತ, ಅವಿಜ್ಞಾನ, ಅನಿಲಯನ ಎಂಬೀ ಐದು ಹೆಸರುಳ್ಳವನು.

ಭಾ ॥ *(a)* ಅತಃ ಸಾಧುಸ್ವರೂಪಃ ಸನ್ ಸತ್ಯನಾಮಾನೃತಾದಿಕಂ ।
ನಾಮಾನೇನ ಗತತ್ವಾದೇಃ *(b)* ಯದಿದಂ ಕಿಂ ಚ ಭಾಷಿತಂ ।
ಸನ್ನಿರುಕ್ತಾದಿಶಬ್ದೇನ ತತ್ಸರ್ವಂ ಸಾಧುತ್ವೈವ ಹಿ ॥

ಅ ॥ *(a)* ಹಾಗೆಯೇ ಮಂಗಲಸ್ವರೂಪನಾಗಿಯೇ ಎಲ್ಲಾ ಸ್ಥಳದಲ್ಲಿಯೂ ಇರುವುದರಿಂದ 'ಸತ್ಯ' ಎಂತ ಹೆಸರುಳ್ಳವನು. ಚೇಷ್ಟಕನಾದ ಹರಿಯಿಂದ ಪ್ರಾಪ್ತವಾದ ಪ್ರಯುಕ್ತ ಜಗತ್ತು ಅನೃತ (ಅನ+ಋತ) ವೆಂದು ಹೆಸರುಳ್ಳದ್ದು. ಹೀಗೆ ಅವಿಜ್ಞಾನಾದಿ ಶಬ್ದಗಳಲ್ಲಿಯೂ, ವ್ಯುತ್ಪತ್ತಿಯನ್ನು ತಿಳಿದುಕೊಳ್ಳತಕ್ಕದು. *(b)* ಸತ್, ನಿರುಕ್ತಾದಿ ಶಬ್ದಗಳಿಂದ ಯಾವುದಾವುದು ಹೇಳಲ್ಪಟ್ಟಿತೆ ? ಅವೆಲ್ಲವೂ ಮಂಗಳಸ್ವರೂಪವೇ.

ಭಾ ॥ ಅವಸಾದನಾದಿಹೇತುತ್ವಂ ಸಾಧುತ್ವೈವ ಹಿ ಸರ್ವಶಃ ।
ಅಸಾಧುತಾವಸಾದಾದಿಸ್ತತ್ಕರ್ತೃತ್ವಂ ಹಿ ಭಾಷಿತಂ ॥

ಅ ॥ ಶ್ರೀಹರಿಗೆ ಅವಸಾದನ ಎಂದರೆ ದುಃಖಾದಿ ಹೇತುತ್ವವು ಹೇಳಲ್ಪಟ್ಟದ್ದೆಲ್ಲವೂ ಮಂಗಲಸ್ವರೂಪವೇ. ದುಃಖಾದಿಗಳು ಅಮಂಗಲಸ್ವರೂಪಗಳು. ಶ್ರೀಹರಿಗಾದರೂ ದುಃಖಾದಿ ಕರ್ತೃತ್ವವನ್ನು ಹೇಳಿದ್ದಲ್ಲದೆ ದುಃಖಾದಿ ಸ್ವರೂಪವನ್ನು ಹೇಳಲಿಲ್ಲ. ॥ ೧೪ ॥

**ಮಂ ॥ ತದಪ್ಯೇಷ ಶ್ಲೋಕೋ ಭವತಿ । ಅಸದ್ವಾ ಇದಮಗ್ರ ಆಸೀತ್ । ತತೋ ವೈ ಸದಜಾಯತ । ತದಾತ್ಮಾನಸ್ಸ್ವಯಮಕುರುತ । ತಸ್ಮಾತ್ತತ್ಸುಕೃತಮುಚ್ಯತ ಇತಿ । ಯದ್ವೈ ತತ್ಸುಕೃತಂ । ರಸೋ ವೈ ಸಃ । ರಸಗ್ಂಹ್ಯೇವಾಯಂ ಲಬ್ಧ್ವಾನಂದೀ ಭವತಿ । ಕೋಹ್ಯೇವಾನ್ಯಾತ್ಕಃ ಪ್ರಾಣ್ಯಾತ್ । ಯದೇಷ ಆಕಾಶ ಆನಂದೋ ನ ಸ್ಯಾತ್ । ಏಷ ಹ್ಯೇವಾನಂದಯಾತಿ ॥ ೧೫ ॥**

ಅ ॥ ತದಪಿ=ಸ್ವರೂಪಬಾಹುಳ್ಯವಿಷಯದಲ್ಲಿ, ಏಷ ಶ್ಲೋಕಃ=ಈ ಮಂತ್ರವು, ಭವತಿ=ಸಮ್ಮತಿಯಾಗಿರುತ್ತದೆ, ಇದಂ=ಈ ಜಗತ್ತಿನ, ಅಗ್ರೇ=(ಸೃಷ್ಟಿಯ) ಪೂರ್ವದಲ್ಲಿ, ಅಸತ್=ಮೂಲರೂಪಿಯಾದ ಶ್ರೀಹರಿಯು, ಆಸೀತ್=ಇರುತ್ತಿದ್ದನು. ವೈ=ಶ್ರುತ್ಯಾದಿಪ್ರಸಿದ್ಧವು. ತತಃ=ಆ ನಾರಾಯಣನಿಂದ, ಸತ್=ಸನ್ನಾಮಕನಾದ ವಾಸುದೇವನು, ಅಜಾಯತ ವೈ=ಪ್ರಾದುರ್ಭವಿಸಿದನು. ತತ್=ಆ ವಾಸುದೇವಾಖ್ಯರೂಪವು, ಆತ್ಮಾನಂ=ತನ್ನನ್ನು, ಸ್ವಯಂ=ಸಂಕರ್ಷಣ ಪ್ರದ್ಯುಮ್ನಾದಿರೂಪದಿಂದ, ಅಕುರುತ=ಮಾಡಿತು. ತಸ್ಮಾತ್=ಆದುದರಿಂದಲೇ, ತತ್=ವಾಸುದೇವರೂಪವು, ಸುಕೃತಮಿತಿ=ಸುಕೃತವೆಂದು, ಉಚ್ಯತೇ=ಹೇಳಲ್ಪಡುತ್ತದೋ, ಯತ್ ಏತತ್ ಸುಕೃತಂ=ಯಾವುದು ಸುಕೃತನಾಮಕವೋ, ಸಃ=ಆ ವಾಸುದೇವನು, ರಸೋ ವೈ=ಆನಂದರೂಪನೇ. ಅಯಂ= ಈಜ್ಞಾನಿಯು, ಹಿ=ಆದುದರಿಂದಲೇ, ರಸಮೇವ=ಆನಂದರೂಪನನ್ನೇ, ಲಬ್ಧ್ವಾ=ಹೊಂದಿ, ಆನಂದೀ ಭವತಿ=ಸ್ವಯೋಗ್ಯವಾದ ಆನಂದಭರಿತನಾಗುತ್ತಾನೆ. ಏಷಃ ಆಕಾಶಃ=ಈ ಆಕಾಶನಾಮಕನಾದ ಹರಿಯು, ಆನಂದಃ=ಸುಖರೂಪನು, ನ ಸ್ಯಾತ್ ಯತ್=ಆಗದಿದ್ದಲ್ಲಿ, ಕಃ ಹಿ ಏವ=ಯಾರು ತಾನೇ, ಅನ್ಯಾತ್=ಪ್ರೇರಿಸ್ಯಾನು, ಕಃ=ಯಾವಾತನು, ಪ್ರಾಣ್ಯಾತ್=ಯಜ್ಞದಾನಾದಿಗಳಲ್ಲಿ ಪ್ರೇರಣೆಯನ್ನು ಮಾಡುವನು. ಹಿ=ಆದುದರಿಂದ, ಏಷ ಏವ=ಈ ವಾಸುದೇವನೇ, ಆನಂದಯಾತಿ=ಬ್ರಹ್ಮಾದಿ ನಿಖಿಲ ಜಗತ್ತನ್ನು ಸಂತೋಷಯುಕ್ತವಾದ್ದನ್ನಾಗಿ ಮಾಡುತ್ತಾನೆ. ॥ ೧೫ ॥

ಭಾ ॥ ಅನಾಸಾದ್ಯಸ್ತ್ವಸನ್ನಾಮಾ ಪೂರ್ವಂ ನಾರಾಯಣಾಭಿಧಃ ॥

ಅ ॥ ಪ್ರಲಯಕಾಲದಲ್ಲಿದ್ದ ನಾರಾಯಣಾಖ್ಯನಾದ ಶ್ರೀಹರಿಯು ಯಾರಿಂದಲೂ ಹೊಂದಲಶಕ್ಯನಾದುದರಿಂದ 'ಅಸತ್' ಎಂತ ಹೆಸರುಳ್ಳವನು.

ಭಾ ॥ ಸ ಆಸಾದ್ಯಶ್ಚ ಸನ್ನಾಮಾ ವಾಸುದೇವೋಽಭವತ್ಪ್ರಭುಃ ।

ಅ ॥ ಅಂತಹ ಶ್ರೀಹರಿಯು ಜ್ಞಾನಿಗಳಿಂದ ಪ್ರಾಪ್ಯನಾದುದರಿಂದ 'ಸತ್' ಎಂತ ಹೆಸರುಳ್ಳ ವಾಸುದೇವನಾದನು.

ಭಾ ॥ ಸ ವಾಸುದೇವಃ ಸ್ವಾತ್ಮಾನಂ ಚಕ್ರೇ ಸಂಕರ್ಷಣಾದಿಕಂ ।
ತಸ್ಮಾತ್ತತ್ಸುಕೃತಂ ನಾಮ ಸ ಆನಂದೋ ರಸಸ್ತತಃ ॥

ಅ ॥ ಆ ವಾಸುದೇವನು ತನ್ನನ್ನು ಸಂಕರ್ಷಣಾದಿ ರೂಪಗಳುಳ್ಳವನನ್ನಾಗಿ ಮಾಡಿಕೊಂಡನು. ಆ ಕಾರಣ ಆ ವಾಸುದೇವನು 'ಸುಕೃತ' (ಸು+ಕೃತ) ಎನ್ನಿಸಿಕೊಂಡಿದ್ದಾನೆ. ಆತನು ಪೂರ್ಣವಾದ ಆನಂದವುಳ್ಳವನು.

ಭಾ ॥ ಆನಂದಮೇನಂ ಸಂಪ್ರಾಪ್ಯ ಮುಕ್ತೋ ಮೋದೇ ನ್ನ ಚಾನ್ಯಥಾ ।

ಅ ॥ ವಾಸುದೇವನು ಪೂರ್ಣಾನಂದನಾದುದರಿಂದ ಮುಕ್ತನಾದವನು ಪೂರ್ಣಾನಂದ ಸ್ವರೂಪನಾದ ಶ್ರೀಹರಿಯನ್ನೇ ಹೊಂದಿ ಆನಂದಪೂರ್ಣನಾಗುತ್ತಾನಲ್ಲದೆ, ಆನಂದವಿಲ್ಲದವನನ್ನು ಹೊಂದಿ ಮುಕ್ತನು ಆನಂದಪಡಲಾರನು.

ಭಾ ॥ ಆದೀಪ್ತಸ್ತ್ವೇಷ ಭಗವಾನ್ ಯದ್ಯಾನಂದೋ ಭವೇನ್ನ ಚ ।
ಸಾಮಾನ್ಯಚೇಷ್ಟಾ ಧರ್ಮ್ಯಾಶ್ಚ ಕಸ್ಯ ಸ್ಯುಃಸ್ತನ್ಮೃತೇ ಪ್ರಭುಮ್ ॥

ಅ || ಪ್ರಕಾಶಸ್ವರೂಪನಾದ ಈ ವಾಸುದೇವನು ಆನಂದರೂಪನಲ್ಲದಿದ್ದರೆ ಆತನನ್ನು ಬಿಟ್ಟು ಯಾವಾತನಿಗೆ ಲೌಕಿಕ ಚೇಷ್ಟೆಗಳೂ ಧರ್ಮವಿಷಯೀಭೂತಗಳಾದ ವೈದಿಕ ವ್ಯಾಪಾರಗಳೂ ಆದಾವು.

ಭಾ || ಸುಖಂ ಲಬ್ಧ್ವಾ ಹಿ ಕುರುತೇ ಲೋಕಚೇಷ್ಟಾಂ ಜನಾರ್ದನಃ ।
ಅಲ್ಪಾತ್ಸುಖಾದಲ್ಪಕರ್ಮಾ ಪೂರ್ಣಾನಂದಾದ್ಧಿ ಸರ್ವಕೃತ್ ॥

ಅ || ಏಕೆಂದರೆ, ಶ್ರೀ ಜನಾರ್ದನನು ಪೂರ್ಣ ಸುಖವನ್ನು ಹೊಂದಿಯೇ ವೈದಿಕ ಲೌಕಿಕ ವ್ಯಾಪಾರಗಳನ್ನು ಮಾಡುತ್ತಾನೆ. ಅಲ್ಪಸುಖದಿಂದ ಅಲ್ಪಪ್ರವೃತ್ತಿಯುಳ್ಳವನು (ಲೋಕದಲ್ಲಿ) (ದೃಷ್ಟನಾಗುತ್ತಾನೆ.) ಹರಿಯು ಪೂರ್ಣಾನಂದನಾದ ಪ್ರಯುಕ್ತವೇ ಮಹಾ ಪ್ರವೃತ್ತಿಯುಳ್ಳವನಾಗಿದ್ದಾನೆ.

ಭಾ || ನಹ್ಯಾರ್ತಾಃ ಕರ್ಮ ಕುರ್ವಂತಿ ಮುಗ್ಧಾಶ್ಚೈವ ವಿಶೇಷತಃ ।
ತಸ್ಮಾತ್ ಯಾದೃಕ್ಸುಖಂ ತಾದೃಕ್ಕರ್ಮ ಪೂರ್ಣಸುಖಸ್ತತಃ ।
ಸರ್ವಕೃತ್ತ್ವಾತ್ಪರೋ ವಿಷ್ಣುಃ ॥

ಅ || ಲೋಕದಲ್ಲಿ ದುಃಖಿಗಳು ಕರ್ಮವನ್ನು ಮಾಡುವುದಿಲ್ಲ. ಮೂರ್ಖತರಂತೂ ಸುತರಾಂ ಮಾಡುವುದಿಲ್ಲ. ಆದಕಾರಣ ಯಾವ ರೀತಿ ಸುಖವಿದೆಯೋ ಅದನ್ನನುಸರಿಸಿಯೇ ಪ್ರವೃತ್ತಿಯು ಇರುವುದು. ಮಹಾಕರ್ತೃವಾದ ಪ್ರಯುಕ್ತ ಆ ಸರ್ವೋತ್ತಮನಾದ ವಿಷ್ಣುವೇ ಪೂರ್ಣಾನಂದನು.

ಭಾ || ಆಹ ತಸ್ಮಾತ್ಸನಾತನೀ । ಸುಖಂ ಲಬ್ಧ್ವಾ ಕರೋತೀತಿ
ಛಂದೋಗಾನಾಂ ಶ್ರುತಿಃ ಪರಾ ।
ಅಲಬ್ಧ್ವಾ ತು ಸುಖಂ ನೈವ ಕರೋತೀತ್ಯಪಿ ಸಾದರಂ ॥

ಅ || ಆದುದರಿಂದ ಶಾಶ್ವತವಾಗಿಯೂ ಅತ್ಯುತ್ತಮವಾಗಿಯೂ ಇರುವ ಸಾಮಶಾಖಿಗಳ ಶ್ರುತಿಯು "ವಿಷ್ಣುವು ಆನಂದವನ್ನು ಹೊಂದಿಯೇ ಸೃಷ್ಟಿಯನ್ನು ಮಾಡುತ್ತಾನೆಂದೂ, ಪೂರ್ಣಾನಂದವನ್ನು ಹೊಂದದೆ ಮಾಡುವುದಲ್ಲವೆಂತಲೂ ಆದರದಿಂದ ಹೇಳುತ್ತದೆ."

ಭಾ || ತತ್ಪೂರ್ಣಾನಂದದೇವೇನ ಕಾರಿತಃ ಪ್ರಾಣಿತಿ ಸ್ಫುಟಂ ।
ಸರ್ವಲೋಕಃ ಸ ಏವೈಕಃ ಆನಂದಯತಿ ಚಾಖಿಲಮ್ ॥

ಅ || ಆದಕಾರಣ ಪೂರ್ಣಾನಂದನಾದ ಶ್ರೀಹರಿಯಿಂದ ನಿಖಿಲ ಜಗತ್ತು ಪ್ರೇರಿತವಾಗಿ ನಿಖಿಲ ವ್ಯಾಪಾರಗಳನ್ನೂ ಚೆನ್ನಾಗಿ ಮಾಡುತ್ತದೆ. ಆತನೊಬ್ಬನೇ ನಿಖಿಲ ಜಗತ್ತನ್ನೂ ಆನಂದಗೊಳಿಸುತ್ತಾನೆ. ॥ ೧೫ ॥

ಮಂ || ಯದಾ ಹ್ಯೇವೈಷ ಏತಸ್ಮಿನ್ನದೃಶ್ಯೇಽನಾತ್ಮ್ಯೇಽನಿರುಕ್ತೇಽನಿಲಯನೇಽಭಯಂ ಪ್ರತಿಷ್ಠಾಂ ವಿಂದತೇ। ಅಥ ಸೋಽಭಯಂ ಗತೋ ಭವತಿ । ಯದಾ ಹ್ಯೇವೈಷ ಏತಸ್ಮಿನ್ನುದರಮಂತರಂ ಕುರುತೇ । ಅಥ ತಸ್ಯ ಭಯಂ ಭವತಿ । ತತ್ತ್ವೇವ ಭಯಂ ವಿದುಷೋಽಮನ್ವಾನಸ್ಯ । ತದಪ್ಯೇಷ

**ಶ್ಲೋಕೋ ಭವತಿ । ಭೀಷಾಸ್ಮಾದ್ವಾತಃ ಪವತೇ । ಭೀಷೋದೇತಿ ಸೂರ್ಯಃ। ಭೀಷಾಸ್ಮಾದಗ್ನಿಶ್ಚೇಂದ್ರಶ್ಚ। ಮೃತ್ಯುರ್ಧಾವತಿ ಪಂಚಮ ಇತಿ ॥ ೧೬ ॥**

ಅ ॥ ಯದಾ ಹಿ ಏವ=ಯಾವಾಗ, ಏಷಃ=ಜ್ಞಾನಿಯು, ಅದೃಶ್ಯೇ=ಅಜ್ಞರಿಗಗೋಚರನಾದ, ಅನಾತ್ಮ್ಯೇ=ಜೀವಗುಣರಹಿತನಾದ, ಅನಿರುಕ್ತೇ=ಸಂಪೂರ್ಣವಾಗಿ ವೇದಗಳಿಂದಲೂ ಪ್ರತಿಪಾದ್ಯನಾಗದಿರುವ, ಅನಿಲಯನೇ=ಆಶ್ರಯರಹಿತನಾದ, ಏತಸ್ಮಿನ್=ಈ ಹರಿಯಲ್ಲಿ, ಅಭಯಂ=ಭಯವಿಲ್ಲದೇನೇ, ಪ್ರತಿಷ್ಠಾಂ=ಧ್ಯಾನರೂಪ ಸ್ಥಿತಿಯನ್ನು, ವಿಂದತೇ=ಹೊಂದುವನೋ, ಅಥ=ಆವಾಗ, ಸಃ=ಆ ಅಧಿಕಾರಿಯು, ಅಭಯಂ=ಹರಿಯನ್ನು, ಗತಃ=ಹೊಂದಿದವನು, ಭವತಿ=ಆಗುತ್ತಾನೆ. ಯದಾಹಿ ಏವ=ಯಾವಾಗ, ಏಷಃ=ಈ ಅಧಿಕಾರಿಯು, ಉದರಂ=ಜೀವರಲ್ಲಿ ಪರಸ್ಪರವಾಗಿರುವ, ಅಂತರಂ=ಭೇದವನ್ನು, ಏತಸ್ಮಿನ್=ಈ ವಿಷ್ಣುವಿನಲ್ಲಿ, ಕುರುತೇ=ಮಾಡುತ್ತಾನೋ, ಅಥ=ಆವಾಗ, ತಸ್ಯ=ಆ ಅಧಿಕಾರಿಗೆ, ಭಯಂ=ಭೀತಿಯು, ಭವತಿ=ಆಗುತ್ತದೆ. ತತ್ ಏವ ತು=ಆ ಬ್ರಹ್ಮವೇ, ವಿದುಷಃ=ಜ್ಞಾನಿಗೂ, ಅಮನ್ವಾನಸ್ಯ=ಅಜ್ಞಾನಿಗೂ, ಭಯಂ=ಭಯಂಕರವು. ತದಪಿ=ಆ ವಿಷಯದಲ್ಲಿ, ಏಷಃ ಶ್ಲೋಕಃ=ಮೇಲಿನ ಮಂತ್ರವು, ಭವತಿ=ಸಮ್ಮತಿಯಾಗಿರುತ್ತದೆ. ಅಸ್ಮಾತ್=ಈ ಹರಿಯ, ಭೀಷಾ=ಭಯದಿಂದ, ವಾತಃ=ಗಾಳಿಯು, ಪವತೇ=ಶುದ್ಧಿಯನ್ನುಮಾಡುತ್ತದೆ. ಭೀಷಾ=(ಇವನ) ಭಯದಿಂದ, ಸೂರ್ಯಃ=ಸೂರ್ಯನು, ಉದೇತಿ=ಉದಯಿಸುತ್ತಾನೆ. ಅಸ್ಮಾತ್=ಇವನ,ಭೀಷಾ=ಭಯದಿಂದ, ಅಗ್ನಿಶ್ಚ=ಅಗ್ನಿಯು, ಇಂದ್ರಶ್ಚ=ಇಂದ್ರನು, (ತಮ್ಮ ವ್ಯಾಪಾರಗಳನ್ನು ಮಾಡುತ್ತಾರೆ.) ಪಂಚಮಃ=ಮಾರಕನಾದ, ಮೃತ್ಯುಃ=ಯಮನು, ಧಾವತಿ=ತನ್ನ ವ್ಯಾಪಾರಕ್ಕಾಗಿ ಓಡುತ್ತಾನೆ.

**ಭಾ** ॥ ತಸ್ಮಾದದೃಶ್ಯೇ ಜೀವಾನಾಂ ಗುಣಾನಾಮಪ್ಯಸಂಗತೇಃ ।
ಅನಾತ್ಮ್ಯೇಽಥ ಗುಣಾನಂತ್ಯಾದನಿರುಕ್ತೇ ನಿರಾಶ್ರಯಾತ್ ।
ಅನಿಲಯನೇಽಭಯತ್ವೇನ ಯದಾ ಜ್ಞಾನೇನ ತಿಷ್ಠತಿ ।
ತದಾ ಭಯಂ ಹರಿಂ ಗಚ್ಛೇತ್ ನೈವಾಜ್ಞಾನೀ ಕಥಂಚನ ॥

ಅ ॥ ಹಿಂದೆ ಹೇಳಿದರೀತ್ಯಾ ಹರಿಗೇನೇ ಸ್ವಾತಂತ್ರ್ಯವಿರುವುದರಿಂದ ಅಜ್ಞದೃಷ್ಟಿಗೆ ಅಗೋಚರನಾಗಿಯೂ ಜೀವರಲ್ಲಿರತಕ್ಕ ಅಲ್ಪಜ್ಞತ್ವ ಅಲ್ಪಸುಖ ಇತ್ಯಾದಿ ಗುಣಗಳಿಗೆ ಸಂಬಂಧವಿಲ್ಲದಿರುವುದರಿಂದ ಅನಾತ್ಮ್ಯನಾಗಿಯೂ, ಗುಣಾಧಿಕನಾದುದರಿಂದ ಅನಿರುಕ್ತನಾಗಿಯೂ, ಪರಾಶ್ರಯವಿಲ್ಲದುದರಿಂದ ಅನಿಲಯನನಾಗಿಯೂ ಇರುವ ಶ್ರೀ ಹರಿಯಲ್ಲಿ ಭಯವಿಲ್ಲದೇನೇ ಜ್ಞಾನವುಳ್ಳವನಾಗುತ್ತಾನೋ ಆ ಜ್ಞಾನಿಯು ಭಯಪರಿಹಾರಕನಾದ ಹರಿಯನ್ನೇ ಹೊಂದುವನು. ಅಜ್ಞಾನಿಯು ಯಾವ ರೀತಿಯಿಂದಲೂ ಹರಿಯನ್ನು ಹೊಂದಲಾರನು.

**ಭಾ** ॥ ಯದೇತಸ್ಮಿನ್ ಪರೇ ವಿಷ್ಣೌ ಉದರಂ ಜೀವಗತ್ವತಃ ।
ಭೇದಂ ಕರೋತಿ ತೇನೈವ ಭಯಮಸ್ಯ ಮಹದ್ಭವೇತ್ ॥

ಅ ॥ ಯಾವಾಗ ಅಧಿಕಾರಿಯು ಜೀವರಲ್ಲಿ ಪರಸ್ಪರವಾಗಿರುವ ಭೇದವನ್ನು ಈ ಸರ್ವೋತ್ತಮವಾದ ವಿಶ್ವತೈಜಸಾದಿ ಭಗವದ್ರೂಪಸಮುದಾಯದಲ್ಲಿಯೂ ತಿಳುಕೊಳ್ಳುತ್ತಾನೋ ಆ ಹರಿದ್ರೋಹದಿಂದಲೇ ತಮಸ್ಸೆಂದು ಪ್ರಸಿದ್ಧವಾದ ಮಹಾಭಯವು ಆತನಿಗುಂಟಾಗುತ್ತದೆ.

ಭಾ ॥ ಅ ಇತ್ಯುಕ್ತಃ ಪರೋ ವಿಷ್ಣುರೇಭ್ಯ ಉಚ್ಚಃ ಸ ಏವತು ।
ತ ಉದಾ ಜೀವಸಂಘಾಃ ಸ್ಯುರುದರಂ ತದ್ಗತಾಂತರಮ್ ॥

ಅ ॥ ಸರ್ವೋತ್ತಮನಾದ ವಿಷ್ಣುವು 'ಅ' ಎಂದು ಹೇಳಲ್ಪಡುತ್ತಾನೆ. ಅವನೇ ಎಲ್ಲಾ ಜೀವರಿಂದಲೂ ಉಚ್ಚನಾಗಿದ್ದಾನೆ. ಆದ ಕಾರಣ ಜೀವರ ಸಮುದಾಯವು 'ಉದಾ' ಎನ್ನಿಸಿಕೊಳ್ಳುತ್ತಾವೆ. ಆ ಜೀವರಲ್ಲಿರತಕ್ಕ ಭೇದವು 'ಉದರ' ಎನ್ನಿಸಿಕೊಳ್ಳುತ್ತದೆ.

ಭಾ ॥ ತದೇವ ಬ್ರಹ್ಮ ಭಯಕೃದ್ವಿದುಷೋಽವಿದುಷಸ್ತಥಾ ।
ವಿದುಷೋಽಲ್ಪಭಯಂ ಕುರ್ಯಾತ್ ಯಾವನ್ಮುಕ್ತಿಂ ವ್ರಜತ್ಯಸೌ ।
ಅಥಾಭಯಂ ಭವೇದ್ಬ್ರಹ್ಮ ತಸ್ಯ ಮುಕ್ತಸ್ಯ ಸರ್ವದಾ ॥

ಅ ॥ ಆ ಪೂರ್ವೋಕ್ತವಾದ ಪರಬ್ರಹ್ಮವೇ ಜ್ಞಾನಿಯಾದವನಿಗೂ ಅಜ್ಞಾನಿಯಾದವನಿಗೂ ಭಯವನ್ನುಂಟುಮಾಡತಕ್ಕದಾಗಿರುತ್ತದೆ. ಆದರೆ ಜ್ಞಾನಿಗೆ ಆತನು ಮುಕ್ತಿಯನ್ನು ಹೊಂದುವ ತನಕವೇ ಅಲ್ಪವಾದ ಭಯವನ್ನು ಮಾಡುತ್ತಿರುತ್ತಾನೆ. ಮುಕ್ತಿಯಾದ ಮೇಲೆ ಆತನಿಗೆ ಅಭಯವನ್ನೇ ಕೊಡುತ್ತಿರುತ್ತಾನೆ.

ಭಾ ॥ ತಸ್ಮಾದ್ವಾಯ್ವಾದಯೋ ದೇವಾಃ ವಿದ್ವಾಂಸೋಽಪಿ ವಿಶೇಷತಃ ।
ಭೀತಾಃ ಸ್ವಕರ್ಮ ಕುರ್ವಂತಿ ವಿಷ್ಣೋಃ ಪ್ರೀತ್ಯರ್ಥಮಂಜಸಾ ॥

ಅ ॥ ಆದುದರಿಂದಲೇ ವಿಶೇಷವಾಗಿ ಜ್ಞಾನಿಗಳಾದ ವಾಯ್ವಾದಿ ದೇವತೆಗಳೂ ಸ್ವಸ್ವ ಕರ್ಮಗಳನ್ನು ಮಾಡದಿದ್ದಲ್ಲಿ ಶ್ರೀ ಹರಿಗೆ ಅಪ್ರೀತಿಯುಂಟಾಗುವದೆಂಬ ಭೀತಿಯಿಂದಲೇ ಆತನ ಪ್ರೀತಿಗಾಗಿಯೇ ತಮ್ಮ ತಮ್ಮ ಕಾರ್ಯಗಳನ್ನು ಚೆನ್ನಾಗಿ ಮಾಡುತ್ತಿರುತ್ತಾರೆ.

ಭಾ ॥ ಅಮನ್ವಾನಸ್ಯ ಸುರ್ವಿಷ್ಣುಃ ಕುರ್ಯಾನ್ನಿತ್ಯಂ ಮಹದ್ಭಯಂ ।
ತಮ ಆಖ್ಯಮನುತ್ಥಾನಂ ವಿದುಷಾಂ ನಿಯಮೇನ ತು ।
ಸ್ಯಾದೇವ ಮೋಕ್ಷಃ ॥

ಅ ॥ ಅಜ್ಞಾನಿಯಾದ ಪುರುಷನಿಗೆ ಶ್ರೀ ವಿಷ್ಣುವು ತಮಸ್ಸೆಂದು ಪ್ರಸಿದ್ಧವಾದ ತಿರುಗಿ ಏಳಿಗೆಯಿಲ್ಲದ ಮಹಾಭಯವನ್ನು ನಿರಂತರವೂ ಮಾಡುತ್ತಿರುತ್ತಾನೆ. ಈ ವರೆಗೆ ಹೇಳಿದ ಶ್ರೀ ಹರಿಯ ಮಹಿಮೆಯನ್ನು ತಿಳಿದವರಿಗೆ ಮೋಕ್ಷವು ಆಗಿಯೇ ಆಗುತ್ತದೆ. ॥ ೧೬ ॥

**ಮಂ ॥ ಸೈಷಾನಂದಸ್ಯ ಮೀಮಾಂಸಾ ಭವತಿ । ಯುವಾ ಸ್ಯಾತ್ಸಾಧುಯುವಾಧ್ಯಾಯಕಃ । ಆಶಿಷ್ಠೋ ದೃಢಿಷ್ಠೋ ಬಲಿಷ್ಠಃ । ತಸ್ಯೇಯಂ ಪೃಥಿವೀ ಸರ್ವಾ ವಿತ್ತಸ್ಯ ಪೂರ್ಣಾ ಸ್ಯಾತ್ । ಸ ಏಕೋ ಮಾನುಷ ಆನಂದಃ । ತೇ ಯೇ ಶತಂ ಮಾನುಷಾ ಆನಂದಾಃ । ಸ ಏಕೋ ಮನುಷ್ಯಗಂಧರ್ವಾಣಾಮಾನಂದಃ । ಶ್ರೋತ್ರಿಯಸ್ಯ ಚಾಕಾಮಹತಸ್ಯ ॥ ೧೭ ॥**

ಅ ॥ ಸಾ=ಪ್ರಮಾಣಸಿದ್ಧವಾದ, ಏಷಾ=ಮೇಲೆ ಹೇಳುವ, ಆನಂದಸ್ಯ ಮೀಮಾಂಸಾ =ವಿಚಿತ್ರವಾದ ಆನಂದ ವಿಷಯಕ ವಿಚಾರವು, ಭವತಿ=ಆಗುತ್ತದೆ. ಯುವಾ=ವಿಷ್ಣುವಿನಿಂದ ಕೂಡಿಕೊಂಡು ಹೋಗುವವನು, ಸಾಧುಯುವಾ=ಆನಂದಾದಿ ಗುಣಯುಕ್ತನೂ, ಆಧ್ಯಾಯಕಃ =ಚನ್ನಾಗಿ ಅಧ್ಯಯನ ಮಾಡಿದವನು, ಆಶಿಷ್ಠಃ=ನಿರಂತರದಲ್ಲಿಯೂ ಪೂರ್ಣ ಸುಖವುಳ್ಳವನು, ದೃಢಿಷ್ಠಃ=ವಿಕಾರವಿಲ್ಲದಿದ್ದವನು. ಬಲಿಷ್ಠಃ=ಬಹುಸಾಮರ್ಥ್ಯವುಳ್ಳವನು, ಸ್ಯಾತ್=ಆದಾನು. ತಸ್ಯ=ಈ ಗುಣಯುಕ್ತನಾದ ಮುಕ್ತಚಕ್ರವರ್ತಿಗೆ (ತ್ರೇತಾಯುಗದಲ್ಲಿ ಸಂಸಾರಾವಸ್ಥೆಯಲ್ಲಿ,) ಇಯಂ ಸರ್ವಾ ಪೃಥಿವೀ=ಈ ಎಲ್ಲಾ ಭೂಮಿಯೂ, ವಿತ್ತಸ್ಯ=ದ್ರವ್ಯದಿಂದ, ಪೂರ್ಣಾ=ತುಂಬಿದ್ದು, ಸ್ಯಾತ್=ಆದರೆ (ಯಾವ ಸುಖವ್ರೋ) ಸಃ=ಅದು, ಮಾನುಷಃ=ಮುಕ್ತ ಚಕ್ರವರ್ತಿಯು, ಏಕಃ ಆನಂದಃ=ಒಂದು ಆನಂದವು, ತೇ=ಪ್ರಸಿದ್ಧಗಳಾದ, ಯೇ=ಯಾವ, ಮಾನುಷಾಃ=ಮನುಷ್ಯಮುಕ್ತಚಕ್ರವರ್ತಿ ಸಂಬಂಧಿಗಳಾದ, ಶತಂ ಆನಂದಾಃ=ನೂರು ಆನಂದಗಳೋ, ಸಃ= ಅದು, ಶ್ರೋತ್ರಿಯಸ್ಯ ಚ=ಶ್ರುತಿಫಲವನ್ನು ಹೊಂದಿದ, ಅಕಾಮಹತಸ್ಯ ಚ=ಕಾಮೋಪದ್ರವ ರಹಿತರಾದ, ಮನುಷ್ಯಗಂಧರ್ವಾಣಾಂ=ಮನುಷ್ಯಗಂಧರ್ವರಿಗೆ, ಏಕಃ ಆನಂದಃ=ಒಂದು ಆನಂದವು.

ಭಾ ॥ ತತ್ರಾಪ್ಯಸ್ತಿ ಹ್ಯಾನಂದಸ್ಯ ವಿಚಿತ್ರತಾ ॥

ಅ ॥ ಆ ಮುಕ್ತಿಯಲ್ಲಿಯೂ ಆನಂದದಲ್ಲಿ ತರತಮಭಾವವು ಇರುತ್ತದೆ.

ಭಾ ॥ *(a)* ಯಸ್ತು ಸಾಧುಗುಣೈರ್ಯುಕ್ತಃ ತಸ್ಯೈವಾಪ್ಯಖಿಲಾ ಮಹೀ ।
ತ್ರೇತಾಯುಗೇ ಚಕ್ರವರ್ತೀ *(b)* ಯದಾ ಮುಕ್ತಸ್ತು ಸಂಸೃತೇಃ ।
ಅಧೀತಿ ಫಲಪೂರ್ಣತ್ವಾದಾಧ್ಯಾಯಕ ಇತೀರಿತಃ ॥

ಅ ॥ *(a)* ಯಾವಾತನು ತ್ರೇತಾಯುಗದಲ್ಲಿ ಚಕ್ರವರ್ತಿಯಾಗಿಯೂ, ಸಾಧುಗುಣಯುಕ್ತನಾಗಿಯೂ ಇರುತ್ತಾನೋ, ಆತನಿಗೆ ಸಮಸ್ತ ಭೂಮಿಯೂ ಅಧೀನವಾಗಿದೆ. *(b)* ಆತನೇ ಸಾಧುಗುಣಗಳಿಂದ ಯುಕ್ತನಾದ ಪ್ರಯುಕ್ತ ಲಿಂಗಶರೀರದಿಂದ ಬಿಡುಗಡೆಯನ್ನು ಯಾವಾಗ ಹೊಂದುತ್ತಾನೋ, ಆಗ ಅಧ್ಯಯನಫಲವನ್ನು ಹೊಂದಿದವನಾದುದರಿಂದ 'ಆಧ್ಯಾಯಕ' ನೆನಿಸಿಕೊಳ್ಳುತ್ತಾನೆ.

ಭಾ ॥ ಸ ಏವ ವಿಷ್ಣುನಾ ಯುಕ್ತೋ ಗಚ್ಛತೀತಿ ಯುವಾ ಸ್ಮೃತಃ ॥

ಅ ॥ ಆತನೇ ಸಂಸಾರದಿಂದ ಬಿಡುಗಡೆಯನ್ನು ಹೊಂದಿ ವಿಷ್ಣುವಿನಿಂದ ಕೂಡಿಕೊಂಡು ಹೋಗುವ ಪ್ರಯುಕ್ತ 'ಯುವಾ' ಎನ್ನಿಸಿಕೊಳ್ಳುತ್ತಾನೆ.

ಭಾ ॥ ಏಕಾನಂದಸ್ವರೂಪೋಽಸೌ ಮಾನುಷೋ ಮುಕ್ತ ಇಷ್ಯತೇ ॥

ಅ ॥ ಈ ಮನುಷ್ಯ ಚಕ್ರವರ್ತಿಯು ಮುಕ್ತನಾದವನು ಒಂದು ಆನಂದವುಳ್ಳವನೆಂದು ತಿಳಿಯಲ್ಪಟ್ಟದ್ದಾನೆ.

ಭಾ ॥ ತಸ್ಮಾಚ್ಛತಗುಣಾನಂದಾ ಗಂಧರ್ವಾ ಮಾನುಷಾತ್ಮಕಾಃ ॥

ಅ ॥ ಮುಕ್ತನಾದ ಮನುಷ್ಯ ಚಕ್ರವರ್ತಿಯಿಂದ ಮುಕ್ತರಾದ ಮನುಷ್ಯ ಗಂಧರ್ವರು ನೂರು ಪಾಲು ಹೆಚ್ಚಿಗೆ ಆನಂದವುಳ್ಳವರು.

ಭಾ ॥ ಮುಕ್ತಾ ಶ್ರುತಿಫಲಂ ಪ್ರಾಪ್ತಾಃ ತತಃ ಕಾಮಾಹತಾಸ್ತಥಾ ॥

ಅ ॥ ಮುಕ್ತರಾದ ಪ್ರಯುಕ್ತ ಶ್ರವಣಫಲವನ್ನು ಸಂಪೂರ್ಣವಾಗಿ ಹೊಂದಿದ ಪ್ರಯುಕ್ತ ಶ್ರೋತ್ರಿಯರಾಗಿದ್ದಾರೆ. ಹಾಗೂ ಸಮಸ್ತ ಕಾಮಗಳನ್ನೂ ಹೊಂದಿದವರಾದುದರಿಂದ ಕಾಮೋಪದ್ರವರಹಿತರಾದುದರಿಂದಲೂ ಅಕಾಮಹತರಾಗಿರುತ್ತಾರೆ ॥ ೧೭ ॥

ಮಂ ॥ ತೇ ಯೇ ಶತಂ ಮನುಷ್ಯಗಂಧರ್ವಾಣಾಮಾನಂದಾಃ । ಸ ಏಕೋ ದೇವಗಂಧರ್ವಾಣಾಮಾನಂದಃ। ಶ್ರೋತ್ರಿಯಸ್ಯ ಚಾಕಾಮಹತಸ್ಯ ॥ ॥ ೧೮ ॥ ತೇ ಯೇ ಶತಂ ದೇವಗಂಧರ್ವಾಣಾಮಾನಂದಾಃ। ಸ ಏಕಃ ಪಿತೄಣಾಂ ಚಿರಲೋಕಲೋಕಾನಾಮಾನಂದಃ । ಶ್ರೋತ್ರಿಯಸ್ಯ ಚಾಕಾಮಹತಸ್ಯ ॥ ೧೯ ॥ ತೇ ಯೇ ಶತಂ ಪಿತೄಣಾಂ ಚಿರಲೋಕಲೋಕಾನಾಮಾನಂದಾಃ । ಸ ಏಕ ಆಜಾನಜಾನಾಂ ದೇವಾನಾಮಾನಂದಃ । ಶ್ರೋತ್ರಿಯಸ್ಯ ಚಾಕಾಮಹತಸ್ಯ ॥ ೨೦ ॥ ತೇ ಯೇ ಶತಮಾಜಾನಜಾನಾಂ ದೇವಾನಾಮಾನಂದಾಃ । ಸ ಏಕಃ ಕರ್ಮದೇವಾನಾಂ ದೇವಾನಾಮಾನಂದಃ । ಯೇ ಕರ್ಮಣಾ ದೇವಾನಪಿಯಂತಿ । ಶ್ರೋತ್ರಿಯಸ್ಯ ಚಾಕಾಮಹತಸ್ಯ ॥ ೨೧ ॥

ಅ ॥ ತೇ ಯೇ ಶತಂ ಮನುಷ್ಯಗಂಧರ್ವಾಣಾಂ ಆನಂದಾಃ=(ಹಿಂದಿನದ್ದೇ ಅರ್ಥ.) ಸಃ ಶ್ರೋತ್ರಿಯಸ್ಯ ಚ ಅಕಾಮಹತಸ್ಯ ದೇವಗಂಧರ್ವಾಣಾಂ=ಸಾಕ್ಷಾದ್ದೇವದೂತರಿಗೆ, ಏಕಃ ಆನಂದಃ=(ಹಿಂದಿನದ್ದೇ ಅರ್ಥ.)

ಅನ್ವಯಾರ್ಥಗಳನ್ನು ಮುಂದೆಯೂ ಇದೇ ಕ್ರಮದಲ್ಲಿಟ್ಟುಕೊಳ್ಳಬೇಕು. ಚಿರಲೋಕಲೋಕಾನಾಂ ಚಿರಲೋಕ=ಅರ್ಯಮಾದಿ ಉತ್ತಮ ಪಿತೃಗಳಿಂದ ಅಧಿಷ್ಠಿತವಾದ ಲೋಕವೇ, ಲೋಕಾನಾಂ=ಆಶ್ರಯವಾಗಿವುಳ್ಳ, ಪಿತೃಣಾಂ=ಪಿತೃದೇವತೆಗಳಿಗೆ, ಆಜಾನಜಾನಾಂ ದೇವಾನಾಂ=ವಿಶೇಷನಾಮವಿಲ್ಲದೆ ದೇವತೆಗಳ ಕುಲೋತ್ಪನ್ನರಾದ ದೇವತೆಗಳಿಗೆ, ಯೇ=ಯಾವ ಬಲ್ಯಾದಿಗಳು, ಕರ್ಮಣಾ=ಭೂದಾನಾದಿರೂಪ ಕರ್ಮದಿಂದ, ದೇವಾನ್=ದೇವತ್ವವನ್ನು, ಅಪಿಯಂತಿ=ಹೊಂದಿದ್ದಾರೋ, ಕರ್ಮದೇವಾನಾಂ ದೇವಾನಾಂ=ಕರ್ಮದಿಂದ ದೇವತ್ವವನ್ನು ಹೊಂದಿದ, ಅಂತಹ ದೇವತೆಗಳಿಗೆ. ॥ ೨೧ ॥

ಮಂ ॥ ತೇ ಯೇ ಶತಂ ಕರ್ಮದೇವಾನಾಂ ದೇವಾನಾಮಾನಂದಃ । ಸ ಏಕೋ ದೇವಾನಾಮಾನಂದಃ । ಶ್ರೋತ್ರಿಯಸ್ಯ ಚಾಕಾಮಹತಸ್ಯ ॥

ತೇ ಯೇ ಶತಂ ದೇವಾನಾಮಾನಂದಾಃ । ಸ ಏಕ ಇಂದ್ರಸ್ಯಾನಂದಃ ।
ಶ್ರೋತ್ರಿಯಸ್ಯ ಚಾಕಾಮಹತಸ್ಯ ॥ ೨೩ ॥ ತೇ ಯೇ ಶತಮಿಂದ್ರಸ್ಯಾ
ನಂದಾಃ । ಸ ಏಕೋ ಬೃಹಸ್ಪತೇರಾನಂದಃ । ಶ್ರೋತ್ರಿಯಸ್ಯ ಚಾಕಾ
ಮಹತಸ್ಯ ॥ ೨೪ ॥ ತೇ ಯೇ ಶತಂ ಬೃಹಸ್ಪತೇರಾನಂದಾಃ । ಸ
ಏಕಃ ಪ್ರಜಾಪತೇರಾನಂದಃ । ಶ್ರೋತ್ರಿಯಸ್ಯ ಚಾಕಾಮಹತಸ್ಯ ॥ ೨೫ ॥
ತೇ ಯೇ ಶತಂ ಪ್ರಜಾಪತೇರಾನಂದಾಃ । ಸ ಏಕೋ ಬ್ರಹ್ಮಣ
ಆನಂದಃ । ಶ್ರೋತ್ರಿಯಸ್ಯ ಚಾಕಾಮಹತಸ್ಯ ॥ ೨೬ ॥

ಅ ॥ ದೇವಾನಾಂ=ಸೃಷ್ಟ್ಯಾದಿಯಲ್ಲಿ ದೇವತ್ವವನ್ನು ಹೊಂದಿದ ತತ್ವಾಭಿಮಾನಿ ದೇವತೆಗಳಿಗೆ. ॥ ೨೨ ॥ ಇಂದ್ರಸ್ಯ=ದಕ್ಷ ಪ್ರಜಾಪತಿಗೆ. ॥ ೨೩ ॥ ಬೃಹಸ್ಪತೇಃ=ದೇವೇಂದ್ರನಿಗೆ. ॥ ೨೪ ॥ ಪ್ರಜಾಪತೇಃ=ಪ್ರಜಾಪತಿನಾಮಕ ರುದ್ರನಿಗೆ. ॥ ೨೫ ॥ ಬ್ರಹ್ಮಣಃ=ಚತುರ್ಮುಖನಿಗೆ. ॥ ೨೬ ॥

ಭಾ ॥ ತೇಭ್ಯಃ ಶತಗುಣಾನಂದಾ ದೇವಪ್ರೇಷ್ಯಾಸ್ತು ಮುಖ್ಯತಃ ।
ಯೇ ತೇ ಹಿ ದೇವ ಗಂಧರ್ವಾ ಮುಕ್ತೇಭ್ಯ ಸ್ತೇಭ್ಯ ಏವ ಚ ॥
ಶತಾಧಿಕಾ ಹಿ ಪಿತರಃ ತೇಭ್ಯ ಆಜಾನದೇವತಾಃ ॥

ಅ ॥ ಮುಕ್ತರಾದ ಮನುಷ್ಯಗಂಧರ್ವರಿಂದ ದೇವಗಂಧರ್ವರು ನೂರು ಮಡಿ ಆನಂದವುಳ್ಳವರು. ಯಾರು ಸಾಕ್ಷಾತ್ತಾಗಿ ದೇವತೆಗಳಿಗೆ ದೂತರಾಗಿರುತ್ತಾರೋ ಅವರು ದೇವಗಂಧರ್ವರು. ಅಂತಹ ಮುಕ್ತರಾದ ದೇವಗಂಧರ್ವರಿಂದ ಮುಕ್ತರಾದ ಪಿತೃದೇವತೆಗಳು ನೂರುಪಟ್ಟು ಹೆಚ್ಚಿಗೆ ಆನಂದವುಳ್ಳವರು. ಅವರಿಂದ ನೂರುಪಾಲು ಆಜಾನದೇವತೆಗಳು ಆನಂದ ಉಳ್ಳವರು.

ಭಾ ॥ ಅನಾಖ್ಯಾತಾ ದೇವತಾಸ್ತು ಜಾತಾ ದೇವಕುಲೇ ಚ ಯಾಃ ।
ಆಜಾನದೇವತಾಸ್ತಾ ಹಿ ತಾಭ್ಯೋಽಗ್ರ್ಯಾಃ ಕರ್ಮದೇವತಾಃ ।
ಬಲ್ಯಾದ್ಯಾ ಅಂತರಾ ಪ್ರಾಪ್ತದೇವತಾಃ ಕರ್ಮದೇವತಾಃ ॥

ಅ ॥ ನಾಮವಿಶೇಷದಿಂದ ಅಪ್ರಸಿದ್ಧರಾದವರು ಹಾಗೆ ದೇವಕುಲದಲ್ಲಿ ಹುಟ್ಟಿದವರು ಯಾವ ದೇವತೆಗಳಿರುತ್ತಾರೋ ಅವರು ಆಜಾನದೇವತೆಗಳು. ಅವರಿಂದ ಕರ್ಮದೇವತೆಗಳು ಹಿಂದಿನಂತೆಯೇ ನೂರುಪಾಲು ಹೆಚ್ಚಿಗೆ ಆನಂದವುಳ್ಳವರು. ಸೃಷ್ಟ್ಯಾದಿಯಲ್ಲಿ ದೇವತೆಗಳಲ್ಲಿ ಸೇರದೆ ಮಧ್ಯಕಾಲದಲ್ಲಿ ಯಾಗಾದಿರೂಪಕರ್ಮದಿಂದ ದೇವತ್ವವನ್ನು ಹೊಂದಿದ ಬಲಿಚಕ್ರವರ್ತಿಯೇ ಮೊದಲಾದವರು ಕರ್ಮದೇವತೆಗಳು.

ಭಾ ॥ ತಾಭ್ಯಶ್ಚ ತಾತ್ವಿಕಾ ದೇವಾಃ ಸೃಷ್ಟ್ಯಾದೌ ದೇವತಾಂ ಗತಾಃ ॥

ಅ ॥ ಆ ಕರ್ಮದೇವತೆಗಳಿಂದ ಸೃಷ್ಟ್ಯಾದಿಯಲ್ಲಿಯೇ ದೇವತ್ವವನ್ನು ಹೊಂದಿದ ತತ್ವಾಭಿಮಾನಿದೇವತೆಗಳು ನೂರುಪಾಲು ಆನಂದ ಹೆಚ್ಚಿಗೆವುಳ್ಳವರು.

ಭಾ ॥ ತೇಭ್ಯೋ ದಕ್ಷಶ್ಶ್ರೇಂದ್ರನಾಮಾ ಸ ಹೀಂದುಂ ರಾರಯತ್ಪುರಾ ॥

ಅ ॥ ಆ ತಾತ್ವಿಕದೇವತೆಗಳಿಂದ ಇಂದ್ರನಾಮಕನಾದ ದಕ್ಷಪ್ರಜಾಪತಿಯು ಶ್ರೇಷ್ಠನು. ಆತನು ಪೂರ್ವದಲ್ಲಿ ಚಂದ್ರನನ್ನು ಕಲಾಕ್ಷೀಣನನ್ನಾಗಿ ಮಾಡಿದ್ದರಿಂದ ಇಂದ್ರನೆಂದು ಹೆಸರುಗೊಂಡನು.

ಭಾ ॥ ತಸ್ಮಾದ್ಬೃಹಸ್ಪತಿರ್ನಾಮ ಮಹೇಂದ್ರತ್ವಾತ್ಪುರಂದರಃ ॥

ಅ ॥ ಆ ದಕ್ಷಪ್ರಜಾಪತಿಯಿಂದ ಪುರಂದರನು ಶ್ರೇಷ್ಠನು. ಆತನು ಮಹೇಂದ್ರನಾದುದರಿಂದ ಬೃಹಸ್ಪತಿನಾಮಕನು.

ಭಾ ॥ ತಸ್ಮಾತ್ಪ್ರಜಾಪತಿರ್ಮುಕ್ತೋ ರುದ್ರಃ ಪ್ರಜನನೇಶಿತಾ ॥

ಅ ॥ ಆ ದೇವೇಂದ್ರನಿಂದ ಉತ್ಪತ್ತಿಗೆ ನಿಯಾಮಕನಾದ ಪ್ರಜಾಪತಿನಾಮಕನಾದ ಮುಕ್ತರುದ್ರನು ಅಂದರೆ ಶೇಷನು ನೂರುಮಡಿ ಆನಂದಾಧಿಕ್ಯವುಳ್ಳವನು.

ಭಾ ॥ ತಸ್ಮಾದ್ಬ್ರಹ್ಮಾ ಶತಗುಣೋ ಮುಕ್ತ ಇತ್ಯೇಷನಿರ್ಣಯಃ ॥

ಅ ॥ ಆ ಶೇಷನಿಂದ ಮುಕ್ತನಾದ ಚತುರ್ಮುಖನು ನೂರುಮಡಿ ಆನಂದಾಧಿಕನು. ಹೀಗೆಯೇ ನಿಖಿಲಶಾಸ್ತ್ರಾರ್ಥ ನಿಶ್ಚಯವು.

ಭಾ ॥ ಯಥಾಽನಂದೇ ತಥಾ ಜ್ಞಾನೇ ವಿಷ್ಣುಭಕ್ತೌ ಬಲಾದಿಕೇ ।
ಸರ್ವೈರ್ಗುಣೈಃಶತಗುಣಾಃ ಕ್ರಮೇಣೋಕ್ತೇನ ತೇಽಖಿಲಾಃ ॥

ಅ ॥ ಹಿಂದೆ ಹೇಳಲ್ಪಟ್ಟ ಕ್ಷಿತಿಪ, ಮನುಷ್ಯ ಗಂಧರ್ವಕ್ರಮದಿಂದ ಎಲ್ಲರೂ, ಆನಂದದಲ್ಲಿ ಶ್ರೈಷ್ಠ್ಯವು ಇದ್ದಂತೆಯೇ ಜ್ಞಾನ, ವಿಷ್ಣುಭಕ್ತಿ, ಬಲವೇ ಮೊದಲಾದ ವಿಷಯದಲ್ಲಿಯೂ ಸರ್ವಗುಣಗಳಿಂದಲೂ ನೂರುಪಾಲು ಅಧಿಕರು.

ಭಾ ॥ ಅಥವಾ ಸಹಸ್ರಗುಣಿತಾ ಅನಂತ ಗುಣಿತಾಸ್ತಥಾ ।
ಪರಿಮಾಣೇ ಶತಗುಣೇಽಪ್ಯಾನಂದಸ್ಫುಟತಾವಶಾತ್ ॥

ಅ ॥ ಪೂರ್ವಪೂರ್ವೋಕ್ತರ ಆನಂದಾದಿಗಳಿಗಿಂತ ಉತ್ತರೋತ್ತರರ ಆನಂದಾದಿಗಳು ನೂರುಮಡಿ ಹೆಚ್ಚುಉಳ್ಳದ್ದಾಗ್ಯೂ ಉತ್ತರೋತ್ತರರ ಆನಂದಾದಿಗಳಿಗೆ ಅತ್ಯಂತಅಭಿವ್ಯಕ್ತಿವಿಶೇಷವಿರುವುದರಿಂದ ಸಹಸ್ರ ಯಾ ಅನಂತ ಗುಣಗಳುಳ್ಳವರೆಂದು ತಿಳುಕೊಳ್ಳತಕ್ಕದ್ದು.

ಭಾ ॥ ಯಥಾ ದೀಪಾಚ್ಛತಗುಣಾಪ್ಯಗ್ನಿಜ್ವಾಲಾ ನ ದೀಪವತ್ ।
ಸ್ಫುಟೀಭವೇದ್ಯಥೈವಾಗ್ನಿರ್ಬಹುಲೋಽಪಿ ನ ಸೂರ್ಯವತ್ ।
ಯಥೈವ ಸೂರ್ಯಾದ್ದ್ವಿಗುಣಶ್ಚಂದ್ರೋ ನೈವ ಸ್ಫುಟೀಭವೇತ್ ।
ಉತ್ತರೇಷಾಮುತ್ತರೇಷಾಂ ಗುಣಾ ಏವಮತಿಸ್ಫುಟಾಃ ॥

ಅ ॥ ಅಗ್ನಿಜ್ವಾಲೆಯು ದೀಪದಿಂದ ದೊಡ್ಡದಿದ್ದರೂ ಅದರಂತೆ ಹ್ಯಾಗೆ ಪ್ರಕಾಶಗೊಳಿಸಲಾರದೋ ಮತ್ತು ಸೂರ್ಯಮಂಡಲಕ್ಕಿಂತಲೂ ದೊಡ್ಡದಾಗಿ ಅಗ್ನಿಯನ್ನು ಉರಿಸಿದರೂ ಸೂರ್ಯನಂತೆ ಹೇಗೆ ಪ್ರಕಾಶಿಸಲಾರದೋ ಸೂರ್ಯನಿಂದಿಮ್ಮಡಿಯಾಗಿರುವ ಚಂದ್ರಮಂಡಲವು ಸೂರ್ಯಮಂಡಲದಂತೆ ಹೇಗೆ ಪ್ರಕಾಶಿಸಲಾರದೋ ಅದರಂತೆಯೇ ಉತ್ತರೋತ್ತರರ ಜ್ಞಾನಾನಂದಾದಿಗುಣಗಳು ಪರಿಮಾಣವಿಶೇಷವನ್ನಪೇಕ್ಷಿಸದೇನೇ ಸ್ವಾಭಾವಿಕವಾಗಿಯೇ ಅತ್ಯಂತ ಸ್ಪಷ್ಟಗಳಾಗಿದ್ದಾವೆ.

ತಾ || ವಸ್ತುತಃ ಸೂರ್ಯಮಂಡಲಕ್ಕಿಂತ ದೊಡ್ಡದಾಗಿ ಅಗ್ನಿಜ್ವಾಲೆಯನ್ನು ಉರಿಸಲಿಕ್ಕೆ ಸಾಧ್ಯವಿಲ್ಲದಿದ್ದರೂ ನಮಗೆ ಕಾಣಿಸುವ ಸೂರ್ಯಮಂಡಲಕ್ಕಿಂತಲೂ ದೊಡ್ಡದಾಗಿ ಅಗ್ನಿಜ್ವಾಲೆಯು ಉರಿಸಲು ಸಾಧ್ಯವು. ಅಂತಹ ಅಗ್ನಿಜ್ವಾಲೆಯು ಸೂರ್ಯನ ಕಾಂತಿಗೆ ಸದೃಶವಾಗಲಾರದೆಂದು ಅಭಿಪ್ರಾಯವು.

ಭಾ || ಪ್ರತಿಬಿಂಬಾ ಯತಃ ಪೂರ್ವೇ ಬ್ರಹ್ಮಾಂತಾನಾಂ ನರಾದಯಃ |
ಅತೋಽಸ್ಪಷ್ಟಸ್ವರೂಪಾಸ್ತೇ ಸ್ಫುಟರೂಪಾಸ್ತಥೋತ್ತರಾಃ ||

ಅ || ಯಾವುದರಿಂದ ಮನುಷ್ಯೋತ್ತಮನೇ ಮೊದಲಾದ ಪೂರ್ವಪೂರ್ವೋಕ್ತರಾದವರು ಬ್ರಹ್ಮಾದಿಗಳಿಗೆ ಅಧೀನರೂ ಸದೃಶರೂ ಆಗಿರುತ್ತಾರೋ, ಆ ಕಾರಣ ಅಸ್ಪಷ್ಟವಾದಜ್ಞಾನಾನಂದಾದಿಸ್ವರೂಪರು. ಉತ್ತರೋತ್ತರರು ಸ್ಪಷ್ಟವಾದ ಜ್ಞಾನಾನಂದಾದಿಸ್ವರೂಪವುಳ್ಳವರು. || ೧೮-೨೬ ||

ಮಂ || ಸ ಯಶ್ಚಾಯಂ ಪುರುಷೇ | ಯಶ್ಚಾಸಾವಾದಿತ್ಯೇ | ಸ ಏಕಃ | ಸ ಯ ಏವಂ ವಿತ್ | ಅಸ್ಮಾಲ್ಲೋಕಾತ್ಪ್ರೇತ್ಯ | ಏತಮನ್ನಮಯಮಾತ್ಮಾನಮುಪಸಂಕ್ರಾಮತಿ | ಏತಂ ಪ್ರಾಣಮಯಮಾತ್ಮಾನಮುಪಸಂಕ್ರಾಮತಿ | ಏತಂ ಮನೋಮಯಮಾತ್ಮಾನಮುಪಸಂಕ್ರಾಮತಿ | ಏತಂ ವಿಜ್ಞಾನಮಯಮಾತ್ಮಾನಮುಪಸಂಕ್ರಾಮತಿ | ಏತಮಾನಂದಮಯಮಾತ್ಮಾನಮುಪಸಂಕ್ರಾಮತಿ || ೨೭ ||

ಅ || ಸಃ=ಪ್ರಸಿದ್ಧನಾದ, ಯೋಽಯಂ=ಯಾವಾತನು, ಪುರುಷೇ ಚ=ನಿಖಿಲಜೀವಸಮುದಾಯದಲ್ಲಿಯೂ (ಇದ್ದಾನೋ), ಯಃ ಚ ಅಸೌ=ಯಾವಾತನು, ಆದಿತ್ಯೇ=ಸೂರ್ಯಾದಿದೇವತೆಗಳಲ್ಲಿಯೂ(ಇದ್ದಾನೋ), ಸಃ=ಆತನು, ಏಕ ಏವ=ಒಬ್ಬನೇ. ಯಃ=ಯಾವಾತನು, ಏವಂ ವಿತ್=ಹೀಗೆ ತಿಳಕೊಳ್ಳುವನೋ, ಸಃ=ಆ ಅಧಿಕಾರಿಯು, ಅಸ್ಮಾತ್ ಲೋಕಾತ್=ಈ ಪಾಂಚಭೌತಿಕ ಶರೀರದಿಂದ, ಪ್ರೇತ್ಯ=ಹೊರಟು, ಏತಂ=ಈ ದಾವ, ಅನ್ನಮಯಂ ಆತ್ಮಾನಂ=ಅನ್ನಮಯನಾಮಕನಾದ ಅನಿರುದ್ಧರೂಪಿ ಶ್ರೀ ಪರಮಾತ್ಮನನ್ನು, ಉಪಸಂಕ್ರಾಮತಿ=ಪ್ರಾಪಿಸುತ್ತಾನೆ. (ಹೀಗೆಯೇ) ಪ್ರಾಣಮಯಂ ಆತ್ಮಾನಂ=ಪ್ರದ್ಯುಮ್ನರೂಪಿ ಶ್ರೀ ಪರಮಾತ್ಮನನ್ನು, ಮನೋಮಯಂ ಆತ್ಮಾನಂ=ಸಂಕರ್ಷಣರೂಪಿ ಶ್ರೀ ಪರಮಾತ್ಮನನ್ನು, ವಿಜ್ಞಾನಮಯಮಾತ್ಮಾನಂ=ವಾಸುದೇವರೂಪಿ ಶ್ರೀ ಪರಮಾತ್ಮನನ್ನು, ಆನಂದಮಯಂ ಆತ್ಮಾನಂ=ನಾರಾಯಣರೂಪಿ ಶ್ರೀ ಪರಮಾತ್ಮನನ್ನು, ಉಪಸಂಕ್ರಾಮತಿ=ಪ್ರಾಪಿಸುತ್ತಾನೆ.

ಭಾ || (*a*) ಯತ್ಪ್ರಸಾದಾತ್ಸ್ವರೂಪಾಪ್ತಿಃ ಬ್ರಹ್ಮಾದೀನಾಂ ಸಮಂತತಃ |
ಸ ವಿಷ್ಣುಃ ಸರ್ವಜೀವೇಷು ನೃಷು ದೇವೇಷು ಚ ಸ್ಥಿತಃ ||
(*b*) ಏಕ ಏವ ಮಹಾಯೋಗೀ ನಿರ್ವಿಶೇಷೋಽಖಿಲೈರ್ಗುಣೈಃ |
ಸರ್ವೋತ್ತಮಃ ಸ ಪೂರ್ಣಶ್ಚ ||

(c) ತಮೇವಂ ವೇದ ಯಃ ಪುಮಾನ್ ।
ಜೀವಾಂಶ್ಚ ತಾರತಮ್ಯಸ್ಥಾನ್ ಸ ಗಚ್ಛೇತ್ತಂ ಚ ರೂಪಿಣಮ್ ॥
ವಿಷ್ಣುಂ ॥ ೨೭ ॥

ಅ ॥(a) ಯಾವ ಪರಮಾತ್ಮನ ಅನುಗ್ರಹದಿಂದ ಬ್ರಹ್ಮಾದಿ ಸಮಸ್ತ ಸಜ್ಜೀವರು ಸಂಪೂರ್ಣವಾಗಿ ಲಿಂಗದೇಹ ಭಂಗವಾಗೋಣ ತಮತಮಗೆ ಯೋಗ್ಯವಾದ ಸ್ವರೂಪಭೂತಾನಂದವನ್ನು ಹೊಂದುವರೋ, ಅಂತಹ ಶ್ರೀ ವಿಷ್ಣುವು ಸರ್ವಪ್ರಾಣಿಗಳಲ್ಲಿಯೂ, ಮನುಷ್ಯರಲ್ಲಿಯೂ, ದೇವತೆಗಳಲ್ಲಿಯೂ ಇರುತ್ತಾನೆ.

(b) ಆತನೊಬ್ಬನೇ ಮಹಾ ಸಮರ್ಥನೂ ನೀಚೋಚ್ಚಜೀವರಲ್ಲಿ ತಾನಿದ್ದರೂ ಭೇದಶೂನ್ಯನೂ, ಸಮಸ್ತಗುಣಪರಿಪೂರ್ಣನೂ, ಸರ್ವೋತ್ತಮನೂ ಆಗಿರುತ್ತಾನೆ.

(c) ಇಂತಹ ಮಹಾತ್ಮೆವುಳ್ಳ ಶ್ರೀಹರಿಯನ್ನೂ, ಜೀವರು ಪರಸ್ಪರವಾಗಿ ತಾರತಮ್ಯಯುಕ್ತರೆಂದೂ, ಯಾರು ತಿಳುಕೊಳ್ಳುತ್ತಾನೋ ಅಂತಹ ಪುರುಷನು ಅನ್ನಮಯಾದಿ ಪಂಚಸ್ವರೂಪವುಳ್ಳ ಶ್ರೀಹರಿಯನ್ನು ಹೊಂದುತ್ತಾನೆ. ॥ ೨೭ ॥

**ಮಂ ॥ ತದಪ್ಯೇಷ ಶ್ಲೋಕೋ ಭವತಿ । ಯತೋ ವಾಚೋ ನಿವರ್ತಂತೇ । ಅಪ್ರಾಪ್ಯ ಮನಸಾ ಸಹ । ಆನಂದಂ ಬ್ರಹ್ಮಣೋ ವಿದ್ವಾನ್ । ನ ಬಿಭೇತಿ ಕುತಶ್ಚನೇತಿ । ಏತꣳ ಹ ವಾವ ನ ತಪತಿ । ಕಿಮಹꣳಸಾಧು ನಾಕರವಂ । ಕಿಮಹಂ ಪಾಪಮಕರವಮಿತಿ । ಸ ಯ ಏವಂ ವಿದ್ವಾನೇತೇ ಆತ್ಮಾನꣳ ಸ್ಪೃಣುತೇ । ಉಭೇ ಹ್ಯೇವೈಷ ಏತೇ ಆತ್ಮಾನꣳ ಸ್ಪೃಣುತೇ । ಯ ಏವಂ ವೇದ । ಇತ್ಯುಪನಿಷತ್ ॥ ಓಂ ॥ ಸ ಹ ನಾ ವವತು । ಸ ಹ ನೌ ಭುನಕ್ತು । ಸ ಹ ವೀರ್ಯಂ ಕರವಾವಹೈ । ತೇಜಸ್ವಿನಾವಧೀತಮಸ್ತು ಮಾ ವಿದ್ವಿಷಾವಹೈ । ಓಂ ಶಾಂತಿಃ ಶಾಂತಿಃ ಶಾಂತಿಃ ॥ ೨೮ ॥**

॥ ಇತಿ ದ್ವಿತೀಯಾ ವಲ್ಲೀ ಸಂಪೂರ್ಣಾ ॥

ಅ ॥ ತದಪಿ= ಆ ಅರ್ಥದಲ್ಲಿ, ಏಷ ಶ್ಲೋಕಃ=ಮೇಲಿನ ಮಂತ್ರವು, ಭವತಿ= ಸಮ್ಮತಿಯಾಗಿರುತ್ತದೆ. ಯತಃ=ಯಾವ ಬ್ರಹ್ಮಾನಂದದಿಂದ, ವಾಚಃ=ಮಾತುಗಳು, ಮನಸಾ ಸಹ=ಮನಸ್ಸಿನಿಂದೊಡಗೂಡಿ, ಅಪ್ರಾಪ್ಯ=ಸಂಪೂರ್ಣವಾಗಿ ವಿಷಯಿಕರಿಸದೆ, ನಿವರ್ತಂತೇ= ತಿರುಗಿದ್ದಾವೋ, ಬ್ರಹ್ಮಣಃ=ಶ್ರೀ ಪರಬ್ರಹ್ಮನಿಗೆ, ಆನಂದಂ=ಆನಂದರೂಪವನ್ನು, ವಿದ್ವಾನ್= ತಿಳಿದವನು, ಕುತಶ್ಚನ=ಯಾರಿಂದಲೂ, ನ ಬಿಭೇತಿ=ಹೆದರುವುದಿಲ್ಲ. ಅಹಂ=ನಾನು, ಸಾಧು=

ಪುಣ್ಯವನ್ನು, ಕಿಂ=ಯಾವುದರಿಂದ, ನ ಅಕರವಂ=ಮಾಡಲಿಲ್ಲ. ಅಹಂ=ನಾನು, ಪಾಪಂ ವಾ= ಪಾಪವನ್ನಾಗಲೀ, ಕಿಂ=ಏತಕ್ಕಾಗಿ, ಅಕರವಂ=ಮಾಡಿದೆನು. ಇತಿ=ಈ ರೀತಿಯಾದ ಪಶ್ಚಾತ್ತಾಪದಿಂದ, ಏವಂ=ಈ ಜ್ಞಾನಿಯಾದವನನ್ನು, ನ ತಪತಿ ಪಾಪ=(ಕರ್ಮವು) ಸಂತಾಪಗೊಳಿಸುವುದಿಲ್ಲ, ಯಃ=ಯಾವಾತನು, ಆತ್ಮಾನಂ=ಪರಮಾತ್ಮನನ್ನು, ಏವಂ=ಹಿಂದೆ ಹೇಳಿದ ರೀತಿಯಿಂದ, ವಿದ್ವಾನ್=ತಿಳಿಯುತ್ತಾನೋ, ಸಃ=ಆತನು, ಏತೇ=ಪುಣ್ಯಪಾಪಗಳನ್ನು, ಸ್ಪೃಣುತೇ=ಬಿಡುತ್ತಾನೆ. ಯಃ=ಯಾವಾತನು, ಏವಂ=ಪೂರ್ವೋಕ್ತರೀತಿಯಿಂದ, ವೇದ= ತಿಳಿಯುತ್ತಾನೋ, ಏಷಃ=ಇವನು, ಉಭೇ ಹ್ಯೇವ ಏತೇ=ಈ ಪುಣ್ಯಪಾಪಗಳೆರಡನ್ನೂ, ಆತ್ಮಾನಂ=ತನ್ನಿಂದ, ಸ್ಪೃಣುತೇ=ಬಿಡುತ್ತಾನೆ. ಉಪನಿಷತ್=ರಹಸ್ಯವು, ಇತಿ=ಹೀಗೆ ಹೇಳಲ್ಪಟ್ಟಿತು. ಅಂತ್ಯದಲ್ಲಿಯೂ ವಿದ್ಯಾಪ್ರಚಯಾರ್ಥವಾಗಿ ಶಾಂತಿಯನ್ನು ಪಠಿಸುತ್ತಾರೆ. ॥ ೨೮ ॥

ಭಾ ॥ ವಿಷ್ಣುಂ ನ ಪುಣ್ಯಪಾಪೇ ಚ ತಸ್ಯಾನಿಷ್ಟೇ ಕದಾಚನ ।
ಪ್ರಿಯಾಪ್ರಿಯೇಷು ತಜ್ಜ್ಞಾನೀ ಹ್ಯಾಸ್ತೃಣೋತಿ ಯತೋ ನೃಪು ॥

ಅ ॥ ಇಂತಹ ಜ್ಞಾನಿಗೆ ಅನಿಷ್ಟಗಳಾದ ಪುಣ್ಯಪಾಪಗಳಿರುವುದಿಲ್ಲ. ಏಕೆಂದರೆ:- ಅಪರೋಕ್ಷಜ್ಞಾನಿಯು ಮುಕ್ತಿಗೆ ಹೋಗುವ ಕಾಲದಲ್ಲಿ ಇತರ ಕಾಮ್ಯ ಪುಣ್ಯವನ್ನು ಪ್ರಿಯರಾದ ಪುತ್ರಾದಿಗಳಲ್ಲಿಯೂ, ಪಾಪಶೇಷವನ್ನು ತನ್ನಲ್ಲಿ ದ್ವೇಷಮಾಡುವವರಲ್ಲಿಯೂ, ಹಂಚಿಕೊಟ್ಟು ಮುಕ್ತನಾಗುತ್ತಾನೆ.

ಭಾ ॥ ಅಗೋಚರಂ ವಾಙ್ಮನಸೋರಾನಂತ್ಯಾತ್ಪುರುಷೋತ್ತಮಂ ।
ಜ್ಞಾತ್ವಾ ಮುಕ್ತಸ್ಯ ಭೀರ್ನೈವ ಕುತಶ್ಚನ ಭವಿಷ್ಯತಿ ॥
ಇತ್ಯಾದಿ ಯಜುಃ ಸಂಹಿತಾಯಾಂ ॥

ಅ ॥ ಅನಂತಗುಣಪರಿಪೂರ್ಣನಾಗಿರುವ ಪ್ರಯುಕ್ತ ವಚನಕ್ಕೂ ಮನಸ್ಸಿಗೂ ಕೂಡ ಸಂಪೂರ್ಣವಾಗಿ ಗೋಚರನಾಗದೇ ಇರುವ ಶ್ರೀ ಪುರುಷೋತ್ತಮನನ್ನು ತಿಳಿದಿರತಕ್ಕ ಮುಕ್ತನಿಗೆ ಯಾವುದರಿಂದಲೂ ಭಯವಿರುವುದಿಲ್ಲ. ಇದೇ ಮೊದಲಾದ ವಿಷಯವು ಯಜುಃಸಂಹಿತೆಯಲ್ಲಿದೆ. ॥ ೨೮ ॥

ಈ ವರೆಗೆ ಬ್ರಹ್ಮವಲ್ಲಿಗೆ ಸಪ್ರಮಾಣವಾಗಿ ತಾನು ವ್ಯಾಖ್ಯಾನಮಾಡಿ ತಾನು ಮಾಡಿದ ವ್ಯಾಖ್ಯಾನವನ್ನು ದೃಢೀಕರಿಸುವುದಕ್ಕೋಸ್ಕರ ಪರರ ವ್ಯಾಖ್ಯಾನಗಳಲ್ಲಿ ಅಸ್ವಾರಸ್ಯವನ್ನು ಸ್ಪಷ್ಟಗೊಳಿಸಿ ದೂಷಿಸುತ್ತಾರೆ.

ಭಾ ॥ ನ ಚ ಸಹ ಬ್ರಹ್ಮಣೇತ್ಯಾದೇರನ್ಯೋಽರ್ಥಃ ಕಲ್ಪ್ಯಃ ।
ಅಪ್ರಾಮಾಣಿಕತ್ವಾದನಾಶ್ವಾಸಾಚ್ಚ ॥

ಅ ॥ 'ಸೋಶ್ನುತೇ ಸರ್ವಾನ್ ಕಾಮಾನ್ ಸಹಬ್ರಹ್ಮಣಾ' ಇತ್ಯಾದಿಗಳಲ್ಲಿ ಮುಕ್ತನು ಬ್ರಹ್ಮಸ್ವರೂಪನೇ, ಆ ಬ್ರಹ್ಮನು ಭೋಕ್ತೃನಿಖಿಲಸ್ವರೂಪನೇ ಆಗಿರುತ್ತಾನೆ. ಆದುದರಿಂದ ಬ್ರಹ್ಮಜ್ಞಾನಿಯಾದವನು ಬ್ರಹ್ಮರೂಪದಿಂದಲೇ ಸಕಲವನ್ನು ಭೋಗಿಸುತ್ತಾನೆ. ಎಂಬೀರೀತಿಯಾದ ಪರರ ಅರ್ಥವು ಪ್ರಮಾಣವಿಲ್ಲದಿರುವುದರಿಂದಲೂ, ಇತರ ಪ್ರಮಾಣಗಳಿಂದ ವಿರೋಧವಿರುವುದರಿಂದ ನಂಬಲನರ್ಹವಾಗಿರುದರಿಂದಲೂ ಕಲ್ಪಿಸತಕ್ಕದ್ದಲ್ಲ.

ಭಾ ॥ ನಚೌಷಧೀಭ್ಯೋऽನ್ನಂ ಅನ್ನರಸಮಯಃ ಇತ್ಯತ್ರ
ಉಭಯಾರ್ಥತ್ವೇನ ವಿರೋಧಃ ।
ಅನ್ನಸ್ಯಾನ್ನಂ ಮಧ್ಯಮಃ ಸ್ರಾಣಃ ಪ್ರಾಣಃ ಸ್ಥೂಣಾ ಇತ್ಯಾದಿವತ್
ವಿಶೇಷಿತತ್ವಾದುಪಪತ್ತೇಃ ॥

ಅ ॥ 'ಓಷಧೀಭ್ಯೋऽನ್ನಂ' ಎಂಬಲ್ಲಿರುವ ಅನ್ನಶಬ್ದಕ್ಕೆ ಪ್ರಸಿದ್ಧವಾದ ಅನ್ನವೆಂತಲೂ 'ಅನ್ನರಸಮಯ' ಎಂಬಲ್ಲಿ ಅದಕ್ಕೇ ಸಂಹಾರಕನೆಂತಲೂ ಹೀಗೆ ಒಂದೇ ಪ್ರಕರಣದಲ್ಲಿ ಶ್ರುತವಾದ ಒಂದು ಶಬ್ದಕ್ಕೆ ಎರಡು ವಿಧವಾದ ಅರ್ಥವನ್ನಿಟ್ಟುಕೊಂಡುದರಿಂದ ವಿರೋಧವು ಕಂಡು ಬರುತ್ತದೆಂದು ಹೇಳಕೂಡದು. 'ಅನ್ನಸ್ಯಾನ್ನಂ' ಎಂಬಲ್ಲಿ ಬೇರೆ ಬೇರೆ ವಿಭಕ್ತಿಗಳಲ್ಲಿರುವ ಎರಡು ಅನ್ನಶಬ್ದಗಳಿಗೆ ಹೇಗೆ ಒಂದೇ ಅರ್ಥವು ಕೂಡುವುದಿಲ್ಲವೋ ಹಾಗೇ 'ಮಧ್ಯಮಃಪ್ರಾಣಃ' ಎಂಬಲ್ಲಿ ಮಧ್ಯಮ ಅಂದರೆ ಅವಾಂತರೇಶ್ವರ ಎಂಬ ವಿಶೇಷಣ ಕೊಟ್ಟಿರುವುದರಿಂದ ಪ್ರಾಣ ಶಬ್ದಕ್ಕೆ ಮುಖ್ಯಪ್ರಾಣನೆಂದೂ 'ಪ್ರಾಣಸ್ಥೂಣಾ' ಎಂಬಲ್ಲಿ ಸ್ಥೂಣಾ ಅಂದರೆ ನಿಖಿಲಾಶ್ರಯನೆಂಬ ವಿಶೇಷಣ ಕೊಟ್ಟ ಪ್ರಯುಕ್ತ ಅದೇ ಪ್ರಾಣಶಬ್ದಕ್ಕೆ ಪರಬ್ರಹ್ಮನೆಂದೂ ಬೇರೆ ಬೇರೆ ಅರ್ಥಗಳನ್ನಿಟ್ಟುಕೊಂಡಂತೆ ಪ್ರಕೃತ 'ಅನ್ನರಸಮಯಃ' ಎಂಬಲ್ಲಿ ಅತ್ಯುತ್ತಮಾರ್ಥಕವಾದ ರಸ ಶಬ್ದದಿಂದ ವಿಶೇಷಿತವಾದ ಅನ್ನ ಶಬ್ದಕ್ಕೆ ಆ ವಿಶೇಷಣಬಲದಿಂದ ಸಂಹಾರಕನೆಂದೇ ಅರ್ಥವಾಗಬೇಕು.

ಭಾ ॥ ನಚಾನ್ನಮಯಾದೀನಾಮಬ್ರಹ್ಮತ್ವೇ ಕಿಂಚಿನ್ಮಾನಂ ।
ಯೇऽನ್ನಂ ಬ್ರಹ್ಮೋಪಾಸತೇ । ಯೇ ಪ್ರಾಣಂ ಬ್ರಹ್ಮೋಪಾಸತೇ ।
ಆನಂದಂ ಬ್ರಹ್ಮಣೋ ವಿದ್ವಾನ್ । ವಿಜ್ಞಾನಂಬ್ರಹ್ಮಚೇದ್ವೇದ ।
ಅಸ್ತಿಬ್ರಹ್ಮೇತಿ ಚೇದ್ವೇದ । ಅಧೀಹಿ ಭಗವೋ ಬ್ರಹ್ಮೇತಿ ।
ತಸ್ಮಾ ಏತತ್ಪ್ರೋವಾಚ । ಅನ್ನಂ ಪ್ರಾಣಂ ಚಕ್ಷುಃ ಶ್ರೋತ್ರಂ
ಮನೋವಾಚಮಿತ್ಯಾದಿನಾ ಬ್ರಹ್ಮಶಬ್ದೇನೋಕ್ತತ್ವಾಚ್ಚ ॥

ಅ ॥ ಅನ್ನಮಯಾದಿಶಬ್ದಗಳಿಗೆ ಬ್ರಹ್ಮಪರವಾದ ಅರ್ಥವನ್ನುಳಿದು ಕೋಶಪರವಾದ ಅರ್ಥಕಲ್ಪನೆಯಲ್ಲಿ ಯಾವುದೊಂದು ಪ್ರಮಾಣವೂ ಇರುವುದಿಲ್ಲ. 'ಅನ್ನಂಬ್ರಹ್ಮೋಪಾಸತೇ' 'ಪ್ರಾಣಂ ಬಹ್ಮೋಪಾಸತೇ' ಇತ್ಯಾದಿ ವಾಕ್ಯಗಳಲ್ಲಿ ಅನ್ನಾದಿಗಳನ್ನು ಬ್ರಹ್ಮಶಬ್ದದಿಂದ ವಿಶೇಷಣ ಕೊಟ್ಟು ಹೇಳಿದ ಪ್ರಯುಕ್ತವು ಬ್ರಹ್ಮೋಪದೇಶವನ್ನು ಕೊಡಬೇಕೆಂದು ಕೇಳಿದ ಭೃಗುವಿಗೆ ಅನ್ನ ಪ್ರಾಣ ಇತ್ಯಾದಿ ಶಬ್ದಗಳಿಂದ ಬ್ರಹ್ಮವನ್ನುಪದೇಶಿಸಿದ ಪ್ರಯುಕ್ತವೂ 'ಅನ್ನಂಬ್ರಹ್ಮೇತಿ ವ್ಯಜಾನಾತ್' ಇತ್ಯಾದಿ ಸ್ಥಳಗಳಲ್ಲಿ ಸ್ಪಷ್ಟವಾಗಿ ಅನ್ನ ಶಬ್ದಕ್ಕೆ ಬ್ರಹ್ಮವಾಚಕತ್ವವನ್ನು ಹೇಳಿದ ಪ್ರಯುಕ್ತವೂ ಅನ್ನಮಯಾದಿ ಶಬ್ದಗಳಿಗೆ ಬ್ರಹ್ಮಪರವಾದ ಅರ್ಥವೇ ಯುಕ್ತವಾಗಿರುತ್ತದಲ್ಲದೆ ಅಪ್ರಾಮಾಣಿಕವೂ ಪ್ರಮಾಣವಿರುದ್ಧವೂ ಆದ ಕೋಶಪರವಾದ ಅರ್ಥವು ಯುಕ್ತವಲ್ಲ.

ಭಾ ॥ (*a*) ನ ಚ ಲೌಕಿಕಾನ್ನಸ್ಯ ಅತ್ತೃತ್ವಮಸ್ತಿ ।
(*b*) ಯೇऽನ್ಯಥಾ ವಿದುಃ ತೇऽನ್ಯರಾಜಾನಃ ತೇ ಕ್ಷಯ್ಯಲೋಕಾ
ಭವಂತೀತಿ ಶ್ರುತೇಃ ।
ಅವಿದ್ಯಮಾನೋಪಾಸನಾದ್ಧೋಪಾವಗತೇಶ್ಚ ॥
(*c*) ನ ಚ ರಮಂತ್ಯಹೋ ಅಸದುಪಾಸನಯಾ ಆತ್ಮಹನ
ಇತಿ ಚ ಭಾಗವತೇ ॥

ಅ ||(a) ಅದೂ ಅಲ್ಲದೆ ಅನ್ನಶಬ್ದಕ್ಕೆ (ಪರಬ್ರಹ್ಮರೂಪವಾದ ಅರ್ಥವನ್ನು ಅಂಗೀಕಾರ ಮಾಡದೆ) ಲೌಕಿಕವಾದ ಅನ್ನವೆಂದೇ ಅರ್ಥವನ್ನು ಮಾಡಿದರೆ 'ಅದ್ಯತೇಽತ್ತಿ ಚ ಭೂತಾನಿ' ಎಂಬಲ್ಲಿ ಹೇಳಿದ ಸಕಲಭೂತ ಸಂಹಾರಕತ್ವಲಕ್ಷಣವು ಎಷ್ಟುಮಾತ್ರಕ್ಕೂ ಕೂಡಲಾರದು. (b) (ಲೌಕಿಕಾನ್ನದಲ್ಲಿ ಅತ್ತೃತ್ವವು ಇಲ್ಲದಿದ್ದರೂ ಉಪಾಸನಾರ್ಥವಾಗಿ ಉಪನಿಷತ್ತು ಹೇಳುತ ದೆಂದನ್ನಕೂಡದು. ಏಕೆಂದರೆ) ಯಾರು ಇಲ್ಲದಿರುವುದನ್ನು ಉಪಾಸನೆ ಮಾಡುತ್ತಾರೋ ಅಂಥ ವರು ತಮ್ಮಿಂದ ನೀಚರಿಂದ ನಿಯಮ್ಯರೂ ನಶ್ವರವಾದ ಲೋಕವುಳ್ಳವರೂ ಆಗುತ್ತಾರೆ ಎಂಬೀ ಶ್ರುತಿಯಿಂದ ಇಲ್ಲದಿರುವುದನ್ನು ಉಪಾಸನೆಮಾಡಿದರೆ ಮಹಾದೋಷವು ಹೇಳಲ್ಪಟ್ಟಿದೆ. (c) ಅಲ್ಲದೆ ಯಾರು ಇಲ್ಲದಿದ್ದುದನ್ನು ಉಪಾಸನೆ ಮಾಡುತ್ತಾರೆ. ಅವರು ಆತ್ಮಘಾತಿಗಳಾಗಿ ಸುಖ ಲೇಶವನ್ನು ಹೊಂದದೆ ನಿತ್ಯದುಃಖಿಗಳೇ ಆಗುವರು ಎಂದು ಭಾಗವತದಲ್ಲಿಯೂ ಹೇಳಿಯದೆ.

ಭಾ ||(a) ನಾವಿದ್ಯಮಾನಂ ಬ್ರುವತೇ ವೇದಾ ಧ್ಯಾತುಂ ನ ವೈದಿಕಾಃ ।
ಅವಿದ್ಯಮಾನಂ ಧ್ಯಾಯಂತೋ ಯಾಂತಿ ಸರ್ವೇಽಧರಂ ತಮಃ ||
(b) ತಸ್ಮಾತ್ಸತ್ಯಾರ್ಥತಾಂ ಬ್ರೂಯಾದ್ವೇದಾನಾಮಪಿ ಸರ್ವಶಃ ।
ಯ ಏವಂ ವೇದ ಸ ಜ್ಞಾನೀ ಜ್ಞಾನವಾನ್ನಾನ್ಯಥಾ ಭವೇತ್ ||
- ಇತಿ ವೇದಾರ್ಥವಿವೇಕೇ ||

ಅ|| (a) ವೇದಗಳೂ ತದನುಸಾರಿ ಗ್ರಂಥಗಳೂ ಇಲ್ಲದಿರುವ ಅರ್ಥವನ್ನು ಧ್ಯಾನ ಮಾಡುವಂತೆ ಹೇಳುವುದಿಲ್ಲ. ಅಂತೂ ಇಲ್ಲದಿರುವುದನ್ನು ಧ್ಯಾನಮಾಡತಕ್ಕವರು ಅಂಧಂತಮ ಸ್ಸಿಗೆ ತೆರಳುತ್ತಾರೆ. (b) ಆದ ಕಾರಣ ವೇದವೇದಾನುಸಾರಿಗ್ರಂಥಗಳಿಗೆ ಅಬಾಧಿತವಾದ ಅರ್ಥವನ್ನೇ ಹೇಳತಕ್ಕದ್ದು. ಈ ರೀತಿಯಾದ ಅಸದುಪಾಸನೆಯಿಂದ ಅಂಧತಮಸ್ಸೇ ಪ್ರಾಪ್ತಿ ಯಾಗುತ್ತದೆ ಎಂತ ತಿಳಿದುಕೊಂಡವನೇ ಜ್ಞಾನಿಯು. ಆದ ಕಾರಣ ಅಂತಹ ಜ್ಞಾನಿಯು ಅಸದುಪಾಸನೆಯನ್ನೆಷ್ಟುಮಾತ್ರಕ್ಕೂ ಮಾಡಬಾರದು. ಈ ರೀತಿಯಾಗಿ ವೇದಾರ್ಥವಿವೇಕದ ಲ್ಲುಕ್ತವಾಗಿದೆ.

ಭಾ || ಸ ಯಶ್ಚಾಯಂ ಪುರುಷೇ । ಯಶ್ಚಾಸಾವಾದಿತ್ಯೇ ಇತ್ಯಧಿಕ
ರಣತ್ವೇನ ಭೇದ ಏವ ಜೀವಸ್ಯ ಪರಮಾದುಕ್ತಃ ||

ಅ || (ಹೀಗಿದ್ದರೂ ಆನಂದಮಯನೆಂದರೆ ಜೀವನೇ ಬ್ರಹ್ಮನಲ್ಲ. ಜೀವಬ್ರಹ್ಮರಿಗೆ ಭೇದ ವಿಲ್ಲದಿರುವ ಪ್ರಯುಕ್ತ ಆ ಪಕ್ಷದಲ್ಲಿ ಬ್ರಹ್ಮಶಬ್ದ ವಿರೋಧವಿರುವುದಿಲ್ಲ ಎಂಬೀ ಪರರ ವ್ಯಾಖ್ಯಾ ನವು ಅಸಂಗತವು ಏಕೆಂದರೆ-) ನಿಖಿಲಜೀವರಲ್ಲಿಯೂ ಆದಿತ್ಯಾದಿ ಎಲ್ಲಾ ದೇವತೆಗಳಲ್ಲಿಯೂ ನಿಯಾಮಕನಾಗಿ ಬ್ರಹ್ಮನಿರುತ್ತಾನೆಂದು ಹೇಳಿರುವ ಪ್ರಯುಕ್ತ ಆಧಾರಾಧೇಯಗಳಿಗೆ ಭೇದವೇ ಲೋಕದಲ್ಲಿ ತೋರುವುದರಿಂದ ಅಧಿಕರಣೀಭೂತನಾದ ಜೀವನಿಗೆ ಆಧೇಯಭೂತನಾದ ಬ್ರಹ್ಮ ನಿಂದ ಭೇದವೇ ಸ್ಪಷ್ಟವಾಗಿ ಹೇಳಲ್ಪಡುತ್ತದೆ. ಆದಕಾರಣ ಜೀವಬ್ರಹ್ಮೈಕ್ಯವು ಕೂಡುವುದಿಲ್ಲ. ಆನಂದಮಯನೆಂದರೆ ಬ್ರಹ್ಮನೇ ಆಗಬೇಕು; ಜೀವನಲ್ಲ.

ಭಾ ||(a) ಏತಸ್ಮಿನ್ನದೃಶ್ಯೇಽನಾತ್ಮ್ಯೇಽನಿರುಕ್ತೇಽನಿಲಯನೇಽಭಯಂ
ಪ್ರತಿಷ್ಠಾಂ ವಿಂದತೇ ।
(b) ಏತಮಾನಂದಮಯಮಾತ್ಮಾನಮುಪಸಂಕ್ರಾಮತಿ ।
(c) ಸೋಽಶ್ನುತೇ ಸರ್ವಾನ್ ಕಾಮಾನ್ ಸಹ ಬ್ರಹ್ಮಣಾ ವಿಪಶ್ಚಿತಾ ।

(*d*) ಏತಮಾನಂದಮಯಮಾತ್ಮಾನಮುಪಸಂಕ್ರಮ್ಯ ।
ಇಮಾನ್ ಲೋಕಾನ್ ಕಾಮಾನ್ನೀ ಕಾಮರೂಪ್ಯನುಸಂ
ಚರನ್ನಿತ್ಯಾದಿನಾ ಮುಕ್ತಸ್ಯಾಪಿ ಭೇದ ಏವಾಭ್ಯಸ್ಯತೇ ॥

(*a*) (ಆಗಲಿ; ಆಧಾರಾಧೇಯಗಳಿಗೆ ಲೋಕದಲ್ಲಿ ಭೇದವೇ ತೋರುವ ಪ್ರಯುಕ್ತ ಜೀವ ಬ್ರಹ್ಮರಿಗೂ, ಭೇದವನ್ನು ಹೇಳತಕ್ಕುದೆಂಬುದು ಸರಿಯಲ್ಲ. ಏಕೆಂದರೆ:- ಅಂತಹ ಭೇದವು ಈಸಂಸಾರಾವಸ್ಥೆಯಲ್ಲಿ ಮಾತ್ರವಿದ್ದರೂ ಮುಕ್ತ್ಯವಸ್ಥೆಯಲ್ಲಿ ಬ್ರಹ್ಮನಿಂದ ಐಕ್ಯವು ಉಂಟಾಗುವುದರಿಂದ ಭೇದವು ವ್ಯಾವಹಾರಿಕವಾಗಿರುತ್ತದೆಯಲ್ಲದೆ ಪಾರಮಾರ್ಥಿಕವಲ್ಲ; ಎಂಬೀ ಪರರ ವ್ಯಾಖ್ಯಾನವೂ ಅಸಂಗತವು). ಏಕೆಂದರೆ:- (*a*) ಯಾವಾತನು ಈ ಅದೃಶ್ಯತ್ವಾದಿಗುಣಯುಕ್ತನಾದ ಶ್ರೀ ಹರಿಯಲ್ಲಿ ಸ್ಥಿತಿಯನ್ನು ಹೊಂದುವನೋ ಆತನು ಶ್ರೀ ಹರಿಯನ್ನು ಹೊಂದುತ್ತಾನೆ. (*b*) ಜ್ಞಾನಿಯು ಈ ಆನಂದಮಯನಾಮಕನಾದ ಹರಿಯನ್ನು ಸಮೀಪಿಸುತ್ತಾನೆ. (*c*) ಜ್ಞಾನಿಯು ಪರಬ್ರಹ್ಮನಿಂದ ಕೂಡಿಕೊಂಡೇ ನಿಖಿಲ ಭೋಗಗಳನ್ನೂ ಅನುಭವಿಸುತ್ತಾನೆ. (*d*) ಈ ಆನಂದಮಯನಾಮಕನಾದ ಹರಿಯ ಸಮೀಪವನ್ನು ಹೊಂದಿ, ಇಚ್ಛಾನುಸಾರವಾದ ಭೋಗಗಳೂ, ರೂಪಗಳೂ ಉಳ್ಳವನಾಗಿ, ಈ ಲೋಕಗಳನ್ನೆಲ್ಲಾ ಸಂಚರಿಸುತ್ತಾ, ಸಾಮಗಾನವನ್ನು ಮಾಡುತ್ತಿರುತ್ತಾನೆ. ಇತ್ಯಾದಿ ವಾಕ್ಯಗಳಲ್ಲಿ ಪ್ರತಿಯೊಂದು ಕಡೆಯಲ್ಲಿಯೂ ಮುಕ್ತನಾದವನಿಗೂ ಬ್ರಹ್ಮನಿಂದ ಭೇದವೇ ಸ್ಪಷ್ಟವಾಗಿ ಹೇಳಲ್ಪಡುತ್ತದೆ. (ಆದುದರಿಂದ ಭೇದವು ಪಾರಮಾರ್ಥಿಕವೇ ಆಗಿರುತ್ತದೆ. ವ್ಯಾವಹಾರಿಕವಲ್ಲ).

**ಭಾ** ॥ ಅಥ ಸೋಽಭಯಂ ಗತೋ ಭವತೀತಿ ಮುಕ್ತಿಪ್ರಸ್ತಾವಾತ್ ।
ಸೈಷಾನಂದಸ್ಯ ಮೀಮಾಂಸಾ ಇತಿ ಮುಕ್ತಾನಂದೋ ಮೀಮಾಂಸ್ಯತೇ।
ಶ್ರೋತ್ರಿಯಸ್ಯ ಚಾಕಾಮಹತಸ್ಯೇತಿ ಸರ್ವತ್ರ ವಿಶೇಷಣಾಚ್ಚ ॥

ಅ ॥ (ಸೈಷಾನಂದಸ್ಯ ಮೀಮಾಂಸಾ ಎಂಬಲ್ಲಿ ಸಂಸಾರಿಗಳ ಆನಂದವೇ ವಿಚಾರಿಸಲ್ಪಡುತ್ತದೆ. ಮುಕ್ತರ ಆನಂದವಲ್ಲ; ಎಂಬ ಪರರ ವ್ಯಾಖ್ಯಾನವು ಯುಕ್ತವಲ್ಲ.) ಏಕೆಂದರೆ:- ಆ ಮೇಲೆ ಉಪಾಸಕನು ಅಭಯನಾದ ಹರಿಯನ್ನು ಹೊಂದುವನು. ಎಂದು ಮುಕ್ತಿಯನ್ನಾರಂಭಿಸಿಕೊಂಡು ಅದೇ ಪ್ರಕರಣದಲ್ಲಿ ಈ 'ಸೈಷಾನಂದಸ್ಯ' ಎಂಬ ವಾಕ್ಯವು ಹೊರಟಪ್ರಯುಕ್ತವೂ, ಮನುಷ್ಯಗಂಧರ್ವರನ್ನಾರಂಭಿಸಿಕೊಂಡು ಸಮಸ್ತರಿಗೂ 'ಶ್ರೋತ್ರಿಯ' ಮತ್ತು 'ಅಕಾಮಹತ' ಎಂಬೀ ಎರಡು ವಿಶೇಷಣಗಳನ್ನು ಕೊಟ್ಟಿರುವ ಪ್ರಯುಕ್ತವೂ ಮುಕ್ತರ ಆನಂದವೇ ವಿಚಾರಿಸಲ್ಪಡುತ್ತದಲ್ಲದೆ (ಈ ವಾಕ್ಯದಲ್ಲಿ ಸಂಸಾರಿಗಳ ಆನಂದವಿಚಾರವನ್ನು ಮಾಡಿಲ್ಲ).

**ಭಾ** ॥ ನ ಹ್ಯಮುಕ್ತಸ್ಯ ಅಕಾಮಹತತ್ವಂ ಮುಖ್ಯಂ ಭವತಿ ।
ನ ಚ ಮುಖ್ಯಾ ಶ್ರೋತ್ರಿಯತಾ ॥

ಅ ॥ (ಅಲ್ಲಿ 'ಶ್ರೋತ್ರಿಯ,' 'ಅಕಾಮಹತ' ಎಂಬ ಎರಡು ವಿಶೇಷಣಗಳನ್ನು ಕೊಟ್ಟಿರುವುದರಿಂದಲೇ ಅದು ಮುಕ್ತರ ಆನಂದವಿಚಾರವೆಂದೇತಕ್ಕೆ ಹೇಳಬೇಕೆಂದು ಆಕ್ಷೇಪಿಸಕೂಡದು.) ಏಕಂದರೆ:— ಅಮುಕ್ತರಾದವರಿಗೆ ಮುಖ್ಯವಾಗಿ ಅಕಾಮಹತತ್ವವೂ, ಶ್ರೋತ್ರಿಯತ್ವವೂ

**ಭಾ** ॥(*a*) ಯಸ್ಯ ಶ್ರುತಿಫಲಂ ಪೂರ್ಣಂ ಸ ಶ್ರೋತ್ರಿಯ ಉದಾಹೃತಃ

(*b*) ಸ ಹಿ ಮುಕ್ತೋಽಕಾಮಹತಃ ಸ ಹಿ ಕಾಮೈರ್ನ ಹನ್ಯತೇ ||
ಯಸ್ಯ ಕಾಮಾಸ್ತು ಸತ್ಯಾಃ ಸ್ಯುಃ ಸ ಹಿ ಕಾಮೈರ್ನ ಹನ್ಯತೇ ||
(*c*) ನ ಹ್ಯಕಾಮಃ ಕ್ವಚಿತ್ಕಶ್ಚಿತ್ ದೃಶ್ಯತೇ ಶ್ರೂಯತೇಽಪಿ ಚ ||
- ಇತಿ ಬ್ರಹ್ಮಾಂಡೇ ||

ಅ || (ಅಂತಹ ವಿಶೇಷಣಗಳು ಅಮುಕ್ತರಿಗೆ ಕೂಡಲಾರವು.) ಅದೇಕೆಂದರೆ:— (*a*) ಯಾವಾತನಿಗೆ ಶ್ರವಣಕ್ಕೆ ಮುಖ್ಯ ಫಲವಾದ ಮೋಕ್ಷವು ಪ್ರಾಪ್ತವಾಗಿದೆಯೋ ಆತನೇ ಶ್ರೋತ್ರಿಯನು. (*b*) ಯಾವಾತನ ಅಭೀಷ್ಟಗಳು ನಿಷ್ಫಲಗಳಾಗುವುದಿಲ್ಲವೋ ಅಂಥವನು ಕಾಮಗಳಿಂದ ಪೀಡಿಸಲ್ಪಡುವುದಿಲ್ಲ. ಆತನೇ ಅಕಾಮಹತನು. ಅಂತಹನು ಮುಕ್ತನೇ ಆಗ ಬೇಕು. (*c*) ಕಾಮವೇ ಇಲ್ಲದಿರುವ ಪುರುಷನು ಎಲ್ಲಿಯೂ ತೋರುವುದೂ ಇಲ್ಲ; ಕೇಳಿ ಬರುವುದೂ ಇಲ್ಲ. (ಆದರೆ ಕಾಮಕೃತವಾದ ಉಪದ್ರವವಿಲ್ಲದವನು ಮುಕ್ತನೇ ಅಲ್ಲದೆ ಬೇರಲ್ಲ.)

ಭಾ ||(*a*) ನ ಚ ದೇವಪದಾಕಾಮಸ್ಯ ಸಕಾಶಾದಿಂದ್ರಪದಾಕಾಮಸ್ಯ
ಶತಗುಣಾನಂದೋ ದೃಶ್ಯತೇ | ಸತಿ ಚ ಪ್ರಾಜಾಪತ್ಯಾದಿಕಾಮೇ ||

ಅ || ಹೀಗಾದರೂ 'ಶ್ರೋತ್ರಿಯ' 'ಅಕಾಮಹತ' ಎಂಬೀ ವಿಶೇಷಣಗಳು ಮುಕ್ತರಿಗಲ್ಲ. ಇತರ ಪುರುಷವಿಷಯಕಗಳಾಗಿರುತ್ತವೆ. ಅದು ಹೇಗೆಂದರೆ:—ದೇವತೆಗಳಿಗಿಂತ ಇಂದ್ರನಿಗೆ ನೂರುಮಡಿ ಆನಂದವಷ್ಟೆ. ಹಾಗೆಯೇ ಮತ್ತೊಬ್ಬನು ಅಷ್ಟು ಶ್ರೋತ್ರಿಯನಾಗಿಯೂ, ದೇವತೆಗಳ ಪದವನ್ನಿಚ್ಛಿಸದೆಯೇ ಯಾರು ಇರುತ್ತಾನೋ, ಅಂತಹ ವಿರಕ್ತನಿಗೆ ದೇವತೆಗಳಿಂದ ನೂರು ಮಡಿ ಆನಂದವು; ಅಂದರೆ ಇಂದ್ರನಿಗೆ ಸಮಾನವಾದ ಆನಂದವು.

ಇದೇ ರೀತಿಯಾಗಿ ಪೂರ್ವೋತ್ತರಗಳಲ್ಲಿ ಆಯಾಯ ಪದಗಳನ್ನಿಚ್ಛಿಸದೇ ಅಷ್ಟಷ್ಟು ಶ್ರೋತ್ರಿಯತ್ವಾದಿ ಗುಣಯುಕ್ತರಾದ ಇತರ ವಿರಕ್ತರಿಗೂ ಆಯಾ ದೇವತೆಗಳ ಸಮಾನವಾದ ಆನಂದವು. ಎಂಬೀ ಮಾಯಾವಾದಿಗಳ ವ್ಯಾಖ್ಯಾನವೂ ಅಸಂಗತವು.

ಏಕೆಂದರೆ:—(*a*) ದೇವಪದವನ್ನಿಚ್ಛಿಸದೇ ಇದ್ದು ಅಷ್ಟು ಯೋಗ್ಯತಾ ಇರುವ ವಿರಕ್ತನಾದ ಪುರುಷನ ಆನಂದಕ್ಕಿಂತ, ಇಂದ್ರಪದವಿಯನ್ನಿಚ್ಛಿಸದೇ ಇದ್ದು ಅಷ್ಟು ಯೋಗ್ಯತಾ ಇರುವ ವಿರಕ್ತ ಪುರುಷನಿಗೆ ಪ್ರಾಜಾಪತ್ಯಾದಿ ಮೇಲಿನ ಪದಗಳ ಕಾಮನೆ ಇರುವಾಗ ನೂರುಮಡಿ ಆನಂದವು ಎಲ್ಲಿಯೂ ತೋರುವುದಿಲ್ಲ.

ಭಾ ||(*a*) ನ ಚ ಮಾನುಷಾಃ ಪ್ರಾಯಸ್ತದಿಚ್ಛವಃ ||

ಅ || ಅಲ್ಲದೆ ಆಯಾಯ ಪದಗಳನ್ನಿಚ್ಛಿಸದೇ ಇದ್ದು ಅಷ್ಟು ಆನಂದವಿರುವ ಹಾಗೂ ಮೇಲಿನ ಪದವಿಗಳನ್ನಿಚ್ಛಿಸಿಕೊಂಡಿರುವ ವಿರಕ್ತರಾದ ಪುರುಷರೇ ಇಲ್ಲ.

ಏಕೆಂದರೆ:—(*a*) (ಆಯಾಯ ಪದಗಳಿಗೆ ಹೋಗುವ ಯೋಗ್ಯತೆಯುಳ್ಳವರನ್ನು ಹೊರತು ಮಿಕ್ಕಾದ) ಮನುಷ್ಯರೂ ಕೂಡ (ಅಯೋಗ್ಯಪದವಿಯನ್ನಿಚ್ಛಿಸಿದರೆ ಅನರ್ಥವುಂಟೆಂಬ ಭೀತಿಯಿಂದ) ಅಯೋಗ್ಯಪದವಿಯನ್ನಿಚ್ಛಿಸುವುದಿಲ್ಲ. (ಹೀಗಿರಲು ಮಹಾನುಭಾವರಾದ ಋಷ್ಯಾದಿಗಳು ಹಾಗೆ ಇಚ್ಛಿಸುವುದಿಲ್ಲವೆಂದು ಹೇಳತಕ್ಕುದೇ ಇಲ್ಲ.)

ಭಾ ||(*a*) ಚಕ್ರವರ್ತಿನಸ್ತು ಯುವಶಬ್ದೇನೈವ ಮುಕ್ತತ್ವಮುಕ್ತಂ |
ತಸ್ಮಾನ್ಮುಕ್ತವಿಷಯೇಯಂ ಮೀಮಾಂಸಾ ||

ಅ || ಮನುಷ್ಯ ಗಂಧರ್ವಾದಿಗಳ ಆನಂದವನ್ನು ಹೇಳುವಾಗ ಮುಕ್ತಪುರುಷರಿಗೆ ಜ್ಞಾಪಕವಾದ ಶ್ರೋತ್ರಿಯತ್ವಾದಿ ವಿಶೇಷಣಗಳಿದ್ದರೂ ಚಕ್ರವರ್ತಿಯ ಆನಂದವನ್ನು ನಿರ್ದೇಶಿಸುವಾಗ ಅದಿಲ್ಲದಿರುವ ಪ್ರಯುಕ್ತ ಅಲ್ಲಿ ಹೇಳಿದ ಆನಂದವು ಮುಕ್ತಚಕ್ರವರ್ತಿವಿಷಯವಲ್ಲವೆಂದು ಶಂಕಿಸಕೂಡದು. ಏಕೆಂದರೆ:—(a) ಅಲ್ಲಿ ವಿಷ್ಣುವಿನಿಂದ ಕೂಡಿಕೊಂಡೇ ಹೋಗುತ್ತಾನೆ ಎಂದರ್ಥವುಳ್ಳ ಯುವಶಬ್ದದಿಂದಲೇ ಚಕ್ರವರ್ತಿಗೆ ಮುಕ್ತತ್ವವು ಹೇಳಲ್ಪಟ್ಟಿತು. ಆದುದರಿಂದ ಈ ಎಲ್ಲಾ ಆನಂದವಿಚಾರವೂ ಮುಕ್ತರ ವಿಷಯವಾಗಿಯೇ ಇರುತ್ತದೆ.

ಭಾ || ಯದಾ ಸರ್ವೇ ಪ್ರಮುಚ್ಯಂತೇ ಕಾಮಾ ಯೇಽಸ್ಯ ಹೃದಿ ಸ್ಥಿತಾಃ |
ಇತ್ಯತ್ರಾಪ್ಯಂತಃಕರಣಸ್ಥಾನಾಮೇವ ಕಾಮಾನಾಂ ವಿಮೋಕ್ಷ ಉಕ್ತಃ ||
ನ ತು ಸ್ವರೂಪಭೂತಾನಾಂ ||

ಅ || ಕಾಮನಾಯಿಲ್ಲದಿರುವ ಪುರುಷನು ಯಾರೊಬ್ಬನೂ ಇಲ್ಲವೆಂದು ಹಿಂದೆ ಹೇಳಿಯದೆ. ಇದು ಅಸಂಗತವು. ಏಕೆಂದರೆ:—'ಯದಾ ಸರ್ವೇ ಪ್ರಮುಚ್ಯಂತೇ' ಎಂಬ ಶ್ರುತಿಯಲ್ಲಿ ಮುಕ್ತನಿಗೆ ಯಾವುದೊಂದು ಕಾಮನೆಗಳೂ ಇರುವುದಿಲ್ಲವೆಂದು ಹೇಳಿಯದೆ. ಆದಕಾರಣ ಪರಸ್ಪರವಾಗಿ ವಿರೋಧವು ತೋರುತ್ತದೆಯೆಂದು ಹೇಳಕೂಡದು. ಏಂಕೆದರೆ:—ಆ ಶ್ರುತಿಯಲ್ಲಿ ಅಂತಃಕರಣದಲ್ಲಿರತಕ್ಕ ಕಾಮನೆಗಳ ಪರವಾಗಿ ಎಲ್ಲಾ ಕಾಮನೆಗಳೂ ಬಿಡಲ್ಪಡುತ್ತವೆಯೆಂದು ಹೇಳಿದ್ದಲ್ಲದೆ ಸ್ವರೂಪಭೂತವಾದ ಕಾಮನೆಗಳ ಪರವಾಗಲ್ಲ. ಆದ್ದಕಾರಣ ಪೂರ್ವದಲ್ಲಿ ಸ್ವರೂಪಕಾಮನೆ ಇರುತ್ತದೆಂದು ಹೇಳಿದ್ದೆಂದೂ, ಈ ಶ್ರುತಿಯಲ್ಲಿ ಅಂತಃಕರಣಕಾಮನೆಗಳಿರುವುದಿಲ್ಲವೆಂದಂದುದೆಂದೂ ತಿಳಿಯಬೇಕು. ಆದಕಾರಣ ವಿರೋಧವಿಲ್ಲ.

ಭಾ ||(a) ಯಂ ಯಮಂತಮಭಿಕಾಮೋ ಭವತಿ | ಸೋಽಸ್ಯ
ಸಂಕಲ್ಪಾದೇವ ಭವತೀತಿ ಮುಕ್ತಾನಾಮಪಿ
ಸ್ವರೂಪಭೂತಃ ಕಾಮಃ ಪ್ರತೀಯತೇ ||

ಅ || (a) ಮುಕ್ತರಿಗೂ ಕೂಡ ಸ್ವರೂಪಭೂತವಾದ ಕಾಮನೆಯಿರುತ್ತದೆಯೆಂಬ ವಿಷಯದಲ್ಲಿ ಪ್ರಮಾಣವೇನೆಂದರೆ:—ಮುಕ್ತನಾದವನು ಯಾವ ಯಾವ ಅಭಿಲಾಷಾಯುಕ್ತನಾಗುತ್ತಾನೋ, ಅದದು ಆತನಿಗೆ ಸಂಕಲ್ಪಮಾತ್ರಕ್ಕೆ ಸಿದ್ಧಿಸುತ್ತದೆಂಬ ವಾಕ್ಯದಿಂದ ಮುಕ್ತರಿಗೂ ಸ್ವರೂಪಭೂತವಾದ ಕಾಮನೆಯು ಇರುತ್ತದೆಂದು ಸ್ಪಷ್ಟವಾಗುತ್ತದೆ.

ಭಾ || ಕಾಮಃ ಸಂಕಲ್ಪ ಆನಂದೋ ಮುಕ್ತಾನಾಂ ತಾರತಮ್ಯತಃ |
ಸ್ವರೂಪಭೂತಾಸ್ತೇ ಸರ್ವೇ ನಿರ್ದೋಷಾ ಗುಣರೂಪಕಾಃ ||
— ಇತಿ ಪಾದ್ಮೇ ||

ಅ || ಮುಕ್ತರಿಗೆ ತಾರತಮ್ಯಾನುಸಾರವಾಗಿ ಕಾಮವು, ಸಂಕಲ್ಪವು, ಆನಂದವೂ ಇವುಗಳೆಲ್ಲವೂ ದೋಷಶೂನ್ಯಗಳಾಗಿಯೂ, ಗುಣರೂಪಗಳಾಗಿಯೂ, ಸ್ವರೂಪಭೂತಗಳಾಗಿಯೂ ಇರುತ್ತವೆಯೆಂದು ಪಾದ್ಮಪುರಾಣದಲ್ಲಿ ಉಕ್ತವಾಗಿದೆ.

ಭಾ || 'ಸಂಕಲ್ಪಾದೇವ ಚ ತಚ್ಛ್ರುತೇ'ರಿತಿ ಸೂತ್ರಂ ||

ಅ || ಅಲ್ಲದೆ, ಮುಕ್ತರು ಪಿತೃಗಳನ್ನು ನೋಡಬೇಕೆಂದು ಇಚ್ಛಿಸಿದೊಡನೇ ಸಂಕಲ್ಪದಿಂದಲೇ ಪಿತೃಗಳು ತತ್ಕ್ಷಣವೇ ತೋರುತ್ತಾರೆ. ಇದೇ ಮೊದಲಾದ ಅರ್ಥವುಳ್ಳ ಶ್ರುತಿ

ಇರುವುದರಿಂದ ಮನಸ್ಸಿನಲ್ಲಿ ಆಲೋಚನಾಮಾತ್ರದಿಂದಲೇ ಪ್ರಯತ್ನವಿಲ್ಲದೇನೇ ಮುಕ್ತರಿಗೆ ನಿಖಿಲಭೋಗಗಳೂ ಸಿದ್ಧಿಸುತ್ತವೆ ಎಂಬ ಈ ಬ್ರಹ್ಮಸೂತ್ರವೂ ಇರುತ್ತದೆ.

**ಭಾ** || ಭೇದವ್ಯಪದೇಶಾದಿತಿ ಜೀವೇಶಯೋರ್ಭೇದಶ್ಚೋಕ್ತೋ ಭಗವತಾ ||

**ಅ** || 'ಭೇದವ್ಯಪದೇಶಾತ್' ಎಂಬ ಸೂತ್ರದಲ್ಲಿ ಜೀವೇಶ್ವರರಿಗೆ ಭೇದವನ್ನೇ ಶ್ರೀ ವೇದ ವ್ಯಾಸರು ಹೇಳುತ್ತಾರೆ.

ಆದುದರಿಂದ ಜೀವೇಶ್ವರರಿಗೆ ಅಭೇದವನ್ನು ಹೇಳುವವರಿಗೆ ಶ್ರುತಿವಿರೋಧವಲ್ಲದೆ ಸೂತ್ರ ವಿರೋಧವೂ ಇರುತ್ತದೆ.

**ಭಾ** ||(*a*) ನ ಚ ಭೇದದರ್ಶನಮಸುಕರಂ । ಸ್ವರೂಪತ್ವಾದ್ಭೇದಸ್ಯ ||

**ಅ** || 'ಚೈತ್ರನು ಮೈತ್ರನಿಂದ ಭಿನ್ನನು' ಅಥವಾ 'ಚೈತ್ರ ಮೈತ್ರರಿಗೆ ಭೇದವು' ಎಂಬೀರೀ ತಿಯಾಗಿಯೇ ಭೇದವು ತೋರುತ್ತದಲ್ಲದೆ ಬರೀ 'ಭೇದ' ಎಂದಿಷ್ಟೇ ಜ್ಞಾನವುಂಟಾಗುವುದಿಲ್ಲವಷ್ಟೆ. ಹೀಗೆ ಯಾವರೀತಿಯಿಂದಿಟ್ಟುಕೊಂಡರೂ ಅನ್ಯೋನ್ಯಾಶ್ರಯ ರೂಪದೋಷ ಬರುತ್ತದೆ. ಅದು ಹೇಗೆಂದರೆ:—

ಧರ್ಮಿಪ್ರತಿಯೋಗಿಗಳಾದ ಚೈತ್ರಮೈತ್ರರ ಜ್ಞಾನವುಂಟಾದರೆ ಭೇದಜ್ಞಾನವುಂಟಾಗುತ್ತದೆ. ಭೇದಜ್ಞಾನವುಂಟಾದರೆ ಅವರಿಬ್ಬರ ಜ್ಞಾನವುಂಟಾಗುತ್ತದೆ. ಅಥವಾ ವಿಶೇಷಣ ಭೂತರಾದ ಚೈತ್ರಮೈತ್ರರ ಜ್ಞಾನವುಂಟಾದರೆ ವಿಶೇಷ್ಯವಾದ ಭೇದಜ್ಞಾನ ಉಂಟಾಗುತ್ತದೆ. ವಿಶೇಷ್ಯವಾದ ಭೇದಜ್ಞಾನ ಉಂಟಾದರೆ ವಿಶೇಷಣಭೂತರಾದ ಚೈತ್ರಮೈತ್ರರ ಜ್ಞಾನವು ಬರುತ್ತದೆ ಎಂಬ ಈ ರೀತಿಯಾಗಿ 'ಮದುವೆಯಾಗದೆ ಹುಚ್ಚು ಬಿಡದು' ಹುಚ್ಚು ಬಿಡದೆ ಮದುವೆಯಾಗದೆಂಬಂತೆ ಅನ್ಯೋನ್ಯಾಶ್ರಯ ರೂಪದೋಷ ಬರುತ್ತದೆ. ಆದುದರಿಂದ ಸೂತ್ರಕಾರರಿಂದಲೂ ಶ್ರುತಿ ಯಿಂದಲೂ ಕಾಲ್ಪನಿಕವಾದ ಭೇದವೇ ಹೇಳಲ್ಪಟ್ಟದೆ ಪಾರಮಾರ್ಥಿಕವಲ್ಲ, ಎಂಬ ಈ ಮಾಯಾ ವಾದಿಗಳ ಮತವು ಅಸಂಗತವು. ಅದು ಹೇಗೆಂದರೆ:—

(*a*) ಭೇಧವು ಧರ್ಮಿಸ್ವರೂಪವೇ ಆಗಿರುವುದರಿಂದ ಧರ್ಮಿಜ್ಞಾನವೇ ಭೇದಜ್ಞಾನವು ಬೇರೆಯಲ್ಲ. ಆದುದರಿಂದ ಎರಡು ಪ್ರತೀತಿ ಇಲ್ಲದ ಕಾರಣ ಅನ್ಯೋನ್ಯಾಶ್ರಯರೂಪ ದೋಷವೂ ಇಲ್ಲ. ಕಾರಣ, ಭೇದಜ್ಞಾನವುಂಟಾಗುವುದು ಅಶಕ್ಯವಲ್ಲ.

**ಭಾ** ||(*a*) ಸರ್ವವ್ಯಾವೃತ್ತಂ ಹಿ ಸರ್ವಸ್ಯ ಸ್ವರೂಪಂ ಸರ್ವೈರನುಭೂಯತೇ ||

**ಅ** || ಈ ರೀತಿಯಾಗಿ ಭೇದಜ್ಞಾನವು ಧರ್ಮಿಸ್ವರೂಪವೇ ಆದುದರಿಂದ ಸುಲಭವೇ ಆಗಿದೆ. ಆದರೆ ಭೇದವು ಧರ್ಮಿಸ್ವರೂಪವೆಂದೇತಕ್ಕೆ ಅಂಗೀಕರಿಸಬೇಕು. ಅಂದರೆ (*a*) ಘಟಪಟ ಇತ್ಯಾದಿ ಸಮಸ್ತ ವಸ್ತುಗಳ ಜ್ಞಾನ ಉಂಟಾಗುವಾಗಲೂ ಅವುಗಳಿಂದಿತರ ಸಮಸ್ತ ವಸ್ತುಗಳಿಂದ ಬೇರೆಯಾಗಿಯೇ ಸರ್ವರಿಂದಲೂ ಅನುಭವಿಸಲ್ಪಡುತ್ತದಲ್ಲದೆ ಮಿಶ್ರವಾಗಿ ಅಂದರೆ ಘಟವು ಪಟವು ಪುಸ್ತಕವು ಎಂದೆಲ್ಲವೂ ಒಂದೇ ರೂಪವಾಗಿ ಜ್ಞಾನಉಂಟಾಗುವುದಿಲ್ಲ.

**ಭಾ** || ಅನ್ಯಥಾ ಅಹಂ ವಾ ದೃಷ್ಟೋಽನ್ಯೋವಾ ದೃಷ್ಟ ಇತ್ಯಪಿ
ಸಂಶಯಃ ಸ್ಯಾತ್ ||

**ಅ** || ಘಟಪಟಾದಿಜ್ಞಾನ ಕಾಲದಲ್ಲಿ ಇತರ ವಸ್ತುಗಳಿಂದ ಬೇರೆಯಾಗಿಯೇ ಅನುಭವಿಸಲ್ಪಡು ತ್ತದೆಂಬುದನ್ನು ಒಡಂಬಡದಿದ್ದರೆ ಎಲ್ಲಾ ಪದಾರ್ಥಗಳಲ್ಲಿ ಸೇರದ ತನ್ನ ಸ್ವರೂಪಜ್ಞಾನ ಬರು

ವಾಗಲೂ ಘಟಪಟಾದಿ ವಸ್ತುಗಳಿಗಿಂತ ಬೇರೆಯಾಗಿ ತೋರದೆ ಹೋಗಬೇಕಾದೀತು. ಹಾಗೆ ಇತರ ವಸ್ತುಗಳಿಗಿಂತ ಬೇರೆಯಾಗಿ ತೋರದಿದ್ದಲ್ಲಿ ಇದು ಘಟವೋ ಅಥವಾ ನಾನೋ? ಯಾ ಘಟವೆಯೋ? ಎಂಬಿತ್ಯಾದಿ ತನ್ನ ಸ್ವರೂಪದಲ್ಲಿಯೂ ಸಂಶಯ ವಿಪರೀತಜ್ಞಾನ ಉಂಟಾಗಬೇಕಾದೀತು.

ಭಾ ||(a) ನ ಚ ಪಶ್ಚಾದ್ಭೇದೋ ಜ್ಞಾಯತ । — ಇತ್ಯತ್ರ ಕಿಂಚಿನ್ಮಾನಂ ||

ಅ || ಪದಾರ್ಥಜ್ಞಾನ ಉಂಟಾದಮೇಲೆಯೇ ಭೇದಜ್ಞಾನ ಉಂಟಾಗುವ ಪ್ರಯುಕ್ತ ಪೂರ್ವೋಕ್ತವಾದ ಸಂದೇಹ ಉಂಟಾಗಲಾರದೆಂಬ ಮಾತು ಯುಕ್ತವಲ್ಲ. ಏಕೆಂದರೆ:- (a) ಘಟಪಟಾದಿ ವಸ್ತುಜ್ಞಾನ ಉಂಟಾದ ಮೇಲೆಯೇ ಭೇದಜ್ಞಾನ ಉಂಟಾಗುವದೆಂಬ ವಿಷಯದಲ್ಲಿ ಪ್ರತ್ಯಕ್ಷಾದಿ ಯಾವುದೊಂದು ಪ್ರಮಾಣವೂ ಇಲ್ಲ.

ಭಾ ||(a) ನಹಿ ದೃಷ್ಟ ವಸ್ತುನಃ ಪುರುಷಸ್ಯ ।
ತಸ್ಯ ವಸ್ತ್ವಂತರಾದ್ಭೇದೇ ಸಂಶಯಃ ಕ್ವಚಿದ್ದೃಷ್ಟಃ ||

ಅ || ಘಟಪಟಾದಿವಸ್ತುಗಳ ಜ್ಞಾನವು ಬೇರೆ ಬೇರೆಯಾಗಿ ಉಂಟಾಗದಿದ್ದರೆ ತನ್ನ ಸ್ವರೂಪದಲ್ಲಿಯೂ 'ತಾನೋಘಟವೋ?' ಎಂದು ಸಂಶಯ ಉಂಟಾಗ ಬಹುದೆಂದು ಹೇಳಿದುದು ಯುಕ್ತವಲ್ಲ. ಏಕೆಂದರೆ:—

(a) ಘಟಪಟಾದಿ ವಸ್ತುಗಳನ್ನು ನೋಡಿದ ಆತನಿಗೆ ಇತರ ಘಟಪಟಾದಿ ವಸ್ತುಗಳಿಂದ ಭೇದವೇ ನಿಶ್ಚಿತವಾಗಿರುವಾಗ ಅಂತಹ ಸಂಶಯುವು ಎಲ್ಲಿಯೂ ದೃಷ್ಟವಾಗಿಲ್ಲ.

ಭಾ ||(a) ನ ಚ ಸರ್ವತೋ ವ್ಯಾವೃತ್ತ್ಯನುಭವೇ ಸರ್ವಜ್ಞತಾ
ಪೇಕ್ಷ್ಯೇತೇತಿ ದೋಷಃ ।
ಸಾಮಾನ್ಯತಃ ಸರ್ವಸ್ಯ ಸರ್ವೈರಪಿ ಜ್ಞಾತತ್ವಾತ್ ||

ಅ || ಘಟಪಟಾದಿಗಳ ಜ್ಞಾನಉಂಟಾಗುವಾಗ ಇತರ ಸರ್ವವಸ್ತುವಿನಿಂದಲೂ ಬೇರೆಯಾಗಿಯೇ ಜ್ಞಾನಉಂಟಾಗುವದಾದರೆ ಯಾರಿಗೆ ಜ್ಞಾನ ಬರುತ್ತದೋ ಆತನು ಎಲ್ಲಾ ಇತರ ವಸ್ತುಗಳನ್ನೂ ತಿಳಿದಿರಬೇಕಾದೀತು. ಅಂತೂ ಆತನಿಗೆ ಸರ್ವಜ್ಞತ್ವ ಅಪೇಕ್ಷಣೀಯವಾಗುತ್ತದೆ. ಎಂದು ಆಶಂಕಿಸ ಕೂಡದು ಏಕೆಂದರೆ:-

(a) ಎಲ್ಲಾ ವಸ್ತುಗಳ ಜ್ಞಾನವು ಸಾಮಾನ್ಯವಾಗಿದ್ದರೇನೇ ಸಾಕು. ವಿಶೇಷವಾಗಿ ಬೇಕಿಲ್ಲ. ಅಂತಹ ಸಾಮಾನ್ಯವಾದ ಎಲ್ಲಾ ವಸ್ತುಗಳ ಜ್ಞಾನವು ಎಲ್ಲರಿಗೂ ಇರುವ ಪ್ರಯುಕ್ತ ಯಾರಿಗೆ ಜ್ಞಾನವುಂಟಾಗುತ್ತದೋ ಆತನು ಸರ್ವಜ್ಞನಾಗಬೇಕೆಂಬ ದೋಷವಿಲ್ಲ.

ಭಾ ||(a) ಯಾವತ್ತು ಸರ್ವತೋ ಭೇದೋ ವಿಶೇಷತೋ ನ ಜ್ಞಾಯತೇ ತಾ
ವತ್ಸ್ವರೂಪಮೇವ ವಿಶೇಷತೋ ನ ಜ್ಞಾತಂ ||

ಅ || ಇತರ ಎಲ್ಲಾ ವಸ್ತುಗಳ ಜ್ಞಾನವು ವಿಶೇಷವಾಗಿಲ್ಲದಿದ್ದರೆ ಘಟಪಟಾದಿಗಳೂ ಇತರ ವಸ್ತುಗಳಿಂದ ಬೇರೆಯೆಂದು ವಿಶೇಷವಾಗಿ ತಿಳಿದಹಾಗಾಗಿಲ್ಲವಷ್ಟೆ. ಅಂತೂ ಭೇದಜ್ಞಾನವೂ ಸ್ಪಷ್ಟವಾಗಿ ಉಂಟಾಗಲಿಲ್ಲವಾದ ಪ್ರಯುಕ್ತ ಭೇದಸ್ವರೂಪವಾದ ಪದಾರ್ಥ ಸ್ವರೂಪವೂ [illegible]ಯದೇ ಹೋಗಬೇಕಾದೀತು. ಎಂದಾಶಂಕಿಸಿದರೆ ಅದು ನಮಗಿಷ್ಟವೇ ಆಗಿರುತ್ತದೆ. ಹೇಗೆಂದರೆ:—

*(a)* ಯಾವ ತನಕ ವಿಶೇಷಾಕಾರವಾಗಿ ನಿಖಿಲ ವಸ್ತುವಿನಿಂದ ಭೇದವು ತಿಳಿಯಲ್ಪ ಡುವುದಿಲ್ಲವೋ ಆ ತನಕ ವಿಶೇಷಾಕಾರವಾಗಿ ಧರ್ಮಿಸ್ವರೂಪ ತಿಳಿಯಲ್ಪಡುವುದಿಲ್ಲ. ಭೇದವು ವಿಶೇಷವಾಗಿ ತಿಳಿಯಲ್ಪಟ್ಟರೆ, ಧರ್ಮಿಸ್ವರೂಪವೂ ವಿಶೇಷವಾಗಿ ತಿಳಿಯಲ್ಪಡುತ್ತದೆ.

**ಭಾ** ॥ ನ ಹಿ ಜ್ಞಾತಾದ್ವಸ್ತುನೋಽನ್ಯ ವ್ಯಾವೃತ್ತಿಃ ಕೇನಚಿಚ್ಛಂಕ್ಯತೇ ॥

**ಅ** ॥ ವಿಶೇಷಾಕಾರವಾಗಿ ಎದುರಿಗಿದ್ದ ವಸ್ತುವನ್ನು ತಿಳುಕೊಂಡವನು ಅದಕ್ಕೆ ಸಾಮಾ ನ್ಯವಾಗಿ ತಿಳಿದ ಇತರ ವಸ್ತುಗಳಿಂದ ಐಕ್ಯವನ್ನು ಯಾರೂ ಶಂಕಿಸುವುದಿಲ್ಲ, ಆದಕಾರಣ ಸಾಮಾನ್ಯವಾಗಿ ಸರ್ವವೂ ಎಲ್ಲರಿಂದಲೂ ತಿಳಿಯಲ್ಪಟ್ಟದೆಯೆಂದಹಾಗಾಯಿತು.

**ಭಾ** ॥*(a)* ಯದಾ ತು ಸಂಶೀಯತೇ ತದಾಪಿ ಕುತಶ್ಚಿದ್ವ್ಯಾವೃತ್ತಮೇವ ಜ್ಞಾಯತೇ ॥

*(b)* ನ ಹಿ ಸರ್ವಮಿದಂ ಭವತಿ ವಾ ನ ವೇತಿ ಕಸ್ಯ ಚಿತ್ಸಂಶಯಃ ॥

*(c)* ಅತೋ ವ್ಯಾವೃತ್ತಿರೇವ ಸ್ವರೂಪಂ ॥

**ಅ** ॥ ಇಷ್ಟಾದರೂ ಭೇದವು ಘಟಪಟಾದಿ ಧರ್ಮಿಸ್ವರೂಪವೆಂದು ಹೇಳಕೂಡದು. ಏಕೆಂದರೆ:—ಬೇದವು ಧರ್ಮಿಸ್ವರೂಪವಾದರೆ ಧರ್ಮಿಜ್ಞಾನವುಂಟಾದಾಗಲೇ ಭೇದಜ್ಞಾನವೂ ಉಂಟಾಗುವಪ್ರಯುಕ್ತ ಸಂಶಯವೇ ಇಲ್ಲವೆಂದಾದೀತು ಎಂದಾಶಂಕಿಸಕೂಡದು. ಏಕೆಂದರೆ:-

*(a)* ಯಾವಾಗ "ಸ್ಥಾಣುವೋ? ಪುರುಷನೋ?" ಎಂದು ಸಂಶಯ ಬರುತ್ತದೋ ಆಗ ಘಟಪಟಾದಿ ಕೆಲವು ಪದಾರ್ಥಗಳಿಂದ ಬೇರೆಯಾಗಿಯೇ ಜ್ಞಾನಬರುತ್ತದಲ್ಲದೆ ಸ್ಥಾಣ್ವಾದಿ ಪದಾರ್ಥಗಳಿಂದಲೂ ಬೇರೆಯೆಂದು ಜ್ಞಾನಬರುವುದಿಲ್ಲವಾದ ಪ್ರಯುಕ್ತ ಸಂಶಯವು ಕೂಡು ತ್ತದೆ. ಏಕೆಂದರೆ:—

*(b)* ಎದುರಿಗಿದ್ದ ವಸ್ತುವು "ಸರ್ವ ಸ್ವರೂಪವೋ? ಅಲ್ಲವೋ?" ಎಂಬೀ ಸಂಶಯುವು ಯಾರಿಗೂ ಇಲ್ಲ. ಪರಂತು ಎದುರಿಗಿದ್ದ ವಸ್ತುವು "ಸ್ಥಾಣುವೋ? ಪುರುಷನೋ?" ಎಂಬೀ ರೀತಿಯಾಗಿಯೇ ಸಂಶಯವು ಬರತಕ್ಕದ್ದು.

*(c)* ಆದುದರಿಂದ ಭೇದವು ಧರ್ಮಿಸ್ವರೂಪವೆಂದೇ ಒಡಂಬಡಬೇಕು.

**ಭಾ** ॥*(a)* ಅಸ್ಯ ಭೇದ ಇತಿ ವಿಶೇಷ್ಯತ್ವಮಸ್ಯ ಸ್ವರೂಪಮಿತಿವತ್ ॥

**ಅ** ॥ ಇಷ್ಟಾದರೂ ಲೋಕದಲ್ಲಿ "ರಾಮನ ರಥವು" ಎಂಬಲ್ಲಿ ರಾಮನಿಗೂ ರಥಕ್ಕೂ ಹೇಗೆ ಭೇದವಿದೆಯೋ ಹಾಗೆಯೇ "ಘಟದ ಭೇದವು" ಎಂದು ಹೇಳುವಾಗ ಘಟಕ್ಕೂ ಭೇದ ಕ್ಕೂ ಭೇದವೇ ಹೊರತು ಐಕ್ಯವು ಎಷ್ಟು ಮಾತ್ರಕ್ಕೂ ಕೂಡಲಾರದು. ಎಂದು ಆಕ್ಷೇಪಿಸ ಕೂಡದು. ಏಕೆಂದರೆ:—

*(a)* "ರಾಮನ ಸ್ವರೂಪವು" ಎಂಬಲ್ಲಿ ರಾಮನಿಗೂ ಆತನ ಸ್ವರೂಪಕ್ಕೂ ಐಕ್ಯವಿದ್ದ ರೂ ಹಾಗೆ ಪ್ರಯೋಗವು ಹೇಗೆ ಕೂಡುತ್ತದೋ ಹಾಗೆಯೇ "ಘಟದ ಭೇದವು" ಎಂದು ಘಟ ವನ್ನು ವಿಶೇಷಣವಾಗಿಯೂ ಭೇದವನ್ನು ವಿಶೇಷ್ಯವಾಗಿಯೂ ಪ್ರಯೋಗಿಸುವುದು ಅವುಗಳಿಗೆ ಐಕ್ಯವಿದ್ದರೂ ಕೂಡುತ್ತದೆ.

**ಭಾ ||**(*a*) ಯಥಾಸ್ತೀತಿ ವರ್ತಮಾನಃ ಕಾಲೋ ವಸ್ತುನಾ ಸಹೈವಾನುಭೂಯತೇ । ಏವಮನ್ಯಸ್ಮಾದ್ವ್ಯಾವೃತ್ತಮಿತ್ಯತ್ರ ಅನ್ಯದಪಿ ಸಾಮಾನ್ಯತಃ ಸಹೈವಾನುಭೂಯತೇ ||

ಅ || ಇಷ್ಟರವರೆಗೆ ಹೇಳಿದ ರೀತಿಯಿಂದ ಭೇದವು ಧರ್ಮಿಸ್ವರೂಪವೆಂದು ಹೇಳಿದ ಹಾಗಾಯಿತು. ಆ ಪಕ್ಷದಲ್ಲಿ ಅನ್ಯೋನ್ಯಾಶ್ರಯರೂಪದೋಷವು ಧರ್ಮ್ಯಂಶದಲ್ಲಿ ಬಾರದಿದ್ದರೂ ಪ್ರತಿಯೋಗ್ಯಂಶದಲ್ಲಿ ಬಂದೇ ಬರುತ್ತದೆ. ಹೇಗೆಂದರೆ:— 'ಘಟವು ಪಟಾದಿ ವಸ್ತುಗಳಿಂದ ಭಿನ್ನವು' ಎಂಬಲ್ಲಿ ಭೇದಕ್ಕೆ ಘಟವು ಧರ್ಮಿಯು. ಪಟಾದಿಗಳು ಪ್ರತಿಯೋಗಿಗಳು. ಭೇದವು ಧರ್ಮಿಸ್ವರೂಪ ಅಂದರೆ ಇಲ್ಲಿ ಘಟಸ್ವರೂಪವೆಂದ ಪಕ್ಷದಲ್ಲಿ ಘಟ ಮತ್ತು ಭೇದ ಇವುಗಳ ಜ್ಞಾನ ಉಂಟಾಗುವುದರಲ್ಲಿ ಅನ್ಯೋನ್ಯಾಶ್ರಯವಿಲ್ಲ. ಸರಿ. ಭೇದಜ್ಞಾನವುಂಟಾಗಬೇಕಾದರೆ ಪಟಾದಿ ಪ್ರತಿಯೋಗಿಜ್ಞಾನವೂ ಆವಶ್ಯಕವಾದುದರಿಂದ ಪಟಾದಿಗಳನು ತಿಳಿಯದೆಭೇದ ಜ್ಞಾನ ಉಂಟಾಗಲಾರದು. ಭೇದಜ್ಞಾನ ಉಂಟಾಗದೆ ಪಟಾದಿ ಪ್ರತಿಯೋಗಿ ಜ್ಞಾನವುಂಟಾಗದೆಂದು. ತಿರಿಗಿ ಅನ್ಯೋನ್ಯಾಶ್ರಯದೋಷವು ಬಂದೇ ಬರುತ್ತದೆ ಎಂದಾಕ್ಷೇಪಿಸಕೂಡದು. ಏಕೆಂದರೆ—

(*a*) ''ಘಟವು ಉಂಟು'' ಎಂದ ಕೂಡಲೇ 'ಈಗ' ಎಂಬ ವರ್ತಮಾನ ಕಾಲವೂ ಕೂಡ ಒಟ್ಟಿಗೇನೇ ಸಾಕ್ಷೀಂದ್ರಿಯದಿಂದ ಅನುಭವಿಸಲ್ಪಡುತ್ತದೋ ಹಾಗೆಯೇ 'ಪಟಾದಿಗಳಿಂದ ಭಿನ್ನವು' ಎಂಬಲ್ಲಿಯೂ ಪ್ರತಿಯೋಗಿಗಳಾದ ಪಟಾದಿಗಳೂ ಸಾಮಾನ್ಯವಾಗಿ ಘಟದಿಂದಲೂ ಸಾಕ್ಷಿಸಿದ್ಧವಾದ ಕಾಲದಿಂದಲೂ ಕೂಡಿಕೊಂಡೇ ಅನುಭವಿಸ್ಪಡುತ್ತವೆ.

**ಭಾ ||**(*a*) ನ ಹ್ಯಸ್ತೀತಿ ವರ್ತಮಾನಕಾಲಾಪೇಕ್ಷಯಾನುಭೂಯತ ಇತ್ಯೇತಾವತಾ ವಿದ್ಯಮಾನತಾ ನಾಮ ವಸ್ತುನೋऽನ್ಯಾ ||

ಅ || ಹೀಗಾದರೂ ಭೇದಜ್ಞಾನಕ್ಕೆ ಧರ್ಮಿ ಮತ್ತು ಪ್ರತಿಯೋಗಿ ಜ್ಞಾನದ ಅಪೇಕ್ಷೆಯಿರುತ್ತದೆ. 'ಇದು ಘಟವು' ಎಂಬೀ ಬರೇ ಧರ್ಮಿಜ್ಞಾನಕ್ಕೆ ಪ್ರತಿಯೋಗಿಜ್ಞಾನಾಪೇಕ್ಷೆಯಿರುವುದಿಲ್ಲ. ಆದ ಕಾರಣ ಪ್ರತಿಯೋಗಿ ಜ್ಞಾನಾಪೇಕ್ಷೆಯುಳ್ಳ ಭೇದಕ್ಕೂ ಅದಿಲ್ಲದಿರುವ ಧರ್ಮಿಸ್ವರೂಪಕ್ಕೂ ಅಭೇದವು ಎಷ್ಟುಮಾತ್ರಕ್ಕೂ ಕೂಡಲಾರದು. ಎಂಬೀ ಮಾಯಾವಾದಿಗಳ ಮತವು ಅಸಂಗತವು. ಏಕೆಂದರೆ:—

(*a*) 'ಬ್ರಹ್ಮನು ಇದ್ದಾನೆ' ಎಂದರೆ ಬ್ರಹ್ಮನ ಇರುವಿಕೆಯು ವರ್ತಮಾನ ಕಾಲದಲ್ಲಿ ಅನುಭವಿಸಲ್ಪಡುತ್ತದೆ. ಆಗ ಬ್ರಹ್ಮನ ಇರುವಿಕೆಗೆ ಅಂದರೆ ವರ್ತಮಾನಕಾಲಸಂಬಂಧಕ್ಕೆ ಸಂಬಂಧಿಯಾದ ಬ್ರಹ್ಮನ ಅಪೇಕ್ಷೆಯಿರುತ್ತದೆ. ಹೀಗೆ ವಿದ್ಯಮಾನತೆ (ಇರುವಿಕೆ)ಗೆ ಸಾಪೇಕ್ಷತ್ವ ಬಂತು. ಬ್ರಹ್ಮನು ನಿರಪೇಕ್ಷನಾಗಿದ್ದಾನೆ. ಹೀಗೆ ವಿರುದ್ಧಧರ್ಮಗಳಿದ್ದರೂ ವಿದ್ಯಮಾನತೆಯು ಬ್ರಹ್ಮನಿಂದ ಬೇರೆಯಲ್ಲ. ಬೇರೆಯೆಂದರೆ ಅದ್ವೈತಕ್ಕೆ ಹಾನಿಯಾಗಬಹುದಲ್ಲವೇ?

**ಭಾ ||**(*a*) ಸದಿತ್ಯಪಿ ಶತ್ರಂತತ್ವಾತ್ಕಾಲಸಂಬಂಧ್ಯೇವಾನುಭೂಯತೇ । ತಿಷ್ಠನ್ನಿತಿವತ್ ||

ಅ || 'ಬ್ರಹ್ಮನು ಇದ್ದಾನೆ' ಎಂದರೆ ಪೂರ್ವೋಕ್ತ ರೀತಿಯಿಂದ ಆಕ್ಷೇಪಿಸುವಪ್ರಯುಕ್ತ ಬ್ರಹ್ಮನು ಸತ್' ಎಂದರೆ ಬಾಧಕವೇನು? ಎಂದು ಕೇಳಿದರೆ:—

(*a*) 'ಸತ್' ಎಂದರೂ ಅದು ಶತೃಪ್ರತ್ಯಯಾಂತವಾದ ಶಬ್ದವಷ್ಟೆ. ಶತೃಪ್ರತ್ಯಯವು ಲಟನ ಅರ್ಥವುಳ್ಳದಾದುದರಿಂದ ಲಟಗೆ ವರ್ತಮಾನ ಕಾಲವೆಂದೇ ಅರ್ಥವು. ಆದ ಕಾರಣ

'ತಿಷ್ಠನ್' ಎಂಬುದು 'ಈಗ ನಿಂತಿದ್ದವನು' ಎಂದು ಹೇಗೆ ವರ್ತಮಾನಕಾಲ ಸಂಬಂಧವುಳ್ಳದ್ದೋ ಅಂತೆಯೇ 'ಸತ' ಎಂಬುದೂ ವರ್ತಮಾನಕಾಲ ಸಂಬಂಧವುಳ್ಳದಾಗಿಯೇ ಅನುಭವಿಸಲ್ಪಡುತ್ತದೆ. ಕಾರಣ, 'ಬ್ರಹ್ಮನು ಇದ್ದಾನೆ' ಎಂದಂತೆಯೇ ಆಯಿತು.

**ಭಾ॥** ಏವಮನ್ಯಸ್ಮಾದ್ವ್ಯಾವೃತ್ತಮಿತ್ಯನ್ಯೇನ ಸಹ ಪ್ರತೀಯಮಾನಮಪಿ ನ ಸ್ವರೂಪಾದನ್ಯತ್ ॥

ಅ॥ ಅಂತೂ ವರ್ತಮಾನ ಕಾಲವನ್ನಪೇಕ್ಷಿಸಿಕೊಂಡು ತೋರತಕ್ಕ ಇರುವಿಕೆಯು ನಿರಪೇಕ್ಷಪ್ರತೀತಿಯುಳ್ಳ ಬ್ರಹ್ಮನಿಂದ ಹೇಗೆ ಬೇರೆಯಲ್ಲವೋ ಅದೇ ರೀತಿಯಾಗಿ 'ಘಟವು ಪಟಾದಿಗಳಿಂದ ಭಿನ್ನವು' ಎಂಬಲ್ಲಿಯೂ ಪಟಾದಿಗಳಿಂದ ಕೂಡಿಕೊಂಡು ಪ್ರತೀತವಾಗುವ ಭೇದವು ಪ್ರತಿಯೋಗಿಗಳಾದ ಪಟಾದಿಜ್ಞಾನಾಪೇಕ್ಷೆಯಿಲ್ಲದಿರುವ ಘಟರೂಪವಾದ ಧರ್ಮಿಸ್ವರೂಪದಿಂದ ಬೇರೆಯಲ್ಲ.

**ಭಾ॥** *(a)* ಅಸ್ಮಾದ್ವ್ಯಾವೃತ್ತಿರನ್ಯಸ್ಯ ಸ್ವರೂಪಂ ಅನ್ಯಸ್ಮಾದ್ವ್ಯಾವೃತ್ತಿರಸ್ಯ ಸ್ವರೂಪಮಿತಿ ನೈಕಸ್ವರೂಪತಾ ॥

ಅ॥ ಹೀಗಾದರೂ ಒಂದೇ ಸಂಯೋಗವು ಅನೇಕವನ್ನಾಶ್ರಯಿಸಿಕೊಂಡು ಹೇಗದೆಯೋ ಅದೇ ರೀತಿಯಾಗಿ 'ಘಟಪಟಗಳಿಗೆ ಪುಸ್ತಕದಿಂದ ಭೇದವು' ಎಂಬಲ್ಲಿಯೂ ಒಂದೇ ಭೇದವು ಅನೇಕವನ್ನಾಶ್ರಯಿಸಿಕೊಂಡದೆ. ಅಂತಹ ಭೇದವು ಧರ್ಮಿಸ್ವರೂಪವಾದರೆ ಘಟಪಟಗಳು ಭೇದಕ್ಕೆ ಧರ್ಮಿಗಳಾದವಷ್ಟೆ. ಹಾಗಾದ ಪಕ್ಷದಲ್ಲಿತದಭಿನ್ನಾಭಿನ್ನಸ್ಯ ತದಭಿನ್ನತ್ವಂ ಎಂಬ ನ್ಯಾಯದಿಂದ ಘಟದ್ದಿಂದ ಅಭಿನ್ನವಾದುದು ಭೇದವು ಅಂತಹ ಭೇದದಿಂದ ಅಭಿನ್ನವಾದುದು ಪಟವು. ಅಂಥಹ ಪಟಕ್ಕೂ ಘಟದಿಂದ ಅಭೇದವು ಬರುವ ಪ್ರಯುಕ್ತ ಘಟಪಟಗಳಿಗೆ ಐಕ್ಯವು ಬರಬೇಕಾದೀತು ಎಂದಾಕ್ಷೇಪಿಸಕೂಡದು.

*(a)* 'ಘಟಪಟಗಳಿಗೆ ಭೇದವು' ಎಂದು ಸಾಮಾನ್ಯವಾಗಿ ಹೇಳಿದರೂ ಘಟದಿಂದ ಭಿನ್ನವು ಪಟಸ್ವರೂಪವು. ಪಟದಿಂದ ಭಿನ್ನವು ಘಟಸ್ವರೂಪವು. ಎಂದು ಎರಡು ಭೇದವು ತೋರುವ ಪ್ರಯುಕ್ತ ಘಟಪಟಗಳಿಗೆ ಅಭೇದವು ಬರುವುದಿಲ್ಲ.

**ಭಾ॥** *(a)* ಜ್ಞಾನಾನಂದಾದಿ ವತ್ಸ್ವರೂಪತ್ವೇऽಪಿ ವ್ಯವಹಾರ ವಿಶೇಷೋ ಭವತಿ ॥

ಅ ॥ ಆದರೂ ಭೇದವು ಘಟಪಟಾದಿ ಧರ್ಮಿಸ್ವರೂಪವಲ್ಲ. ಧರ್ಮಿಸ್ವರೂಪವಾದರೆ, ಘಟ ಮತ್ತು ಭೇದ ಎಂಬೀ ಶಬ್ದಗಳಿಗೆ ಏಕಾರ್ಥವು ಬರುವ ಪ್ರಯುಕ್ತ 'ಘಟವು ಭಿನ್ನವು' ಎಂಭಿತ್ಯಾದಿ ಏಕಾರ್ಥವುಳ್ಳ ಎರಡು ಪದಗಳ ಪ್ರಯೋಗವು 'ಘಟವು ಘಟವು' ಎಂಬುದು ಹೇಗೆ ಕೂಡುವುದಿಲ್ಲವೋ ಹಾಗೇ ಕೂಡದೇ ಹೋಗಬೇಕಾದೀತು ಎಂದಾಶಂಕಿಸಕೂಡದು. ಏಕೆಂದರೆ

*(a)* ಜ್ಞಾನ ಆನಂದ ಇತ್ಯಾದಿಗಳು ಬ್ರಹ್ಮಸ್ವರೂಪಗಳಾದರೂ 'ವಿಜ್ಞಾನಂ, ಆನಂದಂ, ಬ್ರಹ್ಮ' ಇದೇ ಮೊದಲಾದ ವ್ಯವಹಾರಗಳು ಹೇಗದೆಯೋ ಹಾಗೆಯೇ ಭೇದವು ಘಟಸ್ವರೂಪವಾದರೂ ಅವುಗಳಿಗೆ ಏಕಾರ್ಥವು ಇಲ್ಲದಿರುವ ಪ್ರಯುಕ್ತ 'ಘಟವು ಭಿನ್ನವು' ಎಂಬಿತ್ಯಾದಿ ಪ್ರಯೋಗಗಳು ಕೂಡುತ್ತವೆ.

**ಭಾ॥** *(a)* ನ ಚ ಸ್ವರೂಪತ್ವೇನ ಭೇದಸ್ಯಾಭಾವೋ ಭವತಿ ಜ್ಞಾನಾನಂದಾದಿವದೇವ ॥

ಅ || ಹೀಗಾದರೂ, ಭೇದವು ಧರ್ಮಿಸ್ವರೂಪವಾದುದರಿಂದ ಧರ್ಮಿ, ಅಥವಾ ಭೇದ ಏಕಾರ್ಥವುಳ್ಳ ಇವೆರಡರ ಮಧ್ಯದಲ್ಲಿ 'ಒಂದೇ ಉಳಿಯಲಿ. ಮತ್ತೊಂದುಬೇಡ' ವೆಂದಾಶಂಕಿಸ ಕೂಡದು. ಏಕಂದರೆ:—

*(a)* ಅದ್ವೈತಿಯು ಜ್ಞಾನ, ಆನಂದ, ಐಕ್ಯ ಇವುಗಳಿಗೆ ಪರಸ್ಪರವಾಗಿಯೂ ಮತ್ತು ಬ್ರಹ್ಮನಿಂದಲೂ ಐಕ್ಯವನ್ನಂಗೀಕರಿಸುವುದರಿಂದ ಏಕಾರ್ಥಪ್ರತಿಪಾದಕಗಳಾದ ಅವುಗಳಲ್ಲಿ ಯಾವು ದಾದರೂ ಒಂದೊಂದೇ ಉಳಿಯಲಿ ಉಳಿದುದು ಬೇಡವೆಂದು ಹೇಳಲು ಹೇಗೆ ಬರುವುದಿಲ್ಲವೋ ಹಾಗೆಯೇ ಇಲ್ಲಿಯೂ ತಿಳಿಯತಕ್ಕುದು.

**ಭಾ** ||*(a)* ಅನ್ಯಪ್ರತಿಯೋಗಿಕತ್ವಾದ್ಭೇದಸ್ಯ ನ ಸ್ವಸ್ಮಾದಪಿ ಭವತಿ ||

ಅ || ವಿದಾರಣ (ಶೀಳೋಣ) ಸ್ವರೂಪವಾದ ಭೇದವು ಘಟಸ್ವರೂಪವಾದರೆ ಘಟವೂ ಭೇದಿಸಲ್ಪಡಬೇಕಾದೀತು. ಹೀಗೆ ಎಲ್ಲಾ ಅದರ ಪರಮಾಣುಪರ್ಯಂತವಾದ ಅವಯವಗ ಳಿಗೂ ಭೇದನವು ಬರಬೇಕಾದೀತು; ಅಂತೂ ಸರ್ವವೂ ಶೂನ್ಯವಾಗಬೇಕಾಯಿತು. ಎಂದಾ ಶಂಕಿಸಕೂಡದು.

*(a)* ವಿದಾರಣರೂಪವಾದ ಭೇದವು ಯಾವ ಘಟಕ್ಕೆ ಪಟದಿಂದಾಗುತ್ತದೋ ಅಂತಹ ಘಟವು ಪಟದಿಂದ ಬೇರೆಯಾಗಿ ಮಾಡಲ್ಪಡುತ್ತದೆ. ಅಂತಹ ಘಟರೂಪವಾದ ಭೇದಕ್ಕೆ ಘಟವು ಪ್ರತಿಯೋಗಿಯಲ್ಲ. ಘಟದಿಂದ ಬೇರೆಯಾದ ಪಟಾದಿಗಳೇ ಪ್ರತಿಯೋಗಿಗಳು. ಅಂತಹ ಪ್ರತಿ ಯೋಗಿಗಳಿಂದಲೇ ಘಟವು ಭೇದಿಸಲ್ಪಡುತ್ತದಲ್ಲದೆ ತನ್ನಿಂದಲೇ ಅಲ್ಲ. ಕಾರಣ, ತನ್ನ ಸ್ವರೂಪ ದಿಂದಲೇ ಭೇದಿಸಲ್ಪಡದೇ ಇದ್ದ ಕಾರಣ ಸರ್ವಶೂನ್ಯವಾಗುವುದಿಲ್ಲ.

**ಭಾ** ||*(a)* ಭೇದಸ್ತು ಸರ್ವವಸ್ತೂನಾಂ ಸ್ವರೂಪಂ ನೈಜಮವ್ಯಯಂ ||

ಅ || ಹೀಗಾದರೂ, ಭೇದವು ಧರ್ಮಿಸ್ವರೂಪವಲ್ಲ. ಭೇದವೆಂದರೆ ಅನ್ಯೋನ್ಯಾಭಾವ ವಷ್ಟೆ; ಅದು ನಿತ್ಯವಾಗಿರುತ್ತದೆ. ಘಟಾದಿರೂಪವಾದ ಧರ್ಮಿಗಳು ಅನಿತ್ಯಗಳು. ಅಂತೂ ನಿತ್ಯಾನಿತ್ಯಗಳಿಗೆ ಐಕ್ಯವು ಕೂಡಲಾರದು. ಎಂದಾಶಂಕಿಸಿದರೆ- ಅದನ್ನು ಪರಿಹರಿಸುವ ನಿಮಿ ತ್ತವಾಗಿ ಅನಿತ್ಯವಾದ ಧರ್ಮಿಯು ನಷ್ಟವಾದರೂ, ಭೇದವು ತತ್ಸ್ವರೂಪವಾದರೂ ನಷ್ಟವಾಗು ವುದಿಲ್ಲವೆಂಬೀಮತವನ್ನು ಅನುವಾದಮಾಡುತ್ತಾರೆ.

*(a)* ಭೇದವು ಎಲ್ಲಾ ಪದಾರ್ಥಗಳ ಸ್ವರೂಪವೇ ಆಗಿರುತ್ತದೆ, ಸಂಯೋಗಾದಿಗಳಂತೆ ನೈಮಿತ್ತಿಕವಲ್ಲ. ಅಲ್ಲದೆ ನಾಶಶೂನ್ಯವಾಗಿರುತ್ತದೆ.

**ಭಾ** ||*(a)* ನಷ್ಟಾನಾಮಪಿ ವಸ್ತೂನಾಂ ಭೇದೋ ನೈವ ವಿನಶ್ಯತಿ ||

ಅ || ಪೂರ್ವದಲ್ಲಿ ಹೇಳಿದುದು ಯುಕ್ತವಲ್ಲ. ಧರ್ಮಿಯು ನಿತ್ಯವಾದರೇನೇ ತತ್ಸ್ವರೂ ಪವಾದ ಭೇದವು ನಿತ್ಯವಾಗಬೇಕಲ್ಲದೆ, ಧರ್ಮಿಯು ಅನಿತ್ಯವಾದರೆ ತತ್ಸ್ವರೂಪವಾದ ಭೇದವು ಅನಿತ್ಯವೇ ಆಗಬೇಕು ಎಂದಾಶಂಕಿಸಕೂಡದು.

*(a)* ಪದಾರ್ಥಗಳು ನಷ್ಟಗಳಾದರೂ ಅವುಗಳ ಭೇದವು ಅಂದರೆ ಧರ್ಮಧರ್ಮಿಭಾ ವವು ನಾಶವನ್ನು ಹೊಂದುವುದೇ ಇಲ್ಲ.

**ಭಾ** ||*(a)* ಅವಸ್ತುನೋಽಪಿ ರೂಪಂ ಸ್ವಂ ಭೇದ ಏವ ನ ಚಾನ್ಯಥಾ ||

ಅ || ಪದಾರ್ಥಸ್ವರೂಪವಾದರೂ ಭೇದವು ನಷ್ಟವಾಗದಿದ್ದರೆ ಅಂತಹ ಭೇದವು ಧರ್ಮಿ ಸ್ವರೂಪವಾಗದೇ ಹೋಗಬೇಕಾದೀತು ಎಂದೆನಕೂಡದು.

(*a*) ನಷ್ಟವಾದ ಪದಾರ್ಥದ ಭೇದವೂ ಭಾವಸ್ವರೂಪವೇ ಆಗಿರುತ್ತದೆ, ಅಭಾವರೂಪ ವಲ್ಲ. ಅಂತೂ ವಸ್ತುನಷ್ಟವಾದರೂ ತತ್ಸ್ವರೂಪವಾದ ಭೇದವು ನಾಶವಾಗುವುದಿಲ್ಲವೆಂದು ಹೇಳಿದ ಹಾಗಾಯಿತು.

ಭಾ ॥ ವಿಶೇಷರೂಪನಾಶೇನ ಭೇದಮಾತ್ರಾವಸಾಯಿತಾ ।
ನಾಶ ಇತ್ಯುಚ್ಯತೇ ಸದ್ಭಿಃ ಭೇದೋ ನ ಹಿ ವಿನಶ್ಯತಿ ॥
ಇತ್ಯಾಹುಃ ಕೇಚಿದಜ್ಞಾನಾತ್ ॥

ಅ॥ ಹಿಂದೆ ಹೇಳಿದುದನ್ನೇ ವಿವರಿಸುತ್ತಾರೆ. ಘಟದ ಉತ್ಪತ್ತಿಯೆಂದರೆ- ಉಪಾದಾನ ಕಾರಣವಾದ ಮಣ್ಣಿನ ರೂಪದಿಂದ ಮೊದಲು ಇದ್ದರೂ ಆ ಮೇಲೆ ಕುತ್ತಿಗೆಯೂ ಹೊಟ್ಟೆಯೂ ಉಂಟಾಗುವ ರೀತಿಯಲ್ಲಿ ರೂಪಿಸಲ್ಪಡುವುದೇ ಆಗಿರುತ್ತದೆ. ಹಾಗೆ ಆ ವರ್ತುಳಾಕಾರವೂ ಕುತ್ತಿಗೆಯೂ ತೆಗೆಯಲ್ಪಟ್ಟ ನಂತರ ವಿಶೇಷಾಕಾರವು ನಷ್ಟವಾಗೋಣ ಕೇವಲ ಭೇದವು ಉಪಾ ದಾನವಾದ ಮಣ್ಣಿನ ರೂಪದಿಂದಿರುವಿಕೆಯೇ ಘಟದ ನಾಶವೆಂದು ಸಜ್ಜನರಿಂದ ಹೇಳಲ್ಪಡುತ್ತದೆ. ಏವಂಚ ಘಟನಷ್ಟವಾದರೂ ಘಟಸ್ವರೂಪವಾದ ಭೇದವು ಕಾರ್ಯರೂಪದಿಂದ ನಷ್ಟವಾದರೂ ಉಪಾದಾನ ಕಾರಣರೂಪದಿಂದ ನಿತ್ಯವಾಗಿರುತ್ತದೆ. ಆದುದರಿಂದ ಘಟಕ್ಕೆ ನಾಶವಿದ್ದರೂ ಭೇದಕ್ಕೆ ನಾಶವಿಲ್ಲ. ಎಂದು ಸಾಮಾನ್ಯವಾಗಿ ವಿಚಾರ ಮಾಡಿದ ಜ್ಞಾನಿಗಳು ಹೇಳುತ್ತಾರೆ.

ಭಾ ॥ ತತ್ರಾಹುಃ ಸೂಕ್ಷ್ಮದರ್ಶಿನಃ । ಸತ್ಯಂ ಭೇದಸ್ತು
ವಸ್ತೂನಾಂ ಸ್ವರೂಪಂ ನಾತ್ರ ಸಂಶಯಃ । ತಸ್ಮಾದ್ವಸ್ತುವಿನಾಶೇ ತು
ತದ್ಭೇದೋ ನಾಸ್ತಿ ಕುತ್ರಚಿತ್ ॥

ಅ॥ ಇಂತಹ ಭೇದದ ವಿಷಯದಲ್ಲಿ ಸೂಕ್ಷ್ಮವಾಗಿ ವಿಚಾರಮಾಡಿದ ಕೆಲವು ಜ್ಞಾನಿಗಳು ಹೀಗೆ ಹೇಳುತ್ತಾರೆ. ಭೇದವು ವಸ್ತುಸ್ವರೂಪವೆಂಬುದೇನೋ ನಿಜ; ಅದರಲ್ಲಿ ಸಂದೇಹವಿಲ್ಲ. ಆದುದರಿಂದಲೇ ಪದಾರ್ಥವು ನಷ್ಟವಾದ ಕೂಡಲೇ ಅದರ ಭೇದವು ವ್ಯವಹಾರೋಪಯುಕ್ತ ವಾಗಿ ಎಲ್ಲಿಯೂ ಇರುವುದಿಲ್ಲ.

ಅಂದರೆ ನಷ್ಟವಾಗುತ್ತದೆಂದು ಹೇಳಿದ ಹಾಗಾಯಿತು. ಧರ್ಮಿಸ್ವರೂಪವಾದ ಭೇದವು ಉಪಾದಾನ ರೂಪದಿಂದ ಇದ್ದರೂ ವ್ಯವಹಾರೋಪಯುಕ್ತವಾಗಿ ಕಾರ್ಯರೂಪದಿಂದ ಇಲ್ಲದ ಪ್ರಯುಕ್ತ ಅನಿತ್ಯವೆಂದೆನಿಸುತ್ತದೆ. ಈ ರೀತಿಯಾಗಿ ಅಭಿಪ್ರಾಯವಿರುವುದರಿಂದ ಪೂರ್ವಮತ ಕ್ಕೂ ಈ ಮತಕ್ಕೂ ವಿರೋಧವಿರುವುದಿಲ್ಲ.

ಭಾ ॥ ಅವಿನಷ್ಟಸ್ಯ ತಸ್ಮಾತ್ತು ಭೇದೋಽಸ್ತ್ಯೇವ ಸ್ವರೂಪತಃ ॥

ಅ ॥ 'ಘಟದಿಂದ ಪಟವು ಭಿನ್ನವು' ಎಂಬಲ್ಲಿ ಘಟವೇ ಪ್ರತಿಯೋಗಿಯಾಗುಳ್ಳ ಭೇದ ರೂಪವಾದ ಪಟವು ನಷ್ಟವಾದರೆ ನಷ್ಟವಾಗದೆ ಇರುವ ಘಟವು ಪಟಸ್ವರೂಪವಾಗಬೇಕಾದೀತು. ಎಂದಾಶಂಕಿಸಕೂಡದು.

ಭೇದವು ಧರ್ಮಿಸ್ವರೂಪವಾದುದರಿಂದ ಧರ್ಮಿಯಾದುದು ನಷ್ಟವಾಗದಿರುವ ಪ್ರಯುಕ್ತ ನಷ್ಟವಾಗದಿರುವ ಘಟಕ್ಕೆ ನಷ್ಟವಾದ ಪಟದಿಂದ ಸ್ವರೂಪಭೇದವು ಇದ್ದೇ ಇರುತ್ತದೆ.

ಭಾ ॥ ಏವಂ ಭಾವಾದಭಾವಸ್ಯ ನ ಭೇದೋ ಭಾವರೂಪವಾನ್ ।

ಅ॥ ಹೀಗಾದರೂ ಭೇದವು ಧರ್ಮಿಸ್ವರೂಪವಾಗಲಾರದು. ಏಕೆಂದರೆ:— ಸತ್ಪ್ರತಿಯೋಗಿಕವಾದ ಅಂದರೆ ಘಟಪ್ರತಿಯೋಗಿಕವಾದ ಭೇದವು ಅಸತ್ತಿನಲ್ಲಿಯೂ ಹೇಳಬರುತ್ತದೆ. ಹೇಗೆಂದರೆ:—'ಶಶಶೃಂಗವು (ಮೊಲದ ಕೊಂಬು) ಘಟವಲ್ಲ' ಎಂಬಲ್ಲಿ ಘಟವು ಪ್ರತಿಯೋಗಿಯು. ಶಶಶೃಂಗವು ಅನುಯೋಗಿಯು; ಅಂದರೆ ಧರ್ಮಿಯು. ಇಲ್ಲಿ ಘಟಭೇದಕ್ಕೆ ಸರ್ವಥಾ ಲೋಕದಲ್ಲಿಲ್ಲದೇ ಇರುವ ಶಶಶೃಂಗಸ್ವರೂಪತ್ವವನ್ನು ಹೇಳಬೇಕಾಗುತ್ತದೆ. ಅದೇ ಅಪ್ರಸಿದ್ಧವಾದ ಪ್ರಯುಕ್ತ ಭೇದಕ್ಕೆ ತತ್ಸ್ವರೂಪತ್ವವನ್ನು ಹೇಳುವುದು ಯುಕ್ತವಲ್ಲ. ಇಂತಹ ಸ್ಥಳದಲ್ಲಿ ಧರ್ಮಿಸ್ವರೂಪತ್ವವನ್ನು ಹೇಳುವುದಿಲ್ಲವೆಂದರೆ ಮೊದಲು ಹೇಳಿದುದಕ್ಕೆ ವಿರೋಧ ಬರುತ್ತದೆ.

ಹೇಗೆ ಘಟವು ನಷ್ಟವಾದರೆ ತದ್ಧರ್ಮಿಕ ಭೇದವು ಇರುವುದಿಲ್ಲವೋ, ಹಾಗೆಯೇ ಸತ್ತಾದ ಘಟಾದಿಗಳಿಂದ ಅಸತ್ತಾದ ಶಶಶೃಂಗಾದಿಗಳಿಗೆ ಭೇದವಿಲ್ಲ. ಏಕೆಂದರೆ:—ಭೇದವು ಸತ್ಸ್ವರೂಪವೆಂತ ಒಡಂಬಟ್ಟಿದ್ದೇವೆ.

ಭಾ॥ ಅಭಾವಾದ್ಭಾವರೂಪಸ್ಯ ಸ್ವರೂಪಂ ಭಾವ ಇಷ್ಯತೇ ॥

ಅ॥ ಅಸತ್ತಾದ ಶಶಶೃಂಗಾದಿಗಳಲ್ಲಿ ಘಟಪ್ರತಿಯೋಗಿಕ ಭೇದವಿಲ್ಲದಿದ್ದರೆ, ಶಶಶೃಂಗಕ್ಕೂ ಘಟಕ್ಕೂ ಐಕ್ಯವು ಬರಬೇಕಾದೀತು ಎಂದಾಶಂಕಿಸಕೂಡದು.

ಅಸತ್ತಾದ ಶಶಶೃಂಗಾದಿಗಳಿಂದ ಸತ್ತಾದ ಘಟಾದಿಗಳಿಗೆ ಭೇದವಿರುತ್ತದೆ. ಏಕೆಂದರೆ:- ಘಟಾದಿಗಳ ಸ್ವರೂಪವು ಸತ್ತಾಗಿಯೇ ಪ್ರಾಮಾಣಿಕರಿಂದ ಇಚ್ಛಿಸಲ್ಪಟ್ಟಿದೆ. ಅಂದರೆ ಸತ್ಪ್ರತಿಯೋಗಿಕ ಭೇದವು ಅಸತ್ತಿನಲ್ಲಿಲ್ಲದಿದ್ದರೂ, ಅಸತ್ಪ್ರತಿಯೋಗಿಕ ಭೇದವು ಸತ್ತಿನಲ್ಲಿರುವುದರಿಂದ ಅಸತ್ತಾದ ಶಶಶೃಂಗಾದಿಗಳಿಗೂ ಸತ್ತಾದ ಘಟಾದಿಗಳಿಗೂ ಐಕ್ಯವು ಬರುವುದಿಲ್ಲ.

ಭಾ॥ ನಷ್ಟಭೇದೋಽಪ್ಯಭಾವಾತ್ಮಾ ವಿದ್ಯತೇ ಚ ವಿನಾಶತಃ ॥

ಅ॥ ಅನಿತ್ಯಗಳಾದ ಘಟಪಟಾದಿಗಳು ನಷ್ಟವಾದರೂ ಅವುಗಳ ಭೇದವು ನಷ್ಟವಾಗುವುದಿಲ್ಲವೆಂಬೀ ಮತವನ್ನು ವಿವರಿಸುತ್ತಾರೆ.

ಕಾರ್ಯರೂಪವಾದ ಘಟವು ನಷ್ಟವಾದರೂ ಕಾರಣವಾದ ಮಣ್ಣಿನ ರೂಪದಿಂದ ಅದು ಹೇಗಿರುತ್ತದೋ ಅದೇ ರೀತಿಯಾಗಿ ನಷ್ಟವಾದ ಘಟಾದಿಗಳ ಭೇದವೂ ನಷ್ಟಘಟಾದಿಸ್ವರೂಪವಾಗಿ ಉಪಾದಾನರೂಪದಿಂದ ಇರುತ್ತದೆಂಬ ಅಭಿಪ್ರಾಯವಾದರೆ ನಮಗೂ ಸಮ್ಮತವು.

ಭಾ॥ ಸ್ವರೂಪತ್ವಾತ್ತು ಭೇದಸ್ಯ ಭೇದೇ ಶಂಕಾ ನ ಕಸ್ಯಚಿತ್ ॥

ಅ॥ ಭೇದವು ಧರ್ಮಿಸ್ವರೂಪವಾದ ಪ್ರಯುಕ್ತವೂ, ಧರ್ಮಿಸ್ವರೂಪವಿಷಯದಲ್ಲಿ ಪರರು ಹೇಳುವ ದೋಷಗಳು ಅಸಂಗತಗಳಾದ ಪ್ರಯುಕ್ತವೂ, ಭೇದವಿಷಯದಲ್ಲಿ ಯಾವುದೊಂದು ದೂಷಣೆಗೂ ಅವಕಾಶವಿರುವುದಿಲ್ಲ.

ಭಾ॥ ಸರ್ವಂ ಸಾಮಾನ್ಯತೋ ಯಸ್ಮಾತ್ಸರ್ವೈರಪ್ಯನುಭೂಯತೇ ।
ತಸ್ಮಾದ್ವ್ಯಾವೃತ್ತತಾ ಸರ್ವೈಃ ಸರ್ವಸ್ಮಾದನುಭೂಯತೇ ॥

ಅ॥ ಸಾಮಾನ್ಯವಾಗಿ ಸರ್ವವಸ್ತುಗಳೂ ಸರ್ವರಿಂದಲೂ ಯಾವ ಕಾರಣದಿಂದ ಅನುಭವಿಸಲ್ಪಡುತ್ತವೋ, ಆದುದರಿಂದ 'ಸಮಸ್ತರಿಂದಲೂ ಆಯಾ ವಸ್ತುವು ತದಿತರ ಸರ್ವವಸ್ತುಗಳಿಂದಲೂ ಭಿನ್ನವಾಗಿಯೇ ಅನುಭವಿಸಲ್ಪಡುತ್ತದೆ.

ಭಾ || ಪ್ರತಿಯೋಗಿತಾ ತ್ವಭಾವಸ್ಯಾಪ್ಯಸ್ತ್ಯಭಾವತಯಾ ಸ್ಫುಟಂ ||

ಅ || ಅಸತ್ತಾದ ಶಶಶೃಂಗಾದಿಗಳಿಂದ ಸತ್ತಾದ ಘಟಾದಿಗಳಿಗೆ ಭೇದವುಂಟೆಂದು ಉಕ್ತವಾಗಿದೆಯಷ್ಟೆ. ಅಲ್ಲಿ ಶಶಶೃಂಗವು ಪ್ರತಿಯೋಗಿಯೆಂದು ಹೇಳಿಯದೆ. ಅದು ಅಸಂಗತವು. ಏಕೆಂದರೆ:-ಶಶಶೃಂಗಾಭಾವವು ನಿಷೇಧರೂಪವಾದ ಪ್ರಯುಕ್ತ ನಿರ್ಧರ್ಮಿಕವಾಗಿದೆ. ಕಾರಣ, ಪ್ರತಿಯೋಗಿತ್ವವು ಅದಕ್ಕೆ ಕೂಡಲಾರದೆಂದಾಶಂಕಿಸಕೂಡದು.

ಅಭಾವಕ್ಕೂ ಕೂಡ ಪ್ರತಿಯೋಗಿತ್ವವೂ ಅನುಯೋಗಿತ್ವವೂ ಅದೆ. ಅಂತಹ ಪ್ರತಿಯೋಗಿತ್ವವು ಅಭಾವಾಭಿನ್ನವಾಗಿಯೇ ಇರುತ್ತದೆ.

ಭಾ || ನ ಹ್ಯಭಾವೋಽಪ್ಯಧರ್ಮಾಸ್ಯಾನ್ನ ತು ಸ್ಯಾದ್ಭಾವಧರ್ಮಯುಕ್ ||

ಅ || ಅಭಾವವು ವಸ್ತುನಿಷೇಧರೂಪವಾದರೂ ಪ್ರಮೇಯತ್ವಾದಿಗಳು ಅನುಭವಸಿದ್ಧವಾದುದರಿಂದ ಧರ್ಮಶೂನ್ಯವಾದುದೆಂದು ಹೇಳಕೂಡದು. ಆದರೆ ಅಂತಹ ಅಭಾವವು ತನ್ನಿಂದ ಭಿನ್ನವಾದ ಧರ್ಮದಿಂದ ಕೂಡಿದ್ದಲ್ಲ.

ಭಾ || ಅಭಾವಸ್ಯಾಸ್ತಿತಾ ನಾಮ ಸ್ಯಾದೇವಾಭಾವರೂಪಿಣೀ ||

ಅ || 'ಅಭಾವೋಽಸ್ತಿ' ಅಂದರೆ 'ಅಭಾವವು ಇದೆ' ಎಂಬಲ್ಲಿ ಅಸ್ತಿತ್ವಾದಿ ಧರ್ಮವೂ ಅಭಾವರೂಪಿಯಾಗಿಯೇ ಇರುತ್ತದೆ.

ಭಾ || ಅಭಾವತಾಽಪಿ ಸೈವ ಸ್ಯಾನ್ನ ತು ಸ್ಯಾದ್ಭಾವರೂಪಿಣೀ ||

ಅ || ಅಭಾವದಲ್ಲಿರತಕ್ಕ ಅಭಾವತ್ವರೂಪ ಧರ್ಮವೂ ಅಭಾವರೂಪವೇ. ಭಾವರೂಪವಾದುದಲ್ಲ; ಅಂದರೆ ಅಭಾವಭಿನ್ನವಲ್ಲ.

ಇಷ್ಟರ ವರೆಗೆ ಹೇಳಿದ ರೀತಿಯಿಂದ ಭೇದವು ಧರ್ಮಿಸ್ವರೂಪವೆಂದು ಸಿದ್ಧವಾಯಿತು. ಇಂತಹ ಭೇದವು ಜಗತ್ತಿನಲ್ಲಿ ಪರಸ್ಪರವಾಗಿ ಸಕಲ ವಸ್ತುಗಳಿಗೂ ಇರುವುದಾಗಿ ಅನುಭವಿಸಲ್ಪಡುತ್ತದೆ. ಆದಕಾರಣ, ಜೀವೇಶ್ವರರಿಗೂ ಭೇದವು ಪಾರಮಾರ್ಥಿಕವೇ ಆಗಿರುತ್ತದೆ. ವ್ಯಾವಹಾರಿಕವು ಎಷ್ಟುಮಾತ್ರಕ್ಕೂ ಅಲ್ಲ.

ಭಾ || ಅತಃ ಸ ಸರ್ವವ್ಯಾವೃತ್ತಸ್ವರೂಪೋ ಭಗವಾನ್ ಪರಃ |
ಯೇನ ಜ್ಞಾತಃ ಸ ತು ಜ್ಞಾನೀ ಮುಚ್ಯತೇ ನಾತ್ರ ಸಂಶಯಃ ||
ಇತಿ ತತ್ವನಿರ್ಣಯೇ ||

|| ಇತಿ ತೈತ್ತಿರೀಯೋಪನಿಷದ್ಭಾಷ್ಯೇ ಬ್ರಹ್ಮವಲ್ಲೀ ಸಂಪೂರ್ಣಾ ||

ಅ || ಆದಕಾರಣ, ನಿಖಿಲ ವಸ್ತುಗಳಿಂದಲೂ ಭಿನ್ನಸ್ವರೂಪನಾದ, ಅನ್ನಮಯಾದಿ ಪಂಚಸ್ವರೂಪಿಯಾದ, ಐಶ್ವರ್ಯಸಂಪನ್ನನೂ ಸರ್ವೋತ್ತಮನೂ ಆದ ಶ್ರೀಹರಿಯು ಯಾರಿಂದ ತಿಳಿಯಲ್ಪಡುತ್ತಾನೋ ಆತನೇ ಜ್ಞಾನಿಯು. ಆತನು ಈ ಸಂಸಾರದುಃಖದಿಂದ ಬಿಡುಗಡೆಯನ್ನು ಹೊಂದಿ ಮೋಕ್ಷಸುಖವನ್ನನುಭವಿಸುತ್ತಾನೆ. ಈ ವಿಷಯದಲ್ಲಿ ಲೇಶಮಾತ್ರ ಸಂದೇಹವಿರುವುದಿಲ್ಲ. ಎಂದೀರೀತಿಯಾಗಿ ತತ್ವನಿರ್ಣಯ ಗ್ರಂಥದಲ್ಲಿ ವರ್ಣಿತವಾಗಿದೆ.

**ತೈತ್ತಿರೀಯೋಪನಿಷದ್ಭಾಷ್ಯದಲ್ಲಿ ಬ್ರಹ್ಮವಲ್ಲಿಯು ಸಂಪೂರ್ಣವಾಯಿತು.**

# ತೃತೀಯಾ ವಲ್ಲೀ ಪ್ರಾರಭ್ಯತೇ.

ಮಂ ॥ ಓಂ ॥ ಓಂ ಸಹ ನಾವವತು । ಸಹ ನೌ ಭುನಕ್ತು । ಸಹ ವೀರ್ಯಂ ಕರವಾವಹೈ । ತೇಜಸ್ವಿನಾವಧೀತಮಸ್ತು ಮಾ ವಿದ್ವಿಷಾವಹೈ ॥ ಓಂ ಶಾಂತಿಃ ಶಾಂತಿಃ ಶಾಂತಿಃ ॥

ಓಂ ಭೃಗುರ್ವೈ ವಾರುಣಿಃ । ವರುಣಂ ಪಿತರಮುಪಸಸಾರ । ಅಧೀಹಿ ಭಗವೋ ಬ್ರಹ್ಮೇತಿ । ತಸ್ಮಾ ಏತತ್ಪ್ರೋವಾಚ । ಅನ್ನಂ ಪ್ರಾಣಂ ಚಕ್ಷುಃ ಶ್ರೋತ್ರಂ ಮನೋ ವಾಚಮಿತಿ ॥ ತꣳಹೋವಾಚ । ಯತೋ ವಾ ಇಮಾನಿ ಭೂತಾನಿ ಜಾಯಂತೇ । ಯೇನ ಜಾತಾನಿ ಜೀವಂತಿ । ಯತ್ಪ್ರಯಂತ್ಯಭಿಸಂವಿಶಂತಿ । ತದ್ವಿಜಿಜ್ಞಾಸಸ್ವ । ತದ್ಬ್ರಹ್ಮೇತಿ ॥ ೧ ॥

ಅ ॥ ವಾರುಣಿಃ=ವರುಣನ ಪುತ್ರನಾದ, ಭೃಗುಃ=ಭೃಗುಋಷಿಯು, ಪಿತರಂ=ತಂದೆಯಾದ, ವರುಣಂ=ವರುಣನನ್ನು, ಭಗವಃ=ಪೂಜ್ಯನೇ! ಬ್ರಹ್ಮ=ಪರಬ್ರಹ್ಮನನ್ನು, ಅಧೀಹಿ=ಉಪದೇಶಿಸು, ಇತಿ=ಹೀಗೆಂದು, ಉಪಸಸಾರ=ಸಮೀಪಿಸಿದನು. ವೈ=ಪ್ರಸಿದ್ಧವು. ತಸ್ಮೈ=ಆ ಭೃಗುವಿಗೋಸ್ಕರ, ಅನ್ನಂ=ಅನ್ನಮಯನನ್ನು, ಪ್ರಾಣಂ=ಪ್ರಾಣಮಯನನ್ನು, ಚಕ್ಷುಃ=ಚಕ್ಷುರ್ಮಯನನ್ನು, ಶ್ರೋತ್ರಂ=ಶ್ರೋತ್ರಮಯನನ್ನು, ಮನಃ=ಮನೋಮಯನನ್ನು, ವಾಚಂ=ವಾಙ್ಮಯನನ್ನು, (ವಿಜ್ಞಾನಮಯಾನಂದಮಯರನ್ನೂ,) ಇತಿ=ಈ ಪ್ರಕಾರವಾದ, ಏತತ್=ಎಂಟು ಭಗವದ್ರೂಪಗಳನ್ನು, ಪ್ರೋವಾಚ=(ವರುಣನು) ಹೇಳಿದನು.

ಯತೋ ವಾ=ಯಾವ ಶ್ರೀಪರಮಾತ್ಮನಿಂದ, ಇಮಾನಿ ಭೂತಾನಿ=ಈ ಎಲ್ಲಾ ಪ್ರಾಣಿಗಳೂ, ಜಾಯಂತೇ=ಹುಟ್ಟುತ್ತಾವೋ. ಯೇನ=ಯಾವ ಶ್ರೀಹರಿಯಿಂದಲೇ, ಜಾತಾನಿ=ಹುಟ್ಟಿದವುಗಳು, ಜೀವಂತಿ=ಬದುಕುತ್ತಾವೋ, ಯತ್=ಯಾವ ಶ್ರೀ ಪರಮಾತ್ಮನನ್ನು, ಪ್ರಯಂತಿ=ಪ್ರಳಯಕಾಲದಲ್ಲಿ ಹೊಂದುತ್ತವೋ, ಯತ್=ಯಾವ ಶ್ರೀ ಪರಮಾತ್ಮನನ್ನು, ಅಭಿ=ಸ್ವೇಚ್ಛೆಯಿಂದ, ಸಂವಿಶಂತಿ=ಮುಕ್ತಿಯಲ್ಲಿ ಪ್ರವೇಶಿಸುತ್ತಾರೋ, ತತ್=ಅಂತಹ ಶ್ರೀ ಪರಮಾತ್ಮನನ್ನು, ವಿಜಿಜ್ಞಾಸಸ್ವ=ವಿಶೇಷವಾಗಿ ಧ್ಯಾನಿಸು. ತತ್=ಅದೇ, ಬ್ರಹ್ಮ=ಗುಣಪರಿಪೂರ್ಣವಾದ ಪರಬ್ರಹ್ಮವು, ಇತಿ=ಹೀಗೆ (ವರುಣನು), ತಂ ಹ=ಮಗನಾದ ಭೃಗುವಿಗೆ, ಉವಾಚ=ಹೇಳಿದನು. ॥ ೧ ॥

ಮಂ ॥ ಸ ತಪೋಽತಪ್ಯತ । ಸ ತಪಸ್ತಪ್ತ್ವಾ । ಅನ್ನಂ ಬ್ರಹ್ಮೇತಿ ವ್ಯಜಾನಾತ್ । ಅನ್ನಾದ್ಧ್ಯೇವ ಖಲ್ವಿಮಾನಿ ಭೂತಾನಿ ಜಾಯಂತೇ । ಅನ್ನೇನ ಜಾತಾನಿ ಜೀವಂತಿ । ಅನ್ನಂ ಪ್ರಯಂತ್ಯಭಿಸಂವಿಶಂತೀತಿ । ತದ್ವಿಜ್ಞಾಯ । ಪುನ

ರೇವ ವರುಣಂ ಪಿತರಮುಪಸಸಾರ । ಅಧೀಹಿ ಭಗವೋ ಬ್ರಹ್ಮೇತಿ ।
ತಂ್ ಹೋವಾಚ। ತಪಸಾ ಬಹ್ಮ ವಿಜಿಜ್ಞಾಸಸ್ವ। ತಪೋ ಬ್ರಹ್ಮೇತಿ

ಅ ॥ ಸಃ=ಭೃಗುವು, ತಪಃ=ಆಲೋಚನೆಯನ್ನು, ಅತಪ್ಯತ=ಮಾಡಿದನು. ಸಃ= ಆತನು, ತಪಃ=ಆಲೋಚನೆಯನ್ನು, ತಪ್ತ್ವಾ=ಮಾಡಿ, ಅನ್ನಂ=ಅನ್ನಮಯನಾಮಕ ನಾದ ಅನಿರುದ್ಧನನ್ನು, ಬ್ರಹ್ಮೇತಿ=ಪರಬ್ರಹ್ಮನನ್ನಾಗಿ, ವ್ಯಜಾನಾತ್=ಸಾಕ್ಷಾತ್ಕರಿಸಿದನು. ಅನ್ನಾತ್ ಏವ ಹಿ=ಅನ್ನಮಯನಾಮಕನಾದ ಅನಿರುದ್ಧನಿಂದಲೇ, ಇಮಾನಿ ಭೂತಾನಿ= ಈ ಎಲ್ಲಾ ಪ್ರಾಣಿಗಳೂ, ಜಾಯಂತೇ=ಹುಟ್ಟುತ್ತವೆ. ಜಾತಾನಿ=ಹುಟ್ಟಿದವುಗಳು, ಅನ್ನೇನ= ಅನ್ನಮಯನಾಮಕನಾದ ಅನಿರುದ್ಧನಿಂದಲೇ, ಜೀವಂತಿ=ಜೀವಿಸುತ್ತವೆ. ಅನ್ನಂ=ಆ ಅನಿ ರುದ್ಧನನ್ನು, ಪ್ರಯಂತಿ=ಪ್ರಳಯಕಾಲದಲ್ಲಿ ಹೊಂದುತ್ತವೆ. ಅಭಿ=ಸ್ವೇಚ್ಛೆಯಿಂದ, ಸಂವಿ ಶಂತಿ=ಮುಕ್ತಿಯಲ್ಲಿ ಪ್ರವೇಶಿಸುತ್ತವೆ. ಇತಿ=ಹೀಗೆ, ತತ್=ಆ ಪರಬ್ರಹ್ಮನನ್ನು, ವಿಜ್ಞಾಯ= ತಿಳಿದು, ಪುನರೇವ=ತಿರುಗಿ, ಪಿತರಂ ವರುಣಂ=ತಂದೆಯಾದ ವರುಣನನ್ನು, ಭಗವಃ= ಪೂಜ್ಯನೇ! ಬ್ರಹ್ಮ=ಪರಬ್ರಹ್ಮನನ್ನು, ಅಧೀಹಿ=ಉಪದೇಶಿಸು. ಇತಿ=ಹೀಗೆಂದು, ಉಪಸ ಸಾರ=ಸಮೀಪಿಸಿದನು. ತಪಸಾ=ಮನನಾದಿರೂಪ ತಪಸ್ಸಿನಿಂದ, ಬ್ರಹ್ಮ=ಪರಬ್ರಹ್ಮವು, ತಪಃ=ಜ್ಞಾನಸ್ವರೂಪವು, ಇತಿ=ಹೀಗೆ ತಿಳಿದು, ಬ್ರಹ್ಮ=ಪರಬ್ರಹ್ಮನನ್ನು, ವಿಜಿಜ್ಞಾಸಸ್ವ= ವಿಶೇಷವಾಗಿ ಧ್ಯಾನಿಸು. ಇತಿ=ಹೀಗೆ, ತಂ ಹ=ಆ ಭೃಗುವಿಗೆ (ವರುಣನು), ಉವಾಚ= ಹೇಳಿದನು. ॥ ೨ ॥ ಮೇಲಿನ ವರ್ಗಗಳಲ್ಲಿ ಒಮ್ಮೆ ಬಂದ ಶಬ್ದಗಳಿಗೆ ಅರ್ಥವನ್ನು ಹಿಂದಿನಂತೆ ತಿಳುಕೊಳ್ಳತಕ್ಕದು.

ಮಂ ॥ ಸ ತಪೋಽತಪ್ಯತ । ಸ ತಪಸ್ತಪ್ತ್ವಾ । ಪ್ರಾಣೋ ಬ್ರಹ್ಮೇತಿ ವ್ಯಜಾ
ನಾತ್ । ಪ್ರಾಣಾದ್ಧ್ಯೇವ ಖಲ್ವಿಮಾನಿ ಭೂತಾನಿ ಜಾಯಂತೇ ।
ಪ್ರಾಣೇನ ಜಾತಾನಿ ಜೀವಂತಿ । ಪ್ರಾಣಂ ಪ್ರಯಂತ್ಯಭಿಸಂವಿಶಂ
ತೀತಿ । ತದ್ವಿಜ್ಞಾಯ । ಪುನರೇವ ವರುಣಂ ಪಿತರಮುಪಸಸಾರ ।
ಅಧೀಹಿ ಭಗವೋ ಬ್ರಹ್ಮೇತಿ । ತಂ್ ಹೋವಾಚ । ತಪಸಾ ಬ್ರಹ್ಮ
ವಿಜಿಜ್ಞಾಸಸ್ವ । ತಪೋ ಬ್ರಹ್ಮೇತಿ ॥ ೩ ॥

ಅ ॥ ಪ್ರಾಣಃ=ಪ್ರಾಣಮಯನಾದ ಪ್ರದ್ಯುಮ್ನನು, ಪ್ರಾಣಾತ್=ಪ್ರಾಣಮಯನಾದ ಪ್ರದ್ಯುಮ್ನನಿಂದ. ॥ ೩ ॥

ಮಂ ॥ ಸ ತಪೋಽತಪ್ಯತ । ಸ ತಪಸ್ತಪ್ತ್ವಾ । ಮನೋ ಬ್ರಹ್ಮೇತಿ ವ್ಯಜಾ
ನಾತ್ । ಮನಸೋ ಹ್ಯೇವ ಖಲ್ವಿಮಾನಿ ಭೂತಾನಿ ಜಾಯಂತೇ ।
ಮನಸಾ ಜಾತಾನಿ ಜೀವಂತಿ । ಮನಃ ಪ್ರಯಂತ್ಯಭಿಸಂವಿಶಂತೀತಿ ।

ತದ್ವಿಜ್ಞಾಯ । ಪುನರೇವ ವರುಣಂ ಪಿತರಮುಪಸಸಾರ । ಅಧೀಹಿ ಭಗವೋ ಬ್ರಹ್ಮೇತಿ । ತಗ್ಂ ಹೋವಾಚ । ತಪಸಾ ಬ್ರಹ್ಮ ವಿಜಿಜ್ಞಾಸಸ್ವ । ತಪೋ ಬ್ರಹ್ಮೇತಿ ॥ ೪ ॥

ಅ ॥ ಮನಃ=ಮನೋಮಯನಾದ ಸಂಕರ್ಷಣನು, ಮನಸಃ=ಮನೋಮಯನಾದ ಸಂಕರ್ಷಣನಿಂದ, ॥ ೪ ॥

ಮಂ ॥ ಸ ತಪೋಽತಪ್ಯತ । ಸ ತಪಸ್ತಪ್ತ್ವಾ । ವಿಜ್ಞಾನಂ ಬ್ರಹ್ಮೇತಿ ವ್ಯಜಾನಾತ್ । ವಿಜ್ಞಾನಾದ್ಧ್ಯೇವ ಖಲ್ವಿಮಾನಿ ಭೂತಾನಿ ಜಾಯಂತೇ । ವಿಜ್ಞಾನೇನ ಜಾತಾನಿ ಜೀವಂತಿ । ವಿಜ್ಞಾನಂ ಪ್ರಯಂತ್ಯಭಿಸಂವಿಶಂತೀತಿ । ತದ್ವಿಜ್ಞಾಯ । ಪುನರೇವ ವರುಣಂ ಪಿತರಮುಪಸಸಾರ । ಅಧೀಹಿ ಭಗವೋ ಬ್ರಹ್ಮೇತಿ । ತಗ್ಂ ಹೋವಾಚ । ತಪಸಾ ಬ್ರಹ್ಮ ವಿಜಿಜ್ಞಾಸಸ್ವ । ತಪೋ ಬ್ರಹ್ಮೇತಿ ॥ ೫ ॥

ಅ ॥ ವಿಜ್ಞಾನಂ= ವಿಜ್ಞಾನಮಯನಾದ ವಾಸುದೇವನು, ವಿಜ್ಞಾನಾತ್=ವಿಜ್ಞಾನಮಯನಾದ ವಾಸುದೇವನಿಂದ. ॥ ೫ ॥

ಮಂ ॥ ಸ ತಪೋಽತಪ್ಯತ । ಸ ತಪಸ್ತಪ್ತ್ವಾ । ಆನಂದೋ ಬ್ರಹ್ಮೇತಿ ವ್ಯಜಾನಾತ್ । ಆನಂದಾದ್ಧ್ಯೇವ ಖಲ್ವಿಮಾನಿ ಭೂತಾನಿ ಜಾಯಂತೇ । ಆನಂದೇನ ಜಾತಾನಿ ಜೀವಂತಿ । ಆನಂದಂ ಪ್ರಯಂತ್ಯಭಿಸಂವಿಶಂತೀತಿ ॥ ೬

ಅ ॥ ಆನಂದಃ=ಆನಂದಮಯನಾದ ನಾರಾಯಣನು, ಆನಂದಾತ್=ಆನಂದಮಯನಾದ ನಾರಾಯಣನಿಂದ. ॥ ೬ ॥

ಮಂ ॥ ಸೈಷಾ ಭಾರ್ಗವೀ ವಾರುಣೀ ವಿದ್ಯಾ । ಪರಮೇ ವ್ಯೋಮನ್ ಪ್ರತಿಷ್ಠಿತಾ । ಯ ಏವಂ ವೇದ ಪ್ರತಿತಿಷ್ಠತಿ । ಅನ್ನವಾನನ್ನಾದೋ ಭವತಿ । ಮಹಾನ್ ಭವತಿ ಪ್ರಜಯಾ ಪಶುಭಿರ್ಬ್ರಹ್ಮವರ್ಚಸೇನ । ಮಹಾನ್

ಅ ॥ ಭಾರ್ಗವೀ=ಭೃಗುವಿನಿಂದ ಕೇಳಲ್ಪಟ್ಟ, ವಾರುಣೀ=ವರುಣನಿಂದುಪದೇಶಿಸಲ್ಪಟ್ಟ, ಸಾ ಏಷಾ="ಅನ್ನಂ ಪ್ರಾಣಂ" ಇತ್ಯಾದಿಗಳಿಂದ ಹೇಳಲ್ಪಟ್ಟ, ವಿದ್ಯಾ=ವಿದ್ಯೆಯು, ವ್ಯೋಮನ್=ಅಚ್ಛೇದ್ಯತ್ವಾದಿಗುಣಗಳಿಂದ ಆಕಾಶದಂತಿರುವ, ಪರಮೇ=ಸರ್ವೋತ್ತಮನಾದ ಶ್ರೀ ಹರಿಯಲ್ಲಿ, ಪ್ರತಿಷ್ಠಿತಾ=ಆಶ್ರಿತವಾಗಿದೆ. ಯಃ=ಯಾವ ಅಧಿಕಾರಿಯು, ಏವಂ=ಈ ಪೂರ್ವೋಕ್ತನಾದ ಎಂಟು ರೂಪಗಳನ್ನು ಜಗಜ್ಜನ್ಮಾದಿ ಕಾರಣಗಳನ್ನಾಗಿ, ವೇದ=ತಿಳಿಯುತ್ತಾನೋ (ಆತನು), ಪ್ರತಿತಿಷ್ಠತಿ=ಮುಕ್ತನಾಗಿ ಹರಿಯಲ್ಲಿರುತ್ತಾನೆ. ಅನ್ನವಾನ್=ರಕ್ಷಕನಾದ ಅನ್ನನಾಮಕ ವಿಷ್ಣುವುಳ್ಳವನಾಗಿ, ಅನ್ನಾದಃ=ಅನ್ನನಾಮಕ ಹರಿಯನ್ನು ಉಪಜೀವಿಸುವನಾಗಿಯೂ, ಭವತಿ=ಆಗುತ್ತಾನೆ. ಪ್ರಜಯಾ=ಶಿಷ್ಯಾದಿ ಪ್ರಜೆಗಳಿಂದಲೂ, ಪಶುಭಿಃ=ವೇದಗಳಿಂದಲೂ, ಬ್ರಹ್ಮವರ್ಚಸೇನ=ಸ್ವರೂಪತೇಜಸ್ಸಿನಿಂದಲೂ, ಮಹಾನ್=ಶ್ರೇಷ್ಠನು, ಭವತಿ=ಆಗುತ್ತಾನೆ. ಕೀರ್ತ್ಯಾ=ಯಶಸ್ಸಿನಿಂದಲೂ, ಮಹಾನ್=ಶ್ರೇಷ್ಠನು, ಭವತಿ=ಆಗುತ್ತಾನೆ. ॥

**ಮಂ ॥ ಅನ್ನಂ ನ ನಿಂದ್ಯಾತ್ । ತದ್ವ್ರತಂ । ಪ್ರಾಣೋ ವಾ ಅನ್ನಂ । ಶರೀರಮನ್ನಾದಂ । ಪ್ರಾಣೇ ಶರೀರಂ ಪ್ರತಿಷ್ಠಿತಂ । ಶರೀರೇ ಪ್ರಾಣಃ ಪ್ರತಿಷ್ಠಿತಃ । ತದೇತದನ್ನಮನ್ನೇ ಪ್ರತಿಷ್ಠಿತಂ । ಸ ಯ ಏತದನ್ನಮನ್ನೇ ಪ್ರತಿಷ್ಠಿತಂ ವೇದ ಪ್ರತಿತಿಷ್ಠತಿ । ಅನ್ನವಾನನ್ನಾದೋ ಭವತಿ । ಮಹಾನ್ ಭವತಿ ಪ್ರಜಯಾ ಪಶುಭಿರ್ಬ್ರಹ್ಮವರ್ಚಸೇನ । ಮಹಾನ್ ಕೀರ್ತ್ಯಾ ॥ ೮ ॥**

ಅ ॥ ಅನ್ನಂ=ಶ್ರೀ ಅನ್ನನಾಮಕ ಪರಮಾತ್ಮನನ್ನು, ನ ನಿಂದ್ಯಾತ್=ದೂಷಿಸಬಾರದು. ತತ್=ಆ ದೂಷಿಸದೇ ಇರುವುದೇ, ವ್ರತಂ=ಮೋಕ್ಷವನ್ನು ಇಚ್ಛಿಸುವವನ ನಿಯಮವು. ಪ್ರಾಣಃ=ದೇಹಗತ ಪ್ರಾಣನಲ್ಲಿರತಕ್ಕ ಪ್ರಾಣನಾಮಕನಾದ ಹರಿಯು, ಅನ್ನಂ ವೈ=ಅನ್ನನಾಮಕನು. ಶರೀರಂ=ಜೀವಪ್ರೇರಕವಾದ ಜೀವನಲ್ಲಿದ್ದ ರೂಪವು, ಅನ್ನಾದಂ=ಅನ್ನಾಖ್ಯರೂಪವನ್ನನುಭವಿಸತಕ್ಕುದು. ಪ್ರಾಣೇ=ಪ್ರಾಣನಲ್ಲಿರತಕ್ಕ ಪ್ರಾಣಾಖ್ಯರೂಪದಲ್ಲಿ, ಶರೀರಂ=ಶರೀರವೆಂದೆನಿಸುವ ಜೀವ ನಿಯಾಮಕರೂಪವು, ಪ್ರತಿಷ್ಠಿತಂ=ಆಶ್ರಿತವಾಗಿರತಕ್ಕುದು. ಶರೀರೇ=ಶರೀರಾಖ್ಯರೂಪದಲ್ಲಿ, ಪ್ರಾಣಃ=ಪ್ರಾಣಾಖ್ಯಹರಿಯು, ಪ್ರತಿಷ್ಠಿತಃ=ಇರುತ್ತಾನೆ. ತದೇತತ್=ಆ ಈ ರೂಪದ್ವಯವು, ಅನ್ನಂ=ಅನ್ನನಾಮಕವು. ಅನ್ನೇ=ಅನ್ನದಲ್ಲಿ, ಪ್ರತಿಷ್ಠಿತಂ=ಇರುವುದು. ಯಃ=ಯಾವಾತನು, ಏತತ್ ಅನ್ನಂ=ಈ ಅನ್ನನಾಮಕ ರೂಪವು, ಅನ್ನೇ=ಅನ್ನನಾಮಕಭಗವದ್ರೂಪದಲ್ಲಿ, ಪ್ರತಿಷ್ಠಿತಂ=ಇರತಕ್ಕುದನ್ನಾಗಿ, ವೇದ=ತಿಳಿಯುತ್ತಾನೋ, ಸಃ=ಆತನು, ಪ್ರತಿತಿಷ್ಠತಿ=ಮುಕ್ತನಾಗಿ ಪರಮಾತ್ಮನಲ್ಲಿರುತ್ತಾನೆ. (ಉಳಿದುದು ಹಿಂದಿನಂತೆ.)

**ಮಂ ॥ ಅನ್ನಂ ನ ಪರಿಚಕ್ಷೀತ । ತದ್ವ್ರತಂ । ಆಪೋ ವಾ ಅನ್ನಂ । ಜ್ಯೋತಿರನ್ನಾದಂ । ಅಪ್ಸು ಜ್ಯೋತಿಃ ಪ್ರತಿಷ್ಠಿತಂ । ಜ್ಯೋತಿಷ್ಯಾಪಃ ಪ್ರತಿ**

ಷ್ಠಿತಾಃ । ತದೇತದನ್ನಮನ್ನೇ ಪ್ರತಿಷ್ಠಿತಂ । ಸ ಯ ಏತದನ್ನಮನ್ನೇ ಪ್ರತಿಷ್ಠಿತಂ ವೇದ ಪ್ರತಿತಿಷ್ಠತಿ । ಅನ್ನವಾನನ್ನಾದೋ ಭವತಿ । ಮಹಾನ್ ಭವತಿ ಪ್ರಜಯಾ ಪಶುಭಿರ್ಬ್ರಹ್ಮವರ್ಚಸೇನ । ಮಹಾನ್ ಕೀರ್ತ್ಯಾ ॥ ೯

ಅ ॥ ಅನ್ನಂ=ಅನ್ನಾಖ್ಯಪರಮಾತ್ಮನನ್ನು, ನ ಪರಿಚಕ್ಷೀತ=ಬಿಡಬಾರದು. ತತ್=ಅದೇ, ವ್ರತಂ=ನಿಯಮವು. ಆಪಃ=ಅಪ್‌ನಾಮಕನಾದ ಹರಿಯು, ಅನ್ನಂ ವೈ=ಅನ್ನನಾಮಕನು. ಜ್ಯೋತಿಃ=ಜ್ಯೋತಿರ್ಗತವಾದ ರೂಪವು, ಅನ್ನಾದಂ=ಅನ್ನಾಖ್ಯರೂಪವನ್ನನುಭವಿಸುವುದು. ಅಪ್ಸು=ಅಪ್‌ನಾಮಕರೂಪದಲ್ಲಿ, ಜ್ಯೋತಿಃ=ಜ್ಯೋತಿರ್ನಾಮಕರೂಪವು, ಪ್ರತಿಷ್ಠಿತಂ=ಇರುವುದು. ಜ್ಯೋತಿಷಿ=ಜ್ಯೋತಿರ್ನಾಮಕರೂಪದಲ್ಲಿ, ಆಪಃ=ಅಮ್ನಾಮಕಭಗವದ್ರೂಪಗಳು, ಪ್ರತಿಷ್ಠಿತಾಃ=ಇರುತ್ತವೆ. (ಉಳಿದುದು ಹಿಂದಿನಂತೆ.)

ಮಂ ॥ ಅನ್ನಂ ಬಹು ಕುರ್ವೀತ । ತದ್ವ್ರತಂ । ಪೃಥಿವೀ ವಾ ಅನ್ನಂ । ಆಕಾಶೋಽನ್ನಾದಃ । ಪೃಥಿವ್ಯಾಮಾಕಾಶಃ ಪ್ರತಿಷ್ಠಿತಃ । ಆಕಾಶೇ ಪೃಥಿವೀ ಪ್ರತಿಷ್ಠಿತಾ । ತದೇತದನ್ನಮನ್ನೇ ಪ್ರತಿಷ್ಠಿತಂ । ಸ ಯ ಏತದನ್ನಮನ್ನೇ ಪ್ರತಿಷ್ಠಿತಂ ವೇದ ಪ್ರತಿತಿಷ್ಠತಿ । ಅನ್ನವಾನನ್ನಾದೋ ಭವತಿ । ಮಹಾನ್ ಭವತಿ ಪ್ರಜಯಾ ಪಶುಭಿರ್ಬ್ರಹ್ಮವರ್ಚಸೇನ । ಮಹಾನ್ ಕೀರ್ತ್ಯಾ ॥ ೧೦ ॥

ಅ ॥ ಅನ್ನಂ=ಅನ್ನನಾಮಕ ಭಗವದ್ರೂಪವನ್ನು, ಬಹುಕುರ್ವೀತ=ಜ್ಞಾನಾನಂದಾದಿ ಗುಣಗಳಿಂದ ಪೂರ್ಣವನ್ನಾಗಿ ತಿಳುಕೊಳ್ಳಬೇಕು. ತತ್=ಹಾಗೆ ತಿಳುಕೊಳ್ಳೋಣವೇ, ವ್ರತಂ=ನಿಯಮವು. ಪೃಥಿವೀ=ಪೃಥಿವಿನಾಮಕ ಭಗವದ್ರೂಪವು, ಅನ್ನಂ ವೈ=ಅನ್ನನಾಮಕವು, ಆಕಾಶಃ=ಆಕಾಶನಾಮಕ ರೂಪವು, ಅನ್ನಾದಃ=ಅನ್ನಾದನಾಮಕವು. ಪೃಥಿವ್ಯಾಂ=ಪೃಥಿವೀನಾಮಕ ರೂಪದಲ್ಲಿ, ಆಕಾಶಃ=ಆಕಾಶನಾಮಕ ಭಗವದ್ರೂಪವು, ಪ್ರತಿಷ್ಠಿತಃ=ಇರುವುದು. ಆಕಾಶೇ=ಆಕಾಶನಾಮಕ ಭಗವದ್ರೂಪದಲ್ಲಿ, ಪೃಥಿವೀ=ಪೃಥಿವೀನಾಮಕ ಭಗವದ್ರೂಪವು. ಪ್ರತಿಷ್ಠಿತಾ=ಇರುವುದು. (ಉಳಿದುದು ಹಿಂದಿನಂತೆ.)

ಮಂ ॥ ನ ಕಂಚನ ವಸತೌ ಪ್ರತ್ಯಾಚಕ್ಷೀತ । ತದ್ವ್ರತಂ । ತಸ್ಮಾದ್ಯಯಾ ಕಯಾ ಚ ವಿಧಯಾ ಬಹ್ವನ್ನಂ ಪ್ರಾಪ್ನುಯಾತ್ । ಅರಾಧ್ಯಸ್ಮಾ ಅನ್ನಮಿತ್ಯಾಚಕ್ಷತೇ । ಏತದ್ವೈ ಮುಖತೋಽನ್ನꣳ ರಾದ್ಧಂ । ಮುಖತೋಽಸ್ಮಾ ಅನ್ನꣳ ರಾಧ್ಯತೇ । ಏತದ್ವೈ ಮಧ್ಯತೋಽನ್ನꣳ ರಾದ್ಧಂ । ಮಧ್ಯತೋಽಸ್ಮಾ ಅನ್ನꣳ ರಾಧ್ಯತೇ ।

ಏತದ್ವಾ ಅಂತತೋಽನ್ನꣳ ರಾದ್ಧಂ । ಅಂತತೋಽಸ್ಮಾ ಅನ್ನꣳ ರಾದ್ಧ್ಯತೇ ।
ಯ ಏವಂ ವೇದ ॥ ೧೧ ॥

ಅ ॥ ವಸತೌ=ಗುರುಕುಲವಾಸ ವಿಷಯದಲ್ಲಿ, ಕಂಚನ(ಅಪೇಕ್ಷಿಸಿ ಬಂದ) ಯಾವಾತನನ್ನೂ, ನ ಪ್ರತ್ಯಾಚಕ್ಷೀತ=ತಿರಸ್ಕರಿಸಬಾರದು. ತತ್=ಆ ತಿರಸ್ಕರಿಸದೆ ಇರುವುದೇ, ವ್ರತಂ=ನಿಯಮವು. ತಸ್ಮಾತ್=ಪ್ರತಿಷ್ಠೆಯುಂಟಾಗುವುದರಿಂದ, ಯಯಾ ಕಯಾ ಚ ವಿಧಯಾ=ಯಾವುದಾದರೂ ವಿಹಿತಪ್ರಯತ್ನದಿಂದ, ಅನ್ನಂ=ಶ್ರೀ ಪರಮಾತ್ಮನನ್ನು, ಬಹು=ಗುಣಪರಿಪೂರ್ಣನನ್ನಾಗಿ (ತಿಳಿದು) ಪ್ರಾಪ್ನುಯಾತ್=ಹೊಂದತಕ್ಕುದು. ಅಸ್ಮೈ=ಪರಮಾತ್ಮನು ಗುಣಪರಿಪೂರ್ಣನೆಂದು ತಿಳಿದವನಿಗೆ, ಅರಾಧಿ ಇತಿ=ಸಿದ್ಧವಾಯಿತೆಂದು, ಆಚಕ್ಷತೇ=ಹೇಳುತ್ತಾರೆ. ಮುಖತಃ=ಬಾಲ್ಯವಯಸ್ಸಿನಲ್ಲಿಯೇ, ಏತತ್ ಅನ್ನಂ=ಈ ಅನ್ನಾಖ್ಯರೂಪವು, ರಾದ್ಧಂ ವೈ=ಉಪಾಸನೆಯಿಂದ ತಿಳಿಯಲ್ಪಟ್ಟ ಪಕ್ಷದಲ್ಲಿ, ಅಸ್ಮೈ=ಉಪಾಸಕನಿಗೆ, ಅನ್ನಂ=ಭಗವದ್ರೂಪವು, ಮುಖತಃ=ಪಾದವನ್ನಾರಂಭಿಸಿ, ಮುಖಪರ್ಯಂತ (ಸಮಸ್ತ ಅವಯವಗಳು) ರಾಧ್ಯತೇ=ಸಿದ್ಧವಾಗುತ್ತದೆ. ಮಧ್ಯತಃ=ಮಧ್ಯಮವಯಸ್ಸಿನಲ್ಲಿ, ಏತತ್ ಅನ್ನಂ=ಈ ಭಗವದ್ರೂಪವು, ರಾದ್ಧಂ ವೈ=ಸಿದ್ಧವಾದರೆ, ಅಸ್ಮೈ=ಉಪಾಸಕನಿಗೆ, ಅನ್ನಂ=ಭಗವದ್ರೂಪದ, ಮಧ್ಯತಃ=ಮಧ್ಯಾವಯವವು, ರಾಧ್ಯತೇ=ಸಿದ್ಧವಾಗುತ್ತದೆ. ಅಂತತಃ=ವಾರ್ಧಿಕ್ಯಾವಸ್ಥೆಯಲ್ಲಿ, ಏತತ್ ಅನ್ನಂ=ಈ ಭಗವದ್ರೂಪವು, ರಾದ್ಧಂ ವೈ=ಸಿದ್ಧವಾದರೆ, ಅಸ್ಮೈ=ಉಪಾಸಕನಿಗೆ, ಅನ್ನಂ=ಭಗವದ್ರೂಪದ, ಅಂತತಃ=ಪಾದಗಳೇ, ರಾಧ್ಯತೇ=ಸಿದ್ಧಗಳಾಗುತ್ತವೆ. ಯಃ=ಯಾವ ಅಧಿಕಾರಿಯು, ಏವಂ=ಈ ರೀತಿಯಾಗಿ, ವೇದ=ತಿಳಿಯುತ್ತಾನೋ, (ಆತನು ಹರಿಯನ್ನು ಹೊಂದುತ್ತಾನೆ.) ॥ ೧೧ ॥

**ಭಾ ॥** ಚಕ್ಷುಃ ಸ ಚಷ್ಟೇ ಯದ್ವಿಷ್ಣುಃ ಶ್ರೋತ್ರಂ ಶ್ರೋತೃತ್ವತೋ ವಿಭುಃ ।
ವಾಕ್ಚ ವಕ್ತೃತ್ವತೋ ನಿತ್ಯಂ ಮನೋ ಮಂತೃತ್ವತಸ್ತಥಾ ।
ತಪೋ ಜ್ಞಾನಸ್ವರೂಪತ್ವಾತ್ ವಿಜ್ಞಾನಂ ತು ವಿವೇಚನಾತ್ ॥

ಅ ॥ ಶ್ರೀ ಹರಿಯು ಯಾವುದರಿಂದ ಇದ್ದಲ್ಲಿಯೇ ಸಕಲವನ್ನೂ ನೋಡುತ್ತಾನೋ ಆದ ಕಾರಣ 'ಚಕ್ಷು' ಎಂದು ಹೆಸರುಳ್ಳವನು. ನಿಖಿಲ ವಸ್ತುಗಳನ್ನೂ ಕೇಳುವುದರಿಂದ 'ಶ್ರೋತ್ರ'ನೆನಿಸುತ್ತಾನೆ. ವಿಶೇಶವಾಗಿ ವಕ್ತೃ ಆದ ಪ್ರಯುಕ್ತ 'ವಾಕ್' ಎಂದೆನಿಸುತ್ತಾನೆ. (೧ನೇ ವರ್ಗದ್ದು.) ಹಾಗೆಯೇ ಮನನಶಕ್ತಿಯನ್ನು ಕೊಡುವ ನಿಮಿತ್ತ 'ಮನ'ವೆನ್ನಿಸಿಕೊಂಡಿದ್ದಾನೆ. ಜ್ಞಾನಸ್ವರೂಪನಾದುದರಿಂದ 'ತಪ'ನೆನ್ನಿಸಿಕೊಂಡಿದ್ದಾನೆ. (೪.ವ.) ತ್ರಿವಿಧರಾದ ಜೀವರಿಗೆ ಫಲವನ್ನು ಕೊಟ್ಟು ಯೋಗ್ಯತೆಯನ್ನು ವಿವೇಕಿಸುವ ನಿಮಿತ್ತ 'ವಿಜ್ಞಾನ'ನೆನಿಸಿಕೊಂಡಿದ್ದಾನೆ, (೫. ವ.)

**ಭಾ ॥** ಜ್ಞಾನಾನುಸಂಧಾನರೂಪತಪಸಾ ತಂ ಜನಾರ್ದನಂ ।
ಕ್ರಮಾದ್ಭೃಗುರ್ವ್ಯಜಾನಾತ್ತಮನ್ನಾದಿಬಹುರೂಪಿಣಂ ॥

ಅ॥ ಭೃಗುಋಷಿಯು ಶ್ರವಣಾನಂತರ ಭಾವಿಯಾದ ಶ್ರವಣ, ಮನನ, ನಿಧಿಧ್ಯಾಸನರೂಪವಾದ ತಪಸ್ಸಿನಿಂದ ಆ ಹರಿಯನ್ನು ಕ್ರಮದಿಂದ ಅನ್ನಮಯಾದಿ ಎಂಟು ರೂಪಗಳುಳ್ಳವನನ್ನಾಗಿ ತಿಳುಕೊಂಡನು. (೨-೫. ವ.)

ಭಾ || ಏವಂ ವಿಜಾನಂಸ್ತಂ ವಿಷ್ಣುಂ ತಸ್ಮಿಂಸ್ತು ಪ್ರತಿತಿಷ್ಠತಿ ||

ಅ|| ಪೂರ್ವೋಕ್ತನಾದ ಹರಿಯನ್ನು ಈ ರೀತಿಯಾದ ಮಹಿಮಾಯುಕ್ತನೆಂದು ತಿಳು ಕೊಂಡವನು ಹರಿಯಲ್ಲಿರುತ್ತಾನೆ. ಅಂದರೆ ಸಾಯುಜ್ಯಮುಕ್ತಿಯನ್ನು ಹೆ ಂದುತ್ತಾನೆ.

ಭಾ || ಮುಕ್ತೋ ಭೂತ್ವಾನ್ನವಾಂಶ್ಚ ಸ್ಯಾದನ್ನಾದಶ್ಚ ಸದೈವ ತು |
ಅನ್ನನಾಮಾ ತು ಭಗವಾನ್ವಿದ್ವಾಂಸ್ತಮುಪಜೀವತಿ ||
ತದ್ವಾಂಶ್ಚ ತೇನ ಗುಪ್ತತ್ವಾತ್ || ೭-೮ ||

ಅ|| ಜ್ಞಾನಿಯಾದವನು ಮುಕ್ತನಾಗಿ ಯಾವ ಹರಿಯು ಅನ್ನನಾಮಕನೋ ಆತನನ್ನು ಯಾವಾಗಲೂ ಆಶ್ರಯಿಸಿಕೊಂಡಿರುತ್ತಾನೆ. ಆದುದರಿಂದ 'ಅನ್ನಾದ' ಎಂದೆನಿಸುತ್ತಾನೆ. ಅಂತಹ ಹರಿಯಿಂದ ಯಾವಾಗಲೂ ರಕ್ಷಿಸಲ್ಪಡುವ ಪ್ರಯುಕ್ತ ಅನ್ನನಾಮಕ ಹರಿಯುಳ್ಳವನಾಗಿ 'ಅನ್ನ ವಾನ್' ಎಂದು ಹೆಸರುಳ್ಳವನಾಗುತ್ತಾನೆ. || ೭-೮ ||

ಭಾ || ವಿದ್ಯಾರ್ಥೀ ವಸತೀಚ್ಛಯಾ | ಆಗತಂ ನೇತಿ ನ ಬ್ರೂಯಾತ್ತದೇ-
ತದ್ವಿದುಷೋ ವ್ರತಂ ||

ಅ|| ವಿದ್ಯಾಭ್ಯಾಸಕ್ಕೋಸ್ಕರ ಗುರುಕುಲದಲ್ಲಿ ಆವಾಸ ಮಾಡಬೇಕೆಂದು ಇಚ್ಛೆಯಿಂದ ಬಂದ ಯೋಗ್ಯಶಿಷ್ಯನನ್ನು ವಿದ್ಯೆಯನ್ನು ಹೇಳುವುದಿಲ್ಲವೆಂದಾಗಲೀ, ತನ್ನಲ್ಲಿರಕೂಡದೆಂದಾಗಲೀ ಹೇಳಬಾರದು. ಇದೇ ಮುಖ್ಯವಾಗಿ ಜ್ಞಾನಿಯಾದವನಿಗೆ ವ್ರತವಾಗಿರತಕ್ಕದು.

ಭಾ || ಸ ವಿಷ್ಣುಃ ಪೃಥಿವೀನಾಮಾ ಪೃಥುತ್ವಾತ್ಪ್ರಾಣನಾಮಕಃ |
ಪ್ರಕೃಷ್ಟಾನಂದ ಬಲತ ಆಕಾಶಃ ಸರ್ವವೇತ್ತೃತಃ ||

ಅ|| ಪೂರ್ವೋಕ್ತನಾದ ಹರಿಯು ಎಲ್ಲಾ ಸ್ಥಳಗಳಲ್ಲಿಯೂ ವ್ಯಾಪ್ತನಾದುದರಿಂದ ಪೃಥಿವೀ' ಎಂದು ಹೆಸರುಳ್ಳವನು. (೧೦. ವ.) ಉತ್ಕೃಷ್ಟವಾದ ಆನಂದವು ಮತ್ತು ಬಲವು ಇವುಗಳೇ ಸ್ವರೂಪವುಳ್ಳವನಾದುದರಿಂದ 'ಪ್ರಾಣ'ನೆಂದು ಹೆಸರುಳ್ಳವನಾಗಿರುತ್ತಾನೆ. (೮. ವ.) ಸಮಸ್ತವನ್ನೂ ತಿಳಿದವನಾದುದರಿಂದ 'ಆಕಾಶ'ನೆನ್ನಿಸಿಕೊಂಡಿದ್ದಾನೆ. (೧೦. ವ.)

ಭಾ || ಶರಾಖ್ಯದೇಹಿನಶ್ಚೈವ ಶರೀರಂ ಪ್ರೇರಣಾತ್ಸ್ಮೃತಃ ||

ಅ|| ದೇಹನಿಮಿತ್ತವಾಗಿ ನಾಶವಿರುವ ಪ್ರಯುಕ್ತ 'ಶರ'ವೆಂದು ಪ್ರಸಿದ್ಧನಾದ ಜೀವನನ್ನು ಪ್ರೇರಿಸುವ ಪ್ರಯುಕ್ತವೇ ಹರಿಯು 'ಶರೀರ'ವೆನ್ನಿಸಿಕೊಂಡಿದ್ದಾನೆ. (೮. ವ.)

ಭಾ || ಏತೈಶ್ಚತುರ್ಭಿರ್ಭಗವಾನ್ ರೂಪೈಶ್ಚ ಚತುರಾತ್ಮಭಿಃ ||
ಭೋಗ್ಯಭೋಕ್ತೃಸ್ವರೂಪೇಣ ತಿಷ್ಠತಿ ಕ್ರೀಡಯಾ ಸ್ವಯಂ ||

ಅ|| ಪೂರ್ವೋಕ್ತಗಳಾದ ಪೃಥಿವ್ಯಾದಿಗಳಲ್ಲಿರತಕ್ಕ ಪೃಥಿವೀನಾಮಕವೇ ಮೊದಲಾದ ನಾಲ್ಕು ರೂಪಗಳಿಂದ ಶ್ರೀಹರಿಯೊಬ್ಬನೇ ಕ್ರೀಡೆಯಿಂದ ಭೋಗ್ಯಭೋಕ್ತೃಸ್ವರೂಪದಿಂದ ಅಂದರೆ ಒಂದು ರೂಪವು ಭೋಗ್ಯವೆಂತಲೂ, ಮತ್ತೊಂದು ಭೋಕ್ತೃವೆಂತಲೂ ಅನ್ನಿಸಿಕೊಂಡಿ ರುತ್ತಾನೆ. (೮, ೧೦. ವ)

ಭಾ || ನ ಚ ಭೋಗ್ಯತ್ವಮಾತ್ರೇಣ ಹೀನತ್ವಂ ತಸ್ಯ ಕುತ್ರಚಿತ್ |
ನ ಹಿ ಭಾರ್ಯೋಪಭೋಗ್ಯಸ್ತು ಭರ್ತಾ ಹೀನತ್ವಮಾಪ್ನುಯಾತ್ ||

ಅ॥ ಶ್ರೀಹರಿಯು ಒಂದು ರೂಪಕ್ಕೆ ಭೋಗ್ಯತ್ವವಿದ್ದರೂ ಕೇವಲ ಅದರಿಂದ ಆತನಿಗೆ ಯಾವ ವಿಧದಿಂದಲೂ ಎಲ್ಲಿಯೂ ನೀಚತ್ವವನ್ನು ಹೇಳಕೂಡದು. ಲೋಕದಲ್ಲಿಯೂ ಪತ್ನಿಯಿಂದ ಆಲಿಂಗನ ಚುಂಬನ ಸುರತಾದಿಗಳಿಂದ ಉಪಭೋಗಿಸಿಕೊಳ್ಳುವನಾದರೂ, ಪತಿಯಾದವನು ನೀಚತ್ವವನ್ನೂ ಪತ್ನಿಯು ಉಚ್ಚತನವನ್ನೂ ಹೊಂದುವುದಿಲ್ಲವಷ್ಟೆ. (೮, ೯, ೧೦. ವ.)

ಭಾ ॥ ಏವಂ ಸ ಭಗವಾನ್ ವಿಷ್ಣುರವಿಶೇಷೋಽಖಿಲೇಷ್ವಪಿ ।
ರೂಪೇಷು ಕ್ರೀಡತೇ ನಿತ್ಯಂ ಭೋಕ್ತಾ ಭೋಗ್ಯ ಇತೀಚ್ಛಯಾ ॥

ಅ ॥ ಪೂರ್ವೋಕ್ತ ರೀತಿಯಿಂದ ಶ್ರೀಹರಿಯು ಎಲ್ಲಾ ರೂಪಗಳಲ್ಲಿಯೂ ಉಚ್ಚ ನೀಚಭಾವವಿಲ್ಲದಿದ್ದರೂ ಸ್ವೇಚ್ಛೆಯಿಂದಲೇ ಒಂದು ರೂಪವು ಭೋಗ್ಯವೆಂತಲೂ, ಇನ್ನೊಂದು ಭೋಕ್ತೃವೆಂತಲೂ ಮಾಡಿಕೊಂಡು ಕ್ರೀಡಿಸಿಕೊಂಡಿರುತ್ತಾನೆ. (೮, ೯, ೧೦. ವ.)

ಭಾ ॥ ಅನ್ನಾಖ್ಯಂ ತನ್ನೈವ ನಿಂದ್ಯಾದ್ಬಹುಮನ್ಯೇತ ತಂ ಸದಾ ।
ಇತಿ ವ್ರತದ್ವಯಂ ಹ್ಯೇತದ್ಭಾವ್ಯಂ ಯದಿ ಸುಖೇ ಸ್ಪೃಹಾ ॥

ಅ ॥ ಯಾವಾತನಿಗೆ ಶಾಶ್ವತವಾದ ಸುಖದಲ್ಲಿ ಅಭಿಲಾಷೆಯಿದೆಯೋ ಆತನು ಅನ್ನವೆಂದು ಪ್ರಸಿದ್ಧನಾದ ಶ್ರೀಹರಿಯನ್ನು ನಿಂದಿಸಬಾರದು. ಅಲ್ಲದೆ ಯಾವಾಗಲೂ ಅನಂತಗುಣಯುಕ್ತನನ್ನಾಗಿ ತಿಳುಕೊಂಡು ಉಪಾಸನೆಮಾಡತಕ್ಕದ್ದು. ಎಂಬೀ ಎರಡು ವ್ರತಗಳು ಆವಶ್ಯವಾಗಿ ಬೇಕಾದವುಗಳು. (೮, ೯, ೧೦ ವ.)

ಭಾ ॥ ಯೇನ ಕೇನಾಪಿ ವಿಧಿನಾ ಬಹ್ವಿತ್ಯೇವ ಜನಾರ್ದನಂ ।
ಮತ್ವೈವ ಪ್ರಾಪ್ನುಯಾನ್ನಿತ್ಯಂ ಮನೋವಾಕ್ಕಾಯವೃತ್ತಿಭಿಃ ॥

ಅ ॥ ಯಾವುದಾದರೊಂದು ಗುರುಸೇವಾದಿರೂಪವಾದ ಯುಕ್ತವಾದ ರೀತಿಯಿಂದ ಮನಸ್ಸು, ವಚನ, ಶರೀರವೆಂಬೀ ತ್ರಿಕರಣಪೂರ್ವಕವಾಗಿ ಶ್ರೀಹರಿಯನ್ನು ನಿಖಿಲಗುಣಪರಿಪೂರ್ಣನನ್ನಾಗಿ ನಿರಂತರವೂ ತಿಳಿದೇ ಆತನನ್ನು ಹೊಂದುವನು (೧೧. ವ.)

ಭಾ ॥ ಯ ಏವಂ ಸಮುಪಾಸೀತ ತಸ್ಯಾನ್ನಾಖ್ಯೋ ಹರಿಃ ಸ್ವಯಂ ।
ಸಿದ್ಧ ಇತ್ಯೇವ ಹಿ ಪ್ರಾಹುರ್ವಿದ್ವಾಂಸಃ ಪರಿನಿಷ್ಠಿತಾಃ ॥

ಅ ॥ ಪೂರ್ವೋಕ್ತನಾದ ರೀತಿಯಿಂದ ಯಾರು ಉಪಾಸನೆಮಾಡುತ್ತಾನೋ, ಆತನಿಗೆ ಅನ್ನಾಖ್ಯನಾದ ಶ್ರೀಹರಿಯು ಅಭೀಷ್ಟಗಳನ್ನೀಯಲು ತಾನಾಗಿಯೇ ಸಿದ್ಧನಾಗಿರುತ್ತಾನೆಂದು ನಿಶ್ಚಯಜ್ಞಾನಿಗಳು ಹೇಳುತ್ತಾರೆ. (೧೧ ವ.)

ಭಾ ॥ ಯಸ್ಯ ತದ್ಬ್ರಹ್ಮ ಸಂಸಿದ್ಧಂ ಪೂರ್ವಂ ತೇನಾಪ್ಯತೇಽಗ್ರತಃ ॥

ಅ ॥ ಯಾವಾತನಿಂದ ಬಾಲ್ಯವಯಸ್ಸಿನಲ್ಲಿಯೇ ಶ್ರವಣಮನನಾದಿಗಳಿಂದ ಶ್ರೀಹರಿಯು ಸಿದ್ಧೀಕರಿಸಲ್ಪಟ್ಟನೋ, ಆತನಿಂದ ಮುಕ್ತಿಯಲ್ಲಿ ಶ್ರೀ ಪರಮಾತ್ಮನ ಮುಖಾದಿ ಸಮಸ್ತ ಅವಯವಗಳೂ ಪ್ರತ್ಯಕ್ಷೀಕರಿಸಲ್ಪಡುತ್ತವೆ. (೧೧. ವ.)

ಭಾ ॥ ಮಧ್ಯೇ ವಯಸಿ ಚೇತ್ಸಿದ್ಧಂ ಮುಕ್ತೌ ಮಧ್ಯಂ ಪ್ರಪಶ್ಯತಿ ॥

ಅ ॥ ಮಧ್ಯಮ ವಯಸ್ಸಿನಲ್ಲಿ ಅಂದರೆ ತರುಣನಾದಾಗ ಶ್ರೀಹರಿಯನ್ನು ಅಪರೋಕ್ಷೀಕರಿಸಿಕೊಂಡರೆ ಮುಕ್ತಿಯಲ್ಲಿ ಶ್ರೀಹರಿಯ ಮಧ್ಯಪ್ರದೇಶವನ್ನು ಮಾತ್ರ ಚೆನ್ನಾಗಿ ನೋಡುತ್ತಾನೆ. (೧೧. ವ.)

**ಭಾ ||** ವಾರ್ಧಕೇ ಚೇದ್ದ್ವಿಜಾನಾತಿ ಮುಕ್ತಃ ಪಾದೌ ಪ್ರಪಶ್ಯತಿ ।
ತೇಜೋಮಂಡಲಮೇವಾನ್ಯದಂಗಂ ವಿಷ್ಣೋಃ ಪ್ರಪಶ್ಯತಿ ||

ಅ || ಮುದಿತನದಲ್ಲಿ ಯಾವಾತನು ಪರಮಾತ್ಮನನ್ನು ತಿಳುಕೊಳ್ಳುವನಾದರೆ ಆ ಮುಕ್ತನು ಮುಕ್ತಿಯಲ್ಲಿ ಶ್ರೀಹರಿಯ ಪಾದಗಳನ್ನು ಮಾತ್ರ ಚನ್ನಾಗಿ ಪ್ರತ್ಯಕ್ಷೀಕರಿಸುತ್ತಾನೆ. ಇತರವಾದ ವಿಷ್ಣುವಿನ ಅಂಗಗಳನ್ನಿವರು ತೇಜಸ್ಸಿನ ರಾಶಿಯಂತೆ ನೋಡುತ್ತಾರೆ. (೧೧. ವ.)

**ಭಾ ||** ಪೂರ್ವೇ ವಯಸಿ ಬೋದ್ಧವ್ಯಮಾಮುಖಾತ್ಸರ್ವದೃಷ್ಟಯೇ || ೧೧ ||

ಅ || ಆದಕಾರಣ, ಮುಕ್ತಿಯಲ್ಲಿ ಶ್ರೀ ಪರಮಾತ್ಮನ ಮುಖವನ್ನಾರಂಭಿಸಿಕೊಂಡು ಸಮಸ್ತ ಅವಯುವಗಳನ್ನೂ, ನೋಡಬೇಕೆಂದಿದ್ದರೆ ಬಾಲ್ಯವನ್ನಾರಂಭಿಸಿ ಮುಪ್ಪಿನ ವರೆಗೂ ಶ್ರವಣಮನನಾದಿಗಳಿಂದ ಎಷ್ಟು ಹೊತ್ತಿಗೂ ಶ್ರೀಹರಿಯನ್ನೇ ಚಿಂತಿಸುತ್ತಿರಬೇಕು. || ೧೧. ||

**ಮಂ || ಕ್ಷೇಮ ಇತಿ ವಾಚಿ । ಯೋಗಕ್ಷೇಮ ಇತಿ ಪ್ರಾಣಾಪಾನಯೋಃ । ಕರ್ಮೇತಿ ಹಸ್ತಯೋಃ । ಗತಿರಿತಿ ಪಾದಯೋಃ । ವಿಮುಕ್ತಿರಿತಿ ಪಾಯೌ । ಇತಿ ಮಾನುಷೀಃ ಸಮಾಜ್ಞಾಃ || ಅಥ ದೈವೀಃ । ತೃಪ್ತಿರಿತಿ ವೃಷ್ಟೌ । ಬಲಮಿತಿ ವಿದ್ಯುತಿ । ಯಶ ಇತಿ ಪಶುಷು । ಜ್ಯೋತಿರಿತಿ ನಕ್ಷತ್ರೇಷು । ಪ್ರಜಾತಿರಮೃತ ಮಾನಂದ ಇತ್ಯುಪಸ್ಥೇ । ಸರ್ವಮಿತ್ಯಾಕಾಶೇ || ೧೨ ||**

ಅ|| ವಾಚಿ=ವಾಗಿಂದ್ರಿಯದಲ್ಲಿ, ಕ್ಷೇಮ ಇತಿ=ಕ್ಷೇಮನಾಮಕ ಹರಿಯು, (ಇದ್ದಾನೆಂದು ಉಪಾಸನೆ ಮಾಡತಕ್ಕದು). ಪ್ರಾಣಾಪಾನಯೋಃ=ಪ್ರಾಣಾಪಾನರಲ್ಲಿರತಕ್ಕ ಹರಿಯು, ಯೋಗಕ್ಷೇಮ ಇತಿ=(ಕ್ರಮದಿಂದ) ಯೋಗ, ಕ್ಷೇಮನೆನಿಸಿಕೊಳ್ಳುತ್ತಾನೆ. ಹಸ್ತಯೋಃ=ಕೈಗಳಲ್ಲಿ, ಕರ್ಮ ಇತಿ=ಕರ್ಮನಾಮಕ ಹರಿಯು ಇರುತ್ತಾನೆ. ಪಾದಯೋಃ=ಕಾಲುಗಳಲ್ಲಿ, ಗತಿರಿತಿ=ಗತಿನಾಮಕ ಹರಿಯು ಇರುತ್ತಾನೆ. ಪಾಯೌ=ಗುದದಲ್ಲಿ, ವಿಮುಕ್ತಿಃ ಇತಿ=ವಿಮುಕ್ತ್ಯಾಖ್ಯ ಹರಿಯು ಇರುತ್ತಾನೆಂದುಪಾಸಿಸತಕ್ಕದು, ಮಾನುಷೀಃ=ಮನುಷ್ಯದೇಹಸಂಬಂಧಿಗಳಾದ, ಸಮಾಜ್ಞಾಃ=ಉಪಾಸನೆಗಳು, ಇತಿ=ಹೇಳಿದ ರೀತಿಯಾಗಿರುತ್ತವೆ. ಅಥ=ಅನಂತರ, ದೈವೀಃ=ದೇವಸಂಬಂಧಿಗಳಾದ ಉಪಾಸನೆಗಳು (ಹೇಳಲ್ಪಡುತ್ತವೆ.) ವೃಷ್ಟೌ=ವೃಷ್ಟ್ಯಭಿಮಾನಿಯಾದ ಪರ್ಜನ್ಯನಲ್ಲಿ, ತೃಪ್ತಿಃ ಇತಿ=ತೃಪ್ತಿನಾಮಕ ಹರಿಯು ಇದ್ದಾನೆಂದು ಉಪಾಸನೆ ಮಾಡತಕ್ಕದು, ವಿದ್ಯುತಿ=ಮಿಂಚಿಗೆ ಅಭಿಮಾನಿಯಾದ ವಾಯುವಿನಲ್ಲಿ, ಬಲಮಿತಿ=ಬಲನಾಮಕನಾದ ಹರಿಯು ಇರುತ್ತಾನೆಂದು ಉಪಾಸನೆ ಮಾಡತಕ್ಕದು, ಪಶುಷು=ಯಜ್ಞಪಶುವಿಗಭಿಮಾನಿಯಾದ ದಕ್ಷಪ್ರಜಾಪತಿಯಲ್ಲಿ, ಯಶ ಇತಿ=ಯಶೋನಾಮಕನಾದ ಹರಿಯು ಇದ್ದಾನೆಂದು ಉಪಾಸನೆ ಮಾಡತಕ್ಕದು, ನಕ್ಷತ್ರೇಷು=ಅಶ್ವಿನ್ಯಾದಿ ನಕ್ಷತ್ರಗಳಲ್ಲಿ, ಜ್ಯೋತಿಃ ಇತಿ=ಜ್ಯೋತಿರ್ನಾಮಕ ಹರಿಯು ಇರುತ್ತಾನೆಂದು ಉಪಾಸನೆ ಮಾಡತಕ್ಕದು, ಉಪಸ್ಥೇ=ಉಪಸ್ಥಾಭಿಮಾನಿಯಾದ ಶಿವನಲ್ಲಿ, ಪ್ರಜಾತಿಃ=ಪ್ರಜಾಪತಿನಾಮಕನಾಗಿಯೂ, ಅಮೃತಂ=ಅಮೃತನಾಮಕನಾಗಿಯೂ, ಆನಂದ ಇತಿ=ಆನಂದನಾಮಕನಾಗಿಯೂ ಇದ್ದಾನೆಂದು ಉಪಾಸನೆ ಮಾಡತಕ್ಕದು. ಆಕಾಶೇ=ಪ್ರಕೃತಿಯಲ್ಲಿ, ಸರ್ವಂ ಇತಿ=ಸರ್ವನಾಮಕನಾಗಿದ್ದಾನೆಂತಲೂ ಉಪಾಸನೆ ಮಾಡತಕ್ಕದು. || ೧೨. ||

ಭಾ ॥ ಕ್ಷೇಮಕೃತ್ತ್ವಾತ್ಕ್ಷೇಮನಾಮಾ ವಾಚಿಸ್ಥಃ ಸ ಪರೋ ಹರಿಃ ॥

ಅ॥ ವಾಗಿಂದ್ರಿಯದಲ್ಲಿ ನಿಯಾಮಕನಾಗಿದ್ದ ಸರ್ವೋತ್ತಮನಾದ ಶ್ರೀಹರಿಯು ಭಕ್ತರಿಗೆ ಕ್ಷೇಮವನ್ನುಂಟುಮಾಡುವ ಪ್ರಯುಕ್ತ ಕ್ಷೇಮನಾಮಕನು.

ಭಾ ॥ ಯೋಗನಾಮಾ ತಥಾ ಪ್ರಾಣೇ ಸರ್ವಕಾಮನಿಯೋಜನಾತ್ ।
ಕ್ಷೇಮನಾಮಾ ಕ್ಷೇಮಕೃತ್ತ್ವಾದಪಾನೇ ಹಿ ಹರಿಃ ಸ್ವಯಂ ॥

ಅ॥ ಪ್ರಾಣನಲ್ಲಿದ್ದ ಹರಿಯು ಭಕ್ತರಿಗೆ ನಿಖಿಲ ಕಾಮಗಳನ್ನು ಸಲ್ಲಿಸುವ ಪ್ರಯುಕ್ತ 'ಯೋಗ'ನಾಮಕನಾಗಿರುತ್ತಾನೆ. ಅಪಾನನಲ್ಲಿದ್ದ ಹರಿಯು ಭಕ್ತರಿಗೆ ಕ್ಷೇಮಕಾರಕನಾದುದರಿಂದ 'ಕ್ಷೇಮ'ನಾಮಕನಾಗಿರುತ್ತಾನೆ.

ಭಾ ॥ ಕರ್ಮನಾಮಾ ಹಸ್ತಗತಃ ಕರ್ಮಕೃತ್ತ್ವಾಜ್ಜನಾರ್ದನಃ ॥

ಅ॥ ಹಸ್ತಗಳಲ್ಲಿರುವ ಹರಿಯು ನಿಖಿಲ ಕರ್ಮಗಳನ್ನೂ ಮಾಡುವಪ್ರಯುಕ್ತ 'ಕರ್ಮ' ನಾಮಕನು.

ಭಾ ॥ ಗತಿದತ್ತ್ವಾದ್ಗತಿರ್ನಾಮ ಪಾದಸ್ಥಃ ಪುರುಷೋತ್ತಮಃ ॥

ಅ॥ ಪಾದದಲ್ಲಿರತಕ್ಕ ಪುರುಷೋತ್ತಮನು ಭಕ್ತರಿಗೆ ಜ್ಞಾನಮೋಕ್ಷಗಳನ್ನು ಕೊಡುವ ಪ್ರಯುಕ್ತ 'ಗತಿ' ಎಂದೆನಿಸುತ್ತಾನೆ.

ಭಾ ॥ ವಿಸರ್ಗಕೃದ್ವಿಮುಕ್ತ್ಯಾಖ್ಯಃ ಪಾಯುಸ್ಥಃ ಪರಮೋ ವಿಭುಃ ॥
ಆಧ್ಯಾತ್ಮಸ್ಥ ಇತಿ ಪ್ರೋಕ್ತಃ ॥

ಅ॥ ಗುದದಲ್ಲಿರತಕ್ಕ ಸರ್ವೋತ್ತಮನಾದ ಶ್ರೀಹರಿಯು ಮಲಾದಿವಿಸರ್ಗಗಳನ್ನು ಮಾಡಿಸುವ ಪ್ರಯುಕ್ತ 'ವಿಮುಕ್ತಿ' ಎಂದು ಹೆಸರುಳ್ಳವನಾಗಿರುತ್ತಾನೆ. ಮನುಷ್ಯರ ದೇಹವನ್ನಧಿಕರಿಸಿಕೊಂಡಿರತಕ್ಕ ವಾಗಾದಿ ಇಂದ್ರಿಯಗಳಲ್ಲಿ ನಿಯಾಮಕನಾಗಿದ್ದ ಹರಿಯು ಕ್ಷೇಮಾದಿಶಬ್ದವಾಚ್ಯನೆಂದು ಉಪಾಸನೆಮಾಡತಕ್ಕದೆಂದು ಹೇಳಲ್ಪಟ್ಟಿತು.

ಭಾ ॥ ಅಥಾಧಿದೈವಗತಂ ಶೃಣು ॥ ಪರ್ಜನ್ಯೇ ತೃಪ್ತಿನಾಮಾಸೌ ತೃಪ್ತಿ
ದತ್ತ್ವಾಜ್ಜನಾರ್ದನಃ ॥

ಅ ॥ ಈಗ ದೇವತಾ ಸಂಬಂಧಿಯಾದ ವೃಷ್ಟ್ಯಾದಿಗಳನ್ನಧಿಕರಿಸಿಕೊಂಡು ಇರತಕ್ಕ ಪರ್ಜನ್ಯಾದಿಗಳು ಅಧಿದೈವಗಳು. ಅವುಗಳಲ್ಲಿರತಕ್ಕ ಭಗವದ್ರೂಪಗಳನ್ನು ಕೇಳು. ಭಕ್ತರಿಗೆ ತೃಪ್ತಿಯನ್ನುಂಟುಮಾಡುವ ಪ್ರಯುಕ್ತ "ತೃಪ್ತಿ"ನಾಮಕನಾದ ಶ್ರೀಜನಾರ್ದನನು ಆದಿತ್ಯನಲ್ಲಿರತಕ್ಕವನೆಂದು ಉಪಾಸನೆ ಮಾಡತಕ್ಕದು.

ಭಾ ॥ ವಾಯೌ ಚ ಬಲನಾಮಾ ಚ ಬಲದತ್ತ್ವಾತ್ತ್ವದ್ಯೈ ವಹಿ ॥

ಅ ॥ ಯಾವಾಗಲೂ ಸಾಮರ್ಥ್ಯಪ್ರದನಾದುದರಿಂದ ಬಲನಾಮಕ ಹರಿಯು ವಿದ್ಯುದಭಿಮಾನಿಯಾದ ವಾಯುವಿನಲ್ಲಿರತಕ್ಕವನೆಂದು ಉಪಾಸನೆ ಮಾಡತಕ್ಕದ್ದು.

ಭಾ ॥ ಯಶಪ್ರದತ್ತ್ವಾದ್ದಕ್ಷೇತು ಯಶಃ ಪಶ್ವಭಿಮಾನಿನಿ ॥

ಅ ॥ ಕೀರ್ತಿಯನ್ನು ಕೊಡುವ ಪ್ರಯುಕ್ತ ಯಶೋನಾಮಕನಾದ ಹರಿಯು ಯಜ್ಞಪಶುವಿಗೆ ಅಭಿಮಾನಿಯಾದ ದಕ್ಷಪ್ರಜಾಪತಿಯಲ್ಲಿರುತ್ತಾನೆಂದು ಉಪಾಸಿಸತಕ್ಕದ್ದು.

ಭಾ || ನಕ್ಷತ್ರೇಷು ಜ್ಯೋತಿರಾಖ್ಯೋ ಜ್ಯೋತಿರ್ದಾತೃತ್ವತೋ ಹರಿಃ ||

ಅ || ಪ್ರಕಾಶವನ್ನು ಕೊಡುವವನಾದುದರಿಂದ ಜ್ಯೋತಿಸ್ಸೆಂದು ಹೆಸರುಳ್ಳ ಹರಿಯು ಅಶ್ವಿನ್ಯಾದಿ ನಕ್ಷತ್ರಗಳಲ್ಲಿದ್ದಾನೆಂದು ಉಪಾಸನೆ ಮಾಡತಕ್ಕದ್ದು.

ಭಾ || ಉಪಸ್ಥ ಮಾನಿನಿ ಶಿವೇ ಪ್ರಜಾತ್ಯಾನಂದಸಂತತೇಃ ||
ದಾತೃತ್ವಾತ್ತತ್ತದಾಖ್ಯೋಽಸೌ ಸಂತತಿಸ್ತ್ವಮೃತಂ ಸ್ಮೃತಂ ||

ಅ || ಸತ್ಪುತ್ರರನ್ನೂ ಆನಂದವನ್ನೂ ಸಂತತಿ ಪರಂಪರೆಯನ್ನೂ ಕೊಡುವ ಪ್ರಯುಕ್ತ ಪ್ರಜಾಪತಿ, ಆನಂದ, ಅಮೃತವೆಂದು ಹೆಸರುಳ್ಳ ಶ್ರೀ ಹರಿಯು ಗುಹ್ಯೇಂದ್ರಿಯಕ್ಕೆ ನಿಯಾಮಕನಾದ ಶಿವನಲ್ಲಿರುತ್ತಾನೆಂದು ಉಪಾಸನೆ ಮಾಡತಕ್ಕದು. ಅಮೃತವೆಂದರೆ ಪೌತ್ರಾದಿರೂಪ ಸಂತಾನಪರಂಪರೆಯೆಂದು ಸ್ಮೃತಿಸಿದ್ಧವಾಗಿದೆ.

ಭಾ || ಸರ್ವಂ ಸರ್ವಪ್ರದತ್ವಾತ್ತು ಪ್ರಕೃತೌ ಪುರುಷೋತ್ತಮಃ || ೧೨ ||

ಅ || ಜಗತ್ತಿಗೆ ಸತ್ತಾದಿ ಸಕಲವನ್ನೂ ಕೊಡುತ್ತಾನಾದುದರಿಂದ ಸರ್ವನೆಂದು ಹೆಸರುಳ್ಳ ಹರಿಯು ಪ್ರಕೃತಿಯಲ್ಲಿರುತ್ತಾನೆಂದು ಉಪಾಸನೆ ಮಾಡತಕ್ಕದ್ದು. || ೧೨ ||

ಮಂ || ತತ್ಪ್ರತಿಷ್ಠೇತ್ಯುಪಾಸೀತ | ಪ್ರತಿಷ್ಠಾವಾನ್ ಭವತಿ | ತನ್ಮಹ ಇತ್ಯುಪಾಸೀತ |
ಮಹಾನ್ ಭವತಿ | ತನ್ಮನ ಇತ್ಯುಪಾಸೀತ | ಮಾನವಾನ್ ಭವತಿ | ತನ್ನಮ
ಇತ್ಯುಪಾಸೀತ | ನಮ್ಯಂತೇಽಸ್ಮೈ ಕಾಮಾಃ | ತದ್ಬ್ರಹ್ಮೇತ್ಯುಪಾಸೀತ |
ಬ್ರಹ್ಮವಾನ್ ಭವತಿ | ತದ್ಬ್ರಹ್ಮಣಃ ಪರಿಮರ ಇತ್ಯುಪಾಸೀತ | ಪರ್ಯೇಣಂ
ಮ್ರಿಯಂತೇ ದ್ವಿಷಂತಃ ಸಪತ್ನಾಃ | ಪರಿ ಯೇ ಪ್ರಿಯಾ ಭ್ರಾತೃವ್ಯಾಃ || ೧೩ ||

ಅ || ತತ್=ಆ ಪರಬ್ರಹ್ಮವನ್ನು, ಪ್ರತಿಷ್ಠಾ ಇತಿ=ಪ್ರತಿಷ್ಠಾಶಬ್ದವಾಚ್ಯವಾದದ್ದನ್ನಾಗಿ, ಉಪಾಸೀತ=ಉಪಾಸನೆ ಮಾಡತಕ್ಕದ್ದು. ಪ್ರತಿಷ್ಠಾವಾನ್=ಉಪಾಸಕನು ತನ್ನಿಂದ ಕೆಳಗಿನ ಯೋಗ್ಯತೆಯುಳ್ಳವರ ನಿಯಾಮಕನು, ಭವತಿ=ಆಗುತ್ತಾನೆ. ತತ್=ಆಕಾಶದಲ್ಲಿದ್ದ ಪರಬ್ರಹ್ಮವನ್ನು, ಮಹ ಇತಿ='ಮಹ' ಎಂದು, ಉಪಾಸೀತ=ಉಪಾಸನೆ ಮಾಡತಕ್ಕದ್ದು. (ಉಪಾಸಕನು) ಮಹಾನ್=ಜ್ಞಾನಾನಂದಾದಿಗಳಿಂದ ಶ್ರೇಷ್ಠನು, ಭವತಿ=ಆಗುತ್ತಾನೆ. ತತ್=ಆಕಾಶದಲ್ಲಿದ್ದ ಪರಬ್ರಹ್ಮವನ್ನು, ಮನ ಇತಿ=ಮನಸ್ಸು ಎಂತೆಂದು, ಉಪಾಸೀತ=ಉಪಾಸನೆ ಮಾಡತಕ್ಕದು. ಮಾನವಾನ್=ಪೂಜ್ಯನು, ಭವತಿ=ಆಗುತ್ತಾನೆ. ತತ್=ಆಬ್ರಹ್ಮವನ್ನು, ನಮ ಇತಿ=ನಮಃ ಎಂದು, ಉಪಾಸೀತ=ಉಪಾಸನೆ ಮಾಡತಕ್ಕದು. ಅಸ್ಮೈ=ಈತನಿಗೆ, ಕಾಮಾಃ=ಅಭೀಷ್ಟಗಳು, ನಮ್ಯಂತೇ=ಸಿದ್ಧಿಸುತ್ತವೆ. ತತ್=ಆ ಭಗವದ್ರೂಪವನ್ನು, ಬ್ರಹ್ಮ ಇತಿ=ಬ್ರಹ್ಮ ಎಂದು, ಉಪಾಸೀತ=ಉಪಾಸನೆ ಮಾಡತಕ್ಕದು. ಬ್ರಹ್ಮವಾನ್=ಸ್ವಯೋಗ್ಯಗುಣಪೂರ್ಣನು, ಭವತಿ=ಆಗುತ್ತಾನೆ. ತತ್=ಆ ಆಕಾಶದಲ್ಲಿದ್ದ ಪರಬ್ರಹ್ಮವನ್ನು, ಬ್ರಹ್ಮಣಃ=ಚತುರ್ಮುಖನಿಗೆ, ಪರಿಮರ ಇತಿ=ಮಾರಕನೆಂದು, ಉಪಾಸೀತ=ಉಪಾಸನೆ ಮಾಡತಕ್ಕದು. ಏನಂ ಪರಿ=ಇವನ ಸುತ್ತುಮುತ್ತಿನ, ದ್ವಿಷಂತಃ=ದ್ವೇಷಿಸತಕ್ಕ, ಸಪತ್ನಾಃ=ಬಾಹ್ಯ ಶತ್ರುಗಳು, ಮ್ರಿಯಂತೇ=

ನಾಶವಾಗುತ್ತಾರೆ. ಪರಿ=ಇವನ ಸುತ್ತುಮುತ್ತಿನ, ಯೇ=ಯಾವ, ಅಪ್ರಿಯಾಃ=ದುಃಖಾದಿಗಳನ್ನು ಕೊಡತಕ್ಕ, ಭ್ರಾತೃವ್ಯಾಃ=ಕಾಮಕ್ರೋಧಾದಿ ಶತ್ರುಗಳೋ (ಅವುಗಳು ನಾಶಹೊಂದುತ್ತವೆ.) ॥ ೧೩ ॥

ಭಾ ॥ ಸ ಪ್ರತಿಷ್ಠಾ ಸ್ಥಾಪಕತ್ವಾನ್ಮನೋ ಮಾನ್ಯತ್ವತೋ ಹರಿಃ ॥

ಅ ॥ ಆಕಾಶಗತನಾದ ಶ್ರೀ ಪರಮಾತ್ಮನು ಆಯಾ ದೇವತಗಳನ್ನು ಅವರವರಿಗೆ ಯೋಗ್ಯಗಳಾದ ಸ್ಥಾನಗಳಲ್ಲಿ ಸ್ಥಾಪಿಸುವ ಪ್ರಯುಕ್ತ 'ಪ್ರತಿಷ್ಠಾ' ಎನ್ನಿಸಿಕೊಳ್ಳುತ್ತಾನೆ. ಸಮಸ್ತ ದೇವತೆಗಳಿಂದಲೂ ಸ್ತುತ್ಯ ಯಾ ಪೂಜ್ಯನಾದ ಪ್ರಯುಕ್ತ 'ಮನ'ಎನ್ನಿಸಿಕೊಳ್ಳುತ್ತಾನೆ.

ಭಾ ॥ ನಮೋ ನಮ್ಯತ್ವತೋ ನಿತ್ಯಂ ಮಹಶ್ಚಾಪಿ ಮಹತ್ವತಃ ॥

ಅ ॥ (ಸಮಸ್ತ ದೇವತೆಗಳಿಂದಲೂ) ನಿರಂತರದಲ್ಲೂ ಸ್ತುತ್ಯನಾದ ಪ್ರಯುಕ್ತ 'ನಮಃ' ಎನ್ನಿಸಿಕೊಳ್ಳುತ್ತಾನೆ. ವ್ಯಾಪ್ತನಾದುದರಿಂದ 'ಮಹಃ' ಎನ್ನಿಸಿಕೊಳ್ಳುತ್ತಾನೆ.

ಭಾ ॥ ವಿರಿಂಚಮಾರಕಶ್ಚಾಽಸೌ ಬ್ರಹ್ಮ ಪೂರ್ಣಗುಣತ್ವತಃ ॥

ಅ ॥ ಚತುರ್ಮುಖನಿಗೂ ಮಾರಕನಾದುದರಿಂದ (ಶ್ರೀ ಹರಿಯು 'ಪರಿಮರ'ನೆಂತಲೂ) ಸಕಲಗುಣಪೂರ್ಣನಾದುದರಿಂದ 'ಬ್ರಹ್ಮ'ನೆಂತಲೂ (ಅನ್ನಿಸುತ್ತಾನೆ.) ॥ ೧೩ ॥

ಮಂ ॥ ಸ ಯಶ್ಚಾಯಂ ಪುರುಷೇ । ಯಶ್ಚಾಸಾವಾದಿತ್ಯೇ । ಸ ಏಕಃ । ಸ ಯ ಏವಂ ವಿತ್ । ಅಸ್ಮಾಲ್ಲೋಕಾತ್ಪ್ರೇತ್ಯ । ಏತಮನ್ನಮಯಮಾತ್ಮಾನಮುಪಸಂಕ್ರಮ್ಯ । ಏತಂ ಪ್ರಾಣಮಯಮಾತ್ಮಾನಮುಪಸಂಕ್ರಮ್ಯ । ಏತಂ ಮನೋಮಯಮಾತ್ಮಾನಮುಪಸಂಕ್ರಮ್ಯ । ಏತಂ ವಿಜ್ಞಾನಮಯಮಾತ್ಮಾನಮುಪಸಂಕ್ರಮ್ಯ । ಏತಮಾನಂದಮಯಮಾತ್ಮಾನಮುಪಸಂಕ್ರಮ್ಯ । ಇಮಾನ್ ಲೋಕಾನ್ ಕಾಮಾನ್ನೀ ಕಾಮರೂಪ್ಯನುಸಂಚರನ್ । ಏತತ್ಸಾಮ ಗಾಯನ್ನಾಸ್ತೇ । ಹಾ೩ ವುಹಾ೩ ವುಹಾ೩ ವು । ಅಹಮನ್ನಮಹಮನ್ನಮಹಮನ್ನಂ । ಅಹಮನ್ನಾದೋ೩ ಹಮನ್ನಾದೋ೩ ಹಮನ್ನಾದಃ । ಅಹಶ್ಲೋಕಕೃದಹಶ್ಲೋಕಕೃದಹಶ್ಲೋಕಕೃತ್ ॥ ೧೪ ॥

ಅ ॥ 'ಸ ಯಶ್ಚಾಯಂ' ಇತ್ಯಾದಿ ವಾಕ್ಯಗಳಿಗೆ ಹಿಂದೆ ಬ್ರಹ್ಮವಲ್ಲಿಯಲ್ಲಿ ಅರ್ಥವು ಹೇಳಲ್ಪಟ್ಟಿದೆ. ಉಪಸಂಕ್ರಮ್ಯ=ಭಗವಂತನ ಸಮೀಪವನ್ನು ಹೊಂದಿ, ಕಾಮಾನ್ನೀ=ಇಚ್ಛಿಸಲ್ಪಟ್ಟ ನಿಖಿಲ ಭೋಗಗಳುಳ್ಳವನಾಗಿ, ಕಾಮರೂಪೀ=ಇಚ್ಛಾನುಸಾರವಾದ ರೂಪಗಳುಳ್ಳವನಾಗಿ, ಇಮಾನ್ ಲೋಕಾನ್=ಈ ಪ್ರಮಾಣಪ್ರಸಿದ್ಧಗಳಾದ ಭೂರಾದಿ ಲೋಕಗಳನ್ನು, ಅನುಸಂಚರನ್=ಸಂಚರಿಸುವನಾಗಿ (ಅಥವಾ) ಇಮಾನ್=ಪ್ರಮಾಣಪ್ರಸಿದ್ಧರಾದ, ಲೋಕಾನ್=ಪ್ರಕಾಶರೂಪರಾದ ತಮ್ಮಿಂದ ಕೆಳಗಿನ ಮುಕ್ತರನ್ನು, ಅನು=ಅವರವರ ಯೋಗ್ಯತಾನುಸಾರವಾಗಿ, ಸಂಚರನ್=ನಿಯಮಿಸುವನಾಗಿ, ಏತತ್=ಮೇಲೆ ಹೇಳುವ 'ಹಾ೩ವುಹಾ೩ವುಹಾ೩ವು' ಎಂಬೀ,

ಸಾಮ=ಸಾಮಭಾಗವನ್ನು, ಗಾಯನ್=ಗಾನ ಮಾಡುವವನಾಗಿ, ಆಸ್ತೇ=ಇರುತ್ತಾನೆ. ಅಹಂ=ನಾನು, ಅನ್ನಂ=ಮುಕ್ತರಾದ ಸ್ಥಾವರರಿಗೆ ಉಪಜೀವ್ಯನಾಗಿರುತ್ತೇನೆ. ಅಹಂ=ನಾನು, ಅನ್ನಾದಃ=ಯಥೇಷ್ಟ ಭೋಗಗಳನ್ನು ಭೋಗಿಸುವವನು, ಅಹಂ=ನಾನು, ಶ್ಲೋಕಕೃತ್=ಹರಿಯ ಕೀರ್ತಿಯನ್ನು ಪ್ರಕಾಶಗೊಳಿಸುವವನು. ಆದರಾತಿಶಯದಿಂದ ಮೂರಾವರ್ತಿ ಹೇಳಿರುತ್ತಾರೆಂದು ತಿಳಿಯತಕ್ಕದು. ॥ ೧೪ ॥

ಭಾ ॥ ವೇದ್ಯೈನಂ ತತ್ವತೋ ಬ್ರಹ್ಮ ಸ ಏನಂ ಪಂಚರೂಪಿಣಂ ।
ಪ್ರಾಪ್ಯ ಗಾಯತಿ ಮುಕ್ತಃ ಸನ್ನನ್ನನಾಮಾಸ್ಮಿ ಭೋಗ್ಯತಃ ॥
ಯಥೇಷ್ಟಮನ್ನಭೋಕ್ತಾ ಚ ಕೀರ್ತಿಕರ್ತಾ ಹರೇಸ್ತಥಾ ॥ ೧೪ ॥

ಅ ॥ ಯಾವಾತನು ಯಥಾರ್ಥವಾಗಿ ಪರಬ್ರಹ್ಮನನ್ನು ಗುಣಪರಿಪೂರ್ಣನನ್ನಾಗಿ ತಿಳುಕೊಳ್ಳುತ್ತಾನೋ ಆತನು ಅನ್ನಮಯಾದಿ ಎಂಟು ರೂಪಗಳುಳ್ಳ ಪರಮಾತ್ಮನನ್ನು ಮುಕ್ತನಾಗಿ ಹೊಂದಿ ಸಾಮವನ್ನು ಗಾನಮಾಡುತ್ತಿರುತ್ತಾನೆ. ಅಲ್ಲದೆ ಆತನು "ಮುಕ್ತರಾದ ತನ್ನಿಂದ ಕೆಳಗಿನ ಯೋಗ್ಯತೆಯ ಪುರುಷರಿಗೆ ನಿಯಾಮಕನಾದುದರಿಂದ ಅನ್ನನಾಮಕನೂ, ಯಥೇಷ್ಟ ಭೋಗಗಳನ್ನು ಭೋಗಿಸುವವನೂ, ಶಿಷ್ಯರಿಗೆ ಪರಮಾತ್ಮನ ತತ್ವಗಳನ್ನುಪದೇಶಿಸಿ ಆತನ ಕೀರ್ತಿಯನ್ನು ವಿಸ್ತಾರಗೊಳಿಸುವವನೂ ನಾನು ಆಗಿರುತ್ತೇನೆ" ಎಂಬುದನ್ನು ತಿಳಿದುಕೊಂಡು ಸಂತುಷ್ಟನಾಗಿರುತ್ತಾನೆ. ॥ ೧೪ ॥

ಮಂ ॥ ಅಹಮಸ್ಮಿ ಪ್ರಥಮಜಾ ಋತಾ೩ ಸ್ಯ । ಪೂರ್ವಂ ದೇವೇಭ್ಯೋಽಮೃತಸ್ಯ ನಾ೩ ಭಾ ಇ । ಯೋ ಮಾ ದದಾತಿ ಸ ಇ ದೇವ ಮಾಃ ವಾಃ । ಅಹಮನ್ನಮನ್ನಮದಂತಮಾದ್ಮಿ । ಅಹಂ ವಿಶ್ವಂ ಭುವನಮಭ್ಯಭವಾಂ । ಸುವರ್ಣ ಜ್ಯೋತೀಃ । ಯ ಏವಂ ವೇದ । ಇತ್ಯುಪನಿಷತ್ । ಸ ಹ ನಾವವತು । ಸ ಹ ನೌ ಭುನಕ್ತು । ಸ ಹ ವೀರ್ಯಂ ಕರವಾವ ಹೈ । ತೇಜಸ್ವಿನಾವಧೀತಮಸ್ತು ಮಾ ವಿದ್ವಿಷಾವ ಹೈ । ಓಂ. ಶಾಂತಿಃ ಶಾಂತಿಃ ಶಾಂತಿಃ ॥ ಹರಿಃ ಓಂ ॥

## ಇತಿ ತೃತೀಯಾ ವಲ್ಲೀ ಸಂಪೂರ್ಣಾ

## ॥ ತೈತ್ತಿರೀಯೋಪನಿಷತ್ಸಂಪೂರ್ಣಾ ॥

ಅ ॥ ಅಹಂ=ನಾನು, ಋತಸ್ಯ=ಜ್ಞಾನರೂಪನಾದ ವಿಷ್ಣುವಿನ, ದೇವೇಭ್ಯಃ ಪೂರ್ವಂ=ಎಲ್ಲಾ ದೇವತೆಗಳಿಂದಲೂ ಮೊದಲಿನ, ಪ್ರಥಮಜಃ=ಮಗನು, ಅಸ್ಮಿ=ಆಗಿರುತ್ತೇನೆ. ಅಮೃತಸ್ಯ=ಮುಕ್ತವರ್ಗಕ್ಕೆ, ನಾಭಾಇ=ಆಶ್ರಯನು (ಆಗಿರುತ್ತೇನೆ.), ಯಃ=ಯಾವ ಅಧಿಕಾರಿಯು, ಮಾಃ=ವಿಷ್ಣುಮಾಹಾತ್ಮ್ಯ ಪ್ರತಿಪಾದಕಪ್ರಮಾಣಗಳನ್ನು, ದದಾತಿ=ಭಕ್ತರಿಗುಪದೇಶಿಸುತ್ತಾನೋ, ಸಃ=ಆತನು, ಇದೇವ=ಹೀಗೆಯೇ, ಮಾ=ನನ್ನನ್ನು, ಅವಾಃ=ಬರುತ್ತಾನೆ. ಅಹಂ=ನಾನು, ಅನ್ನಂ=ಪರಮಾತ್ಮನ ಆಹಾರಭೂತನು. ಅಹಂ=ನಾನು, ಅನ್ನಂ=ಅನ್ನೋಪಜೀವಿಯಾದ, ಅದಂತಂ=ಜೀವಸಮುದಾಯವನ್ನು, ಅದ್ಮಿ=ಸಂಹರಿಸುತ್ತೇನೆ. ಅಹಂ=ನಾನು, ವಿಶ್ವಂ ಭುವನಂ=ಸರಸ್ವತ್ಯಾದಿ ನಿಖಿಲಜಗತ್ತನ್ನೂ, ಅಭ್ಯಭವಾಂ=ಗುಣಗಳಿಂದ ತಿರಸ್ಕರಿಸು

ತ್ತೇನೆ, ಅಹಂ=ನಾನು, ಸುವರ್ಣಜ್ಯೋತೀಃ=ಪ್ರಕಾಶರೂಪನಾದ ವಿಷ್ಣುವೇ ಪ್ರೇರಕನಾಗಿ ಉಳ್ಳವನು, ಯಃ=ಯಾವಾತನು, ಏವಂ=ಪೂರ್ವೋಕ್ತ ಪ್ರಮೇಯಗಳನ್ನು, ವೇದ=ಚೆನ್ನಾಗಿ ತಿಳಿದುಕೊಳ್ಳುತ್ತಾನೋ, (ಅಂತಹ ಚತುರ್ಮುಖನೇ ಮುಖ್ಯಜ್ಞಾನಿಯು) (ಅಥವಾ) ಯಃ=ಯಾವನಾನೇ, ಏವಂ=ಪೂರ್ವೋಕ್ತ ರೀತಿಯಿಂದ,ವೇದ=ಮುಖ್ಯವಾಗಿ ತಿಳುಕೊಂಡಿದ್ದೇನೋ, ಅಂಥಾ ನಾನು ಸುವರ್ಣಜ್ಯೋತೀಃ=ವಿಷ್ಣುವೇ ಮುಖ್ಯವಾಗಿ ಪ್ರೇರಕನಾಗಿ ಉಳ್ಳವನು.

ಇತಿ=ಈ ರೀತಿಯಾಗಿ, ಉಪನಿಷತ್=ರಹಸ್ಯ ಪ್ರಮೇಯವು (ಉಕ್ತವಾಯಿತು) ॥ ೧೫ ॥

**ಭಾ** ॥ ಋತರೂಪಸ್ಯ ವಿಷ್ಣೋಸ್ತು ಪುತ್ರಃ ಪ್ರಥಮಜೋ ಹ್ಯಹಂ ।
ದೇವೇಭ್ಯಃ ಪೂರ್ವಜಶ್ಚಾಹಂ ಮುಕ್ತಾನಾಮಾಶ್ರಯಃ ಸದಾ ॥

**ಅ** ॥ ಜ್ಞಾನರೂಪನಾದ ವಿಷ್ಣುವಿಗೆ ಎಲ್ಲಾ ದೇವತೆಗಳಿಂದಲೂ ಮೊದಲನೇ ಮಗನು ನಾನಾಗಿರುತ್ತೇನೆ. ಅಲ್ಲದೆ, ಯಾವಾಗಲೂ ಮುಕ್ತರಿಗೆ ಆಶ್ರಯನೂ ಆಗಿರುತ್ತೇನೆ.

**ಭಾ** ॥ ಯೋ ದದಾತಿ ಚ ಮಾಸ್ಸಮ್ಯಗ್ವಿಷ್ಣು ತತ್ವಪ್ರದರ್ಶಕಃ ।
ಸ ಇತ್ಥಮೇವ ಮಾಂ ಯಾತಿ ವಿಷ್ಣೋರನ್ನಮಹಂ ಸದಾ ॥

**ಅ** ॥ ಅದೂ ಅಲ್ಲದೆ, ಯಾವಾತನು ವಿಷ್ಣುವಿನ ಮಹಿಮೆಗಳನ್ನು ಶಿಷ್ಯರಿಗೆ ಉಪದೇಶ ಕೊಡುತ್ತಾನೋ, ಅಂತಹ ವಿಷ್ಣುವಿನ ಮಹಿಮೆಗಳನ್ನು ಪ್ರಕಾಶಗೊಳಿಸತಕ್ಕವನು ನಿಶ್ಚಯವಾಗಿಯೂ ನನ್ನನ್ನೇ ಹೊಂದುತ್ತಾನೆ. ಅಲ್ಲದೆ, ನೃಸಿಂಹರೂಪಿಯಾದ ವಿಷ್ಣುವಿನಿಂದ ಸಂಹಾರ್ಯನಾದ ಪ್ರಯುಕ್ತ ಯಾವಾಗಲೂ ನಾನು ಆತನಿಗೆ ಅನ್ನಸ್ಥಾನೀಯನು.

**ಭಾ** ॥ ಮಮಾನ್ನಂ ಸರ್ವಜೀವಾಸ್ತು ಭೋಗ್ಯಾ ಮಮ ಯತಃ ಸದಾ ॥

**ಅ** ॥ ಸಮಸ್ತಜೀವರೂ ನನಗೆ ಉಪಜೀವ್ಯರು ಅಂದರೆ ಅನ್ನಸ್ಥಾನೀಯರಾದುದರಿಂದ ಯಾವಾಗಲೂ ನನಗೆ ಭೋಗ್ಯರು; ಅಂದರೆ ನನ್ನಿಂದ ಸಂಹಾರ್ಯರು.

**ಭಾ** ॥ ಸರ್ವಮಭ್ಯಭವಂ ಚಾಹಂ ಗುಣೈಃ ಸರ್ವೈಶ್ಚ ನಿತ್ಯಗೈಃ(ಕೈಃ) ॥

**ಅ** ॥ ಅಲ್ಲದೆ ನಾನೇ ನಿತ್ಯಗಳಾದ ಸಮಸ್ತ ಆನಂದಾದಿಗುಣಗಳಿಂದ ಸರಸ್ವತಿಯೇ ಮೊದಲಾದ ಜೀವರ ಸಮುದಾಯವನ್ನು ತಿರಸ್ಕರಿಸುವೆನು ಅಂದರೆ ಅವರಿಗಿಂತ ಉತ್ತಮನಾಗಿರುತ್ತೇನೆ.

**ಭಾ** ॥ ಸುವರ್ಣೋ ಭಗವಾನ್ ವಿಷ್ಣುಜ್ಯೋತಿಃ ಸ ಮಮ ಚೋರಕಃ(ರೇಚಕಃ)॥

**ಅ** ॥ ಪರಮಾನಂದ ರೂಪನಾದುದರಿಂದಲೂ ಪ್ರಕಾಶರೂಪನಾದುದರಿಂದಲೂ ಸುವರ್ಣಜ್ಯೋತಿಶಬ್ದವಾಚ್ಯನಾದ ಪೂಜ್ಯನಾದ ವಿಷ್ಣುವು ನನಗೂ ಪ್ರೇರಕನಾಗಿರುತ್ತಾನೆ.

**ಭಾ** ॥ ಯೋಽಹಮೇವಂ ವಿದಭವಂ ತಸ್ಯ ಮೇ ಮಾಧವಃ ಪತಿಃ ॥

**ಅ** ॥ ಯಾವ ನಾನು ಅನ್ನಮಯಾದಿ ಐದು ರೂಪಗಳುಳ್ಳ ಶ್ರೀಹರಿಯನ್ನು ಈ ವರೆಗೆ ಹೇಳಿದ ರೀತಿಯಿಂದ ಜಗತ್ಕಾರಣನೆಂದೂ ಸರ್ವಪ್ರೇರಕನೆಂದೂ ತಿಳುಕೊಂಡಿದ್ದೇನೋ ಅಂತಹ ನನಗೆ ಲಕ್ಷ್ಮೀಪತಿಯಾದ ಶ್ರೀಹರಿಯೇ ಸ್ವಾಮಿಯಾಗಿರುತ್ತಾನೆ.

**ಭಾ** ॥ ಇತಿ ಬ್ರಹ್ಮಾ ಗಾಯಮಾನಃ ಮುಕ್ತಶ್ಚರತಿ ಸರ್ವದಾ
ಇತಿ ಯಜುಃ ಸಂಹಿತಾಯಾಂ ॥

ಅ ॥ ಹೀಗೆ ಮುಕ್ತನಾದ ಚತುರ್ಮುಖನು ಯಾವಾಗಲೂ ಗಾನಮಾಡುತ್ತಾ ಸಂಚರಿಸುತ್ತಿರುತ್ತಾನೆ. ಎಂದು ಯಜುಃಸಂಹಿತೆಯಲ್ಲಿ ಹೇಳಿಯದೆ.

**ಭಾ** ॥ ಅನ್ನಂ ಭಗವಂತಂ ನ ಪರಿಚಕ್ಷೀತ ನ ನಿರಾಕುರ್ಯಾತ್ ॥

ಅ ॥ ಅನ್ನಶಬ್ದವಾಚ್ಯನಾದ ಹರಿಯನ್ನು ನ ಪರಿಚಕ್ಷೀತ ಅಂದರೆ ನಿರಾಕರಣೆ ಮಾಡಬಾರದು; ಅಂದರೆ ಅಯೋಗ್ಯರಿಗುಪದೇಶಿಸಬಾರದು.

**ಭಾ** ॥ ತದ್ಗುಣಾನ್ ತತ್ಕರ್ಮಾಣಿ ವಾ ಕುತ್ರಾಪಿ ಬಹುಕುರ್ವೀತ
ಬಹುಗುಣತ್ವೇನ ಪ್ರತಿಪಾದಯೇದ್ಭಗವಂತಂ ॥

ಅ ॥ ಆತನ ಗುಣಕರ್ಮಗಳನ್ನು ಎಲ್ಲಾ ಸತ್ಸಭೆಯಲ್ಲಿಯೂ ಬಹುಕರಿಸಬೇಕು ಅಂದರೆ ಆತನನ್ನು ಅನಂತಾನಂತಗುಣಪರಿಪೂರ್ಣನೆಂದು ಪ್ರಶಂಸೆಮಾಡತಕ್ಕದು.

**ಭಾ** ॥ ಯಯಾ ಕಯಾ ಚ ವಿಧಯಾ ಬಹ್ವನ್ನಂ ಪ್ರಾಪ್ನುಯಾತ್ ।
ಅತಿ ಪ್ರಯತ್ನೇನಾಪಿ ವಿಹಿತ ಪ್ರಕಾರೇಣ ಬಹುತರಾಂ
ಭಗವದ್ವಿದ್ಯಾಂ ಪ್ರಾಪ್ನುಯಾತ್ ॥

ಅ ॥ ಯಾವ ಪ್ರಕಾರದಿಂದಲಾದರೂ ಶ್ರೀಹರಿಯನ್ನು ಹೊಂದಬೇಕು. ಅಂದರೆ ಅತಿ ಪ್ರಯಾಸಪಟ್ಟಾದರೂ ಶಾಸ್ತ್ರೋಕ್ತವಿಧಿಯಿಂದಲೇ ಅತಿಶಯವಾಗಿ ಭಗವಜ್ಜ್ಞಾನವನ್ನು ಹೊಂದತಕ್ಕದು.

**ಭಾ** ॥ ಪ್ರಜಾಪತಿಃ ಪ್ರಥಮಜಾ ಋತಸ್ಯ, ಆತ್ಮನಾತ್ಮಾನಮಭಿಸಂಬಭೂವ ।
ಪ್ರಜಾಪತೇ ನ ತ್ವದೇತಾನ್ಯನ್ಯೋ ವಿಶ್ವಾ ಜಾತಾನಿ ಪರಿತಾ ಬಭೂವ ।
ಇತ್ಯಾದಿನಾ ವಿರಿಂಚಸ್ಯೈವೈತಜ್ಜ್ಞಾನಂ ॥
ಅನ್ಯೋ ನ ಪರಿಬಭೂವೇತಿ ನಿಷೇಧಾತ್ ॥

ಅ ॥ ಎಲ್ಲಾ ಪ್ರಜೆಗಳಿಗೆ ಅಧಿಪತಿಯಾದ ಚತುರ್ಮುಖನು ಜ್ಞಾನರೂಪನಾದ ವಿಷ್ಣುವಿನ ಪ್ರಥಮ ಪುತ್ರನು. ಚತುರ್ಮುಖನು ತನ್ನ ಇಚ್ಛೆಯಿಂದ ಅನ್ನಾದಿ ವಿಷಯವನ್ನು ತಿನ್ನುವ ಜೀವಸಮುದಾಯವನ್ನು ತಿನ್ನಲಿಕ್ಕೆ ಉದ್ಯುಕ್ತನಾದನು. ಅಂದರೆ ನಾಶಮಾಡಿದನು. ಪ್ರಜೆಗಳಿಗೆ ಅಧಿಪತಿಯಾದ ಚತುರ್ಮುಖನೇ! ಈ ಪ್ರತ್ಯಕ್ಷ ಸಿದ್ಧಗಳಾದ ಅತೀಂದ್ರಿಯಗಳಾದ ಉತ್ಪತ್ತಿಯನ್ನು ಪಡೆದ ಎಲ್ಲಾ ವಸ್ತುಗಳನ್ನೂ ವಶೀಕರಿಸಿದ್ದಿ. ಅಂದರೆ ನಿಖಿಲ ವಸ್ತುಗಳಿಗೂ ಅಧಿಪತಿಯಾಗಿರುತ್ತಿ. ಜೀವರಲ್ಲಿ ಯಾವುದೂ ನಿನ್ನನ್ನತಿಕ್ರಮಿಸಿಲ್ಲ. ಅಂದರೆ ಜೀವರಲ್ಲಿ ನಿನ್ನಿಂದುತ್ತಮವಾದುದು ಯಾವುದೂ ಇಲ್ಲ. ಈ ಪ್ರಕಾರಗಳಾದ ವಾಕ್ಯಗಳಿಂದ ಹಿಂದೆ ಹೇಳಿದ ಗಾನವು ಮುಕ್ತನಾದ ಚತುರ್ಮುಖಕರ್ತೃಕವೇ. ಚತುರ್ಮುಖನಿಂದ ಇತರರಿಗೆ ಜಗತ್ಸ್ವಾಮಿತ್ವವನ್ನು ನಿಷೇಧಿಸಿರುತ್ತದಷ್ಟೆ.

**ಭಾ** ॥ ವಿದ್ಯುದ್ವನ್ಮಾನುಷಾ ವಿದ್ಯುಃ ಸೂರ್ಯಮಂಡಲ ವತ್ಸುರಾಃ ।
ಪ್ರತಿಬಿಂಬವಚ್ಚ ಗಿರಿಶೋ ಬ್ರಹ್ಮೈನಂ ಪಶ್ಯತಿ ಸ್ಫುಟಂ ॥

ಅ ॥ ಮುಕ್ತರಾದ ಮನುಷ್ಯರು ಶ್ರೀಹರಿಯನ್ನು ಮಿಂಚಿನಂತೆ ನೋಡುವರು ಅಂದರೆ ಯಾವಾಗಲೂ ನೋಡಲಸಮರ್ಥರಾಗಿರುತ್ತಾರೆ. ದೇವತೆಗಳು ಆತನನ್ನು ಸೂರ್ಯಮಂಡಲವನ್ನು ನೋಡಿದಂತೆ ನೋಡುತ್ತಾರೆ. ರುದ್ರನು ಆತನನ್ನು ಪ್ರತಿಬಿಂಬದಂತೆ ನೋಡುತ್ತಾನೆ. ಚತುರ್ಮುಖನೇ ಆತನನ್ನು ಸ್ಪಷ್ಟವಾಗಿ ನೋಡುತ್ತಾನೆ.

ಭಾ || ಬ್ರಹ್ಮಾ ಹಿ ಸ್ಥಿರಚಿದ್ರೂಪೋ ಬಹುಲಾತ್ಮಾ ವಿಶೇಷತಃ |
ಅನ್ಯೇ ಕ್ರಮಾದಬಹುಲಾಃ ತಥಾ ಚಂಚಲಚೇತಸಃ ||

ಅ || ಚತುರ್ಮುಖನೊಬ್ಬನೇ ಸ್ಥಿರವಾದ ಜ್ಞಾನಸ್ವರೂಪನು ಅಂದರೆ ಆತನ ಜ್ಞಾನವು ಯಾವಾಗಲೂ ಚಾಂಚಲ್ಯವನ್ನು ಹೊಂದುವುದಿಲ್ಲ. ಇತರರಿಂದೆಲ್ಲಾ ವಿಶೇಷವಾಗಿ ಹರಿಯಲ್ಲಿಯೇ ನಟ್ಟ ಇಂದ್ರಿಯಗಳುಳ್ಳವನು. ಇವನಿಂದ ಇತರರಾದ ರುದ್ರಾದಿಗಳು ಇವನಷ್ಟು ಭಗವದಾಸಕ್ತರಲ್ಲ. ಅಲ್ಲದೆ ಮನಶ್ಚಾಂಚಲ್ಯವನ್ನೂ ಹೊಂದತಕ್ಕವರಾಗಿರುತ್ತಾರೆ.

ಭಾ || ತಸ್ಮಾತ್ಸಮ್ಯಙ್ನಪಶ್ಯಂತಿ ಹರಿಂ ಬ್ರಹ್ಮಾ ತು ಪಶ್ಯತಿ |
ಇತಿ ಹರಿವಂಶವಚನಾಚ್ಚ ಬ್ರಹ್ಮೈವೇನಂ ಸಮ್ಯಗ್ವೇದ ||

ಅ || ಆದುದರಿಂದ ರುದ್ರಾದಿಗಳು ಚನ್ನಾಗಿ ಹರಿಯನ್ನು ನೋಡಲಾರರು. ಬ್ರಹ್ಮನೊಬ್ಬನೇ ಚನ್ನಾಗಿ ನೋಡುವನು ಎಂಬೀ ರೀತಿಯಾಗಿ ಹರಿವಂಶದಲ್ಲಿ ಹೇಳಿರುತ್ತದಾದ ಕಾರಣ ಭಗವಂತನನ್ನು ಬ್ರಹ್ಮನೊಬ್ಬನೇ ಚೆನ್ನಾಗಿ ತಿಳುಕೊಂಡಿರುತ್ತಾನೆ.

## ಇಲ್ಲಿಗೆ ತೃತೀಯವಲ್ಲಿಯ ಭಾಷ್ಯವು ಸಮಾಪ್ತವಾಯಿತು.



ಈ ರೀತಿಯಾಗಿ ಆಚಾರ್ಯರು ಉಪನಿಷತ್ತನ್ನು ಭಾಷ್ಯರೂಪದಿಂದ ವಿವರಿಸಿ ಈಗ ಆ ಅರ್ಥಸ್ಮರಣಪೂರ್ವಕವಾಗಿ ಗ್ರಂಥಾರಂಭದಲ್ಲಿ ಮಾಡಿದಂತೆ ಅಂತ್ಯದಲ್ಲಿಯೂ ಹರಿವಂದನರೂಪವಾದ ಮಂಗಲವನ್ನು ಮಾಡುತ್ತಾರೆ.

ಭಾ || ಯಸ್ಯೋಚ್ಚೋಽಥ ಸಮೋ ವಾ ಕಶ್ಚಿನ್ನೈವಾಸ್ತ್ಯನಂತಸಚ್ಛಕ್ತೇಃ |
ತಂ ವಂದೇ ಪರಮೇಶಂ ಪ್ರೇಯಾಂಸಂ ಪ್ರೇಯಸಶ್ಚ ಮೇ ವಿಷ್ಣುಂ ||

ಅ || ಅಪರಿಮಿತ ಶಕ್ತಿವಂತನಾದ ಯಾವ ಪರಮಾತ್ಮನಿಗೆ ಆತನಿಂದ ಉತ್ತಮನೂ ಅಥವಾ ಸಮಾನನೂ ಆದವನು ಯಾವನೊಬ್ಬನೂ ಇರುವುದಿಲ್ಲವೋ, ಅಂತಹ ಪರಮೇಶ್ವರನಾದ, ನನಗೆ ಪ್ರಿಯರಾದವರಲ್ಲೆಲ್ಲಾ ಅತಿಪ್ರಿಯನಾದ ಶ್ರೀಮಹಾವಿಷ್ಣುವನ್ನು ನಮಸ್ಕರಿಸುತ್ತೇನೆ.

ಲೋಕದಲ್ಲಿ ಯಾರಲ್ಲಿ ಇಷ್ಟವಿರುತ್ತದೋ ಆತನ ಮಾತಿನಲ್ಲಿ ನಂಬಿಕೆಯಿರುತ್ತದಷ್ಟೆ. ಆದಕಾರಣ, ಆಚಾರ್ಯರೂ ತಾನು ರಚಿಸಿದ ಈ ಭಾಷ್ಯಾರ್ಥದಲ್ಲಿ ಹಾಗೂ ಇತರ ಎಲ್ಲಾ ಗ್ರಂಥಾರ್ಥಗಳಲ್ಲಿಯೂ ಸಜ್ಜನರಿಗೆ ನಂಬಿಗೆಯುಂಟಾಗುವದಕ್ಕೋಸ್ಕರ ತಾನು ಆಪ್ತನೆಂಬ ಬುದ್ಧಿಯನ್ನುಂಟುಮಾಡುವ ನಿತ್ಯವಾದ ವೇದದಲ್ಲಿಯೇ ಪ್ರಸಿದ್ಧವಾದ ತನ್ನ ಸ್ವರೂಪ ಮಹಿಮೆಗಳನ್ನು ಭಕ್ತರಿಗೋಸ್ಕರ ವರ್ಣಿಸಿ ಹೇಳುತ್ತಾರೆ.

ಭಾ || ಯಸ್ಯ ತ್ರೀಣ್ಯುದಿತಾನಿ ವೇದವಚನೇ ರೂಪಾಣಿ ದಿವ್ಯಾನ್ಯಲಂ
ಬಟ್ ತದ್ದರ್ಶತಮಿತ್ಥಮೇವ ನಿಹಿತಂ ದೇವಸ್ಯ ಭರ್ಗೋ
ಮಹತ್ | ವಾಯೋಃ ರಾಮವಚೋನಯಂ ಪ್ರಥಮಕಂ
ಪೃಕ್ಷೋ ದ್ವಿತೀಯಂ ವಪುರ್ಮಧ್ವೋ ಯತ್ತು ತೃತೀಯಕಂ
ಕೃತಮಿದಂ ಭಾಷ್ಯಂ ಹಿ ತೇನ ಪ್ರಭೌ ||

ಅ ॥ ಪೂರ್ಣಬಲಾತ್ಮಕವಾಗಿಯೂ, ಜ್ಞಾನರೂಪವಾಗಿಯೂ, ಜಗತ್ಪೋಷಣಾದಿಕರ್ತೃಗಿಯೂ, ಶ್ರೇಷ್ಠವಾಗಿಯೂ, ಯಾವ ಕ್ರೀಡಾದಿಗುಣವಿಶಿಷ್ಟರಾದ ವಾಯುದೇವರ ಮೂಲರೂಪವಿರುತ್ತದೋ ಅದು ಅವತಾರತ್ರಯಗಳನ್ನು ಮಾಡುವಂತೆ ಹರಿಪ್ರೇರಿತವಾಗಿ ಹಾಗೇ ಅವತರಿಸಿತು. ಅಂತಹ ಮೂರು ದಿವ್ಯರೂಪಗಳು 'ಬಳಿತ್ಥಾ' ಇತ್ಯಾದಿ ವೇದವಚನಗಳಲ್ಲಿ ವರ್ಣಿತವಾಗಿವೆ. ಅವುಗಳಲ್ಲಿ ಶ್ರೀರಾಮಚಂದ್ರದೇವರ ಸಂದೇಶಹಾರಿಯಾದ ಹನುಮದಾಖ್ಯರೂಪವು ಮೊದಲನೆಯದು. ಕೌರವಸೈನ್ಯನಾಶಕವಾದ ಭೀಮಾಖ್ಯರೂಪವು ಎರಡನೇಯದು. . ಆನಂದರೂಪಿಯಾದ ಶ್ರೀಹರಿಪ್ರತಿಪಾದಕ ಶಾಸ್ತ್ರವನ್ನು ರಚಿಸಿದ ಮಧ್ವಾಖ್ಯರೂಪವು ಮೂರನೇದ್ದಾಗಿರುತ್ತದೆ. ಅಂತಹ ಮಧ್ವಾಖ್ಯರೂಪದಿಂದ ಪ್ರಭುವಾದ ಹರಿಪ್ರೀತ್ಯರ್ಥವಾಗಿ ಭಾಷ್ಯವು ಮಾಡಲ್ಪಟ್ಟಿತು.

ಭಾ ॥ ಹನುಶಬ್ದೋ ಜ್ಞಾನವಾಚೀ ಹನುಮಾನ್ಮತಿಶಬ್ದಿತಃ ।
ರಾಮಸ್ಯ ಸ್ವೃತರೂಪಸ್ಯ ವಾಚಸ್ತೇನಾನಯಂತ ಹಿ ॥

ಅ ॥ 'ಹನು' ಎಂಬ ಶಬ್ದವು ಉತ್ಕೃಷ್ಟವಾದ ಜ್ಞಾನವನ್ನು ಹೇಳತಕ್ಕುದಾಗಿದೆ. ಅಂತಹ ಜ್ಞಾನವುಳ್ಳ ಹನುಮಂತನೇ 'ಮತಿ' ಎಂಬ ಶಬ್ದದಿಂದ ಹೇಳಲ್ಪಡುತ್ತಾನೆ. ಆತನಿಂದ ಸತ್ಯರೂಪನಾದ ಶ್ರೀರಾಮನ ಮಾತುಗಳು (ಸೀತೆಗಾಗಿ) ಒಯ್ಯಲ್ಪಟ್ಟವು. (ಅಥವಾ) ಶ್ರೀರಾಮಪ್ರತಿಪಾದಕಗಳಾದ ಮೂಲರಾಮಾಯಣವಾಕ್ಯಗಳು (ಶಿಷ್ಯರಿಗೆ) ಉಪದೇಶಿಸಲ್ಪಡುತ್ತಿವೆ.

ಭಾ ॥ ಭೃತಮೋ ಭೀಮ ಇತ್ಯುಕ್ತೋ ವಾಚೋ ಮಾ ಮಾತರಃ ಸ್ಮೃತಾಃ ।
ಋಗಾದ್ಯಾ ಇತಿಹಾಸಶ್ಚ ಪುರಾಣಂ ಪಂಚರಾತ್ರಕಂ ।
ಪ್ರೋಕ್ತಾಃ ಸಪ್ತಶಿವಾಸ್ತತ್ರ ಶಯೋ ಭೀಮಸ್ತತಃ ಸ್ಮೃತಃ ॥

ಅ ॥ ಯಾವಾತನಲ್ಲಿ ಋಗಾದಿ ಪ್ರಮಾಣಗಳು ಪೂರ್ಣಗಳಾಗಿದ್ದಾವೋ, ಆತನು ಭೀಮನೆಂದು ಹೇಳಲ್ಪಟ್ಟಿದ್ದಾನೆ. 'ಮಾಃ' ಅಂದರೆ ವಚನಗಳು. ಅವುಗಳೇ ತಾಯಿಯಂತೆ ಹಿತರೂಪಗಳಾದುದರಿಂದ ಮಾತೃಗಳಾಗಿ ಹೇಳಲ್ಪಟ್ಟಿವೆ. ಋಗಾದಿ ನಾಲ್ಕು ವೇದಗಳೂ, ಇತಿಹಾಸವೂ, ಪುರಾಣವೂ, ಪಂಚರಾತ್ರಗಳೂ (ಸೇರಿ) ಈ ಏಳು ಸತ್ಪ್ರಮಾಣಭೂತಗಳಾದ ವಚನಗಳಾಗಿ ಹೇಳಲ್ಪಟ್ಟಿವೆ. ಈ ಏಳು ಸದಾಗಮಗಳಲ್ಲಿ ಅತ್ಯಾಸಕ್ತಿಯಿದ್ದವನಾದುದರಿಂದ 'ಭೀಮ'ನೆಂದು ಹೇಳಲ್ಪಟ್ಟಿದ್ದಾನೆ.

ಭಾ ॥ ಮಧ್ವಿತ್ಯಾನಂದ ಉದ್ದಿಷ್ಟೋ ವೇತಿ ತೀರ್ಥಮುದಾಹೃತಂ ।
ಮಧ್ವ ಆನಂದತೀರ್ಥಃ ಸ್ಯಾತ್ ತೃತೀಯಾ ಮಾರುತೀ ತನುಃ ॥

ಅ ॥ 'ಮಧು' ಅಂದರೆ ಆನಂದಕರವೆಂದು ಅರ್ಥವು. 'ವ' ಅಂದರೆ ಜ್ಞಾನಕರವಾದ ಶಾಸ್ತ್ರವೆಂದು ಹೇಳಲ್ಪಟ್ಟಿದೆ. ಹಾಗೂ 'ಮಧ್ವ' ಅಂದರೆ ಆನಂದಕರವಾದ ಶಾಸ್ತ್ರಪ್ರಣೇತರೆಂದು ಹೇಳಿದ ಹಾಗಾಯಿತು. ಅದು ವಾಯುದೇವರ ಮೂರನೇ ಅವತಾರರೂಪವು.

ಭಾ ॥ ಇತಿ ಸೂಕ್ತಗತಂ ರೂಪತ್ರಯಮೇತನ್ಮಹಾತ್ಮನಃ ।
ಯೋ ವೇದ ವೇದವಿತ್ಸ ಸ್ಯಾತ್ ತತ್ವವಿತ್ತತ್ಪ್ರಸಾದತಃ ॥ ಇತಿ ಚ ॥

ಅ ॥ ಇಂತಹ ಮಹಾನುಭಾವರಾದ ವಾಯುದೇವರ 'ಬಳಿತ್ಥಾ' ಎಂಬೀ ಸೂಕ್ತದಲ್ಲಿ ಹೇಳಲ್ಪಟ್ಟ ಈ ಮೂರು ರೂಪಗಳನ್ನು ಯಾವಾತನು ತಿಳುಕೊಳ್ಳುತ್ತಾನೋ, ಆತನೇ ವೇದಜ್ಞನು. ಅಂತಹನು ಹರಿಯ ಅನುಗ್ರಹದಿಂದ ತತ್ವಜ್ಞಾನಿಯಾಗಿ ಮುಕ್ತನಾಗುತ್ತಾನೆ. ಎಂಬೀ ರೀತಿಯಾಗಿಯೂ ಹೇಳಲ್ಪಟ್ಟಿದೆ.

ಭಾ ||(*a*) ಸಾಧಕೋ ರಾಮವಾಕ್ಯಾನಾಂ ತತ್ಸಮೀಪಗತಃ ಸದಾ । ಹನೂ
ಮಾನ್ ಪ್ರಥಮೋ ಜ್ಞೇಯಃ (*b*) ಭೀಮಸ್ತು ಬಹುಭುಕ್ಪಿತೋಃ ||
ಪೃತನಾಕ್ಷಯಕಾರೀ ಚ ದ್ವಿತೀಯಸ್ತು (*c*) ತೃತೀಯಕಃ ।
ಪೂರ್ಣಪ್ರಜ್ಞಸ್ತಥಾನಂದತೀರ್ಥನಾಮಾ ಪ್ರಕೀರ್ತಿತಃ ||

ಅ || (*a*) ಶ್ರೀರಾಮನ ಆಜ್ಞಾಪರಿಪಾಲಕನಾಗಿ ಯಾವಾಗಲೂ ಆತನ ಸಮೀಪ ದಲ್ಲಿಯೇ ಇರತಕ್ಕ ಹನುಮಂತನು ಮೊದಲನೇ ರೂಪನೆಂದು ತಿಳಿಯತಕ್ಕದು.

(*b*) ಬಹು ಅನ್ನವನ್ನು ಭೋಗಿಸುವ ಪ್ರಯುಕ್ತವೂ, ಕುರುಸೈನ್ಯವನ್ನು ನಾಶಮಾಡುವ ಪ್ರಯುಕ್ತವೂ, ಕ್ರಮೇಣ 'ಪಿತುಮಾನ್' 'ಪೃತ್ಕ್ಸುಃ' ಎಂತ ಪ್ರಸಿದ್ಧನಾದ ಭೀಮನು ವಾಯು ದೇವರ ಎರಡನೇ ರೂಪನೆಂದು ತಿಳಿಯತಕ್ಕದು.

(*c*) ಮೂರನೇ ರೂಪವು 'ಪೂರ್ಣಪ್ರಜ್ಞ' ಎಂದೂ, 'ಆನಂದತೀರ್ಥ' ಎಂದೂ ಹೇಳ ಲ್ಪಟ್ಟದೆ.

ಭಾ || ದಶೇತಿ ಸರ್ವಮುದ್ದಿಷ್ಟಂ ಸರ್ವಂ ಪೂರ್ಣಮಿಹೋಚ್ಯತೇ ।
ಪ್ರಜ್ಞಾ ಪ್ರಮತಿರುದ್ದಿಷ್ಟಾ ಪೂರ್ಣಪ್ರಜ್ಞಸ್ತತಃ ಸ್ಮೃತಃ ।

ಅ || 'ದಶ' ಎಂದರೆ ಸರ್ವವೆಂದರ್ಥವು. 'ಸರ್ವ' ಎಂದರೆ ಪೂರ್ಣವೆಂದು ಹೇಳ ಲ್ಪಟ್ಟದೆ. 'ಪ್ರಮತಿ' ಎಂದರೆ ಪ್ರಜ್ಞಾಯೆಂದರ್ಥವು. ಹಾಗೂ 'ದಶಪ್ರಮತಿ' ಎಂದರೆ 'ಪೂರ್ಣ ಪ್ರಜ್ಞ' ಎಂದು ಅರ್ಥವು ಸ್ಮೃತಿಸಿದ್ಧವಾಗಿರುತ್ತದೆ.

ಭಾ || ಆ ಸಮಂತಾತ್ಸತಿತ್ಸೇ ತು ಗೂಢಂ ಕಲಿಯುಗೇ ಹರಿಂ ।
ಅಸತ್ಯಮಪ್ರತಿಷ್ಠಂ ಚ ಜಗದೇತದನೀಶ್ವರಂ ।
ವದದ್ಭಿರ್ಗೂಹಿತಂ ಸಂತಂ ತೃತೀಯೋಽಸುರ್ಮಥಾಯತಿ ||

ಅ || ವಾಯುದೇವರ ಮೂರನೇ ಅವತಾರವು "ಜಗತ್ತು ಅಸತ್ಯವಾದುದು. ಅಂದರೆ ಜ್ಞಾನಬಾಧ್ಯವಾದುದು. ಜೀವನಿಂದ ಬೇರೆಯಾದ ಮತ್ತೊಬ್ಬನೀಶ್ವರನಿಲ್ಲದುದು." ಈ ಪ್ರಕಾರ ವಾಗಿ ಹೇಳುವುದರಿಂದ ಅಡಗಿಸಲ್ಪಟ್ಟರುವ ವಿಶೇಷತಃ ಕಲಿಮಹಾತ್ಮೆಯಿಂದ ಅಪ್ರಕಾಶನಾಗಿ ಯೂ ಇರುವ ಶ್ರೀ ಹರಿಯನ್ನು ಸರ್ವಪ್ರಕಾರದಿಂದಲೂ ಸರ್ವಕ್ಕೂ ಸ್ವಾಮಿಯಾಗಿರುತ್ತಾ ನೆಂಬೀ ವಿಷಯದಲ್ಲಿ ಬ್ರಹ್ಮಸೂತ್ರ ಮತ್ತು ಉಪನಿಷದಾದಿಗಳ ವ್ಯಾಖ್ಯಾನದಿಂದ ಯೋಗ್ಯಾಧಿಕಾರಿ ಗಳಿಗಾಗಿ ಪ್ರಕಾಶಗೊಳಿಸುತ್ತಾರೆ.

ಭಾ || ಯೇನ ವಿಷ್ಣೋಽಸ್ತು ಪರ್ವಾಖ್ಯಾನ್ ಗುಣಾನಾಜ್ಞಾಸಿಷುಃ ಪರಾನ್ ।
ಈಶಾನಾಸಃ ಸೂರಯಶ್ಚ್ಛಿನಿಗೂಢಾನ್ನಿರ್ಗುಣೋಕ್ತಿಭಿಃ ||

ಅ || ಯಾವ ರೂಪದಿಂದ ರುದ್ರಾದಿ ಜ್ಞಾನಿಗಳು 'ಈಶ್ವರನು ನಿರ್ಗುಣನು' ಎಂದೀರೀತಿ ಯಾಗಿ ಹೇಳತಕ್ಕ ದುಃಶಾಸ್ತ್ರಗಳಿಂದ ಮುಚ್ಚಿಹೋದ ಶ್ರೀ ವಿಷ್ಣುವಿನ 'ಪರ್ವ' ಎಂದು ಪ್ರಸಿದ್ಧ ಗಳಾದ ಉತ್ತಮ ಗುಣಗಳನ್ನು ತಿಳಿದುಕೊಂಡರೋ ಅದು ವಾಯುದೇವರ ಮೂರನೇ ಅವ ತಾರವು.

ಭಾ || ತ್ರೇತಾಯಾಂ ದ್ವಾಪರೇ ಚೈವ ಕಲೌ ಚೈತೇ ಕ್ರಮಾ ತ್ತ್ರಯಃ ।
ಏತೇಷಾಂ ಪರಮೋ ವಿಷ್ಣುರ್ನೇತಾ ಸರ್ವೇಶ್ವರೇಶ್ವರಃ ||
ಸ್ವಯಂಭುಬ್ರಹ್ಮ ಸಂಜ್ಞೋಽಸೌ ಪರಸ್ಮೈ ಬ್ರಹ್ಮಣೇ ನಮಃ || ಇತಿ ಚ ||

ಅ ॥ ತ್ರೇತಾ, ದ್ವಾಪರ, ಕಲಿ ಎಂಬೀ ಮೂರು ಯುಗಗಳಲ್ಲಿ ಕ್ರಮೇಣ ಹಿಂದಿನ ಮೂರು ಅವತಾರಗಳಾದವು. ಅವುಗಳಿಗೆ ಸರ್ವೋತ್ತಮನಾದ ವಿಷ್ಣುವೇ ಪ್ರೇರಕನು. ಅಂತಹ ವಿಷ್ಣುವು ನಿಯಾಮಕರಾದ ಬ್ರಹ್ಮಾದಿಗಳಿಗೂ ನಿಯಾಮಕನು. ಅಲ್ಲದೆ, 'ಸ್ವಯಂಭು' 'ಬ್ರಹ್ಮ' ಎಂದು ಮುಂತಾಗಿ ಪ್ರಸಿದ್ಧನಾದವನು. ಅಂತಹ ಪರಬ್ರಹ್ಮನಿಗೆ ನಮಸ್ಕಾರವು ಎಂಬೀರೀತಿಯಾಗಿಯೂ ಹೇಳಲ್ಪಟ್ಟದೆ.

ಭಾ ॥ ಪೂರ್ಣಾಗಣ್ಯಗುಣೋದಾರಧಾಮ್ನೇ ನಿತ್ಯಾಯ ವೇಧಸೇ ।
ಅಮಂದಾನಂದಸಾಂದ್ರಾಯ ಪ್ರೇಯಸೇ ವಿಷ್ಣವೇ ನಮಃ ॥

ಅ ॥ ಪೂರ್ಣಗಳಾಗಿಯೂ ಅಪರಿಮಿತಗಳಾಗಿಯೂ ಇರುವ ಗುಣಗಳೇ ಮೂರ್ತಿಯಾಗಿವುಳ್ಳ ಸರ್ವಜ್ಞನಾಗಿಯೂ ಶಶ್ವದೇಕಪ್ರಕಾರನಾಗಿಯೂ ಅಪರಿಮಿತ ಅನಂದ ಪರಿಪೂರ್ಣನಾಗಿಯೂ ನನಗೆ ವಿಶೇಷವಾಗಿ ಪ್ರಿಯನಾಗಿಯೂ ಇರುವ ಶ್ರೀ ವಿಷ್ಣುವಿಗೆ ನಮಸ್ಕಾರವು.

**ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತಂ**
**ಶ್ರೀಮತ್ತೈತ್ತಿರೀಯೋಪನಿಷದ್ಭಾಷ್ಯಂ**
**ಸಂಪೂರ್ಣಂ.**

**ಈ ರೀತಿಯಾಗಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ರಚಿತವಾದ ತೈತ್ತಿರೀಯೋಪನಿಷತ್ತಿನ ಭಾಷ್ಯವು ಸಂಪೂರ್ಣವು**

**ಸಭಾಷ್ಯತೈತ್ತಿರೀಯೇಯಂ ವಿವೃತಾ ದೇಶಭಾಷಯಾ ।**
**ತಂತ್ರಿನಾರಾಯಣೇನೈವಂ ಪ್ರೀತ್ಯರ್ಥಂ ಕೃಷ್ಣಮಧ್ವಯೋಃ ॥**



# ಸಭಾಷ್ಯ ತಲವಕಾರೋಪನಿಷತ್ತು.

ನತ್ವಾ ರಮಾಪತಿಂ ಸರ್ವದೇವಾನಾಮಿಷ್ಟದಂ ಹರಿಂ ।
ಭಾಷ್ಯಂ ತಲವಕಾರಸ್ಯ ವ್ಯಾಖ್ಯಾಸ್ಯೇಽಹಂ ಯಥಾಮತಿ ॥

**ಶ್ರೀಮದ್ಧನುಮದ್ಭೀಮಮಧ್ವಾಂತರ್ಗತ ರಾಮಕೃಷ್ಣವೇದವ್ಯಾಸಾತ್ಮಕ**
**ಲಕ್ಷ್ಮೀಹಯಗ್ರೀವಾಯ ನಮಃ ॥ ಹರಿಃ ಓಂ ॥**

**ಭಾ** ॥ ಅನಂತಗುಣಪೂರ್ಣತ್ವಾದಗಮ್ಯಾಯ ಸುರೈರಪಿ ।
ಸರ್ವೇಷ್ಟದಾತ್ರೇ ದೇವಾನಾಂ ನಮೋ ನಾರಾಯಣಾಯ ತೇ ॥

ಅವ ॥ ಶ್ರೀಮದಾಚಾರ್ಯರು ಈ ಗ್ರಂಥದಲ್ಲಿಯೂ ಮಂಗಲವನ್ನು ಮಾಡುತ್ತಾರೆ.

ಅ ॥ ಅಪರಿಮಿತಗುಣಪರಿಪೂರ್ಣನಾದುದರಿಂದ ದೇವತೆಗಳಿಂದಲೂ ಕೂಡ ತಿಳಕೊಳ್ಳಲಿಕ್ಕೆ ಅಶಕ್ಯನಾಗಿಯೂ, ದೇವತೆಗಳಿಗೆ ಅಖಿಲೇಷ್ಟಗಳನ್ನು ಕೊಡತಕ್ಕವನಾಗಿಯೂ, ಇರುವ ನಾರಾಯಣನಾದ ನಿನಗೋಸ್ಕರ ನಮಸ್ಕಾರವು.

**ಮಂ ॥ ಕೇನೇಷಿತಂ ಪತತಿ ಪ್ರೇಷಿತಂ ಮನಃ ಕೇನ ಪ್ರಾಣಃ ಪ್ರಥಮಃ ಪ್ರೈತಿ ಯುಕ್ತಃ । ಕೇನೇಷಿತಾಂ ವಾಚಮಿಮಾಂ ವದಂತಿ ಚಕ್ಷುಃ ಶ್ರೋತ್ರಂ ಕ ಉ ದೇವೋ ಯುನಕ್ತಿ ॥ ೧ ॥**

ಅ ॥ ಉ=ಎಲೋ ಬ್ರಹ್ಮನೇ! ಇಷಿತಂ=ಇಷ್ಟವಾದ ಯೋಗ್ಯಾಯೋಗ್ಯ ವಸ್ತುವನ್ನು ಕುರಿತು, ಮನಃ=ಮನಸ್ಸು, ಕೇನ=ಯಾವ ದೇವತೆಯಿಂದ, ಪ್ರೇಷಿತಂ = ಪ್ರೇರಿತವಾಗಿ, ಪತತಿ=ಬೀಳುತ್ತದೆ, ಪ್ರಥಮಃ=ಸರ್ವ ಜೀವೋತ್ತಮರಾದ, ಪ್ರಾಣಃ=ಮುಖ್ಯ ವಾಯು ದೇವರೂ ಕೂಡಾ, ಕೇನ=ಯಾವ ದೇವತೆಯಿಂದ, ಯುಕ್ತಃ=ಪ್ರೇರಿತರಾಗಿ, ಪ್ರೈತಿ=ಆತ್ಮ ವ್ಯಾಪಾರವನ್ನು ಮಾಡುತ್ತಾರೆ, ಇಮಾಂ=ಈದಾವ, ವಾಚಂ=ಮಾತನ್ನು, ಕೇನ=ಯಾರಿಂದ, ಇಷಿತಾಂ=ಪ್ರೇರಿತವಾದ್ದನ್ನಾಗಿ, ವದಂತಿ=(ಜನರು) ಹೇಳುತ್ತಾರೆ. ಕೋ ದೇವಃ=ಯಾವ ದೇವತೆಯು, ಚಕ್ಷುಃ ಶ್ರೋತ್ರಂ=ಕಣ್ಣು ಕಿವಿಗಳನ್ನು, ಯುನಕ್ತಿ=ಪ್ರೇರಿಸುತ್ತದೆ.

**ಭಾ** ॥ ವೈಜಯಂತೇ ಸಮಾಸೀನಮೇಕಾಂತೇ ಚತುರಾನನಂ ।
ವಿಷ್ಣೋರ್ವಿವಿದಿಷುಸ್ತತ್ತ್ವಂ ಪರ್ಯಪೃಚ್ಛತ್ಸದಾಶಿವಃ ॥

ಅ ॥ ವೈಜಯಂತ (ಅಂತರಿಕ್ಷ ಯಾ ಮೇರುಪರ್ವತ ಇವುಗಳಲ್ಲಿದ್ದ ಬ್ರಹ್ಮದೇವರ ಮಂದಿರ) ದಲ್ಲಿ ಕುಳಿತಿದ್ದ ಚತುರ್ಮುಖಬ್ರಹ್ಮನ ಸಮೀಪಕ್ಕೆ ಹೋಗಿ ಸದಾಶಿವನೆಂಬ ರುದ್ರನು ಹರಿತತ್ವವನ್ನು ತಿಳಿಯಲಿಚ್ಛಿಸಿದವನಾಗಿ ಏಕಾಂತದಲ್ಲಿ ಪ್ರಶ್ನೆಮಾಡುವವನಾದನು.

ವಿ ॥ ಅ ॥ ಉಮಾಪತಿಯು ಸಾಮಾನ್ಯವಾಗಿ ಹರಿತತ್ವವನ್ನು ತಿಳಿದುಕೊಂಡಿದ್ದರೂ ತಾನು ವಿಶೇಷವಾಗಿ ತಿಳುಕೊಳ್ಳಬೇಕೆಂದೂ, ಹಾಗೂ ತಿಳಿದ ವಿಷಯವು ದೃಢವಾಗುವುದಕ್ಕೂ, ಲೋಕದ ಜನರಿಗೆ ಅನುಗ್ರಹಮಾಡುವದಕ್ಕಾಗಿಯೂ, ಎಲ್ಲಾ ಇಂದ್ರಿಯಗಳಿಗೂ ಪ್ರೇರಕನಾಗಿರತಕ್ಕ ಚತುರ್ಮುಖನ ಕುರಿತು ಕೇಳುವವನಾದನು.

ಹೀಗೆ ಚತುರ್ಮುಖ, ರುದ್ರರ ಸಂವಾದರೂಪವಾಗಿರುವ ಪ್ರಯುಕ್ತ ಅವರೇ ಈ ಉಪನಿಷತ್ತಿಗೆ ಋಷಿಗಳೆಂದೂ, ವಿಷ್ಣುವೇ ದೇವತೆಯೆಂದೂ ತಿಳಿಯತಕ್ಕದ್ದು.

**ಭಾ ||** ಯದಿದಂ ಪುರುಷಾವಶ್ಯಂ ತತ್ರ ತತ್ರ ಪತೇನ್ಮನಃ ।
ಕೇನ ತತ್ಪ್ರೇರಿತಂ ಯಾತಿ ಪ್ರಾಣಃ ಸರ್ವೋತ್ತಮಸ್ತಥಾ ॥

ಅ || ಯಾವ ಈ ಮನಸ್ಸು ಪುರುಷನ ವಶದಲ್ಲಿರದೆ ಅಲ್ಲಲ್ಲಿ (ಇಷ್ಟಾನಿಷ್ಟ ಪದಾರ್ಥಗಳಲ್ಲಿ ಬೀಳುತ್ತದೆಯೋ) ಅದು ಯಾರಿಂದ ಪ್ರೇರಿತವಾಗಿ (ಹೇಗೆ) ಆಯಾ ವಿಷಯಗಳಲ್ಲಿ ಸೇರುತ್ತದೆ? ಹಾಗೂ ಸರ್ವೋತ್ತಮನಾದ ಮುಖ್ಯಪ್ರಾಣನು ಯಾರಿಂದ ಪ್ರೇರಿತನಾಗಿ ತನ್ನ ಕಾರ್ಯವನ್ನು ಮಾಡುವನು? ಅಂದರೆ ಕುಠಾರದಂತೆ ಇಂದ್ರಿಯಗಳು ಕರಣಗಳಾದ ಪ್ರಯುಕ್ತ ಅವುಗಳಿಗೊಬ್ಬ ಪ್ರೇರಕನು ಅವಶ್ಯವಾಗಿರಬೇಕು. ನಿಗ್ರಹಿಸಿಕೊಂಡಿದ್ದರೂ ವಿಷಯಗಳಲ್ಲೇ ಬೀಳುವ ಪ್ರಯುಕ್ತ ಜೀವನು ಪ್ರೇರಕನೆಂದೆನಲಾಗುವದಿಲ್ಲ. ಆದುದರಿಂದಾರೋ ಬಲಿಷ್ಠವಾದ ದೇವತೆಯು ಪ್ರೇರಕವಾಗಿರಬೇಕು. ಆತನು ಯಾರು? ಎಂದು ಪ್ರಶ್ನೆಯ ತಾತ್ಪರ್ಯವು ಮುಖ್ಯಪ್ರಾಣದೇವರೇ ಅಂತಹ ಪ್ರೇರಕರೆಂದರೆ, ಅಂತಹ ಸರ್ವ ಜೀವೋತ್ತಮರಾದ ಮುಖ್ಯಪ್ರಾಣದೇವರು ಯಾರಿಂದ ಪ್ರೇರಿತರಾಗಿ ಸ್ವಕೀಯ ವ್ಯಾಪಾರವನ್ನು ಮಾಡುತ್ತಾರೆ. ಅವರು ಪರತಂತ್ರರಾದುದರಿಂದ ಮುಖ್ಯವಾಗಿ ಮನಃಪ್ರೇರಕರಲ್ಲ.

**ಭಾ ||** ಚಕ್ಷುಃ ಶ್ರೋತ್ರಂ ತಥಾ ವಾಚಂ ಕೋ ದೇವೋ ವಿನಿಯೋಜಯೇತ್ ||೧||

ಅ || ಕಣ್ಣು ಕಿವಿ ಹಾಗೂ ಮಾತುಗಳನ್ನೂ ಯಾವ ದೇವತೆಯು ಸ್ವತಂತ್ರವಾಗಿ ಪ್ರೇರಿಸುತ್ತದೆ ॥ ೧ ॥

**ಮಂ ॥ ಶ್ರೋತ್ರಸ್ಯ ಶ್ರೋತ್ರಂ ಮನಸೋ ಮನೋ ಯದ್ವಾಚೋ ಹ ವಾಚಂ ಸ ಉ ಪ್ರಾಣಸ್ಯ ಪ್ರಾಣಃ ಚಕ್ಷುಷಶ್ಚಕ್ಷುರತಿಮುಚ್ಯ ಧೀರಾಃ ಪ್ರೇತ್ಯಾಸ್ಮಾಲ್ಲೋಕಾದಮೃತಾ ಭವಂತಿ || ೨ ||**

ಅ || ಶ್ರೋತ್ರಸ್ಯ=ಕಿವಿಗೆ, ಶ್ರೋತ್ರಂ=ಶ್ರವಣಶಕ್ತಿಯನ್ನು (ಕೇಳುವ ಶಕ್ತಿಯನ್ನು) ಕೊಡುವ, ಮನಸಃ=ಮನಸ್ಸಿಗೆ, ಮನಃ=ಮನನಶಕ್ತಿಯನ್ನು ಕೊಡುವ, ವಾಚಃ=ವಚನೇಂದ್ರಿಯಕ್ಕೆ, ವಾಚಂ=ವಾಗುಚ್ಚಾರಣ ಶಕ್ತಿಯನ್ನು ಕೊಡುವ, ಪ್ರಾಣಸ್ಯ=ಮುಖ್ಯಪ್ರಾಣನಿಗೂ, ಪ್ರಾಣಃ=ಪ್ರೇರಕವಾದ, ಚಕ್ಷುಷಃ=ಕಣ್ಣಿಗೆ, ಚಕ್ಷುಃ=ದರ್ಶನಶಕ್ತಿಯನ್ನು ಕೊಡುವ, ಯತ್=ಯಾವ ದೇವತೆಯು (ನಿನ್ನಿಂದ ಕೇಳಲ್ಪಟ್ಟಿತೋ) ಸಃ=ಆ ದೇವತೆಯು, ಸ ಉ=ಪ್ರಸಿದ್ಧನಾದ ವಿಷ್ಣುವೇ ಸರಿ. ಧೀರಾಃ=ವಿಷ್ಣುವಿನಶ್ರೋತ್ರಾದಿ ಪ್ರೇರಕತ್ವಾದಿ ಮಾಹಾತ್ಮ್ಯವನ್ನು ತಿಳಿದವರು, ಅಸ್ಮಾಲ್ಲೋಕಾತ್=ಈ ಭೌತಿಕ ಶರೀರದಿಂದ, ಪ್ರೇತ್ಯ=ಮೃತರಾಗಿ, ಅತಿಮುಚ್ಯ=ಲಿಂಗಬಂಧವನ್ನು ಬಿಟ್ಟು, ಅಮೃತಾಃ=ಮುಕ್ತರು, ಭವಂತಿ=ಆಗುತ್ತಾರೆ.

**ಮಂ ॥ ನ ತತ್ರ ಚಕ್ಷುರ್ಗಚ್ಛತಿ ನ ವಾಗ್ಗಚ್ಛತಿ ನೋ ಮನೋ ನ ವಿದ್ಮ ನ ವಿಜಾನೀಮೋ ಯಥೈತದನುಶಿಷ್ಯಾತ್ || ೩ ||**

ಅ || ತತ್ರ=ಆ ಹರಿಯ ಮಾಹಾತ್ಮ್ಯೆಯಲ್ಲಿ, ಚಕ್ಷುಃ=ದರ್ಶನೇಂದ್ರಿಯವು, ನ ಗಚ್ಛತಿ=ಹೋಗುವುದಿಲ್ಲ. ವಾಕ್=ವಾಗಿಂದ್ರಿಯವು, ನ ಗಚ್ಛತಿ=ಹೋಗುವುದಿಲ್ಲ. ಮನಃ=ಮನಸ್ಸು, ನೋ ಗಚ್ಛತಿ=ಹೋಗುವುದಿಲ್ಲ. (ಚಕ್ಷುರಾದ್ಯಭಿಮಾನಿ ದೇವತೆಗಳೂ ಹರಿಯ ಮಾಹಾತ್ಮ್ಯವನ್ನು

ತಿಳಿಯುವುದಿಲ್ಲ. ಆದುದರಿಂದ) ಯಥಾ=ಯಾವಪ್ರಕಾರದಿಂದ, ಏತತ್=ಪ್ರಾಣಾದಿ ಜಗತ್ತನ್ನು, ಅನುಶಿಷ್ಯಾತ್=ಪ್ರೇರಿಸುತ್ತದೋ. (ಆ ಪ್ರಕಾರವನ್ನು) ನ ವಿದ್ಮ=ಸಾಮಾನ್ಯಾಕಾರವಾಗಿಯೂ ತಿಳಿಯುವುದಿಲ್ಲ. ನ ವಿಜಾನೀಮಃ=ವಿಶೇಷಾಕಾರವಾಗಿ ಸುತರಾಂ ತಿಳಿಯುವುದಿಲ್ಲ.

**ಮಂ ॥ ಅನ್ಯದೇವ ತದ್ವಿದಿತಾದಥೋ ಅವಿದಿತಾದಧಿ ॥ ಇತಿ ಶುಶ್ರುಮ ಪೂರ್ವೇಷಾಂ ಯೇ ನಸ್ತದ್ವ್ಯಾಚಚಕ್ಷಿರೇ ॥ ೪ ॥**

ಅ ॥ ತತ್=ಅದು, (ಚಕ್ಷುರಾದೀಂದ್ರಿಯಗಳಿಂದ ತಿಳಿಯಲಸಾಧ್ಯವಾದ ವಸ್ತುವು) ವಿದಿತಾತ್=ವಿದಿತವಾದ ಜಗತ್ತಿನಿಂದಲೂ, ಅಥೋ ಅವಿದಿತಾತ್=ಮತ್ತು ಅವಿದಿತವಾದ ಮೂಲಪ್ರಕೃತಿ ತದಭಿಮಾನಿ ಲಕ್ಷ್ಮೀದೇವಿಯಿಂದಲೂ, ಅನ್ಯದೇವ=ವಿಲಕ್ಷಣವೇ ಸರಿ. ಅಧಿ=ಸರ್ವೋತ್ತಮವಾದುದು, ಇತಿ=ಹೀಗೆ, ನಃ=ನಮಗೆ, ಯೇ=ಯಾರು, ತತ್=ಆ ಬ್ರಹ್ಮವನ್ನು, ವ್ಯಾಚಚಕ್ಷಿರೆ=ವ್ಯಾಖ್ಯಾನ ಮಾಡಿರುವರೋ; ಪೂರ್ವೇಷಾಂ=ಅಂಥಾ ಪ್ರಾಚೀನರಾದವರಿಂದ, (ವ್ಯಾಸಾದಿಗಳ ಸಕಾಶದಿಂದ) ಶುಶ್ರುಮ=ಕೇಳಿದ್ದೇವು.

**ಮಂ ॥ ಯದ್ವಾಚಾಽನಭ್ಯುದಿತಂ ಯೇನ ವಾಗಭ್ಯುದ್ಯತೇ ॥ ತದೇವ ಬ್ರಹ್ಮ ತ್ವಂ ವಿದ್ಧಿ ನೇದಂ ಯದಿದಮುಪಾಸತೇ ॥ ಯನ್ಮನಸಾ ನ ಮನುತೇ ಯೇನಾಹುರ್ಮನೋ ಮತಂ ॥ ತದೇವ ಬ್ರಹ್ಮ ತ್ವಂ ವಿದ್ಧಿ ನೇದಂ ಯದಿದಮುಪಾಸತೇ ॥ ಯಚ್ಚಕ್ಷುಷಾ ನ ಪಶ್ಯತಿ ಯೇನ ಚಕ್ಷೂಂಷಿ ಪಶ್ಯಂತಿ ॥ ತದೇವ ಬ್ರಹ್ಮ ತ್ವಂ ವಿದ್ಧಿ ನೇದಂ ಯದಿದಮುಪಾಸತೇ ॥ ಯಚ್ಛ್ರೋತ್ರೇಣ ನ ಶೃಣೋತಿ ಯೇನ ಶ್ರೋತ್ರಮಿದಂ ಶ್ರುತಂ ॥ ತದೇವ ಬ್ರಹ್ಮ ತ್ವಂ ವಿದ್ಧಿ ನೇದಂ ಯದಿದಮುಪಾಸತೇ ॥ ಯತ್ಪ್ರಾಣೇನ ನ ಪ್ರಾಣಿತಿ ಯೇನ ಪ್ರಾಣಃ ಪ್ರಣೀಯತೇ ॥ ತದೇವ ಬ್ರಹ್ಮ ತ್ವಂ ವಿದ್ಧಿ ನೇದಂ ಯದಿದಮುಪಾಸತೇ ॥ ೫ ॥**

ಪ್ರಥಮಃ ಖಂಡಃ ॥ ೧ ॥

ಅ ॥ ಯತ್=ಯಾವ (ಬ್ರಹ್ಮವು), ವಾಚಾ=ವಾಗಿಂದ್ರಿಯದಿಂದ, ಅನಭ್ಯುದಿತಂ=ಸಂಪೂರ್ಣವಾಗಿ ಹೇಳಲ್ಪಡುವದಿಲ್ಲವೋ, ಯೇನ=ಯಾವಬ್ರಹ್ಮನಿಂದ (ಪ್ರೇರಿತವಾಗಿ), ವಾಕ್=ವಚನವು, ಅಭ್ಯುದ್ಯತೇ=(ಪ್ರಾಣಿಗಳಿಂದ) ಉಚ್ಚರಿಸಲ್ಪಡುತ್ತದೋ; ತದೇವ=ಅದನ್ನೇ, ತ್ವಂ=ನೀನು, ಬ್ರಹ್ಮ=ಪರಬ್ರಹ್ಮನನ್ನಾಗಿ, ವಿದ್ಧಿ=ತಿಳಿ. ಇದಂ=ಈ ಜೀವಸ್ವರೂಪವು, ನ=ಬ್ರಹ್ಮವಲ್ಲ. ತೇ=ನಿನ್ನ, ಉಪ=ಸಮೀಪದಲ್ಲಿ, ಯತ್=ಯಾವುದು, ಆಸ=ನಿಯಾಮಕವಾಗಿದೆಯೋ; ಇದಮೇವ=ಇದೇ ಪರಬ್ರಹ್ಮವು. (ಈ ಉತ್ತರಾರ್ಧಕ್ಕೆ ಮೇಲೆಯೂ ಇದೇ ರೀತಿಯಾಗಿ ಅನ್ವಯ ಅರ್ಥವನ್ನು ತಿಳಿದುಕೊಳ್ಳತಕ್ಕದ್ದು.) ಯತ್=ಯಾವ ಬ್ರಹ್ಮವನ್ನು, ಮನಸಾ=ಚಿತ್ತದಿಂದ, ನ ಮನುತೇ=ಸಂಪೂರ್ಣವಾಗಿ ತಿಳಿಯುವದಿಲ್ಲವೋ; ಯೇನ=ಯಾವಬ್ರಹ್ಮನಿಂದ, ಮನಃ=ಚಿತ್ತವನ್ನು, ಮತಂ=ತಿಳಿಯಲ್ಪಟ್ಟದ್ದನ್ನಾಗಿ, ಆಹುಃ=ಹೇಳುತ್ತಾರೋ.

ಯತ್=ಯಾವಬ್ರಹ್ಮವನ್ನು, ಚಕ್ಷುಷಾ=ಕಣ್ಣಿನಿಂದ, ನ ಪಶ್ಯತಿ=ನೋಡುವದಿಲ್ಲವೋ; ಯೇನ=ಯಾವಪರಬ್ರಹ್ಮನಿಂದ, ಚಕ್ಷೂಂಷಿ=ಚಕ್ಷುರಿಂದ್ರಿಯಗಳು, ಪಶ್ಯಂತಿ=ನೋಡುತ್ತವೋ.

ಯತ್=ಯಾವಬ್ರಹ್ಮವನ್ನು, ಶ್ರೋತ್ರೇಣ=ಕಿವಿಯಿಂದ,ನ ಶೃಣೋತಿ=ಕೇಳುವದಿಲ್ಲವೋ; ಯೇನ=ಯಾರಿಂದ, ಇದಂ ಶ್ರೋತಂ=ಈ ಕಿವಿಯು, ಶ್ರುತಂ=ಕೇಳುತ್ತದೋ.

ಯತ್=ಯಾವ ಬ್ರಹ್ಮವು, ಪ್ರಾಣೇನ=ಮುಖ್ಯಪ್ರಾಣನಿಂದ, ನ ಪ್ರಾಣಿತಿ=ಶರೀರವ್ಯಾಪಾರಾದಿಗಳನ್ನು ಮಾಡುವದಿಲ್ಲವೋ; ಯೇನ=ಯಾವ ಬ್ರಹ್ಮನಿಂದ, ಪ್ರಾಣಃ=ಮುಖ್ಯಪ್ರಾಣನೂ, ಪ್ರಣೀಯತೇ=(ಪ್ರೇರಿತನಾಗಿ)ನಿಖಿಲವ್ಯಾಪಾರವನ್ನೂ ಮಾಡುತ್ತಾನೋ; (ಅಂತಾದ್ದನ್ನೇ ಬ್ರಹ್ಮನನ್ನಾಗಿ ತಿಳಿ).

**ಭಾ** ॥ ಇತಿ ಪೃಷ್ಟಸ್ತದಾ ಬ್ರಹ್ಮಾ ಪ್ರಾಹ ದೇವಮುಮಾಪತಿಂ ॥
ಧ್ಯಾತ್ವಾ ನಾರಾಯಣಂ ದೇವಂ ಸರ್ವಾಧಾರಮನೂಪಮಮ್ ॥
ಸರ್ವಜ್ಞಂ ಸರ್ವಶಕ್ತಿಂ ಚ ಸರ್ವದೋಷವಿವರ್ಜಿತಂ ॥

**ಅ** ॥ ಪೂರ್ವೋಕ್ತರೀತಿಯಿಂದ ಕೇಳಲ್ಪಟ್ಟ ಚತುರ್ಮುಖನು ಆಗ ನಿಖಿಲವಸ್ತುಗಳಿಗೆ ಆಶ್ರಯನಾಗಿಯೂ ಅಸದೃಶನಾಗಿಯೂ ಸಮಸ್ತವನ್ನು ತಿಳಿದವನಾಗಿಯೂ ಸರ್ವಶಕ್ತನಾಗಿಯೂ ಎಲ್ಲಾ ದೋಷಗಳಿಂದ ರಹಿತನಾಗಿಯೂ ಕ್ರೀಡಾದಿಗುಣ ವಿಶಿಷ್ಟನಾಗಿಯೂ ಇರುವ ಶ್ರೀ ನಾರಾಯಣನನ್ನು ಧ್ಯಾನಮಾಡುತ್ತಾ ಪಾರ್ವತೀಪತಿಯನ್ನು ಕುರಿತು ಹೀಗೆಂದನು.

**ಭಾ** ॥ ಯಃ ಪ್ರಾಣಸ್ಯ ಪ್ರಣೇತಾ ಚ ಚಕ್ಷುರಾದೇಶ್ಚ ಸರ್ವಶಃ ॥
ಅಗಮ್ಯಃ ಸರ್ವದೇವೈಶ್ಚ ಪರಿಪೂರ್ಣತ್ವಹೇತುತ
ಪ್ರಾಣಾದೀನಾಂ ಪ್ರಣೇತಾ ಚ ಸರ್ವವೇತ್ತಾ ಚ ಸರ್ವಶಃ ॥
ಸರ್ವೋತ್ತಮಶ್ಚ ಸರ್ವತ್ರ ಸ ವಿಷ್ಣುರಿತಿ ಧಾರ್ಯತಾಂ ॥

ಅ ॥ (೧. ವ.) ಯಾವಾತನು ಪ್ರಾಣನಿಗೂ ಚಕ್ಷುರಾದಿ ಎಲ್ಲಾ ಇಂದ್ರಿಯಗಳಿಗೂ ಪ್ರೇರಕನೋ; (೨. ವ.) ಯಾವನು ಗುಣಪರಿಪೂರ್ಣನಾದುದರಿಂದ ಸಮಸ್ತ ದೇವತೆಗಳಿಂದಲೂ ಅಗಮ್ಯನಾಗಿರುತ್ತಾನೋ (೩. ವ.) ಅಂತಹನು ಪ್ರಾಣಾದಿ ಎಲ್ಲರಿಗೂ ಪ್ರೇರಕನಾಗಿಯೂ ಸರ್ವಾಪೇಕ್ಷಯಾ ಸರ್ವಜ್ಞನಾಗಿಯೂ (೪. ವ) ಸರ್ವತ್ರ ಸರ್ವೋತ್ತಮನಾಗಿಯೂ ಇರುವ (೨.ವ.) ವಿಷ್ಣುವೇ ಎಂದು ನಿಶ್ಚಯಿಸಲ್ಪಡಲಿ.

ಒಂದನೇ ಖಂಡಾರ್ಥವು ಸಮಾಪ್ತವಾಯಿತು.

**ಮಂ ॥ ಯದಿ ಮನ್ಯಸೇ ಸುವೇದೇತಿ ದಹರಮೇವಾಪಿ ನೂನಂ ತ್ವಂ ವೇತ್ಥ ಬ್ರಹ್ಮಣೋ ರೂಪಂ । ಯದಸ್ಯ ತ್ವಂ ಯದಸ್ಯ ದೇವೇಷ್ವಥ ನು ಮೀಮಾಂಸ್ಯಮೇವ ತೇ ॥ ೧ ॥**

ಅ ॥ (ಎಲೋ ರುದ್ರನೇ) ಸುವೇದೇತಿ=(ನಾನು ಅಂದರೆ ರುದ್ರನು ಪರಬ್ರಹ್ಮನನ್ನು,) ಚೆನ್ನಾಗಿ ತಿಳಿದ್ದೇನೆಂದು, ಮನ್ಯಸೇ ಯದಿ=ತಿಳಿದುಕೊಂಡಪಕ್ಷದಲ್ಲಿ, ತ್ವಮಪಿ=ನೀನೂ ಕೂಡ ನೂನಂ=ನಿಶ್ಚಯವಾಗಿ, ದಹರಮೇವ=ಅಲ್ಪವಾಗಿಯೇ, ಬ್ರಹ್ಮಣಃ=ಪರಬ್ರಹ್ಮನ, ರೂಪಂ=ಸ್ವರೂಪವನ್ನು, ವೇತ್ಥ=ತಿಳಿದಿರುತ್ತಿ, ಯತ್=ಯಾವಕಾರಣದಿಂದ(ಅಲ್ಪವಾಗಿ ತಿಳಿದಿರುತ್ತಿಯೋ), ಅಥ=ಆ ಕಾರಣದಿಂದ, ತ್ವಂ=ನಿನ್ನಲ್ಲಿ, ದೇವೇಷು=ದೇವತೆಗಳಲ್ಲಾಗಲೀ, ಅಸ್ಯ=ಪರಬ್ರಹ್ಮನ, ಯತ್=ಯಾವುದೊಂದು ರೂಪವದೆಯೋ, ಅಸ್ಯ ತತ್=ಅಂಥಾ ಪರಬ್ರಹ್ಮನರೂಪವು,ನು=ಈಗ ತೇ=ನಿನ್ನಿಂದ, ಮೀಮಾಂಸ್ಯಮೇವ=ಅವಶ್ಯವಾಗಿ ವಿಚಾರಮಾಡಲ್ಪಡತಕ್ಕದ್ದೇ. ॥ ೧ ॥

ಮಂ ॥ ಮನ್ಯೇ ವಿದಿತಂ ನಾಹಮನ್ಯೇ ಸುವೇದೇತಿ । ನೋ ನ ವೇದೇತಿ ವೇದ ಚ । ಯೋ ನಸ್ತದ್ವೇದ ತದ್ವೇದ ನೋ ನ ವೇದೇತಿ ವೇದ ಚ । ಯಸ್ಯಾಮತಂ ತಸ್ಯ ಮತಂ ಮತಂ ಯಸ್ಯ ನ ವೇದ ಸಃ ॥ ೨ ॥

ಅ ॥ ಅನ್ಯೇ=ಇತರರು, ಸುವೇದೇತಿ=(ಈ ಚತುರ್ಮುಖನು ಪರಬ್ರಹ್ಮನನ್ನು) ಚೆನ್ನಾಗಿ ತಿಳಿದಿರುತ್ತಾನೆಂದು, (ನನ್ನನ್ನು ಹೇಳುತ್ತಾರೆ), ಅಹಂ=ನಾನಾದರೆ, ವಿದಿತಂ=(ಪರಬ್ರಹ್ಮನನ್ನು) ತಿಳಿಯಲ್ಪಟ್ಟವನನ್ನಾಗಿ, ನ ಮನ್ಯೇ=ತಿಳಿದುಕೊಳ್ಳುವುದಿಲ್ಲ, ನವೇದೇತಿನೋ=ತಿಳಿಯುವುದಿಲ್ಲವೆಂದಲ್ಲ, ವೇದಚ=ಸ್ವಲ್ಪತಿಳಿದಿರುತ್ತೇನೆ, ನಃ=ನಮ್ಮಪೈಕಿ, ಯಃ=ಯಾವಾತನು, ತತ್=ಪರಬ್ರಹ್ಮನನ್ನು, ವೇದ=(ನಾನು) ತಿಳಿದಿರುತ್ತೇನೆಂದು (ಹೇಳುತ್ತಾನೋ), ನೋವೇದ=(ಆತನು) ತಿಳಿಯುವದಿಲ್ಲ, ನವೇದೇತಿ=ನಾನು ಬ್ರಹ್ಮನನ್ನು ತಿಳಿಯಲಿಲ್ಲವೆಂದು (ಯಾರು ಹೇಳುತ್ತಾನೋ), ವೇದಚ=(ಆತನು) ತಿಳಿದಿರುತ್ತಾನೆ, ಯಸ್ಯ=ಯಾವಾತನಿಗೆ, ಅಮತಂ=(ಬ್ರಹ್ಮನು) ಸಂಪೂರ್ಣವಾಗಿ ವಿಚಾರಿಸಲ್ಪಡಲಿಲ್ಲವೆಂದು ಬುದ್ಧಿಯುದೆಯೋ, ತಸ್ಯ=ಆತನಿಂದ, ಮತಂ=(ಬ್ರಹ್ಮವು) ತಿಳಿಯಲ್ಪಟ್ಟಿದೆ, ಯಸ್ಯ=ಯಾವಾತನಿಗೆ, ಮತಂ=ಬ್ರಹ್ಮನು ಸಂಪೂರ್ಣವಾಗಿ ವಿಚಾರಿಸಲ್ಪಟ್ಟದ್ದಾನೆಂದು ಬುದ್ಧಿಯುದೆಯೋ, ಸಃ=ಆತನು, ನ ವೇದ=ತಿಳಿಯಲೇ ಇಲ್ಲ. ॥ ೨ ॥

ಮಂ ॥ ಅವಿಜ್ಞಾತಂ ವಿಜಾನತಾಂ ವಿಜ್ಞಾತಮವಿಜಾನತಾಂ । ಪ್ರತಿಬೋಧ ವಿದಿತಂ ಮತಮಮೃತತ್ವಂ ಹಿ ವಿಂದತೇ । ಆತ್ಮನಾ ವಿಂದತೇ ವೀರ್ಯಂ ವಿದ್ಯಯಾ ವಿಂದತೇಽಮೃತಂ ॥ ೩ ॥

ಅ ॥ ವಿಜಾನತಾಂ=ನಾವು ಪರಬ್ರಹ್ಮನನ್ನು ಸಾಕ್ಷಾತ್ಕರಿಸಿದ್ದೇವೆಂದು ತಿಳಿದವರಿಗೆ, ಅವಿಜ್ಞಾತಂ=ಬ್ರಹ್ಮನು, ತಿಳಿಯಲ್ಪಡಲಿಲ್ಲ, ಅವಿಜಾನತಾಂ=ಈ ರೀತಿಯಾದ ಅಜ್ಞಾನ ಶೂನ್ಯರಿಗೆ, (ಅಂದರೆ ನಾವು ಪರಬ್ರಹ್ಮನನ್ನು ಸಾಕ್ಷಾತ್ಕರಿಸಲಿಲ್ಲವೆಂದು ತಿಳಿದವರಿಗೆ), ವಿಜ್ಞಾತಂ=ಬ್ರಹ್ಮನು ಸಾಕ್ಷಾತ್ಕರಿಸಲ್ಪಟ್ಟದ್ದಾನೆ ಅಂದರೆ ಸಾಕ್ಷಾತ್ಕಾರಕ್ಕೆ ಯೋಗ್ಯರಾಗುತ್ತಾರೆ, ಪ್ರತಿಬೋಧವಿದಿತಂ ಮತಂ=ಅವರವರ ಯೋಗ್ಯತಾನುಸಾರವಾಗಿ, ಶ್ರವಣ ಮನನ ನಿದಿಧ್ಯಾಸನಗಳಿಂದ ತಿಳಿಯಲ್ಪಟ್ಟ ಪರಬ್ರಹ್ಮವು, ಅಮೃತತ್ವಂ=ಮುಕ್ತಿಯನ್ನು, ವಿಂದತೇ=ಹೊಂದಿಸುತ್ತದೆ, ಹಿ=ಪ್ರಸಿದ್ಧವು, ಆತ್ಮನಾ=ಜ್ಞಾನೋತ್ತರ ಕಾಲಿಕ ಸ್ವಕೀಯ ಯಜ್ಞಾದಿ ಪ್ರಯತ್ನದಿಂದ, ವೀರ್ಯಂ=ಆನಂದಾತಿಶಯವನ್ನು, ವಿಂದತೇ=ಹೊಂದುತ್ತಾನೆ, ವಿದ್ಯಯಾ=ಅಪರೋಕ್ಷಜ್ಞಾನದಿಂದ, ಅಮೃತಂ=ಮುಕ್ತಿಯನ್ನು, ವಿಂದತೇ=ಹೊಂದುತ್ತಾನೆ. ॥ ೩ ॥

ಮಂ ॥ ಇಹ ಚೇದವೇದೀದಥ ಸತ್ಯಮಸ್ತಿ । ನ ಚೇದಿಹಾವೇದೀನ್ಮಹತೀ ವಿನಷ್ಟಿಃ ॥ ಭೂತೇಷು ಭೂತೇಷು ವಿಚಿತ್ಯ ಧೀರಾಃ । ಪ್ರೇತ್ಯಾಸ್ಮಾಲ್ಲೋಕಾದಮೃತಾ ಭವಂತಿ ॥ ೪ ॥

ದ್ವಿತೀಯಃ ಖಂಡಃ ॥ ೨ ॥

ಅ ॥ ಇಹ=ಜ್ಞಾನಯೋಗ್ಯವಾದ ಬ್ರಾಹ್ಮಣಾದಿ ದೇಹದಲ್ಲಿ, ಅವೇದೀತ್‌ಚೇತ್=ಪರಬ್ರಹ್ಮನನ್ನು ತಿಳಿದ ಪಕ್ಷದಲ್ಲಿ, ಅಥ ಸತ್ಯಮಸ್ತಿ=ಆ ಪಕ್ಷದಲ್ಲಿ ಮಂಗಲವೇ ಆಗುತ್ತದೆ. ಇಹ=ಜ್ಞಾನಸಂಪಾದನೆಗುಚಿತವಾದ ಬ್ರಾಹ್ಮಣಾದಿ ದೇಹದಲ್ಲೂ ಕೂಡಾ, ನಾವೇದೀತ್ ಚೇತ್=ತಿಳಿ

ಥುದೆ ಇದ್ದರೆ, ಮಹತೀವಿನಷ್ಟಿಃ=ದೊಡ್ಡ ನಾಶವದೆ. ಧೀರಾಃ=ಪಂಡಿತರು, ಭೂತೇಷು ಭೂತೇಷು=ಎಲ್ಲಾ ಪ್ರಾಣಿಗಳಲ್ಲಿಯೂ, ವಿಚಿತ್ಯ=ಪರಬ್ರಹ್ಮನನ್ನು ತಿಳಿದು, ಅಸ್ಮಾಲ್ಲೋಕಾತ್= ಈ ಭೌತಿಕ ಶರೀರದಿಂದ, ಪ್ರೇತ್ಯ=ಹೊರಟು, ಅಮೃತಾಃ=ಮುಕ್ತರು, ಭವಂತಿ=ಆಗುತ್ತಾರೆ.॥

**ಭಾ** ॥(*a*) ಯಂ ಸಮ್ಯಕ್ ನೈವ ಜಾನಾತಿ ಕಶ್ಚಿನ್ನಿರವಶೇಷತಃ ।
(*b*) ಸರ್ವಾತ್ಮನಾ ವಿಜಾನಾಮೀತಿ ತು ಯಸ್ಯ ಮತಂ ಭವೇತ್ ॥
ತಸ್ಯಾಜ್ಞಾತಃ ಸ ಭಗವಾನ್ (*c*) ಯೋ ನೈವಂ ಮನ್ಯತೇ ಸದಾ॥
ಜ್ಞಾತಃ ತಸ್ಯ (*d*) ತಥಾಸ್ಯೈವ ನಿಶ್ಶೇಷಂ ಮನನಂ ಕೃತಂ ॥
ಇತಿ ಯೋ ಮನ್ಯತೇ ನಾಸ್ಯ ಮತಃ ಸ ಪುರುಷೋತ್ತಮಃ ।
(*e*) ನಾತಿ ವೇದ್ಯೋ ನ ಚಾವೇದ್ಯಃ ತಸ್ಮಾತ್ಸಪರಮೇಶ್ವರಃ ॥

ಅ ॥ (*a*) (೧. ವ.) ಯಾವಾತನನ್ನು ಚೆನ್ನಾಗಿ ಯಾವನೊಬ್ಬನೂ ಸಮಸ್ತಲಕ್ಷಣಗಳಿಂದ ತಿಳಿದುಕೊಳ್ಳುವುದಿಲ್ಲವೋ, (*b*) (೨.೩.ವ) ಅಂತಹನನ್ನು ಸಂಪೂರ್ಣವಾಗಿ ತಿಳಿದುಕೊಂಡಿದ್ದೇನೆ ಎಂತ ಯಾರು ತಿಳಿದು ಕೊಂಡಿರುವನೋ ಆತನಿಂದ ಆ ಪರಮಾತ್ಮನು ತಿಳಿಯಲ್ಪಡಲೇ ಇಲ್ಲ. (*c*) ಯಾವಾತನು ಹರಿಯನ್ನು ಯಾವಾಗಲೂ ಹಾಗೆ ತಿಳಿಯುವದಿಲ್ಲವೋ (ಅಂದರೆ ಸಂಪೂರ್ಣವಾಗಿ ತಿಳಿದಿರುತ್ತೇನೆಂದು ತಿಳಿದುಕೊಳ್ಳುವದಿಲ್ಲವೋ) ಆತನಿಂದ ಆ ಹರಿಯು ತಿಳಿಯಲ್ಪಟ್ಟಿದ್ದಾನೆ. (*d*) ಹಾಗೇವೇ ಯಾವಾತನು ತಾನು ಸಂಪೂರ್ಣವಾಗಿ ಮನನವಾಡಿಕೊಂಡಿದ್ದೇನೆಂದು ತಿಳಿದುಕೊಳ್ಳುತ್ತಾನೋ ಆತನಿಂದ ಆ ಪುರುಷೋತ್ತಮನಾದ ಹರಿಯು ಮನನವಾಡಲ್ಪಡಲಿಲ್ಲ. (*e*) ಆದುದರಿಂದ ಪರಮೇಶ್ವರನಾದ ಹರಿಯು ಸಂಪೂರ್ಣವಾಗಿ ತಿಳಕೊಳ್ಳಲು ಶಕ್ಯನೂ ತಿಳುಕೊಳ್ಳಲಿಕ್ಕೆ ಅಶಕ್ಯನೂ ಅಲ್ಲ.

**ಭಾ**॥(*a*) ನೇದಂ ಜೀವಸ್ವರೂಪಂ ತದ್ಬ್ರಹ್ಮ ವಿಷ್ಣ್ವಾಖ್ಯಮವ್ಯಯಂ ॥
(*b*) ಕಿಂ ತು ಯತ್ತೇ ಸಮೀಪಸ್ಥಮಾಸ ತೇ ವಿನಿಯಾಮಕಂ ॥
ತದೇವ ಬ್ರಹ್ಮ ವಿದ್ಧಿ ತ್ವಂ ವಿಷ್ಣ್ವಾಖ್ಯಂ ಪರಮವ್ಯಯಂ ॥
(*c*) ನಿಯಾಮಕಂ ತದ್ದೇವಾನಾಂ ಮರ್ತ್ಯಾನಾಂ ಕಿಮುತೋತ್ತಮಂ ॥

ಅ ॥ (*a*) (೧ ಖಂಡ ೫ ವ) ನಾಶಶೂನ್ಯವಾಗಿಯೂ ವಿಷ್ಣುವೆಂದುಪ್ರಸಿದ್ಧವಾಗಿಯೂ ಇರುವ ಆ ಪರಬ್ರಹ್ಮವು ಈ ಪ್ರತ್ಯಕ್ಷಸಿದ್ಧವಾದ ಜೀವಸ್ವರೂಪವಲ್ಲ. (*b*) ಆದರೆ ನಿನ್ನ ಸಮೀಪದಲ್ಲಿದ್ದು ವಿಶೇಷತಃ ನಿಯಾಮಕನಾಗಿ ಯಾವದದೆಯೋ ಅದನ್ನೇ ನೀನು ನಾಶಶೂನ್ಯವಾಗಿಯೂ ಸರ್ವೋತ್ತಮವಾಗಿಯೂ ವಿಷ್ಣುವೆಂದು ಪ್ರಸಿದ್ಧವಾಗಿಯೂ ಇರುವ ಪರಬ್ರಹ್ಮನನ್ನಾಗಿ ತಿಳಿ. (*c*) (೧ ಖಂಡ ೪ ವ) ಆ ಉತ್ತಮ ವಸ್ತುವು ದೇವತೆಗಳಿಗೂ ನಿಯಾಮಕವಾಗಿರಲು ಮನುಷ್ಯರಿಗೆ ನಿಯಾಮಕವೆಂದೇನು ಹೇಳತಕ್ಕದು?

**ಭಾ** ॥ ತತ್ಪ್ರಸಾದಂ ವಿನಾ ಜೀವೇ ಮಂತವ್ಯಾ ನ ಪ್ರವೃತ್ತಯಃ ॥
ಕಿಮು ಜೀವಸ್ಯ ತದ್ಭಾವೋ ನ ಮಂತವ್ಯ ಇತೀರ್ಯತೇ ॥

ಅ ॥ (೨ ಖಂ. ೩ ವ.) ಆ ಪರಮಾತ್ಮನ ಅನುಗ್ರಹವಿಲ್ಲದೆ ಜೀವರಲ್ಲಿ ಯಾವ ಪ್ರವೃತ್ತಿಗಳು (ಸ್ವಾತಂತ್ರ್ಯದಿಂದ) ಆಗುತ್ತವೆಯೆಂದು ತಿಳಿಯಕೂಡದು. ಅಂದ ಮೇಲೆ ಜೀವನಿಗೆ ಅಂತಹ ಪರಬ್ರಹ್ಮನ ಸ್ವರೂಪವು ಬರುತ್ತದೆಂದು ತಿಳಿಯಕೂಡದು ಎಂದೇನು ಹೇಳತಕ್ಕದ್ದು?

**ಎರಡನೇ ಖಂಡಾರ್ಥವು ಸಮಾಪ್ತವಾಯಿತು.**

ಮಂ ॥ ಬ್ರಹ್ಮ ಹ ದೇವೇಭ್ಯೋ ವಿಜಿಗ್ಯೇ ॥ ಅಥ ತಸ್ಯ ಹ ಬ್ರಹ್ಮಣೋ ವಿಜಯೇ ದೇವಾ ಅಮಹೀಯಂತ ತ ಐಕ್ಷಂತ ॥ ಅಸ್ಮಾಕಮೇವಾಯಂ ವಿಜಯೋ ಅಸ್ಮಾಕಮೇವಾಯಂ ಮಹಿಮೇತಿ ॥ ತದ್ಧೈಷಾಂ ವಿಜಜ್ಞೌ ॥ ೧ ॥

ಅ॥ ಬ್ರಹ್ಮ=ಪರಬ್ರಹ್ಮವು, ದೇವೇಭ್ಯಃ=ದೇವತೆಗಳನ್ನುದ್ದೇಶಿಸಿ, ವಿಜಿಗ್ಯೇ=(ದೈತ್ಯಾದಿಗಳನ್ನು) ಗೆದ್ದಿತು. ಹ=ನಿಶ್ಚಯವು, ಅಥ=ಗೆದ್ದ ಮೇಲೆ, ತಸ್ಯ=ದೇವತೆಗಳಲ್ಲಿ ಪ್ರವಿಷ್ಟನಾದ, ಬ್ರಹ್ಮಣಃ=ಪರಬ್ರಹ್ಮನಿಗೆ, ವಿಜಯೇ (ಸತಿ)=ಜಯವಾಗುತ್ತಿರಲು, ದೇವಾಃ=ದೇವತೆಗಳು, ಅಮಹೀಯಂತ=ಅಹಂಕಾರಿಗಳಾದರು. ಹ=ಆಶ್ಚರ್ಯವು, ತೇ=ಆ ದೇವತೆಗಳು, ಅಸ್ಮಾಕಮೇವ=ನಮಗೇನೇ. ಅಯಂ ವಿಜಯಃ=ಈ ಜಯವು, ಅಸ್ಮಾಕಮೇವ=ನಮಗೇನೇ, ಅಯಂ ಮಹಿಮಾ=ಈ ಮಹಾತ್ಮೆಯು, ಇತಿ=ಹೀಗೆಂದು, ಐಕ್ಷಂತ=ತಿಳುಕೊಂಡರು. ಏಷಾಂ=ಈ ದೇವತೆಗಳ, ತತ್=ಆ ಅಹಂಕಾರವನ್ನು, ವಿಜಜ್ಞೌ=(ಪರಬ್ರಹ್ಮನು) ತಿಳುಕೊಂಡನು. ಹ= ಪ್ರಸಿದ್ಧವು.

ಮಂ ॥ ತೇಭ್ಯೋ ಹ ಪ್ರಾದುರ್ಬಭೂವ । ತನ್ನ ವ್ಯಜಾನಂತ । ಕಿಮಿದಂ ಯಕ್ಷಮಿತಿ । ತೇಽಗ್ನಿಮಬ್ರುವನ್ । ಜಾತವೇದ ಏತದ್ವಿಜಾನೀಹಿ ಕಿಮೇತದ್ಯಕ್ಷಮಿತಿ । ತಥೇತಿ ತದಭ್ಯದ್ರವತ್ । ತಮಭ್ಯವದತ್ಕೋಽಸೀತ್ಯಗ್ನಿರ್ವಾ ಅಹಮಸ್ಮೀತ್ಯಬ್ರವೀಜ್ಜಾತವೇದಾ ವಾ ಅಹಮಸ್ಮೀತಿ । ತಸ್ಮಿಂಸ್ತ್ವಯಿ ಕಿಂ ವೀರ್ಯಮಿತ್ಯಪೀದಂ ಸರ್ವಂ ದಹೇಯಂ ಯದಿದಂ ಪೃಥಿವ್ಯಾಮಿತಿ । ತಸ್ಮೈ ತೃಣಂ ನಿದಧಾವೇತದ್ದಹೇತಿ । ತದುಪಪ್ರೇಯಾಯ ಸರ್ವಜವೇನ । ತನ್ನ ಶಶಾಕ ದಗ್ಧುಂ । ಸ ತತ ಏವ ನಿವವೃತೇ । ನೈತದಶಕಂ ವಿಜ್ಞಾತುಂ ಯದೇತದ್ಯಕ್ಷಮಿತಿ ॥ ೨॥

ಅ ॥ ತೇಭ್ಯಃ=ಆ ದೇವತೆಗಳಿಗೋಸ್ಕರ, ಪ್ರಾದುರ್ಬಭೂವ=(ಪರಬ್ರಹ್ಮವು ಯಕ್ಷರೂಪದಿಂದ) ಪ್ರತ್ಯಕ್ಷವಾಯಿತು. ಹ=ಪ್ರಸಿದ್ಧವು. ತತ್=ಆ (ಯಕ್ಷರೂಪವಾದ) ಬ್ರಹ್ಮವನ್ನು, ಇದಂ ಯಕ್ಷಂ=ಈ ಯಕ್ಷವನ್ನು, ಕಿಮಿತಿ=ಯಾವದೆಂಬುವದನ್ನಾಗಿ, ನ ವ್ಯಜಾನಂತ= ತಿಳಿಯಲಿಲ್ಲ. ತೇ=ಆ ದೇವತೆಗಳು, ಅಗ್ನಿಂ=ಅಗ್ನಿಯ ಹತ್ತಿರ, ಅಬ್ರುವನ್=ಹೇಳಿದರು. ಜಾತವೇದಃ=ಎಲೈ ಅಗ್ನಿಯೇ, ಏತದ್ಯಕ್ಷಂ=ಈ ಯಕ್ಷವನ್ನು, ಕಿಮಿತಿ=ಯಾವುದೆಂದು, ವಿಜಾನೀಹಿ=ತಿಳಿ. ತಥೇತಿ=ಹಾಗೆಯೇ ಆಗಲೆಂದು ಹೇಳಿ, ತತ್ ಅಭಿ=ಯಕ್ಷಕ್ಕೆ ಅಭಿಮುಖವಾಗಿ, ಅಭ್ಯದ್ರವತ್=(ಅಗ್ನಿಯು) ಓಡಿದನು. ತಂ=ಅಗ್ನಿಯನ್ನು ಕುರಿತು, ಕೋಽಸೀತಿ= (ನೀನು) ಯಾರೆಂದು, (ಯಕ್ಷನು) ಅವದತ್=ಕೇಳಿದನು. ಅಹಂ=ನಾನು, ಅಗ್ನಿರ್ವಾ= ಅಗ್ನಿನಾಮಕನಾಗಿ, ಅಸ್ಮಿ=ಆಗಿದ್ದೇನೆ. ಜಾತವೇದಾ ವೈ=ಜಾತವೇದನಾಮದಿಂದ ಪ್ರಸಿದ್ಧನು, ಅಸ್ಮಿ=ಆಗಿರುತ್ತೇನೆ. ಇತಿ=ಹೀಗೆಂದು, ಅಬ್ರವೀತ್ =(ಅಗ್ನಿಯು) ಹೇಳಿದನು. ತಸ್ಮಿನ್ ತ್ವಯಿ=ಅಂಥಾ ನಿನ್ನಲ್ಲಿ, ಕಿಂ ವೀರ್ಯಮಿತಿ=ಏನು ಸಾಮರ್ಥ್ಯವಿದೆಯೆಂದು (ಯಕ್ಷನು ಕೇಳಿದನು.) ಪ್ರಥಿವ್ಯಾಂ=ಭೂಮಿಯಲ್ಲಿ, ಯದಿದಂ=ಯಾವದು ಯಾವದದೆಯೋ, ಸರ್ವಮಪೀದಂ=ಈ ಎಲ್ಲಾದನ್ನೂ, ದಹೇಯಂ=ಸುಟ್ಟುಬಿಡುವೆನು, ಇತಿ=ಹೀಗೆ (ಅಗ್ನಿಯು ಹೇಳಿದನು.) ತಸ್ಮೈ=ಆ ಅಗ್ನಿಗೆ, ಏತತ್=ಈ ತೃಣವನ್ನು, ದಹ=ಸುಡು. ಇತಿ=ಹೀಗೆಂದು,

ತೃಣಂ=ಹುಲ್ಲನ್ನು, ನಿದಧೌ=ಎದುರಿನಲ್ಲಿಟ್ಟನು. ತತ್=ಹುಲ್ಲನ್ನು (ಸುಡಲಿಕ್ಕೆ), ಸರ್ವ ಜವೇನ=ನಿಖಿಲ ಪ್ರಯತ್ನದಿಂದ, ಉಪಪ್ರೇಯಾಯ=(ಅಗ್ನಿಯು) ಸಮೀಪಿಸಿದನು. ತತ್= ಆ ಹುಲ್ಲನ್ನು, ದಗ್ಧುಂ=ಸುಡಲಿಕ್ಕೆ, ನ ಶಶಾಕ=(ಅಗ್ನಿಯು) ಸಮರ್ಥನಾಗಲಿಲ್ಲ. ಸಃ= ಆ ಅಗ್ನಿಯು, ತತ ಏವ=ಅಷ್ಟರಿಂದಲೇ, ಅಂದರೆ ಯಕ್ಷರೂಪವನ್ನು ನಿರ್ಧಾರಿಸದೇನೇ, ನಿವ ವೃತೇ=ಹಿಂತಿರುಗಿದನು. ಯದೇತದ್ಯಕ್ಷಮಿತಿ=ಈ ಯಕ್ಷನು ಯಾರೆಂಬುದನ್ನು, ಏತತ್= ಇದನ್ನು, ವಿಜ್ಞಾತುಂ=ತಿಳಿಯಲಿಕ್ಕೆ, ನಾಶಕಂ=ಸಮರ್ಥನಾಗಲಿಲ್ಲ, ಇತಿ=ಹೀಗೆಂದು (ಅಗ್ನಿಯು ದೇವತೆಗಳನ್ನು ಕುರಿತು ಹೇಳಿದನು.) ॥ ೨ ॥

**ಮಂ ॥ ಅಥ ವಾಯುಮಬ್ರುವನ್ । ವಾಯವೇತದ್ವಿಜಾನೀಹಿ ಕಿಮೇತ ದ್ಯಕ್ಷಮಿತಿ । ತಥೇತಿ ತದಭ್ಯದ್ರವತ್ । ತಮಭ್ಯವದತ್ಕೋಽಸೀತಿ । ವಾಯುರ್ವಾ ಅಹಮಸ್ಮೀತ್ಯಬ್ರವೀನ್ಮಾತರಿಶ್ವಾ ವಾ ಅಹಮಸ್ಮೀತಿ । ತಸ್ಮಿನ್ ತ್ವಯಿ ಕಿಂ ವೀರ್ಯಮಿತಿ । ಅಪೀದಂ ಸರ್ವಮಾದದೀಯಂ ಯದಿದಂ ಪೃಥಿವ್ಯಾಮಿತಿ । ತಸ್ಮೈ ತೃಣಂ ನಿದಧಾವೇತದಾದತ್ಸ್ವೇತಿ ತದುಪಪ್ರೇಯಾಯ ಸರ್ವಜವೇನ ತನ್ನ ಶಶಾಕಾದಾತುಂ । ಸ ತತ ಏವ ನಿವವೃತೇ । ನೈತದಶಕಂ ವಿಜ್ಞಾತುಂ । ಯದೇತದ್ಯಕ್ಷಮಿತಿ । ಅಥೇಂದ್ರಮಬ್ರುವನ್ ! ಮಘವನ್ನೇತದ್ವಿಜಾನೀಹಿ ಕಿಮೇತದ್ಯಕ್ಷ ಮಿತಿ ತಥೇತಿ ತದಭ್ಯದ್ರವತ್ । ತಸ್ಮಾತ್ತಿರೋದಧೇ । ಸ ತಸ್ಮಿನ್ನೇವಾ ಕಾಶೇ ಸ್ತ್ರಿಯಮಾಜಗಾಮ ಬಹು ಶೋಭಮಾನಾಮುಮಾಂ ಹೈಮ ವತೀಂ । ತಾಂ ಹೋವಾಚ ಕಿಮೇತದ್ಯಕ್ಷಮಿತಿ ॥ ೩ ॥**

## ತೃತೀಯಃ ಖಂಡಃ ॥ ೩ ॥

**ಅ ॥** ಅಥ=ಆಮೇಲೆ, ವಾಯುಂ=ನಾಸಿಕ್ಯವಾಯುವನ್ನು ಕುರಿತು, ಅಬ್ರುವನ್=ಹೇಳಿ ದರು, ವಾಯೋ=ಎಲೋ ನಾಸಿಕ್ಯವಾಯುವೇ.........(ಇಲ್ಲಿ ಹೇಳದಿದ್ದ ಶಬ್ದಗಳಿಗೆ ಮುಂಚಿ ನಂತೆಯೇ ಅನ್ವಯಾರ್ಥಗಳನ್ನು ತಿಳಿದುಕೊಳ್ಳತಕ್ಕದ್ದು.)...... .....ವಾಯುರ್ವೈ=ವಾಯು ನಾಮಕನು, ಮಾತರಿಶ್ವಾವೈ=ಮಾತರಿಶ್ವನಾಮಕನು............ಆದದೀಯಂ=ಭೂಮಿಯ ಲ್ಲಿದ್ದ ಎಲ್ಲಾ ಪದಾರ್ಥಗಳನ್ನೂ ಸ್ವೀಕರಿಸುವೆನು. ಆದತ್ಸ್ವ=ತೆಗೆದುಕೋ.......ಆದಾತುಂ= ತೆಗೆದುಕೊಳ್ಳಲಿಕ್ಕೆ..............ಅಥ=ಆಮೇಲೆ.........ಇಂದ್ರಂ=ದೇವೇಂದ್ರನನ್ನು ಕುರಿತು, ಅಬ್ರುವನ್=ಹೇಳಿದರು. ಮಘವನ್=ಎಲೋ ದೇವೇಂದ್ರನೇ, ಏತದ್ಯಕ್ಷಂ ಕಿಮಿತಿ ವಿಜಾನೀಹಿ. ತಥೇತಿತದಭ್ಯ ದ್ರವತ್(ಹಿಂದೆಹೇಳಿದುದೇ ಅರ್ಥ.) ತಸ್ಮಾತ್=ಆ ಪ್ರದೇಶದಿಂದ, ತಿರೋದಧೇ= (ಯಕ್ಷನು), ಅಂತರ್ಹಿತನಾದನು. ಸಃ=ಆ ಇಂದ್ರನು, ತಸ್ಮಿನ್ನೇವಾಕಾಶೇ=ಯಕ್ಷನು ಅಂತ ರ್ಧಾನಹೊಂದಿದ ಪ್ರದೇಶದಲ್ಲಿಯೇ, ಬಹುಶೋಭಮಾನಾಂ=ಬಹಳವಾಗಿ ಪ್ರಕಾಶಗೊಳಿಸುತ್ತಿ ರುವ, ಹೈಮವತೀಂ=ಹಿಮವಂತನ ಮಗಳಾದ, ಉಮಾಂ=ಪಾರ್ವತಿ ಯೆಂದು ಹೆಸರುಳ್ಳ, ಸ್ತ್ರಿಯಂ=ಸ್ತ್ರೀಯನ್ನು ನೋಡಿ, ಆಜಗಾಮ=ಸಮೀಪಿಸಿದನು. ಏತದ್ಯಕ್ಷಂ=ಈ ಯಕ್ಷನು, ಕಿಮಿತಿ=ಯಾರೆಂದು, ತಾಂ ಹ=ಆ ದೇವಿಯನ್ನು ಕುರಿತು, ಉವಾಚ=ಕೇಳಿದನು.

**ಭಾ ॥** ಇತ್ಯತ್ರಾಖ್ಯಾಯಿಕಾಂ ವಕ್ಷ್ಯೇ ಶೃಣು ತಾಂ ತ್ವಂ ಮಹೇಶ್ವರ ॥

ಅ ॥ (೧. ವ.)ಎಲೈ ಮಹೇಶ್ವರನೇ (ಅತ್ಯಾಶ್ಚರ್ಯಕರನಾಗಿರುವುದರಿಂದ ಸಂಪೂರ್ಣ ವಾಗಿ ತಿಳಿದುಕೊಳ್ಳಲಶಕ್ಯನು ಎಂಬೀ ವಿಷಯದಲ್ಲಿ) ಒಂದಿತಿಹಾಸವನ್ನು ಹೇಳುತ್ತೇನೆ. ಅದನ್ನು ಕೇಳುವವನಾಗು.

ಭಾ ॥(*a*) ಸ್ಥಿತ್ವಾ ದೇವೇಷು ತಬ್ರ್ಬಹ್ಮ ವ್ಯಜಯದ್ದೈತ್ಯದಾನವಾನ್ ॥
ದೇವೇಭ್ಯೋಽರ್ಥಾಯ

(*b*) ವಿಜಯಂ ತಂ ದೇವಾ ಮೇನಿರೇ ಸ್ವಕಂ ॥ ಅವಿಷ್ಟಾ ಅಸುರೈಃ ॥

ಅ ॥ (*a*) (೧. ವ.) ಆ ಪರಬ್ರಹ್ಮನು (ದೇವತೆಗಳಿಗೆ ದೈತ್ಯದಾನವರೊಡನೆ ಯುದ್ಧವು ಪ್ರವೃತ್ತವಾಗಿರಲು ತಾನು ದೇವತೆಗಳಲ್ಲಿ ವಿಶೇಷವಾಗಿ ಪ್ರವಿಷ್ಟನಾಗಿದ್ದು ಅವರಿಗೋಸ್ಕರ ದೈತ್ಯ ದಾನವರನ್ನು ಸೋಲಿಸಿದನು. (*b*) ಇಂತಹ ದೇವತೆಗಳಲ್ಲಿ ಅವಿಷ್ಟನಾದ ಹರಿಯ ವಿಜಯ ವನ್ನು ದೇವತೆಗಳು ಅಸುರರಿಂದ ಆವಿಷ್ಟರಾಗಿ ತಾವೇ ಜಯಿಸಿದೆವೆಂಬದಾಗಿ ತಿಳಿದುಕೊಂಡರು॥೧॥

ಭಾ ॥(*a*) ತೇಷಾಂ ಪ್ರಬೋಧಾಯ ಜನಾರ್ದನಃ ।
ಯಕ್ಷರೂಪಃ ಪ್ರಾದುರಭೂದುಮಾಶಿವಸಮನ್ವಿತಃ ॥
ಬ್ರಹ್ಮಣಾಚೈವ ಸಹಿತಃ ।
(*b*) ಏತೇಭ್ಯೋಽಪಿ ಪರೋಽಹ್ಯಹಂ ॥
ಏತೇ ಪಿ ಮೇ ಭೃತ್ಯಭೂತಾಃ ಪರಿವಾರ್ಯ ವ್ಯವಸ್ಥಿತಾಃ ।
—ಇತಿ ಜ್ಞಾಪಯಿತುಂ ॥

(*c*) ವಿಷ್ಣುಃ ಸ ಹ ತೈರಪ್ಯುಪಾಗತಃ ।
ಯೂಯಮೇತಾನಪಿ ಜ್ಞಾತುಮಶಕ್ತಾಃ ಕಿಮು ಮಾಮಿತಿ ॥

ಅ ॥(*a*) (೨. ವ.) (ತನ್ನ ತತ್ವವನ್ನು) ಅವರಿಗೆ (ಅಹಂಕಾರಿಗಳಾದ ದೇವತೆಗಳಿಗೆ) ತಿಳಿಸುವದಕ್ಕೋಸ್ಕರ ಶ್ರೀ ಜನಾರ್ದನನು ಪಾರ್ವತೀ ಪರಮೇಶ್ವರರಿಂದಲೂ, (ಭಾರ್ಯೆಯ ರಿಂದೊಡಗೂಡಿದ) ಚತುರ್ಮುಖ (ಮುಖ್ಯಪ್ರಾಣರಿಂದಲೂ ಸಭಾರ್ಯರಾದ ಗರುಡಶೇಷ ರಿಂದಲೂ) ಕೂಡಿಕೊಂಡು ಯಕ್ಷರೂಪನಾಗಿ ತೋರಿಸಿಕೊಂಡನು. (*b*) ತಾನು ಈ ಎಲ್ಲಾ ದೇವತೆಗಳಿಂದಲೂ ಅಂದರೆ ಬ್ರಹ್ಮರುದ್ರ ಮೊದಲಾದ ಎಲ್ಲರಿಂದಲೂ ಅತ್ಯುತ್ತಮನು(ನಿಮ್ಮೆಲ್ಲ ರಿಂದ ಅತ್ಯುತ್ತಮರಾದ) ಇವರೆಲ್ಲರೂ ತನಗೆ ಭೃತ್ಯರಾದುದರಿಂದ ಪರಿವಾರಭೂತರಾಗಿರುತ್ತಾರೆ. (ಆದುದರಿಂದ ನಾವೇಗೆದ್ದಿದ್ದೇವೆಂಬ ಭ್ರಾಂತಿಯನ್ನು ಹೊಂದ ಬೇಡಿರಿ). ಎಂಬೀ ವಿಷಯವನ್ನು ತಿಳಿಸುವದಕ್ಕೂ (*c*) ಎಲೈ ದೇವತೆಗಳಿರಾ! ನೀವು ಇವರನ್ನು ಸಹಾ ತಿಳಿದುಕೊಳ್ಳಲಶಕ್ತರು. ನನ್ನನ್ನು ತಿಳುಕೊಳ್ಳಲಸಮರ್ಥರೆಂದು ಏನು ಹೇಳತಕ್ಕದ್ದದೆ. ಎಂಬ ಈ ವಿಷಯವನ್ನು ತಿಳಿ ಸುವದಕ್ಕೂ ಇಷ್ಟು ದೇವತೆಗಳಿಂದ ಕೂಡಿಕೊಂಡು ವಿಷ್ಣುವುಆವಿರ್ಭವಿಸಿದನು.

ಭಾ ॥ ತಜ್ಜ್ಞಾನಾರ್ಥಂ ಹುತಾಶಶ್ಚ ನಾಸಿಕ್ಯೋ ವಾಯುರೇವ ಚ ।
ಇಂದ್ರಶ್ಚ ಕ್ರಮಶೋ ಜಗ್ಮುಃ ತಂ ಜ್ಞಾತುಂ ನೈವ ಚಾಶಕನ್ ॥

ಅ ॥ (೨. ವ.) ಹೀಗೆ ಯಕ್ಷರೂಪವಾಗಿ ಬಂದದ್ದನ್ನು ತಿಳಿಯುವದಕ್ಕೋಸ್ಕರ ಅಗ್ನಿಯೂ (೩. ವ.) ನಾಸಿಕ್ಯವಾಯುವೂ ದೇವೇಂದ್ರನೂ ಕ್ರಮದಿಂದ ಹೋಗುವವರಾದರು. ಹೋದರೂ ಆತನನ್ನು ತಿಳಿದುಕೊಳ್ಳುವುದಕ್ಕೆ ಅಸಮರ್ಥರಾದರು.

ಭಾ ॥ ತತ್ರೇಂದ್ರೋಽಧಿಕಬುದ್ಧಿತ್ವಾತ್ ಪೃಚ್ಛತೀತಿ ಜನಾರ್ದನಃ ।
ಮತ್ತಃ ಶಿವಾದ್ಬ್ರಹ್ಮಣಶ್ಚ ಶ್ರೋತುಂ ನೈವಾಪಿ ಶಕ್ತಿಮಾನ್ ॥
ಇತಿ ಜ್ಞಾಪಯಿತುಂ ತತ್ರ ನಾದೃಶ್ಯತ ಸ ಕೇಶವಃ ॥

ಅ ॥ ಅವರಲ್ಲಿ ಇಂದ್ರನು ಹೆಚ್ಚಿಗೆ ಬುದ್ಧಿಶಾಲಿಯಾದುದರಿಂದ ನೀನು ಯಾರೆಂದು ಕೇಳುವನು. ಆದರೆ ಈಗ ಇಂದ್ರನು (ಅಸುರಾವೇಶಯುಕ್ತನಾಗಿರುವ ಪ್ರಯುಕ್ತ) ನನ್ನಿಂದಲೂ ರುದ್ರನಿಂದಲೂ ಚತುರ್ಮುಖನಿಂದಲೂ ಪಾರ್ವತಿಯನ್ನು ಹೊರತು ಇತರರಿಂದಲೂ ಉಪದೇಶವನ್ನು ಹೊಂದಲಿಕ್ಕೆ ಯೋಗ್ಯನಲ್ಲವೆಂಬುದನ್ನು ತಿಳಿಸುವದಕ್ಕೋಸ್ಕರ ಜನಾರ್ದನನು ಅದೃಶ್ಯನಾದನು.

ಭಾ ॥ ಏಷೈವ ಜ್ಞಾನದಾನೇ ತೇ ಯೋಗ್ಯೇತಿ ವ್ಯದರ್ಶಯತ್ ॥

ಅ ॥ (ಆದಕಾರಣ ಪಾರ್ವತಿಯನ್ನು ಹೊರತು ಮಿಕ್ಕವರಿಂದ ಕೂಡಿಕೊಂಡು ಅದೃಶ್ಯನಾಗಿರುವ ಪ್ರಯುಕ್ತ) ಪಾರ್ವತಿಯೇ ಇಂದ್ರನಾದ ನಿನಗೆ ಜ್ಞಾನವನ್ನು ಕೊಡಲಿಕ್ಕೆ ಯೋಗ್ಯಳು. ಎಂಬ ಈ ಪ್ರಮೇಯವನ್ನು ತಿಳಿಸಿದನು.

**ಮಂ ॥ ಬ್ರಹ್ಮೇತಿ ಹೋವಾಚ । ಬ್ರಹ್ಮಣೋ ವಾ ಏತದ್ವಿಜಯೇ ದೇವಾ ಅಮಹೀಯಧ್ವಮಿತಿ । ತತೋ ಹ ವೈ ವಿದಾಂಚಕಾರ ಬ್ರಹ್ಮೇತಿ । ತಸ್ಮಾದ್ವಾ ಏತೇ ದೇವಾ ಅತಿತರಾಮಿವಾನ್ಯಾನ್ ದೇವಾನ್ ಯದಗ್ನಿರ್ವಾಯುರಿಂದ್ರಸ್ತೇಹ್ಯೇನ ನ್ನೇದಿಷ್ಠಂ ಪಸ್ಪೃಶುಃ ॥ ೧ ॥**

ಅ ॥ ಬ್ರಹ್ಮೇತಿ=ಇಂದ್ರನಿಂದ ಪ್ರಶ್ನಿಸಲ್ಪಟ್ಟ ಪಾರ್ವತಿಯು ಆ ಯಕ್ಷನನ್ನು ಪರಬ್ರಹ್ಮವೆಂದು, ಉವಾಚ=ಹೇಳಿದಳು. ಹ=ನಿಶ್ಚಯವು. ಏತತ್=ದೇವತೆಗಳಲ್ಲಿ ಪ್ರವಿಷ್ಟನಾದ, ಬ್ರಹ್ಮಣಃ=ಪರಬ್ರಹ್ಮನಿಗೆ, ವಿಜಯೇ=ಜಯವಾಗೋಣ, ದೇವಾಃ!=ದೇವತೆಗಳಿರಾ! ಅಮಹೀಯಧ್ವಂ=ನಾವೇಗೆದ್ದೆವೆಂದಹಂಕಾರ ಪಟ್ಟಿರಿ. ಇತಿ=ಹೀಗೆ (ಹೇಳಿದಳು.) ತತೋ ಹ ವೈ=ದೇವ್ಯುಪದೇಶದಿಂದಲೇ, ಬ್ರಹ್ಮೇತಿ=ಆ ಯಕ್ಷನನ್ನು ಪರಬ್ರಹ್ಮವನ್ನಾಗಿಯೂ, ಮತ್ತು ದೈತ್ಯರ ಪರಾಭವವು ತನ್ನಲ್ಲಿ ಪ್ರವಿಷ್ಟನಾಗಿದ್ದ ಬ್ರಹ್ಮನಿಂದಲೇ ಆದದ್ದು ಎಂದೂ, ವಿದಾಂ ಚಕಾರ=(ಇಂದ್ರನು) ತಿಳಿದುಕೊಂಡನು. ತಸ್ಮಾದ್ವೈ=ಗರ್ವಶೂನ್ಯರಾದುದರಿಂದಲೇ, ಏತೇ ದೇವಾಃ=ಸಪತ್ನೀಕರಾದ ಬ್ರಹ್ಮವಾಯುಶೇಷಗರುಡರುದ್ರರು, ಅನ್ಯಾನ್ ದೇವಾನ್=ಇತರ ಇಂದ್ರಾದಿ ದೇವತೆಗಳಿಂದ, ಅತಿತರಾಮಿವ=ಅಧಿಕರೇಸರಿ. ಅಥವಾ, ತಸ್ಮಾದ್ವೈ=ಯಕ್ಷರೂಪವಾಗಿ ಪ್ರಾದುರ್ಭವಿಸಿದ್ದನ್ನು ವಿಚಾರಿಸಬೇಕೆಂದು ಪ್ರಥಮದಲ್ಲಿ ಹೇಳಿದ ಪ್ರಯುಕ್ತವೇ,ಏತೇ ದೇವಾಃ=ಕಾಮದಕ್ಷ ಬೃಹಸ್ಪತ್ಯಾದಿಗಳು, ಅನ್ಯಾನ್ ದೇವಾನ್=ಇತರ ದೇವತೆಗಳನ್ನು, ಅತಿತರಾಮಿವ=ಅತಿಕ್ರಮಿಸಿಯೇ ಇದ್ದಾರೆ. ಅಂದರೆ ಶ್ರೇಷ್ಠರಾಗಿದ್ದಾರೆ. ಅಥವಾ, ತಸ್ಮಾದ್ವೈ=ಯಕ್ಷರೂಪನಾದ ಬ್ರಹ್ಮನನ್ನು ಪ್ರಥಮದಲ್ಲಿ ನೋಡಿದಪ್ರಯುಕ್ತವೇ ಯತ್=ಯಾವ ಅಗ್ನಿಃ=ಅಗ್ನಿಯು, ವಾಯುಃ=ನಾಸಿಕ್ಯವಾಯುವು, ಇಂದ್ರಃ=ದೇವೇಂದ್ರನು, ಏತೇ ದೇವಾಃ=ಎಂಬೀ ದೇವತೆಗಳು, ಅನ್ಯಾನ್ ದೇವಾನ್=ಇತರ ದೇವತೆಗಳನ್ನು ಅತಿತರಾಮಿವ=ಅತಿಕ್ರಮಿಸಿಯೇ ಇರುತ್ತಾರೆ. ತೇಹಿ=ಅವರಾದರೂ, ಏತತ್=ಯಕ್ಷರೂಪವಾದ ಬ್ರಹ್ಮನನ್ನು, ನೇದಿಷ್ಠಂ=ಸರ್ವಸಮೀಪಸ್ಥವಾದದ್ದನ್ನಾಗಿ, ಪಸ್ಪೃಶುಃ=ಮುಟ್ಟಿದರು. ಅಥವಾ ವಿಚಾರಮಾಡಿದರು.

**ಮಂ ॥ ತೇ ಹ್ಯೇನತ್ಪ್ರಥಮೋ ವಿದಾಂ ಚಕಾರ ಬ್ರಹ್ಮೇತಿ। ತಸ್ಮಾದ್ವಾ ಇಂದ್ರೋಽತಿತರಾಮಿವಾನ್ಯಾನ್ ದೇವಾನ್। ಸ ಹ್ಯೇನನ್ನೇದಿಷ್ಟಂ ಪಸ್ಪರ್ಶ। ಸ ಹ್ಯೇನತ್ಪ್ರಥಮೋ ವಿದಾಂ ಚಕಾರ ಬ್ರಹ್ಮೇತಿ ॥ ೨ ॥**

ಅ ॥ ತೇ ಹಿ=ಅಗ್ನಿ ವಾಯು ಇಂದ್ರರು, ಪ್ರಥಮಃ=ಪ್ರಥಮದಲ್ಲಿ, ಬ್ರಹ್ಮೇತಿ=ಪರಬ್ರಹ್ಮವನ್ನಾಗಿ, ಏನತ್=ಯಕ್ಷವನ್ನು, ವಿದಾಂ ಚಕಾರ=ತಿಳಿದುಕೊಂಡರು. (ಅಂದರೆ ಇಂದ್ರನು ಪಾರ್ವತಿಯ ಉಪದೇಶದಿಂದಲೂ ಅಗ್ನಿ ವಾಯುಗಳು ಇಂದ್ರನ ಉಪದೇಶದಿಂದಲೂ ತಿಳಕೊಂಡರು.) ತಸ್ಮಾದ್ವೈ=ಆದುದರಿಂದಲೇ, ಇಂದ್ರಃ=ದೇವೇಂದ್ರನು, ಅನ್ಯಾನ್ ದೇವಾನ್=ಇತರ ದೇವತೆಗಳನ್ನು, ಅತಿತರಾಮಿವ=ಅತಿಕ್ರಮಿಸಿಯೇ ಇರುತ್ತಾನೆ. ಸ ಹಿ=ಆ ದೇವೇಂದ್ರನು ಏನತ್=ಈ ಪರಬ್ರಹ್ಮವನ್ನು, ನೇದಿಷ್ಟಂ=ಸಮೀಪಸ್ಥವಾದುದನ್ನಾಗಿ, ಪಸ್ಪರ್ಶ=ತಿಳಕೊಂಡನು. ಸಹಿ=ಆತನೇ, ಏನತ್=ಈ ಯಕ್ಷವನ್ನು, ಪ್ರಥಮಃ=ಪ್ರಥಮದಲ್ಲಿ, ಬ್ರಹ್ಮೇತಿ=ಪರಬ್ರಹ್ಮವನ್ನಾಗಿ, ವಿದಾಂ ಚಕಾರ=ತಿಳಿದನು.

ತಾ ॥ ಮೇಲಿನ ಮಂತ್ರಗಳಲ್ಲಿ ದೇವತೆಗಳ ತಾರತಮ್ಯವನ್ನು ತಿಳಿಸಿರುತ್ತಾರೆ. ಪರಮಾತ್ಮತತ್ವವನ್ನು ಯಥಾರ್ಥವಾಗಿ ತಿಳಿದವರು ನಿಗರ್ವಿಗಳಾಗಿರುತ್ತಾರೆ. ಆದುದರಿಂದ ಬ್ರಹ್ಮಾದ್ಯುಮಾ ಪರ್ಯಂತ ಹತ್ತು ದೇವತೆಗಳು ಇತರ ಎಲ್ಲಾ ದೇವತೆಗಳಿಂದಲೂ ಉತ್ತಮರು. ಇವರಲ್ಲಿ ಬ್ರಹ್ಮ (ಚತುರ್ಮುಖನು) ಉತ್ತಮನು. ಉಮಾ ಅವರಳು. ಗರ್ವೋಪೇತರಾದ ಇಂದ್ರಾದಿ ದೇವತೆಗಳ ಪೈಕಿ ಕಾಮಾದಿ ದೇವತೆಗಳು ಯಕ್ಷರೂಪಿಯಾದ ಪರಮಾತ್ಮನ ವಿಚಾರವನ್ನು ಮೊದಲು ಮಾಡಿದುದರಿಂದ ತದಿತರರಿಂದ ಅವರು ಉತ್ತಮರು. ಪರಮಾತ್ಮನ ಜ್ಞಾನವಿಲ್ಲವಾದರೂ ಜ್ಞಾನೇಚ್ಛಾವುಳ್ಳವರು ಇತರರಿಂದ ಉತ್ತಮರೆಂದು ಸೂಚಿತವಾಯಿತು. ಆದರೂ ಜಿಜ್ಞಾಸುಗಳಲ್ಲಿ ಇಂದ್ರನು ಪ್ರಥಮತಃ ಪರಮಾತ್ಮನನ್ನು ತಿಳಿದುದರಿಂದ ಅವನು ಉಮಾದೇವಿಗೆ ಮಾತ್ರ ಅವರನು. ಕಾಮ, ಇಂದ್ರರು ಸಮಾನರು. ಮತ್ತು ಗರ್ವಯುಕ್ತರಾದ ಇತರ ದೇವತೆಗಳಿಂದಲೂ ಶ್ರೇಷ್ಠರು.

**ಮಂ ॥ ತಸ್ಯೈಷ ಆದೇಶೋ ಯದೇತದ್ವಿದ್ಯುತೋಽಭಿವ್ಯದ್ಯುತದಾ೩ ಇತಿ। ನ್ಯಮೀಮಿಷದಾ೩ ಇತ್ಯಧಿದೈವತಂ। ಅಥಾಧ್ಯಾತ್ಮಂ। ಯದೇತದ್ಗಚ್ಛತೀವ ಚ ಮನೋಽನೇನೈವ ತದುಪಸ್ಮರತಿ। ಅಭೀಕ್ಷ್ಣಂ ಸಂಕಲ್ಪಃ ತದ್ಧ ತದ್ವನಂ ನಾಮ ತದ್ವನಮಿತ್ಯುಪಾಸಿತವ್ಯಂ ॥ ೩ ॥**

ಅ ॥ ತಸ್ಯ=ಆ ಪರಬ್ರಹ್ಮನ, (ವಿಷಯಕವಾದ) ಏಷ ಆದೇಶಃ=ಇದು [illegible]ದೇಶವು. ಯದೇತತ್=ಕಪಿಲಾಖ್ಯರೂಪವು, ವಿದ್ಯುತಃ=ತೇಜೋರೂಪಗಳಾದ ವಸ್ತುಗಳನ್ನು, ಆ=ಚೆನ್ನಾಗಿ, ಅಭಿವ್ಯದ್ಯುತತ್=ಪ್ರಕಾಶಿಸಿತು, ಆ ನ್ಯಮೀಮಿಷತ್=ಪೂರ್ಣವಾದ ಬ್ರಹ್ಮವು ಚೆನ್ನಾಗಿ ಕಣ್ಣನ್ನು ಮುಚ್ಚಿತು. (ಅಂದರೆ ಪೂರ್ಣವಾದ ಬ್ರಹ್ಮವು ನಯನಗಳನ್ನು ಮುಚ್ಚಿಕೊಂಡು ಕ್ಷೀರಸಾಗರದಲ್ಲಿ ಮಲಗಿಕೊಂಡದೆ) ಇತಿ=ಹೀಗೆ, ಅಧಿದೈವತಂ=ಅಧಿದೈವದಲ್ಲಿದ್ದ ಭಗವದುಪದೇಶವು, ಅಥ=ಆ ಮೇಲೆ, ಅಧ್ಯಾತ್ಮಂ=ದೇಹದಲ್ಲಿದ್ದ ಭಗವದುಪದೇಶವು, (ಹೇಳಲ್ಪಡುತ್ತದೆ) ಯದೇತತ್ ಮನಃ=ಯಾವದೊಂದು ಮನಸ್ಸು, ಅನೇನೈವ=ಇವನಿಂದಲೇ ಪ್ರೇರಿತವಾಗಿ, ಗಚ್ಛತೀವ ಚ=ಹೋಗುವಂತಿದೆ. (ಅಂದರೆ ಸಂಪೂರ್ಣವಾಗಿ ವಸ್ತುವನ್ನು ವಿಷಯೀಕರಿಸುವುದಿಲ್ಲ,) ಅನೇನೈವ=ಅನಿರುದ್ಧಾಖ್ಯ ಹರಿಯಿಂದಲೇ, ತತ್=ವಿಷಯಸಮುದಾಯವನ್ನು, ಉಪಸ್ಮರತಿ=ಸ್ಮರಿಸುತ್ತದೆ. ಅಭೀಕ್ಷ್ಣಂ ಸಂಕಲ್ಪಃ=ನಿರಂತರದಲ್ಲಿಯೂ ಚೆನ್ನಾಗಿ ಅನೇಕಾರ್ಥಗಳನ್ನು ಸಂಕಲ್ಪಿಸ

ತಕ್ಕದು. (ಹೀಗೆ ಅನಿರುದ್ಧಾಖ್ಯಹರಿಯ ಆದೇಶವು.) ತತ್=ಆ ಬ್ರಹ್ಮವನ್ನು, ತತ್=(ವ್ಯಾಪ್ತವಾದುದರಿಂದ) ತತ್ ಎಂತಲೂ, ವನಂ ನಾಮ=ಭಜನೀಯವಾದುದರಿಂದ ವನವೆಂತಲೂ, ತದ್ವನಮಿತಿ=ಹೀಗೆ ತತ್ ವನವೆಂದು, ಉಪಾಸಿತವ್ಯಂ=ಉಪಾಸನಾ ಮಾಡತಕ್ಕದು, ಹ=ಪ್ರಸಿದ್ಧವು.

**ಮಂ ॥ ಸ ಯ ಏತದೇವಂ ವೇದಾಭಿ ಹೈನಂ ಸರ್ವಾಣಿ ಭೂತಾನಿ ಸಂವಾಂಛಂತಿ । ಉಪನಿಷದಂ ಭೋ ಬ್ರೂಹೀತಿ । ಉಕ್ತಾತ ಉಪನಿಷತ್ । ಬ್ರಾಹ್ಮೀಂ ವಾವತ ಉಪನಿಷದಮಬ್ರೂಮೇತಿ । ತಸ್ಯೈ ತಪೋ ದಮಃ ಕರ್ಮೇತಿ ಪ್ರತಿಷ್ಠಾ । ವೇದಾಃ ಸರ್ವಾಂಗಾನಿ ಸತ್ಯಮಾಯತನಂ । ಯೋ ಹ ವಾ ಏತಾಮುಪನಿಷದಮೇವಂ ವೇದಾಪಹತ್ಯ ಪಾಪ್ಮಾನಮನಂತೇ ಸ್ವರ್ಗೇ ಲೋಕೇ ಜ್ಯೇಯೇ ಪ್ರತಿತಿಷ್ಠತಿ ಜ್ಯೇಯೇ ಪ್ರತಿತಿಷ್ಠತಿ ॥ ೪ ॥** ॥ ಇತಿ ಚತುರ್ಥಃ ಖಂಡಃ ॥

## ಇತಿ ತಲವಕಾರೋಪನಿಷತ್ಸಮಾಪ್ತಾ.

**ಅ ॥** ಸ ಯಃ=ಯಾವ ಪ್ರಸಿದ್ಧ ಅಧಿಕಾರಿಯು, ಏತತ್=ಈ ಬ್ರಹ್ಮವನ್ನು, ಏವಂ='ತತ್ ವನಂ' ಎಂಬೀರೀತಿಯಾಗಿ, ವೇದ=ತಿಳುಕೊಳ್ಳುತ್ತಾನೋ, ಏನಂ=ಇಂಥಾ ಜ್ಞಾನಿಯನ್ನು, ಸರ್ವಾಣಿ ಭೂತಾನಿ=ಎಲ್ಲಾ ಪ್ರಾಣಿಗಳು, ಅಭಿಸಂವಾಂಛಂತಿ=ಇಚ್ಛಿಸುತ್ತಿವೆ. ಭೋ=ಎಲೈ ಚತುರ್ಮುಖನೇ! ಉಪನಿಷದಂ=ಉಪನಿಷತ್ತನ್ನು, ಬ್ರೂಹೀತಿ=ಹೇಳೆಂದು, (ಪುನಃ ಕೇಳಿದನು.) ತೇ=ನಿನಗೋಸ್ಕರ, ಉಪನಿಷತ್=ಉಪನಿಷತ್ ಪ್ರತಿಪಾದ್ಯವಾದ ಬ್ರಹ್ಮಾಖ್ಯಪ್ರಮೇಯವು, ಉಕ್ತಾ=ಹೇಳಲ್ಪಟ್ಟಿತು. (ಅಂದರೆ ಉಪನಿಷತ್ ಎಂಬುದಕ್ಕೆ—೧. ಉಪನಿಷತ್ಪ್ರತಿಪಾದ್ಯವಾದ ವಸ್ತುವು, ೨. ಉಪನಿಷದುತ್ಪನ್ನವಾದ ವಿದ್ಯಾಸ್ಥಾನವು, ೩. ವಿದ್ಯಾಸಾಧನವೂ ಹೀಗೆ ತ್ರಿವಿಧವಾದ ಅಭಿಪ್ರಾಯವನ್ನು ವಿಕಲ್ಪಿಸಿಕೊಂಡು ಮೇಲಿನ ಎರಡಕ್ಕೆ ಸಮಾಧಾನವನ್ನು ಮೇಲೆ ಹೇಳುವವರಾಗಿ ಒಂದನೇ ವಿಕಲ್ಪಕ್ಕೆ ಸಮಾಧಾನವನ್ನು ಕೊಟ್ಟರು.) ತೇ=ನಿನಗೋಸ್ಕರ, ಬ್ರಾಹ್ಮೀಂ=ಬ್ರಹ್ಮವಿಷಯಕವಾದ, ಉಪನಿಷದಂ=ಉಪನಿಷತ್ಸ್ವರೂಪವನ್ನು, ವಾವ=ನಿಸ್ಸಂಶಯವಾಗಿ, ಅಬ್ರೂಮ=ಹೇಳಿದೆವು, ಇತಿ=ಬ್ರಹ್ಮನು ಹೀಗೆಂದನು. ತಸ್ಯೈ=ಆ ಬ್ರಹ್ಮವಿದ್ಯೆಗೆ, ತಪಃ=ಕೃಚ್ಛ್ರ ಚಾಂದ್ರಾಯಣಾದಿಗಳು, ಅಥವಾ ಶಾಸ್ತ್ರಪರ್ಯಾಲೋಚನೆಯು, ದಮಃ=ಇಂದ್ರಿಯನಿಗ್ರಹವು, ಕರ್ಮ=ವರ್ಣಾಶ್ರಮೋಚಿತ ಕ್ರಿಯಾನುಷ್ಠಾನವು, ಇತಿ=ಇವುಗಳು, ಪ್ರತಿಷ್ಠಾ=ಸ್ಥಿತಿಹೇತುವು (ಅಂದರೆ ತಪಆದಿಸಂಪನ್ನರಲ್ಲಿ ವಿದ್ಯೆಯು ಇರುತ್ತದೆ. ಇವರೇ ವಿದ್ಯಾಸ್ಥಾನರು ) ವೇದಾಃ=ಋಗಾದಿ ವೇದಗಳು, ತದನುಕೂಲ ಗ್ರಂಥಗಳು, ಸರ್ವಾಂಗಾನಿ=ಶಿಕ್ಷಾದಿ ಷಡಂಗಗಳು, ಸತ್ಯಂ=ಮೀಮಾಂಸಾಶಾಸ್ತ್ರವು, (ಇವುಗಳು ಆ ವಿದ್ಯೆಗೆ) ಆಯತನಂ=ಉತ್ಪತ್ತಿಸ್ಥಾನವು. (ಅಂದರೆ ಸಾಧನಗಳು.) ಯೋಹ ವೈ=ಯಾವ ಅಧಿಕಾರಿಯು, ಏತಾಂ ಉಪನಿಷದಂ=ಈ ಉಪನಿಷತ್ತನ್ನು, ಏವಂ=ಇಷ್ಟರ ವರೆಗೆ ಹೇಳಿದ ಪ್ರಕಾರ, ವೇದ=ತಿಳುಕೊಳ್ಳುತ್ತಾನೋ, (ಅಂಥಾ ಅಧಿಕಾರಿಯು,) ಪಾಪ್ಮಾನಂ=ಪಾಪಸಮೂಹವನ್ನು, ಅಪಹತ್ಯ=ಬಿಟ್ಟು, ಅನಂತೇ=ಪರಿಚ್ಛೇದಶೂನ್ಯನಾದ, ಸ್ವರ್ಗೇ=ಸ್ವರೂಪಭೂತ ಸುಖಜ್ಞಾನರೂಪನಾದ, ಲೋಕೇ=ಪ್ರಕಾಶರೂಪನಾದ, ಜ್ಯೇಯೇ=ಸರ್ವೋತ್ತಮನಾದ ವಿಷ್ಣುವಿನಲ್ಲಿ, ಪ್ರತಿತಿಷ್ಠತಿ=ಇರುತ್ತಾನೆ. (ಅಂದರೆ ಮುಕ್ತನಾಗುವನು.) ಇಷ್ಟರ ವರೆಗೆ ಹೇಳಿದ ಪ್ರಮೇಯವು ನಿಶ್ಚಯವೆಂದು ತಿಳಿಸುವುದಕ್ಕೋಸ್ಕರ ಅಂತ್ಯದಲ್ಲಿ ದ್ವಿರುಕ್ತಿಯನ್ನು ಇಟ್ಟಿದ್ದಾರೆ. ॥ ೪ ॥

**ತಲವಕಾರೋಪನಿಷತ್ತು ಸಮಾಪ್ತವಾಯಿತು.**

ಭಾ || ಉಮಾ ಸಾ ಸಮ್ಯಗಾಚಷ್ಟ ತಸ್ಮೈ ವಿಷ್ಣುಂ ಪರಂ ಪದಂ || (೧. ವ.)

ಅ || (೧ ವ.) ಅಂತಹ ಪಾರ್ವತಿಯು ಸರ್ವೋತ್ತಮನೂ, ಗನ್ಯನೂ ಆದ ವಿಷ್ಣು ವನ್ನು ಆ ಇಂದ್ರನಿಗೆ ಚೆನ್ನಾಗಿ ಉಪದೇಶಿಸುವವಳಾದಳು.

ಭಾ || ಯಸ್ಮಾದ್ಬ್ರಹ್ಮಾ ಚ ವಾಯುಶ್ಚ ಶೇಷವೀಂದ್ರೌ ಶಿವಸ್ತಥಾ |
ಸಭಾರ್ಯಾ ಗರ್ವಿಣೋ ನಾಸನ್ ಸುರೇಭ್ಯಸ್ತೇಽಧಿಕಾಸ್ತತಃ ||

ಅ || ಯಾವ ಕಾರಣದಿಂದ ಪತ್ನೀಸಹಿತರಾದ ಚತುರ್ಮುಖ, ಮುಖ್ಯಪ್ರಾಣ, ಶೇಷ, ಗರುಡ, ರುದ್ರ ಇಷ್ಟು ದೇವತೆಗಳು ಅಹಂಕಾರಿಗಳಾಗಲಿಲ್ಲವೋ, ಆದುದರಿಂದಲೇ ಈ ದೇವತೆ ಗಳು ಇಂದ್ರಾದಿ ಎಲ್ಲಾ ದೇವತೆಗಳಿಂದಲೂ ಉತ್ತಮರು.

ಭಾ || ಇಂದ್ರಸ್ತು ಪ್ರಥಮಂ ಬ್ರಹ್ಮ ವ್ಯಜಾನಾತ್ತೇನ ಶೂತ್ತಮಃ |
ದಕ್ಷಾದಿಭ್ಯಸ್ತಥಾ ಕಾಮಃ ತಜ್ಜ್ಞಾತುಂ ಪೂರ್ವಮುಕ್ತವಾನ್||(೧ ೨.ವ)

ಅ || (೧.೨. ವ.) ಆ ಮೇಲೆ ಇಂದ್ರನು ಪ್ರಥಮತಃ ಬ್ರಹ್ಮನನ್ನು ತಿಳಿದನು. ಕಾಮನು ಈ ಮೊದಲೇ ದಕ್ಷಾದಿಗಳಿಗೆ ಬ್ರಹ್ಮನನ್ನು ತಿಳಿಯಲಿಕ್ಕೆ ಹೇಳಿದ್ದನು. ಆದುದರಿಂದಲೇ ಇವ ರಿಬ್ಬರು ದಕ್ಷಾದಿಗಳಿಂದ ಉತ್ತಮರಾಗಿಯೂ ಅನ್ಯೋನ್ಯ ಸಮರಾಗಿಯೂ ಇರುತ್ತಾರೆ.

ಭಾ || ದಕ್ಷೋ ಬೃಹಸ್ಪತಿಶ್ಚೈವ ಮನುಃ ಕಾಮಾತ್ಮಜಸ್ತಥಾ |
ಸೂರ್ಯಾಚಂದ್ರಮಸೌ ಧರ್ಮೋ ವರುಣಶ್ಚೋಚುರೋಮಿತಿ || (೧.ವ.)

ಅ || (೧ ವ.) ಕಾಮನು ಬ್ರಹ್ಮನನ್ನು ತಿಳಿಯಬೇಕೆಂದು ದಕ್ಷಾದಿಗಳ ಹತ್ತಿರ ಹೇಳೋಣ, ದಕ್ಷ, ಬೃಹಸ್ಪತಿ, ಸ್ವಾಯಂಭುವ ಮನು, ಕಾಮಪುತ್ರನಾದ ಅನಿರುದ್ಧನು, ಸೂರ್ಯ, ಚಂದ್ರ, ಯಮ, ವರುಣ, ಇಷ್ಟು ದೇವತೆಗಳು ಆಗಬಹುದೆಂದು ಹೇಳಿದರು. ಆದುದರಿಂದಲೇ ಇವರು ಇತರರಿಂದ ಉತ್ತಮರು.

ಭಾ || ನಾಸಿಕ್ಯವಾಯುರಗ್ನಿಶ್ಚ ಪ್ರಥಮಂ ತದಪಶ್ಯತಾಂ ||

ಅ || ನಾಸಿಕ್ಯವಾಯುವೂ ಅಗ್ನಿಯೂ ಪ್ರಥಮದಲ್ಲಿ ಯಕ್ಷರೂಪವನ್ನು ಮಾತ್ರ ನೋಡಿದರು.

ಭಾ || ಸರ್ವದೇವಾಧಿಕಾಸ್ತಸ್ಮಾತ್ ಏತೇ ದೇವಾಃ ಪ್ರಕೀರ್ತಿತಾಃ |

ಅ || ಆದುದರಿಂದಲೇ ಇಷ್ಟರ ವರೆಗೆ ಹೇಳಿದ ದೇವತೆಗಳು ಇತರ ಎಲ್ಲಾ ದೇವತೆ ಗಳಿಗಿಂತಲೂ ಉತ್ತಮರೆಂದು ಹೇಳಲ್ಪಟ್ಟಿದ್ದಾರೆ.

ಭಾ || ಏತೇಭ್ಯಶ್ಚೇಂದ್ರಕಾಮೌ ತು ತಾಭ್ಯಾಂ ಬ್ರಹ್ಮಾದಯೋಽಧಿಕಾಃ ||

ಅ || ಇಷ್ಟು ದೇವತೆಗಳಿಗಿಂತ (ಅಂದರೆ ದಕ್ಷಾದಿಗಳಿಗಿಂತ) ಇಂದ್ರಕಾಮರು ಉತ್ತ ಮರು. ಅವರಿಬ್ಬರಿಂದ ಬ್ರಹ್ಮಾದಿಗಳುತ್ತಮರು.

ಭಾ || ಏತೇಷಾಮವಮೋ ವಹ್ನಿಃ ಪರಮೋ ವಿಷ್ಣು ರುಚ್ಯತೇ |
ಅಂತರಾಲೇ ಸ್ಥಿತಾಸ್ತ್ವನ್ಯೇ ಬ್ರಹ್ಮಾದ್ಯಾಃ ಪೂರ್ವವಾರಿತಾಃ |

ಅ || ಎಲ್ಲಾ ದೇವತೆಗಳಲ್ಲಿ ನಿಕೃಷ್ಟನಾದವನು ಅಗ್ನಿಯು. ಉತ್ತಮೋತ್ತಮನು ವಿಷ್ಣು ವೆಂದು ಹೇಳಲ್ಪಟ್ಟಿರುತ್ತಾನೆ. ಇತರರಾದ ಪೂರ್ವೋಕ್ತಬ್ರಹ್ಮಾದಿಗಳು ಮಧ್ಯಮರಾಗಿರುತ್ತಾರೆ.

ಭಾ ॥ ಅಗ್ನಿಃ ಪಶ್ಚಾದ್ವಿಜಾನಾತ್ತದಿಂದ್ರವಾಕ್ಯಾತ್ತತೋಽವಮಃ ।
ತಸ್ಮಾದ್ವಿಷ್ಣ್ವಭಿಸಂಬಂಧಾತ್ಪಾರಾವರ್ಯಂ ಸುರೇಷ್ವಿದಂ ॥(೧. ೨. ವ.)

ಅ ॥ (೧. ೨. ವ.) ಅಗ್ನಿಯು ಇಂದ್ರನಮಾತನ್ನು ಕೇಳಿದಮೇಲೆ ಯಾ ದಕ್ಷಾದಿಗಳು ತಿಳಿದಮೇಲೆ ಆ ಯಕ್ಷವನ್ನು ಪರಬ್ರಹ್ಮವೆಂದು ತಿಳಿದನು. ಕಾರಣ ಸರ್ವರಿಂದಲೂ ನಿಕೃಷ್ಟ ನಾಗಿರುತ್ತಾನೆ. ಹಾಗೂ ವಿಷ್ಣುತತ್ವವನ್ನು ತಿಳಿದುಕೊಂಡಪ್ರಕಾರ ದೇವತೆಗಳಲ್ಲಿ ಈ ರೀತಿ ಯಾಗಿ ಉಚ್ಚನೀಚ ಭಾವವಿರುತ್ತದೆ.

ಭಾ ॥ ವ್ಯದ್ಯೋತಯದ್ವಿದ್ಯುದಾದೀನ್ ಕಪಿಲಾಖ್ಯಸ್ತು ಯೋ ಹರಿಃ ।
ಅಕ್ಷ್ಣೋರ್ನಿಮೇಷಣಂ ಕೃತ್ವಾ ಯಃ ಶೇತೇ ಕ್ಷೀರಸಾಗರೇ ।
ಸ ಏವೈಕಃ ಪರಂ ಬ್ರಹ್ಮೇತ್ಯೇವಂ ತಸ್ಯೋಪದೇಶನಂ। ಅಧಿ ದೈವೇ ।
(೩. ವ.)

ಅ ॥ (೩. ವ.) ಯಾವ ಕಪಿಲಾಖ್ಯಹರಿಯು ವಿದ್ಯುದಾದಿ ತೇಜಃ ಪದಾರ್ಥಗಳನ್ನೂ ಪ್ರಕಾಶಗೊಳಿಸುತ್ತಿದ್ದಾನೋ, ಯಾವಾತನು ಕಣ್ಣುಗಳನ್ನು ಮುಚ್ಚಿಕೊಂಡು ಕ್ಷೀರಸಮುದ್ರ ದಲ್ಲಿ ಮಲಗಿಕೊಂಡಿರುತ್ತಾನೋ, ಆತನೊಬ್ಬನೇ ಪರಬ್ರಹ್ಮನು (ಹೀಗೆ ಅಧಿದೈವದಲ್ಲಿದ್ದ ಭಗವ ತ್ಸಂಬಂಧವಾದ ಉಪದೇಶವು.

ಭಾ ॥ ತಥಾಧ್ಯಾತ್ಮೇಯಂ ಮನೋ ಗಚ್ಛತೀವ ಚ ।
ಸಮ್ಯಜ್ಞ ಗಚ್ಛತಿ ಕ್ವಾಪಿ ಮನೋ ಯೇನ ಸ್ಮರತ್ಯಪಿ ।
ಸೋಽನಿರುದ್ಧಾಖ್ಯ ಈಶೇಶಃ ಪರಂ ಬ್ರಹ್ಮೇತಿ ಕೀರ್ತ್ಯತೇ ॥

ಅ ॥ ಎಷ್ಟು ಪ್ರಯತ್ನಪಟ್ಟರೂ ಯಾರೊಬ್ಬನಮನಸ್ಸೂ ಯಾವ ಅನಿರುದ್ಧಾಖ್ಯಹರಿಯ ಸಮೀಪಕ್ಕೆ ಹೋಗುವಂತಿದೆಯಲ್ಲದೆ ಚನ್ನಾಗಿ ಎಲ್ಲಿಯೂ ಹೋಗುವುದಿಲ್ಲವೋ? ಯಾವ ಅನಿ ರುದ್ಧಾಖ್ಯ ಹರಿಯಿಂದಲೇ ಮನಸ್ಸು ಪ್ರೇರಿತವಾಗಿ ವಿಷಯಸ್ಮರಣಸಾಧನವಾಗುತ್ತಿದೆಯೋ, ಅಂತಹ ಅನಿರುದ್ಧಾಖ್ಯ ಸರ್ವೇಶ್ವರನು ಪರಬ್ರಹ್ಮನೆಂದು ಹೇಳಲ್ಪಟ್ಟಿರುತ್ತಾನೆ. ಹೀಗೆ ದೇಹದ ಲ್ಲಿದ್ದ ಅನಿರುದ್ಧಾಖ್ಯ ಭಗವಂತನ ಸಂಬಂಧವಾದ ಉಪದೇಶವು.

ಭಾ ॥ ಸ ವಿಷ್ಣುಸ್ತದ್ವನಂ ನಾಮ ತತತ್ವಾದ್ವನನೀಯತಃ ।
ಏವಮೇನಂ ತು ಯೋ ವೇದ ಭವೇತ್ಸರ್ವೈರಪೇಕ್ಷಿತಃ ॥

ಅ ॥ ಅಂಥಾ ಹರಿಯು ವ್ಯಾಪ್ತನಾದುದರಿಂದ 'ತತ್' ಎಂತಲೂ ಸರ್ವರಿಂದಲೂ, ಭಜಿಸಲು ಯೋಗ್ಯನಾದುದರಿಂದ 'ವನ' ಎಂತಲೂ ಪ್ರಸಿದ್ಧನು. (೩. ವ.) ಹೀಗೆ ಯಾವನು ಈ ಹರಿಯನ್ನು ತಿಳುಕೊಳ್ಳುತ್ತಾನೋ ಆತನು ಎಲ್ಲರಿಂದಲೂ ಅಪೇಕ್ಷಣೀಯನಾಗುತ್ತಾನೆ. (ಅಂದರೆ ಪೂಜಿಸಲ್ಪಡುತ್ತಾನೆ).

ಭಾ ॥ ಏತಚ್ಛ್ರುತ್ವಾ ಹರೋಽಪೃಚ್ಛದ್ಬ್ರಹ್ಮಾಣಂ ಪುನರೇವ ತು ।
ವಿದ್ಯಾಕಾರಂ ಮಮ ಬ್ರೂಹೀತ್ಯುಕ್ತೋ ಬ್ರಹ್ಮಾಽಹ ತಂ ಪುನಃ ॥
ವಿದ್ಯಾವೇದ್ಯಂ ತವ ಪ್ರೋಕ್ತಂ ಆಸ್ಥಾನಂ ತೇ ವದಾಮ್ಯಹಂ ॥

ಅ ॥ ಈ ರಿತಿಯಾಗಿ ಹೇಳಿದ ಮಾತನ್ನು ಕೇಳಿ ರುದ್ರನು ಚತುರ್ಮುಖನೊಡನೆ ವಿದ್ಯಾಕಾರವನ್ನು ಹೇಳಬೇಕೆಂದು ತಿರುಗಿ ಕೇಳಿದನು. ಹೀಗೆ ರುದ್ರನಿಂದ ಕೇಳಲ್ಪಟ್ಟ ಚತು ರ್ಮುಖನು ರುದ್ರನನ್ನು ಕುರಿತು ಎಲೈ ರುದ್ರನೇ! ವಿದ್ಯೆಯಿಂದ ತಿಳಿಯತಕ್ಕವಸ್ತು ನಿನಗೆ ಹೇಳ ಲ್ಪಟ್ಟಿತು. ಇನ್ನು ಆಸ್ಥಾನವನ್ನು (ಅಂದರೆ ಅದರ ಅಧಿಷ್ಠಾನವನ್ನು) ಹೇಳುತ್ತೇನೆ.

**ಭಾ** ॥ ತಪೋದಮಃ ಸ್ವಧರ್ಮೇಷು ಯೇ ಸ್ಥಿತಾಸ್ತೇಷು ತಿಷ್ಠತಿ ।
- ವಿದ್ಯಾ । (ಳ. ವ.)

ಅ ॥ ಯಾರು ತಪ, ದಮ, ಸ್ವಧರ್ಮ ಇವುಗಳಲ್ಲಿ ನಿರತರಾಗಿರುತ್ತಾರೋ, ಅವರಲ್ಲಿ ಈ ವಿದ್ಯೆಯಿರುತ್ತದೆ.

**ಭಾ** ॥ ಸ್ಥಾನಾನಿ ತಸ್ಯಾಸ್ತು ವೇದಾ ಅಂಗಾನಿ ನಿರ್ಣಯಃ ॥

ಅ ॥ ಋಗಾದಿ ವೇದಗಳು, ತದನುಕೂಲ ಗ್ರಂಥಗಳು, ಶಿಕ್ಷಾದಿ ಷಡಂಗಗಳು. ಮೀಮಾಂಸಾಶಾಸ್ತ್ರವು ಆ ವಿದ್ಯೆಗೆ ಉತ್ಪತ್ತಿಸ್ಥಾನಗಳು.

**ಭಾ** ॥ ವೇದ್ಯೈ ತಾಮೇವಮಖಿಲಂ ಯೋ ವಿಷ್ಣೌ ಪ್ರತಿತಿಷ್ಠತಿ ।
- ಇತ್ಯಾದಿ ಬ್ರಹ್ಮಸಾರೇ ॥

ಅ ॥ ಇಷ್ಟನ್ನೂ ಯಾವಾತನು ಸಂಪೂರ್ಣವಾಗಿ ತಿಳಿದು ಕೊಳ್ಳುತ್ತಾನೋ ಆತನು ವಿಷ್ಣುವಿನಲ್ಲಿ ಸ್ಥಿರವಾಗಿ ಇರುತ್ತಾನೆ. (ಅಂದರೆ ಮುಕ್ತನಾಗುತ್ತಾನೆ.) ಹೀಗೆ ಬ್ರಹ್ಮಸಾರದಲ್ಲಿ ಹೇಳಿಯದೆ.

**ಭಾ** ॥ ವಿದ್ಯುತಃ ಸೂರ್ಯಾದಿ ಪ್ರಕಾಶಾನ್ ।
ಆ ಸಮಂತಾತ್ ವ್ಯದ್ಯುತತ್ ಪ್ರಾಕಾಶಯತ್ ॥
"ಯದಾದಿತ್ಯಗತಂ ತೇಜೋ ಜಗದ್ಭಾಸಯತೇಽಖಿಲಂ ।
ಯಚ್ಚಂದ್ರಮಸಿ ಯಚ್ಚಾಗ್ನೌ ತತ್ತೇಜೋ ವಿದ್ಧಿ ಮಾಮಕಮ್"
- ಇತಿ ವಚನಾತ್ ॥

ಅ ॥ 'ವಿದ್ಯುತಃ' ಅಂದರೆ ಸೂರ್ಯಾದಿ ಪ್ರಭೆಗಳನ್ನು 'ಆ' ಎಂದರೆ ಚೆನ್ನಾಗಿ 'ವ್ಯದ್ಯುತತ್' ಅಂದರೆ ಪ್ರಕಾಶಗೊಳಿಸಿದನು, ಸೂರ್ಯನಲ್ಲಿದ್ದ ಯಾವದೊಂದು ತೇಜಸ್ಸು ಎಲ್ಲಾ ಜಗತ್ತನ್ನು ಪ್ರಕಾಶಗೊಳಿಸುತ್ತದೆಯೋ, ಚಂದ್ರಾಗ್ನಿಗಳಲ್ಲಿ ಯಾವ ತೇಜಸ್ಸು ಅದೆಯೋ, ಆ ಎಲ್ಲಾ ತೇಜಸ್ಸೂ ನನ್ನದೇ ಎಂದು ತಿಳಿ, ಎಂದು (ಅರ್ಜುನನ್ನು ಕುರಿತು ಕೃಷ್ಣನು ಗೀತೆಯಲ್ಲಿ ಆಜ್ಞಾಪಿಸಿದುದರಿಂದ) ಎಲ್ಲಾ ತೇಜಸ್ಸೂ ಹರಿಯಧೀನವೆಂದು ತಿಳುಕೊಳ್ಳತಕ್ಕದು.

**ಭಾ** ॥ "ತಮೇವ ಭಾಂತಮನುಭಾತಿ ಸರ್ವಂ ತಸ್ಯ ಭಾಸಾ ಸರ್ವಮಿದಂ
ವಿಭಾತಿ" ಇತಿ ಚ ॥

ಅ ॥ ಅಲ್ಲದೆ ಪ್ರಕಾಶಗೊಳಿಸುತ್ತಿರುವ ಹರಿಯನ್ನನುಸರಿಸಿಯೇ ಸೂರ್ಯಾದಿಗಳು ಪ್ರಕಾಶಗೊಳಿಸುತ್ತಾರೆ. ಹರಿಯ ಪ್ರಕಾಶದಿಂದಲೇ ಈ ಎಲ್ಲಾ ಜಗತ್ತೂ ಪ್ರಕಾಶಿಸುತ್ತದೆ. ಹೀಗೆಯೂ (ಕಾಠಕೋಪನಿಷತ್ತಿನಲ್ಲಿ) ಹೇಳಿಯದೆ.

**ಭಾ** ॥ ನ್ಯಮೀಮಿಷತ್ ಆ ಸಮಂತಾತ್ ನಿಮೀಲಿತಾಕ್ಷಮಭವತ್

ಅ ॥ ನ್ಯಮೀಮಿಷತ್ ಅಂದರೆ ಪೂರ್ಣನಾದ ಬ್ರಹ್ಮವು ಚೆನ್ನಾಗಿ ಕಣ್ಣನ್ನು ಮುಚ್ಚಿಕೊಂಡದ್ದಾಯಿತು.

**ಭಾ** ॥ "ಸ ವೈ ಕಿಲಾಯಂ ಪುರುಷಃ ಪುರಾತನೋ ಯ ಏಕ ಆಸೀದವಿಶೇಷ

ಆ

ಅಗ್ರೇ ಗುಣೇಭ್ಯೋ ಜಗದಾತ್ಮನೀಶ್ವರೇ ನಿಮೀಲಿತಾತ್ಮಾ ನಿಶಿ ಸುಪ್ತ ಶಕ್ತಿಷು" || ಇತಿ ವಚನಾತ್ ||

ಅ || ಸತ್ವಾದಿ ಗುಣಗಳು ಹುಟ್ಟುವದಕ್ಕಿಂತ ಮುಂಚೆಯೇ ಮಹಾ ಪ್ರಳಯದಲ್ಲಿ ಸತ್ವಾದಿಗಳ ಶಕ್ತಿಯು ಇಲ್ಲದಿರುವಾಗ ಸರ್ವರಲ್ಲಿ ಪ್ರಧಾನನಾಗಿಯೂ ಪುರಾತನನಾಗಿಯೂ ಗುಣಭರಿತನಾಗಿಯೂ ಇರುವ ಯಾವ ಶ್ರೀಹರಿಯು ಕಣ್ಣನ್ನು ಮುಚ್ಚಿದ ಸ್ವರೂಪವುಳ್ಳವನಾಗಿಯೂ ತನ್ನಿಂದ ಉತ್ತಮರಿಲ್ಲದೆ ಇದ್ದವನಾಗಿಯೂ, ಎಲ್ಲಾ ಜಗತ್ತಿಗೂ ನಿಯಾಮಕನಾಗಿಯೂ ಸರ್ವ ಸ್ವತಂತ್ರನಾಗಿಯೂ ತನ್ನಲ್ಲಿಯೇ ಇರುತ್ತಾನೋ ಆತನೇ ಈ ಕೃಷ್ಣನು ಎಂಬೀ ಪ್ರಮಾಣದಿಂದ ಪ್ರಳಯಕಾಲದಲ್ಲಿ ಹರಿಯು ನಿಮೀಲಿತಾಕ್ಷನಾಗಿ ಇರುತ್ತಾನೆಂದು ಹೇಳಿದ ಹಾಗಾಯಿತು.

**ಭಾ** || ಪೂರ್ಣತ್ವಾಚ್ಚ ಆಃ |

ಅ || ಗುಣಪರಿಪೂರ್ಣನಾದುದರಿಂದ ಪರಬ್ರಹ್ಮನು 'ಆಃ'ಎಂದು ಹೇಳಿಸಿಕೊಳ್ಳುತ್ತಾನೆ.

**ಭಾ** || ಅಭೀಕ್ಷ್ಣಂ ಸಂಕಲ್ಪ ಇತಿ ಮನಸೋ ವಿಶೇಷಣಂ |
ಸಂಕಲ್ಪಕಮಿತ್ಯರ್ಥಃ |

ಅ || ಅಭೀಕ್ಷ್ಣಂ ಸಂಕಲ್ಪಃ ಎಂಬುವದು ಮನಸ್ಸಿಗೆ ವಿಶೇಷಣವು. ಸಂಕಲ್ಪಕವು ಅನೇಕಾರ್ಥಗಳನ್ನು ವಿಷಯೀಕರಿಸತಕ್ಕದ್ದು ಎಂದರ್ಥವು.

**ಭಾ** || ಸ ಪ್ರತಿಷ್ಠಾಂ ಸಾಯತನಾಂ ಉಪನಿಷದಂ ಬ್ರೂಹೀತ್ಯುಕ್ತೇ |
ಸಮ್ಯಗೇವ ಮಯಾ ಉಪನಿಷತ್ಸ್ವರೂಪಮುಕ್ತಂ |
ತತ್ರ ವಕ್ತವ್ಯಂ ನಾಸ್ತಿ ||

ಅ || ಆಶ್ರಯೋತ್ಪತ್ತಿಸ್ಥಾನಗಳಿಂದೊಡಗೂಡಿದ ಉಪನಿಷತ್ತನ್ನು ಹೇಳು ಎಂದು ರುದ್ರನು ಹೇಳೋಣ ನನ್ನಿಂದ ಉಪನಿಷತ್ಸ್ವರೂಪವು ಹೇಳಲ್ಪಟ್ಟಿದೆ. ಆ ವಿಷಯದಲ್ಲಿ ಹೇಳತಕ್ಕಾಂಶವಿಲ್ಲ. ಎಂದು ಚತುರ್ಮುಖನು ಹೇಳಿದನು.

**ಭಾ** || ತಪೋ ದಮಃ ಕರ್ಮ ಚ ವಿದ್ಯಾಯಾಃ ಪ್ರತಿಷ್ಠಾ |
ತದ್ವತ್ಸು ವಿದ್ಯಾ ಪ್ರತಿತಿಷ್ಠತೀತ್ಯರ್ಥಃ ||

ಅ || ತಪ ಆದಿಗಳು ವಿದ್ಯೆಗೆ ಸ್ಥಾನವು ಅಂದರೆ ತಪ ಆದಿಸಂಪನ್ನರಲ್ಲಿ ವಿದ್ಯೆಯಿರುತ್ತದೆಂದರ್ಥವು.

**ಭಾ** || ಸತ್ಯಮಿತಿ ಮೀಮಾಂಸಾ | 'ನಿರ್ಣೀಯತೇ ಯತಃ ಸಮ್ಯಗಿದಂ ಸತ್ಯಮಿತಿ ಸ್ಫುಟಂ |'

"ಶ್ರುತಿಸ್ಮೃತ್ಯುದಿತಂ ಸರ್ವಂ ವ್ಯಕ್ತಂ ಮೀಮಾಂಸಯೈತಯಾ|
ಸತ್ಯಮಿತ್ಯುಚ್ಯತೇ ತಸ್ಮಾತ್ ಮೀಮಾಂಸಾ ಬ್ರಹ್ಮನಿಶ್ಚಯಾ" |
- ಇತಿ ಶಬ್ದನಿರ್ಣಯೇ ||

ಅ || ಸತ್ಯವೆಂದರೆ ಮೀಮಾಂಸಾಶಾಸ್ತ್ರವು ಯಾವ ಕಾರಣದಿಂದ ಶ್ರುತಿಸ್ಮೃತಿಗಳಲ್ಲಿ ಹೇಳಲ್ಪಟ್ಟ ವಿಷಯವು ಚೆನ್ನಾಗಿ ಈ ಮೀಮಾಂಸಾ ಶಾಸ್ತ್ರದಿಂದಲೇ ವ್ಯಕ್ತವಾಗಿ ಪರಮಾರ್ಥ ಸತ್ಯವಾಗಿ ನಿಶ್ಚಯಿಸಲ್ಪಡುತ್ತದೋ, ಆದುದರಿಂದ ಬ್ರಹ್ಮವಿಷಯಕ ನಿರ್ಣಯವನ್ನುಂಟುಮಾಡುವ ಮೀಮಾಂಸಾ ಶಾಸ್ತ್ರವು ಸತ್ಯವೆಂದು ಶಬ್ದನಿರ್ಣಯದಲ್ಲಿ ಹೇಳಲ್ಪಟ್ಟದೆ.

ಭಾ || (೧) "ಋಗ್ಯಜುಃ ಸಾಮಾಥರ್ವಾಶ್ಚ ಪಂಚರಾತ್ರಂ ಚ ಭಾರತಂ |
ಮೂಲರಾಮಾಯಣಂ ಚೈವ ಪುರಾಣಂ ಭಗವತ್ಪರಂ |
ವೇದಾ ಇತ್ಯುಚ್ಯತೇ ಸದ್ಭಿಃ (೨) ಶಿಕ್ಷಾದ್ಯಂ ಸ್ಮೃತಯಸ್ತಥಾ |
ಅಂಗಾನಿ, (೩) ಸತ್ಯಂ ಮೀಮಾಂಸಾ ತದ್ವಿದ್ಯಾಯತನಂ ತ್ರಯಂ" |
- ಇತಿ ವಿದ್ಯಾನಿರ್ಣಯೇ ||

ಅ || (೧) ಋಗಾದಿ ನಾಲ್ಕು ವೇದಗಳು, ಪಂಚರಾತ್ರಾಗಮ, ಭಾರತ, ಮೂಲರಾಮಾಯಣ, ಹರಿಸರ್ವೋತ್ತಮತ್ವಪ್ರತಿಪಾದಕ ಪುರಾಣಗಳು ಇಷ್ಟೂ ಸಜ್ಜನರಿಂದ ವೇದವೆಂದು ಹೇಳಲ್ಪಡುತ್ತದೆ. (೨) ಶಿಕ್ಷಾದಿಗಳೂ ಹಾಗೇ ಸ್ಮೃತಿಗಳೂ ಅಂಗಗಳೆನ್ನಿಸಿಕೊಳ್ಳುತ್ತವೆ. (೩) ಸತ್ಯವೆಂಬೀ ಮೀಮಾಂಸಾ ಶಾಸ್ತ್ರವು ಇವು ಮೂರು ವಿದ್ಯೆಗೆ ಉತ್ಪತ್ತಿಸ್ಥಾನವು. ಹೀಗೆ ವಿದ್ಯಾನಿರ್ಣಯದಲ್ಲಿ ಹೇಳಲ್ಪಟ್ಟದೆ.

ಭಾ || ಯಶ್ಚಿದಾನಂದಸಚ್ಛಕ್ತಿಸಂಪೂರ್ಣೋ ಭಗವಾನ್ ಪರಃ |
ನಮೋಽಸ್ತು ವಿಷ್ಣವೇ ತಸ್ಮೈ ಪ್ರೇಷ್ಠಾಯ ಪ್ರೇಯಸಾಂ ಚ ಮೇ ||

ಅ || ಯಾವ ಸರ್ವೋತ್ತಮನಾದ ಶ್ರೀಪರಮಾತ್ಮನು ಜ್ಞಾನಾನಂದಗಳು ನಿರ್ದುಷ್ಟವಾದ ಶಕ್ತಿಯೂ ಇವುಗಳಿಂದ ಪೂರ್ಣನಾಗಿದ್ದಾನೋ (ಮತ್ತು) ನನಗೆ ಪ್ರಿಯವಸ್ತುಗಳಲ್ಲೆಲ್ಲಾ ವಿಶೇಷತಃ ಪ್ರಿಯನಾಗಿರುವ ಪ್ರಸಿದ್ಧ ವಿಷ್ಣುಗೋಸ್ಕರ ನಮಸ್ಕಾರವು.

**ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಚಿತಂ**

## ತಲವಕಾರೋಪನಿಷದ್ಭಾಷ್ಯಂ ಸಂಪೂರ್ಣಂ.

**ಇಲ್ಲಿಗೆ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ಮಾಡಲ್ಪಟ್ಟ ತಲವಕಾರೋಪನಿಷದ್ಭಾಷ್ಯವು ಸಂಪೂರ್ಣವಾಯಿತು. || ಶ್ರೀಃ ||**

**ಸಭಾಷ್ಯಕೇನೋಪನಿಷದ್ವಿವೃತಿಂ ದೇಶಭಾಷಯಾ |**
**ತಂತ್ರಿನಾರಾಯಣಸ್ತ್ವೇವಮತನ್ವತ ಹರೇರ್ಮುದೇ ||**



# ಸಭಾಷ್ಯ ಷಟ್ಪ್ರಶ್ನೋಪನಿಷತ್ತು.



ಶ್ರೀವಾಸುದೇವಮಾನಮ್ಯ ಪೂರ್ಣಬೋಧಾನ್ ಗುರೂನಪಿ ।
ಕರಿಷ್ಯೇ ಪ್ರಶ್ನಷಟ್ಕೀಯ ಭಾಷ್ಯವ್ಯಾಖ್ಯಾನಪಂಚಿಕಾಂ ॥

**ಶ್ರೀಮದ್ಧನುಮದ್ಭೀಮಮಧ್ವಾಂತರ್ಗತರಾಮಕೃಷ್ಣವೇದವ್ಯಾಸಾತ್ಮಕ ಲಕ್ಷ್ಮೀಹಯಗ್ರೀವಾಯ ನಮಃ ॥ ಹರಿಃ ಓಂ ॥**

**ಭಾ** ॥ ಓಂ ॥ ನಮೋ ಭಗವತೇ ತಸ್ಮೈ ಪ್ರಾಣಾದಿಪ್ರಭವಿಷ್ಣವೇ ।
ಅಮಂದಾನಂದಸಾಂದ್ರಾಯ ವಾಸುದೇವಾಯ ವೇಧಸೇ ॥

ಅ ॥ ಪ್ರಾಣಾದಿಪ್ರಭವಿಷ್ಣವೇ=ಮುಖ್ಯಪ್ರಾಣನೇ ಮೊದಲಾದವರಿಗೆ ಸೃಷ್ಟಿಕರ್ತನಾದ, ಅಮಂದಾನಂದಸಾಂದ್ರಾಯ=ಅಪರಿಮಿತವಾದ ಸಂತೋಷದಿಂದ ಪೂರ್ಣನಾದ, ವೇಧಸೇ=ಸರ್ವಜ್ಞನಾದ, ಭಗವತೇ=ಷಡ್ಗುಣೈಶ್ವರ್ಯಸಂಪನ್ನನಾದ, ತಸ್ಮೈ=ಸಕಲಶಾಸ್ತ್ರಪ್ರತಿಪಾದ್ಯನಾದ, ವಾಸುದೇವಾಯ=ವಾಸುದೇವರೂಪಿ ಶ್ರೀಪರಮಾತ್ಮನಿಗೋಸ್ಕರ, ನಮಃ=ನಮಸ್ಕಾರವು, (ಆಗಲಿ).

ತಾ ॥ ಈ ಉಪನಿಷತ್ತಿನಲ್ಲಿ ಶ್ರೀ ವಾಸುದೇವರೂಪಿ ಶ್ರೀ ಪರಮಾತ್ಮನೇ ಮುಖ್ಯ ದೇವತೆಯು. (ಪ್ರತಿಪಾದ್ಯನು.) ಅಮುಖ್ಯವಾಗಿ ಪ್ರಾಣಾದಿಗಳೂ ಪ್ರತಿಪಾದ್ಯರು. ಪಿಪ್ಪಲಾದರೇ ಮೊದಲಾದವರು ಋಷಿಗಳು. (ಮಂತ್ರದ್ರಷ್ಟೃಗಳು) ಯಥಾಯೋಗ್ಯವಾಗಿ ಅಕ್ಷರಪರಿಗಣನೆಯಿಂದ ಛಂದಸ್ಸನ್ನು ತಿಳಿದುಕೊಳ್ಳತಕ್ಕದು. 'ಸುಕೇಶಾ' ಎಂಬಿತ್ಯಾದಿ ಕಥೆಯು ವಿದ್ಯೆಯನ್ನು ಸ್ತುತಿಸಿ ಶ್ರೋತೃಜನರಿಗೆ ವಿಶ್ವಾಸವನ್ನುಂಟುಮಾಡಲಿಕ್ಕಾಗಿರುತ್ತದೆ. ಅದು ಹೇಗೆಂದರೆ:—ಮಹಾನುಭಾವರಾದ ಭಾರದ್ವಾಜರೇ ಮೊದಲಾದವರು ಸಹ ಸಂವತ್ಸರ ಬ್ರಹ್ಮಚರ್ಯಾದಿ ವ್ರತಗಳನ್ನು ಮಾಡಿ ಈ ವಿದ್ಯೆಯನ್ನು ಹೊಂದಿದ್ದರಿಂದ ಇದು ಅತಿ ಪ್ರಶಸ್ತವಾದುದು. ಆದ ಕಾರಣ ಅತಿಶ್ರದ್ಧೆಯು ಇದ್ದರೇನೇ ತತ್ವಜ್ಞಾನವು ಲಭಿಸೀತೆಂದು ಶ್ರೋತೃಗಳು ಇದರಲ್ಲಿ ವಿಶ್ವಾಸದಿಂದ ಪ್ರವರ್ತಿಸುತ್ತಾರೆ.

**ಮಂ ॥ ಹರಿಃ ಓಂ ॥ ಸುಕೇಶಾ ಚ ಭಾರದ್ವಾಜಃ ಶೈಬ್ಯಶ್ಚ ಸತ್ಯಕಾಮಃ ಸೌರ್ಯಾಯಣೀ ಚ ಗಾರ್ಗ್ಯಃ ಕೌಸಲ್ಯಶ್ಚಾಶ್ವಲಾಯನೋ ಭಾರ್ಗವೋ ವೈದರ್ಭಿಃ ಕಬಂಧೀ ಕಾತ್ಯಾಯನಃ । ತೇ ಹೈತೇ ಬ್ರಹ್ಮಪರಾ ಬ್ರಹ್ಮನಿಷ್ಠಾಃ ಪರಂ ಬ್ರಹ್ಮಾನ್ವೇಷಮಾಣಾಃ ಏಷ ಹ ವೈ ತತ್ಸರ್ವಂ ವಕ್ಷ್ಯತೀತಿ ತೇ ಹ ಸಮಿತ್ಪಾಣಯೋ ಭಗವಂತಂ ಪಿಪ್ಪಲಾದಮುಪಸನ್ನಾಃ ॥ ೧ ॥**

ಅ ॥ ಭಾರದ್ವಾಜಃ=ಭರದ್ವಾಜನ ಮಗನಾದ, ಸುಕೇಶಾ ಚ=ಸುಕೇಶನೆಂಬವನು, ಶೈಬ್ಯಶ್ಚ=ಶಿಬಿಪುತ್ರನಾದ, ಸತ್ಯಕಾಮಃ=ಸತ್ಯಕಾಮನೆಂಬವನು, ಸೌರ್ಯಾಯಣೀಚ=ಸೂರ್ಯನಪೌತ್ರನಾದ, ಗಾರ್ಗ್ಯಃ=ಗರ್ಗಗೋತ್ರೋತ್ಪನ್ನನಾದ ಗಾರ್ಗ್ಯನೆಂಬವನು, ಆಶ್ವಲಾಯನಃ=ಅಶ್ವಲಾಯನನ ಮಗನಾದ, ಕೌಸಲ್ಯಶ್ಚ=ಕೋಸಲದೇಶೋತ್ಪನ್ನನಾದ ಕೌಸಲ್ಯನೆಂಬವನು, ಭಾರ್ಗವಃ=ಭೃಗುಪುತ್ರನಾದ, ವೈದರ್ಭಿಃ=ವಿದರ್ಭದೇಶೀಯನಾದ ವೈದರ್ಭಿಯೆಂಬವನೂ,

ಕಾತ್ಯಾಯನಃ=ಕತ್ಯನಪುತ್ರನಾದ, ಕಬಂಧೀ=ಕಬಂಧಿ ಎಂಬವನು, ತ ಏತೇ ಹ=ಆ ಈ ಪ್ರಸಿದ್ಧರಾದ, ಬ್ರಹ್ಮಪರಾಃ=ವೇದಾಭ್ಯಾಸದಲ್ಲಿ ಆಸಕ್ತರಾದ, ಬ್ರಹ್ಮನಿಷ್ಠಾಃ=ವೇದೋಕ್ತ ಕರ್ಮಾ ಚರಣೆಯಲ್ಲಿ ಆಸಕ್ತರಾದ, (ಈ ಆರು ಜನರು) ಪರಂ=ಸರ್ವೋತ್ತಮನಾದ, ಬ್ರಹ್ಮ=(ವಾಸು ದೇವಾಖ್ಯ) ಬ್ರಹ್ಮನನ್ನು, ಅನ್ವೇಷಮಾಣಾಃ=ತಿಳಿಯಲಿಚ್ಛಿಸಿದವರು (ಆದರು.)

ತೇ ಹ=ಆ ಆರುಜನರೂ, ಏಷ ಹವೈ=ಈ ಪ್ರಸಿದ್ಧರಾದ ಪಿಪ್ಪಲಾದ ಋಷಿಗಳು, ತತ್= ಆ, ಅಂದರೆ ನಾವು ಕೇಳುವ, ಸರ್ವಂ=ಸಮಸ್ತವಿಷಯವನ್ನು, ವಕ್ಷ್ಯತಿ=ಹೇಳುವರು, ಇತಿ= ಹೀಗೆ (ನಿಶ್ಚೈಸಿ), ಸಮಿತ್ಪಾಣಯಃ=ಸಮಿಧೆಯು ಕೈಯಲ್ಲುಳ್ಳವರಾಗಿ, ಭಗವಂತಂ=ಪೂಜ್ಯರಾದ, ಪಿಪ್ಪಲಾದಂ=ಪಿಪ್ಪಲಾದ ಋಷಿಗಳ್ನು, ಉಪಸನ್ನಾಃ=ಸಮೀಪಿಸಿದರು.

ತಾ || ವೇದಾಭ್ಯಾಸದಲ್ಲತ್ಯಾಸಕ್ತರಾಗಿಯೂ ಬ್ರಹ್ಮಜ್ಞಾನವನ್ನು ಹೊಂದುವದಕ್ಕೆ ಯೋಗ್ಯರಾಗಿಯೂ ಇದ್ದ ಸುಕೇಶನೇ ಮೊದಲಾದ ಆರು ಜನ ಮುನಿಗಳು ಒಂದಾನೊಂದು ದಿನ ಒಂದು ಪ್ರದೇಶದಲ್ಲಿ ಮಿಳಿತರಾಗಿ ಪರಬ್ರಹ್ಮವನ್ನು ತಿಳಕೊಳ್ಳಬೇಕೆಂದು ಆಲೋಚಿಸಿದರು. ಹಾಗೇ ತಾವು ಕೇಳತಕ್ಕ ವಿಷಯಗಳಿಗೆಲ್ಲಾ ತಕ್ಕ ಸಮಾಧಾನವನ್ನು ಋಷಿವರ್ಯರಾದ ಪಿಪ್ಪಲಾದರು ಹೇಳಬಲ್ಲರೆಂದು ನಿಶ್ಚೈಸಿ ಅವರ ಬಳಿಗೆ ಹೋದರು.

**ಮಂ || ತಾನ್ಹ ಸ ಋಷಿರುವಾಚ | ಭೂಯ ಏವ ತಪಸಾ ಬ್ರಹ್ಮಚರ್ಯೇಣ ಶ್ರದ್ಧಯಾ ಸಂವತ್ಸರಂ ಸಂವತ್ಸ್ಯಥ | ಯಥಾಕಾಮಂ ಪ್ರಶ್ನಾನ್ ಪೃಚ್ಛತ | ಯದಿ ವಿಜ್ಞಾಸ್ಯಾಮಃ ಸರ್ವಂ ಹ ವೋ ವಕ್ಷ್ಯಾಮ ಇತಿ || ೨ ||**

ಅ || ತಾನ್=ಅವರನ್ನು, ಹ=ಪ್ರಸಿದ್ಧರಾದ, ಸಃ=ಪೂರ್ವೋಕ್ತರಾದ, ಋಷಿಃ=ಪಿಪ್ಪಲಾದ ಮುನಿಗಳು, ಭೂಯ ಏವ=ಮತ್ತೂ ಅಧಿಕವಾದ, ತಪಸಾ=ಸಮಸ್ತೇಂದ್ರಿಯ ನಿಗ್ರಹ ದಿಂದಲೂ, ಬ್ರಹ್ಮಚರ್ಯೇಣ=ಬ್ರಹ್ಮಚರ್ಯವ್ರತದಿಂದಲೂ, ಶ್ರದ್ಧಯಾ=ಆಸ್ತಿಕ್ಯಬುದ್ಧಿಯಿಂದ ಲೂ, ಸಂವತ್ಸರಂ=ಒಂದು ವರ್ಷಪರ್ಯಂತ, ಸಂವತ್ಸ್ಯಥ=ವಾಸಮಾಡಿರಿ. (ಆ ಮೇಲೆ), ಯಥಾಕಾಮಂ=ಇಚ್ಛಾನುಸಾರವಾಗಿ, ಪ್ರಶ್ನಾನ್=ಪ್ರಶ್ನೆಗಳನ್ನು ಪೃಚ್ಛತ=ಕೇಳಿರಿ. ವಿಜ್ಞಾಸ್ಯಾಮೋ ಯದಿ=ತಿಳಿದಿರುವ ಪಕ್ಷದಲ್ಲಿ, ವಃ=ನಿಮಗೋಸ್ಕರ, ಸರ್ವಂ ಹ=ಸಮಸ್ತವನ್ನು, ವಕ್ಷ್ಯಾಮಃ=ಹೇಳುವೆವು, ಇತಿ=ಹೀಗೆ, ಉವಾಚ=ಹೇಳಿದರು.

ತಾ || ಈ ರೀತಿಯಿಂದ ತತ್ವಜ್ಞಾನೇಚ್ಛುಗಳಾಗಿ ತಮ್ಮ ಬಳಿಗೆ ಬಂದವರನ್ನು ಕುರಿತು ಪಿಪ್ಪಲಾದರು "ಎಲೈ ಮುನಿಗಳಿರಾ! ಯದ್ಯಪಿ ನೀವೆಲ್ಲರೂ ತಪೋಜ್ಞಾನಾದಿ ಸಂಪನ್ನರಾಗಿರುತ್ತೀರಿ. ಹಾಗಿದ್ದರೂ ತತ್ವೋಪದೇಶವನ್ನು ಚನ್ನಾಗಿ ಪರೀಕ್ಷಿಸಿ ಕೊಡಬೇಕಾಗಿರುವುದರಿಂದ ನೀವು ಇನ್ನೂ ಹೆಚ್ಚಾದ ಬ್ರಹ್ಮಚರ್ಯಾದಿ ವ್ರತಗಳನ್ನು ಪಾಲಿಸುತ್ತಾ ಸಂವತ್ಸರಪರ್ಯಂತ ನಮ್ಮ ಬಳಿಯಲ್ಲಿಯೇ ನಿಯಮದಿಂದ ವಾಸಿಸತಕ್ಕದ್ದು. ಅನಂತರ ನೀವು ಯಾವ ವಿಷಯವನ್ನು ತಿಳಿದುಕೊಳ್ಳಬೇಕೆಂದು ಬಂದಿರುವಿರೋ ಆ ವಿಷಯವನ್ನು ಕುರಿತು ನಮ್ಮೊಡನೆ ಕೇಳಿರಿ. ನಾವು ತಿಳಿದಿರುವ ಅಂಶದಲ್ಲಿ ನಿರ್ವಂಚನೆಯಿಂದ ನಿಮಗೆ ಉಪದೇಶವನ್ನು ಮಾಡುವೆವು"

**ಮಂ || ಅಥ ಕಬಂಧೀ ಕಾತ್ಯಾಯನ ಉಪೇತ್ಯ ಪಪ್ರಚ್ಛ | ಭಗವನ್ ಕುತೋ ಹ ವಾ ಇಮಾಃ ಪ್ರಜಾಃ ಪ್ರಜಾಯಂತ ಇತಿ || ತಸ್ಮೈ ಸ ಹೋವಾಚ | ಪ್ರಜಾ ಕಾಮೋ ಹ ವೈ ಪ್ರಜಾಪತಿಃ | ಸ ತಪೋಽತಪ್ಯತ || ೩ ||**

ಅ || ಅಥ=ಆ ಮೇಲೆ, ಕಾತ್ಯಾಯನಃ=ಕತ್ಯನ ಪುತ್ರನಾದ, ಕಬಂಧೀ=ಕಬಂಧಿ ಮುನಿಯು, ಉಪೇತ್ಯ=(ಪಿಪ್ಪಲಾದರನ್ನು) ಸಮೀಪಿಸಿ, ಭಗವನ್=ಪೂಜ್ಯರೇ!, ಕುತಃ= ಯಾರಿಂದ, ಇಮಾಃ=ಈದಾವ, ಪ್ರಜಾಃ=ಪ್ರಜೆಗಳು, ಪ್ರಜಾಯಂತೇ=ಹುಟ್ಟುತ್ತಾರೆ. ಇತಿ= ಹೀಗೆ, ಪಪ್ರಚ್ಛ ಕೇಳಿದನು. ತಸ್ಮೈ=ಅವನಿಗೋಸ್ಕರ, ಸ ಹ=ಆ ಪಿಪ್ಪಲಾದರು, ಉವಾಚ= ಹೇಳಿದರು. ಪ್ರಜಾಪತಿಃ=ಪರಮಾತ್ಮನು, ಪ್ರಜಾಕಾಮಃ=ಸಂತತಿಯನ್ನು ಇಚ್ಛಿಸಿದವನಾದನು, ಹ ವೈ=ಪ್ರಸಿದ್ಧ. ಸಃ=ಆ ಪರಮಾತ್ಮನು, ತಪಃ=ಮಾಡತಕ್ಕದ್ದನ್ನೂ, ಅತಪ್ಯತ=ಆಲೋ ಚಿಸಿದನು.

ಭಾ || ಪ್ರಜಾನಾಂ ಪಾಲನಾದ್ವಿಷ್ಣುಃ ಪ್ರಜಾಪತಿರಿತೀರಿತಃ |

ಅ || ವಿಷ್ಣುಃ=ಶ್ರೀಪರಮಾತ್ಮನು, ಪ್ರಜಾನಾಂ=ಬ್ರಹ್ಮಾದಿ ಎಲ್ಲಾ ಪ್ರಜೆಗಳನ್ನು, ಪಾಲ ನಾತ್=ರಕ್ಷಿಸುವುದರಿಂದ, ಪ್ರಜಾಪತಿರಿತಿ='ಪ್ರಜಾಪತಿ' ಎಂದು, ಈರಿತಃ=ಹೇಳಲ್ಪಡುತ್ತಾನೆ.

ತಾ || ಆ ಮೇಲೆ ಪಿಪ್ಪಲಾದರ ಅಪ್ಪಣೆ ಪ್ರಕಾರ ಆ ಆರುಜನರೂ ಒಂದು ವರ್ಷ ಪರ್ಯಂತ ನಿಯಮವನ್ನು ಪಾಲಿಸಿದರು. ಅನಂತರ ಅವರಲ್ಲೊಬ್ಬನಾದ ಕಾತ್ಯಾಯನನು ಮೊದಲು ಬಂದು ಪಿಪ್ಪಲಾದರೊಡನೆ 'ಎಲೈ ಪೂಜ್ಯರೇ! ಬ್ರಹ್ಮಾದಿ ದೇವತೆಗಳು ಯಾರಿಂದ ಉತ್ಪತ್ತಿಯನ್ನು ಹೊಂದುವರು. ಕಾರಣವಿಲ್ಲದೆ ಕಾರ್ಯವು ಉಂಟಾಗಲಾರದು. ಚೇತನರಿಗೆ ಅಚೇತನಗಳಾವುವೂ ಕಾರಣವಾಗಲಾರವು. ಚೇತನರಲ್ಲಿಯೂ ಜೀವರು ಅಸ್ವತಂತ್ರರಾದುದ ರಿಂದ ಅವರೂ ಕಾರಣರಾಗಲಾರರು. ಇವರನ್ನೆಲ್ಲಾ ಉಂಟುಮಾಡಲು ಸಮರ್ಥನಾದವನ, ಬೇರಾರೂ ತೋರವುದಿಲ್ಲ. ಆದುದರಿಂದ ಈ ಬ್ರಹ್ಮಾದಿಗಳ ಉತ್ಪತ್ತಿಗೆ ನಿಶ್ಚಿತವಾದ ಕಾರಣವು ಯಾವುದೆಂಬುದನ್ನು ತಿಳಿಯಪಡಿಸಬೇಕಾಗಿ ಪ್ರಾರ್ಥಿಸುತ್ತೇನೆ' ಎಂದು ವಿಜ್ಞಾಪಿಸಿ ಕೊಂಡನು.

**ಮಂ || ಸ ಮಿಥುನಮುತ್ಪಾದಯತೇ | ರಯಿಂ ಚ ಪ್ರಾಣಂ ಚೇತ್ಯೇತೌ ಮೇ ಬಹುಧಾ ಪ್ರಜಾಃ ಕರಿಷ್ಯತ ಇತಿ | ಆದಿತ್ಯೋ ಹ ವೈ ಪ್ರಾಣೋ ರಯಿರೇವ ಚಂದ್ರಮಾಃ || ೪ ||**

ಅ || ಸಃ=ಆ ಪ್ರಜಾಪತಿಯು, ಏತೌ=ಇವರಿಬ್ಬರು, ಮೇ=ನನಗೆ, ಬಹುಧಾ=ಅನೇಕ ಪ್ರಕಾರಗಳಾದ, ಪ್ರಜಾಃ=ಸಂತತಿಗಳನ್ನು, ಕರಿಷ್ಯತಃ=ಮಾಡುವರು. ಇತಿ=ಈ ಪ್ರಕಾರ ಯೋಚಿಸಿ, ರಯಿಂ=ವಿತ್ತಾಭಿಮಾನಿಯಾದ ಭಾರತಿಯನ್ನು, ಪ್ರಾಣಂ ಚ=ಮುಖ್ಯಪ್ರಾಣನನ್ನು, ಇತಿ=ಈರೀತಿಯಾದ, ಮಿಥುನಂ=ಸ್ತ್ರೀಪುರುಷದ್ವಂದ್ವವನ್ನು, ಉತ್ಪಾದಯತೇ=ಹುಟ್ಟಿಸಿದನು, ಪ್ರಾಣಃ=ಆ ಮುಖ್ಯಪ್ರಾಣನು, ಆದಿತ್ಯಃ=ಆದಿತ್ಯನಾಮಕನಾಗಿ ಆದಿತ್ಯನನ್ನು ಪ್ರವೇಶಿಸಿದನು. ರಯಿರೇವ=ಭಾರತಿಯಾದರೂ, ಚಂದ್ರಮಾಃ=ಚಂದ್ರಮಾ ಎಂಬ ಹೆಸರುಳ್ಳವಳಾಗಿ ಚಂದ್ರನನ್ನು ಪ್ರವೇಶಮಾಡಿದಳು, ಹವೈ=ಪ್ರಸಿದ್ಧ.

ಭಾ || ಸ ವಾಯುಂ ಸೂರ್ಯನಾಮಾನಂ ಚಂದ್ರನಾಮ್ನೀಂ ಸರಸ್ವತೀಂ |
ಸೂರ್ಯಾಚಂದ್ರಗತೌ ದೇವಃ ಸಸರ್ಜ ಪುರುಷೋತ್ತಮಃ ||
ತಾವಾವಿಶ್ಯ ಸ್ವಯಂ ವಿಷ್ಣುಃ ಸರ್ವಸೃಷ್ಟೀಃ ಕರೋತ್ಯಜಃ ||

ಅ || ಸಃ=ಆ, ಪುರುಷೋತ್ತಮಃ ಪುರುಷ=ಕ್ಷರಾಕ್ಷರಪುರುಷರಿಂದ, ಉತ್ತಮಃ= ಶ್ರೇಷ್ಠನಾದ, ದೇವಃ=ಪ್ರಜಾಪತಿಯು, ಸೂರ್ಯಾಚಂದ್ರಗತೌ=ಆದಿತ್ಯನು ಚಂದ್ರನೂ ಇವರಲ್ಲಿ ಇರತಕ್ಕ, ಸೂರ್ಯನಾಮಾನಂ=ಆದಿತ್ಯನೆಂದು ಹೆಸರುಳ್ಳ, ವಾಯುಂ=ಪ್ರಾಣನನ್ನು, ಚಂದ್ರ

ನಾಮ್ನೀಂ=ಚಂದ್ರಮಾ ಎಂದು ಹೆಸರುಳ್ಳ, ಸರಸ್ವತೀಂ=ಭಾರತಿಯನ್ನು, ಸಸರ್ಜ=ಸೃಷ್ಟಿಸಿದನು. ಅಜಃ=ಉತ್ಪತ್ತಿಶೂನ್ಯನಾದ, ವಿಷ್ಣುಃ=ಶ್ರೀ ಪರಮಾತ್ಮನು, ತೌ=ಆ ಪ್ರಾಣಭಾರತಿಯನ್ನು, ಆವಿಶ್ಯ=ಪ್ರವೇಶಿಸಿ, ಸರ್ವಸೃಷ್ಟೀಃ=ಸಮಸ್ತರ ಉತ್ಪತ್ತಿಗಳನ್ನು, ಕರೋತಿ=ಮಾಡುತ್ತಾನೆ.

ತಾ ॥ ಪ್ರಜಾಪತಿ ನಾಮಕನಾದ ಪರಬ್ರಹ್ಮನು, ತನಗೆ ಸಂತತಿಗಳಾಗಬೇಕೆಂದು ಆಲೋಚಿಸಿ ಮುಖ್ಯವಾಗಿ ಪ್ರಾಣಮತ್ತು ಸರಸ್ವತಿಗಳನ್ನು ಸೃಷ್ಟಿಸಿದರೆ ಅವರು ಬೇಕಾದ ಸೃಷ್ಟಿಗಳನ್ನು ಮಾಡುವರೆಂದು ಭಾವಿಸಿ ಅವರಿಬ್ಬರನ್ನು ಸೃಷ್ಟಿಸಿದನು. ಯದ್ಯಪಿ ಪರಬ್ರಹ್ಮನು ಕಣ್ಣಿಗೆ ತೋರದಿದ್ದರೂ ತಾನು ಮೊದಲು ಸೃಷ್ಟಿಸಿದ ಜಗತ್ಕಾರಣೀಭೂತರಾದ ಪ್ರಾಣಭಾರತಿಯರನ್ನಾವೇಶಿಸಿ ಸಕಲ ಜಗತ್ತನ್ನು ಸೃಷ್ಟಿಸುತ್ತಾನೆ. ಹೀಗೆ ಪರಮಾತ್ಮನು ಆದಿತ್ಯಾದಿ ದೇವತೆಗಳನ್ನು ಸೃಷ್ಟಿಮಾಡಲು, ಪ್ರಾಣನು ಆದಿತ್ಯನೆಂಬ ಹೆಸರಿನಿಂದ ಆದಿತ್ಯನನ್ನು ಪ್ರವೇಶಿಸಿದನು. ಭಾರತಿಯು ಚಂದ್ರಮಾ ಎಂಬ ಹೆಸರಿನಿಂದ ಚಂದ್ರನನ್ನು ಪ್ರವೇಶಮಾಡಿದಳು. ಬ್ರಹ್ಮಾದಿ ಸಕಲರನ್ನೂ ಪಾಲಿಸುವ ಪ್ರಯುಕ್ತ ಪರಬ್ರಹ್ಮನೇ ಮುಖ್ಯವಾಗಿ 'ಪ್ರಜಾಪತಿ'ಎಂದು ತಿಳಿಯತಕ್ಕದು.

ಪರಮಾತ್ಮನು ದೇವಾದಿಗಳನ್ನು ಸೃಷ್ಟಿಮಾಡಿದನೆಂದು ಅಲ್ಲಲ್ಲಿ ಗ್ರಂಥದಲ್ಲಿ ತೋರುತ್ತದೆ. ದೇವಾದಿ ಪ್ರಜೆಗಳೆಲ್ಲರೂ ನಿತ್ಯರಾದ ಪ್ರಯುಕ್ತ .ಹೊಸತಾಗಿ ಸೃಷ್ಟಿಹೊಂದಿರುವುದಿಲ್ಲ. ಆದ ಕಾರಣ ಜೀವರ ಸೃಷ್ಟಿಯೆಂದರೆ ಈ ರೀತಿಯಾಗಿರುತ್ತದೆ. ಅಮುಕ್ತರಾದ ಜೀವರು ಅವರವರ ಯೋಗ್ಯತಾನುಸಾರವಾಗಿ ಸಾಧನಗಳನ್ನು ಮಾಡಿ ಅದರ ಫಲವನ್ನನುಭವಿಸಿ ಪ್ರಳಯ ಕಾಲದಲ್ಲಿ ಪರಮಾತ್ಮನ ಉದರದಲ್ಲಿರುತ್ತಾರೆ. ಆಗ ಅವರು ನಿದ್ರಿತನಾದ ಮನುಷ್ಯನು ಯಾವ ವ್ಯಾಪಾರನನ್ನು ಮಾಡದೆಯೂ ಇರುವಂತೆ ನಿರ್ವ್ಯಾಪಾರರಾಗಿರುತ್ತಾರೆ. ಪರಮಾತ್ಮನು ಅವರವರ ಯೋಗ್ಯತಾನುಸಾರವಾಗಿ ಪದವಿಗಳನ್ನು ದೇಹಗಳನ್ನು ಕೊಟ್ಟು ಅವರಿಂದ ಕಾರ್ಯಗಳನ್ನು ಮಾಡಿಸುವುದೇ ಅವರ ಸೃಷ್ಟಿಯಾಗಿರುತ್ತದೆ.

**ಮಂ ॥ ರಯಿರ್ವಾ ಏತತ್ಸರ್ವಂ ಯನ್ಮೂರ್ತಂ ಚಾಮೂರ್ತಂ ಚ ತಸ್ಮಾನ್ಮೂರ್ತಿರೇವ ರಯಿಃ । ಅಥಾದಿತ್ಯ ಉದಯನ್ಯತ್ಪ್ರಾಚೀಂ ದಿಶಂ ಪ್ರವಿಶತಿ ತೇನ ಪ್ರಾಚ್ಯಾನ್ ಪ್ರಾಣಾನ್ ರಶ್ಮಿಷು ಸನ್ನಿಧತ್ತೇ । ಯದ್ದಕ್ಷಿಣಾಂ ಯತ್ಪ್ರತೀಚೀಂ ಯದುದೀಚೀಂ ಯದಧೋ ಯದೂರ್ಧ್ವಂ ಯದಂತರಾ ದಿಶೋ ಯತ್ಸರ್ವಂ ಪ್ರಕಾಶಯತಿ ತೇನ ಸರ್ವಾನ್ ಪ್ರಾಣಾನ್ ರಶ್ಮಿಷು ಸನ್ನಿಧತ್ತೇ ॥ ೫ ॥**

ಅ ॥ ಮೂರ್ತಂ ಚ=ತೇಜಸ್ಸು, ಜಲ, ಪೃಥಿವೀ ಈ ಸ್ವರೂಪವಾದದ್ದು, ಅಮೂರ್ತಂ ಚ=ಪ್ರಕೃತಿಯೇ ಮೊದಲಾದುದು, ಯತ್=ಯಾವುದೊಂದು (ಉಪಾದಾನಸ್ವರೂಪವಾದುದು) ಅದೆಯೋ, ಏತತ್ಸರ್ವಂ=ಇದೆಲ್ಲವೂ, ರಯಿರ್ವೈ=ಭಾರತಿಯೇ. ತಸ್ಮಾತ್=ಆ ಎರಡು ರಾಶಿಗಳಲ್ಲಿ, ಮೂರ್ತಿರೇವ=ಮೂರ್ತವೇ, ರಯಿಃ=ಭಾರತಿಯು. . ಅಥ=ಆ ಮೇಲೆ, ಆದಿತ್ಯಃ=ಆದಿತ್ಯನಲ್ಲಿದ್ದ ಪ್ರಾಣನು, ಉದಯನ್=ಉದಯವನ್ನು ಹೊಂದುವವನಾಗಿ, ಪ್ರಾಚೀಂ=ಪೂರ್ವ, ದಿಶಂ=ದಿಕ್ಕನ್ನು, ಪ್ರವಿಶತಿ=ಪ್ರವೇಶಿಸುತ್ತಾನೆ. ತೇನ=ಅದರಿಂದ, ಪ್ರಾಚ್ಯಾನ್=ಪೂರ್ವದಿಕ್ಕಿನಲ್ಲಿದ್ದ, ಪ್ರಾಣಾನ್=ಪ್ರಾಣಶಬ್ದವಾಚ್ಯರನ್ನು, ರಶ್ಮಿಷು=ಕಿರಣಗಳಲ್ಲಿ, ಸನ್ನಿಧತ್ತೇ=ಕೂಡಿಸಿಕೊಳ್ಳುತ್ತಾನೆ. ಯತ್=ಯಾವಕಾರಣದಿಂದ, ದಕ್ಷಿಣಾಂ=ದಕ್ಷಿಣದಿಕ್ಕನ್ನು, ಯತ್ ಪ್ರತೀಚೀಂ=ಪಶ್ಚಿಮದಿಕ್ಕನ್ನು, ಯತ್ ಉದೀಚೀಂ=ಉತ್ತರದಿಕ್ಕನ್ನು, ಯತ್ ಅಧಃ=ಕೆಳದಿಕ್ಕನ್ನು, ಯತ್ ಊರ್ಧ್ವಂ=ಮೇಲಿನ ಪ್ರದೇಶವನ್ನು, ಯತ್ ಅಂತರಾ ದಿಶಃ=ದಶ

ದಿಕ್ಕುಗಳ ಮಧ್ಯಪ್ರದೇಶಗಳನ್ನು, ಯತ್=ಯಾವುದೊಂದು, ಸರ್ವಂ=ಸಮಸ್ತವನ್ನು, ಪ್ರಕಾಶಯತಿ=ಬೆಳಗುತ್ತಾನೋ, ತೇನ=ಅದರಿಂದ, ಸರ್ವಾನ್=ಸಮಸ್ತರಾದ, ಪ್ರಾಣಾನ್=ಪೂರ್ವೋಕ್ತರಾದ ತತ್ತದಭಿಮಾನಿದೇವತೆಗಳನ್ನು, ರಶ್ಮಿಷು=ಕಿರಣಗಳಲ್ಲಿ, ಸನ್ನಿಧತ್ತೇ=ಕೂಡಿಸಿಕೊಳ್ಳುತ್ತಾನೆ.

ಭಾ ॥ ಅಮೂರ್ತಸ್ಥಃ ಸ ವಾಯುಸ್ತು ಮೂರ್ತಸಂಸ್ಥಾ ಸರಸ್ವತೀ ।
ಆದಿತ್ಯಸ್ಥಃ ಸ ವಾಯುಸ್ತು ಪ್ರಾಣಾನಾತ್ಮನಿ ಸನ್ನಯೇತ್ ।
ಪ್ರಾಚ್ಯಾಃ ಪ್ರಾಣಾಸ್ತಥೇಂದ್ರಾದ್ಯಾ ದಕ್ಷಿಣಾಶ್ಚ ಯಮಾದಯಃ ।
ಪ್ರತೀಚ್ಯಾ ವರುಣಾದ್ಯಾಸ್ತು ಸೋಮಾದ್ಯಾ ಉತ್ತರಾಃ ಸ್ಮೃತಾಃ ।
ಶೇಷಮಿತ್ರಾವವಾಚೀನೌ ವೀಂದ್ರಕಾಮಾವುದಕ್ತನೌ ।
ಸಭಾರ್ಯಾಃ ಕೋಣಪೈಃ ಸಾರ್ಧಂ ಚತ್ವಾರೋ ದಿಶಿ ದಿಶ್ಯಪಿ ॥

ಅ ॥ ಸಃ=ಆ, ವಾಯುಃಸ್ತು=ವಾಯುವಾದರೂ, ಅಮೂರ್ತಸ್ಥಃ=ಪ್ರಕೃತ್ಯಾದಿಗಳಲ್ಲಿ ಇರತಕ್ಕವನು, ಸರಸ್ವತೀ=ಭಾರತಿಯು, ಮೂರ್ತಸಂಸ್ಥಾ=ಪೃಥಿವ್ಯಾದಿಗಳಲ್ಲಿ ಇರತಕ್ಕವಳು, ಆದಿತ್ಯಸ್ಥಃ=ಆದಿತ್ಯನಲ್ಲಿರತಕ್ಕ, ಸಃ=ಆ, ವಾಯುಸ್ತು=ಪ್ರಾಣನಾದರೂ, ಪ್ರಾಣಾನ್=ಇಂದ್ರಾದಿಗಳನ್ನು, ಆತ್ಮನಿ=ತನ್ನಲ್ಲಿ, ಸನ್ನಯೇತ್=ಕೂಡಿಸುತ್ತಾನೆ. ಪ್ರಾಚ್ಯಾಃ=ಮೂಡು ದಿಕ್ಕಿನಲ್ಲಿದ್ದ, ಪ್ರಾಣಾಃ=ಚೇಷ್ಟಕರು, ಇಂದ್ರಾದ್ಯಾಃ=ದೇವೇಂದ್ರನೇ ಮೊದಲಾದವರು. ತಥಾ=ಹಾಗೇ, ದಕ್ಷಿಣಾಶ್ಚ=ತೆಂಕುದಿಕ್ಕಿನಲ್ಲಿದ್ದ ಪ್ರಾಣರು, ಯಮಾದಯಃ=ವೈವಸ್ವತನೇ ಮೊದಲಾದವರು, ಪ್ರತೀಚ್ಯಾಃ=ಪಶ್ಚಿಮದಿಕ್ಕಿನಲ್ಲಿದ್ದವರು, ವರುಣಾದ್ಯಾಃ=ವರುಣನೇ ಮೊದಲಾದವರು. ಉತ್ತರಾಸ್ತು=ಉತ್ತರದಿಕ್ಕಿನಲ್ಲಿದ್ದವರು, ಸೋಮಾದ್ಯಾಃ=ಕುಬೇರನೇ ಮೊದಲಾದವರು, ಸ್ಮೃತಾಃ=ಹೇಳಲ್ಪಟ್ಟಿದ್ದಾರೆ. ಅವಾಚೀನೌ=ಅಧಃಪ್ರದೇಶದಲ್ಲಿರುವವರು, ಶೇಷಮಿತ್ರೌ=ಶೇಷ ಮತ್ತು ಮಿತ್ರರೆಂಬ ದೇವತೆಗಳು, ಉದಕ್ತನೌ=ಮೇಲುಪ್ರದೇಶದಲ್ಲಿರತಕ್ಕವರು, ವೀಂದ್ರಕಾಮೌ=ಗರುಡ ಮತ್ತು ಮನ್ಮಥ ಇವರು, ಸಭಾರ್ಯಾಃ=ಸಪತ್ನೀಕರಾದ ಇಂದ್ರಾದಿಗಳು, ಕೋಣಪೈಃ=ಅಂತರ್ದಿಗಧಿಪತಿಗಳಾದ, ಅಗ್ನ್ಯಾದಿಗಳಿಂದ, ಸಾರ್ಧಂ=ಕೂಡಿಕೊಂಡು, ದಿಶಿದಿಶ್ಯಪಿ=ಪ್ರತಿಯೊಂದುದಿಕ್ಕಿನಲ್ಲಿಯೂ, ಚತ್ವಾರಃ=ನಾಲ್ಕುಜನರು.

ತಾ ॥ ಪೂರ್ವೋಕ್ತರಾದ ಪ್ರಾಣಭಾರತಿಯರು ರೀತ್ಯಂತರದಿಂದಲೂ, ಸಕಲಸೃಷ್ಟಿಗೂ ನಿಮಿತ್ತಕಾರಣರಾಗಿರುತ್ತಾರೆ. ಮೂರ್ತಗಳು ಅಂದರೆ ಪೃಥಿವೀ ಜಲ ತೇಜಸ್ಸುಗಳು ಅಮೂರ್ತ ಅಂದರೆ ಪ್ರಕೃತ್ಯಾದಿಗಳು ಎಂಬೀ ಎರಡು ರಾಶಿಗಳು ಜಗತ್ತಿಗೆ ಉಪಾದಾನಕಾರಣಗಳು. ಇವುಗಳಲ್ಲಿ ಭಾರತಿಯು ಮೂರ್ತಗಳಲ್ಲಿದ್ದು 'ಮೂರ್ತೆ'ಯೆನಿಸುವಳು. ಪ್ರಾಣನು ಅಮೂರ್ತಗಳಲ್ಲಿದ್ದು 'ಅಮೂರ್ತ'ನೆನಿಸುವನು. ಅಂದರೆ ರಯಿಪ್ರಾಣರು ಜಗದುಪಾದಾನಭೂತಗಳಾದ ಪಂಚಭೂತ ಮತ್ತು ಪ್ರಕೃತ್ಯಾದಿಗಳಲ್ಲಿದ್ದು ಅವುಗಳಿಗೆ ಶಕ್ತಿಯನ್ನು ಕೊಟ್ಟು ನಿಖಿಲವಸ್ತುಗಳನ್ನೂ ಉಂಟುಮಾಡುವರು. ಪರಬ್ರಹ್ಮನ ಇಚ್ಛಾನೆರವೇರಿಸುವದಕ್ಕಾಗಿ ಅವರ ಅಧೀನರಾಗಿ ಜಗತ್ಸೃಷ್ಟಿಯನ್ನುಮಾಡುವರು.

ಹೆಂಡತಿಯರಿಂದ ಕೂಡಿದ ಇಂದ್ರಾಗ್ನಿಗಳು ಅಂದರೆ ಈ ನಾಲ್ಕು ಜನರು ಪೂರ್ವದಿಕ್ಕಿನ ಅಧಿಪತಿಗಳು. ಸಪತ್ನೀಕರಾದ ಯಮನಿಋತಿಗಳು ದಕ್ಷಿಣದಿಕ್ಕಿಗೂ ಸಪತ್ನೀಕರಾದ ವರುಣವಾಯುಗಳು ಪಶ್ಚಿಮದಿಕ್ಕಿಗೂ ಹೀಗೇ ಕುಬೇರೇಶಾನರು ಉತ್ತರದಿಕ್ಕಿಗೂ ಶೇಷಮಿತ್ರರು ಅಧಃ

ಪ್ರದೇಶಕ್ಕೂ ಗರುಡಮನ್ಮಥರು ಊರ್ಧ್ವಪ್ರದೇಶಕ್ಕೂ ಈ ರೀತಿಯಾಗಿ ಪ್ರತಿದಿಕ್ಕಿಗೂ ನಾಲ್ಕು ನಾಲ್ಕು ಜನರು ಅಭಿಮಾನಿಗಳು. ಈ ದೇವತೆಗಳನ್ನೆಲ್ಲಾ ಪ್ರಾಣನು ಆದಿತ್ಯಗತನಾಗಿ ಆಯಾಯ ದಿಕ್ಕುಗಳನ್ನು ಪ್ರವೇಶಿಸುವಾಗ ತತ್ತದ್ದೇವತೆಗಳನ್ನು ತನ್ನ ರಶ್ಮಿಗಳ ಮೂಲಕ ಸಕಲವಿಧದ ಶಕ್ತಿಗಳನ್ನು ಕೊಟ್ಟು ಪ್ರೇರಿಸುತ್ತಾನೆ. ॥ ៦ ॥

**ಮಂ ॥ ಸ ಏಷ ವೈಶ್ವಾನರೋ ವಿಶ್ವರೂಪಃ ಪ್ರಾಣೋಽಗ್ನಿರುದಯತೇ । ತದೇತದ್ಋಚಾಭ್ಯುಕ್ತಂ । ವಿಶ್ವರೂಪಂ ಹರಿಣಂ ಜಾತವೇದಸಂ ಪರಾಯಣಂ ಜ್ಯೋತಿರೇಕಂ ತಪಂತಂ । ಸಹಸ್ರರಶ್ಮಿಃ ಶತಧಾ ವರ್ತಮಾನಃ ಪ್ರಾಣಃ ಪ್ರಜಾನಾಮುದಯತ್ಯೇಷ ಸೂರ್ಯಃ ॥ ೭ ॥**

ಅ ॥ ಸ ಏಷಃ=ಆದಿತ್ಯನಲ್ಲಿದ್ದ, ವಿಶ್ವರೂಪಃ=ಪೂರ್ಣರೂಪನಾದ, ಅಗ್ನಿಃ=ಸಮಸ್ತವನ್ನೂ ತಿನ್ನತಕ್ಕ ಪ್ರಾಣಃ=ಮುಖ್ಯಪ್ರಾಣನು, ವೈಶ್ವಾನರಃ=ಸಮಸ್ತಜನರ ಉತ್ಪತ್ತಿಗೆ ಕಾರಣನಾಗಿ, ಉದಯತೇ=ಇರುತ್ತಾನೆ. ತದೇತತ್=ಆ ಈ ಪ್ರಮೇಯವು, ಋಚಾ='ವಿಶ್ವರೂಪಂ' ಎಂಬ ಮಂತ್ರದಿಂದ, ಅಭ್ಯುಕ್ತಂ=ಹೇಳಲ್ಪಟ್ಟಿದೆ.

ವಿಶ್ವರೂಪಂ=ಪೂರ್ಣರೂಪನಾದ, ಹರಿಣಂ=ರಶ್ಮಿಗಳುಳ್ಳ, ಜಾತವೇದಸಂ=ಹುಟ್ಟಿದ್ದನ್ನೆಲ್ಲಾ ತಿಳಿಯತಕ್ಕ, ಪರಾಯಣಂ=ನಿಖಿಲಪ್ರಾಣಗಳಿಗೂ ಆಶ್ರಯನಾದ, ಏಕಂ=ಪ್ರಧಾನವಾದ, ಜ್ಯೋತಿಃ=ಪ್ರಕಾಶಕವಾದುದನ್ನು, ತಪಂತಂ=ಸುಡತಕ್ಕುದನ್ನಾಗಿ (ತಿಳಿಯತಕ್ಕುದು), ಸಹಸ್ರರಶ್ಮಿಃ=ಅಪರಿಮಿತಗಳಾದ ಕಿರಣಗಳುಳ್ಳ, ಶತಧಾ=ಅನಂತರೂಪಗಳಿಂದ, ವರ್ತಮಾನಃ=ಇರುವ, ಪ್ರಾಣಃ=ಚೇಷ್ಟಕನಾದ, ಏಷಃ=ಇವನೇ, ಪ್ರಜಾನಾಂ=ಪ್ರಜೆಗಳ ಉತ್ಪತ್ತಿಗೋಸ್ಕರ, ಸೂರ್ಯಃ=ಸೂರ್ಯಸ್ಥನಾಗಿ, ಉದಯತಿ=ಉದಯಿಸುತ್ತಾನೆ.

ತಾ ॥ ಮತ್ತು ಆದಿತ್ಯಾಂತರ್ಗತನಾದ ಪ್ರಾಣನು ಅಪರಿಮಿತಸ್ವರೂಪಗಳುಳ್ಳವನೂ, ಲಯಕಾಲದಲ್ಲಿ ಸಮಸ್ತಜಗನ್ನಾಶಕ್ಕೆ ಕಾರಣನೂ, ಜಗತ್ತನ್ನು ಸುಡುವವನೂ, ಪಣಗಿಸುವವನೂ ಆಗಿರುತ್ತಾನೆ. ಇಂತಹ ಪ್ರಾಣನಮಹಿಮೆಯು "ವಿಶ್ವರೂಪಂ" ಎಂಬ ಮಂತ್ರದಲ್ಲಿಯೂ ಉಕ್ತವಾಗಿದೆ. ಅನಂತಾನಂತರಶ್ಮಿಗಳುಳ್ಳ ಪ್ರಾಣನು ಅನೇಕರೂಪಗಳಿಂದ ಪ್ರಾಣಿಗಳಲ್ಲಿದ್ದು ನಿಖಿಲ ಪ್ರಜೆಗಳ ಉತ್ಪತ್ತಿಗೂ ಕಾರಣನಾದವನು. ಹಾಗೇ ಭಾರತಿಯು ಚಂದ್ರನಲ್ಲಿದ್ದವಳಾಗಿ ಎಲ್ಲಾ ಓಷಧಿಗಳನ್ನು ಹುಟ್ಟಿಸಿ ತನ್ಮೂಲಕ ಎಲ್ಲಾ ಪ್ರಜೆಗಳ ಉತ್ಪತ್ತಿಗೂ ಕಾರಣಳಾಗಿದ್ದಾಳೆ.

**ಮಂ ॥ ಸಂವತ್ಸರೋ ವೈ ಪ್ರಜಾಪತಿಃ । ತಸ್ಯಾಯನೇ ದಕ್ಷಿಣಂ ಚೋತ್ತರಂ ಚ । ತದ್ಯೇಹ ವೈ ತದಿಷ್ಟಾಪೂರ್ತೇ ಕೃತಮಿತ್ಯುಪಾಸತೇ । ತೇ ಚಾಂದ್ರಮಸಮೇವ ಲೋಕಮಭಿಜಯಂತೇ । ತ ಏವ ಪುನರಾವರ್ತಂತೇ ತಸ್ಮಾದೇತೇ ಋಷಯಃ ಪ್ರಜಾಕಾಮಾ ದಕ್ಷಿಣಂ ಪ್ರತಿಪದ್ಯಂತೇ ಏಷ ವೈ ರಯಿಃ ಯಃ ಪಿತೃಯಾಣಃ ॥ ೭ ॥**

ಅ ॥ ಪ್ರಜಾಪತಿಃ=ಪರಬ್ರಹ್ಮನು, ಸಂವತ್ಸರಃ=ಸಂವತ್ಸರದಲ್ಲಿದ್ದವನಾಗಿ.(ಪ್ರಜೋತ್ಪಾದಕನೆಂದು) ವೈ=ಪ್ರಸಿದ್ಧ. ತಸ್ಯ=ಸಂವತ್ಸರಕ್ಕೆ, ದಕ್ಷಿಣಂಚ=ದಕ್ಷಿಣಾಯನವೆಂಬುವ, ಉತ್ತರಂಚ=ಉತ್ತರಾಯಣವೆಂಬುವ, ಅಯನೇ=ಭಾಗವಿಶೇಷಗಳು. ತತ್=ಸಾಧಕರಲ್ಲಿ, ಯೇ=ಯಾವ, ಋಷಯಃ=ಋಷಿಗಳು, ಪ್ರಜಾಕಾಮಾಃ=ಮೋಕ್ಷೇತರ ಫಲವನ್ನು ಇಚ್ಛಿಸುವರಾಗಿ, ಇಷ್ಟಾಪೂರ್ತಂ=ಯಾಗವು ಅನ್ನದಾನಾದಿಯೂ ಇವುಗಳನ್ನು, ಕೃತಮಿತಿ=ಇತರವ್ಯಾಪಕರ್ಮವನ್ನು,

ಉಪಾಸತೇ=ಮಾಡುತ್ತಾರೋ, ತೇ ಏತೇ=ಅವರು, ದಕ್ಷಿಣಂ=ಪಿತೃಯಾಣವನ್ನು, ಪ್ರತಿಪದ್ಯಂತೇ=ಹೊಂದುತ್ತಾರೆ. ತೇ=ಹೊಂದಿದವರು, ಚಾಂದ್ರಮಸಮೇವ=ಚಂದ್ರಸಂಬಂಧಿಯಾದ, ಲೋಕಂ=ಲೋಕವನ್ನು, ಅಭಿಜಯಂತೇ=ಹೊಂದುತ್ತಾರೆ. ತ ಏವ=ಅವರೇ, ಪುನಃ=ಕರ್ಮಫಲಭೋಗಾನಂತರದಲ್ಲಿ, ತಸ್ಮಾತ್=ಚಂದ್ರಲೋಕದಿಂದ, ಆವರ್ತಂತೇ ಹವೈ=ತಿರುಗಿ ಬರುವರು. ಯಃ=ಯಾವ ದೇವತೆಯು, ಪಿತೃಯಾಣಃ=ಪಿತೃಯಾಣನಿಯಾಮಕನ್ರೋ, ಏಷಃ=ಇದೇ, ರಯಿಃ ವೈ=ಚಂದ್ರಾಭಿಮಾನಿನಿಯಾದ ಭಾರತಿಯು.

ಭಾ || ಸಂವತ್ಸರಸ್ಥೋ ಭಗವಾನ್ ವಾಗೀರಾವಯನಸ್ಥಿತೌ ||

ಅ || ಭಗವಾನ್=ಶ್ರೀಪರಮಾತ್ಮನು, ಸಂವತ್ಸರಸ್ಥಃ=ಸಂವತ್ಸರದಲ್ಲಿರುವನು. ವಾಗೀರೌ=ಭಾರತಿಯೂ, ಮುಖ್ಯಪ್ರಾಣನೂ ಇವರಿಬ್ಬರು, ಅಯನಸ್ಥಿತೌ=ದಕ್ಷಿಣಾಯಣೋತ್ತರಾಯಣಗಳಲ್ಲಿ ಇರುವವರು.

ತಾ || ಸಂವತ್ಸರಕ್ಕೆ ಉತ್ತರಾಯಣ ಮತ್ತು ದಕ್ಷಿಣಾಯಣಗಳೆಂಬೆರಡು ಭಾಗಗಳು. ಸೂರ್ಯಗತಿ ವಿಶೇಷವಾದ ದೇವಯಾನಸ್ವರೂಪ ದೇವತಾವಿಶೇಷಾಭಿಮನ್ಯಮಾನವಾದ ಉತ್ತರಾಯಣಕ್ಕೆ ಮುಖ್ಯಪ್ರಾಣನು ಮುಖ್ಯಾಧಿಪತಿಯು. ಸೂರ್ಯಗತಿ ವಿಶೇಷವಾದ ಪಿತೃಯಾಣ ಸ್ವರೂಪದೇವತಾವಿಶೇಷಾಭಿಮನ್ಯಮಾನವಾದ ದಕ್ಷಿಣಾಯಣಕ್ಕೆ ಭಾರತಿಯು ಮುಖ್ಯಾಧಿಕಾರಿಣಿಯು. ಈ ರೀತಿ ಎರಡು ಅಯನಗಳನ್ನೂ ಸಂವತ್ಸರರೂಪಕಾಲವನ್ನೂ ನಿಮಿತ್ತೀಕರಿಸಿಕೊಂಡು ಪ್ರಜಾಪತಿಯು ಸಂವತ್ಸರದಲ್ಲಿದ್ದು ಸಂವತ್ಸರನಾಮಕನಾಗಿ ಸಕಲವನ್ನೂ ಸೃಷ್ಟಿಮಾಡುವನು. ಯಾವಋುಷಿಗಳು ಮೋಕ್ಷೇತರಫಲವನ್ನು ಇಚ್ಛಿಸಿಕೊಂಡು ಯಾಗ ಅನ್ನದಾನಾದಿ ಹಾಗೆ ಇತರಕರ್ಮಗಳನ್ನೂ ಮಾಡುವರೋ ಅಂತಹರು ಪಿತೃಯಾಣನಾಮಕವಾದ ದಕ್ಷಿಣಾಯನವನ್ನು ಹೊಂದಿ ಚಂದ್ರಲೋಕಕ್ಕೆ ಹೋಗುವರು. ಅಲ್ಲಿ ತಮ್ಮ ಸುಕೃತದ ಫಲವನ್ನನುಭವಿಸಿದ ನಂತರ ಚಂದ್ರಲೋಕದಿಂದ ತಿರುಗಿ ಭೂಲೋಕವನ್ನು ಹೊಂದುವರು. ಈ ರೀತಿಯಾಗಿ ಪಿತೃಯಾಣದಿಂದ ಹೋದವರಿಗೆ ಪುನರ್ಜನ್ಮವುಳ್ಳ ಚಂದ್ರಲೋಕಪ್ರಾಪ್ತಿಯಾಗುವುದೆಂದು ತಾತ್ಪರ್ಯವು. || ೮ ||

**ಮಂ || ಅಥೋತ್ತರೇಣ ತಪಸಾ ಬ್ರಹ್ಮಚರ್ಯೇಣ ಶ್ರದ್ಧಯಾ ವಿದ್ಯಯಾಽತ್ಮಾನಮನ್ವಿಷ್ಯಾದಿತ್ಯಮಭಿಜಯಂತೇ। ಏತದ್ವೈ ಪ್ರಾಣಾನಾಮಾಯತನಮೇತದಮೃತಮಭಯಮೇತತ್ಪರಾಯಣಮೇತಸ್ಮಾನ್ನ ಪುನರಾವರ್ತಂತ ಇತ್ಯೇಷ ನಿರೋಧಃ। ತದೇಷ *ಶ್ಲೋಕಃ। ಪಂಚಪಾದಂ ಪಿತರಂ ದ್ವಾದಶಾಕೃತಿಂ ದಿವ ಆಹುಃ ಪರೇ ಅರ್ಧೇ ಪುರೀಷಿಣಂ। ಅಥೇಮೇ ಅನ್ಯ ಉ ಪರೇ ವಿಚಕ್ಷಣಂ ಸಪ್ತಚಕ್ರೇ ಷಳರ ಆಹುರರ್ಪಿತಮಿತಿ || ೮ ||**

* ಋ. ಅ. ೨, ಅಧ್ಯಾಯ ೩, ವರ್ಗ ೧೬.

ಅ || ಅಥ=ಆ ಮೇಲೆ, ತಪಸಾ=ಕೃಚ್ಛ್ರಚಾಂದ್ರಾಯಣಾದಿ ವ್ರತಗಳಿಂದ, ಬ್ರಹ್ಮಚರ್ಯೇಣ=ಬ್ರಹ್ಮಚರ್ಯದಿಂದಲೂ, ಶ್ರದ್ಧಯಾ=ಆಸ್ತಿಕ್ಯಬುದ್ಧಿಯಿಂದಲೂ, ವಿದ್ಯಯಾ=ವೇದಾಂತಶಾಸ್ತ್ರದಿಂದಲೂ, ಆತ್ಮಾನಂ=ಪರಮಾತ್ಮನನ್ನು, ಅನ್ವಿಷ್ಯ=ವಿಚಾರಿಸಿ ತಿಳಿದು, ಉತ್ತರೇಣ=ದೇವಯಾನದಿಂದ ಹೋದವರು, ಆದಿತ್ಯಂ=ಸೂರ್ಯನನ್ನು, ಅಭಿಜಯಂತೇ=ಹೊಂದುವರು. ಏತದ್ವೈ=ದೇವಯಾನದಿಂದ ಪ್ರಾಪ್ಯವಾದ ಬ್ರಹ್ಮವೇ, ಪ್ರಾಣಾನಾಂ=ಇಂದ್ರಾದಿಗಳಿಗೆ, ಆಯತನಂ=ಆಶ್ರಯವಾದುದು. ಏತತ್=ಇದೇ, ಅಮೃತಂ=ಮುಕ್ತಿಪ್ರದವು. ಏತತ್ ಅಭ

ಯಂ=ಭಯಶೂನ್ಯವು. ಪರಾಯಣಂ=ಮುಕ್ತರಿಗೂ ಆಶ್ರಯವಾದುದು. ಏತಸ್ಮಾತ್=ಇದರಿಂದ, ಪುನಃ=ತಿರುಗಿ, ನಾವರ್ತಂತೇ=ಬರುವುದಿಲ್ಲ. ಇತಿ=ಹೀಗೆ, ಏಷಃ=ಆದಿತ್ಯನು, ನಿರೋಧಃ=ಮಾರ್ಗನಿರೋಧಕನು. ತತ್=ಆ ವಿಷಯದಲ್ಲಿ, ಏಷಃ=ಮೇಲೆ ಹೇಳತಕ್ಕ, ಶ್ಲೋಕಃ=ಮಂತ್ರವು (ಪ್ರಮಾಣವಾಗಿದೆ.)

ಪಂಚಪಾದಂ=ಐದು ಋತ್ವಭಿಮಾನಿಗಳು ಅಂಶಗಳಾಗಿವುಳ್ಳ, ಪಿತರಂ=ಪಾಲಕನಾದ, ದ್ವಾದಶಾಕೃತಿಂ=ಹನ್ನೆರಡು ಮಾಸಾಭಿಮಾನಿದೇವತೆಗಳು ರೂಪಗಳಾಗುಳ್ಳ, ವಿಚಕ್ಷಣಂ=ವಿವೇಕಿಯಾದ, ಸಪ್ತಚಕ್ರೇ=ಏಳು ಚಕ್ರಗಳುಳ್ಳ, ಷಳರೇ, ಷಟ್=ಆರು, ಅರೇ=ಅಚ್ಚಿನಮರಗಳುಳ್ಳ ರಥದಲ್ಲಿ ಅರ್ಪಿತಂ=ಇರತಕ್ಕ ಆದಿತ್ಯನನ್ನು, ದಿವಃ=ಅಂತರಿಕ್ಷದ, ಪರೇ ಅರ್ಧೇ=ದಕ್ಷಿಣಾಶ್ರಿತಭಾಗದಲ್ಲಿ, ಪುರೀಷಿಣಂ=ವೃಷ್ಟಿಕಾರಣನನ್ನಾಗಿ, ಆಹುಃ=ಹೇಳುತ್ತಾರೆ. ಅಥ=ಹಾಗೇ, ಅನ್ಯೇ=ಇತರರಾದ, ಇಮೇ=ಜ್ಞಾನಿಗಳು, ಉ ಪರೇ=ಸ್ವರ್ಗದ ಉತ್ತರಾಶ್ರಿತಭಾಗದಲ್ಲಿ ಹೋಗತಕ್ಕ ಆದಿತ್ಯನನ್ನಾಗಿ, ಆಹುಃ=ಹೇಳುತ್ತಾರೆ.

**ತಾ ||** ಇನ್ನು ಮೋಕ್ಷೇಚ್ಛುಗಳಾದ ಸಜ್ಜನರು ತಪಸ್ಸೇ ಮೊದಲಾದ ಸಾಮಗ್ರಿಗಳಿಂದ ಪರಬ್ರಹ್ಮನನ್ನು ತಿಳಿದು ದೇವಯಾನವೆಂಬುವ ಉತ್ತರಾಯಣದಿಂದ ಹೋಗಿ ಆದಿತ್ಯಲೋಕವನ್ನು ಹೊಂದುತ್ತಾರೆ. ಈ ರೀತಿಯಾಗಿ ಹೋದವರಿಗೆ ಪುನರ್ಜನ್ಮವಿರುವುದಿಲ್ಲ. ಏಕಂದರೆ ದೇವಯಾನದಿಂದ ಹೋದವರು ಪರಬ್ರಹ್ಮನನ್ನೇ ಹೊಂದುವರು. ಅದು ಇಂದ್ರಾದಿಗಳಿಗೂ ಹಾಗೇ ಸಕಲ ಮುಕ್ತರಿಗೂ ಆಶ್ರಯವಾಗಿಯೂ ನಿರ್ಭಯವಾಗಿಯೂ ಇರತಕ್ಕದು. ಈ ವಿಷಯವು 'ಪಂಚಪಾದಂ' ಎಂಬ ಮಂತ್ರವಿಶೇಷದಲ್ಲಿಯೂ ಹೇಳಲ್ಪಟ್ಟಿದೆ. ಹೇಗೆಂದರೆ ಕರ್ಮಭೂಮಿಯಲ್ಲಿ ಜನಿಸಿ ಅಲ್ಪವಾದ ಪುಣ್ಯವನ್ನು ಸಂಪಾದಿಸಿಕೊಂಡು ಹೋಗತಕ್ಕ ಜೀವರು ಅಂತರಿಕ್ಷದ ದಕ್ಷಿಣಾಶ್ರಿತಭಾಗವನ್ನಾಶ್ರಯಿಸಿಕೊಂಡು ಹೋಗತಕ್ಕ ವೃಷ್ಟ್ಯಭಿಮಾನಿಯಾದ ಕಾಲಾಭಿಮಾನಿ ದೇವತಾಲೋಕವನ್ನು ಹೊಂದುವರು. ತದಿತರರಾದ ಜ್ಞಾನಿಗಳು ಅಂತರಿಕ್ಷದ ಉತ್ತರಾಶ್ರಿತ ಭಾಗದಲ್ಲಿ ಹೋಗತಕ್ಕ ಆದಿತ್ಯನನ್ನು ಅಂದರೆ ಕಾಲಾಭಿಮಾನಿದೇವತಾಲೋಕವನ್ನು ಹೊಂದುವರು. ಅಂತಹ ಆದಿತ್ಯಸ್ವರೂಪಕ್ಕೆ ಹೇಮಂತಶಿಶಿರಗಳಿಗೆ ಐಕ್ಯವನ್ನಭಿಪ್ರಾಯಪಟ್ಟು ಐದು ಋತ್ವಭಿಮಾನಿದೇವತೆಗಳು ಅಂಶಭೂತರಾಗಿಯೂ, ದ್ವಾದಶಮಾಸಾಭಿಮಾನಿ ದೇವತೆಗಳು ಸ್ವರೂಪಭೂತರಾಗಿಯೂ ಇರುತ್ತಾರೆ. ಅಲ್ಲದೆ ಆದಿತ್ಯನು ವಿಶಿಷ್ಟ ಪ್ರಜಾಪಾಲಕನಾಗಿಯೂ ಸಾರಾಸಾರ ಜ್ಞಾನಿಯಾಗಿಯೂ ಸಪ್ತಾಶ್ವಗಳಿಂದ ಅಲಂಕರಿಸಲ್ಪಟ್ಟ ಆರು ಅಚ್ಚಿನಮರಗಳುಳ್ಳ ರಥಶ್ರೇಷ್ಠದಲ್ಲಿ ಶೋಭಿಸಿಕೊಂಡಿರುತ್ತಾನೆ. ಸೂರ್ಯನು ಸಪ್ತಾಶ್ವನೆಂದು ಪ್ರಸಿದ್ಧಿ ಇದೆ. ಅದು ಹೇಗೆಂದರೆ- ಗಾಯತ್ರ್ಯಾದಿ ಏಳು ಛಂದೋಭಿಮಾನಿದೇವತೆಗಳೇ ಅಶ್ವರೂಪರಾಗಿರುತ್ತಾರೆ. ಹಾಗೇ ಈ ಏಳು ಅಶ್ವಗಳ ಮಧ್ಯೇ ಪ್ರಧಾನಾಶ್ವವು 'ಸಪ್ತಛಂದಃ' ಎಂದು ಹೆಸರುಳ್ಳದ್ದಾಗಿದೆ. ಈ ಎರಡು ಕಾರಣಗಳಿಂದಲೂ ಸೂರ್ಯನು ಸಪ್ತಾಶ್ವನೆಂದು ಪ್ರಸಿದ್ಧನಾಗಿದ್ದಾನೆ. ॥ ೮ ॥

**ಮಂ ॥ ಮಾಸೋ ವೈ ಪ್ರಜಾಪತಿಃ । ತಸ್ಯ ಕೃಷ್ಣಪಕ್ಷ ಏವ ರಯಿಃ । ಶುಕ್ಲಃ ಪ್ರಾಣಃ ತಸ್ಮಾದೇತೇ ಋಷಯಃ ಶುಕ್ಲ ಇಷ್ಟಿಂ ಕುರ್ವಂತಿ । ಇತರ ಇತರಸ್ಮಿನ್ । ಅಹೋರಾತ್ರೇ ವೈ ಪ್ರಜಾಪತಿಸ್ತಸ್ಯಾಹರೇವ ಪ್ರಾಣೋ ರಾತ್ರಿರೇವ ರಯಿಃ । ಪ್ರಾಣಂ ವಾ ಏತೇ ಪ್ರಸ್ಕಂದಂತಿ ಯೇ ದಿವಾ ರತ್ಯಾ ಸಂಯುಜ್ಯಂತೇ । ಬ್ರಹ್ಮಚರ್ಯಮೇವ ತದ್ಯದ್ರಾತ್ರೌ ರತ್ಯಾ ಸಂಯುಜ್ಯಂತೇ ॥ ೯ ॥**

ಅ ॥ ಪ್ರಜಾಪತಿಃ=ಪರಮಾತ್ಮನು, ಮಾಸಃ=ಮಾಸದಲ್ಲಿದ್ದು ಮಾಸನಾಮಕನಾಗಿ (ಪ್ರಜೋತ್ಪಾದಕನೆಂದು), ವೈ=ಪ್ರಸಿದ್ಧ. ತಸ್ಯ=ಮಾಸಾವಯವಭೂತವಾದ, ಕೃಷ್ಣಪಕ್ಷಏವ=ಕೃಷ್ಣಪಕ್ಷವೇ, ರಯಿಃ=ಭಾರತಿಯು, ಶುಕ್ಲಃ=ಶುಕ್ಲಪಕ್ಷವು, ಪ್ರಾಣಃ=ಮುಖ್ಯಪ್ರಾಣನು. ತಸ್ಮಾತ್=ಆದುದರಿಂದ, ಏತೇ ಋಷಯಃ=ಈ ಜ್ಞಾನಿಗಳು, ಶುಕ್ಲೇ=ಶುಕ್ಲಪಕ್ಷದಲ್ಲಿ, ಇಷ್ಟಿಂ=ಪ್ರಾಣಪೂಜಾತ್ಮಕಯಾಗವನ್ನು, ಕುರ್ವಂತಿ=ಮಾಡುತ್ತಾರೆ. ಇತರೇ=ಅನ್ಯರು, ಇತರಸ್ಮಿನ್=ಕೃಷ್ಣಪಕ್ಷದಲ್ಲಿ (ಯಾಗಮಾಡುತ್ತಾರೆ). ಪ್ರಜಾಪತಿಃ=ಪರಬ್ರಹ್ಮನು, ಅಹೋರಾತ್ರೇ ವೈ=ಅಹೋರಾತ್ರಾಭಿಮಾನಿಯು, ತಸ್ಯ=ಅಹೋರಾತ್ರಾವಯವಭೂತವಾದ, ಅಹರೇವ=ಹಗಲೇ, ಪ್ರಾಣಃ=ಪ್ರಾಣನು, ರಾತ್ರಿರೇವ=ರಾತ್ರಿಯೇ, ರಯಿಃ=ಭಾರತಿಯು, ಯೇ=ಯಾರು, ದಿವಾ=ಹಗಲಲ್ಲಿ, ರತ್ಯಾ=ಕ್ರೀಡಾಹೇತುಭೂತಳಾದ ಸ್ತ್ರೀಯಿಂದ, ಸಂಯುಜ್ಯಂತೇ=ಕೂಡಿಸಲ್ಪಡುತ್ತಾರೋ, ತ ಏತೇ=ಅವರು, ಪ್ರಾಣಂ ವಾ=ಮುಖ್ಯಪ್ರಾಣನನ್ನೇ. ಪ್ರಸ್ಕಂದಂತಿ=ಹೊರಪಡಿಸುತ್ತಾರೆ. ಯತ್=ಯಾವುದೊಂದು, ರಾತ್ರೌ=ರಾತ್ರಿಯಲ್ಲಿ ರತ್ಯಾ=ಸ್ತ್ರೀಯಿಂದ, ಸಂಯುಜ್ಯಂತೇ=ಕೂಡಿಸಲ್ಪಡುತ್ತಾರೋ, ತತ್=ಅದು, ಬ್ರಹ್ಮಚರ್ಯಮೇವ=ಬ್ರಹ್ಮಚರ್ಯಸಮಾನವೇ.

ಭಾ ॥ ಮಾಸಸ್ಥಿತಃ ಸ ಭಗವಾನ್ ಪಕ್ಷಯೋರ್ವಾಕ್ಚ ಮಾರುತಃ ।
ಅಹೋರಾತ್ರೇ ತು ಭಗವಾನ್ ಪ್ರಾಣೋಹ್ಯಹನಿ ವಾಙ್ನಿಶಿ ॥

ಅ ॥ ಸಃ=ಆದಾನ, ಭಗವಾನ್=ಶ್ರೀ ಪರಮಾತ್ಮನು, ಮಾಸಸ್ಥಿತಃ=ಮಾಸದಲ್ಲಿರುವವನು, ವಾಕ್=ಭಾರತಿಯು, ಮಾರುತಶ್ಚ=ಪ್ರಾಣನೂ, ಪಕ್ಷಯೋಃ=ಎರಡು ಪಕ್ಷಗಳಲ್ಲಿರತಕ್ಕವರು. ಭಗವಾನ್=ಶ್ರೀ ಪರಮಾತ್ಮನು, ಅಹೋರಾತ್ರೇ ತು=ಅಹೋರಾತ್ರಿಗಳಲ್ಲಿರತಕ್ಕವನು, ಪ್ರಾಣೋಹಿ=ಪ್ರಾಣನಾದರೂ, ಅಹನಿ=ಹಗಲಿನಲ್ಲಿರುವವನು, ವಾಕ್=ಭಾರತಿಯು, ನಿಶಿ=ರಾತ್ರಿಯಲ್ಲಿರುವವಳು.

ತಾ ॥ ಪ್ರಜಾಪತಿಯು ಮಾಸನಾಮಕನಾಗಿ ಮಾಸದಲ್ಲಿರುವಾಗ ಪ್ರಾಣನು ಶುಕ್ಲಪಕ್ಷರೂಪನಾಗಿಯೂ ಭಾರತಿಯು ಕೃಷ್ಣಪಕ್ಷರೂಪಳಾಗಿಯೂ ಇರುತ್ತಾರೆ. ಪ್ರಾಣನು ಆದಿತ್ಯನಿಗೂ ಉತ್ತರಾಯಣಕ್ಕೂ ಹಾಗೇ ಶುಕ್ಲಪಕ್ಷಕ್ಕೂ ನಿಯಾಮಕನಾಗಿರುವುದರಿಂದ ದೇವಯಾನರೂಪವಾದ ಉತ್ತರಾಯಣದಿಂದ ಆದಿತ್ಯಲೋಕವನ್ನು ಹೊಂದಬೇಕೆಂದು ಇಚ್ಛಿಸುವವರು ಶುಕ್ಲಪಕ್ಷದಲ್ಲಿ ಐಹಿಕ ಫಲಾಪೇಕ್ಷೆಯಿಲ್ಲದ ಪ್ರಾಣೋಪಾಸನಾದಿ ಕರ್ಮಗಳನ್ನು ಮಾಡುತ್ತಾರೆ. ಮತ್ತು ಭಾರತಿಯು ಚಂದ್ರನಿಗೂ ದಕ್ಷಿಣಾಯನಕ್ಕೂ ಹಾಗೇ ಕೃಷ್ಣಪಕ್ಷಕ್ಕೂ ನಿಯಾಮಕಳಾಗಿರುವುದರಿಂದ ಪಿತೃಯಾಣರೂಪ ದಕ್ಷಿಣಾಯನದಿಂದ ಚಂದ್ರಲೋಕವನ್ನು ಹೊಂದಲಿಚ್ಛಿಸುವವರು ಕೃಷ್ಣಪಕ್ಷದಲ್ಲಿ ಕಾಮ್ಯಕರ್ಮಗಳನ್ನು ಮಾಡುತ್ತಾರೆ. ಹಾಗೆ ಪ್ರಜಾಪತಿಯು ಅಹೋರಾತ್ರನಾಮಕನಾಗಿ ಅಹೋರಾತ್ರಗಳಲ್ಲಿರುವಾಗ ಪ್ರಾಣನು ಅಹಃ ಸ್ವರೂಪನಾಗಿಯೂ ಭಾರತಿಯು ರಾತ್ರಿಸ್ವರೂಪಳಾಗಿಯೂ ಇರುತ್ತಾರೆ. ಅಂತಹ ಪ್ರಾಣಾಭಿಮಾನಿಕವಾದ ಹಗಲಿನಲ್ಲಿ ಸ್ತ್ರೀಸಂಸರ್ಗವನ್ನು ಮಾಡುವವರು ತಮ್ಮ ಪ್ರಾಣವನ್ನು ಶೀಘ್ರವಾಗಿ ಹೊರಪಡಿಸುವರು. ಏಕೆಂದರೆ:—ಹಗಲಿನಲ್ಲಿ ಪುರುಷನ ರೇತಸ್ಸಿನಲ್ಲಿ ಪ್ರಾಣನ ಸನ್ನಿಧಾನವಿದ್ದರೂ, ಸ್ತ್ರೀಯಲ್ಲಿ ಭಾರತಿಯು ಸನ್ನಿಧಾನವಿಲ್ಲದಿರುವುದರಿಂದ ಹಗಲಿನ ಸಂಸರ್ಗದಿಂದ ಪುರುಷನ ರೇತವು ಭಾರ್ಯೆಯಿಂದಿತರತ್ರ ಪತಿತವಾಗುವ ಪ್ರಯುಕ್ತ ವ್ಯರ್ಥವಾಗುತ್ತದೆ. ರಾತ್ರಿಯಲ್ಲಾದರೂ ಸ್ತ್ರೀಯರಲ್ಲಿ ದೇವೀಸನ್ನಿಧಾನವಿರುವುದರಿಂದ ಸ್ತ್ರೀಸಂಸರ್ಗವು ಬ್ರಹ್ಮಚರ್ಯಕ್ಕೆ ಸಮಾನವಾದುದು. ॥ ೯ ॥

ಮಂ ॥ ಅನ್ನಂ ವೈ ಪ್ರಜಾಪತಿಃ । ತತೋ ಹ ವೈ ತದ್ರೇತಃ । ತಸ್ಮಾದಿಮಾಃ ಪ್ರಜಾಃ ಪ್ರಜಾಯಂತ ಇತಿ । ತದ್ಯೇಹ ವೈ ತತ್ಪ್ರಜಾಪತಿವ್ರತಂ ಚರಂತಿ। ತೇ ಮಿಥುನಮುತ್ಪಾದಯಂತೇ । ತೇಷಾಮೇವೈಷ ಬ್ರಹ್ಮಲೋಕೋ ಯೇಷಾಂ ತಪೋ ಬ್ರಹ್ಮಚರ್ಯಂ ಯೇಷು ಸತ್ಯಂ ಪ್ರತಿಷ್ಠಿತಂ । ತೇಷಾಮಸೌ ವಿರಜೋ ಬ್ರಹ್ಮಲೋಕೋ ನ ಯೇಷು ಜಿಹ್ಮಮನೃತಂ ನ ಮಾಯಾಚೇತಿ ॥ ೧೦ ॥

ಇತಿ ಪ್ರಥಮಃ ಪ್ರಶ್ನಃ ॥ ೧ ॥

ಅ ॥ ಪ್ರಜಾಪತಿಃ=ಪರಬ್ರಹನು, ಅನ್ನಂ=ಅನ್ನಸ್ಥನಾಗಿ (ಪ್ರಜೋತ್ಪಾದಕನೆಂದು), ವೈ=ಪ್ರಸಿದ್ಧವು. ತತೋ ಹ=ಅನ್ನದಿಂದಲೇ, ತತ್=ಆ, ರೇತೋ ವೈ=ರೇತಸ್ಸು (ಹುಟ್ಟುತ್ತದೆ). ತಸ್ಮಾತ್=ಆ ರೇತಸ್ಸಿನಿಂದ, ಇಮಾಃ=ಈದಾವ, ಪ್ರಜಾಃ=ಮನುಷ್ಯಾದಿ ಪ್ರಜೆಗಳು, ಪ್ರಜಾಯಂತೇ=ಹುಟ್ಟುತ್ತಾರೆ. ತತ್=ಆ ಪ್ರಜೆಗಳಲ್ಲಿ, ಯೇ ಹ ವಾ=ಯಾವ ಪುರುಷರು, ಏತತ್=ಪೂರ್ವೋಕ್ತವಾದ, ಪ್ರಜಾಪತಿವ್ರತಂ=ಪರಬ್ರಹ್ಮನ ಕರ್ಮವನ್ನು, ಚರಂತಿ=ಮಾಡುತ್ತಾರೋ, ತೇ=ಅವರು, ಮಿಥುನಂ=ಯೋಗ್ಯಮಕ್ಕಳನ್ನು, ಉತ್ಪಾದಯಂತೇ=ಹುಟ್ಟಿಸುತ್ತಾರೆ. ತೇಷಾಮೇವ=ಅವರಿಗೇನೇ, ಏಷಃ=ಈ, ಬ್ರಹ್ಮಲೋಕಃ=ಚತುರ್ಮುಖನ ಲೋಕವು(ಲಭಿಸತಕ್ಕದು). ಯೇಷಾಂ=ಯಾರಿಗೆ, ತಪಃ=ತಪಸ್ಸು, ಬ್ರಹ್ಮಚರ್ಯಂ=ಬ್ರಹ್ಮಚರ್ಯವೂ (ಅದೆಯೋ), ಯೇಷು=ಯಾರಲ್ಲಿ, ಸತ್ಯಂ=ಯಥಾರ್ಥವಾದ ಮಾತು, ಪ್ರತಿಷ್ಠಿತಂ=ನಿಯಮದಿಂದ ಇದೆಯೋ, ಯೇಷು=ಯಾರಲ್ಲಿ, ಜಿಹ್ಮಂ=ಕುಟಿಲಬುದ್ಧಿಯು, ಅನೃತಂ=ಅಸತ್ಯವಚನವು, ನ=ಇಲ್ಲವೋ, ಮಾಯಾ ಚ=ವಂಚನೆಯೂ ಕೂಡ, ಇತಿ=ಇದೇ ಮೊದಲಾದ ದೋಷಗಳು, ನ=ಇಲ್ಲವೋ, ತೇಷಾಂ=ಅವರಿಗೇನೇ, ಅಸೌ=ಈದಾವ, ವಿರಜಃ=ಅಪ್ರಾಕೃತವಾದ, ಬ್ರಹ್ಮಲೋಕಃ=ವೈಕುಂಠಾದಿ ಲೋಕವು, (ಲಭಿಸುತ್ತದೆ.)

ಭಾ ॥ ದಂಪತ್ಯೋರ್ಭಗವಾನ್ ವಿಷ್ಣುಃ ಭಾರ್ಯಾಸ್ಥಾ ತು ಸರಸ್ವತೀ ।
ಭರ್ತೃಸ್ಥಃ ಸ ಸ್ವಯಂ ವಾಯುಃ ಏವಂ ಜಾನನ್ ವಿಮುಚ್ಯತೇ ॥
-ಇತಿ ಪ್ರಜಾಪತಿಸಂಹಿತಾಯಾಂ ॥

ಅ ॥ ಭಗವಾನ್=ಪೂಜ್ಯನಾದ, ವಿಷ್ಣುಃ=ಶ್ರೀಪರಮಾತ್ಮನು, ದಂಪತ್ಯೋಃ=ಗಂಡಹೆಂಡತಿಯರಲ್ಲಿ (ಸನ್ನಿಹಿತನು). ಸರಸ್ವತೀ ತು=ಭಾರತಿಯಾದರೂ, ಭಾರ್ಯಾಸ್ಥಾ=ಹೆಂಡತಿಯಲ್ಲಿ ಸನ್ನಿಹಿತಳು. ಸಃ=ಪ್ರಸಿದ್ಧನಾದ, ವಾಯುಃ=ಮುಖ್ಯಪ್ರಾಣನು, ಸ್ವಯಂ=ಮುಖ್ಯವಾಗಿ, ಭರ್ತೃಸ್ಥಃ=ಗಂಡನಲ್ಲಿ ಸನ್ನಿಹಿತನು. ಏವಂ=ಹೀಗೆ, ಜಾನನ್=ತಿಳಿದುಕೊಂಡವನು, ವಿಮುಚ್ಯತೇ=(ಸಂಸಾರದಿಂದ) ಬಿಡಲ್ಪಡುತ್ತಾನೆ. ಇತಿ=ಹೀಗೆ, ಪ್ರಜಾಪತಿಸಂಹಿತಾಯಾಂ= 'ಪ್ರಜಾಪತಿಸಂಹಿತಾ' ಎಂಬ ಶ್ರುತಿಯಲ್ಲಿ (ಹೇಳಲ್ಪಟ್ಟಿದೆ.)

ತಾ ॥ ಪತಿಪತ್ನೀಭಾವವನ್ನು ಹೊಂದಿದ ಸ್ತ್ರೀಪುರುಷರಲ್ಲಿ ಮುಖ್ಯವಾಗಿ ಪರಮಾತ್ಮನ ಸನ್ನಿಧಾನವೂ, ಪುರುಷನಲ್ಲಿ ಮುಖ್ಯವಾಗಿ ಪ್ರಾಣನ ಸನ್ನಿಧಾನವೂ, ಸ್ತ್ರೀಯಲ್ಲಿ ಮುಖ್ಯವಾಗಿ ಭಾರತಿಯ ಸನ್ನಿಧಾನವೂ, ಇರುತ್ತದೆ. ಈ ಸ್ತ್ರೀಪುರುಷರಲ್ಲಿ ಪರಮಾತ್ಮನು ಅನ್ನನಾಮಕನಾಗಿ ಅನ್ನ

ದಲ್ಲಿದ್ದು ಆ ಅನ್ನದ ಮೂಲಕ ಪುರುಷನಲ್ಲಿ ಇಂದ್ರಿಯವನ್ನುಂಟುಮಾಡಿ ತನ್ಮೂಲಕ ಮನುಷ್ಯಾದಿ ಸಕಲ ಪ್ರಜೆಗಳನ್ನೂ ಮುಖ್ಯವಾಗಿ ಆ ಭಗವಂತನೇ ಸೃಷ್ಟಿಮಾಡುತ್ತಾನೆ. ಆ ಭಗವಂತನು ಅದೃಶ್ಯನಾಗಿದ್ದರೂ, ನಿಮಿತ್ತ ಮತ್ತು ಉಪಾದಾನೀಭೂತಗಳಾದ ಪದಾರ್ಥಗಳನ್ನು ಕಾರಣ ಗಳನ್ನಾಗಿಟ್ಟುಕೊಂಡು ಪೂರ್ವೋಕ್ತರೀತಿಯಿಂದ ಚೇತನಾಚೇತನಾತ್ಮಕವಾದ ಸಮಸ್ತ ಪ್ರಪಂಚ ವನ್ನೂ ಉಂಟುಮಾಡುವವನಾಗಿರುತ್ತಾನೆ. ಈರೀತಿಯಾಗಿ ಪರಮಾತ್ಮನ ಚರಿತ್ರೆಯನ್ನು ಭಕ್ತಿ ಯಿಂದ ತಿಳಿದುಕೊಂಡವರು ಈ ಲೋಕದಲ್ಲಿ ಸತ್ಪುತ್ರಾದಿ ಸಂಪತ್ತನ್ನು ಹೊಂದಿ, ಪರದಲ್ಲಿ ಸತ್ಯಲೋಕವೆಂಬ ಚತುರ್ಮುಖನ ಲೋಕವನ್ನು ಹೊಂದುತ್ತಾರೆ. ಈ ರೀತಿಯಾಗಿ ತಿಳಿದು ಕೊಳ್ಳುವುದು ಮಾತ್ರವಲ್ಲದೆ ಯಾವ ಅಧಿಕಾರಿಗಳು ತಪಸ್ಸು, ಬ್ರಹ್ಮಚರ್ಯ, ಸತ್ಯವಚನಾದಿ ಗಳಿಂದ ಭೂಷಿತರಾಗಿಯೂ, ದುರ್ವಾಕ್ಯ, ಮೋಸತನ, ವಕ್ರಸ್ವಭಾವವೇ ಮೊದಲಾದ ದೋಷಗಳನ್ನು ದೂರದಲ್ಲಿ ಪರಿತ್ಯಜಿಸಿರುತ್ತಾರೋ, ಅಂತಹರು ಶಾಶ್ವತವಾದ ನಿತ್ಯಾನಂದ ಸ್ವರೂಪವಾದ ವೈಕುಂಠಾದಿ ಲೋಕಗಳನ್ನು ಹೊಂದುತ್ತಾರೆ. ॥ ೧೦ ॥

ಒಂದನೆಯ ಪ್ರಶ್ನೆಯು ಮುಗಿಯಿತು. ॥ ೧ ॥ ಶ್ರೀಃ ॥

ಪರಮೇಶ್ವರನು ಸಕಲ ಪ್ರಜೆಗಳನ್ನು ಸೃಷ್ಟಿಸುವನೆಂದು ಪೂರ್ವಪ್ರಶ್ನೆಯಲ್ಲಿ ಹೇಳಲ್ಪಟ್ಟಿದೆ. ಅಂತಹ ಪ್ರಜೆಗಳಿಗೆ ಸ್ಥಿತಿಜ್ಞಾನಗಳು ಅತ್ಯಾವಶ್ಯಕವಾಗಿರುವುದರಿಂದ ಅವುಗಳನ್ನು ಪ್ರತಿಪಾದಿಸು ವುದಕ್ಕೂ, ಪೂರ್ವದಲ್ಲಿ ಹೇಳಿದ ಪ್ರಾಣನ ಉತ್ತಮತ್ವವನ್ನು ಉಪಪಾದನೆಮಾಡುವುದಕ್ಕೂ ಈ ಎರಡನೇ ಪ್ರಶ್ನೆಯು ಹೊರಟಿದೆ.

**ಮಂ ॥ ಅಥ ಹೈನಂ ಭಾರ್ಗವೋ ವೈದರ್ಭಿಃ ಪಪ್ರಚ್ಛ । ಭಗವನ್ ಕತ್ಯೇವ ದೇವಾಃ ಪ್ರಜಾ ವಿಧಾರಯಂತೇ । ಕತರ ಏತತ್ಪ್ರಕಾಶಯಂತೇ । ಕಃ ಪುನರೇಷಾಂ ವರಿಷ್ಠ ಇತಿ ॥ ೧ ॥**

ಅ ॥ ಅಥ=ಆ ಮೇಲೆ, ಭಾರ್ಗವಃ=ಭೃಗುಕುಲೋತ್ಪನ್ನನಾದ, ವೈದರ್ಭಿಃ=ವೈದ ರ್ಭಿಯು, ಏನಂ=ಈ ಪಿಪ್ಪಲಾದರನ್ನು, ಭಗವನ್=ಪೂಜ್ಯರೇ! ಕತ್ಯೇವ=ಎಷ್ಟು, ದೇವಾಃ= ದೇವತೆಗಳು, ಪ್ರಜಾಃ=ಪ್ರಾಣಿಗಳನ್ನು, ವಿಧಾರಯಂತೇ=ಧರಿಸುತ್ತಾರೆ. ಕತರೇ=ಎಷ್ಟು ದೇವತೆಗಳು, ಏತತ್=ವಿಷಯಸಮುದಾಯವನ್ನು, ಪ್ರಕಾಶಯಂತೇ=ಪ್ರಕಾಶಗೊಳಿಸುವರು, ಪುನಃ=ಮತ್ತು, ಏಷಾಂ=ಈ ದೇವತೆಗಳಲ್ಲಿ, ವರಿಷ್ಠಃ=ಶ್ರೇಷ್ಠನು, ಕಃ=ಯಾರು? ಇತಿ= ಈ ರೀತಿಯಾಗಿ, ಪಪ್ರಚ್ಛ=ಕೇಳಿದನು.

ತಾ ॥ ಕಾತ್ಯಾಯನನಿಗೆ ಪಿಪ್ಪಲಾದರು ಪೂರ್ವೋಕ್ತ ರೀತಿಯಿಂದ ಉತ್ತರವನ್ನು ಕೊಡೋಣ ವೈದರ್ಭಿಯು "ಎಲೈ ಪೂಜ್ಯರೇ! ಮನುಷ್ಯಾದಿ ಪ್ರಜೆಗಳಿಗೆ ಸ್ಥಿತಿಯನ್ನೂ ಶಬ್ದಾದಿ ಗಳ ಜ್ಞಾನವನ್ನೂ ಕೊಡತಕ್ಕ ದೇವತೆಗಳಾರು? ಅಂದರೆ ಪರಮೇಶ್ವರನು ಮುಖ್ಯವಾಗಿ ಯಾರನ್ನು ನಿಮಿತ್ತೀಕರಿಸಿಕೊಂಡು ಪ್ರಜೆಗಳಿಗೆ ಸ್ಥಿತಿಜ್ಞಾನಗಳನ್ನು ಕೊಡುತ್ತಾನೆ? ಹೀಗೆ ಧಾರಕಪ್ರಕಾಶಕರಾದ ದೇವತೆಗಳಲ್ಲಿ ಅತಿಶ್ರೇಷ್ಠನು ಯಾರು? ಪೂರ್ವೋಕ್ತ ರೀತಿಯಿಂದ ಪ್ರಾಣ ನಾಗಬೇಕು. ಅವನಿಗೆ ಅಂತಹ ಶ್ರೇಷ್ಠತ್ವವು ಇರುವ ವಿಷಯದಲ್ಲಿ ಪ್ರಮಾಣವೇನು?" ಎಂದು ಕೇಳಿದನು. ॥ ೧ ॥

ಮಂ ॥ ತಸ್ಮೈ ಸ ಹೋವಾಚ। ಆಕಾಶೋ ಹ ವಾ ಏಷ ದೇವೋ ವಾಯು ರಗ್ನಿರಾಪಃ ಪೃಥಿವೀ ವಾಙ್ಮನಶ್ಚಕ್ಷುಃ ಶ್ರೋತ್ರಂ ಚ। ತೇ ಪ್ರಕಾಶ್ಯಾ ಅಭಿವದಂತಿ । ವಯಮೇತದ್ಬಾಣಮವಷ್ಟಭ್ಯ ವಿಧಾರಯಾಮ ಇತಿ ॥ ೨ ॥

ಅ ॥ ತಸ್ಮೈ=ಆ ವೈದರ್ಭಿಗೋಸ್ಕರ, ಸಹ=ಆ ಪಿಪ್ಪಲಾದರು, ಉವಾಚ=ಹೇಳಿದರು. ಏಷಃ=ಈದಾವ, ದೇವಃ=ಧಾರಕವಾದ ದೇವತೆಯು, ಆಕಾಶೋ ಹ ವೈ=ಆಕಾಶಾಭಿಮಾನಿಯು, ವಾಯುಃ=ಭೂತವಾಯುವು, ಅಗ್ನಿಃ=ಭೂತಾಗ್ನಿಯು, ಆಪಃ=ಜಲಾಭಿಮಾನಿಯು, ಪೃಥಿವೀ=ಪೃಥಿವ್ಯಭಿಮಾನಿಯು, ವಾಕ್=ವಾಗಭಿಮಾನಿಯು, ಮನಃ=ಮನೋಭಿಮಾನಿಯು, ಚಕ್ಷುಃ=ನಯನಾಭಿಮಾನಿಯು, ಶ್ರೋತ್ರಂ ಚ=ಕರ್ಣಾಭಿಮಾನಿಯು, ತೇ=ಅವರು, ಪ್ರಕಾಶ್ಯಾಃ=ಪ್ರಕಾಶಗೊಂಡವರಾಗಿ, ವಯಂ=ನಾವು, ಏತತ್=ಈದಾವ, ಬಾಣಂ=ಶರೀರವನ್ನು, ಅವಷ್ಟಭ್ಯ=ಆಶ್ರಯಿಸಿಕೊಂಡು, ವಿಧಾರಯಾಮಃ=ಧರಿಸುತ್ತೇವೆ. ಇತಿ=ಈ ಪ್ರಕಾರವಾಗಿ, ಅಭಿವದಂತಿ=ಕಾದಾಡಿಕೊಂಡರು.

ಭಾ ॥ ವಾಯುರಗ್ನಿರಿತ್ಯತ್ರ ಭೂತವಾಯುರುಚ್ಯತೇ ॥

ಅ ॥ ವಾಯುರಗ್ನಿರಿತ್ಯತ್ರ='ವಾಯುರಗ್ನಿ' ಎಂಬಲ್ಲಿ, (ವಾಯುಶಬ್ದದಿಂದ) ಭೂತವಾಯುಃ=ಭೂತವಾಯುವು, ಉಚ್ಯತೇ=ಹೇಳಲ್ಪಡುತ್ತದೆ.

ತಾ ॥ ಪೃಥಿವೀ, ಜಲ, ತೇಜಸ್ಸು, ವಾಯು, ಮತ್ತು ಆಕಾಶಗಳೆಂಬ ಪಂಚ ಭೂತಾಭಿಮಾನಿಗಳೂ, ತನ್ಮಾತ್ರೆಗಳೂ, (ಅಂದರೆ ಗಂಧ, ರಸ, ರೂಪ, ಸ್ಪರ್ಶ, ಶಬ್ದಗಳೂ) ಕರ್ಮೇಂದ್ರಿಯಗಳೂ, (ವಾಕ್, ಪಾಣಿ, ಪಾದ, ಪಾಯು, ಉಪಸ್ಥ) ತದ್ವಿಷಯಗಳೂ ಮೇಲೆ ಹೇಳುವ ರೀತ್ಯಾ ತತ್ತದಭಿಮಾನಿ ದೇವತೆಗಳೂ ಪ್ರಜೆಗಳಿಗೆ ಧಾರಕರಾಗಿರುತ್ತಾರೆ. ಚಕ್ಷುಸ್ಸು, ಶ್ರೋತ್ರ, ಘ್ರಾಣ, ರಸನಾ, ತ್ವಕ್ ಎಂಬ ಪಂಚ ಜ್ಞಾನೇಂದ್ರಿಯಾಭಿಮಾನಿಗಳೂ ಮನಸ್ಸೂ ತದ್ವಿಷಯಗಳೂ ಜ್ಞಾನೋತ್ಪಾದಕರು. (ಪ್ರಕಾಶಕರು.) ಮುಖ್ಯಪ್ರಾಣನು ಮುಖ್ಯವಾಗಿ ಧಾರಕಪ್ರಕಾಶಕರಾದ ದೇವತೆಗಳಿಗೂ, ಧಾರಕನೂ ಪ್ರಕಾಶಕನೂ ಆಗಿರುತ್ತಾನೆ. ಅಂತಹ ಪ್ರಾಣನಿಗೆ ಶ್ರೇಷ್ಠತ್ವವಾದರೂ ಹೇಳುವ ಆಖ್ಯಾಯಿಕೆಯಿಂದ ಸಿದ್ಧವಾಗುವುದು. ಅದು ಹೇಗೆಂದರೆ:—ಪೂರ್ವೋಕ್ತರಾದ ಧಾರಕಪ್ರಕಾಶಕ ದೇವತೆಗಳು ಈ ಶರೀರವನ್ನು ಮುಖ್ಯವಾಗಿ "ನಾನೇ ಧರಿಸತಕ್ಕವನು; ನಾನೇ ಶಬ್ದಾದಿ ವಿಷಯಗಳನ್ನು ಪ್ರಕಾಶಗೊಳಿಸತಕ್ಕವನು" ಹೀಗೆಂದು ಪರಸ್ಪರವಾಗಿ ಮತ್ಸರದಿಂದ ಕಾದಾಡಿದರು. ॥ ೨ ॥

ಮಂ ॥ ತಾನ್ ವರಿಷ್ಠಃ ಪ್ರಾಣ ಉವಾಚ । ಮಾ ಮೋಹಮಾಪದ್ಯಥಾಹಮೇವೈತತ್ಪಂಚಧಾತ್ಮಾನಂ ವಿಭಜ್ಯೈತದ್ಬಾಣಮವಷ್ಟಭ್ಯ ವಿಧಾರಯಾಮೀತಿ। ತೇಽಶ್ರದ್ಧಧಾನಾ ಬಭೂವುಃ । ಸೋಽಭಿಮಾನಾದೂರ್ಧ್ವಮುತ್ಕ್ರಮತ ಇವ ತಸ್ಮಿನ್ನುತ್ಕ್ರಾಮತಿ ಅಥೇತರೇ ಸರ್ವ ಏವೋತ್ಕ್ರಾಮಂತೇ। ತಸ್ಮಿಂಶ್ಚ ಪ್ರತಿಷ್ಠಮಾನೇ ಸರ್ವ ಏವ ಪ್ರತಿಷ್ಠಂತೇ ॥ ೩ ॥

ಅ ॥ ತಾನ್=ಆ ಅಹಂಕಾರಿಗಳನ್ನು ಕುರಿತು, ವರಿಷ್ಠಃ=ಅತಿ ಶ್ರೇಷ್ಠನಾದ, ಪ್ರಾಣಃ=ಮುಖ್ಯಪ್ರಾಣನು, ಮೋಹಂ=ಮಿಥ್ಯಾಜ್ಞಾನವನ್ನು, ಮಾಪದ್ಯಥ=ಹೊಂದಬೇಡಿರಿ. ಅಹಮೇವ=ನಾನೇ, ಏತತ್=ಈ ಶರೀರದಲ್ಲಿ, ಪಂಚಧಾ=ಪ್ರಾಣಾದಿ ಐದು ರೂಪಗಳಿಂದ, ಆತ್ಮಾನಂ=ತನ್ನನ್ನು, ವಿಭಜ್ಯ=ವಿಭಾಗಿಸಿ, ಏತತ್=ಈದಾದ, ಬಾಣಂ=ಶರೀರವನ್ನು, ಅವಷ್ಟಭ್ಯ=ಆಶ್ರಯಿಸಿ, ವಿಧಾರಯಾಮಿ=ಧಾರಕನು (ಪ್ರಕಾಶಕನೂ ಕೂಡ) ಆಗಿರುತ್ತೇನೆ. ಇತಿ=ಹೀಗೆ, ಉವಾಚ=ಹೇಳಿದನು. ತೇ=ಅವರು, ಅಶ್ರದ್ದಧಾನಾಃ=ವಿಶ್ವಾಸವಿಲ್ಲದವರು, ಬಭೂವುಃ=ಆದರು. ಸಃ=ಮುಖ್ಯಪ್ರಾಣನು ಅಹಂಕಾರಯುಕ್ತ ಶರೀರದಿಂದ, ಊರ್ಧ್ವಂ=ಸ್ವಲ್ಪ ಮೇಲುಗಡೆ,ಉತ್ಕ್ರಮತ ಇವ=ಸ್ವಲ್ಪ ಹೊರಟು ಹೋದನು. ('ಉಪಮಾರ್ಥೇ ತಥಾಲ್ಪತ್ವೇಽಪೀವಶಬ್ದಃ ಪ್ರಯುಜ್ಯತೇ ।' ಈ ಕೋಶದಿಂದಲೂ "ದಶರಾತ್ರೈರ್ಭುಕ್ತಮಿವ ನ ಸಮ್ಯಕ್ ಸ್ವಲ್ಪ ಭೋಜನಾತ್" ಈ ಪ್ರಯೋಗಾನುಸಾರವಾಗಿಯೂ 'ಇವ' ಶಬ್ದವು ಅಲ್ಪಾರ್ಥದಲ್ಲಿರುತ್ತದೆ.) ಅಥ=ಆ ಮೇಲೆ, ತಸ್ಮಿನ್=ಪ್ರಾಣನು, ಉತ್ಕ್ರಾಮತಿ ಸತಿ=ಹೊರಡುತ್ತಿರಲು, ಇತರೇ=ಇತರರಾದ, ಸರ್ವ ಏವ=ಸಮಸ್ತರೂ, ಉತ್ಕ್ರಮಂತೇ=ಹೊರಟು ಹೋದರು. ತಸ್ಮಿಂಶ್ಚ=ಆ ಪ್ರಾಣನು, ಪ್ರತಿಷ್ಠಮಾನೇ=ಮತ್ತು ಪ್ರವೇಶಿಸಿ ನಿಲ್ಲಲು, ಸರ್ವ ಏವ=ಸಮಸ್ತರೂ,ಪ್ರತಿಷ್ಠಂತೇ=ಅವರವರ ಸ್ಥಾನದಲ್ಲಿ ಪ್ರವೇಶಿಸಿ ನಿಲ್ಲುವರಾದರು.

ಭಾ ॥ ಪ್ರಾಣಶಬ್ದೇನ ಪ್ರಧಾನವಾಯುಃ ॥

ಅ ॥ ಪ್ರಾಣಶಬ್ದೇನ=ಪ್ರಾಣಶಬ್ದದಿಂದ, ಪ್ರಧಾನವಾಯುಃ=ಮುಖ್ಯಪ್ರಾಣನು (ಉಚ್ಯತೇ=ಹೇಳಲ್ಪಡುತ್ತಾನೆ.)

ತಾ ॥ ಈ ರೀತಿಯಾಗಿ ಅಹಂಕಾರದಿಂದ ಕಾದಾಡಿದವರನ್ನು ಕುರಿತು ದೇವಶ್ರೇಷ್ಠನಾದ ಮುಖ್ಯಪ್ರಾಣನು 'ಎಲೈ ದೇವತೆಗಳಿರಾ! ಪ್ರಜೆಗಳ ಶರೀರದಲ್ಲಿ ಪ್ರಾಣಾಪಾನಾದಿ ಐದು ರೂಪಗಳಿಂದಲೂ ವಾಗಾದಿ ರೂಪಗಳಿಂದಲೂ ಇದ್ದು ನಾನೇ ಈ ಶರೀರವನ್ನು ಧರಿಸತಕ್ಕವನೂ ಪ್ರಕಾಶಿಸತಕ್ಕವನೂ ಆಗಿರುತ್ತೇನೆ. ಆದುದರಿಂದ ನೀವು ನಾವೇ ಧಾರಕಪ್ರಕಾಶಕರೆಂದು ಮೋಹವನ್ನು ಹೊಂದಬೇಡಿರಿ.' ಎಂದೆನಲು ಅವರಾರೂ ಈ ಮಾತಿನಲ್ಲಿ ವಿಶ್ವಾಸವನ್ನಿಡಲಿಲ್ಲ. ಕೂಡಲೇ ಮುಖ್ಯಪ್ರಾಣನು ಅವರಿಗೆ ನಂಬಿಕೆಯುನ್ನುಂಟುಮಾಡಲು ಅಹಂಕೃತವಾದ ಶರೀರದಿಂದ ಸ್ವಲ್ಪ ಹೊರಟು ಹೋದನು. ಆಗ ಆಕಾಶಾದಿ ಸಮಸ್ತ ದೇವತೆಗಳೂ ಶರೀರಧಾರಣ ಪ್ರಕಾಶವಂತಿರಲಿ ತಮಗೆ ಶರೀರದಲ್ಲಿ ನಿಲ್ಲಲು ಅಸಮರ್ಥರಾಗಿ ಹೊರಟು ಹೋದರು. ಪ್ರಾಣನು ಧಾರಕನಲ್ಲದ ಶರೀರದಲ್ಲಿ ತಮಗೆ ಪ್ರವೇಶಿಸಲಾಗದಿದ್ದರೂ ಯಾವದೋ ಒಂದು ಸಮಯ ಹೀಗಾಗಬಹುದೆಂದು ತಿರುಗಿ ಗರ್ವಪಡುತ್ತಿರುವ ದೇವತೆಗಳಿಗೆ ಪೂರ್ಣ ನಂಬಿಕೆಯುನ್ನುಂಟು ಮಾಡಲು ತಿರುಗಿ ತಾನು ಶರೀರವನ್ನು ಪ್ರವೇಶಿಸಲು ಎಲ್ಲಾ ದೇವತೆಗಳೂ ಅದರಲ್ಲಿ ಪ್ರವೇಶವನ್ನು ಹೊಂದುವವರಾದರು. ॥ ೩ ॥

**ಮಂ ॥ ತದ್ಯಥಾ ಮಧುಮಕ್ಷಿಕಾ ಮಧುಕರರಾಜಾನಮುತ್ಕ್ರಾಮಂತಂ ಸರ್ವಾ ಏವೋತ್ಕ್ರಮಂತೇ। ತಸ್ಮಿಂಶ್ಚ ಪ್ರತಿಷ್ಠಮಾನೇ ಸರ್ವಾ ಏವ ಪ್ರತಿಷ್ಠಂತೇ। ಏವಂ ವಾಙ್ಮನಶ್ಚಕ್ಷುಃ ಶ್ರೋತ್ರಂ ಚೇತಿ। ತೇ ಪ್ರೀತಾಃ ಪ್ರಾಣಂ ಸ್ತುನ್ವಂತ್ಯೇಷೋಽಗ್ನಿಸ್ತಪತ್ಯೇಷ ಸೂರ್ಯ ಏಷ ಪರ್ಜನ್ಯೋ ಮಘವಾನೇಷ ವಾಯುರೇಷ ಪೃಥಿವೀ ರಯಿರ್ದೇವಃ ಸದಸಚ್ಚಾಮೃತಂ ಚ ಯತ್ ॥ ೪ ॥**

ಅ ॥ ತತ್=ಲೋಕದಲ್ಲಿ, ಯಥಾ=ಹೇಗೆ, ಮಧುಮಕ್ಷಿಕಾಃ=ಜೇನುನೊಣಗಳು, ಮಧುಕರರಾಜಾನಂ=ರಾಣಿ ಹುಳುವನ್ನು, ಉತ್ಕ್ರಾಮಂತಂ=ಹೊರಟು ಹೋಗುವುದನ್ನು (ಅನುಸರಿಸಿ,) ಸರ್ವಾ ಏವ=ಸಮಸ್ತಗಳೂ ಕೂಡ, ಉತ್ಕ್ರಾಮಂತೇ=ಹೊರಟು ಹೋಗುತ್ತವೋ, ತಸ್ಮಿಂಶ್ಚ=ಆ ರಾಣಿ ಹುಳುವು, ಪ್ರತಿಷ್ಠಮಾನೇ ಸತಿ=ತಿರುಗಿ ಬರುತ್ತಿರಲು, ಸರ್ವಾ ಏವ=ಸಮಸ್ತ ಹುಳುಗಳೂ, ಪ್ರತಿಷ್ಠಂತೇ=ಪ್ರವೇಶಿಸುತ್ತಾವೆ. ಏವಂ=ಹೀಗೆಯೇ, ವಾಕ್=ವಾಗಭಿಮಾನಿ ದೇವತೆಯು, ಮನಃ=ಮನೋಽಭಿಮಾನಿಯು, ಚಕ್ಷುಃ=ಚಕ್ಷುರಭಿಮಾನಿಯು, ಶ್ರೋತ್ರಂ ಚ=ಕರ್ಣಾಭಿಮಾನಿಯೂ, (ಪ್ರಾಣನನ್ನನುಸರಿಸಿಕೊಂಡಿರುವರು.) ಇತಿ=ಹೀಗೆ ನಿಶ್ಚಯವಾಗಲು, ಪ್ರೀತಾಃ=ಸಂತುಷ್ಟರಾದ, ತೇ=ಆ ದೇವತೆಗಳು, ಪ್ರಾಣಂ=ಮುಖ್ಯಪ್ರಾಣನನ್ನು, ಸ್ತುನ್ವಂತಿ=ಸ್ತುತಿಮಾಡುತ್ತಾರೆ. ಏಷಃ=ಮುಖ್ಯಪ್ರಾಣನೇ, ಅಗ್ನಿಃ=ಬೆಂಕಿಯಾಗಿ, ತಪತಿ=ಸುಡುತ್ತಾನೆ. ಏಷಃ=ಇವನೇ, ಸೂರ್ಯಃ=ಸೂರ್ಯನಾಗಿ, ತಪತಿ=ಸುಡುತ್ತಾನೆ. ಏಷಃ=ಇವನೇ, ಪರ್ಜನ್ಯಃ=ಮೇಘವಾಗಿ (ವೃಷ್ಟ್ಯಾದಿಗಳನ್ನು ಕೊಡುತ್ತಾನೆ.) ಏಷಃ=ಇವನೇ, ಮಘವಾನ್=ದೇವೇಂದ್ರನು, ಏಷಃ=ಇವನೇ, ವಾಯುಃ=ಬೀಸತಕ್ಕವನು, ಏಷಃ=ಇವನೇ, ಪೃಥಿವೀ=ಪೃಥಿವ್ಯಭಿಮಾನಿಯು, ರಯಿಃ=ವಿತ್ತಾಭಿಮಾನಿಯು, ದೇವಃ=ಕ್ರೀಡಾದಿಗುಣ ವಿಶಿಷ್ಟನಾದ ಇವನೇ, ಸತ್=ಮೂರ್ತಾಭಿಮಾನಿಯೂ, ಅಸಚ್ಚ=ಅಮೂರ್ತಾಭಿಮಾನಿಯೂ, ಯಚ್ಚ=ಯಾವ, ಅಮೃತಂ=ಮುಕ್ತಸಮುದಾಯವೋ (ಅದಕ್ಕೂ ಇವನೇ ಅಭಿಮಾನಿಯು.)

ತಾ ॥ ಲೋಕದಲ್ಲಿ ಜೇನುಹುಳುಗಳು ಜೇನುತಟ್ಟೆಯಿಂದ ರಾಣಿ ಹುಳುವನ್ನನುಸರಿಸಿ ಅದು ಹೊರಟು ಹೋಗಲು ತಾವೂ ಹಾರುತ್ತಾ ಅದು ತಿರಿಗಿ ಕೂಡಲು ತಾವೂ ಹೇಗೆ ತಿರುಗಿ ಕೂಡುತ್ತವೆಯೋ ಅದೇ ಪ್ರಕಾರ ವಾಗಾದ್ಯಭಿಮಾನಿ ದೇವತೆಗಳು ಪ್ರಾಣನನ್ನನುಸರಿಸಿಕೊಂಡು ಪ್ರವೇಶ ನಿರ್ಗಮನಗಳನ್ನು ಮಾಡುತ್ತಾರೆ. ಈ ರೀತಿಯಾಗಿ ಶರೀರ ಧಾರಕಪ್ರಕಾಶಕರಾದ ದೇವತೆಗಳಲ್ಲಿ ಎಲ್ಲರಿಂದಲೂ ಪ್ರಾಣನೇ ಶ್ರೇಷ್ಠನೆಂದು ನಿರ್ಧಾರವಾಗೋಣ ಇತರ ದೇವತೆಗಳು ತಮ್ಮ ಅಹಂಕಾರವನ್ನು ತೊರೆದು ಸಂತುಷ್ಟರಾಗಿ 'ಎಲೈ ಮುಖ್ಯಪ್ರಾಣನೇ! ನೀನೇ ಸರ್ವ ದೇವತೆಗಳಲ್ಲಿಯೂ ಇದ್ದು ಸೂರ್ಯಾದಿನಾಮಕನಾಗಿ ಸೂರ್ಯಾದಿ ಗುಣಕ್ರಿಯಾ ಪ್ರವರ್ತಕನಾಗಿಯೂ ಇರುವುದರಿಂದ ಅಂದರೆ ಸೂರ್ಯಾಗ್ನಿಸ್ವರೂಪನಾಗಿ ಸುಡತಕ್ಕವನೂ ಪರ್ಜನ್ಯರೂಪನಾಗಿ ವರ್ಷಿಸತಕ್ಕವನೂ ಇಂದ್ರರೂಪನಾಗಿ ದೇವತೆಗಳನ್ನು ಪಾಲಿಸುವವನೂ ವಾಯುರೂಪನಾಗಿ ಬೀಸತಕ್ಕವನೂ ಪೃಥಿವೀರೂಪನಾಗಿ ಸಕಲ ಪ್ರಾಣಿಗಳನ್ನೂ ಧರಿಸತಕ್ಕವನೂ ವಿತ್ತಕ್ಕೆ ನಿಯಾಮಕನೂ ಮೂರ್ತ, (ಪೃಥಿವೀ ಅಪ್‌ತೇಜಸ್ಸುಗಳು) ಅಮೂರ್ತ, (ಆಕಾಶಕಾಲಗಳು) ಇವುಗಳಿಗೆಲ್ಲಾ ನಿಯಾಮಕನಾಗಿಯೂ ಇರತಕ್ಕವನು ನೀನೇ ಎಂದೀರೀತಿಯಾಗಿ ಸ್ತುತಿಸಿದರು.

**ಮಂ ॥ ಅರಾ ಇವ ರಥನಾಭೌ ಪ್ರಾಣೇ ಸರ್ವಂ ಪ್ರತಿಷ್ಠಿತಂ । ಋಚೋ ಯಜೂಂಷಿ ಸಾಮಾನಿ ಯಜ್ಞಃ ಕ್ಷತ್ರಂ ಚ ಬ್ರಹ್ಮ ಚ । ಪ್ರಜಾಪತಿಶ್ಚರಸಿ ಗರ್ಭೇ ತ್ವಮೇವ ಪ್ರತಿಜಾಯಸೇ । ತುಭ್ಯಂ ಪ್ರಾಣ ಪ್ರಜಾಸ್ತ್ವಿಮಾಃ ಯತ್ಪ್ರಾಣೈಃ ಪ್ರತಿತಿಷ್ಠಸಿ । ದೇವಾನಾಮಸಿ ವಹ್ನಿತಮಃ ಪಿತೄಣಾಂ ಪ್ರಥಮಾ ಸ್ವಧಾ । ಋಷೀಣಾಂ ಚರಿತಂ ಸತ್ಯಂ ಅಥರ್ವಾಂಗಿರಸಾಮಸಿ ॥ ೫ ॥**

ಅ ॥ ರಥನಾಭೌ=ರಥದಗಡಿಡ್ಡೆಯಲ್ಲಿ, ಅರಾ ಇವ=ಅಚ್ಚಿಮರಗಳಂತೆ, ಪ್ರಾಣೇ=ಮುಖ್ಯ ಪ್ರಾಣನಲ್ಲಿ, ಋಚಃ=ಋಗ್ವೇದವು, ಯಜೂಂಷಿ=ಯಜುರ್ವೇದವು, ಸಾಮಾನಿ=ಸಾಮವೇದವು, ಯಜ್ಞಃ=ಯಾಗವು, ಕ್ಷತ್ರಂ ಚ=ಕ್ಷತ್ರಿಯಜಾತಿಯು, ಬ್ರಹ್ಮ ಚ=ಬ್ರಾಹ್ಮಣಜಾತಿಯೂ ಕೂಡ, ಸರ್ವಂ=ಸಮಸ್ತವೂ, ಪ್ರತಿಷ್ಠಿತಂ=ಸ್ಥಿತವಾಗಿದೆ ತ್ವಮೇವ=ನೀನೇ, ಪ್ರಜಾಪತಿಃ= ದಕ್ಷಾದಿ ಪ್ರಜಾಪತಿಯಾಗಿ, ಗರ್ಭೇ=ಗರ್ಭದಲ್ಲಿ, ಚರಸಿ=ಸಂಚರಿಸುತ್ತಿ. ಪ್ರತಿಜಾಯಸೇ= ಹುಟ್ಟುತ್ತಿ. ಯತ್=ಯಾವ ಕಾರಣದಿಂದ, ಪ್ರಾಣೈಃ=ಚಕ್ಷುರಾದಿಗಳಿಂದ ಕೂಡಿಕೊಂಡು, (ಧಾರಣಾದಿಗಳನ್ನು ಮಾಡುತ್ತಾ ಶರೀರದಲ್ಲಿ,) ಪ್ರತಿತಿಷ್ಠಸಿ=ಇರುತ್ತಿಯೋ, (ಆದುದರಿಂದ,) ಪ್ರಾಣ=ಎಲೈ ಮುಖ್ಯಪ್ರಾಣನೇ! ಇಮಾಃ=ಈ ಯಾವ, ಪ್ರಜಾಃ=ದೇವಾದಿ ಪ್ರಜೆಗಳು, ತುಭ್ಯಂ ತು=ನಿನ್ನವರೇ, ದೇವಾನಾಂ=ಎಲ್ಲಾ ದೇವತೆಗಳಿಗೂ, ತ್ವಮೇವ=ನೀನೇ, ವಹ್ನಿತಮಃ= ಯಜ್ಞಭಾಗವನ್ನು ಪ್ರಾಪಿಸಿಕೊಡತಕ್ಕವನು, ಅಸಿ=ಆಗಿರುತ್ತಿ. ಪಿತೄಣಾಂ=ಪಿತೃಗಳಿಗೆ, ಪ್ರಥಮಾ=ಮುಖ್ಯವಾಗಿ, ಸ್ವಧಾ=ಸ್ವಧಾವಾಹಕನು. ಅಥರ್ವಾಂಗಿರಸಾಂ=ಅಥರ್ವಾ, ಅಂಗಿರ ನಾಮಕರಾದ, ಋಷೀಣಾಂ=ಋಷಿಗಳ, ಚರಿತಂ=ಆಚಾರವು, ಸತ್ಯಮಪಿ=ಸತ್ಯವಚನವೂ ಕೂಡ (ಆಗಿರುತ್ತಿ.)

ತಾ ॥ ರಥನಾಭಿಯಲ್ಲಿ ಅಚ್ಚಿಮರಗಳು ಹೇಗೆ ಸ್ಥಾಪಿಸಲ್ಪಟ್ಟಿವೆಯೋ, ಹಾಗೇ ಪ್ರಾಣನಲ್ಲಿ ಸರ್ವವೂ ಅಂದರೆ ಋಗಾದ್ಯಭಿಮಾನಿಗಳು ಯಾಗವೂ, ಬ್ರಾಹ್ಮಣ-ಕ್ಷತ್ರಿಯ ಜಾತಿಯೂ ಎಲ್ಲವೂ ನಿನ್ನಧೀನವಾಗಿರುತ್ತದೆ. ನೀನೇ ದಕ್ಷಾದಿ ಪ್ರಜಾಪತಿರೂಪನಾಗಿ ಗರ್ಭದಲ್ಲಿದ್ದುದನ್ನು ಪ್ರೇರಿಸತಕ್ಕವನೂ, ಉತ್ಪತ್ತಿಕ್ರಿಯೆಯನ್ನು ಮಾಡಿಸತಕ್ಕವನೂ, ಆಗಿರುತ್ತಿ. ನಿಖಿಲ ದೇವತೆಗಳಿಗೂ ಯಜ್ಞಭಾಗವನ್ನು ಸಲ್ಲಿಸತಕ್ಕವನೂ, ಪಿತೃಗಳಿಗೆ ತಿಲೋದಕ ಪಿಂಡಾದಿಗಳನ್ನು ಒಯ್ಯತಕ್ಕವನೂ ನೀನೇ ಆಗಿರುತ್ತಿ. ಮಹರ್ಷಿಗಳಲ್ಲಿ ಸತ್ಯಸದಾಚಾರಗಳು ನಿನ್ನನುಗ್ರಹದಿಂದಲೇ ಇರುತ್ತವೆ. ಚಕ್ಷುರಾದಿಗಳಿಂದ ಕೂಡಿಕೊಂಡು ಶರೀರವನ್ನು ನೀನೇ ಧರಿಸತಕ್ಕವನಾದುದರಿಂದ ತದಭಿಮಾನಿಗಳಾದ ನಾವೆಲ್ಲರೂ ನಿನ್ನಧೀನರಾದ ಭೃತ್ಯರಾಗಿರುತ್ತೇವೆ. ॥ ೫ ॥

**ಮಂ ॥ ಇಂದ್ರಸ್ತ್ವಂ ಪ್ರಾಣ ತೇಜಸಾ ರುದ್ರೋಽಸಿ ಪರಿರಕ್ಷಿತಾ । ತ್ವಮಂತರಿಕ್ಷೇ ಚರಸಿ ಸೂರ್ಯಸ್ತ್ವಂ ಜ್ಯೋತಿಷಾಂ ಪತಿಃ । ಯದಾ ತ್ವಮಭಿವರ್ಷಸ್ಯಥೇಮಾಃ ಪ್ರಾಣ ತೇ ಪ್ರಜಾಃ । ಆನಂದರೂಪಾಸ್ತಿಷ್ಠಂತಿ ಕಾಮಾಯಾನ್ನಂ ಭವಿಷ್ಯತೀತಿ । ವ್ರಾತ್ಯಸ್ತ್ವಂ ಪ್ರಾಣೈಕರ್ಷಿರತ್ತಾ ವಿಶ್ವಸ್ಯ ಸತ್ಪತಿಃ । ವಯಮಾದ್ಯಸ್ಯ ದಾತಾರಃ ಪಿತಾ ತ್ವಂ ಮಾತರಿಶ್ವನಃ ॥ ೬ ॥**

ಅ ॥ ಪ್ರಾಣ=ಎಲೈ ಮುಖ್ಯಪ್ರಾಣನೇ! ತ್ವಂ=ನೀನೇ, ಇಂದ್ರಃ=ಮಹೇಂದ್ರನು, ತೇಜಸಾ=ಪ್ರಭಾವದಿಂದ, ಯುಕ್ತಃ=ಕೂಡಿದವನು. ರುದ್ರಃ=ರೋಗನಾಶಕನು. ಪರಿರಕ್ಷಿತಾ=ರಕ್ಷಣೆಮಾಡತಕ್ಕವನೂ, ಅಸಿ=ಆಗಿರುತ್ತಿ. ತ್ವಂ=ನೀನೇ, ಅಂತರಿಕ್ಷೇ=ಆಕಾಶದಲ್ಲಿ, ಚರಸಿ=(ವಾಯುರೂಪದಿಂದ) ಸಂಚರಿಸುತ್ತಿ, ಸೂರ್ಯಃ=ಸೂರ್ಯಸ್ವರೂಪನು, ಜ್ಯೋತಿಷಾಂ=ಎಲ್ಲಾ ಜ್ಯೋತಿರ್ಮಂಡಲಗಳಿಗೂ, ತ್ವಂ=ನೀನೇ, ಪತಿಃ=ಸ್ವಾಮಿಯು. ಪ್ರಾಣ=ಎಲೈ ಮುಖ್ಯಪ್ರಾಣನೇ! ಯದಾ=ಯಾವಾಗ, ತ್ವಂ=ನೀನು, (ಮೇಘರೂಪನಾಗಿ)ಅಭಿವರ್ಷಸಿ=ಮಳೆಗರೆಯುತ್ತಿಯೋ, ಅಥ=ಆವಾಗ, ತೇ=ನಿನ್ನವರಾದ, ಇಮಾಃ=ಈ ಸಮಸ್ತ, ಪ್ರಜಾಃ=ಮನು

ಷ್ಯಾದಿ ಪ್ರಜೆಗಳು, ಕಾಮಾಯ=ಯಥೇಷ್ಟವಾಗಿ, ಅನ್ನಂ=ಅನ್ನವೂ, ಭವಿಷ್ಯತಿ=ಆಗುವುದು. ಇತಿ=ಹೀಗೆ, (ನಿಶ್ಚಿತ್ಯ=ನಿಶ್ಚಯಿಸಿ), ಆನಂದರೂಪಾಃ=ಸಂತುಷ್ಟಾಂತರಂಗರಾಗಿ, ತಿಷ್ಠಂತಿ= ಇರುತ್ತಾರೆ. ಪ್ರಾಣ=ಎಲೈ ಮುಖ್ಯಪ್ರಾಣನೇ! ತ್ವಂ=ನೀನು, ವ್ರಾತ್ಯಃ=ವ್ರತಾಸಕ್ತನಾದ, ಏಕರ್ಷಿಃ=ಮುಖ್ಯ ಋಷಿಯು, ಅಥರ್ವವೇದದ್ರಷ್ಟನು. ವಿಶ್ವಸ್ಯ=ಸಮಸ್ತ ಜಗತ್ತಿನ್ನ, ಅತ್ತಾ=ತಿನ್ನತಕ್ಕ ಯಮಾದಿಸ್ವರೂಪನು (ಆಗಿರುತ್ತಿ). ಸತ್ಪತಿಃ=ಸತ್=ಸಜ್ಜನರಿಗೆ, ಪತಿಃ= ಸ್ವಾಮಿಯು (ನೀನೇ), ವಯಂ=ನಾವು, ಅದ್ಯಸ್ಯ=ಭೋಜ್ಯವಸ್ತುವನ್ನ, ದಾತಾರಃ=ಕೊಡು ವವರು. ಮಾತರಿಶ್ವ=ಎಲೋ ಮುಖ್ಯಪ್ರಾಣನೇ! ತ್ವಂ=ನೀನು, ನಃ=ನಮಗೆ, ಪಿತಾ=ಪಿತೃ ಸ್ವರೂಪನು.

ತಾ ॥ ಎಲೈ ಮುಖ್ಯಪ್ರಾಣನೇ! ಪ್ರತಾಪದಿಂದ ಕೂಡಿದವನಾಗಿಯೂ, ರೋಗನಿವ ರ್ತಕನಾಗಿಯೂ, ನಿಖಿಲಜಗದ್ರಕ್ಷಕನಾಗಿಯೂ, ಪರಮೈಶ್ವರ್ಯವುಳ್ಳವನಾಗಿಯೂ ಇರುತ್ತಿ. ಅಲ್ಲದೆ ಅಂತರಿಕ್ಷದ ಗ್ರಹಾದಿಗಳಿಗೂ ನಿಯಾಮಕನಾಗಿರುತ್ತಿ. ನೀನು ಪರ್ಜನ್ಯರೂಪನಾಗಿ ವರ್ಷಿಸೋಣ ಪ್ರಜೆಗಳು ಇಚ್ಛಾನುಸಾರವಾಗಿ ಅನ್ನಾದಿಗಳು ದೊರಕುವವೆಂದು ಸಂತೋಷಿ ಗಳಾಗಿರುವರು. ವ್ರತನಿಷ್ಠನಾದ ಅಥರ್ವವೇದದರ್ಶಿಯೂ, ಜಗನ್ನಾಶಕನಾದ ಯಮನೂ ನಮಗೆ ಪಿತೃತುಲ್ಯನೂ ಆಗಿರುತ್ತಿ. ಇಂತಹ ನಿನಗೆ ಭೋಜ್ಯಪದಾರ್ಥಗಳನ್ನರ್ಪಿಸುತಾ ನಿನ್ನನ್ನು ಪೂಜಿಸುತ್ತಲೂ ಇರುತ್ತೇವೆ. ॥ ೬ ॥

**ಮಂ ॥ ಯಾ ತೇ ತನೂರ್ವಾಚಿ ಪ್ರತಿಷ್ಠಿತಾ ಯಾ ಶ್ರೋತ್ರೇ ಯಾ ಚ ಚಕ್ಷುಷಿ। ಯಾ ಮನಸಿ ಸಂತತಾ ಶಿವಾಂ ತಾಂ ಕುರು ಮೋತ್ಕ್ರಮೀಃ। ಪ್ರಾಣ ಸ್ಯೇತದ್ವಶೇ ಸರ್ವಂ ತ್ರಿದಿವೇ ಯತ್ಪ್ರತಿಷ್ಠಿತಂ । ಮಾತೇವ ಪುತ್ರಾನ್ರ ಕ್ಷಸ್ವ ಶ್ರೀಶ್ಚ ಪ್ರಜ್ಞಾಂ ಚ ವಿಧೇಹಿ ನ ಇತಿ ॥ ೭ ॥**

**ಇತಿ ದ್ವಿತೀಯ ಪ್ರಶ್ನಃ ॥ ೨ ॥**

ಅ ॥ ಯಾ=ಯಾವ, ತೇ=ನಿನ್ನದಾದ, ತನೂಃ=ಶರೀರವು, ವಾಚಿ=ಮಾತಿನಲ್ಲಿ, ಪ್ರತಿಷ್ಠಿತಾ=ಸ್ಥಿತವಾಗಿದೆಯೋ, ಯಾ=ಯಾವ ಶರೀರವು, ಶ್ರೋತ್ರೇ=ಶ್ರೋತ್ರೇಂದ್ರಿಯದಲ್ಲಿ, ಯಾಚ=ಯಾವುದು, ಚಕ್ಷುಷಿ=ಚಕ್ಷುರಿಂದ್ರಿಯದಲ್ಲಿ, ಯಾ=ಯಾವದು, ಮನಸಿ=ಚಿತ್ತದಲ್ಲಿ, ಸಂತತಾ=ವ್ಯಾಪ್ತವಾಗಿದೆಯೋ, ತಾಂ=ಅಂಥಾ ಮೂರ್ತಿಯನ್ನು, ಶಿವಾಂ=ಮಂಗಲವನ್ನಾಗಿ, ಕುರು=ಮಾಡು. ಮೋತ್ಕ್ರಮೀಃ=(ವಾಗಾದಿಗಳಿಂದ) ಉತ್ಕ್ರಮಿಸಬೇಡ. ಏತತ್= ಈದಾವ, ಸರ್ವಂ=ಸಮಸ್ತವಾದ ವಾಗಾದಿಯು, ಪ್ರಾಣಸ್ಯ=ಮುಖ್ಯಪ್ರಾಣನಾದ ನಿನ್ನ, ವಶೇ= ಅಧೀನದಲ್ಲಿ, (ವರ್ತತೇ=ಇರುತ್ತದೆ.) ತ್ರಿದಿವೇ=ಸ್ವರ್ಗಲೋಕದಲ್ಲಿ, ಯತ್=ಯಾವುದು, ಪ್ರತಿಷ್ಠಿತಂ=ಸ್ಥಿತವಾದ ಅಧಿದೈವಾದಿಗಳು, (ನಿನ್ನ ಅಧೀನದಲ್ಲಿ ಇರುತ್ತವೆ). (ತ್ವಂ=ನೀನು), ನಃ=ನಮ್ಮನ್ನು, ಮಾತಾ=ತಾಯಿಯು, ಪುತ್ರಾನಿವ=ಮಕ್ಕಳುಗಳನ್ನೆಂಬಂತೆ, ರಕ್ಷಸ್ವ=ರಕ್ಷಿಸು. ಶ್ರೀಶ್ಚ=ಪ್ರಜಾಧಾರಣ ಶೋಭೆಯನ್ನೂ, ಪ್ರಜ್ಞಾಂ ಚ=ಪ್ರಕಾಶಕತ್ವಶಕ್ತಿಯನ್ನೂ, ನಃ= ನಮಗೆ, ವಿಧೇಹಿ=ಕೊಡು. ಇತಿ=ಹೀಗೆ, (ಸ್ತುವಂತಿ=ಸ್ತೋತ್ರಮಾಡಿದರು.)

ತಾ ॥ ನಿನ್ನ ಸಂಬಂಧಿಕವಾದ ಯಾವ ಶರೀರವು, ವಾಗಿಂದ್ರಿಯದಲ್ಲಿಯೂ, ಶ್ರೋತ್ರ, ಚಕ್ಷುಸ್ಸು, ಮನಸ್ಸು, ಇತ್ಯಾದಿಗಳಲ್ಲಿಯೂ ವ್ಯಾಪಿಸಿರುತ್ತದೆಯೋ, ಅದನ್ನು ಶಾಂತವಾಗಿರಿಸು.

ಅವುಗಳಿಂದ ನಿನ್ನ ಸಾನ್ನಿಧ್ಯವನ್ನೆಂದಿಗೂ, ತಪ್ಪಿಸಬೇಡ. ಅಧ್ಯಾತ್ಮ (ದೇಹದಲ್ಲಿರುವ ಚಕ್ಷುರಾದ್ಯಭಿಮಾನಿ ದೇವತೆಗಳು) ಅಧಿದೈವ (ಪ್ರಥಿವ್ಯಾದ್ಯಭಿಮಾನಿ ದೇವತೆಗಳು) ಅಧಿಭೂತ (ಸರ್ವ ಜೀವ,) ರೂಪಗಳೆಲ್ಲವೂ ಕ್ಷಣಕಾಲವೂ ನಿನ್ನನ್ನು ಬಿಟ್ಟು ಪ್ರವೃತ್ತ್ಯಾದಿಗಳನ್ನು ಮಾಡಲಾರವು ಆದುದರಿಂದ ತಾಯಿ ಮಕ್ಕಳನ್ನು ರಕ್ಷಿಸುವಂತೆ ನೀನು ನಮ್ಮನ್ನು ರಕ್ಷಿಸುತ್ತಾ ಪ್ರಜಾಧಾರಣ ಶಕ್ತಿಯನ್ನೂ, ಪ್ರಕಾಶಕತ್ವ ಶಕ್ತಿಯನ್ನೂ ದಯಪಾಲಿಸು. ಎಂದೀರೀತಿಯಾಗಿ ಪ್ರಾಣನನ್ನು ಸ್ತುತಿಸಿದರು. ಆದುದರಿಂದ ಎಲೈ ವೈದರ್ಭಿಯೇ! ಪೂರ್ವೋಕ್ತರೀತಿಯಾಗಿ ಆಕಾಶಾದಿ ದೇವತೆಗಳು ಪ್ರಜಾಧಾರಕರಾಗಿಯೂ, ಅವರಲ್ಲೆಲ್ಲಾ ಅತಿಶ್ರೇಷ್ಠನಾದವನು ಮುಖ್ಯಪ್ರಾಣನೇ ಎಂದೂ ಸದೃಷ್ಟಾಂತವಾಗಿ ನಿನಗೆ ತಿಳಿಸಿರುತ್ತೇನೆ ಎಂದು ಹೇಳಿದರು.

ಎರಡನೇ ಪ್ರಶ್ನೆಯು ಮುಗಿಯಿತು. ॥ ೨ ॥

## ಮೂರನೇ ಪ್ರಶ್ನೆಯು.

ಸಮಸ್ತ ಜಗತ್ಕರ್ತೃತ್ವವು ಪರಮೇಶ್ವರನಿಗೆಂದು ಹೇಳಿರುತ್ತದೆ. ಅದನ್ನು ಇನ್ನೂ ವಿಶದೀಕರಿಸುವದಕ್ಕೆ ಈ ಮೂರನೇ ಪ್ರಶ್ನೆಯು ಹೊರಟದೆ.

**ಮಂ ॥ ಅಥ ಹೈನಂ ಕೌಸಲ್ಯಶ್ಚಾಶ್ವಲಾಯನಃ ಪಪ್ರಚ್ಛ । ಭಗವನ್ ಕುತ ಏಷ ಪ್ರಾಣೋ ಜಾಯತೇ । ಕಥಮಾಯಾತ್ಯಸ್ಮಿನ್ ಶರೀರೇ । ಆತ್ಮಾನಂ ವಾ ಪ್ರವಿಭಜ್ಯ ಕಥಂ ಪ್ರತಿಷ್ಠತೇ । ಕೇನೋತ್ಕ್ರಮತೇ ಕಥಂ ಬಾಹ್ಯಮಭಿಧತ್ತೇ ಕಥಮಧ್ಯಾತ್ಮಮಿತಿ ॥ ೧ ॥**

ಅ ॥ ಅಥ=ಆ ಮೇಲೆ, ಕೌಸಲ್ಯಶ್ಚ=ಕೋಸಲದೇಶೋತ್ಪನ್ನನಾದ, ಆಶ್ವಲಾಯನಃ=ಆಶ್ವಲಾಯನ ಋಷಿಯು, ಭಗವನ್=ಪೂಜ್ಯರಾದ ಪಿಪ್ಪಲಾದರೇ, ಏಷ ಪ್ರಾಣಃ=ಇಂಥಾ ಪ್ರಾಣನು, ಕುತಃ=ಯಾವ ಪುರುಷನಿಂದ, ಜಾಯತೇ=ಹುಟ್ಟುತ್ತಾನೆ. ಕಥಂ=ಯಾವ ಕಾರಣದಿಂದ, ಅಸ್ಮಿನ್=ಈದಾವ, ಶರೀರೇ=ಶರೀರದಲ್ಲಿ, ಆಯಾತಿ=ಪ್ರವರ್ತಿಸುತ್ತಾನೆ. ಕಥಂ=ಹೇಗೆ, ಆತ್ಮಾನಂ=ತನ್ನನ್ನು, ಪ್ರವಿಭಜ್ಯ=ವಿಭಾಗಿಸಿ, ಪ್ರತಿಷ್ಠತೇ=ಇರುತ್ತಾನೆ. ಕೇನ=ಯಾವ ಭಾಗದಿಂದ, ಉತ್ಕ್ರಮತೇ=(ಜೀವಾದಿಗಳನ್ನು ಹಿಡಿದುಕೊಂಡು,) ಶರೀರದ ದೆಶೆಯಿಂದ ಹೊರಟುಹೋಗುತ್ತಾನೆ. ಕಥಂ=ಯಾವ ರೂಪದಿಂದ, ಬಾಹ್ಯಂ=ಅಧಿಭೂತಾದಿಗಳನ್ನು, ಅಭಿಧತ್ತೇ=ಧರಿಸುತ್ತಾನೆ. ಕಥಂ=ಹೇಗೆ, ಅಧ್ಯಾತ್ಮಂ=ಅಧ್ಯಾತ್ಮರೂಪವನ್ನು, ಅಭಿಧತ್ತೇ=ಧರಿಸುತ್ತಾನೆ. ಇತಿ=ಹೀಗೆ, ಪಪ್ರಚ್ಛ=ಕೇಳಿದನು.

ತಾ ॥ ಪಿಪ್ಪಲಾದರು ವೈದರ್ಭಿಗೆ ಉತ್ತರವನ್ನು ಕೊಡಲು ಆಶ್ವಲಾಯನರು ಎಲೈ ಪೂಜ್ಯರೇ ಇಂತಹ ಸಾಮರ್ಥ್ಯವಂತನಾದ ಪ್ರಾಣನಿಗೆ ಪರಮೇಶ್ವರನಿಂದ ಉತ್ಪತ್ತಿಯು ಹೇಗೆ ಕೂಡುವದು? ಯಾವ ಕಾರಣದಿಂದ ಪಂಚರೂಪಗಳನ್ನು ಧರಿಸಿ ಈ ಶರೀರವನ್ನು ಧರಿಸಿಕೊಂಡಿರುತ್ತಾನೆ? ಅಂದರೆ ಯಾವ ಯಾವ ಭಾಗದಿಂದ ಏನೇನು ಕೆಲಸ ಮಾಡಿಕೊಂಡು ಯಾವ ಯಾವ ಸ್ಥಾನದಲ್ಲಿರುತ್ತಾನೆ? ಯಾವ ವಿಭಾಗದಿಂದ ಜೀವಾದಿಗಳನ್ನು ಹಿಡಿದುಕೊಂಡು ಹೊರಟುಹೋಗುತ್ತಾನೆ? ಯಾವ ಯಾವ ರೂಪದಿಂದ ಬಾಹ್ಯಗಳಾದ ಅಧಿಭೂತ ಅಧಿದೈವ ರೂಪಗಳನ್ನೂ, ಅಧ್ಯಾತ್ಮರೂಪವನ್ನೂ ಧರಿಸುತ್ತಾನೆ? ಎಂದು ಪ್ರಶ್ನಿಸಿದನು.

**ಮಂ ॥ ತಸ್ಮೈ ಸ ಹೋವಾಚ ಅತಿಪ್ರಶ್ನಾನ್ ಪೃಚ್ಛಸಿ ಬ್ರಹ್ಮಿಷ್ಠೋಽಸೀತಿ । ತಸ್ಮಾತ್ತೇಽಹಂ ಬ್ರವೀಮಿ । ಆತ್ಮತ ಏಷ ಪ್ರಾಣೋ ಜಾಯತೇ । ಯಥೈಷಾ ಪುರುಷೇ ಛಾಯಾ ಏತಸ್ಮಿನ್ನೇತದಾತತಂ ॥ ೨ ॥**

ಅ ॥ ಸ ಹ=ಪಿಪ್ಪಲಾದರು, ತಸ್ಮೈ=ಆಶ್ವಲಾಯನನಿಗೋಸ್ಕರ, ಅತಿಪ್ರಶ್ನಾನ್=ಅತ್ಯಂತವಾಗಿ ಕೇಳಲಗತ್ಯಗಳಾದ ಅರ್ಥಗಳನ್ನು, ಪೃಚ್ಛಸಿ=ಕೇಳುತ್ತಿ. (ಆದುದರಿಂದ) ಬ್ರಹ್ಮಿಷ್ಠಃ=ವೇದವಿಚಾರಾದಿಗಳುಳ್ಳವನು, ಅಸಿ=ಆಗಿರುತ್ತಿ. ತಸ್ಮಾತ್=ಆದುದರಿಂದ, ತೇ=ನಿನಗೋಸ್ಕರ, ಅಹಂ=ನಾನು (ಉತ್ತರವನ್ನು), ಬ್ರವೀಮಿ=ಹೇಳುತ್ತೇನೆ. ಇತಿ=ಹೀಗೆ, ಉವಾಚ=ಹೇಳಿದರು. ಆತ್ಮತಃ=ಪರಮಾತ್ಮನಿಂದ, ಏಷಃ=ಮಹಾಮಹಿಮನಾದ, ಪ್ರಾಣಃ=ಮುಖ್ಯಪ್ರಾಣನು, ಜಾಯತೇ=ಹುಟ್ಟುತ್ತಾನೆ. ಯಥಾ=ಹೇಗೆ ಏಷಾ=ಈದಾವ, ಛಾಯಾ=ನೆರಳು, ಪುರುಷೇ=ಶರೀರದಲ್ಲಿ, ಆತತಾ=ಅಧೀನವಾಗಿದೆಯೋ, (ಹೀಗೆಯೇ) ಏತಸ್ಮಿನ್=ಈ ಪರಮಾತ್ಮನಲ್ಲಿ, ಏತತ್=ಪ್ರಾಣಾದಿಗಳೆಲ್ಲವೂ, ಆತತಂ=ಅಧೀನವಾಗಿದೆ.

**ಭಾ ॥ ಆತ್ಮತಃ ಪರಮಾತ್ಮತಃ ॥**

ಅ ॥ ಆತ್ಮತಃ=ಮಂತ್ರದಲ್ಲಿದ್ದ ಆತ್ಮಶಬ್ದದಿಂದ, ಪರಮಾತ್ಮತಃ=ಪರಮಾತ್ಮನಿಂದ ಎಂದರ್ಥವಾಗಿರುತ್ತದೆ.

ತಾ ॥ ಶರೀರದ ನೆರಳು ಶರೀರದ ಅಧೀನವಾಗಿರುವಂತೆ ಪ್ರಾಣಾದಿಗಳೆಲ್ಲರೂ ಪರಮಾತ್ಮನ ಅಧೀನರಾದುದರಿಂದ ಪ್ರಾಣನಿಂದಲೂ ಅತ್ಯಂತ ಮಹಿಮೋಪೇತನಾದ ಪರಮಾತ್ಮನಿಂದ ಪ್ರಾಣನು ಉತ್ಪತ್ತಿಯನ್ನು ಹೊಂದುತ್ತಾನೆ.

**ಮಂ ॥ ಮನೋಽಕೃತೇನಾಯಾತ್ಯಸ್ಮಿನ್ ಶರೀರೇ । ಯಥಾ ಸಮ್ರಾಡೇವಾಧಿಕೃತಾನ್ವಿನಿಯುಙ್ಕ್ತೇ ಏತಾನ್ ಗ್ರಾಮಾನಧಿತಿಷ್ಠಸ್ವೈತಾನ್ ಗ್ರಾಮಾನಧಿತಿಷ್ಠಸ್ವೇತ್ಯೇವಮೇವೈಷ ಪ್ರಾಣ ಇತರಾನ್ ಪ್ರಾಣಾನ್ ಪೃಥಕ್ ಪೃಥಗೇವ ಸನ್ನಿಧತ್ತೇ ॥ ೩ ॥**

ಅ ॥ ಪ್ರಾಣಃ=ಮುಖ್ಯಪ್ರಾಣನು, ಮನೋಽಕೃತೇನ ಮನಃ=ಪರಬ್ರಹ್ಮನ, ಕೃತೇನ=ನಿಮಿತ್ತವಾಗಿ (ಅಂದರೆ ಪ್ರೇರಣೆಯಿಂದ,) ಅಸ್ಮಿನ್ ಶರೀರೇ=ಈ ಶರೀರದಲ್ಲಿ, ಆಯಾತಿ=ಬರುತ್ತಾನೆ. ('ಮನನಾನ್ಮನ ಉದ್ದಿಷ್ಟಃ' 'ಮನೋ ಬ್ರಹ್ಮ' ಎಂಬೀ ವಚನಶ್ರುತಿಗಳಿಂದ ಮನಃ ಎಂಬ ಶಬ್ದಕ್ಕೆ ಪರಬ್ರಹ್ಮನೆಂದು ಅರ್ಥ) ಸಮ್ರಾಟ್=ಚಕ್ರಾಧಿಪತಿಯು, ಅಧಿಕೃತಾನ್=ಅಧಿಕಾರಿಗಳನ್ನು, (ಕುರಿತು) ಏತಾನ್=ಈದಾವ, ಗ್ರಾಮಾನ್=ಗ್ರಾಮಗಳಲ್ಲಿ, ಅಧಿತಿಷ್ಠಸ್ವ=ಅಧಿಪತಿಯಾಗಿರು. ಏತಾನ್ಗ್ರಾಮಾನ್=ಈ ಗ್ರಾಮಗಳಲ್ಲಿ, ಅಧಿತಿಷ್ಠಸ್ವ=ಅಧಿಪತಿಯಾಗಿರು. ಇತಿ=ಈ ರೀತಿಯಾಗಿ. ಯಥಾ=ಹೇಗೆ ಲೋಕದಲ್ಲಿ, ವಿನಿಯುಙ್ಕ್ತೇ=ಆಜ್ಞಾಪಿಸುತ್ತಾನೋ, ಏವಮೇವ=ಹೀಗೇಯೇ, ಏಷಃ=ಈದಾವ, ಪ್ರಾಣಃ=ಮುಖ್ಯಪ್ರಾಣನು, ಇತರಾನ್=ತನ್ನ ವಿಭಾಗರೂಪಗಳಾದ, ಪ್ರಾಣಾನ್=ಪ್ರಾಣಗಳನ್ನು, ಪೃಥಕ್ಪೃಥಗೇವ=ಬೇರೆ ಬೇರೆ ಸ್ಥಾನಗಳಲ್ಲಿ, ಸನ್ನಿಧತ್ತೇ=ಸ್ಥಾಪಿಸುತ್ತಾನೆ.

**ಭಾ ॥ ವಿಷ್ಣೋರ್ವಾಯುಃ ಸಮುತ್ಪನ್ನೋ ವಾಯೋಃ ಸರ್ವಾಶ್ಚ ದೇವತಾಃ । ಪ್ರಾಣಾದ್ಯಾಸ್ತಾನ್ನಯನ್ ಪ್ರಾಣಃ ಆಜ್ಞಾಪಯತಿರಾಜವತ್ ॥**

ಸ್ವಯಂ ಚ ಪಂಚರೂಪಃ ಸನ್ ದದ್ಯಾನ್ಮೋಕ್ಷಾದಿಕಂ ಪ್ರಭುಃ ||
- ಇತಿ ಪ್ರಭಂಜನೇ || ೩ ||

ಅ || ವಿಷ್ಣೋಃ=ಪರಮಾತ್ಮನಿಂದ, ವಾಯುಃ=ಮುಖ್ಯಪ್ರಾಣನು, ಸಮುತ್ಪನ್ನಃ=ಹುಟ್ಟಿದನು. ವಾಯೋಃ=ಮುಖ್ಯಪ್ರಾಣನಿಂದ, ಸರ್ವಾಶ್ಚ=ಸಮಸ್ತರಾದ, ಪ್ರಾಣಾದ್ಯಾಃ=(ನಾಸಿಕ್ಯ) ಪ್ರಾಣನೇ ಮೊದಲಾದ, ದೇವತಾಃ=ದೇವತೆಗಳು (ಹುಟ್ಟಿದರು.) ತಾನ್=ಆ ಪ್ರಾಣಾದಿಗಳನ್ನು, ನಯನ್=ಪ್ರವೃತ್ತಿಗೊಳಿಸತಕ್ಕ, ಪ್ರಾಣಃ=ಮುಖ್ಯಪ್ರಾಣನು, ಸ್ವಯಂ ಚ=ತಾನೂ ಕೂಡ,ಪಂಚರೂಪಃಸನ್=ಐದುರೂಪಗಳುಳ್ಳವನಾಗಿ, ರಾಜವತ್=ರಾಜನಂತೆ, ಆಜ್ಞಾಪಯತಿ=ಆಜ್ಞಾಪಿಸುತ್ತಾನೆ. ಪ್ರಭುಃ=ಮುಖ್ಯಪ್ರಾಣನು, ಮೋಕ್ಷಾದಿಕಂ=ಮೋಕ್ಷಾದಿ ಪುರುಷಾರ್ಥಗಳನ್ನು, ದದ್ಯಾತ್=ಕೊಡುತ್ತಾನೆ ಇತಿ=ಈ ರೀತಿಯಾಗಿ, ಪ್ರಭಂಜನೇ=ಪ್ರಭಂಜನನೆಂಬ ಆಗಮವಿಶೇಷದಲ್ಲಿ (ಹೇಳಲ್ಪಟ್ಟಿದೆ).

ತಾ || ಪರಬ್ರಹ್ಮನ ಪ್ರೇರಣೆಯಿಂದಲಾಗಲೀ ಸ್ವೇಚ್ಛೆಯಿಂದಲಾಗಲೀ ಇಂತಹ ಪ್ರಾಣನು ಸಕಲ ಶರೀರದಲ್ಲಿಯೂ ಪ್ರವೇಶಿಸುತ್ತಾನೆ. ಲೋಕದಲ್ಲಿ ರಾಜನು ತನ್ನ ಅಧಿಕಾರಿಗಳನ್ನು 'ನೀನು ಇಂತಹ ಗ್ರಾಮಗಳನ್ನು ಪಾಲಿಸು.' 'ನೀನು ಆಗ್ರಾಮವನ್ನು ರಕ್ಷಿಸಿಕೊಂಡಿರು' ಎಂಬೀ ರೀತಿಯಾಗಿ ಹೇಗೆ ಆಜ್ಞಾಪಿಸುತ್ತಾನೋ ಅಂತೆಯೇ ಪ್ರಾಣನು ತನ್ನಿಂದುತ್ಪನ್ನರಾದ ಇತರ ಪ್ರಾಣಾದಿ ಎಲ್ಲಾ ದೇವತೆಗಳನ್ನೂ ಬೇರೆ ಬೇರೆ ಸ್ಥಾನಗಳಲ್ಲಿದ್ದು ಕಾರ್ಯಗಳನ್ನು ಮಾಡುವಂತೆ ಆಜ್ಞಾಪಿಸುತ್ತಾನೆ. ಪ್ರಾಣನು ತನ್ನಿಂದುತ್ಪನ್ನಗಳಾದ ಭೂತಾತ್ಮಕ ಪಂಚಪ್ರಾಣಗಳಿಗೆ ತನ್ನ ಸ್ವರೂಪಭೂತಗಳಾದ ಪ್ರಾಣಾಪಾನಾದಿ ಪಂಚರೂಪಗಳಿಂದ ತತ್ತತ್ಸ್ಥಾನದಲ್ಲಿ ಪ್ರವೃತ್ತಿನಿವೃತ್ತಿಗಳನ್ನುಂಟುಮಾಡುತ್ತಾನೆ. 'ಸ ಏನಾನ್ ಬ್ರಹ್ಮ ಗಮಯತಿ' 'ವಿಷ್ಣುರ್ಹಿ ದಾತಾ ಮೋಕ್ಷಸ್ಯ ವಾಯುಶ್ಚ ತದನುಜ್ಞಯಾ' ಇತ್ಯಾದಿ ಪ್ರಮಾಣಾನುಸಾರವಾಗಿ ವಾಯುವೂ ಕೂಡ ಪರಮಾತ್ಮನ ಆಜ್ಞಾನುಸಾರವಾಗಿ ಮೋಕ್ಷಾದಿಗಳನ್ನು ಕೊಡುತ್ತಾನೆ. || ೩ ||

**ಮಂ || ಪಾಯೂಪಸ್ಥೇಽಪಾನಂ ಚಕ್ಷುಃ ಶ್ರೋತ್ರೇ ಮುಖನಾಸಿಕಾಭ್ಯಾಂ ಪ್ರಾಣಃ ಸ್ವಯಂ ಪ್ರತಿಷ್ಠತೇ । ಮಧ್ಯೇ ತು ಸಮಾನಃ । ಏಷ ಹ್ಯೇತದ್ಧುತಮನ್ನಂ ಸಮಂ ನಯತಿ ತಸ್ಮಾದೇತಾಃ ಸಪ್ತಾರ್ಚಿಷೋ ಭವಂತಿ। ಹೃದಿ ಹ್ಯೇಷ ಆತ್ಮಾ॥ ೪ ||**

ಅ || ಪಾಯೂಪಸ್ಥೇ=ಗುದ ಮತ್ತು ಉಪಸ್ಥಗಳಲ್ಲಿ, ಅಪಾನಂ=ಅಪಾನನೆಂಬ ವಾಯುವನ್ನು, ಚಕ್ಷುಃಶ್ರೋತ್ರೇ=ಕಣ್ಣುಕಿವಿಗಳಲ್ಲಿ, ಮುಖನಾಸಿಕಾಭ್ಯಾಂ=ಬಾಯಿಮೂಗುಗಳಲ್ಲಿ, ಪ್ರಾಣಃ=ಮುಖ್ಯಪ್ರಾಣನು, ಸ್ವಯಂ=ತನ್ನಸ್ವರೂಪವಾದ ಆಯಾ ನಾಮಗಳಿಂದ, ಪ್ರತಿಷ್ಠತೇ=ಸನ್ನಿಧೀಕರಿಸುತ್ತಾನೆ. ಹಿ=ಯಾವಕಾರಣದಿಂದ, ಏಷಃ=ಈ ಸಮಾನನು, ಏತತ್ ಹುತಂ=ಈ ಭುಕ್ತವಾದ, ಅನ್ನಂ=ಅನ್ನವನ್ನು, ಸಮಂ=ಯೋಗ್ಯರೀತಿಯಾಗಿ, ನಯತಿ=ಪ್ರಾಪಿಸಿ ಕೊಡುತ್ತಾನೋ, ತತ್=ಆ ಕಾರಣ, ಸಮಾನಸ್ತು=ಸಮಾನನಾದರೂ, ಮಧ್ಯೇ=ಪ್ರಾಣಾಪಾನರ ಮಧ್ಯಪ್ರದೇಶವಾದ, ನಾಭಿದೇಶದಲ್ಲಿ (ಇರುತ್ತಾನೆ), ತಸ್ಮಾತ್=ಆಹಾರವನ್ನು ಸಮೀಕರಿಸುವ ಪ್ರಯುಕ್ತ, ಏತಾಃ=ಇವು, ಸಪ್ತಾರ್ಚಿಷಃ=ಏಳು ಜ್ಞಾನೇಂದ್ರಿಯ ವ್ಯಾಪಾರಗಳು, ಭವಂತಿ=ಆಗುತ್ತವೆ. (ಚಕ್ಷುಃ ಶ್ರೋತ್ರ ಮೂಗು ಜಿಹ್ವೆ ಚರ್ಮ ಮನಸ್ಸು ಬುದ್ಧಿ. ಇವೇಳು ಜ್ಞಾನೇಂದ್ರಿಯಗಳು) ಏಷಃ ಆತ್ಮಾ=ಈ ಜೀವನು, ಹೃದಿ ಹಿ=ಹೃದಯದಲ್ಲಿ (ಸ್ವರೂಪದಿಂದ ಇದ್ದಾನೆ.)

ತಾ || ಶರೀರಗತವಾಯುವು ಮಲಾದ್ಯಪಸರಣೆಯನ್ನು ಮಾಡುವುದರಿಂದ ಅಪಾನನೆಂದೂ, ಕಣ್ಣು, ಕಿವಿ, ಬಾಯಿ, ಮೂಗು, ಇವುಗಳಲ್ಲಿ ಶ್ವಾಸಪ್ರಣಯನದಿಂದ ಪ್ರಾಣನೆಂದೂ, ಆಹಾರರಸಗಳನ್ನು ಆಯಾಯ ಸ್ಥಾನಗಳಿಗೊಯ್ಯುವ ಪ್ರಯುಕ್ತ ಪ್ರಾಣಾಪಾನಗಳ ಮಧ್ಯಪ್ರದೇಶವಾದ ನಾಭಿಯಲ್ಲಿದ್ದು ಸಮಾನನೆಂದೂ ಹೇಳಲ್ಪಡುತ್ತಾನೆ. ಈ ವಾಯುಗಳಲ್ಲಿ ಮುಖ್ಯಪ್ರಾಣನು ತತ್ತನ್ನಾಮದಿಂದ ಪ್ರವೃತ್ತ್ಯಾದಿಗಳನ್ನು ಮಾಡಿಸುತ್ತಾನೆ. ಅನ್ನಾದಿಗಳನ್ನು ಸಕಲಾವಯವಗಳಿಗೊಯ್ದು ಆಯಾ ಇಂದ್ರಿಯಗಳಿಗೆ ಶಕ್ತಿಯನ್ನು ಕೊಡುವುದರಿಂದ ಏಳು ಜ್ಞಾನೇಂದ್ರಿಯ ವ್ಯಾಪಾರಗಳೂ ವಾಯುವಿನಧೀನವಾಗಿವೆ. ಜೀವನು ಅಣುರೂಪನಾದುದರಿಂದ ವಿಷಯಗಳನ್ನನುಭವಿಸಲು ಈ ಏಳುಜ್ಞಾನೇಂದ್ರಿಯವ್ಯಾಪಾರವೂ ಅತ್ಯಾವಶ್ಯಕವಾಗಿದೆ. || ೫ ||

**ಮಂ || ಅತ್ರೈತದೇಕಶತಂ ನಾಡೀನಾಂ | ತಾಸಾಂ ಶತಂ ಶತಮೇಕೈಕಸ್ಯಾಂ ದ್ವಾಸಪ್ತತಿಂ ಪ್ರತಿಶಾಖಾನಾಡೀಸಹಸ್ರಾಣ್ಯಾಸು ವ್ಯಾನಶ್ಚರತ್ಯಥೈಕಯೋರ್ಧ್ವ ಉದಾನಃ ಪುಣ್ಯೇನ ಪುಣ್ಯಂ ಲೋಕಂ ನಯತಿ ಪಾಪೇನ ಪಾಪಮುಭಾಭ್ಯಾಮೇವ ಮನುಷ್ಯಲೋಕಂ || ೬ ||**

ಅ || ಅತ್ರ=ಈ ಶರೀರದಲ್ಲಿ, ನಾಡೀನಾಂ=ನಾಡಿಗಳ, ಏತತ್ ಏಕಶತಂ=ಈ ನೂರೊಂದು (ಇವೆ), ತಾಸಾಂ=ಆ ನಾಡಿಗಳ ಮಧ್ಯದಲ್ಲಿ, ಏಕೈಕಸ್ಯಾಂ=ಪ್ರತಿಯೊಂದರಲ್ಲಿ, ಶತಂ ಶತಂ=ನೂರು ನೂರು ಉಪನಾಡಿಗಳು (ಇವೆ), (ಶತೋತ್ತರಾಯುತ ಸಂಖ್ಯಾಃ೧೦೧೦೦) (ಪುನಃ=ಈ ಅಯುತನಾಡಿಗಳಲ್ಲಿ ಪ್ರತಿಯೊಂದರಲ್ಲಿಯೂ ಏಳೇಳು ಇವೆ, ನೂರು ನಾಡಿಗಳಲ್ಲಿ ಪ್ರತಿಯೊಂದರಲ್ಲಿ ಇಪ್ಪತ್ತೆಪ್ಪತ್ತು ಪ್ರತಿಶಾಖಾನಾಡಿಗಳು, ಹೀಗೆ ಪ್ರತಿಶರೀರದಲ್ಲಿ), ಪ್ರತಿಶಾಖಾನಾಡೀ ಸಹಸ್ರಾಣಿ=ಪ್ರತಿಶಾಖಾ ನಾಡೀಸಹಸ್ರಗಳ, ದ್ವಾಸಪ್ತತಿಂ=ಎಪ್ಪತ್ತೆರಡನ್ನು, ಜಾನೀಯಾತ್=ತಿಳಿಯತಕ್ಕದ್ದು, ಆಸು=ಈ ನಾಡಿಗಳಲ್ಲಿ, ವ್ಯಾನಃ=ಅನೇಕ ವಸ್ತುವನ್ನು ಪ್ರಾಪಿಸಿ ಕೊಡುವ ನಿಮಿತ್ತ"ವ್ಯಾನ" ನಾಮಕನಾಗಿ, ಚರತಿ=ಸಂಚರಿಸುತ್ತಾನೆ. ಉದಾನಃ=ತನ್ನಾಮಕನಾದ ವಾಯುವು, ಏಕಯಾ='ಸುಷುಮ್ನಾ'ಎಂಬನಾಡಿಯಿಂದ,ಊರ್ಧ್ವಂ=ಊರ್ಧ್ವಗತಿಯಾಗಿ, ಚರತಿ=ಸಂಚರಿಸುತ್ತಾನೆ, ಪುಣ್ಯೇನ=ಜೀವಕೃತ ಪುಣ್ಯವನ್ನು ನಿಮಿತ್ತೀಕರಿಸಿಕೊಂಡು, ಪುಣ್ಯಂ ಲೋಕಂ=ಸ್ವರ್ಗಾದಿಲೋಕಗಳನ್ನು, ಪಾಪೇನ=ಪಾಪಕಾರ್ಯದಿಂದ, ಪಾಪಂ=ನರಕಾದಿಗಳನ್ನು, ಉಭಾಭ್ಯಾ ಮೇವ=ಸಮವಾದ ಪುಣ್ಯಪಾಪಗಳಿಂದ, ಮನುಷ್ಯಲೋಕಂ=ಭೂಲೋಕವನ್ನು, ನಯತಿ=ಒಯ್ಯುತ್ತಾನೆ.

ತಾ || ಪ್ರಾಣಾಪಾನಸಮಾನರ ಸ್ಥಿತಿಯನ್ನು ಹೇಳಿಯಾಗಿದೆ. ವ್ಯಾನೋದಾನರ ಸ್ಥಿತಿಯು ಈ ರೀತಿಯಾಗಿದೆ. ಈ ಶರೀರದಲ್ಲಿ ಮುಖ್ಯನಾಡಿಗಳು ನೂರೊಂದು (೧೦೧). ಪ್ರತಿಯೊಂದರಲ್ಲಿಯೂ ಒಂದೊಂದು ನೂರು ಉಪನಾಡಿಗಳಿರುತ್ತವೆ. ಒಟ್ಟಿಗೆ ಹತ್ತುಸಾವಿರದ ನೂರಾಯಿತು. (೧೦೧೦೦). ಈ ಪೈಕಿ ಹತ್ತುಸಾವಿರ ನಾಡಿಗಳಲ್ಲಿ ಪ್ರತಿಯೊಂದರಲ್ಲಿ ಏಳೇಳೂ ಮಿಕ್ಕ ನೂರರಲ್ಲಿ ಪ್ರಯೊಂದರಲ್ಲಿಇಪ್ಪತ್ತೆಪ್ಪತ್ತು ಪ್ರತಿಶಾಖಾನಾಡಿಗಳಿವೆ. ಒಟ್ಟಿಗೆ ಎಪ್ಪತ್ತೆರಡು ಸಾವಿರ ನಾಡಿಗಳಾದವು (೭೨೦೦೦). ಸಕಲ ಶರೀರದಲ್ಲಿ ಹರಡಿಕೊಂಡಿದ್ದ ಇಷ್ಟು ನಾಡಿಗಳಲ್ಲಿ ತತ್ತದ್ರಸಗಳನ್ನು ಅನೇಕ ರೀತಿಯಿಂದ ಒಯ್ಯುವ ಪ್ರಯುಕ್ತ ವ್ಯಾನನೆಂಬ ವಾಯುವಿರುತ್ತಾನೆ. ಈ

ನಾಡಿಗಳ ಮಧ್ಯದಲ್ಲಿ ಪ್ರಧಾನವಾದ 'ಸುಷುಮ್ನ' ಎಂಬೊಂದು ನಾಡಿಯಲ್ಲಿ ಮೇಲುಮೊಗವಾಗಿ ಸಂಚರಿಸುವ ಪ್ರಯುಕ್ತ ಉದಾನನೆಂಬ ವಾಯುವು ಜೀವಕೃತ ಪುಣ್ಯವಿಶೇಷದಿಂದ ಸ್ವರ್ಗಾದಿ ಪುಣ್ಯಲೋಕವನ್ನು ಜ್ಞಾನದಿಂದ ಮೋಕ್ಷವನ್ನು ಪಾಪದಿಂದ ದುಃಖಪ್ರಚುರವಾದ ನರಕಾದಿ ಲೋಕವನ್ನು ಸಮವಾದ ಪುಣ್ಯಪಾಪಗಳಿಂದ ಸಮದುಃಖಸುಖವುಳ್ಳ ಮನುಷ್ಯಲೋಕವನ್ನು ಹೊಂದಿಸುತ್ತಾನೆ. ವ್ಯಾನೋದಾನರಲ್ಲಿ ಮುಖ್ಯಪ್ರಾಣನು ತತ್ತನ್ನಾಮದಿಂದ ಪ್ರವೃತ್ತ್ಯಾದಿಗಳನ್ನು ಮಾಡಿಸುತ್ತಿದ್ದಾನೆ. ॥ ೫ ॥

**ಮಂ ॥ ಆದಿತ್ಯೋ ಹ ವೈ ಬಾಹ್ಯಃ ಪ್ರಾಣ ಉದಯತ್ಯೇಷ ಹ್ಯೇನಂ ಚಾಕ್ಷುಷಂ ಪ್ರಾಣಮನುಗೃಹ್ಣಾನಃ ಪೃಥಿವ್ಯಾಂ ಯಾ ದೇವತಾ ಸೈಷಾ ಪುರುಷಸ್ಯಾಪಾನಮವಷ್ಟಭ್ಯಾಂತರಾ ಯದಾಕಾಶಃ ಸ ಸಮಾನೋ ವಾಯುರ್ವ್ಯಾನಃ ತೇಜೋ ಹ ವಾ ಉದಾನಃ। ತಸ್ಮಾದುಪಶಾಂತತೇಜಾಃ ಪುನರ್ಭವಮಿಂದ್ರಿಯೈರ್ಮನಸಿ ಸಂಪದ್ಯಮಾನೈಃ ॥ ೬ ॥**

ಅ ॥ ಏಷಃ=ಮುಖ್ಯಪ್ರಾಣನು, ಪ್ರಾಣಃ=ಪ್ರಾಣನಾಮಕನಾಗಿ, ಬಾಹ್ಯಃ=ಹೊರಗಿದ್ದ, ಆದಿತ್ಯಃ=ಆದಿತ್ಯನಲ್ಲಿದ್ದು ತನ್ನಾಮಕನಾಗಿ, ಉದಯತಿ=ಉದಯಿಸುತ್ತಾನೆ, ಏಷ ಹಿ=ಆದಿತ್ಯನಲ್ಲಿದ್ದ ಪ್ರಾಣನೇ, ಏನಂ=ಈದಾದ, ಚಾಕ್ಷುಷಂ=ಕಣ್ಣಿನಲ್ಲಿದ್ದ, ಪ್ರಾಣಂ=ಪ್ರಾಣವಾಯುವನ್ನು, ಅನುಗೃಹ್ಣಾನಃ=ಅನುಗ್ರಹಿಸುವವನಾಗಿ (ಇರುತ್ತಾನೆ), ಪೃಥಿವ್ಯಾಂ=ಹೊರಗಿನ ಪೃಥಿವಿಯಲ್ಲಿ (ಧಾರಕವಾದ), ಯಾ=ಯಾವ, ದೇವತಾ=ಅಪಾನಾಖ್ಯದೇವತೆಯೋ, ಸೈಷಾ=ಅದೇ ದೇವತೆಯು, ಪುರುಷಸ್ಯ=ದೇಹದಲ್ಲಿರತಕ್ಕ, ಅಪಾನಂ=ಅಪಾನಾಖ್ಯದೇವತೆಯನ್ನು, ಅವಷ್ಟಭ್ಯ=ಧರಿಸಿ, ಅಂತರಾ=ಶರೀರದ ಒಳಗೆ (ಇರುತ್ತಾನೆ.) ಅಂತರಾ=ದ್ಯಾವಾಪೃಥಿವಿಗಳ ನಡುವೆ, ಯದಾಕಾಶಃ=ಆಕಾಶ ಧಾರಕನಾದ ಸಮಾನನೋ, ಸಃ=ಅವನು, ಸಮಾನಃ=ಅಧ್ಯಾತ್ಮ ಸಮಾನವಾಯು ಧಾರಕನು. ಯಃ ವಾಯುಃ=ವಾಯುವು (ಬಹಿರ್ವಾಯುಧಾರಕನಾದ ವ್ಯಾನನೋ,) ಸಃ=ಅವನೇ, ವ್ಯಾನಃ=ವ್ಯಾನವಾಯುಧಾರಕನು, ತೇಜೋ ಹ ವಾ=ಬಾಹ್ಯತೇಜೋಧಾರಕನಾದ ಉದಾನನೋ, ಸಃ=ಅವನೇ, ಉದಾನಃ=ಉದಾನವಾಯುಧಾರಕನು. ತಸ್ಮಾತ್=ಆದಕಾರಣ, ಉಪಶಾಂತತೇಜಾಃ-ಉಪಶಾಂತ=ಕ್ಷೀಣವಾದ, ತೇಜಾಃ=ಕಾಂತಿಯುಳ್ಳವನು, ಮನಸಿ=ಮನಸ್ಸಿನಲ್ಲಿ, ಸಂಪದ್ಯಮಾನೈಃ=ಲೀನವಾಗುವ, ಇಂದ್ರಿಯೈಃ=ಇಂದ್ರಿಯಗಳಿಂದ(ಕೂಡಿಕೊಂಡು), ಪುನರ್ಭವಂ=ಮರಣವನ್ನು, ಪ್ರಾಪ್ಸ್ಯತಿ=ಹೊಂದುವನು.

ತಾ ॥ ಮುಖ್ಯಪ್ರಾಣನು ಬಾಹ್ಯ ಅಧಿಭೂತ ಅಧಿದೈವಗಳನ್ನೂ ಅಧ್ಯಾತ್ಮವನ್ನೂ ಹೇಗೆ ಧರಿಸುತ್ತಾನೆಂದರೆ ಪ್ರಾಣರೂಪದಿಂದ ಬಾಹ್ಯಾದಿತ್ಯನನ್ನು ಅಧ್ಯಾತ್ಮನಾಗಿ ಅಧಿಷ್ಠಾನಭೂತನಾದ ಆದಿತ್ಯನಿಂದ ಕೂಡಿಕೊಂಡು ಚಕ್ಷುಸ್ಸಿನಲ್ಲಿದ್ದು ಚಕ್ಷುರಿಂದ್ರಿಯವನ್ನೂ, ತದಭಿಮಾನಿಯಾದ ಪ್ರಾಣವಾಯುವನ್ನೂ ಧರಿಸುತ್ತಾನೆ. ಅಂದರೆ ಚಕ್ಷುರಿಂದ್ರಿಯಗತನಾದ ತನ್ನ ದಾಸನಾದ ಪ್ರಾಣವಾಯುವನ್ನು ಅನುಗ್ರಹಿಸುತ್ತಿದ್ದಾನೆ. ಮುಖ್ಯಪ್ರಾಣನು ಅಪಾನರೂಪದಿಂದ ಬಾಹ್ಯ ಪೃಥಿವಿಯನ್ನೂ ಅಧ್ಯಾತ್ಮನಾಗಿ ಅಧಿಷ್ಠಾನ ಭೂತಪೃಥಿವಿಯಿಂದ ಕೂಡಿಕೊಂಡು ಪುರುಷನ ಅಪಾನ ದೇಶದಲ್ಲಿದ್ದು ಜಡಭೂತವಾದ ಅಪಾನ ವಾಯುವನ್ನೂ ತದಭಿಮಾನಿ ಸ್ವದಾಸಭೂತ

ಅಪಾನವಾಯುವನ್ನೂ ಅನುಗ್ರಹಿಸುತ್ತಿದ್ದಾನೆ. ಬಾಹ್ಯದ್ಯಾವಾ ಪೃಥಿವಿಗಳ ಮಧ್ಯ ಆಕಾಶ ಧಾರಕನಾದ ಮುಖ್ಯಪ್ರಾಣನು ಸಮಾನರೂಪದಿಂದ ಸ್ವಾಧಿಷ್ಠಾನವಾದ ಆಕಾಶದಿಂದ ಕೂಡಿ ಕೊಂಡು ಪುರುಷಶರೀರದಲ್ಲಿದ್ದ ಜಡಭೂತ ಸಮಾನ ವಾಯುವನ್ನೂ, ತದಭಿಮಾನಿಯಾದ ಸ್ವದಾಸಭೂತ ಸಮಾನವಾಯುವನ್ನೂ ಧರಿಸುತ್ತಾನೆ. ಬಾಹ್ಯವಾಯು ಧಾರಕನಾದ ಮುಖ್ಯ ಪ್ರಾಣಸ್ವರೂಪನಾದ ವ್ಯಾನನೇ ಸ್ವಾಧಿಷ್ಠಾನಭೂತ ವ್ಯಾನನಿಂದ ಕೂಡಿಕೊಂಡು ಪುರುಷ ಶರೀರದಲ್ಲಿದ್ದ ಜಡಭೂತವಾಯುವನ್ನೂ ತದಭಿಮಾನಿಯಾದ ಸ್ವದಾಸಭೂತ ವ್ಯಾನನನ್ನೂ ಧರಿಸುತ್ತಾನೆ. ಬಾಹ್ಯತೇಜೋಧಾರಕನಾದ ಮುಖ್ಯಪ್ರಾಣಸ್ವರೂಪನಾದ ಉದಾನನೇ ಅಧಿಷ್ಠಾನ ಭೂತ ತೇಜಸ್ಸಿನಿಂದ ಕೂಡಿಕೊಂಡು ಪುರುಷಶರೀರದಲ್ಲಿದ್ದ ಜಡ ಉದಾನವಾಯುವನ್ನೂ, ತದಭಿಮಾನಿಸ್ವದಾಸಭೂತ ಉದಾನನನ್ನೂ ಧರಿಸುತ್ತಾ ಪ್ರಾಣಿಗಳಿಗೆ ಜೀವನ ಕಾರಣನಾಗಿದ್ದಾನೆ. ಆದುದರಿಂದ ಪುರುಷನಲ್ಲಿ ತೇಜಸ್ಸು ಕಡಿಮೆಯಾಗಲು ತನ್ನಿಯಾಮಕನಾದ ಉದಾನನೂ ಹೊರಟು ಹೋಗುವುದರಿಂದ ಇಂದ್ರಿಯಗಳಿಂದ ಕೂಡಿಕೊಂಡು ಶರೀರದಿಂದ ಜೀವನು ಹೊರಟುಹೋಗುವನು ಅಂದರೆ ಮರಣ ಉಂಟಾಗುವುದು. ॥ ೬ ॥

**ಮಂ ॥ ಯಚ್ಚಿತ್ತಸ್ತೇನೈಷ ಪ್ರಾಣಮಾಯಾತಿ । ಪ್ರಾಣಸ್ತೇಜಸಾ ಯುಕ್ತಃ ಸಹಾತ್ಮನಾ ಯಥಾ ಸಂಕಲ್ಪಿತಂ ಲೋಕಂ ನಯತಿ । ಯ ಏವಂ ವಿದ್ವಾನ್ ಪ್ರಾಣಂ ವೇದ ನ ಹಾಸ್ಯ ಪ್ರಜಾ ಹೀಯತೇಽಮೃತೋ ಭವತಿ । ತದೇಷ ಶ್ಲೋಕಃ । ಉತ್ಪತ್ತಿಮಾಯತಿಂ ಸ್ಥಾನಂ ವಿಭುತ್ವಂ ಚೈವ ಪಂಚಧಾ । ಅಧ್ಯಾತ್ಮಂ ಚೈವ ಪ್ರಾಣಸ್ಯ ವಿಜ್ಞಾಯಾಮೃತ ಮಶ್ನುತೇ ವಿಜ್ಞಾಯಾಮೃತಮಶ್ನುತ ಇತಿ ॥ ೭ ॥**

ಇತಿ ತೃತೀಯಃ ಪ್ರಶ್ನಃ ॥ ೩ ॥

ಅ ॥ ಏಷಃ=ಈ ಪುರುಷನು, ಯಚ್ಚಿತ್ತಃ ಯತ್=ಯಾವ ವಿಷಯಕವಾದ, ಚಿತ್ತಃ= ಮನಸ್ಸುಳ್ಳವನಾಗುತ್ತಾನೋ, ತೇನ=ಆ ವಿಷಯಕವಾದ ಮನಸ್ಸಿನಿಂದ ಕೂಡಿಕೊಂಡು, ಪ್ರಾಣಂ=ಮುಖ್ಯಪ್ರಾಣನ ಸಮೀಪಕ್ಕೆ, ಆಯಾತಿ=ಬರುತ್ತಾನೆ. ಪ್ರಾಣಃ=ಮುಖ್ಯಪ್ರಾಣನು, ತೇಜಸಾ=ಉದಾನನಿಂದ, ಯುಕ್ತಃ=ಕೂಡಿಕೊಂಡು, ಆತ್ಮನಾ=ಪರಮಾತ್ಮನಿಂದಲೂ, ಸಹ= ಕೂಡಿಕೊಂಡು, ಯಥಾಸಂಕಲ್ಪಿತಂ=ಸಂಕಲ್ಪಾನುಸಾರವಾದ, ಲೋಕಂ=ಶರೀರವನ್ನು, ನಯತಿ=ಹೊಂದಿಸುತ್ತಾನೆ. ಯಃ=ಯಾವ, ವಿದ್ವಾನ್=ತಿಳಿದವನು, ಏವಂ=ಈ ಪ್ರಕಾರನಾದ, ಪ್ರಾಣಂ=ಮುಖ್ಯಪ್ರಾಣನನ್ನು, ವೇದ=ತಿಳಿಯುತ್ತಾನೋ, ಅಸ್ಯ=ಇವನ, ಪ್ರಜಾ=ಸಂತ ತಿಯು, ನ ಹೀಯತೇ=ಅಳಿಯುವುದಿಲ್ಲ. ಅಮೃತಃ=ಮುಕ್ತನೂ, ಭವತಿ=ಆಗುತ್ತಾನೆ. ತತ್=ಆ ವಿಷಯದಲ್ಲಿ, ಏಷಃ=ಈಗ ಹೇಳಲ್ಪಡುವ, ಶ್ಲೋಕಃ=ಮಂತ್ರವು (ಸಮ್ಮತಿಯಾಗಿದೆ.) ಪ್ರಾಣಸ್ಯ=ಮುಖ್ಯಪ್ರಾಣನ, ಉತ್ಪತ್ತಿಂ=ಜನನವನ್ನೂ, ಆಯತಿಂ=ಪ್ರವೃತ್ತಿಯನ್ನೂ, ಸ್ಥಾನಂ= ಪಾಯೂಪಸ್ಥಾದಿ ಸ್ಥಾನವನ್ನೂ, ಪಂಚಧಾ=ಪ್ರಾಣಾದಿ ರೂಪದಿಂದ, ವಿಭುತ್ವಂ ಚೈವ=ಸ್ವಾಮಿ ತ್ವವನ್ನೂ, ಅಧ್ಯಾತ್ಮಂ ಚೈವ=ಅಧ್ಯಾತ್ಮಾಧಾರಕತ್ವವನ್ನೂ, ವಿಜ್ಞಾಯ=ತಿಳಿದು, ಅಮೃತಂ= ಮುಕ್ತಿಯನ್ನು, ಅಶ್ನುತೇ=ಹೊಂದುತ್ತಾನೆ.

ತಾ॥ ಇದೇ ಪೂರ್ವೋಕ್ತವಾದ ಉದಾನರೂಪದಿಂದ ಮುಖ್ಯಪ್ರಾಣನು ಈ ಶರೀರವನ್ನು ಬಿಟ್ಟು ಹೊರಟುಹೋಗುತ್ತಾನೆ. ಪುರುಷನು ಮರಣಕಾಲದಲ್ಲಿ ಯಾವ ಭಾವನೆಯಿಂದಿರು

ತ್ತಾನೋ ಅದೇ ಭಾವನೆಯಿಂದ ಮುಖ್ಯಪ್ರಾಣನನ್ನು ಹೊಂದುತ್ತಾನೆ. ಮುಖ್ಯಪ್ರಾಣನಾದರೆ— ಉದಾನ, ಪರಮಾತ್ಮರಿಂದ ಕೂಡಿಕೊಂಡು ಜೀವನಿಗೆ ತತ್ಸಂಕಲ್ಪಿತ ಲೋಕವನ್ನು ಪ್ರಾಪಿಸಿ ಕೊಡುತ್ತಾನೆ. ಇಂತಹ ಮಹಿಮಾಯುಕ್ತನಾದ ಮುಖ್ಯಪ್ರಾಣನನ್ನು ಯಾವಾತನು ಭಕ್ತಿಯಿಂದ ತಿಳಿದುಕೊಳ್ಳುತ್ತಾನೋ ಅಂತಹನು ಈ ಲೋಕದಲ್ಲಿ ಅವಿಚ್ಛಿನ್ನಸಂತತಿಯಾಗಿದ್ದು ಮುಕ್ತನಾಗಿ ಅನಂತಸುಖವನ್ನನುಭವಿಸುತ್ತಾನೆ. ಈ ವಿಷಯವನ್ನು ಶ್ರುತ್ಯಂತರವೂ ಅನುಮೋದಿಸುತ್ತಿದೆ. "ಪರಮಾತ್ಮನಿಂದಲೇ ಪ್ರಾಣನಿಗೆ ಉತ್ಪತ್ತಿಯನ್ನೂ ಶರೀರದಲ್ಲಿ ತದಿಚ್ಛೆಯಿಂದ ಪ್ರವೃತ್ತಿಯನ್ನೂ, ಅವಸ್ಥಿತಿಯನ್ನೂ ಪ್ರಾಣಾದಿ ಪಂಚರೂಪದಿಂದ ಸ್ಥಾವರರೂಪಗಳಿಗೆ ಸ್ವಾಮಿತ್ವವನ್ನೂ, ಅಧ್ಯಾತ್ಮ ಬಾಹ್ಯಧಾರಕತ್ವವನ್ನೂ, ಉತ್ಕ್ರಮಣವನ್ನೂ ಯಾವಾತನು ವಿಶೇಷತಃ ತಿಳಿಯುತ್ತಾನೋ ಅವನು ಮುಕ್ತಿಯನ್ನು ಹೊಂದುತ್ತಾನೆ." ಈ ರೀತಿಯಾಗಿ ಪಿಪ್ಪಲಾದರು ಆಶ್ವಲಾಯನನಿಗೆ ಬೋಧಿಸಿದರು. ॥ ೭ ॥

## ಮೂರನೆಯ ಪ್ರಶ್ನೆಯು ಮುಗಿಯಿತು.

## ನಾಲ್ಕನೇ ಪ್ರಶ್ನೆಯು.

**ಮಂ ॥ ಅಥ ಹೈನಂ ಸೌರ್ಯಾಯಣೀ ಗಾರ್ಗ್ಯಃ ಪಪ್ರಚ್ಛ । ಭಗವನ್ನೇತಸ್ಮಿನ್ ಪುರುಷೇ ಕಾನಿ ಸ್ವಪಂತಿ । ಕಾನ್ಯಸ್ಮಿನ್ ಜಾಗ್ರತಿ । ಕತರ ಏಷ ದೇವಃ ಸ್ವಪ್ನಾನ್ ಪಶ್ಯತಿ । ಕಸ್ಯೈತತ್ಸುಖಂ ಭವತಿ । ಕಸ್ಮಿನ್ ಸರ್ವೇ ಸಂಪ್ರತಿಷ್ಠಿತಾ ಭವಂತೀತಿ ॥ ೧ ॥**

ಅ॥ ಅಥ=ಅನಂತರದಲ್ಲಿ, ಸೌರ್ಯಾಯಣೀ=ಸೂರ್ಯನ ಪೌತ್ರನಾದ, ಗಾರ್ಗ್ಯಃ= ಗಾರ್ಗ್ಯಋಷಿಯು, ಭಗವನ್=ಪೂಜ್ಯರಾದ ಪಿಪ್ಪಲಾದರೇ! ಏತಸ್ಮಿನ್ ಪುರುಷೇ=ಈ ಜೀವನು (ಸ್ವಪ್ನಾದಿಗಳನ್ನು ಹೊಂದುವಾಗ,) ಕಾನಿ=ಯಾವ ದೇವತೆಗಳು, ಸ್ವಪಂತಿ=ವ್ಯಾಪಾರ ಇಲ್ಲದವ ರಾಗುತ್ತಾರೆ. ಅಸ್ಮಿನ್=ಈ ಜೀವನು ಸುಪ್ತನಾಗೋಣ, ಕಾನಿ=ಯಾವ ದೇವತೆಗಳು, ಜಾಗ್ರತಿ= ವ್ಯಾಪಾರಪ್ರವೃತ್ತರಾಗುತ್ತಾರೆ. ಯಃ ದೇವಃ=ಯಾವ ದೇವತೆಯು, ಸ್ವಪ್ನಾನ್=ಸ್ವಪ್ನಪದಾರ್ಥ ಗಳನ್ನು, ಪಶ್ಯತಿ=ನೋಡುತ್ತದೋ, ಏಷಃ=ಇದು, ಕತರಃ=ಯಾವುದು? ಏತತ್=ಸುಷುಪ್ತಿ ಕಾಲದ, ಸುಖಂ=ಸುಖವು, ಕಸ್ಯ=ಯಾವಾತನಿಗೆ, ಭವತಿ=ಉಂಟಾಗುತ್ತದೆ. ಸರ್ವೇ=ಎಲ್ಲ ರೂ, ಕಸ್ಮಿನ್=ಯಾರಲ್ಲಿ, ಸಂಪ್ರತಿಷ್ಠಿತಾಃ=ಆಶ್ರಿತರು, ಭವಂತಿ=ಆಗುತ್ತಾರೆ? ಇತಿ=ಹೀಗೆ, ಪಪ್ರಚ್ಛ ಹ=ಕೇಳಿದನು.

ತಾ॥ ಕಾತ್ಯಾಯನನ ಅನಂತರದಲ್ಲಿ ಗಾರ್ಗ್ಯನು ಬಂದು ಈ ರೀತಿಯಾಗಿ ಪ್ರಶ್ನೆಮಾಡಿ ದನು. ಹರಿವಾಯುಗಳು ಈ ಶರೀರದಲ್ಲಿ ಜಾಗ್ರದವಸ್ಥೆಯಲ್ಲಿ ಮಾತ್ರವಲ್ಲ. ಎಲ್ಲಾ ಅವಸ್ಥೆ ಗಳಲ್ಲಿಯೂ ನಿಯಾಮಕರಾಗಿರುವರಷ್ಟೆ. ಜೀವನು ಸ್ವಪ್ನಾವಸ್ಥೆಯಲ್ಲಿರುವಾಗ ಯಾವ ಯಾವ ದೇವತೆಗಳು ತಮ್ಮ ತಮ್ಮ ವ್ಯಾಪಾರಗಳನ್ನು ಬಿಟ್ಟುಕೊಂಡಿರುತ್ತಾರೆ. ಎಲ್ಲರೂ ತಮ್ಮ ತಮ್ಮ ವ್ಯಾಪಾರಗಳನ್ನು ಮಾಡಿಕೊಂಡಿದ್ದರೆ ಸ್ವಪ್ನವು ಉಂಟಾಗಲಾರದಷ್ಟೆ. ಇನ್ನು ಯಾರು ಯಾರು ತಮ್ಮ ತಮ್ಮ ವ್ಯಾಪಾರಗಳನ್ನು ಮಾಡಿಕೊಂಡಿರುತ್ತಾರೆ? ಎಲ್ಲರೂ ಸುಮ್ಮನಿದ್ದರೆ ಶರೀರಕ್ಕೆ ಪುನರುತ್ಥಾನವಿರದು. ಹಾಗೇ ಸ್ವಾಪಾವಸ್ಥೆಯಲ್ಲಿ ಸಮಸ್ತ ಇಂದ್ರಿಯಗಳೂ ಉಪರತಗಳಾಗುವ ಪ್ರಯುಕ್ತ ಜೀವನು ಯಾವ ಇಂದ್ರಿಯದಿಂದ ಸ್ವಾಪಸುಖವನ್ನನುಭವಿಸುತ್ತಾನೆ? ಹಾಗೆ ಸರ್ವೇಂ

ದ್ರಿಯಗಳಿಗೆ ಉಪರತಿಯುಂಟಾಗುವ ಸುಷುಪ್ತಿಯಲ್ಲಿ ಜೀವನಿಗೆ ವಿಷಯಸಂಬಂಧವಿಲ್ಲದಿರುವ ಪ್ರಯುಕ್ತ ಅವನಿಗೆ ಸುಖದುಃಖಾದಿಗಳು ಹೇಗೆ ಉಂಟಾಗುತ್ತದೆ? ಈ ಸ್ವಾಪವನ್ನು ಹೊಂದಿದ ದೇವತೆಗಳು ಯಾರ ಅಧೀನರಾಗಿರುತ್ತಾರೆ? ಪರಮೇಶ್ವರನೆಂದರೆ ಸರ್ವಾಶ್ರಯತ್ವಕ್ಕೆ ಉಪಯುಕ್ತವಾದ ಅವನ ಮಹಿಮೆ ಎಂತಹುದು? ॥ ೧ ॥

**ಮಂ ॥ ತಸ್ಮೈ ಸ ಹೋವಾಚ । ಯಥಾ ಗಾರ್ಗ್ಯ ಮರೀಚಯೋಽರ್ಕಸ್ಯಾಸ್ತಂ ಗಚ್ಛತಃ ಸರ್ವಾ ಏತಸ್ಮಿನ್ ತೇಜೋ ಮಂಡಲ ಏಕೀ ಭವಂತಿ ತಾಃ ಪುನರುದಯತಃ ಪ್ರಚರಂತ್ಯೇವಂ ಹ ವೈ ತತ್ಸರ್ವಂ ಪರೇ ದೇವೇ ಮನಸ್ಯೇಕೀ ಭವತಿ । ತೇನ ತರ್ಹ್ಯೇಷ ಪುರುಷೋ ನ ಶೃಣೋತಿ ನ ಪಶ್ಯತಿ ನ ಜಿಘ್ರತಿ ನ ರಸಯತೇ ನ ಸ್ಪೃಶತೇ ನಾಭಿವದತೇ ನಾದತ್ತೇ ನಾನಂದಯತೇ ನ ವಿಸೃಜತೇ ನೇಯಾಯತೇ ಸ್ವಪಿತೀತ್ಯಾ ಚಕ್ಷತೇ ॥ ೨ ॥**

ಅ ॥ ಸ ಹ=ಪಿಪ್ಪಲಾದರು, ತಸ್ಮೈ=ಗಾರ್ಗ್ಯನಿಗೋಸ್ಕರ, ಉವಾಚ=ಹೇಳಿದರು. ಗಾರ್ಗ್ಯ=ಗಾರ್ಗ್ಯ ಋಷಿಯೇ! ಅರ್ಕಸ್ಯ=ಸೂರ್ಯನು, ಅಸ್ತಂ=ಮರೆಯನ್ನು, ಗಚ್ಛತಃ=ಹೊಂದುತ್ತಿರಲು, ಸರ್ವಾಃ=ಸಮಸ್ತಗಳಾದ, ಮರೀಚಯಃ=ಕಿರಣಗಳು, ಏತಸ್ಮಿನ್‌ತೇಜೋಮಂಡಲೇ=ಈ ತೇಜೋಗೋಲದಲ್ಲಿ, ಯಥಾ=ಯಾವರೀತಿಯಲ್ಲಿ, ಏಕೀಭವಂತಿ=ಅಡಗಿಕೊಳ್ಳುತ್ತವೋ, ಪುನಃ=ಮತ್ತು, ಉದಯತಃ=ಸೂರ್ಯನು ಉದಯಿಸೋಣ, ತಾಃ=ಆ ಕಿರಣಗಳು, ಪ್ರಚರಂತಿ=ಹರಡಿಕೊಳ್ಳುತ್ತವೋ, ಏವಂ ಹ ವೈ=ಇದೇ ರೀತಿಯಾಗಿ, ತತ್ ಸರ್ವಂ=ಆ ಜೀವ ಮತ್ತು ಇಂದ್ರಿಯಗಳು, ಪರೇ ದೇವೇ=ಪರಮಾತ್ಮನು, ಮನಸಿ=ಮನಸ್ಸಿನಲ್ಲಿರುವಾಗ, ಏಕೀಭವತಿ=(ಕೂಡಿಹೋಗುತ್ತಾವೆ) ಕೂಡಿಕೊಂಡಿರುತ್ತಾವೆ. ತೇನ=ಆ ಕಾರಣದಿಂದ, ತರ್ಹಿ=ಸ್ವಾಪಕಾಲದಲ್ಲಿ, ಏಷಃ ಪುರುಷಃ=ಈ ಜೀವನು, ನ ಶೃಣೋತಿ=ಕೇಳುವುದಿಲ್ಲ. ನ ಪಶ್ಯತಿ=ನೋಡುವುದಿಲ್ಲ. ನ ಜಿಘ್ರತಿ=ವಾಸನೆತಿಳಿಯುವುದಿಲ್ಲ. ನ ರಸಯತೇ=ರುಚಿ ತಿಳಿಯುವುದಿಲ್ಲ. ನ ಸ್ಪೃಶತೇ=ಮುಟ್ಟುವುದಿಲ್ಲ. ನಾಭಿವದತೇ=ಮಾತಾಡುವುದಿಲ್ಲ, ನಾದತ್ತೇ=ತೆಗದುಕೊಳ್ಳುವುದಿಲ್ಲ. ನಾನಂದಯತೇ=ಸಂತೋಷಿಸುವುದಿಲ್ಲ. ನ ವಿಸೃಜತೇ=ಬಿಡುವುದಿಲ್ಲ. ನೇಯಾಯತೇ=ಹೋಗುವುದಿಲ್ಲ. ಸ್ವಪಿತಿ ಇತಿ=ನಿದ್ರಿಸುತ್ತಾನೆಂದು, ಆಚಕ್ಷತೇ=(ವಿದ್ವಾಂಸರು) ಹೇಳುತ್ತಾರೆ.

**ಭಾ** ॥ ರಶ್ಮೀನಾ ಮವಿಶೇಷೇಽಪಿ ಹ್ಯನ್ಯದೃಷ್ಟಿವ್ಯಪೇಕ್ಷಯಾ ।
ಸೂರ್ಯಸ್ಯ ಮಂಡಲಂ ಯಾಂತೀತ್ಯುಚ್ಯಂತೇ ತದದರ್ಶನಾತ್ ।
ಏವಂ ವಿಷ್ಣೋಽಸ್ತು ಸಾಮಿಪ್ಯಾದ್ದೇವಾನಾಂ ಸುಪ್ತಿಗಸ್ಯ ತು ॥
ವ್ಯವಹಾರಾಕರತ್ವಾಚ್ಚ ಏಕೀಭಾವ ಇತೀರ್ಯತೇ ॥ ಇತಿ ಚ ॥

ಅ ॥ ರಶ್ಮೀನಾಂ=ಸೂರ್ಯಕಿರಣಗಳಿಗೆ, ಅವಿಶೇಷೇಽಪಿ=ಉದಯಾಸ್ತಗಳಲ್ಲಿ ವಿಶೇಷವಿಲ್ಲದಿದ್ದರೂ, ಅನ್ಯದೃಷ್ಟಿವ್ಯಪೇಕ್ಷಯಾ-ಅನ್ಯ=ದೇಶಾಂತರದಲ್ಲಿರುವವರ, ದೃಷ್ಟಿವ್ಯಪೇಕ್ಷಯಾ=ದರ್ಶನಾಪೇಕ್ಷೆಯಿಂದ, ತದದರ್ಶನಾತ್- ತತ್=ರಶ್ಮಿಗಳು, ಅದರ್ಶನಾತ್=ಕಾಣದಿರುವುದರಿಂದ, ಸೂರ್ಯಸ್ಯ=ಸೂರ್ಯನ, ಮಂಡಲಂ=ಮಂಡಲವನ್ನು, ಯಾಂತಿ ಇತಿ=ಹೋಗತ್ತಾ

ವೆಯೆಂದು, ಹಿ=ಹೇಗೆ, ಉಚ್ಯಂತೇ=ಹೇಳಲ್ಪಡುತ್ತವ್ರೋ, ಏವಂ=ಹೀಗೆಯೇ, ಸುಪ್ತಿಗಸ್ಯ= ಸುಪ್ತಿಯನ್ನು ಹೊಂದಿದವನ ಸಂಬಂಧಿಗಳಾದ, ದೇವಾನಾಂ ತು=ದೇವತೆಗಳಿಗೆ, ವಿಷ್ಣೋಃ= ಪರಮಾತ್ಮನ, ಸಾಮಿಪ್ಯಾತ್ತು=ಅತಿಸಾಮಿಪ್ಯ ಇರುವಪ್ರಯುಕ್ತವೂ, ವ್ಯವಹಾರಾಕರತ್ವಾಚ್ಚ=ಯಾವ ವ್ಯವಹಾರಾಸಮರ್ಥರಾದ ಪ್ರಯುಕ್ತವೂ, ಏಕೀಭಾವ ಇತಿ=ಐಕ್ಯಪ್ರಾಪ್ತಿಯೆಂದು, ಈರ್ಯತೇ=ಹೇಳಲ್ಪಟ್ಟದೆ.

ತಾ ॥ ಗಾರ್ಗ್ಯನಿಗೆ ಹೀಗೆ ಉತ್ತರವನ್ನು ಕೊಟ್ಟರು. ಸೂರ್ಯನು ಉದಯ ಅಸ್ತಗಳನ್ನು ಹೊಂದುವಾಗ ಆತನ ಕಿರಣಗಳು ಒಮ್ಮೆ ಆತನಲ್ಲಿ ಐಕ್ಯವಾದಂತೆಯೂ ಮತ್ತೊಮ್ಮೆ ಆತನಿಂದ ಹೊರಟು ಬರುವಂತೆಯೂ ಈ ಜೀವನು ಸ್ವಪ್ನಾವಸ್ಥೆಯನ್ನು ಹೊಂದುವಾಗ ಇಂದ್ರಿಯಾಭಿಮಾನಿಗಳು ಮನೋಗತತೈಜಸನೆಂಬ ಪರಮಾತ್ಮನೊಡನೆ ನಿರ್ವ್ಯಾಪಾರರಾಗಿರುತ್ತಾರೆ. ಆಗ ಮನಸಿಗುಪರತಿಯಿಲ್ಲ ಸುಷುಪ್ತಿಯಲ್ಲಿ ಅಂದರೆ ಗಾಢನಿದ್ರೆಯಲ್ಲಿ ತತ್ಸಂಬಂಧಿಗಳಾದ ಮನ ಆದಿ ಇಂದ್ರಿಯಾಭಿಮಾನಿಗಳೆಲ್ಲರೂ ನಿರ್ವ್ಯಾಪಾರರಾಗಿ ಹೃದಯಗತನಾದ ಪ್ರಾಜ್ಞನಾಮಕ ಪರಮಾತ್ಮನೊಡನೆ ಸೇರಿರುತ್ತಾರೆ. ಸ್ವಪ್ನದಲ್ಲಿ ಇಂದ್ರಿಯಗಳಿಗೆ ನಿರ್ವ್ಯಾಪಾರವೆಂದರೆ ಶಬ್ದ, ರೂಪ, ರಸಾದಿಜ್ಞಾನಗಳು ಉಂಟಾಗುವುದಿಲ್ಲವೆಂದರ್ಥ. ಸುಷುಪ್ತಿಯಲ್ಲಿ ಜ್ಞಾನ, ಅಹಂಕಾರ, ಸ್ಮೃತಿ, ಸಂಕಲ್ಪಾದಿ ಮನೋವ್ಯಾಪಾರಗಳಾವುವೂ ಇರುವುದಿಲ್ಲ. ಇನ್ನು ಜಾಗ್ರದವಸ್ಥೆಯಲ್ಲಿ ಎಲ್ಲಾ ಇಂದ್ರಿಯಾಭಿಮಾನಿಗಳು ತಮ್ಮ ತಮ್ಮ ಸ್ಥಳಗಳಲ್ಲಿ ತಂತಮ್ಮ ಕಾರ್ಯಗಳನ್ನು ಮಾಡುತ್ತಿರುತ್ತಾರೆ. ಇಲ್ಲಿ ಯದ್ಯಪಿ ಮೇರುವಿಗೆ ಪ್ರದಕ್ಷಿಣೀಕರಿಸತಕ್ಕ ಸೂರ್ಯನು ಒಂದಿಲ್ಲೊಂದು ದೇಶದಲ್ಲಿ ಇದ್ದೇ ಇರುವುದರಿಂದ ಉದಯಾಸ್ತಗಳು ಇರುವುದಿಲ್ಲ. ಹಾಗಿದ್ದರೂ ತತ್ತದ್ದೇಶಸ್ಥರಿಗೆ ಸೂರ್ಯನು ಕಾಣಲು, ಮರೆಯಾಗಲು 'ಸೂರ್ಯನು ಉದಯವಾದನು ಮತ್ತು ಅಸ್ತನಾದನು' ಎಂದು ವ್ಯವಹಾರವು ಸಲ್ಲುತ್ತದೆ. ಸೂರ್ಯನ ಕಿರಣಗಳು ಕಾಣದಿರಲು ಆ ದೇಶದವರಿಗೆ ಅವುಗಳು ಸೂರ್ಯನಲ್ಲಿಯೇ ಅಡಗಿದವೆಂದು ಭ್ರಾಂತಿಯು ಹುಟ್ಟುತ್ತದೆ. ಅಂತೆಯೇ ಎಲ್ಲಾ ದೇವತೆಗಳೂ ಸ್ವಪ್ನಸುಷುಪ್ತ್ಯಾದ್ಯವಸ್ಥೆಗಳಲ್ಲಿಯೂ ಭಗವಂತನ ಸಮೀಪವೇ ಇರುತ್ತಾರೆ. ಹಾಗೇ ಸೂರ್ಯನು ದೃಗ್ಗೋಚರನಾಗಲು ಕಿರಣಗಳೆಲ್ಲಾ ಹೊರಟುಬಂದವೆಂದು ತೋರುತ್ತದೆ. ಸುಪ್ತನಾದ ಜೀವನ ಸಂಬಂಧಿಗಳಾದ ತತ್ತದಿಂದ್ರಿಯಾಭಿಮಾನಿದೇವತೆಗಳು ನಿರ್ವ್ಯಾಪಾರರಾದುದರಿಂದ ಪರಮಾತ್ಮನೊಡನೆ ಸೇರಿದರೆಂದೂ, ಜಾಗ್ರದವಸ್ಥೆಯಲ್ಲಿ ಆತನನ್ನು ಬಿಟ್ಟುಬಂದರೆಂದೂ ತೋರುತ್ತದೆ. ॥ ೨ ॥

**ಮಂ ॥ ಪ್ರಾಣಾಗ್ನಯ ಏವೈತಸ್ಮಿನ್ ಪುರೇ ಜಾಗ್ರತಿ। ಗಾರ್ಹಪತ್ಯೋ ಹ ವಾ ಏಷೋಽಪಾನೋ ವ್ಯಾನೋಽನ್ವಾಹಾರ್ಯಪಚನೋ ಯದ್ಗಾರ್ಹಪತ್ಯಾತ್ಪ್ರಣೀಯತೇ। ಪ್ರಣಯನಾದಾಹವನೀಯಃ ಪ್ರಾಣೋ ಯದುಚ್ಛ್ವಾಸನಿಃಶ್ವಾಸಾವೇತಾವಾಹುತೀ ಸಮಂ ನಯತಿ ಸ ಸಮಾನೋ ಮನೋ ಹ ವಾವ ಯಜಮಾನ ಇಷ್ಟಂ ಫಲಮೇವೋದಾನಃ। ಸ ಏನಂ ಯಜಮಾನಮಹರಹರ್ಬ್ರಹ್ಮ ಗಮಯತಿ ॥ ೩ ॥**

ಅ ॥ ಏತಸ್ಮಿನ್ ಪುರೇ=ಈ ಶರೀರದಲ್ಲಿ, ಪ್ರಾಣಾಗ್ನಯ ಏವ=ಪ್ರಾಣ=ಮುಖ್ಯಪ್ರಾಣ ರೂಪಗಳೆಂಬ, ಅಗ್ನಯಏವ=ಅಗ್ನಿಗಳೇ, ಜಾಗ್ರತಿ=ಶರೀರಧಾರಣಾದಿವ್ಯಾಪಾರಗಳನ್ನು ಮಾಡುತ್ತಿವೆ. ಏಷಃ ಅಪಾನಃ=ಈ ಅಪಾನನೆಂಬವನು, ಗಾರ್ಹಪತ್ಯೋ ಹ ವಾ=ಗಾರ್ಹಪತ್ಯನೆಂಬ

ವನು, ವ್ಯಾನಃ=ವ್ಯಾನನೆಂಬವನು, ಅನ್ವಾಹಾರ್ಯಪಚನಃ=ದಕ್ಷಿಣಾಗ್ನಿಯು, ಯತ್=ಯಾವ ಕಾರಣ, ಗಾರ್ಹಪತ್ಯಾತ್=ಗಾರ್ಹಪತ್ಯಾಗ್ನಿಯಿಂದ, ಆಹವನೀಯಃ=ಆಹವನೀಯಾಗ್ನಿಯು, ಪ್ರಣೀಯತೇ=ಒಯ್ಯಲ್ಪಡುತ್ತಾನೋ, (ಪ್ರಾಣೋಽಪಿ=ಪ್ರಾಣನಾದರೂ, ಅಪಾನಾತ್=ಅಪಾನ ನಿಂದ, ಪ್ರಣೀಯತೇ=ಒಯ್ಯಲ್ಪಡುತ್ತಾನೋ,) ಪ್ರಣಯನಾತ್=ಪ್ರಣಯನ ಸಾಮ್ಯದಿಂದ, ಪ್ರಾಣಃ=ಪ್ರಾಣಾಖ್ಯವಾಯುವು, ಆಹವನೀಯಃ=ಆಹವನೀಯಾಗ್ನಿಯು. ಯತ್=ಯಾವ ಕಾರಣ, ಏತೌ=ಈದಾವ, ಉಚ್ಛ್ವಾಸನಿಶ್ವಾಸೌ=ಶ್ವಾಸೋಚ್ಛ್ವಾಸಗಳೆಂಬ, ಆಹುತೀ=ಆಹುತಿಗಳನ್ನು, ಸಮಂ=ಯೋಗ್ಯರೀತಿಯಾಗಿ, ನಯತಿ=ಪ್ರಾಪಿಸಿಕೊಡುತ್ತಾನೋ, ತಸ್ಮಾತ್=ನಯನ ಸಾಮ್ಯದಿಂದ, ಸಮಾನಃ=ಸಮಾನನು, ಸಃ=ಅಧ್ವರ್ಯುವು. ಮನೋ ಹ ವಾವ=ಜೀವ ನಾದರೂ, ಯಜಮಾನಃ=ಯಜಮಾನನು, ಉದಾನಃ=ಉದಾನನು, ಇಷ್ಟಂ ಫಲಂ=ಯಜ್ಞಫಲ ಪ್ರತಿಪಾದಕನಾದ ಉದ್ಗಾತೃವೇ. ಸಃ=ಉದಾನನು, ಏನಂ ಯಜಮಾನಂ=ಈ ಜೀವನನ್ನು, ಅಹರಹಃ=ಪ್ರತಿದಿನವೂ, ಬ್ರಹ್ಮ=ಸುಸುಮ್ನಾಗತನಾದ ಬ್ರಹ್ಮನನ್ನು, ಗಮಯತಿ=ಹೊಂದಿಸುತ್ತಾನೆ.

ತಾ ॥ ಸ್ವಪ್ನಸುಷುಪ್ತಿಗಳಲ್ಲಿ ಮುಖ್ಯಪ್ರಾಣರೂಪಗಳಾದ ಅಗ್ನಿ ಅಧ್ವರ್ಯು ಉದ್ಗಾತೃಗಳು ಶರೀರಧಾರಣಾದಿರೂಪ ಸ್ವವ್ಯಾಪಾರಗಳನ್ನು ಮಾಡುತ್ತಾರೆ. ಈ ಪ್ರಾಣಗಳಲ್ಲಿ ಅಪಾನನು ಪಶ್ಚಿಮಭಾಗವಾದ ಗುದದಲ್ಲಿದ್ದ ಪ್ರಯುಕ್ತ ಸ್ಥಾನಸಾಮ್ಯದಿಂದ ಗಾರ್ಹಪತ್ಯನೆಂದೆನ್ನಿಸುವನು. ಹೋಮಾಂಗಸಾಮ್ಯವಿರುವುದರಿಂದ ವ್ಯಾನನು ದಕ್ಷಿಣಾಗ್ನಿಯೆಂದೆನಿಸುವನು. ಅಗ್ನಿಯು ಗಾರ್ಹಪತ್ಯಾಗ್ನಿಯಿಂದ ಪ್ರತ್ಯೇಕಿಸಿತಂದರೆ ಆಹವನೀಯನೆನಿಸುವಂತೆ ಅಪಾನಪ್ರದೇಶದಿಂದ ಅಪಾನರೂಪ ಮುಖ್ಯಪ್ರಾಣನಿಂದ ಪ್ರತ್ಯೇಕಿಸಲ್ಪಟ್ಟ ಶ್ವಾಸಾತ್ಮಕ ಪ್ರಾಣರೂಪವು ಆಹವನೀಯವೆನಿಸುತ್ತದೆ. ಶ್ವಾಸೋಚ್ಛ್ವಾಸಗಳೆಂಬ ಆಹುತಿಗಳನ್ನು ಯೋಗ್ಯವಾಗಿ ಒಯ್ಯುವುದರಿಂದ ಸಮಾನನು ಅಧ್ವರ್ಯು ಎಂದೆನಿಸುತ್ತಾನೆ. ಜೀವನೇ ಯಜಮಾನನಾಗಿರುತ್ತಾನೆ. ಏಕೆಂದರೆ ಯಜಮಾನನ ಸ್ವರ್ಗರೂಪ ಫಲವು ಋತ್ವಿಗಧೀನವಾಗಿರುವಂತೆ ಜೀವನ ಸುಖರೂಪಫಲವು ಉದಾನಾಧೀನವಾಗಿದೆ. ಯಜ್ಞಫಲಪ್ರತಿಪಾದಕ ಉದಾನನು ಉದ್ಗಾತನೆಂದು ತಿಳಿಸುವರು. ಅಂತಹ ಉದಾನನು ಪ್ರತಿದಿನವೂ ಸುಷ್ಪ್ಯವಸ್ಥೆಗಳಲ್ಲಿ ಪರಬ್ರಹ್ಮನನ್ನು ಹೊಂದಿಸಿ ಜೀವನಿಗೆ ಸುಖವನ್ನು ಕೊಡುತ್ತಾನೆ.

**ಮಂ ॥ ಅತ್ರೈಷ ದೇವಃ ಸ್ವಪ್ನೇ ಮಹಿಮಾನಮನುಭವತಿ ಯದ್ದೃಷ್ಟಂ ದೃಷ್ಟಮನು ಪಶ್ಯತಿ ಶ್ರುತಂ ಶ್ರುತಮೇವಾರ್ಥಮನುಶೃಣೋತಿ ದೇಶದಿಗಂತರೇಚ ಪ್ರತ್ಯನುಭೂತಂ ಪುನಃ ಪುನಃ ಪ್ರತ್ಯನುಭವತಿ। ದೃಷ್ಟಂ ಚಾದೃಷ್ಟಂ ಚ ಶ್ರುತಂ ಚಾಶ್ರುತಂ ಚಾನುಭೂತಂ ಚಾನನುಭೂತಂ ಚ ಸಚ್ಚಾ ಸಚ್ಚ ಸರ್ವಂ ಪಶ್ಯತಿ ಸರ್ವಃ ಪಶ್ಯತಿ । ಸ ಯದಾ ತೇಜಸಾಭಿಭೂತೋ ಭವತ್ಯತ್ರೈಷ ದೇವಃ ಸ್ವಪ್ನಾನ್ನ ಪಶ್ಯತಿ । ಅಥ ಯದೇ ತಸ್ಮಿನ್ ಶರೀರೇ ಸುಖಂ ಭವತಿ ॥ ೬ ॥**

ಅ ॥ ಅತ್ರ=ಈ, ಸ್ವಪ್ನೇ=ಸ್ವಪ್ನಾವಸ್ಥೆಯಲ್ಲಿ, ಏಷ ದೇವಃ=ಮನೋನಾಮಕದೇವತೆಯಿಂದ ಅನುಗ್ರಹೀತನಾದ ಜೀವನು, ಮಹಿಮಾನಂ=ತನ್ನ ಮಹತ್ವವನ್ನು (ಇತರ ಸುಖದುಃಖಗಳನ್ನು), ಅನುಭವತಿ=ಅನುಭವಿಸುತ್ತಾನೆ. ಯತ್ ದೃಷ್ಟಂ=ಯಾವ ಅರ್ಥವನ್ನು ನೋಡುತ್ತಾನೋ, ದೃಷ್ಟಂ=ಮುಂಚೆ ಕಂಡದ್ದನ್ನೇ, ಅನುಪಶ್ಯತಿ=ನೋಡುತ್ತಾನೆ. ಶ್ರುತಂ ಅರ್ಥಂ=

ಅನುಶ್ರ್ರಣೋತಿ=ತಿರುಗಿ ಕೇಳುತ್ತಾನೆ.
ಪೂರ್ವದಲ್ಲಿ ಕೇಳಿದ್ದನ್ನೇ, ಶ್ರುತಂ=ಕೇಳಿದ್ದನ್ನು, ಅನುಶ್ರ್ರಣೋತಿ=ತಿರುಗಿ ಕೇಳುತ್ತಾನೆ.
ದೇಶದಿಗಂತರೇ ಚ=ದೇಶದಿಗ್ದ್ವೀಪಗಳಲ್ಲಿಯೂ, ಪ್ರತ್ಯನುಭೂತಂ=ಮತ್ತು ಅನುಭವಿಸಲ್ಪಟ್ಟ
ದ್ದನ್ನೇ, ಪುನಃ ಪುನಃ=ಮತ್ತು ಮತ್ತು, ಪ್ರತ್ಯನುಭವತಿ=ಅದೇ ಇದೆಂದು ತಿಳುಕೊಳ್ಳುತ್ತಾನೆ.
ದೃಷ್ಟಂಚ ಅದೃಷ್ಟಂಚ=ಈ ಜನ್ಮದಲ್ಲಿ ನೋಡದೆ ಜನ್ಮಾಂತರದಲ್ಲಿ ನೋಡಿದ್ದನ್ನು, ಶ್ರುತಂ ಚ
ಅಶ್ರುತಂ ಚ=ಕೇಳಿದ್ದನ್ನೂ ಕೇಳದಿದ್ದುದನ್ನೂ, ಅನುಭೂತಂ ಚ ಅನನುಭೂತಂ ಚ=ಅನುಭ
ವಿಸಿದ್ದನ್ನೂ ಅನುಭವಿಸದಿದ್ದುದನ್ನೂ, ಸಚ್ಚ=ಸ್ವಪ್ನಕಾಲದಲ್ಲಿದ್ದುದನ್ನೂ, ಅಸಚ್ಚ=ಸ್ವಪ್ನಕಾಲ
ದಲ್ಲಿ ನಾಶವಾಗಿದ್ದುದನ್ನೂ, ಸರ್ವಂ=ಸಮಸ್ತವನ್ನೂ, ಪಶ್ಯತಿ=ತಿಳುಕೊಳ್ಳುತ್ತಾನೆ. ಸರ್ವಃ=
ತಾನು ನರವಾನರಾದ್ಯನೇಕಪ್ರಕಾರನಾಗಿ, ಪಶ್ಯತಿ=ನೋಡುತ್ತಾನೆ. ಯದಾ=ಯಾವಾಗ, ಸಃ=
ಜೀವನು,ತೇಜಸಾ=ಭಗವತ್ಸಂಬಂಧಿಯಾದ ತೇಜಸ್ಸಿನಿಂದ, ಅಭಿಭೂತಃ=ಆವೃತನು, ಭವತಿ=
ಆಗುತ್ತಾನೋ, ಅತ್ರ=ಈ ಸುಷುಪ್ತಿಯಲ್ಲಿ, ಏಷದೇವಃ=ಮನೋನಾಮಕದೇವತೆಯಿಂದ ಅನು
ಗೃಹೀತನಾದ ಜೀವನು, ಸ್ವಪ್ನಾನ್=ಸ್ವಪ್ನಪದಾರ್ಥಗಳನ್ನು, ನ ಪಶ್ಯತಿ=ನೋಡುವುದಿಲ್ಲ, ಅಥ=
ಪರಮಾತ್ಮ ಸನ್ನಿಧಾನ ಸಾಮರ್ಥ್ಯದಿಂದುಂಟಾದ, ಯತ್ ಸುಖಂ=ಯಾವ ಸುಖವೋ, ತತ್=
ಅದು, ಏತಸ್ಮಿನ್ ಶರೀರೇ=ಈ ಜೀವನಲ್ಲಿ, ಭವತಿ=ಆಗುತ್ತದೆ.

**ಭಾ** ॥ ಭಗವತಃ ಶರೀರವತ್ಸಾದೃಶ್ಯಯುಕ್ತೇ ಜೀವೇ ಸುಖಂ ಭವತಿ ।
ಕಸ್ಯೈತತ್ಸುಖಂ ಭವತೀತಿ ಪೃಷ್ಟತ್ವಾತ್ ।
ನಹ್ಯಚೇತನಸ್ಯ ಶರೀರಸ್ಯ ಸುಖಂ ಭವತಿ ।
'ಯಸ್ಯಾತ್ಮಾ ಶರೀರಂ' ಇತಿ ಚ ಶ್ರುತಿಃ ॥
ಸಾದೃಶ್ಯಾದ್ದೇಹವಜ್ಜೀವೋ ವಿಷ್ಣೋಸ್ತಸ್ಯ ಸುಖಂ ಭವೇತ್ ।
ಸುಪ್ತೌ ತಸ್ಯ ಸುಖಾರ್ಥಂ ಹಿ ಭಗವಾನ್ ಸುಪ್ತಿಮಾನಯೇದಿತಿ ಚ ॥ ೪ ॥

ಅ ॥ ಭಗವತಃ=ಶ್ರೀ ಪರಮಾತ್ಮನ, ಶರೀರವತ್=ಶರೀರದಂತೆ, ಸಾದೃಶ್ಯಯುಕ್ತೇ=
ಜ್ಞಾನರೂಪನಾದುದರಿಂದ ಸಾಮ್ಯವಿರುವ, ಜೀವೇ=ಜೀವನಲ್ಲಿ, ಸುಖಂ=ಸುಖವು, ಭವತಿ=
ಆಗುತ್ತದೆ. ಕಸ್ಯ=ಯಾರಿಗೆ, ಏತತ್ ಸುಖಂ=ಈ ಸುಖವು, ಭವತೀತಿ=ಆಗುತ್ತದೆಯೆಂದು,
ಪೃಷ್ಟತ್ವಾತ್=ಪ್ರಶ್ನೆಮಾಡಿದ್ದರಿಂದ, ಅಚೇತನಸ್ಯ=ಜಡವಾದ, ಶರೀರಸ್ಯ=ದೇಹಕ್ಕೆ, ಸುಖಂ=
ಸೌಖ್ಯವು, ನ ಭವತಿ ಹಿ=ಆಗುವದಿಲ್ಲದಷ್ಟೆ. ಯಸ್ಯ=ಪರಮಾತ್ಮನಿಗೆ, ಆತ್ಮಾ=ಜೀವನು,
ಶರೀರಂ=ದೇಹರೂಪನು, ಇತಿ=ಹೀಗೆ, ಶ್ರುತಿಶ್ಚ=ಶ್ರುತಿಯೂ (ಅದೆ). ಸಾದೃಶ್ಯಾತ್=ಜ್ಞಾನಾ
ತ್ಮಕತ್ವರೂಪಸಾಮ್ಯದಿಂದ, ವಿಷ್ಣೋಃ=ಪರಮಾತ್ಮನ, ದೇಹವತ್=ಶರೀರದಂತೆ, ಜೀವಃ=
ಜೀವನು. ತಸ್ಯ=ಅವನಿಗೆ, ಸುಪ್ತೌ=ಸುಪ್ತಿಕಾಲದಲ್ಲಿ, ಸುಖಂ=ಆನಂದವು, ಭವೇತ್=
ಆಗುತ್ತದೆ. ತಸ್ಯ=ಅವನಿಗೆ, ಸುಖಾರ್ಥಂ ಹಿ=ಸುಖವಾಗುವುದಕ್ಕೋಸ್ಕರವೇ, ಭಗವಾನ್=
ಶ್ರೀ ಪರಮಾತ್ಮನು, ಸುಪ್ತಿಂ=ಸುಷುಪ್ತ್ಯವಸ್ಥೆಯನ್ನು, ಆನಯೇತ್=ಪ್ರಾಪಿಸಿಕೊಡುತ್ತಾನೆ.
ಇತಿ ಚ=ಹೀಗೂ (ಶ್ರುತಿಯದೆ).

ತಾ ॥ ಮನಸ್ಸನ್ನು ಬಿಟ್ಟು ಇತರ ಎಲ್ಲಾ ಇಂದ್ರಿಯಗಳಿಗೂ ವಿಶ್ರಾಂತಿಯೇ ಸ್ವಪ್ನ
ವೆನ್ನಲ್ಪಡುತ್ತದೆ. ಆ ಕಾಲದಲ್ಲಿ ಮನೋನಿಯಾಮಕನಿಂದ ಅನುಗ್ರಹೀತನಾದ ಜೀವನು
ಸ್ವಪ್ನದ ಸುಖದುಃಖಾದಿಗಳನ್ನು ಜನ್ಮಜನ್ಮಾಂತರಗಳಲ್ಲಿ ಅನುಭವಿಸಿದ್ದುದನ್ನೇ 'ಅದೇ ಇದು'
ಎಂದು ತಿಳುಕೊಳ್ಳುತ್ತಾನೆ. ಅಲ್ಲದೆ ತಾನೂ ನರವಾನರಾದಿರೂಪನೆಂದೂ ಇನ್ನೂ ವಿಧವಿಧ
ರೂಪನಾಗಿದ್ದೇನೆಂದೂ ತತ್ತತ್ಕಾರ್ಯಗಳನ್ನೂ ಮಾಡುವವನಂತೆಯೂ ಅನುಭವಿಸುತ್ತಾನೆ. ಮನ

ಸ್ಸಿಗೂ ವಿಶ್ರಾಂತಿಯುಂಟಾದ ಸುಷುಪ್ತಿಯಲ್ಲಿ ಜೀವನು ಹೃದಯಗತನಾದ ಪ್ರಾಜ್ಞನೆಂಬ ಪರಮಾತ್ಮನಿಂದ ಕೂಡುವಾಗ ಸ್ವಾಪ್ನವನ್ನೂ ನೋಡುವುದಿಲ್ಲ. ಸುಷುಪ್ತಿಯಲ್ಲಿ ಪ್ರಾಜ್ಞರೂಪಿ ಪರಮಾತ್ಮನ ಸನ್ನಿಧಾನ ಸಾಮರ್ಥ್ಯದಿಂದುಂಟಾಗತಕ್ಕ ಸುಖವು ಜ್ಞಾನಾತ್ಮಕನಾದುದರಿಂದ ಪರಮಾತ್ಮನ ಸಾದೃಶ್ಯಯುಕ್ತನಾದ ಜೀವನಿಂದ ಸಾಕ್ಷಾತ್ತು ಅನುಭವಿಸಲ್ಪಟ್ಟಂತೆ ತೋರಲಾರದು ಅಂತಹ ಪರಮಾತ್ಮನು ಜೀವನಿಗೆ ಸುಖವನ್ನುಂಟುಮಾಡುವನಿಮಿತ್ತ ಪ್ರತಿದಿನವೂ ಇಂತಹ ಸುಷುಪ್ತ್ಯವಸ್ಥೆಯನ್ನುಂಟುಮಾಡುತ್ತಾನೆ. ॥ ೪ ॥

**ಮಂ ॥ ಸ ಯಥಾ ಸೋಮ್ಯ ವಯಾಂಸಿ ವಾಸೋ ವೃಕ್ಷಂ ಸಂಪ್ರತಿಷ್ಠಂತೇ। ಏವಂ ಹ ವೈ ತತ್ಸರ್ವಂ ಪರೇ ಆತ್ಮನಿ ಸಂಪ್ರತಿಷ್ಠತೇ । ಪೃಥಿವೀ ಚ ಪೃಥಿವೀ ಮಾತ್ರಾ ಚಾಪಶ್ಚಾಪೋಮಾತ್ರಾ ಚ ತೇಜಶ್ಚ ತೇಜೋ ಮಾತ್ರಾ ಚ ವಾಯುಶ್ಚ ವಾಯುಮಾತ್ರಾ ಚಾಕಾಶಶ್ಚಾಕಾಶಮಾತ್ರಾ ಚ ಚಕ್ಷುಶ್ಚ ದ್ರಷ್ಟವ್ಯಂ ಚ ಶ್ರೋತ್ರಂ ಚ ಶ್ರೋತವ್ಯಂ ಚ ಘ್ರಾಣಂ ಚ ಘ್ರಾತವ್ಯಂ ಚ ರಸನಂ ಚ ರಸಯಿತವ್ಯಂ ಚ ತ್ವಕ್ಚ ಸ್ಪರ್ಶಯಿತವ್ಯಂ ಚ ವಾಕ್ಚ ವಕ್ತವ್ಯಂ ಚ ಹಸ್ತೌ ಚ ದಾತವ್ಯಂ ಚ ಪಾದೌ ಚ ಗಂತವ್ಯಂ ಚ ಪಾಯುಶ್ಚ ವಿಸರ್ಜಯಿತವ್ಯಂ ಚೋಪಸ್ಥಶ್ಚಾನಂದಯಿತವ್ಯಂ ಚ ಮನಶ್ಚ ಮಂತವ್ಯಂ ಚ ಬುದ್ಧಿಶ್ಚ ಬೋದ್ಧವ್ಯಂ ಚಾಹಂಕಾರಶ್ಚಾಹಂಕರ್ತವ್ಯಂ ಚ ಚಿತ್ತಂ ಚ ಚೇತಯಿತವ್ಯಂ ಚ ತೇಜಶ್ಚ ವಿದ್ಯೋತಯಿತವ್ಯಂ ಚ ಪ್ರಾಣಶ್ಚ ವಿಧಾರಯಿತವ್ಯಂ ಚ ॥ ೫ ॥**

ಅ ॥ ಸೋಮ್ಯ=ಸೋಮಾರ್ಹನೇ! ಸಃ=ದೃಷ್ಟಾಂತವು, ವಯಾಂಸಿ=ಪಕ್ಷಿಗಳು, ವಾಸೋವೃಕ್ಷಂ=ಆವಾಸಭೂತವಾದ ಮರವನ್ನು, ಯಥಾ=ಹೇಗೆ, ಸಂಪ್ರತಿಷ್ಠಂತೇ=ಆಶ್ರಯಿಸುತ್ತಾವೋ, ಏವಂ ಹವಾ=ಹೀಗೆಯೇ, ಪೃಥಿವೀ ಚ=ಪೃಥಿವಿಯು, ಪೃಥಿವೀಮಾತ್ರಾ ಚ=ಗಂಧವೂ, ಆಪಶ್ಚ=ಜಲವೂ, ಆಪೋಮಾತ್ರಾಚ=ರಸವೂ, ತೇಜಶ್ಚ=ತೇಜಸ್ಸು, ತೇಜೋಮಾತ್ರಾ ಚ=ರೂಪವೂ, ವಾಯುಶ್ಚ=ಗಾಳಿಯೂ, ವಾಯುಮಾತ್ರಾ ಚ=ಸ್ಪರ್ಶವೂ, ಆಕಾಶಶ್ಚ=ಆಕಾಶವೂ, ಆಕಾಶಮಾತ್ರಾ ಚ=ಶಬ್ದವೂ, ಚಕ್ಷುಶ್ಚ=ನೇತ್ರವೂ, ದೃಷ್ಟವ್ಯಂ ಚ=ನೋಡತಕ್ಕುದೂ, ಶ್ರೋತ್ರಂ ಚ=ಕಿವಿಯೂ, ಶ್ರೋತವ್ಯಂ ಚ=ಕೇಳತಕ್ಕುದೂ, ಘ್ರಾಣಂ ಚ=ಮೂಗೂ, ಘ್ರಾತವ್ಯಂ ಚ=ಮೂಸತಕ್ಕುದೂ, ರಸನಂ ಚ=ರಸನೇಂದ್ರಿಯವೂ, ರಸಯಿತವ್ಯಂ ಚ=ರುಚಿ ನೋಡತಕ್ಕುದೂ, ತ್ವಕ್ಚ=ತ್ವಗಿಂದ್ರಿಯವೂ, ಸ್ಪರ್ಶಯಿತವ್ಯಂ ಚ=ಮುಟ್ಟತಕ್ಕುದೂ, ವಾಕ್ಚ=ವಾಗಿಂದ್ರಿಯವೂ, ವಕ್ತವ್ಯಂ ಚ=ಹೇಳತಕ್ಕುದೂ, ಹಸ್ತೌ ಚ=ಕೈಗಳೂ, ದಾತವ್ಯಂ ಚ=ಕೊಡತಕ್ಕುದೂ, ಪಾದೌಚ=ಕಾಲುಗಳೂ, ಗಂತವ್ಯಂ ಚ=ನಡಿಯತಕ್ಕುದೂ, ಪಾಯುಶ್ಚ=ಗುದವೂ, ವಿಸರ್ಜಯಿತವ್ಯಂ ಚ=ವಿಸರ್ಜಿಸತಕ್ಕುದೂ, ಉಪಸ್ಥಶ್ಚ=ಉಪಸ್ಥವೂ, ಆನಂದಯಿತವ್ಯಂ ಚ=ಆನಂದಿಸತಕ್ಕುದೂ, ಮನಶ್ಚ=(ಸಂಕಲ್ಪ ವಿಕಲ್ಪರೂಪವಾದ) ಮನಸ್ಸೂ, ಮಂತವ್ಯಂ ಚ=ತಿಳಿಯತಕ್ಕುದೂ, ಬುದ್ಧಿಶ್ಚ=(ನಿಶ್ಚಯಾತ್ಮಕ) ಬುದ್ಧಿಯೂ, ಬೋದ್ಧವ್ಯಂ ಚ=ನಿಶ್ಚಯಜ್ಞಾನ ವಿಷಯವೂ, ಅಹಂಕಾರಶ್ಚ=ತನ್ನದಲ್ಲದುದನ್ನು ತನ್ನದೆಂದು ತಿಳಕೊಳ್ಳೋಣವೂ, ಅಹಂಕರ್ತವ್ಯಂ ಚ=ಅದಕ್ಕೆ ವಿಷಯವಾದುದೂ, ಚಿತ್ತಂ ಚ=ಅಸ್ಥಿರಸ್ಮರಣೆಯೂ, ಚೇತಯಿತವ್ಯಂ ಚ=ಅದಕ್ಕೆ ವಿಷಯವಾದುದೂ, ತೇಜಶ್ಚ=ಚೇತನವೂ (ಚಿತ್ತಕ್ಕೆ ವಿಷಯಗಳಲ್ಲಿ

ಪ್ರಾಪ್ತಿಯೂ), ವಿದ್ಯೋತಯಿತವ್ಯಂ ಚ=ಪ್ರಕಾಶಾರ್ಹವಾದುದೂ, ಪ್ರಾಣಶ್ಚ=ಮುಖ್ಯಪ್ರಾಣನೂ, ವಿಧಾರಯಿತವ್ಯಂ ಚ=ಧಾರಣೆಯೂ, ಏತತ್=ಈ, ಸರ್ವಂ=ಎಲ್ಲವೂ, ಪರೇ ಆತ್ಮನಿ=ವಿಷ್ಣುವಿನಲ್ಲಿಯೇ, ಸಂಪ್ರತಿಷ್ಠತೇ=ಆಶ್ರಯಿಸಿಕೊಂಡಿರುತ್ತದೆ.

ತಾ ॥ ಪಕ್ಷಿಗಳು ಯಾವಪ್ರಕಾರ ಒಂದು ನಿವಾಸಾರ್ಹವಾದ ವೃಕ್ಷವನ್ನಾಶ್ರಯಿಸಿಕೊಂಡಿರುತ್ತಾವೋ ಅದೇ ಪ್ರಕಾರ ಪೃಥಿವ್ಯಾದಿ ಪಂಚಭೂತಗಳೂ ಗಂಧಾದಿಪಂಚ ತನ್ಮಾತ್ರೆಗಳೂ ಚಕ್ಷುರಾದಿ ದಶಇಂದ್ರಿಯಗಳೂ ತದ್ವಿಷಯಗಳೂ ಮನ ಆದಿಐದು ಅಂತಃಕರಣಗಳೂ ತದ್ವಿಷಯಗಳೂ ಚೇತನವೂ ಪೃಥಿವ್ಯಾದಿ ಸರ್ವಧಾರಕನಾದ ಮುಖ್ಯಪ್ರಾಣನೂ ಎಲ್ಲರೂ ಪರಮಾತ್ಮನನ್ನಾಶ್ರಯಿಸಿಕೊಂಡಿರುತ್ತಾರೆ. ॥ ೫ ॥

**ಮಂ ॥ ಏಷ ಹಿ ದೃಷ್ಟಾ ಸ್ಪ್ರಷ್ಟಾ ಶ್ರೋತಾ ಘ್ರಾತಾ ರಸಯಿತಾ ಮಂತಾ ಬೋದ್ಧಾ ಕರ್ತಾ ವಿಜ್ಞಾನಾತ್ಮಾ ಪುರುಷಃ। ಸ ಯೋ ಹ ವೈತದಚ್ಛಾಯಮಶರೀರ ಮಲೋಹಿತಂ ಶುಭ್ರಮಕ್ಷರಂ ವೇದಯತೇ । ಯಸ್ತು ಸೋಮ್ಯ ಸ ಸರ್ವಜ್ಞಃ ಸರ್ವಂ ಭವತಿ। ತದೇಷ ಶ್ಲೋಕಃ॥ ವಿಜ್ಞಾನಾತ್ಮಾ ಸಹ ದೇವೈಶ್ಚ ಸರ್ವೈಃ ಪ್ರಾಣಾ ಭೂತಾನಿ ಸಂಪ್ರತಿಷ್ಠಂತಿ ಯತ್ರ। ತದೇತದಕ್ಷರಂ ವೇದಯತೇ ಯಸ್ತು ಸೋಮ್ಯ ಸ ಸರ್ವಜ್ಞಃ ಸರ್ವಮೇವಾವಿವೇಶೇತಿ ॥ ೬ ॥**

**ಇತಿ ಚತುರ್ಥಃ ಪ್ರಶ್ನಃ ॥ ೪ ॥**

ಅ ॥ ಏಷ ಹಿ=ಈ ಪರಮಾತ್ಮನೇ, ದ್ರಷ್ಟಾ=ದರ್ಶನಶಕ್ತಿಯನ್ನು ಕೊಡತಕ್ಕವನು, ಸ್ಪೃಷ್ಟಾ=ಸ್ಪರ್ಶನ ಶಕ್ತಿಯನ್ನು ಕೊಡತಕ್ಕವನು, ಶ್ರೋತಾ=ಶ್ರವಣ ಶಕ್ತಿಪ್ರದನು, ಘ್ರಾತಾ=ಘ್ರಾಣಶಕ್ತಿಪ್ರದನು, ರಸಯಿತಾ=ರುಚಿಗ್ರಹಣ ಶಕ್ತಿಪ್ರದನು, ಮಂತಾ=ಮನನ ಶಕ್ತಿಪ್ರದನು, ಬೋದ್ಧಾ=ತಿಳಿಸತಕ್ಕವನು, ಕರ್ತಾ=ಸರ್ವಕರ್ತನು ವಿಜ್ಞಾನಾತ್ಮಾ=ಜ್ಞಾನಸ್ವರೂಪನು, ಪುರುಷಃ=ಗುಣಪರಿಪೂರ್ಣನು ಸಃ=ಜ್ಞಾನಸ್ವರೂಪನಾದ ಪರಮಾತ್ಮನು, ಯೋ ಹ ವಾ=ಯಾವ ಲಕ್ಷಣಗಳುಳ್ಳವನೋ, ಏತತ್=ಈ, ಅಚ್ಛಾಯಂ=ಅವಿದ್ಯಾಶೂನ್ಯನಾದ, ಅಶರೀರಂ=ಪ್ರಾಕೃತಶರೀರ ಶೂನ್ಯನಾದ, ಅಲೋಹಿತಂ=ವರ್ಣವಿಲ್ಲದ, ಶುಭ್ರಂ=ಶುದ್ಧನಾದ, ಅಕ್ಷರಂ=ಪರಮಾತ್ಮನನ್ನು, ಸೋಮ್ಯ=ಸೋಮಾರ್ಹನೇ ಯಸ್ತು=ಯಾರು, ವೇದಯತೇ=ತಿಳಕೊಳ್ಳುತ್ತಾನೋ, ಸಃ=ಅವನು, ಸರ್ವಜ್ಞಃ ಏವ=ಸರ್ವಜ್ಞನೇ ಆಗುತ್ತಾನೆ. ಸರ್ವಂ=ಪೂರ್ಣನಾದ ಬ್ರಹ್ಮನನ್ನು, ಭವತಿ=ಪ್ರವೇಶಿಸುತ್ತಾನೆ, ತತ್=ಈ ವಿಷಯದಲ್ಲಿ, ಏಷಃ=ಮೇಲೆ ಹೇಳುವ, ಶ್ಲೋಕಃ=ಮಂತ್ರವು (ಸಮ್ಮತಿಯಾಗಿದೆ). ವಿಜ್ಞಾನಾತ್ಮಾ=ಜ್ಞಾನಸ್ವರೂಪನಾದ ಜೀವನು, ಪ್ರಾಣಾಃ=ಚಕ್ಷುರಾದಿಗಳು, ಭೂತಾನಿ=ಪೃಥಿವ್ಯಾದಿಗಳು, ಸರ್ವೈಃ=ಸಮಸ್ತರಾದ, ದೇವೈಶ್ಚ=ಸೂರ್ಯಾದಿಗಳಿಂದ, ಸಹ=ಕೂಡಿಕೊಂಡು, ಯತ್ರ=ಯಾವ ಪರಬ್ರಹ್ಮನಲ್ಲಿ, ಸಂಪ್ರತಿಷ್ಠಂತಿ=ಇರುತ್ತಾವೋ, ತದೇತತ್ ಅಕ್ಷರಂ=ಆ ಈ ಪರಬ್ರಹ್ಮನನ್ನು, ಯಸ್ತು=ಯಾವಾತನು, ಹೇ ಸೋಮ್ಯ=ಎಲೈ ಸೋಮಾರ್ಹನೇ, ವೇದಯತೇ=ತಿಳಕೊಳ್ಳುತ್ತಾನೋ, ಸಃ=ಅವನು, ಸರ್ವಜ್ಞಃ=ಸರ್ವಜ್ಞನು, ಸರ್ವಮೇವ=ಪರಮಾತ್ಮನನ್ನೇ, ಆವಿವೇಶ=ಪ್ರವೇಶಿಸುತ್ತಾನೆ. ಇತಿ=ಹೀಗೆ (ಸಮ್ಮತಿಯು). ಇತಿ=ಹೀಗೆ, ಚತುರ್ಥಃ=ನಾಲ್ಕನೇ, ಪ್ರಶ್ನಃ=ಪಶ್ನೆಯು (ಸಮಾಪ್ತಃ).

ತಾ || ಪರಮಾತ್ಮನು ಭಾಸಕಗಳಾದ ಚಕ್ಷುರಾದಿ ನಿಖಿಲ ಇಂದ್ರಿಯುಗಳಿಗೂ ಶಕ್ತಿಯನ್ನು ಕೊಡತಕ್ಕವನು. ಮತ್ತು ಆತನು ಅವಿದ್ಯಾದಿ ದೋಷಶೂನ್ಯನಾಗಿಯೂ, ಪ್ರಾಕೃತ ಶರೀರ ಶೂನ್ಯನಾಗಿಯೂ ಇರುತ್ತಾನೆ. ಇಂತಹ ಪರಮಾತ್ಮನನ್ನು ಯಾರು ವಿವೇಚಿಸಿ ತಿಳಿದುಕೊಳ್ಳುತ್ತಾರೋ ಅವರು ಸರ್ವಜ್ಞಾನಿಗಳಾಗಿ ಮುಕ್ತಿಯನ್ನು ಹೊಂದುತ್ತಾರೆ. || ೬ ||

ನಾಲ್ಕನೇ ಪ್ರಶ್ನೆಯು ಮುಗಿಯಿತು. || ೪ ||

## ಐದನೆಯ ಪ್ರಶ್ನೆಯು.

**ಮಂ || ಅಥ ಹೈನಂ ಶೈಬ್ಯಃ ಸತ್ಯಕಾಮಃ ಪಪ್ರಚ್ಛ | ಸ ಯೋ ಹ ವೈತದ್ಭಗವನ್ ಮನುಷ್ಯೇಷು ಪ್ರಾಯಣಾಂತಮೋಂಕಾರಮಭಿಧ್ಯಾಯೀತ | ಕತಮಂ ವಾವ ಸ ತೇನ ಲೋಕಂ ಜಯತೀತಿ | ತಸ್ಮೈ ಸ ಹೋವಾಚ | ಏತದ್ವೈ ಸತ್ಯಕಾಮ ಪರಂ ಚಾಪರಂ ಚ ಬ್ರಹ್ಮ ಯದೋಂಕಾರಃ | ತಸ್ಮಾದ್ವಿದ್ವಾನೇತೇನೈವಾಯತನೇನೈಕತರಮನ್ವೇತಿ || ೧ ||**

ಅ || ಅಥ=ಅನಂತರ, ಶೈಬ್ಯಃ=ಶಿಬಿ ಪುತ್ರನಾದ, ಸತ್ಯಕಾಮಃ=ಸತ್ಯಕಾಮನು, ಭಗವನ್=ಪೂಜ್ಯರೇ! ಏತತ್=ಈದಾವ, ಮನುಷ್ಯೇಷು=ಮನುಷ್ಯರಲ್ಲಿ, ಸ ಯೋ ಹ ವಾ=ಯಾವ ಅಧಿಕಾರಿಯು, ಪ್ರಾಯಣಾಂತಂ=ದೇಹತ್ಯಾಗಪರ್ಯಂತವಾಗಿ, 'ಓಂ' ಕಾರಂ='ಓಂ' ಎಂತ ಕರಿಯಲ್ಪಡುವ ಪರಮಾತ್ಮನನ್ನು, ಅಭಿಧ್ಯಾಯೀತ=ಧ್ಯಾನಿಸುವನೋ, ಸಃ=ಆತನು, ತೇನ=ಆ ಓಂಕಾರದಿಂದ, ಕತಮಂ ವಾವ ಲೋಕಂ=ಯಾವಲೋಕವನ್ನು, ಜಯತಿ=ಹೊಂದುತ್ತಾನೆ. ಇತಿ=ಹೀಗೆ, ಏನಂ=ಪಿಪ್ಪಲಾದರನ್ನು, ಪಪ್ರಚ್ಛ=ಕೇಳಿದನು. ತಸ್ಮೈ=ಆ ಸತ್ಯಕಾಮನಿಗೋಸ್ಕರ, ಸಃ=ಪಿಪ್ಪಲಾದರು, ಉವಾಚ ಹ=ಹೇಳಿದರು. ಸತ್ಯಕಾಮ=ಎಲೈ ಸತ್ಯಕಾಮನೇ! ಯತ್ 'ಓಂ'ಕಾರಃ=ಓಂ ಎಂತ ಹೇಳಲ್ಪಡತಕ್ಕ ಯಾವುದೊಂದು ವಸ್ತುವಿರುತ್ತದೋ, ಏತದ್ವೈ=ಇದೇ, ಪರಂ ಚ=ಪರಬ್ರಹ್ಮವು, ಅಪರಂ ಚ=ಚತುರ್ಮುಖನು. ತಸ್ಮಾತ್=ಆದುದರಿಂದ, ವಿದ್ವಾನ್='ಓಂ' ಎಂಬ ಪ್ರಣವ ಮಂತ್ರದಿಂದ ಉಪಾಸನೆ ಮಾಡತಕ್ಕವನು, ಏತೇನ=ಪೂರ್ವೋಕ್ತವಾದ, ಅಯನೇನ=ಉಪಾಸನಾಖ್ಯಮಾರ್ಗದಿಂದ, ಏಕತರಂ=ಪರಾಪರ ಬ್ರಹ್ಮರಲ್ಲೊಬ್ಬನನ್ನು, ಅನ್ವೇತಿ=ಹೊಂದುತ್ತಾನೆ.

ತಾ || ಪೂರ್ವಪ್ರಶ್ನೆಗಳಲ್ಲಿ ಪರಮಾತ್ಮನ ಸ್ವರೂಪಮಾಹಾತ್ಮ್ಯಗಳು ಹೇಳಲ್ಪಟ್ಟವು. ಅಂತಹ ಪರಮಾತ್ಮನನ್ನು ಯೋಗ್ಯರೀತಿಯಿಂದ ಉಪಾಸನೆ ಮಾಡಿದರೇನೇ ಸುಖವು ಲಭಿಸೀತು. ಅಂತಹ ಉಪಾಸನಾಕ್ರಮವೂ, ಅದರಿಂದ ಲಭ್ಯವಾಗುವ ಫಲವೂ ಈ ಪ್ರಶ್ನೆಯಲ್ಲಿ ನಿರೂಪಿಸಲ್ಪಡುತ್ತದೆ. ಸತ್ಯಕಾಮನು ಈ ರೀತಿ ಪ್ರಶ್ನಿಸಿದನು. ಎಲೈ! ಪಿಪ್ಪಲಾದರೇ! ಈ ಲೋಕದಲ್ಲಿ ಅಧಿಕಾರಿಯಾದ ಮನುಷ್ಯನು 'ಓಂ' ಎಂಬೀ ಪ್ರಣವ ಮಂತ್ರದಿಂದ ಧ್ಯಾನಾದಿಗಳನ್ನು ಮಾಡಿದರೆ ಆತನಿಗೆ ಯಾವ ಲೋಕವು ಪ್ರಾಪ್ತವಾಗುತ್ತದೆ?' ಪಿಪ್ಪಲಾದರು ಎಲೈ ಸತ್ಯಕಾಮನೇ! 'ಓಂ'ಕಾರವು ಮುಖ್ಯವಾಗಿ ಪರಮಾತ್ಮಪ್ರತಿಪಾದಕವಾಗಿಯೂ, ಅಮುಖ್ಯವಾಗಿ ತತ್ಪ್ರತಿಮಾರೂಪನಾದ ಚತುರ್ಮುಖಪ್ರತಿಪಾದಕವಾಗಿಯೂ ಇರುವುದರಿಂದ ಈ ಪ್ರಣವದ ಉಪಾಸನಾನುಗುಣವಾಗಿ ಇವರಲ್ಲೊಬ್ಬನನ್ನು ಹೊಂದುತ್ತಾನೆಂದು ತಿಳಿ ಎಂದರು.

ಮಂ || ಸ ಯದ್ಯೇಕಮಾತ್ರಮಭಿಧ್ಯಾಯೀತ ಸ ತೇನೈವ ಸಂವೇದಿತಸ್ತೂರ್ಣ ಮೇವ ಜಗತ್ಯಾಮಭಿಸಂಪದ್ಯತೇ| ತಮೃಚೋ ಮನುಷ್ಯಲೋಕಮು ಪನಯಂತೇ । ಸ ತತ್ರ ತಪಸಾ ಬ್ರಹ್ಮಚರ್ಯೇಣ ಶ್ರದ್ಧಯಾ ಸಂಪ ನ್ನೋ ಮಹಿಮಾನಮನುಭವತಿ । ಅಥ ಯದಿ ದ್ವಿಮಾತ್ರೇಣ ಮನಸಿ ಸಂಪದ್ಯತೇ ಸೋಽಂತರಿಕ್ಷಂ ಯಜುರ್ಭಿರುನ್ನೀಯತೇ ಸೋಮ ಲೋಕಂ ಸ ಸೋಮಲೋಕೇ ವಿಭೂತಿಮನುಭೂಯ ಪುನರಾವರ್ತತೇ। ಯಃ ಪುನರೇತಂ ತ್ರಿಮಾತ್ರೇಣೋಮಿತ್ಯೇತೇನೈವಾಕ್ಷರೇಣ ಪರಂ ಪುರುಷಮಭಿಧ್ಯಾಯೀತ ಸ ತೇಜಸಿ ಸೂರ್ಯೇ ಸಂಪನ್ನೋ ಯಥಾ ಪಾದೋದರಸ್ತ್ವಚಾ ವಿನಿರ್ಮುಚ್ಯತೇ ಏವಂ ಹ ವೈ ಸ ಪಾಪ್ಮನಾ ವಿನಿರ್ಮುಕ್ತಃ । ಸ ಸಾಮಭಿರುನ್ನೀಯತೇ ಬ್ರಹ್ಮಲೋಕಂ । ಸ ಏತಸ್ಮಾಜ್ಜೀವಘನಾತ್ಪರಾತ್ಪರಂ ಪುರಿಶಯಂ ಪುರುಷಮೀಕ್ಷತೇ || ೨ ||

ಅ || ಸಃ=ಉಪಾಸಕನು, ಏಕಮಾತ್ರಂ=ಪ್ರಣವದ ಒಂದೇ ಮಾತ್ರೆಯಿಂದ ವಾಚ್ಯನೆಂದು, ಅಭಿಧ್ಯಾಯೀತ ಯದಿ=ಪರಮಾತ್ಮಧ್ಯಾನವನ್ನು ಮಾಡಿದಪಕ್ಷದಲ್ಲಿ, ಸಃ=ಉಪಾಸಕನು, ತೇನೈವ=ಧ್ಯಾನಿಸಲ್ಪಟ್ಟ ಪರಮಾತ್ಮನಿಂದಲೇ, ಸಂವೇದಿತಃ=ಸಂಬೋಧಿಸಲ್ಪಟ್ಟವನಾಗಿ, ತೂರ್ಣಮೇವ=ಶೀಘ್ರವೇ, ಜಗತ್ಯಾಂ=ಭೂಮಿಯಲ್ಲಿ, ಅಭಿಸಂಪದ್ಯತೇ=ಹುಟ್ಟುತ್ತಾನೆ. ತಂ=ಆ ಉಪಾಸಕನನ್ನು, ಋಚಃ=ಋಗ್ವೇದಾಭಿಮಾನಿದೇವತೆಗಳು, ಮನುಷ್ಯಲೋಕಂ=ಶ್ರೇಷ್ಠವಾದ ಬ್ರಾಹ್ಮಣಶರೀರವನ್ನು, ಉಪನಯಂತೇ=ಪ್ರಾಪಿಸಿಕೊಡುತ್ತಾರೆ. ಸಃ=ಅವನು, ತತ್ರ=ಆ ಜನ್ಮದಲ್ಲಿ, ತಪಸಾ=ತಪಸ್ಸಿನಿಂದ, ಬ್ರಹ್ಮಚರ್ಯೇಣ=ಬ್ರಹ್ಮಚರ್ಯವ್ರತದಿಂದ, ಶ್ರದ್ಧಯಾ=ಆಸ್ತಿಕ್ಯಬುದ್ಧಿಯಿಂದ, ಸಂಪನ್ನಃ=ಯುಕ್ತನಾಗಿ, ಮಹಿಮಾನಂ=ಮಹತ್ವವನ್ನು, ಅನುಭವತಿ=ಅನುಭವಿಸುತ್ತಾನೆ, ಅಥ=ಹೀಗೆಯೇ, ದ್ವಿಮಾತ್ರೇಣ=ಪ್ರಣವದ ಎರಡು ಮಾತ್ರೆಗಳಿಂದ ವಾಚ್ಯನಾದ ಪರಮಾತ್ಮನಿಂದ, ಮನಸಿ=ಚಿತ್ತದಲ್ಲಿ, ಸಂಪದ್ಯತೇ ಯದಿ=ಸಂಗತನಾದ ಪಕ್ಷದಲ್ಲಿ, ಸಃ=ಅವನು, ಯಜುರ್ಭಿಃ=ಯಜುರ್ವೇದಾಭಿಮಾನಿ ದೇವತೆಗಳಿಂದ, ಅಂತರಿಕ್ಷಂ=ಅಂತರಿಕ್ಷದಲ್ಲಿದ್ದ, ಸೋಮಲೋಕಂ=ಚಂದ್ರಲೋಕಕ್ಕೆ, ಉನ್ನೀಯತೇ=ವೈಯಲ್ಪಡುತ್ತಾನೆ. ಸಃ=ಅವನು, ಸೋಮಲೋಕೇ=ಚಂದ್ರಲೋಕದಲ್ಲಿ, ವಿಭೂತಿಂ=ಐಶ್ವರ್ಯವನ್ನು, ಅನುಭೂಯ=ಹೊಂದಿ, ಪುನರಾವರ್ತತೇ=ತಿರುಗಿ ಹುಟ್ಟುತ್ತಾನೆ. ಯಃ ಪುನಃ=ಯಾವಾತನು, ಏತಂಪರಂ ಪುರುಷಂ=ಈ ಪರಬ್ರಹ್ಮನನ್ನು, ತ್ರಿಮಾತ್ರೇಣ=ಮೂರು ಮಾತ್ರೆಗಳುಳ್ಳ, 'ಓಂ' ಇತಿ=ಓಂ ಎಂಬ, ಏತೇನೈವಾಕ್ಷರೇಣ=ಈ ಅಕ್ಷರದಿಂದ, ಅಭಿಧ್ಯಾಯೀತ=ಧ್ಯಾನಿಸುತ್ತಾನೋ, ಸಃ=ಅವನು, ತೇಜಸಿ=ತೇಜೋರೂಪನಾದ, ಸೂರ್ಯೇ=ಆದಿತ್ಯನಲ್ಲಿ, ಸಂಪನ್ನಃ=ಸಂಗತನಾಗಿ, ಪಾದೋದರಃ=ಸರ್ಪವು, ತ್ವಚಾ=ಪರೆಯಿಂದ, ಯಥಾ=ಯಾವಪ್ರಕಾರ, ವಿನಿರ್ಮುಚ್ಯತೇ=ಬಿಡಲ್ಪಡುತ್ತದೋ, ಏವಂ ಹವೈ=ಇದೇ ಪ್ರಕಾರ, ಸಃ=ಉಪಾಸಕನು, ಪಾಪ್ಮನಾ=ಪಾಪದದೆಸೆಯಿಂದ, ವಿನಿರ್ಮುಕ್ತಃ=ಬಿಡಲ್ಪಡುತ್ತಾನೆ. ಸಃ=ಅವನು, ಸಾಮಭಿಃ=ಸಾಮವೇದಾಭಿಮಾನಿ ದೇವತೆಗಳಿಂದ, ಬ್ರಹ್ಮಲೋಕಂ=ಸತ್ಯಾಖ್ಯಲೋಕವನ್ನು, ಉನ್ನೀಯತೇ=ಹೊಂದಿಸಲ್ಪಡುತ್ತಾನೆ. ಸಃ=ಆತನು, ಏತಸ್ಮಾತ್=ಸತ್ಯಲೋಕಾಧಿಪತಿಯಾದ, ಜೀವಘನಾತ್=ಸಕಲಜೀವೋತ್ತಮನಾದ ಚತುರ್ಮುಖನಿಂದ, ಪರಾತ್ಪರಂ=ಉತ್ತಮೋತ್ತಮನಾದ, ಪುರಿಶಯಂ=ಸಕಲರ ಶರೀರಾಂತರ್ಗತನಾದ, ಪುರುಷಂ=ಪೂರ್ಣನಾದವಾಸುದೇವನನ್ನು, ಈಕ್ಷತೇ=ನೋಡುತ್ತಾನೆ.

ಭಾ || ಪ್ರಣವೇನ ಹರಿಂ ಧ್ಯಾಯನ್ ಬ್ರಹ್ಮಲೋಕಂ ಸಮೇತ್ಯ ಚ |
ಜ್ಞಾನಂ ಚತುರ್ಮುಖಾತ್ಪ್ರಾಪ್ಯ ಮುಚ್ಯತೇ ನಾತ್ರ ಸಂಶಯಃ ||

ಅ || ಪ್ರಣವೇನ=ಪ್ರಣವ ಮಂತ್ರದಿಂದ, ಹರಿಂ=ಶ್ರೀ ಪರಮಾತ್ಮನನ್ನು, ಧ್ಯಾಯನ್=ಧ್ಯಾನಿಸುವವನು, ಬ್ರಹ್ಮಲೋಕಂ=ಚತುರ್ಮುಖಲೋಕವನ್ನು, ಸಮೇತ್ಯ ಚ=ಹೊಂದಿ, ಚತುರ್ಮುಖಾತ್=ಅಪರಬ್ರಹ್ಮನಿಂದ, ಜ್ಞಾನಂ=ವಿಶೇಷ ಜ್ಞಾನವನ್ನು, ಪ್ರಾಪ್ಯ=ಪಡದು, ಮುಚ್ಯತೇ=ಬಿಡಲ್ಪಡುತ್ತಾನೆ. ಅತ್ರ=ಈ ವಿಷಯದಲ್ಲಿ, ಸಂಶಯಃ=ಸಂದೇಹವು, ನ=ಇರುವುದಿಲ್ಲ.

ತಾ || ಆ ಉಪಾಸನಾಕ್ರಮವೇ ಹೇಳಲ್ಪಡುತ್ತದೆ. 'ಓಂ' ಎಂಬ ಪ್ರಣವ ಮಂತ್ರದಲ್ಲಿ ಅಕಾರ, ಉಕಾರ, ಮಕಾರಗಳೆಂಬ ಮೂರು ಅಂಶಗಳು (ಮಾತ್ರೆಗಳು) ಇರುತ್ತವೆ. ಅವುಗಳಲ್ಲಿ ಎರಡು ಅಂಶಗಳನ್ನು ತಿಳಿಯದೆ ಒಂದಂಶವನ್ನು ಮಾತ್ರ ತಿಳಿದು ಪರಮಾತ್ಮನನ್ನು ಉಪಾಸನೆ ಮಾಡತಕ್ಕವನು ತಿರುಗಿ ಹುಟ್ಟುತ್ತಾನೆ. ಆದರೆ ಆತನು ಋಗಭಿಮಾನಿದೇವತೆಗಳಿಂದ ಉತ್ತಮವಾದ ಬ್ರಾಹ್ಮಣತ್ವವನ್ನು ಹೊಂದಿಸಲ್ಪಡುತ್ತಾನೆ. ಆಗಾತನು ತಪಸ್ವಿಯಾಗಿ ತಾದೃಶಪ್ರಣವೋಪಾಸನೆಯ ಫಲವನ್ನನುಭವಿಸುತ್ತಾನೆ. ಯಾವಾತನು ಎರಡೇ ಮಾತ್ರೆಗಳನ್ನು ತಿಳಿದು ಉಪಾಸನೆ ಮಾಡುತ್ತಾನೋ ಆತನಿಗೆ ಯಜುರಭಿಮಾನಿ ದೇವತೆಗಳು ಚಂದ್ರಲೋಕವನ್ನು ಪ್ರಾಪಿಸಿಕೊಡುತ್ತಾರೆ. ಅಲ್ಲಿ ಅವನು ಬಹಳ ಐಶ್ವರ್ಯವನ್ನನುಭವಿಸಿ ಭೂಮಿಯಲ್ಲಿ ತಿರುಗಿ ಹುಟ್ಟುತ್ತಾನೆ. ಯಾರು ಮೂರು ಮಾತ್ರೆಗಳನ್ನೂ ಚನ್ನಾಗಿ ತಿಳಿದು ಪ್ರಣವದಿಂದ ಪರಬ್ರಹ್ಮನ ಉಪಾಸನೆಮಾಡುತ್ತಾನೋ ಅವನು ಪರಮೇಶ್ವರನನ್ನು ದರ್ಶನಮಾಡಿ ಸೂರ್ಯನನ್ನು ಹೊಂದಿ ಸರ್ಪವು ಪರೆಯಿಂದ ಬಿಡಲ್ಪಡುವಂತೆ ಪಾಪದಿಂದ ಮುಕ್ತನಾಗಿ ಸಾಮಾಭಿಮಾನಿಗಳಿಂದ ಸತ್ಯಲೋಕಕ್ಕೆ ವೈಯಲ್ಪಡುತ್ತಾನೆ. ಅಲ್ಲಿ ಚತುರ್ಮುಖನಿಂದ ಭಗದ್ವಿಷಯಕ ವಿಶೇಷ ಜ್ಞಾನವನ್ನುಪದೇಶಿಸಲ್ಪಟ್ಟು ಮುಕ್ತಿಯನ್ನು ಹೊಂದುತ್ತಾನೆ. || ೨ ||

**ಮಂ || ತದೇತೌ ಶ್ಲೋಕೌ ಭವತಃ | ತಿಸ್ರೋ ಮಾತ್ರಾ ಮೃತ್ಯುಮತ್ಯಃ ಪ್ರಯುಕ್ತಾ ಅನ್ಯೋನ್ಯಸಕ್ತಾ ಅನವಿಪ್ರಯುಕ್ತಾಃ | ಕ್ರಿಯಾಸು ಬಾಹ್ಯಾಭ್ಯಂತರ ಮಧ್ಯಮಾಸು ಸಮ್ಯಕ್ಪ್ರಯುಕ್ತಾಸು ನ ಕಂಪತೇ ಜ್ಞಃ | ಋಗ್ಭಿರೇತಂ ಯಜುರ್ಭಿರಂತರಿಕ್ಷಂ ಸಾಮಭಿರ್ಯತ್ತತ್ಕವಯೋ ವೇದಯಂತೇ | ತಮೋಂಕಾರೇಣೈ ವಾಯತನೇನಾನ್ವೇತಿ ವಿದ್ವಾನ್ ಯತ್ತಚ್ಛಾಂತಮಜರಮಮೃತಮಭಯಂ ಪರಂ ಚೇತಿ || ೩ ||**

ಇತಿ ಪಂಚಮಃ ಪ್ರಶ್ನಃ || ೫ ||

ಅ || ತತ್=ಪೂರ್ವೋಕ್ತ ವಿಷಯದಲ್ಲಿ, ಏತೌ=ಈ ದಾವ, ಶ್ಲೋಕೌ=ಎರಡು ಶ್ಲೋಕಗಳು, ಭವತಃ=ಪ್ರಮಾಣಗಳಾಗುತ್ತವೆ. ತಿಸ್ರಃ ಮಾತ್ರಾಃ=ಅಕಾರಾದಿ ಮೂರು ಪ್ರಣವ ಮಾತ್ರೆಗಳು, ಅನವಿಪ್ರಯುಕ್ತಾಃ=ಬೇರೆಬೇರೆಯಾಗಿ, ಅನ್ಯೋನ್ಯಸಕ್ತಾಃ=ಎರಡೆರಡಾಗಿ, ಬಾಹ್ಯಾಭ್ಯಂತರಮಧ್ಯಮಾಸು=ತಾರಮಂದ್ರ ಮಧ್ಯಮರೂಪಗಳಾದ, ಕ್ರಿಯಾಸು=ಉಚ್ಚಾರಣೆಗಳಲ್ಲಿ, ಪ್ರಯುಕ್ತಾಃ=ಉಚ್ಚರಿಸಲ್ಪಟ್ಟವುಗಳಾದರೆ, ಮೃತ್ಯುಮತ್ಯಃ=ಮರಣವನ್ನುಕೊಡತಕ್ಕವುಗಳಾಗಿರುತ್ತವೆ. ಸಮ್ಯಕ್=ಚನ್ನಾಗಿ, ಪ್ರಯುಕ್ತಾಸು=ಉಚ್ಚರಿಸಲ್ಪಟ್ಟರೆ, ಜ್ಞಃ=ತಿಳಿದವನು,

ನ ಕಂಪತೇ=ಮುಕ್ತನಾಗುತ್ತಾನೆ. ಋಗ್ಭಿಃ=ಋಗಭಿಮಾನಿಗಳಿಂದ, ಏತಂ=ಮನುಷ್ಯ ಲೋಕವನ್ನು, ಯಜುರ್ಭಿಃ=ಯಜುರಭಿಮಾನಿಗಳಿಂದ, ಅಂತರಿಕ್ಷಸ್ಥಸೋಮಲೋಕವನ್ನು ಹೊಂದಿಸಲ್ಪಡುತ್ತಾನೆ. ಸಾಮಭಿಃ=ಸಾಮಾಭಿಮಾನಿಗಳಿಂದ, ಕವಯಃ=ಪಂಡಿತರು, ಯತ್ತತ್=ಯಾವುದನ್ನು, ವೇದಯಂತೇ=ತಿಳಿಯುತ್ತಾರೋ, ಯತ್ತತ್=ಪ್ರಸಿದ್ಧವಾದ, ಶಾಂತಂ=ಸುಖಪೂರ್ಣನಾದ, ಅಜರಂ=ಜರಾವರ್ಜಿತನಾದ, ಅಭಯಂ=ನಿರ್ಭಯನಾದ, ಪರಂ ಚ=ಸರ್ವೋತ್ತಮನಾದ, ತಂ=ಆ ವಾಸುದೇವನನ್ನು, ಅಯನೇನ=ಗತಿಸಾಧನವಾದ, ಓಂಕಾರೇಣೈವ=ಪ್ರಣವದಿಂದಲೇ, ವಿದ್ವಾನ್=ತಿಳಿದವನು, ಅನ್ವೇತಿ=ಹೊಂದುತ್ತಾನೆ. ಇತಿ=ಹೀಗಂದರು. ಇತಿ=ಹೀಗೆ ಪಂಚಮಃ=ಐದನೇ, ಪ್ರಶ್ನಃ=ಪ್ರಶ್ನೆಯು ॥ ೩ ॥

ಐದನೇ ಪ್ರಶ್ನೆಯು ಮುಗಿಯಿತು. ॥ ೫ ॥

## ಆರನೇ ಪ್ರಶ್ನೆಯು.

**ಮಂ ॥ ಅಥ ಹೈನಂ ಸುಕೇಶಾ ಭಾರದ್ವಾಜಃ ಪಪ್ರಚ್ಛ । ಭಗವನ್ ಹಿರಣ್ಯನಾಭಃ ಕೌಸಲ್ಯೋ ರಾಜಪುತ್ರೋ ಮಾಮುಪೇತ್ಯೈನಂ ಪ್ರಶ್ನಮಪೃಚ್ಛತ । ಷೋಡಶಕಲಂ ಭಾರದ್ವಾಜ ಪುರುಷಂ ವೇತ್ಥ ತಂ ಮಹ್ಯಂ ಬ್ರವೀಹೀತಿ । ತಮಹಂ ಕುಮಾರಮಬ್ರುವಂ ನಾಹಮಿಮಂ ವೇದ ಯದ್ಯಹಮಿಮಮವೇದಿಷ್ಯಂ ಕಥಂ ತೇ ನಾವಕ್ಷ್ಯಮಿತಿ । ಸಮೂಲೋ ವಾ ಏಷ ಪರಿಶುಷ್ಯತಿ ಯೋಽನೃತಮಭಿವದತಿ । ತಸ್ಮಾನ್ನಾರ್ಹಾಮ್ಯನೃತಂ ವಕ್ತುಂ । ಸ ತೂಷ್ಣೀಂ ರಥಮಾರುಹ್ಯ ಪ್ರವವ್ರಾಜ । ತಂ ತ್ವಾ ಪೃಚ್ಛಾಮಿ ಕ್ವಾಸೌ ಪುರುಷ ಇತಿ ॥ ೧ ॥**

ಅ ॥ ಅಥ=ಅನಂತರದಲ್ಲಿ, ಭಾರದ್ವಾಜಃ=ಭರದ್ವಾಜಪುತ್ರನಾದ, ಸುಕೇಶಾಃ=ಸುಕೇಶನೆಂಬುವನು. ಏನಂ=ಪಿಪ್ಪಲಾದರನ್ನು ಕುರಿತು, ಭಗವನ್=ಪೂಜ್ಯರೇ! ಕೌಸಲ್ಯಃ=ಕೋಸಲದೇಶದವನಾದ, ಹಿರಣ್ಯನಾಭಃ=ಈ ಹೆಸರಿನ, ರಾಜಪುತ್ರಃ=ರಾಜಕುಮಾರನು, ಮಾಂ=ನನ್ನನ್ನು, ಉಪೇತ್ಯ=ಹೊಂದಿ, ಏನಂ=ಈ ಮೇಲೆ ಹೇಳುವ, ಪ್ರಶ್ನಂ=ಪ್ರಶ್ನೆಯನ್ನು, ಅಪೃಚ್ಛತ=ಕೇಳಿದನು. ಭಾರದ್ವಾಜ=ಸುಕೇಶನೇ! ಷೋಡಶಕಲಂ=ಹದಿನಾರುಕಲೆ (ಭಾಗ) ಗಳುಳ್ಳ, ಪುರುಷಂ=ಪುರುಷನನ್ನು, ವೇತ್ಥ=ತಿಳಿದಿರುವಿಯಾದರೆ, ತಂ=ಅವನನ್ನು ಮಹ್ಯಂ=ನನಗೋಸ್ಕರ, ಬ್ರವೀಹಿ=ಹೇಳು. ಇತಿ=ಹೀಗೆ, ಪಪ್ರಚ್ಛ ಹ=ಕೇಳಿದನು. ಅಹಂ=ನಾನು, ತಂ ಕುಮಾರಂ=ಆ ಹಿರಣ್ಯನಾಭನನ್ನು, ಅಬ್ರುವಂ=ಹೇಳಿದೆನು. ಇಮಂ=ಈ ಷೋಡಶಕಲ ಪುರುಷನನ್ನು, ನ ವೇದ=ಅರಿಯೆನು. ಅಹಂ=ನಾನು, ಇಮಂ=ಈ ಪುರುಷನನ್ನು, ಯದ್ಯವೇದಿಷ್ಯಂ=ತಿಳಿದಿದ್ದರೆ, ತೇ=ನಿನಗೆ, ಕಥಂ ನಾವಕ್ಷ್ಯಂ=ಹೇಗೆ ಹೇಳದಿದ್ದೇನು. ಇತಿ=ಹೀಗಂದೆನು. ಯಃ=ಯಾರು, ಅನೃತಂ=ಸುಳ್ಳನು, ಅಭಿವದತಿ=ಹೇಳುತ್ತಾನೋ, ಏಷಃ=ಅವನು, ಸಮೂಲೋ ವಾ=ಧರ್ಮ ಐಶ್ವರ್ಯಗಳಿಂದ ಕೂಡಿದವನಾಗಿ, ಪರಿಶುಷ್ಯತಿ=ನಾಶವನ್ನು ಹೊಂದುತ್ತಾನೆ. ತಸ್ಮಾತ್=ಆದುದರಿಂದ, ಅನೃತಂ=ಸುಳ್ಳನ್ನು, ವಕ್ತುಂ=ಹೇಳಲಿಕ್ಕೆ, ನಾಹರ್ಾಮಿ=ಯೋಗ್ಯನಲ್ಲ. ಸಃ=ಅವನು, ತೂಷ್ಣೀಂ=ಏನೂ ಹೇಳದೆ, ರಥಂ=ರಥವನ್ನು, ಆರುಹ್ಯ=ಏರಿ, ಪ್ರವವ್ರಾಜ=ಹೊರಟುಹೋದನು. ತಂ=ಅಂತಹ ಪುರುಷನನ್ನು, ಅಸೌ=ಈ, ಪುರುಷಃ=ಷೋಡಶಕಲಪುರುಷನು, ಕ್ವೇತಿ=ಎಲ್ಲಿರುತ್ತಾನೆಂದು, ತ್ವಾ=ನಿಮ್ಮನ್ನು, ಪೃಚ್ಛಾಮಿ=ಕೇಳುತ್ತೇನೆ. ॥

ತಾ ॥ ಪ್ರಾಣಾದಿ ಸಕಲ ದೇವತೆಗಳೂ ಜಾಗ್ರದಾದಿ ಅವಸ್ಥೆಗಳಲ್ಲಿ ಪರಮಾತ್ಮನ ಅಧೀನ ರೆಂದು ಪೂರ್ವದಲ್ಲಿ ಹೇಳಲ್ಪಟ್ಟಿತು. ಆ ಅಧೀನತ್ವವು ಮೋಕ್ಷದಲ್ಲಿಯೂ ಇರತಕ್ಕದ್ದೇ ಎಂದು ಈ ಪ್ರಶ್ನೆಯಲ್ಲಿ ವರ್ಣಿಸಲ್ಪಡುತ್ತದೆ. ಸತ್ಯಕಾಮನ ಪ್ರಶ್ನೆಯು ಮುಗಿಯಲು ಸುಕೇಶನು ಬಂದು ಈ ರೀತಿ ಕೇಳಿದನು. "ಎಲೈ! ಪೂಜ್ಯರೇ! ಹಿರಣ್ಯನಾಭನೆಂಬ ರಾಜಕುಮಾರನೊಮ್ಮೆ ನನ್ನೊಡನೆ ಷೋಡಶಕಲೆಯುಳ್ಳ ಪುರುಷನನ್ನು ತನಗೆ ತಿಳಿಸಬೇಕೆಂದನು. ಆದರೆ ನಾನಂತಹನನ್ನರಿಯೆ ನಾದುದರಿಂದ ಆತನಿಗೆ ಹೇಳಲಿಲ್ಲ. ಆತನು ಸುಮ್ಮನೆ ತಿರುಗಿ ಹೋದನು. ನಾನಾದರೂ ತಿಳಿಯದೆ ಹೇಗೆ ಸುಳ್ಳನ್ನು ಹೇಳಲಿ. ಅನೃತಭಾಷಿಯು ಸಮೂಲವಾಗಿ ನಾಶವನ್ನು ಹೊಂದು ತ್ತಾನಲ್ಲವೆ? ಆದುದರಿಂದ ಅಂತಹ ಷೋಡಶಕಲಾಯುಕ್ತ ಪುರುಷನಾವನಾದರಿದ್ದರೆ ನನಗೆ ಆತನ ಸಂಗತಿಯನ್ನರುಹಬೇಕು. ಮತ್ತು ಆತನ ಷೋಡಶಕಲೆಗಳಾವುವು? ಅವನೆಲ್ಲಿರು ತ್ತಾನೆ? ಅಂತಹ ಷೋಡಶಕಲಾಸಂಬಂಧವು ಆತನಿಗೆ ಹೇಗೆ ಕೂಡುತ್ತದೆ? ಎಲ್ಲವನ್ನು ವಿವರವಾಗಿ ತಿಳಿಹಿಸಬೇಕು" ॥ ೧ ॥

**ಮಂ ॥ ತಸ್ಮೈ ಸ ಹೋವಾಚ । ಇಹೈವಾಂತಃ ಶರೀರೇ ಸೋಮ್ಯ ಸ ಪುರುಷೋ ಯಸ್ಮಿನ್ನೇತಾಃ ಷೋಡಶಕಲಾಃ ಪ್ರಭವಂತೀತಿ । ಸ ಈಕ್ಷಾಂಚಕ್ರೇ । ಕಸ್ಮಿನ್ನಹಮುತ್ಕ್ರಾಂತ ಉತ್ಕ್ರಾಂತೋ ಭವಿ ಷ್ಯಾಮಿ । ಕಸ್ಮಿನ್ವಾ ಪ್ರತಿಷ್ಠಿತೇ ಪ್ರತಿಷ್ಠಾಸ್ಯಾಮೀತಿ । ಸ ಪ್ರಾಣಮಸೃ ಜತ ಪ್ರಾಣಾತ್ ಶ್ರದ್ಧಾಂ ಖಂ ವಾಯುರ್ಜ್ಯೋತಿರಾಪಃ ಪೃಥಿವೀಂದ್ರಿ ಯಂ ಮನೋನ್ನಮನ್ನಾದ್ವೀರ್ಯಂ ತಪೋ ಮಂತ್ರಾಃ ಕರ್ಮ ಲೋ ಕಾ ಲೋಕೇಷು ನಾಮ ಚ ॥ ೨ ॥**

ಅ॥ ಸ ಹ=ಪಿಪ್ಪಲಾದರು, ತಸ್ಮೈ=ಹೀಗೆ ಕೇಳಿದ ಸುಕೇಶನಿಗೋಸ್ಕರ, ಸೋಮ್ಯ=ಸೋ ಮಾರ್ಹನಾದ ಸುಕೇಶನೇ! ಯಸ್ಮಿನ್=ಯಾವನಲ್ಲಿ, ಏತಾಃ=ಮೇಲೆ ಹೇಳುವ, ಷೋಡಶಕಲಾಃ ಷೋಡಶ=ಹದಿನಾರು ಸಂಖ್ಯಾಕಗಳಾದ, ಕಲಾಃ=ಜೀವನಿಂದ ಕೂಡಿಕೊಂಡಿದ್ದ ಶರೀರದ ಭಾಗಗಳು, ಪ್ರಭವಂತಿ=ಹುಟ್ಟುತ್ತಾವೋ, ಸಃ ಪುರುಷಃ=ಅಂತಹ ಪುರುಷನು, ಇಹೈವ ಶರೀರೇ= ಈ ಶರೀರದ, ಅಂತಃ=ಒಳಗೆ, (ಅಸ್ತಿ=ಇರುತ್ತಾನೆ), ಇತಿ=ಹೀಗೆ, ಉವಾಚ=ಹೇಳಿದರು. ಸಃ= ಆ ಪುರುಷನು, ಈಕ್ಷಾಂಚಕ್ರೇ=ಕಲೆಗಳನ್ನು ಸೃಷ್ಟಿಸುತ್ತೇನೆಂದು ಆಲೋಚಿಸಿದನು, ಅಹಂ= ನಾನು, ಕಸ್ಮಿನ್=ಯಾವ ಪುರುಷನು, ಉತ್ಕ್ರಾಂತೇ ಸತಿ=ಶರೀರದಿಂದ ಹೊರಟುಹೋಗೋಣ, ಉತ್ಕ್ರಾಂತಃ=ಹೊರಟುಹೋಗುವವನು, ಭವಿಷ್ಯಾಮಿ=ಆಗುವೆನು, ಕಸ್ಮಿನ್ವಾ=ಯಾರು, ಪ್ರತಿ ಷ್ಠಿತೇ ಸತಿ=ಶರೀರವನ್ನು ಪ್ರವೇಶಿಸಲು, ಪ್ರತಿಷ್ಠಾಸ್ಯಾಮಿ=ಪ್ರವೇಶಿಸುವೆನು, ಇತಿ=ಹೀಗೆ ನಿಶ್ಚೈಸಿ, ಸಃ=ಪುರುಷನು, ಪ್ರಾಣಂ=ಜೀವಕಲಾಭಿಮಾನಿಯಾದ ಪ್ರಾಣನನ್ನು, ಪ್ರಾಣಾತ್= ಇಂತಹ ಪ್ರಾಣನನ್ನು ನಿಮಿತ್ತೀಕರಿಸಿಕೊಂಡು, ಶ್ರದ್ಧಾಂ=ಆಸ್ತಿಕ್ಯಾಭಿಮಾನಿಯಾದ ಭಾರತಿ ಯನ್ನು, ಅಸೃಜತ=ಸೃಷ್ಟಿಸಿದನು. ತತಃ=ಅವಳಿಂದ, ಖಂ=ಆಕಾಶವೂ, ವಾಯುಃ=ವಾಯು ವು, ಜ್ಯೋತಿಃ=ಅಗ್ನಿಯು, ಆಪಃ=ಜಲವೂ, ಪೃಥಿವೀ=ಭೂಮಿಯೂ, ಪಂಚಭೂತಾಭಿಮಾನಿ ಗಳೂ, ಇಂದ್ರಿಯಂ=ಸೂರ್ಯಾದಿ ದೇವತೆಗಳೂ, ಮನಃ=ತದಭಿಮಾನಿ ಗರುಡಾದಿ ದೇವತೆ ಗಳೂ, ಅನ್ನಂ=ತದಭಿಮಾನಿ ಸೋಮನೂ, ಅನ್ನಾತ್=ಅನ್ನವನ್ನು ನಿಮಿತ್ತೀಕರಿಸಿಕೊಂಡು, ವೀರ್ಯಂ=ತದಭಿಮಾನಿ ವರುಣನೂ, ತಪಃ=ತದಭಿಮಾನಿ ವಹ್ನಿಯೂ, ಮಂತ್ರಾಃ=ಋಗಾ ದ್ಯಭಿಮಾನಿನಿಯಾದ ಸ್ವಾಹಾದೇವತೆಯೂ, ಕರ್ಮ=ತದಭಿಮಾನಿ ಪುಷ್ಕರನೂ, ಲೋಕಾಃ=

ಗೋಳಕಾಭಿಮಾನಿಯಾದ ಪರ್ಜನ್ಯನೂ, ಲೋಕೇಷು=ಲೋಕಗಳಲ್ಲಿ, ನಾಮ ಚ ದೇವದತ್ತಾದಿ ನಾಮಧೇಯವೂ (ಪುರುಷೇಣ=ಪುರುಷನಿಂದ) ಸೃಷ್ಟಾಃ=ಈ ಕಲೆಗಳು ಸೃಷ್ಟಿಸಲ್ಪಟ್ಟವು.

**ಭಾ ||** ಕರ್ಮೇತಿ ಪುಷ್ಕರಃ ಪ್ರೋಕ್ತ ಉಷಾ ನಾಮಾಭಿಮಾನಿನೀ |
ಲೋಕಾಭಿಮಾನೀ ಪರ್ಜನ್ಯಃ ಸ್ವಾಹಾ ವೈ ಮಂತ್ರದೇವತಾ |
ತಪೋಭಿಮಾನೀ ವಹ್ನಿಶ್ಚ ವರುಣೋ ವೀರ್ಯದೇವತಾ |
ಅನ್ನಸ್ಯ ದೇವತಾ ಸೋಮಃ ಮನೋ ನಾಮಾನಿರುದ್ಧಕಃ |
ಇಂದ್ರಿಯೇಶಾಶ್ಚ ಸೂರ್ಯಾದ್ಯಾಃ ಚಕ್ಷುರಾದ್ಯಭಿಮಾನಿನಃ |
ರುದ್ರೋ ವೀಂದ್ರಃ ಶೇಷಕಾಮೌ ಮನಸಸ್ತ್ವೇವ ದೇವತಾಃ |
ಶ್ರದ್ಧೇತಿ ವಾಯೋಃ ಪತ್ನೀ ಸ್ಯಾತ್ ಸರ್ವೇಷಾಂ ಪ್ರಭವಾಪ್ಯಯಾ |
ತಸ್ಯಾಶ್ಚ ಕಾರಣಂ ಪ್ರಾಣಃ ಸರ್ವೇಷಾಮುತ್ತಮೋತ್ತಮಃ ||
ತಸ್ಯಾಪೀಶಃ ಕಾರಣಂ ಚ ವಾಸುದೇವಃ ಪರೋಽವ್ಯಯಃ |
ನ ತಸ್ಯ ಸದೃಶಃ ಕಶ್ಚಿತ್ಕುತ ಏವೋತ್ತಮೋ ಭವೇತ್ |
ತಂ ಜ್ಞಾತ್ವಾ ಮುಚ್ಯತೇ ಜಂತುರ್ವಿದಿತ್ವೈವಂ ಪರಾತ್ಪರಂ |
- ಇತಿ ತತ್ವವಿವೇಕೇ ||

ಏತಸ್ಮಾಜ್ಜಾಯತೇ ಪ್ರಾಣಃ ಮನಃ ಸರ್ವೇಂದ್ರಿಯಾಣಿ ಚ |
ಖಂ ವಾಯುರ್ಜ್ಯೋತಿರಾಪಃ ಪೃಥಿವೀ ವಿಶ್ವಸ್ಯ ಧಾರಿಣೀ | ಇತಿ
ಮಂತ್ರೋಕ್ತ ಏವ ಕ್ರಮಃ |
ನ ಹೀಂದ್ರಿಯೇಭ್ಯೋ ಮನಃ ಪಶ್ಚಾತ್ "ತತ್ಪ್ರಾಕ್ ಶ್ರುತೇಶ್ಚ"
ಇತಿ ಭಗವದ್ವಚನಂ |

ವಿಷ್ಣೋಃ ಪ್ರಾಣಃ ತತಃ ಶ್ರದ್ಧಾ ತಸ್ಯಾ ರುದ್ರೋ ಮನೋಭಿಧಃ |
ತಸ್ಮಾದಿಂದ್ರಸ್ತ್ವಿಂದ್ರಿಯಾತ್ಮಾ ತಸ್ಯ ಸೋಮೋಽನ್ನ ದೇವತಾ |
ತತಶ್ಚ ವರುಣಃ ಸೃಷ್ಟಃ ತಸ್ಮಾದಗ್ನಿಸ್ತತೋಽವರಃ |
ಆಕಾಶ ದೇವತಾ ವಿಘ್ನಃ ತತೋ ವಾಯೋಃ ಸುತೋ ಮರುತ್ |
ತಸ್ಮಾದಗ್ನಿಃ ಪಾವಕಾಖ್ಯಃ ಪ್ರಥಮೋಽಗ್ನೇಃ ಸುತಸ್ತತಃ |
ತತಃ ಪರ್ಜ್ಜನ್ಯ ಉದ್ಭೂತಃ ಸ್ವಾಹಾಽತೋ ಮಂತ್ರದೇವತಾ |
ಉದಾತ್ಮಕೋ ಬುಧಸ್ತಸ್ಯಾ ಉಷಾನಾಮಾತ್ಮಿಕಾ ತತಃ |
ತತಃ ಶನಿಃ ಪೃಥಿವ್ಯಾತ್ಮಾ ಕರ್ಮಾತ್ಮಾ ಪುಷ್ಕರಸ್ತತಃ |
ಕ್ರಮಾತ್ ಪ್ರತ್ಯವರಾ ಹ್ಯೇತೇ ಮುಕ್ತಾಃ ಸರ್ವಗುಣೈರಪಿ |
ನಿತ್ಯಮುಕ್ತಸ್ತತೋ ವಿಷ್ಣುಃ ಪ್ರಾಣಾದಪ್ಯುತ್ತಮೋತ್ತಮ ಇತಿ ಚ || ೨ ||

**ಅ ||** ಕರ್ಮ=ಕರ್ಮಾಭಿಮಾನಿಯು, ಪುಷ್ಕರ ಇತಿ=ಪುಷ್ಕರ ಎಂತೆಂದು, ಪ್ರೋಕ್ತಃ=ಹೇಳಲ್ಪಟ್ಟದ್ದಾನೆ. ನಾಮಾಭಿಮಾನಿನೀ ನಾಮ=ದೇವದತ್ತಾದಿ ನಾಮಕ್ಕೆ, ಅಭಿಮಾನಿನೀ=ಅಭಿಮಾನಿನಿಯಾದ, ಉಷಾ=ಉಷೆಯು, ಲೋಕಾಭಿಮಾನೀ ಲೋಕ=ಗೋಳಕಗಳಿಗೆ ಅಭಿಮಾನೀ=ಅಭಿಮಾನಿಯು, ಪರ್ಜನ್ಯಃ=ಪರ್ಜನ್ಯನು. ಮಂತ್ರದೇವತಾ=ಮಂತ್ರಾಭಿಮಾನಿನಿಯು, ಸ್ವಾಹಾ

ವೈ=ಅಗ್ನಿಭಾರ್ಯೆಯಾದ ಸ್ವಾಹೆಯು, ತಪೋಽಭಿಮಾನೀ ತಪಃ=ತಪಸ್ಸಿಗೆ, ಅಭಿಮಾನೀ=
ಅಭಿಮಾನಿಯು. ವಹ್ನಿಶ್ಚ=ವಹ್ನಿಯು, ವೀರ್ಯದೇವತಾ=ವೀರ್ಯಾಭಿಮಾನಿಯು, ವರು
ಣಃ=ವರುಣನು. ಅನ್ನಸ್ಯ=ಅನ್ನಕ್ಕೆ, ದೇವತಾ=ಅಧಿಪತಿಯು, ಸೋಮಃ=ಸೋಮ
ನು, ಮನೋನಾಮಾ=ಮನೋಧಿಪತಿಯು, ಅನಿರುದ್ಧಕಃ=ಅನಿರುದ್ಧನು. ಇಂದ್ರಿ
ಯೇಶಾಃ=ಇಂದ್ರಿಯಾಧಿಪತಿಗಳಾದ, ಸೂರ್ಯಾದ್ಯಾಶ್ಚ=ಸೂರ್ಯಾದಿಗಳು, ಚಕ್ಷುರಾದ್ಯಭಿ
ಮಾನಿನಃ=ಚಕ್ಷುರಾದ್ಯಧಿಪತಿಗಳು. ರುದ್ರಃ=ಮಹೇಶನು, ವೀಂದ್ರಃ=ಗರುಡನು, ಶೇಷ
ಕಾಮೌ ಶೇಷ=ಶೇಷನು, ಕಾಮೌ=ಮನ್ಮಥನು ಇವರಿಬ್ಬರು, ಮನಸಸ್ತ್ವೇವ=ಮನಸ್ಸಿಗೆ,
ದೇವತಾಃ=ಅಧಿಪತಿಗಳು. ಸರ್ವೇಷಾಂ=ಸಮಸ್ತರ, ಪ್ರಭವಾಪ್ಯಯಾ=ಉತ್ಪತ್ತಿನಾಶಕಾರಣ
ಳಾದ, ಶ್ರದ್ಧೇತಿ=ಶ್ರದ್ಧಾ ಎಂಬವಳು, ವಾಯೋಃ=ಮುಖ್ಯಪ್ರಾಣನ, ಪತ್ನೀ=ಹೆಂಡತಿಯು,
ಸ್ಯಾತ್=ಆಗಿರುತ್ತಾಳೆ. ತಸ್ಯಾಶ್ಚ=ಅವಳಿಗೂ, ಕಾರಣಂ=ನಿಮಿತ್ತನು, ಸರ್ವೇಷಾಂ=ಸಮಸ್ತ
ರಲ್ಲಿಯೂ, ಉತ್ತಮೋತ್ತಮಃ=ಅತ್ಯುತ್ತಮನಾದ, ಪ್ರಾಣಃ=ಮುಖ್ಯಪ್ರಾಣನು. ತಸ್ಯಾಪಿ=
ಅವನಿಗೂ, ಕಾರಣಂ=ನಿಮಿತ್ತನು, ಪರಃ=ಸರ್ವೋತ್ತಮನಾದ, ಅವ್ಯಯಃ=ನಾಶರಹಿತನಾದ,
ಈಶಃ=ಐಶ್ವರ್ಯವಂತನಾದ, ವಾಸುದೇವಃ=ಶ್ರೀ ಪರಮಾತ್ಮನು. ತಸ್ಯ=ಅವನಿಗೆ, ಸದೃಶಃ=
ಸಮನು, ಕಶ್ಚಿತ್=ಯಾವನೊಬ್ಬನೂ, ನ=ಇರುವುದಿಲ್ಲ. ಉತ್ತಮಃ=ಅವನಿಂದ ಶ್ರೇಷ್ಠನು,
ಕುತ ಏವ=ಯಾವುದರಿಂದ, ಭವೇತ್=ಆದಾನು. ಜಂತುಃ=ಮನುಷ್ಯನು, ತಂ=ಆ ಪರಮಾ
ತ್ಮನನ್ನು, ಜ್ಞಾತ್ವಾ=ತಿಳಿದು, ಪರಾತ್ಪರಂ=ಉತ್ತಮೋತ್ತಮನನ್ನಾಗಿ, ಏವಂ=ವಿಶೇಷವಾಗಿ,
ವಿದಿತ್ವಾ=ತಿಳಿದು, ಮುಚ್ಯತೇ=ಮುಕ್ತಿಯನ್ನು ಹೊಂದುತ್ತಾನೆ. ಇತಿ=ಹೀಗೆ, ತತ್ತ್ವವಿವೇಕೇ=
ತತ್ತ್ವವಿವೇಕ ಗ್ರಂಥದಲ್ಲಿ (ಹೇಳಲ್ಪಟ್ಟದೆ). ಏತಸ್ಮಾತ್=ಈ ಪರಮಾತ್ಮನಿಂದ, ಪ್ರಾಣಃ=ಮುಖ್ಯ
ಪ್ರಾಣನು, ಜಾಯತೇ=ಹುಟ್ಟುತ್ತಾನೆ. ಮನಃ=ಮನಸ್ಸು, ಸರ್ವೇಂದ್ರಿಯಾಣಿ ಚ=ಎಲ್ಲಾ
ಇಂದ್ರಿಯಾಭಿಮಾನಿಗಳೂ, ಖಂ=ಆಕಾಶಾಭಿಮಾನಿಯೂ, ವಾಯುಃ=ಭೂತವಾಯುವು,
ಜ್ಯೋತಿಃ=ಅಗ್ನಿಯು, ಆಪಃ=ಜಲಾಭಿಮಾನಿಯೂ, ವಿಶ್ವಸ್ಯ=ಸಮಸ್ತಕ್ಕೂ, ಧಾರಿಣೀ=ಧಾರಕ
ವಾದ, ಪೃಥಿವೀ=ಭೂಮಿಯೂ, (ಕ್ರಮದಿಂದ ಉತ್ಪನ್ನಗಳಾದುವು). ಇತಿ=ಈ ಪ್ರಕಾರವಾದ,
ಮಂತ್ರೋಕ್ತ ಏವ=ಮಂತ್ರದಲ್ಲಿ ಹೇಳಲ್ಪಟ್ಟದ್ದೇ, ಕ್ರಮಃ=ಕ್ರಮವು. ಇಂದ್ರಿಯೇಭ್ಯಃ=ಇಂದ್ರಿ
ಯಗಳಿಂದ, ಮನಃ=ಮನಸ್ಸು, ಪಶ್ಚಾತ್=ನೀಚವಾದುದು, ನ=ಅಲ್ಲ. ತತ್=ಆ ಮನಸ್ಸು,
ಪ್ರಾಕ್=ಪ್ರಾಥಮಿಕವು. ಶ್ರುತೇಶ್ಚ='ಮನಃ ಸರ್ವೇಂದ್ರಿಯಾಣಿ ಚ'=ಆ ರೀತಿಯಾಗಿ ಶ್ರುತಿ
ಯಿರುವುದರಿಂದಲೂ, ಇತಿ=ಹೀಗೆ, ಭಗವದ್ವಚನಂ=ವೇದವ್ಯಾಸರ ಮಾತು. ವಿಷ್ಣೋಃ=ಪರ
ಮಾತ್ಮನಿಂದ, ಪ್ರಾಣಃ=ಮುಖ್ಯಪ್ರಾಣನು, ಸೃಷ್ಟಿಸಲ್ಪಟ್ಟನು. ತತಃ=ಪ್ರಾಣನಿಂದ, ಶ್ರದ್ಧಾ=
ಭಾರತಿಯು, ತಸ್ಯಾಃ=ಅವಳಿಂದ, ಮನೋಭಿಧಃ=ಮನೋನಿಯಾಮಕನಾದ, ರುದ್ರಃ=
ರುದ್ರನು, ತಸ್ಮಾತ್=ಆತನಿಂದ, ಇಂದ್ರಿಯಾತ್ಮಾ=ಇಂದ್ರಿಯಾಭಿಮಾನಿಯಾದ, ಇಂದ್ರಸ್ತು=
ಮಹೇಂದ್ರನು, ತಸ್ಯ=ಆ ಇಂದ್ರನಿಗೆ, ಅನ್ನದೇವತಾ=ಅನ್ನಾಭಿಮಾನಿಯಾದ, ಸೋಮಃ=
ಚಂದ್ರನು, ತತಶ್ಚ=ಅವನಿಂದ, ವರುಣಃ=ಜಲಾಭಿಮಾನಿಯು, ತಸ್ಮಾತ್=ಅವನಿಂದ, ಅಗ್ನಿಃ=
ಅಗ್ನಿಯು, ತತಃ = ಅವನಿಂದ, ಅವರಃ = ನೀಚನಾದ, ಆಕಾಶದೇವತಾ = ಆಕಾಶಾಭಿಮಾನಿ
ಯಾದ, ವಿಘ್ನಃ=ಗಣಪತಿಯು, ತತಃ=ಅವನಿಂದ, ವಾಯೋಃ ಸುತಃ=ವಾಯುಪುತ್ರನಾದ,
ಮರುತ್=ಭೂತವಾಯುವು, ತಸ್ಮಾತ್=ಅವನಿಂದ, ತತಃ=ಅನಂತರ, ಅಗ್ನೇಃ=ಅಗ್ನಿಯ,
ಸುತಃ=ಪುತ್ರನಾದ, ಪ್ರಥಮಃ=ಮೊದಲನೆಯವನಾದ, ಪಾವಕಾಖ್ಯಃ=ಪಾವಕನೆಂಬ ಹೆಸರಿನ,
ಅಗ್ನಿಃ=ಅಗ್ನಿಯು, ತತಃ=ಅವನಿಂದ, ಪರ್ಜನ್ಯಃ=ಲೋಕಾಭಿಮಾನಿಯು, ಉದ್ಭೂತಃ=

ಹುಟ್ಟಿದನು. ಅತಃ=ಇವನಿಂದ, ಮಂತ್ರದೇವತಾ=ಮಂತ್ರಾಭಿಮಾನಿಯಾದ, ಸ್ವಾಹಾ= ಸ್ವಾಹಾಖ್ಯದೇವತೆಯು, ತಸ್ಯಾಃ = ಆ ದೇವತೆಯಿಂದ, ಉದಾತ್ಮಕಃ = ಜಲಾತ್ಮಕನಾದ, ಬುಧಃ=ಬುಧನು, ತತಃ=ಅವನಿಂದ, ನಾಮಾತ್ಮಿಕಾ=ನಾಮಾಭಿಮಾನಿಯಾದ, ಉಷಾ= ಉಷಾ ಎಂಬ ದೇವತೆಯು, ತತಃ=ಆ ದೇವತೆಯಿಂದ, ಪೃಥಿವ್ಯಾತ್ಮಾ=ಪೃಥಿವ್ಯಭಿಮಾನಿಯಾದ, ಶನಿಃ=ಶನಿಯು, ತತಃ=ಶನಿಯಿಂದ, ಕರ್ಮಾತ್ಮಾ=ಕರ್ಮಾಭಿಮಾನಿಯಾದ, ಪುಷ್ಕರಃ=ಪುಷ್ಕರಾಖ್ಯ ದೇವತೆಯು, ಕ್ರಮಾತ್=ಕ್ರಮದಿಂದ, ಮುಕ್ತಾಃ ಏತೇ ಹಿ=ಇವರು ಮುಕ್ತರಾದವರೂ ಕೂಡ, ಸರ್ವಗುಣೈರಪಿ=ನಿಖಿಲ ಗುಣಗಳಿಂದಲೂ, ಪ್ರತ್ಯವರಾಃ=ನಿಕೃಷ್ಟರಾದವರು. ನಿತ್ಯಮುಕ್ತಃ=ಸಂಸಾರಸಂಬಂಧವೇ ಇಲ್ಲದ, ವಿಷ್ಣುಃ=ಶ್ರೀ ಪರಮಾತ್ಮನು, ತತಃ=ನಿಖಿಲ ದೇವತೆಗಳಿಂದಲೂ, ಪ್ರಾಣಾದಪಿ=ಮುಖ್ಯಪ್ರಾಣನಿಂದಲೂ, ಉತ್ತಮೋತ್ತಮಃ = ಅತ್ಯುತ್ತಮನು. ಇತಿ ಚ=ಹೀಗೂ (ಹೇಳಿಯದೆ).

ತಾ ॥ ಹೀಗೆ ಕೇಳಿದ ಭಾರದ್ವಾಜನಿಗೆ ಪಿಪ್ಪಲಾದರು ಹೀಗಂದರು. "ಎಲೈ ಭಾರದ್ವಾಜನೇ! ನೀನು ಕೇಳಿದ ಷೋಡಶಕಲಾ ಪುರುಷನು ಈ ಎಲ್ಲಾ ಪ್ರಾಣಿಗಳ ಶರೀರದೊಳಗೆ ನಿಯಾಮಕನಾಗಿರುತ್ತಾನೆ. ಕಲ್ಪಾದಿಯಲ್ಲಿ ಪರಮಾತ್ಮನು ತನ್ನನ್ನು ಭಕ್ತಿಜ್ಞಾನಾದಿಗಳಿಂದ ವಶೀಕರಿಸಿಕೊಳ್ಳತಕ್ಕವನಾರೆಂದೂ, ಮತ್ತು ತಾನು ಯಾರನ್ನು ನಿಮಿತ್ತೀಕರಿಸಿಕೊಂಡು ನಾನೀ ಕಲೆಗಳನ್ನು ಸೃಷ್ಟಿಮಾಡಲಿ ಎಂದೂ ಯೋಚಿಸಿ ಅದರಲ್ಲಿ ಸಮರ್ಥನು ಮುಖ್ಯಪ್ರಾಣನೆಂದು ನಿರ್ಧರಿಸಿ, ಜೀವಕಲಾಭಿಮಾನಿಯಾದ (೧) ಮುಖ್ಯಪ್ರಾಣನನ್ನೂ, ಅವನನ್ನು ನಿಮಿತ್ತೀಕರಿಸಿಕೊಂಡು ಜೀವರ ಆಸ್ತಿಕ್ಯಬುದ್ಧ್ಯಭಿಮಾನಿನಿಯಾದ, (೨) ಭಾರತಿಯನ್ನೂ ಸೃಷ್ಟಿಮಾಡಿದನು. ಹಾಗೇ (೩) ಮನೋಭಿಮಾನಿಗಳಾದ ರುದ್ರ-ಗರುಡ-ಶೇಷ-ಮನ್ಮಥ-ಅನಿರುದ್ಧರು, (೪) ಇಂದ್ರಿಯಾಭಿಮಾನಿಗಳಾದ, ಇಂದ್ರ-ಸೂರ್ಯಾದಿಗಳು, (೫) ಅನ್ನಾಭಿಮಾನಿಯಾದ ಸೋಮನು, (೬) ವೀರ್ಯಾಭಿಮಾನಿಯಾದ ವರುಣನು, (೭) ತಪೋಭಿಮಾನಿಯಾದ ಅಗ್ನಿಯು, (೮) ಆಕಾಶಾಭಿಮಾನಿಯಾದ ಗಣಪತಿಯು, (೯) ಭೂತವಾಯುದೇವತೆಯಾದ ಮರುತ್ತು, ಮತ್ತು (೧೦) ತೇಜೋಭಿಮಾನಿಯಾದ ಪಾವಕಾಗ್ನಿಯೂ, ಇಂದ್ರಿಯಾಶ್ರಯಗಳಾದ (೧೧) ಗೋಳಕಾಭಿಮಾನಿಯಾದ ಪರ್ಜನ್ಯನೂ, (೧೨) ಋಗಾದ್ಯಭಿಮಾನಿ ಸ್ವಾಹಾದೇವತೆಯೂ, (೧೩) ಜಲಾಭಿಮಾನಿಯಾದ ಬುಧನೂ, ದೇವದತ್ತಾದಿ (೧೪) ನಾಮಾಭಿಮಾನಿಯಾದ ಉಷಾದೇವತೆಯೂ, (೧೫) ಪೃಥಿವ್ಯಭಿಮಾನಿ ಶನಿಯೂ, (೧೬) ಕರ್ಮಾಭಿಮಾನಿಯಾದ ಪುಷ್ಕರನೂ, ಹೀಗೆ ಹದಿನಾರು ಕಲೆಗಳನ್ನೂ, ತದಭಿಮಾನಿ ದೇವತೆಗಳನ್ನೂ ಸೃಷ್ಟಿಮಾಡಿದನು. ಇದರಲ್ಲಿ ಪೂರ್ವಪೂರ್ವೋಕ್ತರನ್ನು ನಿಮಿತ್ತೀಕರಿಸಿ ಉತ್ತರೋತ್ತರೋಕ್ತರನ್ನು ಸೃಷ್ಟಿಸಿದನು. ಇವರೆಲ್ಲಾ ಸಂಸಾರಾವಸ್ಥೆಯಲ್ಲಿಯೂ, ಮುಕ್ತಿಯಲ್ಲಿಯೂ ಪೂರ್ವಪೂರ್ವರಿಂದ ಉತ್ತರೋತ್ತರರು ಗುಣಾದಿಗಳಲ್ಲಿ ಅವರ (ನೀಚ)ರಿರುತ್ತಾರೆ. ಈ ಪ್ರಕಾರ ಷೋಡಶ ಕಲೆಗಳನ್ನು ಸೃಷ್ಟಿಸಿ ಅವುಗಳಿಂದ ತತ್ತತ್ಕಾರ್ಯಗಳನ್ನು ಮಾಡಿಸುತ್ತಾ ಸರ್ವೋತ್ತಮನಾದ ಪರಮಾತ್ಮನು ಆ ಕಲೆಗಳೊಡನೆ ಪ್ರತಿ ಶರೀರದಲ್ಲಿಯೂ ಇರುತ್ತಾನೆ."

ಇಲ್ಲಿ ಮಂತ್ರದಲ್ಲಿ ಹದಿನಾರು ಕಲೆಗಳ ಉದ್ದೇಶವನ್ನು ಮಾತ್ರಮಾಡಿರುತ್ತದೆ. ಅವುಗಳ ಉಚ್ಚನೀಚಭಾವವನ್ನು "ವಿಷ್ಣೋಃ ಪ್ರಾಣಃ ತತಃ ಶ್ರದ್ಧಾ" ಎಂಬ ಭಾಷ್ಯರೀತ್ಯಾನೇ ತಿಳಿಯತಕ್ಕದು ಅದೇರೀತಿಯಾಗಿ ಮೇಲೆ ವರ್ಣಿಸಲ್ಪಟ್ಟಿತು. ॥ ೨ ॥

**ಮಂ ॥ ಯಥೇಮಾ ನದ್ಯಃ ಸ್ಯಂದಮಾನಾಃ ಸಮುದ್ರಾಯಣಾಃ ಸಮುದ್ರಂ ಪ್ರಾಪ್ಯಾಸ್ತಂ ಗಚ್ಛಂತಿ ಭಿದ್ಯೇತೇ ತಾಸಾಂ ನಾಮರೂಪೇ ಸಮುದ್ರ ಇತ್ಯೇವಂ ಪ್ರೋಚ್ಯತೇ ಏವಮೇವಾಸ್ಯ ಪರಿದ್ರಷ್ಟುರಿಮಾಃ ಷೋಡಶಕಲಾಃ ಪುರುಷಾಯಣಾಃ ಪುರುಷಂ ಪ್ರಾಪ್ಯಾಸ್ತಂ ಗಚ್ಛಂತಿ ಭಿದ್ಯೇತೇ ಚಾಸಾಂ ನಾಮರೂಪೇ ಪುರುಷ ಇತ್ಯೇವಂ ಪ್ರೋಚ್ಯತೇ । ಸ ಏಷೋಽಕಲೋಽಮೃತೋ ಭವತಿ ॥ ೩ ॥**

ಅ ॥ ಇಮಾಃ=ಪ್ರಸಿದ್ಧಗಳಾದ, ಸ್ಯಂದಮಾನಾಃ=ಹರಿಯುವ, ಸಮುದ್ರಾಯಣಾಃ=ಸಮುದ್ರವನ್ನು ಸೇರುವ, ನದ್ಯಃ=ನದಿಗಳು, ಸಮುದ್ರಂ=ಕಡಲನ್ನು, ಪ್ರಾಪ್ಯ=ಹೊಂದಿ, ಅಸ್ತಂ=ಅದರ್ಶನವನ್ನು, ಯಥಾ=ಹೇಗೆ, ಗಚ್ಛಂತಿ=ಹೊಂದುತ್ತಾವೋ, ಸಮುದ್ರೇ=ಸಮುದ್ರದಲ್ಲಿದ್ದ, ತಾಸಾಂ=ಆ ನದಿಗಳ, ನಾಮರೂಪೇ-ನಾಮ=ಗಂಗಾದಿ ನಾಮಗಳೂ, ರೂಪೇ=ಶುಕ್ಲಾದಿರೂಪಗಳೂ, ಭಿದ್ಯೇತೇ=ಬೇರೆಬೇರೆಯಾಗಿರುತ್ತವೆ. ಇತ್ಯೇವಂ=ಈ ಪ್ರಕಾರವಾಗಿ, ಯಥಾ ಪ್ರೋಚ್ಯತೇ=ವಿದ್ವಾಂಸರಿಂದ ಹೇಳಲ್ಪಡುತ್ತದೆ. ಏವಮೇವ=ಹೀಗೆಯೇ, ಪರಿದ್ರಷ್ಟುಃ=ಜ್ಞಾನಿಯಾದ, ಅಸ್ಯ=ಜೀವನ (ಸಂಬಂಧಿಗಳಾದ), ಇಮಾಃ ಷೋಡಶಕಲಾಃ=ಈ (ಪ್ರಾಣಾದಿ) ಹದಿನಾರು ಕಲೆಗಳು, ಪುರುಷಾಯಣಾಃ=ಪುರುಷಾಶ್ರಿತಗಳಾಗಿ, ಪುರುಷಂ=ಪರಮಾತ್ಮನನ್ನು, ಪ್ರಾಪ್ಯ=ಹೊಂದಿ, ಅಸ್ತಂ=ಅದರ್ಶನವನ್ನು, ಗಚ್ಛಂತಿ=ಹೊಂದುತ್ತವೆ. ಪುರುಷೇ=ಪರಮಾತ್ಮನಲ್ಲಿದ್ದ, ಆಸಾಂ=ಈ ಪ್ರಾಣಾದಿಕಲೆಗಳ, ನಾಮರೂಪೇ=ನಾಮರೂಪಗಳು, ಭಿದ್ಯೇತೇ ಚ=ವಿವಿಕ್ತವಾಗಿರುತ್ತವೆ. ಇತ್ಯೇವಂ=ಹೀಗೆಯೇ, ಪ್ರೋಚ್ಯತೇ=ಜ್ಞಾನಿಗಳಿಂದ ಹೇಳಲ್ಪಡುತ್ತದೆ. ಸ ಏಷಃ=ಈ ಜೀವನು, ಅಕಲಃ=ನಷ್ಟವಾದ ಅಚೇತನ ಕಲೆಗಳುಳ್ಳವನು, ಅಮೃತಃ=ಮುಕ್ತನು, ಭವತಿ=ಆಗುತ್ತಾನೆ.

ಭಾ ॥ ಸಮುದ್ರೇ ಇತ್ಯೇವಂ ಪ್ರೋಚ್ಯತೇ । ಪುರುಷೇ ಇತ್ಯೇವಂ ಪ್ರೋಚ್ಯತೇ ।
ಭಿದ್ಯೇತೇ ತಾಸಾಂ ನಾಮ ರೂಪೇ ।
ಭಿದ್ಯೇತೇ ಚಾಸಾಂ ನಾಮರೂಪೇ ಇತ್ಯುಕ್ತತ್ವಾತ್ ।
ಅಜ್ಞೈರನವಗತಾನ್ಯಪಿ ಸಮುದ್ರೇ ಸ್ಥಿತಾನಾಂ ನದೀನಾಂ
ವಿಷ್ಣೌ ಸ್ಥಿತಾನಾಂ ಮುಕ್ತಾನಾಂ ಚ ಭಿನ್ನಾನ್ಯೇವ ನಾಮರೂಪಾಣಿ
ಸಂತ್ಯೇವೇತ್ಯರ್ಥಃ ॥
ನ ಚ ಭೇದಶಬ್ದೋ ನಾಶೇ ಪ್ರಯುಜ್ಯಮಾನಃ ಕ್ವಾಪಿ ದೃಷ್ಟಃ ।
ಘಟಾದಾವಪಿ ಬಹು ಭಾವ ಏವ ಭೇದಶಬ್ದಃ ಪ್ರಯುಜ್ಯತೇ ।

ನಾಶಸ್ತ್ವರ್ಥತ ಏವಾವಗಮ್ಯತೇ ।
ನ ಚಾತ್ರಾರ್ಥತೋಽಪಿ ನಾಶೋಽವಗಮ್ಯತೇ ।
ನ ಹಿ ನಾಮಾನಿ ರೂಪಾಣಿ ಚ ಕಪಾಲವದ್ಬಹುಧಾ ಭೂತಾನಿ ತಿಷ್ಠಂತಿ।
ಅತೋ ಭಿದ್ಯೇತೇ ಇತಿ ಪೃಥಕ್ತ್ವಮೇವೋಚ್ಯತೇ ।
ಅರಾ ಇವ ರಥನಾಭೌ ಕಲಾ ಯಸ್ಮಿನ್ ಪ್ರತಿಷ್ಠಿತಾಃ ಇತಿ
ವಾಕ್ಯಶೇಷಾಚ್ಚ ।

ಅತಃ ಪುರುಷೇ ಭಿನ್ನಾನಿ ನಾಮರೂಪಾಣಿ ಪ್ರತಿಷ್ಠಿತಾನೀತ್ಯೇವಾರ್ಥಃ।
ಅಸ್ತಗಮನಂ ತ್ವಾದಿತ್ಯವದಜ್ಞಾನಾಮವಿಜ್ಞೇಯತ್ವಮೇವ।
"ಪ್ರಾಣಾದಯಃ ಕಲಾ ಯಸ್ಮಿನ್ ಮುಕ್ತಾ ನಿತ್ಯಂ ಪ್ರತಿಷ್ಠಿತಾಃ।
ಪೃಥಕ್ ಪೃಥಕ್ ನಾಮರೂಪೈರ್ನಮಸ್ತಸ್ಮೈ ಪರಾಯ ತೇ।"
ಇತಿ ಸತ್ತತ್ವೇ। ನಾಮರೂಪಾದ್ವಿಮುಕ್ತ ಇತ್ಯನೇನಾಪಿ ನಾಮರೂಪಾ
ಮುಕ್ತತ್ವಮುಚ್ಯತೇ।
ವಿಪ್ರಿಯ ಇತ್ಯಾದಿವತ್ ನಾಮರೂಪೇ ಅವಿಹಾಯ ಇತಿ ಚ ಪೂರ್ವತ್ರ।
ಅನಂತಂ ವೈ ನಾಮ ಅನಂತಾ ವೈ ವಿಶ್ವೇದೇವಾಃ ಇತಿ
ನಾಮರೂಪಯೋರನಂತತ್ವಂ ಹಿ ಶ್ರುತಿರ್ವಕ್ತಿ।
ಯತ್ರ ಪೂರ್ವೇ ಸಾಧ್ಯಾಃ ಸಂತಿ ದೇವಾಃ।
ಸ ತತ್ರ ಪರ್ಯೇತಿ ಜಕ್ಷನ್ ಕ್ರೀಡನ್ ರಮಮಾಣಃ।
ಸೋಽಶ್ನುತೇ ಸರ್ವಾನ್ ಕಾಮಾನ್ ಸಹ ಬ್ರಹ್ಮಣಾ ವಿಪಶ್ಚಿತಾ।
ಋಚಾಂ ತ್ವಃ ಪೋಷಮಾಸ್ತೇ ಪುಪುಷ್ವಾನ್ ಗಾಯತ್ರಂ ತ್ವೋ
ಗಾಯತಿ ಶಕ್ವರೀಷ್ವಿತ್ಯಾದೇಶ್ಚ।
ಅತಃ ಸರ್ವಮುಕ್ತೇಭ್ಯೋಽಪ್ಯುತ್ತಮೋತ್ತಮಃ ಪರಿಪೂರ್ಣೋ
ನಾರಾಯಣ ಇತಿ ಸಿದ್ಧಂ ॥ ೩ ॥

ಅ ॥ ಸಮುದ್ರೇ ಇತ್ಯೇವಂ ಪ್ರೋಚ್ಯತೇ=ಸಮುದ್ರದಲ್ಲಿದ್ದವುಗಳೆಂದೇ ಹೇಳಲ್ಪಡುತ್ತದೆ. ಪುರುಷೇ ಇತ್ಯೇವಂ ಪ್ರೋಚ್ಯತೇ=ಪುರುಷನಲ್ಲಿದ್ದವುಗಳೆಂದೇ ಹೇಳಲ್ಪಡುತ್ತದೆ. ಭಿದ್ಯೇತೇ ತಾಸಾಂ ನಾಮರೂಪೇ=ನದಿಗಳ ನಾಮರೂಪಗಳು ಪ್ರತ್ಯೇಕವಾಗಿಯೇ ಇರುತ್ತವೆ. ಭಿದ್ಯೇತೇ ಚಾಸಾಂ ನಾಮರೂಪೇ=ಕಲೆಗಳ ನಾಮರೂಪಗಳು ಪ್ರತ್ಯೇಕವಾಗಿಯೇ ಇರುತ್ತವೆ. ಇತಿ=ಹೀಗೆ, ಉಕ್ತತ್ವಾತ್=ಹೇಳಿರುವುದರಿಂದ, ಅಜ್ಞೈಃ=ಮಂದರಿಂದ, ಅನವಗತಾನ್ಯಪಿ=ತಿಳಿಯಲ್ಪಡದೆ ಇದ್ದರೂ, ಸಮುದ್ರೇ=ಸಮುದ್ರದಲ್ಲಿ, ಸ್ಥಿತಾನಾಂ=ಇರುವ, ನದೀನಾಂ=ನದಿಗಳ, ವಿಷ್ಣೌ=ಪರಮಾತ್ಮನಲ್ಲಿ, ಸ್ಥಿತಾನಾಂ=ಇದ್ದ, ಮುಕ್ತಾನಾಂ ಚ=ಮುಕ್ತರ, ಭಿನ್ನಾನ್ಯೇವ=ಬೇರೆಬೇರೆಯೇ ಆಗಿರುವ, ನಾಮರೂಪಾಣಿ=ನಾಮರೂಪಗಳು, ಸಂತ್ಯೇವ=ಇದ್ದೇ ಇರುತ್ತವೆ. ಇತ್ಯರ್ಥಃ=ಈ ಅಭಿಪ್ರಾಯ. ಭೇದ ಶಬ್ದಃ=ಭೇದವೆಂಬ ಶಬ್ದವು, ನಾಶೇ=ನಾಶದಲ್ಲಿ, ಪ್ರಯುಜ್ಯಮಾನಃ=ಪ್ರಯೋಗಿಸಲ್ಪಟ್ಟದ್ದು, ಕ್ವಾಪಿ=ಎಲ್ಲಿಯೂ, ನ ಚ ದೃಷ್ಟಃ=ಕಾಣಲ್ಪಡಲಿಲ್ಲ. ಘಟಾದಾವಪಿ=ಘಟಪಟಾದಿಗಳಲ್ಲಿಯೂ, ಬಹು ಭಾವ ಏವ=ಅವಯವ ವಿಭಾಗದಲ್ಲಿಯೇ, ಭೇದಶಬ್ದಃ=ಭೇದಶಬ್ದವು, ಪ್ರಯುಜ್ಯತೇ=ಪ್ರಯೋಗಿಸಲ್ಪಡುತ್ತದೆ. ನಾಶಸ್ತು=ನಾಶವಾದರೂ, ಅರ್ಥತ ಏವ=ಅರ್ಥಾಪತ್ತಿಯಿಂದಲೇ, ಅವಗಮ್ಯತೇ=ತಿಳಿಯಲ್ಪಡುತ್ತದೆ. ಅತ್ರ=ಇಲ್ಲಿ, ಅರ್ಥತೋಽಪಿ=ಅರ್ಥಾಪತ್ತಿಯಿಂದಲೂ, ನಾಶಃ=ನಾಶವು, ನ ಚಾವಗಮ್ಯತೇ=ತಿಳಿಯಲ್ಪಡುವುದಿಲ್ಲ. ನಾಮಾನಿ=ದೇವದತ್ತಾದಿನಾಮಗಳು, ರೂಪಾಣಿ ಚ=ಶುಕ್ಲಾದಿರೂಪಗಳು ಕಪಾಲವತ್=ಕಪಾಲದಂತೆ, ಬಹುಧಾಭೂತಾನಿ=ಅನೇಕಪ್ರಕಾರಗಳಾಗಿ, ನ ಹಿ ತಿಷ್ಠಂತಿ=ಇರುವುದಿಲ್ಲ. ಅತಃ=ಆದಕಾರಣ, ಭಿದ್ಯೇತೇ ಇತಿ=ಭಿದ್ಯೇತೇ ಎಂಬೀಪದದಿಂದ, ಪೃಥಕ್ತ್ವಮೇವ=ಬೇರೆ ಬೇರೆಯಾಗಿರುವಿಕೆಯೇ, ಉಚ್ಯತೇ=ಹೇಳಲ್ಪಡುತ್ತದೆ. ರಥನಾಭೌ=ಉಜಿಡೆಯಲ್ಲಿ,

ಅರಾ ಇವ=ಅಚ್ಚಿಮರಗಳಂತೆ, ಯಸ್ಮಿನ್=ಯಾವಾತನಲ್ಲಿ, ಕಲಾಃ=ಕಲೆಗಳು, ಪ್ರತಿಷ್ಠಿತಾಃ=ಪ್ರತಿಷ್ಠಿಸಲ್ಪಟ್ಟವೆಯೋ, ಇತಿ=ಈ ಪ್ರಕಾರವಾದ, ವಾಕ್ಯಶೇಷಾಚ್ಚ=ಶಿಷ್ಟವಾಕ್ಯದಿಂದಲೂ, ಅತಃ=ಆದುದರಿಂದ, ಪುರುಷೇ=ಪರಮಾತ್ಮನಲ್ಲಿ, ಭಿನ್ನಾನಿ ಭಿನ್ನಾನಿ=ಬೇರೆಬೇರೆಯಾದ, ನಾಮರೂಪಾಣಿ=ನಾಮರೂಪಗಳು, ಪ್ರತಿಷ್ಠಿತಾನಿ=ಪ್ರತಿಷ್ಠಿಸಿಕೊಳ್ಳಲ್ಪಟ್ಟವೆ. ಇತ್ಯೇವ=ಹೀಗೆಯೇ, ಅರ್ಥಃ=ಅಭಿಪ್ರಾಯವು. ಅಸ್ತಗಮನಂ ತು=ಅಸ್ತಮಾನವನ್ನು ಹೊಂದುವಿಕೆಯೆಂಬುದು, ಆದಿತ್ಯವತ್=ಸೂರ್ಯನಂತೆ, ಅಜ್ಞಾನಾಂ=ಮಂದರಿಗೆ, ಅವಿಜ್ಞೇಯತ್ವಮೇವ=ತಿಳಿಯದೆ ಇರುವಿಕೆಯೇ. ಮುಕ್ತಾಃ=ಮುಕ್ತಿಯನ್ನು ಹೊಂದಿದ, ಪ್ರಾಣಾದಯಃ=ಮುಖ್ಯಪ್ರಾಣನೇ ಮೊದಲಾಗಿಯುಳ್ಳ, ಕಲಾಃ=ಷೋಡಶಕಲಾಭಿಮಾನಿಗಳು, ನಾಮರೂಪೈಃ=ನಾಮರೂಪಗಳಿಂದ, ಪೃಥಕ್ ಪೃಥಕ್=ಬೇರೆ ಬೇರೆಯಾಗಿ, ಯಸ್ಮಿನ್=ಯಾವಪರಮಾತ್ಮನಲ್ಲಿ, ನಿತ್ಯಂ=ನಿರಂತರವೂ, ಪ್ರತಿಷ್ಠಿತಾಃ=ಪ್ರತಿಷ್ಠಿಸಲ್ಪಟ್ಟದ್ದಾರೋ, ತಸ್ಮೈ=ಆ, ಪರಾಯ=ಶ್ರೇಷ್ಠನಾದ, ತೇ=ನಿನಗೋಸ್ಕರ, ನಮಃ=ನಮಸ್ಕಾರವು. ಇತಿ=ಹೀಗೆ, ಸತ್ತತ್ವೇ=ಸತ್ತತ್ವನಾಮಕ ಗ್ರಂಥದಲ್ಲಿ (ಹೇಳಲ್ಪಟ್ಟದೆ.) ನಾಮರೂಪಾತ್=ನಾಮರೂಪದಿಂದ, ವಿಮುಕ್ತ ಇತ್ಯನೇನಾಪಿ=ವಿಮುಕ್ತನೆಂಬುದರಿಂದಲೂ, ನಾಮರೂಪಾಮುಕ್ತತ್ವಂ ನಾಮರೂಪ=ನಾಮರೂಪಗಳಿಂದ, ಅಮುಕ್ತತ್ವಂ=ಬಿಡಲ್ಪಡದಿರುವಿಕೆಯು, ಉಚ್ಯತೇ=ಹೇಳಲ್ಪಡುತ್ತದೆ. ವಿಪ್ರಿಯ ಇತ್ಯಾದಿವತ್=ವಿಪ್ರಿಯವೆಂಬಿತ್ಯಾದಿ ಶಬ್ದಗಳಂತೆ, ನಾಮರೂಪೇ=ನಾಮರೂಪಗಳನ್ನು, ಅವಿಹಾಯ=ಬಿಡದೇನೆ, ಇತಿ ಚ=ಹೀಗೆ, ಪೂರ್ವತ್ರ=ಪೂರ್ವದಲ್ಲಿ, ಅನಂತಂ ವೈ=ಅಪರಿಮಿತವೇ, ನಾಮ=ಹೆಸರು, ಅನಂತಾವೈ=ಅಪರಿಮಿತರೇ, ವಿಶ್ವೇದೇವಾಃ=ವಿಶ್ವೇದೇವತೆಗಳು, ಇತಿ=ಹೀಗೆ, ನಾಮರೂಪಯೋಃ=ನಾಮರೂಪಗಳಿಗೆ, ಅನಂತತ್ವಂ ಹಿ=ಅನಂತ್ಯವನ್ನೇ, ಶ್ರುತಿಃ=ವೇದವು, ವಕ್ತಿ=ಹೇಳುತ್ತದೆ. ಯತ್ರ=ಯಾವಮುಕ್ತಿಯಲ್ಲಿ, ಪೂರ್ವೇ=ಪ್ರಾಚೀನರಾದ, ಸಾಧ್ಯಾಃ ದೇವಾಃ=ಬ್ರಹ್ಮಾದಿದೇವತೆಗಳು, ಸಂತಿ=ಇದ್ದಾರೋ, ತತ್ರ=ಆ ಮುಕ್ತಿಯಲ್ಲಿ. ಸಃ=ಮುಕ್ತಿವರ್ಗವು, ಜಕ್ಷನ್=ಭುಜಿಸುತ್ತಾ, ಕ್ರೀಡನ್=ಆಡುತ್ತಾ, ರಮಮಾಣಃ=ಸ್ತ್ರೀಯರಿಂದ ಕೂಡಿಕೊಂಡು ರಮಿಸುತ್ತಾ, ಪರ್ಯೇತಿ=ಸಂಚರಿಸುತ್ತದೆ. ಸಃ=ಆ ಮುಕ್ತವರ್ಗವು, ವಿಪಶ್ಚಿತಾ=ಸರ್ವಜ್ಞನಾದ, ಬ್ರಹ್ಮಣಾ=ಪರಮಾತ್ಮನಿಂದ, ಸಹ=ಕೂಡಿಕೊಂಡು, ಸರ್ವಾನ್ ಕಾಮಾನ್=ಎಲ್ಲಾ ಅಭೀಷ್ಟಗಳನ್ನು, ಅಶ್ನುತೇ=ಅನುಭವಿಸುತ್ತದೆ. ತ್ವಃ=ಒಬ್ಬ ಬ್ರಹ್ಮನು ಋಚಾಂ=ಋಕ್ಕುಗಳ, ಪೋಷಂ=ಪೋಷಣವನ್ನು, ಪುಪುಷ್ವಾನ್=ಪುಷ್ಟೀಕರಿಸುವವನಾಗಿ, ಆಸ್ತೇ=ಇದ್ದಾನೆ. ತ್ವಃ=ಮತ್ತೊಬ್ಬ ಬ್ರಹ್ಮನು, ಶಕ್ವರೀಷು=ಶಕ್ವರೀಛಂದಸ್ಕ ರಿಕ್ಕುಗಳಲ್ಲಿ, ಗಾಯತ್ರಂ=ಗಾಯತ್ರನಾಮವನ್ನು, ಗಾಯತಿ=ಗಾನಮಾಡುತ್ತಾನೆ. ಇತ್ಯಾದೇಶ್ಚ=ಇದೇಮೊದಲಾಗುಳ್ಳ ಶ್ರುತಿಗಳಿಂದಲೂ (ಮುಕ್ತರಿಗೂ ಸಹ ಅನಂತ್ಯವು ತೋರುತ್ತಿದೆ). ಅತಃ=ಆದುದರಿಂದ, ಸರ್ವಮುಕ್ತೇಭ್ಯೋಪಿ=ಎಲ್ಲಾ ಮುಕ್ತರಿಂದಲೂ, ಉತ್ತಮೋತ್ತಮಃ=ಅತ್ಯುತ್ತಮನಾದ, ಪರಿಪೂರ್ಣಃ=ಗುಣಪರಿಪೂರ್ಣನಾದವನು, ನಾರಾಯಣ ಇತಿ=ನಾರಾಯಣನೆಂದು, ಸಿದ್ಧಂ=ದೃಢವಾಯಿತು.

ತಾ॥ ಪೂರ್ವೋಕ್ತರಾದ ಕಲಾಭಿಮಾನಿಗಳು ಪರಮಾತ್ಮನಲ್ಲಿ ಹೇಗೆ ಇರುತ್ತಾರೆಂದರೆ-ಗಂಗಾದಿ ನದಿಗಳು ಸಮುದ್ರಕ್ಕೆ ಹೋಗಿ ಸೇರಿದರೂ ಅವುಗಳ ನಾಮರೂಪಗಳು ಪಂಡಿತರಿಗೆ ಹೇಗೆ ಬೇರೆಯಾಗಿಯೇ ತಿಳಿದುಬರುತ್ತಾವೋ ಅದೇ ರೀತಿ ಈ ಕಲಾಭಿಮಾನಿಗಳು ಪರಮಾತ್ಮನಲ್ಲಿ ಸೇರಿದರೆಂದರೂ ಅವರ ನಾಮರೂಪಗಳು ಬೇರೆಬೇರೆಯಾಗಿಯೇ ಇರುತ್ತವೆಯಲ್ಲದೆ ಅವುಗಳೆಲ್ಲ ನಾಶವಾಗಿ ಕಲಾಭಿಮಾನಿಗಳಿಗೂ ಪರಬ್ರಹ್ಮನಿಗೂ ಐಕ್ಯವಾಗುವುದಿಲ್ಲ. ಯದ್ಯಪಿ

ಮಂತ್ರದಲ್ಲಿ 'ಭಿದ್ಯೇತೇ ತಾಸಾಂ ನಾಮರೂಪೇ' ಎಂಬಿತ್ಯಾದಿಗಳಿಂದ ಅವುಗಳ ನಾಮರೂಪ ಗಳು ನಾಶವಾಗುತ್ತವೆಯೆಂದು ಆಪಾತತಃ ಅರ್ಥವು ತೋರಿಬಂದರೂ ಆ ವಾಕ್ಯಗಳಿಂದಲೇ ಅವುಗಳ ನಾಮರೂಪಗಳು ಬೇರೆಬೇರೆಯಾಗಿಯೇ ಇರುತ್ತವೆಯೆಂದಂತಾಗುತ್ತದೆ. ಏಕೆಂದರೆ— ಭೇದಶಬ್ದಕ್ಕೆ ನಾಶವೆಂಬರ್ಥವು ಎಲ್ಲಿಯೂ ತೋರಿಬರುವುದಿಲ್ಲ. 'ಭಿನ್ನೋ ಘಟಃ' ಎಂಬಿತ್ಯಾದಿ ಗಳಲ್ಲಿಯೂ ಘಟದ ಅವಯವಬಾಹುಳ್ಯವೇ ತೋರುತ್ತದೆ. ನಾಶವಾಗದೆ ಅವಯವ ಬಾಹುಳ್ಯವು ಕೂಡದಾದಪ್ರಯುಕ್ತ ನಾಶವು ಕಲ್ಪಿಸಲ್ಪಡುತ್ತದೆ. ಘಟವು ಬಹುಭಾವವನ್ನು ಹೊಂದಿದಂತೆ ಪ್ರಕೃತದಲ್ಲಿ ನಾಮರೂಪಗಳು ಪ್ರತಿಯೊಂದು ಬೇರೆಬೇರೆಯಾಗಲಾರದಾದುದರಿಂದ ಹಾಗೆ ಅರ್ಥಾತ್ ನಾಶವನ್ನು ಕಲ್ಪಿಸಲಿಕ್ಕೂ ಬರಲಾರದು, ಆದಕಾರಣ ಇಲ್ಲಿ ನಾಮರೂಪಗಳು ಪರ ಮಾತ್ಮನಲ್ಲಿ ಬೇರೆಬೇರೆಯಾಗಿಯೇ ಇರುತ್ತವೆಯೆಂದರ್ಥ. ಆದುದರಿಂದಲೇ ಇನ್ನು ಮೇಲಿನ ಮಂತ್ರದಲ್ಲಿಯೂ ರಥದ ಅಕ್ಷದಲ್ಲಿ ಅಚ್ಚಿಮರಗಳು ಹೇಗೆ ಇರುತ್ತವೋ ಹಾಗೇ ಕಲೆಗಳಿರುತ್ತ ವೆಂದು ಸ್ಪಷ್ಟವಾಗಿ ದೃಷ್ಟಾಂತವನ್ನು ಹೇಳಿರುತ್ತದೆ. 'ಅಸ್ತಂ ಗಚ್ಛಂತಿ' ಎಂಬುದರಿಂದಲೂ ಸೂರ್ಯನು ಮುಳುಗಿದರೆ ಇಲ್ಲಿದ್ದವರಿಗೆ ಕಾಣದಿದ್ದರೂ ದೇಶಾಂತರದವರಿಗೆ ತೋರುವಂತೆ ಅಜ್ಞರಿಗೆ ತಿಳಿಯದಿದ್ದರೂ ಪ್ರಾಜ್ಞರಿಗೆ ಇವುಗಳ ನಾಮರೂಪಗಳು ಬೇರೆಬೇರೆಯಾಗಿಯೇ ತಿಳಿದುಬರುತ್ತವೆ. ಅಲ್ಲದೆ ಮುಕ್ತರಾದ ಪ್ರಾಣಾದಿಷೋಡಶಕಲೆಗಳೂ ನಾಮರೂಪಗಳಿಂದ ಪ್ರತ್ಯೇಕಪ್ರತ್ಯೇಕವಾಗಿಯೇ ಇರುತ್ತನೆಂದು 'ಸತ್ತತ್ವ' ಎಂಬ ಸ್ಮೃತಿವಿಶೇಷದಲ್ಲಿಯೂ ಹೇಳಲ್ಪ ಟ್ಟದೆ. ಇನ್ನೂ 'ಯಥಾ ನದ್ಯಃ ಸ್ಯಂದಮಾನಾಃ ಸಮುದ್ರೇಽಸ್ತಂ ಗಚ್ಛಂತಿ ನಾಮರೂಪೇಽ ವಿಹಾಯ। ತಥಾ ವಿದ್ವಾನ್ ನಾಮರೂಪಾದ್ವಿಮುಕ್ತಃ ಪರಾತ್ಪರಂ ಪುರುಷಮುಪೈತಿ ದಿವ್ಯಂ ॥' ಎಂಬ ಭಾಷ್ಯದಲ್ಲಿ ಸೂಚಿಸಿದ ಸಮಾಖ್ಯಾಮಂತ್ರದಲ್ಲಿ 'ನಾಮರೂಪಾದ್ವಿಮುಕ್ತಃ' ಎಂಬಲ್ಲಿ 'ವಿಪ್ರಿಯ' ಎಂಬ ಶಬ್ದಕ್ಕೆ 'ಅಪ್ರಿಯ' ಎಂಬರ್ಥವು ಹೇಗೋ ಹಾಗೇ ನಾಮರೂಪಗಳಿಂದ ವಿಮುಕ್ತನೆಂದರೆ ಅಮುಕ್ತ (ಬಿಡಲ್ಪಡದೇ ಇದ್ದವನು) ನೆಂದೇ ಹೇಳಲ್ಪಡುತ್ತದೆ. ಪೂರ್ವಾರ್ಧದಲ್ಲಿ ದೃಷ್ಟಾಂತವಾಕ್ಯದಲ್ಲಿಯೂ 'ನಾಮರೂಪೇಽವಿಹಾಯ' ಎಂಬಲ್ಲಿ 'ಅವಿಹಾಯ' ಅಂದರೆ ಬಿಡ ದೇನೇ ಎಂದರ್ಥವೆಂದು ತಿಳಿಯತಕ್ಕದು. ಅಲ್ಲದೆ 'ಅನಂತಂ ವೈ ನಾಮ' ಎಂಬ ಶ್ರುತ್ಯಂತ ರದಲ್ಲಿಯೂ ಅವುಗಳಿಗೆ ಅಪರಿಮಿತತ್ವವು ಹೇಳಲ್ಪಡುತ್ತದೆ. ಹಾಗೂ 'ಯತ್ರಪೂರ್ವೇ' 'ತತ್ರ ಪರ್ಯೇತಿ' 'ಸೋಽಶ್ನುತೇ' 'ಋಚಾಂ ತ್ವಃ' ಎಂಬಿತ್ಯಾದಿ ಶ್ರುತಿಗಳಲ್ಲಿಯೂ ಪರಮಾತ್ಮ ನಿಗೂಮುಕ್ತರಿಗೂ ಪರಸ್ಪರವಾಗಿ ಭೇದವೇ ತೋರಿಬರುತ್ತದೆ. ಆದುದರಿಂದ ಸರ್ವ ಮುಕ್ತ ರೂ ಕಲಾಭಿಮಾನಿಗಳೂ ಬೇರೆಬೇರೆಯಾಗಿದ್ದು ಅವರೆಲ್ಲರಿಂದಲೂ ಭಿನ್ನನೂ ಸರ್ವೋತ್ತಮನೂ ಆದವನು ನಾರಾಯಣನೆಂದು ಸಿದ್ಧವಾಗುತ್ತದೆ. ॥ ೩ ॥

ಮಂ ॥ **ತದೇಷ ಶ್ಲೋಕಃ। ಅರಾ ಇವ ರಥನಾಭೌ ಕಲಾ ಯಸ್ಮಿನ್ ಪ್ರತಿ ಷ್ಠಿತಾಃ। ತಂ ವೇದ್ಯಂ ಪುರುಷಂ ವೇದಯಥಾ ಮಾ ವೋ ಮೃತ್ಯುಃ ಪರಿವ್ಯಥಾ ಇತಿ ॥ ತಾನ್ ಹೋವಾಚ। ಏತಾವದೇವಾಹಮೇತ ತ್ಪರಂ ಬ್ರಹ್ಮ ವೇದ ನಾತಃ ಪರಮಸ್ತೀತಿ। ತೇ ಹಿ ತಮರ್ಚಯಂತಃ ತ್ವಂ ಹಿ ನಃ ಪಿತಾ ಯೋಽಸ್ಮಾಕಮವಿದ್ಯಾಯಾಃ ಪರಂ ಪಾರಂ ತಾರ ಯಸೀತಿ ॥ ನಮಃ ಪರಮಋಷಿಭ್ಯೋ ನಮಃ ಪರಮಋಷಿಭ್ಯಃ ॥೪॥**

ಇತಿ ಷಷ್ಠಃ ಪ್ರಶ್ನಃ ॥ ೬ ॥

**॥ ಇತಿ ಷಟ್ಪ್ರಶ್ನೋಪನಿಷತ್ಸಮಾಪ್ತಾ ॥ ಶ್ರೀಃ ॥**

ಅ॥ ತತ್=ಹಿಂದೆ ಹೇಳಿದ ವಿಷಯದಲ್ಲಿ, ಏಷಃ=ಈಗ ಹೇಳುವ, ಶ್ಲೋಕಃ=ಮಂತ್ರವು, (ಸಮ್ಮತಿಯಾಗಿರುತ್ತದೆ.) ರಥನಾಭೌ=ಉಜಿಡೆಯಲ್ಲಿ, ಅರಾ ಇವ=ಅಚ್ಚಿಮರಗಳಂತೆ, ಯಸ್ಮಿನ್=ಯಾವ ಪುರುಷನಲ್ಲಿ, ಕಲಾಃ=ಷೋಡಶಕಲೆಗಳು, ಪ್ರತಿಷ್ಠಿತಾಃ=ಪ್ರತಿಷ್ಠಿಸಿಕೊಳ್ಳಲ್ಪಟ್ಟದ್ದಾವೋ, ತಂ=ಆ, ವೇದ್ಯಂ=ತಿಳಿಯಲರ್ಹನಾದ, ಪುರುಷಂ=ಪರಮಾತ್ಮನನ್ನು, ವೇದಯಥಾಃ=ತಿಳಿಯಿರಿ. ಮೃತ್ಯುಃ=ಸಂಸಾರವು, ವಃ=ನಿಮ್ಮನ್ನು , ಮಾ ಪರಿವ್ಯಥಾಃ=ದುಃಖಗೊಳಿಸದಿರಲಿ. ಇತಿ=ಈ ರೀತಿಯಾಗಿದೆ.

ಸಃ=ಪಿಪ್ಪಲಾದರು, ತಾನ್=ಭಾರದ್ವಾಜಾದಿಗಳನ್ನು(ಕುರಿತು,) ಅಹಂ=ನಾನು, ಏತಾವದೇವ=ಇಷ್ಟೇ, ಏತತ್=ಪೂರ್ವೋಕ್ತನಾದ, ಪರಂಬ್ರಹ್ಮ=ಪರಬ್ರಹ್ಮನನ್ನು, ವೇದ=ತಿಳಿದಿದ್ದೇನೆ. ಅತಃ=ಇದಕ್ಕಿಂತ, ಪರಂ=ಹೆಚ್ಚಾದ ತಿಳುವಳಿಕೆಯು, ನಾಸ್ತಿ=ಇಲ್ಲ. ಇತಿ=ಹೀಗೆ, ಉವಾಚ ಹ=ಹೇಳಿದರು. ತೇ ಹಿ=ಭಾರದ್ವಾಜಾದಿಗಳು, ಯಃ=ಯಾವ ನೀವು, ಅಸ್ಮಾಕಂ=ನಮ್ಮನ್ನು, ಅವಿದ್ಯಾಯಾಃ=ಅಜ್ಞಾನದ, ಪರಂ ಪಾರಂ=ದಡವನ್ನು, ತಾರಯಸಿ=ದಾಟಿಸಿದಿರೋ, ಸ ತ್ವಂ=ಆ ನೀವು, ನಃ=ನಮಗೆ, ಪಿತಾ=ತಂದೆಯಾಗಿರುತ್ತೀರಿ, ಇತಿ=ಹೀಗೆಂದು, ತಂ=ಆ ಪಿಪ್ಪಲಾದರನ್ನು, ಅರ್ಚಯಂತಃ=ಪೂಜಿಸುವರಾದರು. ಪರಮಋಷಿಭ್ಯಃ=ಋಷಿಶ್ರೇಷ್ಠರಿಗೆಲ್ಲರಿಗೂ, ನಮಃ=ನಮಸ್ಕಾರವು. ॥ ಇತಿ=ಹೀಗೆ, ಷಷ್ಠಃ ಪ್ರಶ್ನಃ=ಆರನೇ ಪ್ರಶ್ನೆಯು (ಮುಗಿಯಿತು.)

ತಾ ॥ ಪೂರ್ವೋಕ್ತ ವಿಷಯಕ್ಕೆ ಸಮ್ಮತಿಯಾದ ಈ ಮಂತ್ರಾರ್ಥವು ಹೇಳಲ್ಪಟ್ಟಿದೆ. ಇಂತಹ ಸರ್ವೋತ್ತಮನಾದ ಪರಮಾತ್ಮನನ್ನು ತಿಳಿದುಕೊಂಡರೆ ಸಂಸಾರ ಬಾಧೆಯನ್ನು ನೀಗಿ ಅಧಿಕಾರಿಯು ಮುಕ್ತಿಯನ್ನು ಹೊಂದುತ್ತಾನೆ. ಆದ ಕಾರಣ 'ಎಲೈ ಭಾರದ್ವಾಜ ಪ್ರಭೃತಿಗಳೇ! ನೀವು ಯಾವ ಪರಬ್ರಹ್ಮನನ್ನು ತಿಳಿದುಕೊಳ್ಳಬೇಕೆಂದು ಬಂದಿರುತ್ತೀರೋ ಅಂತಹ ಪರಬ್ರಹ್ಮನ ವಿಷಯವಾಗಿ ನಾನು ತಿಳಕೊಂಡಷ್ಟನ್ನು ತಿಳಿಸಿರುತ್ತೇನೆ. ಇದಕ್ಕಿಂತ ಹೆಚ್ಚಾಗಿ ನನ್ನಂತಹರು ತಿಳಿದುಕೊಳ್ಳಲಾರರು.' ಎಂದು ಪಿಪ್ಪಲಾದ ಮಹರ್ಷಿಗಳು ಬೋಧಿಸುವವರಾದರು. ಆ ಮೇಲೆ ಭಾರದ್ವಾಜಾದಿಗಳು "ಎಲೈ ಪೂಜ್ಯರೇ! ನಮ್ಮ ಈ ಪರಬ್ರಹ್ಮ ವಿಷಯದಲ್ಲಿದ್ದ ಅಜ್ಞಾನವನ್ನು ಕಳೆದುದರಿಂದ ತಾವೇ ನಮಗೆ ತಂದೆಗೆ ಸಮಾನರಾಗಿರುತ್ತೀರಿ" ಎಂದು ನಮಸ್ಕರಿಸಿ ಅವರನ್ನು ಪೂಜಿಸುವವರಾದರು.

ಶಿಷ್ಯರು ಆದ್ಯಂತಗಳಲ್ಲಿ ಗುರುನಮಸ್ಕಾರವನ್ನು ಮಾಡಬೇಕೆಂದು ಸೂಚಿಸುವುದಕ್ಕೋಸ್ಕರ ವೇದಪುರುಷನು ಹೇಳುತ್ತಾನೆ. ಪೂಜ್ಯರಾದ ಋಷಿವರ್ಯರೆಲ್ಲರಿಗೂ ನಮಸ್ಕಾರವಿರಲಿ, ಈ ವಾಕ್ಯವು ಆದರಸೂಚನೆಗಾಗಿ ದ್ವಿರಾವೃತ್ತವಾಗಿದೆ.

**ಹೀಗೆ ಆರನೇ ಪ್ರಶ್ನೆಯು ಮುಗಿಯಿತು. ॥ ೬ ॥**

**ಭಾ ॥** ನಮೋ ನಮೋಽಸ್ತು ಹರಯೇ ಪ್ರೇಷ್ಠಪ್ರೇಷ್ಠತಮಾಯ ತೇ ।
ಪರಮಾನಂದಸಂದೋಹಸಾಂದ್ರಾನಂದವಪುಷ್ಮತೇ ॥

ಅ ॥ ಪ್ರೇಷ್ಠಪ್ರೇಷ್ಠತಮಾಯ=ಅತ್ಯಂತ ಪ್ರಿಯಪುರುಷನಾದ, ಪರಮ=ನಿರವಧಿಕಗಳಾದ, ಆನಂದ=ಸಂತೋಷಗಳ, ಸಂದೋಹ=ಸಮುದಾಯದಿಂದ, ಸಾಂದ್ರ=ನಿಬಿಡವಾದ, ಆನಂದವಪುಷ್ಮತೇ=ಆನಂದಾತ್ಮಕಶರೀರವುಳ್ಳ, ಹರಯೇ=ದುರಿತನಾಶಕನಾದ, ತೇ=ನಿನಗೋಸ್ಕರ, ನಮೋನಮಃ=ನಮಸ್ಕಾರವು, (ಅಸ್ತು=ಇರಲಿ.)

ತಾ || ಶಿಷ್ಟಾಚಾರಾನುಸಾರವಾಗಿ ಭಾಷ್ಯಕಾರರು ತನಗೆ ಎಲ್ಲದಕ್ಕಿಂತಲೂ ಅತಿಶಯ ಪ್ರಿಯನೂ ಸಚ್ಚಿದಾನಂದ ಮೂರ್ತಿಯೂ ಆದ ವಾಸುದೇವರೂಪಿ ಶ್ರೀ ಪರಮಾತ್ಮನಿಗೋಸ್ಕರ ಅನಂತ ನಮಸ್ಕಾರರೂಪಮಂಗಳವನ್ನು ರಚಿಸಿದರು.

ಶ್ರೀ ಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ರಚಿತವಾದ
ಷಟ್ಪ್ರಶ್ನೋಪನಿಷದ್ಭಾಷ್ಯವು ಸಂಪೂರ್ಣವಾಯಿತು.

ಷಟ್ಪ್ರಶ್ನೋಪನಿಷದ್ಭಾಷ್ಯಟೀಕಾವ್ಯಾಖ್ಯಾನಮಾತ್ರತಃ |
ಇಂದಿರಾರಮಣಃ ಪ್ರೀತಿಂ ಯಾತು ಮಧ್ವಾರ್ಯಹೃದ್ಗತಃ || ಶ್ರೀಃ ||

ಕರ್ಣಾಟಭಾಷಾಟೀಕಾಸ್ರಕ್ತ್ವಂತ್ರಿನಾರಾಯಣಾರ್ಪಿತಾ |
ಷಟ್ಪ್ರಶ್ನೋಪನಿಷದ್ಗಮ್ಯಪ್ರಾಣೇಶೇಶಪದೇ ಲಸೇತ್ ||



# ಸಭಾಷ್ಯ ಆಥರ್ವಣೋಪನಿಷತ್ತು

## ಖಂಡ ೧.

ಸಮಸ್ತ ಗುಣಪೂರ್ಣಾಯ ದೋಷದೂರಾಯವಿಷ್ಣವೇ ।
ಸಮಸ್ತ ಪ್ರಾಣನಾಥಾಯ ಭಕ್ತಾಭೀಷ್ಟಪ್ರದಾಯಿನೇ ॥

**ಶ್ರೀಮದ್ಧನುಮದ್ಭೀಮಮಧ್ವಾಂತರ್ಗತರಾಮಕೃಷ್ಣವೇದವ್ಯಾಸಾತ್ಮಕ ಲಕ್ಷ್ಮೀಹಯಗ್ರೀವಾಯ ನಮಃ ॥ ಹರಿಃ ಓಂ ॥**

**ಭಾ ॥** ಆನಂದಮಜರಂ ನಿತ್ಯಂ ಅಜಮಕ್ಷಯಮಚ್ಯುತಂ ।
ಅನಂತಶಕ್ತಿಂ ಸರ್ವಜ್ಞಂ ನಮಸ್ಯೇ ಪುರುಷೋತ್ತಮಂ ॥

ಅ ॥ ಆನಂದಂ=ಆನಂದಸ್ವರೂಪನು, ಅಜರಂ=ಮುಪ್ಪಿಲ್ಲದವನು, ನಿತ್ಯಂ=ಶಾಶ್ವತನು, ಅಜಂ=ಉತ್ಪತ್ತಿರಹಿತನು, ಅಕ್ಷಯಂ=ಅವಯವಹ್ರಾಸ ಇಲ್ಲದವನು, ಅಚ್ಯುತಂ=ದೇಹನಾಶಗಳು ಇಲ್ಲದವನು, ಅನಂತಶಕ್ತಿಂ=ಅಪಾರವಾದ ಶಕ್ತಿಯುಳ್ಳವನು, ಸರ್ವಜ್ಞಂ=ಸರ್ವಜ್ಞನೂ ಆದ, ಪುರುಷೋತ್ತಮಂ=ಪುರುಷಶ್ರೇಷ್ಠನಾದ ಶ್ರೀನಾರಾಯಣನನ್ನು, ನಮಸ್ಯೇ=ನಮಸ್ಕರಿಸುತ್ತೇನೆ.

ತಾ ॥ ಶ್ರೀಮನ್ನಾರಾಯಣನು ಸರ್ವೋತ್ತಮನು, ಸರ್ವಜ್ಞನು, ಸರ್ವಶಕ್ತನು, ಆನಂದಮೂರ್ತಿಯು, ಅಶೇಷದೋಷರಹಿತನು ಎಂದು ಈ ಉಪನಿಷತ್ತಿನಲ್ಲಿ ಮುಖ್ಯವಾಗಿ ಪ್ರತಿಪಾದಿಸಲ್ಪಡುತ್ತದೆಂದು ಶ್ರೀಮದಾಚಾರ್ಯರು ಮಂಗಳಾಚರಣೆಯಲ್ಲಿ ಸೂಚಿಸಿರುವರು.

**ಮಂ ॥ ಬ್ರಹ್ಮಾ ದೇವಾನಾಂ ಪ್ರಥಮಃ ಸಂಬಭೂವ ವಿಶ್ವಸ್ಯ ಕರ್ತಾ ಭುವನಸ್ಯ ಗೋಪ್ತಾ । ಸ ಬ್ರಹ್ಮವಿದ್ಯಾಂ ಸರ್ವವಿದ್ಯಾಪ್ರತಿಷ್ಠಾಮಥರ್ವಾಯ ಜ್ಯೇಷ್ಠಪುತ್ರಾಯ ಪ್ರಾಹ ॥ ೧ ॥**

ಅ ॥ ವಿಶ್ವಸ್ಯ ಭುವನಸ್ಯ=ಸಮಸ್ತಜಗತ್ತಿಗೆ, ಕರ್ತಾ=ಸೃಷ್ಟಿಕರ್ತನು, ಗೋಪ್ತಾ=ರಕ್ಷಕನು ಆದ, ಬ್ರಹ್ಮಾ=ಚತುರ್ಮುಖನು, ದೇವಾನಾಂ=ದೇವತೆಗಳಲ್ಲಿ, ಪ್ರಥಮಃ=ಮೊದಲನೆಯವನಾಗಿ, ಸಂಬಭೂವ=ಹುಟ್ಟಿದನು. ಸಃ=ಆ ಬ್ರಹ್ಮನು, ಸರ್ವವಿದ್ಯಾಪ್ರತಿಷ್ಠಾಂ=ಸಕಲ ವಿದ್ಯೆಗಳಿಗೆ ಆಶ್ರಯವಾದ, ಬ್ರಹ್ಮವಿದ್ಯಾಂ=ಪರಮಾತ್ಮ ತತ್ವವನ್ನು, ಜ್ಯೇಷ್ಠಪುತ್ರಾಯ=ಹಿರೇಮಗನಾದ, ಅಥರ್ವಾಯ=ಅಥರ್ವನೆಂಬವನಿಗೋಸ್ಕರ, ಪ್ರಾಹ=ಚನ್ನಾಗಿ ಹೇಳಿದನು.

ತಾ ॥ ಈ ಮಂತ್ರದಲ್ಲಿ ಚತುರ್ಮುಖನು ಪ್ರಥಮ ಪುತ್ರನೆಂದು ಹೇಳಲ್ಪಟ್ಟಿದೆ. ಯಾರ ಪುತ್ರನೆಂದು ಹೇಳಲಿಲ್ಲ. ಮತ್ತೂ ಚತುರ್ಮುಖನಿಗೆ ಅಥರ್ವನು ಜ್ಯೇಷ್ಠಪುತ್ರನೆಂದು ಹೇಳಲ್ಪಟ್ಟಿದೆ. ಗ್ರಂಥಾಂತರದಲ್ಲಿ ಶಿವಸನಕಾದಿಗಳು ಜ್ಯೇಷ್ಠಪುತ್ರರೆಂದು ಉಕ್ತವಾಗಿದೆ. ಈ ಸಂಶಯಗಳನ್ನು ಶ್ರೀಮದಾಚಾರ್ಯರು ಪ್ರಮಾಣದಿಂದಲೇ ಪರಿಹರಿಸುತ್ತಾರೆ.

**ಭಾ ॥** ಮನೋರ್ವೈವಸ್ವತಸ್ಯಾದಾವಥರ್ವಾ ಬ್ರಹ್ಮಣೋಽಜನಿ ।
ಮಿತ್ರಶ್ಚ ವರುಣಶ್ಚಾಥೋ ಪ್ರಹೇತಿರ್ಹೇತಿರೇವ ಚ

ಬ್ರಹ್ಮಣಃ ಪ್ರಥಮೇ ಕಲ್ಪೇ ಶಿವಃ ಪ್ರಥಮಜಃ ಸ್ಮೃತಃ ।
ಸನಕಾದ್ಯಾಸ್ತು ವಾರಾಹೇಽಬ್ರಹ್ಮಾ ವಿಷ್ಣೋಃ ಸುತೋಽಗ್ರಜಃ ॥
– ಇತಿ ಬ್ರಹ್ಮಾಂಡೇ ॥

ತಾ ॥ ವೈವಸ್ವತಮನ್ವಂತರದಲ್ಲಿ ಚತುರ್ಮುಖನಿಂದ ಅಥರ್ವನು ಪ್ರಥಮದಲ್ಲಿ ಹುಟ್ಟಿದನು. ಅನಂತರ ಮಿತ್ರ, ವರುಣ, ಪ್ರಹೇತಿ ಮತ್ತು ಹೇತಿ ಇವರು ಹುಟ್ಟಿದರು ಪ್ರಥಮಕಲ್ಪದಲ್ಲಿ (ಅಂದರೆ ಪದ್ಮಕಲ್ಪದಲ್ಲಿ) ಶಿವನು ಪ್ರಥಮದಲ್ಲಿ ಬ್ರಹ್ಮನಿಂದ ಹುಟ್ಟಿದನು. ವಾರಾಹಕಲ್ಪದಲ್ಲಿ ಸನಕಾದಿಗಳು ಬ್ರಹ್ಮನಿಗೆ ಜ್ಯೇಷ್ಠಪುತ್ರರಾದರು. ಬ್ರಹ್ಮನು ವಿಷ್ಣುವಿಗೆ ಜ್ಯೇಷ್ಠಪುತ್ರನಾಗಿರುತ್ತಾನೆ ಎಂದು ಬ್ರಹ್ಮಾಂಡಪುರಾಣದಲ್ಲುಕ್ತವಾಗಿದೆ. ॥ ೧ ॥

**ಮಂ ॥ ಅಥರ್ವಣೇ ಯಾಂ ಪ್ರವದೇತ ಬ್ರಹ್ಮಾ ಅಥರ್ವಾ ತಾಂ ಪುರೋವಾಚಾಂಗಿರೇ ಬ್ರಹ್ಮವಿದ್ಯಾಂ । ಸ ಭಾರದ್ವಾಜಾಯ ಸತ್ಯವಹಾಯ ಪ್ರಾಹ ಭಾರದ್ವಾಜೋಽಂಗಿರಸೇ ಪರಾವರಾಂ ॥ ೨ ॥**

ಅ ॥ ಬ್ರಹ್ಮಾ=ಚತುರ್ಮುಖನು, ಅಥರ್ವಣೇ=ಅಥರ್ವನಿಗೋಸ್ಕರ, ಯಾಂ=ಯಾವುದನ್ನು, ಪ್ರವದೇತ=ಹೇಳಿದನೋ, ತಾಂ=ಅದನ್ನು, ಪುರಾ=ಪ್ರಾಕಿನಲ್ಲಿ, ಅಂಗಿರೇ=ಅಂಗಿರನಾಮಕ ಋಷಿಗೋಸ್ಕರ, ಬ್ರಹ್ಮವಿದ್ಯಾಂ=ಬ್ರಹ್ಮವಿದ್ಯೆಯನ್ನು, ಉವಾಚ=ಹೇಳಿದನು. ಸಃ= ಆತನು, ಭಾರದ್ವಾಜಾಯ=ಭರದ್ವಾಜ ಪುತ್ರನಾದ, ಸತ್ಯವಹಾಯ=ಸತ್ಯವಹನಿಗೋಸ್ಕರ, ಪ್ರಾಹ=ಹೇಳಿದನು. ಭಾರದ್ವಾಜಃ=ಭರದ್ವಾಜ ಪುತ್ರನು, ಅಂಗಿರಸೇ=ಅಂಗಿರನಾಮಕ ಋಷಿಗೋಸ್ಕರ, ಪರಾವರಾಂ=ಪರಾವರ ವಿದ್ಯೆಯನ್ನು (ಹೇಳಿದನು) ॥ ೨ ॥

**ಮಂ ॥ ಶೌನಕೋ ಹ ವೈ ಮಹಾಶಾಲೋಽಂಗಿರಸಂ ವಿಧಿವದುಪಸನ್ನಃ ಪಪ್ರಚ್ಛ । ಕಸ್ಮಿನ್ನು ಭಗವೋ ವಿಜ್ಞಾತೇ ಸರ್ವಮಿದಂ ವಿಜ್ಞಾತಂ ಭವತೀತಿ ॥ ೩ ॥**

ಅ ॥ ಮಹಾಶಾಲಃ=ಪ್ರತಿಸಂವತ್ಸರದಲ್ಲಿ ವಿಧಿಪೂರ್ವಕ ಯಜ್ಞಮಾಡತಕ್ಕ, ಶೌನಕಃ= ಶೌನಕನೆಂಬ ಋಷಿಯು, ಅಂಗಿರಸಂ=ಅಂಗಿರ ಋಷಿಯನ್ನು, ವಿಧಿವತ್=ಶಾಸ್ತ್ರಪ್ರಕಾರವಾಗಿ, ಉಪಸನ್ನಃ=ಸಮೀಪಿಸಿದವನಾಗಿ (ಅಂದರೆ ಸಮಿತ್ಪಾಣಿಯಾಗಿ ವಿನಯಪೂರ್ವಕ ಸಮೀಪಿಸಿ), ಪಪ್ರಚ್ಛ=ಕೇಳಿದನು. ಭಗವಃ=ಪೂಜ್ಯನೇ! ಕಸ್ಮಿನ್ನು=ಯಾವವಸ್ತುವು, ವಿಜ್ಞಾತೇ (ಸತಿ) = ತಿಳಿಯಲ್ಪಡುತ್ತಿರಲು, ಇದಂ ಸರ್ವಂ=ಈ ಸಮಸ್ತವೂ (ಅಂದರೆ ಕರ್ಮ ಮತ್ತು ದೇವತೆಗಳು), ವಿಜ್ಞಾತಂ=ತಿಳಿಯಲ್ಪಟ್ಟುದು, ಭವತಿ=ಆಗುತ್ತದೆ. ಇತಿ=ಹೀಗೆ ॥ ೩ ॥

**ಮಂ ॥ ತಸ್ಮೈ ಸ ಹೋವಾಚ । ದ್ವೇ ವಿದ್ಯೇ ವೇದಿತವ್ಯೇ । ಇತಿ ಹ ಸ್ಮ ಯದ್ಬ್ರಹ್ಮವಿದೋ ವದಂತಿ । ಪರಾಚೈವಾಪರಾ ಚ ॥ ೪ ॥**

ಅ ॥ ತಸ್ಮೈ=ಆ ಶೌನಕನಿಗೋಸ್ಕರ, ಸ ಹ=ಆ ಪ್ರಸಿದ್ಧನಾದ ಅಂಗಿರಸನು, ಉವಾಚ=ಹೇಳಿದನು. ದ್ವೇ ವಿದ್ಯೇ=ಎರಡು ವಿದ್ಯೆಗಳು, ವೇದಿತವ್ಯೇ=ತಿಳಿಯತಕ್ಕವುಗಳು. ಇತಿ=ಹೀಗೆ, ಹ=ಪ್ರಸಿದ್ಧವು. ಸ್ಮ=ನಿಜವಾಗಿಯೂ, ಬ್ರಹ್ಮವಿದಃ=ಬ್ರಹ್ಮಜ್ಞಾನಿಗಳು, ಯತ್= ಯಾವುದನ್ನು ವದಂತಿ=ಹೇಳುತ್ತಾರೋ (ಅದು) ಪರಾ=ಪರಮಮುಖ್ಯವೃತ್ತಿಯಿಂದ ಭಗವತ್ಪ್ರತಿ

ಪಾದಕ ವಿದ್ಯೆಯು (ಒಂದು), ಅಪರಾ=ಅಮುಖ್ಯವೃತ್ತಿಯಿಂದ ಕರ್ಮಾದಿಗಳನ್ನು ಪ್ರತಿಪಾದಿಸುವ ಅಪರವಿದ್ಯೆಯು (ಇನ್ನೊಂದು, ಹೀಗೆ ಎರಡು.) ॥ ೪ ॥

**ಮಂ ॥ ತತ್ರಾಪರಾ । ಋಗ್ವೇದೋ ಯಜುರ್ವೇದಃ ಸಾಮವೇದೋಽಥರ್ವವೇದಃ ಶಿಕ್ಷಾ ಕಲ್ಪೋ ವ್ಯಾಕರಣಂ ನಿರುಕ್ತಂ ಛಂದೋ ಜ್ಯೋತಿಷಮಿತಿ ॥ ೫ ॥**

ಅ ॥ ತತ್ರ=ಅವುಗಳಲ್ಲಿ, ಅಪರಾ=ಅಪರ ವಿದ್ಯೆಯು (ಆವುದೆಂದರೆ), ಋಗ್ವೇದೋ ಯಜುರ್ವೇದಃ ಸಾಮವೇದೋಽಥರ್ವವೇದಃ=ಋಗಾದಿ ನಾಲ್ಕು ವೇದಗಳು. ಶಿಕ್ಷಾ, ಕಲ್ಪಃ, ವ್ಯಾಕರಣಂ, ನಿರುಕ್ತಂ, ಛಂದಃ, ಜ್ಯೋತಿಷಂ=ಶಿಕ್ಷಾದಿ ಆರು ವೇದಾಂಗಗಳು. ಇತಿ=ಈ ರೀತಿಯಾಗಿರುತ್ತದೆ.

ತಾ ॥ ವರ್ಣೋಚ್ಚಾರಣದ ಉತ್ಪತ್ತಿಕ್ರಮವನ್ನು ಬೋಧಿಸುವ ಶಾಸ್ತ್ರವು ಶಿಕ್ಷಾ, ಬೋಧಾಯನ ಆಶ್ವಲಾಯನಗ್ರಂಥಗಳು ಕಲ್ಪವು, ಶಬ್ದನಿರ್ವಚನಪರವಾದ ನಿಘಂಟು ನಿರುಕ್ತವು. ಗಾಯತ್ರ್ಯಾದಿ ಛಂದಸ್ಸುಗಳ ಲಕ್ಷಣ ಬೋಧಕಗ್ರಂಥವೇ ಛಂದಃ ಶಾಸ್ತ್ರ, ಕಾಲನಿರ್ಣಾಯಕ ಶಾಸ್ತ್ರವು ಜೋತಿಷ್ಯವಾಗಿರುತ್ತದೆ.

ಭಾ ॥ ಋಗಾದ್ಯಾ ಅಪರಾ ವಿದ್ಯಾ ಯದಾ ವಿಷ್ಣೋರ್ನ ವಾಚಕಾಃ ।
ತಾ ಏವ ಪರಮಾ ವಿದ್ಯಾ ಯದಾ ವಿಷ್ಣೋಸ್ತು ವಾಚಕಾಃ ॥
– ಇತಿ ಪರಮಸಂಹಿತಾಯಾಂ ॥

ತಾ ॥ ಋಗ್ವೇದಾದಿ ಗ್ರಂಥಗಳು ಯಾವಾಗ ವಿಷ್ಣುಪರವಲ್ಲದೇ ಇರುತ್ತಾವೋ ಆಗ ಅಪರ ವಿದ್ಯೆಯೆನಿಸಿಕೊಳ್ಳುತ್ತವೆ. ಅವುಗಳೇ ಯಾವಾಗ ವಿಷ್ಣುಪರಗಳಾಗಿರುತ್ತವೋ ಆಗ ಪರ ವಿದ್ಯೆಯೆನಿಸಿಕೊಳ್ಳುತ್ತವೆಯೆಂದು ಪರಮ ಸಂಹಿತೆಯೆಂಬ ಗ್ರಂಥದಲ್ಲಿ ಹೇಳಲ್ಪಟ್ಟದೆ. (ಋಗಾದಿ ಶಾಸ್ತ್ರ) ಗಳೇ ಪರ ವಿದ್ಯೆಯೆಂದೂ ಅಪರ ವಿದ್ಯೆಯೆಂದೂ ಅರ್ಥಾನುಸಂಧಾನ ಭೇದದಿಂದ ವ್ಯವಹಾರ ಮಾಡಲ್ಪಡುತ್ತವೆ. ಕೇವಲ ಪರಮಾತ್ಮನ ಜ್ಞಾನವನ್ನೇ ಬೋಧಿಸುವ ಅರ್ಥತೆಗೆದು ಕೊಂಡರೆ ಅವುಗಳು ಪರವಿದ್ಯೆಗಳು ಎನಿಸಿಕೊಳ್ಳುವುವು. ಕರ್ಮಾದಿಗಳನ್ನು ಬೋಧಿಸುವ ಅರ್ಥವನ್ನು ತೆಗೆದುಕೊಂಡರೆ ಅಪರವಿದ್ಯೆ ಎನಿಸಿಕೊಳ್ಳುವುವು.

ಭಾ ॥ "ಋಗ್ಭಿರ್ಹೋತ್ರೇಣ ಶಂಸಂತಿ ತಥೌದ್ಗಾತ್ರ್ಯೈ ಸ್ತುವಂತಿ ಯೇ ॥
ವಿಷ್ಣುಮೇವ ತಥಾ ತಸ್ಮೈ ಯಜುರ್ಭಿರಪಿ ಜುಹ್ವತಿ ॥
ಸ್ತುವಂತ್ಯಾಥರ್ವಣೈಶ್ಚೈನಂ ಸೇತಿಹಾಸಪುರಾಣಕೈಃ ।
ನ ವಿಷ್ಣೋಃ ಸದೃಶಂ ಕಿಂಚಿತ್ಪರಮಂ ಚಾಪಿ ಮನ್ವತೇ ॥
ಸರ್ವೋತ್ತಮಂ ತಂ ಜಾನಂತಸ್ತೇ ಹಿ ಭಾಗವತೋತ್ತಮಾಃ" ।

ತಾ ॥ ವಿಷ್ಣುವನ್ನು ಹೋತೃಗಳಾಗಿ ಋಗ್ವೇದ ಮಂತ್ರಗಳಿಂದ ಸ್ತೋತ್ರಮಾಡುವರು. ಉದ್ಗಾತೃಗಳಾಗಿ ಹಾಗೆಯೇ (ಸಾಮವೇದ ಮಂತ್ರಗಳಿಂದ) ಸ್ತುತಿಸುವರು. ಹಾಗೆಯೇ ಯಜುರ್ವೇದ ಮಂತ್ರಗಳಿಂದ ಆ ವಿಷ್ಣುವಿಗೋಸ್ಕರ ಯಾಗವನ್ನು ಮಾಡುವರು. ಅಥರ್ವಣ ಮಂತ್ರಗಳಿಂದಲೂ ಇತಿಹಾಸಪುರಾಣಗಳಿಂದಲೂ ಆತನನ್ನೇ ಸ್ತೋತ್ರಮಾಡುವವರು ವಿಷ್ಣುವನ್ನು

ಸರ್ವೋತ್ತಮನೆಂದು ತಿಳಿಯುವರು, ಮತ್ತು ವಿಷ್ಣುವಿಗೆ ಸಮರು ಅಧಿಕರಿರುವರೆಂದು ಅಂಗೀಕರಿಸಲಾರರು. ಅವರೇ ಭಾಗವತೋತ್ತಮರು.

**ಭಾ** || ವೇದೇ ರಾಮಾಯಣೇ ಚೈವ ಪುರಾಣೇ ಭಾರತೇ ತಥಾ |
ಆದಾವಂತೇ ಚ ಮಧ್ಯೇ ಚ ವಿಷ್ಣುಃ ಸರ್ವತ್ರ ಗೀಯತೇ ||

ಅ || ವೇದ, ರಾಮಾಯಣ, ಪುರಾಣ ಹಾಗೂ ಭಾರತ ಇವುಗಳಲ್ಲಿ ಆದಿಮಧ್ಯಾಂತವಾಗಿ ಸರ್ವ ಸ್ಥಳಗಳಲ್ಲಿಯೂ ಶ್ರೀ ವಿಷ್ಣುವೇ ಗಾನಮಾಡಲ್ಪಡುತ್ತಾನೆ.

**ಭಾ** || ಏತದಂತೇ ಚ ಮಧ್ಯೇ ಚ ಬ್ರಹ್ಮೈವೋಕ್ತ್ವಾ ವಿಜಾನತಾಂ |
ಋಗಾದಿಪಂಚಧಾ ಸಂಸ್ಥಂ ಶಬ್ದಬ್ರಹ್ಮ ಪ್ರಕಾಮ್ಯತಿ ||

ಅ || (ಹಿಂದೆ ಹೇಳಿದ ಗ್ರಂಥಗಳ) ಅಂತ್ಯದಲ್ಲಿಯೂ ಮಧ್ಯದಲ್ಲಿಯೂ ಮುಖ್ಯವಾಗಿ ಪರಬ್ರಹ್ಮನೇ ಹೇಳಲ್ಪಟ್ಟಿದ್ದಾನೆಂದು ತಿಳಿಯುವ ಜ್ಞಾನಿಯನ್ನು ಕುರಿತು ಋಗಾದಿ ವೇದಗಳಲ್ಲಿಯೂ ಇತಿಹಾಸಗಳಲ್ಲಿಯೂ ಐದು ಪ್ರಕಾರನಾಗಿ ನೆಲೆಗೊಂಡಿರುವ ಶಬ್ದ ಬ್ರಹ್ಮವು ಪೂರ್ಣಾಕಾಂಕ್ಷೆಯುಳ್ಳದ್ದು ಆಗುತ್ತದೆ. (ಅಂದರೆ ಅವರ ಕಾರ್ಯಗಳು ಪೂರ್ತಿಸಲ್ಪಡುತ್ತವೆಂದರ್ಥ.)

**ಭಾ** || ಯಂ ವಾಕೇಷ್ವನುವಾಕೇಷು ನಿಷತ್ಸೂಪನಿಷತ್ಸು ಚ |
ಸ್ತುವಂತಿ ಸತ್ಯಕರ್ಮಾಣಂ ಸತ್ಯಂ ಸತ್ಯೇಷು ಸಾಮಸು ||

ಅ || ಅಬಾಧಿತ ಅರ್ಥಗಳುಳ್ಳ ವಾಕ್ಯಗಳಲ್ಲಿ ಅನುವಾಕಗಳಲ್ಲಿ (ಇವೆರಡುಯಜುರ್ವೇದ ಪ್ರಕರಣಗಳು) ನಿಷತ್ತುಗಳಲ್ಲಿ ಉಪನಿಷತ್ತುಗಳಲ್ಲಿ (ಇವೆರಡು ಅಥರ್ವವೇದ ಪ್ರಕರಣಗಳು) ಸಾಮಗಳಲ್ಲಿ ಯಾವ ಸತ್ಯನು ಸತ್ಯಾತ್ಮಕನೂ ಆದ ವಿಷ್ಣುವನ್ನು (ಭಾಗವತೋತ್ತಮರು) ಸ್ತೋತ್ರಮಾಡುವರು.

**ಭಾ** || "ಸರ್ವೇ ವೇದಾ ಯತ್ಪದಮಾಮನಂತಿ
ತಪಾಂಸಿ ಸರ್ವಾಣಿ ಚ ಯದ್ವದಂತಿ |
ಯದಿಚ್ಛಂತೋ ಬ್ರಹ್ಮಚರ್ಯಂ ಚರಂತಿ,
ತತ್ತೇಪದಂ ಸಂಗ್ರಹೇಣ ಪ್ರವಕ್ಷ್ಯೇ ||"

ತಾ || ಸಮಸ್ತವೇದಗಳು ಯಾವ ಪರಮಾತ್ಮನನ್ನು ಮಹಾತಾತ್ಪರ್ಯದಿಂದ ಪ್ರತಿಪಾದನೆ ಮಾಡುತ್ತವೋ ಎಲ್ಲಾ ತಪಸ್ಸುಗಳೂ ಯಾವ ಪರಮಾತ್ಮನ ಜ್ಞಾನೋದ್ದೇಶದಿಂದ ಹೇಳುತ್ತವೋ ಯಾವ ಪರಮಾತ್ಮನನ್ನು ಅಪೇಕ್ಷಿಸಿದವರು ಬ್ರಹ್ಮಚರ್ಯವನ್ನು ಮಾಡುತ್ತಾರೋ ಅವನನ್ನು ಸಂಗ್ರಹದಿಂದ ನಿನಗೋಸ್ಕರ ಹೇಳುವೆನು.

**ಭಾ** || "ವೇದೈಶ್ಚ ಸರ್ವೈರಹಮೇವ ವೇದ್ಯೋ ವೇದಾಂತಕೃದ್ವೇದ ವಿದೇವ ಚಾಹಮಿತಿ ಚ ಭಾರತೇ" | (ಗೀತಾ ೧೫. ೧೫)

ತಾ || ಮತ್ತೂ ಭಾರತದಲ್ಲಿ ಸಮಸ್ತ ವೇದಗಳಿಂದ ತಿಳಿಯಲ್ಪಡುವವನು ನಾನೇ, ವೇದಾಂತ ಗ್ರಂಥವನ್ನೂ ಮಾಡಿದವನೂ ನಾನೇ, ವೇದಗಳ ಸಂಪೂರ್ಣಾರ್ಥವನ್ನೂ ತಿಳಿದವನು ನಾನೇ (ಎಂದು ಶ್ರೀ ಕೃಷ್ಣನು ಹೇಳಿರುವನು).

**ಭಾ** || "ಚತುರ್ದಶ ಮಹಾವಿದ್ಯಾಸ್ಥಾನಾನಿ ವೇದಿತವ್ಯಾನಿ ಚ ಭವಂತಿ ಇತಿ ಚ ಮೂಲಶ್ರುತಿಃ" |

ಮಹಾ ಜ್ಞಾನನಿಮಿತ್ತಗಳಾದ ೧೪ ವಿದ್ಯೆಗಳನ್ನೂ ತಿಳಿಯಬೇಕೆಂದು ಮೂಲಶ್ರುತಿಯು ಹೇಳುವುದು.

**ತಾ** ॥ ೪ ವೇದಗಳು, ಶಿಕ್ಷಾದಿ ಷಡಂಗಗಳು, ಇತಿಹಾಸ ಪುರಾಣಗಳು, ಮನ್ವಾದಿಸ್ಮೃತಿಗಳು, ಮೀಮಾಂಸ ಇವುಗಳೇ ೧೪ ಮಹಾವಿದ್ಯಾಸ್ಥಾನಗಳು.

**ಭಾ** ॥ "ಪಂಚರಾತ್ರಮೃಗಾದ್ಯಾಶ್ಚ ಸರ್ವಮೇಕಂ ಪುರಾಭವತ್ ।
ಮೂಲವೇದ ಇತಿ ಹ್ಯಾಖ್ಯಾ ಕಾಲೇ ಕೃತಯುಗೇ ತದಾ ।
ನೈವರ್ಕ್ಸಾಮಾದಿ ನಾಮಾನಿ ತದಾ ವೇದಸ್ಯ ಚಾಭವನ್" ॥

**ತಾ** ॥ ಪೂರ್ವದಲ್ಲಿ ಪಂಚರಾತ್ರಾಗಮ ಋಗ್ವೇದಾದಿ ಸಮಸ್ತ ಗ್ರಂಥಗಳೂ ಒಂದೇ ಆಗಿತ್ತು ಕೃತಯುಗದಲ್ಲಿ ಇವುಗಳಿಗೆ ಮೂಲವೇದವೆಂದೇ ಹೆಸರಿತ್ತು (ಮೂಲವೇದ ವೆಂದರೆ ಮೂಲಕಾರಣನಾದ ಪರಮಾತ್ಮನನ್ನೂ ತಿಳಿಸಿಕೊಡುವ ವೇದ)ಆಗ ಋಕ್ಸಾಮಾದಿ ಹೆಸರುಗಳು ವೇದಗಳಿಗೆ ಪ್ರತ್ಯೇಕವಾಗಿರಲಿಲ್ಲ.

**ಭಾ** ॥ (1) "ನೈವ ಚೇಂದ್ರಾದಿನಾಮಾನಿ ವಿಷ್ಣೋರನ್ಯತ್ರ ಕುತ್ರಚಿತ್ ।
ಬ್ರಹ್ಮರುದ್ರೇಂದ್ರಪೂರ್ವೈಸ್ತು ನಾಮಭಿಃ ಪ್ರೋಚ್ಯತೇ ಹರಿಃ ।
(2) ದೇವತಾತ್ವೇನ ಪೂಜ್ಯಸ್ಸ (3)ಬ್ರಹ್ಮಾದ್ಯಾ ಮನುನಾಮಕಾಃ ।
ವಕ್ತೃತ್ವೇನ ಪಿತೃತ್ವೇನ ಕಾರಿತ್ವೇನೈವ ಚಾದರಾತ್ ।
ಇಜ್ಯಂತೇ ದೇವತಾಃ ಸರ್ವಾ ನ ತು ದೇವತಯಾ ಕ್ವಚಿತ್ ।
(4) ಅನನ್ಯಯಾಜಿನಸ್ತೇ ತು ತಸ್ಮಾತ್ಕಾರ್ತಯುಗಾ ಜನಾಃ ।
ಪ್ರಾಪ್ನುವಂತಿ ಹರಿಂ ತಂ ಚ (5) ತಸ್ಮಾದ್ವೇದೇನ ಕಿಂಚನ ।
ಪಾರಾವರ್ಯಂ ಹರೇರ್ಯಸ್ಮಾದುತ್ಥಿತಾಸ್ತುರಗಾನನಾತ್ ।
ಋಗಾದ್ಯಾಅನುವ್ಯಾಖ್ಯಾಂತಾಃ ॥

**ತಾ** ॥ (1) ಇಂದ್ರಾದಿನಾಮಗಳು ವಿಷ್ಣು ಹೊರತು ಇನ್ನಾರಿಗೂ ಇರುತ್ತಿರಲಿಲ್ಲ. ಮತ್ತು ಬ್ರಹ್ಮರುದ್ರೇಂದ್ರಾದಿ ನಾಮಗಳಿಂದ ವಿಷ್ಣುವೇ ಕರೆಸಿಕೊಳ್ಳಲ್ಪಡುತ್ತಿದ್ದನು. (2) ಆ ವಿಷ್ಣುವೇ ಪರಮಾತ್ಮನೆಂದು ಪೂಜಿಸಿಕೊಳ್ಳಲ್ಪಡುತ್ತಿದ್ದನು (3) ಬ್ರಹ್ಮಾದಿದೇವತೆಗಳು ಮನುನಾಮಕರಾದವರು ಪ್ರೀತಿಪೂರ್ವಕವಾಗಿ ಗುರುಗಳೆಂದು ಪಿತೃಗಳೆಂದು, ಭಗವತ್ಕಾರ್ಯಕ್ಕೆ ಸಹಕಾರಿಗಳೆಂದು ಗೌರವಿಸಲ್ಪಡುತ್ತಿದ್ದರು. ಎಷ್ಟುಮಾತ್ರವೂ ಈ ಬ್ರಹ್ಮಾದಿದೇವತೆಗಳು ದೇವತ್ವೇನ ಪೂಜಿಸಲ್ಪಡುತ್ತಿರಲಿಲ್ಲ. (4) ಆ ಕೃತಯುಗ ಜನರು ಪರಮಾತ್ಮನಾದ ವಿಷ್ಣುವಿನ ವಿನಹ ಇನ್ನುಯಾರನ್ನೂ ಪೂಜಿಸದೇ ಇರುವುದರಿಂದ ಆ ವಿಷ್ಣುವನ್ನೇ ಹೊಂದುತ್ತಿದ್ದರು. (5) ಆ ಕಾಲದಲ್ಲಿ ಸರ್ವವೇದಗಳಿಗೂ ವಿಷ್ಣುಪರವಾದ ಅರ್ಥವನ್ನೇ ಮಾಡಿಕೊಂಡಿದ್ದುದರಿಂದ ಪರವಿದ್ಯೆಯೆಂದೂ ಅಪರ ವಿದ್ಯೆಯೆಂದೂ ಭೇದವಿರಲಿಲ್ಲ. ಮತ್ತೂ ಋಗ್ವೇದ ಮೊದಲು ಅನುವ್ಯಾಖ್ಯಾವರೆಗೂ ಸಮಸ್ತ ವಿದ್ಯೆಗಳೂ ಹಯಗ್ರೀವ ದೇವರಿಂದ ಉಪದೇಶಿಸಲ್ಪಟ್ಟುದರಿಂದ (ಉಚ್ಚನೀಚಭಾವವು) ಪಾರಾವರ್ಯವು ಇರುತ್ತಿರಲಿಲ್ಲ.

**ಭಾ** ॥ ತಸ್ಮಾತ್ಸರ್ವೈರ್ಹರಿಂ ಯಜೇತ್ । ತಸ್ಮಾದ್ಬ್ರಹ್ಮಾದಯಃ ಸರ್ವೇ
ಮನವೋ ಮಾನವಾಸ್ತಥಾ । ಯಜಂತಿ ಸರ್ವವೇದೈಸ್ತಂ ಜಾನಂತಿ ಚ
ವಿನಿಶ್ಚಯಾತ್ ।

ತಾ || ಆದುದರಿಂದ ಹರಿಯನ್ನೇ ಸಮಸ್ತ ವೇದಗಳಿಂದಲೂ ಪೂಜಿಸುತ್ತಿದ್ದರು. ಬ್ರಹ್ಮಾದಿಗಳು ಸಕಲರಾದ ಮನು ಮಾನವರು ಸರ್ವ ವೇದಗಳಿಂದಲೂ ಆ ಹರಿಯನ್ನೇ ಪೂಜಿಸುವುದೂ, ತಿಳಿಯುವುದೂ ಆಗಿತ್ತು.

ಭಾ || ಅಶಕ್ತಾಃ ಪಂಚರಾತ್ರೇಣ ಋಗಾದ್ಯೈರ್ವಾಥ ತಂ ಯಜೇತ್ ||

ತಾ || ಸರ್ವ ವೇದಗಳಿಂದ ಪೂಜಿಸಲು ಅಶಕ್ತನಾದವನು ಪಂಚರಾತ್ರಗಳಿಂದಾಗಲೀ ಋಗಾದಿ ವೇದಗಳಿಂದಾಗಲೀ ಆತನನ್ನು ಪೂಜಿಸಬೇಕು.

(ಇಷ್ಟರ ವರೆಗೆ ಕೃತಯುಗದ ಪೂಜಾಕ್ರಮವನ್ನು ಹೇಳಿ ಇನ್ನು ಮುಂದಿನ ಯುಗಗಳ ಪೂಜಾಕ್ರಮವನ್ನು ಹೇಳುವರು.)

ಭಾ || ಋಗಾದ್ಯೈರೇವ ಸತ್ರೈತ್ರೈರ್ಭಿನ್ನೈರಿಷ್ಟೋ ಜನೈರ್ಹರಿಃ |
ದ್ವಾಪರೀಯೈರ್ಜನೈರ್ವಿಷ್ಣುಃ ಪಂಚರಾತ್ರೈಸ್ತು ಕೇವಲೈಃ |
ಕಲೌ ತು ನಾಮಮಾತ್ರೇಣ ಪೂಜ್ಯತೇ ಭಗವಾನ್ ಹರಿಃ ||

ತಾ || ತ್ರೇತಾಯುಗದ ಜನರಿಂದ ಹರಿಯು ವಿಭಕ್ತಗಳಾದ ಋಗಾದಿ ವೇದಗಳಿಂದ ಪೂಜಿಸಲ್ಪಡುತ್ತಿದ್ದನು. ದ್ವಾಪರಯುಗದಲ್ಲಿ ವಿಷ್ಣುವು ಕೇವಲ ಪಂಚರಾತ್ರಗಳಿಂದಲೇ ಜನರಿಂದ ಪೂಜಿಸಲ್ಪಡುತ್ತಿದ್ದನು. ಕಲಿಯುಗದಲ್ಲಿ ಪರಮಾತ್ಮನಾದ ಹರಿಯು ನಾಮೋಚ್ಚಾರಣ ಮಾತ್ರದಿಂದಲೇ ಪೂಜಿಸಲ್ಪಡುತ್ತಾನೆ. ಅಂದರೆ ಅಧಮ ಪಕ್ಷದಲ್ಲಿ ಈ ಪ್ರಕಾರವಾಗಿಯಾದರೂ ಪೂಜಿಸಬೇಕೆಂದು ತಾತ್ಪರ್ಯ.

ಭಾ || ಏಕೋ ವೇದಃ ಕೃತೇಹ್ಯಾಸೀ ತ್ರೇತಾಯಾಂ ಸ ತ್ರಿಧಾಽಭವತ್ |
ಸ ಏವ ಪಂಚಧಾ ಜಾತೋ ದ್ವಾಪರಂ ಪ್ರಾಪ್ಯ ವೈ ಯುಗಂ |
ಉತ್ಸನ್ನಃ ಸ ಕಲಿಂ ಪ್ರಾಪ್ಯ ವೇದಃ ಪ್ರಾಯೇಣ ಸರ್ವಶಃ ||

ತಾ || ಕೃತಯುಗದಲ್ಲಿ ವೇದವು ಒಂದೇ ಆಗಿತ್ತು. ತ್ರೇತಾಯುಗದಲ್ಲಿ ಅದೇ ವೇದವು ಮೂರಾಗಿ ವಿಭಾಗಿಸಲ್ಪಟ್ಟಿತು. ದ್ವಾಪರಯುಗದಲ್ಲಿ ಅದೇ ವೇದವು ಐದಾಗಿ ವಿಭಾಗಿಸಲ್ಪಟ್ಟಿತು. ಅದೇ ವೇದವು ಕಲಿಯುಗದಲ್ಲಿ ಹೆಚ್ಚುಕಡಿಮೆಯಾಗಿ ಮಲಿನವಾಗುತ್ತದೆ. ಅಂದರೆ ಮರೆಯಾಗಿಹೋಗುತ್ತದೆ.

ಭಾ || ಮುಖ್ಯೋ ಧರ್ಮಃ ಕಾರ್ತಯುಗೋ ವರ್ತಿತವ್ಯಃ ಕಲಾವಪಿ |
ತ್ರೇತಾದೌ ತದಶಕ್ತ್ಯಾ ಹಿ ಧರ್ಮೋಽನ್ಯಃ ಸಂಪ್ರಕೀರ್ತಿತಃ ||

ತಾ || ಕಲಿಯುಗದಲ್ಲಾದರೂ ಕೃತಯುಗದ ಮುಖ್ಯ ಧರ್ಮಗಳನ್ನೇ ಆಚರಿಸತಕ್ಕದ್ದು. ಹಾಗೆ ಆಚರಿಸುವುದಕ್ಕೆ ಅಶಕ್ತರಾದವರನ್ನುದ್ದೇಶಿಸಿ ತ್ರೇತಾದಿ ಇತರ ಯುಗಧರ್ಮಗಳೂ ಹೇಳಲ್ಪಟ್ಟಿವೆ.

ಭಾ || ಕೃತೇ ಭಾಗವತಾಃ ಸರ್ವೇ ವೇದಾಶ್ಚ ಪುರುಷಾಸ್ತಥಾ |
ತ್ರೇತಾಯಾಂ ಭಿನ್ನವಿಷಯಾಸ್ತತಸ್ತ್ರೈವಿದ್ಯತಾಂ ಗತಾಃ

ತ್ರಿದ್ವರು. ತ್ರೇತಾಯುಗದಲ್ಲಿ ಜನರು ಇತರ ವಿಷಯಾಸಕ್ತರು. (ಅಂದರೆ ಕರ್ಮದೇವತಾ ವಿಷಯುಪರರಾದರು.) ಕಾರಣ, ವೇದಗಳೂ ತ್ರೈವಿದ್ಯಗಳು ಆದವು. (ಅಂದರೆ ಯಥಾಯೋಗ್ಯವಾಗಿ ವಿಷ್ಣುವಿಗೆ ಆಧಿಕ್ಯ, ಕಿಂಚಿದುತ್ತಮತ್ವ, ಬ್ರಹ್ಮಾದಿ ಸಾಮ್ಯ ಅವರಿಂದ ಹೀನತ್ವರೂಪ ಮೂರುವಿಧಾರ್ಥವುಳ್ಳವುಗಳೆಂದು ತಿಳಿಯಲ್ಪಟ್ಟವು.)

**ಭಾ** ॥ ತಸ್ಮಾದೇಕಃ ಸರ್ವವೇದೈರ್ಜ್ಞೇಯೋ ವಿಷ್ಣುಃ ಸನಾತನಃ ।
ಪೂಜ್ಯೋ ಯಜ್ಞೈಃ ಸೋಪಚಾರೈರ್ಧ್ಯೇಯೋ ವಂದ್ಯಶ್ಚ ಸರ್ವದಾ ।
- ಇತ್ಯಾದಿ ನಾರಾಯಣಸಂಹಿತಾಯಾಂ ॥

**ತಾ** ॥ ಆದುದರಿಂದ ನಿತ್ಯನಾದ ವಿಷ್ಣು ಒಬ್ಬನೇ ಮುಖ್ಯವಾಗಿ ಸರ್ವದಾ ಸರ್ವವೇದಗಳಿಂದಲೂ ಪ್ರತಿಪಾದ್ಯನು. ಯಜ್ಞಗಳಿಂದಲೂ ಉಪಚಾರಗಳಿಂದಲೂ ಪೂಜ್ಯನು, ಧ್ಯೇಯನು, ವಂದ್ಯನು, ಎಂದು ತಿಳಿಯತಕ್ಕದ್ದು, ಹೀಗೆ ನಾರಾಯಣಸಂಹಿತೆಯಲ್ಲಿ ಇರುತ್ತದೆ.

**ಭಾ** ॥ ವೇದವಾದಾಶ್ಚಾನುಯುಗಂ ಹ್ರಸಂತೀತಿ ಚ ನಃ ಶ್ರುತಿರಿತಿ ಭಾರತೇ ॥

**ತಾ** ॥ ಭಾರತದಲ್ಲಿ ಹೀಗೆ ಇದೆ. 'ವೇದಗಳ ಅರ್ಥವು ಯುಗಾನುಸಾರವಾಗಿ ಹ್ರಾಸವನ್ನು ಹೊಂದುವುದು. ತತ್ಪ್ರಯುಕ್ತ ಪರಮಾತ್ಮನನ್ನು ಪ್ರತಿಪಾದಿಸುವ ಶಕ್ತಿಯು ಕಡಿಮೆಯಾಗುವುದೆಂದು ನಾವು ಕೇಳಿರುವೆವು.'

**ಭಾ** ॥ "ವೇದೈಶ್ಚ ಪಂಚರಾತ್ರೈಶ್ಚ ಭಕ್ತ್ಯಾ ಯಜ್ಞೈಸ್ತಥೈವಚ ।
ದೃಶ್ಯೋಽಹಂ ನಾನ್ಯಥಾ ದೃಶ್ಯೋ ವರ್ಷಕೋಟಿಶತೈರಪೀತ್ಯಾದಿ
ವಾರಾಹೇ" ॥

**ತಾ** ॥ ಮತ್ತು ವರಾಹ ಪುರಾಣದಲ್ಲಿ ಹೀಗೆ ಹೇಳಿದೆ. ವೇದಗಳಿಂದಲೂ, ಪಂಚರಾತ್ರಗಳಿಂದಲೂ, ಭಕ್ತಿಯಿಂದಲೂ, ಯಜ್ಞಗಳಿಂದಲೂ, ನಾನು ನೋಡಲು ಶಕ್ಯನಾಗುವೆನು. ಶತಕೋಟಿ ವರ್ಷಗಳಾದರೂ ಇತರ ಪ್ರಯತ್ನದಿಂದ ನಾನು ನೋಡಲು ಸಾಧ್ಯನಾಗುವದಿಲ್ಲ.

**ಭಾ** ॥ ಅತ್ರಾಪಿ "ತದೇತತ್ಸತ್ಯಂ ಮಂತ್ರೇಷು ಕರ್ಮಾಣಿ ಕವಯೋ ಯಾನ್ಯಪಶ್ಯನ್ನಿ"ತ್ಯಾದಿನಾ ಕರ್ಮವಿಷಯಾಮಪರವಿದ್ಯಾಮುಕ್ತ್ವಾ "ಯೇನಾಕ್ಷರಂ ಪುರುಷಂ ವೇದ ಸತ್ಯಂ ಪ್ರೋವಾಚ ತಾಂ ತತ್ವತೋ ಬ್ರಹ್ಮವಿದ್ಯಾ" ಮಿತ್ಯಾರಭ್ಯಾಥರ್ವಣಾನೇವ ಮಂತ್ರಾನ್ ಪರವಿದ್ಯಾತ್ವೇನಾಹ ॥

**ತಾ** ॥ ಈ ಉಪನಿಷತ್ತಿನಲ್ಲಿ ಕೂಡ "ತದೇತತ್ಸತ್ಯಂ ... " ಇತ್ಯಾದಿ ಮಂತ್ರಗಳಿಂದ ಕರ್ಮವಿಷಯಕವಾದ ಅಪರವಿದ್ಯೆಯನ್ನು ಹೇಳಿ "ಯೇನಾಕ್ಷರಂ ... " ಎಂಬ ಮಂತ್ರದ ಮೊದಲುಗೊಂಡು ಆಥರ್ವಣ ಮಂತ್ರಗಳನ್ನೇವೆ ಪರವಿದ್ಯೆಯೆಂದು ಹೇಳುತ್ತಾರೆ. (ಆದುದರಿಂದ ವೇದವನ್ನು ಜ್ಞಾನಕಾಂಡವೆಂದೂ ಕರ್ಮಕಾಂಡವೆಂದೂ ವಿಭಾಗವಮಾಡಿ ಜ್ಞಾನಕಾಂಡವೆನಿಸಿಕೊಳ್ಳುವ ಉಪನಿಷತ್ತುಗಳಲ್ಲಿ ಮಾತ್ರವೇ ಪರಮಾತ್ಮತತ್ವವು ಪ್ರತಿಪಾದಿಸಲ್ಪಡುತ್ತದೆ ಎಂಬುವ ಮತವು ಯುಕ್ತವಲ್ಲ. ನಿಖಿಲ ವೇದಗಳು ಪರಮಾತ್ಮಪರವಾಗಿ ಅರ್ಥಮಾಡಿದರೆ ಪರವಿದ್ಯೆಗಳೇ ಆಗುವುವು.)

ಭಾ || ಚತುರ್ವೇದಸಂಸ್ಕಾರವತಾಮೇವ ಚ ವಿದ್ಯಾಯಾಂ ಅಧಿಕಾರ ಉಕ್ತಃ |
ತೇಷಾಮೇವೈತಾಂ ಬ್ರಹ್ಮವಿದ್ಯಾಂ ವದೇತ ಶಿರೋವ್ರತಂ
ವಿಧಿವದ್ಯೈಸ್ತು ಚೀರ್ಣಮಿತಿ | ಶಿರೋವ್ರತಮಿತ್ಯುಪಲಕ್ಷಣತ್ವೇನ ||

ತಾ || ನಾಲ್ಕು ವೇದಸಂಸ್ಕಾರಗಳುಳ್ಳವರಿಗೆ ಮಾತ್ರ ವಿದ್ಯೆಗಳಲ್ಲಿ ಅಧಿಕಾರವು ಹೇಳಲ್ಪಟ್ಟದೆ. ಈ ಬ್ರಹ್ಮವಿದ್ಯೆಯನ್ನೂ ಶಿರೋವ್ರತವನ್ನೂ ಶಾಸ್ತ್ರೋಕ್ತವಾಗಿ ಯಾರು ಆಚರಿಸಿರುವರೋ ಅವರುಗಳಿಗೇವೇ ಬ್ರಹ್ಮವಿದ್ಯೆಯನ್ನು ಹೇಳಬೇಕೆಂದಿದೆ. (ಆದುದರಿಂದ ಋಗಾದಿ ವೇದಗಳಿಗೂ ಬ್ರಹ್ಮವಿದ್ಯೆಗೂ ಅಧಿಕಾರ ಸಾಮ್ಯವಿರುವುದರಿಂದಲೂ ಕೂಡ ಭೇದವಿರುವುದಿಲ್ಲ). ಶಿರೋವ್ರತವೆಂಬುವುದು ಉಪಲಕ್ಷಣದಿಂದ ಹೇಳಲ್ಪಟ್ಟಿರುವುದು. (ಉಪಲಕ್ಷಣವೆಂದರೆ ಸ್ವಾರ್ಥವನ್ನು ಬಿಡದೇ ಅನ್ಯಾರ್ಥವನ್ನು ತಿಳಿಸಿಕೊಡೋಣ.) ಶಿರೋವ್ರತವು ಅಥರ್ವ ವೇದದವರಿಗೆ ಸಂಸ್ಕಾರವಾಗಿದ್ದರೂ ಎಲ್ಲಾ ವೇದಗಳ ಸಂಸ್ಕಾರವೂ ಇದರಿಂದಲೇ ಸೂಚಿತವಾಗುವುದು.

ಭಾ || 'ಸ್ವವೇದವ್ರತಯುಕ್ತಸ್ಯ ಸರ್ವವೇದಗತಾಸ್ವಪಿ |
ಅಧಿಕಾರೋಽಸ್ತಿ ವಿದ್ಯಾಸು ನಾವೇದವ್ರತಿನಃ ಕ್ವಚಿ'ದಿತಿ ವ್ಯಾಸಸ್ಮೃತೌ ||

ಅ || ವ್ಯಾಸಸ್ಮೃತಿಯಲ್ಲಿ ಹೀಗಿದೆ. ಅವರವರ ವೇದಸಂಸ್ಕಾರಗಳನ್ನು ಆಚರಿಸಿದವರಿಗೇನೇವೆ ಸರ್ವವೇದದಲ್ಲಿರುವ ವಿದ್ಯೆಗಳಲ್ಲಿಯೂ, ಅಧಿಕಾರವು ಇರುತ್ತದೆ. ಸ್ವವೇದ ಸಂಸ್ಕಾರವಿಲ್ಲದವರಿಗೆ ಸ್ವಲ್ಪವಾದರೂ ಅಧಿಕಾರವಿರುವುದಿಲ್ಲ.

**ಮಂ || ಅಥ ಪರಾ | ಯಯಾ ತದಕ್ಷರಮಧಿಗಮ್ಯತೇ ||**

ಅ || ತದಕ್ಷರಂ=ಆ ನಾಶರಹಿತನಾದ ಪರಬ್ರಹ್ಮನು, ಯಯಾ ಅಧಿಗಮ್ಯತೇ=ಯಾವ ಋಗಾದಿಗಳಿಂದ ಜ್ಞಾತನಾಗುತ್ತಾನೋ, ಅಥ ಪರಾ=ಆವಾಗ ಅವುಗಳೇ ಪರವಿದ್ಯೆಯು.

**ಮಂ || ಯತ್ತದದ್ರೇಶ್ಯಮಗ್ರಾಹ್ಯಮಗೋತ್ರಮವರ್ಣಮಚಕ್ಷುಃಶ್ರೋತ್ರಂ ತದಪಾಣಿಪಾದಂ ನಿತ್ಯಂ ವಿಭುಂ ಸರ್ವಗತಂ ಸುಸೂಕ್ಷ್ಮಂ | ತದವ್ಯಯಂ ಯದ್ಭೂತಯೋನಿಂ ಪರಿಪಶ್ಯಂತಿ ಧೀರಾಃ || ೬ ||**

ಅ || ಯತ್=ಯಾವ ಕಾರಣದಿಂದ, ತತ್=ಆ ಅಕ್ಷರಶಬ್ದವಾಚ್ಯ ಪರಮಾತ್ಮನು, ಅದ್ರೇಶ್ಯಂ=ಪ್ರತ್ಯಕ್ಷದಿಂದ ತಿಳಿಯಲಶಕ್ಯನು, ಅಗ್ರಾಹ್ಯಂ=ಗ್ರಹಿಸಲಶಕ್ಯನು, ಅಗೋತ್ರಂ=ಪ್ರವರಶೂನ್ಯನು, ಅವರ್ಣಂ=ಜಾತಿಶೂನ್ಯನು, ಅಚಕ್ಷುಃಶ್ರೋತ್ರಂ=ಕಣ್ಣುಕಿವಿ ಇಲ್ಲದವನು, ಅಪಾಣಿಪಾದಂ=ಕೈಯು, ಕಾಲುಗಳು ಇಲ್ಲದವನು, ನಿತ್ಯಂ=ಶಾಶ್ವತನು, ವಿಭುಂ=ಸರ್ವೇಶ್ವರನು, ಸರ್ವಗತಂ=ಸರ್ವಾಂತರ್ಯಾಮಿಯು, ಸುಸೂಕ್ಷ್ಮಂ=ಅತ್ಯಂತ ಸೂಕ್ಷ್ಮನು, ಯದ್ಭೂತಯೋನಿಂ=ಸರ್ವ ಪ್ರಾಣಿಗಳ ಉತ್ಪತ್ತಿಸ್ಥಿತಿನಾಶಕ್ಕೆ ಕಾರಣನಾದವನು, ತದವ್ಯಯಂ=ಆತನು ವಿಕಾರಶೂನ್ಯನು, ಎಂದು. ಧೀರಾಃ=ಜ್ಞಾನಿಗಳು, ಪರಿಪಶ್ಯಂತಿ=ನೋಡುತ್ತಾರೆ, ತಿಳಿಯುತ್ತಾರೆ.

ತಾ || ಪರಮಾತ್ಮನು ಪ್ರಾಕೃತ ಇಂದ್ರಿಯಗಳಿಗೆ ಗೋಚರನಲ್ಲ. ಅವನಿಗೆ ಪ್ರಾಕೃತ ದೇಹವೂ, ಅವಯವಗಳೂ ಇಲ್ಲ. ಕೇವಲ ಚಿದಾನಂದ ಸ್ವರೂಪಿಯು. ಅತಿ ಸೂಕ್ಷ್ಮನು, ಸರ್ವಾಂತರ್ಯಾಮಿಯು, ಜಗಜ್ಜನ್ಮಾದಿಕಾರಣನೂ ಆಗಿರುತ್ತಾನೆ.

**ಮಂ ॥ ಯಥೋರ್ಣನಾಭಿಃ ಸೃಜತೇ ಗೃಹ್ಣತೇ ಚ ಯಥಾ ಪೃಥಿವ್ಯಾಮೋಷಧಯಃ ಸಂಭವಂತಿ । ಯಥಾ ಸತಃ ಪುರುಷಾತ್ಕೇಶಲೋಮಾನಿ ತಥಾಕ್ಷರಾತ್ಸಂಭವತೀಹ ವಿಶ್ವಂ ॥ ೭ ॥**

ಅ ॥ (ಪರಮಾತ್ಮನು ಜಗತ್ಸೃಷ್ಟಿಯನ್ನು ಮಾಡುವ ಕ್ರಮವನ್ನು ಕೆಲವು ಉಪಮಾನಗಳಿಂದ ತಿಳಿಸುವರು:) ಯಥಾ=ಹೇಗೆ, ಊರ್ಣನಾಭಿಃ=ಜಾಡರಹುಳವು, ಸೃಜತೇ=ಸೃಷ್ಟಿಸುತ್ತದೋ, ಹೊರಗೆ ಹಾಕುತ್ತದೋ, ಮತ್ತು ಗೃಹ್ಣತೇ ಚ=ಎಳೆಕೊಳ್ಳುತ್ತದೋ, ಪೃಥಿವ್ಯಾಂ=ಭೂಮಿಯಲ್ಲಿ, ಓಷಧಯಃ=ಸಸ್ಯಾದಿಗಳು, ಸಂಭವಂತಿ=ಹುಟ್ಟುತ್ತವೋ, ಸತಃ=ಜೀವವಂತನಾದ, ಪುರುಷಾತ್=ಪುರುಷನ ದೆಸೆಯಿಂದ, ಕೇಶಲೋಮಾನಿ=ಕೂದಲುಗಳು (ಬೆಳೆಯುತ್ತವೋ;) ತಥಾ=ಹಾಗೆಯೇ, ಅಕ್ಷರಾತ್=ಪರಬ್ರಹ್ಮನಿಂದ, ಇಹ ವಿಶ್ವಂ=ಈ ಜಗತ್ತು, ಸಂಭವತಿ=ಹುಟುತ್ತದೆ.

ತಾ ॥ ಜಾಡರಹುಳವು ತನ್ನ ದೇಹದಿಂದ ದಾರವನ್ನು ಹೊರಗೆ ಹಾಕಿ ಮತ್ತು ಎಳೆಕೊಳ್ಳುವಂತೆಯೇ ಪರಮಾತ್ಮನು ಸತ್ಯವಾದ ಜಗತ್ತನ್ನು ತನ್ನ ಉದರದಿಂದ ಸೃಷ್ಟಿಸಿ ಮತ್ತು ಅಂತ್ಯಕಾಲದಲ್ಲಿ ತನ್ನಲ್ಲೇ ಲೀನವಾಗುವಂತೆ ಮಾಡುವನು. ಈ ಉಪಮಾನದಿಂದ ಜಗತ್ತಿಗೂ, ಪರಮಾತ್ಮನಿಗೂ ಭೇದವೂ ಮತ್ತು ಜಗತ್ತಿನ ಸತ್ಯತ್ವವೂ ಸ್ಥಾಪಿಸಲ್ಪಡುವುವು. ಸಸ್ಯಾದಿಗಳು ಭೂಮಿಯಲ್ಲಿ ಬಿದ್ದ ಬೀಜಗಳಿಂದ ಉತ್ಪನ್ನವಾಗುವಂತೆ ಜೀವರು ಪರಮಾತ್ಮನಿಂದ ಉದ್ಭವಿಸುವರು. ಪರಮಾತ್ಮನಿಗೂ ಜೀವರಿಗೂ ಭೇದವು ಈ ಉದಾಹರಣದಿಂದ ಸ್ಪಷ್ಟವಾಗುವುದು. ಮತ್ತು ಜೀವರು ಪರತಂತ್ರರೆಂದು ವಿದಿತವಾಗುವುದು. ನಿರಾಯಾಸವಾಗಿ ಪುರುಷನ ದೇಹದಲ್ಲಿ ರೋಮಗಳು ಬೆಳೆಯುವಂತೆ ಪರಮಾತ್ಮನಿಂದ ನಿರಾಯಾಸವಾಗಿ ಜಗತ್ತು ಸೃಷ್ಟಿಮಾಡಲ್ಪಡುವುದು. ॥ ೭ ॥

**ಮಂ ॥ ತಪಸಾ ಚೀಯತೇ ಬ್ರಹ್ಮ ತತೋಽನ್ನಮಭಿಜಾಯತೇ । ಅನ್ನಾತ್ಪ್ರಾಣೋ ಮನಃ ಸತ್ಯಂ ಲೋಕಾಃ ಕರ್ಮಸು ಚಾಮೃತಂ ॥ ೮ ॥**

ಅ ॥ ಬ್ರಹ್ಮ=ಪರಮಾತ್ಮನು, ತಪಸಾ=ಆಲೋಚನೆಯಿಂದ, ಚೀಯತೇ=ಸಂಬದ್ಧನಾಗುತ್ತಾನೆ. ತತಃ=ಆ ಆಲೋಚನಾನಂತರದಲ್ಲಿ, ಅನ್ನಂ ಅಭಿಜಾಯತೇ=ಅನ್ನವು ಹುಟ್ಟುತ್ತದೆ. ಅನ್ನಾತ್=ಅನ್ನದ ದೆಸೆಯಿಂದ, ಪ್ರಾಣಃ=ಪ್ರಾಣವು, ಮನಃ=ಮನಸ್ಸು, ಸತ್ಯಂ=ಸತ್ಯವು, ಲೋಕಾಃ=ಲೋಕಗಳು, (ಹುಟ್ಟುತ್ತವೆ.) ಕರ್ಮಸು=ಕರ್ಮಗಳಲ್ಲಿ, ಅಮೃತಂ=ಸ್ವರ್ಗಮೋಕ್ಷಾದಿಗಳು ಹುಟ್ಟುತ್ತವೆ.

ತಾ ॥ ಇಲ್ಲಿ ಅನ್ನಾದಿ ಪದಗಳಿಂದ ತತ್ತದಭಿಮಾನಿ ದೇವತೆಗಳೂ, ಜಡಗಳೂ ಕೂಡ ಸೂಚಿತವಾದವೆಂದು ತಿಳಿಯಬೇಕು.

**ಮಂ ॥ ಯಸ್ಸರ್ವಜ್ಞಃ ಸರ್ವವಿದ್ಯಸ್ಯ ಜ್ಞಾನಮಯಂ ತಪಃ। ತಸ್ಮಾದೇತದ್ಬ್ರಹ್ಮ ನಾಮರೂಪಮನ್ನಂ ಚ ಜಾಯತೇ ॥ ೯ ॥**

ಅ ॥ ಯಃ=ಯಾವನು, ಸರ್ವಜ್ಞಃ=ಸರ್ವಜ್ಞನೋ, ಸರ್ವವಿತ್=ಸರ್ವವನ್ನೂ ತಿಳಿದವನೋ, ಯಸ್ಯ=ಯಾರಿಗೆ, ಜ್ಞಾನಮಯಂ=ಜ್ಞಾನಮಯವಾದ, ತಪಃ=ಆಲೋಚನೆಯೋ, ತಸ್ಮಾತ್=ಆತನ ದೆಸೆಯಿಂದ, ಏತದ್ಬ್ರಹ್ಮ=ಈ ಚತುರ್ಮುಖಬ್ರಹ್ಮನು, ನಾಮರೂಪಂ=ನಾಮವೂ ರೂಪವೂ, ಅನ್ನಂ=ಅನ್ನವೂ, ಜಾಯತೇ=ಹುಟ್ಟುತ್ತದೆ.

ಭಾ ॥ ಏತದ್ಬ್ರಹ್ಮ ಚತುರ್ಮುಖಃ ॥

॥ ಇತಿ ಪ್ರಥಮಃ ಖಂಡಃ ॥

(ಈ ಮಂತ್ರದಲ್ಲಿ) ಏತದ್ಬ್ರಹ್ಮನೆನಿಸಿಕೊಂಡವನು ಚತುರ್ಮುಖನು.

ತಾ ॥ ಚರಾಚರಾತ್ಮಕ ಸಮಸ್ತ ಪ್ರಪಂಚವನ್ನು ಪರಮಾತ್ಮನು ತನ್ನ ಇಚ್ಛಾಮಾತ್ರದಿಂದಲೇ ನಿರಾಯಾಸವಾಗಿ ಸೃಷ್ಟಿಮಾಡುವನು. ಚತುರ್ಮುಖ ಬ್ರಹ್ಮನು ಸೃಷ್ಟಿಕರ್ತನೆಂದು ಪ್ರಸಿದ್ಧನಾಗಿದ್ದರೂ ಅವನೂ ಪರಮಾತ್ಮನಿಂದಲೇ ಉದ್ಭವಿಸಿದವನು. ಇತರ ದೇವತೆಗಳು ಜಡಪದಾರ್ಥಗಳು ಅವನಿಂದ ಉದ್ಭವಿಸುವದೆಂದು ಪ್ರತ್ಯೇಕ ಹೇಳಲಗತ್ಯವಿಲ್ಲ. ಇಚ್ಛೆಯಿಂದಲೇ ಸೃಷ್ಟಿ ಮಾಡುವನೆಂದು ಹೇಳಿದುದರಿಂದ ಪರಿಣಾಮವಾದವು ಯುಕ್ತವಲ್ಲವೆಂದು ಸೂಚಿತವಾಯಿತು. ಪರಮಾತ್ಮನೇ ಜಗತ್ತಾಗಿ ವಿಕಾರ ಹೊಂದುವನೆಂದು ಹೇಳುವದೇ ಪರಿಣಾಮವಾದವು. ಈ ಖಂಡದಲ್ಲಿ ವೇದಾದಿಗಳಿಂದ ಕರ್ಮಗಳನ್ನೂ, ದೇವತೆಗಳನ್ನೂ ತಿಳಿಯುವದಲ್ಲದೆ ಪರಮಾತ್ಮನನ್ನು ಮುಖ್ಯತಾತ್ಪರ್ಯದಿಂದ ತಿಳಿಯಲಾಗುವದೆಂದೂ, ಹೀಗೆ ತಿಳಿಯುವುದರಿಂದ ಅವುಗಳಿಗೆ ಪರವಿದ್ಯೆ ಎಂದು ಹೆಸರು ಬಂದಿರುವದೆಂದೂ, ಆ ಪರಮಾತ್ಮನು ಸರ್ವೋತ್ತಮನೆಂದೂ ತಿಳಿಸಿದಂತಾಯಿತು.

**ಪ್ರಥಮ ಖಂಡವು ಸಮಾಪ್ತವಾಯಿತು.**

## ಖಂಡ ೨.

ಈ ಖಂಡದಲ್ಲಿ ಮುಮುಕ್ಷುವಿಗೆ ಸ್ವವರ್ಣಾಶ್ರಮೋಚಿತ ಕರ್ಮಗಳನ್ನು ಭಗವದರ್ಪಣಬುದ್ಧಿಯಿಂದ ಮಾಡುವುದು ಆವಶ್ಯಕವೆಂದು ವಿಧಿಸಲ್ಪಡುತ್ತದೆ.

**ಮಂ ॥ ತದೇತತ್ಸತ್ಯಂ ॥**

ಅ ॥ ತತ್=ಪರವಿದ್ಯೆಯಿಂದ ತಿಳಿಯಲ್ಪಡುವ, ಏತತ್=ಅದೃಶ್ಯತ್ವಾದಿಗುಣಗಳುಳ್ಳ ಪರಮಾತ್ಮನು, ಸತ್ಯಂ=ಸಾಧುಗುಣಪೂರ್ಣನು.

ಭಾ ॥ ತದೇತತ್ಸತ್ಯಂ ಭಗವಾನ್ ॥

ಅ ॥ ತದೇತತ್ಸತ್ಯಂ=ಎಂಬುವನು ಭಗವಂತನು

ತಾ ॥ ಇಲ್ಲಿ ಸತ್ಯಂ ಎಂದರೆ ಸುಳ್ಳಿಗೆ ವಿರೋಧವಾದ ಸತ್ಯವಚನವೆಂದರ್ಥವಲ್ಲ. ಸತ್ಯಂ ಎಂದರೆ ಪರಮಾತ್ಮನೆಂದರ್ಥವು.

**ಮಂ ॥ ಮಂತ್ರೇಷು ಕರ್ಮಾಣಿ ಕವಯೋ ಯಾನ್ಯಪಶ್ಯಂಸ್ತಾನಿ ತ್ರೇತಾಯಾಂ ಬಹುಧಾ ಸಂತತಾನಿ। ತಾನ್ಯಾಚರಥ ನಿಯತಂ ಸತ್ಯಕಾಮಾ ಏಷ ವಃ ಪಂಥಾ ಸುಕೃತಸ್ಯ ಲೋಕೇ ॥ ೧ ॥**

ಅ ॥ ಕವಯಃ=ಜ್ಞಾನಿಗಳು, ಮಂತ್ರೇಷು=ಮಂತ್ರಗಳಲ್ಲಿ, ಯಾನಿ ಕರ್ಮಾಣಿ=ಯಾವ ಕರ್ಮಗಳನ್ನು, ಅಪಶ್ಯನ್=ತಿಳದರೋ, ತಾನಿ=ಆ ಕರ್ಮಗಳು, ತ್ರೇತಾಯಾಂ=ತ್ರೇತಾಯುಗದಲ್ಲಿ, ಬಹುಧಾ=ಬಹುಪ್ರಕಾರವಾಗಿ, ಸಂತತಾನಿ=ವಿಸ್ತರಿಸಲ್ಪಟ್ಟವು. ಸತ್ಯಕಾಮಾಃ=ಎಲೈ ಶೌನಕಾದಿ ಸತ್ಯಕಾಮರೇ! ತಾನಿ=ಆ ಕರ್ಮಗಳನ್ನು, ನಿಯತಂ=ನಿಯಮದಿಂದ, ಆಚರಥ=

ಮಾಡಿರಿ ಏಷಃ=ಇದು, ವಃ=ನಿಮಗೆ, ಸುಕೃತಸ್ಯ ಲೋಕೇ=ಸುಕೃತ ಶಬ್ದವಾಚ್ಯನಾದ ಪರಮಾತ್ಮನ ಲೋಕಕ್ಕೆ, ಪಥಾಃ=ಮಾರ್ಗವು.

ತಾ ॥ ಜ್ಞಾನಿಗಳು ಸಮಾಧ್ಯವಸ್ಥೆಯಲ್ಲಿ, ಯೋಗ್ಯಕರ್ಮಗಳನ್ನು ತಿಳಿಯುವರು. ಈ ಕರ್ಮಗಳನ್ನು ಕೃತಯುಗದ ಜನರು ಕೇವಲ ಭಗವದರ್ಪಣ ಬುದ್ಧಿಯಿಂದ ಆಚರಿಸುತ್ತಿದ್ದರು. ತ್ರೇತಾಯುಗದಲ್ಲಿ ಭಕ್ತರು ಭಗವತ್ಪ್ರೀತ್ಯರ್ಥವಾಗಿ ಸಮಸ್ತ ಕರ್ಮವನ್ನು ಸದಾ ಮಾಡುವರಾಗಿಯೂ, ತ್ರೈವಿದ್ಯರು ಕರ್ಮಾಂತ್ಯದಲ್ಲಿ ಭಗವದರ್ಪಣೆ ಮಾಡುವರಾಗಿಯೂ ದ್ವೇಷಿಗಳು ಅಂತ್ಯದಲ್ಲಾದರೂ ಹರಿಸಮರ್ಪಣೆ ಮಾಡದೆ ಕರ್ಮಗಳನ್ನು ಮಾಡುವವರಾಗಿಯೂ ಇರುತ್ತಿದ್ದರು. ಪರಮಾತ್ಮನ ಪ್ರೀತಿಯೇ ಮುಖ್ಯೋದ್ದೇಶವಾಗಿ ಭಾವಿಸಿ, ಸಮಸ್ತ ಕರ್ಮಗಳನ್ನು ಮಾಡಬೇಕೆಂದು ವೇದಪುರುಷರು ಉಪದೇಶಿಸುವರು. ಮೋಕ್ಷವು ದೊರಿಯಲಿಕ್ಕೆ ಇದೇ ಮಾರ್ಗವು.

ಭಾ ॥ ತತ್ಕಾಮಾಃ ಕರ್ಮಾಣ್ಯಾಚರಥ ।
ತದಾ ಸಾಪಿ ಪರವಿದ್ಯಾ
ಅನ್ಯಥಾ ಪ್ಲವಾ ಹ್ಯೇತೇ ಅದೃಢಾ ಯಜ್ಞರೂಪಾಃ ॥

ತಾ ॥ ಭಗವತ್ಪ್ರೀತಿ ಕಾಮುಕರಾಗಿ ಕರ್ಮಗಳನ್ನು ಮಾಡಿರಿ. ಆಗ ಕರ್ಮವಿದ್ಯೆಯಾದರೂ, ಪರವಿದ್ಯೆಯೇ ಆಗುವುದು. ಹಾಗಲ್ಲದಿದ್ದರೆ (ಅಂದರೆ ಭಗವತ್ಪ್ರೀತಿಯೇ ಮುಖ್ಯೋದ್ದೇಶವಾಗಿ ಇಲ್ಲದಿದ್ದರೆ) ಯಜ್ಞರೂಪಗಳಾದ ಕರ್ಮಗಳು ದೃಢವಲ್ಲದ ನಾವೆಗಳಂತೆ (ಸಂಸಾರ ಸಾಗರವನ್ನು ದಾಟಿಸಲಾರವು).

ತಾ ॥ ಎಲ್ಲೆಲ್ಲಿ ಕರ್ಮನಿಂದೆಯು ಮಾಡಲ್ಪಟ್ಟಿರುವುದೋ ಅದು ಭಗವದ್ವಿಷಯಕವಲ್ಲದ ಕರ್ಮನಿಂದೆಯೆಂದು ತಿಳಿಯಬೇಕು. 'ಕರ್ಮಾಣ್ಯಾಚರಥ' ಎಂದು ದೇವಯಜ್ಞ, ಬ್ರಹ್ಮಯಜ್ಞ ಮೊದಲಾದ ಸಕಲ ಧರ್ಮಗಳೂ ಅನುಷ್ಠಿಸತಕ್ಕವೆಂದು ವಿಧಿಸಲ್ಪಡುತ್ತದೆ. ದೇವಯಜ್ಞವೆಂದರೆ ಅಗ್ನಿಹೋತ್ರಾದಿಗಳು ಆ ಹೋಮಪ್ರಕಾರವನ್ನು ಮುಂದೆ ವಿವರಿಸುತ್ತಾರೆ. ॥ ೧ ॥

**ಮಂ ॥ ಯದಾ ಲೇಲಾಯತೇ ಹ್ಯರ್ಚಿಃ ಸಮಿದ್ಧೇ ಹವ್ಯವಾಹನೇ । ತದಾಜ್ಯಭಾಗಾ ವಂತರೇಣಾಹುತೀಃ ಪ್ರತಿಪಾದಯೇತ್ ॥ ೨ ॥**

ಅ ॥ ಸಮಿದ್ಧೇ=ಸಮಿತ್ತಿನಿಂದ ಚನ್ನಾಗಿ ಜ್ವಲಿಸುವ, ಹವ್ಯವಾಹನೇ=ಅಗ್ನಿಯಲ್ಲಿ, ಯದಾರ್ಚಿಃ=ಯಾವಾಗ ಜ್ವಾಲೆಯು, ಲೇಲಾಯತೇ=ಜ್ವಲಿಸುತ್ತದೋ, ತದಾ=ಆ ಸಮಯದಲ್ಲಿ, ಆಜ್ಯಭಾಗಾವಂತರೇಣ=ಪೂರ್ವ, ಅಪರ, ಆಜ್ಯ ಭಾಗಗಳ ಮಧ್ಯದಲ್ಲಿ, ಆಹುತೀಃ=ಚರು ಸಮಿಧಾದ್ಯಾಹುತಿಗಳನ್ನು, ಪ್ರತಿಪಾದಯೇತ್=ಕೊಡಬೇಕು.

ತಾ ॥ ಅಗ್ನಿಹೋತ್ರಾದಿ ಹೋಮಗಳು ದರ್ಶಾದಿಗಳಿಂದ ಕೂಡಿ ಇರದಿದ್ದರೆ ಅವು ನಿಷ್ಫಲವಾಗುವುವಲ್ಲದೆ ಸ್ವರ್ಗಾದಿ ಲೋಕಗಳು ದೊರೆಯದಂತೆ ಮಾಡುವವೆಂದು ಮುಂದೆ ಹೇಳುತ್ತಾರೆ. ॥ ೨ ॥

**ಮಂ ॥ ಯಸ್ಯಾಗ್ನಿಹೋತ್ರಮದರ್ಶಪೂರ್ಣಮಾಸಮಚಾತುರ್ಮಾಸ್ಯಮನಾಗ್ರಯಣಮತಿಥಿವರ್ಜಿತಂ ಚ । ಅಹುತಮವೈಶ್ವದೇವಮವಿಧಿನಾಹುತಮಾಸಪ್ತಮಾಂಸ್ತಸ್ಯ ಲೋಕಾನ್ ಹಿನಸ್ತಿ ॥ ೩ ॥**

ಅ ॥ ಅಹುತಂ=ಹೋಮಾಭಾವವು, ಅಂದರೆ ಅಧಿಕಾರ ಇದ್ದರೂ ಅಗ್ನಿಕಾರ್ಯಾದಿಗಳನ್ನು ಮಾಡದೆ ಇರೋಣವು, ಅವಿಧಿನಾಹುತಂ=ಅಗ್ನಿಕಾರ್ಯಗಳನ್ನು ಶಾಸ್ತ್ರವನ್ನು ಅನುಸರಿಸದೆ ಮಾಡೋಣವು, ಯಸ್ಯಾಗ್ನಿಹೋತ್ರಂ=ಅದರ್ಶಪೂರ್ಣಮಾಸಂ=ಯಾರ ಅಗ್ನಿಹೋತ್ರವು ಅಮಾವಾಸ್ಯ ಪೌರ್ಣಮಾಸಿ ಪಕ್ಷಯಾಗಗಳಿಂದ ರಹಿತವಾಗುತ್ತದೋ. ಅನಾಗ್ರಯಣಂ=ಅಗ್ರಯಣ ಅಂದರೆ ಹೊಸಧಾನ್ಯದ ಕುರಿತು ಮಾಡುವ ಯಾಗ, ಇದರಿಂದ ರಹಿತವಾಗುತ್ತದೋ, ಅತಿಥಿವರ್ಜಿತಂ ಚ=ಅತಿಥಿಯಿಂದ ರಹಿತವಾದದ್ದು, ಅವೈಶ್ವದೇವಂ=ವೈಶ್ವದೇವ ಹೋಮಶ್ರಾದ್ಧಾದಿ ಪಿತೃಯಜ್ಞ, ಬಲಿಹರಣಾಖ್ಯ ಭೂತಯಜ್ಞ, ವೇದಪಾಠಾಖ್ಯ ಬ್ರಹ್ಮಯಜ್ಞ ಇವುಗಳಿಂದ ರಹಿತವಾಗಿರುತ್ತದೋ, ತಸ್ಯ=ಅಂತಹರ, ಆಸಪ್ತಮಾನ್=ಭೂಲೋಕವನ್ನಾರಂಭಿಸಿ ಸತ್ಯಲೋಕಪರ್ಯಂತಗಳಾದ, ಲೋಕಾನ್=ಲೋಕಗಳನ್ನು (ಏಳು ಜಿಹ್ವೆಗಳುಳ್ಳ ಅಗ್ನಿಯು), ಹಿನಸ್ತಿ=ನಾಶಮಾಡುತ್ತದೆ. (ಅಂತೂ ಆತನಿಗೆ ಊರ್ಧ್ವಲೋಕಗಳು ದೊರೆಯಲಾರವು). ಕಾರಣ ದರ್ಶಪೂರ್ಣಾದಿಯಾಗಗಳನ್ನು ತತ್ತತ್ಕಾಲದಲ್ಲಿ ಮಾಡತಕ್ಕದ್ದು. ॥ ೩ ॥

**ಮಂ ॥ ಕಾಲೀ ಕರಾಲೀ ಚ ಮನೋಜವಾ ಚ ಸುಲೋಹಿತಾ ಯಾ ಚ ಸುಧೂಮ್ರವರ್ಣಾ । ಸ್ಫುಲಿಂಗಿನೀ ವಿಶ್ವರುಚೀ ಚ ದೇವೀ ಲೇಲಾಯಮಾನಾ ಇತಿ ಸಪ್ತ ಜಿಹ್ವಾಃ ॥ ೪ ॥ ಏತೇಷು ಯಶ್ಚರತೇ ಭ್ರಾಜಮಾನೇಷು ಯಥಾಕಾಲಂ ಚಾಹುತಯೋ ಹ್ಯಾದದಾಯನ್ । ತಂ ನಯಂತ್ಯೇತಾಃ ಸೂರ್ಯಸ್ಯ ರಶ್ಮಯೋ ಯತ್ರ ದೇವಾನಾಂ ಪತಿರೇಕೋಽಧಿವಾಸಃ ॥ ೫ ॥**

ಅ ॥ ಕಾಲೀ, ಕರಾಲೀ, ಮನೋಜವಾ, ಸುಲೋಹಿತಾ, ಸುಧೂಮ್ರವರ್ಣಾ, ಸ್ಫುಲಿಂಗಿನೀ, ವಿಶ್ವರುಚಿ, ಎಂದೀ ಏಳು ಹೆಸರುಳ್ಳ, ದೇವೀಃ=ಪ್ರಕಾಶಮಾನಗಳಾದ, ಲೇಲಾಯಮಾನಾಃ=ಜ್ವಲಿಸತಕ್ಕ, ಇತಿ ಸಪ್ತಜಿಹ್ವಾಃ=ಅಗ್ನಿಯ ಈ ಏಳು ಜಿಹ್ವೆಗಳು, ॥೪॥ ಭ್ರಾಜಮಾನೇಷು ಏತೇಷು=ಪ್ರಕಾಶಮಾನಗಳಾದ ಈ ಜಿಹ್ವೆಗಳಲ್ಲಿ, ಯಃ=ಯಾವ ಪುರುಷನು, ಯಥಾಕಾಲಂ=ವಿಹಿತಕಾಲದಲ್ಲಿ, ಆಹುತಯಃ=ಆಹುತಿಗಳನ್ನು, ಆದದಾಯನ್=ಕೊಡತಕ್ಕವನಾಗಿ, ಚರತೇ=ಕರ್ಮಗಳನ್ನು ಮಾಡುತ್ತಾನೋ, ತಂ=ಅವನನ್ನು, ಏತಾಃ=ಈ ಆಹುತಿಗಳು, ಯತ್ರ=ಯಾವ ಲೋಕದಲ್ಲಿ, ದೇವಾನಾಂ ಏಕಃ ಪತಿಃ=ದೇವತೆಗಳಿಗೆ ಒಬ್ಬನೇ ಒಡೆಯನಾದವನು, ಅಧಿವಾಸಃ=ಮುಖ್ಯವಾಗಿವಾಸಮಾಡುವನೋ, ತಂ=ಆಲೋಕವನ್ನು, ನಯಂತಿ=ಸೇರಿಸುತ್ತವೆ. ಮತ್ತು ತಂ=ಅವನನ್ನು, ಸೂರ್ಯಸ್ಯ ರಶ್ಮಯಃ=ಸೂರ್ಯನ ರಶ್ಮಿಗಳು, ನಯಂತಿ=ಒಯ್ಯುತ್ತವೆ.

ತಾ ॥ ಕರ್ಮಿಗಳಾದ ಭಾಗವತರು ಅಪ್ರತೀಕಾಲಂಬನರು, ಪ್ರತೀಕಾಲಂಬನರೆಂದು ಎರಡು ವಿಧವಾಗಿರುವರು. ದೇವತೆಗಳು, ನೂರುಋಷಿಗಳು ನೂರುಗಂಧರ್ವರು ನೂರುಚಕ್ರವರ್ತಿಗಳು ಅಪ್ರತೀಕಾಲಂಬನರು. ಅಂದರೆ ವ್ಯಾಪ್ತ್ಯೋಪಾಸಕರು ಪರಮಾತ್ಮನನ್ನು ಸರ್ವಸ್ಥಳದಲ್ಲೂ ಉಪಾಸನೆ ಮಾಡಲಿಕ್ಕೆ ಯೋಗ್ಯರು. ಪ್ರತೀಕಾಲಂಬನರು ದೇಹಾಲಂಬನರೆಂದೂ ಪ್ರತಿಮಾಲಂಬನರೆಂದೂ, ಎರಡು ವಿಧರಾಗಿರುವರು. ಋಷಿಮೊದಲಾದ ಮಧ್ಯಮಾಧಿಕಾರಿಗಳು ದೇಹಾಲಂಬನರು. ಅವರು ಅಂತರುಪಾಸಕರು ಅಂದರೆ ತಮ್ಮ ದೇಹದಲ್ಲಿರುವ ಪರಮಾತ್ಮನನ್ನು ಉಪಾಸನೆ ಮಾಡುವವರು. ವಿಗ್ರಹಗಳಲ್ಲಿ ಅಂತರ್ಯಾಮಿಯಾಗಿರುವ ಪರಮಾತ್ಮನನ್ನು ಪೂಜಿಸುವವರು ಪ್ರತಿಮಾಲಂಬನರು ಇವರು ಅಧಮಾಧಿಕಾರಿಗಳು ಮನುಷ್ಯರು ಈ ವರ್ಗಕ್ಕೆ ಸೇರಿದವರು ಉತ್ತಮಾಧಿಕಾರಿಗಳಾದ ಅಪ್ರತೀಕಾಲಂಬನರು ತಮ್ಮ

ಆಹುತಿಗಳಿಂದ ಅಂದರೆ ಸ್ವವರ್ಣಾಶ್ರಮೋಚಿತ ಕರ್ಮಾನುಷ್ಠಾನಗಳಿಂದ ಪರಮಾತ್ಮನೇ ರಾಜನಾಗಿರುವ ವೈಕುಂಠಲೋಕವನ್ನೂ ಪಡೆಯುವರು. ಮಧ್ಯಮಾಧಿಕಾರಿಗಳಾದ ದೇಹಾಲಂಬನರು ತಮ್ಮ ಆಹುತಿಗಳಿಂದ ಚತುರ್ಮುಖ ಬ್ರಹ್ಮನು ರಾಜನಾಗಿರುವ ಸತ್ಯಲೋಕವನ್ನು ಸೇರುವರು. ಪ್ರತಿಮಾಲಂಬನರು ಮಹರ್ಲೋಕಾದಿಗಳನ್ನು ಸೇರುವರು. ಈ ಲೋಕಗಳಲ್ಲಿ ಇರುವ ದೇಹ ಪ್ರತಿಬಂಧಕವು ನಾಶವಾಗಿ ಅನಂತರ ವೈಕುಂಠವನು ಸೇರುವರು. ಸೂರಿಗಳಿಗೆ ಅಂದರೆ ಜ್ಞಾನಿಗಳಿಗೆ ಪ್ರಾಪ್ಯನಾದಕಾರಣ ಪರಮಾತ್ಮನಿಗೆ ಸೂರ್ಯನೆಂದು ಹೆಸರು; ಈ ಸೂರ್ಯನ ತೇಜಸ್ಸಿನಿಂದ ಈ ಅಧಿಕಾರಿ ವರ್ಗವು ವೈಕುಂಠಲೋಕವನ್ನು ಹೊಂದುವುದು. ॥ ೪ ॥ ೫ ॥

**ಮಂ ॥ ಏಹ್ಯೇಹೀತಿ ತಮಾಹುತಯಃ ಸುವರ್ಚಸಃ ಸೂರ್ಯಸ್ಯ ರಶ್ಮಿಭಿರ್ಯಜಮಾನಂ ವಹಂತಿ । ಪ್ರಿಯಾಂ ವಾಚಮಭಿವದಂತ್ಯೋಽರ್ಚಯಂತ್ಯ ಏಷ ವಃ ಪುಣ್ಯಃ ಸುಕೃತೋ ಬ್ರಹ್ಮಲೋಕಃ ॥ ೬ ॥**

ಅ ॥ ಆಹುತಯಃ=ಹವಿರ್ಭಾಗವನ್ನು ಸ್ವೀಕರಿಸಿದ, ಸುವರ್ಚಸಃ=ಕಾಂತಿಮಂತರಾದ ದೇವತೆಗಳು, ಸೂರ್ಯಸ್ಯ=ಸೂರ್ಯನ, ರಶ್ಮಿಭಿಃ=ತನ್ನ ಅಧಿಷ್ಠಾನಭೂತಗಳಾದ ಕಿರಣಗಳಿಂದ, ಯಜಮಾನಂ=ಮೂರು ವಿಧರಾದ ಯಜಮಾನರನ್ನು, "ಏಹ್ಯೇಹಿ=ಇತ್ತ ಬಾ! ಬಾ! (ಅಗತ್ಯವಾಗಿ ಬರಬೇಕು) ವಃ=ನಿಮಗೆ, ಸುಕೃತಃ=ಹರಿವಿಷಯವಾಗಿ ಮಾಡಿದ್ದ, ಪುಣ್ಯಃ=ಪುಣ್ಯಸಾಧ್ಯವಾದ, ಬ್ರಹ್ಮಲೋಕಃ=ಪರಬ್ರಹ್ಮ ಲೋಕವು." ಇತಿ=ಹೀಗೆ, ಪ್ರಿಯಾಂ ವಾಚಂ=ಒಳ್ಳೆಯ ಮಾತನ್ನು, ಅಭಿವದಂತ್ಯಃ=ಹೇಳುವರಾಗಿ, ಅರ್ಚಯಂತ್ಯಃ=ಪೂಜಿಸುವರಾಗಿ, ತಂ=ಆ ಬುದ್ಧಿಸ್ಥನಾದ ಪರಮಾತ್ಮನನ್ನು, ವಹಂತಿ=ಹೊಂದಿಸುತ್ತಾರೆ.

ತಾ ॥ ಭಗವದ್ಭಕ್ತನು ಮುಕ್ತಿಕಾಲದಲ್ಲಿ ತನ್ನ ಅಂತಿಮಶರೀರವನ್ನು ಬಿಟ್ಟುಹೋಗುವ ಕ್ರಮವು ಹೇಗೆಂದರೆ- ಭಕ್ತಜೀವನು ಸೂರ್ಯರಶ್ಮಿಗಳಿಂದ ಪ್ರಕಾಶಿತವಾದ ನಾಡ್ಯಂತರ್ಮಾರ್ಗಗಳಲ್ಲಿ ಹೋಗುತ್ತಾ ದೇಹದಿಂದಲೂ ಹೊರಟುಹೋಗಿ ತುರೀಯವೆಂಬ ಭಗವದ್ರೂಪದ ಸನ್ನಿಧಿಯನ್ನು ಹೊಂದುತ್ತಾನೆ. ಅಧಿಕಾರಿಗಳಲ್ಲಿ ಅಪ್ರತೀಕಾಲಂಬನರು ಸುಷುಮ್ನಾನಾಡಿಯ ಮಧ್ಯದಲ್ಲಿರುವ ಬ್ರಹ್ಮನಾಡಿಯ ಅಂತರ್ಮಾರ್ಗದಿಂದ ಹೋಗುತ್ತಾ ಶಿರಸ್ಸಿನಿಂದ ಹೊರಟುಹೋಗುವರು. ದೇಹಾಲಂಬನರು ಬ್ರಹ್ಮನಾಡಿಯಲ್ಲದ ಸುಷುಮ್ನೆಯ ಪ್ರಭೇದವಾದ ಇನ್ನೊಂದು ನಾಡಿಯಿಂದ ಹೋಗುತ್ತಾ ದೇಹವನ್ನು ಬಿಡುವರು ಪ್ರತಿಮಾಲಂಬನರು ಪಿಂಗಲಾ ಎಂಬ ನಾಡಿಯ ಅಂತರ್ಮಾರ್ಗದಿಂದ ಹೋಗಿ ದೇಹವನ್ನು ಪರಿತ್ಯಜಿಸುವರು.

ಭಾ ॥ ಭಗವದ್ವಿಷಯತ್ವೇನ ಕೃತ ಏಷ ವಃ ಪುಣ್ಯಃ ಸುಕೃತಃ ।
ಬ್ರಹ್ಮಲೋಕಃ ಪರಬ್ರಹ್ಮಲೋಕಃ ॥

ತಾ ॥ (ಸ್ವವರ್ಣಾಶ್ರಮೋಚಿತವಾದ) ಈ ನಿಮ್ಮ ಪುಣ್ಯಕರ್ಮವು ಹರಿವಿಷಯಕವಾಗಿ ಮಾಡಲ್ಪಟ್ಟುದರಿಂದ ಸುಕೃತವೆನ್ನಿಸಿಕೊಳ್ಳುತ್ತದೆ. (ಕರ್ಮಗಳನ್ನು ಹರಿವಿಷಯಕವಾಗಿ ಮಾಡೋಣವೆಂದರೆ— ಯಾವುದೊಂದನ್ನೂ (ವಿಹಿತವಾದುದನ್ನು) ತಾನು ಮಾಡುವುದಲ್ಲ. ಶ್ರೀಹರಿಯೇ ಮಾಡುವುದು. ಸರ್ವಯಜ್ಞಭೋಕ್ತನೂ ಆತನೇ. ಸರ್ವರಿಗೂ ಸ್ವಾಮಿಯೂ ಆತನೇ. ಈ ರೀತಿಯಾಗಿ ಭಾವಿಸುತ್ತಾ ಸಕಲ ಕರ್ಮಗಳನ್ನೂ ಶ್ರೀಹರಿಯಲ್ಲಿ ಅರ್ಪಿಸುವುದು ) ಬ್ರಹ್ಮಲೋಕವೆಂದರೆ ಪರಬ್ರಹ್ಮಲೋಕವು.

ಭಾ || ನಿಷ್ಕಾಮಂ ಜ್ಞಾನಪೂರ್ವಂ ಯನ್ನಿವೃತ್ತಮಿಹ ಚೋಚ್ಯತೇ |
ನಿವೃತ್ತಂ ಸೇವಮಾನಸ್ತು ಬ್ರಹ್ಮಾಭ್ಯೇತಿ ಸನಾತನಂ ||
|| ಇತಿ ವ್ಯಾಸಸ್ಮೃತೌ ||

ತಾ || (ಸ್ವರ್ಗಾದಿ ಅಲ್ಪಫಲಗಳಲ್ಲಿ) ಇಚ್ಛೆಯಿಲ್ಲದೆ ಭಗವಜ್ಜ್ಞಾನಪೂರ್ವಕವಾಗಿ ಮಾಡತಕ್ಕ ಯಾವುದೊಂದು ಕರ್ಮವಿದೆಯೋ, ಅದು ನಿವೃತ್ತಕರ್ಮವೆಂದು ಹೇಳಲ್ಪಡುವುದು. ಅಂತಹ ನಿವೃತ್ತಕರ್ಮಗಳನ್ನು ಆಚರಿಸುವವನು ಶಾಶ್ವತವಾದ ಬ್ರಹ್ಮಸನ್ನಿಧಿಯನ್ನು ಹೊಂದುತ್ತಾನೆ ಎಂದು ವ್ಯಾಸಸ್ಮೃತಿಯಲ್ಲುಕ್ತವಾಗಿರುತ್ತದೆ.

ಭಾ || ಸ ಯ ಆತ್ಮಾನಮೇವ ಲೋಕಮುಪಾಸ್ತೇ ನ ಹಾಸ್ಯ ಕರ್ಮ ಕ್ಷೀಯತೇ ||
ಇತಿ ಚ ಶ್ರುತಿಃ ||

ಅ || ಪ್ರಸಿದ್ಧನಾದ ಯಾವ ಅಧಿಕಾರಿಯು ಲೋಕಕ್ಕಾಶ್ರಯನಾದ ಭಗವಂತನನ್ನೇ ಉಪಾಸನೆಮಾಡುವನೋ ಅಂತಹ ಜ್ಞಾನಿಯ ಕರ್ಮವು ನಾಶವಾಗುವುದಿಲ್ಲ. ಅಂದರೆ ಅಕ್ಷಯವಾದ ಮೋಕ್ಷಫಲವನ್ನು ಕೊಡತಕ್ಕದಾಗುವುದಲ್ಲದೆ ಸ್ವರ್ಗಾದಿ ಅಲ್ಪಫಲಗಳನ್ನು ಕೊಡತಕ್ಕದಲ್ಲ. ಈ ರೀತಿಯಾಗಿ ಶ್ರುತಿವಚನವಿರುತ್ತದೆ.

ಭಾ || "ಸ ಹ ಯಜ್ಞಾಃ ಪ್ರಜಾಃ ಸೃಷ್ಟ್ವಾ" ಇತ್ಯುಕ್ತ್ವಾ "ಏವಂ ಪ್ರವರ್ತಿತಂ ಚಕ್ರಂ ನಾನುವರ್ತಯತೀ ಹ ಯಃ | ಅಘಾಯುರಿಂದ್ರಿಯಾರಾಮೋ ಮೋಘಂ ಪಾರ್ಥ ಸ ಜೀವತಿ" || ಇತಿ ಚ ||

ಅ|| "ಸ್ವಸ್ವವರ್ಣಾಶ್ರಮೋಚಿತ ಕರ್ಮಗಳಿಂದ ಸಹಿತರಾದವರನ್ನಾಗಿಯೇ ಪ್ರಜೆಗಳನ್ನು (ಬ್ರಾಹ್ಮಣಾದಿ ಮೂರು ವರ್ಣಗಳನ್ನು) (ಕಲ್ಪಾದಿಯಲ್ಲಿ ವಿಷ್ಣುವು) ಸೃಷ್ಟಿಮಾಡಿ" ಎಂಬೀ ಶ್ಲೋಕದಿಂದ ಕರ್ಮಕ್ಕೆ ಫಲವನ್ನು ಹೇಳಿ ಆ ಮೇಲೆ "ಎಲೈ ಅರ್ಜುನನೇ! ಈ ಅಧಿಕಾರಿಗಳಲ್ಲಿ ಯಾವಾತನು ಪೂರ್ವೋಕ್ತಪ್ರಕಾರವಾಗಿ (ಪರಮೇಶ್ವರನಿಂದ) ಪ್ರವರ್ತಿತವಾದ ಭೂತಚಕ್ರವನ್ನು ಅಂದರೆ ಭೂತಗಳಿಂದ ಅಭಿವ್ಯಕ್ತಗಳಾದವುಗಳು ವೇದಗಳು. ಅವುಗಳಿಂದ ಬ್ರಹ್ಮವು. ಅದರಿಂದ ಕರ್ಮವು. ಕರ್ಮದಿಂದ ಯಜ್ಞವು. ಯಜ್ಞದಿಂದ ಪರ್ಜನ್ಯ. ಪರ್ಜನ್ಯನಿಂದ ಅನ್ನವು. ಅನ್ನದಿಂದ ತಿರುಗಿ ಭೂತಗಳು ಎಂಬೀ ಚಕ್ರವನ್ನು ಯಾರು ಅನುಸರಿಸುವುದಿಲ್ಲವೋ, ಆತನು ಪಾಪಮಯವಾದ ಆಯುಸ್ಸುಳ್ಳವನಾಗಿಯೂ, ಕೇವಲ ವಿಷಯಭೋಗಾಸಕ್ತನಾಗಿ ವ್ಯರ್ಥವಾಗಿ ಜೀವಿಸುತ್ತಾನೆ" ಎಂಬೀ ಶ್ಲೋಕದಿಂದ ಕರ್ಮವನ್ನು ಮಾಡದಿದ್ದರೆ ಅನರ್ಥವು (ಗೀತೆಯಲ್ಲಿ ಶ್ರೀಕೃಷ್ಣನಿಂದ) ಹೇಳಲ್ಪಟ್ಟದೆ.

ಭಾ || "ಯಾಂತಿ ಮದ್ಯಾಜಿನೋಽಪಿ ಮಾಂ" ಇತಿ ಚ ||

ತಾ || (ಮತ್ತೂ ಶ್ರೀಹರಿಯೇ ನಿಖಿಲಕರ್ತನು ಎಂಬಿತ್ಯಾದ್ಯನುಸಂಧಾನಮಾಡಿ ತನಗೆ ಉಚಿತವಾದ ಕರ್ಮದಿಂದ ಅನನ್ಯಭಾವದಿಂದ) ನನ್ನನ್ನು ಪೂಜಿಸುವವರು ನನ್ನನ್ನೇ ಹೊಂದುತ್ತಾರೆ. ಎಂದು ಗೀತೆಯಲ್ಲಿ ಉಕ್ತವಾಗಿದೆ.

ಭಾ || "ಅಹಂ ಹಿ ಸರ್ವಯಜ್ಞಾನಾಂ ಭೋಕ್ತಾ ಚ ಪ್ರಭುರೇವ ಚ |
ನ ತು ಮಾಮಭಿಜಾನಂತಿ ತತ್ವೇನಾತಶ್ಚ್ಯವಂತಿ ತೇ" || ಇತಿ ಚ ||

ತಾ ॥ ಇದಲ್ಲದೆ 'ನಾನೇ ಸರ್ವಯಜ್ಞಗಳನ್ನೂ ಭೋಗಿಸುವವನು. ಸರ್ವರಿಗೂ ಸ್ವಾಮಿಯು ಅನ್ಯದೇವತೆಗಳನ್ನು ಆರಾಧಿಸುವವರು ನನ್ನನ್ನು ಸರ್ವಯಜ್ಞಭೋಕ್ತೃವೆಂಬ ಭಾವನೆಯಿಂದ ತಿಳಿಯುವದಿಲ್ಲ. ಕಾರಣ, ಸ್ವರ್ಗಭೋಗಾನಂತರ ಅವರು ಅಧೋಲೋಕಕ್ಕೇ ಬರುವರು.' ಎಂದೂ ಶ್ರೀ ಕೃಷ್ಣನಿಂದ ಹೇಳಲ್ಪಟ್ಟದರಿಂದಲೂ (ಜ್ಞಾನಿಯೂ ಅವಶ್ಯವಾಗಿ ಕರ್ಮವನ್ನು ಮಾಡತಕ್ಕದ್ದು.)

ಭಾ ॥ ಯಸ್ತ್ವಾತ್ಮರತಿರೇವೇತ್ಯುಕ್ತ್ವಾಪಿ ಕುರ್ಯಾದ್ವಿದ್ವಾಂಸ್ತಥಾಸಕ್ತ
ಇತ್ಯೇವೋಕ್ತತ್ವಾಚ್ಚ ॥

ತಾ ॥ "ಯಾವಾತನು ಭಗವದ್ದರ್ಶನದಿಂದ ಸುಖವನ್ನು ಹೊಂದಿರುತ್ತಾನೋ (ಆತನಿಗೆ ಕಾರ್ಯವೇ ಇಲ್ಲವೆಂದು)" ಹೇಳಿದಾಗ್ಯೂ 'ಕುರ್ಯಾದ್ವಿದ್ವಾನ್' ಎಂಬಲ್ಲಿ ಪೂರ್ವೋಕ್ತಪ್ರಕಾರವಾಗಿ ಭಗವಂತನಲ್ಲಿ ಆಸಕ್ತನಾಗಿದ್ದಾಗ್ಯೂ ಜ್ಞಾನಿಯು ಕರ್ಮವನ್ನು ಮಾಡತಕ್ಕದು. ಹೀಗೆಯೇ ಹೇಳಿರುವುದರಿಂದ (ಜ್ಞಾನಿಗೂ ಕರ್ಮವು ಆವಶ್ಯಕವು) ಇಲ್ಲಿ ಗೀತೆಯ ಪೂರ್ವೋತ್ತರ ವಾಕ್ಯಗಳಿಗೆ ವಿರೋಧವುಂಟಾಯಿತೆಂದು ಭಾವಿಸಕೂಡದು. ಅಸಂಪ್ರಜ್ಞಾತ ಸಮಾಧಿಯಲ್ಲಿರುವವನಿಗೆ ಮಾತ್ರ ಕರ್ಮವು ಆವಶ್ಯಕವಲ್ಲ. ವಿಹಿತಕರ್ಮಕ್ಕಿಂತಲೂ ಅಂತಹ ಸಮಾಧಿಯಲ್ಲಿಯೇ ಆತನಿಗೆ ಹೆಚ್ಚಿಗೆ ಫಲವು ಲಭಿಸುವುದಷ್ಟೇ; ಈ ಅಭಿಪ್ರಾಯದಿಂದ ಪೂರ್ವವಾಕ್ಯವು ಹೊರಟಿದೆ. ಉಳಿದವರಿಗೆ ಕರ್ಮವು ಆವಶ್ಯಕವೆಂದು ಉತ್ತರವಾಕ್ಯವು ಹೇಳುತ್ತದೆಯಾದುದರಿಂದ ಪರಸ್ಪರ ವಿರೋಧವಿರುವುದಿಲ್ಲ.

ಭಾ ॥ "ಯೇ ತ್ವೇತದಭ್ಯಸೂಯಂತೋ ನಾನುತಿಷ್ಠಂತಿ ಮೇ ಮತಂ ।
ಸರ್ವಜ್ಞಾನವಿಮೂಢಾಂಸ್ತಾನ್ವಿದ್ಧಿ ನಷ್ಟಾನಚೇತಸಃ" ॥ ಇತಿ ಚ ॥

ತಾ ॥ ('ಕುರ್ಯಾದ್ವಿದ್ವಾನ್' ಎಂಬೀ ಶ್ಲೋಕದಲ್ಲಿ ಲೋಕಕ್ಕೆ ತಿಳಿಸಲಿಕ್ಕಾಗಿಯೇ ಕರ್ಮಮಾಡಬೇಕೆಂದು ಉಕ್ತವಾಗಿದೆ. ಎಂದು ಶಂಕಿಸಬಾರದು ಏಕೆಂದರೆ 'ಮಯಿಸರ್ವಾಣಿ ಕರ್ಮಾಣಿ' ಎಂಬೀ ಶ್ಲೋಕದಲ್ಲಿ ಜ್ಞಾನಿಯಾದ ಅರ್ಜುನನ ಒಡನೆ ಭಗವದ್ವಿಷಯಕವಾಗಿ ಕರ್ಮವನ್ನು ಮಾಡಬೇಕೆಂದು ಹೇಳಿ 'ಯೇಮೇಮತಮಿದಂ' ಎಂಬೀ ಶ್ಲೋಕದಲ್ಲಿ ಅಂತಹ ಕರ್ಮಕ್ಕೆ ಮೋಕ್ಷರೂಪ ಫಲವನ್ನೂ ಹೇಳಿ 'ಯೇ ತ್ವೇತತ್' ಎಂಬೀ ಪ್ರಕೃತ ಶ್ಲೋಕದಲ್ಲಿ ಕರ್ಮವನ್ನು ಮಾಡದಿದ್ದರೆ ಮಹಾ ಅನರ್ಥವು ಉಕ್ತವಾಗಿದೆ.) "ಯಾರು ಹರಿಗುರುಗಳಲ್ಲಿ ಅಸೂಯೆಯನ್ನು ಪಡುತ್ತಾ ನನಗೆ ಸಮ್ಮತವಾದ ಸ್ವವಿಹಿತಕರ್ಮಗಳನ್ನು ಅನುಷ್ಠಾನಮಾಡುವುದಿಲ್ಲವೋ ಅಂತಹ ಕೆಡುಕರು ಎಲ್ಲಾ ಕರ್ಮವಿಷಯಕವಾದ ಜ್ಞಾನದಲ್ಲಿ ಮೂಢರೂ ಆದ ಜನರನ್ನು ನರಕಾದಿ ಅನರ್ಥಗಳನ್ನು ಭೋಗಿಸತಕ್ಕವರೆಂದು ತಿಳಿ" ಎಂದೂ ಗೀತೆಯಲ್ಲಿ ಉಕ್ತವಾಗಿದೆ. (ಕಾರಣ ಜ್ಞಾನಿಗೂ ಇಷ್ಟಾನಿಷ್ಟ ಪ್ರಾಪ್ತಿಪರಹಾರಕ್ಕಾಗಿ ಸ್ವವಿಹಿತ ಕರ್ಮಾಚರಣೆಯು ಆವಶ್ಯಕವು.)

ಭಾ ॥ "ಲೋಕೇಽಸ್ಮಿನ್ ದ್ವಿವಿಧಾ ನಿಷ್ಠಾ ಪುರಾ ಪ್ರೋಕ್ತಾ ಮಯಾಽನಘ ।"
ಇತ್ಯುಕ್ತತ್ವಾಚ್ಚ ನಾತ್ರಾಶ್ರಮಾಂತರವಿರೋಧಃ ॥

ತಾ ॥ (ಹೀಗೆ ಭಗವದ್ವಿಷಯಕ ಯಜ್ಞಾದಿಕರ್ಮವು ಆವಶ್ಯಕವಾದರೆ ಯತಿಗಳಿಗೆ ಕರ್ಮದಲ್ಲಧಿಕಾರವಿಲ್ಲದಿರುವುದರಿಂದ ಯತ್ಯಾಶ್ರಮಕ್ಕೆ ಲೋಪವೇ ಬರಬೇಕಾದೀತು. ಎಂದಾ ಶಂಕಿಸಿದರೆ) 'ಎಲೈ ಅರ್ಜುನನೇ! ಈ ಅಧಿಕಾರವರ್ಗದಲ್ಲಿ ಜ್ಞಾನಯೋಗ, ಕರ್ಮಯೋಗವೆಂಬೀ ಎರಡು ಸಾಧನಗಳಿಂದಲೂ ಮುಕ್ತಿಯು ಆಗುವುದೆಂದು ನನ್ನಿಂದ ಪೂರ್ವದಲ್ಲಿಯೇ ಪ್ರೋಕ್ತ

ವಾಗಿದೆ. ಅಂದರೆ ಜ್ಞಾನಯೋಗಿಗಳಿಗೆ ಗ್ರಹಸ್ಥಾಶ್ರಮವನ್ನು ಬಿಟ್ಟು ಯತ್ಯಾಶ್ರಮವನ್ನು ಸ್ವೀಕರಿಸಿ ಶಮದಮಾದ್ಯನುಷ್ಠಾನರೂಪ ಜ್ಞಾನೋಪಾಯದಿಂದ ಮುಕ್ತಿಯು. ಕರ್ಮಯೋಗಿಗಳಿಗೆ ಸ್ವಾಶ್ರಮೋಚಿತಕರ್ಮಾನುಷ್ಠಾನದಿಂದ ಮುಕ್ತಿಯು.' ಹೀಗೆ ಹೇಳಿರುವುದರಿಂದಲೂ ಯತ್ಯಾಶ್ರಮಕ್ಕೆ ಲೋಪವು ಬರುವುದಿಲ್ಲ. (ಏಕೆಂದರೆ-ಕರ್ಮಯೋಗಿಗಳಿಗೆ ಕರ್ಮವನ್ನು ಹೇಳಿದ್ದರೂ ಯತಿಗಳಿಗೆ ಹೇಳಲೇ ಇಲ್ಲವಷ್ಟೆ.)

**ಭಾ** ॥ ತ್ರೇತಾಯಾಂ ಬಹುಧಾ ಸಂತತಾನಿ ।
ಕೃತೇ ತ್ವೇಕಪ್ರಕಾರೇಣೈವ ಸಂತತಾನಿ ॥

**ತಾ** ॥ (ಯಜ್ಞಾದಿಕರ್ಮಗಳು) ತ್ರೇತಾಯುಗದಲ್ಲಿ ಬಹುಪ್ರಕಾರವಾಗಿ ಅಂದರೆ ವಿಷ್ಣುವನ್ನೇ ಪೂಜಿಸುವುದು, ಇತರ ದೇವತೆಗಳನ್ನು ಪೂಜಿಸಿ ಕೊನೆಗೆ ವಿಷ್ಣುವಿಗೆ ಅರ್ಪಿಸುವುದು, ಇತರ ದೇವತೆಗಳಿಗೇನೇ ಪೂಜಿಸುವುದು ಎಂದು ನಾನಾಪ್ರಕಾರವಾಗಿ (ಶಿಷ್ಟರಿಂದ) ಆಚರಿಸಲ್ಪಟ್ಟವೆ. ಕೃತಯುಗದಲ್ಲಾದರೋ ವಿಷ್ಣುಪೂಜಾರೂಪವಾಗಿ ಒಂದೇ ವಿಧವಾಗಿ ಆಚರಿಸಲ್ಪಟ್ಟವೆ.

**ಭಾ** ॥ (೧) ಅಗ್ನಿಷ್ಟೋಮಾದಿಭಿರ್ಯಜ್ಞೈಃ ಸರ್ವದೇವಸ್ಥಿತಂ ಹರಿಂ ।
ಯಜಂತಿ ತಾಂಶ್ಚ ಕಾರಿತ್ವಾದ್ವಸುಸ್ತಸ್ಮಾತ್ತಥಾಯಜತ್ ॥
(೨) ಪ್ರಥಕ್ಪೃಥಕ್ಚ ತ್ರೇತಾಯಾಂ ಯಜಂತೇ ದೇವತಾಗಣಾನ್ ।
ಯಥಾ ಕೃತೇ ತಥಾ ಪ್ರಾಜ್ಞಾಸ್ತ್ರೇತಾಯಾಂ ಬಹುಧಾ ತತಃ ॥
-ಇತಿಪಾದ್ಮೇ ॥

**ತಾ** ॥ (೧) ಕೃತಯುಗದಲ್ಲಿ ಅಗ್ನಿಷ್ಟೋಮಾದಿ ಯಾಗಗಳಿಂದ ದೇವತೆಗಳಲ್ಲಿಯೂ ಅಂತರ್ಯಾಮಿಯಾಗಿದ್ದ ಹರಿಯನ್ನೂ ಭಗತ್ಸೇವಕರಾದ ಪ್ರಯುಕ್ತ ಆ ದೇವತೆಗಳನ್ನೂ ಪೂಜಿಸುತ್ತಿದ್ದರು. ಆ ಕಾರಣ, ವಸುನಾಮಕ ಪುರುಷನು ಆ ರೀತಿಯಾಗಿಯೇ ಯಾಗವನ್ನು ಮಾಡಿದ್ದನು. (೨) ತ್ರೇತಾಯುಗದಲ್ಲಾದರೋ ಪ್ರತ್ಯೇಕ ಪ್ರತ್ಯೇಕವಾಗಿ ದೇವತಗಳನ್ನು ಪೂಜಿಸುತ್ತಿದ್ದರು. ಪ್ರಾಜ್ಞರು ಮಾತ್ರ ಕೃತಯುಗದ ಕ್ರಮದಿಂದಲೇ ಪೂಜಿಸುತ್ತಿದ್ದರು. ಅಂತೂ ಬಹುಪ್ರಕಾರದಲ್ಲಿ ಯಾಗವನ್ನು ಮಾಡಿದ್ದುದರಿಂದ ಉಪನಿಷತ್ತಿನ ವಾಕ್ಯಗಳಲ್ಲಿ ತ್ರೇತಾಯುಗದಲ್ಲಿ ಬಹುಪ್ರಕಾರವಾಗಿ ಕರ್ಮಗಳು ವ್ಯಾಪಿಸಿದವು (ಎಂದುಕ್ತವಾಗಿದೆ.) ಎಂದೀ ರೀತಿಯಾಗಿ ಪಾದ್ಮಪುರಾಣದಲ್ಲಿ ಹೇಳಿಯದೆ.

**ಭಾ** ॥ ಯಮಿಂದ್ರಮಾಹುರ್ವರುಣಂ ಯಮಾಹುರ್ಯಂ
ಮಿತ್ರಮಾಹುರ್ಯಮು ಸತ್ಯಮಾಹುಃ ।
ಯೋ ದೇವಾನಾಂ ದೇವತಮೋ ಜನಿತ್ರಂ ವಾಯೋಸ್ತಸ್ಮೈ
ಸೋಮಮೇಭ್ಯೋ ಜುಹೋಮಿ ॥

**ತಾ** ॥ (ಕೃತಯುಗದಲ್ಲಿಯೂ ಇಂದ್ರಾದಿನಾಮಗಳಿಂದ ಪೂಜಿಸುತ್ತಿದ್ದ ಪ್ರಯುಕ್ತ ಎಲ್ಲಾ ಕರ್ಮಗಳೂ ಪರಮಾತ್ಮವಿಷಯಕಗಳೇ ಹೇಗಾದುವು ಎಂದಾಶಂಕಿಸಿದರೆ-) ಯಾವ ಹರಿಯನ್ನು ಇಂದ್ರನನ್ನಾಗಿಯೂ, ವರುಣನನ್ನಾಗಿಯೂ, ಮಿತ್ರನನ್ನಾಗಿಯೂ, ಸತ್ಯ(ವಾಯು)ನನ್ನಾಗಿಯೂ ಹೇಳುತ್ತಿದ್ದರೋ, ಯಾವ ಶ್ರೀ ಹರಿಯು ಇಂದ್ರಾದಿದೇವತೆಗಳಿಗೂ ಅವರವರ ಪದವಿಗಳನ್ನು ಕೊಟ್ಟವನೋ, ಯಾರಾದರೆ ವಾಯುದೇವರಿಗೂ ಜನಕನೋ ಅಂತಹ ವಿಷ್ಣುವಿಗೂ,

ವಾಯುದೇವರಿಗೂ, ಇಂದ್ರಾದಿ ದೇವತೆಗಳಿಗೂ ಸೋಮಾದಿದ್ರವ್ಯಗಳನ್ನು ಹೋಮಿಸುವೆನು. (ಇದರಿಂದ ಕೃತಯುಗದಲ್ಲಿ ಅಂತರ್ಗತರೂಪಕ್ಕೇನೇ ಪೂಜೆಯನ್ನು ಮಾಡುತ್ತಿದ್ದರೆಂದುಕ್ತ ವಾದಂತಾಯಿತು.)

ಭಾ ॥ ಏವಂ ವಾಯೋಃ ಪಿತರಂ ವಿಷ್ಣುಮೇವ ಯಜಂತಿ
ದ್ರವ್ಯೈಃ ಸಹ ಯೇ ಕೃತೇ ಜನಾಃ ।
ಏವಂ ತ್ರೇತಾಯಾಂ ಕೇಚಿದನ್ಯೇ ಪೃಥಕ್ತ್ವಾನಿಷ್ಟ್ವಾ
ವಿಷ್ಣಾವರ್ಪಯಂತೇ ನ ಚಾನ್ಯೇ ॥ - ಇತಿ ಬ್ರಹ್ಮಾಂಡೇ ॥

ತಾ ॥ 'ಕೃತಯುಗದಲ್ಲಿ ಯಾವಜನರು (ಇರುತ್ತಿದ್ದರೋ ಅಂತಹರು) ವಾಯು ದೇವರಿಗೂ ತಂದೆಯಾದ ದೇವತೆಗಳಿಂದ ಕೂಡಿಕೊಂಡಿದ್ದ ವಿಷ್ಣುವನ್ನೇ ಪೂರ್ವೋಕ್ತಪ್ರಕಾರ ಪೂಜಿಸುತ್ತಿದ್ದರು. ಇದೇ ರೀತಿಯಾಗಿ ತ್ರೇತಾಯುಗದಲ್ಲಿ ಕೆಲವರು ಉತ್ತಮರು ಪೂಜಿಸು ತ್ತಿದ್ದರು. ಇತರರು (ಮಧ್ಯಮರು) ಪ್ರತ್ಯೇಕವಾಗಿ ಇತರ ದೇವತೆಗಳನ್ನು ಪೂಜಿಸಿ ಕೊನೆಗೆ ವಿಷ್ಣುವಿನಲ್ಲಿ ಅರ್ಪಿಸುತ್ತಿದ್ದರು. ಅಧಮರು ಹೀಗೂ ಸಹ ಮಾಡುತ್ತಿರಲಿಲ್ಲ.' ಎಂದು ಬ್ರಹ್ಮಾಂಡ ಪುರಾಣದಲ್ಲಿ ಹೇಳಿಯದೆ. ॥ ೬ ॥

**ಮಂ ॥ ಪ್ಲವಾ ಹ್ಯೇತೇ ಅದೃಢಾ ಯಜ್ಞರೂಪಾ ಅಷ್ಟಾದಶೋಕ್ತಮವರಂ ಯೇಷು ಕರ್ಮ। ಏತಚ್ಛ್ರೇಯೋಯೇಽಭಿನಂದಂತಿ ಮೂಢಾ ಜರಾ ಮೃತ್ಯುಂ ತೇ ಪುನರೇವಾಪಿಯಂತಿ ॥ ೭ ॥**

ಅ ॥ ಏತೇ=ಭಗವಂತನನ್ನು ದೂಷಿಸದೆ ಮಾಡಲ್ಪಟ್ಟ, ಯಜ್ಞರೂಪಾಃ=ಯಾಗದಂತೆ ತೋರುವವುಗಳು, ಅದೃಢಾಃ=ದೃಢವಲ್ಲದೆ ಇರುವ, ಪ್ಲವಾ ಹಿ=ದೋಣಿಗಳಂತೆ ಇರುವವುಗ ಳಾಗಿವೆ, (ಅಂದರೆ ಹರಕು ದೋಣಿಗಳಿಂದ ನದಿಯನ್ನು ದಾಟುವವನು ಆಪತ್ತನ್ನು ಹೊಂದು ವಂತೆ ಇಂತಹ ಕರ್ಮಗಳನ್ನು ಮಾಡಿದವನು ಕಷ್ಟಕ್ಕೆ ಗುರಿಯಾಗುತ್ತಾನಲ್ಲದೆ ಶ್ರೇಯಸ್ಸನ್ನೂ ಹೊಂದಲಾರನು). ಯೇಷು=ಯಾವ ಯಾಗಗಳಲ್ಲಿ, ಅಷ್ಟಾದಶೋಕ್ತಂ-ಅಷ್ಟಾದಶ=ಹದಿ ನೆಂಟು ಪುರುಷರಿಗೆ, ಉಕ್ತಂ=ಕರ್ತವ್ಯವಾಗಿ ಹೇಳಲ್ಪಟ್ಟ (ಅಥವಾ), ಅಷ್ಟಾದಶ=ಹದಿನೆಂಟು ವಿದ್ಯೆಗಳಲ್ಲಿ, ಉಕ್ತಂ=ಹೇಳಲ್ಪಟ್ಟ, (೧೬ ಋತ್ವಿಜರು, ೧ ಯಜಮಾನ, ೧ ಸಭ್ಯ ಹೀಗೆ ೧೮ ಪುರುಷರು, ಯಾ ಋಗಾದಿ ೪ ವೇದಗಳು, ಶಿಕ್ಷಾದಿ ೬ ಅಂಗಗಳು, ಪುರಾಣ, ೧ ನ್ಯಾಯ, ೧ ಮೀಮಾಂಸಾ, ೧ ಧರ್ಮಶಾಸ್ತ್ರ, ೧ ಆಯುರ್ವೇದ, ೧ ಧನುರ್ವೇದ, ೧ ಗಾಂಧರ್ವ, ೧ ಅರ್ಥ ಶಾಸ್ತ್ರ ೧, ಹೀಗೆ ೧೮ ವಿದ್ಯೆಗಳು), ಅವರಂ=(ಹರಿವಿಷಯವಲ್ಲದಿರುವ ಪ್ರಯುಕ್ತ) ನಿಕೃಷ್ಟ ವಾದ,ಏತತ್ ಕರ್ಮ=ಈ ಕರ್ಮವನ್ನು,ಶ್ರೇಯಃ=ಶ್ರೇಯಸ್ಸಾಧನವನ್ನಾಗಿ, ಯೇ ಮೂಢಾಃ= ಯಾವ ಅಜ್ಞಾನಿಗಳು, ಅಭಿನಂದಂತಿ=(ತಿಳಿದು) ಸಂತೋಷಪಡುತ್ತಾರೋ, ತೇ=ಅವರು, ಜರಾ ಮೃತ್ಯುಂ=ಮುಪ್ಪುಮರಣಗಳನ್ನು, ಪುನರೇವ=ತಿರುತಿರುಗಿ, ಅಪಿಯಂತಿ=ಹೊಂದುತ್ತಾರೆ. (ಅಂದರೆ ಸ್ವರ್ಗನರಕ ಭೂಲೋಕಗಳಲ್ಲಿ ತಿರುಗುತ್ತಿರುತ್ತಾರೆ). ॥ ೭ ॥

**ಮಂ ॥ ಅವಿದ್ಯಾಯಾಮಂತರೇ ವೇಷ್ಟ್ಯಮಾನಾಃ ಸ್ವಯಂ ಧೀರಾಃ ಪಂಡಿತಂ ಮನ್ಯಮಾನಾಃ ಜಂಘನ್ಯಮಾನಾಃ ಪರಿಯಂತಿ ಮೂಢಾ ಅಂಧೇನೈವ ನೀಯಮಾನಾ ಯಥಾಂಧಾಃ ॥ ೮ ॥**

ಅ ॥ ಅವಿದ್ಯಾಯಾಂ ಅಂತರೇ=ಅಜ್ಞಾನ ಮಧ್ಯದಲ್ಲಿ, ವೇಷ್ಟ್ಯಮಾನಾಃ=ಸುತ್ತುವರಿಯಲ್ಪಟ್ಟ (ಅಂದರೆ ಅತಿಶಯವಾಗಿ ಅಜ್ಞಾನಾಚ್ಛಾದಿತರಾದ), ಸ್ವಯಂ ಧೀರಾಃ=ತಾವೇ ಪ್ರಜ್ಞಾವಂತರೆಂದು ತಿಳಿದಿರುವ, ಪಂಡಿತಂಮನ್ಯಮಾನಾಃ=ಅಪಂಡಿತರಾದರೂ ತಾವೇ ಪಂಡಿತರೆಂದು ತಿಳುಕೊಂಡಿರುವ, ಜಂಘನ್ಯಮಾನಾಃ=ಕುಟಿಲತನವುಳ್ಳ, ಮೂಢಾಃ=ಮೂರ್ಖರು, ಅಂಧೇನ=ಕುರುಡನಿಂದ, ನೀಯಮಾನಾಃ=ಕೈಯಲ್ಪಡುವ, ಅಂಧಾ ಯಥಾ=ಕುರುಡರಂತೆ, ಪರಿಯಂತಿ=ತಿರುಗಾಡುತ್ತಾರೆ. (ಅಂದರೆ ಕುರುಡನಿಗೆ ಕುರುಡನೇ ದಾರಿತೋರಿಸಿಕೊಂಡು ಹೋಗಿ ಇಬ್ಬರೂ ಮಾರ್ಗತಪ್ಪಿ ಬಾವಿಗೆ ಬೀಳುವಂತೆ ಸ್ವರ್ಗಾದಿ ಅನಿತ್ಯ ಲೋಕಗಳಲ್ಲಿ ಬಿದ್ದು ಉರುಳಾಡುತ್ತಿರುತ್ತಾರೆ). ॥ ೮ ॥

**ಮಂ ॥ ಅವಿದ್ಯಾಯಾಂ ಬಹುಧಾ ವರ್ತಮಾನಾಃ ಸ್ವಯಂ ಕೃತಾರ್ಥಾ ಇತ್ಯಭಿಮನ್ಯಂತಿ ಬಾಲಾಃ । ಯತ್ಕರ್ಮಿಣೋ ನ ಪ್ರವೇದಯಂತಿ ರಾಗಾತ್ತೇನಾತುರಾಃ ಕ್ಷೀಣಲೋಕಾಶ್ಚ್ಯವಂತೇ ॥ ೯ ॥**

ಅ ॥ ಅವಿದ್ಯಾಯಾಂ=ಅಜ್ಞಾನದಲ್ಲಿ, ಬಹುಧಾ=ಅನೇಕ ಪ್ರಕಾರವಾಗಿ, ವರ್ತಮಾನಾಃ=ಇರುವ, ಬಾಲಾಃ=ಮೂಢರು, ಸ್ವಯಂಕೃತಾರ್ಥಾ ಇತಿ=ತಾವೇ ಧನ್ಯರೆಂದು, ಅಭಿಮನ್ಯಂತಿ=ತಿಳಕೊಳ್ಳುತ್ತಾರೆ, ಯತ್=ಯಾವ ಕಾರಣದಿಂದ, ರಾಗಾತ್=(ಸ್ವರ್ಗಾದಿ ಅನಿತ್ಯಸುಖಗಳಲ್ಲಿ) ಅಭಿಲಾಷೆಯಿಂದ, ಕರ್ಮಿಣಃ=ಯಜ್ಞಾದಿ ಕರ್ಮಗಳನ್ನಾಚರಿಸತಕ್ಕವರೋ (ಆ ಕಾರಣದಿಂದ), ನ ಪ್ರವೇದಯಂತಿ=ಹರಿಯನ್ನು ಚನ್ನಾಗಿ ತಿಳುಕೊಳ್ಳುವುದಿಲ್ಲ. ತೇನ=ಅದೇ ಕಾರಣದಿಂದ, ಆತುರಾಃ=ಕಳವಳಗೊಂಡವರಾಗಿ, ಕ್ಷೀಣಲೋಕಾಃ=ಆ ಲೋಕವನ್ನು ಕಳಕೊಂಡವರಾಗಿ, ಚ್ಯವಂತೇ=ಅಧೋಲೋಕಕ್ಕೆ ಬೀಳುತ್ತಾರೆ. ॥ ೯ ॥

**ಮಂ ॥ ಇಷ್ಟಾಪೂರ್ತಂ ಮನ್ಯಮಾನಾ ವರಿಷ್ಠಂ ನಾನ್ಯಚ್ಛ್ರೇಯೋ ವೇದಯಂತೇ ಪ್ರಮೂಢಾಃ । ನಾಕಸ್ಯ ಪೃಷ್ಠೇ ಸುಕೃತೇ ತೇಽನುಭೂತ್ವಾ ಇಮಂ ಲೋಕಂ ಹೀನತರಂ ವಾ ವಿಶಂತಿ ॥ ೧೦ ॥**

ಅ ॥ ಇಷ್ಟಾಪೂರ್ತಂ-ಇಷ್ಟ=ಯಾಗವು, ಪೂರ್ತಂ=ಅನ್ನದಾನಾದಿಯು ಇವುಗಳನ್ನು, ವರಿಷ್ಠಂ=ಮುಖ್ಯ ಶ್ರೇಯಸ್ಸಾಧನವನ್ನಾಗಿ, ಮನ್ಯಮಾನಾಃ=ತಿಳುಕೊಳ್ಳುವವರು, ಪ್ರಮೂಢಾಃ=ಅತಿಮೂಢರಾದವರು, ಅನ್ಯತ್=ಭಗವದ್ರೂಪವಾದ, ಶ್ರೇಯಃ=ಅತಿಪ್ರಶಸ್ತ ವಸ್ತುವನ್ನು, ನ ವೇದಯಂತೇ=ತಿಳಿಯುವುದಿಲ್ಲ. ತೇ=ಅವರು, ಸುಕೃತೇ=ಪುಣ್ಯಸಾಧ್ಯವಾದ, ನಾಕಸ್ಯ ಪೃಷ್ಠೇ=ಸ್ವರ್ಗಪ್ರದೇಶದಲ್ಲಿ, ಅನುಭೂತ್ವಾ=ಅಲ್ಪವಾದ ಸ್ವರ್ಗಸುಖಗಳನ್ನನುಭವಿಸಿ, ಇಮಂ ಲೋಕಂ=ಭೂಲೋಕವನ್ನಾಗಲಿ, ಹೀನತರಂ ವಾ=ಅಂಧಂತಮಸ್ಸನ್ನಾಗಲಿ, ವಿಶಂತಿ=ಪ್ರವೇಶಿಸುತ್ತಾರೆ.

**ಭಾ ॥** ವಿಷ್ಣೋಃ ಸರ್ವೇಭ್ಯಃ ಕಿಂಚಿದುತ್ತಮತ್ವಂ ಜಾನಂತಃ ಇಮಂ ಲೋಕಮಾವಿಶಂತಿ ।
ಸಾಮ್ಯಂ ಹೀನತ್ವಂ ವಾ ಜಾನಂತೋ ಹೀನತರಂ ತಮ ಏವ ವಿಶಂತಿ ॥

ತಾ ॥ ಶ್ರೀಪರಮಾತ್ಮನಿಗೆ ಬ್ರಹ್ಮಾದಿ ಸಮಸ್ತ ಉತ್ತಮತ್ವವನ್ನು ತಿಳಿದವರು ಈ ಲೋಕವನ್ನೇ ಪ್ರವೇಶಿಸುತ್ತಾರೆ. ಬ್ರಹ್ಮಾದಿಗಳ ಸಾಮ್ಯವನ್ನಾಗಲಿ, ಅವರಿಂದಲೂ ನಿಕೃಷ್ಟತ್ವವನ್ನಾಗಲೀ ತಿಳುಕೊಂಡವರು ಅತಿನಿಕೃಷ್ಟವಾದ ತಮಸ್ಸನ್ನೇ ಹೊಂದುತ್ತಾರೆ.

ಭಾ || ದೇವೇಭ್ಯ ಉತ್ತಮಂ ವಿಷ್ಣುಂ ರಾಜವದ್ಯಸ್ತು ಮನ್ಯತೇ ।
ಯಾಜೀ ಸ ಮಾನುಷಂ ಯಾತಿ ಸಾಮ್ಯಹೀನತ್ವವಿತ್ತಮಃ || ಇತಿ ಚ ||

ಅ || ರಾಜನು ಹೇಗೆ ಐಶ್ವರ್ಯದಿಂದಲೇ ಎಲ್ಲರಿಂದಲೂ ಮೇಲಾದವನೋ, ಅದೇ ರೀತಿಯಾಗಿ ಶ್ರೀಹರಿಯನ್ನು ಬ್ರಹ್ಮಾದಿದೇವತೆಗಳಿಗಿಂತ ಗುಣಗಳಿಂದಲೇ ಉತ್ತಮನನ್ನಾಗಿ ಯಾರು ತಿಳುಕೊಳ್ಳುತ್ತಾನೋ ಅಂಥಾ (ಕೊನೆಗೆ ವಿಷ್ಣುವಿನಲ್ಲಿ) ಯಜ್ಞಾದಿಗಳನ್ನು ಸಮರ್ಪಿಸುವವನು ಮನುಷ್ಯಜನ್ಮವನ್ನು ಹೊಂದುತ್ತಾನೆ, ಬ್ರಹ್ಮಾದಿಸಾಮ್ಯವನ್ನಾಗಲಿ ಹೀನತ್ವವನ್ನಾಗಲಿ ತಿಳಿಯುವವನು ತಮಸ್ಸನ್ನೇ ಹೊಂದುತ್ತಾನೆ. ಹೀಗೂ ಉಕ್ತವಾಗಿಯದೆ.

ಭಾ || "ತ್ರೈವಿದ್ಯಾಮಾಮಿತಿ" ತು "ಯೇಪ್ಯನ್ಯ ದೇವತಾ ಭಕ್ತಾಃ" "ತೇಪಿ ಮಾಮೇವ ಕೌಂತೇಯ ಯಜಂತಿ" "ಅಹಂ ಹಿ ಸರ್ವಯಜ್ಞಾನಾಂ ಭೋಕ್ತೇ"ತ್ಯುಕ್ತತ್ವಾತ್ ಅಜ್ಞಾನಪೂರ್ವಯಾಜಿನಸ್ತ್ರೈವಿದ್ಯಾಃ ||

ತಾ || ಸಾಮ್ಯಾದಿ ಮಿಥ್ಯಾಜ್ಞಾನಿಗಳು ತ್ರೈವಿದ್ಯರಾದುದರಿಂದ ಅಂಥವರಿಗೆ ಸ್ವರ್ಗಭೋಗದ ಕ್ಷಯಾನಂತರದಲ್ಲಿ ಭೂಲೋಕಪ್ರಾಪ್ತಿಯೇ ಹೇಳಲ್ಪಟ್ಟ ಪ್ರಯುಕ್ತ ತಮಸ್ಸನ್ನು ಹೊಂದುತ್ತಾರೆ. ಎಂಬೀ ವಚನವು ಅಸಂಗತವು ಎಂದು ಆಶಂಕಿಸಕೂಡದು. ಏಕೆಂದರೆ-ತ್ರೈವಿದ್ಯರು ನನ್ನನ್ನೇ ಹೊಂದುತ್ತಾರೆ ಎಂಬುವುದಾದರೂ, ಯಾರು ಹರಿಯಿಂದ ಇತರರಾದ ದೇವತೆಗಳ ಭಕ್ತರೋ ಅವರೂ ಕೂಡಾ, ಎಲೈ ಅರ್ಜುನನೇ ನನ್ನನ್ನೇ ಯಾಗಮಾಡುವರು. ನಾನಾದರೂ ನಿಖಿಲ ಯಾಗಗಳನ್ನು ಭೋಗಿಸುವವನು. ಹೀಗೆ ಹೇಳಲ್ಪಟ್ಟ ಪ್ರಯುಕ್ತ ಸರ್ವಯಜ್ಞಭೋಕ್ತೃತ್ವಾದಿ ಜ್ಞಾನವಿಲ್ಲದೆ ಯಾರು ಯಾಗ ಮಾಡುವರೋ ಅಂಥವರೇ ತ್ರೈವಿದ್ಯರೆಂದು ವಿವಕ್ಷಿತರಾಗಿದ್ದಾರೆ. ಅಂತೂ ತ್ರೈವಿದ್ಯರೆಂದರೆ ಮುಕ್ತಿಯೋಗ್ಯರು, ನಿತ್ಯಸಂಸಾರಿಗಳು ಅಲ್ಲದೆ ತಮೋಯೋಗ್ಯರಲ್ಲ. ಕಾರಣ ಗೀತಾವಿರೋಧ ಇಲ್ಲ. || ೧೦ ||

**ಮಂ || ತಪಃ ಶ್ರದ್ಧೇ ಯೇಽಭ್ಯುಪವಸಂತಿ ಅರಣ್ಯೇ ಶಾಂತಾ ವಿದ್ವಾಂಸೋ ಭೈಕ್ಷಚರ್ಯಾಂ ಚರಂತಃ । ಸೂರ್ಯದ್ವಾರೇಣ ತೇ ವಿರಜಾಃ ಪ್ರಯಾಂತಿ ಯತ್ರಾಮೃತಃ ಸ ಪುರುಷೋ ಹ್ಯವ್ಯಯಾತ್ಮಾ || ೧೧ ||**

ಅ || ಯೇ=ಯಾವ ಹರಿಜ್ಞಾನವನ್ನು ಇಚ್ಛಿಸುವವರು, ಅರಣ್ಯೇ=ಪುಣ್ಯದೇಶದಲ್ಲಿ(ಇದ್ದು), ತಪಃ ಶ್ರದ್ಧೇ-ತಪಃ=ಕೃಚ್ಛ್ರಚಾಂದ್ರಾಯಣಾದಿಯೂ ಯಾ ಶ್ರವಣಮನನಾದಿಯೂ, ಶ್ರದ್ಧೇ=ಆಸ್ತಿಕ್ಯಬುದ್ಧಿಪೂರ್ವಕ ಯಾಗಾದಿಯು ಇವುಗಳನ್ನು, ಅಭ್ಯುಪವಸಂತಿ=ಮಾಡುವರೋ, ತೇ=ಆ, ಶಾಂತಾಃ=ಭಗವದಾಸಕ್ತರಾದ, ವಿದ್ವಾಂಸಃ=ಭಗವಜ್ಜ್ಞಾನಿಗಳು, ಭೈಕ್ಷಚರ್ಯಾಂ=ಭೈಕ್ಷಕರ್ಮವನ್ನು, ಚರಂತಃ=ಮಾಡುವವರಾಗಿ ಸೂರ್ಯದ್ವಾರೇಣ=ಸೂರ್ಯಮಂಡಲದ ಮಾರ್ಗದಿಂದ, ವಿರಜಾಃ=ಪ್ರಾರಬ್ಧಕರ್ಮ ರಹಿತರಾಗಿ, ಅಮೃತಃ=ನಾಶವಿಲ್ಲದಿರುವ, ಪುರುಷಃ=ಗುಣಪರಿಪೂರ್ಣನಾದ, ಸಃ=ಪ್ರಸಿದ್ಧನಾದ, ಅವ್ಯಯಾತ್ಮಾ-ಅವ್ಯಯ=ಶಶ್ವದೇಕಪ್ರಕಾರನಾದ, ಆತ್ಮಾ=ಸ್ವಾಮಿಯಾದ ಶಿಂಶುಮಾರರೂಪಿ ಶ್ರೀಹರಿಯು, ಯತ್ರ=ಎಲ್ಲಿ (ಇದ್ದಾನೋ ಅಲ್ಲಿಗೆ), ಪ್ರಯಾಂತಿ=ಹೋಗುತ್ತಾರೆ, ಹಿ=ನಿಶ್ಚಯವು. || ೧೧ ||

ಮಂ॥ ಪರೀಕ್ಷ್ಯ ಲೋಕಾನ್ ಕರ್ಮಚಿತಾನ್ ಬ್ರಾಹ್ಮಣೋ ನಿರ್ವೇದಮಾ ಯಾನ್ನಾಸ್ತ್ಯಕೃತಃ ಕೃತೇನ। ತದ್ವಿಜ್ಞಾನಾರ್ಥಂ ಸ ಗುರುಮೇವಾಭಿ ಗಚ್ಛೇತ್ಸಮಿತ್ಪಾಣಿಃ ಶ್ರೋತ್ರಿಯಂ ಬ್ರಹ್ಮನಿಷ್ಠಂ ॥ ೧೨ ॥

ಅ॥ ಲೋಕಾನ್=ವಿಷ್ಣುಲೋಕದಿಂದಿತರ ಲೋಕಗಳನ್ನು, ಕರ್ಮಚಿತಾನ್=ಕಾಮ್ಯ ಕರ್ಮಗಳಿಂದ ಸಂಪಾದಿತಗಳನ್ನಾಗಿ, ಪರೀಕ್ಷ್ಯ=(ಅಸಾರಾನಿತ್ಯವಾಗಿ) ತಿಳಿದು, ಬ್ರಾಹ್ಮಣಃ= ಬ್ರಹ್ಮಜ್ಞಾನಯೋಗ್ಯನು, ನಿರ್ವೇದಂ=(ಕಾಮ್ಯಕರ್ಮಗಳಲ್ಲಿಯೂ ತತ್ಫಲಗಳಲ್ಲಿಯೂ) ವೈರಾಗ್ಯ ವನ್ನು, ಆಯಾತ್=ಪ್ರಾಪಿಸತಕ್ಕದು. ಅಕೃತಃ=ನಿತ್ಯಪುರುಷಾರ್ಥವಾದ ಮೋಕ್ಷವು, ಕೃತೇನ= ಕರ್ಮದಿಂದ, ನಾಸ್ತಿ=ಇಲ್ಲ (ಸಿಗಲಾರದು), ತತ್=ಆದುದರಿಂದ, ಸಃ=ವಿರಕ್ತನಾದವನು, ವಿಜ್ಞಾನಾರ್ಥಂ=ಮೋಕ್ಷಫಲಕ ಬ್ರಹ್ಮಜ್ಞಾನಾರ್ಥವಾಗಿ, ಸಮಿತ್ಪಾಣಿಃ=ಕೈಯಲ್ಲಿ ಸಮಿಧೆಯನ್ನು ಹಿಡಕೊಂಡವನಾಗಿ, ಶ್ರೋತ್ರಿಯಂ=ವೇದಾಧ್ಯಾಪಕನಾದ, ಬ್ರಹ್ಮನಿಷ್ಠಂ=ಭಗವದ್ಭಕ್ತನಾದ, ಗುರುಮೇವ=ಗುರುವನ್ನೇ, ಅಭಿಗಚ್ಛೇತ್=ಪ್ರಾಪಿಸತಕ್ಕದು. (ಅಂತೂ ವೈರಾಗ್ಯವು ಶ್ರವಣಕ್ಕೆ ಸಾಧನವೆಂದು ಉಕ್ತವಾಯಿತು.) ॥ ೧೨ ॥

ಮಂ॥ ತಸ್ಮೈ ಸ ವಿದ್ವಾನ್ ಉಪಸನ್ನಾಯ ಸಮ್ಯಕ್ ಪ್ರಶಾಂತಚಿತ್ತಾಯ ಶಮಾನ್ವಿತಾಯ। ಯೇನಾಕ್ಷರಂ ಪುರುಷಂ ವೇದ ಸತ್ಯಂ ಪ್ರೋವಾಚ ತಾಂ ತತ್ವತೋ ಬ್ರಹ್ಮವಿದ್ಯಾಂ ॥ ೧೩ ॥

॥ ಇತಿ ದ್ವಿತೀಯಃ ಖಂಡಃ ॥

ಅ॥ ಉಪಸನ್ನಾಯ=ಗುರುಶುಶ್ರೂಷೆಯನ್ನು ಮಾಡಿದ,ಸಮ್ಯಕ್=ಚೆನ್ನಾಗಿ, ಪ್ರಶಾಂತ ಚಿತ್ತಾಯ=ವಿಷಯಗಳಲ್ಲಿ ಅಲಂಬುದ್ಧಿಯುಳ್ಳ (ವಿರಕ್ತನಾದ), ಶಮಾನ್ವಿತಾಯ=ಶಮಾದಿ ಗುಣಗ ಳಿಂದೊಡಗೂಡಿದ, ತಸ್ಮೈ=ಆ ಶೌನಕನಿಗೋಸ್ಕರ, ವಿದ್ವಾನ್=ಜ್ಞಾನಿಯಾದ, ಸಃ=ಆಂಗಿರ ಋಷಿಯು, ಯೇನ=ಯಾವ ಋಗಾದಿ ಶಾಸ್ತ್ರದಿಂದ, ಸತ್ಯಂ=ಅನ್ಯಾಧೀನನಲ್ಲದೆ ಇರುವ, ಪುರುಷಂ=ಗುಣಪರಿಪೂರ್ಣನಾದ, ಅಕ್ಷರಂ=ನಾಶರಹಿತನಾದ ಶ್ರೀಹರಿಯನ್ನು, ವೇದ=ತಿಳಿ ಕೊಳ್ಳುತ್ತಾನೋ, ತಾಂ ಬ್ರಹ್ಮವಿದ್ಯಾಂ=ಆ ಬ್ರಹ್ಮವಿದ್ಯೆಯನ್ನು, ತತ್ವತಃ=ಯಥಾರ್ಥವಾಗಿ, ಪ್ರೋವಾಚ=ಹೇಳಿದನು. (ಅಂತೂ ನಿತ್ಯಾನಿತ್ಯ ವಸ್ತುವಿಚಾರದಿಂದುಂಟಾದ ವೈರಾಗ್ಯವೂ, ಶಮ ದಮಾದಿ ಸಂಪತ್ತೂ, ಮುಮುಕ್ಷಾ ಈ ಮೂರು ಶ್ರವಣಾದಿ ರೂಪವಿಚಾರಕ್ಕೆ ಅಂಗವೆಂದು ತಿಳಿಯತಕ್ಕದು.) ॥ ೧೩ ॥

ಎರಡನೇ ಖಂಡವು ಮುಗಿಯಿತು.

## ಖಂಡ ೩.

ಮಂ॥ ತದೇತತ್ಸತ್ಯಂ । ಯಥಾ ಸುದೀಪ್ತಾತ್ಪಾವಕಾದ್ವಿಸ್ಫುಲಿಂಗಾಃ ಸಹ ಸ್ರಶಃ ಪ್ರಭವಂತೇ ಸರೂಪಾಃ । ತಥಾಕ್ಷರಾದ್ವಿವಿಧಾಃ ಸೋಮ್ಯ ಭಾವಾಃ ಪ್ರಜಾಯಂತೇ ತತ್ರ ಚೈವಾಪಿಯಂತಿ ॥ ೧ ॥

ಅ॥ ತದೇತತ್=ಉಕ್ತವಕ್ಷ್ಯಮಾಣ ಲಕ್ಷಣವುಳ್ಳದ್ದು, ಸತ್ಯಂ=ಪರಬ್ರಹ್ಮವು. ಯಾ ಉಕ್ತ ವಕ್ಷ್ಯಮಾಣ ಪ್ರಮೇಯವೆಲ್ಲವೂ, ಸತ್ಯಂ=ಯಥಾರ್ಥವಾದುದು, (ಮಿಥ್ಯಾಭೂತವಾದುದಲ್ಲ). ಯಥಾ=ಹೇಗೆ, ಸುದೀಪ್ತಾತ್=ಚೆನ್ನಾಗಿ ಪ್ರಕಾಶವಿಶಿಷ್ಟವಾದ, ಪಾವಕಾತ್=ಅಗ್ನಿಯಿಂದ, ಸಹಸ್ರಶಃ=ಅಪರಿಮಿತಗಳಾದ, ವಿಸ್ಫುಲಿಂಗಾಃ=ಬೆಂಕಿಕಿಡಿಗಳು,ಪ್ರಭವಂತೇ=ಹುಟ್ಟುತ್ತಾವೋ,

ತಥಾ=ಹಾಗೆ, ಸೋಮ್ಯ=ಸೋಮಪಾನಾರ್ಹನಾದ ಶೌನಕನೇ! ಅಕ್ಷರಾತ್=ಶ್ರೀಹರಿಯಿಂದ, ವಿವಿಧಾಃ=ನಾನಾವಿಧಗಳಾದ, ಸರೂಪಾಃ=ಪ್ರಕಾಶಯುಕ್ತಗಳಾದ, ಭಾವಾಃ=ಪದಾರ್ಥಗಳು, ಪ್ರಜಾಯಂತೇ=ಹುಟ್ಟುತ್ತವೆ. ತತ್ರೈವ ಚ=ಆ ಹರಿಯಲ್ಲಿಯೇ, ಅಪಿಯಂತಿ=ನಾಶನವನ್ನು ಹೊಂದುತ್ತವೆ. ॥ ೧ ॥

**ಮಂ ॥ ದಿವ್ಯೋಹ್ಯಮೂರ್ತಃ ಪುರುಷಃ ಸ ಬಾಹ್ಯಾಭ್ಯಂತರೋಹ್ಯಜಃ ।**
**ಅಪ್ರಾಣೋಹ್ಯಮನಾಃ ಶುಭ್ರೋ ಹ್ಯಕ್ಷರಾತ್ಪರತಃ ಪರಃ ॥ ೨ ॥**

ಅ ॥ ಪುರುಷಃ=ಶ್ರೀಹರಿಯು, ದಿವ್ಯೋಹಿ=ಅತ್ಯಾಶ್ಚರ್ಯಕರನು. ಅಮೂರ್ತಃ=ನಿಯತ ಪರಿಮಾಣವಿಲ್ಲದಿರುವವನು. ಬಾಹ್ಯಾಭ್ಯಂತರಃ=ಬಾಹ್ಯಪದಾರ್ಥಗಳು, ಆಂತರಪದಾರ್ಥಗಳು ಇವು ಎರಡರಲ್ಲಿಯೂ ಇರುವವನು. ಅಜೋ ಹಿ=ಉತ್ಪತ್ತಿಶೂನ್ಯನು. ಅಪ್ರಾಣಃ=ಪ್ರಾಣಾಖ್ಯಕಲಾರಹಿತನು ಯಾ ಜಡಜ್ಞಾನ ಕರ್ಮೇಂದ್ರಿಯರಹಿತನು. ಅಮನಾಃ=ಜಡಮನೋರಹಿತನು. ಶುಭ್ರೋ ಹಿ=ಶುದ್ಧನು(ಜ್ಞಾನಾನಂದಾದ್ಯಾತ್ಮಕ ಇಂದ್ರಿಯಗಳಿಂದ ಕ್ರೀಡಿಸುವವನು). ಅಕ್ಷರಾತ್=ಜಡಪ್ರಕೃತಿಯಿಂದ, ಪರತಃ=ಉತ್ತಮವಾದ ಶ್ರೀತತ್ವದಿಂದ, ಪರಃ=ಉತ್ತಮನು.

**ಭಾ ॥** ಅಪರಂ ತ್ವಕ್ಷರಂ ಯಾ ಸಾ ಪ್ರಕೃತಿರ್ಜಡ ರೂಪಿಕಾ ।
ಅಕ್ಷರಂ ಪರಮಂ ಶ್ರೀಸ್ತು ಪರತಃ ಪರಮಕ್ಷರಂ ॥
ವಾಸುದೇವಃ ಪರಾನಂದಃ ಇತಿ ತ್ರಿವಿಧಮಕ್ಷರಂ ॥ ಇತಿ ಚ ॥ ೨ ॥

ತಾ ॥ ಜಡರೂಪವುಳ್ಳ ಪ್ರಕೃತಿಯು ಯಾವುದದೆಯೋ ಅದು ಅಪರಾಕ್ಷರವೆನ್ನಿಸಿಕೊಳ್ಳುತ್ತದೆ. (ಜಡಪ್ರಕೃತಿಗೆ ಅಭಿಮಾನಿಯಾದ)ಲಕ್ಷ್ಮಿಯಾದರೂ ಪರಮಾಕ್ಷರವೆಂದೆನ್ನಿಸಿಕೊಳ್ಳುತ್ತಾಳೆ. ಪರಮಾನಂದ ಉಳ್ಳ ವಾಸುದೇವನು ಪರತಃ ಪರಾಕ್ಷರವೆಂದೆನ್ನಿಸಿಕೊಳ್ಳುತ್ತಾನೆ. ಹೀಗೆ ಅಕ್ಷರವು ಮೂರು ವಿಧವೆಂದು ಉಕ್ತವಾಗಿಯದೆ. ॥ ೨ ॥

**ಮಂ ॥ ಏತಸ್ಮಾಜ್ಜಾಯತೇ ಪ್ರಾಣೋ ಮನಃ ಸರ್ವೇಂದ್ರಿಯಾಣಿ ಚ । ಖಂ ವಾಯುರ್ಜ್ಯೋತಿರಾಪಃ ಪೃಥಿವೀ ವಿಶ್ವಸ್ಯ ಧಾರಿಣೀ ॥ ೩ ॥**

ಅ ॥ ಏತಸ್ಮಾತ್=ಶ್ರೀಪರಮಾತ್ಮನಿಂದ, ಪ್ರಾಣಃ=ಮುಖ್ಯಪ್ರಾಣನು, ಜಾಯತೇ=ಹುಟ್ಟುತ್ತಾನೆ. ಮನಃ=ಮನಸ್ತತ್ವವು, ಸರ್ವೇಂದ್ರಿಯಾಣಿ ಚ=ಎಲ್ಲಾ ಇಂದ್ರಿಯಗಳು, ಖಂ=ಆಕಾಶವು, ವಾಯುಃ=ಭೂತವಾಯುವು, ಜ್ಯೋತಿಃ=ಅಗ್ನಿಯು, ಆಪಃ=ಜಲವು, ವಿಶ್ವಸ್ಯ=ಸಮಸ್ತ ಜಗತ್ತಿಗೆ, ಧಾರಿಣೀ=ಧಾರಕವಾದ, ಪೃಥಿವೀ=ಪೃಥಿವಿಯು, (ಅಂತು ಜಡ ತದಭಿಮಾನಿಗಳು ಆ ಹರಿಯಿಂದಲೇ ಹುಟ್ಟುವವರಾದರು.) ॥ ೩ ॥

**ಮಂ ॥ ಅಗ್ನಿರ್ಮೂರ್ಧಾ ಚಕ್ಷುಷೀ ಚಂದ್ರಸೂರ್ಯೌ ದಿಶಃ ಶ್ರೋತ್ರೇ ವಾಗ್ವಿವೃತಾಶ್ಚ ವೇದಾಃ । ವಾಯುಃ ಪ್ರಾಣೋ ಹೃದಯಂ ವಿಶ್ವಮಸ್ಯ ಪದ್ಭ್ಯಾಂ ಪೃಥಿವೀ ಹ್ಯೇಷ ಸರ್ವಭೂತಾಂತರಾತ್ಮಾ ॥ ೪ ॥**

ಅ ॥ ಅಸ್ಯ=ಈ ಹರಿಯ, ಮೂರ್ಧಾ=ಶಿರಸ್ಸು, ಅಗ್ನಿಃ=ಅಗ್ನಿನಾಮವುಳ್ಳದ್ದು. ಅಗ್ನಿಯನ್ನು ಹುಟ್ಟಿಸತಕ್ಕುದು (ಇನ್ನು ಮೇಲೆಯೂ ಇದೇ ರೀತಿಯಾಗಿ ಆಯಾಯ ಹೆಸರುಳ್ಳದ್ದು. ಆಯಾಯ ಪದಾರ್ಥಗಳನ್ನು ಹುಟ್ಟಿಸತಕ್ಕುದು ಎಂದು ತಿಳಿಯತಕ್ಕುದು.) ಚಕ್ಷುಷೀ=ಕಣ್ಣು

ಗಳು, ಚಂದ್ರಸೂರ್ಯೌ=ಚಂದ್ರಸೂರ್ಯರೆಂದು ಹೆಸರುಳ್ಳವುಗಳು, ಶ್ರೋತ್ರೇ=ಕಿವಿಗಳು, ದಿಶಃ=ದಿಕ್ ಎಂದು ಹೆಸರುಳ್ಳವುಗಳು, ವಾಕ್=ಮಾತು, ವಿವೃತಾಃ=ವಿಸ್ತೀರ್ಣಗಳಾದ, ವೇದಾಃ=ಋಗಾದಿ ವೇದಗಳು, ಪ್ರಾಣಃ=ಪ್ರಾಣವು, ವಾಯುಃ=ವಾಯುನಾಮಕವು. ಹೃದಯಂ=ಮಧ್ಯಪ್ರದೇಶವು, ವಿಶ್ವಂ=ವಿಶ್ವನಾಮಕವು. ಪದ್ಭ್ಯಾಂ=ಚರಣಗಳಿಂದ, ಪೃಥಿವೀ=ಭೂಮಿಯು (ಹುಟ್ಟಿತು). ಏಷ ಹಿ=ಈ ಶ್ರೀಹರಿಯು, ಸರ್ವಭೂತಾಂತರಾತ್ಮಾ=ಎಲ್ಲಾ ಪ್ರಾಣಿಗಳಲ್ಲಿಯೂ ಅಂತರ್ಯಾಮಿಯು. ಅಂತೂ ಸೃಷ್ಟಿಕರ್ತೃತ್ವವು, ನಿಯಾಮಕತ್ವವು ಈ ಎರಡು ಶ್ರೀಹರಿಗೇನೇ ಇರುವುದೆಂದು ಉಕ್ತವಾದ ಹಾಗಾಯಿತು.

ಭಾ ॥ ವಿಷ್ಣ್ವಂಗಾನಾಂ ಹಿ ನಾಮಾನಿ ದ್ಯುಭ್ವಾದೀನಿ ತು ಸರ್ವಶಃ ।
ಕ್ರೀಡಾದಿಶಕ್ತಿರೂಪತ್ವಾತ್ತಜ್ಜತ್ವಾದನ್ಯವಸ್ತುಷು ॥ ಇತಿ ಚ ॥

ತಾ ॥ ವಿಷ್ಣುವಿನ ಅವಯುವಗಳಿಗೆ ಕ್ರೀಡಾದಿಗುಣರೂಪತ್ವವಿದ್ದುದರಿಂದಲೂ, ಇತರ ವಸ್ತುಗಳಲ್ಲಿ ತತ್ತದವಯುವಜನ್ಯತ್ವವಿದ್ದುದರಿಂದಲೂ, ದ್ಯು, ಅಗ್ನಿ ಇತ್ಯಾದಿನಿಖಿಲ ಶಬ್ದಗಳು ನಾಮಗಳಾಗಿವೆ.

(ಅಂತೂ ಭಗವದಂಗಗಳಿಗೂ, ಅಭಿಮಾನಿದೇವತೆಗಳಿಗೂ ವಸ್ತುತಃ ಸರ್ವಥಾ ಐಕ್ಯವಿಲ್ಲ.) ॥ ೪ ॥

**ಮಂ ॥ ತಸ್ಮಾದಗ್ನಿಃ ಸಮಿದ್ಧೋ ಯಸ್ಯ ಸೂರ್ಯಃ ಸೋಮಾತ್ಪರ್ಜನ್ಯಃ ಓಷಧಯಃ ಪೃಥಿವ್ಯಾಂ । ಪುಮಾನ್ ರೇತಃ ಸಿಂಚತಿ ಯೋಷಿತಾಯಾಂ ಬಹ್ವೀಃ ಪ್ರಜಾಃ ಪುರುಷಾತ್ಸಂಪ್ರಸೂತಾಃ ॥ ೫ ॥**

ಅ ॥ ತಸ್ಮಾತ್=ಆ ಹರಿಯಿಂದ, ಅಗ್ನಿಃ=ಅಗ್ನ್ಯಾಖ್ಯದೇವತೆಯು, ಸಮಿಧಃ=ಯಜ್ಞಾಂಗಸಮಿಧೆಯು, ಪೃಥಿವ್ಯಾಂ=ಭೂಲೋಕದಲ್ಲಿ (ಹುಟ್ಟಿದವು), ಯಸ್ಯ=ಯಾವ, ಸೂರ್ಯಃ=ಆದಿತ್ಯನು, (ಇದ್ದಾನೋ ಆತನಿಂದಲೂ,) ಸೋಮಾತ್=ಸೋಮಾಖ್ಯದೇವತೆಯಿಂದಲೂ (ಕೂಡಾ), ಪರ್ಜನ್ಯಃ=ವೃಷ್ಟಿಯು (ಹುಟ್ಟಿತು). ತದಭಿಮಾನಿಯೂ ಕೂಡಾ ಹುಟ್ಟಿದನು. ಅಂತಹ ಪರ್ಜನ್ಯನಿಂದ ಓಷಧಯಃ=ವ್ರೀಹ್ಯಾದಿದ್ರವ್ಯಗಳು (ಹುಟ್ಟಿದವು). ಪುಮಾನ್=ಪೂರ್ಣನಾದ ವಾಸುದೇವನು, ಯೋಷಿತಾಯಾಂ=ಹೆಂಡತಿಯಲ್ಲಿ, ರೇತಃ=ರೇತಸ್ಸನ್ನು, ಸಿಂಚತಿ=ಸೇಚನಮಾಡುತ್ತಾನೆ. (ಅಂದರೆ ಪ್ರಳಯಕಾಲದಲ್ಲಿ ತನ್ನ ಹೊಟ್ಟೆಯಲ್ಲಿ ಇಟ್ಟುಕೊಂಡ ಜಗತ್ತನ್ನು ರೇತಸ್ಸಿನಂತೆ ಲಕ್ಷ್ಮಿಯಲ್ಲಿ ಸ್ಥಾಪಿಸುವನು.) ಪುರುಷಾತ್=ಪೂರ್ಣನಾದ ವಾಸುದೇವನಿಂದ, ಬಹ್ವೀಃ=ಬಹುಸಂಖ್ಯಾಕರಾದ, ಪ್ರಜಾಃ=ಬ್ರಹ್ಮಾದಿಪ್ರಜೆಗಳು, ಸಂಪ್ರಸೂತಾಃ=ಹುಟ್ಟಿದರು.

ಭಾ ॥ ವಾಸುದೇವಃ ಪುಮಾನ್ನಾಮಾ ಪೂರ್ಣತ್ವಾತ್ಸಃ ಸ್ವಯೋಷಿತಿ ।
ರಮಾಯಾಂ ಗರ್ಭಮುದಧಾತ್ ಪ್ರಜಾಸ್ತಸ್ಮಾತ್ಪ್ರಜಜ್ಞಿರೇ ॥
ಇತಿ ಚ ॥ ೫ ॥

ತಾ ॥ ವಾಸುದೇವರೂಪನಾದ ಶ್ರೀ ಹರಿಯು ಗುಣಪರಿಪೂರ್ಣನಾದುದರಿಂದ ಪುಮಾನ್ ಎಂದು ಹೆಸರುಳ್ಳವನು. ಆತನು ತನ್ನ ಭಾರ್ಯೆಯಾದ ಲಕ್ಷ್ಮಿಯಲ್ಲಿ ಗರ್ಭವನ್ನಿಟ್ಟನು. ಅದರಿಂದ ಪ್ರಜೆಗಳು ಹುಟ್ಟಿದರು. ॥ ೫ ॥

ಮಂ || ತಸ್ಮಾದೃಚಃ ಸಾಮ ಯಜೂಂಷಿ ದೀಕ್ಷಾ ಯಜ್ಞಾಶ್ಚ ಸರ್ವೇ ಕ್ರತವೋ ದಕ್ಷಿಣಾಶ್ಚ । ಸಂವತ್ಸರಶ್ಚ ಯಜಮಾನಶ್ಚ ಲೋಕಾಃ ಸೋಮೋ ಯತ್ರ ಪವತೇ ಯತ್ರ ಸೂರ್ಯಃ || ೬ ||

ಅ || ತಸ್ಮಾತ್=ಆಹರಿಯಿಂದಲೇ, ಋಚಃ=ಋಗ್ವೇದವು, ತದಭಿಮಾನಿದೇವತೆಗಳೂ, (ಮೇಲೆಯೂ ತತ್ತದಭಿಮಾನಿದೇವತೆಗಳನ್ನು ಇಟ್ಟುಕೊಳ್ಳತಕ್ಕದ್ದು.) ಸಾಮಂ=ಸಾಮವೇದವು, ಯಜೂಂಷಿ=ಯಜುರ್ವೇದವು, ದೀಕ್ಷಾ=ಯಜ್ಞದೀಕ್ಷೆಯು, ಯಜ್ಞಾಃ=ಅಗ್ನಿಹೋತ್ರಾದಿಗಳು, ಸರ್ವೇ=ನಿಖಿಲಗಳಾದ, ಕ್ರತವಃ=ಸೋಮಯಾಗಗಳು, ದಕ್ಷಿಣಾಶ್ಚ=ದಕ್ಷಿಣೆಗಳು, ಸಂವತ್ಸರಶ್ಚ=ಸಂವತ್ಸರವು, ಯಜಮಾನಶ್ಚ=ಯಜ್ಞಾದಿಗಳನ್ನು ಮಾಡಿಸುವವನು, ಯತ್ರ=ಎಲ್ಲಿ, ಸೋಮಃ=ಸೋಮನು,(ಚಂದ್ರನು)ಪವತೇ=ಸಂಚರಿಸುತ್ತಾನೋ, ಯತ್ರ=ಎಲ್ಲಿ, ಸೂರ್ಯಃ=ಆದಿತ್ಯನು (ಕೂಡಾ ಸಂಚರಿಸುತ್ತಾನೋ), ಅಂಥಾ ಲೋಕಾಶ್ಚ=ಲೋಕಗಳು ಕೂಡಾ ಹುಟ್ಟಿದವು. ಇವುಗಳಲ್ಲಿ ಋಗಾದಿ ಕೆಲವುಗಳೀಗೆ ಅಭಿವ್ಯಕ್ತಿಯೆಂತಲೂ ದೀಕ್ಷಾದಿಗಳಿಗೆ ಸಾಕ್ಷಾದುತ್ಪತ್ತಿಯೇ ಎಂತಲೂ ತಿಳಕೊಳ್ಳತಕ್ಕದ್ದು). || ೬ ||

ಮಂ || ತಸ್ಮಾಚ್ಚ ದೇವಾ ಬಹುಧಾ ಸಂಪ್ರಸೂತಾಃ ಸಾಧ್ಯಾ ಮನುಷ್ಯಾಃ ಪಶವೋ ವಯಾಂಸಿ । ಪ್ರಾಣಾಪಾನೌ ವ್ರೀಹಿಯವೌ ತಪಶ್ಚ ಶ್ರದ್ಧಾ ಸತ್ಯಂ ಬ್ರಹ್ಮಚರ್ಯಂ ವಿಧಿಶ್ಚ || ೭ ||

ಅ || ತಸ್ಮಾಚ್ಚ=ಆ ಪುರುಷನಿಂದಲೇ, ಬಹುಧಾ=ಬಹುಪ್ರಕಾರವಾಗಿ (ಅಂದರೆ ಸೂಕ್ಷ್ಮದೇಹ ಸ್ಥೂಲದೇಹ, ಲಿಂಗಜನ್ಯದೇಹ ಇತ್ಯಾದಿ ಬಹುಪ್ರಕಾರ), ದೇವಾಃ=ದೇವತೆಗಳು, ಸಂಪ್ರಸೂತಾಃ=ಹುಟ್ಟಿದರು. ಸಾಧ್ಯಾಃ=ಸಾಧ್ಯನಾಮಕ ಗಣದೇವತೆಗಳು, ಮನುಷ್ಯಾಃ=ಮನುಷ್ಯರು, ಪಶವಃ=ಪಶುಗಳು, ವಯಾಂಸಿ=ಹಕ್ಕಿಗಳು, ಪ್ರಾಣಾಪಾನೌ=ಪ್ರಾಣ, ಅಪಾನ ಎಂಬೀ ವಾಯುಗಳು, ವ್ರೀಹಿಯವೌ=ಭತ್ತ ಧಾನ್ಯಗಳು, ತಪಶ್ಚ=ಕೃಚ್ಛ್ರ ಚಾಂದ್ರಾಯಣಾದಿಗಳು, ಶ್ರದ್ಧಾ=ಆಸ್ತಿಕ್ಯಬುದ್ಧಿಯು, ಸತ್ಯಂ=ಯಥಾರ್ಥನುಡಿಯು, ಬ್ರಹ್ಮಚರ್ಯಂ=ಬ್ರಹ್ಮಚರ್ಯವು, ವಿಧಿಶ್ಚ=ಕರ್ಮವಿಧಾನವೂ ಕೂಡಾ, (ಇವುಗಳೆಲ್ಲವೂ ಹುಟ್ಟಿದವು).

ಮಂ || ಸಪ್ತ ಪ್ರಾಣಾಃ ಪ್ರಭವಂತಿ ತಸ್ಮಾತ್ಸಪ್ತಾರ್ಚಿಷಃ ಸಮಿಧಃಸಪ್ತಹೋಮಾಃ । ಸಪ್ತ ಇಮೇ ಲೋಕಾಃ ಯೇಷು ಚರಂತಿ ಪ್ರಾಣಾ ಗುಹಾಶಯಾಂ ನಿಹಿತಾಃ ಸಪ್ತ ಸಪ್ತ || ೮ ||

ಅ || ತಸ್ಮಾತ್=ಆ ಹರಿಯಿಂದ, ಸಪ್ತ ಪ್ರಾಣಾಃ=ಏಳು ಇಂದ್ರಿಯಗಳು, (ಚಕ್ಷು, ಶ್ರೋತ್ರ, ಘ್ರಾಣ, ರಸನ, ತ್ವಕ್, ಮನಸ್ಸು, ಬುದ್ಧಿ), ಪ್ರಭವಂತಿ=ಹುಟ್ಟಿದವು, ಸಪ್ತಾರ್ಚಿಷಃ=ಏಳು ಇಂದ್ರಿಯಜನ್ಯ ಜ್ಞಾನಗಳು, ಸಮಿಧಃ=ಗಂಧಾದಿ ವಿಷಯಗಳು, ಅಂದರೆ ರೂಪ, ರಸ, ಗಂಧ, ಸ್ಪರ್ಶ, ಶಬ್ದ, ಇವು ಐದುವಿಷಯ), ಸಪ್ತಹೋಮಾಃ=ಏಳು ವಿಷಯೇಂದ್ರಿಯ ಸಂಬಂಧಗಳು, (ಸೃಷ್ಟಗಳಾದವು). ಗುಹಾಶಯಾಂ=(ಪ್ರಾಣಿಗಳಿಗೆ ಜ್ಞಾನಹುಟ್ಟುವದಕ್ಕೋಸ್ಕರ), (ಪ್ರತಿಶರೀರದಲ್ಲಿಯೂ), ಸಪ್ತಸಪ್ತಪ್ರಾಣಾಃ=ಏಳೇಳು ಜ್ಞಾನೇಂದ್ರಿಯಗಳು, ನಿಹಿತಾಃ=ಇಡಲ್ಪಟ್ಟವುಗಳಾಗಿ, ಯೇಷು=ಯಾವ ಗೋಲಕಗಳಲ್ಲಿ, ಚರಂತಿ=ಸಂಚರಿಸುತ್ತಾವೋ, (ಅಂಥಾ) ಇಮೇ=ಈದಾವ, ಸಪ್ತಲೋಕಾಃ=ಏಳುಗೋಲಕಗಳು (ಹುಟ್ಟಿದವು).

ಭಾ || ಸಪ್ತಾರ್ಚಿಷೋ ವೃತ್ತಯಃ | ಹೋಮಾಃ ಸಂಬಂಧಾಃ ||
ಲೋಕಾಃ ಗೋಲಕಾಃ | ಗುಹಾಶಯಾಂ ಬುದ್ಧೌ ||
"ಲೋಪಃ ಸಮಾನೇ" ಇತಿ ಸೂತ್ರಾತ್ ಏಕ ಯಕಾರ ಲೋಪಃ ||
ಪ್ರತಿಪುರುಷಂ ಸಪ್ತ ಸಪ್ತ || ೮ ||

ತಾ || ಏಳುಅರ್ಚಿಸ್ಸುಗಳೆಂದರೆ ಇಂದ್ರಿಯದಿಂದ ಹುಟ್ಟಿದ ಜ್ಞಾನಗಳು. ಹೋಮಗಳೆಂದರೆ ವಿಷಯೇಂದ್ರಿಯ ಸಂಬಂಧಗಳು. ಲೋಕಗಳೆಂದರೆ ಇಂದ್ರಿಯಗೋಳಕಗಳು. ಗುಹಾಶಯಾಂ ಅಂದರೆ ಬುದ್ಧಿಯಲ್ಲಿ 'ಲೋಪಃ ಸಮಾನೇ' ಸಮಾನವಾದ ಶಬ್ದವು ಪರವಾದರೆ ಪೂರ್ವಶಬ್ದಕ್ಕೆ ನಾಶಬರುವುದು. ಎಂಬೀ ಸೂತ್ರದಿಂದ (ಗುಹಾಶಯಾಯಾಂ) ಎಂಬಲ್ಲಿದ್ದ ಒಂದು ಯಕಾರಕ್ಕೆ ಲೋಪವು ಬಂದಿರುತ್ತದೆ. ಪ್ರತಿ ಪುರುಷರಲ್ಲಿಯೂ ಏಳೇಳು ಇಂದ್ರಿಯಗಳಿವೆ. || ೮ ||

**ಮಂ || ಅತಃ ಸಮುದ್ರಾಃ ಗಿರಯಶ್ಚ ಸರ್ವೇ ಅಸ್ಮಾತ್ಸ್ಯಂದಂತೇ ಸಿಂಧವಃ ಸರ್ವ ರೂಪಾಃ | ಅತಶ್ಚ ಸರ್ವಾ ಓಷಧಯೋ ರಸಾಶ್ಚ ಯೇನೈಷ ಭೂತೈಸ್ತಿಷ್ಠತೇ ಹ್ಯಂತರಾತ್ಮಾ || ೯ ||**

ಅ || ಅತಃ=ಶ್ರೀಪರಮಾತ್ಮನಿಂದಲೇ, ಸರ್ವೇ=ಸಮಸ್ತಗಳಾದ, ಸಮುದ್ರಾಃ=ಸಮುದ್ರಗಳು, ಗಿರಯಶ್ಚ=ಪರ್ವತಗಳು (ಕೂಡಾ ಹುಟ್ಟಿದವು). ಅಸ್ಮಾತ್=ಈ ಹರಿಯಿಂದಲೇ, ಸಿಂಧವಃ=ನದಿಗಳು, ಸರ್ವರೂಪಾಃ=ಸರ್ವದಿಙ್ಮುಖಗಳಾಗಿ, ಸ್ಯಂದಂತೇ=ಹರಿಯುತ್ತವೆ. ಅತಶ್ಚ=ಈ ಹರಿಯಿಂದಲೇ, ಸರ್ವಾಃ=ನಿಖಿಲಗಳಾದ, ಓಷಧಯಃ=ಧಾನ್ಯವಿಶೇಷಗಳು, ರಸಾಶ್ಚ=ಮಧುರಾದಿ ರಸಗಳು (ಹುಟ್ಟಿದವು). ಯೇನ=ಯಾವಕಾರಣದಿಂದ, ಭೂತೈಃ=ಭೂತಗಳಿಂದ (ಕೂಡಿಕೊಂಡು), ಅಂತರಾತ್ಮಾ=ಅಂತರ್ಯಾಮಿ ರೂಪಿಯಾಗಿ, ತಿಷ್ಠತೇ=ಇರುತ್ತಾನೋ, ಏಷ ಹಿ=ಈ ಹರಿಯು, (ಈ ಸಮಸ್ತ ವಸ್ತುಗಳನ್ನೂ ಉಂಟುಮಾಡಿದನು).

**ಮಂ || ಪುರುಷ ಏವೇದಂ ವಿಶ್ವಂ ಕರ್ಮ ತಪೋ ಬ್ರಹ್ಮ ಪರಾಮೃತಂ | ಏತದ್ಯೋವೇದ ನಿಹಿತಂ ಗುಹಾಯಾಂ ಸೋಽವಿದ್ಯಾಗ್ರಂಥಿಂ ವಿಕಿರತಿ ಹ ಸೌಮ್ಯ || ೧೦ ||**

ಅ || ಕರ್ಮ=ಸೃಷ್ಟಿಕ್ರಿಯೆಯು, ತಪಃ=ಜ್ಞಾನವು(ಇದೇ ಮೊದಲಾದ),ಇದಂ ವಿಶ್ವಂ=ಈ ನಿಖಿಲಧರ್ಮಸಮುದಾಯವು, ಪರಾಮೃತಂ=ನಿತ್ಯಮುಕ್ತವೆಂದು ಹೆಸರುಳ್ಳ, ಬ್ರಹ್ಮ=ಗುಣಪರಿಪೂರ್ಣನಾದ, ಪುರುಷ ಏವ=ಶ್ರೀ ಪರಮಾತ್ಮನೇ(ಅಂದರೆ ಪರಮಾತ್ಮನಿಗೂ ಆತನ ಧರ್ಮಾದಿಗಳಿಗೂ ಅತ್ಯಂತಾಭೇದವೇ ಎಂದು ತಾತ್ಪರ್ಯ.)ಏತತ್=ಈ ಯಾವ, ಗುಹಾಯಾಂ=ಹೃದಯ ಗುಹೆಯಲ್ಲಿ, ನಿಹಿತಂ=ಇಡಲ್ಪಟ್ಟ ಬ್ರಹ್ಮವಸ್ತು, ಯಃ=ಯಾವ ಅಧಿಕಾರಿಯು, ವೇದ=ತಿಳಕೊಳ್ಳುತ್ತಾನೋ, ಸಃ=ಆತನು, ಸೌಮ್ಯ=ಸೋಮಪಾನಾರ್ಹನಾದ ಎಲೈಶೌನಕನೇ! ಅವಿದ್ಯಾಗ್ರಂಥಿಂ=ಪ್ರಕೃತಿಬಂಧವನ್ನು, ವಿಕಿರತಿ ಹ=ಬಿಡಿಸಿಕೊಳ್ಳುತ್ತಾನೆ.

ಭಾ || ಭಗವತಃ ಕರ್ಮ ಚೇಷ್ಟಾ ತಪೋ ಜ್ಞಾನಂ ಚ |
ಪರಾಮೃತಾಖ್ಯಃ ಪುರುಷೋ ಭಗವಾನೇವ || ೯ ||

ತಾ ॥ ಪರಮಾತ್ಮನ ಕರ್ಮ ಅಂದರೆ ಚೇಷ್ಟೆಯು, ತಪಸ್ಸೆಂದರೆ ಜ್ಞಾನ ಇವುಗಳು ಪರಾಮೃತನೆಂದು ಹೆಸರುಳ್ಳ ಪುರುಷ ಅಂದರೆ ಗುಣಪರಿಪೂರ್ಣನೆಂದು ಪ್ರಸಿದ್ಧನಾದ ಪರಮಾತ್ಮನೇ ಅಂದರೆ ಆತನ ಸ್ವರೂಪಗಳೇ ಎಂದುತಿಳಿಯತಕ್ಕದು.

ಭಾ ॥ ಯೈಷಾ ಚೇಷ್ಟಾ ಭಗವತೋ ಯಚ್ಚ ಜ್ಞಾನಂ ಪರಾತ್ಮನಃ ।
ತತ್ಸರ್ವಂ ಭಗವಾನೇವ ಯೇ ಚ ಧರ್ಮಾ ಬಲಾದಯಃ ॥ ಇತಿ ಚ ॥
ಸ್ವಾಭಾವಿಕೀ ಜ್ಞಾನ ಬಲಕ್ರಿಯಾ ಚ ಇತಿ ಶ್ರುತಿಃ ॥ ೧೦ ॥

ಇತಿ ತೃತೀಯಃ ಖಂಡಃ

ಅ ॥ ಪರಮಾತ್ಮನ ಯಾವುದೊಂದು ಚೇಷ್ಟೆಯಿದೆಯೋ ಯಾವುದೊಂದು ಜ್ಞಾನವಿದೆಯೋ ಸಾಮರ್ಥ್ಯವೇ ಮೊದಲಾದ ಯಾವ ಆತನ ಧರ್ಮಗಳಿವೆಯೋ ಇವುಗಳೆಲ್ಲವೂ ಶ್ರೀಪರಮಾತ್ಮನೇ. (ಅಂತೂ ಪರಮಾತ್ಮನಿಗೂ ಆತನ ಧರ್ಮಗಳಿಗೂ ಅಭೇದವೇ). ಹೀಗೂ ಸ್ಮೃತಿಯು ಇರುತ್ತದೆ. "ಜ್ಞಾನ, ಬಲ, ಕ್ರಿಯೆಗಳೂ (ಪರಮಾತ್ಮನ) ಸ್ವಭಾವಗಳೇ ಅಂದರೆ ಸ್ವರೂಪವೇ" ಎಂದು ಶ್ವೇತಾಶ್ವತರ ಶ್ರುತಿಯೂ (VI-8) ಇರುತ್ತದೆ. ಅಂತೂಪರಮಾತ್ಮನನ್ನು ಜಗತ್ಸೃಷ್ಟ್ಯಾದಿಗಳನ್ನು ಮಾಡತಕ್ಕವನೆಂದು ತಿಳುಕೊಂಡರೆ ಸಮಸ್ತ ಅಜ್ಞಾನವೂ ನಾಶವಾಗುತ್ತದೆಂದು ಈ ಖಂಡದಲ್ಲಿ ಉಕ್ತವಾದಂತಾಯಿತು.

ಮೂರನೆಯ ಖಂಡವು ಸಮಾಪ್ತವು.

## ಖಂಡ ೪.

**ಮಂ ॥ ಆವಿಃ ಸನ್ನಿಹಿತಂ ಗುಹಾಚರಂ ನಾಮ ಮಹತ್ಪದಂ । ಅತ್ರೈತತ್ಸರ್ವಮರ್ಪಿತಮೇಜತ್ಪ್ರಾಣನ್ನಿಮಿಷಚ್ಚ ಯತ್ ॥ ೧ ॥**

ಅ ॥ (ಪರಬ್ರಹ್ಮವು) ಆವಿಃ=ನಿತ್ಯಾಭಿವ್ಯಕ್ತವು, ಸನ್ನಿಹಿತಂ=ಸರ್ವವಸ್ತುಗಳಿಗೂ ಸಮೀಪದಲ್ಲಿರುವುದು. ಗುಹಾಚರಂ=ಹೃದಯಾಕಾಶದಲ್ಲಿರುವುದು. ಪದಂ=ಪ್ರಾಪಿಸಲಿಕ್ಕೆ ಯೋಗ್ಯವಾದುದು. ಮಹತ್=ಸರ್ವೋತ್ತಮವು. ನಾಮ=(ಈ ರೀತಿಯಾಗಿ) ಪ್ರಸಿದ್ಧವು. ಅತ್ರ=ಈರೀತಿಯಾದ ಶ್ರೀಹರಿಯಲ್ಲಿ, ಏಜತ್=ಸಾಮಾನ್ಯಚೇಷ್ಟಾಯುಕ್ತವಾದ, ಪ್ರಾಣತ್=ವಿಶೇಷಚೇಷ್ಟಾಯುಕ್ತವಾದ, ನಿಮಿಷಚ್ಚ=ಜಾಗ್ರದಾದ್ಯವಸ್ಥೆಗಳಿಂದೊಡಗೂಡಿದ, ಯತ್=ಯಾವುದೊಂದು (ಅದೆಯೋ), ಏತತ್ಸರ್ವಂ=ಇದೆಲ್ಲವೂ, ಅರ್ಪಿತಂ=ಆಧರಿಸಲ್ಪಟ್ಟಿದೆ.

**ಮಂ ॥ ಏತಜ್ಜಾನಥ ಸದಸದ್ವರೇಣ್ಯಂ ಪರಂ ವಿಜ್ಞಾನಾದ್ಯದ್ವರಿಷ್ಠಂ ಪ್ರಜಾನಾಂ । ಯದರ್ಚಿಮದ್ಯದಣುಭ್ಯೋಽಣು ಚ ಯಸ್ಮಿಂಲ್ಲೋಕಾ ನಿಹಿತಾ ಲೋಕಿನಶ್ಚ ॥ ೨ ॥**

ಅ ॥ ಯತ್=ಯಾವ ಬ್ರಹ್ಮವು, ಸದಸದ್ವರೇಣ್ಯಂ=ಮೂರ್ತಾಮೂರ್ತ ನಿಖಿಲಪದಾರ್ಥಗಳಿಂದ ಶ್ರೇಷ್ಠವೋ, ವಿಜ್ಞಾನಾತ್=ಚತುರ್ಮುಖನಿಂದ, ಪರಂ=ಉತ್ತಮವೋ, ಪ್ರಜಾನಾಂ=ಬ್ರಹ್ಮಾದಿ ಪ್ರಜೆಗಳಿಗೂ, ವರಿಷ್ಠಂ=ಶ್ರೇಷ್ಠವೋ, ಯತ್=ಯಾವುದು, ಅರ್ಚಿಮತ್=ವಿ ಷ

ಕಾಂತಿಯುಳ್ಳದ್ದೋ, ಯತ್=ಯಾವುದು, ಅಣುಭ್ಯಃ=ಅಣುಪದಾರ್ಥಗಳಿಂದಲೂ, ಅಣು ಚ= ಅತ್ಯಣುವಾಗಿದೆಯೋ, ಯಸ್ಮಿನ್=ಯಾವ ಶ್ರೀಹರಿಯಲ್ಲಿ, ಲೋಕಾಃ=ಪೃಥಿವ್ಯಾದಿಲೋಕಗಳು, ಲೋಕಿನಶ್ಚ=ಲೋಕಪಾಲರೂ ಕೂಡ, ನಿಹಿತಾಃ=ಆಶ್ರಿತರಾಗಿದ್ದಾರೋ, ಏತತ್=ಇಂತಹ ಗುಣವುಳ್ಳ ಅಂತರ್ಯಾಮಿರೂಪವನ್ನು, ಜಾನಥ=ತಿಳಿಯಿರಿ.

ಭಾ ॥ ವಿಜ್ಞಾನಾದ್ಬ್ರಹ್ಮಣಃ ಪರಂ ।
ನಾಭಿಹ್ರದಾದಿಹ ಸತೋಽಂಭಸಿ ಯಸ್ಯ ಪುಂಸೋ
ವಿಜ್ಞಾನ ಶಕ್ತಿರಹಮಾಸಮನಂತಶಕ್ತೇಃ ॥
– ಇತಿ ಭಾಗವತೇ ॥ ೨ ॥

ತಾ ॥ ವಿಜ್ಞಾನ ಅಂದರೆ ಚತುರ್ಮುಖನಿಂದ (ಬ್ರಹ್ಮವು) ಸರ್ವೋತ್ತಮವು ಎಂದು ಅರ್ಥವು. ವಿಜ್ಞಾನವೇ ಶಕ್ತಿಯಾಗಿವುಳ್ಳ ನಾನು ಜಲಶಾಯಿಯಾಗಿಯೂ ಅಪರಿಮಿತ ಶಕ್ತಿ ಯುಳ್ಳವನಾಗಿಯೂ ಇರುವ ಯಾವ ಶ್ರೀಹರಿಯ ಅಗಾಧವಾದ ನಾಭಿಯಿಂದ ಉತ್ಪನ್ನನಾದೆನೋ ಎಂದು ಭಾಗವತದಲ್ಲಿ (ಬ್ರಹ್ಮನ ವಚನ ವಿರುವುದರಿಂದ ವಿಜ್ಞಾನವೆಂಬೀ ಹೆಸರು ಚತುರ್ಮುಖ ನಿಗೆ ಎಂದು ತಿಳಿದುಕೊಳ್ಳಬೇಕು. ಅಂತೂ ವಿಷ್ಣುವಿಗೆ ಚತುರ್ಮುಖನಿಂದ ಉತ್ತಮತ್ವವೂ ಸಿದ್ಧವಾದಹಾಗಾಯಿತು). ॥ ೨ ॥

**ಮಂ ॥ ತದೇತದಕ್ಷರಂ ಬ್ರಹ್ಮ ಸ ಪ್ರಾಣಸ್ತದು ವಾಙ್ಮನಃ । ತದೇತತ್ಸತ್ಯಂ । ತದಮೃತಂ ತದ್ವೇದ್ಧವ್ಯಂ ಸೋಮ್ಯ ವಿದ್ಧಿ ॥ ೩ ॥**

ಅ ॥ ತತ್=ಅದೃಶ್ಯತ್ವಾದಿಗುಣವುಳ್ಳ, ಏತತ್=ಸ್ಪಷ್ಟತ್ವಾದಿಗುಣವುಳ್ಳ, ಅಕ್ಷರಂ= ಶ್ರೀ ಹರಿಯು, ಬ್ರಹ್ಮ=ನಿಖಿಲಗುಣಪರಿಪೂರ್ಣನು. ಸಃ=ಶ್ರೀ ಪರಮಾತ್ಮನು, ಪ್ರಾಣಃ=ನಿಖಿಲ ಜಗತ್ಪ್ರೇರಕನು. ತದು=ಆ ಬ್ರಹ್ಮವೇ, ವಾಕ್=ವಾಕ್ಶಬ್ದವಾಚ್ಯವು. ಮನಃ=ಮನಶ್ಶಬ್ದವಾಚ್ಯವು. ತತ್ ಏತತ್=ಆ ಈ ಬ್ರಹ್ಮವೇ, ಸತ್ಯಂ=ಮುಕ್ತಾಮುಕ್ತನಿಯಾಮಕವು. ತತ್=ಅದೇ, ಅಮೃತಂ=ನಿತ್ಯಮುಕ್ತವು. ಸೋಮ್ಯ=ಸೋಮಪಾನಾರ್ಹನೇ! ತತ್=ಅಂತಹ ಬ್ರಹ್ಮವನ್ನು, ವೇದ್ಧವ್ಯಂ=ಲಕ್ಷ್ಯವನ್ನಾಗಿ, ವಿದ್ಧಿ=ತಿಳಿ. (ಅಂದರೆ ಧನುರ್ಧಾರಿಯು ಬಾಣದಿಂದ ತನ್ನ ಗುರಿ ಯನ್ನು ಹೇಗೆ ಚಿತ್ತೈಕಾಗ್ರತೆಯಿಂದ ಹೊಡೆಯುವನೋ ಹಾಗೆಯೇ ಶ್ರೀ ಹರಿಯನ್ನು ಗುರಿ ಯಾಗಿ ಭಾವಿಸಿ ಚಿತ್ತೈಕಾಗ್ರತೆಯನ್ನು ಹೊಂದು ಎಂದು ಅರ್ಥ).

ಭಾ ॥ ಪ್ರಾಣಃ ಪ್ರಣಯನಾದ್ವಿಷ್ಣುರ್ವಕ್ತೃತ್ವಾದ್ವಾಗುದೀರಿತಃ ।
ಮನೋ ಮಂತ್ರತ್ವತೋ ವಿಷ್ಣುಃ ಸರ್ವಜೀವನಿಯಾಮಕಃ ॥
– ಇತಿ ಶಬ್ದನಿರ್ಣಯೇ ॥ ೩ ॥

ತಾ ॥ ಶ್ರೀ ಹರಿಯು ಸಕಲ ಜೀವಪ್ರೇರಕನಾದುದರಿಂದ 'ಪ್ರಾಣ'ನೆಂತಲೂ ಸರ್ವ ರಿಗೂ ಭಾಷಣಶಕ್ತಿಯನ್ನು ಕೊಡುವ ಪ್ರಯುಕ್ತ 'ವಾಕ್'ಎಂತಲೂ ಹೇಳಲ್ಪಡುತ್ತಾನೆ. ನಿಖಿಲ ಜೀವರಿಗೂ ನಿಯಾಮಕನಾದ ವಿಷ್ಣುವು ಸಮಸ್ತವನ್ನೂ ತಿಳುಕೊಳ್ಳುವುದರಿಂದ 'ಮನಃ' ಎಂತಲೂ ಹೇಳಲ್ಪಡುತ್ತಾನೆ ಎಂದು ಶಬ್ದನಿರ್ಣಯದಲ್ಲಿ ಹೇಳಿದೆ. ॥ ೩ ॥

**ಮಂ ॥ ಧನುರ್ಗೃಹಿತ್ವೌಪನಿಷದಂ ಮಹಾಸ್ತ್ರಂ ಶರಂ ಹ್ಯುಪಾಸಾನಿಶಿತಂ ಸಂದಧೀತ । ಆಯಮ್ಯ ತದ್ಭಾವಗತೇನ ಚೇತಸಾ ಲಕ್ಷ್ಯಂ ತದೇವಾಕ್ಷರಂ ಸೋಮ್ಯ ವಿದ್ಧಿ ॥ ೪ ॥**

ಅ ॥ ಸೋಮ್ಯ=ಶೌನಕನೇ! ಔಪನಿಷದಂ=ನಿಖಿಲವೇದಗಳಿಂದ ವ್ಯಾಖ್ಯಾನಮಾಡಿಸಿಕೊಳ್ಳಲು ಯೋಗ್ಯವಾದ, ಮಹಾಸ್ತ್ರಂ=(ವ್ಯಾಹೃತ್ಯಾದಿ ಸರ್ವಮಂತ್ರಗಳಿಗೂ ವ್ಯಂಜಕವಾದುದರಿಂದ) ಶ್ರೇಷ್ಠ ಪ್ರಣವರೂಪವಾದ, ಧನುಃ=ಧನಸ್ಸನ್ನು, ಗೃಹೀತ್ವಾ=ಹಿಡುಕೊಂಡು (ಅದರಲ್ಲಿ), ಉಪಾಸಾನಿಶಿತಂ=ಶ್ರವಣಮನನಾದಿರೂಪ ಉಪಾಸನೆಯಿಂದ ತೀಕ್ಷ್ಣೀಕೃತವಾದ (ಅಜ್ಞಾನ ಸಂಶಯ ವಿಪರ್ಯಯ ರಹಿತವಾದ), ಶರಂ=ಬಾಣವನ್ನು, ಸಂದಧೀತ=ಕೂಡಿಸು. (ಆ ಮೇಲೆ), ತದ್ಭಾವಗತೇನ=ಪರಮಾತ್ಮನಲ್ಲಾಸಕ್ತವಾದ, ಚೇತಸಾ=ಅಂತಃಕರಣದಿಂದ, ತತ್=ಆ ಶರಸಂಯೋಜಿತ ಧನುಸ್ಸನ್ನು, ಆಯಮ್ಯ=ಶೆಳದು, ಲಕ್ಷ್ಯಂ=ಲಕ್ಷ್ಯವಾದ, ತತ್=ಪೂರ್ವೋಕ್ತವಾದ, ಅಕ್ಷರಮೇವ=ಪರಮಾತ್ಮನನ್ನೇ, ವಿದ್ಧಿ=ತಿಳಿ. (ಅಂತೂ ಸರ್ವದಾ ಧ್ಯಾನಾಸಕ್ತನಾಗು.)

**ಮಂ ॥ ಪ್ರಣವೋ ಧನುಃ ಶರೋಹ್ಯಾತ್ಮಾ ಬ್ರಹ್ಮ ತಲ್ಲಕ್ಷ್ಯಮುಚ್ಯತೇ । ಅಪ್ರಮತ್ತೇನ ವೇದ್ಧವ್ಯಂ ಶರವತ್ತನ್ಮಯೋ ಭವೇತ್ ॥ ೫ ॥**

ಅ ॥ ಪ್ರಣವಃ=ಪ್ರಣವ ಮಂತ್ರವೇ, ಧನುಃ=ಧನುಸ್ಸು. (ಅಂತೂ ಲಕ್ಷ್ಯವೇಧಕ್ಕೆ ಧನುಸ್ಸುವಿನಂತೆ ಸಾಧನವಾದುದು ಎಂದು ತಿಳಿಯುತಕ್ಕದು.) ಆತ್ಮಾ=ಮನಸ್ಸು, ಶರಃ=ಬಾಣವು. (ಲಕ್ಷ್ಯದಲ್ಲಿ ಸಂಬದ್ಧವಾಗುವುದರಿಂದ) ತತ್ ಬ್ರಹ್ಮ=ಆ ಬ್ರಹ್ಮವು, ಲಕ್ಷ್ಯಂ=ಗುರಿಯಾದದ್ದಾಗಿ ಉಚ್ಯತೇ=ಹೇಳಲ್ಪಡುತ್ತದೆ. (ಬಾಣದಿಂದ ಹೊಡಿಸಿಕೊಳ್ಳುವುದರಿಂದ) ಅಪ್ರಮತ್ತೇನ=ಪ್ರಮಾದ ರಹಿತವಾದ ಮನಸ್ಸಿನಿಂದ, (ಬ್ರಹ್ಮಾಖ್ಯವಾದ ಲಕ್ಷ್ಯವು) ವೇದ್ಧವ್ಯಂ=ಚೆನ್ನಾಗಿ ಧ್ಯಾನಿಸಲಿಕ್ಕೆ ಯೋಗ್ಯವಾದದ್ದು. (ಆ ರೀತಿಯಾಗಿ ಉಪಾಸಕನು) ಶರವತ್=ಬಾಣದಂತೆ, ತನ್ಮಯಃ=ಬ್ರಹ್ಮಾಸಕ್ತನು, ಭವೇತ್=ಆಗುತ್ತಾನೆ. ॥ ೫ ॥

**ಮಂ ॥ ಯಸ್ಮಿನ್ ದ್ಯೌಃ ಪೃಥಿವೀಚಾಂತರಿಕ್ಷಮೋತಂ ಮನಃ ಸಹ ಪ್ರಾಣೈಶ್ಚ ಸರ್ವೈಃ । ತಮೇವೈಕಂ ಜಾನಥ ಆತ್ಮಾನಮನ್ಯಾ ವಾಚೋ ವಿಮುಂಚಥಾಮೃತಸ್ಯೈಷ ಸೇತುಃ ॥ ೬ ॥**

ಅ ॥ ಯಸ್ಮಿನ್=ಯಾವ ಶ್ರೀಪರಮಾತ್ಮನಲ್ಲಿ, ದ್ಯೌಃ=ಸ್ವರ್ಗವು, ಪೃಥಿವೀ=ಭೂಮಿಯು, ಅಂತರಿಕ್ಷಂ ಚ=ಆಕಾಶವು ಕೂಡಾ, ಓತಂ=ಪ್ರವಿಷ್ಟವಾಗಿಯದೋ, ಸರ್ವೈಃ=ನಿಖಿಲಗಳಾದ, ಪ್ರಾಣೈಶ್ಚ=ಚಕ್ಷುರಾದಿ ಇಂದ್ರಿಯಗಳಿಂದ, ಸಹ=ಕೂಡಿಕೊಂಡು, ಮನಃ=ಮನಸ್ಸು, ಓತಂ=ಪ್ರವಿಷ್ಟವಾಗಿಯದೋ, ತಂ=ಸರ್ವರಿಗೂ ಆಶ್ರಯನಾದ, ಏಕಂ=ಪ್ರಧಾನನಾದ, ಆತ್ಮಾನಮೇವ=ಪರಮಾತ್ಮನನ್ನೇ, ಜಾನಥ=ತಿಳಿಯಿರಿ. (ಶ್ರವಣ ಮನನಾದಿ ರೂಪ ಬ್ರಹ್ಮೋಪಾಸನವನ್ನು ಮಾಡಿರಿ ಎಂದು ಅರ್ಥ.) ಅನ್ಯಾಃ=ಇತರ ದೇವತಾವಿಷಯಕಗಳಾದ, ವಾಚಃ=ಮಾತುಗಳನ್ನು, ವಿಮುಂಚಥ=ಪರಿತ್ಯಾಗ ಮಾಡಿರಿ (ಇತರ ದೇವತೆಗಳು ವಿಷ್ಣುವಿನ ಪರಿವಾರಕರೆಂದು ಪೂಜಾ ಮಾಡಬೇಕಲ್ಲದೆ ಪ್ರಧಾನರೆಂದು ಪೂಜಾಮಾಡಕೂಡದು.) ಏಷಃ=ಶ್ರೀಪರಮಾತ್ಮನೇ, ಅಮೃತಸ =ಮುಕ್ತಸಮುದಾಯಕ್ಕೂ ಕೂಡಾ, ಸೇತುಃ=ಆಶ್ರಯಭೂತನು.

ಭಾ || ಅಮೃತಸ್ಯ ಮುಕ್ತಸ್ಯ ಸೇತುಃ || || ೪ || ೫ ||
ಓಂ ಮುಕ್ತೋಪಸೃಪ್ಯವ್ಯಪದೇಶಾತ್ || (ಬ್ರ. ಸೂ.) || ೧ || ೩ || ೨ ||
ಮುಕ್ತಾನಾಂ ಪರಮಾ ಗತಿಃ ಇತ್ಯಾದೇಃ || ೬ || (ಸಹಸ್ರನಾಮ) ಭಾರತ.

ತಾ|| ಅಮೃತಸ್ಯ ಅಂದರೆ ಮುಕ್ತರ ಸಮುದಾಯಕ್ಕೆ ಸೇತುವಿನಂತೆ ಆಶ್ರಯಭೂತನು. (ಸರ್ವಲೋಕಕ್ಕೂ ಆಶ್ರಯೀಭೂತನಾದ ಶ್ರೀಹರಿಯು) ಮುಕ್ತರಿಂದಲೂ ಹೊಂದಲಿಕ್ಕೆ ಯೋಗ್ಯನು ಎಂದು ಬ್ರಹ್ಮಸೂತ್ರದಲ್ಲಿ ಶ್ರೀವೇದವ್ಯಾಸದೇವರು ಹೇಳಿರುವುದರಿಂದಲೂ, ಮುಕ್ತರಿಗೆ ಮುಖ್ಯನಾಗಿ ಆಶ್ರಯಭೂತನು. ಇದೇ ಮೊದಲಾದ ಗೀತಾರೂಪವಾದ ಶ್ರೀಕೃಷ್ಣವಚನದಿಂದಲೂ, (ಈ ರೀತಿಯಾಗಿ ತಿಳಕೊಳ್ಳತಕ್ಕದು). || ೬ ||

**ಮಂ || ಅರಾ ಇವ ರಥನಾಭೌ ಸಂಹತಾ ಯತ್ರ ನಾಡ್ಯಃ । ಸ ಏಷೋಂತಶ್ಚರತೇ ಬಹುಧಾ ಜಾಯಮಾನಃ || ೭ ||**

ಅ || ರಥನಾಭೌ=ರಥಚಕ್ರದಲ್ಲಿ, ಅರಾ ಇವ=ಅಚ್ಚುಮರಗಳಂತೆ, ಯತ್ರ=ಯಾವ ದೇಹಸ್ಥನಾದ ಹರಿಯಲ್ಲಿ, ನಾಡ್ಯಃ=ಬ್ರಹ್ಮನಾಡ್ಯಾದಿನಾಡಿಗಳು, ಸಂಹತಾಃ=ಸಂಬದ್ಧಗಳಾಗಿವೆಯೋ, ಸಃ=ಆ, ಏಷಃ=ಶ್ರೀಪರಮಾತ್ಮನು, ಬಹುಧಾ=ವಿಶ್ವಾದಿ ಅನೇಕರೂಪಗಳಿಂದ (ಸ್ವೇಚ್ಛೆಯಿಂದಲೇ ಜಾಗ್ರದಾದ್ಯವಸ್ಥೆಗಳನ್ನು ಜೀವನಿಗೆ ಕೊಡುವುದಕ್ಕೋಸ್ಕರ), ಜಾಯಮಾನಃ=ಪ್ರಾದುರ್ಭವಿಸುವವನಾಗಿ, ಅಂತಃ=ಶರೀರದೊಳಗೆ, ಯಾ ನೇತ್ರಾದಿಸ್ಥಾನಗಳಲ್ಲಿ, ಚರತೇ=ಸಂಚರಿಸುತ್ತಾನೆ. || ೭ ||

**ಮಂ || ಓಮಿತ್ಯೇವ ಧ್ಯಾಯಥ ಆತ್ಮಾನಂ ಸ್ವಸ್ತಿ ವಃ ಪಾರಾಯ ತಮಸಃ ಪರಸ್ತಾತ್ || ೮ ||**

ಅ || ಆತ್ಮಾನಂ=ಶ್ರೀ ಪರಮಾತ್ಮನನ್ನು, ಓಮಿತ್ಯೇವ=ಅಶೇಷಗುಣಪರಿಪೂರ್ಣನನ್ನಾಗಿಯೇ, ಯಾ ಋಗಾದಿನಿಖಿಲಶಾಸ್ತ್ರವೇದ್ಯನನ್ನಾಗಿಯೇ, ತಮಸಃ=ಜಡಪ್ರಕೃತಿಯಿಂದ, ಪರಸ್ತಾತ್=ಉತ್ತಮವಾದ ಶ್ರೀತತ್ವದಿಂದ, ಪಾರಾಯ=ಅತ್ಯುತ್ತಮವಾದ ಹರಿಜ್ಞಾನಕ್ಕೋಸ್ಕರ, ಯಾ ಮುಕ್ತಿಗೋಸ್ಕರ, ಧ್ಯಾಯಥ=ಧ್ಯಾನಮಾಡಿರಿ. (ಹೀಗೆ ಧ್ಯಾನಮಾಡಿದರೆ ಆತನ ಜ್ಞಾನವುಂಟಾಗುತ್ತದೆ. ಅದರಿಂದ) ವಃ=ನಿಮಗೆ, ಸ್ವಸ್ತಿ=ಮಂಗಲವಾಗುತ್ತದೆ.

ಭಾ || ಹೃದಯಸ್ಥಃ ಸದಾ ವಿಷ್ಣುಃ ಬಹುಧಾ ಚೈಕಧಾ ಭವನ್ ||
ಚರತಿ ಸ್ವೇಚ್ಛಯೈವಾಂತಃ ಸರ್ವಜೀವಾನ್ನಿಯಾಮಯನ್
ಇತಿ ಪ್ರವೃತ್ತೇ || ೮ ||

ತಾ || ಶರೀರದಲ್ಲಿ ನಿಯಾಮಕನಾದ ಶ್ರೀ ಹರಿಯು, ತನ್ನ ಇಚ್ಛೆಯಿಂದಲೇ ವಿಶ್ವಾದ್ಯನೇಕರೂಪವುಳ್ಳವನಾಗಿಯೂ, ಏಕರೂಪಿಯಾದವನಾಗಿಯೂ ಅವತರಿಸುವನಾಗಿ ಶರೀರದ ಒಳಗೆ ನಿಖಿಲ ಜೀವರನ್ನೂ ನಿಯಮಿಸುತ್ತಾ ಸಂಚರಿಸುತ್ತಾನೆ. ಎಂದು ಪ್ರವೃತ್ತದಲ್ಲಿ (ಅಂದರೆ ಪಂಚರಾತ್ರಾಗಮದ ಭಾಗವಿಶೇಷದಲ್ಲಿ) ಉಕ್ತವಾಗಿಯದೆ. || ೮ ||

**ಮಂ || ಯಃ ಸರ್ವಜ್ಞಃ ಸರ್ವವಿದ್ಯಸ್ಯೈಷ ಮಹಿಮಾ ಭುವಿ। ದಿವ್ಯೇ ಬ್ರಹ್ಮಪುರೇಹ್ಯೇಷ ವ್ಯೋಮ್ನ್ಯಾತ್ಮಾ ಸಂಪ್ರತಿಷ್ಠಿತಃ || ೯ ||**

ಅ ॥ ಯಃ=ಯಾವ ಶ್ರೀ ಹರಿಯು, ಸರ್ವಜ್ಞಃ=ಸರ್ವವಿಷಯಕ ಜ್ಞಾನಉಳ್ಳವನು, ಸರ್ವವಿತ್=ನಿಖಿಲಕಾಮಗಳನ್ನು ಹೊಂದಿದ್ದಾನೋ, ಯಸ್ಯ=ಯಾವ ಶ್ರೀ ಹರಿಯ, ಏಷಃ= ಜಾಗ್ರದಾದ್ಯವಸ್ಥಾ ಪ್ರದವಾದ, ಮಹಿಮಾ=ಮಾಹಾತ್ಮ್ಯೆಯು, ಭುವಿ=ಭೂಮಿಯಲ್ಲಿ (ಪ್ರಸಿದ್ಧ ವಾಗಿಯದೋ), ಏಷಃ=ಈ, ಆತ್ಮಾ=ಶ್ರೀಪರಮಾತ್ಮನು, ಬ್ರಹ್ಮಪುರೇ=ದೇಹದಲ್ಲಿ, ದಿವ್ಯೇ ವ್ಯೋಮ್ನಿ=ಭೂತಾಕಾಶಾತ್ಮಕವಾದ ಆಕಾಶದಲ್ಲಿ, ಸಂಪ್ರತಿಷ್ಠಿತಃ=ಯಾವಾಗಲೂ ಆವಿರ್ಭೂತ ನಾಗಿರುತ್ತಾನೆ. ॥ ೯ ॥

ಮಂ ॥ ಮನೋಮಯಃ ಪ್ರಾಣಶರೀರನೇತಾ ಪ್ರತಿಷ್ಠಿತೋಽನ್ನೇ ಹೃದಯಂ ಸನ್ನಿಧಾಯ । ತದ್ವಿಜ್ಞಾನೇನ ಪರಿಪಶ್ಯಂತಿ ಧೀರಾ ಆನಂದರೂಪ ಮಮೃತಂ ಯದ್ವಿಭಾತಿ ॥ ೧೦ ॥

ಅ ॥ ಮನೋಮಯಃ=ಪೂರ್ಣಜ್ಞಾನಸ್ವರೂಪನಾದ, ಪ್ರಾಣಶರೀರನೇತಾ-ಪ್ರಾಣ= ಪಂಚವಾಯುಗಳಿಗೂ ನಿಖಿಲೇಂದ್ರಿಯಗಳಿಗೂ, ಶರೀರ=ದೇಹಕ್ಕೂ, ನೇತಾ=ಪ್ರೇರಕನಾದ ಶ್ರೀಹರಿಯು, ಅನ್ನೇ=ಅನ್ನವಿಕಾರವಾದ ಶರೀರದಲ್ಲಿ, ಹೃದಯಂ=ಹೃದಯವನ್ನು, ಸನ್ನಿಧಾಯ= ಅಧಿಷ್ಠಾನೀಕರಿಸಿಕೊಂಡು, ಪ್ರತಿಷ್ಠಿತಃ=ಸನ್ನಿಹಿತನಾಗಿರುತ್ತಾನೋ, ಯತ್=ಯಾವುದು, ಆನಂದರೂಪಂ=ಪೂರ್ಣಾನಂದ ಸ್ವರೂಪವಾಗಿಯೂ, ಅಮೃತಂ=ದೇಹದಿಂದಲೂ ನಾಶಶೂನ್ಯ ವಾಗಿಯೂ, ವಿಭಾತಿ=ವಿಶೇಷವಾಗಿ ಆವಿರ್ಭವಿಸಿಕೊಂಡಿರುತ್ತದೋ, ತತ್=ಅಂತಹರೂಪ ವನ್ನು, ಧೀರಾಃ=ಜ್ಞಾನಿಗಳು, ವಿಜ್ಞಾನೇನ=ಶ್ರವಣಾದಿಗಳಿಂದುಂಟಾದ ವಿಶೇಷಜ್ಞಾನದಿಂದ, ಪರಿ ಪಶ್ಯಂತಿ=ವಿಷಯೀಕರಿಸುತ್ತಾರೆ. ॥ ೧೦ ॥

ಮಂ ॥ ಭಿದ್ಯತೇ ಹೃದಯಗ್ರಂಥಿಃ ಛಿದ್ಯಂತೇ ಸರ್ವಸಂಶಯಾಃ । ಕ್ಷೀಯಂತೇ ಚಾಸ್ಯ ಕರ್ಮಾಣಿ ತಸ್ಮಿನ್ ದೃಷ್ಟೇ ಪರಾವರೇ ॥ ೧೧ ॥

ಅ ॥ ಪರಾವರೇ=ಉತ್ತಮರಾದ ಬ್ರಹ್ಮಾದಿಗಳೂ ಅವರರಾಗಿಉಳ್ಳ, ತಸ್ಮಿನ್=ಆ ಸರ್ವೋತ್ತಮನಾದ ಶ್ರೀ ಹರಿಯು, ದೃಷ್ಟೇಸತಿ=ಪ್ರತ್ಯಕ್ಷೀಕರಿಸಲ್ಪಡುತ್ತಿರಲು, ಹೃದಯ ಗ್ರಂಥಿಃ=ಅವಿದ್ಯಾಮೂಲಕರಾಗದ್ವೇಷ ಮೂಲಕವಾದ ಬಂಧವು, ಭಿದ್ಯತೇ=ನಾಶಮಾಡಲ್ಪಡು ತ್ತದೆ, ಸರ್ವಸಂಶಯಾಃ=ಅಜ್ಞಾನಮೂಲಕ ಸಂದೇಹ ವಿಪರ್ಯಯಗಳು, ಛಿದ್ಯಂತೇ=ನಾಶವಾ ಗುತ್ತವೆ. ಅಸ್ಯ=ಅಪರೋಕ್ಷಜ್ಞಾನಿಯ, ಕರ್ಮಾಣಿ=ಅಪ್ರಾರಬ್ಧ ಕರ್ಮಗಳು, ಕ್ಷೀಯಂತೇ= ನಾಶವಾಗುತ್ತವೆ, (ಅಂದರೆ=ಸಂಚಿತಗಳಿಗೆ ನಾಶವು ಆಗಾಮಿಗಳಿಗೆ ಅಸಂಬಂಧವು ಎಂಬ ಅರ್ಥವು.

ಭಾ ॥ ಪರಾ ಅಪ್ಯವರಾ ಯಸ್ಮಾತ್ ಸ ಹಿ ವಿಷ್ಣುಃ ಪರಾವರಃ ॥ ೧೧ ॥

ತಾ ॥ ಅತ್ಯುತ್ತಮರಾದ ರಮಾಬ್ರಹ್ಮಾದಿಗಳೂ ಕೂಡಾ, ಯಾವ ಶ್ರೀ ಹರಿಯಿಂದ ನಿಕೃಷ್ಟರಾಗಿರುವರೋ ಅಂತಹ ವಿಷ್ಣುವೇ ಪರಾವರ ಎನ್ನಿಸಿಕೊಳ್ಳುತ್ತಾನೆ. ॥ ೧೧ ॥

ಮಂ ॥ ಹಿರಣ್ಮಯೇ ಪರೇ ಕೋಶೇ ವಿರಜಂ ಬ್ರಹ್ಮ ನಿಷ್ಕಲಂ । ತಚ್ಛುಭ್ರಂ ಜ್ಯೋತಿಷಾಂ ಜ್ಯೋತಿಸ್ತದ್ಯದಾತ್ಮವಿದೋ ವಿದುಃ ॥ ೧೨ ॥

ಅ ॥ ಹಿರಣ್ಮಯೇ=ಸುವರ್ಣಾತ್ಮಕವಾದ, ಪರೇ=ಉತ್ತಮವಾದ, ಕೋಶೇ=ಬ್ರಹ್ಮಾಂಡದಲ್ಲಿ, ವಿರಜಂ=ರಜೋಗುಣವೇ ಮೊದಲಾದ ಗುಣಶೂನ್ಯನಾದ, ನಿಷ್ಕಲಂ=ಷೋಡಶಕಲಾ ರಹಿತನಾದ, ಶುಭ್ರಂ=ಶುದ್ಧನಾದ, ಜ್ಯೋತಿಷಾಂ=ತೇಜೋರೂಪಗಳಿಗೂ (ಸೂರ್ಯಾದಿಗಳಿಗೂ) ಜ್ಯೋತಿಃ=ಪ್ರಕಾಶಕ ಶಕ್ತಿಯನ್ನು ಕೊಡತಕ್ಕ, ಯತ್=ಯಾವ, ಬ್ರಹ್ಮ=ಆದಿತ್ಯಾಂತರ್ಗತನಾದ ಶಿಂಶುಮಾರರೂಪಿ ಶ್ರೀಪರಮಾತ್ಮನನ್ನು, ಆತ್ಮವಿದಃ=ಆತ್ಮಜ್ಞಾನಿಗಳಾದ ಬ್ರಹ್ಮಾದಿಗಳು, ವಿದುಃ=ತಿಳಿದಿದ್ದಾರೋ, ತತ್=ಆದುದರಿಂದ, ತತ್=ಅಂಥಾ ಬ್ರಹ್ಮನನ್ನು (ಸೂರ್ಯಾಂತರ್ಗತನನ್ನಾಗಿ ಧ್ಯಾನಿಸತಕ್ಕುದು.)

ಭಾ ॥ ಬ್ರಹ್ಮಾಂಡ ಮಧ್ಯಗೋ ನಿತ್ಯಂ ತಪತ್ಯೇಷ ರವೌಸ್ಥಿತಃ ॥
ಇತಿ ಚ ॥ ೧೨ ॥

ತಾ ॥ ಬ್ರಹ್ಮಾಂಡ ಮಧ್ಯದಲ್ಲಿರತಕ್ಕ ಶ್ರೀಹರಿಯೇ ಸೂರ್ಯನಲ್ಲಿದ್ದವನಾಗಿ ನಿರಂತರದಲ್ಲಿಯೂ ಸುಡುವನು. ಹೀಗೂ ಉಕ್ತವಾಗಿಯದೆ. ॥ ೧೨ ॥

**ಮಂ ॥ ನ ತತ್ರ ಸೂರ್ಯೋ ಭಾತಿ ನ ಚಂದ್ರತಾರಕಂ ನೇಮಾ ವಿದ್ಯುತೋ ಭಾಂತಿ ಕುತೋಽಯಮಗ್ನಿಃ । ತಮೇವ ಭಾಂತಮನುಭಾತಿ ಸರ್ವಂ ತಸ್ಯ ಭಾಸಾ ಸರ್ವಮಿದಂ ವಿಭಾತಿ ॥ ೧೩ ॥**

ಅ ॥ ತತ್ರ=ಇಂಥಾ ಹರಿಯಲ್ಲಿ, ಸೂರ್ಯಃ=ಆದಿತ್ಯನು, ನ ಭಾತಿ=ಪ್ರಕಾಶಿಸುವುದಿಲ್ಲ. ಚಂದ್ರತಾರಕಂ=ಚಂದ್ರನಕ್ಷತ್ರಾದಿಗಳು, ನ=ಪ್ರಕಾಶಿಸುವುದಿಲ್ಲ. ಇಮಾಃ=ಈ, ವಿದ್ಯುತಃ= ಮಿಂಚುಗಳು, ನ ಭಾಂತಿ=ಪ್ರಕಾಶಿಸುವುದಿಲ್ಲ. ಅಯಂ=ಅಲ್ಪದೇಶವೃತ್ತಿಯಾದ, ಅಗ್ನಿಃ= ಅಗ್ನಿಯು, ಕುತಃ=ಹೇಗೆ? (ಅಂದರೆ ಪ್ರಕಾಶಿಸುವುದಿಲ್ಲವೆಂದು ಏನು ಹೇಳತಕ್ಕುದು.) ತಂ ಭಾಂತಮೇವ=ಪ್ರಕಾಶಿಸುತ್ತಿರುವ ಶ್ರೀಹರಿಯನ್ನೇ, ಅನು=ಅನುಸರಿಸಿ, ಸರ್ವಂ=ಸಮಸ್ತವು, (ಸೂರ್ಯಾದಿಯು) ಭಾತಿ=ಪ್ರಕಾಶಿಸುತ್ತದೆ, ತಸ್ಯ=ಶ್ರೀಪರಮಾತ್ಮನ, ಭಾಸಾ=ಪ್ರಕಾಶದಿಂದಲೇ, ಇದಂ ಸರ್ವಂ=ಈ ಸಮಸ್ತ ಸೂರ್ಯಾದಿ ಜಗತ್ತು, ವಿಭಾತಿ=ಪ್ರಕಾಶಿಸುತ್ತದೆ.

ಭಾ ॥ ಸೂರ್ಯಾದಯಸ್ತಂ ನ ಭಾಸಯಂತಿ ॥ ೧೩ ॥

ತಾ ॥ ಸೂರ್ಯಚಂದ್ರಾದಿಗಳು ಆ ಹರಿಯನ್ನು ಪ್ರಕಾಶಿಸುವುದಿಲ್ಲ. (ಹರಿಯ ಅನುಗ್ರಹದಿಂದಲೇ ಸೂರ್ಯಚಂದ್ರಾದಿಗಳು ಜಗತ್ತನ್ನು ಪ್ರಕಾಶಗೊಳಿಸುವರು.)

**ಮಂ ॥ ಬ್ರಹ್ಮೈವೇದಮಮೃತಂ ಪುರಸ್ತಾದ್ಬ್ರಹ್ಮ ಪಶ್ಚಾದ್ಬ್ರಹ್ಮ ದಕ್ಷಿಣತಶ್ಚೋತ್ತರೇಣ । ಅಧಶ್ಚೋರ್ಧ್ವಂ ಚ ಪ್ರಸೃತಂ ಬ್ರಹ್ಮೈವೇದಂ ವಿಶ್ವಮಿದಂ ವರಿಷ್ಠಂ ॥ ೧೪ ॥**

ಅ ॥ ಅಮೃತಂ=ನಿತ್ಯಮುಕ್ತವಾದ, ಇದಂ=ಈ, ಬ್ರಹ್ಮೈವ=ಪರಬ್ರಹ್ಮವೇ, ಪುರಸ್ತಾತ್=ಪೂರ್ವದಿಕ್ಕಿನಲ್ಲಿಯೂ, ಪ್ರಸೃತಂ=ವ್ಯಾಪ್ತವಾಗಿಯದೆ. ಪಶ್ಚಾತ್=ಪಶ್ಚಿಮದಿಕ್ಕಿನಲ್ಲಿಯೂ, ಬ್ರಹ್ಮ=ಪರಬ್ರಹ್ಮವು, (ವ್ಯಾಪ್ತವಾಗಿಯದೆ). ಬ್ರಹ್ಮ=ಪರಬ್ರಹ್ಮವೇ, ದಕ್ಷಿಣತಃ=ದಕ್ಷಿಣದಿಕ್ಕಿನಲ್ಲಿಯೂ, ಉತ್ತರೇಣ ಚ=ಉತ್ತರದಿಕ್ಕಿನಲ್ಲಿಯೂ, ಅಧಶ್ಚ=ಅಧೋದಿಕ್ಕಿನಲ್ಲಿಯೂ, ಊರ್ಧ್ವಂ ಚ=ಊರ್ಧ್ವಪ್ರದೇಶದಲ್ಲಿಯೂ, (ವ್ಯಾಪ್ತವಾಗಿಯದೆ). ಇದಂ ಬ್ರಹ್ಮೈವ=ಈ ಪರ

ಬ್ರಹ್ಮವೇ, ವಿಶ್ವಂ=ನಿಖಿಲ ಗುಣಪರಿಪೂರ್ಣವಾದುದು. ಇದಂ=ಈ ಪರಬ್ರಹ್ಮವೇ, ವರಿಷ್ಠಂ= ಸರ್ವೋತ್ತಮವು. (ವ್ಯಾಪ್ತನಾಗಿದ್ದರೂ ಶ್ರೀಹರಿಗೆ ಅಚಿಂತ್ಯ ಅಪರಿಮಿತ ಶಕ್ತಿ ಇರುವುದರಿಂದ ಹೃದಯಾದ್ಯಲ್ಪದೇಶದಲ್ಲಿ ಸ್ಥಿತಿಯು ಸಂಗತವಾದುದು.

**ಭಾ ||** ಇದಂ ಬ್ರಹ್ಮೈವ ವಿಶ್ವಂ ಪೂರ್ಣಂ ಇದಮೇವ ವರಿಷ್ಠಂ
ಸರ್ವೋತ್ತಮಂ ಇದಂ ಶಬ್ದಾನಾಂ ಬಹುತ್ವಾತ್
ಬ್ರಹ್ಮವಿಷಯ ಏವೇದಂಶಬ್ದಃ || ೧೪ ||

ಇತಿ ಚತುರ್ಥಃ ಖಂಡಃ

**ತಾ ||** ಈ ಪರಬ್ರಹ್ಮವೇ ವಿಶ್ವಂ (ಅಂದರೆ ನಿಖಿಲ ಗುಣಪರಿಪೂರ್ಣವು). ಈ ಬ್ರಹ್ಮವೇ ವರಿಷ್ಠಂ=(ಅಂದರೆ ಸರ್ವೋತ್ತಮವಾದುದು). ಇದಂ ಶಬ್ದಗಳು ಬಹ್ವಾವರ್ತಿ ಇದ್ದುದರಿಂದ ಋಕ್ಕಿನಲ್ಲಿದ್ದ ಇದಂ ಶಬ್ದವು ಬ್ರಹ್ಮರೂಪವಾದ ಅರ್ಥವನ್ನೇ ಹೇಳತಕ್ಕುದು. (ಅಂತೂ ಇದಂ ಎಂಬ ಶಬ್ದಕ್ಕೆ ಜಗತ್ ಎಂಬ ಅರ್ಥವಲ್ಲ) ಹಾಗೂ ಈ ನಾಲ್ಕನೇ ಖಂಡದಲ್ಲಿ ಬ್ರಹ್ಮಜ್ಞಾನಕ್ಕಾಗಿ ಶ್ರವಣಮನನಾದಿಗಳನ್ನು ಅಗತ್ಯವಾಗಿ ಮಾಡತಕ್ಕದೆಂದು ಹೇಳಿದಂತಾಯಿತು.

ನಾಲ್ಕನೇ ಖಂಡವು ಮುಗಿಯಿತು.

## ಖಂಡ ೫.

**ಮಂ || ದ್ವಾ ಸುಪರ್ಣಾ ಸಯುಜಾ ಸಖಾಯಾ ಸಮಾನಂ ವೃಕ್ಷಂ ಪರಿಷಸ್ವಜಾತೇ | ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತ್ಯನಶ್ನನ್ನನ್ಯೋ ಅಭಿಚಾಕಶೀತಿ || ೧ ||**

**ಅ ||** ಸಯುಜೌ=ಕೂಡಿಕೊಂಡಿರುವ (ಅಂದರೆ ಯಾವಾಗಲೂ ವಿಯೋಗಶೂನ್ಯರಾದ), ಸಖಾಯಾ=ಅನ್ಯೋನ್ಯಮಿತ್ರರಾದ, ಸುಪರ್ಣೌ=ಪಕ್ಷಿರೂಪರಾದ, ದ್ವಾ=ಜೀವೇಶರು, ಸಮಾನಂವೃಕ್ಷಂ=ದೇಹಾಖ್ಯವಾದ ಅಶ್ವತ್ಥವೃಕ್ಷವನ್ನು, ಪರಿಷಸ್ವಜಾತೇ=ಆಲಿಂಗನ ಮಾಡಿಕೊಂಡಿದ್ದಾರೆ, ತಯೋಃ=ಆ ಎರಡರ ಮಧ್ಯದಲ್ಲಿ, ಅನ್ಯಃ=ಜೀವನು, ಪಿಪ್ಪಲಂ=ಅಶ್ವತ್ಥ ಫಲರೂಪವಾದ ದೇಹಜನಿತವಾದ ಕರ್ಮಫಲವನ್ನು, ಸ್ವಾದು=ಅರುಚಿಯಾದುದನ್ನೇ ರುಚಿಯೆಂದು, ಅತ್ತಿ=ತಿನ್ನುತ್ತಾನೆ. ಅನ್ಯಃ=ಈಶ್ವರನು, ಅನಶ್ನನ್=(ಅಸಾರ ಭಾಗವನ್ನೂ ಪಾಪ ಫಲವನ್ನೂ ಕೂಡ) ಸ್ವೀಕರಿಸದಿದ್ದವನಾಗಿ, ಅಭಿಚಾಕಶೀತಿ=ಚೆನ್ನಾಗಿ ಪ್ರಕಾಶಿಸುತ್ತಿದ್ದಾನೆ.

**ಭಾ ||** ಸ್ವಾದುವತ್ಸರ್ವದಾತ್ತಿ | ನ ತು ಸ್ವಾದ್ವೇವ |
ತಸ್ಯೇದಾಹುಃ ಪಿಪ್ಪಲಂ ಸ್ವಾದ್ವಗ್ರೇ ತನ್ನೋನ್ನಶದ್ಯಃ
ಪಿತರಂ ನ ವೇದೇತ್ಯಜ್ಞಾನಾಂ ಸ್ವಾದುನಿಷೇಧಾತ್ ||

**ತಾ ||** (ಜೀವನು ಅರುಚಿಯಾದುದನ್ನೇ) ಯಾವಾಗಲೂ ರುಚಿಯಾದ ಪದಾರ್ಥದಂತೆ ಸ್ವೀಕರಿಸುತ್ತಾನೆ. ಸ್ವಾದುಪದಾರ್ಥವನ್ನೇ ತಿನ್ನುತ್ತಾನೆಂದು ಶ್ರುತಿಯ ಅರ್ಥವಲ್ಲ. (ಏಕೆಂದರೆ) ಯಾವಾತನು ಸರ್ವರಿಗಿಂತಲೂ ಶ್ರೇಷ್ಠನಾಗಿರುತ್ತಾನೋ ಆತನಿಗೇನೇ ಪುಣ್ಯರೂಪವಾದ ದೇಹಾಖ್ಯ ಅಶ್ವತ್ಥಫಲವನ್ನು ಭೋಗ್ಯವನ್ನಾಗಿ ಹೇಳುವರು. ನಾಶವುಳ್ಳ ಯಾವ ಪುರುಷನು ಜಗಜ್ಜನಕನಾದ ಶ್ರೀಹರಿಯನ್ನು ತಿಳಿಯುವುದಿಲ್ಲವೋ ಆತನಿಗೆ ಉತ್ಕೃಷ್ಟವಾದ ಪುಣ್ಯರೂಪವಾದ ಫಲವು ಭೋಗ್ಯವಾಗುವುದಿಲ್ಲವೆಂದು (ಶ್ರುತಿಯಲ್ಲಿ ವಿಷ್ಣುವಿಗೇನೇ ನಿಖಿಲಸಾರ ಭೋಕ್ತೃತ್ವವನ್ನು ಪ್ರತಿ

ಪಾದಿಸಿ) ಅಜ್ಞರಾದ ಜೀವರಿಗೆ ಸ್ವಾದುಪದಾರ್ಥಭೋಕ್ತೃತ್ವವನ್ನು ನಿಷೇಧಿಸಿರುವುದರಿಂದ (ಜೀವ ರಿಗೆ ಅಸಾರ ಭೋಕ್ತೃತ್ವವು, ಪಾಪಫಲ ಭೋಕ್ತೃತ್ವವು, ಎಂದುಕ್ತವಾದಹಾಗಾಯಿತು).

ಭಾ ॥ ಜೀವಾದ್ಯಮೇವ ನಾಶ್ನಾತಿ ಭಗವಾನ್ನ ತು ನಾಶ್ನಾತ್ಯೇವ ।
ತಸ್ಯೇದಾಹುಃ ಪಿಪ್ಪಲಂ ಸ್ವಾದ್ವಿತ್ಯುಕ್ತತ್ವಾತ್ ॥
ಸ್ವಾತಂತ್ರ್ಯೇಣೈವ ಭೋಕ್ತೃತ್ವಾದ್ದುಃಖಾಭೋಗಾಚ್ಚ ಸರ್ವದಾ ।
ಅಭೋಕ್ತಾ ಚೈವ ಭೋಕ್ತಾ ಚ ಭಗವಾನ್ವಿಷ್ಣುರವ್ಯಯಃ ॥
ಇತಿ ಚ ತತ್ವಸಾರೇ ॥

ತಾ ॥ 'ತಸ್ಯೇದಾಹುಃಪಿಪ್ಪಲಂ' ಎಂಬೀ ಶ್ರುತಿಯಲ್ಲಿ ಶ್ರೀಹರಿಗೆ ಸಾರಪದಾರ್ಥ ಭೋಕ್ತೃತ್ವವಡೆಯೆಂದು ಹೇಳಿದುದರಿಂದ 'ಅನಶ್ನನ್' ಎಂಬೀಪದಕ್ಕೆ ಶ್ರೀಹರಿಯು ಜೀವರಿಂದ ಭೋಗಿಸಲುಯೋಗ್ಯವಾದ ಅಸಾರವಾದ ಪುಣ್ಯಫಲವನ್ನೂ ನಿಖಿಲಪಾಪಫಲವನ್ನೂ ಇವುಗಳನ್ನೇ ಸ್ವೀಕರಿಸುವುದಿಲ್ಲವೆಂದರ್ಥವಲ್ಲದೆ (ಸಾರಪದಾರ್ಥವನ್ನು ಸಹಾ) ಭೋಗಿಸುವುದೇ ಇಲ್ಲ. (ಎಂದರ್ಥವಲ್ಲ) ಪೂಜ್ಯನಾಗಿಯೂ ನಾಶಶೂನ್ಯನಾಗಿಯೂ ಇರುವ ಶ್ರೀಹರಿಯು ಸ್ವಾತಂತ್ರ್ಯದಿಂದಲೇ ನಿಖಿಲಪದಾರ್ಥಗಳನ್ನು ಭೋಗಿಸುವುದರಿಂದ 'ಭೋಕ್ತಾ' ಎಂತಲೂ ಯಾವಾಗಲೂ ನಿಖಿಲ ದುಃಖಗಳನ್ನು ಭೋಗಿಸದಿರುವಪ್ರಯುಕ್ತ 'ಅಭೋಕ್ತಾ' ಎಂತಲೂ ಹೇಳಲ್ಪಡುತ್ತಾನೆ. ಈ ರೀತಿಯಾಗಿ ತತ್ವಸಾರವೆಂಬ ಗ್ರಂಥದಲ್ಲಿ ಹೇಳಲ್ಪಟ್ಟಿದೆ. ॥ ೧ ॥

**ಮಂ ॥ ಸಮಾನೇ ವೃಕ್ಷೇ ಪುರುಷೋ ನಿಮಗ್ನೋಽನೀಶಯಾ ಶೋಚತಿ ಮುಹ್ಯಮಾನಃ । ಜುಷ್ಟಂ ಯದಾ ಪಶ್ಯತ್ಯನ್ಯಮೀಶಮಸ್ಯ ಮಹಿಮಾನಮಿತಿ ವೀತಶೋಕಃ ॥ ೨ ॥**

ಅ ॥ ಸಮಾನೇ ವೃಕ್ಷೇ=ದೇಹಾಖ್ಯ ಅಶ್ವತ್ಥವೃಕ್ಷದಲ್ಲಿ, ನಿಮಗ್ನಃ=ಮುಳುಗಿದ, (ಮಮತಾದ್ಯಭಿಮಾನವುಳ್ಳ), ಪುರುಷಃ=ಜೀವನು, ಅನೀಶಯಾ=ಸ್ವತಂತ್ರವಾದ ಭಗವನ್ಮತಿಯಿಂದ, ಮುಹ್ಯಮಾನಃ=ಮೋಹಯುಕ್ತನಾಗಿ, ಶೋಚತಿ=ದುಃಖಿಸುತ್ತಾನೆ. (ಹರಿಯನ್ನು ತಿಳಿಯದೆ ಸಾಂಸಾರಿಕ ದುಃಖವನ್ನು ಅನುಭವಿಸುತ್ತಾನೆ). ಜುಷ್ಟಂ=ಸರ್ವರಿಂದಲೂ ಸೇವಿಸಲು ಯೋಗ್ಯನಾದ, ಈಶಂ=ಶ್ರೀ ಪರಮಾತ್ಮನನ್ನು, ಅನ್ಯಂ=ಜೀವನಿಂದಿತರನನ್ನಾಗಿಯೂ, ಅಸ್ಯ=ಇಂಥಾ ಹರಿಯ, ಇತಿ=ಪೂರ್ವೋಕ್ತಪ್ರಕಾರದಿಂದ ಜಗತ್ಸೃಷ್ಟೃತ್ವಾದಿರೂಪವಾದ, ಮಹಿಮಾನಂ=ಮಾಹಾತ್ಮೆಯನ್ನೂ, ಯದಾ=ಯಾವಾಗ, ಪಶ್ಯತಿ=ನೋಡುತ್ತಾನೋ, (ಆಗ) ವೀತಶೋಕಃ=ನಿಖಿಲಾನಿಷ್ಟ ನಿವೃತ್ತನಾಗಿ ಮುಕ್ತನಾಗುತ್ತಾನೆ.

ಭಾ ॥ ನಾಸ್ತೀಶೋಽಸ್ಯಾ ಯತೋಽನ್ಯೋ ಹಿ ತತೋಽನೀಶಾ ಹರೇರ್ಮತಿಃ ।
ತಯಾ ಮುಹ್ಯತಿ ಜೀವಸ್ತಮನ್ಯಂ ಜ್ಞಾತ್ವಾ ವಿಮುಚ್ಯತೇ ॥
ಜೀವಾದನ್ಯಃ ಸ್ವತಂತ್ರೋಽಯಂ ಯತೋಽತಃ ಪುರುಷೋತ್ತಮಃ ॥
-ಇತಿ ಬ್ರಹ್ಮಸಾರೇ ॥ ೨ ॥

ತಾ ॥ ಯಾವ ಕಾರಣದಿಂದ ಈ ಹರೀಚ್ಛೆಗೆ ಅಧಿಪತಿಯು ಮತ್ತೊಬ್ಬನಿಲ್ಲವೋ, ಆದುದರಿಂದಲೇ ಭಗವನ್ಮತಿಯು 'ಅನೀಶಾ' ಎನ್ನಿಸಿಕೊಳ್ಳುತ್ತದೆ. ಅಂತಹ ಹರಿಶಕ್ತಿಯಿಂದಲೇ ಜೀವನು ಮೋಹವನ್ನು ಹೊಂದುತ್ತಾನೆ. ಅಂತಹ ಹರಿಯನ್ನು ಜೀವರಿಂದ ಭಿನ್ನನನ್ನಾಗಿ ತಿಳಿದೇ

ಮುಕ್ತಿಯನ್ನು ಹೊಂದುತ್ತಾನೆ. ಯಾವ ಕಾರಣದಿಂದ ಶ್ರೀಹರಿಯು ಜೀವರಿಂದ ಭಿನ್ನನಾಗಿಯೂ ಸ್ವತಂತ್ರನಾಗಿಯೂ ಇರುತ್ತಾನೋ, ಆದುದರಿಂದಲೇ ಪುರುಷೋತ್ತಮನೆಂದು ಹೇಳಲ್ಪಟ್ಟಿರುತ್ತಾನೆ. ಹೀಗೆ ಬ್ರಹ್ಮಸಾರದಲ್ಲಿ ಉಕ್ತವಾಗಿದೆ. (ಅಂತೂ ಜೀವರಿಗೂ ಪರಮಾತ್ಮನಿಗೂ ಭೇದಜ್ಞಾನವೇ ಮುಕ್ತಿಗೆ ಸಾಧನವು.) ॥ ೨ ॥

**ಮಂ ॥ ಯದಾ ಪಶ್ಯಃ ಪಶ್ಯತೇ ರುಕ್ಮವರ್ಣಂ ಕರ್ತಾರಮೀಶಂ ಪುರುಷಂ ಬ್ರಹ್ಮಯೋನಿಂ । ತದಾ ವಿದ್ವಾನ್ ಪುಣ್ಯಪಾಪೇ ವಿಧೂಯ ನಿರಂಜನಃ ಪರಮಂ ಸಾಮ್ಯಮುಪೈತಿ ॥ ೩ ॥**

ಅ ॥ ಪಶ್ಯಃ=ನೋಡತಕ್ಕ ಜೀವನು, ಯದಾ=ಯಾವಾಗ, ರುಕ್ಮವರ್ಣಂ=ಭಂಗಾರವರ್ಣ ಶರೀರವುಳ್ಳ, ಬ್ರಹ್ಮಯೋನಿಂ=ಚತುರ್ಮುಖನಿಗೂ ಕಾರಣನಾದ, ಕರ್ತಾರಂ=ಜಗತ್ಕರ್ತ್ರನಾದ, ಪುರುಷಂ=ಗುಣಪೂರ್ಣನಾದ, ಈಶಂ=ಸ್ವಾಮಿಯಾದ ಶ್ರೀಹರಿಯನ್ನು, ಪಶ್ಯತೇ=ನೋಡುತ್ತಾನೋ, ತದಾ=ಆಗ, ವಿದ್ವಾನ್=ಅಪರೋಕ್ಷಜ್ಞಾನಿಯು; ಪುಣ್ಯಪಾಪೇ-ಪುಣ್ಯ=ಅನಿಷ್ಟಪುಣ್ಯವು, ಪಾಪೇ=ನಿಖಿಲ ಪಾಪವು ಇವುಗಳನ್ನು, ವಿಧೂಯ=ಬಿಟ್ಟು, ನಿರಂಜನಃ=ನಿರ್ಲೇಪನಾಗಿ, ಪರಮಂ ಸಾಮ್ಯಂ=ನಿರ್ದುಃಖಪೂರ್ಣಾನಂದತ್ವಾದಿರೂಪವಾದ ಬ್ರಹ್ಮಸಾಮ್ಯವನ್ನು, ಉಪೈತಿ=ಹೊಂದುತ್ತಾನೆ.

**ಭಾ ॥** ಪುಣ್ಯಂ ಚಾನಿಷ್ಟಂ ವಿಧೂಯ ॥

ತಾ ॥ ಅನಿಷ್ಟಪುಣ್ಯವನ್ನು ಬಿಟ್ಟು (ಅಂತೂ ಕಾಮ್ಯ-ಅಕಾಮ್ಯ ಎಂದು ಪುಣ್ಯವು ಎರಡು ವಿಧವು. ಅದರಲ್ಲಿ ಅಕಾಮ್ಯವು ಅಪರೋಕ್ಷಜ್ಞಾನವುಂಟಾಗಿ ಕ್ಷೀಣವಾಗುವುದು. ಪ್ರಾರಬ್ಧ ಅಪ್ರಾರಬ್ಧವೆಂದು ಕಾಮ್ಯವು ಎರಡು ವಿಧವು. ಪ್ರಾರಬ್ಧಕ್ಕೆ ಭೋಗದಿಂದಲೇ ನಾಶವು. ಅಪ್ರಾರಬ್ಧವಾಗಿಯೂ ಅನಿಷ್ಟವಾಗಿಯೂ ಇರುವ ಪುಣ್ಯವು ಜ್ಞಾನದಿಂದ ನಾಶವಾಗುವುದು). ॥ ೩ ॥

**ಮಂ ॥ ಪ್ರಾಣೋ ಹ್ಯೇಷ ಸರ್ವಭೂತೈರ್ವಿಭಾತಿ ವಿಜಾನನ್ವಿದ್ವಾನ್ ಭವತೇ ನಾತಿವಾದೀ । ಆತ್ಮಕ್ರೀಡ ಆತ್ಮರತಿಃ ಕ್ರಿಯಾವಾನೇಷ ಬ್ರಹ್ಮವಿದಾಂ ವರಿಷ್ಠಃ ॥ ೪ ॥**

ಅ ॥ ಏಷಃ=ಈ, ಪ್ರಾಣೋ ಹಿ=ಪ್ರಕೃಷ್ಟಚೇಷ್ಟಕನಾದ ಹರಿಯೇ, ಸರ್ವಭೂತೈಃ=ನಿಖಿಲ ಇಂದ್ರಿಯಾಭಿಮಾನಿಗಳಿಂದ, ವಿಭಾತಿ=ವಿಶೇಷವಾಗಿ ಪ್ರಕಾಶಿಸುತ್ತಾನೆ. (ಅಂತೂ ಹರಿಯೇ ಸರ್ವಜೀವರ ದೇಹಗಳಲ್ಲಿಯೂ ಪ್ರಕಾಶಿಸುತ್ತಾನೆ. ಆತನೇ ಸ್ವತಂತ್ರನು. ನಾನು ಸ್ವತಂತ್ರನಲ್ಲ ಹೀಗೆ) ವಿಜಾನನ್=ತಿಳಿದ, ವಿದ್ವಾನ್=ಬ್ರಹ್ಮಜ್ಞಾನಿಯು, ಅತಿವಾದೀ=ನಾನೇ ಕರ್ತನು ಇತ್ಯಾದ್ಯಯೋಗ್ಯವಾದುದನ್ನು ಹೇಳತಕ್ಕವನು, ನ ಭವತೇ=ಆಗುವುದಿಲ್ಲ. ಆತ್ಮಕ್ರೀಡಃ=ಹರಿಯ ಸೃಷ್ಟ್ಯಾದಿ ಕ್ರೀಡೆಗಳನ್ನು ಧ್ಯಾನಿಸತಕ್ಕ, ಆತ್ಮರತಿಃ=ಹರಿದರ್ಶನನಿಮಿತ್ತಕವಾದ ಸ್ವರೂಪಸುಖವುಳ್ಳ, ಕ್ರಿಯಾವಾನ್=ಭಗವದಾರಾಧನವೇ ಮುಖ್ಯ ಕ್ರಿಯಾವುಳ್ಳ, ಏಷಃ=ಈ ಬ್ರಹ್ಮಾಪರೋಕ್ಷಜ್ಞಾನಿಯು, ಬ್ರಹ್ಮವಿದಾಂ=ಬ್ರಹ್ಮಜ್ಞಾನಿಗಳಲ್ಲಿ, ವರಿಷ್ಠಃ=ಶ್ರೇಷ್ಠನು. (ಸ್ವಾವರ ಬ್ರಹ್ಮಜ್ಞಾನಿಗಳಿಗೆ ಸಚ್ಛಾಸ್ತ್ರೋಪದೇಶಕನು.) ॥ ೪ ॥

**ಮಂ ॥ ಸತ್ಯೇನ ಲಭ್ಯಸ್ತಪಸಾ ಹ್ಯೇಷ ಆತ್ಮಾ ಸಮ್ಯಕ್ ಜ್ಞಾನೇನ ಬ್ರಹ್ಮಚರ್ಯೇಣ ನಿತ್ಯಂ । ಅಂತಃ ಶರೀರೇ ಜ್ಯೋತಿರ್ಮಯೋ ಹಿ ಶುಭ್ರೋ ಯಂ ಪಶ್ಯಂತಿ ಯತಯಃ ಕ್ಷೀಣದೋಷಾಃ ॥ ೫ ॥**

ಅ ॥ ಕ್ಷೀಣದೋಷಾಃ=ದೋಷಶೂನ್ಯರಾದ, ಯತಯಃ=ಶ್ರವಣಾದ್ಯನುಕೂಲಪ್ರಯತ್ನವುಳ್ಳವರು, ಯಂ=ಯಾವ ಹರಿಯನ್ನು, ಅಂತಃಶರೀರೇ=ಶರೀರದೊಳಗೆ, ಪಶ್ಯಂತಿ=ನೋಡುತ್ತಾರೋ, ಏಷಃ=ಈದಾವ, ಜ್ಯೋತಿರ್ಮಯಃ=ಜ್ಞಾನಪ್ರಚುರನಾದ, ಶುಭ್ರಃ=ಶುದ್ಧನಾದ, ಆತ್ಮಾ=ಶ್ರೀ ಹರಿಯು, ಸತ್ಯೇನ=ಯಥಾರ್ಥನುಡಿಯಿಂದಲೂ, ತಪಸಾ=ವರ್ಣಾಶ್ರಮೋಚಿತಕರ್ಮಾನುಷ್ಠಾನಪೂರ್ವಕ ಭಗವದ್ಧ್ಯಾನದಿಂದಲೂ, ಸಮ್ಯಗ್ಜ್ಞಾನೇನ=ಗುರೂಪದೇಶದಿಂದ ಉಂಟಾದ ತತ್ವವಿಷಯಜ್ಞಾನದಿಂದಲೂ, ನಿತ್ಯಂ=ನಿರಂತರದಲ್ಲಿಯೂ, ಬ್ರಹ್ಮಚರ್ಯೇಣ=ಸರ್ವೇಂದ್ರಿಯನಿಗ್ರಹರೂಪ ಬ್ರಹ್ಮಚರ್ಯವ್ರತದಿಂದಲೂ, ಲಭ್ಯಃ=ವ್ಯಾಪಿಸಲುಯೋಗ್ಯನು. ॥೫॥

**ಮಂ ॥ ಸತ್ಯಮೇವ ಜಯತಿ ನಾನೃತಂ ಸತ್ಯೇನ ಪಂಥಾ ವಿತತೋ ದೇವಯಾನಃ । ಯೇನಾಕ್ರಮಂತ್ಯೃಷಯೋ ಹ್ಯಾಪ್ತಕಾಮಾ ಯತ್ರ ತತ್ಸತ್ಯಸ್ಯ ಪರಮಂ ನಿಧಾನಂ ॥ ೬ ॥**

ಅ ॥ ಯತ್ರ=ಯಾವ ಲೋಕದಲ್ಲಿ, ಸತ್ಯಸ್ಯ=ವಿಷ್ಣುವಿಗೆ, ಪರಮಂ=ಮುಖ್ಯವಾಗಿ, ನಿಧಾನಂ=ಸನ್ನಿಧಾನವದೆಯೋ, ತತ್=ಆ ವೈಕುಂಠಲೋಕದಲ್ಲಿದ್ದ ಹರಿಯನ್ನು, ಆಪ್ತಕಾಮಾಃ=ಮಹಾಜ್ಞಾನವನ್ನು ಹೊಂದಿದ, ಋಷಯಃ=ಋಷಿಗಳು, ಯೇನ=ಯಾವ ದೇವಯಾನದಿಂದ, ಆಕ್ರಮಂತಿ=ಹೋಗುತ್ತಾರೋ, ಸಃ=ಆದಾವ, ದೇವಯಾನಃ=ದೇವಯಾನ ಎಂಬ, ಪಂಥಾಃ=ಅರ್ಚಿರಾದಿಮಾರ್ಗವು, ಯೇನ=ಯಾವ ಸತ್ಯದಿಂದ, ವಿತತಃ=ನಿರ್ಮಿತವಾಗಿಯದೋ, ತಂ=ಆ, ಸತ್ಯಮೇವ=ಸತ್ಯಾಖ್ಯ ಹರಿಯನ್ನೇ, ಜಯತಿ=ಹೊಂದುತ್ತಾನೆ. ಅನೃತಂ=ಅನೃತಪದಾಭಿಧೇಯವಾದ ಅಸುರಜಾತವನ್ನು, ನ ಜಯತಿ=ಹೊಂದುವುದಿಲ್ಲ. ॥ ೬ ॥

ಭಾ ॥ ಸತ್ಯೋ ಹಿ ಭಗವಾನ್ವಿಷ್ಣುಃ ಸದ್ಗುಣತ್ವಾತ್ಪ್ರಕೀರ್ತಿತಃ ।
ಅಸುರಾಸ್ತದ್ವಿರುದ್ಧತ್ವಾದನೃತಾಃ ಪರಿಕೀರ್ತಿತಾಃ ॥
ತಸ್ಯ ವಿಷ್ಣೋರ್ನಿಧಾನಂ ತು ವೈಕುಂಠೋ ಲೋಕ ಉತ್ತಮಃ ।
ಇತಿ ಚ ॥ ೬ ॥

ತಾ ॥ ಪೂಜ್ಯನಾದ ಶ್ರೀ ವಿಷ್ಣುವು ಸದ್ಗುಣಭರಿತನಾದುರಿಂದ ಸತ್ಯನೆಂದು ಹೇಳಲ್ಪಟ್ಟಿರುತ್ತಾನೆ. ಋತರೂಪನಾದ ಹರಿಗೆ ವಿರೋಧಿಗಳಾದುದರಿಂದ ಅಸುರರು ಅನೃತರೆಂದು ಹೇಳಲ್ಪಟ್ಟಿರುತ್ತಾರೆ. ಅಂಥಾ ಹರಿಗೆ ಉತ್ತಮವಾದ ಕುಂದುರಹಿತವಾದ ವೈಕುಂಠಲೋಕವು ಆಶ್ರಯವಾದುದು.

**ಮಂ ॥ ಬೃಹಚ್ಚ ತದ್ದಿವ್ಯಮಚಿಂತ್ಯರೂಪಂ ಸೂಕ್ಷ್ಮಾಚ್ಚ ತತ್ಸೂಕ್ಷ್ಮತರಂ ವಿಭಾತಿ । ದೂರಾತ್ಸುದೂರೇ ತದಿಹಾಂತಿಕೇ ಚ ಪಶ್ಯತ್ಸ್ವಿಹೈವ ನಿಹಿತಂ ಗುಹಾಯಾಂ ॥ ೭ ॥**

ಅ ॥ ಅಚಿಂತ್ಯರೂಪಂ=ಆಲೋಚಿಸಲಿಕ್ಕೂ ಅಶಕ್ಯವಾದ ಶಕ್ತಿಯುಳ್ಳ, ದಿವ್ಯಂ=ಅಲೌಕಿಕವಾದ, ಬೃಹತ್=ಗುಣಪರಿಪೂರ್ಣವಾದ, ತತ್=ಆ ಪರಬ್ರಹ್ಮವು, ವಿಭಾತಿ=(ಮನುಷ್ಯೋತ್ತಮರಿಗೆ) ಪ್ರಕಾಶಿಸುತ್ತದೆ. ಸೂಕ್ಷ್ಮಾತ್=ಸೂಕ್ಷ್ಮಗಳಾದ ಪ್ರಕೃತ್ಯಾದಿಗಳಿಂದಲೂ, ಸೂಕ್ಷ್ಮತರಂ=ಅತಿಸೂಕ್ಷ್ಮವಾದ, (ಅಣುವಿನಿಂದಲೂ ಅತ್ಯಣುವಾದ), ತತ್=ಬಿಂಬರೂಪವಾದ ಬ್ರಹ್ಮವು, (ಋಷ್ಯಾದಿ ಮಧ್ಯಮಾಧಿಕಾರಿಗಳಿಗೆ) ತೋರುತ್ತದೆ. ದೂರಾತ್ಸುದೂರೇ=ಅತ್ಯಂತ

ದೂರದಲ್ಲಿಯೂ, ಇಹ=ಮಧ್ಯದಲ್ಲಿಯೂ, ಅಂತಿಕೇ ಚ=ಸಮೀಪದಲ್ಲಿಯೂ ಇದ್ದು, ತತ್=ಆ ವ್ಯಾಪ್ತವಾದ ಬ್ರಹ್ಮವು, (ಅಪ್ರತೀಕಾಲಂಬನರಿಗೆ). ತೋರುತ್ತದೆ. ಪಶ್ಯತ್ಸು=(ಅಂತೂಸ್ವಯೋಗ್ಯರೂಪವನ್ನು), ನೋಡತಕ್ಕ ನಿಖಿಲಜ್ಞಾನಿಗಳಿಗೂ, ಇಹೈವ=ತಮ್ಮ ತಮ್ಮ ಶರೀರದಲ್ಲಿಯೇ, ಗುಹಾಯಾಂ=ಹೃದಯ ಪ್ರದೇಶದಲ್ಲಿ, ನಿಹಿತಂ=ಇಡಲ್ಪಟ್ಟ ಸ್ವಸ್ವಬಿಂಬರೂಪವು (ತೋರುತ್ತದೆ).

ತಾ ॥ ಅಂತೂ ಈ ಮಂತ್ರದಲ್ಲಿ ಜ್ಞಾನಿಗಳ ವೈಚಿತ್ರ್ಯವು ಹೇಳಲ್ಪಟ್ಟಿತು. ಇದರಿಂದ ಆಯಾ ವಿಧದ ಜ್ಞಾನಿಗಳಿಗೆ ಪ್ರಾಪ್ತವಾಗತಕ್ಕ ಲೋಕಗಳಲ್ಲಿಯೂ ವೈಚಿತ್ರ್ಯವು ಸೂಚಿಸಲ್ಪಟ್ಟಿತು. ಅದನ್ನು ಪ್ರಮಾಣಾಂತರದಿಂದ ಈ ರೀತಿಯಾಗಿ ತಿಳುಕೊಳ್ಳತಕ್ಕದು. ಮಹರಾದಿ ನಿಖಿಲಲೋಕಗಳೂ ಜ್ಞಾನದಿಂದಲೇ ಲಭ್ಯಗಳು. ಇಂತಹ ಅಧಿಕಾರಗಳಲ್ಲಿ ಅಪ್ರತೀಕಾಲಂಬನರಾದ ದೇವಾದಿಗಳು ಭಗವದ್ದರ್ಶನದಿಂದ ಸಾಕ್ಷಾತ್ ವೈಕುಂಠಲೋಕಕ್ಕೇನೇ ಹೋಗುವರು. ಮಧ್ಯಮರಾದ ಋಷ್ಯಾದಿಗಳು ಬಿಂಬರೂಪ ಪರಬ್ರಹ್ಮದರ್ಶನವನ್ನು ಹೊಂದಿ ಚತುರ್ಮುಖಲೋಕವಾದ ಸತ್ಯಲೋಕವನ್ನು ಮೊದಲು ಹೊಂದಿಯೇ ವೈಕುಂಠವನ್ನು ಸೇರುವರು. ಮನುಷ್ಯೋತ್ತಮರು ಅಧಮಾಧಿಕಾರಿಗಳು. ಇವರಲ್ಲಿ ಉತ್ತಮರು ಅಖಂಡಧ್ಯಾನ ರೂಪವಾದ ತಪಸ್ಸಿನಿಂದ ತಪೋಲೋಕವನ್ನು ಹೊಂದುವರು. ಮಧ್ಯಮರು ಯೋಗಬಲದಿಂದ ಜನಲೋಕವನ್ನು ಸೇರುವರು. ಅಧಮರು ಪಾದಯೋಗದಿಂದ ಮಹರ್ಲೋಕವನ್ನು ಪಡೆಯುವರು. ಈ ತ್ರಿವಿಧರಾದರೋ ಕಾಲಾಂತರದಲ್ಲಿ ಸತ್ಯಲೋಕವನ್ನು ಹೊಂದಿ ಚತುರ್ಮುಖನಿಂದ ಉಪದಿಷ್ಟರಾಗಿ ಆ ಮೇಲೆ ಬಿಂಬದರ್ಶನವನ್ನು ಹೊಂದಿ ಮುಕ್ತರಾಗುತ್ತಾರೆಂದು ತಿಳಿಯತಕ್ಕದು.

ಭಾ ॥ ಸರ್ವಗತ್ವಾತ್ತದ್ದೂರೇ ಅಂತಿಕೇ ಚ ॥

ತಾ ॥ ಆ ಬ್ರಹ್ಮವು ಸರ್ವತ್ರ ವ್ಯಾಪ್ತವಾದುದರಿಂದ ದೂರದಲ್ಲಿಯೂ ಸಮೀಪದಲ್ಲಿಯೂ ಇರಲಾಪುದು.

**ಮಂ ॥ ನ ಚಕ್ಷುಷಾ ಗೃಹ್ಯತೇ ನಾಪಿ ವಾಚಾ ನಾನ್ಯೈರ್ದೇವೈಸ್ತಪಸಾ ಕರ್ಮಣಾ ವಾ । ಜ್ಞಾನಪ್ರಸಾದೇನ ವಿಶುದ್ಧಸತ್ವಸ್ತತಸ್ತು ತಂ ಪಶ್ಯತೇ ನಿಷ್ಕಲಂ ಧ್ಯಾಯಮಾನಃ ॥ ೮ ॥**

ಅ ॥ (ಹೃದಯಾಕಾಶದಲ್ಲಿರತಕ್ಕ ಪರಬ್ರಹ್ಮಾಖ್ಯವಸ್ತುವು) ಚಕ್ಷುಷಾ=ಚಕ್ಷುರಾದಿದೇವತಾಪ್ರಸಾದಗಳಿಂದ, ನ ಗೃಹ್ಯತೇ=ಗ್ರಹಿಸಲ್ಪಡುವುದಿಲ್ಲ. ವಾಚಾ=ವಾಗ್ದೇವತಾನುಗ್ರಹದಿಂದಲೂ, ನಾಪಿ=ಗ್ರಹಿಸಲ್ಪಡುವುದಿಲ್ಲ. ಅನ್ಯೈಃ ದೇವೈಃ=ಇತರ ಇಂದ್ರಿಯಾಭಿಮಾನಿದೇವತೆಗಳಿಂದಲೂ, ತಪಸಾ=ಉಪವಾಸಾದಿ ವ್ರತದಿಂದಲೂ, ಕರ್ಮಣಾ=ವರ್ಣಾಶ್ರಮೋಚಿತಧರ್ಮಗಳಿಂದಲೂ, ನ=ಗ್ರಹಿಸಲ್ಪಡುವುದಿಲ್ಲ. ಜ್ಞಾನಪ್ರಸಾದೇನ=ಜ್ಞಾನರೂಪರಾದ ವಾಯುಬ್ರಹ್ಮರೂ, ಪರಮಜ್ಞಾನರೂಪನಾದ ಹರಿಯೂ ಇವರ ಅನುಗ್ರಹದಿಂದ, ವಿಶುದ್ಧಸತ್ವಃ=ರಜಸ್ತಮೋಗುಣಗಳಿಂದ ಮಿಶ್ರವಾಗದೇ ಇರತಕ್ಕ ಸತ್ವಗುಣವುಳ್ಳವನು (ಆಗುತ್ತಾನೆ.) ತತಸ್ತು=ಆ ವಿಶುದ್ಧಸತ್ವನಾದುದರಿಂದಲೇ, ನಿಷ್ಕಲಂ=ಷೋಡಶಕಲಾತ್ಮಕದೇಹಶೂನ್ಯನನ್ನಾಗಿ, ಧ್ಯಾಯಮಾನಃ=ಧ್ಯಾನಿಸುವವನಾಗಿ, ತಂ=ಆ ಪರಮಾತ್ಮನನ್ನು, ಪಶ್ಯತೇ=ನೋಡುತ್ತಾನೆ.

ಭಾ ॥ ನಾನ್ಯೈರ್ದೇವೈರ್ಹರಿಂ ಪಶ್ಯೇಜ್ಜ್ಞಾನರೂಪೇಣ ವಾಯುನಾ ।
ಬ್ರಹ್ಮಣಾ ಪರಮಜ್ಞಾನರೂಪೇಣ ಹರಿಣಾ ತಥಾ ॥

ಪ್ರಸನ್ನೇಽನ್ನೈವ ತಂ ಪಶ್ಯೇದನ್ಯೇಽನುಜ್ಞಾಪ್ರದಾಯಿನಃ ||

ಇತಿ ಚ ||

ತಾ || ವಾಯುಚತುರ್ಮುಖರಿಂದ ವ್ಯತಿರಿಕ್ತರಾದ ದೇವತೆಗಳ ಅನುಗ್ರಹದಿಂದ ಹರಿಯನ್ನು ಎಷ್ಟುಮಾತ್ರಕ್ಕೂ ನೋಡಲಾರನು. ಪ್ರಸನ್ನರಾದ ಜ್ಞಾನರೂಪರಾದ ವಾಯುಚತುರ್ಮುಖರಿಂದಲೂ ಪರಮಜ್ಞಾನರೂಪನಾದ ಹರಿಯಿಂದಲೂ (ಅಂತೂ ಇವರ ಅನುಗ್ರಹದಿಂದಲೇ) ಹರಿಯನ್ನು ನೋಡಲಾಗುವುದು. ಇತರರು ಅನುಕೂಲ ಜ್ಞಾನವನ್ನು ಕೊಡತಕವರು. (ಅಂತೂ ಇತರ ದೇವತೆಗಳು ಇಂದ್ರಿಯಾದಿ ಪ್ರೇರಕರಾದುದರಿಂದ ಭಗವದಪರೋಕ್ಷಜ್ಞಾನಾನುಕೂಲಜ್ಞಾನೋತ್ಪಾದಕರು.

ಭಾ || ಷೋಡಶಕಲಾಶರೀರೋ ನ ಭವತೀತಿ ನಿಷ್ಕಲಃ ||

ತಾ || (ಶ್ರೀಹರಿಯು) ಷೋಡಶಕಲಾಯುಕ್ತ ಶರೀರಿಯಲ್ಲವಾದುದರಿಂದ 'ನಿಷ್ಕಲ'ನೆನಿಸುತ್ತಾನೆ. (ಷೋಡಶಕಲೆಗಳನ್ನು ಷಟ್ಪ್ರಶ್ನೋಪನಿಷತ್ತಿನಲ್ಲಿ ಹೇಳಿದಂತೆ ತಿಳುಕೊಳ್ಳಬೇಕು.)

ಭಾ || ಯದಾ ಪಶ್ಯಃ ಪಶ್ಯತೇ ರುಗ್ಮವರ್ಣಂ |
ಆನಂದರೂಪಮಮೃತಂ ಯದ್ವಿಭಾತಿ ಇತ್ಯುಕ್ತತ್ವಾತ್ || ೮ ||

ತಾ || ಯಾವಾಗ ಜೀವನು ಸುವರ್ಣದಂತೆ ಸೌಂದರ್ಯ ಕಾಂತಿವುಳ್ಳ ಶ್ರೀಹರಿಯನ್ನು ನೋಡುತ್ತಾನೋ (ಆಗ ಹರಿಸಾಮ್ಯವನ್ನು ಹೊಂದುತ್ತಾನೆ.) ಆನಂದಾತ್ಮಕ ಕರಚರಣಾದಿ ಸ್ವರೂಪವುಳ್ಳ ನಿತ್ಯಮುಕ್ತವಾದ ಯಾವುದು ಶೋಭಿಸುತ್ತದೋ (ಅದು ಬ್ರಹ್ಮವು.) ಈ ಪ್ರಕಾರವಾಗಿ ಶ್ರುತಿಗಳಲ್ಲಿ ಹೇಳಿರುವುದರಿಂದ ನಿಷ್ಕಲನೆಂದರೆ ಪರರು, ಹೇಳುವಂತೆ ಸೌಂದರ್ಯಾದಿಗುಣಗಳಿಲ್ಲದವನೆಂದಾಗಲೀ ಕರಚರಣಾತ್ಮಕ ಶರೀರವಿಲ್ಲದವನೆಂದಾಗಲೀ ಶ್ರೀ ಹರಿಯನ್ನು ತಿಳುಕೊಳ್ಳಕೂಡದು. || ೮ ||

**ಮಂ || ಏಷೋಽಣುರಾತ್ಮಾ ಚೇತಸಾ ವೇದಿತವ್ಯೋ ಯಸ್ಮಿನ್ ಪ್ರಾಣಃ ಪಂಚಧಾ ಸಂವಿವೇಶ | ಪ್ರಾಣೈಶ್ಚಿತ್ತಂ ಸರ್ವಮೋತಂ ಪ್ರಜಾನಾಂ ಯಸ್ಮಿನ್ ವಿಶುದ್ಧೇ ವಿಭವತ್ಯೇಷ ಆತ್ಮಾ || ೯ ||**

ಅ || ಪ್ರಜಾನಾಂ=ಸರ್ವಪ್ರಜೆಗಳ, ಸರ್ವಂ=ನಿಖಿಲವಾದ, ಚಿತ್ತಂ=ಮನೋಬುದ್ಧಿರಹಂಕಾರ ಚಿತ್ತಚೇತನವೆಂದು ಐದುವಿಧವಾದ ಮನಸ್ಸು, ಪ್ರಾಣೈಃ=ನಿಖಿಲೇಂದ್ರಿಯಗಳಿಂದ ಕೂಡಿಕೊಂಡು, ಯಸ್ಮಿನ್=ಯಾವ ಮುಖ್ಯಪ್ರಾಣನಲ್ಲಿ, ಓತಂ=ಆಶ್ರಿತವಾಗಿದೆಯೋ, ಸ ಪ್ರಾಣಃ=ಅಂತಹ ಮುಖ್ಯಪ್ರಾಣನು, ಯಸ್ಮಿನ್=ಯಾವ, ವಿಶುದ್ಧೇ=ನಿಷ್ಕಲನಾದ ಶ್ರೀ ಹರಿಯಲ್ಲಿ, ಪಂಚಧಾ=ಪ್ರಾಣಾದಿ ಐದು ರೂಪಿಯಾಗಿ, ಸಂವಿವೇಶ=ಆಶ್ರಿತನಾಗಿರುತ್ತಾನೋ, ಏಷ ಆತ್ಮಾ=ಈ ಗುಣಪರಿಪೂರ್ಣನಾದ ಶ್ರೀಹರಿಯು, ವಿಭವತಿ=ಬಹು ಐಶ್ವರ್ಯಯುಕ್ತನಾಗಿರುತ್ತಾನೆ. ಏಷಃ=ಇಂತಹ ಗುಣಯುಕ್ತನಾದ, ಅಣುಃ=ಅಣುರೂಪಿಯಾದ (ಅಣುರೂಪದಿಂದ ನಿಖಿಲಪ್ರಾಣಿಗಳಲ್ಲಿರತಕ್ಕ), ಆತ್ಮಾ=ಪರಮಾತ್ಮನು, ಚೇತಸಾ=ಶುದ್ಧಾಂತಃಕರಣದಿಂದಲೇ, ವೇದಿತವ್ಯಃ=ಸಾಕ್ಷಾತ್ಕರಿಸಿಕೊಳ್ಳಲರ್ಹನು. || ೯ ||

ಮಂ || ಯಂ ಯಂ ಲೋಕಂ ಮನಸಾ ಸಂವಿಭಾತಿ ವಿಶುದ್ಧಸತ್ವಃ ಕಾಮ ಯತೇ ಯಾಂಶ್ಚ ಕಾಮಾನ್ | ತಂ ತಂ ಲೋಕಂ ಜಯತೇ ತಾಂಶ್ಚ ಕಾಮಾಂಸ್ತಸ್ಮಾದಾತ್ಮಜ್ಞಂ ಹ್ಯರ್ಚಯೇದ್ಭೂತಿಕಾಮಃ || ೧೦ ||

ಇತಿ ಪಂಚಮಃ ಖಂಡಃ

ಅ || ವಿಶುದ್ಧಸತ್ವಃ=ಭಗವದಪರೋಕ್ಷಜ್ಞಾನಿಯು, ಯಂ ಯಂ ಲೋಕಂ=ಸ್ವರ್ಗಾದಿ ಲೋಕವನ್ನು, ಮನಸಾ=ಚಿತ್ತದಿಂದ, ಸಂವಿಭಾತಿ=ಇಚ್ಛಿಸುತ್ತಾನೋ, ಯಾಂಶ್ಚ=ಯಾವ, ಕಾಮಾನ್=ಕಾಮ್ಯಮಾನವಿಷಯಗಳನ್ನು, ಕಾಮಯತೇ=ಇಚ್ಛಿಸುತ್ತಾನೋ, ತಂ ತಂ ಲೋಕಂ=ಆಯಾ ಲೋಕಗಳನ್ನು, ತಾನ್=ಆದಾವ, ಕಾಮಾಂಶ್ಚ=ಅಭೀಷ್ಟಗಳನ್ನೂ, ಜಯತೇ=ಹೊಂದುತ್ತಾನೆ. ತಸ್ಮಾತ್=ಆದಕಾರಣ, ಭೂತಿಕಾಮಃ=ಭಾಗ್ಯವನ್ನಿಚ್ಛಿಸುವವನು, ಆತ್ಮಜ್ಞಂ=ಭಗವಜ್ಜ್ಞಾನಿಯನ್ನು, ಅರ್ಚಯೇತ್=ಪೂಜಿಸತಕ್ಕುದು, ಹಿ=ನಿಶ್ಚಯ.

ತಾ || ಅಂತೂ ಈ ಖಂಡದಲ್ಲಿ ಭಗವದಪರೋಕ್ಷಜ್ಞಾನಿಯೂ ಪ್ರಸನ್ನನಾದರೆ ಭೂತಿಯನ್ನು ಕೊಡತಕ್ಕ ಸಾಮರ್ಥ್ಯವುಳ್ಳವನಾದುದರಿಂದ ಆತನ ಅನುಗ್ರಹಕ್ಕಾಗಿ ಪೂಜೆಯನ್ನು ಮಾಡತಕ್ಕುದು ಎಂದು ಹೇಳಿದಂತಾಯಿತು.

ಐದನೆಯ ಖಂಡವು ಮುಗಿದುದು.

## ಖಂಡ ೬.

ಮಂ || ಸ ವೇದೈತತ್ಪರಮಂ ಬ್ರಹ್ಮಧಾಮ ಯತ್ರ ವಿಶ್ವಂ ನಿಹಿತಂ ಭಾತಿ ಶುಭ್ರಂ | ಉಪಾಸತೇ ಪುರುಷಂ ಯೇ ಹ್ಯಕಾಮಾಸ್ತೇ ಶುಕ್ರಮೇತದತಿವರ್ತಂತಿ ಧೀರಾಃ || ೧ ||

ಅ || ಯತ್ರ=ಯಾವ ಮುಖ್ಯವಾಯುವಿನಲ್ಲಿ, ವಿಶ್ವಂ=ಗುಣಪೂರ್ಣವಾದ, ಶುಭ್ರಂ=ಶುದ್ಧವಾದ ಬ್ರಹ್ಮವು, ನಿಹಿತಂ=ಇದ್ದದ್ದಾಗಿ, ಭಾತಿ=ಶೋಭಿಸುತ್ತದೋ, (ವಾಯ್ವಾವಿಷ್ಟ ಜೀವರಿಗೆ ವಾಯುದ್ವಾರಾ ಜ್ಞಾನವನ್ನು ಪ್ರಕಾಶಿಸುವವನು) ಏತತ್=ಈ ದಾವ, ಪರಮಂ=ಮುಖ್ಯನಾದ, ಬ್ರಹ್ಮಧಾಮ=ಬ್ರಹ್ಮ=ಪರಬ್ರಹ್ಮನಿಗೆ, ಧಾಮ=ಗೃಹಸ್ಥಾನೀಯನಾದ ಮುಖ್ಯವಾಯುವನ್ನು, ಸಃ=ಬ್ರಹ್ಮಜ್ಞಾನಿಯನ್ನು ಪೂಜಿಸುವವನು, ವೇದ=ತಿಳಿಯುತ್ತಾನೆ. (ಅಂದರೆ ಯಾವಾತನು ಬ್ರಹ್ಮಜ್ಞಾನಿಯನ್ನು ಪೂಜಿಸುವನೋ ಆತನು ಮುಖ್ಯಪ್ರಾಣನನ್ನು ತಿಳಿದವನಾಗುವನು. ಆತನ ಜ್ಞಾನವಾಗೋಣ ಅಲ್ಲಿರುವ ಹರಿಯು ಆತನಿಗೆ ಪ್ರಾಣದ್ವಾರಾ ಜ್ಞಾನವೃದ್ಧಿಯನ್ನು ಮಾಡುತ್ತಾನೆ.) ಅಕಾಮಾಃ=ಕಾಮಾದಿ ದೋಷಶೂನ್ಯರಾದ, ಯೇ=ಯಾರು, ಪುರುಷಂ=ಪೂರ್ಣಸದ್ಗುಣಗಳುಳ್ಳ ಬ್ರಹ್ಮನನ್ನು, ಉಪಾಸತೇ=ಶ್ರವಣಮನನಾದಿಗಳಿಂದ ತಿಳಿಯುತ್ತಾರೋ, ತೇ ಧೀರಾಃ=ಅಂತಹ ಧೀರರು, ಶುಕ್ರಂ=ಶೋಕರಹಿತವಾದ, ಏತತ್=ಈ ಬ್ರಹ್ಮವನ್ನು, (ಹೊಂದಲಿಕ್ಕೆ) ಅತಿವರ್ತಂತಿ=ಸಂಸಾರಕ್ಲೇಶಗಳನ್ನತಿಕ್ರಮಿಸಿ ಮುಕ್ತರಾಗುತ್ತಾರೆ, ಹಿ=ನಿಶ್ಚಯ.

ಭಾ || ಸ ಆತ್ಮಜ್ಞಾರ್ಚಕೋ ಬ್ರಹ್ಮಣೋ ಧಾಮ ಪ್ರಾಣಂ ವೇದ |
ಯತ್ರ ವಿಶ್ವಂ ಪೂರ್ಣಂ ಬ್ರಹ್ಮ ನಿಹಿತಂ ||

ತಾ ॥ ಪೂರ್ವೋಕ್ತನಾದ ಬ್ರಹ್ಮಜ್ಞಾನಿಪೂಜಕನು ಮುಖ್ಯಪ್ರಾಣನನ್ನು ಪರಬ್ರಹ್ಮನಿಗೆ ಮಂದಿರಭೂತನನ್ನಾಗಿ ತಿಳುಕೊಳ್ಳುತ್ತಾನೆ. (ಕಾರಣ, ಬ್ರಹ್ಮಧಾಮ ಎಂಬುದನ್ನು ಬಿಂಗಡಿಸಿ ಬ್ರಹ್ಮರೂಪತೇಜಸ್ಸೆಂದು ಹೇಳುವ ಅರ್ಥವು ಸರಿಯಲ್ಲ.) ಯಾವ ಪ್ರಾಣನಲ್ಲಿ ವಿಶ್ವಂ ಅಂದರೆ ಗುಣಪೂರ್ಣವಾದ ಬ್ರಹ್ಮವು (ನಿಖಿಲ ಜಗತ್ತನ್ನು ಧರಿಸತಕ್ಕದಾಗಿ) ಶೋಭಿಸುತ್ತದೋ (ಅದು ಪರಬ್ರಹ್ಮನ ಮಂದಿರವೇ ಆಗಿರುತ್ತದೆ.)

ಭಾ ॥ ಪ್ರಧಾನಂ ಧಾಮ ವಿಷ್ಣೋಸ್ತು ಪ್ರಾಣ ಏವ ಪ್ರಕೀರ್ತಿತಃ ॥

ತಾ ॥ ಶ್ರೀ ಪರಮಾತ್ಮನಿಗೆ (ವೈಕುಂಠಾದಿಗಳಿಂದಲೂ ಮುಖ್ಯವಾದ ಮಂದಿರವು ಮುಖ್ಯಪ್ರಾಣನೇ ಆಗಿರುತ್ತಾನೆ. ಎಂದು ಶ್ರುತಿಇರುತ್ತದೆ.)

ಭಾ ॥ ಉಪಾಯೈರ್ಯೋ ವಿಜಾನೀಯಾತ್ಪ್ರಾಣಸ್ಥಂ ಪರಮೇಶ್ವರಂ ।
ತಸ್ಯ ಪ್ರಾಣೇ ಹರಿರ್ನಿತ್ಯಮಾವಿಷ್ಟೋ ಭವತಿ ಧ್ರುವಂ ॥

ತಾ ॥ ಯಾವಾತನು ಶ್ರವಣಮನನಾದ್ಯುಪಾಯಗಳಿಂದ ಪ್ರಾಣಾಂತರ್ಗತ ಶ್ರೀಹರಿಯನ್ನು ತಿಳಿಯುತ್ತಾನೋ ಆತನ ಪ್ರಾಣನಲ್ಲಿ ಶ್ರೀಹರಿಯು ನಿರಂತರವೂ ಇರುವುದು ನಿಶ್ಚಯವು.

ಭಾ ॥ ನಿತ್ಯಂ ಪ್ರಾಣೇ ಸ್ಥಿತಸ್ಯೈವ ವಿಷ್ಣೋರಾವೇಶ ಏವ ಹಿ ।
ಪ್ರಾಣದ್ವಾರೇಣ ಯಜ್ಜ್ಞಾನ ದೀಪನಂ ಜ್ಞಾನಿನಃ ಸದಾ ॥

ತಾ ॥ (ಯದ್ಯಪಿ)ಶ್ರೀಹರಿಯು ಯಾವಾಗಲೂ ಮುಖ್ಯಪ್ರಾಣನಲ್ಲಿರುತ್ತಾನೆ.(ಆದಾಗ್ಯೂ) ಆತನಿಗೆ ಆವೇಶವೆಂದರೆ ಪ್ರಾಣಾಂತರ್ಗತ ಬ್ರಹ್ಮೋಪಾಸಕನಿಗೆ ಯಾವಾಗಲೂ ಪ್ರಾಣಪ್ರಸಾದ ದ್ವಾರಾ ಅಪರೋಕ್ಷಜ್ಞಾನೋತ್ಪತ್ತಿ ಅಭಿವೃದ್ಧಿಗಳವೆಯೋ ಅದೇ ಆವೇಶವೆನ್ನಿಸಿಕೊಳ್ಳುತ್ತದೆ. (ಅಲ್ಲದೆ ಬೇರೆವಿಧವಾಗಲ್ಲ ಕಾರಣ ಶ್ರೀಹರಿಯು ನಿರಂತರದಲ್ಲಿ ಪ್ರವಿಷ್ಟನಾದಾಗ್ಯೂ ಪುನಃಪ್ರವೇಶ ಹೇಳುವುದು ಅಸಂಗತವಲ್ಲ.)

ಭಾ ॥ ಸನ್ನಿಧಾನಂ ಯಥಾ ಪ್ರಾಪ್ತಾಃ ಪಿಶಾಚಾಃ ಪುರುಷೇಷ್ವಪಿ ।
ತತ್ರ ಸ್ಥಿತ್ವಾಪಿ ಭುಂಜಂತ ಆವಿಶೇಯುಃ ಪುನಶ್ಚ ತೇ ॥
ಮಂತ್ರಾದಿಭಿಸ್ತಥಾ ವಿಷ್ಣುಃ ಸದಾ ಪ್ರಾಣಸ್ಥಿತೋಽಪಿ ಸನ್ ।
ಜ್ಞಾನದೀಪ್ತ್ಯಾದಿಕಂ ಕುರ್ಯಾಜ್ಜ್ಞಾನಿನಃ ಪುನರೇವ ತು ॥ ಇತಿ ಚ ॥

ತಾ ॥ ಹೇಗೆ ಪಿಶಾಚಗಳು ಪುರುಷರಲ್ಲಿ ಸನ್ನಿಧಾನವನ್ನು ಹೊಂದಿದಾಗ್ಯೂ ಅಲ್ಲಿದ್ದು ಭೋಗಗಳನ್ನು ಹೊಂದುತ್ತಾ ಇದ್ದಾಗ್ಯೂ ಮಂತ್ರೌಷಧಾದಿನಿಮಿತ್ತಗಳಿಂದ ಪುನಃಪ್ರವೇಶಿಸಿದ್ದಾವೆಂದು ಹೇಳಲ್ಪಡುತ್ತವೆಯೋ ಹಾಗೆಯೇ ವಿಷ್ಣುವೂ ಯಾವಾಗಲೂ ಮುಖ್ಯಪ್ರಾಣನಲ್ಲಿದ್ದಾಗ್ಯೂ ಜ್ಞಾನಿಯಾದ ಉಪಾಸಕನಿಗೆ ವಿಶೇಷಜ್ಞಾನೋತ್ಪತ್ತಿಯನ್ನೂ ತದಭಿವೃದ್ಧಿಯನ್ನೂ ಮತ್ತು ಮುತ್ತು ಮಾಡುತ್ತಾನೆ. (ಈ ರೀತಿಯಾಗಿರುವವನೇ ಮುಖ್ಯಪ್ರಾಣಾವಿಷ್ಟನೆಂದು ಹೇಳಲ್ಪಡುತ್ತಾನೆ.)

ಭಾ ॥ ಏತಚ್ಛುಕ್ರಂ ಪ್ರತಿ ಅನ್ಯದತಿವರ್ತಂತೇ ।
ಸರ್ವಂ ತೀರ್ತ್ವಾ ಹರಿಂ ಶುಕ್ರಂ ಪ್ರತಿ ವೃತ್ತಿರ್ಭವೇತ್ಸ್ವನಃ ॥
ಜ್ಞಾನಿನಃ ಸಾ ಹಿ ಮುಕ್ತಿಃ ಸ್ಯಾತ್ತನ್ನೈವಾತ್ಯೇತಿ ಕಶ್ಚನ ॥
— ಇತಿ ಮಹಾವಾರಾಹೇ ॥

ತಾ ॥ ಈ ಶೋಕರಹಿತನಾದ ಬ್ರಹ್ಮನನ್ನು ಕುರಿತು (ಅಂದರೆ ಬ್ರಹ್ಮನೆಲ್ಲಿರುತ್ತಾನೋ ಅಲ್ಲಿರಲಿಕ್ಕಾಗಿ) ಇತರರಾದ ಕರ್ಮಗಳನ್ನು ಅತಿಕ್ರಮಿಸಿರುತ್ತಾನೆ. ಜ್ಞಾನಿಯಾದವನಿಗೆ ನಿಖಿಲ ಕರ್ಮಫಲಗಳನ್ನೂ ಬಿಟ್ಟು ಶೋಕರಹಿತನಾದ ಪರಮಾತ್ಮನ ಸಮೀಪದಲ್ಲಿಯೇ ಪುನಃ ಪುನಃ ಸ್ಥಿತಿಯಾಗುತ್ತದೆ. (ಯದ್ಯಪಿ ವ್ಯಾಪ್ತನಾದ ಹರಿಯ ಸಾಲೋಕ್ಯವು ನಿತ್ಯಸಿದ್ಧವಾಗಿದ್ದರೂ) ಕ್ಷೀರಸಮುದ್ರಾದಿಗಳಲ್ಲಿ ಶ್ರೀಹರಿಯಿಂದ ಕೂಡಿಕೊಂಡಿರತಕ್ಕುದೇ ಸಾಲೋಕ್ಯಾದಿರೂಪಮುಕ್ತಿಯು. ಯಾರೊಬ್ಬನೂ ಆ ಬ್ರಹ್ಮನನ್ನತಿಕ್ರಮಿಸಿರಲಾರನು. ಎಂದು ಮಹಾವಾರಾಹದಲ್ಲಿ ಹೇಳಿಯದೆ. ॥ ೧ ॥

**ಮಂ ॥ ಕಾಮಾನ್ಯಃ ಕಾಮಯತೇ ಮನ್ಯಮಾನಃ ಸ ಕಾಮಭಿರ್ಜಾಯತೇ ತತ್ರ ತತ್ರ । ಪರ್ಯಾಪ್ತಕಾಮಸ್ಯ ಕೃತಾತ್ಮನಶ್ಚ ಇಹೈವ ಸರ್ವೇ ಪ್ರವಿಲೀಯಂತಿ ಕಾಮಾಃ ॥ ೨ ॥**

ಅ ॥ ಯಃ=ಯಾವಾತನು, ಕಾಮಾನ್=ಕಾಮ್ಯಮಾನವಿಷಯಗಳನ್ನು, ಮನ್ಯಮಾನಃ=(ಯೋಗ್ಯಗಳನ್ನು) ತಿಳಿದವನಾಗಿ, ಕಾಮಯತೇ=ಇಚ್ಛಿಸುತ್ತಾನೋ, (ವಿಷಯದೃಷ್ಟಿಯಿಂದ ಹರಿಯನ್ನು ಉಪಾಸಿಸುತ್ತಾನೋ), ಸಃ=ಆತನು, ಕಾಮಭಿಃ=ವಿಷಯಗಳಿಂದೊಡಗೂಡಿಯೇ, ತತ್ರ ತತ್ರ=ಆಯಾಯ ಭಾಗ್ಯವಂತ ಪುರುಷರ ಸಂತತಿಯಲ್ಲಿ, ಜಾಯತೇ=ಹುಟ್ಟುತ್ತಾನೆ. ಪರ್ಯಾಪ್ತಕಾಮಸ್ಯ=ಯಥೇಷ್ಟವಿಷಯಗಳನ್ನು ಭೋಗಿಸಿದ, (ಅಥವಾ) ಮೋಕ್ಷಕ್ಕೆ ಸಾಕಾದ ಭಗವದ್ಭಕ್ತ್ಯಾದಿಗಳುಳ್ಳ, ಕೃತಾತ್ಮನಶ್ಚ=ತೃಪ್ತಮನಸ್ಸುಳ್ಳವನಿಗೆ, ಇಹೈವ=ಈ ಜನ್ಮದಲ್ಲಿಯೇ, ಸರ್ವೇ ಕಾಮಾಃ=ನಾನಾವಸ್ತುವಿಷಯದ ಅಭಿಲಾಷೆಗಳು, ಪ್ರವಿಲೀಯಂತಿ=ನಿವೃತ್ತಗಳಾಗುತ್ತವೆ. ॥ ೨ ॥

**ಮಂ ॥ ನಾಯಮಾತ್ಮಾ ಪ್ರವಚನೇನ ಲಭ್ಯೋ ನ ಮೇಧಯಾ ನ ಬಹುನಾ ಶ್ರುತೇನ । ಯಮೇವೈಷ ವೃಣುತೇ ತೇನ ಲಭ್ಯಸ್ತಸ್ಯೈಷ ಆತ್ಮಾ ವಿವೃಣುತೇ ತನೂಂ ಸ್ವಾಂ ॥ ೩ ॥**

ಅ ॥ ಅಯಂ=ಈ, ಆತ್ಮಾ=ಶ್ರೀ ಹರಿಯು, ಪ್ರವಚನೇನ=(ಭಕ್ತಿಶೂನ್ಯವಾದ)ಸಚ್ಛಾಸ್ತ್ರಪ್ರವಚನೆಯಿಂದಲೂ, ನ ಲಭ್ಯಃ=ಪ್ರತ್ಯಕ್ಷನಾಗತಕ್ಕವನಲ್ಲ. ಮೇಧಯಾ=ಪ್ರಜ್ಞಾವಿಶೇಷದಿಂದಲೂ, ಬಹುನಾ=ಬಹಳವಾದ, ಶ್ರುತೇನ=(ಭಕ್ತಿಶೂನ್ಯ) ಶ್ರವಣಮನನಗಳಿಂದಲೂ, ನ ಲಭ್ಯಃ=ಸಿಗತಕ್ಕವನಲ್ಲ. ಏಷಃ=ಶ್ರೀ ಹರಿಯೇ, ಯಮೇವ=ಯಾವಾತನನ್ನು, ವೃಣುತೇ=(ಭಕ್ತನನ್ನಾಗಿ) ಸ್ವೀಕರಿಸುತ್ತಾನೋ, (ಯಾರಿಗೆ ಪ್ರಸನ್ನನಾಗುತ್ತಾನೋ) ತೇನ=ಆತನಿಂದಲೇ, ಲಭ್ಯಃ=ಹೊಂದಲ್ಪಡತಕ್ಕವನು. (ಸಾಕ್ಷಾತ್ಕರಿಸಲಿಕ್ಕೆ ಶಕ್ಯನು) ತಸ್ಯ=ಆತನಿಗೆ, ಏಷಃ=ಈ ಪ್ರಸನ್ನನಾದ, ಆತ್ಮಾ=ಶ್ರೀ ಹರಿಯು, ಸ್ವಾಂ=ಸ್ವಕೀಯವಾದ, ತನೂಂ=ಶರೀರವನ್ನು, ವಿವೃಣುತೇ=ಪ್ರಕಾಶಪಡಿಸುತ್ತಾನೆ. ॥ ೩ ॥

**ಮಂ ॥ ನಾಯಮಾತ್ಮಾ ಬಲಹೀನೇನ ಲಭ್ಯೋ ನ ಚ ಪ್ರಮಾದಾತ್ತಪಸೋ ವಾಪ್ಯಲಿಂಗಾತ್ । ಏತೈರುಪಾಯೈರ್ಯತತೇ ಯಸ್ತು ವಿದ್ವಾಂಸ್ತಸ್ಯೈಷ ಆತ್ಮಾ ವಿಶತೇ ಬ್ರಹ್ಮಧಾಮ ॥ ೪ ॥**

ಅ || ಅಯಂ ಆತ್ಮಾ=ಈ ಹರಿಯು, ಬಲಹೀನೇನ=ಶ್ರವಣಮನನಭಕ್ತ್ಯಾದಿ ಬಲ ಶೂನ್ಯನಾದ ಪುರುಷನಿಂದ, ನ ಲಭ್ಯಃ=ಸಾಕ್ಷಾತ್ಕರಿಸಲು ಶಕ್ಯನಲ್ಲ. ಪ್ರಮಾದಾತ್=ಭಗವದ್ವಿಸ್ಮರಣರೂಪವಾದ ಮನಶ್ಚಾಂಚಲ್ಯದಿಂದಲೂ, ಅಲಿಂಗಾತ್=ಅತಿಶ್ರದ್ಧಾದಿ ಲಿಂಗಗಳಿಲ್ಲದಿರುವ, ತಪಸೋ ವಾಪಿ=ದೇವಾದಿ ಪೂಜಾರೂಪ ತಪಸ್ಸಿನಿಂದಾಗಲೀ, ನ ಲಭ್ಯಃ=ಸಿಗತಕ್ಕವನಲ್ಲ. ಏತೈಃ=ಭಕ್ತಿಯುಕ್ತ ಶ್ರವಣಾದಿರೂಪಗಳಾದ, ಉಪಾಯೈಃ=ಉಪಾಯಗಳಿಂದ, ವಿದ್ವಾನ್=ಜ್ಞಾನಿಯಾದ, ಯಸ್ತು=ಯಾವಾತನು, ಯತತೇ=(ಸಾಕ್ಷಾತ್ಕಾರಕ್ಕಾಗಿ)ಪ್ರಯತ್ನಿಸುತ್ತಾನೋ, ತಸ್ಯ=ಆತನಿಗೇನೇ, ಏಷ ಆತ್ಮಾ=ಈ ಹರಿಯು, ಬ್ರಹ್ಮಧಾಮ=ಪರಬ್ರಹ್ಮನಿಗೆ ಮಂದಿರಭೂತನಾದ ಮುಖ್ಯವಾಯುವನ್ನು, ವಿಶತೇ=ಪ್ರವೇಶಿಸುತ್ತಾನೆ. (ಯಾರು ಶ್ರವಣಾದ್ಯುಪಾಯಗಳಿಂದ ಜ್ಞಾನಿಯಾಗಿ ಬ್ರಹ್ಮಜ್ಞಾನಕ್ಕೆ ಪ್ರಯತ್ನಿಸುತ್ತಾನೋ ಆತನಿಗೆ ಮುಖ್ಯಪ್ರಾಣಾಂತರ್ಗತನಾದ ಶ್ರೀಹರಿಯ ೭ ವಾಯುದ್ವಾರಾ ಜ್ಞಾನಾಭಿವೃದ್ಧಿಯನ್ನು ಮಾಡುತ್ತಾನೆ.) ॥ ೪ ॥

**ಮಂ ॥ ಸಂಪ್ರಾಪ್ಯೈನಮೃಷಯೋ ಜ್ಞಾನತೃಪ್ತಾಃ ಕೃತಾತ್ಮಾನೋ ವೀತ ರಾಗಾಃ ಪ್ರಶಾಂತಾಃ । ತೇ ಸರ್ವಗಂ ಸರ್ವತಃ ಪ್ರಾಪ್ಯ ಧೀರಾ ಮುಕ್ತಾತ್ಮಾನಃ ಸರ್ವಮೇವಾಪಿಯಂತಿ ॥ ೫ ॥**

ಅ ॥ ಜ್ಞಾನತೃಪ್ತಾಃ=ಅಪರೋಕ್ಷಜ್ಞಾನದಿಂದ ಸಂತುಷ್ಟರಾದ, ಋಷಯಃ=ಋಷಿ ಗಂಧರ್ವಾದಿಗಳು, ಏನಂ=ಈ ಹರಿಯನ್ನು, ಸಂಪ್ರಾಪ್ಯ=ಹೊಂದಿ, ಕೃತಾತ್ಮಾನಃ=ಕೃತಕೃತ್ಯರಾಗಿ, ವೀತರಾಗಾಃ=ವೈರಾಗ್ಯವನ್ನು ಹೊಂದಿದವರು, ಪ್ರಶಾಂತಾಃ=ಭಕ್ತಿದಾರ್ಢ್ಯಯುತರು, (ಆಗುತ್ತಾರೆ.) ತೇ=ಆ, ಧೀರಾಃ=ಜ್ಞಾನಿಗಳು, ಸರ್ವತಃ=ದೇಹಾದಿ ಬಂಧದಿಂದ, ಮುಕ್ತಾತ್ಮಾನಃ=ಬಿಡಲ್ಪಟ್ಟ ಸ್ವರೂಪವುಳ್ಳವರಾಗಿ, ಸರ್ವಗಂ=ಶ್ರೀಹರಿಯನ್ನು, ಪ್ರಾಪ್ಯ=ಹೊಂದಿ, ಸರ್ವಮೇವ=ಗುಣಪರಿಪೂರ್ಣನಾದ ಶ್ರೀಹರಿಯನ್ನೇ, ಅಪಿಯಂತಿ=ಹೊಂದುತ್ತಾರೆ. (ಅಂತೂ ಇತರರಿಗೆ ತಿಳಿಯದಂತೆಯೇ ಶ್ರೀಹರಿಯನ್ನು ಪ್ರವೇಶಿಸಿ, ಸ್ವೇಚ್ಛಾನುಸಾರವಾಗಿ ಬಾಹ್ಯಾಂತಃ ಪ್ರದೇಶಗಳಲ್ಲಿ ಸಂಚರಿಸುತ್ತಾ ಭೋಗಗಳನ್ನು ಭೋಗಿಸುವವರಾಗಿರುತ್ತಾರೆಂದು ತಾತ್ಪರ್ಯವು.)

**ಭಾ ॥ ಸರ್ವತೋ ದೇಹಾದೇರ್ಮುಕ್ತಾಃ ಸಂತಃ ಸರ್ವಗಂ**
**ಭಗವಂತಂ ಪ್ರಾಪ್ಯ ತಮೇವಾಪಿಯಂತಿ ॥**

ತಾ ॥ 'ಸರ್ವತಃ' ಅಂದರೆ ಚರಮದೇಹ ಅವಿದ್ಯಾ ಇತ್ಯಾದಿಗಳಿಂದ ಬಿಡಲ್ಪಟ್ಟವರಾಗಿ ಸರ್ವಗಂ ಅಂದರೆ ಪೃಥಿವ್ಯಾದಿ ನಿಖಿಲತತ್ವಗಳಲ್ಲಿಯೂ ಅಂತರ್ಯಾಮಿಯಾದ ಷಡ್ಗುಣೈಶ್ವರ್ಯಸಂಪನ್ನನಾದ ಶ್ರೀಹರಿಯನ್ನು ಹೊಂದಿ ಆತನನ್ನೇ ಮುಕ್ತಿಯಲ್ಲಿ ಪ್ರವೇಶಿಸುತ್ತಾರೆ.

**ಭಾ ॥ ದೇಹಾದೇಃ ಸರ್ವತೋ ಮುಕ್ತಾಃ ಸರ್ವಗಂ ಪುರುಷೋತ್ತಮಂ ।**
**ಪ್ರಾಪ್ಯ ತಸ್ಮಿನ್ ಪ್ರವಿಶ್ಯಾಥ ಮೋದಂತೇಽಂತರ್ಬಹಿಸ್ತಥಾ ॥ ಇತಿ ಚ ॥**

ತಾ ॥ (ಜ್ಞಾನಿಗಳು) ಚರಮದೇಹಾದಿ ಸಮಸ್ತ ಬಂಧಗಳಿಂದ ಬಿಡಲ್ಪಟ್ಟವರಾಗಿ ಪೃಥಿವ್ಯಾದಿ ಸರ್ವತತ್ವಗಳಲ್ಲಿ ಅಂತರ್ಗತನಾಗಿಯೂ ಕ್ಷರಾಕ್ಷರ ನಿಖಿಲ ಪುರುಷರಿಂದ ಅತ್ಯುತ್ತಮನಾಗಿಯೂ ಇರುವ ಶ್ರೀಹರಿಯನ್ನು ಪ್ರಾಪಿಸಿ ಆತನಲ್ಲಿಯೇ ಪ್ರವೇಶಿಸಿ ಆ ಮೇಲೆ ಬ್ರಹ್ಮಾಂಡದ ಒಳಗೂ ಹೊರಗೂ ಸಂತೋಷವನ್ನೇ ಅನುಭವಿಸುತ್ತಿರುತ್ತಾರೆ. ॥ ೫ ॥

**ಮಂ ॥ ವೇದಾಂತವಿಜ್ಞಾನಸುನಿಶ್ಚಿತಾರ್ಥಾಃ ಸನ್ಯಾಸಯೋಗಾದ್ಯತಯಃ ಶುದ್ಧಸತ್ವಾಃ । ತೇ ಬ್ರಹ್ಮಲೋಕೇಷು ಪರಾಂತಕಾಲೇ ಪರಾಮೃತಾತ್ಪರಿಮುಚ್ಯಂತಿ ಸರ್ವೇ ॥ ೬ ॥**

ಅ ॥ ವೇದಾಂತವಿಜ್ಞಾನಸುನಿಶ್ಚಿತಾರ್ಥಾಃ, ವೇದಾಂತ=ವೇದಾರ್ಥನಿರ್ಣಾಯಕ ಮೀಮಾಂಸಾಶಾಸ್ತ್ರದಿಂದ ಉಂಟಾದ, ವಿಜ್ಞಾನ=ವಿಶೇಷಜ್ಞಾನದಿಂದ, ಸುನಿಶ್ಚಿತಾರ್ಥಾಃ=ಚನ್ನಾಗಿ ನಿಶ್ಚಯಾಭಿಪ್ರಾಯವುಳ್ಳ, ಸನ್ಯಾಸಯೋಗಾತ್=ಶ್ರೀಹರಿಯಲ್ಲಿ ನಿಖಿಲಕರ್ಮ ಸಮರ್ಪಣರೂಪ ಉಪಾಯದಿಂದ, ಶುದ್ಧಸತ್ವಾಃ=ಪರಿಶುದ್ಧವಾದ ಅಂತಃಕರಣವುಳ್ಳ, ಯತಯಃ=ಪ್ರಯತ್ನಶೀಲರು, ತೇ ಸರ್ವೇ=ಅವರೆಲ್ಲರೂ, ಬ್ರಹ್ಮಲೋಕೇಷು=ಸತ್ಯಲೋಕಗಳಲ್ಲಿದ್ದು, ಪರಾಂತಕಾಲೇ-ಪರ=ಬ್ರಹ್ಮದೇವರ ನೂರು ಆಯುಷ್ಯದ, ಅಂತಕಾಲೇ=ಅಂತ್ಯದಲ್ಲಿ, (ಕೊನೆಯ ಹನ್ನೆರಡು ವರ್ಷಗಳ ಅಂದರೆ ನೂರು ಆಯುಷ್ಯದ ಎಂಟು ಅಂಶಗಳ ಕಡೆಯ ಅಂಶದಲ್ಲಿ) ಪರಿ=ಮಹರಾದಿ ಲೋಕಗಳನ್ನು ಬಿಟ್ಟು, ಪರಾಮೃತಾತ್=ನಿತ್ಯಮುಕ್ತಳಾದ ಲಕ್ಷ್ಮಿಯಿಂದ ಅಭಿಮನ್ಯಮಾನವಾದ ಪ್ರಕೃತಿಬಂಧದಿಂದ, ಮುಚ್ಯಂತಿ=ಮುಕ್ತರಾಗುತ್ತಾರೆ.

ಭಾ ॥ ಬ್ರಹ್ಮಲೋಕೇಷು ಸ್ಥಿತ್ವಾ ಪರಾಂತಕಾಲೇ ಪರಿಮುಚ್ಯಂತಿ ॥

ತಾ ॥ ದೇವಾದಿ ಮುಕ್ತಿಯೋಗ್ಯ ಅಧಿಕಾರಿಗಳು ತತ್ತದ್ಯೋಗ್ಯತಾನುಸಾರವಾಗಿ ಆಯಾಯ ವೈಕುಂಠ, ಸತ್ಯ, ತಪ, ಜನ, ಮಹರ್ಲೋಕಗಳಲ್ಲಿದ್ದು ಬ್ರಹ್ಮಾಯುಷ್ಯದ ಅಂತ್ಯಕಾಲದಲ್ಲಿ ಮಹರ್ಲೋಕಾದಿಗಳನ್ನು ತೊರೆದು ಮುಕ್ತರಾಗುತ್ತಾರೆ. ॥ ೬ ॥

**ಮಂ ॥ ಗತಾಃ ಕಲಾಃ ಪಂಚದಶ ಪ್ರತಿಷ್ಠಾ ದೇವಾಶ್ಚ ಸರ್ವೇ ಪ್ರತಿದೇವತಾಸು । ಕರ್ಮಾಣಿ ವಿಜ್ಞಾನಮಯಶ್ಚ ಆತ್ಮಾ ಪರೇಽವ್ಯಯೇ ಸರ್ವ ಏಕೀ ಭವಂತಿ ॥ ೭ ॥**

ಅ ॥ ಪ್ರತಿಷ್ಠಾಃ=ಸಂಸಾರಿಗಳಿಗೆ ನಿಯಾಮಕರಾದ, ಕಲಾಃ=ಕಲಾಭಿಮಾನಿಗಳಾದ, ಪಂಚದಶ=ಹದಿನೈದು ದೇವತೆಗಳು, ಗತಾಃ=ಮುಕ್ತರಾಗಿದ್ದಾರೋ (ಅಂದರೆ ಸಂಸಾರದಲ್ಲಿ ಯಾವ ಪುರುಷನಿಗೆ ಕಲಾಭಿಮಾನಿ ದೇವತೆಗಳು ನಿಯಾಮಕರಾಗಿದ್ದಾರೋ, ಅವರು ಆ ಪುರುಷನ ಮುಕ್ತಿಕಾಲದಲ್ಲಿ ತಾವೂ ಮುಕ್ತರಾಗಿ ಆ ಮುಕ್ತನಾದ ಪುರುಷನಿಗೂ ನಿಯಾಮಕರಾಗಿರುತ್ತಾರೆ.) ಸರ್ವೇ ದೇವಾಶ್ಚ=ಕಲಾದೇವತೆಗಳಿಂದಿತರರಾದ ನಿಖಿಲ ದೇವತೆಗಳೂ ಕೂಡ, ಪ್ರತಿದೇವತಾಸು=ದೇವತಾಪ್ರತಿಬಿಂಬ ಭೂತರಾದ ಪ್ರಜೆಗಳಲ್ಲಿ (ಇರುತ್ತಾರೆ.) ಕರ್ಮಾಣಿ=ಕರ್ಮಾಭಿಮಾನಿಯಾದ ಪುಷ್ಕರನು, ವಿಜ್ಞಾನಮಯಃ=ವಿಜ್ಞಾನರೂಪನಾದ, ಆತ್ಮಾ ಚ=ಜೀವನೂ ಕೂಡ, ಸರ್ವೇ=ನಿಖಿಲ ದೇವತೆಗಳೂ, ಅವ್ಯಯೇ=ನಾಶರಹಿತನಾದ, ಪರೇ=ಪರಮಾತ್ಮನಲ್ಲಿ, (ಮುಕ್ತರಾಗಿ) ಏಕೀಭವಂತಿ=(ಪರಮಾತ್ಮನನ್ನು ಪ್ರವೇಶಮಾಡಿ ಆತನಿಂದ ಕೂಡಿಕೊಂಡು) ಒಂದೇ ಸ್ಥಾನದಲ್ಲಿರುವವರಾಗುತ್ತಾರೆ.

ಭಾ ॥ ಅವಿರೋಧಶ್ಚ ಸಾದೃಶ್ಯಮೇಕದೇಶಸ್ಥಿತಿಸ್ತಥಾ ।
ಏಕೀಭಾವಸ್ತ್ರಿಧಾ ಪ್ರೋಕ್ತೋ ನೈಕೀಭಾವಃ ಸ್ವರೂಪಯೋಃ ॥

ತಾ ॥ (ಮೂಲದಲ್ಲಿ 'ಏಕೀ ಭವಂತಿ' ಎಂಬೀ ಪದದಿಂದ ಸಾಲೋಕ್ಯಾದಿ ಐದು ವಿಧವಾದ ಮುಕ್ತಿಯನ್ನು ಹೇಳಿದ ಹಾಗಾಯಿತು. ಏಕೆಂದರೆ) ಅವಿರೋಧ, ಸಾದೃಶ್ಯ, ಏಕದೇಶಸ್ಥಿತಿ ಎಂದು ಏಕೀ ಭಾವವು ಇಲ್ಲಿ ಮೂರುವಿಧವು ವಿವಕ್ಷಿತವು. ಅಲ್ಲದೆ ಸ್ವರೂಪಗಳಿಗೆ ಐಕ್ಯ

ವಿಲ್ಲ. (ಆದಕಾರಣ, ಅವಿರೋಧವೆಂದರೆ ವಿರೋಧವಿಲ್ಲದ ಬುದ್ಧಿಯಿರುವಿಕೆ. ಬ್ರಾಹ್ಮಣರು ರಾಜಸ್ಥಾನದಲ್ಲಿ ಏಕೀಭವಿಸಿದ್ದಾರೆಂದರೆ ಎಲ್ಲರು ಒಮ್ಮನಸ್ಸಿನಿಂದಿರುತ್ತಾರೆ ಎಂದು ಹೇಗೆ ತಾತ್ಪರ್ಯವೋ ಹಾಗೆ ಮುಕ್ತಬ್ರಹ್ಮರಿಗೂ ತಿಳಿಯತಕ್ಕದು. ಇಂತಹ ಅವಿರೋಧರೂಪ ಏಕೀಭಾವವು ಮುಕ್ತರಿಗೆ ಎರಡುವಿಧವು. (೧) ಬ್ರಹ್ಮನ ಬುದ್ಧಿಯನ್ನು ಅನುಸರಿಸಿದ ಬುದ್ಧಿಯಿರುವಿಕೆಯು ಇದು ಸರ್ವಮುಕ್ತಸಾಧಾರಣವಾದುದು (೨) ಬ್ರಹ್ಮನ ಚಕ್ಷುರಾದಿಗಳಿಂದಲೇ ಪ್ರಯೋಜ್ಯ ಬುದ್ಧಿಯಿರುವಿಕೆಯು ಇನ್ನೊಂದು. ಇದು ಸಾಯುಜ್ಯಮುಕ್ತರಿಗೆ ಮಾತ್ರ ಇರತಕ್ಕದು. ಸಾದೃಶ್ಯರೂಪ ಏಕೀ ಭಾವವು ಎರಡುವಿಧವು. (೩) ಬ್ರಹ್ಮನ ಸಮಾನ ಐಶ್ವರ್ಯಾದಿರೂಪ ಸಾರ್ಷ್ಟಿಯು ಒಂದು. (೪) ಬ್ರಹ್ಮನಂತೆ ಚತುರ್ಭುಜತ್ವಾದಿಗಳಿರುವಿಕೆಯು ಇನ್ನೊಂದು. ಏಕದೇಶ ಸ್ಥಿತಿರೂಪ ಏಕೀಭಾವವೆಂದರೆ ಗೋವುಗಳು ಕೊಟ್ಟಿಗೆಯಲ್ಲಿ ಕೂಡಿಕೊಂಡವು ಎಂಬಲ್ಲಿ ಒಂದೇ ಸ್ಥಳದಲ್ಲಿ ಸೇರಿದವು ಎನ್ನುವಂತೆ (೫) ಮುಕ್ತರಿಗೆ ಪರಮಾತ್ಮನು ವ್ಯಕ್ತರೂಪದಿಂದ ಭೂಮ್ಯಾದಿ ಶ್ವೇತದ್ವೀಪಪರ್ಯಂತವಾದ ಲೋಕದಲ್ಲಿ ಎಲ್ಲಿರುತ್ತಾನೋ ಅಲ್ಲಿರುವಿಕೆಯು. ಈ ರೀತಿಯಾಗಿ ಮುಕ್ತಿಕ್ರಮಗಳನ್ನು ತಿಳುಕೊಳ್ಳತಕ್ಕದು. ಅಲ್ಲದೆ ಎಷ್ಟುಮಾತ್ರಕ್ಕೂ ಜೀವಬ್ರಹ್ಮರಿಗೆ ಸ್ವರೂಪೈಕ್ಯವಲ್ಲ)

**ಭಾ** ||(೧) ಕುತೋಽಭೂತಸ್ಯ ಭವನಂ ಸ್ವರೂಪಸ್ಯೈಕ್ಯಮೇವ ಹಿ |
(೨) ಅತೋ ನದೀನಾಂ ಜೀವಾನಾಂ ವಿರುದ್ಧಾನಾಂ ನೃಣಾಮಪಿ ||
ಅಬ್ಧಿನಾ ಹರಿಣಾ ಚೈವ ತಥೈವ ಚ ನರಾಂತರೈಃ |
ಏಕೀಭಾವಸ್ತು ಸಂಶ್ಲೇಷೋ ವಿರೋಧಸ್ಯ ಚ ವರ್ಜನಂ ||
(೩) ಸ್ವರೂಪೈಕ್ಯಂ ಕುತಸ್ತೇಷಾಂ ನಿತ್ಯಭಿನ್ನಸ್ವರೂಪಿಣಾಂ ||

ತಾ || (೧) (ಏಕಂದರೆ) ಸಂಸಾರಾವಸ್ಥೆಯಲ್ಲಿ ಏಕತ್ವವನ್ನು ಹೊಂದದೆ ಇದ್ದ ಜೀವನಿಗೆ ಮುಕ್ತಿಯಾದ ಮೇಲೆ ಐಕ್ಯವು ಹೇಗುಂಟಾದೀತು. (ಎಷ್ಟುಮಾತ್ರಕ್ಕೂ ಆಗಲಾರದು). ಹರಿಯ ಅವತಾರರೂಪಗಳಿಗೆ ಪೂರ್ವದಲ್ಲಿ ಐಕ್ಯವೇ ಇದ್ದ ಪ್ರಯುಕ್ತ ಅನಂತರವೂ ಐಕ್ಯವೇ ಇರುತ್ತದೆ. (೨) ಆದಕಾರಣ ನದಿಗಳಿಗೂ, ಜೀವರಿಗೂ, ಪರಸ್ಪರ ವಿರೋಧಯುಕ್ತರಾದ ಮನುಷ್ಯರಿಗೂ, ಕ್ರಮವಾಗಿ ಸಮುದ್ರದಿಂದಲೂ, ಪರಮಾತ್ಮನಿಂದಲೂ, ಇತರ ಮನುಷ್ಯರಿಂದಲೂ ಐಕ್ಯವೆಂದರೆ ಯಥಾಯೋಗ್ಯವಾಗಿ ಏಕಸ್ಥಾನಸ್ಥಿತಿರೂಪಸಂಬಂಧ ಹಾಗೂ ಐಕಮತ್ಯವೆಂದು ಅರ್ಥಮಾಡಬೇಕು. (ಹೇಗೋ ಹಾಗೆಯೇ ಜೀವಬ್ರಹ್ಮರ ವಿಷಯವೂ ಆಗಿರುತ್ತದೆ.) (೩) ಕಾರಣ ನಿತ್ಯವು ಭಿನ್ನ ಭಿನ್ನ ಸ್ವಭಾವದವರಾದ ಪರಮಾತ್ಮ ಮತ್ತು ಜೀವರೊಳಗೆ ಸ್ವರೂಪೈಕ್ಯವು ಹೇಗೆ ಉಂಟಾದೀತು.

**ಭಾ** || ಹರೇರಪಿ ಸ್ವರೂಪಾಣಾಮೇಕೀಭಾವೋ ಯದೋಚ್ಯತೇ |
ಸಂಶ್ಲೇಷ ಏವ ಸಿದ್ಧತ್ವಾತ್ಸ್ವರೂಪೈಕ್ಯಸ್ಯ ನೋ ಭವಃ || ಇತಿ ಚ ||

ತಾ || ಭಗವಂತನ ಸ್ವರೂಪಗಳಿಗೆ ಐಕ್ಯವನ್ನು ಹೇಳುವಾಗಲೂ ಸ್ಥಾನವಿಶೇಷದಲ್ಲಿ ಸಂಬಂಧವೆಂತಲೇ ಇಟ್ಟುಕೊಳ್ಳಬೇಕಲ್ಲದೆ ಸ್ವರೂಪೈಕ್ಯವು ಅನಾದಿ ಸಿದ್ಧವಾದ ಪ್ರಯುಕ್ತ ಅದು ಹೊಸತಾಗಿ ಹುಟ್ಟುವುದಲ್ಲ.

**ಭಾ** || ಗತಾಃ ಮುಕ್ತಾಃ ಪ್ರಾಣಾದಿಸಂಚದಶಕಲಾರೂಪಾ ದೇವತಾಃ ||

ತಾ || ಪ್ರಾಣನೇ ಮೊದಲಾದ ಹದಿನೈದು ಕಲಾಭಿಮಾನಿ ದೇವತೆಗಳು 'ಗತಾಃ' ಅಂದರೆ ಮುಕ್ತರಾದರು, (ಮುಕ್ತಿಯು ಪೂರ್ವದಲ್ಲಿ ನಿಯಾಮಕರಾಗಿದ್ದಂತೆ ಆ ಮೇಲೆಯೂ ಅವರೂ ಮುಕ್ತರಾಗಿ ನಿಯಾಮಕರಾಗಿರುತ್ತಾರೆ.)

ಭಾ || ಅನ್ಯೇ ಚ ದೇವಾಃ ಸರ್ವೇ ಪ್ರತಿದೇವತಾಸು
ದೇವತಾಪ್ರತಿಬಿಂಬಭೂತಾಸು ಪ್ರಜಾಸು ಪ್ರತಿ ಪ್ರತಿ ಸ್ಥಿತಾಃ ||

ತಾ || ಕಲಾ ದೇವತೆಗಳಿಂದ ಇತರರಾದ ಸಮಸ್ತ ದೇವತೆಗಳು ಪ್ರತಿ ದೇವತೆಗಳು ಅಂದರೆ ದೇವತಾ ಪ್ರತಿಬಿಂಬರೂಪರಾದ ಪ್ರಜೆಗಳಲ್ಲಿ ಪ್ರತ್ಯೇಕಪ್ರತ್ಯೇಕವಾಗಿ ಇರುತ್ತಾರೆ.

ಭಾ || ಕರ್ಮಾಣಿ ವಿಜ್ಞಾನಮಯೋ ಜೀವಶ್ಚ ಪರಮಾತ್ಮನಿ ಪ್ರವಿಶಂತಿ ||

ತಾ || ಕರ್ಮಾಭಿಮಾನಿ ಪುಷ್ಕರನೂ ವಿಜ್ಞಾನಮಯನೆಂಬ ಜೀವನೂ ಪರಮಾತ್ಮನಲ್ಲಿ ಪ್ರವೇಶಿಸುತ್ತಾನೆ.

ಭಾ || ಪ್ರತಿಬಿಂಬೋ ಹರೇಃ ಪ್ರಾಣಸ್ತಸ್ಯ ಚಾನ್ಯಾಃ ಕಲಾಃ ಕ್ರಮಾತ್ ।
ಕಲಾನಾಂ ದೇವತಾ ಅನ್ಯಾ ದೇವತಾನಾಂ ನರಾ ಅಪಿ ||

ತಾ || ಶ್ರೀಹರಿಗೆ ಮುಖ್ಯಪ್ರಾಣನು ಪ್ರತಿಬಿಂಬನು, ಆತನಿಗೆ ಕ್ರಮದಿಂದ ಶ್ರದ್ಧಾದಿ ಕಲೆಗಳು ಪ್ರತಿಬಿಂಬಗಳು, ಆ ಕಲಾಭಿಮಾನಿ ದೇವತೆಗಳಿಗೆ ಇತರ ದೇವತೆಗಳು ಪ್ರತಿಬಿಂಬರು. ಆ ದೇವತೆಗಳಿಗೆ ಮನುಷ್ಯರು ಪ್ರತಿಬಿಂಬರೂಪರಾಗಿರುತ್ತಾರೆ.

ಭಾ || ತಸ್ಮಾತ್ಸರ್ವೇಷು ಮುಕ್ತೇಷು ನರೇಷು ಚ ನಿಯಾಮಕಾಃ ।
ತಿಷ್ಠಂತಿ ನಾತ್ರ ಸಂದೇಹಃ ಪರಮಾತ್ಮನಿ ಚಾಖಿಲಾಃ ||
– ಇತಿ ಮುಕ್ತವಿವೇಕೇ ||

ತಾ || ಆದಕಾರಣ ಕಲಾಭಿಮಾನಿ ದೇವತೆಗಳು ಮುಕ್ತ ಮತ್ತು ಅಮುಕ್ತರಾದ ಸರ್ವ ಪುರುಷರಲ್ಲಿಯೂ ನಿಯಾಮಕರಾಗಿರುತ್ತಾರೆ. ಈ ವಿಷಯದಲ್ಲಿ ಸಂದೇಹವಿಲ್ಲ. ಅಲ್ಲದೆ ಸಮಸ್ತರೂ ಪರಮಾತ್ಮನಲ್ಲಿ ಅಧೀನರಾಗಿಯೂ ಇರುತ್ತಾರೆ ಎಂದು ಮುಕ್ತವಿವೇಕದಲ್ಲಿ ಹೇಳಿಯದೆ.

ಭಾ || ಕಲಾಭ್ಯಶ್ಚಾನ್ಯದೇವೇಭ್ಯಃ ಕರ್ಮ ಪ್ರತ್ಯವರಂ ಯತಃ ।
ಕಲಾಭ್ಯಃ ಪೃಥಗುಕ್ತಂ ತತ್ಪುಷ್ಕರಃ ಕರ್ಮ ಚೋಚ್ಯತೇ || ಇತಿ ಚ ||

ತಾ || ಯಾವ ಕಾರಣದಿಂದ ಕಲಾಭಿಮಾನಿ ದೇವತೆಗಳಿಂದಲೂ, ಇತರ ದೇವತೆಗಳಿಂದಲೂ ಕರ್ಮವು ಅಧಮವಾಗಿರುತ್ತದೋ, ಆ ಕಾರಣದಿಂದ ಅದು ಕಲೆಗಳಿಂದ ಬೇರೆಯಾಗಿ ಹೇಳಲ್ಪಟ್ಟಿತು. ಪುಷ್ಕರನೇ ಕರ್ಮಾಭಿಮಾನಿಯೆನಿಸುತ್ತಾನೆ.

ಭಾ || ಅನ್ಯಥಾ ಗತಾ ಭವಿಷ್ಯಂತೀತ್ಯಧ್ಯಾಹಾರೋ ದೋಷಃ ।

ತಾ || ಈ ವರೇಗಿನ ವ್ಯಾಖ್ಯಾನಗಳನ್ನು ಬಿಟ್ಟು ಬೇರೆ ವಿಧವಾಗಿ ಅರ್ಥಮಾಡಿದರೆ (ಮುಕ್ತಿಕಾಲದಲ್ಲಿ ಕಲಾದೇವತೆಗಳು 'ಗತಾಃ' ಅಂದರೆ ತಮ್ಮ ತಮ್ಮ ಮೂಲರೂಪಗಳನ್ನು ಸೇರುತ್ತವೆ. ಎಂದು ಅದ್ವೈತಿಗಳು ಹೇಳುವಂತಾದರೆ) 'ಗತಾಃ' ಎಂಬಲ್ಲಿ 'ಭವಿಷ್ಯಂತಿ' ಅಂದರೆ ಹೊಂದಿದವರು ಆಗುತ್ತಾರೆ, ಎಂಬ ಅಧ್ಯಾಹಾರವು ದೋಷವಾಗಿರುತ್ತದೆ.

ಭಾ || ನ ಚ ಮೂಲರೂಪಾಣಿ ಪ್ರತಿದೇವತಾ ಇತ್ಯುಚ್ಯಂತೇ ದೇವಾನಾಂ ||

ತಾ ॥ (ಏಕೆಂದರೆ) ದೇವತೆಗಳ ಮೂಲರೂಪಗಳು ಪ್ರತಿ ದೇವತೆಗಳೆಂದು ಕರೆಯಲ್ಪಡುವುದಿಲ್ಲ.

**ಭಾ** ॥ ಪ್ರತಿರೂಪಶಬ್ದವದ್ಧಿ ಪ್ರತಿದೇವತಾ ಶಬ್ದಃ ॥

ತಾ ॥ (ನಾವು ಹೇಳುವಂತೆ ಪ್ರತಿ ದೇವತೆಗಳೆಂದರೆ ಪ್ರತಿಬಿಂಬಭೂತಗಳೆಂದು ಅರ್ಥವು ಯೋಗ್ಯವಿಡೆ ಏಕೆಂದರೆ):—'ಪ್ರತಿರೂಪ' ಎಂಬ ಶಬ್ದದಂತೆಯೇ 'ಪ್ರತಿ ದೇವತಾ' ಎಂಬ ಶಬ್ದವೂ ಆಗಿರುತ್ತದೆ.

(ಆದರೂ, ಈ ವರೇಗೆ ಹೇಳಿದಂತೆ ಕಲೆಗಳೆಂದರೆ ಕಲಾಭಿಮಾನಿದೇವತೆಗಳೆಂದೂ, ಗತಾಃ' ಎಂದರೆ ಮುಕ್ತರೆಂದೂ ಅರ್ಥವಲ್ಲ. ಏಕೆಂದರೆ ಮೂಲಪ್ರಮಾಣವೂ ಇಲ್ಲ. ತೋರುವ ಅರ್ಥಕ್ಕೆ ಬಾಧಕವೂ ಇಲ್ಲ. ಎಂದೆನ್ನುವುದಾದರೆ ಸಮಾಧಾನವನ್ನು ಹೇಳುತ್ತಾರೆ).

**ಭಾ** ॥ ವಿಜ್ಞಾನಾತ್ಮಾ ಸಹ ದೇವೈಶ್ಚ ಸರ್ವೈಃ ಪ್ರಾಣಾ
ಭೂತಾನಿ ಸಂಪ್ರತಿಷ್ಠಂತಿ ಯತ್ರ ॥ (ಷಟ್. ॥ ೪ ॥ ೬ ॥)

ತಾ ॥ ಎಲ್ಲಿ ವಿಜ್ಞಾನಾತ್ಮನಾದ ಜೀವನು ಸರ್ವ ದೇವತೆಗಳಿಂದ ಕೂಡಿಕೊಂಡೂ, ಪ್ರಾಣಾದಿ ಕಲಾಭಿಮಾನಿದೇವತೆಗಳೂ ಭೂತಾಭಿಮಾನಿಗಳೂ ಪ್ರತಿಷ್ಠಿತರಾಗಿರುತ್ತಾರೋ, (ಅದು ಬ್ರಹ್ಮವು). ಅಂತೂ ಸರ್ವರಿಗೂ ಆಶ್ರಯನು ಬ್ರಹ್ಮನೆಂದು ಹೇಳಿದ ಹಾಗಾಯಿತು.

**ಭಾ** ॥ ಇಮಾಃ ಷೋಡಶಕಲಾಃ ಪುರುಷಾಯಣಾಃ ಪುರುಷಂ
ಪ್ರಾಪ್ಯಾಸ್ತಂ ಗಚ್ಛಂತಿ ಯಥಾ ಸೋಮ್ಯೇಮಾಃ
ಸಮುದ್ರಾಯಣಾ ಇತಿ ನದೀದೃಷ್ಟಾಂತಪೂರ್ವಕಂ
ಪುರುಷಪ್ರಾಪ್ತಿಕಥನಾಚ್ಚ ಮುಕ್ತಾದೇವತಾ ಏವೋಚ್ಯಂತೇ ।
ಸ ಪ್ರಾಣಮಸೃಜತೇತ್ಯಾದೇಶ್ಚ ಪುರುಷೋ ಭಗವಾನ್ ॥
(ಷಟ್. ॥ ೬ ॥ ೨ ॥)

ತಾ ॥ "ಯಾವ ರೀತಿಯಲ್ಲಿ ಸಮುದ್ರಗಮನಸ್ವಭಾವವುಳ್ಳ ಈ ನದಿಗಳು ಸಮುದ್ರವನ್ನು ಸಮೀಪಿಸಿ ಅಡಗುತ್ತವೋ ಅಂತೆಯೇ ಭಗವಂತನನ್ನು ಹೊಂದುವ ಸ್ವಭಾವವುಳ್ಳ ಈ ಹದಿನಾರು ಕಲೆಗಳು ಭಗವಂತನನ್ನು ಸಮೀಪಿಸಿ ಅಡಗುತ್ತವೆ. ಎಲೈ ಸೋಮಪಾನಾರ್ಹನೇ!" ಎಂದು ನದಿಗಳ ದೃಷ್ಟಾಂತಪೂರ್ವಕವಾಗಿ ಪುರುಷಪ್ರಾಪ್ತಿಯನ್ನು ಕಲೆಗಳಿಗೆ ಹೇಳಿರುವುದರಿಂದ, (ಜಡ ಕಲೆಗಳಿಗೆ ಪುರುಷಪ್ರಾಪ್ತಿಯು ಕೂಡಲಾರದಾದುದರಿಂದ 'ಕಲಾಃ' 'ಗತಾಃ' ಎಂಬಿವುಗಳಿಂದ) ಮುಕ್ತದೇವತೆಗಳೇ ಹೇಳಲ್ಪಡುತ್ತಾರೆ. 'ಸ ಪ್ರಾಣಮಸೃಜತ' ಅಂದರೆ 'ಅವನು ಪ್ರಾಣನನ್ನು ಸೃಷ್ಟಿಸಿದನು' ಎಂದು ಮೊದಲಾಗಿ ಹೇಳಿರುವುದರಿಂದ (ಈ ಪ್ರಕರಣದ ಆರಂಭವಾಕ್ಯದಲ್ಲಿ) ಪುರುಷನೆಂದರೆ ಪರಮಾತ್ಮನೇ ಎಂದು ತಿಳಿಯತಕ್ಕದು. ॥ ೭ ॥

**ಮಂ ॥ ಯಥಾ ನದ್ಯಃ ಸ್ಯಂದಮಾನಾಃ ಸಮುದ್ರಾಯಣಾಃ ಸಮುದ್ರಂ ಪ್ರಾಪ್ಯಾಸ್ತಂ ಗಚ್ಛಂತಿ ನಾಮರೂಪೇ ವಿಹಾಯ । ತಥಾ ವಿದ್ವಾನ್ನಾಮರೂಪಾದ್ವಿಮುಕ್ತಃ ಪರಾತ್ಪರಂ ಪುರುಷಮುಪೈತಿ ದಿವ್ಯಂ ॥ ೮ ॥**

ಅ ॥ ಸ್ಯಂದಮಾನಾಃ=ಹರಿಯುವ, ಸಮುದ್ರಾಯಣಾಃ=ಸಮುದ್ರವೇ ಆಶ್ರಯವಾಗುಳ್ಳ, ನದ್ಯಃ=ಗಂಗಾದಿ ನದಿಗಳು, ಸಮುದ್ರಂ=ಸಮುದ್ರವನ್ನು, ಪ್ರಾಪ್ಯ=ಹೊಂದಿ, ನಾಮರೂಪೇ=

ನಾಮ=ತಮ್ಮ ಗಂಗಾದಿ ನಾಮಧೇಯವು, ರೂಪೇ=ಗಂಗಾದಿರೂಪವೂ ಇವುಗಳನ್ನು, ಅವಿಹಾಯ=ಬಿಡದೆ, ಅಸ್ತಂ=ಅದರ್ಶನವನ್ನು, ಯಥಾ=ಹೇಗೆ, ಗಚ್ಛಂತಿ=ಹೊಂದುತ್ತವೋ, ತಥಾ=ಹಾಗೆಯೇ, ವಿದ್ವಾನ್=ಬ್ರಹ್ಮಜ್ಞಾನಿಯಾದವನು, ನಾಮರೂಪಾತ್=ದೇವದತ್ತಾದಿ ನಾಮವೂ, ಶುಕ್ಲಾದಿರೂಪವೂ ಇವುಗಳಿಂದ, ವಿಮುಕ್ತಃ=ಬಿಡಲ್ಪಡದೇ ಇದ್ದವನಾಗಿ, (ಅಂದರೆ ನಾಮರೂಪಯುಕ್ತನಾಗಿಯೇ), ಪರಾತ್ಪರಂ=ಸರ್ವೋತ್ತಮನಾದ, ದಿವ್ಯಂ=ಆಶ್ಚರ್ಯಕರನಾದ, ಪುರುಷಂ=ಶ್ರೀಪರಮಾತ್ಮನನ್ನು, ಉಪೈತಿ=ಹೊಂದುತ್ತಾನೆ.

ಭಾ || ಅಗಮ್ಯ ನಾಮರೂಪತ್ವಾದಮುಕ್ತೈರ್ಮುಕ್ತಿಗಾ ನರಾಃ |
ವಿಹೀನನಾಮರೂಪಾಸ್ತು ನ ತು ತದ್ರಹಿತತ್ವತಃ ||
ಅಶರೀರೋ ಯಥಾ ವಾಯುಃ ಸಾಮಾನ್ಯಾಗಮ್ಯದೇಹತಃ ||

ತಾ || ಮುಕ್ತಿಯಲ್ಲಿ ಇರುವ ಜೀವರ ನಾಮರೂಪಗಳು ಅಮುಕ್ತರಾದ ಜೀವರಿಗೆ ತಿಯಳಿಲು ಅಸಾಧ್ಯವಾದುದರಿಂದ ಮುಕ್ತಜೀವರು ಅನಾಮರೂಪರೆಂದು ಹೇಳಲ್ಪಡುತ್ತಾರೆ. ಅಲ್ಲದೆ ನಾಮರೂಪಗಳೇ ಇಲ್ಲದಿರುವುದರಿಂದಲ್ಲ. ವಾಯುವು ಸಾಮಾನ್ಯ ಪುರುಷರಿಂದ ನೋಡಲ ಸಾಧ್ಯವಾದ ಶರೀರ ಉಳ್ಳವನಾದುದರಿಂದ "ಅಶರೀರ" ನೆನಿಸುವಂತೆ ಇಲ್ಲಿಯೂ ತಿಳಿಯಬೇಕು.

ಭಾ ||(೧) ಏವಂ ನದ್ಯಃ ಸಮುದ್ರಸ್ಥಾಃ ಸಾಮಾನ್ಯಾಗಮ್ಯರೂಪತಃ |
(೨) ಸ್ವಕೀಯಮುದಕಂ ನದ್ಯಃ ಸಮುದ್ರೇ ನೈವ ಜಾನತೇ ||
ವಾಯುಸ್ತು ತತ್ಪೃಥಕ್ ಜ್ಞಾತ್ವಾ ಮೇಘೇ ಕೃತ್ವಾ ಪ್ರವರ್ಷತಿ ||
|| ಇತಿ ಚ ||

ತಾ ||(೧) ಇದೇ ರೀತಿಯಾಗಿ ಸಮುದ್ರವನ್ನು ಸೇರಿದ ನದಿಗಳು ಸಾಮಾನ್ಯವಾಗಿ ನದ್ಯಭಿಮಾನಿದೇವತೆಗಳಿಂದಲೂ ತಿಳಿಯಲಿಕ್ಕೆ ಅಶಕ್ಯವಾದ ಸ್ವರೂಪವಿರುವ ಪ್ರಯುಕ್ತವೇ (ನಾಮರೂಪಗಳನ್ನು ಬಿಟ್ಟು ಅದೃಶ್ಯಗಳಾಗುತ್ತವೆ ಎಂದು ಹೇಳಲ್ಪಡುತ್ತವೆ. (೨) ನದ್ಯಭಿಮಾನಿ ದೇವತೆಗಳೂ ಸಮುದ್ರದಲ್ಲಿರುವ ತಮ್ಮ ತಮ್ಮ ನೀರನ್ನು ತಿಳಿಯಲಾರವು. ವಾಯುದೇವರು ಮಾತ್ರ ಆ ಜಲಗಳನ್ನು ಪ್ರತ್ಯೇಕಿಸಿ ಮೇಘರೂಪದಿಂದ ವರ್ಷಿಸುತ್ತಾರೆ.

ಭಾ ||(೧) ವಿಮುಕ್ತ ಇತ್ಯಮುಕ್ತ ಇತ್ಯರ್ಥಃ | ವಿಪ್ರಿಯ ಇತಿವತ್ ||
(೨) ಅವಿಹಾಯೇತಿ ಚ || (೩) ಅನಂತಂ ವೈ ನಾಮೇತಿ ಚ ಶ್ರುತೇಃ ||

ತಾ || 'ವಿಪ್ರಿಯ' ಎಂಬುದಕ್ಕೆ 'ಅಪ್ರಿಯ' ಎಂಬೀ ಅರ್ಥದಂತೆ 'ವಿಮುಕ್ತ' ಎಂಬುದಕ್ಕೆ 'ಅಮುಕ್ತ' ಅಂದರೆ ಬಿಡಲ್ಪಡದೇ ಇದ್ದವನು ಎಂದು ಅರ್ಥವು. (ಅಂತೂ ನಾಮರೂಪಾದ್ವಿಮುಕ್ತಃ ಎಂಬಲ್ಲಿ ನಾಮರೂಪಗಳಿಲ್ಲವೆಂದು ಹೇಳಲ್ಪಡುವುದಿಲ್ಲ. ಅವುಗಳಿರುತ್ತವೆಯೆಂದೇ ಹೇಳಲ್ಪಡುತ್ತದೆ). (೨) ದೃಷ್ಟಾಂತದಲ್ಲಿಯೂ ನಾಮರೂಪೇ ಅವಿಹಾಯವೆಂದು ಭೇದವಾಗಿರುತ್ತದೆ. (ಕಾರಣ ದೃಷ್ಟಾಂತ ವಿರೋಧವೂ ಇರುವುದಿಲ್ಲ). (೩) ನಾಮಧೇಯವು ವಿನಾಶವಿಲ್ಲದುದಾಗಿದೆ. (ವಿಶ್ವೇದೇವತೆಗಳೂ ವಿನಾಶಶೂನ್ಯರಾಗಿದ್ದಾರೆ). ಎಂದಿತ್ಯಾದಿ ಶ್ರುತಿಗಳಿರುವುದರಿಂದ (ನಾಮರೂಪಗಳಿಗೆ ವಿನಾಶವಿಲ್ಲವೆಂದು ಸಿದ್ಧವಾಗುತ್ತದೆ). || ೮ ||

**ಮಂ || ಸ ಯೋ ಹ ವೈತತ್ಪರಮಂ ಬ್ರಹ್ಮ ವೇದ ಬ್ರಹ್ಮೈವ ಭವತಿ |**
**ನಾಸ್ಯಾಬ್ರಹ್ಮವಿತ್ಕುಲೇ ಭವತಿ | ತರತಿ ಶೋಕಂ ಪಾಪ್ಮಾನಂ ಗುಹಾ**
**ಗ್ರಂಥಿಭ್ಯೋ ವಿಮುಕ್ತೋಽಮೃತೋ ಭವತಿ || ೯ ||**

ಅ ॥ ಯಃ=ಯಾವ ಅಧಿಕಾರಿಯು, ಏತತ್=ಈ, ಪರಮಂ=ಸರ್ವೋತ್ತಮನಾದ, ಬ್ರಹ್ಮ=ಪರಬ್ರಹ್ಮನನ್ನು, ವೇದ ಪ ವಾ=ತಿಳಿಯುತ್ತಾನೋ, ಸಃ=ಆತನು, ಬ್ರಹ್ಮೈವ=ಜ್ಞಾನಾನಂದಾದಿ ಸ್ವೋಚಿತ ಗುಣಗಳಿಂದ ಪೂರ್ಣನೇ, ಭವತಿ=ಆಗುತ್ತಾನೆ. (ಪರಬ್ರಹ್ಮನಾಗುವುದಿಲ್ಲ) ಅಸ್ಯ=ಈ ಜ್ಞಾನಿಯ, ಕುಲೇ=ವಂಶದಲ್ಲಿ, ಅಬ್ರಹ್ಮವಿತ್=ಬ್ರಹ್ಮಜ್ಞಾನಶೂನ್ಯನು, ನ ಭವತಿ=ಹುಟ್ಟುವುದಿಲ್ಲ. ಶೋಕಂ=ಸಂಸಾರ ದುಃಖವನ್ನು, ತರತಿ=ದಾಟುತ್ತಾನೆ. ಪಾಪ್ಮಾನಂ=ಪಾಪಗಳನ್ನು, ತರತಿ=ದಾಟುತ್ತಾನೆ. ಗುಹಾಗ್ರಂಥಿಭ್ಯಃ=ಹೃದಯದಲ್ಲಿರತಕ್ಕ ಅವಿದ್ಯಾಕಾಮಕರ್ಮಾದಿಗಳಿಂದ, ವಿಮುಕ್ತಃ=ಬಿಡಲ್ಪಟ್ಟವನಾಗಿ, ಅಮೃತಃ=ಮುಕ್ತನು, ಭವತಿ=ಆಗುವನು.

ಭಾ ॥ ಪರಂ ಬ್ರಹ್ಮ ವಿದಿತ್ವಾ ತು ಬೃಂಹಿತಃ ಸ್ವಾತ್ಮಯೋಗ್ಯತಃ ।
ನಾಯೋಗ್ಯಂ ಕಿಂಚಿದಾಪ್ನೋತಿ ಕುತ ಏವ ಹರೇರ್ಗುಣಾನ್ ॥
॥ ಇತಿ ಚ ॥

ತಾ ॥ ಜೀವನು ಪರಬ್ರಹ್ಮನನ್ನು ತಿಳಿದು ಸ್ವಸ್ವಯೋಗ್ಯತಾನುಸಾರವಾಗಿ ಗುಣಪರಿಪೂರ್ಣನೇ ಆಗುತ್ತಾನೆ. ಅಯೋಗ್ಯವಾದುದಾವುದನ್ನೂ ಯಾವನೊಬ್ಬನೂ ಹೊಂದುವುದೇ ಇಲ್ಲ. ಹರಿಯ ಗುಣಗಳನ್ನಾದರೂ ಹೇಗೆ ಹೊಂದುವನು, (ಕಾರಣ ಬ್ರಹ್ಮತ್ವವು ಬರಲಾರದು.)

ಭಾ ॥ ಬೃಹತ್ತ್ವಂ ಬೃಂಹಿತತ್ವಂ ಸಾಜ್ಜೀವಾನಾಂ ನ ಪರಾತ್ಮತಾ ।
ಅಸ್ವತಂತ್ರಸ್ಯ ಜೀವಸ್ಯ ಕುತೋ ನಿತ್ಯಸ್ವತಂತ್ರತಾ ॥ ಇತಿ ಸ್ಕಾಂದೇ ॥

ತಾ ॥ ಜೀವರಿಗೆ ಬ್ರಹ್ಮತ್ವವೆಂದರೆ ಪೂರ್ಣತ್ವವೇ ಆಗುವುದು. ಪರಮಾತ್ಮನ ಸ್ವರೂಪವು ಬರಲಾರದು. ಅಸ್ವತಂತ್ರನಾದ ಜೀವನಿಗೆ ನಿತ್ಯಸ್ವಾತಂತ್ರ್ಯವು ಹೇಗೆ ತಾನೇ ಉಂಟಾದೀತು. ಎಂದು ಸ್ಕಾಂದಪುರಾಣದಲ್ಲಿ ಹೇಳಿಯದೆ.

ಭಾ ॥ "ಯತ್ರಾಮೃತಃ ಸ ಪುರುಷೋ ಹ್ಯವ್ಯಯಾತ್ಮಾ
ಯತ್ರ ತತ್ಸತ್ಯಸ್ಯ ಪರಮಂ ನಿಧಾನಂ ।" ( ॥ ೪ ॥ ಮಂ ॥ ೭ ॥)
"ಅಮೃತಸ್ಯೈಷ ಸೇತುಃ ।"
"ಶರವತ್ತನ್ಮಯೋ ಭವೇತ್" ॥ ( ಖಂಡ ॥ ೪ ॥ )
"ಬ್ರಹ್ಮ ತಲ್ಲಕ್ಷ್ಯಮುಚ್ಯತೇ ।" ( ಮಂ ॥ ೬ ॥ )
"ನಿರಂಜನಃ ಪರಮಂ ಸಾಮ್ಯಮುಪೈತಿ ।" ( ಖಂ ॥ ೫ ॥ )
ಇತ್ಯಾದಿನಾ ಮುಕ್ತಸ್ಯ ಸರ್ವತ್ರ ಭಗವತ್ಸಕಾಶಾದ್ಭೇದಸ್ಯೈವೋಕ್ತತ್ವಾಚ್ಚ ॥ ಮಂ ॥ ೩ ॥

ತಾ ॥ ಯಾವ ಸ್ಥಳದಲ್ಲಿ ನಿತ್ಯಮುಕ್ತನಾಗಿಯೂ, ಗುಣಪರಿಪೂರ್ಣನಾಗಿಯೂ, ನಾಶಶೂನ್ಯನಾಗಿಯೂ ಶ್ರೀಹರಿಯು (ಇರುತ್ತಾನೋ ಅಂತಹ ಲೋಕಕ್ಕೆ ಜ್ಞಾನಿಗಳು ಹೋಗುತ್ತಾರೆ) ಸತ್ಯರೂಪಿಯಾದ ಪ್ರಾಣನಿಗೆ ಮುಖ್ಯವಾಗಿಆಶ್ರಯವಾದುದಾವುದೋ(ಅಂತಹುದನ್ನು) ಹೊಂದುತ್ತಾರೆ. (ಅಂತೂ ಈ ಎರಡು ವಾಕ್ಯಗಳಲ್ಲಿಯೂ ಮುಕ್ತಬ್ರಹ್ಮರಿಗೆ ಗಂತೃಗಮ್ಯಭಾವವನ್ನು ಹೇಳಿರುವುದರಿಂದ ಭೇದವು ಸಿದ್ಧವಾಯಿತು.) ಈ ಹರಿಯು ಮುಕ್ತವರ್ಗಕ್ಕೆ ಆಶ್ರಯನಾಗಿರುತ್ತಾನೆ. ಜೀವನು ಬಾಣದಂತೆ ಸಂಬದ್ಧನಾಗುತ್ತಾನೆ. (ಅಂದರೆ ಪರಮಾತ್ಮೈಕಾಗ್ರಚಿತ್ತನಾಗುತ್ತಾನೆ.) ಬ್ರಹ್ಮವು ಜೀವನಿಗೆ 'ಲಕ್ಷ್ಯ' ಅಂದರೆ ಗುರಿ ಎಂದು ಹೇಳಲ್ಪಡುತ್ತದೆ. ದೋಷಗಳನ್ನೆಲ್ಲ ತೊಳಕೊಂಡು ಬ್ರಹ್ಮನ ಸಾಮ್ಯವನ್ನು ಹೊಂದುತ್ತಾನೆ. ಇತ್ಯಾದಿ ವಾಕ್ಯಗಳಿಂದ

ಮುಕ್ತನಿಗೆ ಸರ್ವಸ್ಥಳದಲ್ಲಿಯೂ ಪರಮಾತ್ಮನಿಂದ ಭೇದವೇ ಶ್ರುತಿಗಳಲ್ಲಿ ಹೇಳಲ್ಪಟ್ಟ ಪ್ರಯುಕ್ತವೂ 'ಬ್ರಹ್ಮೈವ ಭವತಿ' ಎಂಬಿತ್ಯಾದಿ ಸ್ಥಳಗಳಲ್ಲಿ ಐಕ್ಯವು ಹೇಳಲ್ಪಡುವುದಿಲ್ಲ.

ಭಾ ||(೧) "ಮುಕ್ತೋಪಸೃಪ್ಯ ವ್ಯಪದೇಶಾತ್ |" (ಅ. ೧. ಪಾ ೩. ಸೂ. ೨.)
(೨) "ಜಗದ್ವ್ಯಾಪಾರವರ್ಜಂ |" (ಅ. ೪ ಪಾ. ೪. ಸೂ. ೧೭.)
(೩) "ಪ್ರಕರಣಾದಸನ್ನಿಹಿತತ್ವಾಚ್ಚ |" (ಅ. ೪. ಪಾ. ೪. ಸೂ. ೧೮.)
ಇತ್ಯಾದಿನಾ ಭಗವತಾಽಪಿ ಸರ್ವತ್ರ ಭೇದಸ್ಯೈವ ಸೂಚಿತತ್ವಾತ್ ||

ತಾ || (೧) 'ಮುಕ್ತರಿಂದ ಹೊಂದಲಿಕ್ಕೆ ಯೋಗ್ಯನು' ಎಂದು ಹೇಳಿರುವುದರಿಂದಲೂ, (೨) ಮುಕ್ತರಿಗೆ ಜಗತ್ಸೃಷ್ಟ್ಯಾದಿ ವ್ಯಾಪಾರಗಳನ್ನು ಹೊರತು ಇತರ ನಿಖಿಲ ಅಭೀಷ್ಟಪ್ರಾಪ್ತಿಯೋ, (೩) (ಶರೀರದಿಂದ ಹೊರಟುಹೋಗುತ್ತಾನೆ ಎಂಬಿರುವುದರಿಂದ) ಜೀವಪ್ರಕರಣವೆಂದು ತಿಳಿದ ಪ್ರಯುಕ್ತವೂ, ಜೀವರಿಗೆ ಜಗದ್ವ್ಯಾಪಾರ ಶಕ್ತಿಯಿಲ್ಲದಿರುವುದರಿಂದಲೂ ('ಸರ್ವಾನ್ ಕಾಮಾನ್' ಎಂಬೀ ಸಾಮಾನ್ಯಶ್ರುತಿಗೆ ಸಂಕೋಚವು ನ್ಯಾಯಪ್ರಾಪ್ತವಾಗುತ್ತದೆ.) ಇತ್ಯಾದಿ ಸೂತ್ರಗಳಿಂದಲೂ ಪೂಜ್ಯರಾದ ವೇದವ್ಯಾಸರಿಂದ ಸರ್ವಸ್ಥಳದಲ್ಲಿಯೂ ಭೇದವೇ ಸೂಚಿಸಲ್ಪಟ್ಟದೆ.

ಭಾ ||(೧) "ನ ತೇ ಮಹಿತ್ವಮನ್ವಶ್ನುವಂತಿ |"
(೨) "ಸೋಽಶ್ನುತೇ ಸರ್ವಾನ್ ಕಾಮಾನ್ ಸಹ ಬ್ರಹ್ಮಣಾ ವಿಪಶ್ಚಿತಾ |"
(೩) "ಬ್ರಹ್ಮೇಶಾನಾದಿಭಿರ್ದೇವೈರ್ಯತ್ಪ್ರಾಪ್ತುಂ ನೈವ ಶಕ್ಯತೇ |
ತದ್ಯತ್ಸ್ವಭಾವಃ ಕೈವಲ್ಯಂ ಸ ಭವಾನ್ ಕೇವಲೋ ಹರೇ ||"
ಇತ್ಯಾದೇಶ್ಚ ||

ತಾ || (೧) (ಸ್ವರೂಪದಿಂದಲೇ ಪೂರ್ಣನಾದ ಶ್ರೀಹರಿಯೆ! ನೀನು ಜ್ಞಾನಕ್ಕೂ ಅಗೋಚರನು.) ಇಂತಹ ನಿನ್ನ ಮಹಿಮೆಯನ್ನು (ಮುಕ್ತರೂ ಅಮುಕ್ತರೂ ಕೂಡ) ಹೊಂದುವುದಿಲ್ಲ. (ಋಗ್ವೇದ) (೨) (ಯಾರು ಹೃದಯಗುಹೆಯಲ್ಲಿರತಕ್ಕ ಪರಮಾತ್ಮನನ್ನು ತಿಳಿಯುತ್ತಾನೋ) ಆತನು ಜ್ಞಾನಿಯಾದ ಚತುರ್ಮುಖನಿಂದ ಯಾ ಪರಬ್ರಹ್ಮನಿಂದ ಕೂಡಿಕೊಂಡು ಸಮಸ್ತ ಅಭೀಷ್ಟಗಳನ್ನೂ ಭೋಗಿಸುತ್ತಾನೆ. (ತೈತ್ತಿರೀಯ II ೨) (೩) ಚತುರ್ಮುಖರುದ್ರರೇ ಮೊದಲಾದ ದೇವತೆಗಳಿಂದ (ಮುಕ್ತಾಮುಕ್ತರಿಂದ) ಯಾವ ಸರ್ವೋತ್ತಮತ್ವವು ಹೊಂದಲಸಾಧ್ಯವೋ, ಅಂತಹ ಸರ್ವೋತ್ತಮತ್ವವು ಯಾವ ಶ್ರೀಹರಿಗೆ ಸ್ವಾಭಾವಿಕವೋ, ಎಲೈ ಹರಿಯೇ! ಅಂತಹ ಸರ್ವೋತ್ತಮತ್ವವಿಶಿಷ್ಟನಾದವನು ನೀನೇ ಆಗಿರುತ್ತಿ. ಇತ್ಯಾದಿ ವಚನಗಳಿಂದಲೂ (ಭೇದವೇ ನಿಶ್ಚಿತವಾಗಿದೆ).

ಭಾ || ಮುಕ್ತೇಭ್ಯೋಽಪಿ ಮನುಷ್ಯೇಭ್ಯೋ ದೇವಾ ಏವ ಗುಣಾಧಿಕಾಃ |
ತೇಭ್ಯೋ ವಾಯುಸ್ತತೋ ವಿಷ್ಣುಃ ಪರಿಪೂರ್ಣಗುಣಃ ಸದಾ ||

ತಾ || ಮುಕ್ತರಾದ ಮನುಷ್ಯರಿಗಿಂತ ದೇವತೆಗಳೇ ಗುಣಾಧಿಕರು. ಅವರಿಂದ ವಾಯುವು ಉತ್ತಮನು. ವಾಯುವಿನಿಂದಲೂ ಶ್ರೀಹರಿಯು ಅಪರಿಮಿತ ಗುಣಗಳುಳ್ಳವನು.

ಭಾ || ಯೇ ತ್ವೇತದನ್ಯಥಾ ವಿದ್ಯುಸ್ತೇ ಹಿ ಯಾಂತ್ಯಧರಂ ತಮಃ |
ಯೇ ತ್ವೇತದೇವಂ ಜಾನಂತಿ ತೇ ಯಾಂತಿ ಪರಮಂ ಹರಿಂ || ಇತಿ ಚ ||

ತಾ ॥ ಯಾರು ಈ ವಿಷಯಗಳನ್ನು ವಿಪರೀತವಾಗಿ ತಿಳುಕೊಳ್ಳುತ್ತಾರೋ, ಅವರು ಘೋರವಾದ ತಮಸ್ಸನು ಹೊಂದುತ್ತಾರೆ. ಯಾರು ಈ ಕ್ರಮದಿಂದಲೇ ತಿಳುಕೊಳ್ಳುತ್ತಾರೋ, ಅಂತಹರು ಸರ್ವೋತ್ತಮನಾದ ಶ್ರೀಹರಿಯನ್ನು ಹೊಂದುತ್ತಾರೆ. ಹೀಗೂ ಉಕ್ತವಾಗಿದೆ.

ಭಾ ॥ ದೇವಾನಾಂ ಸಂತತೌ ಜಾತಾಃ ಪ್ರಾಯಶೋ ಜ್ಞಾನಿನಃ ಕೃತೇ ।
ಬಲವದ್ಧೇತುತಶ್ಚಾನ್ಯೇ ಯಸ್ಮಾದ್ಬ್ರಹ್ಮವಿದಸ್ಸುರಾಃ ॥
ನ ಸಂತತೌ ಬ್ರಹ್ಮವಿದೋ ನರಾಣಾಂ ಜ್ಞಾನಿನಾಮಪಿ ।
ಪ್ರಾಯಶಃ ಸ್ಯುಸ್ಸುರಾಣಾಂ ಚ ನಿಯಮೋಽಯಂ ಕೃತೇ ಯುಗೇ ॥

ತಾ ॥ ಯಾವಕಾರಣದಿಂದ ದೇವತೆಗಳು ಬ್ರಹ್ಮಜ್ಞಾನಿಗಳೋ, ಕಾರಣ ದೇವತೆಗಳ ಸಂತತಿಯಲ್ಲಿ ಕೃತಯುಗದಲ್ಲಿ ಹೆಚ್ಚಾಗಿ ಜ್ಞಾನಿಗಳೇ ಹುಟ್ಟುವರು. ಶಾಪಾದಿಬಲವತ್ತರ ಕಾರಣ ಗಳಿಂದ ಬ್ರಹ್ಮಜ್ಞಾನದಲ್ಲಿ ನ್ಯೂನತೆಯುಳ್ಳವರೂ ಹುಟ್ಟುವುದುಂಟು. ಮನುಷ್ಯರು ಜ್ಞಾನಿಗ ಳಾದಾಗ್ಯೂ ಅವರ ಕುಲದಲ್ಲಿ ಹೆಚ್ಚಿಗೆಯಾಗಿ ಜ್ಞಾನಿಗಳು ಹುಟ್ಟಲಾರರು. (ಕದಾಚಿತ್ ಬ್ರಹ್ಮ ಜ್ಞಾನಿಗಳೂ ಹುಟ್ಟತಕ್ಕದಿರುತ್ತದೆ.) ಹೀಗೆ ಕೃತಯುಗದಲ್ಲಿ ದೇವತೆಗಳಿಂದ ನಿಯಮವು ಮಾಡಲ್ಪಟ್ಟುದರಿಂದ ("ನಾಸ್ಯ ಅಬ್ರಹ್ಮವಿತ್ ಕುಲೇ ಭವತಿ" ಎಂಬೀ ವಾಕ್ಯದಲ್ಲಿ ಬ್ರಹ್ಮಜ್ಞಾನಿ ಯ ಕುಲದಲ್ಲಿ ಬ್ರಹ್ಮಜ್ಞಾನ ಶೂನ್ಯನು ಹುಟ್ಟುವುದೇ ಇಲ್ಲವೆಂದರ್ಥವಲ್ಲ.)

ಭಾ ॥ ತಸ್ಮಾತ್ಸ ಭಗವಾನ್ವಿಷ್ಣುರ್ಜ್ಞೇಯಸ್ಸರ್ವೋತ್ತಮೋತ್ತಮಃ ।
ಸದಾ ಸರ್ವಗುಣೈಃ ಪೂರ್ಣೋ ಯೋಽನಂತಃ ಪುರುಷೋತ್ತಮಃ ॥
ಇತಿ ಚ ॥

ತಾ ॥ ಬ್ರಹ್ಮಜ್ಞಾನವುಳ್ಳ ಪುತ್ರ ಪೌತ್ರಾದಿ ಫಲಪ್ರದನಾದುದರಿಂದ ಯಾವ ಶ್ರೀಹರಿಯು ಸರ್ವೋತ್ತಮರಾದ ಬ್ರಹ್ಮಾದಿಗಳಿಂದುತ್ತಮನೋ ಯಾವಾಗಲೂ ಅಪರಿಮಿತ ಗುಣಪೂರ್ಣನೋ ನಾಶಶೂನ್ಯನೋ ಕ್ಷರಾಕ್ಷರ ಪುರುಷರಿಂದುತ್ತಮನೋ ಅಂತಹ ಸರ್ವಪೂಜ್ಯನಾದ ಶ್ರೀಹರಿಯೋ ಸರ್ವರಿಂದಲೂ ತಿಳಿಯಲಿಕ್ಕೆ ಯೋಗ್ಯನಾಗಿರುತ್ತಾನೆ. ॥ ೯ ॥

**ಮಂ ॥ ತದೇಷ ಶ್ಲೋಕಃ। ಕ್ರಿಯಾವಂತಃ ಶ್ರೋತ್ರಿಯಾ ಬ್ರಹ್ಮನಿಷ್ಠಾಃ ಸ್ವಯಂ ಜುಹ್ವಂತ ಏಕರ್ಷಿಂ ಶ್ರದ್ಧಯಂತಃ । ತೇಷಾಮೇವೈತಾಂ ಬ್ರಹ್ಮ ವಿದ್ಯಾಂ ವದೇತ ಶಿರೋವ್ರತಂ ವಿಧಿವದ್ಯೈಸ್ತು ಚೀರ್ಣಂ ॥ ೧೦ ॥**

ಅ ॥ ತತ್=ಈ ವಿದ್ಯಾಧಿಕಾರಿವಿಷಯದಲ್ಲಿ, ಏಷಃ=ಮೇಲೆ ಹೇಳತಕ್ಕ, ಶ್ಲೋಕಃ= ಮಂತ್ರವು, (ಪ್ರಮಾಣವಾಗುತ್ತದೆ). ಕ್ರಿಯಾವಂತಃ=ಫಲಕಾಮನೆಯನ್ನು ಬಿಟ್ಟು ಹರಿಯಲ್ಲಿ ಅರ್ಪಣ ಬುದ್ಧಿಯಿಂದ ಸ್ವವರ್ಣಾಶ್ರಮೋಚಿತ ಕರ್ಮಾಸಕ್ತರಾದ ಯಾರು, ಶ್ರೋತ್ರಿಯಾಃ= ವೇದಾಧ್ಯಯನ ಶೀಲರೋ, ಬ್ರಹ್ಮನಿಷ್ಠಾಃ=ಭಗವದ್ಭಕ್ತರೋ, ಸ್ವಯಂ=ಸ್ವತಂತ್ರನಾದ ಶ್ರೀಹರಿ ಯನ್ನುದ್ದೇಶಿಸಿ,ಜುಹ್ವತಃ=ಅಗ್ನಿಹೋತ್ರಾದಿಗಳನ್ನುಮಾಡುವವರೋ, ಏಕರ್ಷಿನ್=ಬ್ರಹ್ಮವಿದ್ಯಾ ಸಂಪ್ರದಾಯ ಪ್ರವರ್ತಕರಾದ ಪ್ರಧಾನ ಋಷಿಗಳನ್ನು, ಶ್ರದ್ಧಯಂತಃ=ವಿಶ್ವಾಸಪೂರ್ವಕ ಪೂಜಿ ಸುವರೋ, ಯೈಸ್ತು=ಯಾರಿಂದ, ವಿಧಿವತ್=ಶಾಸ್ತ್ರಾನುಸಾರವಾಗಿ, ಶಿರೋವ್ರತಂ='ಶಿರೋ ವ್ರತ' ವೆನ್ನಿಸುವ ವ್ರತವಿಶೇಷವು, ಚೀರ್ಣಂ=ಮಾಡಲ್ಪಟ್ಟದೋ, ತೇಷಾಮೇವ=ಅವರಿಗೇನೇ, ಏತಾಂ=ಪೂರ್ವೋಕ್ತವಾದ, ಬ್ರಹ್ಮವಿದ್ಯಾಂ=ಬ್ರಹ್ಮಜ್ಞಾನಕ್ಕೆ ಕಾರಣೀಭೂತವಾದ ಉಪನಿಷದ್ರ ಹಸ್ಯವನ್ನು, ವದೇತ=ಸ್ಪಷ್ಟವಾಗಿ ಉಪದೇಶಿಸತಕ್ಕದು. ॥ ೧೦ ॥

ಮಂ ॥ ತದೇತ್ಸತ್ಯಮೃಷಿರಂಗಿರಾಃ ಪುರೋವಾಚ । ನೈತದಚೀರ್ಣವ್ರತೋಽಧೀತೇ । ಓಂ ನಮಃ ಪರಮಋಷಿಭ್ಯೋ ನಮಃ ಪರಮಋಷಿಭ್ಯಃ ॥

॥ ಇತಿ ಶ್ರೀಮದಾಥರ್ವಣೋಪನಿಷತ್ಸಮಾಪ್ತಾ ॥

ಅ ॥ ಅಂಗಿರಾಃ ಋಷಿಃ=ಅಂಗಿರಋಷಿಯು, ಏತತ್=ನಾನು ಹೇಳಿದ ಪ್ರಮೇಯವನ್ನು, ಅಚೀರ್ಣವ್ರತಃ=ನಿಯಮವನ್ನು ಬಿಟ್ಟಂತಹಪುರುಷನು, ನ ಅಧೀತೇ=ನಿಶ್ಚೈಸುವುದಿಲ್ಲ. ಇತಿ= ಹೀಗೆಂದು, ಉವಾಚ ಪುರಾ=(ಶೌನಕನಿಗೋಸ್ಕರ) ಹೇಳಿದ್ದನು. ತದೇತತ್=ಆ ಋಷಿಯಿಂದ ಹೇಳಲ್ಪಟ್ಟ ಈ ಸಮಸ್ತಪ್ರಮೇಯವೂ, ಸತ್ಯಂ=ಯಥಾರ್ಥವಾದುದು. ಪರಮಋಷಿಭ್ಯಃ=ಪರಮ ಋಷಿಗಳೆಲ್ಲರಿಗೂ, ನಮಃ=ಪುನಃ ಪುನಃ ನಮಸ್ಕಾರವು. (ಋಷಿಗಳಲ್ಲಿ ಆದರದಿಂದ ಶ್ರುತಿಯು ದ್ವಿರುಕ್ತಿಯನ್ನು ಮಾಡಿರುತ್ತದೆ.)

ಆಥರ್ವಣೋಪನಿಷತ್ತು ಸಮಾಪ್ತವಾಯಿತು

ಭಾ ॥ ಪ್ರೀಯತಾಂ ಭಗವಾನ್ನಿತ್ಯಂ ಪ್ರೇಷ್ಠಪ್ರೇಷ್ಠತಮಸ್ಸದಾ ।
ಮಮ ನಿತ್ಯಂ ನಮಾಮ್ಯೇನಂ ಪರಮೋದಾರಸದ್ಗುಣಂ ॥

ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯ
ವಿರಚಿತಮಾಥರ್ವಣೋಪನಿಷದ್ಭಾಷ್ಯಂ
॥ ಸಂಪೂರ್ಣಂ ॥

ತಾ ॥ ನಾನು ಅತ್ಯುತ್ಕೃಷ್ಟಗಳಾದ ಸದ್ಗುಣಭರಿತನಾದ ಈ ಉಪನಿಷತ್ಪ್ರತಿಪಾದ್ಯನಾದ ಶ್ರೀಹರಿಯನ್ನು ನಮಸ್ಕರಿಸುತ್ತೇನೆ. ಯಾವಾಗಲೂ ಅತಿಶಯ ಪ್ರಿಯವಸ್ತುವಿನಿಂದಲೂ ಪ್ರಿಯ ನಾದ ಅಂತಹ ಪೂಜ್ಯನಾದ ಹರಿಯು ನನಗೆ ನಿರಂತರವೂ ಪ್ರಸನ್ನನಾಗಿರಲಿ:— ಅಂತೂ ಈ ಖಂಡದಲ್ಲಿ ಪ್ರಾಣಸ್ಥ ಬ್ರಹ್ಮೋಪಾಸನೆಯಿಂದ ಬ್ರಹ್ಮಸಾಕ್ಷಾತ್ಕಾರವಾಗಿ ಶೋಕಪಾಪಾದಿಗಳ ನ್ನೆಲ್ಲಾ ದಾಟಿ ಅವಿದ್ಯಾ ಕಾಮಕರ್ಮಾದಿಗಳಿಂದ ವಿರಹಿತನಾಗಿ ಆತ್ಯಂತಿಕ ದುಃಖನಿವೃತ್ತಿ ಪೂರ್ವಕ ಸ್ವರೂಪಾನಂದಾವಿರ್ಭಾವರೂಪ ಮುಕ್ತಿಯನ್ನು ಅಧಿಕಾರಿಯು ಹೊಂದಿಯೇ ಹೊಂದುವನೆಂದು ಹೇಳಿದ ಹಾಗಾಯಿತು. ॥ ೧೦ ॥

ಈ ರೀತಿಯಾಗಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ರಚಿತವಾದ
ಆಥರ್ವಣೋಪನಿಷದ್ಭಾಷ್ಯವು ಸಮಾಪ್ತವಾಯಿತು.

ಆಥರ್ವಣಾಗಮಶಿರೋಭಾಷಾಟೀಕಾಮಣಿಂ ನವಂ ।
ತಂತ್ರಿನಾರಾಯಣೋ ಭಕ್ತ್ಯಾ ಹ್ಯರ್ಪಯತ್ಪುರುಷೋತ್ತಮೇ ॥

# ಸಭಾಷ್ಯ ಮಾಂಡೂಕೋಪನಿಷತ್ತು

ಓಂ ॥ ಚಕ್ಷುರಾದಿಸ್ಥಿತೋ ಯೋ ಹಿ ಜಾಗ್ರದಾದಿಪ್ರವರ್ತಕಃ ।
ವಿಶ್ವಾದಿರೂಪೀ ತಂ ವ್ಯಾಸಂ ವಂದೇಽಹಂ ಮಧ್ವವಲ್ಲಭಂ ॥

**ಶ್ರೀಮದ್ಧನುಮದ್ಭೀಮಮಧ್ವಾಂತರ್ಗತ ರಾಮಕೃಷ್ಣವೇದವ್ಯಾಸಾತ್ಮಕ**
**ಲಕ್ಷ್ಮೀಹಯಗ್ರೀವಾಯ ನಮಃ ॥ ಹರಿಃ ॥ ಓಂ ॥**

**ಭಾ॥** ಪೂರ್ಣಾನಂದಜ್ಞಾನಶಕ್ತಿಸ್ವರೂಪಂ ನಿತ್ಯಮವ್ಯಯಂ ।
ಚತುರ್ಧಾ ಸರ್ವಭೋಕ್ತಾರಂ ವಂದೇ ವಿಷ್ಣುಂ ಪರಂ ಪದಂ ॥

ಅ ॥ ಪೂರ್ಣವಾದ ಆನಂದವು, ಜ್ಞಾನವು, ಸಾಮರ್ಥ್ಯವು, ಇವುಗಳೇ ಸ್ವರೂಪವಾಗಿ (ದೇಹವಾಗಿ) ಉಳ್ಳವನು, ನಿತ್ಯನು, ವಿನಾಶಶೂನ್ಯನು, (ವಿಶ್ವ, ತೈಜಸ, ಪ್ರಾಜ್ಞ, ತುರೀಯ ಎಂಬ) ನಾಲ್ಕುರೂಪದಿಂದ ಸರ್ವವಿಷಯಗಳನ್ನು ಭೋಗಿಸುವವನು, (ಜ್ಞಾನಿಗಳಿಂದ) ಪ್ರಾಪ್ಯನೂ, ಸರ್ವೋತ್ತಮನೂ ಆದ, ಶ್ರೀ ವಿಷ್ಣುವನ್ನು ಯಾವಾಗಲೂ (ನಾನು) ನಮಸ್ಕರಿಸುತ್ತೇನೆ.

ತಾ ॥ ಇದರಿಂದ ವಿಶ್ವ, ತೈಜಸ, ಪ್ರಾಜ್ಞ, ತುರೀಯ ಎಂದು ನಾಲ್ಕುರೂಪಗಳುಳ್ಳ ಶ್ರೀ ಹರಿಯು ವಿಷಯನು, ಅವನನ್ನು ಹೊಂದುವುದೇ ಪ್ರಯೋಜನವು, ಯೋಗ್ಯನಾಗಿ ಅವನನ್ನು ಇಚ್ಛಿಸುವವನೇ ಅಧಿಕಾರಿಯು, ಯಥಾಯೋಗ್ಯನಾಗಿ ಸಂಬಂಧವು ಎಂದು ಸೂಚಿಸುತ್ತಾ ಶ್ರೀಮದಾನಂದ ತೀರ್ಥಭಗವತ್ಪಾದಾಚಾರ್ಯರು ಮಂಗಲವನ್ನು ಮಾಡುವವರು ಆದರು.

**ಭಾ॥ (a)** ಮಂಡೂಕರೂಪಿಣಾ ವರುಣೇನ ಚತೂರೂಪೋ ನಾರಾಯಣೋಽತ್ರ ಸ್ತೂಯತೇ । **(b)** ಧ್ಯಾಯನ್ನಾರಾಯಣಂ ದೇವಂ ಪ್ರಣವೇನ ಸಮಾಹಿತಃ । ಮಂಡೂಕರೂಪೀ ವರುಣಸ್ತುಷ್ಟಾವ ಹರಿಮವ್ಯಯಂ ॥

– ಇತಿ ಪಾದ್ಮೇ ॥

ಅ ॥ (a) ಮಂಡೂಕದ (ಕಪ್ಪೆಯ) ರೂಪವುಳ್ಳ ವರುಣನಿಂದ ನಾಲ್ಕುರೂಪಗಳುಳ್ಳ ನಾರಾಯಣನು ಇಲ್ಲಿ (ಈ ಉಪನಿಷತ್ತಿನಲ್ಲಿ) ಸ್ತುತಿಸಲ್ಪಡುತ್ತಾನೆ. ॥ (b) ಮಂಡೂಕರೂಪವುಳ್ಳ ವರುಣನು ಸಮಾಹಿತನಾಗಿ, (ಅಂದರೆ ವಿಷಯಗಳಲ್ಲಿ ಅಲಂಬುದ್ಧಿಯುಳ್ಳವನಾಗಿ, ಅಥವಾ ಯಥಾರ್ಥಜ್ಞಾನಿಯಾಗಿ) ನಾರಾಯಣದೇವರನ್ನು ಧ್ಯಾನಿಸುತ್ತಾ, ಪ್ರಣವದಿಂದ ಅಂದರೆ ಪ್ರಣವವನ್ನು ಉಪಕ್ರಮಿಸಿ "ಓಮಿತ್ಯೇತದಕ್ಷರಂ" ಇದು ಮೊದಲಾದ ಸಂಪೂರ್ಣ ಉಪನಿಷತ್ತಿನಿಂದ ನಾಶಶೂನ್ಯನಾದ ಶ್ರೀಹರಿಯನ್ನು ಸ್ತುತಿಸಿದನು. ಎಂದು ಪಾದ್ಮಪುರಾಣದಲ್ಲಿ ಹೇಳಿಯದೆ.

ತಾ ॥ ಈ ಉಪನಿಷತ್ತಿಗೆ ಮಂಡೂಕರೂಪಿಯಾದ ವರುಣನು ಋಷಿಯೆಂದೂ, ವಿಶ್ವಾದಿನಾಲ್ಕುರೂಪಗಳುಳ್ಳ ನಾರಾಯಣನು ದೇವತೆಯೆಂದೂ, ತಿಳಿಸಲ್ಪಟ್ಟಿತು. ಛಂದಸ್ಸನ್ನು ಅಕ್ಷರ ಗಣನೆಯಿಂದ ತಿಳಿಯಬಹುದು.

**ಮಂ ॥ ಹರಿಃ ಓಂ ॥ ಓಮಿತ್ಯೇತದಕ್ಷರಮಿದಂ ಸರ್ವಂ ॥ ತಸ್ಯೋಪವ್ಯಾಖ್ಯಾನಂ ಭೂತಂ ಭವದ್ಭವಿಷ್ಯದಿತಿ ॥ ೧ ॥**

ಅ ॥ ಓಮಿತಿ="ಓಂ" ಎಂದು ಹೇಳಲ್ಪಟ್ಟ ಯಾವಬ್ರಹ್ಮನೋ, ಏತತ್=ಇವನು, ಅಕ್ಷರಂ=ಕಾಲತ್ರಯದಲ್ಲಿಯೂ ನಾಶರಹಿತನಾದುದರಿಂದ"ಅಕ್ಷರ"ನೆನ್ನಿಸಿಕೊಳ್ಳುತ್ತಾನೆ. ಇದಂ=ಈ ಅಕ್ಷರನು, ಸರ್ವಂ=ಗುಣಪರಿಪೂರ್ಣನು, (ಓಂ ಎಂಬುವುದರಿಂದ ಹೇಳಲ್ಪಟ್ಟ ಬ್ರಹ್ಮನು) ಭೂತಂ=ಹಿಂದಿನಕಾಲದಲ್ಲಿಯೂ ಇದ್ದವನು, ಭವತ್=ವರ್ತಮಾನಕಾಲದಲ್ಲಿಯೂ ಇರತಕ್ಕವನು, ಭವಿಷ್ಯತ್=ಮುಂದೆ ಬರುವ ಕಾಲದಲ್ಲಿಯೂ ಇರುವವನು, (ಅಂತೂ ಯಾವಾಗಲೂ ಏಕಪ್ರಕಾರನು. ಆದುದರಿಂದ "ಅಕ್ಷರನು" ಎನ್ನಿಸಿಕೊಳ್ಳುತ್ತಾನೆ.) ಇತಿ=ಈ ಪ್ರಕಾರವಾಗಿ, ತಸ್ಯ=ಆ "ಓಂ" ಎಂಬ ಅಕ್ಷರದಿಂದ ಪ್ರತಿಪಾದಿಸಲ್ಪಡತಕ್ಕ ಶ್ರೀಹರಿಗೆ (ಅಕ್ಷರಶಬ್ದಾರ್ಥತ್ವ ವಿಷಯದಲ್ಲಿ) ಉಪವ್ಯಾಖ್ಯಾನಂ=ಉಪಪನ್ನವಾದ ವ್ಯಾಖ್ಯಾನವು ಹೇಳಲ್ಪಟ್ಟಿತು. ॥ ೧ ॥

**ಭಾ॥** (a) ಓಮಿತ್ಯುಕ್ತಂ ತು ಯದ್ಬ್ರಹ್ಮ ತದಕ್ಷರಮುದಾಹೃತಂ । ಓತಮತ್ರ ಜಗದ್ಯಸ್ಮಾದೋಂ ತಸ್ಮಾದ್ಭಗವಾನ್ ಹರಿಃ ॥ (b) ತದಿದಂ ಗುಣಪೂರ್ತ್ಯೈವ ಸರ್ವಮಿತ್ಯೇವ ಶಬ್ದಿತಂ । (c) ಭಾವಿ ಭೂತಭವತ್ಕಾಲೇಷ್ವೇಕರೂಪತಯಾ ಹರಿಃ । ಸರ್ವದಾ ನಿತ್ಯ ಇತ್ಯೇಷಾ ವ್ಯಾಖ್ಯೋಂಕಾರಸ್ಯ ಕೀರ್ತಿತಾ ॥ ಇತಿ ಬೃಹತ್ಸಂಹಿತಾಯಾಂ ॥ ೧ ॥

ಅ ॥ (a) 'ಓಂ' ಎಂಬುವುದರಿಂದ ಪ್ರತಿಪಾದಿತನಾದ ಯಾವಬ್ರಹ್ಮನೋ, ಅವನು 'ಅಕ್ಷರನು' ಎಂದು ಹೇಳಲ್ಪಡುತ್ತಾನೆ. ಯಾವಕಾರಣದಿಂದ ಇವನಲ್ಲಿ ಜಗತ್ತು ಪ್ರವಿಷ್ಟವಾಗಿದೆಯೋ, ಆದುದರಿಂದ ಪೂಜ್ಯನಾದ ಹರಿಯು 'ಓಂ' ಎಂದು ಹೇಳಲ್ಪಡುತ್ತಾನೆ. ॥ (b) ಆ ಈ ಓಂಕಾರಪ್ರತಿಪಾದ್ಯನಾದ ಬ್ರಹ್ಮನೇ ಗುಣಗಳ ಪೂರ್ಣತೆಯಿಂದಲೇ 'ಸರ್ವಂ' ಎಂದು ಹೇಳಲ್ಪಟ್ಟಿದ್ದಾನೆ. ॥ (c) ಶ್ರೀಹರಿಯು ಭವಿಷ್ಯತ್ಕಾಲದಲ್ಲಿಯೂ ಭೂತಕಾಲದಲ್ಲಿಯೂ ವರ್ತಮಾನಕಾಲದಲ್ಲಿಯೂ ಒಂದೇಪ್ರಕಾರ ಸರ್ವದಾ ನಿತ್ಯನಾಗಿರುತ್ತಾನೆ. ಈ ಪ್ರಕಾರ ಈ ವ್ಯಾಖ್ಯಾನವು (ಶಬ್ದದ ಪ್ರವೃತ್ತಿ ನಿಮಿತ್ತವು) ಓಂಕಾರಕ್ಕೆ ಹೇಳಲ್ಪಟ್ಟಿದೆ. ಈ ಪ್ರಕಾರ ಬೃಹತ್ಸಂಹಿತೆಯಲ್ಲಿ ಹೇಳಿಯದೆ. ॥

**ಮಂ ॥ ಸರ್ವಮೋಂಕಾರ ಏವ ಯಚ್ಚಾನ್ಯತ್ತ್ರಿಕಾಲಾತೀತಂ ತದಪ್ಯೋಂಕಾರ ಏವ । ಸರ್ವಂ ಹ್ಯೇತದ್ಬ್ರಹ್ಮ। ಅಯಮಾತ್ಮಾ ಬ್ರಹ್ಮ॥ ೨ ॥**

ಅ ॥ ಓಂಕಾರ ಏವ='ಓಂ' ಎಂಬ ಪ್ರಣವದಿಂದ ಪ್ರತಿಪಾದಿಸಲ್ಪಟ್ಟ ಅಕ್ಷರನೇ, ಸರ್ವಂ=ಪರಿಪೂರ್ಣನು. (ಇತರನಲ್ಲ) ತ್ರಿಕಾಲಾತೀತಂ=ಕಾಲತ್ರಯಕೃತವಿಕಾರವಿಲ್ಲದಿರುವ, ಯತ್ ಅನ್ಯತ್=ಯಾವುದು ಇತರವು ಚಿತ್ಪ್ರಕೃತಿರೂಪವಾದುದು ಅದೆಯೋ, ತದಪಿ=ಅದೂ ಕೂಡ, ಓಂಕಾರ ಏವ=ಓಂ ಎಂಬುವುದರಿಂದ ಪ್ರತಿಪಾದಿಸಲ್ಪಡತಕ್ಕ ಅಕ್ಷರಾಖ್ಯ ಪರಬ್ರಹ್ಮವೇ, (ಅದರಿಂದಿತರವಾದುದು ಯಾವುದು ಅಂತಹುದು ಇರುವುದಿಲ್ಲ. ಶ್ರೀತತ್ವದಲ್ಲಿಯೂ ಶಶ್ವದೇಕಪ್ರಕಾರತ್ವವು ಶ್ರೀಹರಿಯ ಅನುಗ್ರಹದಿಂದಲೇ, ಸ್ವತಃ ಅಲ್ಲವು.) ಏತತ್ ಅಕ್ಷರಂ=ಈ ಓಂ ಪದವಾಚ್ಯನಾದ ಅಕ್ಷರಾಖ್ಯಬ್ರಹ್ಮನೇ, ಸರ್ವಂ=ಪರಿಪೂರ್ಣನು. ಹಿ="ಪರಮಂ ಯೋ ಮಹದ್ಬ್ರಹ್ಮ" "ತದೇವ ಬ್ರಹ್ಮ ಪರಮಂ ಕವೀನಾಂ" "ಪೂರ್ಣಮದಃ ಪೂರ್ಣಮಿದಂ" ಇದೇ ಮೊದಲಾದ ಶ್ರುತಿಗಳಲ್ಲಿ ಪ್ರಸಿದ್ಧವು. ಆತ್ಮಾ=ಲಕ್ಷ್ಮೀ ಬ್ರಹ್ಮಾದಿಗಳಲ್ಲಿ ವಿಷಯಾನುಭವವನ್ನುಮಾಡುತ್ತಾ ಯಾವ ಆತ್ಮನು ಇದ್ದಾನೊ, ಅಯಂ=ಈತನು, ಬ್ರಹ್ಮ=ಓಂ ಪದವಾಚ್ಯ ಬ್ರಹ್ಮನೇ. (ಬೇರೆ ಯಾರೊಬ್ಬನೂ ಪೂರ್ಣನಾದವನು ಇಲ್ಲವೇ ಇಲ್ಲ.) ॥ ೨ ॥

ಭಾ|| (a) ಓಮಿತ್ಯಾಕ್ರಿಯತೇ ಯಸ್ಮಾದೋಂಕಾರೋಽಸಾವತಃ ಪರಃ। ಸರ್ವತ್ವಮಿತಿ ಪೂರ್ಣತ್ವಂ ತನ್ನಾನ್ಯಸ್ಯ ಹರೇಃ ಕ್ವಚಿತ್ ॥ ಇತಿ ನೈರ್ಗುಣ್ಯೇ॥ (b) ಸರ್ವಮೋಂಕಾರ ಏವೇತ್ಯನ್ಯಸ್ಯ ಪೂರ್ಣತ್ವನಿವಾರಣಂ । ತ್ರಿಕಾಲಾತೀತತ್ವಂ ಚ ತಸ್ಯೈವ। ಪ್ರಕೃತೇರಪಿ ತ್ರಿಕಾಲಾತೀತತ್ವಂ ವಿದ್ಯತ ಇತ್ಯನ್ಯದಿತಿ ವಿಶೇಷಣಂ ॥ (c) ಪರಮಂ ಯೋ ಮಹದ್ಬ್ರಹ್ಮ । ತದೇವ ಬ್ರಹ್ಮ ಪರಮಂ ಕವೀನಾಂ। ಪೂರ್ಣಮದಃ ಪೂರ್ಣಮಿದಮಿತ್ಯಾದಿಷು ಪ್ರಸಿದ್ಧಂ ಚ ಬ್ರಹ್ಮಣಃ ಪೂರ್ಣತ್ವಮಿತ್ಯಾಹ । ಸರ್ವಂ ಹ್ಯೇತದ್ಬ್ರಹ್ಮೇತಿ (d) ಶ್ರೀ ಬ್ರಹ್ಮಾದಿಸಕಲದೇಹೇಷು ಸ್ಥಿತ್ವಾ ಆದಾನಾದಿಕರ್ತಾ ಯೋಽಯಂ ಕಶ್ಚಿತ್ಪ್ರತೀಯತೇ । ಜೀವಾನಾಮಸ್ವಾತಂತ್ರ್ಯದರ್ಶನಾತ್ । ಸೋಽಪಿ ಸ ಏವೇತಿ ದರ್ಶಯತಿ । ಅಯಮಾತ್ಮಾ ಬ್ರಹ್ಮೇತಿ ॥

ಅ॥ (a) ಯಾವಕಾರಣದಿಂದ ಈ ಸರ್ವೋತ್ತಮನಾದ ಶ್ರೀಹರಿಯು "ಓಂ" ಎಂದು, ಆಕ್ರಿಯತೇ=ಕರೆಯಲ್ಪಡುತ್ತಾನೋ, ಆದುದರಿಂದ ಇವನು ಓಂಕಾರನು. ಸರ್ವತ್ವವೆಂದರೆ ಪರಿಪೂರ್ಣತ್ವವು, ಆ ಪರಿಪೂರ್ಣತ್ವವು ಹರಿಯಿಂದ ಇತರರಿಗೆ ಎಲ್ಲಿಯೂ ಇರುವುದಿಲ್ಲ. ಎಂದು ನೈರ್ಗುಣ್ಯದಲ್ಲಿ ಇದೆ. ॥ (b) ಸರ್ವಂ=ಪೂರ್ಣನು, ಓಂಕಾರನೇಸರಿ, ಎಂಬುವುದರಿಂದ (ಹರಿಯಿಂದ) ಇತರನಿಗೆ ಪೂರ್ಣತ್ವವನ್ನು ನಿವಾರಿಸಿದ ಹಾಗಾಯಿತು. (ಕಾರಣ ವ್ಯರ್ಥವಲ್ಲವು) ಕಾಲತ್ರಯಕೃತವಿಕಾರವಿಲ್ಲದಿರುವಿಕೆಯೂ ಅವನಿಗೇನೇ ಸರಿ. ಚಿತ್ಪ್ರಕೃತಿಗೂ ಕೂಡ ಕಾಲತ್ರಯಕೃತ ವಿಕಾರಶೂನ್ಯತ್ವವು (ಈಶಪ್ರಸಾದಾಧೀನವಾದುದು) ಅದೆ, ಆದುದರಿಂದ "ಅನ್ಯತ್" ಎಂದು ವಿಶೇಷಣವು. ॥ (c) 'ಯಾವನು ಪರಮಮಹದ್ಬ್ರಹ್ಮಶಬ್ದವಾಚ್ಯನೋ' ॥ ಜ್ಞಾನಿಗಳ ಪರಬ್ರಹ್ಮನು ಅವನೇ ॥ ಅದು (ಮೂಲರೂಪವು) ಪರಿಪೂರ್ಣವಾದುದು. ಇದು (ಅವತಾರರೂಪವೂ) ಪರಿಪೂರ್ಣವಾದುದು ಇವೇ ಮೊದಲಾದ ಶ್ರುತಿಗಳಲ್ಲಿ ಪರಬ್ರಹ್ಮನಿಗೆ ಪೂರ್ಣತ್ವವು ಪ್ರಸಿದ್ಧವಾಗಿದೆ ಎಂದು ಹೇಳುತ್ತಾರೆ. ॥ ಈ ಬ್ರಹ್ಮನು ಸರ್ವಂ=ಪರಿಪೂರ್ಣನು, ಪ್ರಸಿದ್ಧವು ಎಂದು. (d) ಅಯಮಾತ್ಮಾ ಬ್ರಹ್ಮೇತಿ=ಈ ಆತ್ಮನು ಬ್ರಹ್ಮನೆಂದು, ಲಕ್ಷ್ಮಿಯು ಚತುರ್ಮುಖನು ಇವರೇ ಮೊದಲಾದ ಎಲ್ಲವರ ಶರೀರಗಳಲ್ಲಿ ಇದ್ದು ತೆಗೆದುಕೊಳ್ಳುವುದು, (ವಿಷಯಗಳನ್ನು ಅನುಭವಿಸುವುದು) ಇದೇ ಮೊದಲಾದುದನ್ನು ಮಾಡುವ ಯಾವ ಈ ಒಬ್ಬನು ತೋರುತ್ತಾನೋ, । ಜೀವರಿಗೆ ಅಸ್ವಾಂತತ್ರ್ಯವು ತೋರುವುದರಿಂದ ಅವರಲ್ಲಿ ನಿಯಾಮಕನಾಗಿರುವವನು ಅವನೇ (ಅಂದರೆ ಲಕ್ಷ್ಮ್ಯಾದಿಗಳಿಗೆ ಆದಾನಾದಿಗಳನ್ನು ಮಾಡುವವನೂ ಓಂಕಾರವಾಚ್ಯನಾದ ಅಕ್ಷರನಾಮಕ ಶ್ರೀಹರಿಯೇ) ಎಂದು (ಮಂತ್ರದಲ್ಲಿ) ತೋರಿಸುತ್ತಾರೆ.

ಭಾ|| (a) ಪೂರ್ಣಸ್ತು ಹರಿರೇವೈಕೋ ನಾನ್ಯತ್ಪೂರ್ಣಂ ಕದಾಚನ । ವಿನಾ ಚ ಪ್ರಕೃತಿಂ ನಾನ್ಯತ್ಕಾಲಾತೀತಂ ಪರಾತ್ಮನಃ । (b) ಕಾಲಶ್ಚೈವ ದಿಶೋ ವೇದಾಃ ಪಕೃತ್ಯಾತ್ಮಾನ ಈರಿತಾಃ । ಅಭಿಮಾನಾತ್ತು ಜೀವಾನಾಂ ನ ಕಾಲಾತೀತತಾ ಭವೇತ್ ॥ (c) ಮುಕ್ತಾನಾಮಪಿ ಪೂರ್ವತ್ರ ಕಾಲಸಂಬಂಧ ಈರಿತಃ । ಪೂರ್ಣತ್ವಂ ಚ ಸದಾ

ವಿಷ್ಣೋಃ ಪ್ರಸಿದ್ಧಂ ಸರ್ವ ವೇದತಃ ॥ (d) ಸೋऽಯಂ ವಿಷ್ಣು
ರಮಾಬ್ರಹ್ಮರುದ್ರಾನಂತಾದಿಗಃ ಸದಾ ॥ ಆದಾನಾದನಕರ್ತೃತ್ವಾ
ದಾತ್ಮಾ ತೇಷಾಮಗೋಚರಃ। ಇತಿ ಮಂಡೂಕರೂಪೀ ಸನ್ ದದರ್ಶ
ವರುಣಃ ಶ್ರುತಿಂ ॥ ಇತಿ ಹರಿವಂಶೇಷು ॥ ೨ ॥

ಅ ॥ (a) ಶ್ರೀ ಹರಿಯೊಬ್ಬನೇ ಪರಿಪೂರ್ಣನಾದವನು. ಯಾವಾಗಲೂ ಇತರವಾದುದು ಪೂರ್ಣವಾದುದು ಇಲ್ಲವೇ ಇಲ್ಲ. । ಚಿತ್ಪ್ರಕೃತಿಯನ್ನು (ಮಹಾಲಕ್ಷ್ಮಿಯನ್ನು) ಹೊರತು ಪರಮಾತ್ಮನಿಂದ ಇತರವಾದುದು ತ್ರಿಕಾಲಾತೀತವಾದುದು ಇಲ್ಲವೇ ಇಲ್ಲ. ॥ (b) ಕಾಲವು, ದಿಕ್ಕುಗಳು, ವೇದಗಳು, ಇವುಗಳೆಲ್ಲವೂ ಚೇತನಪ್ರಕೃತಿಯೇ ಅಭಿಮಾನಿಯಾಗಿ ಉಳ್ಳವುಗಳಾಗಿ ಹೇಳಲ್ಪಟ್ಟಿವೆ. ಜೀವರಿಗಾದರೂ ದೇಹಾಭಿಮಾನದಿಂದ ಮಾಡಲ್ಪಡುವ ಉಚ್ಚನೀಚತ್ವಾದಿ ವಿಕಾರಗಳು ಇರುವುದರಿಂದ ತ್ರಿಕಾಲಾತೀತತ್ವವು ಇರುವುದಿಲ್ಲ.

ತಾ ॥ ಕಾಲಶಬ್ದದಿಂದ ಕಾಲಪ್ರವಾಹವು. " ಕಾಲಪ್ರವಾಹ ಏವೈಕೋ ನಿತ್ಯೋ ನ ತು ವಿಶೇಷವಾನ್" ಎಂಬೀಪ್ರಮಾಣದಿಂದ ಕಾಲಪ್ರವಾಹವೇ ನಿತ್ಯವು. "ಸರ್ವೇ ನಿಮೇಷಾ ಜಜ್ಞಿರೇ" ಎಂಬೀಶ್ರುತಿಯಿಂದ ನಿಮೇಷಾದಿಗಳಿಗೆ ಕಾಲಕೃತವಿಕಾರವು ಶ್ರುತವಾಗುತ್ತದೆ. ಆದುದರಿಂದ ಅನಿತ್ಯವು. ದಿಕ್ಕುಗಳೆಂದರೆ ಅವ್ಯಾಕೃತಾಕಾಶಭಾಗಗಳು, ಅಂತೂ ಕಾಲಾದಿಗಳೂ ಪ್ರಕೃತಿ ಸ್ವರೂಪಗಳಾದುದರಿಂದ 'ಪ್ರಕೃತ್ಯನ್ಯತ್ತು' ವಿಶೇಷಣದಿಂದಲೇ "ಕಾಲಾದಿಗಳಿಂದ ಇತರನು" ಎಂಬೀ ವಿಶೇಷಣವನ್ನು ಕೊಟ್ಟಹಾಗಾಯಿತು. ಕಾರಣ ಕಾಲಾದಿಗಳಲ್ಲಿ ಈ ಲಕ್ಷಣಕ್ಕೆ ಅತಿವ್ಯಾಪ್ತಿ ರೂಪದೋಷವಿಲ್ಲವು. ಜೀವರಲ್ಲಿ ಆದರೂ ಈ ಲಕ್ಷಣವೇ ಇಲ್ಲದಿರುವುದರಿಂದ ಅತಿವ್ಯಾಪ್ತಿಗೆ ಅವಕಾಶವೇ ಇಲ್ಲವು. ಅ ॥ (c) ಮುಕ್ತರಿಗೂ ಸಂಸಾರಾವಸ್ಥೆಯಲ್ಲಿ ಕಾಲಸಂಬಂಧವು ಹೇಳಲ್ಪಟ್ಟಿದೆ. (ಅಂತೂ ಪೂರ್ವಕಾಲಕೃತ ವಿಕಾರಗಳು ಇದ್ದುದರಿಂದ ಕಾಲತ್ರಯಕೃತ ವಿಕಾರಶೂನ್ಯತ್ವವು ಇರುವುದಿಲ್ಲ. ಕಾರಣ ಅತಿವ್ಯಾಪ್ತಿಯಿಲ್ಲವು.) ಯಾವಾಗಲೂ ವಿಷ್ಣುವಿಗೇನೇ ಗುಣಪರಿಪೂರ್ಣತ್ವವು ಎಲ್ಲಾ ವೇದಗಳಿಂದಲೂ ಪ್ರಸಿದ್ಧವಾಗಿದೆ. ॥ (d) ಅಗೋಚರನಾಗಿರುವ ಆ ಈ ವಿಷ್ಣುವು ಲಕ್ಷ್ಮಿಯು, ಚತುರ್ಮುಖನು, ರುದ್ರನು, ಶೇಷನು ಇವರೇ ಮೊದಲಾದವರಲ್ಲಿ ಸರ್ವದಾ ಇರುವವನಾಗಿ, ಆ ರಮಾದಿಗಳಿಗೆ ಜ್ಞಾನಾದಿಗಳನ್ನು ಕೊಡುವುದರಿಂದಲೂ, ವಿಷಯಾನುಭವಗಳನ್ನು ಮಾಡುವವನಾದುದರಿಂದಲೂ "ಆತ್ಮಾ" ಎನ್ನಿಸಿಕೊಳ್ಳುತ್ತಾನೆ. ಈಪ್ರಕಾರವಾಗಿ ವರುಣನು ಮಂಡೂಕಸ್ವರೂಪವುಳ್ಳವನಾಗಿ ("ಸರ್ವಂ ಓಂಕಾರಏವ" ಇದೇ ಮೊದಲಾದ) ಶ್ರುತಿಯನ್ನು ಕಂಡನು. ಎಂದು (ಖಿಲ, ಅಖಿಲ, ಪಾರಿಜಾತ ಎಂದು ೩ ಭಾಗಗಳಿಂದೊಡಗೂಡಿದ) ಹರಿವಂಶದ(೩ ಭಾಗಗಳ)ಲ್ಲಿ ಅದೆ. ॥ ೨ ॥

**ಮಂ ॥ ಸೋऽಯಮಾತ್ಮಾ ಚತುಷ್ಪಾತ್ । ಜಾಗರಿತಸ್ಥಾನೋ ಬಹಿಃಪ್ರಜ್ಞಃ ಸಪ್ತಾಂಗ ಏಕೋನವಿಂಶತಿಮುಖಃ ಸ್ಥೂಲಭುಗ್ವೈಶ್ವಾನರಃ ಪ್ರಥಮಃ ಪಾದಃ ॥ ೩ ॥**

ಅ ॥ ಸಃ=ಆ'ಓಂ'ಪದವಾಚ್ಯನಾಗಿ ಅಕ್ಷರನಾಮಕನಾದ, ಅಯಂ=ಈ ಲಕ್ಷ್ಮ್ಯಾದಿಗಳಲ್ಲಿ ನಿಯಾಮಕನಾಗಿ ಇರುವ, ಆತ್ಮಾ=ಶ್ರೀಹರಿಯು, ಚತುಷ್ಪಾತ್=ನಾಲ್ಕು ಸ್ವರೂಪಭೂತಗಳಾದ ಅಂಶಗಳುಳ್ಳವನು. (ಅಂದರೆ ಎಲ್ಲಾ ಜೀವರಿಗೂ ನಿಯಾಮಕನಾಗಿ ಅವರವರ ದೇಹಗಳಲ್ಲಿ ನಾಲ್ಕು ರೂಪಗಳುಳ್ಳವನಾಗಿ ಇರುತ್ತಾನೆ.) ಜಾಗರಿತಸ್ಥಾನಃ=ಕಣ್ಣೇ ಸ್ಥಾನವಾಗಿ

ಉಳ್ಳವನು, ಬಹಿಃಪ್ರಜ್ಞಃ=ಬಾಹ್ಯಾರ್ಥಗಳನ್ನು ತಿಳಿಸಿಕೊಡುವವನು, ಸಪ್ತಾಂಗಃ=೪ ಕೈಗಳು, ೨ ಪಾದಗಳು, ೧ ಗಜದ ಹಸ್ತವು. (ಶುಂಡವು.) ಹೀಗೆ ಏಳು ಅಂಗಗಳುಳ್ಳವನು, ಏಕೋನವಿಂಶತಿ ಮುಖಃ=ಹತ್ತೊಂಭತ್ತು (೧೯) ಮುಖಗಳುಳ್ಳವನು. (೧೮ ಪುರುಷಮುಖಾಕಾರಗಳು, ೧ ಮಧ್ಯದಲ್ಲಿರುವುದು ಗಜಮುಖಾಕಾರವು) ಸ್ಥೂಲಭುಕ್=ಶುಭಭೋಗಗಳನ್ನು ಭೋಗಿಸುವವನು, (ಇಂತಹ) ವೈಶ್ವಾನರಃ=ವೈಶ್ವಾನರನು, ಪ್ರಥಮಃ ಪಾದಃ=(ಆತ್ಮನಿಗೆ) ಒಂದನೇ ರೂಪವು. ॥ ೩ ॥

**ಭಾ॥** **(a)** ಚತುರ್ಧಾಽವಸ್ಥಿತೋ ದೇಹೇ ಪರಮಾತ್ಮಾ ಸನಾತನಃ । **(b)** ವೈಶ್ವಾನರೋ ಜಾಗರಿತಸ್ಥಾನಗೋ ಗಜವಕ್ತ್ರಕಃ । ನಿರ್ಮಾತಾ ಬಾಹ್ಯಸಂವಿತ್ತೇರ್ಜೀವಾನಾಂ ತದಗೋಚರಃ ॥ **(c)** ಅಷ್ಟಾದಶ ಮುಖಾನ್ಯಸ್ಯ ಪುಮಾಕಾರಾಣಿ ಸರ್ವಶಃ । ಮಧ್ಯಮಂ ತು ಗಜಾಕಾರಂ ಚತುರ್ಬಾಹುಃ ಪರಃ ಪುಮಾನ್ ॥ **(d)** ಪಾದೌ ಹಸ್ತಿಕರೋ ಹಸ್ತಾ ಇತಿ ಸಪ್ತಾಂಗ ಈರಿತಃ ॥

ಅ ॥ (a) ಯಾವಾಗಲೂ ಏಕಪ್ರಕಾರನಾದ ಪರಮಾತ್ಮನು (ಜೀವರ) ದೇಹದಲ್ಲಿ ನಾಲ್ಕುರೂಪಗಳಿಂದ ಇರುತ್ತಾನೆ. ॥ (b) ವೈಶ್ವಾನರನು, (ಎಲ್ಲಿದ್ದು ಎಚ್ಚರಿತನಾಗಿರುತ್ತಾನೋ ಅಂತಹ ಕಣ್ಣು ಜಾಗರಿತಸ್ಥಾನವು) ಬಲಕಣ್ಣಿನಲ್ಲಿರುವವನು. ಆನೆಯ ಮುಖದಂತೆ ಮುಖವುಳ್ಳವನು. ಜೀವರಿಗೆ ಅಗೋಚರನಾಗಿದ್ದು ಜೀವರಿಗೆ ಬಾಹ್ಯಪದಾರ್ಥವಿಷಯಕ (ಅಂದರೆ ಬಾಹ್ಯ ಪದಾರ್ಥಗಳನ್ನು ವಿಷಯೀಕರಿಸುವ) ಜ್ಞಾನವನ್ನು ನಿರ್ಮಿಸುವವನು. ॥ (c) ಈತನಿಗೆ ೧೮ ಮುಖಗಳು, ಇವುಗಳು ಎಲ್ಲವೂ ಪುರುಷಾಕಾರಗಳೇ, ಮಧ್ಯಮುಮುಖವಾದರೂ ಆನೆಯ ಮುಖದಂತಿರುವುದು. (ಅಂತೂ ೧೯ ಮುಖಗಳು.) ಸರ್ವೋತ್ತಮನಾದ ಪುರುಷನು ನಾಲ್ಕು ಭುಜಗಳುಳ್ಳವನು. (ಅಂತೂ ಎರಡುಪಾರ್ಶ್ವಗಳಲ್ಲಿ ಒಂಭತ್ತು, ಒಂಭತ್ತು ಪುರುಷ ಮುಖಗಳು, ಮಧ್ಯದಲ್ಲಿ ಒಂದುಗಜ ಮುಖವು.) ॥ (d) ಎರಡು ಪಾದಗಳು, ಆನೆಯ ಕೈಯು (ಅಂದರೆ ಎದುರಿನಲ್ಲಿರುವ ಶುಂಡಾದಂಡವು.) ನಾಲ್ಕು ಕೈಗಳು, ಹೀಗೆ ಏಳು ಅಂಗಗಳುಳ್ಳವನಾಗಿ ಹೇಳಲ್ಪಟ್ಟದ್ದಾನೆ.

**ಭಾ॥** **(a)** ಸ್ಥೂಲಾನ್ ಭೋಗಾನಿಂದ್ರಿಯೈಸ್ಸಶುಭಾನ್ ಭುಂಕ್ತೇ ನ ಚಾಶುಭಾನ್ । **(b)** ವಿಶ್ವಂ ಸ್ಥೂಲಂ ಸಮುದ್ದಿಷ್ಟಂ ಸರ್ವಗತ್ವ್ಯಾತ್ತ್ವ ಹೇತುತಃ । ತತ್ಸಂಬಂಧೀ ನರೋಽನಾಶಾದ್ವೈಶ್ವಾನರ ಉದಾಹೃತಃ ॥ **(c)** ವಿನಾಯಕಸ್ತು ವಿಶ್ವಸ್ಯ ಧ್ಯಾನಾದ್ವೈದ್ಗಜವಕ್ತ್ರತಾಂ । ತಥೈವ ತೈಜಸಧ್ಯಾನಾತ್ತ್ರಿಧ್ಯಾನಾದಿಂದ್ರ ಇಂದ್ರತಾಂ ॥ **(d)** ಚತುರ್ಥ್ಯಾನಾಚ್ಚ ರುದ್ರತ್ವಂ ರುದ್ರ ಆಪ ಜನಾರ್ದನಾತ್ । ಏವಂಭೂತ ಗುಣೋ ವಿಷ್ಣುಶ್ಚತುರಾತ್ಮಾ ಪರಾತ್ಪರಃ ॥ ಇತಿ ಮಹಾಯೋಗೇ ॥ ೩ ॥

ಅ ॥ (a) ಆ ಹರಿಯು ಸ್ಥೂಲಗಳಾದ ಶುಭವಿಷಯಗಳನ್ನೇ (ಜೀವನ) ಇಂದ್ರಿಯಗಳಿಂದ ಭೋಗಿಸುತ್ತಾನೆ. ಅಶುಭವಿಷಯಗಳನ್ನು ಭೋಗಿಸಲಾರನು. ("ಶ್ರೋತ್ರಂ ಚಕ್ಷುಃ ಸ್ಪರ್ಶನಂ ಚ ರಸನಂ ಘ್ರಾಣಮೇವ ಚ । ಅಧಿಷ್ಠಾಯ ಮನಶ್ಚಾಯಂ ವಿಷಯಾನುಪಸೇವತೇ"

ಎಂಬೀ ಗೀತಾವಚನದಿಂದಲೂ ಈ ಅರ್ಥವು ಸಿದ್ಧವಾಗುವುದು.) ॥ (b) ವಿಶ್ವವು ಸರ್ವರಿಂದಲೂ ತಿಳಿಯಲ್ಪಡುವ ಕಾರಣದಿಂದ ಸ್ಥೂಲವಸ್ತುವೆಂದು ಹೇಳಲ್ಪಡುತ್ತದೆ. (ಅದನ್ನು ಭೋಗಿಸುವುದರಿಂದ) ಆ ಸ್ಥೂಲವಸ್ತುವಿನ ಸಂಬಂಧವುಳ್ಳ ಶ್ರೀಹರಿಯು ವೈಶ್ವನು, ನಾಶವಿಲ್ಲದಿರುವುದರಿಂದ ನರನು, ಅಂತೂ 'ವೈಶ್ವಾನರ'ನೆಂದು ಹೇಳಲ್ಪಟ್ಟಿದ್ದಾನೆ. (c) ವಿನಾಯಕನಾದರೂ ವಿಶ್ವನೆಂಬ ಹರಿಯ ಉಪಾಸನೆಯಿಂದ ಗಜಮುಖಾಕಾರವನ್ನು ಹೊಂದಿದನು. ಹಾಗೆಯೇ ತೈಜಸನಧ್ಯಾನದಿಂದಲೂ ಗಜಮುಖಾಕಾರವನ್ನುಹೊಂದಿದನು. ("ತಂ ಯಥಾಯಥೋಪಾಸತೇ" ಎಂಬೀ ಶ್ರುತಿಯಿಂದ.) ಇಂದ್ರನು ವಿಶ್ವ, ತೈಜಸ, ಪ್ರಾಜ್ಞರೆಂಬ ಮೂವರನ್ನು ಧ್ಯಾನಮಾಡುವುದರಿಂದ ಇಂದ್ರತ್ವವನ್ನು ಹೊಂದಿದನು. ॥ (d) ರುದ್ರನು, ವಿಶ್ವ, ತೈಜಸ, ಪ್ರಾಜ್ಞ, ತುರೀಯ ಎಂಬ ನಾಲ್ಕು ರೂಪಗಳನ್ನು ಧ್ಯಾನಿಸಿದರಿಂದ ಜನಾರ್ದನನಿಂದ ರುದ್ರತ್ವವನ್ನು ಹೊಂದಿದನು. ವಿಷ್ಣುವು ಇಂತಹ ಗುಣಗಳುಳ್ಳವನು, ವಿಶ್ವಾದಿ ನಾಲ್ಕು ರೂಪಗಳುಳ್ಳವನು, ಸರ್ವೋತ್ತಮನೂ ಆಗಿರುತ್ತಾನೆ. ಎಂದು ಮಹಾಯೋಗದಲ್ಲಿ ಅದೆ. ॥ ೩ ॥

**ಮಂ ॥ ಸ್ವಪ್ನಸ್ಥಾನೋಽಂತಃಪ್ರಜ್ಞಃ ಸಪ್ತಾಂಗ ಏಕೋನವಿಂಶತಿಮುಖಃ ಪ್ರವಿವಿಕ್ತಭುಕ್ತೈಜಸೋ ದ್ವಿತೀಯಃ ಪಾದಃ ॥ ೪ ॥**

ಅ ॥ ಸ್ವಪ್ನಸ್ಥಾನಃ=ಜೀವನು ಎಲ್ಲಿ ಇದ್ದು ಸ್ವಾಪ್ನಪದಾರ್ಥಗಳನ್ನು ನೋಡುತ್ತಾನೋ ಅದು ಸ್ವಪ್ನವು, ಅದೇ ಸ್ಥಾನವಾಗಿ ಉಳ್ಳವನು, (ಅಂದರೆ ಕಂಠಪ್ರದೇಶದಲ್ಲಿ ಇರುವವನು.) ಅಂತಃಪ್ರಜ್ಞಃ=ಬಾಹ್ಯಪದಾರ್ಥಗಳ ಜ್ಞಾನದಿಂದುಂಟಾದ ಸಂಸ್ಕಾರಪರಿಣಾಮರೂಪಗಳಾದ ಆಂತರ ಅರ್ಥಗಳನ್ನು ತಿಳಿಸಿಕೊಡುವವನು, ಮತ್ತು ತಿಳಿಯುವವನು. ಸಪ್ತಾಂಗಃ=೭ಅಂಗಗಳುಳ್ಳವನು, ಏಕೋನವಿಂಶತಿಮುಖಃ=೧೯ಮುಖಗಳುಳ್ಳವನು, ಪ್ರವಿವಿಕ್ತಭುಕ್=ಬಾಹ್ಯಾರ್ಥಗಳಿಂದ ಇತರಗಳಾದ ಸ್ವಾಪ್ನಪದಾರ್ಥಗಳನ್ನು ಅನುಭವಿಸುವವನು, ಅನುಭವಿಸಿಕೊಡುವವನೂ, (ಇಂತಹ) ತೈಜಸಃ=ತೇಜೋಮಯವಾದ ಮನಸ್ಸಿನಲ್ಲಿ ಇದ್ದುದರಿಂದ ತೈಜಸನಾಮಕನಾದ ಹರಿಯು, ದ್ವಿತೀಯಃಪಾದಃ=ಎರಡನೇರೂಪವು. ॥ ೪ ॥

**ಭಾ॥ (a) ಜಾಗ್ರದ್ದರ್ಶನಸಂಸ್ಕಾರರೂಪತ್ವಾತ್ಸ್ವಪ್ನಗಂ ತು ಯತ್ । ಪ್ರವಿವಿಕ್ತಂ ತು ತಜ್ಜ್ಞಾನಕಾರಣೋಽಂತರ್ಜ್ಞ ಉಚ್ಯತೇ ॥**

**– ಇತಿ ವಾರಾಹೇ ॥ ೪ ॥**

ಅ ॥ (a) ಸ್ವಪ್ನಾವಸ್ಥೆಯಲ್ಲಿ ಇರುವುದು ಯಾವುದೊಂದು ವಸ್ತುವೋ, ಅದು ಜಾಗ್ರತ್ಕಾಲದಲ್ಲಿ ಇರುವ ಪದಾರ್ಥಗಳ ಜ್ಞಾನದಿಂದುಂಟಾದ ಸಂಸ್ಕಾರವೇ ಉಪಾದಾನಕಾರಣವಾಗಿವುಳ್ಳದ್ದು, ಆದುದರಿಂದ ಜಾಗ್ರತ್ಕಾಲದಲ್ಲಿ ಕಂಡ ಪದಾರ್ಥಗಳಿಂದ ಅತ್ಯಂತವಿಲಕ್ಷಣವಾದುದು. (ತೈಜಸನು) ಆ ಜ್ಞಾನಕ್ಕೆ ಕಾರಣನಾಗಿ ಅಂತರ್ಜ್ಞನೆಂದು ಹೇಳಲ್ಪಡುತ್ತಾನೆ. ಎಂದು ವಾರಾಹಪುರಾಣದಲ್ಲಿ ಇದೆ. ॥

ತಾ ॥ ಅಂತೂ ಶ್ರೀಹರಿಯು ಬಾಹ್ಯಪದಾರ್ಥಗಳಿಂದಬೇರೆಯಾದ ಸ್ವಾಪ್ನಪದಾರ್ಥವನ್ನು ಭೋಗಿಸುತ್ತಾನೆ. ಸಾರಪದಾರ್ಥಭೋಕ್ತನು ಜೀವನಿಗೂ ಭೋಗವನ್ನು ಕೊಡುವವನು. ಕಾರಣ "ಪ್ರವಿವಿಕ್ತಭುಕ್" ಎನ್ನಿಸಿಕೊಳ್ಳುತ್ತಾನೆ. ಅಂತಹ ಪದಾರ್ಥವನ್ನು ದೇಹದ ಒಳಗೆ ಮನಸಿನಿಂದ ಜೀವನಿಗೆ ತಿಳಿಸಿಕೊಡುತ್ತಾನೆ. ತಾನೂ ತಿಳಿಯುತ್ತಾನೆ. ಕಾರಣ 'ಅಂತಃಪ್ರಜ್ಞ'ನೆನ್ನಿಸಿಕೊಳ್ಳುತ್ತಾನೆ. ॥ ೪ ॥

ಮಂ ॥ ಯತ್ರ ಸುಪ್ತೋ ನ ಕಂಚನ ಕಾಮಂ ಕಾಮಯತೇ ನ ಕಂಚನ ಸ್ವಪ್ನಂ ಪಶ್ಯತಿ ತತ್ಸುಷುಪ್ತಂ ಸುಷುಪ್ತಸ್ಥಾನ ಏಕೀಭೂತಃ ಪ್ರಜ್ಞಾನಘನ ಏವಾನಂದಮಯೋ ಹ್ಯಾನಂದಭುಕ್ಚೇತೋಮುಖಃ ಪ್ರಾಜ್ಞಸ್ತೃತೀಯಃ ಪಾದಃ ॥ ೫ ॥

ಅ ॥ ಯತ್ರ=ಯಾವದೇಶದಲ್ಲಿ, ಸುಪ್ತಃ=ಅಜ್ಞಾನಯುಕ್ತನಾದ ಅಥವಾ ಸುಖರೂಪಿಯಾದ ಶ್ರೀಹರಿಯನ್ನು ಹೊಂದಿದ ಜೀವನು, ಕಂಚನ=ಯಾವುದೊಂದು, ಕಾಮಂ=ಇಚ್ಛಿಸುವ ವಿಷಯವನ್ನು, ನ ಕಾಮಯತೇ=ಇಚ್ಛಿಸುವುದಿಲ್ಲ. ಕಂಚನ ಸ್ವಪ್ನಂ=ಯಾವ ಸ್ವಾಪ್ನಪದಾರ್ಥವನ್ನೂ, ನ ಪಶ್ಯತಿ=ನೋಡುವುದಿಲ್ಲ. (ಸ್ವಾತ್ಮಕಾಲ ಅಜ್ಞಾನಗಳನ್ನು ಹೊರತು ಯಾವುದನ್ನೂ ನೋಡುವುದಿಲ್ಲ.) ತತ್=ಆಸ್ಥಾನವು, ಸುಷುಪ್ತಂ=ಸುಷುಪ್ತವೆನ್ನಿಸಿಕೊಳ್ಳುತ್ತದೆ. ಸುಷುಪ್ತಸ್ಥಾನಃ=ಸುಷುಪ್ತವೇ ಸ್ಥಾನವಾಗಿ ಉಳ್ಳವನು. (ಅಂದರೆ ಹೃದಯಾಕಾಶವೇ ಸ್ಥಾನವಾಗಿ ಉಳ್ಳವನು.) ಏಕೀಭೂತಃ=ವಿಶ್ವತೇಜಸರಿಂದ ಸಂಬಂಧ ವಿಶೇಷರೂಪವಾದ ಐಕ್ಯವನ್ನು ಹೊಂದಿದನು, ಪ್ರಜ್ಞಾನಘನಃ=ಚೆನ್ನಾಗಿ ತಿಳಿಸಲ್ಪಟ್ಟ ಜೀವನು ಉಳ್ಳವನು. (ಅಂದರೆ ಸುಷುಪ್ತಿಕಾಲದಲ್ಲಿ ಜೀವಸ್ವರೂಪವನ್ನೂ,ಅಜ್ಞಾನವನ್ನೂ,ಕಾಲವನ್ನೂ ಹೀಗೆ ಮೂರನ್ನು ಜೀವನಿಗೆ ತಿಳಿಸಿಕೊಡುತ್ತಾನೆ.) ಆನಂದಮಯಃ=ಪೂರ್ಣಾನಂದನು, ಹಿ=ಶ್ರುತಿಪ್ರಸಿದ್ಧವು. ಆನಂದಭುಕ್=ವಿಷಯಭೋಗಗಳನ್ನು ಹೊರತೇ ಆನಂದವನ್ನು ಭೋಗಿಸುವವನು, ಭೋಗಿಸಿಕೊಡುವವನು. ಚೇತೋಮುಖಃ=ಜ್ಞಾನಸ್ವರೂಪವಾದ ಮುಖವುಳ್ಳವನು. (ಅಂದರೆ ಜ್ಞಾನಸ್ವರೂಪಗಳಾದ ಎಲ್ಲಾ ಅವಯವಗಳುಳ್ಳವನು ) (ಇಂತಹ) ಪ್ರಾಜ್ಞಃ=ಪ್ರಕರ್ಷೇಣ ನ ಜ್ಞಾಪಯತಿ ಎಂಬೀ ವ್ಯುತ್ಪತ್ತಿಯಿಂದ ಜೀವಸ್ವರೂಪ ಕಾಲ ಅಜ್ಞಾನಗಳಿಂದ ಇತರವಾದ ಯಾವ ಬಾಹ್ಯಪದಾರ್ಥವನ್ನಾಗಲೀ ಸ್ವಾಪ್ನಪದಾರ್ಥವನ್ನಾಗಲೀ ತಿಳಿಸಿಕೊಡದಿರುವುದರಿಂದ ಪ್ರಾಜ್ಞನಾಮಕನು, ತೃತೀಯಃಪಾದಃ=(ಆತ್ಮನಿಗೆ) ಮೂರನೇ ರೂಪವು. ॥ ೫ ॥

ಭಾ॥ (a) ಸುಷುಪ್ತಂ ತು ತಮೋ ಜ್ಞೇಯಂ ಹರಿಂ ಪ್ರಾಪ್ಯ ತದಾವೃತಃ ।
ನ ಕಾಮಯೇನ್ನೈವ ಪಶ್ಯೇಜ್ಜೀವಃ ಸ್ವಾತ್ಮತಮೋ ವಿನಾ ॥
(b) ಕಾಲಂ ಚ ತಸ್ಯ ಸ್ಥಾನಸ್ಯ ಪತಿಃ ಪ್ರಾಜ್ಞೋ ಹರಿಃ ಸ್ವಯಂ ।
ಚಿತ್ತಸ್ಥೋ ದರ್ಶಯೇತ್ತಸ್ಮಾತ್ತೈಜಸಃ ಸ್ವಪ್ನಕೃದ್ಧರಿಃ ॥ (c) ನ
ಬಾಹ್ಯಂ ಜ್ಞಾಪಯೇದ್ಯಸ್ಮಾತ್ಪ್ರಾಜ್ಞಸ್ತೇನ ಜನಾರ್ದನಃ । ಏಕೀ
ಭಾವಂ ವ್ರಜೇತಾಂ ಚ ತೇನ ವಿಶ್ವಶ್ಚ ತೈಜಸಃ । ಏಕೀಭೂತಸ್ತದಾ
ಪ್ರಾಜ್ಞೋ (d) ಘನೋ ಜೀವಸ್ತಮೋವೃತಃ । ತನ್ಮಾತ್ರಸ್ಯ ಸ
ಕಾಲಸ್ಯ ಘನಪ್ರಜ್ಞಃ ಪ್ರದರ್ಶನಾತ್ ॥ ಇತಿ ಪ್ರಕಾಶಿಕಾಯಾಂ ॥

ಅ ॥ (a) ಸುಪ್ತಿಯಾದರೂ ಅಜ್ಞಾನ ಕಾರ್ಯವೆಂದು ತಿಳಿಯತಕ್ಕದು. ಪ್ರಾಜ್ಞನಾಮಕ ಹರಿಯನ್ನು ಪ್ರಾಪಿಸಿ (ಇರತಕ್ಕ ಪುರುಷನು ಯಾವಕಾರಣದಿಂದ) ಆ ಅಜ್ಞಾನದಿಂದೊಡಗೂಡಿದ್ದಾನೋ! (ಆದುದರಿಂದ) ಜೀವನು, ಸ್ವಸ್ವರೂಪ, ಅಜ್ಞಾನ, ಕಾಲ ಇವುಗಳನ್ನು ಹೊರತು (ಯಾವುದನ್ನೂ) ಇಚ್ಛಿಸಲಾರನು. (ಯಾವ ಪದಾರ್ಥವನ್ನೂ ಸ್ವಪ್ನವನ್ನೂ) ನೋಡಲಾರನು. ॥ (b) ಅಜ್ಞಾನ ಕಾರ್ಯವಾದ ಸುಷುಪ್ತ್ಯಾಖ್ಯಸ್ಥಾನಕ್ಕೆ ಸಾಕ್ಷಾತ್ಪ್ರಾಜ್ಞರೂಪಿಯಾದ ಶ್ರೀ ಹರಿಯು ಸ್ವಾಮಿಯಾಗಿರುತ್ತಾನೆ. ಸ್ವಪ್ನವನ್ನು ಮಾಡುವ ಶ್ರೀ ಹರಿಯು

(ಯಾವಕಾರಣದಿಂದ) ಮನಸ್ಸಿನೊಳಗೆ ಇದ್ದವನಾಗಿ ಸ್ವಾಪ್ನಪದಾರ್ಥವನ್ನು ತೋರಿಸುವನೋ, ಆದುದರಿಂದ 'ತೈಜಸ'ನೆನ್ನಿಸಿಕೊಳ್ಳುತ್ತಾನೆ. ॥ (c) ಜನಾರ್ದನನು ಯಾವಕಾರಣದಿಂದ ಬಾಹ್ಯ ಪದಾರ್ಥವನ್ನಾಗಲೀ (ಸ್ವಾಪ್ನಪದಾರ್ಥವನ್ನಾಗಲೀ ಯಾವುದನ್ನೂ) ತಿಳಿಸಿಕೊಡುವುದಿಲ್ಲವೋ, ಆದುದರಿಂದ ಪ್ರಾಜ್ಞನೆನ್ನಿಸಿಕೊಳ್ಳುತ್ತಾನೆ. (ಯಾವಕಾರಣದಿಂದ) ಸುಷುಪ್ತ್ಯವಸ್ಥೆಯಲ್ಲಿ ವಿಶ್ವನು ತೈಜಸನೂ ಕೂಡ ಇವರಿಬ್ಬರು ಆ ಪ್ರಾಜ್ಞನಿಂದ ಐಕ್ಯವನ್ನು ಹೊಂದಿರುವರೋ (ಆದುದರಿಂದನ ಪ್ರಾಜ್ಞರೂಪಿಯಾದ ಶ್ರೀ ಹರಿಯು ಏಕೀಭೂತನೆಂದು ಹೇಳಲ್ಪಡುತ್ತಾನೆ. ॥ (d) ಅಜ್ಞಾನ ದಿಂದೊಡಗೂಡಿದ ಜೀವನು ಘನನೆಂದು ಹೇಳಲ್ಪಡುತ್ತಾನೆ. ಕಾಲ ಸುಷುಪ್ತ್ಯವಸ್ಥೆ ಸುಖಗ ಳಿಂದೊಡಗೂಡಿದ, ಅಜ್ಞಾನದಿಂದ ಸಂಬದ್ಧನಾದ ಕೇವಲ ಜೀವನಿಗೆ ತೋರಿಸುವುದರಿಂದ ಘನ ಪ್ರಜ್ಞನೆನ್ನಿಸಿಕೊಳ್ಳುತ್ತಾನೆ. (ಅಂತೂ ಕಾಲಸುಷುಪ್ತ್ಯವಸ್ಥೆಸುಖಗಳಿಂದ ಸಹಿತನಾದ ಅಜ್ಞಾನ ಯುಕ್ತನಾದ ಜೀವನನ್ನೇ ಚೆನ್ನಾಗಿ ತಿಳಿಸಿಕೊಡುತ್ತಾನೆ.) ಎಂದು ಪ್ರಕಾಶಿಕಾ ಎಂಬ ಗ್ರಂಥದಲ್ಲಿ ಹೇಳಿಯದೆ.

ಭಾ॥ (a) ಆನಂದಮಯಃ ಪೂರ್ಣಾನಂದಃ। ಚೇತೋ ಮುಖೋಜ್ಞಾನಸ್ವರೂಪ ಮುಖಃ। ಪ್ರಜ್ಞಾನಘನ ಇತಿ ವಿಪರೀತಸಮಾಸಃ। ಘನಪ್ರಜ್ಞ ಇತಿ ವಕ್ಷ್ಯಮಾಣತ್ವಾತ್ ॥ (b) ವಿಷಯಭೋಗಂ ವಿನಾಽನಂದಮಾ ತ್ರಭುಕ್ತ್ವಾದಾನಂದಭುಗಿತಿ ವಿಶೇಷಃ ॥ (c) ಆನಂದಮಯತ್ವ ಚೇತೋಮುಖತ್ವ ಸರ್ವಜ್ಞತ್ವ ಸರ್ವೇಶ್ವರತ್ವಾದಿ ಚತುಷ್ಟಯೇಽಪಿ ಸಮಂ ॥ (d) ಅನ್ಯತ್ರಾತಿದೇಶಾರ್ಥಮೇಕತ್ರಾನಂದಮಯತ್ವಂ ಚೇತೋಮುಖತ್ವಂ ಚೋಕ್ತಂ ॥ ೫ ॥

ಅ ॥ (a) 'ಆನಂದಮಯಃ' ಅಂದರೆ ಪರಿಪೂರ್ಣವಾದ ಆನಂದವುಳ್ಳವನು, 'ಚೇತೋ ಮುಖಃ' ಅಂದರೆ ಜ್ಞಾನಸ್ವರೂಪವಾದ ಮುಖವುಳ್ಳವನು, (ಘನಂ ಪ್ರಜ್ಞಾಪಯತೀತಿ ಘನಪ್ರ ಜ್ಞಾನಃ ಎಂದಾಗಬೇಕಿದ್ದಿತು. ಕಾರಣ 'ಪ್ರಜ್ಞಾನಘನಃ ಎಂಬುವುದು ಹೇಗೆ ಆಗುವುದು, ಎಂದರೆ) ಪ್ರಜ್ಞಾನಘನಃ ಎಂಬುವುದು ವ್ಯತ್ಯಸ್ತವಾದ ಸಮಾಸವು. (ಅಂದರೆ ಘನ ಶಬ್ದವನ್ನು ಮೊದಲು ಹೇಳದೆ ಮೇಲೆ (ನಿಪಾತ) ಹೇಳಿಯದೆ. 'ಘನಪ್ರಜ್ಞಃ' ಎಂದು ಮೇಲೆ ಹೇಳುವುದರಿಂದ. ॥ (b) ವಿಷಯಭೋಗವನ್ನು ಹೊರತು, ವಿಷಯಭೋಗದಿಂದ ಅಭಿವ್ಯಕ್ತವಾಗದಿರುವ ಕೇವಲ ಸ್ವರೂಪಾ ನಂದವನು ಭೋಗಿಸುವುದರಿಂದ ಆನಂದಭುಕ್ ಎಂದು (ಪ್ರಾಜ್ಞನಿಗೇನೇ) ವಿಶೇಷವು. (ವಿಶ್ವತೈ ಜಸರಿಗಾದರೂ ಬಾಹ್ಯ ಅಂತರ್ವಿಷಯಭೋಗದಿಂದಲೇ ಆನಂದವನ್ನು ಹೇಳಿರುವುದು.) ॥ (c) ಆನಂದಮಯತ್ವ, ಚೇತೋಮುಖತ್ವ, ಸರ್ವಜ್ಞತ್ವ, ಸರ್ವೇಶ್ವರತ್ವಮೊದಲಾದುದು, ವಿಶ್ವಮೊದ ಲಾದ ನಾಲ್ಕು ಭಗವದ್ರೂಪದಲ್ಲಿಯೂ ಸಮವು. ॥ (d) ವಿಶ್ವ, ತೇಜಸ, ತುರೀಯ, ಈ ಮೂರಲ್ಲಿಯೂ ಇಟ್ಟುಕೊಳ್ಳುವುದಕ್ಕೋಸ್ಕರ ಪ್ರಾಜ್ಞನಲ್ಲಿ ಆನಂದಮಯತ್ವವೂ ಚೇತೋಮುಖ ತ್ವವೂ ಕೂಡ ಹೇಳಲ್ಪಟ್ಟದೆ. ॥ ೫ ॥

**ಮಂ ॥ ಏಷ ಸರ್ವೇಶ್ವರಃ ಏಷ ಸರ್ವಜ್ಞಃ ಏಷೋಽಂತರ್ಯಾಮೀ । ಏಷ ಯೋನಿಃ ಸರ್ವಸ್ಯ ಪ್ರಭವಾಪ್ಯಯೌ ಹಿ ಭೂತಾನಾಂ ॥ ೬ ॥**

ಅ ॥ ಏಷಃ=ಈ ವಿಶ್ವಾದಿ ನಾಲ್ಕು ರೂಪಗಳುಳ್ಳ ಶ್ರೀ ಹರಿಯು, ಸರ್ವೇಶ್ವರಃ=ಎಲ್ಲ ರಿಗೂ ಸ್ವಾಮಿಯು. ಏಷಃ=ಇವನು, ಸರ್ವಜ್ಞಃ=ಸಮಸ್ತವನ್ನೂ ತಿಳಿದವನು, ಏಷಃ=ಈತನು,

ಅಂತರ್ಯಾಮೀ=ಒಳಗೆ ಇದ್ದು ನಿಯಮಿಸುವವನು, ಹಿ=ಯಾವಕಾರಣದಿಂದ, ಭೂತಾನಾಂ=ಎಲ್ಲಾ ಪ್ರಾಣಿಗಳ, ಪ್ರಭವಾಪ್ಯಯೌ=ಉತ್ಪತ್ತಿನಾಶಗಳಿಗೆ ಕಾರಣನೋ, (ಅದುದರಿಂದ) ಏಷಃ=ಈತನು, ಸರ್ವಸ್ಯ=ಎಲ್ಲರಿಗೂ, ಯೋನಿಃ=ಕಾರಣನು. ॥ ೬ ॥

ಭಾ॥ (a) ಏಷ ಚತೂರೂಪ ಆತ್ಮಾ ಸರ್ವಜ್ಞತ್ವ ಸರ್ವೇಶರತ್ವಾದಿಲಕ್ಷಣಃ ॥ (b) ಪರಮಾತ್ಮಾ ಚತೂರೂಪಃ ಸರ್ವಪ್ರಾಣಿಶರೀರಗಃ । ವಿಶ್ವಶ್ಚ ತೈಜಸಃ ಪ್ರಾಜ್ಞಸ್ತುರೀಯಶ್ಚೇತಿ ಕಥ್ಯತೇ ॥ (c) ತಾನಿ ರೂಪಾಣಿ ಸರ್ವಾಣಿ ಪೂರ್ಣಾನಂದಮಯಾನಿ ತು । ಚೇತೋಮುಖಾನಿ ಸರ್ವಾಣಿ ಪೂರ್ಣಜ್ಞಾನಸ್ವರೂಪತಃ ॥ (d) ಮುಖಶಬ್ದಸ್ತು ಸರ್ವಸ್ಯ ದೇಹಸ್ಯಾಪ್ಯುಪಲಕ್ಷಕಃ । ತಥಾಽಪಿ ಮುಖಶಬ್ದೋಽಯಂ ಪೂರ್ಣತ್ವಂ ಸೂಚಯೇದ್ವಿಭೋಃ । ಜ್ಞಾನಸ್ಯ ಮುಖ್ಯವಾಚಿತ್ವಾನ್ಮುಖವಾಚ್ಯಪಿ ಸನ್ನ್ಯತಃ ॥ ಇತಿ ಮಾರ್ಕಂಡೇಯೇ ॥ (e) ಪೂರ್ಣಾನಂದಸ್ವರೂಪಸ್ಯ ಕ್ರೀಡಾಭೋಗೋ ನ ಚಾನ್ಯಥಾ । ಯಥಾಽದಿತ್ಯಸ್ಯ ದೀಪೇನ ವಿಶೇಷೋನಸ್ತಿ ಕಶ್ಚನ ॥ ಇತಿ ಬ್ರಹ್ಮತರ್ಕೇ ॥ ೬ ॥

ಅ॥ (a) 'ಏಷಃ' ಅಂದರೆ ನಾಲ್ಕುರೂಪಗಳುಳ್ಳ ಆತ್ಮಶಬ್ದವಾಚ್ಯನಾದ ಶ್ರೀಹರಿಯು ಸರ್ವಜ್ಞತ್ವ, ಸರ್ವೇಶ್ವರತ್ವ ಮೊದಲಾದ ಲಕ್ಷಣಗಳುಳ್ಳವನು. ॥ (b) ವಿಶ್ವ, ತೈಜಸ, ಪ್ರಾಜ್ಞ, ತುರೀಯ ಎಂದು ನಾಲ್ಕು ರೂಪಗಳುಳ್ಳ ಶ್ರೀ ಪರಮಾತ್ಮನು ಎಲ್ಲಾ ಪ್ರಾಣಿಗಳ ಶರೀರದಲ್ಲಿಯೂ ಇದ್ದಾನೆಂದು ಹೇಳಲ್ಪಡುತ್ತಾನೆ. ॥ (c) ಆ ಎಲ್ಲಾ ರೂಪಗಳೂ ಪರಿಪೂರ್ಣ ಆನಂದ ಪ್ರಾಚುರ್ಯವುಳ್ಳವುಗಳೇ, ಎಲ್ಲಾರೂಪಗಳೂ ಪರಿಪೂರ್ಣ ಜ್ಞಾನಸ್ವರೂಪಗಳಾದುದರಿಂದ ಚೇತೋಮುಖಗಳು (ಅಂದರೆ ಜ್ಞಾನಸ್ವರೂಪಮುಖವುಳ್ಳವುಗಳು). ॥ (d) ಮುಖಶಬ್ದವಾದರೂ ಎಲ್ಲಾ ದೇಹಕ್ಕೂ ಉಪಲಕ್ಷಕವು (ಉಪಲಕ್ಷಣವೆಂದರೆ ತನ ಅರ್ಥವನ್ನು ಬಿಡದೆ ಬೇರೆ ಅರ್ಥವನ್ನು ಸ್ವೀಕರಿಸುವುದು, ಅಂತೂ ಮುಖಶಬ್ದದಿಂದ ಎಲ್ಲಾ ಅವಯವಗಳನ್ನು ಇಟ್ಟುಕೊಳ್ಳತಕ್ಕದು). (ಯದ್ಯಪಿ ಈ ಮುಖಶಬ್ದವು ಸ್ವಾಭಾವಿಕವಾಗಿ ವದನವೆಂಬ ಅರ್ಥವನ್ನು ಹೇಳುವುದಾಗಿ ಆಗುತ್ತದೆ). ಆದರೂ (ಮುಖಶಬ್ದವು) ಮುಖ್ಯ ರೂಪ ಅರ್ಥವನ್ನು ಹೇಳುವುದರಿಂದ ಶ್ರೀ ಹರಿಯ ಜ್ಞಾನಕ್ಕೆ ಪರಿಪೂರ್ಣತ್ವವನ್ನು ಸೂಚಿಸುತ್ತದೆ. "ಮಣಿರ್ಮುಖಂ ಪ್ರಧಾನಂ ಚೇತ್ಯುತ್ತಮಸ್ಯ ವಚೋ ಭವೇತ್" ಎಂಬೀ ವಚನದಿಂದ ಮುಖ ಶಬ್ದಕ್ಕೆ ಮುಖ್ಯ (ಉತ್ತಮ, ಪೂರ್ಣ) ವೆಂದರ್ಥವು. (ಅಂತೂ ಚೇತಸಾ=ಜ್ಞಾನದಿಂದ, ಮುಖಃ=ಉತ್ತಮನು, ಪೂರ್ಣನು ಎಂದು ಹೇಳಿದ ಹಾಗಾಯಿತು). ಹೀಗೆ ಮಾರ್ಕಂಡೇಯ ಪುರಾಣದಲ್ಲಿ ಹೇಳಿಯದೆ. ॥ (e) ಹೇಗೆ ಸೂರ್ಯನಿಗೆ (ಪೂಜಾಕಾಲದಲ್ಲಿ) ದೀಪತೋರಿಸುವುದರಿಂದ ಯಾವುದೊಂದು ವಿಶೇಷವು ಇರುವುದಿಲ್ಲವೋ, ಹಾಗೆಯೇ ಪರಿಪೂರ್ಣವಾದ ಆನಂದಸ್ವರೂಪವುಳ್ಳವನಾದಾಗ್ಯೂ ಶ್ರೀ ಹರಿಗೆ ಸ್ಥೂಲಾದಿ ವಿಷಯಭೋಗವು ಕ್ರೀಡೆಯೇ, ಬೇರೆ ರೀತಿಯಾಗಿ (ಅಂದರೆ ಇಲ್ಲದಿರುವ ಹೆಚ್ಚು ಆನಂದವನ್ನು ಹುಟ್ಟಿಸುವುದು) ಅಲ್ಲವೇ ಅಲ್ಲ. ಅಂತೂ ವಿಷಯ ಭೋಗದಿಂದ ಶ್ರೀ ಹರಿಯ ಆನಂದಕ್ಕೆ ವಿಶೇಷವು ಇಲ್ಲವೇ ಇಲ್ಲ) ಈ ಪ್ರಕಾರ ಬ್ರಹ್ಮತರ್ಕದಲ್ಲಿ ಇದೆ. ॥ ೬ ॥

ಉಪನಿಷತ್ತು ತಾನೇ ಪ್ರಮಾಣವಾಗಿದ್ದರೂ ದಾರ್ಢ್ಯಾರ್ಥವಾಗಿ ತಾನು ಹೇಳಿದ ಅರ್ಥದಲ್ಲಿ ಬಹ್ಮದೃಷ್ಟಗಳಾದ ಮಂತ್ರಗಳನ್ನು ಉದಾಹರಿಸುತ್ತದೆ.—

ಮಂ || ಅತ್ರೈತೇ ಶ್ಲೋಕಾ ಭವಂತಿ। ಬಹಿಃಪ್ರಜ್ಞೋ ವಿಭುರ್ವಿಶ್ವೋ ಹ್ಯಂತಃ ಪ್ರಜ್ಞಸ್ತು ತೈಜಸಃ । ಘನಃಪ್ರಜ್ಞಸ್ತಥಾ ಪ್ರಾಜ್ಞ ಏಕ ಏವ ತ್ರಿಧಾ ಸ್ಮೃತಃ || ೭ ||

ಅ || ಅತ್ರ=ಈ ವಿಷಯದಲ್ಲಿ, ಏತೇ=ಮುಂದೆ ಹೇಳುವ, ಶ್ಲೋಕಾಃ=ಮಂತ್ರಗಳು, ಭವಂತಿ=(ಸಂವಾದಿಗಳು, ಅಂದರೆ ತನ್ನ ವಿಷಯಗಳೇ ವಿಷಯವಾಗಿವುಳ್ಳ ಪ್ರಮಾಣಾಂತರಗಳು) ಆಗುತ್ತವೆ. ವಿಭುಃ=ಸಮರ್ಥನಾದ, ವಿಶ್ವಃ=ವೈಶ್ವಾನರನು, ಬಹಿಃಪ್ರಜ್ಞಃ=ಬಾಹ್ಯಾರ್ಥಗಳನ್ನು ತಿಳಿಸಿಕೊಡತಕ್ಕವನು, ತೈಜಸಸ್ತು=ತೈಜಸನಾದರೂ, ಅಂತಃಪ್ರಜ್ಞಃ=ಒಳಗೆ ಇರುವ ವಾಸನಾಮಯ ಪದಾರ್ಥಗಳನ್ನು ತಿಳಿಸಿಕೊಡತಕ್ಕವನು, ತಥಾ=ಹಾಗೆಯೇ, ಪ್ರಾಜ್ಞಃ=ಪ್ರಾಜ್ಞರೂಪಿಯು, ಘನಃಪ್ರಜ್ಞಃ=ಅಜ್ಞಾನಯುಕ್ತನಾದ ಜೀವನನ್ನು ತಿಳಿಸಿಕೊಡತಕ್ಕವನು. ಏಕ ಏವ=ಒಬ್ಬನೇ, ತ್ರಿಧಾ=ಮೂರುಪ್ರಕಾರವಾಗಿ, ಸ್ಮೃತಃ=(ಮಂತ್ರದ್ರಷ್ಟನಾದ ಬ್ರಹ್ಮನಿಂದ) ಸ್ಮರಿಸಲ್ಪಟ್ಟಿದ್ದಾನೆ. || ೭ ||

ಮಂ || ದಕ್ಷಿಣಾಕ್ಷಿಮುಖೇ ವಿಶ್ವೋ ಮನಸ್ಯಂತಸ್ತು ತೈಜಸಃ | ಆಕಾಶೇ ಚ ಹೃದಿ ಪ್ರಾಜ್ಞಸ್ತ್ರಿಧಾ ದೇಹೇ ವ್ಯವಸ್ಥಿತಃ || ೮ ||

ಅ || ವಿಶ್ವಃ=ವೈಶ್ವಾನರನು, ದಕ್ಷಿಣಾಕ್ಷಿಮುಖೇ=ಬಲಕಣ್ಣಿನ ಅಗ್ರಭಾಗದಲ್ಲಿ, ತೈಜಸಸ್ತು=ತೈಜಸನಾದರೂ, ಮನಸಿ ಅಂತಃ=ಮನಸ್ಸಿನಲ್ಲಿ ಒಳಗೆ, ಪ್ರಾಜ್ಞಃ=ಪ್ರಾಜ್ಞರೂಪಿಯು, ಆಕಾಶೇ ಚ ಹೃದಿ=ಹೃದಯಾಕಾಶದಲ್ಲಿ, (ಹೀಗೆ) ದೇಹೇ=ಶರೀರದಲ್ಲಿ, ತ್ರಿಧಾ=ಮೂರುಪ್ರಕಾರವಾಗಿ, ವ್ಯವಸ್ಥಿತಃ=ಇರುತ್ತಾನೆ. || ೮ ||

ಮಂ || ವಿಶ್ವೋ ಹಿ ಸ್ಥೂಲಭುಙ್ನಿತ್ಯಂ ತೈಜಸಃ ಪ್ರವಿವಿಕ್ತಭುಕ್ । ಆನಂದಭುಕ್ತಥಾ ಪ್ರಾಜ್ಞಸ್ತ್ರಿಧಾ ಭೋಗಂ ನಿಬೋಧತ || ೯ ||

ಅ || ವಿಶ್ವಃ=ವಿಶ್ವನಾಮಕ ಹರಿಯು, ನಿತ್ಯಂ=ನಿರಂತರದಲ್ಲಿ, ಸ್ಥೂಲಭುಕ್=ಸ್ಥೂಲವಸ್ತುವನ್ನು ಭೋಗಿಸುವವನು, ಹಿ=ಪ್ರಸಿದ್ಧವು, ತೈಜಸಃ=ತೈಜಸನು, ಪ್ರವಿವಿಕ್ತಭುಕ್=ಸ್ವಾಪ್ನಪದಾರ್ಥಗಳನ್ನು ಭೋಗಿಸುವವನು, ತಥಾ=ಹಾಗೆಯೇ, ಪ್ರಾಜ್ಞಃ=ಪ್ರಾಜ್ಞರೂಪಿಯು, ಆನಂದಭುಕ್=ಆನಂದವನ್ನೇ ಭೋಗಿಸುವವನು. (ಹೀಗೆ) ತ್ರಿಧಾ=ಮೂರುಪ್ರಕಾರವಾಗಿ, ಭೋಗಂ=ಭೋಗವನ್ನು, ನಿಬೋಧತ=ತಿಳಿಯಿರಿ. (ಹೀಗೆ ಮಂತ್ರದ್ರಷ್ಟನಾದ ಬ್ರಹ್ಮನು ಉಪದೇಶಕ್ಕೆ ಅರ್ಹರಾದವರನ್ನು ಕುರಿತು ಹೇಳಿದನು). || ೯ ||

ಮಂ || ಸ್ಥೂಲಂ ತರ್ಪಯತೇ ವಿಶ್ವಂ ಪ್ರವಿವಿಕ್ತಂ ತು ತೈಜಸಂ | ಆನಂದಂ ಚ ತಥಾ ಪ್ರಾಜ್ಞಂ ತ್ರಿಧಾ ತೃಪ್ತಿಂ ವಿಜಾನಥ || ೧೦ ||

ಅ || ಸ್ಥೂಲಂ=ಸ್ಥೂಲವಾದ ಭೋಗ್ಯವಸ್ತುವು, ವಿಶ್ವಂ=ವಿಶ್ವನಾಮಕನಾದ ಹರಿಯನ್ನು, ತರ್ಪಯತೇ=ತೃಪ್ತಿಪಡಿಸುತ್ತದೆ. ಪ್ರವಿವಿಕ್ತಂ ತು=ಸ್ವಾಪ್ನವಸ್ತುವಾದರೂ, ತೈಜಸಂ=ತೈಜಸನಾಮಕ ಹರಿಯನ್ನು, (ತೃಪ್ತಿಪಡಿಸುತ್ತದೆ). ತಥಾ=ಹಾಗೆಯೇ, ಆನಂದಂ ಚ=ಆನಂದವು, ಪ್ರಾಜ್ಞಂ=ಪ್ರಾಜ್ಞನಾಮಕ ಹರಿಯನ್ನು, (ತೃಪ್ತಿಪಡಿಸುತ್ತದೆ). (ಹೀಗೆ) ತ್ರಿಧಾ=ಮೂರುಪ್ರಕಾರವಾಗಿ, ತೃಪ್ತಿಂ=ತೃಪ್ತಿಯನ್ನು ವಿಜಾನಥ=ತಿಳಿಯಿರಿ. || ೧೦ ||

ಮಂ ॥ ತ್ರಿಷು ಧಾಮಸು ಯದ್ಭೋಜ್ಯಂ ಭೋಕ್ತಾ ಯಶ್ಚ ಪ್ರಕೀರ್ತಿತಃ ।
ವೇದೈತದುಭಯಂ ಯಸ್ತು ಸ ಭುಂಜಾನೋ ನ ಲಿಪ್ಯತೇ ॥ ೧೧ ॥

ಅ ॥ ತ್ರಿಷು ಧಾಮಸು=ಕಣ್ಣು, ಮನಸ್ಸು, ಹೃದಯಾಕಾಶಗಳೆಂಬ ಮೂರು ಸ್ಥಾನಗಳಲ್ಲಿ, ಯತ್‌ಭೋಜ್ಯಂ=ಯಾವ ಸ್ಥೂಲವೊದಲಾದುದು ಭೋಗಿಸಲಿಕ್ಕೆ ಯೋಗ್ಯವಾದುದೋ, ಯಶ್ಚ=ಯಾವ ವಿಶ್ವಾದಿರೂಪಿಯು, ಭೋಕ್ತಾ=ಭೋಗಿಸುವವನಾಗಿ, ಪ್ರಕೀರ್ತಿತಃ=ಹೇಳಲ್ಪಟ್ಟಿರುತ್ತಾನೋ. ಏತದುಭಯಂ=ಈ ಭೋಕ್ತೃಭೋಗ್ಯರೂಪವಾದ ಎರಡು ವಸ್ತುವನ್ನು, ಯಸ್ತು=ಯಾವಾತನು, ವೇದ=ತಿಳಿಯುತ್ತಾನೋ, ಸಃ=ಆ ಜ್ಞಾನಿಯು, ಭುಂಜಾನಃ=(ವಿಷಯಗಳನ್ನು) ಅನುಭವಿಸುವವನಾದಾಗ್ಯೂ, ನ ಲಿಪ್ಯತೇ=ಅವುಗಳಿಂದ ಉಂಟಾದ ಲೇಪವನ್ನು ಹೊಂದುವುದಿಲ್ಲ. (ಅಂದರೆ ವಿಷಯಾನುಭವನಿಮಿತ್ತವಾಗಿ ಉಚ್ಚನೀಚತ್ವಾದಿ ವಿಕಾರವನ್ನು ಹೊಂದಲಾರನು). ॥ ೧೧ ॥

ಭಾ॥ (a) ಪ್ರಮಾಣಸ್ಯ ಪ್ರಮಾಣಂ ಚ ಬಲವದ್ವಿದ್ಯತೇ ಮುನೇ । ಬ್ರಹ್ಮದೃಷ್ಟಾನತೋ ಮಂತ್ರಾನ್ ಪ್ರಮಾಣಂ ಸಲಿಲೇಶ್ವರಃ । ಅತ್ರ ಶ್ಲೋಕಾ ಭವಂತೀತಿ ಚಕಾರೈವ ಪೃಥಕ್ ಪೃಥಕ್ ॥ ಇತಿ ಗಾರುಡೇ ॥
(b) ಖಂಡಚತುಷ್ಟಯೇಽಪಿ ಪೃಥಕ್ ಪೃಥಕ್ । ಪ್ರಭವಃ ಸರ್ವಭಾವಾನಾಂ ವಿಷ್ಣುರೇವ ನ ಸಂಶಯಃ । ಇತ್ಥಂ ಸತಾಂ ನಿಶ್ಚಯಃ ಸ್ಯಾದನ್ಯಥಾತ್ವಸತಾಂ ಭವೇತ್ ॥ ೭-೮-೯-೧೦-೧೧ ॥

ಅ ॥ (a) ಎಲೈ ಮುನಿಯೇ, ಪ್ರಮಾಣಕ್ಕೂ ಸಂವಾದ ಭೂತವಾದ ಪ್ರಮಾಣವು ಇದ್ದರೆ ಆ ಪ್ರಮಾಣವು ಅತಿಶ್ರೇಷ್ಠವೇ ಆಗುತ್ತದೆ. ಆದುದರಿಂದ, ಸಲಿಲೇಶ್ವರಃ=ವರುಣನು ಬ್ರಹ್ಮದೃಷ್ಟಗಳಾದ ಮಂತ್ರಗಳನ್ನು ಸಂವಾದ ಪ್ರಮಾಣವನ್ನಾಗಿ ಇಲ್ಲಿ ಮಂತ್ರಗಳು ಆಗುತ್ತವೆ. ಎಂದು ಪ್ರತ್ಯೇಕ ಪ್ರತ್ಯೇಕವಾಗಿಯೇ ಮಾಡಿದನು.. ಎಂದು ಗಾರುಡದಲ್ಲಿ. ॥ (b) ನಾಲ್ಕು ಖಂಡದಲ್ಲಿಯೂ ಪ್ರತ್ಯೇಕ ಪ್ರತ್ಯೇಕ ಎಲ್ಲಾ ಪದಾರ್ಥಗಳಿಗೂ ಶ್ರೀ ಹರಿಯೇ ಉತ್ಪಾದಕನು, ಸಂದೇಹವಿಲ್ಲವು. ಈ ಪ್ರಕಾರ ಸಜ್ಜನರ ನಿಶ್ಚಯವು. ದುರ್ಜನರಿಗೆ ಬೇರೆ ರೀತಿಯಾಗಿಯೇ ಆಗುವುದು. ॥ ೭ ॥ ೮ ॥ ೯ ॥ ೧೦ ॥ ೧೧ ॥

ಮಂ ॥ ಪ್ರಭವಸ್ಸರ್ವಭಾವಾನಾಂ ಸತಾಮಿತಿ ವಿನಿಶ್ಚಯಃ । ಸರ್ವಂ ಜನಯತಿ ಪ್ರಾಣಶ್ಚೇತೋಂಶೂನ್ಪುರುಷಃ ಪೃಥಕ್ ॥ ೧೨ ॥

ಅ ॥ (ವಿಶ್ವಾದಿನಾಲ್ಕುರೂಪಿಯಾದ ಶ್ರೀ ಹರಿಯು) ಸರ್ವಭಾವಾನಾಂ=ಎಲ್ಲಾ ವಸ್ತುಗಳಿಗೂ, ಪ್ರಭವಃ=(ಯಥಾಯೋಗ್ಯವಾಗಿ) ಉತ್ಪಾದಕನು, ಇತಿ=ಈ ಪ್ರಕಾರವಾಗಿ, ಸತಾಂ=ಸಜ್ಜನರ, ವಿನಿಶ್ಚಯಃ=ವಿಶೇಷಾಕಾರವಾಗಿ ನಿಶ್ಚಯವು, ಪುರುಷಃ=ಗುಣಪರಿಪೂರ್ಣನಾದ, ಪ್ರಾಣಃ=ಚೇಷ್ಟಕನಾದ, ಪ್ರಾಣನಾಮಕನಾದ ಶ್ರೀ ಹರಿಯು, ಸರ್ವಂ=ಸಮಸ್ತವನ್ನು, ಚೇತೋಂಶೂನ್=ಜ್ಞಾನಾಖ್ಯ ರಶ್ಮಿಯುಕ್ತರಾದ ಜೀವರನ್ನು, ಪೃಥಕ್=ದೇವ, ದಾನವ, ಮನುಷ್ಯಾದಿಗಳ ಪ್ರಭೇದದಿಂದ, ಜನಯತಿ=ಹುಟ್ಟಿಸುತ್ತಾನೆ. ॥ ೧೨ ॥

ಭಾ॥ ಸರ್ವಸ್ಯ ಹಿ ಪ್ರಣೇತೃತ್ವಾತ್ಪ್ರಾಣೋ ನಾರಾಯಣಃ ಪರಃ । ತಾಂ ಸೃಷ್ಟಿಂ ಬಹುಧಾ ಪ್ರಾಹುರ್ಜ್ಞಾನಿನೋಽಜ್ಞಾನಿನಸ್ತಥಾ ॥ ೧೨ ॥

ಅ ॥ ಸರ್ವೋತ್ತಮನಾದ ನಾರಾಯಣನು ಸರ್ವಕ್ಕೂ ಪ್ರೇರಕನಾದುದರಿಂದ ಪ್ರಾಣ ನಾಮಕನು. ॥ ಅಂತಹ ಸೃಷ್ಟಿಯನ್ನು ಜ್ಞಾನಿಗಳು, ಹಾಗೆಯೇ ಅಜ್ಞಾನಿಗಳು ಬಹು ಪ್ರಕಾರ ವಾಗಿ ಹೇಳುತ್ತಾರೆ. ॥ ೧೨ ॥

**ಮಂ ॥ ವಿಭೂತಿಂ ಪ್ರಸವಂ ತ್ವನ್ಯೇ ಮನ್ಯಂತೇ ಸೃಷ್ಟಿಚಿಂತಕಾಃ । ಸ್ವಪ್ನಮಾ ಯಾಸರೂಪೇತಿ ಸೃಷ್ಟಿರನ್ಯೈರ್ವಿಕಲ್ಪಿತಾ ॥ ೧೩ ॥**

ಅ ॥ ಸೃಷ್ಟಿಚಿಂತಕಾಃ=ಸೃಷ್ಟಿವಿಷಯಕ ವಿಚಾರವುಳ್ಳ, ಅನ್ಯೇ=ಇತರರು, ಬ್ರಹ್ಮಪರಿ ಣಾಮವಾದಿಗಳು (ಅಂದರೆ ಭಾಸ್ಕರರು), ಪ್ರಸವಂ=ಸೃಷ್ಟಿಯನ್ನು, ವಿಭೂತಿಂ=ಜೀವ, ಜಡ ರೂಪದಿಂದ ಅನೇಕ ಪ್ರಕಾರವನ್ನಾಗಿ (ಬ್ರಹ್ಮನಿಗೇನೇ), ಮನ್ಯಂತೇ=ತಿಳಿಯುತ್ತಾರೆ, ('ಸೃಷ್ಟಿ ಚಿಂತಕಾಃ' ಎಂಬುವುದರಿಂದ 'ಶಾಸ್ತ್ರರೀತಿಯಾಗಿ ಬ್ರಹ್ಮನ ಸ್ವರೂಪವನ್ನು ತಿಳಿಯದಿದ್ದವರು' ಎಂದು ಸೂಚಿತವಾಯಿತು.) ಅನ್ಯೈಃ=ಇತರರಿಂದ (ಮಾಯಾವಾದಿಗಳಿಂದ, ಅಂದರೆ ಜಗತ್ತು ಬ್ರಹ್ಮವಿವರ್ತವು, ಬ್ರಹ್ಮನಲ್ಲಿಯೇ ಆರೋಪಿತವು; ಎಂದು ಹೇಳುವವರಿಂದ), ಸೃಷ್ಟಿಃ= (ಜಗತ್ತಿನ) ಸೃಷ್ಟಿಯು, ಸ್ವಪ್ನಮಾಯಾಸರೂಪಾ=ಸ್ವಾಪ್ನಪದಾರ್ಥವು ಹೇಗೆ ಸುಪ್ತನಾದ ಆತ್ಮ ನಲ್ಲಿ ಆರೋಪಿತವೋ, ಅದರಂತೆಯೇ ಬ್ರಹ್ಮನಲ್ಲಿ ಆರೋಪಿತವು. ಮಾಯೆಯಿಂದ ನಿರ್ಮಿ ಸಲ್ಪಟ್ಟ ವಸ್ತುಗಳಂತೆಯೇ ಮಿಥ್ಯಾಭೂತವು, ಇತಿ=ಈ ಪ್ರಕಾರವಾಗಿ, ವಿಕಲ್ಪಿತಾ=ನಿಶ್ಚಯಿ ಸಲ್ಪಟ್ಟದೆ. ॥ ೧೩ ॥

ಭಾ॥ (a) ವಿಷ್ಣುರ್ವಿಕೃತಿಮಾಯಾತಿ ಮಹದಾದಿಸ್ವರೂಪಿಣೀಂ । ತತ್ತದ್ವಿವಿಧ ಭೂತಿಸ್ತು ಸೃಷ್ಟಿಃ ಪ್ರೋಕ್ತಾ ಹ್ಯಪಂಡಿತೈಃ ॥ (b) ಸ್ವಪ್ನಮಾ ಯಾಸರೂಪಾಂ ಚ ಕೇಚಿದಜ್ಞಾ ಜನಾ ವಿದುಃ ॥ ೧೩ ॥

ಅ ॥ (a) ವಿಷ್ಣುವು ಮಹತ್ತು ಮೊದಲಾದ ಸ್ವರೂಪವಾದ ವಿಕಾರವನ್ನು ಹೊಂದು ತ್ತಾನೆ. ॥ ಅಜ್ಞಾನಿಗಳಾದ (ಭಾಸ್ಕರರಿಂದಲಾದರೂ) ಸೃಷ್ಟಿಯು ಆಯಾಯ ಪದಾರ್ಥಗಳ ಆಕಾರದಿಂದ ಅನೇಕ ಪ್ರಕಾರವಾಗಿ ಉತ್ಪತ್ತಿಯೆಂದು ಹೇಳಲ್ಪಟ್ಟದೆ. ॥ (b) ಅಜ್ಞಾನಿಗಳಾದ ಕೆಲವರು (ಮಾಯಾವಾದಿಗಳು) (ಸೃಷ್ಟಿಯನ್ನು) ಸ್ವಾಪ್ನಪದಾರ್ಥಕ್ಕೆ ಸಮಾನವನ್ನಾಗಿಯೂ, ಐಂದ್ರಜಾಲಿಕ ವಸ್ತುವಿಗೆ ಸಮಾನವಾದುದನ್ನಾಗಿಯೂ ತಿಳಿಯುತ್ತಾರೆ. ॥ ೧೩ ॥

**ಮಂ ॥ ಇಚ್ಛಾಮಾತ್ರಂ ಪ್ರಭೋಸ್ಸೃಷ್ಟಿರಿತಿ ಸೃಷ್ಟೌ ವಿನಿಶ್ಚಿತಾಃ । ಕಾಲಾತ್ಪ್ರ ಸೂತಿಂ ಭೂತಾನಾಂ ಮನ್ಯಂತೇ ಕಾಲಚಿಂತಕಾಃ ॥ ೧೪ ॥**

ಅ ॥ ಪ್ರಭೋಃ=ಪ್ರಭುಕರ್ತೃಕವಾದ, ಸೃಷ್ಟಿಃ=(ಜಗತ್ತಿನ) ಸೃಷ್ಟಿಯು, ಇಚ್ಛಾ ಮಾತ್ರಂ=ಕೇವಲ ಇಚ್ಛಾಧೀನವಾದುದು, ಇತಿ=ಈಪ್ರಕಾರವಾಗಿ, ಸೃಷ್ಟೌ=ಸೃಷ್ಟಿವಿಷಯದಲ್ಲಿ, ವಿನಿಶ್ಚಿತಾಃ=ನಿಶ್ಚಯವುಳ್ಳ ಬ್ರಹ್ಮಾದಿದೇವತೆಗಳು, (ಹೇಳುತ್ತಾರೆ), ಕಾಲಚಿಂತಕಾಃ=ಕಾಲಕ್ಕೇನೆ ಸರ್ವೋತ್ತಮತ್ವವನ್ನು ತಿಳಿಯುವವರು, ಭೂತಾನಾಂ=ಪ್ರಾಣಿಗಳಿಗೆ, ಪ್ರಸೂತಿಂ=ಉತ್ಪತ್ತಿ ಯನ್ನು, ಕಾಲಾತ್=ಕಾಲದಿಂದಲೇ, ಮನ್ಯಂತೇ=ತಿಳಿಯುತ್ತಾರೆ. ॥ ೧೪ ॥

ಭಾ॥ (a) ಅವಿಕಾರಸ್ಯ ಚಿನ್ಮಾತ್ರ ಸ್ವೇಚ್ಛಯೈವಾಖಿಲಂ ಜಗತ್ । ಉತ್ಪದ್ಯತ ಇತಿ ಪ್ರಾಜ್ಞಾಃ ಪ್ರಾಹುರ್ಬ್ರಹ್ಮಾದಯೋಽಖಿಲಾಃ ॥ (b) ಪೂರ್ಣ ಶಕ್ತೇಃ ಕುತೋ ಮಾಯಾ ಸಾರ್ವಜ್ಞಾತ್ಸ್ವಪ್ನವತ್ಕುತಃ ॥

(c) ಸರ್ವದೋಷವ್ಯತೀತಸ್ಯ ವಿಕಾರಃ ಕುತ ಇಷ್ಯತೇ ॥ (d) ತಸ್ಮಾದೇವಾವಿಕಾರಸ್ಯ ವಿಷ್ಣೋರಿಚ್ಛಾವಶಾದಿದಂ । ಯಥಾರ್ಥಮೇವ ಸಂಭೂತಮಿತಿ ವೇದವಚೋಽಖಿಲಂ ॥ (e) ಕೇಚಿತ್ಕಾಲತ ಏವೈತಾಂ ಸೃಷ್ಟಿಮಾಹುರಕೋವಿದಾಃ । ಕೇಚಿದ್ರುದ್ರಾದ್ಬ್ರಹ್ಮಣಶ್ಚ ಪ್ರಧಾನಾದಿತಿ ಚಾಪರೇ ॥ (f) ವಿಮೂಢಾಃ ಸರ್ವ ಏವೈತೇ ಯತೋ ನಾರಾಯಣಃ ಪರಃ । ಸರ್ವಕರ್ತಾ ಸರ್ವಶಕ್ತಿರೇಕ ಏವ ನಚಾಪರಃ । ಪ್ರಧಾನಕಾಲಬ್ರಹ್ಮೇಶಮುಖಾಃ ಸರ್ವೇಽಪಿ ತದ್ವಶಾಃ ॥ ೧೪ ॥

ಅ ॥ (a) ವಿಕಾರಶೂನ್ಯನಾದ ಶ್ರೀಹರಿಯ ಕೇವಲ ಜ್ಞಾನರೂಪವಾದ ತನ್ನ ಇಚ್ಛೆಯಿಂದಲೇ ಎಲ್ಲಾ ಜಗತ್ತು ಹುಟ್ಟುತ್ತದೆ ಎಂದು (ಚತುರ್ಮುಖ) ಬ್ರಹ್ಮನೇ ಮೊದಲಾದ ಎಲ್ಲಾ ಪ್ರಾಜ್ಞರು ಹೇಳುತ್ತಾರೆ. (b) ಪರಿಪೂರ್ಣಸಾಮರ್ಥ್ಯವುಳ್ಳ ಶ್ರೀಹರಿಗೆ ಏಕೆ ಮಾಯೆಯು, ಸರ್ವಜ್ಞನಾದುದರಿಂದ ಸ್ವಪ್ನದಂತೆ ಹೇಗೆ ಆಗುವುದು.

ತಾ ॥ "ಅಕ್ಷಮಾಃ ಸತ್ಯಸೃಷ್ಟೌ ಹಿ ಮಾಯಾಸೃಷ್ಟಿಂ ವಿತನ್ವತೇ । ಅನಂತಾಚಿಂತ್ಯವಿಭವಃ ಕಥಂ ತಾಮೀಹತೇ ಹರಿಃ"॥ ಎಂಬೀ ವಚನಾನುಸಾರವಾಗಿ ಅಚಿಂತ್ಯಶಕ್ತಿಯುಳ್ಳ ಶ್ರೀಹರಿಗೆ ಮಾಯಾಸೃಷ್ಟಿಯು ದುರ್ಬಲನಂತೆ ಏಕೆ ಮಾಡಬೇಕಾಗುವುದು? ಸ್ವಪ್ನವು ಅಜ್ಞಾನಕಾರ್ಯವಾದುದರಿಂದ, ಶ್ರೀ ಹರಿಯು ಸರ್ವಜ್ಞನೇ ಆದುದರಿಂದ ಸ್ವಾಪ್ನಪದಾರ್ಥದಂತೆ ಆತನ ಸೃಷ್ಟಿಯು ಎಷ್ಟುಮಾತ್ರಕ್ಕೂ ಅಲ್ಲವು. ಅಂತೂ "ಸ್ವಪ್ನಮಾಯಾಸರೂಪಾ" ಎಂಬುವ ಪಕ್ಷವು ಕೇವಲ ಅಸಂಗತವು. ॥ ಅ ॥ (c) ಎಲ್ಲಾ ದೋಷಗಳಿಂದಲೂ ರಹಿತನಾದ ಶ್ರೀಹರಿಗೆಯಾವ ಕಾರಣದಿಂದ ವಿಕಾರವು ಇಚ್ಛಿಸಲ್ಪಡುತ್ತದೆ.

ತಾ ॥ ಶ್ರೀ ಹರಿಯೇ, ಜಗತ್ತಿನ ಆಕಾರವಾಗಿ ಪರಿಣಾಮವನ್ನು ಹೊಂದುತ್ತಾನೆ ಎಂದಂಗೀಕರಿಸಿದರೆ ತುಚ್ಛಪದಾರ್ಥಗಳ ಆಕಾರದಿಂದಲೂ ವಿಕಾರಬರಬೇಕಾಗುವುದು. ಕಾರಣ "ವಿಭೂತಿಂ ಪ್ರಸವಂ"ಎಂಬುವಲ್ಲಿ ಹೇಳಿದ ಭಾಸ್ಕರನ ಮತವು ಕೇವಲ ಅನುಚಿತವು.॥ ಅ॥ (d) ಆದುದರಿಂದಲೇ ವಿಕಾರಶೂನ್ಯನಾದ ಶ್ರೀಹರಿಯ ಇಚ್ಛೆಯ ಅಧೀನದಿಂದಲೇ ಈ ಯಥಾರ್ಥವೇ ಆದ ಜಗತ್ತು ಹುಟ್ಟಿತು. ಈ ಪ್ರಕಾರವಾಗಿ ಎಲ್ಲಾ ("ಕವಿರ್ಮನೀಷೀ ಪರಿಭೂಃ ಸ್ವಯಂಭೂರ್ಯಾಥಾತಥ್ಯತೋಽರ್ಥಾನ್ ವ್ಯದಧಾಚ್ಛಾಶ್ವತೀಭ್ಯಃ ಸಮಾಭ್ಯಃ" "ಯಚ್ಚಿಕೇತ ಸತ್ಯಮಿತ್" "ಸತ್ಯಮೇವ ಜಗತ್" ಇದೇಮೊದಲಾದ ವೇದವಚನವು (ಅದೆ). ॥ (e) ಅಪಂಡಿತರಾದ ಕೆಲವರು ಕಾಲದಿಂದಲೇ ಈ ಸೃಷ್ಟಿಯನ್ನು ಹೇಳುತ್ತಾರೆ. ॥ ಕೆಲವರು ರುದ್ರನಿಂದಲೂ ಕೆಲವರು ಬ್ರಹ್ಮನಿಂದಲೂ (ಹೇಳುತ್ತಾರೆ). ಇತರರು ಪ್ರಧಾನದಿಂದಲೇ ಎಂದು ಹೇಳುತ್ತಾರೆ. ॥ (f) ಇವರೆಲ್ಲರೂ ಅತಿಮೂಢರೇ ಆಗಿರುತ್ತಾರೆ. ಏಕೆಂದರೆ, ಸರ್ವೋತ್ತಮನಾದ ನಾರಾಯಣನೊಬ್ಬನೇ ಸರ್ವಕರ್ತನು, ಸರ್ವಶಕ್ತನು, ಇತರನು ಇಲ್ಲವೇ ಇಲ್ಲ. ॥ ಪ್ರಧಾನ, ಕಾಲ, ಚತುರ್ಮುಖ, ರುದ್ರ ಮೊದಲಾದ ಎಲ್ಲರೂ ಕೂಡ ಆ ಹರಿಯ ಅಧೀನರೇ ಆಗಿರುತ್ತಾರೆ. ॥ ೧೪ ॥

**ಮಂ ॥ ಭೋಗಾರ್ಥಂ ಸೃಷ್ಟಿರಿತ್ಯನ್ಯೇ ಕ್ರೀಡಾರ್ಥಮಿತಿ ಚಾಪರೇ । ದೇವಸ್ಯೈಷ ಸ್ವಭಾವೋಽಯಮಾಪ್ತಕಾಮಸ್ಯ ಕಾ ಸ್ಪೃಹೇತಿ ॥ ೧೫ ॥**

॥ ಇತಿ ಪ್ರಥಮಃ ಖಂಡಃ ॥

ಅ ॥ (ಅತೃಪ್ತನಾದ ವಿಷ್ಣುವಿಗೆ) ಭೋಗಾರ್ಥಂ=ಭೋಗಾಖ್ಯಪ್ರಯೋಜನಕ್ಕಾಗಿ, ಸೃಷ್ಟಿರಿತಿ=ಸೃಷ್ಟಿಯೆಂದು, ಅನ್ಯೇ=ಇತರರು(ಹೇಳುತ್ತಾರೆ), ಕ್ರೀಡಾರ್ಥಂ=(ಪ್ರಲಯಕಾಲದಲ್ಲಿ ಜಗತ್ತು ಇಲ್ಲದಿರುವುದರಿಂದ ಈಶ್ವರನೊಬ್ಬನಿಗೆ ಆಲಸ್ಯವು ಬರುವುದರಿಂದ ಅದನ್ನು ಪರಿಹರಿಸಿ) ಕ್ರೀಡೆಗೋಸ್ಕರ, ಸೃಷ್ಟಿರಿತಿ=ಸೃಷ್ಟಿಯೆಂದು, ಅಪರೇ=ಇತರರು (ರಾಮಾನುಜರು) (ಹೇಳುತ್ತಾರೆ), ದೇವಸ್ಯ=ಕ್ರೀಡಾದಿಗುಣವಿಶಿಷ್ಟನಾದ ಶ್ರೀಹರಿಗೆ, ಅಯಂ=ಈ ಸೃಷ್ಟ್ಯಾದಿ ವಿಷಯವಾದ, ಏಷಃ=ಇಚ್ಛಾಪೂರ್ವಕವಾದ ವ್ಯಾಪಾರವು, ಸ್ವಭಾವಃ=ಸ್ವಭಾವವೇ, (ಪ್ರಯೋಜನಕ್ಕಾಗಿ ಅಲ್ಲ), ಆಪ್ತಕಾಮಸ್ಯ=ಪೂರ್ಣಕಾಮನಾದ ಶ್ರೀಹರಿಗೆ, ಸ್ಪೃಹಾ=ಪ್ರಯೋಜನದ ಅಭಿಲಾಷೆಯು, ಕಾ=ಯಾವುದು, (ಯಾವುದೂ ಇಲ್ಲ). ಇದು ಶ್ರುತಿಯ ತಾತ್ಪರ್ಯ ವಿಷಯಭೂತವಾದ ಅರ್ಥವು. ಇತಿ=ವಿಶ್ವತೈಜಸ ಪ್ರಾಜ್ಞರೂಪನಿರೂಪಣವು ಸಮಾಪ್ತವಾಯಿತು. ॥೫॥

ಭಾ॥ **(a)** ತಸ್ಯಾಪಿ ವಿಷ್ಣೋಃ ಸೃಷ್ಟಿಂ ತು ಕೇಚಿದಾಹುರನೈಪುಣಾಃ । ಅತೃಪ್ತಸ್ಯೈವ ಭೋಗಾರ್ಥಂ ಕ್ರೀಡಾರ್ಥಂ **(b)** ತು ವಿಪಶ್ಚಿತಃ ॥ ಸಾ ಚ ಕ್ರೀಡಾ ಸ್ವಭಾವೋಽಸ್ಯ ಕುತೋಽತೃಪ್ತ್ಯಾ ಸ್ಪೃಹಾ ವಿಭೋಃ ॥
– ಇತಿ ಹರಿವಂಶೇಷು ॥ ೧೫ ॥ ೧ ॥

ಅ ॥ (a) ಪಾಂಡಿತ್ಯವಿಲ್ಲದಿರುವ ಕೆಲವು ವಾದಿಗಳು ಆ ವಿಷ್ಣುಕರ್ತೃಕವಾದ ಜಗತ್ಸೃಷ್ಟಿಯನ್ನು ಅತೃಪ್ತನೇ ಆದ ಅವನ ಭೋಗಕ್ಕೋಸ್ಕರವೆಂದು ಹೇಳುತ್ತಾರೆ. ಕೆಲವರು (ರಾಮಾನುಜರು) ಪ್ರಲಯದಲ್ಲಿ ಒಬ್ಬನೇ ಇದ್ದು ಆಲಸ್ಯಬರುವುದರಿಂದ ಅದನ್ನು ಪರಿಹರಿಸುವ ಬಗ್ಗೆ ಕ್ರೀಡೆಗೋಸ್ಕರವೆಂದು (ಹೇಳುತ್ತಾರೆ). ॥ (b) ವಿದ್ವಾಂಸರಾದರೂ, ಆ ಜಗತ್ಸರ್ಜನಾದಿರೂಪವ್ಯಾಪಾರವು ಈತನಿಗೆ ಸ್ವಭಾವವೇ, ವಿಭುವಿಗೆ ಅತೃಪ್ತಿಯಿಂದುಂಟಾದ ಭೋಗಕ್ಕೋಸ್ಕರ (ಆಲಸ್ಯಪರಿಹಾರಕ್ಕೋಸ್ಕರ ಉಂಟಾದ ಕ್ರೀಡೆಗೋಸ್ಕರವಾಗಲೀ) ಇಚ್ಛೆಯು ಎಲ್ಲಿಂದ. ಎಂದು ಹರಿವಂಶಗಳಲ್ಲಿ ಇದೆ. ॥ ೧೫ ॥ ೧ ॥

॥ ೧ನೇ ಖಂಡವು ಸಮಾಪ್ತವಾಯಿತು. ॥ ಶ್ರೀಃ ॥

## ॥ ಎರಡನೇ ಖಂಡವು. ॥

**ಮಂ ॥ ನಾಂತಃಪ್ರಜ್ಞಂ ನ ಬಹಿಃ ಪ್ರಜ್ಞಂ ನೋಭಯತಃ ಪ್ರಜ್ಞಂ ನ ಪ್ರಜ್ಞಾನಘನಂ ನ ಪ್ರಜ್ಞಂ ನಾಪ್ರಜ್ಞಮದೃಷ್ಟಮವ್ಯವಹಾರ್ಯಮಲಕ್ಷಣಮಚಿಂತ್ಯಮವ್ಯಪದೇಶ್ಯಮೈಕಾತ್ಮ್ಯಪ್ರತ್ಯಯಸಾರಂ ಪ್ರಪಂಚೋಪಶಮಂ ಶಿವಮದ್ವೈತಂ ಚತುರ್ಥಂ ಮನ್ಯಂತೇ ಸ ಆತ್ಮಾ ಸ ವಿಜ್ಞೇಯಃ॥**

ಅ ॥ ನಾಂತಃಪ್ರಜ್ಞಂ=ದೇಹದ ಒಳಗೆ ಇರತಕ್ಕ ಸ್ವಾಪ್ನಪದಾರ್ಥಗಳನ್ನು ತೋರಿಸದಿರುವವನು (ಅಂದರೆ ಸ್ವಪ್ನಾವಸ್ಥೆಯನ್ನು ಮಾಡದಿರುವವನು), ನ ಬಹಿಃ ಪ್ರಜ್ಞಂ=ಹೊರಗೆ ಇರುವ ಜಾಗ್ರತ್ಕಾಲೀನ ಪದಾರ್ಥಗಳನ್ನು ತೋರಿಸದಿರುವವನು, (ಅಂದರೆ ಜಾಗ್ರದವಸ್ಥೆಯನ್ನು ಮಾಡದಿರುವವನು), ನೋಭಯತಃ ಪ್ರಜ್ಞಂ=ಬಾಹ್ಯಾಭ್ಯಂತರರೂಪಗಳಾದ ಅರ್ಥಗಳನ್ನು ತಿಳಿಸದೆ ಇರುವವನು, ನ ಪ್ರಜ್ಞಾನಘನಂ=ಅಜ್ಞಾನದಿಂದೊಡಗೂಡಿದ ಜೀವನಿಗೆ ಸುಪ್ತ್ಯವಸ್ಥಾಕಾಲ ಸುಖಗಳನ್ನು ತಿಳಿಸದಿರುವವನು, (ಸುಪ್ತ್ಯವಸ್ಥೆಯನ್ನು ಮಾಡದಿರುವವನು) ನ ಪ್ರಜ್ಞಂ=ಅಸಂಪ್ರಜ್ಞಾತ ಸಮಾಧ್ಯವಸ್ಥೆಯನ್ನು ಮಾಡದಿರುವವನು, ನಾಪ್ರಜ್ಞಂ=ಚೆನ್ನಾಗಿ ತಿಳಿಸಿಕೊಡು

ವವನೇ, (ಅಂದರೆ ಮುಕ್ತರಿಗೆ ಅವರವರಿಗೆ ಯೋಗ್ಯವಾದ ಜ್ಞಾನವನ್ನು ಕೊಡುವವನೇ), ಅದೃಷ್ಟಂ=ಅಮುಕ್ತರ ದೃಷ್ಟಿಗೆ ಅಗೋಚರನು, ಅವ್ಯವಹಾರ್ಯಂ=ಮುಕ್ತಿಯನ್ನು ಹೊರತು ಸಂಸಾರದಲ್ಲಿ ಶ್ರೀಹರಿಯ ರೂಪವನ್ನು ಜನರಿಂದ ಗ್ರಹಿಸಲಿಕ್ಕೂ ವ್ಯವಹರಿಸಲಿಕ್ಕೂ ಅವಿಷಯನು. ಅಲಕ್ಷಣಂ=ಜಾಗ್ರದಾದ್ಯವಸ್ಥಾಪ್ರವರ್ತಕತ್ವರೂಪ ಧರ್ಮಶೂನ್ಯನು, ಅಚಿಂತ್ಯಂ=ಅಚಿಂತ್ಯಶಕ್ತಿಯುಳ್ಳವನು, (ಅದರಿಂದಲೇ) ಅವ್ಯಪದೇಶ್ಯಂ=ವ್ಯಪದೇಶಮಾಡಲಿಕ್ಕೆ ಅಶಕ್ಯನು, ಐಕಾತ್ಮ್ಯಪ್ರತ್ಯಯಸಾರಂ=ಪ್ರಧಾನನು, ಪೂರ್ಣನು, ಜ್ಞಾನರೂಪನು, ಆನಂದರೂಪನು, ಪ್ರಪಂಚೋಪಶಮಂ=ವ್ಯಾಪ್ತನೂ ಉತ್ಕೃಷ್ಟಆನಂದರೂಪನೂ, ಶಿವಂ=ನಿರ್ದುಃಖಸುಖರೂಪನು, ಅದ್ವೈತಂ=("ದ್ವಿತ್ವೇನ=ವಸ್ತುತತ್ವಾಪೇಕ್ಷಯಾ ಅನ್ಯಾತ್ಮಕತ್ವಾದಿರೂಪ ದ್ವಿತೀಯೇನ ಪ್ರಕಾರೇಣ, ಇತಂ=ಜ್ಞಾತಂ ವಸ್ತು, ದ್ವೀತಂ, ಅಂದರೆ ವಸ್ತುವಿನಯಾಥಾರ್ಥ್ಯಕ್ಕಿಂತ ಇತರವಾದ ಎರಡನೇ ಪ್ರಕಾರದಿಂದ ತಿಳಿಯಲ್ಪಟ್ಟವಸ್ತುವು ದ್ವೀತವು. ದ್ವೀತಸ್ಯೇದಂ ದ್ವೈತಂ ಅಂದರೆ ಮಿಥ್ಯಾಜ್ಞಾನವು. ನ ವಿದ್ಯತೇ ದ್ವೈತಂ=ಮಿಥ್ಯಾಜ್ಞಾನಂ ಯಸ್ಮಾತ್ತತ್ ಅದ್ವೈತಂ" ಎಂಬೀ ವ್ಯುತ್ಪತ್ತಿಯಿಂದ)ನಾನು ನನ್ನದು ಇದೇ ಮೊದಲಾದ ಜೀವನ ಮಿಥ್ಯಾಜ್ಞಾನವನ್ನು ಹೋಗಲಾಡಿಸುವವನು, (ಇಂತಹ ಗುಣವಿಶಿಷ್ಟನನ್ನು, ಆತ್ಮನ)ಚತುರ್ಥಂ=ನಾಲ್ಕನೇ ರೂಪವನ್ನಾಗಿ, (ಬ್ರಹ್ಮಾದಿ ದೇವತೆಗಳು), ಮನ್ಯಂತೇ=ತಿಳಿಯುತ್ತಾರೆ, ಸಃ=ಆ ನಾಲ್ಕುರೂಪವುಳ್ಳ, ಆತ್ಮಾ=ಯಾವ ಆತ್ಮನೋ, ಸಃ=ಅವನೇ, ವಿಜ್ಞೇಯಃ=(ಮುಮುಕ್ಷುಗಳಿಂದ) ವಿಶೇಷಾಕಾರವಾಗಿ ತಿಳಿಯಲಿಕ್ಕೆ ಯೋಗ್ಯನು. ‖ ೧ ‖

ಭಾ‖ **(a)** ವಿಷ್ಣುಸ್ತುರೀಯರೂಪೇಣ ದ್ವಾದಶಾಂತೇ ವ್ಯವಸ್ಥಿತಃ । **(b)** ಮುಕ್ತಾನಾಂ ಪ್ರಾಪ್ಯರೂಪೋऽಸೌ ವ್ಯವಹಾರೇ ನ ದೃಶ್ಯತೇ ‖ **(c)** ಸಮ್ಯಕ್ಸಮಾಹಿತಾನಾಂ ತು ಪ್ರಾಪ್ತಾನಾಂ ಷೋಡಶೀಂ ಕಲಾಂ। ಅಪರೋಕ್ಷದೃಶಾಂ ಕ್ವಾಪಿ ತುರೀಯಂ ದೃಶ್ಯತೇ ಪದಂ ‖

ಅ ‖ (a) ಶ್ರೀ ವಿಷ್ಣುವು ತುರೀಯ ರೂಪದಿಂದ (ಮೂಗಿನ ಬುಡವನ್ನಾರಂಭಿಸಿ ಮೇಲಿನ) ೧೨ ಅಂಗುಲದ ಅಂತ್ಯದಲ್ಲಿ (ಶಿರಸ್ಸಿನ ಮಧ್ಯ ಪ್ರದೇಶದಲ್ಲಿ) ಇರುತ್ತಾನೆ. ‖ (b) ಈ ತುರೀಯನಾಮಕ ಶ್ರೀ ಹರಿಯು ಮುಕ್ತರಿಗೆ ಹೊಂದಲಿಕ್ಕೆ ಯೋಗ್ಯವಾದ ಸ್ವರೂಪವುಳ್ಳವನು. (ಅಂತೂ ಭಕ್ತರಿಗೆ ಮುಕ್ತಿಯನ್ನು ಕೊಡುವವನು.) ವ್ಯವಹಾರ ದೆಶೆಯಲ್ಲಿ (ಅಂದರೆ ಸಂಸಾರದಲ್ಲಿ ಅಮುಕ್ತರಿಂದ) ಕಾಣಲ್ಪಡುವುದಿಲ್ಲ. ‖ (c) ಚೆನ್ನಾಗಿ ಶ್ರೀಹರಿಯಲ್ಲಿಯೇ ಮನಸ್ಸನ್ನು ಇಟ್ಟು ಧ್ಯಾನಿಸುವ, ೧೬ನೇ ಕಲೆಯಾದ ಮುಖ್ಯಪ್ರಾಣನನ್ನು ಹೊಂದಿದ (ಅಂದರೆ ಮುಖ್ಯಪ್ರಾಣನ ಪರಮಾನುಗ್ರಹಕ್ಕೆ ಪಾತ್ರರಾದ) ಅಪರೋಕ್ಷ ಜ್ಞಾನಿಗಳಾದ ಜೀವನ್ಮುಕ್ತರಿಂದಲೂ, ಪ್ರಾಪಿಸಲಿಕ್ಕೆ ಯೋಗ್ಯವಾದ ತುರೀಯ ನಾಮಕ ರೂಪವು ಕಾಲವಿಶೇಷದಲ್ಲಿಯೇ ಕಾಣಲ್ಪಡುತ್ತದೆ. ‖ (ಅವರಿಂದಲೂ ಯಾವಾಗಲೂ ಕಾಣಲ್ಪಡುವುದಿಲ್ಲ.) ಆದರೆ ಪ್ರಾರಬ್ಧಕರ್ಮ ಪ್ರತಿಬಂಧಕ ಹೋದಮೇಲೆ ಕಾಣಲ್ಪಡುತ್ತದೆ.

ಭಾ‖ **(a)** ಅಂತರ್ಬಹಿಶ್ಚ ಸೌಪ್ತಂ ಚ ಸಮಾಧಿಜ್ಞಾನಮೇವ ಚ । ಬಹಿಃ ಶಬ್ದಾದಿಕಂ ಜಾನನ್ಪಶ್ಯನ್ಸ್ವಪ್ನಂ ತಥೈವ ಚ ‖ ಯದಾ ಭವತಿ **(b)** ಸಾಽವಸ್ಥಾ ಹ್ಯುಭಯಜ್ಞಾನಶಬ್ದಿತಾ । ಏತತ್ಸರ್ವಂ ತುರೀಯೇಣ ರೂಪೇಣ ನ ಕರೋತ್ಯಜಃ ‖ **(c)** ಸರ್ವಜ್ಞಾನಪ್ರದಶ್ಚಾಪಿ ಮುಕ್ತಸ್ಯೈವ ತುರೀಯಕಃ ‖ ಇತಿ ಬ್ರಹ್ಮಾಂಡೇ‖

ಅ || (a) ಅಂತರಾರ್ಥವನ್ನು, ಬಾಹ್ಯಾರ್ಥವನ್ನು, ಸುಪ್ತಜೀವಸ್ವರೂಪಾದಿಯನ್ನು, ಸಮಾಧಿಜ್ಞಾನವನ್ನು, ಬಾಹ್ಯಶಬ್ದ ಮೊದಲಾದುದನ್ನು, ಹಾಗೆಯೇ ಸ್ವಪ್ನವನ್ನು ಕೂಡ ಜೀವನು ತಿಳಿಯುವವನೂ, ನೋಡುವವನೂ ಕೂಡ ಯಾವಾಗ ಆಗುತ್ತಾನೋ, || (b) ಆ ದೆಶೆಯು ಉಭಯ ಜ್ಞಾನಶಬ್ದದಿಂದ ಹೇಳಲ್ಪಡುತ್ತದೆ. ಈ ಎಲ್ಲವನ್ನು ಶ್ರೀ ಹರಿಯು (ಅಜಃ) ತುರೀಯ ರೂಪದಿಂದ ಮಾಡುವುದಿಲ್ಲ. || (c) ಆದರೆ ಈ ತುರೀಯ ರೂಪಿಯು ಮುಕ್ತರಿಗೇನೇ (ಅವರವರ ಯೋಗ್ಯತಾನುಸಾರವಾಗಿ) ಪೂರ್ಣ ಜ್ಞಾನವನ್ನು ಕೊಡುವವನು. ಹೀಗೆ ಬ್ರಹ್ಮಾಂಡ ಪುರಾಣದಲ್ಲಿ ಹೇಳಿಯದೆ.

ಭಾ|| (a) ಅಮುಕ್ತಸ್ಯ ತ್ವದೃಶ್ಯತ್ವಾತ್ಷೋಡಶೀಂ ವಾ ಕಲಾಮೃತೇ । ತುರೀಯೋಽದೃಷ್ಟ ಇತ್ಯುಕ್ತೋ (b) ಗ್ರಹಣಾದೇರಗೋಚರಃ || ವಿನಾ ಮುಕ್ತಿಂ ತತಸ್ತೇನಾವ್ಯವಹಾರ್ಯ ಇತೀರಿತಃ || (c) ಜಾಗ್ರದಾದಿ ಪ್ರವೃತ್ತಿಸ್ತು ಲಕ್ಷಣಂ ಹ್ಯನುಮಾಪಕಂ । ಅಲಕ್ಷಣಸ್ತದ್ರಾಹಿತ್ಯಾ (d) ದಚಿಂತ್ಯಸ್ತತ ಏವ ಚ || ತತ ಏವ ಹ್ಯನಿರ್ದೇಶ್ಯಶ್ಚಿದಾನಂದೈಕಲಕ್ಷಣಃ । ಮುಕ್ತಸ್ಯ ಸರ್ವವ್ಯಾಪಾರಹೇತುರೇವ ತುರೀಯಕಃ ||

ಅ || (a) ಹದಿನಾರನೆಯ ಕಲೆಯಾದ ಮುಖ್ಯಪ್ರಾಣನ ಅನುಗ್ರಹವನ್ನು ಹೊರತು (ಅಪರೋಕ್ಷ ಜ್ಞಾನವುಂಟಾಗದೆ ಇರುವುದರಿಂದ, ಜೀವನ್ಮುಕ್ತಿಯಿಲ್ಲದಿರುವುದರಿಂದ) ಅಮುಕ್ತನಿಂದ ಕಾಣಲ್ಪಡದಿರುವುದರಿಂದಲೇ ತುರೀಯನು ಅದೃಷ್ಟನೆಂದು ಹೇಳಲ್ಪಡುತ್ತಾನೆ. || (b) ಮುಕ್ತಿಯಾಗದೆ (ತುರೀಯ ರೂಪಿಯು) ಗ್ರಹಣಾದಿಗಳಿಗೆ ಅಗೋಚರನಾದುದರಿಂದ ಅವ್ಯವಹಾರ್ಯನೆಂದು ಹೇಳಲ್ಪಡುತ್ತಾನೆ. (ಅಂದರೆ ಮುಕ್ತ್ಯನಂತರ ತುರೀಯರೂಪಿಯು ಮುಕ್ತರ ಜ್ಞಾನಕ್ಕೆ ವಿಷಯನಾಗುತ್ತಾನೆ. ತತ್ಪೂರ್ವದಲ್ಲಿ ಆಗುವುದಿಲ್ಲ. ಆದುದರಿಂದ ಆ ತುರೀಯರೂಪಿಯು ಅಗ್ರಾಹ್ಯನೆಂದು, ಅವ್ಯವಹಾರ್ಯನೆಂದು ಹೇಳಲ್ಪಡುತ್ತಾನೆ. || (c) ಲಕ್ಷಣವೆಂದರೆ ಅನುಮೇಯಿಸಿಕೊಡುವುದು. ಅದು ಜಾಗ್ರದವಸ್ಥೆಯೇ ಮೊದಲಾದ ಸ್ವಪ್ನ ಸುಷುಪ್ತಿಗಳ ಪ್ರವೃತ್ತಿರೂಪವು. ಅದಿಲ್ಲದಿರುವುದರಿಂದ ಅಲಕ್ಷಣನು. (ಎನ್ನಿಸಿಕೊಳ್ಳುತ್ತಾನೆ.) || (d) ಆ ಕಾರಣದಿಂದಲೇ (ಅನುಮಾಪಕ ಧರ್ಮವಿಲ್ಲದಿರುವುದರಿಂದಲೇ) ಅಚಿಂತ್ಯನು (ಅನುಮಿತಿಯೆಂಬ ವಿಚಾರಕ್ಕೆ ಅವಿಷಯನು.) ಅಚಿಂತ್ಯನಾದುದರಿಂದಲೇ ನಿರ್ದೇಶಮಾಡಲಿಕ್ಕೆ ಅಶಕ್ಯನು. ಜ್ಞಾನಾನಂದಗಳೇ ಲಕ್ಷಣವಾಗಿವುಳ್ಳ ತುರೀಯರೂಪಿಯು ಮುಕ್ತನ ಎಲ್ಲಾ ವ್ಯಾಪಾರಗಳಿಗೂ ಕಾರಣನಾಗಿರುತ್ತಾನೆ. (ಅಂತೂ ಸರ್ವ ವ್ಯಾಪಾರ ಹೇತುತ್ವರೂಪ ಲಕ್ಷಣವಿದ್ದುದರಿಂದ ಸರ್ವಥಾ ಲಕ್ಷಣವಿಲ್ಲದಿರುವುದೇ ಅಲಕ್ಷಣವೆಂಬುವುದರ ಅರ್ಥವೆಂದು ಹೇಳಕೂಡದು).

ಭಾ|| (a) ಏಕಃ ಪ್ರಧಾನ ಉದ್ದಿಷ್ಟ ಆತ್ಮಾ ಪೂರ್ಣತ್ವತಃ ಶ್ರುತಃ || ತದೇವಾಸ್ಯ ಸ್ವರೂಪಂ ಯದ್ವೈಕಾತ್ಮ್ಯಂ ತೇನ ಕೀರ್ತಿತಃ । ಪ್ರತ್ಯಯೋ ಜ್ಞಾನರೂಪತ್ವಾತ್ಸಾರ ಆನಂದರೂಪತಃ || (b) ಪ್ರಪಂಚೋ ವಿಸ್ತೃತೇರ್ವಿಷ್ಣುಃ ಶಮ ಆನಂದರೂಪತಃ । ಉತ್ಕೃಷ್ಟಾನಂದರೂಪತ್ವಾದುಪಶಬ್ದಃ ಪ್ರಕೀರ್ತಿತಃ || (c) ಪ್ರಪಂಚಂ ದೇಹಬಂಧಾಖ್ಯಂ ತುರೀಯಃ ಶಮಯೇದ್ಯತಃ । ಪ್ರಪಂಚೋಪಶಮಸ್ತೇನಾಪ್ಯುಕ್ತಃ ಸ ಭಗವಾನ್ಪ್ರಭುಃ || (d) ನಿರ್ದುಃಖಸುಖರೂಪತ್ವಾಚ್ಛಿವಶಬ್ದಃ ಶ್ರುತೌ ಶ್ರುತಃ ||

ಅ || (a) 'ಏಕಃ' ಎಂಬುವುದರಿಂದ ಪ್ರಧಾನನು ಎಂದು ಹೇಳಲ್ಪಟ್ಟಿದ್ದಾನೆ. ಗುಣಪೂರ್ಣನಾದುದರಿಂದ 'ಆತ್ಮಾ' ಎಂದು ಕೇಳಲ್ಪಟ್ಟಿದ್ದಾನೆ. ಪ್ರಧಾನಪೂರ್ಣತ್ವವೇ ಈ ಹರಿಗೆ ಯಾವ ಕಾರಣದಿಂದ ಸ್ವರೂಪವೋ ಅದರಿಂದ 'ಐಕಾತ್ಮ್ಯ'ನೆಂದು ಹೇಳಲ್ಪಟ್ಟಿದ್ದಾನೆ. ಜ್ಞಾನಸ್ವರೂಪನಾದುದರಿಂದ 'ಪ್ರತ್ಯಯ'ನೆಂದೂ, ಆನಂದಸ್ವರೂಪನಾದುವರಿಂದ 'ಸಾರ'ನೆಂದೂ(ಅಂತೂ ಐಕಾತ್ಮ್ಯ ಪ್ರತ್ಯಯಸಾರನೆಂದೂ ಹೇಳಲ್ಪಡುತ್ತಾನೆ); ಶ್ರೀವಿಷ್ಣುವು ವ್ಯಾಪ್ತನಾದುದರಿಂದ ಪ್ರಪಂಚನೆಂದೂ ಆನಂದರೂಪನಾದುದರಿಂದ ಶಮನೆಂದೂ (ಹೇಳಲ್ಪಡುತ್ತಾನೆ); (b) ಉತ್ಕೃಷ್ಟವಾದ ಆನಂದ ಸ್ವರೂಪವುಳ್ಳವನಾದುದರಿಂದ ಉಪಶಬ್ದವು ಹೇಳಲ್ಪಟ್ಟಿದೆ. (ಅಂತೂ ಪ್ರಪಂಚೋಪಶಮನೆನ್ನಿಸಿ ಕೊಳ್ಳುತ್ತಾನೆ). || (c) ಅಥವಾ ತುರೀಯನು ಯಾವಕಾರಣದಿಂದ ದೇಹಸಂಬಂಧಾದಿ ಅನಿಷ್ಟ ಪ್ರಪಂಚವನ್ನು ಹೋಗಲಾಡಿಸುತ್ತಾನೋ, ಅದರಿಂದಲೂ ಪ್ರಭುವಾದ ಆ ಹರಿಯು 'ಪ್ರಪಂಚೋಪ ಶಮ'ನೆಂದು ಹೇಳಲ್ಪಡುತ್ತಾನೆ. || (d) ದುಃಖವಿಲ್ಲದೇನೇ ಇದ್ದು ಕೇವಲ ಸುಖರೂಪನೇ ಆದುದರಿಂದ ಶ್ರುತಿಯಲ್ಲಿ 'ಶಿವ'ಶಬ್ದವು ಕೇಳಲ್ಪಟ್ಟಿದೆ. ಅಂದರೆ ಶ್ರುತಿಯಲ್ಲಿ ಶಿವನೆಂದು ಹೇಳಲ್ಪಟ್ಟಿದ್ದಾನೆ. ||

**ಭಾ|| (a)** ಅನ್ಯಥಾಪ್ರತ್ಯಯೋ ದ್ವೈತಂ ಶಮಯೇತ್ತಂ ಯತೋ ಹರಿಃ |
ಅದ್ವೈತಸ್ತೇನ ಚೋದ್ದಿಷ್ಟಸ್ತುರೀಯಃ ಪುರುಷೋತ್ತಮಃ ||
ಇತಿ ಮಾಹಾತ್ಮ್ಯೇ || **(b)** ಅಪೇಕ್ಷ್ಯ ವಸ್ತು ಯಾಥಾರ್ಥ್ಯಂ ದ್ವಿತ್ವಮನ್ಯಸ್ವರೂಪತಾ | ಇಣ್ಗತಾವಿತಿಧಾತೋಶ್ಚ ತಜ್ಜ್ಞಾನಂ ದ್ವೈತಮುಚ್ಯತೇ || ಇತಿ ಸಂಕಲ್ಪೇ || **(c)** ಸ ಆತ್ಮಾ ಸ ವಿಜ್ಞೇಯ ಇತಿ ಸೋಽಯಮಾತ್ಮಾ ಚತುಷ್ಪಾದಿತಿ ಚತುರ್ಧಾ ವಿಭಕ್ತ ಉಚ್ಯತೇ ಉಪಸಂಹಾರಾರ್ಥಂ | ಸೋಽಯಮಾತ್ಮಾಧ್ಯಕ್ಷರಮಿತಿ ಪೃಥಗಾರಂಭಾತ್ || **(d)** ವಿಶ್ವಾದಿರೂಪೋ ಯಸ್ಮಾತ್ತ್ವಾತ್ಮಾ ಸ ವಿಜ್ಞೇಯೋ ಮುಮುಕ್ಷುಭಿಃ | ನಿರ್ವಿಶೇಷೋಽಪಿ ಭಗವಾಂಶ್ಚತುರ್ಧಾ ಸಮುದೀರಿತಃ || ಇತಿ ಪ್ರತ್ಯಯೇ || ೧ ||

ಅ || (a) (ವಸ್ತುವಿನಲ್ಲಿ ಇರತಕ್ಕ ಯಾಥಾರ್ಥ್ಯದಿಂದ) ಬೇರೆ ರೀತಿಯಾಗಿ ತಿಳಿದುಕೊಳ್ಳುವಿಕೆಯು ದ್ವೈತವೆನ್ನಿಸಿಕೊಳ್ಳುತ್ತದೆ. ಅದನ್ನು (ಆ ಮಿಥ್ಯಾಜ್ಞಾನವನ್ನು) ಯಾವ ಕಾರಣದಿಂದ ಶ್ರೀಹರಿಯು (ಜ್ಞಾನವನ್ನು ಕೊಟ್ಟು) ಹೋಗಲಾಡಿಸುತ್ತಾನೋ, ಅದರಿಂದಲೂ ಪುರುಷೋತ್ತಮನಾದ ತುರೀಯನು ಅದ್ವೈತನೆಂದು ಹೇಳಲ್ಪಡುತ್ತಾನೆ ಎಂದು ಮಾಹಾತ್ಮ್ಯವೆಂಬಗ್ರಂಥದಲ್ಲಿ ಅದೆ. || (b) ವಸ್ತುವಿನಲ್ಲಿರತಕ್ಕ ಯಾಥಾರ್ಥ್ಯವನ್ನಪೇಕ್ಷಿಸಿ ಬೇರೆ ಸ್ವರೂಪವುಳ್ಳತನವು ದ್ವಿತ್ವವೆನ್ನಿಸಿಕೊಳ್ಳುತ್ತದೆ.(ಅಂತೂ ದ್ವಿತ್ವೇನ=ದ್ವಿತೀಯ ಪ್ರಕಾರೇಣ, ಇತಂ=ತಿಳಿಯಲ್ಪಟ್ಟ ವಸ್ತುವು ದ್ವೀತವೆನ್ನಿಸಿಕೊಳ್ಳುತ್ತದೆ.) "ಇಣ್" ಧಾತುವು ಗತಿ (ಜ್ಞಾನ) ಯೆಂಬ ಅರ್ಥದಲ್ಲಿದೆ (ಈ ಧಾತುವ್ಯಾಖ್ಯಾನದಿಂದ) ಆ ವಸ್ತುವಿನ ಜ್ಞಾನವು (ಮಿಥ್ಯಾಜ್ಞಾನವು "ದ್ವೀತಸ್ಯ ಇದಂ ದ್ವೈತಂ" ಎಂಬೀವ್ಯುತ್ಪತ್ತಿಯಿಂದ) ದ್ವೈತವೆಂದು ಹೇಳಲ್ಪಡುತ್ತದೆ ಎಂದು ಸಂಕಲ್ಪವೆಂಬ ಗ್ರಂಥದಲ್ಲಿ ಇದೆ. || (c) "ಸೋಽಯಮಾತ್ಮಾ ಚತುಷ್ಪಾತ್" ಎಂದು ವಿಶ್ವಮೊದಲಾದ ರೂಪದಿಂದ ನಾಲ್ಕು ಪ್ರಕಾರವಾಗಿ ವಿಭಾಗಿಸಿಕೊಳ್ಳಲ್ಪಟ್ಟ ಆ ಹರಿಯೇ ಆತ್ಮನೆಂದೂ ಆತನೇ ವಿಶೇಷಾಕಾರವಾಗಿ ತಿಳಿಯಲರ್ಹನೆಂದೂ ಉಪಸಂಹಾರಕ್ಕೋಸ್ಕರ (ಅಂದರೆ ನಾಲ್ಕು ರೂಪಗಳ ನಿರೂಪಣೆಯು ಸಮಾಪ್ತವಾಯಿತು. ಎಂದು ತೋರಿಸುವುದಕ್ಕೋಸ್ಕರ) ಹೇಳಲ್ಪಡುತ್ತಾನೆ. 'ಸೋಽಯಮಾತ್ಮಾಽಧ್ಯಕ್ಷರಂ' ಎಂದು ಪ್ರತ್ಯೇಕವಾಗಿ ಪ್ರಾರಂಭಿಸಿರುವುದರಿಂದ (ಅಂದರೆ

ವಿಶ್ವಾದಿ ರೂಪಗಳು ಪ್ರಣವಾಂಶಗಳಾದ ಅಕಾರಾದಿಗಳಿಂದ ಪ್ರತಿಪಾದಿಸಿಕೊಳ್ಳಲ್ಪಡುತ್ತವೆ ಎಂದು ಹೇಳುವುದಕ್ಕೋಸ್ಕರ, 'ಸೋಽಯಂ' ಇ?ು ಮೊದಲಾದ ಬೇರೆ ಪ್ರಕರಣವು ಆರಂಭವಾದುದರಿಂದ, ಹಿಂದಿನ ಪ್ರಕರಣದಿಂದ ಏಕವಾಕ್ಯತ್ವವು ಬರುವುದಿಲ್ಲ. ಆದುದರಿಂದ ಉಪಸಂಹಾರಕ್ಕೋಸ್ಕರ ಎಂದು ಹೇಳಿರುವುದು ಯುಕ್ತವೇ ಆಯಿತು). ॥ (d) ವಿಶ್ವ ಮೊದಲಾದ ನಾಲ್ಕುರೂಪವುಳ್ಳ ಯಾವ ಆತ್ಮನೋ ಆತನು ಮೋಕ್ಷವನ್ನು ಪಡೆಯಬೇಕು ಎಂದಿಚ್ಛಿಸುವುದರಿಂದ ವಿಶೇಷಾಕಾರವಾಗಿ ತಿಳಿಯಲರ್ಹನಾಗಿರುತ್ತಾನೆ. ಭಗವಂತನು (ತನ್ನ ರೂಪಗಳಲ್ಲಿ ಪರಸ್ಪರ) ವಿಶೇಷವಿಲ್ಲದಿರುವವನಾದರೂ, ಅಥವಾ ಭೇದಶೂನ್ಯನಾದರೂ ೪ ರೂಪಿಯಾಗಿ ಹೇಳಲ್ಪಡುತ್ತಾನೆ. ಎಂದು ಪ್ರತ್ಯಯವೆಂಬ ಗ್ರಂಥದಲ್ಲಿ ಇದೆ. ॥ ೧ ॥

**ಮಂ ॥ ಅತ್ರೈತೇ ಶ್ಲೋಕಾ ಭವಂತಿ । ನಿವೃತ್ತೇಃ ಸರ್ವದುಃಖಾನಾಮೀಶಾನಃ ಪ್ರಭುರವ್ಯಯಃ । ಅದ್ವೈತಃ ಸರ್ವಭಾವಾನಾಂ ದೇವಸ್ತುರ್ಯೋ ವಿಭುಃ ಸ್ಮೃತಃ ॥ ೨ ॥**

ಅ ॥ ಅತ್ರ=ಈ ತುರೀಯನಿಗೆ ಹೇಳಿದ ಮಾಹಾತ್ಮ್ಯ ವಿಷಯದಲ್ಲಿ, ಏತೇ=ಮೇಲೆ ಹೇಳುವ ಬ್ರಹ್ಮದೃಷ್ಟಗಳಾದ, ಶ್ಲೋಕಾಃ=ಮಂತ್ರಗಳು, ಭವಂತಿ=(ಸಂವಾದಿಗಳು) ಆಗುತ್ತವೆ. ಸರ್ವದುಃಖಾನಾಂ=ಎಲ್ಲಾ ದುಃಖಗಳ, ನಿವೃತ್ತೇಃ=ನಾಶಕ್ಕೆ (ಕಾರಣನು), ಈಶಾನಃ=ಮುಕ್ತರಿಗೂ ಪ್ರೇರಕನು, ಪ್ರಭುಃ=ಸ್ವಾಮಿಯು, ಅವ್ಯಯಃ=ಯಾವಾಗಲೂ ಏಕಪ್ರಕಾರನೇ, ಅದ್ವೈತಃ=ಮಿಥ್ಯಾಜ್ಞಾನವನ್ನು ಹೋಗಲಾಡಿಸುವವನು, ಸರ್ವಭಾವಾನಾಂ=ಎಲ್ಲಾ ಜೀವರಿಗೂ, ದೇವಃ=ಪ್ರಾಪ್ಯನು, (ಇಂತಹ) ತುರ್ಯಃ=ತುರೀಯನು, ವಿಭುಃ=ಸರ್ವ ಸಮರ್ಥನೆಂದು, ಸ್ಮೃತಃ=(ಮಂತ್ರದ್ರಷ್ಟನಾದ ಬ್ರಹ್ಮನಿಂದ) ಹೇಳಲ್ಪಟ್ಟದ್ದಾನೆ. ॥ ೨ ॥

ಭಾ॥ **(a)** ಸರ್ವದುಃಖಾನಾಂ ನಿವೃತ್ತೇಃ ಕಾರಣಭೂತಸ್ತುರೀಯೋ ದೇವಃ । **(b)** ಹರಿಸ್ತುರೀಯರೂಪೇಣ ಮೋಕ್ಷದಃ ಸಂಪ್ರಕೀರ್ತಿತಃ ॥ ದೇವಃ ಸ ಸರ್ವಜೀವಾನಾಂ ಗಮ್ಯತ್ವಾತ್ಸಮುದೀರಿತಃ । **(c)** ಭಾವಾ ಜೀವಾಃ ಸಮುದ್ದಿಷ್ಟಾ ಭವಂತ್ಯೇತೇ ಯತೋ ವಿಭೋಃ ॥ ಈಶಾನಾಮಪಿ ಮುಕ್ತಾನಾಂ ಈಶಾನಃ ಸೋಽನನಾಚ್ಛ್ರುತಃ ॥

– ಇತಿ ಪ್ರತ್ಯಾಹಾರೇ ॥ ೨ ॥

ಅ ॥ (a) ತುರೀಯ ರೂಪಿಯಾದ ದೇವನು ಎಲ್ಲಾ ದುಃಖಗಳ ನಾಶಕ್ಕೆ ಕಾರಣೀಭೂತನು. ॥ (b) ಶ್ರೀ ಹರಿಯು ತುರೀಯ ರೂಪದಿಂದ ಮುಕ್ತಿಯನ್ನು ಕೊಡುವವನೆಂದು ಹೇಳಲ್ಪಟ್ಟಿರುತ್ತಾನೆ. ಆತನು ಎಲ್ಲಾ ಜೀವರಿಗೆ ಪ್ರಾಪ್ಯನಾದುದರಿಂದ ದೇವನೆಂದು ಹೇಳಲ್ಪಡುತ್ತಾನೆ. (c) ಯಾವಕಾರಣದಿಂದ ಈ ಜೀವರು ಶ್ರೀಹರಿಯಿಂದ (ದೇಹಸಂಬಂಧದಿಂದ) ಹುಟ್ಟುತ್ತಾರೋ, (ಕಾರಣ) ಜೀವರು ಭಾವರೆಂದು ಹೇಳಲ್ಪಡುತ್ತಾರೆ. ಆ ಹರಿಯು ನಿಯಾಮಕರಾದ ಮುಕ್ತರಿಗೂ ಚೇಷ್ಟಕನಾದುದರಿಂದ ಈಶಾನನೆಂದು ಶ್ರುತನಾಗಿದ್ದಾನೆ. ಎಂದು ಪ್ರತ್ಯಾಹಾರವೆಂಬ ಗ್ರಂಥದಲ್ಲಿ ಅದೆ. ॥ ೨ ॥

**ಮಂ ॥ ಕಾರ್ಯಕಾರಣಬದ್ಧೌ ತಾವಿಷ್ಯೇತೇ ವಿಶ್ವತೈಜಸೌ । ಪ್ರಾಜ್ಞಃ ಕಾರಣಬದ್ಧಸ್ತು ದ್ವೌ ತು ತುರ್ಯೇ ನ ಸಿದ್ಧ್ಯತಃ ॥ ೩ ॥**

ಅ || ತೌ=ಆ ಇಬ್ಬರು, ವಿಶ್ವತೈಜಸೌ=ವಿಶ್ವತೈಜಸರು, ಕಾರ್ಯಕಾರಣ ಬದ್ಧೌ, ಕಾರ್ಯ=ಅಜ್ಞಾನಕಾರ್ಯವಾದ ನಾನು ನನ್ನದು ಇದೇಮೊದಲಾದ ಭ್ರಮವು, ಕಾರಣ= ಭ್ರಮೆಗೆ ಕಾರಣವಾದ ಅವಿದ್ಯೆಯೂ ಇವುಗಳಿಂದ, ಬದ್ಧೌ=ಬದ್ಧರಾಗಿ, ಇಷ್ಯೇತೇ=ಇಚ್ಛಿಸಲ್ಪ ಡುತ್ತಾರೆ. ಪ್ರಾಜ್ಞಸ್ತು=ಪ್ರಾಜ್ಞನಾದರೂ, ಕಾರಣಬದ್ಧಃ=ಕಾರಣೀಭೂತವಾದ ಅಜ್ಞಾನರೂಪ ಸುಪ್ತಿಯಿಂದ ಬದ್ಧನಾಗಿರುತ್ತಾನೆ, ತುರ್ಯೇ=ನಾಲ್ಕನೇ ರೂಪದಲ್ಲಿ, ದ್ವೌತು=ಎರಡೂ ಕೂಡ, ನ ಸಿಧ್ಯತಃ=ಇರುವುದಿಲ್ಲ.

ತಾ || ಅವಿದ್ಯಾ ತತ್ಕಾರ್ಯವಾದ ಸ್ವಾತಂತ್ರ್ಯ ಮೊದಲಾದುದೇ ವಿಷಯವಾಗಿವುಳ್ಳ ಜಾಗ್ರತ್ಕಾಲದಲ್ಲಿರುವ ಭ್ರಾಂತಿ ಏತದ್ರೂಪಗಳಿಂದ ಎರಡು ಬಂಧನಗಳನ್ನು ಕೊಡುವವನು ವಿಶ್ವ ರೂಪಿಯಾದ ಶ್ರೀ ಹರಿಯು. ಅವಿದ್ಯಾ ತತ್ಕಾರ್ಯವಾದ ಜಾಗ್ರತ್ಕಾಲದಲ್ಲಿರುವ ಭ್ರಾಂತಿಕಾ ರ್ಯವಾದ ಸ್ವಾಪ್ನಭ್ರಮರೂಪಗಳಾದ ಎರಡು ಬಂಧಗಳನ್ನು ಕೊಡುವವನು ತೈಜಸನು. ತುರೀಯನು ಎಲ್ಲಾ ಜ್ಞಾನವನ್ನು ಕೊಡುವವನು. || ೩ ||

ಭಾ|| (a) ಕಾರ್ಯಕಾರಣಬಂಧಸ್ಯ ತದಧೀನತ್ವತೋ ವಿಭುಃ । ವಿಶ್ವಾದಿ ರೂಪೋ ಭಗವಾನ್ಬದ್ಧ ಇತ್ಯುಚ್ಯತೇ ಶ್ರುತೌ || ಕುತೋ ಬಂಧಃ ಪರಸ್ಯಾಸ್ಯ ಬಂಧೇಶಸ್ಯ ಚಿದಾತ್ಮನಃ । ಇತಿ ಚ । (b) ಸ ಬದ್ಧಃ ಸ ದುಃಖೀ ಸ ಬಂಧಯತಿ ಸ ದುಃಖಯತೀತಿ । ಸ ಜೀವಃ ಸ ಪ್ರಕೃತಿಃ ಸ ಜೀವಯತಿ ಸ ಪ್ರಕರೋತೀತಿ । ಸೋಽವರಃ ಸೋಽನಿತ್ಯಃ ಸೋಽವರಯತಿ ಸೋಽನಿತ್ಯಯತೀತಿ ಕೌಷಾರವಶ್ರುತಿಃ || (c) ವಿ-ಷ್ಣೋರ್ಗುಣೋಕ್ತಿಪರತಾ ಮಮ ನಿತ್ಯಂ ಸುರೇಶ್ವರಾಃ || ತದರ್ಥ ಮನ್ಯದ್ವಚನಮತಸ್ತಸ್ಯ ವಿರೋಧಿ ಯತ್ || ತನ್ಮಮಾರ್ಥೋ ನ ಹಿ ಕ್ವಾಪಿ (d) ಸ್ಯಾಹಂ ತತ್ಸರಣಾತ್ಸದಾ । ಸರಸ್ವತೀತಿ ಸಂಪ್ರೋಕ್ತಾ ತಸ್ಮಾಜ್ಜ್ಞೇಯಾ ಹರೇರ್ಗುಣಾಃ || ಇತಿ ಮಹೋಪನಿಷದಿ || ೩ ||

ಅ || (a) ವಿಶ್ವಮೊದಲಾದ ರೂಪವುಳ್ಳ ಸರ್ವಸಮರ್ಥನಾದ ಶ್ರೀಹರಿಯು ಜೀವ ರಲ್ಲಿರತಕ್ಕ ಕಾರ್ಯಕಾರಣ ಬಂಧವು ಆ ಹರಿಯು ಅಧೀನವಾದುದರಿಂದ, "ಕಾರ್ಯಕಾರಣ ಬದ್ಧೌ" ಎಂಬೀ ಶ್ರುತಿಯಲ್ಲಿ ಬದ್ಧನೆಂದು ಹೇಳಲ್ಪಡುತ್ತಾನೆ. ಬಂಧವನ್ನು ಕೊಡುವುದರಿಂದ ಬಂಧಕ್ಕೆ ಸ್ವಾಮಿಯೂ, ಚಿದ್ರೂಪಿಯೂ, ಸರ್ವೋತ್ತಮನೂ ಆದ, ಈ ಹರಿಗೆ ಬಂಧವು ಯಾವ ಕಾರಣದಿಂದ, ಹೀಗೆ ಅದೆ. || (b) ಆ ಹರಿಯು ಬಂಧಿಸುತ್ತಾನೆ ಆದುದರಿಂದ ಅವನು 'ಬದ್ಧ' ನೆಂದೂ ಆತನು ದುಃಖಪಡಿಸುತ್ತಾನೆ, ಆದುದರಿಂದ ಆತನು 'ದುಃಖಿ'ಯೆಂದೂ ಹೇಳಲ್ಪಡುತ್ತಾನೆ. ಆ ಹರಿಯು ಬದುಕಿಸುತ್ತಾನೆ, (ಕಾರಣ) ಅವನು 'ಜೀವನು' ಎಂದೂ ಆತನು ಚೆನ್ನಾಗಿ ಮಾಡು ತ್ತಾನೆ, ಕಾರಣ ಅವನು 'ಪ್ರಕೃತಿ' ಯೆಂದೂ (ಹೇಳಲ್ಪಡುತ್ತಾನೆ). ಆತನು (ಇತರರೆಲ್ಲರನ್ನೂ) ಅವರರನ್ನಾಗಿ ಮಾಡುತ್ತಾನೆ. ಆದುದರಿಂದ ಅವನು 'ಅವರನೆಂದೂ' ಅವನು (ಇತರರನ್ನು) ಅನಿತ್ಯರನ್ನಾಗಿ ಮಾಡುತ್ತಾನೆ. ಕಾರಣ 'ಅನಿತ್ಯ' ನೆಂದೂ (ಹೇಳಲ್ಪಡುತ್ತಾನೆ). ಎಂದು ಕೌಷಾರವ ಶ್ರುತಿಯು. (c) ಎಲೈ ದೇವಶ್ರೇಷ್ಠರೇ, ಸರಸ್ವತಿಯಾದ ನನಗೆ ನಿತ್ಯದಲ್ಲಿಯೂ ಶ್ರೀ ವಿಷ್ಣುವಿನ ಗುಣಗಳನ್ನು ಹೇಳುವುದರಲ್ಲಿಯೇ ಆಸಕ್ತಿಯು. (ಯಾವಾಗ ವಿಷ್ಣುಭಕ್ತರಾದ ಬ್ರಹ್ಮಾದಿಗಳಿಗೆ ಇಂತಹ ಮಹಿಮೆಯುದೆಯೋ, ಆಗ ಶ್ರೀ ಹರಿಯು ಬಹುಮಹಿಮೆಯುಳ್ಳವನು ಎಂದು ಹೇಳತಕ್ಕುದು ಏನಿದೆ. ಈ ಪ್ರಕಾರ) ಆ ವಿಷ್ಣುವಿನ ಗುಣೋತ್ಕರ್ಷವನ್ನು ಪ್ರತಿಪಾದಿ

ಸುವುದಕ್ಕೋಸ್ಕರ, ಶ್ರೀ ಹರಿಯಿಂದ ಇತರರಿಗೆ ಗುಣೋತ್ಕರ್ಷವನ್ನು ಪ್ರತಿಪಾದಿಸುವ ಮಾತು. ಆದುದರಿಂದ ಆ ಗುಣೋತ್ಕರ್ಷಕ್ಕೆ ಯಾವುದು ವಿರೋಧಿಯಾಗುವುದೋ, ಅಂತಹುದು ನನಗೆ ಸಮ್ಮತವಾದ ಅರ್ಥವು ಎಲ್ಲಿಯೂ ಇಲ್ಲವಷ್ಟೆ. ॥ (d) ಆ ನಾನು ಯಾವಾಗಲೂ ಆ ಭಗವದ್ಗುಣೋತ್ಕರ್ಷಕ್ಕೆ ವಿರೋಧಿಯಾದ ಅರ್ಥವನ್ನು ತಿರಸ್ಕರಿಸಿರುವುದರಿಂದ ಅಥವಾ ಗುಣೋತ್ಕರ್ಷವನ್ನು ಪ್ರತಿಪಾದಿಸುವ ವಚನವನ್ನು ಕುರಿತೇ ಯಾವಾಗಲೂ ಹೋಗುವುದರಿಂದ ಸರಸ್ವತಿಯೆಂದು ಹೇಳಲ್ಪಡುತ್ತೇನೆ. ಆದುದರಿಂದ ಹರಿಯ ಗುಣಗಳೇ ವೇದಪ್ರತಿಪಾದ್ಯಗಳೆಂದು ತಿಳಿಯತಕ್ಕವುಗಳು. ಎಂದು ಮಹೋಪನಿಷತ್ತಿನಲ್ಲಿ ಅದೆ. ॥ ೩ ॥

**ಮಂ ॥ ನಾತ್ಮಾನಂ ನ ಪರಾಂಶ್ಚೈವ ನ ಸತ್ಯಂ ನಾಪಿ ಚಾನೃತಂ । ಪ್ರಾಜ್ಞಃ ಕಿಂಚನ ಸಂವೇತ್ತಿ ತುರ್ಯಂ ತತ್ಸರ್ವದೃಕ್ಸದಾ ॥ ೪ ॥**

ಅ ॥ ಪ್ರಾಜ್ಞಃ=ಪ್ರಾಜ್ಞರೂಪಿಯಾದ ಶ್ರೀ ಹರಿಯು, ಆತ್ಮಾನಂ=ಸ್ವಸ್ವರೂಪವನ್ನು, ನ ಸಂವೇತ್ತಿ=ತಿಳಿಸಲಾರನು, ಪರಾಂಶ್ಚೈವ=ಅಜ್ಞಾನಾದಿಗಳಿಂದ ಇತರಗಳಾದ ಪದಾರ್ಥಗಳನ್ನು, ನ ಸಂವೇತ್ತಿ=ತಿಳಿಸಲಾರನು, ಸತ್ಯಂ ಅಪಿ=ಸತ್ಯಕಾರ್ಯವಾದ ಪುಣ್ಯವನ್ನೂ, ನ=ತಿಳಿಸಲಾರನು, ಅನೃತಂ ಚ=ಅನೃತಕಾರ್ಯವಾದ ಪಾಪವನ್ನೂ ಕೂಡ, ನ ಸಂವೇತ್ತಿ=ತಿಳಿಸಲಾರನು, ಕಿಂಚನ=(ಜೀವಸ್ವರೂಪ, ಸುಖ, ಕಾಲ, ಅಜ್ಞಾನಗಳನ್ನು ಹೊರತು) ಯಾವುದನ್ನೂ, ನ ಸಂವೇತ್ತಿ=ತಿಳಿಸಲಾರನು, ತುರ್ಯಂ=ತುರೀಯನಾದರೂ, ಸದಾ=ಯಾವಾಗಲೂ (ಮುಕ್ತಿಯಲ್ಲಿ), ತತ್ ಸರ್ವದೃಕ್=ಅವರವರಿಗೆ ಯೋಗ್ಯವಾದ ಸರ್ವವನ್ನೂ ತೋರಿಸುತ್ತಾನೆ. ॥ ೪ ॥

ಭಾ॥ (a) ನಾತ್ಮಾನಂ ನ ಪರಾಂಶ್ಚೈವ ನ ಸತ್ಯಂ ಚಾಪಿ ನಾನೃತಂ । ಪ್ರಾಜ್ಞಃ ಸಂವೇದಯೇತ್ಕಿಂಚಿಜ್ಜೀವಕಾಲತಮೋ ವಿನಾ ॥ (b) ಸುಪ್ತ್ಯವಸ್ಥಾಂ ಸುಖಂ ಚಾಪಿ ವಿನಾ ನಾನ್ಯತ್ಪ್ರದರ್ಶಯೇತ್ । ಸರ್ವಂ ತು ದರ್ಶಯೇನ್ಮುಕ್ತೌ ತುರೀಯಃ ಪರಮೇಶ್ವರಃ ॥ ಇತಿ ಪ್ರತ್ಯಯೇ ॥ (c) ಸ್ವತಂತ್ರೇ ಕರ್ತೃಶಬ್ದಃ ಸ್ಯಾತ್ಪ್ರಾಜ್ಞಸ್ಯಾವೇದನಂ ಯಥಾ । ಸರ್ವಪ್ರದರ್ಶಕೇ ಚೈವ ತುರೀಯೇ ಸರ್ವದರ್ಶನಂ ॥

– ಇತಿ ಬ್ರಹ್ಮತರ್ಕೇ ॥ ೪ ॥

ಅ ॥ ಪ್ರಾಜ್ಞರೂಪಿಯಾದ ಶ್ರೀಹರಿಯು ಜೀವ, ಕಾಲ, ಅಜ್ಞಾನಗಳನ್ನು ಹೊರತು ಯಾವುದನ್ನೂ ತೋರಿಸಲಾರನು. ॥ ಅಂದರೆ ತನ್ನ ಸ್ವರೂಪವನ್ನು ತೋರಿಸಲಾರನು, ಜೀವಾದಿಗಳಿಂದ ಇತರಗಳಾದ ಪದಾರ್ಥಗಳನ್ನು ತೋರಿಸಲಾರನು, ಪುಣ್ಯವನ್ನು ತೋರಿಸಲಾರನು, ಪಾಪವನ್ನು ಕೂಡ ತೋರಿಸಲಾರನು. ॥ (b) ಸುಪ್ತ್ಯವಸ್ಥೆಯನ್ನು, ಸುಖವನ್ನು ಕೂಡ ಹೊರತು ಇತರವಾದುದನ್ನು ತೋರಿಸಲಾರನು. (ಅಂತೂ ಸುಪ್ತಿಯಲ್ಲಿ ಪ್ರಾಜ್ಞನು, ಜೀವಸ್ವರೂಪ, ಕಾಲ, ಅಜ್ಞಾನ, ಸುಪ್ತ್ಯವಸ್ಥೆ, ಸುಖ ಇವುಗಳನ್ನು ಮಾತ್ರ ತೋರಿಸುವನು). ಪರಮೇಶ್ವರನಾದ ತುರೀಯನು ಮುಕ್ತಿಯಲ್ಲಾದರೂ (ತತ್ತದ್ಯೋಗ್ಯವಾದ) ಸರ್ವವನ್ನು ತೋರಿಸುವನು. ಹೀಗೆ ಪ್ರತ್ಯಯವೆಂಬ ಗ್ರಂಥದಲ್ಲಿ ಅದೆ. ॥ (c) 'ಸ್ವತಂತ್ರಃ ಕರ್ತಾ' ಎಂಬೀ ವಚನಾನುಸಾರವಾಗಿ ಕ್ರಿಯೆಯಲ್ಲಿ ಯಾರು ಸ್ವತಂತ್ರನೋ, ಆತನಲ್ಲಿ 'ಕರ್ತಾ' ಎಂಬೀ ಮುಖ್ಯವಾದ ಕರ್ತೃಶಬ್ದಪ್ರಯೋಗವು ಆಗುವುದು. ಹೇಗೆಂದರೆ– (ಹಿಂದೆ ಹೇಳಿದ್ದನ್ನು ತಿಳಿಸದೆ ಇದ್ದ) ಪ್ರಾಜ್ಞರೂಪಿಗೆ 'ನ ಸಂವೇತ್ತಿ' ಎಂಬೀ ಅಸಂವೇದನ ಕ್ರಿಯೆಯನ್ನು ಕುರಿತು (ಮುಖ್ಯವಾಗಿ

ಕರ್ತೃತ್ವವು ಹೇಳಲ್ಪಡುತ್ತದೆ. ಇತರರಿಗೂ ಇಂತಹ ಕ್ರಿಯೆಯನ್ನು ಕೊಡುವ ವಿಷಯದಲ್ಲಿ ಪ್ರಾಜ್ಞನಿಗೇನೇ ಸ್ವಾತಂತ್ರ್ಯವಿರುವುದು). ಹಾಗೆಯೇ ಸರ್ವವನ್ನೂ ತೋರಿಸುವ ತುರೀಯ ನಲ್ಲಾದರೂ ('ಸರ್ವದೃಕ್' ಎಂದು) ಸರ್ವವನ್ನು ನೋಡುವಿಕೆ ಎಂಬ ಕ್ರಿಯೆಯನ್ನು ಕುರಿತು, ಮುಖ್ಯವಾಗಿ ಕರ್ತೃತ್ವವು ಹೇಳಲ್ಪಡುತ್ತದೆ. ಇತರರಿಗೂ ದರ್ಶನಕ್ರಿಯೆಯನ್ನು ಕೊಡುವು ದರಲ್ಲಿ ತುರೀಯನಿಗೇನೇ ಸ್ವಾತಂತ್ರ್ಯವಿರುವುದು. ಇದೇ ರೀತಿಯಾಗಿ ಬಂಧನರೂಪ ಕ್ರಿಯೆ ಯನ್ನು ಕುರಿತು ಈಶ್ವರನೇ ಸ್ವತಂತ್ರನಾದುದರಿಂದ, ಆ ಬಂಧವು ಈಶ್ವರನ ಅಧೀನವಾದುದ ರಿಂದ, 'ಬದ್ಧೌ' ಎಂಬೀ ಶಬ್ದಪ್ರಯೋಗವು ಸಂಗತವೇ ಆಗುತ್ತದೆ. ಹೀಗೆ ಬ್ರಹ್ಮತರ್ಕದಲ್ಲಿ ಇದೆ. ॥ ೪ ॥

ಮಂ ॥ ದ್ವೈತಸ್ಯಾಗ್ರಹಣಂ ತುಲ್ಯಮುಭಯೋಃ ಪ್ರಾಜ್ಞತುರ್ಯಯೋಃ ।
ಬೀಜ ನಿದ್ರಾಯುತಃ ಪ್ರಾಜ್ಞಃ ಸಾ ಚ ತುರ್ಯೇ ನ ವಿದ್ಯತೇ ॥ ೫ ॥

ಅ ॥ ಪ್ರಾಜ್ಞತುರ್ಯಯೋಃ=ಪ್ರಾಜ್ಞತುರೀಯ ನಾಮಕರಾದ, ಉಭಯೋಃ=ಇಬ್ಬ ರಿಗೂ, ದ್ವೈತಸ್ಯ=(ಶರೀರ ಮಂದಿರ ಮೊದಲಾದವುಗಳಲ್ಲಿ) ಸ್ವಾತಂತ್ರ್ಯಕ್ಕೆ, ಅಗ್ರಹಣಂ= ಗ್ರಹಣಾಕಾರಣತ್ವವೂ (ಅಂದರೆ ದೇಹಾದಿಗಳಲ್ಲಿ ಸ್ವಾತಂತ್ರ್ಯಭ್ರಮೆಯನ್ನುಹುಟ್ಟಿಸದೆ ಇರುವುದು), ತುಲ್ಯಂ=ಸಮಾನವು, ಪ್ರಾಜ್ಞಃ=ಪ್ರಾಜ್ಞರೂಪಿಯು, ಬೀಜನಿದ್ರಾಯುತಃ, ಬೀಜನಿದ್ರಾ=ಶರೀ ರಾದಿಗಳಲ್ಲಿ ಸ್ವಾತಂತ್ರ್ಯಬುದ್ಧಿಗೆ ಕಾರಣವಾದ ಮೂಲ ಅವಿದ್ಯೆಯಿಂದ, ಯುತಃ=ಕೂಡಿರು ವಿಕೆಯನ್ನು ಕೊಡುವವನು, ಸಾ ಚ=ಆ ಬೀಜ ನಿದ್ರೆಯೂ ಕೂಡ, ತುರ್ಯೇ=ತುರೀಯ ನಲ್ಲಿ, ನ ವಿದ್ಯತೇ=ಇರುವುದಿಲ್ಲ. ॥ ೫ ॥

ಮಂ ॥ ಸ್ವಪ್ನನಿದ್ರಾಯುತಾವಾದ್ಯೌ ಪ್ರಾಜ್ಞಸ್ತ್ವಸ್ವಪ್ನನಿದ್ರಯಾ । ನ ನಿದ್ರಾಂ
ನೈವ ಚ ಸ್ವಪ್ನಂ ತುರ್ಯೇ ಪಶ್ಯಂತಿ ನಿಶ್ಚಿತಾಃ ॥ ೬ ॥

ಅ ॥ ಆದ್ಯೌ=ವಿಶ್ವತೈಜಸರು, ಸ್ವಪ್ನನಿದ್ರಾಯುತೌ, ಸ್ವಪ್ನ=ಜಾಗ್ರತ್ಕಾಲೀನ ಸ್ವಪ್ನ ಭ್ರಮೆಗಳೂ, ನಿದ್ರಾ=ತತ್ಕಾರಣೀಭೂತ ಅವಿದ್ಯೆಯೂ ಇವುಗಳಿಂದ, ಯುತೌ=ಬದ್ಧರಾಗಿರು ತ್ತಾರೆ, ಪ್ರಾಜ್ಞಸ್ತು=ಪ್ರಾಜ್ಞನಾದರೂ, ಅಸ್ವಪ್ನ ನಿದ್ರಯಾ=ಭ್ರಾಂತಿಯನ್ನು ಹೊರತು ಕೇವಲ ಅವಿದ್ಯೆಯಿಂದ (ಬದ್ಧನಾಗಿರುತ್ತಾನೆ), ಅಂದರೆ(ಬಂಧಕ್ಕೆ ಸ್ವಾಮಿಯು), ನಿಶ್ಚಿತಾಃ=ಯಥಾರ್ಥ ನಿಶ್ಚಯವುಳ್ಳವರು, ತುರ್ಯೇ=ತುರೀಯರೂಪದಲ್ಲಿ, ನಿದ್ರಾಂ=ಅವಿದ್ಯಾಕೃತಬಂಧಸ್ವಾಮಿತ್ವ ವನ್ನು, ನ ಪಶ್ಯಂತಿ=ತಿಳಿಯಲಾರರು, ಸ್ವಪ್ನಂ ಚ=ಭ್ರಮಕಾರಣತ್ವವನ್ನೂ ಕೂಡ, ನೈವ ಪಶ್ಯಂತಿ=ತಿಳಿಯಲಾರರು. ॥ ೬ ॥

ಭಾ॥ (a) ನಿದ್ರಾಯುತಾಸ್ತು ವಿಶ್ವಾದ್ಯಾಸ್ತದಧೀನಾ ಯತೋ ಹಿ ಸಾ । ಯಥಾ ಭೃತ್ಯಯುತಃ ಸ್ವಾಮೀ ನ ಹ್ಯಜ್ಞಾನಂ ಪರಾತ್ಮನಃ ॥ ಇತಿ ಚ (b) ಅಭೇದಮಪಿ ತದ್ಬ್ರಹ್ಮ ಬಹುರೂಪಂ ವಿಶೇಷತಃ । ಕರೋತಿ ನ ಕರೋತೀತಿ ವ್ಯವಹಾರ್ಯಂ ಸ್ವಶಕ್ತಿತಃ ॥ ಇತಿ ಚ ॥ (c) ನ ಸಂ ವೇದಯತೀತ್ಯಸ್ವೀಕಾರೇ ತುರ್ಯಂ ತತ್ಸರ್ವದೃಕ್ಸದಾ ॥ ದ್ವೈತ ಸ್ಯಾಗ್ರಹಣಂ ತುಲ್ಯಮುಭಯೋಃ ಪ್ರಾಜ್ಞತುರ್ಯಯೋಃ ॥ ಇತಿ ಚ ॥ ವಿರುದ್ಧಂ । ದ್ವೈತಗ್ರಹಣಾಕಾರಣತ್ವಂ ತುಲ್ಯಮಿತ್ಯರ್ಥಃ ॥

(d) ದ್ವೈತಂ ನ ಗ್ರಾಹಯೇತ್ತುರ್ಯೋ ನ ಚ ಪ್ರಾಜ್ಞಃ ಕಥಂಚನ।
ದ್ವೈತಗ್ರಹಣಬೀಜಂ ತು ನಿದ್ರಾ ಪ್ರಾಜ್ಞಂ ಸಮಾಶ್ರಿತಾ ॥
– ಇತಿ ಪ್ರಕಟಶ್ರುತಿಃ ॥ ೫-೬ ॥

ಅ ॥ (a) ಆ ನಿದ್ರೆಯು (ಅವಿದ್ಯೆಯು) ಯಾವ ಕಾರಣದಿಂದ ಆ ಹರಿಯ ಅಧೀನ ವಾದುದೋ, (ಆದಕಾರಣ) ವಿಶ್ವ ಮೊದಲಾದವರು ಅವಿದ್ಯಾ ಬದ್ಧರು (ಎನ್ನಿಸಿಕೊಳ್ಳುತ್ತಾರೆ). ಹೇಗೆ (ಭೃತ್ಯನು ರಾಜನ ಅಧೀನನಾದುದರಿಂದ) ಸ್ವಾಮಿಯಾದ ರಾಜನು ಭೃತ್ಯನಿಂದ ಯುಕ್ತನು ಎಂದು (ಹೇಳಲ್ಪಡುತ್ತಾನೆ). ಸರ್ವೋತ್ತಮನಾದ ಶ್ರೀ ಹರಿಗೆ ಅಜ್ಞಾನವಿಲ್ಲವೆಂಬುವುದು ಪ್ರಸಿದ್ಧವು. ಹೀಗೂ ಅದೆ. ॥ (b) (ಭೇದವಿಲ್ಲದಿದ್ದರೂ ಭೇದಕಾರ್ಯವನ್ನು ನಿರ್ವಹಿಸಿ ಕೊಡುವುದು ವಿಶೇಷವು.) ಅಭಿನ್ನನಾದರೂ ಆ ಬ್ರಹ್ಮನು ವಿಶೇಷದಿಂದ ಅನೇಕ ರೂಪಿಯೆಂದು (ಹೇಳಲ್ಪಡುತ್ತಾನೆ.) ಸ್ವಾಭಿನ್ನವಾದ ವಿಶೇಷ ಶಕ್ತಿಯಿಂದ, ಅಥವಾ ಅಘಟಿತ ಘಟನಾ ಸಾಮರ್ಥ್ಯದಿಂದ (ವಿಶ್ವಾದಿ ರೂಪದಿಂದ) ಮಾಡುತ್ತಾನೆಂದೂ (ತುರೀಯ ರೂಪದಿಂದ) ಮಾಡುವುದಿಲ್ಲವೆಂದೂ ಹೇಳಿಸಿಕೊಳ್ಳುತ್ತಾನೆ. (ಹೀಗೂ ಅದೆ). ॥ (c) ('ಸರ್ವದೃಕ್' ಎಂಬುವುದಕ್ಕೆ ಸರ್ವವನ್ನು) ಸಂವೇದಯತಿ=ತಿಳಿಸಿಕೊಡುತ್ತಾನೆ ಎಂಬ ಅರ್ಥವನ್ನು ಸ್ವೀಕಾರಮಾಡದೆ ಇದ್ದರೆ (ತುರ್ಯಂ ತತ್ಸರ್ವದೃಕ್) ತುರೀಯನು ಯಾವಾಗಲೂ ಅವೆಲ್ಲವನ್ನು ನೋಡುತ್ತಾನೆ. (ಎಂಬುವುದರಿಂದ ತುರೀಯನಿಗೆ ಸರ್ವಜ್ಞತ್ವವನ್ನು ಹೇಳಿ) 'ಅಗ್ರಹಣಂ ತುಲ್ಯಂ' ಪ್ರಾಜ್ಞ ತುರೀಯರಿಬ್ಬರಿಗೂ ಸ್ವಾತಂತ್ರ್ಯದ ಅಗ್ರಹಣವು ಸಮಾನವಾದುದು ಎಂದು (ತುರೀಯನಿಗೆ 'ಅಗ್ರಹಣಂ' ಎಂಬುವುದರಿಂದ ಜ್ಞಾನವಿಲ್ಲವೆಂದು ಆ ಕಲ್ಪದಲ್ಲಿ ಹೇಳಬೇಕಾಗುವುದರಿಂದ 'ಸರ್ವದೃಕ್' ಸರ್ವಜ್ಞನು, 'ಅಗ್ರಹಣಂ' ಜ್ಞಾನವಿಲ್ಲದಿರುವವನು, ಇವೆರಡೂ ಪರಸ್ಪರ) ವಿರುದ್ಧವಾಗುವುದು. ಜ್ಞಾನ ಅಜ್ಞಾನಗಳು ಏಕತ್ರ ವಿರುದ್ಧಗಳಾಗಿವೆ. ಕಾರಣ 'ಸರ್ವದೃಕ್' ಸರ್ವವನ್ನು ನೋಡುತ್ತಾನೆ ಎಂದರ್ಥಮಾಡದೆ ತೋರಿಸುತ್ತಾನೆ ಎಂದೇ ವ್ಯಾಖ್ಯಾನಮಾಡತಕ್ಕುದು. (ಪ್ರಾಜ್ಞ ತುರೀಯರಿಗೆ) ದ್ವೈತಗ್ರಹಣಾ ಕಾರಣತ್ವಂ, ದ್ವೈತ=ದೇಹಾದಿ ವಿಷಯದಲ್ಲಿ ಸ್ವಾತಂತ್ರ್ಯದ, ಗ್ರಹಣ=ತದ್ವಿಷಯಕವಾದ ಭ್ರಮರೂಪ ಜ್ಞಾನಕ್ಕೆ, ಅಕಾರಣತ್ವಂ=ಅಹೇತುತ್ವವು ಸಮಾನವೆಂದು ಅರ್ಥವು. (ಅಂದರೆ ಪ್ರಾಜ್ಞ ತುರೀಯರನ್ನು ಹೊಂದಿದವರಿಗೆ ದೇಹಾದಿ ವಿಷಯದಲ್ಲಿ ಸ್ವಾತಂತ್ರ್ಯ ಭ್ರಮೆಯು ಇರುವುದಿಲ್ಲ. ಕಾರಣ ಪ್ರಾಜ್ಞ ತುರೀಯರು ಸಾತಂತ್ರ್ಯ ಭ್ರಾಂತಿಗೆ ಕಾರಣ ಭೂತರು ಅಲ್ಲ). ॥ (d) ತುರ್ಯ ರೂಪಿಯು (ಜೀವನಿಗೆ) ಸ್ವಾತಂತ್ರ್ಯ ಭ್ರಮೆಯನ್ನು ಗ್ರಹಿಸಿ ಕೊಡಲಾರನು. ಪ್ರಾಜ್ಞನೂ ಕೂಡ ಯಾವ ಪ್ರಕಾರದಿಂದಲೂ ತಿಳಿಸಿಕೊಡಲಾರನು. ದೇಹ ಮೊದಲಾದವುಗಳಲ್ಲಿ (ಜೀವನು) ಸಾತಂತ್ರ್ಯ ಬುದ್ಧಿಗೆ ಕಾರಣೀಭೂತವಾದ ಮೂಲ ಅವಿದ್ಯೆಯಾದರೂ ಪ್ರಾಜ್ಞರೂಪಿಯನ್ನು ಆಶ್ರಯಿಸಿಕೊಂಡಿದೆ. (ಅಂದರೆ ಪ್ರಾಜ್ಞನ ಅಧೀನವಾದುದು). ಎಂದು ಪ್ರಕಟ ಶ್ರುತಿಯು. ॥ ೫-೬ ॥

**ಮಂ ॥ ಅನ್ಯಥಾಗೃಹ್ಣತಃ ಸ್ವಪ್ನೋ ನಿದ್ರಾ ತತ್ತ್ವಮಜಾನತಃ। ವಿಪರ್ಯಾಸೇ ತಯೋಃಕ್ಷೀಣೇ ತುರೀಯಂ ಪದಮಶ್ನುತೇ ॥ ೭ ॥**

ಅ ॥ ಅನ್ಯಥಾಗೃಹ್ಣತಃ=ಶ್ರೀ ಹರಿಯ ಅಧೀನವಾದ ಶರೀರ ಮನೆ ಮೊದಲಾದುದರಲ್ಲಿ ತನ್ನ ಅಧೀನವೆಂದೇ ತಿಳಿಯುವವನಿಗೆ, ಸ್ವಪ್ನಃ=ಮಿಥ್ಯಾಜ್ಞಾನವು (ಆಗುತ್ತದೆ), ತತ್ವಂ=ಶ್ರೀಹರಿಗೆ ಸ್ವಾತಂತ್ರ್ಯಾದಿರೂಪ ಯಥಾರ್ಥವನ್ನು,) ಅಜಾನತಃ=ತಿಳಿಯದಿದ್ದವನಿಗೆ, ನಿದ್ರಾ=ಮೂಲಾವಿದ್ಯೆಯ ಬಂಧವು (ಆಗುತ್ತದೆ), ತಯೋಃ=ಆ ನಿದ್ರಾಭ್ರಮೆಗಳಿಗೆ, ವಿಪರ್ಯಾಸೇ=

ವಿಪರಿವರ್ತನವು, (ತಿರುಗಾಡುವಿಕೆಯು) ಕ್ಷೀಣೇ=ನಾಶವಾಗುತ್ತಿರಲು, ತುರೀಯಂ ಪದಂ= ನಾಲ್ಕನೇರೂಪವನ್ನು ಅಶ್ನುತೇ=(ಸಾಕ್ಷಾತ್ಕರಿಸಿ) ಹೊಂದುತ್ತಾನೆ. ॥ ೭ ॥

ಭಾ॥ ವಿಪರೀತಜ್ಞಾನಾದಪಿ ವಿಪರೀತಜ್ಞಾನಾಂತರಂ ಜಾಯತೇ ॥ ೭ ॥

ಅ ॥ (ಇದ್ದ ಒಂದು ವಸ್ತುವನ್ನು ಬೇರೆ ಒಂದು ವಸ್ತುವನ್ನಾಗಿ ತಿಳಿದು ಕೊಳ್ಳುವಿಕೆಯು ವಿಪರೀತ ಜ್ಞಾನವು). ವಿಪರೀತಜ್ಞಾನದಿಂದಲೂ ಕೂಡ ವಿಪರೀತವಾದ ಬೇರೊಂದು ಜ್ಞಾನವು ಹುಟ್ಟುತ್ತದೆ. ॥ ೭ ॥

**ಮಂ ॥ ಅನಾದಿಮಾಯಯಾ ಸುಪ್ತೋ ಯದಾ ಜೀವಃ ಪ್ರಬುಧ್ಯತೇ । ಅಜಮನಿದ್ರಮಸ್ವಪ್ನಮದ್ವೈತಂ ಬುಧ್ಯತೇ ತದಾ ॥ ೮ ॥**

ಅ ॥ ಅನಾದಿಮಾಯಯಾ=ಅನಾದಿಯಾದ ವಿಷ್ಣುವಿನ, ಅನಾದಿಯಾದ ಇಚ್ಛೆಯಿಂದಲೂ ಇಚ್ಛಾಧೀನವಾದ ಅವಿದ್ಯೆಯಿಂದಲೂ, ಸುಪ್ತಃ=ಸಂಸಾರದಲ್ಲಿ ಪ್ರವೇಶಿಸಲ್ಪಟ್ಟ, ಜೀವಃ= ಜೀವನು, ಯದಾ=ಯಾವಾಗ, ಅನಾದಿಮಾಯಯಾ=ಈಶ್ವರನ ಇಚ್ಛೆಯಿಂದಲೇ (ಸದ್ಗುರುಗಳ ಉಪದೇಶದಿಂದ), ಪ್ರಬುಧ್ಯತೇ=ಶ್ರೀ ಹರಿಯೇ ಸ್ವತಂತ್ರನು ಇತರವಾದುದು ಎಲ್ಲವೂ ಆತನ ಅಧೀನವೆಂದು ಮೊದಲಾದ ತತ್ವಜ್ಞಾನವುಳ್ಳವನಾಗುತ್ತಾನೋ, ತದಾ=ಆವಾಗ, ಅಜಂ= ಜನನ ಮೊದಲಾದ ದೋಷರಹಿತನೂ, ಅನಿದ್ರಂ ಅಸ್ವಪ್ನಂ=ವಿಶ್ವತೈಜಸ ಪ್ರಾಜ್ಞರ ವ್ಯಾಪಾರಗಳನ್ನು ಮಾಡದಿರುವವನೂ, ಅದ್ವೈತಂ=ಮಿಥ್ಯಾಜ್ಞಾನವನ್ನು ಹೋಗಲಾಡಿಸುವವನೂ (ಸರ್ವಾನಿಷ್ಟನಿವರ್ತಕನೂ) ಆದ ಶ್ರೀ ಹರಿಯನ್ನು, ಬುಧ್ಯತೇ=ಸಾಕ್ಷಾತ್ಕರಿಸುತ್ತಾನೆ. ॥ ೮ ॥

ಭಾ॥ ಅನಾದಿಮಾಯಯಾ ವಿಷ್ಣೋರಿಚ್ಛಯಾ ಸ್ವಾಪಿತೋ ಯದಾ । ತಯಾ ಪ್ರಬೋಧಮಾಯಾತಿ ತದಾ ವಿಷ್ಣುಂ ಪ್ರಪಶ್ಯತಿ ॥

- ಇತಿ ಪ್ರಕಾಶಿಕಾಯಾಂ ॥ ೮ ॥

ಅ ॥ ವಿಷ್ಣುವಿನ ಅನಾದಿಯಾದ ಮಾಯೆಯಿಂದ ಅಂದರೆ ಇಚ್ಛೆಯಿಂದ (ಸಂಸಾರದಲ್ಲಿ) ಪ್ರವೇಶಿಸಲ್ಪಟ್ಟ ಜೀವನು ಯಾವಾಗ ಆ ಭಗವದಿಚ್ಛೆಯಿಂದ (ಅಂದರೆ ಆತನ ಅನುಗ್ರಹದಿಂದ) ಶ್ರವಣ ಮೊದಲಾದುದನ್ನು (ಗುರೂಪದೇಶದಿಂದ) ಹೊಂದುತ್ತಾನೋ, ಆಗ ವಿಷ್ಣುವನ್ನು ಪ್ರತ್ಯಕ್ಷೀಕರಿಸುತ್ತಾನೆ. ಎಂದು ಪ್ರಕಾಶಿಕಾ ಎಂಬುವ ಗ್ರಂಥದಲ್ಲಿ ಇದೆ. ॥ ೮ ॥

**ಮಂ ॥ ಪ್ರಪಂಚೋ ಯದಿ ವಿದ್ಯೇತ ನಿವರ್ತೇತ ನ ಸಂಶಯಃ । ಮಾಯಾಮಾತ್ರಮಿದಂ ದ್ವೈತಮದ್ವೈತಂ ಪರಮಾರ್ಥತಃ ॥ ೯ ॥**

ಅ ॥ ಪ್ರಪಂಚಃ=ದೇಹ, ಮನೆ ಮೊದಲಾದುವುಗಳಲ್ಲಿ ಸ್ವಸ್ವಾಮಿ ಸಂಬಂಧ ಮೊದಲಾದ ಬಂಧವು (ಜೀವನಿಗೆ ಸ್ವತಂತ್ರವಾಗಿ ಇಲ್ಲವೇ ಇಲ್ಲ. ಇತರ ಅಧೀನವಾದುದೂ), ಯದಿ ವಿದ್ಯೇತ=ಉಂಟೆಂದು ಅಂಗೀಕರಿಸುವುದಾದರೂ, ಪರಮಾರ್ಥತಃ=ಸರ್ವೋತ್ತಮನಾದ ಶ್ರೀ ಹರಿಯ ಅನುಗ್ರಹದಿಂದ, ನಿವರ್ತೇತ=ನಾಶವನ್ನು ಹೊಂದುತ್ತದೆಯೇ ಸರಿ, ಸಂಶಯಃ= ಸಂದೇಹವು, ನ=ಇರುವುದಿಲ್ಲ, (ಅಂತೂ ಈ ಶರೀರ ನನ್ನದು ಈ ಮನೆಯು ನನ್ನದು ಇದು ಮೊದಲಾದ ಭ್ರಾಂತಿಯು ಅನಾದಿ ಕಾಲವನ್ನಾರಂಭಿಸಿ ಇರುವುದಾದರೂ ಶ್ರೀ ಹರಿಯ ಅನುಗ್ರಹದಿಂದ ನಾಶವನ್ನು ಹೊಂದುತ್ತದೆಯೇ ಸರಿ), ಅದ್ವೈತಂ=(ದ್ವಿತ್ವೇನ=ವಸ್ತುಸ್ವರೂಪಾಪೇ

ಕ್ಷಯಾ ದ್ವಿತೀಯೇನ ಪ್ರಕಾರೇಣ, ಮಹದ್ಭಿಃ ಇತಂ=ಜ್ಞಾತಂ ನ ಎಂಬೀವ್ಯುತ್ಪತ್ತಿಯಿಂದ ವಸ್ತುವಿನ ಸ್ವರೂಪಕ್ಕಿಂತ ಎರಡನೇ ಪ್ರಕಾರದಿಂದ, ಮಹಾತ್ಮರಿಂದ ತಿಳಿಯಲ್ಪಡದಿರುವ ಪರ ಬ್ರಹ್ಮ ಮೊದಲಾದ ವಸ್ತುವು ಅಂದರೆ) ಮಹಾನುಭಾವರಿಂದ ಯೋಗ್ಯರೀತಿಯಾಗಿ ತಿಳಿಯಲ್ಪಟ್ಟ ಬ್ರಹ್ಮಾದಿ ವಸ್ತುಸಮುದಾಯವು, ದ್ವೈತಂ=(ಅಜ್ಞರಿಂದ ದ್ವಿತ್ವೇನ ಪ್ರಕಾರೇಣ, ಇತಂ=ಜ್ಞಾತಂ ಅಂದರೆ ವಸ್ತುವಿನ ತತ್ವಕ್ಕಿಂತ ವಿಪರೀತವಾಗಿ ತಿಳಿಯಲ್ಪಟ್ಟದ್ದು) ಅಂದರೆ ಅಜ್ಞರಿಂದ ಬೇರೆ ರೀತಿ ಯಾಗಿ (ಅಂದರೆ ವಿಪರೀತವಾಗಿ) ತಿಳಿಯಲ್ಪಟ್ಟಿತು, ಇದಂ=ಈ ಮಿಥ್ಯಾಜ್ಞಾನವು, ಮಾಯಾ ಮಾತ್ರಂ=ಭಗವದಿಚ್ಛೆಯಿಂದಲೇ ಉಂಟಾಯಿತು, (ಅಂತೂ ಮಿಥ್ಯಾಜ್ಞಾನವು ಅನಾದಿಯಾಗಿ ದ್ದರೂ ಈಶ್ವರನ ಇಚ್ಛೆಯಿಂದಲೇ ಹುಟ್ಟಿರುವುದರಿಂದ ಸ್ವಾಭಾವಿಕವಲ್ಲವು. ಆ ಕಾರಣ ಆತನ ಅನುಗ್ರಹದಿಂದ ನಾಶವು ಸಂಗತವೇ ಸರಿ). ॥ ೯ ॥

ಭಾ॥ (a) ತಸ್ಮಾತ್ ಸ್ವಸ್ವಾಮಿಸಂಬಂಧಃ ಪ್ರಪಂಚೋಽಸ್ಯ ಶರೀರಿಣಃ। ವಸ್ತುತೋಽಸೌ ನ ಚೈವಾಸ್ತಿ ಪರಮಸ್ಯ ವಶೇ ಯತಃ॥ ತಸ್ಮಾದಿಕಃ ॥(b) ಸ್ತಥಾಪ್ಯೇಷಹ್ಯಭಿಮಾನಾತ್ಪ್ರದೃಶ್ಯತೇ। ಅತಃ ಸ ವಿದ್ಯತ ಇತಿ ಹ್ಯಂಗೀಕಾರೋ ಭವೇದ್ಯದಿ ॥ ತಥಾಽಪಿ ಭಗವಜ್ಜ್ಞಾನಾತ್ಸ ನಿವರ್ತೇದಸಂಶಯಃ॥ ಇತಿ ಬ್ರಹ್ಮತರ್ಕೇ ॥ (c) ಅದ್ವೈತಮನ್ಯಥಾಽಜ್ಞಾತಂ ಪರಬ್ರಹ್ಮಾದಿವಸ್ತು ಯತ್॥ ದ್ವೈತಂ ದ್ವಿಧಾ ಜ್ಞಾತಂ ಮನ್ಯಥಾ ಜ್ಞಾತಮಜ್ಞೈಃ। ಪರಮಾರ್ಥತಃ ಪರಮೇಶ್ವರಾತ್ ॥

ಅ ॥ (a) ಈ ಜೀವನಿಗೆ ಪ್ರಪಂಚವು ಅಂದರೆ ಶರೀರದಿಂದ ಸ್ವಸ್ವಾಮಿಭಾವ ಸಂಬಂಧವು (ಈ ಶರೀರಕ್ಕೆ ನಾನು ನಿಯಾಮಕನು, ಶರೀರವು ನಿಯಮ್ಯವು ಇದು ಮೊದಲಾದುದು) ಸ್ವಾಭಾವಿಕವಾಗಿ ಇಲ್ಲವೇ ಇಲ್ಲ. ಏಕೆಂದರೆ- ಇದು (ಶರೀರವೇ ಮೊದಲಾದುದು) ಸರ್ವೋತ್ತಮನಾದ ಶ್ರೀಹರಿಯ ಅಧೀನದಲ್ಲಿಯೇ ಇರತಕ್ಕುದು. ॥ (b) ಯದ್ಯಪಿ ಇದು ಜೀವನಿಗೆ ಸ್ವಾಭಾವಿಕವಲ್ಲವು, ಶ್ರೀಹರಿಯ ಅಧೀನವೂ ಆಗಿದೆ. ಆದರೂ ಈ ಸ್ವಸ್ವಾಮಿಭಾವಸಂಬಂಧವು ಅಭಿಮಾನದಿಂದ ಅಂದರೆ ತನ್ನಲ್ಲಿ ಸ್ವಾತಂತ್ರ್ಯದ ಆರೋಪದಿಂದ ಅಥವಾ ಅಜ್ಞಾನದಿಂದ ಕಾಣಲ್ಪಡುತ್ತದೆ. ॥ ತನ್ನಲ್ಲಿ ಸ್ವಾತಂತ್ರ್ಯವನ್ನು ಆರೋಪಿಸಿಕೊಂಡು ತೋರುವುದರಿಂದ ಆ ಸ್ವಸ್ವಾಮಿಭಾವಸಂಬಂಧವು (ಅಸ್ವಾಭಾವಿಕವಾಗಿ) ಉಂಟೆಂದು ಅಂಗೀಕಾರವು ಯಾವ ಪಕ್ಷದಲ್ಲಿ ಆಗುವುದೋ, । ಆದರೂ ಈ ಸಂಬಂಧವು ಭಗವಜ್ಜ್ಞಾನದಿಂದ ನಾಶವಾಗುತ್ತದೆಯೇ ಸರಿ. ಸಂದೇಹವಿಲ್ಲ. ಎಂದು ಬ್ರಹ್ಮತರ್ಕದಲ್ಲಿ ಅದೆ. ॥ (c) ಅನ್ಯಥಾ=ವಸ್ತುವಿನ ಸ್ವರೂಪದಿಂದ ಬೇರೆ ರೀತಿಯಾಗಿ, (ಮಹಾತ್ಮರಿಂದ) ಅಜ್ಞಾತಂ=ತಿಳಿಯಲ್ಪಡದಿರುವ, ಯತ್=ಯಾವ, ಪರಬ್ರಹ್ಮಾದಿವಸ್ತು=ಪರಬ್ರಹ್ಮನೇ ಮೊದಲಾದ ವಸ್ತುವೋ (ಅದು), ಅದ್ವೈತಂ=ಅದ್ವೈತವೆನ್ನಿಸಿಕೊಳ್ಳುತ್ತದೆ. ॥ (ಅದ್ವೈತಶಬ್ದದಿಂದುಕ್ತವಾದ ಪರಬ್ರಹ್ಮ ಮೊದಲಾದ ವಸ್ತುವು ಯಾವ ಕಾರಣದಿಂದ) ದುರ್ಜನರಿಂದ (ವಸ್ತುವಿನ ತತ್ವಕ್ಕಿಂತ) ಎರಡನೇ ಪ್ರಕಾರವಾಗಿ ತಿಳಿಯಲ್ಪಟ್ಟಿತು. (ಶ್ರೀ ಹರಿಯಲ್ಲಿರತಕ್ಕ ಸ್ವಾಮಿತ್ವವು ತನ್ನಲ್ಲಿಯೇ ಇದೆ ಎಂಬೀಜ್ಞಾನದಿಂದ ಹರಿಯಲ್ಲಿದೆ ಎಂಬೀಜ್ಞಾನವಿಲ್ಲದಿರುವುದರಿಂದ) ಬೇರೆ ರೀತಿಯಾಗಿ (ಅಂದರೆ ಸ್ವಾಮಿಯಲ್ಲವೆಂದು) ತಿಳಿಯಲ್ಪಟ್ಟಿತು. (ಅದು) ದ್ವೈತವು. ॥ 'ಪರಮಾರ್ಥತಃ' ಅಂದರೆ ಸರ್ವೋತ್ತಮನಾದ ಶ್ರೀ ಹರಿಯಿಂದ, ॥

ಭಾ॥ (a) ತಸ್ಯೈವ ಮಾಯಾಮಾತ್ರಂ ತದಿಚ್ಛಯಾ ನಿರ್ಮಿತಂ । ತದನ್ಯಥಾ ಜ್ಞಾನಂ ತಸ್ಮಾತ್ತದಿಚ್ಛಯೈವ ನಿವರ್ತತೇ ॥ (b) ಪರೇಣ ಬ್ರಹ್ಮಣಾ ಯತ್ತು ದ್ವಿಧಾ ನ ಜ್ಞಾತಮಂಜಸಾ । ತದದ್ವೈತಂ ಪರಂ ಬ್ರಹ್ಮ (c) ತದೇವ ಜ್ಞಾತಮನ್ಯಥಾ ॥ ಜೀವೇನ ದ್ವೈತಮುದ್ದಿಷ್ಟಂ ಮಿಥ್ಯಾಜ್ಞಾನಂ ತದೇವ ಚ । ಪರಮಾರ್ಥಾತ್ಪರಾದ್ವಿಷ್ಣೋರ್ಜಾತಮಿಚ್ಛಾವಶಾದನು ॥ (d) ಮಾಯೇತೀಚ್ಛಾ ಸಮುದ್ದಿಷ್ಟಾ ಮಾಯಾಮಾತ್ರಂ ತದುದ್ಭವಂ । ಉತ್ತಮತ್ವಾತ್ಪರಾರ್ಥೋಽಸೌ ಭಗವಾನ್ವಿಷ್ಣುರಚ್ಯುತಃ ॥ ಇತಿ ಚ ॥ (e) ಅನನ್ಯಥಾ ಇತಮವಗತಮದ್ವೈತಂ ದ್ವೈತಂ ವಸ್ತುಸ್ವರೂಪಾಪೇಕ್ಷಯಾ ದ್ವಿಧಾ ಹ್ಯನ್ಯಥಾ ಜ್ಞಾತಮಿತ್ಯರ್ಥಃ ॥ ೯ ॥

ಅ ॥ (ಮಹಾತ್ಮರಿಂದ ವಿಪರೀತವಾಗಿ ತಿಳಿಯಲ್ಪಡದಿರುವುದರಿಂದ ಅದ್ವೈತವು ಬ್ರಹ್ಮನು. ಆ ಬ್ರಹ್ಮನು ದುರ್ಜನರಿಂದ ವಿಪರೀತವಾಗಿ ತಿಳಿಯಲ್ಪಡುತ್ತಾನೆ. ಆ ಅನ್ಯಥಾ ಜ್ಞಾನವು) ಆ ಪರಮೇಶ್ವರನದ್ದೇ ಮಾಯಾಮಾತ್ರವು. ಅಂದರೆ ಆ ಹರಿಯ ಇಚ್ಛೆಯಿಂದಲೇ ನಿರ್ಮಿಸಲ್ಪಟ್ಟದ್ದು. ಆದುದರಿಂದ ಆ ಮಿಥ್ಯಾಜ್ಞಾನವು ಆ ಹರಿಯ ಇಚ್ಛೆಯಿಂದಲೇ ನಾಶವಾಗುತ್ತದೆ. ॥ (b) ಯಾವ ಕಾರಣದಿಂದ ಯಾವುದೊಂದು ಪ್ರಸಿದ್ಧವಾದ ಭಗವತ್ಸ್ವರೂಪವು ಪರಬ್ರಹ್ಮನ ಪ್ರಸಾದದಿಂದ, ವಸ್ತುತತ್ವಕ್ಕಿಂತ ಬೇರೆ ರೀತಿಯಾಗಿ (ಮಹಾತ್ಮರಿಂದ) ತಿಳಿಯಲ್ಪಡುವುದಿಲ್ಲವೋ, ಚೆನ್ನಾಗಿಯೇ ತಿಳಿಯಲ್ಪಡುತ್ತದೋ, ಆದುದರಿಂದ ಪರಬ್ರಹ್ಮನು ಅದ್ವೈತವೆನ್ನಿಸಿಕೊಳ್ಳುತ್ತಾನೆ. ॥ (c) ಆ ಪರಬ್ರಹ್ಮನೇ ದುರ್ಜನರಿಂದ ವಿಪರೀತವಾಗಿ ತಿಳಿಯಲ್ಪಟ್ಟನು. (ಕಾರಣ) ದ್ವೈತನೆಂದು ಹೇಳಲ್ಪಟ್ಟನು. ಆ ಮಿಥ್ಯಾಜ್ಞಾನವು ಪರಮೇಶ್ವರನಾದ ವಿಷ್ಣುವಿನ ಇಚ್ಛಾಧೀನವಾಗಿ ಅದನ್ನು ಅನುಸರಿಸಿಯೇ ಹುಟ್ಟಿಯದೆ. ಆದುದರಿಂದ ಆತನ ಇಚ್ಛೆಯಿಂದಲೇ ನಾಶವಾಗುತ್ತದೆ. ॥ (d) ಮಾಯೆಯೆಂದರೆ ಇಚ್ಛೆಯೆಂದು ಹೇಳಲ್ಪಟ್ಟಿದೆ. ಅದರಿಂದ ಹುಟ್ಟಿರುವುದು ಮಾಯಾಮಾತ್ರವು. । ಅವಿನಾಶಿಯಾದ ಈ ಪೂಜ್ಯನಾದ ವಿಷ್ಣುವು ಸರ್ವೋತ್ತಮನಾದುದರಿಂದ 'ಪರಾರ್ಥ'ನೆನ್ನಿಸಿಕೊಳ್ಳುತ್ತಾನೆ. ಹೀಗೂ ಅದೆ. ॥ (e) 'ಅನ್ಯಥಾ' ಅಂದರೆ ವಸ್ತುತತ್ವಕ್ಕಿಂತ ಬೇರೆ ಪ್ರಕಾರದಿಂದ ('ದ್ವಿ' ಎಂಬುವುದರ ಅರ್ಥವು) 'ಇತಂ' ಅಂದರೆ ತಿಳಿಯಲ್ಪಟ್ಟದ್ದು ಅಲ್ಲವು. ಅದೇ ('ದ್ವಿ ಇತಂ ನ' ಎಂಬೀವ್ಯುತ್ಪತ್ತಿಯಿಂದ) ಅದ್ವೈತಶಬ್ದವಾಚ್ಯವಾಗುತ್ತದೆ. ವಸ್ತುಸ್ವರೂಪವನ್ನು ಅಪೇಕ್ಷಿಸಿ ಬೇರೆ ಪ್ರಕಾರವಾಗಿ ತಿಳಿಯಲ್ಪಟ್ಟದ್ದು ದ್ವೈತವು. ಅಂದರೆ ವಿಪರೀತವಾಗಿ ತಿಳಿಯಲ್ಪಟ್ಟದ್ದು ಎಂದು ಅಭಿಪ್ರಾಯವು. ॥ ೯ ॥

**ಮಂ ॥ ವಿಕಲ್ಪೋ ವಿನಿವರ್ತೇತ ಕಲ್ಪಿತೋ ಯದಿ ಕೇನಚಿತ್ । ಉಪದೇಶಾದಯಂ ವಾದೋ ಜ್ಞಾತೇ ದ್ವೈತಂ ನ ವಿದ್ಯತೇ ॥ ಇತಿ ॥ ೧೦ ॥ ೨ ॥**

॥ ಇತಿ ದ್ವಿತೀಯಃ ಖಂಡಃ ॥

ಅ ॥ ವಿಕಲ್ಪಃ=ಶರೀರ ಮನೆ,ಮೊದಲಾದವುಗಳಲ್ಲಿ ತನ್ನದು ಎಂದು ಅಭಿಮಾನವೇ ಮೊದಲಾದ ಅನೇಕ ವಿಧವಾದ ಬಂಧವು, ಯದಿ=(ಹಿಂದೆ ಹೇಳಿದ ರೀತಿಯಿಂದ ಸ್ವಾಭಾವಿಕವಾದ) ಪಕ್ಷದಲ್ಲಿಯೂ, ಕೇನಚಿತ್=ಅಜ್ಞಾನಮೊದಲಾದಕಾರಣದಿಂದ ಸ್ವಾಭಾವಿಕವಾಗಿ, ಕಲ್ಪಿತಃ=

ನಿರ್ಮಿಸಲ್ಪಟ್ಟಾಗ್ಯೂ, ಉಪದೇಶಾತ್=ಮಹಾತ್ಮರ ಉಪದೇಶದ ಸಾಮರ್ಥ್ಯದಿಂದ, ವಿನಿವರ್ತೇತ=ನಾಶವನ್ನು ಹೊಂದುತ್ತದೆಯೇ ಸರಿ, ಜ್ಞಾತೇ=ಪರಬ್ರಹ್ಮನು ಯೋಗ್ಯರೀತಿಯಾಗಿ ತಿಳಿಯಲ್ಪಡುತ್ತಿರಲು, ದ್ವೈತಂ=ಮಿಥ್ಯಾಜ್ಞಾನವು, ನ ವಿದ್ಯತೇ=ಇರುವುದಿಲ್ಲ, (ನಾಶವಾಗುತ್ತದೆ) ಆ ಮೇಲೆ ಮುಕ್ತಿಯಾಗುತ್ತದೆ. ಇತಿ ಅಯಂ=ಈ ಪ್ರಕಾರ ಇದು (ಸಜ್ಜನರ) ವಾದಃ=ಸಿದ್ಧಾಂತವು. ॥ ೧೦ ॥ ೨ ॥

ಭಾ॥ (a) ಅತೋ ವಿಕಲ್ಪಃ ಶರೀರಾದಿಸಂಬಂಧಃ ॥ ಕೇನಚಿದಜ್ಞಾನಾದಿನಾ ಕಾರಣೇನ ಕಲ್ಪಿತೋಽಪ್ಯುಪದೇಶಾನ್ನಿವರ್ತತೇ । ಅಯಂ ಸತಾಂ ವಾದಃ ॥ (b) ಜ್ಞಾತೇ ಸತಿ ಪರಬ್ರಹ್ಮಣಿ ದ್ವೈತಮನ್ಯಥಾಜ್ಞಾನಂ ನಿವರ್ತತ ಇತಿ ॥ (c) ವಿಕಲ್ಪೋ ದೇಹಬಂಧಾದಿಃ ಕೇನಚಿತ್ಕಾರಣೇನ ತು । ಕಲ್ಪಿತೋ ವಿನಿವರ್ತೇತ ಗುರುವಾಕ್ಯಾದಸಂಶಯಃ ॥ (d) ಏಷ ಏವ ಸತಾಂ ವಾದೋ ಜ್ಞಾತೇ ಬ್ರಹ್ಮಣಿ ತತ್ತ್ವತಃ । ನಿವರ್ತತೇಽನ್ಯಥಾ ಜ್ಞಾನಂ ತತ ಆನಂದಮೇತ್ಯಸೌ ॥ಇತಿ ಚ॥೧೦॥

ಅ॥ (a) ಆದುದರಿಂದ ವಿಕಲ್ಪವೆಂದರೆ ಶರೀರವೊದಲಾದವುಗಳ ಸಂಬಂಧವು. (ಸ್ವಸ್ವಾಮಿಭಾವಸಂಬಂಧವು). 'ಕೇನಚಿತ್' ಅಂದರೆ ಅಜ್ಞಾನವೊದಲಾದ ಕಾರಣದಿಂದ ಕಲ್ಪಿಸಲ್ಪಟ್ಟಾಗ್ಯೂ (ಮಹಾತ್ಮರ) ಉಪದೇಶದಿಂದ (ಅಪರೋಕ್ಷಜ್ಞಾನವುಂಟಾಗಿ) ನಾಶವಾಗುತ್ತದೆ. (ಆ ಮೇಲೆ ಆನಂದಾವಿರ್ಭಾವರೂಪ ಮುಕ್ತಿಯನ್ನು ಹೊಂದುತ್ತಾನೆ). ಇದು ಸಜ್ಜನರ ಸಿದ್ಧಾಂತವು. ॥ (b) ಪರಬ್ರಹ್ಮನು ತಿಳಿಯಲ್ಪಡುತ್ತಿರಲು, ದ್ವೈತಂ=ಮಿಥ್ಯಾಜ್ಞಾನವು ಹೊರಟುಹೋಗುತ್ತದೆ. ಎಂದು ಸತ್ಸಿದ್ಧಾಂತವು. ॥ (c) ವಿಕಲ್ಪಃ=ದೇಹಾದಿಗಳಲ್ಲಿರುವ ಸ್ವಸ್ವಾಮಿಸಂಬಂಧವು, ಅಜ್ಞಾನಾದಿ ಕಾರಣದಿಂದ ಕಲ್ಪಿತವಾಗಿದ್ದರೂ ಗುರುಗಳ ಉಪದೇಶದಿಂದ ನಾಶವಾಗುತ್ತದೆ, ಸಂದೇಹವಿಲ್ಲ. ॥ (d) ಪರಬ್ರಹ್ಮನು ಶಾಸ್ತ್ರೋಕ್ತಪ್ರಕಾರ ತಿಳಿಯಲ್ಪಡುತ್ತಿರಲು ಮಿಥ್ಯಾಜ್ಞಾನವು ನಾಶವಾಗುತ್ತದೆ. ಆ ಮೇಲೆ ಇವನು ಸ್ವರೂಪಾನಂದಾವಿರ್ಭಾವರೂಪಮುಕ್ತಿಯನ್ನು ಹೊಂದುತ್ತಾನೆ. ಎಂದಿದೇ ಸಜ್ಜನರ ಸಿದ್ಧಾಂತವು. ॥ ೧೦ ॥

॥ ೨ನೇ ಖಂಡವು ಸಮಾಪ್ತವಾಯಿತು. ॥ ಶ್ರೀಃ ॥

## ॥ ಮೂರನೇ ಖಂಡವು. ॥

ಮಂ ॥ ಸೋಽಯಮಾತ್ಮಾಧ್ಯಕ್ಷರಮೋಂಕಾರೋಽಧಿಮಾತ್ರಂ ಪಾದಾ ಮಾತ್ರಾ ಅಕಾರ ಉಕಾರೋ ಮಕಾರ ಇತಿ । ಜಾಗರಿತಸ್ಥಾನೋ ವೈಶ್ವಾನರೋಽಕಾರಃ ಪ್ರಥಮಾ ಮಾತ್ರಾ । ಆಪ್ತೇರಾದಿಮತ್ತ್ವಾದ್ವಾ ಆಪ್ನೋತಿ ಹ ವೈ ಸರ್ವಾನ್ಕಾಮಾನಾದಿಶ್ಚ ಭವತಿ । ಯ ಏವಂ ವೇದ ॥ ೧ ॥

ಅ ॥ ಓಂಕಾರಃ=ಓಂ ಎಂದು ಕರೆಯಲ್ಪಡುವುದರಿಂದ ಓಂಕಾರ ಶಬ್ದದಿಂದ ಹೇಳಲ್ಪಡುವ, ಸೋಽಯಂ=ಆ ಈ ವಿಶ್ವಾದಿನಾಲ್ಕುರೂಪಿಯಾದ, ಆತ್ಮಾ=ಶ್ರೀ ಹರಿಯು, ಅಧ್ಯಕ್ಷರಂ=ಸರ್ವೋತ್ತಮನೂ ಅವಿನಾಶಿಯೂ ಆದುದರಿಂದ ಅಧ್ಯಕ್ಷರನು, ಅಧಿಮಾತ್ರಂ=

ಪೂರ್ಣಗಳಾದ ಅಂಶಗಳುಳ್ಳವನು, ಪಾದಾಃ=ವಿಶ್ವಾದಿರೂಪಗಳು, ಮಾತ್ರಾಃ=ಮಾತ್ರಾಶಬ್ದ ವಾಚ್ಯಗಳು. ಅಕಾರಃ="ಅ" ಎಂದು ಕರೆಯಲ್ಪಡುವುದರಿಂದ ಅಕಾರಶಬ್ದವಾಚ್ಯನು, ವಿಶ್ವನು. ಉಕಾರಃ=ಉಕಾರವಾಚ್ಯನು, ತೈಜಸನು. ಮಕಾರಃ=ಮಕಾರವಾಚ್ಯನು, ಪ್ರಾಜ್ಞನು. (ನಾದ ಬೋಧ್ಯನಾದ ತುರೀಯನು ನಾದನು). ಇತಿ=ಹೀಗೆ, (ಅಂಶಗಳು). ಜಾಗರಿತಸ್ಥಾನಃ= ಚಕ್ಷುಸ್ಸೇ ಸ್ಥಾನವಾಗಿವುಳ್ಳ, ಪ್ರಥಮಾ ಮಾತ್ರಾ=ಪ್ರಣವ ಪ್ರತಿಪಾದ್ಯನಾದ ಶ್ರೀಹರಿಯ ಒಂದನೇ ಅಂಶನಾದ, ವೈಶ್ವಾನರಃ=ವೈಶ್ವಾನರನು, ಅಕಾರಃ=ಅವರ್ಣಪ್ರತಿಪಾದ್ಯನು, ಆಪ್ತೇಃ=ಆಯಾಯ ಜೀವರಿಗೆ ಯೋಗ್ಯಗಳಾದ ಭೋಗ್ಯವಿಷಯಗಳನ್ನು ಪ್ರಾಪಿಸಿಕೊಡುವುದರಿಂದಲೂ, ಆದಿ ಮತ್ವಾದ್ವಾ=ಪ್ರಾಜ್ಞತೈಜಸರೇ ಆದಿಯಾಗಿ ಉಳ್ಳವನಾದುದರಿಂದಲೂ (ವಿಶ್ವನು 'ಅಃ' ಎಂದು ಹೇಳಲ್ಪಡುತ್ತಾನೆ). ಯಃ=ಯಾವ ಅಧಿಕಾರಿಯು, ಏವಂ=ವಿಶ್ವನು ಅಕಾರವಾಚ್ಯನೆಂದು, ವೇದ=ತಿಳಿಯುತ್ತಾನೋ, (ಅಸ್ಯ=ಈ ತಿಳಿದವನಿಗೆ, ಸಃ=ಆ ವಿಶ್ವನು),ಸರ್ವಾನ್ ಕಾಮಾನ್= ಸ್ವಯೋಗ್ಯಗಳಾದ ಎಲ್ಲಾ ಭೋಗಗಳನ್ನು, ಆಪ್ನೋತಿ=ಪ್ರಾಪಿಸಿಕೊಡುತ್ತಾನೆ. ಆದಿಶ್ಚ= (ಮುಕ್ತಿಗೆ) ಕಾರಣನೂ, ಭವತಿ=ಆಗುತ್ತಾನೆ. ॥ ೧ ॥

**ಭಾ॥ (a)** ಅಧಿಕಂ ಸರ್ವತಃ ಅವಿನಾಶಿ ಚೇತ್ಯಧ್ಯಕ್ಷರಂ ॥ **(b)** ಅಧಿಕಾ ಏವ ಮಾತ್ರಾ ಅಂಶಾ ಯಸ್ಯ ತದಧಿಮಾತ್ರಂ ॥ **(c)** ಅ ಇತ್ಯನೇನಾ ಭಿಧಾನೇನಾಕ್ರಿಯತ ಇತ್ಯಕಾರಃ ॥ **(d)** ತತ್ರ ಪೂರ್ವೋಕ್ತೋ ವೈಶ್ವಾನರಃ ಪ್ರಥಮಾ ಮಾತ್ರೇತ್ಯಾದ್ಯನುವಾದಃ ॥ ಅಕಾರ ಇತ್ಯಾ ದಿಕಂ ವಿಧೇಯಂ ॥

ಅ ॥ (a) ಸರ್ವರಿಂದಲೂ ಉತ್ತಮನೂ, ವಿನಾಶಶೂನ್ಯನೂ ಆಗಿರುತ್ತಾನೆಂದು 'ಅಧ್ಯ ಕ್ಷರ'(ನೆಂದು ಹೇಳಲ್ಪಟ್ಟದ್ದಾನೆ). ॥ (b) ಪೂರ್ಣಗಳೇ ಆದ, ಮಾತ್ರಾಃ=ಅಂಶಗಳು ಯಾರಿಗೆ ಇರುತ್ತವೋ, ಅವನು 'ಅಧಿಮಾತ್ರನು.' ॥ (c) 'ಅ' ಎಂಬೀ ನಾಮಧೇಯದಿಂದ ಕರೆಯಲ್ಪ ಡುತ್ತಾನೆ ಎಂದು 'ಅಕಾರ'ನೆನಿಸಿಕೊಳ್ಳುತ್ತಾನೆ. ॥ (d) ಆ ವಿಶ್ವಾದಿ ನಾಲ್ಕು ಮೂರ್ತಿಗಳಲ್ಲಿ ಪೂರ್ವದಲ್ಲಿ ಜಾಗರಿತ ಸ್ಥಾನನೆಂದು ಹೇಳಲ್ಪಟ್ಟ ವೈಶ್ವಾನರನು ಒಂದನೇ ಅಂಶನು. ಇದು ಮೊದಲಾದುದು ಅನುವಾದವು (ಹಿಂದೆ ಹೇಳಿದ್ದನ್ನೇ ಹೇಳಿರುವುದು.) ॥ ಅಕಾರಃ=ಇದು ಮೊದ ಲಾದುದು ವಿಧಾನಮಾಡತಕ್ಕದು. ॥ (ಅಂದರೆ ವೈಶ್ವಾನರನು ಜೀವನಿಗೆ ವಿಷಯಗಳನ್ನು ಪ್ರಾಪಿಸಿ ಕೊಡುವುದರಿಂದಲೂ ಪ್ರಾಜ್ಞತೈಜಸರೇ ಆದಿಯಾಗಿ ಉಳ್ಳವನಾದುದರಿಂದಲೂ ಅಕಾರವಾಚ್ಯನು ಎಂದು ಹಿಂದೆ ಹೇಳದೆ ಇರುವುದನ್ನು ಪ್ರತಿಪಾದಿಸುವುದು). ॥

**ಭಾ॥ (a)** ಪ್ರಾಜ್ಞಸ್ತೈಜಸಶ್ಚಾದಿರಸ್ಯೇತ್ಯಾದಿಮಾನ್ । **(b)** ಸುಪ್ತೇರುತ್ಥಾನೇ ಪ್ರಾಜ್ಞಾದ್ವಿಭಕ್ತೋ ಭವತಿ ವಿಶ್ವಃ । **(c)** ಸ್ವಪ್ನಾದುತ್ಥಾನೇ ತೈಜ ಸಾತ್ ॥ **(d)** ಆದಿಶ್ಚಾಸ್ಯೋಪಾಸಕಸ್ಯ ಭವತಿ ॥ ೧ ॥

ಅ ॥ (a) ಪ್ರಾಜ್ಞನು ತೈಜಸನೂ ಕೂಡ ಈ ವಿಶ್ವನಿಗೆ ಆದಿಯು. ಆದುದರಿಂದ 'ಆದಿ ಮಾನ್', ॥ (b) ಸುಪ್ತಿಯಿಂದ ಎದ್ದಕೂಡಲೇ ವಿಶ್ವನು ಪ್ರಾಜ್ಞನಿಂದ ವಿಭಾಗಿಸಲ್ಪಟ್ಟವನು ಆಗುತ್ತಾನೆ. (ಅಂದರೆ ಸುಷುಪ್ತ್ಯವಸ್ಥೆಯನ್ನು ಹೊಂದಿದ ಜೀವನು ತಾಡನಾದಿಗಳಿಂದ ಕೆಲವು ವೇಳೆ ತತ್ಕ್ಷಣವೇ ಸ್ವಪ್ನಾವಸ್ಥೆಯನ್ನು ಹೊಂದದೆ ಎಚ್ಚರಿತನಾಗುತ್ತಾನೆ ಎಂದು ಅನುಭವ ಸಿದ್ಧವು.) ॥ (c) ಸ್ವಪ್ನದಿಂದ ಎದ್ದೊಡನೆಯೇ ತೈಜಸನಿಂದ (ವಿಭಕ್ತನಾಗುತ್ತಾನೆ). (ಅಂತೂ

ಸ್ವಪ್ನವನ್ನು ನೋಡುತ್ತಿರುವಾಗಲೇ ಕದಾಚಿತ್ ಎಚ್ಚರಿತನಾಗುತ್ತಾನೆ ಎಂಬುವುದೂ ಅನುಭವ ಸಿದ್ಧವು.) ॥ (d) ಈ ಉಪಾಸಕನಿಗೆ (ವಿಶ್ವನು) ಮುಕ್ತಿಗೆ ಕಾರಣನೂ ಆಗುತ್ತಾನೆ. ॥ ೧ ॥

**ಮಂ ॥ ಸ್ವಪ್ನಸ್ಥಾನಸ್ತೈಜಸ ಉಕಾರೋ ದ್ವಿತೀಯಾ ಮಾತ್ರಾ । ಉತ್ಕರ್ಷಾ ದುಭಯತ್ವಾದ್ವಾ । ಉತ್ಕರ್ಷತಿ ಹ ವೈ ಜ್ಞಾನ ಸಂತತಿಂ ಸಮಾನಶ್ಚ ಭವತಿ ನಾಸ್ಯಾಬ್ರಹ್ಮವಿತ್ಕುಲೇ ಭವತಿ । ಯ ಏವಂ ವೇದ ॥ ೨ ॥**

ಅ ॥ ಸ್ವಪ್ನಸ್ಥಾನಃ=ಕಂಠದೇಶಸ್ಥನಾದ, ದ್ವಿತೀಯಾ ಮಾತ್ರಾ=(ಆತ್ಮನ) ಎರಡನೇ ಅಂಶ ನಾದ, ತೈಜಸಃ=ತೈಜಸನು, ಉಕಾರಃ='ಉ' ಎಂದು ಹೇಳಲ್ಪಡುವನು. ಉತ್ಕರ್ಷಾತ್= ಜಾಗ್ರದ್ದಶೆಯಲ್ಲಿರುವ ದೇಹಾಭಿಮಾನವನು ಬಿಡಿಸಿ ಸ್ವಪ್ನ ಮಂಡಲಕ್ಕೆ ಜೀವನನ್ನು ಸೆಳೆಯು ವುದರಿಂದಾಗಲೀ, ಉಭಯತ್ವಾದ್ವಾ=ಬಾಹ್ಯವ್ಯಾಪಾರೋಪರತಿಯೆಂಬ ನಿದ್ರೆ, ಸ್ವಾಪ್ನವಿಷಯಾ ನುಭವ ಈ ಎರಡಕ್ಕೆ ಕಾರಣನಾದುದರಿಂದ ಎಂದಾಗಲೀ (ತೈಜಸನು 'ಉ' ಎಂದು ಹೇಳಲ್ಪಡು ತ್ತಾನೆ). ಯಃ=ಯಾವ ಅಧಿಕಾರಿಯು, ಏವಂ=ಈ ಪ್ರಕಾರವಾಗಿ, ವೇದ=ತಿಳಿಯುತ್ತಾನೋ, (ಆ ಜ್ಞಾನಿಯು) ಜ್ಞಾನಸಂತತಿಂ=ಜ್ಞಾನಪರಂಪರೆಯನ್ನು, (ಆಪ್ನೋತಿ=ಹೊಂದುತ್ತಾನೆ). ಉತ್ಕರ್ಷತಿ ಹ=(ಶರೀರಬಂಧದಿಂದ ತನ್ನನ್ನು) ಉದ್ಧರಿಸಿಕೊಳ್ಳುತ್ತಾನೆ. ಸಮಾನಶ್ಚ=ಎಲ್ಲಾ ಮುಕ್ತರ ಮಧ್ಯದಲ್ಲಿರುವವನು, ಭವತಿ=ಆಗುತ್ತಾನೆ, ವೈ=ನಿಶ್ಚಯ. ಅಸ್ಯ=ಈ ಜ್ಞಾನಿಯ, ಕುಲೇ=ವಂಶದಲ್ಲಿ, ಅಬ್ರಹ್ಮವಿತ್=ಬ್ರಹ್ಮಜ್ಞಾನಿಯಲ್ಲದವನು, ನ ಭವತಿ=ಆಗುವುದಿಲ್ಲ. (ಅಂದರೆ ಬ್ರಹ್ಮಜ್ಞಾನವುಳ್ಳ ಮಕ್ಕಳೇ ಹುಟ್ಟುತ್ತವೆ). ॥ ೨ ॥

ಭಾ॥ **(a)** ಶರೀರಾಭಿಮಾನಾದುತ್ಥಾಪ್ಯ ಕರ್ಷತೀತ್ಯುತ್ಕರ್ಷಃ ॥ **(b)** ನಿದ್ರಾ ವಿಷಯಾನುಭವಶ್ಚಾನೇನ ಕ್ರಿಯತ ಇತ್ಯುಭಯತ್ವಂ । ಸಮಾನಃ ಸರ್ವೇಷಾಂ ಮಧ್ಯಸ್ಥೋ ಭವತಿ ॥ ಮಿತೇರಂತರ್ಗಮನಾತ್ ॥ ೨ ॥

ಅ ॥ (a) ದೇಹಾಭಿಮಾನದಿಂದ ಉದ್ಧರಿಸಿ (ಅಂದರೆ ಅಭಿಮಾನವನ್ನು ನಾಶೀಕರಿಸಿ ಸ್ವಪ್ನಸ್ಥಾನದಲ್ಲಿ ದೇಹದ ಒಳಗಿರುವ ವಾಸನಾಮಯಗಳಾದ ಪದಾರ್ಥಗಳ ಜ್ಞಾನಕ್ಕೋಸ್ಕರ) ಸೆಳೆಯುತ್ತಾನೆ (ಆದಪ್ರಯುಕ್ತ) 'ಉತ್ಕರ್ಷನು' ಎಂದು (ಹೆಸರು). (b) ನಿದ್ರೆಯೂ ಸ್ವಾಪ್ನ ವಿಷಯಗಳ ಜ್ಞಾನವೂ (ಈ ಎರಡು) ಕೂಡ ಈ ತೈಜಸನಿಂದ ಮಾಡಲ್ಪಡುತ್ತದೆ. ಎಂದು 'ಉಭಯತ್ವವು' ॥ (c) 'ಸಮಾನಃ' ಅಂದರೆ ಎಲ್ಲಾ ಮುಕ್ತರ ಮಧ್ಯದಲ್ಲಿರುವವನು ಆಗು ತ್ತಾನೆ, 'ಮಿತೇಃ' ಅಂದರೆ ತನ್ನ ಆಲಿಂಗನವನ್ನು ಕೊಟ್ಟು ತನ್ನೊಳಗೆ ಜೀವನನ್ನು ಪ್ರಾಪಿಸಿಕೊ ಡುವುದರಿಂದ, (ಎಂದರ್ಥವು). ॥ ೨ ॥

ಭಾ॥ **(a)** ಅಧಿಕತ್ವಾಚ್ಚ ನಿತ್ಯತ್ವಾದಧ್ಯಕ್ಷರಮುದಾಹೃತಃ । **(b)** ಯೇಽಂ ಶಾಸ್ತಸ್ಯ ತು ಸರ್ವೇಽಪಿ ಪೂರ್ಣಾಃ ಪ್ರತ್ಯೇಕಶಃ ಪ್ರಭೋಃ ॥ ಅತೋಽ ಧಿಮಾತ್ರಮುದ್ದಿಷ್ಟೋ ಮಾತ್ರಾ ಅಂಶಾ ಉದಾಹೃತಾಃ । **(c)** ಶ್ರುತಃ ಸ ವಿಷ್ಣು ರೋಂಕಾರ ಓಮಿತ್ಯಾ ಕ್ರಿಯತೇ ಯತಃ । ಆದ್ಯ ಸ್ತದಂಶೋ ಹ್ಯಾಪ್ತಿಸ್ತ್ವಾದ್ವಿಷಯಾ ನಾಪಯೇದ್ಯತಃ ॥ ಜೀವಸ್ಯ ತು **(d)** ಯತಃ ಪ್ರಾಜ್ಞಾತ್ತೈಜಸಾದ್ವಾ ಸಮುತ್ಥಿತಃ । ಅವಿಭಾಗೋಽಪಿ ಭಗವಾನಾ

ದಿಮಾಂಸ್ತೇನ ಕೀರ್ತಿತಃ । (e) ತಸ್ಮಾದುತ್ಪದ್ಯತೇ ಮುಕ್ತಃ ಸ
ಜ್ಞಾನಾನಂದಲಕ್ಷಣಃ ॥ ಆಪ್ನೋತಿ ವಿಷಯಾನ್ಸರ್ವಾನ್ ॥ ೧ ॥

ಅ ॥ (a) ಸರ್ವೋತ್ತಮನಾದುದರಿಂದಲೂ ನಿತ್ಯನಾದುದರಿಂದಲೂ ಅಧ್ಯಕ್ಷರನೆಂದು ಹೇಳಲ್ಪಡುತ್ತಾನೆ. ॥ (b) ಆ ಪ್ರಭುವಿನ ಯಾವ ಅಂಶಗಳು ಇವೆಯೋ, ಅವುಗಳೆಲ್ಲವೂ ಒಂದೊಂದೂ ಪರಿಪೂರ್ಣಗಳೇ ಆಗಿವೆ. ಆದುದರಿಂದ ಅಧಿಮಾತ್ರನೆಂದು ಹೇಳಲ್ಪಡುತ್ತಾನೆ. 'ಮಾತ್ರಾಃ' ಅಂದರೆ ಅಂಶಗಳು ಎಂದು ಹೇಳಲ್ಪಟ್ಟಿವೆ. ॥ (c) ಯಾವಕಾರಣದಿಂದ 'ಓಂ' ಎಂದು ಕರೆಯಲ್ಪಡುತ್ತಾನೋ (ಕಾರಣ) ಆವಿಷ್ಣುವು ಓಂಕಾರನೆಂದು ಹೇಳಲ್ಪಡುತ್ತಾನೆ. ಆ ಓಂಕಾರವಾಚ್ಯನಾದ ಶ್ರೀ ಹರಿಯು ಒಂದನೇ ಅಂಶನಾದ ಅಕಾರವಾಚ್ಯನಾದ ವಿಶ್ವನು (ಆದ್ಯಃ) ಯಾವ ಕಾರಣದಿಂದ ಜೀವನಿಗೆ ಭೋಗ್ಯವಿಷಯಗಳನ್ನು ಪ್ರಾಪಿಸಿಕೊಡುತ್ತಾನೋ ಆದುದರಿಂದ 'ಆಪ್ತಿ' ಶಬ್ದವಾಚ್ಯನು. ॥ (d) ಸ್ವತಃ ಭೇದಶೂನ್ಯನಾದರೂ ವಿಶ್ವನು ಯಾವ ಕಾರಣದಿಂದ ಪ್ರಾಜ್ಞನಿಂದಲೂ ತೈಜಸನಿಂದಲೂ ಹೊರಟಿರುವನೋ, ಆದುದರಿಂದ 'ಆದಿಮಾನ್' ಎಂದು ಹೇಳಲ್ಪಡುತ್ತಾನೆ. ॥ (e) (ಆ ವಿಶ್ವನನ್ನು ಉಪಾಸನೆ ಮಾಡಿದವನು) ಅದರಿಂದ ನಿರ್ದುಷ್ಟವಾದ ಜ್ಞಾನವೂ ಆನಂದವೂ ಇವುಗಳೇ ಸ್ವರೂಪವಾಗಿವುಳ್ಳ ಮುಕ್ತನು ಆಗುತ್ತಾನೆ. ಎಲ್ಲಾ ಕಾಮ್ಯವಿಷಯಗಳನ್ನು ಹೊಂದುತ್ತಾನೆ. ॥ ೧ ॥

ಭಾ॥ (a) ನಿದ್ರಾಯಾ ವಿಷಯಸ್ಯ ಚ । ಉಭಯೋಃ ಕಾರಣತ್ವೇನ ಹ್ಯುಭಯ
ಸ್ತೈಜಸಃ ಸ್ಮೃತಃ ॥ (b) ದೇಹಾಭಿಮಾನಾದುದ್ಧೃತ್ಯ ಕರ್ಷತಿ
ಸ್ವಪ್ನಮಂಡಲೇ । ಉತ್ಕರ್ಷತ್ವಂ ತತಸ್ತಸ್ಯ (c) ತಜ್ಜ್ಞಾನೀ
ಜ್ಞಾನನಿತ್ಯತಾಂ । ಆಪ್ನೋತಿ ದೇಹಾದುತ್ಕೃಷ್ಯ ಸ್ವಾತ್ಮಾನಂ
(d) ಸರ್ವಮೋಕ್ಷಿಣಾಂ ॥ ಮಧ್ಯಸ್ಥಃ ಸ ಭವೇತ್ಸ್ನೇಹಾದ್ದೋಷಾ
ಭಾವಾಚ್ಚ ಸರ್ವಶಃ ॥ ೨ ॥

ಅ ॥ (a) ತೈಜಸನು, ಮನಸ್ಸುಬಿಟ್ಟು ಎಲ್ಲಾ ಇಂದ್ರಿಯಗಳಿಗೂ ಉಪರತಿ ರೂಪವಾದ ನಿದ್ರೆಗೂ, ಸ್ವಾಪ್ನವಿಷಯಾನುಭವಕ್ಕೂ ಈ ಎರಡಕ್ಕೂ ಕಾರಣನಾದುದರಿಂದ ಉಭಯನೆಂದು ಹೇಳಲ್ಪಡುತ್ತಾನೆ. ॥ (b) (ಯಾವಕಾರಣದಿಂದ ಜೀವನನ್ನು ) ತೈಜಸನು ದೇಹಾಭಿಮಾನ ವನ್ನು ನಾಶಮಾಡಿ ಸ್ವಪ್ನಸ್ಥಾನಕ್ಕೆ (ವಾಸನಾಮಯಗಳಾದ ಪದಾರ್ಥಗಳ ಜ್ಞಾನಕ್ಕೋಸ್ಕರ) ಸೆಳೆಯುತ್ತಾನೋ, ಆದುದರಿಂದ ಆ ತೈಜಸನಿಗೆ ಉತ್ಕರ್ಷತ್ವವು. ॥ (c) ತನ್ನನ್ನು ದೇಹಾಭಿ ಮಾನದಿಂದ ಸೆಳೆದು ಇರತಕ್ಕ ತೈಜಸಜ್ಞಾನಿಯು (ಮುಕ್ತಿಯಲ್ಲಿ) ಜ್ಞಾನನಿತ್ಯತ್ವವನ್ನು ಹೊಂದು ತ್ತಾನೆ. ॥ (d) ಅಂತಹ ಮುಕ್ತನು ತೈಜಸನಲ್ಲಿ ಇವನಿಗೆ ಭಕ್ತಿಯಿದ್ದುದರಿಂದಲೂ, ಹಾಗೆಯೇ ಆ ಉಪಾಸಕನಲ್ಲಿ ತೈಜಸನಿಗೆ ಪ್ರೀತಿಯಿದ್ದುದರಿಂದಲೂ ಅಥವಾ ಮುಕ್ತರಿಗೆ ಪರಸ್ಪರ ಸ್ನೇಹ ವಿದ್ದುದರಿಂದಲೂ ಸಂಪೂರ್ಣವಾಗಿ ರಾಗಾದಿ ದೋಷಗಳಿಲ್ಲದಿರುವುದರಿಂದಲೂ ಎಲ್ಲಾ ಮುಕ್ತರ ಮಧ್ಯದಲ್ಲಿ ಇರುವವನು ಆಗುವನು. ॥ ೨ ॥

**ಮಂ ॥ ಸುಷುಪ್ತಸ್ಥಾನಃ ಪ್ರಾಜ್ಞೋ ಮಕಾರಸ್ತೃತೀಯಾ ಮಾತ್ರಾ । ಮಿತೇ
ರಪೀತೇರ್ವಾ। ಮಿನೋತಿ ಹ ವಾ ಇದಂ ಸರ್ವಮಪೀತಿಶ್ಚ ಭವತಿ ।
ಯ ಏವಂ ವೇದ ॥ ೩ ॥**

ಅ॥ ಸುಷುಪ್ತಸ್ಥಾನಃ=ಹೃತ್ಕರ್ಣಿಕೆಯ ಅಗ್ರದಲ್ಲಿ ಇರುವ, ತೃತೀಯಾ ಮಾತ್ರಾ=ಆತ್ಮನ ಮೂರನೇ ಅಂಶನಾದ, ಪ್ರಾಜ್ಞಃ=ಪ್ರಾಜ್ಞರೂಪಿಯು, ಮಕಾರಃ='ಮ' ಎಂದು ಹೇಳಲ್ಪಡು ವವನು. ಮಿತೇಃ=ಸುಪ್ತಿಯಲ್ಲಿ ಜೀವನನ್ನು ತನ್ನೊಳಗೆ ಪ್ರಾಪಿಸಿಕೊಡುವುದರಿಂದಲಾಗಲೀ, ಅಪೀತೇರ್ವಾ=ಸುಪ್ತಿಯಲ್ಲಿ ಬಾಹ್ಯಜ್ಞಾನವನ್ನು ನಾಶಮಾಡುವುದರಿಂದಲಾಗಲೀ, (ಮಕಾರ ವಾಚ್ಯನು). ಯಃ=ಯಾವ ಅಧಿಕಾರಿಯು, ಏವಂ=ಈ ಪ್ರಕಾರವಾಗಿ, ವೇದ=ತಿಳಿಯು ತ್ತಾನೋ, (ಆ ಜ್ಞಾನಿಯು) ಇದಂ ಸರ್ವಂ=ಯಥಾಯೋಗ್ಯವಾಗಿ ಜಗತ್ತನ್ನು, ಮಿನೋತಿ ಹ ವಾ=ತನ್ನೊಳಗೆ ಪ್ರಾಪಿಸಿಕೊಡುತ್ತಾನೆ. ಅಂದರೆ ಜೀವರು ಅಣುಗಳು ಆದರೂ ಅಧಿಕಾರಿಗೆ ಸೂರ್ಯಾದಿಗಳಂತೆ ಪ್ರಕಾಶದಿಂದ ವ್ಯಾಪ್ತಿಯುಂಟು. ಕಾರಣ ಅವರ ಮಧ್ಯದಲ್ಲಿ ಮುಕ್ತನಾಗಿ ಪ್ರಾಪಿಸಿಕೊಡುತ್ತಾನೆ. ಅಂತೂ ಬ್ರಹ್ಮಾಂಡದ ಒಳಗಿದ್ದ ಎಲ್ಲಾ ಪದಾರ್ಥಗಳನ್ನು ತಿಳಿಯುತ್ತಾನೆ. ಅಪೀತಿಶ್ಚ=ದುಃಖಮೊದಲಾದುವುಗಳನ್ನು ನಾಶಮಾಡಿದವನೂ ಕೂಡ, ಭವತಿ=ಆಗುತ್ತಾನೆ.॥೩॥

ಭಾ॥ (a) ಸ್ವಾತ್ಮನ್ಯಂತರ್ಗಮಯತಿ ಮಾನಮಂತರ್ಗತಿಃ ಸ್ಮೃತಾ । ಜೀವ ಮಂತರ್ಗತಂ ಕೃತ್ವಾ ತಜ್ಜ್ಞಾನಲಯಕೃದ್ಯತಃ ॥ ಪ್ರಾಜ್ಞೋ ಮಾನಮಪೀತಿಶ್ಚ (b) ತಜ್ಜ್ಞೋಽಪ್ಯೇವಂ ವಿಮುಕ್ತಿಗಃ । ವ್ಯಾಪ್ತ್ಯಾಂತರ್ಗಮಯೇತ್ಸರ್ವಂ ದುಃಖಾದ್ಯಂ ತು ವಿಲಾಪಯೇತ್ ॥ (c) ಅಣೂನಾಮಪಿ ಜೀವಾನಾಂ ಪ್ರಕಾಶೋ ವ್ಯಾಪಕೋ ಭವೇತ್ । ಅಂಡಮಾತ್ರೇ (d) ಬಹಿಶ್ಚಾಪಿ ದೇವತಾನಾಂ ಯಥಾ ಕ್ರಮಂ ॥ ಅತೋಽಂತರ್ಗಮನಂ ಮುಕ್ತೌ ಜೀವೇಷು ಜಗತೋ ಭವೇತ್ ॥ ಇತಿ ಬ್ರಹ್ಮತರ್ಕೇ ॥ ೩ ॥

ಅ॥ (a) (ಅಜ್ಞಾನಾವೃತನಾದ ಜೀವನನ್ನು) ತನ್ನೊಳಗೆ ಪ್ರವೇಶಮಾಡಿಸುತ್ತಾನೆ. ಮಾನ (ಮಿತಿ) ಅಂದರೆ ಅಂತರ್ಗಮನವೆಂದು ಹೇಳಲ್ಪಟ್ಟಿದೆ. ಯಾವಕಾರಣದಿಂದ ಪ್ರಾಜ್ಞನು ಜೀವನನ್ನು ತನ್ನೊಳಗೆ ಇರುವವನನ್ನಾಗಿಮಾಡಿ, ಆ ಜೀವನಿಗೆ ಯಾವುದೊಂದು ಬಾಹ್ಯಪದಾರ್ಥ ಗಳನ್ನು ವಿಷಯೀಕರಿಸುವ ಜ್ಞಾನವುಂಟೋ, ಆ ಜ್ಞಾನವನ್ನು ನಾಶಮಾಡಿದವನೋ, ಆದುದರಿಂದ ಮಾನ (ಮಿತಿಯು)ವೆಂದೂ, ಅಪೀತಿಯೆಂದೂ ಹೇಳಲ್ಪಡುತ್ತಾನೆ. ॥ (b) ಆ ಪ್ರಾಜ್ಞನನ್ನು ತಿಳಿದವನೂ ಕೂಡ, ಈ ಪ್ರಕಾರ ಮುಕ್ತಿಯನ್ನು ಹೊಂದಿದವನಾಗಿ ವ್ಯಾಪ್ತಿಯಿಂದ ಸರ್ವವನ್ನು ಒಳಗೆ ಪ್ರವೇಶಮಾಡಿಸುತ್ತಾನೆ. ಅಂದರೆ ಜ್ಞಾನದಿಂದ ಸರ್ವವನ್ನು ವಿಷಯೀಕರಿಸುತ್ತಾನೆ. ದುಃಖ ಮೊದಲಾದ ಅನಿಷ್ಟವನ್ನು ನಾಶಮಾಡುವನು. ॥ (c) ಅಣುಭೂತರಾದಾಗ್ಯೂ ಜೀವರ ಪ್ರಕಾಶವು ಕೇವಲ ಬ್ರಹ್ಮಾಂಡದಲ್ಲಿ ವ್ಯಾಪಿಸಿಕೊಂಡದ್ದು ಆಗುವುದು. ॥ (d) ದೇವತೆಗಳಿ ಗಾದರೂ ಯಥಾಕ್ರಮವಾಗಿ ಬ್ರಹ್ಮಾಂಡದಿಂದ ಹೊರಗೂ ಕೂಡ, (ವ್ಯಾಪ್ತಿಯು ಅದೆ.) ಆದುದರಿಂದ ಕೇವಲ ಬ್ರಹ್ಮಾಂಡದಲ್ಲಿ ಪ್ರಕಾಶವು ವ್ಯಾಪಿಸಿಕೊಂಡು ಇದ್ದುದರಿಂದ ಮುಕ್ತಿ ಯಲ್ಲಿ ಜೀವರ ಜ್ಞಾನಗಳಲ್ಲಿ ಜಗತ್ತಿಗೆ ಅಂತರ್ಗಮನವು ಆಗುವುದು. ಎಂದು ಬ್ರಹ್ಮತರ್ಕ ದಲ್ಲಿ ಅದೆ. ॥ ೩ ॥

**ಮಂ ॥ ಅತ್ರೈತೇ ಶ್ಲೋಕಾ ಭವಂತಿ । ವಿಶ್ವಸ್ಯಾತ್ವವಿವಕ್ಷಾಯಾಮಾದಿಸಾ ಮಾನ್ಯಮುತ್ಕಟಂ । ಮಾತ್ರಾಸಂಪ್ರತಿಪತ್ತೌ ಸ್ಯಾದಾಪ್ತಿಸಾಮಾನ್ಯ ಮೇವ ಚ ॥ ೪ ॥**

ಅ ॥ ತತ್ರ=ಮೂರುರೂಪಗಳನ್ನು ತಿಳಿದವರಿಗೆ ಹೇಳಿದ ಫಲದಲ್ಲಿ, ಏತೇ=ಮೇಲೆ ಹೇಳುವ, ಶ್ಲೋಕಾಃ=ಮಂತ್ರಗಳು, ಭವಂತಿ=(ಸನಾಂದಿಗಳು) ಆಗುತ್ತವೆ. ವಿಶ್ವಸ್ಯ=ವಿಶ್ವ ನಾಮಕ ರೂಪಕ್ಕೆ, ಅಕ್ಷ್ವವಿವಕ್ಷಾಯಾಂ=ಪ್ರಣವದ ಏಕದೇಶವಾದ ಅಕಾರವಾಚ್ಯತ್ವೋಪಾಸನೆ ಯಾಗುತ್ತಿರಲು, (ಉಪಾಸಕನಿಗೆ) ಆದಿಸಾಮಾನ್ಯಂ=ಆದಿಮತ್ವದಿಂದ ವಿಶ್ವನ ಸಾಮ್ಯವು, (ಆಗುತ್ತದೆ). ಉತ್ಕಟಂ=ಸ್ಪಷ್ಟವಿದು, ಮಾತ್ರಾ ಸಂಪ್ರತಿಪತ್ತೌ=ವಿಶ್ವನೆಂಬ ಭಗವದಂಶವನ್ನು ಧ್ಯಾನಮಾಡಿದರೆ ಈ ಧ್ಯಾನಿಸಿದವನಿಗೆ, ಉತ್ಕಟಂ=ಸ್ಪಷ್ಟ ಹೇಗೆ ಆದೀತೋ ಹಾಗೆ, ಆಪ್ತಿ ಸಾಮಾನ್ಯಮೇವ ಚ=ಎಲ್ಲಾ ಕಾಮ್ಯಮಾನವಿಷಯಗಳ ಪ್ರಾಪ್ತಿಯಿಂದ ವಿಶ್ವನ ಸಾಮ್ಯವೇ, ಸ್ಯಾತ್=ಆಗುವುದು. ॥ ೪ ॥

ಭಾ॥ ಮಾತ್ರಾಸಂಪ್ರತಿಪತ್ತೌ ಅಂಶಧ್ಯಾನೇ । ಆದಿಮತ್ವಂ ವಿಶ್ವಸ್ಯ ವಿದ್ಯತೇ । ತದುಪಾಸಕಸ್ಯಾಪಿ ಭವತೀತ್ಯಾದಿಸಾಮಾನ್ಯಂ ॥ ೪ ॥

ಅ ॥ 'ಮಾತ್ರಾಸಂಪ್ರತಿಪತ್ತೌ' ಅಂದರ ವಿಶ್ವನೆಂಬ ಭಗವದಂಶವನ್ನು ಧ್ಯಾನಿಸಿದರೆ ಎಂದರ್ಥವು. (ವಿಶ್ವನಿಗೆ ಸುಪ್ತಿಯಿಂದೆದ್ದೊಡನೆ ಪ್ರಾಜ್ಞರೂಪವೇ ಆದಿಯಾಗಿದೆ. ಸ್ವಪ್ನದಿಂದೆ ದ್ದೊಡನೆ ತೈಜಸರೂಪವೇ ಆದಿಯಾಗಿದೆ. ಅಂತೂ) ಆದಿಮತ್ವವು ಇದೆ. ಆ ಆದಿಮತ್ವವು ವಿಶ್ವನನ್ನು ಉಪಾಸನೆ ಮಾಡಿದವನಿಗೂ ಕೂಡ ಆಗುತ್ತದೆ. ಈ ಪ್ರಕಾರ (ಮುಕ್ತಿಯಾಗಲಿಕ್ಕೆ "ತಂ ಯಥಾ ಯಥೋಪಾಸತೇ ತದೇವ ಭವತಿ" ಎಂಬೀ ಶ್ರುತಿಯಿಂದ ವಿಶ್ವನನ್ನು ಆದಿಮಾನ್ ಎಂದು ಧ್ಯಾನಿಸಿದರಿಂದ ಉಪಾಸಕನೂ ಆದಿಮಾನ್ (ವಿಶ್ವನೇ ಆದಿಯಾಗಿವುಳ್ಳವನು) ಆಗು ವನು. ಆದ ಪ್ರಯುಕ್ತ) ಆದಿಮತ್ವದಿಂದ ವಿಶ್ವನಿಗೂ ಆತನನ್ನು ಉಪಾಸನೆ ಮಾಡಿದವನಿಗೂ ಸಾಮ್ಯವು. (ಶಬ್ದದಿಂದ ತಿಳಿದುಕೊಳ್ಳತಕ್ಕದ್ದು). ॥ ೪ ॥

**ಮಂ ॥ ತೈಜಸಸ್ಯೋತ್ವವಿಜ್ಞಾನೇ ಉತ್ಕರ್ಷೋ ದೃಶ್ಯತೇ ಸ್ಫುಟಂ । ಮಾತ್ರಾ ಸಂಪ್ರತಿಪತ್ತೌ ಸ್ಯಾದುಭಯತ್ವಂ ತಥಾವಿಧಂ ॥ ೫ ॥**

ಅ ॥ ತೈಜಸಸ್ಯ=ತೈಜಸನಿಗೆ, ಉತ್ವವಿಜ್ಞಾನೇ=ಉಕಾರವಾಚ್ಯತ್ವೋಪಾಸನೆಯಾಗು ತ್ತಿರಲು, (ಆ ಉಪಾಸಕನಿಗೆ) ಸ್ಫುಟಂ=ಚೆನ್ನಾಗಿ, ಉತ್ಕರ್ಷಃ=ಜ್ಞಾನೋತ್ಕರ್ಷರೂಪಫಲವು, ದೃಶ್ಯತೇ=ಪ್ರಮಾಣಪ್ರಮಿತವು. ಮಾತ್ರಾಸಂಪ್ರತಿಪತ್ತೌ=ಪ್ರಣವಾಂಶವಾದ ಉಕಾರದಿಂದ ವಾಚ್ಯನು ಎಂದುಆತ್ಮಾಂಶನಾದ ತೈಜಸನನ್ನು ಧ್ಯಾನಿಸಿದರೆ, (ಆಧ್ಯಾನಿಸಿದವನಿಗೆ), ತಥಾವಿಧಂ= ಜ್ಞಾನಸಂತತಿಯು ಸಾಮ್ಯವು ಎಂಬೀ, ಉಭಯತ್ವಂ=ಎರಡು, ಸ್ಯಾತ್=ಆಗುವುದು.

ತಾ ॥ ನಿದ್ರೆಯು ಸ್ವಾಪ್ನವಿಷಯಾನುಭವವೂ ಕೂಡ ಶ್ರೀಹರಿಯಿಂದ ಮಾಡಲ್ಪಡುತ್ತದೆ. ಕಾರಣ ತೈಜಸನಿಗೆ ಉಭಯತ್ವವು. ಈ ಉಪಾಸಕನಿಗೂ ಬಾಹ್ಯೇಂದ್ರಿಯೋಪರತಿರೂಪವಾದ ನಿದ್ರೆಯು ಮುಕ್ತಿಯಲ್ಲಿ ಆಗುತ್ತದೆ. (ಅಂದರೆ ಬಾಹ್ಯೇಂದ್ರಿಯಗಳು ಜಡಗಳೆಲ್ಲವೂ ನಷ್ಟಗಳಾಗು ತ್ತವೆ). ಸ್ವರೂಪೇಂದ್ರಿಯದಿಂದ ವಿಷಯಾನುಭವವೂ ಆಗುತ್ತದೆ. ಕಾರಣಉಭಯತ್ವವು. ॥ ೫ ॥

**ಮಂ ॥ ಮಕಾರಭಾವೇ ಪ್ರಾಜ್ಞಸ್ಯ ಮಾನಸಾಮಾನ್ಯಮುತ್ಕಟಂ । ಮಾತ್ರಾ ಸಂಪ್ರತಿಪತ್ತೌ ತು ಲಯಸಾಮಾನ್ಯಮೇವ ಚ ॥ ೬ ॥**

ಅ ॥ ಪ್ರಾಜ್ಞಸ್ಯ=ಪ್ರಾಜ್ಞನಿಗೆ, ಮಕಾರಭಾವೇ=ಪ್ರಣವದ ಏಕದೇಶವಾದ ಮವರ್ಣ ದಿಂದ ವಾಚ್ಯತ್ವವು ತಿಳಿಯಲ್ಪಡುತ್ತಿರಲು, ಮಾನಸಾಮಾನ್ಯಂ=ಸರ್ವಾಂತರ್ಭಾವದಿಂದ ಪ್ರಾಜ್ಞನ

ಸಾಮಾನ್ಯವು, ಉತ್ಕಟಂ=ಸ್ಪಷ್ಟವು. ಮಾತ್ರಾಸಂಪ್ರತಿಪತ್ತೌ ತು=ಪ್ರಣವಾಂಶವಾದ ಮಕಾರದಿಂದ ವಾಚ್ಯನೆಂದು ಆತ್ಮಾಂಶವಾದಪ್ರಾಜ್ಞನನ್ನುಧ್ಯಾನಿಸಿದರೆ, (ಧ್ಯಾನಿಸಿದವನಿಗೆ) ಲಯಸಾಮಾನ್ಯಮೇವ ಚ=ದುಃಖಮೊದಲಾದ ಅನಿಷ್ಟವನ್ನು ನಾಶಮಾಡುವುದರಿಂದ ಪ್ರಾಜ್ಞನ ಸಾಮ್ಯವೇ, (ಆಗುತ್ತದೆ). ॥ ೬ ॥

**ಮಂ ॥ ತ್ರಿಷು ಧಾಮಸು ಯತ್ತುಲ್ಯಂ ಸಾಮಾನ್ಯಂ ವೇತ್ತಿ ನಿಶ್ಚಿತಂ । ಸ ಪೂಜ್ಯಸ್ಸರ್ವಭಾವಾನಾಂ ವಂದ್ಯಶ್ಚೈವ ಮಹಾಮುನಿಃ ॥ ೭ ॥**

ಅ ॥ ತ್ರಿಷು ಧಾಮಸು=ಹಿಂದೆಹೇಳಿದಪ್ರಕಾರ ವಿಶ್ವಮೊದಲಾದ ಮೂರು ರೂಪಗಳು ಧ್ಯಾನಮಾಡಲ್ಪಡುತ್ತಿರಲು, (ಧ್ಯಾನಿಸಿದ ಪುರುಷನಿಗೆ) ಯತ್=ಯಾವ, ತುಲ್ಯಂ=ಸಮಾನವಾದ, (ಅಂದರೆ ಧ್ಯಾನಿಸಲ್ಪಡತಕ್ಕ ವಿಶ್ವಾದಿಗಳಿಗೆ ಸದೃಶವಾದ) ಸಾಮಾನ್ಯಂ=ಆದಿಮತ್ವಮೊದಲಾದ ಸಾಮ್ಯವು, (ಆಗುತ್ತದೆ ಎಂದು) ನಿಶ್ಚಿತಂ=ನಿಶ್ಚಿತವೆಂದು, ವೇತ್ತಿ=(ಯಾರು) ತಿಳಿಯುತ್ತಾನೋ, ಸಃ=ಆ ತಿಳಿಯುವವನು, ಮಹಾಮುನಿಃ=ಶ್ರೇಷ್ಠಮುನಿಯು, ಸರ್ವಭಾವಾನಾಂ=ಎಲ್ಲಾ ಜೀವರಿಂದಲೂ, ಪೂಜ್ಯಃ=ಪೂಜಿಸಲ್ಪಡತಕ್ಕವನು, ವಂದ್ಯಶ್ಚೈವ=ನಮಸ್ಕರಿಸಲ್ಪಡತಕ್ಕವನೂ ಕೂಡ (ಆಗುತ್ತಾನೆ.) ॥ ೭ ॥

**ಮಂ ॥ ಅಕಾರೋ ನಯತೇ ವಿಶ್ವಮುಕಾರಶ್ಚಾಪಿ ತೈಜಸಂ । ಮಕಾರಶ್ಚ ಪುನಃ ಪ್ರಾಜ್ಞಂ ನಾಮಾತ್ರೇ ವಿದ್ಯತೇಽಗತಿಃ ॥ ಇತಿ ॥ ೮ ॥**

॥ ತೃತೀಯಃ ಖಂಡಃ ॥ ೩ ॥

ಅ ॥ ಅಕಾರಃ='ಅ' ಎಂದು ಹೇಳಲ್ಪಡತಕ್ಕ ವಿಶ್ವನು, (ತನ್ನನ್ನು ಉಪಾಸನೆ ಮಾಡಿದವನಿಗೆ) ವಿಶ್ವಂ=ತನ್ನನ್ನೇ, ನಯತೇ=ಪ್ರಾಪಿಸಿಕೊಡುತ್ತಾನೆ. ಉಕಾರಶ್ಚ='ಉ' ಎಂದು ಹೇಳಲ್ಪಡತಕ್ಕ ತೈಜಸನು, (ಉಪಾಸಕನಿಗೆ) ತೈಜಸಮಪಿ=ತನ್ನನ್ನೇ, (ಪ್ರಾಪಿಸಿಕೊಡುತ್ತಾನೆ.) ಮಕಾರಶ್ಚ='ಮ' ಎಂದು ಹೇಳಲ್ಪಡತಕ್ಕ ಪ್ರಾಜ್ಞನು, (ಉಪಾಸಕನಿಗೆ) ಪುನಃ=ಮತ್ತು, (ಅಂದರೆ ಪ್ರತಿದಿವಸದಲ್ಲಿಯೂ ಸುಪ್ತಿಯಲ್ಲಿ ಪ್ರಾಪ್ತಿಯಿದ್ದರೂ ಮುಕ್ತಿಯಲ್ಲಿ ಆತನ ಪ್ರಾಪ್ತಿಗಾಗಿ,) ಪ್ರಾಜ್ಞಂ=ತನ್ನನ್ನೇ (ಪ್ರಾಪಿಸಿಕೊಡುತ್ತಾನೆ). ಅಮಾತ್ರೇ=ತುರೀಯನಲ್ಲಿ, (ಉಪಾಸಕನಿಗೆ) ಅಗತಿಃ=ಪ್ರಾಪ್ತ್ಯಭಾವವು, ನ ವಿದ್ಯತೇ=ಇರುವುದಿಲ್ಲ. (ಪ್ರಾಪ್ತಿಯು ಉಂಟೇ ಉಂಟು. ಅಂತೂ ತುರೀಯನೂ ಜ್ಞಾನಿಪ್ರಾಪ್ಯನೇ ಸರಿ. ॥ ೮ ॥

**॥ ಮೂರನೇ ಖಂಡವು ಸಮಾಪ್ತವಾಯಿತು. ॥ ೩ ॥**

**ಭಾ॥** **(a)** ಅಮಾತ್ರೇಽಪ್ಯಗತಿರ್ನ ವಿದ್ಯತೇ। ಪ್ರತಿದಿವಸಂ ವಿಭಾಗ ಏಕೀಭಾವಶ್ಚ ವಿದ್ಯತೇ ವಿಶ್ವಾದೀನಾಂ। ತುರೀಯಸ್ಯ ತನ್ನ ವಿದ್ಯತ ಇತ್ಯಮಾತ್ರಃ॥ **(b)** ವಿಶ್ವಾದೀನಾಂ ವ್ಯವಹಾರಕಾರಣತ್ವಂ ವಿದ್ಯತೇ। ತುರೀಯಸ್ಯ ತನ್ನ ವಿದ್ಯತ ಇತ್ಯತೋ ಗಮ್ಯತ್ವಮಪಿ ನಾಸ್ತೀತ್ಯಾಶಂಕಾಂ ನಿವಾರಯತಿ ಅಗತಿರ್ನವಿದ್ಯತ ಇತಿ ॥ ಆತ್ಮಾನಂ ಸಂವಿಶತೀತಿ ಗತಿವಚನಾತ್ । **(c)** ಆದಿಮತ್ವೇನ ಸಾಮಾನ್ಯಮುಪಾಸ್ಯೇನ ಭವೇದಿತಿ ॥ **ಉಪಾಸಕಸ್ಯ ಸಂಜಾನನ್ ಸರ್ವವಂದ್ಯೋ ಭವೇತ್ಪುಮಾನ್ ।**

(d) ಸಾಮಾನ್ಯತ್ರಯಮಪ್ಯೇತತ್ತುಲ್ಯಂ ಮುಕ್ತಿಗತತ್ವತಃ ॥
ಅಮಾತ್ರತ್ವಂ ತುರೀಯಸ್ಯ ತ್ವವಿಭಾಗಾದ್ದಿನೇ ದಿನೇ । (e) ಜಾಗ್ರ
ದಾದೇರಕರ್ತಾऽಪಿ ಗಮ್ಯೋऽಸೌ ಜ್ಞಾನಿನಾಂ ಭವೇತ್ ॥ ಇತಿ ಚ ॥ (f)
ಆದಿಮತ್ತ್ವಾದಿಸಾಮಾನ್ಯಂ ತುಲ್ಯಂ ಮೋಕ್ಷೋಪಭೋಗ್ಯತಃ ।
ಅಮಾತ್ರತ್ವಂ ತುರೀಯಸ್ಯಾಪ್ಯವಿಭಾಗಾದ್ದಿನೇದಿನೇ ॥

– ಇತ್ಯಾತ್ಮಸಂಹಿತಾಯಾಂ ॥ ೫. ೬. ೭. ೮. ॥

ಅ ॥ (a) (ಹೇಗೆ ವಿಶ್ವಾದಿರೂಪತ್ರಯದಲ್ಲಿ ಅಗಮ್ಯತ್ವವಿಲ್ಲವೋ, ಅದೇ ರೀತಿಯಾಗಿ) ಅಮಾತ್ರೆ ತುರೀಯನಲ್ಲಿಯೂ ಅಗಮ್ಯತ್ವವಿಲ್ಲವು. (ಅವನೂ ಕೂಡ ಜ್ಞಾನಿಪ್ರಾಪ್ಯನೇ ಸರಿ.) (ಹೇಗೆ) ವಿಶ್ವಾದಿಗಳ ಮಧ್ಯದಲ್ಲಿ ಪ್ರತಿದಿವಸದಲ್ಲಿಯೂ (ವಿಶ್ವತೈಜಸರಿಗೆ ಪ್ರಾಜ್ಞನಿಂದ) ವಿಭಾಗವೂ, ಏಕೀಭಾವವೂ ಕೂಡ ಇರುತ್ತದೋ, (ವಿಶ್ವನಿಗೆ ಪ್ರಾಜ್ಞತೈಜಸರಿಂದ ಇದೆಯೋ ಹಾಗೆಯೇ,)। ತುರೀಯನಿಗೆ ಅವುಗಳು ಇಲ್ಲವು; ಕಾರಣ ಅಮಾತ್ರನೆಂದು(ಹೇಳಲ್ಪಡುತ್ತಾನೆ.)॥ (b) ವಿಶ್ವಾದಿರೂಪಗಳಿಗೆ ಜಾಗ್ರತ್ಕಾಲ ಮೊದಲಾದುವುಗಳಲ್ಲಿ ಪ್ರವೃತ್ತಿರೂಪವಾದ ವ್ಯವಹಾರಕ್ಕೆ ಕಾರಣತ್ವವು ಇರುತ್ತದೆ. (ತತ್ಪ್ರಯುಕ್ತ ಆಯಾಯ ಅವಸ್ಥೆಯಲ್ಲಿ ಜೀವನಿಂದ ಸಾಮ್ಯವೂ ಕೂಡ ಅದೆ.)। ತುರೀಯನಿಗಾದರೂ ಗಮ್ಯತ್ವಕ್ಕೆ ಪ್ರಯೋಜಕವಾದ ಜಾಗ್ರತ್ಕಾಲ ಮೊದಲಾದುವುಗಳಲ್ಲಿ ಪ್ರವೃತ್ತಿರೂಪವಾದ ವ್ಯವಹಾರಕಾರಣವಿಲ್ಲದಿರುವುದರಿಂದ ತತ್ಪ್ರಯುಕ್ತವಾದ ಗಮ್ಯತ್ವವೂ ಕೂಡ ಇರುವುದಿಲ್ಲ. ಎಂಬೀ ಆ ಶಂಕೆಯನ್ನು 'ಅಗತಿರ್ನವಿದ್ಯತೇ' ಎಂಬೀ ಈ ವಾಕ್ಯದಿಂದ ನಿವಾರಣೆಮಾಡುತ್ತಾರೆ. । (ಅಂತೂ ಜಾಗ್ರದಾದಿ ಪ್ರವೃತ್ತಿಗಳನ್ನು ಮಾಡದಿದ್ದರೂ, ತುರೀಯನು ಗಮ್ಯನು ಎಂದಂಗೀಕರಿಸಿರುವುದರಿಂದ ಆತನಿಗೆ ಅಗಮ್ಯತ್ವವಿಲ್ಲವು.)। ಆತ್ಮನನ್ನು ಪ್ರವೇಶಿಸುತ್ತಾನೆ, ಎಂದು ಗಮ್ಯತ್ವವನ್ನು ಹೇಳಿರುವುದರಿಂದ, (ತಥಾ ಚ ತುರೀಯ ಪ್ರಕರಣದಲ್ಲಿ ಆತ್ಮಶಬ್ದದಿಂದ ಹೇಳಲ್ಪಟ್ಟ ತುರೀಯನಿಗೆ 'ಸಂವಿಶತಿ' ಎಂದು ಸ್ಪಷ್ಟವಾಗಿ ಗಮ್ಯತ್ವವನ್ನು ಹೇಳಿಯದೆ. ಅದನ್ನು ಅನುಸರಿಸಿ ಈ ವಾಕ್ಯವನ್ನು 'ವಿದ್ಯತೇऽಗತಿಃ' ಎಂಬುವಲ್ಲಿಯೂ ಅಕಾರವನ್ನು ಪ್ರಶ್ಲೇಷಮಾಡಿಯೇ ವ್ಯಾಖ್ಯಾನ ಮಾಡಿದ್ದಾಗಿರುತ್ತದೆ. ॥ ೮ ॥ (c) (ವಿಶ್ವನೇ ಮೊದಲಾದವರು ಅಕಾರಾದಿವಾಚ್ಯರಾಗಿರುತ್ತಾರೆಂದು) ಉಪಾಸನೆಮಾಡಿದವನಿಗೆ, ಉಪಾಸ್ಯರಾದ ವಿಶ್ವನೇ ಮೊದಲಾದವರಿಂದ ಆದಿಮತ್ತ್ವ ಮೊದಲಾದುವುಗಳಿಂದ ಸಾಮ್ಯವು ಆಗುವುದು. ಹೀಗೆ ತಿಳಿಯುವ ಪುರುಷನು ಎಲ್ಲರಿಂದಲೂ ನಮಸ್ಕರಿಸಲ್ಪಡತಕ್ಕವನು ಆಗುವನು. ॥ ೭ ॥ (d) ಈ ಸಾಮ್ಯತ್ರಯವೂ ಕೂಡ, (ಅಂದರೆ I ರನೇ ಮಂತ್ರದಲ್ಲಿ ಹೇಳಿದ ಆದಿಸಾಮಾನ್ಯವೂ, ಆಪ್ತಿಸಾಮಾನ್ಯವೂ, II ೨ನೇ ಮಂತ್ರದಲ್ಲಿ ಹೇಳಿದ ಉತ್ಕರ್ಷಸಾಮಾನ್ಯವೂ, ಉಭಯ ಸಾಮಾನ್ಯವೂ, III ೩ನೇ ಮಂತ್ರದಲ್ಲಿ ಹೇಳಿದ ಮಾನಸಾಮ್ಯವೂ, ಲಯಸಾಮ್ಯವೂ ಹೀಗೆ ಮೂರು ಸಾಮಾನ್ಯವೂ ಕೂಡ) ಮುಕ್ತಿಯಲ್ಲಿ ಇರತಕ್ಕದು. ಆದುದರಿಂದ ತುಲ್ಯವು (ಅಂದರೆ ಒಂದೇ ಪ್ರಕಾರವುಳ್ಳದ್ದು ಆದುದರಿಂದ ವಿಕಾರವಿಲ್ಲದಿರುವುದು. ಮುಕ್ತಿಯಲ್ಲಿ ಇದ್ದದ್ದು ವಿಕಾರಿಯು ಆಗಲಾರದು). ತುರೀಯನಿಗಾದರೂ ಪ್ರತಿದಿವಸದಲ್ಲಿಯೂ ವಿಭಾಗವಿಲ್ಲದಿರುವುದರಿಂದ ಅಂಶವಿಲ್ಲದಿರುವಿಕೆಯು. ॥ (e) ಈ ತುರೀಯನು ಜಾಗ್ರದಾದ್ಯವಸ್ಥೆಗಳನ್ನು ಮಾಡದಿರುವವನಾದರೂ (ಅಂದರೆ ಬಾಹ್ಯ ಮೊದಲಾದುವುಗಳ ವ್ಯವಹಾರಕ್ಕೆ ಕಾರಣನಾಗದಿದ್ದರೂ)

ಜ್ಞಾನಿಗಳಿಂದ ಪ್ರಾಪ್ಯನು ಆಗುತ್ತಾನೆಯೇ ಸರಿ. ಹೀಗೂ ಅದೆ. ॥ (f) ಮೋಕ್ಷವನ್ನು ಉಪಭೋಗಿಸುವುದರಿಂದ ಆದಿಮುತ್ತ್ವ ಮೊದಲಾದ ಸಾಮ್ಯತ್ರಯವೂ ಏಕಪ್ರಕಾರವು. । ತುರೀಯನಿಗಾದರೂ ನಿತ್ಯದಲ್ಲಿಯೂ ವಿಭಾಗವಿಲ್ಲದಿರುವುದರಿಂದ ಅಂಶವಿಲ್ಲದಿರುವಿಕೆಯು. ಎಂದು ಆತ್ಮಸಂಹಿತೆಯಲ್ಲಿ (ಹೇಳಿಯದೆ.) ॥ ೫-೬-೭-೮ ॥

ಎಂದು ಮಾಂಡೂಕೋಪನಿಷದ್ಭಾಷ್ಯದಲ್ಲಿ ಮೂರನೇ ಖಂಡವು ಸಮಾಪ್ತವಾಯಿತು. ॥ ೩ ॥

## ನಾಲ್ಕನೇ ಖಂಡವು.

**ಮಂ ॥ ಅಮಾತ್ರಶ್ಚತುರ್ಥೋಽವ್ಯವಹಾರ್ಯಃ ಪ್ರಪಂಚೋಪಶಮಃ ಶಿವೋಽದ್ವೈತ ಓಂಕಾರ ಆತ್ಮೈವ ಸಂವಿಶತ್ಯಾತ್ಮನಾಽತ್ಮಾನಂ । ಯ ಏವಂ ವೇದ ॥ ೧ ॥**

ಅ ॥ ಅಮಾತ್ರಃ, ಅವ್ಯವಹಾರ್ಯಃ, ಪ್ರಪಂಚೋಪಶಮಃ, ಶಿವಃ, ಅದ್ವೈತಃ...... ಚತುರ್ಥಃ=ತುರೀಯನು, ಓಂಕಾರಃ=ಪ್ರಣವದ ಏಕದೇಶವಾದ ನಾದದಿಂದ ಪ್ರತಿಪಾದ್ಯನು. ಯಃ=ಯಾವ ಅಧಿಕಾರಿಯು, ಏವಂ=ನಾದಪ್ರತಿಪಾದ್ಯನನ್ನಾಗಿ, ವೇದ=ತಿಳಿಯುತ್ತಾನೋ, (ಆತನು) ಆತ್ಮೈವ=ಶುದ್ಧಾತ್ಮನಾಗಿಯೇ, (ಅಂದರೆ ಶರೀರ ಮನೆ ಮೊದಲಾದುವುಗಳಲ್ಲಿ ನನ್ನದು ಎಂದು ಮೊದಲಾದ ಅಭಿಮಾನವನ್ನು ಬಿಟ್ಟು) ಆತ್ಮನಾ=ಪರಮಾತ್ಮನ ಪ್ರಸಾದದಿಂದ, ಆತ್ಮಾನಂ=ನಾದಬೋಧ್ಯನಾದ ತುರೀಯನನ್ನು, ಸಂವಿಶತಿ=ಪ್ರವೇಶಿಸುತ್ತಾನೆ. (ಪ್ರವೇಶಮಾಡಿಯೂ ಹೊರಗೂ ಒಳಗೂ ಇಚ್ಛಾನುಸಾರವಾಗಿ ಸ್ವಯೋಗ್ಯಗಳಾದ ಭೋಗಗಳನ್ನು ಭೋಗಿಸುವವನಾಗಿ ಸುಖವಾಗಿ ಇರುತ್ತಾನೆ). ॥ ೧ ॥

**ಭಾ॥** (a) (1) ಆತ್ಮೈವ ಭೂತ್ವಾಽನ್ಯಾಭಿಮಾನಂ ತ್ಯಕ್ತ್ವಾ ಪರಮಾತ್ಮನೈವ ಪರಮಾತ್ಮಾನಂ ಪ್ರವಿಶತ್ಯುಪಾಸಕಃ । (b) ಅವ್ಯವಹಾರ್ಯತ್ವಾದಿಕಮತ್ರ ಸಮಮಿತಿದರ್ಶಯಿತುಂ ಪುನರಪ್ಯುಕ್ತಮವ್ಯವಹಾರ್ಯತ್ವಾದಿಕಂ ॥ (c) ತುರೀಯಂ ನಾದನಾಮಾನಂ ಹರಿಂ ಜ್ಞಾತ್ವಾ ಪರಂ ಪದಂ ॥ ತಮೇವ ಪ್ರವಿಶೇಚ್ಛುದ್ಧರೂಪೀ ತತ್ಸದೃಶಾತ್ಮವಾನ್ । (d) ಜ್ಞಾನಾನಂದೌ ಚ ಶಕ್ತಿಶ್ಚ ತಥಾಽಪಿ ನ ಸಮಾಃ ಕ್ವಚಿತ್ ॥ ವಿಮುಕ್ತಸ್ಯಾಪಿ ಜೀವಸ್ಯ ಪಾರತಂತ್ರ್ಯಂ ಚ ನಿತ್ಯದಾ ॥ ೧ ॥

ಅ ॥ (a) ಆತ್ಮನೇ ಆಗಿ (ಅಂದರೆ ಪರಾಧೀನತೆ ಮೊದಲಾದವುಗಳಿಂದೊಡಗೂಡಿದ ಸ್ವರೂಪಾನುಭವವನ್ನು ಬಿಡದೆ) ಇತರವಾದ ದೇಹಮೊದಲಾದುದರಲ್ಲಿ ಅಭಿಮಾನವನ್ನು ಬಿಟ್ಟು ಪ್ರಸನ್ನನಾದ ತುರೀಯಪರಮಾತ್ಮನಿಂದಲೇ (ಅಂದರೆ ಆತನ ಅನುಗ್ರಹದಿಂದ) ತುರೀಯ ಪರಮಾತ್ಮನನ್ನೇ ಉಪಾಸಕನು ಪ್ರವೇಶಮಾಡುತ್ತಾನೆ. ॥ (b) (ವಿಶ್ವಾದ್ಯುಪಾಸಕನಲ್ಲಿ ವಿಶ್ವಾದಿ ಸಾಮ್ಯವಿದ್ದಂತೆಯೇ), ಈ ತುರೀಯೋಪಾಸಕನಲ್ಲಿಯೂ (ತುರೀಯ ಸಾಮ್ಯವು ಅವಶ್ಯವಾಗಿ ಹೇಳತಕ್ಕುದು ಆದುದರಿಂದ) ಅವ್ಯವಹಾರ್ಯತ್ವಮೊದಲಾದದು (ತುರೀಯ ಸಾಮ್ಯವು ಅವಶ್ಯವಾಗಿ ಹೇಳತಕ್ಕುದು ಆದುದರಿಂದ) ಅವ್ಯವಹಾರ್ಯತ್ವಮೊದಲಾದುದು (ತುರೀಯ) ಸಮವೇ ಎಂದು ತೋರಿಸುವುದಕ್ಕೋಸ್ಕರ ಮತ್ತೂಕೂಡ ಇಲ್ಲಿಯೂ ಅವ್ಯವ

ಹಾರ್ಯತ್ವ ಮೊದಲಾದುದು ಹೇಳಲ್ಪಟ್ಟಿತು. ॥ (c) ಸರ್ವೋತ್ತಮನೂ ಪ್ರಾಪ್ಯನೂ ನಾದಪ್ರತಿಪಾದ್ಯನಾದುದರಿಂದ ನಾದನಾಮಕನೂ ಆದ ತುರೀಯನಾಮಕ ಶ್ರೀ ಹರಿಯನ್ನು ತಿಳಿದು ನಿರ್ದುಷ್ಟವಾದ ಸ್ವರೂಪವುಳ್ಳವನಾಗಿ (ತುರೀಯನಂತೆ ಆತನನ್ನು ಉಪಾಸನೆಮಾಡಿದವನಿಗೂ ಲೋಕವ್ಯವಹಾರಕ್ಕೆ ಅವಿಷಯನಾದುದರಿಂದ ಅವ್ಯವಹಾರ್ಯತ್ವಮೊದಲಾದ ಧರ್ಮಗಳಿಂದ) ಆತನಿಗೆ ಸಮಾನವಾದ ಸ್ವರೂಪವುಳ್ಳವನಾಗಿ ಆತನನ್ನೇ ಪ್ರವೇಶಮಾಡುವನು. ॥ (d) ಆದರೂ ಅಂದರೆ ಆತನಿಗೆ ಸಮಾನವಾದ ಸ್ವರೂಪವುಳ್ಳವನಾದಾಗ್ಯೂ ಜ್ಞಾನಾನಂದಗಳೂ ಸಾಮರ್ಥ್ಯವೂ ಇವುಗಳು ವಿಮುಕ್ತನಾದ ಜೀವನಿಗೂ ಎಲ್ಲಿಯೂ (ಭಗವಜ್ಞಾನಮೊದಲಾದವುಗಳಿಗೆ) ಸದೃಶಗಳು ಆಗಲಾರವು. ನಿರಂತರದಲ್ಲಿಯೂ (ಮುಕ್ತಜೀವನಿಗೂ) ಪರಾಧೀನತೆಯೇ ಇರುತ್ತದೆ. ॥ ೧ ॥

**ಮಂ ॥ ಅತ್ರೈತೇ ಶ್ಲೋಕಾ ಭವಂತಿ । ಓಂಕಾರಂ ಪಾದಶೋ ವಿದ್ಯಾತ್ಪಾದಾ ಮಾತ್ರಾ ನ ಸಂಶಯಃ । ಓಂಕಾರಂ ಪಾದಶೋ ಜ್ಞಾತ್ವಾ ನ ಕಿಂಚಿದಪಿ ಚಿಂತಯೇತ್ ॥ ೨ ॥**

ಅ ॥ ಅತ್ರ=ಈ ವಿಷಯದಲ್ಲಿ, ಏತೇ=ಮೇಲೆ ಹೇಳುವ, ಶ್ಲೋಕಾಃ=ಮಂತ್ರಗಳು, ಭವಂತಿ=(ಸಂವಾದಿಗಳು) ಆಗುತ್ತವೆ. ಓಂಕಾರಂ=ಓಂ ಎಂದು ಹೇಳಲ್ಪಡುವ ಸಮಗ್ರ ಪ್ರಣವಪ್ರತಿಪಾದ್ಯನಾದ ಶ್ರೀ ಹರಿಯನ್ನು, ಪಾದಶಃ=ವಿಶ್ವಾದ್ಯಂಶಗಳಿಂದ, (ವಿಶ್ವಾದಿ ನಾಲ್ಕು ರೂಪವುಳ್ಳವನನ್ನಾಗಿ) ವಿದ್ಯಾತ್=ತಿಳಿಯತಕ್ಕದು. ಪಾದಾಃ=ಪ್ರಣವಾಂಶ ಭೂತಗಳಾದ ಅಕಾರಾದಿಗಳಿಂದ ಪ್ರತಿಪಾದ್ಯರು, ಮಾತ್ರಾಃ=ಅಂಶರು, ನ ಸಂಶಯಃ=ಸಂದೇಹವಿಲ್ಲವು. ಓಂಕಾರಂ=ಪ್ರಣವವಾಚ್ಯನಾದ ತುರೀಯನನ್ನು, ಪಾದಶಃ=ನಾದರೂಪ ಅಂಶಪ್ರತಿಪಾದ್ಯನನ್ನಾಗಿ, ಜ್ಞಾತ್ವಾ=ತಿಳಿದು, ಕಿಂಚಿದಪಿ=ಯಾವುದೊಂದು ಸಂಸಾರದಲ್ಲಿರುವ ವಿಷಯ ಸಮುದಾಯವನ್ನು, ನ ಚಿಂತಯೇತ್=ಆಲೋಚಿಸಲಾರನು. (ಆತನನ್ನೇ ಪ್ರವೇಶಿಸಿ ಆನಂದಾವಿರ್ಭಾವವನ್ನು ಹೊಂದುತ್ತಾನೆ). ॥ ೨ ॥

**ಮಂ ॥ ಯುಂಜೀತ ಪ್ರಣವೇ ಚೇತಃ ಪ್ರಣವೋ ಬ್ರಹ್ಮ ನಿರ್ಭಯಂ । ಪ್ರಣವೇ ನಿತ್ಯಯುಕ್ತಸ್ಯ ನ ಭಯಂ ವಿದ್ಯತೇ ಕ್ವಚಿತ್ ॥ ೩ ॥**

ಅ ॥ ಪ್ರಣವೇ=ಪ್ರಣವಶಬ್ದವಾಚ್ಯನಾದ ಶ್ರೀ ಹರಿಯಲ್ಲಿ, ಚೇತಃ=ಮನಸ್ಸನ್ನು, ಯುಂಜೀತ=ಕೂಡಿಸತಕ್ಕದ್ದು, (ಅಂದರೆ ತದ್ವಿಷಯವನ್ನಾಗಿ ಮಾಡತಕ್ಕದ್ದು). ಬ್ರಹ್ಮ=ಗುಣಪರಿಪೂರ್ಣನಾದ, ನಿರ್ಭಯಂ=ಭಯಶೂನ್ಯನಾದ ವಿಶ್ವಾದಿ ನಾಲ್ಕುರೂಪವುಳ್ಳ ಶ್ರೀ ಹರಿಯು, ಪ್ರಣವಃ=ಜಾಗ್ರದಾದ್ಯವಸ್ಥೆಗಳನ್ನು ಪ್ರಾಪಿಸಿಕೊಡುವುದರಿಂದ ಪ್ರಣವನೆಂದು (ಹೇಳಲ್ಪಡುತ್ತಾನೆ). ಪ್ರಣವೇ=ಶ್ರೀ ಹರಿಯಲ್ಲಿ, ನಿತ್ಯಯುಕ್ತಸ್ಯ=ನಿರಂತರದಲ್ಲಿಯೂ ಮನಸ್ಸನ್ನು ಇಟ್ಟವನಿಗೆ, ಕ್ವಚಿತ್=ಯಾವನಿಮಿತ್ತದಿಂದಲೂ, ಭಯಂ=ಭೀತಿಯು, ನ ವಿದ್ಯತೇ=ಇರುವುದಿಲ್ಲ. ॥ ೩ ॥

**ಭಾ ॥ ಚತೂರೂಪಸ್ಯಾಸ್ಯ ವಿಷ್ಣೋರ್ನಾಮ ಪ್ರಣವ ಇತ್ಯಪಿ । ಜಾಗ್ರದಾದಿ ಪ್ರಣಯನಾತ್ ॥ ೨ ॥ ೩ ॥**

ಅ ॥ ವಿಶ್ವಾದಿ ನಾಲ್ಕುರೂಪಗಳುಳ್ಳ ಶ್ರೀ ವಿಷ್ಣುವಿಗೂ ಜಾಗ್ರದಾದ್ಯವಸ್ಥೆಗಳನ್ನು ಹೊಂದಿಸಿಕೊಡುವುದರಿಂದ ಪ್ರಣವ ಎಂಬೀ ನಾಮಧೇಯವು ಇರುತ್ತದೆ. ॥ ೨ ॥ ೩ ॥

ಮಂ ॥ ಪ್ರಣವೋ ಹ್ಯಪರಂ ಬ್ರಹ್ಮ ಪ್ರಣವಶ್ಚ ಪರಂ ಸ್ಮೃತಃ । ಅಪೂರ್ವೋಽನಂತರೋಽಬಾಹ್ಯೋ ನ ಪರಃ ಪ್ರಣವೋಽವ್ಯಯಃ ॥ ೪ ॥

ಅ ॥ ಅಪರಂ=ಮೂಲರೂಪದ ಮುಂಚಿನ ಅವತಾರ ಸ್ವರೂಪನಾದ, ಪ್ರಣವಃ=ಶ್ರೀ ಹರಿಯು ಬ್ರಹ್ಮ=ಗುಣಪರಿಪೂರ್ಣನು, ಹಿ=("ಸರ್ವೇಷು ಭೂತೇಷು ಏತಮೇವ ಬ್ರಹ್ಮೇತ್ಯಾಚಕ್ಷತೇ" ಇತ್ಯಾದಿಗಳಲ್ಲಿ) ಪ್ರಸಿದ್ಧವು, ಪರಂ=ಮೇಲಿನ ವಿಶ್ವಾದ್ಯವತಾರ ರೂಪನಾದ, ಪ್ರಣವಶ್ಚ=ಶ್ರೀ ಹರಿಯೂ ಕೂಡ, ಬ್ರಹ್ಮ=ಗುಣಪೂರ್ಣನು ಎಂದು, ಸ್ಮೃತಃ=(ಚತುರ್ಮುಖನಿಂದ) ಸ್ಮರಿಸಲ್ಪಟ್ಟಿದೆ, (ಅಂತೂ ಪೂರ್ವಾವತಾರದಲ್ಲಿ ಪಶ್ಚಿಮಾವತಾರದಲ್ಲಿಯೂ ಪೂರ್ಣತ್ವವೇ ಇರುವುದು, ಎಲ್ಲಿಯೂ ನ್ಯೂನತೆಯಿರುವುದಿಲ್ಲ). ಅಪೂರ್ವಃ=ಕಾರಣಶೂನ್ಯನು ಆದಿಯು, ಅನಂತರಃ=ನಾಶವಿಲ್ಲದಿರುವವನು, ಅಬಾಹ್ಯಃ=ಸರ್ವತ್ರವ್ಯಾಪ್ತನು, ಅನಪರಃ=ಪರಾಧೀನನಾದ ಸ್ಥಿತಿಯಿಲ್ಲದಿರುವವನು, ಅವ್ಯಯಃ=ಯಾವಾಗಲೂ ಏಕಪ್ರಕಾರನು. ॥ ೪ ॥

ಭಾ ॥ ಸ ಏವ ಬ್ರಹ್ಮ ಬೃಂಹಣಾತ್ ॥ ೪ ॥

ಆ ನಾಲ್ಕುರೂಪಗಳುಳ್ಳ ಶ್ರೀಹರಿಯೇ ಗುಣಗಳಿಂದ ಪೂರ್ಣನಾದ್ದುದರಿಂದ ಬ್ರಹ್ಮನೆನಿಸಿಕೊಳ್ಳುತ್ತಾನೆ. ॥ ೪ ॥

ಮಂ ॥ ಸರ್ವಸ್ಯ ಪ್ರಣವೋ ಹ್ಯಾದಿರ್ಮಧ್ಯಮಂತಸ್ತಥೈವ ಚ । ಏವಂ ಹಿ ಪ್ರಣವಂ ಜ್ಞಾತ್ವಾ ವ್ಯಶ್ನುತೇ ತದನಂತರಂ ॥ ೫ ॥

ಅ ॥ ಪ್ರಣವಃ=ಶ್ರೀ ಹರಿಯು, ಸರ್ವಸ್ಯ=ಎಲ್ಲಾ ಜಗತ್ತಿಗೂ, ಆದಿಃ=ಕಾರಣನು, ಮಧ್ಯಂ=ಸ್ಥಿತಿಯನ್ನು ಮಾಡುವವನು. ತಥೈವ ಚ=ಹಾಗೆಯೇ, ಅಂತಃ=ನಾಶವನ್ನು ಮಾಡುವವನು, ಹಿ=ಶ್ರುತಿಪ್ರಸಿದ್ಧವು. ಏವಂ=ಈ ಪ್ರಕಾರವಾಗಿ, ಪ್ರಣವಂ=ಶ್ರೀಹರಿಯನ್ನು, ಜ್ಞಾತ್ವಾ=ತಿಳಿದು, ತದನಂತರಂ=ಪ್ರಾರಬ್ಧಭೋಗಾನಂತರದಲ್ಲಿ, ತತ್=ಆ ಬ್ರಹ್ಮನನ್ನು, ವ್ಯಶ್ನುತೇ=ವಿಶೇಷಾಕಾರವಾಗಿ ಹೊಂದುತ್ತಾನೆ. ॥ ೫ ॥

ಮಂ ॥ ಪ್ರಣವಂ ಹೀಶ್ವರಂ ವಿದ್ಯಾತ್ಸರ್ವಸ್ಯ ಹೃದಯೇ ಸ್ಥಿತಂ । ಸರ್ವವ್ಯಾಪಿನಮೋಂಕಾರಂ ಮತ್ವಾ ಧೀರೋ ನ ಶೋಚತಿ ॥ ೬ ॥

ಅ ॥ ಪ್ರಣವಂ = ಶ್ರೀ ಹರಿಯನ್ನು, ಈಶ್ವರಂ = ಸರ್ವನಿಯಾಮಕನನ್ನಾಗಿಯೂ, ಸರ್ವಸ್ಯ=ಎಲ್ಲರ, ಹೃದಯೇ=ಹೃದಯದಲ್ಲಿ, ಸ್ಥಿತಂ=ಇರತಕ್ಕವನನ್ನಾಗಿಯೂ (ಅಂದರೆ ಅಣುವನ್ನಾಗಿ) ವಿದ್ಯಾತ್=ತಿಳಿಯತಕ್ಕದ್ದು. ಸರ್ವವ್ಯಾಪಿನಂ=ಸರ್ವತ್ರವ್ಯಾಪಿಸಿಕೊಂಡಿರುವ (ಮಹದ್ರೂಪ) ಓಂಕಾರಂ="ಓಂ" ಎಂದು ಹೇಳಲ್ಪಡತಕ್ಕವನನ್ನು, ಮತ್ವಾ=ತಿಳಿದು, ಧೀರಃ=ಪಂಡಿತನು, ನ ಶೋಚತಿ=ದುಃಖಪಡುವುದಿಲ್ಲ, (ಮುಕ್ತನಾಗುತ್ತಾನೆ). ॥ ೬

ಭಾ ॥ ಓಮಿತ್ಯಾಕ್ರಿಯಮಾಣತ್ವಾದೋಂಕಾರಃ ಸ ಪ್ರಕೀರ್ತಿತಃ । ಆದಿಮತ್ತ್ವಾದಯೋ ಹ್ಯರ್ಥಾ ಓಮಿತ್ಯಸ್ಯ ಶ್ರುತೌ ಶ್ರುತಾಃ ॥ ೬ ॥

ಅ ॥ ಆ ಹರಿಯು "ಓಂ" ಎಂದು ಹೇಳಲ್ಪಡುವುದರಿಂದ ಓಂಕಾರನೆಂದು ಹೇಳಲ್ಪಡುತ್ತಾನೆ. ಓಂ ಎಂಬುದರ ಅವಯವಭೂತವಾದ ಅಕಾರ ಮೊದಲಾದುದಕ್ಕೆ ಆದಿಮತ್ತ್ವ ಮೊದಲಾದ ಅರ್ಥಗಳು ಶ್ರುತಿಯಲ್ಲಿಯೂ ಕೂಡ ಹೇಳಲ್ಪಟ್ಟವೆ.

**ಭಾ||** **(a)** ಅಪೂರ್ವಃ ಕಾರಣಾಭಾವಾನ್ನಾಶಾಭಾವಾದನಂತರಃ । ಪರಾಧೀನ ಸ್ಥಿತ್ಯಭಾವಾದನಪರ ಉದಾಹೃತಃ || ಸರ್ವಗತ್ವಾದಬಾಹ್ಯಶ್ಚ ತಂ ಜ್ಞಾತ್ವಾ ಪ್ರವಿಮುಚ್ಯತೇ || ಇತಿ ಚ || ೪ || ೫ ||

**ಅ ||** ಕಾರಣವಿಲ್ಲದಿರುವುದರಿಂದ 'ಅಪೂರ್ವನು' ನಾಶವಿಲ್ಲದಿರುವುದರಿಂದ 'ಅನಂತರನು. । ಅನ್ಯಾಧೀನವಾದ ಸ್ಥಿತಿಯಿಲ್ಲದಿರುವುದರಿಂದ 'ಅನಪರನು' ಎಂದು ಹೇಳಲ್ಪಡುತ್ತಾನೆ. ಸರ್ವತ್ರವ್ಯಾಪ್ತನಾದುದರಿಂದ 'ಅಬಾಹ್ಯನು'. || ೪ || ಆ ಹರಿಯನ್ನು ತಿಳಿದು ವಿಶೇಷಾಕಾರವಾಗಿ (ಸಂಸಾರದಿಂದ) ಬಿಡಲ್ಪಡುತ್ತಾನೆ. || ೫ ||

**ಭಾ||** **(a)** ಪರತ್ವಮಪರತ್ವಂ ಚ ವಿಷ್ಣೋರೇಕಸ್ಯ ವೈ ಯದಾ । ಶ್ರೂಯತೇ ನ ತು ಸಾಮರ್ಥ್ಯಭೇದಸ್ತತ್ರ ಕಥಂ ಚನ || **(b)** ಅವತಾರಸ್ಯ ಪೂರ್ವತ್ವಾತ್ಪೌರ್ವಾಪರ್ಯಮುದಾಹೃತಂ || ಇತಿ ಬ್ರಹ್ಮತರ್ಕೇ || **(c)** ಪೂರ್ವಾವತಾರೇ ಪಶ್ಚಿಮಾವತಾರೇಽಪಿ ಪೂರ್ಣ ಏವೇತಿ ಪ್ರಣವೋ ಹ್ಯಪರಂ ಬ್ರಹ್ಮೇತ್ಯಾದೇರರ್ಥಃ || ೪ ||

**ಅ ||** (a) (1) ಒಬ್ಬ ವಿಷ್ಣುವಿಗೇನೇ ಯಾವಾಗ ಪರತ್ವವೂ ಅಪರತ್ವವೂ ಶ್ರುತವಾಗುತ್ತದೋ । ಅಲ್ಲಿಯೂ ಯಾವಪ್ರಕಾರದಿಂದಲೂ ಸಾಮರ್ಥ್ಯದ ಭೇದವು ಇರುವುದಿಲ್ಲ. || (b) ಅವತಾರಕ್ಕೆ ಪೂರ್ವತ್ವವೂ ಪಶ್ಚಿಮತ್ವವೂ ಇರುವುದರಿಂದ (ಪೂರ್ವಾಪರ ರೂಪಗಳಿಗೂ ವಾಸುದೇವಾದಿ ರೂಪಗಳಿಗೂ ವಿಶ್ವಾದಿ ರೂಪಗಳಿಗೂ) ಪೂರ್ವತ್ವ ಅಪರತ್ವವೂ ಕೂಡ, ಹೇಳಲ್ಪಡುತ್ತದೆ. ಎಂದು ಬ್ರಹ್ಮತರ್ಕದಲ್ಲಿ ಅದೆ. (c) ಪೂರ್ವ ಅವತಾರದಲ್ಲಿ (ವಾಸುದೇವಾದಿಯಲ್ಲಿಯೂ ಪಶ್ಚಿಮ ಅವತಾರದಲ್ಲಿಕೂಡ (ವಿಶ್ವತೈಜಸಾದಿ ರೂಪ ಅವತಾರದಲ್ಲಿಯೂ) ಪರಿಪೂರ್ಣನೇ ಆಗಿರುತ್ತಾನೆ. ಎಂದು "ಪ್ರಣವೋ ಹ್ಯಪರಂ ಬ್ರಹ್ಮ" ಇದು ಮೊದಲಾದುದಕ್ಕೆ ಅರ್ಥವು. || ೪ ||

**ಮಂ || ಅಮಾತ್ರೋಽನಂತಮಾತ್ರಶ್ಚ ದ್ವೈತಸ್ಯೋಪಶಮಃ ಶಿವಃ । ಓಂಕಾರೋ ವಿದಿತೋ ಯೇನ ಸ ಮುನಿರ್ನೇತರೋ ಜನಃ ಸ ಮುನಿರ್ನೇತರೋ ಜನ ಇತಿ || ೭ ||**

ಚತುರ್ಥಃ ಖಂಡಃ || ೪ ||

**|| ಇತಿ ಶ್ರೀಮಾಂಡೂಕೋಪನಿಷತ್ಸಮಾಪ್ತಾ ||**

**ಅ ||** ಅಮಾತ್ರಃ=ಭಿನ್ನಾಂಶರಹಿತನಾದ, ಅನಂತಮಾತ್ರಶ್ಚ=ವಿಶ್ವಮೊದಲಾದ ಅನಂತ ಅಂಶಗಳುಳ್ಳ, ದ್ವೈತಸ್ಯ=ಎಲ್ಲಾ ಅನಿಷ್ಟವನ್ನು, ಉಪಶಮಃ=ನಾಶಮಾಡುವ, ಶಿವಃ=ನಿರ್ದುಃಖಸುಖರೂಪನಾದ, ಓಂಕಾರಃ=ವಿಶ್ವಮೊದಲಾದನಾಲ್ಕುರೂಪವುಳ್ಳ ಶ್ರೀ ಹರಿಯು, ಯೇನ=ಯಾವ ಅಧಿಕಾರಿಯಿಂದ, ವಿದಿತಃ=ಚೆನ್ನಾಗಿಶ್ರವಣಮನನಾದಿಗಳಿಂದ ತಿಳಿಯಲ್ಪಡುತ್ತಾನೋ, ಸಃ=ಆತನೇ, ಮುನಿಃ=ಅಪರೋಕ್ಷಜ್ಞಾನಿಯು. ಇತರಃ ಜನಃ=ಬೇರೆಜನವು, ನ=ಅಲ್ಲವೇ ಅಲ್ಲ. ಇತಿ=ಹೀಗೆ (ತಿಳಿಯತಕ್ಕದು.) || ೭ ||

**ನಾಲ್ಕನೇ ಖಂಡವು ಸಮಾಪ್ತವಾಯಿತು. || ೪ ||**

**ಶ್ರೀ ಮಾಂಡೂಕೋಪನಿಷತ್ತು ಸಮಾಪ್ತವಾಯಿತು. || ಶ್ರೀಃ ||**

ಭಾ ॥ ಏಕೋಽಪಿ ನಿರ್ವಿಶೇಷೋಽಪಿ ಚತುರ್ಧಾ ವ್ಯವಹಾರಭಾಕ್ । ಯಸ್ತಂ ವಂದೇ ಚಿದಾತ್ಮಾನಂ ವಿಷ್ಣುಂ ವಿಶ್ವಾದಿರೂಪಿಣಂ ॥

**ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯ**
**ವಿರಚಿತಮಾಂಡೂಕೋಪನಿಷದ್ಭಾಷ್ಯಂ**
**॥ ಸಂಪೂರ್ಣಂ ॥**

ಅ ॥ ಯಾವಾತನು ಸ್ವಗತ ಭೇದ ರಹಿತನಾದಾಗ್ಯೂ, ನಿರ್ವಿಶೇಷನಾದಾಗ್ಯೂ, ವಿಶ್ವಾದಿರೂಪದಿಂದ ನಾಲ್ಕು ಪ್ರಕಾರವಾಗಿ ವ್ಯವಹಾರವನ್ನು ಹೊಂದುತ್ತಾನೆ. ಆ ವಿಶ್ವ ಮೊದಲಾದ ರೂಪವುಳ್ಳವನೂ ಜ್ಞಾನಾನಂದಾದಿ ಸ್ವರೂಪನೂ ಆದ ವಿಷ್ಣುವನ್ನು ನಮಸ್ಕರಿಸುತ್ತೇನೆ. ಸ್ತುತಿಸುತ್ತೇನೆ. ॥

**ಈ ಪ್ರಕಾರವಾಗಿ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರಿಂದ ನಿರ್ಮಿಸಲ್ಪಟ್ಟ ಮಾಂಡೂಕೋಪನಿಷದ್ಭಾಷ್ಯವು ಸಂಪೂರ್ಣವಾಯಿತು.**

ಮಾಂಡೂಕೋಪನಿಷದ್ಭಾಷ್ಯಂ ವಿವೃತ್ತಂ ಗುರ್ವನುಗ್ರಹಾತ್ ।
ತೇನೇಷ್ಟದೋಽಸ್ತು ಮತ್ಪ್ರಾಜ್ಞೋ ಭಗವಾನ್ಬಾದರಾಯಣಃ ॥
ಸಭಾಷ್ಯಮಾಂಡೂಕಾಮ್ನಾಯ ವಿವೃತಿರ್ದೇಶಭಾಷಯಾ ।
ತಂತ್ರಿನಾರಾಯಣಕೃತಾ ಪ್ರೀತ್ಯೈ ಭೂಯಾದ್ಧರೇರಯೋಃ ॥

॥ ಶ್ರೀಕೃಷ್ಣಾರ್ಪಣಮಸ್ತು ॥



# ಸಭಾಷ್ಯ ಐತರೇಯೋಪನಿಷತ್ತು.

## ॥ ದ್ವಿತೀಯಾರಣ್ಯಕೇ ಪ್ರಥಮೋಽಧ್ಯಾಯಃ ॥

ಓಂ ॥ ಶ್ರೀಮದಾನಂದತೀರ್ಥಾರ್ಯಹೃದಯಾಮಲಮಂದಿರಂ ।
ಜಾನಕೀಜಾನಿಮಾನಂದಸಾಂದ್ರಂ ವಂದೇ ನಿರಂತರಂ ॥
ಐತರೇಯನಿಗಮಂ ಸಸುಭಾಷ್ಯಂ ನಾದಿರಾಯಣಪದಾಂಕಿತತಂತ್ರೀ ।
ಭಾಷಯಾ ಶುಭಜನಪ್ರಮುದೇ ಚ ವ್ಯಾಕರೋತಿ ಗುರುನಾಥಸುತೃಪ್ತ್ಯೈ ॥

**ಶ್ರೀಮದ್ಧನುಮದ್ಭೀಮಮಧ್ವಾಂತರ್ಗತರಾಮಕೃಷ್ಣವೇದವ್ಯಾಸಾತ್ಮಕ ಲಕ್ಷ್ಮೀಹಯಗ್ರೀವಾಯ ನಮಃ ॥ ಹರಿಃ ॥ ಓಂ ॥**

**ಭಾ॥** ನಾರಾಯಣಂ ನಿಖಿಲಪೂರ್ಣಗುಣೈಕದೇಹಂ ಸರ್ವಜ್ಞಮಚ್ಯುತಮಪೇತಸಮಸ್ತದೋಷಂ । ಪ್ರಾಣಸ್ಯ ಸರ್ವಚಿದಚಿತ್ಪರಮೇಶ್ವರಸ್ಯ ಸಾಕ್ಷಾದಧೀಶ್ವರಮಿಯಾಂ ಶರಣಂ ರಮೇಶಂ ॥

ಅ ॥ ಅಹಂ=ನಾನು, ನಿಖಿಲಪೂರ್ಣಗುಣೈಕದೇಹಂ, ನಿಖಿಲ=ಸಮಸ್ತಗಳಾದ, ಪೂರ್ಣ=ಪರಿಪೂರ್ಣಗಳಾದ. ಗುಣ=ಜ್ಞಾನಾನಂದಾದಿಗುಣಗಳೇ, ಏಕ=ಮುಖ್ಯವಾಗಿ, ದೇಹಂ=ಶರೀರವುಳ್ಳವನು, ಸರ್ವಜ್ಞಂ=ಸಮಸ್ತವನ್ನು ತಿಳಿದವನು, ಅಚ್ಯುತಂ=ನಾಶರಹಿತನು, ಅಪೇತಸಮಸ್ತದೋಷಂ, ಅಪೇತ=ನಾಶೀಕರಿಸಲ್ಪಟ್ಟ, ಸಮಸ್ತ=ನಿಖಿಲಭಕ್ತರ, ದೋಷಂ=ಸಂಸಾರರೂಪದೋಷವುಳ್ಳವನು, ಅಥವಾ ಅಪೇತ ಸಮಸ್ತದೋಷಂ=ಸರ್ವದೋಷರಹಿತನಾದ, ಸರ್ವಚಿದಚಿತ್ಪರಮೇಶ್ವರಸ್ಯ, ಸರ್ವ=ಸಮಸ್ತಗಳಾದ, ಚಿದಚಿತ್ = ಚೇತನಾಚೇತನಗಳಿಗೆ, ಪರಮ=ಮುಖ್ಯವಾಗಿ, ಈಶ್ವರಸ್ಯ=ನಿಯಾಮಕನಾದ, ಪ್ರಾಣಸ್ಯ=ಮುಖ್ಯಪ್ರಾಣನಿಗೂ, ಅಧೀಶ್ವರಂ=ಮುಖ್ಯನಿಯಾಮಕನು. ರಮೇಶಂ=ಲಕ್ಷ್ಮೀಪತಿಯೂ ಆದ,ನಾರಾಯಣಂ=ಶ್ರೀಪರಮಾತ್ಮನನ್ನು , ಸಾಕ್ಷಾತ್=ಪ್ರತ್ಯಕ್ಷವಾಗಿ, ಶರಣಂ=ರಕ್ಷಕನನ್ನಾಗಿ, ಇಯಾಂ=ಹೊಂದುವೆನು.

ತಾ ॥ ಪ್ರತ್ಯೇಕಪ್ರತ್ಯೇಕವಾಗಿಯೂ ಪೂರ್ಣಗಳಾದ ಜ್ಞಾನಾನಂದಾದಿಗುಣಾತ್ಮಕ ಶರೀರವುಳ್ಳವನೂ ಸರ್ವಜ್ಞನೂ ನಾಶರಹಿತನೂ, ಭಕ್ತರ ಸಂಸಾರವನ್ನು ಹೋಗಲಾಡಿಸಿ ಮುಕ್ತಿಯನ್ನು ಪ್ರಾಪಿಸಿಕೊಡತಕ್ಕವನೂ ಚೇತನಾಚೇತನ ಎಲ್ಲಾ ಜಗತ್ತಿಗೂ ಮುಖ್ಯನಿಯಾಮಕನಾದ ಮುಖ್ಯಪ್ರಾಣನಿಗೂ ಅಧಿಪತಿಯಾದ ಲಕ್ಷ್ಮೀಪತಿಯಾದ ಶ್ರೀಹರಿಯನ್ನು ಅಪರೋಕ್ಷವಾಗಿಯೇ ಶರಣುಹೋಗುತ್ತೇನೆಂದು ಮಂಗಲಾಚರಣೆಯನ್ನು ಶ್ರೀಮದಾಚಾರ್ಯರು ಮಾಡಿದರು. ಋಷ್ಯಾದಿಗಳ ಜ್ಞಾನವಿಲ್ಲದಿದ್ದರೆ ಅನರ್ಥವು ಹೇಳಿರುವುದರಿಂದ ಈ ಉಪನಿಷತ್ತಿನಲ್ಲಿ ಶ್ರೀಮಹಿದಾಸರೂಪಿಯಾದ ಹರಿಯೇ ದೇವತೆಯು, ಆತನೇ ಋಷಿಯು. ಚತುರ್ಮುಖನೂ ಅವಾಂತರ ಋಷಿಯು ಎಂದು ನಿರೂಪಿಸಿದ್ದಾರೆ.

**ಭಾ॥** (a) ಪ್ರಾದುರ್ಬಭೂವ ಭಗವಾಂಸ್ತಪಸೇತರಾಯಾ ನಾರಾಯಣೋಽಬ್ಜಜಸುತಸ್ಯ ವಿಶಾಲನಾಮ್ನಃ । ತಸ್ಮಿನ್ಗತೇಽಧ್ವರಮಭೂತ್ಸುರವಿಪ್ರಸಂಘೋ ನಿಶ್ಚೇತನಸ್ತದನು ಪದ್ಮಭವೋಽಮುಮಸ್ತೌತ್ ॥ (b) ತೇನ ಸ್ತುತಃ

ಸ ಭಗವಾನ್ಗಿರಿಶೇಂದ್ರಮುಖ್ಯಾನ್ ಸರ್ವಾನಬೋಧಯುದಜೇನ ಸಹೈವ ತೇSಥ । ದಾಸತ್ವಮಾಪುರತ ಏವ ಮಹತ್ಸುರಾಣಾಂ ದಾಸತ್ವತಃ ಸ ಮಹಿದಾಸ ಇತಿ ಪ್ರಸಿದ್ಧಃ ॥ (c) ಶೃಣ್ವತ್ಸು ತೇಷು ಭಗವಾನವದ ದ್ರಮಾಯೈ ದಿವ್ಯಾಂ ಶ್ರುತಿಂ ಸ ಪರಮೋSತಿಮುಖ್ಯೈತರೇಯಿಂ । ಸಾ ಬಹ್ವೃಚೈಃ ಪ್ರಪಠಿತಾ ಚತುರಾನನಾಸ್ಯಾದ್ಯಸ್ಯಾಂ ರಹಸ್ಯಮುದಿತಂ ಪರಮಂ ಹಿ ವಿಷ್ಣೋಃ ॥ (d) ಮಹಾಭೂತಿಃ ಶ್ರುತಿಃ ಸೈಷಾ ಮಹಾ ಭೂತಿರ್ಯತೋ ಹರಿಃ । ವಿಶೇಷೇಣಾತ್ರ ಕಥಿತಃ ಸರ್ವಜ್ಞಃ ಶಾಶ್ವತಃ ಪ್ರಭುಃ ॥ ಇತಿ ಋಕ್ಸಂಹಿತಾಯಾಂ ॥

ಅ ॥ (a) ಷಡ್ಗುಣೈಶ್ವರ್ಯಸಂಪನ್ನನಾದ ಶ್ರೀ ನಾರಾಯಣನು ಬ್ರಹ್ಮದೇವರ ಮಗನಾದ ವಿಶಾಲನಾಮಕನಿಂದ ಇತರಾದೇವಿಯು ತಪಸ್ಸಿನಿಂದ (ಮಹಿದಾಸ ನಾಮಕನಾಗಿಇತರಾದೇವಿಯುಲ್ಲಿ) ಅವತರಿಸಿದನು. ಆಹರಿಯು(ಬ್ರಹ್ಮಾದಿ ದೇವತೆಗಳು ಮಾಡುತ್ತಿದ್ದ) ಯಾಗವನ್ನು ಕುರಿತು ಹೋದಾಗ ದೇವತೆಗಳು ಮತ್ತು ಬ್ರಾಹ್ಮಣರು ಇವರ ಸಮುದಾಯವು (ಅಪರಿಮಿತ ಪ್ರಕಾಶವು ಒಮ್ಮೆಗೆ ಅವರಮೇಲೆ ಬೀಳಲು ಆಗ ಅವರು ಸ್ತಬ್ಧರಾದರು) ಕರ್ತವ್ಯ ಜ್ಞಾನಶೂನ್ಯವಾಯಿತು. ಆಮೇಲೆ (ನಿತ್ಯದಲ್ಲಿಯೂ ಶ್ರೀಹರಿಯರೂಪವನ್ನು ಪ್ರತ್ಯಕ್ಷೀಕರಿಸಿಕೊಂಡಿರುವುದರಿಂದ ಸ್ಥಿರಚಿತ್ತನಾದ) ಚತುರ್ಮುಖನು ಈ ಹರಿಯನ್ನು ಸ್ತುತಿಸಿದನು. ॥ (b) ಆತನಿಂದಸ್ತೋತ್ರ ಮಾಡಿಸಿಕೊಳ್ಳಲ್ಪಟ್ಟ ಆಹರಿಯು, ರುದ್ರನೂ ದೇವೇಂದ್ರನೂ ಇವರೇ ಮೊದಲಾದ ಎಲ್ಲಾ ದೇವತೆಗಳನ್ನೂ ಚತುರ್ಮುಖನಿಂದೊಡಗೂಡಿಯೇ ಎಚ್ಚರಿಸಿದನು. ಆಮೇಲೆ ಆದೇವತೆಗಳು ಶ್ರೀ ಹರಿಯ ಅನುಗ್ರಹದಿಂದಲೇ ಭೃತ್ಯತನವನ್ನು ಹೊಂದುವವರಾದರು. (ಅನುಗ್ರಹವಿಲ್ಲದಿದ್ದರೆ ಅವರು ಶ್ರೀಹರಿಯ, ಭೃತ್ಯರೆಂದು ಹೇಳಲಿಕ್ಕೂ ಅಸಮರ್ಥರಾಗುತ್ತಿದ್ದರು). ಹೀಗೆ ಶ್ರೇಷ್ಠರಾದ ಬ್ರಹ್ಮಾದಿದೇವತೆಗಳಿಗೂ ಆತನ ಭೃತ್ಯತನವೇ ಇರುವುದರಿಂದ (ಬ್ರಹ್ಮಾದಿ ದೇವತೆಗಳೆಲ್ಲರೂ ಸೇವಕರಾದುದರಿಂದ) ಶ್ರೀಹರಿಯು (ಮಹಿನಃ ದಾಸಾಃ ಯಸ್ಯ ಎಂಬೀ ವ್ಯುತ್ಪತ್ತಿಯಿಂದ) ಮಹಿದಾಸನೆಂದು ಪ್ರಸಿದ್ಧನಾದನು. ॥ (c) ಆ ಬ್ರಹ್ಮಾದಿದೇವತೆಗಳು ಕೇಳಿಕೊಂಡು ಇರುವಾಗ ಸರ್ವೋತ್ತಮನಾದ ಶ್ರೀಪರಮಾತ್ಮನು ಮುಖ್ಯವಾಗಿ ದೇವಾಧಿಕಾರಿಕವಾದ (ಇತರಾದೇವಿಯು ಮಗನಿಂದ ಉಪದೇಶಿಸಿಕೊಳ್ಳಲ್ಪಟ್ಟ ಪ್ರಯುಕ್ತವೂ ಆತನನ್ನೇ ಪ್ರತಿಪಾದಿಸುವುದರಿಂದಲೂ) ಐತರೇಯಿ ನಾಮಕವಾದ ಉಪನಿಷತ್ತನ್ನು ಲಕ್ಷ್ಮೀದೇವೀಗೋಸ್ಕರ ಅತಿ ಸಂಕ್ಷೇಪದಿಂದ ಉಪದೇಶಿಸಿದನು. ಯಾವ ಶ್ರುತಿಯಲ್ಲಿ ವಿಷ್ಣುವಿನ ಅತಿರಹಸ್ಯಪ್ರಮೇಯವು ಮುಖ್ಯವಾಗಿ ಹೇಳಲ್ಪಟ್ಟದೋ ಅಂತಹ, ಬ್ರಹ್ಮದೇವರ ಮುಖದಿಂದ ಉಪದೇಶಿಸಲ್ಪಟ್ಟ ಶ್ರುತಿಯು ಋಕ್ಶಾಖಿಗಳಿಂದ ಅಧ್ಯಯನ ಮಾಡಲ್ಪಟ್ಟಿತು. (ಋಕ್ಶಾಖೆಯುವರು ಬ್ರಹ್ಮದೇವರಿಂದ ಐತರೇಯೋಪನಿಷತ್ತನ್ನು ಉಪದೇಶ ಪಡೆಕೊಂಡರು). ॥ (d) ಯಾವಕಾರಣದಿಂದ ಮಹದೈಶ್ವರ್ಯರೂಪನಾದ ಹರಿಯು ಈ ಶ್ರುತಿಯಲ್ಲಿ ಪ್ರತಿಪಾದಿಸಿಕೊಳ್ಳಲ್ಪಟ್ಟಿರುತ್ತಾನೋ, (ಅದರಿಂದಲೇ) ಈ ಶ್ರುತಿಯು (ಮಹತೀ ಭೂತಿಃ ಐಶ್ವರ್ಯರೂಪಃ ಹರಿಃ ಯಸ್ಯಾಂ ಎಂಬೀ ವ್ಯುತ್ಪತ್ತಿಯಿಂದ) "ಮಹಾಭೂತಿ ಶ್ರುತಿಃ" ಎನ್ನಿಸಿಕೊಳ್ಳುತ್ತದೆ. (ಅಲ್ಲದೆ) ಇದರಲ್ಲಿ ಹರಿಯು ಸರ್ವಜ್ಞನೂ ಶಾಶ್ವತನೂ ಗುಣಪರಿಪೂರ್ಣನೂ ಎಂದೂ ಮುಖ್ಯವಾಗಿ ಹೇಳಲ್ಪಡುತ್ತಾನೆ, ಎಂದು ಋಕ್ಸಂಹಿತೆಯಲ್ಲಿ ಉಕ್ತವಾಗಿದೆ,

ತಾ || ಲಕ್ಷ್ಮೀಪ್ರಾಣಾದಿಗಳು ಅಮುಖ್ಯವಾಗಿಯೇ ಪ್ರತಿಪಾದಿಸಿಕೊಳ್ಳಲ್ಪಟ್ಟವರು. ಕಾರಣ ಈ ಶ್ರುತಿಯು ಲಕ್ಷ್ಮೀಪರವಲ್ಲ. ವಿಷ್ಣುಪರವೇ ಸರಿ ಎಂದು ತಿಳಕೊಳ್ಳತಕ್ಕದು.

ಮಂ || ಹರಿಃ ಓಂ || ಏಷ ಪಂಥಾ ಏತತ್ಕರ್ಮೈತದ್ಬ್ರಹ್ಮೈತತ್ಸತ್ಯಂ ತಸ್ಮಾನ್ನ ಪ್ರಮಾದ್ಯೇತ್ತನ್ನಾತೀಯಾನ್ನ ಹ್ಯತ್ಯಾಯನ್ಪೂರ್ವೇ ಯೇಽತ್ಯಾಯಂಸ್ತೇ ಪರಾಬಭೂವುಸ್ತದುಕ್ತಮೃಷಿಣಾ ಪ್ರಜಾ ಹ ತಿಸ್ರೋ ಅತ್ಯಾಯಮೀಯುರ್ನ್ಯ1ನ್ಯಾ ಅರ್ಕಮಭಿತೋ ವಿವಿಶ್ರೇ| ಬೃಹದ್ಧ ತಸ್ಥೌ ಭುವನೇಷ್ವಂತಃ ಪವಮಾನೋ ಹರಿತ ಆವಿವೇಶೇತಿ ಪ್ರಜಾ ಹ ತಿಸ್ರೋ ಅತ್ಯಾಯಮೀಯುರಿತಿ ಯಾ ವೈತಾ ಇಮಾಃ ಪ್ರಜಾಸ್ತಿಸ್ರೋ ಅತ್ಯಾಯಮಾಯಂಸ್ತಾನೀಮಾನಿ ವಯಾಂಸಿ ವಂಗಾವಗಧಾಶ್ಚೇರಪಾದಾನ್ಯನ್ಯಾ ಅರ್ಕಮಭಿತೋ ವಿವಿಶ್ರ ಇತಿ ತಾ ಇಮಾಃ ಪ್ರಜಾ ಅರ್ಕಮಭಿತೋ ನಿವಿಷ್ಟಾ ಇಮಮೇವಾಗ್ನಿಂ ಬೃಹದ್ಧ ತಸ್ಥೌ ಭುವನೇಷ್ವಂತರಿತ್ಯದ ಉ ಏವ ಬೃಹದ್ಭುವನೇಷ್ವಂತರಸಾವಾದಿತ್ಯಃ ಪವಮಾನೋ ಹರಿತ ಆವಿವೇಶೇತಿ ವಾಯುರೇವ ಪವಮಾನೋ ದಿಶೋ ಹರಿತ ಆವಿಷ್ಟಃ || ೧ ||

ಅ || ಏಷಃ=ಈ ಸಂಕರ್ಷಣರೂಪಿಯಾದ ಹರಿಯು, ಪಂಥಾಃ=ಮಾರ್ಗರೂಪನು, ಏತತ್=ಈ ಅನಿರುದ್ಧನೇ, ಕರ್ಮ='ಕರ್ಮ' ಎನ್ನಿಸಿ ಕೊಳ್ಳುತ್ತಾನೆ. ಏತತ್=ಈ ವಾಸುದೇವನು, ಬ್ರಹ್ಮ='ಬ್ರಹ್ಮ'ನೆನ್ನಿಸಿಕೊಳ್ಳುತ್ತಾನೆ. ಏತತ್=ಈ ಪ್ರದ್ಯುಮ್ನನು, ಸತ್ಯಂ=ಸತ್ಯನಾಮಕನು. ತಸ್ಮಾತ್=ಆ ಹರಿಯಿಂದ, ನ ಪ್ರಮಾದ್ಯೇತ್=ಪ್ರಮಾದ ಯುಕ್ತನಾಗಬಾರದು, (ಯಾವಾಗಲೂ ಆತನನ್ನು ಮರತುಬಿಡಬಾರದು). ತತ್=ಆ ಬ್ರಹ್ಮನನ್ನು, ನಾತೀಯಾತ್=ಅತಿಕ್ರಮಿಸಬಾರದು. (ಆತನನ್ನು ಬಿಟ್ಟು ಮತ್ತೊಬ್ಬನನ್ನು ಹೊಂದಬಾರದು). ಪೂರ್ವೇ=ಬ್ರಹ್ಮಾದಿಗಳು, ನಾತ್ಯಾಯನ್ ಹಿ=(ಈತನನ್ನು, ಬಿಡಲಿಲ್ಲವಷ್ಟೆ, ಯೇ=ಯಾರು, ಅತ್ಯಾಯನ್=ಅತಿಕ್ರಮಿಸಿರುವರೋ, ತೇ=ಅವರು, ಪರಾಬಭೂವುಃ=ಅಂಧಂತಮಸ್ಸಿನಲ್ಲಿ ಬಿದ್ದಿರುವರು, (ಯಾರು ಅತಿಕ್ರಮಿಸಲಿಲ್ಲವೋ ಅಂತಹ ಬ್ರಹ್ಮಾದಿಗಳು ಮುಕ್ತರಾಗಿರುವರು.) ತತ್=ಆ ಪ್ರಮೇಯವು (ಹರಿಯನ್ನು ಅತಿಕ್ರಮಿಸಿದವರಿಗೆ ಪರಾಜಯವು; ಅತಿಕ್ರಮಿಸದೆ ಇರುವವರಿಗೆ ಐಶ್ವರ್ಯವು). ಋಷಿಣಾ=ಹಯಗ್ರೀವ ರೂಪಿಯಾದ ಶ್ರೀಹರಿಯಿಂದ, ಉಕ್ತಂ=ಹೇಳಲ್ಪಟ್ಟದೆ. ಹ=ಪ್ರಸಿದ್ಧರಾದ, ತಿಸ್ರಃ=ಮೂರು ವಿಧರಾದ, ಪ್ರಜಾಃ=ಪ್ರಜೆಗಳು, ಅತ್ಯಾಯಂ=ಭಗವದತಿಕ್ರಮವನ್ನು, ಈಯುಃ=ಹೊಂದಿದರು; (ಅದರಿಂದ ಸ್ವರೂಪನಾಶವನ್ನು ಅಂದರೆ ತಮಸ್ಸನ್ನು ಹೊಂದಿದರು). ಅನ್ಯಾಃ=ಇತರರಾದ ಮನುಷ್ಯೋತ್ತಮರು, ಅರ್ಕಂ=ಅರ್ಕನಾಮಕ ಅಗ್ನ್ಯಂತರ್ಗತ ಭಗವದ್ರೂಪವನ್ನು, ಅಭಿತಃ=ಯೋಗ್ಯಸಾಧನೆಗಳಿಂದ, ನಿ ವಿವಿಶ್ರೇ=(ಮನಸ್ಸನ್ನು ನೆಲೆಗೊಳಿಸಿ) ಉಪಾಸನೆ ಮಾಡಿದರು; (ಇದರಿಂದ ಭಗವಲ್ಲೋಕವನ್ನು ಹೊಂದಿದರು). ಭುವನೇಷು=ಲೋಕಗಳಲ್ಲಿ, ಅಂತಃ=ಒಳಗೆ, ಬೃಹತ್=ತೇಜಸ್ಸಿನಿಂದ ವ್ಯಾಪ್ತವಾದ ಆದಿತ್ಯಾಂತರ್ಗತರೂಪವು, ತಸ್ಥೌ=ಇರುತ್ತದೆಯೋ, (ಅಂತಹ ರೂಪವನ್ನು ಋಷಿಗಳು ಹೊಂದಿದರು). ಪವಮಾನಃ=ವಾಯುದೇವರಲ್ಲಿರುವ ಶ್ರೀಹರಿಯು, ಹರಿತಃ=ಎಲ್ಲಾ ದಿಕ್ಕುಗಳನ್ನು, ಆವಿವೇಶ=ಪ್ರವೇಶಿಸಿದನು, (ಅಂತಹ ವ್ಯಾಪ್ತನಾದ ಶ್ರೀಹರಿಯನ್ನು ದೇವತೆಗಳು ಹೊಂದಿದರು).

ಇತಿ=ಹೀಗೆಂದು (ಋಷಿಗಳಿಂದ ಹೇಳಲ್ಪಟ್ಟಿದೆ.) ಇದೇ ಮಂತ್ರವನ್ನು ಅನುವಾದ ಮಾಡಿಕೊಂಡು ಶ್ರುತಿಯು ತಾನೇ ವ್ಯಾಖ್ಯಾನವನ್ನು ಮಾಡುತ್ತದೆ). 'ಪ್ರಜಾ ಹ ತಿಸ್ರೋ ಅತ್ಯಾಯಮಾಯಃ ಇತಿ=ಅಂದರೆ ವೈ=ಪ್ರಸಿದ್ಧರಾದ, ಯಾಃ=ಯಾವ, ತಾ ಇಮಾಃ=ಆ ಈ, ತಿಸ್ರಃ ಪ್ರಜಾಃ= ತ್ರಿವಿಧಪ್ರಜೆಗಳು, ಅತ್ಯಾಯಂ=ಭಗವದತಿಕ್ರಮವನ್ನು, ಆಯನ್ = ಹೊಂದಿದರೋ, ತಾ ಇಮಾನಿ=ಆ ಮೂರು ಜನರು, ವಯಾಂಸಿ=ಪಿಶಾಚರು, ವಂಗಾವಗಧಾಃ=ರಾಕ್ಷಸರು, ಈರ ಪಾದಾಶ್ಚ=ಅಸುರರು, (ಆಗಿರುತ್ತಾರೆ). ನ್ಯನ್ಯಾ ಅರ್ಕ ಮಭಿತೋ ವಿವಿಶ್ರ ಇತಿ=ಅಂದರೆ, ತಾನಿ ಇಮಾಃ ಪ್ರಜಾಃ=ಆ ಈ ಮನುಷ್ಯೋತ್ತಮರಾದ ಪ್ರಜೆಗಳು, ಇಮಮೇವಾಗ್ನಿಂ=ಈ ಅಗ್ನ್ಯಂತ ರ್ಗತನಾದ, ಅರ್ಕಂ=ಅರ್ಕಶಬ್ದವಾಚ್ಯನಾದ ಶ್ರೀ ಹರಿಯನ್ನು, ಅಭಿತಃ=ಅಭಿಮುಖವಾಗಿ, ನಿವಿಷ್ಟಾಃ=ಹೊಂದಿದರು. ಬೃಹದ್ಧತಸ್ಥೌ ಭುವನೇಷ್ವಂತರಿತಿ=ಅಂದರೆ, ಅದ ಉ ಏವ=ಈ ವಿಷ್ಣುವೇ, ಭುವನೇಷ್ವಂತಃ=ಲೋಕಗಳೊಳಗೆ, ಬೃಹತ್=ತೇಜಸ್ಸಿನಿಂದ ಪರಿಪೂರ್ಣನಾಗಿ, ಅಸೌ ಆದಿತ್ಯಃ=ಸರ್ವವಸ್ತುಗಳನ್ನು ಸ್ವೀಕರಿಸುವುದರಿಂದ ಆದಿತ್ಯನಾಮಕನು. (ಅಂತಹ ವಿಷ್ಣು ವನ್ನು ಋಷಿಗಳು ವೇದಾಧ್ಯಯನದಿಂದ ಹೊಂದಿದರು). 'ಪವಮಾನೋ ಹರಿತ ಆವಿವೇಶೇತಿ= ಅಂದರೆ ಪವಮಾನಃ=ಪವಮಾನಶಬ್ದವಾಚ್ಯನು, ವಾಯುರೇವ=ವಾಯುಸ್ಥ ವಿಷ್ಣುವೇ, ಹರಿತಃ= ಅಂದರೆ ದಿಶಃ=ದಿಕ್ಕುಗಳನ್ನು, ಆವಿಷ್ಟಃ=ಪ್ರವೇಶಿಸಿದನು. (ಇಂತಹ ಹರಿಯನ್ನು ದೇವತೆ ಗಳು ಹೊಂದಿದರು).

ಈ ಉಪನಿಷತ್ತಿನಲ್ಲಿ ಮೋಕ್ಷಹೇತುವಾದ ಭಗವಂತನ ಉಪಾಸನೆಯನ್ನು ನಿರೂಪಿಸುತ್ತಾರೆ.

**ಭಾ॥** (a) ಏಷ ಏವ ಸದಾ ಪಂಥಾ ಭಗವಾನ್ಪುರುಷೋತ್ತಮಃ । ನಿತ್ಯಂ ಸ್ವಪ್ರಾಪ್ತಿಹೇತುತ್ವಾತ್ಕರ್ತೃತ್ವಾತ್ಕರ್ಮ ಮಾತೃತಃ ॥ (b) ಬ್ರಹ್ಮೈಷ ಗುಣಪೂರ್ಣತ್ವಾತ್ಸತ್ಯಂ ಸಾಧುಸ್ವರೂಪತಃ । ಕ್ವಾಪಿ ತಂ ವಿಸ್ಮರೇ ನ್ನೈವ ತ್ಯಕ್ತ್ವಾ ತಂ ನೇತರಂ ವ್ರಜೇತ್ ॥ (c) ಪೂರ್ವೇ ನೈನಂ ತತ್ಯಜುರ್ಹಿ ಬ್ರಹ್ಮಾದ್ಯಾಸ್ತೇನ ಸಂಸೃತೇಃ । ಮುಕ್ತಾ ಶ್ರೀಶ್ಚ ತದತ್ಯಾಗಾ ನ್ನಿತ್ಯಮುಕ್ತಾ ಗುಣಾಧಿಕಾ ॥

ಅ (a) ಮಹಾವ್ರತದಲ್ಲಿ ಪೂಜ್ಯನಾಗಿ ಪ್ರಸ್ತುತನಾದ, ಸರ್ವೋತ್ತಮನಾದ ಶ್ರೀ ಹರಿಯು ಭಕ್ತರ ಸಾಯುಜ್ಯಾದಿರೂಪ ಮುಕ್ತಿಗೆ ಕಾರಣನಾದುದರಿಂದ, ನಿಯಮದಿಂದ ಯಾವಾ ಗಲೂ "ಪಂಥಾಃ" ಎನ್ನಿಸಿಕೊಳ್ಳುತ್ತಾನೆ. ಈತನೇ ಸರ್ವಜಗತ್ತನ್ನು ಸೃಷ್ಟಿಸುವುದರಿಂದ ಅಥವಾ ಜಗತ್ತನ್ನು ನಾಶಮಾಡುವುದರಿಂದಲೂ (ಕರ್ ಎಂದೂ) ಸರ್ವಜ್ಞನಾದುದರಿಂದ (ಮ ಎಂದೂ) 'ಕರ್ಮ' ಎನ್ನಿಸಿಕೊಳ್ಳುತ್ತಾನೆ. ॥ (b) ಈತನೇ ಗುಣಪರಿಪೂರ್ಣನಾದುದರಿಂದ "ಬ್ರಹ್ಮ" ನೆನ್ನಿಸಿ ಕೊಳ್ಳುತ್ತಾನೆ, ನಿರ್ದೋಷ ಸ್ವರೂಪವುಳ್ಳವನಾದುದರಿಂದ "ಸತ್ಯ" ನೆನ್ನಿಸಿಕೊಳ್ಳುತ್ತಾನೆ. ಆತ ನನ್ನು ಎಲ್ಲಿಯೂ ಮರೆತುಬಿಡಬಾರದು. ॥ ಆತನನ್ನು ಬಿಟ್ಟು ಇತರರನ್ನು ಹೊಂದಬಾರದು. (ಪರಿವಾರರೆಂಬ ಭಾವನೆಯಿಲ್ಲದೆ ಆತನಿಂದ ಇತರರನ್ನು ಪೂಜಿಸಬಾರದು. ಅಂತೂ ಹರಿಯೇ ಸರ್ವೋತ್ತಮನು ಎಂದು ಆತನ ಉಪಾಸನೆಯನ್ನು ಮಾಡಿಯೇ ದೇವತೆಗಳೆಲ್ಲರೂ ಆತನ ಪರಿವಾರಭೂತರು ಎಂದು ಸ್ಮರಿಸತಕ್ಕದು. ಇದನ್ನತಿಕ್ರಮಿಸಿ ಸ್ಮರಿಸಬಾರದು). (c) "ಪ್ರಾಚೀನ ರಾದ ಬ್ರಹ್ಮಾದಿದೇವತೆಗಳು ಈ ಹರಿಯನ್ನು ಬಿಡಲಿಲ್ಲವಷ್ಟೆ. ಅದರಿಂದಲೇ ಸಂಸಾರದಿಂದ ಮುಕ್ತರಾಗಿರುವರು. ಲಕ್ಷ್ಮಿಯಾದರೂ ಅಂತಹ ಹರಿಯನ್ನು ಬಿಡದಿರುವುದರಿಂದ ನಿತ್ಯಮುಕ್ತಳು (ಶ್ರೀ ಹರಿಯು ಪರಿಪೂರ್ಣ ಗುಣಗಳುಳ್ಳವನು ಎಂದು ಉಪಾಸನೆಯನ್ನು ಮಾಡಿರುವುದರಿಂದ) ಗುಣಾಧಿಕಳೂ (ಆಗಿರುತ್ತಾಳೆ).

ಭಾ॥ (a) ವಿಹಾಯಸ್ಯಯನಾತ್ಪ್ರೋಕ್ತಾ ವಯಾಂಸೀತಿ ಪಿಶಾಚಕಾಃ । ವರ್ತಿತ ಜ್ಞಾನತೋ ವಂಗಾ ನರಾಸ್ತೈರವನಂ ಸದಾ ॥ (b) ಅನ್ನರೂಪೈರ್ಗೃಧ್ನವೋ ಹಿ ವಂಗಾವಗಧನಾಮಕಾಃ । ರಾಕ್ಷಸಾ ಅಸುರಾ ಈರಪಾದಾ ಇತಿ ಸಮೀರಿತಾಃ ॥ (c) ಧರ್ಮೋ ಜ್ಞಾನಂ ಚ ವೈರಾಗ್ಯಮೈಶ್ವರ್ಯಂ ಚತುರಾತ್ಮಕಃ । ವಾಯುರ್ದೇವೋಽತ್ರಾಸುರಾಣಾಮೈಶ್ವರ್ಯಂ ಗುಣ ಏವ ಹಿ ॥ (d) ಈರಪಾದಾಸ್ತತಃ ಪ್ರೋಕ್ತಾಸ್ತೇ ತ್ರಯೋ ವಿಷ್ಣುಮತ್ಯಜನ್ । ಪರಾಭೂತಾಸ್ತತಸ್ತೇ ತು ತಮಸ್ಯಂಧೇ ನಿಪಾತಿತಾಃ ॥

ಅ ॥ (a) ಆಕಾಶದಲ್ಲಿ ಯಾವಾಗಲೂ ಸಂಚಾರಮಾಡಿರುವುದರಿಂದ ಪಿಶಾಚರು "ವಯಾಂಸಿ" ಎನ್ನಿಸಿಕೊಳ್ಳುತ್ತಾರೆ । ಇತರರಿಂದ ಹುಟ್ಟಿಸಲ್ಪಟ್ಟ ಜ್ಞಾನವುಳ್ಳವರಾದುದರಿಂದ ಮನುಷ್ಯರು (ವಂ. ಗಂ. ಯೇಷಾಂ ಎಂಬೀ ವ್ಯುತ್ಪತ್ತಿಯಿಂದ) "ವಂಗ" ಎನ್ನಿಸಿಕೊಳ್ಳುತ್ತಾರೆ. ॥ (b) ಅನ್ನರೂಪರಾದ ಮನುಷ್ಯರಿಂದ ಯಾವಾಗಲೂ ಸ್ವರಕ್ಷಣೆಯನ್ನು ಅಪೇಕ್ಷಿಸುವ ಪ್ರಯುಕ್ತ (ಮನುಷ್ಯ ಮಾಂಸಾಹಾರಿಗಳಾದುದರಿಂದ) ರಾಕ್ಷಸರು "ವಂಗಾವಗಧ"ರೆಂದು ಹೆಸರುಳ್ಳವರು. ಅಸುರರು ಈರಪಾದರು ಎನ್ನಿಸಿಕೊಳ್ಳುತ್ತಾರೆ. ॥ (c) ವಾಯುದೇವರು ಧರ್ಮ, ಜ್ಞಾನ, ವೈರಾಗ್ಯ, ಐಶ್ವರ್ಯ ಎಂಬೀ ನಾಲ್ಕು ಸ್ವರೂಪರು. (ನಾಲ್ಕು ಗುಣಕ್ಕೆ ಅಭಿಮಾನಿಯು) ಈ ನಾಲ್ಕರಲ್ಲಿ ಅಸುರರಿಗೆ ಐಶ್ವರ್ಯವೆಂಬೀ ಒಂದೇ ಗುಣವಿರತಕ್ಕದ್ದು. ॥ (d) ಅದರಿಂದಲೇ ಅಸುರರು ಈರಪಾದರೆನ್ನಿಸಿಕೊಳ್ಳುತ್ತಾರೆ. ಈ ಮೂರು ಜನರು ಪರಮಾತ್ಮನನ್ನು ಪರಿತ್ಯಾಗ ಮಾಡಿದರು. ಅದರಿಂದಲೇ ಅವರು ಪರಾಜಿತರಾಗಿ ಅಂಧಂತಮಸ್ಸಿನಲ್ಲಿ ಬಿದ್ದರು. ॥

ಭಾ॥ (a) ದೇವಾಶ್ಚ ಋಷಯೋ ಮರ್ತ್ಯಾಸತ್ತಮಾ ಇತಿ ಚ ತ್ರಯಃ । ಆಶ್ರಿತಾ ವಿಷ್ಣುಮೇವೈಕಂ ತ್ರಿಸ್ಥಾನಸ್ಥಿತಮಚ್ಯುತಂ ॥ (b) ಅಗ್ನಿಸ್ಥಮಾಶ್ರಿತಾ ಮರ್ತ್ಯಾ ವಿಷ್ಣುಮರ್ಕಾಭಿಧಂ ಪರಂ । ಆ ಜನ್ಯೈರರ್ಚಿತತ್ವಾತ್ಸ ಹ್ಯರ್ಕ ಇತ್ಯುಚ್ಯತೇ ಹರಿಃ ॥ (c) ಅಗ್ನೌ ಕರ್ಮಾಣಿ ಕೃತ್ವೈವ ಮಾನುಷಾ ಮುಕ್ತಿಭಾಗಿನಃ । ಕರ್ಮಭಿಃ ಶುದ್ಧಸತ್ವಾನಾಂ ಕರ್ಮತ್ಯಾಗೋಽಪಿ ನಾನ್ಯಥಾ ॥ (d) ಆಶ್ರಿತಾಃ ಸೂರ್ಯಗಂ ವಿಷ್ಣುಮೃಷಯೋ ಬೃಹದಿತ್ಯಸೌ । ತೇಜಸಾ ಬೃಹ್ಮಣಾದುಕ್ತೋ ವಿಷ್ಣುರಾದಿತ್ಯ ಇತ್ಯಪಿ ॥ ಆದಾನಾತ್ಸರ್ವವಸ್ತೂನಾಂ ಸ್ವಾಧ್ಯಾಯೇನಾಮುಮಾಶ್ರಿತಾಃ । ಮುಚ್ಯಂತೇ ಋಷಯೋ ನಿತ್ಯಂ ನಾನ್ಯಥಾ ತು ಕಥಂಚನ ॥ (e) ವಾಯುಸ್ಥಮಾಶ್ರಿತಾ ದೇವಾಃ ಪವಮಾನಾಭಿಧಂ ಹರಿಂ । ಸಂಸಾರಾತ್ಪಾವಯಿತ್ವಾಯನ್ತ್ರಹಾನಂದೇ ಮಿನೋತ್ಯಯಂ । ಪವಮಾನಸ್ತತೋ (f) ವಿಷ್ಣುರ್ವ್ಯಾಪ್ತಃ ಸರ್ವಾಸು ದಿಕ್ಷು ಚ ॥ ಆಶ್ರಿತೋ ಭಗವಾನ್ಸರ್ವೈಃ ಸರ್ವತ್ರಾಪಿ ವಿಶೇಷತಃ । ಆಶ್ರಯಾತ್ಪೃಥಗುಕ್ತೋಽಯಂ ನಿತ್ಯಾನಂದೋ ರಮಾಪತಿಃ ॥೧॥

ಅ ॥ (a) ದೇವತೆಗಳು, ಋಷಿಗಳು, ಮನುಷ್ಯೋತ್ತಮರು ಎಂಬೀ ಮೂವರು, ಮೂರು ಸ್ಥಾನದಲ್ಲಿರತಕ್ಕವನೂ, ಸ್ವರೂಪತಃ ಭೇದಶೂನ್ಯನೂ ನಾಶವಿಲ್ಲದಿರತಕ್ಕವನೂ ಆದ ಶ್ರೀ ಹರಿಯನ್ನು ಆಶ್ರಯಿಸಿದರು. ॥ (b) ಅದರಲ್ಲಿ ಮನುಷ್ಯೋತ್ತಮರು "ಅರ್ಕ"ನೆಂದು ಹೆಸರುಳ್ಳವನೂ ಅಗ್ನ್ಯಂತರ್ಗತನೂ ಸರ್ವೋತ್ತಮನೂ ಆದ ವಿಷ್ಣುವನ್ನು ಆಶ್ರಯಿಸಿದರು. ಆ ಹರಿಯಾದರೂ ಚೆನ್ನಾಗಿ ಜನರಿಂದ ಪೂಜಿಸಿಕೊಳ್ಳಪಡುವ ಪ್ರಯುಕ್ತ "ಅರ್ಕ" ಎನ್ನಿಸಿಕೊಳ್ಳಲ್ಪಡುತ್ತಾನೆ. ॥ (c) ಮನುಷ್ಯೋತ್ತಮರು ಅಗ್ನಿಯಲ್ಲಿ ಕರ್ಮಗಳನ್ನು ಮಾಡಿಯೇ ಮುಕ್ತಿಯನ್ನು ಹೊಂದ ತಕ್ಕವರು. ಹೋಮಾದಿ ಕರ್ಮ ಪರಿತ್ಯಾಗ ರೂಪವಾದ ಯತ್ಯಾಶ್ರಮವೂ ಕೂಡ ಪೂರ್ವದಲ್ಲಿ ಕರ್ಮಗಳಿಂದ ಅಂತಃಕರಣವನ್ನು ಪವಿತ್ರೀಕರಿಸಿದವರಿಗೇನೆ ಬೇರೆ ರೀತಿಯಾಗಿ ಅಲ್ಲ. (ಬ್ರಹ್ಮಜ್ಞಾನವೇ ಮುಕ್ತಿಗೆ ಕಾರಣವಾದರೂ ಕರ್ಮವು ಜ್ಞಾನಕ್ಕೆ ಸಾಧನವಾದುದರಿಂದ ಕರ್ಮಮಾಡಿಯೇ ಮುಕ್ತಿಯಾಗುವುದೆಂದು ಇಲ್ಲಿ ಹೇಳಲ್ಪಟ್ಟಿದೆ.) ॥ (d) ಋಷಿಗಳು ಸೂರ್ಯಾಂತರ್ಗತನಾದ ವಿಷ್ಣುವನ್ನಾಶ್ರಯಿಸಿದರು. ಈತನು ತೇಜಸ್ಸಿನಿಂದ ಪೂರ್ಣನಾದುದರಿಂದ ಬೃಹತ್ ಎಂದೂ ಸರ್ವ ವಸ್ತುಗಳನ್ನು ಸ್ವೀಕರಿಸುವುದರಿಂದ ಆದಿತ್ಯನೆಂದೂ ಹೇಳಲ್ಪಡುತ್ತಾನೆ. ಈ ಋಷಿಗಳಾದರೂ ನಿರಂತರವೂ ಸ್ವಾಧ್ಯಾಯದಿಂದಲೇ ಈತನನ್ನು ಆಶ್ರಯಿಸಿದವರಾಗಿ ಮುಕ್ತರಾಗಿರುತ್ತಾರೆ. ಬೇರೆ ಯಾವ ವಿಧದಿಂದಲೂ ಆಗಲಾರದು. ॥ (e) ದೇವತೆಗಳು ವಾಯ್ವಂತರ್ಗತನಾದ ಪವಮಾನನೆಂದು ಹೆಸರುಳ್ಳ ಹರಿಯನ್ನು ಆಶ್ರಯಿಸುತ್ತಾರೆ. ಯಾವ ಕಾರಣದಿಂದ ಈ ಹರಿಯು ಭಕ್ತರನ್ನು ಸಂಸಾರದಿಂದ ದಾಟಿಸಿ ಮಹಾನಂದವುಳ್ಳ ಮುಕ್ತಿಯಲ್ಲಿ ಹಾಕುತ್ತಾನೋ (ಕಳುಹಿಸುತ್ತಾನೋ) ಅದರಿಂದ ಪವಮಾನನೆನ್ನಿಸಿಕೊಳ್ಳುತ್ತಾನೆ ॥ (f) ಸರ್ವದಿಕ್ಕುಗಳಲ್ಲಿ ವ್ಯಾಪ್ತನಾದ ಪ್ರಯುಕ್ತ ವಿಷ್ಣುವೆಂತಲೂ ಶ್ರೀ ಹರಿಯು ಸರ್ವರಿಂದ ನಿಖಿಲಸಾಧನೆಗಳಿಂದಲೂ ಅಗ್ನ್ಯಾದಿಗಳಲ್ಲಿ ವಿಶೇಷವಾಗಿ ಪೂಜಿಸಲ್ಪಡುವ ಪ್ರಯುಕ್ತ ನಿತ್ಯಾನಂದವುಳ್ಳ ರಮಾಪತಿಯು ಆಶ್ರಿತ ಎಂತಲೂ ಪ್ರತ್ಯೇಕವಾಗಿ ಹೇಳಲ್ಪಡುತ್ತಾನೆ. ॥ ೧ ॥

**ಮಂ ॥ ಉಕ್ಥಮುಕ್ಥಮಿತಿ ವೈ ಪ್ರಜಾ ವದಂತಿ ತದಿದಮೇವೋಕ್ಥಮಿಯಮೇವ ಪೃಥಿವೀ ತೋ ಹೀದಂ ಸರ್ವಮುತ್ತಿಷ್ಠತಿ ಯದಿದಂ ಕಿಂಚ ತಸ್ಯಾಗ್ನಿರರ್ಕೋಽನ್ನಮಶೀತಯೋಽನ್ನೇನ ಹೀದಂ ಸರ್ವಮಶ್ನುತೇಽಂತರಿಕ್ಷಮೇವೋಕ್ಥಮಂತರಿಕ್ಷಂ ವಾ ಅನುಪತಂತ್ಯಂತರಿಕ್ಷಮನುಧಾವಯಂತಿ ತಸ್ಯ ವಾಯುರರ್ಕೋಽನ್ನಮಶೀತಯೋಽನ್ನೇನ ಹೀದಂ ಸರ್ವಮಶ್ನುತೇಽಸಾವೇವದ್ಯೌರುಕ್ಥಮಮುತಃಪ್ರದಾನಾದ್ಧೀದಂ ಸರ್ವಮುತ್ತಿಷ್ಠತಿ ಯದಿದಂ ಕಿಂಚ ತಸ್ಯಾಸಾವಾದಿತ್ಯೋಽರ್ಕೋಽನ್ನಮಶೀತಯೋಽನ್ನೇನ ಹೀದಂ ಸರ್ವಮಶ್ನುತ ಇತ್ಯಧಿದೈವತಮಥಾಧ್ಯಾತ್ಮಂ ಪುರುಷ ಏವೋಕ್ಥಮಯಮೇವ ಮಹಾನ್ಪ್ರಜಾಪತಿರಹಮುಕ್ಥಮಸ್ಮೀತಿ ವಿದ್ಯಾತ್ತಸ್ಯ ಮುಖಮೇವೋಕ್ಥಂ ಯಥಾ ಪೃಥಿವೀ ತಥಾ ತಸ್ಯ ವಾಗರ್ಕೋಽನ್ನಮಶೀತಯೋಽನ್ನೇನ ಹೀದಂ ಸರ್ವಮಶ್ನುತೇ ನಾಸಿಕೇ ಏವೋಕ್ಥಂ ಯಥಾಂತರಿಕ್ಷಂ ತಥಾ ತಸ್ಯ ಪ್ರಾಣೋಽರ್ಕೋಽನ್ನಮಶೀತಯೋಽನ್ನೇನ ಹೀದಂ ಸರ್ವಮಶ್ನುತೇ ತದೇತದ್ಬ್ರಧ್ನಸ್ಯ ವಿಷ್ಟಪಂ ಯದೇತನ್ನಾಸಿಕಾಯ್ಯೈ ವಿನತಮಿವ ಲಲಾಟಮೇವೋಕ್ಥಂ ಯಥಾ**

ದ್ಯೌಸ್ತಥಾ ತಸ್ಯ ಚಕ್ಷುರರ್ಕೋಽನ್ನಮಶೀತಯೋಽನ್ನೇನ ಹೀದಂ ಸರ್ವಮಶ್ನುತೇ ಸಮಾನಮಶೀತಯೋಽಧ್ಯಾತ್ಮಂ ಚಾಧಿದೈವತಂ ಚಾನ್ನಮೇವಾನ್ನೇನ ಹೀಮಾನಿ ಸರ್ವಾಣಿ ಭೂತಾನಿ ಸಮನಂತೀಽ ೩ ಅನ್ನೇನೇಮಂ ಲೋಕಂ ಜಯತ್ಯನ್ನೇನಾಮುಂ ತಸ್ಮಾತ್ಸಮಾನಮಶೀತಯೋಽಧ್ಯಾತ್ಮಂ ಚಾಧಿದೈವತಂ ಚಾನ್ನಮೇವ ತದಿದಮನ್ನಮನ್ನಾದಮಿಯಮೇವ ಪೃಥಿವೀತೋಹೀದಂ ಸರ್ವಮುತ್ತಿಷ್ಠತಿ ಯದಿದಂ ಕಿಂಚ ಯದ್ಧ ಕಿಂಚೇದಂ ಪ್ರೇತಾ ೩ ಇ ತದಸೌ ಸರ್ವಮತ್ತಿ ಯದು ಕಿಂ ಚಾತಃ ಪ್ರೈತೀಽ ೩ ತದಿಯಂ ಸರ್ವಮತ್ತಿ ಸೇಯಮಿತ್ಯಾದ್ಯಾತ್ರ್ಯತ್ತಾ ಹ ವಾ ಆದ್ಯೋ ಭವತಿ ನ ತಸ್ಯೇಶೇಽಯಂ ನಾದ್ಯಾದ್ಯದ್ವೈನಂ ನಾದ್ಯುಃ ॥ ೨ ॥

ಅ॥ ವೈ=ಪ್ರಸಿದ್ಧರಾದ, ಪ್ರಜಾಃ=ದೇವಾದಿಪ್ರಜೆಗಳು, (ಯಾವುದನ್ನು) ಉಕ್ಥಮುಕ್ಥಮಿತಿ=ನಿಖಿಲಜಗತ್ತನ್ನು ಸೃಷ್ಟಿಸುವುದರಿಂದ ಉಕ್ಥನಾಮಕವನ್ನಾಗಿ, ವದಂತಿ=ಹೇಳುತ್ತಾರೋ, ತದುಕ್ಥಂ=ಆ ಉಕ್ಥನಾಮಕವಾದುದು, ಇದಮೇವ=ಈ ವಿಷ್ಣ್ವಾಖ್ಯಬ್ರಹ್ಮವೇ. ಇಯಮೇವ=ಈ ಭಗವದ್ರೂಪವೇ, ಪೃಥಿವೀ=ಪೃಥಿವಿಯಲ್ಲಿದ್ದು ಪೃಥಿವೀನಾಮಕವು. ಯದಿದಂ ಕಿಂಚ=ಪ್ರಮಾಣಪ್ರಮಿತವಾದ, ಇದಂ ಸರ್ವಂ=ಈ ಅಂಕುರಾದಿಯು, ಇತಃ=ಈ ಪೃಥಿವಿಯಿಂದಲೇ, ಉತ್ತಿಷ್ಠತಿ ಹಿ=ಹುಟ್ಟುತ್ತದಷ್ಟೇ, ತಸ್ಯ=ಆ ಪೃಥಿವಿಯಲ್ಲಿರತಕ್ಕ ವಿಷ್ಣುವಿಗೆ, ಅಗ್ನಿಃ=ಅಗ್ನಿಯು, ಅರ್ಕಃ=ವಾಹನರೂಪ ಅರ್ಕನು. * ಅಥವಾ, ಅಗ್ನಿಃ=ಅಗ್ನಿಯಲ್ಲಿರತಕ್ಕ ಅಗ್ನಿಶಬ್ದವಾಚ್ಯವಾದ ಭಗವದ್ರೂಪವಿಶೇಷವು, ತಸ್ಯ=ಪೃಥಿವಿಯಲ್ಲಿರತಕ್ಕ ಹರಿಗೆ, ಅರ್ಕಃ=ಅರ್ಕಪದದಿಂದ ಹೇಳಲ್ಪಟ್ಟ ಗರುಡನಲ್ಲಿದ್ದು, ಗರುಡಾಕಾರವಾಗಿ ತಾನೇ ವಾಹನರೂಪವು. (ಮೇಲೆಯೂ ಇದೇ ರೀತಿಯಾಗಿ ಅರ್ಥಾಂತರವನ್ನು ಇಟ್ಟುಕೊಳ್ಳತಕ್ಕುದು), ಅನ್ನಂ=ಪ್ರಸಿದ್ಧಾನ್ನವೇ, ಅಶೀತಯಃ=ತೃಚಾಶೀತಿಗಳು, (ಬೃಹತೀ ಸಹಸ್ರಾಖ್ಯಶಸ್ತ್ರವು), ಇದಂ=ಈ ಸಮಸ್ತ ಪ್ರಾಣಿವರ್ಗವು, ಅನ್ನೇನ= § ಅನ್ನಭೋಜನದಿಂದಲೇ, ಸರ್ವಂ=ನಿಖಿಲಾಭೀಷ್ಟವನ್ನು ಅಶ್ನುತೇ=ಹೊಂದುತ್ತದೆ. ಅಂತರಿಕ್ಷಮೇವ=ಅಂತರಿಕ್ಷದಲ್ಲಿರತಕ್ಕುದು. ತಮ್ಮ ಹೃದಯದಲ್ಲಿ ಕಾಣಿಸಿಕೊಳ್ಳಲ್ಪಡುವುದರಿಂದ ಅಂತರಿಕ್ಷನಾಮಕವೂ ಆದ ಭಗವದ್ರೂಪವೇ, ಉಕ್ಥಂ=ಉಕ್ಥನಾಮಕವು. ಅಂತರಿಕ್ಷಂ ವಾ=ಅಂತರಿಕ್ಷದಲ್ಲಿರುವ ಹರಿಯನ್ನೇ, ಅನು=ಅನುಸರಿಸಿ, (ಆತನ ಪ್ರೇರಣೆ

---

* 'ಅರ್ಕ' ಎಂಬೀ ಪದವು ಗತ್ಯರ್ಥಕವಾದ 'ಋ' ಧಾತುವಿನಿಂದ ಹುಟ್ಟಿದ್ದು. ಅತಿಶೀಘ್ರಗಮನವಿರುವುದರಿಂದ ಶ್ಯೇನಪಕ್ಷಿಯೇ ಆ ಶಬ್ದದಿಂದ ಹೇಳಲ್ಪಡುತ್ತದೆ. ತದಾಕಾರವಾಗಿ ಯಾಗದಲ್ಲಿ ಮಾಡಲ್ಪಡತಕ್ಕ ಇಟ್ಟಿಕಾಸಂಬಂಧರೂಪವಾದ ಚಿತಿಯೂ ಅಮುಖ್ಯವೃತ್ತಿಯಿಂದ ಪ್ರತಿಪಾದಿಸಿಕೊಳ್ಳಲ್ಪಡುತ್ತದೆ. ಅದು ಸುಪರ್ಣನಿಗೆ ಪ್ರತಿಮಾರೂಪವು. ಆ ಸುಪರ್ಣನೇ ಅಗ್ನಿಯಲ್ಲಿಯೂ ಇರತಕ್ಕವನು. ಆತನೇ ಶ್ರೀಹರಿಗೆ ವಾಹನಭೂತನು. ಅಂತೂ ಅಗ್ನಿಯಲ್ಲಿರತಕ್ಕ ಗರುಡನೇ 'ಅರ್ಕ' ಎಂಬೀಪದದಿಂದ ಪ್ರತಿಪಾದಿತವಾದ ಚಿತಿಯಲ್ಲಿರುವುದರಿಂದ ಅಗ್ನಿಯು ವಾಹನರೂಪನಾದ ಅರ್ಕನು ಎಂದು ಹೇಳಲ್ಪಡುತ್ತಾನೆ. ॥

§ ಬೇರೆ ರೀತಿಯಿಂದಲ್ಲ. "ದಾರಾಪತ್ಯಗೃಹಾದೀನಿ ವಾಸೋಽಲಂಕಾರಭೂಷಣಂ ॥ ಅಸಹ್ಯಂನಾಶ್ನುತಃ ಪುಂಸಃ ಸಹ್ಯಂ ಭುಕ್ತವತೋ ಧ್ರುವಂ" ॥ ಎಂಬೀ ವಚನದಿಂದ ಅಶ್ನುತೇ ಅನಯಾ ಎಂಬೀ ವ್ಯುತ್ಪತ್ತಿಯನ್ನನುಸರಿಸಿ ಸರ್ವಕಾಮಗಳ ಪ್ರಾಪ್ತಿಹೇತುವಾದುದರಿಂದ ಅನ್ನವು "ಅಶೀತಿ" ಎನ್ನಿಸಿಕೊಳ್ಳುತ್ತದೆ. ತೃಚಾಶೀತಿಗಳೂ ಕೂಡಾ ಅನ್ನದಂತೆ ಪರಮಾತ್ಮನಿಗೆ ತೃಪ್ತಿಹೇತುವಾಗಿ ಸರ್ವಕಾಮಗಳ ಪ್ರಾಪ್ತಿಗೆ ಸಾಧನವಾದುದರಿಂದ ಅಶೀತಿ ಶಬ್ದವಾಚ್ಯಗಳಾಗುತ್ತವೆ. ಕಾರಣ 'ಅನ್ನಂ ಅಶೀತಯಃ' ಎಂದು ಹೇಳಿದ್ದು ಸಂಗತವೇ ಸರಿ.

ಯಿಂದಲೇ ಪಕ್ಷಿಗಳು) ಪತಂತಿ=ಹಾರುತ್ತಿವೆ. ಅಂತರಿಕ್ಷಮನು=ಆ ಹರಿಯ ಪ್ರೇರಣೆಯಿಂದಲೇ, ಧಾವಯಂತಿ=(ಮನುಷ್ಯರೇ ಮೊದಲಾದವರು ಅಶ್ವಾದಿ ವಾಹನಗಳಲ್ಲಿ ಕೂತುಕೊಂಡವರಾಗಿ ಅವುಗಳನ್ನು) ಓಡಿಸುತ್ತಾರೆ. (ಅಂತೂ ಶ್ರೀಪರಮಾತ್ಮನು ಆಕಾಶದಲ್ಲಿ ಪ್ರಾಣಿಗಳಿಗೆ ಅವಕಾಶವನ್ನು ಕೊಟ್ಟರೇನೇ ಪತನಾದಿ ಕರ್ಮಗಳು ಕೂಡುವವು. ಇಲ್ಲವಾದರೆ ಕೂಡಲಾರವು). ತಸ್ಯ=ಅಂತರಿಕ್ಷದಲ್ಲಿರತಕ್ಕ ಹರಿಗೆ, ವಾಯುಃ=ವಾಯುವು, ಅರ್ಕಃ, ಅನ್ನಂ, ಅಶೀತಯಃ, ಅನ್ನೇನ ಹೀದಂ ಸರ್ವಮಶ್ನುತೇ= „ । ಅಸೌ ದ್ಯೌರೇವ=ದ್ಯುಲೋಕಸ್ಥನಾದ ಪ್ರಕಾಶಿಸುವುದರಿಂದ ದ್ಯುನಾಮಕನಾದ ಬ್ರಹ್ಮನೇ, ಉಕ್ಥಂ=ಉಕ್ಥನಾಮಕನು. ಅಮುತಃ ಪ್ರದಾನಾತ್=ಸ್ವರ್ಗದಲ್ಲಿದ್ದು ಮಳೆಯನ್ನು ಸುರಿಸುವುದರಿಂದಲೇ, ಯದಿದಂ ಕಿಂಚ=ಪ್ರಮಾಣಸಿದ್ಧವಾದ, ಇದಂ ಸರ್ವಂ=ಈ ಸಸ್ಯಾದಿ ಸರ್ವವು, ಉತ್ತಿಷ್ಠತಿ ಹಿ=ಹುಟ್ಟುತ್ತದಷ್ಟೆ, ತಸ್ಯ=ದ್ಯುಲೋಕದಲ್ಲಿರತಕ್ಕ ಹರಿಗೆ, ಅಸೌ ಆದಿತ್ಯಃ=ಈ ಆದಿತ್ಯನು, ಅರ್ಕಃ, ಅನ್ನಂ, ಅಶೀತಯಃ, ಅನ್ನೇನ ಹೀದಂ ಸರ್ವಮಶ್ನುತೇ= „ । ಅಧಿದೈವತಂ=ಅಧಿದೈವದಲ್ಲಿದ್ದ ಭಗವದ್ರೂಪಗಳಿಗೆ ಉಕ್ಥತ್ವಾದಿಗಳು, ಇತಿ=ಹೀಗೆ ವರ್ಣಿಸಲ್ಪಟ್ಟವು. ಅಥ=ಆ ಮೇಲೆ, ಅಧ್ಯಾತ್ಮಂ=ಅಧ್ಯಾತ್ಮಗತ ಭಗವದ್ರೂಪಗಳಿಗೆ, (ಹೇಳಲ್ಪಡುತ್ತದೆ). ಪುರುಷ ಏವ=ಶರೀರದಲ್ಲಿ ನಿಯಾಮಕನಾಗಿದ್ದುದರಿಂದ ಪುರುಷಶಬ್ದವಾಚ್ಯನಾದ ವಿಷ್ಣುವೇ, ಉಕ್ಥಂ=ಉಕ್ಥನಾಮಕನು. ಅಯಮೇವ=ಈತನೇ, ಮಹಾನ್=ಸರ್ವೋತ್ತಮನು, ಪ್ರಜಾಪತಿಃ=ಬ್ರಹ್ಮಾದಿನಿಖಿಲಪ್ರಜೆಗಳಿಗೂ ಸ್ವಾಮಿಯು. ಅಹಂ=ನಾನು, ಉಕ್ಥಂ=ಉಕ್ಥನಾಮಕನು, ಅಸ್ಮೀತಿ=ಆಗಿದ್ದೇನೆಂದು, ವಿದ್ಯಾತ್=(ವಿದ್ಯಾಂ ಅತ್ತಿ ಎಂಬೀವ್ಯುತ್ಪತ್ತಿಯಿಂದ) ಜ್ಞಾನವನ್ನನುಭವಿಸುವವನು. (ಅಂತೂ ಆತನಿಗೇನೇ ಸರ್ವೋತ್ತಮತ್ವಾದಿಗಳು ಇರುವುದರಿಂದ ಆತನೊಬ್ಬನೇ ಅಂತಹ ಜ್ಞಾನಯೋಗ್ಯನು. ಮತ್ತೊಬ್ಬನಲ್ಲ) ತಸ್ಯ=ಆತನ, ಮುಖಮೇವ=ಮುಖನೇ, ಉಕ್ಥಂ=ಅಗ್ನಿಯನ್ನು ಸೃಷ್ಟಿಸುವುದರಿಂದ, ಉಕ್ಥನಾಮಕವು. ಯಥಾ ಪೃಥಿವೀ=ಅಧಿದೈವತದಲ್ಲಿ ಪೃಥಿವಿಯು ಹೇಗೆ ಉಕ್ಥವೆಂದು ಹೇಳಲ್ಪಟ್ಟದೋ, ತಥಾ=ಹಾಗೆಯೇ, (ಅಧ್ಯಾತ್ಮದಲ್ಲಿ ಪುರುಷಮುಖವೇ ಉಕ್ಥವೆನ್ನಿಸಿಕೊಳ್ಳಲ್ಪಡುತ್ತದೆ). ತಸ್ಯ=ಆತನಿಗೆ, ವಾಕ್=ವಾಗಭಿಮಾನಿಯಾದ ವಹ್ನಿಯು, ಅರ್ಕಃ, ಅನ್ನಂ, ಅಶೀತಯಃ, ಅನ್ನೇನ ಹೀದಂ ಸರ್ವಮಶ್ನುತೇ= „ ॥ ನಾಸಿಕೇ ಏವ=ಮೂಗುಗಳೇ, ಉಕ್ಥಂ=(ಗಾಳಿಯನ್ನು ಹುಟ್ಟಿಸುವುದರಿಂದ) ಉಕ್ಥನಾಮಕಗಳು. ಯಥಾಽಂತರಿಕ್ಷಂ=ಅಂತರಿಕ್ಷವು ಉಕ್ಥವೆಂದು ಹೇಗೆ ಹೇಳಲ್ಪಟ್ಟದೋ, ತಥಾ=ಹಾಗೇ ಉಕ್ಥವೆಂದು ಹೇಳಲ್ಪಡುತ್ತದೆ. ತಸ್ಯ=ನಾಸಿಕಾರೂಪವಾದ ಉಕ್ಥಕ್ಕೆ, ಪ್ರಾಣಃ=ವಾಯುವು,ಅರ್ಕಃ,ಅನ್ನಂ,ಅಶೀತಯಃ,ಅನ್ನೇನ ಹೀದಂ ಸರ್ವಮಶ್ನುತೇ=„ । ಯದೇತತ್=ಯಾವುದೊಂದು, ನಾಸಿಕಾಯೈ=ಮೂಗಿನ ಬುಡದಲ್ಲಿ, (ನೇತ್ರಗಳ ಮಧ್ಯದಲ್ಲಿ) ವಿನತಮಿವ=ಸ್ವಲ್ಪ ಆಳಪ್ರದೇಶದಂತೆ, (ತೋರುತ್ತದೋ), ತದೇತತ್=ಆ ಇದನ್ನು, ಬ್ರಧ್ನಸ್ಯ=ಸೂರ್ಯನ, ವಿಷ್ಟಪಂ=ಲೋಕವನ್ನಾಗಿ, (ತಿಳಿಯತಕ್ಕುದು). ಲಲಾಟಮೇವ=ಹಣೆಸಂಬಂಧಿಯಾದ ಕಣ್ಣೇ, ಉಕ್ಥಂ=ಉಕ್ಥನಾಮಕವು. ಯಥಾದ್ಯೌಃ=ಸ್ವರ್ಗಲೋಕವು ಉಕ್ಥವಾದ ಹಾಗೆ, ತಥಾ=ಅದು ಉಕ್ಥವು. ತಸ್ಯ=ಲಲಾಟರೂಪ ಉಕ್ಥಕ್ಕೆ, ಚಕ್ಷುಃ=ಚಕ್ಷುರಭಿಮಾನಿಯಾದ ಸೂರ್ಯನು, ಅರ್ಕಃ, ಅನ್ನಂ, ಅಶೀತಯಃ, ಅನ್ನೇನ ಹೀದಂ ಸರ್ವಮಶ್ನುತೇ= „ । ಅಧ್ಯಾತ್ಮಂ ಚ ಅಧಿದೈವತಂ ಚ=ಈ ಆರು ಸ್ಥಾನಗಳಲ್ಲಿ, ಅಶೀತಯಃ=ಅಶೀತಿಗಳಂತೆ, ಅನ್ನಂ=ಅನ್ನನಾಮಕತದಂತರ್ಗತರೂಪವು, ಸಮಾನಮೇವ=ಏಕಪ್ರಕಾರವೇ ಸರಿ. ಇಮಾನಿ ಸರ್ವಾಣಿ ಭೂತಾನಿ=ಈ ಎಲ್ಲಾ ಪ್ರಾಣಿಗಳು, ಅನ್ನೇನ ಹಿ=ಅನ್ನನಾಮಕ ಹರಿಯಿಂದಲೇ, ಸಮನಂತಿ=ಚೆನ್ನಾಗಿ ಚೇಷ್ಟೆಯನ್ನು ಮಾಡುತ್ತವೆ. ಅನ್ನೇನ=ಅನ್ನನಾಮಕ ಹರಿಯಿಂದಲೇ, ಇಮಂ ಲೋಕಂ=

ಮನುಷ್ಯಲೋಕವನ್ನು, ಜಯತಿ=ಹೊಂದುತ್ತಾನೆ. (ಯಥೇಷ್ಟ ಅನ್ನದಾನಮಾಡಿದ ಪುರುಷನು ಜನ್ಮಾಂತರದಲ್ಲಿ ಪೃಥಿವಿಗೆ ಅಧಿಪತಿಯಾಗಿರುತ್ತಾನೆ). ಅನ್ನೇನ=ಪುರೋಡಾಶಾದಿ ಅನ್ನಾಂತ ರ್ಗತ ರೂಪದಿಂದ, ಅಮುಂ=ಸ್ವರ್ಗಾದಿ ಲೋಕವನ್ನು (ಹೊಂದುತ್ತಾನೆ). ತಸ್ಮಾತ್=ಅದ ರಿಂದ, ಅಧ್ಯಾತ್ಮಂ ಚ ಅಧಿದೈವತಂ ಚ ಅಶೀತಯಃ ಅನ್ನಂ ಸವಾನಮೇವ= „ । ಅನ್ನಂ=ಉಪ ಜೀವ್ಯವಾದ, ಅನ್ನಾದಂ=ಸಮಸ್ತವನ್ನು ತಿನ್ನುವ, ತದಿದಂ=ಆ ಈ ಭಗವದ್ರೂಪವು, ಇಯ ಮೇವ ಪೃಥಿವೀ=ಈ ಪೃಥಿವಿಯಲ್ಲಿರತಕ್ಕ ಪೃಥಿವೀನಾಮಕ ಸ್ತ್ರೀರೂಪವು, ಇತೋ ಹಿ=ಈ ಪೃಥಿವಿಯಲ್ಲಿರತಕ್ಕ ಪರಮಾತ್ಮನ ಸಾಮರ್ಥ್ಯದಿಂದಲೇ, ಯದಿದಂ ಕಿಂಚ=ಪ್ರಮಾಣಸಿದ್ಧ ವಾದ, ಇದಂ ಸರ್ವಂ=ಈ ಧಾನ್ಯಾದಿಯು, ಉತ್ತಿಷ್ಠತಿ ಹಿ=ಹುಟ್ಟುತ್ತದಷ್ಟೆ, ಯತ್ಕಿಂಚ= ಪ್ರಮಾಣಸಿದ್ಧವಾದ, ಇದಂ=ಧೂಮಾದ್ಯಚೇತನವು. ಸ್ವರ್ಗಾದಿಗಳನ್ನು ಕುರಿತು ಹೋಗತಕ್ಕ ಚೇತನವೂ ಕೂಡ, ಪ್ರೇತಾ ೩ ಇ=(ಪೃಥಿವಿಯಿಂದ) ಹೋಗುತ್ತದೋ, ತತ್ಸರ್ವಂ=ಆ ಸಮಸ್ತ ವನ್ನು, ಅಸೌ=ದ್ಯುಲೋಕದಲ್ಲಿದ್ದ ಹರಿಯು, ಅತ್ತಿ=ಸ್ವೀಕರಿಸುತ್ತಾನೆ, ಉ=ಮತ್ತು, ಯತ್ ಕಿಂಚ=ಯಾವದೊಂದು, ಅತಃ=ಸ್ವರ್ಗಲೋಕದಿಂದ, ಪ್ರೈತೀ ೩=(ಭೂಮಿಯನ್ನು ಕುರಿತು), ಬರುತ್ತದೋ, ತತ್ಸರ್ವಂ=ಆ ವೃಷ್ಟ್ಯಾದಿ ಸಮಸ್ತವನ್ನು, ಇಯಂ=ಪೃಥಿವಿಯಲ್ಲಿರತಕ್ಕ ಸ್ತ್ರೀ ರೂಪನಾದ ಹರಿಯು, ಅತ್ತಿ=ಸ್ವೀಕರಿಸುತ್ತಾನೆ. ಸೇಯಂ=ಆ ಈ ಪೃಥಿವಿಯಲ್ಲಿರತಕ್ಕ ಭಗವ ನ್ಮೂರ್ತಿಯು, ಇತಿ=ಪೂರ್ವೋಕ್ತರೀತಿಯಾಗಿ, ಅದ್ಯಾ=ಭೋಗ್ಯವು. (ಉಪಜೀವ್ಯವು. *) ಅತ್ರೀ=ಸಂಹರಿಸುವುದು, (ಇದೇ ರೀತಿಯಾಗಿ ದ್ಯುಲೋಕದಲ್ಲಿದ್ದ ಹರಿಯು), ಅತ್ತಾ=ತಿನ್ನು ವವನು, ಅದ್ಯಃ=ಉಪಜೀವ್ಯನೂ, ಭವತಿ=ಆಗುತ್ತಾನೆ, ಹ ವಾ=ಪ್ರಸಿದ್ಧವು. ಅಯಂ=ಈ ಹರಿಯು (ಹೇಗೆ ನಿಖಿಲಲೋಕವನ್ನು) ನಾದ್ಯಾತ್=ಸಂಹರಿಸಲಾರನೋ, ಯದ್ವಾ=ಅಥವಾ, ಏನಂ=ಈ ಪರಮಾತ್ಮನನ್ನು (ಹೇಗೆ ಇತರರು), ನಾದ್ಯುಃ=ಉಪಜೀವಿಸಲಾರರೋ, ತಸ್ಯ=ಆ ರೀತಿಯಾಗಿ ಮಾಡತಕ್ಕದ್ದಕ್ಕೆ (ಯಾರೊಬ್ಬನು), ನೇಶೇ=ಸಮರ್ಥನಾಗಲಾರನು. ॥ ೨ ॥

ಭಾ॥ **(a)** ಉತ್ಥಾಪನಾದುಕ್ಥನಾಮಾ ಸ ಏವ ಪೃಥಿವೀಸ್ಥಿತಃ । ಪ್ರಥಿತಃ ಪೃಥಿ ವೀನಾಮಾ ಸೋಽಂತರಿಕ್ಷಾಭಿಧೋಽತ್ರಗಃ ॥ ಅಂತರೀಕ್ಷ್ಯೋ ಯತೋ ದ್ಯುಸ್ಥೋ ದ್ಯುನಾಮಾತಿಪ್ರಕಾಶನಾತ್ । **(b)** ಅಧ್ಯಾತ್ಮೇ ಚ ನಿವಿ ಷ್ಟೋಽಸೌ ಪುರುಷಾಖ್ಯೋ ಜನಾರ್ದನಃ ॥ ಪೂರ್ಷು ಸ್ಥಿತತ್ವಾತ್ಸ ಮಹಾ ನ್ಪ್ರಜಾನಾಂ ಪತಿರೇವ ಚ । **(c)** ಅಹಮುಕ್ಥಮಿತಿ ಹ್ಯೇತಾಂ ವಿದ್ಯಾಮನು ಭವತ್ಯಸೌ ॥ ಪೃಥಕ್ಪೃಥಕ್ತ ತಸ್ಯಾಂಗಾನ್ಯುಕ್ಥಾನಿ ಜಗದೀಶಿತುಃ । **(d)** ಅಗ್ನಿವಾತದಿನೇಶಾನಾಮುತ್ಥಾನಾನಿ ಪೃಥಕ್ಪೃಥಕ್ ॥ ವದನಂ ನಾಸಿಕಾ ನೇತ್ರಮಿತ್ಯೇತಾನಿ ಪರಾತ್ಮನಃ ॥

ಅ ॥ (a) ಶ್ರೀಹರಿಯು ನಿಖಿಲಜಗತ್ತನ್ನು ಸೃಷ್ಟಿಸುವುದರಿಂದ ಉಕ್ಥನಾಮಕನು. ಆತನೇ ವಿಸ್ತೃತ (ವ್ಯಾಪ್ತ) ನಾಗಿರುವುದರಿಂದ ಪೃಥಿವೀನಾಮಕನಾಗಿ ಪೃಥಿವಿಯಲ್ಲಿದ್ದಾನೆ. ಆತನು ಯಾವಕಾರಣದಿಂದ ತಂತಮ್ಮ ಹೃದಯದಲ್ಲಿಯೇ ಜ್ಞಾನಿಗಳಿಂದ ನೋಡಲು ಶಕ್ಯನೋ,

---

* ಒಂದು ವಸ್ತುವು ಇನ್ನೊಂದು ವಸ್ತುವಿನಿಂದ ನಿಯಮವಾಗಿ ಹುಟ್ಟುವುದಾದರೆ ಒಂದನೇ ವಸ್ತುವಿಗೆ ಉಪಜೀವಕವೆಂದೂ ಎರಡನೇದಕ್ಕೆ ಉಪಜೀವ್ಯವೆಂದೂ ಹೆಸರು. ಉದಾ:- ತಂದೆಯು ಉಪಜೀವ್ಯನೂ ಮಗನು ಉಪಜೀವಕನೂ ಆಗುವನು.

ಆದುದರಿಂದ ಅಂತರಿಕ್ಷನಾಮಕನಾಗಿ ಅಂತರಿಕ್ಷದಲ್ಲಿದ್ದಾನೆ. ಅತಿಶಯವಾಗಿ ಪ್ರಕಾಶಿಸುವುದರಿಂದ ದ್ಯುನಾಮಕನಾಗಿ ಸ್ವರ್ಗದಲ್ಲಿದ್ದಾನೆ. ಜೀವನನ್ನಧಿಕರಿಸಿ (b) (ಜೀವನಿಗೆ) ಭೋಗಸಾಧನವಾಗಿರುವ ಶರೀರದಲ್ಲಿ ಈ ಜನಾರ್ದನನು ಪ್ರತಿಶರೀರಗಳಲ್ಲಿರುವುದರಿಂದ ಪುರುಷನೆಂದು ಹೆಸರುಳ್ಳವನಾಗಿ ಪ್ರವಿಷ್ಟನಾಗಿದ್ದಾನೆ. ಆತನೇವೇ ಸರ್ವೋತ್ತಮನೂ ಬ್ರಹ್ಮಾದಿನಿಖಿಲಪ್ರಜೆಗಳಿಗೆ ಸ್ವಾಮಿಯೂ (ಆಗಿರುತ್ತಾನೆ). ॥ (c) ಈತನು ನಾನೇ ಉಕ್ಥನು ಎಂಬೀ ಜ್ಞಾನವನ್ನು ಅನುಭವಿಸುತ್ತಾನೆ. ನಿಖಿಲ ಜಗತ್ತಿಗೂ ಸ್ವಾಮಿಯಾದ ಶ್ರೀಪರಮಾತ್ಮನ ಎಲ್ಲಾ ಅಂಗಗಳೂ ಪ್ರತ್ಯೇಕ ಪ್ರತ್ಯೇಕವಾಗಿ ಉಕ್ಥನಾಮಕಗಳು. (d) ಶ್ರೀಹರಿಯ ಮುಖ ಮೂಗು ಕಣ್ಣು ಇವುಗಳು ಬೇರೆಬೇರೆಯಾಗಿ ಅಗ್ನಿ, ವಾಯು, ದಿನಾಧಿಪತಿಯಾದ ಸೂರ್ಯ, ಇವರಿಗೆ ಉತ್ಥಾಪಕಗಳು. (ಅಂದರೆ ಇವರನ್ನ ಸೃಷ್ಟಿಸಿದವುಗಳು.)

**ಭಾ॥ (a)** ತೃಚಾಶೀತಿ ವಿಭಿನ್ನಸ್ಯ ಶಸ್ತ್ರಸ್ಯಾನ್ನತ್ವಹೇತುತಃ । ವಿಷ್ಣೋಃಸ್ತೃಚಾಶೀತಿವತ್ತ್ವಾತ್ಪ್ರಸಿದ್ಧಾನ್ನಮಿತಿ ಸ್ಫುಟಂ ॥ **(b)** ಅನ್ನಾಭಿಮಾನಿ ದೇವಶ್ಚ ತೃಚಾಶೀತ್ಯಾಶ್ಚ ದೇವತಾ । ಸೋಮ ಏವ ತತಶ್ಚಾನ್ನಮಶೀತಯ ಇತೀರಿತಂ ॥

ಅ ॥ (a) ಮೂರು ಋಕ್ಕುಗಳ ಸಮಾಹಾರ (ಕೂಡುವಿಕೆಯು) ತೃಚವು. ಅಂತಹ ತೃಚದ ಎಂಭತ್ತಕ್ಕೆ (೨೪೦ ಋಕ್ಕುಗಳಿಗೆ) ತೃಚಾಶೀತಿ ಎಂದು ಹೆಸರು. ಅದರಿಂದ ಪ್ರತ್ಯೇಕಿಸಿ ಹೊಗಳುವಿಕೆಯು ಅಂದರೆ ಬೃಹತೀ ಸಹಸ್ರಾಖ್ಯ ಶಸ್ತ್ರವು ವಿಷ್ಣುವಿಗೆ ತೃಪ್ತಿಯನ್ನು ಹುಟ್ಟಿಸುವುದರಿಂದ ಪ್ರಸಿದ್ಧಾನ್ನವೂ ತೃಚಾಶೀತಿಯಂತೆ (ತೃಪ್ತಿಜನಕವು) ಆಗುವುದು. ಎಂದು ಪ್ರಸಿದ್ಧವು. ಈ ಪ್ರಕಾರವಾಗಿ 'ಅನ್ನಮಶೀತಯಃ' ಎಂಬೀ ವಾಕ್ಯವನ್ನು ಉಪಮಾನವು ಉಕ್ತವಾಗಿದೆ ಎಂದು ವ್ಯಾಖ್ಯಾನಮಾಡಿ ಸಾಮಾನಾಧಿಕರಣ್ಯರೂಪದಿಂದಲೂ ವ್ಯಾಖ್ಯಾನಮಾಡಿರುತ್ತಾರೆ. ॥ (b) ಯಾವುದರಿಂದ ಅನ್ನಾಭಿಮಾನಿಯಾದ ದೇವತೆಯು ಸೋಮನೇ, ತೃಚಾಶೀತಿಗೂ ಅಧಿಪತಿಯಾದ ದೇವತೆಯು ಸೋಮನೆಯೋ. ಅದರಿಂದಲೇ 'ಅನ್ನಮಶೀತಯಃ' ಅನ್ನವು ಅಶೀತಿಗಳು ಎಂದು ಹೇಳಲ್ಪಟ್ಟವೆ. ॥

**ಭಾ॥** ಅದನಾಘ್ರಾಣದೃಷ್ಟ್ಯಾಖ್ಯಭೋಗತ್ರಯವಿಭಾಗತಃ । ಮುಖನಾಸಾ ಚಕ್ಷುಷಾಂ ತದ್ಭೋಗ್ಯಮನ್ನಂ ಹರೇಃ ಶ್ರುತಂ ॥

ಅ ॥ ಶ್ರೀ ಹರಿಯ ಬಾಯಿ, ಮೂಗು, ಕಣ್ಣು ಇವುಗಳಿಗೆ ಅದನ (ತಿನ್ನುವಿಕೆ) ಆಘ್ರಾಣ (ಪರಿಮಳವನ್ನು ಸ್ವೀಕರಿಸುವಿಕೆ) ದೃಷ್ಟಿ (ನೋಡುವಿಕೆ) ಎಂಬೀ ಮೂರು ಭೋಗಗಳ ವಿಭಾಗದಿಂದ ಅಂದರೆ ಕ್ರಮವಾಗಿ ವಿಷಯವಾದುದರಿಂದ ಪ್ರಸಿದ್ಧಾನ್ನವು ಭೋಗ್ಯವಾಗಿ ಹೇಳಲ್ಪಟ್ಟಿದೆ. ॥

**ಭಾ॥ (a)** ಅರಣಂ ಗಮನಂ ಯಸ್ಮಾದರ್ಕಃ ಶೀಘ್ರಗತಿಸ್ತ್ವತಃ । ಶ್ಯೇನ ಏವ ತದಾಕಾರಾ ಚಿತಿರರ್ಕಪದೋದಿತಾ ॥ **(b)** ಸುಪರ್ಣಪ್ರತಿಮಾ ಸಾ ಯತ್ತದಾರೂಢೋ ಜನಾರ್ದನಃ । ತಸ್ಮಾತ್ತಸ್ಯಾರ್ಕ ಇತಿ ಸಾ ಪ್ರೋಚ್ಯತೇ ವೈದಿಕೈಃ ಪದೈಃ ॥ **(c)** ಯೋಽಸೌ ಚಿತಿಗತೋ ವೀಂದ್ರಃ ಸೋಽಗ್ನಿವಾತರವಿಷ್ವಪಿ । ತಥಾ ವಾಕ್ಪ್ರಾಣಚಕ್ಷುಷ್ಷು ತಸ್ಮಾತ್ತೇಽರ್ಕಾಃ ಪ್ರಕೀರ್ತಿತಾಃ ॥ **(d)** ತೇಷು ಸ್ಥಿತೇ ಸುಪರ್ಣೇ ಚ ರೂಪಭೇದೈಃ ಪೃಥಕ್ಪೃಥಕ್ । ಸ್ಥಿತೋ ವಿಷ್ಣುಸ್ತದರ್ಕಾಸ್ತೇ ತಸ್ಮಾದೇವ ಪ್ರಕೀರ್ತಿತಾಃ ॥

ಅ॥ 'ಅರ್ಕ' ಎಂಬೀ ಪದದ ಪ್ರಕೃತಿಯಾದ, 'ಋ' ಧಾತುವಿನ ಅರ್ಥರೂಪವಾದ ಅರಣವು ಯಾವುದರಿಂದ ಅಂದರೆ 'ಋ ಗತೌ' ಎಂಬೀ ಧಾತುವಿನ ವ್ಯಾಖ್ಯಾನದಿಂದ ಗಮನಾರ್ಥಕವ್ರೋ, (ಕಾರಣ) ಅತಿಶೀಘ್ರ ಗಮನವಿರುವುದರಿಂದ ಶ್ಯೇನಪಕ್ಷಿಯೇ 'ಅರ್ಕ' ಎನ್ನಿಸಿಕೊಳ್ಳುತ್ತದೆ. ಶ್ಯೇನಾಕಾರವಾದ (೩೬೦) ಮುನ್ನೂರ ಅರುವತ್ತು ಇಟ್ಟಿಗೆಗಳ ಸಂಬಂಧ ರೂಪವಾದ ಚಿತಿಯು 'ಅರ್ಕ' ಎಂಬೀ ಪದದಿಂದ ಹೇಳಲ್ಪಟ್ಟದೆ.॥ (b) ಅದು ಗರುಡನಿಗೆ ಪ್ರತಿಮಾರೂಪವು. ಅಂದರೆ ಗರುಡನೇ ಅಭಿಮಾನಿಯಾಗಿರತಕ್ಕುದು. ಯಾವುದರಿಂದ ಜನಾರ್ದನನು ಶ್ಯೇನಾಕಾರವಾದ ಚಿತಿಗೆ ಅಭಿಮಾನಿಯಾದ ಗರುಡನನ್ನು ಏರಿದ್ದಾನೋ, ಕಾರಣ ಗರುಡಾಭಿಮಾನಿಕವಾದ ಚಿತಿಯು ಶ್ರೀಹರಿಗೆ ವೇದದಲ್ಲಿದ್ದ ಎಲ್ಲಾ ಪದಗಳಿಂದ ಅರ್ಕವೆಂದು ಹೇಳಲ್ಪಡುತ್ತದೆ. (c) ಪಕ್ಷಿಗಳಿಗೆ ಅಧಿಪತಿಯಾದ ಯಾವ ಈ ಗರುಡನು ಇಟ್ಟಿಗೆಗಳಿಗೆ ಅಧಿಪತಿಯಾಗಿದ್ದಾನೋ, ಆತನು ಅಗ್ನಿ, ವಾಯು, ಸೂರ್ಯ ಇವರಲ್ಲಿಯೂ, ಹಾಗೆಯೇ ಮಾತು, ಪ್ರಾಣ, ಕಣ್ಣು ಇವುಗಳಲ್ಲಿಯೂ (ಅಧಿಪತಿಯಾಗಿ) ಇದ್ದಾನೆ. ಆದುದರಿಂದಲೇ ಅಗ್ನ್ಯಾದಿಗಳು ಅರ್ಕಗಳು ಎಂದು ಹೇಳಲ್ಪಟ್ಟವೆ. ॥ (d) ಅಗ್ನ್ಯಾದಿಗಳಲ್ಲಿ ಅಧಿಪತಿಯಾಗಿದ್ದ ಗರುಡನಲ್ಲಿಯೂ ಶ್ರೀಹರಿಯು ರೂಪಭೇದಗಳಿಂದ ಬೇರೆಬೇರೆಯಾಗಿ ಇದ್ದಾನೆ. ಅದರಿಂದಲೇ ಶ್ರೀಹರಿಗೆ ಆ ಅಗ್ನ್ಯಾದಿಗಳು ಅರ್ಕಗಳೆಂದು ಹೇಳಲ್ಪಟ್ಟವೆ. ॥

ಭಾ॥ **(a)** ವ್ಯಾಪ್ತತ್ವಾಜ್ಜೀವದೇಹೇಷು ಮುಖೇ ವಿಷ್ಣೋರ್ಮುಖಂ ಸ್ಮೃತಂ । ನಾಸಯೋರ್ನಾಸಿಕೇ ವಿಷ್ಣೋರಕ್ಷ್ಣೋರೇವ ತದಕ್ಷಿಣೀ ॥ **(b)** ಜೀವವಾಕ್ಪ್ರಾಣ ಚಕ್ಷುಷ್ಷು ತದ್ವ್ಯಾಗಾದ್ವ್ಯಾಪ್ತತಃ ಸ್ಥಿತಾಃ । ವಿಷ್ಣೋರ್ವಾಗ್ಭಾರ್ಗವೋ ರಾಮೋ ಪ್ರಾಣೋಽಸ್ಯ ನರಕೇಸರೀ ॥ **(c)** ಚಕ್ಷುಸ್ತು ಕಪಿಲೋ ವಿಷ್ಣುರಗ್ನ್ಯಾದೀನಾಂ ಚ ಕಾರಣಂ । ಜೀವವಾಗಾದಿಸಂಸ್ಥಂ ಚ ಸುಪರ್ಣಮಧಿಸಂಸ್ಥಿತಾಃ ॥

ಅ॥ (a) ಶ್ರೀಹರಿಯು ಜೀವರ ಸ್ಥೂಲದೇಹಗಳಲ್ಲಿ ವ್ಯಾಪಿಸಿಕೊಂಡಿರುವುದರಿಂದ ಜೀವನ ವಾಗಿಂದ್ರಿಯಗೋಳಕವಾದ ಮುಖದಲ್ಲಿ ಮುಖವೂ, ಮೂಗುಗಳಲ್ಲಿ ಮೂಗೂ, ಕಣ್ಣುಗಳಲ್ಲಿ ಕಣ್ಣುಗಳೂ ಉಕ್ಥಗಳೆಂದು ಹೇಳಲ್ಪಟ್ಟವೆ. ॥ (b) (ಅರ್ಥಾಂತರವನ್ನು ಹೇಳುತ್ತಾರೆ.) ಜೀವರ ವಾಕ್, ಪ್ರಾಣ, ಕಣ್ಣು ಈ ಗೋಳಕಗಳಲ್ಲಿ ಶ್ರೀಪರಮಾತ್ಮನ ವಾಗಾದಿ ಗೋಳಕಗಳು ಇವೆ. ಜೀವರಲ್ಲಿ ವ್ಯಾಪ್ತವಾದಪ್ರಯುಕ್ತವೇ ಶ್ರೀಹರಿಯ ಮಾತು ಪರಶುರಾಮನು. ಈತನ ಪ್ರಾಣವು ನರಸಿಂಹನು. ॥ (c) ಕಣ್ಣು ಕಪಿಲರೂಪಿಯಾದ ಶ್ರೀಹರಿಯು. (ಜೀವರ ವಾಗಾದಿ ಗೋಳಕದಲ್ಲಿದ್ದ ಪರಶುರಾಮಾದಿಗಳು) ಅಗ್ನ್ಯಾದಿಗಳಿಗೆ ಕಾರಣಭೂತನೂ ಜೀವರ ವಾಗಾದಿ ಇಂದ್ರಿಯಗಳಲ್ಲಿರತಕ್ಕವನೂ ಆದ ಗರುಡನನ್ನು ಏರಿದ್ದಾರೆ. (ಆರೂಢರಾಗಿದ್ದಾರೆ). ॥

ಭಾ॥ **(a)** ಅವಿಶೇಷೋಽಪಿ ಭಗವಾನ್ ಪೂರ್ಣೈಶ್ವರ್ಯ ಸ್ವರೂಪತಃ । ಅಂಗಾಂಗಿತ್ವೇನೈಕ ಏವ ಸ್ವಾನಂದಾನುಭವೇ ಸ್ಥಿತಃ ॥ **(b)** ಸ ಏವ ವ್ಯೂಹ್ಯ ಚಾತ್ಮಾನಂ ಪೃಥಗ್ರೂಪ ಇವ ಸ್ಥಿತಃ । ಸುಪರ್ಣನಾಮಾ ಭಗವಾನ್ಸುಪರ್ಣೇ ಚ ವ್ಯವಸ್ಥಿತಃ ॥ **(c)** ಅಗ್ನ್ಯಾದಿಷು ಚ ತನ್ನಾಮಾ ವಾಸುದೇವಃ ಸ ಸಂಸ್ಥಿತಃ । ಅನ್ನನಾಮಾ ಸ ಏವಾನ್ನೇ ಚೇಷ್ಟಯನ್ಸರ್ವಮಾಸ್ಥಿತಃ । ಅನ್ನೇ ಸ್ಥಿತಃ ಸ ಏವೇಶೋ ಹ್ಯನ್ನದಾತೃಗತಿಪ್ರದಃ ॥

ಅ ॥ (a) ಶ್ರೀಹರಿಯು (ಇಂದ್ರಾರ್ಜುನಾದಿಗಳಂತೆ) * ವಿಶೇಷರಹಿತನಾದರೂ ಪೂರ್ಣಾಚಿಂತ್ಯ ಐಶ್ವರ್ಯರೂಪನಾದುದರಿಂದ, ಒಬ್ಬನೇ ಅಂಗಾಂಗೀಭಾವದಿಂದ ಸ್ವರೂಪ ಭೂತಾನಂದಾನುಭವದಲ್ಲಿ ಇದ್ದಾನೆ. ಅಂದರೆ ಸ್ವರೂಪಭೂತಾನಂದವನ್ನು ಅನುಭವಿಸಿರುತ್ತಾನೆ. ॥ (b) ಅಂಗಭೂತನಾದ ಹರಿಯೇ ತನ್ನನ್ನು ವಾಹ್ಯವಾಹಕ (ಹೊರಲಿಕ್ಕೆ ಯೋಗ್ಯವಾದದ್ದು, ಹೊತ್ತುಕೊಳ್ಳತಕ್ಕದ್ದು) ರೂಪದಿಂದ ವಿಭಾಗಿಸಿ, ಪ್ರತ್ಯೇಕರೂಪದಂತೆ ಇದ್ದಾನೆ. (ಪೃಥ್ವಿಯಲ್ಲಿದ್ದ ವಾಸುದೇವನು ಸುಪರ್ಣನೆಂದು ಹೆಸರುಳ್ಳವನಾಗಿ ಸುಪರ್ಣನಲ್ಲಿ ಇದ್ದಾನೆ. ॥ (c) ಆ ವಾಸುದೇವನೇ ಅಗ್ನ್ಯಾದಿಗಳಲ್ಲಿ ಅಗ್ನ್ಯಾದಿನಾಮಕನಾಗಿದ್ದಾನೆ. ಆತನೇ ಅನ್ನನಾಮಕನಾಗಿ ಅನ್ನದಲ್ಲಿದ್ದು ಸರ್ವ ಪ್ರಾಣಿಗಳಿಗೂ ಚೇಷ್ಟಕನಾಗಿ, ಅನ್ನದಲ್ಲಿ ನಿಯಾಮಕನಾಗಿ ಇದ್ದಾನೆ. ಅವನೇ ಅನ್ನ ದಾನಮಾಡುವವರಿಗೆ ಸದ್ಗತಿಯನ್ನು ಕೊಡುವವನಾಗಿ ಸರ್ವರಿಗೂ ನಿಯಾಮಕನಾಗಿದ್ದಾನೆ. ॥

ಭಾ॥ **(a)** ತಸ್ಯಾಂತರಿಕ್ಷಗಸ್ಯೈವ ನಿಯಮಾದನು ಪಕ್ಷಿಣಃ । ಪತಂತಿ ಧಾವಯಂತ್ಯಶ್ವಾನ್ನರಾದೀಂಶ್ಚ ನರಾದಯಃ ॥ **(b)** ಪರಸ್ಯ ವಿಷ್ಣೋರ್ಧಾಮತ್ವಾತ್ಸೂರ್ಯೋ ಬ್ರಧ್ನ ಇತೀರಿತಃ । ನಿಹಿತಶ್ಚೈವ ತಲ್ಲೋಕೋ ನಾಸಿಕಾಯಾಂ ನತಸ್ಥಲೇ ॥

ಅ ॥ (a) ಆ ಅಂತರಿಕ್ಷದಲ್ಲಿರತಕ್ಕ ಹರಿಯ ನಿಯಮವನ್ನನುಸರಿಸಿ ಪಕ್ಷಿಗಳು ಹಾರುತ್ತಿವೆ. ಮನುಷ್ಯರೇ ಮೊದಲಾದವರು ಅಶ್ವಾದಿಗಳನ್ನೂ ಮನುಷ್ಯಾದಿಗಳನ್ನೂ ಓಡಿಸುತ್ತಿರುತ್ತಾರೆ. ॥ (b) ಸರ್ವೋತ್ತಮನಾದ ವಿಷ್ಣುವಿಗೆ ಮಂದಿರಭೂತನಾದುದರಿಂದ ಸೂರ್ಯನು ಬ್ರಧ್ನನೆನ್ನಿಸಿಕೊಳ್ಳುತ್ತಾನೆ. ಮೂಗುವಿನಲ್ಲಿ ತಗ್ಗುಪ್ರದೇಶದಲ್ಲಿ ಸೂರ್ಯಲೋಕವು ಇಡಲ್ಪಟ್ಟದೆ. (ಅಂದರೆ ನಾಸಿಕಾಮೂಲವನ್ನು ಸೂರ್ಯನಿಗೆ ಸ್ಥಾನಭೂತವಾದುದನ್ನಾಗಿ ತಿಳಕೊಳ್ಳತಕ್ಕುದು).

ಭಾ॥ **(a)** ಪೃಥಿವ್ಯಾಂ ಸಂಸ್ಥಿತೋ ವಿಷ್ಣುಃ ಸ್ತ್ರೀರೂಪೇಣ ದ್ಯುಲೋಕತಃ । ಪತಿತಂ ಸರ್ವಮೇವಾತ್ತಿ **(b)** ತಥಾ ದಿವಿ ಚ ಸಂಸ್ಥಿತಃ ॥ ಇತೋಗತಂ ಸರ್ವಮತ್ತಿ ದ್ಯುನಾಮಾ ಭಗವಾನ್ಪರಃ । ಭೋಗ್ಯತ್ವಾದಾದ್ಯ ಇತ್ಯುಕ್ತ ಏವಮಾದ್ಯಾತೃರೂಪವಾನ್ ॥ **(c)** ಏಕ ಏವ ಪರೋ ವಿಷ್ಣುರತ್ತಾನ್ಯೈರುಪಜೀವ್ಯತಃ । ಆದ್ಯೋ ಭವತಿ ಚಾನ್ಯೇಷಾಂ ನೋಪಜೀವ್ಯೋ ಭವೇದ್ಯಥಾ ॥ ಹರಿಃ ಸ ಸರ್ವಜೀವಾನಾಂ **(d)** ನ ಭುಜ್ಯಂತೇ ಯಥಾಽಮುನಾ । ಸರ್ವೇ ಲೋಕಾಸ್ತಥಾ ಕರ್ತುಂ ನೈವೇಷ್ಟೇ ಕಶ್ಚನ ಕ್ವಚಿತ್ ॥ ೨ ॥

---

* ಇಂದ್ರಾರ್ಜುನರಿಗೆ ಭೇದವಿಲ್ಲದಿದ್ದರೂ ಸ್ವಲ್ಪ ವಿಶೇಷವಿರುತ್ತದೆ. ಜೀವರು ಸಾಂಶರು. (ಅಂದರೆ ದೇವಾದಿಗಳು). ನಿರಂಶರು (ಅಸ್ಮದಾದಿಗಳು). ಎಂದು ಎರಡು ಪ್ರಕಾರವಾಗಿ ಇರುವರು. ಸಾಂಶರು ಒಂದೇ ಕಾಲದಲ್ಲಿ ಬೇರೆ ಬೇರೆ ದೇಹಗಳನ್ನು ತೆಗೆದುಕೊಂಡು ಬೇರೆ ಬೇರೆ ದೇಶಗಳಲ್ಲಿ ಜೀವಿಸುವ ಸಾಮರ್ಥ್ಯವುಳ್ಳವರು. ದೇವೇಂದ್ರನು ಒಂದಂಶದಿಂದ ಸ್ವರ್ಗಾಧಿಪತಿಯಾಗಿಯೂ, ಇನ್ನೊಂದು ಅಂಶದಿಂದ ಭೂತಲದಲ್ಲಿ ಅರ್ಜುನನಾಗಿಯೂ ಇರುತ್ತಿದ್ದನು. ಸಾಂಶಜೀವರಿಗೆ ಸುಖಜ್ಞಾನಾದಿಗಳಿಂದ ಬೇರೆ ಬೇರೆ ದೇಹದಲ್ಲಿ ಹೆಚ್ಚುಕಡಿಮೆ ಆಗಬಹುದು. ಶ್ರೀ ಪರಮಾತ್ಮನು ಸಾಂಶನಾದಾಗ್ಯೂ, ಎಲ್ಲಾ ಅವತಾರಗಳಲ್ಲಿಯೂ ಸುಖಜ್ಞಾನಾದಿಗಳಿಂದ ವೃದ್ಧಿಹ್ರಾಸರಹಿತನು.

ಅ ॥ (a) ಪೃಥಿವಿಯಲ್ಲಿರತಕ್ಕ ವಿಷ್ಣುವು ಸ್ತ್ರೀರೂಪದಿಂದ(ಸ್ತ್ರೀರೂಪನಾಗಿ)ಸ್ವರ್ಗಲೋಕದಿಂದ ಬಿದ್ದ ವೃಷ್ಟ್ಯಾದಿ ಸರ್ವವಸ್ತುಗಳನ್ನು ಸ್ವೀಕರಿಸುತ್ತಾನೆ. ॥ (b) ಹಾಗೆಯೇ ದ್ಯುನಾಮಕನಾದ ಸರ್ವೋತ್ತಮನಾದ, ಹರಿಯು ಸ್ವರ್ಗದಲ್ಲಿದ್ದವನಾಗಿ ಭೂಮಿಯಿಂದ ಹೋದ ನಿಖಿಲ ವಸ್ತುಗಳನ್ನು ಸ್ವೀಕರಿಸುತ್ತಾನೆ. ಸರ್ವೋತ್ತಮನಾದ ಶ್ರೀಹರಿಯು ಉಪಜೀವ್ಯನಾದುದರಿಂದ ಆದ್ಯನೆಂದೂ (ಸಂಹಾರಕನಾದುದರಿಂದ) ಅತ್ತೃ ಎಂದೂ ಹೇಳಿಸಿಕೊಳ್ಳಲ್ಪಡುತ್ತಾನೆ. ಹೀಗೆ ಆದ್ಯ, ಅತ್ತೃರೂಪವುಳ್ಳವನಾಗುತ್ತಾನೆ. ॥ (c) ಆತನೇ (ಇತರರನ್ನು ಸಂಹರಿಸುವುದರಿಂದ) ಅತ್ತಾ ಎಂದೂ, ಚೆನ್ನಾಗಿ ಇತರರಿಂದ ಉಪಜೀವ್ಯನಾದುದರಿಂದ ಆದ್ಯನೆಂದೂ ಆಗುತ್ತಾನೆ. ಹೇಗೆ ಶ್ರೀಹರಿಯು ಇತರ ಸರ್ವರಿಗೆ ಉಪಜೀವ್ಯನಾಗಲಿಕ್ಕಿಲ್ಲವೋ, (d) ಹೇಗೆ ಈತನಿಂದ ಸರ್ವಲೋಕವು ಪಾಲಿಸಲ್ಪಡಲಿಕ್ಕಿಲ್ಲವೋ, ಆರೀತಿಯಾಗಿ ಮಾಡಲಿಕ್ಕೆ ಯಾರೊಬ್ಬನೂ ಎಲ್ಲಿಯೂ ಸಮರ್ಥನಾಗಲಾರನು. ॥ ೨ ॥

**ಮಂ ॥ ಅಥಾತೋ ರೇತಸಃ ಸೃಷ್ಟಿಃ ಪ್ರಜಾಪತೇ ರೇತೋ ದೇವಾ ದೇವಾನಾಂ ರೇತೋ ವರ್ಷಂ ವರ್ಷಸ್ಯ ರೇತ ಓಷಧಯ ಓಷಧೀನಾಂ ರೇತೋಽನ್ನಮನ್ನಸ್ಯ ರೇತೋ ರೇತೋ ರೇತಸೋ ರೇತಃ ಪ್ರಜಾಃ ಪ್ರಜಾನಾಂ ರೇತೋ ಹೃದಯಂ ಹೃದಯಸ್ಯ ರೇತೋ ಮನೋ ಮನಸೋ ರೇತೋ ವಾಗ್ವಾಚೋ ರೇತಃ ಕರ್ಮ ತದಿದಂ ಕರ್ಮ ಕೃತಮಯಂ ಪುರುಷೋ ಬ್ರಹ್ಮಣೋ ಲೋಕಃ ಸ ಇರಾಮಯೋ ಯದ್ಧಿರಾಮಯಾಸ್ತಸ್ಮಾದ್ಧಿರಣ್ಮಯೋ ಹಿರಣ್ಮಯೋ ಹ ವಾ ಅಮುಷ್ಮಿಲ್ಲೋಕೇ ಸಂಭವತಿ ಹಿರಣ್ಮಯಃ ಸರ್ವೇಭ್ಯೋ ಭೂತೇಭ್ಯೋ ದದೃಶೇ ಯ ಏವಂ ವೇದ ॥ ೩ ॥**

ಅ ॥ ಅಥ=ಅನಂತರದಲ್ಲಿ, ಅತಃ=ಶ್ರೀ ಹರಿಯ ಮಾಹಾತ್ಮ್ಯೆಯನ್ನು ಕೇಳಿದ್ದಕ್ಕೆ ಮಹಾಫಲವಿರುವುದರಿಂದ, ರೇತಸಃ=ರೇತಸ್ಸಂಬಧಿಯಾದ, ಸೃಷ್ಟಿಃ=ಸೃಷ್ಟಿಯು, (ಹೇಳಲ್ಪಡುತ್ತದೆ.) ದೇವಾಃ=ಬ್ರಹ್ಮಾದಿದೇವತೆಗಳು, ಪ್ರಜಾಪತೇಃ=ಸರ್ವಜೀವಾಧಿಪತಿಯಾದ ವಿಷ್ಣುವಿನ, ರೇತಃ=ರೇತಸ್ಸು (ರೇತಃ ಪರಿಣತ ಶರೀರವನ್ನು ಹೊಂದಿದವರು, ವಿಷ್ಣುವಿನಿಂದ ಹುಟ್ಟಿದವರು.) ವರ್ಷಂ=ಮಳೆಯು, ದೇವಾನಾಂ=ದೇವತೆಗಳ, ರೇತಃ=ರೇತಸ್ಸು, (ದೇವತೆಗಳಿಂದ ಹುಟ್ಟಿದ್ದು) ವರ್ಷಸ್ಯ=ಮಳೆಯ, ರೇತಃ=ರೇತಸ್ಸು, ಓಷಧಯಃ=ಓಷಧಿಗಳು, (ಮಳೆಯಿಂದ ಓಷಧಿಗಳು ಅಂದರೆ ಪಕ್ವಫಲವುಳ್ಳವುಗಳು ಹುಟ್ಟಿದುವು.) ಓಷಧೀನಾಂ=ಓಷಧಿಗಳ, ರೇತಃ=ರೇತಸ್ಸು, ಅನ್ನಂ=ಅನ್ನವು, (ಓಷಧಿಗಳಿಂದ ಅನ್ನವು ಹುಟ್ಟಿತು.) ಅನ್ನಸ್ಯ=ಅನ್ನದ, ರೇತಃ=ರೇತಸ್ಸು, ರೇತಃ=ಸುಕ್ಕ್ರವೇ ಸರಿ. ರೇತಸಃ=ರೇತಸ್ಸಿನ, ರೇತಃ=ರೇತಸ್ಸು, ಪ್ರಜಾಃ=ಎಲ್ಲಾ ಪ್ರಜೆಗಳು, (ರೇತಸ್ಸಿನಿಂದ ಎಲ್ಲಾ ಪ್ರಜೆಗಳು ಹುಟ್ಟುತ್ತಾರೆ.) ಪ್ರಜಾನಾಂ=ಪ್ರಜೆಗಳ, ರೇತಃ=ರೇತಸ್ಸು, ಹೃದಯಂ=ಸಂಕಲ್ಪರೂಪ ಮನಸ್ಸು, (ನಾನು ಇಂತಹ ಕೆಲಸವನ್ನು ಹೀಗೆ ಮಾಡುವೆನು ಎಂಬೀ ಮನಸ್ಸು ಪ್ರಜೆಗಳಿಗೆ ಹುಟ್ಟುತ್ತದೆ.) ಹೃದಯಸ್ಯ=ಹೃದಯದ, ರೇತಃ=ರೇತಸ್ಸು, ಮನಃ=ವಿಕಲ್ಪರೂಪ ಮನಸ್ಸು, (ಏಕಾದಶ್ಯಾದಿ ಉಪವಾಸಾದಿಗಳ ಸಂಕಲ್ಪಗಳನ್ನು ಮಾಡಿದ ಮೇಲೆ, ಈ ಉಪವಾಸಾದಿಗಳನ್ನು ಎಷ್ಟುಮಾತ್ರಕ್ಕೂ ಪರಿತ್ಯಾಗಮಾಡಲಾರೆನು ಎಂಬೀ ವಿಕಲ್ಪರೂಪ ಮನಸ್ಸು ಹುಟ್ಟುತ್ತದೆ.) ಮನಸಃ=ವಿಕಲ್ಪಾತ್ಮಕ ಮನಸ್ಸಿಗೆ, ರೇತಃ=ರೇತಸ್ಸು, ವಾಕ್=ನುಡಿಯು, ವಾಚಃ=ಮಾತಿನ, (ವೃದ್ಧ ವ್ಯವಹಾರದ) ರೇತಃ=ರೇತಸ್ಸು, ಕರ್ಮ=ಘಟವನ್ನು ತೆಗೆದುಕೊಂಡು ಬರೋಣವು ಇದೇ ಮೊದಲಾದ ಕರ್ಮವು, ತದಿದಂ=ಆ ಈ ಘಟಪಟಾದಿ ಜಗತ್ತು,

ಕರ್ಮಕೃತಂ=ಕುಲಾಲಾದಿ ಕರ್ಮಗಳಿಂದುಂಟಾದದ್ದು ಅಯಂ=ಈ ಕರ್ಮಾಭಿಮಾನಿಯಾದ, ಪುರುಷಃ=ಜೀವನು, ಬ್ರಹ್ಮಣಃ=ವಿಷ್ಣುವಿಗೆ, ಲೋಕಃ=ಆವಾಸಸ್ಥಾನನು, (ಜಡಗಳಿಂದ ಚೇತನಗಳಲ್ಲಿ ವಿಷ್ಣುವಿನ ಸನ್ನಿಧಾನವು ಅಧಿಕವಾದುದು). ಸಃ=ಆ ವಿಷ್ಣುವು, ಇರಾಮಯಃ=ಇಚ್ಛಾನುರೂಪ ಸುಖಪರಿಪೂರ್ಣನು, ಯತ್=ಯಾವ ಕಾರಣದಿಂದ, ಇರಾಮಯಾಃ=ಸುಖಪರಿಪೂರ್ಣನೋ, ತಸ್ಮಾತ್=ಅದರಿಂದಲೇ, ಹಿರಣ್ಮಯೋ ಹಿ=ಲೌಕಿಕಾನಂದ ವಿಲಕ್ಷಣಸುಖದಿಂದೊಡಗೂಡಿದವನೇ ಸರಿ. ಯಃ=ಯಾವ ಅಧಿಕಾರಿಯು, ಏವಂ=ಪೂರ್ವೋಕ್ತರೀತಿಯಾಗಿ, ವೇದ=ತಿಳಿಯುತ್ತಾನೋ, (ಆತನು) ಅಮುಷ್ಮಿನ್‌ಲೋಕೇ=ವೈಕುಂಠಾದಿ ಲೋಕಗಳಲ್ಲಿ, ಹಿರಣ್ಮಯಃ=(ಕರ್ಮಗಳಿಂದುಂಟಾದ ಪ್ರಾಕೃತ ರೂಪವನ್ನು ಬಿಟ್ಟು) ಸ್ವರೂಪಾನಂದಾವಿರ್ಭಾವವುಳ್ಳವನು, ಸಂಭವತಿ=ಆಗುತ್ತಾನೆ. ಹಿರಣ್ಮಯಃ=ಸುಖಮಯನಾಗಿಯೇ, ಸರ್ವೇಭ್ಯೋ ಭೂತೇಭ್ಯಃ=ಸರ್ವಮುಕ್ತರಿಂದ, ದದೃಶೇ=ಕಾಣಲ್ಪಡುತ್ತಾನೆ, ಹ ವ=ಪ್ರಸಿದ್ಧವು. ॥ ೩ ॥

ಭಾ॥ **(a)** ಸ ಏಷ ಭಗವಾನ್ವಿಷ್ಣುಃ ಪ್ರಜಾಪತಿರಿತೀರಿತಃ । ತಸ್ಮಾಜ್ಜಾತಾಃ ಸರ್ವದೇವಾ ಬ್ರಹ್ಮಾದ್ಯಾ **(b)** ಸ್ತೇಭ್ಯ ಏವ ಚ ॥ ವೃಷ್ಟಿಃ ಸಂಜಾಯತೇ ತಸ್ಯಾಃ ಸರ್ವಾ ಓಷಧಯೋಽಭವನ್ । ಓಷಧೀಭ್ಯೋಽನ್ನಮನ್ನಾಚ್ಚ ರೇತೋ **(c)** ರೇತಸ ಏವ ಚ ॥ ಸರ್ವಾಃ ಪ್ರಜಾಃ ಪ್ರಜಾಯಂತೇ ಸಂಕಲ್ಪೋ ಹೃದಯಾಭಿಧಃ । ಪ್ರಜಾಭ್ಯೋ ಜಾಯತೇ ತಸ್ಮಾದ್ವಿಕಲ್ಪಾಖ್ಯಂ ಮನಸ್ತಥಾ ॥

ಅ ॥ (a) ಆ ಈ ಪೂಜ್ಯನಾದ ಹರಿಯೇ ಪ್ರಜಾಪತಿಯೆಂದು ('ಪ್ರಜಾಕಾಮೋ ಹ ವೈ ಪ್ರಜಾಪತಿಃ ಸಮಿಥುನಮುತ್ಪಾದಯತೇ' ಇತ್ಯಾದಿ ಶ್ರುತಿಗಳಲ್ಲಿ) ಹೇಳಲ್ಪಟ್ಟಿರುತ್ತಾನೆ. ಆ ಹರಿಯಿಂದಲೇ ಚತುರ್ಮುಖನೇ ಮೊದಲಾದ ಎಲ್ಲಾ ದೇವತೆಗಳೂ ಹುಟ್ಟಿದರು. ॥ (b) ಬ್ರಹ್ಮಾದಿಗಳಿಂದಲೇ ಮಳೆಯು ಹುಟ್ಟುತ್ತದೆ. (ಕೇವಲ ಪರ್ಜನ್ಯಾದಿಗಳಿಂದಲ್ಲ, ಇಲ್ಲಿವೃಷ್ಟ್ಯಾದಿ ಪದಗಳಿಂದ ಭೂತ, ಭೂತಾಭಿಮಾನಿ, ಆತನ ಶರೀರ, ತದಂತರ್ನಿಯಾಮಕ ಹರಿಯು ಇಷ್ಟು ಮಂದಿ ಹೇಳಲ್ಪಡುತ್ತಾರೆ.) ಆ ಮಳೆಯಿಂದ ಎಲ್ಲಾ ಪಕ್ವಫಲಗಳಿಂದೊಡಗೂಡಿದ ಗಿಡಬಳ್ಳಿಗಳು ಹುಟ್ಟಿದುವು. ಓಷಧಿಗಳಿಂದ ಅನ್ನವು, ಅನ್ನದಿಂದ ರೇತಸ್ಸು. ॥ (c) ರೇತಸ್ಸಿನಿಂದಲೇ ಎಲ್ಲಾ ಪ್ರಜೆಗಳೂ ಹುಟ್ಟುತ್ತಾರೆ. (ನಾನು ಇಂತಹ ಕರ್ಮವನ್ನು ಹೀಗೆಮಾಡುವೆನೆಂಬೀ ಮನೋವ್ಯಾಪಾರಕ್ಕೆ ಪ್ರಜೆಗಳೇ ಕರ್ತೃಗಳಾಗಿರುವುದರಿಂದ) ಹೃದಯವೆಂದುಹೆಸರುಳ್ಳ ಸಂಕಲ್ಪಾತ್ಮಕ ಮನಸ್ಸು ಪ್ರಜೆಗಳಿಂದ ಹುಟ್ಟುತ್ತದೆ. ಅದರಿಂದ ವಿಕಲ್ಪಾತ್ಮಕ ಮನಸ್ಸು ಹುಟ್ಟುತ್ತದೆ. (ಸಂಕಲ್ಪಿತವಾದ ಕರ್ಮವನ್ನು ಪರಿತ್ಯಾಗಮಾಡಲಾರೆನೆಂಬುದೇ ವಿಕಲ್ಪಾತ್ಮಕ ಮನಸ್ಸು).

ಭಾ॥ **(a)** ವಿಕಲ್ಪಾದ್ವಾಕ್ಪ್ರಚಾರಶ್ಚ ವಾಚಾ ನಾಮಾದಿವೇದನಾತ್ । ಕರ್ಮ ಸಂಜಾಯತೇ ತಸ್ಮಾತ್ಕರ್ಮಣಶ್ಚ ಜಗತ್ಪುನಃ ॥ **(b)** ಕರ್ಮಾಭಿಮಾನ್ಯಯಂ ಜೀವಃ ಪರಸ್ಯ ಬ್ರಹ್ಮಣೋ ಹರೇಃ । ಆವಾಸಸ್ಥಾನಮುದ್ದಿಷ್ಟೋ ವಿಶೇಷಾತ್ಸ ಇರಾಮಯಃ ॥

ಅ ॥ (a) ವಿಕಲ್ಪರೂಪಮನಸ್ಸಿನಿಂದ ವಾಕ್ಪ್ರಚಾರವು ಹುಟ್ಟುತ್ತದೆ. ಆ ವೃದ್ಧರಾದ ಉಪದೇಶಕರ ಶಬ್ದಪ್ರಯೋಗದಿಂದ (ಉಪದೇಶ್ಯರಾದ ದೇವತೆಗಳ) ನಾಮ, ಕರ್ಮ, ಕ್ರಮಾದಿಪದಿಗಳು ತಿಳಿಯುವುದರಿಂದ ಕರ್ಮವು ಹುಟ್ಟುತ್ತದೆ. ಅದರಿಂದಲೇ ಸರ್ವಜಗತ್ತೂ ಹುಟ್ಟುತ್ತ

ಮತ್ತೂ ಹುಟ್ಟುತ್ತಿರುತ್ತದೆ. ॥ (b) ಕರ್ಮಾಭಿಮಾನಿಯಾದ ಈ ಜೀವನು ಸರ್ವೋತ್ತಮನೂ ಗುಣಪರಿಪೂರ್ಣನೂ ಆದ ಶ್ರೀಹರಿಗೆ ವಿಶೇಷವಾಗಿ ಆವಾಸಸ್ಥಾನನೆಂದು ಹೇಳಲ್ಪಡುತ್ತಾನೆ. ಆ ಹರಿಯೇ ಇರಾಮಯನು.

**ಭಾ॥** **(a)** ಇಚ್ಛಾನುರೂಪಂ ತು ಸುಖಮಿರೇತ್ಯೇವ ಪ್ರಕೀರ್ತಿತಂ । ಇಚ್ಛಾನಂದಪ್ರಭೂತತ್ವಾತ್ಸ ಏವ ಚ ಹಿರಣ್ಮಯಃ ॥ **(b)** ಹಿರುಕ್ಸುಖಂ ಹಿರಣ್ಯಂ ಸ್ಯಾದ್ಬಾಹ್ಯಾನಂದಾತ್ಪೃಥಗ್ಯತಃ । ಆಧಿಕ್ಯಾರ್ಥೇ ಮಯಡ್ಯಸ್ಮಾದಧಿಕಾನಂದರೂಪತಃ ॥

ಅ ॥ (a) (ಏಕೆಂದರೆ— ಇ, ಎಂಬ ಶಬ್ದವು ಇಚ್ಛಾರ್ಥಕವು. ರ, ಎಂಬ ಶಬ್ದವು ಇಚ್ಛಾನುಗುಣವಾದ ಸುಖಾರ್ಥಕವು. ಅಂತೂ) ಇಚ್ಛಾನುಗುಣವಾದ ಸುಖವೇ 'ಇ. ರ.' ವೆಂದು ಹೇಳಿಸಿ ಕೊಳ್ಳಲ್ಪಡುತ್ತದೆ. (ಮಯಟ್ ಪ್ರತ್ಯವು ಪ್ರಾಚುರ್ಯಾರ್ಥಕವು. ಅಂತೂ) ಇಚ್ಛಾನುಸಾರಿ ಆನಂದ ಪೂರ್ಣನಾದುದರಿಂದಲೇ ಬ್ರಹ್ಮಪದೋಕ್ತನಾದ ಹರಿಯು ಇರಾಮಯನು. ಆತನೇ ಹಿರಣ್ಮಯನೆನ್ನಿಸಿಕೊಳ್ಳಲ್ಪಡುತ್ತಾನೆ. ॥ (b) ಯಾವ ಕಾರಣದಿಂದ'ಹಿರುಕ್'' ಅಂದರೆ ಪೃಥಕ್ ವಿಲಕ್ಷಣವಾದ ಣ್ಯ, ಸುಖವು ಹಿರಣ್ಯವೆನ್ನಿಸಿಕೊಳ್ಳುತ್ತದೆಯೋ, ಯಾವುದರಿಂದ ಮಯಟ್ ಪ್ರತ್ಯಯವು ಪ್ರಾಚುರ್ಯಾರ್ಥದಲ್ಲಿದೆಯೋ ಅದರಿಂದ ಲೌಕಿಕಾನಂದಕ್ಕಿಂತ ವಿಲಕ್ಷಣವಾದ ಪೂರ್ಣಾನಂದ ಸ್ವರೂಪನಾದುದರಿಂದ ಆ ಹರಿಯು ಹಿರಣ್ಮಯನೆನ್ನಿಸಿ ಕೊಳ್ಳಲ್ಪಡುತ್ತಾನೆ.

**ಭಾ** ॥ ಉತ್ಸೃಜ್ಯ ಕರ್ಮಜಂ ರೂಪಂ ನಿಜಾನಂದೈಕರೂಪಕಃ । ಏವಂ ನಾರಾಯಣಂ ಜಾನನ್ಸರ್ವಲೋಕೈಕ ಕಾರಣಂ ॥ ತಲ್ಲೋಕೇ ದೃಶ್ಯತೇ ಭೂತ್ಯೈರ್ಮುಕ್ತೈರಾನಂದರೂಪಕಃ ॥ ೩ ॥

ಅ ॥ ಪೂರ್ವೋಕ್ತರೀತಿಯಾಗಿ ಎಲ್ಲಾ ಲೋಕಗಳಿಗೂ ಮುಖ್ಯಕಾರಣಭೂತನಾದ ನಾರಾಯಣನನ್ನು ತಿಳಿದವನು ಕರ್ಮದಿಂದುಂಟಾದ ಸ್ವರೂಪವನ್ನು ಬಿಟ್ಟು ಸ್ವಕೀಯಾನಂದವೇ ಮುಖ್ಯ ಸ್ವರೂಪವುಳ್ಳವನು (ಮುಕ್ತನು) ಆಗುತ್ತಾನೆ. ಆ ವಿಷ್ಣುವಿನ ಸ್ಥಾನವಾದ ವೈಕುಂಠದಲ್ಲಿ ಮುಕ್ತರಾದ ಬ್ರಹ್ಮಾದಿಗಳಿಂದ ಆನಂದಸ್ವರೂಪವುಳ್ಳವನಾಗಿ ಕಾಣಲ್ಪಡುತ್ತಾನೆ. ॥ ೩ ॥

**ಮಂ ॥ ತಂ ಪ್ರಪದಾಭ್ಯಾಂ ಪ್ರಾಪದ್ಯತ ಬ್ರಹ್ಮೇಮಂ ಪುರುಷಂ ಯತ್ಪ್ರಪದಾಭ್ಯಾಂ ಪ್ರಾಪದ್ಯತ ಬ್ರಹ್ಮೇಮಂ ಪುರುಷಂ ತಸ್ಮಾತ್ಪ್ರಪದೇ ತಸ್ಮಾತ್ಪ್ರಪದೇ ಇತ್ಯಾಚಕ್ಷತೇ ಶಫಾಃ ಖುರಾ ಇತ್ಯನ್ಯೇಷಾಂ ಪಶೂನಾಂ ತದೂರ್ಧ್ವಮುದಸರ್ಪತ್ತಾ ಊರೂ ಅಭವತಾಮುರು ಗೃಣೀಹೀತ್ಯಬ್ರವೀತ್ತದುದರಮಭವದುರ್ವೇವ ಮೇ ಕುರ್ವಿತ್ಯಬ್ರವೀತ್ತದುದರೋಽಭವದುದರಂ ಬ್ರಹ್ಮೇತಿ ಶಾರ್ಕರಾಕ್ಷ್ಯಾ ಉಪಾಸತೇ ಹೃದಯಂ ಬ್ರಹ್ಮೇತ್ಯಾರುಣಯೋ ಬ್ರಹ್ಮಾ ಹೈವ ತಾ ಇ ಊರ್ಧ್ವಂ ತ್ವೇವೋದಸರ್ಪತ್ತಚ್ಛಿರೋಽಶ್ರಯತ ಯಚ್ಛಿರೋಽಶ್ರಯತ ತಚ್ಛಿರೋಽಭವತ್ತಚ್ಛಿರಸಃ ಶಿರಸ್ತ್ವಂ ತಾ ಏತಾಃ ಶೀರ್ಷಂಛ್ರಿಯಃ ಶ್ರಿತಾಶ್ಚಕ್ಷುಃ ಶ್ರೋತ್ರಂ ಮನೋ ವಾಕ್ಪ್ರಾಣಃ ಶ್ರಯಂತೇಽಸ್ಮಿಂಛ್ರಿಯೋ ಯ ಏವಮೇತಚ್ಛಿರಸಃ ಶಿರಸ್ತ್ವಂ ವೇದ ತಾ ಅಹಿಂಸಂತಾಹಮುಕ್ಥಮಸ್ಮ್ಯಹಮುಕ್ಥಮಸ್ಮೀತಿ ತಾ ಅಬ್ರುವನ್ನಹಂತಾಸ್ಮಾಚ್ಛ**

ರೀರಾದುತ್ಕ್ರಾಮಾಮ ತದ್ಯಸ್ಮಿನ್ನ ಉತ್ಕ್ರಾಂತ ಇದಂ ಶರೀರಂ ಪತ್ಸ್ಯತಿ ತದುಕ್ಥಂ ಭವಿಷ್ಯತೀತಿ ವಾಗುದಕ್ರಾಮದವದನ್ನಶ್ನನ್ಪಿಬನ್ನಾಸ್ತೈವ ಚಕ್ಷುರುದಕ್ರಾಮದಪಶ್ಯನ್ನಶ್ನನ್ಪಿಬನ್ನಾಸ್ತೈವ ಶ್ರೋತ್ರಮುದಕ್ರಾಮದಶೃಣ್ವನ್ನಶ್ನನ್ಪಿಬನ್ನಾಸ್ತೈವ ಮನ ಉದಕ್ರಾಮನ್ನಿಮೀಲಿತ ಇವಾಶ್ನನ್ಪಿಬನ್ನಾಸ್ತೈವ ಪ್ರಾಣ ಉದಕ್ರಾಮತ್ತತ್ಪ್ರಾಣ ಉತ್ಕ್ರಾಂತೇಽಪದ್ಯತ ತದಶೀರ್ಯತಾಶಾರೀತೀಲ್ ಶೈ ತಚ್ಛರೀರಮಭವತ್ತಚ್ಛರೀರಸ್ಯ ಶರೀರತ್ವಂ ಶೀರ್ಯತೇ ಹ ವಾ ಅಸ್ಯ ದ್ವಿಷನ್ಪಾಪ್ಮಾ ಭ್ರಾತೃವ್ಯಃ ಪರಾಽಸ್ಯ ದ್ವಿಷನ್ಪಾಪ್ಮಾ ಭ್ರಾತೃವ್ಯೋ ಭವತಿ ಯ ಏವಂ ವೇದ ತಾ ಆಹಿಂಸಂತೇವಾಹಮುಕ್ಥಮಸ್ಮ್ಯಹಮುಕ್ಥಮಸ್ಮೀತಿ ತಾ ಅಬ್ರುವನ್ಹಂತೇದಂ ಪುನಃ ಶರೀರಂ ಪ್ರವಿಶಾಮ ತದ್ಯಸ್ಮಿನ್ನಃ ಪ್ರಪನ್ನ ಇದಂ ಶರೀರಮುತ್ಥಾಸ್ಯತಿ ತದುಕ್ಥಂ ಭವಿಷ್ಯತೀತಿ ವಾಕ್ಪ್ರಾವಿಶದಶಯದೇವ ಚಕ್ಷುಃ ಪ್ರಾವಿಶದಶಯದೇವ ಶ್ರೋತ್ರಂ ಪ್ರಾವಿಶದಶಯದೇವ ಮನಃ ಪ್ರಾವಿಶದಶಯದೇವ ಪ್ರಾಣಃ ಪ್ರಾವಿಶತ್ತತ್ಪ್ರಾಣೇ ಪ್ರಪನ್ನ ಉದತಿಷ್ಠತದುಕ್ಥಮಭವತ್ತದೇತದುಕ್ಥಂ ಪ್ರಾಣ ಏವ ಪ್ರಾಣ ಉಕ್ಥಮಿತ್ಯೇವ ವಿದ್ಯಾತ್ತಂ ದೇವಾ ಅಬ್ರುವಂಸ್ತ್ವಮುಕ್ಥಮಸಿ ತ್ವಮಿದಂ ಸರ್ವಮಸಿ ತವ ವಯಂ ಸ್ಮಸ್ತ್ವಮಸ್ಮಾಕಮಸೀತಿ ತದಪ್ಯೇತದೃಷಿಣೋಕ್ತಂ ತ್ವಮಸ್ಮಾಕಂ ತವ ಸ್ಮಸೀತಿ ॥ ೪ ॥

ಅ ॥ ಬ್ರಹ್ಮ=ವಾಸುದೇವಾಖ್ಯ ಪರಬ್ರಹ್ಮನು, ತಂ=ಆ, (ಜ್ಞಾನಿಗಳಲ್ಲಿ ಪ್ರಧಾನನಾದ) ಇಮಂ ಪುರುಷಂ=ಈ ಚತುರ್ಮುಖನನ್ನು, ಪ್ರಪದಾಭ್ಯಾಂ=ಪಾದಾಗ್ರಗಳಲ್ಲಿ, ಪ್ರಾಪದ್ಯತ=ಹೊಂದಿದನು. (ಆದಿ ಸೃಷ್ಟಿಯಲ್ಲಿ ಶ್ರೀ ಹರಿಯು ಚತುರ್ಮುಖನ ಪಾದಗಳನ್ನು ಪ್ರವೇಶಿಸಿದನು.) ಯತ್=ಯಾವ ಕಾರಣದಿಂದ, ಬ್ರಹ್ಮ=ವಾಸುದೇವನು, ಇಮಂ ಪುರುಷಂ=ಈ ಚತುರ್ಮುಖನನ್ನು, ಪ್ರಪದಾಭ್ಯಾಂ=ಪಾದಗಳಲ್ಲಿ, ಪ್ರಾಪದ್ಯತ=ಹೊಂದಿದನೋ, ತಸ್ಮಾತ್=ಹೊಂದಿದುದರಿಂದ (ಚತುರ್ಮುಖನ ಪಾದಗಳ ಮೇಲಿನ ಭಾಗವನ್ನು) ಪ್ರಪದೇ ಇತಿ=ಪ್ರಪದಗಳನ್ನಾಗಿ, ಆಚಕ್ಷತೇ=(ಜ್ಞಾನಿಗಳು) ಹೇಳುತ್ತಾರೆ. (ಆದುದರಿಂದಲೇ ಚತುರ್ಮುಖನಂತೆ ಪುರುಷರ ಆಕಾರವುಳ್ಳ ಮನುಷ್ಯಾದಿಗಳ ಪಾದಗಳ ಮೇಲಿನ ಭಾಗವನ್ನು ಪ್ರವೃತ್ತಿನಿಮಿತ್ತವಿಲ್ಲದಿದ್ದರೂ ಕೇವಲ ಸಾದೃಶ್ಯದಿಂದಲೇ ಪ್ರಪದಗಳನ್ನಾಗಿ ವಿದ್ವಾಂಸರು ಹೇಳುತ್ತಾರೆ.) ಅನ್ಯೇಷಾಂ=ಪುರುಷರಂತೆ ಆಕಾರವಿಲ್ಲದಿರುವ, ಪಶೂನಾಂ=ಅಶ್ವಾದಿಗಳ (ಪಾದಗಳ ಮೇಲಿನ ಭಾಗವನ್ನು) ಶಫಾಃ ಖುರಾ ಇತಿ=ಗೊರಸುಗಳೆಂದೇ (ವಿದ್ವಾಂಸರು ಹೇಳುತ್ತಾರೆ. ಪ್ರವೃತ್ತಿ ನಿಮಿತ್ತವಿಲ್ಲದಿರುವುದರಿಂದಲೂ ಸಾದೃಶ್ಯವಿಲ್ಲದಿರುವುದರಿಂದಲೂ ಪ್ರಪದಗಳನ್ನಾಗಿ ಹೇಳುವುದಿಲ್ಲ.) ತಪೂರ್ಧ್ವಂ=ಆಮೇಲೆ, ತತ್=ಆ ಬ್ರಹ್ಮನು, ಊರ್ಧ್ವಂ=ಚತುರ್ಮುಖನ ಪ್ರಪದದಿಂದ ಮೇಲೆ (ವಾಯುವಿನಿಂದ ಕೂಡಿಕೊಂಡು,) ಉದಸರ್ಪತ್=ತೊಡೆಯನ್ನು ಸಮೀಪಿಸಿದನು. (ಶ್ರೀ ಹರಿಯು ಪ್ರಪದದಿಂದ ಮೇಲೆ ಹೋದ ಕಾರಣ ಅದನ್ನು ನಿಮಿತ್ತೀಕರಿಸಿಕೊಂಡು) ತೌ=ಚತುರ್ಮುಖಸಂಬಂಧಿಗಳಾದ ಅವಯವ ವಿಶೇಷಗಳು, ಊರೂ= (ಊ ಉರು, ಉರು=ಅತಿಶಯವಾಗಿ, ಊ=ಊರ್ಧ್ವ ಪ್ರದೇಶಕ್ಕೆ ಹೋದಕಾರಣ) ತೊಡೆಗಳು, ಅಭವತಾಂ=ಆದವು. (ಅದರ ಸಾದೃಶ್ಯದಿಂದಲೇ ಮನುಷ್ಯರಲ್ಲಿಯೂ ಆರೀತಿಯಾಗಿ ವ್ಯವಹಾರವು.) (ಆಮೇಲೆ ಸ್ವಲ್ಪ ಮೇಲಿನ ಪ್ರದೇಶ

ವನ್ನು ವಾಯುವಿನೊಡನೇಯೇ ಹೋಗಿ)ಉರು=ಉತ್ಕೃಷ್ಟವಾಗಿ, ಗೃಣೀಹಿ=ಸ್ತೋತ್ರಮಾಡು. ಇತಿ=ಹೀಗೆ, ಅಬ್ರವೀತ್=(ಶ್ರೀ ಹರಿಯು ವಾಯುವಿಗೆ) ಹೇಳಿದನು. (ಆ ವಾಯುದೇವರು ಎಲ್ಲಿದ್ದುಕೊಂಡು ಉತ್ಕೃಷ್ಟ ಸ್ತೋತ್ರಮಾಡುವರೋ) ತತ್=ಆ ಸ್ಥಾನವು, ಉದರಂ=ಉದರ ನಾಮಕವು, ಅಭವತ್=ಆಯಿತು. (ಆ ಮೇಲೆ ರೂಪಾಂತರದಿಂದ ಸ್ವಲ್ಪ ಮೇಲೆ ಹೋಗಿ) ಉರ್ವೇವ=ವಿಸ್ತೃತವಾದ ಆವಾಸ ಸ್ಥಾನವನ್ನೇ, ಮೇ=ನನಗೆ, ಕುರು=ಮಾಡು. ಇತಿ=ಹೀಗೆ, ಅಬ್ರವೀತ್=ಪುನಃ ಹೇಳಿದರು. (ವಾಯುದೇವರು ಹರಿಯ ಆಜ್ಞಾನುಸಾರವಾಗಿ ಅದೇ ರೀತಿಯಾಗಿ ಮಾಡಿದರು. ಆ ಮೇಲೆ) ತತ್=ಆಸ್ಥಾನವು, ಉರಃ=ವಿಸ್ತೃತವಾದುದರಿಂದ ಉರೋನಾಮಕವು, ಅಭವತ್=ಆಯಿತು. (ವಕ್ಷಃಪ್ರದೇಶದ ಮಧ್ಯದಲ್ಲಿ ಹೃದಯವನ್ನು ಮಾಡಿದನು, ಎಂದೂ ತಿಳಿಯತಕ್ಕದ್ದು.) ಶಾರ್ಕರಾಕ್ಷ್ಯಾಃ=ಸೂಕ್ಷ್ಮಜ್ಞಾನಿಗಳಾದ ಮುನಿಗಳು, ಉದರಂ=ಮೇಲೆ ಹೋಗುವುದರಿಂದಲೂ ಚೆನ್ನಾಗಿ ಸ್ತೋತ್ರ ವಿಷಯನಾದುದರಿಂದಲೂ ಉದರನಾಮಕನು, ಉದರದಲ್ಲಿರುವ ವಸ್ತುವನ್ನು, ಬ್ರಹ್ಮೇತಿ=ವಾಸುದೇವಾಖ್ಯ ಪರಬ್ರಹ್ಮನನ್ನಾಗಿ, ಉಪಾಸತೇ=ಧ್ಯಾನಿಸುತ್ತಾರೆ. ಆರುಣಯಃ=ಆರುಣಿನಾಮಕ ಮುನಿಗಳು, ಹೃದಯಂ=ಹೃದಯದಲ್ಲಿರತಕ್ಕ ಮನಸ್ಸಿನಲ್ಲಿ ಸಂಚರಿಸುವುದರಿಂದ ಹೃದಯಶಬ್ದವಾಚ್ಯವಾದವನನ್ನು, ಬ್ರಹ್ಮೇತಿ=ಪರಬ್ರಹ್ಮನನ್ನಾಗಿ (ಧ್ಯಾನಿಸುತ್ತಾರೆ). ತಾಃ ಇ=ಅವೆರಡೂ (ಉದರದಲ್ಲಿಯೂ ಹೃದಯದಲ್ಲಿಯೂ ಇರತಕ್ಕವುಗಳು). ಬ್ರಹ್ಮ ಏವ ಹ=ಪರಬ್ರಹ್ಮನೇ ಸರಿ. (ಸ್ವಲ್ಪ ಭೇದವೂ ಇಲ್ಲ) ಊರ್ಧ್ವಂತು ಏವ=ವಕ್ಷಃಪ್ರದೇಶದಿಂದ ಮೇಲೆಯೇ, ಉದಸರ್ಪತ್=(ಆ ಪರಬ್ರಹ್ಮನು ವಾಯುವಿನಿಂದ ಕೂಡಿಕೊಂಡು) ಹೋದನು. ತತ್=ಮೇಲಕ್ಕೆ ಹೋದ ಬ್ರಹ್ಮನು, ಶಿರಃ=ತಲೆಯನ್ನು, ಅಶ್ರಯತ=ಆಶ್ರಯಿಸಿದನು, (ವಾಯುವಿನಿಂದಲೂ ಇತರ ದೇವತೆಗಳಿಂದಲೂ ಕೂಡಿಕೊಂಡು ಶಿರಸ್ಸಿನಲ್ಲಿದ್ದನು) ಯತ್=ಯಾವ ಕಾರಣದಿಂದ, ಶಿರಃ=ತಲೆಯನ್ನು, ಅಶ್ರಯತ=ಆಶ್ರಯಿಸಿದನೋ, ತತ್=ಆ ಕಾರಣ (ಆ ಅಂಗವು) ಶಿರಃ=ಶಿರೋನಾಮಕವು, ಅಭವತ್=ಆಯಿತು. ತತ್=ಅದೇ, ಶಿರಸಃ=ತಲೆಗೆ, ಶಿರಸ್ತ್ವಂ=ಶಿರಶ್ಶಬ್ದಪ್ರವೃತ್ತಿನಿಮಿತ್ತವು, ತಾ ಏತಾಃ=ಆ ಈ, ಶ್ರಿಯಃ=ಆಶ್ರಯದಿಂದ ಶ್ರೀಶಬ್ದವಾಚ್ಯರಾದ, ಚಕ್ಷುಃ, ಶ್ರೋತ್ರಂ, ಮನಃ, ವಾಕ್, ಪ್ರಾಣಃ, ಇವರೇ ಮೊದಲಾದ ದೇವತೆಗಳು, ಶೀರ್ಷನ್=(ಚತುರ್ಮುಖನ) ಶಿರಸ್ಸಿನಲ್ಲಿ, ಶ್ರಿತಾಃ=ಆಶ್ರಿತರಾಗಿದ್ದಾರೆ. (ಹೀಗೆಯೇ ಎಲ್ಲಾ ಪ್ರಾಣಿಗಳ ಶಿರಸ್ಸುಗಳಲ್ಲಿಯೂ ಈ ದೇವತೆಗಳು ಆಶ್ರಿತರಾಗಿ ವಿಷ್ಣುವನ್ನು ಧ್ಯಾನಿಸುತ್ತಿದ್ದಾರೆ.) ಯಃ=ಯಾವ ಅಧಿಕಾರಿಯು ಏವಂ=ಈ ಪ್ರಕಾರವಾಗಿ, ಶಿರಸಃ=ಶಿರಸ್ಸಿಗೆ, ಏತತ್=ಪೂರ್ವೋಕ್ತವಾದ, ಶಿರಸ್ತ್ವಂ=ಶಿರಶ್ಶಬ್ದಪ್ರವೃತ್ತಿ ನಿಮಿತ್ತವನ್ನು, ವೇದ=ತಿಳಿಯುತ್ತಾನೋ, ಅಸ್ಮಿನ್=ಈತನಲ್ಲಿ, ಶ್ರಿಯಃ=ಸಂಪತ್ತುಗಳು, ಶ್ರಯಂತೇ=ಆಶ್ರಯಿಸಿ ಕೊಂಡಿರುತ್ತಾವೆ. ಅಹಂ=ನಾನು, ಉಕ್ಥಂ=ಶ್ರೇಷ್ಠನು, ಅಸ್ಮಿ=ಆಗಿರುತ್ತೇನೆ, ಅಹಂ=ನಾನು, ಉಕ್ಥಂ-ಅಸ್ಮಿ-ಇತಿ=ಹೀಗೆ, ತಾಃ=ಆ ಚಕ್ಷುರಾದಿ ದೇವತೆಗಳು, ಅಹಿಂಸಂತ=ಮಾತಿನಿಂದ ಹಿಂಸೆಯನ್ನು ಮಾಡಿಕೊಂಡರು, (ಪರಸ್ಪರವಾಗಿ ಜಗಳ ಮಾಡಿಕೊಂಡರು). (ಇದನ್ನು ನಿಶ್ಚಯಿಸುವ ಬಗ್ಗೆ, ಶ್ರೀ ಹರಿಯ ಆಜ್ಞಾನುಸಾರವಾಗಿ) ತಾಃ=ಆ ದೇವತೆಗಳು, ಅಸ್ಮಾತ್=ಈ ಚತುರ್ಮುಖ ಸಂಬಂಧಿಯಾದ, ಶರೀರಾತ್=ದೇಹದಿಂದ, ಉತ್ಕ್ರಾಮಾಮ=ಹೊರಟು ಹೋಗುವ, ಹಂತ=ಹರ್ಷವೂ, ತತ್=ಆ, ನಃ=ನಮ್ಮ ಪೈಕಿ, ಯಸ್ಮಿನ್=ಯಾವ ದೇವತೆಯು, ಉತ್ಕ್ರಾಂತೇ=ಹೊರಟು ಹೋಗುತ್ತಿರಲು, ಇದಂ ಶರೀರಂ=ಈ ಶರೀರವು, ಪತ್ಸ್ಯತಿ=ಬೀಳುವುದೋ, ತತ್=ಆ ದೇವತೆಯು, ಉಕ್ಥಂ=ಶ್ರೇಷ್ಠನು, ಭವಿಷ್ಯತಿ=ಆಗುವನು. ಇತಿ=ಈ ಪ್ರಕಾರವಾಗಿ, ಅಬ್ರುವನ್=ಹೇಳಿದರು. (ಹೀಗೆ ಸಂಕೇತವನ್ನು ಮಾಡಿಕೊಂಡಮೇಲೆ ಆ ದೇವತೆಗಳ ಮಧ್ಯ

ದಲ್ಲಿ ಪ್ರಥಮದಲ್ಲಿ) ವಾಕ್=ವಾಗಭಿಮಾನಿಯಾದ ವಹ್ನಿಯು, ಉದಕ್ರಾಮತ್=(ಬ್ರಹ್ಮನ ಶರೀರ ದಿಂದ) ಹೊರಟು ಹೋದನು. (ಆಗ ಆ ಶರೀರವು ವಾಗಿಂದ್ರಿಯವಿಲ್ಲದೆ ಇರುವುದರಿಂದ) ಅವ ದನ್=ಮಾತನು ಮಾತ್ರ ಆಡದೆ ಇದ್ದದ್ದಾಗಿ, ಅಶ್ನನ್=ತಿನ್ನುವುದಾಗಿ, ಪಿಬನ್=ಪಾನಮಾ ಡುವುದಾಗಿ, ಆಸ್ತ ಏವ=ಇರುತ್ತಿತ್ತು. ಚಕ್ಷುಃ=ಚಕ್ಷುರಭಿಮಾನಿಯಾದ ಸೂರ್ಯನು, ಉದ ಕ್ರಾಮತ್=ಅಪಶ್ಯನ್=ನೋಡದೆ ಇದ್ದದ್ದಾಗಿ, ಅಶ್ನನ್-ಪಿಬನ್-ಆಸ್ತ ಏವ-, ಶ್ರೋತ್ರಂ= ಶ್ರೋತ್ರಾಭಿಮಾನಿಯಾದ ಚಂದ್ರನು, ಉದಕ್ರಾಮತ್-ಅಶೃಣ್ವನ್= (ಕಿವುಡನಾಗಿ) ಕೇಳದೆ ಇದ್ದವನಾಗಿ, ಅಶ್ನನ್-ಪಿಬನ್-ಆಸ್ತ ಏವ-ಮನಃ=ಮನೋಽಭಿಮಾನಿಯು, ಉದಕ್ರಾಮತ್- ಮೀಲಿತ ಇವ=ಮುಚ್ಚಲ್ಪಟ್ಟ ಕಣ್ಣುಳ್ಳವನಂತೆ, (ಪ್ರತಿಭಾಶೂನ್ಯನಾದವನಂತೆ) ಅಶ್ನನ್-ಪಿಬನ್- ಆಸ್ತ ಏವ-ಪ್ರಾಣಃ=ವಾಯುದೇವರು, ಉದಕ್ರಾಮತ್-ತತ್=ಆ ಶರೀರವು, ಪ್ರಾಣೇ= ಮುಖ್ಯಪ್ರಾಣನು, ಉತ್ಕ್ರಾಂತೇ=ಹೊರಟು ಹೋದೊಡನೆ, ಅಪದ್ಯತ=ಬಿತ್ತು. ತತ್=ಆ ಶರೀರವು, ಅಶೀರ್ಯತ=ಶಿಥಿಲೋನ್ಮುಖವಾಯಿತು. (ಯಾವ ಕಾರಣದಿಂದ ಈ ಶರೀರವು) ಅಶಾರಿ=ಶಿಥಿಲೋನ್ಮುಖವಾಯಿತೋ, ಇತಿ=ಆ ಕಾರಣದಿಂದ, ತತ್=ಅದು, ಶರೀರಂ=ಶರೀರ ನಾಮಕವು, ಅಭವತ್=ಆಯಿತು ತತ್=ಅದೇ, (ಶಿಥಿಲತನವೇ) ಶರೀರಸ್ಯ=ಶರೀರಕ್ಕೆ, ಶರೀರತ್ವಂ=ಶರೀರಶಬ್ದಪ್ರವೃತ್ತಿನಿಮಿತ್ತವು. ಯಃ=ಯಾವಾತನು, ಏವಂ=ಪೂರ್ವೋಕ್ತಪ್ರಕಾರ ವಾಗಿ, ವೇದ=ತಿಳಿಯುತ್ತಾನೋ, ಅಸ್ಯ=ಪ್ರಾಣಮಾಹಾತ್ಮ್ಯವನ್ನು ತಿಳಿದವನ, ದ್ವಿಷನ್= ದ್ವೇಷಿಯಂತಿದ್ದ, ಭ್ರಾತೃವ್ಯಃ=ಶತ್ರುಭೂತವಾದ, ಪಾಪ್ಮಾ=ಪಾಪವು, ಶೀರ್ಯತೇ ಹ ವೈ= ನಿಶ್ಚಯವಾಗಿ ನಾಶವಾಗುತ್ತದೆ. ಅಸ್ಯ=ಈತನ, ದ್ವಿಷನ್=ದ್ವೇಷಿಯಾದ, ಪಾಪ್ಮಾ=ಪಾಪಿ ಯಾದ, ಭ್ರಾತೃವ್ಯಃ=ಶತ್ರುವು, ಪರಾಭವತಿ=ನರಕಪ್ರಾಪ್ತಿರೂಪ ಪರಾಜಯವನ್ನು ಹೊಂದು ತ್ತಾನೆ. ತಾಃ=ಆ ದೇವತೆಗಳು, ಅಹಂ, ಉಕ್ಥಂ, ಅಸ್ಮಿ, ಅಹಂ, ಉಕ್ಥಂ, ಅಸ್ಮಿ, ಇತಿ= ಹೀಗೆಯೇ, ಅಹಿಂಸಂತ ಇವ=ಜಗಳವನ್ನು ಮಾಡಿಕೊಂಡರು. * ಇದಂ ಶರೀರಂ=ಈ ಶರೀ ರವನ್ನು, ಪುನಃ=ಮತ್ತು, ಪ್ರವಿಶಾಮ=ಪ್ರವೇಶಿಸುವ, ತತ್=ಆ, ನಃ=ನಮ್ಮ ಪೈಕಿ, ಯಸ್ಮಿನ್= ಯಾರು, ಪ್ರಪನ್ನೇ=ಪ್ರವೇಶಿಸುತ್ತಿರಲು, ಇದಂ, ಶರೀರಂ=ಈ ಶರೀರವು, ಉತ್ಥಾಸ್ಯತಿ=ಏಳು ವುದೋ, ತತ್=ಅದು, ಉಕ್ಥಂ=ಶ್ರೇಷ್ಠವು, ಭವಿಷ್ಯತಿ=ಆಗುವುದು. ಇತಿ=ಹೀಗೆ, ತಾಃ=ಆ ದೇವತೆಗಳು, ಅಬ್ರುವನ್=ಹೇಳಿದರು. ಹಂತ=ಹರ್ಷವು. ವಾಕ್=ವಾಗಭಿಮಾನಿಯು, ಪ್ರಾವಿ ಶತ್=(ದೇಹವನ್ನು)ಪ್ರವೇಶಿಸಿದನು. ಅಶಯದೇವ=(ಶರೀರವು)ಮಲಗಿಕೊಂಡೇ ಇತ್ತು. ಚಕ್ಷುಃ= ಚಕ್ಷುರಭಿಮಾನಿಯು, ಪ್ರಾವಿಶತ್, ಅಶಯದೇವ, ಶ್ರೋತ್ರಂ, ಪ್ರಾವಿಶತ್, ಅಶಯದೇವ, ಮನಃ, ಪ್ರಾವಿಶತ್, ಅಶಯದೇವ, ಪ್ರಾಣಃ, ಪ್ರಾವಿಶತ್, ಪ್ರಾಣೇ=ಮುಖ್ಯಪ್ರಾಣನು, ಪ್ರಪನ್ನೇ=(ಶರೀರವನ್ನು) ಹೊಂದುತ್ತಿರಲು, ತತ್=ಆ ಶರೀರವು, ಉದತಿಷ್ಠತ್=ಎದ್ದಿತು. (ಆಕಾರಣ) ತತ್=ಆ ಪ್ರಾಣನು, ಉಕ್ಥಂ=ಸರ್ವಶ್ರೇಷ್ಠನು, ಅಭವತ್=ಆದನು. ತತ್=ಆ (ತಾನು ಹೊರಟೊಡನೆ ಶರೀರದ ಪತನಕ್ಕೆ ಕಾರಣನಾದ) ಏತತ್=ಈ, (ತಾನು ಪ್ರವೇಶಿಸಿದೊ ಡನೆ ಶರೀರದ ಉತ್ಥಿತಿಗೆ ಕಾರಣನಾದ) ಉಕ್ಥಂ=ಸರ್ವಶ್ರೇಷ್ಠನು, ಪ್ರಾಣ ಏವ=ಮುಖ್ಯಪ್ರಾ ಣನೇ ಸರಿ. (ಅಧಿಕಾರಿಯು) ಪ್ರಾಣಃ=ಮುಖ್ಯಪ್ರಾಣನು, ಉಕ್ಥಮಿತ್ಯೇವ=ಸರ್ವಶ್ರೇಷ್ಠನೆಂದೇ,

---

* ಪೂರ್ವೋಕ್ತ ರೀತಿಯಾಗಿ ವಾಯುದೇವರು ಚತುರ್ಮುಖನ ಶರೀರದಿಂದ ಹೊರಟೊಡನೆ ಶರೀರವು ಬಿದ್ದುದರಿಂದ ವಾಯುದೇವರಿಗೆ ಉತ್ತಮತ್ವಸಿದ್ಧವಾದರೂ ಇದು ಯದೃಚ್ಛಾಕಲ್ಪಿತವೆಂಬೀ ದುರಭಿಪ್ರಾಯ ದಿಂದ ನಾನೇ ಉತ್ತಮನು, ನಾನೇ ಉತ್ತಮನೆಂದು ದೇವತೆಗಳು ಕಾದಾಡಿ ಕೊಂಡರು,

ವಿದ್ಯಾತ್=ಉಪಾಸನೆ ಮಾಡತಕ್ಕದು. (ಹೀಗೆ ಎರಡು ವಿಧ ಪರೀಕ್ಷೆಯಾದ ಮೇಲೆ ಸಂಶಯ ವನ್ನು ಹೋಗಲಾಡಿಸಿಕೊಂಡ) ದೇವಾಃ=ರುದ್ರಾದಿದೇವತೆಗಳು, ತಂ=ಆ ಪ್ರಾಣನನ್ನು ಕುರಿತು, ತ್ವಂ=ನೀನು, ಉಕ್ಥಂ=ಸರ್ವಶ್ರೇಷ್ಠನು, ಗುಣಾಧಿಕನು, ಅಸಿ=ಆಗಿರುತ್ತಿ. ತ್ವಂ=ನೀನೇ, ಇದಂ ಸರ್ವಂ=ಈ ಎಲ್ಲವೂ, ಅಸಿ=ಆಗಿರುತ್ತಿ. (ಎಲ್ಲಾ ನಮ್ಮ ದರ್ಶನಾದಿ ರೂಪವ್ಯಾಪಾರ ಗಳಿಗೆ ನೀನೇ ನಿಯಾಮಕನಾಗಿರುತ್ತಿ.) ವಯಂ=ನಾವೆಲ್ಲರೂ, ತವ=ನಿನ್ನ, (ಭೃತ್ಯರು)ಸ್ಮಃ= ಆಗಿರುತ್ತೇವೆ. ತ್ವಂ=ನೀನೇ, ಅಸ್ಮಾಕಂ=ನಮ್ಮೆಲ್ಲರಿಗೂ, ಅಸಿ=(ಸ್ವಾಮಿಯು) ಆಗಿರುತ್ತಿ. ಇತಿ=ಹೀಗೆ, ಅಬ್ರುವನ್,=ಹೇಳಿದರು. ತದಸ್ಯೈತತ್=ಆ ಈ ಪ್ರಮೇಯವು, ಋಷಿಣಾ= ಮಂತ್ರದ್ರಷ್ಟೃವಿನಿಂದ, ತ್ವಂ=ನೀನು, ಅಸ್ಮಾಕಂ, ಅಸಿ, ತವ=ನಿನ್ನ, ಸ್ಮ=ಭೃತ್ಯರಾಗಿದ್ದೇವೆ. ಇತಿ=ಹೀಗೆ, ಉಕ್ತಂ=ಹೇಳಲ್ಪಟ್ಟದೆ. ಸಂಪೂರ್ಣ ಮಂತ್ರವು ಈ ರೀತಿಯಾಗಿ ತಿಳಿದುಕೊಳ್ಳ ತಕ್ಕದು. 'ತ್ವಯೇದಿಂದ್ರ ಯುಜಾ ವಯಂ ಪ್ರತಿಬ್ರುವೀಮಹಿ ಸ್ಪೃಧಃ ॥ ತ್ವಮಸ್ಮಾಕಂ ತವ ಸ್ಮ ಸೀತಿ ॥' ಹೇ ಇಂದ್ರ=ಪರಮೈಶ್ವರ್ಯಯುಕ್ತನಾದ ವಾಯುವೇ, ಯುಜಾ=ನಿಯಾಮಕನಾಗಿ ನಮ್ಮ ಒಟ್ಟಿಗೆಯಿದ್ದ, ತ್ವಯೇತ್=ನಿನ್ನಿಂದಲೇ (ನಿನ್ನ ಸಾಮರ್ಥ್ಯದಿಂದಲೇ) ಸ್ಪೃಧಃ=ಸ್ಪರ್ಧೆ ಯುಳ್ಳ ನಾವು, ಪ್ರತಿಬ್ರುವೀಮಹಿ=ಪ್ರತ್ಯುತ್ತರವನ್ನು ಕೊಡುತ್ತೇವೆ. ತ್ವಂ, ಅಸ್ಮಾಕಂ, ಅಸಿ, ತವ, ಸ್ಮ, ॥ ೪ ॥

ಭಾ॥ (a) ತಮಿಮಂ ಪ್ರಥಮಜ್ಞಾನಿಪುರುಷಂ ಚತುರಾನನಂ । ವಾಸುದೇವಾಭಿಧಂ ಬ್ರಹ್ಮ ಪ್ರಾಪ ಪ್ರಪದಯೋಃ ಪುರಾ ॥ (b) ಯಸ್ಮಾತ್ಪ್ರಪೇದೇ ಭಗವಾನ್ಪ್ರಪದಾಚ್ಚತುರಾನನಂ । ತಸ್ಮಾತ್ಪ್ರಪದನಾದೇವ ಪ್ರಪದಂ ನಾಮ ಕೀರ್ತಿತಂ ॥ (c) ಚತುರ್ಮುಖಾಕಾರವತಾಂ ನೃಣಾಂ ಪಾದತಲೋಪರಿ । ಪ್ರಪದಾಖ್ಯಾ ವರ್ತತೇಽತೋ ನ ತು ಪಶ್ವಾದಿನಾಂ ಕ್ವಚಿತ್ ॥

ಅ ॥ (a) ಆ ಈ ಶ್ರೀಹರಿಯಿಂದ ಪ್ರಥಮತಃ ಹುಟ್ಟಿದವನೂ ಆತನಿಗೆ ಮುಖ್ಯವಾಸ ಭೂತನೂ ಆತನನ್ನು ಮುಖ್ಯವಾಗಿ ತಿಳಿಯತಕ್ಕವನೂ ಈ ರೀತಿಯಾಗಿ ಹೇಳಲ್ಪಟ್ಟ ಜ್ಞಾನಿಗಳಲ್ಲಿ ಪ್ರಧಾನನೂ ಪುರುಷಶಬ್ದವಾಚ್ಯನೂ ಆದ ಚತುರ್ಮುಖನನ್ನು ವಾಸುದೇವನೆಂದು ಹೆಸರುಳ್ಳ ಪರ ಬ್ರಹ್ಮನು ಪೂರ್ವದಲ್ಲಿ (ಆದಿ ಸೃಷ್ಟಿಯಲ್ಲಿ) ಪಾದಾಗ್ರಗಳಲ್ಲಿ ಹೊಂದಿದನು. ॥ ಶ್ರೀಹರಿಯು ಚತುರ್ಮುಖನ ಪಾದಗಳಲ್ಲಿ ಪ್ರವೇಶಿಸಿದನು.) ॥ (b)ಯಾವ ಕಾರಣದಿಂದ ಶ್ರೀಹರಿಯು ಚತುರ್ಮುಖನನ್ನು ಪಾದಾಗ್ರದಿಂದ ಹೊಂದಿದನೋ ಆದುದರಿಂದ ಹೊಂದಿದುದರಿಂದಲೇ ಅದು ಪ್ರಪದ ವೆಂದು ಹೇಳಲ್ಪಟ್ಟಿತು. ॥ (c) (ಆದುದರಿಂದಲೇ) ಚತುರ್ಮುಖನ ಆಕಾರದಂತೆ ಆಕಾರವುಳ್ಳ ಮನುಷ್ಯರ ಪಾದಪ್ರದೇಶದ ಮೇಲಿನ ಭಾಗದಲ್ಲಿ ಪ್ರಪದವೆಂಬೀ ಹೆಸರು ಇರುತ್ತದೆ. ಪ್ರವೃತ್ತಿ ನಿಮಿತ್ತವಿಲ್ಲದಿರುವುದರಿಂದಲೇ ಪಶುಪಕ್ಷ್ಯಾದಿಗಳ (ಪಾದಪ್ರದೇಶದ ಮೇಲಿನ ಭಾಗಕ್ಕೆ ಪ್ರಪದ ವೆಂಬೀ ಹೆಸರು) ಎಲ್ಲಿಯೂ ಇಲ್ಲ.

ಭಾ॥ (a) ಅದೂಯಾರ್ಧ್ವಂ ತತೋ ವಿಷ್ಣುಃ ಪ್ರಪದಾದೂರುಮತ್ರ ಚ । ಸ್ಥಿತ ಊರೂ ಚ ತಾವಾಸ್ತಾಮೂರೂರ್ಧ್ವಗಮನಾದ್ಧರೇಃ ॥ (b) ಕಿಂಚಿದೂರ್ಧ್ವಂ ತತೋ ಗತ್ವಾ ವಾಯುನಾ ಸಹ ಕೇಶವಃ । ವಾಯುಮಾಹೋರುಗರಣಂ ಕುರ್ವತ್ರ ಸ್ಥಿತ ಇತ್ಯಪಿ ॥ (c) ಉರ್ವೇವ

ಗರಣಂ ಚಕ್ರೇ ವಾಯುರ್ಯತ್ರ ಸ್ಥಿತಃ ಸದಾ । ತತ್ಥಾನಮುದರಂ ನಾಮ (d) ಪುನರಾಹ ಜನಾರ್ದನಃ ॥ ಉರುಸ್ಥಾನಂ ನಿವಾಸಂ ಮೇ ಕುರು ವಿಸ್ತಾರಸಂಯುತಂ । ತಥಾಽಕರೋತ್ಸ ವಾಯುಶ್ಚ (e) ತದುರೋಽಭೂದುರುತ್ವತಃ ॥ ಉರೋಮಧ್ಯೇ ಚ ಹೃದಯಂ ತತ್ರಾವಾಸೋ ಹರೇಃ ಸದಾ ॥

ಅ ॥ (a)ಆ ಮೇಲೆ ಶ್ರೀಹರಿಯು ಚತುರ್ಮುಖನ ಪಾದಾಗ್ರದಿಂದ ಮೇಲು ಭಾಗವಾದ ಊರುಪ್ರದೇಶವನ್ನು ಕುರಿತು ಹೋದನು. ಪಾದಾಗ್ರದಲ್ಲಿಯೂ ಸನ್ನಿಹಿತನಾಗಿಯೇ ಇರುತ್ತಾನೆ. ಶ್ರೀಪರಮಾತ್ಮನು (ಊ=ಉರು=ಊರ್ಧ್ವಗಮನ, ಅತಿಶಯವಾಗಿ) ಅತಿಶಯವಾಗಿ ಮೇಲಿನ ಪ್ರದೇಶವನ್ನು ಕುರಿತು ಹೋದುದರಿಂದ ಚತುರ್ಮುಖ ಸಂಬಂಧಿಗಳಾದ ಅವಯವವಿಶೇಷಗಳು ಊರುನಾಮಕಗಳಾದುವು. ॥ (b) ಆ ಮೇಲೆ ಸ್ವಲ್ಪ ಮೇಲು ಭಾಗವನ್ನು ಕುರಿತು ವಾಯುದೇವರಿಂದ ಕೂಡಿ ಕೊಂಡೇ ಹೋಗಿ ಉತ್ಕೃಷ್ಟವಾಗಿ ಸ್ತೋತ್ರಮಾಡು. ಇಲ್ಲಿ ಸನ್ನಿಹಿತನೂ ಆಗು. ಎಂದು ವಾಯುವಿಗೆ ಹರಿಯು ಹೇಳಿದನು. ॥ (c) ಆ ವಾಯುವು ಯಾವ ಪ್ರದೇಶದಲ್ಲಿ ಇದ್ದವನಾಗಿ ಉತ್ಕೃಷ್ಟವಾಗಿಯೇ ಯಾವಾಗಲೂ ಸ್ತೋತ್ರವನ್ನು ಮಾಡಿದನೋ ಆ ಸ್ಥಾನವು ಉದರವೆಂದು ಪ್ರಸಿದ್ಧವಾಯಿತು. ॥ (d) ಪುನಃ ಜನಾರ್ದನನು ಉತ್ಕೃಷ್ಟವಾಗಿಯೂ ವಿಸ್ತಾರದಿಂದೊಡಗೂಡಿಯೂ ಇದ್ದ ಆವಾಸಸ್ಥಾನವನ್ನು ನನಗೋಸ್ಕರ ಮಾಡು ಎಂದನು. ಆ ವಾಯುದೇವರು (ಭಗವದಾಜ್ಞಾನುಸಾರವಾಗಿ) ಅದೇ ರೀತಿಯಾಗಿ ಮಾಡಿದನು. ॥ (e) ಆ ಸ್ಥಾನವು ವಿಸ್ತೃತವಾದುದರಿಂದ ಉರೋ ನಾಮಕವಾಯಿತು. ವಕ್ಷಃ ಪ್ರದೇಶದ ಮಧ್ಯದಲ್ಲಿಯಾದರೂ ಹೃದಯವನ್ನು ಮಾಡಿದನು. ಆ ಹೃದಯದಲ್ಲಿಯೇ ಶ್ರೀ ಹರಿಗೆ ಸದಾ ಆವಾಸವು. (ಹೃದಯದಲ್ಲಿಯೇ ಪರಮಾತ್ಮನು ಸದಾ ಆವಾಸಿಸುವನು).

ಭಾ॥ (a) ಸೂಕ್ಷ್ಮದೃಷ್ಟಿಯುತಾ ಯೇ ತು ಮುನಯಃ ಶಾರ್ಕರಾಕ್ಷ್ಯಕಾಃ । ಉದರೇ ತೇ ಪರಂ ಬ್ರಹ್ಮ ವಾಸುದೇವಮುಪಾಸತೇ ॥ (b) ಹೃಸ್ಸ್ಥಮೇವ ಪರಂ ವಿಷ್ಣುಂ ಧ್ಯಾಯಂತ್ಯಾರುಣಯಃ ಸದಾ । ಉದರಸ್ಥಂ ಚ ಹೃದ್ಗಂ ಚ ತೇ ಉಭೇ ಬ್ರಹ್ಮ ತತ್ಪರಂ ॥ ಏಕಮೇವ ಯತಸ್ತಸ್ಮಾದುಭಯೇ ಹ್ಯಪಿ ತದ್ವಿದಃ ॥

ಅ ॥ (a) ಯಾವ ಮುನಿಗಳು ಸೂಕ್ಷ್ಮಜ್ಞಾನದಿಂದೊಡಗೂಡಿರುವರೋ (ಅವರು ಶರ್ಕರಾ=ಸೂಕ್ಷ್ಮಪಾಷಾಣಗಳಂತೆ, ಅಕ್ಷಿ=ಸೂಕ್ಷ್ಮಜ್ಞಾನವುಳ್ಳವರಾದುದರಿಂದ) ಶಾರ್ಕರಾಕ್ಷರೆನ್ನಿಸಿಕೊಳ್ಳಲ್ಪಡುತ್ತಾರೆ. ಅವರು ಉದರದಲ್ಲಿರತಕ್ಕ ಉದರ ನಾಮಕನಾದ ವಾಸುದೇವಾಖ್ಯ ಪರಮಾತ್ಮನನ್ನು ಧ್ಯಾನಿಸುತ್ತಾರೆ. ॥ (b) ಆರುಣಿಗಳೆಂದು ಪ್ರಸಿದ್ಧರಾದ ಮುನಿಗಳು ಹೃದಯದಲ್ಲಿರತಕ್ಕ ಸರ್ವೋತ್ತಮನಾದ ವಿಷ್ಣುವನ್ನೇ ಸರ್ವದಾ ಧ್ಯಾನಿಸುತ್ತಾರೆ. ಯಾವ ಕಾರಣದಿಂದ ಉದರದಲ್ಲಿರತಕ್ಕುದೂ, ಹೃದಯದಲ್ಲಿರತಕ್ಕುದೂ ಆವೆರಡೂ ಅದ್ವಿತೀಯನೂ ಸರ್ವೋತ್ತಮನೂ ಆದ ಪರಬ್ರಹ್ಮವೇ ಎಂದು ಪ್ರಸಿದ್ಧವೋ, ಆದುದರಿಂದ ಶಾರ್ಕರಾಕ್ಷ, ಅರುಣಿ ಎಂಬೀ ಇಬ್ಬರು ಮುನಿಗಳೂ ಕೂಡಾ ಆ ಭಗವತ್ಸ್ವರೂಪವನ್ನು ತಿಳಿದವರೇ.

ಭಾ॥ (a) ತತ ಊರ್ಧ್ವಂ ಗತೋ ವಿಷ್ಣುರ್ವಾಯುನಾ ಸಹ ದೈವತೈಃ । ಸ್ಥಿತೋ ಮೂರ್ಧನಿ ದೇವೇಶಃ ಶ್ರಿತೋಽಸಾವಿತಿ ತಚ್ಛಿರಃ ॥ (b) ತತ್ರ ಪ್ರಾಣಾ

ತ್ಮನಾ ವಾಯುರ್ಮನೋರೂಪೇಣ ಶಂಕರಃ । ಶೇಷಃ ಸುಪರ್ಣ ಇಂದ್ರಶ್ಚ ಮನಾಂಸ್ಯೇವ ಪೃಥಕ್ಪೃಥಕ್ ॥ (c) ಅಹಂಭಾವಮನೋ ರುದ್ರಃ ಶೇಷೋಽಸೌ ಪಾಂಚರಾತ್ರಕಂ । ವೈದಿಕಂ ಗರುಡಶ್ಚೇಂದ್ರೋ ಯಜ್ಞಾದಿ ವಿಷಯಂ ಮನಃ ॥ (d) ಶ್ರೋತ್ರಂ ಚಂದ್ರೋ ರವಿಶ್ಚಕ್ಷುರ್ವಾಗಗ್ನಿಃ ಪರಿಕೀರ್ತಿತಃ ।

ಅ ॥ (a) ಆ ಮೇಲೆ ವಿಷ್ಣುವು ವಕ್ಷಃಪ್ರದೇಶದಿಂದ ಮೇಲುಭಾಗವಾದ ಶಿರಸ್ಸನ್ನು ವಾಯುವಿನಿಂದ ಕೂಡಿಕೊಂಡು ಹೋದನು. ಆ ಶಿರಸ್ಸಿನಲ್ಲಿ ದೇವತೆಗಳಿಗೆ ನಿಯಾಮಕನಾದ ಶ್ರೀಹರಿಯು ವಾಯ್ವಾದಿ ದೇವತೆಗಳಿಂದ ಕೂಡಿಕೊಂಡು ಇರುತ್ತಿದ್ದಾನೆ. (ಈ ಹರಿಯು ಯಾವ ಕಾರಣದಿಂದ ಶಿರಸ್ಸನ್ನು) ಆಶ್ರಯಿಸಿದನೋ ಅದರಿಂದ ಆ ಅಂಗವು ಶಿರಸ್ಸೆಂದು ಹೇಳಲ್ಪಟ್ಟಿತು. ॥ (b) ಆ ಶಿರಸ್ಸಿನಲ್ಲಿ ವಾಯುವು ಪ್ರಾಣಾಭಿಮಾನಿಯಾಗಿಯೂ ಪ್ರಾಣನಾಮಕನಾಗಿಯೂ ಇದ್ದು ವಿಷ್ಣುವನ್ನು ಧ್ಯಾನಿಸುತ್ತಾನೆ. (ಮೇಲೆಯೂ ಇದೇ ರೀತಿಯಾಗಿ ತಿಳಿದುಕೊಳ್ಳತಕ್ಕದ್ದು) ರುದ್ರನು ಮನೋಽಭಿಮಾನಿಯಾಗಿದ್ದಾನೆ. ಶೇಷಗರುಡೇಂದ್ರರು ಪ್ರತ್ಯೇಕ ಪ್ರತ್ಯೇಕವಾಗಿ ಮನೋಽಭಿಮಾನಿಗಳೇ. ॥ (c) (ಇವರಲ್ಲಿ) ರುದ್ರನು-ಅಹಂಕಾರವಿಷಯಕ ಮನೋಽಭಿಮಾನಿಯು. ಈ ಶೇಷನು-ಪಂಚರಾತ್ರಾಗಮ ವಿಷಯಕ ಮನೋಽಭಿಮಾನಿಯು. ಗರುಡನು-ಋಗಾದಿ ವೇದ ವಿಷಯಕ ಮನೋಽಭಿಮಾನಿಯು. ದೇವೇಂದ್ರನು-ಯಾಗಾದಿ ವಿಷಯಕ ಮನೋಽಭಿಮಾನಿಯು. ॥ (d) ಚಂದ್ರನು-ಕಿವಿಗಧಿಪತಿಯು, ಸೂರ್ಯನು-ಕಣ್ಣಿಗಧಿಪತಿಯು, ಅಗ್ನಿಯು-ವಚನಾಧಿಪತಿಯು ಎಂತಲೂ ಹೇಳಲ್ಪಟ್ಟಿದ್ದಾರೆ.

ಭಾ॥ (a) ಏತೇ ದೇವಾಸ್ತದನ್ಯೇ ಚ ಸರ್ವಪ್ರಾಣಿಷು ಸಂಸ್ಥಿತಾಃ । ಉಪಾಸತೇ ಮಹಾವಿಷ್ಣುಂ ಪರಮಾತ್ಮಾನಮಚ್ಯುತಂ ॥ (b) ವಾಚಾ ಹಿಂಸಾಮಕುರ್ವಂಸ್ತೇ ವಿನಿಂದಂತಃ ಪರಸ್ಪರಂ । ತೇ ವಿಷ್ಣೋರಾಜ್ಞಯಾಽವೋಚ (c) ನ್ನುತ್ಕ್ರಾಮಾಮ ಪೃಥಕ್ಪೃಥಕ್ ॥ ದೇಹಾದಬ್ಜಭವಸ್ಯಾಸ್ಮಾದ್ಯಸ್ಮಿನ್ನುತ್ಕ್ರಾಂತ ಏವ ಹಿ । ಶರೀರಂ ಪದ್ಯತೇ ಶ್ರೇಯಾನ್ಸ ಇತ್ಯವಧಾರ್ಯತಾಂ ॥ (d) ತತಃ ಕ್ರಮೇಣ ಚಾಗ್ನ್ಯಾದ್ಯಾ ನಿಷ್ಕ್ರಾಂತಾಸ್ತೇಷು ಸರ್ವಶಃ । ನಿಷ್ಕ್ರಾಂತೇಷು ನ ವೈ ಪಾತಃ ಶರೀರಸ್ಯಾಭವತ್ಕ್ವಚಿತ್ । ವಾಯಾವುತ್ಕ್ರಾಂತ ಏವೈತಚ್ಛರೀರಮುಪತತ್ಕ್ಷಿತೌ ॥

ಅ ॥ (a) ಈ ದೇವತೆಗಳೂ, ಇವರಿಂದ ಅನ್ಯರಾದ ದೇವತೆಗಳೂ ಕೂಡ ಎಲ್ಲಾ ಪ್ರಾಣಿಗಳ (ಶಿರಸ್ಸುಗಳಲ್ಲಿ) ಇದ್ದವರಾಗಿ ನಾಶರಹಿತನೂ ಮಹಾವಿಷ್ಣುವೆಂದು ಪ್ರಸಿದ್ಧನೂ ಆದ ಪರಮಾತ್ಮನನ್ನು ಧ್ಯಾನಿಸುತ್ತಾರೆ. ॥ (b) ಅವರು ಮಾತಿನಿಂದ ಹಿಂಸೆಯನ್ನು ಮಾಡಿಕೊಂಡರು. (ಅಂದರೆ ನಾನೇ ಶ್ರೇಷ್ಠನು, ನೀನಲ್ಲ. ಎಂಬೀರೀತಿಯಾಗಿ) ಪರಸ್ಪರವಾಗಿ ನಿಂದಿಸಿಕೊಂಡರು. ಆಗ ಆ ದೇವತೆಗಳು ಶ್ರೀಹರಿಯ ಆಜ್ಞಾನುಸಾರವಾಗಿ ಹೇಳಿಕೊಂಡರು. ॥ (c) (ನಾವೆಲ್ಲರೂ) ಚತುರ್ಮುಖನ ಈ ಶರೀರದಿಂದ ಬೇರೆಬೇರೆಯಾಗಿ ಹೊರಟು ಹೋಗುವ, ನಮ್ಮಷೈಕಿ ಯಾರು ಹೊರಟೊಡನೆಯೇ ಶರೀರವು ಬೀಳುವುದೋ ಆತನು ಶ್ರೇಷ್ಠನೆಂದು ನಿಶ್ಚಯಿಸಲ್ಪಡಲಿ. ॥ (d) ಹೀಗೆ ನಿಶ್ಚಯಿಸಿದಮೇಲೆ ಕ್ರಮವಾಗಿ ಅಗ್ನ್ಯಾದಿದೇವತೆಗಳು ಹೊರಟು ಹೋದರು. ಅವರೆಲ್ಲರು ಹೊರಟು ಹೋದರೂ ಶರೀರಕ್ಕೆ ಎಲ್ಲಿಯೂ ಬೀಳುವಿಕೆಯು

ಆಗಲೇಇಲ್ಲ. (ಶರೀರವು ಬೀಳಲೇ ಇಲ್ಲ). ವಾಯುದೇವರು ಹೊರಟೊಡನೆಯೇ ಶರೀರವು ಭೂಮಿಯಲ್ಲಿ ಬಿದ್ದಿತು.

**ಭಾ॥ (a)** ಉದಾಸೀನವದಾಸ್ತಾಂ ತೌ ಕೇಶವಶ್ಚಾಬ್ಜಸಂಭವಃ । ತೇಷಾಂ ಬಲ ಪರೀಕ್ಷಾರ್ಥಂ ವಾಯ್ವಾದೀನಾಂ ಚ ಸರ್ವಶಃ ॥ **(b)** ಪುನಸ್ತೇ ಪ್ರಾವಿಶನ್ಸರ್ವೇ ವಹ್ನಿಸೂರ್ಯೌ ಶಶೀ ಶಿವಃ । ನೋತ್ಥಾನಮಭವತ್ತೇಷು ಪ್ರವಿಷ್ಟೇಷ್ವಪಿ ಸರ್ವಶಃ ॥ ವಾಯೌ ಪ್ರವಿಷ್ಟೇ ತೂತ್ಥಾನಂ ಕಾಯಸ್ಯಾಸೀತ್ತದೈವ ಚ ।

ಅ॥ ಕೇಶವನು, ಚತುರ್ಮುಖನೆಂಬೀರ್ವರು ಆ ವಾಯ್ವಾದಿ ಎಲ್ಲಾ ದೇವತೆಗಳ ಸಾಮರ್ಥ್ಯವನ್ನು ಪರೀಕ್ಷಿಸುವುದಕ್ಕೋಸ್ಕರ ಉದಾಸೀನರಾದವರಂತಿರುತ್ತಿದ್ದರು. (ಜನರಿಗೆ ದೇವತೆಗಳ ಸಾಮರ್ಥ್ಯವನ್ನು ಸ್ಪಷ್ಟವಾಗಿ ತಿಳಿಸುವುದಕ್ಕೋಸ್ಕರ ಶರೀರವನ್ನು ಪ್ರೇರಿಸದೇನೇ ಸುಮ್ಮನಿರುತ್ತಿದ್ದರು). ॥ (b) ಮತ್ತು ಅಗ್ನಿ, ಸೂರ್ಯ, ಚಂದ್ರ, ರುದ್ರ ಮೊದಲಾದವರೆಲ್ಲರೂ (ಶರೀರವನ್ನು) ಪ್ರವೇಶಿಸಿದರು. ಅವರೆಲ್ಲರು ಪ್ರವೇಶಿಸಿದರೂ ಶರೀರಕ್ಕೆ ಉತ್ಥಿತಿಯಾಗಲಿಲ್ಲ. (ಶರೀರವು ಏಳಲಿಲ್ಲ). ವಾಯುದೇವರು ಪ್ರವೇಶಿಸಿದೊಡನೆಯೇ ಶರೀರಕ್ಕೆ ಉತ್ಥಿತಿಯಾಯಿತು. (ಶರೀರವು ಎದ್ದಿತು).

**ಭಾ॥ (a)** ಉಚ್ಚೈಃ ಸ್ಥಿತತ್ವಾದುಕ್ಥೋಽಭೂದ್ವಾಯುರೇವ ತತಃ ಪ್ರಭುಃ । **(b)** ಉಚ್ಚತ್ವಂ ಚ ಗುಣಾಧಿಕ್ಯಂ ತ್ವಮುಚ್ಚೋಽಸೀತಿ ತೇಽಬ್ರುವನ್ ॥ ಭೃತ್ಯಾ ವಯಂ ತವೈವಸ್ತ್ವಮಸ್ಮಾಕಂ ಪತಿಃ ಸದಾ । **(c)** ಸ್ಪರ್ಧಾಮಹೇ ತ್ವದ್ಬಲೇನ ತ್ವಯಾ ನಾನ್ಯೇನ ಕೇನಚಿತ್ । ಇತ್ಯೂಚುರ್ವೀಂದ್ರಶೇಷೇಶಶಕ್ರಚಂದ್ರಾದಿಕಾಃ ಪೃಥಕ್ ॥ **(d)** ವಾಯುಃ ಸ ಸಂಸ್ತುತಸ್ತೈಶ್ಚ ಪ್ರಸನ್ನೋಽಭೂದ್ದಿವೌಕಸಾಂ ॥ ೪ ॥

ಅ ॥ (a) ವಾಯುದೇವರು ಎಲ್ಲರಿಂದಲೂ ಉತ್ತಮರಾಗಿರುವುದರಿಂದಲೇ ಉಕ್ಥನಾಮಕರಾದರು. ಅದರಿಂದಲೇ (ಸರ್ವಜಗತ್ತಿಗೂ ನಿಯಾಮಕರಾದರು. ॥ (b) ಅಥವಾ ಉಚ್ಚತ್ವವೆಂದರೆ ಗುಣಗಳಿಂದ ಶ್ರೇಷ್ಠತನವು. (ಎಲೋ ವಾಯುವೇ) ನೀನೇ ಉತ್ತಮನಾಗಿದ್ದೀ. ನಾವೆಲ್ಲರೂ ನಿನ್ನ ದಾಸರಾಗಿದ್ದೇವೆ. ನೀನು ಯಾವಾಗಲೂ ನಮಗೆಲ್ಲರಿಗೂ ಅಧಿಪತಿಯಾಗಿರುವಿ. ಎಂದು ಆದೇವತೆಗಳು ಹೇಳಿದರು. ॥ (c) ನಿನ್ನಿಂದಲೇ ಅಂದರೆ ನೀನುಕೊಟ್ಟ ಸಾಮರ್ಥ್ಯದಿಂದಲೇ (ನಾವೆಲ್ಲರೂ ಪರಸ್ಪರವಾಗಿ) ಸ್ಪರ್ಧೆಯುಳ್ಳವರಾಗಿದ್ದೇವೆ. ಇತರರಿಂದ ಯಾರಿಂದಲೂ ಅಲ್ಲ. ಎಂದು ಗರುಡ, ಶೇಷ, ರುದ್ರ, ಇಂದ್ರ, ಚಂದ್ರ ಇವರೇ ಮೊದಲಾದವರು ಪ್ರತ್ಯೇಕ ಪ್ರತ್ಯೇಕವಾಗಿ ಹೇಳಿಕೊಂಡರು. ಈ ಪ್ರಕಾರ ಅವರಿಂದ ಚೆನ್ನಾಗಿ ಸ್ತುತಿಸಿಕೊಳ್ಳಲ್ಪಟ್ಟ ಆ ಮುಖ್ಯಪ್ರಾಣದೇವರಾದರೂ ದೇವತೆಗಳಿಗೆ ಸಂತುಷ್ಟರಾದರು. ॥ ೪ ॥

**ಮಂ ॥ ತಂ ದೇವಾಃ ಪ್ರಾಣಯಂತ ಸ ಪ್ರಣೀತಃ ಪ್ರಾತಾಯತ ಪ್ರಾತಾಯೀತೀ೨ ೩ ತತ್ಪ್ರಾತರಭವತ್ಸಮಾಗಾದಿತೀ೨ ೩ ತತ್ಸಾಯಮಭವದಹರೇವ ಪ್ರಾಣೋ ರಾತ್ರಿರಪಾನೋ ವಾಗಗ್ನಿಶ್ಚಕ್ಷುರಸಾವಾದಿತ್ಯಶ್ಚಂದ್ರಮಾ ಮನೋದಿಶಃ ಶ್ರೋತ್ರಂ ಸ ಏಷ ಪ್ರಹಿತಾಂ ಸಂಯೋ**

ಗೋಽಧ್ಯಾತ್ಮಮಿಮಾ ದೇವತಾ ಅದಲು ಆವಿರಧಿದೈವತಮಿತ್ಯೇತತ್ತ ದುಕ್ತಂ ಭವತ್ಯೇತದ್ಧಸ್ಮ ವೈತದ್ವಿದ್ವಾನಾಹ ಹಿರಣ್ಯ ದನ್ವೈದೋ ನ ತಸ್ಯೇಶೇಯಃ ಮಹ್ಯಂ ನ ದದ್ಯುರಿತಿ ಪ್ರಹಿತಾಂ ವಾ ಅಹಮಧ್ಯಾತ್ಮಂ ಸಂಯೋಗಂ ನಿವಿಷ್ಟಂ ವೇದ್ಯೈತದ್ಧ ತದನೀಶಾನಾನಿ ಹ ವಾ ಅಸ್ಮೈ ಭೂತಾನಿ ಬಲಿಂ ಹರಂತಿ ಯ ಏವಂ ವೇದ ತತ್ಸತ್ಯಂ ಸದಿತಿ ಪ್ರಾಣ ಸ್ತೀತ್ಯನ್ನಂ ಯಮಿತ್ಯಸಾವಾದಿತ್ಯಸ್ತದೇತತ್ತ್ರಿವೃತ್ತ್ರಿವೃದಿವ ವೈ ಚ ಕ್ಷುಃ ಶುಕ್ಲಂ ಕೃಷ್ಣಂ ಕನೀನಿಕೇತಿ ಸ ಯದಿ ಹ ವಾ ಅಪಿ ಮೃಷಾ ವದತಿ ಸತ್ಯಂ ಹೈ ವಾಸ್ಯೋದಿತಂ ಭವತಿ ಯ ಏವ ಮೇತತ್ಸತ್ಯಸ್ಯ ಸತ್ಯತ್ವಂ ವೇದ ॥ ೫ ॥

ಅ ॥ ದೇವಾಃ=ದೇವತೆಗಳು (ವಾಯುದೇವರಿಂದ ಹರಿಯಗುಣಗಳನ್ನು ಕೇಳಿ), ತಂ=ಆ ವಾಯುವಿನಿಂದುಪದೇಶಿಸಲ್ಪಟ್ಟ ನಾರಾಯಣನನ್ನು, ಪ್ರಾಣಯಂತ=ಶಿಷ್ಯಪ್ರಶಿಷ್ಯಾದಿಗಳಲ್ಲಿ ಚೆನ್ನಾಗಿ ಉಪದೇಶಿಸಿದರು. (ಹಾಗೆಯೇ ಶಿಷ್ಯಾದಿಗಳಿಗೆ ವಾಯುದೇವರ ಗುಣಗಳನ್ನು ಉಪದೇಶಿಸಿದರು). ಸಃ=ಆ ಮುಖ್ಯಪ್ರಾಣದೇವರು, ಪ್ರಣೀತಃ=(ದೇವತೆಗಳಿಂದ ಶಿಷ್ಯಾದಿಗಳಲ್ಲಿ) ಉಪದೇಶಿಸಲ್ಪಟ್ಟವರಾಗಿ (ಶಿಷ್ಯರಿಂದ ತಿಳಿಯಲ್ಪಟ್ಟ ಗುಣಗಳುಳ್ಳವರಾಗಿ), ಪ್ರಾತಾಯತ=(ಶಿಷ್ಯರಲ್ಲಿ ಪ್ರವೇಶಿಸಿ) ವ್ಯಾಪ್ತನಾದನು. (ಯಾವಕಾರಣದಿಂದ) ಪ್ರಾತಾಯೀತಿ ೩= ವಿಸ್ತೃತನಾದನೋ, ತತ್=ಅದರಿಂದ, ಪ್ರಾತಃ=ಪ್ರಾತರ್ನಾಮಕನು, ಅಭವತ್=ಆದನು. ಇತಿ=ಯಾವಕಾರಣದಿಂದ, ಸಮಾಗಾತ್=(ರೂಪಾಂತರವನ್ನು ಹೊಂದಿ ಜೀವಸ್ವರೂಪದಿಂದ) ಸಂಗತನಾದನೋ, ತತ್=ಅದರಿಂದ, ಸಾಯಂ="ಸಾಯಂ" ಶಬ್ದವಾಚ್ಯನು, ಅಭವತ್= ಆದನು. ಪ್ರಾಣಃ=ಮುಖ್ಯಪ್ರಾಣನು, ಅಹರೇವ=ಇತರರಿಂದ ಅಪಹರಿಸಲಸಾಧ್ಯನಾದುದರಿಂದಲೂ ಅಹರ್ನಿಯಾಮಕನಾದುದರಿಂದಲೂ, ಅಹರ್ನಾಮಕನೇ. ಅಪಾನಃ=ಅಪಾನನು, ರಾತ್ರಿಃ= ರತಿರೂಪನಾದುದರಿಂದಲೂ ರಾತ್ರಿನಿಯಾಮಕನಾದುದರಿಂದಲೂ ರಾತ್ರಿ ನಾಮಕನು. ಅಗ್ನಿಃ= ಅಗ್ನಿಯು, ವಾಕ್=ವಾಗಭಿಮಾನಿಯು, ವಾಗೆಂದು ಹೆಸರುಳ್ಳವನು. ಅಸೌ ಆದಿತ್ಯಃ=ಈ ಆದಿತ್ಯನು, ಚಕ್ಷುಃ=ಚಕ್ಷುರಭಿಮಾನಿಯು, ಚಕ್ಷುಸ್ಸೆಂದು ಹೆಸರುಳ್ಳವನು. ಚಂದ್ರಮಾಃ= ಚಂದ್ರನು, ಮನಃ=ಮನೋಽಭಿಮಾನಿಯು. (ಶಿವಾದಿಗಳೂ ಮನೋಽಭಿಮಾನಿಗಳು). ದಿಶಃ= ಪ್ರಾಚ್ಯಾದಿ ದಿಗಭಿಮಾನಿಗಳಾದ ಮಿತ್ರಾದಿಗಳು, ಶ್ರೋತ್ರಂ=ಶ್ರೋತ್ರಾಭಿಮಾನಿಗಳೂ, ಸ ಏಷಃ= ಆ ಇದು, ಪ್ರಹಿತಾಂ=ವಿಷ್ಣುವಿನಿಂದ ಪ್ರೇರಿಸಲ್ಪಟ್ಟ ದೇವತೆಗಳದ್ದೇ, ಅಧ್ಯಾತ್ಮಂ=ಶರೀರದಲ್ಲಿರತಕ್ಕ, ಸಂಯೋಗಃ=ಸಂಬಂಧವು. ಇಮಾಃ=ಈ ಬ್ರಹ್ಮಾದಿಗಳೆಲ್ಲರೂ, ದೇವತಾಃ=ಕೇವಲ ದೇವತೆಗಳು. ಅದ ಉ=ಆ ವಿಷ್ಣ್ವಾಖ್ಯ ಪರಬ್ರಹ್ಮನೇ, ಆವಿಃ=ಪೂರ್ಣಜ್ಞಾನಾನಂದಸ್ವರೂಪವುಳ್ಳವನು. ಅಧಿದೈವತಂ=ಸರ್ವಾಧಿಕ ದೈವತೆಯು, ಇತ್ಯೇತತ್=ಈ ಪ್ರಮೇಯವೇ, ತದುಕ್ತಂ, ತತ್=ನಿಖಿಲವೇದಾದಿ ಸದಾಗಮಗಳಿಂದ, ಉಕ್ತಂ=ಹೇಳಲ್ಪಟ್ಟದ್ದಾಗಿ, ಭವತಿ=ಆಗುತ್ತದೆ. (ಇತರವಾದುದಲ್ಲ). ಹ ಸ್ಮ ವಾ=ಸುಪ್ರಸಿದ್ಧವೇ. ಅಥವಾ ಏತತ್=ವಿಷ್ಣುವೇ ಸರ್ವೋತ್ತಮನು, ನಿಖಿಲವೇದಾದಿ ತಾತ್ಪರ್ಯವಿಷಯನು, ಎಂಬುವದೂ ಕೂಡಾ, ಸರ್ವಪ್ರಮಾಣಗಳಲ್ಲಿ ಸುಪ್ರಸಿದ್ಧವು. ಏತತ್=ವಿಷ್ಣುವೇ ಸರ್ವೋತ್ತಮನೆಂಬೀ ಪ್ರಮೇಯವನ್ನು ವಿದ್ವಾನ್=ತಿಳಿದ, ಹಿರಣ್ಯದನ್=ಹಿರಣ್ಯದನ್ನೆಂದು ಪ್ರಸಿದ್ಧರಾದ, ವೈದಃ=ವೇದದ್ರಷ್ಟನಾದ

ಮುನಿಯು (ಹೇಗೆ ಜನರು ನನ್ನ ಅಭೀಷ್ಟವನ್ನು ), ಮಹ್ಯಂ=ನನಗೋಸ್ಕರ, ನ ದದ್ಯುಃ=ಕೊಡಲಾರರೋ, ತಸ್ಯ=ಆ ರೀತಿಮಾಡಲಿಕ್ಕೆ, ಅಯಂ=ಈ ಯಾವದೊಂದು ಮಾನುಷಾದಿಜೀವವು, ನೇಶೇ=ಸಮರ್ಥವಲ್ಲ. ಇತಿ=ಹೀಗೆಂದು, ಆಹ=ಹೇಳಿದರು. (ಮತ್ತು ವಿಷ್ಣುವಿನಿಂದ), ಪ್ರಹಿತಾಂ=ಪ್ರೇರಿಸಲ್ಪಟ್ಟ ಬ್ರಹ್ಮಾದಿ ದೇವತೆಗಳ, ಅಧ್ಯಾತ್ಮಂ ನಿವಿಷ್ಟಂ=ಶರೀರದಲ್ಲಿರತಕ್ಕ, ಸಂಯೋಗಂ=ಸಂಬಂಧವನ್ನು, ಅಹಂ=ನಾನು, ವೇದ ವೈ=ತಿಳಿದಿದ್ದೇನೆ. ತತ್=ಆ ಕಾರಣದಿಂದ ಅಸ್ಮೈ=ಈ ಸಂಬಂಧವನ್ನು ತಿಳಿದ ನನಗೋಸ್ಕರ, ಭೂತಾನಿ=ಅವರರಾದ ಪ್ರಾಣಿಗಳು, ಬಲಿಂ=ಪೂಜೆಯನ್ನು, ಹರಂತಿ=ಮಾಡುತ್ತಾರೆ. (ಮುಕ್ತಿಯಲ್ಲಿ ಯಥೇಷ್ಟ ಭೋಗವನ್ನು ಭೋಗಿಸುವೆನು, ಸ್ವೇಚ್ಛಾವಿಹಾರವುಳ್ಳವನೂ ಆಗುವೆನು), ಏತತ್=ಇದು, ಹ=ಪ್ರಮಾಣಪ್ರಮಿತವು. (ಈ ವಿಷಯದಲ್ಲಿ ಸಂದೇಹವೇ ಇಲ್ಲ). ತತ್=ಆ ನನ್ನ ಸ್ವೇಚ್ಛಾವಿಹಾರ ನಿಷೇಧದಲ್ಲಿ (ಸಮಸ್ತಪ್ರಾಣಿಗಳೂ), ಅನೀಶಾನಿ=ಅಸಮರ್ಥಗಳಷ್ಟೆ. (ದೇವಾದಿಗಳನ್ನು ಹೊರತು ಯಾರೊಬ್ಬನೂ ಅಲ್ಲ). ಏತತ್ ಹ=ಇದು ನಿಶ್ಚಿತವು. (ಪ್ರಹಿತಾಂವಾ ಇತ್ಯಾದಿ ಪ್ರಮೇಯವು ಆ ಋಷಿಯಿಂದ ಹೇಳಲ್ಪಟ್ಟದೆ.) ಯಃ=ಯಾವಾತನು, ಏವಂ=ಪೂರ್ವೋಕ್ತರೀತಿಯಾಗಿ (ದೇವತೆಗಳ ಸಂಯೋಗವನ್ನು ತತ್ಪ್ರೇರಕನಾದ ವಿಷ್ಣುವನ್ನು ) ವೇದ=ತಿಳಿಯುತ್ತಾನೋ, ಅಸ್ಮೈ=ಈ ಜ್ಞಾನಿಗೋಸ್ಕರ, ಅನೀಶಾನಿ=ಸ್ವಾವರರಾದ, ಭೂತಾನಿ=ಮುಕ್ತರು, ಬಲಿಂ=ಪೂಜಾದಿಗಳನ್ನು, ಹರಂತಿ=ಮಾಡುತ್ತಾರೆ. ತತ್=ವಿಷ್ಣ್ವಾಖ್ಯಪರಬ್ರಹ್ಮನು, ಸತ್ಯಂ=ಸತ್ಯನಾಮಕನು. ಸರ್ವೋತ್ತಮನಾದುದರಿಂದ "ಸತ್" ಪೂರ್ಣನಾದುದರಿಂದ "ತಿ" ಸರ್ವಜ್ಞನಾದುದರಿಂದ "ಯಂ" ಅಂತೂ "ಸತ್ಯಂ" ಎನಿಸಿಕೊಳ್ಳುತ್ತಾನೆ). ಪ್ರಾಣಃ=ಮುಖ್ಯಪ್ರಾಣದೇವರು (ಶೇಷಾದಿಸರ್ವದೇವೋತ್ತಮರಾದುದರಿಂದ) ಸದಿತಿ=ಸತ್ ಎಂದು ಹೇಳಿಸಲ್ಪಡುತ್ತಾರೆ. ಅನ್ನಂ=ಅನ್ನಾಭಿಮಾನಿಯೂ, ಯಾವಾಗಲೂ ವೇದೋಚ್ಚಾರಣ ರೂಪವಾದ ಧ್ವನಿ ಯಿರುವುದರಿಂದ ಅನ್ನಶಬ್ದವಾಚ್ಯನೂ ಆದ ಚತುರ್ಮುಖನು, ತೀತಿ=(ಜೀವರಲ್ಲಿ ಪೂರ್ಣನಾದುದರಿಂದ) ತಿ ಎನ್ನಲ್ಪಡುತ್ತಾನೆ. ಅಸೌ ಆದಿತ್ಯಃ=ಈ ಸೂರ್ಯನು, ಯಮಿತಿ=(ಪ್ರಕಾಶದಿಂದ ಎಲ್ಲಾ ಲೋಕಗಳನ್ನು ನಿಯಮಿಸುವುದರಿಂದ) "ಯಂ" ಎನ್ನಿಸಿಕೊಂಡಿದ್ದಾನೆ. ತದೇತತ್=ಈ ದೇವತಾತ್ರಯವು, ತ್ರಿವೃತ್=ಮೂರರಿಂದ ಯುಕ್ತವಾಗಿದೆ. (ಮಿಲಿತರಾದ ಈ ಮೂರು ದೇವತೆಗಳಿಗೇನೇ "ಸತ್ಯ"ವೆಂದು ಹೆಸರು). (ಈ ಮೂರುದೇವತೆಗಳು ಚಕ್ಷುಸ್ಸಿನಲ್ಲಿ ಇರತಕ್ಕವರು). ಚಕ್ಷುಃ=ನಯನವು, (ಹಿಂದಿನ ಮೂರು ದೇವತೆಗಳಿಗೆ ಅಧಿಷ್ಠಾನವಾದುದರಿಂದಲೇ) ಶುಕ್ಲಂ=ಬಿಳುಪು, ಕೃಷ್ಣಂ=ಕಪ್ಪು, ಕನೀನಿಕಾ=(ಕಣ್ಣಿನ) ಗುಡ್ಡು ಎಂದು, ತ್ರಿವೃದಿವ ವೈ=ಮೂರುವಿಧವಾಗಿ ಕಾಣಲ್ಪಡುತ್ತದೆ. ಯಃ=ಯಾವಾತನು, ಏವಂ=ಪೂರ್ವೋಕ್ತಪ್ರಕಾರವಾಗಿ, ಸತ್ಯಸ್ಯ=ವಿಷ್ಣುವಿಗೂ ಪೂರ್ವದಲ್ಲಿ ಹೇಳಿದ ಮೂರು ದೇವತೆಗಳಿಗೂ, ಏತತ್ ಸತ್ಯತ್ವಂ=ಪ್ರತ್ಯೇಕ ಪ್ರತ್ಯೇಕವಾಗಿಯೂ ಮಿಲಿತವಾಗಿಯೂ ಇರುವ ಸತ್ಯತನವನ್ನು, ವೇದ=ತಿಳಿಯುತ್ತಾನೋ, ಸಃ=ಆ ಅಧಿಕಾರಿಯು, ಮೃಷಾ=ಸುಳ್ಳನ್ನು, ವದತಿ ಯದಿ ಅ ಪಿ=ಹೇಳಿದರೂ, ಅಸ್ಯ=ಇವನ, ಉದಿತಂ=ವಚನವು, ಸತ್ಯಂ ವೈ=ಸತ್ಯವಾಗಿಯೇ, ಭವತಿ ಹ=ಆಗುತ್ತದೆ. (ಈ ಉಪಾಸಕನಿಗೆ ಕದಾಚಿತ್ ಸುಳ್ಳುಮಾತನ್ನು ಹೇಳಿದರೂ ಅದು ಸತ್ಯವೇ ಆಗುವುದರಿಂದ ಪಾಪಲೇಪವು ಸಂಭವಿಸುವುದಿಲ್ಲ). ॥ ೫ ॥

ಭಾ॥ **(a)** ತಸ್ಮಾಚ್ಛ್ರುತ್ವಾ ಪರಂ ಬ್ರಹ್ಮ ದೇವಾ ನಾರಾಯಣಾಭಿಧಂ । ಶಿಷ್ಯಪ್ರಶಿಷ್ಯಾದಿಷು ಚ ತೇऽನಯನ್ವಾಯುನೋದಿತಂ ॥ **(b)** ವಾಯುಮಸ್ಯ ನಯನ್ಸರ್ವೇ ಯಶಸಾ ತದ್ಗುಣೋಕ್ತಿತಃ । ಯೇ ಯೇ ಗುಣಾನ್ವಿಜಾನಂತಿ

ವಾಯೋಸ್ತಾನಾವಿಶನ್ಮರುತ್ ॥ (c) ತತ್ರ ತತ್ರ ಪ್ರವಿಷ್ಟತ್ವಾತ್ಪ್ರತ ತೋಽಸೌ ಬಭೂವ ಹ । ಪ್ರತತತ್ವಾತ್ಪ್ರಾತರಿತಿ ತಸ್ಯ ನಾಮಾಭವದ್ವಿ ಭೋಃ । ಸಂಗತಶ್ಚಾ (ಶ್ಚ) (d) (ಅ) ಭವಜ್ಜೀವಚಿತಾ ರೂಪಾಂತರೇಣ ಸಃ ॥ ಸಂಗತತ್ವಾತ್ಸಾಯಮಿತಿ ತದ್ರೂಪಂ ನಾಮತೋಽಭವತ್ ॥

ಅ ॥ (a) ದೇವತೆಗಳು ವಾಯುದೇವರಿಂದ (ಶ್ರೀಹರಿಯ ಗುಣಗಳನ್ನು) ಕೇಳಿ ವಾಯುದೇವರಿಂದ ಉಪದೇಶಿಸಲ್ಪಟ್ಟ ನಾರಾಯಣನೆಂದು ಹೆಸರುಳ್ಳ ಪರಬ್ರಹ್ಮನನ್ನು ಶಿಷ್ಯ ಪ್ರಶಿಷ್ಯಾದಿಗಳಲ್ಲಿ ಉಪದೇಶಿಸಿದರು. ॥ (b) ಮತ್ತು ಆ ಸಮಸ್ತ ದೇವತೆಗಳು (ಎಲ್ಲಾ ದಿಕ್ಕು ಗಳಲ್ಲಿಯೂ ವ್ಯಾಪ್ತವಾದ) ಕೀರ್ತಿಯಿಂದ ಆ ವಾಯುದೇವರ ಗುಣಗಳನ್ನು ಹೇಳಿದ್ದರಿಂದ ಆ ವಾಯುದೇವರನ್ನು ಕೂಡ ಹೊಂದಿಸಿದರು. ಅಂದರೆ ಅವರ ಮಹಿಮೆಗಳನ್ನು ಶಿಷ್ಯಾದಿ ಗಳಿಗೆ ಉಪದೇಶಿಸಿದರು. ಯಾರುಯಾರು ವಾಯುದೇವರ ಗುಣಗಳನ್ನು ತಿಳಿಯುವರೋ, ಅವ ರನ್ನುವಾಯುದೇವರು ಪ್ರವೇಶಿಸಿದರು. ॥ (c) ಅಲ್ಲಲ್ಲಿ ಪ್ರವೇಶಿಸಿದ್ದರಿಂದಲೇ ವಾಯುದೇವರು ವ್ಯಾಪ್ತರಾಗಿದ್ದರು. ಹೀಗೆ ವ್ಯಾಪ್ತರಾದುದರಿಂದಲೇ 'ಪ್ರಾತರ್' ಎಂದು ಮುಖ್ಯಪ್ರಾಣದೇವರಿಗೆ ಹೆಸರಾಯಿತು. ॥ (d) ಹಾಗೆಯೇ ಆತನು ರೂಪಾಂತರದಿಂದ ಜೀವಚ್ಚೈತನ್ಯದಿಂದ ಸಂಗತ ನಾದನು. (ಜೀವನಿಗೂ ಅಭಿಮಾನಿಯಾಗಿಯೇ ಇದ್ದಾನೆ). ಸಂಬದ್ಧವಾದುದರಿಂದಲೇ ಆತನ ರೂಪವು, ಹೆಸರಿನಿಂದ 'ಸಾಯಂ' ಎಂದಾಯಿತು. (ಅಂದರೆ ಅವನ ರೂಪಕ್ಕೆ 'ಸಾಯಂ' ಎಂದು ಹೆಸರಾಯಿತು.

ಭಾ॥ ವಾಯೋಸ್ತುತ್ಪುನರಧ್ಯಾತ್ಮಂ ಪ್ರಾಣಾಪಾನಾಭಿದಂ ದ್ವಯಂ । ಅಧ್ಯಾತ್ಮ ಮಗ್ನಿರ್ವಾಗಾಖ್ಯಶ್ಚಕ್ಷುಃ ಸೂರ್ಯಃ ಪ್ರಕೀರ್ತಿತಃ ॥ ಯಜ್ಞಾದಿಸಾಧನೇ ಯತ್ತು ಮನಶ್ಚಂದ್ರಃ ಪ್ರಕೀರ್ತಿತಃ ।

ಅ ॥ ಪುನಃ ವಾಯುದೇವರಿಗೆ ಪ್ರಾಣ ಅಪಾನವೆಂದು ಹೆಸರುಳ್ಳ ಎರಡು ಅಧ್ಯಾತ್ಮ ರೂಪವು (ಶರೀರದಲ್ಲಿರತಕ್ಕ ರೂಪವು) ಇದೆ. ಅಗ್ನಿಯು ಅಧ್ಯಾತ್ಮನಾಗಿ ವಾಗಭಿಮಾನಿಯಾಗಿ 'ವಾಕ್' ಎಂದು ಹೆಸರುಳ್ಳವನು. ಸೂರ್ಯನು ಕಣ್ಣಿಗೆ ಅಭಿಮಾನಿಯಾಗಿ 'ಚಕ್ಷುಸ್ಸು' ಎಂದು ಹೇಳಲ್ಪಡುತ್ತಾನೆ. ಯಜ್ಞವೇ ಮೊದಲಾದ್ದಕ್ಕೆ ಸಾಧನವಾದ ಕಪಾಲಾದಿ ವಿಷಯದಲ್ಲಿ ಯಾವ ಮನಸ್ಸದೆಯೋ, (ಅಂತಹ ಮನಸ್ಸಿಗೆ ಅಭಿಮಾನಿಯು ಮನೋನಾಮಕನು ಎಂದು ಚಂದ್ರನು ಹೇಳಲ್ಪಡುತ್ತಾನೆ.

ಭಾ॥ (a) ಮಿತ್ರೋ ಯಮಶ್ಚ ವರುಣಃ ಕುಬೇರಶ್ಚ ದಿಗೀಶ್ವರಾಃ ॥ ಶ್ರೋತ್ರಾಭಿ ಮಾನಿನಃ ಸರ್ವೇ ವೈದಿಕಶ್ರವಣೋಚಿತಂ । ಶ್ರೋತ್ರಂ ಚಂದ್ರಃ (b) ತಥಾ ಸ್ಮಾರ್ತತಾಂತ್ರಿಕಶ್ರವಣೋಚಿತಂ ॥ ಯಮ ಏವ ಷಡಂಗಾನಾಂ ವಿಷಯ ಶ್ರವಣೋಚಿತಂ । ಶ್ರೋತ್ರಂ ತು ವರುಣಃ (c) ಕಾವ್ಯಶಾಸ್ತ್ರಾರ್ಥಗಂ ಮಿತ್ರ ಏವ ಚ ॥ ಶ್ರೋತ್ರಂ ಯನ್ನೀತಿಶಾಸ್ತ್ರಾರ್ಥಗಂ ಕುಬೇರಶ್ಚ ಪ್ರಕೀ ರ್ತಿತಃ ।(d) ವಿಷ್ಣುನಾ ಪ್ರಹಿತಾನಾಂ ಹಿ ಸಂಯೋಗೋಽಧ್ಯಾತ್ಮಮೇಷ ಹಿ॥

ಅ ॥ (a) ಪೂರ್ವಾದಿ ದಿಕ್ಕುಗಳಿಗೆ ಅಭಿಮಾನಿಗಳಾದ ಮಿತ್ರ, ಯಮ, ವರುಣ, ಕುಬೇರ, ಚಂದ್ರ ಇವರೆಲ್ಲರೂ ಕಿವಿಗೆ ಅಧಿಪತಿಯಾಗಿ 'ಶ್ರೋತ್ರ'ವೆಂದು ಹೆಸರುಳ್ಳವರು. ಅವ ರಲ್ಲಿ ಚಂದ್ರನು ವೇದೋಕ್ತ ವಿಷಯಗಳನ್ನು ಕೇಳಲರ್ಹವಾದ ಕಿವಿಗೆ ಅಧಿಪತಿಯು. ॥ (b)

ಹಾಗೆಯೇ ಯಮನು ಸ್ಮೃತಿ, ಹಾಗೆಯೇ ಸಿದ್ಧಾಂತಗಳಲ್ಲಿ ಹೇಳಲ್ಪಟ್ಟ ಪ್ರಮೇಯಗಳನ್ನು ಕೇಳಲರ್ಹವಾದ ಕಿವಿಗೆ ಅಧಿಪತಿಯು. ವರುಣನು ಶಿಕ್ಷಾದಿ ಷಡಂಗಗಳ ವಿಷಯಗಳನ್ನು ಕೇಳಲು ಯೋಗ್ಯವಾದ ಕಿವಿಗಧಿಪತಿಯು. ॥ (c) ಮಿತ್ರನು ಕಾವ್ಯಶಾಸ್ತ್ರವೇ ವಿಷಯವಾಗಿ ಉಳ್ಳ ಕಿವಿಗಧಿಪತಿಯು. ಕುಬೇರನು ನೀತಿಶಾಸ್ತ್ರವೇ ವಿಷಯವಾಗ್ಯುಳ್ಳ ಕಿವಿಗಧಿಪತಿಯು. ಎಂದೂ ಹೇಳಲ್ಪಟ್ಟಿದೆ. ॥ (d) ಇದಾದರೂ ವಿಷ್ಣುವಿನಿಂದ ಪ್ರೇರಿತರಾದ ದೇವತೆಗಳದ್ದೇ ಅಧ್ಯಾತ್ಮ ಸಂಯೋಗವು ಎಂದು ಪ್ರಸಿದ್ಧವು.

ಭಾ॥ **(a)** ಶಿವಾದೀನಾಂ ಚ ಸರ್ವೇಷಾಂ ಮನಸ್ತ್ವಂ ಕಥಿತಂ ಪುರಾ। ಏತಾಸ್ಸರ್ವಾ ದೇವತಾ ಹಿ ಬ್ರಹ್ಮವಾಯುಸುಪರ್ಣಕಾಃ । ಶೇಷಶಂಕರಶಕ್ರಾಶ್ಚ ಚಂದ್ರಸೂರ್ಯಯಮಾ ಅಪಿ ॥ ಅಗ್ನಿಶ್ಚ ಮಿತ್ರಾವರುಣೌ ಕುಬೇರಾದ್ಯಾಶ್ಚ ಸರ್ವಶಃ। ಅಧಿದೈವಂ ಸ ಏವೈಕ ಆಧಿಕ್ಯಾತ್ಪುರುಷೋತ್ತಮಃ ॥ **(b)** ದೇವಮಾತ್ರಾಸ್ತದನ್ಯೇ ತು ಸ ಆವಿಃ ಪುರುಷೋತ್ತಮಃ । ಪೂರ್ಣಜ್ಞಾನಸ್ವರೂಪತ್ವಾದೇತಾವತ್ಕಥಿತಂ ಭವೇತ್ ॥ ತಾತ್ಪರ್ಯಾತ್ಸರ್ವವೇದೈಶ್ಚ

ಅ ॥ (a) ರುದ್ರನೇ ಮೊದಲಾದ ಎಲ್ಲಾ ದೇವತೆಗಳಿಗೂ ಪೂರ್ವದಲ್ಲಿ ಮನೋಽಭಿಮಾನಿತ್ವವು ಹೇಳಲ್ಪಟ್ಟಿದೆ. ಚತುರ್ಮುಖಾದಿಗಳು ಅಂದರೆ ಚತುರ್ಮುಖಬ್ರಹ್ಮನು, ಮುಖ್ಯಪ್ರಾಣನು, ಗರುಡನು, ಶೇಷನು, ರುದ್ರನು, ಇಂದ್ರನು, ಚಂದ್ರನು, ಸೂರ್ಯನು, ಯಮನು, ಅಗ್ನಿಯು, ಮಿತ್ರನು, ವರುಣನು, ಕುಬೇರನೇ ಮೊದಲಾದವರು ಇವರೆಲ್ಲರೂ ದೇವತೆಗಳೇ ಸರಿ. ಈ ಸಮಸ್ತದೇವತೆಗಳಿಂದಲೂ, ಅತ್ಯುತ್ತಮನಾದುದರಿಂದ ಪುರುಷೋತ್ತಮನಾದ ಆ ಹರಿಯೊಬ್ಬನೇ ಅಧಿದೈವನು, ಸರ್ವಾಧಿಕ ದೈವತೆಯು. ॥(b) ಅವನಿಂದ ಇತರರೆಲ್ಲರೂ ಕೇವಲ ದೇವತೆಗಳು. ಆಪುರುಷೋತ್ತಮನು ಪೂರ್ಣಜ್ಞಾನಸ್ವರೂಪ ವುಳ್ಳವನಾದುದರಿಂದ' 'ಆವಿಃ' ಎನ್ನಿಸಿ ಕೊಳ್ಳುತ್ತಾನೆ. ಇಷ್ಟುಪ್ರಮೇಯವು ವೇದಾದಿ ಸದಾಗಮಗಳಿಂದ ಮುಖ್ಯತಾತ್ಪರ್ಯ ವಿಷಯವಾಗಿ ಹೇಳಲ್ಪಟ್ಟಿದೆ.

ಭಾ॥ **(a)** ತಜ್ಜ್ಞಾನನ್ನವದನ್ಮುನಿಃ । ಹಿರಣ್ಯದನ್ನಾಮ ವೈದೋ ಭೂತೇಷು ಹಿ ಸುರಾನ್ಯತೇ ॥ ಮದಭೀಪ್ಸ್ಟಂ ಮಮಾದಾತುಂ ನೈವೇಷ್ಟೇ ಕಶ್ಚನಾಂಜಸಾ । **(b)** ವಿಷ್ಣುನಾ ಪ್ರಹಿತಾನಾಂ ಹಿ ದೇವಾನಾಮುಹಮುತ್ತಮಂ ॥ ವೇದ ಸಂಯೋಗಮಧ್ಯಾತ್ಮಂ ತತೋ ಮುಕ್ತೌ ಯಥೇಷ್ಟಭುಕ್ । ಸ್ಯಾನ್ನೈವಾತ್ರಾಸ್ತಿ ಸಂದೇಹಃ ಸ್ವೇಚ್ಛಾ ವಿಹೃತಿರೇವ ಚ । **(c)** ಮನ್ನಿಷೇಧೇ ನ ಶಕ್ತೋಽಸ್ತಿ ಪ್ರೀತಾ ದೇವಾ ಹಿ ಮೇ ಸದಾ ॥ ಅಧಿದೈವೇನ ಸಹಿತಾ ವಿಷ್ಣುನಾ ಪ್ರಭವಿಷ್ಣುನಾ। ಏತದ್ಧಿ ತೇನ ಕಥಿತಂ ಮುನಿನಾ ತತ್ವವೇದಿನಾ॥

ಅ ॥ (a) ಆ ಪ್ರಮೇಯವನ್ನು ತಿಳಿದ 'ಹಿರಣ್ಯದನ್' ಎಂದು ಪ್ರಸಿದ್ಧನಾದ ವೇದವನ್ನು ನೋಡಿದ ಮುನಿಯು ಹೇಳಿದನು. ದೇವತೆಗಳನ್ನು ಹೊರತು ಪ್ರಾಕೃತಜನರಲ್ಲಿ ಯಾರೊಬ್ಬರೂ ಜನಾಗಿ ನನಗೆ ನನ್ನಿಂದಭಿಲಷಿತವಾದುದನ್ನು ಕೊಡಿಸದೆ ಇರುವ ಹಾಗೆ ಮಾಡಲಿಕ್ಕೆ ಸಮರ್ಥರಲ್ಲ (ವಿಷ್ಣ್ವಾದಿ ದೇವತೆಗಳು ಮುಕ್ತಿಯಲ್ಲಿ ನನಗೆ ಫಲವನ್ನು ಹೇಗೆ ಕೊಡಲಾರರೋ ಆ ರೀತಿಯಾಗಿ ಮಾಡಲಿಕ್ಕೆ ದೇವತೆಗಳಿಂದ ಇತರರಿಗೆ ಯಾರಿಗೂ ಸಾಮರ್ಥ್ಯವಿಲ್ಲ) ॥ (b) ಏಕೆಂದರೆ ವಿಷ್ಣುವಿನಿಂದ ಅಂತಃಪ್ರೇರಿತರಾದ ದೇವತೆಗಳಿಗೆ ಪ್ರತಿಶರೀರದಲ್ಲಿರತಕ್ಕ ಉತ್ತಮವಾದ ಸಂಯೋಗವನ್ನು (ಅಂದರೆ ನಿಯಮ್ಯ ನಿಯಾಮಕರೂಪವಾದದ್ದು. ಅಥವಾ ಶ್ರೀಹರಿಯು ಪೂಜ್ಯನು. ದೇವತೆಗಳು

ಪೂಜಕರು. ಎಂಬೀ ಪೂಜ್ಯಪೂಜಕಭಾವರೂಪವಾದದ್ದು) ನಾನು ತಿಳಿದಿದ್ದೇನೆ. ಆದುದರಿಂದ ನಾನು ಮುಕ್ತಿಯಲ್ಲಿ ಯಥೇಷ್ಟ ಭೋಗವನ್ನು ಭೋಗಿಸುವವನೂ ಸ್ವೇಚ್ಛಾನುಸಾರವಾದ ಕ್ರೀಡೆ ಯುಳ್ಳವನೂ ಆಗುವೆನು. ಈ ವಿಷಯದಲ್ಲಿ ಸಂದೇಹವೇ ಇರುವುದಿಲ್ಲ. ॥ (c) ನನ್ನ ಕ್ರೀಡಾದಿಗಳನ್ನು ನಿಷೇಧಿಸುವ ವಿಷಯದಲ್ಲಿ (ದೇವತೆಗಳಿಂದಿತರನಾದ ಯಾರೊಬ್ಬನೂ) ಸಮರ್ಥನಲ್ಲ. ಸರ್ವೋತ್ತಮನೂ ಸರ್ವ ಸಮರ್ಥನೂ ಆದ ವಿಷ್ಣುವಿನಿಂದ ಒಡಗೂಡಿದ ದೇವತೆಗಳು ಯಾವಾಗಲೂ ಸಂತುಷ್ಟರೇ ಆಗಿರುವರು. (ಕಾರಣ ಕದಾಚಿತ್ ದೇವತೆಗಳು ಫಲವನ್ನು ಕೊಡದೆಯೂ ಇರುವರು. ಎಂದು ಆಶಂಕಿಸಕೂಡದು.) ಈ ಪ್ರಮೇಯವು ಯಥಾರ್ಥವನ್ನರಿತ ಆ ಮುನಿಯಿಂದ ಹೇಳಲ್ಪಟ್ಟಿದೆ.

ಭಾ॥ (a) ವಿಷ್ಣುಪ್ರಹಿತದೇವಾನಾಂ ಯೋಗಮಧ್ಯಾತ್ಮಮಂಜಸಾ । ವೇದ ತಂ ಚ ನಿಯೋಕ್ತಾರಮುಪಾಸ್ತೇ ವಿಷ್ಣುಮವ್ಯಯಂ ॥ ಏತಾದೃಶೋಪಾಸನಾಯಾ ಯೋಗ್ಯಃ ಸನ್ಸತತಂ ಸುಧೀಃ । (b) ಸ್ವಸ್ವಾವ್ಯನ್ಯಾನಿ ಭೂತಾನಿ ಹರೇಯುರ್ಬಲಿಮಸ್ಯ ಹಿ ॥ ಮುಕ್ತಸ್ಯ ವೈಷ್ಣವೇ ಲೋಕೇ ಮುಕ್ತಾನಿ ಚ ನ ಸಂಶಯಃ ।

ಅ ॥ (a) ವಿಷ್ಣುವಿನಿಂದ ಪ್ರೇರಿತರಾದ ದೇವತೆಗಳಿಗೆ ಪ್ರತಿಶರೀರದಲ್ಲಿಯೂ ಇರತಕ್ಕ ಆ ಪೂರ್ವೋಕ್ತ ಸಂಯೋಗವನ್ನೂ ತತ್ಪ್ರೇರಕನೂ ನಾಶಶೂನ್ಯನೂ ಆದ ವಿಷ್ಣುವನ್ನೂ ಯಾವಾತನು ಚೆನ್ನಾಗಿ ತಿಳಿಯುತ್ತಾನೋ ಉಪಾಸನೆಯನ್ನು ಕೂಡ ಮಾಡುತ್ತಾನೊ ಇಂತಹ ಉಪಾಸನೆಗೆ ಯೋಗ್ಯನಾದವನು ನಿರ್ದೋಷಿಯು ಮತ್ತು ಯಾವಾಗಲು ಸುಬುದ್ಧಿಯುಳ್ಳವನೇ ಸರಿ. ॥ (b) ಇಂತಹ ಜ್ಞಾನಿಯಾದ ಮುಕ್ತನಿಗೆ ತಂತಮ್ಮ ನಿಯಾಮಕರಿಂದಿತರರಾದ (ಅಂದರೆ ಸ್ವಾವರರಾದ) ಪ್ರಾಣಿಗಳು ಮುಕ್ತರೂಕೂಡ ವಿಷ್ಣುಸಂಬಂಧಿಯಾದ ವೈಕುಂಠಲೋಕದಲ್ಲಿ ಪೂಜೆಯನ್ನು ಮಾಡುವರು. ಸಂಶಯವೇ ಇಲ್ಲ.

ಭಾ॥ ಇತ್ಯೇತದ್ಧ್ಯಾನಯೋಗ್ಯಾಶ್ಚ ಮುನಯೋ ದೇವತಾಸ್ತಥಾ ॥ ಮಾನುಷಾ ಜ್ಞಾನಮಾತ್ರೇಣ ಸ್ವಾವರೈಃ ಪೂಜ್ಯತಾಮಿಯುಃ ॥ ಮುಕ್ತಾಮುಕ್ತೈರ್ಮುಕ್ತಿಯೋಗ್ಯಾ ಇತಿ ಶಾಸ್ತ್ರಸ್ಯ ನಿರ್ಣಯಃ ॥

ಅ ॥ ಪೂರ್ವೋಕ್ತವಾದ ಈ ಧ್ಯಾನಕ್ಕೆ ಯೋಗ್ಯರಾದವರು ಋಷಿಗಳು. ಹಾಗೂ ದೇವತೆಗಳು ಮುಕ್ತಿಗೆ ಯೋಗ್ಯರಾದವರು ಕೇವಲ ಜ್ಞಾನದಿಂದ ಮುಕ್ತರಾಗಿ ತಮ್ಮಿಂದ ಅವರರಾದ ಮುಕ್ತರಿಂದ ಪೂಜ್ಯತನವನ್ನು ಹೊಂದುತ್ತಾರೆ. ಎಂದು ಸರ್ವ ಶಾಸ್ತ್ರದ ಸಿದ್ಧಾಂತವು.

ಭಾ॥ (a) ಸ ಏಷ ಭಗವಾನ್ವಿಷ್ಣುಃ ಸತ್ಯಮಿತ್ಯಭಿಧೀಯತೇ ॥ ಸರ್ವೋತ್ತಮತ್ವಾತ್ಪೂರ್ಣತ್ವಾತ್ಸರ್ವಜ್ಞತ್ವಾತ್ತಥೈವ ಚ । ದೇವತಾತ್ರಯಮನ್ಯಚ್ಚ ಪೃಥಕ್ಸತ್ಯಮಿತೀರ್ಯತೇ ॥ (b) ಶೇಷವೀಂದ್ರಶಿವಾದಿಭ್ಯಃ ಉತ್ತಮತ್ವಾತ್ಸದೈವ ಹಿ । ವಾಯುಃ ಸದಿತಿ ಸಂಪ್ರೋಕ್ತೋ ಜೀವೇಷು ತು ಸುಪೂರ್ಣತಃ ॥ ತೀತಿ ಬ್ರಹ್ಮಾ ಸಮುದ್ದಿಷ್ಟಃ ಸ ಏವಾನ್ನಾಭಿಮಾನವಾನ್ । (c) ಅನ್ನಂ ಪ್ರಜಾಪತಿರಿತಿ ಶ್ರುತಿರನ್ಯಾ ಹ್ಯಭಾಷತ ॥ ಅತಿನಾದಾತ್ಸದಾ ವೇದೈರಪ್ಯನ್ನಂ ಸ ಚತುರ್ಮುಖಃ । (d) ಯಮಿತ್ಯಾದಿತ್ಯ ಉದ್ದಿಷ್ಟೋ

ಯಮಯೇದ್ಯತ್ಪ್ರಕಾಶನಾತ್ ॥ ದೇವತಾತ್ರಯಮೇತತ್ತು ಸಹಿತಂ ಸತ್ಯ ಮುಚ್ಯತೇ ॥ (e) ಶುಕ್ಲ ಕೃಷ್ಣ ಕನೀನಾಸು ಚಕ್ಷುಷೋಽಪ್ಯೇತ ಆಸ್ಥಿತಾಃ ।

ಅ ॥ (a) ಆ ಈ ಪೂಜ್ಯನಾದ ಹರಿಯು ಸರ್ವೋತ್ತಮನಾದುದರಿಂದ (ಸತ್) ಗುಣಪರಿಪೂರ್ಣನಾದುದರಿಂದ (ತಿ) ಸರ್ವಜ್ಞನಾದುದರಿಂದ (ಯ) ಅಂತು 'ಸತ್ಯ' ಎಂದು ಹೇಳಲ್ಪಡುತ್ತಾನೆ. ಇತರರಾದ ಮೂರು ದೇವತೆಗಳು ಪ್ರತ್ಯೇಕವಾಗಿ ಸತ್ಯರೆಂದು ಹೇಳಲ್ಪಡುತ್ತಾರೆ. ॥ (b) ಮುಖ್ಯಪ್ರಾಣದೇವರೂ ಶೇಷ, ಗರುಡ, ರುದ್ರ, ಇವರೇ ಮೊದಲಾದ ಎಲ್ಲಾ ದೇವತೆಗಳಿಂದಲೂ ಯಾವಾಗಲೂ ಉತ್ತಮರಾದುದರಿಂದ 'ಸತ್' ಎಂದು ಹೇಳಲ್ಪಡುತ್ತಾರೆ. ಜೀವರ ಮಧ್ಯದಲ್ಲಿ ಅತಿಶಯವಾಗಿ ಗುಣಪರಿಪೂರ್ಣನಾದುದರಿಂದ ಚತುರ್ಮುಖನು 'ತಿ' ಎಂದು ಹೇಳಲ್ಪಡುತ್ತಾನೆ. ಆತನೇ (ಸರ್ವರಿಗೂ ಉಪಜೀವ್ಯನಾದುದರಿಂದ) ಅನ್ನಕ್ಕೆ ಅಭಿಮಾನಿಯಾಗಿ ಅನ್ನನಾಮಕನು. ॥ (c) ಪ್ರಜೆಗಳಿಗೆ ಅಧಿಪತಿಯಾದ ಚತುರ್ಮುಖನು ಅನ್ನಶಬ್ದವಾಚ್ಯನು ಎಂದು ಮತ್ತೊಂದು ಶ್ರುತಿಯು ಹೇಳಿದೆಷ್ಟೆ. ವೇದಗಳಿಂದ ಯಾವಾಗಲೂ ಅತಿಶಯವಾಗಿ ಸ್ತುತಿಸಿಕೊಳ್ಳಲ್ಪಡುವ ಪ್ರಯುಕ್ತವೂ ಆ ಚತುರ್ಮುಖನು 'ಅನ್ನ' ಎನ್ನಿಸಿ ಕೊಳ್ಳುತ್ತಾನೆ. ॥ (d) ಯಾವ ಕಾರಣದಿಂದ ಸೂರ್ಯನು ಪ್ರಕಾಶದಿಂದ (ಸರ್ವಲೋಕವನ್ನೂ) ನಿಯಮಿಸುತ್ತಾನೋ ಆ ಕಾರಣ 'ಯಂ' ಎಂದು ಹೇಳಲ್ಪಡುತ್ತಾನೆ. ಈ ಮೂರು ದೇವತೆಗಳು ಮಿಲಿತರಾಗಿಯೇ 'ಸತ್ಯ'ರೆಂದು ಹೇಳಲ್ಪಡುತ್ತಾರೆ. ॥ (e) ಈ ದೇವತೆಗಳೇ ಕಣ್ಣಿನ ಶುಕ್ಲ (ಬಿಳಿಪು) ಕೃಷ (ಕಪ್ಪು) ಕನೀನಿಕ ಗುಡ್ಡುವೆಂಬೀ (ಮೂರು) ಸ್ಥಾನಗಳಲ್ಲಿ ಆಶ್ರಿತರಾಗಿದ್ದಾರೆ.

ಭಾ॥ **(a)** ಏವಂ ಸತ್ಯಪದಾರ್ಥಂ ಹಿ ವಿಜ್ಞಾಯೋಪಾಸ್ತ ಆದರಾತ್ । ಯೋಗ್ಯಸ್ತಸ್ಯಾ ಉಪಾಸಾಯಾ ನೈವಾಸತ್ಯೇನ ದುಷ್ಯತಿ ॥ **(b)** ದೇವತಾ ಮುನಯಶ್ಚೈವ ಯೋಗ್ಯಾ ಅಸ್ಯಾ ಅಪಿ ಸ್ಫುಟಂ । ಮಾನುಷಾಣಾಂ ಜ್ಞಾನಮಾತ್ರಾದ್ದೋಷೋ ನಾತಿತರಾಂ ಭವೇತ್ ॥ ೫ ॥

ಅ ॥ (a) ಯಾರು ಪೂರ್ವೋಕ್ತವಾಗಿ ಸತ್ಯಶಬ್ದಾರ್ಥವನ್ನು ವಿಶ್ವಾಸದಿಂದ ತಿಳಿದು ಉಪಾಸನೆ ಮಾಡುತ್ತಾನೋ ಅಂತಹ ಉಪಾಸನೆಗೆ ಯೋಗ್ಯನಾದವನು ಸುಳ್ಳು ಮಾತಿನಿಂದ ದುಷ್ಟನಾಗುವುದಿಲ್ಲ. (ಸುಳ್ಳನ್ನಾಡಿದರೂ ತನ್ನಿಮಿತ್ತವಾಗಿ ದೋಷಿಯಾಗುವುದಿಲ್ಲ). ॥ (b) ಈ ಉಪಾಸನೆಗೂ ಕೂಡ ದೇವತೆಗಳೂ ಋಷಿಗಳೂ ಇವರೇ ಮುಖ್ಯ ಯೋಗ್ಯರು ಮನುಷ್ಯರಿಗೆ ಕೇವಲ ಜ್ಞಾನದಿಂದಲೇ ಅಸತ್ಯವಚನನಿಮಿತ್ತವಾಗಿ ದೋಷವು ಅತಿಶಯವಾಗಿ ಆಗಲಾರದು. ॥ ೫ ॥

**ಮಂ ॥ ತಸ್ಯ ವಾಕ್ತಂತಿರ್ನಾಮಾನಿ ದಾಮಾನಿ ತಸ್ಯೇದಂ ವಾಚಾ ತಂತ್ಯಾ ನಾಮಭಿರ್ದಾಮಭಿಃ ಸರ್ವಂ ಸಿತಂ ಸರ್ವಂ ಹೀದಂ ನಾಮಾನೀ೮ ೬ ಸರ್ವಂ ವಾಚಾಽಭಿವದತಿ ವಹಂತಿ ಹ ವಾ ಏನಂ ತಂತಿಸಂಬದ್ಧಾ ಯ ಏವಂ ವೇದ ತಸ್ಯೋಷ್ಣಿಗ್ಲೋಮಾನಿ ತ್ವಗ್ಗಾಯತ್ರೀ ತ್ರಿಷ್ಟುಪ್ಮಾಂಸಮನುಷ್ಟುಪ್ಸ್ನಾವಾನ್ಯಸ್ಥಿ ಜಗತೀ ಪಂಕ್ತಿರ್ಮಜ್ಜಾ ಪ್ರಾಣೋ ಬೃಹತೀ ಸಚ್ಛಂದೋಭಿಶ್ಛನ್ನೋ ಯಚ್ಛಂದೋಭಿಶ್ಛನ್ನಸ್ತಸ್ಮಾಚ್ಛಂದಾಂಸೀತ್ಯಾಚಕ್ಷತೇ ಛಾದಯಂತಿ ಹ ವಾ ಏನಂ ಛಂದಾಂಸಿ ಪಾಪಾತ್ಕರ್ಮಣೋ ಯಸ್ಯಾಂ ಕಸ್ಯಾಂಚಿದ್ದಿಶಿ ಕಾಮಯತೇ ಯ ಏವಮೇತಚ್ಛಂದಸಾಂ ಛಂದಸ್ತ್ವಂ ವೇದ ತದುಕ್ತಮೃಷಿಣಾಽಪಶ್ಯಂ**

ಗೋಪಾಮಿತ್ಯೇಷ ವೈ ಗೋಪಾ ಏಷ ಹೀದಂ ಸರ್ವಂ ಗೋಪಾಯ ತ್ಯನಿಪದ್ಯಮಾನಮಿತಿ ನ ಹ್ಯೇಷ ಕದಾಚನ ಸಂವಿಶತ್ಯಾ ಚ ಪರಾ ಚ ಪಥಿಭಿಶ್ಚರಂತಮಿತ್ಯಾ ಚ ಹ್ಯೇಷ ಪರಾ ಚ ಪಥಿಭಿಶ್ಚರತಿ ಸ ಸಧ್ರೀಚೀಃ ಸ ವಿಷೂಚೀರ್ವಸಾನ ಇತಿ ಸಧ್ರೀಚೀಶ್ಚ ಹ್ಯೇಷ ವಿಷೂಚೀಶ್ಚ ವಸ್ತ ಇಮಾ ಏವ ದಿಶ ಆವರೀವರ್ತಿ ಭುವನೇಷ್ವಂತರಿತ್ಯೇಷ ಹ್ಯಂತ ರ್ಭುವನೇಷ್ವಾವರೀವರ್ತ್ಯಥೋ ಆವೃತಾಸೋಽವತಾಸೋ ನ ಕರ್ತೃ ಭಿರಿತಿ ಸರ್ವಂ ಹೀದಂ ಪ್ರಾಣೇನಾವೃತಂ ಸೋಽಯಮಾಕಾಶಃ ಪ್ರಾಣೇನ ಬೃಹತ್ಯಾ ವಿಷ್ಟಬ್ಧಸ್ತದ್ಯಥಾಽಯಮಾಕಾಶಃ ಪ್ರಾಣೇನ ಬೃಹತ್ಯಾ ವಿಷ್ಟಬ್ಧ ಏವಂ ಸರ್ವಾಣಿ ಭೂತಾನ್ಯಾ ಪಿಪೀಲಿಕಾಭ್ಯಃ ಪ್ರಾಣೇನ ಬೃಹತ್ಯಾ ವಿಷ್ಟಬ್ಧಾನೀತ್ಯೇವ ವಿದ್ಯಾತ್ ॥ ೬ ॥

ಅ ॥ ತಸ್ಯ=ನಾರಾಯಣನಿಗೆ, ವಾಕ್=ವೇದರೂಪವಾದ ಮಾತು, (ಜಗತ್ತೆಂಬ ಪಶುವಿನ ಬಂಧನದಲ್ಲಿ) ತಂತಿಃ=ಮಹಾರಜ್ಜುರೂಪವಾದದ್ದು, ನಾಮಾನಿ=ವೇದದಲ್ಲಿದ್ದ ಬ್ರಹ್ಮ ರುದ್ರಾದಿ ನಾಮಗಳೂ ವಿಪ್ರಾದಿನಾಮಗಳೂ ಕೂಡ, ದಾಮಾನಿ=ಅವಾಂತರರಜ್ಜುರೂಪಗಳು. ತತ್=ಆದುದರಿಂದ, ಅಸ್ಯ=ಈ ನಾರಾಯಣನ, ವಾಚಾ=ವೇದವಚನರೂಪವಾದ, ತಂತ್ಯಾ= ಮಹಾರಜ್ಜುವಿನಿಂದಲೂ, ನಾಮಭಿಃ=ಬ್ರಹ್ಮಾದಿ ನಾಮರೂಪಗಳಾದ, ದಾಮಭಿಃ=ಅವಾಂತರ ಹಗ್ಗಗಳಿಂದಲೂ, ಇದಂ ಸರ್ವಂ=ಈ ಬ್ರಹ್ಮಾದಿ ಸರ್ವ ಜಗತ್ತು, ಸಿತಂ=ಕಟ್ಟಲ್ಪಟ್ಟಿದೆ. ಇದಂ ಸರ್ವಂ=ಈ ಸಮಸ್ತ ಜಗತ್ತು, ನಾಮಾನೀ॰ ३ ಹಿ=ನಾಮದಲ್ಲಿಯೇ ಇರುತ್ತದೆ. (ಸರ್ವರೂ ನಾಮವುಳ್ಳವರೇ ಸರಿ) ಸರ್ವಂ=ಸಮಸ್ತ ಬ್ರಹ್ಮಾದಿ ಜಗತ್ತನ್ನು, ವಾಚಾ=ವೇದ ವಚನದಿಂದ, ಅಭಿವದತಿ=(ಶ್ರೀ ಹರಿಯು) ಹೇಳುತ್ತಾನೆ. (ಶ್ರೀಹರಿಯು ಸರ್ವರಿಗೂ ವೇದದಲ್ಲಿ ಹೇಳಿದ ನಾಮಗಳನ್ನೇ ಸಂಕೇತಮಾಡುತ್ತಾನೆ.) ಯಃ=ಯಾರು, ಏವಂ=ಪೂರ್ವೋಕ್ತ ರೀತಿಯಾಗಿ, ವೇದ=ತಿಳಿಯುತ್ತಾನೋ, ಏನಂ=ತಿಳಿದವನನ್ನು ಕುರಿತು, ತಂತಿಸಂಬದ್ಧಾಃ=ವೇದದಲ್ಲಿ ಹೇಳಲ್ಪಟ್ಟ ದೇವಾದಿಗಳು, ವಹಂತಿ=(ಸಂಸಾರದಲ್ಲಿಯೂ ಮುಕ್ತಿಯಲ್ಲಿಯೂ ಬಲಿಯನ್ನು) ಹೊಂದಿಸುತ್ತಾರೆ. ಅಥವಾ, ತಂತಿ ಸಂಬದ್ಧಾಃ=ಪಂಚಭೂತಾಭಿಮಾನಿಗಳಾದ ವಿಷ್ವೀಶಾದಿ ಗಳು, (ಅಶ್ವರೂಪರಾಗಿ) ಏನಂ=ರಥದಲ್ಲಿರತಕ್ಕ ಅಧಿಕಾರಿಯನ್ನು, ವಹಂತಿ=ಹೊರು ತ್ತಾರೆ. (ಈ ವಿದ್ಯೆಗೆ ಯೋಗ್ಯನಾದವನು ಬ್ರಹ್ಮಪದಯೋಗ್ಯನೇ ಸರಿ.) ಮತ್ತು ತಸ್ಯ=ಆ ಮುಖ್ಯಪ್ರಾಣದೇವರ, ವಾಚಾ, ತಂತ್ಯಾ, ನಾಮಭಿಃ=ಗರುಡಾದಿ ರೂಪಗಳಾದ, ದಾಮಭಿಃ, ಇದಂ ಸರ್ವಂ=ಈ ಗರುಡಾದಿ ಜಗತ್ತು, ಸಿತಂ=...,, ತಸ್ಯ=ಹರಿಯ ಮತ್ತು ವಿಮುಕ್ತ ಮುಖ್ಯಪ್ರಾಣನ, ಲೋಮಾನಿ=ರೋಮಗಳಲ್ಲಿ, ಉಷ್ಣಿಕ್=ಉಷ್ಣಿಕ್‌ಛಂದಸ್ಸುಳ್ಳ ಮಂತ್ರಸಮು ದಾಯವು, (ಆಶ್ರಿತವಾಗಿದೆ) ಅಥವಾ, ತಸ್ಯ=ಆತನ, ಲೋಮಾನಿ=ರೋಮಗಳು, ಉಷ್ಣಿಕ್= ಉಷ್ಣಿಕ್‌ಛಂದಸ್ಸನ್ನಾಶ್ರಯಿಸಿರುವುದರಿಂದಲೂ, ಉಷ್ಣಸ್ವರೂಪವಾಗಿರುವುದರಿಂದಲೂ ಉಷ್ಣಿಕ್ ಶಬ್ದವಾಚ್ಯಗಳು. ಅಥವಾ, ('ಬ್ರಾಹ್ಮಣೋಽಸ್ಯ ಮುಖಂ' ಇತ್ಯಾದಿಗಳಂತೆ ಅಭೇದವ್ಯಪದೇ ಶವು ಔಪಚಾರಿಕವಾದುದು. ಮೇಲೆಯೂ ಇದೇರೀತಿಯಾಗಿ ಅರ್ಥಾಂತರಗಳನ್ನು ತಿಳಿಯತ ಕ್ಕದ್ದು.) ತ್ವಕ್=ಚರ್ಮದಲ್ಲಿ, ಗಾಯತ್ರೀ=ಗಾಯತ್ರೀಛಂದಸ್ಸಿನ ಮಂತ್ರಗಣವು. (ಆಶ್ರಿತವಾ ಗಿದೆ) ಅಥವಾ, ತ್ವಕ್=ಚರ್ಮವು, ಗಾಯತ್ರೀ=ಗಾನ ರಕ್ಷಣಗಳನ್ನು ಮಾಡುವುದರಿಂದಲೂ ಗಾಯಕರನ್ನು ರಕ್ಷಿಸುವ ಪ್ರಯುಕ್ತವೂ ಗಾಯತ್ರೀ ಶಬ್ದವಾಚ್ಯವು. ಮಾಂಸಂ=ಮಾಂಸವು,

ತ್ರಿಸ್ಟುಪ್=ಮೂರು ವೇದಗಳಿಂದ ಸ್ತುತಿಸಿಕೊಳ್ಳಲ್ಪಡುವುದರಿಂದ, ತ್ರಿಸ್ಟುಪೆನ್ನಿಸಿ ಕೊಳ್ಳಲ್ಪಡುತ್ತದೆ. ಸ್ನಾವಾನಿ=ಮಜ್ಜಾವಿಶೇಷಗಳು, (ನರಗಳು) ಅನುಷ್ಟುಪ=ಅನುಕೂಲವಾಗಿ ಸ್ತುತಿಸಿಕೊಳ್ಳಲ್ಪಡುವ ಪ್ರಯುಕ್ತ ಅನುಷ್ಟುಪೆನ್ನಿಸಿ ಕೊಳ್ಳಲ್ಪಡುತ್ತದೆ. ಅಸ್ಥಿ=ಎಲುಬು, ಜಗತೀ=ಹುಟ್ಟಿದ್ದಕ್ಕೆಲ್ಲಾ ಆಶ್ರಯವಾದುದರಿಂದ ಜಗತೀ ಎನ್ನಿಸಿಕೊಳ್ಳಲ್ಪಡುತ್ತದೆ. ಮಜ್ಜಾ=ಮಾಂಸವಿಶೇಷವು, ಪಜ್ತಿಃ=ಐದು ಸ್ವರೂಪವುಳ್ಳದ್ದಾದುದರಿಂದ ಪಜ್ತಿ ಶಬ್ದವಾಚ್ಯವಾದುದು. ಪ್ರಾಣಃ=ಪ್ರಾಣನು, ಬೃಹತೀ=ಪೂರ್ಣನಾದುದರಿಂದ ಬೃಹತೀ ಶಬ್ದವಾಚ್ಯನು. ಸಃ=ಆ ಹರಿವಾಯುಗಳು, ಛಂದೋಭಿಃ=ಉಷ್ಣಿಗಾದಿ ಛಂದಸ್ಸುಗಳಿಂದ, (ಶರೀರವು ಕವಚಗಳಿಂದೆಂಬಂತೆ) ಆಚ್ಛಾದಿಸಿ ಕೊಳ್ಳಲ್ಪಟ್ಟಿದ್ದಾರೆ. ಯತ್=ಯಾವ ಕಾರಣದಿಂದ, ಛಂದೋಭಿಃ=ಉಷ್ಣಿಗಾದಿ ಛಂದಸ್ಸುಗಳಿಂದ, ಛನ್ನಃ=ಆಚ್ಛಾದಿತನಾಗಿರುತ್ತಾನೋ, ತಸ್ಮಾತ್=ಅದರಿಂದ(ಅವುಗಳನ್ನು)ಛಂದಾಂಸೀತಿ=ಛಂದಸ್ಸುಗಳನ್ನಾಗಿಯೇ, ಆಚಕ್ಷತೇ=(ವಿದ್ವಾಂಸರು) ಹೇಳುತ್ತಾರೆ. ಯಃ=ಯಾವ ಅಧಿಕಾರಿಯು, ಛಂದಸಾಂ=ಛಂದಸ್ಸುಗಳಿಗೆ, ಏತತ್=ಈ (ವಿಷ್ಣುವನ್ನಾಚ್ಛಾದಿಸತಕ್ಕ) ಛಂದಸ್ತ್ವಂ=ಛಂದಶ್ಶಬ್ದಪ್ರವೃತ್ತಿನಿಮಿತ್ತವನ್ನು, ವೇದ=ತಿಳಿಯುತ್ತಾನೋ, ಯಸ್ಯಾಂ ಕಸ್ಯಾಂಚಿದ್ದಿಶಿ=ಯಾವದೊಂದು ದಿಕ್ಕಿನಲ್ಲಿ, ಕಾಮಯತೇ=ಆವಾಸಮಾಡಲಿಚ್ಛಿಸುತ್ತಾನೋ, ಏನಂ=ಈ ದಿಕ್ಕಿನಲ್ಲಿ ಆವಾಸ ಮಾಡುವ ಇವನನ್ನು, ಛಂದಾಂಸಿ=ಛಂದಸ್ಸುಗಳು, ಪಾಪಾತ್ಕರ್ಮಣಃ=ಪಾಪಕರ್ಮವನ್ನು ಹೋಗಲಾಡಿಸಿ, ಛಾದಯಂತಿ=ರಕ್ಷಿಸುತ್ತವೆ. (ಇಲ್ಲಿ ಛಂದಸ್ಸಿನಲ್ಲಿರತಕ್ಕ ಛಂದೋನಾಮಕ ಹರಿಯೇ ಮುಖ್ಯವಾಗಿ ಪಾಪಗಳನ್ನು ಹೋಗಲಾಡಿಸಿ ರಕ್ಷಿಸುವನು. ಛಂದಸ್ಸುಗಳಾದರೂ ಶ್ರೀ ಹರಿಯ ಸಮ್ಬಂಧದಿಂದಲೇ ಎಂದು ತಿಳಿಯತಕ್ಕದ್ದು. ಈ ಫಲವು ಇದನ್ನು ಉಪಾಸನಾ ಮಾಡಲರ್ಹರಾದ ಭೃಗ್ವಾದಿಗಳಿಗೂ, ದೇವತೆಗಳಿಗೂ ಮುಖ್ಯವೆಂದು ತಿಳಿಯತಕ್ಕದ್ದು.) ತತ್=ಆ ಪ್ರಮೇಯವು, ಋಷಿಣಾ=ಮಂತ್ರವನ್ನು ನೋಡಿದ ಶ್ರೀಹರಿಯಿಂದ, ಉಕ್ತಂ=ಹೇಳಲ್ಪಟ್ಟಿದೆ. 'ಅಪಶ್ಯಂ ಗೋಪಾಮನಿಪದ್ಯಮಾನಮಾ ಚ ಪರಾಚ ಪಥಿಭಿಶ್ಚರಂತಂ। ಸ ಸಧ್ರೀಚೀಃ ಸ ವಿಷೂಚೀರ್ವಸಾನ ಆವರೀ ವರ್ತಿ ಭುವನೇಷ್ವಂತಃ॥' ಎಂಬೀ ಮಂತ್ರದ ಅರ್ಥವು ಈ ರೀತಿಯಾಗಿದೆ. ಗೋಪಾಂ=ಛಂದೋ ವಿದ್ಯೆಯನ್ನು ತಿಳಿದವರನ್ನು ಪಾಪದಿಂದ ಬಿಡುಗಡೆ ಮಾಡುವ, ಅನಿಪದ್ಯಮಾನಂ=ಯಾವಾಗಲೂ ಒಂದೇ ಪ್ರದೇಶದಲ್ಲಿ ಸುಮ್ಮನೆ ಕೂತುಕೊಳ್ಳದೆ ಇರುವ, ಆ ಚ ಪರಾ ಚ ಪಥಿಭಿಶ್ಚರಂತಂ=ಸರ್ವತ್ರ ಸಂಚಾರಿಯಾದ ಛಂದಸ್ಸಿನಲ್ಲಿರತಕ್ಕ ವಾಯುವನ್ನೂ ವಾಯುವಿನಲ್ಲಿರತಕ್ಕ ಹರಿಯನ್ನೂ, ಅಪಶ್ಯಂ=ನೋಡಿದೆನು. ಸಃ=ಹರಿವಾಯುಗಳು, ಸಧ್ರೀಚೀಃ=ಋಜುಗಳಾದ ಪೂರ್ವಾದಿ ದಿಕ್ಕುಗಳಲ್ಲಿ, ವಸಾನಃ=ಆವಾಸಮಾಡುತ್ತಾರೆ. ಸಃ=ಆತನೇ, ವಿಷೂಚೀಃ=ವಕ್ರಗಳಾದ ಆಗ್ನೇಯಾದಿ ದಿಕ್ಕುಗಳಲ್ಲಿಯೂ (ಆವಾಸ ಮಾಡುತ್ತಾನೆ ಈತನೇ) ಭುವನೇಷು ಅಂತಃ=ಸರ್ವಲೋಕಗಳೊಳಗೂ, ಆವರೀವರ್ತಿ=ಸಾಕ್ಷಿಯಾಗಿದ್ದಾನೆ. (ಈ ಹೇಳಿದ ಮಂತ್ರದ ಅರ್ಥವು ಕಠಿಣವಾದುದರಿಂದ ಶ್ರುತಿಯು ತಾನೇ ಕ್ರಮವಾಗಿ ಮಂತ್ರಭಾಗಗಳನ್ನನುವಾದ ಮಾಡಿ ವ್ಯಾಖ್ಯಾನಮಾಡುತ್ತದೆ). "ಅಪಶ್ಯಂ ಗೋಪಾಮಿತಿ" ಅಂದರೆ ಹಿ=ಯಾವ ಕಾರಣದಿಂದ, ಏಷಃ=ಇವನು, ಇದಂ ಸರ್ವಂ=ಈ ಸಮಸ್ತ ಛಂದಸ್ಸನ್ನು ತಿಳಿದವನನ್ನೂ, ಗೋಪಾಯತಿ=(ಪಾಪದಿಂದ) ಬಿಡುಗಡೆ ಮಾಡುತ್ತಾನೋ ಆ ಕಾರಣ, ಏಷಃ=ಛಂದೋನಿಯಾಮಕವಾಯುವಿನಲ್ಲಿರತಕ್ಕ ಹರಿಯು, ಗೋಪಾ ವೈ=ರಕ್ಷಕನೇ ಸರಿ. 'ಅನಿಪದ್ಯಮಾನಮಿತಿ' ಅಂದರೆ ಏಷಃ=ವಾಯುವು ಆತನಲ್ಲಿರತಕ್ಕ ಹರಿಯೂ ಕೂಡ, ಕದಾಚನ=ಯಾವಾಗಲೂ, ನ ಸಂವಿಶತಿ=ಸುಮ್ಮನೆ ಇರುವುದಿಲ್ಲ. (ಯಾವಾಗಲೂ ಸರ್ವ ಪ್ರವೃತ್ತಿಯುಳ್ಳವನೇ ಆಗುತ್ತಾನೆ.) 'ಆ ಚ ಪರಾ ಚ ಪಥಿಭಿಶ್ಚರಂತಮಿತಿ' ಅಂದರೆ ಏಷಃ=ಈ ಹರಿವಾಯುಗಳು, ಆ ಚ=ಚೆನ್ನಾಗಿ,

(ಪಂಚಭೂತಗಳ ಒಳಗೂ) ಪರಾ ಚ=ಪಂಚಭೂತಗಳಿಂದ ಹೊರಗೂ ಕೂಡ, ಪಥಿಭಿಃ=ತಮ್ಮ ಇಷ್ಟಮಾರ್ಗಗಳಿಂದ, ಚರತಿ=ಸಂಚರಿಸುತ್ತಾರೆ. 'ಸ ಸಧ್ರೀಚೀಃ ಸ ವಿಷೂಚೀರ್ವಸಾನ' ಇತಿ ಅಂದರೆ ಏಷ ಹಿ=ಈ ಹರಿವಾಯುಗಳು, ಸಧ್ರೀಚೀಃ=ಋಜುಗಳಾದ ಪ್ರಾಚ್ಯಾದಿ ನಾಲ್ಕು ದಿಕ್ಕುಗಳಲ್ಲಿಯೂ, ವಿಷೂಚೀಃ=ವಕ್ರಗಳಾದ ಆಗ್ನೇಯಾದಿ ನಾಲ್ಕು ದಿಕ್ಕುಗಳಲ್ಲಿಯೂ, ವಸ್ತೇ=ಆವಾಸಮಾಡುತ್ತಾರೆ. ದಿಶ ಏವ=ದಿಕ್ಕುಗಳೇ, ಇಮಾಃ=ಸಧ್ರೀಚ್ಯಾದಿ ಪದವಾಚ್ಯಗಳು, 'ಆವರೀವರ್ತಿ ಭುವನೇಷ್ವಂತರಿತಿ' ಅಂದರೆ ಏಷ ಹಿ=ಈ ಹರಿವಾಯುಗಳು, ಭುವನೇಷ್ವಂತಃ=ಸರ್ವ ಲೋಕಗಳಲ್ಲಿಯೂ, ಆವರೀವರ್ತಿ=ಚೆನ್ನಾಗಿರುತ್ತಾರೆ. (ಲೋಕಗಳನ್ನು ನೋಡಿಕೊಂಡೇ ಇರುತ್ತಾರೆ.)

(ಇದಕ್ಕೆ ಸಮಾಖ್ಯಾರೂಪವಾದ ಮಂತ್ರಾಂತರವನ್ನು ಉದಾಹರಿಸುತ್ತಾರೆ. "ಅಪ್ರಕ್ಷಿತಂ ವಸು ಬಿಭರ್ಷಿ ಹಸ್ತಯೋರಷಾಢ್ಹಂ ಸಹಸ್ತನ್ವಿಶ್ರುತೋ ದಧೇ । ಆವೃತಾಸೋಽವತಾಸೋ ನಕರ್ತೃಭಿಸ್ತನೂಷು ತೇ ಕ್ರತವ ಇಂದ್ರ ಭೂರಯಃ" ॥ (ಸಮಗ್ರಮಂತ್ರಾರ್ಥವು). ಇಂದ್ರ=ಎಲೋ ಪರಮೇಶ್ವರನೇ, ಅಪ್ರಕ್ಷಿತಂ=ನಾಶಶೂನ್ಯವಾದ, ವಸು=ದ್ರವ್ಯವನ್ನು, ಹಸ್ತಯೋಃ=ಕೈಗಳಲ್ಲಿ, ಬಿಭರ್ಷಿ=ಧರಿಸಿದ್ದಿ. ಅಷಾಢ್ಹಂ=ಸಹಿಸಲಿಕ್ಕೆ ಅಶಕ್ಯವಾದ, ಸಹಃ=ಸಾಮರ್ಥ್ಯವನ್ನು, ತನ್ವಿ=ತನ್ನಶರೀರದಲ್ಲಿ, ಶ್ರುತಃ=ಪ್ರಸಿದ್ಧನಾದ ನೀನು, ದಧೆ=ಧರಿಸಿದ್ದಿ. ಕರ್ತೃಭಿಃ=ಧನವನ್ನು ಸಂಗ್ರಹಿಸುವವರಿಂದ, ಅವತಾಸೋ ನ=ಸುವರ್ಣವನ್ನು ಹಾಕಿಡತಕ್ಕ ಮಾಳಿಗೆಗಳಂತೆ, ಭೂರಯಃ=ಅಪರಿಮಿತರಾದ, ಕ್ರತವಃ=ಜ್ಞಾನರೂಪರಾದ ಜೀವರು, ತೆ=ನಿನ್ನ, ತನೂಷು=ಶರೀರಗಳಲ್ಲಿ, ಆವೃತಾಸಃ=ರಕ್ಷಿಸಲ್ಪಡುತ್ತಾರೆ. ಅಥ=ಹಿಂದೆ ಹೇಳಿದ "ಛಾದಯಂತಿಹವಾ ಏನಂ ಛಂದಾಂಸಿ" ಎಂಬ ಅರ್ಥದಲ್ಲಿ ಸಮ್ಮತಿಯಾಗಿ, 'ಅಪಶ್ಯಂ ಗೋಪಾಂ' ಎಂಬೀ ಮಂತ್ರವನ್ನು ಉದಾಹರಿಸಿದ ನಂತರದಲ್ಲಿ ('ಸರ್ವಂಹೀದಂ ಪ್ರಾಣೇನಾವೃತಂ' ಎಂಬೀ ಮೇಲಿನ ಅರ್ಥದಲ್ಲಿಯೂ, ಮಂತ್ರವು ಉದಾಹರಿಸಲ್ಪಡುವುದು. ಅದರಲ್ಲಿ ಇತರ ಪಾದಗಳಿಗೆ ಪ್ರಕೃತ ಉಪಯೋಗವಿಲ್ಲದ ಪ್ರಯುಕ್ತ ತೃತೀಯ ಪಾದವನ್ನು ಮಾತ್ರ ಉದಾಹರಿಸುತ್ತಾರೆ). "ಆವೃತಾಸೋಽವತಾಸೋ ನ ಕರ್ತೃಭಿಃ"=ಎಂದು. (ಅರ್ಥವು ಪೂರ್ವದಲ್ಲೇ ಉಕ್ತವಾಯಿತು.

ಹೀಗೆ ಸಮಾಖ್ಯಾ (ಅದೇ ಅರ್ಥವನ್ನು ತೋರಿಸುವ ಸಮ್ಮತಿವಚನವು) ಮಂತ್ರವನ್ನು ಆದಿಯಲ್ಲಿ ಉದಾಹರಿಸಿ ಸಮಾಖ್ಯೆಯ ಅರ್ಥವನ್ನು ಹೇಳುತ್ತಾರೆ). ಪ್ರಾಣೇನ=ಹರಿವಾಯುಗಳಿಂದ, ಇದಂ ಸರ್ವಂ=ಈ ಚೇತನಾಚೇತನ ಸಮುದಾಯವು, ಆವೃತಂ=(ತಮ್ಮ ಶರೀರದಲ್ಲಿಯೇ) ರಕ್ಷಿಸಲ್ಪಟ್ಟದೆ, ಹಿ=ಪ್ರಸಿದ್ಧವು. ಸೋಽಯಮಾಕಾಶಃ=ಆ ಈ ಪ್ರಕೃತಿಯು, (ವಾಯುವೂ ಕೂಡಾ) ಬೃಹತ್ಯಾ=ಬೃಹತೀ ಶಬ್ದವಾಚ್ಯನಾದ, ಪ್ರಾಣೇನ=ಶ್ರೀ ಹರಿಯಿಂದ, ವಿಷ್ಟಬ್ಧಃ=ಧರಿಸಲ್ಪಟ್ಟದೆ. ತತ್=ಮೇಲೆ ಹೇಳುವ ಅರ್ಥದಲ್ಲಿ, (ಪೂರ್ವೋಕ್ತವೇ ದೃಷ್ಟಾಂತವು) ಯಥಾ=ಹೇಗೆ, ಅಯಮಾಕಾಶಃ=ಬೃಹತ್ಯಾ ಪ್ರಾಣೇನ ವಿಷ್ಟಬ್ಧಃ ...... ಏವಂ=ಈ ಪ್ರಕಾರವಾಗಿ, ಆ ಪಿಪೀಲಿಕಾಭ್ಯಃ=ಇರುವೆಗಳನ್ನಾರಂಭಿಸಿ, ಸರ್ವಾಣಿ ಭೂತಾನಿ=ಸಮಸ್ತ ಪ್ರಾಣಿಗಳು, ಬೃಹತ್ಯಾ ಪ್ರಾಣೇನ=ಮುಖ್ಯವಾಗಿ ಬೃಹತೀಪ್ರಾಣಶಬ್ದವಾಚ್ಯನಾದ ವಿಷ್ಣುವಿನಿಂದಲೂ, ಅಮುಖ್ಯವಾಗಿ ಮುಖ್ಯಪ್ರಾಣನಿಂದಲೂ, (ಪ್ರಕೃತಿಯಿಂದಲೂ ಕೂಡಾ) ವಿಷ್ಟಬ್ಧಾನಿ=ಧರಿಸಲ್ಪಟ್ಟಿದ್ದಾವೆ. ಇತ್ಯೇವ=ಹೀಗಿಯೇ, ವಿದ್ಯಾತ್=ತಿಳಿಯತಕ್ಕದು. ॥ ೬ ॥

ಭಾ॥ **(a)** ತಸ್ಯ ನಾರಾಯಣಸ್ಯೈವ ಸರ್ವವೇದಾತ್ಮಿಕಾ ಹಿ ವಾಕ್ । ತಂತಿರೂಪಾ ಜಗದ್ಬಂಧೇ ನಾಮ ಬ್ರಹ್ಮಾದಿಕಂ ಚ ಯತ್ ॥ ವಿಪ್ರಕ್ಷತ್ರಿಯ

ವೈಶ್ಯಾದಿರೂಪಂ ಜಾಖಿಲಮೇವ ತು । ದಾಮ (b) ತೇನೈವ ಬಧ್ನಾತಿ ಸಕಲಂ ಜಗದಚ್ಯುತಃ ॥ ಸರ್ವೇ ಹಿ ನಾಮವಂತೋಽತ್ರ ಸರ್ವೇ ವೇದೋದಿತಾ ಅಪಿ । ವೇದಾತ್ಮಿಕ್ಯಾ ಯತೋ ವಾಚಾ ವಿಷ್ಣುರ್ವದತಿ ಸೋಽಖಿಲಂ ॥

ಅ ॥ (a) ಸರ್ವೋತ್ತಮನೆಂದು ಪ್ರಸಿದ್ಧನಾದ ನಾರಾಯಣನದ್ದೇ ಸರ್ವವೇದರೂಪವಾದ ಮಾತು ಜಗತ್ತನ್ನು ಬಂಧಿಸುವ ವಿಷಯದಲ್ಲಿ ಮಹಾರಜ್ಜುರೂಪವಾಗಿಯದೆ. ಬ್ರಹ್ಮರುದ್ರಾನಿರೂಪವಾದುದು. ಬ್ರಾಹ್ಮಣ, ಕ್ಷತ್ರಿಯ, ವೈಶ್ಯಾದಿ ರೂಪವಾದುದು, ಯಾವುದು ನಾಮಧೇಯವು ಇದೆಯೋ ಇವೆಲ್ಲವೂ ಅವಾಂತರ ರಜ್ಜುರೂಪವಾದುದು. ॥ (b) ಆ ಹೆಸರಿನಿಂದಲೇ ನಾಶಶೂನ್ಯನಾದ ಹರಿಯು ಎಲ್ಲಾ ಜಗತ್ತನ್ನು ಬಂಧಿಸಿದ್ದಾನೆ. ಹೇಗೆಂದರೆ- ಬ್ರಹ್ಮರುದ್ರಾದಿಗಳೆಲ್ಲರೂ ನಾಮವುಳ್ಳವರೇ ಆಗಿದ್ದಾರಷ್ಟೆ. ಯಾವ ಕಾರಣದಿಂದ ಆ ಹರಿಯು ಎಲ್ಲಾ ಬ್ರಹ್ಮಾದಿ ಜಗತ್ತನ್ನು ವೇದರೂಪವಾದ ಮಾತಿನಿಂದಲೇ ಹೇಳುತ್ತಾನೋ, ಕಾರಣ ಸಮಸ್ತರೂ ವೇದಗಳಿಂದ ಹೇಳಲ್ಪಟ್ಟವರೇ ಆಗಿದ್ದಾರೆ.

ಭಾ॥ (a) ಯ ಏತದ್ವಿಷ್ಣುವಾಚೈವ ಬದ್ಧಂ ನಾಮಾಖ್ಯದಾಮಭಿಃ । ಜ್ಞಾತ್ವಾ ಜಗದುಪಾಸ್ತೇ ತು ಯೋಗ್ಯಃ ಸಂಸ್ತದುಪಾಸನೇ ॥ (b)ತಂ ಪ್ರತ್ಯೇವಾಖಿಲಾನ್ಯೇವ ಭೂತಾನಿ ಸಹ ದೈವತೈಃ । ಬಲಿಂ ಹರಂತಿ ಪಂಚಾಥ ಭೂತಾನ್ಯೇನಂ ವಹಂತಿ ಚ ॥ (c) ಯೋಗ್ಯಶ್ಚಾಸ್ಯಾ ಉಪಾಸಾಯಾ ಯೋಗ್ಯೋ ಬ್ರಹ್ಮಪದಸ್ಯ ಯಃ । ಭೂತಯುಕ್ತೇ ರಥೇ ತಸ್ಮಾತ್ಸ ತಿಷ್ಠತಿ ಸುರಾರ್ಚಿತಃ॥ (d) ಮುಕ್ತಃ ಸಂಶ್ಚ ತದನ್ಯೇಷಾಂ ಜ್ಞಾನಮಾತ್ರಾದ್ವಿಮುಕ್ತಿಗೈಃ । ಸ್ವಾವರೈಃ ಸೇವ್ಯತೈವ ಸ್ಯಾತ್ಕೈಶ್ಚಿದೇವ ಕ್ವಚಿತ್ಕ್ವಚಿತ್ ॥

ಅ ॥ (a) ಯಾವಾತನು ಈ ಬ್ರಹ್ಮಾದಿಜಗತ್ತನ್ನು ವಿಷ್ಣುವಿನ ವೇದರೂಪವಾದ ಮಾತಿನಿಂದಲೂ ಬ್ರಹ್ಮಾದಿ ನಾಮಗಳೆಂದು ಹೆಸರುಳ್ಳ ಅವಾಂತರ ರಜ್ಜುಗಳಿಂದಲೂ, ಸಂಬದ್ಧವಾದುದನ್ನಾಗಿ ತಿಳಿದು ಅಂತಹ ಉಪಾಸನೆಯಲ್ಲಿ ಯೋಗ್ಯನಾಗಿ ಉಪಾಸನಾಮಾಡುತ್ತಾನೋ ॥ (b) ಆತನನ್ನು ಕುರಿತೇ (ಆತನಿಗೇನೇ) ಎಲ್ಲಾ ಪ್ರಾಣಿಗಳು ದೇವತೆಗಳಿಂದೊಡಗೂಡಿಯೇ ಪೂಜೆಯನ್ನು ಮಾಡುತ್ತಾರೆ. ಅಥವಾ ಪಂಚಭೂತಾಭಿಮಾನಿಗಳಾದ ವಿಷ್ಣ್ವೀಶಾದಿಗಳು (ಅಶ್ವರೂಪವಾಗಿ ರಥದಲ್ಲಿರುವ) ಇವನನ್ನು ಹೊರುತ್ತಾರೆ. ॥ (c) ಚತುರ್ಮುಖಪದವಿಗೆ ಯಾರು ಯೋಗ್ಯನೋ ಆತನೇ ಈ ಉಪಾಸನೆಗೆ ಯೋಗ್ಯನು. ಆದುದರಿಂದ ಆತನು ಮುಕ್ತನಾಗಿ ಗರುಡಾದಿ ದೇವತೆಗಳಿಂದ ಪೂಜಿಸಲ್ಪಟ್ಟವನಾಗಿ ಭೂತಾಭಿಮಾನಿಗಳಿಂದ ಯುಕ್ತವಾದ (ಹೊರಲ್ಪಟ್ಟ) ರಥದಲ್ಲಿ ಇರುತ್ತಾನೆ. ॥ (d) ಬ್ರಹ್ಮನಿಂದ ಇತರರಾದವರಿಗಾದರೂ ಕೇವಲ ಜ್ಞಾನದಿಂದ ಮುಕ್ತಿಯನ್ನು ಹೊಂದಿದ ತಮ್ಮಿಂದ ಕಡಿಮೆಯುವರಾದ ಕೆಲವರಿಂದಲೇ ಅಲ್ಲಲ್ಲಿ ಸೇವಿಸಿಕೊಳ್ಳುವಿಕೆಯೇ ಆಗುವುದು. (ಅಂದರೆ ಚತುರ್ಮುಖನಿಂದ ಇತರರಾದ ಗರುಡಾದಿಗಳನ್ನು ಅವರಿಂದ ಕಡಿಮೆಯುವರಾದರು ಸೇವಿಸುತ್ತಾ ಇರುತ್ತಾರೆ).

ಭಾ॥ (a) ತಥೈವ ವಾಯುನಾ ಬದ್ಧಂ ಜಗದೇತತ್ತತೋಽವರಂ । ಸುಪರ್ಣಶೇಷಗಿರಿಶಶಕ್ರಸೂರ್ಯಾದ್ಯಮಂಜಸಾ ॥ (b) ವಿಷ್ಣೋರ್ವಾಯೋಶ್ಚ ಲೋಮಾದಾ ಛಂದಾಂಸ್ಯೇವಾಶ್ರಿತಾನಿ ಚ । ವಿಷ್ಣೋರ್ವಿಮುಕ್ತವಾಯೋಶ್ಚ ಲೋಮಾದ್ಯಂ ತು ಚಿದಾತ್ಮಕಂ ॥ (c) ಲೋಮಪ್ರಾಣಾದಿ ಭೇದಶ್ಚ

ಸ್ಯೈವ ಕಸ್ಮಿಂಶ್ಚಿದಾತ್ಮನಿ । ಛನ್ನಶ್ಛಂದೋಭಿರೇವಂ ಸ ಕೇಶವಸ್ತೇನ ಚಾಭಿಧಾ ॥ ಛಂದಾಂಸೀತ್ಯೇವ ತೇಷಾಂ ಹಿ

ಅ ॥ (a) ಹಾಗೆಯೇ ವಾಯುದೇವರಿಂದ ನಿಕೃಷ್ಟವಾದ ಗರುಡ, ಶೇಷ, ರುದ್ರ, ಇಂದ್ರ, ಸೂರ್ಯನೇ ಮೊದಲಾದ ಈ ಜಗತ್ತು ಚನ್ನಾಗಿ ವಾಯುದೇವರಿಂದ ಬದ್ಧವಾಗಿದೆ. (ಗರುಡಾದಿಗಳಿಗೆ ವಾಯುದೇವರು ನಿಯಾಮಕರಾಗಿದ್ದಾರೆ. ॥ (b) ಹರಿವಾಯುಗಳ ರೋಮಾದಿಗಳಲ್ಲಿ ಉಷ್ಣಿಗಾದಿ ಛಂದಸ್ಸುಗಳೇ ಆಶ್ರಿತಗಳಾಗಿವೆ. ವಿಷ್ಣುವಿನ ಮತ್ತು ಮುಕ್ತನಾದ ವಾಯುವಿನ ರೋಮಾದಿಗಳು ಚಿತ್ಸ್ವರೂಪಗಳೇ ಆಗಿವೆ. ॥ (c) (ಕೇಶಗಳನ್ನಾರಂಭಿಸಿ ನಖಾಗ್ರಪರ್ಯಂತವೂ) ಚಿತ್ಸ್ವರೂಪರಾದ ಹರಿವಾಯುಗಳಲ್ಲಿ ರೋಮಪ್ರಾಣಾದಿ ಅವಯುವಗಳಿಂದ ಅತ್ಯಲ್ಪ ಭೇದವೂ ಇಲ್ಲ. ಹೀಗೆ ಅವಯುವಗಳಿಗೆ ಪರಸ್ಪರವಾಗಿಯೂ ಅವಯುವಿಯಿಂದಲೂ ಅಭೇದವು ಸಿದ್ಧವಾಗುತ್ತಿರಲು, ಹರಿವಾಯುಗಳು ಉಷ್ಣಿಗಾದಿ ಛಂದಸ್ಸುಗಳಿಂದ ಆಚ್ಛಾದಿತರಾಗಿದ್ದಾರೆ (ಎಂಬುದು ಸಂಗತವಾಗುತ್ತದೆ). ಇದರಿಂದಲೇ (ಆಚ್ಛಾದಿಸುವುದರಿಂದಲೇ) ಅವುಗಳಿಗೆ ಛಂದಸ್ಸುಗಳೆಂದೇ ಹೆಸರು ಪ್ರಮಾಣಪ್ರಸಿದ್ಧವು.

ಭಾ॥ ಯ ಏವಂ ವಿದುಪಾಸಕಃ । ನಿವಾರಯಂತಿ ಪಾಪೇಭ್ಯಶ್ಛಂದಾಂಸಿ ಕಿಮು ಕೇಶವಃ ॥ ಯೋಗ್ಯಾ ಅಸ್ಯಾಶ್ಚ ವಿದ್ಯಾಯಾ ಭೃಗ್ವಾದ್ಯಾ ದೇವತಾಸ್ತಥಾ । ಛಂದಸ್ಸು ಸಂಸ್ಥಿತೋ ವಿಷ್ಣುರ್ಗೋಪಾಯತ್ಯೇವ ತದ್ವಿದಃ ॥

ಅ ॥ ಯಾರು ಹೀಗೆ ತಿಳಿದು ಉಪಾಸನಾ ಮಾಡುತ್ತಾನೋ ಆತನನ್ನು ಛಂದೋಽಭಿಮಾನಿಗಳು ಪಾಪಗಳಿಂದ ನಿವಾರಿಸುತ್ತಾರೆ. ಯಾವಾಗ ಛಂದೋಽಭಿಮಾನಿಗಳೇ ರಕ್ಷಿಸುತ್ತಾರೋ ಅವರಿಗೂ ಆಶ್ರಯಭೂತನಾದ ಹರಿಯು (ರಕ್ಷಿಸುತ್ತಾನೆಂದು) ಕಿಮು=ಏನು ಹೇಳತಕ್ಕದ್ದು. ಈ ವಿದ್ಯೆಗಾದರೂ ಭೃಗುವೇ ಮೊದಲಾದ ಋಷಿಗಳು ಹಾಗೂ ದೇವತೆಗಳು ಯೋಗ್ಯರಾಗಿದ್ದಾರೆ. ಛಂದಸ್ಸುಗಳಲ್ಲಿರತಕ್ಕ ಹರಿಯು ಛಂದೋಜ್ಞಾನಿಯಾದವರನ್ನು ನಿಶ್ಚಯವಾಗಿ ರಕ್ಷಿಸುತ್ತಾನೆ.

ಭಾ॥ (a) ಮಂತ್ರೋಽಪ್ಯರ್ಥಮಿಮಂ ಪ್ರಾಹಾಪಶ್ಯಂ ಗೋಪಾಮಿತಿ ಸ್ಮ ಹ । ಏಷ ಗೋಪ್ತಾ ಹಿ ಸರ್ವಸ್ಯ ವಾಯುಸ್ಥಃ ಪುರುಷೋತ್ತಮಃ ॥ (b) ಛಂದಸ್ಸು ಸಂಸ್ಥಿತೋ ವಾಯುರ್ವಾಯೌ ಚ ಸ ಜನಾರ್ದನಃ । ವಾಯುಶ್ಚ ವಾಯುಸಂಸ್ಥಶ್ಚ ಕದಾಚಿನ್ನೈವ ತಿಷ್ಠತಃ ॥ (c) ವಾಯುರ್ಹಿ ನಿತ್ಯಸಂಚಾರೀ ಸದಾ ಸರ್ವಪ್ರವೃತ್ತಿಮಾನ್ । ಚೋದಿತಃ ಕೇಶವೇನೈವ ತತ್ಸ್ಥೇನಾಮಿತಶಕ್ತಿನಾ ॥

ಅ ॥ (a) 'ಅಪಶ್ಯಂ ಗೋಪಾಂ' ಎಂಬೀ ಮಂತ್ರವೂ ಕೂಡ ಇದೇ ಅರ್ಥವನ್ನು ಹೇಳುತ್ತದೆ. ಪುರುಷೋತ್ತಮನಾದ ಶ್ರೀ ಹರಿಯು ವಾಯುವಿನಲ್ಲಿರತಕ್ಕವನಾಗಿ ಸಕಲವನ್ನೂ ರಕ್ಷಿಸುವನಷ್ಟೇ? (b) ವಾಯುವು ಉಷ್ಣಿಗಾದಿ ಛಂದಸ್ಸುಗಳಲ್ಲಿ ಅಧಿಪತಿಯಾಗಿರುತ್ತಾನೆ. ಅಂತಹವಾಯುವಿನಲ್ಲಿ ಶ್ರೀ ಜನಾರ್ದನನಿರುತ್ತಾನೆ. ವಾಯುದೇವರೂ ತದಂತರ್ಗತ ಶ್ರೀ ಹರಿಯೂ ಯಾವಾಗಲೂ ಸುಮ್ಮಗಿರಲಾರರು. ಅಂದರೆ ಯಾವಾಗಲೂ ಸರ್ವಜಗತ್ತಿನ ಪ್ರವೃತ್ತಿಯನ್ನು ಮಾಡಿಕೊಂಡೇ ಇರುವರು. ॥ (c) ವಾಯುದೇವರು ತನ್ನಲ್ಲಿರತಕ್ಕ ಅಪರಿಮಿತ ಶಕ್ತಿಯುಳ್ಳ ಶ್ರೀ ಕೇಶವನಿಂದ ಪ್ರೇರಿಸಲ್ಪಟ್ಟವರಾಗಿಯೇ ಯಾವಾಗಲೂ ಸಮಸ್ತ ಜಗತ್ತಿನ ವ್ಯಾಪಾರವುಳ್ಳವರಾಗಿಯೇ ಸರ್ವತ್ರ ಸಂಚರಿಸಿಕೊಂಡಿರುತ್ತಾರೆ.

ಭಾ॥ (a) ಆಸಮಂತಾತ್ಪರಾಕ್ಷ್ವಾಪಿ ಪಂಚಭೂತೇಭ್ಯ ಈಶ್ವರಃ । ವಾಯು ಸ್ತತ್ರೋರ್ಧ್ವೇ ಹರಿಶ್ಚೈವ ಚರತ್ಯಮಿತಪೌರುಷಃ ॥ (b) ಸಧ್ರೀಚೀನಾಸು ಪೂರ್ವಾದಿದಿಕ್ಷ್ವೇತೌ ಚತಸೃಷ್ವಪಿ । ನಿತ್ಯದಾ ವಸತಃ ಕೋಣದಿಕ್ಷ್ವಥಾಸು ವಿಷೂಚಿಷು ॥ ಅಂತಶ್ಚ ಸರ್ವಲೋಕೇಷು ಚರತೋ ಲೋಕಸಾಕ್ಷಿಣೌ ।

ಅ ॥ (a) ಬಹುಪ್ರಕಾರವುಳ್ಳ ವಾಯುದೇವರೂ ಅವರಲ್ಲಿರತಕ್ಕ ಹರಿಯೂ ಕೂಡ ಚನ್ನಾಗಿ ಸುತ್ತಲೂ ಅಂದರೆ ಪಂಚಭೂತಗಳೊಳಗೂ ಪಂಚಭೂತಗಳಿಂದ ಹೊರಗೂ ನಿಯಾಮಕರಾಗಿ ಸಂಚರಿಸುತ್ತಾರೆ. ॥ (b) ಈ ಹರಿವಾಯುಗಳು ಋಜುಗಳಾದ ಪೂರ್ವಾದಿನಾಲ್ಕು ದಿಕ್ಕುಗಳಲ್ಲೂ ಹಾಗೆಯೇ ವಕ್ರಗಳಾದ ಆಗ್ನೇಯಾದಿ ದಿಕ್ಕುಗಳಲ್ಲೂ ನಿಖಿಲಲೋಕಗಳೊಳಗೂ ಲೋಕಸಾಕ್ಷಿಗಳಾಗಿ ಸಂಚರಿಸುತ್ತಾರೆ.

ಭಾ॥ (a) ಹಸ್ತಯೋರೇತಯೋರೇವ ನಿತ್ಯಾಕ್ಷೀಣಂ ವಸುಸ್ಥಿತಂ ॥ ತದ್ಧ್ಯಸಹ್ಯಂ ಬಲಂ ವಾಯೋರನಂತಂ ಕಿಮು ತದ್ಧರೇಃ ॥ ವಾಯೋರಾಧಾರಭೂತಸ್ಯ (b) ತಾಭ್ಯಾಂ ಹಿ ಕ್ರತುನಾಮಕಾಃ । ಆವೃತಾಃ ಸರ್ವಜೀವಾ ಹಿ ಯಥೈವ ಕನಕಾವಟಾಃ ॥ ಆಚ್ಛಾದ್ಯಂತೇ ವಿತ್ತವದ್ಭಿಸ್ತಾಭ್ಯಾಮೇವ ಚ ಚೇತನಾಃ । ಆವೃತಾ ಮಹದಾದ್ಯಾಸ್ತು ದೇಹೇ ತಿಷ್ಠಂತಿ ಚೈತಯೋಃ ॥

ಅ ॥ (a) ಹರಿವಾಯುಗಳ ಹಸ್ತದಲ್ಲಿ ನಿತ್ಯವೂ ಅವಿನಾಶಿಯಾದ ಸಂಪತ್ತು ಇರುತ್ತದೆ. ಆ ಸಂಪತ್ತು ಸಹಿಸಲಸಾಧ್ಯವಾಗಿಯೂ ಅವಿನಾಶಿಯಾಗಿಯೂ ಆದ ಬಲವೇ, ಅದು ವಾಯುದೇವರಿಗಿರುತ್ತದೆ. ಅಂತಹ ವಾಯುದೇವರಿಗೂ ಆಶ್ರಯನಾದ ಹರಿಗೆ ಅಂತಹ ಸಾಮರ್ಥ್ಯವುಂಟೆಂದು ಹೇಳತಕ್ಕುದೇನು. ॥ (b) ಆ ಹರಿವಾಯುಗಳಿಂದ ಕ್ರತುವೆಂದು ಹೆಸರುಳ್ಳ (ಜ್ಞಾನರೂಪರಾದ) ಸಮಸ್ತ ಜೀವರೂ ಆಚ್ಛಾದಿತರಾಗಿದ್ದಾರೆ. ಧನಿಕರಿಂದ ಸುವರ್ಣವನ್ನು ಹಾಕಿಡತಕ್ಕ ಗರ್ತ (ಗುಳಿ) ವಿಶೇಷಗಳು (ಕಲ್ಲುಹಲಿಗೆ ಇತ್ಯಾದಿಗಳಿಂದ) ಹೇಗೆ ಮುಚ್ಚಲ್ಪಡುತ್ತವೆಯೋ ಹಾಗೆಯೇ ಹರಿವಾಯುಗಳಿಂದ ಜೀವರು ಮಹದಾದಿ ತತ್ವಾವೃತರಾಗಿ ಈ ಹರಿವಾಯುಗಳ ಶರೀರದಲ್ಲಿರುತ್ತಾರೆ.

ಭಾ॥ (a) ವಿಷ್ಟಬ್ಧಾಶ್ಚೈವ ಸರ್ವೇಽಪಿ ಜೀವಾ ಆಕಾಶ ಏವ ಚ । ಸ ವಾಯುಃ ಪ್ರಕೃತಿಶ್ಚೈವ ವಿಷ್ಟಬ್ಧಾ ಕೇಶವೇನ ಹಿ ॥ (b) ಬೃಹತ್ವಾದ್ಬೃಹತೀತ್ಯೇವ ತಯೋರ್ನಾಮ ಪ್ರಕೀರ್ತಿತಂ । ವಾಯುಕೇಶವಯೋಃ ಪ್ರಾಣ ನಾಮ ಸರ್ವಪ್ರಣಾಯನಾತ್ ॥ (c) ವಿಶೇಷತೋ ಬೃಹತ್ಪ್ರಾಣೋ ಭಗವಾಂಸ್ತತ್ರ ಕೇಶವಃ । ಇತಿ ವಿದ್ಯಾತ್ ॥ ೬ ॥

ಅ ॥ (a) ಸಮಸ್ತ ಜೀವರೂ ಆಕಾಶವೂ ಕೂಡ ಆ ಹರಿವಾಯುಗಳಿಂದಲೇ ಧರಿಸಲ್ಪಡುತ್ತಾರೆ. ಆ ವಾಯುವೂ ಪ್ರಕೃತಿಯೂ ಕೂಡ ಕೇಶವನಿಂದಲೇ ಧರಿಸಲ್ಪಡುತ್ತಾರೆ. (b) ಪೂರ್ಣರಾದುದರಿಂದಲೇ ಆ ಹರಿವಾಯುಗಳಿಗೆ 'ಬೃಹತೀ' ಎಂಬ ಹೆಸರಿರುತ್ತದೆ. ಸಮಸ್ತ ವಸ್ತುವನ್ನು ಪ್ರೇರಿಸುವುದರಿಂದಲೇ ಮುಖ್ಯಪ್ರಾಣ, ಪರಮಾತ್ಮ ಇವರಿಬ್ಬರಿಗೆ 'ಪ್ರಾಣ' ರೆಂಬೀ ಹೆಸರು. ॥ (c) ಆ ಹರಿವಾಯುಗಳಲ್ಲಿ ಪೂಜ್ಯನಾದ ಶ್ರೀಹರಿಯು ವಿಶೇಷವಾಗಿ ಪೂರ್ಣನಾದುದರಿಂದ ವಿಶೇಷವಾಗಿ 'ಪ್ರಾಣ' ನೆಂದು ತಿಳಿಯತಕ್ಕದ್ದು. ॥ ೬ ॥

ಮಂ || ಅಥಾತೋ ವಿಭೂತಯೋಽಸ್ಯ ಪುರುಷಸ್ಯ ತಸ್ಯ ವಾಚಾ ಸೃಷ್ಟೌ ಪೃಥಿವೀ ಚಾಗ್ನಿಶ್ಚಾಸ್ಯಾಮೋಷಧಯೋ ಜಾಯಂತೇಽಗ್ನಿರೇನಾ ಸ್ವಾದಯತೀದಮಾಹರತೇದಮಾಹರತೇತ್ಯೇವಮೇತೌ ವಾಚಂ ಪಿತರಂ ಪರಿಚರತಃ ಪೃಥಿವೀ ಚಾಗ್ನಿಶ್ಚ ಯಾವದನು ಪೃಥಿವೀ ಯಾವದನ್ವಗ್ನಿಸ್ತಾವಾನಸ್ಯ ಲೋಕೋ ಭವತಿ ನಾಸ್ಯ ತಾವಲ್ಲೋಕೋ ಜೀರ್ಯತೇ ಯಾವದೇತಯೋರ್ನ ಜೀರ್ಯತೇ ಪೃಥಿವ್ಯಾಶ್ಚಾಗ್ನೇಶ್ಚ ಯ ಏವಮೇತಾಂ ವಾಚೋ ವಿಭೂತಿಂ ವೇದ ಪ್ರಾಣೇನ ಸೃಷ್ಟಾವಂತರಿಕ್ಷಂ ಚ ವಾಯುಶ್ಚಾಂತರಿಕ್ಷಂ ವಾ ಅನುಚರಂತ್ಯಂತರಿಕ್ಷಮನುಶೃಣ್ವಂತಿ ವಾಯುರಸ್ಮೈ ಪುಣ್ಯಂ ಗಂಧಮಾವಹತ್ಯೇವಮೇತೌ ಪ್ರಾಣಂ ಪಿತರಂ ಪರಿಚರಂತೋಽಂತರಿಕ್ಷಂ ಚ ವಾಯುಶ್ಚ ಯಾವದನ್ವಂತರಿಕ್ಷಂ ಯಾವದನು ವಾಯುಸ್ತಾವಾನಸ್ಯ ಲೋಕೋ ಭವತಿ ನಾಸ್ಯ ತಾವಲ್ಲೋಕೋ ಜೀರ್ಯತೇ ಯಾವದೇತಯೋರ್ನ ಜೀರ್ಯತೇಽಂತರಿಕ್ಷಸ್ಯ ಚ ವಾಯೋಶ್ಚ ಯ ಏವಮೇತಾಂ ಪ್ರಾಣಸ್ಯ ವಿಭೂತಿಂ ವೇದ ಚಕ್ಷುಷಾ ಸೃಷ್ಟೌ ದ್ಯೌಶ್ಚಾದಿತ್ಯಶ್ಚ ದ್ಯೌರ್ಹಾಸ್ಮೈ ವೃಷ್ಟಿಮನ್ನಾದ್ಯಂ ಸಂಪ್ರಯಚ್ಛತ್ಯಾದಿತ್ಯೋಽಸ್ಯ ಜ್ಯೋತಿಃ ಪ್ರಕಾಶಂ ಕರೋತ್ಯೇವಮೇತೌ ಚಕ್ಷುಃ ಪಿತರಂ ಪರಿಚರತೋ ದ್ಯೌಶ್ಚಾದಿತ್ಯಶ್ಚ ಯಾವದನು ದ್ಯೌರ್ಯಾವದನ್ವಾದಿತ್ಯಸ್ತಾವಾನಸ್ಯ ಲೋಕೋ ಭವತಿ ನಾಸ್ಯ ತಾವಲ್ಲೋಕೋ ಜೀರ್ಯತೇ ಯಾವದೇತಯೋರ್ನ ಜೀರ್ಯತೇ ದಿವಶ್ಚಾದಿತ್ಯಸ್ಯ ಚ ಯ ಏವಮೇತಾಂ ಚಕ್ಷುಷೋ ವಿಭೂತಿಂ ವೇದ ಶ್ರೋತ್ರೇಣ ಸೃಷ್ಟಾ ದಿಶಶ್ಚ ಚಂದ್ರಮಾಶ್ಚ ದಿಗ್ಭ್ಯೋ ಹ್ಯೇನಮಾಯಂತೀ೩ ದಿಗ್ಭ್ಯೋ ವಿಶೃಣೋತಿ ಚಂದ್ರಮಾ ಅಸ್ಮೈ ಪೂರ್ವಪಕ್ಷಾಪರಪಕ್ಷಾನ್ವಿಚಿನೋತಿ ಪುಣ್ಯಾಯ ಕರ್ಮಣೇ ಏವಮೇತೇ ಶ್ರೋತ್ರಂ ಪಿತರಂ ಪರಿಚರಂತಿ ದಿಶಶ್ಚ ಚಂದ್ರಮಾಶ್ಚ ಯಾವದನು ದಿಶೋ ಯಾವದನು ಚಂದ್ರಮಾಸ್ತಾವಾನಸ್ಯ ಲೋಕೋ ಭವತಿ ನಾಸ್ಯ ತಾವಲ್ಲೋಕೋ ಜೀರ್ಯತೇ ಯಾವದೇತೇಷಾಂ ನ ಜೀರ್ಯತೇ ದಿಶಾಂ ಚ ಚಂದ್ರಮಸಶ್ಚ ಯ ಏವಮೇತಾಂ ಶ್ರೋತ್ರಸ್ಯ ವಿಭೂತಿಂ ವೇದ ಮನಸಾ ಸೃಷ್ಟಾ ಆಪಶ್ಚ ವರುಣಶ್ಚಾಽಪೋ ಹಾಸ್ಮೈ ಶ್ರದ್ಧಾಂ ಸನ್ನಮಂತೇ ಪುಣ್ಯಾಯ ಕರ್ಮಣೇ ವರುಣೋಽಸ್ಯ ಪ್ರಜಾಂ ಧರ್ಮೇಣ ದಾಧಾರ್ಯೈವಮೇತೇ ಮನಃ ಪಿತರಂ ಪರಿಚರಂತ್ಯಾಪಶ್ಚ ವರುಣಶ್ಚ ಯಾವದನ್ವಾಪೋ ಯಾವದನು ವರುಣಸ್ತಾವಾನಸ್ಯ ಲೋಕೋ ಭವತಿ ನಾಸ್ಯ ತಾವಲ್ಲೋಕೋ ಜೀರ್ಯತೇ ಯಾವದೇತೇಷಾಂ ನ ಜೀರ್ಯತೇಽಪಾಂ ಚ ವರುಣಸ್ಯ ಚ ಯ ಏವಮೇತಾಂ ಮನಸೋ ವಿಭೂತಿಂ ವೇದ || ೭ ||

ಅ ‖ ಅಥ=ಈ ವಿದ್ಯೆಯನ್ನು ನಿರೂಪಿಸಿದಮೇಲೆ, ಅತಃ=ಮಹಾ ಫಲವಿರುವುದರಿಂದ, ಅಸ್ಯ ಪುರುಷಸ್ಯ=ಈ ಹರಿಯ, ವಿಭೂತಯಃ=ಅಂಗವುಹಿಮೆಗಳು, (ಹೇಳಲ್ಪಡುತ್ತವೆ.) ತಸ್ಯ=ಆ ವಿಷ್ಣುವಿನ, ವಾಚಾ=ಮಾತಿನಿಂದ, ಪ್ರಥಿವೀ ಚ=ಪ್ರಥಿವಿಯೂ, ಅಗ್ನಿಶ್ಚ=ಅಗ್ನಿಯೂ ಕೂಡ, ಸೃಷ್ಟೌ=ಸೃಷ್ಟಿಸಲ್ಪಟ್ಟವು. ಅಸ್ಯಾಂ=ಈ ಪ್ರಥಿವಿಯಲ್ಲಿ, ಓಷಧಯಃ=ವ್ರೀಹ್ಯಾದಿಗಳು, ಜಾಯಂತೇ=ಹುಟ್ಟುತ್ತವೆ. (ಹರಿಯ ಸೇವೆಗೋಸ್ಕರ ವ್ರೀಹ್ಯಾದಿಗಳನ್ನು ಭೂಮಿಯು ಹುಟ್ಟಿಸುತ್ತದೆ) ಅಗ್ನಿಃ=ಬೆಂಕಿಯು, ಏನಾಃ=ಇವುಗಳನ್ನು, ಸ್ವಾದಯತಿ=ಪಾಕದಿಂದ ರುಚಿಕರವನ್ನಾಗಿ ಮಾಡುತ್ತದೆ. ಇದಂ=ಬೇಯಿಸಲಿಕ್ಕೆ ಯೋಗ್ಯಗಳಾದ ಅಕ್ಕಿಮೊದಲಾದುವುಗಳನ್ನು, ಆಹರತ=ತಂದುಕೊಡಿರಿ, ಇದಂ=ಈ ಶಾಖಫಲಾದಿಗಳನ್ನು ಆಹರತ=ತಂದುಕೊಡಿರಿ. (ಎಂದು ಜನರಿಗೆ ಹೇಳಿ ಅವರಿಂದ ತರಲ್ಪಟ್ಟ ಸರ್ವ ಧಾನ್ಯಾದಿಗಳನ್ನು ರುಚಿಕರಗಳನ್ನಾಗಿ ಮಾಡುತ್ತಾನೆ) ಏವಂ=ಹೀಗೆ, ಏತೌ=ಪೃಥಿವ್ಯಗ್ನಿಗಳು, ಪಿತರಂ=ಪಿತೃರೂಪವಾದ, ವಾಚಂ=ಮಾತನ್ನು, ಪರಿಚರತಃ=ಸೇವಿಸುತ್ತವೆ. (ಅಂತೂ ಈ ಪೃಥಿವ್ಯಗ್ನಿಗಳು ಮುಖದಿಂದ ಭೋಗಿಸಲಿಕ್ಕೆ ಯೋಗ್ಯಗಳಾದ ಅನ್ನಾದಿಗಳನ್ನು ಸೃಷ್ಟಿಸಿ ಸರ್ವರ ಮುಖದಲ್ಲಿರತಕ್ಕ ವಿಷ್ಣುಮುಖಕ್ಕೆ ಸಮರ್ಪಿಸುತ್ತಾರೆ) ಯಃ=ಯಾವ ಅಧಿಕಾರಿಯು, ಏವಂ=ಈ ಪ್ರಕಾರವಾಗಿ, ವಾಚಃ=ವಿಷ್ಣುಮುಖಕ್ಕೆ, ಏತಾಂ=ಈ (ಪ್ರಥಿವ್ಯಗ್ನಿಗಳನ್ನು ಸೃಷ್ಟಿಸುವಿಕೆ, ಅವರಿಂದ ಸೇವಿಸಿ ಕೊಳ್ಳುವಿಕೆ ಎಂಬೀ ರೂಪವಾದ) ವಿಭೂತಿಂ=ಐಶ್ವರ್ಯವನ್ನು, ವೇದ=ತಿಳಿಯುತ್ತಾನೋ, ಅಸ್ಯ=ಈತನಿಗೆ, ಯಾವತ್=ಎಷ್ಟು ಪ್ರದೇಶದಲ್ಲಿ, ಪ್ರಥಿವೀ=ಭೂಮಿಯು, ಯಾವತ್=ಎಷ್ಟು ದೇಶದಲ್ಲಿ. ಅಗ್ನಿಃ=ಅಗ್ನಿಯು, (ಇರುತ್ತವೋ) ಅನು=ಆ ಪ್ರಥಿವ್ಯಗ್ನಿಗಳನ್ನನುಸರಿಸಿಯೇ, ತಾವಾನ್=ಅಷ್ಟುದೇಶವೂ, ಲೋಕಃ=ಆವಾಸಸ್ಥಾನವು, ಭವತಿ=ಆಗುತ್ತದೆ. ಯಾವತ್=ಎಷ್ಟುಕಾಲಪರ್ಯಂತ, ಮುಕ್ತಯೋಃ=ಮುಕ್ತರಾದ, ಪೃಥಿವ್ಯಾಶ್ಚ ಅಗ್ನೇಶ್ಚ=ಪೃಥಿವ್ಯಗ್ನಿಗಳ, ಲೋಕಃ=ಲೋಕವು, ನ ಜೀರ್ಯತೇ=ಜೀರ್ಣವಾಗುವುದಿಲ್ಲವೋ, ತಾವತ್=ಅಷ್ಟುಕಾಲಪರ್ಯಂತ, ಅಸ್ಯ=ಈತನ, ಲೋಕಃ=ಲೋಕವು, ನ ಜೀರ್ಯತೇ=ನಾಶವಾಗುವುದಿಲ್ಲ. (ಪೃಥಿವ್ಯಗ್ನಿಗಳಂತೆಯೇ ಮುಕ್ತನಾಗಿ ವಿಷ್ಣುವಿನ ಸಮೀಪದಲ್ಲಿ (ವೈಕುಂಠಾದಿಗಳಲ್ಲಿ) ಯಾವಾಗಲೂ ಇರುತ್ತಾನೆ. ಈ ಫಲವು ಪೃಥಿವ್ಯಗ್ನಿ ಪದಯೋಗ್ಯರಾದ ಜೀವರಿಗೇನೇ, ಇತರರಿಗೆ ಪೃಥಿವ್ಯಗ್ನಿಲೋಕಗಳಲ್ಲಿ ಮುಕ್ತಸ್ಥಾನದಲ್ಲಿ ಕೇವಲ ಸಂಚಾರವೆಂದು ತಿಳಿಯತಕ್ಕದು). ಪ್ರಾಣೇನ=ಶ್ರೀ ಹರಿಯ ಪ್ರಾಣವೂ, ತನ್ನಿಯಾಮಕಭಗವತ್ಪ್ರಾಣವಾಯುವೂ ಇವುಗಳಿಂದ ಅಂತರಿಕ್ಷಂ ಚ=ಅಂತರಿಕ್ಷಲೋಕವು, ವಾಯುಶ್ಚ=ಮುಖ್ಯಪ್ರಾಣನೂ ಕೂಡ, ಸೃಷ್ಟೌ=ಸೃಷ್ಟಿಸಲ್ಪಟ್ಟರು. ಅಂತರಿಕ್ಷಂ ವಾ ಅನು=ಭೂತಾಕಾಶಾಭಿಮಾನಿಯಾದ ಗಣಪತಿಯನ್ನನುಸರಿಸಿಯೇ, (ಆತನ ಪ್ರೇರಣೆಯಿಂದಲೇ) ಚರಂತಿ=(ಎಲ್ಲಾ ಪ್ರಾಣಿಗಳೂ ಶ್ರೀ ಹರಿಯ ಪ್ರೀತಿಗೋಸ್ಕರವೇ ತೀರ್ಥಕ್ಷೇತ್ರಾದಿಗಳ) ಸಂಚಾರವನ್ನು ಮಾಡುತ್ತಾರೆ. ಅಂತರಿಕ್ಷಂ ಅನು ಶೃಣ್ವಂತಿ=(ಶ್ರೀಹರಿಯ ಕರ್ಮಗಳನ್ನು) ಕೇಳುತ್ತಾರೆ. (ಅಂದರೆ ಅಂತರಿಕ್ಷಕ್ಕೆ ಅಭಿಮಾನಿಯಾದ ವಿಘ್ನೇಶನು, ಸ್ವಜನಕರಾದ ಹರಿವಾಯುಗಳ ಸೇವೆಗೋಸ್ಕರ ವಿಷ್ಣುಪ್ರೀತಿಜನಕವಾದ, ತೀರ್ಥಯಾತ್ರಾದಿರೂಪವಾದ, ಪ್ರಾಣವ್ಯಾಪಾರಕ್ಕಾಗಿ ಪ್ರಾಣಿಗಳಿಗೆ ಅವಕಾಶವನ್ನು ಕೊಡುತ್ತಾನೆ. ಹಾಗೂ ಆ ಪ್ರಾಣನಿಂದ ಮಾಡಲ್ಪಡತಕ್ಕ ಜಗತ್ಸರ್ಜನಾದಿ ವ್ಯಾಪಾರಗಳನ್ನು ಕೇಳುವುದಕ್ಕಾಗಿ ಕಿವಿಗೆ ಶ್ರವಣ ಶಕ್ತಿಯನ್ನು ಕೊಡುತ್ತಾನೆ. ಅಂತೂ ಇವೆರಡೂ ಹರಿವಾಯುಗಳ ಸೇವಾರೂಪವಾದುದು). ವಾಯುಃ=ಮುಖ್ಯಪ್ರಾಣದೇವರು, ಅಸ್ಮೈ=ಈ ವಿಷ್ಣುವಿನ ಪ್ರಾಣಕ್ಕೋಸ್ಕರ, ಪುಣ್ಯಂ ಗಂಧಂ=ಪರಿಮಳಗಂಧವನ್ನು, ಆವಹತಿ=ಪ್ರಾಪಿಸಿಕೊಡುತ್ತಾನೆ. ಏವಂ=ಹೀಗೆ, ಏತೌ ಅಂತರಿಕ್ಷಂ ಚ ವಾಯುಶ್ಚ=ವಿಘ್ನೇಶಪ್ರಾಣರು, ಪಿತರಂ ಪ್ರಾಣಂ ಪರಿಚರತಃ,

ಯಾವತ್ ಅಂತರಿಕ್ಷಂ, ಯಾವತ್ ವಾಯುಃ, ಅನು ತಾವಾನ್ ಲೋಕಃ ಅಸ್ಯ ಭವತಿ, ಯಾವತ್ ಏತಯೋಃ ಅಂತರಿಕ್ಷಸ್ಯ ಚ ವಾಯೋಶ್ಚ ಲೋಕಃ ನ ಜೀರ್ಯತೇ, ಯಃ ಏವಂ ಏತಾಂ ಪ್ರಾಣಸ್ಯ ವಿಭೂತಿಂ ವೇದ ತಾವತ್ ಅಸ್ಯ ಲೋಕಃ ನ ಜೀರ್ಯತೇ, (ಈ ಪದಗಳಿಗೆ ಪೂರ್ವದಂತೆಯೇ ಅರ್ಥ. ಚಕ್ಷುಷಾ=ಚಕ್ಷುರಿಂದ್ರಿಯದಿಂದ, ದ್ಯೌಃ=ದ್ಯುಲೋಕಕ್ಕೆ ಅಧಿಪತಿಯಾದ ದೇವತೆಯು, ಆದಿತ್ಯಶ್ಚ=ಸೂರ್ಯನೂ ಕೂಡ, ಸೃಷ್ಟೌ=ಸೃಷ್ಟಿಸಲ್ಪಟ್ಟರು. ದ್ಯೌಃ ಹ= ದ್ಯುಲೋಕಕ್ಕೆ ಅಧಿಪತಿಯಾದ ದೇವತೆಯಾದರೂ, ಅಸ್ಮೈ=ಶ್ರೀಹರಿಗೆ ಪ್ರೀತಿಯನ್ನುಂಟು ಮಾಡುವ ಕರ್ಮವು ಸಿದ್ಧಿಯಾಗುವುದಕ್ಕೋಸ್ಕರ, ವೃಷ್ಟಿಂ=ಮಳೆಯನ್ನು (ಅದರಿಂದ) ಅನ್ನಾದ್ಯಂ=ಅನ್ನವೇ ಮೊದಲಾದುದನ್ನು, (ನೀರು, 'ಸಂಪತ್ತು, ತುಲಸಿ, ಗಂಧ, ಪುಷ್ಪವೇ ಮೊದಲಾದ ಪೂಜಾಸಾಧನೀಭೂತವಾದ ದ್ರವ್ಯವನ್ನು) ಸಂಪ್ರಯಚ್ಛತಿ=ಕೊಡುತ್ತಾನೆ. ಆದಿತ್ಯಃ=ಆದಿತ್ಯನು, ಅಸ್ಮೈ=ಹರಿಗೆ ಪ್ರೀತಿಯಾಗುವ ಕರ್ಮವು ಸಿದ್ಧಿಯಾಗುವುದಕ್ಕೋಸ್ಕರ, ಜ್ಯೋತಿಃ ಪ್ರಕಾಶಂ=ತನ್ನ ತೇಜಸ್ಸಿನಿಂದ ದ್ರವ್ಯಗಳ ಪ್ರಕಾಶವನ್ನು, ಕರೋತಿ=ಮಾಡುತ್ತಾನೆ. ಏವಂ ಏತೌ ದ್ಯೌಃ ಚ ಆದಿತ್ಯಶ್ಚ ಪಿತರಂ ಚಕ್ಷುಃ ಪರಿಚರತಃ, ಯಃ ಏವಂ ಏತಾಂ ಚಕ್ಷುಷಃ ವಿಭೂತಿಂ ವೇದ, ಯಾವತ್ ದ್ಯೌಃ, ಯಾವತ್ ಆದಿತ್ಯಃ, ಅನು ತಾವಾನ್ ಲೋಕಃ ಅಸ್ಯ ಭವತಿ, ಯಾವತ್ ಏತಯೋಃ ದಿವಶ್ಚ ಆದಿತ್ಯಸ್ಯ ಚ ಲೋಕಃ ನ ಜೀರ್ಯತೇ ತಾವತ್ ಅಸ್ಯ ನ ಜೀರ್ಯತೇ, (ಅರ್ಥ ಪೂರ್ವದಂತೆ) ಶ್ರೋತ್ರೇಣ=ಶ್ರೋತ್ರೇಂದ್ರಿಯದಿಂದ, ದಿಶಶ್ಚ=ದಿಗಭಿಮಾನಿಗಳಾದ ಮಿತ್ರಾದಿಗಳು, ಚಂದ್ರಮಾಶ್ಚ=ಚಂದ್ರನೂ ಕೂಡಾ, ಸೃಷಾಃ=ಸೃಷ್ಟಿಸಲ್ಪಟ್ಟವು. (ವೀಣಾ, ವೇಣು, ಮೃದಂಗ, ಮುರಜಾದಿಗಳ ಎಲ್ಲಾ ಶಬ್ದಗಳೂ) ದಿಗ್ಭ್ಯೋಹ=ದಿಕ್ಕುಗಳ ದೆಸೆಯಿಂದಲೇ, ಏನಂ=ಜೀವರ ಶ್ರೋತ್ರದಲ್ಲಿರತಕ್ಕ ಹರಿಯನ್ನು, ಆಯಂತಿ=ಸಮೀಪಿಸುತ್ತವೆ. (ಅಂದರೆ ದಿಗ್ದೇವತೆಗಳು ಸುಶಬ್ದಗಳನ್ನು ತಮ್ಮಿಂದ ಅಧಿಷ್ಠಿತಗಳಾದ ಪ್ರಾಚ್ಯಾದಿ ದಿಕ್ಕುಗಳ ದೆಸೆಯಿಂದಲೇ ತಂದು ಜೀವ ಶ್ರೋತ್ರಗಳಿಗೆ ನಿಯಾಮಕನಾಗಿದ್ದ ಹರಿಗೆ ಸಮರ್ಪಿಸುತ್ತಾರೆ. ದಿಗ್ಭ್ಯಃ=ದಿಗ್ದೇವತೆಗಳಿಂದ (ಅವರ ಪ್ರೇರಣೆಯಿಂದ ಜೀವನು) ವಿಶೃಣೋತಿ=ಆ ಶಬ್ದಾದಿಗಳನ್ನು ಕೇಳುತ್ತಾನೆ. (ಪರಮಾತ್ಮನಾದರೋ ದಿಗ್ದೇವತೆಗಳ ಪ್ರೇರಣೆಯಿಲ್ಲದೇನೇ ವಿಶೇಷವಾಗಿ ಆ ಶಬ್ದಗಳನ್ನೇ ಜೀವರ ಕಿವಿಗಳಲ್ಲಿರತಕ್ಕ ತನ್ನ ಕಿವಿಯಿಂದ ಕೇಳುತ್ತಾನೆ. ಅಲ್ಲದೆ ಜೀವರಿಗುಂಟಾಗುವ ವೀಣಾದಿಶಬ್ದಗಳ ಶ್ರವಣ ಸುಖವನ್ನು ಭೋಗಿಸುತ್ತಾನೆ. ಕಾರಣ, ಎಲ್ಲವೂ ಹರಿಯ ಸೇವಾರೂಪವೇ ಆಗುವುದು). ಚಂದ್ರಮಾಶ್ಚ=ಚಂದ್ರನಾದರೂ, ಅಸ್ಮೈ ಪುಣ್ಯಾಯ, ಕರ್ಮಣೇ=ಈ ಹರಿಯನ್ನುದ್ದೇಶಿಸಿ ಜೀವರಿಗೆ ಪುಣ್ಯಕರ್ಮವನ್ನು ಮಾಡುವುದಕ್ಕೋಸ್ಕರ, (ತನ್ನ ಷೋಡಶ ಕಲೆಗಳ ವೃದ್ಧಿಕ್ಷಯಗಳಿಂದ) ಪೂರ್ವಪಕ್ಷಾಪರಪಕ್ಷಾನ್=ಶುಕ್ಲಪಕ್ಷ ಕೃಷ್ಣಪಕ್ಷಗಳನ್ನು, ವಿಚಿನೋತಿ=ಪ್ರತ್ಯೇಕಿಸುತ್ತಾನೆ. (ಅಂತೂ ಚಂದ್ರನು ಶುಕ್ಲಪಕ್ಷ ಕೃಷ್ಣಪಕ್ಷಗಳನ್ನು ಪ್ರತ್ಯೇಕ ಮಾಡಿದರೇನೇ ಅಲ್ಲಲ್ಲಿ ದೇವಪಿತ್ರಧಿಷ್ಠಾನ ಭೇದದಿಂದ ಶ್ರೀ ಹರಿಯ ಸ್ತೋತ್ರಾದಿಕರ್ಮಗಳು ಪ್ರವರ್ತಿಸಲ್ಪಡುತ್ತವೆ. ಅಂತಹ ಸ್ತುತ್ಯಾದಿಗಳನ್ನು ಶ್ರೀ ಹರಿಯು ತನ್ನ ಕಿವಿಯಿಂದ ಕೇಳುತ್ತಾನೆ. ಏವಂ ಏತೇ ದಿಶಶ್ಚ ಚಂದ್ರಮಾಶ್ಚ ಪಿತರಂ ಶ್ರೋತ್ರಂ ಪರಿಚರಂತಿ, ಯಃ ಏವಂ ಏತಾಂ ಶ್ರೋತ್ರಸ್ಯ ವಿಭೂತಿಂ ವೇದ, ಯಾವತ್ ದಿಶಃ, ಯಾವತ್ ಚಂದ್ರಮಾಃಅನು ತಾವಾನ್ ಲೋಕಃ ಅಸ್ಯ ಭವತಿ; ಯಾವತ್ ಏತೇಷಾಂ ದಿಶಾಂ ಚ ಚಂದ್ರಮಸಶ್ಚ ಲೋಕಃ ನ ಜೀರ್ಯತೇ ತಾವತ್ ಅಸ್ಯ ಲೋಕಃ ನ ಜೀರ್ಯತೇ; (ಅರ್ಥಪೂರ್ವದಂತೆ). ಮನಸಾ=ಮನಸ್ಸಿನಿಂದ, ಆಪಶ್ಚ=ಅಬಭಿಮಾನಿಗಳಾದ ಬ್ರಹ್ಮಾದಿಗಳು ವರುಣಶ್ಚ=ವರುಣನೂ, ಕೂಡ, ಸೃಷ್ಟಾಃ=ಸೃಷ್ಟಿಸಲ್ಪಟ್ಟವು. ಅಸ್ಮೈ ಪುಣ್ಯಾಯ ಕರ್ಮಣೇ=ಈ ಹರಿಯನ್ನುದ್ದೇಶಿಸಿ

!ೀವರಿಗೆ ಪುಣ್ಯಕರ್ಮವನು ಮಾಡುವುದಕ್ಕೋಸ್ಕರ, ಆಪಃ=ಬ್ರಹ್ಮಾದಿ ದೇವತೆಗಳು, ಶ್ರದ್ಧಾಂ= ವಿಶ್ವಾಸವನ್ನು, ಸನ್ನಮಂತೇ=ಕೊಡುತ್ತಾರೆ. ವರುಣಃ=ವರುಣನು, ಅಸ್ಯ=ಈ ಹರಿಯ ಪ್ರೀತಿ ಗೋಸ್ಕರ, ಧರ್ಮೇಣ=ತಟಾಕಾದಿ ನಿರ್ಮಾಣರೂಪಕರ್ಮದಿಂದ, (ಅವುಗಳಲ್ಲಿ ಪ್ರಾಣಿಗಳಿಗೆ ವಿಶ್ವಾಸವನ್ನು ಹುಟ್ಟಿಸಿದ್ದರಿಂದ) ಪ್ರಜಾಂ=ಪ್ರಜೆಗಳನ್ನು, ದಾಧಾರ=ಧರಿಸಿದನು. (ಅಂತೂ ಶ್ರದ್ಧಾಪುರಸ್ಸರವಾಗಿ ತಟಾಕಾದಿ ನಿರ್ಮಾಣರೂಪವಾದ ಪುಣ್ಯವುಳ್ಳವರನ್ನಾಗಿ ಮಾಡಿದನು). (ಅಥವಾ) ವರುಣಃ=ವರುಣನು, ಅಸ್ಮೈ=ಹರಿಯನ್ನುದ್ದೇಶಿಸಿ, ಪುಣ್ಯಾಯ ಕರ್ಮಣೇ= ತಟಾಕ ನಿರ್ಮಾಣರೂಪ ಪುಣ್ಯಕರ್ಮವನ್ನು ಮಾಡುವುದಕ್ಕೋಸ್ಕರ ಜೀವರಿಗೆ, ಶ್ರದ್ಧಾಂ= ವಿಶ್ವಾಸವನ್ನು, ಸನ್ನಮತೇ=ಕೊಡುತ್ತಾನೆ. ಏವಂ ಆಪಶ್ಚ ವರುಣಶ್ಚ ಪಿತರಂ ಮನಃ ಪರಿ ಚರಂತಿ, ಯಃ ಏವಂ ಏತಾಂ ಮನಸಃ ವಿಭೂತಿಂ ವೇದ ಯಾವತ್ ಆಪಃ, ಯಾವತ್ ವರುಣಃ, ಅನು ತಾವಾನ್ ಲೋಕಃ ಅಸ್ಯ ಭವತಿ, ಯಾವತ್ ಏತೇಷಾಂ ಅಪಾಂ ಚ ವರಣಸ್ಯ ಚ ಲೋಕಃ ನ ಜೀರ್ಯತೇ ತಾವತ್ ಅಸ್ಯ ಲೋಕಃ ನ ಜೀರ್ಯತೇ. ॥ ೭ ॥

**ಭಾ॥** (a) ತಸ್ಯ ವಿಷ್ಣೋರಂಗಾನಾಮಥ ವೈಭವಂ । ಉಚ್ಯತೇ ತಸ್ಯ ವಾಚಾ ಹಿ ಸೃಷ್ಟಾವಗ್ನಿಃ ಕ್ಷಿತಿಸ್ತಥಾ ॥ (b) ಶುಶ್ರೂಷಾರ್ಥಂ ತಸ್ಯ ಪೃಥ್ವೀ ಜನಯತ್ಯೋಷಧೀಃ ಪ್ರಭೋಃ । ತಾಃ ಪಚತ್ಯಗ್ನಿರುದ್ಯುಕ್ತ ಆಹೃತಾ ಆಹೃತಾಃ ಪುನಃ ॥ ಆಹರೇತಿ ವಚೋಽಸ್ಯಾಪಿ ಶೃಣ್ವಂತ್ಯೇವ ಮಹರ್ಷಯಃ ॥

ಅ ॥ (a) ಈ ವಿದ್ಯೆಯನು, ನಿರೂಪಿಸಿದ ಮೇಲೆ ಪ್ರಸಿದ್ಧನಾದ ಶ್ರೀ ಹರಿಯ ಅವಯವ ಗಳ ಮಹಿಮೆಯು ಹೇಳಲ್ಪಡುತ್ತದೆ. ಆ ಹರಿಯ ವಾಗಿಂದ್ರಿಯದಿಂದ ಅಗ್ನಿಯೂ ಹಾಗೆ ಪೃಥ್ವಿಯೂ ಸೃಷ್ಟಿಸಲ್ಪಟ್ಟವು, ಎಂದು ಪ್ರಸಿದ್ಧವು. ॥ (b) ಅಂತಹ ಸರ್ವಸಮರ್ಥನಾದ ಶ್ರೀ ಹರಿಯ ಸೇವೆಗೋಸ್ಕರ ಭೂಮಿಯು ವ್ರೀಹ್ಯಾದಿಗಳನ್ನು ಹುಟ್ಟಿಸುತ್ತದೆ. ಅಗ್ನಿಯು (ಭಕ್ತ್ಯತಿ ಶಯದಿಂದ) ಸನ್ನದ್ಧವಾಗಿಯೇ (ಕೂಡಿದ್ದಾಗಿಯೇ) ಮತ್ತೂ ಮತ್ತೂ ತರಲ್ಪಟ್ಟ ಆ ಓಷಧಿಗ ಳನ್ನು ಪಾಕದಿಂದ ರುಚಿಕರಗಳನ್ನಾಗಿ ಮಾಡುತ್ತಾನೆ. (ಬೇಯಿಸಲಿಕ್ಕೆ ಯೋಗ್ಯವಾದ ಅಕ್ಕಿ ಮೊದಲಾದುದನ್ನು) ತೆಗೆದುಕೊಂಡು ಬನ್ನಿರಿ, ಎಂಬೀ ಅಗ್ನಿಯ ಮಾತನ್ನು ಮಹರ್ಷಿಗಳು ಕೇಳುತ್ತಾರೆ.

**ಭಾ॥** (a) ಮುಖಜತ್ವಾತ್ತಯೋರ್ವಿಷ್ಣೋರ್ಮುಖಂ ಜನಕಮಿಷ್ಯತೇ । ಆಸ್ಯ ಭೋಗ್ಯಂ ತತೋ ವಿಷ್ಣೋರನ್ನಂ ತೌ ಕುರುತಃ ಸದಾ ॥ (b) ಸರ್ವೈ ರ್ಯದ್ಭುಜ್ಯತೇ ಚಾನ್ನಂ ತತ್ರ ತತ್ರ ಸ್ಥಿತೋ ಹರಿಃ । ತದ್ಭುಂಕ್ತೇಽತಸ್ತ ದರ್ಥಂ ಹಿ ತಾವನ್ನಂ ಕುರುತಸ್ಸದಾ ॥ (c) ವಿಷ್ಣೋರ್ವಾಗ್ವಿಭವಂ ವೇದ ಯ ಉಪಾಸ್ತೇ ಚ ಸರ್ವದಾ । ಯೋಗ್ಯಃ ಸಂಸ್ತದುಪಾಸಾಯಾಃ ಸ ಭೂಮ್ಯಗ್ನಿಸಮನ್ವಿತಃ ॥ (d) ಸಮಂ ತಯೋರ್ವ್ಯಾಪ್ತಿಮಾಂಶ್ಚ ತದ್ವ ನ್ಮುಕ್ತಶ್ಚ ನಿತ್ಯದಾ । ಅನಷ್ಟಲೋಕೋ ವಸತಿ ಸಮೀಪೇ ಕೇಶವಸ್ಯ ಚ ॥

ಅ ॥ (a) ಪೃಥಿವ್ಯಗ್ನಿಗಳು ಶ್ರೀ ಪರಮಾತ್ಮನ ವದನದಿಂದ ಹುಟ್ಟಿರುವ ಪ್ರಯುಕ್ತ ಅವರಿಗೆ ಮುಖವು ಜನಕವೆಂದು ಇಚ್ಛಿಸಲ್ಪಡುತ್ತದೆ. (ಹರಿಯು ಉತ್ಪಾದಕನಾದುದರಿಂದ) ಅಗ್ನಿಪೃಥಿವಿಗಳು ಮುಖದಿಂದ ಭೋಗಿಸಲ್ಕೆ ಯೋಗ್ಯವಾದ ಅನ್ನವನ್ನು ಯಾವಾಗಲೂ ಮಾಡು ತ್ತಾರೆ. ॥ (b) ಯಾವ ಅನ್ನವು ಸರ್ವರಿಂದಲೂ ಭೋಜಿಸಲ್ಪಡುತ್ತದೋ ಅಂತಹ ಅನ್ನವನ್ನು

ಶ್ರೀ ಹರಿಯು ಅಲ್ಲಲ್ಲಿದ್ದವನಾಗಿ ಭೋಗಿಸುತ್ತಾನೆ. ಅಂತರ್ಯಾಮಿ ರೂಪದಿಂದ ಶ್ರೀ ಹರಿಯು ಭೋಗಿಸುವ ಕಾರಣ ಆತನ ಪ್ರೀತಿಗೋಸ್ಕರ ಅಗ್ನಿಪೃಥಿವಿಗಳು ಅನ್ನವನ್ನು ಮಾಡುತ್ತಾರೆ. ॥ (c) ಯಾವ ನಿರ್ದುಷ್ಟನಾದ (ಯೋಗ್ಯ) ಅಧಿಕಾರಿಯು ಶ್ರೀ ಹರಿಯ ಮುಖದ ಐಶ್ವರ್ಯವನ್ನು ತಿಳಿಯುತ್ತಾನೋ, ಸರ್ವದಾ ಉಪಾಸನೆಯನ್ನು ಮಾಡುತ್ತಾನೋ ಅಂತಹ ಉಪಾಸನೆಗೆ ಯೋಗ್ಯನಾದ ಸದಧಿಕಾರಿಯು ಮುಕ್ತರಾದಭೂಮ್ಯಗ್ನಿಗಳಿಂದ ಯುಕ್ತನೂ, ॥ (d) ಆ ಭೂಮ್ಯಗ್ನಿಗಳ ಸಮವ್ಯಾಪ್ತಿಯುಳ್ಳವನೂ (ಎಷ್ಟು ಪ್ರದೇಶಗಳಲ್ಲಿ ಭೂಮ್ಯಗ್ನಿಗಳು ಇರುತ್ತಾರೋ ಅಷ್ಟು ಪ್ರದೇಶಗಳಲ್ಲಿಯೂ ಇರುವವನೂ) ಪೃಥಿವ್ಯಗ್ನಿಗಳಂತೆ ಮುಕ್ತನೂ ಆಗಿ ಶ್ರೀ ಹರಿಯ ಸಮೀಪದಲ್ಲಿ (ವೈಕುಂಠದಲ್ಲಿ) ಯಾವಾಗಲೂ ನಾಶವಿಲ್ಲದ ಲೋಕವುಳ್ಳವನಾಗಿ (ಪುನರಾವರ್ತಿಶೂನ್ಯನಾಗಿ) ಆವಾಸಮಾಡುತ್ತಾನೆ.

ಭಾ॥ ಯೋಗ್ಯಾ ಅಸ್ಯಾ ಉಪಾಸಾಯಾಃ ಪೃಥಿವ್ಯಗ್ನಿಪದಸ್ಯ ಯೇ । ಯೋಗ್ಯಾಸ್ತೇ ವೈಮುಖ್ಯತಯಾ ತದನ್ಯೇ ಯತ್ರ ತೌ ಸ್ಥಿತೌ ॥ ತತ್ರ ಚರ್ತುಂ ಸಮರ್ಥಾಃ ಸ್ಯುರ್ಮುಕ್ತಿಂ ಪ್ರಾಪ್ಯ ಯದೃಚ್ಛಯಾ । ಕಾದಾಚಿತ್ಕ್ಯೋಪಾಸನೇ ತು ತಾವತ್ಯೇಷಾಂ ಚ ಯೋಗ್ಯತಾ ॥

ಅ ॥ ಯಾರು ಪೃಥಿವ್ಯಗ್ನಿಪದಕ್ಕೆ ಯೋಗ್ಯರೋ ಅವರೇ ಮುಖ್ಯವಾಗಿ ಈ ಉಪಾಸನೆಗೆ ಯೋಗ್ಯರು. ಅವರಿಂದ ಇತರರಾದವರು ಸ್ವಲ್ಪಕಾಲದಲ್ಲಿ ಉಪಾಸನೆ ಮಾಡಿ ಹರೀಚ್ಛೆಯಿಂದ ಮುಕ್ತಿಯನ್ನು ಹೊಂದಿ ಯಾವ ಪ್ರದೇಶಗಳಲ್ಲಿ ಭೂಮ್ಯಗ್ನಿಗಳಿರುತ್ತಾರೋ ಅಂತಹ ಪ್ರದೇಶದಲ್ಲಿ (ಇಚ್ಛಾನುಸಾರವಾಗಿ) ಸಂಚರಿಸಲು ಸಮರ್ಥರಾಗುವರು. ಇವರಿಗಾದರೂ ಅಷ್ಟೇ ಉಪಾಸನಾ ಫಲಗಳಲ್ಲಿ ಯೋಗ್ಯತೆಯಿರುವುದು.

ಭಾ॥ (a) ವೇದನಂ ಹ್ಯಾಪರೋಕ್ಷ್ಯೇಣ ಮುಖ್ಯಂ ಭವತಿ ನಾನ್ಯಥಾ । ಏಕದೇಶವಿದೋ ಯಸ್ಮಾತ್ಪರೋಕ್ಷಜ್ಞಾನಿನೋಽಖಿಲಾಃ ॥ ಆಪರೋಕ್ಷ್ಯಂ ಭವೇದ್ಯಸ್ಮಾ (b) ನ್ನೈವೋಪಾಸಾಮೃತೇ ಕ್ವಚಿತ್ । ತಸ್ಮಾದುಪಾಸಾಪೂರ್ವಂ ತು ಯೋ ಪರೋಕ್ಷಂ ಪ್ರಪಶ್ಯತಿ ॥ ಸ ಏವ ವೇದ (c) ನಾನ್ಯಸ್ತು ಯೋಗ್ಯಶ್ಚೈವಾಪರೋಕ್ಷದೃಕ್ । ತಸ್ಮಾದ್ಯೋಗ್ಯಸ್ಯೋಕ್ತಫಲಮನ್ಯೇಷಾಂ ಕಿಂಚಿದೇವ ಹಿ ॥

ಅ ॥ (a) ಯಾವ ಕಾರಣದಿಂದ ಎಲ್ಲಾಪರೋಕ್ಷಜ್ಞಾನಿಗಳೂ ಸ್ವಲ್ಪ ವಿಷಯವನ್ನೇ ತಿಳಿದಿರುವರೋ, ಆ ಕಾರಣ ಪ್ರತ್ಯಕ್ಷವಾಗಿ ತಿಳಿದುಕೊಳ್ಳುವುದೇ ಮುಖ್ಯವಾಗಿ (ವಿದ ಧಾತುವಿನಿಂದ ಪ್ರತಿಪಾದ್ಯವು) ಆಗುತ್ತದೆ. ಬೇರೆ ರೀತಿಯಾಗಿ (ಪರೋಕ್ಷವಾಗಿ ತಿಳಿದು ಕೊಳ್ಳುವುದು ಮುಖ್ಯವಾಗಿ ಪ್ರತಿಪಾದ್ಯವು) ಆಗಲಾರದು. ॥ (b) ಯಾವ ಕಾರಣದಿಂದ ಉಪಾಸನೆಯನ್ನು ಹೊರತು ಎಲ್ಲಿಯೂ ಪ್ರತ್ಯಕ್ಷವಾಗಲಾರದೋ, ಆದುದರಿಂದ ಯಾವಾತನು ಉಪಾಸನಾ ಪೂರ್ವಕವಾಗಿ ಪ್ರತ್ಯಕ್ಷವಾಗಿಯೇ ನೋಡುತ್ತಾನೋ, ಆತನೇ ತಿಳಿಯ ತಕ್ಕವನು. (ಎಂದು ಹೇಳಲ್ಪಡುತ್ತಾನೆ.) ॥ (c) ಚ=ಯಾವ ಕಾರಣದಿಂದ ಯೋಗ್ಯನಾದ ಅಧಿಕಾರಿಯೇ (ಉಪಾಸನಾ ಪೂರ್ವಕವಾಗಿ) ಅಪರೋಕ್ಷಜ್ಞಾನಿಯು ಇತರನಾಗುವುದಿಲ್ಲ. ಆದುದರಿಂದ ಯೋಗ್ಯನಾದವನಿಗೇನೇ ಹೇಳಲ್ಪಟ್ಟ ಸಂಪೂರ್ಣ ಫಲವು. ಇತರರಿಗೆ (ಅಂದರೆ ಕೆಲವು ಕಾಲದಲ್ಲಿ ಮಾತ್ರ ಉಪಾಸನಾ ಮಾಡತಕ್ಕವರಿಗೆ) ಸ್ವಲ್ಪವೇ ಸರಿ.

ತಾ ॥ 'ಖಂಡಸ್ಮೃತಿರ್ಧಾರಣಾಸ್ಯಾದಖಂಡಾ ಧ್ಯಾನಮುಚ್ಯತೇ ॥ ಅಪ್ರಯತ್ನಾತ್ಸಮಾಧಿಸ್ತು ದರ್ಶನಂ ಚಿರಯೂಽನಯಾ' ಎಂದು ಹೇಳಿರುವುದರಿಂದ ಶೀಘ್ರವಾಗಿ ಮಾಡಲ್ಪಡತಕ್ಕ ಸಮಾಧಿಯಿಂದ ಅಪರೋಕ್ಷಜ್ಞಾನವು ಉಂಟಾಗುವುದು. ಖಂಡಸ್ಮೃತಿರೂಪವಾದ ಕದಾಚಿತ್ ಮಾಡತಕ್ಕ ಉಪಾಸನೆಯಿಂದ ಅಪರೋಕ್ಷಜ್ಞಾನವು ಉಂಟಾಗಲಾರದು. ಕಾರಣ ಅವರಿಗೆ ಆ ಲೋಕಗಳಲ್ಲಿ ಕೇವಲ ಸಂಚಾರವೆಂದು ತಿಳಿಯತಕ್ಕದ್ದು. ॥

ಭಾ॥ (a) ಪ್ರಾಣಾದಿಭ್ಯಶ್ಚ ವಾಯ್ವಾದ್ಯಾ ಏವಂ ವಿಷ್ಣೋಃ ಪ್ರಜಜ್ಞಿರೇ। ಬ್ರಹ್ಮಶೇಷಸುಪರ್ಣೇಂದ್ರಶಿವಾದ್ಯಾ ಆಪ ಈರಿತಾಃ ॥ (b) ತೇ ವಿಷ್ಣೋರ್ಮನಸಾ ಜಾತಾಃ ಸರ್ವೇ ಚಾಬಭಿಮಾನಿನಃ । ವೈಶ್ವದೇವ್ಯಸ್ತತೋ ಹ್ಯಾಪೋ ವರುಣಶ್ಚ ಮನೋಭವಃ ॥ (c) ಪ್ರಾಣಿನಾಂ ಪೂರ್ತಪುಣ್ಯೇಷು ಶ್ರದ್ಧಾರೂಪ ಮನೋಽಧಿಪಃ ।

ಅ ॥ (a) ಈ ಪ್ರಕಾರವಾಗಿ ಶ್ರೀ ಹರಿಯ ಪ್ರಾಣಾದಿಗಳಿಂದ ವಾಯುವೇ ಮೊದಲಾದ ದೇವತೆಗಳು ಹುಟ್ಟಿದರು. ಚತುರ್ಮುಖ, ಶೇಷ, ಗರುಡ, ದೇವೇಂದ್ರ, ರುದ್ರ ಇವರೇ ಮೊದಲಾದ ಎಲ್ಲಾ ದೇವತೆಗಳು ಜಲಾಭಿಮಾನಿಗಳೆಂದು ಹೇಳಲ್ಪಟ್ಟಿರುತ್ತಾರೆ. ॥ (b) ಆ ಜಲಾಭಿಮಾನಿಗಳಾದ ಎಲ್ಲಾ ದೇವತೆಗಳೂ ವಿಷ್ಣುವಿನ ಮನಸ್ಸಿನಿಂದ ಹುಟ್ಟಿದವರು. ಎಲ್ಲಾ ದೇವತೆಗಳು ಜಲಾಭಿಮಾನಿಗಳಾದುದರಿಂದಲೇ ಜಲಗಳು ವಿಶ್ವೇದೇವತೆಗಳೇ ಅಭಿಮಾನಿಗಳಾಗಿ ಉಳ್ಳವುಗಳು. ವರುಣನೂ ಕೂಡ (ಶ್ರೀಹರಿಯ) ಮನಸ್ಸಿನಿಂದ ಹುಟ್ಟಿದವನು ॥ (c) ಆತನು ಪ್ರಾಣಿಗಳಿಗೆ ತಟಾಕಾದಿ ನಿರ್ಮಾಣರೂಪ ಪುಣ್ಯವಿಷಯಗಳಲ್ಲಿ ಶ್ರದ್ಧಾರೂಪವಾಗಿ ಪರಿಣತವಾದ ಮನಸ್ಸಿಗೆ ಅಧಿಪತಿಯು. (ಅಂದರೆ ಪ್ರಾಣಿಗಳಿಗೆ ವಿಶ್ವಾಸಪೂರ್ವಕವಾಗಿ ಸರೋವರವೇ ಮೊದಲಾದುದನ್ನು ನಿರ್ಮಿಸಲಿಕ್ಕೆ ಬುದ್ಧಿಯನ್ನು ಕೊಡುತ್ತಾನೆ.)

ಭಾ॥ (a) ಏವಂ ಹಿ ಸರ್ವದೇವಾ ಹಿ ವಿಷ್ಣ್ವಂಗೇಭ್ಯಃ ಪ್ರಜಜ್ಞಿರೇ । ಸ್ವೋತ್ಪತ್ತ್ಯಂಗಂ ಚ ತೇ ವಿಷ್ಣೋಃ ಶುಶ್ರೂಷಂ ತೇ ಪೃಥಕ್ಪೃಥಕ್ ॥ (b) ವಿಷ್ಣೋರ್ವಿಷಯಧರ್ಮೇಷು ಜ್ಞಾನಾದಿಷು ಚತುರ್ಮುಖಃ । ಶ್ರದ್ಧಾಂ ದದಾತಿ ಭೂತಾನಾಂ ವೈದಿಕಶ್ರವಣೇ ವಿಪಃ ॥ (c) ತಾಂತ್ರಿಕೇ ಶೇಷರುದ್ರೌ ಚ ಶಕ್ರೋ ಯಜ್ಞಾದಿಕರ್ಮಣಿ । ವಾಯುರ್ಗಂಧವಹಶ್ಚಾಸ್ಯ ಭಕ್ತಿಜ್ಞಾನಪ್ರದಸ್ತಥಾ ॥ ಭೂತಾನಾಂ ತಸ್ಯ ವಿಷಯೇ (d) ತ್ವಂತರಿಕ್ಷಂ ಚ ಕರ್ಮಣಃ । ತದೀಯಸ್ಯೈವ ಭೋಗಾರ್ಥಂ ಜೀವಾನಾಂ ಶ್ರುತಿಚಾರದಂ ॥ (e) ಅಂತರಿಕ್ಷಂ ಚ ವಿಷ್ಣೋಶಃ ಸೂರ್ಯಸ್ತತ್ಕರ್ಮಸಿದ್ಧಯೇ । ಭೂತಾನಾಂ ಜ್ಯೋತಿಷೋ ದಾತಾ ದ್ಯೌರಪ್ಯನ್ನಾದ್ಯದಾಯಿನೀ ॥ ೭ ॥

ಅ ॥ (a) ಈ ಪ್ರಕಾರವಾಗಿಯೇ ಎಲ್ಲಾ ದೇವತೆಗಳೂ ಶ್ರೀ ಹರಿಯ ಅವಯವಗಳಿಂದಲೇ ಹುಟ್ಟುವವರಾದರು. ಆ ದೇವತೆಗಳು ಶ್ರೀ ಹರಿಯ ತಮ್ಮ ತಮ್ಮ ಉತ್ಪತ್ತಿಕಾರಣೀಭೂತವಾದ ಅಂಗವನ್ನು (ತಮಗೆ ಯಾವ ಯಾವ ಅಂಗಗಳಿಂದ ಉತ್ಪತ್ತಿಯಾಗಿದೆಯೋ ಅಂತಹ ಅಂಗವನ್ನು) ಪ್ರತ್ಯೇಕ ಪ್ರತ್ಯೇಕವಾಗಿ ಸೇವಿಸಿಕೊಂಡಿರುತ್ತಾರೆ. ॥ (b) ಪ್ರಾಣಿಗಳಿಗೆ ಹರಿವಿಷಯಕಗಳಾದ ಜ್ಞಾನಾದಿ ಧರ್ಮಗಳಲ್ಲಿ ಚತುರ್ಮುಖನು ವಿಶ್ವಾಸವನ್ನು ಕೊಡು

ತ್ತಾನೆ. ಹಾಗೆಯೇ ಗರುಡನು ವೇದಗಳಲ್ಲಿದ್ದ ವಿಷಯಗಳನ್ನು ಕೇಳುವ ವಿಷಯದಲ್ಲಿಯೂ, (c) ಶೇಷರುದ್ರರು ಸಿದ್ಧಾಂತವಿಷಯದಲ್ಲಿಯೂ, ದೇವೇಂದ್ರನು ಯಜ್ಞಾದಿ ಕರ್ಮಗಳಲ್ಲಿಯೂ, ವಿಶ್ವಾಸವನ್ನು ಕೊಡುತ್ತಾರೆ. ಭೂತವಾಯುವು ವಿಷ್ಣುವಿನ ಘ್ರಾಣೇಂದ್ರಿಯಕ್ಕೆ (ಮೂಗಿಗೆ) ಶುಭಗಂಧವನ್ನೇ ಪ್ರಾಪಿಸಿಕೊಡುತ್ತದೆ. ಮುಖ್ಯಪ್ರಾಣನು ಪ್ರಾಣಿಗಳಿಗೆ ಶ್ರೀಹರಿಯ ವಿಷಯ ದಲ್ಲಿ ಭಕ್ತಿಜ್ಞಾನವನ್ನು ಕೊಡುವವನು. ॥ (d) ಅಂತರಿಕ್ಷಾಭಿಮಾನಿಯು ಹರಿಸಂಬಂಧಿ ಯಾದ ಕರ್ಮವನ್ನು ಕೊಡತಕ್ಕವನು. ಕರ್ಮವು ಜೀವರಿಗೆ ಸುಖಭೋಗಿಸುವುದಕ್ಕೋಸ್ಕರ ವಾಗುವುದು. ಅಲ್ಲದೆ ಧ್ವನಿಯನ್ನು ಹುಟ್ಟಿಸಿ ವೇದಗಳ ಪ್ರವೃತ್ತಿಯನ್ನು ಕೊಡತಕ್ಕವನು. ಅಥವಾ ಭಗವದ್ವಿಷಯಕವಾದ ಕಥಾದಿ ಶ್ರವಣವನ್ನು ಮಾಡಿಸುವವನು. ॥ (e) ಅಂತರಿ ಕ್ಷಾಭಿಮಾನಿಯು ಗಣಪತಿಯು. ಸೂರ್ಯನು ಪರಮಾತ್ಮನಿಗೆ ಪ್ರೀತಿಯನ್ನುಂಟು ಮಾಡುವ ಕರ್ಮವು ಸಿದ್ಧಿಯಾಗುವುದಕ್ಕೋಸ್ಕರ ಪ್ರಾಣಿಗಳಿಗೆ ಪ್ರಕಾಶವನ್ನು ಕೊಡತಕ್ಕವನು. ದ್ಯುಲೋ ಕಕ್ಕಭಿಮಾನಿಯಾದ ದೇವತೆಯೂ ಕೂಡ ಅನ್ನವೃಷ್ಟಿಮೊದಲಾದುದನ್ನು ಕೊಡತಕ್ಕವನು. ॥೭॥

ಪೂರ್ವೋಕ್ತ ಪ್ರಕಾರವಾಗಿ ಪೂಜ್ಯನಾದ ಹರಿಯಿಂದುಪದೇಶಿಸಲ್ಪಟ್ಟ ಲಕ್ಷ್ಮೀದೇವಿಯು ತಾನು ಸರ್ವಜ್ಞಳಾದಾಗ್ಯೂ ಲೋಕದಲ್ಲಿದ್ದ ಜನರಿಗೆ ಅನುಗ್ರಹಿಸುವುದಕ್ಕೋಸ್ಕರ ಪರರ ಸಂಶ ಯವನ್ನು ತಾನೇ ಆಶಂಕಿಸಿ ಶ್ರೀ ಹರಿಯನ್ನು ಕುರಿತು ಪ್ರಶ್ನೆಮಾಡುತ್ತಾಳೆ.

ಮಂ ॥ ಆಪಃ ೩ ಇತ್ಯಾಪ ಇತಿ ತದಿದಮಾಪ ಏವೇದಂ ವೈ ಮೂಲಮುದ ಸ್ತೂಲಮಯಂ ಪಿತೈತೇ ಪುತ್ರಾ ಯತ್ರ ಹ ಕ್ವಚ ಪುತ್ರಸ್ಯ ತತ್ಪಿತು ರ್ಯತ್ರ ವಾ ಪಿತುಸ್ತದ್ವಾ ಪುತ್ರಸ್ಯೇತ್ಯೇತತ್ತದುಕ್ತಂ ಭವತ್ಯೇತದ್ಧ ಸ್ಮ ವೈತದ್ವಿದ್ವಾನಾಹ ಮಹಿದಾಸ ಐತರೇಯ ಆಹಂ ಮಾಂ ದೇವೇ ಭ್ಯೋ ವೇದ ಓಮುದ್ದೇವಾನ್ವೇದೇತಃ ಪ್ರದಾನಾಹ್ಯೇತ ಇತಃ ಸಂ ಭೃತಾ ಇತಿ ಸ ಏಷ ಗಿರಿಶ್ಚಕ್ಷುಶ್ರೋತ್ರಂ ಮನೋ ವಾಕ್ಪ್ರಾಣಸ್ತಂ ಬ್ರಹ್ಮಗಿರಿರಿತ್ಯಾಚಕ್ಷತೇ ಗಿರತಿ ಹ ವೈ ದ್ವಿಷಂತಂ ಪಾಪ್ಮಾನಂ ಭ್ರಾತೃವ್ಯಂ ಪರಾಸ್ಯ ದ್ವಿಷನ್ಪಾಪ್ಮಾ ಭ್ರಾತೃವ್ಯೋ ಭವತಿ ಯ ಏವಂ ವೇದ ಸ ಏಷೋಸುಃ ಸ ಏಷ ಪ್ರಾಣಃ ಸ ಏಷ ಭೂತಿಶ್ಚಾಭೂತಿಶ್ಚ ತಂ ಭೂತಿರಿತಿ ದೇವಾ ಉಪಾಸಾಂಚಕ್ರಿರೇ ತೇ ಬಭೂವುಸ್ತಸ್ಮಾದ್ಧಾ ಪ್ಯೇತರ್ಹಿ ಸುಪ್ತೋ ಭೂರ್ಭೂರಿತ್ಯೇವ ಪ್ರಶ್ವಸಿತ್ಯಭೂತಿರಿತ್ಯಸುರಾಸ್ತೇ ಹ ಪರಾಬಭೂವುರ್ಭವತ್ಯಾತ್ಮನಾ ಪರಾಸ್ಯ ದ್ವಿಷನ್ಪಾಪ್ಮಾ ಭ್ರಾತೃ ವ್ಯೋ ಭವತಿ ಯ ಏವಂ ವೇದ ಸ ಏಷ ಮೃತ್ಯುಶ್ಚೈವಾಮೃತಂ ಚ ತದುಕ್ತಮೃಷಿಣಾಪಾಙ್ ಪ್ರಾಙೇತಿ ಸ್ವಧಯಾ ಗೃಭೀತ ಇತ್ಯಪಾ ನೇನ ಹ್ಯಯಂ ಯತಃ ಪ್ರಾಣೋ ನ ಪರಾಙ್ ಭವತ್ಯಮರ್ತ್ಯೋ ಮರ್ತ್ಯೇ ನಾಸಯೋನಿರಿತ್ಯೇತೇನ ಹೀದಂ ಸರ್ವಂ ಸಯೋನಿ ಮರ್ತ್ಯಾನಿ ಹೀಮಾನಿ ಶರೀರಾಣೀ॰ ೩ ಅಮೃತೈಷಾ ದೇವತಾ ತಾ ಶಶ್ವಂತಾ ವಿಷೂಚೀನಾ ವಿಯಂತಾ ನ್ಯನ್ಯಂ ಚಿಕ್ಯುರ್ನ ನಿಚಿಕ್ಯುರನ್ಯ ಮಿತಿ ನಿಚಿನ್ವಂತಿ ಹ್ಯೇವೇಮಾನಿ ಶರೀರಾಣೀ॰ ೩ ಅಮೃತೈವೈಷಾ

**ದೇವತಾಽನ್ಯತೋ ಹ ವಾ ಅಮುಷ್ಮಿಂಲ್ಲೋಕೇ ಸಂಭವತ್ಯನ್ಯತಃ ಸರ್ವೇಭ್ಯೋ ಭೂತೇಭ್ಯೋ ದದೃಶೇ ಯ ಏವಂ ವೇದ ಯ ಏವಂ ವೇದ ॥ ೮ ॥**

**ಇತ್ಯೈತರೇಯೋಪನಿಷತ್ಸು ದ್ವಿತೀಯಾರಣ್ಯಕೇ ಪ್ರಥಮೋಽಧ್ಯಾಯಃ ॥ ೨ ॥ ೧ ॥**

ಅ ॥ ಆಪಾಃ ೩ ಇತಿ=ಆಪಃ ಎಂಬೀ ನಾಮಧೇಯವು, (ಮನಸ್ಸಿನಿಂದ ವರುಣನೂ ಜಲಗಳೂ ಸೃಷ್ಟಿಸಲ್ಪಟ್ಟರು ಎಂದೂ ಮತ್ತು ಬ್ರಹ್ಮಾದಿಗಳೂ "ಅಪ್"ಶಬ್ದವಾಚ್ಯರೆಂದು ಹೇಳಲ್ಪಟ್ಟಿದೆ. ಅಲ್ಲಿ ಯಾವುದೊಂದು ನಿಮಿತ್ತವೂ ಹೇಳಲ್ಪಡಲಿಲ್ಲ. ಆ ಕಾರಣ ಎಲ್ಲಾ ದೇವತೆಗಳಿಗೆ "ಆಪಃ" ಎಂಬೀ ನಾಮಧೇಯವು ಹೇಗೆ ಸಂಗತವಾಗುತ್ತದೆ ಎಂದು ಲಕ್ಷ್ಮಿಯ ಪ್ರಶ್ನೆಯ ಅಭಿಪ್ರಾಯವು.) ಆಪ ಇತಿ=ಅಪಃ ಎಂಬೀ ನಾಮಧೇಯವು, (ದೇವತೆಗಳಿಗೆ ಸಂಗತವಾಗುತ್ತದೆ ಎಂದು ಮಹಿದಾಸನು ಉತ್ತರ ಕೊಟ್ಟನು.) ಇದಂ=ಈ ಮಹಿದಾಸನೆಂಬ ಪರಬ್ರಹ್ಮವು ಯಾವುದದೆಯೋ, ತತ್=ಅದು, ಅಪ ಏವ=ಸರ್ವಗುಣಪರಿಪೂರ್ಣವಾದುದರಿಂದ ಅಪ್‌ಶಬ್ದವಾಚ್ಯವಾಗುತ್ತದೆ. ಇದಂ ವೈ=ಅಪ್‌ಶಬ್ದವಾಚ್ಯವಾದ ಪರಬ್ರಹ್ಮವೇ, ಮೂಲಂ=(ನಿಖಿಲ ಜಗತ್ತಿಗೂ) ಕಾರಣವು. ಅದಃ=ಆ ಮಹಿದಾಸನಿಂದ ಭಿನ್ನವಾದ ಚತುರ್ಮುಖಾದಿ ಜಗತ್ತು, ತೂಲಂ=ಕಾರ್ಯರೂಪವು. ಅಯಂ=ಈ ಪರಮಾತ್ಮನು, ಪಿತಾ=ತಂದೆಯು, ಏತೇ=ಈ ಬ್ರಹ್ಮಾದಿದೇವತೆಗಳು, ಪುತ್ರಾಃ=ಮಕ್ಕಳುಗಳು; ಪುತ್ರಸ್ಯ=ಮಗನಿಗೆ, ಯತ್ರ ಕ್ವಚ=ಯಾವುದೊಂದು ನಾಮಧೇಯವಿದೆಯೋ, ತತ್=ಅದು, ಪಿತುರ್ಹ=ತಂದೆಗೂ (ಆಗುತ್ತದೆ.) ಪಿತುರ್ವಾ=ತಂದೆಗೆ, ಯತ್ರ=ಯಾವ ನಾಮಧೇಯವಿದೆಯೋ, ತತ್=ಅದು, ಪುತ್ರಸ್ಯ ವಾ=ಮಗನಿಗೂ (ಆಗುತ್ತದೆ.) ಇತಿ=ಆದುದರಿಂದ, (ಎಲೋ ಪ್ರಿಯಳೇ) ಏತತ್=ನಿನ್ನ ಪ್ರಶ್ನೆಗೆ ಉತ್ತರವು, ಉಕ್ತಂ=ಹೇಳಲ್ಪಟ್ಟದ್ದಾಗಿ, ಭವತಿ=ಆಗುತ್ತದೆ. * (ಬೇರೆ ರೀತಿಯಾಗಿಯೂ ದೇವತೆಗಳಿಗೆ "ಆಪಃ" ಎಂಬೀ ಹೆಸರು ಸಂಗತವೇ ಆಗುತ್ತದೆ ಎಂದು ಹೇಳುತ್ತಾರೆ.) ಏತತ್=ಇದನ್ನು, (ಶ್ರೀಹರಿಯ ನಾಮಧೇಯವು ದೇವತೆಗಳಿಗೂ ಇರುವುದಕ್ಕೆ ಹೇಳಿದ ಕಾರಣವನ್ನು) ವಿದ್ವಾನ್=ತಿಳಿದ, ಐತರೇಯಃ=ಇತರಾದೇವಿಯ ಮಗನಾದ, ಮಹಿದಾಸಃ=ಮಹಿದಾಸನಾಮಕನಾದ ಹರಿಯು, ಏತತ್=ಮೇಲೆ ಹೇಳುವ ವಚನವನ್ನು, ಆಹ=ಲಕ್ಷ್ಮಿಯನ್ನು ಕುರಿತು ಹೇಳಿದನು. ಹ ಸ್ಮ ವಾ=ಪೂರ್ವೋಕ್ತ ವಿಷಯವು ಸುಪ್ರಸಿದ್ಧವಾದುದು. ಅಹಂ=ನಾನು, ಆ ದೇವೇಭ್ಯಃ=ದೇವತೆಗಳ ಪರ್ಯಂತವಾಗಿ, ಮಾಂ=ನನ್ನನ್ನು, ವೇದ=ತಿಳಿದಿದ್ದೇನೆ. ಉ=ಮತ್ತು, ಆ ಮತ್=ನನ್ನ ಪರ್ಯಂತವಾಗಿ, ದೇವಾನ್=ದೇವತೆಗಳನ್ನು, ವೇದ=ತಿಳಿದಿದ್ದೇನೆ. (ಅಂತೂ ನಾನು ಎಲ್ಲಾ

---

* ಮಗನಿಗೆ ಯಾವ ಧನ, ಹೆಸರು ಮೊದಲಾದುವುಗಳವೆಯೋ ಅವು ತಂದೆಗೂ ಆಗುತ್ತವೆ. ಪಿತಾಮಹಾದಿಗಳಿಗೂ ಪಿತೃಗಳೆಂದೇನೇ ಲೋಕ, ವೇದಗಳಲ್ಲಿ ಪ್ರಸಿದ್ಧಿಯಿದೆ. ಮಕ್ಕಳು ಸಂಪಾದಿಸಿದ ಧನಾದಿಗಳಲ್ಲಿ ಈ ಧನಾದಿಗಳು ನನ್ನದೆಂದು ತಂದೆಯವರಿಗೂ ಅಬಾಧಿತ ಪ್ರತೀತಿ (ವ್ಯವಹಾರ) ಯಿದೆ. ಹೀಗೆಯೇ ಮಕ್ಕಳಿಗೂ ತಂದೆಯ ನಾಮಾದಿಗಳು ಅಮುಖ್ಯವಾಗಿವೆ. ಯದುಗಳು, ರಘುಗಳು, ಕುರುಗಳು. ಇತ್ಯಾದಿ ವ್ಯವಹಾರವು ವಂಶೀಯರಲ್ಲಿ ದೃಷ್ಟವಾಗಿದೆಯಷ್ಟೆ! ಅಲ್ಲದೆ ಮಕ್ಕಳು ಪಿತೃಧನಾದಿಗಳನ್ನನುಭವಿಸಿಕೊಂಡಿರುತ್ತಾರೆ. ಅಂತೂ ಬ್ರಹ್ಮಾದಿಗಳೆಲ್ಲರೂ ವಿಷ್ಣುವಿನ ಮಕ್ಕಳಾದುದರಿಂದ ಆವನಲ್ಲಿದ್ದ 'ಅಪಃ' ಎಂಬೀ ನಾಮಧೇಯವು ಅಮುಖ್ಯವಾಗಿ ದೇವತೆಗಳಲ್ಲಿಯೂ ಪ್ರಯೋಗಿಸಲ್ಪಡುತ್ತದೆ.

ದೇವತೆಗಳಲ್ಲಿಯೂ ವ್ಯಾಪ್ತನಾಗಿದ್ದೇನೆ. ದೇವತೆಗಳು ನನ್ನಲ್ಲಿಯೇ ಆಶ್ರಿತರಾಗಿರುತ್ತಾರೆ. ಈ ವಿಷಯವು ನನಗೆ ಪ್ರತ್ಯಕ್ಷ ಸಿದ್ಧವಾದುದರಿಂದ ಎಷ್ಟು ಮಾತ್ರಕ್ಕೂ ಅಪ್ರಾಮಾಣಿಕವಲ್ಲ. ಎಂಬೀ ಅಭಿಪ್ರಾಯದಿಂದ "ಅಹಂ ವೇದ" ಎಂದು ಹೇಳಿರುವರು. ಮತ್ತು ಕ್ಷೀರನೀರಗಳನ್ನು ಬೆರಸಿದರೂ ಬರೇ ನೀರಿನಲ್ಲಿಯೂ ಕ್ಷೀರ ಎಂಬೀ ವ್ಯವಹಾರವಿದ್ದಂತೆಯೇ ನನಗೂ ದೇವತೆಗಳಿಗೂ ಪರಸ್ಪರ ಸಂಬಂಧವಿರುವುದರಿಂದ ಆ ದೇವತೆಗಳಿಗೆ "ಆಪಃ" ಎಂಬೀ ನನ್ನ ನಾಮಧೇಯದ ವ್ಯವಹಾರವು ಸಂಗತವೇ ಆಗಿರುವುದು.) ಏತೇ=ಈ ದೇವತೆಗಳು, ಹಿ=ಯಾವ ಕಾರಣದಿಂದ, ಇತಃ=ನನ್ನ ಆಜ್ಞೆಯಿಂದಲೇ, ಪ್ರದಾನಾಃ=ಪದದಾನವುಳ್ಳವರು. (ಅಂದರೆ ನಾನು ಕೊಟ್ಟ ಪದವಿಗಳನ್ನೇ ಅನುಭವಿಸಿಕೊಂಡಿರುವರು.) ಏತೇ=ಈ ದೇವತೆಗಳು, ಇತಃ ಹಿ= ನನ್ನ ಆಜ್ಞೆಯಿಂದಲೇ, ಸಂಭೃತಾಃ=ಪೋಷಿತರಾಗಿರುತ್ತಾರೆ. (ಯಾವುದರಿಂದ ಈ ದೇವತೆಗಳೆಲ್ಲರೂ ಕೇವಲ ನನ್ನ ಆಜ್ಞೆಯಿಂದಲೇ ಸತ್ತಾಪ್ರತೀತಿಪ್ರವೃತ್ತ್ಯಾದಿಗಳನ್ನು ಹೊಂದಿರುವರೋ, ಆ ಕಾರಣ ನನ್ನಿಂದಲೇ ಜ್ಞಾನಬಲಕರ್ಮಚೇಷ್ಟಾದಿಗಳನ್ನು ಹೊಂದಿ ಪೋಷಿತರಾಗಿರುತ್ತಾರೆ. ಆದುದರಿಂದ ಎಲ್ಲಾರೀತಿಗಳಿಂದಲೂ ಎಲ್ಲಾ ದೇವತೆಗಳೂ ನನ್ನ ಅಧೀನರೇ ಆಗಿರುವ ಪ್ರಯುಕ್ತ 'ಯದಧೀನಾಯಸ್ಯ ಸತ್ತಾತತ್ತದಿತ್ಯೇವ ಭಣ್ಯತೆ' ॥ ಇತ್ಯಾದಿ ವಚನಾನುಸಾರವಾಗಿ 'ಆಪಃ' ಎಂಬೀ ನನ್ನ ಹೆಸರು ಆ ದೇವತೆಗಳಿಗೆ ಸಂಗತವೇ ಆಗುವುದು).

ಈ ಪ್ರಕಾರ ಪ್ರಶ್ನೆಗೆ ಉತ್ತರಕೊಟ್ಟು ಇತರ ವಿದ್ಯೆಯನ್ನು 'ಸ ಏಷಃ' ಇತ್ಯಾದಿಯಿಂದ ಆರಂಭಿಸುತ್ತಾರೆ.

ಸ ಏಷಃ=ಆ ಈ ಪರಮಾತ್ಮನು, ಗಿರಿಃ=(ಎಲ್ಲಾ ಪ್ರಾಣಿಗಳನ್ನು ಭಕ್ಷಿಸುವುದರಿಂದ) ಗಿರಿ ಎಂಬ ಹೆಸರುಳ್ಳವನಾಗಿದ್ದಾನೆ. ಚಕ್ಷುಃ=(ಎಲ್ಲಾ ಜಗತ್ತನ್ನು ಸತ್ಯವಾಗಿಯೂ ನೋಡುವುದರಿಂದ) ಚಕ್ಷುಃ ಎಂಬ ಹೆಸರುಳ್ಳವನಾಗಿದ್ದಾನೆ. ಶ್ರೋತ್ರಂ=(ಸರ್ವವನ್ನೂ ಪ್ರತ್ಯಕ್ಷವಾಗಿಯೂ ಕೇಳತಕ್ಕವನಾದ ಪ್ರಯುಕ್ತ) ಶ್ರೋತ್ರನಾಮಕನಾಗಿರುವನು. ಮನಃ=(ಸರ್ವಜ್ಞನಾದುದರಿಂದ) ಮನೋನಾಮಕನೂ, ವಾಕ್=(ಸರ್ವವನ್ನೂ ಬ್ರಹ್ಮಾದಿಗಳಿಗೆ ಯಥಾರ್ಥವಾಗಿ ಉಪದೇಶಿಸುವ ಪ್ರಯುಕ್ತ) ವಾಕ್‌ನಾಮಕನೂ, ಪ್ರಾಣಃ=(ಸಮಸ್ತರನ್ನೂ ಪ್ರೇರಿಸುವ ಪ್ರಯುಕ್ತ) ಪ್ರಾಣನಾಮಕನೂ ಆಗಿರುವನು. ತಂ=ಅಂತಹ ಹರಿಯನ್ನು, ಬ್ರಹ್ಮಗಿರಿರಿತಿ=(ಗುಣಪೂರ್ಣನಾದುದರಿಂದ ಬ್ರಹ್ಮನೂ ನಿಖಿಲವನ್ನು ಭಕ್ಷಿಸುವುದರಿಂದ ಗಿರಿಯೂ, ಅಂತೂ) ಬ್ರಹ್ಮಗಿರಿ ಎಂದು, ಆಚಕ್ಷತೆ=(ವಿದ್ವಾಂಸರು) ಹೇಳುತ್ತಾರೆ.

ಯಃ=ಯಾವಾತನು, ಏವಂ=ಪೂರ್ವೋಕ್ತಪ್ರಕಾರವಾಗಿ, ವೇದ=ತಿಳಿಯುತ್ತಾನೋ, (ಉಪಾಸನೆ ಮಾಡಿ ಪ್ರತ್ಯಕ್ಷೀಕರಿಸಿಕೊಳ್ಳುತ್ತಾನೋ), ಸಃ=ಅಂಥವನು, ದ್ವಿಷಂತಂ=ದ್ವೇಷಿಯಂತೆ ಅನಿಷ್ಟವನ್ನುಂಟುಮಾಡುವ, ಭ್ರಾತೃವ್ಯಂ=ಸಹೋದರನಂತೆ ಒಟ್ಟಿಗೆ ಇರುವ, ಪಾಪ್ಮಾನಂ=ಅಪ್ರಾರಬ್ಧಪಾಪಕರ್ಮವನ್ನು, ಗಿರತಿ=ನಾಶಮಾಡುತ್ತಾನೆ. ಅಸ್ಯ=ಇವನ, ದ್ವಿಷನ್= ದ್ವೇಷಿಯಾದ, ಪಾಪ್ಮಾ=ಪಾಪಿಯಾದ, ಭ್ರಾತೃವ್ಯಃ=ಬಾಹ್ಯ ಶತ್ರುವೂ ಕೂಡ, ಪರಾಭವತಿ= ತಿರಸ್ಕೃತನಾಗುತ್ತಾನೆ. (ಅಂಧಂತಮಸ್ಸಿನಲ್ಲಿ ಬೀಳುತ್ತಾನೆ). ಸ ಏಷಃ=ಆ ಈ ಹರಿಯು, ಅಸುಃ(ಸರ್ವವನ್ನೂ ನಿರಾಸ ಮಾಡಿದಪ್ರಯುಕ್ತ), ಅಸುನಾಮಕನು, ಸ ಏಷಃ=ಆ ಈ ಹರಿಯು, ಪ್ರಾಣಃ=(ಪ್ರಕೃಷ್ಟ ಆನಂದರೂಪನಾದುದರಿಂದ) ಪ್ರಾಣನಾಮಕನು. ಸ ಏಷಃ=ಆ ಈ ಹರಿಯು, ಭೂತಿಶ್ಚ=ಜ್ಞಾನ ಐಶ್ವರ್ಯಾದಿಸ್ವರೂಪನು. ಸ ಏಷಃ=ಆ ಈ ಹರಿಯು, ಅಭೂತಿಶ್ಚ=(ಅಜ್ಞಾನಾದಿಗಳನ್ನು ಕೊಡುವುದರಿಂದ) ಅಭೂತಿಶಬ್ದವಾಚ್ಯನು. ತಂ=ಅಂತಹ ಹರಿ

ಹುನ್ನು , ಭೂತಿರಿತಿ=ಭೂತಿಸ್ವರೂಪನೂ, ಐಶ್ವರ್ಯವನ್ನು ಕೊಡತಕ್ಕವನೂ ಎಂದು, ದೇವಾಃ= ಬ್ರಹ್ಮಾದಿ ದೇವತೆಗಳು, ಉಪಾಸತೇ=ಧ್ಯಾನಮಾಡುತ್ತಾರೆ. ತೇ=ಆ ದೇವತೆಗಳು, ಬಭೂವುಃ= ಉಪಾಸನೆ ಮಾಡಿ ಸುಖಸಜ್ಞಾನಾದಿ ಪೂರ್ಣಗುಣಸ್ವರೂಪರೂ) ಆದರು. ದೇವತೆಗಳು ಭೂತಿಎಂದು ಉಪಾಸನೆ ಮಾಡುತ್ತಾರೆಂಬುದನ್ನು ಪ್ರತ್ಯಕ್ಷವಾಗಿ ದೃಷ್ಟಾಂತದಿಂದ ಉಪಾಸನೆ ಮಾಡುತ್ತಾರೆ. ತಸ್ಮಾತ್=ಆದುದರಿಂದ (ದೇವತೆಗಳು ಭೂತಿ ಎಂದು ಶ್ರೀ ಹರಿಯನ್ನು ಉಪಾಸನೆ ಮಾಡುವುದರಿಂದಲೇ) ಏತರ್ಹ್ಯಪಿ=ಈಗಲೂ ಕೂಡಾ, ಸುಪ್ತಃ=ನಿದ್ರಿತರಲ್ಲಿ ನಿಯಾಮಕನಾದ ಸರ್ವದೇವೋತ್ತಮನಾದ ವಾಯುವು, ಭೂರ್ಭೂರಿತ್ಯೇವ=ಭುರ್ ಭುರ್ ಎಂದೇ, ಪ್ರಶ್ವಸಿತಿ=ಶ್ವಾಸರೂಪದಿಂದ ಶ್ರೀ ಹರಿಯನ್ನೇ ಸ್ತೋತ್ರ ಮಾಡುತ್ತಾನೆ. (ಹೀಗೆಯೇ ಇತರ ದೇವತೆಗಳೂ ಶ್ರೀ ಹರಿಯನ್ನು ಭೂತಿಯೆಂದೇ ಉಪಾಸನೆ ಮಾಡುತ್ತಾರೆ.) ಅಸುರಾಃ=ರಾಕ್ಷಸರು, ಅಭೂತಿರಿತಿ=ನಮಗೆ ದುಃಖಾದ್ಯನರ್ಥಗಳನ್ನು ಕೊಡತಕ್ಕವನು, ತಾನು ಐಶ್ವರ್ಯಾದಿ ನಿಖಿಲ ಗುಣರಹಿತನು ಎಂದೇ (ಉಪಾಸನ ಮಾಡುತ್ತಾರೆ). ತೇ=ಆ ಅಸುರರು, ಪರಾಬಭೂವುಃ ಹ=ಪರಾಜಯವನ್ನು ಹೊಂದಿದರು. (ಜ್ಞಾನಾದಿಗುಣಶೂನ್ಯರಾಗಿ ಅಂಧಂತಮಸ್ಸಿನಲ್ಲಿ ಬಿದ್ದರು.) ಯಃ=ಯಾವಾತನು, ಏವಂ=ಪೂರ್ವೋಕ್ತಪ್ರಕಾರವಾಗಿ, (ಶ್ರೀಹರಿಯು ಭೂತಿ ಸ್ವರೂಪನೂ, ಐಶ್ವರ್ಯವನ್ನು ಕೊಡತಕ್ಕವನೂ ಎಂಬೀ ರೀತಿಯಾಗಿ) ವೇದ=ತಿಳಿಯುತ್ತಾನೋ (ಹಾಗೆಯೇ ಅಂತಹ ಪೂರ್ವೋಕ್ತ ಉಪಾಸನೆಗಳಿಂದ ದೇವತೆಗಳಿಗೂ ರಾಕ್ಷಸರಿಗೂ ಹೇಳಿದ ಫಲವನ್ನು ತಿಳಿದುಕೊಳ್ಳುತ್ತಾನೋ,) ಸಃ=ಅವನು, ಆತ್ಮನಾ=ಪರಮಾತ್ಮನ ಪ್ರಸಾದದಿಂದ, ಭವತಿ=ಆಗುತ್ತಾನೆ. (ಅಂದರೆ ಜ್ಞಾನ ಐಶ್ವರ್ಯಾದಿ ಗುಣಗಳುಳ್ಳವನಾಗಿ ಭೂಮಿಯಲ್ಲಿ ಹುಟ್ಟುತ್ತಾನೆ.) ಅಸ್ಯ=ಈತನ, ದ್ವಿಷನ್=ದ್ವೇಷಿಯಾದ, ಭ್ರಾತೃವ್ಯಃ=ಶತ್ರುಭೂತನಾದ, ಪಾಪ್ಮಾ=ಬಾಹ್ಯಾಭ್ಯಂತರ ಶತ್ರುವು, ಆತ್ಮನಾ=ಪರಮಾತ್ಮ ಪ್ರಸಾದದಿಂದ, ಪರಾಭವತಿ=ತಿರಸ್ಕೃತನಾಗುತ್ತಾನೆ. (ತಮಸ್ಸಿಗೆ ಹೋಗುತ್ತಾನೆ). ಸ ಏಷಃ=ಆ ಈ ಹರಿಯು, ಮೃತ್ಯುಶ್ಚೈವ= ಮರಣ ಸಂಸಾರಗಳನ್ನು ಕೊಡತಕ್ಕವನು, ಅಮೃತಂ ಚ=ಮೋಕ್ಷವನ್ನು ಕೊಡತಕ್ಕವನು. (ಅಥವಾ ಮೃತ್ಯುಃ=ಮರಣವನ್ನು ಕೊಡತಕ್ಕವನು, ಅಮೃತಂ=ಜೀವನವನ್ನು ಕೊಡತಕ್ಕವನು.) (ಶ್ರೀ ಹರಿಯು ಯಾವಾಗ ಅಪಾನನಿಂದೊಡಗೂಡಿದ ಪ್ರಾಣವನ್ನು ಈ ಶರೀರದಲ್ಲಿ ನಿಯಮಿಸುತ್ತಾನೋ, ಆಗ ಜೀವನವನ್ನು ಕೊಡುತ್ತಾನೆ. ಯಾವಾಗ ಪ್ರಾಣಾಪಾನರನ್ನು ಶರೀರದಿಂದ ಹೊರಗೆ ಕಳುಹಿಸುತ್ತಾನೋ, ಆಗ ಮರಣವನ್ನು ಕೊಡುತ್ತಾನೆ.)

ಈ ವಿಷಯದಲ್ಲಿ ಮಂತ್ರಸಮ್ಮತಿಯನ್ನು ಹೇಳುತ್ತಾರೆ—

ತತ್=ಅದು, (ಪ್ರಾಣಾಪಾನರನ್ನ ನಿಮಿತ್ತೀಕರಿಸಿ ಶ್ರೀಹರಿಯು ಜೀವರಿಗೆ ಜೀವನಾದಿಗಳನ್ನು ಕೊಡುತ್ತಾನೆ. ಇತ್ಯಾದಿ ಪ್ರಮೇಯವು), ಋಷಿಣಾ=ಮಂತ್ರದ್ರಷ್ಟೃವಿನಿಂದ, ಉಕ್ತಂ= ಹೇಳಲ್ಪಟ್ಟಿದೆ.

**ಮಂ ॥ ಅಪಾಙ್ ಪ್ರಾಙೇತಿ ಸ್ವಧಯಾ ಗೃಭೀತೋ ಅಮರ್ತ್ಯೋ ಮರ್ತ್ಯೇನಾ ಸಯೋನಿಃ । ತಾ ಶಶ್ವಂತಾ ವಿಷೂಚೀನಾ ವಿಯಂತಾ ನ್ಯನ್ಯಂ ಚಿಕ್ಯುರ್ನ ನಿಚಿಕ್ಯುರನ್ಯಂ ॥**

ಎಂಬೀ ಮಂತ್ರದಲ್ಲಿ ಕ್ರಮವಾಗಿ ಪಾದಗಳನ್ನನುವಾದಮಾಡಿಕೊಂಡೇ ವ್ಯಾಖ್ಯಾನಮಾಡುತ್ತಾರೆ. "ಅಪಾಙ್ ಪ್ರಾಙೇತಿ ಸ್ವಧಯಾ ಗೃಭೀತ" ಇತಿ=ಅಂದರೆ, ಹಿ=ಯಾವ ಕಾರಣದಿಂದ, ಅಪಾನೇನ=ಅಪಾನವಾಯುವಿನಿಂದ ಕೂಡಿದ, ಅಯಂ ಪ್ರಾಣಃ=ಈ ಪ್ರಾಣನು,

ಯತಃ=(ಶ್ರೀಹರಿಯಿಂದ) ಪ್ರೇರಿಸಲ್ಪಟ್ಟವನೋ. (ತಸ್ಮಾತ್=ಶ್ರೀ ಹರಿಯ ಪ್ರೇರಣೆಯಿಂದಲೇ) ಪರಾಙ್=ದೇಹದಿಂದ ಹೊರಗೆ ಇದ್ದವನು, ನ ಭವತಿ=ಆಗುವುದಿಲ್ಲ. (ಅಂತೂ ದೇಹದಲ್ಲಿಯೇ ಇದ್ದು ಜೀವರಿಗೆ ಕ್ಲಪ್ತಕಾಲದ ವರೇಗೆ ಜೀವನವನ್ನು ಕೊಟ್ಟುಕೊಂಡು ಇರುತ್ತಾನೆ.)

"ಅಮರ್ತ್ಯೋ ಮರ್ತ್ಯೇನಾಸಯೋನಿಃ" ಇತಿ. ಅಂದರೆ, ಏತೇನ=ಈ ಪ್ರಾಣನಿಂದ, ಇದಂ ಸರ್ವಂ=ಈ ಶರೀರ ಸಮುದಾಯವು, ಸಯೋನಿ=ಸಕಾರಣವು. (ಅಂತೂ ಸರ್ವಶರೀರವೂ ಪ್ರಾಣನಿಗೆ ಅಧಿಷ್ಠಾನರೂಪವು.) ಇಮಾನಿ ಶರೀರಾಣಿ=ಈ ಶರೀರಗಳು, ಮರ್ತ್ಯಾನಿ ಹಿ= ನಶ್ವರಗಳಷ್ಟೆ. ಏಷಾ ದೇವತಾ=ಪ್ರಾಣಾಖ್ಯದೇವತೆಯು, ಅಮೃತಾ=ಅವಿನಾಶಿಯಾದುದು. ಉತ್ತರಾರ್ಧವನ್ನನುವಾದ ಮಾಡಿ, "ತಾ ಶಶ್ವಂತಾ......ಅನ್ಯಮಿತಿ," ಅಂದರೆ ಇಮಾನಿ ಶರೀರಾಣಿ=ಈ ಶರೀರಗಳನ್ನೇ, ನಿಚಿಕ್ಯಂತಿ=(ಜನರು) ನೋಡುತ್ತಾರೆ. (ವಾಯುವನ್ನು ನೋಡಲಾರರು). ಏಷಾ ಏವ ದೇವತಾ=ಪ್ರಾಣಾಖ್ಯದೇವತೆಯು, ಅಮೃತಾ=ನಿತ್ಯಮುಕ್ತವು (ಶರೀರಗಳು ಅಲ್ಲ. ಅವುಗಳು ನಾಶವುಳ್ಳದ್ದೇ ಸರಿ.)

ಅಂತೂ ಮಂತ್ರಾರ್ಥವು ಹೀಗೆ ತಿಳಿಯತಕ್ಕದು.

ವಾಯುಃ=ಮುಖ್ಯಪ್ರಾಣ ದೇವರು, ಸ್ವಧಯಾ=ಸುಖರೂಪಿಯಾದ ಹರಿಯಿಂದ, ಗೃಭೀತಃ=ಪ್ರೇರಿತರಾಗಿ, ಅಪಾಙ್=ಕೆಳಗೆ, ಏತಿ=ಹೋಗುತ್ತಾರೆ. (ಅಪಾನ ರೂಪದಿಂದ ಕೆಳಗೆ ಹೋಗುತ್ತಾರೆ.) ಪ್ರಾಙ್=ಮೇಲೆಯೂ, ಏತಿ=ಹೋಗುತ್ತಾರೆ. (ಪ್ರಾಣರೂಪದಿಂದ ಮೇಲೆ ಹೋಗುತ್ತಾರೆ.) (ಆನಂದ ರೂಪಿಯಾದ ಹರಿಯ ಅನುಗ್ರಹದಿಂದಲೇ) ಅಮರ್ತ್ಯಃ= ಅವಿನಾಶ ಜ್ಞಾನವುಳ್ಳ ಮುಖ್ಯಪ್ರಾಣ ದೇವರು, ಮರ್ತ್ಯೇನ=ನಶ್ವರವಾದ ಪ್ರಾಣಿಶರೀರದಿಂದ, ಸಯೋನಿಃ=ಸಾಧಿಷ್ಠಾನವಾಗಿದೆ. (ಅಂತೂ ವಾಯುದೇವರು ಪ್ರಾಣಿಗಳ ಶರೀರಗಳಿಂದೊಡಗೂಡಿಯೇ ಇದ್ದಾರೆ.) ತಾ=ಆ ದೇಹ, ಮುಖ್ಯಪ್ರಾಣರು, ಶಶ್ವಂತಾ=ಶಾಶ್ವತಗಳು. (ಇವುಗಳಲ್ಲಿ ಸ್ಥೂಲದೇಹಗಳು ಜೀವರಿಗೆ ಮೋಕ್ಷ ಪರ್ಯಂತ ಪ್ರವಾಹವಾಗಿ ಇರುತ್ತವೆ. ಕಾರಣ ಶಾಶ್ವತಗಳು. ಸೂಕ್ಷ್ಮದೇಹವು ಸಾಕ್ಷಾತ್ತಾಗಿಯೇ ಅನಾದಿ ಲಾಗ್ಯಾತು ಸಂಬದ್ಧವಾಗಿಯದೆ. ಕಾರಣ 'ಶಾಶ್ವತ'ವೆನ್ನಿಸಿಕೊಳ್ಳುತ್ತದೆ. ಆ ಕಲ್ಪದ ವಾಯುದೇವರು ಅನಾದಿಕಾಲವನ್ನಾರಂಭಿಸಿ ನಿಯಾಮಕರಾಗಿದ್ದಾರೆ. ಅಂತೂ ಶಾಶ್ವತವೆನ್ನಿಸಿಕೊಳ್ಳುತ್ತಾರೆ.) ವಿಷೂಚೀನಾ=ನಾನಾವಿಧ ಗಮನವುಳ್ಳವರು, (ಅದರಲ್ಲಿ ವಾಯುದೇವರಿಗೆ ಶ್ರೀ ಹರಿಯ ಪ್ರಾಪ್ತಿಯಾಗುವುದು. ಶರೀರಕ್ಕೆ ಜಡತನ ಬರುತ್ತದೆ.) ವಿಯಂತಾ=ವಿರುದ್ಧಗಮನವುಳ್ಳವರು. (ವಾಯುವು ಊರ್ಧ್ವಲೋಕಕ್ಕೆ ಹೋಗುತ್ತಾನೆ. ಶರೀರವು ಕೆಳಗೆ ಬೀಳುವುದು.) ಅನ್ಯಂ=ದೇಹವನ್ನು, ನಿಚಿಕ್ಯುಃ= (ಜನರು) ನೋಡುತ್ತಾರೆ. ಅನ್ಯಂ=ವಾಯುವನ್ನು, ನ ನಿಚಿಕ್ಯುಃ=ನೋಡಲಾರರು. (ಶರೀರೋತ್ಕ್ರಮಣ ಕಾಲದಲ್ಲಿ ಯಾರೂ ಮುಖ್ಯಪ್ರಾಣನನ್ನುನೋಡಲಾರರು. ಆದುದರಿಂದ ಇವರು ದೃಶ್ಯತ್ವಾದೃಶ್ಯತ್ವವಿರುದ್ಧ ಧರ್ಮದಿಂದಲೂ ಯುಕ್ತರು.) ಯಃ=ಯಾವಾತನು, ಏವಂ= ಪೂರ್ವೋಕ್ತ ಪ್ರಕಾರವಾಗಿ (ವಾಯುವು ಅಮೃತತ್ವಾದಿ ಗುಣಯುಕ್ತನು ಎಂಬೀ ರೀತಿಯಾಗಿ) ವೇದ=ತಿಳಿಯುತ್ತಾನೋ, ಸಃ=ಅವನು, ಅಮೃತಃ=ಮುಕ್ತನಾಗಿ, ಅಮುಷ್ಮಿನ್ ಲೋಕೇ= ವೈಕುಂಠಾದಿ ವಿಷ್ಣುಲೋಕದಲ್ಲಿ, ಸಂಭವತಿ=ಚೆನ್ನಾಗಿರುತ್ತಾನೆ. ಅಮೃತಃ=ಮುಕ್ತನಾಗಿಯೇ, ಸರ್ವೇಭ್ಯಃ ಭೂತೇಭ್ಯಃ=ಸಮಸ್ತ ಮುಕ್ತರಿಂದ, ದದೃಶೇ=ಕಾಣಲ್ಪಡುತ್ತಾನೆ. (ಹೇಳಿದ ವಿಷಯಗಳೆಲ್ಲವೂ ಸರ್ವ ಪ್ರಮಾಣ ಸಿದ್ಧವೆಂದು ತಿಳಿಸುವ ಉದ್ದಿಶ್ಯ "ಯ ಏವಂ ವೇದ" ಎಂದು ಎರಡಾವರ್ತಿ ಪ್ರಯೋಗಿಸಿದ್ದಾರೆ). ॥ ೮ ॥

**ಈ ಪ್ರಕಾರ ಐತರೇಯೋಪನಿಷತ್ತಿನಲ್ಲಿ ಎರಡನೇ ಆರಣ್ಯಕದಲ್ಲಿ ಒಂದನೇ ಅಧ್ಯಾಯವು ಮುಗಿಯಿತು. ॥ ೨ ॥ ೧ ॥**

ಭಾ॥ (a) ಆಪ ಇತ್ಯೇವ ದೇವಾನಾಂ ಬ್ರಹ್ಮಾದೀನಾಂ ಕಥಂ ಭವೇತ್ । ನಾಮೇತ್ಯಪೃಚ್ಛಲ್ಲಕ್ಷ್ಮೀಸ್ತಂ ಮಹಿದಾಸಂ ಜನಾರ್ದನಂ ॥ (b) ಆಪ ಇತ್ಯೇವ ನಾಮ್ಯೇಷಾಂ ಭವತೀತ್ಯಾಹ ಸ ಪ್ರಭುಃ । ಇದಂ ಮದಾಖ್ಯಂ ಯದ್ಬ್ರಹ್ಮ ಹ್ಯಾಪ ಇತ್ಯಭಿಧೀಯತೇ ॥ ಆಪೂರ್ಣತ್ವಾದ್ಗುಣೈಃ ಸರ್ವೈ (c) ಸ್ತನ್ಮೂಲಮಖಿಲಸ್ಯ ಚ । ತೂಲಭೂತಂ ತದನ್ಯತ್ತು ಪಿತಾ ಹ್ಯೇಷ ಜನಾರ್ದನಃ ॥ (d) ಪುತ್ರಾ ಬ್ರಹ್ಮಾದಯಃ ಸರ್ವೇ ನೈವಾಯಂ ವೃಕ್ಷ ಮೂಲವತ್ । ಸ್ವತಂತ್ರತ್ವಾಜ್ಜಗನ್ನಾಥಃ

ಅ ॥ (a) ಚತುರ್ಮುಖನೇ ಮೊದಲಾದ ಎಲ್ಲಾ ದೇವತೆಗಳಿಗೂ, "ಆಪಃ" ಎಂಬೀ ನಾಮಧೇಯವೇ, ಹೇಗೆ ಸಂಗತವಾಗುತ್ತದೆ." ಎಂದು ಲಕ್ಷ್ಮಿಯು ಮಹಿದಾಸರೂಪಿಯಾದ ಹರಿಯನ್ನು ಕುರಿತು ಪ್ರಶ್ನಿಸಿದಳು. ॥ (b) ಆಗ ಸಮರ್ಥನಾದ ಮಹಿದಾಸ ರೂಪಿಯಾದ ಹರಿಯು ಈ ಬ್ರಹ್ಮಾದಿಗಳಿಗೆ, "ಆಪಃ" ಎಂಬೀ ನಾಮಧೇಯವು, ಸಂಗತವೇ ಆಗುತ್ತದೆ ಎಂದನು. "ನಾನು" ಎಂದು ಹೆಸರುಳ್ಳ ಯಾವ ಈ ಬ್ರಹ್ಮನೋ, ಆತನು ಎಲ್ಲಾ ಗುಣಗಳಿಂದಲೂ ಪೂರ್ಣನಾದುದರಿಂದ "ಆಪಃ" ಎಂದು ಹೇಳಲ್ಪಡುತ್ತಾನೆ. ॥ (c) ಆ ಬ್ರಹ್ಮನೇ ಸರ್ವ ಜಗತ್ತಿಗೂ ಕಾರಣನಾದವನು. ಆ ಹರಿಯಿಂದ ಇತರರಾದ ಚತುರ್ಮುಖಾದಿಗಳು ಕಾರ್ಯಭೂತರು. ಈ ಜನಾರ್ದನನು ಪಿತೃಭೂತನು. ॥ (d) ಈ ಬ್ರಹ್ಮಾದಿಗಳೆಲ್ಲರೂ ಪುತ್ರರು. ಸರ್ವಜಗತ್ತಿಗೂ ಸ್ವಾಮಿಯಾದ ಶ್ರೀ ಹರಿಯು ಸರ್ವವಿಷಯದಲ್ಲಿಯೂ ಸ್ವತಂತ್ರನಾದುದರಿಂದ ಮರ ಮತ್ತು ಬೀಜ ಇವುಗಳಂತೆ ಅಲ್ಲ. ಹೇಗೆ ಬಿಜವೇ ಮರವಾಗುವುದೋ, ಅದೇ ರೀತಿಯಾಗಿ ಹರಿಯೇ ಜಗದ್ರೂಪವಾಗಿ ಪರಿಣತನು ಆಗುವುದಿಲ್ಲ.

ಭಾ॥ (a) ಪಿತೃತ್ವಾತ್ಪರಮೇಶಿತುಃ ॥ ತಸ್ಮಾನ್ನಾಮಾಪ ಇತಿ ಹ್ಯೇತದ್ಬ್ರಹ್ಮರುದ್ರಾದಿನಾಂ ಭವೇತ್ । ಯಥಾ ಯದವ ಇತ್ಯೇವ ರಘುನಃ ಕುರವಸ್ತಥಾ ॥ (b) ಪುತ್ರನಾಮ ಪಿತುಶ್ಚಸ್ಯಾತ್ತತ್ತಂತ್ರತ್ವಾತ್ಸುತಸ್ಯ ಹಿ । ಯಥಾ ಪಿತಾಮಹಾದ್ಯಾಶ್ಚ ಪಿತರೋ ನಾಮ ಕೀರ್ತಿತಾಃ ॥

ಅ ॥ (a) ಸರ್ವೋತ್ತಮನೂ, ಸರ್ವನಿಯಾಮಕನೂ, ಆದ ಹರಿಯು ಸರ್ವರಿಗೂ ಪಿತೃಭೂತನಾದುದರಿಂದ, ಆ ಹರಿಗೆ "ಆಪಃ" ಎಂಬೀ ನಾಮಧೇಯವು. ಹೇಗೆ ಯದುಗಳು, ರಘುಗಳು, ಹಾಗೆ ಕುರುಗಳು, ಎಂಬೀ ನಾಮಧೇಯವು ಆ ವಂಶೀಯರಲ್ಲಿದೆಯೋ, ಹಾಗೆಯೇ ಈ ಹೆಸರು ಬ್ರಹ್ಮರುದ್ರಾದಿಗಳಿಗೆ ಆಗುವುದು. ॥ (b) ಮಗನು ತಂದೆಯ ಅಧೀನನಾದುದರಿಂದ ಮಕ್ಕಳ ನಾಮಧೇಯವು ತಂದೆಯವರಿಗೂ ಆಗುವುದು. ಹೇಗೆಂದರೆ ಪಿತಾಮಹಾದಿಗಳೂ, ಪಿತೃಗಳೆಂದೇ ಹೇಳಲ್ಪಟ್ಟಿರುತ್ತಾರೆ. ॥

ಭಾ॥ ತಥಾಪಿ ಮುಖ್ಯಯಾ ವೃತ್ತ್ಯಾ ವ್ಯವಹಾರ ವ್ಯವಸ್ಥಿತಿಃ । ಆಪ ಇತ್ಯೇವ ದೇವಾನಾಂ ಸರ್ವೇಷಾಂ ಪ್ರದದೌ ಹರಿಃ ॥ ಸ್ವಕೀಯಮೇವಮನ್ಯಾನಿ ಪೃಥಕ್ಪೃಥಗದಾತ್ಪ್ರಭುಃ । (b) ನಾರಾಯಣಾದಿನಾಮಾನಿ ದದೌ ನಾನ್ಯಸ್ಯ ಕೇಶವಃ ॥ ಏವಂ ಸ ಭಗವಾನ್ವಿಷ್ಣುರ್ಮಹಿದಾಸಾಭಿಧಃ ಪ್ರಭುಃ । ಜಾನನ್ನಿತ್ಯೋದಿತಜ್ಞಾನಾದಾಹ ದೇವೀಮಿದಂ ವಚಃ ॥ (c) ದೇವಪರ್ಯಂತಮಾವ್ಯಾಪ್ತಿಂ ವೇದಾಹಂ ಮಮ ಸರ್ವದಾ । ಮತ್ಪರ್ಯಂತಂ

ತಥಾ ವ್ಯಾಪ್ತಿಂ ದೇವಾನಾಮಪಿ ಸರ್ವಶಃ ॥ ಮಯಿ ದೇವಾಸ್ತೇಷು ಚಾಹ ಮಿತಿ ವಿದ್ಧಿ ವರಾನನೇ ॥

ಅ ॥ (a) ಆದರೂ (ಯಾವ ಹೆಸರು ಯಾರಿಗೆ ವಿಶೇಷಾಕಾರವಾಗಿ ಕೊಡಲ್ಪಟ್ಟದೋ, ಆ ಹೆಸರು ಆತನಲ್ಲಿ ಮುಖ್ಯವಾದುದು, ಎಂಬೀ) ಮುಖ್ಯವೃತ್ತಿಯಿಂದಲೇ ದೇವದತ್ತಾದಿನಾಮ ವ್ಯವಹಾರಗಳ ವ್ಯವಸ್ಥೆಯು. "ಆಪಃ" ಎಂಬೀ ತನ್ನ ನಾಮಧೇಯವನ್ನೇ, ಶ್ರೀ ಹರಿಯು ಸಮಸ್ತ ದೇವತೆಗಳಿಗೆ ಕೊಟ್ಟನು. ಹೀಗೆಯೇ ಸಮರ್ಥನಾದ ಹರಿಯು, ಇತರಗಳಾದ ಬ್ರಹ್ಮೇತ್ಯಾದಿ ನಾಮಗಳನ್ನು ಪ್ರತ್ಯೇಕ ಪ್ರತ್ಯೇಕವಾಗಿ ಕೊಟ್ಟನು. ॥(b) ಕೇಶವನು, ನಾರಾಯಣ ಮೊದಲಾದ ಹೆಸರುಗಳನ್ನು ಇತರ ಯಾವ ದೇವತೆಗೂ ಕೊಡಲಿಲ್ಲ. ಪೂರ್ವೋಕ್ತಪ್ರಕಾರವಾಗಿ ನಿತ್ಯದ ಲ್ಲಿಯೂ ಅಭಿವ್ಯಕ್ತಜ್ಞಾನದಿಂದಲೇ ತಿಳಿದ ಮಹಿದಾಸನೆಂದು ಹೆಸರುಳ್ಳ ಸಮರ್ಥನಾದ ಪೂಜ್ಯ ನಾದ ವಿಷ್ಣುವು ಈ ಮಾತನ್ನು ತನ್ನ ಪತ್ನಿಯಾದ ಲಕ್ಷ್ಮಿಯನ್ನು ಕುರಿತು ಹೇಳಿದನು. (c) ಉತ್ಕೃಷ್ಟ ಮುಖವುಳ್ಳ ಪ್ರಿಯಳೇ! ನನಗೆ ಯಾವಾಗಲೂ ದೇವತೆಗಳ ಪರ್ಯಂತವಾಗಿ ವ್ಯಾಪ್ತಿ ಯನ್ನು ನಾನು ತಿಳಿದಿದ್ದೇನೆ. ಹಾಗೂ ಸಮಸ್ತ ದೇವತೆಗಳಿಗೂ ನನ್ನ ಪರ್ಯಂತವಾಗಿ ವ್ಯಾಪ್ತಿ ಯನ್ನು ತಿಳಿದಿದ್ದೇನೆ. ಅಂತೂ ಎಲ್ಲಾದೇವತೆಗಳು ನನ್ನಲ್ಲಿ (ಆಶ್ರಿತರಾಗಿರುತ್ತಾರೆ) ನಾನು ದೇವತೆಗಳಲ್ಲಿ (ವ್ಯಾಪ್ತನಾಗಿದ್ದೇನೆ). ಎಂದು ತಿಳಿ.

ಭಾ॥ (a) ಮಯ್ಯೈತಾನಿ ಪ್ರದತ್ತಾನಿ ಪದಾನಿ ಬ್ರಹ್ಮಪೂರ್ವಕಾಃ । ಅಧಿತಿಷ್ಠಂತಿ ಸತ್ತಾದ್ಯಾ ಅಪ್ಯೇತೇಷಾಂ ಮದಾಜ್ಞಯಾ ॥ (b) ಜ್ಞಾನಕರ್ಮಬಲೇ ಹಾದ್ಯಾ ಮದ್ದತ್ತಾ ಇತಿ ಕಿಂ ವದೇ । ಸಂಭೃತಾ ಮತ್ತ ಏವೈತೇ ಸ ಏಷ ಭಗವಾನ್ಗಿರಿಃ ॥ ಗಿರಣಾತ್ಸರ್ವಭೂತಾನಾಂ ಚಕ್ಷುರ್ನಾಮಾಸ್ಯ ದರ್ಶ ನಾತ್ । (c) ಸರ್ವಶ್ರೋತೃತ್ವತಃ ಶ್ರೋತ್ರಂ ಮನೋ ಮಂತೃತ್ವಹೇ ತುತಃ ॥ ಪ್ರಾಣನಾಮಾ ಪ್ರಣೇತೃತ್ವಾತ್ತಮೇನಂ ಗುಣಪೂರ್ತಿತಃ । ಗಿರಣಾ ಚ್ಚಾಖಿಲಸ್ಯಾಸ್ಯ ಪ್ರಾಹು ಬ್ರಹ್ಮಗಿರಿಂ ಪ್ರಭುಂ ॥

ಅ ॥ (a) ಚತುರ್ಮುಖನೇ ಮೊದಲಾದವರು ನನ್ನಿಂದಲೇ ಕೊಡಲ್ಪಟ್ಟ ಈ ಪದವಿ ಗಳನ್ನು ಹೊಂದಿಕೊಂಡು ಇದ್ದಾರೆ. ಸ್ವರೂಪ, ಸತ್ತಾ, ಪ್ರವೃತ್ತ್ಯಾದಿಗಳು ಇವರಿಗೆ ನನ್ನ ಆಜ್ಞೆಯಿಂದಲೇ (ಇರುತ್ತವೆ). ॥ (b) "ಜ್ಞಾನ, ಕರ್ಮ, ಸಾಮರ್ಥ್ಯ ಇಚ್ಛಾದಿಗಳು ನನ್ನಿಂದ ಕೊಡಲ್ಪಟ್ಟವೆ" ಎಂದು ಏನು ಹೇಳುವೆನು. (ಅಂತೂ) ಇವರು ನನ್ನಿಂದಲೇ (ಸರ್ವಪ್ರಕಾರ ದಿಂದಲೂ) ಪೋಷಿತರಾಗಿರುತ್ತಾರೆ. ಆ ಈ ಪೂಜ್ಯನಾದ ಹರಿಯು ಸರ್ವಪ್ರಾಣಿಗಳನ್ನು ತಿನ್ನು ವುದರಿಂದ "ಗಿರಿ" ಯೆಂದೂ, ಈ ಸರ್ವಜಗತ್ತನ್ನು ನೋಡುವುದರಿಂದ "ಚಕ್ಷುಃ" ಎಂದೂ (c) ಸರ್ವವನ್ನು ಕೇಳುವುದರಿಂದ "ಶ್ರೋತ್ರ" ಎಂದೂ, ಸರ್ವವನ್ನು ಆಲೋಚಿಸುವುದರಿಂದ "ಮನಃ" ಎಂದೂ, ಸರ್ವಪ್ರೇರಕನಾದುದುದರಿಂದ "ಪ್ರಾಣ" ನೆಂದೂ ಹೆಸರುಳ್ಳವನೂ ಆಗಿ ರುತ್ತಾನೆ. ಆ ಈ ಸರ್ವಸಮರ್ಥನಾದ ಹರಿಯನ್ನು ಗುಣಪೂರ್ಣನಾದುದರಿಂದ (ಬ್ರಹ್ಮ) ಈ ಸರ್ವಜಗತ್ತನ್ನು ನಾಶಮಾಡುವುದರಿಂದ (ಗಿರಿ) (ಅಂತೂ) "ಬ್ರಹ್ಮಗಿರಿ" ಎಂಬುವುದಾಗಿ ಹೇಳುತ್ತಾರೆ.

ಭಾ॥ (a) ಯ ಏವಂ ವೇದ ತಂ ವಿಷ್ಣುಮಾಪರೋಕ್ಷ್ಯೇಣ ಶಾಶ್ವತಂ । ಗಿರ ತ್ಯೇವಾಖಿಲಂ ಪಾಪಂ ಭ್ರಾತೃವತ್ಸಹ ಸಂಸ್ಥಿತಂ ॥ (b) ಪರಾಭವತಿ

ಪಾಪ್ಮಾऽಸ್ಯ ದ್ವೇಷ್ಟಾ ನಿರಯಗಃ ಸದಾ । ಅಸನಾದ್ಭಗವಾನ್ಸೋऽಸುಃ ಸರ್ವಸ್ಯಾಪಿ ಜನಾರ್ದನಃ ॥ ಪ್ರಕೃಷ್ಟಾನಂದರೂಪತ್ವಾತ್ಪ್ರಾಣ ಇತ್ಯಭಿಧೀಯತೇ। (c) ಸ ಏಷ ಭೂತಿನಾಮಾऽಪಿ ಜ್ಞಾನೈಶ್ವರ್ಯಾದಿ ಭೂತಿದಃ ॥

ಅ ॥ (a) ಯಾವಾತನು ಪೂರ್ವೋಕ್ತಪ್ರಕಾರವಾಗಿ ಶಾಶ್ವತನಾದ ಆ ವಿಷ್ಣುವನ್ನು ಪ್ರತ್ಯಕ್ಷವಾಗಿ ತಿಳಿಯುತ್ತಾನೋ, ಆತನು ಸೋದರನಂತೆ ಒಟ್ಟಿಗೇನೇ ಇರುವ ಅಪ್ರಾರಬ್ಧವಾದ, ಸರ್ವಪಾಪವನ್ನು ನಾಶಮಾಡುತ್ತಾನೆ. (b) ಈತನಿಗೆ ದ್ವೇಷಿಯಾದ ಪಾಪಿಷ್ಠನಾದ ಬಾಹ್ಯ ಶತ್ರುವೂ ಕೂಡ ತಿರಸ್ಕೃತನಾಗುತ್ತಾನೆ. ಅಂದರೆ ಯಾವಾಗಲೂ ನರಕದಲ್ಲಿಯೇ ಬೀಳುತ್ತಾನೆ. ಪೂಜ್ಯನಾದ ಹರಿಯು ಸರ್ವರನ್ನು ಸಂಹರಿಸುವುದರಿಂದಲೂ ಅಥವಾ ತಮಸ್ಸನ್ನು ಪ್ರಾಪಿಸಿ ಕೊಡುವುದರಿಂದಲೂ, "ಅಸುಃ" ಎಂದೂ, ಎಲ್ಲಾ ಯೋಗ್ಯರಿಗೂ ಉತ್ಕೃಷ್ಟ ಆನಂದವನ್ನು ಕೊಡುವುದರಿಂದಲೂ ಅಥವಾ ಉತ್ಕೃಷ್ಟ ಆನಂದಸ್ವರೂಪನಾದುರಿಂದಲೂ "ಪ್ರಾಣ"ನೆಂದೂ ಹೇಳಲ್ಪಡುತ್ತಾನೆ. ॥ (c) ಆ ಈ ಹರಿಯು ಭೂತಿನಾಮಕನು, ಜ್ಞಾನ ಐಶ್ವರ್ಯಾದಿ ಸಂಪತ್ತನ್ನು ಕೊಡತಕ್ಕವನೂ (ಭೂತಿಸ್ವರೂಪನೂ) ಆಗಿರುತ್ತಾನೆ.

ಭಾ॥ (a) ಅಜ್ಞಾನಾದಿಪ್ರದಾತೃತ್ವಾತ್ಸ ಏವಾ ಭೂತಿ ನಾಮಕಃ । ಸುಖಜ್ಞಾನಾದಿ ಗುಣದಂ ಪೂರ್ಣಂ ಸರ್ವಗುಣೈಃ ಪ್ರಭುಂ ॥ ಉಪಾಸತೇ ತಂ ವಾಯ್ವಾದ್ಯಾ ದೇವಾ (b) ಸ್ತಸ್ಮಾಚ್ಚ ತೇऽಖಿಲಾಃ । ಬಭೂವುಃ ಸುಖಸಜ್ಞಾಜ್ಞಾನಪೂರ್ವೈಃ ಸರ್ವಗುಣೈರ್ಯುತಾಃ ॥ (c) ದೇವಾನಾಮಪಿ ಸರ್ವೇಷಾಂ ಪ್ರಧಾನೋऽದ್ಯಾಪಿ ಮಾರುತಃ । ಸ್ಥಿತ್ವಾ ಸುಪ್ತೇಷು ವಿಷ್ಣುಂ ತಂ ಭೂರ್ಭೂರಿತ್ಯೇವ ಶಂಸತಿ ॥ ಭೂಃ ಶಬ್ದಾರ್ಥೋ ಭೂತಿರಿತಿ ॥

ಅ ॥ (a) ಆತನೇ ಅಜ್ಞಾನಾದಿಗಳನ್ನು ಕೊಡುವುದರಿಂದ "ಅಭೂತಿ"ಯೆಂದು ಹೆಸರುಳ್ಳವನು. ಸುಖಜ್ಞಾನ ಮೊದಲಾದ ಗುಣಗಳನ್ನು ಕೊಡತಕ್ಕವನೂ, ಸಮಸ್ತ ಗುಣಪರಿಪೂರ್ಣನೂ, ಸರ್ವಸಮರ್ಥನೂ ಆದ ಶ್ರೀ ಪರಮಾತ್ಮನನ್ನು ಮುಖ್ಯಪ್ರಾಣ ಮೊದಲಾದ ದೇವತೆಗಳು,ಉಪಾಸನೆಮಾಡುತ್ತಾರೆ. ॥ (b) ಆದುದರಿಂದಲೇ ಅವರೆಲ್ಲರೂ ಸುಖಸಜ್ಞಾಜ್ಞಾನವೇ ಮೊದಲಾದ ಎಲ್ಲಾ ಗುಣಗಳಿಂದಲೂ ಯುಕ್ತರಾಗುವರು. ॥ (c) ಎಲ್ಲಾ ದೇವತೆಗಳಲ್ಲಿಯೂ ಪ್ರಧಾನನಾದ ಮುಖ್ಯಪ್ರಾಣನು ಈಗಲೂ ಕೂಡ ನಿದ್ರಿತರಾದವರಲ್ಲಿದ್ದು ಆ ಹರಿಯನ್ನು "ಭೂರ್ಭೂಃ" ಎಂದೇ ಶ್ವಾಸರೂಪದಿಂದ ಹೊಗಳುತ್ತಾನೆ. "ಭೂಃ" ಎಂಬೀ ಶಬ್ದದ ಅರ್ಥವು ಭೂತಿಃ=ಸಂಪತ್ತು ಎಂದೇ ಸರಿ.

ಭಾ॥ (a) ವೈಪರೀತ್ಯೇನ ಚಾಸುರಾಃ । ಅಭೂತಿಕಾರಕೋऽಸ್ಮಾಕಮೈಶ್ವರ್ಯಾದಿ ಗುಣೋಜ್ಝಿತಃ ॥ ಇತ್ಯೇವೋಪಾಸತೇ (b) ತಸ್ಮಾತ್ಪರಾಭೂತಾಶ್ಚ ಸರ್ವಶಃ । ಜ್ಞಾನೈಶ್ವರ್ಯಾದಿಭಿರ್ಹೀನಾಃ ಪೇತುರಂಧೇತಮಸ್ಯಥ ॥ ಯ ಏವಂ ವೇದ ತಂ ವಿಷ್ಣುಂ ಭೂತಿದಂ ಭೂತಿರೂಪಿಣಂ । ಭಾವಾಭಾವಂ ಚ ದೇವಾನಾಂ ದೈತ್ಯಾನಾಂ ಚೈವಮೇವ ತು ॥ (d) ಜ್ಞಾನೈಶ್ವರ್ಯಾದಿಭಿಃ ಸೋऽಪಿ ಭವೇತ್ತಸ್ಯ ಪರಾತ್ಮನಃ। ಪ್ರಸಾದಾತ್ತಸ್ಯ ಪಾಪ್ಮಾ ಚ ಪರಾಭವತಿ ಸರ್ವಶಃ ॥

ಅ ॥ (a) ಅಸುರರು ವಿಪರೀತವಾಗಿ ಅಂದರೆ ಇದಕ್ಕೆ ವಿರುದ್ಧವಾಗಿ "ಈ ಹರಿಯು ನಮಗೆ ಅನೈಶ್ವರ್ಯವನ್ನು ಮಾಡುವವನು, ಅಂದರೆ ತನ್ನನ್ನು ಉಪಾಸನೆ ಮಾಡುವವರಿಗೆ ಅಭೂತಿಯನ್ನೇ ಕೊಡುತ್ತಾನೆ. ತಾನು ಐಶ್ವರ್ಯಾದಿ ಗುಣಗಳಿಂದ ವಿರಹಿತನೂ ಆಗಿದ್ದಾನೆ" ಎಂದೇ ಉಪಾಸನೆ ಮಾಡುತ್ತಾರೆ. ॥ (b) ಆದುದರಿಂದ ಸರ್ವರೂ ಪರಾಜಿತರಾಗಿ, ಜ್ಞಾನ ಐಶ್ವರ್ಯಾದಿಗಳಿಂದ ವಿರಹಿತರೂ ಆಗಿ ಆಮೇಲೆ ಅಂಧಂತಮಸ್ಸಿನಲ್ಲಿ ಬಿದ್ದರು. ॥ (c) ಯಾವಾತನು ಪೂರ್ವೋಕ್ತಪ್ರಕಾರವಾಗಿ ಆ ಹರಿಯನ್ನು "ಐಶ್ವರ್ಯವನ್ನು ಕೊಡತಕ್ಕವನು, ಐಶ್ವರ್ಯಸ್ವರೂಪನು ಮತ್ತು ದೇವತೆಗಳಿಗೆ ಸುಖಪ್ರದನು, ದೈತ್ಯರಿಗೆ ದುಃಖಪ್ರದನು" ಎಂದು ತಿಳಿದುಕೊಳ್ಳುತ್ತಾನೋ. (d) ಆತನೂ ಕೂಡ ಆ ಪರಮಾತ್ಮನ ಅನುಗ್ರಹದಿಂದ ಜ್ಞಾನ ಐಶ್ವರ್ಯಾದಿಗಳಿಂದ (ಒಡಗೂಡಿದವನು) ಆಗುವನು. ಆತನ ಬಾಹ್ಯಾಭ್ಯಂತರ ಶತ್ರುವೂ ಕೂಡ ಸರ್ವಪ್ರಕಾರದಿಂದಲೂ ತಿರಸ್ಕೃತನಾಗುತ್ತಾನೆ. ॥

ಭಾ॥ **(a)** ಸ ಏಷ ಭಗವಾನ್ವಿಷ್ಣುರ್ಮೃತ್ಯುದೋ ಮೋಕ್ಷದಸ್ತಥಾ । ಸ ಏವ ಜೀವನಕರೋ ಯದಾ ಪಾನೇನ ಸಂಯುತಂ ॥ ಪ್ರಾಣಂ ನಿಯಮಯ ತ್ಯಸ್ಮಿಂಚ್ಛರೀರೇ ಪುರುಷೋತ್ತಮಃ । **(b)** ಶರೀರಾದ್ಬಹಿರೇತೌ ತು ಯದಾ ನಿಸ್ಸಾರಯತ್ಯಜಃ ॥ ತದಾ ಮೃತ್ಯುಪ್ರದಶ್ಚಾಯಂ ಮುಕ್ತಾನಾಮಪಿ ಜೀವನಂ । ಪ್ರಾಣಾದೇವ ಹಿ ತತ್ರಾಪಿ ಪ್ರಾಣಾಧಾರೋ ಜನಾರ್ದನಃ ॥

ಅ ॥ (a) ಆ ಈ ಪೂಜ್ಯನಾದ ವಿಷ್ಣುವು ಮರಣವನ್ನು ಕೊಡತಕ್ಕವನೂ ಹಾಗೆ ಮೋಕ್ಷಪ್ರದನು, ಆತನೇ ಯಾವಾಗ ಅಪಾನಾಖ್ಯ ವಾಯುವಿನಿಂದ ಯುಕ್ತನಾದ ಪ್ರಾಣನನ್ನು ಈ ಶರೀರದಲ್ಲಿ ನಿಯಮಿಸುತ್ತಾನೋ, ಆಗ ಜೀವನವನ್ನು ಕೊಡುವವನು. ॥ (b) ಯಾವಾಗ ಈ ಪ್ರಾಣಾಪಾನರನ್ನು ಶರೀರದಿಂದ ಹೊರಗೆ ಹೊರಡಿಸುತ್ತಾನೋ, ಆಗ ಮರಣವನ್ನು ಕೊಡ ತಕ್ಕವನು. ಮುಖ್ಯಪ್ರಾಣನಿಂದಲೇ ಮುಕ್ತರಿಗೂ ಜೀವನವಾಗುತ್ತದೆ. ಮುಕ್ತಿಯಲ್ಲಿಯೂ ಕೂಡ ಜನಾರ್ದನನೇ ಮುಖ್ಯಪ್ರಾಣನಿಗೆ ಧಾರಕನಾಗಿರುತ್ತಾನೆ.

"ಅರ್ವಾಙ್ಪ್ರಾಙ್" ಎಂಬೀ ಮಂತ್ರಾರ್ಥವನ್ನು ಹೇಳುತ್ತಾರೆ.—

ಭಾ॥ **(a)** ಅರ್ವಾಕ್ಪ್ರಾಕ್ಚ ಸದಾ ಗಚ್ಛೇದ್ವಾಯುರಾನಂದರೂಪಿಣಾ । ಅನೇನೈವ ಗೃಹೀತೋ ಹಿ **(b)** ಪ್ರಾಣೋಽಪಾನೇನ ಸಂಯುತಃ ॥ ಅನೇನ ಹರಿಣಾ ಯಸ್ಮಾನ್ನಿಯತೋ ನ ಪರಾಗ್ಭವೇತ್ । **(c)** ಅಮರ್ತ್ಯಸ್ತತ್ಪ್ರಸಾದೇನ ವಾಯುರ್ದೇಹೈಃ ಸಹ ಸ್ಥಿತಃ ॥ **(d)** ಅನಿತ್ಯಾ ಅಪಿ ದೇಹಾಸ್ತೇ ಶಶ್ವತ್ಸಂತ್ಯಾವಿಮೋಕ್ಷತಃ । ಸ್ಥೂಲಸೂಕ್ಷ್ಮವಿಭಾಗೇನ ಕಿಮು ವಾಯುರ್ಜಗತ್ಪ್ರಭುಃ ॥ **(e)** ನಾನಾಗತೀ ತು ತಾವೇತೌ ವಾಯುಃ ಪ್ರಾಪ್ನೋತಿ ಕೇಶವಂ । ಶರೀರಂ ತು ವಿನಷ್ಟಂ ಸ್ಯಾತ್ಪಂಚತ್ವಮುಪಗಚ್ಛತಿ ॥ **(f)** ಜಡಂ ತಜ್ಜಡತಾಮೇತಿ ಚೇತನಾ ವಾಯುದೇವತಾ । ಚೇತನೇಶಂ ಹರಿಂ ಯಾತಿ ವಿರುದ್ಧಗಮನೌ ಚ ತೌ ॥

ಅ ॥ ಪ್ರಥಮ ಪಾದಾರ್ಥವು. (೧) (a) ಮುಖ್ಯಪ್ರಾಣದೇವರು ಸುಖರೂಪಿಯಾದ ಶ್ರೀ ಹರಿಯಿಂದ ಪ್ರೇರಿತರಾಗಿಯೇ ಯಾವಾಗಲೂ (ಅಪಾನರೂಪದಿಂದ) ಕೆಳಗೂ (ಪ್ರಾಣರೂಪದಿಂದ) ಮೇಲುಪ್ರದೇಶಕ್ಕೂ ಹೋಗುತ್ತಾರೆ. (b) ಅಪಾನನಿಂದ ಯುಕ್ತನಾದ ಪ್ರಾಣನು

ಯಾವಕಾರಣದಿಂದ ಈ ಸರ್ವೋತ್ತಮನಾದ ಹರಿಯಿಂದಲೇ ಪ್ರೇರಿತನಾಗಿರುತ್ತಾನೋ. ಆದುದರಿಂದಲೇ ದೇಹದಿಂದ ಬಹಿರ್ಭೂತನೂ ಅಲ್ಲ. (ಅಂದರೆ, ದೇಹದಲ್ಲಿಯೇ ಇದ್ದು ದೇಹಿಗಳಿಗೆ ಕ್ಲಪ್ತಕಾಲಪರ್ಯಂತವಾಗಿ ಜೀವನವನ್ನು ಕೊಡುತ್ತಾ ಇರುತ್ತಾನೆ). "ಅಮರ್ತ್ಯೋ ಮರ್ತ್ಯೇನಾಸಯೋನಿಃ" ಎಂಬೀ ಎರಡನೆ ಪಾದಕ್ಕೆ ವ್ಯಾಖ್ಯಾನಮಾಡುತ್ತಾರೆ. ಅಮರ್ತ್ಯ ಇತಿ.॥(೨)(c) ಮುಖ್ಯಪ್ರಾಣದೇವರು ದೇಹಗಳಿಂದ ಕೂಡಿಕೊಂಡಿದ್ದರೂ ಹರಿಯ ಅನುಗ್ರಹದಿಂದಲೇ (ಅಭಿಮಾನಶೂನ್ಯರಾದುದರಿಂದ) ನಿತ್ಯ (ಅವಿನಾಶಿಯಾದ) ಜ್ಞಾನವುಳ್ಳವರು. ॥ (೩) (d) "ತಾ ಶಶ್ವಂತಾ" ಇತ್ಯಾದಿ ತೃತೀಯ ಪಾದಾರ್ಥವು ಆ ದೇಹಗಳು ಅನಿತ್ಯಗಳಾಗಿದ್ದರೂ ಸ್ಥೂಲ ಸೂಕ್ಷ್ಮ ಎಂಬೀ ಪ್ರಭೇದದಿಂದ ಮೋಕ್ಷವಾಗುವವರೆಗೆ ಯಾವಾಗಲೂ ಇರುತ್ತವೆ ಎಂದು ಹೇಳಲು ಜಗತ್ಪ್ರಭುವಾದ ಮುಖ್ಯಪ್ರಾಣದೇವರು ಶಾಶ್ವತರು ಎಂದು ಹೇಳತಕ್ಕದ್ದು ಏನಿದೆ. ॥ (e) ಆ ದೇಹವಾಯುಗಳು ನಾನಾವಿಧ ಗಮನವುಳ್ಳವರು. ಅದರಲ್ಲಿ ವಾಯುದೇವರು ಶ್ರೀ ಹರಿಯನ್ನು ಹೊಂದುತ್ತಾರೆ. ದೇಹವಾದರೂ ನಷ್ಟವಾದದ್ದಾಗಿ ಪ್ರಥಿವ್ಯಾದಿ ಪಂಚಭೂತಸ್ವರೂಪವನ್ನು ಹೊಂದುತ್ತದೆ. ॥ (f) (ಅಂತೂ) ಆ ಜಡಪದಾರ್ಥವು ಜಡಸ್ವರೂಪವನ್ನೇ ಹೊಂದುತ್ತದೆ. ಚೇತನರಾದ ವಾಯುದೇವರು ಚೇತನಗಳಿಗೆ ನಿಯಾಮಕನಾದ ಶ್ರೀಹರಿಯನ್ನು ಹೊಂದುತ್ತಾರೆ. ಅಂತೂ ಆ ದೇಹವಾಯುಗಳು ವಿರುದ್ಧ ಗಮನವುಳ್ಳವರು.

ಭಾ॥ **(a)** ಊರ್ಧ್ವಂ ಗಚ್ಛತಿ ದೇವಃ ಸ ದೇಹೋಽಧಃ ಪತತಿ ಕ್ಷಿತೌ । ದೃಶ್ಯತೇ ತಚ್ಛರೀರಂ ಚಾಪ್ಯದೃಶ್ಯಾ ವಾಯುದೇವತಾ ॥ **(b)** ಯ ಏವಂ ವೇದ ತಂ ವಾಯುಮಮೃತಂ ಸರ್ವನಾಯಕಂ । ಪೂರ್ಣಾನಂದೇನ ಹರಿಣಾ ಗೃಹೀತಂ ತದ್ವಶಂ ಸದಾ ॥ ಸ ಮುಕ್ತೋ ಲೋಕಮಾಪ್ನೋತಿ ವಿಷ್ಣೋರ್ಮುಕ್ತೈಶ್ಚ ದೃಶ್ಯತೇ ॥ ಇತಿ ಚ ॥

ಅ ॥ (a) ಮುಖ್ಯಪ್ರಾಣದೇವರು ಮೇಲುಪ್ರದೇಶಕ್ಕೆ ಹೋಗುತ್ತಾರೆ. ಆ ದೇಹವು ಕೆಳಗೆ ಭೂಮಿಯಲ್ಲಿ ಬೀಳುತ್ತದೆ. ಆ ಶರೀರವು ಕಾಣಲ್ಪಡುತ್ತದೆ. ವಾಯುದೇವರು ಅದೃಶ್ಯರಾಗಿ ಇರುತ್ತಾರೆ. ॥(b) ಯಾವ ಅಧಿಕಾರಿಯು ಪೂರ್ವೋಕ್ತ ಪ್ರಕಾರವಾಗಿ ವಾಯುದೇವರನ್ನು ಅಮೃತನೆಂದೂ ಸರ್ವನಿಯಾಮಕನೆಂದೂ ಪೂರ್ಣಾನಂದವುಳ್ಳ ಶ್ರೀಹರಿಯಿಂದ ಪ್ರೇರಿತನೆಂದೂ ಯಾವಾಗಲೂ ಶ್ರೀಹರಿಯ ಅಧೀನನೇ ಎಂದೂ ತಿಳಿದುಕೊಳ್ಳುತ್ತಾನೋ, ಆತನು ಮುಕ್ತನಾಗಿ ವಿಷ್ಣುಲೋಕವನ್ನು ಹೊಂದುತ್ತಾನೆ. ಎಲ್ಲಾ ಮುಕ್ತರಿಂದಲೂ ಕಾಣಲ್ಪಡುತ್ತಾನೆ.

ಭಾ॥ ಬ್ರಹ್ಮ ಪಂಥಾಃ ಸತ್ಯಂ ಕರ್ಮೇತಿ ತಸ್ಯ ನಾರಾಯಣಸ್ಯ ವಾಸುದೇವಾದ್ಯಾಃ ಕ್ರಮೇಣ ಚತಸ್ರೋ ಮೂರ್ತಯಃ ॥

ಅ ॥ (ವಾಸುದೇವನು ಮೋಚಕನೆಂದೂ, ಸಂಕರ್ಷಣನು ಸಂಹಾರಕನೆಂದೂ, ಪ್ರದ್ಯುಮ್ನನು ಸೃಷ್ಟಿಕರ್ತನೆಂದೂ ಅನಿರುದ್ಧನು ಸಸ್ಥಾಪಕನೆಂದೂ,ಹೇಳಿರುವುದರಿಂದ"ನಾರಾಯಣನು ಜಗಜ್ಜನ್ಮಾದಿ ಕಾರಣತ್ವವೇ ಮೊದಲಾದ ಅನಂತಗುಣ ಪರಿಪೂರ್ಣನು" ಎಂಬೀ ವಚನವು ಅಸಂಗತವೆಂದು ಆಶಂಕಿಸಕೂಡದು. ಏಕೆಂದರೆ) ಅನಂತಗುಣಪೂರ್ಣನಾದ ನಾರಾಯಣನ ವಾಸುದೇವಾದಿ ನಾಲ್ಕು ಮೂರ್ತಿಗಳು ಕ್ರಮವಾಗಿ "ಬ್ರಹ್ಮ ಪಂಥಾಃ ಸತ್ಯಂ ಕರ್ಮ" ಎಂದು ಹೇಳಲ್ಪಟ್ಟಿವೆ.

ತಾ || "ವಾನಾತ್ಸೂತೇರ್ದೇವನಾದ್ವಾಸುದೇವಃ" ಎಂದು ಹೇಳಿದಪ್ರಕಾರ ಜ್ಞಾನ ಸೃಷ್ಟಿ ಕ್ರೀಡಾಖ್ಯಗುಣಪೂರ್ಣನಾದುದರಿಂದ ಬ್ರಹ್ಮಶಬ್ದವಾಚ್ಯನು ವಾಸುದೇವನು. ಶರೀರ ಗಳಿಂದ ಸೆಳೆದು ಪ್ರಳಯಕಾಲದಲ್ಲಿ ತನ್ನ ಉದರವನ್ನು ಹೊಂದಿಸುವುದರಿಂದ ಸಂಕರ್ಷಣನು "ಪಂಥಾಃ" ಎಂದೆನ್ನಿಸಿಕೊಳ್ಳುತ್ತಾನೆ. ಜಗತ್ತನ್ನು ಸೃಷ್ಟಿಸಿ ಚೆನ್ನಾಗಿ ಪ್ರಕಾಶಿಸುವುದರಿಂದ ಪ್ರದ್ಯುಮ್ನನು "ಸತ್ಯಂ" ಎಂದೆನ್ನಿಸಿಕೊಳ್ಳುತ್ತಾನೆ. ಅನ್ನಪಾನಾದಿಗಳನ್ನು ಮಾಡುತ್ತಾ ತಮ್ಮನ್ನು ರಕ್ಷಿಸಬೇಕೆಂದು ಬಂದವರ ಉಪದ್ರವನನ್ನು ತಿಳಿಯುವುದರಿಂದಲೂ ಅಂಥವರ ಉಪದ್ರವವನ್ನು ನಾಶಮಾಡುವುದರಿಂದಲೂ ಅನಿರುದ್ಧನು "ಕರ್ಮ" ಎನ್ನಿಸಿಕೊಳ್ಳುತ್ತಾನೆ. "ನಾಸಿಕಾಯೈ ವಿನತಮಿವ" ಎಂಬೀ ಎರಡನೇ ಖಂಡದ ವಾಕ್ಯವು "ನಿಹಿತಶ್ಚೈವ ತಲ್ಲೋಕಃ" ಇತ್ಯಾದಿಯಿಂದ ವ್ಯಾಖ್ಯಾನ ಮಾಡಲ್ಪಟ್ಟರೂ ನಾಸಿಕಾರಂಧ್ರ ಸಮೀಪದಲ್ಲಿ ತಗ್ಗುಪ್ರದೇಶವು ಇಲ್ಲದೇ ಇರುವುದ ರಿಂದ ಸ್ಪಷ್ಟಾರ್ಥಕವು ಆಗಲಿಲ್ಲ. ಎಂಬೀ ಅಭಿಪ್ರಾಯದಿಂದ ಸ್ವವಚನದಿಂದ ಆ ವಾಕ್ಯವನ್ನು ವಿವರಿಸುತ್ತಾರೆ.

ಭಾ|| ನಾಸಿಕಾಯಾಂ ಯನ್ನೇತ್ರಯೋರ್ಮಧ್ಯೇ ವಿನತಮಿವ ಕಿಂಚಿನ್ನತಸ್ಥಾನಂ
ತತ್ಸೂರ್ಯಲೋಕಸ್ಥಾನೀಯಂ ವಿದ್ಯಾತ್ । ತಥೇತಿ ನಿರ್ಣಯಃ ||

ಅ || ("ಉಪಮಾರ್ಥೇ ತಥಾಲ್ಪತ್ವೇಽಪೀವಶಬ್ದಃ ಪ್ರಯುಜ್ಯತೇ" ಎಂಬೀ ವಚನದಿಂದ) ವಿನತಮಿವ ಅಂದರೆ ಸ್ವಲ್ಪ ತಗ್ಗು, (ಎಂದು ಹೇಳಿದಹಾಗಾಯಿತು.) ದೇಹದಲ್ಲಿ, ಮೂಗಿನಲ್ಲಿ, ಕಣ್ಣುಗಳ ಮಧ್ಯದಲ್ಲಿ, ಯಾವ ಸ್ವಲ್ಪ ತಗ್ಗುಪ್ರದೇಶವಿದೆಯೋ ಅದನ್ನು "ಅಧಿದೈವದಲ್ಲಿ ದ್ಯುಲೋಕದಲ್ಲಿ ಯಾವದು ಸೂರ್ಯಲೋಕಕ್ಕೆ ಸ್ಥಾನವೋ, ಅದರಂತೆ ಇರತಕ್ಕದ್ದು" ಸೂರ್ಯಲೋಕ ಸ್ಥಾನೀಯವು. ಅಂದರೆ ಸೂರ್ಯಲೋಕಕ್ಕೆ ಪ್ರತಿನಿಧಿಯನ್ನಾಗಿ ತಿಳಿಯ ತಕ್ಕದ್ದು (ಇದರಲ್ಲಿಯೂ ಸೂರ್ಯಲೋಕವು ಇಡಲ್ಪಟ್ಟದೆ. ತಥಾ ಅಂದರೆ ನಿಶ್ಚಯವು.

ತಾ || "ಯಥಾ" ಎಂಬೀ ವಚನದಿಂದಲೇ ಲೋಕಪ್ರಯೋಗದ ಮಹಿಮೆಯಿಂದ "ತಥಾ ಹಾಗೆ" ಎಂಬೀ ಅರ್ಥವು ಸಿದ್ಧವಾಗುವದಾದರೂ "ಸಿದ್ಧೇ ಸತ್ಯಾರಂಭೋ ನಿಯ ಮಾರ್ಥಃ" ಎಂಬೀ ನ್ಯಾಯದಿಂದ ಪುನಃ ಸ್ಪಷ್ಟವಾದ ವಚನವು. "ಹೇಗೆ ಪೃಥಿವಿಯೋ ಅದೇ ರೀತಿಯಾಗಿಯೇ ಸರಿ. ಈ ವಿಷಯದಲ್ಲಿ ಸಂದೇಹ ಲೇಶವೂ ಇರುವುದಿಲ್ಲ". ಎಂಬೀ ನಿಶ್ಚಯ ವನ್ನು ತಿಳಿಸಿ ಕೊಡುವುದು. ಕಾರಣ "ತಥಾ" ಎಂದು ಹೇಳಿದ್ದು ಸಾರ್ಥಕವೇ ಆಯಿತು. ||೨||

ತೃತೀಯ ಖಂಡದ "ಇರಾಮಯಾಃ" ಎಂಬೀ ವಾಕ್ಯವು "ಇಚ್ಛಾನಂದಪ್ರಭೂತತ್ವಾತ್" ಎಂದು ವ್ಯಾಖ್ಯಾತವಾದರೂ ಇರಾಮಯಾಃ ಎಂಬಲ್ಲಿ ಇರತಕ್ಕದೀರ್ಘಕ್ಕೆ ಗತಿಯನ್ನು ಹೇಳುತ್ತಾರೆ.

ಭಾ|| ಈರಾಮಯಾ ಇತಿ ದೈರ್ಘ್ಯಮವಧಾರಣಾರ್ಥಂ । ದೈರ್ಘ್ಯಂ ಪ್ಲುತಂ ಚ
ಹಿಂಕಾರೋ ಬಿಂದುರಪ್ಯವಧಾರಣೇ ಇತಿ ಶಬ್ದನಿರ್ಣಯೇ ||

ಅ || ಈರಾಮಯಾಃ ಎಂಬೀ ದೈರ್ಘ್ಯವು ನಿಶ್ಚಯಾರ್ಥವು.

ತಾ || ಆ ವಿಷ್ಣುವೇ ಸುಖಪರಿಪೂರ್ಣನು. ಅಥವಾ ವಿಷ್ಣುವು ಸುಖಪರಿಪೂರ್ಣನೇ ಸರಿ ಎಂಬೀ ಅವಧಾರಣ (ನಿಶ್ಚಯ) ಅರ್ಥಕ್ಕೋಸ್ಕರ ಇರಾಮಯಾಃ ಎಂದು ದೀರ್ಘಾಂತಪದವು ಪ್ರಯುಕ್ತವಾಗಿದೆ.

ಅ || ದೀರ್ಘವೂ ಪ್ಲುತವೂ ಹಿಂಕಾರವೂ ಬಿಂದುವೂ ಕೂಡ ಅವಧಾರಣಾರ್ಥದಲ್ಲಿ ಇದೆ. ಎಂದು ಶಬ್ದನಿರ್ಣಯದಲ್ಲಿ ಹೇಳಿಯದೆ.

ತಾ || ಪ್ರಕೃತದಲ್ಲಿ ಇರಾಮಯಃ ಎಂದು ಹೇಳುವ ಬದಲಿಗೆ ಈರಾಮಯಾಃ ಎಂದು ದೀರ್ಘವೂ, ಆಪಾಃ ಇತ್ಯಾದಿ ಪ್ರದೇಶದಲ್ಲಿ ಪ್ಲುತವೂ, "ವಂಗಾವಗಧಾಃ" ಇತ್ಯಾದಿಗಳಲ್ಲಿ ಬಿಂದುವೂ, ಇತರ ಸ್ಥಳಗಳಲ್ಲಿ ಹಿಂಕಾರವೂ, ಅವಧಾರಣಾರ್ಥವು ಎಂದು ತಿಳಿಯತಕ್ಕದ್ದು. ||೩||

ನಾಲ್ಕನೇ ಖಂಡದಲ್ಲಿ ಬ್ರಹ್ಮಾ ಹೈವ ತಾ ೩ ಈ ಎಂಬಲ್ಲಿ "ತಾಃ ಈ" ಎಂದು ಪದಚ್ಛೇದವು ತೋರುವುದರಿಂದ ಅದನ್ನು ಅನುವಾದಮಾಡಿ ವಿವಕ್ಷಿತವಾದ ಪದವನ್ನು ತೋರಿಸುತ್ತಾರೆ.

ಭಾ|| ಬ್ರಹ್ಮಾ ಹ್ಯೇವ ತಾ ೩ ಈತೇ ||

ಅ || ತಾ ಈ ಅಂದರೆ ತೇ=ಉದರದಲ್ಲಿಯೂ, ಹೃದಯದಲ್ಲಿಯೂ ಇರತಕ್ಕ ಭಗವದ್ರೂಪಗಳು. ಬ್ರಹ್ಮೈವ ಹ=ಪರಬ್ರಹ್ಮನೇಸರಿ. ಸ್ವಲ್ಪವೂ ಭಗವದ್ರೂಪಗಳಿಗೆ ಭೇದವಿಲ್ಲ. ತತ್ ಔ ಎಂದು ಇರಲು "ತ್ಯದಾದೀನಾಂ ಅಃ" ಎಂಬುವುದರಿಂದ ಅತ್ವವು ಪರರೂಪವು ಆಗಲು "ತ" ಎಂದು, ನಪುಂಸಕಾಚ್ಚ ಎಂಬುವುದರಿಂದ ಔಕಾರಕ್ಕೆ ಈಕಾರವೂ ಅವಧಾರಣಾರ್ಥಕವಾದ ಪ್ಲುತವೂ ಇರಲು "ತ ೩ ಈ" ಎಂದು ಇರಲು ಗುಣರೂಪ ಸಂಧಿಯಾಗೋಣ "ತೇ" ಎಂಬೀ ರೂಪವು ಸಿದ್ಧವಾಗುವುದು ಎಂದು ವಸ್ತುಸ್ಥಿತಿಯು. "ತ ಈ" ಎಂದು ವಿಭಾಗಮಾಡಿ ಹೇಳಲು ಕಾರಣವೇನು? ಎಂಬೀ ಸಂಶಯವನ್ನು ಪರಿಹರಿಸುತ್ತಾರೆ.

ಭಾ|| (a) ದೇಶತಃ ಕಾಲತೋಽರ್ಥಾಚ್ಚ ಬಲತೋ ಗುಣತಸ್ತಥಾ | ಸ್ವರೂಪತೋಽಪಿ ನೈವಾಸ್ಯಾದ್ಭೇದೋಽತ್ಯಲ್ಪೋಽಪಿ ಯತ್ರ ಹಿ || (b) ಕೇವಲೈಶ್ವರ್ಯಯೋಗೇನ ಯತ್ರ ಸಂಖ್ಯಾ ದ್ವಿವದ್ಭವೇತ್ | ಸ್ವರಸ್ಪರ್ಶವಿಭಾಗೇನ ತತ್ರೋಕ್ತಿಃ ಸ್ಯಾದ್ವಿಭಕ್ತಿಷು || (c) ಅಚಿಂತ್ಯಾತ್ತು ತಥೈಶ್ವರ್ಯಾದೇಕೋಽಪಿ ಬಹುರೂಪವಾನ್ | ಪ್ರಕಾಶಯೇದ್ಯತೋ ವಿಷ್ಣುಃ (d) ಸರ್ವತ್ರಾಪ್ಯವಿಶೇಷವಾನ್ || ನ ವಿಶೇಷೋ ಹಿ ರೂಪಾಣಾಂ ಮತ್ಸ್ಯಾದೀನಾಂ ಕಥಂಚನ | ನೈಶ್ವರ್ಯೇಣ ಬಲೇಚ್ಛೈವ ನಾನಂದಾದಿಗುಣೇಷ್ವಪಿ || ಇತ್ಯಾದಿ ಶಬ್ದನಿರ್ಣಯವಚನಾತ್ || ದ್ವಿವಚನಮತ್ರವ್ಯವಹಾರಮಾತ್ರಮಿತಿ ತಾ ಇತ್ಯುಕ್ತಂ |

ಅ || (a) "ಉದರ ಪ್ರದೇಶದಲ್ಲಿ ಇದ್ದಾನೆ, ಹೃದಯ ಪ್ರದೇಶದಲ್ಲಿ ಇದ್ದಾನೆ." ಎಂಬೀ ದೇಶದಿಂದಲೂ "ರಾಮನು ತ್ರೇತಾಯುಗದಲ್ಲಿಯೂ ಕೃಷ್ಣನು ದ್ವಾಪರಯುಗದಲ್ಲಿಯೂ ಅವತರಿಸಿದನು." ಎಂಬೀಕಾಲದಿಂದಲೂ, "ವೇದವ್ಯಾಸದೇವರು ಜಟಾ ಕಮಂಡಲು ಮೊದಲಾದುದು ಉಳ್ಳವರು, ಕೃಷ್ಣನು ಶಂಖಚಕ್ರಾದಿ ಉಳ್ಳವನು" ಎಂದು ವಿಶೇಷಣವಾದ ಪದಾರ್ಥದಿಂದಲೂ. ಅಥವಾ "ಜ್ಞಾನವನ್ನು ಹುಟ್ಟಿಸುವುದಕ್ಕೋಸ್ಕರ ವೇದವ್ಯಾಸ ದೇವರು, ಶತ್ರುಗಳನ್ನು ಸಂಹರಿಸಲಿಕ್ಕೆ ಕೃಷ್ಣನು" ಎಂಬೀ ಪ್ರಯೋಜನದಿಂದಲೂ, "ರಾಮನು ಮಹಾಸಾಮರ್ಥ್ಯವುಳ್ಳವನು, ಪರಶುರಾಮನು ಅಲ್ಪ ಸಾಮರ್ಥ್ಯವುಳ್ಳವನು" ಎಂದು ಸಾಮರ್ಥ್ಯದಿಂದಲೂ, ಹಾಗೆ ಇತರ ಗುಣಗಳಿಂದಲೂ ಮತ್ಸ್ಯಾದಿ ಆಕಾರದಿಂದಲೂ ಪರಿಮಾಣದಿಂದಲಾಗಲೀ ಎಲ್ಲಿ ಭೇದ ಇಲ್ಲವೋ, (ಇಂದ್ರಾರ್ಜುನಾದಿಗಳಲ್ಲಿ ಇದ್ದಂತೆ) ಅತ್ಯಲ್ಪವಾದ(ಭೇದಃ) ವಿಶೇಷವೂ ಕೂಡಾ ಇಲ್ಲವೋ, (b) ಆದರೆ, ಕೇವಲ ಐಶ್ವರ್ಯ ಸಂಬಂಧದಿಂದ ಎಲ್ಲಿ ಸಂಖ್ಯೆಯು ಇಬ್ಬರಲ್ಲಿ ಇದ್ದಂತೆ ಆಗುವುದೋ, ಅಂದರೆ ವಸ್ತುತಃ ಭಿನ್ನಗಳಾದ ಎರಡರಲ್ಲಿ ಇದ್ದಂತೆ ತೋರುವುದೋ, ಅಂಥಾವಿಷಯದಲ್ಲಿ ವಿಭಕ್ತಿಗಳಲ್ಲಿ ಕೆಲವುಕಡೆ ಸ್ವರಗಳ ವಿಭಾಗದಿಂದಲೂ ಕೆಲವುಕಡೆ ಸ್ಪರ್ಶಗಳ(ವ್ಯಂಜನಾಕ್ಷರಗಳ) ವಿಭಾಗದಿಂದಲೂ ಕೆಲವುಕಡೆ ಸ್ವರಸ್ಪರ್ಶಗಳ ವಿಭಾಗದಿಂದಲೂ ಸಂಧಿಯಿಲ್ಲದೆಹೇಳೋಣವು ಉಂಟು,

ತಾ ॥ ರಾಮಕೃಷ್ಣಾದಿರೂಪಗಳಿಗೆ ಯತ್ಕಿಂಚಿತ್ ವಿಶೇಷವು ಇಲ್ಲದಿದ್ದರೂ ಕೇವಲ ಐಶ್ವರ್ಯದಿಂದಲೇ. ದ್ವಿತ್ವಸಂಖ್ಯೆಯು ತೋರುವುದು. ಅಂಥಾ ಪ್ರದೇಶಗಳಲ್ಲಿ ಸ್ವರಗಳನ್ನಾಗಲೀ ವ್ಯಂಜನಾಕ್ಷರಗಳನ್ನಾಗಲೀ ಸ್ವರವ್ಯಂಜನಗಳನ್ನಾಗಲೀ ಪ್ರತ್ಯೇಕಿಸಿ ಸಂಧಿಯಿಲ್ಲದೆ ಶ್ರುತ್ಯಾದಿಗಳಲ್ಲಿ ಪ್ರಯುಕ್ತಗಳಾಗುತ್ತವೆ.

ಅ ॥ (c) ಶ್ರೀಪರಮಾತ್ಮನು ಭೇದರಹಿತನಾದರೂ ಅಚಿಂತ್ಯವಾದ ಐಶ್ವರ್ಯದಿಂದಲೇ ಬಹುರೂಪವುಳ್ಳವನಾಗಿ (ತನ್ನನ್ನು) ಪ್ರಕಾಶಗೊಳಿಸುವನು. ಅಥವಾ ಅಚಿಂತ್ಯ ಐಶ್ವರ್ಯದಿಂದಲೇ ವಿಷ್ಣುವು ಒಬ್ಬನಾದರೂ ಬಹುರೂಪವುಳ್ಳವನು. ಹಾಗೆಯೇ (ಭೇದವುಳ್ಳವನಂತೆ ತನ್ನನ್ನು) ಪ್ರಕಾಶಿಸುವನು. ॥ (d) ಯಾವ ಕಾರಣದಿಂದ ಶ್ರೀ ಹರಿಯು ಎಲ್ಲಾ ರೂಪಾದಿಗಳಲ್ಲಿಯೂ (ಇಂದ್ರಾರ್ಜುನಾದಿಗಳಂತೆ ಸಹ) ವಿಶೇಷವಿಲ್ಲದೆ ಇರುವವನೋ ಅದರಿಂದಲೇ ಮತ್ಸ್ಯಾದಿ ಭಗವದ್ರೂಪಗಳಿಗೆ ಯಾವ ಪ್ರಕಾರದಿಂದಲೂ ಐಶ್ವರ್ಯದಲ್ಲಿಯೂ ಸಾಮರ್ಥ್ಯದಲ್ಲಿಯೂ ಆನಂದಾದಿಗುಣಗಳಲ್ಲಿಯೂ ವಿಶೇಷವಿರುವುದಿಲ್ಲ. ಎಂಬಿವೇ ಮೊದಲಾದ ಶಬ್ದನಿರ್ಣಯದ ವಚನಾನುಸಾರವಾಗಿ ದ್ವಿವಚನವು ಇಲ್ಲಿ ಕೇವಲ ವ್ಯವಹಾರವು ಎಂಬೀ ಅಭಿಪ್ರಾಯದಿಂದ "ತ ಈ" ಎಂದು ಹೇಳಲ್ಪಟ್ಟಿದೆ.

ತಾ ॥ ಇಂದ್ರಾರ್ಜುನರಿಗೆ ಅಭೇದವು ಇದ್ದರೂ "ಸರ್ವೇ ಗುಣಾ ಆವೃತಾ ಮಾನುಷತ್ವೇ" ಎಂದು ಹೇಳಿದ ರೀತಿಯಾಗಿ ಐಶ್ವರ್ಯಾದಿಗಳಲ್ಲಿ ಯತ್ಕಿಂಚಿದ್ವಿಶೇಷವಿದೆ. "ಅಂಶಿನೋಽಶೇಷಸಂಧಾನಮತ್ಯಲ್ಪಸ್ಯಾಪಿ ವಿದ್ಯತೇ । ಭುವಿ ಜಾತೇನ ಚಾಂಶೇನ ಸುಖದುಃಖಾದಿತದ್ಗತಂ । ಅನುಭೂಯತೇ ವಿಶೇಷಸ್ತು ಕಶ್ಚಿದೀಶಕೃತೋ ಭವೇತ್ ॥" ಎಂದು ಹೇಳಿದ ರೀತಿಯಾಗಿ ಅನುಸಂಧಾನಾದಿಗಳಲ್ಲಿ ವಿಶೇಷವುಂಟೇ ಉಂಟು. ಭಗವದ್ರೂಪಗಳಲ್ಲ್ಯಾದರೂ ಅಂತಹ ವಿಶೇಷವೂ ಇಲ್ಲವೆಂದು ಹೇಳಿದಹಾಗಾಯಿತು. ಅಂತೂ ತಂತು ಪಟಗಳಲ್ಲಿ ಇದ್ದಂತೆ ಭೇದಜ್ಞಾಪಕವು, ಇಂದ್ರಾರ್ಜುನರಂತೆ ವಿಶೇಷ ಜ್ಞಾಪಕವೂ ಇಲ್ಲ. ಆದರೆ ಅತ್ಯಂತ ಅಭಿನ್ನನಾದ ವಿಶೇಷರಹಿತನಾದ ಶ್ರೀ ಹರಿಯಲ್ಲಿ ದ್ವಿವಚನವು ಕೇವಲ ವ್ಯವಹಾರವು. ಎಂದು ತೋರಿಸಲಿಕ್ಕೆ "ಬ್ರಹ್ಮೈವ" ಎಂದು ಅಭೇದಸಿದ್ಧವಾದರೂ "ತ ಈ" ಎಂದು ವಿಭಾಗದಿಂದ ಹೇಳಲ್ಪಟ್ಟಿತು.

ನಾಲ್ಕನೇ ಖಂಡದಲ್ಲಿ "ಬ್ರಹ್ಮಾ ಹೈವೇತಿ" ಎಂದು ಸಂಧಿಕಾಲದಲ್ಲಿ ದೀರ್ಘವು ಶ್ರುತವಾದ ಪ್ರಯುಕ್ತ "ತೇ ಉಭೇ ಬ್ರಹ್ಮ ತತ್ಪರಂ" ಎಂದು ಹ್ರಸ್ವಾಂತಪದವನ್ನು ಹೇಗೆ ಪ್ರಯೋಗಿಸಿದರು. ಎಂಬೀ ಆಶಂಕೆಯನ್ನು ಪರಿಹರಿಸುತ್ತಾರೆ.

ಭಾ॥ ಸಂಹಿತಾಯಾಂ ಯತ್ರ ದೈರ್ಘ್ಯಂ ಪದೇ ಯತ್ರ ನ ವಿದ್ಯತೇ । ಉಕ್ತಾರ್ಥಸ್ಯ ಮಹಾಧಿಕ್ಯಂ ಶ್ರುತೇಸ್ತತ್ರ ವಿವಕ್ಷಿತಂ ॥ ಇತ್ಯತೋ ಬ್ರಹ್ಮಾ ಹೇತಿ ದೈರ್ಘ್ಯಮಪಿ ಪರಬ್ರಹ್ಮತ್ವವಿವಕ್ಷಯಾ ॥

ಅ ॥ ಯಾವ ಸಂಹಿತೆ (ವರ್ಣಗಳ ಅತಿಸಾಮೀಪ್ಯ) ಯಲ್ಲಿ ಯಾವ ಪದದಲ್ಲಿ ದೀರ್ಘವಿಲ್ಲವೋ, ಅಲ್ಲಿ ಶ್ರುತಿಗೆ ಹೇಳಿದ ಅರ್ಥಕ್ಕೆ ಅತ್ಯಾಧಿಕ್ಯವು ವಿವಕ್ಷಿತವಾಗಿದೆ. ಎಂಬೀ ಪ್ರಮಾಣದಿಂದ "ಬ್ರಹ್ಮಾ ೩ ಹ" ಎಂಬೀ ದೀರ್ಘವೂ ಕೂಡ ಪರಬ್ರಹ್ಮನನ್ನು ವಿವಕ್ಷಿಸಿಕೊಂಡೇ ಹೇಳಿದ್ದು.

ತಾ ॥ ಉದರದಲ್ಲಿಯೂ ಹೃದಯದಲ್ಲಿಯೂ ಇರತಕ್ಕದ್ದು ಪರಬ್ರಹ್ಮನೇ ಸರಿ. ಅತ್ಯಲ್ಪವೂ ಕೂಡ ಭೇದವಿರುವುದಿಲ್ಲ. ॥ ೪ ॥

ಐದನೇ ಖಂಡದಲ್ಲಿ "ಅದ ಉ ಆವಿರಧಿದೈವತಂ" ಎಂಬುವುದು "ಅಧಿದೈವಂ ಸ ಏಃ ತ್ಯಾದಿಯಿಂದ ವ್ಯಾಖ್ಯಾತವಾದರೂ ಪುನಃ ಸ್ಪಷ್ಟವಾಗಿ ವ್ಯಾಖ್ಯಾನಮಾಡುತ್ತಾರೆ.

ಭಾ|| ಅದ ಉ ಏವ ನಾರಾಯಣಾಖ್ಯಮಧಿದೈವತಂ ಅನ್ಯಾನಿ ದೈವತಮಾತ್ರಾಣಿ। ಸ್ಥಾನಾಂತರೇಽನ್ಯೇಷಾಮಪ್ಯಧಿದೈವತ್ವಕಥನಂ ಕರ್ಮಜ ದೇವಾದ್ಯಪೇಕ್ಷಯಾ || ಮುಖ್ಯಾಧಿದೈವತಂ ನಾರಾಯಣ ಏವ ।

ಅ || ನಾರಾಯಣಾಖ್ಯ ಪರಬ್ರಹ್ಮನೇ ಸರ್ವೋತ್ತಮನಾದ ದೇವತೆಯು. ಇತರರು ಕೇವಲ ದೇವತೆಗಳು. || ("ಹಿರಣ್ಯಗರ್ಭೋಽಧಿದೈವಂ ದೇವಃ ಸಂಕರ್ಷಣೋಽಪಿ ವಾ" ಎಂದು ಗೀತಾಭಾಷ್ಯೋದಾಹೃತವಾದ ಗೀತಾಕಲ್ಪದಲ್ಲಿ ಚತುರ್ಮುಖಾದಿಗಳಿಗೂ ಅಧಿದೈವತ್ವವು ಹೇಳಿರುವುದರಿಂದ ಅವಧಾರಣವು ಹೇಗೆ ಸಂಗತವಾಗುವುದು? ಎಂದರೆ) ಇತರ ಪ್ರದೇಶಗಳಲ್ಲಿ ಇತರರಿಗೂ ಸರ್ವೋತ್ತಮ ದೇವತ್ವವನ್ನು ಹೇಳಿದ್ದು ಕರ್ಮಜ ದೇವಾದಿಗಳನ್ನು ಅಪೇಕ್ಷಿಸಿಕೊಂಡು. || ಮುಖ್ಯವಾಗಿ ಸರ್ವೋತ್ತಮ ದೇವತೆಯು ನಾರಾಯಣನೇ.

ತಾ || ಚತುರ್ಮುಖಾದಿಗಳು "ಯಾರು ಕರ್ಮದಿಂದ ದೇವತ್ವವನ್ನು ಹೊಂದುವರೋ ಅಂಥವರಲ್ಲಿ ಸರ್ವೋತ್ಕೃಷ್ಟ ದೇವತೆಯು ಎಂದರ್ಥವು. ಎಲ್ಲಾ ದೇವತೆಗಳಲ್ಲಿ ಅಲ್ಲ. ಆ ಕಾರಣ ಸರ್ವ ದೇವೋತ್ತಮನು ನಾರಾಯಣನೇ ಸರಿ. || ೫ ||

ಆರನೇ ಖಂಡದಲ್ಲಿ "ತಸ್ಯೋಷ್ಣಿಕ್" ಇತ್ಯಾದಿ ವಾಕ್ಯಗಳಲ್ಲಿ ಲೋಮಾದಿ ಪದವು "ವಿಷ್ಣೋರ್ವಾಯೋಶ್ಚ ಲೋಮಾದೌ" ಎಂದು ಸಪ್ತಮ್ಯರ್ಥಕವಾಗಿ ವ್ಯಾಖ್ಯಾತವಾದರೂ ಅದನ್ನೇ ವ್ಯಾಕರಣದಿಂದಲೂ ಸಮರ್ಥಿಸುತ್ತಾರೆ.

ಭಾ|| ತಸ್ಯೋಷ್ಣಿಗ್ಲೋಮಾನೀತ್ಯಾದಿ । ಲೋಮಸೂಷ್ಣಿಗಿತ್ಯಾದ್ಯರ್ಥೇ । ಸಪ್ತಸು ಪ್ರಥಮೇತಿ ಸೂತ್ರಾತ್ । ಸ ಛಂದೋಭಿ ಛನ್ನ ಇತಿ ವಾಕ್ಯಶೇಷಾತ್ । ಬ್ರಾಹ್ಮಣೋಽಸ್ಯ ಮುಖಮಾಸೀದಿತ್ಯಾದಿವಚ್ಚ ||

ಅ || "ತಸ್ಯೋಷ್ಣಿಕ್ ಲೋಮಾನಿ" ಇತ್ಯಾದಿವಾಕ್ಯವು (ಶ್ರೀಹರಿಯ ಮತ್ತೂ ಮುಖ್ಯವಾಯುವಿನ) ರೋಮಾದಿಗಳಲ್ಲಿ ಉಷ್ಣಿಗಾದಿನಾಮಕ ಛಂದಸ್ಸುಳ್ಳ ಮಂತ್ರಸಮುದಾಯವು (ಆಶ್ರಿತವಾಗಿದೆ). ಇದೇ ಮೊದಲಾದ ಅರ್ಥದಲ್ಲಿ ಇದೆ. || "ಸಪ್ತಸು ಪ್ರಥಮಾ" ಪ್ರಥಮಾ ವಿಭಕ್ತಿಯು ಏಳು ವಿಭಕ್ತಿಗಳಲ್ಲಿಯೂ ಪ್ರಯುಕ್ತವಾಗುತ್ತದೆ. ಎಂದು ಸೂತ್ರವಿರುವುದರಿಂದ (ಹೇಳಿದ ಅರ್ಥವು ಸಂಗತವೇ ಆಗುತ್ತದೆ.) ಆ ಹರಿವಾಯುಗಳು ಉಷ್ಣಿಗಾದಿ ಛಂದಸ್ಸುಗಳಿಂದ ಆಚ್ಛಾದಿತರಾಗಿದ್ದಾರೆ. ಎಂದು ಶಿಷ್ಟವಾಕ್ಯವು ಇರುವುದರಿಂದ ||(ಸಾಮಾನಾಧಿಕರಣ್ಯವು ಎಷ್ಟು ಮಾತ್ರಕ್ಕೂ ಕೂಡಲಾರದು.) || ಮತ್ತು ಬ್ರಾಹ್ಮಣನು ಶ್ರೀಹರಿಯ ಮುಖನು. ಆದನು. ಅಂದರೆ ಮುಖದಿಂದ ಹುಟ್ಟಿದವನು. ಎಂಬಿದೇ ಮೊದಲಾದ ಪ್ರಯೋಗದಂತೆ.

ತಾ || ತೃತೀಯಾ ಅಥವಾ 'ಸಪ್ತಮ್ಯರ್ಥದಲ್ಲಿ ಪ್ರಥಮಾ ವಿಭಕ್ತಿಯು "ಬ್ರಾಹ್ಮಣೋಽಸ್ಯ ಮುಖಂ" ಇತ್ಯಾದಿ ಶ್ರುತಿಯಲ್ಲಿ ಹೇಗೆ ಪ್ರಯುಕ್ತವಾಗಿ ಇದೆಯೋ, ಅದೇರೀತಿಯಾಗಿ "ಉಷ್ಣಿಕ್ ಲೋಮಾನಿ" ಇತ್ಯಾದಿ ಸ್ಥಳದಲ್ಲಿಯೂ ಅಂಗೀಕರಿಸತಕ್ಕದು.

ಭಾ|| ಅಂಗೇಷು ಯಸ್ಯ ಛಂದಾಂಸಿ ದೇವಾ ಲೋಕಾ ಮುಖಾ ಅಪಿ । ತದ್ವಶಾ ನಿಯತಾ ನಿತ್ಯಂ ನಮಸ್ತಸ್ಮೈ ಪರಾತ್ಮನೇ || ಇತಿ ಚ ಸ್ಕಾಂದೇ ||

ಅ ॥ ಯಾವ ಶ್ರೀಹರಿಯ ಅಂಗಗಳಲ್ಲಿ ಛಂದಸ್ಸುಗಳು, ದೇವತೆಗಳು, ಸರ್ವಲೋಕಗಳು, ಯಾಗಗಳೂ ಕೂಡ ಶ್ರೀಹರಿಯ ಅಧೀನಗಳಾಗಿಯೇ ನಿಯಮಿಸಲ್ಪಟ್ಟಿದ್ದಾವೋ ಅಂತಹ ಸರ್ವೋತ್ತಮನಾದ ಶ್ರೀಪರಮಾತ್ಮನಿಗೋಸ್ಕರ ನಮಸ್ಕಾರವು. ಎಂದು ಸ್ಕಾಂದಪುರಾಣದಲ್ಲಿ ಹೇಳಿಯದೆ. ಅಂತೂ ಪುರಾಣವಾಕ್ಯದಲ್ಲಿ ಪ್ರಥಮಾ ವಿಭಕ್ತಿಯು ಸಪ್ತಮ್ಯರ್ಥಕವೆಂದು ಸ್ಪಷ್ಟವಾಗಿ ನಿರೂಪಿಸಿದ್ದಾರೆ. ॥ ೬ ॥

ಏಳನೇಖಂಡದಲ್ಲಿ "ಚಂದ್ರಮಾ ಅಸ್ಮೈ ಪೂರ್ವಪಕ್ಷಾಪರಪಕ್ಷಾನ್ ವಿಚಿನೋತಿ ಪುಣ್ಯಾಯ ಕರ್ಮಣೇ" ಇದೇಮೊದಲಾದ ಪ್ರದೇಶದಲ್ಲಿ ಇವನ ಪುಣ್ಯಕರ್ಮವು ಸಿದ್ಧಿಯಾಗುವುದಕ್ಕೋಸ್ಕರ ಎಂದು ಅನ್ವಯಾರ್ಥವು ಪ್ರತೀತವಾಗುವುದರಿಂದ ಯೋಗ ರೀತಿಯಿಂದ ವ್ಯಾಖ್ಯಾನಮಾಡುತ್ತಾರೆ.

ಭಾ॥ ಅಸ್ಮೈ ಪುಣ್ಯಾಯ ಕರ್ಮಣ ಇತ್ಯೇತಮುದ್ದಿಶ್ಯ ಜೀವಾನಾಂ ಪುಣ್ಯಕರ್ಮ ಕರ್ತುಂ । ತೈರ್ಹಿ ಸ್ತುತ್ಯಾದಿ ಕರ್ಮಾಣಿ ಕೃತಾನಿ ಶ್ರೋತ್ರೇಣ ಶೃಣೋತಿ ಭಗವಾನ್ ॥ ದಿಗ್ಭ್ಯೋಽಪ್ಯನ್ಯ ಏವ ವಿಶೃಣೋತಿ ಜೀವಃ ಅನ್ಯೇಷಾಂ ಜೀವಾನಾಂ ಶ್ರವಣಜಂ ಭೋಗಂ ಶ್ರೋತ್ರೇಣ ದಿಗ್ಭಿರನನುಗೃಹೀತೇನೈವ ಭಗವಾನ್ಭುಂಕ್ತೇ ॥

ಅ ॥ ಅಸ್ಮೈಪುಣ್ಯಾಯ ಕರ್ಮಣ ಇತಿ=ಅಂದರೆ ಈ ಪರಮಾತ್ಮನನ್ನು ಉದ್ದೇಶಿಸಿ ದರ್ಶಪೂರ್ಣಮಾಸಾದಿ ಪುಣ್ಯಕರ್ಮವನ್ನು ಜೀವರಿಂದ ಮಾಡಿಸುವುದಕ್ಕೋಸ್ಕರ ಎಂದರ್ಥವು. ॥ ಯಜಮಾನರಿಂದ ಮಾಡಲ್ಪಟ್ಟ ಸ್ತೋತ್ರ, ವ್ಯಾಖ್ಯಾನ ಅಧ್ಯಯನಾದಿ ಕರ್ಮಗಳನ್ನು ಶ್ರೀಹರಿಯು ತನ್ನ ಕಿವಿಯಿಂದಲೇ ಕೇಳುತ್ತಾನಷ್ಟೇ ಅಂತೂ "ಪುಣ್ಯ" ಶಬ್ದದಿಂದ ಸ್ತುತ್ಯಾದಿಗಳೂ ವಿವಕ್ಷಿತಗಳಾಗಿವೆ. ॥ ಅಥವಾ, ಜೀವನು ದಿಗ್ದೇವತೆಗಳಿಂದ (ಅನ್ಯ ಏವ) ಪ್ರೇರಿತನಾಗಿಯೇ ಪರಮಾತ್ಮನ ಸ್ತುತ್ಯಾದಿ ಕರ್ಮಗಳನು ಕೇಳುತ್ತಾನೆ. ಅಥವಾ ಶ್ರೀಹರಿಯು ಮಾತ್ರ ಕೇಳುವುದು ಅಲ್ಲ. ಶ್ರೀಹರಿಯಿಂದ ಇತರನಾದ ಜೀವನೂ ಕೂಡ ದಿಗ್ದೇವತೆಗಳ ಅನುಗ್ರಹದಿಂದ ಕೇಳುತ್ತಾನೆ. ॥ ಇತರರಾದ ಜೀವರ ಕಿವಿಯಿಂದ (ಶಬ್ದವನ್ನು ಕೇಳೋಣದರಿಂದ) ಉಂಟಾದ ಭೋಗ್ಯವಾದ ಪರಮಸುಖವನ್ನು ಶ್ರೀ ಹರಿಯು ದಿಗ್ದೇವತೆಗಳಿಂದ ಅನುಗ್ರಹೀತವಾಗದೇನೇ ಇರುವ ಜೀವರ ಕಿವಿಗೆ ನಿಯಾಮಕವಾಗಿರುವ ತನ್ನ ಕಿವಿಯಿಂದಲೇ (ಶಬ್ದವನ್ನು ಕೇಳಿ) ಅನುಭವಿಸುತ್ತಾನೆ. ಅಥವಾ ಶ್ರೋತ್ರಪ್ರದೇಶದಲ್ಲಿ ಅಭಿವ್ಯಕ್ತವಾದ ಭೋಗ್ಯವಾದ ಶಬ್ದವನ್ನು ಜೀವರ ಶ್ರೋತ್ರಗಳಲ್ಲಿ ಇರತಕ್ಕ ತನ್ನ ಕಿವಿಯಿಂದ ಕೇಳುತ್ತಾನೆ.

ತಾ ॥ ಜೀವರಿಗೆ ಶಬ್ದಭೋಗವು ದಿಗ್ದೇವತೆಗಳ ಅನುಗ್ರಹದಿಂದ ಸಾಧ್ಯವಾಗುವದಾದರೂ ಭಗವತ್ಪರಿಚಾರಕತ್ವವು ಸಂಗತವೇ ಆಗುವುದು.

ಭಾ॥ ನ ಚ ಜೀವ ವಾಗಾದಿನಾ ಪೃಥಿವ್ಯಗ್ನ್ಯಾದಿಕಂ ಸೃಷ್ಟಮಿತ್ಯತ್ರ ಕಿಂಚಿನ್ಮಾನಮಸ್ತಿ । ಮುಖಾದಿಂದ್ರಶ್ಚಾಗ್ನಿಶ್ಚೇತ್ಯಾದಿನಾ ಭಗವತಃ ಸಕಾಶಾದ್ಧಿ ಸರ್ವೇಷಾಂ ಸೃಷ್ಟಿಃ ಪ್ರಸಿದ್ಧಾ ॥

ಅ ॥ ಜೀವನ ವಾಗಿಂದ್ರಿಯವೇ ಮೊದಲಾದ ಇಂದ್ರಿಯಗಳಿಂದ ಪೃಥಿವಿ, ಅಗ್ನಿ, ಮೊದಲಾದುದು ಸೃಷ್ಟಿಸಲ್ಪಟ್ಟಿತು. ಎಂಬೀ ವಿಷಯದಲ್ಲಿ ಯಾವುದೊಂದು ಪ್ರಮಾಣವೂ ಇಲ್ಲ. (ಕಾರಣ ವಿಷ್ಣುವಿನ ವಾಗಾದಿಗಳೆಂದೇ ಅರ್ಥಮಾಡಬೇಕು.) ॥ (ಮುಖಾದಿತಿ) ಶ್ರೀ ಹರಿಯ ಮುಖದಿಂದ ಇಂದ್ರಾಗ್ನಿಗಳು ಹುಟ್ಟಿದರು. ಇವೇ ಮೊದಲಾದ ವಚನದಿಂದ ಶ್ರೀ ಹರಿಯ ಸಕಾಶದಿಂದಲೇ ಸರ್ವರಿಗೂ ಸೃಷ್ಟಿಯು ಪ್ರಸಿದ್ಧವಾಗಿದೆ.

ತಾ || ಸಮಾಖ್ಯಾರೂಪವಾದ ಪುರುಷಸೂಕ್ತದಿಂದಲೂ ವಿಷ್ಣುವಿನ ವಾಗಾದಿಗಳು ಎಂದೇ ಅರ್ಥಮಾಡಬೇಕು. || ಪುರುಷಸೂಕ್ತದಲ್ಲಿ "ಪದ್ಭ್ಯಾಂ ಭೂಮಿರಜಾಯತ" ಕಾಲುಗಳಿಂದ ಪೃಥಿವಿಯು ಹುಟ್ಟಿತು. ಎಂದು ಹೇಳಿರುವುದರಿಂದ ಇಲ್ಲಿ ವಾಗಿಂದ್ರಿಯದಿಂದ ಪೃಥಿವ್ಯಗ್ನಿಗಳು ಸೃಷ್ಟಿಸಲ್ಪಟ್ಟವು. ಎಂದು ಇರುವುದರಿಂದ ಪುರುಷಸೂಕ್ತವು ಸಮಾಖ್ಯಾರೂಪವು ಹೇಗೆ ಆಗುವುದು? ಎಂದರೆ—

ಭಾ|| ಸೃಷ್ಟಿಭೇದಾದನ್ಯಥಾ ವಚನಂ ||

ಅ || ಇದಕ್ಕೆ ವಿರುದ್ಧವಾದ ಮಾತು ಸೃಷ್ಟಿಗಳ ಭೇದದಿಂದ.

ತಾ || ಅಂತರ ಸೃಷ್ಟಿ, ಬಾಹ್ಯಸೃಷ್ಟಿ ಇತ್ಯಾದಿ ರೀತಿಯಿಂದ ಸೃಷ್ಟಿಯು ಬಹುವಿಧವಾಗಿರುವುದರಿಂದ ಒಂದು ಸಲ ಒಂದು ರೂಪದಿಂದ ಪಾದಗಳಿಂದಲೂ ಮತ್ತೊಂದು ರೂಪದಿಂದ ವಾಗಿಂದ್ರಿಯದಿಂದಲೂ ಉತ್ಪತ್ತಿಯು. ಕಾರಣ ಸಮಾಖ್ಯಾರೂಪವಾಗಿಯೇ ಆಗುವುದು.

ಮೂರನೇ ಖಂಡದಲ್ಲಿ 'ಅಯಂ ಪುರುಷೋ ಬ್ರಹ್ಮಣೋ ಲೋಕಃ' ಎಂಬಲ್ಲಿ ಅಯಂ ಎಂದು ವಿಶೇಷಣವಿರುವುದರಿಂದ ಪುರುಷಃ ಅಂದರೆ ಜೀವನು ಎಂದು ಅಂಗೀಕೃತವಾದ ಹಾಗೆ ಪ್ರಕೃತ "ಅಸ್ಯ ಪುರುಷಸ್ಯ" ಎಂಬಲ್ಲಿಯೂ ಅಸ್ಯ ಎಂದು ವಿಶೇಷಣವಿರುವುದರಿಂದ ಜೀವನು ಎಂದೇ ಅಂಗೀಕರಿಸತಕ್ಕದ್ದು. ಆತನೇ ಪೃಥಿವ್ಯಾದಿಗಳಿಗೆ ಕಾರಣನಾಗಿದ್ದಾನೆ. ಎಂಬುವುದರಲ್ಲಿ ಪ್ರಮಾಣವೂ ಇಲ್ಲ. ಪ್ರಮಾಣವಿರೋಧವು ಅದೆ ಎಂದರೆ ಅಮುಖ್ಯಕಾರಣತ್ವವೂ ಕಲ್ಪಿಸಲ್ಪಡಲಿ. ಅಂತಹ ಜೀವನ ಬಾಯಿಯಿಂದ ಅನ್ನದ ಭೋಗವನ್ನು ಹುಟ್ಟಿಸುವ ಅದೃಷ್ಟದಿಂದ ಪೃಥಿವ್ಯಗ್ನಿಗಳೂ ಸೃಷ್ಟಿಸಲ್ಪಟ್ಟರು" ಎಂದಂಗೀಕರಿಸಿದರೂ ಬಾಧಕವಿರುವುದಿಲ್ಲ. ಎಂಬೀ ಆಶಂಕೆಯನ್ನು ಪರಿಹರಿಸುತ್ತಾರೆ.

ಭಾ|| ನ ಚ ಮುಖ್ಯಕಾರಣಾಂಗೀಕಾರೇऽವಿರೋಧೇ ಔಪಚಾರಿಕಂ ಕಾರಣಮಂಗೀಕರ್ತುಂ ಯುಕ್ತಂ | ಅತಿಪ್ರಸಂಗಾತ್ | ನ ಹಿ ಯತ್ಕಿಂಚಿತ್ಕಾರಣತ್ವಮಸ್ತೀತ್ಯೇತಾವತಾ ಬ್ರಾಹ್ಮಣಸ್ಯ ಚಂಡಾಲಃ ಪಿತೇತ್ಯುಚ್ಯತೇ | ಪಿತೃತ್ವಂ ಚಾತ್ರೋಕ್ತಂ ವಾಚಂ ಪಿತರಮಿತ್ಯಾದಿನಾ ||

ಅ || ಮುಖ್ಯಕಾರಣವನ್ನು ಅಂಗೀಕರಿಸಿದರೂ ವಿರೋಧವಿಲ್ಲದೇ ಇರಲು ಅಮುಖ್ಯಕಾರಣವನ್ನು ಅಂಗೀಕರಿಸುವುದು ಯುಕ್ತವಾಗುವುದಿಲ್ಲ. || ಅತಿಪ್ರಸಂಗ ವಿರುವುದರಿಂದ || ಯತ್ಕಿಂಚಿತ್ ಕಾರಣತ್ವವು ಉಂಟು ಎಂದು ಹೇಳೋಣದರಿಂದ ಬ್ರಾಹ್ಮಣನಿಗೆ ಚಂಡಾಲನು ತಂದೆ ಯೆಂದು ಹೇಳಲ್ಪಡುವುದಿಲ್ಲವಷ್ಟೇ || "ವಾಚಂ ಪಿತರಂ" ಇತ್ಯಾದಿಯಿಂದ ಇಲ್ಲಿ ಪಿತೃತ್ವವು ಹೇಳಲ್ಪಟ್ಟದೆ.

ತಾ || ಹರಿಯ ಆಸ್ಯಾದಿಗಳೇವೇ ಪೃಥಿವ್ಯಾದಿಗಳಿಗೆ ಮುಖ್ಯಕಾರಣವೆಂದಂಗೀಕರಿಸಿದರೂ ವಿರೋಧವಿಲ್ಲದಿರುವುದರಿಂದ ಅನ್ನವೇ ಭೋಜನವಾಗಿ ವುಳ್ಳ ಅದೃಷ್ಟವುಅನ್ನಕ್ಕೆ ಕಾರಣವು. ಅನ್ನಕ್ಕೆ ತಂಡುಲಾಗ್ನಿಗಳ ಅಪೇಕ್ಷೆಯು. ತಂಡುಲಕ್ಕೆ ಧಾನ್ಯ ಪೃಥಿವಿಗಳ ಅಪೇಕ್ಷೆ ಎಂದು ಪೃಥಿವ್ಯಾದಿಗಳನ್ನು ಕುರಿತು ವಾಗಿಂದ್ರಿಯವು ಅದೃಷ್ಟದ್ವಾರಾ ಅಮುಖ್ಯಕಾರಣವು ಎಂದು ಹೇಳುವುದು ಯುಕ್ತನಲ್ಲ. ಅತಿಪ್ರಸಂಗ ಬರುವುದರಿಂದ, ಹೇಗೆಂದರೆ ಹಿಂದೆ ಹೇಳಿದ ಪರಂಪರೆಯಿಂದ ಜೀವನ ಆಸ್ಯಾದಿಗಳು ಅಗ್ನ್ಯಾದಿಗಳಿಗೆ ಕಾರಣವೆಂದಂಗೀಕರಿಸಿದರೆ ಚಂಡಾಲನಿಗೆ ಯತ್ಕಿಂಚಿತ್ ಕೃಷಿ ಮೊದಲಾದುದಕ್ಕೆ ಕಾರಣತ್ವವಿದೆ ಎಂದಿಷ್ಟರಿಂದ ಬ್ರಾಹ್ಮಣನಿಗೆ ಕೃಷಿಮೂ

ಲಕವಾದ ಅನ್ನದ ವಿಕಾರಭೂತವಾದ ರೇತಸ್ಸಿನ ಪರಿಣಾಮದಿಂದ ದೇಹವು ಪ್ರಾಪ್ತವಾದುದರಿಂದ ಚಂಡಾಲನು ತಂದೆಯಾಗಿದ್ದಾನೆ ಎಂದು ಹೇಳಲ್ಪಡಬೇಕಾಗುವುದು. ಹಾಗಿಲ್ಲವಷ್ಟೇ? ಪೃಥಿವ್ಯಗ್ನಿಗಳು ತಮಗೆ ಜನಕವಾದ ವಾಗಿಂದ್ರಿಯವನ್ನು ಸೇವಿಸುತ್ತವೆ ಎಂದು ಹೇಳಿರುವುದರಿಂದ ವಾಗಿಂದ್ರಿಯಕ್ಕೆ ಪಿತೃತ್ವವೂ ಕೂಡ ಹೇಳಲ್ಪಟ್ಟಿವೆ. ॥

ಹಿಂದೆ ಹೇಳಿದ ಪರಂಪರೆಯಿಂದ ಮನುಷ್ಯರು ಅಮುಖ್ಯಕಾರಣರೆಂದು ಕಲ್ಪನೆಯುಬೇಡ. ಮುಖ್ಯವಾಗಿ ಮನುಷ್ಯರಿಗೆ ದೇವತೆಗಳನ್ನು ಹುಟ್ಟಿಸುವ ಅದೃಷ್ಟದಿಂದಲೇ ಉತ್ಪತ್ತಿಯು ಏತಕ್ಕಾಗಬಾರದು ಎಂಬೀ ಆಶಂಕೆಯನ್ನು ಪರಿಹರಿಸುತ್ತಾರೆ.

**ಭಾ॥** (a) ಮನುಷ್ಯಾಣಾಂ ತು ಯತ್ಕರ್ಮ ನ ದೇವೋತ್ಪತ್ತಿಕಾರಣಂ । ದೈವತ್ತೈರುಪಕಾರಸ್ತು ಕ್ರಿಯತೇ ನರಕರ್ಮಣಾಂ ॥ (b) ದೇವಾನಾಂ ಕರ್ಮಣ್ಯೈವೈತೇ ಜಾಯಂತೇ ಸರ್ವಮಾನುಷಾಃ । ಪ್ರಧಾನತ್ವಾನ್ನ ದೇವಾನಾಂ ನೃಕರ್ಮೋತ್ಪತ್ತಿಕಾರಣಂ ॥ ಇತಿ ಚ ಬ್ರಹ್ಮಾಂಡೇ ॥

ಅ ॥ (a) ಮನುಷ್ಯರಿಗೆ ಯಾವುದೊಂದು ಕರ್ಮವದೆಯೋ ಅದು ದೇವತೆಗಳ ಉತ್ಪತ್ತಿಗೆ ಕಾರಣವಾಗಲಾರದು. ಮನುಷ್ಯರ ಕರ್ಮಗಳಿಗೇನೇ ದೇವತೆಗಳಿಂದ ಉಪಕಾರವು ಮಾಡಲ್ಪಡುತ್ತದೆ. ॥ (b) ದೇವತೆಗಳ ಕರ್ಮದಿಂದಲೇ ಈ ಎಲ್ಲಾ ಮನುಷ್ಯರು ಹುಟ್ಟುತ್ತಾರೆ. ದೇವತೆಗಳಿಗೆ ಪ್ರಾಧಾನ್ಯವಿರುವುದರಿಂದ ಅಂದರೆ ದೇವತೆಗಳು ಮನುಷ್ಯರಿಂದ ಎಷ್ಟೋ ಉತ್ತಮರಾದುದರಿಂದ ಮನುಷ್ಯರ ಕರ್ಮವು ದೇವತೆಗಳ ಉತ್ಪತ್ತಿಗೆ ಕಾರಣವಾಗಲಾರದು. ಎಂದು ಬ್ರಹ್ಮಾಂಡ ಪುರಾಣದಲ್ಲಿ ಹೇಳಿಯದೆ. ॥

ಎಂಟನೇ ಖಂಡದಲ್ಲಿ "ಆಹ ಮಹಿದಾಸ ಐತರೇಯಃ" ಇತ್ಯಾದಿಯಿಂದ ಮಹಿದಾಸರೂಪಿಯಾದ ಶ್ರೀ ಹರಿಯ ಮಾತು ಸಮ್ಮತಿಯಾಗಿ ಉದಾಹರಿಸಲ್ಪಡುತ್ತದೆ. ಎಂದು ಅನ್ಯಥಾ ಪ್ರತೀತವಾಗುವುದರಿಂದ ವಿವಕ್ಷಿತವಾದ ಯೋಗ್ಯ ರೀತಿಯಾಗಿ ವ್ಯಾಖ್ಯಾನಮಾಡುತ್ತಾರೆ.

**ಭಾ॥** ಆಹ ಮಹಿದಾಸ ಐತರೇಯ ಇತಿ ತು ಸರ್ವಸ್ಯ ವಚನಸ್ಯ ತದೀಯತ್ವಜ್ಞಾಪನಾರ್ಥಂ ನ ತು ಸನ್ನಿಹಿತಸ್ಯೈವ । ಯಥೇಂದ್ರಂ ಕುತ್ಸಮಿತ್ಯಾದಿ । ಯಥಾ ಚ ಪೂರ್ವಂ ತು ಬಾದರಾಯಣೋ ಹೇತುವ್ಯಪದೇಶಾದಿತಿ ॥ ೮ ॥

ಅ ॥ ಇತರಾದೇವಿಯ ಪುತ್ರನಾದ ಮಹಿದಾಸ ರೂಪಿಯಾದ ಶ್ರೀಹರಿಯು ಹೇಳಿದನು. ಎಂಬುವದಾದರೂ ಎಲ್ಲಾ ಮಾತೂ ಆಪರಮಾತ್ಮನದ್ದೇ ಆಗಿದೆ ಎಂದು ತಿಳಿಸುವುದಕ್ಕೋಸ್ಕರ. ಸಮೀಪದಲ್ಲಿದ್ದ "ಅಹಂ ಮಾಂ ದೇವೇಭ್ಯೋ ವೇದ" ಇತ್ಯಾದಿ ವಚನಮಾತ್ರ ಅವನದ್ದಲ್ಲ ಎಂದು ತಿಳಿಸುವುದಕ್ಕೋಸ್ಕರ ಅಂತೂ ಸರ್ವವಚನವು ಅವನದ್ದೇ ಸರಿ.

"ಇಂದ್ರಂ ಕುತ್ಸೋ ವೃತ್ರಹಣಂ ಶಚೀಪತಿಂ ಕಾಟೇ ನಿಬಾಳ್ಹ ಋಷಿರಹ್ನ ಊತಯೇ" ಎಂಬೀ ವಾಕ್ಯವು ಎಲ್ಲಾ ಪೂರ್ವೋತ್ತರ ಸಂದರ್ಭಕ್ಕೆ ಹೇಗೆ ನಿಂದಿತವಾಕ್ಯತ್ವವನ್ನು ತಿಳಿಸಿಕೊಡುತ್ತದೋ ಹಾಗೆಯೇ ಪ್ರಕೃತದಲ್ಲಿ ಇಟ್ಟುಕೊಳ್ಳತಕ್ಕದ್ದು. ॥ ಹೇಗೆ "ಪೂರ್ವಂ ತು ಬಾದರಾಯಣೋ ಹೇತುವ್ಯಪದೇಶಾತ್" ಎಂಬಲ್ಲಿ ಬ್ರಹ್ಮಮೀಮಾಂಸಾ ಶಾಸ್ತ್ರವು ವೇದವ್ಯಾಸ ದೇವರಿಂದಲೇ ರಚಿತವಾದದ್ದು ಎಂದು ಪ್ರಸಿದ್ಧಿಯಿರುವುದರಿಂದ ಅಲ್ಲಿ ಬಾದರಾಯಣ ಎಂಬೀ ಪದದ ಗ್ರಹಣವು ಹೇಗೆ ಎಲ್ಲಾ ಸೂತ್ರವೂ ವೇದವ್ಯಾಸ ದೇವರಿಂದಲೇ ಕೃತವಾದದ್ದು ಎಂಬೀ ಅಭಿಪ್ರಾಯವನ್ನು ತೋರಿಸಿ ಕೊಡುವುದೋ ಅದೇ ರೀತಿಯಾಗಿ ಪ್ರಕೃತದಲ್ಲಿಯೂ ತಿಳಿದುಕೊಳ್ಳಬೇಕು. ॥ ೮ ॥

ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತೇ
ಶ್ರೀಮನ್ಮಹೈತರೇಯಭಾಷ್ಯೇ ದ್ವಿತೀಯಪ್ರಘಟ್ಟಿಕೇ
ಪ್ರಥಮೋಽಧ್ಯಾಯಃ ॥ ೨ ॥ ೧ ॥

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ನಿರ್ಮಿಸಲ್ಪಟ್ಟ
ಶ್ರೀಮನ್ಮಹೈತರೇಯೋಪನಿಷತ್ತಿನ ಭಾಷ್ಯದಲ್ಲಿ ೨ನೇ ಪ್ರಘಟ್ಟಿಕದಲ್ಲಿ
೧ನೇ ಅಧ್ಯಾಯವು ಸಮಾಪ್ತವಾಯಿತು. ॥ ಶ್ರೀಃ ॥

ಸಮಸ್ತಗುಣಪೂರ್ಣೇನ ಶ್ರೀಪ್ರಾಣಪತಿನೇರಿತಃ ।
ಯದವೋಚಮಹಂ ತೇನ ಪ್ರೀಣಾತು ಪುರುಷೋತ್ತಮಃ ॥ ಶ್ರೀಃ ॥

---

## ॥ ದ್ವಿತೀಯಾರಣ್ಯಕೇ ದ್ವಿತೀಯೋಽಧ್ಯಾಯಃ ॥

ಅಂತರ್ಯಾಮಿಣಮೀಶಂ ಸರ್ವೇಷಾಂ ಸರ್ವಶಬ್ದಸಂವಾಚ್ಯಂ ।
ಬೃಹತೀ ದಶಶತಗೀತಂ ವಂದೇ ವಿಷ್ಣುಂ ರಮಾಮರುನ್ನಾಥಂ ॥

ಮಂ ॥ ಹರಿಃ ಓಂ ॥ ಏಷ ಇಮಂ ಲೋಕಮಭ್ಯಾರ್ಚತ್ಪುರುಷರೂಪೇಣ ಯ ಏಷ ತಪತಿ ಪ್ರಾಣೋ ವಾವ ತದಭ್ಯಾರ್ಚತ್ಪ್ರಾಣೋ ಹ್ಯೇಷ ಯ ಏಷ ತಪತಿ ತಂ ಶತಂ ವರ್ಷಾಣ್ಯಭ್ಯಾರ್ಚತ್ತಸ್ಮಾಚ್ಛತಂ ವರ್ಷಾಣಿ ಪುರುಷಾಯುಷೋ ಭವಂತಿ ತಂ ಯಚ್ಛತಂ ವರ್ಷಾಣ್ಯಭ್ಯಾರ್ಚತ್ತಸ್ಮಾಚ್ಛತರ್ಚಿನಸ್ತಸ್ಮಾಚ್ಛತರ್ಚಿನ ಇತ್ಯಾಚಕ್ಷತ ಏತಮೇವ ಸಂತಂ ಸ ಇದಂ ಸರ್ವಂ ಮಧ್ಯತೋ ದಧೇ ಯದಿದಂ ಕಿಂ ಚ ಸ ಯದಿದಂ ಸರ್ವಂ ಮಧ್ಯತೋ ದಧೇ ಯದಿದಂ ಕಿಂ ಚ ತಸ್ಮಾನ್ಮಾಧ್ಯಮಾಸ್ತಸ್ಮಾನ್ಮಾಧ್ಯಮಾ ಇತ್ಯಾಚಕ್ಷತ ಏತಮೇವ ಸಂತಂ ಪ್ರಾಣೋ ವೈ ಗೃತ್ಸೋಽಪಾನೋ ಮದಃ ಸ ಯತ್ಪ್ರಾಣೋ ಗೃತ್ಸೋಽಪಾನೋ ಮದಸ್ತಸ್ಮಾದ್ಗೃತ್ಸಮದಸ್ತಸ್ಮಾದ್ಗೃತ್ಸಮದ ಇತ್ಯಾಚಕ್ಷತ ಏತಮೇವ ಸಂತಂ ತಸ್ಯೇದಂ ವಿಶ್ವಂ ಮಿತ್ರಮಾಸೀದ್ಯದಿದಂ ಕಿಂ ಚ ತದ್ಯದಸ್ಯೇದಂ ವಿಶ್ವಂ ಮಿತ್ರಮಾಸೀದ್ಯದಿದಂ ಕಿಂ ಚ ತಸ್ಮಾದ್ವಿಶ್ವಾಮಿತ್ರಸ್ತಸ್ಮಾದ್ವಿಶ್ವಾಮಿತ್ರ ಇತ್ಯಾಚಕ್ಷತ ಏತಮೇವ ಸಂತಂ ತಂ ದೇವಾ ಅಬ್ರುವನ್ನಯಂ ವೈ ನಃ ಸರ್ವೇಷಾಂ ವಾಮ ಇತಿ ತಂ ಯದ್ದೇವಾ ಅಬ್ರುವನ್ನಯಂ ವೈ ನಃ ಸರ್ವೇಷಾಂ ವಾಮ ಇತಿ ತಸ್ಮಾದ್ವಾಮದೇವಸ್ತಸ್ಮಾದ್ವಾಮದೇವ ಇತ್ಯಾಚಕ್ಷತ ಏತಮೇವ ಸಂತಂ ಸ ಇದಂ ಸರ್ವಂ ಪಾಪ್ಮನೋಽತ್ರಾಯತ ಯದಿದಂ ಕಿಂ ಚ ಸ ಯದಿದಂ ಸರ್ವಂ ಪಾಪ್ಮನೋಽತ್ರಾಯತ ಯದಿದಂ ಕಿಂ ಚ ತಸ್ಮಾದತ್ರಯಸ್ತಸ್ಮಾದತ್ರಯ ಇತ್ಯಾಚಕ್ಷತ ಏತಮೇವ ಸಂತಂ ॥ ೧ ॥

ಅ || ಯ ಏಷಃ=ಯಾವ ಈ ಹರಿಯು, ತಪತಿ=(ಸೂರ್ಯಮಂಡಲದಲ್ಲಿದ್ದ ಸೂರ್ಯನಲ್ಲಿದ್ದು ಮೂರು ಲೋಕವನ್ನು) ಸುಡುತ್ತಾನೋ, ಮತ್ತು ಪ್ರಕಾಶಗೊಳಿಸುತ್ತಾನೋ, ಏಷಃ=ಆ ಈ ಹರಿಯು (ಲಕ್ಷ್ಮೀದೇವಿಯಿಂದಲೂ ವಾಯುದೇವರಿಂದಲೂ ಕೂಡಿಕೊಂಡು) ಇಮಂ ಲೋಕಂ=ಈ ಬ್ರಹ್ಮಾದಿಪ್ರಾಣಿಗಳ ಶರೀರ ಸಮುದಾಯವನ್ನು, ಪುರುಷರೂಪೇಣ=ಅಂತರ್ಯಾಮಿರೂಪದಿಂದ, ಅಭ್ಯಾರ್ಚತ್=ಪ್ರವೇಶಿಸಿದನು. ಯ ಏಷಃ ತಪತಿ, ಏಷಃ,, ಪ್ರಾಣೋ ಹಿ=ಉತ್ತಮನಾದ ನಾರಾಯಣನೇ ಸರಿ. ಪ್ರಾಣೋ ವಾವ=ನಾರಾಯಣನೇ, ತತ್=ಆ ಬ್ರಹ್ಮಾದಿ ಶರೀರವನ್ನು, ಅಭ್ಯಾರ್ಚತ್=ಪ್ರವೇಶಿಸಿದನು. (ಇಲ್ಲಿ ಪ್ರಾಣಪದದಿಂದ ಮಧ್ಯಮಪ್ರಾಣನಾದ ಮುಖ್ಯಪ್ರಾಣನೂ, ಲಕ್ಷ್ಮಿಯೂ ಕೂಡ ವಿವಕ್ಷಿತರಾಗಿರುತ್ತಾರೆ). (ಈ ಪ್ರಕಾರವಾಗಿ ಶ್ರೀ ಹರಿಯು ಎಲ್ಲಾ ದೇಹಗಳಲ್ಲಿಯೂ ಅಂತರ್ಯಾಮಿಯಾಗಿದ್ದಾನೆ ಎಂದು ಹೇಳಿ ಆತನು ಅಪೂರ್ಣನಾದರೆ ಅದು ಕೂಡಲಾರದಿರುವುದರಿಂದ ಆ ಹರಿಗೆ ಗುಣಪೂರ್ಣತ್ವವು ಸಿದ್ಧಿಯಾಗುವುದಕ್ಕೋಸ್ಕರ ಸರ್ವಶಬ್ದವಾಚ್ಯತ್ವವನ್ನು ಮೇಲೆ ಹೇಳುವವರಾಗಿ ಪ್ರಕೃತ ಶತರ್ಚಿಶಬ್ದವಾಚ್ಯತ್ವವನ್ನು ತೋರಿಸುತ್ತಾರೆ.) (ಶ್ರೀಹರಿಯು) ತಂ=ಆ ಬ್ರಹ್ಮಾದಿಲೋಕವನ್ನು, ಶತಂ ವರ್ಷಾಣಿ=ನೂರುವರ್ಷಗಳಲ್ಲಿ, ಅಭ್ಯಾರ್ಚತ್=ಪ್ರವೇಶಿಸಿದನು. (ಪುರುಷರಲ್ಲಿ ೧೦೦ ವರ್ಷಗಳ ಪರ್ಯಂತವಾಗಿದ್ದನು.) ತಸ್ಮಾತ್=ಆ ಕಾರಣದಿಂದ, ಪುರುಷಾಯುಷಃ=ಪುರುಷರಾಯುಷ್ಯಗಳು, ಶತಂ ವರ್ಷಾಣಿ=(೧೦೦) ವರ್ಷಗಳು, ಭವಂತಿ=ಆಗುತ್ತವೆ. ತಂ=ಆ ಲೋಕವನ್ನು, ಯತ್=ಯಾವಕಾರಣದಿಂದ, ಶತಂ ವರ್ಷಾಣಿ=ನೂರುವರ್ಷಗಳಲ್ಲಿ, ಅಭ್ಯಾರ್ಚತ್=ಪ್ರವೇಶಿಸಿದನೋ, ತಸ್ಮಾತ್=ಅದರಿಂದ, ಏತಮೇವ=ವಿಷ್ಣುವನ್ನೇ, ಸಂತಂ=ಶತರ್ಚಿನಾಮಾರ್ಥವುಳ್ಳವನನ್ನಾಗಿ, ಶತರ್ಚಿನ ಇತಿ=ಶತರ್ಚಿನಾಮಕ ಬಹುರೂಪವುಳ್ಳವನನ್ನಾಗಿ, ಆಚಕ್ಷತೇ=(ವಿದ್ವಾಂಸರು) ಹೇಳುತ್ತಾರೆ. (ಈ ಅರ್ಥವು ತಾತ್ಪರ್ಯವಿಷಯೀಭೂತವಾದುದು. ಎಂಬೀ ಅಭಿಪ್ರಾಯದಿಂದ ದ್ವಿರುಕ್ತಿಯು) ಅಥವಾ (ಹರಿಯ ರೂಪಗಳು) ಶತರ್ಚಿನಃ=ಶತರ್ಚಿನಾಮಕಗಳಾಗಿ (ಆದವು.) ತಸ್ಮಾತ್=ಆ ಹೆಸರು ಇರುವುದರಿಂದಲೇ, ಶತರ್ಚಿನ ಇತಿ=(ಶತಂ ಅರ್ಚಂತಿ ಎಂಬೀ ವ್ಯುತ್ಪತ್ತಿಯಿಂದ) ಶತರ್ಚಿನಾಮಕಗಳನ್ನಾಗಿ, ಆಚಕ್ಷತೇ...... ಸಃ=ಆ ಹರಿಯು, ಯದಿದಂ ಕಿಂಚ=ಯಾವಯಾವದದೆಯೋ, ಇದಂ ಸರ್ವಂ=ಈ ಸಮಸ್ತ ಜಗತ್ತನ್ನು, ಮಧ್ಯತಃ=ತನ್ನ ಹೊಟ್ಟೆಯಲ್ಲಿ, ದಧೇ=ಧರಿಸಿದನು. ಮತ್ತು ಸರ್ವಜಗತ್ತಿನ ಮಧ್ಯಪ್ರದೇಶದಲ್ಲಿ ಒಳಗಿದ್ದು ಧರಿಸಿದನು. ಸಃ=ಆ ಹರಿಯು, ಯತ್=ಯಾವಕಾರಣದಿಂದ, ಯದಿದಂ ಕಿಂಚ=ಯಾವುದದೆಯೋ, ಇದಂ ಸರ್ವಂ, ಮಧ್ಯತೋ ದಧೇ,, ತಸ್ಮಾತ್=ಆಕಾರಣದಿಂದ ಮಧ್ಯಮಾಃ=(ಆ ರೂಪಗಳು) ಮಧ್ಯಮನಾಮಕಗಳು (ಆದವು.) ತಸ್ಮಾತ್=ಅದರಿಂದ, ಏತಮೇವ ಸಂತಂ=ಈ ವಿಷ್ಣುವನ್ನೇ, ಮಧ್ಯಮಾ ಇತಿ=ಮಧ್ಯಮನಾಮಕ ಅನೇಕ ರೂಪವುಳ್ಳವನೆಂದು, ಆಚಕ್ಷತೇ......ಪ್ರಾಣೋ ವೈ=ಪ್ರಾಣನಲ್ಲಿದ್ದ ಪ್ರಾಣನಾಮಕ ಹರಿಯೇ, ಗೃತ್ಸಃ=ಗೃತ್ಸನಾಮಕನು. ಅಪಾನಃ=ಅಪಾನನಲ್ಲಿದ್ದ ಅಪಾನನಾಮಕ ಹರಿಯು, ಮದಃ=ಮದನಾಮಕನು. ಸಃ=ಆ ಹರಿಯು, ಯತ್=ಯಾವಕಾರಣದಿಂದ, ಪ್ರಾಣಃ=ಪ್ರಾಣರೂಪಿಯಾಗಿ, ಗೃತ್ಸಃ=ಗೃತ್ಸನಾಮಕನೋ, ಅಪಾನಃ=ಅಪಾನರೂಪಿಯಾಗಿ, ಮದಃ=ಮದನಾಮಕನೋ, ತಸ್ಮಾತ್=ಅದರಿಂದ, ಗೃತ್ಸಮದಃ......ತಸ್ಮಾತ್ ಏತುವೇವ ಸಂತಂ ಗೃತ್ಸಮದಃ ಇತಿ ಆಚಕ್ಷತೇ......ತಸ್ಯ=ಆ ಹರಿಗೆ, ಯದಿದಂ ಕಿಂಚ ತತ್ ಇದಂ, ವಿಶ್ವಂ=ಈ ಸಮಸ್ತ ಜಗತ್ತು, ಮಿತ್ರಂ=ಪ್ರಿಯವಾದುದು, ಆಸೀತ್=ಆಯಿತು. ಯತ್=ಯಾವಕಾರಣದಿಂದ, ಯದಿದಂ ಕಿಂಚ ಇದಂ ವಿಶ್ವಂ......ಅಸ್ಯ=ಈ ಹರಿಗೆ, ಮಿತ್ರಂ ಆಸೀತ್......ತಸ್ಮಾತ್......ವಿಶ್ವಾಮಿತ್ರಃ=ವಿಶ್ವಾಮಿತ್ರನಾಮಕನು. ತಸ್ಮಾತ್, ಏತಮೇವ ಸಂತಂ, ವಿಶ್ವಾಮಿತ್ರ ಇತಿ ಆಚಕ್ಷತೇ......

೦=ಆ ಹರಿಯನ್ನು ಕುರಿತು, ದೇವಾಃ=ಬ್ರಹ್ಮಾದಿದೇವತೆಗಳು, "ಅಯಂ ವೈ=ಈ ಹರಿಯೇ, ರ್ವೇಷಾಂ=ಸಮಸ್ತರಾದ, ನಃ=ನಮಗೆ, ವಾಮ ಇತಿ=ಮಂಗಲವನ್ನು ಮಾಡುವವ"ನೆಂದು ಬ್ರುವನ್=ಹೇಳಿದರು. ಯತ್ ಅಯಂ ವೈ=ಇವನೇ, ಸರ್ವೇಷಾಂ ನಃ ವಾಮ ಇತಿ ತಂ ದೇವಾಃ ಬ್ರುವನ್ ತಸ್ಮಾತ್......ವಾಮದೇವಃ=ವಾಮದೇವ ನಾಮಕನು, ತಸ್ಮಾತ್=ಏತಮೇವ ಂತಂ ವಾಮದೇವ ಇತಿ ಆಚಕ್ಷತೇ......ಸಃ=ಆ ಹರಿಯು, ಯದಿದಂ ಕಿಂಚ, ಇದಂ ಸರ್ವಂ= ಭಕ್ತರ ಸಮುದಾಯವನ್ನು, ಪಾಪ್ಮನಃ=ಪಾಪಸಮುದಾಯದಿಂದ, ಅತ್ರಾಯತ=ರಕ್ಷಿಸಿ ನೋ, ತಸ್ಮಾತ್=ಪಾಪದಿಂದ ಬಿಡುಗಡೆ ಮಾಡುವ ಪ್ರಯುಕ್ತ, ಅತ್ರಯಃ=ಅತ್ರಿನಾಮಕ ಹುರೂಪಿಯು. ತಸ್ಮಾತ್ ಏತಮೇವ ಸಂತಂ ಅತ್ರಯ ಇತಿ ಆಚಕ್ಷತೇ...... ॥ ೧ ॥

ತಾ ॥ ಮಧುಚ್ಛಂದ ಮೊದಲಾದವರಲ್ಲಿ ಶತರ್ಚಿಗಳೆಂದು ರೂಢಿಯಿದ್ದರೂ ಆ ಋಷಿ ಗಳು ಅಮುಖ್ಯವಾಗಿಯೇ ಆ ಶಬ್ದವಾಚ್ಯರಾಗಿರುತ್ತಾರೆ. ಯದ್ಯಪಿ ಲೋಕದಲ್ಲಿ ಯೋಗರೂಢಿ ಗಳ ಮಧ್ಯದಲ್ಲಿ ರೂಢಿಯು ಶೀಘ್ರದಲ್ಲಿ ಅರ್ಥವನ್ನು ತೋರಿಸಿಕೊಡುವುದರಿಂದ ರೂಢಿಯೇ ಮುಖ್ಯವಾದುದು. ಆದರೂ ಪ್ರಕೃತ ಕೇವಲ ರೂಢಿಯಿಂದ ಶ್ರೀ ಹರಿಯಲ್ಲಿ ಮಹಾಯೋಗವೇ ಮುಖ್ಯವಾದುದು. ವಿದ್ವದ್ರೂಢಿಯಿಂದ ಯುಕ್ತವಾದರೆ ಸುತರಾಂ ಪ್ರಾಧಾನ್ಯವಿದೆ. ಇದೇ ಅಭಿಪ್ರಾಯವು ಅನುವ್ಯಾಖ್ಯಾನದಲ್ಲಿ ವ್ಯಕ್ತವಾಗುತ್ತಿದೆ. "ಏತಮೇವ ತಥಾ ಸಂತಂ ಶತರ್ಚೀ ತ್ಯಾದಿಕಾ ಶ್ರುತಿಃ । ಆಚಕ್ಷತ ಇತಿ ಹ್ಯತ್ರ ಸಂತಮಿತ್ಯವಧಾರಣಾತ್ ॥ ಯೋಗಸ್ಯ ರೂಢೇಃ ಪ್ರಾ ಬಲ್ಯಂ ವಿದ್ವದ್ರೂಢಿಂ ಚ ತತ್ರ ಗಾಂ । ಬಹುಶೋ ದರ್ಶಯಂತ್ಯಂಜಸ್ತಾತ್ಪರ್ಯಾತ್ಸ ನಿರುಕ್ತಿ ಕಮ್ ॥" ಎಂದು. ಆ ಕಾರಣ ಶ್ರೀ ಹರಿಯಲ್ಲಿ ಮಹಾಯೋಗ, ವಿದ್ವದ್ರೂಢಿ ಎರಡೂ ಇರು ವುದರಿಂದ ಶ್ರೀ ಹರಿಯೇ ಮುಖ್ಯವಾಗಿ ಆ ಶಬ್ದಗಳಿಂದ ಪ್ರತಿಪಾದಿಸಲ್ಪಡುತ್ತಾನೆ. ॥ ೧ ॥

ಭಾ॥ **(a)** ಏಷ ನಾರಾಯಣೋ ದೇವೋ ವಾಯುನಾ ಸಹೈವೇಮಂ ಲೋಕಮ ಭ್ಯಾರ್ಚತ್ ! ಬ್ರಹ್ಮಾದಿ ಶರೀರೇಷು ಪ್ರವಿವೇಶ ॥ **(b)** ಪುರುಷ ಇತ್ಯಂ ತರ್ಯಾಮಿರೂಪಸ್ಯಾಖ್ಯಾ । ಪುರಿ ಶೇತ ಇತಿ । ಪ್ರಸಿದ್ಧತ್ವಾಚ್ಚ ಪಂಚರಾ ತ್ರೇಷು ॥ **(c)** ಯ ಏಷ ಸೂರ್ಯಮಂಡಲೇ ಸ್ಥಿತ್ವಾ ತಪತಿ ಭಗವಾನ್ಸ ನಾರಾಯಣಃ । ಯ ಆದಿತ್ಯೇ ತಿಷ್ಠನ್ನಾದಿತ್ಯಾದಂತರೋ ಯಮಾದಿತ್ಯೋ ನ ವೇದ ॥ ಇತ್ಯಾದಿ ಶ್ರುತಿಭ್ಯಃ ॥

ಅ ॥ (a) ಏಷಃ=ಅಂದರೆ ಕ್ರೀಡಾದಿಗುಣವಿಶಿಷ್ಟನಾದ ನಾರಾಯಣನು ವಾಯುದೇವ ರಿಂದ ಕೂಡಿಕೊಂಡೇ, 'ಇಮಂ ಲೋಕಂ ಅಭ್ಯಾರ್ಚತ್' ಅಂದರೆ ಬ್ರಹ್ಮಾದಿಗಳ ಶರೀರದಲ್ಲಿ ಪ್ರವೇಶಿಸಿದನು. ॥ (b) 'ಪುರುಷರೂಪೇಣ' ಎಂಬಲ್ಲಿ 'ಪುರುಷ' ಎಂಬುವುದು, ಪುರಿ=ಶರೀರದಲ್ಲಿ, ಶೇತೇ=ಮಲಗುತ್ತಾನೆ. ಎಂಬೀ ವ್ಯುತ್ಪತ್ತಿಯಿಂದ ಅಂತರ್ಯಾಮಿ ರೂಪಕ್ಕೆ ಹೆಸರು. ಪಂಚರಾ ತ್ರಾಗಮಗಳಲ್ಲಿ ಈ ರೀತಿಯಾಗಿ ಪ್ರಸಿದ್ಧಿಯಿರುವುದರಿಂದಲೂ (ಈ ಅರ್ಥವು ಸಿದ್ಧವಾಗುತ್ತದೆ.) ('ಆದಿತ್ಯ ಏವ ಪ್ರಾಣಃ' ಎಂದು ಶ್ರುತಿಯಿರುವುದರಿಂದಲೂ ಯಾವ ಸೂರ್ಯನೆಂದು ಪ್ರಸಿದ್ಧಿಯುಳ್ಳ ಪ್ರಾಣನು ಸುಡುತ್ತಾನೋ ಅವನು ಪ್ರವೇಶಿಸಿದನು ಎಂದು ಮೇಲಿನ ವಾಕ್ಯದಲ್ಲಿ ಶ್ರುತವಾಗುವು ದರಿಂದ 'ಏಷಃ'ಎಂಬುವುದಕ್ಕೆ ನಾರಾಯಣನು ಎಂಬೀ ವ್ಯಾಖ್ಯಾನವು ಹೇಗೆ ಸಂಗತವಾಗುತ್ತದೆ? ಎಂಬೀ ಆಶಂಕೆಯನ್ನು ಪರಿಹರಿಸುತ್ತಾರೆ.) ॥ (c) ಯಾವ ಈತನು ಸೂರ್ಯಮಂಡಲದಲ್ಲಿದ್ದು ಸುಡುತ್ತಾನೋ ಅಂತಹ ಪೂಜ್ಯನಾದವನು ನಾರಾಯಣನು. ಏಕೆಂದರೆ ಯಾವಾತನು ಆದಿತ್ಯ ನಲ್ಲಿದ್ದು ಆದಿತ್ಯನಿಂದ ಬೇರೆಯಾದವನೋ ಸೂರ್ಯನು ಯಾವಾತನನ್ನು ತಿಳಿಯುವದಿಲ್ಲವೋ ಎಂದು ಬೃಹದಾರಣ್ಯಕವೇ (ಅ. ೫ ಬ್ರಾ. ೭ ಮಂ. ೯) ಮೊದಲಾದ ಶ್ರುತಿಗಳಿರುವುದರಿಂದ.

ರುದ್ರನಿಗೂ ಎಂಟು ಮೂರ್ತಿಗಳಿದ್ದ ಪ್ರಯುಕ್ತ ಸೂರ್ಯಮಂಡಲದಲ್ಲಿದ್ದಾನೆ ಎಂಬುವುದು ಸಿದ್ಧವಾದುದರಿಂದ ಈ ಬೃಹದಾರಣ್ಯಕ ಶ್ರುತಿಯಲ್ಲಿ ಆದಿತ್ಯಮಂಡಲಾಂತರ್ಗತರಾಗಿ ಹೇಳಲ್ಪಟ್ಟವರು ಶಿವಾದಿಗಳೆಂದು ಏತಕ್ಕೆ ಆಶಂಕಿಸಬಾರದೆಂದರೆ.

ಭಾ॥ (a) ಯ ಏಷೋಽಂತರಾದಿತ್ಯೇ ಹಿರಣ್ಮಯಃ ಪುರುಷೋ ದೃಶ್ಯತ ಇತ್ಯುಕ್ತ್ವಾ ತಸ್ಯ ಯಥಾ ಕಪ್ಯಾಸಂ ಪುಂಡರೀಕಮೇವಮಕ್ಷಿಣೀ ಇತ್ಯುಕ್ತತ್ವಾನ್ನ ಶಿವಾದಯಃ। ಶಿವೋ ಹಿ ವಿರೂಪಾಕ್ಷಃ ॥ (b) ಪ್ರಸಿದ್ಧಶ್ಚ ಪುಂಡರೀಕಾಕ್ಷ ಇತಿ ಭಗವಾನ್ನಾರಾಯಣಃ । ಯಮಾದಿತ್ಯೋ ನ ವೇದೇತ್ಯುಕ್ತತ್ವಾನ್ನಾದಿತ್ಯಃ ॥ (c) ಭೇದವ್ಯಪದೇಶಾಚ್ಚಾನ್ಯ ಇತಿ ಭಗವದ್ವಚನಂ ।

ಅ ॥ (a) ಸುಖಪರಿಪೂರ್ಣನಾದ ಯಾವ ಈ ಪುರುಷ ಶಬ್ದವಾಚ್ಯನಾದ ಶ್ರೀ ಹರಿಯು ಸೂರ್ಯಾಂತರ್ಗತನಾಗಿ ಕಾಣಲ್ಪಡುತ್ತಾನೆ ಎಂದು ಹೇಳಿ ಆತನಿಗೆ 'ಯಥಾ ಕಪ್ಯಾಸಂ ಪುಂಡರೀಕಂ ಏವಂ ಅಕ್ಷಿಣೀ' ಅಂದರೆ ನೀರನ್ನು ಕುಡಿಯುತ್ತಿರುವ ನಾಳವೇ ಆಸನವಾಗಿವುಳ್ಳ ಅಂದರೆ ಬಾಡದಿರುವ ಕಮಲವ್ರೋ ಹೇಗೆ ಆದರಂತೆ ಕಣ್ಣುಗಳು ಎಂದು ಹೇಳಿರುವುದರಿಂದ ಶಿವಾದಿಗಳು ಅಲ್ಲಿ ಹೇಳಲ್ಪಡುವುದಿಲ್ಲ. ಶಿವನಾದರೆ ವಿರೂಪಾಕ್ಷನೆಂದೇ ಪ್ರಸಿದ್ಧನಾಗಿದ್ದಾನೆ. ॥ (b) ಪೂಜ್ಯನಾದ ನಾರಾಯಣನು ಪುಂಡರೀಕಾಕ್ಷನೆಂದು ಪ್ರಸಿದ್ಧನಾಗಿದ್ದಾನೆ. ಯಾವಾತನನ್ನು ಸೂರ್ಯನು ತಿಳಿಯುವುದಿಲ್ಲವೆಂದು ಹೇಳಿದ್ದರಿಂದ ಸೂರ್ಯನಲ್ಲ. ॥ (c) "ಅಂತರಾದಿತ್ಯೇ ಮನಸಾ ಚರಂತಂ । ದೇವಾನಾಂ ಹೃದಯಂ ಬ್ರಹ್ಮಾನ್ವವಿಂದತ್ ॥" ಎಂದು ತೈತ್ತಿರೀಯೋಪನಿಷತ್ತೇ ಮೊದಲಾದ ಶ್ರುತಿಯಲ್ಲಿ ಭೇದವು ಹೇಳಲ್ಪಟ್ಟ ಪ್ರಯುಕ್ತ ಪ್ರಸಿದ್ಧ ಆದಿತ್ಯನಿಂದ ಶ್ರೀ ಹರಿಯು ಭಿನ್ನನೇ ಸರಿ ಎಂದು ವೇದವ್ಯಾಸದೇವರ ಸೂತ್ರರೂಪವಾದ ಮಾತು. (ಅಂತೂ ವಿಷ್ಣುವಿಗೂ ಆದಿತ್ಯನಿಗೂ ಭೇದವಿದೆ. ಅವರಿಗೆ ಐಕ್ಯವು ಎಷ್ಟುಮಾತ್ರಕ್ಕೂ ಹೇಳಕೂಡದು.)

ಭಾ॥ (a) ವೃತ್ರಂ ಯದಿಂದ್ರ ಶವಸಾಽವಧೀರಹಿಮಾದಿತ್ಸೂರ್ಯಂ ದಿವ್ಯಾರೋಹಯೋ ದೃಶೇ ॥ (ಋ. ಅ. ೧, ಅ. ೪) (b) ಯತ್ಸೂರ್ಯಸ್ಯ ಹರಿತಃ ಪತಂತೀಃ ಪುರಸ್ತಾತೀರು ಪರಾ ಏತಸೇ ಕಃ ॥ (c) ಸೀದನ್ನಿಂದ್ರಸ್ಯ ಜಠರೇ ಕನಿಕ್ರದನ್ನೃಭಿರ್ಯತಸ್ಸೂರ್ಯಮಾರೋಹಯೋ ದಿವಿ ॥ (d) ಚಂದ್ರಮಾ ಮನಸೋಜಾತಶ್ಚಕ್ಷೋಸ್ಸೂರ್ಯೋ ಅಜಾಯತ ॥ (ಋ. ಅ. ೮, ಅ. ೪, ವ. ೧೯) (e) ಯಸ್ಸೂರ್ಯಂ ಯ ಉಷಸಂ ಜಜಾನ ಯೋ ಅಪಾಂ ನೇತಾ ಸ ಜನಾಸ ಇಂದ್ರಃ ॥ (f) ಉದ್ವೇತಿ ಪ್ರಸವೀತಾ ಜನಾನಾಂ ಮಹಾನ್ ಕೇತುರರ್ಣವಃ ಸೂರ್ಯಸ್ಯ ॥ (ಋ. ಅ. ೫, ಅ. ೫, ವ. ೫) (g) ಯೇನಾವೃತಂ ಖಂ ಚ ದಿವಂ ಮಹೀಂ ಚ ಯೇನಾದಿತ್ಯಸ್ತಪತಿ ತೇಜಸಾ ಭ್ರಾಜಸಾ ಚ ॥ (h) ಯಮಂತಃ ಸಮುದ್ರೇ ಕವಯೋಽವಯಂತಿ ಯದಕ್ಷರೇ ಪರಮೇ ಪ್ರಜಾಃ ॥ (i) ತಮೇತಾಃ ಪಂಚ ದೇವತಾಃ ಪರಿಮ್ರಿಯಂತೇ ವಿದ್ಯುದ್ವೃಷ್ಟಿಶ್ಚಂದ್ರಮಾ ಆದಿತ್ಯೋಽಗ್ನಿರಿತ್ಯಾದೌ ಸೂರ್ಯಸ್ಯ ಸರ್ವತ್ರ ಪರಾಧೀನತ್ವಾವಗತೇಶ್ಚ ॥

ಅ ॥ (a) ಹೇ ಇಂದ್ರ=ಪರಮೇಶ್ವರನೇ, ಶವಸಾ=ಸುಖದಿಂದ (ಅನಾಯಾಸವಾಗಿ), ವೃತ್ರಂ=ವೃತ್ರಾಸುರನನ್ನು, ಅಹಿಂ=ತನ್ನಾಮಕ ದೈತ್ಯನನ್ನು, ಯತ್=ಯಾವ ಕಾರಣ

ಂದ, ಅವಧೀಃ=ಸಂಹರಿಸಿದಿಯೋ, ಆದಿತ್=ಇದೇ ಕಾರಣದಿಂದ, ದೃಶೇ=ನೋಡಲಿಕ್ಕೆ, ಸೂರ್ಯಂ=ಸೂರ್ಯನನ್ನು, ದಿವಿ=ಅಂತರಿಕ್ಷದಲ್ಲಿ, ಆರೋಹಯಃ=ಚೆನ್ನಾಗಿ ಸ್ಥಾಪಿಸಿದ್ದಿ. ॥ (b) ಯತ್=ಯಾವುದರಿಂದ, (ಅಂದರೆ ಸೂರ್ಯನನ್ನು ಅಂತರಿಕ್ಷದಲ್ಲಿ ಆರೋಹಣೆಮಾಡಿ ಸುವುದರಿಂದ) ಸೂರ್ಯಸ್ಯ=ಸೂರ್ಯನ, ಹರಿತಃ=ದಿಕ್ಕುಗಳನ್ನು, ಪತಂತೀಃ=ಬೀಳತಕ್ಕ, ಪುರಃಸತೀಃ=ಪುರೋಭಾಗದಲ್ಲಿರುವ, ಉ ಪರಾಃ=ಮೇಲುಭಾಗದಲ್ಲಿರುವ ಕಾಂತಿಗಳನ್ನು, ಏತಶೇ=ಜ್ಞಾನಕ್ಕೋಸ್ಕರ, ಕಃ (ಅಕಃ) ಮಾಡುವವನಾದಿ. ॥ (c) ಇಂದ್ರಸ್ಯ=ಪರಮೇಶ್ವರನ, ಜಠರೇ=ಹೊಟ್ಟೆಯಲ್ಲಿ, ಸೀದನ್=ಇರುವ ನೀನು, ಯತಃ=ಯಾವ ಕಾರಣದಿಂದ, ಸೂರ್ಯಂ=ಸೂರ್ಯನನ್ನು, ದಿವಿ=ಅಂತರಿಕ್ಷದಲ್ಲಿ, ಆರೋಹಯಃ=ಸ್ಥಾಪಿಸಿದ್ದಿಯೋ, ಅದು ದರಿಂದ ನೃಭಿಃ=ಮನುಷ್ಯರಿಂದ, ಕನಿಕ್ರದತ್=ಕರ್ಮಗಳನ್ನು ಮಾಡಿಸಿದಿ. ॥ (d) ಚಂದ್ರನು ಮನಸ್ಸಿನಿಂದ ಹುಟ್ಟಿದನು. ಸೂರ್ಯನು ಕಣ್ಣಿನಿಂದ ಹುಟ್ಟಿದನು. ॥ (e) ಜನಾಸಃ=ಜನರುಗಳಿರಾ, ಯಃ=ಯಾವಾತನು, ಸೂರ್ಯಂ=ಸೂರ್ಯನನ್ನು, ಜಜಾನ=ಹುಟ್ಟಿಸಿದನೋ, ಯಃ=ಯಾವಾತನು, ಉಷಸಂ=ತನ್ನಾಮಕ ದೇವತೆಯನ್ನು, (ಹುಟ್ಟಿಸಿದನೋ) ಯಃ=ಯಾವಾತನು, ಅಪಾಂ=ಜಲಗಳಿಗೆ, ನೇತಾ=ಒಯ್ಯತಕ್ಕವನೋ, ಸಃ=ಆತನು, ಇಂದ್ರಃ=ಪರಮೇಶ್ವರನಾದ ನಾರಾಯಣನೇ ಸರಿ. ॥ (f) ಜನಾನಾಂ=ಜನರಿಗೆ, ಪ್ರಸವೀತಾ=ಉತ್ಪಾದಕನಾದ, ಅರ್ಣವಃ=ಅತಿ ನೂತನನಾದ, ಅಥವಾ ಅತಿಶಯವಾದ, ಸುಖಜ್ಞಾನಗಳುಳ್ಳ ಶ್ರೀಹರಿಯು, ಸೂರ್ಯಸ್ಯ=ಸೂರ್ಯನಿಗೆ, ಕೇತುಃ=ಆಶ್ರಯನಾಗಿ, ಅಥವಾ ಜ್ಞಾನದಾಯಕನಾಗಿ, ಉದ್ವೇತಿ=ಉದಯನಾಗುತ್ತಾನಷ್ಟೆ. ॥ (g) ಯೇನ=ಯಾವ ಪರಮಾತ್ಮನಿಂದ, ಆವೃತಂ=ಬಹಿರ್ವ್ಯಾಪ್ತನಾದ, ಖಂ ಚ=ಆಕಾಶವನ್ನು, ದಿವಂ=ಸ್ವರ್ಗಲೋಕವನ್ನು, ಮಹೀಂ ಚ=ಭೂಮಿಯನ್ನೂ ಕೂಡ, ಆದಿತ್ಯಃ=ಸೂರ್ಯನು, ಯೇನ=ಯಾವ ಶ್ರೀ ಹರಿಯ ಪ್ರೇರಣಯಿಂದ, ತೇಜಸಾ=ತೇಜಸ್ಸಿನಿಂದ, ತಪತಿ=ಸುಡುತ್ತಾನೆ. ಭ್ರಾಜಸಾ ಚ=ಕಾಂತಿಯಿಂದ, ತಪತಿ=ಪ್ರಕಾಶಗೊಳಿಸುತ್ತಾನೆ. ॥ (h) ಕವಯಃ=ಜ್ಞಾನಿಗಳೂ ಕೂಡ, ಅಂತಃ ಸಮುದ್ರೇ=ಸಮುದ್ರದ ಮಧ್ಯದಲ್ಲಿರುವ, ಯಂ=ಯಾವ ಶ್ರೀ ಹರಿಯನ್ನು, ಅವಯಂತಿ=ಸ್ವಲ್ಪವೇ ತಿಳಿಯುತ್ತಾರೋ, ಪರಮೇ=ಸರ್ವೋತ್ತಮನಾದ, ಯದಕ್ಷರೇ=ಯಾವ ಅಕ್ಷರ ಶಬ್ದವಾಚ್ಯನಾದ ಶ್ರೀ ಹರಿಯಲ್ಲಿ, ಪ್ರಜಾಃ=ಎಲ್ಲಾ ಪ್ರಜೆಗಳೂ, ಆಶ್ರಿತರಾಗಿರುತ್ತಾರೆ.

ತಾ ॥ ಅಂತೂ ಸಮುದ್ರಾಂತಸ್ಥಿತತ್ವದಿಂದಲೂ ಅಕ್ಷರಶ್ರುತಿಯೂ ವಾಕ್ಯಶೇಷದಲ್ಲಿರುವುದರಿಂದ 'ಯೇನಾದಿತ್ಯಃ' ಎಂಬಲ್ಲಿಯೂ ಯಚ್ಛಬ್ದದಿಂದ ಹರಿಯೇ ಹೇಳಲ್ಪಡುತ್ತಾನೆ.

(i) ವಿದ್ಯುತ್ ವೃಷ್ಟಿಃ, ಚಂದ್ರಮಾಃ ಆದಿತ್ಯಃ, ಅಗ್ನಿಃ=ಎಂಬೀ, ಏತಾಃ=ಈ, ಪಂಚ ದೇವತಾಃ=ಐದು ದೇವತೆಗಳು, ತಂ=ಆ ಪರಮಾತ್ಮನನ್ನು, ಪರಿ=ಸುತ್ತಲೂ ಆತನಸಂಕಲ್ಪವನ್ನನುಸರಿಸಿ, ಮ್ರಿಯಂತೇ=ಮರಣವನ್ನು ಹೊಂದುತ್ತಾರೆ. ಇತ್ಯಾದೌ=ಇದೇ ಮೊದಲಾದ, ಸರ್ವತ್ರ=ಎಲ್ಲಾ ಪ್ರದೇಶದಲ್ಲಿ, ಸೂರ್ಯಸ್ಯ=ಸೂರ್ಯನಿಗೆ, ಪರಾಧೀನತ್ವಾವಗತೇಶ್ಚ=ಅನ್ಯಾಧೀನತ್ವವು ತಿಳಿದಿರುವುದರಿಂದಲೂ ಕೂಡ.

ತಾ ॥ ಅಂತೂ ಸೂರ್ಯನು ಸ್ವರ್ಗತನಾಗಿದ್ದಾನೆ. ತನ್ನ ಕಾಂತಿಯಿಂದ ಜ್ಞಾನವನ್ನು ಕೊಡುತ್ತಾನೆ, ಕರ್ಮಗಳನ್ನು ಮಾಡಿಸುತ್ತಾನೆ, ಎಲ್ಲವನ್ನೂ ಹುಟ್ಟಿಸುತ್ತಾನೆ, ಸುಡುತ್ತಾನೆ, ಪ್ರಕಾಶಿಸುತ್ತಾನೆ, ಮರಣಾದಿಗಳನ್ನು ಕೊಡುತ್ತಾನೆ, ಇತ್ಯಾದಿ ಎಲ್ಲಾ ವಿಷಯದಲ್ಲಿಯೂ, ಅನ್ಯಾಧೀನತ್ವವು ತಿಳಿದಿರುವುದರಿಂದ ಶ್ರೀಹರಿಯು ಆದಿತ್ಯನಿಂದ ಭಿನ್ನನೇ ಸರಿ ಎಂದು ಸಿದ್ಧವಾಯಿತು.

ಭಾ॥ (a) ಧ್ಯೇಯಃ ಸದಾ ಸವಿತೃಮಂಡಲಮಧ್ಯವರ್ತೀ ನಾರಾಯಣಃ ಸರಸಿಜಾಸನಸನ್ನಿವಿಷ್ಟಃ। ಕೇಯೂರವಾನ್ಮಕರಕುಂಡಲವಾನ್ಕಿರೀಟೀ ಹಾರೀ ಹಿರಣ್ಮಯವಪುರ್ಧೃತಶಂಖಚಕ್ರಃ ॥ ಇತಿ ನಾರಸಿಂಹಪುರಾಣೇ ॥ (b) ತಾಪನೀ ಪಾಚಿಕಾ ಚೈವ ಶೋಷಣೀ ಚ ಪ್ರಕಾಶನೀ। ನೈವ ರಾಜನ್ರವೇಃ ಶಕ್ತಿಃ ಶಕ್ತಿರ್ನಾರಾಯಣಸ್ಯ ಚ (ಹಿ) ॥ ಇತಿ ಪಾದ್ಮೇ ॥ (c) ಯದಾದಿತ್ಯಗತಂ ತೇಜೋ ಜಗದ್ಭಾಸಯತೇಽಖಿಲಂ। ಯಚ್ಚಂದ್ರಮಸಿ ಯಚ್ಚಾಗ್ನೌ ತತ್ತೇಜೋ ವಿದ್ಧಿ ಮಾಮಕಂ ಇತಿ ಚ॥ (d) ನ ಚ ವಿಷ್ಣೋರನ್ಯಾಧೀನತ್ವಂ ಶ್ರುತಿಷೂಕ್ತಂ ಕುತ್ರಚಿತ್ । ಉತ್ಪತ್ತಿಸ್ತು ಪ್ರಾದುರ್ಭಾವಾಪೇಕ್ಷಯಾ। ಏಕೋ ನಾರಾಯಣ ಆಸೀನ್ನ ಬ್ರಹ್ಮಾ ನ ಚ ಶಂಕರಃ॥ ಇತಿ ಮಹಾಪ್ರಲಯೇ ತಸ್ಯೈವಾವಸ್ಥಾನಶ್ರುತೇಃ ॥

ಅ ॥ (a) ಸೂರ್ಯಮಂಡಲದ ಮಧ್ಯದಲ್ಲಿರತಕ್ಕವನೂ, ಕಮಲಾಸನದಲ್ಲಿ ಕೂತುಕೊಂಡವನೂ ಕೇಯೂರ (ತೋಳುಸರಿಗೆ) ವುಳ್ಳವನೂ ಮಕರಕುಂಡಲವುಳ್ಳವನೂ ಕಿರೀಟವುಳ್ಳವನೂ ಆಭರಣವುಳ್ಳವನೂ ಪೂರ್ಣಸುಖಮಯವಾದ ಶರೀರವುಳ್ಳವನೂ ಶಂಖಚಕ್ರಗಳನ್ನು ಧರಿಸಿದವನೂ ಏತಾದೃಶ ಮಹಿಮೋಪೇತನಾದ ನಾರಾಯಣನು ಸರ್ವದಾ ಧ್ಯಾನಮಾಡಿಸಿಕೊಳ್ಳಲಿಕ್ಕೆ ಯೋಗ್ಯನು. ॥ ಎಂದು ನಾರಸಿಂಹ ಪುರಾಣದಲ್ಲಿ ಹೇಳಿಯದೆ. ॥ (b) ಎಲೇ ರಾಜನೇ ಸುಡತಕ್ಕದ್ದೂ, ಬೇಯಿಸತಕ್ಕದ್ದೂ, ಒಣಗಿಸತಕ್ಕದ್ದೂ, ಪ್ರಕಾಶಗೊಳಿಸತಕ್ಕದ್ದೂ, ಸಾಮರ್ಥ್ಯವು ಸೂರ್ಯನದ್ದಲ್ಲವೇ ಅಲ್ಲ ಅಂತಹ ಶಕ್ತಿಯು ನಾರಾಯಣನದ್ದೇ ಸರಿ ಎಂದು ಪಾದ್ಮ ಪುರಾಣದಲ್ಲಿ ॥ (c) "ಸೂರ್ಯನಲ್ಲಿದ್ದ ಯಾವುದೊಂದು ತೇಜಸ್ಸು ಎಲ್ಲಾ ಜಗತ್ತನ್ನು ಪ್ರಕಾಶಿಸುತ್ತದೋ, ಯಾವುದು ಚಂದ್ರನಲ್ಲದೆಯೋ, ಯಾವುದು ಅಗ್ನಿಯಲ್ಲದೆಯೂ, ಅಂತಹ ತೇಜಸ್ಸನ್ನು ನನ್ನದ್ದನ್ನಾಗಿ ತಿಳಿ ಎಂದು ಗೀತೆಯಲ್ಲಿ ಕೃಷ್ಣನ ನುಡಿಯು. ॥(ಗೀ, ಅ, ೧೫, ಶ್ಲೋ. ೧೨) (d) (ಸೂರ್ಯಾದಿಗಳಿಗೆ ಇತರಾಧೀನತ್ವವು ಹೇಳಿದಂತೆ) ವಿಷ್ಣುವಿಗೆ ಇತರಾಧೀನತ್ವವು ಶ್ರುತಿಗಳೆಲ್ಲೆಲ್ಲಿಯೂ ಹೇಳಲಿಲ್ಲ. ॥ (ಹಾಗಾದರೆ ಉತ್ಪತ್ತಿ ಶ್ರುತಿಯೇ ಅನ್ಯಾಧೀನತ್ವವನ್ನು ಹೇಳುತ್ತದೆಂದಂದರೆ (೧) ವಸುದೇವಾದಿಗಳಲ್ಲಿ ಕೃಷ್ಣಾದಿ ರೂಪದಿಂದ ಉತ್ಪತ್ತಿ ಪ್ರತಿಪಾದಕ ವಚನವು ಅನ್ಯಾಧೀನತ್ವ ವಿಷಯದಲ್ಲಿ ಪ್ರಮಾಣವಾಗುವದೋ? ಅಥವಾ (೨) ವಾಸುದೇವಾದಿ ರೂಪದಿಂದ ಆದಿಯಲ್ಲಿ ಉತ್ಪತ್ತಿ ಪ್ರತಿಪಾದಕ ವಚನವೋ? (೩) ಅಥವಾ ಮೂಲರೂಪಿಯಾದ ನಾರಾಯಣನದ್ದೆಯೋ? ಆದ್ಯ ಪಕ್ಷ ದ್ವಯವೂ ಯುಕ್ತವಲ್ಲ. ಏಕೆಂದರೆ) "ಉತ್ಪತ್ತಿಸ್ತು ಪ್ರಾದುರ್ಭಾವಾಪೇಕ್ಷಯಾ" ಅಂದರೆ ಕೃಷ್ಣಾದಿ ರೂಪದಿಂದ ಉತ್ಪತ್ತಿ ಪ್ರತಿಪಾದಕ ವಚನವು ಪ್ರಾದುರ್ಭಾವವನ್ನು ಅಪೇಕ್ಷಿಸಿಕೊಂಡು.

ತಾ ॥ (೧) "ಪ್ರತ್ಯಕ್ಷತ್ವಂ ಹರೇರ್ಜನ್ಮ" ಎಂಬೀ ವಚನದಿಂದ ಜನರ ದೃಷ್ಟಿಗೆ ಗೋಚರನಾದುದರಿಂದ ಅದನ್ನಪೇಕ್ಷಿಸಿಕೊಂಡೇ ಉತ್ಪತ್ತಿಪ್ರತಿಪಾದಕ ವಚನವು. (೨) ವಾಸುದೇವಾದಿ ರೂಪದಿಂದ ಉತ್ಪತ್ತಿ ಪ್ರತಿಪಾದಕ ವಚನವು ದೀಪದಿಂದ ಮತ್ತೊಂದು ದೀಪದಂತೆ ಮೂಲರೂಪದಿಂದ ಪೂರ್ಣವಾದ ರೂಪಾಂತರಕ್ಕೇನೇ ಸಂಬಂಧವನ್ನಪೇಕ್ಷಿಸಿಯೇ ಸರಿ. ಕಾರಣ ಇದೂ ಪ್ರಮಾಣವಾಗಲಾರದು. (೩) ನಾರಾಯಣನು ಒಬ್ಬನೇ ಇರುತ್ತಿದ್ದನು. ಚತುರ್ಮುಖನು ಇರಲಿಲ್ಲ. ರುದ್ರನೂ ಇರಲಿಲ್ಲ ಎಂದು ಮಹಾ ಪ್ರಳಯಕಾಲದಲ್ಲಿ ನಾರಾಯಣನಿಗೊಬ್ಬನಿಗೇನೇ ಸ್ಥಿತಿಯು ಹೇಳಿರುವುದರಿಂದ ಉತ್ಪತ್ತಿಯೇ ಶ್ರುತಿಗಳಲ್ಲಿ ಹೇಳಲ್ಪಡಲಿಲ್ಲ. ಮತ್ತು ಇತರರಾದ

ಬ್ರಹ್ಮಾದಿಗಳನ್ನು ನಿಷೇಧಿಸಿ, ಆತನು ಒಬ್ಬನೇ ಇದ್ದಾನೆಂದು ಹೇಳಿರುವುದರಿಂದ ಬ್ರಹ್ಮಾದಿಗಳಿಂದ ಉತ್ಪತ್ತಿಯನ್ನು ಸಂಭಾವಿಸಲಿಕ್ಕೂ ಕೂಡದು.

ಭಾ॥ (a) ಯಂ ಕಾಮಯೇ ತಂ ತಮುಗ್ರಂ ಕೃಣೋಮಿ ತಂ ಬ್ರಹ್ಮಾಣಂ ತಮೃಷಿಂ ತಂ ಸುಮೇಧಾಂ । ಇತ್ಯಾದಿ ಬ್ರಹ್ಮಶಿವಾದೀನಾಂ ದೇವ್ಯಧೀನಪದಪ್ರಾಪ್ತಿಮುಕ್ತ್ವಾ ತಸ್ಯಾ ಅಪಿ ಭಗವದಧೀನತ್ವಂ॥ ಮಮ ಯೋನಿರಪ್ಸ್ವಂತಃ ಸಮುದ್ರೇ ॥ ತತೋ ವಿತಿಷ್ಠೇ ಭುವನಾನಿ ವಿಶ್ವಾ। ಪರೋ ದಿವಾ ಪರ ಏನಾ ಪೃಥಿವ್ಯೇತ್ಯಾಹ ॥ (b) ಅಹಂ ರುದ್ರಾಯ ಧನುರಾತನೋಮಿ ಬ್ರಹ್ಮದ್ವಿಷೇ ಶರವೇ ಹಂತ ವಾ ಉ । ಅಹಂ ಸುವೇ ಪಿತರಮಸ್ಯ ಮೂರ್ಧನ್ನಿತಿ ಬ್ರಹ್ಮರುದ್ರಯೋರ್ದೇವ್ಯಾಸ್ಸಕಾಶಾತ್ಸೃಷ್ಟಿಸಂಹಾರೌ ಚೋಕ್ತೌ ॥

ಅ ॥ (a) ಯಾವಾತನನ್ನು ಇಚ್ಛಿಸುತ್ತೇನೋ, ಅಂತವನನ್ನು ರುದ್ರನನ್ನಾಗಿಯೂ, ಚತುರ್ಮುಖನನ್ನಾಗಿಯೂ, ಋಷಿಯನ್ನಾಗಿಯೂ, ಒಳ್ಳೇ ಜ್ಞಾನಿಯನ್ನಾಗಿಯೂ ಮಾಡುತ್ತೇನೆ. ಇತ್ಯಾದಿ ವಾಕ್ಯದಿಂದ ಬ್ರಹ್ಮರುದ್ರಾದಿಗಳಿಗೆ ಲಕ್ಷ್ಮ್ಯಧೀನವಾದ ಫಲಪ್ರಾಪ್ತಿಯೆಂದು ಹೇಳಿ ಆ ಲಕ್ಷ್ಮಿಗೂ ಶ್ರೀ ಹರಿಯ ಅಧೀನತ್ವವು ಹೇಳಲ್ಪಟ್ಟಿದೆ. ॥ ನನಗೆ ಕಾರಣೀಭೂತನಾದವನು ಸಮುದ್ರದ ಒಳಗೆ ನೀರಿನಲ್ಲಿದ್ದಾನೆ ನಾರಾಯಣನು. ॥ ಶ್ರೀ ಹರಿಯ ಪ್ರಸಾದದಿಂದ, ವಿಶ್ವಾ=ಸಮಸ್ತಗಳಾದ, ಭುವನಾನಿ=ಲೋಕಗಳನ್ನು, ವಿತಿಷ್ಠೇ=ಅಧಿಕರಿಸಿಕೊಂಡಿರುತ್ತೇನೆ. ' ಉತಾಮೂಂ ದ್ಯಾಂ ಚ ವರ್ಷ್ಮಣೋಪಸ್ಪೃಶಾಮಿ' ಅಂದರೆ (ಉತ=ಮತ್ತು, ಅಮೂಂ=ಈ ಭೂಮಿಯನ್ನು, ದ್ಯಾಂಚ=ಸ್ವರ್ಗಲೋಕವನ್ನೂ, ವರ್ಷ್ಮಣಾ=ದೇಹದಿಂದ, ಬಲದಿಂದಾಗಲೀ, ಉಪಸ್ಪೃಶಾಮಿ=ಮುಟ್ಟುತ್ತೇನೆ. ' ಅಹಮೇವ ವಾತ ಇವ ಪ್ರವಾಮ್ಯಾರಭಮಾಣಾ ಭುವನಾನಿ ವಿಶ್ವಾ' ಅಂದರೆ ಅಹಮೇವ=ನಾನೇ, ವಿಶ್ವಾ=ಸಮಸ್ತಗಳಾದ, ಭುವನಾನಿ=ಲೋಕಗಳನ್ನು, ಆರಭಮಾಣಾ=ಸೃಷ್ಟಿಸುವವಳಾಗಿ, ವಾತ ಇವ=ಘಾಳಿಯಂತೆ, ಪ್ರವಾಮಿ=ವ್ಯಾಪಿಸಿರುತ್ತೇನೆ. ನನಗೆ ಕಾರಣೀಭೂತನಾದ ಪರಮಾತ್ಮನು) ದಿವಾ=ಸ್ವರ್ಗಲೋಕದಿಂದ, ಪರಃ=ಬೇರೆಯವನು. ಏನಾ ಪೃಥಿವ್ಯಾ=ಈ ಭೂಮಿಯಿಂದಲೂ, ಪರಃ=ಉತ್ತಮನು ಅಂದರೆ, ಶ್ರೀ ಭೂನಾಮಕನನ್ನ ಎರಡು ರೂಪಗಳಿಂದಲೂ ಅತ್ಯುತ್ತಮನು"ಏತಾವತೀ ಮಹಿನಾ ಸಂಬಭೂವ"ಅಂದರೆ ನಾನಾದರೆ ಮಹಿನಾ=ಮಹಾತ್ಮೆಯಿಂದ, ಏತಾವತೀ=ಕೇವಲ ಬ್ರಹ್ಮಾದಿಗಳಿಂದ ಉತ್ತಮಳಾದುದರಿಂದ ಪರಿಮಿತಳಾಗಿ, ಸಂಬಭೂವ=ಆದೆನು.) ಎಂದು ಲಕ್ಷ್ಮೀದೇವಿಯು ಹೇಳಿದ್ದಾಳೆ. ॥ (b) ಅಹಂ=ನಾನು, ಶರವೇ=ಹಿಂಸಕನಾದ, ಬ್ರಹ್ಮದ್ವಿಷೇ=ಚತುರ್ಮುಖನ ಐದನೇ ಮುಖವನ್ನು ನಾಶಮಾಡಿದುದರಿಂದ ಚತುರ್ಮುಖನಿಗೆ ದ್ವೇಷಿಯಾದ, ರುದ್ರಾಯ=ರುದ್ರನಿಗೋಸ್ಕರ ಹಂತ ವಾ ಉ=ಕೊಲ್ಲುವುದಕ್ಕೋಸ್ಕರವೇ, (ಪ್ರಳಯಕಾಲದಲ್ಲಿ ದುರ್ಗಾರೂಪದಿಂದ) ಧನುಃ=ಧನುಸ್ಸನ್ನು, ಆತನೋಮಿ=ವಿಸ್ತರಿಸುತ್ತೇನೆ. ಅಹಂ=ನಾನು, ಅಸ್ಯ=ಈ ಜಗತ್ತಿಗೆ, ಪಿತರಂ=ಜನಕನಾದ ಚತುರ್ಮುಖನನ್ನು, ಮೂರ್ಧನ್=ಸಕಲ ಜೀವೋತ್ತಮನನ್ನಾಗಿ, ಸುವೇ=ಹುಟ್ಟಿಸುವೆನು. ಎಂಬೀತ್ಯಾದಿ ವಚನಗಳಿಂದ ಬ್ರಹ್ಮ, ರುದ್ರರಿಗೆ ಲಕ್ಷ್ಮೀದೇವಿಯ ಸಕಾಶದಿಂದ, ಸೃಷ್ಟಿಯೂ, ಸಂಹಾರವೂ ಇವೆರಡೂ ಹೇಳಲ್ಪಟ್ಟಿವೆ.

ಭಾ॥ (a) ಅಸ್ಯ ದೇವಸ್ಯ ಮೀಢುಷೋ ವಯಾ ವಿಷ್ಣೋರೇಷಸ್ಯ ಪ್ರಭೃಥೇ ಹವಿರ್ಭಿಃ । ವಿದೇಹಿ ರುದ್ರೋ ರುದ್ರಿಯಂ ಮಹಿತ್ವಂ ಯಾಸಿಷ್ಟಂ ವರ್ತಿರಶ್ವಿನಾವಿರಾವದಿತ್ಯಾದಿನಾ ವಿಷ್ಣೋಃ ಪ್ರಸಾದಾದೇವ ಶಿವಾದೀನಾಂ ಪದ

ಪ್ರಾಪ್ತಿಕಥನಾಚ್ಚ ॥ (b) ತಮೇತಾಃ ಸಪ್ತಾಕ್ಷಿತಯ ಉಪತಿಷ್ಠಂತೇ ತದ್ಯಾ ಇಮಾ ಅಕ್ಷನ್ಲೋಹಿನ್ಯೋ ರಾಜಯಸ್ತಾಭಿರೇನಂ ರುದ್ರೋಽನ್ವಾಯತ್ತ ಇತ್ಯಾದಿನಾ ಶಿವಾದಿಸರ್ವದೇವೋಪಾಸ್ಯಸ್ಯ ವಾಯೋರಯಂ ವಾವ ಶಿಶುರ್ಯೋಽಯಂ ಮಧ್ಯಮಃ ಪ್ರಾಣ ಇತಿ ಮಧ್ಯಮಶಬ್ದೋಕ್ತಸ್ಯ ಪ್ರಾಣಃ ಸ್ಥೂಣೇತಿ ಪ್ರಾಣಶಬ್ದೋದಿತೋ ನಾರಾಯಣ ಆಶ್ರಯ ಉಕ್ತಃ । (c) ತಸ್ಮಾತ್ಸರ್ವೋತ್ತಮೋ ಭಗವಾನ್ನಾರಾಯಣಃ ಪ್ರಾಣಶಬ್ದೋದಿತ ಆದಿತ್ಯಮಂಡಲಸ್ಥಸ್ತಪತಿ ॥ ಇತ್ಯಾದಿ ಸಿದ್ಧಂ ॥

ಅ ॥ (a) ಮೀಢುಷಃ=ಭಕ್ತರಿಗೆ ಅಭೀಷ್ಟವನ್ನು ಪ್ರಾಪಿಸಿಕೊಡುವ ಅಥವಾ ಸಮರ್ಥನಾದ, ಏಷಸ್ಯ =ಚೆನ್ನಾಗಿ ಇಚ್ಛಾರೂಪನಾದ ಅಂದರೆ ಸತ್ಯಕಾಮನಾದ, ದೇವಸ್ಯ=ಕ್ರೀಡಾದಿ ಗುಣವಿಶಿಷ್ಟನಾದ, ಅಸ್ಯ ವಿಷ್ಣೋಃ=ಈ ವಿಷ್ಣುವಿಗೆ, ಹವಿರ್ಭಿಃ=ಹವಿಸ್ಸುಗಳಿಂದ, ಪ್ರಭೃಥೇ=ಪೂಜೆಯು ಮಾಡಲ್ಪಡೋಣ, ವಯಾಃ=ಅಹಂಕಾರಾಭಿಮಾನಿಯಾಗಿ ಬಂಧಕನಾದ, ರುದ್ರಃ=ರುದ್ರನು, ರುದ್ರಿಯಂ=ರುದ್ರಸಂಬಂಧಿಕವಾದ, ಮಹಿತ್ವಂ=ಮಹಿಮೆಯನ್ನು ಅಥವಾ ರುದ್ರಪದವಿಯನ್ನು, ವಿದೇಹಿ=ಹೊಂದಿದನಷ್ಟೇ. ಅಶ್ವಿನಾ=ಅಶ್ವಿನಿದೇವತೆಗಳಿರಾ (ನೀವೂ ಕೂಡ) ಇರಾವತ್=ಅನ್ನವುಳ್ಳ, ವರ್ತಿಃ=ಇರುವಿಕೆಯನ್ನು ಅಂದರೆ ಸಮುಸ್ತಭೋಗವತ್ತಾದ ಪದವಿಯನ್ನು, ಯಾಸಿಷ್ಟಂ=ಹೊಂದಿರುವಿರಷ್ಟೇ. ಇತ್ಯಾದಿ ವಾಕ್ಯದಿಂದ ಶ್ರೀಹರಿಯ ಅನುಗ್ರಹದಿಂದಲೇ ರುದ್ರಾದಿಗಳಿಗೆ ಪದಪ್ರಾಪ್ತಿಯನ್ನು ಹೇಳಿರುವುದರಿಂದಲೂ, (b) ತಂ=ಆ ಗೋವತ್ಸರೂಪನಾದ ವಾಯುವನ್ನು, ಏತಾಃ=ಮೇಲೆ ಹೇಳುವ, ಅಕ್ಷಿತಯಃ=ಕ್ಷೀಣವಾಗದೆ ಇರುವ ಜ್ಞಾನಮನಸ್ಸುಗಳುಳ್ಳ ಸದಾಶಿವನೇ ಮೊದಲಾದ (೭) ದೇವತೆಗಳು, ಉಪತಿಷ್ಠಂತೇ=ಧ್ಯಾನಿಸುತ್ತಾರೆ. ಅಕ್ಷನ್=ನಯನದಲ್ಲಿ, (ತದ್ಯಾಃ)=ಪ್ರಸಿದ್ಧಗಳಾದ ಯಾವ, ಲೋಹಿನ್ಯಃ=ಕೆಂಪಾದ, ಇಮಾಃ=ತೋರುವ, ರಾಜಯಃ=ರೇಖೆಗಳೋ, ತಾಭಿಃ=ಅವುಗಳಿಂದ, (ಅವುಗಳಲ್ಲಿದ್ದವನಾಗಿ) ರುದ್ರಃ=ಶಿವನು, ಅನ್ವಾಯತ್ತೇ=ಧ್ಯಾನಿಸುತ್ತಾನೆ. ಎಂದಿವೇ ಮೊದಲಾದ ವಾಕ್ಯದಿಂದ ರುದ್ರನೇ ಮೊದಲಾದ ಎಲ್ಲಾ ದೇವತೆಗಳಿಂದ ಉಪಾಸ್ಯನೂ, 'ಯಾವ ಈ ಮಧ್ಯಮಪ್ರಾಣನೋ ಈತನು ಮಗುವೇ ಸರಿ.' ಎಂದು 'ಮಧ್ಯಮಪ್ರಾಣ' ಎಂಬೀ ಶಬ್ದದಿಂದ ಹೇಳಲ್ಪಟ್ಟವನೂ ಆದ ಮುಖ್ಯಪ್ರಾಣನಿಗೆ, ಪ್ರಾಣಃ=ಸರ್ವಚೇಷ್ಟಕನಾದ ಶ್ರೀಹರಿಯು, ಸ್ಥೂಣಾ=ಆಶ್ರಯನು ಎಂದು ಪ್ರಾಣಶಬ್ದದಿಂದ ಹೇಳಲ್ಪಟ್ಟ ನಾರಾಯಣನು ಆಶ್ರಯನಾಗಿ ಹೇಳಲ್ಪಟ್ಟಿದ್ದಾನೆ. ॥ (c) ಆದುದರಿಂದ "ಸರ್ವೋತ್ತಮನೂ ಪೂಜ್ಯನೂ ಆದ ನಾರಾಯಣನು ಪ್ರಾಣಶಬ್ದದಿಂದ ಹೇಳಲ್ಪಟ್ಟವನಾಗಿ ಸೂರ್ಯಮಂಡಲದಲ್ಲಿದ್ದವನಾಗಿ ಸುಡುತ್ತಾನೆ". ಎಂದಿವೇ ಮೊದಲಾದುದು ಸಿದ್ಧವಾಯಿತು.

ತಾ ॥ ಪೂರ್ವದಲ್ಲಿ ಹೇಳಿದ ಪ್ರಮಾಣಸಮುದಾಯದಿಂದ "ಏಕೋ ನಾರಾಯಣಃ" ಇತ್ಯಾದಿಯಿಂದ ಸರ್ವೋತ್ತಮನೂ, ಸಮುದ್ರಾಂತಸ್ಥತ್ವಾದಿ ಲಿಂಗದಿಂದಲೂ "ಧ್ಯೇಯಃ ಸದಾ" ಎಂಬೀ ಸ್ಮೃತಿಯಿಂದಲೂ ಪೂಜ್ಯನಾದ ನಾರಾಯಣನೂ, "ಪ್ರಾಣಃ ಸ್ಥೂಣಾ" ಎಂಬೀ ಪ್ರಯೋಗದಿಂದ ಪ್ರಾಣಶಬ್ದದಿಂದ ಹೇಳಲ್ಪಟ್ಟವನೂ, 'ಯ ಏಷ ಆದಿತ್ಯೇ' ಇತ್ಯಾದಿಯಿಂದ ಆದಿತ್ಯಮಂಡಲಸ್ಥನೂ 'ಯೇನಾದಿತ್ಯಸ್ತಪತಿ' 'ತಾಪನೀ ಪಾಚಿಕಾ ಚೈವ' ಇತ್ಯಾದಿಯಿಂದ ತಾಪನ ಪಾಚನಾದಿಗಳನ್ನು ಮಾಡುವವನೂ ಇವೇ ಮೊದಲಾದ ಪ್ರಮೇಯವು ಸಿದ್ಧವಾಯಿತು. ಶಿವಾದಿಗಳು ಆದಿತ್ಯನಲ್ಲಿರುವವರಲ್ಲ. ವಿಷ್ಣುವೇ ಸರಿ ಎಂಬೀ ಪ್ರಮೆಯವೂ ಕೂಡ ಸಿದ್ಧವಾಯಿತು.

ಭಾ॥ (a) ಕ್ಷಿತಿಪಾ ಮನುಷ್ಯಗಂಧರ್ವಾ ದೇವಾಶ್ಚ ಪಿತರಶ್ಚಿರಾಃ । ಆಜಾನಜಾಃ ಕರ್ಮದೇವಾಸ್ತಾತ್ತ್ವಿಕಾ ದಕ್ಷ ಏವ ಚ ॥ ಶಕ್ರಶ್ಶೇಷೋಮಾ ಚ ರುದ್ರಶ್ಚ ಭಾರತೀ ವಾಯುರೇವ ಚ । ಮುಕ್ತಾ ಉಕ್ತಾಃ ಶತಗುಣಾ ಬಲಜ್ಞಾನಸು ಖಾದಿಭಿಃ ॥ ವಿಷ್ಣುಭಕ್ತ್ಯಾದಿಭಿಶ್ಚೈವ ಗುಣೈಃ ಸರ್ವೈಃ ಕ್ರಮಾಧಿಕಾಃ । (b) ತಸ್ಮಾದ್ರಮಾ ತತೋ ವಿಷ್ಣುರನಂತಗುಣತೋಽಧಿಕಃ ॥ ನಿತ್ಯ ಮುಕ್ತಃ ಸ್ವತಂತ್ರಶ್ಚ ನ ಚಾನ್ಯಸ್ತಾದೃಶಃ ಕ್ವಚಿತ್ । ಕುತ ಏವಾಧಿ ಕೋಽನ್ಯಃ ಸ್ಯಾದ್ಬ್ರಹ್ಮಮುಕ್ತಾ ಅಪಿ ತದ್ವಶಾಃ ॥ ರಮಾಽಪಿ ತದ್ವಶಾ ನಿತ್ಯಂ ಸ ನಾನ್ಯಸ್ಯ ವಶೇ ಪ್ರಭುಃ । (c) ನ ಭೇದಃ ಶೇಷಶಿವಯೋಃ ಸುಪರ್ಣಃ ಶೇಷಸಮ್ಮಿತಃ ॥ ಕಾಮಃ ಶಕ್ರಸಮೋ ನಿತ್ಯಂ ಪ್ರತಿಬಿಂಬಾಶ್ಚ ತೇ ಕ್ರಮಾತ್ । ಇತಿ ಚ ಮಹಾಸಂಹಿತಾಯಾಂ ॥ (d) ಸ ಪುರುಷೇಷು ಶತಂ ವರ್ಷಾಂಗತ ಇತಿ ಶತರ್ಚಿನಾಮಾ । ಬಹುರೂಪತ್ವಾದ್ಬಹುವಚನಂ ॥ ಏತಮೇವ ತಥಾ ಸಂತಂ ಮುಖ್ಯತ ಆಚಕ್ಷತೇ ಋಷಿಂಸ್ತೂಪಚಾರತಃ । ಆತ್ಮನ ಉದರೇ ಧೃತವಾನ್ಮಧ್ಯೇ ಸ್ಥಿತ್ವಾ ಧೃತವಾಂಶ್ಚ ॥ (e) ಪ್ರಾಣಸ್ಥಃ ಪ್ರಾಣನಾಮಾಸಾವಪಾನೇಽಪಾನನಾಮಕಃ । ನೇತೃತ್ವಾಚ್ಚಾಪನೇತೃತ್ವಾ ದ್ಭಗವಾನ್ಪುರುಷೋತ್ತಮಃ ॥ ಇತಿ ಚ । ವಾಮೋ ಭದ್ರಃ ॥ ಖಂಡ ॥ ೧ ॥

ಅ ॥ (a) ರಾಜರೂ ಮನುಷ್ಯಗಂಧರ್ವರೂ (ದೇವಗಂಧರ್ವದ್ವಾರಾ ದೇವದೂತರು) ದೇವಗಂಧರ್ವರೂ ಸಾಕ್ಷಾದ್ದೇವದೂತರೂ ಚಿರಲೋಕವುಳ್ಳ ಪಿತೃದೇವತೆಗಳೂ ಆಜಾನಜರೂ ಅಂದರೆ ದೇವತೆಗಳ ಕುಲದಲ್ಲಿ ಹುಟ್ಟಿದವರು, ನಾಮವಿಶೇಷದಿಂದ ಪ್ರಸಿದ್ಧರಾಗದೆ ಇದ್ದವರೂ ಕರ್ಮದೇವತೆಗಳೂ ಅಂದರೆ ಕರ್ಮದಿಂದ ದೇವತ್ವವನ್ನು ಹೊಂದಿದ ಬಲಿಚಕ್ರವರ್ತಿಯೇ ಮೊದಲಾದವರು. ತತ್ವಾಭಿಮಾನಿಗಳಾದ ಅಗ್ನ್ಯಾದಿಗಳೂ ದಕ್ಷಪ್ರಜಾಪತಿಯೂ ಇಂದ್ರನೂ ಪಾರ್ವತಿಯೂ ರುದ್ರನೂ ಭಾರತೀದೇವಿಯೂ ವಾಯುದೇವರೂ ಕೂಡ ಬಲಜ್ಞಾನ ಸುಖವೇ ಮೊದಲಾದುವುಗಳು. ವಿಷ್ಣುಭಕ್ತಿಯೇ ಮೊದಲಾದ ವೈರಾಗ್ಯ ಶಮದಮಾದಿಗಳೂ ಈ ಪ್ರಕಾರವಾಗಿ ಸಾಧ್ಯಸಾಧನಭೂತಗಳಾದ ಎಲ್ಲಾ ಗುಣಗಳಿಂದಲೂ ಮುಕ್ತಿಯಲ್ಲಿ ನೂರು ಪಾಲು ಹೆಚ್ಚೆಚ್ಚು ಗುಣಗಳುಳ್ಳವರಾಗಿ ಕ್ರಮದಿಂದ ಅಧಿಕರಾಗಿ ಹೇಳಲ್ಪಟ್ಟದ್ದಾರೆ. ॥ (b) ಆ ಮುಖ್ಯಪ್ರಾಣದೇವರಿಂದ ಲಕ್ಷ್ಮೀದೇವಿಯು, ಕೋಟಿಗುಣಗಳಿಂದ ಅಧಿಕಳಾಗಿರುತ್ತಾಳೆ. ಅಂತಹ ಲಕ್ಷ್ಮೀದೇವಿಯಿಂದ ಶ್ರೀಪರಮಾತ್ಮನು ಅನಂತಾನಂತಗುಣಗಳಿಂದ ಅಧಿಕನೂ ನಿತ್ಯ ಮುಕ್ತನೂ ಸ್ವತಂತ್ರನೂ ಆಗಿರುತ್ತಾನೆ. ಅವನಿಂದ ಇತರನು, ಅವನಿಗೆ ಸಮಾನನಾದವನು ಯಾವ ಪ್ರದೇಶದಲ್ಲಿಯೂ ಇಲ್ಲವೇ ಇಲ್ಲ. ಮತ್ತೊಬ್ಬನು ಆತನಿಂದ ಅಧಿಕನು (ಉತ್ತಮನು) ಇಲ್ಲವೆಂದು ಏನು ಹೇಳತಕ್ಕದ್ದು ಇದೆ. ಏಕೆಂದರೆ ಮುಕ್ತರಾದ ಬ್ರಹ್ಮಾದಿಗಳೂ ಅವನ ಅಧೀನರೇ ಆಗಿರುತ್ತಾರೆ. ಲಕ್ಷ್ಮೀದೇವಿಯೂ ಕೂಡ ನಿರಂತರದಲ್ಲಿಯೂ ಹರಿಯ ಅಧೀನಳೇ. ಸರ್ವಸಮರ್ಥನಾದ ಶ್ರೀಹರಿಯು ಮತ್ತೊಬ್ಬನ ಅಧೀನದಲ್ಲಿ ಇಲ್ಲವೇ ಇಲ್ಲವಷ್ಟೇ. ॥ (c) ಶೇಷರುದ್ರರಿಗೆ (ಪದೈಕ್ಯವಿರುವುದರಿಂದ) ವಿಶೇಷವು ಇಲ್ಲ. ಗರುಡನು ಶೇಷನಿಗೆ ಸಮಾನನು. 'ಪ್ರಾಯ ಇಂದ್ರವತ್ಕಾಮ'ಎಂಬ ವಚನಾನುಸಾರವಾಗಿ ಮನ್ಮಥನು ಪ್ರಾಯಶಃ ಇಂದ್ರನಿಗೆ ಸಮಾನಿಕನು. ಪೂರ್ವೋಕ್ತರಾದವರು ಕ್ರಮವಾಗಿ ನಿರಂತರದಲ್ಲಿಯೂ ಪ್ರತಿಬಿಂಬ ಭೂತರಾಗಿರುತ್ತಾರೆ. ಎಂದು ಮಹಾಸಂಹಿತೆಯಲ್ಲಿ (ಹೇಳಲ್ಪಟ್ಟಿದೆ). ॥ (d) ಆ ಹರಿಯು ಪುರುಷರಲ್ಲಿ

(೧೦೦) ವರ್ಷಪರ್ಯಂತ ಇರುತ್ತಿದ್ದನು, ಕಾರಣ ಶತರ್ಚಿನಾಮಕನು ಅನಂತಾನಂತ ರೂಪ ಗಳಿರುವುದರಿಂದ ಬಹುವಚನವೂ ಸಂಗತವಾಗುತ್ತದೆ. ಈ ಹರಿಯನ್ನೇ ಮುಖ್ಯವಾಗಿ (ಸ್ವಾತಂತ್ರ್ಯಮೊದಲಾದ ಗುಣಗಳುಳ್ಳವನನ್ನಾಗಿ) ಹೇಳುತ್ತಾರೆ. ಋಷಿಗಳನ್ನಾದರೂ ಅಮುಖ್ಯವಾಗಿ ಹೇಳುತ್ತಾರೆ. "ಸ ಇದಂ ಸರ್ವಂ ಮಧ್ಯತೋ ದಧೇ" ಅಂದರೆ ತನ್ನ ಹೊಟ್ಟೆಯಲ್ಲಿ ಧರಿಸಿದನು. ಮತ್ತು ಮಧ್ಯದಲ್ಲಿದ್ದು ಧರಿಸಿದನು. ॥ (e) ಪೂಜ್ಯನಾದ, ಸರ್ವೋತ್ತಮನಾದ ಶ್ರೀ ಹರಿಯು ಸರ್ವಜಗತ್ತನ್ನು ಒಯ್ಯುವುದರಿಂದ ಪ್ರಾಣನಾಮಕನೂ ಪ್ರಾಣನಲ್ಲಿರತಕ್ಕವನೂ, ಕೆಳಗೆ ಒಯ್ಯುವುದರಿಂದ ಅಪಾನನಾಮಕನಾಗಿ ಅಪಾನನಲ್ಲಿರತಕ್ಕವನೂ ಆಗಿರುತ್ತಾನೆ. ಎಂದು ಉಕ್ತವಾಗಿಯದೆ. ("ವಾಮಂ ಸೌಂದರ್ಯಂ ಭಾಮಂ ತೇಜಃ" ಎಂದು ಬೇರೆಕಡೆಗಳಲ್ಲಿ ಹೇಳಿರುವುದರಿಂದ) "ವಾಮ" ಅಂದರೆ ಸುಂದರನು. ॥ ಖಂಡ ॥ ೧ ॥

ಮಂ ॥ ಏಷ ಉ ಏವ ಬಿಭ್ರದ್ವಾಜಃ ಪ್ರಜಾ ವೈ ವಾಜಸ್ತಾ ಏಷ ಬಿಭರ್ತಿ ಯದ್ಬಿಭರ್ತಿ ತಸ್ಮಾದ್ಭರದ್ವಾಜಸ್ತಸ್ಮಾದ್ಭರದ್ವಾಜ ಇತ್ಯಾಚಕ್ಷತ ಏತಮೇವ ಸಂತಂ ತಂ ದೇವಾ ಅಬ್ರುವನ್ನಯಂ ವೈ ನಃ ಸರ್ವೇಷಾಂ ವಸಿಷ್ಠ ಇತಿ ತಂ ಯದ್ದೇವಾ ಅಬ್ರುವನ್ನಯಂ ವೈ ನಃ ಸರ್ವೇಷಾಂ ವಸಿಷ್ಠ ಇತಿ ತಸ್ಮಾದ್ವಸಿಷ್ಠಸ್ತಸ್ಮಾದ್ವಸಿಷ್ಠ ಇತ್ಯಾಚಕ್ಷತ ಏತಮೇವ ಸಂತಂ ಸ ಇದಂ ಸರ್ವಮಭಿಪ್ರಾಗಾದ್ಯದಿದಂ ಕಿಂ ಚ ಸ ಯದಿದಂ ಸರ್ವಮಭಿಪ್ರಾಗಾದ್ಯದಿದಂ ಕಿಂ ಚ ತಸ್ಮಾತ್ಪ್ರಗಾಥಾಸ್ತಸ್ಮಾತ್ಪ್ರಗಾಥಾ ಇತ್ಯಾಚಕ್ಷತ ಏತಮೇವ ಸಂತಂ ಸ ಇದಂ ಸರ್ವಮಭ್ಯಪವಯತ ಯದಿದಂ ಕಿಂ ಚ ಸ ಯದಿದಂ ಸರ್ವಮಭ್ಯಪವಯತ ಯದಿದಂ ಕಿಂ ಚ ತಸ್ಮಾತ್ಪಾವಮಾನ್ಯಸ್ತಸ್ಮಾತ್ಪಾವಮಾನ್ಯ ಇತ್ಯಾಚಕ್ಷತ ಏತಮೇವ ಸಂತಂ ಸೋಽಬ್ರವೀದಹಮಿದಂ ಸರ್ವಮಸಾನಿ ಯಚ್ಚ ಕ್ಷುದ್ರಂ ಯಚ್ಚ ಮಹದಿತಿ ತೇ ಕ್ಷುದ್ರಸೂಕ್ತಾಶ್ಚಾಭವನ್ಮಹಾಸೂಕ್ತಾಶ್ಚ ತಸ್ಮಾತ್ಕ್ಷುದ್ರಸೂಕ್ತಾಸ್ತಸ್ಮಾತ್ಕ್ಷುದ್ರಸೂಕ್ತಾ ಇತ್ಯಾಚಕ್ಷತ ಏತಮೇವ ಸಂತಂ ಸೂಕ್ತಂ ಬತಾವೋಚತೇತಿ ತತ್ಸೂಕ್ತಮಭವತ್ತಸ್ಮಾತ್ಸೂಕ್ತಂ ತಸ್ಮಾತ್ಸೂಕ್ತಮಿತ್ಯಾಚಕ್ಷತ ಏತಮೇವ ಸಂತಂ ಏಷ ವಾ ಋಗೇಷ ಹ್ಯೇಭ್ಯಃ ಸರ್ವೇಭ್ಯೋ ಭೂತೇಭ್ಯೋಽರ್ಚತ ಸ ಯದೇಭ್ಯಃ ಸರ್ವೇಭ್ಯೋ ಭೂತೇಭ್ಯೋಽರ್ಚತ ತಸ್ಮಾದೃಕ್ತಸ್ಮಾದೃಗಿತ್ಯಾಚಕ್ಷತ ಏತಮೇವ ಸಂತಂ ಏಷ ವಾ ಅರ್ಧರ್ಚ ಏಷ ಹ್ಯೇಭ್ಯಃ ಸರ್ವೇಭ್ಯೋಽರ್ಧೇಭ್ಯೋಽರ್ಚತ ಸ ಯದೇಭ್ಯಃ ಸರ್ವೇಭ್ಯೋಽರ್ಧೇಭ್ಯೋಽರ್ಚತ ತಸ್ಮಾದರ್ಧರ್ಚಸ್ತಸ್ಮಾದರ್ಧರ್ಚ ಇತ್ಯಾಚಕ್ಷತ ಏತಮೇವ ಸಂತಂ ಏಷ ವೈ ಪದಮೇಷ ಹೀಮಾನಿ ಸರ್ವಾಣಿ ಭೂತಾನಿ ಪಾದಿ ಸ ಯದಿಮಾನಿ ಸರ್ವಾಣಿ ಭೂತಾನಿ ಪಾದಿ ತಸ್ಮಾತ್ಪದಂ ತಸ್ಮಾತ್ಪದಮಿತ್ಯಾಚಕ್ಷತ ಏತಮೇವ ಸಂತಂ ಏಷ ವಾ ಅಕ್ಷರಮೇಷ ಹ್ಯೇಭ್ಯಃ ಸರ್ವೇಭ್ಯೋ ಭೂತೇಭ್ಯಃ ಕ್ಷರತಿ ನ ಚೈನಮತಿ

**ಕ್ಷರಂತಿ ಸ ಯದೇಭ್ಯಃ ಸರ್ವೇಭ್ಯೋ ಭೂತೇಭ್ಯಃ ಕ್ಷರತಿ ನ ಚೈನ ಮತಿಕ್ಷರಂತಿ ತಸ್ಮಾದಕ್ಷರಂ ತಸ್ಮಾದಕ್ಷರಮಿತ್ಯಾಚಕ್ಷತ ಏತಮೇವ ಸಂತಂ ತಾ ವಾ ಏತಾಃ ಸರ್ವಾ ಋಚಃ ಸರ್ವೇ ವೇದಾಃ ಸರ್ವೇ ಘೋಷಾ ಏಕೈವ ವ್ಯಾಹೃತಿಃ ಪ್ರಾಣ ಏವ ಪ್ರಾಣ ಋಚ ಇತ್ಯೇವ ವಿದ್ಯಾತ್ ॥ ೨ ॥**

ಅ ॥ ಉ=ಮತ್ತು, ಏಷ ಏವ=ಈ ಹರಿಯೇ, ಬಿಭ್ರದ್ವಾಜಃ=ಬಿಭ್ರದ್ವಾಜನೆಂದು ಹೇಳಲ್ಪಡುತ್ತಾನೆ. ಪ್ರಜಾ ವೈ=ಪ್ರಜರೇ, ವಾಜಃ=ವಾಜರೆಂದು ಹೇಳಲ್ಪಡುತ್ತಾರೆ. ತಾಃ=ಆ ಪ್ರಜೆಗಳನ್ನು, ಏಷಃ=ಈ ಹರಿಯು, ಬಿಭರ್ತಿ=ಧರಿಸುತ್ತಾನೆ. ಯತ್=ಯಾವಕಾರಣದಿಂದ, ಬಿಭರ್ತಿ=(ಪ್ರಜೆಗಳನ್ನು) ಧರಿಸುತ್ತಾನೋ, ತಸ್ಮಾತ್=ಅದರಿಂದ, ಭರದ್ವಾಜಃ=ಭರದ್ವಾಜ ನಾಮಕನು. ತಸ್ಮಾತ್=ಅದರಿಂದಲೇ, ಏತಮೇವ ಸಂತಂ=ಈ ಹರಿಯನ್ನೇ ಮುಖ್ಯಾರ್ಥವುಳ್ಳವನನ್ನಾಗಿ, ಭರದ್ವಾಜ ಇತಿ=ಭರದ್ವಾಜ ಇತಿ=ಭರದ್ವಾಜನೆಂದೇ, ಆಚಕ್ಷತೇ=(ವಿದ್ವಾಂಸರು) ಹೇಳುತ್ತಾರೆ. ಅಯಂ ವೈ=ಈ ಹರಿಯೇ, ಸರ್ವೇಷಾಂ=ಸಮಸ್ತರಾದ, ನಃ=ನಮಗೆ, ವಸಿಷ್ಠಃ=ವಾಸಮಾಡುವವರಲ್ಲಿ ಉತ್ತಮನು. (ಯಾವಾಗಲೂ ಸ್ವತಂತ್ರನಾಗಿ ಎಲ್ಲಾ ಕಡೆಯಲ್ಲಿಯೂ ವಾಸಮಾಡುವವನು). ಇತಿ=ಈ ಪ್ರಕಾರವಾಗಿ, ದೇವಾಃ=ದೇವತೆಗಳು, ತಂ=ಆ ಹರಿಯನ್ನು ಕುರಿತು, ಅಬ್ರುವನ್=ಹೇಳಿದರು. ಯತ್=ಯಾವ ಕಾರಣದಿಂದ, ಅಯಂ ವೈ ಸರ್ವೇಷಾಂ ನಃ ವಸಿಷ್ಠ ಇತಿ ದೇವಾಃ ತಂ .....ಅಬ್ರುವನ್=ಹೇಳಿದರೋ, ತಸ್ಮಾತ್, ವಸಿಷ್ಠಃ ತಸ್ಮಾತ್ ಏತಮೇವ ಸಂತಂ ವಸಿಷ್ಠ ಇತಿ ಆಚಕ್ಷತೇ .....ಸಃ=ಆ ಹರಿಯು, ಯದಿದಂ ಕಿಂ ಚ=ಯಾವುದು ಯಾವುದು ಇದೆಯೋ, ಇದಂ ಸರ್ವಂ=ಈ ಸಮಸ್ತ ವೇದಾದಿಗಳನ್ನು, ಅಭಿಪ್ರಾಗಾತ್=ಸುತ್ತಲೂ ಚೆನ್ನಾಗಿ ಗಾನಮಾಡಿದನು (ಉಪದೇಶಿಸಿದನು). ತಸ್ಮಾತ್=ಅದರಿಂದ, ಪ್ರಗಾಥಾಃ=ಪ್ರಗಾಥಾನಾಮಕನು, ಸಃ ಯತ್ ಯದಿದಂ ಕಿಂ ಚ ಇದಂ ಸರ್ವಂ ಅಭಿಪ್ರಾಗಾತ್ ತಸ್ಮಾತ್ ಏತಮೇವ ಸಂತಂ ಪ್ರಗಾಥಾಃ ತಸ್ಮಾತ್ ಪ್ರಗಾಥಾ ಇತಿ ಆಚಕ್ಷತೇ...... ಸಃ ಯದಿದಂ ಕಿಂ ಚ......ಇದಂ ಸರ್ವಂ=ಈ ಸಮಸ್ತವನ್ನು, ಅಭ್ಯಪವಯತ=ಸಂಸಾರದಿಂದ ಬಿಡಿಸಿದನೋ (ಪವಿತ್ರೀಕರಿಸಿದನೋ), ಸಃ ಯತ್ ಯದಿದಂ ಕಿಂ ಚ ಇದಂ ಸರ್ವಂ ಅಭ್ಯಪವಯತ ತಸ್ಮಾತ್ ಏತಮೇವ ಸಂತಂ ಪಾವಮಾನ್ಯಃ ತಸ್ಮಾತ್ಪಾವಮಾನ್ಯ ಇತ್ಯಾಚಕ್ಷತೇ... ಸಃ=ಶ್ರೀ ಪರಮಾತ್ಮನು, ಇದಂ ಸರ್ವಂ=ಈ ಸರ್ವವೇದ ಪ್ರಸಿದ್ಧವಾದ, ಯತ್=ಪರಿಪೂರ್ಣವಾದ ವಸ್ತುವೋ, (ತದ್ರೂಪನಾದ) ಅಹಂ=ನಾನು, ಯಚ್ಚ ಕ್ಷುದ್ರಂ=ಯಾವುದು ಅಲ್ಪವಾದುದೋ, ಯಚ್ಚ ಮಹತ್=ಯಾವುದು ಅತಿದೊಡ್ಡದಾದುದೋ, ತತ್=ಅದು, ಅಸಾನಿ=ಆಗಿರುತ್ತೇನೆ. (ಅಂತೂ ಸಕಲ ಅಲ್ಪಪ್ರಾಣಿ ಹಾಗೂ ಪದಾರ್ಥಗಳಲ್ಲಿ ಪ್ರವೇಶಿಸಿ ಸೂಕ್ಷ್ಮರೂಪವುಳ್ಳವನಾಗಿಯೂ ಸಕಲ ಮಹತ್ಪದಾರ್ಥಗಳಲ್ಲಿ ಪ್ರವೇಶಿಸಿ ಮಹದ್ರೂಪವುಳ್ಳವನಾಗಿಯೂ ಇರುತ್ತೇನೆ ಎಂದು ತಾತ್ಪರ್ಯ). ಇತಿ=ಈಪ್ರಕಾರವಾಗಿ, ಅಬ್ರವೀತ್=ಹೇಳಿದನು. ತಸ್ಮಾತ್=ಶ್ರೀಪರಮಾತ್ಮನು ಅತ್ಯಲ್ಪನೂ ಅತಿಮಹತ್ತೂ ಆಗಿರುತ್ತೇನೆಂದು ಹೇಳಿದ್ದರಿಂದ, ತೇ=ಅಲ್ಪಪ್ರಾಣಿಗಳಲ್ಲಿರತಕ್ಕ ಭಗವದ್ರೂಪಸಮುದಾಯಗಳು, ಕ್ಷುದ್ರಸೂಕ್ತಾಃ=ಕ್ಷುದ್ರಸೂಕ್ತನಾಮಕಗಳು, ಅಭವನ್=ಆದವು. ಮಹಾಸೂಕ್ತಾಶ್ಚ=ಮಹಾಸೂಕ್ತ ನಾಮಕಗಳೂ, ಅಭವನ್=ಆದವು. ತಸ್ಮಾತ್, ಕ್ಷುದ್ರಸೂಕ್ತಾಃ ತಸ್ಮಾತ್ ಏತಮೇವ ಸಂತಂ ಕ್ಷುದ್ರಸೂಕ್ತಾ ಇತ್ಯಾಚಕ್ಷತೇ......ತತ್=ವಿಷ್ಣ್ವಾಖ್ಯ ಬ್ರಹ್ಮನು, ಸೂಕ್ತಂ=ಸೂಕ್ತದಿಂದೊಡಗೂಡಿದ ನಿಖಿಲ ವೇದ ಸಮುದಾಯವನ್ನು, ಅವೋಚತ=(ಬ್ರಹ್ಮಾದಿಗಳಿಗೆ) ಉಪದೇಶಿಸಿದನು. ಇತಿ=ಈ

ಕಾರಣದಿಂದ, ತತ್=ಆ ಬ್ರಹ್ಮನು, ಸೂಕ್ತಂ=ಸೂಕ್ತನಾಮಕನು, ಅಭವತ್=ಆದನು. ತಸ್ಮಾತ್ ಸೂಕ್ತಂ ತಸ್ಮಾತ್ ಏತಮೇವ, ಸಂತಂ ಸೂಕ್ತಮಿತ್ಯಾಚಕ್ಷತೇ… …ಏಷ ವಾ=ಈ ಹರಿಯೇ, ಋಕ್=ಋಕ್‌ಶಬ್ದವಾಚ್ಯನು. ಏಷಃ=ಈ ಹರಿಯು, ಸರ್ವೇಭ್ಯಃ ಭೂತೇಭ್ಯಃ=ಸಮಸ್ತ ಪ್ರಾಣಿಗಳಿಂದ, ಅರ್ಚತ ಹಿ=ಹೋಗಿದ್ದಾನಷ್ಟೆ. (ಅಂದರೆ ಮರಣಕಾಲದಲ್ಲಿ ಸಾಯುವ ಪ್ರಾಣಿಗಳನ್ನು ಬಿಟ್ಟು ಒಂದು ಭಾಗದಿಂದ ಸ್ಥಳಾಂತರಕ್ಕೆ ಹೋದನು). ಸಃ=ಆ ಶ್ರೀಪರಮಾತ್ಮನು, ಯತ್=ಯಾವಕಾರಣದಿಂದ, ಏಭ್ಯಃ ಸರ್ವೇಭ್ಯಃ ಭೂತೇಭ್ಯಃ=ಈ ಸಮಸ್ತ ಪ್ರಾಣಿಗಳಿಂದ, ಅರ್ಚತ=ಹೋದನೋ, ತಸ್ಮಾತ್ ಋಕ್ ತಸ್ಮಾತ್ ಏತಮೇವ ಸಂತಂ, ಋಕ್ ಇತ್ಯಾಚಕ್ಷತೇ… …ಏಷ ವಾ=ಈ ಹರಿಯೇ, ಅರ್ಧರ್ಚಃ=ಅರ್ಧರ್ಚನಾಮಕನು. ಏಷಃ=ಈ ಹರಿಯು, ಏಭ್ಯಃ ಸರ್ವೇಭ್ಯಃ ಅರ್ಧೇಭ್ಯಃ=ಈ ಸಮಸ್ತಗಳಾದ ಪ್ರಾಣಿಶರೀರರೂಪಸ್ಥಾನಗಳಿಂದ, ಅರ್ಚತ=ಹೋದನೋ, ಸಃ ಯತ್ ಏಭ್ಯಃ ಸರ್ವೇಭ್ಯಃ ಅರ್ಧೇಭ್ಯಃ ಅರ್ಚತ=ಹೋದನೋ, ತಸ್ಮಾತ್ ಅರ್ಧರ್ಚಃ ತಸ್ಮಾತ್ ಏತಮೇವ ಸಂತಂ ಅರ್ಧರ್ಚ ಇತ್ಯಾಚಕ್ಷತೇ… … ಏಷ ವೈ=ಈ ಹರಿಯೇ, ಪದಂ=ಪದನಾಮಕನು. ಏಷ ಹಿ=ಈ ಹರಿಯಾದರೆ, ಇಮಾನಿ ಸರ್ವಾಣಿ ಭೂತಾನಿ=ಈ ಎಲ್ಲಾ ಪ್ರಾಣಿಗಳನ್ನು, ಅಪಾದಿ=ಹೊಂದಿದನು. ಸಃ ಯತ್ ಇಮಾನಿ ಸರ್ವಾಣಿ ಭೂತಾನಿ ಪಾದಿ=ಹೊಂದಿದನೋ ತಸ್ಮಾತ್ ಪದಂ ತಸ್ಮಾತ್ ಏತಮೇವ ಸಂತಂ ಪದಂ ಇತ್ಯಾಚಕ್ಷತೇ… … ಏಷ ವಾ=ಈ ಹರಿಯೇ, ಅಕ್ಷರಂ=ಅಕ್ಷರನಾಮಕನು. ಏಷ ಹಿ=ಇವನಾದರೆ, ಏಭ್ಯಃ ಸರ್ವೇಭ್ಯಃ ಭೂತೇಭ್ಯಃ=ಈಸಮಸ್ತ ಪ್ರಾಣಿಗಳಿಗೋಸ್ಕರ, ಕ್ಷರತಿ=ಸಮಸ್ತಾಭೀಷ್ಟವನ್ನೂ ಕೊಡುತ್ತಾನೆ. ಏನಂ=ಈ ಪರಮಾತ್ಮನನ್ನು, ಅತಿ=ಅತಿಕ್ರಮಿಸಿ (ಯಾರೊಬ್ಬನೂ) ನ ಚ ಕ್ಷರತಿ=ಅಭೀಷ್ಟವನ್ನು ಕೊಡಲಾರನು. ಅಂತೂ ಇವನೇ ಅಧಿಕವಾಗಿ ಅಬೀಷ್ಟವನ್ನು ಕೊಡತಕ್ಕವನು ಎಂದು ತಾತ್ಪರ್ಯ. ಸಃ ಯತ್ ಏಭ್ಯಃ ಸರ್ವೇಭ್ಯಃ ಭೂತೇಭ್ಯಃ ಕ್ಷರತಿ ಏನಂ ಅತಿ ನ ಚ ಕ್ಷರತಿ… … ತಸ್ಮಾತ್ ಅಕ್ಷರಂ='ಅಧಿಕಂ ಕ್ಷರತಿ' ಎಂಬೀ ವ್ಯುತ್ಪತ್ತಿಯಿಂದ ಅಕ್ಷರನಾಮಕನು. ತಸ್ಮಾತ್ ಏತಮೇವ ಸಂತಂ ಅಕ್ಷರಮಿತ್ಯಾಚಕ್ಷತೇ… …ತಾ ವಾ ಏತಾಃ=ಪ್ರಸಿದ್ಧಗಳಾದ ಈ, ಸರ್ವಾ ಋಚಃ=ಸಮಸ್ತ ಋಕ್ಕುಗಳು, ಸರ್ವೇ ವೇದಾಃ=ಸಮಸ್ತವೇದಗಳೂ. ಸರ್ವೇ ಘೋಷಾಃ=ಸಮಸ್ತ ಧ್ವನಿಗಳೂ, ಏಕೈವ ವ್ಯಾಹೃತಿಃ=ಏಕಪ್ರಕಾರವಾದದ್ದೇ ನಾಮಧೇಯವು, ಪ್ರಾಣ ಏವ=(ಇವೆಲ್ಲವೂ) ನಾರಾಯಣ ವಿಷಯಕವಾದದ್ದೇ. ಋಚಃ=ಋಕ್ಕುಗಳನ್ನು, ಪ್ರಾಣ ಇತ್ಯೇವ=ನಾರಾಯಣಪರಗಳನ್ನಾಗಿಯೇ, ವಿದ್ಯಾತ್=ತಿಳಿಯತಕ್ಕದ್ದು. ॥ ೨ ॥

ತಾ ॥ "ಪ್ರಗಾಥಾ" ಎಂಬುವುದು (೧) ಬೃಹತೀ (೨) ಸತೋಬೃಹತೀ ಎಂಬೀ ಋಗ್ವಿಶೇಷಗಳಿಗೆ ಸಂಜ್ಞೆಯು. ಮೂರನೇ ಪಾದದಲ್ಲಿ (೧೨) ಅಕ್ಷರಗಳೂ ಬೇರೆ ಮೂರು ಪಾದಗಳಲ್ಲಿ ಎಂಟೆಂಟು ಅಕ್ಷರಗಳಿದ್ದರೆ ಅಂತಹ ಋಕ್ಕು 'ಬೃಹತೀ' ಎಂದೆನಿಸಿಕೊಳ್ಳುತ್ತದೆ. (೨) ಒಂದನೇ ಮೂರನೇ ಪಾದಗಳಲ್ಲಿ(೧೨) ಅಕ್ಷರಗಳೂ, ಎರಡನೇ ನಾಲ್ಕನೇ ಪಾದಗಳಲ್ಲಿ ಎಂಟೆಂಟು ಅಕ್ಷರಗಳೂ ಇದ್ದರೆ ಆ ಋಕ್ಕು 'ಸತೋಬೃಹತೀ' ಎಂದೆನಿಸಿಕೊಳ್ಳುತ್ತದೆ. ಎಂದು ಅನುಕ್ರಮಣಿಕೆಯಲ್ಲಿ ವ್ಯಕ್ತವಾಗಿಯದೆ. ಅಂತಹ 'ಪ್ರಗಾಥಾ' ಎಂಬ ನಾಮುಸಮನ್ವಯವನ್ನು ತಿಳಿಯತಕ್ಕದು. "ಪಾವಮಾನ್ಯಃ" ಎಂಬುವುದು ಕೆಲವು ಋಕ್ಕುಗಳಿಗೆ ಹೆಸರು. ಸಂಸಾರದಿಂದ ಪವಿತ್ರೀ ಕರಿಸುವುದರಿಂದ ಶ್ರೀ ಹರಿಯ ರೂಪಗಳಿಗೆ 'ಪಾವಮಾನ್ಯಃ' ಎಂಬೀ ಹೆಸರು. ಸ್ತ್ರೀರೂಪಗಳಾದುದರಿಂದ ಸ್ತ್ರೀಲಿಂಗ ಪ್ರಯೋಗವು. ಬಹುರೂಪಿಯಾದುದರಿಂದ ಬಹು ವಚನವು. ಋಷ್ಯಾದಿಗಳ ನಾಮಧೇಯವು ಮಾತ್ರ ಶ್ರೀ ಹರಿಗೆ ಅಲ್ಲ. ಸಮಸ್ತ ಋಕ್ಕುಗಳೂ, ಅವನಿಗೇನೇ ಹೆಸರು. ಸರ್ವ ಋಕ್ಕುಗಳು ಮಾತ್ರ ಅವನ ಹೆಸರು ಅಲ್ಲ. ಸಮಸ್ತ ವೇದ

ಗಳೂ ಶ್ರೀ ಹರಿಯ ನಾಮವೇ ಸರಿ. ಮತ್ತು ಸಮುದ್ರ, ಮೇಘಗಳ ಧ್ವನಿಯು ವೃಕ್ಷಪತನ ಭೇರೀ ತಾಡನ ಘಂಟಾನಾದ ಗರ್ಗರ ಗೋಧಾ ಪಿಂಗಾದಿಗಳ ಧ್ವನಿಗಳೂ ಕೂಡ ತನ್ಮೂಲಕ ವ್ಯಕ್ತವಾಗುವ ವರ್ಣದ್ವಾರಾ ಶ್ರೀಹರಿಗೇನೇ ನಾಮಗಳು. ಇವೆಲ್ಲವೂ ನಾರಾಯಣ ನೊಬ್ಬನನ್ನೇ ಹೇಳುತ್ತವೆ. ಅವುಗಳಲ್ಲಿಯೂ ಋಕ್ಕುಗಳು ವಿಶೇಷಾಕಾರವಾಗಿ ಶ್ರೀ ಹರಿಯ ಗುಣಗಳಿಗೆ ಪ್ರಕಾಶಕಗಳಾದುದರಿಂದ ನಾರಾಯಣ ವಿಷಯಕಗಳೇ ಸರಿ. ಎಂದು ತಿಳಿಯತಕ್ಕದ್ದು. ॥ ೨ ॥

ಭಾ॥ (a) ವಸಿಷ್ಠೋ ವಸತಾಮುತ್ತಮಃ । ಅಭ್ಯಪವಯತ ಪಾವಯಾಮಾಸ ಸಂಸಾರಾತ್ ॥ ತದ್ವಿಷ್ಣ್ವಾಖ್ಯಂ ಬ್ರಹ್ಮ ಸೂಕ್ತಾನ್ಯವೋಚತೇತಿ ಸೂಕ್ತ ನಾಮಕಮಭವತ್ । ಬತೇತ್ಯಾಸ್ವಾದನೇ ॥ ಸ್ವಾತ್ಮನ್ಯೇವ ಸ್ವಯಂ ಸುಷ್ಟೂಕ್ತಮಿತಿ ವಾ । (b) ಇದಂ ಸರ್ವಂ ಪರಿಪೂರ್ಣಂ ಸನ್ನಹಮಲ್ಪಪ್ರಾಣಿಷು ಪ್ರವಿಶ್ಯ ಸೂಕ್ಷ್ಮರೂಪೋ ಮಹಾಪ್ರಾಣಿಷು ಮಹಾರೂಪಶ್ಚ ಭವಾನೀತಿ ಸ ಭಗವಾನಬ್ರವೀತ್ ॥ ತಸ್ಮಾತ್ಕ್ಷುದ್ರೋಽಸಾನೀತ್ಯುಕ್ತತ್ವಾತ್ಕ್ಷುದ್ರಸೂಕ್ತಾಸ್ತೇ ಕ್ಷುದ್ರಪ್ರಾಣಿಷು ಸ್ಥಿತಾ ಭಗವದ್ರೂಪಸಂಘಾಃ । ಮಹಾನಸಾನೀತ್ಯುಕ್ತತ್ವಾನ್ಮಹಾಸೂಕ್ತಾ ಮಹಾಪ್ರಾಣಿಷು ಸ್ಥಿತಾಃ ॥ ಸೂಕ್ಷ್ಮರೂಪತ್ವಾದೇವ ಕ್ಷುದ್ರನಾಮ ಭಗವತಃ । ನ ತು ಸಾಮರ್ಥ್ಯಾಲ್ಪತ್ವಾತ್ ॥ ನ ಹಿ ಸಾಮರ್ಥ್ಯಾದಿಗುಣೇಷು ಕಶ್ಚಿದ್ವಿಶೇಷೋ ಭಗವದ್ರೂಪೇಷು । (c) ಏಭ್ಯಃ ಪ್ರಾಣಿಭ್ಯೋ ಗತವಾನಿತ್ಯೃಕ್ ॥ ಗಚ್ಛತಿ ಹಿ ಮರಣಕಾಲೇ । ಬ್ರಹ್ಮಣಾ ಸಂಪರಿತ್ಯಕ್ತೋ ಮೃತ ಇತ್ಯುಚ್ಯತೇ ಬುಧೈಃ ॥ ಇತಿ ಹಿ ಭಾರತೇ ॥ (d) ಮ್ರಿಯಮಾಣಮಿಮಂ ಜೀವಂ ವಾಸುದೇವಾದಿದೇವತಾಃ । ತ್ಯಕ್ತ್ವಾ ಭಾಗೇನ ಗಚ್ಛಂತಿ ಭಾಗತೋಽನುವ್ರಜಂತಿ ತಂ ॥ ಗತ್ವೈರ್ಭಾಗೈರಪಿ ಪುನರ್ವಿಶೇಯುರ್ಭೋಗಸಿದ್ಧಯೇ । ಭೋಗ್ಯಲೋಕಮನುಪ್ರಾಪ್ತಂ ತಸ್ಮಾತ್ಸ್ವಪ್ನವದಂತರಾ ॥ ಇತಿ ಚ ॥ ಅರ್ಚ ಗತಿಪೂಜನಯೋಃ ಋ ಗತೌ ಇತಿ ಧಾತೋಃ । (e) ಸರ್ವೇಭ್ಯೋಽರ್ಧೇಭ್ಯಃ ಸ್ಥಾನೇಭ್ಯಃ ಶರೀರೇಭ್ಯೋ ಗತವಾನಿತ್ಯರ್ಧರ್ಚಃ ॥ ಸರ್ವಾಣಿ ಭೂತಾನ್ಯಪಾದಿ । ಪದಗತೌ । ತಸ್ಮಾತ್ಪದಂ ನಾಮ । ಅಧಿಕಂ ಕ್ಷರತೀತ್ಯಕ್ಷರಂ । ಕ್ಷರಣಂ ನಾಮ ಸಂತತದಾನಂ । ಕ್ಷರವಿನಾಶಸಂತತದಾನಯೋಃ ॥ ಇತಿ ಧಾತೋಃ ॥

ಅ ॥ (a) ವಸಿಷ್ಠಃ ಅಂದರೆ ಆವಾಸಮಾಡುವವರಲ್ಲಿ ಉತ್ತಮನು. ॥ (ನಿವಾಸಾರ್ಥಕವಾದ 'ವಸ' ಧಾತುವಿಗೆ 'ಅತಿಶಯ' ವೆಂಬೀ ಅರ್ಥದಲ್ಲಿ ಇಷ್ಠನ್ ಪ್ರತ್ಯಯವು. ಅಂತೂ 'ದೇವಾನಾಂ ದೇವಃ' ದೇವತೆಗಳಿಗೆ ದೇವತ್ವವನ್ನು ಕೊಡುವವನು ಎಂಬಂತೆ ಆವಾಸಮಾಡುವವರಿಗೆ ಉತ್ತಮತ್ವವನ್ನು ಕೊಡುವವನು ಎಂದು ತಾತ್ಪರ್ಯವು.) 'ಅಭ್ಯಪವಯತ' ಅಂದರೆ 'ಪೂಞ್ ಪವನೇ' ಎಂಬೀ ಧಾತುವಿನಿಂದ ಸಂಸಾರದಿಂದ ಪವಿತ್ರೀಕರಿಸಿದನು. ॥ 'ಸೂಕ್ತಂ ಬತಾವೋಚತ' ಎಂಬುವಲ್ಲಿ ತತ್ ಅಂದರೆ ವಿಷ್ಣುವೆಂದು ಹೆಸರುಳ್ಳ ಬ್ರಹ್ಮನು ಸೂಕ್ತಗಳನ್ನು ಹೇಳಿದನು. ಆದುದರಿಂದ ಸೂಕ್ತನಾಮಕನು ಆದನು. 'ಬತ' ಎಂಬುವುದು ಆಸ್ವಾದನಾರ್ಥದಲ್ಲಿ ಅದೆ. ॥ (ಅಂದರೆ ಸೂಕ್ತಗಳೆಂದರೆ ಒಳ್ಳೇಮಾತುಗಳು; ಆದಿಭಾಗವತಾದಿಗಳು; ಅಥವಾ ಅಪೌರುಷೇಯಗಳಾದ ಸೂಕ್ತಗಳು. ಇದರಿಂದ 'ಸುಷ್ಠು ಉಕ್ತಾನಿ ವಚನಾನಿ ಯೇನ' ಎಂದು

ವ್ಯುತ್ಪತ್ತಿಯನ್ನು ತೋರಿಸಿದ ಹಾಗಾಯಿತು.) ಅನಂತಾನಂತ ವೇದಗಳೂ ಪೌರುಷೇಯಗಳೂ ಕೂಡ ಈ ಪರಿಯಿಂದ ಪ್ರತಿಕ್ಷಣದಲ್ಲಿಯೂ ಉಚ್ಚರಿಸಲ್ಪಡುತ್ತವೆ. ಕಾರಣ ಅತ್ಯಾಶ್ಚರ್ಯವು. ಇದರಿಂದ ಆಸ್ವಾದನವು ಸಿದ್ಧವಾಯಿತು. ("ವೈಕುಂಠಸ್ಯಾಖಿಲಾ ವೇದಾ ಉದ್ಗೀರ್ಯಂತೇಽನಿಶಂ ಯತಃ" ಎಂಬೀ ವಚನವೂ ಅದೆ.) ರೀತ್ಯಂತರದಿಂದಲೂ 'ಸೂಕ್ತಂ ಬತಾವೋಚತ' ಎಂಬುವುದಕ್ಕೆ ಅರ್ಥವನ್ನು ಹೇಳುತ್ತಾರೆ. ತನ್ನಿಂದಲೇ ತಾನು ಚೆನ್ನಾಗಿ ಹೇಳಲ್ಪಟ್ಟದ್ದಾನೆ. ಎಂದು ಸಂಗತವಾಗುತ್ತದೆ. ॥ (b) "ಯಾವುದು ಅಲ್ಪವಾದುದೋ, ಯಾವುದು ಮಹತ್ತು ಆದದೋ, ಆ ಈ ಜಗತ್ತು, ನಾನು, ಆದೆನು" ಎಂದು ಅನ್ಯಥಾ ಪ್ರತೀತವಾದುದರಿಂದ ಚೆನ್ನಾಗಿ ವ್ಯಾಖ್ಯಾನ ಮಾಡುತ್ತಾರೆ. "ಸರ್ವ ಸನ್ನಿಹಿತನಾದ ಅಥವಾ ಪ್ರಮಾಣ ಪ್ರಮಿತನಾದ ಪರಿಪೂರ್ಣವಸ್ತುರೂಪಿಯಾದ ನಾನು ಅಲ್ಪ ಪ್ರಾಣಿಗಳಲ್ಲಿ ಪ್ರವೇಶಿಸಿ ಸೂಕ್ಷ್ಮರೂಪಿಯಾಗಿಯೂ ಮಹತ್ತಾದ ಪ್ರಾಣಿಗಳಲ್ಲಿ ಪವೇಶಿಸಿ ಅತಿ ದೊಡ್ಡದಾದ ರೂಪವುಳ್ಳವನೂ ಆಗುವೆನು" ಎಂದು ಶ್ರೀ ಹರಿಯು ಹೇಳಿದನು. ॥ 'ತಸ್ಮಾತ್' ಅಂದರೆ ಅಲ್ಪನು ಆಗಿದ್ದೇನೆ ಎಂದು ಶ್ರೀ ಹರಿಯಿಂದ ಹೇಳಲ್ಪಟ್ಟ ಪ್ರಯುಕ್ತ, 'ತೇ' ಅಂದರೆ ಅಲ್ಪಪ್ರಾಣಿಗಳಲ್ಲಿರುವ ಭಗವದ್ರೂಪ ಸಮುದಾಯಗಳು, 'ಕ್ಷುದ್ರಸೂಕ್ತ' ನಾಮಕಗಳು. "ಅತಿದೊಡ್ಡವನು ಆಗಿದ್ದೇನೆ" ಎಂದು ಹೇಳಿರುವುದರಿಂದ ದೊಡ್ಡ ಪ್ರಾಣಿಗಳಲ್ಲಿರುವ ಭಗವದ್ರೂಪ ಸಮೂಹಗಳು ಮಹಾಸೂಕ್ತನಾಮಕಗಳು. ಸೂಕ್ಷ್ಮರೂಪಿಯಾದುದರಿಂದಲೇ ಶ್ರೀ ಹರಿಗೆ 'ಕ್ಷುದ್ರ' ನೆಂಬೀ ನಾಮಧೇಯವು. ಸಾಮರ್ಥ್ಯದ ಅಲ್ಪತ್ವ ಅಂದರೆ ಕಮ್ಮಿಯಾದ ಸಾಮರ್ಥ್ಯದಿಂದ ಅಲ್ಲ. ಶ್ರೀ ಪರಮಾತ್ಮನ ರೂಪಗಳಲ್ಲಿ ಸಾಮರ್ಥ್ಯ ಮೊದಲಾದ ಗುಣಗಳಲ್ಲಿ ಯಾವುದೊಂದು ವಿಶೇಷವು ಇರುವುದಿಲ್ಲವಷ್ಟೇ ॥ (c) ಈ ಪ್ರಾಣಿಗಳಿಂದ ಹೋದನು ಆದುದರಿಂದ 'ಋಕ್' ಎಂದು ಹೇಳ್ಪಡುತ್ತಾನೆ. ಮರಣಕಾಲದಲ್ಲಿ (ಭಾಗದಿಂದ ಬಿಟ್ಟು) ಹೋಗುತ್ತಾನಷ್ಟೇ. ॥ ಪರಬ್ರಹ್ಮನಿಂದ ಬಿಡಲ್ಪಟ್ಟ ಜೀವನು 'ಮೃತನು' ಸತ್ತವನು ಎಂದು ಪಂಡಿತರಿಂದ ಹೇಳಲ್ಪಡುತ್ತಾನೆ. ಎಂದು ಭಾರತದಲ್ಲಿ ಇದೆ. ಪ್ರಸಿದ್ಧವು ॥ (d) ವಾಸುದೇವನೇ ಮೊದಲಾದ ದೇವತೆಗಳು ಒಂದಂಶದಿಂದ ಮರಣವನ್ನು ಹೊಂದುವ ಈ ಜೀವನನ್ನು ಬಿಟ್ಟುಹೋಗುತ್ತಾರೆ. ಒಂದಂಶದಿಂದ ಆತನನ್ನೇ ಅನುಸರಿಸುತ್ತಾರೆ ॥ ಹೋದ ಅಂಶಗಳಿಂದಲೂ ಕೂಡ ಪುನಃ (ಆ ದೇವತೆಗಳು) ಜೀವರಿಗೆ ಭೋಗವು ಸಿದ್ಧಿಯಾಗುವುದಕ್ಕೋಸ್ಕರ ಅವರವರ ಯೋಗ್ಯತೆಯನ್ನನುಸರಿಸಿ ಬಂದ, ಮನುಷ್ಯಲೋಕವನ್ನು ಸ್ವರ್ಗಲೋಕವನ್ನೂ ಕೂಡ ಪ್ರವೇಶಿಸುತ್ತಾರೆ. ವಾಸುದೇವಾದಿಗಳು ಒಂದಶದಿಂದ ಹೋದಪ್ರಯುಕ್ತವೇ ಮಧ್ಯದಲ್ಲಿ ಅಂದರೆ ಮರಣವಾದ ಬಳಿಕ ಭೋಗ್ಯ ಲೋಕಪರ್ಯಂತವಾಗಿ ಸ್ವಪ್ನದಂತೆ (ಸ್ವಪ್ನಾವಸ್ಥೆಯಲ್ಲಿ ಎಂಬಂತೆ ಭೋಗವು) ಎಂದೂ ಉಕ್ತವಾಗಿಯದೆ. ॥ 'ಅರ್ಚ' ಧಾತುವು 'ಗತಿಪೂಜಾ' ಎಂಬ ಅರ್ಥಗಳಲ್ಲಿದೆ. 'ಋ' ಧಾತುವು ಗತಿಯೆಂದು ಅರ್ಥದಲ್ಲಿದೆ. ಎಂದು ಧಾತುವ್ಯಾಖ್ಯಾನದಿಂದ (ಋಕ್ ಶಬ್ದಪ್ರಕೃತಿಯಾದ 'ಋ' ಧಾತುವಿಗೂ ತದ್ವ್ಯಾಖ್ಯಾನಭೂತವಾದ 'ಅರ್ಚ' ಧಾತುವಿಗೂ ಒಂದೇ ವಿಧವಾದ ಅರ್ಥವು ಸಿದ್ಧವಾಯಿತು.) ॥ (e) ಸಮಸ್ತಗಳಾದ ಅರ್ಥಗಳು ಅಂದರೆ ಪ್ರಾಣಿಗಳಿಗೆ ಸ್ಥಾನಭೂತಗಳಾದ ಶರೀರಗಳಿಂದ ಹೋದನು. ಆದುದರಿಂದ ಅರ್ಥರ್ಚನಾಮಕನು. । ಸರ್ವಪ್ರಾಣಿಗಳನ್ನು ಹೊಂದಿದನು. ॥ 'ಪದ' ಧಾತುವು ಗತಿಯೆಂದು ಅರ್ಥದಲ್ಲಿದೆ. ಆದುದರಿಂದ 'ಪದ'ವೆಂಬೀ ಹೆಸರು. (ಸರ್ವಪ್ರಾಣಿಗಳಿಗೆ) ಹೆಚ್ಚು ಅಭೀಷ್ಟವನ್ನು ಕೊಡುತ್ತಾನೆ. ಆದುದರಿಂದ 'ಅಕ್ಷರ' ನಾಮಕನು. 'ಕ್ಷರಣಂ' ಅಂದರೆ ನಿರಂತರದಲ್ಲಿಯೂ, ಕೊಡುವಿಕೆಯು. 'ಕ್ಷರ' ವೆಂಬೀ ಧಾತುವು (1) ವಿನಾಶ (2) ನಿರಂತರ ದಾನ ಎಂಬೀ ಅರ್ಥಗಳಲ್ಲಿಇದೆ. ಎಂದು ಧಾತುವ್ಯಾಖ್ಯಾನದಿಂದ ಈ ಅರ್ಥವು ಸಿದ್ಧವಾಗುತ್ತದೆ.

ತಾ || ಪೂರ್ವದಲ್ಲಿ ಜೀವರಿಂದ ಒಂದಂಶದಿಂದ ಹೋಗುವಿಕೆಯು 'ಋಕ್' ಶಬ್ದ ಪ್ರವೃತ್ತಿನಿಮಿತ್ತವು. ಇಲ್ಲಿಯಾದರೂ ಶರೀರಗಳಿಂದ ಹೋಗುವಿಕೆಯು 'ಅರ್ಧರ್ಚ' ಎಂಬ ಶಬ್ದ ಪ್ರವೃತ್ತಿ ನಿಮಿತ್ತವು. ಕಾರಣ ಪೌನರುಕ್ತ್ಯವಿಲ್ಲ. ಅಂತೂ 'ಋಕ್' ಅಂದರೆ ಒಂದಂಶದಿಂದ ಜೀವರನ್ನು ಬಿಟ್ಟು ಹೋಗುವಿಕೆಯು. 'ಅರ್ಧರ್ಚ' ಅಂದರೆ ಶರೀರಗಳಿಂದಲೇ ಬಿಟ್ಟು ಹೋಗುವುದು.

ಭಾ|| (a) "ಏವಮೃಷಿಷು ಶಬ್ದೇಷು ಚ ವ್ಯವಹ್ರಿಯಮಾಣಾನಿ ಸರ್ವಾಣಿ ನಾಮಾನಿ ವಿಷ್ಣೋರೇವ ಮುಖ್ಯತಃ ಕಿಮು ದೇವತಾ ನಾಮಾನಿ" | (b) "ಯೋ ದೇವಾನಾಂ ನಾಮಧಾ ಏಕ ಏವ ತಂ ಸಂಪ್ರಶ್ನಂ ಭುವನಾ ಯಂತ್ಯನ್ಯಾ" ||"ಇಂದ್ರಂ ಮಿತ್ರಂ ವರುಣಮಗ್ನಿಮಾಹುರಥೋ ದಿವ್ಯಃ ಸ ಸುಪರ್ಣೋ ಗರುತ್ಮಾನ್" | "ಯಮಿಂದ್ರಮಾಹುರ್ವರುಣಂ ಯಮಾಹುರ್ಯಂ ಮಿತ್ರಮಾಹುರ್ಯಮು ಸತ್ಯಮಾಹುಃ" || "ನಾಮಾನಿ ಸರ್ವಾಣಿ ಯಮಾವಿಶಂತಿ ತಂ ವೈ ವಿಷ್ಣುಂ ಪರಮಮುದಾಹರಂತಿ" | ಇತ್ಯಾದಿ ಶ್ರುತಿಭ್ಯಃ" || (c) "ನ ಕೇವಲಮೃಷ್ಯಾದೀನಾಂ ನಾಮ ಭಗವತಃ ಸರ್ವೇ ವೇದಾ ಅಪಿ ತಸ್ಯೈವ ನಾಮಾನಿ ಕಿಮು ಚ ವೇದಾಃ | ಸಮುದ್ರಮೇಘವೃಕ್ಷಪತನ ಭೇರೀತಾಡನಾದಿ ಸರ್ವಘೋಷಾ ಅಪಿ ತಸ್ಯೈವ ನಾಮಾನಿ ಯಥಾ ಯೋಗ್ಯಂ ಯೋಜನೀಯಾನಿ" || (d) "ಏಕಮೇವ ವ್ಯಾಹರಣಂ | ಏಕ ಪ್ರಕಾರಮೇವ ನಾಮ || ನಿರ್ದೋಷಗುಣಪೂರ್ತಿವಾಚಕತ್ವಾದೇಕಪ್ರಕಾರತಾ | ಪ್ರಾಣೇ ನಾರಾಯಣ ಏವ | ನಾರಾಯಣವಿಷಯ ಏವ ವ್ಯವಹಾರಃ || ಋಚಸ್ತು ವಿಶೇಷತ ಇಂದ್ರಾದಿನಾಮವತೋ ವಿಷ್ಣೋರ್ಗುಣಾನಲ್ಪಜ್ಞಾನಾಮಪಿ ಪ್ರಕಾಶಯಂತೀತಿ | ಪ್ರಾಣೇ ನಾರಾಯಣ ಏವೇತಿ ವಿದ್ಯಾತ್" ||

ಅ || (a) ಪೂರ್ವೋಕ್ತ ಪ್ರಕಾರವಾಗಿ ಋಷಿಗಳಲ್ಲಿಯೂ, ಸೂಕ್ತಾದಿಗಳಲ್ಲಿಯೂ, ಹೇಳಲ್ಪಡತಕ್ಕ ಎಲ್ಲಾ ನಾಮಧೇಯಗಳೂ ಮುಖ್ಯವಾಗಿ ವಿಷ್ಣುವಿಗೇನೇ ಸಂಗತಗಳಾಗುತ್ತವೆಯೋ, ಆಗ ಋಕ್ಕಗಳಲ್ಲಿದ್ದ ದೇವತಾನಾಮಗಳು ವಿಷ್ಣುವಿಗೇನೇ (ಮುಖ್ಯವಾಗಿ ಇವೆ) ಎಂದ್ಬು ಏನು ಹೇಳತಕ್ಕದ್ದಿದೆ. || (b) ಯಾವ ಹರಿಯು ಒಬ್ಬನೇ ಎಲ್ಲಾ ದೇವತೆಗಳ ನಾಮಧಾರಕನೋ ಯೋಗ್ಯಪ್ರಶ್ನೆಗೆ ವಿಷಯೀಭೂತನಾದ ಆತನನ್ನು ಕುರಿತು ಇತರಗಳಾದ ಎಲ್ಲಾ ಲೋಕಗಳೂ ಹೊಂದುತ್ತಾನೆ. || (ಸರ್ವರ ಪ್ರಾಪ್ತಿಗೆ ಅಧಿಕರಣೀಭೂತನಾದುದರಿಂದ ಸರ್ವಶಬ್ದ ವಾಚ್ಯತ್ವವು ಸಂಗತವೇ ಆಗುತ್ತದೆ). ಶ್ರೀ ಹರಿಯನ್ನು ಇಂದ್ರನೆಂದೂ ಮಿತ್ರನೆಂದೂ ವರುಣನೆಂದೂ ಅಗ್ನಿಯೆಂದೂ ಹೇಳುತ್ತಾರೆ. ಮತ್ತು ಆ ಹರಿಯು ಅಲೌಕಿಕನೂ ಸುಪರ್ಣರೂಪನೂ ಮತ್ತು ಗರುತ್ಮಾನ್ನಾಮಕನೂ ಆಗಿರುತ್ತಾನೆ. ಯಾವ ಶ್ರೀ ಹರಿಯನ್ನು ಇಂದ್ರನನ್ನಾಗಿ ಹೇಳುತ್ತಾರೆ. ಯಾವಾತನನ್ನು ವರುಣನನ್ನಾಗಿ ಹೇಳುತ್ತಾರೆ. ಯಾವಾತನನ್ನು ಮಿತ್ರನನ್ನಾಗಿ ಹೇಳುತ್ತಾರೆ. ಯಾವಾತನನ್ನೇ ಸತ್ಯನಾಮಕನನ್ನಾಗಿಯೂ ಹೇಳುತ್ತಾರೆ. ಎಲ್ಲಾ ನಾಮಧೇಯಗಳೂ ಯಾವ ಶ್ರೀ ಹರಿಯನ್ನೇ ಹೊಂದುತ್ತವೆಯೋ ಸರ್ವೋತ್ತಮನಾದ ಅಂಥವನನ್ನೇ ವಿಷ್ಣುವನ್ನಾಗಿ ಹೇಳುತ್ತಾರೆ. ಇದೇ ಮೊದಲಾದ ಶ್ರುತಿಗಳಿರುವುದರಿಂದ ಸರ್ವಶಬ್ದವಾಚ್ಯನಾ

ದವನು (ಶ್ರೀ ಪರಮಾತ್ಮನೇ ಸರಿ). ॥ (c) ಋಷ್ಯಾದಿಗಳ ಹೆಸರು ಮಾತ್ರ ಶ್ರೀ ಪರಮಾತ್ಮನಿ ಗಲ್ಲ. ಸಮಸ್ತವೇದಗಳೂ ಆತನ ನಾಮಧೇಯಗಳೇ ಆಗಿರುತ್ತಾವೆ ಎಂದೇನು ಪುನಃ ಹೇಳ ತಕ್ಕದ್ದಿದೆ? ವೇದಗಳೂ, ಸಮುದ್ರ, ಮೇಘ, ವೃಕ್ಷಪತನ, ಭೇರೀತಾಡನ ಇವೇ ಮೊದಲಾದ ಎಲ್ಲಾ ಧ್ವನಿಗಳೂ ಕೂಡಾ ಶ್ರೀಹರಿಗೇನೇ ನಾಮಧೇಯಗಳು. ಯೋಗ್ಯತಾನುಸಾರವಾಗಿ ಇವುಗಳನ್ನನ್ವಯಿಸಿಕೊಳ್ಳಬೇಕೆಂದು ಹೇಳಲು ಸಮಸ್ತವೇದಗಳು ತತ್ಪರಗಳಾಗಿದ್ದಾವೆಂದೇನು ಹೇಳತಕ್ಕದ್ದಿದೆ? ॥ (d) "ಏಕೈವ ವ್ಯಾಹೃತಿಃ" ಅಂದರೆ ಒಂದೇ ವ್ಯಾಹರಣವು ॥ ಅಂದರೆ ಏಕಪ್ರ ಕಾರವಾದದ್ದೇ ನಾಮಧೇಯವು. ದೋಷಶೂನ್ಯಗಳಾದ ಅನಂತಾನಂತಗುಣಗಳಿಂದ ಪೂರ್ಣ ನಾಗಿದ್ದಾನೆ ಎಂದು ಹೇಳುವುದರಿಂದ ಏಕಪ್ರಕಾರತ್ವವು ಸಿದ್ಧವಾಗುತ್ತದೆ. ॥ "ಪ್ರಾಣೇ" ಅಂದರೆ ನಾರಾಯಣನಲ್ಲಿಯೇ । ಎಲ್ಲಾ ನಾಮವು ನಾರಾಯಣ ವಿಷಯದಲ್ಲಿಯೇ ಸರಿ. ॥ ಋಕ್ಕುಗಳಾ ದರೂ ವಿಶೇಷಾಕಾರವಾಗಿ ಇಂದ್ರಾದಿನಾಮಗಳುಳ್ಳ ಶ್ರೀಹರಿಯ ಗುಣಗಳನ್ನು ಅಲ್ಪಜ್ಞಾನಿಗ ಳಿಗೂ ಪ್ರಕಾಶಿಸುತ್ತವೆ. ಆದುದರಿಂದ (ಆ ಋಕ್ಕುಗಳನ್ನು) ನಾರಾಯಣ ವಿಷಯದಲ್ಲಿಯೇ ತಿಳಿಯತಕ್ಕದ್ದು.

ಭಾ॥ (a) ಉಕ್ತಂ ಚ ಬೃಹತ್ಸಂಹಿತಾಯಾಂ । ಹುಂಕಾರೇಣ ಸಹೈವಾಬ್ಧಿಃ ಸರ್ವಾಭಿಭವಶಕ್ತತಾಂ ॥ ವಿಷ್ಣೋರ್ವಕ್ತಿ ಯತೋ ಹುಂ ಚ ಪರಾಭಿ ಭವವಾಚಕಃ ॥ (b) ಓಮಿತಿ ಸ್ವರತೇ ನಿತ್ಯಂ ವಾಯುರ್ಮೇಘೇಷು ಸಂಸ್ಥಿತಃ । ಬಲವನ್ನಾದಸಂಯುಕ್ತೋ ಹ್ಯಧಿಕೋಚ್ಚತ್ವಮಸ್ಯ ತು ॥ ಓಂಕಾರಸ್ಯಾರ್ಥ ಉದ್ದಿಷ್ಟ ಉಕ್ತಾರ್ಥಾಧಿಕ್ಯಮೇವ ಚ । ನಾದೋ ಬಲೀ ಪ್ರವದತಿ ತಥಾ ಭೇರೀಧ್ವನಿಃ ಪ್ರಭೋಃ ॥ ಅನುದಾತ್ತಸ್ವರೂಪತ್ವಾದೌ ದಾರ್ಯಂ ವದತೀಶಿತುಃ । ತದಪೇಕ್ಷಯಾऽನ್ಯನೀಚತ್ವಂ ಘಂಟಾದ್ಯಾಃ ಸ್ವರಿತಾತ್ಮಕಾಃ ॥ (d) ಉಚ್ಚಸ್ಥಿತಿಮುದಾತ್ತಸ್ತು ಸ್ವರ್ಣಚಂಚ್ವಾದಿಕಃ ಸ್ವರಃ । ವಿಷ್ಣೋರ್ವಕ್ತಿ ತಥಾ ಮಂದ್ರಃ ಶ್ವಾಸಾದಿಃ ಪ್ರಚಯಾತ್ಮಕಃ ॥ ಏಕಪ್ರಕಾರತಾಂ ವಿಷ್ಣೋಃ ಸದಾಚಾಲ್ಯಾಂ ವದತ್ಯಪಿ । (e) ಇತ್ಯಾ ದಯಃ ಸರ್ವಘೋಷಾ ವಿಷ್ಣೋರೇವ ಗುಣೋನ್ನತಿಂ ॥ ವದಂತಿ ಕಿಮು ವೇದಾದ್ಯಾ ಮಾರ್ಜಾರಾದ್ಯಭಿಧಾಸ್ತಥಾ ॥ (f) ಮಾರಯಿತ್ವಾ ಪ್ರಭ ಕ್ಷಯೈವ ಜರಯತ್ಯಖಿಲಂ ಜಗತ್ । ತೇನ ಮಾರ್ಜಾರ ಉದ್ದಿಷ್ಟೋ ಮೋಷಣಾನ್ಮೂಷಕೋ ಹರಿಃ ॥ ವರ್ಷಣಾದ್ವೃಷ ಉದ್ದಿಷ್ಟೋ ಬಲನಾ ದ್ಬಲಿನಾಮಕಃ । ತಾರಣಾತ್ತೃಣನಾಮಾಸಾವಿತ್ಯಾದ್ಯೇಕೋಽಭಿಧೀಯತೇ ॥ (g) ಸರ್ವನಾಮ್ನ್ಯಾಪಿ ಭಗವಾನ್ಸರ್ವಶಕ್ತಿಶ್ಚ ಸರ್ವವಿತ್ । ಬ್ರಹ್ಮರುದ್ರಾದಿ ಜೀವೇಭ್ಯೋ ಜಡೇಭ್ಯಃ ಶ್ರಿಯ ಏವ ತು ॥ ವ್ಯತಿರಿಕ್ತಃ ಸದಾನಂತಸಾಂ ದ್ರಾನಂದೈಕರೂಪಕಃ । (h) ತಸ್ಯೈವ ಮುಖ್ಯನಾಮಾನಿ ಸಮಾಕೃಷ್ಯೇ ತರೇಷ್ವಪಿ ॥ ಉಪಚಾರಾತ್ಪ್ರವರ್ತಂತೇ ವ್ಯವಹಾರಪ್ರಸಿದ್ಧಯೇ । (i) ತಥೈವ ಸರ್ವ ನಾಮಾನಿ ಪ್ರವರ್ತಂತೇ ಚ ಮಾರುತೇ ॥ ನ ತಾವನ್ಮುಖ್ಯ ವೃತ್ತ್ಯೈವ ಮುಖ್ಯತೋऽನ್ಯವ್ಯಪೇಕ್ಷಯಾ । ಮುಖ್ಯತಃ ಸರ್ವನಾಮಾ ತು ವಿಷ್ಣುರೇಕೋ ನ ಚಾಪರಃ ॥ (j) ತಸ್ಮಾತ್ಪ್ರಾಣಾದಿಶಬ್ದಾಶ್ಚ ವಿಷ್ಣೌ

ವೇವ ಹಿ ಮುಖ್ಯತಃ । ಅನ್ಯವ್ಯಪೇಕ್ಷಯಾ ವಾಯೌ ಮುಖ್ಯವೃತ್ತಿರ್ವಿಧೀಯತೇ ॥ ವಾಯುಶ್ಚ ಸೂರ್ಯಸಂಸ್ಥಃ ಸಂಸ್ತಪತ್ಯೇತಜ್ಜಗತ್ತ್ರಯಂ । ಆಜ್ಞಯೈವ ಹರೇರ್ವಾಯೋಃ ಶಕ್ತ್ಯಾ ಸೂರ್ಯಸ್ತಪತ್ಯಯಂ ॥ಇತ್ಯಾದಿ ಚ॥

ಅ ॥ (a) (ಈ ಎಲ್ಲಾ ಪ್ರಮೇಯವು) ಬೃಹತ್ಸಂಹಿತಾವೆಂಬ ಗ್ರಂಥದಲ್ಲಿ ಹೇಳಲ್ಪಟ್ಟಿದೆ. ॥ ಯಾವಕಾರಣದಿಂದ ಹುಂಕಾರವು ಇತರರಿಗೆ ತಿರಸ್ಕಾರವನ್ನು ಸಂಪಾದಿಸಿಕೊಡುವ ಶಕ್ತಿಯನ್ನು ಹೇಳುತ್ತದೆಯೋ ಆದುದರಿಂದ ಸಮುದ್ರವು (ತನ್ನ ಧ್ವನಿಯಿಂದ ವ್ಯಂಗ್ಯವಾಗುವ) ಹುಂಕಾರದಿಂದೊಡಗೂಡಿಯೇ (ಹುಂಕಾರವನ್ನುಚ್ಚರಿಸಿದ್ದಾಗಿಯೇ) ಶ್ರೀಹರಿಗೆ ಸಮಸ್ತವನ್ನು ತಿರಸ್ಕರಿಸುವ ವಿಷಯದಲ್ಲಿ ಸಾಮರ್ಥ್ಯವಿರುವಿಕೆಯನ್ನು ಹೇಳುತ್ತದೆ. ॥

ತಾ ॥ ಆದುದರಿಂದಲೇ ಸಮರ್ಥರಾದವರು ತಮಗೆ ಇತರರನ್ನು ಪರಾಜಯಿಸುವ ಶಕ್ತಿಯಿದೆ ಎಂದು ತಿಳಿಸಿಕೊಡುವುದಕ್ಕೋಸ್ಕರ ಹುಂಕಾರವನ್ನು ಮಾಡುತ್ತಾರೆ. ಸಮುದ್ರಾದಿಗಳ ಧ್ವನಿಗಳು ವಾಚಕಗಳಾದ ವರ್ಣಗಳಿಗೆ ವ್ಯಂಜಕಗಳಾದುದರಿಂದ ಅಮುಖ್ಯವಾಗಿಯೇ ವಾಚಕಗಳಾಗುತ್ತವೆ. ಹಾಗಾದರೆ "ನದೀಸಮುದ್ರ ಘೋಷಾಶ್ಚ ನಾದತ್ವಾತ್ ಶ್ರೈಷ್ಠ್ಯವಾಚಕಾಃ" ಎಂದು ಕರ್ಮನಿರ್ಣಯದಲ್ಲಿ ಸಮುದ್ರಧ್ವನಿಯು "ನಾದ"ವ್ಯಂಜಕವಾಗಿ (ಶ್ರೈಷ್ಠ್ಯ) ಶ್ರೇಷ್ಠತ್ವವನ್ನು ಹೇಳುತ್ತವೆ ಎಂದು ಹೇಳಲ್ಪಡುತ್ತದೆ. ಆದುದರಿಂದ ವಿರೋಧವು ಪ್ರಾಪ್ತವಾಯಿತು ಎಂದು ಆಶಂಕಿಸಕೂಡದು. ಎರಡೂ ಗ್ರಂಥಗಳನ್ನನುಸರಿಸಿ ಹುಂಕಾರ, ನಾದ ಈ ಎರಡನ್ನು ವ್ಯಕ್ತೀಕರಿಸುತ್ತವೆ ಎಂದು ಉಪಪನ್ನವಾಗುತ್ತದೆ. ಅಥವಾ ನದಿಯ ಧ್ವನಿಯನ್ನು ವಿವಕ್ಷಿಸಿ "ನಾದತ್ವಾತ್" ಎಂದು ಹೇಳಿಯದೆ. ಸಮುದ್ರದ ಧ್ವನಿಯನ್ನು ವಿವಕ್ಷೀಕರಿಸಿಕೊಂಡು "ಹುಂಕಾರತ್ವಾತ್" ಎಂದೂ ಉಕ್ತವಾಗಿಯದೆ. 'ಚ'ಶಬ್ದದಿಂದ ಈ ಅರ್ಥವು ಸಿದ್ಧವಾಗುತ್ತದೆ. ॥ (b) ಮೇಘಗಳಲ್ಲಿರತಕ್ಕ ವಾಯುವು ಬಲಿಷ್ಠವಾದನಾದದಿಂದೊಡಗೂಡಿಯೇ ನಿರಂತರದಲ್ಲಿಯೂ 'ಓಮ್' ಎಂದು ಧ್ವನಿಯನ್ನು ಮಾಡುತ್ತದೆ. । ಈ ಓಂಕಾರಕ್ಕೆ ಅತ್ಯಧಿಕವಾದ ಉತ್ತಮತ್ವವು ಎಂಬೀ ಅರ್ಥವು ಹೇಳಲ್ಪಟ್ಟದೆ. ಬಲಿಷ್ಠವಾದ ನಾದವು ಹೇಳಿದ ಅರ್ಥಗಳಿಗೆ ಆಧಿಕ್ಯವನ್ನೇ ಹೇಳುತ್ತದೆ.

ತಾ ॥ ವಾಯುವು ನಾದವ್ಯಂಜಕವಾದ ಧ್ವನಿಯನ್ನು ಮಾಡಿದವನಾಗಿ ಮೇಘಧ್ವನಿಯಿಂದ ವ್ಯಂಗವಾದ ಓಂಕಾರವನ್ನು ಚೆನ್ನಾಗಿ ಉಚ್ಚರಿಸುತ್ತಾನೆ. ॥ (c) ಹಾಗೆಯೇ ಭೇರೀಧ್ವನಿಯು ಸರ್ವಸಮರ್ಥನೂ ಸರ್ವರಿಗೆ ಇಷ್ಟವನ್ನು ಕೊಡುವುದರಲ್ಲಿ ಶಕ್ತನೂ ಆದ ಶ್ರೀಹರಿಗೆ ಅನುದಾತ್ತವ್ಯಂಜಕತ್ವವು ಇರುವುದರಿಂದ ಔದಾರ್ಯವನ್ನು ಹೇಳುತ್ತದೆ. ॥ ಸ್ವರಿತಸ್ವರವ್ಯಂಜಕಗಳಾದ ಘಂಟೆಯೇ ಮೊದುಲಾದವುಗಳು ಆ ಪರಮಾತ್ಮನಿಗಿಂತ ಇತರರಿಗೆ ಅತಿನೀಚತ್ವವನ್ನು ಹೇಳುತ್ತವೆ. ॥ (d) ಸ್ವರ್ಣಚಂಚು=ನಾಗಸರವೇ ಮೊದಲಾಗಿವುಳ್ಳ ಸ್ವರವು. ಅಂದರೆ ನಾಗಸರವೇ ಮೊದಲಾದವುಗಳ ಸ್ವರದಿಂದ ವ್ಯಂಗವಾದ ಉದಾತ್ತವಾದರೂ ಶ್ರೀಪರಮಾತ್ಮನಿಗೆ ಸರ್ವೋತಮತ್ವೇನ ಸ್ಥಿತಿಯನ್ನು ಹೇಳುತ್ತದೆ. ॥ ಹಾಗೆಯೇ ಶ್ವಾಸವೇ ಮೊದಲಾದ ಪ್ರಚಯರೂಪವಾದ ಮಂದ್ರಸ್ವರವಾದರೂ ಶ್ರೀಹರಿಗೆ ಯಾವಾಗಲೂ ಹಂದಾಡಿಸಲಿಕ್ಕೆ ಅಶಕ್ಯವಾದ ಏಕಪ್ರಕಾರತ್ವವನ್ನು ಹೇಳುತ್ತದೆ.

ತಾ ॥ ಶ್ವಾಸಾದಿಗಳಪ್ರಚಯು ಅಂದರೆ ಮೇಲೆ ಮೇಲೆ ತೀವ್ರಸಂಯೋಗವನ್ನು ಬಿಟ್ಟು ಅತಿ ಶಿಥಿಲವಾಗಿ ಇರುವಿಕೆಯು. ಅದರಿಂದ ವ್ಯಂಗ್ಯವಾಗುವ ಮಂದ್ರಸ್ವರವೂ ಕೂಡ ಶ್ರೀಹರಿಯು ಯಾವಾಗಲೂ ಏಕಪ್ರಕಾರನಾಗಿಯೇ ಇದ್ದಾನೆ ಎಂದು ಹೇಳುತ್ತದೆ. ॥ (e) "ಇತ್ಯಾದಯು

ಸ್ಪರ್ಶಘೋಷಾಃ''......ಇದೇ ಮೊದಲಾದ ಎಲ್ಲಾ ಧ್ವನಿಗಳು ಪರಮಾತ್ಮನಿಗೇನೇ ಆನಂದಾದಿ ಗಳ ಔನ್ನತ್ಯವನ್ನು ಹೇಳುತ್ತವೆ ಎಂದುಹೇಳಲು ವೇದವೇ ಮೊದಲಾದುವುಗಳು ಹಾಗೆ ಮಾರ್ಜಾ ರಾದಿ ಹೆಸರುಗಳೂ ಕೂಡ ಹೇಳುತ್ತವೆ ಎಂದು ಹೇಳತಕ್ಕದು ಏನು ಇದೆ?

ತಾ || ದಧಿಮಂಥನ (ಮೊಸರನ್ನು ಕಡಿಯುವಿಕೆ) ವೃಕ್ಷಪತನಾದಿ ಧ್ವನಿಗಳು ಅಂತ ರ್ನಾದ ವ್ಯಂಜಕಗಳಾಗಿ ಯಾವಾಗ ವಿಷ್ಣುವಿಗೆ ಭೀಷಕತ್ವವೇ ಮೊದಲಾದ ಗುಣಗಳ ಉನ್ನತಿ ಯನ್ನು ಹೇಳುತ್ತವೋ, ಆಗ ವೇದವೇ ಮೊದಲಾದವುಗಳು ಮಾರ್ಜಾರಾದಿ ಶಬ್ದಗಳೂ ಕೂಡ ವಾಕ್ಯ ಮತ್ತು ಪದಗಳ ಸಮನ್ವಯದಿಂದ ಶ್ರೀ ಪರಮಾತ್ಮನಿಗೆ ಗುಣೋನ್ನತಿಯನ್ನು ಹೇಳುತ್ತ ವೆಯೆಂದು ಏನು ಹೇಳತಕ್ಕದು? ಅಥವಾ ಸಮಸ್ತ ವೇದಗಳೂ ಕೂಡ ಶ್ರೀಹರಿಗೇನೇ ನಾಮ ಧೇಯವು ಎಂದು ಹೇಳಲು ಸಮುದ್ರ ಘೋಷವು ಆತನಿಗೇನೇ ಹೆಸರು ಇತ್ಯಾದಿ ಸ್ಮವಚನ ವನ್ನನುಸರಿಸಿ ಯಾವಾಗ ಅನ್ಯತ್ರ ಪ್ರಸಿದ್ಧಗಳಾದ ವೇದಾದಿಗಳೂ ಮಾರ್ಜಾರಾದಿ ಹೆಸರುಗಳೂ ಕೂಡ ವಿಷ್ಣುವಿಗೇನೇ ಗುಣಪರಿಪೂರ್ಣತ್ವವನ್ನು ಹೇಳುತ್ತವೋ ಆಗ ಅನ್ಯತ್ರ ಪ್ರಸಿದ್ಧಿರಹಿತಗ ಳಾದ ಸರ್ವಧ್ವನಿಗಳು ಹೇಳುತ್ತವೆ ಎಂದು ಏನು ಹೇಳತಕ್ಕದು. ಧ್ವನಿಸ್ವರೂಪಗಳಾದುದ ರಿಂದ ಅವಾಚಕಗಳಾದರೂ ಧ್ವನಿಗಳಿಗೆ ವಾಚಕಗಳಾದ ವರ್ಣಾದಿಗಳನ್ನು ವ್ಯಕ್ತೀಕರಿಸುವುದ ರಿಂದ ಅಮುಖ್ಯವಾದ ವಾಚಕತ್ವವು ಇದೆ ಎಂದು ಕರ್ಮನಿರ್ಣಯದಲ್ಲಿಯೂ ಅದರ ಟೀಕೆಯ ಲ್ಲಿಯೂ ವ್ಯಕ್ತವಾಗಿಯದೆ. ಕರ್ಮನಿರ್ಣಯ ಟೀಕಾವಾಕ್ಯಗಳು. ''ದಧ್ನೋ ಮಂಥನ ಘೋಷಶ್ಚಾಂತರ್ನಾದ ಸ್ವರೂಪತಃ। ಭೀಷಕತ್ವಂ ಹರೇರ್ಬ್ರೂಯಾದಂತರ್ನಾದೋ ಹಿ ಭೀಷಣೇ ॥ ನದೀಸಮುದ್ರ ಘೋಷಾಶ್ಚ ನಾದತ್ವಾತ್ ಶ್ರೈಷ್ಠ್ಯವಾಚಕಾಃ'' ಇತ್ಯಾದಿ. (f) ಎಲ್ಲಾ ಜಗ ತ್ತನ್ನು ಸಂಹರಿಸಿ ಭಕ್ಷಿಸಿಯೇ ಜೀರ್ಣೀಕರಿಸಿಕೊಳ್ಳುತ್ತಾನೆ. ಆದುದರಿಂದ (ಮಾರಯತಿ ಜರಯತಿ ಚ ಎಂಬೀವ್ಯುತ್ಪತ್ತಿಯಿಂದ) ಶ್ರೀ ಹರಿಯು ''ಮಾರ್ಜಾರನೆಂದೂ'' ಮೋಷಣಾತ್ ಅಂದರೆ ಭಕ್ತರ ಪಾಪಗಳನ್ನು ಅಪಹರಿಸಿದರಿಂದ ''ಮೂಷಕ''ನೆಂದೂ, ಹೇಳಲ್ಪಟ್ಟಿದ್ದಾನೆ. ಮಳೆಯನ್ನು ಸುರಿಸುವುದರಿಂದ ''ವರ್ಷ''ನೆಂದೂ ಹೇಳಲ್ಪಟ್ಟಿದ್ದಾನೆ. ( ಜಗತ್ತನ್ನು ) ಆಚ್ಛಾ ದನೆ ಮಾಡುವುದರಿಂದ ''ಬಲಿ'' ಎಂದು ಹೆಸರುಳ್ಳವನು. ಈತನು ಸಂಸಾರದಿಂದ ದಾಟ ಸುವದರಿಂದ ''ತೃಣ''ನೆಂದು ಹೆಸರುಳ್ಳವನು ಒಬ್ಬನೇ ಹರಿಯು. ಇವೇಮೊದಲಾದ ಎಲ್ಲಾ ಶಬ್ದಗಳಿಂದಲೂ ಹೇಳಲ್ಪಡುತ್ತಾನೆ. (g) ಸರ್ವಶಕ್ತನೂ ಸರ್ವಜ್ಞನೂ ಆದ ಶ್ರೀಪರಮಾತ್ಮನು ಎಲ್ಲಾ ಹೆಸರುಳ್ಳವನಾದಾಗ್ಯೂ ಬ್ರಹ್ಮರುದ್ರರೇ ಮೊದಲಾದ ಜೀವರಿಂದಲೂ ಎಲ್ಲಾ ಜಡ ಪದಾರ್ಥಗಳಿಂದಲೂ ಲಕ್ಷ್ಮೀದೇವಿಯಿಂದಲೂ ಕೂಡ ಭಿನ್ನನೇ ಆಗಿರುತ್ತಾನೆ. ಯಾವಾಗಲೂ ಅಪರಿಮಿತವಾಗಿಯೂ ನಿಬಿಡವಾಗಿಯೂ ಇರುವ ಆನಂದವೇ ಮುಖ್ಯಸ್ವರೂಪವಾಗಿ ಉಳ್ಳವನು. ॥ (h) ಶ್ರೀ ಪರಮಾತ್ಮನಿಗೇನೇ ಪ್ರಧಾನವಾಗಿರುವ ನಾಮಧೇಯಗಳು ಕರ್ಮದೇವತಾದಿ ಲೋಕವ್ಯವಹಾರವು ಪ್ರಸಿದ್ಧಿಯಾಗುವುದಕ್ಕೋಸ್ಕರ ಇತರರಲ್ಲಿಯೂ ಕೂಡ ಶೆಳಕೊಂಡು ಉಪಚಾರದಿಂದ (ಅಮುಖ್ಯವಾಗಿ) ಪ್ರವರ್ತಿಸುತ್ತವೆ. ॥ (i) ಅದೇರೀತಿಯಾಗಿ ಎಲ್ಲಾ ನಾಮಧೇಯಗಳೂ ಮುಖ್ಯಪ್ರಾಣದೇವರಲ್ಲಿಯೂ ಪ್ರವರ್ತಿಸುತ್ತವೆ. ॥ ಮುಖ್ಯವೃತ್ತಿಯಿಂದಲೇ ಅಲ್ಲ. (ಆದುದರಿಂದ ''ನಾರಾಯಣ ಏವ'' ಎಂಬೀ ಅವಧಾರಣವು ಸಂಗತವೇ ಆಗುತ್ತದೆ. ಇತರರಾದ ರುದ್ರಾದಿಗಳನ್ನಪೇಕ್ಷಿಸಿ ಮುಖ್ಯಪ್ರಾಣನಲ್ಲಿ ಮುಖ್ಯವಾಗಿ ಸರ್ವನಾಮಗಳು ಪ್ರವರ್ತಿ ಸುತ್ತವೆ. ಅದನ್ನಪೇಕ್ಷಿಸಿಯೇ ''ವಾಯಾವೇವ'' ಎಂಬೀ ಅವಧಾರಣವು). ॥ಮುಖ್ಯವಾಗಿ ಸರ್ವ ನಾಮಗಳುಳ್ಳವನು ವಿಷ್ಣುವು ಒಬ್ಬನೇ ಸರಿ. ಇತರನು ಯಾರೂ ಆಗಲಾರನು.

ತಾ || ಯದ್ಯಪಿ ಮುಖ್ಯವಾಗಿ ಸರ್ವನಾಮವುಳ್ಳವನು ವಿಷ್ಣುವೇ, ಮತ್ತೊಬ್ಬನಲ್ಲ. ಆದುದರಿಂದ ಎಲ್ಲಾ ಶಬ್ದಗಳು ಶ್ರೀಹರಿಯಲ್ಲೇ ಮುಖ್ಯಗಳು. || (j) ಆದುದರಿಂದ ಪ್ರಾಣಾದಿ ಶಬ್ದಗಳುವಿಷ್ಣುವಿನಲ್ಲಿಯೇ ಮುಖ್ಯಗಳಾಗಿವೆ. ಅನ್ಯರಾದ ಗರುಡಾದಿಗಳನ್ನಪೇಕ್ಷಿಸಿ ಮುಖ್ಯ ಪ್ರಾಣದೇವರಲ್ಲಿ ಮುಖ್ಯವೃತ್ತಿಯು ವಿಧಿಸಲ್ಪಡುತ್ತದೆ. || ಮುಖ್ಯಪ್ರಾಣದೇವರೂ ಕೂಡ ಸೂರ್ಯಮಂಡಲದಲ್ಲಿದ್ದವರಾಗಿ ಈಮೂರು ಲೋಕವನ್ನು ಸುಡುತ್ತಾರೆ. (ಅಂತೂ "ಯ ಏಷ ತಪತಿ" ಎಂಬೀ ವಾಕ್ಯವು ವಾಯುಪರವೂ ಆಗುತ್ತದೆ.) || ಈ ಸೂರ್ಯನು ಹರಿಯ ಆಜ್ಞೆಯಿಂದಲೇಮುಖ್ಯಪ್ರಾಣನ ಶಕ್ತಿಯಿಂದ ಸುಡುತ್ತಾನೆ. ಇದೇ ಮೊದಲಾದುದು ಹೇಳಲ್ಪಟ್ಟದೆ. ||

ತಾ || ಮುಖ್ಯಪ್ರಾಣನ ಶಕ್ತಿಯಿಂದ ಸೂರ್ಯನು ಸುಡುತ್ತಾನೆ ಎಂದು ಹೇಳಲು ಮುಖ್ಯಪ್ರಾಣನು ಸುಡುತ್ತಾನೆ ಎಂದು ಹೇಳತಕ್ಕದು ಏನು ಇದೆ?

**ಭಾ||** **(a)** ನ ಪ್ರಸಿದ್ಧಸೂರ್ಯಸ್ಯೇಯಂ ತಾಪನಶಕ್ತಿರಿತಿ ಜ್ಞಾಪಯಿತುಂ ಪ್ರಾಣೋ ಹ್ಯೇಷ ಯ ಏಷ ತಪತೀತ್ಯುಕ್ತಂ । ಪ್ರಾಣಾದ್ವಾ ಏಷ ಉದೇತಿ ಪ್ರಾಣೇಽಸ್ತಮೇತಿ || ಇತಿ ಚ ಶ್ರುತಿಃ || **(b)** ಪ್ರಾಣಶಬ್ದಶ್ಚ ಮುಖ್ಯತೋ ವಿಷ್ಣೌ ಪ್ರವರ್ತಮಾನೋಽಪಿ ವಾಯಾವಪಿ ವರ್ತತೇ । ಅತಃ ಸರ್ವವೇದಾದ್ಯಭಿಧೇಯತ್ವಂ ವಾಯೋರಪ್ಯಸ್ತಿ || **(c)** ಪ್ರಾಣಸ್ಯ ಪ್ರಾಣಮಿತಿ ಶ್ರುತೇರುಭಯೋರಪಿ ಪ್ರಾಣಶಬ್ದಃ ಪ್ರಸಿದ್ಧ ಏವ । ಅಯಂ ವಾವ ಶಿಶುರ್ಯೋಽಯಂ ಮಧ್ಯಮಃ ಪ್ರಾಣ ಇತಿ ವಾಯೋರ್ವಿಶೇಷಣಾದುತ್ತಮ ಪ್ರಾಣೋ ವಿಷ್ಣುರಿತಿ ಚ ಸಿದ್ಧಂ ||

ಅ || (a) ಪ್ರಸಿದ್ಧನಾದ ಸೂರ್ಯನಿಗೆ ಈ ಸುಡತಕ್ಕ ಶಕ್ತಿಯು ಅಲ್ಲ. ಎಂದು ತಿಳಿಸುವುದಕ್ಕೋಸ್ಕರ ಯಾವ ಈತನು ಸುಡುತ್ತಾನೋ ಆತನು ಪ್ರಾಣನೇ ಸರಿ ಎಂದು ಹೇಳಲ್ಪಟ್ಟಿದೆ. || ಮುಖ್ಯಪ್ರಾಣನಿಂದಲೇ ಈ ಸೂರ್ಯನು ಉದಯಿಸುತ್ತಾನೆ. ಮುಖ್ಯಪ್ರಾಣನಲ್ಲಿಯೇ ಅಸ್ತವನ್ನು (ಅದರ್ಶನವನ್ನು) ಹೊಂದುತ್ತಾನೆ ಎಂದು ಶ್ರುತಿಯೂ ಅದೆ. (ಅಂತೂ ಸೂರ್ಯನು ಪ್ರಾಣಾಧೀನನೇ ಸರಿ). || (b) "ಪ್ರಾಣ"ನೆಂಬೀ ಶಬ್ದವು ಮುಖ್ಯವಾಗಿ ಶ್ರೀಹರಿಯಲ್ಲಿ ಪ್ರವರ್ತಿಸಿಕೊಂಡಿದ್ದರೂ ಮುಖ್ಯಪ್ರಾಣನಲ್ಲಿಯೂ ಅದೆ. ಆದುದರಿಂದ ಎಲ್ಲಾ ವೇದಾದಿಗಳಿಂದ ಹೇಲ್ಪಡುವಿಕೆಯು ಮುಖ್ಯಪ್ರಾಣದೇವರಿಗೂ ಅದೆ. (ಅಂತೂ ಸರ್ವವೇದಗಳೂ ಮುಖ್ಯಪ್ರಾಣನನ್ನು ಪ್ರತಿಪಾದಿಸುತ್ತವೆ). || (c) ಮುಖ್ಯಪ್ರಾಣನಿಗೂ (ಶ್ರೀಹರಿಯು) ಚೇಷ್ಟಕನು ಎಂದು ಶ್ರುತಿಯಿರುವುದರಿಂದ ಹರಿವಾಯುಗಳಿಬ್ಬರಲ್ಲಿಯೂ ಪ್ರಾಣಶಬ್ದವು ಪ್ರಸಿದ್ಧವಾಗಿಯದೆ. || ಈತನು ಶಿಶುವೇ ಸರಿ. ಯಾವ ಈತನು ಮಧ್ಯಮಪ್ರಾಣನು ಎಂದು ವಾಯುವಿಗೆ ("ಮಧ್ಯಮ"ನೆಂಬೀ) ವಿಶೇಷಣವಿರುವುದರಿಂದ ಉತ್ತಮ ಪ್ರಾಣನು ವಿಷ್ಣುವೇ ಸರಿ ಎಂದೂ ಸಿದ್ಧವಾಯಿತು.

**ಭಾ||** **(a)** ದ್ವಾವಾತ್ಮಾನೌ ಹಿ ದೇವೇಷು ದ್ವೌ ಪ್ರಾಣೌ ದ್ವೌ ಚ ಚೇತನೌ ।
ಅಜ್ಞಾನಾಭಿಭವಾಸ್ಪೃಷ್ಟೌ ವಾಯುರ್ನಾರಾಯಣಶ್ಚ ತೌ || **(b)**
ತದನ್ಯೇ ಚೇತನಾಸ್ಸರ್ವೇ ಪ್ರಾಣಾಶ್ಚಾತ್ಮಾನ ಏವ ಚ || ಅಜ್ಞಾನಾಭಿ
ಭವಾಸ್ಪೃಷ್ಟಾಸ್ತಸ್ಮಾತ್ತೇ ಹ್ಯಧಮಾಃ ಶ್ರುತಾಃ । **(c)** ಮಧ್ಯಮೋ
ವಾಯುರೇವೈಕಃ ಉತ್ತಮಃ ಕೇವಲೋ ಹರಿಃ || ಸರ್ವಶಬ್ದೋದಿತೌ
ತಸ್ಮಾದೇತೌ ದ್ವಾವೇವ ನಾಪರಃ । **(d)** ಅನ್ಯೇ ಚೈವಮಿತ್ಯೈಃ ಶಬ್ದೈರು

ಚ್ಯಂತೇ ನಾಮಿತ್ರೈಃ ಕ್ವಚಿತ್ ॥ ಶ್ರೀರಪ್ಯಖಿಲಶಬ್ದೋಕ್ತಾ ವಿಷ್ಣುವನ್ನ ತು ಮುಖ್ಯತೇ । (e) ತಸ್ಮಾದಮಿತನಾಮಾನಾವಪಿ ತೌ ಮಿತನಾಮವತ್ ॥ ಶ್ರೀಶ್ಚ ವಾಯುಶ್ಚ ವಿಷ್ಣುಸ್ತು ಮುಖ್ಯೋಕ್ತೇರಮಿತಾಭಿಧಃ । (f) ಅನಂತ ನಾಮಕತ್ವಾಚ್ಚ ಸೋಽನಂತಗುಣ ಈರಿತಃ ॥ ಪೃಥಙ್ನಾಮಾನಿ ಯಸ್ಮಾತ್ತ ದ್ಗುಣಾನೇವ ಪ್ರಚಕ್ಷತೇ । ಇತ್ಯಾದಿ ಬ್ರಹ್ಮಾಂಡೇ ॥ ಖಂಡ ॥ ೨ ॥

ಅ॥ (a) ದೇವತೆಗಳ ಮಧ್ಯದಲ್ಲಿ ಇಬ್ಬರು ಆತ್ಮಶಬ್ದವಾಚ್ಯರು. ಇಬ್ಬರು ಪ್ರಾಣಶಬ್ದ ವಾಚ್ಯರು. ಇಬ್ಬರು ಚೇತನಶಬ್ದವಾಚ್ಯರು ಅವರಿಬ್ಬರು ಹರಿವಾಯುಗಳು. ಅಜ್ಞಾನ ಮತ್ತು ತಿರಸ್ಕಾರ ಇವುಗಳಿಂದ ಮುಟ್ಟಲ್ಪಡದೆ ಇರುವವರು.

ತಾ ॥ ಅಜ್ಞಾನವಿಲ್ಲದೆ ಇರುವುದರಿಂದಲೇ ಚೇತನೋತ್ತಮರಾದ ದೇವತೆಗಳಲ್ಲಿಯೂ ಇವರಿಬ್ಬರೂ ಮುಖ್ಯಚೇತನರು. ಪರಾಭವ ವಿಲ್ಲದಿರುವುದರಿಂದ ಹರಿವಾಯುಗಳು ಮುಖ್ಯಸ್ವಾಮಿಗಳು. (ಆತ್ಮರು) ಅಜ್ಞಾನತಿರಸ್ಕಾರ ಎರಡೂ ಇಲ್ಲದಿರುವುದರಿಂದ ಮುಖ್ಯನಿಯಾಮಕರು. (ಪ್ರಾಣರು). ॥ (b) ಅವರಿಬ್ಬರಿಂದ ಇತರರಾದ ಎಲ್ಲಾ ದೇವತೆಗಳೂ ಹಿ=ಯಾವಕಾರಣದಿಂದ, ಅಜ್ಞಾನಅಭಿಭವಗಳಿಂದ ಸಂಬಂಧಿಸಲ್ಪಟ್ಟದ್ದಾರೋ ಆದುದರಿಂದಲೇ ಅಧಮರಾದ ಚೇತನರು. "ನೀಚರಾದ ಪ್ರಾಣರು, ನೀಚರಾದ ಆತ್ಮರು. ಎಂದು ಹೇಳಲ್ಪಟ್ಟಿದ್ದಾರೆ. ॥(c) ವಾಯುಒಬ್ಬನೇ ಮಧ್ಯಮ ಪ್ರಾಣನು, ಮಧ್ಯಮಚೇತನನು, ಮಧ್ಯಮ ಆತ್ಮನು. ಹರಿಯು ಒಬ್ಬನೇ ಸರ್ವೋತ್ತಮನು. । ಆದುದರಿಂದ ಅಂದರೆ ಸರ್ವಸ್ವಾಮಿತ್ವವು ಸರ್ವನಿಯಾಮಕತ್ವವು ಇರುವುದರಿಂದ ಇವರಿಬ್ಬರೇ ಚೇತನಾಚೇತನಪರಗಳಾದ ಎಲ್ಲಾ ಶಬ್ದಗಳಿಂದಲೂ ಹೇಳಲ್ಪಟ್ಟಿರುತ್ತಾರೆ. ಇತರನು ಯಾರೂ ಹೇಳಲ್ಪಡುವುದಿಲ್ಲ. ॥ (d) ಇತರರಾದರೂ ಕೆಲವು ಶಬ್ದಗಳಿಂದಲೇ ಹೇಳಲ್ಪಡುತ್ತಾರೆ. ಎಲ್ಲಿಯೂ ಅಪರಿಮಿತ ಶಬ್ದಗಳಿಂದ ಹೇಳಲ್ಪಡುವುದಿಲ್ಲ. ಲಕ್ಷ್ಮೀದೇವಿಯೂ ಕೂಡ ಎಲ್ಲಾ ಶಬ್ದಗಳಿಂದಲೂ ಹೇಳಲ್ಪಡುತ್ತಾಳೆ. ವಿಷ್ಣುವಿನಂತೆ ಮುಖ್ಯನಾಗಿ ಅಲ್ಲ.

ತಾ ॥ ಸಂಖ್ಯೆಯಿಂದಲೂ ಅರ್ಥದಿಂದಲೂ ಲಕ್ಷ್ಮಿಯು ಶ್ರೀ ಹರಿಯಂತೆ ಮುಖ್ಯವಾಗಿ ಎಲ್ಲಾವೇದಗಳಿಂದ ಹೇಳಲ್ಪಡುವುದಿಲ್ಲ. ಏಕೆಂದರೆ ನಾರಾಯಣಾದಿ ಶಬ್ದವಾಚ್ಯತ್ವವು ಲಕ್ಷ್ಮ್ಯಾದಿ ಶಬ್ದಮುಖ್ಯಾರ್ಥತ್ವವೂ ಇಲ್ಲವಷ್ಟೇ. ॥ (e) ಆದುದರಿಂದ ಆಲಕ್ಷ್ಮೀದೇವಿಯೂ ವಾಯುದೇವರೂ ಕೂಡ ಬಹುಮಾನವುಳ್ಳವರಾದಾಗ್ಯೂ (ಶ್ರೀ ಹರಿಯಂತೆ ಎಲ್ಲಾಶಬ್ದಗಳ ಮುಖ್ಯಾರ್ಥತ್ವವು ಇಲ್ಲದೆ ಇರುವುದರಿಂದಲೇ) ಪರಿಮಿತನಾಮವುಳ್ಳ ದೇವತೆಗಳಿಂದ ತುಲ್ಯರಾಗಿ (ಗ್ರಂಥಾಂತರದಲ್ಲಿ ಹೇಳಲ್ಪಡುತ್ತಾರೆ.) ಶ್ರೀ ಪರಮಾತ್ಮನಾದರೂ (ಎಲ್ಲಾ ಶಬ್ದಗಳಿಂದಲೂ) ಮುಖ್ಯವಾಗಿ ಹೇಳಲ್ಪಟ್ಟಪ್ರಯುಕ್ತ ಅಪರಿಮಿತವಾದ ನಾಮವುಳ್ಳವನು. ॥ (f) ಯಾವಕಾರಣದಿಂದ ಪ್ರತ್ಯೇಕಗಳಾದ ಎಲ್ಲಾ ನಾಮಗಳೂ ಶ್ರೀ ಹರಿಯ ಗುಣಗಳನ್ನೇ ಹೇಳುತ್ತವೆಯೋ ಆದುದರಿಂದ "ಆ ಪರಮಾತ್ಮನು ಅನಂತಾನಂತ ನಾಮಧೇಯಗಳು ಇರುವುದರಿಂದ ಅನಂತಾನಂತ ಗುಣಗಳುಳ್ಳವನು" ಎಂದು ಹೇಳಲ್ಪಟ್ಟಿದ್ದಾನೆ. ಇದೇ ಮೊದಲಾದ ವಿಷಯವು ಬ್ರಹ್ಮಾಂಡಪುರಾಣದಲ್ಲಿ ಹೇಳಿಯದೆ. ॥ ೨ ॥

**ಭಾ॥ (a)** ಅನ್ಯದೇವತಾವಿಷಯತ್ವೇನ ಪ್ರತೀಯಮಾನಾ ಅಪಿ ಋಚೋ ಭಗವದ್ವಿಷಯಾ ಏವ ಮುಖ್ಯತಃ । ತದನಂತರಂ ವಾಯು ವಿಷಯಾಶ್ಚ ॥ **(b)** ತಸ್ಮಾದ್ಬೃಹತೀ ಸಹಸ್ರಂ ಸರ್ವಂ ಮುಖ್ಯತೋ ನಾರಾಯಣಸ್ಯಾನ್ನಂ

ತದಾಜ್ಞಯಾ ವಾಯೋಶ್ಚ । (c) ತಸ್ಮಾತ್ತಚ್ಛಂಸನೇನ ಭಗವಾನ್ವಾಯುಶ್ಚಾತಿಪ್ರೀಯತ ಇತಿ ದರ್ಶಯತಿ ವಿಶ್ವಾಮಿತ್ರಂ ಹ್ಯೇತದಹಃ ಶಂಸಿಷ್ಯಂತಮಿತ್ಯಾದಿನಾ ॥

ಅ ॥ (a) 'ಪ್ರಾಣಋಚ ಇತ್ಯೇವ ವಿದ್ಯಾತ್' ಎಂಬುವಲ್ಲಿ ಇತರ ದೇವತಾವಿಷಯವಾಗಿ ಪ್ರತೀತಗಳಾದರೂ ಎಲ್ಲಾ ಋಕ್ಕುಗಳೂ ಮುಖ್ಯವಾಗಿ ಭಗವದ್ವಿಷಯಕಗಳೇ. ॥ ಆ ಮೇಲೆ ಮುಖ್ಯಪ್ರಾಣವಿಷಯಕಗಳೂ ಆಗಿವೆ.

ತಾ ॥ ಯಾವುದೊಂದು ಎಲ್ಲಾ ಋಕ್ಕುಗಳಿಗೂ ಹರಿವಾಯುವಿಷಯಕತ್ವವು ಹೇಳಲ್ಪಟ್ಟದೋ. ಅದನ್ನು 'ವಿಶ್ವಾಮಿತ್ರಂ ಹ್ಯೆತ್ರತದಹಃ' ಇತ್ಯಾದಿಯಿಂದ ಯುಕ್ತಿಯಿಂದಉಪಪಾದಿಸುತ್ತಾರೆ. ॥ ಅಂತಹ ಯುಕ್ತಿಯನ್ನು ತೋರಿಸುತ್ತಾರೆ. ॥ (b) ಭಗವದ್ವಾಯು ವಿಷಯಕವಾದುದರಿಂದಲೇ (ಅನ್ಯದೇವತಾ ವಿಷಯಕವಾಗಿ ಪ್ರತೀತವಾದರೂ) ಎಲ್ಲಾ ಬೃಹತೀಸಹಸ್ರವು ಮುಖ್ಯವಾಗಿ ನಾರಾಯಣನಿಗೂ ಆತನ ಆಜ್ಞೆಯಿಂದ ಮುಖ್ಯಪ್ರಾಣನಿಗೂ ಅನ್ನವು (ತರ್ಪಕವು ತೃಪ್ತಿಯನ್ನು ಹುಟ್ಟಿಸುವುದು.)

ತಾ ॥ ಅಲ್ಲವಾದರೆ ತೃಪ್ತಿಜನಕವಾಗದೆ ಹೋಗಬೇಕಾದೀತು. ಇತರ ವಿಷಯಕವಾದುದು ಇತರರಿಗೆ ತೃಪ್ತಿಜನಕವು ಆಗುವುದಿಲ್ಲ, ಇದೇಯುಕ್ತಿಯು. । (c) ಬೃಹತೀಸಹಸ್ರವು ತೃಪ್ತಿಜನಕವಾದುದರಿಂದ, ಬೃಹತೀಸಹಸ್ರವನ್ನು ಹೊಗಳುವುದರಿಂದ ಶ್ರೀಪರಮಾತ್ಮನೂ ಮುಖ್ಯಪ್ರಾಣನೂ ಕೂಡ ಸಂತುಷ್ಟರಾಗುತ್ತಾರೆ ಎಂದು "ವಿಶ್ವಾಮಿತ್ರಂ ಹ್ಯೇತದಹಃ" ಇತ್ಯಾದಿಯಿಂದ ತೋರಿಸುತ್ತಾರೆ.

ಮಂ ॥ ವಿಶ್ವಾಮಿತ್ರಂ ಹ್ಯೇತದಹಃ ಶಂಸಿಷ್ಯಂತಮಿಂದ್ರ ಉಪ ನಿಷಸಾದ ಸಹಾನ್ನಮಿತ್ಯಭಿವ್ಯಾಹೃತ್ಯ ಬೃಹತೀಸಹಸ್ರಂ ಶಶಂಸ ತೇನೇಂದ್ರಸ್ಯ ಪ್ರಿಯಂ ಧಾಮೋಪೇಯಾಯ ತಮಿಂದ್ರ ಉವಾಚ ಋಷೇ ಪ್ರಿಯಂ ವೈ ಮೇ ಧಾಮೋಪಾಗಾಃ ಸ ವಾ ಋಷೇ ದ್ವಿತೀಯಂ ಶಂಸೇತಿ ಸಹಾನ್ನಮಿತ್ಯೇವಾಭಿವ್ಯಾಹೃತ್ಯ ಬೃಹತೀಸಹಸ್ರಂ ಶಶಂಸ ತೇನೇಂದ್ರಸ್ಯ ಪ್ರಿಯಂ ಪ್ರಿಯಂ ಧಾಮೋಪೇಯಾಯ ತಮಿಂದ್ರ ಉವಾಚ ಋಷೇ ಪ್ರಿಯಂ ವೈ ಮೇ ಧಾಮೋಪಾಗಾಃ ಸ ವಾ ಋಷೇ ತೃತೀಯಂ ಶಂಸೇತಿ ಸಹಾನ್ನಮಿತ್ಯೆವಾಭಿವ್ಯಾಹೃತ್ಯ ಬೃಹತೀಸಹಸ್ರಂ ಶಂಶಸ ತೇನೇಂದ್ರಸ್ಯ ಪ್ರಿಯಂ ಧಾಮೋಪೇಯಾಯ ತಮಿಂದ್ರ ಉವಾಚ ಋಷೇ ಪ್ರಿಯಂ ವೈ ಮೇ ಧಾಮೋಪಾಗಾ ವರಂ ತೇ ದದಾಮೀತಿ ಸ ಹೋವಾಚ ತ್ವಾಮೇವ ಜಾನೀಯಾಮಿತಿ ತಮಿಂದ್ರ ಉವಾಚ ಪ್ರಾಣೋ ವಾ ಅಹಮಸ್ಮ್ಯೃಷೇ ಪ್ರಾಣಸ್ತ್ವಂ ಪ್ರಾಣಃ ಸರ್ವಾಣಿ ಭೂತಾನಿ ಪ್ರಾಣೋ ಹ್ಯೇಷ ಯ ಏಷ ತಪತಿ ಸ ಏತೇನ ರೂಪೇಣ ಸರ್ವಾ ದಿಶೋ ವಿಷ್ಟೋಽಸ್ಮಿ ಮೇಽನ್ನಂ ಮಿತ್ರಂ ದಕ್ಷಿಣಂ ತದ್ವೈಶ್ವಾಮಿತ್ರಮೇಷ ತಪನ್ನೇವಾಸ್ಮೀತಿ ಹೋವಾಚ ॥ ೩ ॥

ಅ || ಅಪಃ=ಅಪಹರಿಸಲಿಕ್ಕೆ ಅಸಾಧ್ಯವಾದುದರಿಂದಲೂ, ಪರಿಹಾರ್ಯವಾಗದೆ ಇರುವುದರಿಂದಲೂ, ಮಹಾವ್ರತದಲ್ಲಿ ಅವಶ್ಯವಾಗಿ ಉಚ್ಚರಿಸಲಿಕ್ಕೆ ಯೋಗ್ಯವಾದುದರಿಂದಲೂ, ಅರ್ಹನಾಮಕವಾದ, ಅಥವಾ ಯಾಗದಲ್ಲಿ ಸುತ್ಯಾದಿನದಲ್ಲಿ ಚೆನ್ನಾಗಿ ಉಚ್ಚರಿಸಲಿಕ್ಕೆ ಯೋಗ್ಯವಾದುದರಿಂದ ಅಹರ್ನಾಮಕವಾದ, ಏತತ್=ಈ ಬೃಹತೀಸಹಸ್ರವನ್ನು (ಮಹಾವ್ರತಾಖ್ಯ ಯಾಗದಲ್ಲಿ) ಶಂಸಿಷ್ಯಂತಂ=ಹೊಗಳಲಿಕ್ಕೆ ಉದ್ಯುಕ್ತನಾದ, ವಿಶ್ವಾಮಿತ್ರಂ=ಹೋತನಾದ ವಿಶ್ವಾಮಿತ್ರಋಷಿಯನ್ನು ಕುರಿತು, ಇಂದ್ರಃ=ಯಜಮಾನನಾದ ಪುರಂದರನು, (ನೋಡಿ ವಿಷ್ಣು ವಾಯುಗಳಿಂದ ಆವಿಷ್ಟನಾಗಿ ಸ್ತೋತ್ರಮಾಡು ಎಂದು ಹೇಳಿ) ಉಪ=ವಿಶ್ವಾಮಿತ್ರನ ಸಮೀಪದಲ್ಲಿ, ನಿಷಸಾದ=ಕೂತುಕೊಂಡನು. ಸ ಹ=ಆ ವಿಶ್ವಾಮಿತ್ರಋಷಿಯು, ಅನ್ನಂ=(ನಿನ್ನನ್ನೇ ಅತಿಶಯಪ್ರೀತಿಗೆ ಕಾರಣವಾದುದರಿಂದ) ಅನ್ನದಂತೆ ತರ್ಪಕವಾದುದು, ಇತಿ=ಹೀಗೆ, ಅಭಿವ್ಯಾಹೃತ್ಯ=ಹೇಳಿ, ಬೃಹತೀಸಹಸ್ರಂ=ಬೃಹತೀಸಹಸ್ರವನ್ನು, ಶಶಂಸ=ಹೊಗಳಿದನು. ತೇನ=ಹೊಗಳಿದರಿಂದ, ಇಂದ್ರಸ್ಯ=ಇಂದ್ರನಲ್ಲಿಆವಿಷ್ಟನಾದ ವಾಯುವಿನಿಂದೊಡಗೂಡಿದ ಶ್ರೀ ಹರಿಗೆ ಪ್ರಿಯಂ=ಪ್ರೀತಿವಿಷಯವಾದ, ಧಾಮ=ಮಂದಿರವನ್ನು, ಉಪೇಯಾಯ=ಸಮೀಪಿಸಿದನು. ತಂ=ಆ ವಿಶ್ವಾಮಿತ್ರಋಷಿಯನ್ನು ಕುರಿತು, ಇಂದ್ರಃ=ಇಂದ್ರಾವಿಷ್ಟನಾದ ವಿಷ್ಣುವು, ಉವಾಚ=ಹೇಳಿದನು. ಋಷೇ=ವಿಶ್ವಾಮಿತ್ರಋಷಿಯೇ, (ಒಂದಾವರ್ತಿ ಸ್ತುತಿಸಿದರಿಂದ) ಮೇ=ನನ್ನ, ಪ್ರಿಯಂ=ಪ್ರೀತಿವಿಷಯವಾದ, ಧಾಮ=ಮಂದಿರವನ್ನು, ಉಪಾಗಾಃ=ಸಮೀಪಿಸಿದಿ, ವೈ=ನಿಶ್ಚಯವು. ಋಷೇ... ಸ ವಾ=ಸಿದ್ಧ ಸಾಲೋಕ್ಯವುಳ್ಳ ನೀನು, ದ್ವಿತೀಯಂ=ಎರಡನೇ ಆವರ್ತಿ, ಶಂಸ=ಇತಿ...... ಸ ಹ ಅನ್ನಮಿತ್ಯೇವ ಅಭಿವ್ಯಾಹೃತ್ಯ ಬೃಹತೀಸಹಸ್ರಂ ಶಶಂಸ......ತೇನ=ಎರಡನೇ ಆವರ್ತಿಸ್ತುತಿಸಿದ್ದರಿಂದ, ಇಂದ್ರಸ್ಯ ಪ್ರಿಯಂ ಧಾಮ ಉಪೇಯಾಯ, ತಂ ಇಂದ್ರ ಉವಾಚ ಋಷೇ ಪ್ರಿಯಂ ಮೇ ಧಾಮ ಉಪಾಗಾಃ ವೈ, ಋಷೇ ಸ ವಾ ·· ··· ···ತೃತೀಯಂ=ಮೂರನೇ ಆವರ್ತಿ, ಶಂಸ, ಇತಿ ಸ ಹ ಅನ್ನಮಿತ್ಯೇವ ಅಭಿವ್ಯಾಹೃತ್ಯ ಬೃಹತೀಸಹಸ್ರಂ ಶಶಂಸ··· ··· ತೇನ=ಮೂರನೇ ಆವರ್ತಿ ಸ್ತುತಿಸಿದರಿಂದ, ಇಂದ್ರಸ್ಯ ಪ್ರಿಯಂ ಧಾಮ ಉಪೇಯಾಯ ತಂ··· ··· ಇಂದ್ರಃ=ಶ್ರೀಹರಿಯು, (ಅತಿಸಂತುಷ್ಟನಾಗಿ), ಉವಾಚ ಋಷೇ ಪ್ರಿಯಂ ವೈ ಧಾಮ··· ···ಉಪಾಗಾಃ=(ಅಂತಃಪುರ ಪ್ರಾಪ್ತಿಸಾಧನವಾದ ಅನುಗ್ರಹವನ್ನು) ಹೊಂದಿದಿ. ತೇ=ನಿನಗೋಸ್ಕರ, ವರಂ=ನಾಲ್ಕನೇ ಒಂದು ವರವನ್ನು, ದದಾಮಿ=ಕೊಡುತ್ತೇನೆ. (ನಿನಗೆ ಅಪೇಕ್ಷಿತವಾದ ವರವನ್ನು ಕೇಳಿಕೋ) ಇತಿ ಸ ಹ=ವಿಶ್ವಾಮಿತ್ರ ಋಷಿಯು, ತ್ವಾಮೇವ=ನಿನ್ನನ್ನೇ, ಜಾನೀಯಾಂ=ತಿಳಿದುಕೊಳ್ಳುವೆನು, ಇತಿ=ಹೀಗೆ ಉವಾಚ=ಹೇಳಿದನು. ತಂ=ಆ ವಿಶ್ವಾಮಿತ್ರಋಷಿಯನ್ನು ಕುರಿತು, ಇಂದ್ರಃ=ಇಂದ್ರಾವಿಷ್ಟನಾದ ಶ್ರೀ ಪರಮಾತ್ಮನು, ಉವಾಚ=ಹೇಳಿದನು, ಋಷೇ······ಅಹಂ=ಇಂದ್ರಾವಿಷ್ಟನಾದ ನಾನು, ಪ್ರಾಣೋ ವೈ=ಪ್ರಕೃಷ್ಟಾನಂದರೂಪನಾದುದರಿಂದ ಪ್ರಾಣಶಬ್ದವಾಚ್ಯನೇ, ಅಹಂ=ಅಹೇಯನಾದುದರಿಂದ ಅಹಂನಾಮಕನು, ಅಸ್ಮಿ=ದೋಷಗಳನ್ನು ನಿರಾಕರಿಸಿದರಿಂದಲೂ ಜ್ಞಾನರೂಪನಾದುದರಿಂದಲೂ 'ಅಸ್ಮಿ' ನಾಮಕನು. ಪ್ರಾಣಃ=ಪ್ರಾಣನಾಮಕನಾದ ನಾನೇ, ತ್ವಂ=ವ್ಯಾಪ್ತನಾದುದರಿಂದಲೂ ಜ್ಞಾನಿಯಾದುದರಿಂದಲೂ 'ತ್ವಂ' ನಾಮಕನು. ಪ್ರಾಣಃ=ಪ್ರಾಣನಾಮಕನಾದ ನಾನು, ಸರ್ವಾಣಿ=ಪೂರ್ಣನಾದರಿಂದ ಸರ್ವನಾಮವುಳ್ಳವನು, ಭೂತಾನಿ=ಸರ್ವರೂಪಗಳಲ್ಲಿ ಇರುವುದರಿಂದ ಭೂತನಾಮಕನು. ಪ್ರಾಣಃ=ಪ್ರಾಣನಾಮಕನಾದ ನಾನು, ಏಷಃ=ಸರ್ವೈಶ್ವರ್ಯಸ್ವರೂಪನಾದುದರಿಂದ ಏಷನಾಮಕನು, ಹಿ=ಪ್ರಸಿದ್ಧವು. ಯ ಏಷಃ=ಯಾವ ಈತನು, ತಪತಿ=(ಸೂರ್ಯನಲ್ಲಿದ್ದು ಎಲ್ಲಾ ಜಗತ್ತನ್ನು) ಸುಡುತ್ತಾನೆ. ಮತ್ತು ಪ್ರಕಾಶಗೊಳಿಸುತ್ತಾನೆ.

ಸಃ=ತಪನನಾಮಕನಾದ ನಾನು. ಏತೇನ ರೂಪೇಣ=ಸೂರ್ಯನಲ್ಲಿರತಕ್ಕ ರೂಪದಿಂದ, ಸರ್ವಾಃ ದಿಶಃ=ಎಲ್ಲಾ ದಿಕ್ಕುಗಳನ್ನು, ವಿಷ್ಟಃ=ಪ್ರವೇಶ ಮಾಡಿದವನು, ಅಸ್ಮಿ=ಆಗಿರುತ್ತೇನೆ. ತಸ್ಯ=ಹೀಗೆ ಸರ್ವನಾಮವುಳ್ಳ, ಮೇ=ನನಗೆ, ಅನ್ನಂ=ಅನ್ನಾಭಿಮಾನಿನಿಯಾದ ಲಕ್ಷ್ಮೀದೇವಿಯು, ಮಿತ್ರಂ=ಭೋಗ್ಯಳಾದುದರಿಂದ ಹೆಂಡತಿಯು. ದಕ್ಷಿಣಂ=(ದಕ್ಷೇ ಇನಃ ಪತಿರ್ಯಸ್ಯ ಎಂಬೀ ವ್ಯುತ್ಪತ್ತಿಯಿಂದ) ದಕ್ಷಿಣಭಾಗದಲ್ಲಿದ್ದ ಶ್ರೀಹರಿಯು ಸ್ವಾಮಿಯಾಗಿ ಉಳ್ಳವಳಾದುದರಿಂದ 'ದಕ್ಷಿಣಾ' ಎಂದು ಹೆಸರುಳ್ಳವಳು. ತತ್=ರಮಾಭಿಮನ್ಯಮಾನವಾದ ಅನ್ನವು, ವೈಶ್ವಾಮಿತ್ರಂ=ವಿಶ್ವಾಮಿತ್ರ ಋಷಿಯಿಂದ ದೃಷ್ಟವಾದ ಬೃಹತೀಸಹಸ್ರವೇ. ಏಷಃ=ಈ, ತಪನ್ನೇವ=ಸುಡತಕ್ಕ ವಿಷ್ಣುವೇ, ಅಸ್ಮಿ=ನಾನಾಗಿರುತ್ತೇನೆ. ಇತಿ=ಹೀಗೆ, ಉವಾಚ=ಹೇಳಿದನು, ಹ=ಪ್ರಸಿದ್ಧವು. ॥ ೩ ॥

ತಾ ॥ (1) ಪ್ರಿಯವಾದ ಮಂದಿರದ ಸಮೀಪಪ್ರಾಪ್ತಿಯೆಂದರೆ ಶ್ರೀ ಪರಮಾತ್ಮನ ಸಾಲೋಕ್ಯರೂಪವಾದ ಫಲಪ್ರಾಪ್ತಿಗೆ ಸಾಧನವಾದ ಆತನಪ್ರಸಾದಪ್ರಾಪ್ತಿಯು ಎಂದರ್ಥವು. ಏಕೆಂದರೆ ಅದೇಕಾಲದಲ್ಲಿ ವಿಶ್ವಾಮಿತ್ರನು ಹರಿಯಮಂದಿರವನ್ನು ಹೊಂದಲಿಲ್ಲ. ಆದುದರಿಂದಲೇ ಸಾಮೀಪ್ಯಾರ್ಥಕವಾದ ಉಪಶಬ್ದವು ಅಡೆ. ಅಂತೂ ಸಾಧನ ಸಂಪೂರ್ತಿಯಾದರೆ ಫಲವಿಲಂಬ ವಿರುವುದಿಲ್ಲವಷ್ಟೆ? (೧) ಒಂದಾವರ್ತಿ ಸ್ತುತಿಸಿದರಿಂದ ಸಾಲೋಕ್ಯಸಾಧನ ಪ್ರಸಾದಪ್ರಾಪ್ತಿಯು. (೨) ಎರಡನೇ ಆವರ್ತಿಸ್ತುತಿಸಿದರಿಂದ ಭಗವತ್ಪುರಪ್ರಾಪ್ತಿಗೆ ಸಾಧನವಾದ ಪ್ರಸಾದಪ್ರಾಪ್ತಿಯು. (೩) ಮೂರನೇ ಆವರ್ತಿಸ್ತುತಿಸಿದರಿಂದ ಅಂತಃ ಪುರಪ್ರಾಪ್ತಿಗೆ ಸಾಧನವಾದ ಪ್ರಸಾದಪ್ರಾಪ್ತಿಯು. ಪುನಃ ಅಪೇಕ್ಷಿತವಾದ ವರವನ್ನು ಕೇಳಿಕೋ ಎಂದು (4) ನಾಲ್ಕನೇ ವರವನ್ನು ಕೊಡುವಾಗ ನಿನ್ನನ್ನೇ ತಿಳಿಯುವೆನು ಎಂದು ವಿಶ್ವಾಮಿತ್ರನು ಹೇಳಿದನು. ಇಲ್ಲಿ ವಿಶ್ವಾಮಿತ್ರನಿಗೆ ಇಂದ್ರನಲ್ಲಿ ತೇಜಸ್ಸು ಹೆಚ್ಚಿಗೆ ಇರುವುದರಿಂದ ಮತ್ತೊಬ್ಬನೂ ಇದ್ದಾನೆ. ಆದರೆ ಪ್ರಾಯಶಃ ಈತನು ವಿಷ್ಣುವೇ ಆಗಬೇಕು. ಮತ್ತೊಬ್ಬಗೆ ಇಂತಹ ತೇಜಸ್ಸು ಕೂಡಲಾರದು. ಈತನು ವಿಷ್ಣುವೇ ಆದರೆ ವಿಶೇಷಾಕಾರವಾಗಿ ತಿಳಿಯಲ್ಪಡಬೇಕು. ಅಂತೂ ನಿನ್ನಲ್ಲಿ ಆವಿಷ್ಟವನ್ನು ಪ್ರಥಮತಃ ತಿಳಿಯುವೆನು. ಆತನು ವಿಷ್ಣುವಾದರೆ ನಿನ್ನಲ್ಲಿ ಆವಿಷ್ಟನಾದ ವಿಷ್ಣುವನ್ನೇ ವಿಶೇಷಾಕಾರವಾಗಿ ತಿಳಿಯುವೆನು. ಈ ಪ್ರಕಾರವಾಗಿ ಎರಡು ಅಭಿಪ್ರಾಯದಿಂದ ಕೇಳಿದ ವಿಶ್ವಾಮಿತ್ರ ಋಷಿಯನ್ನು ಕುರಿತು ಇಂದ್ರಾವಿಷ್ಟನಾದ ಹರಿಯು ಹೇಳಿದನು. ಇದರಲ್ಲಿ ಎರಡನೇ ಪ್ರಶ್ನೆಯು ಶ್ರೇಷ್ಠವಾದುದರಿಂದ ಅದಕ್ಕೇನೇ ಪ್ರಥಮತಃ ಉತ್ತರವನ್ನು ಹೇಳುತ್ತಾರೆ. 'ಪ್ರಾಣೋವಾ ಅಹಮಸ್ಮಿ' ಇತ್ಯಾದಿಯು. ಒಂದನೆಯ ಪ್ರಶ್ನೆಗೆ ಉತ್ತರವನ್ನು ಹೇಳುತ್ತಾರೆ. 'ಏಷ ತಪನ್ನೇವಾಸ್ಮೀತಿ ಹೋವಾಚ' ಇತ್ಯಾದಿಯು.

ಭಾ॥ (a) ವೃತ್ರಂ ಹತ್ವಾ ಪುರೇಂದ್ರಸ್ತು ಮಹೇಂದ್ರತ್ವಾಭಿಪತ್ತಯೇ । ಮಹಾವ್ರತಂ ಕರ್ಮ ಚಕ್ರೇ ಹೌತ್ರಂ ಚಕ್ರೇಽತ್ರ ಕೌಶಿಕಃ ॥ ಭೃಗುರಧ್ವರ್ಯುರಭವದ್ಬ್ರಹ್ಮ ಬ್ರಹ್ಮಾಭವತ್ಸ್ವಯಂ । ಉದ್ಗಾತಾ ವಾಯುರಭವತ್ (b) ಸ್ವಯಂ ನಾರಾಯಣಃ ಪ್ರಭುಃ ॥ ಸಾದಸ್ಯಮಕರೋತ್ತತ್ರ ತದನ್ಯೇಽನ್ಯೇಽಪಿ ಚರ್ತ್ವಿಜಃ । ಬೃಹತೀಸಹಸ್ರಂ ಶಂಸಿಷ್ಯನ್ಯದಾ ಸಸ್ಮಾರ ಕೇಶವಂ ॥ ವಾಯುನಾ ಸಹ ದೇವೇಶಸ್ತದಾ ವಾಸವಮಾವಿಶತ್ । (c) ಆವಿಷ್ಟೋ ವಿಷ್ಣುನಾಥೇಂದ್ರೋ ವಾಯುನಾ ಸಹ ಕೌಶಿಕಂ ॥ ಶಂಸೇತ್ಯುಕ್ತ್ವಾ ನಿಷಣ್ಣೋಽಭೂದಿದಮನ್ನಂ ತವೇತಿ ಸಃ । ಋಕ್ಸಹಸ್ರಂ ಶಶಂಸಾಥ ಯಜ್ಞಾಂಗತ್ವೇನ ಭಕ್ತಿತಃ ॥ ತಚ್ಛ್ರುತ್ವಾ ತುಷ್ಟಿಮಗಮತ್ಕೇಶವೋ ವಾಯುಸಂಯುತಃ । (d) ದ್ವಿತೀಯ ವಾರಂ ಶಂಸೇತಿ ಪ್ರಾಹ ತಂ ಚ ಜನಾರ್ದನಃ ॥

ಪ್ರೀತ್ಯೈವ ಶಕ್ರಮಾವಿಷ್ಟೋ ವಿಶ್ವಾಮಿತ್ರಃ ಶಶಂಸ ತತ್ । ಅತಿಪ್ರಿಯತ್ವಾದ್ಭಗವಾನ್ಪುನರಪ್ಯಾಹ ಕೌಶಿಕಂ ॥ ತೃತೀಯಂ ಚ ಶಶಂಸಾಸೌ ವಿಷ್ಣೋರನ್ನಂ ಪ್ರಕಲ್ಪಯತ್ । (e) ತತೋಽತಿತುಷ್ಟೋ ಭಗವಾನ್ ದದಾಮಿ ವರಮಿತ್ಯಮುಂ ॥ ಊಚೇ ಸ ಪ್ರಥಮೇ ತ್ವೇವ ನಿಜಸಾಲೋಕ್ಯಮೀಶ್ವರಃ । ಪ್ರಾದಾದ್ದ್ವಿತೀಯೇ ಸಾಮೀಪ್ಯಂ ತೃತೀಯೇ ಪುನರೇವ ಚ ॥ ವರಂ ದದಾನೀತ್ಯುಕ್ತಃ ಸ ಮುನಿಃ ಪ್ರಾಹ ಜನಾರ್ದನಂ । ಸಮ್ಯಕ್ತ್ವಾಮೇವ ಜಾನೀಯಾಮಿತಿ ಮೋಕ್ಷೇ ಸುಖೋಚ್ಛ್ರಿತಾಂ ॥ ಇತ್ಥಂಸ್ತಂ ಪ್ರಾಹ ಭಗವಾನಿಂದ್ರಸ್ಥೋ ವಾಯುಸಂಯುತಃ । (f) ಸರ್ವನಾಮಾಹಮಸ್ಮ್ಯೇಕ ಇತಿ ಜ್ಞಾನಂ ಮಮೋತ್ತಮಂ ॥ ಯಸ್ಮಾತ್ಸರ್ವಗುಣತ್ವಂ ಸ್ಯಾತ್ಸರ್ವನಾಮತ್ವ ಏವ ತು । ನ ಹಿ ದೋಷಾಭಿಧಾಯೀನಿ ವಿಷ್ಣೋರ್ನಾಮಾನಿ ಕಾನಿಚಿತ್ ॥ (g) ಅದೋಷತ್ವಾನ್ಮಹಾವಿಷ್ಣೋರ್ನ ಸಾಮಾನ್ಯವಚಾಂಸ್ಯಪಿ । ಸರ್ವೋತ್ತಮಗುಣಾತ್ಮತ್ವಾತ್ಸದಾ ನಾರಾಯಣಸ್ಯ ಹಿ ॥ ಸರ್ವೋತ್ತಮಗುಣಾನೇವ ನಾಮಾನ್ಯಾಚಕ್ಷತೇ ಹರೇಃ ।

ಅ॥ (a) ದೇವೇಂದ್ರನಾದರೂ ವೃತ್ರಾಸುರನನ್ನು ಸಂಹರಿಸಿ ಸುರಾಧಿಪತ್ಯವು ಸ್ಥಿರವಾಗುವುದಕ್ಕೋಸ್ಕರ ಮಹಾವ್ರತಾಖ್ಯಯಾಗವನ್ನು ಮಾಡಿದನು. ಈ ಯಾಗದಲ್ಲಿ ವಿಶ್ವಾಮಿತ್ರ ಋಷಿಯು ಹೋತೃತ್ವವನ್ನೂ (ಅಂದರೆ ಋಗ್ವೇದಾಭಿಜ್ಞನಾಗಿ ಹೋಮಮಾಡುವಿಕೆಯನ್ನು) ಹೊಂದಿದನು. ಭೃಗುಋಷಿಯು ಅಧ್ವರ್ಯುವು ಆದನು. ಚತುರ್ಮುಖನು ತಾನೇ ಬ್ರಹ್ಮನಾದನು. (ಬ್ರಹ್ಮತ್ವವನ್ನು ಹೊಂದಿದನು) ವಾಯುದೇವರು ಉದ್ಗಾತರಾದರು (ಸಾಮವೇದಗಾಯಕರಾದರು.)॥ (b) ಸಮರ್ಥರಾದ ನಾರಾಯಣದೇವರು ತಾನೇ ಸಭಿಕತ್ವವನ್ನು ಹೊಂದಿದರು. ಅದರಲ್ಲಿ ಅವರಿಂದ ಇತರರಾದ ಋಷ್ಯಾದಿಗಳು ಋತ್ವಿಕ್‌ಗಳಾದರು. ಪೂರ್ವೋಕ್ತರಿಂದ ಇತರರು ಉಪಋತ್ವಿಕ್‌ಗಳಾದರು. ಯಾವಾಗ ಬೃಹತೀಸಹಸ್ರವನ್ನು ಹೊಗಳುವವನಾಗಿ ಶ್ರೀಪರಮಾತ್ಮನನ್ನು ಸ್ಮರಿಸಿದನೋ ಆಗ ಬ್ರಹ್ಮಾದಿದೇವತೆಗಳಿಗೆ ನಿಯಾಮಕನಾದ ಶ್ರೀಪರಮಾತ್ಮನು ವಾಯುದೇವರಿಂದೊಡಗೂಡಿ ದೇವೇಂದ್ರನನ್ನು ಪ್ರವೇಶಿಸಿದನು. ॥ (c) ಆಮೇಲೆ 'ವಿಷ್ಣುವಿನಿಂದ ಪ್ರವಿಷ್ಟನಾದ ದೇವೇಂದ್ರನು ವಾಯುದೇವರಿಂದೊಡಗೂಡಿ ವಿಶ್ವಾಮಿತ್ರ ಋಷಿಯನ್ನು ಕುರಿತು (ಬೃಹತೀಸಹಸ್ರವನ್ನು) ಸ್ತುತಿಸು' ಎಂದು ಹೇಳಿ ಕೊತುಕೊಂಡನು. ಆ ವಿಶ್ವಾಮಿತ್ರ ಋಷಿಯು ನಿನಗೆ ಇದು ಅನ್ನವು, (ತರ್ಪಕವು) ಎಂದು ಋಕ್ಕುಗಳ ಸಾವಿರವನ್ನು ಭಕ್ತಿಪೂರ್ವಕವಾಗಿ ಯಾಗಕ್ಕೆ ಅಂಗವಾಗಿ ಸ್ತುತಿಸಿದನು. ಅದನ್ನು ಕೇಳಿ ವಾಯುದೇವರಿಂದ ಯುಕ್ತನಾದ ಶ್ರೀಪರಮಾತ್ಮನು ಸಂತೋಷವನ್ನು ಹೊಂದಿದನು. ॥ (d) ಎರಡನೇ ಆವೃತ್ತಿ ಸ್ತುತಿಸು ಎಂದು (ಬೃಹತೀಸಹಸ್ರದಲ್ಲಿಯೂ ವಿಶ್ವಾಮಿತ್ರರಲ್ಲಿಯೂ)ಪ್ರೀತಿಗೋಸ್ಕರ ಇಂದ್ರನನ್ನು ಪ್ರವೇಶಿಸಿದ ಶ್ರೀಪರಮಾತ್ಮನು, ವಿಶ್ವಾಮಿತ್ರ ಋಷಿಯನ್ನು ಕುರಿತು ಹೇಳಿದನು. ಅದನ್ನು ಆಗ ವಿಶ್ವಾಮಿತ್ರ ಋಷಿಯು ಸ್ತುತಿಸಿದನು. ಶ್ರೀಪರಮಾತ್ಮನು (ತನಗೆ ಬೃಹತೀಸಹಸ್ರವು) ಅತಿಶಯವಾಗಿ ಪ್ರೀತಿವಿಷಯವಾದುದರಿಂದ ಪುನಃವಿಶ್ವಾಮಿತ್ರಋಷಿಯನ್ನು ಕುರಿತು ಹೇಳಿದನು. ಆಗ ಈ ವಿಶ್ವಾಮಿತ್ರ ಋಷಿಯು ಶ್ರೀಪರಮಾತ್ಮನಿಗೆ ಅನ್ನವನ್ನು (ವಚನವಿಂದ) ನಿರ್ಮಿಸಿಯೇ ಮೂರನೇ ಆವೃತ್ತಿಯೂ ಹೊಗಳಿದನು. (e) ಆ ಮೇಲೆ ಶ್ರೀಪರಮಾತ್ಮನು ಅತ್ಯಂತಸಂತುಷ್ಟನಾದವನಾಗಿ ಈ ವರವನ್ನು ಕೊಡುತ್ತೇನೆ ಎಂದು ಹೇಳಿದನು. ಆ ಪರಮಾತ್ಮನು, ಒಂದನೇ

ಆವೃತ್ತಿಯಲ್ಲಿ ತನ್ನ ಸಾಲೋಕ್ಯವನ್ನು ಅಂದರೆ ತತ್ಸಾಧನೀಭೂತವಾದ ಪ್ರಸಾದವನ್ನೂ ಎರಡನೇ ಆವೃತ್ತಿ ಪಟ್ಟಣದಲ್ಲಿ ಆವಾಸರೂಪವಾದ ಸಾಮೀಪ್ಯವನ್ನೂ ಪುನಃ ಮೂರನೇ ಆವೃತ್ತಿ ಅಂತಃಪುರದಲ್ಲಿ ಆವಾಸರೂಪವಾದ ಸಾಮೀಪ್ಯವನ್ನೂ ಕೊಟ್ಟನು. (ಪುನಃ ನಾಲ್ಕನೆಯದ್ದಾದ) ವರವನ್ನು ಕೊಡುತ್ತೇನೆ ಎಂದು ಹೇಳಲ್ಪಟ್ಟ ಆ ವಿಶ್ವಾಮಿತ್ರ ಋಷಿಯು ಮುಕ್ತಿಯಲ್ಲಿ ಸುಖೋನ್ನತಿಯನ್ನು ಇಚ್ಛಿಸಿದವನಾಗಿ ಚೆನ್ನಾಗಿ ನಿನ್ನನ್ನೇ ತಿಳಿಯುವೆನು ಎಂದು ಶ್ರೀಪರಮಾತ್ಮನನ್ನು ಕುರಿತು ಹೇಳಿದನು. ಆ ವಿಶ್ವಾಮಿತ್ರ ಋಷಿಯನ್ನು ವಾಯುದೇವರಿಂದೊಡಗೂಡಿದ ಇಂದ್ರನಲ್ಲಿದ್ದ ಶ್ರೀಪರಮಾತ್ಮನು ಹೇಳಿದನು. ॥ (f) ನಾನು ಒಬ್ಬನೇ ಸರ್ವನಾಮವುಳ್ಳವನಾಗಿದ್ದೇನೆ. ನನಗೆ ಸರ್ವನಾಮಗಳೂ ಇವೆ ಎಂಬೀಜ್ಞಾನವು ಅತ್ಯುತ್ತಮವು. (ಇದೇ ವಿಶ್ವಾಮಿತ್ರ ಋಷಿಯಿಂದ ಪ್ರಾರ್ಥಿತವಾದ ವಿಶೇಷ ಜ್ಞಾನವು) ಎಂದನು. ಯಾವ ಕಾರಣದಿಂದ ಮುಖ್ಯವಾಗಿ ಸರ್ವನಾಮಗಳಿದ್ದರೇನೇ ಸರ್ವಗುಣವತ್ವವು ಆಗುವುದು. ಯಾವುದೊಂದು ನಾಮಧೇಯಗಳೂ ಶ್ರೀ ಪರಮಾತ್ಮನಿಗೆ ದೋಷವನ್ನು ಹೇಳುವವುಗಳು ಆಗಲಾರವು. ॥ (g) ಸರ್ವೋತ್ತಮನಾದ ಶ್ರೀ ಪರಮಾತ್ಮನು ನಿರ್ದೋಷಿಯಾದುದರಿಂದ ಸಾಮಾನ್ಯ ಮಾತುಗಳು ಅಂದರೆ ಗುಣದೋಷಗಳಲ್ಲಿ ಉದಾಸೀನಗಳಾದ ಕೇವಲ ಧರ್ಮಪ್ರತಿಪಾದಕಗಳಾದವುಗಳೂ ಕೂಡ ಆಗಲಾರವು. ಯಾವಾಗಲೂ ಶ್ರೀ ಪರಮಾತ್ಮನಿಗೆ ಸರ್ವೋತ್ತಮಗುಣಸ್ವರೂಪತ್ವವು ಇರುವುದರಿಂದ ಶ್ರೀ ಪರಮಾತ್ಮನಿಗೆ ಎಲ್ಲಾ ನಾಮಧೇಯಗಳೂ ಅತ್ಯುತ್ತಮಗಳಾದ ಗುಣಗಳನ್ನೇ ಹೇಳುತ್ತವೆ.

**ಭಾ॥** (a) ಯಾವಜ್ಜ್ಞಾನೇನ ಮೋಕ್ಷಃ ಸ್ಯಾತ್ತಾವಜ್ಜ್ಞಾತ್ವಾಽಪಿ ಕೌಶಿಕಃ । ಅಧಿಕಜ್ಞಾನಲಬ್ಧ್ಯರ್ಥಂ ಮೋಕ್ಷೇಽಧಿಕಸುಖಾಪ್ತಯೇ ॥ ಜಾನೀಯಾಂ ತ್ವಾಮಿತಿ ಪ್ರಾಹ ತಸ್ಮಾ ಆಹ ಸ ಕೇಶವಃ । ಇಂದ್ರಾವಿಷ್ಟಃ ಪ್ರಾಣನಾಮ ತಥಾಽನ್ಯಾಶ್ಚಾಭಿಧಾಃ ಪ್ರಭುಃ ॥ (b) ಪ್ರಕೃಷ್ಟಾನಂದರೂಪತ್ವಾತ್ಪ್ರಾಣ ಇತ್ಯಭಿಧೀಯತೇ । ಅಹೇಯತ್ವಾದಹಂ ನಾಮಾಸ್ಯಸನಾಮ್ನಿನುತೇರಪಿ ॥ ತತೋ ವೇತ್ತೀತಿ ಚ ತ್ವಂ ಸ ಪೂರ್ಣತ್ವಾತ್ಸರ್ವನಾಮಕಃ । ಸರ್ವಾಣಿ ಬಹುರೂಪತ್ವಾತ್ಸರ್ವರೂಪೇಷು ಪೂರಿತಃ ॥ (c) ಪ್ರಭೂತತ್ವಾದ್ಭೂತನಾಮಾ ಸರ್ವರೂಪಪ್ರಭೂತತಃ । ಬಹುರೂಪಃ ಸ ಭೂತಾನೀತ್ಯುಕ್ತೋ ವಿಷ್ಣುಸ್ಸನಾತನಃ ॥ ಸರ್ವೈಶ್ವರ್ಯಸ್ವರೂಪತ್ವಾದೇಷ ಇತ್ಯಭಿಧೀಯತೇ । ಸ ಏವ ಸೂರ್ಯಸಂಸ್ಥಸ್ಸನ್ಲೋಕಂ ತಪತಿ ಕೇಶವಃ ॥ (d) ಸರ್ವನಾಮವತಸ್ತಸ್ಯ ಮಮಾನ್ನಂ ಮಿತ್ರಮುಚ್ಯತೇ । ಅನ್ನಾಭಿಮಾನಿನೀ ಸಾಕ್ಷಾಚ್ಛ್ರೀರೇವ ಪ್ರಮದೋತ್ತಮಾ ॥ ಸಾಽನ್ನಮಿತ್ಯುಚ್ಯತೇ ವಿಷ್ಣೋರ್ಭೋಗ್ಯತ್ವಾನ್ಮಿತ್ರಮೇವ ಚ । ದಕ್ಷಭಾಗಸ್ಥಿತೇನತ್ವಾದ್ದಕ್ಷಿಣಂ ನಾಮ ಸೋಚ್ಯತೇ ॥ ತಸ್ಯಾ ಇನೋ ಹಿ ವಿಷ್ಣುಃ ಸ ದಕ್ಷಭಾಗೇ ಸ್ಥಿತಃ ಸದಾ । (e) ಯಸ್ಯಾಭಿಮಾನಿನ್ಯನ್ನಸ್ಯ ಲಕ್ಷ್ಮೀಃ ಸಾ ದೇವತೋತ್ತಮಾ ॥ ವೈಶ್ವಾಮಿತ್ರಂ ತದನ್ನಂ ತು ಋಕ್ಸಹಸ್ರಾತ್ಮಕಂ ಮತಂ । ವಿಶ್ವಾಮಿತ್ರೇಣ ದೃಷ್ಟತ್ವಾದ್ವೈಶ್ವಾಮಿತ್ರಮಿತೀರ್ಯತೇ ॥ (f) ಇಂದ್ರಾವಿಷ್ಟಃ ಕೋಽಯಮಿತಿ ಶಂಕಾಂ ಪರಿಹರನ್ಹರಿಃ । ಆದಿತ್ಯಸಂಸ್ಥಿತೋ ವಿಷ್ಣುಸ್ತಪನ್ನಸ್ಮೀತಿ ಚೋಚಿ

ವಾನ್ ‖ ತ್ವಾಂ ಜಾನೀಯಾಮಿತಿ ಪ್ರಶ್ನಂ ವಿಶ್ವಾಮಿತ್ರಸ್ಯ ಕುರ್ವತಃ । ಅಭಿಪ್ರಾಯದ್ವಯಂ ಹ್ಯಸ್ತಿ ಶಕ್ರಾವಿಷ್ಟೋ ನ ಚಾಪರಃ ‖ ಹರೇರಿತಿ ತು ಮೇ ತರ್ಕಸ್ತೇಜೋಬಾಹುಲ್ಯತೋಽಜನಿ । ತಸ್ಯ ತರ್ಕಸ್ಯ ಸತ್ಯತ್ವಂ ಜ್ಞಾತವ್ಯಂ ಪ್ರಥಮಂ ಮಯಾ ‖ (g) ದ್ವಿತೀಯಂ ಯದಿ ವಿಷ್ಣುಃಸ್ಯಾಜ್ಜ್ಞಾತವ್ಯೋ ಮೇ ವಿಶೇಷತಃ । ಇತ್ಯಭಿಪ್ರಾಯಮಸ್ಯೈವ ಜ್ಞಾತ್ವಾ ವಿಷ್ಣುಃ ಸನಾತನಃ ‖ ಅಭಿಪ್ರಾಯದ್ವಯಸ್ಯಾಪಿ ಪರಿಹಾರಂ ಹರಿರ್ದದೌ ‖ (h) ಪ್ರಾಣೋ ವಾ ಅಹಮಿತ್ಯಾದಿನಾಮಸಂದರ್ಭಮುಕ್ತವಾನ್ । ವಿಶೇಷಜ್ಞಾನಸಿಧ್ಯರ್ಥಂ ನಾಮ್ನಾಮುಕ್ತಿಃ ಪರಾತ್ಮನಃ ‖ ಇಂದ್ರಾವಿಷ್ಟಃ ಕೋಽಯಮಿತಿ ಶಂಕಾನುತ್ತ್ಯರ್ಥಮೇವಚ । ತಪನ್ನೇವಾಸ್ಮೀತ್ಯವದತ್ತಪಂತಂ ವೇದ ಸೋಽಪಿ ಹಿ ‖ ನಾರಾಯಣಂ ಸೂರ್ಯಗತಂ ಗಾಯತ್ರ್ಯೋಪಾಸಕೋ ಹಿ ಸಃ । ಇತಿ ಬ್ರಹ್ಮಾಂಡೇ ‖

ಅ ‖ (a) ಎಷ್ಟು ಜ್ಞಾನದಿಂದ ಮುಕ್ತಿಯಾಗುವುದೋ ಅಷ್ಟನ್ನು ವಿಶ್ವಾಮಿತ್ರಋಷಿಯು ತಿಳಿದರೂ ಅತ್ಯಧಿಕವಾದ ಜ್ಞಾನಲಾಭಕ್ಕಾಗಿಯೂ ಮುಕ್ತಿಯಲ್ಲಿ ಅಧಿಕವಾದ ಸುಖಪ್ರಾಪ್ತಿಗೋಸ್ಕರವೂ ನಿನ್ನನ್ನೇ ತಿಳಿಯುತ್ತೇನೆ ಎಂದು ಹೇಳಿದನು. ಇಂದ್ರನಲ್ಲಿ ಪ್ರವಿಷ್ಟನಾದ ಪ್ರಭುವಾದ ಆ ಪರಮಾತ್ಮನು ಆ ವಿಶ್ವಾಮಿತ್ರ ಋಷಿಗೋಸ್ಕರ ಪ್ರಾಣನೆಂಬೀ ಹೆಸರನ್ನೂ ಇತರಗಳಾದ ಹೆಸರುಗಳನ್ನೂ ಹೇಳಿದನು. ‖ (b) ಉತ್ಕೃಷ್ಟವಾದ ಆನಂದಸ್ವರೂಪನಾದುದರಿಂದ ಶ್ರೀ ಹರಿಯು ಪ್ರಾಣನೆಂದು ಹೇಳಲ್ಪಡುತ್ತಾನೆ. ಪರಿತ್ಯಾಗಮಾಡಲಿಕ್ಕೆ ಯೋಗ್ಯನಲ್ಲದೆ ಇರುವುದರಿಂದ 'ಅಹಂ' ಎಂದು ಹೆಸರುಳ್ಳವನು. (ಭಕ್ತರ ಪಾಪಗಳನ್ನು) ನಿರಸನಮಾಡುವುದರಿಂದಲೂ ಜ್ಞಾನರೂಪನಾದುದರಿಂದಲೂ 'ಅಸ್ಮಿ' ಎಂದು ಹೇಳಲ್ಪಡುತ್ತಾನೆ. (ಸರ್ವತ್ರ) ವ್ಯಾಪ್ತನಾಗಿ ತಿಳಿಯುತ್ತಾನೆ. ಆದುದರಿಂದ 'ತ್ವಂ' ಎನ್ನಿಸಿ ಕೊಳ್ಳುತ್ತಾನೆ. ಆತನು ಗುಣಪರಿಪೂರ್ಣನಾದುದರಿಂದ 'ಸರ್ವ' ಎಂದು ಹೆಸರುಳ್ಳವನು. ಅನಂತರೂಪಗಳುಳ್ಳವನಾದುದರಿಂದಲೂ ಎಲ್ಲಾ ರೂಪಗಳಲ್ಲಿ ಪೂರ್ಣನಾದುದರಿಂದಲೂ 'ಸರ್ವಾಣಿ' ಎಂದು ಹೇಳಲ್ಪಡುತ್ತಾನೆ. ‖ (c) ಪೂರ್ಣನಾದುದರಿಂದಲೂ ಅಥವಾ ನಿರಂತರದಲ್ಲಿ ಆವಿರ್ಭೂತ ಗುಣಗಳುಳ್ಳವನಾದುದರಿಂದಲೂ ಅಥವಾ ಸ್ವತಂತ್ರನಾಗಿ ಇದ್ದುದರಿಂದಲೂ 'ಭೂತ' ಎಂದು ಹೆಸರುಳ್ಳವನು. (ಯಾವ ಕಾರಣದಿಂದ) ಬಹುರೂಪವುಳ್ಳವನೋ (ಆದುದರಿಂದ) ಎಲ್ಲಾ ರೂಪಗಳಲ್ಲಿ ಪೂರ್ಣನಾದುದರಿಂದ 'ಭೂತಾನಿ' ಎಂದು ಹೇಳಲ್ಪಟ್ಟಿದ್ದಾನೆ. ವಿಷ್ಣುವು ಸನಾತನನು (ಯಾವಾಗಲೂ ಇರುವವನು) ಆದುದರಿಂದ ಭೂತನಾಮಕನು. ಸರ್ವೈಶ್ವರ್ಯಸ್ವರೂಪನಾದುದರಿಂದ 'ಏಷಃ' ಎಂದು ಹೇಳಲ್ಪಡುತ್ತಾನೆ. ಆ ಹರಿಯೇ ಸೂರ್ಯನಲ್ಲಿದ್ದವನಾಗಿ ಜಗತ್ತನ್ನು ಸುಡುತ್ತಾನೆ. ‖ (d) ಸರ್ವನಾಮಗಳುಳ್ಳ ಅಂತಹ ನನಗೆ ಅನ್ನಾಭಿಮಾನಿನಿಯಾದ ಲಕ್ಷ್ಮೀದೇವಿಯು ಭಾರ್ಯಳಾಗಿ ಹೇಳಲ್ಪಡುತ್ತಾಳೆ. ಅನ್ನಕ್ಕೆ ಅಭಿಮಾನಿಯಳಾದ ಸಾಕ್ಷಾಲ್ಲಕ್ಷ್ಮೀದೇವಿಯೇ ಸ್ತ್ರೀಯರಲ್ಲಿ ಉತ್ತಮಳು. ಆ ಲಕ್ಷ್ಮೀದೇವಿಯು ಶ್ರೀ ಹರಿಗೆ ಭೋಗ್ಯಳಾದುದರಿಂದ 'ಅನ್ನಂ' ಎಂದೂ 'ಮಿತ್ರಂ' ಎಂದೂ ಹೇಳಲ್ಪಡುತ್ತಾಳೆ. ಅವಳು ದಕ್ಷಿಣಭಾಗದಲ್ಲಿರತಕ್ಕ ಹರಿಯು ಸ್ವಾಮಿಯಾಗಿ ಉಳ್ಳವಳಾದುದರಿಂದ 'ದಕ್ಷಿಣಂ' ಎಂದು ಹೇಳಲ್ಪಡುತ್ತಾಳೆ, ಅವಳಿಗೆ ಪತಿಯಾದವನು ಶ್ರೀ ಪರಮಾತ್ಮನಷ್ಟೇ? ಆತನು ಯಾವಾಗಲೂ ದಕ್ಷಿಣಭಾಗದಲ್ಲಿರತಕ್ಕವನು. ‖ (e) ಯಾವ ಅನ್ನಕ್ಕೆ ಲಕ್ಷ್ಮೀದೇವಿಯು ಅಭಿಮಾನಿಯಳೋ ಆ ಲಕ್ಷ್ಮೀದೇವಿಯು ಎಲ್ಲಾ ದೇವತೆಗಳಲ್ಲಿಯೂ ಉತ್ತ

ವುಳು. ವಿಶ್ವಾಮಿತ್ರ ಸಂಬಂಧಿಯಾದ ಆ ಅನ್ನವಾದರೂ ಋಕ್ಕುಗಳ ಸಹಸ್ರಸ್ವರೂಪವಾಗಿ ಸಮ್ಮತವಾಗಿದೆ. ಆ ಅನ್ನವು ವಿಶ್ವಾಮಿತ್ರ ಋಷಿಯಿಂದ ಕಾಣಲ್ಪಟ್ಟ ಪ್ರಯುಕ್ತ 'ವೈಶ್ವಾಮಿತ್ರ' ವೆಂದು ಹೇಳಲ್ಪಡುತ್ತದೆ. ॥ (f) ಇಂದ್ರನಲ್ಲಿ ಆವಿಷ್ಟನಾದ ಈತನು ಯಾರು ಎಂಬೀ ಸಂದೇಹ ವನ್ನು ಪರಿಹರಿಸುವ ಶ್ರೀ ಹರಿಯು ಆದಿತ್ಯನಲ್ಲಿದ್ದು ಸುಡತಕ್ಕವನು ವಿಷ್ಣುವೇ ನಾನಾಗಿದ್ದೇನೆ. ಎಂದೂ ಹೇಳಿದನು. ನಿನ್ನನ್ನು ತಿಳಿಯುತ್ತೇನೆ ಎಂದು ಪ್ರಶ್ನೆಯನ್ನು ಮಾಡುವ ವಿಶ್ವಾಮಿತ್ರ ಋಷಿಗೆ ಎರಡು ಅಭಿಪ್ರಾಯವು ಇದೆ. 'ಇಂದ್ರನಲ್ಲಿ ಆವಿಷ್ಟನಾದವನು ಪರಮಾತ್ಮನಿಂದ ಇತ ರನು ಅಲ್ಲ.' ಎಂಬೀ ಅನುಮಿತಿಯು ತೇಜೋಬಾಹುಳ್ಯಾಖ್ಯ ಲಿಂಗದಿಂದ ಹುಟ್ಟಿತು. ಅಂತಹ ತರ್ಕಕ್ಕೆ (ಅನುಮಿತಿಗೆ) ಪ್ರಾಮಾಣ್ಯವು (ಸಂವಾದದಿಂದ) ಪ್ರಥಮದಲ್ಲಿ ನನ್ನಿಂದ ತಿಳಿಯಲ್ಪಡ ಬೇಕು. (ಅಂತೂ ಸ್ವವಿಷಯ ವಿಷಯಕ ಪ್ರಮಾಣಾಂತರವು ದಾರ್ಢ್ಯಕ್ಕೆ ಕಾರಣವು ಎಂದು ಒಂದನೇ ಅಭಿಪ್ರಾಯವು. ॥ (g) ಎರಡನೆದ್ದು, ವಿಷ್ಣುವಾಗಿದ್ದರೆ (ಪ್ರಮಾಣಸಮೂಹದಿಂದ) ವಿಷ್ಣುವೇಸರಿ ಎಂದು ವ್ಯವಸ್ಥೆಯಾದರೆ ನನ್ನಿಂದ ವಿಶೇಷಾಕಾರವಾಗಿ ತಿಳಿಯಲ್ಪಡಬೇಕು. ವಿಶ್ವಾ ಮಿತ್ರ ಋಷಿಯ ಈ ಅಭಿಪ್ರಾಯವನ್ನು ತಿಳಿದೇ ಸನಾತನನಾದ ಶ್ರೀ ಹರಿಯು ಎರಡು ಅಭಿಪ್ರಾ ಯಕ್ಕೂ ಪರಿಹಾರವನ್ನು ಕೊಟ್ಟನು. ॥ (h) (ಶ್ರೀ ಹರಿಯು) 'ಪ್ರಾಣೋ ವಾ ಅಹಂ' ಇತ್ಯಾದಿ ವಾಕ್ಯದಿಂದ ನಾಮಗಳ ಸಂದರ್ಭವನ್ನು ಹೇಳಿದನು. (ಭಾರತಾದಿಗಳಲ್ಲಿ) ಶ್ರೀ ಪರ ಮಾತ್ಮನ ('ವಿಶ್ವಂ ವಿಷ್ಣುಃ' ಇತ್ಯಾದಿ) ನಾಮಗಳ ಕಥನವು ವಿಶೇಷ ಜ್ಞಾನಸಿದ್ಧ್ಯರ್ಥವಾಗಿಯೇ (ಪ್ರಸಿದ್ಧವಾಗಿಯದೆ) ಇಂದ್ರನಲ್ಲಿ ಆವಿಷ್ಟನಾದವನು ಯಾರು ಎಂಬೀ ಶಂಕಾಪರಿಹಾರಾರ್ಥ ವಾಗಿಯೇ 'ತಪನ್ನೇವಾಸ್ಮಿ' ಎಂದು ಹೇಳಿದನು. ಆ ವಿಶ್ವಾಮಿತ್ರ ಋಷಿಯೂ ಕೂಡ ಸುಡತಕ್ಕ ವನೂ ವ್ಯಾಪ್ತನೂ ಆದ ನಾರಾಯಣನನ್ನು ತನ್ನಿಂದ ದೃಷ್ಟವಾದ ಗಾಯತ್ರಿಯಿಂದ ತಿಳಿದಿದ್ದಾನೆ. ಪ್ರಮಾಣಪ್ರಮಿತವು. ಆ ವಿಶ್ವಾಮಿತ್ರ ಋಷಿಯಾದರೂ ಗಾಯತ್ರ್ಯುಪಾಸಕನಷ್ಟೇ. ಎಂದು ಬ್ರಹ್ಮಾಂಡ ಪುರಾಣದಲ್ಲಿ ಹೇಳಿಯದೆ.

ಭಾ॥ **(a)** ಉಪನಿಷಣ್ಣಮಿಂದ್ರಂ ದೃಷ್ಟ್ವಾಽಪಿ ತ್ವಾಮೇವ ಜಾನೀಯಾಮಿತಿ ವರಸ್ವೀಕಾರಾದಿಂದ್ರಾದೇವ ಚೇಂದ್ರಾವಿಷ್ಟೋ ಭಗವಾನತ್ರೋಕ್ತ ಇತಿ ಜ್ಞಾಯತೇ । **(b)** ಇಂದ್ರಂ ತು ಜಾನಾತ್ಯೇವ ಹಿ ವಿಶ್ವಾಮಿತ್ರಃ ॥ ಭಗ ವಂತಮಪಿ ಸ್ವರೂಪತ ಆಗತಂ ಜಾನಾತ್ಯೇವ । ವಿಶೇಷಜ್ಞಾನಪ್ರಾರ್ಥನೇ ಪ್ರಾಣೋ ವಾ ಅಹಮಸ್ಮ್ಯೃಷ ಇತ್ಯಾದಿಕಮೇವ ಪೂರ್ಯತೇ ॥ ಏಷ ತಪನ್ನೇವಾಸ್ಮೀತಿ ವ್ಯರ್ಥಂ । ಪ್ರಾಣೋ ಹ್ಯೇಷ ಯ ಏಷ ತಪತೀತ್ಯು ಕ್ತತ್ವಾತ್ ॥ **(c)** ಸ ಏತೇತ ರೂಪೇಣ ಸರ್ವಾ ದಿಶೋ ವಿಷ್ಟೋಽಸ್ಮೀ ತ್ಯಾದಿನಾಪ್ಯಾವಿಷ್ಟಸ್ಯ ವಿಷ್ಣುತ್ವಂ ಕಿಂಚಿಜ್ಜ್ಞಾಯತೇ । ತಥಾಪ್ಯೇ ತೇನೇತಿ ತೃತೀಯಾತ್ವಾತ್ಕರಣತ್ವಾಶಂಕಾ ಭವತಿ ॥ ತಸ್ಯ ಮ ಇತಿ ವೈಯಧಿ ಕರಣ್ಯಮಿತಿ ಚ । ಅತೋ ಭಗವನ್ನಾಮಾನಿ ಪೃಥಗುತ್ಕ್ವಾಽಹಂ ವಿಷ್ಣು ರಿತ್ಯೇಷ ತಪನ್ನೇವಾಸ್ಮೀತ್ಯುವಾಚ ॥ ಇಂದ್ರಶರೀರಮೇವ ಪಶ್ಯತೋ ವಿಶ್ವಾ ಮಿತ್ರಸ್ಯ ತರ್ಕಮಾತ್ರತೋ ಭಗವಾನಿತಿ ಕಿಂಚಿಜ್ಜ್ಞಾನತ ಇತಿ ಜ್ಞಾಯತೇ। ನ ಚೇಂದಸ್ಯ ಪ್ರಾಣಶಬ್ದಃ ಸರ್ವಶಬ್ದಾಭಿಧೇಯತ್ವಂ ಚ ವಿದ್ಯತೇ ॥ **(d)** ಅಜಸ್ಯ ನಾಭಾವಧ್ಯೇಕಮರ್ಪಿತಮಿತ್ಯುಕ್ತಸ್ಯ ಪದ್ಮನಾಭಸ್ಯ ಹಿ ಯೋ ದೇವಾನಾಂ ನಾಮಧಾ ಏಕ ಏವೇತಿ ಸರ್ವದೇವಾಭಿಧಾನತ್ವ

ಮುಕ್ತಂ । ಇಂದ್ರೇ ಹೀಂದ್ರಶಬ್ದೋಽಪಿ ನ ಮುಖ್ಯತೋ ವರ್ತತೇ ॥
ಪರಮೈಶ್ವರ್ಯಾಭಾವಾತ್ । ಇಂದ್ರಶಬ್ದೋಽಪಿ ವಿಷ್ಣಾವೇವ ವರ್ತತೇ ।
ಸ ಹಿ ಪರಮೇಶ್ವರಃ ॥

ಅ ॥ (a) ಸಮೀಪದಲ್ಲಿ ಕೂತುಕೊಂಡಿದ್ದ ಇಂದ್ರನನ್ನು ನೋಡಿದರೂ ನಿನ್ನನ್ನೇ ತಿಳಿಯುತ್ತೇನೆ ಎಂದು ಇಂದ್ರನಿದ್ದೆಶೆಯಿಂದಲೇ ವರವನ್ನು ಸ್ವೀಕಾರ ಮಾಡಿರುವುದರಿಂದ ಇಂದ್ರನಲ್ಲಿ ಆವಿಷ್ಟನಾದವನು ಪರಮಾತ್ಮನು ಇಲ್ಲಿ ಹೇಳಲ್ಪಟ್ಟಿದ್ದಾನೆ ಎಂದು ತಿಳಿಯಲ್ಪಡುತ್ತದೆ.

ತಾ ॥ ನಿನ್ನನ್ನೇ ತಿಳಿಯುತ್ತೇನೆ ಎಂದು ಶ್ರೇಷ್ಟನಾದ ಜ್ಞಾನವನ್ನೇ ಪ್ರಾರ್ಥಿಸಿರುವುದರಿಂದ ಆ ಪ್ರಶ್ನೆಗೆ ಇಂದ್ರವಿಷಯಕತ್ವವು ಕೂಡದೆ ಇರುವುದರಿಂದ ಇಂದ್ರನಲ್ಲಿ ಆವಿಷ್ಟನಾದ ಪರಮಾತ್ಮನೇ ಇಲ್ಲಿ 'ತ್ವಾಂ' ಎಂದು ಉದ್ದೇಶ್ಯವಾಗಿ ಹೇಳಲ್ಪಡುತ್ತೇನೆ ಎಂದು ತಿಳಿಯುತ್ತದೆ. ಮತ್ತು ಪ್ರಶ್ನವಾಕ್ಯದಲ್ಲಿ ಈ ಪ್ರಸಿದ್ಧ ಇಂದ್ರನ ಜ್ಞಾನಾರ್ಥವಾಗಿ ಪ್ರಾರ್ಥನೆಯಾದರೆ ಆತನಿಂದಲೇ ವರವನ್ನು ಸ್ವೀಕಾರಮಾಡಬೇಕಾಗಿದ್ದಿತು. ಅದು ಮೇಲೆ ಹೇಳುವರೀತಿಯಾಗಿ ಕೂಡದೆ ಇರುವುದರಿಂದ ಈ ಪ್ರಶ್ನವಾಕ್ಯದಲ್ಲಿಯೂ 'ಪ್ರಾಣೋ ವಾ ಅಹಂ' ಇತ್ಯಾದಿ ಪರಿಹಾರ ವಾಕ್ಯದಲ್ಲಿಯೂ ಶ್ರೀ ಹರಿಯೇ ಹೇಳಲ್ಪಟ್ಟಿದ್ದಾನೆ ಎಂದು ತಿಳಿಯಲ್ಪಡುತ್ತದೆ. ॥ (b) ವಿಶ್ವಾಮಿತ್ರಋಷಿಯು ಇಂದ್ರನನ್ನು ತಿಳಿಯುತ್ತಾನೆ ಅಂದರೆ ಇಂದ್ರನಿಂದ ಹೋತೃವಿನ ಕೃತ್ಯದಲ್ಲಿ ವಿನಿಯುಕ್ತನಾದ ವಿಶ್ವಾಮಿತ್ರ ಋಷಿಯು ಮಹಾವ್ರತದಲ್ಲಿ ಯಜಮಾನನಾದ ಇಂದ್ರನನ್ನು ವಿಶೇಷಾಕಾರವಾಗಿ ತಿಳಿದಿರುತ್ತಾನೆಯೇ ಸರಿ. ॥ ಶ್ರೀ ಹರಿಯನ್ನು ಬಂದವನನ್ನು ಸ್ವರೂಪದಿಂದಲೇ ತಿಳಿಯುತ್ತಾನೆ. ಅಂದರೆ ಮುಕ್ತಿಯಲ್ಲಿ ಅಧಿಕ ಸುಖಸಂಪಾದಕ ಗುಣ ವಿಶೇಷಗಳುಳ್ಳವನು ಎಂದು ತಿಳಿಯಲಿಲ್ಲ. ಆದುದರಿಂದ ಪೂರ್ವದಲ್ಲಿ ತಿಳಿಯಲ್ಪಟ್ಟ ನಿನ್ನನ್ನೇ ಪುನಃ ತಿಳಿಯುವೆನು ಎಂಬುವುದು ಸಂಗತವೇ ಆಗುತ್ತದೆ. ॥ (ಇಂದ್ರನ ಸ್ವರೂಪ ಜ್ಞಾನವಿದ್ದರೂ) ವಿಶೇಷ ಜ್ಞಾನಾರ್ಥವಾಗಿ ಪ್ರಾರ್ಥನೆಯಾದರೆ 'ಪ್ರಾಣೋ ವಾ ಅಹಮಸ್ಮಿ ಋಷೇ' ಇತ್ಯಾದಿ ವಚನವೇ ಸಾಕಾಗಿದ್ದಿತು. 'ಏಷ ತಪನ್ನೇವಾಸ್ಮಿ' ಸೂರ್ಯನಲ್ಲಿ ಇದ್ದು ಸುಡತಕ್ಕವನು ವಿಷ್ಣುವೇ ಆಗಿದ್ದೇನೆ ಎಂಬುವುದು ವ್ಯರ್ಥವಾಗಬೇಕಾಗುವುದು. 'ಪ್ರಾಣೋ ಹ್ಯೇಷ ಯ ಏಷ ತಪತಿ' ಯಾವ ಈತನು ಸೂರ್ಯನಲ್ಲಿದ್ದು ಲೋಕವನ್ನು ಸುಡುತ್ತಾನೋ ಆತನು ಪ್ರಾಣಶಬ್ದವಾಚ್ಯನು ಎಂದು ಹೇಳಿರುವುದರಿಂದ.

ತಾ ॥ 'ಪ್ರಾಣೋ ಹ್ಯೇಷ ಯ ಏಷ ತಪತಿ' ಎಂದು ವಿಷ್ಣುವಿಗೆ ತಾಪಕತ್ವವನ್ನು (9)ನೇ ಖಂಡದಲ್ಲಿ ಹೇಳುವುದರಿಂದ ಇಂದ್ರನಿಗೆ ಸುಡತಕ್ಕ ಶಕ್ತಿಯು ಇಲ್ಲ. ನಮ್ಮ ಪಕ್ಷದಲ್ಲಿ ಬಹಳ ತೇಜಸ್ಸು ಇದ್ದುದರಿಂದ ಇಂದ್ರನಲ್ಲಿ ಆವಿಷ್ಟನಾದವನು ವಿಷ್ಣುವೆಂದು ತಿಳಿದರೂ ಅದನ್ನು ದೃಢೀಕರಿಸುವುದಕ್ಕೋಸ್ಕರ 'ಈತನು ಯಾರು' ಎಂಬೀ ಪ್ರಶ್ನೆಗೆ ಉತ್ತರವಾಗಿ 'ಏಷ ತಪನ್ನೇವಾಸ್ಮಿ' ಎಂಬುವುದು ಸಾರ್ಥಕವಾಗುತ್ತದೆ. ಕೇವಲ ಇಂದ್ರನು ಪ್ರತ್ಯಕ್ಷಸಿದ್ಧನಾದುದರಿಂದ 'ನೀನು ಯಾರು' ಎಂಬೀ ಪ್ರಶ್ನೆಗೆ ಅವಕಾಶವಿಲ್ಲದೆ ಇರುವುದರಿಂದ 'ಏಷ ತಪನ್ನೇವ' ಎಂಬುವುದು ವ್ಯರ್ಥವೇ ಆಗಬೇಕಾಗುವುದು. ॥ ಬಹು ತೇಜಸ್ಸು ಇರುವುದರಿಂದ ವಿಷ್ಣುವೆಂದೇ ಸಿದ್ಧವಾಗುತ್ತದೆ. ಮತ್ತು 'ಸ ಏತೇನ ರೂಪೇಣ' ಎಂಬುವಲ್ಲಿ 'ಇಂದ್ರಾವಿಷ್ಟನಾದ ನಾನು ವಿಷ್ಣ್ವಾಖ್ಯರೂಪದಿಂದ ಎಲ್ಲಾ ದಿಕ್ಕುಗಳನ್ನು ಪ್ರವೇಶಿಸುತ್ತೇನೆ.' ಎಂದು ಇಂದ್ರಾವಿಷ್ಟನಿಗೆ ವಿಷ್ಣುತ್ವವು ತಿಳಿಯಲ್ಪಡುತ್ತದೆ. ಅಲ್ಲದೆ 'ತಸ್ಯ ಮೇಽನ್ನಂ ದಕ್ಷಿಣಂ' ಎಂಬುವಲ್ಲಿಯೂ ಇಂದ್ರಾವಿಷ್ಟನಿಗೆದಕ್ಷಿಣಾಮಿತ್ರತ್ವ ಲಿಂಗದಿಂದ ವಿಷ್ಣುತ್ವವು ತಿಳಿಯಲ್ಪಡುತ್ತದೆಯೇ ಸರಿ. ಅಂತೂ 'ಏಷತಪನ್ನೇವ' ಎಂಬುವುದು ವ್ಯರ್ಥವೇ ಸರಿ ಎಂಬೀ ಆಶಂಕೆಯನ್ನು ಪರಿಹರಿಸುತ್ತಾರೆ. ॥ (c) ಯದ್ಯಪಿ

ಸ ಏತೇನ ರೂಪೇಣ ಸರ್ವಾ ದಿಶೋಽವಿಷ್ಣೋಽಸ್ಮಿ' ಇತ್ಯಾದಿಯಿಂದ ('ತಸ್ಯ ಮೇಽನ್ನಂ ಮಿತ್ರಂ ದಕ್ಷಿಣಂ' ಎಂಬುವುದರಿಂದಲೂ 'ತೇಜೋ ಬಾಹುಳ್ಯಲಿಂಗ'ದಿಂದಲೂ) ಇಂದ್ರನಲ್ಲಿ ಆವಿಷ್ಟನಾದವ ನಿಗೆವಿಷ್ಣುತ್ವವು ತಿಳಿಯಲ್ಪಡುತ್ತದೆ. (ಆದರೂ) ಸ್ವಲ್ಪವೇ (ಸ್ಪಷ್ಟವಾಗಿ ತಿಳಿಯಲ್ಪಡುವುದಿಲ್ಲ.) ಆದ ರೂ 'ಏತೇನ' ಎಂಬುವುದು ತೃತೀಯಾ ವಿಭಕ್ತಿಯಾದುದರಿಂದ ಕರಣತ್ವ ಸಂಶಯವು ಬರುತ್ತದೆ. ತಸ್ಯ ಮೇ' ಎಂಬುವುಗಳಿಗೆ ವಿರುದ್ಧಾಧಿಕರಣತ್ವವೂ ಬರುತ್ತದೆ. ಆದುದರಿಂದ ಶ್ರೀ ಹರಿಯು ನಾಮಗಳನ್ನು ಪ್ರತ್ಯೇಕವಾಗಿ ಹೇಳಿ ನಾನು ವಿಷ್ಣುವೆಂದು ಸುಡತಕ್ಕವನೇ ಆಗಿರುತ್ತೇನೆ ಎಂದು ಹೇಳಿದನು. ಇಂದ್ರನ ಶರೀರವನ್ನೇ ನೋಡತಕ್ಕವನೂ ಕೇವಲ ತರ್ಕದಿಂದ ಶ್ರೀ ಹರಿಯು ಎಂದು ಸ್ವಲ್ಪ ತಿಳಿದ ವಿಶ್ವಾಮಿತ್ರನಿಗೆ (ಹೇಳಿದನು) ಎಂದು ತಿಳಿಯುತ್ತದೆ. ಇಂದ್ರನಿಗೆ ಪ್ರಾಣ ಶಬ್ದವೂ ಸರ್ವಶಬ್ದಾಭಿಧೇಯತ್ವವೂ ಇರುವುದಿಲ್ಲ.

ತಾ ॥ 'ಏತೇನ' ವಿಷ್ಣುವೆಂದು ಹೆಸರುಳ್ಳ ಕರಣೀಭೂತವಾದ ರೂಪದಿಂದ, ಎಂದು ತೃತೀಯಾ ವಿಭಕ್ತಿಯಿಂದ ಹೇಳಲ್ಪಟ್ಟದ್ದಕ್ಕೆ ಕರಣತ್ವವು. ಪ್ರಥಮಾ ವಿಭಕ್ತಿಯಿಂದ ನಿರ್ದಿಷ್ಟ ವಾದದ್ದಕ್ಕೆ ಕರ್ತೃತ್ವವು. ಆದುದರಿಂದ ಅದು ವಿಷ್ಣುವಿನಿಂದ ಇತರವಾದುದು ಎಂಬೀ ಶಂಕೆಯು ಬರುತ್ತದೆ. ಮತ್ತು 'ತಸ್ಯ ಮೇಽನ್ನಂ' ಎಂಬುವಲ್ಲಿಯೂ ನನಗೆ ಕರಣೀಭೂತನಾದ ವಿಷ್ಣುವಿಗೆ ಲಕ್ಷ್ಮಿಯು ಭೋಗ್ಯಳು. ಎಂದು ಅರ್ಥವನ್ನು ಅಂಗೀಕರಿಸುವುದರಿಂದ 'ತಸ್ಯ ಮೇ' ಎಂಬುವು ಗಳಿಗೆ ಬೇರೆ ಬೇರೆ ವಿಷಯತ್ವವೂ ಬರುತ್ತದೆ. ಆದುದರಿಂದ 'ಏತೇನ ರೂಪೇಣ' ಎಂಬುವುದು ವಿಷ್ಣುವಿನಿಂದ ಇತರವಾದುದು ಎಂದು ಆಶಂಕೆಯು ಬರುತ್ತದೆ. ಆದುದರಿಂದ ಪ್ರವಿಷ್ಟನಾದವ ನಿಗೆ ಸ್ಪಷ್ಟವಾಗಿ ವಿಷ್ಣುತ್ವವು ತಿಳಿಯಲ್ಪಡುವುದಿಲ್ಲ. ಯಾವುದರಿಂದ ವಿಷ್ಣುವನ್ನು ಹೊಂದಿಸುವ ವುಗಳಿಗೆ ಸಾವಕಾಶತ್ವವು (ವಿಷ್ಣು ವಿನಹ ಇತರ ವಿಷಯಕವಾದ ಅರ್ಥವುಳ್ಳದು) ಇದೆಯೋ ಆದು ದರಿಂದ ಇಂದ್ರನ ಶರೀರವನ್ನೇ ನೋಡುತ್ತಿರುವ ಪ್ರಮಾಣಾಂತರ ಸಂವಾದವನ್ನಪೇಕ್ಷಿಸಿ ಶ್ರೀ ಹರಿಯೆಂಬು ಸ್ವಲ್ಪ ತಿಳಿದಿರುವ 'ಸ ಏತೇನ' ಇತ್ಯಾದಿಯಿಂದಲೂ ವಿಷ್ಣುತ್ವವನ್ನು ಸ್ವಲ್ಪ ತಿಳಿದ ವಿಶ್ವಾಮಿತ್ರನಿಗೆ ಸ್ವರೂಪ ಜ್ಞಾನವಿದ್ದರೂ ಅಥವಾ ಶ್ರೀ ಹರಿಯ ವಿಶೇಷಗುಣಗಳ ಜ್ಞಾನವಿಲ್ಲ ದಿರುವುದರಿಂದ ಸ್ವಲ್ಪ ತಿಳಿದ ವಿಶ್ವಾಮಿತ್ರ ಋಷಿಗೆ ಪ್ರತ್ಯೇಕ ಪ್ರತ್ಯೇಕ ಶ್ರೀ ಹರಿಯ ನಾಮಗಳನ್ನು ಹೇಳಿ ನಾನು ವಿಷ್ಣುವೆಂದು ಹೇಳಿದನು. ಎಂದು ತಿಳಿಯಲ್ಪಡುತ್ತದೆ. ಅಲ್ಲದೆ ಇಂದ್ರನಿಗೆ ಪ್ರಾಣಾದಿ ಶಬ್ದಗಳು ಕೂಡದಿರುವುದರಿಂದ ಇಂದ್ರಾಂತರ್ಗತನಾದ ವಿಷ್ಣುವನ್ನೇ ಗ್ರಹಣಮಾಡ ಬೇಕು. ॥ (d) ಉತ್ಪತ್ತಿಶೂನ್ಯನಾದ ಶ್ರೀ ಪರಮಾತ್ಮನ ಹೊಕ್ಕಳಿನಲ್ಲಿ ಉತ್ತಮವಾದ ಒಂದು ಕಮಲವು ಸಮರ್ಪಿಸಲ್ಪಟ್ಟದೆ ಎಂದು ಹೇಳಲ್ಪಟ್ಟ ಪದ್ಮನಾಭನಿಗಾದರೂ 'ಯಾವ ಶ್ರೀ ಹರಿಯು ಒಬ್ಬನೇ ಎಲ್ಲಾ ದೇವತೆಗಳ ನಾಮಧಾರಕನು' ಎಂದು ಸಮಸ್ತ ದೇವತೆಗಳ ಹೆಸರು ಹೇಳಲ್ಪ ಟ್ಟಿದೆ. ಇಂದ್ರನಲ್ಲಿ ಆದರೂ ಇಂದ್ರಶಬ್ದವೂ ಮುಖ್ಯವಾಗಿ ಇರುವುದಿಲ್ಲ. (ಇದಿ ಪರಮೈಶ್ವರ್ಯೇ ಎಂಬ ಧಾತುವಿನಿಂದ ಹುಟ್ಟಿದ ಪ್ರಯುಕ್ತ ಇಂದ್ರನಲ್ಲಿ) ಪರಮೈಶ್ವರ್ಯವು ಇಲ್ಲದೆ ಇರುವುದ ರಿಂದ ಇಂದ್ರಶಬ್ದವೂ ಕೂಡ ವಿಷ್ಣುವಿನಲ್ಲಿಯೇ (ಮುಖ್ಯವಾಗಿ) ಇರುತ್ತದೆ. ಆ ಹರಿಯೇ ಸರ್ವೋತ್ತಮನಾದ ಈಶ್ವರನು.

**ಭಾ**॥ **(a)** ಯಮಿಂದ್ರಮಾಹುರ್ವರುಣಂ ಯಮಾಹುರ್ಯಂ ಮಿತ್ರಮಾಹು ರ್ಯಮು ಸತ್ಯಮಾಹುಃ । ಇತಿ ಶ್ರುತೇಶ್ಚ ॥ ಇಂದ್ರಂ ಮಿತ್ರಂ ವರುಣಮ ಗ್ನಿಮಾಹುರಥೋ ದಿವ್ಯಃ ಸ ಸುಪರ್ಣೋ ಗರುತ್ಮಾನ್ ॥ ಇತ್ಯಾದಿ ಶ್ರುತೇಶ್ಚ ॥ **(b)** ಸಪ್ತಾರ್ಥಗರ್ಭಾ ಭುವನಸ್ಯ ರೇತೋ ವಿಷ್ಣೋಸ್ತಿಷ್ಠಂತಿ ಪ್ರದಿಶಾ

ವಿಧರ್ಮಣಿ ॥ ಇತ್ಯಾದಿನಾ ವಿಷ್ಣುರೇವ ಹಿ ತತ್ರ ಪ್ರಸ್ತುತಃ । ನಾಮಾನಿ ವಿಶ್ವಾಽಭಿ ನ ಸಂತಿ ಲೋಕೇ ಯದಾವಿರಾಸೀದನೃತಸ್ಯ ಸರ್ವಂ ॥ ನಾಮಾನಿ ಸರ್ವಾಣಿ ಯಮಾವಿಶಂತಿ ತಂ ವೈ ವಿಷ್ಣುಂ ಪರಮಮುದಾಹರಂತಿ । ಇತಿ ಶ್ರುತಿಃ ॥ (c) ಯೋ ದೇವಾನಾಂ ನಾಮಧಾ ಏಕ ಏವೇತ್ಯವಧಾರಣಾನ್ನಾನ್ಯಸ್ಯ ಸರ್ವನಾಮತ್ವಂ । ಸ ಚ ವಿಷ್ಣೋರ್ನಾನ್ಯಃ ॥ ಪದ್ಮನಾಭತ್ವಾದೇವ । ಶ್ರಿಯೋ ವಾಯೋರಪಿ ನ ನಾರಾಯಣಾದಿನಾಮವತ್ವಂ ॥ (d) ಏಕೋ ವಾಸುದೇವಸ್ತತ್ಸದೃಶ ಪರೌ ನ ಸ್ತಃ ॥ ಇತಿ ಹಿ ಶ್ರುತಿಃ । ಏಕೋ ನಾರಾಯಣ ಆಸೀತ್ತತ್ಸಮೋ ವಾಽಧಿಕೋ ವಾ ನಾಸ್ತಿ ॥ ಇತಿ ಚ ॥ (e) ಯೇನಾವೃತಂ ಖಂ ಚ ದಿವಂ ಮಹೀಂ ಚ ಯೇನಾದಿತ್ಯಸ್ತಪತಿ ತೇಜಸಾ ಭ್ರಾಜಸಾ ಚ । ಯಮಂತಃ ಸಮುದ್ರೇ ಕವಯೋಽವಯಂತಿ ಯದಕ್ಷರೇ ಪರಮೇ ಪ್ರಜಾಃ ॥ ಇತ್ಯುಕ್ತಸ್ಯ ಸಮುದ್ರಶಾಯಿನ ಏವ ನಾರಾಯಣಸ್ಯ "ತದೇವ ವರ್ತಂತದು ಸತ್ಯಮಾಹುಸ್ತದೇವ ಬ್ರಹ್ಮ ಪರಮಂ ಕವೀನಾಂ" ಇತಿ ಪರಬ್ರಹ್ಮತ್ವಾವಧಾರಣಾಚ್ಚ ವಿಷ್ಣೋಃ ಪರಂ ಸದೃಶಂ ವಾ ನಾಸ್ತ್ಯೇವ ॥ ಅತಸ್ತದತ್ರೋಚ್ಯತ ಇತ್ಯಪಿ ನ ವಕ್ತವ್ಯಂ ॥

ಅ ॥ (a) ಯಾವ ಶ್ರೀಹರಿಯನ್ನು ಇಂದ್ರನೆಂದು ಹೇಳುತ್ತಾರೆ. ಯಾರನ್ನು ವರುಣನೆಂದು ಹೇಳುತ್ತಾರೆ. ಯಾರನ್ನು ಮಿತ್ರನೆಂದು ಹೇಳುತ್ತಾರೆ. ಯಾರನ್ನೇ ಸತ್ಯನೆಂದೂ ಹೇಳುತ್ತಾರೆ. ॥ ಶ್ರೀಹರಿಯನ್ನು ಇಂದ್ರ, ಮಿತ್ರ, ವರುಣ, ಅಗ್ನಿಯನ್ನಾಗಿ ಹೇಳುತ್ತಾರೆ. ಮತ್ತು ಆತನು, ಅಲೌಕಿಕನು, ಸುಪರ್ಣನು ಗರುತ್ಮಾನ್‌ನಾಮಕನೂ ಆಗಿರುತ್ತಾನೆ. ಇದೇ ಮೊದಲಾದ ಶ್ರುತಿಯಿರುವುದರಿಂದಲೂ (ಇಂದ್ರಾದಿಶಬ್ದವಾಚ್ಯತ್ವವಿದೆ.) ॥ (b) ಅರ್ಧಗರ್ಭಾಃ= ಚೆನ್ನಾಗಿ ಅಭಿವೃದ್ಧವಾದ ಬ್ರಹ್ಮಾಂಡವೇ ಗರ್ಭದಲ್ಲಿ ಉಳ್ಳ, (ಬ್ರಹ್ಮಾಂಡಕ್ಕೆ ಆವರಣಭೂತರಾದ) ಸಪ್ತ= (1) ಮಹತತ್ವ (1) ಅಹಂಕಾರತತ್ವ (5) ಪೃಥಿವ್ಯಾದಿ ಐದು ಭೂತಗಳು, ಇವುಗಳಿಗೆ ಅಭಿಮಾನಿಗಳಾದ ದೇವತೆಗಳು, ಭುವನಸ್ಯ=ಜಗತ್ತಿಗೆ, ರೇತಃ=ಸುಖಪ್ರದನಾದ ಅಥವಾ ಕಾರಣೀಭೂತನಾದ, ವಿಷ್ಣೋಃ=ಶ್ರೀಪರಮಾತ್ಮನ, ಪ್ರದಿಶಾ=ಆಜ್ಞೆಯಿಂದ, ವಿಧರ್ಮಣಿ= ಧಾರಣಾದಿರೂಪವಾದ ಅನೇಕ ಧರ್ಮದಲ್ಲಿ, ತಿಷ್ಠಂತಿ=ಇರುತ್ತಾರೆ. ಇದೇ ಮೊದಲಾದ ಶ್ರುತಿಯಿಂದ ಶ್ರೀಪರಮಾತ್ಮನೇ ಅಲ್ಲಿ ಪ್ರಸ್ತುತನಾಗಿದ್ದಾನೆ. ॥ ಲೋಕೇ=ಲೋಕದಲ್ಲಿ, ವಿಶ್ವಾ=ಸಮಸ್ತಗಳಾದ, ನಾಮಾನಿ=ಹೆಸರುಗಳು, ಅಭಿ=ಮುಖ್ಯವಾಗಿ, ನ ಸಂತಿ=ಇರುವುದೇ ಇಲ್ಲ. ಯತ್=ಯಾವ ಶ್ರೀಪರಮಾತ್ಮನಿಂದ, ಸರ್ವಂ ಅನೃತಸ್ಯ=ಎಲ್ಲಾ ಜಗತ್ತು (ಪರಮಾರ್ಥವಾಗಿ ಪರ್ಯಾಲೋಚಿಸಲು), ಆವಿರಾಸೀತ್=ಉತ್ಪನ್ನವಾಗಿಯದೋ, (ಆದುದರಿಂದ ಲೋಕದಲ್ಲಿ ನಾಮುಗಳೇ ಇರುವುದಿಲ್ಲ. ಅಂತೂ ವಿಷ್ಣುವಿಗೇನೇ ಸರ್ವನಾಮುಗಳು). ॥ ಯಾವ ಶ್ರೀಹರಿಯನ್ನು ಎಲ್ಲಾ ನಾಮಧೇಯುಗಳೂ ಹೊಂದುತ್ತವೆಯೋ ಅಂತಹ ಸರ್ವೋತ್ತಮನನ್ನೇ ವಿಷ್ಣುಶಬ್ದವಾಚ್ಯನನ್ನಾಗಿಯೂ ಹೇಳುತ್ತಾರೆ. ಎಂದೂ ಶ್ರುತಿಯುದೆ. ॥ (c) ಯಾವಾತನು ಒಬ್ಬನೇವೇ ಎಲ್ಲಾ ದೇವತೆಗಳ ನಾಮಧಾರಕನು ಎಂಬು ಅವಧಾರಣಾರ್ಥಕವಾದ "ಏವ" ಶಬ್ದವಿರುವುದರಿಂದ ವಿಷ್ಣುವಿನಿಂದ ಇತರನಿಗೆ ಸರ್ವನಾಮವತ್ವವು ಇರುವುದಿಲ್ಲ. ಆ ಒಬ್ಬನಾದರೂ ಹರಿಯಿಂದ ಇತರನು ಆಗುವುದಿಲ್ಲ. ಪದ್ಮನಾಭತ್ವಲಿಂಗದಿಂದಲೇ. ಲಕ್ಷ್ಮೀದೇವಿಗೂ ಮುಖ್ಯಪ್ರಾಣದೇವರಿಗೂ ನಾರಾಯಣಾದಿ ಸರ್ವನಾಮುಗಳು ಇರುವುದಿಲ್ಲ. ॥ (d) ಸರ್ವೋತ್ತ

ಮನು ಒಬ್ಬನೇ ವಾಸುದೇವನು. ಅವನಿಗೆ ಸಮಾನಿಕನು, ಅಧಿಕನಾದವನು ಇಲ್ಲವೇ ಇಲ್ಲ. ಎಂದು ಶ್ರುತಿಯುದೆ. ॥ ಒಬ್ಬನೇ ನಾರಾಯಣನು ಇದ್ದನು. ಅವನಿಗೆ ಸಮಾನಿಕನಾಗಲೀ ಅಧಿಕನಾದವನಾಗಲೀ ಇಲ್ಲ. ಎಂದೂ ಶ್ರುತಿಯುದೆ. (e) ಯಾವ ನಾರಾಯಣನಿಂದ ಅವ್ಯ ತವಾದ ಆಕಾಶವನ್ನೂ ಸ್ವರ್ಗವನ್ನೂ ಭೂಮಿಯನ್ನೂ ಕೂಡ ಸೂರ್ಯನು ಯಾವ ಶ್ರೀಹರಿಯು ಪ್ರೇರಣೆಯಿಂದಲೇ ತೇಜಸ್ಸಿನಿಂದಲೂ ಪ್ರಕಾಶದಿಂದಲೂ ಸುಡುತ್ತಾನೆ; ಪ್ರಕಾಶಗೊಳಿಸು ತ್ತಾನೆ. ಸಮುದ್ರದಲ್ಲಿರುವ ಯಾವ ಶ್ರೀ ಹರಿಯನ್ನು ಜ್ಞಾನಿಗಳೂ ಕೂಡ ಸ್ವಲ್ಪವಾಗಿಯೇ ತಿಳಿಯುತ್ತಾರೆ. ಯಾವನಾಶಶೂನ್ಯನೂ ಸರ್ವೋತ್ತಮನೂ ಆದ ಶ್ರೀ ಪರಮಾತ್ಮನಲ್ಲಿ ಎಲ್ಲಾ ಪ್ರಜೆಗಳೂ ಆಶ್ರಿತರಾಗಿರುತ್ತಾರೆ. ಎಂದು ಹೇಳಲ್ಪಟ್ಟ ಕ್ಷೀರಾಬ್ಧಿಶಾಯಿಯಾದ ನಾರಾಯಣ ನಿಗೇನೇ, 'ಅವನನ್ನೇ ಋತನೆಂದೂ ಸತ್ಯನೆಂದೂ ಹೇಳುತ್ತಾರೆ. ಅವನೇ ಜ್ಞಾನಿಗಳ ಮತ ದಲ್ಲಿ ಸರ್ವೋತ್ತಮನಾದ ಪರಬ್ರಹ್ಮನು.' ಎಂದು ಪರಬ್ರಹ್ಮತ್ವವನ್ನು ನಿರ್ಧಾರಣೆಮಾಡಿರುವು ದರಿಂದ ವಿಷ್ಣುವಿನ ಜೆಶೆಯಿಂದ ಉತ್ತಮನಾಗಲೀ (ಆತನಿಗೆ) ಸಮಾನಿಕನಾಗಲೀ ಇಲ್ಲವೇ ಇಲ್ಲ. ಆದುದರಿಂದ ತತ್=ವಿಷ್ಣುವಿನಿಂದ ಇತರವಾದ ನಿರ್ಗುಣವಾದ ಪರಬ್ರಹ್ಮವು 'ಯೋ ದೇವಾ ನಾಂ' ಎಂಬಲ್ಲಿ ಹೇಳಲ್ಪಡುತ್ತದೆ ಎಂದು ಹೇಳಕೂಡದು.

ಭಾ॥ (a) ಪರೋ ಮಾತ್ರಯಾ ತನ್ವಾ ವೃಧಾನ ನ ತೇ ಮಹಿತ್ವಮನ್ವಶ್ನುವಂತಿ । ನ ತೇ ವಿಷ್ಣೋ ಜಾಯಮಾನೋ ನ ಜಾತೋ ದೇವ ಮಹಿಮ್ನಃ ಪರಮಂತಮಾಪ ॥ ಇತ್ಯಾದೇಶ್ಚ ॥ (b) ನಕಿರಿಂದ್ರ ತ್ವದುತ್ತರೋ ನ ಜ್ಯಾಯಾಂ ಅಸ್ತಿ ವೃತ್ರಹನ್ । ನಕಿರೇವಾಯಥಾತ್ವಮಿತ್ಯಾದ್ಯಪಿ ಸರ್ವ ನಾಮಕತ್ವಾತ್ತಸ್ಯೈವ ॥ (c) ಕಿಮೇಕಂ ದೈವತಂ ಲೋಕೇ ಕಿಂ ವಾಪ್ಯೇಕಂ ಪರಾಯಣಂ । ಇತ್ಯಾದಿ ಪ್ರಶ್ನಸ್ಯಾಪಿ ॥ ಪರಮಂ ಯೋ ಮಹತ್ತೇಜಃ ಪರಮಂ ಯೋ ಮಹತ್ತಪಃ ॥ ಪರಮಂ ಯೋ ಮಹದ್ಬ್ರಹ್ಮ ಪರಮಂ ಯಃ ಪರಾಯಣಂ । ಪವಿತ್ರಾಣಾಂ ಪವಿತ್ರಂ ಯೋ ಮಂಗಲಾನಾಂ ಚ ಮಂಗಲಂ ॥ ದೈವತಂ ದೇವತಾನಾಂ ಚ ಭೂತಾನಾಂ ಯೋಽವ್ಯಯಃ ಪಿತಾ । ಯತಃ ಸರ್ವಾಣಿ ಭೂತಾನಿ ಭವಂತ್ಯಾದಿಯುಗಾಗಮೇ ॥ ಯಸ್ಮಿಂಶ್ಚ ಪ್ರಲಯಂ ಯಾಂತಿ ಪುನರೇವ ಯುಗಕ್ಷಯೇ । ತಸ್ಯ ಲೋಕಪ್ರಧಾನಸ್ಯ ಜಗನ್ನಾಥಸ್ಯ ಭೂಪತೇ ॥ ವಿಷ್ಣೋರ್ನಾಮಸಹಸ್ರಂ । ಇತ್ಯೇವ ಭಾರತೇ ಪರಿಹಾರಾಚ್ಚ ॥

ಅ ॥ (a) ತನ್ವಾ=ಸ್ವಶರೀರದಿಂದಲೇ, ವೃಧಾನ=ಅಪರಿಚ್ಛಿನ್ನನಾದ, ವಿಷ್ಣೋ=ಪರ ಮಾತ್ಮನೇ, (ನೀನು) ಮಾತ್ರಯಾ=ಪರಿಮಿತಿಯಿಂದ, ಪರಃ=ವಿಲಕ್ಷಣನು. (ಅಂದರೆ ಅಪರಿ ಮಿತನು) (ಆದುದರಿಂದ) ತೇ=ನಿನ್ನ, ಮಹಿತ್ವಂ=ಜಗತ್ಸೃಷ್ಟ್ಯಾದಿಮಾಹಾತ್ಮ್ಯೆಯನ್ನು, (ಮುಕ್ತರೂ ಅಮುಕ್ತರೂ ಯಾರೂ ಕೂಡ) ನ ಅನ್ವಶ್ನುವಂತಿ=ಹೊಂದುವುದಿಲ್ಲ, ಅನುಭವಿ ಸುವುದಿಲ್ಲ. ದೇವ=ಶ್ರೀಪರಮಾತ್ಮನೇ, ಮಹಿಮ್ನಃ =ರಮಾದಿ ಮಹಿಮೆಗೆ, ಪರಅಂ ತಂ=ಪರಾವಧಿಭೂತವಾದ, ತೇ=ನಿನ್ನ, ಮಹಿತ್ವಂ=ಮಹಿಮೆಯನ್ನು, ಜಾಯಮಾನಃ= ಈಗ ಹುಟ್ಟಿದವನು, ನಾಪ=ಹೊಂದುವುದಿಲ್ಲ. ಜಾತಃ=ಹಿಂದೆ ಹುಟ್ಟಿದವನು, ನಾಪ= ಹೊಂದಲಿಲ್ಲ. (ಮೇಲೆ ಹುಟ್ಟುವವನು ಹೊಂದಲಾರನು) ಇದೇ ಮೊದಲಾದ ಶ್ರುತಿಯಿಂದಲೂ

(ಸಮರೂ ಅಧಿಕರೂ ಇಲ್ಲವೆಂದು ಸಿದ್ಧವಾಯಿತು). ॥ (b) ವೃತ್ರಸಂಹಾರಕನಾದ ದೇವೇಂದ್ರನೇ ನಿನಗೆ ಸಮರೂ ಅಭ್ಯಧಿಕರೂ ಇಲ್ಲ ಆದರೂ ಇಂದ್ರನಿಂದ ಅಧಿಕನಾದ ವಿಷ್ಣುವನ್ನು ಸ್ವೀಕರಿಸಿದಂತೆ ವಾಸುದೇವನಿಂದ ಉತ್ತಮನನ್ನು ಏತಕ್ಕೆ ಸ್ವೀಕರಿಸಬಾರದು. ಎಂದರೆ 'ನಕಿಃ ಏವ ಅಯಥಾತ್ವಂ' ಎಂದು ಇದೇ ಮೊದಲಾದುದು ಕೂಡ (ಶ್ರೀಹರಿಗೆ) ಸರ್ವನಾಮಗಳಿರುವುದರಿಂದ ಅವನಿಗೇನೇ ಸರಿ. ('ನಕಿರ್ಮಾಕಿಃ ಸ್ಮಸೀತ್ಯಾದಿ ಪ್ರೋಕ್ತಾಧಿಕ್ಯವಿವಕ್ಷಯಾ' ಎಂದು ಬೇರೆಕಡೆ ಹೇಳಿರುದವುರಿಂದ ಇಲ್ಲಿ 'ನಕಿ'ಎಂಬುವುದು ಹೇಳಿದ ಅರ್ಥಕ್ಕೆ ಆಧಿಕ್ಯ ಸಂಪಾದಕವು.)

ಶ್ರೀ ಪರಮಾತ್ಮನು ಸರ್ವದೇವಾಂತರ್ಗತನೂ ಸರ್ವೋತ್ತಮನೂ ಪರಮ ಮಹದ್ಬ್ರಹ್ಮನಾಮಕನೂ ಆಗಿರುತ್ತಾನೆ. ಎಂಬುವಲ್ಲಿ ಭಾರತ ಸಮ್ಮತಿಯನ್ನು ಹೇಳುತ್ತಾರೆ. ॥ (c) ಲೋಕದಲ್ಲಿ ಒಂದೇ ದೇವತೆಯೋ, ಅಥವಾ ಸರ್ವೋತ್ತಮವಾದುದು ಒಂದೆಯೋ? ಇದೇ ಮೊದಲಾದ (ಯುಧಿಷ್ಠಿರನ) ಪ್ರಶ್ನೆಗೂ ಕೂಡ, ॥ ಸರ್ವೋತ್ತಮನಾದ ಯಾವಾತನು ಮಹಾ ತೇಜೋರೂಪನೋ ಯಾವಾತನು ಮಹಾತಪೋ ರೂಪನೋ ಯಾವಾತನು ಪರಮ ಮಹದ್ಬ್ರಹ್ಮ ಶಬ್ದವಾಚ್ಯನೋ ಯಾವಾತನು ಮುಖ್ಯವಾಗಿ ಸರ್ವೋತ್ತಮನೋ ಯಾವಾತನು ಪವಿತ್ರಪದಾರ್ಥಗಳಿಗೂ ಪಾವಿತ್ರ್ಯ ಸಂಪಾದಕನೋ ಯಾವಾತನು ಮಂಗಲಗಳಿಗೂ ಮಾಂಗಲ್ಯಕಾರಕನೋ ಯಾವಾತನು ಬ್ರಹ್ಮಾದಿ ದೇವತೆಗಳಿಗೂ ದೇವತೆಯೋ (ದೇವತ್ವವನ್ನು ಕೊಟ್ಟವನೋ ಯಾವಾತನು ಎಲ್ಲಾ ಪ್ರಾಣಿಗಳಿಗೂ ಜನಕನೋ ಅವಿನಾಶಿಯೋ ಯಾವ ಶ್ರೀ ಹರಿಯಿಂದ ಎಲ್ಲಾ ಪ್ರಾಣಿಗಳು ಆದಿಯುಗ ಪ್ರಾಪ್ತಿಯಾಗಲು ಹುಟ್ಟುತ್ತವೆಯೋ) ಯುಗನಾಶದಲ್ಲಿ (ಯುಗಾಂತ್ಯದಲ್ಲಿ) ಯಾವ ಶ್ರೀ ಪರಮಾತ್ಮನಲ್ಲಿ ಪುನಃ ನಾಶವನ್ನು ಹೊಂದುತ್ತವೆಯೋ ಅಂತಹ ಎಲ್ಲಾ ಲೋಕಗಳಲ್ಲಿಯೂ ಶ್ರೇಷ್ಠನಾದ ಜಗತ್ತಿಗೆ ಅಧಿಪತಿಯಾದ ಶ್ರೀಪರಮಾತ್ಮನ ನಾಮಧೇಯಗಳ ಸಹಸ್ರವನ್ನು ಭೂಪತಿಯಾದ ಯುಧಿಷ್ಠಿರನೇ ನನ್ನ ಸಕಾಶದಿಂದ (ಕೇಳು) ಎಂದೇ ಭಾರತದಲ್ಲಿ (ಭೀಷ್ಮಾಚಾರ್ಯರ) ಪರಿಹಾರವಾಕ್ಯದಿಂದಲೂ (ಸರ್ವೋತ್ತಮತ್ವಾದಿಗಳು ಸಿದ್ಧವಾಯಿತು.) (ಭಾರತ ಆನುಶಾಸನಿಕಪರ್ವ, ದಾನಧರ್ಮದಲ್ಲಿ ಭೀಷ್ಮ ಯುಧಿಷ್ಠಿರ ಸಂವಾದ).

ಭಾ॥ (a) "ಮೇಽನ್ನಂ ದಕ್ಷಿಣಂ" ಇತ್ಯುಕ್ತತ್ವಾಚ್ಚ ವಿಷ್ಣುರೇವೇತಿ ಜ್ಞಾಯತೇ। (b) ಸ ಹಿ ವಿಷ್ಣುರ್ದಕ್ಷಿಣಾಮಿತ್ರ ಉಕ್ತೋ ಹರಿವಂಶೇಷು ಧನ್ಯಾಶ್ಚರ್ಯಾಧ್ಯಾಯೇ ॥ ದಕ್ಷಿಣಾಭಿಃ ಸಹೈವೈತನ್ಮದಧಸ್ತಾಜ್ಜಗತ್ಸದಾ । ಧನ್ಯಾಶ್ಚರ್ಯೋಽಹಮೇವೈಕೋ ಮಿತ್ರಂ ಮೇ ದಕ್ಷಿಣಾ ರಮಾ ॥ ಇತ್ಯವಾದೀದ್ಧರಿರ್ಭೂಪಾ ಧನ್ಯೋಸೀತ್ಯುದಿತೋ ಮಯಾ ॥ ಇತಿ ನಾರದವಚನಂ ॥ (c) ನ ಚ ಬೃಹತೀಸಹಸ್ರಾಭಿಮಾನಿನೀಂ ದೇವೀಂ ವಿನಾ ಚೇತನಮಾತ್ರಸ್ಯ ಮುಖ್ಯ ಮಿತ್ರತ್ವಂ ಯುಜ್ಯತೇ । ಮಿನೋತಿ ತ್ರಾಯತೇ ಚೇತಿ ಮಿತ್ರಮಿತ್ಯಭಿಧೀಯತೇ ॥ ತಸ್ಮಾದ್ಯೋಽಯಂ ವಿಜಾನಾತಿ ಸ ಮಿತ್ರಂ ತಸ್ಯ ನಾನ್ಯಥಾ । ಇತಿ ಭಾರತೇ ॥

ಅ ॥ (a) ನನಗೆ ಅನ್ನವು (ತರ್ಪಕವು) ದಕ್ಷಿಣಂ=ಲಕ್ಷ್ಮೀದೇವಿಯು. ಎಂದು ಹೇಳಿರುವುದರಿಂದಲೂ ವಿಷ್ಣುವೇ ಎಂದು ತಿಳಿಯಲ್ಪಡುತ್ತದೆ. ॥ (b) ಆ ವಿಷ್ಣುವಾದರೂ ಹರಿವಂಶಗಳಲ್ಲಿ ಧನ್ಯಾಶ್ಚರ್ಯಾಧ್ಯಾಯದಲ್ಲಿ ದಕ್ಷಿಣಾಮಿತ್ರನೆಂದು ಹೇಳಲ್ಪಟ್ಟಿದ್ದಾನೆ. ದಕ್ಷಿಣಾನಾಮಕಗಳಾದ ಲಕ್ಷ್ಮೀರೂಪಗಳಿಂದ ಕೂಡಿಕೊಂಡೇ ಈ ಜಗತ್ತು ಯಾವಾಗಲೂ ನನ್ನಿಂದ

ಕೆಳಗೆ ಇರತಕ್ಕದ್ದು. (ನೀಚವಾದುದು) ನಾನೇ ಒಬ್ಬನು ಧನ್ಯಾಶ್ಚರ್ಯನು. (ಸರ್ವೋತ್ತಮನೂ ಅಸದೃಶನೂ ಆಗಿರುತ್ತೇನೆ). ನನಗೆ ದಕ್ಷಿಣಾನಾಮಕಳಾದ ಲಕ್ಷ್ಮೀದೇವಿಯು ಮಿತ್ರಳು. ಈ ಪ್ರಕಾರವಾಗಿ ಹರಿಯು ಹೇಳಿದನು. ಎಲೋ ರಾಜನೇ ನೀನು ಅಧನ್ಯನು ಆಗಿರುತ್ತಿ ಎಂದು ನನ್ನಿಂದ ಹೇಳಲ್ಪಟ್ಟನು ಎಂದು ನಾರದನ ಮಾತು.

'ಮೇಽನ್ನಂ ಮಿತ್ರಂ' ಎಂಬುವಲ್ಲಿ ದಕ್ಷಿಣಂ=ಸಮೀಚೀನವಾದ, ಅನ್ನಂ=ಬೃಹತೀಸಹಸ್ರವು, ನನಗೆಮಿತ್ರವೆಂದು ಹೇಳಲ್ಪಡುತ್ತದೆ. ತದಭಿಮಾನಿಯಾದ ಲಕ್ಷ್ಮಿಯು ಮಿತ್ರಳಲ್ಲ. ಎಂಬಆಶಂಕೆಯನ್ನು ಪರಿಹರಿಸುತ್ತಾರೆ. (c) ಬೃಹತೀಸಹಸ್ರಕ್ಕೆ ಅಭಿಮಾನಿಯಾದ ಲಕ್ಷ್ಮೀದೇವಿಯನ್ನು ಹೊರತು ಕೇವಲ ಅಚೇತನವಾದ ಬೃಹತೀಸಹಸ್ರಕ್ಕೆ ಮುಖ್ಯವಾದ ಮಿತ್ರತ್ವವು ಕೂಡುವುದಿಲ್ಲ. ವಿಶೇಷಾಕಾರವಾಗಿ ತಿಳಿಯುತ್ತದೆ. ಮತ್ತು ರಕ್ಷಿಸುತ್ತದೆ. ಅಂತೂ 'ಮಿತ್ರ'ಎಂದು ಹೇಳಲ್ಪಡುತ್ತದೆ. ಆದುದರಿಂದ ಯಾವಾತನು ಯಾರನ್ನು ವಿಶೇಷಾಕಾರವಾಗಿ ತಿಳಿಯುತ್ತಾನೋ ಆತನು ಅವನಿಗೆ ಮಿತ್ರನು. ಇಲ್ಲವಾದರೆ ಮಿತ್ರನಲ್ಲ. ಎಂದು ಭಾರತದಲ್ಲಿ ಹೇಳಿಯದೆ. ॥

ತಾ ॥ ಪ್ರಕೃತದಲ್ಲಿ ಲಕ್ಷ್ಮೀದೇವಿಗೆ ಭಗವತ್ಪ್ರಾಣಕರ್ತೃತ್ವವೆಂದರೆ ಬೃಹತೀಸಹಸ್ರಪ್ರತಿಪಾದಗಳಾದ ಗುಣಾದಿಗಳಿಗೆ ಅಯೋಗ್ಯರಾದ ಜನರ ಮನಸ್ಸಿಗೆ ವಿಷಯವಾಗದಂತೆ ರಕ್ಷಿಸುವಿಕೆಯು.

ಭಾ॥ **(a)** ಉಕ್ಥಾಯುತ್ವಾಚ್ಚ ವಿಷ್ಣುರೇವಾಽತ್ರೋಕ್ತ ಇತ್ಯವಗಮ್ಯತೇ । ಬೃಹತೀಸಹಸ್ರಂ ಹ್ಯುಕ್ಥನಾಮಕಂ ಮುಖ್ಯತಃ ॥ ಮಹಾವ್ರತನಿಯುಕ್ತಂ ಯ ದೃಕ್ಸಹಸ್ರಂ ಹರೇಃ ಪ್ರಿಯಂ । ತದುಕ್ಥಮಿತಿ ಸಂಪ್ರೋಕ್ತಂ ತೇನೇಯೋ ವಿಷ್ಣುರೇವ ಹಿ ॥ ತಸ್ಮಾದುಕ್ಥಾಯುರಿತ್ಯುಕ್ತ ಐಶ್ವರ್ಯಾದಿಂದ್ರ ಉಚ್ಯತೇ । ತಸ್ಮಾದುಕ್ಥಾಯುರಿಂದ್ರೇತಿ ವಿಷ್ಣುರ್ಯಜ್ಞೇಷು ಚೋಚ್ಯತೇ ॥ ಇತಿ ಗಾರುಡೇ ॥ **(b)** ವಿಷ್ಣುರ್ಹ್ಯುಕ್ಥಾಯುರಿಂದ್ರ ಇತ್ಯುಚ್ಯತೇ । ಯಜ್ಞೇಷ್ವನ್ಯ ಇಂದ್ರಃ ಪೃಥಕ್ಪ್ರೋಚ್ಯತೇ॥ ಯಮಿಂದ್ರಮಾಹುರ್ವರುಣಂ ಯಮಾಹುರ್ಯಂ ಮಿತ್ರಮಾಹುರ್ಯಮು ಸತ್ಯಮಾಹುಃ ॥ ಇತ್ಯುಕ್ತ್ವಾ ತಸ್ಮೈ ತ್ವಾ ತೇಭ್ಯಸ್ತ್ವೇತಿ ಭೇದವಚನಾಚ್ಚ । **(c)** ಸತ್ಯ ಇತಿ ವಾಯುಃ ॥ ಸದಿತಿ ಪ್ರಾಣಃ ಇತಿ ಶ್ರುತೇಃ । ಸದೇವ ಸತ್ಯಮಿತ್ಯುಕ್ತಂ ಸತ್ಯೋ ವಾಯುರುದಾಹೃತಃ ॥ ಸಾಧುತ್ವಂ ಸತ್ಯತಾ ಪ್ರೋಕ್ತಾ ಸಾಧುರ್ವಾಯುರ್ಹಿ ಸರ್ವತಃ । ಇತಿ ಶಬ್ದನಿರ್ಣಯೇ ॥ **(d)** ಪ್ರಿಯ ಧಾಮ್ನ ಉಪ ಸಮೀಪೇ ಗಮನಂ ನಾಮ ತದ್ಧಾಮ ಪ್ರಾಪ್ತಿಕಾರಣಭಗವತ್ಪ್ರಸಾದಪ್ರಾಪ್ತಿಃ । ಅನ್ಯಥೋಪಶಬ್ದೋ ವ್ಯರ್ಥಃ ಸ್ಯಾತ್ ॥ ನ ಚ ತದೈವ ಭಗವತಃ ಪ್ರಿಯಂ ಧಾಮ ವಿಶ್ವಾಮಿತ್ರೇಣ ಪ್ರಾಪ್ತಂ । ಬೃಹತೀಸಹಸ್ರೇ ಪ್ರಥಮೇ ಸಾಲೋಕ್ಯಂ ಪ್ರದದೌ ಹರಿಃ ॥ ದ್ವಿತೀಯೇ ಸ್ವಪುರಪ್ರಾಪ್ತಿಂ ತೃತೀಯೇಽಂತಃ ಪುರಸ್ಯ ಚ । ತಥಾ ಸ್ವವಿಷಯಂ ಜ್ಞಾನಂ ವಿಶ್ವಾಮಿತ್ರೇ ದದೌ ಪ್ರಭುಃ ॥ ಇತಿ ಚ ಗಾರುಡೇ ॥

ಅ ॥ (a) ಉಕ್ಥಾಯು ಆದುದರಿಂದ ವಿಷ್ಣುವೇ ಇಲ್ಲಿ ಹೇಳಲ್ಪಡುತ್ತಾನೆ. ಎಂದು ತಿಳಿಯಲ್ಪಡುತ್ತದೆ. ಮುಖ್ಯವಾಗಿ ಬೃಹತೀ ಸಹಸ್ರವೇ ಉಕ್ಥವೆಂದು ಹೆಸರುಳ್ಳದಷ್ಟೇ. ॥ ಶ್ರೀಹರಿಗೆ ಪ್ರಿಯವಾದ ಯಾವ ಬೃಹತೀ ಸಹಸ್ರವೂ ಕೂಡ ಮಹಾವ್ರತದಲ್ಲಿ ಪ್ರೇರಿತವಾಗುತ್ತದೋ,

ಅದು 'ಉಕ್ಥವೆಂದು ಹೇಳಲ್ಪಡುತ್ತದೆ. ಅದರಿಂದ ಹರಿಯೇ ತಿಳಿಯಲಿಕ್ಕೆ ಯೋಗ್ಯನೂ ಪ್ರಾಪ್ಯನೂ ಕೂಡ ಆಗುತ್ತಾನೆ. ಆದುದರಿಂದಲೇ ಹರಿಯು 'ಉಕ್ಥಾಯುಃ' ಎಂದು ಹೇಳಲ್ಪಡುತ್ತಾನೆ. ಪರಮೈಶ್ವರ್ಯವಿರುವುದರಿಂದ 'ಇಂದ್ರನು' ಎಂದು ಹೇಳಲ್ಪಡುತ್ತಾನೆ. ಆದುದರಿಂದ ಯಾಗಗಳಲ್ಲಿಯೂ ಶ್ರೀ ಹರಿಯು 'ಉಕ್ಥಾಯುಃ' 'ಇಂದ್ರ'ನೆಂದೂ ಹೇಳಲ್ಪಡುತ್ತಾನೆ. ಎಂದು ಗಾರುಡದಲ್ಲಿ ಅದೆ. ॥ (b) ಯಾವ ಕಾರಣದಿಂದ ಯಾಗಗಳಲ್ಲಿ ಮತ್ತೊಬ್ಬ ಇಂದ್ರನು (ಒಂದೇ ಪ್ರಕರಣದಲ್ಲಿ) ಪ್ರತ್ಯೇಕವಾಗಿ ಹೇಳಲ್ಪಡುತ್ತಾನೋ ಆದುದರಿಂದ ಹರಿಯು 'ಉಕ್ಥಾಯುಃ ಇಂದ್ರ'ನೆಂದೂ ಹೇಳಲ್ಪಡುತ್ತಾನೆ. ॥ 'ಯಾರನ್ನು ಇಂದ್ರನೆಂದೂ ವರುಣನೆಂದೂ ಮಿತ್ರ ಸತ್ಯರೆಂದೂ ಹೇಳುತ್ತಾರೆ.' ಎಂದು ಹೇಳಿ (ಮೇಲಿನವಾಕ್ಯದಲ್ಲಿ) ತಸ್ಮೈ=ದೇವಶ್ರೇಷ್ಠನಾದ ಪರಮಾತ್ಮನಿಗೋಸ್ಕರ, ತೇಭ್ಯಃ=ದೇವತೆಗಳಿಗೋಸ್ಕರ, ಎಂದು ಭೇದಪ್ರತಿಪಾದಕವಾದ ವಚನವಿರುವುದರಿಂದಲೂ (ಪೂರ್ವವಾಕ್ಯವು ಶ್ರೀ ಹರಿಗೂ ಇಂದ್ರಾದಿಗಳಿಗೂ ಅಭೇದವನ್ನು ವಿಧಿಸುವವುಗಳು ಅಲ್ಲ. ವ್ಯಾಹತಪೂರ್ವೋತ್ತರ ವಿರುದ್ಧವಾಗುವುದರಿಂದ, ಅಂತೂ ಇಂದ್ರಾದಿಶಬ್ದ ವಾಚ್ಯತ್ವವನ್ನೇ ಪ್ರತಿಪಾದಿಸುತ್ತದೆ. ಎಂದು ತಿಳಿಯುತ್ತದೆ). ॥ (c) (ಹಾಗಾದರೂ ಯಮು ಸತ್ಯಮಾಹುಃ' ಎಂಬೀ ವಾಕ್ಯವು ಸತ್ಯನಾಮಕವಾದ ಯಾವ ದೇವತೆಯೂ ಇಲ್ಲದೆ ಇರುವುದರಿಂದ ನಾಮವನ್ನು ವಿಧಿಸುವುದು ಆಗಲಾರದು. ಮತ್ತೆ ಉಪಾಧಿಕಲ್ಪಿತರಾದ ಇಂದ್ರಾದಿಗಳಿಗೆ ಅಸತ್ಯತ್ವವಿರುವುದರಿಂದ ಬ್ರಹ್ಮನೊಬ್ಬನೇ ಸತ್ಯನು (ಪಾರಮಾರ್ಥಿಕನು). ಎಂದೇ ಅರ್ಥವನ್ನು ಅಂಗೀಕರಿಸಬೇಕು. ಎಂಬೀ ಆಶಂಕೆಯನ್ನು ಪರಿಹರಿಸುತ್ತಾರೆ). ಸತ್ಯನೆಂದರೆ ಮುಖ್ಯಪ್ರಾಣನು. 'ಸತ್' ಎಂದರೆ ಮುಖ್ಯಪ್ರಾಣನು ಎಂದು ಶ್ರುತಿಯಿರುವದರಿಂದ. 'ಸತ್' ಆವದ್ದೇ ಸತ್ಯವೆಂದು ಹೇಳಲ್ಪಡುತ್ತದೆ. ಸತ್ಯಶಬ್ದವಾಚ್ಯನು ಮುಖ್ಯಪ್ರಾಣನಾಗಿ ಹೇಳಲ್ಪಟ್ಟಿದ್ದಾನೆ. ಸಾಧುತನವೇ ಸತ್ಯಶಬ್ದಪ್ರವೃತ್ತಿನಿಮಿತ್ತವಾಗಿ ಹೇಳಲ್ಪಟ್ಟದೆ. ('ಅನಾದಿಕಾಲತಃ ಸರ್ವದೋಷಹೀನಾ ಗುಣಾಧಿಕಾಃ । ಋಜವಃ' ಎಂಬೀ ವಚನದಿಂದ) ಮುಖ್ಯಪ್ರಾಣನೇ ಯಾವಾಗಲೂ ಸಾಧುವು (ನಿರ್ದೋಷಿಯು) ಎಂದು ಶಬ್ದನಿರ್ಣಯದಲ್ಲಿ ಹೇಳಲ್ಪಟ್ಟದೆ. ॥ (d) 'ತೇನೇಂದ್ರಸ್ಯ ಪ್ರಿಯಂ ಧಾಮೋಪೇಯಾಯ' ಎಂಬುವಲ್ಲಿ ಪ್ರಿಯವಾದ ಮಂದಿರದ ಸಮೀಪದಲ್ಲಿ ಗಮನವೆಂದರೆ ಹರಿಯ ಮಂದಿರದ ಪ್ರಾಪ್ತಿಗೆ ಕಾರಣವಾದ ಆತನ ಅನುಗ್ರಹದ ಪ್ರಾಪ್ತಿಯು. ಅಲ್ಲವಾದರೆ 'ಉಪ'ಶಬ್ದವು ವ್ಯರ್ಥವಾಗಬೇಕಾಗುವುದು. ('ಪ್ರಿಯಂಧಾಮೇಯಾಯ' ಇಷ್ಟರಿಂದಲೇ ಪೂರ್ತಿಯಾಗುವುದರಿಂದ) ಅಲ್ಲದೆ ಅದೇ ಕಾಲದಲ್ಲಿ ಶ್ರೀ ಪರಮಾತ್ಮನ ಪ್ರಿಯವಾದ ಮಂದಿರವು ವಿಶ್ವಾಮಿತ್ರಋಷಿಯಿಂದ ಪ್ರಾಪ್ತವಾಗಲಿಲ್ಲ. ಒಂದನೇ ಆವರ್ತಿ ಬೃಹತೀಸಹಸ್ರವು (ವಿಶ್ವಾಮಿತ್ರಋಷಿಯಿಂದ ಸ್ತುತಿಸಲ್ಪಡುತ್ತಿರಲು) ಪ್ರಭುವಾದ ಶ್ರೀಹರಿಯು ಸಾಲೋಕ್ಯವನ್ನು ಕೊಟ್ಟನು. ಎರಡನೇ ಆವರ್ತಿಯಲ್ಲಿ ಸ್ವಪುರದ ಪ್ರಾಪ್ತಿಯನ್ನೂ ಮೂರನೇ ಆವರ್ತಿ, ಅಂತಃಪುರಪ್ರಾಪ್ತಿಯನ್ನೂ ಹಾಗೆ (ನಾಲ್ಕನೇ ಆವರ್ತಿ) ಸ್ವವಿಷಯಕವಾದ ಜ್ಞಾನವನ್ನೂ ವಿಶ್ವಾಮಿತ್ರಋಷಿಗೋಸ್ಕರಕೊಟ್ಟನು. ಎಂದು ಗಾರುಡದಲ್ಲಿ ಅದೆ.

ತಾ ॥ ಈ ಮಂತ್ರದಲ್ಲಿ ಇಂದ್ರನು ಯಜಮಾನನಾಗಿ ಯಾಗವನ್ನು ಮಾಡಿದನೆಂದು ವಿಶ್ವಾಮಿತ್ರನು ಹೋತನಾಗಿ ಬೃಹತೀಸಹಸ್ರವನ್ನು ಮೂರಾವರ್ತಿ ಸ್ತುತಿಸಿದನೆಂದೂ ಇಂದ್ರನ ಲೋಕವನ್ನು ಪಡೆದನೆಂದೂ ಆ ಇಂದ್ರನಿಂದ ವರವನ್ನು ಬೇಡಿಕೊ ಎಂದು ಕೇಳಲ್ಪಟ್ಟವನಾಗಿ ವಿಶ್ವಾಮಿತ್ರನು ನಿನ್ನನ್ನೇ ತಿಳಿಯಲಿಚ್ಛಿಸುವೆನೆಂದು ಬೇಡಿಕೊಂಡೆನೆಂದೂ ಆಗ ಇಂದ್ರನು ನಾನೇ ಪ್ರಾಣನು; ನೀನೂ ಪ್ರಾಣನು ಸೂರ್ಯನೂ; ಪ್ರಾಣನು; ಸರ್ವರೂ ಪ್ರಾಣರು ಎಂದು ಉಪದೇಶಿಸಿದನೆಂದೂ ತೋರುತ್ತದೆ. ಈ ವಾಕ್ಯಗಳು ಜೀವಬ್ರಹ್ಮರಿಗೂ ಐಕ್ಯವನ್ನೇ ಬೋಧಿಸುವವೆಂದು ಅದ್ವೈತಿಗಳು ಹೇಳುವರು. ಆದರೆ ಶ್ರುತ್ಯರ್ಥವು ಇದಲ್ಲ. ॥

ಐಕ್ಯಾರ್ಥಕಲ್ಪನೆಯಲ್ಲಿರುವ ದೋಷಗಳನ್ನು ಮುಂದಿನ ಭಾಷ್ಯದಲ್ಲಿ ತೋರಿಸುವರು.

ಭಾ॥ (a) ನ ಚೇಂದ್ರಾದಿಭಿರೈಕ್ಯಮತ್ರೋಚ್ಯತೇ । "ಪ್ರಾಣಸ್ತಥಾನುಗಮಾತ್" ಇತಿ ಚ ವಿಷ್ಣೋರೇವ ಪ್ರಾಣಶಬ್ದಾಭಿಧೇಯತ್ವಮುಕ್ತ್ವಾ "ನ ವಕ್ತುರಾತ್ಮೋಪದೇಶಾದಿತಿ ಚೇದಧ್ಯಾತ್ಮಸಂಬಂಧಭೂಮಾ ಹ್ಯಸ್ಮಿನ್" ಇತಿ ವಕ್ತುಃ ಬೃಹತೀಸಹಸ್ರಂ ಶಂಸಿತುರ್ವಿಶ್ವಾಮಿತ್ರಸ್ಯೇಂದ್ರೇಣ ಸ್ವಾತ್ಮೋಪದೇಶಃ ಕ್ರಿಯತ ಇತಿ ಪಕ್ಷೋ ನಿರಾಕೃತೋ ಹಿ ಭಗವತಾ ಸೂತ್ರೇಷು । (b) ಅಧ್ಯಾತ್ಮಸಂಬಂಧಶಬ್ದೇನಾವೇಶೋ ವಿಷ್ಣೋರಿಂದ್ರೇ ವಿವಕ್ಷಿತೋ ಭಗವತಾ ॥ ಅನ್ಯೇಷ್ವಂತರ್ಯಾಮಿ ರೂಪೇಣ ಸಂಬಂಧೋಽಸ್ತ್ಯೇವ । ಅಸ್ಮಿನ್ನಿಂದ್ರೇ ತು ವಿಶೇಷಾವೇಶಸ್ತಾತ್ಕಾಲಿಕಃ ॥ ಅಧಿಕಾತ್ಮನಃ ಪರಮಾತ್ಮನಃ ಸಂಬಂಧೋಽಧ್ಯಾತ್ಮ ಸಂಬಂಧಃ । ನ ಹಿ ಸ್ವಾತ್ಮನಾ ಸ್ವಸ್ಯ ಸಂಬಂಧೋ ಭವತಿ ॥ (c) ಯದ್ಯಧ್ಯಾತ್ಮಮಾತ್ರಮತ್ರೋಚ್ಯತ ಇತಿ ವಿವಕ್ಷಿತಂ ತರ್ಹ್ಯಧ್ಯಾತ್ಮಭೂಮೇತ್ಯೇವ ಸ್ಯಾತ್ಸಂಬಂಧ ಶಬ್ದೋ ವ್ಯರ್ಥಃ । ತಸ್ಮಾದಿಂದ್ರಾದಿ ಜೀವೇಭ್ಯೋ ವಿಷ್ಣೋರ್ಭೇದ ಏವಾತ್ರ ಭಗವತೋ ವಿವಕ್ಷಿತಃ ॥ (d) "ಶಾಸ್ತ್ರದೃಷ್ಟ್ಯಾತೂಪದೇಶೋ ವಾಮದೇವವತ್"ಇತಿ ಶಾಸ್ತುರಂತರ್ಯಾಮಿಣೋ ವಿಷ್ಣೋಃ ಸರ್ವಶರೀರಸ್ಥಿತತ್ವಾತ್ಸರ್ವನಾಮಾಭಿಧೇಯತ್ವಂ ಚೋಕ್ತಂ ॥ "ಅಹಂ ಮನುರಭವಂ ಸೂರ್ಯಶ್ಚ" ಇತ್ಯಾದಿವತ್ । (e) ನ ಹಿ ಮನು ಸೂರ್ಯಾದಿರ್ಭವತಿ ವಾಮದೇವಸ್ತೇಷಾಂ ಪಕ್ಷೇಽಪಿ । ಸರ್ವಪ್ರವೃತ್ತಿಹೀನತಾಂ ಹಿ ತೇ ಮೋಕ್ಷಂ ವದಂತಿ ॥ ಅತ್ರ ಚಾಹಂ ಭೂಮಿಮದದಾಮಾರ್ಯಾಯೇತ್ಯಾದಿನಾ ಪ್ರವೃತ್ತಿರೇವೋಚ್ಯತೇ । (f) ನ ಚ ವಾಮದೇವೇನ ಮನ್ವಾದಿ ಕರ್ಮ ಕ್ರಿಯತೇ ಕದಾಪಿ । ಅತೀತಾರ್ಥಶ್ಚಾಯಂ ದೃಶ್ಯತೇ ಭೂಮಿಮದದಾಂ ॥ ಇತ್ಯಾದಿನಾ ॥ ನ ಹಿ ಪೂರ್ವಂ ವಾಮದೇವೇನ ತಾನಿ ಕರ್ಮಾಣಿ ಕೃತಾನಿ । ಭಗವಾನ್ವಿಷ್ಣುರ್ಹೀಂದ್ರಾಯ ಭೂಮಿಮದದಾತ್ ॥ (g) ಸ ಏವ ಚ ಸರ್ವೇಷ್ವಂತರ್ಯಾಮಿತ್ವೇನ ಸ್ಥಿತ್ವಾ ನಾಮ ಪ್ರವೃತ್ತಿನಿಮಿತ್ತಾನಿ ಸರ್ವಕರ್ಮಾಣಿ ಕುರ್ವನ್ನವಬೋಧಸೂರಿರ್ನಿಯಮನಾದಿಭಿರ್ಮನುಸೂರ್ಯಾದಿಸರ್ವನಾಮಾ ಭವತಿ (h) ಯದಿ ಭೇದಸ್ಯ ಪೂರ್ವಮಪಿ ಮಿಥ್ಯಾತ್ವಮಂಗೀಕ್ರಿಯತೇ ತರ್ಹಿ ಭೂಮಿದಾನಾದಿ ಸರ್ವಕರ್ಮಣಾಂ ಮನ್ವಾದಿತ್ವಸ್ಯಾಪಿ ಮಿಥ್ಯಾತ್ವಾದಹಂ ಮನುರಭವಮಿತ್ಯಾದಿಕಂ ಸರ್ವಮನರ್ಥಕಮೇವ ಭವತಿ

ಅ ॥ (a) ಇಲ್ಲಿ ('ಪ್ರಾಣೋ ವಾ ಅಹಮಸ್ಮಿ' ಇಂದ್ರಾದಿಗಳಿಗೆ ಐಕ್ಯವು ಹೇಳಲ್ಪಡಲಿಲ್ಲ. ಏಕೆಂದರೆ ಇಲ್ಲಿ ಪ್ರಾಣಶಬ್ದವಾಚ್ಯನು ವಿಷ್ಣುವೇ ಹೊರತು ಇತರನಲ್ಲ. ಇದಕ್ಕೆ ಸೂತ್ರ ಸಮ್ಮತಿಯನ್ನು ತೋರಿಸುತ್ತಾರೆ.'ಓಂ ಪ್ರಾಣಾಸ್ತಥಾನುಗಮಾತ್' (ಬ್ರ. ಸೂ. ಅ. ೧. ಪಾ ೧'ಅ. ೧೨.) ಪ್ರಾಣಃ=ಪ್ರಾಣನು, ತಥಾ=ಹಾಗೆಯೇ, ಅನುಗಮಾತ್=ಬಹ್ವಾವರ್ತಿ ಹೇಳಿರುವುದರಿಂದ,

ತಾ || ಈ ಸೂತ್ರದಲ್ಲಿ ವೇದವ್ಯಾಸರು 'ತದ್ವೈತತ್ವಂ ಪ್ರಾಣಃ' ಎಂಬುವ ತೈತ್ತರೀಯ ಶ್ರುತಿಯಲ್ಲಿ ಪ್ರಾಣಶಬ್ದವಾಚ್ಯನು ಹೇಗೆ ವಿಷ್ಣುವೋ, ಅದರಂತೆ ಈ ಐತರೇಯ ಶ್ರುತಿಯ 'ತಾ ವಾ ಏತಾಃ' ಎಂಬುವಲ್ಲಿಯೂ ಪ್ರಾಣಶಬ್ದವಾಚ್ಯನು ವಿಷ್ಣುವೇ ಎಂದು ನಿರ್ಧರಿಸುತ್ತಾರೆ. 'ತಂ ದೇವಾಃ ಪ್ರಾಣಯಂತ' ಇತ್ಯಾದಿ ಸ್ಥಳದಲ್ಲಿ ವಿಷ್ಣುವಿನ ಧರ್ಮಗಳು ಹೆಚ್ಚಿಗೆ ಹೇಳಲ್ಪಟ್ಟಿರುವುದರಿಂದ, ಆದುದರಿಂದ ಇಲ್ಲಿಯೂ ಪ್ರಾಣಶಬ್ದವಾಚ್ಯನು ವಿಷ್ಣುವೇ ಎಂದು ನಿಶ್ಚಯವಾಗುವುದು. । ಎಂದು ವಿಷ್ಣುವಿಗೇನೇ ಪ್ರಾಣಶಬ್ದವಾಚ್ಯತ್ವವನ್ನು ಹೇಳಿ 'ನ ವಕ್ತುರಾತ್ಮೋಪದೇಶಾದಿತಿ ಚೇದಧ್ಯಾತ್ಮಸಂಬಂಧಭೂಮಾ ಹ್ಯಸ್ಮಿನ್'(ಬ್ರ. ಸೂ. ಅ. ೧. ಪಾ. ೧. ಅ. ೧೧.)ಅಂದರೆ ವಕ್ತುಃ= ಬೃಹತೀಸಹಸ್ರವನ್ನು ಹೇಳತಕ್ಕ ವಿಶ್ವಾಮಿತ್ರಋಷಿಗೆ, ಆತ್ಮೋಪದೇಶಾತ್=ಪ್ರಕೃತ ಉಪದೇಶ ಮಾಡತಕ್ಕ ಇಂದ್ರನನ್ನು ಉದ್ದೇಶಿಸಿ ಪ್ರಾಣನೆಂದು ಹೇಳಿರುವುದರಿಂದ, ನ=ಪ್ರಾಣಶಬ್ದವಾಚ್ಯನು ವಿಷ್ಣುವಲ್ಲ. ಎಂದು ಹೇಳಕೂಡದು. ಏಕೆಂದರೆ- ಅಸ್ಮಿನ್=ಈ ಪ್ರಕರಣದಲ್ಲಿ, ಪ್ರಾಣಸ್ಯ= 'ಪ್ರಾಣೋ ವಾ ಅಹಮಸ್ಮಿ' ಎಂದು ಹೇಳಲ್ಪಟ್ಟ ಪ್ರಾಣಶಬ್ದವಾಚ್ಯನಿಗೆ, ಅಧ್ಯಾತ್ಮಸಂಬಂಧ ಭೂಮಾ='ಪ್ರಾಣಸ್ತ್ವಂ ಪ್ರಾಣಃ ಸರ್ವಾಣಿ' ಇತ್ಯಾದಿಯಿಂದ ಬಹುದೇಹ ಸಂಬಂಧವು, ಉಚ್ಯತೇ=ಹೇಳಲ್ಪಡುತ್ತದೆ. ಎಂದು ಹೇಳತಕ್ಕ ವಿಶ್ವಾಮಿತ್ರಋಷಿಗೆ ಇಂದ್ರನಿಂದ ತನ್ನ ಸ್ವರೂಪದ ಉಪದೇಶವು ಮಾಡಲ್ಪಡುತ್ತದೆ ಎಂಬೀ ಪಕ್ಷವು ಪೂಜ್ಯರಾದ ವೇದವ್ಯಾಸದೇವರಿಂದ ಸೂತ್ರಗಳಲ್ಲಿ ನಿರಾಕರಿಸಲ್ಪಟ್ಟದಷ್ಟೇ? ಹೇಗೆಂದರೆ- ॥ (b) 'ಅಧ್ಯಾತ್ಮಸಂಬಂಧ'ಶಬ್ದದಿಂದ ವಿಷ್ಣುವಿನ ಆವೇಶವೇ ಇಂದ್ರನಲ್ಲಿ ಸೂತ್ರಕಾರರಿಂದ ಅಂಗೀಕರಿಸಲ್ಪಟ್ಟದೆ. । ಇತರರಲ್ಲಿ ಅಂತರ್ಯಾಮಿ ರೂಪದಿಂದ (ಶ್ರೀ ಹರಿಗೆ) ಸಂಬಂಧವು ಇದೆ. ॥ ಈ ಇಂದ್ರನಲ್ಲಿ ಆದರೂ ತತ್ಕಾಲದಲ್ಲಿ ಅಂದರೆ (ಮಹಾವ್ರತ ಯಜ್ಞಕಾಲದಲ್ಲಿ) ವಿಶೇಷಾವೇಶವು (ಪ್ರಾಪ್ತವಾಯಿತು) ಆದಕಾರಣ ('ಶ್ರೀ ಬ್ರಹ್ಮ ರುದ್ರಶೇಷಾಶ್ಚ ವೀಂದ್ರೇಂದೌ ಕಾಮ ಏವ ಚ । ಕಾಮ ಪುತ್ರೋಽನಿರುದ್ಧಶ್ಚ ಸೂರ್ಯಶ್ಚಂದ್ರೋ ಬೃಹಸ್ಪತಿಃ । ಇತ್ಯಾದ್ಯಾಃ ವಿಶೇಷಾವೇಶಿನೋ ಹರೇಃ' ॥ ಎಂದು ತಾತ್ಪರ್ಯನಿರ್ಣಯದಲ್ಲಿ ಇಂದ್ರನಿಂದ ಇತರರಿಗೂ ವಿಶೇಷಾವೇಶ ಹೇಳಿದ್ದರೂ ಬಾಧಕವಿಲ್ಲ.) ॥ ಸರ್ವೋತ್ತಮನಾದ ಪರಮಾತ್ಮನ ಸಂಬಂಧವೇ ಅಧ್ಯಾತ್ಮಸಂಬಂಧವು. ತನ್ನಿಂದ ತನಗೆ ಸಂಬಂಧವು ಕೂಡಲಾರದು.

(c) 'ಅಧ್ಯಾತ್ಮಸಂಬಂಧಭೂಮಾ' ಎಂಬುವಲ್ಲಿ ಅಧ್ಯಾತ್ಮಮಾತ್ರವು (ಪರಮಾತ್ಮಭೂಯಸ್ತ್ವವು, ಆತನಿಂದ ಐಕ್ಯವು) ಇಲ್ಲಿ ಹೇಳಲ್ಪಡುತ್ತದೆ. ಎಂದು ವಿವಕ್ಷಿತವಾಗಿದ್ದರೆ ಅಧ್ಯಾತ್ಮಭೂಮಾ ಎಂದಿಷ್ಟೇ ಸಾಕಾಗುವುದು. ಸಂಬಂಧ ಶಬ್ದವು ವ್ಯರ್ಥವಾಗಬೇಕಾಗುವುದು. (ನಿಷ್ಪ್ರಯೋಜನವಾದುದರಿಂದ) (ಆದುದರಿಂದ ಐಕ್ಯಪರವೆಂದಂಗೀಕರಿಸಿದರೆ ಸಂಬಂಧಶಬ್ದವು ವ್ಯರ್ಥವಾಗುವುದರಿಂದ) ಇಂದ್ರಾದಿಜೀವರ ದ್ವೇಷಯಿಂದ ಶ್ರೀಪರಮಾತ್ಮನಿಗೆ ಭೇದವೇ ಸೂತ್ರಗಳಲ್ಲಿ ವೇದವ್ಯಾಸ ದೇವರಿಗೆ ವಿವಕ್ಷಿತವಾಗಿದೆ. ॥

ಈ ಶ್ರುತಿಯಲ್ಲಿ ಪ್ರಾಣಶಬ್ದವಾಚ್ಯನು ವಿಷ್ಣುವೆಂದು ಹೇಳಿದರೂ ಇಂದ್ರಾದಿಗಳಿಗೆ ಐಕ್ಯವು ಕೂಡುವುದಿಲ್ಲವೆಂದು ಹೇಳಕೂಡದು. ಏಕೆಂದರೆ-ವಿಷ್ಣುವಿಗೂ ಸರ್ವಜೀವರಿಗೂ ಐಕ್ಯವಿದೆ ಎಂದು ಬೋಧಿಸಿದಂತೆ ಆಗುವುದು. ಹೀಗೆಂದು ಪರನು ಆಶಂಕಿಸಲು ವಿಷ್ಣುವಿಗೂ ಜೀವರಿಗೂ ಐಕ್ಯವಲ್ಲ, ವಿಷ್ಣುವಿಗೆ ಜೀವರಲ್ಲಿ ಅಂತರ್ಯಾಮಿತ್ವವನ್ನು ಈ ಶ್ರುತಿಯು ತಿಳಿಸುತ್ತದೆ ಎಂದು ತೋರಿಸುವರು. ॥ (d) 'ಶಾಸ್ತ್ರದೃಷ್ಟ್ಯಾತೂಪದೇಶೋ ವಾಮದೇವವತ್' (ಬ್ರ. ಸೂ. ಅ. ೧. ಪಾ. ೧. ಅಧಿ. ೧೨ ) ಅಂದರೆ ಉಪದೇಶಃ='ಪ್ರಾಣೋ ವಾ ಅಹಮಸ್ಮಿ' ಎಂದು ಇಂದ್ರನು ಮಾಡುವ ಉಪದೇಶವು, ವಾಮದೇವವತ್=ವಾಮದೇವನುಮಾಡುವ 'ಅಹಂ ಮನುರಭವಂ ಸೂರ್ಯಶ್ಚ' ಇತ್ಯಾದ್ಯುಪದೇಶದಂತೆ, ಶಾಸ್ತ್ರದೃಷ್ಟ್ಯಾ ತು=ಅಂತರ್ಯಾಮಿ ಅಭಿಪ್ರಾಯದಿಂ

ದಲೇ ಸಂಗತವಾಗುತ್ತದೆ' ಎಂದು, ಶಾಸ್ತುಃ=ಅಂತರ್ಯಾಮಿಯಾದ ವಿಷ್ಣುವಿಗೆ, ಎಲ್ಲಾ ಶರೀರಗಳಲ್ಲಿ ಸ್ಥಿತಿಯಿರುವುದರಿಂದ ಸರ್ವನಾಮ ವಾಚ್ಯತ್ವವೂ ಹೇಳಲ್ಪಟ್ಟಿದೆ. ನಾನು, ಮನುವೂ, ಸೂರ್ಯನೂ ಆಗಿದ್ದೇನೆ, ಇತ್ಯಾದಿಯಂತೆ ಅಂದರೆ ಹೇಗೆ ಅಂತರ್ಯಾಮಿ ಯನ್ನು ವಿವಕ್ಷೀಕರಿಸಿಕೊಂಡು ವಾಮದೇವನು ತನ್ನಲ್ಲಿ ಮನ್ವಾದಿಶಬ್ದಗಳನ್ನು ಪ್ರಯೋಗಿಸಿ ಕೊಂಡಿದ್ದನೋ ಅದೇ ರೀತಿಯಾಗಿ ಈಉಪದೇಶವೂ ಸಂಗತವಾಗುತ್ತದೆ. ॥ (ವಾಮದೇವನ ಮಾ ತೂಕೂಡ ಅಭೇದಾಭಿಪ್ರಾಯಕವು ಎಂದು ಪರನು ಆಕ್ಷೇಪಿಸಲು, ಈ ಅಭೇದವು ಸಂಸಾರಾವ ಸ್ಥೆಯಲ್ಲಿ ಕೂಡಲಾರದೆಂದು ಮೊದಲು ತೋರಿಸುತ್ತಾರೆ. ॥(c)(ಅಭೇದವಾದಿಗಳ ಪಕ್ಷದಲ್ಲಿಯೂ ಕೂಡ ವಿಶಿಷ್ಟನಾದ (ಸಂಸಾರಿಯಾದ) ವಾಮದೇವನು ವಿಶಿಷ್ಟರಾದ ಮನು, ಸೂರ್ಯಾದಿ ಸ್ವರೂ ಪಿಯಾಗಿ ಅಂಗೀಕರಿಸಲ್ಪಡುವುದಿಲ್ಲವಷ್ಟೇ? (ಮುಕ್ತಿಯಲ್ಲಿ ವಾಮದೇವನಿಗೂ ಮನ್ವಾದಿಗಳಿಗೂ ಐಕ್ಯವಿರುವುದೆಂಬ ಪಕ್ಷವನ್ನು ದೂಷಿಸುವರು. (ಏಕೆಂದರೆ ಅವರು ಸರ್ವಪ್ರವೃತ್ತಿ (ಕರ್ಮ) ರಾಹಿತ್ಯವನ್ನೇ ಮೋಕ್ಷವನ್ನಾಗಿ ಹೇಳುತ್ತಾರೆ. ಇಲ್ಲಿಯಾದರೂ ನಾನು ಪೂಜ್ಯನಾದವನಿಗೋಸ್ಕರ ಭೂಮಿಯನ್ನು ದಾನಮಾಡಿದೆನು.' ಇತ್ಯಾದಿಯಿಂದ ಪ್ರವೃತ್ತಿಯೇ ಹೇಳಲ್ಪಡುತ್ತದೆ. (ನಿವೃ ತ್ತಿಯು ಹೇಳಲ್ಪಡುವುದಿಲ್ಲ. ಆದುದರಿಂದ ಮುಕ್ತಿಯಲ್ಲಿ ಚೈತನ್ಯಗಳಿಗೆ ಐಕ್ಯವನ್ನು ವಿವಕ್ಷಿಸಿ ಈ ಉಪದೇಶವು ಎಂದು ಹೇಳಕೂಡದು.) ॥ (f) (ಈ ಉಪದೇಶದಿಂದ ಇಂದ್ರಾದಿಗಳಿಗೆ ಐಕ್ಯವು ಸಿದ್ಧವಾಗದೆಇದ್ದರೂ ವಿಷ್ಣುವಿಗೆ ಸರ್ವಾಂತರ್ಯಾಮಿತ್ವವೂ ಸಿದ್ಧವಾಗಲಿಲ್ಲ. ಮತ್ತು ಲೋಕ ದಲ್ಲಿ ಸಮರ್ಥನಾದ ಮಂತ್ರಿಯು ರಾಜಕರ್ಮವನ್ನು ಮಾಡಿದರೆ ಆತನಲ್ಲಿ 'ನಾನು ರಾಜನು' ಎಂಬವ್ಯಪದೇಶವಿದ್ದಂತೆ, ವಾಮದೇವನಲ್ಲಿಯೂ 'ಅಹಂ ಮನುಃ' ಇತ್ಯಾದಿ ವ್ಯಪದೇಶವೂ ಸಗಂತವಾಗಬಹುದು ಎಂದು ಪರನು ಆಕ್ಷೇಪಿಸಲು) ವಾಮದೇವನಿಂದ ಯಾವಾಗಲೂ ಮನ್ವಾ ದಿಗಳ ಕರ್ಮವು ಮಾಡಲ್ಪಡಲಿಲ್ಲ. (ವಾಮದೇವನು ಕಾಲತ್ರಯದಲ್ಲಿಯೂ ಮನ್ವಾದಿಗಳ ಕಾರ್ಯ ವನ್ನು ಮಾಡದಿರುವುದರಿಂದ ಕರ್ಮಗಳನ್ನು ವಿವಕ್ಷಿಸಿ ಈ ವ್ಯಪದೇಶವು ಎಂದೂ ಹೇಳಕೂ ಡದು.) ಅಯಂ='ನಾನು ಆದೆನು' ಎಂಬೀವ್ಯಪದೇಶವು, 'ನಾನು ಭೂಮಿಯನ್ನು ಕೊಟ್ಟದ್ದೆನು' ಇತ್ಯಾದಿಯಿಂದ ವ್ಯಪದೇಶವೂ ಕೂಡ ಅತೀತಾರ್ಥಕವಾಗಿಯೇ ಕಾಣಲ್ಪಡುತ್ತದೆ. (ಆದುದರಿಂದ ವರ್ತಮಾನ ಭವಿಷ್ಯತ್ಕಾಲಗಳಲ್ಲಿ ಕರ್ಮಮಾಡದಿರೋಣವು ಸಿದ್ಧವಾಯಿತು.) ಅತೀತಕಾಲ ದಲ್ಲಿಯೂ ವಾಮದೇವನಿಂದ ಆ ಕರ್ಮಗಳು ಮಾಡಲ್ಪಡಲಿಲ್ಲ. ಪೂಜ್ಯನಾದ ವಿಷ್ಣುವೇ ಇಂದ್ರನಿ ಗೋಸ್ಕರ ಭೂಮಿಯನ್ನು ಕೊಟ್ಟದ್ದನು.

ತಾ ॥ ಶ್ರೀ ಹರಿಯೂ ಕೂಡ ಭೂಮಿದಾನ, ಸ್ಮೃತಿನಿರ್ಮಾಣದಿಂದ ತಿಳಿಸಿಕೊಡು ವಿಕೆಯು, ಸೂರಿನಿಯಮನಾದಿಗಳನ್ನು ಮಾಡದಿರುವುದರಿಂದ ತತ್ಪರವೂ ಆಗಲಾರದು. ಅಲ್ಲದೆ ಸ್ಮೃತಿಗಳ ರಚನೆಯು ಮನ್ವಾದಿಗಳಲ್ಲಿಯೇ ಇರುವುದೆಂದು ಪ್ರಸಿದ್ಧಗಳಾಗಿವೆ ಎಂದೂ ಹೇಳಕೂಡದು. ಏಕೆಂದರೆ- ವಾಮನರೂಪಿಯಾದ ಶ್ರೀಪರಮಾತ್ಮನು ತನ್ನ ಅಗ್ರಜನಾದ ಇಂದ್ರ ನಿಗೋಸ್ಕರ ಮೂರು ಹೆಜ್ಜೆ ಭೂಮಿಯ ಬಿಡೋಣ ಎಂಬ ನ್ಯವನದಿಂದ ಬಲಿಚಕ್ರವರ್ತಿಯ ಸಕಾಶದಿಂದ ಭೂಮಿಯನ್ನು ಅಪಹರಿಸಿ ಕೊಟ್ಟದ್ದನು. ॥ (g) ಆ ಉಪೇಂದ್ರನೇ (ಆಯಾಯ ಮನ್ವಂತರಗಳಲ್ಲಿ) ಎಲ್ಲಾ ಮನ್ವಾದಿಗಳಲ್ಲಿ ಅಂತರ್ಯಾಮಿಯಾಗಿ ಇದ್ದು ಮನು ಮೊದ ಲಾದ ನಾಮಗಳ ಪ್ರವೃತ್ತಿಗೆ ಕಾರಣಗಳಾದ ಸರ್ವಕರ್ಮಗಳನ್ನು ಮಾಡಿದವನಾಗಿ, ತಿಳಿಸಿ ಕೊಡುವಿಕೆಯು ಸೂರಿನಿಯಮನಾದಿ ಪ್ರವೃತ್ತಿನಿಮಿತ್ತಗಳಿಂದ 'ಮನು ಸೂರ್ಯ' ಮೊದಲಾದ ಸರ್ವನಾಮಗಳುಳ್ಳವನು ಆಗುತ್ತಾನೆ.

ತಾ || 'ಆದುದರಿಂದ ಅಹಂ ಮನುರಭವಂ' ಇತ್ಯಾದಿಯು ಸಂಗತವೇ ಆಗುತ್ತದೆ. ಇದೇ ಅಭಿಪ್ರಾಯವು ಭಾ. ೮ ಸ್ಕಂಧ. ಅ. ೧೩. ೯ಲ್ಲಿ ಅದೆ. 'ಮನವೋ ಮನುಪುತ್ರಾಶ್ಚ ಮುನಯಶ್ಚ ಮಹೀಪತೇ । ಇಂದ್ರಾಃ ಸುರಗಣಾಶ್ಚೈವ ಸರ್ವೇ ಪುರುಷಶಾಸನಾಃ ॥ ಯಜ್ಞಾದಯೋ ಯಾಃಕಥಿತಾಃ ಪೌರುಷ್ಯಸ್ತನವೋ ನೃಪ । ಮನ್ವಾದಯೋ ಜಗದ್ಯಾತ್ರಾಂ ನಯಂತ್ಯಭಿ ಪ್ರಚೋದಿತಾ, ॥ ಇತ್ಯಾದಿಯಿಂದ ಸ್ಪಷ್ಟವಾಗಿ ಉಕ್ತವಾಗಿಯದೆ ಎಂದು ತಿಳಿಯುವುದು. ॥ (h) ಯಾವ ಕಲ್ಪದಲ್ಲಿ, ಭೇದಕ್ಕೆ ಮುಕ್ತಿಗೆ ಪೂರ್ವದಲ್ಲಿ (ಅಂದರೆ ಸಂಸಾರಾವಸ್ಥೆಯಲ್ಲಿ) ಮಿಥ್ಯಾತ್ವವು ಅಂಗೀಕರಿಸಲ್ಪಡುತ್ತದೋ ಹಾಗಾದರೆ ಭೂಮಿದಾನವೇ ಮೊದಲಾದ ಎಲ್ಲಾ ಕರ್ಮಗಳಿಗೂ ಮನ್ವಾದಿ ಶಬ್ದಪ್ರವೃತ್ತಿನಿಮಿತ್ತವಾದ ಧರ್ಮಕ್ಕೂ ಮಿಥ್ಯಾತ್ವವಿರುವುದರಿಂದ 'ಅಹಂಮನುರಭವಂ' 'ಸೂರ್ಯಶ್ಚ ಅಹಂ ಕಕ್ಷೀವಾನ್ ಋಷಿರಸ್ಮಿ ವಿಪ್ರಃ' ಇವೇ ಮೊದಲಾದ ಎಲ್ಲವೂ ಅರ್ಥಶೂನ್ಯವು ಅಪ್ರಮಾಣವೇ ಆಗುತ್ತದೆ.

ತಾ || ಅದ್ವೈತಿಗಳ ಪೈಕಿ ಕೆಲವರು (ಭಾಸ್ಕರರು) ಸಂಸಾರಾವಸ್ಥೆಯಲ್ಲಿ ಸತ್ಯೋಪಾಧಿಯಿಂದ ಸತ್ಯವಾದ ಭೇದವು ಉಂಟಾಗುವುದೆಂದು ಅಂಗೀಕರಿಸುವರು. ಇನ್ನು ಕೆಲವರು ಸಂಸಾರಾವಸ್ಥೆಯಲ್ಲಿಯೂ ಭೇದವು ಮಿಥ್ಯೆಯೆಂದು ಹೇಳುವರು. ವಾಮದೇವನು ನಾನು ಮನುವು, ಸೂರ್ಯನು ಎಂದು ಹೇಳಿದುದು ವಾಮದೇವನಿಗೂ ಮನುಸೂರ್ಯರಿಗೂ ಐಕ್ಯವನ್ನು ಬೋಧಿಸುವುದೆಂದು ಉಭಯ ಪಕ್ಷದ ಅದ್ವೈತಿಗಳೂ ಹೇಳುವರು. ವಾಮದೇವನು ಅಮುಕ್ತಾವಸ್ಥೆಯಲ್ಲಿ ಇದನ್ನು ಹೇಳಿದುದರಿಂದ ಇದು ಐಕ್ಯವನ್ನು ಬೋಧಿಸುವುದಾದರೆ ಸಂಸಾರದಲ್ಲಿ ಸತ್ಯವಾದ ಭೇದವನ್ನು ಅಂಗೀಕರಿಸುವ ಭಾಸ್ಕರರಿಗೆ ಅಪಸಿದ್ಧಾಂತ ದೋಷವು ತಗಲುವುದು ಮಾಯಾವಾದಿಗಳು ಮಿಥ್ಯಾತ್ವವನ್ನು ಅಂಗೀಕರಿಸುವುದರಿಂದ ವಾಮದೇವನ ಮಾತುಗಳೂ ಭೂದಾನಾದಿ ಕ್ರಿಯೆಗಳೂ ಅನರ್ಥಕಗಳಾದುವು. ಆದುದರಿಂದ ಐಕ್ಯವಾದಿಗಳಿಗೆ ದೋಷವು ತಪ್ಪುವುದಿಲ್ಲ ಎಂದು ತಿಳಿಸುವರು.

ಭಾ|| **(a)** ಜೀವೇಶ್ವರಭಿದಾ ಚೈವ ಜೀವಭೇದಃ ಪರಸ್ಪರಂ । ಜಡೇಶ್ವರಭಿದಾ ಚೈವ ಜಡಭೇದಸ್ತಥೈವ ಚ ॥ ಜಡಜೀವಭಿದಾ ಚೈವ ಸತ್ಯೋಽಯಂ ಭೇದಪಂಚಕಃ । ನ ಕದಾಚಿನ್ನಿವರ್ತ್ಯೋಽಯಂ ಮುಕ್ತೌ ಸಂಸಾರ ಏವ ಚ ॥ ಯ ಏತದನ್ಯಥಾ ಬ್ರೂಯುಸ್ತೇ ಹಿ ಯಾಂತ್ಯಧರಂ ತಮಃ ॥ ಇತಿ ಭವಿಷ್ಯತ್ಪರ್ವಣಿ ॥ **(b)** ಅಸತ್ಯಮಪ್ರತಿಷ್ಠಂ ತೇ ಜಗದಾಹುರನೀಶ್ವರಂ । ಈಶ್ವರೋಽಹಮಹಂ ಭೋಗೀ ಸಿದ್ಧೋಽಹಂ ಬಲವಾನ್ಸುಖೀ । ಏತಾಂ ದೃಷ್ಟಿಮವಷ್ಟಭ್ಯ ನಷ್ಟಾತ್ಮಾನೋಽಲ್ಪಬುದ್ಧಯಃ ॥ ಆಸುರೀಂ ಯೋನಿಮಾಪನ್ನಾ ಮೂಢಾ ಜನ್ಮನಿ ಜನ್ಮನಿ । ಮಾಮಪ್ರಾಪ್ಯೈವ ಕೌಂತೇಯ ತತೋ ಯಾಂತ್ಯಧಮಾಂ ಗತಿಂ ॥ ಇತ್ಯಾದಿ ಚ ॥ **(c)** ನ ಚ "ಪ್ರಾಣೋ ವಾ ಅಹಮಸ್ಮ್ಯೃಷೇ" ಇತ್ಯಾದಾವಹಮಸ್ಮ್ಯಾದಿ ಶಬ್ದೋಽಸ್ಮಚ್ಛಬ್ದಾರ್ಥಸ್ಥಃ । ಏಷ ತಪನ್ನೇವಾಸ್ಮೀತ್ಯುಪರಿತನಸ್ಯ ವೈಯರ್ಥ್ಯಾತ್ ॥ ಪ್ರಾಣೋಹ್ಯೇಷ ಯ ಏಷ ತಪತೀತ್ಯುಕ್ತತ್ವಾತ್ । ಅತೋಽಹಮಸ್ಮೀತ್ಯಾದಿ ಚ ಭಗವನ್ನಾಮ್ನೈವ ॥ **(d)** ನ ಚ ಜೀವೈಕ್ಯವಚನಮತ್ರ ಪ್ರಸ್ತುತಂ । ತಾ ವಾ ಏತಾಃ ಸರ್ವಾ ಋಚಃ ಸರ್ವೇ ವೇದಾಃ ಸರ್ವೇ ಘೋಷಾ ಏಕೈವ ವ್ಯಾಹೃತಿಃ ಪ್ರಾಣ

ಏವೇತಿ ಸರ್ವನಾಮಾಭಿಧೇಯತ್ವಂ ಭಗವತ ಉಕ್ತ್ವಾ ತತ್ರೈವ ಪ್ರಮಾಣ ತ್ವೇನ "ವಿಶ್ವಾಮಿತ್ರಂ ಹ್ಯೇತದಹರಿ"ತ್ಯಾದ್ಯಾಖ್ಯಾಯಿಕೋಕ್ತಾ || (೮) ತಸ್ಮಾತ್ಸರ್ವಾಂತರ್ಯಾಮಿತ್ವಾತ್ಸರ್ವಗುಣತ್ವಾತ್ಸರ್ವಶಕ್ತಿತ್ವಾಚ್ಚ ಸರ್ವ ನಾಮವತ್ತ್ವಮೇವ ವಿಷ್ಣೋರುಚ್ಯತೇ ನ ತು ಸರ್ವಸ್ವರೂಪತ್ವಂ ||

ಅ || ('ಪ್ರಾಣೋ ವಾ ಅಹಂ' ಇತ್ಯಾದಿ ಪ್ರದೇಶದಲ್ಲಿ ಇಂದ್ರಾದಿ ಜೀವರಿಗೆ ಈಶ್ವರ್ಯವೂ, 'ಅಹಂಮನುರಭವಂ' ಎಂದು ಜೀವರಿಗೂ ಪರಸ್ಪರವಾಗಿ ಐಕ್ಯವು ಆಪಾತತಃ ತೋರುವುದರಿಂದ ಭೇದವನ್ನು ಸ್ಪಷ್ಟಪಡಿಸುವ ಪ್ರಮಾಣವನ್ನುದಾಹರಿಸುತ್ತಾರೆ.) || (a) (1) ಜೀವರಿಗೂಈಶ್ವರ ನಿಗೂ ಭೇದವು, (2) ಅನ್ಯೋನ್ಯವಾಗಿ ಜೀವರಿಗೆ ಭೇದವು, (3) ಜಡಗಳಿಗೂ ಈಶ್ವರ ನಿಗೂ ಭೇದವು, (4) ಹಾಗೆಯೇ ಜಡಗಳಿಗೆ ಪರಸ್ಪರಭೇದವು, (5) ಜಡಗಳಿಗೂ ಜೀವರಿಗೂ ಭೇದವು. ಈ ಭೇದಗಳು ಐದು (ಅಂದರೆ ಭೇದಪಂಚಕವು) ಯಥಾರ್ಥವಾದುದೇ. ಯಾವಾಗಲೂ ಅಂದರೆ ಮುಕ್ತಿಯಲ್ಲಿಯೂ ಸಂಸಾರದಲ್ಲಿಯೂ ಕೂಡ ಈ ಐದು ಭೇದವು ನಷ್ಟವಾಗುವುದಿಲ್ಲ. ಯಾರು ಇದನ್ನು ಬೇರೆ ರೀತಿಯಾಗಿ ಹೇಳುವರೋ ಅವರಾದರೂ ಅಂಧಂತಮಸ್ಸನ್ನು ಹೊಂದುತ್ತಾರೆ. ನಿಶ್ಚಯವು. ಎಂದು ಭವಿಷ್ಯತ್ಪರ್ವದಲ್ಲಿ || (b) (ಆಗಮುಕ್ಕೆ ಪಂಚಭೇದಗಳಲ್ಲಿಯೂ ಜಗತ್ತು ಪರಮಾತ್ಮನಿಂದ ಸೃಷ್ಟಿಸಲಟ್ಟಿದೆ ಎಂಬುವುದರಲ್ಲಿಯೂ ತಾತ್ಪರ್ಯವಿದೆಯೆಂದು ತದ್ವಿರುದ್ಧವಾದ ಮತವನ್ನು ದೂಷಿಸಿ ತೋರುವ ಗೀತಾವಾಕ್ಯಗಳನ್ನು ಉದಾಹರಿಸುತ್ತಾರೆ. ಗೀತಾ. ಅ. ೧೬. ಶ್ಲೋ|| ೮ ) ಆ ಅಸುರರು ಜಗತ್ತನ್ನು ಅಯಥಾರ್ಥವಾದುದೆಂದೂ ನಿಯಾಮಕ ವಿಲ್ಲದೆ ಇರುವುದೆಂದೂ ಹೇಳುತ್ತಾರೆ. || (ಗೀ. ಅ. ೧೬. ಶ್ಲೋ. ೧೪) ನಾನೇ ಈಶ್ವರನು, ನಾನೇಭೋಗಿಯು, ನಾನೇಸಿದ್ಧನು, ನಾನೇ ಸಾಮರ್ಥ್ಯವುಳ್ಳವನು, ನಾನೇ ಸುಖವುಳ್ಳವನು. (ಗೀ. ಅ. ೧೬. ಶ್ಲೋ ೯ ) ಈದಾವ (ಜಗತ್ತುಅಸತ್ಯವು ಇತ್ಯಾದಿರೂಪವಾದ) ಜ್ಞಾನವನ್ನು ಹೊಂದಿ ತಮ್ಮನ್ನೇಹಾಳುಮಾಡಿಕೊಂಡವರಾಗಿ ಅಲ್ಪಬುದ್ಧಿಗಳಾಗಿ(ಜಗತ್ತನ್ನೇ ಹಾಳುಮಾಡುತ್ತಾ ಇರುತ್ತಾರೆ.) || (ಗೀ. ಅ. ೧೬. ಶ್ಲೋ. ೨೦ ) ಅಂತಹ ಮೂಢರು ಪ್ರತಿ ಜನ್ಮದಲ್ಲಿಯೂ ಅಸುರಯೋನಿಯನ್ನು ಹೊಂದಿದವರಾಗಿ ನನ್ನನ್ನು ಹೊಂದದೇನೇ ಎಲೈ ಅರ್ಜುನನೇ ಆ ಮೇಲೆ ಅಧಮಗತಿಯನ್ನೇ ಹೊಂದುತ್ತಾರೆ. ಇತ್ಯಾದಿಯು ಹೇಳಲ್ಪಟ್ಟಿದೆ. || (c) 'ಪ್ರಾಣೋ ವಾ ಅಹಮಸ್ಮಿ ಋಷೇ' ಇತ್ಯಾದಿ ಪ್ರದೇಶದಲ್ಲಿ 'ಅಹಂ ಅಸ್ಮಿ' ಇತ್ಯಾದಿ ಶಬ್ದವು ಅಸ್ಮಚ್ಛಬ್ದಾರ್ಥ ದಲ್ಲಿರತಕ್ಕದ್ದು ಅಲ್ಲ 'ಏಷ ತಪನ್ನೇವಾಸ್ಮಿ'ಎಂದು ಮೇಲಿನ ವಾಕ್ಯಕ್ಕೆ ವೈಯರ್ಥ್ಯ ಬರುವುದರಿಂದ 'ಪ್ರಾಣೋ ಹ್ಯೇಷಃ ಯ ಏಷ ತಪತಿ' ಎಂದು ಹೇಳಿರುವುದರಿಂದ ಆದುದರಿಂದ 'ಅಹಮಸ್ಮಿ' ಇತ್ಯಾದಿಗಳು ಭಗವನ್ನಾಮಗಳೇ.

ತಾ || 'ಅಹಂ ಅಸ್ಮಿ' ಇತ್ಯಾದಿಗಳಿಗೆ ಅಸ್ಮಚ್ಛಬ್ದಾರ್ಥ ಪರತ್ವವನ್ನಂಗೀಕರಿಸಿದರೆ, ಋಷಿಯೇ ನಾನು ಪ್ರಾಣನು ಆಗಿದ್ದೇನೆ; ನೀನು ಪ್ರಾಣನಾಗಿದ್ದಿ; ಸಮಸ್ತ ಭೂತಗಳೂ ಪ್ರಾಣಗಳಾಗಿವೆ; ಯಾವ ಈತನು ಸೂರ್ಯನಾಗಿ ಸುಡುತ್ತಾನೋ ಈತನೂ ಪ್ರಾಣನು. ಎಂದು ಹೇಳಿರುವುದರಿಂದ ತನ್ನಿಂದ ಅಭಿನ್ನನಾದ ಪ್ರಾಣನಿಂದ ಸೂರ್ಯನಿಗೆ ಅಭೇದವನ್ನು ಹೇಳಿರುವುದರಿಂದ ಸೂರ್ಯನಿಗೂ ತನ್ನಿಂದಐಕ್ಯವು ಲಬ್ಧವಾದುದರಿಂದ 'ಏಷ ತಪನ್ನೇವಾಸ್ಮಿ' ಎಂಬೀ ಮೇಲಿನ ವಾಕ್ಯವು ವ್ಯರ್ಥವಾಗಬೇಕಾಗುವುದು. ಆದುದರಿಂದ ತೋರುವ ಅರ್ಥವು ಕೂಡದಿರುವುದರಿಂದ ಅಸ್ಮತ್‌ಶಬ್ದಕ್ಕೆ ಆದೇಶವಾಗಿ ವ್ಯಾಕರಣದಲ್ಲಿ ವಿಹಿತವಾಗಿದ್ದರೂ 'ಅಹಂ' ಎಂಬೀಪದವು, ಅದು ಉಪಪದವಾಗುವಾಗ ಉತ್ತಮಪುರುಷ ಆಖ್ಯಾತಪದವಾಗಿ ವಿಹಿತ ವಾಗಿದ್ದರೂ 'ಅಸ್ಮಿ' ಎಂಬ ಪದವು, ಯುಷ್ಮತ್ ಶಬ್ದಕ್ಕೆ ಆದೇಶರೂಪವಾಗಿ ಹೇಳಲ್ಪಟ್ಟ

'ತ್ವಂ' ಎಂಬ ಪದವು ಇದೇ ಮೊದಲಾದುದು ಶ್ರೀ ಹರಿಗೆ ಗುಣಗಳನ್ನು ಸಮರ್ಪಿಸುತ್ತಾ ನಾಮಧೇಯವೇ ಆಗುತ್ತದೆ. ॥ (d) ಈ ಗ್ರಂಥದಲ್ಲಿ ಪೂರ್ವದಲ್ಲಿ ಜೀವೇಶ್ವರರಿಗೆ ಐಕ್ಯಕಥನವು ಉಪಕ್ರಾಂತವೇ ಆಗಲಿಲ್ಲ. (ಆದುದರಿಂದ ಯಾವುದನ್ನು ಸಾಧಿಸುವ ಉದ್ದಿಶ್ಯ 'ವಿಶ್ವಾಮಿತ್ರಂಹ್ಯೇತತ್' ಇತ್ಯಾದ್ಯಾಖ್ಯಾಯಿಕೆಯಿಂದ ಐಕ್ಯವು ಹೇಳಲ್ಪಡುವುದು.) ॥ 'ತಾ ವಾ ಏತಾಃ ಸರ್ವಾ ಋಚಃ ಸರ್ವೇ ವೇದಾಃ ಸರ್ವೇ ಘೋಷಾಃ ಏಕೈವ ವ್ಯಾಹೃತಿಃ ಪ್ರಾಣ ಏವ' ಎಂದು ಪರಮಾತ್ಮನಿಗೆ ಸರ್ವನಾಮವಾಚ್ಯತ್ವವನ್ನು ಹೇಳಿ ಅದೇ ವಿಷಯದಲ್ಲಿ ಪ್ರಮಾಣವಾಗಿ 'ವಿಶ್ವಾಮಿತ್ರಂ ಹ್ಯೇತದಹಃ' ಇದೇ ಮೊದಲಾದ ಆಖ್ಯಾಯಿಕೆಯು ಹೇಳಲ್ಪಟ್ಟಿದೆ. ॥ (e) ಆದುದರಿಂದ (ನಮ್ಮ ವ್ಯಾಖ್ಯಾನವೇ ಪ್ರಕೃತ ಸಂಗತವಾದುದರಿಂದ, ಇತರವು ಅಸಂಗತ ವಾದುದರಿಂದ,) ಪ್ರಾಣಾದಿ ಸರ್ವರಲ್ಲಿಯೂ ಅಂತರ್ಯಾಮಿ ಯಾದುದರಿಂದಲೂ, ತತ್ತತ್ಪದಗಳ ಪ್ರವೃತ್ತಿಗೆ ನಿಮಿತ್ತಗಳಾದ ಗುಣಗಳು ಇರುವುದರಿಂದಲೂ ತತ್ಸಂಪಾದಕ ಸರ್ವಶಕ್ತಿವಿದ್ದುದರಿಂದಲೂ ಶ್ರೀಪರಮಾತ್ಮನಿಗೆ 'ಪ್ರಾಣಃ ಅಹಂ' ಇತ್ಯಾದಿ ಸರ್ವನಾಮವೇ ಇಲ್ಲಿ ಹೇಳಲ್ಪಡುತ್ತದೆ. ಸರ್ವಸ್ವರೂಪತ್ವವು ಹೇಳಲ್ಪಡುವುದಿಲ್ಲ.

ಭಾ॥ **(a)** ಉಕ್ತಂ ಚ ಭಾರತೇ ॥ ಸೃಷ್ಟೃತ್ವಾಚ್ಚೈವ ಪಾತೃತ್ವಾನ್ನಿಯಮಾಚ್ಚ ಪ್ರಕಾಶನಾತ್ । ಸರ್ವತ್ವಮುಕ್ತಂ ವಿಷ್ಣೋಸ್ತು ನ ತು ಸರ್ವಸ್ವರೂಪತಃ ಇತಿ ॥ **(b)** ಪುರುಷ ಏವೇದಂ ಸರ್ವಂ ಯದ್ಭೂತಂ ಯಚ್ಚ ಭವ್ಯಮಿತಿ ಪುರುಷೇಣೈವೇದಂ ಸರ್ವಂ ವ್ಯಾಪ್ತಂ ಯದ್ಭೂತಂ ಯಚ್ಚ ಭವ್ಯಂ । ಆತೃಣಾದಾಕರೀಷಾತ್ಸರ್ವಂ ಭಗವಾನಿತಿ ಮಿಥ್ಯಾ ದೃಷ್ಟಿರೇವೇತಿ ಚ ಶ್ರುತಿಃ ॥ **(c)** ಹಿರಣ್ಮಯೋ ಹ ವಾ ಅಮುಷ್ಮಿಂಲ್ಲೋಕೇ ಸಂಭವತಿ ಹಿರಣ್ಮಯಃ ಸರ್ವೇಭ್ಯೋ ಭೂತೇಭ್ಯೋ ದದೃಶೇ ಯ ಏವಂ ವೇದ ॥ ಅಮೃತೋ ಹ ವಾ ಅಮುಷ್ಮಿಂಲ್ಲೋಕೇ ಸಂಭವತ್ಯಮೃತಃ ಸರ್ವೇಭ್ಯೋ ಭೂತೇಭ್ಯೋ ದದೃಶೇ ಯ ಏವಂ ವೇದ ಸ ಏತೇನ ಪ್ರಜ್ಞೇನಾತ್ಮನಾಽಸ್ಮಾಲ್ಲೋಕಾದುತ್ಕ್ರಮ್ಯಾಮುಷ್ಮಿನ್ತ್ಸ್ವರ್ಗೇ ಲೋಕೇ ಸರ್ವಾನ್ಕಾಮಾನಾಪ್ತ್ವಾಽಮೃತಃ ಸಮಭವತ್ಸಮಭವದಿತ್ಯಾದಿನಾ ಮುಕ್ತಾನಾಮಪಿ ಭೇದಸ್ಯೈವೋಕ್ತೇಶ್ಚ । **(d)** ನ ಹಿ ಭೇದಾಭಾವೇ ಸರ್ವೇಭ್ಯೋ ಭೂತೇಭ್ಯೋ ದದೃಶ ಇತಿ ಯುಜ್ಯತೇ ॥ ನ ಚಾಮುಕ್ತೈಃ ಸರ್ವಭೂತೈರ್ಮುಕ್ತೋ ದೃಶ್ಯತೇ । ಏಕತ್ವೇ ತು ದದೃಶ ಇತ್ಯೇತಾವತಾ ಪೂರ್ಯತೇ ಸರ್ವೇಭ್ಯೋ ಭೂತೇಭ್ಯ ಇತಿ ವ್ಯರ್ಥಂ ॥ **(e)** ನ ಚ ತೇಷಾಂ ಪಕ್ಷೇ ಸ್ವಯಮಪಿ ಸ್ವಾತ್ಮಾನಂ ಪಶ್ಯತಿ । ಕತೃಕರ್ಮವಿರೋಧ ಇತಿ ಹಿ ತೇ ವದಂತಿ ॥ ಅತಃ ಸರ್ವಶ್ರುತಿವಿರೋಧ ಏವ ಜೀವೇಶ್ವರೈಕ್ಯಾಂಗೀಕಾರೇ ॥

ಅ ॥ (a) (ಸರ್ವ ಜಗತ್ತನ್ನು) ಸೃಷ್ಟಿಮಾಡುವುದರಿಂದಲೂ, ರಕ್ಷಣೆ ಮಾಡುವುದರಿಂದಲೂ, ನಿಯಮಿಸುವುದರಿಂದಲೂ, ಪ್ರಕಾಶಗೊಳಿಸುವುದರಿಂದಲೂ, ಶ್ರೀ ಪರಮಾತ್ಮನಿಗೆ ಸರ್ವನಾಮ ವಾಚ್ಯತ್ವವು ಹೇಳಲ್ಪಟ್ಟಿದೆ. (ಅಥವಾ ಭೇದ ವಿಷಯದಲ್ಲಿ "ಜೀವೇಶ್ವರಭಿದಾ ಚೈವ" ಇತ್ಯಾದಿಯು ಹೇಗೆ ಪ್ರಮಾಣವಾಗುವುದೋ, ಇದೇ ರೀತಿಯಾಗಿ "ಸರ್ವಂ ಖಲ್ವಿದಂ ಬ್ರಹ್ಮ" "ವಾಸುದೇವಃ ಸರ್ವಂ" ಇತ್ಯಾದಿಯು ಶ್ರೀ ಪರಮಾತ್ಮನಿಗೂ ಸರ್ವಾತ್ಮಕತ್ವ ವಿಷಯದಲ್ಲಿ ಪ್ರಮಾಣವು ಇದೆ. ಎಂದರೆ ಅದಕ್ಕೆ ಸಮಾಧಾನವು ಈ ಭಾರತದಲ್ಲಿಯೇ ಹೇಳಲ್ಪಟ್ಟಿದೆ ಎಂದು ಹೇಳುತ್ತಾರೆ.) "ಸೃಷ್ಟೃತ್ವಾದಿತ್ಯಾಯಿಂದ" (ಅರ್ಥವು ಪೂರ್ವದಂತೆಯೇ) "ಯದಧೀನಾ ಯಸ

ಸತ್ತಾ ತತ್ತದಿತ್ಯೇವ ಭಣ್ಯತೇ" ಎಂಬೀ ವಚನಾನುಸಾರವಾಗಿ ಸರ್ವಾತ್ಮಕತ್ವವೂ ಉಪಪನ್ನ ವಾಗುತ್ತದೆ ಎಂದು ಭಾರತದಲ್ಲಿ ಹೇಳಲ್ಪಟ್ಟಿದೆ. ॥ (b) "ಪುರುಷ ಏವೇದಂ ಸರ್ವಂ ಯದ್ಭೂತಂ ಯಚ್ಚ ಭವ್ಯಂ" ಅಂದರೆ ಯಾವುದು ಅತೀತವಾದುದೋ ಯಾವುದು ವರ್ತಮಾನ ಕಾಲಿಕವೋ ಈ ಸಮಸ್ತವೂ ಪುರುಷರೂಪದಿಂದ ವ್ಯಾಪ್ತವಾದುದು. ॥ತೃಣವನ್ನಾರಂಭಿಸಿ ಘಟಪರ್ಯಂತವಾಗಿ ಸಮಸ್ತವು ಪರಮಾತ್ಮನು, ಎಂದು ಮಿಥ್ಯಾ ಜ್ಞಾನವೇ ಎಂದೂ ಶ್ರುತಿಯಿದೆ. ॥ (c) ಯಾವಾತನು ಹೀಗೆ ತಿಳಿಯುತ್ತಾನೋ ಅವನು ವೈಕುಂಠ ಲೋಕದಲ್ಲಿ ಸುಖಮಯನಾಗಿಯೇ ಇರುತ್ತಾನೆ; ಸುಖಮಯನಾಗಿಯೇ ಸಮಸ್ತ ಪ್ರಾಣಿಗಳಿಂದ ಕಾಣಲ್ಪಡುತ್ತಾನೆ; "ಯಾವಾತನು ಈ ರೀತಿಯಾಗಿ ತಿಳಿಯುತ್ತಾನೋ ಆತನು ವೈಕುಂಠ ಲೋಕದಲ್ಲಿ ಮರಣ ಶೂನ್ಯನಾಗಿಯೇ ಇರುತ್ತಾನೆ; ಸಮಸ್ತ ಪ್ರಾಣಿಗಳಿಂದ ಮುಕ್ತನಾಗಿಯೇ ಕಾಣಲ್ಪಡುತ್ತಾನೆ. ಅಲ್ಲದೆ ಈ ಪ್ರಾಜ್ಞರೂಪಿಯಾದ ಆತ್ಮಶಬ್ದ ವಾಚ್ಯನಾದ ಶ್ರೀ ಪರಮಾತ್ಮನಿಂದ (ಆತನ ಪ್ರಸಾದದಿಂದ) ಈ ಲೋಕದಿಂದ ಹೊರಟು ಹೋಗಿ ಸುಖಮಯವಾದ ವೈಕುಂಠ ಲೋಕದಲ್ಲಿ ಎಲ್ಲಾ ಅಭೀಷ್ಟಗಳನ್ನು ಹೊಂದಿ ಮುಕ್ತನು ಆದನು." ಇವೇ ಮೊದಲಾದ ಶ್ರುತಿ ವಾಕ್ಯದಿಂದ ಮುಕ್ತರಿಗೂ ಭೇದವೇ ಹೇಳಿರುವುದರಿಂದ (ಐಕ್ಯವು ಎಷ್ಟುಮಾತ್ರಕ್ಕೂ ವಿವಕ್ಷಿತವಲ್ಲ.) ॥ (d) ಭೇದವು ಇಲ್ಲವಾದರೆ ಸಮಸ್ತ ಪ್ರಾಣಿಗಳಿಂದ ಕಾಣಲ್ಪಡುತ್ತಾನೆ ಎಂಬುವುದು ಕೂಡುವುದಿಲ್ಲ. (ಅಂತೂ ಸರ್ವಪದವೂ ಬಹುವಚನವೂ, ನೋಡುವಿಕೆ, ನೋಡಿಸಿಕೊಳ್ಳುವಿಕೆ, ಇಷ್ಟೂ ಅಯುಕ್ತವಾಗುವುದು). ಅಮುಕ್ತರಾದ ಸಮಸ್ತ ಪ್ರಾಣಿಗಳಿಂದ ಮುಕ್ತನು ಕಾಣಲ್ಪಡುವುದಿಲ್ಲ. (ಆದುದರಿಂದ ಇದು ಮುಕ್ತರಿಗೆ ಭೇದವನ್ನು ಸಾಧಿಸುವ ವಿಷಯದಲ್ಲಿ ಪ್ರಮಾಣವಲ್ಲ ಎಂದು ಹೇಳಕೂಡದು). ಜೀವೈಕತ್ವ ಪಕ್ಷದಲ್ಲಿ ಆದರೂ "ದದೃಶೇ" ಇಷ್ಟರಿಂದಲೇ ಪೂರ್ಣವಾಗುತ್ತದೆ. "ಸರ್ವೇಭ್ಯಃ ಭೂತೇಭ್ಯಃ" ಎಂಬುವುದು ಆ ಪಕ್ಷದಲ್ಲಿ ವಿರುದ್ಧಾರ್ಥಕವೇ ಆಗುವುದು.

ತಾ ॥ ಉಪಾಧಿಯು ಸತ್ಯವು. ತತ್ಕೃತವಾದ ಜೀವ ಭೇದವೂ ಸತ್ಯವು. ಎಂದು ಹೇಳುವವರು ಕೆಲವರು; ಮಿಥ್ಯಾಭೂತವಾದುದೇ ಉಪಾಧಿಯು. ತತ್ಕೃತ ಭೇದವೂ ಮಿಥ್ಯಾಭೂತವು. ಎಂದು ಕೆಲವರು ಹೇಳುವರು. ಈ ಎರಡು ಮತದಲ್ಲಿಯೂ ಬದ್ಧರು, ಮುಕ್ತರು ಎಂಬೀ ವ್ಯವಸ್ಥೆಯನ್ನು ಅಂಗೀಕರಿಸಿರುವುದರಿಂದ ಸಂಸಾರಿಗಳಿಂದ ಮುಕ್ತನು ಕಾಣಲ್ಪಡುತ್ತಾನೆ ಎಂದು ಕಥಂಚಿತ್ ಹೇಳಬಹುದು. ಏಕ ಜೀವವಾದದಲ್ಲಿ ಆದರೂ "ಸರ್ವೇಭ್ಯಃ ಭೂತೇಭ್ಯಃ" ಎಂಬುವುದು ಸರ್ವಥಾ ಅಯುಕ್ತವೇ. ಅವರು ಒಬ್ಬನೇ ಜೀವನು ಸಂಸಾರವನ್ನು ಹೊಂದಿಕೊಂಡು ಇರುತ್ತಾನೆ; ಮುಕ್ತಿಯನ್ನು ಹೊಂದುತ್ತಾನೆ; ಇತರರೆಲ್ಲರೂ ಆತನ ಜ್ಞಾನದಿಂದಲೇ ಸ್ವರೂಪದಿಂದ ಕಲ್ಪಿತರಾಗಿದ್ದಾರೆ. ಆ ಒಬ್ಬನಿಗೆ ತತ್ವಜ್ಞಾನವಾದೊಡನೆ ಮುಕ್ತಿಯಲ್ಲಿ ಯಾವದೊಂದೂ ಉಳಿಯುವುದಿಲ್ಲ ಎಂದಂಗೀಕರಿಸಿರುವುದರಿಂದ ಅಮುಕ್ತರಿಂದ ಮುಕ್ತನು ಕಾಣಲ್ಪಡಲಾರನು. ಕಾರಣ ವ್ಯರ್ಥವೇ ಸರಿ. ॥ (e) (ಪರಮತವನ್ನಂಗೀಕರಿಸಿಯೇ 'ದದೃಶೇ' ಎಂಬುವುದೇ ಸಾಕು ಎಂದು ಹೇಳಿದ್ದು. ವಸ್ತುತಃ ಅದೂ ಕೂಡುವುದಿಲ್ಲ ಎಂದು ಹೇಳುತ್ತಾರೆ.) ಆ ಏಕಜೀವವಾದಿಗಳ ಪಕ್ಷದಲ್ಲಿ (ಆತನಿಗೆ ಮುಕ್ತಿಯಾಗುವಾಗ ಇತರನು ಇಲ್ಲದಿರುವುದರಿಂದ ಮತ್ತೊಬ್ಬನು ನೋಡಲಾರನು). ತಾನೂ ಕೂಡ ತನ್ನನ್ನು ನೋಡುವುದಿಲ್ಲ. ಏಕೆಂದರೆ- 'ಕರ್ತೃ ಕರ್ಮಗಳಿಗೆ ವಿರೋಧವು ಅಂದರೆ ಒಂದೇ ವಸ್ತುವಿಗೆ ಕರ್ತೃತ್ವವೂ ಕರ್ಮತ್ವವೂ ಕೂಡಲಾರದು' ಎಂದು ಅವರು ಹೇಳುವರು. ಅದುದರಿಂದ (ಮುಕ್ತರ ಬಾಹುಳ್ಯವು ತನ್ನಿಂದ ತಾನೇ ತಿಳಿದುಕೊಳ್ಳುವಿಕೆಯೂ ಅಂಗೀಕರಿಸಲ್ಪಡದೆ ಇರುವುದರಿಂದ) ಜೀವರಿಗೂ ಈಶ್ವರನಿಗೂ ಅಭೇದವನ್ನಂಗೀಕರಿಸಿದರೆ ಎಲ್ಲಾ ಶ್ರುತಿಗಳಿಂದಲೂ ವಿರೋಧವೇ ಬರುತ್ತದೆ.

ಭಾ॥ (a) ನ ಚ ಕರ್ತೃಕರ್ಮ ವಿರೋಧೋ ನಾಮಾಸ್ತೀತ್ಯತ್ರ ಕಿಂಚಿನ್ಮಾನಂ। ಶ್ರುತ್ಯನುಭವಸಿದ್ಧತ್ವಾಚ್ಚ ಸ್ವದರ್ಶನಾದೇಃ ॥ (b) ನ ಚ ತೇಷಾಂ ಪಕ್ಷೇ ಪ್ರಾಜ್ಞೇನ ಸರ್ವಜ್ಞೇನ ಪರಮಾತ್ಮನಾ ಸರ್ವಕಾಮಾವಾಪ್ತಿರ್ನಾಮಾಂಗೀಕ್ರಿಯತೇ ಶರೀರಾದುತ್ಕ್ರಾಂತಸ್ಯ ಜ್ಞಾನಿನಃ । ತಸ್ಮಾದ್ವೇದವಿರುದ್ಧವಾದಿನ ಏವ ತೇಽಪಿ ॥ (c) ನ ಚ ಶೂನ್ಯವಾದಿನಃ ಕಶ್ಚಿದ್ವಿಶೇಷೋ ದೃಶ್ಯತೇ । ನ ಹಿ ಸರ್ವಾವಾಚ್ಯಂ ಸರ್ವಾಜ್ಞೇಯಂ ಶೂನ್ಯಂ ಚೇತಿ ಕಶ್ಚಿದ್ವಿಶೇಷಃ ॥ (d) ಕೇನಾಪಿ ಶಬ್ದೇನಾವಾಚ್ಯಸ್ಯ ಲಕ್ಷಣಾಯಾಮಪಿ ಪ್ರಮಾಣಂ ನಾಸ್ತಿ । ಕ್ಷೀರಮಾಧುರ್ಯಾದಯೋಽಪಿ ತೈರೇವ ಶಬ್ದೈರುಚ್ಯಂತೇ ॥ (e) ವಿಶದಂ ಕ್ಷೀರಮಾಧುರ್ಯಂ ಸ್ಥಿರಮಾಜ್ಯಸ್ಯ ತೀಕ್ಷ್ಣಕಂ । ಗುಡಸ್ಯ ಪನಸಾದೀನಾಂ ನಿಹಾರ್ರೀತ್ಯಭಿಧೀಯತೇ ॥ ಇತಿ ಶಬ್ದನಿರ್ಣಯೇ ॥

ಅ ॥ (a) ಕರ್ತೃಕರ್ಮಗಳಿಗೆ ವಿರೋಧವು ಅದೆ ಎಂಬೀ ವಿಷಯದಲ್ಲಿ ಯಾವುದೊಂದು ಪ್ರಮಾಣವೂ ಇಲ್ಲ. ॥ 'ತನ್ನನ್ನು ತಾನು ನೋಡುತ್ತಾನೆ' ಇತ್ಯಾದಿಯು ಶ್ರುತಿಯಿಂದಲೂ ಅನುಭವದಿಂದಲೂ ಸಿದ್ಧವಾಗಿಯದೆ.

ತಾ ॥ ಕರ್ತೃಕರ್ಮಗಳಿಗೆ ವಿರೋಧವಿದೆಯೆಂದು ಪರಮತ ಕಲ್ಪನೆಯು (ಅಂದರೆ ಯಾವುದು ಕರ್ತೃವಾಗಿಯದೋ ಅದೇ ವಸ್ತುವು ಕರ್ಮವಾಗಿರಲು ಸಾಧ್ಯವಿಲ್ಲವೆಂದು ಅದ್ವೈತಿಗಳ ಅಭಿಪ್ರಾಯವು. ಈ ವಿಷಯದಲ್ಲಿ ಸಾಧಕ ಪ್ರಮಾಣ ಯಾವುದೂ ಇರುವುದಿಲ್ಲ. ಬಾಧಕ ಪ್ರಮಾಣವೂ ಅದೆ. 'ತತ್ ಆತ್ಮಾನಮೇವಾವೇತ್' 'ಮುಚ್ಯತೇ ವತ್ಸಃ ಸ್ವಯಮೇವ' ಇತ್ಯಾದಿ ಶ್ರುತಿಯು, 'ಮಾಂ ಅಹಂ ಜಾನಾಮಿ' ನನ್ನನ್ನು ನಾನು ತಿಳಿಯುತ್ತೇನೆ ಎಂಬೀ ಅನುಭವವೂ ಅದೆ. 'ವಿರೋಧೋ ಹ್ಯವಿರೋಧಶ್ಚ ಯತೋ ದರ್ಶನ ಮಾನಕೌ । ಅತೋದೃಷ್ಟೇ ವಿರೋಧಃ ಕಥಂ' ಎಂದು ಅನುವ್ಯಾಖ್ಯಾನದಲ್ಲಿ ಶ್ರೀಮದಾಚಾರ್ಯರು ನಿರೂಪಿಸಿರುವರು. ॥ (b) ('ಸ ಏತೇನ ಪ್ರಾಜ್ಞೇನ' ಎಂಬುವಲ್ಲಿ ಮುಕ್ತರಿಗೆ ಭೇದವು ಹೇಗೆ ಸಿದ್ಧವಾಗುತ್ತದೆ ಎಂದರೆ:-) ಅಭೇದವಾದಿಗಳ ಪಕ್ಷದಲ್ಲಿ ಶರೀರದಿಂದ ಹೊರಟುಹೋದ ಜ್ಞಾನಿಗೆ ಸರ್ವಜ್ಞನಾದ ಪರಮಾತ್ಮನಿಂದ (ಆತನ ಅನುಗ್ರಹದಿಂದ) ಎಲ್ಲಾ ಅಭೀಷ್ಟಗಳ ಪ್ರಾಪ್ತಿಯಾದರೂ ಅಂಗೀಕರಿಸಲ್ಪಡುವುದಿಲ್ಲವಷ್ಟೇ. (ಆದುದರಿಂದ ಭೇದಪಕ್ಷದಲ್ಲಿಯೇ ಈ ಶ್ರುತಿಯು ಯುಕ್ತವಾಗುವುದು). ಆದುದರಿಂದ ('ಪ್ರಾಜ್ಞೇನ ಆತ್ಮನಾ' ಎಂಬೀ ಶ್ರುತಿಯಿಂದಲೂ) ಅವರು ವೇದವಿರುದ್ಧವಾದಿಗಳೇ. ಅಥವಾ ವೇದೋಕ್ತಕ್ಕೆ ಮಿಥ್ಯಾತ್ವವನ್ನು ಒಡಂಬಟ್ಟರೆ ಮಾಯಿಗಳು ಕೂಡ ವೇದವಿರುದ್ಧವಾದಿಗಳು (ಬೌದ್ಧರೇ) ಸರಿ. ॥ (c) ಶೂನ್ಯವಾದಿಯಾದ ಬೌದ್ಧನ ಸಕಾಶದಿಂದ (ಬ್ರಹ್ಮವಾದಿಯಾದ ಮಾಯಾವಾದಿಗೆ) ಯಾವುದೊಂದು ವಿಶೇಷವು ಕಾಣಲ್ಪಡುವುದಿಲ್ಲ. ॥ ಶೂನ್ಯವೂ ಬ್ರಹ್ಮವೂ ಎರಡೂ ಸರ್ವ ಶಬ್ದಗಳಿಂದ ಅವಾಚ್ಯವು. ಸರ್ವ ಶಬ್ದಗಳಿಂದಲೂ ಅಜ್ಞೇಯವು. ಕಾರಣ ಯಾವುದೊಂದು ವಿಶೇಷವೂ ಇಲ್ಲ. ॥

ತಾ ॥ ಶೂನ್ಯವಾದಿಯು ಶೂನ್ಯಕ್ಕೂ, ಮಿಥ್ಯಾವಾದಿಯು ಬ್ರಹ್ಮನಿಗೂ ಅವಾಚ್ಯತ್ವಾದಿಗಳನ್ನು ಅಂಗೀಕರಿಸಿರುವುದರಿಂದ ಶೂನ್ಯವಾದಿಗಳಿಗೂ ಮಾಯಾವಾದಿಗಳಿಗೂ ಯಾವುದೊಂದು ವಿಶೇಷವೂ ಇಲ್ಲ. ಇದೇ ವಿಷಯವು 'ಅವಾಚ್ಯಂ ಸರ್ವಶಬ್ದೈಸ್ತಲ್ಲಕ್ಷ್ಯತೇ ಚಾಖಿಲೈಪದೈಃ । ಅಜ್ಞೇಯಂ ಜ್ಞಾನಲಕ್ಷ್ಯಂಚ' (ಸರ್ವ ಶಬ್ದಗಳಿಂದಲೂ ಅವಾಚ್ಯನು ಅಂದರೆ ಯಾವ

ಶಬ್ದದಿಂದಲೂ ವಾಚ್ಯನಲ್ಲ. ಎಲ್ಲಾ ಪದಗಳಿಂದ, ಲಕ್ಷಣಾವೃತ್ತಿಯಿಂದ, ಅಂದರೆ ಅಮುಖ್ಯ ವೃತ್ತಿಯಿಂದ ಪ್ರತಿಪಾದಿಸಲ್ಪಡುತ್ತಾನೆ. ತಿಳಿಯಲಶಕ್ಯನಾದವನು. ಲಕ್ಷಣಾವೃತ್ತಿಯಿಂದ ಜ್ಞಾನಕ್ಕೆ ವಿಷಯನು). ಇತ್ಯಾದಿ ತತ್ವೋದ್ಯೋತದಲ್ಲಿ ವಿವೃತವಾಗಿಯದೆ. ॥ (d) ಯಾವ ಶಬ್ದದಿಂದಲೂ ಅವಾಚ್ಯವಾದ ವಸ್ತುವಿಗೆ ಲಕ್ಷಣೆಯಲ್ಲಿಯಾದರೂ ಪ್ರಮಾಣವಿರುವುದಿಲ್ಲ. (ಅಂತೂಲಕ್ಷ್ಯತ್ವವೂ ಕೂಡುವುದಿಲ್ಲ). (ಕ್ಷೀರ, ಮಾಧುರ್ಯ ಎಂಬುವ ಪದಗಳು ಪ್ರತ್ಯೇಕವಾಗಿದ್ದರೂ ಕ್ಷೀರದಲ್ಲಿರುವ ಮಾಧುರ್ಯಕ್ಕೆ ಪ್ರತ್ಯೇಕ ಪದವಿಲ್ಲವೆಂದು ಭಾವಿಸಿ ಆ ಮಾಧುರ್ಯವು ಅವಾಚ್ಯವೆಂದೂ ಕ್ಷೀರಮಾಧುರ್ಯವೆಂಬ ಪದದಿಂದ ಲಕ್ಷಣಾವೃತ್ತಿಯಿಂದ ತಿಳಿಸಿಕೊಳ್ಳಲ್ಪಡುತ್ತದೆಂದೂ ಕಲ್ಪಿಸಿ ಮೇಲೆ ಹೇಳಿದ ದೂಷಣೆಯು ಯುಕ್ತವಲ್ಲವೆಂದು ಅದ್ವೈತಿಯು ಹೇಳಲು ಸಮಾಧಾನವನ್ನು ಹೇಳುತ್ತಾರೆ). ಕ್ಷೀರಮಾಧುರ್ಯ ಮೊದಲಾದ ರಸ ವಿಶೇಷಗಳು ಕೂಡ ಕ್ಷೀರಮಾಧುರ್ಯಾದಿ ಶಬ್ದಗಳಿಂದಲೇ ಅಥವಾ ಶಾಸ್ತ್ರಪ್ರಸಿದ್ಧಗಳಾದ ನಾಮವಿಶೇಷಗಳಿಂದಲೇ ಹೇಳಲ್ಪಡುತ್ತವೆ. ॥ (e) ಹಾಲಿನ ಮಾಧುರ್ಯವು 'ವಿಶದ'ವೆಂದೂ, ತುಪ್ಪದ ಮಾಧುರ್ಯವು 'ಸ್ಥಿರ' ವೆಂದೂ, ಬೆಲ್ಲದ ಮಾಧುರ್ಯವು 'ತೀಕ್ಷ್ಣಕ' ವೆಂದೂ, ಹಲಸಿನಹಣ್ಣು ಮೊದಲಾದುವುಗಳ ಮಾಧುರ್ಯವು 'ನಿಹಾರಿ' ಎಂದೂ ಹೇಳಲ್ಪಡುತ್ತದೆ ಎಂದು ಶಬ್ದ ನಿರ್ಣಯದಲ್ಲಿ.

ಭಾ॥ **(a)** ನ ಚ ಸರ್ವಗುಣದೋಷಕ್ರಿಯಾ ವಿನಿರ್ಮುಕ್ತಸ್ಯಾಸ್ತಿತ್ವಮಪಿ ಕುತ್ರಚಿದ್ದೃಷ್ಟಂ । ಅತಃ ಶೂನ್ಯವಾದಿನ ಏವ ತೇಽಪಿ ॥ **(b)** ಅಸ್ತೀತ್ಯೇವೋಪಲಬ್ಧಸ್ಯ ತತ್ತ್ವಭಾವಃ ಪ್ರಸೀದತೀತ್ಯಾದಿನಾ ಪ್ರಸಾದಾದಿಗುಣಾಶ್ಚ ಭಗವತೋ ದೃಶ್ಯಂತೇ ॥ ಯಸ್ಯ ಬ್ರಹ್ಮ ಚ ಕ್ಷತ್ರಂ ಚೋಭೇ ಭವತ ಓದನ ಇತ್ಯಾದಿನಾ ಕರ್ಮಾಣಿ ಚ । **(c)** ತಸ್ಮಿಂದೇವಾಃ ಶ್ರಿತಾಃ ಸರ್ವ ಇತ್ಯಾದಿ ಗುಣಾಶ್ಚ ತತ್ರೈವೋಕ್ತಾಃ ॥ **(d)** ಅಕ್ಷಣ್ವಂತಃ ಕರ್ಣವಂತಃ ಸಖಾಯೋ ಮನೋಜವೇಷ್ವಸಮಾ ಬಭೂವುಃ । ಆದಘ್ನಾಸ ಉಪಕಕ್ಷಾಸ ಉ ತ್ವೇ ಹ್ರದಾ ಇವ ಸ್ನಾತ್ವಾ ಉ ತ್ವೇದದೃಶ್ರ ಇತಿ ಮುಕ್ತಾನಾಮಪಿ ತಾರತಮ್ಯಂ ಚೋಕ್ತಂ ॥ **(e)** ಶ್ರುತ್ವಾ ವಿಷ್ಣುಂ ಕರ್ಣಫಲಂ ಪ್ರಾಪ್ತತ್ವಾತ್ಕರ್ಣಸಂಯುತಾಃ । ಅಕ್ಷಣ್ವಂತೋ ದರ್ಶನಾಚ್ಚ ವಿಷ್ಣೋರ್ಮುಕ್ತಾಶ್ಚ ಯೇ ಗಣಾಃ ॥ **(f)** ತಾರತಮ್ಯಂ ಚ ತೇಷಾಂ ಹಿ ಶ್ರುತಾ ವುದಿತಮಂಜಸಾ । ಕ್ಷೀರಸಾಗರದಘ್ನಾಸ್ತು ಕೇಚಿತ್ತಿಷ್ಠಂತಿ ಮುಕ್ತಿಗಾಃ ॥ **(g)** ಉಪಸ್ತಿತಾ ಬ್ರಹ್ಮವನಂ ಕೇಚಿದಶ್ವತ್ಥಮಂಡಲಂ । ಐರೇ ಹ್ರದೇ ಕೇಚಿದಪಿ ದೇವಾ ಏವ ಪರಂ ಹರಿಂ॥ **(h)** ನಾಗಭೋಗಶಯಂ ಮುಕ್ತಾ ದದೃಶ್ರೇಽಧಿಕಮೋದಿನಃ ॥ ಸಾಗರಾದಿಸ್ಥಿತಾ ವಿಷ್ಣುಂ ಪಶ್ಯಂತಿ ಕ್ವಚಿದೇವ ಹಿ ॥ ಇತಿ ಬ್ರಹ್ಮಸಾರೇ ॥

ಅ ॥ (a) ಸಮಸ್ತಗಳಾದ ಗುಣಗಳೂ ದೋಷಗಳೂ ಕ್ರಿಯೆಗಳೂ ಇವುಗಳಿಂದ ವಿರಹಿತನಾದವನಿಗೆ ಇರುವಿಕೆಯು ಎಲ್ಲಿಯೂ ದೃಷ್ಟವಲ್ಲ. ಸರ್ವವಿಶೇಷಗಳೂ ಇಲ್ಲವೆಂದು ಅಂಗೀಕರಿಸಿರುವುದರಿಂದ). ॥ ಆದುದರಿಂದ ಅವರೂ ಕೂಡ ಶೂನ್ಯವಾದಿಗಳೇ.

ತಾ ॥ ಶೂನ್ಯವಾದಿಗಳು ಶೂನ್ಯಕ್ಕೆಗುಣಕ್ರಿಯಾದಿಗಳು ಇಲ್ಲವೆಂದು ಹೇಳುವರು. ಪರಬ್ರಹ್ಮನಿಗೆ ಯಾರು ಗುಣಕ್ರಿಯಾದಿಗಳು ಇಲ್ಲವೆಂದು ಹೇಳುವರೋ ಅವರಿಗೂ ಶೂನ್ಯವಾದಿಗಳಿಗೂ ಭೇದವಿಲ್ಲ. ಶ್ರೀಪರಬ್ರಹ್ಮನು ನಿರ್ಗುಣನು, ನಿರ್ವಿಶೇಷನೆಂದು ವಾದಿಸುವವರು

ಶೂನ್ಯವಾದಿಗಳೆಂದು ಹೇಳಿದುದು ಯುಕ್ತವಲ್ಲ. ಶ್ರುತಿಗಳಲ್ಲಿ ಪರಬ್ರಹ್ಮನು ನಿರ್ಗುಣನೆಂದು ('ಸಾಕ್ಷೀಚೇತಾ ಕೇವಲೋ ನಿರ್ಗುಣಶ್ಚ') ನಿಷ್ಕ್ರಿಯನೆಂದು (ನಿಷ್ಕಲಂ ನಿಷ್ಕ್ರಿಯಂ ಶಾಂತಂ) ಹೇಳಲ್ಪಟ್ಟಿದೆ. ಆದುದರಿಂದ ನಾವು (ಅದ್ವೈತಿಗಳು) ಪರಬ್ರಹ್ಮನು ಸರ್ವಗುಣಕ್ರಿಯಾಶೂನ್ಯನೆಂದು ಹೇಳಿದುದು ಯುಕ್ತವೇ ಸರಿ. ಎಂದಾಶಂಕಿಸಲು ಸಮಾಧಾನವನ್ನು ಹೇಳುತ್ತಾರೆ. (b) (ಬ್ರಹ್ಮನು) ಇದ್ದಾನೆ ಎಂದು ತಿಳಿದವನಿಗೇನೇ ಪ್ರಕೃತಿ ಪುರುಷಾಖ್ಯ ತತ್ವಕ್ಕೆ ಜನಕನಾದ ವಿಷ್ಣುವು ಸಂತುಷ್ಟನಾಗುತ್ತಾನೆ. ಇವೇ ಮೊದಲಾದ 'ತಂ ವಿದ್ಯಾತ್ ಶುಕ್ರಮಮೃತಂ' ಇತ್ಯಾದಿಯಿಂದ ಶ್ರೀಪರಮಾತ್ಮನಿಗೆ ಪ್ರಸಾದ ಮೊದಲಾದ ಗುಣಗಳು ಕಾಣಲ್ಪಡುತ್ತವೆ.

ತಾ ॥ ಮೇಲೆ ಉದಾಹರಿಸುವ ಶ್ರುತಿಗಳಿಂದ ಪರಮಾತ್ಮನಿಗೆ ಗುಣಕ್ರಿಯಾದಿಗಳು ಇರುವವೆಂದು ಸ್ಪಷ್ಟವಾಗುತ್ತವೆ. ವಾದಿಯಿಂದ ಹೇಳಲ್ಪಟ್ಟ ನಿರ್ಗುಣತ್ವ, ನಿಷ್ಕ್ರಿಯತ್ವಗಳನ್ನು ಪ್ರತಿಪಾದಿಸುವ ಶ್ರುತಿಗಳಿಗೆ ಅರ್ಥವು ಬೇರೆ ಇರುವುದು. ನಿರ್ಗುಣನೆಂದರೆ ಪ್ರಾಕೃತ ಗುಣರಹಿತನೆಂದೂ ನಿಷ್ಕ್ರಿಯನೆಂದರೆ ಪರಾಧೀನಕ್ರಿಯೆಯುಳ್ಳವನು ಅಲ್ಲವೆಂದೂ ಅರ್ಥಮಾಡುವುದು ಯುಕ್ತವಾಗಿರುವುದು. ಯಾವ ಶ್ರೀಪರಮಾತ್ಮನಿಗೆ ಚತುರ್ಮುಖನು ಮುಖ್ಯಪ್ರಾಣನು ಇವರಿಬ್ಬರೂ ಅನ್ನರೂಪರಾಗಿದ್ದಾರೆ. (ಅಂತೂ ಸರ್ವಸಂಹಾರಕನೆಂದು ಸಿದ್ಧವಾಗುವುದು. ಇವೇ ಮೊದಲಾದ ಕರ್ಮಗಳೂ ಕೂಡ ಇವೆ. ('ಋತಂ ಪಿಬಂತೌ, ಇತ್ಯಾದಿಯಿಂದ ಭೋಗಾದಿಗಳೂ ಸಿದ್ಧವಾಗುತ್ತವೆ.) ॥ (c) ಯಾವ ಶ್ರೀ ಪರಮಾತ್ಮನಲ್ಲಿ ಸಮಸ್ತ ದೇವತೆಗಳು ಆಶ್ರಿತರಾಗಿದ್ದಾರೆ. ಈ ದೇವಾಶ್ರಯತ್ವವೇ ಮೊದಲಾದ ಧರ್ಮಗಳೂ ಅದೇ ಕಾಠಕೋಪನಿಷತ್ತಿನಲ್ಲಿ ಹೇಳಲ್ಪಟ್ಟಿವೆ. ॥(d) ಅಕ್ಷಣ್ವಂತಃ=ಪ್ರಶಸ್ತ ನಯನಗಳುಳ್ಳವರು, ಕರ್ಣವಂತಃ=ಪ್ರಶಸ್ತ ಕಿವಿಗಳುಳ್ಳವರು, ಸಖಾಯಃ=ಪರಸ್ಪರವಾಗಿ ಮಿತ್ರರು, ಮನೋಜವೇಷು=ಜ್ಞಾನಾದಿಗುಣಗಳಲ್ಲಿ, ಅಸಮಾಃ=ತಾರತಮ್ಯೋಪೇತರು, ಬಭೂವುಃ=ಆದರು. ಆದಘ್ನಾಸಃ=ಬಹುಪ್ರಮಾಣವಾದ ಕ್ಷೀರಸಮುದ್ರದಲ್ಲಿರುವವರು, ಅಥವಾ ಆಸ್ಯಪರಿಮಾಣವಾದ ಕ್ಷೀರಸಮುದ್ರದಲ್ಲಿ ಕ್ರೀಡಿಸುವವರು, ಅಥವಾ ಕ್ಷೀರಸಮುದ್ರದಲ್ಲಿ ಮುಳುಗುವವರು. ತ್ವೇ=ಕೆಲವರು, ಉಪಕಕ್ಷಾಸಃ ಉ=ಶ್ವೇತದ್ವೀಪದಲ್ಲಿದ್ದ ವನಕ್ರೀಡೆಯಲ್ಲಿ ಆಸಕ್ತರಾಗಿಯೇ, ತ್ವೇ=ಕೆಲವರು, ಸ್ನಾತ್ವಾ ಇವ=ಸ್ನಾನಮಾಡಿದವರಂತೆ ಅಮೃತವನ್ನು ಪಾನಮಾಡಿದವರಾಗಿ, ಹೃದಾಃ=ಐರಾಖ್ಯ ಅಮೃತ ಹೃದದಲ್ಲಿದ್ದವರಾಗಿಯೂ ಇರುತ್ತಾರೆ. ದದೃಶೇ=(ದೇವತೆಗಳೇ ಪರಮಾತ್ಮನನ್ನು) ನೋಡುತ್ತಾರೆ. ಎಂದು ಮುಕ್ತರಿಗೂ ತಾರತಮ್ಯವು ಹೇಳಲ್ಪಟ್ಟಿದೆ. ॥ (e) ಮುಕ್ತರು ಪರಮಾತ್ಮನನ್ನು ಕೇಳಿ, ಕಿವಿಯು ಫಲವನ್ನು ಹೊಂದಿರುವುದರಿಂದ ಕಿವಿಯಿಂದೊಡಗೂಡಿದ್ದಾರೆ. ಪರಮಾತ್ಮನನ್ನು ನೋಡಿರುವುದರಿಂದ (ನಯನಗಳ ಫಲವನ್ನು ಹೊಂದಿರುವುದರಿಂದ) ನಯನಗಳುಳ್ಳವರಾಗಿದ್ದಾರೆ. ಯಾವ ಸಮೂಹಗಳು ಇವೆಯೋ, (ಅನ್ಯೋನ್ಯಸಖಿಗಳಾಗಿಯೇ) ಮುಕ್ತರಾಗಿದ್ದಾರೆ. ॥ (f) ಅವರಿಗಾದರೂ ಶ್ರುತಿಯಲ್ಲಿ ಸ್ಪಷ್ಟವಾಗಿ ಚೆನ್ನಾಗಿ ನೀಚೋಚ್ಚಭಾವವು ಹೇಳಲ್ಪಟ್ಟಿದೆ. ಕೆಲವರು ಮುಕ್ತಿಯಲ್ಲಿದ್ದವರು ಕ್ಷೀರಸಮುದ್ರದ ಪ್ರಮಾಣವುಳ್ಳವರಾಗಿ (ಬಹುಪ್ರಮಾಣ ಕ್ಷೀರಸಮುದ್ರದಲ್ಲಿರುವವರಾಗಿ) ಇರುತ್ತಾರೆ. ॥ (g) ಕೆಲವರು ಅಶ್ವತ್ಥಸಮೂಹವುಳ್ಳ ಬ್ರಹ್ಮವನದ ಸಮೀಪದಲ್ಲಿರುತ್ತಾರೆ. ಅಂದರೆ ಶ್ವೇತದ್ವೀಪದಲ್ಲಿರತಕ್ಕ ವನಕ್ರೀಡೆಯಲ್ಲಿ ಆಸಕ್ತರಾಗಿರುತ್ತಾರೆ. ಕೆಲವರು ಐರಾಖ್ಯ ಅಮೃತಹೃದದಲ್ಲಿ ಇರುತ್ತಾರೆ. ದೇವತೆಗಳೇ ಯಾವಾಗಲೂ ಹರಿಯನ್ನು (ನೋಡುತ್ತಾರೆ.) ॥ (h) ಅತಿಸಂತೋಷವುಳ್ಳ ಮುಕ್ತರಾದ ದೇವತೆಗಳೇ ಶೇಷಶಾಯಿಯಾದ ಶ್ರೀಪರಮಾತ್ಮನನ್ನು ನೋಡುತ್ತಾರೆ. ಕ್ಷೀರಸಮುದ್ರ ಮೊದಲಾದ ಪ್ರದೇಶದಲ್ಲಿರುವವರೂ ದೇವತೆಗಳಿಂದ ವ್ಯತಿರಿಕ್ತರೂ ಕೆಲವು ಸಮಯದಲ್ಲಿಯೇ ಶ್ರೀಪರಮಾತ್ಮನನ್ನು ನೋಡುತ್ತಾರೆ. ಎಂದು ಬ್ರಹ್ಮಸಾರದಲ್ಲಿ ಹೇಳಿಯದೆ.

ಭಾ॥ (a) ಯತ್ರ ಬ್ರಹ್ಮಾ ಪವಮಾನಚ್ಛಂದಸ್ಯಾಂ ೩ ವಾಚಂ ವದನ್ । ಗ್ರಾವ್ಣಾ ಸೋಮೇ ಮಹೀಯತೇ ಸೋಮೇನಾನಂದಂ ಜನಯನ್ನಿಂದ್ರಾಯೇಂದೋ ಪರಿಸ್ರವ ॥ (b) ಯತ್ರ ಜ್ಯೋತಿರಜಸ್ರಂ ಯಸ್ಮಿಲ್ಲೋಕೇ ಸ್ವರ್ಹಿತಂ । ತಸ್ಮಿನ್ಮಾಂಧೇಹಿ ಪವಮಾನಾಮೃತೇ ಲೋಕೇ ಅಕ್ಷಿತ ಇಂದ್ರಾಯೇಂದೋ ಪರಿಸ್ರವ ॥ (c) ಯತ್ರ ರಾಜಾ ವೈವಸ್ವತೋ ಯತ್ರಾವರೋಧನಂ ದಿವಃ । ಯತ್ರಾಮೂರ್ಯಹ್ವತೀರಾಪಸ್ತತ್ರ ಮಾಮಮೃತಂ ಕೃಧೀಂದ್ರಾಯೇಂದೋ ಪರಿಸ್ರವ ॥ (d) ಯತ್ರಾನುಕಾಮಂ ಚರಣಂ ತ್ರಿನಾಕೇ ತ್ರಿದಿವೇ ದಿವಃ । ಲೋಕಾ ಯತ್ರ ಜ್ಯೋತಿಷ್ಮಂತಸ್ತತ್ರ ಮಾಮಮೃತಂ ಕೃಧೀಂದ್ರಾಯೇಂದೋ ಪರಿಸ್ರವ । (e) ಯತ್ರ ತತ್ಪರಮಂ ಪದಂ । (f) ಯತ್ರಾನಂದಾಶ್ಚ ಮೋದಾಶ್ಚ ಮುದಃ ಪ್ರಮುದ ಆಸತೇ ॥ ಕಾಮಸ್ಯ ಯತ್ರಾಪ್ತಾಃ ಕಾಮಾಸ್ತತ್ರ ಮಾಮಮೃತಂ ಕಧೀಂದ್ರಾಯೇಂದೋ ಪರಿಸ್ರವ। (g) ಇತ್ಯಾದಿನಾ ಬ್ರಹ್ಮಸೂರ್ಯಯಮಾದೀನಾಂ ಸರ್ವದೇವಾನಾಂ ದಿವೋ ದೇವ್ಯಾ ಅವರೋಧಭೂತಾನಾಂ ಸರ್ವದೇವೀನಾಂ ಗಂಗಾದ್ಯಬ್ದೇವತಾನಾಂ ಚ ವೇದವ್ಯಾಖ್ಯಾನಂ ಸೋಮಯಾಗಾದಿಕಂ ಕಾಮಚರಣಂ ಚ ಮುಕ್ತಾನಾಂ ಭೇದೇನಾವಸ್ಥಿತಾನಾಮುಚ್ಯತೇ ॥

ಅ ॥ (a) ಈ ಋಕ್ಕುಗಳು ವಾಯುದೇವರ ಪ್ರಾರ್ಥನಾ ರೂಪಗಳಾಗಿವೆ. ಪವಮಾನ =ಸಂಸಾರದಿಂದ ದಾಟಿಸಿ ಮಹಾನಂದದಲ್ಲಿ ಹಾಕತಕ್ಕ, ಇಂದೋ=ಇಷ್ಟವನ್ನು ಕೊಡುವ ಸ್ವಭಾವವುಳ್ಳ ಮುಖ್ಯಪ್ರಾಣನೇ, ಬ್ರಹ್ಮಾ=ಮುಕ್ತನಾದ ಚತುರ್ಮುಖನು, ಯತ್ರ=ಯಾವ ಲೋಕದಲ್ಲಿ, ಛಂದಸ್ಯಾಂ=ಛಂದಸ್ಸಂಬಂಧಿಯಾದ, ವಾಚಂ=ವೇದವಚನವನ್ನು, ವದನ್= ವ್ಯಾಖ್ಯಾನ ಮಾಡುವವನಾಗಿ, ಗ್ರಾವ್ಣಾ=ಹಿಂಡಲ್ಪಟ್ಟ ಸೋಮರಸದಿಂದ, ಸೋಮೇ=ಸೌಮ್ಯಸ್ವರೂಪವಾದ ಭಗವದ್ವಿಷಯದಲ್ಲಿ (ಯಾಗಮಾಡಿ ಪ್ರಸನ್ನನಾದ,) ಸೋಮೇನ=ಶ್ರೀ ಹರಿಯಿಂದ, ಆನಂದಂ=(ತನಗೆ) ಸಂತೋಷವನ್ನು, ಜನಯನ್=ವ್ಯಕ್ತೀಕರಿಸುವವನಾಗಿ, ಮಹೀಯತೇ= (ಮುಕ್ತರ ಸಮೂಹಗಳಿಂದ) ಪೂಜಿಸಲ್ಪಡುತ್ತಾನೆ. ಇಂದ್ರಾಯ=ಪರಮಾತ್ಮನಿಗೋಸ್ಕರ, ಪರಿಸ್ರವ=(ನನ್ನನ್ನು) ಪ್ರಾಪಿಸಿಕೊಡು. ॥ (b) ಯತ್ರ=ಯಾವ ಲೋಕದಲ್ಲಿ, ಅಜಸ್ರಂ= ಯಾವಾಗಲೂ, ಜೋತಿಃ=ಸೂರ್ಯನ ತೇಜಸ್ಸು, ಯಸ್ಮಿನ್=ಯಾವ, ಲೋಕೇ=ಲೋಕದಲ್ಲಿ ಸ್ವರ್=ಆನಂದ ರೂಪಿಯಾದ ವಿಷ್ಣುವೂ ಕೂಡ, ಹಿತಂ=ಇಡಲ್ಪಟ್ಟಿದ್ದಾನೋ, ಅಮೃತೇ =ಮುಕ್ತಿರೂಪವಾದ, ಅಕ್ಷಿತೇ=ನಾಶರಹಿತವಾದ, ತಸ್ಮಿನ್=ಆ, ಲೋಕೇ=ಲೋಕದಲ್ಲಿ, ಮಾಂ=ನನ್ನನ್ನು, ಧೇಹಿ=ಸ್ಥಾಪಿಸು, ಪವಮಾನ, ಇಂದೋ, ಇಂದ್ರಾಯ=ಅದೇ ಲೋಕದಲ್ಲಿರತಕ್ಕ ಪರಮಾತ್ಮನಿಗೋಸ್ಕರ, ಪರಿಸ್ರವ=ಪ್ರಾಪಿಸಿಕೊಡು. ॥ (c) ಯತ್ರ=ಯಾವ ಲೋಕದಲ್ಲಿ, ವೈವಸ್ವತಃ ರಾಜಾ=ಯಮನು, (ಇದ್ದಾನೋ) ಯತ್ರ=ಯಾವ ಲೋಕದಲ್ಲಿ, ದಿವಃ=ವಾಯುಪತ್ನಿಯಾದ ಭಾರತಿಯು, ಅವರೋಧನಂ=ಪರಿವಾರಭೂತರಾದ ದೇವತೆಗಳು ಇದ್ದಾರೋ). ಯತ್ರ=ಯಾವ ಲೋಕದಲ್ಲಿ, ಯಹ್ವತೀಃ=ಹರಿಯುತ್ತಿರುವ, ಅಮೂಃ=ಈ, ಆಪಃ=ಗಂಗಾದಿ ಜಲಾಭಿಮಾನಿದೇವತೆಗಳು ಇರುತ್ತಾವೋ, ತತ್ರ=ಆ ಲೋಕದಲ್ಲಿ, ಮಾಂ= ನನ್ನನ್ನು, ಅಮೃತಂ=ಮುಕ್ತನನ್ನಾಗಿ, ಕೃಧಿ=ಮಾಡು. ಇಂದೋ, ಇಂದ್ರಾಯ,

ಪರಿಸ್ರವ……‖ (d) ತ್ರಿನಾಕೇ=(ಕಂ=ಸುಖಂ, ಅಕಂ=ದುಃಖಂ, ನಾಸ್ತಿ ಅಕಂ=ದುಃಖಂ, ಯತ್ರ ಎಂಬೀ ವ್ಯುತ್ಪತ್ತಿಯಿಂದ) ಪರಮಸುಖಸಾಧನೀಭೂತವಾದ ಮೂರು ವಿಧವಾದ, ಶ್ವೇತ ದ್ವೀಪ, ಅನಂತಾಸನ, ವೈಕುಂಠಾಖ್ಯ ಧಾಮತ್ರಯರೂಪವಾದ, ತ್ರಿದಿವೇ=ತ್ರಿದಿವಶಬ್ದವಾಚ್ಯ ವಾದ, ಯತ್ರ=ಯಾವ ಲೋಕದಲ್ಲಿ, ದಿವಃ=ಭಾರತೀದೇವಿಗೂ, (ಇತರರಿಗೂ) ಅನು ಕಾಮಂ=ಇಚ್ಛಾನುಸಾರವಾಗಿ, ಚರಣಂ=ಸಂಚಾರವು, (ಇದೆಯೋ) ಯತ್ರ=ಯಾವ ಲೋಕ ದಲ್ಲಿ, (ಭಾರತ್ಯಾದಿಗಳಿಗೆ) ಜ್ಯೋತಿಷ್ಮಂತಃ=ತೇಜಸ್ಸುಗಳುಳ್ಳ, ಲೋಕಾಃ=ಪಟ್ಟಣಗಳು, (ಇವೆ ಯೋ) ತತ್ರ=ಆ ಲೋಕದಲ್ಲಿ, ಮಾಂ=ನನ್ನನ್ನು, ಅಮೃತಂ ಕೃಧಿ, ಇಂದೋ ಇಂದ್ರಾಯ ಪರಿಸ್ರವ……‖ (e) ಯತ್ರ=ಯಾವ ಲೋಕದಲ್ಲಿ, ವಿಷ್ಣೋಃ=ಶ್ರೀಪರಮಾತ್ಮನ, ತತ್= ಪ್ರಸಿದ್ಧವಾದ, ಪರಮಂ=ಸರ್ವೋತ್ತಮವಾದ, ಪದಂ=ಸ್ವರೂಪವು. ಸುಕೃತಕರ್ಮಭಿಃ= ಪ್ರಶಸ್ತಕರ್ಮಗಳನ್ನು ಮಾಡಿರುವ, ದೇವೈಃ=ದೇವತೆಗಳಿಂದ, ಮಹೀಯತೇ=ಪೂಜಿಸಲ್ಪಡು ತ್ತದೋ, ತತ್ರ ಮಾಂ ಅಮೃತಂ ಕೃಧಿ ಇಂದೋ ಇಂದ್ರಾಯ ಪರಿಸ್ರವ……‖ (f) ಯತ್ರ= ಯಾವ ಲೋಕದಲ್ಲಿ, ಆನಂದಾಶ್ಚ=ಸಂತೋಷಗಳು, ಮೋದಾಶ್ಚ=ಮೋದಗಳು, ಮುದಃ, ಪ್ರಮುದಃ=ಇವುಗಳು, ಆಸತೇ = ಇರುತ್ತಾವೋ, ಯತ್ರ = ಎಲ್ಲಿ, ಕಾಮಸ್ಯ=ಇಚ್ಛೆಯ, ಕಾಮಾಃ=ವಿಷಯಗಳು, ಆಪ್ತಾಃ=ಪರ್ಯಾಪ್ತಗಳಾಗಿವೆಯೋ, ತತ್ರ ಮಾಮಮೃತಂ ಕೃಧಿ, ಇಂದೋ ಇಂದ್ರಾಯ, ಪರಿಸ್ರವ……

ತಾ ‖ (1) ಆನಂದಗಳು, ವಿಷಯಸಂಬಂಧವಿಲ್ಲದೆ ಭಗವದ್ಭಕ್ತ್ಯತಿಶಯದಿಂದ ಉಂ ಟಾಗುವ ಸುಖವಿಶೇಷವು. (2) ಮೋದಗಳು, ವಿಷಯಭೋಗಗಳಿಂದ ಉಂಟಾಗುವ ಸುಖ ವಿಶೇಷಗಳು. (3) ಪ್ರಮುದಃ, ಭೋಗಾತಿಶಯದಿಂದ ಉಂಟಾಗುವ ಸುಖವಿಶೇಷಗಳು. (4) ಮುದಃ, ಅಲ್ಪಭೋಗದಿಂದ ಉಂಟಾಗುವ ಸುಖವಿಶೇಷಗಳು. ಆದುದರಿಂದಲೇ ಭಾಷ್ಯಾಂ ತ್ಯದಲ್ಲಿ 'ಸುಖಮಾನಂದ ಇತ್ಯುಕ್ತೋ ಮೋದೋ ಭೋಗನಿಮಿತ್ತಕಃ । ಪ್ರಮೋದಸ್ತದ್ವಿಶೇ ಷೋಥೋ ಮುನ್ಮಾತ್ರಾತ್ಯಲ್ಪಭೋಗತಃ ‖' ಎಂದು ಆಚಾರ್ಯರು ನಿರೂಪಿಸಿರುವರು. ‖ (g) ಇದೇಮೊದಲಾದ ಶ್ರುತಿವಾಕ್ಯದಿಂದ ('ಯತ್ರ ಕಾಮಾನಿಕಾಮಾಶ್ಚ ಯತ್ರ ಬ್ರಧ್ನಸ್ಯ ವಿಷ್ಟಪಂ । ಸ್ವಧಾ ಚ ಯತ್ರ ತೃಪ್ತಿಶ್ಚ ತತ್ರಮಾಮಮೃತಂ ಕೃಧಿ'‖ ಇತ್ಯಾದಿಯನ್ನು ಅಂಗೀಕರಿಸತಕ್ಕದು.) ಚತುರ್ಮುಖನು, ಸೂರ್ಯನು, ಯಮನು ಇವರೇ ಮೊದಲಾದ ಸಮಸ್ತದೇವತೆಗಳ, ಭಾರತೀ ದೇವಿಯ, ತತ್ಪರಿವಾರಭೂತರಾದ ಸಮಸ್ತ ದೇವಿಯರ, ಗಂಗೆಯೇ ಮೊದಲಾದ ಜಲಾಭಿಮಾನಿ ದೇವತೆಗಳಿಗೂ ಕೂಡ ಮುಕ್ತರಾಗಿ ಭೇದದಿಂದ ಯುಕ್ತರಾದವರಿಗೇನೇ, ಋಗಾದಿ ವೇದಗಳ ಪ್ರವಚನವು, ಸೋಮಯಾಗಮೊದಲಾದ ಯಾಗವು ಅಥವಾ ಹರಿಪೂಜಾದಿಯು, ಇಚ್ಛಾನು ಸಾರವಾದ ಸಂಚಾರವು ಕೂಡ, ಹೇಳಲ್ಪಡುತ್ತದೆ.

ಭಾ‖ (a) ಮುಕ್ತಾಶ್ಚಾತ್ರೋಚ್ಯಂತ ಇತಿ ಪ್ರತೀಯತೇ । ಅಮೃತಂ ಕೃಧೀತಿ ವಚನಾತ್ ‖ ಅಮುಕ್ತಾನಾಂ ಸ್ವೇ ಸ್ವೇ ಲೋಕೇವ ಸ್ಥಾನಂ ಹಿ ತೇಷಾಂ । ಮುಕ್ತಾನಾಂ ಹಿ ವಿಷ್ಣುಲೋಕೇವ ಸ್ಥಾನಂ ದೇವಾನಾಂ ‖ (b) ಮುಕ್ತಾಃ ಪ್ರತಿಜ್ಞಾನಾತ್ । ಸಂಕಲ್ಪಾದೇವ ಚ ತಚ್ಛ್ರುತೇಃ ‖ ಜಗದ್ವ್ಯಾಪಾರ ವರ್ಜಂ । ಭೋಗಮಾತ್ರ ಸಾಮ್ಯಲಿಂಗಾಚ್ಚ ‖ ಅನಾವೃತ್ತಿಃ ಶಬ್ದಾದನಾ ವೃತ್ತಿಃ ಶಬ್ದಾತ್ । ಇತ್ಯಾದಿ ಮುಕ್ತಸೂತ್ರೇಭ್ಯಶ್ಚ ಮುಕ್ತಾನಾಂ ವಿಷ್ಣೋ ರ್ಭೇದೋ ಭೋಗಾದಿಕಂ ಚ ಸ ಸರ್ವಂ ಪ್ರತೀಯತೇ ‖ (c) ಗಾವ್ಯಾ

ಸೋಮೋ ಮಹೀಯತ ಇತಿ ಬ್ರಹ್ಮಣೋಽನ್ಯಮುಕ್ತೈಃ ಪೂಜ್ಯತ್ವಂ ಚ ಪ್ರತೀಯತೇ । ನ ಚ ಸೂತ್ರೇಷು ನಿಶ್ಚಿತಾರ್ಥಸ್ಯಾಪಚಾರಿಕತ್ವಂ ವಕ್ತುಂ ಯುಜ್ಯತೇ ॥ ನಿರ್ಣಯಾತ್ಮಕತ್ವಾತ್ತೇಷಾಂ । ಅತಿಪ್ರಸಂಗಶ್ಚೋಪಚಾರಾದಿ ಕಲ್ಪನೇ ॥

ಅ ॥ (a) ಈ ವಾಕ್ಯಗಳಲ್ಲಿ ಮುಕ್ತರೇ ಹೇಳಲ್ಪಡುತ್ತಾರೆ ಎಂದು ನಿಶ್ಚಿತವಾಗುತ್ತದೆ. ನನ್ನನ್ನು ಮುಕ್ತನನ್ನಾಗಿಮಾಡು ಎಂಬೀ ವಚನವಿರುವುದರಿಂದ, ॥ ಅಮುಕ್ತರಾದ ಅವರಿಗಾದರೂ ತಮ್ಮ ತಮ್ಮ ಲೋಕದಲ್ಲಿಯೇ ಸ್ಥಿತಿಯಷ್ಟೇ ॥ ಮುಕ್ತರಾದ ದೇವತೆಗಳಿಗೆ ವಿಷ್ಣುಲೋಕದಲ್ಲಿ ಸ್ಥಿತಿಯು, ಪ್ರಮಾಣಪ್ರಸಿದ್ಧವು. ॥ (b) 'ಸ ತತ್ರ ಪರ್ಯೇತಿ' ಎಂಬೀ ಶ್ರುತಿಯಲ್ಲಿ ಮುಕ್ತನೇ ಹೇಳಲ್ಪಡುತ್ತಾನೆ ಸಂಸಾರಿಯಲ್ಲ. 'ಅಹರಹಃ' ಎಂಬ ಶ್ರುತ್ಯಂತರದಲ್ಲಿ ಮುಕ್ತನಿಗೇನೇ ಅಂತಹ ಭೋಗ ಭೋಕ್ತೃತ್ವವನ್ನು ಪ್ರತಿಜ್ಞಾಮಾಡಿರುವುದರಿಂದ ಬ್ರ. ಸೂತ್ರ ಅ. ೪. ಪಾ. ೪. ಸೂ. ೨॥ ಮುಕ್ತನು ಅನಿಷ್ಟೇತರ ಭೋಗಗಳನ್ನು ಭೋಗಿಸುತ್ತಾನೆ. ಅಪ್ರತಿಹತವಾದ ಸ್ವಕಾಮದಿಂದಲೇ, ಆ ವಿಷಯದಲ್ಲಿ 'ಸ ಯದಿ ಪಿತೃಲೋಕಕಾಮೋ ಭವತಿ' ಇತ್ಯಾದಿ ಶ್ರುತಿಯಿರುವುದರಿಂದ. ॥ ಬ್ರ. ಸೂ. ಅ. ೪. ಪಾ. ೪. ಸೂ. ೮ ॥ ಮುಕ್ತನು ಜಗತ್ಕರ್ತೃಕ ಸೃಷ್ಟ್ಯಾದಿ ವ್ಯಾಪಾರಗಳನ್ನು ಬಿಟ್ಟು ಸಮಸ್ತಕಾಮಗಳನ್ನು ಅನುಭವಿಸುತ್ತಾನೆ. 'ಸರ್ವಾನ್ ಕಾಮಾನ್ ಆಪ್ತ್ವಾಽಮೃತಃ' ಎಂದು ಶ್ರುತಿಯಿರುವುದರಿಂದ. ಬ್ರ. ಸೂ. ಅ. ೪. ಪಾ. ೪. ಸೂ. ೧೭ ॥ ಮುಕ್ತರಿಗೆ ಒಂದೇ ರೀತಿಯಾಗಿ ಇರೋಣವೇ. ಆನಂದಾದಿಗಳಿಂದ ವೃದ್ಧಿಹ್ರಾಸಗಳು ಇಲ್ಲ. 'ಏತಮಾನಂದಮಯಂ' ಎಂಬೀ ಶ್ರುತಿಯಲ್ಲಿ ಭೋಗವಿಶೇಷತದಭಾವಗಳು ಇದ್ದರೂ ವೃದ್ಧಿಹ್ರಾಸಗಳು ಇಲ್ಲದೆ ಇರುವಿಕೆ ಎಂಬ ಸಾಮ್ಯವು ಶ್ರುತವಾದುದರಿಂದ ಅಥವಾ ಕೇವಲ ಭೋಗಕ್ಕೆ ವಿಶೇಷವಿದ್ದರೂ ಮುಕ್ತನಿಗೆ ಸಾಮ್ಯವೇ ಭೋಗವಿಶೇಷವು ವೃದ್ಧ್ಯಾದಿಗಳಲ್ಲಿ ಕಾರಣವಲ್ಲವು. ಈ ಅರ್ಥದಲ್ಲಿ 'ಏತಮಾನಂದಮಯಮಾತ್ಮಾನಮನುಪ್ರವಿಶ್ಯ ನ ಜಾಯತೇ ನ ಮ್ರಿಯತೇ ನ ಹ್ರಸತೇ ನ ವರ್ಧತೇ ಯಥಾಕಾಮಂ ರಮತೇ ಯಥಾಕಾಮಮುಪರಮತೇ' ಎಂದು ಯುಕ್ತಿಯನ್ನು ತೋರಿಸುವ ಶ್ರುತಿಯಿರುವುದರಿಂದ (ಅಂತೂ ವೃಧ್ಧ್ಯದ್ಯಭಾವವು ಲಿಂಗವು) ಬ್ರ. ಸೂ. ಅ. ೪. ಪಾ. ೪ ಸೂ. ೨೨ ॥ ಮುಕ್ತರಿಗೆ ಪುನರಾವೃತ್ತಿಯು ಇಲ್ಲ. 'ನ ಚ ಪುನರಾವರ್ತತೇ' 'ಸರ್ವಾನ್ ಕಾಮಾನ್ ಆಪ್ತ್ವಾ ಅಮೃತಃ ಸಮಭವತ್' ಇತ್ಯಾದಿ ಶ್ರುತಿಯಿರುವುದರಿಂದ ಸೂತ್ರ. ೨೩. ॥ ಇವೇ ಮೊದಲಾದ ಮುಕ್ತವಿಷಯಕ ಸೂತ್ರಗಳಿಂದಲೂ ಮುಕ್ತರಿಗೂ ವಿಷ್ಣುವಿಗೂ ಭೇದವು ಭೋಗವೇ ಮೊದಲಾದದ್ದು ತೋರುತ್ತದೆ.

ತಾ ॥ ೧ನೇ ಸೂತ್ರದಲ್ಲಿ ಮುಕ್ತರಿಗೂ ಈಶನಿಗೂ, ಭೇದವೂ ಭೋಗವೂ ಹೇಳಲ್ಪಟ್ಟಿದೆ. ಮುಕ್ತನಿಗೆ ಶ್ರೀ ಹರಿಯಲ್ಲಿ ಪ್ರವೇಶದಿಂದ ಮೋದವು ಹೇಳಿರುವುದರಿಂದ (೨ನೇ ಸೂತ್ರದಲ್ಲಿ ಭೋಗವು. ೩ನೇದರಲ್ಲಿ ಭೋಗವು, ಭೇದವು. ೪ನೇದರಲ್ಲಿ ಭೇದವು, ಭೋಗವು. ೫ನೇದರಲ್ಲಿ ಅಪುನರಾವೃತ್ತಿಯು ಭೋಗವು ಹೇಳಲ್ಪಟ್ಟಿದೆ. ಆದಿಪದದಿಂದ ಮುಕ್ತಬ್ರಹ್ಮನಿಗೆ ಪೂಜ್ಯತ್ವವು. ಇತ್ಯಾದಿಯು ಬ್ರಹ್ಮಸೂತ್ರದಲ್ಲಿ ಹೇಳಲ್ಪಟ್ಟಿದೆ.

(c) (1) 'ಗ್ರಾವ್ಣಾ ಸೋಮೋ ಮಹೀಯತೇ' ಎಂದು ಬ್ರಹ್ಮಗೆ ಇತರ ಮುಕ್ತರಿಂದ ಪೂಜ್ಯತ್ವವೂ ಕೂಡ ಪ್ರತೀತವಾಗುತ್ತದೆ. 'ಅಕ್ಷಣ್ವಂತಃ' 'ಯತ್ರ ಬ್ರಹ್ಮಾ' ಇತ್ಯಾದಿ ಶ್ರುತಿಗೆ ಗೌಣಮೋಕ್ಷಪರತ್ವವನ್ನಂಗೀಕರಿಸಿ ಅಮುಖ್ಯಾರ್ಥವನ್ನು ಏತಕ್ಕೆ ಅಂಗೀಕರಿಸಬಾರದು? ಅಥವಾ ಮುಕ್ತಿಯಲ್ಲಿ ಅಭಿರುಚ್ಯುತ್ಪಾದನಾರ್ಥವಾಗಿ ಕೇವಲ ಅರ್ಥವಾದವೆಂದು ಏತಕ್ಕೆ ಅಂಗೀಕರಿಸ

ಬಾರದು? ಎಂದರೆ - ಽ ಸೂತ್ರಗಳಲ್ಲಿ ನಿಶ್ಚಿತಾರ್ಥಕವಾದ ವೇದಕ್ಕೆ ಅಮುಖ್ಯಾರ್ಥತ್ವವನ್ನ ಹೇಳಲಿಕ್ಕೆ ಕೂಡದು. ॥ ಅವುಗಳಿಗೆ (ಉಪಕ್ರಮಾದಿ ಲಿಂಗದಿಂಗ) ಶ್ರುತ್ಯರ್ಥನಿರ್ಣಯಸ್ವರೂಪತ್ವವು ಇದ್ದುದರಿಂದ ಉಪಚಾರಾದಿಗಳನ್ನು ಕಲ್ಪಿಸಿದರೆ ಅತಿಪ್ರಸಂಗವೂ ಕೂಡ ಬರುತ್ತದೆ.

ತಾ ॥ ಸೂತ್ರಗಳಿಂದ ನಿರ್ಣೀತವಾದ ಅರ್ಥಕ್ಕೂ ಅಮುಖ್ಯಾರ್ಥತ್ವವನ್ನಂಗೀಕರಿಸಿದರೆ "ತದನನ್ಯತ್ವಮಾರಂಭಣ ಶಬ್ದಾದಿಭ್ಯಃ" ಇತ್ಯಾದಿ ಸೂತ್ರನಿರ್ಣೀತವಾದ ಅರ್ಥಕ್ಕೂ 'ತತ್ಸತ್ಯಂ ಸ ಆತ್ಮಾ ತತ್ವಮಸಿ ಶ್ವೇತಕೇತೋ' ಇತ್ಯಾದಿ ಮಹಾವಾಕ್ಯಾರ್ಥಕ್ಕೂ ಕೂಡ ಅಮುಖ್ಯಾರ್ಥತ್ವವು ಪ್ರಸಕ್ತವಾಗುವುದು ಆದುದರಿಂದ ನಿಶ್ಚಿತಾರ್ಥವೇ ಇಲ್ಲದೇ ಹೋಗಬೇಕಾಗುವುದು.

ಭಾ॥ (a) ಬ್ರಹ್ಮಸೂತ್ರಪದೈಶ್ಚೈವ ಹೇತುಮದ್ಭಿರ್ವಿನಿಶ್ಚಿತೈಃ । ಇತಿ ನಿಶ್ಚಿತಾನಿ ಬ್ರಹ್ಮಸೂತ್ರಾಣಿ ॥ ಬಹುನಾಽತ್ರ ಕಿಮುಕ್ತೇನ ಯಾವಚ್ಛ್ವೇತಂ ನ ಗಚ್ಛತಿ । ಯೋಗೀ ತಾವನ್ನ ಮುಕ್ತಃ ಸ್ಯಾದೇಷ ಶಾಸ್ತ್ರಸ್ಯ ನಿರ್ಣಯಃ ॥ ಇತ್ಯಾದಿತ್ಯಪುರಾಣೇ ॥ (b) ನ ಚ ನಿರ್ಣಾಯಕಾನಿ ಭಗವದ್ವಾಕ್ಯಾನ್ಯಪಹಾಯ ಮಾನುಷವಾಕ್ಯೈರೇವ ತೇಷಾಮುಪಚಾರತ್ವಾದಿ ಕಲ್ಪ್ಯಂ । ನ ಚ ಭೋಗರಹಿತಾ ಮುಕ್ತಿರ್ನಾಮಾಸ್ತೀತ್ಯತ್ರ ಕಿಂಚಿನ್ಮಾನಂ ॥ (c) ಭುಂಜತೇ ಪುರುಷಂ ಪ್ರಾಪ್ಯ ಯಥಾ ದೇವಗ್ರಹಾದಯಃ । ತಥಾ ಮುಕ್ತಾವುತ್ತಮಾಯಾಂ ವಿಷ್ಣುಮಾವಿಶ್ಯ ಭುಂಜತೇ ॥ ವಿಷ್ಣೋರ್ವಶಾಶ್ಚ ತೇ ಸರ್ವೇ ಸರ್ವದಾ ದುಃಖವರ್ಜಿತಾಃ । ನ ತು ವಿಷ್ಣುಗುಣಾನ್ಸರ್ವೇ ಭುಂಜತೇ ತೇ ಕದಾಚನ ॥ ಬಾಹ್ಯಭೋಗಾನ್ಭುಂಜತೇ ಚ ತಾರತಮ್ಯೇನ ಕಾಂಕ್ಷನ । ವಿಷ್ಣೋರ್ದೇಹಾದ್ಬಹಿಶ್ಚಾಪಿ ನಿರ್ಗಚ್ಛಂತಿ ಯಥೇಷ್ಟತಃ ॥ ಇತಿ ಸ್ಕಾಂದೇ ॥ (d) ಇದಂ ಜ್ಞಾನಮುಪಾಶ್ರಿತ್ಯ ಮಮ ಸಾಧರ್ಮ್ಯಮಾಗತಾಃ । ಸರ್ಗೇಽಪಿ ನೋಪಜಾಯಂತೇ ಪ್ರಲಯೇ ನ ವ್ಯಥಂತಿ ಚ ॥ ಇತಿ ಭಗವದ್ವಚನಂ ॥ (e) ತಸ್ಮಾನ್ಮುಕ್ತೈರಪೀಜ್ಯಮಾನಃ ಸರ್ವಸ್ಮಾದ್ಭಿನ್ನಃ ಸರ್ವೋತ್ತಮಃ ಸರ್ವನಾಮಾ ಸರ್ವಶಕ್ತಿಃ ಸರ್ವಗುಣಸಂಪೂರ್ಣೋ ನಾರಾಯಣಃ ಸರ್ವವೇದಾದಿಷೂಚ್ಯತ ಇತಿ ಸಿದ್ಧಂ ॥ ಖಂಡ ॥ ೩ ॥

ಅ ॥ (a) ಯುಕ್ತಿಗಳುಳ್ಳ, ನಿರ್ಣಾಯಕಗಳಾಗಿ ವಿಶೇಷಾಕಾರವಾಗಿ ನಿಶ್ಚಿತಗಳಾದ ಬ್ರಹ್ಮಸೂತ್ರಪದಗಳಿಂದಲೇ ಎಂಬೀ ಪ್ರಮಾಣದಿಂದ ಬ್ರಹ್ಮಸೂತ್ರಗಳು ನಿರ್ಣಾಯಕಗಳೆಂದು ನಿಶ್ಚಿತಗಳಾಗಿವೆ. ॥ ಮುಕ್ತಿಯಲ್ಲಿ ಭೇದವು, ಅಪ್ರಾಕೃತಸುಖಭೋಗವು ಶ್ರುತಿಸೂತ್ರಗಳಿಂದ ನಿಶ್ಚಯಿಸಲ್ಪಟ್ಟಿವೆ. ಅದ್ವೈತಿಗಳು ಈ ಶ್ರುತಿಸೂತ್ರಗಳಿಗೆ ಈ ಅರ್ಥವನ್ನು ಅಮುಖ್ಯವೆಂದು ಇಟ್ಟುಕೊಂಡು ಮುಕ್ತಿಯಲ್ಲಿ ಜೀವೇಶರಿಗೆ ಏಕ್ಯವೂ ಭೋಗರಾಹಿತ್ಯವೂ ಶ್ರುತಿಸೂತ್ರಗಳು ಹೇಳುವವುಗಳೆಂದೂ ಕಲ್ಪಿಸುವರು. ಅದ್ವೈತವಾದವು ಯುಕ್ತವಲ್ಲವೆಂದು ಮೇಲೆ ಉದಾಹರಿಸಿದ ಶ್ರುತಿಸೂತ್ರಗಳಿಗೆ ಮುಖ್ಯಾರ್ಥವನ್ನೇ ಸ್ವೀಕರಿಸುವುದು ಯುಕ್ತವೆಂದು ಪುರಾಣಸಮ್ಮತಿಯಿಂದ ತೋರಿಸುತ್ತಾರೆ. 'ಈ ವಿಷಯದಲ್ಲಿ ಬಹಳ ಮಾತಿನಿಂದ ಏನು ಪ್ರಯೋಜನವು. ಯೋಗಿಯು ಎಷ್ಟುಪರ್ಯಂತ ಶ್ವೇತದ್ವೀಪವನ್ನು ಹೋಗುವುದಿಲ್ಲವೋ ಅಷ್ಟುಕಾಲ ಮುಕ್ತನು ಆಗಲಾರನು. ಇದು ಶಾಸ್ತ್ರದ ನಿಶ್ಚಯವು' ಎಂದು ಆದಿತ್ಯಪುರಾಣದಲ್ಲಿ. ॥ (b) ಮತ್ತು ಸ್ಪಷ್ಟಸೂತ್ರಗಳಿಗೆ ಅರ್ಥಾಂತರವನ್ನು ಪರಿಕಲ್ಪಿಸಿ ಉಕ್ತಶ್ರುತಿಗಳಿಗೆ ಅಮುಖ್ಯಮೋಕ್ಷಪರತ್ವವು

ಯಾ ಅರ್ಥವಾದಪರತ್ವವು ತಮ್ಮ ಆಚಾರ್ಯರ ವಾಕ್ಯದಿಂದ ಮಾಡಲ್ಪಡುತ್ತದೋ ಅಥವಾ ಭೋಗಾದಿರಹಿತವಾದ ನಿರ್ಗುಣವಾದ ಮುಕ್ತಿಯು ಅದೆ, ಎಂಬ ವಿಷಯದಲ್ಲಿ ನಿರವಕಾಶವಾದ ಪ್ರಮಾಣಸಾಮರ್ಥ್ಯದಿಂದಲೋ (೧)ನೇ ಕಲ್ಪವು ಅಸಂಗತವು. ಏಕೆಂದರೆ- (1) ಶ್ರುತ್ಯರ್ಥ ನಿರ್ಣಾಯಕಗಳಾದ, ಪೂಜ್ಯರಾದ ವೇದವ್ಯಾಸದೇವರ ಸೂತ್ರರೂಪ ವಾಕ್ಯಗಳನ್ನು ಬಿಟ್ಟು ಮನುಷ್ಯರ ಮಾತುಗಳಿಂದಲೇ ಅವುಗಳಿಗೆ ಅಮುಖ್ಯಾರ್ಥತ್ವಾದಿಗಳನ್ನು ಕಲ್ಪಿಸುವುದು ಅಯುಕ್ತವು. (೨)ನೇದ್ದು ಅಸಂಗತವು. ಸರ್ವಭೋಗಗಳಿಂದ ವಿರಹಿತವಾದ ಇತರವಾದ ಮುಕ್ತಿಯೆಂಬುವುದು ಅದೆ. ಎಂಬೀ ವಿಷಯದಲ್ಲಿ ಯಾವುದೊಂದು ಪ್ರಮಾಣವೂ ಇಲ್ಲ. ॥ (c) (ಸಾಯುಜ್ಯರೂಪವಾದ ಪ್ರಸಿದ್ಧವಾದ ಉತ್ತಮ ಮುಕ್ತಿಯೇ ನಿರ್ಗುಣ ಮುಕ್ತಿಯು ಎಂದೂ ಹೇಳಕೂಡದು). ಹೇಗೆ ಪಿಶಾಚಾದಿಗಳು ಪುರುಷನನ್ನು ಹೊಂದಿ ಭೋಗವನ್ನು ಹೊಂದುತ್ತಾವೋ ಹಾಗೆ ಉತ್ತಮವಾದ ಮುಕ್ತಿಯಲ್ಲಿ ವಿಷ್ಣುವನ್ನು ಪ್ರವೇಶಿಸಿ ಭೋಗಿಸುತ್ತಾರೆ. ॥ ಅವರೆಲ್ಲರೂ ಶ್ರೀ ಹರಿಯ ಅಧೀನರಾಗಿಯೂ ಯಾವಾಗಲೂ ದುಃಖರಹಿತರಾಗಿಯೂ (ಇರುತ್ತಾರೆ). ಅವರೆಲ್ಲರೂ ಯಾವಕಾಲದಲ್ಲಿಯೂ ಶ್ರೀ ಹರಿಯ ಗುಣಗಳನ್ನು ಭೋಗಿಸುವುದಿಲ್ಲ. ॥ ಕೆಲವು ವಿಷ್ಣ್ವಾನಂದಾದಿಗಳಿಂದ ಅತಿರಿಕ್ತಗಳಾದ ಪದಾರ್ಥಗಳನ್ನು ನೀಚೋಚ್ಚಭಾವದಿಂದ ಭೋಗಿಸುತ್ತಾರೆ. (ಅವರು ಉತ್ತಮರಿಂದ ಭೋಗ್ಯಗಳಾದವುಗಳನ್ನು ಭೋಗಿಸಲಾರರು). ಉತ್ತಮರೂ ಕೂಡ ಅವರ ಸ್ತ್ರೀಯರೇ ಮೊದಲಾದವರಲ್ಲಿ ಭೋಗಿಸುವುದಿಲ್ಲ.) ಪರಮಾತ್ಮನ ಶರೀರದಿಂದ ಹೊರಗೂ ಕೂಡ ಇಚ್ಛಾನುಸಾರವಾಗಿ ಹೋಗುತ್ತಾರೆ. ಎಂದು ಸ್ಕಾಂದಪುರಾಣದಲ್ಲಿ ॥ (d) ಈ ಜ್ಞಾನವನ್ನು ಹೊಂದಿ ನನ್ನ ಸಮಾನ ಧರ್ಮವತ್ವವನ್ನು ಹೊಂದಿರುತ್ತಾರೆ. ಸೃಷ್ಟಿಕಾಲದಲ್ಲಿಯೂ ಹುಟ್ಟುವುದಿಲ್ಲ. ಪ್ರಳಯಕಾಲದಲ್ಲಿ ವ್ಯಥೆಯನ್ನು ಹೊಂದುವುದಿಲ್ಲ. ಎಂದೂ ಶ್ರೀ ಪರಮಾತ್ಮನ ಗೀತಾರೂಪವಾದ ನುಡಿಯು.

ತಾ ॥ ಜನನ ಮರಣಾಭಾವಲಿಂಗದಿಂದ ಪರಮ ಮೋಕ್ಷವೆಂದು ತಿಳಿದರೂ 'ಸಾಧರ್ಮ್ಯಮಾಗತಾಃ' ಎಂದು ಭೇದವೇ ಹೇಳಿರುವುದರಿಂದ ಭೇದಕ್ಕೆ ಸತ್ಯತ್ವವೂ, ಸರ್ವಭೋಗ ಮೊದಲಾದುದು ಯುಕ್ತವಾಗುತ್ತದೆ. (e) ಆದುದರಿಂದ ನಾರಾಯಣನು ಮುಕ್ತರಾದವರಿಂದಲೂ ಕೂಡ ಪೂಜಿಸಿಕೊಳ್ಳಲ್ಪಡತಕ್ಕವನು, ಸಮಸ್ತ ವಸ್ತುವಿನಿಂದಲೂ ಭಿನ್ನನು, ಸರ್ವೋತ್ತಮನು, ಸರ್ವನಾಮಗಳುಳ್ಳವನು, ಸರ್ವಶಕ್ತನು, ಸರ್ವಗುಣಗಳಿಂದ ಪರಿಪೂರ್ಣನಾಗಿಯೂ ಸಮಸ್ತವೇದಾದಿಗಳಲ್ಲಿ ಹೇಳಲ್ಪಡುತ್ತಾನೆ. ಎಂದು ಸಿದ್ಧವಾಯಿತು. ॥ ೩ ॥

ಬೃಹತೀಸಹಸ್ರವು ಶ್ರೀ ಹರಿಗೆ ತೃಪ್ತಿಜನಕವು ಎಂದು ಪೂರ್ವಖಂಡದಲ್ಲಿ ನಿರೂಪಿತವಾಗಿಯದೆ. ಪ್ರಸಿದ್ಧವಾದ ಋಗ್ವೇದದಲ್ಲಿ ಭೃಹತೀ ಛಂದಸ್ಕವಾದ ಋಕ್ಸಹಸ್ರವು ತೋರದೆ ಇರುವುದರಿಂದ ಅವುಗಳಿಂದ ಹೇಗೆ ಸ್ತುತಿಸುವುದು ಎಂದರೆ ಅವುಗಳನ್ನು ಸಂಪಾದಿಸತಕ್ಕ ಪ್ರಕಾರವೂ, ತದಭಿಮಾನಿದೇವತೆಗಳೂ, ಪ್ರತಿಪಾದ್ಯರೂಪಗಳೂ, ಹೇಳಲ್ಪಡುತ್ತವೆ.

**ಮಂ ॥ ತದ್ವಾ ಇದಂ ಬೃಹತೀಸಹಸ್ರಂ ಸಂಪನ್ನಂ ತಸ್ಯ ಯಾನಿ ವ್ಯಂಜನಾನಿ ತಚ್ಛರೀರಂ ಯೋ ಘೋಷಃ ಸ ಆತ್ಮಾ ಯ ಊಷ್ಮಾಣಃ ಸ ಪ್ರಾಣ ಏತದ್ಧ ಸ್ಮ ವೈತದ್ವಿದ್ವಾನ್ವಸಿಷ್ಠೋ ವಸಿಷ್ಠೋ ಬಭೂವ ತತ ಏತನ್ನಾಮಧೇಯಂ ಲೇಭ ಏತದು ಹ್ಯೈವೇಂದ್ರೋ ವಿಶ್ವಾಮಿತ್ರಾಯ ಪ್ರೋವಾಚೈತದು ಹ್ಯೈವೇಂದ್ರೋ ಭರದ್ವಾಜಾಯ ಪ್ರೋವಾಚ ತಸ್ಮಾತ್ಸ ತೇನ ಬಂಧುನಾ ಯಜ್ಞೇಷು ಹೂಯತೇ ತದ್ವಾ ಇದಂ ಬೃಹತೀ**

ಸಹಸ್ರಂ ಸಂಪನ್ನಂ ತಸ್ಯ ವಾ ಏತಸ್ಯ ಬೃಹತೀಸಹಸ್ರಸ್ಯ ಸಂಪನ್ನಸ್ಯ ಷಟ್ತ್ರಿಂಶತಮಕ್ಷರಾಣಾಂ ಸಹಸ್ರಾಣಿ ಭವಂತಿ ತಾವಂತಿ ಶತಸಂವತ್ಸರಸ್ಯಾಹ್ನಾಂ ಸಹಸ್ರಾಣಿ ಭವಂತಿ ವ್ಯಂಜನೈರೇವ ರಾತ್ರೀರಾಪ್ನುವಂತಿ ಸ್ವರೈರಹಾನಿ ತದ್ವಾ ಇದಂ ಬೃಹತೀಸಹಸ್ರಂ ಸಂಪನ್ನಂ ತಸ್ಯ ವಾ ಏತಸ್ಯ ಬೃಹತೀಸಹಸ್ರಸ್ಯ ಸಂಪನ್ನಸ್ಯ ಪರಸ್ತಾತ್ಪ್ರಜ್ಞಾಮಯೋ ದೇವತಾಮಯೋ ಬ್ರಹ್ಮಮಯೋಽಮೃತಮಯಃ ಸಂಭೂಯ ದೇವತಾ ಅಪ್ಯೇತಿ ಯ ಏವಂ ವೇದ ತದ್ಯೋಽಹಂ ಸೋಽಸೌ ಯೋಽಸೌ ಸೋಽಹಂ ತದುಕ್ತಮೃಷಿಣಾ ಸೂರ್ಯ ಆತ್ಮಾ ಜಗತಸ್ತಸ್ಥುಷಶ್ಚೇತ್ಯೇತದುಹೈವೋಪೇಕ್ಷೇತೋಪೇಕ್ಷೇತ ॥ ೪ ॥

ಇತ್ಯೈತರೇಯೋಪನಿಷತ್ಸು ದ್ವಿತೀಯಾರಣ್ಯಕೇ
॥ ದ್ವಿತೀಯೋಽಧ್ಯಾಯಃ ॥

ಅ ॥ (ಎಷ್ಟು ಋಕ್ಕುಗಳನ್ನು ಸ್ತುತಿಸಿದರೆ ಮೂವತ್ತಾರು ಸಹಸ್ರ ಅಕ್ಷರಗಳು ಆಗುತ್ತವೆಯೋ ಯಾವುದಾದರೂ ಛಂದಸ್ಸಿನಿಂದ ಅಷ್ಟು ಸ್ತುತಿಸತಕ್ಕದು. ಆಗ) ತದ್ವೈ=ಆ ರೀತಿಯಾಗಿ ಸ್ತುತಿಸಿದರೇನೇ, ಇದಂ ಬೃಹತೀ ಸಹಸ್ರಂ=ಈ ಬೃಹತೀ ಸಹಸ್ರವು, ಸಂಪನ್ನಂ= ಸಂಪಾದಿತವಾಗುತ್ತದೆ. (ಬೃಹತೀಛಂದಸ್ಕ ಋಕ್ಸಹಸ್ರವೇ ಆಗಬೇಕೆಂಬ ನಿಯಮವು ಇಲ್ಲವು.) ತಸ್ಯ=ಆ ಬೃಹತೀ ಸಹಸ್ರಕ್ಕೆ, ಯಾನಿ ವ್ಯಂಜನಾನಿ=ಯಾವ ಕಕಾರವನ್ನಾರಂಭಿಸಿ ಮಕಾರ ಪರ್ಯಂತಗಳಾದ ಸ್ಪರ್ಶಾಕ್ಷರಗಳೋ, ತತ್=ಅವುಗಳು, ಶರೀರಂ=ಶರೀರಾಭಿಮಾನಿಯಾದ ಸ್ವಾಯಂಭುವ ಮನುವೇ ದೇವತೆಯಾಗಿ ಉಳ್ಳವುಗಳು, ಯಃ=ಯಾವುವು, ಘೋಷಃ=ಯ, ರ, ಲ, ವ, ರೂಪಗಳಾದ ಅಂತಸ್ಥಾಕ್ಷರಗಳೋ, ಸಃ=ಅವುಗಳು, ಆತ್ಮಾ=ಜೀವಾಭಿಮಾನಿಯಾದ ಚತುರ್ಮುಖನೇ ದೇವತೆಯಾಗಿ ಉಳ್ಳವುಗಳು. ಯೇ=ಯಾವುವು, ಊಷ್ಮಾಣಃ=ಶ, ಷ, ಸ, ಹ, ಗಳೋ, ಸಃ=ಅವುಗಳು, ಪ್ರಾಣಃ=ಮುಖ್ಯಪ್ರಾಣನೇ ದೇವತೆಯಾಗಿ ಉಳ್ಳವುಗಳು. (ಸ್ವರಾಕ್ಷರಗಳಾದರೂ ಆಯಾಯ ವರ್ಣಗಳ ಅವಯವಗಳಾದುದರಿಂದ ಅವುಗಳಲ್ಲಿಯೇ ಅಂತರ್ಭೂತಗಳಾದುವು. ಆದಕಾರಣ ಪ್ರತ್ಯೇಕವಾಗಿ ಹೇಳಲ್ಪಡಲಿಲ್ಲ. ಬೃಹತೀ ಸಹಸ್ರವರ್ಣಗಳಿಗೂ, ತದಭಿಮಾನಿಗಳಾದ ದೇವತೆಗಳಿಗೂ, ನಿಯಾಮಕನೂ, ತತ್ಪ್ರತಿಪಾದ್ಯನೂ ಶ್ರೀ ಪರಮಾತ್ಮನು ಆಗಿದ್ದಾನೆ. ಎಂದು ಸಿದ್ಧವಾಯಿತು.) ಏತತ್=ಮನ್ವಾದಿಗಳಿಗೆ ಬೃಹತೀ ಸಹಸ್ರಾಭಿಮಾನಿತನವನ್ನು, ಏತತ್=ಶ್ರೀ ಪರಮಾತ್ಮನಿಗೆ ತತ್ಪ್ರತಿಪಾದ್ಯತ್ವವನ್ನೂ, ತದುಭಯ ನಿಯಾಮಕತ್ವವನ್ನೂ, ವಿದ್ವಾನ್=ತಿಳಿದ, ವಸಿಷ್ಠಃ=ವಸಿಷ್ಠಪದಯೋಗ್ಯನಾದ ಜೀವನು, ವಸಿಷ್ಠಃ=ಆವಾಸ ಮಾಡುವವರಲ್ಲಿ ಉತ್ತಮನು, ಬಭೂವ=ಆದನು. ತತಃ=ಆದುದರಿಂದ (ಸಮಸ್ತ ವೇದಪುರಾಣಾದಿಗಳಲ್ಲಿ, ಏತತ್=ಈ, ನಾಮಧೇಯಂ=ವಸಿಷ್ಠ ಎಂಬ ಹೆಸರನ್ನು, ಲೇಭೇ=ಪಡೆದನು. ಹ, ಸ್ಮ, ವಾ=ಇದು ಸುಪ್ರಸಿದ್ಧವು. ಏತತ್, ಉ ಹ, ಏವ=ಈ ವಿದ್ಯೆಯನ್ನೇ, ಇಂದ್ರಃ=ಇಂದ್ರನು, ವಿಶ್ವಾಮಿತ್ರಾಯ=ವಿಶ್ವಾಮಿತ್ರ ಋಷಿಗೋಸ್ಕರ, ಪ್ರೋವಾಚ=ಹೇಳಿದನು. ಏತತ್, ಉ ಹ, ಏವ=ಈ ವಿದ್ಯೆಯನ್ನೇ, ಇಂದ್ರಃ=ಇಂದ್ರನು, ಭರದ್ವಾಜಾಯ=ಭರದ್ವಾಜಋಷಿಗೋಸ್ಕರ, ಪ್ರೋವಾಚ=ಹೇಳಿದನು. ತಸ್ಮಾತ್=ಈ ವಿದ್ಯೆಯ ಬಲದಿಂದಲೇ, ಸಃ=ಆ ಇಂದ್ರನು, ತೇನ ಬಂಧುನಾ=ಆ ವಿಷ್ಣುವಿನಿಂದ (ಆತನ ಅನುಗ್ರಹದಿಂದ,) ಯಜ್ಞೇಷು=ಯಜ್ಞಭಾಗವನ್ನು

ಸ್ವೀಕರಿಸುವುದಕ್ಕೋಸ್ಕರ (ಹೋತೃ ಮೊದಲಾದವರಿಂದ) ಹೂಯತೇ=ಕರೆಯಲ್ಪಡುತ್ತಾನೆ. ತದ್ವೈ ಇದಂ ಬೃಹತೀ ಸಹಸ್ರಂ ಸಂಪನ್ನಂ (ಹಿಂದೆ ಹೇಳಿದುದೇ ಅರ್ಥ.) ತಸ್ಯ ವಾ=ಆದಾವ, ಸಂಪನ್ನಸ್ಯ=ಮನ್ವಾದಿಗಳಿಂದ ಅಭಿಮನ್ಯಮಾನವಾದ ವ್ಯಂಜನಾದಿ ರೂಪಗಳಿಂದ ಸಂಗತವಾದ, ಏತಸ್ಯ=ಈ, ಬೃಹತೀಸಹಸ್ರಸ್ಯ=ಬೃಹತೀಸಹಸ್ರಕ್ಕೆ (ಕೂಡಿ ಅಕ್ಷರಗಳನ್ನು ಎಣಿಕೆಮಾಡಿ ಸ್ವರ ವ್ಯಂಜ್ಯನ ಭೇದದಿಂದ), ಷಟ್ತ್ರಿಂಶತಂ=ಮೂವತ್ತಾರು, ಅಕ್ಷರಾಣಾಂ=ಅಕ್ಷರಗಳ, ಸಹಸ್ರಾಣಿ=ಸಾವಿರಗಳು, ಭವಂತಿ ಆಗುತ್ತವೆ, ಶತಸಂವತ್ಸರಸ್ಯ=ನೂರುಸಂವತ್ಸರದ, ಅಹ್ನಾಂ= ದಿವಸಗಳ, ಸಹಸ್ರಾಣಿ=ಸಾವಿರಗಳು, ತಾವಂತಿ=ಮೂವತ್ತಾರುಗಳೇ, ಭವಂತಿ=ಆಗುತ್ತವೆ. ವ್ಯಂಜನೈರೇವ=ಬೃಹತೀಸಹಸ್ರದಲ್ಲಿರುವ ವ್ಯಂಜನಾಕ್ಷರ ದೇವತೆಗಳಿಂದಲೇ, ರಾತ್ರೀಃ= ರಾತ್ರ್ಯಭಿಮಾನಿದೇವತೆಗಳನ್ನು, ಆಪ್ನುವಂತಿ=ಹೊಂದುತ್ತಾರೆ. ಸ್ವರೈಃ=ಸ್ವರಾಭಿಮಾನಿ ದೇವತೆಗಳಿಂದ, ಅಹಾನಿ=ದಿವಸಾಭಿಮಾನಿ ದೇವತೆಗಳನ್ನು (ಹೊಂದುತ್ತಾರೆ.) ಇದಂ ಬೃಹತೀ ಸಹಸ್ರಂ=ಈ ಬೃಹತೀಸಹಸ್ರವು, ತದ್ವೈ=ಅಹೋರಾತ್ರಾಧಿಷ್ಠಿತವಾಗಿಯೇ, ಸಂಪನ್ನಂ=ಸಂಗತವಾಗುತ್ತದೆ. ಯಃ=ಯಾವಾತನು, ಏವಂ=ಪೂರ್ವೋಕ್ತಪ್ರಕಾರವಾಗಿ, ವೇದ=ತಿಳಿಯುತ್ತಾನೋ, ತಸ್ಯ ವಾ ಏತಸ್ಯ=ಆ ಈ, ಸಂಪನ್ನಸ್ಯ=ಸಂಗತವಾದ, ಬ್ರಹತೀ ಸಹಸ್ರಸ್ಯ=ಬೃಹತೀ ಸಹಸ್ರದ, ಪರಸ್ತಾತ್=ಸಂಪಾದನಾನಂತರದಲ್ಲಿ, (ಅದನ್ನು ಸ್ತುತಿಸಿದೊಡನೆಯೇ) ಪ್ರಜ್ಞಾಮಯಃ=ಪ್ರಕೃಷ್ಟಜ್ಞಾನರೂಪನಾದ ವಿಷ್ಣುವೇ ಪ್ರಧಾನನಾಗಿ ಉಳ್ಳವನು; ದೇವತಾಮಯಃ=ಸರ್ವೋತ್ತಮಸ್ವರೂಪನಾದ ವಿಷ್ಣುವೇ ಪ್ರಧಾನನಾಗಿ ಉಳ್ಳವನು; ಬ್ರಹ್ಮಮಯಃ=ಪೂರ್ಣಗುಣಗಳುಳ್ಳ ವಿಷ್ಣುವೇ ಪ್ರಧಾನನಾಗಿ ಉಳ್ಳವನು; ಅಮೃತಮಯಃ=ನಿತ್ಯನಾದ ವಿಷ್ಣುವೇ ಪ್ರಧಾನನಾಗಿ ಉಳ್ಳವನು; ಸಂಭೂಯ=ಆಗಿ, ದೇವತಾ ಅಪಿ=ತನ್ನಿಂದ ಉತ್ತಮರಾದ ಮುಖ್ಯಪ್ರಾಣಾಂತ ದೇವತೆಗಳನ್ನು, ತದ್ವಾರಾ ವಿಷ್ಣುವನ್ನೂಕೂಡ, ಏತಿ=ಕ್ರಮದಿಂದ ಹೊಂದುತ್ತಾನೆ. ತತ್=ಆದುದರಿಂದ, ಯಃ=ಯಾವಾತನು, ಅಹಂ=ಅಹಂನಾಮಕನೋ, ಸಃ=ಅವನೇ, ಅಸೌ=ಸೂರ್ಯನಲ್ಲಿರತಕ್ಕವನು. ಯಃ=ಯಾವಾತನು, ಅಸೌ=ಸೂರ್ಯನಲ್ಲಿರತಕ್ಕವನೋ, ಸಃ=ಅವನು, ಅಹಂ=ಅಹಂನಾಮಕನು. (ಪುರುಷರಲ್ಲಿರತಕ್ಕವನು) ತತ್=ಸರ್ವಾಂತರ್ಯಾಮಿಭಗವದ್ರೂಪಗಳಿಗೆ ಐಕ್ಯವು, ಋಷಿಣಾ=ಮಂತ್ರದ್ರಷ್ಟುವಿನಿಂದ, ಉಕ್ತಂ=ಹೇಳಲ್ಪಟ್ಟಿದೆ, ಸೂರ್ಯಃ=ಸೂರ್ಯನಲ್ಲಿರತಕ್ಕ ಶ್ರೀ ಪರಮಾತ್ಮನು, ಜಗತಃ=ಜಂಗಮ ಪದಾರ್ಥಕ್ಕೂ, ತಸ್ಥುಷಶ್ಚ=ಸ್ಥಾವರಪದಾರ್ಥಕ್ಕೂ, ಆತ್ಮಾ=ಅಂತರ್ಯಾಮಿಯು. ಏತತ್=ಈ ನಾರಾಯಣಾಖ್ಯ ಪರಬ್ರಹ್ಮನನ್ನು, ಉಪ=ಜೀವಸಮೀಪದಲ್ಲಿರತಕ್ಕವನನ್ನಾಗಿಯೂ, ಜೀವಾಂತರ್ಗತನನ್ನಾಗಿಯೂ, ಈಕ್ಷೇತ=ತಿಳಿಯತಕ್ಕದು. ॥ ೪ ॥

ತಾ ॥ 'ಬೃಹತೀ ಛಂದಸ್ಕವಾದ ಋಕ್ಕನ್ನೇ ಸ್ತುತಿಸಬೇಕು' ಎಂಬೀ ನಿಯಮವನ್ನು ಬಿಟ್ಟು, ಯಾವುದಾದರೂ ರೂಪದಿಂದಲೂ ಸ್ವಾಯಂಭುವ ಮನುವೇ ಮೊದಲಾದವರಿಂದ ಅಭಿಮನ್ಯಮಾನವಾದ ವ್ಯಂಜನಾದಿ ರೂಪದಿಂದಲೂ ಸಂಪನ್ನವಾದ ಈ ಬೃಹತೀ ಸಹಸ್ರಕ್ಕೂ ತದಂತರ್ಗತರೂಪ ಸಹಸ್ರಕ್ಕೂ ಪ್ರತಿ ಋಕ್ಕುಗಳಲ್ಲಿಯೂ ಅಕ್ಷರಗಳಿಗೂ ಅವುಗಳೇ ಹೆಸರಾಗಿ ಉಳ್ಳ, ಅಕ್ಷರಗಳಲ್ಲಿರತಕ್ಕ ರೂಪಗಳಿಗೂ ಮೂವತ್ತಾರು ಆಗುತ್ತವೆ. ಅಕ್ಷರಗಳಲ್ಲಿರತಕ್ಕ ಮೂವತ್ತಾರು ರೂಪಗಳು ಪ್ರತಿಒಂದು ಸ್ವರವ್ಯಂಜನಗಳೆಂಬ ಭೇದದಿಂದ ಮೂವತ್ತಾರು ಆಗುತ್ತವೆ ಅಂತೂ ಬೃಹತೀ ಸಹಸ್ರದಲ್ಲಿರುವ ಅಕ್ಷರಗಳು ಮೂವತ್ತಾರು ಸಹಸ್ರಗಳಾಗುತ್ತವೆ. ಆ ಅಕ್ಷರಗಳು ಸ್ವರ ವ್ಯಂಜನ ವೆಂಬೀ ಭೇದದಿಂದ ಪ್ರತ್ಯೇಕವಾಗಿ ಮೂವತ್ತಾರುಸಹಸ್ರಗಳಾದರೆ ಎಪ್ಪತ್ತಎರಡು ಸಹಸ್ರಗಳಾದುವು. ಈ ಅಕ್ಷರಗಳಿಗೆ ಎಪ್ಪತ್ತಎರಡುಸಹಸ್ರ ಅಭಿಮಾನಿದೇವತೆ

ಗಳೂ ಇರುತ್ತಾರೆ. । ಈ ರೂಪಗಳಿಗೆ ಅಧಿಷ್ಠಾನಾಂತರವೂ ಇರುತ್ತದೆ. ನೂರು ಸಂವತ್ಸರಕ್ಕೆ ಮೂವತ್ತಾರುಸಹಸ್ರ ಹಗಲೂ, ರಾತ್ರಿಯೂ ಇದೆ. ಅವುಗಳಲ್ಲಿರತಕ್ಕ ವಿಷ್ಣುರೂಪಗಳೂ ಅಷ್ಟೇ ಇವೆ. ಆದರೆ ಬೃಹತೀ ಸಹಸ್ರದಲ್ಲಿ ಯಾವ ಭಗವದ್ರೂಪಗಳು ವ್ಯಂಜನಾಕ್ಷರಗಲ್ಲಿರುವವುಗಳೋ, ಅವುಗಳೇ ನೂರು ಸಂವತ್ಸರದ ರಾತ್ರಿದೇವತೆಗಳು. ಯಾವ ರೂಪಗಳು ಸ್ವರಾಕ್ಷರಗಳಲ್ಲಿ ಇರುವವುಗಳೋ, ಅವುಗಳೇ ನೂರು ಸಂವತ್ಸರದ ದಿನಗಳ ದೇವತೆಗಳು. ಉಪಾಸಕರು ಮೂವತ್ತಾರುಸಹಸ್ರ ಬೃಹತೀ ಸಹಸ್ರದಲ್ಲಿರತಕ್ಕ ವ್ಯಂಜನಾಕ್ಷರ ದೇವತೆಗಳನ್ನು ಉಪಾಸನೆ ಮಾಡಿ ಅಷ್ಟು ಸಂಖ್ಯೆಯುಳ್ಳ ರಾತ್ರಿದೇವತೆಗಳನ್ನು ಹೊಂದುತ್ತಾರೆ. ಅಂತೂ ವ್ಯಂಜನಾಕ್ಷರಗಳಲ್ಲಿರುವ ಭಗವದ್ರೂಪಗಳೇ ರಾತ್ರಿಗೂ ದೇವತೆಯಾದುದರಿಂದ ವ್ಯಂಜನಗಳಲ್ಲಿರತಕ್ಕ ಭಗವದ್ರೂಪವನ್ನು ಉಪಾಸನೆಮಾಡಿದರೆ ನೂರು ವರ್ಷಗಳ ರಾತ್ರಿಗಳಲ್ಲಿ ಕ್ರಮವಾಗಿ ಭಗವದುಪಾಸನೆಯನ್ನು ಮಾಡಿದರೆ ಎಷ್ಟು ಫಲವಾಗುವುದೋ. ಅಷ್ಟು ಫಲವನ್ನು ಪ್ರಾಪಿಸುತ್ತಾರೆ. ಇದೇರೀತಿಯಾಗಿ ಸ್ವರಗಳಲ್ಲಿರತಕ್ಕ ಭಗವದ್ರೂಪಗಳೇ ದಿನಗಳಿಗೂ ದೇವತೆಯಾದುದರಿಂದ ಸ್ವರದಲ್ಲಿರತಕ್ಕ ಭಗವದ್ರೂಪವನ್ನು ಉಪಾಸನೆಮಾಡಿದರೆ ನೂರು ವರ್ಷಗಳ ಹಗಲುಗಳಲ್ಲಿ ಕ್ರಮವಾಗಿ ಶ್ರೀ ಹರಿಯನ್ನು ಉಪಾಸನೆಮಾಡಿದರೆ ಯಾವ ಫಲವಾಗುವುದೋ. ಅಷ್ಟು ಫಲವನ್ನು ಹೊಂದುತ್ತಾರೆ. ಈ ಪ್ರಕಾರ ಜ್ಞಾನಪೂರ್ವಕವಾಗಿ ಬೃಹತೀ ಸಹಸ್ರವನ್ನು ಸ್ತುತಿಸಿದೊಡನೇ ಪ್ರಜ್ಞಾದಿಮಯನಾಗಿ ದೇವತೆಗಳನ್ನು ಹೊಂದುತ್ತಾನೆ. ಮತ್ತು ಪ್ರಕೃಷ್ಟಜ್ಞಾನರೂಪನಾದುದರಿಂದಲೂ ಸರ್ವಾಂತರ್ಯಾಮಿಯಾಗಿ ತಿಳಿಸಿಕೊಡುವುದರಿಂದಲೂ ಅನಿರುದ್ಧನು ಪ್ರಜ್ಞನೆನ್ನಿಸಿಕೊಳ್ಳುತ್ತಾನೆ. ಸಮಸ್ತ ದೇವತೆಗಳಿಗೆ ಅಧಿದೇವತೆಯಾದುದರಿಂದಲೂ ಸರ್ವೋತ್ಕೃಷ್ಟವಾದ ದ್ಯೋತನಾದಿ ಗುಣಸ್ವರೂಪನಾದುದರಿಂದಲೂ ಪ್ರದ್ಯುಮ್ನನು 'ದೇವತಾ' ಎನ್ನಿಸಿಕೊಳ್ಳುತ್ತಾನೆ. ಪೂರ್ಣಗುಣಗಳುಳ್ಳವನಾದುದರಿಂದಲೂ, ಜೀವರಿಗೆ ಮುಕ್ತಿಯನ್ನು ಕೊಟ್ಟು ಪೂರ್ಣೀಕರಿಸುವುದರಿಂದಲೂ, ವಾಸುದೇವನು 'ಬ್ರಹ್ಮ'ನೆನ್ನಿಸಿಕೊಳ್ಳುತ್ತಾನೆ. ಅಮಿತವಾದ ಶಾಸ್ತ್ರವನ್ನು ಸ್ವವಿಷಯಕವನ್ನಾಗಿ ಮಾಡುವುದರಿಂದಲೂ, ನಿತ್ಯನಾದುದರಿಂದಲೂ, ಸಂಕರ್ಷಣನು 'ಅಮೃತ' ನೆನ್ನಿಸಿಕೊಳ್ಳುತ್ತಾನೆ. ಅಂತಹ ಹರಿಯೇ ಸರ್ವರಿಗೂ ಸ್ವಾಮಿಯೂ ಸರ್ವರಿಂದಲೂ ಅಧಿಕನೂ ಎಂಬೀ ವಿಶೇಷಜ್ಞಾನವುಳ್ಳವನಾಗಿ ಮುಖ್ಯಪ್ರಾಣ, ವಿಷ್ಣುವೇ ಅವಸಾನವಾಗಿವುಳ್ಳ ದೇವತೆಗಳನ್ನು ಕ್ರಮವಾಗಿ ಹೊಂದುತ್ತಾನೆ. ಈ ವಿದ್ಯೆಯನ್ನು ಉಪಾಸನೆಮಾಡಲಿಕ್ಕೆ ಯೋಗ್ಯರಾದ ಅಧಿಕಾರಿಗಳು, ದೇವಋಷಿಗಳು ಬೃಹತೀ ಸಹಸ್ರವು ಪುರುಷರಿಂದ. ಉಚ್ಚರಿಸಲ್ಪಡುವುದರಿಂದ ಆ ಸ್ವರ ವ್ಯಂಜನಗಳಲ್ಲಿರುವ ಎಪ್ಪತ್ತೆರಡುಸಹಸ್ರ ಭಗವದ್ರೂಪಗಳು ಪುರುಷರಲ್ಲಿವೆ. ಅಲ್ಲದೆ ಪುರುಷರಿಂದ ಉಪಾಸ್ಯಗಳೂ ಆಗಿವೆ. ಸೂರ್ಯನಿಯಮಿತಗಳಾದ ಅಹೋರಾತ್ರಿಗಳಲ್ಲಿರತಕ್ಕ ಭಗವದ್ರೂಪಗಳು ಸೂರ್ಯನಲ್ಲಿರುತ್ತವೆ. ಸೂರ್ಯನಿಂದ ಉಪಾಸ್ಯಗಳೂ ಆಗಿವೆ. ಅಲ್ಲದೆ ಎಪ್ಪತ್ತೆರಡುಸಹಸ್ರ ರೂಪಗಳುಳ್ಳ ವಿಷ್ಣುವು ಪುರುಷರಲ್ಲಿರತಕ್ಕವನು; ಆತನೇ ಸೂರ್ಯನಲ್ಲಿಯೂ ಇರುವವನು; ಅಂತೂ ಆತನೇ ಸರ್ವೋತ್ತಮನೂ ಸರ್ವಗುಣಪರಿಪೂರ್ಣನೂ ಆಗಿರುತ್ತಾನೆ. ॥ ೪ ॥

**ಈ ಪ್ರಕಾರವಾಗಿ ಐತರೇಯೋಪನಿಷತ್ತಿನಲ್ಲಿ ಎರಡನೇ ಆರಣ್ಯಕದಲ್ಲಿ ಎರಡನೇ ಅಧ್ಯಾಯವು ಮುಗಿಯಿತು. ॥ ಶ್ರೀಃ ॥**

ಭಾ॥ (a) ಯಾವತೀಭಿಃ ಋಗ್ಭಿಃ ಶಂಸಿತಾಭಿಃ ಷಟ್ತ್ರಿಂಶತ್ಸಹಸ್ರಾಣ್ಯಕ್ಷರಾಣಿ ಭವಂತಿ । ಯಸ್ಮಾತ್ಕಸ್ಮಾದಪಿ ಛಂದಸಸ್ತಾವತ್ಯಃ ಶಂಸನೀಯಾಸ್ತದಾ ಸಂಪಾದಿತಂ ಬೃಹತೀಸಹಸ್ರಂ ಭವತಿ ॥ (b) ತತ್ರ ಯಾ ವ್ಯಂಜನಾಭಿ

ಮಾನಿದೇವತಾ ಸ್ಯೈವ ಸರ್ವಪ್ರಾಣಿನಾಂ ಶರೀರಾಭಿಮಾನಿದೇವತಾ ಸ್ವಾಯಂಭುವೋ ಮನುಃ । ಘೋಷಾಭಿಮಾನಿದೇವತಾ ಸರ್ವಜೀವಾಭಿಮಾನೀ ಬ್ರಹ್ಮಾ ॥ ಊಷ್ಮಾಭಿಮಾನೀ ವಾಯುಃ । (c) ವ್ಯಂಜನಾನಾಂ ಶರೀರಸ್ಯ ಚಾಭಿಮಾನೀ ಮನುಃ ಸ್ಮೃತಃ ॥ ಘೋಷಾಣಾಂ ಸರ್ವಜೀವಾನಾಮಭಿಮಾನೀ ಚತುರ್ಮುಖಃ । (d) ಊಷ್ಮಾಭಿಮಾನೀ ವಾಯುಶ್ಚ ಪ್ರತಿಪಾದ್ಯೋ ಜನಾರ್ದನಃ ॥ ಏತೇಷಾಮಧಿಪಂ ವಿಷ್ಣುಂ ಬೃಹತ್ಯುಕ್ಥಸ್ಯ ದೇವತಾಂ । ಉಪಾಸ್ಯೈವ ವಸಿಷ್ಠೋಽಭೂದ್ವಸಿಷ್ಠಃ (e) ಶಕ್ರ ಏವ ಚ ॥ ಏತಾಂ ವಿದ್ಯಾಂ ಕೌಶಿಕಾಯ ಭರದ್ವಾಜಾಯ ಚಾದರಾತ್ । ಏತದ್ವಿದ್ಯಾಬಲೇನೈವ ವಿದ್ಯಾಧೀಶೇನ ಬಂಧುನಾ ॥ ಯಜ್ಞೇಷ್ವಾಹೂಯತೇ ನಿತ್ಯಮಿಂದ್ರೋ ವಿಷ್ಣುಪ್ರಸಾದತಃ । (f) ಷಟ್ತ್ರಿಂಶದ್ರೂಪವಾನ್ವಿಷ್ಣುರ್ವ್ಯಂಜನೇಷು ಚ ಸಂಸ್ಥಿತಃ ॥ ತಾನ್ಯೇವ ವಿಷ್ಣುರೂಪಾಣಿ ರಾತ್ರೀಣಾಮಪಿ(ಧಿ) ದೇವತಾಃ । (g) ಏಕೈಕಂ ಚ ಸಹಸ್ರಂ ತದ್ವ್ಯಂಜನೇಷು ಚ ರಾತ್ರಿಷು ॥ ರೂಪಂ ವಿಷ್ಣೋಃ ಸ್ಥಿತಂ ವ್ಯಾಪ್ಯ ಷಟ್ತ್ರಿಂಶತಿಸಹಸ್ರಧಾ । (h) ಷಟ್ತ್ರಿಂಶತಿಸಹಸ್ರಾಣಿ ಸ್ವರಗಾಣಿ ಹರೇರಪಿ ॥ ತಾನ್ಯೇವಾಹ್ನಾಂ ದೈವತಾನಿ ರೂಪಾಣಿ ಪರಮಾತ್ಮನಃ । (i) ದ್ವಾಸಪ್ತತಿಸಹಸ್ರಾಣಿ ರೂಪಾಣ್ಯೇವಂ ರಮಾಪತೇಃ ॥ ಶತಾಬ್ದಾನಾಮಹೋರಾತ್ರದೈವತಾನ್ಯುತ್ತಮಾನಿ ಚ । ಬೃಹತೀಸಹಸ್ರವರ್ಣಾನಾಮಪಿ ಧ್ಯಾತ್ವಾಽಖಿಲಾನ್ಯಪಿ ॥ ಶತವರ್ಷಹರಿಧ್ಯಾನ ಫಲಮಾಪ್ನೋತಿ ಪೂರುಷಃ ।

ಅ ॥ (a) ಸ್ತುತಿಸಲ್ಪಟ್ಟ ಎಷ್ಟು ಋಕ್ಕುಗಳಿಂದ ಮೂವತ್ತಾರುಸಹಸ್ರ ಅಕ್ಷರಗಳು ಆಗುತ್ತವೆಯೋ ಅಷ್ಟುಋಕ್ಕುಗಳು ಯಾವುದಾದರೂ ಛಂದಸ್ಸಿನದೆಶೆಯಿಂದ ಸ್ತುತಿಸಲ್ಪಡಬೇಕು. ಆಗ ಬೃಹತೀಸಹಸ್ರವು ಸಂಪಾದಿಸಿಕೊಳ್ಳಲ್ಪಡುತ್ತದೆ. ॥

ತಾ ॥ ಒಂದು ಪಾದದಲ್ಲಿ ಒಂಭತ್ತು ಅಕ್ಷರಗಳು. ಅಂತೂ ನಾಲ್ಕುಪಾದಗಳಲ್ಲಿ ಮೂವತ್ತಾರು ಅಕ್ಷರಗಳು ಇದ್ದರೆ ಅದು 'ಬೃಹತೀ ಛಂದಸ್ಸ' ಆಗುತ್ತದೆ. ಸಾವಿರ ಋಕ್ಕುಗಳು ಬೃಹತೀ ಛಂದಸ್ಸುಳ್ಳದ್ದೇ ಆಗಬೇಕೆಂಬ ನಿಯಮವಿಲ್ಲವು. ॥ (b) ಆ ಬೃಹತೀಸಹಸ್ರದಲ್ಲಿ ಯಾವುದು ಕಕಾರವನ್ನಾರಂಭಿಸಿ ಮಕಾರಪರ್ಯಂತಗಳಾದ ಸ್ಪರ್ಶಾಕ್ಷರಗಳಿಗೆ ಅಭಿಮಾನಿಯಾದ ದೇವತೆಯೋ ಆ ದೇವತೆಯೇ ಎಲ್ಲಾ ಪ್ರಾಣಿಗಳ ಶರೀರಗಳಿಗೆ ಅಭಿಮಾನಿಯಾದ ದೇವತೆಯು. (ಆ ದೇವತೆಯು) ಸ್ವಾಯಂಭುವ ನಾಮಕಮನುವು. ॥ ಯ. ರ. ಲ. ವ. ರೂಪಗಳಾದ ಅಂತಸ್ಥಾಕ್ಷರಗಳಿಗೆ ಅಭಿಮಾನಿದೇವತೆಯಾದ ಚತುರ್ಮುಖನು ಸಮಸ್ತ ಜೀವರಿಗೆ ಅಭಿಮಾನಿಯು. ॥ ಶ. ಷ. ಸ. ಹ. ಗಳೆಂಬ ಊಷ್ಮವರ್ಣಗಳಿಗೆ ಅಭಿಮಾನಿಯಾದವನು ಮುಖ್ಯಪ್ರಾಣನು. ॥ (c) ವ್ಯಂಜನಾಕ್ಷರಗಳಿಗೂ ಶರೀರಕ್ಕೂ ಅಭಿಮಾನಿಯಾದವನು ಸ್ವಾಯಂಭುವಮನುವು (ಎಂದು ಪ್ರಾಜ್ಞರಿಂದ) ಸ್ಮರಿಸಲ್ಪಟ್ಟಿದ್ದಾನೆ. ॥ ಘೋಷಾಕ್ಷರಗಳಿಗೂ ಎಲ್ಲಾಜೀವರಿಗೂ ಅಭಿಮಾನಿಯಾದವನು ಚತುರ್ಮುಖನು. ॥ (d) ಊಷ್ಮವರ್ಣಗಳಿಗೆ ಅಭಿಮಾನಿಯಾದವನು ಮುಖ್ಯಪ್ರಾಣನು. (ಈ ಬೃಹತೀಸಹಸ್ರವರ್ಣಗಳಲ್ಲಿ) ಪ್ರತಿಪಾದಿಸಿಕೊಳ್ಳಲ್ಪಡುವವನು ಜನಾರ್ದನನು. ॥ ಶ್ರೀ ಪರಮಾತ್ಮನನ್ನು ಈ ಮನ್ವಾದಿಗಳಿಗೆ

ನಿಯಾಮಕನನ್ನಾಗಿಯೂ ಬೃಹತೀಸಹಸ್ರಕ್ಕೆ ಅಭಿಮಾನಿಯಾದವನನ್ನಾಗಿಯೂ ॥ ಉಪಾಸನೆ ಮಾಡಿಯೇ ವಸಿಷ್ಠಪದಯೋಗ್ಯನಾದ ಜೀವನು ವಾಸಮಾಡುವವರಲ್ಲಿ ಉತ್ತಮನು ಆದನು. (ಅಂತೂ ವಸಿಷ್ಠನಾಮಕನಾದನು). ॥ (e) ದೇವೇಂದ್ರನು ಈ ವಿದ್ಯೆಯನ್ನೇ ವಿಶ್ವಾಮಿತ್ರ ಋಷಿಗೂ ಭರದ್ವಾಜಋಷಿಗೂ ವಿಶ್ವಾಸಪೂರ್ವಕವಾಗಿ (ಹೇಳಿದನು) ॥ ಈ ವಿದ್ಯೆಯ ಸಾಮರ್ಥ್ಯದಿಂದಲೇ (ಈ ವಿದ್ಯೆಗೆ ವಿಷಯನಾದುದರಿಂದ) ವಿದ್ಯೆಗಳಿಗೆ ನಿಯಾಮಕನಾದ, (ತದುಕ್ತ ಫಲವನ್ನು ಪ್ರಾಪಿಸಿಕೊಡುವುದರಿಂದ) ಬಂಧುಭೂತನಾದ ಶ್ರೀಪರಮಾತ್ಮನಿಂದ ॥ ಅಂದರೆ ವಿಷ್ಣುವಿನ ಅನುಗ್ರಹದಿಂದ ದೇವೇಂದ್ರನು ನಿರಂತರದಲ್ಲಿಯೂ ಯಾಗಗಳಲ್ಲಿ (ಅಂದರೆ ಯಜ್ಞ ಭಾಗವನ್ನು ಸ್ವೀಕರಿಸುವುದಕ್ಕೋಸ್ಕರ) (ಹೋತೃಮೊದಲಾದವರಿಂದ) ಕರೆಯಲ್ಪಡುತ್ತಾನೆ. (f) ಮೂವತ್ತಾರು ರೂಪವುಳ್ಳ ವಿಷ್ಣುವು ವ್ಯಂಜನಗಳಲ್ಲಿಯೂ ಇದ್ದಾನೆ. ॥ ಆ ವಿಷ್ಣುರೂಪಗಳೇ ರಾತ್ರಿಗಳಿಗೂ ಮುಖ್ಯನಿಯಾಮಕಗಳು. ॥

ತಾ ॥ ಬೃಹತೀಸಹಸ್ರದ ಪ್ರತಿಋಕ್ಕುವಿನಲ್ಲಿಯೂ ಇರತಕ್ಕ ಶ್ರೀ ಹರಿಯು ಅಕ್ಷರಗಳ ಸಮಾನಸಂಖ್ಯೆಯಿಂದ ಮೂವತ್ತಾರು ರೂಪಗಳುಳ್ಳವನಾಗಿ ಮೂವತ್ತಾರು ಅಕ್ಷರಗಳಲ್ಲಿ ಇದ್ದಾನೆ. ಒಂದೊಂದು ಅಕ್ಷರದಲ್ಲಿರತಕ್ಕ ಶ್ರೀ ಹರಿಯು 'ಸ್ವರ' 'ವ್ಯಂಜನ' ಗಳೆಂಬ ಭೇದದಿಂದ ಪ್ರತ್ಯೇಕ ಮೂವತ್ತಾರು ರೂಪವುಳ್ಳವನಾಗಿ ಮೂವತ್ತಾರು ವ್ಯಂಜನಗಳಲ್ಲಿಯೂ ಅಷ್ಟು ಸ್ವರಗಳಲ್ಲಿಯೂ ಇದ್ದಾನೆ. ವ್ಯಂಜನಗಳಲ್ಲಿರತಕ್ಕ ಮೂವತ್ತಾರುಸಹಸ್ರ ವಿಷ್ಣುರೂಪಗಳು ರಾತ್ರಿಗಳಿಗೆ ನಿಯಾಮಕಗಳು. ॥ (g) ಬೃಹತೀಸಹಸ್ರದಲ್ಲಿರತಕ್ಕ ವಿಷ್ಣುವಿನ ಆ ಸಹಸ್ರರೂಪವು ಒಂದೊಂದು (ಮೂವತ್ತಾರು ಪ್ರಕಾರವಾಗಿ) ವಿಭಾಗಿಸಿ (ತನಗೆ ಅಧಿಷ್ಠಾನಭೂತವಾದ ಋಕ್ಕಿನ ಅಕ್ಷರಗಳಲ್ಲಿ) ಇದೆ. ಒಂದೊದು ಅಕ್ಷರದಲ್ಲಿರತಕ್ಕ ವಿಷ್ಣುವಿನ ಆ ರೂಪವು (ಎರಡು ಪ್ರಕಾರ) ವಿಭಾಗಿಸಿ ವ್ಯಂಜನಗಳಲ್ಲಿಯೂ ಸ್ವರಗಳಲ್ಲಿಯೂ ಇದೆ. (ಅಂತೂ ಮೂವತ್ತಾರು ಸಹಸ್ರಾಕ್ಷರಗಳಲ್ಲಿರತಕ್ಕ ವಿಷ್ಣುವಿನ ಆ ರೂಪಸಮುದಾಯವು ಸ್ವರವ್ಯಂಜನಗಳೆಂಬ ಭೇದದಿಂದ) ಪ್ರತ್ಯೇಕವಾಗಿ ಮೂವತ್ತಾರುಸಹಸ್ರ, ವಿಭಾಗಿಸಿಕೊಂಡು ವ್ಯಂಜನಗಳಲ್ಲಿಯೂ ಸ್ವರಗಳಲ್ಲಿಯೂ ಇದೆ. (ಈ ಎರಡು ವಿಧವಾದ ವಿಷ್ಣುವಿನರೂಪವು) ರಾತ್ರಿಗಳಲ್ಲಿಯೂ ಹಗಲುಗಳಲ್ಲಿಯೂ ಇದೆ. ॥ (h) ಶ್ರೀ ಪರಮಾತ್ಮನ ಮೂವತ್ತಾರು ಸಹಸ್ರ ರೂಪಗಳು ಸ್ವರಾಕ್ಷರಗಳಲ್ಲಿವೆ. ಆ ರೂಪಗಳೇವೇ ಹಗಲುಗಳಿಗೆ ಮುಖ್ಯನಿಯಾಮಕಗಳು. ಅಂತಹ ಪರಮಾತ್ಮನ (ಬೃಹತೀ ಸಹಸ್ರದಲ್ಲಿರತಕ್ಕ ರೂಪಸಹಸ್ರವು ಎಪ್ಪತ್ತೆರಡು ಸಹಸ್ರವಾಗಿಯೂ ನೂರು ಸಂವತ್ಸರದ ಅಹೋರಾತ್ರಿಗಳಲ್ಲಿ ಇದ್ದುದಾಗಿಯೂ ಸಂಗತವಾಯಿತು.) ॥ (i) ಬೃಹತೀಸಹಸ್ರವರ್ಣಗಳಿಗೆ ಮುಖ್ಯಾಭಿಮಾನಿಗಳಾದ, ಲಕ್ಷ್ಮೀಪತಿಯಾದ ಶ್ರೀ ಪರಮಾತ್ಮನ ಎಪ್ಪತ್ತೆರಡು ಸಹಸ್ರರೂಪಗಳನ್ನು ಹಿಂದೆ ಹೇಳಿದಪ್ರಕಾರ ನೂರು ಸಂವತ್ಸರಗಳ ಅಹೋರಾತ್ರಿಗಳಿಗೆ ನಿಯಾಮಕಗಳನ್ನಾಗಿಯೂ ಧ್ಯಾನಿಸಿ ಪುರುಷನು ನೂರುವರ್ಷಗಳಲ್ಲಿ ಶ್ರೀ ಹರಿಯ ಧ್ಯಾನದ ಫಲವನ್ನು ಹೊಂದುತ್ತಾನೆ. (ಅಂದರೆ ನೂರುವರ್ಷಗಳಲ್ಲಿ ಪರಮಾತ್ಮನನ್ನು ಧ್ಯಾನಿಸಿದರೆ ಯಾವ ಫಲವಾಗುವುದೋ ಅಂತಹ ಫಲವನ್ನು ಪ್ರಾಪಿಸುತ್ತಾರೆ).

**ಭಾ**॥ **(a)** ಏವಂ ಜ್ಞಾತ್ವಾಽಪಿ ಸಂಪಾದ್ಯ ಬೃಹತೀನಾಂ ಸಹಸ್ರಕಂ । ಜ್ಞಾನಾನ್ನಾರಾಯಣಸ್ಯೈವ ಪ್ರಕೃಷ್ಟಜ್ಞಾನಸಂತತೇಃ । ಸ ಏವ ಮೇ ಮಯೋ ವಿಷ್ಣುಃ ಪ್ರಕೃಷ್ಟಜ್ಞಾನರೂಪಕಃ ॥ **(b)** ಪ್ರಾಧಾನ್ಯಂ ಮಯಶಬ್ದೋಽಯಂ ವಕ್ತಿ ವಿಷ್ಣೋಃ ಸದೈವ ಹಿ । ಪ್ರಧಾನೋಽಸ್ಯ ಹರಿರ್ಯಸ್ಮಾತ್ಪ್ರಜ್ಞಾರೂಪೋಽಧಿದೇವತಾ ॥ ಬ್ರಹ್ಮಾಮೃತಂ ಚ ತೇನಾಯಂ ಬ್ರಹ್ಮಾದಿ ಮಯ

ಉಚ್ಯತೇ । (c) ಸರ್ವೋತ್ತಮಸ್ವರೂಪತ್ವಾದ್ವಿಷ್ಣುರುಕ್ತಃ ಸ ದೇವತಾ ॥ ಬ್ರಹ್ಮ ಪೂರ್ಣಗುಣತ್ವಾಚ್ಚ ನಿತ್ಯತ್ವಾದಮೃತಂ ತಥಾ ॥ (d) ಏತಾದೃಶಂ ತು ಯೋ ವಿಷ್ಣುಂ ಪ್ರಧಾನಂ ವೇತ್ತಿ ಸರ್ವದಾ ॥ ಪ್ರಜ್ಞಾದಿಭಿರ್ಗುಣೈಃ ಸ್ವಸ್ಮಾತ್ಪರೇಭ್ಯಶ್ಚ ಸದಾಧಿಕಂ ॥ (e) ಪ್ರಜ್ಞಾದೇವ ಬ್ರಹ್ಮಾಮೃತಮಯಃ ಸ ಪರಿಕೀರ್ತಿತಃ ॥ ಪ್ರಜ್ಞಾದಿಮಯ ಏವಂ ಸ ಭೂತ್ವಾ ದೇವಾನ್ಕ್ರಮೇಣ ಚ । ಏತಿ ಮಾರುತಪರ್ಯಂತಾನ್ಮಾರುತೇನ ಚ ಕೇಶವಂ ॥ ಸಂಪಾದನಾಚ್ಚ ವಿದ್ಯಾಯಾ ಅಸ್ಯಾಃ ಪರತ ಏವ ಚ ॥ (f) ದ್ವಾಸಪ್ತತಿಸಹಸ್ರಾಣಿ ರೂಪಾಣಿ ಹಿ ರಮಾಪತೇಃ ॥ ಬೃಹತೀಸಹಸ್ರಸಂಸ್ಥಾನಿ ಸ್ವರವ್ಯಂಜನಭೇದತಃ । ತಾನ್ಯೇವ ಪುರುಷಸ್ಥಾನಿ ಯಸ್ಮಾತ್ಪುರುಷಸಂಸ್ಥಿತಂ ॥ ಬೃಹತೀಸಹಸ್ರಂ ತಚ್ಛಂಸ್ಯಂ ವ್ಯಜ್ಯತೇ ನ ಹ್ಯೃತೇ ನರಂ । (g) ದ್ವಾಸಪ್ತತಿಸಹಸ್ರಾಣಿ ತಾನ್ಯೇವಾಹರ್ನಿಶಾಸು ಚ ॥ ವಿಷ್ಣುರೂಪಾಣಿ ಸೂರ್ಯೇಽಪಿ ತ್ವಹೋರಾತ್ರಂ ಹಿ ಸೂರ್ಯಗಂ ॥ (h) ತಸ್ಮಾದ್ಯೋಽಯಮಹಂನಾಮಾಽಸದಾ ಹೇಯತ್ವಹೇತುತಃ ॥ ಸ ಏವಾಸೌ ಸೂರ್ಯಸಂಸ್ಥಃ ಸಾಕ್ಷಾನ್ನಾರಾಯಣಃ ಪ್ರಭುಃ ॥ (i) ಯೋಽಸೌ ಸೂರ್ಯಗತೋ ವಿಷ್ಣುಃ ಸೋಽಹೇಯೋ ಭಾಸ್ಕರಾದಿಭಿಃ ॥ ಏವಂ ಮನುಷ್ಯಜೀವೇಷು ಸೂರ್ಯಾದಿಷು ಚ ಸಂಸ್ಥಿತಃ । ಏಕ ಏವ ಪರೋ ವಿಷ್ಣುರಿತಿಜೀವಸಮೀಪಗಂ ॥ ಈಕ್ಷೇನ್ನಾರಾಯಣಂ ದೇವಂ ಸರ್ವಜೀವೇಶ್ವರೇಶ್ವರಂ ॥ ಇತ್ಯೈತರೇಯ ಸಂಹಿತಾಯಾಂ ॥

ಅ ॥ (a) ಪೂರ್ವೋಕ್ತಪ್ರಕಾರವಾಗಿ ತಿಳಿದುಕೊಂಡೇ ಬೃಹತೀಸಹಸ್ರವನ್ನು ಸಂಪಾದಿಸಿ ಅಂದರೆ ಸ್ತುತಿಸಿ (ಪ್ರಜ್ಞಾಮಯನಾದಿಯಾಗುತ್ತಾನೆ). ಶ್ರೀಹರಿಯು ಪ್ರಕೃಷ್ಟಜ್ಞಾನಸ್ವರೂಪನಾದುದರಿಂದ ಉತ್ಕೃಷ್ಟಜ್ಞಾನದ ಯೋಗ್ಯಸಮುದಾಯವನ್ನು (ಅಂತರ್ಯಾಮಿರೂಪದಿಂದ ವಿಸ್ತಾರಮಾಡಿರುವುದರಿಂದ ಪ್ರಜ್ಞನು, ಆತನೇ ನನಗೆ ಪ್ರಧಾನನು. (ಎಂಬೀ) ನಾರಾಯಣನ ಜ್ಞಾನದಿಂದಲೇ (ಉಪಾಸಕನು) ಪ್ರಜ್ಞಾಮಯನೆಂದು ಹೇಳಲ್ಪಡುತ್ತಾನೆ. ॥ (b) ಈ ಮಯಶಬ್ದವು ಯಾವಾಗಲೂ ವಿಷ್ಣುವಿಗೆ ಪ್ರಾಧಾನ್ಯವನ್ನು ಹೇಳುತ್ತದಷ್ಟೇ! ಪ್ರಕೃಷ್ಟಜ್ಞಾನಸ್ವರೂಪನೂ ಸರ್ವದೇವೋತ್ತಮನೂ ಗುಣಪರಿಪೂರ್ಣನೂ ಅವಿನಾಶಿಯೂ ಆದ ಹರಿಯು ಈ ಉಪಾಸಕನಿಗೆ ಯಾವ ಕಾರಣದಿಂದ ಪ್ರಧಾನನೋ ಆ ಕಾರಣದಿಂದ ಈ ಉಪಾಸಕನು ಬ್ರಹ್ಮಾದಿಮಯನಾಗಿ (ಅಂದರೆ ಬ್ರಹ್ಮಮಯ, ಅಮೃತಮಯ, ದೇವತಾಮಯ, ಪ್ರಜ್ಞಾಮಯನೆಂದೂ) ಹೇಳಲ್ಪಡುತ್ತಾನೆ. ॥ (c) ಆ ಶ್ರೀ ವಿಷ್ಣುವು ಸರ್ವೋತ್ಕೃಷ್ಟವಾದ ಪ್ರಕಾಶಾದಿಗುಣಸ್ವರೂಪನಾದುದರಿಂದ 'ದೇವತಾ' ಎಂದು ಹೇಳಲ್ಪಟ್ಟಿದ್ದಾನೆ. ಪೂರ್ಣಗುಣಸ್ವರೂಪನಾದುದರಿಂದಲೂ (ಮುಕ್ತಿಯನ್ನು ಕೊಟ್ಟು ವೃದ್ಧೀಕರಿಸುವುದರಿಂದಲೂ) 'ಬ್ರಹ್ಮ'ನೆಂದೂ ಹಾಗೂ ನಿತ್ಯನಾದುದರಿಂದ 'ಅಮೃತ'ನೆಂದೂ ಹೇಳಲ್ಪಡುತ್ತಾನೆ. ॥ (d) ಯಾವಾತನು ಏತಾದೃಶ ಮಹಿಮೋಪೇತನಾದ ಶ್ರೀ ಹರಿಯನ್ನು ಪ್ರಕೃಷ್ಟ ಜ್ಞಾನವೊದಲಾದ ಗುಣಗಳಿಂದ ತನ್ನಿಂದಲೂ ಪ್ರಧಾನನನ್ನಾಗಿ ತಿಳಿಯುತ್ತಾನೋ, ಇತರರಾದ ಬ್ರಹ್ಮಾದಿಗಳಿಂದಲೂ ಯಾವಾಗಲೂ ಅತ್ಯುತ್ತಮನನ್ನಾಗಿಯೇ ತಿಳಿಯುತ್ತಾನೋ, ಆತನು 'ಪ್ರಜ್ಞಾಮಯ,' 'ದೇವಮಯ,' 'ಬ್ರಹ್ಮಮಯ,' 'ಅಮೃತಮಯ'ನೆಂದು ಹೇಳಲ್ಪಡುತ್ತಾನೆ. ॥ (e) ಅಂತಹ ಅಧಿಕಾರಿಯು ಈ ವಿದ್ಯೆ

ಯನ್ನು ಸಂಪಾದಿಸಿದ ಅನಂತರದಲ್ಲಿಯೇ (ಅದನ್ನು ಸ್ತುತಿಸಿದೊಡನೆಯೇ) ಪ್ರಜ್ಞಾದಿಮಯ ನಾಗಿ ಕ್ರಮವಾಗಿ ಮುಖ್ಯಪ್ರಾಣಪರ್ಯಂತಗಳಾದ ದೇವತೆಗಳನ್ನು ಹೊಂದುತ್ತಾನೆ. ಮುಖ್ಯ ಪ್ರಾಣನಿಂದ ಶ್ರೀ ಪರಮಾತ್ಮನನ್ನು ಪ್ರಾಪಿಸುತ್ತಾನೆ. ॥ (f) ಸ್ವರ ವ್ಯಂಜನಗಳೆಂಬ ಪ್ರಭೇದ ದಿಂದ, ಬೃಹತೀಸಹಸ್ರದಲ್ಲಿರತಕ್ಕ, ಲಕ್ಷ್ಮೀಪತಿಯಾದ ಶ್ರೀ ಪರಮಾತ್ಮನ ಎಪ್ಪತ್ತೆರಡು ಸಹಸ್ರರೂಪಗಳು ಪ್ರಸಿದ್ಧಗಳಾಗಿವೆಯೋ ಆ ರೂಪಗಳೇವೇ ಪುರುಷರಲ್ಲಿರತಕ್ಕವುಗಳು. ಯಾವಕಾರಣದಿಂದ ಬೃಹತೀಸಹಸ್ರವು ಪುರುಷರಲ್ಲಿ ಇದ್ದುದಾಗಿಯೇ ಆ ಪುರುಷರಿಂದ ಸ್ತುತಿಸಲ್ಪ ಡುವುದೋ ಪುರುಷನನು ಹೊರತು ವ್ಯಕ್ತವಾಗುವುದಿಲ್ಲವೋ (ಆದುದರಿಂದ ಅವುಗಳೇವೇ ಪುರುಷರಲ್ಲಿರತಕ್ಕವುಗಳು). ॥ (g) ಹಗಲು ರಾತ್ರಿಗಳಲ್ಲಿರತಕ್ಕ ಎಪ್ಪತ್ತೆರಡುಸಹಸ್ರ ಆ ವಿಷ್ಣುರೂಪಗಳೇವೇ ಸೂರ್ಯನಲ್ಲಿಯೂ ಇರುತ್ತವೆ. ಯಾವ ಕಾರಣದಿಂದ ಹಗಲು ರಾತ್ರಿಗಳು ಸೂರ್ಯನಿಂದ ನಿಯಮಿಸಲ್ಪಟ್ಟದ್ದಾವೋ (ಕಾರಣ ಸೂರ್ಯನಲ್ಲಿಯೂ ಇರುತ್ತವೆ.) ॥ (h) (ಯಾವ ಕಾರಣದಿಂದ ಬೃಹತೀಸಹಸ್ರದಲ್ಲಿರತಕ್ಕ ಭಗವದ್ರೂಪವೇ ಪುರುಷರಲ್ಲಿಯೂ ಅಹೋ ರಾತ್ರಿಗಳಲ್ಲಿಯೂ ಇದೆಯೋ, ಅಹೋರಾತ್ರಿಗಳಲ್ಲಿರತಕ್ಕುದೇ ಸೂರ್ಯನಲ್ಲಿ ಇದೆಯೋ) ಆದು ದರಿಂದ ಯಾವಾತನು ಈ ಜೀವರಲ್ಲಿರುವವನೋ. ಆತನು ಯಾವಾಗಲೂ ಪರಿತ್ಯಾಗಮಾಡ ಲಿಕ್ಕೆ ಯೋಗ್ಯನಲ್ಲದಿರುವುದರಿಂದ 'ಅಹಂ'ನಾಮಕನು. ಆತನೇ ಮುಖ್ಯವಾಗಿ ಈ ಸೂರ್ಯ ನಲ್ಲಿರತಕ್ಕ ಸರ್ವಸಮರ್ಥನಾದ ನಾರಾಯಣನು. ॥ (i) ಯಾವ ಈ ಸೂರ್ಯನಲ್ಲಿರತಕ್ಕ ಶ್ರೀ ಪರಮಾತ್ಮನೋ, ಅವನು ಸೂರ್ಯಾದಿಗಳಿಂದ ಅಹೇಯನಾದುದರಿಂದ 'ಅಹಂ' ನಾಮಕನು. ಈ ಪ್ರಕಾರವಾಗಿ ಸರ್ವೋತ್ತಮನಾದ ಒಬ್ಬ ವಿಷ್ಣುವೇ ಮನುಷ್ಯಜೀವರಲ್ಲಿಯೂ ಸೂರ್ಯಾದಿಗಳಲ್ಲಿಯೂ ಇರುತ್ತಾನೆ ಈ ಕಾರಣದಿಂದ (ಸೂರ್ಯಾದಿಗಳಲ್ಲಿರತಕ್ಕವನೂ) ಕ್ರೀಡಾದಿಗುಣವಿಶಿಷ್ಟನೂ ಆದ ಶ್ರೀ ನಾರಾಯಣನನ್ನು ಸಮಸ್ತಜೀವರ ಸಮೀಪದಲ್ಲಿರತಕ್ಕವ ನನ್ನಾಗಿಯೂ, ಸಮಸ್ತ ಜೀವರಿಗೂ ನಿಯಾಮಕರಾದ ಬ್ರಹ್ಮಾದಿಗಳಿಗೂ ನಿಯಾಮಕನನಾ ಗಿಯೂ ತಿಳಿಯಬೇಕೆಂದು ಐತರೇಯ ಸಂಹಿತೆಯಲ್ಲಿ ಹೇಳಿಯದೆ.

ಭಾ॥ (a) ಸಂಪನ್ನಸ್ಯ ಪರಸ್ತಾದೇವಾನಂತರಮೇವ । ನ ಪುನಃ ಕರ್ಮಾಂತ ರೇಣ ಶರೀರಾರಂಭ ಏವಂವಿದೋ ಭವತಿ ॥ (b) ಪ್ರಜ್ಞಾಮಯೋ ದೇವ ತಾಮಯ ಇತ್ಯಾದಿ ಪೃಥಕ್ಪೃಥಙ್ಮಯಶಬ್ದೋಽನಿರುದ್ಧಾದಿ ಚತುರ್ಮೂ ರ್ತೀನಾಮಪಿ ಪರಸ್ಪರ ಸಾಮ್ಯೇನ ಸರ್ವಜೀವೇಭ್ಯ ಆಧಿಕ್ಯಂ ಜ್ಞಾತವ್ಯ ಮಿತಿ ದರ್ಶಯಿತುಂ । (c) ಅಂತರ್ಯಾಮಿಸ್ವರೂಪೇಣ ಜ್ಞಾಪಯನ್ನ ನಿರುದ್ಧಕಃ ॥ ಪ್ರಜ್ಞೇತ್ಯುಕ್ತೋ ದ್ಯೋತನಾಚ್ಚ ಪ್ರದ್ಯುಮ್ನೋ ದೇವತೋ ದಿತಃ । (d) ಅಮುಂ ಕರೋತಿ ಯಚ್ಛಾಸ್ತ್ರಮ್ಮೃತಂ ಸ್ವಸ್ಮಿನ್ಪುನಃ ಪುನಃ ॥ ಸಂಕರ್ಷಣೋಽಮೃತಂ ತಸ್ಮಾದ್ವಾಸುದೇವಸ್ತು ಬೃಂಹಣಾತ್ । ಜೀವಾ ನಾಂ ಮುಕ್ತಿದಾನೇನ ಬ್ರಹ್ಮೇತಿ ಕಥಿತಃ ಪ್ರಭುಃ ॥ ಏವಮೇಕೋಽಪಿ ಭಗ ವಾಂಶ್ಚತುರ್ಧಾ ಸಮುದೀರಿತಃ ॥ ಇತ್ಯಾದಿ ಚಾತುರಾತ್ಮ್ಯೇ ॥

ಅ ॥ (a) (ಬೃಹತೀ ಸಹಸ್ರವು) ಉಪಾಸನೆ ಮಾಡಲ್ಪಟ್ಟ ಅನಂತರದಲ್ಲಿಯೇ ॥ ಪುನಃ ಇತರ ಕರ್ಮದಿಂದ ಶರೀರವು ಪ್ರಾಪ್ತವಾದರೆ (ಆ ಶರೀರವು ಹೋದಮೇಲೆ) ಇಂತಹ ಜ್ಞಾನಿ ಯಾದವನಿಗೆ ಆಗುತ್ತದೆ.

ತಾ || 'ಸಂಪನ್ನಸ್ಯ ಪರಸ್ತಾತ್' ಎಂದು ಹೇಳಬೇಕಾಗಿಯೇ ಇಲ್ಲ. ಸಾಧನವಾದ ಮೇಲೆ ಸಾಧ್ಯವು ಸಿದ್ಧವೇ ಆಗಿಯದೆ. ಎಂದರೆ ಇತರ ವಿದ್ಯೆಗಳನ್ನುಪಾಸನೆ ಮಾಡಿದವರಿಗೆ ಕೆಲವುವೇಳೆ ಇತರ ಶರೀರವು ಪ್ರಾಪ್ತಿಯಾಗಿ ಉಪಾಸನೆಗೆ ಫಲಭೂತವಾದ ಅಪರೋಕ್ಷಜ್ಞಾನವನ್ನು ಪ್ರತಿಬಂಧಿಸಿ ಹೇಳಿದಫಲವು ಸಾನಕಾಶದಿಂದಾಗುವುದು. ಬೃಹತೀ ಸಹಸ್ರವನ್ನುಪಾಸನೆ ಮಾಡಿದವರಿಗೆ ಆದರೂ ಬೇರೆ ಕರ್ಮವೇ ಇಲ್ಲದೆ ಇರುವುದರಿಂದ, ಬೇರೆ ಶರೀರವು ಪ್ರಾಪ್ತಿಯಾಗದೆ ಇರುವುದರಿಂದ ಬೃಹತೀ ಸಹಸ್ರವನ್ನು ಸ್ತುತಿಸಿದ ಮೇಲೆಯೇ ಶೀಘ್ರದಲ್ಲಿ 'ಪ್ರಜ್ಞಾಮಯಃ' ಇತ್ಯಾದಿ ವಿಶೇಷಜ್ಞಾನವು, ಆ ಮೇಲೆ ಅಪರೋಕ್ಷವಾಗಿ ಪೂರ್ವೋಕ್ತಫಲವು ಪ್ರಾಪ್ತಿಯಾಗುತ್ತದೆ. ॥ (b) ಪ್ರಜ್ಞಾದಿ ಶಬ್ದಗಳು ಪ್ರಕೃಷ್ಟಜ್ಞಾನ ಮೊದಲಾದ ಗುಣಗಳನ್ನು ತಿಳಿಸಿಕೊಡುವುದರಿಂದ, ಅಂತಹ ಗುಣಗಳಿಂದ ಯುಕ್ತನಾದ ಶ್ರೀ ಹರಿಯು ನನಗೆ ಪ್ರಧಾನನು 'ಎಂದು ಜ್ಞಾನವುಳ್ಳವನಾಗಿ' ಎಂದು ಒಂದು 'ಮಯ' ಶಬ್ದದಿಂದಲೇ ಕೂಡುವಾಗ ಪ್ರತ್ಯೇಕ ಮಯ ಶಬ್ದವು ವ್ಯರ್ಥವೆಂದರೆ.- 'ಪ್ರಜ್ಞಾಮಯಃ, ದೇವತಾಮಯಃ' ಇದೇ ಮೊದಲಾದ ಬೇರೆ ಬೇರೆ ಮಯ ಶಬ್ದವು 'ಅನಿರುದ್ಧ, ಪ್ರದ್ಯುಮ್ನ, ಸಂಕರ್ಷಣ, ವಾಸುದೇವ' ಎಂಬೀ ನಾಲ್ಕು ಭಗವನ್ಮೂರ್ತಿಗಳಿಗೂ ಅನ್ಯೋನ್ಯವಾಗಿ ಒಂದೇರೀತಿಯಾಗಿ ಎಲ್ಲಾ ಜೀವರಿಂದಲೂ ಅತ್ಯುತ್ತಮತ್ವವು ತಿಳಿಯಬೇಕೆಂದು ತೋರಿಸುವುದಕ್ಕೋಸ್ಕರ,

ತಾ || ಅಂತೂ ಪ್ರಜ್ಞಾದಿಶಬ್ದವು ಶ್ರೀ ಹರಿಗೆ ಗುಣಸಮರ್ಪಕ ಮಾತ್ರವಲ್ಲ. ಅನಿರುದ್ಧಾದಿ ನಾಲ್ಕು ಭಗವನ್ಮೂರ್ತಿಪರವೂ ಆಗಿರುತ್ತದೆ. ಆದುದರಿಂದ ಆ ಭಗವನ್ಮೂರ್ತಿಗಳಿಗೆ ಅನ್ಯೋನ್ಯ ಒಂದೇರೀತಿ ಸರ್ವೋತ್ತಮತ್ವವಿದೆ ಎಂದು ಅಭಿಪ್ರಾಯದಿಂದ ಬೇರೆ ಬೇರೆ ಮಯ ಶಬ್ದವು ಉಪಯೋಗಿಸಲ್ಪಟ್ಟಿತು. ॥ (c) ಅನಿರುದ್ಧರೂಪಿಯಾದ ಶ್ರೀ ಹರಿಯು ಸರ್ವರ ಅಂತರ್ಯಾಮಿಯಾದ ಸ್ವರೂಪದಿಂದ ತಿಳಿಸಿಕೊಡುವವನಾಗಿ ('ಪ್ರಕರ್ಷೇಣ ಜ್ಞಾಪಯತಿ' ಎಂಬೀವ್ಯುತ್ಪತ್ತಿಯಿಂದ) 'ಪ್ರಜ್ಞ'ನೆಂದು ಹೇಳಲ್ಪಟ್ಟಿರುತ್ತಾನೆ. ॥ ಪ್ರದ್ಯುಮ್ನನು ಪ್ರಕಾಶಗೊಳಿಸುವುದರಿಂದ 'ದೇವತಾ'ಎಂಬ ಪದದಿಂದ ಹೇಳಲ್ಪಟ್ಟಿದ್ದಾನೆ. ॥ (d) ಸಂಕರ್ಷಣನು, ಅಮಿತವಾದ, ಯಥಾರ್ಥವಾದ ಶಾಸ್ತ್ರವನ್ನು ತನ್ನವಿಷಯದಲ್ಲಿ (ಸ್ವಪ್ರತಿಪಾದಕವಾಗಿ) ಮತ್ತೂ ಮತ್ತು ಯಾವಕಾರಣದಿಂದ ನಿರ್ಮಿಸುತ್ತಾನೋ. ಆದುದರಿಂದ 'ಅಮೃತ'ನೆಂದು ಹೇಳಲ್ಪಡುತ್ತಾನೆ. ಸರ್ವಸಮರ್ಥನಾದ ವಾಸುದೇವನು ಜೀವರಿಗೆ ಮುಕ್ತಿಯನ್ನು ಕೊಟ್ಟು ಗುಣಗಳಿಂದ ಪೂರ್ಣೀಕರಿಸುವುದರಿಂದ 'ಬ್ರಹ್ಮ'ನೆಂದು ಹೇಳಲ್ಪಡುತ್ತಾನೆ. ಈ ಪ್ರಕಾರವಾಗಿ ಪರಮಾತ್ಮನು ತನ್ನಲ್ಲಿ ಭೇದವಿಲ್ಲದಿರುವವನಾದರೂ ನಾಲ್ಕುಪ್ರಕಾರನಾಗಿ ಹೇಳಲ್ಪಟ್ಟಿರುತ್ತಾನೆ. ಇದೇ ಮೊದಲಾದ ವಿಷಯವು ಚಾತುರಾತ್ಮ್ಯವೆಂಬ ಗ್ರಂಥದಲ್ಲಿ, ಹೇಳಲ್ಪಟ್ಟಿದೆ.

ತಾ || ವೇದಾದಿ ಸರ್ವಶಾಸ್ತ್ರಗಳನ್ನು ತನ್ನ ವಿಷಯವಾಗಿ ಅಧಿಕಾರಿಗಳ ಬುದ್ಧಿಯನ್ನು ಸೆಳೆಯುವ ಪ್ರಯುಕ್ತ 'ಸಂಕರ್ಷಣ' ನಾಮಕನು. ಅಂತರ್ಯಾಮಿ ರೂಪದಿಂದ ಜ್ಞಾನನಿರೋಧ (ತಡಿಯುವಿಕೆ)ವನ್ನು ಪರಿಹರಿಸುವುದರಿಂದ 'ಅನಿರುದ್ಧ'ನಾಮಕನು; ಚೆನ್ನಾಗಿ ಪ್ರಕಾಶಿಸುವುದರಿಂದ 'ಪ್ರದ್ಯುಮ್ನ'ನಾಮಕನು; ಅಥವಾ ಚೆನ್ನಾಗಿ ಮತ್ತೂ ಮತ್ತು ತನ್ನವಿಷಯದಲ್ಲಿ ಶಾಸ್ತ್ರಗಳನು ವ್ಯಾಖ್ಯಾನಮಾಡುವ ವಿಷಯದಲ್ಲಿ ಸೆಳೆಯುವದರಿಂದ 'ಸಂಕರ್ಷಣ'ನಾಮಕನು. ಮುಕ್ತಿಯನ್ನು ಕೊಟ್ಟು ಕ್ರೀಡಾದಿಗುಣಗಳಿಗೆ ಆಶ್ರಯರನ್ನಾಗಿ ಮಾಡುವುದರಿಂದ ಅಂತೂ ಸಕಲಗುಣಗಳನ್ನು ಕೊಡುವುದರಿಂದ 'ವಾಸುದೇವ'ನಾಮಕನು. ಆದುದರಿಂದ 'ಪ್ರಜ್ಞ' ಮೊದಲಾದ ಶಬ್ದಗಳಿಗೆ 'ಅನಿರುದ್ಧ' ಮೊದಲಾದ ಶಬ್ದಗಳ ಸಮಾನವಾದ ಅರ್ಥವಿರುತ್ತದೆ. ಅನಿರುದ್ಧಾದಿ ನಾಲ್ಕು

ಮೂರ್ತಿಗಳಲ್ಲಿ ವಾಸುದೇವನು ಅಂತಿಮನು, ಇವನು 'ಬ್ರಹ್ಮಮಯಃ' ಎಂಬ ಶಬ್ದವಾಚ್ಯನು. ಈ ಮಂತ್ರದಲ್ಲಿ ಬ್ರಹ್ಮಮಯನು ಮೂರನೇದ್ದಾಗಿ ಹೇಳಲ್ಪಟ್ಟದ್ದಾನೆ. ಬ್ರಹ್ಮಮಯನೆಂದರೆ ಸಂಕರ್ಷಣನೆಂದು ಅಭಿಪ್ರಾಯ ಬರಬಾರದೆಂದು ತಿಳಿಸುವುದಕ್ಕಾಗಿ ಭಾಷ್ಯದಲ್ಲಿ 'ಬ್ರಹ್ಮಾದಿಮಯಃ' ಎಂದು ಉಕ್ತವಾಗಿಯದೆ.

ಭಾ|| (a) ಸಂಭೂಯೇತ್ಯತ್ರ ಸಮಿತ್ಯುಪಸರ್ಗಾದ್ಬೃಹತೀಸಹಸ್ರಸಂಪಾದನಾನಂತರಂ ಭಗವದಾಧಿಕ್ಯಂ ಪುನರಾಧಿಕ್ಯೇನ ಜ್ಞಾಯತ ಇತ್ಯುಕ್ತಂ ಭವತಿ । ಭಗವದಾಧಿಕ್ಯಮಧಿಕಂ ಜ್ಞಾತ್ವಾ ದೇವತಾ ಅಪಿ ಕ್ರಮೇಣ ಪ್ರಾಪ್ನೋತಿ ॥ (b) ದ್ವಾಸಪ್ತತಿಸಹಸ್ರಾಣಾಂ ರೂಪಾಣಾಂ ಪರ್ಯುಪಾಸನಾತ್ । ಆಧಿಕ್ಯಂ ಜ್ಞಾಯತೇ ವಿಷ್ಣೋರ್ನಿತರಾಂ ಹಿ ಪುನಃ ಪುನಃ ॥ (c) ಪ್ರಾಪ್ನೋತಿ ದೇವತಾಶ್ಚೈವ ಕೇಶವಾಂತಾಃ ಕ್ರಮೇಣ ತು । ಯೋಗ್ಯಾ ಅಸ್ಯಾಶ್ಚ ವಿದ್ಯಾಯಾ ದೇವಾ ಋಷಯ ಏವ ಚ ॥ ಇತ್ಯಾದಿ ಸತ್ತತ್ವೇ ॥

ಅ || (a) 'ಸಂಭೂಯ' ಎಂಬುವಲ್ಲಿ 'ಸಮ್' ಎಂದು ಉಪಸರ್ಗವಿದ್ದುದರಿಂದ ಬೃಹತೀಸಹಸ್ರವನ್ನು ಚೆನ್ನಾಗಿ ಸ್ತುತಿಸಿದಮೇಲೆ ಪುನಃ ಪರಮಾತ್ಮನ ಸರ್ವೋತ್ತಮತ್ವಾದಿರೂಪ ಆಧಿಕ್ಯವು ಮತ್ತು ಅತ್ಯಾಧಿಕ್ಯದಿಂದ ತಿಳಿಯಲ್ಪಡುತ್ತದೆ ಎಂದು ಉಕ್ತವಾಯಿತು. ॥ ಶ್ರೀ ಪರ ಪರಮಾತ್ಮನ ಸರ್ವೋತ್ತಮತ್ವಾದಿ ರೂಪಾಧಿಕ್ಯವನ್ನು ಅತ್ಯಧಿಕನನ್ನಾಗಿ ತಿಳಿದು ಕ್ರಮದಿಂದ ಕೇಶವಪರ್ಯಂತ ಸರ್ವದೇವತೆಗಳನ್ನೂ ಹೊಂದುತ್ತಾನೆ.

ತಾ ॥ ಏಕಕಾಲದಲ್ಲಿಯೇ ಸಮಸ್ತದೇವತೆಗಳನ್ನು ಹೊಂದುವುದಲ್ಲ. ಕ್ರಮವಾಗಿ ಉತ್ತಮೋತ್ತಮ ದೇವತೆಗಳನ್ನು ಹೊಂದುತ್ತಾನೆ. ॥ (b) ಎಪ್ಪತ್ತೆರಡುಸಹಸ್ರ ಭಗವದ್ರೂಪಗಳನ್ನು ಚೆನ್ನಾಗಿ ಉಪಾಸನೆಮಾಡಿರುವುದರಿಂದ ಮತ್ತೂ ಮತ್ತು ಅತಿಶಯವಾಗಿ ಶ್ರೀಪರಮಾತ್ಮನಿಗೆ ಆಧಿಕ್ಯವು ತಿಳಿಯಲ್ಪಡುತ್ತದೆ. ಸರ್ವಪ್ರಸಿದ್ಧವು. ॥ (c) ಕ್ರಮದಿಂದಲಾದರೂ ಕೇಶವಪರ್ಯಂತ ದೇವತೆಗಳನ್ನೇ ಹೊಂದುತ್ತಾನೆ. ಈ ಬೃಹತೀಸಹಸ್ರ ವಿದ್ಯೆಗಾದರೂ ದೇವತೆಗಳು ಹಾಗೂ ಋಷಿಗಳು ಯೋಗ್ಯರು. ಇದೇ ಮೊದಲಾದ ವಿಷಯವು 'ಸತ್ತತ್ವ' ವೆಂಬ ಗ್ರಂಥದಲ್ಲಿ (ಹೇಳಲ್ಪಟ್ಟಿದೆ.)

ಭಾ|| (a) ಬೃಹತೀಸಹಸ್ರಸ್ಥಿತಾನಿ ವಿಷ್ಣುರೂಪಾಣಿ ಪುರುಷೇ ಸ್ಥಿತಾನಿ ಪುರುಷೈರಹೇಯತ್ವಾದಹಂ ನಾಮಕಾನಿ ತಾನ್ಯೇವ ಸೂರ್ಯೇ ಸ್ಥಿತಾನಿ ಯಾನ್ಯೇವ ಸೂರ್ಯೇ ಸ್ಥಿತಾನಿ ತಾನ್ಯಪಿ ಸೂರ್ಯಾದಿಭಿರಹೇಯತ್ವಾದಹಂ ನಾಮಕಾನಿ । (b) ಏತದೇವೋಕ್ತಂ ನಾರಾಯಣಾಖ್ಯಂ ಪರಂ ಬ್ರಹ್ಮೈವ ಸರ್ವದಾ ಉಪ ಸಮೀಪ ಈಕ್ಷೇತ ॥ ನಾತ್ರ ಜೀವೇಶ್ವರಾಭೇದೋ ವಿವಕ್ಷಿತಃ । ಉಪ ಸಮೀಪೇ ಈಕ್ಷೇತೇತಿ ಸಮೀಪೇ ದರ್ಶನವಚನಾತ್ ॥ (c) ನ ಚ ನಿರರ್ಥಕತ್ವಮುಪಸರ್ಗಸ್ಯಾಂಗೀಕರ್ತುಂ ಯುಕ್ತಂ । ನ ಹ್ಯಾರ್ಷೇಷು ವೇದಾದಿಷು ವ್ಯಾಕರಣನಿರುಕ್ತಾದಿಷು ಚೋಪಸರ್ಗಾಣಾಂ ವೈಯರ್ಥ್ಯಮಂಗೀಕೃತಂ ಕುತ್ರಚಿತ್ ॥ (d) ಉಕ್ತಂ ಚ ಭಗವತಾ ವ್ಯಾಸೇನ । ನಾನರ್ಥಕಃ ಸ್ವರೋ ವಾಪಿ ವರ್ಣೋ ವಾ ಕುತ್ರಚಿದ್ಭ

ವೇತ್ ॥ ಪದಂ ವಾಕ್ಯಂ ಕುತಶ್ಚಸ್ಯಾನ್ನಾಲ್ಪಾರ್ಥಮಪಿ ಕುತ್ರಚಿತ್ ।
(c) ಉಚ್ಚಾರಾದ್ಯರ್ಥಮಪಿ ವಾ ನಾಸ್ತಿ ಕಿಂಚಿತ್ಸ್ವರಾದಿಕಂ ॥ ಮಹಾರ್ಥ
ಮೇವ ಸರ್ವಂ ಹಿ ವೇದೇ ವಾ ವೈದಿಕೇಽಪಿ ವಾ । ಇತಿ ॥ (f) ಸುಕರಂ
ಚ ಸರ್ವಪದಾನಾಮನರ್ಥಕತ್ವಕಲ್ಪನಂ ಯೈಶ್ಚ ವಾಕ್ಯೈರರ್ಥವತ್ತ್ವಂ
ಪ್ರತೀಯತೇ ತೇಷಾಮಪ್ಯನರ್ಥಕತ್ವಮೇವ ಸ್ಯಾದ್ವಿಶೇಷಾಭಾವಾತ್ । ನ
ಚ ಮಾನುಷವಾಕ್ಯೇನ ವೇದಪದಾನಾಮಾನರ್ಥಕ್ಯಂ ಕಲ್ಪ್ಯಂ ॥

ಅ ॥ (a) ಬೃಹತೀಸಹಸ್ರದಲ್ಲಿರತಕ್ಕ ಭಗವದ್ರೂಪಗಳೇ ಪುರುಷರಲ್ಲಿರತಕ್ಕವುಗಳು. ಪುರುಷರಿಂದ ಹೇಯ (ಪರಿತ್ಯಾಗಮಾಡಲಿಕ್ಕೆ ಯೋಗ್ಯ)ಗಳಲ್ಲದೆ ಇರುವುದರಿಂದ 'ಅಹಂ' ಎಂದು ಹೆಸರು ಉಳ್ಳವುಗಳು. ಅವುಗಳೇನೇ (ಅಹೋರಾತ್ರಿಗಳಲ್ಲಿತಕ್ಕ ಭಗವದ್ರೂಪಗಳೇ) ಸೂರ್ಯನಲ್ಲಿರತಕ್ಕವುಗಳು. ಯಾವ ಭಗವದ್ರೂಪಗಳು ಸೂರ್ಯನಲ್ಲಿರತಕ್ಕವುಗಳೋ ಅವುಗಳೂ ಕೂಡ ಸೂರ್ಯಾದಿಗಳಿಂದ ಹೇಯಗಳಲ್ಲದೆ ಇರುವುದರಿಂದ 'ಅಹಂ'ನಾಮಕಗಳು.

ತಾ ॥ ಭಗವದ್ರೂಪಗಳು ಪುರುಷರಲ್ಲಿರತಕ್ಕ ಎಪ್ಪತ್ತೆರಡುಸಹಸ್ರ ನಾಡಿಗಳಲ್ಲಿವೆ. ಉತ್ತರಾಯಣ ದಕ್ಷಿಣಾಯನ ಎಂಬ ಭೇದದಿಂದ ಭಿನ್ನಗಳಾದ ಎಪ್ಪತ್ತೆರಡುಸಹಸ್ರ ನಾಡಿಗಳಲ್ಲಿ ಅಷ್ಟು ಸಂಖ್ಯೆಯುಳ್ಳ ಸೂರ್ಯರಶ್ಮಿಗಳು ವ್ಯಾಪ್ತಗಳಾದುದರಿಂದ ಪುರುಷರಲ್ಲಿರತಕ್ಕ ಭಗವದ್ರೂಪಗಳೇ ಸೂರ್ಯನಲ್ಲಿಯೂ ಇರುತ್ತವೆ. ॥ (b) ಇದೇ ಹೇಳಲ್ಪಟ್ಟ ನಾರಾಯಣನೆಂದು ಹೆಸರುಳ್ಳ ಸರ್ವೋತ್ತಮನಾದ ಬ್ರಹ್ಮನನ್ನೇ ಯಾವಾಗಲೂ ಜೀವರ ಸಮೀಪದಲ್ಲಿ (ಜೀವಾಂತರ್ಗತನನ್ನಾಗಿ) ತಿಳಿಯಬೇಕು.=ಪರನು ಈ ಮಂತ್ರದಲ್ಲಿಯೂ 'ಪ್ರಜ್ಞಾಮಯೋ ದೇವತಾಮಯ ...... ಉಪೇಕ್ಷೇತೋಪೇಕ್ಷೇತ' ಎಂಬ ವಾಕ್ಯದಿಂದ ಜೀವೇಶರಿಗೆ ಐಕ್ಯವು ಪ್ರತಿಪಾದಿಸಲ್ಪಟ್ಟದೆ. ನಾರಾಯಣನಿಗೆ ಸರ್ವಾಂತರ್ಯಾಮಿತ್ವವು ಹೇಳಲಿಲ್ಲ. ಎಂದು ಆಕ್ಷೇಪಿಸಿದರೆ ಉತ್ತರವನ್ನು ಕೊಡುತ್ತಾರೆ. ಇಲ್ಲಿ ಜೀವೇಶ್ವರರಿಗೆ ಐಕ್ಯವು ವಿವಕ್ಷಿತವಲ್ಲ ಅಂದರೆ ಜೀವರಿಗೂ ಈಶ್ವರನಿಗೂ ಅಭೇದವನ್ನು ತಿಳಿಸಲಿಕ್ಕೆ ಹೊರಟದ್ದೆಂದು ತಿಳಿಯಬಾರದು. ಏಕೆಂದರೆ 'ಉಪ=ಸಮೀಪದಲ್ಲಿ, ಈಕ್ಷೇತ' ಎಂದು ಸಮೀಪದಲ್ಲಿ ಇದ್ದು ನೋಡುತ್ತಾನೆ ಎಂದು ಪ್ರತಿಪಾದಿಸುವ ವಾಕ್ಯವಿದ್ದುದರಿಂದ. ॥

ತಾ ॥ 'ಉಪೇಕ್ಷೇತೋಪೇಕ್ಷೇತ' ಎಂದು ಎರಡಾವರ್ತಿ ಈ ಮಂತ್ರದಲ್ಲಿ ಹೇಳಲ್ಪಟ್ಟದೆ. 'ಉಪ' ಎಂದರೆ ಸಮೀಪವೆಂದರ್ಥ. ಒಬ್ಬನ ಸಮೀಪದಲ್ಲಿ ಇನ್ನೊಬ್ಬನು ಇದ್ದು ನೋಡುತ್ತಾನೆಂದರೆ ಸಂಗತವಾಗುವುದು. ತನ್ನ ಸಮೀಪದಲ್ಲಿ ತಾನೇ ಇದ್ದು ತನ್ನನ್ನೇ ನೋಡುತ್ತಾನೆ ಎಂದರೆ ಅಸಂಗತವಾಗುವುದು. ಆದುದರಿಂದ 'ಉಪ' ಎಂಬ ಶಬ್ದವನ್ನು ಉಪಯೋಗಿಸಿರುವುದರಿಂದ ಭೇದವೇ ಸಿದ್ಧವಾಗುವುದು ಅಭೇದವಾದಿಯು ಉಪವೆಂಬುವುದು ಉಪಸರ್ಗವಾದುದರಿಂದ ಅದಕ್ಕೆ ಸಮೀಪವೆಂಬುವ ಅರ್ಥಕಲ್ಪನೆಯು ಯುಕ್ತವಲ್ಲ. 'ಉಪೇಕ್ಷೇತ' ಎಂದರೂ ಈಕ್ಷೇತ ಎಂದೇ ಅರ್ಥವು. ಉಪಸರ್ಗಗಳು ನಿರರ್ಥಕಗಳು ಎಂದರೆ ಉತ್ತರವನ್ನು ಹೇಳುವರು. ಉಪಸರ್ಗಗಳಿಗೆ ಅರ್ಥವಿಲ್ಲವೆಂಬುವುದು ಒಡಂಬಡಲಿಕ್ಕೆ ಉಚಿತವಲ್ಲ. ॥ (ಏಕೆಂದರೆ) ಆರ್ಷಗಳಲ್ಲಿ (ಸ್ಮೃತ್ಯಾದಿಗಳಲ್ಲಿಯೂ) ವೇದವೊದಲಾದುವುಗಳಲ್ಲಿಯೂ, ವ್ಯಾಕರಣ ನಿರುಕ್ತಾದಿಗಳಲ್ಲಿಯೂ, ಉಪಸರ್ಗಗಳಿಗೆ ನಿರರ್ಥಕತ್ವವು ಎಲ್ಲಿಯೂ ಅಂಗೀಕರಿಸಲ್ಪಡಲಿಲ್ಲವಷ್ಟೇ ॥ (d) ಈ ಪ್ರಮೇಯವು ಪೂಜ್ಯರಾದ ವೇದವ್ಯಾಸರಿಂದ ಹೇಳಲ್ಪಟ್ಟದೆ. ಸ್ವರವಾಗಲೀ, ವರ್ಣವಾಗಲೀ ಎಲ್ಲಿಯೂ ಅರ್ಥವಿಲ್ಲದಿರುವುದು ಇರುವುದಿಲ್ಲ. ಪದವಾಗಲೀ, ವಾಕ್ಯವಾಗಲೀ ಎಲ್ಲಿ

ಯಾದರೂ ಅಲ್ಪವಾದ ಅರ್ಥವುಳ್ಳದ್ದೂ ಕೂಡ ಯಾವ ಕಾರಣದಿಂದಲೂ ಅಗಲಾರದು. ॥ (e) ಯಾವುದೊಂದು ಸ್ವರಾದಿಯೂ ಕೂಡ ಉಚ್ಚಾರಣವೇ ಮೊದಲಾದ ಪ್ರಯೋಜನವುಳ್ಳದ್ದೂ ಇರುವುದಿಲ್ಲ. (ಛಂದೋ ಭಂಗದಭೀತಿಯಿಂದ ಶ್ಲೋಕವನ್ನು ಪೂರ್ಣೀಕರಿಸುವುದಕ್ಕೋಸ್ಕರವೂ ಇರುವುದಿಲ್ಲ.) ವೇದದಲ್ಲಾಗಲೀ, ವೇದಸಂಬಂಧಿಯಾದ ಸ್ಮೃತಿ ಮೊದಲಾದವುಗಳಲ್ಲಾಗಲೀ, ಸ್ವರಮೊದಲಾದದ್ದೆಲ್ಲವೂ ಶ್ರೇಷ್ಠವಾದ ಅರ್ಥವುಳ್ಳದ್ದೇ ಆಗಿರುತ್ತದೆ ಪ್ರಸಿದ್ಧವು. ॥ (f) ಎಲ್ಲಾ ಪದಗಳಿಗೂ ಅನರ್ಥಕತ್ವವನ್ನು ಕಲ್ಪಿಸುವುದು ಬಹು ಸುಲಭವಾಗಿಯದೆ. ('ಉಪ' ಎಂಬುವುದಕ್ಕೆ ನಿರರ್ಥಕತ್ವವನ್ನಂಗೀಕರಿಸುವುದಾದರೆ) ಯಾವ ವಾಕ್ಯಗಳಿಂದ ಅರ್ಥವು ತೋರುವುದೋ ಆ 'ಈಕ್ಷತಿ' ಮೊದಲಾದ ಪದಗಳಿಗೂ ನಿರರ್ಥಕತ್ವವೇ ಬರಬೇಕಾಗುವುದು. ವಿಶೇಷವಿಲ್ಲದಿರುವುದರಿಂದ ॥ ಮನುಸ್ಯರ ವಾಕ್ಯದಿಂದ ವೇದದಲ್ಲಿರತಕ್ಕ ಪದಗಳಿಗೆ ವೈಯರ್ಥ್ಯವನ್ನು ಕಲ್ಪಿಸಕೂಡದು.

ತಾ ॥ ಸಿದ್ಧಾಂತದಲ್ಲಿ 'ಉಪೇಕ್ಷೇತ' ಎಂಬಲ್ಲಿರತಕ್ಕ 'ಉಪ' ಎಂಬ ಉಪಸರ್ಗವು ಸಾರ್ಥಕವೇ ಆಗಿರುತ್ತದೆ. ಅದ್ವೈತಿಗಳ ಮತದಲ್ಲಿ ನಿರರ್ಥಕವೇ ಆಗಿರುತ್ತದೆ. ವೇದಾದಿಗಳಲ್ಲಿರತಕ್ಕ ಪದಗಳಿಗೆ ನಿರರ್ಥಕತ್ವವನ್ನು ಎಷ್ಟುಮಾತ್ರಕ್ಕೂ ಕಲ್ಪಿಸಬಾರದು. 'ಉಪ' ಎಂಬ ಉಪಸರ್ಗಕ್ಕೆ ಸಮೀಚೀನವೆಂಬ ಅರ್ಥಮಾಡಬಹುದು. ಹಾಗೆ ಮಾಡಿದರೆ ಅಭೇದವೂ ಕೂಡುತ್ತದೆ. ಉಪಸರ್ಗಕ್ಕೆ ವೈಯರ್ಥ್ಯವೂ ಬರುವುದಿಲ್ಲ. ಆದುದರಿಂದ 'ಉಪ' ಎಂಬುವುದಕ್ಕೆ ಸಮೀಪ ಎಂಬುವ ಅರ್ಥವು ಯುಕ್ತವಲ್ಲ. ಎಂದು ಅದ್ವೈತಿಯು ಆಕ್ಷೇಪಿಸಿದರೆ ಇದೇ ಸಮಾಧಾನವು. ಸಮೀಚೀನವಾಗಿ ನೋಡುತ್ತಾನೆ ಎಂಬುವುದೇ ಅರ್ಥವಾಗಿದ್ದರೆ 'ಪ್ರೇಕ್ಷೇತ ಸಮೀಕ್ಷೇತ' ಎಂದು ಪ್ರಯೋಗವಿರುತಿತ್ತು ಮತ್ತು 'ತಸ್ಯೋಪವ್ಯಾಖ್ಯಾನಂ' ಎಂಬುವ ಸ್ಥಳದಲ್ಲಿ 'ಉಪ' ಎಂಬುವುದಕ್ಕೆ ಸಮೀಪವೆಂದೇ ಪರರು ಅರ್ಥಮಾಡಿರುವುದರಿಂದ ಇಲ್ಲಿಯೂ ಅದೇ ಅರ್ಥವನ್ನು ಹೇಳಬೇಕು. ಅದೂ ಅಲ್ಲದೆ ಐಕ್ಯವೇ ತಾತ್ಪರ್ಯವಾದರೆ ಈಕ್ಷಣಕ್ರಿಯೆಯೇ ಕೂಡದಿರುವ ಕಾರಣ ಸಮೀಚೀನವಾದ ಈಕ್ಷಣವು ಸುತರಾಂ ಕೂಡಲಾರದು. ನೋಡುವವನು ಮಾತ್ರ ಇದ್ದು ನೋಡಿಸಿಕೊಳ್ಳುವ ವಸ್ತುವು ಇಲ್ಲದೇ ಹೋದರೆ ಸಾಮಾನ್ಯ ನೋಡುವಿಕೆಯಾಗಲೀ ಚೆನ್ನಾಗಿ ನೋಡುವಿಕೆಯಾಗಲೀ ಹೇಗೆ ಸಂಗತವಾಗುವುದು? ಆದುದರಿಂದ 'ಉಪ' ಎಂಬ ಶಬ್ದಕ್ಕೆ ಸಮೀಪವೆಂದೇ ಅರ್ಥವು ನಿಶ್ಚಿತವಾಗುವುದು.

ಈ ವಾಕ್ಯಕ್ಕೆ ಐಕ್ಯದಲ್ಲಿ ತಾತ್ಪರ್ಯವಿಲ್ಲವೆಂಬುವುದಕ್ಕೆ ಇನ್ನೊಂದು ಕಾರಣವನ್ನು ಹೇಳುವರು.

ಭಾ॥ **(a)** ಜೀವೇಶ್ವರೈಕ್ಯಾಂಗೀಕಾರೇ ಯೋಽಹಂ ಸೋಽಸಾವಿತ್ಯೇವ ಪೂರ್ಯತೇ ಪುನರ್ಯೋಽಸೌ ಸೋಽಹಮಿತಿ ವ್ಯರ್ಥಂ ॥ ನ ಹ್ಯಸ್ಯ ತೇನೈಕ್ಯೇ ತಸ್ಯಾನೇನ ಭೇದಶಂಕಾ ಭವತಿ ॥ **(b)** ಅಸ್ಯ ತಸ್ಯೇತಿ ಭೇದಾಂಗೀಕಾರೇ ನಾಭೇದೋ ಮುಖ್ಯಃ । ಕಿಂ ತು ತದಧೀನತ್ವಮೇವಾನ್ಯಸ್ಯ ಭವತಿ। ಸ್ನೇಹವಿಶೇಷೋ ವಾ ॥ ಚೈತ್ರೋ ಮೈತ್ರೋ ಮೈತ್ರಶ್ಚೈತ್ರ ಇತಿವತ್ । **(c)** ತತ್ರ ಹ್ಯುಭಯಸ್ನೇಹಾಪೇಕ್ಷಯಾ ಪುನರ್ವಚನಂ ಯುಜ್ಯತೇ ॥ ಅಭ್ಯಾಸತ್ವೇ ಹ್ಯೇಕಪ್ರಕಾರೇಣ ಪ್ರಯೋಗೋ ದೃಷ್ಟಃ। ಅತ್ರ ಹಿ ಪ್ರಯೋಗದ್ವೈವಿಧ್ಯಂ ದೃಶ್ಯತೇ ॥ **(d)** ಏಕಪ್ರಕಾರಾ ಬಹುಶೋ ವಾಗಭ್ಯಾಸ ಇತೀರಿತಃ । ಅರ್ಥಾಂತರಾರ್ಥಾ ದ್ವಿವಿಧಾ ಪ್ರಯುಕ್ತೇತಿ ಹಿ ನಿರ್ಣಯಃ ॥ ಇತಿ ಗಾರುಡೇ ॥

ಅ ॥ (a) ('ಏತತ್' ಎಂಬಪದಕ್ಕೆ) ಜೀವೇಶ್ವರೈಕ್ಯವೇ ಅರ್ಥವೆಂದು ಅಂಗೀಕರಿಸಿದರೆ, 'ಯೋಽಸಹಂ ಸೋಽಸೌ=ಯಾವ ನಾನೋ, ಪ್ರಸಿದ್ಧಸೂರ್ಯನೇ.' ಎಂದಿಷ್ಟೇ ಸಾಕಾಗುತ್ತದೆ. ಮತ್ತು 'ಯೋಽಸೌ ಸೋಽಹಂ' ಎಂಬುವುದು ವ್ಯರ್ಥವೇ ಸರಿ. ॥ 'ತದ್ಯೋಽಹಂ ಸೋಽಸೌ' ಎಂಬುವಲ್ಲಿ, ಪುರುಷನಿಗೆ ಸೂರ್ಯನಿಂದ ಐಕ್ಯವು ಹೇಳಲ್ಪಡುತ್ತದೆ. 'ಯೋಽಸೌ ಸೋಽಹಂ' ಎಂಬುವಲ್ಲಿ ಸೂರ್ಯನಿಗೆ ಪುರುಷನಿಂದ ಐಕ್ಯವು ಹೇಳಲ್ಪಡುತ್ತದೆ. ಕಾರಣ ವ್ಯರ್ಥವಾಗುವುದಿಲ್ಲ. ಎಂದರೆ ಇವನಿಗೆ ಅವನಿಂದ ಐಕ್ಯವಿದ್ದರೆ, ಅವನಿಗೆ ಇವನಿಂದ ಭೇದವಿದೆ ಎಂಬ ಸಂಶಯವು ಬರುವುದಿಲ್ಲವಷ್ಟೇ! ಆದುದರಿಂದ 'ಇವನೇ ಅವನು' ಎಂದು ಹೇಳಿದ ಮೇಲೆ 'ಅವನೇ ಇವನು' ಎಂದು ಹೇಳುವುದು ವ್ಯರ್ಥವು. ಶ್ರುತಿಗಳಲ್ಲಿ ಉಪಸರ್ಗಕ್ಕೂ ಕೂಡ ವೈಯರ್ಥ್ಯವನ್ನು ಕಲ್ಪಿಸಬಾರದೆಂದ ಮೇಲೆ 'ಯೋಽಸೌ ಸೋಽಹಂ' ಎಂಬುವುದು ವ್ಯರ್ಥವೆಂದು ಹೇಳುವುದು ಅನುಚಿತವು. ॥ (b) 'ಅಸ್ಯ ತಸ್ಯ' ಎಂದು ಭೇದವನ್ನು ಅಂಗೀಕರಿಸಿದರೆ ಅಭೇದವು ಮುಖ್ಯವಾದುದಲ್ಲ. ಆದರೆ ಇತರನಿಗೆ ಆತನ ಅಧೀನತ್ವವೇ ಬರುತ್ತದೆ. ಅಥವಾ, 'ಚೈತ್ರನೇ ಮೈತ್ರನು' 'ಮೈತ್ರನೇ ಚೈತ್ರನು' ಎಂಬುವಂತೆ ಸ್ನೇಹ ವಿಶೇಷವಾಗಲೀ.

ತಾ ॥ ಅಭೇದವನ್ನು ಅಂಗೀಕಾರಮಾಡುವ ಪಕ್ಷದಲ್ಲಿಯೂ ಸ್ವರೂಪಾಭೇದವನ್ನೇ ಅಂಗೀಕಾರ ಮಾಡಬೇಕೆಂಬ ನಿಯಮವಿಲ್ಲ. ಸ್ವಾಭಾವಿಕವಾಗಿ ಭೇದವಿರುವ ಎರಡು ವಸ್ತುಗಳಿಗೆ ಕೆಲವು ಸ್ಥಳಗಳಲ್ಲಿ ಅಮುಖ್ಯವಾದ ಅಭೇದವು ಹೇಳಲ್ಪಡುತ್ತದೆ. 'ರಾಜಾ ರಾಷ್ಟ್ರಂ ರಾಷ್ಟ್ರಂ ರಾಜಾ' ಎಂಬುವಲ್ಲಿ ರಾಷ್ಟ್ರವು ರಾಜನ ಅಧೀನವಾಗಿರುವುದರಿಂದ ರಾಜನಿಗೂ ರಾಷ್ಟ್ರಕ್ಕೂ ಔಪಚಾರಿಕ ಅಭೇದವು ಹೇಳಲ್ಪಡುತ್ತದೆ. ಇದರಂತೆಯೇ ಜೀವರು ನಿಯಮ್ಯರು. ವಿಷ್ಣುವು ನಿಯಾಮಕನು ಆಗಿರುವುದರಿಂದ ಇವರಿಗೆ ಔಪಚಾರಿಕ ಅಭೇದವು ಹೇಳಬಹುದು. ಅದಲ್ಲದೆ ಇಬ್ಬರಿಗೂ ಒಂದೇ ವಿಷಯದಲ್ಲಿ ಒಂದೇ ಅಭಿಪ್ರಾಯವಿದ್ದರೆ ಅವರಿಗೆ ಐಕ್ಯವೆಂದು ಹೇಳಲ್ಪಡುತ್ತದೆ. ಇಬ್ಬರಿಗೂ ಅತಿಸ್ನೇಹವಿದ್ದರೂ ಇವನೇ ಅವನೆಂದು ಹೇಳಲ್ಪಡುತ್ತದೆ. ಈ ಎಲ್ಲಾ ಸ್ಥಳಗಳಲ್ಲಿ ಅಭೇದವು ಅಮುಖ್ಯವಾದದ್ದು ನಿಜವಾಗಿಯೂ ಭೇದವೇ ಇರುವುದು. ಪರಮಾತ್ಮನು ಎಲ್ಲರಲ್ಲಿಯೂ ಅಂತರ್ಯಾಮಿ ಯಾಗಿರುವುದರಿಂದ ಅಮುಖ್ಯವಾದ ಅಭೇದವು ಹೇಳಿಯದೆ ಎಂದು ಹೇಳಬಹುದು. ॥ (c) (ಅಭೇದವು ಔಪಚಾರಿಕವೆಂಬ ಪಕ್ಷದಲ್ಲಿಯೂ ಪುನಃ ಹೇಳಿರುವುದು ವ್ಯರ್ಥವೇ ಆಗುತ್ತದೆ ಎಂದರೆ–) ಅಲ್ಲಿಯಾದರೂ ಇಬ್ಬರ ಸ್ನೇಹವನ್ನಪೇಕ್ಷಿಸಿ ಪುನಃ ಹೇಳೋಣವು ಯುಕ್ತವೇ ಆಗುತ್ತದೆ. ॥ (ಎರಡನೇ 'ಯೋಽಸೌ ಸೋಽಹಂ' ಎಂಬುವುದು ವ್ಯರ್ಥವಲ್ಲ. ಅಭೇದವನ್ನು ನಿಶ್ಚಯಿಸಲಿಕ್ಕಾಗಿ ಅಭ್ಯಾಸರೂಪವಾಗಿ ಹೇಳಲ್ಪಟ್ಟಿದೆ ಎಂದು ಪರನು ಹೇಳಿದರೆ ಅದನ್ನು ದೂಷಿಸುವರು.) ಅಭ್ಯಾಸ ಎಂದಾಗಿದ್ದರೆ ಒಂದೇ ಪ್ರಕಾರದಿಂದ ಪ್ರಯೋಗವು ಕಾಣಲ್ಪಡಬೇಕಷ್ಟೇ! ಇಲ್ಲಿಯಾದರೂ ಪ್ರಯೋಗಗಳಿಗೆ ದ್ವೈವಿಧ್ಯವು ಅಂದರೆ ಎರಡುಪ್ರಕಾರವಾಗಿ ಪ್ರಯೋಗವು ಕಾಣಲ್ಪಡುತ್ತದಷ್ಟೆ! ॥ (d) ಒಂದೇ ಪ್ರಕಾರವುಳ್ಳ ಬಹಳವಾದ ವಚನವು ಅಂದರೆ ಒಂದೇ ರೀತಿಯಾಗಿ ಬಹ್ವಾವರ್ತಿ ಹೇಳೋಣವು, ಅಭ್ಯಾಸವೆಂದು ಹೇಳಲ್ಪಡುತ್ತದೆ. ಎರಡು ಪ್ರಕಾರವಾಗಿ ಪ್ರಯೋಗಿಸಲ್ಪಟ್ಟರೆ ಬೇರೆ ಬೇರೆ ಅರ್ಥವುಳ್ಳದ್ದು (ಅರ್ಥಾಂತರಪರವಾದುದು) ಹೀಗೆಯೇ ಸಿದ್ಧಾಂತವು. ಎಂದು ಗಾರುಡದಲ್ಲಿ ಹೇಳಿಯದೆ.

**ಭಾ॥ (a)** ಅಹಂಶಬ್ದಸ್ಯಾಹೇಯತ್ವಾಂಗೀಕಾರೇ ನರಾಹೇಯತ್ವಂ ಸುರಾಹೇಯತ್ವಂ ಚೋಚ್ಯತ ಇತಿ ನ ವೈಯ್ಯರ್ಥ್ಯಂ । ಅಃ ಇತಿ ಬ್ರಹ್ಮ ತತ್ರಾಗತಮಹಮಿತಿ ನ ವಾ ಅಹಮಿಮಂ ವಿಜಾನಾತಿ ತಸ್ಯೋಪನಿಷದಹಮಿತ್ಯಾದೌ ವಿಷ್ಣೋರೇವಾಹೇಯತ್ವೇನಾಹಂನಾಮಕತ್ವಪ್ರಸಿದ್ಧೇಃ । **(b)** ಅಹಂ

ಶಬ್ದಸ್ಯಾಸ್ಮಚ್ಛಬ್ದಾರ್ಥಕತ್ವೇಽಹಮಿಮಂ ನ ಜಾನಾತೀತಿ ನ ಯುಜ್ಯತೇ । ತಸ್ಯ ಭೂರಿತಿ ಶಿರೋ ಭುವ ಇತಿ ಬಾಹೂ ಇತ್ಯಾದಿನಾಕ್ಷಿಸಂಸ್ಥೋ ಭಗವಾನೇವ ಹ್ಯಹಂಶಬ್ದೋದಿತಃ ॥ (೮) ನ ಹಿ ಜೀವಸ್ಯಾಕ್ಷಿಣಿ ಪೃಥಕ್ಶಿರೋ ಬಾಹ್ವಾದಿಕಂ ವಿದ್ಯತೇ । ಹೃದಿ ಸ್ಥಿತಮೇವ ಹಿ ತಸ್ಯ ಸ್ವರೂಪಂ ॥ ಜಾಗರಿತೇಽಪ್ಯಕ್ಷ್ಯಾದಿಷು ವಿಶೇಷಸನ್ನಿಹಿತಂ ಭವತಿ ದೀಪಪ್ರಕಾಶವತ್ ॥

ಅ ॥ (a) ('ತದ್ಯೋಽಹಂ' ಎಂಬಲ್ಲಿ 'ಅಹಂ' ಶಬ್ದಕ್ಕೆ ಅಹೇಯತ್ವವೆಂಬ ಅರ್ಥವನ್ನಂಗೀಕರಿಸಿದರೆ 'ಯೋಽಸೌ ಸೋಽಹಂ' ಎಂಬಲ್ಲಿರತಕ್ಕ ಎರಡನೇ ಅಹಂ ಶಬ್ದಕ್ಕೆ ವೈಯರ್ಥ್ಯವು ಬರುತ್ತದೆ ಎಂದು ಪರನು ಆಕ್ಷೇಪಿಸಿದರೆ ಸಮಾಧಾನವನ್ನು ಹೇಳುತ್ತಾರೆ.) 'ಅಹಂ' ಎಂಬ ಶಬ್ದಕ್ಕೆ ಅಹೇಯತ್ವವೆಂಬೀ ಅರ್ಥವನ್ನಂಗೀಕರಿಸಿದರೆ (ಒಂದನೇ ಅಹಂಶಬ್ದಕ್ಕೆ) ಮನುಷ್ಯರಿಂದ ಪರಿತ್ಯಾಗಮಾಡಲಿಕ್ಕೆ ಅಯೋಗ್ಯತ್ವವೂ (ಎರಡನೇ ಅಹಂಶಬ್ದಕ್ಕೆ) ದೇವತೆಗಳಿಂದ ಅಹೇಯತ್ವವೂ ಹೇಳಲ್ಪಡುತ್ತದೆ. ಆದುದರಿಂದ ನಿರರ್ಥಕತ್ವವು ಇಲ್ಲ. ('ಅಹಂ' (ನಾನು) ಎಂಬ ಶಬ್ದವು 'ಅಸ್ಮತ್' ಶಬ್ದಾರ್ಥಕವೇ ಹೊರತು ಪರಮಾತ್ಮಪರವಲ್ಲ. ಅದಕ್ಕೆ ಅಹೇಯನು ಎಂಬ ಅರ್ಥವು ಎಲ್ಲಿಯೂ ದೃಷ್ಟವಲ್ಲ ಎಂದು ಪರನು ಆಕ್ಷೇಪಿಸಿದರೆ ಈ ಅರ್ಥವುಳ್ಳ ಪ್ರಮಾಣಗಳನ್ನು ಉದಾಹರಿಸುತ್ತಾರೆ.) (ಐತ. ಆರ. ೨. ಅಧ್ಯಾ ೩. ಖಂಡ ೮॥) ಅಃ ಇತಿ=ಅಕಾರದಿಂದ, ಬ್ರಹ್ಮ=ಬ್ರಹ್ಮನು (ಹೇಳಲ್ಪಡುತ್ತಾನೆ). ತತ್ರ=ಆ ಬ್ರಹ್ಮನಲ್ಲಿ, ಅಹಮಿತಿ=ಅಹಂ ಎಂಬುವುದೂ ಕೂಡ, ಆಗತಂ=ನಾಮವಾಚಕವಾಗಿ ತಿಳಿಯಲ್ಪಟ್ಟಿತು. ॥ ಅಹಂ=ಅಹಂಶಬ್ದವಾಚ್ಯನಾದ, ಇಮಂ=ಈ ಪರಮಾತ್ಮನನ್ನು, ವಿಜಾನಾತಿ=ತಿಳಿಯುತ್ತಾನೆ, ವೈ=ನಿಶ್ಚಯವಾಗಿ, ನ=ಅಲ್ಲ. ॥(ಬೃಹ. ಅಧ್ಯಾ೭ ಬ್ರಾಹ್ಮ. ೫॥) ಅಹಂ=ಎಂಬುವುದು, ತಸ್ಯ=ಆ ಪರಬ್ರಹ್ಮನ ಉಪನಿಷತ್=ರಹಸ್ಯವಷ್ಟೇ. ಇವೇ ಮೊದಲಾದ ವಾಕ್ಯಗಳಲ್ಲಿ ಶ್ರೀ ಪರಮಾತ್ಮನಿಗೇನೇ ಅಹೇಯತ್ವವಿದ್ದುದರಿಂದ 'ಅಹಂ' ಎಂಬೀ ಹೆಸರಿಗೆ ಆತನಲ್ಲಿಯೇ ಪ್ರಸಿದ್ಧಿಯಿರುವುದರಿಂದ ('ಅಹಂ' ಶಬ್ದವು ಭಗವತ್ಪರವೇ ಆಗಬೇಕು). (b) 'ಅಹಂ' ಶಬ್ದಕ್ಕೆ ಅಸ್ಮತ್=ಶಬ್ದಾರ್ಥಭೂತವಾದ ಜೀವಪರತ್ವವನ್ನಂಗೀಕರಿಸಿದರೆ 'ನಾನು ಈ ಪರಮಾತ್ಮನನ್ನು ತಿಳಿಯುತ್ತಾನೆ, ನ=ಅಲ್ಲ' ಎಂಬುವುದು ಸಂಗತವಾಗುವುದಿಲ್ಲ.

ತಾ ॥ ಏಕೆಂದರೆ- 'ಜಾನಾತಿ' (ಅವನು ತಿಳಿಯುತ್ತಾನೆ) ಎಂಬುವುದು ಪ್ರಥಮ ಪುರುಷವಾಗಿಯದೆ. 'ಅಹಂ' ಎಂಬುವುದಕ್ಕೆ 'ನಾನು' ಎಂದು ಅರ್ಥಮಾಡಿದರೆ 'ಜಾನಾಮಿ' (ತಿಳಿಯುತ್ತೇನೆ) ಎಂದು ಪ್ರಯೋಗವಿರಬೇಕಾಗುವುದು. 'ಜಾನಾತಿ' (ತಿಳಿಯುತ್ತಾನೆ) ಎಂಬುವುದು ಯುಕ್ತವಾಗುವುದಿಲ್ಲ, 'ಜಾನಾತಿ' ಎಂಬುವುದಕ್ಕೆ 'ಜಾನಾಮಿ' ಎಂದು ಅರ್ಥಮಾಡಲಿಕ್ಕೆ ಆಗುವುದಿಲ್ಲವಾದಕಾರಣ 'ಅಹಂ' ಶಬ್ದಕ್ಕೆ ಅಹೇಯನಾದ ಪರಮಾತ್ಮನನ್ನು ಎಂದೇ ಅರ್ಥಮಾಡಬೇಕು. (ಬೃಹ. ಅಧ್ಯಾ. ೭. ಬ್ರಾಹ್ಮಣ. ೫.) ॥ 'ತಸ್ಯೋಪನಿಷದಹಂ' ಎಂದು ಉದಾಹರಿಸಿದ (೩)ನೇ ಪ್ರಮಾಣದಲ್ಲಿ 'ತಸ್ಯ' ಎಂಬುವುದಕ್ಕೆ ಜೀವಪರವಾಗಿ ಅರ್ಥಮಾಡಿದರೆ ಅಹಂ' ಶಬ್ದವು ಜೀವನ ಹೆಸರೆಂದೇ ಆಗುವುದು. ಅಹೇಯನಾದ ಪರಮಾತ್ಮನೆಂದು 'ಅಹಂ' ಶಬ್ದಕ್ಕೆ ಆವಾಕ್ಯದಲ್ಲಿ ಅರ್ಥಮಾಡುವುದು ಅಗತ್ಯವಿರುವುದಿಲ್ಲ. ಅಂತೂ 'ಅಹಂ' ಶಬ್ದಕ್ಕೆ ನಾನು ಎಂದು ಅರ್ಥವಾಗದಿದ್ದರೂ ಅದು ಜೀವನಿಗೇನೇ ಹೆಸರು ಆಗುವುದರಲ್ಲಿ ಯಾವ ದೋಷವೂ ಇರುವುದಿಲ್ಲ. ಎಂದು ಪರನು ಪುನಃ ಆಕ್ಷೇಪಿಸಲು ಅದನ್ನು ದೂಷಿಸುತ್ತಾರೆ. 'ತಸ್ಯ ಭೂರಿತಿ' ತಸ್ಯ=ಆ ದಕ್ಷಿಣವಾದ ಕಣ್ಣಿನಲ್ಲಿರತಕ್ಕವನಿಗೆ, 'ಭೂ' ರಿತಿ=ಭೂಃ ಎಂಬುವುದು, ಶಿರಃ=ಶಿರ

ಸ್ಥಾನೀಯವು. ಭುವ ಇತಿ=ಭುವಃ ಎಂಬುವುದು, ಬಾಹೂ=ಭುಜಗಳು. ಇವೇಮೊದಲಾದ ವಾಕ್ಯದಿಂದ ಕಣ್ಣಿನಲ್ಲಿರತಕ್ಕ ಶ್ರೀಪರಮಾತ್ಮನೇ 'ಅಹಂ' ಶಬ್ದದಿಂದ ಹೇಳಲ್ಪಟ್ಟಿದ್ದಾನೆ. ಮೇಲಿನ ಆಕ್ಷೇಪವು ಶ್ರುತಿಯ ಪೂರ್ವಾಪರಗಳನ್ನು ಆಲೋಚಿಸದೆ ಇರುವುದರಿಂದ ಹೇಳಲ್ಪಟ್ಟಿತು ಎಂದು ವ್ಯಕ್ತಗೊಳಿಸುತ್ತಾರೆ. ಆ ಶ್ರುತಿಯು ಹೀಗೆ ಇರುವುದು 'ಯೋಽಯಂ ದಕ್ಷಿಣೇಽಕ್ಷನ್ ಪುರುಷಃ ತಸ್ಯ ಭೂರಿತಿ ಶಿರಃ ಏಕಃ ಶಿರಃ ಏಕಮೇತದಕ್ಷರಂ ಭುವ ಇತಿಬಾಹೂ ದ್ವೌ ಬಾಹೂ ದ್ವೇ ಏತೇ ಅಕ್ಷರೇ ಸುವರಿತಿ ಪ್ರತಿಷ್ಠಾ ದ್ವೇ ಪ್ರತಿಷ್ಠೇ ದ್ವೇ ಏತೇ ಅಕ್ಷರೇ ತಸ್ಯೋಪನಿಷದಹ ಮಿತಿ ಹಂತಿ ಪಾಪ್ಮಾನಂ ಜಹಾತಿ ಚ ಯ ಏವಂ ವೇದ' ॥ ( ೬ ॥) ಬಲದ ಕಣ್ಣಿನಲ್ಲಿ ಯಾವ ಈ ಪುರುಷನು ಇದ್ದಾನೋ, ಆತನಿಗೆ 'ಭೂಃ' ಎಂಬುವುದು ಶಿರಸ್ಥಾನೀಯವು. ಶಿರಸ್ಸು ಒಂದು. ಈ ಅಕ್ಷರವೂ ಒಂದು. 'ಭುವಃ' ಎಂಬುವುದು ಭುಜಸ್ಥಾನೀಯಗಳು. ಭುಜಗಳು ಎರಡು. ಅಕ್ಷರಗಳು ಎರಡು. 'ಸುವಃ' ಎಂಬುವುದು ಪಾದಗಳು. ಪಾದಗಳು ಎರಡು. ಅಕ್ಷರಗಳೂ ಎರಡು. ಅಂಥವನ ರಹಸ್ಯವಾದ ಹೆಸರು 'ಅಹಂ' ಎಂಬುವುದು. ಈ ಪ್ರಕಾರವಾಗಿ ಯಾವಾತನು ತಿಳಿಯುತ್ತಾನೋ, ಅಂಥವನಿಗೆ ಪಾಪಗಳು ನಾಶವಾಗುವುವು. ಮುಂದೆ ಪಾಪಲೇಪ ವಿಲ್ಲದವನಾಗುವನು. ॥ ಜೀವನಿಗೆ 'ಭೂಃ' ಎಂಬುವುದು ತಲೆಯಲ್ಲ. 'ಭುವಃ' ಎಂಬುವುದು ಭುಜಗಳಲ್ಲ. 'ಸುವಃ' ಎಂಬುವುದು ಪಾದಗಳಲ್ಲ. ಮತ್ತು ಅವನನ್ನು ತಿಳಿಯುವುದರಿಂದ ಪಾಪನಾಶವೂ ಆಗುವುದಿಲ್ಲವೆಂದು ಪ್ರಸಿದ್ಧವು. ಆದುದರಿಂದ ಈ ಶ್ರುತಿಯಲ್ಲಿ ಹೇಳಲ್ಪಟ್ಟ 'ಅಹಂ' ಶಬ್ದವಾಚ್ಯನು ಪರಮಾತ್ಮನೇ. ಬಲದ ಕಣ್ಣಿನಲ್ಲಿ ಇರತಕ್ಕ ಪುರುಷನೆಂದು ಶ್ರುತಿಯಲ್ಲಿ ಹೇಳಲ್ಪಟ್ಟವನು ಜೀವನೇ ಆಗಬೇಕು. ಪರಮಾತ್ಮನು ಸರ್ವವ್ಯಾಪ್ತನಾದುದರಿಂದ ಬಲದ ಕಣ್ಣಿನಲ್ಲಿರತಕ್ಕ ಪುರುಷನೆಂದು ಹೇಳಿಸಿಕೊಳ್ಳಲಾರನು. ಎಂದು ಆಕ್ಷೇಪಿಸಿದರೆ ಉತ್ತರವನ್ನು ಹೇಳುತ್ತಾರೆ. (1) ಜೀವನ ಕಣ್ಣಿನಲ್ಲಿ ಪ್ರತ್ಯೇಕ ಶಿರಸ್ಸು, ಬಾಹು ಮೊದಲಾದುವು ಇರುವುದಿಲ್ಲ. (ಎಲ್ಲಾ ಅವಯುವಗಳಿಂದ ಕೂಡಿದ ಜೀವನು ಒಂದೇ ಅವಯುವವಾದ ಬಲದ ಕಣ್ಣಿನಲ್ಲಿ ಇರುತ್ತಾನೆಂದು ಹೇಳುವುದು ಪ್ರಮಾಣವಿರುದ್ಧವು. ಅಂಶಿಯು ಒಂದಾದ ತನ್ನಅಂಶದಲ್ಲಿ ಅಡಗಿದೆ ಎಂಬಂತೆ ಅಸಂಗತವಾಗುವುದು.) (ಏಕೆಂದರೆ— ಪ್ರತ್ಯೇಕವಿದೆ ಎಂಬ ವಿಷಯ ದಲ್ಲಿ ಪ್ರಮಾಣವಿಲ್ಲದಿರುವುದರಿಂದ). ॥ (ಪ್ರಮಾಣವಿರುದ್ಧವೂ ಆಗಿಯದೆ). (ಹಾಗಾದರೆ ಜೀವನು ಹೃದಯದಲ್ಲಿದ್ದಾನೆ ಎಂಬುವುದು ಅಸಂಗತವಾಗುವುದು. ಯಾವುದಾದರೂ ಒಂದು ಅವಯುವದಲ್ಲಿ ಸರ್ವಾವಯುವಗಳಿಂದೊಡಗೂಡಿದ ಜೀವನು ಇದ್ದಾನೆಂದು ಒಪ್ಪುವುದಾದರೆ ಕಣ್ಣಿನಲ್ಲಿ ಏಕೆ ಇದ್ದಾನೆಂದು ಒಪ್ಪಬಾರದು? ಎಂದು ಆಕ್ಷೇಪಿಸಿದರೆ ಉತ್ತರವನ್ನು ಹೇಳುವರು. ತಸ್ಯ=ಜೀವನ, ಸ್ವರೂಪಂ=ಶಿರಸ್ಸು ಬಾಹು ಮೊದಲಾದವುಗಳಿಂದ ಯುಕ್ತವಾದ ವಿಶಿಷ್ಟ ರೂಪವು, ಹೃದಿ ಏವ=ಹೃದಯದಲ್ಲಿಯೇ, ಸ್ಥಿತಂ=ಇರುತ್ತದೆ. ಹಿ='ಹೃದಿಹ್ಯೇಷ ಆತ್ಮಾ' ಇತ್ಯಾದಿ ಶ್ರುತಿಪ್ರಸಿದ್ಧವು. ಸರ್ವಾವಯುವಗಳಿಂದ ಕೂಡಿದ ಜೀವನು ಹೃದಯದಲ್ಲಿರುತ್ತಾನೆ ಎಂಬುವುದಕ್ಕೆ ಶ್ರುತಿಪ್ರಮಾಣವಿರುತ್ತದೆ. ಕಣ್ಣಿನಲ್ಲಿ ಇದ್ದಾನೆ ಎಂಬುವುದಕ್ಕೆ ಯಾವ ಪ್ರಮಾಣವೂ ಇಲ್ಲದಿರುವುದರಿಂದ ದಕ್ಷಿಣಾಕ್ಷಿಯಲ್ಲಿ ಇರುವ ಪುರುಷನು ಪರಮಾತ್ಮನೆಂದೇ ನಿಶ್ಚಯ ವಾಗುವುದು. ಶ್ರೀ ಪರಮಾತ್ಮನು ಸರ್ವವ್ಯಾಪಿಯಾದುದರಿಂದಲೇ ಬಲದ ಕಣ್ಣಿನಲ್ಲಿಯೂ ನಿಯಾಮಕನಾಗಿ ಒಂದು ರೂಪದಿಂದ ಇರುತ್ತಾನೆ. ॥ ಜೀವನ ಸ್ವರೂಪವು ಹೃದಯದಲ್ಲಿ ಇರ ತಕ್ಕದ್ದೇ ಸರಿ. (ಅಕ್ಷಿಯಲ್ಲಿ ಇರತಕ್ಕದು ಅಲ್ಲ). (ಜೀವನು ಹೃದಯದಲ್ಲಿಯೇ ಇರುತ್ತಾನೆ. ಕಣ್ಣಿನಲ್ಲಿ ಇಲ್ಲವೆಂದು ಹೇಳುವುದಾದರೆ ನೋಡೋಣ ಮೊದಲಾದುವುಗಳು ಹೇಗೆ ಕೂಡುವುದು ಎಂದು ಪರನು ಆಕ್ಷೇಪಿಸಲು ಉತ್ತರವನ್ನು ಕೊಡುತ್ತಾರೆ.) ಜಾಗರಿತೇಽಪಿ=ಜಾಗ್ರತ್ಕಾಲದ

ಲ್ಲಿಯೂ ಕೂಡ, ಹೃದಿ ಏವ=ಹೃದಯದಲ್ಲಿಯೇ, ಸ್ಥಿತಂ=ಶಿರಸ್ಸು ಮೊದಲಾದ ಅಂಗಗಳಿಂದ ಕೂಡಿರುವ, ತಸ್ಯ=ಆ ಜೀವನ, ಸ್ವರೂಪಂ=ಸ್ವರೂಪವು, ಅಕ್ಷ್ಯಾದಿಷು=ಕಣ್ಣು ಮೊದಲಾದ ಇಂದ್ರಿಯಗಳಲ್ಲಿ (ಆಯಾಯ ವಸ್ತುಗಳ ಪರಿಜ್ಞಾನಕ್ಕಾಗಿ ಪ್ರಕಾಶದಿಂದ ಅಥವಾ ಅಂಶದಿಂದ) ವಿಶೇಷಸನ್ನಿಹಿತಂ=ವಿಶೇಷಾಕಾರವಾಗಿ ಸನ್ನಿಹಿತವಾದುದು, ಭವತಿ=ಆಗುತ್ತದೆ. (ಶಿರಸ್ಸು ಮೊದಲಾದ ಅಂಗದಿಂದೊಡಗೂಡಿ ಅಲ್ಲ). ದೀಪಪ್ರಕಾಶವತ್=ದೀಪದ ಪ್ರಕಾಶದಂತೆ. ದೀಪವನ್ನು ಮನೆಯ ಒಂದು ಭಾಗದಲ್ಲಿ ಇಟ್ಟಿದ್ದರೂ ಮನೆಯಲ್ಲಾ ಹೇಗೆ ಬೆಳಕು ಆಗುವುದೋ ಅದರಂತೆ ಜೀವನು ಹೃದಯದಲ್ಲಿಯೇ ಇದ್ದಾಗ್ಯೂ ಅವನ ಸಾಮರ್ಥ್ಯವು ಕಣ್ಣು, ಕಿವಿ ಮೊದಲಾದ ಎಲ್ಲಾ ಅವಯವಗಳಲ್ಲಿ ಹಬ್ಬಿ ಇರುವುದು. ಮೇಲೆ ಹೇಳಿದ ವಿಷಯಗಳನ್ನು ನಿರ್ಣಯಿಸುವ ಸೂತ್ರಗಳನ್ನು ಉದಾಹರಿಸುತ್ತಾರೆ.

ಭಾ॥ (a) ಅವಸ್ಥಿತಿವೈಶೇಷ್ಯಾದಿತಿ ಚೇನ್ನಾಭ್ಯುಪಗಮಾದ್ಧೃದಿ ಹಿ । ಗುಣಾದ್ವಾ ಲೋಕವದಿತಿ ಚ ಸೂತ್ರಾತ್ ॥ (ಬ್ರ. ಸೂ. ಅ. ೨. ಪಾದ. ೩. ಅಧಿ. ೧೨.) (b) ಆದಿತ್ಯೇ ಹಿರಣ್ಮಯಃ ಪುರುಷಸ್ತಸ್ಯ ಯಥಾ ಕಪ್ಯಾಸಂ ಪುಂಡರೀಕಮೇವಮಕ್ಷಿಣೀ ಇತ್ಯಾದಿ ಸೂರ್ಯೇ ಸ್ಥಿತಸ್ಯ ವಿಷ್ಣೋಃ ರೂಪಮುಕ್ತ್ವಾಽಕ್ಷಿಸ್ಥಿತಸ್ಯಾಪಿ ತಸ್ಯೈತಸ್ಯ ತದೇವ ರೂಪಮಿತಿ ಕಥನಾಚ್ಚ । (ಛಾಂದೋ. ಅ. ೧. ಖಂ. ೬.) (c) ಸ ಏಷ ಏವೈತಸ್ಮಾದರ್ವಾಂಚೋ ಲೋಕಾಸ್ತೇಷಾಂ ಚೇಷ್ಟೆ ಇತ್ಯಾದಿ ಲೋಕಾಧಿಪತ್ಯಕಥನಾಚ್ಚ ॥ ನ ಹಿ ಕಶ್ಚಿದ್ಭಿಕ್ಷುಕಃ ಪಾತಾಲಾದ್ಯಧಿಪತಿರಿತ್ಯತ್ರ ಕಿಂಚಿನ್ಮಾನಂ । ತಸ್ಮಾದ್ಭಗವಾನೇವಾಹೇಯತ್ವಾದಹಂನಾಮಾ ॥ (d) ಚಕ್ಷುರ್ಮಿತ್ರಸ್ಯ ವರುಣಸ್ಯಾಗ್ನೇಃ । ಜಗತಸ್ತಸ್ಥುಷಶ್ಚಾತ್ಮೇತ್ಯಾದಿ ಜೀವೇಭ್ಯೋ ಭೇದದರ್ಶನಾಚ್ಚ ॥ (e) ಯಚ್ಚಾಪ್ನೋತಿ ಯದಾದತ್ತೇ ಯಚ್ಚಾತ್ತಿ ವಿಷಯಾನಿಹ । ಯಚ್ಚಾಸ್ಯ ಸಂತತೋ ಭಾವಸ್ತಸ್ಮಾದಾತ್ಮೇತಿ ಭಣ್ಯತೇ ॥ ಇತಿ ಭಾರತೇ ॥

ಅ ॥ (a) ಅಣೋಃ ಚಂದನಸ್ಯ=ಅತಿ ಸ್ವಲ್ಪವಾದ ಗಂಧಕ್ಕೆ, ಅವಸ್ಥಿತಿ ವೈಶೇಷ್ಯಾತ್=ಏಕದೇಶದಲ್ಲಿ ಅಂಶಿರೂಪವಾಗಿ ಚೆನ್ನಾಗಿ ಇರುವುದರಿಂದ, ಅವಿರೋಧಃ=ಶರೀರದ ಎಲ್ಲಾ ಭಾಗದಲ್ಲಿಯೂ ಹಬ್ಬಿಕೊಂಡು ಇರುವಿಕೆಯು, (ಯುಕ್ತವಾಗುತ್ತದೆ. ಜೀವನಿಗಾದರೂ ಕೂಡಲಾರದು.) ಇತಿಚೇತ್ ನ=ಹೀಗೆ ಹೇಳಕೂಡದು. ಏಕೆಂದರೆ, ಜ್ಞಸ್ಯ ಹಿ=ಜೀವನಿಗೂಕೂಡ, ಹೃದಿ ಹಿ='ಹೃದಿ ಹ್ಯೇಷ ಆತ್ಮಾ' ಎಂಬೀ ಶ್ರುತಿಯಿಂದ ಹೃದಯದಲ್ಲಿ, (ಏಕದೇಶದಲ್ಲಿ ಅಂಶಿರೂಪವಾಗಿ ಚೆನ್ನಾಗಿ ಇರೋಣವು, ಬೇರೆಕಡೆ ಅಂಶರೂಪವಾಗಿ ಸ್ವಲ್ಪವಾಗಿ ಇರುವಿಕೆಯು ಇದನ್ನೂ ಕೂಡ) ಅಭ್ಯುಪಗಮಾತ್=ಅಂಗೀಕರಿಸಿರುವುದರಿಂದ (ಅಂತೂ ಅಣುವಾದ ಜೀವನಿಗೂ ಸರ್ವಶರೀರದಲ್ಲಿ ಹಬ್ಬಿಕೊಂಡು ಇರುವಿಕೆಯು ಯುಕ್ತವೇ ಆಗುತ್ತದೆ.) ॥ ಅಣೋಶ್ಚ ಜ್ಞಸ್ಯ=ಅಣುಸ್ವರೂಪನಾದ ಜೀವನಿಗೂ, ಆಲೋಕವತ್=ದೀಪದಂತೆ, ಗುಣಾತ್=ಪ್ರಕಾಶಗುಣದಿಂದ, ಅವಿರೋಧಃ=ಸರ್ವಶರೀರವ್ಯಾಪ್ತಿಯು, ಯುಜ್ಯತೇ=ಯುಕ್ತವಾಗುತ್ತದೆ. ಅಥವಾ ದೀಪಕ್ಕೆ ಪ್ರಕಾಶಗುಣದಿಂದ ವ್ಯಾಪ್ತಿಯೂ, ಜ್ಯೋತೀರೂಪದಿಂದ ಅವ್ಯಾಪ್ತಿಯೂ ಹೇಗೆ ಇದೆಯೋ ಅದೇ ರೀತಿಯಾಗಿ ಜೀವನಿಗೂ ಚಿದ್ಗುಣದಿಂದ ವ್ಯಾಪ್ತಿಯೂ, ಜೀವರೂಪದಿಂದ ಅವ್ಯಾಪ್ತಿಯೂ ಇದೆ. ಈ ಸೂತ್ರಗಳಿಂದಲೂ (ಹೃದಯದಲ್ಲಿರತಕ್ಕ ಜೀವನು ಸರ್ವಶರೀರದಲ್ಲಿಯೂ ಅಂಶ

ದಿಂದ ವ್ಯಾಪಿಸುತ್ತಿದ್ದಾನೆ. ಎಂದು ಸಿದ್ಧವಾಯಿತು.) ಈ ಸೂತ್ರಾರ್ಥಗಳಲ್ಲಿ 'ಅವಿರೋಧಶ್ಚಂದನವತ್' (ಅ. ೨. ಪಾ. ೩. ಅಧಿ ೧೨॥) ಎಂಬುವ ಸೂತ್ರದಿಂದ ಚಂದನ ಅವಿರೋಧ ಎಂಬ ಎರಡು ಪದಗಳನ್ನು ಇಟ್ಟುಕೊಳ್ಳಬೇಕು. ॥ (b) ('ತಸ್ಯೋಪನಿಷದಹಂ' ಎಂಬೀ ಬೃಹದಾರಣ್ಯಕ ವಾಕ್ಯದಲ್ಲಿ 'ತಸ್ಯ' ಎಂಬುವುದಕ್ಕೆ ಕಣ್ಣಿನಲ್ಲಿದ್ದ ಪುರುಷನ ಎಂಬೀ ಅರ್ಥವು ಸ್ವೀಕರಿಸಲ್ಪಟ್ಟಿದೆ. ಆ ಪುರುಷನು ಜೀವನು. ವಿಷ್ಣುವೂ ಕೂಡ ಆಗಲಾರನು. ಮತ್ತೆ ಜೀವರ ಅಕ್ಷಿಯಲ್ಲಿರತಕ್ಕವನು ಸೂರ್ಯನೆಂಬ ಜೀವವಿಶೇಷನೇ ಎಂಬ ಆಶಂಕೆಯನ್ನು ಪರಿಹರಿಸುತ್ತಾರೆ.) ಸೂರ್ಯನಲ್ಲಿ ಸುಖಮಯನಾದ ಪುರುಷನು ಇದ್ದಾನೆ. ಆ ಪುರುಷಶಬ್ದವಾಚ್ಯನಿಗೆ, ಹೇಗೆ ನೀರನ್ನು ಕುಡಿಯುತ್ತಿರುವ ನಾಳವೇ ಆಸನವಾಗಿವುಳ್ಳ ಅಂದರೆ ಬಾಡದೆ ಇರುವ ಶುಭ್ರವಾದ ಕಮಲವೋ; ಇದೇ ರೀತಿಯಾಗಿ ನಯನಗಳು. ಇದೇ ಮೊದಲಾಗಿವುಳ್ಳ ಸೂರ್ಯನಲ್ಲಿರತಕ್ಕ ವಿಷ್ಣುವಿನ ರೂಪವನ್ನು ಹೇಳಿ ನಯನದಲ್ಲಿರತಕ್ಕ ಆ ಶ್ರೀ ಪರಮಾತ್ಮನಿಗೂ ಅದೇ ರೂಪವು. ಇತ್ಯಾದಿ ರೀತಿಯಾಗಿ ಛಾಂದೋಗ್ಯದಲ್ಲಿ ಸಮಾಖ್ಯಾ ಇದ್ದುದರಿಂದಲೂ ಕಣ್ಣಿನಲ್ಲಿರತಕ್ಕ ಶ್ರೀ ಪರಮಾತ್ಮನೇ 'ಅಹಂ' ಶಬ್ದದಿಂದ ಹೇಳಲ್ಪಟ್ಟಿದ್ದಾನೆ.

ತಾ ॥ 'ಯೋಽಯಂ ದಕ್ಷಿಣೇಽಕ್ಷನ್ ಪುರುಷಃ' ಎಂಬೀ ಬೃಹದಾರಣ್ಯಕದಲ್ಲಿ ತೋರುವ ಅಕ್ಷಿಸ್ಥನಾದ ಪುರುಷನು ವಿಷ್ಣುವೇ ಸರಿ. ಸೂರ್ಯನಾಗಲೀ, ಜೀವನಾಗಲೀ ಆಗಲಾರನು. 'ಯ ಏಷೋಽಂತರಕ್ಷಿಣಿ ಪುರುಷೋ ದೃಶ್ಯತೇ' ಎಂದು ಛಾಂದೋಗ್ಯ ಸಮಾಖ್ಯಾ ಇದ್ದುದರಿಂದ ಅಲ್ಲಿಯೂ ಕೂಡ ಸೂರ್ಯಾದಿ ಜೀವರನ್ನೇ ಸ್ವೀಕರಿಸಬೇಕು ಎಂದು ಹೇಳಕೂಡದು. ಅಲ್ಲಿ ಸೂರ್ಯನಲ್ಲಿ ಸುಖಮಯನಾದ ಪೂರ್ಣಗುಣಗಳುಳ್ಳ ಪುರುಷನನ್ನು ಹೇಳಿ ಆತನು ಪುಂಡರೀಕಾಕ್ಷನು ಎಂದು ನಿರೂಪಿಸಿದರು. ಆ ಮೇಲೆ ಅಕ್ಷಿಯಲ್ಲಿರತಕ್ಕ ಪುರುಷನಿಗೂ ಅದೇ ರೂಪವು. ಅದೇ ನಾಮಧೇಯವು. ಎಂದು ಹಿರಣ್ಮಯತ್ವ, ಪುಂಡರೀಕಾಕ್ಷತ್ವಾದಿ ಲಕ್ಷಣಗಳನ್ನು ಹೇಳಿರುವುದರಿಂದ ಆ ಲಕ್ಷಣಗಳು ವಿಷ್ಣುವಿಗೇನೇ ಕೂಡುವ ಪ್ರಯುಕ್ತ ಅಕ್ಷಿಯಲ್ಲಿರತಕ್ಕ ಪರಮಾತ್ಮನೇ 'ಅಹಂ' ಶಬ್ದದಿಂದ ಹೇಳಲ್ಪಡುತ್ತಾನೆ. ॥ (c) ಆ ಈ ಕಣ್ಣಿನಲ್ಲಿರುವ ಪುರುಷನೇ ಈ ಭೂಲೋಕದಿಂದ ಕೆಳಗಿನ ಅತಳಾದಿ ಲೋಕಗಳೋ, ಆ ಲೋಕಗಳಿಗೆ ಅಧಿಪತಿಯಾಗಿದ್ದಾನೆ. ಇತ್ಯಾದಿ ಛಾಂದೋಗ್ಯ ಸಮಾಖ್ಯಾ ವಾಕ್ಯದಿಂದ ಲೋಕಾಧಿಪತ್ಯವನ್ನು ಹೇಳಿರುವುದರಿಂದಲೂ (ಅಕ್ಷಿಸ್ಥನಾದವನು ಶ್ರೀ ಹರಿಯೇ ಸರಿ). 'ಯಾವನೊಬ್ಬ ಭಿಕ್ಷುಕನು ಪಾತಾಲಾದಿ ಲೋಕಗಳಿಗೆ ಅಧಿಪತಿಯಾಗಿದ್ದಾನೆ' ಎಂಬೀ ವಿಷಯದಲ್ಲಿ ಯಾವುದೊಂದು ಪ್ರಮಾಣವೂ ಇರುವುದಿಲ್ಲ. ಆದುದರಿಂದ ಗುಣಪರಿಪೂರ್ಣನಾದ ಶ್ರೀ ಹರಿಯೇ ಅಹೇಯನಾದುದರಿಂದ ಅಹಂ ನಾಮಕನು. ಬ್ರಹ್ಮಾದಿಗಳೆಲ್ಲರೂ ಶ್ರೀ ಪರಮಾತ್ಮನ ಪ್ರಸಾದವನ್ನು ನಿರಂತರದಲ್ಲಿಯೂ ಬೇಡುವವರಾದುದರಿಂದಲೂ ತಮ್ಮ ತಮ್ಮ ಪದವಿಗಳನ್ನು ಶ್ರೀ ಪರಮಾತ್ಮನ ಪ್ರಸಾದದಿಂದಲೇ ಪಡೆದವರಾದುದರಿಂದಲೂ, ಪಾತಾಲಾದಿ ಲೋಕಾಧಿಪತ್ಯವು ಸ್ವಾತಂತ್ರ್ಯೇಣ ಪರಮಾತ್ಮನಿಗೊಬ್ಬನಿಗೇನೇ ಸಲ್ಲುವುದು. ಅವರೆಲ್ಲರೂ ಭಿಕ್ಷುಕರೇ ಆಗಿರುವರು. ಆದುದರಿಂದ ಶ್ರೀಮನ್ನಾರಾಯಣನೇ 'ಅಹಂ' ಶಬ್ದವಾಚ್ಯನೆಂದು ಸಿದ್ಧವಾಯಿತು. ॥ (d) (ಅಲ್ಲದೆ 'ತದ್ಯೋಽಹಂ' ಎಂಬುವಲ್ಲಿ ಜೀವರಿಗೆ ಸೂರ್ಯನಿಂದ ಐಕ್ಯವನ್ನು ಪ್ರತಿಪಾದಿಸಿದರೆ 'ಸೂರ್ಯ ಆತ್ಮಾ' ಎಂಬೀ ರೀತಿಯಾಗಿ ಪ್ರತಿಪಾದಿಸಲ್ಪಟ್ಟ ಮಂತ್ರವಿರೋಧವೂ ಪ್ರಾಪ್ತವಾಗುತ್ತದೆ.) (ಸೂರ್ಯಃ=ಸೂರ್ಯನು,) ಮಿತ್ರಸ್ಯ=ಮಿತ್ರಾಖ್ಯದೇವತೆಗೂ, ವರುಣಸ್ಯ=ವರುಣನಿಗೂ, ಅಗ್ನೇಃ=ಅಗ್ನಿಗೂ, ಜಗತಃ=ಜಂಗಮವಾದ ಜಗತ್ತಿಗೂ, ತಸ್ಥುಷಶ್ಚ=ಸ್ಥಾವರ ಜಗತ್ತಿಗೂ, ಚಕ್ಷುಃ=ಜ್ಞಾನವನ್ನು ಕೊಡುವವನು, (ಆತ್ಮಾ=ನಿಯಾಮಕನು.) ಇತ್ಯಾದಿಗಳಿಂದ (ಸೂರ್ಯನಿಗೆ) ಪ್ರಾಣಿಗಳಿಂದ

ಭೇದವೇ ದೃಷ್ಟವಾದುದರಿಂದ (ಐಕ್ಯವು ಕೂಡಲಾರದು.) ॥ (e) ಯಾವ ಕಾರಣದಿಂದ (ಸಮಸ್ತಗುಣಗಳನ್ನೂ) ಹೊಂದುತ್ತಾನೋ ಯಾವ ಕಾರಣದಿಂದ (ಸಮಸ್ತರನ್ನೂ ಭೃತ್ಯರನ್ನಾಗಿ) ಸ್ವೀಕರಿಸುತ್ತಾನೋ ಯಾವ ಕಾರಣದಿಂದ ಈ ಲೋಕದಲ್ಲಿರತಕ್ಕ ಎಲ್ಲಾ ವಿಷಯಗಳನ್ನೂ ಭಕ್ಷಿಸುತ್ತಾನೋ ಯಾವ ಕಾರಣದಿಂದ ಈ ಹರಿಯ ಜ್ಞಾನಾದಿರೂಪಧರ್ಮವು ಸ್ಥಿತಿಯಾಗಲೀ (ಎಲ್ಲಾ ಕಾಲದೇಶಗಳಲ್ಲಿಯೂ) ಚೆನ್ನಾಗಿ ವಿಸ್ತೃತವಾಗಿಯದೋ ಆದುದರಿಂದ 'ಆತ್ಮಾ' ಎಂದು ಹೇಳಲ್ಪಡುತ್ತಾನೆ. ಎಂದು ಭಾರತದಲ್ಲಿ ಹೇಳಿಯದೆ. ॥

ಭಾ॥ (a) ದೇವತಾ ಅಪ್ಯೇತಿ ಪ್ರಾಪ್ನೋತೀತ್ಯೇವ ಚಾರ್ಥಃ । ಲಯಶ್ಚೇದ್ದೇವತಾಸ್ವಪ್ಯೇತೀತಿ ಸ್ಯಾತ್ ॥ ನ ಚ ವಿನಾಶಃ ಪುರುಷಾರ್ಥಃ । (b) ಮಯಟ್ಪ್ರತ್ಯಯಸ್ಯ ಭಗವತ್ಪ್ರಾಧಾನ್ಯಾರ್ಥತ್ವಾನಂಗೀಕಾರೇ ಸಂಭೂಯ ದೇವತಾ ಅಪ್ಯೇತೀತಿ ಲ್ಯಮ್ನ ಯುಜ್ಯತೇ ॥ (c) ಉಪಾಸನಾಯಾಸ್ತು ಸಂಪನ್ನಸ್ಯ ಪರಸ್ತಾದಿತ್ಯುಕ್ತತ್ವಾತ್ಪೂರ್ವಮೇವ ಸಿದ್ಧಿಃ । (d) ಸರ್ವಸ್ಮಾದ್ಭಿನ್ನಮೀಶೇಶಂ ಜೀವಾಭೇದೇನ ಯಃ ಸ್ಮರೇತ್ ॥ ಸ ಯಾತ್ಯಂಧಂ ತಮೋ ಘೋರಂ ನಿತ್ಯಾತಿಶಯದುಃಖದಂ । (e) ಸರ್ವೋತ್ತಮಂ ತು ಯೋ ವಿಷ್ಣುಂ ಭಿನ್ನಂ ಜಾನಾತಿ ಸರ್ವತಃ ॥ ನಿತ್ಯಾನಂದಮಸೌ ಯಾತಿ ವಾಸುದೇವಪ್ರಸಾದತಃ । ಇತಿ ಚೈತರೇಯಸಂಹಿತಾಯಾಂ ॥ (f) ಅತಃ ಸರ್ವವ್ಯತಿರಿಕ್ತಃ ಸರ್ವೋತ್ತಮಃ ಸರ್ವಗುಣಪರಿಪೂರ್ಣೋ ನಾರಾಯಣ ಇತಿ ಸಿದ್ಧಂ । ಸರ್ವಪ್ರಮಾಣಸಿದ್ಧತ್ವಂ ವಕ್ತುಮಾಧ್ಯಾಯಮೂಲತಃ ॥ ಅಧ್ಯಾಯಾಂತೇ ದ್ವಿರುಕ್ತಿಃ ಸ್ಯಾತ್ಪೂರ್ವೋಕ್ತಸ್ಯಾವಧಾರಣೇ । ಇತಿ ಶಬ್ದನಿರ್ಣಯೇ ॥ ೪ ॥

## ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತೇ ಶ್ರೀಮನ್ಮಹೈತರೇಯಭಾಷ್ಯೇ ದ್ವಿತೀಯಪ್ರಪಾಟ್ಟಿಕೇ

## ॥ ದ್ವಿತೀಯೋಽಧ್ಯಾಯಃ ॥ ೨ ॥ ೨ ॥

ಅ ॥ (a) (ಮತ್ತೂ 'ತದ್ಯೋಽಹಂ' ಎಂಬುವುದಕ್ಕೆ ಐಕ್ಯಪರತ್ವವನ್ನಂಗೀಕರಿಸಿದರೆ ಈ ಮಂತ್ರವಿರೋಧವೂ ಪೂರ್ವವಾಕ್ಯವಿರೋಧವೂ ಮಾತ್ರ ಬರುವುದಲ್ಲ. 'ದೇವತಾ ಅಪ್ಯೇತಿ' ಎಂಬೀ ಫಲವಾಕ್ಯವಿರೋಧವೂ ಬರುತ್ತದೆ.) ದೇವತಾಃ=ದೇವತೆಗಳನ್ನು, ಅಪ್ಯೇತಿ= ಹೊಂದುತ್ತಾನೆ ಎಂದೇ ಅರ್ಥವು. ('ಅಪ್ಯೇತಿ' ಎಂಬುವುದಕ್ಕೆ) (ಪರರು ಹೇಳುವಂತೆ) ನಾಶವೆಂದು ಅರ್ಥವಾಗಿದ್ದರೆ ದೇವತೆಗಳಲ್ಲಿ ನಾಶಹೊಂದುತ್ತಾನೆ. ಏವಂಚ 'ದೇವತಾಸು ಅಪ್ಯೇತಿ' ಎಂದೇ ಪ್ರಯೋಗವಿರಬೇಕಾಗುವುದು. ॥ ಅಲ್ಲದೆ ವಿನಾಶವು ಪುರುಷರಿಂದ ಅಪೇಕ್ಷಣೀಯವಾದುದು ಅಲ್ಲವಷ್ಟೇ! (ಆದುದರಿಂದ ದೇವತೆಗಳನ್ನು ಹೊಂದುತ್ತಾನೆಂದೇ ಅರ್ಥವಾಗುವುದು.) ॥ (b) (ಐಕ್ಯಾರ್ಥದಲ್ಲಿ ಮಯಟ್ ಪ್ರತ್ಯಯವು ವಿಹಿತವಾದುದರಿಂದ 'ಬ್ರಹ್ಮಮಯಃ' ಬ್ರಹ್ಮನೇ ಆಗಿರುತ್ತಾನೆ ಎಂದು ಪೂರ್ವವಾಕ್ಯದಲ್ಲಿಯೇ ಐಕ್ಯವನ್ನು ಹೇಳಿರುವುದರಿಂದ ಭೇದವೇ ಪ್ರಸ್ತುತ

ವಾದದ್ದು ಎಂಬುವುದು ಹೇಗೆ ಸಂಗತವಾಗುತ್ತದೆ ಎಂದು ಪರನು ಆಕ್ಷೇಪಿಸಿದರೆ.)(1) ಮಯಟ್ ಶಬ್ದಕ್ಕೆ ಭಗವತ್ಪ್ರಾಧಾನ್ಯರೂಪ ಅರ್ಥವನ್ನು ಅಂಗೀಕರಿಸಿದ್ದರೆ ಸಂಭೂಯ=ಚೆನ್ನಾಗಿ ಅಗ್ನಿ, ದೇವತೆಗಳನ್ನು ಹೊಂದುತ್ತಾನೆ ಎಂಬೀ 'ಲ್ಯಪ್' ಪ್ರತ್ಯಯವು ಯುಕ್ತವಾಗುವುದಿಲ್ಲ.

ತಾ || ತಾದಾತ್ಮ್ಯಾರ್ಥ (ಐಕ್ಯರೂಪ ಅರ್ಥ)ವನ್ನು ಅಂಗೀಕರಿಸಿದರೆ, ಬ್ರಹ್ಮೈಕ್ಯವು ಸ್ವಾಭಾವಿಕವಾದುದರಿಂದ 'ಸಂಭೂಯ' ಎಂಬುವುದು 'ದೇವತಾಃ ಅಪ್ಯೇತಿ' ಎಂಬುವುದೂ ಕೂಡುವುದಿಲ್ಲ. ಬ್ರಹ್ಮೈಕ್ಯವನ್ನು ಹೊಂದಿದವನಿಗೆ ದೇವತಾಪ್ರಾಪ್ತಿಯಾಗಲೀ ನಾಶವಾಗಲೀ ಕೂಡುವುದಿಲ್ಲವಷ್ಟೇ! || (c) ಉಪಾಸನೆಗಾದರೂ'ಸಂಪನ್ನಸ್ಯ ಪರಸ್ತಾತ್' ಜ್ಞಾನಪೂರ್ವಕ ವಾಗಿ ಬೃಹತೀಸಹಸ್ರವನ್ನು ಸಂಪಾದನೆಮಾಡಿದಕೂಡಲೇಎಂದು ಹೇಳಿರುವುದರಿಂದ ಪೂರ್ವ ದಲ್ಲಿಯೇ ಸಿದ್ಧಿಯಾಗಿಯದೆ. 'ಬ್ರಹ್ಮಮಯಃ 'ಇತ್ಯಾದಿಮೇಲಿನ ಪದಗಳಲ್ಲಿ ಮಯಟ್ಪ್ರತ್ಯಯವು ಉಪಾಸಕನಾದ ಜೀವನಿಗೂ, ಉಪಾಸ್ಯನಾದ ಬ್ರಹ್ಮನಿಗೂ ಐಕ್ಯವನ್ನು ಪ್ರತಿಪಾದಿಸುವುದೆಂದು ಪರರು ಹೇಳಿದರೆ ಅದು ಯುಕ್ತವಲ್ಲವೆಂದು ತಿಳಿಸುವರು. ಉಪಾಸಕನು ಉಪಾಸನಾನಂತರದಲ್ಲಿ ಬ್ರಹ್ಮಮಯನಾಗುತ್ತಾನೆ. ಅಂದರೆ ಬ್ರಹ್ಮನೇ ಪ್ರಧಾನವಸ್ತುವಾಗಿ ಉಳ್ಳವನೆಂದು ಅರ್ಥಮಾಡ ಬೇಕು. ಹೊರತು ಐಕ್ಯಾರ್ಥವನ್ನು ಮಾಡಬಾರದು. ಏಕೆಂದರೆ- ಐಕ್ಯವೇ ಇರುವುದಾದರೆ ಅದು ಸ್ವಾಭಾವಿಕವಾಗಿರುವುದೇ ಆಗಿರುತ್ತದೆ. ಅಂದರೆ ಹೊಸದಾಗಿ ಲಭಿಸುವ ಒಂದು ಫಲವಲ್ಲ. ಶ್ರುತಿ ಯಲ್ಲಿ 'ಸಂಭೂಯ' ಎಂಬ ಶಬ್ದವನ್ನು ಉಪಯೋಗಿಸಿರುವುದರಿಂದ ಬ್ರಹ್ಮಮಯನು ಆಗು ತ್ತಾನೆ ಎಂದೂ ಹಿಂದೆ ಇಲ್ಲದೆ ಇದ್ದ ಒಂದು ಪುರುಷಾರ್ಥಲಾಭವು ಹೇಳಲ್ಪಟ್ಟಿದೆ. ಭಗವತ್ಪ್ರಾ ಧಾನ್ಯಾರ್ಥದಲ್ಲಿ 'ಸಂಭೂಯ' ಎಂಬ ಶಬ್ದವು ಯುಕ್ತವಾಗುತ್ತದೆ. ಐಕ್ಯಾರ್ಥದಲ್ಲಿ ಯುಕ್ತ ವಾಗುವುದಿಲ್ಲ. ಇದರಂತೆ ದೇವತೆಗಳನ್ನು 'ಅಪ್ಯೇತಿ' ಎಂಬ ಪ್ರಯೋಗವೂ ಐಕ್ಯಾರ್ಥದಲ್ಲಿ ಯುಕ್ತವಾಗುವುದಿಲ್ಲ. || (d) (ಇಷ್ಟರವರೇಗೆ ಐಕ್ಯಾರ್ಥವನ್ನು ದೂಷಿಸಿ ಭೇದಾರ್ಥವನ್ನು ಸಾಧಿಸಿರುವರು. ಐಕ್ಯವನ್ನು ಉಪಾಸನೆಮಾಡುವವರಿಗೆ ಅನರ್ಥ ಭೇದೋಪಾಸನೆ ಮಾಡುವವ ರಿಗೆ ಶ್ರೇಯಸ್ಸು ಉಂಟಾಗುತ್ತದೆಂದು ಪ್ರಮಾಣಾಂತರದಿಂದಲೂ ತೋರಿಸುವರು.) (1) ಸರ್ವ ವಸ್ತುಗಳಿಂದ ಭಿನ್ನನೂ, ನಿಯಾಮಕರಾದ ಬ್ರಹ್ಮಾದಿಗಳಿಗೆ ನಿಯಾಮಕನೂ ಆದ ಶ್ರೀ ಹರಿ ಯನ್ನು ಜೀವರ ಐಕ್ಯದಿಂದ ಯಾವಾತನು ಸ್ಮರಿಸುತ್ತಾನೋ. ಆತನು ಭಯಂಕರವೂ, ನಿರಂತರದಲ್ಲಿ ಬಹಳ ದುಃಖವನ್ನು ಕೊಡತಕ್ಕುದೂ ಆದ, ಅಂಧಂತಮಸ್ಸನ್ನು ಹೊಂದುತ್ತಾನೆ. ಅಂತೂ ಐಕ್ಯವನ್ನು ಉಪಾಸನೆಮಾಡಿದರೆ ತಮಸ್ಸು ಪ್ರಾಪ್ತವಾಗುತ್ತದೆ. ಭೇದದಿಂದ ಸರ್ವೋ ತ್ತಮನಾಗಿದ್ದಾನೆ ಎಂದು ಉಪಾಸನೆಮಾಡಿದರೆ ಮೋಕ್ಷವು ಸಿಗುತ್ತದೆ. || (e) (ಮೋಕ್ಷವನ್ನು ಇಚ್ಛಿಸುವವರು ಬೃಹತೀಸಹಸ್ರ ವಿದ್ಯೆಯಲ್ಲಿ ಪ್ರತಿಪಾದಿಸಲ್ಪಟ್ಟ ಭೇದವನ್ನು ಉಪಾಸನೆ ಮಾಡಬಾರದು. 'ಪ್ರಜ್ಞಾಮಯಃ' ಇತ್ಯಾದಿ ಸನ್ನಿಹಿತವಾದ ಐಕ್ಯವನ್ನೇ ಉಪಾಸನೆ ಮಾಡಬೇಕು. ಈ ವಿಷಯವೇ ತಾತ್ಪರ್ಯ ವಿಷಯೀಭೂತವಾದುದು ಎಂದು ತೋರಿಸಲಿಕ್ಕೆ 'ಉಪೇಕ್ಷೇತ' ಎಂಬುವುದನ್ನು ಎರಡಾವರ್ತಿ ಉಪಯೋಗಿಸಿರುವರು. ಎಂಬೀ ಅಪವ್ಯಾಖ್ಯಾನ ವನ್ನು ಪ್ರಮಾಣದಿಂದಲೇ ನಿರಾಕರಿಸುವರು.) (1) ಯಾವಾತನು ಬ್ರಹ್ಮಾದಿ ಸಮಸ್ತ ದೇವತೆ ಗಳಿಂದಲೂ ಶ್ರೇಷ್ಠನಾದ ಶ್ರೀ ಪರಮಾತ್ಮನನ್ನು ಸಮಸ್ತರಿಂದಲೂ ಭಿನ್ನನನ್ನಾಗಿ ತಿಳಿಯು ತ್ತಾನೋ; ಆತನು ವಾಸುದೇವನ ಅನುಗ್ರಹದಿಂದ ನಿರಂತರದಲ್ಲಿಯೂ ಆನಂದವೇ ಉಳ್ಳ ಮುಕ್ತಿಯನ್ನು ಹೊಂದುತ್ತಾನೆ. ಎಂದು ಐತರೇಯ ಸಂಹಿತೆಯಲ್ಲಿ ಹೇಳಲ್ಪಟ್ಟಿದೆ. || (f) ಆದುದರಿಂದ ನಾರಾಯಣನು ಸಮಸ್ತರಿಂದಲೂ ಭಿನ್ನನು, ಬ್ರಹ್ಮಾದಿ ಸಮಸ್ತದೇವತೆಗಳಿಂದ ಅತ್ಯುತ್ತಮನು, ಸಮಸ್ತಗುಣಗಳಿಂದ ಪರಿಪೂರ್ಣನು ಎಂದೂ ಸಿದ್ಧವಾಯಿತು. || ಅಧ್ಯಾಯದ

ಬುಡವನ್ನು ಪ್ರಾರಂಭಿಸಿ ಪೂರ್ವದಲ್ಲಿ ಹೇಳಲ್ಪಟ್ಟ ಸರ್ವಪ್ರಮೇಯಕ್ಕೂ ನಿಶ್ಚಯಾರ್ಥವಾಗಿ (ಹೇಳಿದ ವಿಷಯಗಳು) ಸಮಸ್ತ ಪ್ರಮಾಣಗಳಿಂದಲೂ ಸಿದ್ಧವಾಗಿಯದೆ ಎಂಬುವುದನ್ನು ಹೇಳುವುದಕ್ಕೋಸ್ಕರ ಅಧ್ಯಾಯದ ಅವಸಾನದಲ್ಲಿ ಎರಡಾವರ್ತಿ ಪ್ರಯೋಗವು ಇರುತ್ತದೆ. ಎಂದು ಶಬ್ದನಿರ್ಣಯದಲ್ಲಿ ಹೇಳಲ್ಪಟ್ಟದೆ. ಅಧ್ಯಾಯದಲ್ಲಿ ಹೇಳಿದ ಎಲ್ಲಾ ಪ್ರಮೇಯಗಳು ಬಹು ಪ್ರಮಾಣಗಳಿಂದ ಸಿದ್ದವಾಗಿವೆ ಎಂಬ ಉದ್ದೇಶದಿಂದಲೇ ಎರಡಾವರ್ತಿ ಪ್ರಯೋಗವು ಇರುತ್ತದೆ. ಅಂತೂ ಹೇಳಿದ ಸರ್ವ ವಿಷಯವೂ ಯಥಾರ್ಥವೆಂದು ಸಿದ್ಧವಾಗೋಣ, ಐಕ್ಯವು ಬಾಧಿತವಾಗುವುದರಿಂದ ಅಂತಿಮವಾದದ್ದಕ್ಕೂ ಐಕ್ಯಪರತ್ವವು ಕೂಡಲಾರದು. ಆದುದರಿಂದ ಶ್ರೀ ಹರಿಯು ಸರ್ವೋತ್ತಮನೂ ಸರ್ವರಿಂದ ಭಿನ್ನನೂ ಅನಂತಾನಂತ ಗುಣಪರಿಪೂರ್ಣನೂ ಎಂದು ಸಿದ್ಧವಾಯಿತು. ॥ ಖಂಡ ॥ ೪ ॥

**ಈ ಪ್ರಕಾರವಾಗಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ನಿರ್ಮಿಸಲ್ಪಟ್ಟ ಶ್ರೀಮನ್ಮಹೈತರೇಯೋಪನಿಷದ್ಭಾಷ್ಯದಲ್ಲಿ ಎರಡನೇ ಪ್ರಪಾಠಕದಲ್ಲಿ ಎರಡನೇ ಅಧ್ಯಾಯವು ಮುಗಿಯಿತು ॥ ೨ ॥ ೨ ॥ ಶ್ರೀಃ ॥**

ಸರ್ವೇಂದ್ರಿಯಪ್ರೇರಕೇಣ ಶ್ರೀಪ್ರಾಣಪತಿನೇರಿತಃ ।
ಯದವೋಚ ಮಹಂ ತೇನ ಪ್ರೀಣಾತು ಕರಣಾಕರಃ



## ॥ ದ್ವಿತೀಯಾರಣ್ಯಕೇ ತೃತೀಯೋಽಧ್ಯಾಯಃ ॥

ಹರಿಃ ಓಂ ॥ ಅನಿರುದ್ಧಾದಿ ಪಂಚಾತ್ಮಾ ಬೃಹತ್ಯುಕ್ಥ ಸಮೀಡಿತಃ ।
ಅರ್ಧನಾರೀನರಾಕಾರೋ ಭಾಸತಾಂ ಮೇ ಹರಿರ್ಹೃದಿ ॥

"ಏಷ ಪಂಥಾಃ" ಇತ್ಯಾದಿಗಳಲ್ಲಿ ಪ್ರಸ್ತುತನಾದ ನಾರಾಯಣನು (೧) ನಾರಾಯಣ, ನಾರಾಯಣ (೨) ನಾರಾಯಣ ವಾಸುದೇವ, (೩) ನಾರಾಯಣ ಸಂಕರ್ಷಣ, (೪) ನಾರಾಯಣ ಪ್ರದ್ಯುಮ್ನ, (೫) ನಾರಾಯಣಾನಿರುದ್ಧ ಎಂಬೀ ಪ್ರಭೇದದಿಂದ ಐದು ಪ್ರಕಾರವಾದ ಬೃಹತೀ ಸಹಸ್ರಾದಿ ಸ್ಥಾನಗಳಲ್ಲಿ ಇದ್ದಾನೆ. ಇವೇ ಮೊದಲಾದ ಮಹಿಮೆಯನ್ನು ಹೇಳುತ್ತಾ ಸರ್ವಶಬ್ದ ವಾಚ್ಯತ್ವವನ್ನೇ ಈ ಮೂರನೇ ಅಧ್ಯಾಯದಲ್ಲಿ ವಿಶದೀಕರಿಸುತ್ತಾರೆ.

ಮಂ ॥ ಹರಿಃ ಓಂ ॥ ಯೋ ಹ ವಾ ಆತ್ಮಾನಂ ಪಂಚವಿಧಮುಕ್ಥಂ ವೇದ ಯಸ್ಮಾದಿದಂ ಸರ್ವಮುತ್ತಿಷ್ಠತಿ ಸ ಸಂಪ್ರತಿವಿತ್ಪೃಥಿವೀ ವಾಯು ರಾಕಾಶ ಆಪೋ ಜ್ಯೋತೀಂಷೀತ್ಯೇಷ ವಾ ಆತ್ಮೋಕ್ಥಂ ಪಂಚವಿಧ ಮೇತಸ್ಮಾದ್ಧೀದಂ ಸರ್ವಮುತ್ತಿಷ್ಠತ್ಯೇತಮೇವಾಪ್ಯೇತ್ಯಯನಂ ಹ ವೈ ಸಮಾನಾನಾಂ ಭವತಿ ಯ ಏವಂ ವೇದ ತಸ್ಮಿನ್ನ್ಯೋಽನ್ನಂ ಚಾನ್ನಾದಂ ಚ ವೇದಾಹಾಸ್ಮಿನ್ನನ್ನಾದೋ ಜಾಯತೇ ಭವತ್ಯಸ್ಯಾ ನ್ನಮಾಪಶ್ಚ ಪೃಥಿವೀ ಚಾನ್ನಮೇತನ್ಮಯಾನಿ ಹ್ಯನ್ನಾನಿ ಭವಂತಿ ಜ್ಯೋತಿಶ್ಚ ವಾಯುಶ್ಚಾನ್ನಾದಮೇತಾಭ್ಯಾಂ ಹೀದಂ ಸರ್ವಮನ್ನಮ ತ್ತ್ಯಾವಪನಮಾಕಾಶ ಆಕಾಶೇ ಹೀದಂ ಸರ್ವಂ ಸಮೋಪ್ಯತ ಆವ ಪನಂ ಹ ವೈ ಸಮಾನಾನಾಂ ಭವತಿ ಯ ಏವಂ ವೇದ ತಸ್ಮಿನ್ನ್ಯೋಽ ನ್ನಂ ಚಾನ್ನಾದಂ ಚ ವೇದಾಹಾಸ್ಮಿನ್ನನ್ನಾದೋ ಜಾಯತೇ ಭವತ್ಯ ಸ್ಯಾನ್ನಮೋಷಧಿವನಸ್ಪತಯೋಽನ್ನಂ ಪ್ರಾಣಭೃತೋಽನ್ನಾದಮೋಷಧಿ ವನಸ್ಪತೀನ್ಹಿ ಪ್ರಾಣಭೃತೋಽದಂತಿ ತೇಷಾಂ ಯ ಉಭಯತೋ ದಂತಾಃ ಪುರುಷಸ್ಯಾನುವಿಧಾಂ ವಿಹಿತಾಸ್ತೇಽನ್ನಾದಾ ಅನ್ನಮಿತರೇ ಪಶವಸ್ತಸ್ಮಾತ್ತ ಇತರಾನ್ಪಶೂನಧೀವ ಚರಂತ್ಯಧೀವ ಹ್ಯನ್ನೇಽನ್ನಾ ದೋ ಭವತ್ಯಧೀವ ಹ ಸಮಾನಾನಾಂ ಜಾಯತೇ ಯ ಏವಂ ವೇದ ॥ ೧ ॥

ಅ । ಯಃ=ಯಾವ ಅಧಿಕಾರಿಯು, ಆತ್ಮಾನಂ=ಆತ್ಮಶಬ್ದವಾಚ್ಯನಾದ ಶ್ರೀ ಪರಮಾ ತ್ಮನನ್ನು, ಪಂಚವಿಧಂ=ನಾರಾಯಣಾದಿ ರೂಪದಿಂದ ಐದು ಪ್ರಕಾರವುಳ್ಳವನನ್ನಾಗಿಯೂ, ಯಸ್ಮಾತ್=ಯಾವ ಕಾರಣದಿಂದ; ಯಾವ ಶ್ರೀ ಪರಮಾತ್ಮನಿಂದ, ಇದಂ ಸರ್ವಂ=ಈ ಸಮಸ್ತ ಜಗತ್ತು, ಉತ್ತಿಷ್ಠತಿ=ಹುಟ್ಟುತ್ತದೋ, (ಆದುದರಿಂದ) ಉಕ್ಥಂ=ಉಕ್ಥನಾಮಕನ ನ್ನಾಗಿಯೂ, ವೇದ=ತಿಳಿಯುತ್ತಾನೋ, ಸಃ=ಆತನೇ, ಸಂಪ್ರತಿವಿತ್=ಚೆನ್ನಾಗಿ ತಿಳಿದ ವನು. ಅಥವಾ ಮೂರು ತೃಚಾಶೀತಿ, ಅದರ ಪೂರ್ವ, ಅಪರ ಎಂಬೀ ಐದು ವಿಧವಾದ ಬೃಹತೀಸಹಸ್ರಾಖ್ಯ ಉಕ್ಥದಲ್ಲಿ ನಾರಾಯಣಾದಿ ಐದು ರೂಪದಿಂದ ಇದ್ದ ಪ್ರಯುಕ್ತ ಐದು ರೂಪಗಳುಳ್ಳ ಶ್ರೀ ಹರಿಯನ್ನು ತಿಳಿಯುತ್ತಾನೋ ಅವನೇ ಜ್ಞಾನಿಯು. (ರೀತ್ಯಂತರ ದಿಂದಲೂ ಶ್ರೀ ಹರಿಗೆ ಐದು ಪ್ರಕಾರಗಳನ್ನು ತೋರಿಸುತ್ತಾರೆ.) ಪೃಥಿವೀ=ಪೃಥಿವೀನಾಮಕ ನಾದ; ಪೃಥಿವಿಯಲ್ಲಿರತಕ್ಕ ಸ್ತ್ರೀರೂಪನಾದ ನಾರಾಯಣನು, ವಾಯುಃ=ವಾಯುನಾಮಕ ನಾದ ವಾಯುವಿನಲ್ಲಿರತಕ್ಕ ಸಂಕರ್ಷಣನು, ಆಕಾಶಃ=ಆಕಾಶನಾಮಕನಾದ ವಾಸುದೇವನು, ಆಪಃ=ಅಪ್‌ಶಬ್ದವಾಚ್ಯನೂ ಜಲಗಳಲ್ಲಿರತಕ್ಕವನೂ ಸ್ತ್ರೀರೂಪನೂ ಬಹುರೂಪಗಳುಳ್ಳವನೂ ಆದ ಅನಿರುದ್ಧನು, ಜ್ಯೋತೀಂಷಿ=ಜ್ಯೋತಿರ್ನಾಮಕನೂ ಜ್ಯೋತಿಸ್ಸುಗಳಲ್ಲಿರುವವನೂ ಬಹು ರೂಪಗಳುಳ್ಳವನೂ ಆದ ಪ್ರದ್ಯುಮ್ನನು, ಇತಿ=ಈ ಪ್ರಕಾರವಾಗಿ, ಏಷ ವೈ=ಈ, ಆತ್ಮಾ=ಶ್ರೀ ಹರಿಯೇ, ಪಂಚವಿಧಂ ಉಕ್ಥಂ=ಐದು ಭೂತಗಳಲ್ಲಿ ಇದ್ದುದರಿಂದಲೂ ಜಗತ್ತನ್ನು ಸೃಷ್ಟಿಸು ವುದರಿಂದಲೂ ಐದು ಪ್ರಕಾರವುಳ್ಳ ಉಕ್ಥನೆಂದು ಹೇಳಲ್ಪಡುತ್ತಾನೆ. ಏತಸ್ಮಾದ್ಧಿ=ಐದು ಭೂತಗಳಲ್ಲಿದ್ದ ಶ್ರೀ ಹರಿಯಿಂದಲೇ, ಇದಂ ಸರ್ವಂ=ಈ ಬ್ರಹ್ಮಾಂಡವೇ ಮೊದಲಾದ ಸಮಸ್ತ

ಜಗತ್ತು, ಉತ್ತಿಷ್ಠತಿ=ಹುಟ್ಟುತ್ತದೆ. (ಆದುದರಿಂದ ಉಕ್ಥವೆಂದು ಹೆಸರು.) ಏತಮೇವ= ಐದು ಭೂತಗಳಲ್ಲಿದ್ದ ಶ್ರೀನಾರಾಯಣನನ್ನೇ, (ಈ ಸಮಸ್ತ ಜಗತ್ತು) ಅಪ್ಯೇತಿ=(ಮುಕ್ತಿ ಯಲ್ಲಿಯೂ ಪ್ರಳಯಕಾಲದಲ್ಲಿಯೂ) ಪ್ರವೇಶಿಸುತ್ತದೆ. ಅಯನಂ ಹ ವೈ=(ಶ್ರೀಪರಮಾತ್ಮನೇ) ಸರ್ವರಿಗೂ ಆಶ್ರಯನಾಗುತ್ತಾನೆ. ಯಃ=ಯಾವಾತನು, ಏವಂ=ಪೂರ್ವೋಕ್ತಪ್ರಕಾರ ವಾಗಿ, (ಶ್ರೀ ಹರಿಯನ್ನು) ವೇದ=ತಿಳಿಯುತ್ತಾನೋ ಮತ್ತು ಅಪರೋಕ್ಷವಾಗಿಯೇ ತಿಳಿ ಯುತ್ತಾನೋ, (ಆತನು ಮುಕ್ತನಾಗಿ) ಸಮಾನಾನಾಂ=ಸಮಾನ ಜಾತಿಯವರಿಗೆ, ಅಯ ನಂ=ಆಶ್ರಯನು, ಭವತಿ = ಆಗುತ್ತಾನೆ. ತಸ್ಮಿನ್=ಭೂತಾಂತರ್ಗತವಾದ ನಾರಾಯಣಾದಿ ಐದು ರೂಪಗಳಲ್ಲಿ, ಯಃ=ಯಾವ ಅಧಿಕಾರಿಯು, ಅನ್ನಂ ಚ=ಅನ್ನಶಬ್ದವಾಚ್ಯವೂ ಭೋಗ್ಯ ವಸ್ತುಗಳಲ್ಲಿರತಕ್ಕದೂ ಆದ, ಅನ್ನಾದಂ ಚ=ಭೋಗಿಸತಕ್ಕದೂ ಭೋಕ್ತೃಗಳಲ್ಲಿ ಇರ ತಕ್ಕದೂ ಭೋಗಶಕ್ತಿಯನ್ನು ಕೊಡತಕ್ಕದೂ ಆದ ಶ್ರೀ ಪರಮಾತ್ಮನ ರೂಪವನ್ನು, ವೇದ=ತಿಳಿಯುತ್ತಾನೋ (ಆತನು) ಅಸ್ಮಿನ್=ತನ್ನ ಜಾತಿಯಲ್ಲಿ, ಅನ್ನಾದಃ=ಭೋಗವನ್ನು ಭೋಗಿಸುವವನು, ಆ=ಚೆನ್ನಾಗಿ, ಜಾಯತೇ=ಹುಟ್ಟುತ್ತಾನೆ, ಹ=ಪ್ರಸಿದ್ಧವು. ಅಸ್ಯ=ಈ ಮುಕ್ತಸಮುದಾಯಕ್ಕೆ, ಅನ್ನಂ=ತೃಪ್ತಿಯನ್ನು ಹುಟ್ಟಿಸುವವನು, ಭವತಿ=ಆಗುತ್ತಾನೆ. ಆಪಃ ಚ=ಜಲಗಳಲ್ಲಿರತಕ್ಕ ಬಹುರೂಪಿಯಾದ "ಅಪ್" ನಾಮಕನಾದ ಅನಿರುದ್ಧನು, ಪೃಥಿವೀ ಚ= ಪೃಥಿವಿಯಲ್ಲಿರತಕ್ಕ ಪೃಥಿವೀನಾಮಕನಾದ ನಾರಾಯಣನು, ಅನ್ನಂ=ಭೋಗ್ಯ ವಸ್ತುಗಳಲ್ಲಿದ್ದು ಸರ್ವಲೋಕಗಳನ್ನು ತೃಪ್ತಿಪಡಿಸುತ್ತಾರೆ. ಅನ್ನಾನಿ=ಎಲ್ಲಾ ಅನ್ನಗಳು, ಏತನ್ಮಯಾನಿ=ಅಪ್ ಪೃಥಿವಿಗತ ಭಗವದ್ರೂಪಗಳೇ ಪ್ರಧಾನಗಳಾಗಿ ಉಳ್ಳವುಗಳು, ಭವಂತಿ ಹಿ=ಆಗುತ್ತವಷ್ಟೇ. ಜ್ಯೋತಿಶ್ಚ=ಜ್ಯೋತಿಸ್ಸುಗಳಲ್ಲಿರತಕ್ಕ ಜ್ಯೋತಿರ್ನಾಮಕನಾದ ಪ್ರದ್ಯುಮ್ನನು, ವಾಯುಶ್ಚ= ವಾಯುವಿನಲ್ಲಿರತಕ್ಕ ವಾಯುನಾಮಕನಾದ ಸಂಕರ್ಷಣನೂ ಕೂಡ, ಅನ್ನಾದಂ=ಭೋಕ್ತೃಗ ಳಲ್ಲಿದ್ದು ಭೋಗಶಕ್ತಿಯನ್ನು ಕೊಡುವವರು ಮತ್ತು ತಾವೂ ಭೋಗಿಸುವವರು. ಏತಾಭ್ಯಾಂ= ಜ್ಯೋತಿರ್ವಾಯುಗಳಲ್ಲಿರತಕ್ಕ ಪ್ರದ್ಯುಮ್ನ ಸಂಕರ್ಷಣರಿಂದಲೇ, ಇದಂ ಸರ್ವಂ=ಈ ಎಲ್ಲಾ ಪ್ರಾಣಿಸಮುದಾಯವು, ಅನ್ನಂ=ಭೋಗ್ಯವನ್ನು, ಅತ್ತಿ=ತಿನ್ನುತ್ತದೆ. ಆಕಾಶಃ=ಆಕಾಶನಾ ಮಕನಾದ ಆಕಾಶದಲ್ಲಿರತಕ್ಕ ವಾಸುದೇವನು, ಆವಪನಂ=ಅವಕಾಶವನ್ನು ಕೊಡುವವನು, ಆಕಾಶೇ ಹಿ=ಆಕಾಶಾಂತರ್ಗತನಾದ ಹರಿಯಲ್ಲಿಯೇ, ಇದಂ ಸರ್ವಂ=ಈ ಸಮಸ್ತ ಜಗತ್ತು, ಸಮೋಪ್ಯತೇ=ಚೆನ್ನಾಗಿ ಅವಕಾಶವುಳ್ಳದ್ದಾಗುತ್ತದೆ. (ಆದುರಿಂದ ಆಕಾಶವು ಆವಪನವೆಂದು ಹೇಳಲ್ಪಡುತ್ತದೆ.) ಯಃ=ಯಾವಾತನು, ಏವಂ=ಆಕಾಶನಾಮಕ ವಾಸುದೇವನು ಅವಕಾ ಶವನ್ನು ಕೊಡುತ್ತಾನೆಂದು, ವೇದ=ತಿಳಿಯುತ್ತಾನೋ, (ಆತನು ಮುಕ್ತಿಯಲ್ಲಿ) ಸಮಾ ನಾನಾಂ=ಸಮಾನ ಜಾತಿಯವರಿಗೆ, ಆವಪನಂ=ಅವಕಾಶವನ್ನು ಕೊಡುವವನು, ಭವತಿ= ಆಗುತ್ತಾನೆ. ಹ ವೈ=ಪ್ರಸಿದ್ಧವು. ತಸ್ಮಿನ್=ಆ ಐದು ಭಗವದ್ರೂಪದಲ್ಲಿ, ಯಃ=ಯಾವಾ ತನು, ಅನ್ನಂ ಚ=ಅನ್ನಾಖ್ಯಭಗವದ್ರೂಪವನ್ನು, ಅನ್ನಾದಂ ಚ=ತನ್ನಾಮಕ ಭಗವದ್ರೂಪ ವನ್ನು, ವೇದ=ತಿಳಿಯುತ್ತಾನೋ, (ಆತನು) ಅಸ್ಮಿನ್ ಅನ್ನಾದಃ ಆ ಜಾಯತೇ ಹ, ಅಸ್ಯ ಅನ್ನಂ ಭವತಿ...... (ಪೂರ್ವೋಕ್ತವೇ ಅರ್ಥವು), ಓಷಧಿ ವನಸ್ಪತಯಃ=ಓಷಧಿ ಶಬ್ದವಾಚ್ಯರೂ, ವನ ಸ್ಪತಿನಾಮಕರೂ ಬಹುರೂಪಗಳುಳ್ಳವರೂ ಆದ ನಾರಾಯಣಾನಿರುದ್ಧರು, ಅನ್ನಂ=ಈ ಸ್ಥಾವರ ಗಳಲ್ಲಿ ಅನ್ನರೂಪದಿಂದ ಅಂತರ್ಗತರಾಗಿರುತ್ತಾರೆ. ಪ್ರಾಣಭೃತಃ=ಪ್ರಾಣಭೃತ್ ಶಬ್ದವಾಚ್ಯ ರಾದ ಬಹು ರೂಪಗಳುಳ್ಳ ಸಂಕರ್ಷಣ ಪ್ರದ್ಯುಮ್ನರು, ಅನ್ನಾದಂ=ಜಂಗಮ ಪ್ರಾಣಿಗಳಲ್ಲಿ ಭೋಕ್ತೃಗಳಾಗಿ ಇರುತ್ತಾರೆ. ಹಿ=ಯಾವ ಕಾರಣದಿಂದ, ಓಷಧಿ ವನಸ್ಪತೀನ್=ಅವುಗಳಲ್ಲಿ

ರತಕ್ಕ ಭಗವದ್ರೂಪಗಳಿಂದ ನಿಯಮಿಸಲ್ಪಟ್ಟ ಆ ಸ್ಥಾವರಗಳನ್ನು, ಪ್ರಾಣಭೃತಃ=ಜಂಗಮ ಪ್ರಾಣಿಗಳು, ಅದಂತಿ=ಭಕ್ಷಿಸುತ್ತವೋ, (ಆದುದರಿಂದ ಆ ಭಗವದ್ರೂಪಗಳು ಅನ್ನ ಅನ್ನಾದ ಶಬ್ದವಾಚ್ಯಗಳು), ತೇಷಾಂ=ಆ ಜಂಗಮ ಪ್ರಾಣಿಗಳ ಮಧ್ಯದಲ್ಲಿ, ಯೇ=ಯಾವಗಳು, ಉಭಯತೋದಂತಾಃ=ಮೇಲು ಭಾಗದಲ್ಲಿಯೂ ಕೆಳಗಿನ ಪ್ರದೇಶದಲ್ಲಿಯೂ ಹಲ್ಲು ಉಳ್ಳವುಗಳೋ, ಪುರುಷಸ್ಯ=ಪುರುಷಾಕಾರನೂ ಕ್ಷೀರಸಮುದ್ರದಲ್ಲಿ ಮಲಗಿಕೊಂಡು ಇರುವವನೂ ಆದ ಶ್ರೀ ಪರಮಾತ್ಮನ, ವಿಧಾಂ=ಪ್ರಕಾರವನ್ನು, ಅನು=ಅನುಸರಿಸಿ, ವಿಹಿತಾಃ= ಇರುವ ದೇವ ಗಂಧರ್ವ ಮನುಷ್ಯಾದಿಗಳೋ, ತೇ=ಅವರು ಅನ್ನಾದಾಃ=ಭೋಗಿಸುವವರು, ಇತರೇ=ಪುರುಷರಲ್ಲದೆ ಇರುವ, ಪಶವಃ=ಎತ್ತು ಮೊದಲಾದುವುಗಳು, ಅನ್ನಂ=ಭೋಗ್ಯಗಳು. ತಸ್ಮಾತ್=ಆ ಕಾರಣದಿಂದಲೇ, ತೇ=ಪುರುಷಾಕಾರರಾದ ದೇವಾದಿಗಳು, ಇತರಾನ್ ಪಶೂನ್=ತಮ್ಮಿಂದ ಬೇರೆಗಳಾದ ಪಶುಗಳನ್ನು, ಅಧೀವ=ಮೇಲು ಭಾಗಗಳಲ್ಲಿಯೇ, ಚರಂತಿ= ಸಂಚರಿಸುತ್ತಾರೆ. ಹಿ=ಅದರಿಂದಲೇ, ಅನ್ನೇ=ಭೋಗ್ಯವಿಷಯದಲ್ಲಿ, ಅನ್ನಾದಃ=ಭೋಗಿಸುವವನು, ಅಧೀವ=ಮೇಲು ಭಾಗದಲ್ಲಿ ಕೂತುಕೊಂಡು ಸಂಚರಿಸುತ್ತಾ ಅಧಿಪತಿಯು, ಭವತಿ= ಆಗುತ್ತಾನೆ. ಯಃ ಏವಂ ವೇದ ಸಃ=ಸಮಾನಾನಾಂ·········ಅಧೀವ=ಅಧಿಕನಾಗಿಯೇ ಜಾಯತೇ ಹ ··· ···. ॥ ೧ ॥

ತಾ ॥ (೧) 'ಶ್ರೀ ಪರಮಾತ್ಮನು ಪೂರ್ವೋಕ್ತಪ್ರಕಾರವಾಗಿ ಐದುಪ್ರಕಾರವುಳ್ಳವನೂ ಉಕ್ಥನಾಮಕನೂ ಆಗಿರುತ್ತಾನೆ.' ಇವನ್ನು ಉಪಾಸನೆಮಾಡಲಿಕ್ಕೆ ಯೋಗ್ಯರಾದ ಬ್ರಹ್ಮ ಇಂದ್ರ ಮೊದಲಾದ ದೇವತೆಗಳು ಸಜಾತೀಯರಾದ ತಮ್ಮಿಂದ ಅಧಮರಾದವರಿಗೆ ನಿಯಾಮಕರಾಗುತ್ತಾರೆ. ಉಪಾಸನೆಮಾಡಲಿಕ್ಕೆ ಅಧಿಕಾರಿಗಳಲ್ಲದ ಮನುಷ್ಯಾದಿಗಳು ಕೇವಲಜ್ಞಾನದಿಂದ ತಮಗೆ ಯೋಗ್ಯವಾದ ಆಧಿಕ್ಯವನ್ನು ಹೊಂದುತ್ತಾರೆ. (೨) ಲೋಕದಲ್ಲಿರತಕ್ಕ ಎಲ್ಲಾ ಅನ್ನಗಳು 'ಅಪ್, ಪೃಥಿವಿ'ಗಳಲ್ಲಿರತಕ್ಕ ಶ್ರೀ ಹರಿಯ ಎರಡುರೂಪಗಳ ಅಧೀನಗಳೇ ಆಗಿವೆ. ಅಂತೂ ಈ ಎರಡು ಭಗವದ್ರೂಪಗಳು ಸಮಸ್ತ ಲೋಕಗಳಿಗೂ ತೃಪ್ತಿಯನ್ನು ಹುಟ್ಟಿಸುವ ಪ್ರಯುಕ್ತ 'ಅನ್ನ'ನಾಮಕಗಳು ಆಗುತ್ತವೆ. (೩) ದೇಹದಲ್ಲಿರತಕ್ಕ ಗಾಳಿಯಿಂದ ಅಭಿವೃದ್ಧವಾದ ಹೊಟ್ಟೆಯಲ್ಲಿರತಕ್ಕ ಬೆಂಕಿಯು ಭುಕ್ತವಾದ ಅನ್ನವನ್ನು ಜೀರ್ಣೀಕರಿಸುತ್ತದೆ. ಶ್ರೀ ಹರಿಯ ಪ್ರೇರಣೆಯಿಲ್ಲದೆ ಕೇವಲ ಜ್ಯೋತಿಸ್ಸು, ವಾಯು ಇವುಗಳಿಂದ ಆ ಕಾರ್ಯವು ಉಂಟಾಗಲಾರದು. ಆದುದರಿಂದ ಆ ಜ್ಯೋತಿಸ್ಸು ವಾಯುಗಳಲ್ಲಿರತಕ್ಕ ಭಗವದ್ರೂಪಗಳೇ ಅದಕ್ಕೆ ಕಾರಣಗಳೂ ಭೋಗಿಸುವವುಗಳೂ ಆದುದರಿಂದ 'ಅನ್ನಾದ' ಗಳೆನ್ನಿಸಿಕೊಳ್ಳುತ್ತವೆ. (೪) ಪರಿಪಕ್ವವಾದ ಫಲವುಳ್ಳವುಗಳೂ ಚೂತ ಮೊದಲಾದ ವನಸ್ಪತಿಗಳೂ ಭೋಗಿಸಲಿಕ್ಕೆ ಯೋಗ್ಯಗಳಾದುದರಿಂದ ಅನ್ನಗಳೆಂದೂ, ಪ್ರಾಣಿಗಳು ಭೋಗಿಸುವವರಾದುದರಿಂದ 'ಅನ್ನಾದ' ರೆಂದೂ ಅನುಭವಸಿದ್ಧವಷ್ಟೇ. ಆದುದರಿಂದ ಅವುಗಳಲ್ಲಿರತಕ್ಕ ಭಗವದ್ರೂಪಗಳೂ ಅವುಗಳಿಗೆ ಪ್ರೇರಕಗಳೂ ತೃಪ್ತಿಯನ್ನು ಕೊಡುವವುಗಳೂ ಭೋಕ್ತೃಗಳೂ ಆದುದರಿಂದ 'ಅನ್ನ, ಅನ್ನಾದ' ಗಳೆಂದು ಹೇಳಲ್ಪಡುತ್ತವೆ. (೫) ಪುರುಷರಲ್ಲಿ ಪುರುಷಾಕಾರರಾಗಿ ಇರತಕ್ಕ ಸಂಕರ್ಷಣ ಪ್ರದ್ಯುಮ್ನರು, ಅನ್ನಾದರು, ಅಂದರೆ ಭೋಗಿಸುವವರು ಭೋಗಶಕ್ತಿಯನ್ನು ಕೊಡುವವರು. ಪಶುಗಳಲ್ಲಿ ಇರತಕ್ಕ ಪಶ್ವಾಕಾರರಾದ ನಾರಾಯಣ ಅನಿರುದ್ಧರು, ಎಲ್ಲರಿಗೂ ತೃಪ್ತಿಯನ್ನು ಹುಟ್ಟಿಸುವುದರಿಂದ 'ಅನ್ನ' ಎಂಬ ಶಬ್ದದಿಂದ ಹೇಳಲ್ಪಡುತ್ತಾರೆ. ಎತ್ತು ಮೊದಲಾದ ಪಶುಗಳು ವಾಹನಾದಿ ರೂಪಗಳಾಗಿ ಮನುಷ್ಯ ಮೊದಲಾದವರನ್ನು ಸಂತೋಷಪಡಿಸುತ್ತವಷ್ಟೇ! ಆದುದರಿಂದ ಆ ಪಶುಗಳ ಆಕಾರದಿಂದ ಪಶುಗಳಲ್ಲಿರತಕ್ಕ ಶ್ರೀ ಪರಮಾತ್ಮನು ಸಮಸ್ತರಿಗೂ ತೃಪ್ತಿಯನ್ನು

ಮಾಡುತ್ತಾನೆ. (೬) ಯಾವಕಾರಣದಿಂದ ಸಂಕರ್ಷಣ ಪ್ರದ್ಯುಮ್ನರು ಎತ್ತು, ಕುದುರೆ, ಆನೆ, ಮೊದಲಾದುವುಗಳನ್ನು ಏರುವ ಮನುಷ್ಯ ಮೊದಲಾದವರಲ್ಲಿ ಇರುತ್ತಾರೋ; ಆ ಪಶುಗಳಲ್ಲಿ ನಾರಾಯಣ ಅನಿರುದ್ಧರು ಇರುತ್ತಾರೋ ಆದುದರಿಂದಲೇ ಪುರುಷಾಕಾರರಾದ ದೇವಾದಿಗಳಲ್ಲಿರತಕ್ಕ ಸಂಕರ್ಷಣ ಪ್ರದ್ಯುಮ್ನರೂ, ಪಶುಗಳಲ್ಲಿರತಕ್ಕ ನಾರಾಯಣಾನಿರುದ್ಧರೂ ಮೇಲೆ ಸಂಚರಿಸುತ್ತಾರೆ. ಯಾರು ಯಾರ ಮೇಲೆ ಸಂಚರಿಸುತ್ತಾರೋ ಅವರು ಭೋಗಿಸುವವರು. ಮತ್ತೊಂದು ಭೋಗ್ಯವು- ಅಂತೂ ಪುರುಷರು ಪಶುಗಳ ಮೇಲೆ ಸಂಚರಿಸುವುದರಿಂದಲೂ, ಅನ್ನಾದನು ಅನ್ನವನ್ನು ಭಕ್ಷಣೆಮಾಡುವುದರಿಂದಲೂ ಪುರುಷರು ಅನ್ನಾದರೆಂದೂ, ಪಶುಗಳು ಅನ್ನಗಳೆಂದೂ ಹೇಳಲ್ಪಡುತ್ತವೆ. (೭) ಹೀಗಾದರೆ ಸಂಕರ್ಷಣ ಪ್ರದ್ಯುಮ್ನರು ನಾರಾಯಣ ಅನಿರುದ್ಧರ ಮೇಲೆ ಸಂಚರಿಸುತ್ತಾರೆ; "ಭೋಕ್ತೃಗಳೂ ಆಗಿರುತ್ತಾರೆ." ಎಂದು ಹೇಳಿರುವುದರಿಂದ ಭಗವದ್ರೂಪಗಳಿಗೆ ತಾರತಮ್ಯವು ಬರಬೇಕಾಗುವುದು. ಎಂಬೀ ಆಶಂಕೆಯನ್ನು ಪರಿಹರಿಸುವುದಕ್ಕೋಸ್ಕರ "ಅಧೀವ ಚರಂತಿ" "ಅಧೀವ ಭವತಿ" ಎಂಬ ಎರಡು ಪ್ರದೇಶದಲ್ಲಿಯೂ "ಇವ" ಶಬ್ದವನ್ನು ಪ್ರಯೋಗಿಸಿರುವರು. ಏರತಕ್ಕ ಮನುಷ್ಯರಲ್ಲಿದ್ದು ಸಂಚಾರ ಮಾಡುವುದರಿಂದಲೇ ಆ ರೀತಿಯಾಗಿ ಹೇಳಿದ್ದು, ಗುಣಗಳಲ್ಲಿ ತಾರತಮ್ಯವು ಇಲ್ಲವೇಇಲ್ಲ. (೮) ಕ್ಲೃಪ್ತವಾದ ಆಧಿಕ್ಯವೇಮುಕ್ತಿಯಲ್ಲಿ ಅಭಿವ್ಯಕ್ತವಾಗುವುದು. ಹೊಸದಾಗಿ ಆಧಿಕ್ಯವು ಸಿಗುವುದಿಲ್ಲ ಎಂಬ ಅಭಿಪ್ರಾಯದಿಂದ 'ಅಧೀವಹ' ಎಂಬ ಅಂತಿಮಭಾಗದಲ್ಲಿ 'ಇವ' ಶಬ್ದವನ್ನು ಪ್ರಯೋಗಿಸಿರುವರು. ॥ ೧ ॥

'ಯೋ ಹ ವಾ ಆತ್ಮಾನಂ' ಎಂಬುವಲ್ಲಿ ದೇಹಕ್ಕೆ ಉಪಾದಾನಕಾರಣನಾದುದರಿಂದ ಆತ್ಮನು ಪಂಚವಿಧನು; ಅಂಕುರಾದಿಗಳನ್ನು ಹೊರಡಿಸುವುದರಿಂದ 'ಉಕ್ಥನು' ಎಂದು ಅನ್ಯಥಾ ಪ್ರತೀತವಾಗುತ್ತದೆ. ಆದುದರಿಂದ ಯೋಗ್ಯರೀತಿಯಿಂದ ವ್ಯಾಖ್ಯಾನಮಾಡುತ್ತಾರೆ.

ಭಾ॥ **(a)** ಓಂ ॥ ಯೋಽಸೌ ನಾರಾಯಣೋ ದೇವಃ ಪರಮಾತ್ಮಾ ಸನಾತನಃ ।
ನಿತ್ಯಾತತ ಗುಣತ್ವಾತ್ಸ ಆತ್ಮೇತ್ಯುಕ್ತಃ ಸದಾ ಶ್ರುತೌ ॥ **(b)** ನಾರಾಯಣಾದಿರೂಪೇಣ ಪಂಚಧಾಽವಸ್ಥಿತಃ ಸದಾ । ಸರ್ವಸ್ಯೋತ್ಥಾಪಕತ್ವಾತ್ಸ ಉಕ್ಥಮಿತ್ಯಭಿಧೀಯತೇ ॥ **(c)** ಬೃಹತೀಸಹಸ್ರರೂಪೇ ಚ ಸ ಉಕ್ಥೇ ಪಂಚಧಾ ಸ್ಥಿತಃ । ಪಂಚಭೇದಂ ಹಿ ತಚ್ಛಸ್ತ್ರಂ ತೃಚಾಶೀತಿತ್ರಯಂ ಚ ಯತ್ ॥ ಪೂರ್ವಾಪರಂ ತೃಚಾಶೀತ್ಯಾ ಇತಿ ಪಂಚಾತ್ಮಕಂ ಹಿ ತತ್ ॥

ಅ ॥ (a) 'ಏಷ ಪಂಥಾಃ' ಎಂಬುವಲ್ಲಿ ಪ್ರಸ್ತುತನೂ ಪರಮ ಚೇತನನೂ ನಿತ್ಯನೂ ದೇವನೂ ಆದ ಆತ್ಮ ಶಬ್ದವಾಚ್ಯನಾದ ನಾರಾಯಣನೋ, ಆತನು ಯಾವಾಗಲೂ ನಿತ್ಯಗುಣಗಳುಳ್ಳವನೂ, ವ್ಯಾಪ್ತಗಳಾದ ಗುಣಗಳುಳ್ಳವನೂ ಆದುದರಿಂದ, ಶ್ರುತಿಯಲ್ಲಿ 'ಆತ್ಮಾ' ಎಂದು ಹೇಳಲ್ಪಟ್ಟಿದ್ದಾನೆ. ॥ (b) ಆತನು '(1) ನಾರಾಯಣ ನಾರಾಯಣ (2) ನಾರಾಯಣ ಸಂಕರ್ಷಣ' ಇವೇ ಮೊದಲಾದ ರೂಪದಿಂದ ಐದು ಪ್ರಕಾರನಾಗಿ ಯಾವಾಗಲೂ ಇದ್ದಾನೆ. ॥ ಆತನು ಸಮಸ್ತ ವಸ್ತುಗಳನ್ನು ಸೃಷ್ಟಿಸುವುದರಿಂದ 'ಉಕ್ಥ'ನೆಂದು ಹೇಳಲ್ಪಡುತ್ತಾನೆ. ॥ (c) ಯಾವ ಕಾರಣದಿಂದ ಬೃಹತೀಸಹಸ್ರರೂಪವಾದ ಆ ಶಸ್ತ್ರವು ಐದು ಪ್ರಕಾರವುಳ್ಳದ್ದೋ. ಆದುದರಿಂದ ಆತನು ಬೃಹತೀ ಸಹಸ್ರದ ಪ್ರಭೇದವಾದ ಉಕ್ಥದಲ್ಲಿ ಐದು ರೂಪದಿಂದ ಇದ್ದಾನೆ. ಯಾವುದೊಂದು ಮೂರು ಋಕ್ಕುಗಳ ಕೂಡುವಿಕೆಯು 'ತೃಚವು' ಅದರ ಎಂಭತ್ತರ ಮೂರು, ಅಂತಹ ತೃಚಾಶೀತಿತ್ರಯಕ್ಕೆ ಪೂರ್ವ ಅಪರವೆಂಬ ಎರಡು ಭಾಗವು ಇದೆ. ಆ ಪ್ರಕಾರವಾಗಿ ಆ ಶಸ್ತ್ರವು ಐದು ಸ್ವರೂಪವುಳ್ಳದ್ದು ಪ್ರಸಿದ್ಧವು.

ಭಾ॥ (a) ಪ್ರಥಮೇ ಪಂಚಕಾದ್ಭಾಗೇ ಸ್ಥಿತೋ ನಾರಾಯಣಃ ಸ್ವಯಂ । ಋಕ್ತ್ರ ಯಾಶೀತಿಕೇ ಪೂರ್ವೇ ಗಾಯತ್ರೀಚ್ಛಂದ ಆತ್ಮಕೇ॥ ವಾಸುದೇವಃ ಸ್ಥಿತೋ ನಿತ್ಯಂ (b) ಋಗಶೀತಿತ್ರಯೇ ತಥಾ । ದ್ವಿತೀಯೇ ಬೃಹತೀಚ್ಛಂದ ಸ್ಯಸೌ ಸಂಕರ್ಷಣಃ ಸ್ಥಿತಃ ॥ ಯಸ್ಯಾವೇಶಬಲೇನೈವ ಜೀವಃ ಸಂಕರ್ಷ ಣೋ ಪರಃ । ಪೃಥಿವೀಂ ಬಿಭರ್ತಿ ಸತತಂ ತತ್ಪ್ರಸಾದಾತ್ತ ವೈಭವಃ ॥ (c) ತೃತೀಯಾಯಾಂ ತೃಚಾಶೀತ್ಯಾಮುಷ್ಣಿಕ್ಛಂದಸಿ ಕೇಶವಃ । ಪ್ರದ್ಯುಮ್ನ ರೂಪೀ ಸತತಂ ಸ್ಥಿತೋ ಯಸ್ಯೈವ ಸನ್ನಿಧೇಃ ॥ ಕಾಮಃ ಪ್ರದ್ಯುಮ್ನನಾ ಮಾಭೂತ್ತತ್ಪ್ರಸಾದಾತ್ತವೈಭವಃ । (d) ಉಕ್ಥಸ್ಯೈವಾಂತ್ಯಭಾಗೇ ತು ಸೋಽನಿರುದ್ಧೋ ಹರಿಃ ಸ್ಥಿತಃ ॥ ಕಾಮಪುತ್ರೋಽನಿರುದ್ಧಾಖ್ಯಾಂ ಯದಾ ವೇಶೇನ ಲಬ್ಧವಾನ್ । (e) ಏವಂ ಪಂಚಾತ್ಮಕಂ ವಿಷ್ಣುಂ ಬೃಹತ್ಯುಕ್ಥಸ್ಯ ದೇವತಾಂ ॥ ಯೋ ವೇದ ಸಮ್ಯಗ್ವೇತ್ತಾ ಸಃ ॥

ಅ ॥ (a) ಐದು ಪ್ರಭೇದವುಳ್ಳ ಬೃಹತೀಸಹಸ್ರದ ಒಂದನೇ ಭಾಗದಲ್ಲಿ ಸಾಕ್ಷಾತ್ ನಾರಾಯಣನೇ ಇದ್ದಾನೆ. ಮೂರು ಋಕ್ಕುಗಳ ಎಂಭತ್ತುವುಳ್ಳ ಗಾಯತ್ರೀ ಛಂದಸ್ಸೇ ಸ್ವರೂ ಪವಾಗಿವುಳ್ಳ ಪೂರ್ವಭಾಗದಲ್ಲಿ ನಿರಂತರದಲ್ಲಿಯೂ ವಾಸುದೇವನು ಇದ್ದಾನೆ. (b) ಹಾಗೆಯೇ ಋಕ್ಕುಗಳ ಎಂಭತ್ತರ ಮೂರರಲ್ಲಿ ಬೃಹತೀಛಂದಸ್ಸುವುಳ್ಳ ಎರಡನೇದರಲ್ಲಿ ಈ ಸಂಕರ್ಷಣನು ಇದ್ದಾನೆ. ಯಾವ ಸಂಕರ್ಷಣಾಖ್ಯ ಭಗವದ್ರೂಪದ ಆವೇಶಸಾಮರ್ಥ್ಯದಿಂದಲೇ ಮತ್ತೊಬ್ಬ ಸಂಕರ್ಷಣಾಖ್ಯ ಜೀವನು ನಿರಂತರದಲ್ಲಿಯೂ ಆ ಸಂಕರ್ಷಣನ ಅನುಗ್ರಹದಿಂದ ಪ್ರಾಪಿಸಲ್ಪಟ್ಟ ಸಂಪತ್ತುಳ್ಳವನಾಗಿ ಭೂಮಿಯನ್ನು ಧರಿಸುತ್ತಾನೋ. (ಅಂತಹ ಸಂಕರ್ಷಣನು ಇದ್ದಾನೆ). (c) ಉಷ್ಣಿಕ್ ಛಂದಸ್ಸುಳ್ಳ ಮೂರನೇ ತೃಚಾಶೀತಿಯಲ್ಲಿ ಕೇಶವನು ಇದ್ದಾನೆ. ಯಾರ ಸನ್ನಿಧಿಯಲ್ಲಿ ಪ್ರದ್ಯುಮ್ನ ಸ್ವರೂಪವುಳ್ಳ ಶ್ರೀಹರಿಯು ನಿರಂತರದಲ್ಲಿಯೂ ಇದ್ದಾನೋ (ಅಂತಹ ಕೇಶವನು) (d) ಕಾಮನ ಮಗನು ಯಾವ ಅನಿರುದ್ಧನ ಆವೇಶದಿಂದ 'ಅನಿರುದ್ಧ'ನೆಂಬ ನಾಮವನ್ನು ಹೊಂದಿದನೋ. ಅಂತಹ ಅನಿರುದ್ಧರೂಪಿಯಾದ ಶ್ರೀ ಹರಿಯು ಉಕ್ಥದ ಅಂತಿಮಭಾಗದಲ್ಲಿ ಇದ್ದಾನೆ. ॥ (e) ಈ ಪ್ರಕಾರವಾಗಿ ಐದು ರೂಪಗಳುಳ್ಳ ವಿಷ್ಣುವನ್ನು ಬೃಹ ತ್ಯುಕ್ಥಕ್ಕೆ ದೇವತೆಯನ್ನಾಗಿ ಯಾರು ತಿಳಿಯುತ್ತಾನೋ ಅವನೇ ಚೆನ್ನಾಗಿ ತಿಳಿದವನು.

ತಾ ॥ ಈ ಬೃಹತೀಛಂದಸ್ಸಿನ ಸಹಸ್ರ ಋಕ್ಕುಗಳನ್ನು ಹುಡುಕುವ ಕ್ರಮವು ಹೇಗೆ ಅಂದರೆ— ಗಾಯತ್ರೀ ಛಂದಸ್ಸಿನ ಋಕ್ತ್ರಯದ ಎಂಭತ್ತು ಅಂದರೆ ೨೪೦ ಗಾಯತ್ರಿಯು ೧೬೦ ಬೃಹತಿಋಕ್ಕುಗಳಾಗುತ್ತವೆ. ಗಾಯತ್ರೀ ಛಂದಸ್ಸಿಗೆ ೨೪ ಅಕ್ಷರಗಳು. ಬೃಹತೀಛಂದಸ್ಸಿಗೆ ೩೬ ಅಕ್ಷರಗಳು ಅಂತೂ ೨೪೦ ಗಾಯತ್ರಿಗಳ ಅಕ್ಷರ ೨೪೦×೨೪=೫೭೬೦ ಅಕ್ಷರಗಳು. ಇಷ್ಟು ಅಕ್ಷರಗಳಲ್ಲಿ ೩೬ ಅಕ್ಷರಗಳ ಬೃಹತೀಛಂದಸ್ಸುಗಳು ೫೭೬೦÷೩೬=೧೬೦ ಋಕ್ಕುಗಳು ಆಗುತ್ತವೆ. ಈ ಪ್ರಕಾರ ಇನ್ನು ಮುಂದೆಯೂ ಲೆಕ್ಕವನ್ನು ನೋಡಿಕೊಳ್ಳತಕ್ಕುದು. ಇನ್ನು ಬೃಹತೀಛಂದಸ್ಸಿನ ಋಕ್ತ್ರಯದ ಎಂಬತ್ತು ಅಂದರೆ ೨೪೦ ಋಕ್ಕುಗಳು. ಇನ್ನು ಉಷ್ಣಿಕ್ ಛಂದಸ್ಸಿನ ಋಕ್ತ್ರಯದ ಎಂಭತ್ತು ಅಂದರೆ ೨೪೦ ಉಷ್ಣಿಕ್ಛಂದಸ್ಸುಗಳಿಗೆ ೧೮೬ ಬೃಹತಿಯೂ ಗಾಯತ್ರಿಯೂ ಆಗುತ್ತವೆ. ಉಷ್ಣಿಕ್ಛಂದಸ್ಸಿನಲ್ಲಿ ೨೮ ಅಕ್ಷರಗಳು. ಇವುಗಳು ೨೪೦ಕ್ಕೆ ೬೭೨೦ ಅಕ್ಷರಗಳು. ಇವುಗಳಿಗೆ ೩೬ ಅಕ್ಷರದ ೧೮೬ ಬೃಹತಿಯೂ ೧ ಗಾಯತ್ರೀಋಕ್ಕೂ ಆಗುತ್ತವೆ. ಈ ತೃಚಾಶೀತಿತ್ರಯಕ್ಕೆ ಅಂದರೆ ೩ ಋಕ್ಕುಗಳ ೮೦ ಸಮುದಾಯಗಳು. ಇಂತಹ

೮೦ ರ ಮೂರುಸಮುದಾಯಕ್ಕೆ ಕ್ರಮೇಣ ೧೬೦×೨೪೦×೧೮೬ ಇಷ್ಟು ಬೃಹತಿಗಳು ಕೂಡಿ ೫೮೬ ಬೃಹತಿಗಳೂ ೧ ಗಾಯತ್ರಿಯೂ ಆದುವು. ಈ ತೃಚಾಶೀತಿತ್ರಯದ ಪೂರ್ವ ಉತ್ತರ ಭಾಗಗಳಲ್ಲಿ ೨೦೦, ೨೦೦ ಬೃಹಿತಿಗಳೂ ೧೦, ೧೦ ಗಾಯತ್ರಿಗಳೂ ಇರುತ್ತವೆ. ಅಂತೂ ಹಿಂದಿನದ್ದು ಕೂಡಿ ೨೧ ಗಾಯತ್ರಿಗಳಾದುವು. ಇವುಗಳ ೫೦೪ ಅಕ್ಷರಗಳಿಗೆ ೩೬ ಅಕ್ಷರಗಳ ೧೪ ಬೃಹತಿಗಳಾಗುತ್ತವೆ. ಅಥವಾ ೧೦, ೧೦ ಗಾಯತ್ರಿಗಳ ಬದಲಾಗಿ ೪೮ ಅಕ್ಷರಗಳುಳ್ಳ ೫, ೫ ಜಗತಿಗಳನ್ನಿಟ್ಟುಕೊಂಡರೂ ೧೦ ಜಗತಿಗಳು. ೧ ಗಾಯತ್ರಿ, ಅಂತೂ ೫೦೪ ಅಕ್ಷರಗಳಾಗಿ ೧೪ ಬೃಹತಿಗಳು ಆಗುತ್ತವೆ. ಅಂತೂ ಒಟ್ಟಿಗೆ ೫೮೬×೨೦೦×೨೦೦×೧೪=೧೦೦೦ ಬೃಹತಿಗಳಾದುವು. ಅಥವಾ ಪೂರ್ವೋತ್ತರಗಳಲ್ಲಿ ೩೧೦, ೩೧೦ ಗಾಯತ್ರಿಗಳು. ಅಥವಾ ೧೫೫, ೧೫೫ ಜಗತಿಗಳನ್ನಾಗಲೀ ಇಟ್ಟುಕೊಂಡರೂ ಸರಿಬರುತ್ತದೆ. ಯಾವ ಛಂದಸ್ಸುಗಳನ್ನಿಟ್ಟುಕೊಂಡರೂ ಆಗಬಹುದೆಂದು ಹಿಂದೆ ಹೇಳಿರುವುದರಿಂದ ಈಗ ಇಲ್ಲಿ ಹೇಳಿದ ಗಾಯತ್ರಿ, ಉಷ್ಣಿಕ್, ಜಗತಿಗಳೆಂಬ ನಿಯಮವು ಹೇಗೆ ಕೂಡುತ್ತದೆ? ಎಂದರೆ- ತೃಚಾಶೀತಿತ್ರಯಕ್ಕೆ ನಿಯಮವಿದ್ದರೂ ಪೂರ್ವೋತ್ತರ ಭಾಗಗಳಿಗೆ ನಿಯಮವಿಲ್ಲದ ಪ್ರಯುಕ್ತವೂ ತೃಚಾಶೀತಿತ್ರಯಕ್ಕೂ ಒಂದೇ ಛಂದಸ್ಸೂ ಎಂಬ ನಿಯಮವಿಲ್ಲದ್ದರಿಂದಲೂ ಹಿಂದೆ ಹೇಳಿದುದಕ್ಕೆ ವಿರೋಧವು ಬರಲಾರದು. ಅಥವಾ ಹಿಂದೆ ಹೇಳಿದ ಐದು ರೀತಿಯಿಂದ ಇರುವ ಬೃಹತೀಸಹಸ್ರದಲ್ಲಿ ಪರಮಾತ್ಮನು ಐದು ರೂಪದಿಂದಿರುತ್ತಾನೆ ಎಂದು ವಿವಕ್ಷಿಸಿಕೊಳ್ಳುವಾಗ ಈ ನಿಯಮವಿದ್ದರೂ ಅದನ್ನೇ ವಿವಕ್ಷಿಸಿಕೊಳ್ಳುವಾಗ ಯಾವ ಛಂದಸ್ಸಿನಿಂದಲೂ ಕೂಡುತ್ತದೆ ಎಂಬ ಅಭಿಪ್ರಾಯವಿದ್ದುದರಿಂದ ಹಿಂದೆ ಹೇಳಿದ್ದಕ್ಕೆ ವಿರೋಧವಿಲ್ಲವೆಂದು ತಿಳಿಯತಕ್ಕದ್ದು.

ಭಾ॥ **(a)** ತಾನಿ ರೂಪಾಣಿ ವೈ ಹರೇಃ । ಸ್ಥಿತಾನಿ ಪಂಚಭೂತೇಷು ಪೃಥಿವ್ಯಾದ್ಯಭಿಧಾನಿ ಚ । ತದಾವೇಶಾತ್ಪೃಥಿವ್ಯಾದಿನಾಮ ಭೂತೇಷು ಪಂಚಸು ॥ **(b)** ಪೃಥುತ್ವಾತ್ಪೃಥಿವೀನಾಮಾ ಭೂಮೌ ನಾರಾಯಣಃ ಸ್ಥಿತಃ । ಬಲಜ್ಞಾನಸ್ವರೂಪತ್ವಾದ್ವಾಯುನಾಮಾ ಸ ಏವ ಚ ॥ ವಾಯೌ ಸಂಕರ್ಷಣೋ ನಿತ್ಯಂ ಸ್ಥಿತಃ **(c)** ಆಕಾಶನಾಮಕಃ । ವ್ಯಾಪ್ತತ್ವಾದ್ವಾಸುದೇವಸ್ತು ಸದಾಕಾಶೇ ಸ್ಥಿತಃ ಪ್ರಭುಃ ॥ ಅನಿರುದ್ಧಸ್ತಥೈವಾಪ್ಸು ಬಹುರೂಪೋ ವ್ಯವಸ್ಥಿತಃ । ಅಪ್ನಾಮಾ ಪಾಲನಾನ್ನಿತ್ಯಂ **(d)** ಪ್ರದ್ಯುಮ್ನೋ ಜ್ಯೋತಿಷಿ ಸ್ಥಿತಃ ॥ ಜ್ಯೋತಿರ್ನಾಮಾ ದ್ಯೋತನಾಚ್ಚ ಬಹುರೂಪಃ ಪೃಥಕ್ಪೃಥಕ್ ॥

ಅ ॥ (a) ಶ್ರೀ ಹರಿಯ ಆ ರೂಪಗಳೇ ಪೃಥಿವ್ಯಾದಿ ಐದು ಭೂತಗಳಲ್ಲಿ ಪೃಥಿವಿ ಮೊದಲಾದ ಹೆಸರುಳ್ಳವುಗಳಾಗಿ ಇರುತ್ತವೆ. ಪೃಥಿವಿ ಮೊದಲಾದ ಹೆಸರುಳ್ಳ ಆ ಹರಿಯ ಪ್ರವೇಶದಿಂದಲೇ ಪೃಥಿವ್ಯಾದಿ ಐದು ಭೂತಗಳಲ್ಲಿ ಕ್ರಮವಾಗಿ ಪೃಥಿವಿ ಮೊದಲಾದ ನಾಮಧೇಯವು ಇರುತ್ತದೆ. (b) ಅತಿವಿಸ್ತೃತನಾದುದರಿಂದ ಪೃಥಿವೀನಾಮಕನಾಗಿ ಶ್ರೀ ನಾರಾಯಣನು ಪೃಥಿವಿಯಲ್ಲಿ ಇದ್ದಾನೆ. । ಅವನೇ, ಸಾಮರ್ಥ್ಯವೂ ಜ್ಞಾನವೂ ಇವುಗಳೇವೇ ಸ್ವರೂಪಗಳಾಗಿ ಉಳ್ಳವನಾದುದರಿಂದ ವಾಯುನಾಮಕನಾಗಿ ವಾಯುವಿನಲ್ಲಿ ನಿರಂತರದಲ್ಲಿಯೂ ಸಂಕರ್ಷಣನಾಮಕನಾಗಿ ಇದ್ದಾನೆ. ॥ (c) ಸರ್ವಸಮರ್ಥನಾದ ವಾಸುದೇವನಾದರೂ ('ಆ ಸಮಂತಾತ್ ಕಾಶತೇ' ಎಂಬೀ ವ್ಯುತ್ಪತ್ತಿಯಿಂದ) ಸುತ್ತಲೂ ವ್ಯಾಪಿಸಿಕೊಂಡು ಇದ್ದುದರಿಂದ ಆಕಾಶನಾಮಕನಾಗಿ ಯಾವಾಗಲೂ ಆಕಾಶದಲ್ಲಿದ್ದಾನೆ. । ಹಾಗೆಯೇ ಅನಿರುದ್ಧನು ಚೆನ್ನಾಗಿ ರಕ್ಷಿಸುವುದರಿಂದ 'ಅಪ್' ನಾಮಕನಾಗಿ 'ಅಪ್' ಜಲಗಳಲ್ಲಿ ನಿರಂತರದಲ್ಲಿಯೂ

ಬಹುರೂಪಗಳುಳ್ಳವನಾಗಿ ಇರುತ್ತಾನೆ. (d) ಪ್ರದ್ಯುಮ್ನನು ಪ್ರಕಾಶಗೊಳಿಸುವುದರಿಂದ ಜ್ಯೋತಿರ್ನಾಮಕನಾಗಿ ಅನಂತಾನಂತ ರೂಪಗಳುಳ್ಳವನಾಗಿ ಪ್ರತ್ಯೇಕ ಪ್ರತ್ಯೇಕವಾಗಿ ಜ್ಯೋತಿಸ್ಸಿನಲ್ಲಿ ಇರುತ್ತಾನೆ. (ಶ್ರೀ ಪರಮಾತ್ಮನ ಎಲ್ಲಾ ರೂಪಗಳಲ್ಲಿಯೂ ಪೃಥಿವಿ ಮೊದಲಾದ ಎಲ್ಲಾ ಶಬ್ದಗಳ ಪ್ರವೃತ್ತಿಗೆ ಕಾರಣೀಭೂತಗಳಾದ ಸರ್ವ ಗುಣಗಳು ಇದ್ದುದರಿಂದಲೂ, ಆಯಾಯ ಗುಣಗಳನ್ನು ಅನುಸರಿಸಿ ಸಮಸ್ತ ಕರ್ಮಗಳನ್ನು ಮಾಡಿಸುವುದರಿಂದಲೂ, ಎಲ್ಲಾ ಸ್ಥಾನಗಳಲ್ಲಿ ಇದ್ದುದರಿಂದಲೂ, ಬೇರೆ ಬೇರೆ ನಾಮಧೇಯಗಳು ಹೇಗೆ ಸಂಗತಗಳಾಗುತ್ತವೆ. ಎಂಬೀ ಆಶಂಕೆಯನ್ನು ಪರಿಹರಿಸುತ್ತಾರೆ.)

ಭಾ॥ (a) ಯದ್ಯಪ್ಯಸ್ಯ ಹರೇಃ ಸರ್ವರೂಪಾಣ್ಯಪ್ಯಖಿಲೈರ್ಗುಣೈಃ । ಪೂರ್ಣಾನ್ಯಥಾಪಿ ಚೈಕೈಕರೂಪೇಷು ಸ ಪೃಥಗ್ಗುಣೈಃ ॥ ವ್ಯವಹಾರಾನ್ಪೃಥಗ್ದೇವಃ ಕರೋತೀವ ಹಿ ಲೀಲಯಾ । (b) ತಸ್ಮಾತ್ಪೃಥಗಿವಾಸ್ಯೇತಿ ನಾಮ ವಿಷ್ಣೋಃ ಪರಾತ್ಮನಃ ॥ ಸರ್ವತ್ರ ಸರ್ವನಾಮ್ನೋಽಪಿ ವ್ಯವಹಾರಾರ್ಥಮೀರ್ಯತೇ । (c) ಏತಸ್ಮಾದ್ಧಿ ಹರೇರ್ನಿತ್ಯಂ ಜಗದುತ್ಪತ್ತಿ ಪ್ರಭೋಃ॥ ಮುಕ್ತೌ ಲಯೇ ಚ ತಂ ಯಾತಿ ಸ ಚ ಸರ್ವಾಶ್ರಯಃ ಪ್ರಭುಃ । (d) ಯ ಏವಂ ವೇತ್ತಿ ತಂ ವಿಷ್ಣುಮುಪಾಸ್ತೇ ಚಾಪರೋಕ್ಷತಃ ॥ ಸ ಮುಕ್ತಃ ಸಮಜಾತೀನಾಮಾಶ್ರಯಶ್ಚ ಭವಿಷ್ಯತಿ ॥

ಅ ॥ (a) ಯದ್ಯಪಿ ಈ ಶ್ರೀ ಹರಿಯ ಎಲ್ಲಾ ರೂಪಗಳೂ (ಆಯಾಯ ಶಬ್ದಗಳ ಪ್ರವೃತ್ತಿಗೆ ಕಾರಣೀಭೂತಗಳಾದ) ಸರ್ವಗುಣಗಳಿಂದಲೂ ಪರಿಪೂರ್ಣಗಳಾಗಿವೆ. (ಸರ್ವ ಕ್ರಿಯೆಗಳಿಗೂ ಪ್ರವರ್ತಕಗಳಾಗಿವೆ) ಆದರೂ ಆ ಕ್ರೀಡಾದಿಗುಣವಿಶಿಷ್ಟನಾದ ಶ್ರೀ ಪರಮಾತ್ಮನು ಒಂದೊಂದು ರೂಪಗಳಲ್ಲಿ (ಆಯಾಯ ಶಬ್ದಗಳ ಪ್ರವೃತ್ತಿಗೆ ಉಪಯುಕ್ತಗಳಾದ) ಬೇರೆ ಬೇರೆ ಗುಣಗಳಿಂದ (ಬೇರೆ ಬೇರೆ ಸ್ಥಾನಗಳಲ್ಲಿ) ಬೇರೆ ಬೇರೆ ವಿಧಗಳಾದ ಪ್ರವೃತ್ತಿರೂಪಗಳಾದ ವ್ಯವಹಾರಗಳನ್ನು ಕ್ರೀಡೆಯಿಂದ ಮಾಡುವ ಹಾಗೆ ತೋರಿಸಿಕೊಳ್ಳುತ್ತಾನೆ. ॥ (b) ಆದುದರಿಂದ ಸರ್ವನಾಮಗಳುಳ್ಳವನಾದಾಗ್ಯೂ ಸರ್ವೋತ್ತಮನಾದ ಈ ಶ್ರೀ ಪರಮಾತ್ಮನ ನಾಮಧೇಯವು ಸರ್ವಪ್ರದೇಶಗಳಲ್ಲಿಯೂ ಪ್ರತ್ಯೇಕ ಪ್ರತ್ಯೇಕ ವ್ಯವಹಾರಕ್ಕಾಗಿಯೂ (ಉಚ್ಚರಿಸುವುದಕ್ಕೋಸ್ಕರವೂ ಉಪಾಸನೆಗೋಸ್ಕರವೂ ಪೂರ್ವದಲ್ಲಿ ಹೇಳಿದ ರೀತಿಯಾಗಿ) ಬೇರೆಯಾದದ್ದಂತೆಯೇ ಹೇಳಲ್ಪಡುತ್ತದೆ. ॥ (c) ಸರ್ವಸಮರ್ಥನಾದ ಈ ಶ್ರೀಹರಿಯಿಂದಲೇ ಬ್ರಹ್ಮಾಂಡಾದಿ ಜಗತ್ತು ಯಾವಾಗಲೂ ಹುಟ್ಟುತ್ತದಷ್ಟೆ! ಆತನನ್ನೇ ಮುಕ್ತಿಯಲ್ಲಿಯೂ ಪ್ರಳಯಕಾಲದಲ್ಲಿಯೂ ಪ್ರವೇಶಿಸುತ್ತದೆ. ಸರ್ವಸಮರ್ಥನಾದ ಆ ಹರಿಯಾದರೂ ಬ್ರಹ್ಮಾದಿಗಳಿಗೆಲ್ಲರಿಗೂ ಆಶ್ರಯನಾಗಿರುತ್ತಾನೆ. ॥ (d) ಯಾವಾತನು ಪೂರ್ವೋಕ್ತಪ್ರಕಾರವಾಗಿ ತಿಳಿಯುತ್ತಾನೋ ಆ ವಿಷ್ಣುವನ್ನೇ ಪ್ರತ್ಯಕ್ಷವಾಗಿಯೂ (ತಿಳಿದು) ಉಪಾಸನೆ ಮಾಡುತ್ತಾನೆ. ಅವನು ಮುಕ್ತನಾಗಿ ಸಮಾನ ಜಾತಿಯವರಿಗೆ ಆಶ್ರಯನೂ ಆಗುವನು.

ಭಾ॥ (a) ಸ್ವಜಾತೀನಾಮುತ್ತಮತ್ವಪದಯೋಗ್ಯಾ ಹಿ ಯೇ ಸುರಾಃ । ಬ್ರಹ್ಮೇಂದ್ರಾದ್ಯಾಸ್ತೇ ಹಿ ಯೋಗ್ಯಾಃ ಸಾಕ್ಷಾದಸ್ಮಿನ್ನುಪಾಸನೇ ॥ ಅನ್ಯೇಷಾಂ ಜ್ಞಾನಮಾತ್ರೇಣ ಯೋಗ್ಯಮಾಧಿಕ್ಯಮಾಪ್ಯತೇ । (b) ಸಂಕರ್ಷಣಶ್ಚ ಪ್ರದ್ಯುಮ್ನಸ್ತತ್ರ ಭೋಕ್ತೃಷು ಸಂಸ್ಥಿತೌ ॥ ಭೋಕ್ತೃಶಕ್ತಿಪ್ರದೌ ನಿತ್ಯಂ

ಭೋಕ್ತಾರೌ ಚ ವಿಶೇಷತಃ । (c) ನಾರಾಯಣಾನಿರುದ್ಧೌ ತೌ ಭೋಗ್ಯ ವಸ್ತುಷು ಸಂಸ್ಥಿತೌ ॥ ತರ್ಪಕೌ ಸರ್ವಲೋಕಾನಾಂ ತಸ್ಮಾದ್ಭೋಗ್ಯೌ ನ ಚರ್ವ್ಯತಃ । (d) ಅವಕಾಶಪ್ರದೋ ನಿತ್ಯಂ ವಾಸುದೇವೋ ನಭಃ ಸ್ಥಿತಃ ॥ ಏವಂ ಪಂಚಾತ್ಮಕಂ ವಿಷ್ಣುಂ ಯ ಉಪಾಸ್ತೇ ಸದೈವ ತು । (e) ಅವಕಾಶಪ್ರದಃ ಸೋಽಪಿ ಸ್ವಜಾತೀನಾಂ ಭವಿಷ್ಯತಿ ॥ ಭೋಕ್ತಾ ಚಾಪ್ಯಾಯಕಶ್ಚೈವ ತಸ್ಯ ವಿಷ್ಣೋಃ ಪ್ರಸಾದತಃ । (f) ಬ್ರಹ್ಮೇಂದ್ರಾದ್ಯಾಃ ಸ್ವಜಾತೀಶಪದಯೋಗ್ಯಾ ಅಮುಷ್ಯ ಚ ॥ ಯೋಗ್ಯಾ ಉಪಾಸನಸ್ಯ ಸ್ಯುಸ್ತ ದನ್ಯೇ ಜ್ಞಾನಮಾತ್ರಕೇ ॥

ಅ ॥ (a) ಸ್ವಜಾತಿಯವರ ಮಧ್ಯದಲ್ಲಿ ಉತ್ತಮತ್ವವೆಂದು ಹೆಸರುಳ್ಳ ಪದವಿಗೆ ಯೋಗ್ಯ ರಾದ ಚತುರ್ಮುಖ, ದೇವೇಂದ್ರರೇ ಮೊದಲಾದ ಯಾವ ದೇವತೆಗಳೋ ಅವರೇ ಮುಖ್ಯವಾಗಿ ಈ ಉಪಾಸನೆಯಲ್ಲಿ ಯೋಗ್ಯರಾಗಿ ಇರುತ್ತಾರೆ. 'ದೇವಾನಾಮಸ್ಮಿ ವಾಸವಃ' 'ದೇವೇಷು ವಾಯುಃ ಪುರುಷೋತ್ತಮಾದೃತೇ' ಇತ್ಯಾದಿ ಪ್ರಮಾಣ ಪ್ರಸಿದ್ಧವು. ॥ ಇತರರಿಗೆ ಅಂದರೆ ಉಪಾ ಸನೆಯಲ್ಲಿ ಅಧಿಕಾರವಿಲ್ಲದಿರುವ ಮನುಷ್ಯಾದಿಗಳಿಗೆ ಕೇವಲ ಜ್ಞಾನದಿಂದ (ಅವರವರಿಗೆ) ಯೋಗ್ಯ ವಾದ ಆಧಿಕ್ಯವು ಪ್ರಾಪಿಸಲ್ಪಡುತ್ತದೆ. ॥(b) ('ತಸ್ಮಿನ್ ಯೋಽನ್ನಂ ಚಾನ್ನದಂ ಚ' ಎಂಬುವುದನ್ನು ಆರಂಭಿಸಿ, 'ಆವಪನಂ ಹ ವೈ ಸಮಾನಾನಾಂ ಭವತಿ' ಎಂಬುವ ಪರ್ಯಂತ ವಾಕ್ಯಗಳನ್ನು ವ್ಯಾ ಖ್ಯಾನಮಾಡುತ್ತಾರೆ.) ಸಂಕರ್ಷಣ, ಪ್ರದ್ಯುಮ್ನರು ಆಯಾಯ ಭೋಕ್ತೃಗಳಲ್ಲಿ ಇರುತ್ತಾರೆ. । ಭೋಗವನ್ನು ಹೊಂದುವವರಿಗೆ ಸಾಮರ್ಥ್ಯವನ್ನು ಕೊಡುತ್ತಾರೆ. ನಿರಂತರದಲ್ಲಿ ವಿಶೇಷಾಕಾರ ವಾಗಿ ಭೋಕ್ತೃಗಳೂ ಆಗಿರುತ್ತಾರೆ. ॥ (c) ಪ್ರಸಿದ್ಧರಾದ ನಾರಾಯಣ ಅನಿರುದ್ಧರಾದರೂ ಭೋಗಪಡಿಯಲಿಕ್ಕೆ ಉಪಯುಕ್ತಗಳಾದ ಎಲ್ಲಾ ವಸ್ತುಗಳಲ್ಲಿಯೂ ಇರುತ್ತಾರೆ. ಅಲ್ಲದೆ ಎಲ್ಲಾ ಲೋಕಗಳಿಗೂ ತೃಪ್ತಿಪಡಿಸುತ್ತಾರೆ. ಆದುದರಿಂದ ಅಂದರೆ ಭೋಜ್ಯಗಳಲ್ಲಿ ಅಂತರ್ಗತ ನಾಗಿ ತೃಪ್ತಿಪಡಿಸುವುದರಿಂದ ಭೋಜ್ಯರಾಗಿ ('ಅನ್ನ' ಎಂದು ಹೇಳಲ್ಪಡುತ್ತಾರೆ.) ಭಕ್ಷಣಕ್ಕೆ ಯೋಗ್ಯರಾದುದರಿಂದ (ಅನ್ನಶಬ್ದವಾಚ್ಯರು ಎಂದು) ಅಲ್ಲ. ॥ (d) ವಾಸುದೇವನು ನಿರಂತರ ದಲ್ಲಿಯೂ (ಜಗತ್ತಿಗೆ) ಅವಕಾಶವನ್ನು ಕೊಡುತ್ತಾ ಆಕಾಶದಲ್ಲಿ ಇದ್ದಾನೆ. । ಪೂರ್ವೋಕ್ತಪ್ರ ಕಾರವಾಗಿ ಐದುರೂಪವುಳ್ಳ ಶ್ರೀ ಹರಿಯನ್ನು ಯಾವಾತನು ಯಾವಾಗಲೂ ಉಪಾಸನೆ ಮಾಡು ತ್ತಾನೋ. ॥ (e) ಆತನೂ ಕೂಡ ಮುಕ್ತರಾದ ತನ್ನ ಜಾತಿಯವರಿಗೆ ಅವಕಾಶವನ್ನು ಕೊಡು ವವನು ಆಗುವನು. (ಮತ್ತೂ ತಾನು ತನ್ನ ಜಾತಿಯವರ ಮಧ್ಯದಲ್ಲಿ ಹೆಚ್ಚಾಗಿ) ಭೋಗಿಸು ವವನೂ ಆಗುವನು. । (ಯಾವಾತನು ಶ್ರೀ ಹರಿಯನು 'ಅನ್ನ'ಶಬ್ದ ವಾಚ್ಯನನ್ನಾಗಿ ತಿಳಿಯು ತ್ತಾನೋ ಆತನು) ಆ ವಿಷ್ಣುವಿನ ಅನುಗ್ರಹದಿಂದಲೇ (ತನ್ನ ಜಾತಿಯುವರಿಗೆ) ಅನ್ನನು ಅಂದರೆ ತೃಪ್ತಿಪಡಿಸುವವನೂ ಕೂಡ ಆಗುವನು. ॥ (f) ಈ ಉಪಾಸನೆಗೂ ಯೋಗ್ಯರಾದ ಬ್ರಹ್ಮ, ಇಂದ್ರ ಮೊದಲಾದ ದೇವತೆಗಳು ತನ್ನ ಜಾತಿಯವರಿಗೆ ನಿಯಾಮಕತ್ವ ಅಥವಾ ಉತ್ತಮತ್ವ ವೆಂಬುವ ಪದವಿಗೆ ಯೋಗ್ಯರಾಗಿರುತ್ತಾರೆ. ಅಂದರೆ ತಮ್ಮಿಂದ ಅಧಮರಿಗೆ ನಿಯಾಮಕರಾಗಿ ರುತ್ತಾರೆ. ಅವರಿಂದ ಇತರರಾದವರು ಅಂದರೆ ಈ ಉಪಾಸನೆಯಲ್ಲಿ ಅನಧಿಕಾರಿಗಳಾದ ಮನು ಷ್ಯಾದಿಗಳು ಕೇವಲ ಜ್ಞಾನದಲ್ಲಿ ಅಂದರೆ ಕೇವಲಜ್ಞಾನದಿಂದ ತಮಗೆ ಯೋಗ್ಯವಾದ ಆಧಿಕ್ಯ ವನ್ನು ಹೊಂದುತ್ತಾರೆ.

ಭಾ॥ (a) ಸಂಕರ್ಷಣಶ್ಚ ಪ್ರದ್ಯುಮ್ನೋ ಜಂಗಮೇಷು ವ್ಯವಸ್ಥಿತೌ । (b) ನಾರಾಯಣಾನಿರುದ್ಧೌ ತು ಸ್ಥಾವರಾಂತರ್ಗತೌ ಪ್ರಭೂ ॥ (c) ತತ್ರಾ ಪ್ಯಾಕಾಶಗೋ ನಿತ್ಯಂ ವಾಸುದೇವೋ ನಿರಂಜನಃ । (d) ಪ್ರಾಣಾನಾಂ ಭರಣಾನ್ನಿತ್ಯಂ ಪ್ರಾಣಭೃನ್ನಾಮ ತದ್ಧರೇಃ ॥ ನ ಹ್ಯನ್ಯಃ ಪ್ರಾಣಭರ್ತಾಽಸ್ತಿ ತಮೃತೇ ಪುರುಷೋತ್ತಮಂ । (e) ಓಷಣಾಚ್ಚ ನಿಧಾನಾಚ್ಚ ಸ ಏವೌ ಷಧಿನಾಮಕಃ ॥ ವನನೀಯಪತಿತ್ವಾಚ್ಚ ಸ ಏವ ಹಿ ವನಸ್ಪತಿಃ । (f) ಅನ್ನೇ ಸ್ಥಿತ್ವಾ ತೃಪ್ತಿದತ್ವಂ ತಸ್ಯಾದ್ಯತ್ವಮಪೀಷ್ಯತೇ ॥

ಅ ॥ (a) ('ಪ್ರಾಣಭೃತೋಽನ್ನಾದಂ' ಎಂಬುವುದಕ್ಕೆ ಅರ್ಥವನ್ನು ಹೇಳುತ್ತಾರೆ.) ಸಂಕರ್ಷಣ-ಪ್ರದ್ಯುಮ್ನರು ಜಂಗಮಪ್ರಾಣಿಗಳಲ್ಲಿ ಇರುತ್ತಾರೆ. (ಮತ್ತು ಭೋಕ್ತೃಗಳಿಗೆ ಶಕ್ತಿಯನ್ನು ಕೊಡುತ್ತಾರೆ. ವಿಶೇಷಾಕಾರವಾಗಿ ನಿರಂತರದಲ್ಲಿ ಭೋಕ್ತೃಗಳೂ ಆಗಿರುತ್ತಾರೆ.) ॥ (b) ('ಓಷಧಿವನಸ್ಪತಯೋಽನ್ನಂ' ಎಂಬುವುದಕ್ಕೆ ಅರ್ಥವನ್ನು ಹೇಳುತ್ತಾರೆ.) ನಾರಾಯಣಾನಿರುದ್ಧರಾದರೂ ಓಷಧ್ಯಾದಿ ಸ್ಥಾವರ ಪದಾರ್ಥಗಳಲ್ಲಿ (ಅನ್ನರೂಪರಾಗಿ) ಅಂತರ್ಗತರಾಗಿರುತ್ತಾರೆ. (ಸರ್ವಲೋಕಗಳಿಗೆ ತೃಪ್ತಿಪಡಿಸುವವರೂ ಆಗಿರುತ್ತಾರೆ.) ॥ (c) ಆ ಸ್ಥಾವರ ಜಂಗಮ ಪ್ರಾಣಿಗಳಲ್ಲಿಯೂ ನಿರ್ದೋಷಿಯಾದ ವಾಸುದೇವನು ನಿರಂತರದಲ್ಲಿಯೂ ಅವಕಾಶವನ್ನು ಕೊಡುತ್ತಿರುತ್ತಾನೆ. ॥ (d) ಇಂದ್ರಿಯಗಳನ್ನು ಅಥವಾ ಜೀವರನ್ನು ನಿರಂತರದಲ್ಲಿಯೂ ಪೋಷಿಸುವುದರಿಂದ ಶ್ರೀ ಹರಿಗೆ ಆ 'ಪ್ರಾಣಭೃತ್' ಎಂಬ ಹೆಸರು. ಕ್ಷರಾಕ್ಷರ ಪುರುಷರಿಂದ ಶ್ರೇಷ್ಠನಾದ ಆ ಹರಿಯನ್ನು ಹೊರತು ಇತರಯಾರೂ ಪ್ರಾಣರನ್ನ ಪೋಷಿಸುವವರು ಇಲ್ಲವಷ್ಟೆ! (ಅಂತೂ 'ಪ್ರಾಣಭೃತ್' ಶಬ್ದವಾಚ್ಯರು ಅನಂತರೂಪಗಳುಳ್ಳ ಸಂಕರ್ಷಣ-ಪ್ರದ್ಯುಮ್ನರು.) ॥ (e) ಆ ಶ್ರೀ ಹರಿಯೇ (ಪ್ರಳಯಕಾಲದಲ್ಲಿ ಜಗತ್ತನ್ನು) ಸುಡುವುದರಿಂದಲೂ (ತನ್ನ ಜಠರದಲ್ಲಿ) ಸ್ಥಾಪಿಸುವುದರಿಂದಲೂ, 'ಓಷಧಿ' ಎಂದು ಹೆಸರುಳ್ಳವನಾಗಿದ್ದಾನೆ. (ಅಂತೂ ಓಷಧಿ ಶಬ್ದವಾಚ್ಯನು ಬಹುರೂಪಿಯಾದ ನಾರಾಯಣನು.) ॥ ಆ ಹರಿಯೇ ಭಜಿಸಿಕೊಳ್ಳುವ ಬ್ರಹ್ಮಾದಿಗಳಿಗೂ ಸ್ವಾಮಿಯಾದುದರಿಂದಲೇ 'ವನಸ್ಪತಿ' ಯೆನ್ನಿಸಿಕೊಳ್ಳುತ್ತಾನೆ. (ಅಂತೂ ವನಸ್ಪತಿ ಶಬ್ದವಾಚ್ಯನು ಬಹುರೂಪಿಯಾದ ಅನಿರುದ್ಧನು.) ॥ (f) ಶ್ರೀ ಹರಿಗೆ ಅನ್ನದಲ್ಲಿ ಇದ್ದು ತೃಪ್ತಿಪಡಿಸುವುದೇ ಅನ್ನತ್ವವು. ಅದ್ಯತ್ವವೂ ಇಚ್ಛೈಸಲ್ಪಡುತ್ತದೆ.

ತಾ ॥ ಅನ್ನದಲ್ಲಿ ಇದ್ದು ಸರ್ವರನ್ನೂ ತೃಪ್ತಿಪಡಿಸುತ್ತಾನೆ. ಮತ್ತು ಹರಿಯನ್ನೇ ಉಪಜೀವಿಸಿಕೊಂಡು ಎಲ್ಲಾ ಬ್ರಹ್ಮಾದಿಗಳೂ ಇರುತ್ತಾರೆ. ಆದುದರಿಂದ ಉಪಜೀವ್ಯತ್ವರೂಪವಾದ ಅದ್ಯತ್ವವೂ ಇದೆ. ಆದುದರಿಂದ ಅನ್ನಶಬ್ದವಾಚ್ಯತ್ವವು ಸಂಗತವೇ ಆಗುತ್ತದೆ.

ಭಾ॥ (a) ಪುರುಷಸ್ಯ ಹರೇರ್ಯೇ ತು ಸದಾಕಾರೇಣ ಸಂಸ್ಥಿತಾಃ । ದೇವಗಂಧರ್ವಮರ್ತ್ಯಾದ್ಯಾಸ್ತೇಷು ಸಂಕರ್ಷಣೋ ಹರಿಃ ॥ ಪ್ರದ್ಯುಮ್ನಶ್ಚ ಸ್ಥಿತೋ ನಿತ್ಯಂ ಪುರುಷಾಕೃತಿರೇವ ತು । ತೌ ಭೋಕ್ತಾರೌ ಚ ಭೋಗ್ಯಾನಾಂ ಭೋಜಕಾವಖಿಲಸ್ಯ ಚ ॥ (b) ನಾರಾಯಣಾನಿರುದ್ಧೌ ತು ತಥಾಽನ್ಯಪಶುಷು ಸ್ಥಿತೌ । ವೃಷಭಾಶ್ವಾದಿರೂಪೇಣ ತೃಪ್ತಿದಾವಖಿಲಸ್ಯ ಚ ॥ (c) ವಾಹನೋಪಾನಹಾದೀನಾಮಾರೋಢಾರೋ ನರಾದಯಃ । ಯತಃ ಸಂಕರ್ಷಣಶ್ಚೈವ ಪ್ರದ್ಯುಮ್ನಸ್ತೇಷು ಸಂಸ್ಥಿತೌ ॥ ತತಸ್ತಯೋರ್ಹಿ ಸಂಚಾರ

ಉಪರೀವ ಭವಿಷ್ಯತಿ । (d) ಆಕಾಶಗೋ ವಾಸುದೇವಃ ಪಂಚಮೋऽತ್ರಾ ಪ್ಯುಪಾಸ್ಯತೇ ॥ ವಾಹನಾದಿಯುತೋ ಮುಕ್ತೌ ಭವೇದೇತದುಪಾಸಕಃ ॥ ಇತ್ಯೈತರೇಯಸಂಹಿತಾಯಾಂ ॥

ಅ ॥ ('ತೇಷಾಂ ಯ ಉಭಯತೋ ದಂತಾಃ' ಎಂಬುವಲ್ಲಿ ಎರಡು ಪಾರ್ಶ್ವದಲ್ಲಿಯೂ ಹಲ್ಲುಳ್ಳ ಪ್ರಸಿದ್ಧ ಪುರುಷರ ಸಾದೃಶ್ಯವನ್ನು ಹೊಂದಿದ ಹುಲಿ ಮೊದಲಾದುವುಗಳು 'ಅನ್ನಾದ'ಗಳು ಹಸು, ಎಮ್ಮೆ ಮೊದಲಾದುವುಗಳು 'ಅನ್ನ'ಗಳು ಎಂದು ಅನ್ಯಥಾ ಪ್ರತೀತಿಯಾಗುವುದರಿಂದ ಯೋಗ್ಯರೀತಿಯಿಂದ ವ್ಯಾಖ್ಯಾನಮಾಡುತ್ತಾರೆ. ॥) (a) ಪುರುಷಾಕಾರನಾದ ಕ್ಷೀರಾಬ್ಧಿ ಶಾಯಿಯಾದ ಶ್ರೀ ಪರಮಾತ್ಮನ (ರೀತಿಯನ್ನು ಅನುಸರಿಸಿ) ಆತನ ಆಕಾರದಿಂದಲೇ ಇರುವ ಯಾವ ದೇವತೆಗಳು, ಗಂಧರ್ವರು, ಮನುಷ್ಯ ಮೊದಲಾದವರೋ (ಅವರು ಅನ್ನಾದರು) ಅವರಲ್ಲಿ ಪುರುಷರ ಆಕಾರವೇ ಉಳ್ಳ ಸಂಕರ್ಷಣನಾಮಕ ಹರಿಯೂ ಪ್ರದ್ಯುಮ್ನನೂ ಕೂಡ ನಿರಂತರದಲ್ಲಿಯೂ ಇರುತ್ತಾರೆ. । ಅವರೇ ಭೋಗ್ಯಗಳಾದ ಎಲ್ಲಾ ವಸ್ತುಗಳನ್ನೂ ಭೋಗಿಸುತ್ತಾರೆ. ಸರ್ವರಿಗೆ ಭೋಗಶಕ್ತಿಯನ್ನೂ ಕೊಡುವವರು ಆಗಿರುತ್ತಾರೆ. ॥ (b) ಹಾಗೆಯೇ ನಾರಾಯಣ ಅನಿರುದ್ಧರಾದರೂ ಇತರಗಳಾದ ಎತ್ತು, ಕುದುರೆ ಮೊದಲಾದ ಪಶುಗಳಲ್ಲಿ ಇರುತ್ತಾರೆ. ॥ ಎತ್ತು, ಕುದುರೆ ಮೊದಲಾದ ಪಶುಗಳ ಆಕಾರದಿಂದ ಎಲ್ಲರಿಗೂ ತೃಪ್ತಿ ಪಡಿಸುತ್ತಿರುತ್ತಾರೆ. ಆದುದರಿಂದ ಅನ್ನಶಬ್ದವಾಚ್ಯರು. ॥ (c) ಯಾವ ಕಾರಣದಿಂದ ಸಂಕರ್ಷಣ-ಪ್ರದ್ಯುಮ್ನರು ಎತ್ತು ಮೊದಲಾದುವುಗಳನ್ನು ಏರಿದ ಮನುಷ್ಯ ಮೊದಲಾದವರಲ್ಲಿ ಇರುತ್ತಾರೋ (ಆದುದರಿಂದ) ಮನುಷ್ಯ ಮೊದಲಾದವರು ಎತ್ತು, ಕುದುರೆ ಮೊದಲಾದ ವಾಹನಗಳನ್ನೂ ಎಮ್ಮೆ ಮೊದಲಾದುವುಗಳ ಚರ್ಮದಿಂದ ಮಾಡಿದ ಮೆಟ್ಟು ಮೊದಲಾದುವುಗಳನ್ನೂ ಏರುತ್ತಾರೆ. ಆದುದರಿಂದ ಅಂದರೆ ಸಂಕರ್ಷಣ ಪ್ರದ್ಯುಮ್ನರು ವಾಹನದಲ್ಲಿ ಕೂತುಕೊಂಡ ಮನುಷ್ಯ ಮೊದಲಾದವರಲ್ಲಿ ಇದ್ದುದರಿಂದ, ಆ ಸಂಕರ್ಷಣ-ಪ್ರದ್ಯುಮ್ನರ ಸಂಚಾರವು ಆ ಪಶು ಮೊದಲಾದುವುಗಳಲ್ಲಿ ಅಧಿಷ್ಠಿತರಾದ ನಾರಾಯಣ ಅನಿರುದ್ಧರ ಮೇಲೆ ಆದಂತೆಯೇ ಆಗುವುದು. ॥ (d) ಇಲ್ಲಿಯೂ ಕೂಡ ಐದನೆಯವನಾದ ಆಕಾಶದಲ್ಲಿರತಕ್ಕ ವಾಸುದೇವನು (ವಾಹನದಲ್ಲಿ ಕೂತುಕೊಂಡವರಿಗೂ ಕೂತುಗೊಳಿಸಿಕೊಳ್ಳುವವುಗಳಿಗೂ ಅವಕಾಶವನ್ನು ಕೊಡುತ್ತಾನೆ ಎಂದೂ) ಉಪಾಸನೆ ಮಾಡಲ್ಪಡುತ್ತಾನೆ. ಈ ರೀತಿಯಾಗಿ ಉಪಾಸನೆಮಾಡತಕ್ಕವನು ಮುಕ್ತಿಯಲ್ಲಿ ವಾಹನಾದಿಗಳಿಂದ ಯುಕ್ತನೇ ಆಗುವನು. ಎಂದು ಐತರೇಯ ಸಂಹಿತೆಯಲ್ಲಿ ಹೇಳಿಯದೆ.

ಭಾ॥ (a) ಆತ್ಮಶಬ್ದಾಚ್ಚ ನ ಭೂತಮಾತ್ರಮುತ್ಪ್ರೇಕ್ಷ್ಯತೇ । (b) ನ ಚ ಮುಖ್ಯಾರ್ಥಂ ಪರಿತ್ಯಜ್ಯೋಪಚಾರಾರ್ಥೋऽಂಗೀಕರ್ತವ್ಯೋ ವಿರೋಧಾಭಾವೇ ॥ ಸರ್ವನಾಮವತ್ವಂ ಚ ಭಗವತಃ ಶ್ರುತ್ಯೈವೋಪಪಾದಿತಂ ಪೂರ್ವತ್ರ । (c) ವಪ. ನೀರೋಮುಕರಣಾವಕಾಶಪ್ರದಾನಬೀಜವರ್ಧನೇಷ್ವಿತಿ ಚ ಧಾತುಃ ॥

ಅ ॥ ('ಯೋ ಹ ವಾ ಆತ್ಮಾನಂ ಪಂಚವಿಧಂ' ಎಂದು ಉಪಕ್ರಮಿಸಿ 'ಪೃಥಿವೀ ವಾಯುಃ' ಇತ್ಯಾದಿಯಿಂದ ಐದು ಭೂತಗಳೇ ಐದು ವಿಧ ಆತ್ಮಗಳಾಗಿ ಹೇಳಲ್ಪಡುತ್ತವೆ. ಎಂಬೀ ಅದ್ವೈತಿಗಳ ವ್ಯಾಖ್ಯಾನವನ್ನು ಪ್ರಮಾಣದಿಂದ ನಿರಾಕರಿಸಿದರೂ ಬಾಧಕಾಂತರದಿಂದಲೂ ನಿರಾಕರಿಸುತ್ತಾರೆ-) (a) ಆತ್ಮಶಬ್ದದಿಂದ ಪಂಚಭೂತಗಳೇ ಹೇಳಲ್ಪಡುತ್ತವೆ (ಎಂದು) ಇಲ್ಲಿ (ವಿಷ್ಣುವು ಹೇಳಲ್ಪಡುವುದಿಲ್ಲವೆಂದು) ಹೇಳಕೂಡದು. (b) (ಆತ್ಮ ಶಬ್ದವು ಶರೀರಪರ

ವಾದುದರಿಂದ ಭೂತಗಳು ಶರೀರಕ್ಕೆ ಉಪಾದಾನ ಕಾರಣವಾದುದರಿಂದ ಆ ಪಂಚಭೂತಗಳಲ್ಲಿಯೂ ಆತ್ಮಶಬ್ದವು ಯುಕ್ತವೇ ಆಗುತ್ತದೆ. ಎಂದರೆ—) ವಿರೋಧವಿಲ್ಲದಿರುವಾಗ ಮುಖ್ಯವಾದ ಅರ್ಥವನ್ನು ಬಿಟ್ಟು ಅಮುಖ್ಯವಾದ ಅರ್ಥವು ಅಂಗೀಕರಿಸಿಕೊಳ್ಳಲಿಕ್ಕೆ ಯೋಗ್ಯವಾದುದಲ್ಲವಷ್ಟೇ! ಭಗವಂತನಾದ ಶ್ರೀ ಪರಮಾತ್ಮನಿಗಾದರೂ ಎಲ್ಲಾ ಹೆಸರುಗಳು ಇವೆ ಎಂಬುವುದು ಪೂರ್ವದಲ್ಲಿ 'ತಾ ವಾ ಏತಾಃ ಸರ್ವಾ ಋಚಃ' ಎಂಬೀ ಉಪನಿಷತ್ತಿನಿಂದಲೇ ಅಥವಾ 'ನಾಮಾನಿ ಸರ್ವಾಣಿ' ಇತ್ಯಾದಿ ಶ್ರುತಿಯಿಂದಲೇ ಸಮರ್ಥಿಸಲ್ಪಟ್ಟಿವೆ. ಅಂತೂ ಆತ್ಮಶಬ್ದವು ಪೃಥಿವ್ಯಾದಿ ಐದು ಭೂತಪರವಾದುದು ಎಂದು ಅಂಗೀಕರಿಸಿದರೆ ಆತ್ಮಶ್ರುತಿ ವಿರೋಧವಿದ್ದಂತೆಯೇ ಭಗವತ್ಪರವಾದುದು ಎಂದಂಗೀಕರಿಸಿದರೆ ಯಾವುದೊಂದು ವಿರೋಧವೂ ಬರುವುದಿಲ್ಲ. (c) ('ಆವಪನಂ ಆಕಾಶಃ' ಎಂಬುವುದಕ್ಕೆ ಅವಕಾಶವನ್ನು ಕೊಡುವವನು ಎಂದು ಪ್ರಮಾಣದಿಂದ ವ್ಯಾಖ್ಯಾನ ಮಾಡಿದ್ದರು. ಅದಕ್ಕೆ ಮೂಲಭೂತವಾದ ಧಾತುವ್ಯಾಖ್ಯಾನವನ್ನು ನಿರೂಪಿಸುತ್ತಾರೆ.) 'ವಪ' ಎಂಬ ಧಾತುವು (1) ರೋಮವಿಲ್ಲದೆ ಇರುವಹಾಗೆ ಮಾಡುವಿಕೆ, (2) ಅವಕಾಶವನ್ನು ಕೊಡುವುದು, (3) ಬೀಜಗಳನ್ನು ಅಭಿವೃದ್ಧೀಕರಿಸುವುದು (ಹೀಗೆ ಮೂರು ಅರ್ಥಗಳಲ್ಲಿ ಪಠಿತವಾಗಿಯದೆ).

**ಭಾ॥ (a)** ತಸ್ಮಿನ್ಪಂಚಕೇ ಯೋಽನ್ನಮನ್ನಾದಂ ಚ ವೇದ ಸೋಽಸ್ಮಿನ್ಸ್ವಜಾತಿಯೂಥೇ ವಿಶೇಷೇಣಾನ್ನಾದ ಆಜಾಯತೇ ಹ । **(b)** ತಸ್ಮಿನ್ವೇದ ಅಸ್ಮಿನ್ನಾಜಾಯತ ಇತಿ ಪೃಥಕ್ಪೃಥಕ್ಪುನಃ ಪುನರ್ವಿಶೇಷಣಾತ್ ॥ **(c)** ಉಪಾಸಕಸ್ಯ ಸ್ವಜಾತಿಸನ್ನಿಧಾನಾಚ್ಚ ಸ್ವಜಾತಾವಿತಿ ಜ್ಞಾಯತೇ ॥

ಅ ॥ (a) ('ತಸ್ಮಿನ್ ಯೋಽನ್ನಂ ಚಾನ್ನಾದಂ ಚ ವೇದ' ಎಂಬುವುದಕ್ಕೆ ಆ ಭೂತಪಂಚಕದಲ್ಲಿ ಯಾವಾತನು ಅನ್ನವನ್ನೂ ಅನ್ನಾದವನ್ನೂ ತಿಳಿಯುತ್ತಾನೋ ಆತನು ಇದೇ ಐದು ಭೂತಗಳ ಮಧ್ಯದಲ್ಲಿ ಭೂಲೋಕದಲ್ಲಿ ಸರ್ವಭೋಗವನ್ನು ಭೋಗಿಸುವವನಾಗಿ ಹುಟ್ಟುತ್ತಾನೆ. ಎಂಬೀ ಅದ್ವೈತಿಗಳ ವ್ಯಾಖ್ಯಾನವು ಅಸಂಗತವು ಎಂಬೀ ಅಭಿಪ್ರಾಯದಿಂದ ತನ್ನಮಾತಿನಿಂದಲೂ ವಿವರಿಸುತ್ತಾರೆ.) ಆ ಭೂತಗಳಲ್ಲಿ ಅಂತರ್ಗತವಾದ ನಾರಾಯಣಾದಿ ಐದು ರೂಪಗಳ ಮಧ್ಯದಲ್ಲಿ ಯಾವ ಅಧಿಕಾರಿಯು ಸರ್ವರಿಗೂ ತೃಪ್ತಿಜನಕವಾದುದರಿಂದ ಅನ್ನಶಬ್ದವಾಚ್ಯವೂ, ಭೋಗಶಕ್ತಿಯನ್ನು ಕೊಡುವುದರಿಂದ ಅನ್ನಾದ ಶಬ್ದವಾಚ್ಯವೂ ಆದ ಭಗವದ್ರೂಪವನ್ನು ತಿಳಿಯುತ್ತಾನೋ ಆತನು ಈ ತನ್ನ ಜಾತಿಸಮೂಹದಲ್ಲಿ ವಿಶೇಷಾಕಾರವಾಗಿ ಭೋಗವನ್ನು ಭೋಗಿಸುವವನಾಗಿ ಆಧಿಕ್ಯದಿಂದ ಹುಟ್ಟುತ್ತಾನೆ. ಹ=ಪ್ರಸಿದ್ಧವು. ॥ (b) 'ತಸ್ಮಿನ್ ವೇದ' 'ಅಸ್ಮಿನ್ ಆಜಾಯತೇ' ಎಂದು ಬೇರೆ ಬೇರೆಯಾಗಿ (ಅಂದರೆ 'ಆಪಶ್ಚ ಪೃಥಿವೀಚಾನ್ನಂ' ಎಂಬೀ ಪ್ರಕರಣದಲ್ಲಿಯೂ 'ಓಷಧಿ ವನಸ್ಪತಯೋಽನ್ನಂ' ಎಂಬೀ ಪ್ರಕರಣದಲ್ಲಿಯೂ, ಉಪಾಸ್ಯದ ಸಮುದಾಯಕ್ಕೆ 'ತಸ್ಮಿನ್ ತಸ್ಮಿನ್' ಎಂಬುವುದೂ, ಉಪಾಸಕನಿಗೆ 'ಅಸ್ಮಿನ್ನಾಜಾಯತೇ ಅಸ್ಮಿನ್ನಾಜಾಯತೇ' ಎಂಬುವುದೂ), ಮತ್ತೂ ಮತ್ತೂ ವಿಶೇಷಣವಿದ್ದುದರಿಂದ, ('ತಸ್ಮಿನ್' ಎಂಬುವುದಕ್ಕೆ ಐದು ರೂಪಗಳಲ್ಲಿ, 'ಅಸ್ಮಿನ್' ಎಂಬುವುದಕ್ಕೆ ತನ್ನ ಜಾತಿವರ್ಗದಲ್ಲಿ, ಎಂಬೀ ಅರ್ಥವೇ ಉಪಪನ್ನವಾಗತಕ್ಕದು). [ತಾ ॥ ಒಂದನೇ ಪ್ರಕರಣದಲ್ಲಿ 'ತಸ್ಮಿನ್' ಎಂಬುವುದಕ್ಕೆ ಪೃಥಿವ್ಯಾದಿ ಶಬ್ದದಿಂದ ಹೇಳಲ್ಪಟ್ಟ ಐದುವಿಧ ಆತ್ಮನನ್ನು ಇಟ್ಟುಕೊಳ್ಳತಕ್ಕದು ಎಂಬುವುದರಲ್ಲಿ ವಿವಾದವೇ ಇಲ್ಲವು. ಅಲ್ಲಿ ಐದು ಭೂತಗಳನ್ನೇ ಅಂಗೀಕರಿಸಿಕೊಳ್ಳುವುದಾದರೆ ಎರಡನೇ ಪ್ರಕರಣ

ದಲ್ಲಿಯೂ ಅವುಗಳೇ ಪೂರ್ವದಲ್ಲಿ ಪ್ರಸ್ತುತಗಳಾಪುದರಿಂದ 'ತತ್' ಶಬ್ದದಿಂದ ಐದು ಭೂತಗಳನ್ನೇ ಪರಾಮರ್ಶಿಸಿಕೊಳ್ಳಬೇಕಾಯಿತು. ಆದಾದರೂ ಯುಕ್ತವಾಗಲಾರದು. ಏಕೆಂದರೆ-ಅದನ್ನು ವಿವರಿಸುವ 'ಓಸಧಿವನಸ್ಪತಯೋಽನ್ನಂ' ಇತ್ಯಾದಿ ವಾಕ್ಯದಿಂದ ವಿರೋಧವು ಬರುತ್ತದೆಷ್ಟೇ! 'ನಾರಾಯಣಾದಿ ಐದು ರೂಪವನ್ನು ಪರಾಮರ್ಶಮಾಡಿಕೊಳ್ಳಬೇಕು' ಎಂದಂಗೀಕರಿಸಿದರೆ ಅಧಿಷ್ಠಾನಗಳು ಬೇರೆ ಬೇರೆಗಳಾದರೂ ಎರಡು ಪ್ರಕರಣದಲ್ಲಿಯೂ ಒಂದೇ ವಿಧವಾದ ನಿಯಾಮಕವಾದ ಐದು ಭಗವದ್ರೂಪವನ್ನು ಅಂಗೀಕರಿಸುವುದರಿಂದ ವಿರೋಧವೇ ಇಲ್ಲ. 'ಅಸ್ಮಿನ್ ಆಜಾಯತೇ' ಎಂಬೀ ಒಂದನೇ ಪ್ರಕರಣದಲ್ಲಿ ಅಸ್ಮಿನ್=ತನ್ನಿಂದ ಉಪಾಸ್ಯಗಳಾದ ಭೂತಗಳ ಮಧ್ಯದಲ್ಲಿ ಸೇರಿದ ಭೂಲೋಕದಲ್ಲಿ, ಎರಡನೇ ಪ್ರಕರಣದಲ್ಲಿ ಆದರೂ ಅಸ್ಮಿನ್=ತನ್ನಿಂದ ಉಪಾಸ್ಯಗಳಾದ ಪ್ರಾಣಿಗಳ ಸಮೂಹದಲ್ಲಿ ಎಂಬೀ ವ್ಯಾಖ್ಯಾನವೂ ಅಯುಕ್ತವು. ಒಂದನೇ ಪ್ರಕರಣದಲ್ಲಿ 'ಅಸ್ಮಿನ್' ಎಂಬುವುದರಿಂದ ಸ್ವೀಕರಿಸಿದ್ದನ್ನೇ ಎರಡನೇ ಪ್ರಕರಣದಲ್ಲಿ 'ಇದಂ' ಶಬ್ದದಿಂದ ಪರಾಮರ್ಶೆಮಾಡಿಕೊಳ್ಳತಕ್ಕದು. ಆದುದರಿಂದ 'ಪ್ರಾಣಿಗಳ ಸಮುದಾಯ' ಎಂಬೀ ಪರಾಮರ್ಶೆಯು ಎಷ್ಟುಮಾತ್ರಕ್ಕೂ ಕೂಡಲಾರದು. 'ತನ್ನ ಜಾತಿವರ್ಗದಲ್ಲಿ' ಎಂದು ಅಂಗೀಕರಿಸಿದರೆ ಎರಡು ಪ್ರಕರಣದಲ್ಲಿ ಶ್ರುತಗಳಾದ 'ಇದಂ' ಶಬ್ದಗಳಿಗೆ ಏಕಾರ್ಥಕತ್ವವೇ ಸಿಗುವುದು.] (c) (ಹಾಗಾದರೆ ಎರಡನೇ ಪ್ರಕರಣದಲ್ಲಿಯೂ 'ಅಸ್ಮಿನ್' ಎಂಬುವುದಕ್ಕೆ ಪೃಥಿವೀ ಲೋಕದಲ್ಲಿ ಎಂಬೀ ಅರ್ಥವನ್ನು ಅಂಗೀಕರಿಸುತ್ತೇನೆ ಎಂದರೆ ದೋಷಾಂತರವನ್ನು ಹೇಳುತ್ತಾರೆ) (ಎರಡು ಪ್ರಕರಣದಲ್ಲಿಯೂ ಹೇಳಲ್ಪಟ್ಟ) ಉಪಾಸಕನಿಗೆ ('ಅಯನಂ ಹ ವೈ ಸಮಾನಾನಾಂ ಭವತಿ' 'ಆವಪನಂ ಹ ವೈ ಸಮಾನಾನಾಂ ಭವತಿ' ಎಂದು) ತನ್ನ ಜಾತಿ ಎಂಬ ಅರ್ಥವನ್ನು ಹೇಳುವ ಪದವಿದ್ದುದರಿಂದಲೂ (ಪೃಥಿವೀ ಪದವು ಇಲ್ಲದಿರುವುದರಿಂದಲೂ, 'ಅಸ್ಮಿನ್' ಎಂಬುವುದಕ್ಕೆ ತನ್ನ ಜಾತಿಯಲ್ಲಿ ಎಂಬೀ (ಅರ್ಥವು) ತಿಳಿಯಲ್ಪಡುತ್ತದೆ.

**ಭಾ||** **(a)** ಕ್ಷೀರಾಬ್ಧಿಶಯನಂ ವಿಷ್ಣೋಃ ರೂಪಂ ಯತ್ಪುರುಷಾಭಿಧಂ । ಸಂಕರ್ಷಣಶ್ಚ ಪ್ರದ್ಯುಮ್ನಸ್ತದಾಕಾರೌ ನೃಷು ಸ್ಥಿತೌ ॥ ನಾರಾಯಣಾನಿರುದ್ಧೌ ತು ಪಶ್ವಾಕಾರೌ ಪಶುಸ್ಥಿತೌ । ಇತಿ ಸತ್ತತ್ವೇ ॥ **(b)** ಗುಣವೈಶೇಷ್ಯಾಭಾವೇನ ವಾಹನಾದಿಷು ಚರಣಮಾತ್ರಾದಧೀವ ಚರಂತೀತ್ಯಾದಾವಿವಶಬ್ದಃ ॥೧॥

ಅ || (a) ('ಪುರುಷಸ್ಯಾನುವಿಧಾಂ' ಎಂಬುವಲ್ಲಿ, ಶ್ರೀ ಹರಿಗೆ ಎಲ್ಲಾ ಆಕಾರಗಳೂ ಇರುವುದರಿಂದ ಪಶುಗಳ ಆಕಾರವೂ ಅದೆ. ಆದುದರಿಂದ ಶ್ರೀ ಹರಿಯ ಆಕಾರದ ಸಾದೃಶ್ಯವು ಪಶುಗಳಲ್ಲಿಯೂ ಇದ್ದುದರಿಂದ 'ಪುರುಷಸ್ಯ' ಎಂಬುವುದಕ್ಕೆ ಶ್ರೀ ಹರಿಯ ಎಂಬೀ ವ್ಯಾಖ್ಯಾನವು ಅಸಂಗತವು. ಎಂದರೆ- 'ಪುರುಷ' ಎಂಬ ಪದದಿಂದ ಪುರುಷರ ಆಕಾರವುಳ್ಳ ಪುರುಷನಾಮಕವಾದ ರೂಪವಿಶೇಷವನ್ನೇ ಅಂಗೀಕರಿಸಿಕೊಳ್ಳತಕ್ಕದು ಎಂಬುವುದನ್ನು ಪ್ರಮಾಣದಿಂದಲೇ ಸಮರ್ಥಿಸುತ್ತಾರೆ.) ಕ್ಷೀರಸಮುದ್ರದಲ್ಲಿ ಮಲಗಿಕೊಂಡಿರುವ, 'ಪುರುಷ' ಎಂದು ಹೆಸರುಳ್ಳ, ಯಾವ ವಿಷ್ಣುವಿನ ರೂಪವದೆಯೋ । ಆ ಪುರುಷಾಕಾರವುಳ್ಳ ಸಂಕರ್ಷಣ ಪ್ರದ್ಯುಮ್ನರು ಮನುಷ್ಯ ಮೊದಲಾದವರಲ್ಲಿದ್ದು (ಭೋಕ್ತೃಗಳೂ ಭೋಗಶಕ್ತಿಯನ್ನು ಕೊಡುವವರೂ ಆಗಿರುತ್ತಾರೆ.) ॥ ನಾರಾಯಣ ಅನಿರುದ್ಧರಾದರೂ ಪಶುಗಳ ಆಕಾರವುಳ್ಳವರಾಗಿ ಪಶುಗಳಲ್ಲಿ ಇರುತ್ತಾರೆ. (ಸರ್ವರನ್ನು ತೃಪ್ತಿಪಡಿಸುವುದರಿಂದ ಅನ್ನಶಬ್ದವಾಚ್ಯರೂ ಆಗಿರುತ್ತಾರೆ.) ಎಂದು 'ಸತ್ತತ್ವ'ವೆಂಬ ಗ್ರಂಥದಲ್ಲಿ (ಹೇಳಿಯದೆ.) ॥ (b) (ಭಗವದ್ರೂಪಗಳಿಗೆ) ಗುಣಗಳಲ್ಲಿ ವಿಶೇಷವಿಲ್ಲದಿರುವುದರಿಂದ ವಾಹನ ಮೊದಲಾದುವುಗಳಲ್ಲಿ ಕೇವಲ ಸಂಚಾರದಿಂದ 'ಅಧೀವ ಚರಂತಿ' ಇತ್ಯಾದಿ ಪ್ರದೇಶದಲ್ಲಿ

'ಇವ' ಶಬ್ದವು. ಅಂತೂ ಒಂದು ಭಗವದ್ರೂಪವು ವಾಹ್ಯವಾಗಿಯೂ ಮತ್ತೊಂದು ಭಗವದ್ರೂಪವು ವಾಹಕವಾಗಿಯೂ ತೋರಿಸಿಕೊಂಡರೂ ಆ ಭಗವದ್ರೂಪಗಳಿಗೆ ಅಲ್ಪವಾದ ತಾರತಮ್ಯವೂ ಇಲ್ಲವೇ ಇಲ್ಲ. ಈ ಅಭಿಪ್ರಾಯವನ್ನು ತೋರಿಸುವುದಕ್ಕೋಸ್ಕರ ಇವಶಬ್ದವು ಪ್ರಯುಕ್ತವಾಗಿಯದೆ. ॥ ೧ ॥

ಒಂದನೇ ಖಂಡದಲ್ಲಿ ಅಚೇತನವು ಭೋಗ್ಯವೆಂತಲೂ ಚೇತನವು ಭೋಕ್ತೃ ಎಂತಲೂ ಚೇತನಗಳಲ್ಲಿಯೂ ಸ್ಥಾವರಗಳು ಭೋಗ್ಯಗಳೆಂದೂ ಜಂಗಮ ಪ್ರಾಣಿಗಳು ಭೋಕ್ತೃಗಳೆಂದೂ ಜಂಗಮಗಳಲ್ಲಿಯೂ ಹಸು ಮೊದಲಾದುವುಗಳು ಭೋಗ್ಯಗಳೆಂದೂ ಪುರುಷರು ಭೋಕ್ತೃಗಳೆಂದೂ ಹೇಳಿಯದೆ. ಯಾವ ಕಾರಣದಿಂದ ಪದಾರ್ಥಗಳಲ್ಲಿ ತಾರತಮ್ಯವು ಎಂದರೆ- ಭಗವತ್ಸನಿಧಾನವು ಹೆಚ್ಚುಕಡಿಮೆಯಾದುದರಿಂದ. ಎಂಬೀ ಅಭಿಪ್ರಾಯದಿಂದ ಎರಡನೇ ಖಂಡವು ಪ್ರವೃತ್ತವಾಗಿಯದೆ ಎಂದು ನಿರೂಪಿಸುತ್ತಾರೆ.

**ಮಂ ॥ ತಸ್ಯ ಯ ಆತ್ಮಾನಮಾವಿಸ್ತರಾಂ ವೇದಾಶ್ನುತೇ ಹಾವಿರ್ಭೂಯ ಓಷಧಿವನಸ್ಪತಯೋ ಯಚ್ಚ ಕಿಂಚ ಪ್ರಾಣಭೃತ್ಸ ಆತ್ಮಾನಮಾವಿಸ್ತರಾಂ ವೇದೌಷಧಿವನಸ್ಪತಿಷು ಹಿ ರಸೋ ದೃಶ್ಯತೇ ಚಿತ್ತಂ ಪ್ರಾಣಭೃತ್ಸು ಪ್ರಾಣಭೃತ್ಸು ತ್ವೇವಾऽವಿಸ್ತರಾಮಾತ್ಮಾ ತೇಷು ಹಿ ರಸೋ ದೃಶ್ಯತೇ ನ ಚಿತ್ತಮಿತರೇಷು ಪುರುಷೇತ್ವೇವಾऽವಿಸ್ತರಾಮಾತ್ಮಾ ಸ ಹಿ ಪ್ರಜ್ಞಾನೇನ ಸಂಪನ್ನತಮೋ ವಿಜ್ಞಾತಂ ವದತಿ ವಿಜ್ಞಾತಂ ಪಶ್ಯತಿ ವೇದ ಶ್ವಸ್ತನಂ ವೇದ ಲೋಕಾಲೋಕೌ ಮರ್ತ್ಯೇನಾಮೃತಮೀಪ್ಸತ್ಯೇವಂ ಸಂಪನ್ನೋऽಥೇತರೇಷಾಂ ಪಶೂನಾಮಶನಾಪಿಪಾಸೇ ಏವಾಭಿವಿಜ್ಞಾನಂ ನ ವಿಜ್ಞಾತಂ ವದಂತಿ ನ ವಿಜ್ಞಾತಂ ಪಶ್ಯಂತಿ ನ ವಿದುಃ ಶ್ವಸ್ತನಂ ನ ಲೋಕಾಲೋಕೌ ತ ಏತಾವಂತೋ ಭವಂತಿ ಯಥಾಪ್ರಜ್ಞಂ ಹಿ ಸಂಭವಾಃ ॥ ೨ ॥**

ಅ ॥ ಯಃ=ಯಾವ ಅಧಿಕಾರಿಯು, ಆತ್ಮಾನಂ=ಪರಮಾತ್ಮನನ್ನು, ಆವಿಸ್ತರಾಂ=ಆವಿರ್ಭಾವದ ತಾರತಮ್ಯದಿಂದ, ಅಂದರೆ ನೀಚೋಚ್ಚಭಾವದಿಂದಲೇ ಎಲ್ಲಾ ಪ್ರಾಣಿಗಳಲ್ಲಿಯೂ ಸನ್ನಿಧಾನಯುಕ್ತನನ್ನಾಗಿ, ವೇದ=ತಿಳಿಯುತ್ತಾನೋ, ಸಃ=ಅವನು, ತಸ್ಯ=ಹರಿಯ ಸಂಬಂಧಿಯಾದವನೇ, ಅಂದರೆ ಪರಮಾತ್ಮನ ಪ್ರೀತಿಗೆ ಪಾತ್ರನಾಗುತ್ತಾನೆ. ಓಷಧಿ ವನಸ್ಪತಯಃ=ಸ್ಥಾವರ ಪದಾರ್ಥಗಳೂ, ಯತ್ ಚ ಕಿಂಚ, ಪ್ರಾಣಭೃತ್=ಚಲನಯುಕ್ತವಾದ ಯಾವುದು ಯಾವುದು ಜಂಗಮ ಪ್ರಾಣಿಯದೆಯೋ, (ಇವೆಲ್ಲವನ್ನು) ಸಃ=ಆ ನಾರಾಯಣನು, ಭೂಯಃ=ಹೆಚ್ಚಾಗಿ ಅಂದರೆ ಕಲ್ಲು ಮೊದಲಾದುವುಗಳಿಂದ ವಿಶೇಷಾಕಾರವಾಗಿ, ಆವಿಃ=(ಆ ಸ್ಥಾವರ ಜಂಗಮಗಳಲ್ಲಿ) ಸನ್ನಿಹಿತನಾಗಿ, ಅಶ್ನುತೇ=ಹೊಂದುತ್ತಾನೆ. ಸ ಹ=ಆ ನಾರಾಯಣನೇ, ಆತ್ಮಾನಂ=ತನ್ನನ್ನು ಆವಿಸ್ತರಾಂ=ನೀಚೋಚ್ಚಭಾವದಿಂದ ಎಲ್ಲಾ ವಸ್ತುಗಳಲ್ಲಿಯೂ ಸನ್ನಿಹಿತನನ್ನಾಗಿ, ವೇದ=ಚೆನ್ನಾಗಿ ತಿಳಿಯುತ್ತಾನೆ. (ಇತರನು ತಿಳಿಯಲಾರನು.) (ಕಲ್ಲು ಮೊದಲಾದುವುಗಳಿಕ್ಕಿಂತ (ಶ್ರೀ ಪರಮಾತ್ಮನ ವಿಶೇಷಸನ್ನಿಧಾನವಿದ್ದುದರಿಂದಲೇ) ಓಷಧಿ ವನಸ್ಪತಿಷು=ಸ್ಥಾವರ ಪದಾರ್ಥಗಳಲ್ಲಿ, ರಸಃ=ಕ್ಷೀರಮೊದಲಾದುದು, ದೃಶ್ಯತೇ=ಕಾಣಲ್ಪಡುತ್ತದೆ. ಪ್ರಾಣಭೃತ್ಸು=ಚರಪ್ರಾಣಿಗಳಲ್ಲಿ, ಚಿತ್ತಂ=ಸ್ಮೃತಿಕಾರಣವಾದ ವೃತ್ತಿವಿಶೇಷವು, ದೃಶ್ಯತೇ ಹಿ=ಕಾಣಲ್ಪಡುತ್ತದಷ್ಟೇ!

(ಕಲ್ಲು ಮೊದಲಾದುವುಗಳಲ್ಲಿ ಚಿತ್ತವು ಕಾಣಲ್ಪಡುವುದಿಲ್ಲವಷ್ಟೇ, ಆದುದರಿಂದ ವೃಕ್ಷವೊದ ಲಾದುವುಗಳು ಶಿಲಾದಿಗಳಿಂದ ಉತ್ತಮಗಳು.) ಪ್ರಾಣಭೃತ್ಸು ಏವ=ಚರಪ್ರಾಣಿಗಳಲ್ಲಿಯೇ, ತು=ವಿಶೇಷವಾಗಿ ಅಂದರೆ ಸ್ಥಾವರ ಪದಾರ್ಥಗಳಿಗಿಂತ ಹೆಚ್ಚುಗುಣಗಳಿರುವುದರಿಂದ, ಆತ್ಮಾ=ಪರಮಾತ್ಮನು, ಆವಿಸ್ತರಾಂ=ನೀಚೋಚ್ಚಭಾವದಿಂದ ಸನ್ನಿಹಿತನಾಗಿರುತ್ತಾನೆ. ತೇಷು= ಜಂಗಮ ಪ್ರಾಣಿಗಳಲ್ಲಿ, ರಸೋಽಪಿ=(ಸ್ಥಾವರಗಳಲ್ಲಿ ಇಲ್ಲದಿರುವ) ರಸವು (ಚಿತ್ತವೂ ಕೂಡ) ದೃಶ್ಯತೇ ಹಿ=ಕಾಣಲ್ಪಡುತ್ತದಷ್ಟೇ, ಇತರೇಷು=ಸ್ಥಾವರಗಳಲ್ಲಾದರೂ (ರಸವು ಒಂದೇ ಇರು ವುದು. ಚಿತ್ತಂ=ಮನಸ್ಸು, ನ=ಇಲ್ಲ, ಪುರುಷೇ ತ್ವೇವ=(ಚರಪ್ರಾಣಿಗಳಲ್ಲಿಯೂ ಪಶ್ವಾದಿಗಳಿ ಗಿಂತ) ಮನುಷ್ಯರಲ್ಲಿಯೇ, ಆತ್ಮಾ=ಪರಮಾತ್ಮನು, ಆವಿಸ್ತರಾಂ=ಗುಣಾಧಿಕ್ಯವನ್ನು ತೋರಿ ಸುತ್ತಿರುತ್ತಾನೆ. ಸ ಹಿ=ಮನುಷ್ಯರಾದರೂ, ಪ್ರಜ್ಞಾನೇನ=ಪ್ರಜ್ಞೆಯಿಂದ, ಸಂಪನ್ನತಮಃ= (ಪಶ್ವಾದಿಗಳಿಗಿಂತಲೂ) ಅತಿ ಸಂಪನ್ನನಾಗಿದ್ದಾನೆ. ಸಃ=ಆ ಪುರುಷನು, ವಿಜ್ಞಾತಂ=(ಮನಸ್ಸಿ ನಿಂದ) ತಿಳಿಯಲ್ಪಟ್ಟದ್ದನ್ನು, ವದತಿ=(ಮಾತಿನಿಂದ) ಹೇಳುತ್ತಾನೆ. ವಿಜ್ಞಾತಂ=ಪೂರ್ವದಲ್ಲಿ ಅನುಭೂತವಾದುದನ್ನು, ಪಶ್ಯತಿ=ಯುಕ್ತಿಗಳಿಂದ ವಿಚಾರಮಾಡಿ ನಿಶ್ಚೈಸಿಕೊಳ್ಳುತ್ತಾನೆ. ಶ್ವಸ್ತ ನಂ=ಮೇಲೆ ಆಗುವ ಅರ್ಥವನ್ನು, ವೇದ=(ಹೇತುಗಳಿಂದ) ಅನುಮೇಯಿಸಿಕೊಳ್ಳುತ್ತಾನೆ. ಲೋಕಾಲೋಕೌ=ಲೋಕಾಲೋಕಪ್ರದೇಶಗಳನ್ನು ಅಥವಾ ಸಂಸಾರಮೋಕ್ಷಗಳನ್ನು ಯಾ ಸ್ವರ್ಗನರಕಗಳನ್ನು, ವೇದ=(ವೇದಶಾಸ್ತ್ರಗಳಿಂದ) ತಿಳಿಯುತ್ತಾನೆ. ಅಥವಾ ಪೌರುಷೇಯ ಅಪೌರುಷೇಯ ಆಗಮಗಳನ್ನಾಗಲೀ ತಿಳಿಯುತ್ತಾನೆ. ಮರ್ತ್ಯೇನ=ಶರೀರದಿಂದ, ಅಮೃತಂ= ಮುಕ್ತಿಯನ್ನು, ಈಪ್ಸತಿ=(ಪ್ರಾಪಿಸಲಿಕ್ಕೆ) ಇಚ್ಛಿಸುತ್ತಾನೆ. ಏವಂ=ಪೂರ್ವೋಕ್ತಪ್ರಕಾರವಾಗಿ, ಸಂಪನ್ನಃ=(ಮನುಷ್ಯನು) ಪ್ರಜ್ಞಾ ಸಂಪತ್ತು ಉಳ್ಳವನಾಗುತ್ತಾನೆ. ಅಥ=ಮನುಷ್ಯರಿಂದ, ಇತರೇಷಾಂ ಪಶೂನಾಂ=ಬೇರೆಯಾದ ಪಶುಗಳಿಗಾದರೂ, ಅಶನಾಪಿಪಾಸೇ ಏವ=ಅಶನೇಚ್ಛಾ ಪಾನೇಚ್ಛಾ ವಿಷಯಗಳ ಪ್ರಾಪ್ತಿಯನ್ನು ಕುರಿತೇ, ಅಭಿವಿಜ್ಞಾನಂ=ಪ್ರಜ್ಞೆಯು. (ಪಶುಗಳು) ವಿಜ್ಞಾತಂ=ತಿಳಿದ ಅರ್ಥವನ್ನು, ನ ವದಂತಿ=ಹೇಳುವುದಿಲ್ಲ. ವಿಜ್ಞಾತಂ=ಸಾಮಾನ್ಯವಾಗಿ ತಿಳಿದುದ್ದನ್ನು, ನ ಪಶ್ಯಂತಿ=ಯುಕ್ತಿಗಳಿಂದ ವಿಚಾರಮಾಡಿ ನಿಶ್ಚೈಸಿಕೊಳ್ಳುವುದಿಲ್ಲ. ಶ್ವಸ್ತನಂ= ಭವಿಷ್ಯತ್ಕಾಲಿಕ ವಸ್ತುವನ್ನು, ನ ವಿದುಃ=ಅನುಮೆಯಿಸಿಕೊಳ್ಳುವುದಿಲ್ಲ. ಲೋಕಾಲೋಕೌ= ಸಂಸಾರ ಮೋಕ್ಷಗಳನ್ನಾಗಲೀ, ನ=ತಿಳಿಯುವುದಿಲ್ಲ. ತೇ=ಆ ಪಶುಗಳು, ಏತಾವಂತಃ= ಹೇಳಿದಪ್ರಕಾರವುಳ್ಳವುಗಳೇ, ಭವಂತಿ=ಆಗುತ್ತವೆ. ಸಂಭವಾಃ=(ಪ್ರಾಣಿಗಳ) ಉತ್ಪತ್ತಿಗಳು, ಯಥಾ ಪ್ರಜ್ಞಂ=ಆಯಾಯ ಜ್ಞಾನ ಕರ್ಮಾದಿಗಳನ್ನು ಅನುಸರಿಸಿಕೊಂಡು ಆಗುತ್ತವೆ. ॥ ೨ ॥

ತಾ ॥ ಯಾವಾತನು, ಎಲ್ಲಾ ಪ್ರಾಣಿಗಳಲ್ಲಿಯೂ ನೀಚೋಚ್ಚಭಾವದಿಂದ ಶ್ರೀಹರಿಯು ಇದ್ದಾನೆಂದು ತಿಳಿಯುತ್ತಾನೋ ಆತನು ಶ್ರೀ ಹರಿಯ ಪ್ರೀತಿಗೆ ಪಾತ್ರನಾಗುತ್ತಾನೆ. ಶ್ರೀ ಹರಿಯ ಸನ್ನಿಧಾನದ ತಾರತಮ್ಯದಿಂದಲೇ ಪದಾರ್ಥಗಳಲ್ಲಿ ನೀಚೋಚ್ಚಭಾವವು. ವೃಕ್ಷಾದಿ ಸ್ಥಾವರ ಪದಾರ್ಥಗಳಿಗೆ ಶಿಲಾದಿಗಳಿಗಿಂತ ಭಗವತ್ಸನ್ನಿಧಾನ ಹೆಚ್ಚು ಇದ್ದಪ್ರಯುಕ್ತವೇ ರಸವು ಅನುಭೂತವಾಗುತ್ತದೆ. ಚರಪ್ರಾಣಿಗಳಲ್ಲಿ ಶಿಲಾದಿಗಳಲ್ಲಿ ಇಲ್ಲದೆ ಇರುವ ಚಿತ್ತವೂ ಅನುಭವ ಸಿದ್ಧವಾಗಿಯದೆ. ಆದಕಾರಣ ವೃಕ್ಷಾದಿಗಳು ಶಿಲಾದಿಗಳಿಂದ ಶ್ರೇಷ್ಠಗಳು. ಸ್ಥಾವರಗಳಲ್ಲಿ ಇಲ್ಲ ದಿರುವ ರಸಚಿತ್ತಗಳು ಚರಪ್ರಾಣಿಗಳಿಗೆ ತೋರುವುದರಿಂದ ಅವುಗಳು ಸ್ಥಾವರಗಳಿಂದ ಶ್ರೇಷ್ಠ ಗಳು. ಯದ್ಯಪಿ 'ಗೀತಾತ್ಪುಷ್ಪಫಲಾವಾಪ್ತಿಃ ಸ್ಪರ್ಶಾತ್ಕಾರ್ಶ್ಯಂ ರಸಾತ್ ಸ್ಥಿತಿಃ । ಅಪಿ ವೃಕ್ಷಸ್ಯ ದೃಶ್ಯಂತೇ' ಎಂದು ಅನುವ್ಯಾಖ್ಯಾನವನ್ನು ವ್ಯಾಖ್ಯಾನಮಾಡುವ ವೇಳೆಯಲ್ಲಿ ಸುಧಾದಲ್ಲಿ 'ತಿಲಕ ವೃಕ್ಷಕ್ಕೆ ಸುಂದರಿ ಸ್ತ್ರೀಯರನ್ನು ನೋಡಿದೊಡನೆ ಪುಷ್ಪಮೊದಲಾದುವುಗಳು ಪ್ರಾಪಿಸಲ್ಪಡುತ್ತವೆ.

ಅದರಿಂದ ನೋಡುವಿಕೆಯೂ, ಇಚ್ಛೆಯೂ ಸಿದ್ಧವಾಗುತ್ತವೆ. ಅಲ್ಲದೆ ಕಣ್ಣು, ಮನಸ್ಸು ಸಿದ್ಧಿಸುತ್ತವೆ. ಆದರೂ ಚರಪ್ರಾಣಿಗಳಂತೆ ಚಿತ್ತದ ಕಾರ್ಯಭೂತಗಳಾದ ಪ್ರಯತ್ನಾದಿಗಳು ಇಲ್ಲದೆ ಇರುವುದರಿಂದ ಚಿತ್ತವು ಸ್ಥಾವರಗಳಿಗೆ ಇಲ್ಲವೆಂಬು ಈ ಗ್ರಂಥದಲ್ಲಿ ಹೇಳಿದ್ದಾಗಿರುತ್ತದೆ. ಚರಪ್ರಾಣಿಗಳಲ್ಲಿಯೂ ಪಶ್ವಾದಿಗಳಿಗೆ ಆಹಾರವನ್ನು ಸ್ವೀಕರಿಸಬೇಕೆಂಬೀ ಇಚ್ಛೆಯು ಮಾತ್ರ ಅನುಭೂತವಾಗುತ್ತದೆ. ಮನುಷ್ಯರಿಗಾದರೂ ಪ್ರಜ್ಞಾದಿಗಳು ಇರುತ್ತವೆ. ಸಾಮಾನ್ಯಾಕಾರವಾಗಿ ತಿಳಿದ ಅರ್ಥವನ್ನು ಯುಕ್ತ್ಯಾದಿಗಳಿಂದ ನಿಶ್ಚೈಸಿಕೊಳ್ಳುತ್ತಾರೆ. ಅಲ್ಪಕಾಲದಲ್ಲಿ ಇರತಕ್ಕ ಶರೀರದಿಂದ ನಿತ್ಯ ಮುಕ್ತಿಗೆ ಸಾಧನವನ್ನು ಮಾಡುತ್ತಾರೆ. ಅಂತೂ ಪಶ್ವಾದಿಗಳಿಗಿಂತ ಮನುಷ್ಯರಲ್ಲಿ ಶ್ರೀ ಪರಮಾತ್ಮನ ಸನ್ನಿಧಾನ ಹೆಚ್ಚು ಇದ್ದ ಕಾರಣ ಮನುಷ್ಯರು ಪಶ್ವಾದಿಗಳಿಗಿಂತ ಶ್ರೇಷ್ಠರು. ಹೀಗೆಯೇ ಮನುಷ್ಯರಲ್ಲಿಯೂ ತಾರತಮ್ಯವನ್ನು ತಿಳಿಯತಕ್ಕದು. ಆಯಾಯ ಜ್ಞಾನಕರ್ಮಾದಿಗಳನ್ನು ಅನುಸರಿಸಿ ಸರ್ವಪ್ರಾಣಿಗಳ ಉತ್ಪತ್ತಿಯಾದುದರಿಂದ ಅದನ್ನು ನಿಮಿತ್ತೀಕರಿಸಿಕೊಂಡು ಭಗವತ್ಸನ್ನಿಧಾನವೂ ಹೆಚ್ಚುಕಡಿಮೆಯಾಗಿಯದೆ. ಆ ಕಾರಣ ಶ್ರೀ ಹರಿಗೆ ವೈಷಮ್ಯಾದಿದೋಷಗಳ ಪ್ರಸಕ್ತಿಯೇ ಇಲ್ಲವು. ॥

ಭಾ॥ **(a)** ಆವಿರ್ಭಾವಂ ತಾರತಮ್ಯಾದ್ಯೋ ವೇದ ಪರಮಾತ್ಮನಃ । ಸ ತಸ್ಯೈವ ವಿಶೇಷೇಣ ಪ್ರೀತಿಯೋಗಾದ್ಭವಿಷ್ಯತಿ ॥ **(b)** ಸ್ಥಾವರಂ ಜಂಗಮಂ ಚೈವ ಭೂಯಸ್ತ್ವೇನಾಶ್ನುತೇ ಹರಿಃ । ಆವಿರ್ಭೂತಸ್ತೇಷು ಸದಾ **(c)** ಸಮ್ಯಕ್ಸ್ವಾತ್ಮಾನಮೇವ ಚ ॥ ತಾರತಮ್ಯಾತ್ಸನ್ನಿಹಿತಂ ಸರ್ವಭೂತೇಷು ಕೇಶವಃ । ವೇತ್ತ್ಯೇಕ ಏವ **(d)** ವಿಷ್ಣೋರ್ಯದ್ವಿಶೇಷಾವೇಶನಂ ಸದಾ ॥ ಜಂಗಮೇಷು ಚ ವೃಕ್ಷೇಷು ನೈವ ತಾದೃಕ್ಶಿಲಾದಿಷು । **(e)** ತಸ್ಮಾದ್ವೃಕ್ಷಾದಿಷು ರಸಶ್ಚಿತ್ತಂ ಚಲನವತ್ಸು ಚ ॥ ದೃಶ್ಯತೇ ನ ಶಿಲಾದ್ಯೇಷು

ಅ ॥ (a) ಯಾವಾತನು (ಎಲ್ಲಾ ಪ್ರಾಣಿಗಳಲ್ಲಿಯೂ) ಉಚ್ಚನೀಚ ಭಾವದಿಂದಲೇ ಶ್ರೀ ಹರಿಯ ಆವಿರ್ಭಾವವನ್ನು ತಿಳಿಯುತ್ತಾನೋ ಆತನು, ಶ್ರೀ ಹರಿಗೆ (ಜ್ಞಾನಿಯಾದವನಲ್ಲಿ) ಪ್ರೀತಿಯಿದ್ದುದರಿಂದ ಪ್ರೀತ್ಯಾಖ್ಯ ವಿಶೇಷದಿಂದ ಹರಿಯ ಸಂಬಂಧಿಯೇ ಆಗುವನು. ಅಂದರೆ ಆತನ ಪ್ರೀತಿಪಾತ್ರನು ಆಗುವನು. ॥ (b) ಶ್ರೀ ಹರಿಯು ಶಿಲಾದಿಗಳಿಗಿಂತ ಹೆಚ್ಚಿಗೆಯಾಗಿಯೇ ಸ್ಥಾವರ ಜಂಗಮಗಳಲ್ಲಿ ಯಾವಾಗಲೂ ಸನ್ನಿಹಿತನಾಗಿ ಸ್ಥಾವರ ಜಂಗಮ ಪದಾರ್ಥಗಳನ್ನು ಹೊಂದುತ್ತಾನೆ. ॥ (c) ನಾರಾಯಣನೊಬ್ಬನೇ ಚೆನ್ನಾಗಿ ತನ್ನನ್ನು ನೀಚೋಚ್ಚ ಭಾವದಿಂದಲೇ ಎಲ್ಲಾ ಪ್ರಾಣಿಗಳಲ್ಲಿಯೂ ಆವಿರ್ಭೂತನನ್ನಾಗಿ ತಿಳಿಯುತ್ತಾನೆ. ॥ (d) ಯಾವ ಕಾರಣದಿಂದ ವೃಕ್ಷಮೊದಲಾದ ಜಂಗಮ ಪದಾರ್ಥಗಳಲ್ಲಿ ಯಾವಾಗಲೂ ಶ್ರೀ ಹರಿಯ ವಿಶೇಷವಾದ ಸನ್ನಿಧಾನವು ಯಾದೃಶವಾದುದು ಅದೆಯೋ ಅಂತಹುದು ಕಲ್ಲು ಮೊದಲಾದುವುಗಳಲ್ಲಿ ಇಲ್ಲವೇ ಇಲ್ಲ. ॥ (e) ಆದುದರಿಂದಲೇ ವೃಕ್ಷ ಮೊದಲಾದುವುಗಳಲ್ಲಿ ರಸವೂ ಚರಪ್ರಾಣಿಗಳಲ್ಲಿ ಚಿತ್ತವೂ ಕಾಣಲ್ಪಡುತ್ತದೆ. ಕಲ್ಲು ಮೊದಲಾದುವುಗಳಲ್ಲಿ (ರಸವೂ ಚಿತ್ತವೂ ಎರಡೂ) ಕಾಣಲ್ಪಡುವುದಿಲ್ಲವಷ್ಟೇ. ॥

ಭಾ॥ **(a)** ಸನ್ನಿಧಿರ್ನ ಹಿ ತಾದೃಶೀ । ಶಿಲಾದ್ಯೇಷು ಸ್ಥಿತೋ ವಿಷ್ಣುರ್ಭಾರದಾರ್ಢ್ಯಾದಿ ಕಾರಣಂ ॥ ನೈವ ಚಿತ್ತಾದಿಕಸ್ಯಾತೋ ವೃಕ್ಷಾದ್ಯಾ ಉತ್ತಮಾಸ್ತತಃ । **(b)** ವಿಶೇಷೋಽಯಂ ಪದಾರ್ಥಾನಾಂ ನ ತು ವಿಷ್ಣೋಃ ಕಥಂ

ಚ ನ ॥ (c) ಯತ್ರ ವಿಷ್ಣುರ್ಗುಣಾಧಿಕ್ಯಂ ದರ್ಶಯೇದ್ವಸ್ತು ತದ್ವರಂ। ಗುಣಪೂರ್ಣೋ ಹಿ ಸರ್ವತ್ರ ಸ್ವಯಂ ವಿಷ್ಣುಃ ಸನಾತನಃ ॥ (d) ವೃಕ್ಷೇಭ್ಯೋಽಪ್ಯಧಿಕಂ ವಿಷ್ಣುರ್ಜಂಗಮೇಷು ಪ್ರಕಾಶಿತಃ । ತೇಭ್ಯೋಽಪಿ ಪುರುಷೇ ವಿಷ್ಣುರ್ಗುಣಾಧಿಕ್ಯಪ್ರಕಾಶಕಃ ॥ ಇತ್ಯಾದಿ ಚ ॥

ಅ ॥ (a) (ಕಲ್ಲು ಮೊದಲಾದುವುಗಳಲ್ಲಿಯೂ ಭಾರ, ದಾರ್ಢ್ಯ ಮೊದಲಾದುದು ಅನುಭೂತ ವಾಗುವುದರಿಂದ ಅವುಗಳಲ್ಲಿಯೂ ವಿಶೇಷ ಸನ್ನಿಧಾನವನ್ನು ಅಂಗೀಕರಿಸತಕ್ಕದು ಎಂದರೆ.) ಕಲ್ಲು ಮೊದಲಾದುವುಗಳಲ್ಲಿ ಅಂತಹ ಸನ್ನಿಧಾನವು ಇಲ್ಲ. ಅವುಗಳಲ್ಲಿ ಇರತಕ್ಕ ವಿಷ್ಣುವು ಭಾರ, ದಾರ್ಢ್ಯಮೊದಲಾದುವುಗಳಿಗೆ ಕಾರಣೀಭೂತನಾಗಿರುತ್ತಾನೆ. ಚಿತ್ತ್ರರಸಗಳಿಗೆ ಅಲ್ಲವೇ ಅಲ್ಲ. ಆದುದರಿಂದ ಶಿಲಾದಿಗಳಿಂದ ವೃಕ್ಷ ಮೊದಲಾದುವುಗಳು ಶ್ರೇಷ್ಠಗಳಾಗಿವೆ. ॥ (b) ಈ ವಿಶೇಷವು ಪದಾರ್ಥಗಳದ್ದೇ ಸರಿ. ಯಾವ ರೀತಿಯಿಂದಲೂ ವಿಷ್ಣುವಿಗೆ ಅಲ್ಲ. ಅಂದರೆ ಪದಾರ್ಥಗಳಲ್ಲಿ ತಾರತಮ್ಯವಿದ್ದರೂ ಅವುಗಳಲ್ಲಿ ಸನ್ನಿಹಿತನಾದ ಶ್ರೀ ಹರಿಗೆ ಉಚ್ಚನೀಚ ಭಾವವು ಇಲ್ಲ. ॥ (c) ಯಾವಾಗಲೂ ಏಕಪ್ರಕಾರನಾದ ಶ್ರೀ ಹರಿಯು ಎಲ್ಲಾ ವಸ್ತುಗಳಲ್ಲಿಯೂ ಸಾಕ್ಷಾತ್ತಾಗಿಯೇ ಸರ್ವ ಗುಣಗಳಿಂದಲೂ ಪರಿಪೂರ್ಣನಾಗಿಯೇ ಇರುತ್ತಾನೆ. ಸರ್ವ ಪ್ರಮಾಣಸಿದ್ಧವು. ಯಾವ ಪದಾರ್ಥದಲ್ಲಿ ಶ್ರೀ ಹರಿಯು ಗುಣಗಳ ಆಧಿಕ್ಯವನ್ನು (ಹೆಚ್ಚುಗುಣಗಳನ್ನು) ತೋರಿಸುತ್ತಾನೋ ಆ ವಸ್ತುವು ಶ್ರೇಷ್ಠವಾದುದು. ॥ (d) ಶ್ರೀ ಹರಿಯು ವೃಕ್ಷಗಳಿಂದಲೂ ಹೆಚ್ಚು ಜಂಗಮ ಪದಾರ್ಥಗಳಲ್ಲಿ ಸನ್ನಿಹಿತ ನಾಗಿರುತ್ತಾನೆ. ಶ್ರೀ ಹರಿಯು ಮನುಷ್ಯರಲ್ಲಿ ಅವುಗಳಿಗಿಂತಲೂ ಗುಣಾಧಿಕ್ಯವನ್ನು ತೋರಿಸುತ್ತಿರುತ್ತಾನೆ. ಇವೇ ಮೊದಲಾದುದು ಹೇಳಲ್ಪಟ್ಟಿದೆ.

ಭಾ॥ (a) ಯ ಆತ್ಮಾನಂ ಪರಮಾತ್ಮಾನಮಾವಿಸ್ತರಾಂ ಆವಿರ್ಭಾವತಾರತಮ್ಯೇನ ವೇದ ಸ ತಸ್ಯ ವಿಷ್ಣೋರೇವ । ಸರ್ವೇಷಾಂ ತದೀಯತ್ವೇಽಪಿ ಪ್ರಿಯತ್ವಾತ್ತದೀಯತ್ವ ವಿಶೇಷಣಂ ॥ (b) ಓಷಧಿವನಸ್ಪತಯೋ ಯಚ್ಚ ಕಿಂಚ ಪ್ರಾಣಭೃತ್ತತ್ಸರ್ವಂ ಶಿಲಾದಿಭ್ಯೋ ಭೂಯಸ್ತ್ವೇನ ತೇಷ್ವಾವಿರ್ಭೂತೋಽಚ್ಯುತೋ ಭಗವಾನ್ । ಸ ಏವ ಚ ನಾರಾಯಣಃ ಸಮ್ಯಕ್ಸ್ವಾತ್ಮಾನಮಾವಿಸ್ತರಾಂ ವೇದ ॥ (c) ಅನ ಚೇಷ್ಟಾಯಾಮಿತಿ ಧಾತೋಶ್ಚೇಷ್ಟಾವತ್ತ್ವಮೇವ ಪ್ರಾಣಭೃತ್ತ್ವಂ ಪಶ್ವಾದೀನಾಂ । ಜ್ಞಾನಾನುಸಾರೇಣ ಹ್ಯುತ್ಪತ್ತಯಃ ಸಂಭವಾಃ ॥ ೨ ॥

ಅ ॥ (a) ಯಾವಾತನು ಆತ್ಮಶಬ್ದ ವಾಚ್ಯನಾದ ಶ್ರೀ ಪರಮಾತ್ಮನನ್ನು 'ಆವಿಸ್ತರಾಂ' ಅಂದರೆ ಸನ್ನಿಧಾನದ ನೀಚೋಚ್ಚಭಾವದಿಂದ (ಎಲ್ಲಾ ವಸ್ತುಗಳಲ್ಲಿಯೂ ನೀಚೋಚ್ಚಭಾವದಿಂದ ಸನ್ನಿಹಿತ ನಾಗಿರುತ್ತಾನೆ ಎಂದು) ತಿಳಿಯುತ್ತಾನೋ ಆತನು 'ತಸ್ಯ' ಅಂದರೆ ವಿಷ್ಣುವಿನ ಸಂಬಂಧಿಯೇ ಆಗುತ್ತಾನೆ. । ಎಲ್ಲಾ ವಸ್ತುಗಳು ಶ್ರೀ ಹರಿಯ ಸಂಬಂಧಿಗಳಾದರೂ (ವಿಶೇಷಾಕಾರವಾಗಿ ಶ್ರೀ ಹರಿಯ) ಪ್ರೀತಿಗೆ ಪಾತ್ರನಾದುದರಿಂದ (ಶ್ರೀ ಹರಿಯ ಸಂಬಂಧಿಯಾಗಿದ್ದಾನೆ ಎಂದು) 'ತದೀಯತ್ವ' ಎಂಬ ವಿಶೇಷಣವು. ॥ (b) ಓಷಧಿ ವನಸ್ಪತಿಗಳು, ಯಾವುದು ಯಾವುದು ಚೇಷ್ಟೆಯುಳ್ಳ ಜಂಗಮಪ್ರಾಣಿಗಳ ವರ್ಗವಿದೆಯೋ, ಅವೆಲ್ಲವನ್ನು ಕಲ್ಲು ಮೊದಲಾದವುಗಳಿಂದ ವಿಶೇಷಾಕಾರವಾಗಿ, ಆ ಸ್ಥಾವರ ಜಂಗಮ ಪದಾರ್ಥಗಳಲ್ಲಿ ಸನ್ನಿಹಿತನಾಗಿ ಶ್ರೀ ಹರಿಯು

ಹೊಂದುತ್ತಾನೆ. ॥ ಆ ನಾರಾಯಣನೇ ಚೆನ್ನಾಗಿ ತನ್ನನ್ನು ನೀಚೋಚ್ಚಭಾವದಿಂದ (ಎಲ್ಲಾ ಪ್ರಾಣಿಗಳಲ್ಲಿ ಸನ್ನಿಹಿತನನ್ನಾಗಿ) ತಿಳಿಯುತ್ತಾನೆ. ॥ (c) 'ಅನ' ಎಂಬಧಾತುವು, 'ಚೇಷ್ಟಾ' ಎಂಬ ಅರ್ಥದಲ್ಲಿ ಇದೆ. ಎಂದು ಧಾತುವ್ಯಾಖ್ಯಾನವಿದ್ದುದರಿಂದ ಪಶು ಮೊದಲಾದುವುಗಳಿಗೆ ಪ್ರಾಣಭೃತ್ವವೆಂದರೆ ಚೇಷ್ಟಾವುಳ್ಳತನವೇ. (ಅಂದರೆ 'ಹಿತವು ಪ್ರಾಪ್ತಿಯಾಗಬೇಕು; ಅಹಿತವು ಬರಬಾರದು.' ಇದಕ್ಕೆ ಉಪಯುಕ್ತವಾದ ವ್ಯಾಪಾರವು ಪಶು ಮೊದಲಾದುವುಗಳಿಗೂ ಇದ್ದುದರಿಂದ ಪಶ್ವಾದಿಗಳು 'ಪ್ರಾಣಭೃತ್' ಎನ್ನಿಸಿಕೊಳ್ಳುತ್ತವೆ.) ॥ 'ಸಂಭವಾಃ' ಅಂದರೆ ಉತ್ಪತ್ತಿಗಳು ಜ್ಞಾನಕರ್ಮಾದಿಗಳನ್ನು ಅನುಸರಿಸಿಯೇ ಆಗುವುವು. ಸರ್ವಪ್ರಮಾಣ ಸಿದ್ಧವು. ॥ ೨ ॥

**ಮಂ ॥ ಸ ಏಷ ಪುರುಷಃ ಸಮುದ್ರಃ ಸರ್ವಂ ಲೋಕಮತಿಯದ್ಧ ಕಿಂ ಚಾಶ್ನುತೇಽತ್ಯೇನಂ ಮನ್ಯತೇ ಯದ್ಯಂತರಿಕ್ಷಲೋಕಮಶ್ನುತೇಽತ್ಯೇನಂ ಮನ್ಯತೇ ಯದ್ಯಮುಂ ಲೋಕಮಶ್ನುವೀತಾತ್ಯೇವೈನಂ ಮನ್ಯೇತ ಸ ಏಷ ಪುರುಷಃ ಪಂಚವಿಧಸ್ತಸ್ಯ ಯದುಷ್ಣಂ ತಜ್ಜ್ಯೋತಿರ್ಯಾನಿ ಖಾನಿ ಸ ಆಕಾಶೋಽಥ ಯಂ ಲೋಹಿತಂ ಶ್ಲೇಷ್ಮಾ ರೇತಸ್ತಾ ಆಪೋ ಯಚ್ಛರೀರಂ ಸಾ ಪೃಥಿವೀ ಯಃ ಪ್ರಾಣಃ ಸ ವಾಯುಃ ಸ ಏಷ ವಾಯುಃ ಪಂಚವಿಧಃ ಪ್ರಾಣೋಽಪಾನೋ ವ್ಯಾನ ಉದಾನಃ ಸಮಾನಸ್ತಾ ಏತಾ ದೇವತಾಃ ಪ್ರಾಣಾಪಾನಯೋರೇವ ನಿವಿಷ್ಟಾಶ್ಚಕ್ಷುಃ ಶ್ರೋತ್ರಂ ಮನೋ ವಾಗಿತಿ ಪ್ರಾಣಸ್ಯ ಹ್ಯನ್ವಪಾಯಮೇತಾ ಅಪಿ ಯಂತಿ ಸ ಏಷ ವಾಚಶ್ಚಿತ್ತಸ್ಯೋತ್ತರೋತ್ತರಿಕ್ರಮೋ ಯದ್ಯಜ್ಞಃ ಸ ಏಷ ಯಜ್ಞಃ ಪಂಚವಿಧೋಽಗ್ನಿಹೋತ್ರಂ ದರ್ಶಪೂರ್ಣಮಾಸೌ ಚಾತುರ್ಮಾಸ್ಯಾನಿ ಪಶುಃ ಸೋಮಃ ಸ ಏಷ ಯಜ್ಞಾನಾಂ ಸಂಪನ್ನತಮೋ ಯತ್ಸೋಮ ಏತಸ್ಮಿನ್ಹ್ಯೇತಾಃ ಪಂಚವಿಧಾ ಅಧಿಗಮ್ಯಂತೇ ಯತ್ಪ್ರಾಕ್ಸವನೇಭ್ಯಃ ಸೈಕಾ ವಿಧಾ ತ್ರೀಣಿ ಸವನಾನಿ ಯದೂರ್ಧ್ವಂ ಸಾ ಪಂಚಮೀ ॥ ೩ ॥**

ಟೀ ॥ ಅ ॥ (ಯಾವಾತನು ಈ ಮನುಷ್ಯರಲ್ಲಿ ಪಶ್ವಾದಿಗಳಿಗಿಂತ ಹೆಚ್ಚು ಸನ್ನಿಹಿತನಾಗಿರುತ್ತಾನೆಯೋ) ಸ ಏಷ ಪುರುಷಃ=ಆ ಈ ಪುರುಷನಾಮಕ ಹರಿಯು, ಸಮುದ್ರಃ=(ಇತರರಲ್ಲರಿಂದಲೂ) ಗುಣಪೂರ್ಣನು. ಅಥವಾ, ಸ ಏಷಃ=ಪಶ್ವಾದಿಗಳಿಗಿಂತ ಹೆಚ್ಚು ಶ್ರೀ ಹರಿಯ ಸನ್ನಿಧಾನಕ್ಕೆ ಪಾತ್ರಭೂತನಾದ, ಪುರುಷಃ=ಜೀವನು, ಯದ್ಯಪಿ, ಸಮುದ್ರಃ=(ಶ್ರೀ ಹರಿಯ ಅನುಗ್ರಹದಿಂದ) ಸರ್ವಲೋಕಗಳಿಗೆ ಅಧಿಪತಿಯು, (ಆಗುತ್ತಾನೆ.) ಹಾಗೆಯೇ, ಸರ್ವಂ ಲೋಕಂ=ಪೃಥಿವಿ ಅಂತರಿಕ್ಷಾದಿಲೋಕಗಳನ್ನು, ಅತಿ=ಅತಿಕ್ರಮಿಸಿ, ಯತ್ ಕಿಂಚ ಹ=ಯಾವುದೊಂದು ಪ್ರಸಿದ್ಧವಾದ ಮೋಕ್ಷವನ್ನು, ಅಶ್ನುತೇ=ಹೊಂದುತ್ತಾನೆ. (ಆದರೂ) ಏನಂ=ಈ ಪುರುಷಶಬ್ದವಾಚ್ಯನಾದ ವಿಷ್ಣುವನ್ನು, ಯಾ ಆತ್ಮಶಬ್ದದಿಂದ ಪ್ರಸ್ತುತನಾದ ಶ್ರೀ ಹರಿಯನ್ನು, ಅತಿ=(ತನ್ನಿಂದಲೂ ಇತರ ಸರ್ವವಸ್ತುವಿನಿಂದಲೂ,) ಅಧಿಕನನ್ನಾಗಿಯೇ, ಮನ್ಯತೇ=ತಿಳಿಯುತ್ತಾನೆ. (ಮುಕ್ತನೂ ಕೂಡ ಆತನಿಂದ ಸಾಮ್ಯವನ್ನಾಗಲೀ ತದೈಕ್ಯವನ್ನಾಗಲೀ ತಿಳಿಯುವುದಿಲ್ಲ.) ಯದಿ=ಯಾವ ಪಕ್ಷದಲ್ಲಿ, ಅಂತರಿಕ್ಷಲೋಕಂ=ಅಂತರಿಕ್ಷಲೋಕವನ್ನು, ಅಶ್ನುತೇ=(ಶ್ರೀಹರಿಯ ಅನುಗ್ರಹದಿಂದ) ಹೊಂದುತ್ತಾನೋ, ಆದರೂ, ಏನಂ=ಈ

ಹರಿಯನ್ನು, ಅತಿ=ಅಧಿಕನನ್ನಾಗಿಯೇ, ಮನ್ಯತೇ=ತಿಳಿಯುತ್ತಾನೆ. ಯದಿ=ಯಾವ ಪಕ್ಷ ದಲ್ಲಿ, ಅಮುಂ ಲೋಕಂ=ಈ ಸ್ವರ್ಗಲೋಕವನ್ನು, ಅಂದರೆ ದೇವಲೋಕಾಧಿಪತ್ಯವನ್ನು, ಅಶ್ನವೀತ=(ಶ್ರೀ ಹರಿಯ ಅನುಗ್ರಹದಿಂದ) ಹೊಂದುತ್ತಾನೋ ಅಥವಾ, ಯದಿ=ಯಾವ ಪಕ್ಷದಲ್ಲಿ, ಅಮುಂ ಲೋಕಂ=ಈ ಸ್ವರ್ಗಲೋಕವನ್ನು, ಅಶ್ನವೀತ=ಪ್ರಾಪಿಸುತ್ತಾನೋ. (ಆವಾಗಲೂ) ಏನಂ=ಈ ಹರಿಯನ್ನು, ಅತಿ=ಸರ್ವೋತ್ಕೃಷ್ಟನನ್ನಾಗಿಯೇ, ಮನ್ಯೇತ=ತಿಳಿ ಯುತ್ತಾನೆಯೇ ಸರಿ. ಅಥವಾ, ಯಾವಾತನು ಸರ್ವಲೋಕವನ್ನು ಅತಿಕ್ರಮಿಸಿ ಯಾವುದೊಂದು ಪ್ರಸಿದ್ಧವಾದ ವೈಕುಂಠಲೋಕವನ್ನು ಹೊಂದುತ್ತಾನೋ, ಅಂತಹ ಮುಕ್ತನೂ ಕೂಡ ಈ ಹರಿ ಯನ್ನು ಯಾವ ಕಾರಣದಿಂದ ಅತ್ಯುತ್ತಮನನ್ನಾಗಿಯೇ ತಿಳಿಯುತ್ತಾನೋ ಆದುದರಿಂದ ಅಂತ ರಿಕ್ಷಲೋಕಾಧಿಪತ್ಯವನ್ನಾಗಲೀ, ಸ್ವರ್ಗಾಧಿಪತ್ಯವನ್ನಾಗಲೀ ಹೊಂದಿದರೂ ಈ ಹರಿಯನ್ನು ಸರ್ವೋತ್ತಮನನ್ನಾಗಿಯೇ ತಿಳಿಯುತ್ತಾನೆ. ಅಂತೂ ಶ್ರೀ ಹರಿಯನ್ನು ಮುಕ್ತರೂ ಅಮು ಕ್ತರೂ ಎಲ್ಲರೂ ಸರ್ವೋತ್ತಮನನ್ನಾಗಿಯೇ ಧ್ಯಾನಿಸುತ್ತಾರೆ. ಸ ಏಷಃ ಪುರುಷಃ=ಆ ಈ ಪುರುಷರಲ್ಲಿದ್ದ ಪುರುಷನಾಮಕನಾದ ಹರಿಯು, ಪಂಚವಿಧಃ=ಪುರುಷರ ದೇಹದಲ್ಲಿರುವ ಐದು ಭೂತಗಳಲ್ಲಿ ಐದು ರೂಪವುಳ್ಳವನಾಗಿ ಇದ್ದಾನೆ. ತಸ್ಯ=ಆ ಶರೀರದ ಐದು ಭೂತಗಳ ಮಧ್ಯ ದಲ್ಲಿ, ಯತ್ ಉಷ್ಣಂ=ಯಾವ ಹೊಟ್ಟೆಯಲ್ಲಿ ಇರುವ ಅಗ್ನಿಮೊದಲಾದುದೋ, ತತ್ ಜ್ಯೋತಿಃ= ಆ ಜ್ಯೋತಿಸ್ಸಿನಲ್ಲಿ ಜ್ಯೋತಿರ್ನಾಮಕನಾದ ಪ್ರದ್ಯುಮ್ನನು ಇದ್ದಾನೆ. ಯಾನಿ ಖಾನಿ=ಯಾವ ಕಿವಿ, ಮೂಗು, ಮೊದಲಾದುವುಗಳ ವಿವರ ರೂಪಗಳಾದ ಅವಕಾಶಗಳು ಇವೆಯೋ, ಸಃ ಆಕಾಶಃ=ಅದರಲ್ಲಿ ಆಕಾಶನಾಮಕನಾದ ವಾಸುದೇವನು ಇದ್ದಾನೆ. ಅಥ=ಹಾಗೆಯೇ, ಯತ್=ಯಾವುದು, ಲೋಹಿತಂ=ರಕ್ತವು, ಶ್ಲೇಷ್ಮಾ=ಕಫವು, ರೇತಃ=ರೇತಸ್ಸೋ, ತಾಃ ಆಪಃ= ಅವುಗಳಲ್ಲಿ 'ಅಪ್' ಎಂದು ಹೆಸರುಳ್ಳ ಸ್ತ್ರೀರೂಪಿಯೂ ಬಹುರೂಪಿಯೂ ಆದ ಅನಿರುದ್ಧನು. ಯತ್ ಶರೀರಂ=ಎಲುಬು ಮೊದಲಾದ ಯಾವುದು ಕಠಿನವಾದುದೋ, ಸಾ ಪೃಥಿವೀ=ಅದ ರಲ್ಲಿ ಪೃಥಿವೀ ನಾಮಕನಾದ ನಾರಾಯಣನು ಇದ್ದಾನೆ. ಯಃ ಪ್ರಾಣಃ=ಯಾವುದೊಂದು ಪ್ರಾಣವಿದೆಯೋ, ಸ ವಾಯುಃ=ಅದರಲ್ಲಿ ವಾಯುನಾಮಕ ಸಂಕರ್ಷಣನು ಇದ್ದಾನೆ. (ಹೀಗೆ ದೇಹದಲ್ಲಿರತಕ್ಕ ಪಂಚಭೂತಗಳಲ್ಲಿ ಇರತಕ್ಕ ಶ್ರೀ ಹರಿಯ ಐದು ರೂಪಗಳನ್ನು ಹೇಳಿ ಆ ವಾಯುವಿನಲ್ಲಿ ಇರತಕ್ಕ ಪಂಚರೂಪಿಯಾದ ಶ್ರೀ ಹರಿಯ ಸ್ಥಿತಿಯನ್ನು ಹೇಳುತ್ತಾರೆ). ಸ ಏಷಃ ವಾಯುಃ=ಸಂಕರ್ಷಣನಿಗೆ ಅಧಿಷ್ಠಾನ ಭೂತನಾದ ಆ ಈ ವಾಯುವು, ಪ್ರಾಣಃ, ಅಪಾನಃ, ವ್ಯಾನಃ, ಉದಾನಃ, ಸಮಾನಃ=ಪ್ರಾಣಾದಿರೂಪನಾಗಿ, ಪಂಚವಿಧಃ=ಐದುಪ್ರಕಾರ ನಾಗಿರುತ್ತಾನೆ. (ಇತರ ಭೂತಗಳಲ್ಲಿ ಒಂದೊಂದೇ ರೂಪದಿಂದ ಇದ್ದಾನೆ ಆದರೆ ಆ ನಾಲ್ಕರಲ್ಲಿ ವಾಯುವೇ ಉತ್ತಮನಾಗಿರುತ್ತಾನೆ.) ತಾಃ=ಆ ನಾಲ್ಕು ಭೂತಗಳಿಗೆ ಅಭಿಮಾ ನಿಗಳಾದ, ಚಕ್ಷುಃ=ಭೂತವಾದ ಜ್ಯೋತಿಸ್ಸಿಗೆ ಅಭಿಮಾನಿಯಾದ ಸೂರ್ಯನು, ಶ್ರೋತ್ರಂ= ಆಕಾಶರೂಪವಾದ ಕಿವಿಗೆ ಅಭಿಮಾನಿಗಳಾದ ಮಿತ್ರಾದಿಗಳು, ಮನಃ=ಪೃಥಿವ್ಯಾತ್ಮಕವಾದ ಮನಸ್ಸಿಗೆ ಅಭಿಮಾನಿಗಳಾದ ಶೇಷಾದಿಗಳು, ವಾಕ್=ತೇಜಸ್ಸಿನಿಂದ ಯುಕ್ತವಾದ ಅಗ್ನಿಯೂ ಜಲಾತ್ಮಕಳಾದ ಪಾರ್ವತಿಯೂ, ಏತಾಃ ದೇವತಾಃ=ಈ ದೇವತೆಗಳು, ಪ್ರಾಣಾಪಾನಯೋ ರೇವ=ಪ್ರಾಣ ಅಪಾನರೂಪ ವಾಯುವಿನಲ್ಲಿಯೇ, ನಿವಿಷ್ಟಾಃ=ಆಶ್ರಿತರಾಗಿರುತ್ತಾರೆ. ಪ್ರಾಣಸ್ಯ= ವಾಯುವಿನ, ಅಪಾಯಂ ಅಪಿ=ದೇಹದಿಂದ ಹೊರಡುವಿಕೆಯನ್ನೂ, ಏತಾಃ=ಈ ದೇವತೆ ಗಳು, ಅನುಯಂತಿ=ಅನುಸರಿಸಿಯೇ ಹೊರಟು ಹೋಗುತ್ತಾರೆ. ಯದ್ಯಜ್ಞಃ=ಯಾವುದೊಂದು ಯಜ್ಞವಿದೆಯೋ, ಸ ಏಷಃ=ಆ ಇದು, ವಾಚಃ=ವಾಗಭಿಮಾನಿಯು, ಚಿತ್ತಸ್ಯ=ತದಭಿಮಾನಿಗಳ,

ಉತ್ತರೋತ್ತರಿಕ್ರಮಃ=ಉತ್ತರೋತ್ತರದಲ್ಲಿ ತಾರತಮ್ಯಕ್ರಮದಿಂದುಂಟಾದ ಪ್ರೇರಣಾರೂಪ ವೃತ್ತಿಯಿಂದ ಹುಟ್ಟಿದ್ದು (ಯಾಗವನ್ನು ಕಣ್ಣು, ಕಿವಿ, ಮನಸ್ಸು, ಮಾತು ಇವುಗಳ ವ್ಯಾಪಾರ ದಿಂದ ಸಾಧಿಸತಕ್ಕದು. ಅವುಗಳು ತತ್ತದಭಿಮಾನಿದೇವತೆಗಳಿಂದ ಪ್ರೇರಿಸಲ್ಪಟ್ಟವುಗಳಾಗಿಯೇ ತಮ್ಮ ತಮ್ಮ ವ್ಯಾಪಾರಗಳಲ್ಲಿ ಪ್ರವರ್ತಿಸುತ್ತವೆ. ಸ ಏಷ ಯಜ್ಞಃ=ಪೂರ್ವೋಕ್ತವಾದ ಆ ಈ ಯಾಗವು, ಅಗ್ನಿಹೋತ್ರಂ= (ಸರ್ವಭಕ್ಷಕನಾದುದರಿಂದಲೂ ಹೋಮಿಸುವುದರಿಂದಲೂ ಅಗ್ನಿಹೋತ್ರನಾಮಕನಾದ ಅನಿರುದ್ಧನು) ತನ್ನಾಮಕವೂ, ದರ್ಶಪೂರ್ಣಮಾಸೌ=ತನ್ನಾ ಮಕಗಳು, ಚಾತುರ್ಮಾಸ್ಯಾನಿ=ತನ್ನಾಮಕಗಳು, ಪಶುಃ=ತನ್ನಾಮಕವೂ, ಸೋಮಃ= ತನ್ನಾಮಕವೂ, ಈ ಪ್ರಕಾರವಾಗಿ, ಪಂಚವಿಧಃ = ಐದುಪ್ರಕಾರವಾದುದು. ಯತ್ ಸೋಮಃ=ಯಾವುದೊಂದು ಸೋಮಯಾಗವೋ, ಸ ಏಷಃ=ಆ ಈ ಯಾಗವು, ಯಜ್ಞಾ ನಾಂ=ಯಾಗಗಳ ಮಧ್ಯದಲ್ಲಿ, ಸಂಪನ್ನತಮಃ=ಅತಿ ಶ್ರೇಷ್ಠವಾದುದು. ಏತಸ್ಮಿನ್=ಯಾಗ ಶ್ರೇಷ್ಠವಾದ ಸೋಮದಲ್ಲಿ, ಏತಾಃ=ಮೇಲೆ ಹೇಳುವ, ಪಂಚವಿಧಾಃ=ಐದುಪ್ರಕಾರಗಳು, ಅಧಿ ಗಮ್ಯಂತೇ ಹಿ=ಶಾಸ್ತ್ರದಲ್ಲಿ ಪ್ರತಿಪಾದಿಸಲ್ಪಡುತ್ತವಷ್ಟೇ. ಸವನೇಭ್ಯಃ=ಪ್ರಾತರ್ಮಾಧ್ಯಂದಿನ ಸಾಯಂ ಸವನಗಳಿಂದ, ಪ್ರಾಕ್=ಪೂರ್ವದಲ್ಲಿ ಮಾಡತಕ್ಕ, ಯತ್=ಯಾವ ಸೋಮ ಯಾಗವೋ. ಸಾ=ಆ ಸೋಮಯಾಗವು, ಏಕಾ ವಿಧಾ=ಒಂದು ಪ್ರಕಾರವು. ತ್ರೀಣಿ ಸವ ನಾನಿ='ಪ್ರಾತರ್ಮಾಧ್ಯಂದಿನ ಸಾಯಂ' ಎಂದು ಮೂರು ಯಾಗಗಳು, ಊರ್ಧ್ವಂ=(ಮೂರು ಯಾಗಗಳಿಂದ) ಮೇಲೆ, ಯತ್=ಯಾವ ಸೋಮವಿದೆಯೋ, ಸಾ=ಅದು, ಪಂಚಮೀ= ಐದನೇಪ್ರಕಾರವು. ॥ ೩ ॥

ತಾ ॥ (೧) 'ಚಕ್ಷುಃ' ಅಂದರೆ ಅಗ್ನಿಯು, 'ಶ್ರೋತ್ರಂ' ಅಂದರೆ ಚಂದ್ರನು, 'ಮನಃ' ಪರ್ಜನ್ಯನು, 'ವಾಕ್' ಸ್ವಾಹಾ, ಹೀಗೆ ಚಕ್ಷುರಾದಿಗಳಿಗೆ ಈ ದೇವತೆಗಳನ್ನು ಅಭಿಮಾನಿಗಳ ನ್ನಾಗಿ ತಿಳಿಯತಕ್ಕದು. (೨) ಶ್ರೀ ಹರಿಯು ವಾಯುವಿನಲ್ಲಿ ಐದುರೂಪದಿಂದ ಇದ್ದಾನೆ. ಆದುದರಿಂದ ವಾಯುದೇವರ ಅಧೀನರಾದ ದೇವತೆಗಳಿಂದ ಪ್ರೇರಿಸಲ್ಪಟ್ಟ ವಚನ, ಮನಸ್ಸು ಮೊದಲಾದುವುಗಳ ವ್ಯಾಪಾರದಿಂದ ಯಾಗವನ್ನು ಸಾಧಿಸುವುದು. ಅಂತಹ ಯಾಗವು ಅಗ್ನಿ ಹೋತ್ರಾದಿಭೇದದಿಂದ ಐದು ಪ್ರಕಾರವು. ಅವುಗಳಲ್ಲಿ ಇರತಕ್ಕ ಶ್ರೀ ಹರಿಯೂ ಕೂಡ ಅಗ್ನಿ ಹೋತ್ರಾದಿನಾಮಕನಾಗಿ, ಅನಿರುದ್ಧಾದಿ ರೂಪಗಳಿಂದ ಐದು ವಿಧನಾಗಿರುತ್ತಾನೆ. ಅದು ಹೇಗೆಂ ದರೆ- ಸರ್ವವನ್ನು ಭಕ್ಷಿಸುವುದರಿಂದಲೂ, ಹೋಮಿಸುವುದರಿಂದಲೂ, ಅಗ್ನಿಹೋತ್ರನಾಮಕ ನಾದ ಅನಿರುದ್ಧನು ಅಗ್ನಿಹೋತ್ರ ಯಾಗದಲ್ಲಿ ಇದ್ದಾನೆ. (೩) ಸರ್ವ ವಸ್ತುವನ್ನು ನೋಡುವು ದರಿಂದ 'ದರ್ಶನು' ಮಾಸಾದಿ ಸರ್ವಕಾಲಗಳಲ್ಲಿಯೂ ಪೂರ್ಣನಾದುದರಿಂದ 'ಪೂರ್ಣಮಾ ಸನು' ಅಂತೂ ದರ್ಶ, ಪೂರ್ಣಮಾಸ, ಎಂದು ಹೆಸರುಳ್ಳ ದ್ವಿರೂಪಿಯಾದ ಪ್ರದ್ಯುಮ್ನನು ದರ್ಶ ಪೂರ್ಣಮಾಸನಾಮಕಗಳಾದ ಯಾಗವಿಶೇಷಗಳಲ್ಲಿ ಇದ್ದಾನೆ. (೩) ಅತಿಚತುರನಾದುದರಿಂದಲೂ, ಮಾಸಾದಿ ಸರ್ವಕಾಲಗಳಲ್ಲಿ ಇದ್ದುದರಿಂದಲೂ, ಚಾತುರ್ಮಾಸ್ಯ ತ್ರಯಕ್ಕೆ ನಿಯಾಮಕನಾದು ದರಿಂದಲೂ ಚಾತುರ್ಮಾಸ್ಯನಾಮಕನಾದ ಸಂಕರ್ಷಣನು ಬಹು ರೂಪಿಯಾಗಿ ಚಾತುರ್ಮಾಸ್ಯ ನಾಮಕ ಯಾಗಗಳಲ್ಲಿ ಇದ್ದಾನೆ. (೪) ಸರ್ವಜಗತ್ತನ್ನು ರಕ್ಷಿಸುವುದರಿಂದಲೂ, ಸುಖರೂಪಿ ಯಾದುದರಿಂದಲೂ, ಪಶುನಾಮಕನಾದ ವಾಸುದೇವನು ಪಶುನಾಮಕ ಯಾಗದಲ್ಲಿ ಇದ್ದಾನೆ. (೫) ಅತಿಸುಂದರನಾದುದರಿಂದ, 'ಯಾ ಉನಾ ರುದ್ರೇಣ ಮಯಾ ಲಕ್ಷ್ಮ್ಯಾ ಚ ಸಹಿತಃ' ಎಂಬೀ ವ್ಯುತ್ಪತ್ತಿಯಿಂದ ರುದ್ರ, ಲಕ್ಷ್ಮಿಯರಿಂದ ಕೂಡಿದವನಾದುದರಿಂದ ಸೋಮನಾಮಕನಾದ ನಾರಾ ಯಣನು ಸೋಮಯಾಗದಲ್ಲಿ ಇದ್ದಾನೆ. ಅಗ್ನಿಹೋತ್ರಾದಿ ನಾಲ್ಕು ಯಾಗಗಳಿಗಿಂತ ಸೋಮ

ಯಾಗವು ಶ್ರೇಷ್ಠವಾದುದರಿಂದ ಸೋಮಯಾಗದಲ್ಲಿಯೂ ಶ್ರೀ ಹರಿಯು ಐದುರೂಪಿಯಾಗಿ ಇದ್ದಾನೆ. ಯಾಗದಲ್ಲಿ ಪೂರ್ವದಲ್ಲಿಯೇ ಪೂಜಿಸಿಕೊಳ್ಳುವುದರಿಂದ 'ಪ್ರಾಕ್' ಶಬ್ದವಾಚ್ಯವಾದ ಅನಿರುದ್ಧಾಖ್ಯ ಮೂರ್ತಿಯು ಒಂದು ವಿಧವು. ಮೂರು ಯಾಗಗಳಲ್ಲಿ ಜಗತ್ತನ್ನು ಸೃಷ್ಟಿಸುವುದರಿಂದ ಸವನನಾಮಕಗಳಾದ ಪ್ರದ್ಯುಮ್ನ, ಸಂಕರ್ಷಣ, ವಾಸುದೇವ ಎಂಬ ಮೂರು ರೂಪಗಳು ಉಪರಿತನವಾದ ಸೋಮದಲ್ಲಿ ಸರ್ವೋತ್ತಮನಾದುದರಿಂದ ಊರ್ಧ್ವಶಬ್ದವಾಚ್ಯವಾದ ನಾರಾಯಣಾಖ್ಯರೂಪವು ಐದನೇಯದು. ॥ ೩ ॥

ಭಾ॥ (a) ಯೋಽಸ್ಮಿನ್ಪುರುಷೇ ಪಶ್ವಾದಿಭ್ಯ ಆಧಿಕ್ಯೇನ ಸನ್ನಿಹಿತೋ ಭಗವಾನ್ಸ ಏಷ ಪುರುಷಃ ಸಮುದ್ರಃ ಸಮುದ್ರಿಕ್ತೋಽನ್ಯೇಭ್ಯಃ । (b) ಸ ಜೀವೋ ಯದ್ಯಪಿ ಭಗವತ್ಪ್ರಸಾದಾತ್ಸರ್ವಲೋಕಾಧಿಪೋ ಭವತಿ ಸರ್ವಲೋಕಾನತೀತ್ಯ ಯತ್ಕಿಂಚಿದಲೌಕಿಕಂ ಮೋಕ್ಷಾಖ್ಯಮಪ್ಯಶ್ನುತೇ ತಥಾಽಪಿ ತಮೇನಮಾತ್ಮಶಬ್ದೇನ ಪ್ರಸ್ತುತಂ ವಿಷ್ಣುಮತ್ಯೇವ ಮನ್ಯತೇಽಧಿಕಮೇವ ಮನ್ಯತೇ ಸ್ವಾತ್ಮನಃ ಸರ್ವಸ್ಮಾಚ್ಚ ॥ (c) ಮುಕ್ತೋಽಪಿ ನ ತೇನ ಸಾಮ್ಯಂ ತದ್ಭಾವಂ ವಾ ಮನ್ಯತೇ । (d) ಕೃಷ್ಣೋ ಮುಕ್ತೈರಿಜ್ಯತೇ ವೀತಮೋಹೈಃ । ಮುಕ್ತಾನಾಂ ಪರಮಾ ಗತಿಃ । ಅಮೃತಸ್ಯೈಷಸೇತುಃ ॥ ಇತ್ಯಾದಿ ವಾಕ್ಯಾಚ್ಚ ॥

ಅ ॥ (a) (ಆ ಈ ಜೀವನು ಸಮುದ್ರದಂತೆಯೇ ಯಾವ ಇಚ್ಛೆಯಿಂದಲೂ ಪೂರ್ಣನಾಗುವುದಿಲ್ಲ. ಸರ್ವ ಲೋಕವನ್ನು ಅತಿಕ್ರಮಿಸಿ ಯಾವುದನ್ನು ಹೊಂದುತ್ತಾನೋ, ಈ ವಿಷಯವನ್ನು ದಾಟಿ ಅಂದರೆ ಅದರ ಮೇಲೆಯೂ ಹೆಚ್ಚು ವಿಷಯವನ್ನೇ ಇಚ್ಛಿಸುತ್ತಾನೆ. ಅಂತೂ ಜೀವನಿಗೆ ವಿಷಯಗಳಲ್ಲಿ ಅಲಂಬುದ್ಧಿ ಬರುವುದೇ ಇಲ್ಲ. ಎಂಬೀ ಅದ್ವೈತಿಗಳ ವ್ಯಾಖ್ಯಾನವನ್ನು ನಿರಾಕರಣ ಮಾಡುವುದಕ್ಕೋಸ್ಕರ ಯೋಗ್ಯರೀತಿಯಿಂದ ವ್ಯಾಖ್ಯಾನಮಾಡುತ್ತಾರೆ.) ಯಾವಾತನು ಈ ಜೀವರಲ್ಲಿ ಪಶು ಮೊದಲಾದುವುಗಳಿಂದ ಹೆಚ್ಚು ಸನ್ನಿಧಾನಯುಕ್ತನಾಗಿರುತ್ತಾನೋ, ಸರ್ವಪೂಜ್ಯನಾದ ಆ ಈ ಪುರುಷಶಬ್ದವಾಚ್ಯನಾದ ಶ್ರೀ ಪರಮಾತ್ಮನು ಸಮುದ್ರನು ಅಂದರೆ ಇತರೆಲ್ಲರಿಂದಲೂ ಅತಿಶ್ರೇಷ್ಠನಾಗಿರುತ್ತಾನೆ. (ಗುಣಪರಿಪೂರ್ಣನು ಆಗಿರುತ್ತಾನೆ.) ॥ (b) ಪಶು ಮೊದಲಾದುವುಗಳಿಂದ ಹೆಚ್ಚು ಹರಿಯ ಸನ್ನಿಧಾನಕ್ಕೆ ಪಾತ್ರಭೂತನಾದ ಆ ಜೀವನು ಯದ್ಯಪಿ ಶ್ರೀ ಪರಮಾತ್ಮನ ಅನುಗ್ರಹದಿಂದ ಎಲ್ಲಾ ಲೋಕಗಳಿಗೂ ನಿಯಾಮಕನಾಗುತ್ತಾನೆ. ಅಲ್ಲದೆ ಪೃಥಿವಿ, ಅಂತರಿಕ್ಷ ಮೊದಲಾದ ಎಲ್ಲಾ ಲೋಕಗಳನ್ನು ದಾಟಿ ಯಾವುದೊಂದು ಲೋಕವಿಲಕ್ಷಣವಾದ ಮೋಕ್ಷವೆಂದು ಹೆಸರುಳ್ಳ ದೊಡ್ಡ ಐಶ್ವರ್ಯವನ್ನೂ ಕೂಡ ಹೊಂದುತ್ತಾನೆ. ಆದರೂ ಆ ಈ ಪುರುಷಶಬ್ದವಾಚ್ಯನೂ (ಪೂರ್ವದಲ್ಲಿ) ಆತ್ಮಶಬ್ದದಿಂದ ಹೇಳಲ್ಪಟ್ಟವನೂ ಆದ ಶ್ರೀ ಪರಮಾತ್ಮನನ್ನು 'ಅತ್ಯೇವ ಮನ್ಯತೇ' ಅಂದರೆ ತನ್ನಿಂದಲೂ ಇತರ ಸರ್ವ ವಸ್ತುವಿನಿಂದಲೂ ಅತಿ ಶ್ರೇಷ್ಠನನ್ನಾಗಿಯೇ ತಿಳಿಯುತ್ತಾನೆ. ॥ (c) ಮೋಕ್ಷವನ್ನು ಹೊಂದಿದವನೂ ಕೂಡ ಆ ಹರಿಯಿಂದ ಸಾಮ್ಯವನ್ನಾಗಲೀ ಆತನ ಧರ್ಮ (ಐಕ್ಯ)ವನ್ನಾಗಲೀ ಹೊಂದುವುದಿಲ್ಲ. ॥ (d) ಶ್ರೀ ಕೃಷ್ಣನು ಹೋಗಲ್ಪಟ್ಟ ಅಜ್ಞಾನವುಳ್ಳ ಮುಕ್ತರಾದ ಬ್ರಹ್ಮಾದಿಗಳಿಂದಲೂ ಪೂಜಿಸಲ್ಪಡುತ್ತಾನೆ. । (ಶ್ರೀ ಹರಿಯು) ಮುಕ್ತರಿಗೆ ಮುಖ್ಯಾಶ್ರಯನಾಗಿರುತ್ತಾನೆ. ॥ ಈ ಪರಮಾತ್ಮನು ಮುಕ್ತವರ್ಗಕ್ಕೆ ಆಶ್ರಯನಾಗಿರುತ್ತಾನೆ. ಇವೇ ಮೊದಲಾದ ವಾಕ್ಯದಿಂದಲೂ (ಸರ್ವೋತ್ತಮನೇ ಆಗಿರುತ್ತಾನೆ.)

ಭಾ॥ (a) ಯದ್ಯಪಿ ದೇವಲೋಕಾಧಿಪತ್ಯಂ ತದ್ಯೋಗ್ಯಸ್ಯ ವಿಷ್ಣುರ್ದದಾತಿ ತದಪ್ಯಶ್ನುವೀತೈವ । ಬಹುಗಣಿಕಾದಿಪರಿವಾರರೂಪಮಶುಚೀದಂ ಪದ ಮಿತ್ಯಾದಿಬುದ್ಧ್ಯಾ ನಾಪಹ್ನುವೀತ ॥ (b) ಏನಂ ಭಗವಂತಮತಿ ಮನ್ಯೇ ತ್ರೈವ ಸರ್ವಥಾ ಸ್ವತಃ ಸರ್ವಸ್ಮಾಚ್ಚಾಧಿಕಮೇವ ಮನ್ಯೇತ । ಯದ್ಯಮುಂ ಲೋಕಮಶ್ನುತೇ ಪ್ರಾಪ್ನೋತಿ ಅಶ್ನುವೀತ ಭುಂಜೀತ ॥ (c) ಪೃಥಿವೀ ಲೋಕಾಧಿಪತ್ಯೇಽಪಿ ವಿಷ್ಣೋರಾಧಿಕ್ಯಂ ಸತ್ಪುರುಷೋ ಮನ್ಯತ ಇತಿ ಪ್ರತ್ಯಕ್ಷಸಿದ್ಧತ್ವಾನ್ನ ಪೃಥಗುಕ್ತಂ । ಅತಿಶಬ್ದಾದ್ಯದ್ಧಕಿಂಚೇತಿ ಪ್ರಥ ಮೋಕ್ತೋ ಮೋಕ್ಷ ಇತಿ ಸಿದ್ಧಂ ॥

ಅ ॥ (a) ಯದ್ಯಪಿ ಸ್ವರ್ಗಲೋಕಾಧಿಪತ್ಯವು ಅದನ್ನು ಹೊಂದಲಿಕ್ಕೆ ಯೋಗ್ಯನಾದವ ನಿಗೇನೇ ಶ್ರೀ ಹರಿಯು ಕೊಡುತ್ತಾನೆ. ಅದನ್ನೂ ಕೂಡ ಯೋಗ್ಯನಾದವನು ಭೋಗಿಸುತ್ತಾನೆಯೇ ಸರಿ. ॥ ಅನೇಕ ವೇಶ್ಯಾಸ್ತ್ರೀಯರೇ ಮೊದಲಾದ ಸೇವಕರುಳ್ಳ ಈ ಸ್ವರ್ಗಲೋಕಾಧಿಪತ್ಯವು (ಆದುದರಿಂದ) ಅಶುಚಿಯು, ಅತಿಹೇಯವು ಇವೇ ಮೊದಲಾದ ಬುದ್ಧಿಯಿಂದ ತಿರಸ್ಕರಿಸುವು ದಿಲ್ಲ. ॥ (b) ಯದ್ಯಪಿ ದೇವಲೋಕಾಧಿಪತ್ಯವನ್ನು ಯೋಗ್ಯನಿಗೆ ಶ್ರೀ ಹರಿಯು ಪ್ರಾಪಿಸಿಕೊ ಡುವನು. ಆದರೂ ಹೊಂದಿದವನು ಈ ಹರಿಯನ್ನು 'ಅತಿ ಮನ್ಯೇತೈವ' ಅಂದರೆ ಎಲ್ಲಾ ಗುಣ ಗಳಿಂದಲೂ, ತನ್ನಿಂದಲೂ, ಇತರ ಎಲ್ಲಾ ವಸ್ತುವಿನಿಂದಲೂ ಅತ್ಯುತ್ತಮನನ್ನಾಗಿಯೇ ತಿಳಿ ಯುತ್ತಾನೆ. ॥ ಯಾವ ಪಕ್ಷದಲ್ಲಿ ಈ ಸ್ವರ್ಗಾದಿಲೋಕವನ್ನು 'ಅಶ್ನುತೇ' ಅಂದರೆ ಹೊಂದು ತ್ತಾನೋ, ಹಾಗಾದರೂ 'ಅಶ್ನುವೀತ' ಅಂದರೆ ಭೋಗಿಸುತ್ತಾನೆಯೇ ಸರಿ. (ಇಷ್ಟರಿಂದ ಅಹಂಕಾರವನ್ನು ಹೊಂದಲಾರನು ಮತ್ತು ಎಲ್ಲಾ ವಿಷಯದಲ್ಲಿಯೂ ಶ್ರೀ ಹರಿಯು ಸರ್ವೋ ತ್ತಮನೇ ಆಗಿರುತ್ತಾನೆ ಎಂದೇ ತಿಳಿಯುತ್ತಾನೆ. ॥ (c) ಭೂಲೋಕದ ಆಧಿಪತ್ಯವಿಷಯದ ಲ್ಲಿಯೂ ಶ್ರೀ ಪರಮಾತ್ಮನಿಗೆ ಸರ್ವೋತ್ತಮತ್ವವನ್ನು ಯೋಗ್ಯಪುರುಷನು ತಿಳಿದುಕೊಳ್ಳುತ್ತಾನೆ. ಎಂದು ಪ್ರತ್ಯಕ್ಷವಾಗಿ ಸರ್ವಾನುಭವ ಸಿದ್ಧವಾದುದರಿಂದ ಪ್ರತ್ಯೇಕವಾಗಿ ಹೇಳಲ್ಪಡಲಿಲ್ಲ. ॥ 'ಸರ್ವಂ ಲೋಕಂ ಅತಿ' ಎಂಬಲ್ಲಿ ಎಲ್ಲಾ ಲೋಕಗಳನ್ನು ಅತಿಕ್ರಮಿಸುವುದು ಎಂದು ಅರ್ಥ ವನ್ನು ಹೇಳುವ 'ಅತಿ' ಶಬ್ದವಿದ್ದುದರಿಂದಲೂ ಅಲೌಕಿಕತ್ವರೂಪವಾದ ಅರ್ಥವನ್ನು ಹೇಳುವ 'ಯದ್ಧಕಿಂ ಚ' ಎಂಬ ಶಬ್ದವಿದ್ದುದರಿಂದಲೂ ಆದಿವಾಕ್ಯದಲ್ಲಿ ಹೇಳಲ್ಪಟ್ಟದ್ದು ಮೋಕ್ಷವೆಂದು ಸಿದ್ಧವಾಯಿತು. (ಅಂತೂ 'ಸರ್ವಂ ಲೋಕಂ ಅತಿ ಯದ್ಧಕಿಂ ಚ' ಎಂಬೀ ಪ್ರಥಮ ವಾಕ್ಯವು ಮುಕ್ತಿವಿಷಯಕವೂ ಆಗುವುದು.)

ಭಾ॥ (a) ಅಂತರಿಕ್ಷಪ್ರಾಪ್ತೇರಲ್ಪತ್ವಾನ್ಮೋಕ್ಷೇ ಸ್ವತಃ ಸಿದ್ಧತ್ವಾಚ್ಚಾತಿಮನ್ಯತ ಇತಿ ಸಿದ್ಧವಚನಮೇವ ಕೃತಂ । (b) ಸ್ವರ್ಗಾದಿಪ್ರಾಪ್ತೇರಧಿಕೈಶ್ವರ್ಯಾ ದ್ಭಗವತ್ಸಮೋಽಹಂ ಭಗವತ್ಸ್ವರೂಪ ಇತಿ ವಾ ಮಂತುಂ ಪ್ರಾಪ್ತಿರಸ್ತೀತ್ಯ ತ್ಯೇವೈನಂ ಮನ್ಯೇತೇತಿ ಸಾವಧಾರಣವಿಧಿಃ ॥

ಅ ॥ (a) ಅಂತರಿಕ್ಷದ ಪ್ರಾಪ್ತಿಯು ಕಡಿಮೆ ಯಾದುದರಿಂದಲೂ ಮುಕ್ತಿಯಲ್ಲಿ ಸ್ವಾಭಾವಿಕವಾಗಿಯೇ ಸಿದ್ಧವಾದುದರಿಂದಲೂ 'ಅತಿಮನ್ಯೇತ' ಎಂದು ಸಿದ್ಧವಾದ ವಾಕ್ಯವೇ

ತೋರಿಸಲ್ಪಟ್ಟಿದೆ. [ತಾ || ಎರಡನೇ ವಾಕ್ಯದಲ್ಲಿಯೂ ಒಂದನೇ ವಾಕ್ಯದಲ್ಲಿಯೂ 'ಅತ್ಯೇನಂ ಮನ್ಯತೇ' ಎಂದೂ, ಮೂರನೇ ವಾಕ್ಯದಲ್ಲಿ 'ಅತ್ಯೇವೈನಂ ಮನ್ಯೇತ' ಎಂದೂ ಸಾವಧಾರಣ ವಿಧಿಯೂ ತೋರುವುದು. ಹೀಗೆ ಎರಡು ಪ್ರಕಾರ ಪ್ರಯೋಗಿಸಲು ಕಾರಣವೇನೆಂದರೆ- ಅಂತ ರಿಕ್ಷದಲ್ಲಿ ಲೋಕಇದ್ದವರು ಅಲ್ಪರಾದುದರಿಂದ ಅವರಿಗೆ 'ನಾನು ಶ್ರೀ ಹರಿಗೆ ಸಮಾನಿಕನು' ಇವೇ ಮೊದಲಾದ ಅಭಿಪ್ರಾಯವು ಬರಲಾರದು. ಮುಕ್ತಿಯಲ್ಲಿ ಎಲ್ಲಾ ಅಜ್ಞಾನವೂ ಮಿಥ್ಯಾಜ್ಞಾನವೂ ಇಲ್ಲದಿರುವು-ರಿಂದ ಅಂತಹ ಅಭಿಪ್ರಾಯಕ್ಕೆ ಅವಕಾಶವೇ ಇಲ್ಲವು. ಚತುರ್ಮುಖನು ಸತ್ಯಲೋಕಕ್ಕೆ ಅಧಿಪತಿಯಾದವನು. ಆದಾಗ್ಯೂ ಸರ್ವದೋಷ ರಹಿತನಾದುದರಿಂದ ದುರಭಿಪ್ರಾಯಕ್ಕೆ ಅವಕಾಶವೇ ಇಲ್ಲ. ಆದುದರಿಂದ ಶ್ರೀ ಹರಿಯು ಸರ್ವೋತ್ತಮನು ಎಂಬೀ ಜ್ಞಾನವು ಸ್ವತ ಏವ ಸಿದ್ಧವಾದುದರಿಂದ 'ಮನ್ಯತೇ' ಎಂದು ಸಿದ್ಧವಚನವೇ ಶ್ರುತವಾಗಿಯದೆ.] || (b) (ಯಾಗಾದಿಗಳನ್ನು ಮಾಡಿ) ಸ್ವರ್ಗ ಮೊದಲಾದುದನ್ನು ಹೊಂದುವುದು ಅಥವಾ ಸ್ವರ್ಗಾದಿಗಳ ಆಧಿಪತ್ಯವನ್ನೇ ಹೊಂದುವುದು ಇದು ಅತ್ಯಧಿಕ ಐಶ್ವರ್ಯಸ್ವರೂಪವಾದುದರಿಂದ ನಾನು ಶ್ರೀ ಹರಿಗೆ ಸಮಾನಿಕನು, ಅಥವಾ ಶ್ರೀ ಪರಮಾತ್ಮನ ಸ್ವರೂಪವುಳ್ಳವನೇ ಆಗಿರುತ್ತೇನೆ ಎಂದಾಗಲೀ ತಿಳಿದುಕೊಳ್ಳಲಿಕ್ಕೆ ಪ್ರಾಪ್ತಿಯಿದೆ ಎಂದು 'ಅತ್ಯೇವ ಏನಂ ಮನ್ಯೇತ' ಆದರೂ ಈ ಹರಿಯನ್ನು ಸರ್ವೋತ್ತಮನನ್ನಾಗಿ ತಿಳಿಯುತ್ತಾನೆಯೇ ಸರಿ ಎಂದು ಅವಧಾರಣದಿಂದ ಯುಕ್ತವಾದ ವಿಧಿಯು. ||

ಭಾ|| (a) ನ ಚ ಮನ್ಯತ ಇತಿ ಕಾಮಮಾತ್ರಂ | ಮನು ಅವಬೋಧನ ಇತಿ ಧಾತೋಃ || ನ ಹ್ಯವಬೋಧ ಏವ ಕಾಮಃ | ಅನ್ಯಥಾ ರಾಜ್ಯಂ ಜಾನನ್ನಪಿ ರಾಜ್ಯಕಾಮ ಇತಿ ಸ್ಯಾತ್ || (b) ನ ಚ ಮನ್ಯತೇ ಮನ್ಯೇತೇತಿ ದ್ವಿವಿಧಃ ಪ್ರಯೋಗಸ್ತಸ್ಮಿನ್ಪಕ್ಷೇ ಯುಜ್ಯತೇ | (c) ನ ಚ ಸರ್ವಲೋಕಮತೀತ್ಯಾಶ್ನತೋ ಮುಕ್ತಸ್ಯ ಮುಕ್ತೇರನ್ಯತ್ರ ಕಾಮೋ ವಿದ್ಯತೇ || ಸರ್ವಲೋಕಾಧಿಕಂ ಚ ಮುಕ್ತಿಂ ವಿನಾ ನಾನ್ಯತ್ | (d) ತಸ್ಮಾನ್ಮುಕ್ತೈರಮುಕ್ತೈರಪಿ ಭಗವಾನ್ಸರ್ವೋತ್ತಮತ್ವೇನ ಚಿಂತ್ಯ ಇತಿ ಸಿದ್ಧಂ ||

ಅ || (a) 'ಮನ್ಯತೇ' ಎಂಬುವುದು ಇಚ್ಛಾರ್ಥಕ ಮಾತ್ರವೇ ಆಗುವುದಿಲ್ಲವು. 'ಮನು' ಎಂಬ ಧಾತುವು 'ಅವಬೋಧನ' ತಿಳಿದುಕೊಳ್ಳುವಿಕೆ ಎಂಬ ಅರ್ಥದಲ್ಲಿ, ಎಂದು ಧಾತುವ್ಯಾಖ್ಯಾನವಿದ್ದುದರಿಂದ ತಿಳಿದುಕೊಳ್ಳುವಿಕೆಯೇ ಇಚ್ಛೆಯು ಆಗುವುದಿಲ್ಲವಷ್ಟೇ. | ಅನ್ಯಥಾ ಅಂದರೆ ತಿಳಿದುಕೊಳ್ಳುವುದೇ ಇಚ್ಛೆಯು ಎಂದಾದರೆ ರಾಜ್ಯವನ್ನು ತಿಳಿದವನೂಕೂಡ ರಾಜ್ಯವನ್ನು ಇಚ್ಛಿಸುತ್ತಾನೆ ಎಂದಾಗಬೇಕಾದೀತು. (ಆದುದರಿಂದ 'ಅತ್ಯೇನಂ ಮನ್ಯತೇ' ಎಂಬುವುದಕ್ಕೆ ಪ್ರಾಪ್ತಗಳಾದ ಲೋಕಗಳನ್ನು ದಾಟಿದರೂ ಮತ್ತೂ ಮತ್ತು ಅಧಿಕವನ್ನೇ ಇಚ್ಛಿಸುತ್ತಾನೆ ಎಂಬೀ ಪರರ ವ್ಯಾಖ್ಯಾನವು ಅಸಂಗತವು.) || (b) ಅವರ ಪಕ್ಷದಲ್ಲಿ 'ಮನ್ಯತೇ' 'ಮನ್ಯೇತ' ಎಂಬೀ ಎರಡು ವಿಧ ಪ್ರಯೋಗವೂ ಕೂಡಲಾರದು. ಅದ್ವೈತಿಗಳ ಪಕ್ಷದಲ್ಲಿ ಸಿದ್ಧರೂಪ ಪ್ರಯೋಗವೂ, ವಿಧಿರೂಪ ಪ್ರಯೋಗವೂ ಎರಡೂ ಕೂಡಲಾರದು. ಇಚ್ಛೆಯನ್ನು ವಿಧಿಸಲಿಕ್ಕೆ ಆಗದಿರುವುದರಿಂದ 'ಮನ್ಯತೇ' ಎಂದೇ ಆಗಬೇಕಾಯಿತು. 'ಮನ್ಯೇತ' ಎಂಬೀ ಪ್ರಯೋಗವೇ ಆಗದೆ ಹೋಗಬೇಕಾಯಿತು || (c) ಅಲ್ಲದೆ, ಎಲ್ಲಾ ಲೋಕಗಳನ್ನು ದಾಟಿ ಸರ್ವಭೋಗಗಳನ್ನು ಅನುಭವಿಸುವ ಮುಕ್ತನಿಗೆ ಮುಕ್ತಿಯಿಂಧ ಬೇರೆ ಕಡೆಯಲ್ಲಿ ಇಚ್ಛೆಯು ಇರಲಿಕ್ಕಿಲ್ಲವಷ್ಟೇ. || ಮುಕಿ

ಯನ್ನು ಹೊರತು ಇತರವಾದುದು. ಎಲ್ಲಾ ಲೋಕಗಳಿಂದ ಶ್ರೇಷ್ಠವಾದುದು ಇಲ್ಲವೇ ಇಲ್ಲ. ॥ (d) ಆದುದರಿಂದ ಶ್ರೀ ಹರಿಯು ಮುಕ್ತರಿಂದಲೂ, ಅಮುಕ್ತರಿಂದಲೂ ಸರ್ವೋತ್ತಮನೆಂದೇ ಧ್ಯಾನಿಸಲಿಕ್ಕೆ ಯೋಗ್ಯನು ಎಂದು ಸಿದ್ಧವಾಯಿತು.

ಭಾ॥ **(a)** ಪುರುಷಸ್ಥ ಪಂಚಭೂತೇಷು ಪಂಚರೂಪೋ ಹರಿಃ ಸ್ಥಿತಃ। ಪ್ರದ್ಯುಮ್ನಾದಿ ಸ್ವರೂಪೇಣ ಜ್ಯೋತಿರಾದೌ ಪೃಥಕ್ಪೃಥಕ್ ॥ **(b)** ಸ ಏವ ಚ ಪುನ ರ್ವಾಯೌ ಪಂಚಧಾವಸ್ಥಿತಃ ಪ್ರಭುಃ । ಪ್ರಾಣಾದಿರೂಪೇ ವಸತಿ ಹ್ಯನಿರು ದ್ಧಾದಿರೂಪವಾನ್ ॥ **(c)** ಅನಿರುದ್ಧಶ್ಚ ಪ್ರದ್ಯುಮ್ನಸ್ತಥಾ ಸಂಕರ್ಷಣಃ ಪ್ರಭುಃ । ವಾಸುದೇವೋ ನಾರಾಯಣಃ ಪಂಚರೂಪ ಇತಿ ಕ್ರಮಾತ್ ॥ **(d)** ಪಂಚರೂಪೋಽಪಿ ಭಗವಾನ್ಯಸ್ಮಾದ್ವಾಯೌ ವಿಶೇಷತಃ । ಸ್ಥಿತಸ್ತೇನ ಚ ಖಾದಿಭ್ಯೋ ವಾಯುರೇವ ವಿಶಿಷ್ಯತೇ ॥ **(e)** ಅತ ಏವ ಪೃಥಿವ್ಯಾದಿ ಸ್ವರೂಪಾ ಮನಆದಯಃ । ದೇವಾಃ ಪ್ರಾಣಾಶ್ರಿತಾ ನಿತ್ಯಂ ಗಚ್ಛಂತಿ ಪ್ರಾಣಮನ್ವಪಿ ॥

ಅ ॥ (a) ಶ್ರೀ ಹರಿಯು ಪುರುಷರ ಶರೀರಗಳಲ್ಲಿ ಇರತಕ್ಕ ಐದು ಭೂತಗಳಲ್ಲಿ ಐದು ರೂಪಗಳುಳ್ಳವನಾಗಿ ಇದ್ದಾನೆ. ॥ ಆತನು ಪ್ರದ್ಯುಮ್ನ ಮೊದಲಾದ ಸ್ವರೂಪದಿಂದ ಪ್ರತ್ಯೇಕ ಪ್ರತ್ಯೇಕ ಜೋತಿಸ್ಸೇ ಮೊದಲಾದವುಗಳಲ್ಲಿ ಇದ್ದಾನೆ. [ತಾ ॥ ಪ್ರದ್ಯುಮ್ನನು ಜ್ಯೋತಿರ್ನಾಮಕ ನಾಗಿ ಜ್ಯೋತಿಸ್ಸಿನಲ್ಲಿ ಇದ್ದಾನೆ. ಆಕಾಶನಾಮಕನಾದ ವಾಸುದೇವನು ಆಕಾಶದಲ್ಲಿ ಇದ್ದಾನೆ. ಅಪ್ ನಾಮಕನಾದ ಅನಿರುದ್ಧನು ಜಲಗಳಲ್ಲಿ ಇದ್ದಾನೆ. ಪೃಥಿವೀನಾಮಕನಾದ ನಾರಾಯ ಣನು ಪೃಥಿವಿಯಲ್ಲಿ ಇದ್ದಾನೆ. ವಾಯುನಾಮಕನಾದ ಸಂಕರ್ಷಣನು ವಾಯುವಿನಲ್ಲಿದ್ದಾನೆ.]॥ (b) ಆ ಸರ್ವಸಮರ್ಥನಾದ ಶ್ರೀ ಹರಿಯೇ ಪ್ರಾಣ ಮೊದಲಾದ ಐದು ರೂಪಗಳುಳ್ಳ ವಾಯು ವಿನಲ್ಲಿ ಐದುಪ್ರಕಾರನಾಗಿ ಇದ್ದು ಅನಿರುದ್ಧ ಮೊದಲಾದ ಸ್ವರೂಪಗಳುಳ್ಳವನಾಗಿ ಆವಾಸ ಮಾಡುತ್ತಾನೆ ಪ್ರಮಾಣಪ್ರಸಿದ್ಧವು. ॥ (c) ಶ್ರೀ ಹರಿಯು (೧) ಅನಿರುದ್ಧನು, (೨) ಪ್ರದ್ಯು ಮ್ನನು, (೩) ಹಾಗೆಯೇ ಸಂಕರ್ಷಣನು, (೪) ವಾಸುದೇವನು, (೫) ನಾರಾಯಣನು ಎಂದು ಐದು ರೂಪಗಳುಳ್ಳವನಾಗಿ ಕ್ರಮವಾಗಿ (ಪ್ರಾಣಾದಿಗಳಲ್ಲಿ ನಿಯಾಮಕನಾಗಿ ಇರುತ್ತಾನೆ.) ॥ (d) ಯಾವ ಕಾರಣದಿಂದ ಶ್ರೀ ಹರಿಯು ವಾಯುವಿನಲ್ಲಿ ವಿಶೇಷಾಕಾರವಾಗಿ ಪಂಚರೂಪವುಳ್ಳವ ನಾಗಿಯೇ ಇದ್ದಾನೋ ಅದರಿಂದಲೇ ಆಕಾಶಾದಿ ನಾಲ್ಕು ಭೂತಗಳಿಂದ ವಾಯುವೇ ಅತ್ಯು ತ್ತಮನಾಗಿರುತ್ತಾನೆ. ॥ (e) ವಾಯುದೇವರು ಆಕಾಶಾದಿಗಳಿಂದ ಶ್ರೇಷ್ಠರಾದುದರಿಂದಲೇ ಪೃಥಿವಿ ಮೊದಲಾದ ಸ್ವರೂಪಗಳುಳ್ಳ ಮನಸ್ಸೇ ಮೊದಲಾಗ್ಯುಳ್ಳ ತದಭಿಮಾನಿಗಳೂ ಆದ ದೇವತೆಗಳು ಮುಖ್ಯಪ್ರಾಣನನ್ನು ಆಶ್ರಯಿಸಿದವರಾಗಿ ನಿರಂತರದಲ್ಲಿಯೂ ಪ್ರಾಣನನ್ನು ಅನುಸರಿಸಿಯೇ (ದೇಹಾದಿಗಳಿಂದ) ಹೊರಟು ಹೋಗುತ್ತಾರೆ.

ಭಾ॥ **(a)** ಪೃಥಿವೀಮಯಂ ಮನಸ್ತತ್ರ ಶೇಷವೀಂದ್ರಶಿವೇಂದ್ರಕಾಃ । ಕಾಮಾ ನಿರುದ್ಧಾ ದೇವ ಗುರು ಮನೋದೇವಾಃ ಸಚಂದ್ರಕಾಃ ॥ **(b)** ಶ್ರೋತ್ರ ಮಾಕಾಶರೂಪಂ ಚ ಮಿತ್ರಧರ್ಮಜಲಾಧಿಪಾಃ । ಕುಬೇರಶ್ಚ ದಿಶಾಂ ದೇವಾಃ ಶ್ರೋತ್ರದೇವಾ ಇತಿ ಶ್ರುತಾಃ ॥ **(c)** ಜ್ಯೋತೀರೂಪಂ ತಥಾ

ಚಕ್ಷುಶ್ಚಕ್ಷುರ್ದೇವ್ಯೋ ರವಿ ಸ್ಸ್ಮೃತಃ । ಕಿಂಚಿತ್ತೇಜೋಯುತಾ ವಾಕ್ಚ ವಿಶೇಷೇಣ ತ್ವಬಾತ್ಮಿಕಾ ॥ ಉಪಚೀಯತೇ ತತಃ ಸಾಽದ್ಭಿಸ್ತದಭಾವೇ ಚ ಶುಷ್ಯತಿ । (d) ತೃಷಿತಸ್ಯ ಹಿ ವಾಗೇವ ಪೂರ್ವಂ ಮಂದಾ ಪ್ರವರ್ತತೇ ॥ ವಾಗ್ದೇವತೇ ತತೋ ವಹ್ನಿರುಮಾ ಚಾಪಿ ಪ್ರಕೀರ್ತಿತೇ । (e) ಚಕ್ಷುಷ್ಟ್ವಮಗ್ನೇಃ ಶ್ರೋತ್ರತ್ವಂ ಚಂದ್ರಸ್ಯಾಪಿ ಸಹೋಚ್ಯತೇ । ಸ್ವಾಹಾಯಾ ಅಪಿ ವಾಕ್ತ್ವಂ ಚ ಪರ್ಜನ್ಯಸ್ಯ ಮನಃ ಸ್ಥಿತಿಃ ॥ ದ್ವಿತೀಯಮೇತದಾಸ್ಥಾನಂ ಶ್ರುತಿವಾಕ್ಯಪ್ರಮಾಣತಃ ॥

ಅ ॥ (a) ಮನಸ್ಸು, ಪೃಥಿವೀ ವಿಕಾರವಾದ ಅನ್ನಮಯವಾದುದು. ಅದರಲ್ಲಿ ಚಂದ್ರನಿಂದ ಸಹಿತರಾದ ಶೇಷ, ಗರುಡ, ರುದ್ರ, ಇಂದ್ರರು, ಮನ್ಮಥನು, ಅನಿರುದ್ಧನು, ಬೃಹಸ್ಪತ್ಯಾಚಾರ್ಯರು ಇಷ್ಟು ದೇವತೆಗಳು ಮನಸ್ಸಿಗೆ ಅಭಿಮಾನಿಗಳು. ॥ (b) ಕಿವಿಯು ಆಕಾಶರೂಪವಾದುದು. ಮಿತ್ರನು, ಯಮನು, ಜಲಕ್ಕೆ ಅಭಿಮಾನಿಯಾದ ವರುಣನು, ಕುಬೇರನು ಎಂದು ಯಾವ ಪ್ರಸಿದ್ಧರಾದ ದಿಕ್ಕುಗಳಿಗೆ ಅಭಿಮಾನಿದೇವತೆಗಳೋ (ಅವರು) ಕಿವಿಗೆ ಅಭಿಮಾನಿ ದೇವತೆಗಳೆಂದು ಹೇಳಲ್ಪಡುತ್ತಾರೆ. ॥ (c) ಹಾಗೆಯೇ ಕಣ್ಣು ತೇಜಸ್ಸ್ವರೂಪವಾದುದು. ಸೂರ್ಯನು ಕಣ್ಣಿಗೆ ಅಧಿಪತಿಯೆಂದು ಹೇಳಲ್ಪಟ್ಟಿದ್ದಾನೆ. ॥ ವಾಗಿಂದ್ರಿಯವು ಸ್ವಲ್ಪ ತೇಜಸ್ಸಿನಿಂದ ಯುಕ್ತವಾಗಿಯದೆ. ವಿಶೇಷಾಕಾರವಾಗಿ ನೀರಿನ ಸ್ವರೂಪವುಳ್ಳದ್ದಾಗಿಯದೆ. ॥ ಜಲಾತ್ಮಕವಾದುದರಿಂದಲೇ ಆ ವಾಗಿಂದ್ರಿಯವು ಜಲಗಳಿಂದ ಅಭಿವೃದ್ಧವಾಗುತ್ತದೆ. ನೀರು ಇಲ್ಲವಾದರೆ ವಾಗಿಂದ್ರಿಯವು ಒಣಗುತ್ತದೆ. ॥ (d) ತೃಷೆಯಿಂದೊಡಗೂಡಿದವನಿಗೆ ಆದರೂ ವಾಗ್ವ್ಯವಹಾರವೇ ಮೊದಲು ಮೆಲ್ಲಗೆ ಹೊರಡುತ್ತದೆ. (ನೀರನ್ನು ಕುಡಿದ ಮೇಲೆ ಉಚ್ಚಧ್ವನಿಯಾಗಿ ಹೊರಡುತ್ತದೆ.) ಅಭಿಮನ್ಯಮಾನವಾದ ವಾಗ್ವ್ಯವಹಾರವು ಜಲ, ತೇಜಸ್ಸು ಎಂದು ಎರಡು ಪ್ರಕೃತಿ ಉಳ್ಳದ್ದಾದುದರಿಂದಲೇ ಅಗ್ನಿಯು, ಪಾರ್ವತಿಯು ಇವರಿಬ್ಬರೂ ವಾಗಿಂದ್ರಿಯಕ್ಕೆ ದೇವತೆಗಳೆಂದೇ ಹೇಳಲ್ಪಟ್ಟಿರುತ್ತಾರೆ. ॥ (e) ಅಗ್ನಿಗೆ ಚಕ್ಷುರಭಿಮಾನಿತ್ವವೂ (ವಾಗಭಿಮಾನಿತ್ವದಿಂದ) ಕೂಡಿಕೊಂಡೇ ಅಂದರೆ ವಾಗಭಿಮಾನಿತನವನ್ನು ಬಿಡದೆ ಹೇಳಲ್ಪಡುತ್ತದೆ. ಚಂದ್ರನಿಗೂ ಕೂಡ (ಮನೋಽಭಿಮಾನಿತನದಿಂದ) ಕೂಡಿಕೊಂಡೇ ಶ್ರೋತ್ರಾಭಿಮಾನಿತ್ವವು ಹೇಳಲ್ಪಡುತ್ತದೆ. ॥ ಸ್ವಾಹಾದೇವತೆಗೂ ಮಂತ್ರಗಳ ಅಭಿಮಾನಿತನದಿಂದ ಕೂಡಿಕೊಂಡೇ ವಾಗಭಿಮಾನಿತ್ವವು. ಪರ್ಜನ್ಯನಿಗೆ (ಇಂದ್ರಿಯ ಗೋಳಕಾಭಿಮಾನಿತನವನ್ನು ಬಿಡದೆ) ಮನಸ್ಸಿನಲ್ಲಿ ಇರುವಿಕೆಯು. ಅಂದರೆ ಮನೋಽಭಿಮಾನಿತನವು. ॥ ಶ್ರುತಿವಾಕ್ಯರೂಪ ಪ್ರಮಾಣಗಳನ್ನು ಅನುಸರಿಸಿ ಎರಡನೇದ್ದೂ ಈ ದೇವತೆಗಳಿಗೆ ಅಧಿಷ್ಠಾನವು. (ಎಂದೂ ಅಂಗೀಕರಿಸತಕ್ಕುದು.)

ಭಾ॥ (a) ಶೇಷವೀಂದ್ರಶಿವಾದೀನಾಂ ಮನ ಆದಿಸ್ವರೂಪಿಣಾಂ । ಆಶ್ರಯೋ ವಾಯುರೇವೈಕಸ್ತಸ್ಯ ನಾರಾಯಣಃ ಸ್ವಯಂ ॥ (b) ತಸ್ಮಾದ್ವಾಯುವಶಾನಾಂ ಹಿ ವಾಕ್ಚಿತ್ತಾದಿಸ್ವರೂಪಿಣಾಂ । ದೇವಾನಾಂ ಕ್ರಮವೃತ್ತಿಭ್ಯೋ ಜಾತೇ ಯಜ್ಞೇಽಪಿ ಕೇಶವಃ ॥ ಅಗ್ನಿಹೋತ್ರಾದಿಕೇ ನಿತ್ಯಮನಿರುದ್ಧಾದಿರೂಪಕಃ ॥ (c) ಪಂಚಧಾಽವಸ್ಥಿತಃ ಸೋಮೋ ಪಂಚರೂಪೋ ವ್ಯವಸ್ಥಿತಃ ॥ ಸವನತ್ರಯಾತ್ಪೂರ್ವಕೇ ಚ ಸವನತ್ರಿತಯೇ ಪರೇ । ಅನಿರುದ್ಧಾದಿರೂಪೇಣ ಕ್ರಮೇಣೈವ ವ್ಯವಸ್ಥಿತಃ ॥ (d) ತಮೇತಂ ಪರಮಂ

ವಿಷ್ಣುಂ ಮುಕ್ತೋಽಪ್ಯತ್ಯೇವ ಮನ್ಯತೇ । ಅಧಿಕಂ ಹ್ಯೇವ ತಸ್ಮಾತ್ತಂ ಮನ್ಯೇತಾನ್ಯೋಽಪಿ ಸರ್ವದಾ ॥ ಇತ್ಯಾದಿ ಚ ॥ (e) ಪಂಚರೂಪಭಗವದ್ಧ್ಯಾನಾರ್ಥಮೇವ ಚೈತತ್ಪಂಚವಿಧತ್ವಂ ಸರ್ವತ್ರೋಕ್ತಂ ॥ ೩ ॥

ಅ ॥ (a) ಮನಸ್ಸೇ ಮೊದಲಾದ ಸ್ವರೂಪಗಳುಳ್ಳ ಶೇಷ, ಗರುಡ, ರುದ್ರಾದಿಗಳಿಗೆ ಮುಖ್ಯಪ್ರಾಣನೊಬ್ಬನೇ ಆಶ್ರಯನು. ಆ ಮುಖ್ಯಪ್ರಾಣನಿಗೆ ಸ್ವಯಂ ನಾರಾಯಣನು ಆಶ್ರಯನು. ॥ (b) ಆದುದರಿಂದ ಮುಖ್ಯಪ್ರಾಣನ ಅಧೀನರೂ ವಾಕ್ ಚಿತ್ತ ಮೊದಲಾದ ಸ್ವರೂಪಗಳುಳ್ಳವರೂ ಆದ, ದೇವತೆಗಳ ತಾರತಮ್ಯ ಕ್ರಮದಿಂದ ಹುಟ್ಟಿದ ಪ್ರೇರಣಾರೂಪ ವ್ಯಾಪಾರಗಳಿಂದ ಹುಟ್ಟಿದ ಅಗ್ನಿಹೋತ್ರ ಮೊದಲಾದ ನಾಮಧೇಯಗಳುಳ್ಳ ಯಾಗದಲ್ಲಿಯೂ ಕೂಡ ಕೇಶವನು ನಿರಂತರದಲ್ಲಿಯೂ ಅನಿರುದ್ಧಾದಿ ಸ್ವರೂಪಗಳುಳ್ಳವನಾಗಿ ಇರುತ್ತಾನೆ. ॥ ಅಗ್ನಿಹೋತ್ರನಾಮಕ ಅನಿರುದ್ಧನು ಅಗ್ನಿಹೋತ್ರದಲ್ಲಿದ್ದಾನೆ. ದರ್ಶಪೂರ್ಣಮಾಸನಾಮಕ ಎರಡು ರೂಪಗಳುಳ್ಳ ಪ್ರದ್ಯುಮ್ನನು ದರ್ಶಪೂರ್ಣಮಾಸನಾಮಕ ಯಾಗಗಳಲ್ಲಿದ್ದಾನೆ. ಚಾತುರ್ಮಾಸ್ಯನಾಮಕ ಸಂಕರ್ಷಣನು ಚಾತುರ್ಮಾಸ್ಯಾಖ್ಯ ಯಾಗದಲ್ಲಿದ್ದಾನೆ. ಪಶುನಾಮಕ ವಾಸುದೇವನು ಪಶುನಾಮಕ ಯಾಗದಲ್ಲಿದ್ದಾನೆ. ಸೋಮನಾಮಕ ನಾರಾಯಣನು ಸೋಮಯಾಗದಲ್ಲಿದ್ದಾನೆ. ॥ (c) ಐದು ಪ್ರಕಾರವಾಗಿ ಇರತಕ್ಕ ಸೋಮಯಾಗದಲ್ಲಿಯೂ ಐದುರೂಪಿಯಾಗಿ ಇದ್ದಾನೆ. 'ಪ್ರಾತರ್ ಮಾಧ್ಯಂದಿನಸಾಯಂ' ಎಂಬ ಮೂರು ಯಾಗಗಳಿಂದ ಮೊದಲು ಮಾಡತಕ್ಕ ಸೋಮಯಾಗದಲ್ಲಿಯೂ ಆ ಮೂರು ಯಾಗಗಳಲ್ಲಿಯೂ ಕೊನೆಗೆ ಮಾಡತಕ್ಕ ಸೋಮಯಾಗದಲ್ಲಿಯೂ ಪೂರ್ವದಲ್ಲಿ ಹೇಳಿದ ಕ್ರಮದಿಂದಲೇ ಅನಿರುದ್ಧ ಮೊದಲಾದ ರೂಪದಿಂದ ಅಂದರೆ ಅನಿರುದ್ಧ, ಪ್ರದ್ಯುಮ್ನ, ಸಂಕರ್ಷಣ, ವಾಸುದೇವ, ನಾರಾಯಣ ರೂಪಗಳಿಂದ ಇರುತ್ತಾನೆ. ॥ (d) ಆ ಈ ಸರ್ವೋತ್ತಮನಾದ ಶ್ರೀಪರಮಾತ್ಮನನ್ನು ಮುಕ್ತನೂ ಕೂಡ ಸರ್ವಾಧಿಕನನ್ನಾಗಿಯೇ ತಿಳಿಯುತ್ತಾನೆ. ಆದುದರಿಂದ ಇತರನೂ ಕೂಡ ಯಾವಾಗಲೂ ಆತನನ್ನು ಸರ್ವೋತ್ತಮನನ್ನಾಗಿಯೇ ತಿಳಿಯತಕ್ಕುದು. ಇದೇ ಮೊದಲಾದ ಪ್ರಮೇಯವು ನಿರೂಪಿಸಲ್ಪಟ್ಟಿದೆ. ॥ (e) ಎಲ್ಲಾ ಕಡೆಗಳಲ್ಲಿಯೂ ಐದು ರೂಪಗಳುಳ್ಳ ಶ್ರೀ ಹರಿಯನ್ನು ಧ್ಯಾನಿಸುವುದಕ್ಕೋಸ್ಕರವೇ ಈ ಐದುವಿಧವು ಎಲ್ಲಾ ಅಧಿಷ್ಠಾನದಲ್ಲಿಯೂ ಅನೇಕ ಖಂಡಗಳಲ್ಲಿಯೂ ಹೇಳಲ್ಪಟ್ಟಿದೆ. ॥ ೩ ॥

**ಮಂ ॥ ಯೋ ಹ ವೈ ಯಜ್ಞೇ ಯಜ್ಞಂ ವೇದಾಹನ್ಯಹರ್ದೇವೇಷು ದೇವಮಧ್ಯೂಹ್ಯಂ ಸ ಸಂಪ್ರತಿವಿದೇಷ ವೈ ಯಜ್ಞೇ ಯಜ್ಞೋಽಹನ್ಯಹರ್ದೇವೇಷು ದೇವೋಽಧ್ಯೂಹ್ಯೋ ಯದೇತನ್ಮಹದುಕ್ಥಂ ತದೇತತ್ಪಂಚವಿಧಂ ತ್ರಿವೃತ್ಪಂಚದಶಂ ಸಪ್ತದಶಮೇಕವಿಂಶಂ ಪಂಚವಿಂಶಮಿತಿ ಸ್ತೋಮತೋ ಗಾಯತ್ರಂ ರಥಂತರಂ ಬೃಹದ್ಭದ್ರಂ ರಾಜನಮಿತಿ ಸಾಮತೋ ಗಾಯತ್ರ್ಯುಷ್ಣಿಗ್ಬೃಹತೀ ತ್ರಿಷ್ಟುಬ್ದ್ವಿಪದೇತಿ ಛಂದಸ್ತಃ ಶಿರೋ ದಕ್ಷಿಣಃ ಪಕ್ಷ ಉತ್ತರಃ ಪಕ್ಷಃ ಪುಚ್ಛಮಾತ್ಮೇತ್ಯಾಖ್ಯಾನಂ ಪಂಚಕೃತ್ವಃ ಪ್ರಸ್ತೌತಿ ಪಂಚಕೃತ್ವ ಉದ್ಗಾಯತಿ ಪಂಚಕೃತ್ವಃ ಪ್ರತಿಹರತಿ ಪಂಚಕೃತ್ವ ಉಪದ್ರವತಿ ಪಂಚಕೃತ್ವೋ ನಿಧನಮುಪಯಂತಿ ತತ್ ಸ್ತೋಭಸಹಸ್ರಂ ಭವತ್ಯೇವಂ ಹ್ಯೇತಾಃ ಪಂಚವಿಧಾ ಅನುಶ**

ಸ್ಯಂತೇ ಯತ್ರಾಕ್ತ್ಯ ಚಾಶೀತಿಭ್ಯಃ ಸೈಕಾ ವಿಧಾ ತಿಸ್ರಸ್ತ್ಯ ಚಾಶೀತಯೋ ಯದೂರ್ಧ್ವಂ ಸಾ ಪಂಚವಿಶೋ ತದೇತತ್ಸಹಸ್ರಂ ತತ್ಸರ್ವಂ ತಾನಿ ದಶ ದಶೇತಿ ವೈ ಸರ್ವಮೇತಾವತೀ ಹಿ ಸಂಖ್ಯಾ ದಶ ದಶ ತಸ್ತಚ್ಛತಂ ದಶ ಶತಾನಿ ತತ್ಸಹಸ್ರಂ ತತ್ಸರ್ವಂ ತಾನಿ ತ್ರೀಣಿ ಚ್ಛಂದಾಂಸಿ ಭವಂತಿ ತ್ರೇಧಾ ವಿಹಿತಂ ವಾ ಇದಮನ್ನಮಶನಂ ಪಾನಂ ಖಾದಸ್ತದೇತ್ಯೈರಾಪ್ನೋತಿ ॥ ೪ ॥

ಅ ॥ ಯಃ=ಯಾವ ಅಧಿಕಾರಿಯು, ಯಜ್ಞೇ=ಯಾಗಗಳಲ್ಲಿ, ಅಧ್ಯೂಹ್ಯಂ=ಅಧಿರೂಢನಾದ, ಯಜ್ಞಂ=ಯಾಗಮಾಡಿಸಿಕೊಳ್ಳುವುದರಿಂದ ಯಜ್ಞನಾಮಕನೂ, ಅಹನಿ=ಹಗಲುಗಳಲ್ಲಿ, ಅಹಃ=ಅಪಹರಿಸಲಿಕ್ಕೆ ಅಶಕ್ಯನಾದುದರಿಂದ ಅಹರ್ನಾಮಕನೂ, ದೇವೇಷು=ಬ್ರಹ್ಮಾದಿದೇವತೆಗಳಲ್ಲಿ, ದೇವಂ=ಸರ್ವೋತ್ತಮನಾದುದರಿಂದ ದೇವನಾಮಕನೂ ಆದ ಶ್ರೀಹರಿಯನ್ನು, ವೇದ=ತಿಳಿಯುತ್ತಾನೋ, ಸಃ=ಆತನು, ಸಂಪ್ರತಿವಿತ್=ಚೆನ್ನಾಗಿ ಯಥಾರ್ಥಜ್ಞಾನಿಯು, ಹ ವೈ=ಪ್ರಸಿದ್ಧವು, (ಯಜ್ಞಾದಿಗಳಲ್ಲಿ ಇರತಕ್ಕ ಶ್ರೀ ಹರಿಗೆ ಯಜ್ಞಾದಿತ್ವವು ಅಮುಖ್ಯವೆಂದಾದರೆ ಅದನ್ನು ತಿಳಿದವನು ಯಥಾರ್ಥಜ್ಞಾನಿಯು ಅಲ್ಲವೆಂದು ಆಗಬೇಕಾಯಿತು. ಆದುದರಿಂದ ಯಜ್ಞಾದಿತ್ವವು ಮುಖ್ಯವಾದುದೇ ಎಂದು ನಿರೂಪಿಸುತ್ತಾರೆ.) ಏಷಃ=ಈ ಹರಿಯು, ಯಜ್ಞೇ=ಯಾಗದಲ್ಲಿ, ಅಹನಿ=ಹಗಲಿನಲ್ಲಿ, ದೇವೇಷು=ದೇವತೆಗಳಲ್ಲಿ, ಯಜ್ಞಃ=ಅಹಃ ದೇವಶ್ಚ=ಯಾಗಾದಿಗಳಿಗೆ ಯಜ್ಞತ್ವಾದಿಗಳನ್ನು ಕೊಡುವುದರಿಂದ ಯಜ್ಞಾದಿನಾಮಗಳುಳ್ಳವನಾಗಿಯೇ, ಅಧ್ಯೂಹ್ಯಃ=ನಿಯಾಮಕನಾಗಿ ಇದ್ದಾನೆ, ವೈ=ನಿಶ್ಚಯವು. (ಯಜ್ಞಾದಿನಾಮಗಳುಳ್ಳ ಶ್ರೀ ಹರಿಯೇ ಬೃಹತೀಸಹಸ್ರದಲ್ಲಿಯೂ ಇದ್ದಾನೆ ಎಂದು ನಿರೂಪಿಸುತ್ತಾರೆ). ಮಹತ್=ಪರಿಪೂರ್ಣನಾದುದರಿಂದ ಶ್ರೇಷ್ಠವಾದುದು, ಉಕ್ಥಂ=ಸರ್ವಜಗತ್ತನ್ನು ಸೃಷ್ಟಿಸುವುದರಿಂದಲೂ, ಉಕ್ಥನಾಮಕ ಬೃಹತೀಸಹಸ್ರದಲ್ಲಿ ಇದ್ದುದರಿಂದಲೂ ಉಕ್ಥನಾಮಕವೂ ಆದ, ಯತ್ ಏತತ್=ಯಾವ ಈ ಭಗವದ್ರೂಪವದೆಯೋ, ತತ್ ಏತತ್=ಆ ಈ ಭಗವದ್ರೂಪವು, ಪಂಚವಿಧಂ=ಐದುಪ್ರಕಾರವಾದುದು, ತ್ರಿವೃತ್ ಪಂಚದಶಂ ಸಪ್ತದಶಂ ಏಕವಿಂಶಂ ಪಂಚವಿಂಶಂ=ಆಯಾಯ ಹೆಸರುಳ್ಳದ್ದು, ಇತಿ=ಎಂದು, ಸ್ತೋಮತಃ=ಸ್ತೋಮರೂಪದಿಂದ ಅಂದರೆ ಸ್ತೋಮಶಬ್ದದಿಂದ ಹೇಳಲ್ಪಡುವುದರಿಂದ, (ಹೀಗೆ ಐದು ಪ್ರಕಾರವಾದುದು) 'ಗಾಯತ್ರಂ ರಥಂತರಂ ಬೃಹತ್ ಭದ್ರಂ ರಾಜನಂ'=ತತ್ತನ್ನಾಮಕವು, ಇತಿ=ಎಂದು, ಸಾಮತಃ=ಸಾಮರೂಪದಿಂದ, ಸರ್ವಭೂತಗಳಲ್ಲಿ ಸಮನಾಗಿ ಸಾಮಶಬ್ದದಿಂದ ಹೇಳಲ್ಪಡುವುದರಿಂದ, ಅಥವಾ ಸಾಮವನ್ನು ಅಧಿಕರಿಸಿ ಇರತಕ್ಕ ಪ್ರದ್ಯುಮ್ನಾಖ್ಯರೂಪವು ಐದು ವಿಧವು, ಗಾಯತ್ರೀ ಉಷ್ಣಿಕ್ ಬೃಹತೀ ತ್ರಿಷ್ಟುಪ್ ದ್ವಿಪದಾ=ತತ್ತನ್ನಾಮಕವು, ಇತಿ=ಎಂದು, ಛಂದಸ್ತಃ=ಛಂದೋರೂಪದಿಂದ, ಸ್ತುತ್ಯನಾಗಿ ಛಂದಶ್ಶಬ್ದವಾಚ್ಯವಾದುದರಿಂದ ಅಥವಾ ಛಂದಸ್ಸನ್ನಧಿಕರಿಸಿ (ಇರತಕ್ಕ ಸಂಕರ್ಷಣಾಖ್ಯರೂಪವು ಐದು ಪ್ರಕಾರವು), (ಚಿತಿಗತನಾದ ವಾಸುದೇವನ ಐದು ಪ್ರಕಾರಗಳನ್ನು ತೋರಿಸುತ್ತಾರೆ.) 'ಶಿರಃ ದಕ್ಷಿಣಃ ಪಕ್ಷಃ ಉತ್ತರಃ ಪಕ್ಷಃ ಪುಚ್ಛಂ ಆತ್ಮಾ'=ತತ್ತನ್ನಾಮಕ ಅವಯವು, ಇತಿ=ಎಂದು, ಆಖ್ಯಾನಂ=ಪ್ರಸಿದ್ಧವಾದುದು, (ಪ್ರಸ್ತಾವ ಉದ್ಗೀಥ ಪ್ರತಿಹಾರ ಉಪದ್ರವ ನಿಧನ ಎಂಬ ಐದು ಸಾಮಗಳಲ್ಲಿ ಆಯಾಯ ಹೆಸರುಳ್ಳ ಐದು ರೂಪಿಯಾದ ಶ್ರೀ ಪರಮಾತ್ಮನು ಪ್ರತಿ ಒಂದರಲ್ಲಿಯೂ ಅನಿರುದ್ಧಾದಿ ರೂಪದಿಂದ ಐದುಪ್ರಕಾರ ಇದ್ದಾನೆ. ಆದುದರಿಂದಲೇ ಪ್ರಸ್ತೋತನು) ಪಂಚಕೃತ್ವಃ=ಐದುಪ್ರಕಾರವಾಗಿ, (ಪ್ರಸ್ತಾವದಲ್ಲಿ

ಇರತಕ್ಕ ಅನಿರುದ್ಧಾಖ್ಯ ಶ್ರೀ ಹರಿಯನ್ನು) ಪ್ರಸ್ತೌತಿ=ಪ್ರಸ್ತಾವಸಾಮದಿಂದ ಸ್ತೋತ್ರ ಮಾಡು ತ್ತಾನೆ, (ಉದ್ಗಾತನು ಉದ್ಗೀಥದಲ್ಲಿ ಇರತಕ್ಕ ಪ್ರದ್ಯುಮ್ನರೂಪಿಯಾದ ಶ್ರೀ ಹರಿಯನ್ನು) ಪಂಚಕೃತ್ವಃ=ಐದಾವರ್ತಿ, ಉದ್ಗಾಯತಿ=ಉದ್ಗೀಥಸಾಮದಿಂದ ಸ್ತೋತ್ರಮಾಡುತ್ತಾನೆ, (ಪ್ರತಿಹರ್ತನೂ ಕೂಡ ಪ್ರತಿಹಾರದಲ್ಲಿರತಕ್ಕ ಸಂಕರ್ಷಣರೂಪಿಯಾದ ಶ್ರೀ ಹರಿಯನ್ನು) ಪಂಚಕೃತ್ವಃ=ಐದಾವರ್ತಿ, ಪ್ರತಿಹರತಿ=ಪ್ರತಿಹಾರಸಾಮದಿಂದ ಸ್ತೋತ್ರಮಾಡುತ್ತಾನೆ, (ಉಪ ದ್ರವನಾಮಕ ಸಾಮಗಾಯಕನು ಆ ಸಾಮದಲ್ಲಿರತಕ್ಕ ವಾಸುದೇವನನ್ನು) ಪಂಚಕೃತ್ವಃ= ಐದಾವರ್ತಿ, ಉಪದ್ರವತಿ=ಉಪದ್ರವಸಾಮದಿಂದ ಸ್ತುತಿಸುತ್ತಾನೆ, (ನಿಧನನಾಮಕ ಸಾಮ ವನ್ನು ಗಾನಮಾಡುವವರೂ ಕೂಡ ಅದರಲ್ಲಿರತಕ್ಕ ಎಲ್ಲಾ ಮುಕ್ತರಿಗೂ ಆಶ್ರಯನಾದುದ ರಿಂದ ನಿಧನನಾಮಕನಾದ ನಾರಾಯಣನನ್ನು) ಪಂಚಕೃತ್ವಃ=ಐದಾವರ್ತಿ, ನಿಧನಮುಪ ಯಂತಿ=ನಿಧನಸಾಮದಿಂದ ಸಮಾಪಿಸುತ್ತಾರೆ, ಅಂದರೆ ಸ್ತುತಿಸುತ್ತಾರೆ. (ಆ ಸಾಮಗಳಲ್ಲಿ ಇರತಕ್ಕ ಗಾನವನ್ನು ಮಾತ್ರ ಪೂರ್ಣೀಕರಿಸುವ ವಿಶೇಷಾರ್ಥವಿಲ್ಲದೆ ಇರುವ ಸ್ತೋಭಾಕ್ಷರ ಗಳೂ ಕೂಡ ಶ್ರೀ ಹರಿಯ ಅನಂತಾನಂತ ರೂಪಗಳನ್ನು ಹೇಳುತ್ತವೆ), ತತ್=ಆ ಪ್ರಸ್ತಾ ವಾದಿ ಸಾಮಗಳಲ್ಲಿ, ಸ್ತೋಭಸಹಸ್ರಂ=ಅಪರಿಮಿತಗಳಾದ ಸ್ತೋಭಶಬ್ದಗಳು, ಭವತಿ=ಇರು ತ್ತವೆ, (ಆ ಎಲ್ಲಾ ಸ್ತೋಭಶಬ್ದಗಳು ಶ್ರೀ ಹರಿಯ ಪ್ರತ್ಯೇಕ ಪ್ರತ್ಯೇಕ ಪ್ರಾದುರ್ಭಾವ ರೂಪ ಗಳನ್ನು ಹೇಳುತ್ತವೆ.) (ಇದೇ ರೀತಿಯಾಗಿ 'ಬೃಹತೀಸಹಸ್ರವು ಶ್ರೀ ಹರಿಯ ಸಹಸ್ರರೂಪವನ್ನು ಹೇಳುತ್ತದೆ' ಎಂದು ಹೇಳಲಿಕ್ಕೆ ಬೃಹತೀಸಹಸ್ರಸ್ವರೂಪವನ್ನು ನಿರೂಪಿಸುತ್ತಾರೆ.) ಏವಂ ಹಿ= ಇದೇ ರೀತಿಯಾಗಿ, (ಸಾಮಕ್ಕೆ ಐದುವಿಧವಿದ್ದಂತೆಯೇ) ಏತಾಃ=ಮೇಲೆ ಹೇಳುವ, ಪಂಚ ವಿಧಾಃ=ಐದುಪ್ರಕಾರಗಳು, ಅನುಶಸ್ಯಂತೇ=(ಬೃಹತೀಸಹಸ್ರಕ್ಕೆ) ಹೇಳಲ್ಪಡುತ್ತವೆ, ತೃಚಾ ಶೀತಿಭ್ಯಃ=ಮೂರು ಋಕ್ಕುಗಳ ಎಂಭತ್ತರ ದೆಸೆಯಿಂದ, ಪ್ರಾಕ್=ಪ್ರಥಮ ಭಾಗರೂಪವಾದ ಯಾವ ಮಂತ್ರಸಮುದಾಯವಿದೆಯೋ, ಸಾ=ಅದು, ಏಕಾ ವಿಧಾ=ಒಂದುಪ್ರಕಾರವು, ತಿಸ್ರಃ ತೃಚಾಶೀತಯಃ='ಗಾಯತ್ರೀ ಬಾರ್ಹತೀ ಔಷ್ಣಿಹೀ' ಎಂಬ ಯಾವ ಮೂರು ತೃಚಾಶೀತಿಗಳೋ, (ಅವುಗಳು ಮೂರು ಪ್ರಕಾರಗಳು.) ಯತ್ ಊರ್ಧ್ವಂ=ತೃಚಾಶೀತಿಗಳಿಂದ ಮೇಲಿನ ಯಾವ ಮಂತ್ರಸಮುದಾಯವಿದೆಯೋ, ಸಾ=ಅದು, ಪಂಚಮೀ=ಐದನೇ ಪ್ರಕಾರವು, (ಈ ಪ್ರಕಾರ ಬೃಹ ತೀಸಹಸ್ರಸ್ವರೂಪವನ್ನು ಹೇಳಿ ಅದರಲ್ಲಿರತಕ್ಕ ವಿಷ್ಣುರೂಪಸಮೂಹಗಳನ್ನು ಹೇಳುತ್ತಾರೆ.) ತತ್ ಏತತ್ ಸಹಸ್ರಂ=ಆ ಈ ಐದುವಿಧವಾಗಿ ಹೇಳಲ್ಪಟ್ಟ ಬೃಹತೀಸಹಸ್ರವು, ತತ್ ಏತತ್ ಸಹಸ್ರಂ=ಆ ಈ ಸಹಸ್ರನಾಮವಾಚ್ಯವಾದ ವಿಶ್ವಾದಿಸಹಸ್ರರೂಪವನ್ನು, (ಪ್ರತ್ಯೇಕ ಪ್ರತ್ಯೇಕ ಪ್ರತಿ ಪಾದಿಸುತ್ತದೆ.) ತತ್=ವಿಶ್ವಾದಿ ಸಹಸ್ರರೂಪವನ್ನು ಹೇಳುವ ಆ ಬೃಹತೀಸಹಸ್ರವೇ, ಸರ್ವಂ= ಸರ್ವನಾಮಾತ್ಮಕವು, ಅಂದರೆ ಅನಂತನಾಮಗಳಿಂದ ಹೇಳಲ್ಪಡತಕ್ಕ ಅನಂತರೂಪಗಳನ್ನು ಹೇಳುತ್ತದೆ, (ಯಾವ ಕಾರಣದಿಂದ ಈ ಬೃಹತೀಸಹಸ್ರವು ಸರ್ವರೂಪಗಳನ್ನು ಹೇಳುತ್ತದೋ) ತತ್=ಎಲ್ಲಾ ರೂಪಗಳನ್ನು ಪ್ರತಿಪಾದಿಸುವುದರಿಂದಲೇ, ಸರ್ವಂ=ಹರಿರೂಪಗಳ ಸಮುದಾ ಯವು, ತತ್=ಆ ಬೃಹತೀಸಹಸ್ರದಿಂದ (ಸ್ತುತಿಸಲ್ಪಡುತ್ತದೆ), ದಶ=ಮತ್ಸ್ಯಾದಿ ಹತ್ತುರೂಪ ಗಳು, ತಾನಿ=ಬೃಹತೀಸಹಸ್ರ ಪ್ರತಿಪಾದ್ಯಗಳು, ಬೃಹತೀಸಹಸ್ರದಲ್ಲಿಯೇ ಸ್ತುತಿಸಲ್ಪಡುತ್ತವೆ, ಅಥವಾ ದಶ=ಮತ್ಸ್ಯಾದಿರೂಪಗಳು, ತಾನಿ=ಪ್ರಸ್ತಾವಾದಿ ಸಾಮಭಾಗಪ್ರತಿಪಾದ್ಯಗಳೂ (ಆಗುತ್ತವೆ), ಅಥವಾ ತಾನಿ=ಮತ್ಸ್ಯಾದಿ ಹತ್ತುನಾಮಗಳೇ, ದಶ=(ಎಲ್ಲಾ ನಾಮಗಳಿಗೂ ಅರ್ಥಭೂತನಾದ ಎಲ್ಲಾ ರೂಪವನ್ನು ಹೇಳುವುದರಿಂದ) ಸರ್ವನಾಮಾತ್ಮಗಳಾಗಿವೆ, ದಶ= ಮತ್ಸ್ಯಾದಿ ಹತ್ತುರೂಪಗಳು, ಸರ್ವಂ ವೈ=ಸರ್ವರೂಪಾತ್ಮಕಗಳೂ ಆಗುತ್ತವೆ, (ಆದುದ

ರಿಂದ 'ದಶಾವತಾರಗಳನ್ನು ಹೇಳುವ ಹತ್ತುನಾಮಗಳು ಎಲ್ಲಾ ರೂಪಗಳನ್ನು ಹೇಳುತ್ತವೆ'. ಎಂಬುವುದು ಉಪಪನ್ನವಾಗುತ್ತದೆ), ದಶೇತಿ='ದಶ' ಎಂಬುವುದು, ಸರ್ವಂ=ಸರ್ವಶಬ್ದ ಸಮಾನಾರ್ಥವು (ಎಂಬುವುದು), ವೈ=ಮುಖ್ಯವಾಗಿಯೇ ಶ್ರುತಿಪ್ರಸಿದ್ಧವಾಗಿಯದೆ, ಅಥವಾ ತಾನಿ=ಬೃಹತೀಸಹಸ್ರರೂಪವಾಕ್ಯಗಳು, ದಶ=ಸುಖರೂಪನಾದ ವಿಷ್ಣುವನ್ನು, (ಆತನ ಗುಣ ಗಳನ್ನು ವ್ಯಕ್ತೀಕರಿಸುವುದರಿಂದ) ಕೊಡುತ್ತವೆ, ಆದುದರಿಂದ 'ದಶ' ಶಬ್ದದಿಂದ ಹೇಳಲ್ಪಡು ತ್ತವೆ, ಅಥವಾ, ತಾನಿ=ಬೃಹತೀಸಹಸ್ರವಾಚ್ಯಗಳಾದ ರೂಪಗಳು, ದಶ=ಭಕ್ತರಿಗೆ ಸುಖ ವನ್ನು ಕೊಡುವುದರಿಂದ 'ದಶ' ನಾಮಕಗಳು, ಅಥವಾ, ಸರ್ವಂ=ಬೃಹತೀಸಹಸ್ರವು, ಸಾಮ ಭಾಗದ ಐದೂಕೂಡ (ಎರಡು ಐದು ಆದುದರಿಂದಲೂ ಸರ್ವನಾಮಗಳಿಗೂ ಅರ್ಥಭೂತ ವಾದ ಭಗವದ್ರೂಪವನ್ನು ಪ್ರತಿಪಾದಿಸುವುದರಿಂದಲೂ), ದಶೇತಿ='ದಶ' ನಾಮಕವೆಂದು, ವೈ=ಶ್ರುತಿಪ್ರಸಿದ್ಧವು, ಸಂಖ್ಯಾ=ಸಂಖ್ಯೆಯು, ಏತಾವತೀ ಹಿ=ಹತ್ತರಲ್ಲಿಯೇ ಪರ್ಯವಸಾ ನವಾಗುತ್ತದೆ, (ಇದಕ್ಕಿಂತ ಹೆಚ್ಚು ಇಲ್ಲ. ಶತ (೧೦೦) ಎಂಬುವುದೇ ಮೊದಲಾದುವುಗಳೂ ದಶ (೧೦) ಹತ್ತರ ಪ್ರಭೇದಗಳೇ ಸರಿ), ದಶ ದಶತಃ=ಯಾವ ಹತ್ತು ಹತ್ತು ವರ್ಗಗಳೋ, ತತ್=ಅವುಗಳು, ಶತಂ=ನೂರುಗಳು (ಎಂದು ಹೇಳಲ್ಪಡುತ್ತವೆ), ಶತಾನಿ ದಶ=ನೂರು ಹತ್ತಾದರೆ, ತತ್=ಅವುಗಳೇ, ಸಹಸ್ರಂ=ಸಹಸ್ರವೆಂದು (ಹೇಳಲ್ಪಡುತ್ತವೆ), (ಹತ್ತು ಸಹಸ್ರ ಗಳು ಅಯುತಗಳಾಗುತ್ತವೆ, ಹತ್ತು ಅಯುತಗಳು ಲಕ್ಷಗಳಾಗುತ್ತವೆ, ಆದುದರಿಂದ ಹತ್ತ ರಿಂದ ಹೆಚ್ಚು ಮೂಲವಾದ ಸಂಖ್ಯೆಯು ಇಲ್ಲವು). ತತ್=ಆದುದರಿಂದ, ಅಂದರೆ ಎಲ್ಲಾ ನಾಮ ಗಳ ಅರ್ಥಗಳನ್ನು ಹೇಳುವುದರಿಂದ, ತತ್=ಆ ಬೃಹತೀಸಹಸ್ರವು, ಸರ್ವಂ=ಸಮಸ್ತವನ್ನು ಹೇಳುತ್ತದೆ, ಸರ್ವಗುಣರೂಪನಾದ ಶ್ರೀ ಹರಿಯನ್ನು ಪ್ರತಿಪಾದಿಸುತ್ತದೆ, ತಾನಿ=ಆ ಬೃಹತೀ ಸಹಸ್ರವು, ತ್ರೀಣಿ ಛಂದಾಂಸಿ='ಗಾಯತ್ರೀ, ಬೃಹತೀ, ಉಷ್ಣಿಕ್' ಎಂಬ ಛಂದಸ್ಸುಗಳು, ಭವಂತಿ=ಆಗುತ್ತವೆ, ಅಂದರೆ ಬೃಹತೀಸಹಸ್ರವು ಕ್ರಮದಿಂದ ಈ ಮೂರು ಛಂದಸ್ಸಿನಿಂದ ಸಂಬದ್ಧವಾದ ಋಕ್‌ಸ್ವರೂಪವು ಆಗುತ್ತದೆ. ಇದಂ=ಈ ಮೂರು ಪ್ರಕಾರವಾದ, ಅನ್ನಂ= ಬೃಹತೀಸಹಸ್ರಾಖ್ಯ ಅನ್ನವು, (ಶ್ರೀ ಪರಮಾತ್ಮನಿಗೆ) ಅಶನಂ=ಓದನವು, ಪಾನಂ=ಪಾನೀ ಯವು, ಖಾದಃ=ತಿನ್ನಲಿಕ್ಕೆ ಯೋಗ್ಯವಾದುದು, ಇತಿ=ಈ ಪ್ರಕಾರವಾಗಿ, ತ್ರೇಧಾ=ಮೂರು ಪ್ರಕಾರವಾಗಿ, ವಿಹಿತಂ ವೈ=ಹೇಳಲ್ಪಟ್ಟದಷ್ಟೇ. ತತ್=ಬೃಹತೀಸಹಸ್ರವು, ಏತೈಃ=ಈ ಅಶನ, ಪಾನ, ಖಾದ ರೂಪಗಳಾದ ಮೂರು ಛಂದಸ್ಸುಗಳಿಂದ, ಅಂದರೆ ಮೂರು ತೃಚಾಶೀತಿಗಳಿಂದ, ತತ್=ವಿಷ್ಣ್ವಾಖ್ಯಪರಬ್ರಹ್ಮನನ್ನು, ಆಪ್ನೋತಿ=ಪ್ರಾಪಿಸಿಕೊಡುತ್ತದೆ. ಅಂದರೆ ಬೃಹತೀಸಹಸ್ರ ವನ್ನು ಸ್ತುತಿಸಿದ ಪಕ್ಷದಲ್ಲಿ ಆ ಬೃಹತೀಸಹಸ್ರವು ಶ್ರೀ ಹರಿಗೆ ವಿಶೇಷಾಕಾರವಾಗಿ ಸಂತೋಷ ನನ್ನುಂಟುಮಾಡುತ್ತದೆ. ॥ ೪ ॥

ತಾ ॥ ಉಕ್ಥನಾಮಕ ಭಗವದ್ರೂಪವು ಸ್ತೋಮ, ಸಾಮ, ಚಿತಿ, ಛಂದಃ, ಶಸ್ತ್ರ ಈ ಐದರಲ್ಲಿ ಪ್ರತಿ ಒಂದರಲ್ಲಿಯೂ ಪ್ರತ್ಯೇಕವಾಗಿ ಅನಿರುದ್ಧನನ್ನು ಆರಂಭಿಸಿ ನಾರಾಯಣಪರ್ಯಂತ ಐದು ಪ್ರಕಾರವಾಗಿ ಇದೆ. ಅವುಗಳ ಪೈಕಿ ಸ್ತೋಮದಲ್ಲಿ ಇರತಕ್ಕ ಅನಿರುದ್ಧನ ಐದು ರೂಪವು ಇದಾಗಿರುತ್ತದೆ,- (೧) ಮೂರು ಪ್ರಕಾರಗಳನ್ನು ಅಂಗೀಕರಿಸುವುದರಿಂದ ಅಧ್ಯಾತ್ಮ ಅಧಿಭೂತ ಅಧಿದೈವಗಳಲ್ಲಿರತಕ್ಕ, ಸ್ತೋಮದಲ್ಲಿರತಕ್ಕ ಅನಿರುದ್ಧನ ಅನಿರುದ್ಧಾಖ್ಯ ರೂಪವು 'ತ್ರಿವೃತ್' ಎಂದು ಹೇಳಲ್ಪಡುತ್ತದೆ. (೨) ಪ್ರದ್ಯುಮ್ನಾಖ್ಯರೂಪವು ಪೃಥಿವ್ಯಾದಿ ಐದು ಭೂತಗಳಲ್ಲಿ ಅಧ್ಯಾ ತ್ಮಾದಿ ಮೂರು ಭೇದದಿಂದ ಪ್ರತಿ ಒಂದರಲ್ಲಿಯೂ ಇದ್ದು ಹದಿನೈದು ಪ್ರಕಾರವಾದುದರಿಂದ 'ಪಂಚದಶ' ಎಂದು ಹೇಳಲ್ಪಡುತ್ತದೆ. (೩) ಸಂಕರ್ಷಣಾಖ್ಯ ರೂಪವು ಹದಿನಾರು ಕಲೆಗಳೇ

ಅಧಿರೂಢನಾಗಿ ಅಪಹರಿಸಲಿಕ್ಕೆ ಅಶಕ್ಯನಾದುದರಿಂದಲೇ ಅಹರ್ನಾಮಕನೂ, ಬ್ರಹ್ಮಾದಿದೇವತೆಗಳಲ್ಲಿ ಅಧಿರೂಢನಾಗಿ ಸರ್ವೋತ್ತಮಗಳಾದ ದ್ಯೋತನಾದಿಗುಣಗಳು ಇರುವುದರಿಂದ 'ದೇವ' ನಾಮಕನೂ, ಇದೇ ರೀತಿಯಾಗಿ ಸ್ತೋಮಮೊದಲಾದ ಎಲ್ಲಾ ವಸ್ತುಗಳಲ್ಲಿ ಇದ್ದು ಸ್ತೋಮ ಮೊದಲಾದ ಎಲ್ಲಾ ನಾಮಧೇಯಗಳುಳ್ಳವನೂ ಆದ ನಾಶರಹಿತನಾದ ಶ್ರೀ ಹರಿಯನ್ನು ಯಾವ ಅಧಿಕಾರಿಯು ತಿಳಿಯುತ್ತಾನೋ, ಆತನು ಚೆನ್ನಾಗಿ ಯಥಾರ್ಥಜ್ಞಾನವುಳ್ಳವನು ಎಂದು ಶಾಸ್ತ್ರ ಪ್ರಸಿದ್ಧವು. ॥ (b) ಯಃ ಅಸೌ ಹರಿಃ=ಯಾವ ಈ ಹರಿಯು, ಸರ್ವವಸ್ತುವಿಗೂ ಸೃಷ್ಟಿಕರ್ತನಾಗಿ ಉಕ್ಥನಾಮಕನೋ, ಗುಣಪರಿಪೂರ್ಣನಾದುದರಿಂದ 'ಮಹಾನ್' ಎಂದು ಪ್ರಸಿದ್ಧನೋ, ಸಹಸ್ರಬೃಹತೀ ಛಂದಸ್ಕಋಕ್ಕುಗಳಲ್ಲಿ ಇದ್ದವನಾಗಿ (ಮಹದುಕ್ಥನಾಮಕನೋ) ಆ ಈ ಹರಿಯು ಹಗಲುಗಳಿಗೆ ಅಹಸ್ತ್ವವನ್ನು ಅಂದರೆ ಪ್ರಕಾಶಿಸುವ ಶಕ್ತಿಯನ್ನು ಕೊಡುವುದರಿಂದ ಅಹರ್ನಾಮಕನೂ, ಯಾಗಗಳಿಗೆ ಯಜ್ಞತ್ವವನ್ನು ಕೊಡುವುದರಿಂದ ಯಜ್ಞನಾಮಕನೂ ಬ್ರಹ್ಮಾದಿದೇವತೆಗಳಿಗೆ ದೇವತ್ವವನ್ನು ಕೊಡುವವನಾಗಿ ಸರ್ವದೇವೋತ್ತಮನೂ ಆಗಿರುತ್ತಾನೆ. ॥ (c) ಆ ಬೃಹತೀಸಹಸ್ರದಲ್ಲಿರತಕ್ಕ ವಿಷ್ಣುವು 'ಸ್ತೋಮ, ಸಾಮ, ಚಿತಿ, ಛಂದಃ, ಶಸ್ತ್ರ' ಈ ಐದರಲ್ಲಿಯೂ ಕ್ರಮವಾಗಿ ಅನಿರುದ್ಧ ಮೊದಲಾದ ರೂಪದಿಂದ ಐದುಪ್ರಕಾರನಾಗಿ ಇದ್ದಾನೆ. ಒಂದೊಂದರಲ್ಲಿ ಒಂದೊಂದುರೂಪವಿದೆ. (ಪ್ರಕಾರಾಂತರದಿಂದಲೂ ವ್ಯಾಖ್ಯಾನಮಾಡುತ್ತಾರೆ) ಆ ಸ್ತೋಮಾದಿಗಳಲ್ಲಿರತಕ್ಕ ಅನಿರುದ್ಧ ಮೊದಲಾದ ಒಂದೊಂದೇ ರೂಪವು ಪ್ರತ್ಯೇಕ ಪ್ರತ್ಯೇಕ ಅನಿರುದ್ಧ ಮೊದಲಾದ ಐದು ಸ್ವರೂಪವಾಗಿಯದೆ. (ಅಂತೂ ಐದು ವಿಧವೂ ಪ್ರತ್ಯೇಕವಾಗಿ ಐದು ಪ್ರಕಾರವಾಗಿಯದೆ.)

ಭಾ॥ **(a)** ಪ್ರಸ್ತಾವಾದಿಷ್ವಪಿ ವಿಭುಃ ಪಂಚಧೈವ ವ್ಯವಸ್ಥಿತಃ । **(b)** ಪ್ರಸ್ತಾವಾದೀನ್ಪಂಚಕೃತ್ವಸ್ತಸ್ಮಾದೇವ ಪ್ರಕುರ್ವತೇ ॥ ಪಂಚರೂಪಂ ತಮೇವೈಕಂ ಸ್ತೋತುಮೇವ ಪೃಥಕ್ಪೃಥಕ್ । **(c)** ತತ್ರ ಯೇ ಸ್ತೋಭಶಬ್ದಾಶ್ಚ ಸಂಸ್ಥಿತಾ ಬಹುಕೋಟಯಃ ॥ ಪೃಥಕ್ಪೃಥಕ್ತೇಽಪಿ ವಿಷ್ಣೋಃ ಪ್ರಾದುರ್ಭಾವಾನ್ಪ್ರಚಕ್ಷತೇ । **(d)** ಅನಂತರೂಪೋ ಹಿ ಹರಿಃ ಶಬ್ದೋಽಪ್ಯೇಷ ಹ್ಯನಂತಧಾ ॥

ಅ ॥ (a) ಶ್ರೀ ಹರಿಯು ಪ್ರಸ್ತಾವ ಮೊದಲಾದ ಐದರಲ್ಲಿ ಕ್ರಮವಾಗಿ ಐದು ರೂಪಗಳುಳ್ಳವನಾಗಿ ಇದ್ದಾನೆ. (ಪ್ರಸ್ತಾವಾದಿಗಳಲ್ಲಿ ಇರತಕ್ಕ ಐದು ರೂಪಗಳುಳ್ಳ ಶ್ರೀ ಹರಿಯು ಪ್ರತ್ಯೇಕ ಪ್ರತ್ಯೇಕ ಐದು ಪ್ರಕಾರನಾಗಿಯೇ ಇದ್ದಾನೆ.) ॥ (b) ಆದುದರಿಂದಲೇ, ಅಂದರೆ ಒಂದೊಂದರಲ್ಲಿ ಐದೈದು ರೂಪವಿರುವುದರಿಂದಲೇ (ಪರಸ್ಪರವಾಗಿ) ಭೇದರಹಿತನೇ ಆದ ಆ ಹರಿಯನ್ನು ಐದು ರೂಪಗಳುಳ್ಳವನನ್ನಾಗಿ ಪ್ರತ್ಯೇಕ ಪ್ರತ್ಯೇಕ ಸ್ತೋತ್ರಮಾಡುವುದಕ್ಕೋಸ್ಕರವೇ ಪ್ರಸ್ತಾವ ಮೊದಲಾದುವುಗಳನ್ನು ಐದಾವರ್ತಿ ಮಾಡುತ್ತಾರೆ ಅಂದರೆ ಸ್ತುತಿಸುತ್ತಾರೆ. ॥ (c) ಆ ಸಾಮಗಳಲ್ಲಿ ಅಪರಿಮಿತ ಕೋಟಸಂಖ್ಯಾಕಗಳಾದ ಯಾವ ವ್ಯರ್ಥಾಕ್ಷರವುಳ್ಳ ಸ್ತೋಭಶಬ್ದಗಳು ಇವೆಯೋ ಆ ಸ್ತೋಭಾಕ್ಷರಗಳೂ ಕೂಡ ಪ್ರತ್ಯೇಕ ಪ್ರತ್ಯೇಕ ಅನಂತಪ್ರಾದುರ್ಭಾವಗಳನ್ನು ಶ್ರೀ ಹರಿಗೆ ಹೇಳುತ್ತವೆ. ॥ (d) ಶ್ರೀ ಹರಿಯು ಅಪರಿಮಿತಸ್ವರೂಪಗಳುಳ್ಳವನು. ಶ್ರುತ್ಯಾದಿ ಪ್ರಸಿದ್ಧವು. ಈ ಸ್ತೋಭರೂಪವಾದ ಶಬ್ದವೂ ಕೂಡ ಅಪರಿಮಿತವಾಗಿಯದೆ. ಸ್ತೋಭ ಸಹಸ್ರಪ್ರತಿಪಾದ್ಯವಾದ ರೂಪವೂ ಅಪರಿಮಿತವಾಗಿಯದೆ. ಸ್ತೋಭಶಬ್ದಗಳೂ ಅಪರಿಮಿತಗಳಾಗಿವೆ. ಬಹು ಸಾಮಗಳಲ್ಲಿ ಬಹುರೂಪಿಯಾಗಿದ್ದಾನೆ).

ಭಾ|| (a) ವಿಷ್ಣೋಃ ಸಹಸ್ರನಾಮ್ನಸ್ತು ಯತ್ತದ್ರೂಪಸಹಸ್ರಕಂ । ಬೃಹತೀ ಸಹಸ್ರಮೇತಚ್ಚ ತದ್ವಕ್ತಿ ಹಿ ಪೃಥಕ್ಪೃಥಕ್ ॥ (b) ಸಹಸ್ರಶಬ್ದೋಽಸ್ಯಾಮಿತಂ ಯತೋ ವಕ್ತ್ಯಮಿತಾನ್ಯತಃ । ನಾಮಾನಿ ವಿಷ್ಣೋರುಚ್ಯಂತೇ ಸಹಸ್ರಮಿತಿ ಚಾಖ್ಯಯಾ ॥ (c) ಅನಂತನಾಮವಚನೇ ತ್ವಶಕ್ತತ್ವಾತ್ಸಹಸ್ರಕಂ । ನಾಮ್ನಾಂ ಪೃಥಗಿದಂ ಪ್ರೋಕ್ತಮನಂತತನುವಾಚಕಂ ॥

ಅ || (a) ಯಾವುದೊಂದು ಶ್ರೀ ಪರಮಾತ್ಮನ ಸಹಸ್ರನಾಮಕ್ಕಾದರೂ ಅರ್ಥಭೂತವಾದ ರೂಪಗಳ ಸಹಸ್ರವಿದೆಯೋ ಆ ಈ ರೂಪಸಹಸ್ರವನ್ನು ಬೃಹತೀಸಹಸ್ರವು ಪ್ರತ್ಯೇಕ ಪ್ರತ್ಯೇಕ ಹೇಳುತ್ತದೆ. ಅಂದರೆ ಒಂದೊಂದು ಋಕ್ಕು ಒಂದೊಂದು ನಾಮಗಳ ಅರ್ಥವನ್ನು ಪ್ರತಿಪಾದಿಸುತ್ತದೆ. ಬೃಹತೀ ಸಹಸ್ರವು ಸಹಸ್ರನಾಮಕ್ಕೆ ವ್ಯಾಖ್ಯಾನರೂಪವಾದುದರಿಂದ, ಆ ಸಹಸ್ರನಾಮಗಳು ಅನಂತರೂಪಗಳನ್ನು ಪ್ರತಿಪಾದಿಸುವುದರಿಂದ ಆ ಬೃಹತೀಸಹಸ್ರವೂ ಕೂಡ ಅನಂತರೂಪಗಳನ್ನು ಪ್ರತಿಪಾದಿಸುತ್ತದೆ. (b) ಸಹಸ್ರಶಬ್ದವೂ ಕೂಡ ಯಾವಕಾರಣದಿಂದ ಅಪರಿಮಿತವೆಂಬ ಅರ್ಥವನ್ನು ಹೇಳುತ್ತದೋ, ಆದುದರಿಂದ ಶ್ರೀ ಹರಿಯ ಅಪರಿಮಿತನಾಮಧೇಯಗಳೂ 'ಸಹಸ್ರಂ' ಎಂಬೀ ಹೆಸರಿನಿಂದಲೇ ಹೇಳಲ್ಪಡುತ್ತವೆ. [ತಾ || ಸಹಸ್ರನಾಮಗಳಿಗೂ ಬೃಹತೀಸಹಸ್ರ ಋಕ್ಕುಗಳಿಗೂ ವ್ಯಾಖ್ಯಾನ ವ್ಯಾಖ್ಯೇಯ ಭಾವವಿದ್ದರೆ ಅವರಲ್ಲಿ ಪ್ರತಿಪಾದಿಸಲ್ಪಡತಕ್ಕ ರೂಪಗಳೂ ಅಲ್ಪಗಳೇ ಆದವು. ಸಹಸ್ರಶಬ್ದವು ಎರಡು ಐನೂರನ್ನು ಹೇಳುವುದರಿಂದ ಎಂದು ಹೇಳಕೂಡದು. ಸಹಸ್ರಶಬ್ದವು ಅಮಿತವೆಂಬುವ ಅರ್ಥವನ್ನು ಹೇಳುವುದರಿಂದ ಸಹಸ್ರನಾಮವು ಅಪರಿಮಿತ ಅರ್ಥವನ್ನೇ ಪ್ರತಿಪಾದಿಸುತ್ತದೆ.] (c) ಈ ಪ್ರಸಿದ್ಧವಾದ ನಾಮಗಳ ಸಹಸ್ರವು ಅಪರಿಮಿತ ರೂಪಗಳನ್ನು ಪ್ರತಿಪಾದಿಸುತ್ತದೆ. ಅಪರಿಮಿತ ನಾಮಧೇಯಗಳನ್ನು ಹೇಳುವುದರಲ್ಲಿ (ಅಧಿಕಾರಿಗಳಿಗೆ) ಶಕ್ತಿಯಿಲ್ಲದೆ ಇರುವುದರಿಂದ ಅಪರಿಮಿತ ಭಗವದ್ರೂಪಗಳನ್ನು ಪ್ರತಿಪಾದಿಸುವ ಈ ನಾಮಗಳ ಸಹಸ್ರವು ಪ್ರತ್ಯೇಕವಾಗಿ (ಭಾರತದಲ್ಲಿ) ಹೇಳಲ್ಪಟ್ಟಿದೆ.

ಭಾ|| (a) ವಿಷ್ಣೋರನಂತರೂಪಾಣಾಮುಕ್ತ್ವಾ ಪಂಚಶತದ್ವಯೀ । ಆಸೀತ್ಸಹಸ್ರಮಿತ್ಯಾಖ್ಯಾ ಸಹಸ್ರಂ ಮುಖ್ಯತೋಽಮಿತಂ ॥ (b) ಬ್ರಹ್ಮ ಯಾವತ್ತಾವತೀ ವಾಗಿತಿ ವೇದಪ್ರಮಾಣತಃ । ಸಹ್ಯೈವಾನಂತರೂಪೈಸ್ತು ಸರಣೇನ ಸಹಸ್ರಕಂ ॥ (c) ನಾಮ್ನಾ ಸಹ ಸೃತೇರೇವ ರೂಪಾಣಾಂ ವಾ ಸಹಸ್ರತಾ । ಬೃಹತೀಸಹಸ್ರಂ ಚೈತಸ್ಮಾದ್ರೂಪಾನಂತಾಭಿಧಾಯಕಂ ॥ (d) ಪೃಥಕ್ಪೃಥಗ್ಘಿ ನಾಮಾರ್ಥಾ ಋಚ ಏತಾಃ ಪ್ರಕೀರ್ತಿತಾಃ । ಸರ್ವನಾಮಾತ್ಮಕಂ ತಸ್ಮಾದೃಕ್ಸಹಸ್ರಮಿದಂ ಹರೇಃ ॥ ಸರ್ವರೂಪಾಣ್ಯತೋ ವಿಷ್ಣೋಃ ಸಂಸ್ತುತಾನ್ಯಮುನೈವ ಹಿ ॥

ಅ || (a) ಸಹಸ್ರವೆಂಬ ಪದವು ಮುಖ್ಯವಾಗಿ ಅಪರಿಮಿತವೆಂಬುವ ಅರ್ಥವನ್ನು ಪ್ರತಿಪಾದಿಸುತ್ತದೆ. ಆದುದರಿಂದಲೇ 'ಐನೂರದ್ದು ಎರಡು' ಎಂಬುವುದರಲ್ಲಿ ಶ್ರೀ ಹರಿಯ ಅಪರಿಮಿತರೂಪಗಳನ್ನು ಹೇಳಿದರಿಂದಲೇ 'ಸಹಸ್ರಂ' ಎಂಬೀ ಹೆಸರು ಇತ್ತು ಎಂದಂಗೀಕರಿಸತಕ್ಕದ್ದು. (b) 'ಪರಬ್ರಹ್ಮನು ಎಷ್ಟುರೂಪಗಳಿಂದ ವಿಶೇಷಾಕಾರವಾಗಿ ಇರುತ್ತಾನೋ ನಾವು

ಸಮುದಾಯವು ಸಾಮಾನ್ಯಾಕಾರವಾಗಿಯೂ ವಿಶೇಷಾಕಾರವಾಗಿಯೂ ಅಷ್ಟು ರೂಪಗಳನ್ನು ಪ್ರತಿಪಾದಿಸುತ್ತದೆ. ಎಂದು ವೇದರೂಪ ಪ್ರಮಾಣವಿದ್ದುದರಿಂದ ಅಪರಿಮಿತರೂಪಗಳಿಂದೊಡಗೂಡಿ ಪ್ರತಿಪಾದ್ಯ ಪ್ರತಿಪಾದಕಭಾವವನ್ನನುಸರಿಸಿಯೇ (ನಾಮಸಮುದಾಯವು) 'ಸಹಸ್ರ' ಎಂದು ಹೇಳಲ್ಪಡುತ್ತದೆ. [ತಾ || ಪರಬ್ರಹ್ಮನು ಎಷ್ಟು ದೇಶಕಾಲಗಳಲ್ಲಿ ವ್ಯಾಪಿಸಿಕೊಂಡು ಇರುವನೋ ವೇದವಚನವೂ ಅಷ್ಟು ದೇಶಕಾಲಗಳಲ್ಲಿ ವ್ಯಾಪಿಸಿಕೊಂಡು ಅದೆ. ಈ ರೀತಿಯಾಗಿಯೂ ಬೇರೆ ಗ್ರಂಥಗಳಲ್ಲಿ ವ್ಯಾಖ್ಯಾತವಾಗಿಯದೆ. ಅಥವಾ ಬ್ರಹ್ಮನು ಎಷ್ಟು ರೂಪಗಳಿಂದ ಇದ್ದಾನೋ ವೇದವಚನವೂ ಅಷ್ಟುರೂಪವನ್ನು ಪ್ರತಿಪಾದಿಸುತ್ತದೆ. ಅಂತೂ 'ಶಾಸ್ತ್ರೇಷು ಭಾರತಂ ಸಾರಂ ತತ್ರ ನಾಮಸಹಸ್ರಕಂ' ಎಂದು ಹೇಳಿದ ರೀತಿಯಿಂದ ವಿಶ್ವಾದಿನಾಮಗಳು ವೇದೋಕ್ತಗಳಾದ ಅನಂತರೂಪಗಳನ್ನು ಪ್ರತಿಪಾದಿಸುತ್ತವೆ. ಎಂಬುವುದು ಈ 'ಯಾವದ್ಬ್ರಹ್ಮ ವಿಷ್ಠಿತಂ ತಾವತೀ ವಾಕ್' ಎಂಬೀ ಶ್ರುತಿಯಿಂದ ಲಬ್ಧವಾಯಿತೆಂದು ತಿಳಿಯತಕ್ಕದು.] (c) ಪ್ರತಿಪಾದಿಸಲ್ಪಡತಕ್ಕ ಭಗವದ್ರೂಪಗಳಿಗೆ ನಾಮಸಮೂಹದಿಂದ (ವಾಚ್ಯವಾಗಿ) ಕೂಡಿಕೊಂಡು ಇದ್ದುದರಿಂದಲೇ ಸಹಸ್ರತ್ವವು. ಅಂದರೆ ರೂಪಸಮುದಾಯವು 'ಸಹಸ್ರಂ' ಎಂದು ಹೇಳಲ್ಪಡುತ್ತದೆ. ಇದರಿಂದಲೇ ಬೃಹತೀಸಹಸ್ರವೂ ಕೂಡ (ಶ್ರೀ ಹರಿಯ) ಅನಂತಾನಂತರೂಪಗಳನ್ನು ಪ್ರತಿಪಾದಿಸುತ್ತದೆ. ಬೃಹತೀಸಹಸ್ರವು ಸಹಸ್ರನಾಮಕ್ಕೆ ವ್ಯಾಖ್ಯಾನರೂಪವಾಗಿದೆಯಷ್ಟೆ! (d) ಯಾವ ಕಾರಣದಿಂದ ಈ ಋಕ್ಕುಗಳು ಪ್ರತ್ಯೇಕ ಪ್ರತ್ಯೇಕ ನಾಮಗಳ ಅರ್ಥವುಳ್ಳವುಗಳು ಎಂದು ಹೇಳಲ್ಪಟ್ಟವೋ, ಆದುದರಿಂದ ಈ ಬೃಹತೀಛಂದಸ್ಸುಳ್ಳ ಋಕ್ಸಹಸ್ರವು ಶ್ರೀ ಹರಿಯ ವಿಶ್ವಾದಿ ಸರ್ವನಾಮಾತ್ಮಕವೆಂದು ಹೇಳಲ್ಪಡುತ್ತದೆ. ಆದುದರಿಂದ ಈ ಬೃಹತೀಸಹಸ್ರವನ್ನು ಸ್ತುತಿಸುವ ಅಧಿಕಾರಿಯಿಂದ (ಬೃಹತೀಸಹಸ್ರಾಖ್ಯ ಶಸ್ತ್ರದಿಂದಲೇ) ಶ್ರೀ ಹರಿಯ ಎಲ್ಲಾ ರೂಪಗಳು ಕೆನ್ನಾಗಿ ಸ್ತುತಿಸಲ್ಪಡುತ್ತವೆ. ಅಂತೂ ಬೃಹತೀಸಹಸ್ರವು ಶ್ರೀ ಹರಿಯ ಸರ್ವರೂಪಗಳನ್ನು ಪ್ರತಿಪಾದಿಸುತ್ತದೆ ಎಂದು ತಿಳಿದು ಸ್ತುತಿಸತಕ್ಕದು.

ಭಾ|| (a) ಮತ್ಸ್ಯ ಕೂರ್ಮ ಕ್ರೋಡ ಸಿಂಹ ಬಟು ಭಾರ್ಗವ ರಾಘವಾಃ |
ಕೃಷ್ಣ ಬುದ್ಧೌ ಚ ಕಲ್ಕೀತಿ ರೂಪಾಣಾಂ ದಶಕಂ ಹರೇಃ || ಪಂಚಭೇದವಿಭಿನ್ನೇನ ಹ್ಯೃಕ್ಸಹಸ್ರೇಣ ಶಸ್ಯತೇ | (b) ರೂಪಾಣಾಂ ಪಂಚಕಂ ಪೂರ್ವಮಪರಂ ಪಂಚಕಂ ಹರೇಃ || ಪ್ರಸ್ತಾವಾದ್ಯೈರಾನಿಧನೈಃ ಸ್ತೂಯತೇ ಸಾಮಭಕ್ತಿಭಿಃ | (c) ತಾನಿ ರೂಪಾಣ್ಯಸ್ಯ ದಶ ಸರ್ವರೂಪಾತ್ಮಕಾನಿ ಚ || ದಶನಾಮಾನಿ ಚಾಸ್ಯೈವ ಸರ್ವರೂಪಾಭಿಧಾನ್ಯಪಿ | (d) ಪಂಚಕಂ ಸಾಮಭಕ್ತೀನಾಮೃಕ್ಸಹಸ್ರಂ ಚ ತದ್ದ್ವಯಂ || ಸ್ತಾವಕಂ ಸರ್ವರೂಪಾಣಾಮುತ ಏವ ರಮಾಪತೇಃ | (e) ದಶೇತಿ ಸರ್ವನಾಮ್ನೈತತ್ಪ್ರಥಿತಂ ಮುಖ್ಯತಃ ಶ್ರುತೌ || ಶಂ ರೂಪಂ ಭಗವಂತಂ ಯದ್ದದ್ವ್ಯಾದ್ಯುಕ್ತ್ಯಾ ಸಮಸ್ತಶಃ | ದಶೇತ್ಯಮಿತನಾಮ್ನಾಂ ತದಾಖ್ಯಾ ರೂಪೇಷು ಶಂ ದದೇಃ ||

ಅ || (a) ಮತ್ಸ್ಯ, ಕೂರ್ಮ, ವರಾಹ, ನರಸಿಂಹ, ವಾಮನ, ಪರಶುರಾಮ, ರಾಮ, ಕೃಷ್ಣ, ಬುದ್ಧ, ಕಲ್ಕಿ ಎಂಬೀ ಶ್ರೀ ಪರಮಾತ್ಮನ ರೂಪಗಳ ಹತ್ತು, ಐದರ ಪ್ರಭೇದದಿಂದ ಬೇರೆ ಬೇರೆಯಾದ ಬೃಹತೀಸಹಸ್ರ ಋಕ್ಕಿನಿಂದ ಸ್ತುತಿಸಲ್ಪಡುತ್ತದೆ. (b) ಶ್ರೀ ಹರಿಯ ರೂಪಗಳ

ಮತ್ಸ್ಯಾದಿವಾಮನಾಂತ ಪೂರ್ವಪಂಚಕವು ಭಾರ್ಗವಾದಿ ಮೇಲಿನ ಐದೂ ಸಾಮದ ಭಾಗಗಳಾದ ಪ್ರಸ್ತಾವವನ್ನಾರಂಭಿಸಿ ನಿಧನಪರ್ಯಂತಸಾಮಗಳಿಂದ ಸ್ತುತಿಸಲ್ಪಡುತ್ತದೆ. ॥ (c) ಈ ಹರಿಯ ಆ ಹತ್ತುರೂಪಗಳೇ ಎಲ್ಲಾ ಸ್ವರೂಪಗಳೂ ಆಗುತ್ತವೆ. ಈ ಹರಿಯ ಆ ಹತ್ತು ನಾಮಗಳು ಎಲ್ಲಾ ರೂಪಗಳನ್ನು ಹೇಳುತ್ತವೆ. [ತಾ ॥ ಮತ್ಸ್ಯಮತ್ಸ್ಯ, ಮತ್ಸ್ಯ ಕೂರ್ಮ, ಮತ್ಸ್ಯವರಾಹ, ಮತ್ಸ್ಯಸಿಂಹ, ಮತ್ಸ್ಯವಾಮನ ಇದೇ ಮೊದಲಾದ ಸ್ವವ್ಯೂಹ ದಲ್ಲಿ ಅಂತರ್ಗತಗಳಾದ ಸರ್ವರೂಪಾತ್ಮಕಗಳಾಗಿವೆ. ಮತ್ಸ್ಯವ್ಯಾಸ, ಮತ್ಸ್ಯಹಂಸ, ಮತ್ಸ್ಯವಾಸುದೇವ ಇತ್ಯಾದ್ಯನಂತರೂಪಸ್ವರೂಪಗಳೂ ಆಗಿವೆ. ಕೂರ್ಮಾದಿಗಳಲ್ಲಿಯೂ ಇದೇ ರೀತಿಯಾಗಿ ತಿಳಿಯತಕ್ಕದು.] ॥ (d) ಆದುದರಿಂದಲೇ ಅಂದರೆ ಮತ್ಸ್ಯಾದಿ ನಾಮಗಳಿಗೆ ಅರ್ಥಭೂತಗಳಾದ ರೂಪಗಳು ಅನಂತಗಳಾದುದರಿಂದಲೇ ತದ್ವ್ಯಾಖ್ಯಾನ ಭೂತವಾದ ಸಾಮಭಾಗಗಳ ಐದೂ ಶಸ್ತ್ರಭೂತವಾದ ಬೃಹತೀಛಂದಸ್ಕ ಖುಕ್ಸಹಸ್ರವೂ, ಆ ಎರಡೂ, (ಅಂತೂ ಸಾಮಪಂಚಕ ಶಸ್ತ್ರಪಂಚಕ, ಕೂಡಿ ಹತ್ತು) ಲಕ್ಷ್ಮೀಪತಿಯಾದ ಶ್ರೀ ಪರಮಾತ್ಮನ ಎಲ್ಲಾ ರೂಪಗಳನ್ನೂ ಸ್ತುತಿಸುತ್ತದೆ. ॥ (e) ದಶ ಎಂಬುವುದು ಸರ್ವರೂಪವನ್ನು ಹೇಳುತ್ತದೆ. ಈ ಪ್ರಮೇಯವು ಮುಖ್ಯವಾಗಿ ಎಲ್ಲಾ ಶ್ರುತಿಯಲ್ಲಿ ಪ್ರಸಿದ್ಧವಾಗಿಯದೆ. ಯಾವ ಕಾರಣದಿಂದ ಸುಖರೂಪವುಳ್ಳವನಾಗಿಯೂ ಅಪರಿಮಿತ ಸಂಖ್ಯೆಯುಳ್ಳವನಾಗಿಯೂ ಇರುವ ಶ್ರೀ ಹರಿಯನ್ನು ವ್ಯಕ್ತಿರೂಪದಿಂದಲೇ ಮತ್ಸ್ಯಾದಿನಾಮವು ಕೊಡುವುದೋ, ಆದುದರಿಂದಲೇ ಅಪರಿಮಿತ ಅರ್ಥಪ್ರತಿಪಾದಕಗಳಾದ ಮತ್ಸ್ಯಾದಿನಾಮಗಳಿಗೆ 'ದಶ' ಎಂಬ ಹೆಸರು. (ತನ್ನನ್ನು ಉಪಾಸನೆ ಮಾಡುವವರಿಗೆ) ಸುಖವನ್ನು ಕೊಡುವುದರಿಂದಲೇ ಅನಂತಾನಂತರೂಪಗಳಲ್ಲಿಯೂ 'ದಶ' ಎಂಬ ಹೆಸರು.

ಭಾ॥ **(a)** ಸರ್ವನಾಮಾರ್ಥವಚನಾತ್ಪಂಚಕದ್ವಿತಯಸ್ಯ ಚ । ಅಭೂದ್ದಶೇತಿ ವೈ ನಾಮ ತಸ್ಮಾದೇತದ್ದಶಾಖಿಲಂ ॥ **(b)** ದಶೈವ ಮೂಲಸಂಖ್ಯಾ ಚ ತದ್ವಿಭೇದಾಃ ಶತಾದಯಃ । **(c)** ಖುಕ್ಸಹಸ್ರಮಿದಂ ತಸ್ಮಾದನಂತಗುಣ ಮುಚ್ಯತಂ ॥ ಅನಂತಶಕ್ತಿಮಮಿತರೂಪನಾಮಾನಮೇವ ಚ । ವಕ್ತಿ **(d)** ಛಂದಸ್ತ್ರಯಂ ಚಾತ್ರ ತೃಚಾಶೀತಿತ್ರಯಾತ್ಮಕಂ ॥ ಅಶನಾದಿತ್ರಿಕಂ ತಚ್ಚ ಭೂತ್ವಾ ವಿಷ್ಣುಮುಪೈತಿ ಚ ॥

ಅ ॥ (a) ಐದರ ಎರಡೂ ಕೂಡ ಅಂದರೆ ಶಸ್ತ್ರಪಂಚಕ ಸಾಮಪಂಚಕ 'ದಶ' (೧೦) ಸಂಖ್ಯೆಯೂ ಎಲ್ಲಾ ನಾಮಗಳಿಗೂ ಅರ್ಥಭೂತನಾದ ಶ್ರೀ ಹರಿಯನ್ನು ಪ್ರತಿಪಾದಿಸುವುದರಿಂ ದಲೇ 'ದಶ' ಎಂಬ ನಾಮವು ಅಪರಿಮಿತಾರ್ಥದಲ್ಲಿ ರೂಢವಾಯಿತು. ಆದುದರಿಂದಲೇ ಅಂದರೆ ವೈದಿಕ ಪ್ರಯೋಗದಿಂದ ತಿಳಿಯಲ್ಪಟ್ಟ ರೂಢಿಯಿಂದಲೂ, 'ಶಂ ದದಾತಿ=ಸುಖವನ್ನು ಕೊಡುತ್ತಾನೆ' ಎಂಬೀ ಯೋಗದಿಂದಲೂ ಈ 'ದಶ' ಎಂಬ ಪದವು ಸರ್ವ ಭಗವದ್ರೂಪವನ್ನು ಪ್ರತಿಪಾದಿಸುತ್ತದೆ. ॥ (b) 'ದಶ' ಎಂಬುವುದೇ (ಎಲ್ಲಾ ಸಂಖ್ಯೆಗೂ) ಮೂಲಭೂತವಾದ ಸಂಖ್ಯೆಯು, 'ಶತ' 'ಸಹಸ್ರ' ಇತ್ಯಾದಿಗಳೆಲ್ಲವೂ ಹತ್ತರದ್ದೇ ಪ್ರಭೇದಗಳು. ॥ (c) ಆದುದ ರಿಂದ ಅಂದರೆ ಅಪರಿಮಿತಗಳಾದ ರೂಪಗಳೂ, ಜ್ಞಾನಾನಂದಾದ್ಯನಂತಗುಣಗಳೂ, ಸಾಮರ್ಥ್ಯ ಗಳೂ ಇವುಗಳನ್ನು ಪ್ರತಿಪಾದಿಸುವ ಸಹಸ್ರನಾಮವೂ, ಮತ್ಸ್ಯಾದಿನಾಮಗಳೂ, ಇವುಗಳ ವ್ಯಾಖ್ಯಾನರೂಪವಾದುವರಿಂದ ಈ ಬೃಹತೀ ಛಂದಸ್ಕವಾದ ಖುಕ್ಸಹಸ್ರವು ಅಪರಿಮಿತಗುಣ ಗಳುಳ್ಳವನೂ ನಾಶರಹಿತನೂ ಅಪರಿಮಿತ ಸಾಮರ್ಥ್ಯಗಳುಳ್ಳವನೂ ಅಪರಿಮಿತಗಳಾದ

ರೂಪಗಳೂ ನಾಮಗಳುಳ್ಳವನೂ ಆದ ಶ್ರೀ ಪರಮಾತ್ಮನನ್ನು ಪ್ರತಿಪಾದಿಸುತ್ತದೆ. ॥ (d) ಮೂರು ಋಕ್ಕುಗಳ ಸಮೂಹವು ತೃಚವು. ಅದರ ಎಂಭತ್ತು, ಅದರ ಮೂರು, ಹೀಗೆ ತೃಚಾಶೀತಿ ತ್ರಯ ಸ್ವರೂಪವಾದ ಆ ಶಸ್ತ್ರವು ಇಲ್ಲಿ 'ಗಾಯತ್ರೀ ಬೃಹತೀ ಉಷ್ಣಿಕ್' ಎಂಬೀ ಮೂರು ಛಂದಸ್ಸುಗಳಿಂದ ಸಂಬದ್ಧವಾದುದು ಆಗುತ್ತದೆ. ಆ ಬೃಹತೀಸಹಸ್ರವು ಗಾಯತ್ರೀ, ಬೃಹತೀ, ಉಷ್ಣಿಕ್ ಏತದ್ರೂಪವಾದ ಛಂದಸ್ಸಿನಿಂದ ಸಂಬದ್ಧಗಳಾದ ತಮ್ಮ ಅಂಶಗಳಿಂದ ಕ್ರಮವಾಗಿ ತಿನ್ನಲಿಕ್ಕೆ ಯೋಗ್ಯವಾದುದು, ಕುಡಿಯಲಿಕ್ಕೆ ಯೋಗ್ಯವಾದುದು, ಕಚ್ಚಿ ತಿನ್ನಲಿಕ್ಕೆ ಯೋಗ್ಯವಾದುದು,- ಈ ಪ್ರಕಾರವಾಗಿ ಮೂರು ಪ್ರಕಾರವಾಗಿ ವಿಷ್ಣುವನ್ನು ಹೊಂದಿಸುತ್ತದೆ. (ಅಂತೂ ಬೃಹತೀಸಹಸ್ರವು ವಿಷ್ಣುವನ್ನು ತೃಪ್ತಿಪಡಿಸುತ್ತದೆ).

ಭಾ॥ (a) ಸರ್ವಚ್ಛಂದೋಽಭಿಧಶ್ಚೈವ ಸರ್ವದೇವಾಭಿಧಸ್ತಥಾ । ಸರ್ವಮುನ್ಯಭಿಧಶ್ಚೈವ ಸರ್ವವಸ್ತ್ವಭಿಧೋ ಹರಿಃ ॥ ಅನಂತಪೂರ್ಣಗುಣಕಸ್ತಸ್ಮಾಜ್ಜ್ಞೇಯೋ ರಮಾಪತಿಃ । (b) ಮುಖ್ಯತೋಽಸ್ಯಾಂ ಚ ವಿದ್ಯಾಯಾಂ ಯೋಗ್ಯ ಏಕಶ್ಚತುರ್ಮುಖಃ ॥ ಏಕದೇಶಪರಿಜ್ಞಾನೇ ತ್ವನ್ಯೇ ಯೋಗ್ಯಾಃ ಶಿವಾದಯಃ । ಇತಿ ಚ ॥ (c) ತ್ರಿವಿಧೋ ಹ್ಯನಿರುದ್ಧೋಽಸಾವಧ್ಯಾತ್ಮಾದಿ ವಿಭೇದತಃ । ಅತಸ್ತ್ರಿವೃದಿತಿ ಪ್ರೋಕ್ತ (d) ಸ್ತಥಾ ಪಂಚದಶಾತ್ಮಕಃ ॥ ಪ್ರದ್ಯುಮ್ನಃ ಪಂಚಭೂತೇಷು ಹ್ಯಧ್ಯಾತ್ಮಾದಿವಿಭೇದತಃ । (e) ಲಿಂಗ ಸಪ್ತದಶಸ್ಥತ್ವಾತ್ತಾವಾನ್ಸಂಕರ್ಷಣಃ ಶ್ರುತಃ ॥ (f) ಸಪ್ತಧಾತುಷು ಸಂಸ್ಥಃ ಸನ್ನಧ್ಯಾತ್ಮಾದಿ ವಿಭೇದತಃ । ಏಕವಿಂಶೋ ವಾಸುದೇವೋ (g) ಮನ ಆದಿಚತುಷ್ಟಯೇ ॥ ಗುಣತ್ರಯೇ ಚ ಪ್ರಕೃತಾವಧ್ಯಾತ್ಮಾದಿವಿಭೇದತಃ । ಮೂಲರೂಪೇಣ ಚ ಸಹ ಪಂಚವಿಂಶಾತ್ಮಕಃ ಪ್ರಭುಃ ॥ ನಾರಾಯಣಸ್ತ್ವಚಿಂತ್ಯಾತ್ಮಾ ಸ ಏಕೋಽಪಿ ಹ್ಯನಂತಧಾ ॥

ಅ ॥ (a) ಶ್ರೀ ಹರಿಯು ಎಲ್ಲಾ ಛಂದಸ್ಸುಗಳೂ ನಾಮವಾಗಿವುಳ್ಳವನು. ಹಾಗೆಯೇ ಎಲ್ಲಾ ದೇವ ವಾಚಕ ಪದಗಳೂ ಹೆಸರಾಗಿವುಳ್ಳವನು. ಅಲ್ಲದೆ ಬೃಹತೀಸಹಸ್ರಾದಿಗಳನ್ನು ನೋಡಿರತಕ್ಕ ಎಲ್ಲಾ ಋಷಿವಾಚಕ ಪದಗಳಿಂದಲೂ ಪ್ರತಿಪಾದಿಸಲ್ಪಡುತ್ತಾನೆ. ಮತ್ತು ಸ್ತೋಮ, ಸಾಮ, ಚಿತ್ಯಾದಿ ಸರ್ವ ವಸ್ತುಗಳಿಂದಲೂ ಹೇಳಲ್ಪಡುತ್ತಾನೆ. ಆದುದರಿಂದಲೇ ಎಂದರೆ ಆಯಾ ಶಬ್ದಗಳ ಪ್ರವೃತ್ತಿಗೆ ಕಾರಣೀಭೂತಗಳಾದ ಅಪರಿಮಿತಗಳಾದ ಪರಿಪೂರ್ಣ ಗುಣಗಳಿರುವುದರಿಂದಲೇ ಲಕ್ಷ್ಮೀಪತಿಯು ಅಪರಿಮಿತಗಳಾದ ಪರಿಪೂರ್ಣ ಗುಣಗಳುಳ್ಳವನು ಎಂದು ತಿಳಿಯತಕ್ಕದು. ॥ (b) ಚತುರ್ಮುಖನೊಬ್ಬನೇ ಈ ವಿದ್ಯೆಯಲ್ಲಿ ಮುಖ್ಯವಾಗಿ ಯೋಗ್ಯನಾದವನು. । ರುದ್ರನೇ ಮೊದಲಾದ ಇತರರು ಏಕದೇಶವನ್ನು ಮಾತ್ರ ತಿಳಿದುಕೊಳ್ಳುವ ವಿಷಯದಲ್ಲಿ ಯೋಗ್ಯರಾಗಿದ್ದಾರೆ. ಹೀಗೂ ಉಕ್ತವಾಗಿಯದೆ. ॥ (c) ಈ ಅನಿರುದ್ಧನು 'ಅಧ್ಯಾತ್ಮ, ಅಧಿಭೂತ, ಅಧಿದೈವ' ಎಂಬೀ ಪ್ರಭೇದದಿಂದ ಮೂರು ಪ್ರಕಾರಗಳುಳ್ಳವನು. ಆದುದರಿಂದಲೇ 'ತ್ರಿವೃತ್' ಎಂದು ಹೇಳಲ್ಪಡುತ್ತಾನೆ. ॥ (d) ಹಾಗೆಯೇ ಪ್ರದ್ಯುಮ್ನನು ಪೃಥಿವ್ಯಾದಿ ಐದು ಭೂತಗಳಲ್ಲಿ ಅಧ್ಯಾತ್ಮ ಮೊದಲಾದ ಮೂರು ಪ್ರಭೇದದಿಂದ (ಬೇರೆ ಬೇರೆಯಾಗಿ ಇದ್ದವನಾಗಿ) ಹದಿನೈದು ಸ್ವರೂಪಗಳುಳ್ಳವನಾಗಿದ್ದಾನೆ. ॥ (e) ಹಾಗೆಯೇ ಸಂಕರ್ಷಣನು ಹದಿನಾರು ಕಲಾರೂಪವಾದ ಲಿಂಗ ಶರೀರದಲ್ಲಿಯೂ ಹದಿನಾರು ಕಲೆಗಳಲ್ಲಿಯೂ

ಅಥವಾ ಲಿಂಗಶರೀರದಲ್ಲಿರತಕ್ಕ ಐದು ಭೂತಗಳಲ್ಲಿಯೂ ಹತ್ತು ಇಂದ್ರಿಯಗಳಲ್ಲಿಯೂ ಮನಸ್ಸು ಬುದ್ಧಿಗಳಲ್ಲಿಯೂ ಅಂತೂ ಹದಿನೇಳರಲ್ಲಿದ್ದುದರಿಂದ 'ಸಪ್ತದಶನು' ಎಂದು ಶ್ರುತ್ಯಾದಿಗಳಲ್ಲಿ ಪ್ರಸಿದ್ಧನಾಗಿರುತ್ತಾನೆ. ॥ (f) ವಾಸುದೇವನು ಅಧ್ಯಾತ್ಮ ಮೊದಲಾದ ಮೂರು ಪ್ರಭೇದದಿಂದ ಏಳು ಧಾತುಗಳಲ್ಲಿ ಇದ್ದವನಾಗಿ (ಇಪ್ಪತ್ತೊಂದು ಪ್ರಕಾರನಾದುದರಿಂದ) 'ಏಕವಿಂಶ'ನೆಂದು ಹೇಳಲ್ಪಡುತ್ತಾನೆ. ॥ (g) ಸರ್ವ ಸಮರ್ಥನಾದ ನಾರಾಯಣನಾದರೂ ಮನಸ್ಸೇ ಮೊದಲಾದ ನಾಲ್ಕರಲ್ಲಿ (ಮನಸ್ಸು, ಬುದ್ಧಿ, ಅಹಂಕಾರ, ಚಿತ್ತ ಇವುಗಳಲ್ಲಿ) ಸತ್ವ, ರಜ, ತಮಗಳೆಂಬ ಮೂರು ಗುಣಗಳಲ್ಲಿಯೂ ಪ್ರಕೃತಿಯಲ್ಲಿಯೂ ಅಧ್ಯಾತ್ಮ ಮೊದಲಾದ ಪ್ರಭೇದದಿಂದ ಇಪ್ಪತ್ತನಾಲ್ಕು ಸಂಖ್ಯಾಕಗಳಾದ ಇವುಗಳಲ್ಲಿರತಕ್ಕ ಪ್ರಭುವಾದ ಶ್ರೀ ಹರಿಯು ನಾರಾಯಣಾಖ್ಯ ಮೂಲರೂಪ ದಿಂದೊಡಗೂಡಿ ಪಂಚವಿಂಶ (೨೫) ಸ್ವರೂಪಗಳುಳ್ಳವನಾಗುತ್ತಾನೆ. ಆ ನಾರಾಯಣನು ಒಬ್ಬನೇ ಆದರೂ ಅಚಿಂತ್ಯವಾದ ಸ್ವರೂಪವುಳ್ಳವನಾಗಿ ಅನಂತ ಪ್ರಕಾರವುಳ್ಳವನು ಆಗುತ್ತಾನೆ.

ಭಾ॥ **(a)** ಗಾಯಕಾನಾಂ ತ್ರಾಣತೋಽಸೌ ಗಾಯತ್ರಮನಿರುದ್ಧಕಃ । **(b)** ಪ್ರದ್ಯುಮ್ನೋ ಹಿ ರಥಾರೂಢಸ್ತೇನ ಚೋಕ್ತೋ ರಥಂತರಂ ॥ **(c)** ಬೃಹ ದ್ರೂಪೋ ಬೃಹನ್ನಾಮಾ ತಥಾ ಸಂಕರ್ಷಣಃ ಪ್ರಭುಃ । **(d)** ಭದ್ರಂ ತು ವಾಸುದೇವೋಽಸೌ ಭದ್ರಮೋಕ್ಷಪ್ರದೋ ಯತಃ ॥ **(e)** ನಾರಾ ಯಣೋ ರಾಜನಂ ಸ್ಯಾದ್ರಾಜಯತ್ಯೇಷ ಮೋಕ್ಷಿಣಃ ॥

ಅ ॥ (a) ಈ ಅನಿರುದ್ಧನು ಗಾನಮಾಡುವವರನ್ನು ರಕ್ಷಣೆ ಮಾಡುವುದರಿಂದ 'ಗಾಯತ್ರ' ಎನ್ನಿಸಿ ಕೊಳ್ಳುತ್ತಾನೆ. ॥ (b) ಪ್ರದ್ಯುಮ್ನನು ಯಾವಕಾರಣದಿಂದ ದೇಹಾಖ್ಯರಥ ವನ್ನು ಏರಿರುವನೋ ಅದರಿಂದಲೇ 'ರಥಂತರ' ಎಂದು ಹೇಳಲ್ಪಡುತ್ತಾನೆ. ('ರಥಂತರಂ' ಎಂಬುವಲ್ಲಿ 'ತೃ ಪ್ಲವನತರಣಯೋಃ' ಎಂದು ಎರಡೇ ಅರ್ಥವನ್ನು ಹೇಳಿದ್ದರೂ ವಸ್ತುತಃ ಧಾತುಗಳಿಗೆ ಅನೇಕಾರ್ಥವಿರುವುದರಿಂದ 'ರಥಾರೂಢಃ' ಎಂದು ನಿರೂಪಿಸಿರುವರು.) ಅಥವಾ 'ರಥೇನ ತರತಿ' ರಥದಿಂದ ಹೋಗುತ್ತಾನೆ. ಆದುದರಿಂದ 'ರಥಂತರ' ಎಂದು ಹೇಳಲ್ಪಡುತ್ತಾನೆ. ಅಥವಾ 'ರಥೇನ ಶತ್ರೂನ್ ತರತಿ' ರಥದಿಂದ ವೈರಿಗಳನ್ನು ದಾಟುತ್ತಾನೆ. ಆದುದರಿಂದ 'ರಥಂ ತರ' ಎಂದು ಹೇಳಲ್ಪಡುತ್ತಾನೆ. ॥ (c) ಹಾಗೆಯೇ ಸರ್ವಸಮರ್ಥನಾದ ಸಂಕರ್ಷಣನು ಅತಿ ದೊಡ್ಡದಾದ ಸ್ವರೂಪವುಳ್ಳವನಾಗಿ 'ಬೃಹತ್' ಎಂದು ಹೆಸರುಳ್ಳವನಾಗಿ (ಆಗುತ್ತಾನೆ) ॥ (d) ಈ ವಾಸುದೇವನು ಯಾವಕಾರಣದಿಂದ ಮಂಗಲರೂಪವಾದ ಮುಕ್ತಿಯನ್ನು (ಭಕ್ತರಿಗೆ) ಕೊಡು ತ್ತಾನೋ (ಆದುದರಿಂದಲೇ) 'ಭದ್ರ' ಎಂದು ಹೇಳಲ್ಪಡುತ್ತಾನೆ. ॥ (e) ಈ ನಾರಾಯಣನು ಮುಕ್ತರನ್ನು (ಯಾವಕಾರಣದಿಂದ) ಅನುರಾಗ ಯುಕ್ತರನ್ನಾಗಿ ಮಾಡುತ್ತಾನೋ (ಆದುದ ರಿಂದ) ರಾಜನ ನಾಮಕನಾಗಿ ಆಗುವನು. ॥ (ಹೀಗೆ ಸಾಮವನ್ನಧಿಕರಿಸಿ ಇರತಕ್ಕ ಪ್ರದ್ಯುಮ್ನ ರೂಪಿಯಾದ ಶ್ರೀ ಹರಿಯ ರೂಪವು ಐದು ವಿಧವು.)

ಭಾ॥ **(a)** ಗಾಯತ್ರೀ ತ್ವನಿರುದ್ಧೋಽಸೌ ತ್ರಿಕಾಲೇ ಗೀಯತೇ ಯತಃ । **(b)** ಉಷ್ಣಿಗುಷ್ಣಸ್ವರೂಪತ್ವಾತ್ಪ್ರದ್ಯುಮ್ನೋಽಗ್ನ್ಯಾದಿಸಂಸ್ಥಿತಃ ॥ **(c)** ಸ್ತ್ರೀ ರೂಪೋ ಬೃಹತೀನಾಮಾ ಬೃಹತ್ಸಂಕರ್ಷಣಃ ಪ್ರಭುಃ । **(d)** ವಾಸು ದೇವಸ್ತಥಾ ತ್ರಿಷ್ಟುಪ್ತ್ರಿವೇದ್ಯೈಃ ಸ್ತೂಯತೇ ಯತಃ ॥ **(e)** ನಾರಾಯಣಸ್ತು ಸ್ತ್ರೀರೂಪೋ ದ್ವಿಧೈವಾಽಸೌ ವ್ಯವಸ್ಥಿತಃ । ದ್ವಿಪದೇತಿ ತತೋ ನಾಮ ಸರ್ವಚ್ಛಂದೋಭಿಧಾ ಇಮೇ ॥ ವನಿತಾ ತನವಃ ಪ್ರೋಕ್ತಾಃ ॥

ಅ ॥ (a) ಈ ಅನಿರುದ್ಧನು ಯಾವಕಾರಣದಿಂದ ಪ್ರಾತರ್, ಮಧ್ಯಾಹ್ನ, ಸಾಯಂ ಕಾಲಗಳಲ್ಲಿ ಯಾ ಪ್ರಾತರ್, ಮಧ್ಯಾಹ್ನ, ಸಾಯಂಸವನಗಳಲ್ಲಿ ಅಥವಾ ಭೂತಭವಿಷ್ಯದ್ವರ್ತಮಾ ನಕಾಲಗಳಲ್ಲಿ (ಧ್ಯಾನಿಸುವವರಿಂದ) ಗಾನಮಾಡಲ್ಪಡುತ್ತಾನೋ (ಆದುದರಿಂದ) 'ಗಾಯತ್ರೀ' ಎಂದು ಹೇಳಲ್ಪಡುತ್ತಾನೆ. (b) ಪ್ರದ್ಯುಮ್ನನು ಅಗ್ನಿಮೊದಲಾದ ಸೂರ್ಯಾದಿಗಳಲ್ಲಿ ಇದ್ದ ವನಾಗಿ ಅತ್ಯುಷ್ಣಸ್ವರೂಪವುಳ್ಳವನಾದುದರಿಂದ 'ಉಷ್ಣಿಕ್' ಎಂದು ಹೇಳಲ್ಪಡುತ್ತಾನೆ. ॥ (c) ಸರ್ವಸಮರ್ಥನಾದ ಸಂಕರ್ಷಣನು ಗುಣಪರಿಪೂರ್ಣನೂ ಸ್ತ್ರೀಯರ ಆಕಾರವುಳ್ಳವನೂ ಆಗಿ 'ಬೃಹತೀ' ಎಂದು ಹೆಸರುಳ್ಳವನಾಗಿ (ಹೇಳಲ್ಪಡುತ್ತಾನೆ). ॥ (d) ಹಾಗೆಯೇ ವಾಸುದೇವನು ಯಾವಕಾರಣದಿಂದ ಮೂರು ವೇದಗಳಿಂದ ಸ್ತೋತ್ರಮಾಡಲ್ಪಡುತ್ತಾನೋ (ಆದುದರಿಂದ 'ತ್ರಿಷ್ಟುಪ್' ಎಂದು ಹೇಳಲ್ಪಡುತ್ತಾನೆ ॥ (e) ಸ್ತ್ರೀಯರ ಆಕಾರವುಳ್ಳ ಈ ನಾರಾಯಣನಾದರೂ ಎರಡು ರೂಪವುಳ್ಳವನಾಗಿಯೇ ಇರುತ್ತಾನೆ. ಆದುದರಿಂದ ('ದ್ವೇ ಪದೇ=ರೂಪೇ ಯಸ್ಯಾಃ ಸಾ' ಅಥವಾ 'ದ್ವಿರೂಪೇಣ ವರ್ತತೇ' ಎಂಬೀವ್ಯುತ್ಪತ್ತಿಯಿಂದ) 'ದ್ವಿಪದಾ' ಎಂದು ಹೇಳಲ್ಪಡು ತ್ತಾನೆ. ಎಲ್ಲಾ ಛಂದಸ್ಸುಗಳ ಹೆಸರುಳ್ಳ ಈ ಭಗವದ್ರೂಪಸಮುದಾಯಗಳು ಸ್ತ್ರೀರೂಪಗ ಳಾದ ಆಕಾರಗಳು ಎಂದು ಹೇಳಲ್ಪಟ್ಟವೆ. (ಹೀಗೆ ಛಂದಸ್ಸನ್ನು ಅಧಿಕರಿಸಿ ಇರತಕ್ಕ ಸಂಕ ರ್ಷಣ ರೂಪಿಯಾದ ಶ್ರೀ ಹರಿಯ ರೂಪವು ಐದು ವಿಧವು).

ಭಾ॥ (a) ಮಧ್ಯಂ ನಾರಾಯಣಃ ಪ್ರಭುಃ । ವಾಸುದೇವೋಽಸ್ಯ ಪುಚ್ಛಂ ಚ ವಾಮದಕ್ಷೌ ಚ ಪಕ್ಷಕೌ ॥ ಸಂಕರ್ಷಣಶ್ಚ ಪ್ರದ್ಯುಮ್ನಃ ಕ್ರಮಾದೇವಂ ಪ್ರಕೀರ್ತಿತೌ । (b) ಅನಿರುದ್ಧಃ ಶಿರಶ್ಚೈವ ತಥೈಕೋಽಪಿ ಹಿ ಪಂಚಧಾ ॥

ಅ ॥ (a) ಸರ್ವಸಮರ್ಥನಾದ ನಾರಾಯಣನು ಮಧ್ಯದೇಹನು. ಈ ವಾಸುದೇವ ನಿಗೆ ವಾಸುದೇವನು 'ಪುಚ್ಛ' (ಬಾಲವು) ಎನ್ನಿಸಿಕೊಳ್ಳುತ್ತಾನೆ. ಸಂಕರ್ಷಣ ಪ್ರದ್ಯುಮ್ನರಾ ದರೂ ಎಡಗೈ ಬಲಗೈಗಳಾಗಿ ಕ್ರಮದಿಂದಲೇ ಹೇಳಲ್ಪಡುತ್ತಾರೆ. ॥ (b) ಅನಿರುದ್ಧನೇ ಶಿರಸ್ಥಾ ನೀಯನು. ಆ ಪ್ರಕಾರವಾಗಿ (ಆ ವಾಸುದೇವನು) ಭೇದರಹಿತನಾದರೂ ಐದು ರೂಪನಾಗಿ ಇರುತ್ತಾನೆ. (ಹೀಗೆ ಚಿತಿಯಲ್ಲಿರತಕ್ಕ ವಾಸುದೇವ ರೂಪಿಯಾದ ಶ್ರೀ ಹರಿಯ ರೂಪವು ಐದು ಪ್ರಕಾರವು).

ಭಾ॥ (a) ಪ್ರಸ್ತಾವನಾಮಾನಿರುದ್ಧೋ ರಕ್ಷನ್ಸಂಸ್ತೂಯತೇ ಯತಃ । (b) ಸೃಜನ್ಗಚ್ಛ ರಮಯಾ ಪ್ರದ್ಯುಮ್ನಸ್ತತ್ರ ಗೀಯತೇ ॥ ಉದ್ಗೀಥನಾಮಾ ತೇನಾಸೌ ಜಗದುದ್ಗಮನೇನ ವಾ । (c) ಸಂಹಾರಾತ್ಪ್ರತಿಹಾರಾಖ್ಯ ಸ್ತಥಾ ಸಂಕರ್ಷಣಃ ಪ್ರಭುಃ ॥ (d) ಮೋಚಯಿತ್ವಾ ಸಮೀಪಂ ಹಿ ದ್ರಾವಯೇದ್ವಾಸುದೇವಕಃ । ತೇನೋಪದ್ರವನಾಮಾಸೌ (e) ನಿಧೀ ಯಂತೇ ಯತೋಽಖಿಲಾಃ ॥ ಮುಕ್ತಾ ನಾರಾಯಣೇ ದೇವೇ ತೇನಾಸೌ ನಿಧನಾಭಿಧಃ । ಇತ್ಯಾದಿ ಚ ॥ (f) ಸ್ತೂಯಮಾನತ್ವಾತ್ ಸ್ತೋಮಃ ಸಮತ್ವಾತ್ಸಾಮ ಛಂದ್ಯತ್ವಾಚ್ಛಂದಃ ॥ ೪ ॥

ಅ ॥ (a) ಯಾವ ಕಾರಣದಿಂದ ಅನಿರುದ್ಧ ರೂಪಿಯಾದ ಶ್ರೀ ಹರಿಯು (ಸಕಲ ಜಗತ್ತನ್ನೂ) ರಕ್ಷಿಸುವವನಾಗಿ ಚೆನ್ನಾಗಿ ಸ್ತುತಿಸಲ್ಪಡುತ್ತಾನೋ (ಆದುದರಿಂದ 'ಪ್ರಕರ್ಷೇಣ

ಸ್ತೂಯತೇ' 'ಅವತಿ=ರಕ್ಷತಿ ಚ' ಎಂಬೀವ್ಯುತ್ಪತ್ತಿಯಿಂದ) 'ಪ್ರಸ್ತಾವ'ಎಂದು ಹೆಸರುಳ್ಳವನು. ॥ (b) ಪ್ರದ್ಯುಮ್ನನು ಜಗತ್ತನ್ನು ಸೃಷ್ಟಿಸುವವನಾಗಿ ಸೃಷ್ಟಿಕಾಲದಲ್ಲಿ ಎಲ್ಲಾ ವಚನಗಳಿಗೂ ಅಭಿಮಾನಿನಿಯಾದ ಲಕ್ಷ್ಮಿಯಿಂದ ಗಾನಮಾಡಲ್ಪಡುತ್ತಾನೆ. ಆದುದರಿಂದ 'ಉದ್ಗೀಥ'ನೆಂದು ಹೆಸರುಳ್ಳವನು. ಅಥವಾ ಜಗತ್ತನ್ನು (ಜಠರದಿಂದ) ಹೊರಪಡಿಸುತ್ತಾನೆ. ಆದುದರಿಂದ ('ಉದ್ಗಮಯತೀತಿ ಉದ್ಗೀಥಃ' ಎಂಬೀವ್ಯುತ್ಪತ್ತಿಯಿಂದ) 'ಉದ್ಗೀಥ'ನೆಂದು ಹೆಸರುಳ್ಳವನು. (c) ಹಾಗೆಯೇ ಸರ್ವಸಮರ್ಥನಾದ ಸಂಕರ್ಷಣನು (ಸರ್ವಜಗತ್ತನ್ನೂ) ಸಂಹರಿಸುವುದರಿಂದ 'ಪ್ರತಿಹಾರ'ನೆಂದು ಹೆಸರುಳ್ಳವನು. ॥ (d) ಈ ಸುಖರೂಪಿಯಾದ ವಾಸುದೇವನು (ಭಕ್ತರನ್ನು ಸಂಸಾರದಿಂದ) ಬಿಡಿಸಿ (ತನ್ನ) ಸಮೀಪವನ್ನು ಕುರಿತು ಓಡಿಸುತ್ತಾನೆ. ಆದುದರಿಂದ 'ಉಪದ್ರವ'ನೆಂದು ಹೆಸರುಳ್ಳವನು. ॥ (e) ಕ್ರೀಡಾದಿಗುಣವಿಶಿಷ್ಟನಾದ ನಾರಾಯಣನಲ್ಲಿ ಎಲ್ಲಾ ಮುಕ್ತರೂ ಯಾವಕಾರಣದಿಂದ ಆಶ್ರಯಿಸಲ್ಪಡುತ್ತಾರೋ. ಆದುದರಿಂದ ಈ ನಾರಾಯಣನು 'ನಿಧನ'ನೆಂದು ಹೆಸರುಳ್ಳವನು. ಇದೇ ಮೊದಲಾದ ವಿಷಯವು ನಿರೂಪಿಸಲ್ಪಟ್ಟಿದೆ. (f) (ಬ್ರಹ್ಮರುದ್ರ ಮೊದಲಾದ ದೇವತೆಗಳಿಂದ) ಸ್ತುತಿಸಲ್ಪಡುವುದರಿಂದ 'ಸ್ತೋಮ' ಶಬ್ದವಾಚ್ಯನು (ಅನಿರುದ್ಧನು). (ಗುಣಗಳಿಂದ ಎಲ್ಲಾಪ್ರಾಣಿಗಳಲ್ಲಿಯೂ) ಸಮನಾದುದರಿಂದ, ಅಥವಾ 'ಸಮೋಽಹಂ ಸರ್ವಭೂತೇಷು' 'ನ ಮೇದ್ವೇಷ್ಯೋಽಸ್ತಿ ನ ಪ್ರಿಯಃ' ಎಂದು ಹೇಳಿದ ರೀತಿಯಿಂದ ಸರ್ವರಲ್ಲಿಯೂ ಸಮನಾದುದರಿಂದ (ಪ್ರದ್ಯುಮ್ನನು) 'ಸಾಮ' ಎನ್ನಿಸಿಕೊಳ್ಳುತ್ತಾನೆ. । ಉತ್ತಮಾಧಿಕಾರಿಗಳಿಗೆ ತಾನೇ ಇಷ್ಟನಾದುದರಿಂದಲೂ ಇತರರಿಗೆ ಆತನ ಅನುಗ್ರಹವು ಅಪೇಕ್ಷಿತವಾದುದರಿಂದ ಪ್ರಿಯನಾಗಿರುತ್ತಾನೆ. ಆದುದರಿಂದಲೂ (ಸಂಕರ್ಷಣನು) 'ಛಂದಃ' ಎಂದು ಹೇಳಲ್ಪಡುತ್ತಾನೆ. ॥ ೪ ॥

ಮಂ ॥ ತದ್ವಾ ಇದಂ ಬೃಹತೀಸಹಸ್ರಂ ಸಂಪನ್ನಂ ತದ್ಧೈತದೇಕೇ ನಾನಾಚ್ಛಂದಸಾಂ ಸಹಸ್ರಂ ಪ್ರತಿಜಾನತೇ ಕಿಮನ್ಯತ್ಸದನ್ಯದ್ಬ್ರೂಯಾಮೇತಿ ತ್ರಿಷ್ಟುಪ್ಸಹಸ್ರಮೇಕೇ ಜಗತೀಸಹಸ್ರಮೇಕೇಽನುಷ್ಟುಪ್ಸಹಸ್ರಮೇಕೇ ತದುಕ್ತಮೃಷಿಣಾಽನುಷ್ಟುಭಮನುಚರ್ಚೂರ್ಯಮಾಣಮಿಂದ್ರಂ ನಿಚಿಕ್ಯುಃ ಕವಯೋ ಮನೀಷೇತಿ ವಾಚಿ ವೈತದ್ಯೆಂದ್ರಂ ಪ್ರಾಣಂ ನ್ಯಚಾಯನ್ನಿತ್ಯೇತತ್ತದುಕ್ತಂ ಭವತಿ ಸಹೇಶ್ವರೋ ಯಶಸ್ವೀ ಕಲ್ಯಾಣಕೀರ್ತಿರ್ಭವಿತೋರೀಶ್ವರೋ ಹ ತು ಪುರಾಯುಷಃಪ್ರೈತೋರಿತಿ ಹ ಸ್ಮಾಹಾಽಕೃತ್ಸ್ನೋ ಹ್ಯೇಷ ಆತ್ಮಾ ಯದ್ವಾಗಭಿ ಹಿ ಪ್ರಾಣೇನ ಮನಸೇಶ್ಯಮಾನೋ ವಾಚಾ ನಾನುಭವತಿ ಬೃಹತೀಮಭಿಸಂಪಾದಯೇದೇಷ ವೈ ಕೃತ್ಸ್ನ ಆತ್ಮಾ ಯದ್ಬೃಹತೀ ಸೋಽಯಮಾತ್ಮಾ ಸರ್ವತಃ ಶರೀರೈಃ ಪರಿವೃತಸ್ತದ್ಯಥಾಽಯಮಾತ್ಮಾ ಸರ್ವತಃ ಶರೀರೈಃ ಪರಿವೃತ ಏವಮೇವ ಬೃಹತೀ ಸರ್ವತಚ್ಛಂದೋಭಿಃ ಪರಿವೃತಾ ಮಧ್ಯಂ ಹ್ಯೇಷಾಮಂಗಾನಾಮಾತ್ಮಾ ಮಧ್ಯಂ ಛಂದಸಾಂ ಬೃಹತೀ ಸಹೇಶ್ವರೋ ಯಶಸ್ವೀ ಕಲ್ಯಾಣಕೀರ್ತಿರ್ಭವಿತೋರೀಶ್ವರೋ ಹ ತು ಪುರಾಯುಷಃ ಪ್ರೈತೋರಿತಿ ಹ ಸ್ಮಾಹ ಕೃತ್ಸ್ನೋ ಹ್ಯೇಷ ಆತ್ಮಾ ಯದ್ಬೃಹತೀ ತಸ್ಮಾದ್ಬೃಹತೀಮೇವಾಭಿಸಂಪಾದಯೇತ್ ॥ ೫ ॥

೬ || ತತ್ ಇದಂ=ಆ ಈ ಪೂರ್ವೋಕ್ತ ಪ್ರಕಾರವಾಗಿ ಸಂಪಾದಿಸಲ್ಪಟ್ಟ, ಬೃಹತೀ ಸಹಸ್ರಂ ವೈ=ಬೃಹತೀ ಸಹಸ್ರವೇ, ಸಂಪನ್ನಂ=ಸ್ತುತಿಸಲಿಕ್ಕೆ ಯೋಗ್ಯವಾದುದು (ಆಗುತ್ತದೆ), ತತ್=ಸ್ತುತಿಸುವ ವಿಷಯದಲ್ಲಿ, ಏಕೇ=ಕೆಲವರು, ಏತತ್=ಸ್ತುತಿಸಲಿಕ್ಕೆ ಯೋಗ್ಯವಾದ, ಸಹಸ್ರಂ=ಸಾವಿರವನ್ನು, ನಾನಾಛಂದಸಾಂ=ಅನೇಕ ಛಂದಸ್ಸುಗಳ ಸಂಬಂಧಿಯಾದುದನ್ನೇ, ಪ್ರತಿಜಾನತೇ = ಪ್ರತಿಜ್ಞಾಮಾಡುತ್ತಾರೆ, ಅಂದರೆ ಯಾವುದಾದರೂ ಛಂದಸ್ಸುಳ್ಳ ಋಕ್ಕುಗಳ ಸಹಸ್ರವನ್ನೇ ಸ್ತುತಿಸತಕ್ಕದು, ಬೃಹತೀಸಹಸ್ರವನ್ನೇ ಸಂಪಾದಿಸಬೇಕೆಂದಿಲ್ಲ. ಅನ್ಯತ್,=ಸ್ತುತಿಸಲಿಕ್ಕೆ ಉಪಕ್ರಮಮಾಡಿದ ಛಂದಸ್ಸಿನಿಂದ)ಇತರವಾದ, ಸತ್=ಉತ್ತಮವಾದ ಛಂದಸ್ಸು, ಂ=ಯಾವುದದೆ, (ಎಲ್ಲಾ ಛಂದಸ್ಸುಗಳೂ ಸಮಾನವಾದುದರಿಂದ ತರತಮಭಾಗವೇ ಇಲ್ಲವು.) ಏಕೇ=ಕೆಲವರು, ಅನ್ಯತ್=ಬೃಹತೀ ಛಂದಸ್ಸಿನಿಂದ ಇತರವಾದ, ತ್ರಿಷ್ಟುಪ್ಸಹಸ್ರಂ=ತ್ರಿಷ್ಟುಪ್ ಛಂದಸ್ಕವಾದ ಋಕ್ಸಹಸ್ರವನ್ನೇ, ಸತ್=ಅದಕ್ಕಿಂತ ಉತ್ತಮವಾದುದನ್ನಾಗಿ, (ಅಂದರೆ ಅದನ್ನೇ ಸ್ತುತಿಸಲಿಕ್ಕೆ ಯೋಗ್ಯವಾದುದನ್ನಾಗಿ), ಬ್ರೂಯಾಮ=ಹೇಳುತ್ತೇವೆ, ಇತಿ=ಈ ಪ್ರಕಾರವಾಗಿ, ಹೇಳುತ್ತಾರೆ.) ಏಕೇ=ಕೆಲವರು, ಜಗತೀಸಹಸ್ರಂ=ಜಗತೀಸಹಸ್ರವನ್ನು, (ಸ್ತುತಿಸಲಕ್ಕೆಯೋಗ್ಯವಾದುದನ್ನಾಗಿ ಪ್ರತಿಜ್ಞಾ ಮಾಡುತ್ತಾರೆ) ಏಕೇ=ಕೆಲವರು, ಅನುಷ್ಟುಪ್ ಸಹಸ್ರಂ=ಅನುಷ್ಟುಪ್ ಛಂಧಸ್ಕವಾದ ಋಕ್ಸಹಸ್ರವನ್ನೇ, (ಅತಿಪ್ರಶಸ್ತವಾದುದನ್ನಾಗಿ ಹೇಳುತ್ತಾರೆ.) ತತ್=ಅನುಷ್ಟುಪ್ ಛಂದಸ್ಸಿಗೆ ಉತ್ತಮತ್ವವು, ಋಷಿಣಾ=ಮಂತ್ರದ್ರಷ್ಟನಿಂದ, ಉಕ್ತಂ=ಹೇಳಲ್ಪಟ್ಟದೆ, ಸಂಪೂರ್ಣಮಂತ್ರ, ಮಂತ್ರಾರ್ಥವು ಈ ರೀತಿಯಾಗಿರುತ್ತದೆ. **'ಬೀಭತ್ಸೂನಾಂ ಸಯುಜಂ ಹಂಸಮಾಹುರಪಾಂ ದಿವ್ಯಾನಾಂ ಸಖ್ಯೇ ಚರಂತಂ । ಅನುಷ್ಟುಭಮನು ಚ ಚರ್ಚೂರ್ಯಮಾಣಮಿಂದ್ರಂ ನಿಚಿಕ್ಯುಃ ಕವಯೋ ಮನೀಷಾ'** || ಕವಯಃ=ದಿವ್ಯಜ್ಞಾನಿಗಳು, ಮನೀಷಾ=ಜ್ಞಾನಸಾಮರ್ಥ್ಯದಿಂದ, ಬೀಭತ್ಸೂನಾಂ=ಜಗತ್ತನ್ನು ಧರಿಸಲೀಚ್ಛಿಸುವ, ದಿವ್ಯಾನಾಂ=ಸ್ವರ್ಗಲೋಕದಲ್ಲಿರುವ, ಅಪಾಂ=ಜಲಾಭಿಮಾನಿದೇವತೆಗಳ, ಸಖ್ಯೇ=ಸ್ನೇಹಕ್ಕೋಸ್ಕರ, ಸಯುಜಂ=ಮೇಘಗಳ ಸಮೂಹದಲ್ಲಿ ಒಟ್ಟಿಗೇನೇ ಸಂಚರಿಸುವ, ಹಂಸಂ=ಹಂಸಸ್ವರೂಪಿಯಾದ ಹರಿಯನ್ನೂ, ವಾಯುವನ್ನೂ ಕೂಡ, ಆಹುಃ=ಹೇಳುತ್ತಾರೆ.) (ಬ್ರಹ್ಮಾದಿಗಳಿಗೋಸ್ಕರ) ಅನುಷ್ಟುಭಂ=ನೃಸಿಂಹಪ್ರತಿಪಾದಕವಾದ ಅನುಷ್ಟುಪ್ ಛಂದಸ್ಕಋಕ್ಕನ್ನು, ಅನು=ಚೆನ್ನಾಗಿ, ಚರ್ಚೂರ್ಯಮಾಣಂ=ಉಚ್ಚರಿಸುವ, (ಸಾರ್ಥವಾಗಿ ವ್ಯಾಖ್ಯಾನಮಾಡುವ) ಇಂದ್ರಂ=ಪರಮೇಶ್ವರನಾದ ಹಂಸರೂಪಿಯಾದಶ್ರೀ ಹರಿಯನ್ನು, (ಹಾಗೆಯೇ ರುದ್ರಾದಿಗಳಿಗೋಸ್ಕರ) ಅನುಷ್ಟುಭಂ=ಅನುಷ್ಟುಪ್‌ಛಂದಸ್ಕವಾದ ಋಕ್ಕನ್ನು, ಅನುಚರ್ಚೂರ್ಯಮಾಣಂ=ಚೆನ್ನಾಗಿ ಉಚ್ಚರಿಸುವ, ವ್ಯಾಖ್ಯಾನಮಾಡುವ, ಇಂದ್ರಂ=ಹಂಸರೂಪನಾದ ವಾಯುವನ್ನು, ಮನೀಷಯಾ=ದಿವ್ಯಜ್ಞಾನದ, ನಿಚಿಕ್ಯುಃ=ನೋಡಿದರು. ಇತಿ=ಈಪ್ರಕಾರ (ಋಕ್ಕಿನ ಅರ್ಥವು.) ವೇದಪುರುಷನು ತಾನಾಯೇ ಋಕ್ಕಿನ ತಾತ್ಪರ್ಯವನ್ನು ಹೇಳುತ್ತಾನೆ. ವಾಚಿ='ವಾಕ್' ಎಂದು ಹೆಸರುಳ್ಳ ನರಸಿಂಹರೂಪಿಯಾದ ಶ್ರೀ ಹರಿಯನ್ನು ಪ್ರತಿಪಾದಿಸುವ ಅನುಷ್ಟುಪ್ ಛಂದಸ್ಕವಾದ ಋಕ್ಕು, ಆ=ನ್ನಾಗಿ, (ಮತ್ತೂ ಮತ್ತು ಹಂಸರೂಪಿಯಾದ ಶ್ರೀ ಹರಿಯಿಂದ ಬ್ರಹ್ಮರುದ್ರಾದಿಗಳನ್ನು ರಿತು ಉಚ್ಚರಿಸಲ್ಪಡುತ್ತಿರಲು ಮತ್ತೂ ವ್ಯಾಖ್ಯಾನಮಾಡಲ್ಪಡುತ್ತಿರಲು) ತದಾ=ಆ ಕಾಲದಲ್ಲಿ, ಇಂದ್ರಂ=ಪರಮೇಶ್ವರನಾದ, ಪ್ರಾಣಂ=ಶ್ರೀ ಹರಿಯನ್ನು, (ಮುನಿಗಳು) ನ್ಯಚಾಯನ್=ನೋಡಿದರು, (ಹಾಗೆಯೇ ವಾಯುದೇವರಿಂದ ರುದ್ರಾದಿಗಳನ್ನು ಕುರಿತು ಉಪದೇಶಿಸಲ್ಪಡುತ್ತಿರಲು,) ತದಾ=ಆಗ, ಐಂದ್ರಂ=ಪರಮೇಶ್ವರ ಸಹಿತನಾದ, (ಅಂದರೆ ಹಂಸರೂಪಿಯಾದಶ್ರೀ ಹರಿಯ ಸಮೀಪದಲ್ಲಿಯೇ ಇರುವ) ಪ್ರಾಣಂ=ಹಂಸರೂಪಿಯಾದ ವಾಯುದೇವರನ್ನು ಕೂಡ,

ನ್ಯಚಾಯನ್=ನೋಡಿದರು. ಇತಿ ಏತತ್=ಈ ಪ್ರಮೇಯವು, ತದುಕ್ತಂ=ಆ ಈ ಋಕ್ಕಿನಿಂದ ಹೇಳಲ್ಪಟ್ಟದ್ದು, ಭವತಿ=ಆಗುತ್ತದೆ. (ಅಂತೂ ಬ್ರಹ್ಮಾದಿದೇವತೆಗಳು ಶ್ರೀ ಪರಮಾತ್ಮನ ಹತ್ತಿರ ಯಾವಾಗಲೂ ಅನುಷ್ಟುಪಿನ ಅರ್ಥವನ್ನೇ ಕೇಳುವುದರಿಂದ ಅನುಷ್ಟುಪ್ ಛಂದಸ್ಸೇ ಶ್ರೇಷ್ಠವಾದುದು ಎಂಧು ಹೇಳಿದ ಹಾಗಾಯಿತು.) ಸ ಹ=ಅನುಷ್ಟುಪ್ ಸಹಸ್ರವನ್ನು ಸ್ತುತಿಸುವವನು, ಯಶಸ್ವೀ=ಕೀರ್ತಿಯುಳ್ಳವನು, ಕಲ್ಯಾಣಕೀರ್ತಿಃ=ಮಂಗಲಕರವಾದ ಯಶಸ್ಸುಳ್ಳವನು (ಆಗುವನು), ಭವಿತೋಃ=ಮುಕ್ತಿಯನ್ನು ಕುರಿತು ಹೋಗಲಿಕ್ಕೂ, ಈಶ್ವರಃ=ಸಮರ್ಥನೂ, (ಆಗುವನು.) ಆಯುಷಃ=ಆಯುಸ್ಸುಪರಿಸಮಾಪ್ತಿಯಾಗುವಕ್ಕಿಂತ, ಪುರಾತು=ಪೂರ್ವದಲ್ಲಿಯೂ ಕೂಡ, ಪ್ರೈತೋಃ=ಸಾಯಲಿಕ್ಕೂ, ಈಶ್ವರಃ=ಸಮರ್ಥನು, (ಅಂದರೆ ಸ್ವೇಚ್ಛಾನುಸಾರವಾದ ಮರಣವುಳ್ಳವನೂ,) ಆಗುವನು. ಹ=(ಈ ವಿಷಯವು ಸರ್ವಶಾಸ್ತ್ರದಲ್ಲಿಯೂ) ಅತಿಪ್ರಸಿದ್ಧವು. ಇತಿ ಹ=ಈ ಪ್ರಕಾರವಾಗಿಯೇ, ಆಹ ಸ್ಮ= (ಮಹಿದಾಸರೂಪಿಯಾದ ಶ್ರೀ ಹರಿಯ ಶಿಷ್ಯನೂ ಐತರೇಯ ನಾಮಕನೂ ಆದ ಒಬ್ಬಾನೊಬ್ಬ ಋಷಿಯು) ಪೂರ್ವಪಕ್ಷವನ್ನು ಮಾಡಿದನು. ಆಗ ಮಹಿದಾಸರೂಪಿಯಾದ ಶ್ರೀ ಹರಿಯು ಉತ್ತರವನ್ನು ಕೊಡುವವನಾದನು. ಯತ್=ಯಾವ, ವಾಕ್='ವಾಕ್' ಎಂದು ಹೆಸರುಳ್ಳ ಅನುಷ್ಟುಬಿಗೆ ಅಭಿಮಾನಿನಿಯಾದ, ಅಥವಾ ವಾಗಿಂದ್ರಿಯಕ್ಕೆ ಅಭಿಮಾನಿನಿಯಾದ ಪಾರ್ವತಿಯು, ಏಷಃ=ಇವಳು, ಅಕೃತ್ಸ್ನಃ=ಅಪೂರ್ಣವಾದ, ಆತ್ಮಾ=ಶ್ರೀ ಹರಿಗೆ ಪ್ರತಿಮಾಸ್ಥಾನೀಯಳು, ಹಿ=ಪ್ರಸಿದ್ಧವು. ನಾ=ಪುರುಷನು, ಹಿ=ಯಾವಕಾರಣದಿಂದ, ಪ್ರಾಣೇನ=ಮುಖ್ಯಪ್ರಾಣನಿಂದಲೂ, ಮನಸಾ=ಮನೋಽಭಿಮಾನಿಯಾದ ರುದ್ರನಿಂದಲೂ, ಅಭಿ=ಸುತ್ತಲೂ, (ಸರ್ವವಿಷಯಗಳಲ್ಲಿಯೂ) ಇಷ್ಯಮಾನಃ=ಹಾಕಲ್ಪಟ್ಟವನಾಗಿ, (ಪ್ರೇರಿಸಲ್ಪಟ್ಟವನಾಗಿ) ಅನುಭವತಿ=(ವಿಷಯಗಳನ್ನು) ಅನುಭವಿಸುತ್ತಾನೆ. ವಾಚಾ=ವಾಗಭಿಮಾನಿನಿಯಾದ ಪಾರ್ವತಿಯಿಂದ, ನ ಹಿ=ಅಲ್ಲವಷ್ಟೇ! (ಅಂತೂ ಜೀವರಿಗೆ ವಾಙ್ಮಾತ್ರದಿಂದ ವಿಷಯಭೋಗವಾಗುವುದಿಲ್ಲ. ಕಾರಣ ವಾಗಭಿಮಾನಿನಿಯಾದ ಪಾರ್ವತಿಯು ಅವರಳು, ಆದುದರಿಂದಲೇ ಆ ಪಾರ್ವತಿಯೇ ಅಭಿಮಾನಿಯಾಗಿವುಳ್ಳ ಅನುಷ್ಟುಪ್ ಛಂದಸ್ಕವಾದ ಋಕ್ಸಹಸ್ರವು ಶ್ರೇಷ್ಠವಾದುದಲ್ಲ. ಆದುದರಿಂದ) ಬೃಹತೀಂ=ಬೃಹತೀ ಛಂದಸ್ಕ ಋಕ್ಸಹಸ್ರವನ್ನೇ, ಅಭಿಸಂಪಾದಯೇತ್=ಸಂಪಾದಿಸತಕ್ಕುದು. ಯತ್=ಯಾವಕಾರಣದಿಂದ, ಯತ್=ಯಾವ, ಬೃಹತೀ=ಬೃಹತೀ ಛಂದಸ್ಕವಾದ ಋಕ್ಕಿಗೆ ಅಭಿಮಾನಿಯಾದ, ಏಷ ವೈ=ಈ ಮುಖ್ಯಪ್ರಾಣನೇ, ಕೃತ್ಸ್ನಃ=ಪೂರ್ಣವಾದ, ಆತ್ಮಾ=ವಿಷ್ಣುಪ್ರತಿಮೆಯು, ಅಥವಾ (ಬೃಹತೀ ಶಬ್ದವಾಚ್ಯನಾದ ಮುಖ್ಯಪ್ರಾಣನೇ ಅಭಿಮಾನಿಯಾಗಿ ಉಳ್ಳದ್ದಾದುದರಿಂದ,) ಬೃಹತೀ ವೈ=ಬೃಹತೀ ಛಂದಸ್ಸೇವೇ, ಬೃಹತೀ=ಎಲ್ಲಾ ಛಂದಸ್ಸುಗಳ ಮಧ್ಯದಲ್ಲಿ ಶ್ರೇಷ್ಠವಾದುದು. (ಆದುದರಿಂದಲೇ) ಬೃಹತೀ='ಬೃಹತೀ' ಎಂದು ಹೆಸರುಳ್ಳದ್ದು. ಸಃ=ಪ್ರಸಿದ್ಧವಾದ, ಅಯಂ=ಈದಾವ, ಆತ್ಮಾ=ಮಧ್ಯದೇಹವು, ಸರ್ವತಃ ಶರೀರೈಃ=ಶಿರಸ್ಸು, ಬಾಹು ಮೊದಲಾದ ಎಲ್ಲಾ ಅಂಗಗಳಿಂದಲೂ, ಪರಿವೃತಃ=ಯುಕ್ತವಾಗಿದೆಯಷ್ಟೇ! ತತ್=ಅದು ದೃಷ್ಟಾಂತವು. ಯಥಾ=ಹೇಗೆ, ಅಯಂ ಆತ್ಮಾ=ಈ ಮಧ್ಯದೇಹವು, ಸರ್ವತಃ ಶರೀರೈಃ=ಎಲ್ಲಾ ಶರೀರಾಂಗಗಳಿಂದ, ಪರಿವೃತಃ=ಯುಕ್ತವಾಗಿದೆಯೋ, ಏವಮೇವ=ಇದೇ ರೀತಿಯಾಗಿ, ಬೃಹತೀ=ಬೃಹತೀ ಛಂದಸ್ಸು, ಛಂದೋಭಿಃ=ಆರು ಛಂದಸ್ಸುಗಳಿಂದ, ಸರ್ವತಃ=ಪೂರ್ವೋತ್ತರಗಳಲ್ಲಿ, ಪರಿವೃತಾ=ಯುಕ್ತವಾಗಿದೆ. (ಅಂತೂ ಬೇರೆ ಛಂದಸ್ಸುಗಳು ಪರಿವಾರರೂಪಗಳಾದುದರಿಂದ ಅಮುಖ್ಯಗಳೂ, ಬೃಹತೀ ಛಂದಸ್ಸು ಪರಿವೃತವಾದುದರಿಂದ ಮುಖ್ಯವೂ ಆಗಿದೆ.) ಆತ್ಮಾ=ಮಧ್ಯದೇಹವು, ಏಷಾಂ ಅಂಗಾನಾಂ=ಶಿರಸ್ಸು ಮೊದಲಾದ ಈ ಅಂಗಗಳಿಗೆ, ಮಧ್ಯಂ ಹಿ=

ಮಧ್ಯಪ್ರದೇಶವಷ್ಟೇ! (ಇದೇ ರೀತಿಯಾಗಿ) ಬೃಹತೀ=ಬೃಹತೀ ಛಂದಸ್ಸು, ಛಂದಸಾಂ=ಗಾಯ ತ್ರಿಯನ್ನು ಆರಂಭಿಸಿ ಜಗತೀ ಪರ್ಯಂತಗಳಾದ ಛಂದಸ್ಸು ಗಳಿಗೆ, ಮಧ್ಯಂ=ಮಧ್ಯಭೂತವಾ ದುದು. (ಅಂತೂ ಮಂತ್ರಿ ಮೊದಲಾದವರ ಮಧ್ಯದಲ್ಲಿರುವ ರಾಜನು ಹೇಗೆ ಶ್ರೇಷ್ಠನೋ, ಅದೇ ರೀತಿಯಾಗಿ ಬೃಹತೀಛಂದಸ್ಸೂ ಛಂದಸ್ಸುಗಳ ಮಧ್ಯದಲ್ಲಿ ಇದ್ದುದರಿಂದ ಅವುಗಳಿಂದ ಶ್ರೇಷ್ಠವಾ ಗಿದೆ.) ಸಃ ಯಶಸ್ವೀ ಕಲ್ಯಾಣಕೀರ್ತಿಃ ಸ್ಯಾತ್, ಭವಿತೋಃ ಈಶ್ವರಃ ಸ್ಯಾತ್, ಆಯುಷಃ ಪುರಾ ತು ಪ್ರೈತೋಃ ಈಶ್ವರಃ ಸ್ಯಾತ್, ಇತಿ ಹ ಆಹ ಸ್ಮ=(ಪೂರ್ವದಲ್ಲಿ ಹೇಳಿದುದೇ ಅರ್ಥವು.) (ಅನುಷ್ಟುಪ್ ಸಹಸ್ರವನ್ನು ಸ್ತುತಿಸುವವನಗಿಂತ ಹೆಚ್ಚು ಗುಣವುಳ್ಳವನೂ ಆಗುತ್ತಾನೆ.) ಹೀಗೆ ತನ್ನ ಶಿಷ್ಯನಾದ ಐತರೇಯನನ್ನು ಕುರಿತು ಪೂಜ್ಯನಾದ ಮಹೈತರೇಯನಾಮಕನಾದ ಶ್ರೀ ಹರಿ ಯು ಉತ್ತರವನ್ನು ಕೊಟ್ಟನು. ಯತ್=ಯಾವ, ಬೃಹತೀ=ಬೃಹತೀಛಂದಸ್ಸೋ, ಏಷಃ= ಈ ಛಂದಸ್ಸು, ಕೃತ್ಸ್ನಃ ಆತ್ಮಾ=ಪೂರ್ಣವಾದ ವಿಷ್ಣುಪ್ರತಿಮೆಯು, ಹಿ=ನಿಶ್ಚಯವು. ತಸ್ಮಾತ್= ಆದುದರಿಂದ (ಸ್ತೋತ್ರಮಾಡುವವನು,) ಬೃಹತೀಮೇವ=ಬೃಹತೀಸಹಸ್ರವನ್ನೇ, ಅಭಿಸಂಪಾದ ಯೇತ್=ಸಂಪಾದಿಸಬೇಕು. ॥ ೫ ॥

ಭಾ॥ (a) ತದಿದಮುಕ್ತಪ್ರಕಾರೇಣೈವ ಬೃಹತೀಸಹಸ್ರಂ ಸಂಪನ್ನಂ ಭವತಿ। (b)ತದೇಕೇ ನಾನಾಚ್ಛಂದಸಾಂ ಸಹಸ್ರಂ ಶಂಸಿತವ್ಯಮೇವ ಬೃಹತೀಸಹಸ್ರ ಸಂಪಾದನಮವಿವಕ್ಷಿತಮಿತಿ ಪ್ರತಿಜಾನತೇ ॥ (c) ಕೇಚಿತ್ತ್ರಿಷ್ಟುಪ್ಸಹ ಸ್ರಮೇವ ಶಂಸಿತವ್ಯಮಿತಿ ॥

ಅ ॥ (a) ಪೂರ್ವದಲ್ಲಿ ಹೇಳಿದ ರೀತಿಯಿಂದಲೇ ಸಂಪಾದಿಸಿಕೊಳ್ಳಲ್ಪಟ್ಟ ಆ ಈ ಬೃಹತೀ ಸಹಸ್ರವೇ ಸ್ತೋತ್ರಮಾಡಲಿಕ್ಕೆ ಯುಕ್ತವಾಗುತ್ತದೆ. ॥ (b) ಸ್ತುತಿಸುವ ವಿಷಯ ದಲ್ಲಿ ಕೆಲವರು ಅನೇಕ ಛಂದಸ್ಸುಗಳ ಸಂಬಂಧಿಯಾದ ಸಹಸ್ರವೇ ಸ್ತುತಿಸತಕ್ಕುದು. (ಅಂದರೆ ಯಾವುದಾದರೊಂದು ಛಂದಸ್ಸುಳ್ಳ ಋಕ್ಸಹಸ್ರವೂ ಸ್ತುತಿಸತಕ್ಕುದು) ಬೃಹತೀಛಂದಸ್ಸುಳ್ಳ ಋಕ್ಸಹಸ್ರವನ್ನು ಸಂಪಾದಿಸಿಕೊಳ್ಳುವುದು ಬೇಕಾಗಿಲ್ಲ ಎಂದು ಪ್ರತಿಜ್ಞಾಮಾಡುತ್ತಾರೆ. ॥ (c) ಕೆಲವರು ತ್ರಿಷ್ಟುಪ್‌ಛಂದಸ್ಕವಾದ ಋಕ್ಸಹಸ್ರವೇ ಸ್ತುತಿಸತಕ್ಕುದು ಎಂದು ಹೇಳು ವರು. (ಬೃಹತೀಛಂದಸ್ಸಿನಲ್ಲಿ (೩೬) ಮೂವತ್ತಾರು ಅಕ್ಷರಗಳು, ತ್ರಿಷ್ಟುಪ್‌ಛಂದಸ್ಸಿನಲ್ಲಿ ಅದರೂ ೪೪ ಅಕ್ಷರಗಳು ಇವೆ. ಅಂತೂ ಬೃಹತಿಯಿಂದ ತ್ರಿಷ್ಟುಪ್‌ಛಂದಸ್ಸಿನಲ್ಲಿ ಹೆಚ್ಚು ಅಕ್ಷರ ಗಳಿದ್ದುದರಿಂದ ತ್ರಿಷ್ಟುಪೇ ಶ್ರೇಷ್ಠವಾದುದು. ಆದುದರಿಂದ ಅದನ್ನೇ ಸ್ತುತಿಸತಕ್ಕುದು.)

ಭಾ॥ (a) ಅನುಷ್ಟುಪ್ಸಹಸ್ರಮೇವೇತಿ ವದಂತೋಽನುಷ್ಟುಪ್ಪ್ರಶಂಸಾತ್ಮಿಕಾಮೃ ಚಂ ದರ್ಶಯಂತಿ। (b) ಬೀಭತ್ಸೂನಾಂ ಜಗದ್ಭರ್ತುರ್ಮುಮುಕ್ಷೂನಾಂ॥ ಅಪಾಂ ಸಯುಜಂ ಸಹೈವ ಚರಂತಂ ಚಾಹುಃ। ವಿಷ್ಣುಂ ಹಂಸಸ್ವರೂ ಪಿಣಂ ಅನುಷ್ಟುಭಂ ಚರ್ಕೂರ್ಯಮಾಣಂ ಪುನಃ ಪುನರ್ವದಂತಂ ಪರ ಮೇಶ್ವರಂ ದದೃಶುಶ್ಚ ॥

ಅ ॥ (a) ಅನುಷ್ಟುಪ್ಸಹಸ್ರವನ್ನೇ ಸ್ತುತಿಸಬೇಕೆಂದು ಹೇಳುವವರು (ಆ ಅನು ಷ್ಟುಪ್ ಛಂದಸ್ಸಿಗೆ ಬೃಹತಿ ಮೊದಲಾದವುಗಳಿಂದ ಹೆಚ್ಚು ಅಕ್ಷರಗಳು ಇಲ್ಲದಿರುವುದರಿಂದ ಅದು ಶ್ರೇಷ್ಠವಾದುದೆಂದು ಸಾಧಿಸುವುದಕ್ಕೋಸ್ಕರ) ಅನುಷ್ಟುಪ್ ಛಂದಸ್ಸನ್ನು ಸ್ತುತಿಸುವ ಋಕ್ಕನ್ನು ತೋರಿಸುತ್ತಾರೆ. ॥ (b) (ಮಂತ್ರಾರ್ಥ ಬರಿಯುವಾಗಲೇ ಋಕ್ಕು ತೋರಿಸಲ್ಪಟ್ಟದೆ.)

'ಬೀಭತ್ಸೂನಾಂ'=ಅಂದರೆ ಜಗತ್ತನ್ನು ಪೋಷಿಸಲಿಕ್ಕೆ ಇಚ್ಛಿಸುವ, 'ಅಪಾಂ ಸಯುಜಂ'= ಅಂದರೆ (ಅಬ್ದೇವತೆಗಳ ಸಖ್ಯಾರ್ಥನಾಗಿ ಮೇಘಗಳ ಮಂಡಲದಲ್ಲಿ) ಒಟ್ಟಿಗೇನೇ ಸಂಚರಿಸತಕ್ಕವನನ್ನಾಗಿಯೂ, ಹೇಳುತ್ತಾರೆ. 'ಅನುಷ್ಟುಭಂ ಚರ್ಚುರ್ಯಮಾಣಂ'=ಅಂದರೆ ಮತ್ತೂ ಮತ್ತು (ಬ್ರಹ್ಮಾದಿಗಳಿಗೆ) ಉಪದೇಶಮಾಡುವವನೂ, ಪರಮೈಶ್ವರ್ಯಸಂಪನ್ನನೂ, ಹಂಸರೂಪಿಯೂ ಆದ ಶ್ರೀ ಹರಿಯನ್ನು (ದಿವ್ಯಜ್ಞಾನದಿಂದ) ನೋಡಿದರು.

ಭಾ॥ **(a)** ಮೇಘಸಂಸ್ಥಂ ಹಂಸರೂಪಂ ತಂ ವಿಷ್ಣುಂ ಪರಮೇಶ್ವರಂ । ವಿರಿಂಚಶಿವಪೂರ್ವೇಭ್ಯೋ ನೃಸಿಂಹಾನುಷ್ಟುಭಂ ಪರಾಂ ॥ ಉಚ್ಚಾರಯಂತಮರ್ಥಾಂಶ್ಚ ವ್ಯಾಚಕ್ಷಾಣಂ ಸಮಂತತಃ । ದದೃಶುರ್ಮುನಯೋ ದಿವ್ಯಾ ಆಚಾರ್ಯ ಬ್ರಹ್ಮಶರ್ವಯೋಃ ॥ **(b)** ಏವಂ ವಾಯುಂ ಚ ದದೃಶುಸ್ತತ್ರ ಹಂಸಸ್ವರೂಪಿಣಂ । ಶಿವಾದಿಭ್ಯೋ ವ್ಯಾಹರಂತಂ ತಾಮೇವಾನುಷ್ಟುಭಂ ಪರಾಮಿತ್ಯಾದಿ ಚ ॥

ಅ ॥ (a) ಮೇಘಮಂಡಲದಲ್ಲಿ ಇರುವವನೂ, ಹಂಸಸ್ವರೂಪಿಯೂ, ಪರಮೈಶ್ವರ್ಯಸಂಪನ್ನನೂ ಆದ ಆ ಶ್ರೀ ಹರಿಯನ್ನು ಬ್ರಹ್ಮ, ರುದ್ರ ಮೊದಲಾದವರಿಗೋಸ್ಕರ ಶ್ರೇಷ್ಠವಾದ ನರಸಿಂಹ ಪ್ರತಿಪಾದಕವಾದ ಅನುಷ್ಟುಪ್‌ಛಂದಸ್ಸನ್ನು ಉಪದೇಶಿಸುವವನನ್ನಾಗಿಯೂ, ಅಭಿಪ್ರಾಯಗಳನ್ನು ವ್ಯಾಖ್ಯಾನಮಾಡುವವನನ್ನಾಗಿಯೂ, ಉಪದೇಶಕರಾದ ಬ್ರಹ್ಮರುದ್ರರ ಸುತ್ತು ಮುತ್ತಲೂ, ಅಲೌಕಿಕಜ್ಞಾನವುಳ್ಳ ಜ್ಞಾನಿಗಳು ನೋಡಿದರು. ॥ (b) ಹಾಗೆಯೇ ರುದ್ರಾದಿ ದೇವತೆಗಳಿಗೋಸ್ಕರ ಆ ಶ್ರೇಷ್ಠವಾದ ಅನುಷ್ಟುಪ್‌ಛಂದಸ್ಸನ್ನೇ ಸಾರ್ಥವಾಗಿ ಉಪದೇಶಿಸುತ್ತಿರುವವನೂ, ಆ ಮೇಘಮಂಡಲದಲ್ಲಿಯೇ ಹಂಸರೂಪಿಯೂ ಆದ ಮುಖ್ಯಪ್ರಾಣನನ್ನೂ ಕೂಡ ನೋಡಿದರು. ಇದೇ ಮೊದಲಾದ ಪ್ರಮೇಯವೂ ಹೇಳಲ್ಪಟ್ಟಿದೆ.

ಭಾ॥ **(a)** ವಾಗಾಖ್ಯಾಯಾಮನುಷ್ಟುಭ್ಯುಚ್ಚಾರ್ಯಮಾಣಾಯಾಂ ಹಿ ಮುನಯೋ ವಿಷ್ಣುಂ ದದೃಶುಃ । **(b)** ಅತೋ ಬ್ರಹ್ಮಾದಯೋಽಪಿ ವಿಷ್ಣೋಃ ಸಕಾಶಾದನುಷ್ಟುಬರ್ಥಂ ಸರ್ವದಾ ಶೃಣ್ವಂತೀತಿ ಜ್ಞಾಯತೇ ಅತೋಽನುಷ್ಟುಬೇವ ಛಂದಸಾಂ ವರೇತಿ ಚೋಕ್ತಂ ಭವತಿ ॥

ಅ ॥ (a) 'ವಾಕ್' ಎಂದು ಹೆಸರುಳ್ಳ ನರಸಿಂಹಪ್ರತಿಪಾದಕವಾದ ಅನುಷ್ಟುಪ್ ಛಂದಸ್ಸುಳ್ಳ ಋಕ್ಕು (ಹಂಸರೂಪಿಯಾದ ಶ್ರೀ ಹರಿಯಿಂದ ಬ್ರಹ್ಮರುದ್ರಾದಿಗಳನ್ನು ಕುರಿತು) ಸಾರ್ಥವಾಗಿ ಉಪದೇಶಿಸಲ್ಪಡುತ್ತಿರಲು ಜ್ಞಾನಿಗಳು ಶ್ರೀ ಹರಿಯನ್ನು ನೋಡಿದರು. ॥ (b) ಆದುದರಿಂದ ಬ್ರಹ್ಮರುದ್ರಾದಿದೇವತೆಗಳೂ ಕೂಡ ಹಂಸರೂಪಿಯಾದ ಶ್ರೀ ಪರಮಾತ್ಮನ ಸಕಾಶದಿಂದ ಯಾವಾಗಲೂ ಅನುಷ್ಟುಪ್‌ಛಂದಸ್ಕವಾದ ಋಕ್ಕಿನ ಅರ್ಥವನ್ನು ಕೇಳಿಕೊಂಡೇ ಇದ್ದಾರೆ ಎಂದು ತಿಳಿಯಲ್ಪಡುತ್ತದೆ. ಆದುದರಿಂದ ಅನುಷ್ಟುಪ್‌ಛಂದಸ್ಸೇ ಎಲ್ಲಾ ಛಂದಸ್ಸುಗಳ ಮಧ್ಯದಲ್ಲಿ ಶ್ರೇಷ್ಠವಾದುದು ಎಂದೂ ಹೇಳಲ್ಪಟ್ಟದ್ದಾಗಿ ಆಗುತ್ತದೆ.

ಭಾ॥ **(a)** ಅನುಷ್ಟುಭಾಂ ಸಹಸ್ರಂ ತು ಯಃ ಶಂಸೀತಾತ ಏವ ತು । ಭವಿತುಂ ಚೇಶ್ವರಃ ಸ ಸ್ಯಾದ್ಭಾವೋ ಮುಕ್ತಿರ್ನ ಚಾನ್ಯಥಾ ॥ **(b)** ಯಶಸ್ವೀ ಸ ಪ್ರಸಿದ್ಧಃ ಸ್ಯಾಚ್ಛುಭಕೀರ್ತಿಶ್ಚ ಸರ್ವದಾ । ಸ್ವಚ್ಛಂದವೃತ್ತ್ಯಾ ತಾ ಚ ಸ್ಯಾತ್ತಸ್ಯೇತ್ಯಾಹೈತರೇಯಕಃ ॥

ಅ ॥ (a) ಯಾವಾತನು ಅನುಷ್ಟುಪ್‌ಛಂದಸ್ಸುಳ್ಳ ಋಕ್ಕುಗಳ ಸಾವಿರವನ್ನಾದರೂ ಸ್ತುತಿಸುತ್ತಾನೋ, ಸ್ತೋತ್ರಮಾಡುವುದರಿಂದಲೇ ಮುಕ್ತನಾಗಲಿಕ್ಕೂ ಆತನು ಸಮರ್ಥನು ಆದಾನು. ಭಾವವೆಂದರೆ ಮೋಕ್ಷವೆಂದೇ ಅರ್ಥವು, ಬೇರೆ ರೀತಿಯಾಗಿ ಅಲ್ಲ. ॥ (b) ಆತನು ಯಶಸ್ಸುಳ್ಳವನೂ, ಅತಿ ಪ್ರಸಿದ್ಧನೂ, ಯಾವಾಗಲೂ ಮಂಗಲಕರವಾದ ಕೀರ್ತಿಯುಳ್ಳವನೂ ಆಗುವನು. ಅಲ್ಲದೆ ಆತನಿಗೆ ಸ್ವೇಚ್ಛಾನುಸಾರವಾದ ಮರಣವೂ ಆಗುವುದು. ಈ ಪ್ರಕಾರ ವಾಗಿ ಐತರೇಯನಾಮಕನಾದ ಒಬ್ಬಾನೊಬ್ಬ ಮಹಿದಾಸದೇವರ ಶಿಷ್ಯನು ಹೇಳಿದನು. ಅಂದರೆ ಪೂರ್ವಪಕ್ಷವನ್ನು ಮಾಡಿದನು.

ಭಾ॥ **(a)** ಮಹೈತರೇಯೋ ಭಗವಾಂಸ್ತನ್ನೇತ್ಯಾಹ ರಮಾಪತಿಃ । ನಾನಾಛಂದಃ ಪ್ರಶಂಸಾದಿ ಪ್ರಮಾಣರಹಿತತ್ವತಃ ॥ ಪರಿಹಾರಾಯ ಚಾಪೂರ್ಣಮೈತ ರೇಯಮುನೇ ಶೃಣು । **(b)** ತ್ವಂ ತು ಮಂತ್ರಮುದಾಹೃತ್ಯ ಯಸ್ಮಾ ದೇತದವೋಚಥಾಃ ॥ ತಸ್ಮಾದ್ವಕ್ಷ್ಯಾಮ್ಯುತ್ತರಂ ತೇ ಪ್ರಿಯಃ ಶಿಷ್ಯೋಽಸಿ ಮೇ ಯತಃ ॥

ಅ ॥ (a) (ಹಿಂದೆ ಹೇಳಿದ ಪ್ರಕಾರ ಪೂರ್ವಪಕ್ಷವನ್ನು ಮಾಡುತ್ತಿರಲು) ಸರ್ವೋ ತ್ತಮನೂ, ಐತರೇಯ ನಾಮಕನೂ ಆದ ಲಕ್ಷ್ಮೀಪತಿಯಾದ, ಮಹಿದಾಸರೂಪಿಯಾದ ಶ್ರೀ ಹರಿಯು 'ಅದು ಅಂದರೆ ಅನುಷ್ಟುಪ್ ಸಹಸ್ರವು ಶ್ರೇಷ್ಠವಾದುದು, ಅಲ್ಲವೇ ಅಲ್ಲ' ಎಂದು ಹೇಳಿದನು. 'ನಾನಾ ಛಂದಸ್ಸುಗಳನ್ನು ಹೊಗಳುವುದು' ಇದೇ ಮೊದಲಾದ ಪಕ್ಷವು ಪ್ರಮಾಣವಿಲ್ಲದಿರುವು ದರಿಂದ ಪರಿಹಾರಮಾಡಲಿಕ್ಕೂ ಅಪೂರ್ಣವಾಗಿದೆ. ಕಾರಣ ಸರ್ವಥಾ ಉಪೇಕ್ಷಣೀಯವೇ ಆಗಿದೆ. (ನಿನ್ನ ಪಕ್ಷದಲ್ಲಿ ಪ್ರಮಾಣವಿರುವುದರಿಂದ ಪರಿಹರಿಸಲಿಕ್ಕೆ ಯೋಗ್ಯವೇ ಆಗಿದೆ). ಎಲೈ ಐತರೇಯನಾಮಕ ಪ್ರಿಯಶಿಷ್ಯನೇ! ಕೇಳು. ॥ (b) ನೀನಾದರೂ 'ಅನುಷ್ಟುಭಮನು ಶಂಸಯೀಯಮಾಣಂ' ಎಂಬೀ ಮಂತ್ರವನ್ನು ಉದಾಹರಿಸಿ ಯಾವ ಕಾರಣದಿಂದ ಈ ಪೂರ್ವ ಪಕ್ಷವನ್ನು ಮಾಡುವವನಾಗಿರುತ್ತಿಯೋ, ಆದುದರಿಂದ ನೀನು ಯಾವಕಾರಣದಿಂದ ನನಗೆ ಪ್ರಿಯನಾದ ಶಿಷ್ಯನೂ ಆಗಿರುತ್ತಿಯೋ, ಆದುದರಿಂದಲೂ ನಿನಗೆ ಉತ್ತರವನ್ನು ಹೇಳುವೆನು.

ಭಾ॥ **(a)** ಉಮೈವ ವಾಗಿತಿ ಪ್ರೋಕ್ತಾ ಸಾಽನುಷ್ಟುಬಭಿಮಾನಿನೀ । ಅಕೃತ್ಸ್ನಾ ಸಾ ತತೋ ನೈವ ಬ್ರಹ್ಮೇತ್ಯುಕ್ತಾ ಕಥಂಚನ ॥ ವಾಗಿಂದ್ರಿಯಾಭಿಮಾನಿನ್ಯಾಂ ನ ಹಿ ಬ್ರಹ್ಮವಚಃ ಕ್ವಚಿತ್ । **(b)** ವಾಯುನಾ ಪ್ರಾಣರೂಪೇಣ ಮನೋ ರೂಪಶಿವೇನ ಚ । ಅಭ್ಯಸ್ಯಮಾನೋಽನುಭವೇತ್ಪ್ರಮಾಸ್ವಾಚಾ ತು ನ ಕ್ವಚಿತ್ ॥

ಅ ॥ (a) ಪಾರ್ವತಿಯೇ 'ವಾಕ್' ಎಂದು ಹೇಳಲ್ಪಟ್ಟದ್ದಾಳೆ, ಆ ಪಾರ್ವತಿಯೇ ಅನುಷ್ಟುಪ್‌ಛಂದಸ್ಸಿಗೆ ಅಧಿಪತಿಯಾಗಿದ್ದಾಳೆ. ಅವಳು ಅಪೂರ್ಣವಾದ ವಿಷ್ಣುಪ್ರತಿಮಾಸ್ಥಾನೀ ಯಳು. ಆದುದರಿಂದಲೇ ಯಾವ ಪ್ರಕಾರದಿಂದಲೂ 'ಬ್ರಹ್ಮ' ಎಂದು ಹೇಳಲ್ಪಡುವುದಿಲ್ಲ. ವಾಗಿಂದ್ರಿಯಕ್ಕೆ ಅಭಿಮಾನಿನಿಯಾದ ಪಾರ್ವತಿಯಲ್ಲಿ ಎಲ್ಲಿಯೂ 'ಬ್ರಹ್ಮ' ಎಂಬೀ ವಚನವು ಇಲ್ಲ ವಷ್ಟೆ! (ಅಂತೂ ಪಾರ್ವತಿಯು ಸರ್ವಶಬ್ದಾರ್ಥವನ್ನು ಪ್ರತಿಪಾದಿಸುವ 'ಬ್ರಹ್ಮ' ಶಬ್ದದಿಂದ ವಾಚ್ಯಳು. ಸಂಪೂರ್ಣಪ್ರತಿಮೆಯಾಗಿದ್ದರೆ ಮುಖ್ಯಪ್ರಾಣನಂತೆ ಪಾರ್ವತಿಗೂ 'ಬ್ರಹ್ಮ'ವೆಂಬೀ ಹೆಸರು ಬರಬೇಕಾಗಿದ್ದಿತು). ॥ (b) ಪ್ರಾಣರೂಪನಾದ ವಾಯುವಿನಿಂದಲೂ, ಮನೋರೂ

ಪನಾದ ರುದ್ರನಿಂದಲೂ ಸರ್ವವಿಷಯುಗಳಲ್ಲಿಯೂ ಪ್ರೇರಿಸಲ್ಪಟ್ಟವನಾಗಿ ಪುರುಷನು ಸರ್ವ ವಿಷಯ.ಗಳನ್ನು ಅನುಭವಿಸುತ್ತಾನೆ. ವಾಗಭಿಮಾನಿನಿಯಾದ ಪಾರ್ವತಿಯಿಂದಲಾದರೂ (ಪ್ರೇರಿಸಲ್ಪಟ್ಟವನಾಗಿ) ಎಲ್ಲಿಯೂ (ವಿಷಯುಗಳನ್ನು ಅನುಭವಿಸಲಾರನು.)

**ಭಾ॥ (a)** ಅಭಿಮಾನೀ ಬೃಹತ್ಯಾಸ್ತು ವಾಯುರೇವ ಯತಃ ಪ್ರಭುಃ । ತಸ್ಮಾದೇಷಾ ಛಂದಸಾಂ ಹಿ ವರಿಷ್ಠಾ ಬೃಹತೀ ಸ್ಮೃತಾ ॥ **(b)** ಪೂರ್ಣೋ ಹಿ ವಾಯುರ್ದೇವಾನಾಂ ತಸ್ಮಾದ್ಬ್ರಹ್ಮೇತಿ ಚೋಚ್ಯತೇ । ಮಾಹಾತ್ಮ್ಯಾಧಿಕ್ಯತಶ್ಚೈವ ಬೃಹತೀತ್ಯೇವ ನಾಮ ತತ್ ॥ **(c)** ಅಂಗೇಭ್ಯ ಏವ ಸಂಭೂತಾನ್ಯನ್ಯಚ್ಛಂದಾಂಸಿ ಚಾಬ್ಜಜಾತ್ । ಮಧ್ಯಾತ್ತು ಬೃಹತೀ ಜಾತಾ ತಸ್ಮಾತ್ಸಾ ಮಧ್ಯಮುಚ್ಯತೇ ॥ **(d)** ಪಠ್ಯತೇ ತೇನ ಮಧ್ಯೇ ಸಾ ಛಂದಸಾಂ ಪ್ರವರಾ ಸತೀ । ಛಂದಾಂಸ್ಯನ್ಯಾನ್ಯಂಗವತ್ಸ್ಯುರ್ಮಧ್ಯವದ್ಬೃಹತೀ ಪರಾ ॥

ಅ ॥ (a) ಯಾವಕಾರಣದಿಂದ ಸರ್ವಸಮರ್ಥನಾದ ಮುಖ್ಯಪ್ರಾಣನೇ ಬೃಹತೀ ಛಂದಸ್ಸಿಕ್ಕೆ ಅಭಿಮಾನಿದೇವತೆಯೋ, ಆದುದರಿಂದ ಈ ಬೃಹತೀಛಂದಸ್ಸು ಎಲ್ಲಾ ಛಂದಸ್ಸುಗಳ ಮಧ್ಯದಲ್ಲಿ ಅತಿಶ್ರೇಷ್ಠವಾಗಿ ಸ್ಮೃತವಾಗಿದೆ. ॥ (b) ಆದುದರಿಂದ ಮುಖ್ಯಪ್ರಾಣನು ದೇವತೆಗಳಲ್ಲಿ ಗುಣಪರಿಪೂರ್ಣನಾಗಿರುತ್ತಾನೆ. ಆದುದರಿಂದ ಬ್ರಹ್ಮನೆಂದೂ ಹೇಳಲ್ಪಡುತ್ತಾನೆ. (ಬೃಹತೀಶಬ್ದವಾಚ್ಯನಾದ ಮುಖ್ಯಪ್ರಾಣನೇ ಅಭಿಮಾನಿಯಾಗಿ ಉಳ್ಳದ್ದಾದುದರಿಂದ) ಬೇರೆ ಛಂದಸ್ಸುಗಳಿಂದ ಹೆಚ್ಚು ಮಹಿಮೆಯುಳ್ಳದ್ದಾಗಿದೆ. ಆದುದರಿಂದಲೇ ಆ ಛಂದಸ್ಸು ಬೃಹತೀ ಎಂದೇ ಪ್ರಸಿದ್ಧವಾಗಿಯದೆ. ॥ (c) ಬೇರೆ ಛಂದಸ್ಸುಗಳಾದರೂ ಬ್ರಹ್ಮದೇವರ ದೆಸೆಯಿಂದ ಬೇರೆ ಅಂಗಗಳಿಂದಲೇ ಹುಟ್ಟಿದ್ದಾಗಿವೆ. ಬೃಹತಿಯಾದರೂ ಮಧ್ಯಪ್ರದೇಶದಿಂದಲೇ ಹುಟ್ಟಿದ್ದು. ಆದುದರಿಂದಲೇ ಆ ಬೃಹತಿಯು ಮಧ್ಯವೆಂದು ಹೇಳಲ್ಪಡುತ್ತದೆ. (d) ಆದುದರಿಂದ ಆ ಬೃಹತಿಯು ಛಂದಸ್ಸುಗಳ ಮಧ್ಯದಲ್ಲಿ ಶ್ರೇಷ್ಠವಾದದ್ದಾಗಿ (ತೃಚಾಶೀತಿತ್ರಯದಲ್ಲಿ) ಮಧ್ಯದಲ್ಲಿ ಹೇಳಲ್ಪಡುತ್ತದೆ. ಬೇರೆ ಛಂದಸ್ಸುಗಳು ಅಂಗಗಳಂತೆಯೂ, ಶ್ರೇಷ್ಠವಾದ ಬೃಹತಿಯು ಮಧ್ಯಪ್ರದೇಶದಂತೆಯೂ ಆಗುತ್ತವೆ.

**ಭಾ॥ (a)** ಸಪ್ತ ಚ್ಛಂದಾಂಸಿ ಚೈವಂ ಹಿ ಪ್ರತಿಮಾ ವೈಷ್ಣವೀ ಮತಾ । **(b)** ಗಾಯತ್ರೀದೇವತಾತ್ವಂ ಚ ಲಕ್ಷ್ಮ್ಯಾ ಯತ್ರಾಭಿಧೀಯತೇ ॥ ಬೃಹತೀ ದೇವತಾ ತತ್ರ ಭಗವಾನ್ಪುರುಷೋತ್ತಮಃ । **(c)** ಆಧಿಕ್ಯಂ ಛಂದಸಾಂ ಯತ್ರ ಗಾಯತ್ರ್ಯಾಸ್ತು ವಿವಕ್ಷಿತಂ ॥ ತತ್ರ ತತ್ಪುತ್ರಕೋ ವಾಯುರ್ಬೃಹತೀ ದೇವತಾ ಮತಾ । **(d)** ಋಚಾಮಾಧಿಕ್ಯಯೋಗಾರ್ಥಂ ನಾಂಗೀಕರ್ತವ್ಯಮತ್ರ ತತ್ ॥ ಪ್ರಧಾನತ್ವಾದ್ಬೃಹತ್ಯಾಸ್ತು ಜಗತ್ಯಾದ್ಯಂ ನ ಯುಜ್ಯತೇ ॥

ಅ ॥ (a) ಈ ಪ್ರಕಾರವಾಗಿ, (1) ಗಾಯತ್ರೀ, (2) ಉಷ್ಣಿಕ್, (3) ಅನುಷ್ಟುಪ್, (4) ಬೃಹತೀ, (5) ಪಙ್ಕ್ತಿ, (6) ತ್ರಿಷ್ಟುಪ್, (7) ಜಗತೀ ಎಂಬೀ ಏಳು (೭) ಛಂದಸ್ಸುಗಳು ವಿಷ್ಣುಸಂಬಂಧಿಯಾದ ಪ್ರತಿಮೆಯೆಂದು ಸಮ್ಮತವಾಗಿದೆ. (b) (ಮುಖ್ಯಪ್ರಾಣನು ಅಭಿಮಾ

ನಿಯಾದುದರಿಂದ ಬೃಹತೀಛಂದಸ್ಸು ಉತ್ತಮವಾಗಿದ್ದರೆ, ಗಾಯತ್ರೀ ಛಂದಸ್ಸಿಗೆ ಮಹಾಲಕ್ಷ್ಮಿಯು ಅಭಿಮಾನಿಯಾದ ಕಾರಣ, ಬೃಹತೀಛಂದಸ್ಸುಗಿಂತಲೂ ಗಾಯತ್ರೀ ಛಂದಸ್ಸಿಗೇನೇ ಶ್ರೇಷ್ಠತ್ವವು ಬರಬೇಕಾಗುವುದು ಎಂದರೆ-) ಎಲ್ಲಿ ಮಹಾಲಕ್ಷ್ಮಿಗೆ ಗಾಯತ್ರಿಯು ಅಭಿಮಾನಿತನವು ಹೇಳಲ್ಪಡುತ್ತದೋ, ಅಲ್ಲಿ ಕ್ಷರಾಕ್ಷರ ಪುರುಷರಿಂದ ಶ್ರೇಷ್ಠನಾದ, ಪೂಜ್ಯನಾದ ಶ್ರೀ ಪರಮಾತ್ಮನೇ ಬೃಹತೀಛಂದಸ್ಸಿಗೆ ದೇವತೆಯು. ॥ (ಅಂತೂ ಗಾಯತ್ರಿಗೆ ಲಕ್ಷ್ಮಿಯು ಅಭಿಮಾನಿನಿಯಾಗುವಾಗ ಶ್ರೀ ಪರಮಾತ್ಮನೇ ಬೃಹತೀಛಂದಸ್ಸಿಗೆ ನಿಯಾಮಕನು. ಸರ್ವರೀತಿಯಿಂದಲೂ ಬೃಹತಿಯೇ ಶ್ರೇಷ್ಠವಾದುದರಿಂದ ಅದನ್ನೇ ಸ್ತುತಿಸತಕ್ಕದು). (c) ('ಗಾಯತ್ರೀ ಛಂದಸಾಮಹಂ' ಇತ್ಯಾದಿ ಪ್ರದೇಶಗಳಲ್ಲಿ ಗಾಯತ್ರಿಯು ಎಲ್ಲಾ ಛಂದಸ್ಸುಗಳ ಮಧ್ಯದಲ್ಲಿ ಶ್ರೇಷ್ಠವೆಂದು ಸ್ಪಷ್ಟವಾಗಿ ಹೇಳಿರುವುದರಿಂದ ಶ್ರೀ ಹರಿಯು ಬೃಹತೀ ಛಂದಸ್ಸಿಗೆ ನಿಯಾಮಕನೆಂದಾದರೆ ಲಕ್ಷ್ಮೀದೇವಿಯಿಂದ ನಿಕೃಷ್ಟನು ಆಗಬೇಕಾಯಿತು. ಅಲ್ಲದೆ ಗಾಯತ್ರಿಯನ್ನೇ ಸ್ತುತಿಸಬೇಕು ಎಂದೂ ಪ್ರಾಪ್ತವಾಯಿತೆಂದರೆ-) ಎಲ್ಲಿ ಛಂದಸ್ಸುಗಳ ಮಧ್ಯದಲ್ಲಿ ಗಾಯತ್ರಿಗಾದರೂ ಉತ್ತಮತ್ವವು ಹೇಳಲ್ಪಡುತ್ತದೋ ಅಲ್ಲಿ (ಆ ವಾಕ್ಯದಲ್ಲಿ) ಲಕ್ಷ್ಮೀದೇವಿಯ ಮಗನಾದ ಮುಖ್ಯಪ್ರಾಣನೇ ಬೃಹತೀಛಂದಸ್ಸಿಗೆ ಅಭಿಮಾನಿಯೆಂದು ತಿಳಿಯತಕ್ಕದು. ॥ (d) (ಈ ರೀತಿಯಾಗಿ ಅಂಗೀಕರಿಸಿದರೆ ಶ್ರೀಹರಿಗೆ ಗಾಯತ್ರಿಯಿಂದ ನಿಕೃಷ್ಟತ್ವವು ಬಾರದೆ ಇದ್ದರೂ ಬೃಹತೀ ಛಂದಸ್ಸಿಗಿಂತ ಗಾಯತ್ರಿಗೆ ಶ್ರೈಷ್ಠ್ಯವು ಇದ್ದುದರಿಂದ ಗಾಯತ್ರಿಯನ್ನೇ ಸ್ತುತಿಸಬೇಕಾಯಿತು. ಎಂದರೆ- ) ಇಲ್ಲಿ ಋಕ್ಕುಗಳಿಗೆ ಉತ್ತಮತ್ವವನ್ನು ಕೂಡಿಸುವುದಕ್ಕೋಸ್ಕರ ಗಾಯತ್ರಿಯನ್ನು ಸ್ತುತಿಸುವುದು ಅಂಗೀಕರಿಸಬಾರದು. ಬೃಹತೀಗೇನೇ ಉತ್ತಮತ್ವವು ಇದ್ದುದರಿಂದ ಜಗತೀಛಂದಸ್ಸು ಮೊದಲಾದುದು ಯುಕ್ತವಾಗುವುದಿಲ್ಲ.

ತಾ ॥ ಗಾಯತ್ರಿಯನ್ನು ಸ್ತುತಿಸದೆ ಬ್ರಹತೀಸಹಸ್ರವನ್ನು ಸ್ತುತಿಸಿದರೆ ಐದುನೂರು ೫೦೦) ಗಾಯತ್ರಿಗಳು ಆಗುತ್ತವೆಯೆಂದು ಹೆಚ್ಚಿಗೆ ಋಕ್ಕನ್ನು ಕೂಡಿಸುವುದಕ್ಕೋಸ್ಕರ ಗಾಯತ್ರಿಯನ್ನು ಸ್ತುತಿಸಬಾರದು. ಹೆಚ್ಚಿಗೆ ಋಕ್ಕುಗಳು ಲಾಭವಾಗುವುದಕ್ಕೋಸ್ಕರ ಬೃಹತೀಸಹಸ್ರವನ್ನು ಸ್ತುತಿಸುವುದಾದರೆ ಜಗತಿ ಮೊದಲಾದ ಛಂದಸ್ಸುಗಳನ್ನು ಸ್ತುತಿಸಿದರೆ ಬೃಹತಿಯಿಂದಲೂ, ಹೆಚ್ಚಿಗೆ ಋಕ್ಕುಗಳು ಸಿಗುವುದರಿಂದ ಜಗತ್ಯಾದಿಗಳನ್ನೇ ಸ್ತುತಿಸಬೇಕಾಯಿತು ಎಂದರೆ- ಹೆಚ್ಚಿಗೆ ಋಕ್ಕುಗಳು ಸಿಗುವುದಕ್ಕೋಸ್ಕರವೇ ಬೃಹತಿಯನ್ನು ಸ್ತುತಿಸುವುದು ಎಂದು ನಾವ್ವೇ ಹೇಳುವುದಿಲ್ಲ. ಮಧ್ಯದೇಹದಿಂದ ಹುಟ್ಟಿದ ಪ್ರಯುಕ್ತವೂ, ತ್ರಿಚಾಶೀತಿತ್ರಯದ ಮಧ್ಯದಲ್ಲಿ ಹೇಳಿರುವುದರಿಂದಲೂ, ಏಳು ಛಂದೋರೂಪವಾದ ವಿಷ್ಣುಪ್ರತಿಮೆಗೆ ಮಧ್ಯಾಂಗವಾದುದರಿಂದಲೂ, ಅವಶ್ಯವಾಗಿ ಉಪಾಸನೆಮಾಡಲಿಕ್ಕೆ ಯೋಗ್ಯಗಳಾದ ಎಪ್ಪತ್ತ ಎರಡು ಸಹಸ್ರ ೭೨೦೦೦) ಅಕ್ಷರಗಳಿಂದ ಕೂಡಿರುವುದರಿಂದಲೂ, ಜೀವೋತ್ತಮರಾದ ಮುಖ್ಯಪ್ರಾಣದೇವರೇ ಅಧಿಪತಿಯಾಗಿರುವುದರಿಂದಲೂ, ಬೃಹತಿಯೇ ಎಲ್ಲಾ ಛಂದಸ್ಸುಗಳಿಂದಲೂ ಶ್ರೇಷ್ಠವಾದುದರಿಂದ ಬೃಹತೀಸಹಸ್ರವನ್ನೇ ಸ್ತುತಿಸಬೇಕಲ್ಲದೆ ಜಗತಿ ಮೊದಲಾದುವನ್ನು ಸ್ತುತಿಸಬಾರದು.

ನಾ॥ (a) ಸಂಪಾದನಾದ್ಬೃಹತ್ಯಾಸ್ತು ಮುಕ್ತೋ ಭವಿತುಮೀಶ್ವರಃ । ಸ್ಯಾತ್ಪ್ರಸಿದ್ಧಃ ಸುಕೀರ್ತಿಶ್ಚ ಚ್ಛಂದೋಮೃತ್ಯುರ್ಗುಣಾಧಿಕಃ ॥ (b) ಇತಿ ಪ್ರಾಹ ಸ್ವಯಂ ವಿಷ್ಣುರ್ಮಹಿದಾಸಾಭಿಧಃ ಪ್ರಭುಃ । ಇತ್ಯಾದಿ ಚ ॥ (c) ಇತೋಽನ್ಯತ್ಸತ್ಕ್ರಿಮಿತ್ಯಾಹುರ್ನಾನಾಚ್ಛಂದಸ್ತ್ವವಾದಿನಃ । (d) ಅನ್ಯತ್ಸದ್ರೂಪಮಿತ್ಯಾಹುಸ್ತ್ರಿಷ್ಟುಬ್ವಾದಿನ ಏವ ತೇ ॥

ಅ ॥ (a) ಬೃಹತಿಯ ಸಂಪಾದನೆಯಿಂದಲಾದರೂ ಮುಕ್ತನಾಗಲಿಕ್ಕೂ ಸಮರ್ಥನಾಗುವನು. ಅಲ್ಲದೆ (ಎಲ್ಲಾ ದಿಕ್ಕಿನಲ್ಲಿಯೂ) ಅತಿ ಪ್ರಸಿದ್ಧನೂ, ಒಳ್ಳೇ ಕೀರ್ತಿಯುಳ್ಳವನೂ, ಸ್ವೇಚ್ಛಾನುಸಾರವಾದ ಮರಣವುಳ್ಳವನೂ, ಹೆಚ್ಚು ಗುಣಗಳುಳ್ಳವನೂ ಆಗುವನು. ॥ (b) ಈ ಪ್ರಕಾರವಾಗಿ ಮಹಿದಾಸನೆಂದು ಹೆಸರುಳ್ಳವನೂ, ಸರ್ವಸಮರ್ಥನೂ ಆದ ಶ್ರೀ ಹರಿಯು ತಾನಾಗಿಯೇ (ತನ್ನ ಪ್ರಿಯಶಿಷ್ಯನಾದ ಐತರೇಯನನ್ನು ಕುರಿತು) ಉತ್ತರವನ್ನು ಕೊಟ್ಟನು. ಇದೇ ಮೊದಲಾದ ಪ್ರಮೇಯವೂ ನಿರೂಪಿಸಲ್ಪಟ್ಟಿದೆ. ॥ (c) ಅನೇಕ ಛಂದಸ್ಸುಗಳ ಸಹಸ್ರವನ್ನೇ ಸ್ತುತಿಸಬೇಕೆಂದು ಹೇಳುವವರು ನಾನಾಛಂದಸ್ಸುಗಳನ್ನು ಸ್ತುತಿಸುವುದಕ್ಕಿಂತ ಬೇರೆಯಾಗಿ ಪ್ರಶಸ್ತವಾದುದು ಯಾವುದು ಅದೆ. (ಯಾವುದೂ ಇಲ್ಲ.! ಕಾರಣ ಪ್ರಶಸ್ತವಾದುದು ಬೇರೆ ಇಲ್ಲದಿರುವುದರಿಂದ ಇದನ್ನೇ ಸ್ತುತಿಸತಕ್ಕದು) ಎಂದು ಹೇಳುತ್ತಾರೆ. ॥ (d) ಆ ಪ್ರಸಿದ್ಧರಾದ ಕೆಲವರು ಅನೇಕ ಛಂದಸ್ಸನ್ನು ಸ್ತುತಿಸುವಗಿಂತ, ಬೇರೆಯಾದ ಪ್ರಶಸ್ತವಾದ ಸ್ವರೂಪವುಳ್ಳ ತ್ರಿಷ್ಟುಪ್‌ಸಹಸ್ರವನ್ನೇ ಹೇಳುತ್ತೇವೆ ಎಂದೇ ಹೇಳುತ್ತಾರೆ.

ಭಾ॥ (a) ಐಂದ್ರ್ರಂ ಪ್ರಾಣಂ ಪರಮೇಶ್ವರಸಹಿತಂ ವಾಯುಂ । (b) ಪ್ರಾಣೇನ ಮನಸಾ ಚ । ಅಭಿಇಸ್ಯಮಾನೋಽಭ್ಯಸ್ಯಮಾನಃ ॥ ತೃತೀಯೋಽತಿಶಯ ಇತಿ ಸೂತ್ರಾದಕಾರಸ್ಯೇಕಾರಃ । (c) ಮಥನಾನ್ಮಿಥಿಲೋ ಜಾತಃ ಸಹನಾತ್ಸಿಂಹ ಉಚ್ಯತೇ । ಹತ್ವೀ ದಸ್ಯೂನಿತ್ಯಾದಿವಚ್ಚ ॥ (d) ಅಭ್ಯಸ್ಯಮಾನೋಽಭಿತಃ ಕ್ಷಿಪ್ಯಮಾಣೋ· ವಿಷಯೇಷು ಬಹುಶಃ । ಕೃತ್ಸ್ನ ಆತ್ಮಾ ಕೃತ್ಸ್ನಪ್ರತಿಮಾ ವಿಷ್ಣೋಃ ॥ (e) ಏಕಾಽಪಿ ಪ್ರತಿಮಾ ವಿಷ್ಣೋರ್ಬೃಹತೀ ಛಂದಸಾಂ ವರಾ । ಅನ್ಯಚ್ಛಂದೋಽಭಿಧಾ ಯತ್ಸ್ಯಾತ್ಪ್ರತಿಮಾ ಮಧ್ಯಮೈವ ತದಿತಿ ಚ ॥ (f) ಏವಂ ಬ್ರಹ್ಮಾದಿಭಿಃ ಶ್ರೂಯಮಾಣಾನುಷ್ಟುಬಪಿ ಬೃಹತ್ಯಾ ಅಂಗಮಿತಿ ಬೃಹತ್ಯಾ ಏವಾಧಿಕ್ಯಮುಕ್ತಂ ಭವತಿ ॥ ೫ ॥

ಅ ॥ (a) 'ಐಂದ್ರ್ರಂ ಪ್ರಾಣಂ' ಅಂದರೆ ಪರಮೈಶ್ವರ್ಯ ಸಂಪನ್ನನಾದ, ಹಂಸರೂಪಿಯಾದ ಶ್ರೀ ಹರಿಯಿಂದೊಡಗೂಡಿದ ಮುಖ್ಯಪ್ರಾಣನನ್ನು ॥ (b) ಮುಖ್ಯಪ್ರಾಣನಿಂದಲೂ, ಮನೋಽಭಿಮಾನಿಯಾದ ರುದ್ರನಿಂದಲೂ ॥ 'ಅಭಿ ಇಸ್ಯಮಾನಃ' ಅಂದರೆ ಅಭ್ಯಸ್ಯಮಾನಃ । 'ತೃತೀಯೋಽತಿಶಯೇ' ಅತಿಶಯವೆಂಬೀ ಅರ್ಥದಲ್ಲಿ, ಮೂರನೇ ವರ್ಣವು ಅಂದರೆ ಯಾವ ಅಕ್ಷರವು ಪ್ರಾಪ್ತವಾಗುವುದೋ ಅದರ ಮೂರನೇವರ್ಣವು (ಬರುತ್ತದೆ.) ಎಂಬೀ ಸೂತ್ರದಿಂದ 'ಅಸ್ಯಮಾನಃ' ಎಂಬಲ್ಲಿದ್ದ ಅಕಾರಕ್ಕೆ, 'ಇಸ್ಯಮಾನಃ' ಎಂಬಲ್ಲಿದ್ದ ಇಕಾರವು ಬಂದಿರುತ್ತದೆ. ॥ (c) ಮಥನದಿಂದ 'ಮಿಥಿಲನು' ಆದನು. ಸರ್ವವನ್ನು ಸಹಿಸಿಕೊಳ್ಳುವುದರಿಂದ 'ಸಿಂಹ' ಎಂದು ಹೇಳಲ್ಪಡುತ್ತಾನೆ. (ಇಲ್ಲಿ ಎರಡು ಪ್ರದೇಶದಲ್ಲಿಯೂ ಅಕಾರಕ್ಕೆ ಇಕಾರವು ಬಂದಿರುತ್ತದೆ.) ಕಳ್ಳರನ್ನು ಕೊಂದು ಇತ್ಯಾದಿಯಂತೆ. (ಇಲ್ಲಿ 'ಹತ್ವಾ' ಎಂಬೀ ಆಕಾರದ ಬದಲಿಗೆ 'ಹತ್ವೀ' ಎಂದು ಆಕಾರದ ಮೂರನೇದ್ದಾದ ಈಕಾರವು ಬಂದಿರುತ್ತದೆ. ॥ (d) ಅಂತೂ 'ಅಭ್ಯಸ್ಯಮಾನಃ' ಅಂದರೆ ಸುತ್ತಮುತ್ತಲೂ ಎಲ್ಲಾ ವಿಷಯಗಳಲ್ಲಿಯೂ ಅತಿಶಯವಾಗಿ ಪ್ರೇರಿಸಲ್ಪಟ್ಟವನಾಗಿ । 'ಕೃತ್ಸ್ನ ಆತ್ಮಾ' ಅಂದರೆ ಶ್ರೀ ಹರಿಯ ಪೂರ್ಣಪ್ರತಿಮೆಯು ಎಂದರ್ಥವು. ॥ (e) ಯಾವ ಕಾರಣದಿಂದ ಬೇರೆ ಛಂದಸ್ಸುಗಳೆಂದು ಹೆಸರುಳ್ಳ ಪ್ರತಿಮೆಯು ಮಧ್ಯಮವೇ ಆಗಿಯದೋ, ಆದುದರಿಂದ 'ಬೃಹತೀ' ಎಂಬ ಒಂದೇ ವಿಷ್ಣುವಿನ ಪ್ರತಿಮೆಯು ಅನೇಕ ಪ್ರತಿಮೆಗಳಾದ ಛಂದಸ್ಸುಗಳ ಸಕಾಶದಿಂದ ಶ್ರೇಷ್ಠವಾಗಿದೆ. ಅಥವಾ ಛಂದಸ್ಸುಗಳ ಮಧ್ಯದಲ್ಲಿ

ೃಹತಿಯೊಂದೇ ಶ್ರೀ ಹರಿಗೆ ಮುಖ್ಯಪ್ರತಿಮೆಯು. ಬೇರೆ ಛಂದಸ್ಸೆಂದು ಹೆಸರುಳ್ಳ ಯಾವ ಪ್ರತಿಮೆಯು ಇದೆಯೋ, ಅದು ಮಧ್ಯಮವೇ ಸರಿ. ಹೀಗೂ ಉಕ್ತವಾಗಿದೆ. ॥ (f) (ಹಾಗಾ ದರೆ ಬ್ರಹ್ಮಾದಿಗಳು ಅನುಷ್ಟುಪನ್ನು ಕೇಳಿಕೊಂಡು ಇರುವುದರಿಂದ ಅದು ಶ್ರೇಷ್ಠವೆಂದು 'ಅನು ಷ್ಟುಭಮನುಚಚರ್ಯಾಣಾಂ' ಎಂಬೀ ಪ್ರಮಾಣವನ್ನು ಉದಾಹರಿಸಿ, ಶಿಷ್ಯನು ಶಂಕಿಸಿ ದ್ದಕ್ಕೆ ಏನು ಉತ್ತರವನ್ನು ಕೊಟ್ಟಹಾಗಾಯಿತು? ಪ್ರಮಾಣಕ್ಕೂ ಏನು ತಾತ್ಪರ್ಯವನ್ನು ಹೇಳಿ ದಂತೆಯೇ ಆಯಿತು? ಅಂದರೆ-) ಬ್ರಹ್ಮ ರುದ್ರಾದಿಗಳಿಂದ ಕೇಳಲ್ಪಡತಕ್ಕ ಅನುಷ್ಟುಪೂ ಕೂಡ ಪೂರ್ವೋಕ್ತಪ್ರಕಾರವಾಗಿ, ಅಂದರೆ ಅನುಷ್ಟುಪ್ ಅಪೂರ್ಣಪ್ರತಿಮೆಯು, ಬೃಹತಿಯು ಪೂರ್ಣ ಪ್ರತಿಮೆಯು. ಇದೇ ಮೊದಲಾದ ಪ್ರಕಾರಗಳಿಂದ ಬೃಹತಿಗೇನೆ ಅಂಗಭೂತವಾಗಿದೆಂದು ಬೃಹತಿ ಗೇನೇ ಅಧಿಕ್ಯವು ಹೇಳಲ್ಪಟ್ಟದ್ದಾಗಿ ಆಗುತ್ತದೆ.

ತಾ ॥ ಅನುಷ್ಟುಪಿಗೆ ಅವರಳಾದ ಪಾರ್ವತಿಯು ಅಭಿಮಾನಿಯಾಗಿದ್ದಾಳೆ. ಇತರ ಅವ ಯವಗಳಿಂದ ಹುಟ್ಟಿದ್ದಾಗಿರುತ್ತದೆ. ಛಂದೋರೂಪ ಪ್ರತಿಮೆಗೂ ಅಂಗಭೂತವಾಗಿದೆ. ಆದಕಾ ರಣ ಅನುಷ್ಟುಪ್, ಬೃಹತಿಗೆ ಅಂಗವೇ ಆಗಿದೆ. ಬೃಹತಿಯು ವಾಯುವೇ ಅಭಿಮಾನಿಯಾಗಿ ಉಳ್ಳದ್ದಾಗಿರುತ್ತದೆ. ಅಂಗಿಯೂ ಆಗಿದೆ. ಕಾರಣ ಇದೇ ಶ್ರೇಷ್ಠವು ಎಂದು ಸಮಾಧಾನವು ಹೇ ಳಲ್ಪಟ್ಟಿತು. ಮಂತ್ರಕ್ಕೂ ಇದೇ ತಾತ್ಪಯುವು ಎಂದು ಮಹಿದಾಸದೇವರು ಉತ್ತರವನ್ನು ಕೊಟ್ಟರು. ॥ ೫ ॥

೩೦ ॥ ತದ್ವಾ ಇದಂ ಬೃಹತೀಸಹಸ್ರಂ ಸಂಪನ್ನಂ ತಸ್ಯ ವಾ ಏತಸ್ಯ ಬೃಹತೀ ಸಹಸ್ರಸ್ಯ ಸಂಪನ್ನಸ್ಯೈಕಾದಶಾನುಷ್ಟುಭಾಂ ಶತಾನಿ ಭವಂತಿ ಪಂಚ ವಿಂಶತಿಶ್ಚಾನುಷ್ಟುಭ ಆತ್ತಂ ವೈ ಭೂಯಸಾ ಕನೀಯಸ್ತದುಕ್ತಮೃ ಷಿಣಾ ವಾಚಮಷ್ಟಾಪದೀಮಹಮಿತ್ಯಷ್ಟೌ ಹಿ ಚತುರಕ್ಷರಾಣಿ ಭವಂತಿ ನವಸ್ರಕ್ತಿಮಿತಿ ಬೃಹತೀಸಂಪದ್ಯಮಾನಾ ನವಸ್ರಕ್ತ್ಯೃತಸ್ಪೃ ಶಮಿತಿ ಸತ್ಯಂ ವೈ ವಾಗೃಚಾ ಸ್ಪೃಷ್ಟೇಂದ್ರಾತ್ಪರಿತನ್ವಂ ಮಮ ಇತಿ ತದ್ಯದೇವೈತದ್ಬೃಹತೀಸಹಸ್ರಮನುಷ್ಟುಪ್ಸಂಪನ್ನಂ ಭವತಿ ತಸ್ಮಾತ್ತ ದ್ಯೆಂದ್ರಾತ್ಪ್ರಾಣಾದ್ಬೃಹತ್ಯೈ ವಾಚಮನುಷ್ಟುಭಂ ತನ್ವಂ ಸನ್ನಿರ್ಮಿ ಮೀತೇ ಸ ವಾ ಏಷ ವಾಚಃ ಪರಮೋ ವಿಕಾರೋ ಯದೇತನ್ಮಹ ದುಕ್ಥಂ ತದೇತತ್ಪಂಚವಿಧಂ ಮಿತಮಮಿತಂ ಸ್ವರಃ ಸತ್ಯಾನೃತೇ ಇತ್ಯೃಗ್ಗಾಥಾ ಕುಂಬ್ಯಾ ತನ್ಮಿತಂ ಯಜುರ್ನಿಗದೋ ವೃಥಾ ವಾಕ್ತ ದಮಿತಂ ಸಾಮಾಥೋ ಯಃ ಕಶ್ಚ ಗೇಷ್ಣಃ ಸ ಸ್ವರ ಓಮಿತಿ ಸತ್ಯಂ ನೇತ್ಯನೃತಂ ತದೇತತ್ಪುಷ್ಪಫಲಂ ವಾಚೋ ಯತ್ಸತ್ಯಂ ಸಹೇಶ್ವರೋ ಯಶಸ್ವೀ ಕಲ್ಯಾಣಕೀರ್ತಿರ್ಭವಿತೋಃ ಪುಷ್ಪಂ ಹಿ ಫಲಂ ವಾಚಃ ಸತ್ಯಂ ವದತ್ಯಥೈತನ್ಮೂಲಂ ವಾಚೋ ಯದನೃತಂ ತದ್ಯಥಾ ವೃಕ್ಷ ಆವಿರ್ಮೂಲಃ ಶುಷ್ಯತಿ ಸ ಉದ್ವರ್ತತ ಏವಮೇವಾನೃತಂ ವದ ನ್ನಾವಿರ್ಮೂಲಮಾತ್ಮಾನಂ ಕರೋತಿ ಸ ಶುಷ್ಯತಿ ಸ ಉದ್ವರ್ತತೇ ತಸ್ಮಾದನೃತಂ ನ ವದೇದ್ದಯೇತತ್ವೇನೇನ ಪರಾಗ್ವಾ ಏತದ್ರಿಕ್ತಮ ಕ್ಷರಂ ಯದೇತದೋಮಿತಿ ತದ್ಯತ್ಕಿಂಚೋಮಿತ್ಯಾಹಾತ್ರೈವಾಸ್ಮೈ ತ

ದ್ರಿಚ್ಯತೇ ಸ ಯತ್ಸರ್ವನೋಂ ಕುರ್ಯಾಪ್ರಿಂಚ್ಯಾದಾತ್ಮಾನಂ ಸ ಕಾ-ಮೇಭ್ಯೋ ನಾಲಂ ಸ್ಯಾದಥೈತತ್ಪೂರ್ಣಮಭ್ಯಾತ್ಮಂ ಯನ್ನೇತಿ ಸ ಯತ್ಸರ್ವನ್ನೇತಿ ಬ್ರೂಯಾತ್ಪಾಪಿಕಾಸ್ಯ ಕೀರ್ತಿರ್ಜಾಯೇತ ಸ್ತೈನಂ ತತ್ರೈವ ಹನ್ಯಾತ್ತಸ್ಮಾತ್ಕಾಲ ಏವ ದದ್ಯಾತ್ಕಾಲೇನ ದದ್ಯಾತ್ತತ್ಸತ್ಯಾನೃತೇ ಮಿಥುನೀಕರೋತಿ ತಯೋರ್ಮಿಥುನಾತ್ಪ್ರಜಾಯತೇ ಭೂ-ಯಾನ್ಭವತಿ ಯೋ ವೈ ತಾಂ ವಾಚಂ ವೇದ ಯಸ್ಯಾ ಏಷ ವಿಕಾರಃ ಸ ಸಂಪ್ರತಿವಿದಕಾರೋ ವೈ ಸರ್ವಾ ವಾಕ್ ಸೈಷಾ ಸ್ಪರ್ಶೋಽಷ್ಮಭಿರ್ವ್ಯಜ್ಯಮಾನಾ ಬಹ್ವೀ ನಾನಾರೂಪಾ ಭವತಿ ತಸ್ಯೈ ಯದ ಪಾಂಶು ಸ ಪ್ರಾಣೋಽಥ ಯದುಚ್ಚೈಸ್ತಚ್ಛರೀರಂ ತಸ್ಮಾತ್ತತ್ತಿರ ಇವ ತಿರ ಇವ ಹ್ಯಶರೀರಮಶರೀರೋ ಹಿ ಪ್ರಾಣೋಽಥ ಯದುಚ್ಚೈಸ್ತಚ್ಛರೀರಂ ತಸ್ಮಾತ್ತದಾವಿರಾಸಿರ್ಹಿ ಶರೀರಂ ॥ ೬ ॥

ಅ ॥ ತತ್ ಇದಂ ಬೃಹತೀಸಹಸ್ರಂ=ಆ ಈ ಬೃಹತೀಸಹಸ್ರವು, ವೈ=ಹಿಂದೆ ಹೇಳಿದ ರೀತಿಯಿಂದ, ಸಂಪನ್ನಂ=ಸಂಪಾದಿಸಲ್ಪಡುತ್ತದೆ. ವೈ ಸಂಪನ್ನಸ್ಯ ತಸ್ಯ ಏತಸ್ಯ ಬೃಹತೀಸಹಸ್ರಸ್ಯ=ಪೂರ್ವೋಕ್ತಪ್ರಕಾರವಾಗಿ ಸಂಪಾದಿಸಲ್ಪಟ್ಟ ಆ ಈ ಬೃಹತೀಸಹಸ್ರಕ್ಕೆ, (ಅಂದರೆ ಹಿಂದೆ ಹೇಳಿದ ರೀತಿಯಿಂದ ಬೃಹತೀಸಹಸ್ರವನ್ನು ಸಂಪಾದಿಸುತ್ತಿರಲು) ಅನುಷ್ಟುಭಾಂ=ಅನುಷ್ಟುಪ್ ಛಂದಸ್ಸುಗಳ, ಏಕಾದಶ ಶತಾನಿ=ಹನ್ನೊಂದು ನೂರುಗಳು, ಪಂಚವಿಂಶತಿಃ ಅನುಷ್ಟುಭಶ್ಚ=ಇಪ್ಪತ್ತೈದು ಅನುಷ್ಟುಪ್ ಛಂದಸ್ಸುಗಳೂ ಕೂಡ, ಭವಂತಿ=ಆಗುತ್ತವೆ. ಭೂಯಸಾ ದೊಡ್ಡ ಪದಾರ್ಥದಿಂದ, ಕನೀಯಃ=ಚಿಕ್ಕವಸ್ತುವು, ಆತ್ತಂ ವೈ=ಸ್ವೀಕರಿಸಲ್ಪಡುತ್ತದೆಷ್ಟೇ! (ಅಂದರೆ ಅಂತರ್ಭೂತವಾಗಿ ಮಾಡಲ್ಪಡುತ್ತದೆ.) (ಅಂತೂ ಬೃಹತೀಛಂದಸ್ಸಿಗೆ ೩೬ ಅಕ್ಷರಗಳಾದುದರಿಂದ, ಅನುಷ್ಟುಪ್ ಛಂದಸ್ಸಿಗೆ ೩೨ ಅಕ್ಷರಗಳು ಆಗಿರುವುದರಿಂದ, ಅನುಷ್ಟುಪ್ ಛಂದಸ್ಸುಗಳು ಹೆಚ್ಚುಸಂಖ್ಯೆಯುಳ್ಳವುಗಳಾಗ್ಯೂ, ಬೃಹತೀಛಂದಸ್ಸುಳ್ಳ ಋಕ್ಕುಗಳ ಸಹಸ್ರದಲ್ಲಿಯೇ ಅಂತರ್ಭೂತಗಳಾಗುತ್ತವೆ. ಕಾರಣ ಬೃಹತೀಸಹಸ್ರವನ್ನೇ ಸಂಪಾದಿಸತಕ್ಕುದು.) ಅಥವಾ 'ತದ್ವೈ ಇದಂ' ಇತ್ಯಾದಿ ಮೂಲಕ್ಕೆ ಮೇಲೆ ಹೇಳುವ ಅರ್ಥವೂ ಯುಕ್ತವಾಗುವುದು. ಹಿಂದೆ ಹೇಳಿದ ರೀತಿಯಿಂದ ಅನುಷ್ಟುಪ್ ಛಂದಸ್ಸಿನಿಂದಾಗಲೀ ಬೃಹತೀಸಹಸ್ರವು ಸಂಪಾದಿಸಲ್ಪಡುತ್ತದೆ. ಪುನಃ ೧೧೨೫ ಅನುಷ್ಟುಪ್ ಛಂದಸ್ಸಿನಿಂದ ಸಂಪನ್ನವಾದರೆ ಆಗ ಶ್ರೀ ಹರಿಗೆ ಬೃಹತಿಗೆ ಅಭಿಮಾನಿಯಾದ ಪ್ರಾಣನೆಂಬುವುದು, ಅನುಷ್ಟುಬಿಗೆ ಅಭಿಮಾನಿಯಾದ ಉಮಾ ಯೆಂಬುವುದು ಹೀಗೆ ಎರಡು ಪ್ರತಿಮೆಯು ಸಂಪಾದಿಸಲ್ಪಡುತ್ತದೆ. ಅಂತೂ ಮುಖ್ಯಪ್ರಾಣನಿಗೂ 'ಬೃಹತೀ ಅನುಷ್ಟುಪ್' ಎಂಬ ಎರಡು ಪ್ರತಿಮೆಯು ಸಂಪಾದಿಸಲ್ಪಟ್ಟಿತು. ಪಾರ್ವತಿಯ ಉತ್ಪತ್ತಿಗೂ ಆ ಮುಖ್ಯಪ್ರಾಣನು ಕಾರಣನು ಎಂಬ ಜ್ಞಾನವೂ ಸಂಪಾದಿಸಲ್ಪಟ್ಟಿತು. ಈ ರೀತಿಯಾಗಿ ಸ್ತುತಿಸತಕ್ಕುದು. ತತ್=ಆ ಪ್ರಮೇಯವು, ಋಷಿಣಾ=ಮಂತ್ರದ್ರಷ್ಟನಿಂದ, ಉಕ್ತಂ=ಹೇಳಲ್ಪಟ್ಟಿದೆ. (ಸಮಗ್ರ ಮಂತ್ರ, ಅದರ ಅರ್ಥಗಳು ಈ ರೀತಿಯಾಗಿ ಇವೆ.) 'ವಾಚಮಷ್ಟಾಪದೀಮಹಂ ನವಸ್ರಕ್ತಿಮೃತಸ್ಪೃಶಂ । ಇಂದ್ರಾತ್ಪರಿತನ್ವಂ ಮಮೇ' ॥ ಋತಸ್ಪೃಶಂ ಋತ=ಯಾವಾಗಲೂ ಏಕಪ್ರಕಾರನಾದ (ನಿತ್ಯನಾದ) ಅಥವಾ ಯಥಾರ್ಥಜ್ಞಾನಸ್ವರೂಪನಾದ ಶ್ರೀ ಹರಿಯನ್ನು (ಋಕ್ಕಿನಿಂದ) ಸ್ಪೃಶಂ=ಪ್ರತಿಪಾದಿಸುವ, ಅಷ್ಟಾಪದೀಂ=ಎಂಟುನಾಕ್ಲಿ (ಅಂದರೆ ಮೂವತ್ತ ಎರಡು ೩೨) ಅಕ್ಷರಗಳುಳ್ಳ, ವಾಚಂ=ಅನುಷ್ಟುಪ್ ಛಂದಸ್ಸನ್ನು, ನವಸ್ರಕ್ತಿಂ=

ಬೇರೆ ಋಕ್ಕಿನಿಂದ ನಾಲ್ಕು (೪) ಅಕ್ಷರಗಳನ್ನು ಕೂಡಿಸಿ ಒಂಭತ್ತು ಪ್ರಕಾರವಾಗಿ ವಿಭಾಗಿಸಲ್ಪಟ್ಟ (ಅಂದರೆ ೩೬ ಅಕ್ಷರಗಳುಳ್ಳ) ಬೃಹತಿಯನ್ನು, (ಮಾಡಿದ) ಅಹಂ=ನಾನು, ಇಂದ್ರಾತ್=ಪರಮೈಶ್ವರ್ಯಸಂಪನ್ನನಾದ ಶ್ರೀ ಪರಮಾತ್ಮನಿಗೂ ಮುಖ್ಯಪ್ರಾಣನಿಗೂ, ತನ್ವಂ=ಬೃಹತ್ಯಾಖ್ಯ ಪ್ರತಿಮೆಯನ್ನು, ಪರಿಮಮೇ=ನಿರ್ಮಿಸುವವನಾಗಿದ್ದೇನೆ. ಹಾಗೆಯೇ, ನವಸ್ರಕ್ತಿಂ=ಬೃಹತಿಯನ್ನು, ಅಷ್ಟಾಪದೀಂ ವಾಚಂ=ಅನುಷ್ಟುಪ್ ಛಂದಸ್ಸನ್ನಾಗಿ, (ಮಾಡಿದ) 'ಅಹಂ=ನಾನು, ಇಂದ್ರಾತ್=ಬೃಹತಿಯೇ ಪ್ರತಿಮೆಯಾಗಿವುಳ್ಳವನು ಮುಖ್ಯಪ್ರಾಣನು. ಆತನೇ ಪ್ರತಿಮೆಯಾಗಿವುಳ್ಳ ಶ್ರೀ ಹರಿಯಿಂದಲೂ, ಮುಖ್ಯಪ್ರಾಣನಿಂದಲೂ, (ಅನುಷ್ಟುಪ್ ಛಂದಸ್ಸಿಗೆ ಅಭಿಮಾನಿಯಾದ ಪಾರ್ವತಿಗೆ) ತನ್ವಂ=ಶರೀರವನ್ನು, (ಅಂದರೆ ಶರೀರದ ಉತ್ಪತ್ತಿಯನ್ನು) ಪರಿಮಮೇ=ತಿಳಿಯುವವನಾಗಿದ್ದೇನೆ. (ಅಂತೂ ಪಾರ್ವತಿಯೂ ಶ್ರೀ ಹರಿಗೆ ಪ್ರತಿಮೆಯಾದುದರಿಂದ ಆತನಿಗೆ 'ಉಮೆ'ಯೆಂದು ಹೆಸರುಳ್ಳ ಪ್ರತಿಮೆಯನ್ನು ತಿಳಿಯುವವನಾಗುತ್ತೇನೆ.) ಈ ಮಂತ್ರವನ್ನು ಅಂಶದಿಂದ ಕ್ರಮವಾಗಿ ಉದಾಹರಿಸಿ ತಾನೇ ವ್ಯಾಖ್ಯಾನಮಾಡುತ್ತದೆ. 'ವಾಚಂ ಅಷ್ಟಾಪದೀಂ ಅಹಂ' ಇತಿ=ಅಂದರೆ, ಅಷ್ಟೌ ಹಿ=ಎಂಟು, ಚತುಃ=ನಾಲ್ಕಾವರ್ತಿ, ಅಕ್ಷರಾಣಿ=ಅಕ್ಷರಗಳು, ಭವಂತಿ=ಆಗುತ್ತವೆ. (ಅಂದರೆ ೩೨ ಅಕ್ಷರವುಳ್ಳದ್ದು ಅನುಷ್ಟುಪ್ ಛಂದಸ್ಸು) 'ನವಸ್ರಕ್ತಿ'ಮಿತಿ=ಅಂದರೆ ಬೇರೆ ಋಕ್ಕಿನಿಂದ ನಾಲ್ಕು ಅಕ್ಷರಗಳನ್ನು ತೆಗೆದುಕೊಂಡು ಯಾವಾಗ ಬೃಹತೀ=ಬೃಹತೀಛಂದಸ್ಸು, ಸಂಪದ್ಯಮಾನಾ=ಸಂಪಾದಿಸಲ್ಪಡುತ್ತದೋ (ಆಗ) ನವಸ್ರಕ್ತಿ=ಒಂಭತ್ತು ನಾಲ್ಕಾವರ್ತಿ ಅಕ್ಷರರೂಪ ವಿಭಾಗವುಳ್ಳದ್ದು (ಅಂದರೆ ೩೬ ಅಕ್ಷರವುಳ್ಳದ್ದು) ಆಗುತ್ತದೆ. 'ಋತಸ್ಪೃಶಮಿತಿ'=ಅಂದರೆ, ವಾಕ್=ವಾಗಾಖ್ಯವಾದ ಅನುಷ್ಟುಪ್ ಛಂದಸ್ಸು (ಹಿಂದೆ ಹೇಳಿದ ರೀತಿಯಿಂದ ಒಂಭತ್ತು ನಾಲ್ಕಾವರ್ತಿ ಅಕ್ಷರವುಳ್ಳದ್ದಾಗಿ) ಋಚಾ=ಋಗ್ರೂಪದಿಂದ, (ಅಂದರೆ ಬೃಹತಿಯ ಸ್ವರೂಪತನವನ್ನು ಹೊಂದಿ) ಸತ್ಯಂ=ಸತ್ಯರೂಪಿಯಾದ ವಿಷ್ಣುವನ್ನು, ಸ್ಪೃಷ್ಟಾ=ಮುಟ್ಟಿತು, (ಅಂದರೆ ಶ್ರೀ ಹರಿಯ ಸನ್ನಿಧಾನಕ್ಕೆ ವಿಶೇಷಾಕಾರವಾಗಿ ಪಾತ್ರಭೂತವಾಯಿತು.) 'ಇಂದ್ರಾತ್ಪರಿ ತನ್ವಂ ಮಮೇ' ಇತಿ=ಅಂದರೆ, ಯತ್ ಏವ ಏತತ್ ಬೃಹತೀಸಹಸ್ರಂ=ಯಾವ ಈ ಬೃಹತೀಸಹಸ್ರವೋ, ತತ್=ಅದು, ಅನುಷ್ಟುಪ್ ಸಂಪನ್ನಂ=೧೧೨೫ ಅನುಷ್ಟುಪ್‌ಗಳಿಂದ ಸಂಪಾದಿಸಲ್ಪಟ್ಟದ್ದು, ಭವತಿ=ಆಗುತ್ತದೆ. ತಸ್ಮಾತ್=ಪಾರ್ವತಿಯೂ ಶ್ರೀ ಹರಿಗೆ ಪ್ರತಿಮಾ ರೂಪಳಾದುದರಿಂದ (ಯಾವಾಗ ಬೃಹತೀಸಹಸ್ರವಾಗಿ ಸಂಪಾದಿಸಲ್ಪಟ್ಟ ಋಕ್ಸಮುದಾಯಕ್ಕೇನೇ ಪುನಃ (೧೧೨೫) ಅನುಷ್ಟುಪಾಗಿ ಸಂಪಾದಿಸಲ್ಪಡುತ್ತದೋ) ತದಾ=ಆಗ, ಬೃಹತ್ಯೈ=ಬೃಹತಿಗೆ ಅಭಿಮಾನಿಯಾದ, ಪ್ರಾಣಾತ್=ಮುಖ್ಯಪ್ರಾಣನಿಂದ, ವಾಚಂ=ವಾಗ್ರೂಪವಾದ, ಅನುಷ್ಟುಭಂ=ಅನುಷ್ಟುಪ್ ದೇವತೆಯಾದ ಉಮಾರೂಪವಾದ, ತನ್ವಂ=(ಶ್ರೀ ಹರಿಗೇನೇ) ಎರಡನೇ ಪ್ರತಿಮೆಯನ್ನು, ಸಂನಿರ್ಮಿಮೀತೇ=(ಇವೆಲ್ಲವನ್ನೂ ಚೆನ್ನಾಗಿ ಧ್ಯಾನಿಸುವವನು) ನಿರ್ಮಿಸುತ್ತಾನೆ. ('ಬೃಹತಿಯ ಸಕಾಶದಿಂದ ಅನುಷ್ಟುಪನ್ನು ಸಂಪಾದಿಸುವುದು' ಇದೇ ಮೊದಲಾದುದು) ಐಂದ್ರಾತ್=ಪರಮೈಶ್ವರ್ಯ ಸಂಪನ್ನನಾದ ಬೃಹತಿಯಲ್ಲಿರತಕ್ಕ ವಿಷ್ಣುವಿನ ಸಾಮರ್ಥ್ಯದಿಂದಲೇ, ಹಾಗೆಯೇ, ಐಂದ್ರಾತ್=ಪರಮೇಶ್ವರನಿಗೆ ಅತಿ ಪ್ರಿಯನಾದ, ಪ್ರಾಣಾತ್=ಮುಖ್ಯಪ್ರಾಣನ ಸಾಮರ್ಥ್ಯದಿಂದಲೂ (ಆಗುತ್ತದೆ. ಧ್ಯಾನಿಸುವವರ ಶಕ್ತಿಯಿಂದಲೇ ಅಲ್ಲ) ಯತ್ ಏತತ್ ಮಹದುಕ್ಥಂ=ಯಾವ, ಈ ಬೃಹತೀಸಹಸ್ರವೋ, ಸ ಏಷಃ=ಆ ಇದು, ವಾಚಃ=ಅಕಾರದ, ಪರಮಃ ವಿಕಾರಃ=ಬೇರೆ ಎಲ್ಲಾ ಶಬ್ದಗಳಿಗಿಂತ ಉತ್ತಮ ವ್ಯಾಖ್ಯಾನವು. (ಇತರ ಶಬ್ದಸಮುದಾಯವು ಕೇವಲ ವಿಕಾರವು) ತತ್ ಏತತ್=ಆ ಈ ಉತ್ತಮವ್ಯಾಖ್ಯಾನವಾದ ಬೃಹತೀಸಹಸ್ರವು, ಕೇವಲ ವಿಕಾರವಾದ ಶಬ್ದಸಮುದಾಯವು,

'ಮಿತಂ, ಅಮಿತಂ, ಸ್ವರಃ, ಸತ್ಯಾನೃತೇ' ಇತಿ=ಮಿತ, ಅಮಿತ, ಸ್ವರ, ಸತ್ಯ, ಅನೃತ ಎಂದು, ಪಂಚವಿಧಂ=ಐದು ಪ್ರಕಾರವುಳ್ಳದ್ದು. ಋಕ್=ಸ್ವರನಿಯಮವುಳ್ಳ ವಚನವು, ಗಾಥಾ=ಸ್ವರ ನಿಯಮವಿಲ್ಲದಿರುವ ಮಿತಾಕ್ಷರವುಳ್ಳ ವಚನವು, ಕುಂಬ್ಯಾ=ಅನ್ಯೋನ್ಯವಾಗಿ ವಿಷಮಸಂಖ್ಯಾ ಕಗಳಾದ ಅಕ್ಷರವುಳ್ಳ ಖಂಡವಾಕ್ಯಗಳು. ತತ್=ಆ ಈ ಮೂರು, ಮಿತಂ=ಮಿತವೆನ್ನಿಸಿಕೊ ಳ್ಳುತ್ತದೆ. ಯಾಗಕ್ಕೆ ಅಂಗಭೂತವಾದ ವಾಕ್ಯವು 'ಯಜುಃ' ಎಂದು ಹೇಳಲ್ಪಡುತ್ತದೆ. ನಿಗದಃ=ಯಾಗಕ್ಕೆ ಅಂಗವಲ್ಲದಿರುವ ವಾಕ್ಯವು. ವೃಥಾ ವಾಕ್=ಅರ್ಥವಿಲ್ಲದಿರುವ ವಾಕ್ಯವು, ತತ್=ಆ ಈ ಮೂರು, ಅಮಿತಂ=ಅಮಿತವೆಂದು ಹೇಳಲ್ಪಡುತ್ತದೆ. ಸಾಮ=ಬೃಹತ್ಸಾಮವೇ ಮೊದಲಾದುದು, ಅಥೋ=ಮತ್ತು, ಯಃಕಶ್ಚ ಗೇಷ್ಣಃ=ಯಾವುದು ಗಾನವೋ, ಸಃ=ಆ ಈ ಎರಡು, ಸ್ವರಃ=ಸ್ವರವೆಂದು ಹೇಳಲ್ಪಡುತ್ತದೆ. ಓಮಿತಿ=ಓಮ್ ಎಂಬ ಅಕ್ಷರವು, ಸತ್ಯಂ= ಸತ್ಯವೆಂದು ಹೇಳಲ್ಪಡುತ್ತದೆ. ನೇತಿ='ನ' ಎಂಬ ಅಕ್ಷರವು, ಅನೃತಂ=ಅನೃತವೆಂದು ಹೇಳಲ್ಪಡುತ್ತದೆ. ಯತ್ ಸತ್ಯಂ=ಯಾವ ಸತ್ಯವಾದ ಓಂಕಾರವೋ, ತತ್ ಏತತ್=ಆ ಇದು, ವಾಚಃ=ಅಕಾರಕ್ಕೆ, ಪುಷ್ಪಂ ಫಲಂ=ಉಕಾರ ಮಕಾರರೂಪ ವಿಕಾರದಿಂದೊಡಗೂಡಿದ ಪ್ರಯುಕ್ತ ಪುಷ್ಪ ಫಲಸ್ವರೂಪವಾಗಿಯದೆ. (ಯಾವಾತನು) ವಾಚಃ=ಅಕಾರಕ್ಕೆ ಪುಷ್ಪಂ ಫಲಂ= ಪುಷ್ಪಫಲರೂಪವಾದ, ಸತ್ಯಂ=ಓಂಕಾರವನ್ನು, (ಯೋಗ್ಯರಿಗೆ) ವದತಿ ಹಿ=ಉಪದೇಶಿಸುತ್ತಾ ನೋ, ಸ ಹ=ಅಂತಹನು, ಯಶಸ್ವೀ=ಲೋಕದಲ್ಲಿ ಪ್ರಖ್ಯಾತಿಪಟ್ಟವನೂ, ಕಲ್ಯಾಣಕೀರ್ತಿಃ= ಮಂಗಲಕರವಾದ ಕೀರ್ತಿಯುಳ್ಳವನೂ, (ಆಗುತ್ತಾನೆ.) ಭವಿತೋಃ=ಮುಕ್ತನಾಗಲಿಕ್ಕೂ, ಈಶ್ವರಃ=ಸಮರ್ಥನು, (ಆಗುತ್ತಾನೆ.) ಅಥ=ಆದರೂ, ಯತ್ ಅನೃತಂ='ನ' ಎಂಬೀ ಯಾವ ಅಕ್ಷರವೋ, ಏತತ್=ಇದು, ವಾಚಃ=ಅಕಾರಕ್ಕೆ, ಮೂಲಂ=ಸ್ವಲ್ಪವಾಗಿ ಬುಡದಂತೆಯೇ ಇದೆ. ತತ್=ಆ ವಿಷಯದಲ್ಲಿ ದೃಷ್ಟಾಂತವು, ಯಥಾ=ಹೇಗೆ, ವೃಕ್ಷಃ=ಮರವು, ಆವಿರ್ಮೂಲಃ=ಪ್ರಕಟ ವಾದಬುಡವುಳ್ಳದ್ದಾದರೆ (ಅಂದರೆ ಮರದ ಬುಡವು ಚೆನ್ನಾಗಿ ತೋರಿದರೆ), ಶುಷ್ಯತಿ=ಒಣಗಿಹೋ ಗುತ್ತದೆ. ಸಃ=ಆ ಒಣಗಿಹೋದ ಮರವು, ಉದ್ವರ್ತತೇ=ನಾಶವಾಗುತ್ತದೋ, ಏವಮೇವ= ಇದೇ ರೀತಿಯಾಗಿ, ಅನೃತಂ=ನಿಷೇಧವನ್ನು ತಿಳಿಸಿಕೊಡುವ ನ ಕಾರವನ್ನು, ವದನ್=ಹೇಳುವ ವನು, ಆತ್ಮಾನಂ=ತನ್ನನ್ನೇ, ಆವಿರ್ಮೂಲಂ=ಪ್ರಕಟೀಕರಿಸಲ್ಪಟ್ಟ ಬುಡವುಳ್ಳವನನ್ನಾಗಿ ಅಂದರೆ, ಆ ದೋಷದಿಂದ ಕಲುಷಿತನನ್ನಾಗಿ, ಕರೋತಿ=ಮಾಡುತ್ತಾನೆ. ಸಃ=ಆತನು, ಶುಷ್ಯತಿ=ಪೂರ್ವದ ಲ್ಲಿರತಕ್ಕ ಧರ್ಮಜ್ಞಾನಗಳು ನಷ್ಟಗಳಾದುದರಿಂದ ಸಾರವಿಲ್ಲದಿರುವವನಾಗುತ್ತಾನೆ. ಸಃ=ಆತನು, ಉದ್ವರ್ತತೇ=ನರಕ ಮೊದಲಾದುದನ್ನು ಹೊಂದುತ್ತಾನೆ. ತಸ್ಮಾತ್=ಅನೃತವನ್ನು ಹೇಳಿದರೆ, ಈ ಪ್ರಕಾರವಾಗಿ ಅನರ್ಥವಿರುವುದರಿಂದ, ಅನೃತಂ='ನ' ಎಂಬ ಅಕ್ಷರವನ್ನು, ನ ವದೇತ್= (ಜ್ಞಾನಾದಿಗಳಿಗೆ ಯೋಗ್ಯನಾದ ಅಧಿಕಾರಿಗೋಸ್ಕರ) ಹೇಳಬಾರದು. ದಯೇತ ತು=ಯೋ, ಗ್ಯರಲ್ಲಿ) ದಯೆಯನ್ನೇ ಮಾಡತಕ್ಕದು. ಏತೇನ=ಇದೇ ಕಾರಣದಿಂದ, ಅಂದರೆ ದಯೆಯನ್ನು ಮಾಡದೆ ಯೋಗ್ಯರಿಗೆ 'ನ' ಎಂಬ ಅಕ್ಷರವನ್ನು ಹೇಳಿದರೆ ಅನರ್ಥಪ್ರಾಪ್ತಿಯಾಗುವುದರಿಂದಲೇ, (ಇಷ್ಟರ ವರೆಗೆ ಓಂಕಾರವನ್ನು ಅವಶ್ಯವಾಗಿ ಹೇಳಬೇಕೆಂದೂ, 'ನ'ಕಾರವನ್ನು ಹೇಳಬಾರದೆಂ ದೂ, ಹೇಳಿ, ಈಗ ಎರಡನ್ನೂ ಹೇಳಬಾರದೆಂದು ಮೇಲೆ ಹೇಳುವವರಾಗಿ, ಅವುಗಳ ಪೈಕಿ ಈಗ ಓಂಕಾರಕ್ಕೆ ಅವಕ್ತವ್ಯತ್ವವನ್ನು ತೋರಿಸುತ್ತಾರೆ) ಯತ್ ಏತತ್ ಓಮಿತಿ=ಯಾವ ಈ ಓಮ್ ಎಂಬ ಅಕ್ಷರವೋ, ಏತತ್ ಅಕ್ಷರಂ=ಈ ಅಕ್ಷರವು, ಪರಾಕ್ ವೈ=ಬಹಿರ್ಮುಖವಾಗಿ ಅಯೋಗ್ಯರಿಗೆ ಉಪದೇಶಿಸಲ್ಪಟ್ಟರೆ (ಪ್ರತಿಕೂಲವಾಗಿಯೇ) ರಿಕ್ತಂ=ತನಗೆ ರಿಕ್ತತ್ವವನ್ನು ಕೊಡುವುದು. (ಅಂದರೆ ದಾರಿದ್ರ್ಯ ಸಂಪಾದಕವು) ಯತ್ ಕಿಂಚ=ಯಾವುದೊಂದು ತನ್ನದ್ದಾದ ದ್ರವ್ಯ ಮೊದಲಾದುದನ್ನು, (ಅಯೋಗ್ಯರಿಗೆ) ಓಮಿತಿ=ಕೊಡುತ್ತೇನೆಂದು ಹೇಳಿದ ಪಕ್ಷದಲ್ಲಿ

ಅತ್ರೈವ=ಆವಾಗಲೇ, ತತ್=ಆ ದ್ರವ್ಯವೊದಲಾದುದು, ಅಸ್ಮೈ=ಈತನಿಂದ, ರಿಚ್ಯತೇ= ನಷ್ಟವಾಗುತ್ತದೆ. ಸಃ=ಆತನು, ಸರ್ವಂ=ಸಮಸ್ತ ದ್ರವ್ಯ ವೊದಲಾದುದನ್ನು (ಯೋಗ್ಯಾ-ಯೋಗ್ಯ ಸಾಧಾರಣವಾಗಿ) ಓಂಕುರ್ಯಾತ್ ಯತ್=ಕೊಡುತ್ತೇನೆಂದು ಪ್ರತಿಜ್ಞಾಮಾಡಿದ ಪಕ್ಷದಲ್ಲಿಯೂ, ಕೊಟ್ಟ ಪಕ್ಷದಲ್ಲಿಯೂ, ಆತ್ಮಾನಂ=ತನ್ನನ್ನು, ರಿಂಚ್ಯಾತ್=ರಿಕ್ತನನ್ನಾಗಿ ಮಾಡಿಯಾನು. ಸಃ=ಆ ಪುರುಷನು, ಕಾಮೇಭ್ಯಃ=ಶ್ರೇಷ್ಠವಾದ ಪುರುಷಾರ್ಥದ ಪ್ರಾಪ್ತಿ ಗೋಸ್ಕರ, ಅಲಂ=ಸಮರ್ಥನು, ನ ಸ್ಯಾತ್=ಆಗಲಾರನು, ಅಥ=ಮೇಲೆ, ಯತ್ ನೇತಿ= ಯಾವುದೊಂದು 'ನ' ಎಂಬ ಅಕ್ಷರವೋ, ಏತತ್=ಇದು, ಯದ್ಯಪಿ ಅಧ್ಯಾತ್ಮಂ ಪೂರ್ಣಂ= ತನ್ನ ಪೂರ್ಣತ್ವಕ್ಕೆ ಕಾರಣವಾದುದು. ಸರ್ವಂ=ಸಮಸ್ತರನ್ನು, ನೇತಿ ಬ್ರೂಯಾತ್ ಯತ್= ಸ್ವಲ್ಪವನ್ನು ಕೊಡಲಾರೆನೆಂದು ಹೇಳಿದ ಪಕ್ಷದಲ್ಲಿ, (ತನ್ನ ದ್ರವ್ಯ ವೊದಲಾದುದು ತನ್ನಲ್ಲಿಯೇ ಉಳಿಯುವುದರಿಂದ ರಿಕ್ತತನ ಬರುವುದಿಲ್ಲ. ಆದರೂ) ಅಸ್ಯ=ಇಲ್ಲವೆಂದು ಹೇಳುವವನಿಗೆ, ಪಾಪಿಕಾ ಕೀರ್ತಿಃ=ದುಷ್ಕೀರ್ತಿಯು, ಜಾಯೇತ=ಹುಟ್ಟುತ್ತದೆ. ಸಾ=ದುಷ್ಕೀರ್ತಿಯು, ಏನಂ=ಈ ಪುರುಷನನ್ನು, ತತ್ರೈವ=ಅದೇ ಜನ್ಮದಲ್ಲಿ. ಹನ್ಯಾತ್=ಸತ್ತವನಂತೆ ಮಾಡುತ್ತದೆ. ತಸ್ಮಾತ್=ಅದರಿಂದ, (ಅಂದರೆ ಸರ್ವರಿಗೂ ಕೊಡುತ್ತೇನೆ ಎಂದೂ, ಕೊಡುವುದಿಲ್ಲವೆಂಬು ವುದೂ, ಎರಡೂ ಹಿಂದೆ ಹೇಳಿದ ಪ್ರಕಾರ ಅನರ್ಥಕ್ಕೆ ಗುರಿಯಾದುದರಿಂದ) ಕಾಲ ಏವ=ಪುಣ್ಯ ಕಾಲದಲ್ಲಿಯೇ, ದದ್ಯಾತ್=ದಾನಮಾಡತಕ್ಕುದು. ಕಾಲೇ=ಅಪುಣ್ಯಕಾಲದಲ್ಲಿ, ನ ದದ್ಯಾ ತ್=ದಾನಮಾಡಬಾರದು. (ಈ ಪ್ರಕಾರವಾಗಿ) ಸತ್ಯಾನೃತೇ=ಪಾತ್ರಾಪಾತ್ರಾದ್ಯನುಸಾರ ವಾಗಿ 'ಓಂಕಾರ' 'ನ' ಕಾರಗಳನ್ನು, ಮಿಥುನೀಕರೋತಿ=ಕೂಡಿಸುತ್ತಾನೋ. ತತ್=ಹಾ ಗಾದರೆ, ತಯೋಃ=ಓಂಕಾರ ನಕಾರಗಳ, ಮಿಥುನಾತ್=ಮಿಥುನೀಕರಣದಿಂದ, (ಒಟ್ಟಿಗೆ ಕೂಡಿಸಿರುವುದರಿಂದ,) ಪ್ರಜಾಯತೇ=ಹುಟ್ಟಿಸುತ್ತಾನೆ. (ಅಂದರೆ ಸತ್ಪುತ್ರಾದಿ ಸಂಪತ್ತುಳ್ಳ ವನಾಗಿ ಆಗುತ್ತಾನೆ.) ಭೂಯಾನ್=ಜ್ಞಾನ ವೊದಲಾದ ಗುಣಗಳಿಂದಲೂ, ಉತ್ಕೃಷ್ಟನು ಭವತಿ=ಆಗುತ್ತಾನೆ. ಯಸ್ಯಾಃ=ಯಾವ ಅಕಾರಕ್ಕೇನೆ, ಏಷಃ=ಈ ಮಿತಾ ಮಿತಾದಿರೂಪ ವಾದ ಸರ್ವವೂ, ವಿಕಾರಃ=ವ್ಯಾಖ್ಯಾನರೂಪವೋ, ತಾಂ ವಾಚಂ=ಅಂತಹ ಅಕಾರವನ್ನು, ಯಃ=ಯಾವಾತನು, ವೇದ=ತಿಳಿಯುತ್ತಾನೋ, ಸ ವೈ=ಆತನೇವೇ, ಸಂಪ್ರತಿವಿತ್=ಯ ಥಾರ್ಥಜ್ಞಾನಿಯು, ಸರ್ವವಾಕ್=ಸಮಸ್ತವಾದ ಮಿತಾಮಿತಾದಿ ಐದು ರೂಪವುಳ್ಳದ್ದೂ ಕೂಡ, ಅಕಾರೋ ವೈ=ಅಕಾರವೇ, (ಅಂದರೆ ಅಕಾರದ್ದೇ ವಿಕಾರ ರೂಪವಾದುದ್ದು.) ಸಾ ಏಷಾ=ಆ ಈ ಅಕಾರರೂಪವಾದ ವಚನವು, ಸ್ಪರ್ಶೋಷ್ಮಭಿಃ=ಕಕಾರ ವೊದಲಾದ ಎಲ್ಲಾ ವ್ಯಂಜನಾಕ್ಷರಗಳಿಂದಲೂ, ವ್ಯಜ್ಯಮಾನಾ=ಪ್ರಕಟೀಕರಿಸಲ್ಪಟ್ಟದ್ದೂ, ಬಹ್ವೀ=ಐದು ರೂಪ ವುಳ್ಳದ್ದು, ನಾನಾರೂಪಾ=ವೇದ, ಪಂಚರಾತ್ರ ವೊದಲಾದ ವಿಲಕ್ಷಣರೂಪವುಳ್ಳದ್ದೂ, ಭವತಿ= ಆಗುತ್ತದೆ. ತಸ್ಯೈ=ಆ ಅಕಾರಕ್ಕೆ, ಯತ್ ಉಪಾಂಶು=ಯಾವುದೊಂದು ಮೆಲ್ಲಗೆ ಉಚ್ಚಾ ರಣವೋ, (ಅಂದರೆ ಮೆಲ್ಲಗೆ ಉಚ್ಚರಿಸಲ್ಪಟ್ಟ ಅಕಾರವೋ), ಸಃ ಪ್ರಾಣಃ=ಅದಕ್ಕೆ ಅಭಿಮಾನಿ ಯಾದವನು ಮುಖ್ಯಪ್ರಾಣನು, (ಅಕಾರಕ್ಕೆ ಯಾವುದೊಂದು ಘಟ್ಟಿಯಾಗಿ ಉಚ್ಚಾರಣವೋ ಘಟ್ಟಿಯಾಗಿ ಉಚ್ಚರಿಸಲ್ಪಟ್ಟ ಅಕಾರವೋ) ತತ್ ಶರೀರಂ=ಸ್ಥೂಲ, ಸೂಕ್ಷ್ಮವೆಂಬೀ ಎರಡು ಪ್ರಕಾರವಾದ ಎಲ್ಲಾ ಪ್ರಾಣಿಗಳ ಶರೀರಕ್ಕೆ ಅಭಿಮಾನಿನಿಯಾದ ಭಾರತಿಯೇ ಅದಕ್ಕೆ ಅಭಿಮಾನಿ ನಿಯು. ತಸ್ಮಾತ್=ಮುಖ್ಯಪ್ರಾಣನಿಂದ ಅಭಿಮನ್ಯವಾದ ಪ್ರಯುಕ್ತವೇ; ತತ್=ಮೆಲ್ಲಗೆ ಉಚ್ಚ ರಿಸಿದ ಅಕಾರವು, ತಿರ ಇವ=ತಿರೋಭೂತವಾದ ಹಾಗೆ ಇದೆ. ಅಶರೀರಂ=ಶರೀರವಿಲ್ಲದೆ ಇರುವ ವಸ್ತುವು, ತಿರ ಇವ ಹಿ=ಅಪ್ರತ್ಯಕ್ಷವಾದದ್ದಂತೆಯೆ ಇದೆಯಷ್ಟೆ. (ಪ್ರಕೃತದಲ್ಲಿ)ಪ್ರಾಣಃ=

ಅದಕ್ಕೆ ಅಭಿಮಾನಿಯಾದ ಮುಖ್ಯಪ್ರಾಣನು, ಅಶರೀರೋ ಹಿ=ಶರೀರಾಭಿಮಾನವಿಲ್ಲದಿರುವುದರಿಂದ ಶರೀರವಿಲ್ಲದಿರುವವನಷ್ಟೇ! ಅಥ=ಆಮೇಲೆ, ಯತ್ ಉಚ್ಚೈಃ=ಯಾವುದೊಂದು ಘಟ್ಟಿಯಾಗಿ ಉಚ್ಚರಿಸಲ್ಪಟ್ಟ ಅಕಾರವೋ, ತತ್ ಶರೀರಂ=ಅದು ಶರೀರಾಭಿಮಾನಿಯಾದ ಭಾರತಿಯೇ ದೇವತೆಯಾಗಿ ಉಳ್ಳದ್ದು. ತಸ್ಮಾತ್=ಆದುದರಿಂದಲೇ, ತತ್=ಘಟ್ಟಿಯಾಗಿ ಉಚ್ಚರಿಸಲ್ಪಟ್ಟ ಅವರ್ಣವು, ಆವಿಃ=ಆವಿರ್ಭೂತವಾಗಿ ಶ್ರೋತ್ರೇಂದ್ರಿಯಕ್ಕೆ ಪ್ರತ್ಯಕ್ಷವಾಗುತ್ತದೆ. ಶರೀರಂ=ಶರೀರವು, ಆವಿರ್ಹಿ=ಪ್ರತ್ಯಕ್ಷಭೂತವಾಗಿಯೇ ಇದೆಯಷ್ಟೇ. ॥ ೬ ॥

ತಾ॥ (1) ಈ ಬೃಹತೀಸಹಸ್ರವು ವಾಯುದೇವರಿಗೆ ಪ್ರತಿಮಾರೂಪವಾಗಿದೆ. ಬೃಹತಿಗೆ ಅಧಿಪತಿಯಾದ ವಾಯುದೇವರು ಶ್ರೀ ಹರಿಗೆ ಮುಖ್ಯವಾಗಿ ಪ್ರತಿಮಾರೂಪರಾದುದರಿಂದಲೇ ಬೃಹತೀಸಹಸ್ರವೂ ವಿಷ್ಣುವಿಗೆ ಪ್ರತಿಮಾರೂಪವಾಗಿದೆ. ಆದುದರಿಂದ ಬೃಹತೀಸಹಸ್ರವನ್ನು ಸಂಪಾದಿಸಿದರೆ ಶ್ರೀ ಹರಿಗೆ ಪ್ರತಿಮೆಯನ್ನು ನಿರ್ಮಿಸಿದ ಹಾಗಾಯಿತು. ಇದೇ ರೀತಿಯಾಗಿ ಅನುಷ್ಟುಪಿಗೆ ದೇವತೆಯಾದ ಪಾರ್ವತಿಯೂ ಕೂಡ ಶ್ರೀ ಹರಿಗೆ ಪ್ರತಿಮಾರೂಪಳಾಗಿದ್ದಾಳೆ. ಆ ಪಾರ್ವತಿಯಾದರೂ ಬೃಹತಿಗೆ ದೇವತೆಯಾದ ಮುಖ್ಯಪ್ರಾಣನಿಂದ ಹುಟ್ಟಿದವಳು. (2) ಎಲ್ಲಾ ವರ್ಣಗಳಿಗೂ ಮೂಲಭೂತವಾದ ಅಕಾರವೇ ಓಂಕಾರದ ಆದಿಯಲ್ಲಿ ಇದ್ದುದರಿಂದಲೂ, ಅಕಾರಾರ್ಥವೇ ಓಂಕಾರದಿಂದ ಹೇಳಲ್ಪಡುವುದರಿಂದಲೂ, ಶಬ್ದಾರ್ಥಗಳಿಂದ ವ್ಯತ್ಯಾಸವಿಲ್ಲದಿರುವುದರಿಂದ 'ಓಮ್' ಎಂಬ ಅಕ್ಷರವು ಸತ್ಯವೆಂದು ಹೇಳಲ್ಪಡುತ್ತದೆ. (3) ಮೂಲಭೂತವಾದ ಅಕಾರವೇ 'ನ'ಕಾರದ ಅಂತ್ಯದಲ್ಲಿ ಇದ್ದುದರಿಂದ ಮುಖ್ಯವಾಗಿ ಸ್ಥಿತಿಯಿಲ್ಲದಿರುವುದರಿಂದ ಅಯಥಾರ್ಥವಾಯಿತು. ಆದುದರಿಂದ 'ನ'ಎಂಬ ಅಕ್ಷರವು 'ಅನೃತ' ಎಂದು ಹೇಳಲ್ಪಡುತ್ತದೆ. (4) ಜ್ಞಾನ ದ್ರವ್ಯ ಮೊದಲಾದುದನ್ನು ಅಯೋಗ್ಯರಿಗೆ ಕೊಡುತ್ತೇನೆಂದು ಹೇಳಿದರೆ, ಜ್ಞಾನವು ದಿನೇ ದಿನೇ ಕ್ಷೀಣವಾಗುತ್ತದೆ. ದ್ರವ್ಯವಾದರೋ ಚೋರಾದಿಗಳಿಂದ ಅಪಹರಿಸಲ್ಪಡುತ್ತದೆ. ವಾಗ್ದತ್ತವಾದುದರಿಂದ ಅದನ್ನು ತಾನು ಉಪಯೋಗಿಸಿದರೆ ಮಹಾಪ್ರತ್ಯವಾಯವು ಬರುವುದು. (5) ಅಯೋಗ್ಯರಿಗೆ ಜ್ಞಾನ ದ್ರವ್ಯಾದಿಗಳನ್ನು ಕೊಡಲಾರೆನು, ಎಂದು ಹೇಳಿದರೆ, ಆತನಿಗೆ ಪೂರ್ಣತ್ವವೇ ಬರುವುದು. ಯೋಗ್ಯಾಯೋಗ್ಯನೆಂದು ವಿಚಾರಿಸದೆ ಸರ್ವರಿಗೂ ದಾನಮಾಡಿದ್ದೇನೆಂದು ಹೇಳಿದರೆ, ದುಷ್ಕೀರ್ತಿಯು ಬರುತ್ತದೆ. ಕಾರಣ ಅಯೋಗ್ಯರಿಗೆ ದಾನಮಾಡಬಾರದು. ಯೋಗ್ಯರಿಗೇನೇ ದಾನಮಾಡತಕ್ಕುದು. ಅಂತಹ ಯೋಗ್ಯರಿಗೆ 'ನ'=ಇಲ್ಲವೆಂದು ಹೇಳಬಾರದು. 'ಸಂಭಾವಿತಸ್ಯ ಚಾಕೀರ್ತಿರ್ಮರಣಾದತಿರಿಚ್ಯತೇ' ಎಂಬೀ ಗೀತೋಕ್ತಿಯಿಂದ ಅಪಯಶಸ್ಸುವುಳ್ಳವನು ಸತ್ತಪ್ರಾಯನಷ್ಟೇ. ಅಂತೂ ಪುಣ್ಯಕಾಲದಲ್ಲಿ, ಪುಣ್ಯದೇಶದಲ್ಲಿ ಯೋಗ್ಯರಿಗೇನೇ ದ್ರವ್ಯವನ್ನಾಗಲೀ, ಜ್ಞಾನವನ್ನಾಗಲೀ ಫಲವನ್ನು ಇಚ್ಛಿಸದೆ ಶ್ರೀ ವಿಷ್ಣುಪ್ರೀತ್ಯರ್ಥವಾಗಿಯೇ ದಾನಮಾಡತಕ್ಕುದು. ಅಪುಣ್ಯಕಾಲ ದೇಶಗಳಲ್ಲಿ ಅಯೋಗ್ಯರಿಗೆ ಯತ್ಕಿಂಚಿತ್ ಫಲಾದಿಗಳನ್ನು ಉದ್ದೇಶಿಸಿ ದಾನಮಾಡಬಾರದು. (6) ಮುಖ್ಯಪ್ರಾಣನಿಗೆ ಶರೀರವಿದ್ದರೂ ಶರೀರಾಭಿಮಾನವಿಲ್ಲದಿರುವುದರಿಂದ 'ಅಶರೀರ' ಎಂದು ಹೇಳಲ್ಪಡುತ್ತಾನೆ. 'ಬ್ರಹ್ಮಾ ನಿರಭಿಮಾನತ್ವಾಚ್ಛರೀರ್ಯಪ್ಯಶರೀರವಾನ್' ಇತ್ಯಾದ್ಯುಕ್ತಿ ಇರುವುದರಿಂದ, ಕಾರಣ ಮೆಲ್ಲಗೆ ಉಚ್ಚರಿಸಿದ ಅಕಾರಕ್ಕೆ ಅಶರೀರನಾದ ಪ್ರಾಣನು ಅಭಿಮಾನಿಯಾದುದರಿಂದ ತಿರೋಭೂತದಂತೆ ಇರುವುದೇ ಯುಕ್ತವು. ಅಂತೂ ಘಟ್ಟಿಯಾಗಿ ಉಚ್ಚರಿಸುವುದಕ್ಕಿಂತ ಮೆಲ್ಲಗೆ ಪ್ರಾಣಾಭಿಮಾನಿಕವಾದ ಅಕಾರವನ್ನು ಜಪಾದಿಗಳಲ್ಲಿ ಉಚ್ಚರಿಸಿದರೆ, ಫಲಾಧಿಕ್ಯವಿದೆಯೆಂದು ಹೇಳಲ್ಪಟ್ಟಿತು. ॥ ೬ ॥

ಭಾ॥ (a) ಬೃಹತೀ ಸಂಪಾದನೇಽನುಷ್ಟುಪ್ ಶಂಸನಮಾತ್ರಾತ್ಪಂಚವಿಂಶೋತ್ತರಶತಾನುಷ್ಟುಬಾಧಿಕ್ಯಂ ಚ ಭವತಿ । ಅತ ಆಧಿಕ್ಯಾದ್ಬೃಹತೀ ಸಂಪಾದನಮೇವ ವರಂ ॥ ತಸ್ಯಾತ್ರೈವಾಂತರ್ಭಾವಾತ್ ॥ (b) ಜಗತ್ಯಾದಿಕಂ ತ್ವಧಿಕತ್ವೇಽಪಿ ಬೃಹತೀವನ್ಮಾಹಾತ್ಮ್ಯಾಭಾವಾದೇವೋಪೇಕ್ಷ್ಯತೇ । (c) ವಾಚಮಷ್ಟಾಪದೀಮಹಮಿತ್ಯನುಷ್ಟುಭೋ ಬೃಹತೀಸಂಪಾದನವಚನಾಚ್ಚ ॥

ಅ ॥ (a) ಬೃಹತೀಸಹಸ್ರವನ್ನು ಸಂಪಾದನೆ ಮಾಡಿದರೆ ಕೇವಲ ಅನುಷ್ಟುಪ್ ಛಂದಸ್ಸನ್ನು ಹೊಗಳುವುದಕ್ಕಿಂತ ಇಪ್ಪತ್ತೈದರಕ್ಕಿಂತ ಹೆಚ್ಚಾದ ನೂರು (ಅಂದರೆ ೧೨೫) ಅನುಷ್ಟುಪ್ ಛಂದಸ್ಸಿನ ಆಧಿಕ್ಯವೂ (ಹೆಚ್ಚು) ಆಗುತ್ತದೆ. ಆದುದರಿಂದ ಅನುಷ್ಟುಪ್ ಛಂದಸ್ಸಿಗಿಂತ ಆಧಿಕ್ಯವು ಸಿಗುವುದರಿಂದ, ಬೃಹತೀಸಹಸ್ರ ಸಂಪಾದನವೇ ಶ್ರೇಷ್ಠವು. ಆ ಅನುಷ್ಟುಬಿಗೆ ಈ ಬೃಹತೀ ಸಹಸ್ರದಲ್ಲಿಯೇ ಅಂತರ್ಭಾವವಿರುವುದರಿಂದ, (b) ಜಗತೀಛಂದಸ್ಸೇ ಮೊದಲಾದುದು (ಬೃಹತಿಗಿಂತಲೂ) ಹೆಚ್ಚು ಅಕ್ಷರ ಇದ್ದುದಾಗ್ಯೂ ಬೃಹತೀಛಂದಸ್ಸಿನಂತೆ ಮಾಹಾತ್ಮ್ಯ ಇಲ್ಲದಿರುವುದರಿಂದಲೇ ಬಿಡಲ್ಪಡುತ್ತದೆ. ॥ (c) 'ವಾಚಮಷ್ಟಾಪದೀಮಹಂ' ಎಂಬೀ ಮಂತ್ರದಲ್ಲಿ ಅನುಷ್ಟುಪ್ ಛಂದಸ್ಸಿನ ಸಕಾಶದಿಂದ, ಬೃಹತೀಸಹಸ್ರವನ್ನು ಸಂಪಾದಿಸಬೇಕೆಂದು ಮಾಶಿನಿಂದಲೂ, ಮತ್ತು ಅನುಷ್ಟುಪ್ ಛಂದಸ್ಸುಗಳಿಗೆ ಬೃಹತೀಛಂದಸ್ಸಿನಿಂದ ಸಂಪಾದಿಸಬೇಕೆಂಬೀ ವಾಕ್ಯವಿದ್ದುದರಿಂದಲೂ, (ಬೃಹತೀಸಹಸ್ರವೇ ಶ್ರೇಷ್ಠವು).

ಭಾ॥ (a) ಅಷ್ಟಚತುರಕ್ಷರಾಣ್ಯನುಷ್ಟುಪ್ । ತಸ್ಯಾ ಏವ ಬೃಹತೀಸಂಪಾದನೇ ನವಸ್ರಕ್ತಯೋ ಭವಂತಿ ॥ (b) ಋಚಾ ವಾಗೃಗ್ರೂಪೇಣ ವಾಗೃತಂ ಸ್ಪೃಷ್ಟಾ ಸತ್ಯರೂಪಂ ವಿಷ್ಣುಂ ಸ್ಪೃಷ್ಟಾ ಭವತಿ । (c) ಇಂದ್ರಸ್ಯ ಪರಮೇಶ್ವರಸ್ಯ ವಿಷ್ಣೋಃ ಸಂಬಂಧೀ ನಿತರಾಂ ಪ್ರಿಯತ್ವಾದ್ಯಃ ಪ್ರಾಣದೇವತಾ ವಾಯುಃ ತಸ್ಯ ಪ್ರತಿಮಾರೂಪಮಿದಂ ಬೃಹತೀಸಹಸ್ರಂ ॥ (d) ಸ ಚ ವಾಯುರ್ವಿಷ್ಣೋರ್ಮುಖ್ಯಪ್ರತಿಮಾ । ತಸ್ಮಾದ್ವಿಷ್ಣೋರೇವ ಪ್ರತಿಮಾ ಬೃಹತೀಸಹಸ್ರಂ ॥

ಅ ॥ (a) ಅನುಷ್ಟುಪ್ ಛಂದಸ್ಸು, ಎಂಟುನಾಕ್ಲಿ (ಅಂದರೆ ೩೨) ಅಕ್ಷರವುಳ್ಳವುಗಳು (ಆಗುತ್ತವೆ.) ಆ ಅನುಷ್ಟುಪ್ ಛಂದಸ್ಸಿಗೇನೇ (ನಾಲ್ಕು ಅಕ್ಷರಗಳನ್ನು ತೆಗೆದುಕೊಂಡು) ಬೃಹತೀಸಹಸ್ರವನ್ನು ಸಂಪಾದಿಸಿದರೆ ನಾಲ್ಕು ಅಕ್ಷರಗಳುಳ್ಳ ಒಂಭತ್ತು ವಿಭಾಗವುಳ್ಳವುಗಳಾಗಿ (ನಾಲ್ಕು ಒಂಭತ್ಲಿ ೩೬ ಅಕ್ಷರವುಳ್ಳವುಗಳಾಗಿ) ಆಗುತ್ತದೆ. ॥ (b) 'ವಾಕ್' ಎಂದು ಹೆಸರುಳ್ಳ ಅನುಷ್ಟುಪ್ ಛಂದಸ್ಸು, 'ಋಚಾ' ಅಂದರೆ ಋಗ್ರೂಪದಿಂದ (ಅಂದರೆ ಬೃಹತೀರೂಪತ್ವವನ್ನು ಹೊಂದಿ) 'ಋತಂ ಸ್ಪೃಷ್ಟಾ' ಅಂದರೆ ಸತ್ಯರೂಪನಾದ ಶ್ರೀ ಹರಿಯನ್ನು ಮುಚ್ಚಿದ್ದು ಆಗುತ್ತದೆ. (ಅಂದರೆ ಶ್ರೀ ಹರಿಯ ಸನ್ನಿಧಾನ ವಿಶೇಷಕ್ಕೆ ಪಾತ್ರವಾಗಿಯದೆ). ॥ (c) 'ಇಂದ್ರಸ್ಯ' ಅಂದರೆ ಪರಮೈಶ್ವರ್ಯಸಂಪನ್ನನಾದ ಶ್ರೀಪರಮಾತ್ಮನಿಗೆ ಸಂಬಂಧಿಯಾಗಿ ಆತನಿಗೆ ಅತಿಶಯವಾಗಿ ಪ್ರಿಯನಾದುದರಿಂದ ಯಾವಾತನು ಎಲ್ಲಾ ಪ್ರಾಣರಿಗೂ ಸ್ವಾಮಿಯಾದ ಮುಖ್ಯಪ್ರಾಣನೋ, ಆತನಿಗೆ ಈ ಬೃಹತೀಸಹಸ್ರವು ಪ್ರತಿಮಾರೂಪವಾಗಿಯದೆ. ॥ (d) ಆ ವಾಯುವು ಶ್ರೀಹರಿಗೆ ಮುಖ್ಯವಾಗಿ ಪ್ರತಿಮಾರೂಪನಾಗಿದ್ದಾನೆ. ಆದುದರಿಂದ ಆ ಬೃಹತೀ ಸಹಸ್ರವು ಶ್ರೀ ಹರಿಗೇನೇ ಮುಖ್ಯವಾಗಿ ಪ್ರತಿಮಾರೂಪವಾಗಿಯದೆ.

ಭಾ॥ (a) ತಸ್ಮಾತ್ತಸ್ಯೈವ ಬೃಹತೀಸಹಸ್ರತ್ವೇನ ಸಂಪನ್ನಸ್ಯ ಪಂಚವಿಂಶೋತ್ತ್ರೈಕಾದಶಶತಾನುಷ್ಟುಪ್ತ್ವೇನ ಸಂಪಾದನೇ ಬೃಹತೀದ್ದೈವತ ಪ್ರಾಣರೂಪಾದ್ವಾಯೋರನುಷ್ಟುಬ್ದೇವತಾಯಾ ವಾಗ್ರೂಪಾಯಾ ಉಮಾಯಾ ಉತ್ಪತ್ತಿಃ ಸಂಸ್ಕೃತಾ ಭವತ್ಯೇವಂ ಜಾನತಃ । (b) ತತಶ್ಚೋಮಾಯಾ ಅಪಿ ಭಗವತ್ಪ್ರತಿಮಾತ್ವಾದ್ವಿಷ್ಣುಪ್ರತಿಮಾಸ್ಥಾಪಕ ಏವ ಭವತ್ಯೇತತ್ಸರ್ವಂ ಸಮ್ಯಗ್ಧ್ಯಾಯನ್ ॥ (c) ವಿಷ್ಣುರೇವ ಬೃಹತ್ಯಾಃ ಪ್ರಾಣಸ್ಯಾಧಿಷ್ಠಾತೃದೇವತಾ । ಪ್ರತಿಮಾಧಿಷ್ಠಿತದೇವತಾವತ್ ॥ (d) ತಸ್ಮಾದ್ಬೃಹತ್ಯಾಃ ಸಕಾಶಾದನುಷ್ಟುಪ್ಸಂಪಾದನೇ ತಸ್ಯೈವ ವಿಷ್ಣೋಃ ಪ್ರತಿಮಾಂತರಂ ತಸ್ಮಾದೇವ ನಿರ್ಮಿತಂ ಭವತಿ । ಅತ ಏವೇಂದ್ರಾತ್ಪರಿತಸ್ವಂ ಮಮೇತ್ಯುಕ್ತಂ ॥

ಅ ॥ (a) ಮುಖ್ಯಪ್ರಾಣನಿಗೆ ಬೃಹತೀಸಹಸ್ರವು ಪ್ರತಿಮಾರೂಪವಾದುದರಿಂದ, ಬೃಹತೀಛಂದಸ್ಸುಳ್ಳ ಋಕ್ಸಹಸ್ರವಾಗಿ ಕೂಡಿದ ಆ ಅನುಷ್ಟುಪ್ ಛಂದಸ್ಸಿಗೇನೇ, ಇಪ್ಪತ್ತೈದು ಹೆಚ್ಚಾದ ಹನ್ನೊಂದು ನೂರು (೧೧೨೫) ಅನುಷ್ಟುಪ್‌ಛಂದಸ್ಸಾಗಿ ಸಂಪಾದನೆಯಾಗುತ್ತಿರಲು, ಬೃಹತಿಗೆ ಅಧಿಪತಿಯಾದ, ಪ್ರಾಣರೂಪನಾದ ವಾಯುವಿನಿಂದ ಅನುಷ್ಟುಪ್ ಛಂದಸ್ಸಿಗೆ ಅಧಿಪತಿಯಾದ, ವಾಗ್ರೂಪಳಾದ ಪಾರ್ವತಿಗೆ ಉತ್ಪತ್ತಿಯು. ಹೀಗೆ ತಿಳಿದುಕೊಂಡವನಿಗೆ (ಅಂದರೆ ಬೃಹತಿಗೆ ಮುಖ್ಯಪ್ರಾಣನು ದೇವತೆಯು. ಅನುಷ್ಟುಪ್‌ಛಂದಸ್ಸಿಗೆ ಪಾರ್ವತಿಯು ದೇವತೆಯು. ಹೀಗೆ ತಿಳಿದುಕೊಂಡವನಿಗೆ) ಚೆನ್ನಾಗಿ ಸ್ಮರಿಸಲ್ಪಟ್ಟದ್ದಾಗುತ್ತದೆ. ॥ (b) ಪಾರ್ವತಿಯು ಉತ್ಪತ್ತಿಯು ಚೆನ್ನಾಗಿ ಸ್ಮರಿಸಲ್ಪಡುವುದರಿಂದಲೇ, ಪಾರ್ವತಿಗೂ ಕೂಡ ಶ್ರೀ ಹರಿಯ ಪ್ರತಿಮಾರೂಪತ್ವವಿದ್ದುದರಿಂದ, ಶ್ರೀ ಹರಿಗೆ ಪ್ರತಿಮೆಯನ್ನು ನಿರ್ಮಿಸುವವನೇ ಆಗುತ್ತಾನೆ ಮೇಲೆ ಹೇಳುವ ಎಲ್ಲಾ ವಿಷಯವನ್ನು ಚೆನ್ನಾಗಿ ಧ್ಯಾನಿಸುವವನಾಗಿಯೇ (ನಿರ್ಮಿಸುತ್ತಾನೆ). ॥ (c) ಶ್ರೀ ಹರಿಯೇ ಬೃಹತಿಗೆ ಅಭಿಮಾನಿಯಾದ ಮುಖ್ಯಪ್ರಾಣನಿಗೆ ನಿಯಾಮಕದೇವತೆಯು, ಪ್ರತಿಮೆಯನ್ನು ಅಧಿಕರಿಸಿಕೊಂಡು ಇರತಕ್ಕ ದೇವತೆಯಂತೆ. 'ಪ್ರತಿಮಾಂ ಪ್ರತಿಮಾಂತಸ್ಥಾಂ ಧ್ಯಾಯೇತ್ತೇಜೋಮಯೀಂ ಪರಾಂ' ಇದೇ ಮೊದಲಾಗಿ ಹೇಳಿದಪ್ರಕಾರ ಶ್ರೀ ಹರಿಗೆ ಬೃಹತಿಯು ಪ್ರತಿಮೆಯು. ಅದರ ಒಳಗೆ ಇರತಕ್ಕುದು ಪ್ರಾಣಪ್ರತಿಮೆಯು. ಅದರಲ್ಲಿ ವಾಸುದೇವನು ಅಧಿಷ್ಠಿತನಾಗಿದ್ದಾನೆ. ॥ (d) ಆದುದರಿಂದ ಅಂದರೆ ವಿಷ್ಣುವಿಗೆ ಮುಖ್ಯವಾಗಿ ಬೃಹತೀ ನಿಯಾಮಕತ್ವವಿದ್ದುದರಿಂದಲೇ, ಬೃಹತೀಛಂದಸ್ಕವಾದ ಋಕ್ಕಿನ ಸಕಾಶದಿಂದ ಅನುಷ್ಟುಪ್ ಛಂದಸ್ಸನ್ನು ಸಂಪಾದಿಸಿದರೆ, ಆ ಪರಮಾತ್ಮನಿಗೇನೇ ಮತ್ತೊಂದು ಪ್ರತಿಮೆಯು ಆ ವಿಷ್ಣುವಿನ ದೆಶೆಯಿಂದಲೇ ನಿರ್ಮಿಸಲ್ಪಟ್ಟದ್ದು ಆಗುತ್ತದೆ. । ಆದುದರಿಂದಲೇ (ನಿರ್ಮಾಣವನ್ನು ಶ್ರೀ ಹರಿಯು ಮಾಡುವುದರಿಂದಲೇ) 'ಇಂದ್ರಾತ್ಪರಿತಸ್ವಂ ಮಮ' ಪರಮೇಶ್ವರನ ಸಾಮರ್ಥ್ಯದಿಂದಲೇ ಪ್ರತಿಮೆಯನ್ನು ನಿರ್ಮಿಸುತ್ತೇನೆ ಎಂದು ಹೇಳಲ್ಪಟ್ಟದೆ.

ಭಾ॥ (a) ಬೃಹತೀಸ್ಥವಿಷ್ಣೋರ್ಬಲಾದೇವ ತತ್ಸಂಪದ್ಯತೇ । ಸ ಹಿ ತಸ್ಯಾಃ ಷಟ್ತ್ರಿಂಶದಕ್ಷರಾದಿತ್ವಮಪಿ ನಿಯಮಯತಿ ತತ್ಪ್ರಸಾದಾದ್ವಾಯುಶ್ಚ ॥ (b) ವಾಯುರೇವ ಯದ್ಭಗವನ್ನಿಯತೋ ನಿಯಮಯತಿ ತಸ್ಮಾದಿಂದ್ರಾತ್ಪರೀತ್ಯಸ್ಯೈಂದ್ರಾತ್ಪ್ರಾಣಾದಿತಿ ವ್ಯಾಖ್ಯಾ ಕೃತಾ ॥

ಅ || (a) ಬೃಹತಿಯಲ್ಲಿರತಕ್ಕ ಶ್ರೀ ಹರಿಯ ಸಾಮರ್ಥ್ಯದಿಂದಲೇ ಆ ಅನುಷ್ಟುಪ್ ಸಂಪಾದನೆ ಮೊದಲಾದುದು ಕೂಡುತ್ತದೆ. (ಬೃಹತಿಯು ಶಕ್ತಿಯಿಂದಾಗಲೀ, ಪುರುಷನ ಶಕ್ತಿಯಿಂದಾಗಲೀ ಅಲ್ಲವೇ ಅಲ್ಲ). ಆ ಪರಮಾತ್ಮನೇ ಆ ಬೃಹತಿಯ ಮೂವತ್ತಾರು ಅಕ್ಷರವನ್ನು, ಸಂಬಂಧವನ್ನು ತಿಳಿಸಿಕೊಡುವಿಕೆ ಇದೇ ಮೊದಲಾದುದನ್ನು ಕೂಡ ನಿಯಮಿಸುತ್ತಾನೆ. ಆತನ ಅನುಗ್ರಹದಿಂದಲೇ ಮುಖ್ಯಪ್ರಾಣನೂ ಕೂಡ ನಿಯಮಿಸುತ್ತಾನೆ.) || (b) ಯಾವಕಾರಣದಿಂದ ಮುಖ್ಯಪ್ರಾಣನೇ ಪರಮಾತ್ಮನಿಂದ ನಿಯಮಿಸಲ್ಪಟ್ಟವನಾಗಿಯೇ ನಿಯಮಿಸುತ್ತಾನೋ ಆದುದರಿಂದ 'ಇಂದ್ರಾತ್ಪರಿ' ಎಂಬುವುದಕ್ಕೆ 'ಐಂದ್ರಾತ್ ಪ್ರಾಣಾತ್' ಪರಮಾತ್ಮನಿಂದ ನಿಯಮಿಸಲ್ಪಟ್ಟ ಮುಖ್ಯಪ್ರಾಣನಿಂದ, ಎಂದು ವ್ಯಾಖ್ಯಾನವು ಮಾಡಲ್ಪಟ್ಟಿತು.

ಭಾ|| (a) ಯಾವತ್ಸಹಸ್ರಂ ಬೃಹತೀ ತಾವಚ್ಛಂಸೇದನುಷ್ಟುಭಾ | ಛಂದಸಾ ವಾ ತದನ್ಯೇಷಾಂ ಬೃಹತೀತ್ವಂ ಸ್ಮರೇತ್ತತಃ || (b) ತೇನ ಸರ್ವಗತೋ ವಿಷ್ಣುಃ ಸರ್ವಸ್ಮಾದಧಿಕೋಽರ್ಚಿತಃ | ಭವೇದೇವಂ ಜಾನತಸ್ತು ಕೃತಾ ಚ ಪ್ರತಿಮಾ ಭವೇತ್ || (c) ತಥಾ ವಾಯೋರಪಿ ಕೃತಾ ವಾಯುರ್ಹಿ ಪ್ರತಿಮಾ ಹರೇಃ | ತಸ್ಮಾದ್ವಾಯುಕೃತಂ ಸರ್ವಂ ಕ್ರಿಯತೇ ವಿಷ್ಣುನೈವ ಹಿ || (d) ಬೃಹತೀಸಹಸ್ರಂ ಸಂಪನ್ನಮೇಕಾದಶಶತಂ ಪುನಃ | ಅನುಷ್ಟುಭಾಂ ಸ್ಮರೇತ್ಪಂಚವಿಂಶೋತ್ತರಮುದಾರಧೀಃ || (e) ತೇನ ವಾಯೋರುಮೋತ್ಪತ್ತಿಃ ಸಮ್ಯಗ್ಜ್ಞಾನಾತ್ಸ್ಮೃತಾ ಭವೇತ್ | ತತೋ ದ್ವಿತೀಯಪ್ರತಿಮಾ ವಿಷ್ಣೋರೇವ ಕೃತಾ ಭವೇತ್ || (f) ವಿಷ್ಣುನಾನುಪ್ರವಿಷ್ಟೌ ಯದುಮಾ ವಾಯುಶ್ಚ ತದ್ವಶೌ | ಇತ್ಯಾದಿ ಚ ||

ಅ || (a) ಯಾವುದೊಂದು ಬೃಹತೀ ಸಹಸ್ರವದೆಯೋ, ಅದು ಅನುಷ್ಟುಪ್‌ಛಂದಸ್ಸಿನಿಂದ (ಸಂಪನ್ನವಾಗಿ) ಸ್ತುತಿಸತಕ್ಕುದು. ಆದುದರಿಂದ ಇತರಗಳಿಗೂ ಬೃಹತೀಛಂದಸ್ಸ್ವರೂಪತ್ವವನ್ನು ಸ್ಮರಿಸತಕ್ಕದು. || (b) ಆದುದರಿಂದ ಬೃಹತಿಮೊದಲಾದ ಎಲ್ಲಾ ಛಂದಸ್ಸುಗಳಲ್ಲಿಯೂ ಇರತಕ್ಕ ಶ್ರೀ ಹರಿಯು ಚೇತನಾ ಚೇತನಾತ್ಮಕ ಎಲ್ಲಾ ವಸ್ತುವಿನಿಂದಲೂ ಶ್ರೇಷ್ಠನೂ ಪೂಜಿಸಲ್ಪಟ್ಟವನೂ ಆಗುವನು. ಹೀಗೆ ತಿಳಿದವನಿಗಾದರೂ ಪ್ರತಿಮೆಯು ಮಾಡಲ್ಪಟ್ಟದ್ದಾಗಿ ಆಗುವುದು. || (c) ಅದೇ ರೀತಿಯಾಗಿ ಮುಖ್ಯಪ್ರಾಣನಿಗೂ ಪ್ರತಿಮೆಯು ಮಾಡಲ್ಪಡುತ್ತದೆ. ಮುಖ್ಯಪ್ರಾಣನು ಶ್ರೀ ಹರಿಗೆ ಪ್ರತಿಮಾರೂಪನಷ್ಟೇ! ಮುಖ್ಯಪ್ರಾಣನು ಪ್ರತಿಮಾರೂಪನಾದುದರಿಂದಲೇ ವಾಯುವಿನಿಂದ ಮಾಡಲ್ಪಟ್ಟದ್ದೆಲ್ಲವೂ ಶ್ರೀ ಹರಿಯಿಂದಲೇ ಮಾಡಲ್ಪಡುತ್ತದೆ. ಸರ್ವಶಾಸ್ತ್ರಸಿದ್ಧವು || (d) ಉತ್ಕೃಷ್ಟವಾದ ಬುದ್ಧಿಯುಳ್ಳವನು ಬೃಹತೀಸಹಸ್ರವನ್ನು ಇಪ್ಪತ್ತೈದರಿಂದ ಹೆಚ್ಚಾದ ಹನ್ನೊಂದು ನೂರು (೧೧೨೫) ಅನುಷ್ಟುಪ್‌ಛಂದಸ್ಸುಗಳಿಂದ ಸಂಪಾದಿಸಿಕೊಳ್ಳಲ್ಪಟ್ಟದ್ದನ್ನಾಗಿ ಸ್ಮರಿಸತಕ್ಕದು. || (e) ಆತನಿಂದ, ಯಥಾರ್ಥಜ್ಞಾನದಿಂದ ಪಾರ್ವತಿಯ ಉತ್ಪತ್ತಿಯು ಸ್ಮರಿಸಲ್ಪಟ್ಟದ್ದು ಆಯಿತು. ಅದರಿಂದ ಶ್ರೀ ಹರಿಗೇನೇ (ಬೃಹತಿಯಲ್ಲಿರತಕ್ಕ ಪ್ರಾಣನಿಗಿಂತ) ಎರಡನೇ ಪ್ರತಿಮೆಯು ಮಾಡಲ್ಪಟ್ಟದ್ದು ಆಯಿತು. || (f) ಯಾವಕಾರಣದಿಂದ ಪಾರ್ವತಿಯೂ ಮುಖ್ಯಪ್ರಾಣನೂ ಕೂಡ ಪರಮಾತ್ಮನಿಂದ ಪ್ರವಿಷ್ಟರಾಗಿರುವರೋ, (ಆದುದರಿಂದ) ಹರಿಯ ಅಧೀನರಾಗಿರುತ್ತಾರೆ. ಇದೇ ಮೊದಲಾದ ಪ್ರಮೇಯವು ಹೇಳಲ್ಪಟ್ಟಿದೆ.

ಭಾ॥ (a) ಸ್ರಕ್ತಯೋ ವಿಭಾಗಾಃ । ಸ್ರಕ್ತಿರಂಶೋ ವಿಭಾಗಶ್ಚ ವಿದಲಂ ಚೇತಿ ಕಥ್ಯತೇ ॥ ಇತಿ ಶಬ್ದನಿರ್ಣಯೇ ॥ (b) ಸ ವಾ ಏಷ ವಾಚಃ ಪರಮೋ ವಿಕಾರಃ । ಅಕಾರಾಖ್ಯವಾಗ್ವಿಕಾರೇಷೂತ್ತಮೋ ಬೃಹತೀಸಹಸ್ರಾಖ್ಯಃ॥ (c) ಅಕಾರಃ ಪ್ರಥಮಂ ನಾಮ ವಿಷ್ಣೋಃ ಸರ್ವಗುಣಾನ್ಬ್ರುವನ್ । ಸರ್ವದೋಷವಿರುದ್ಧತ್ವಾದ್ಗುಣಾನಾಂ (d) ಅನ್ಯತಾಮಪಿ ॥ ವಿಷ್ಣೋರ್ವದತಿ ಜೀವೇಭ್ಯೋ ಜಡೇಭ್ಯಶ್ಚೈವ ಸರ್ವದಾ । ಅಭಾವಂ ಚೈವ ದೋಷಾಣಾಂ ಸರ್ವೇಷಾಂ ಕೇಶವೇ ವದೇತ್ ॥

ಅ ॥ (a) 'ನವಸ್ರಕ್ತಿ' ಎಂಬಲ್ಲಿ 'ಸ್ರಕ್ತಿಗಳು' ಅಂದರೆ ವಿಭಾಗಗಳು. 'ವಿಭಾಗವು' 'ಸ್ರಕ್ತಿಃ ಅಂಶಃ ವಿದಲಂ' ಇತ್ಯಾದಿ ಶಬ್ದಗಳಿಂದ ಹೇಳಲ್ಪಡುತ್ತದೆ. ಎಂದು ಶಬ್ದನಿರ್ಣಯದಲ್ಲಿ ಇದೆ. ॥ (b) 'ಸ ವಾ ಏಷ ವಾಚಃ ಪರಮೋ ವಿಕಾರಃ' ಅಂದರೆ ಅಕಾರವೆಂದು ಹೆಸರುಳ್ಳದ್ದು ವಾಕ್ (ಮಾತು) ಅದರ ವಿಕಾರಗಳ ಮಧ್ಯದಲ್ಲಿ ಬೃಹತೀಸಹಸ್ರವೆಂದು ಹೆಸರುಳ್ಳ ಋಕ್ಸಮುದಾಯವು ಶ್ರೇಷ್ಠವಾಗಿದೆ. ॥ (c) ಗುಣಗಳಿಗೆ ಎಲ್ಲಾ ದೋಷಗಳಿಂದ ವಿರೋಧವಿದ್ದುದರಿಂದ ಅಂದರೆ ಗುಣಗಳು ದೋಷವಿರುದ್ಧಗಳಾದುದರಿಂದ ಎಲ್ಲಾ ಗುಣಗಳನು ಅಕಾರವು ಹೇಳುವುದಾಗಿ ಶ್ರೀ ಹರಿಗೆ ಮುಖ್ಯವಾಗಿ ನಾಮಧೇಯವಾಗಿದೆ. ॥ (d) (ಅಲ್ಲದೆ ಆ ಅಕಾರವು) ಶ್ರೀ ಪರಮಾತ್ಮನಿಗೆ ಜೀವರಿಂದಲೂ, ಜಡಪದಾರ್ಥಗಳಿಂದಲೂ, ಯಾವಾಗಲೂ ಭೇದವನ್ನೂ ಕೂಡ ಹೇಳುತ್ತದೆ. ಅಲ್ಲದೆ ಎಲ್ಲಾ ದೋಷಗಳ ರಾಹಿತ್ಯವನ್ನೂ ಕೂಡ ಶ್ರೀ ಪರಮಾತ್ಮನಲ್ಲಿ ಹೇಳುತ್ತದೆ.

ಭಾ॥ (a) ಸಮ್ಯಗ್ವಕ್ತೃತ್ವತಸ್ತಸ್ಮಾದಕಾರೋ ಮುಖ್ಯನಾಮ ಹಿ । ತದರ್ಥಾನೇಕದೇಶೇನ ಶಬ್ದಾಃ ಸರ್ವೇಽಪಿ ಚೋಚಿರೇ ॥ (b) ವ್ಯಾಖ್ಯಾವ್ಯಾಖ್ಯೇಯರೂಪತ್ವಂ ವಿಕಾರತ್ವಮಿಹೋದಿತಂ । ವಿಕಾರತ್ವಂ ಚ ನಾನ್ಯತ್ಸ್ಯಾನ್ನಿತ್ಯಾ ವೇದಾ ಯತೋಽಖಿಲಾಃ ॥ (c) ವಾಚಕೇಷು ತಥಾ ವಿಷ್ಣೋಃ ಸಹಸ್ರಬೃಹತೀಮಯಂ । ಉಕ್ಥಮುತ್ತಮಮುದ್ದಿಷ್ಟಂ ವ್ಯಾಖ್ಯಾಕಾರಸ್ಯ ಸಾ ಪರಾ ॥ (d) ಅನ್ಯೇಽಪಿ ಶಬ್ದಾಃ ಸರ್ವೇಽಪಿ ಹ್ಯಕಾರಾರ್ಥಾಭಿಧಾಯಿನಃ । ಏಷಾಂ ಪರಮಮುಖ್ಯಂ ತತ್ತದೇತತ್ಪಂಚಧಾ ಸ್ಥಿತಂ । (e) ವ್ಯಾಖ್ಯಾನಮೇವಾಕಾರಸ್ಯ ಸರ್ವೈವೋಕ್ಥೇನ ಸರ್ವಶಃ । ಮಿತಾಮಿತೇ ಸ್ವರಸ್ಸತ್ಯಮನೃತಂ ಚೇತಿ ಪಂಚಧಾ ॥

ಅ ॥ (a) ಆದುದರಿಂದ ಅಂದರೆ ಹಿಂದೆ ಹೇಳಿದ ರೀತಿಯಿಂದ ಅಕಾರಕ್ಕೆ ಸರ್ವದೋಷವಿರುದ್ಧಗಳಾದ ಗುಣಗಳಿಂದೊಡಗೂಡಿದ ಪರಬ್ರಹ್ಮನನ್ನು ಪ್ರತಿಪಾದಿಸುವ ಶಕ್ತಿಯಿದ್ದುದರಿಂದ, (ಶ್ರೀ ಹರಿಯನ್ನು) ಚೆನ್ನಾಗಿ ಪ್ರತಿಪಾದಿಸುವುದರಿಂದ ಅಕಾರವು ಮುಖ್ಯ ನಾಮವೇ ಸರಿ. । ಎಲ್ಲಾ ಶಬ್ದಗಳೂ ಕೂಡ ಆ ಅಕಾರದ ಅರ್ಥಗಳನು ಏಕದೇಶದಿಂದ (ಅಂದರೆ ಕೆಲವು, ಗುಣಗಳನ್ನೂ, ಕೆಲವು ಶಬ್ದಗಳು ದೋಷವಿಲ್ಲದಿರುವಿಕೆಯನ್ನೂ, ಕೆಲವು ಕೆಲವುಗುಣಗಳನ್ನೂ ) ಈ ಪ್ರಕಾರ ಏಕದೇಶವಾಗಿಯೇ ಹೇಳುತ್ತವೆ. ॥ (b) ಇಲ್ಲಿ ವಿಕಾರತ್ವವೆಂದರೆ ವ್ಯಾಖ್ಯಾನ, ವ್ಯಾಖ್ಯೇಯಸ್ವರೂಪತ್ವವೇ ಹೇಳಲ್ಪಟ್ಟಿದೆ. । ಯಾವ ಕಾರಣದಿಂದ ಎಲ್ಲಾ ವೇದಗಳೂ ಅನಾದಿ ನಿತ್ಯಗಳೇ ಆಗಿವೆಯೋ (ಆದ್ದುದರಿಂದ) ವಿಕಾರತ್ವವೆಂದರೆ ಇತರವಾದುದು ಆಗಲಾರದು. ॥

(c) ಹಾಗೆಯೇ ಶ್ರೀ ಹರಿಯನ್ನು ಪ್ರತಿಪಾದಿಸುವ ಶಬ್ದಗಳಲ್ಲಿ ಬೃಹತೀಸಹಸ್ರರೂಪವಾದ ಮಹದುಕ್ಥವು ಶ್ರೇಷ್ಠವಾಗಿ ಹೇಳಲ್ಪಟ್ಟಿದೆ. ಆ ಸಹಸ್ರ ಬೃಹತಿಯೇ ಅಕಾರಕ್ಕೆ (ಇತರ ಶಬ್ದಗಳಿಗಿಂತ) ಅತ್ಯುತ್ತಮವು ವ್ಯಾಖ್ಯಾನವು. ॥ (d) ಇತರ ಎಲ್ಲಾ ಶಬ್ದಗಳೂ ಕೂಡ ಅಕಾರಾರ್ಥವನ್ನೇ ಹೇಳುತ್ತವೆ. । ಈ ಶಬ್ದಗಳ ಮಧ್ಯದಲ್ಲಿ ಆ ಬೃಹತೀಸಹಸ್ರವು ಅತಿ ಮುಖ್ಯವಾದುದು (ಇತರವಾದುದು ಕೇವಲ ವಿಕಾರವಾದುದು) ಆ ಬೃಹತೀಸಹಸ್ರವೂ ಈ ವಿಕಾರರೂಪವಾದ ಶಬ್ದಸಮುದಾಯವೂ ಕೂಡ ಐದು ಪ್ರಕಾರವಿದೆ. ॥ (e) ಉಕ್ಥವಾದ ಬೃಹತೀಸಹಸ್ರದಿಂದ ಕೂಡಿಕೊಂಡೇ ಇರತಕ್ಕ ಎಲ್ಲವು 'ಮಿತ, ಅಮಿತ, ಸ್ವರ, ಸತ್ಯ, ಅನೃತ' ಎಂದು ಐದು ಪ್ರಕಾರವೂ ಕೂಡ ಅಕಾರಕ್ಕೇನೇ ವ್ಯಾಖ್ಯಾನರೂಪವಾಗಿದೆ.

ಭಾ॥ **(a)** ತಸ್ಮಾದಕಾರ ಏವಾಯಂ ಸರ್ವವಾಗಾತ್ಮಕಃ ಶ್ರುತಃ । ತಸ್ಯೈವ ವ್ಯಕ್ತಿರೂಪೋಽಯಂ ಸರ್ವವೇದಾದಿವಿಸ್ತರಃ ॥ **(b)** ತಸ್ಮಾತ್ಸರ್ವಗುಣಾನ್ವಿಷ್ಣೋರಕಾರೋ ವಕ್ತಿ ಯತ್ಪ್ರಭೋಃ । ತದ್ವ್ಯಕ್ತಯೋಽಪಿ ಶಬ್ದಾ ಯೇ ಸರ್ವೇ ವಿಷ್ಣುಗುಣಬ್ರುವಾಃ ॥

ಅ ॥ (a) ಯಾವ ಕಾರಣದಿಂದ ಆ ಅಕಾರಕ್ಕೇನೇ ಈ ಎಲ್ಲಾ ವೇದಮೊದಲಾದವುಗಳ ವಿಸ್ತಾರವು ವ್ಯಾಖ್ಯಾನರೂಪವಾಗಿದೆಯೋ, ಅದುದರಿಂದ ಈ ಅಕಾರವೇ.('ಸರ್ವಾ ವಾಕ್' ಇತ್ಯಾದಿ ಶ್ರುತಿಯಲ್ಲಿಯೂ 'ಅಕಾರಃ ಸರ್ವವಾಗಾತ್ಮಾ' ಇದೇ ಮೊದಲಾದ ಸ್ಮೃತಿಯಲ್ಲಿಯೂ) ಸಮಸ್ತ ವಾಕ್‌ಸ್ವರೂಪವುಳ್ಳದ್ದು ಎಂದು ಪ್ರಸಿದ್ಧವಾಗಿಯದೆ. ॥ (b) ಅಂತೂ ಯಾವ ಕಾರಣದಿಂದ ಅಕಾರವು ಶ್ರೀ ಪರಮಾತ್ಮನ ಎಲ್ಲಾ ಗುಣಗಳನ್ನು ಹೇಳುತ್ತದೋ, ಆದುದರಿಂದ ಅದರ ವಿವರಣರೂಪಗಳಾದ ಯಾವ ಶಬ್ದಗಳು ಇವೆಯೋ ಅವುಗಳೆಲ್ಲವೂ ಶ್ರೀ ಹರಿಯ ಗುಣಗಳನ್ನೇ ಹೇಳುತ್ತವೆ. ॥ (ಹೀಗಿರಲು ವ್ಯಾಖ್ಯಾನಗಳಲ್ಲಿ ಅತ್ಯುತ್ತಮವಾದ ಬೃಹತೀಸಹಸ್ರವು ಅಧಿಕವಾಗಿ ಪರಮಾತ್ಮನ ಗುಣಗಳನ್ನು ಹೇಳುತ್ತದೆಂದು ಏನು ಹೇಳತಕ್ಕದು ಇದೆ.)

ಭಾ॥ **(a)** ಅಕಾರಸ್ಯ ತಥೋಪಾಂಶೋರಭಿಮಾನೀ ತು ಮಾರುತಃ । **(b)** ದೇಹೇಂದ್ರಿಯಾಂತಃಕರಣ ನಾಮ್ನೋಽಸ್ಯ ದ್ವಿವಿಧಸ್ಯ ಚ ॥ ಸ್ಥೂಲಸೂಕ್ಷ್ಮಶರೀರಸ್ಯ ಸರ್ವೇಷಾಮಭಿಮಾನಿನೀ । ಭಾರತ್ಯುಚ್ಚೋದಿತಸ್ಯಾಪಿ ಹ್ಯಕಾರಸ್ಯಾಭಿಮಾನಿನೀ ॥ **(c)** ತಸ್ಮಾದುಚ್ಚಾದುಪಾಂಶುರ್ಹಿ ಜಪಾದಿಷು ಫಲಾಧಿಕಃ । ವಾಯುಃ ಪತಿರ್ಹಿ ಭಾರತ್ಯಾ ಉಪಾಂಶೋರ್ದೇವತಾ **(d)** (ಮ)ತತಃ ॥ ಅಕಾರಸ್ಯ ವಿಕಾರೋಽಯಮೋಂಕಾರ ಇತಿ ಕಥ್ಯತೇ । ಅಧಿಕೋಚ್ಚತ್ವಮಾನಂ ಹಿ ತಸ್ಯಾರ್ಥಃ ಸಮುದೀರಿತಃ ॥ **(e)** ಅಕಾರೇಸ್ಯೈವ ತತ್ಸರ್ವಮುಕ್ತಮಾಧಿಕ್ಯವಕ್ತೃತಃ । ಅಧಿಕೋಚ್ಚಸ್ವರೂಪೋಽಸೌ ಮಾತ್ರಾಚಾಧಿಕ ಏವ ಹಿ ॥

ಅ ॥ (a) ಹಾಗೆಯೇ ಮೆಲ್ಲಗೆ ಉಚ್ಚರಿಸಲ್ಪಟ್ಟ ಅಕಾರಕ್ಕೆ ಅಭಿಮಾನಿಯಾದರೂ ಮುಖ್ಯಪ್ರಾಣನಾಗಿದ್ದಾನೆ. ॥ (b) ಶರೀರ, ಇಂದ್ರಿಯ, ಅಂತಃಕರಣನಾಮಕವಾದ ಈ ಎರಡು ವಿಧವಾದ ಸ್ಥೂಲ ಶರೀರಕ್ಕೂ, ಸೂಕ್ಷ್ಮ ಶರೀರಕ್ಕೂ, ಈ ಪ್ರಕಾರವಾಗಿ ಎಲ್ಲರಿಗೂ ಅಭಿಮಾನಿನಿಯಾದ ಭಾರತಿಯು ಘಟ್ಟಿಯಾಗಿ ಉಚ್ಚರಿಸಲ್ಪಟ್ಟ ಅಕಾರಕ್ಕೂ ಅಭಿಮಾನಿನಿಯಾಗಿದ್ದಾಳೆ. ॥ (c) ಯಾವ ಕಾರಣದಿಂದ ಭಾರತಿಗೆ ಸ್ವಾಮಿಯಾದ ವಾಯುದೇವರು

ಮೆಲ್ಲಗೆ ಉಚ್ಚರಿಸಿದ ಅಕಾರಕ್ಕೆ ಅಧಿಪತಿಯಾಗಿರುತ್ತಾರೋ ಆದುದರಿಂದ ಘಟ್ಟಿಯಾಗಿ ಉಚ್ಚರಿಸುವುದಕ್ಕಿಂತ ಮೆಲ್ಲಗೆ ಉಚ್ಚರಿಸುವುದು ಜಪ ಮೊದಲಾದುವುಗಳಲ್ಲಿ ಹೆಚ್ಚು ಫಲವುಳ್ಳದ್ದು. ಸರ್ವ ಶಾಸ್ತ್ರಸಿದ್ಧವು. ॥ (d) ಅಕಾರವು ಸರ್ವ ವಚನಗಳಿಂದಲೂ ವ್ಯಾಖ್ಯಾನಮಾಡಿಸಿಕೊಳ್ಳಲಿಕ್ಕೆ ಯೋಗ್ಯವಾದುದರಿಂದ ಈ ಓಂಕಾರವು ಅಕಾರದ ವಿಕಾರವೆಂದು ಹೇಳಲ್ಪಡುತ್ತದೆ. ಆ ಓಂಕಾರಕ್ಕೆ (ಅದರಲ್ಲಿ ಸೇರಿದ ಅಕಾರದಿಂದ) ಆಧಿಕ್ಯವು, (ಉಕಾರದಿಂದ) ಉಚ್ಚತ್ವವು, (ಸರ್ವ ವೇದಗಳಿಂದ) ಮಿತಿಯು, ಈ ರೀತಿಯಾಗಿ ಅರ್ಥವು ('ಅಕಾರೇಣಾಧಿಕಂ ಪ್ರೋಕ್ತಂ ಉಕಾರೇಣೋಚ್ಚಮಿಷ್ಯತೇ । ತಥಾ ಮಿತಂ ಸರ್ವವೇದೈಃ' ಇತ್ಯಾದಿಗಳಲ್ಲಿ) ಹೇಳಲ್ಪಡುತ್ತದೆ. ॥ (e) ಆ ಎಲ್ಲವೂ ಅಂದರೆ ಓಂಕಾರದಲ್ಲಿ ಸೇರಿದ 'ಅ ಉ ಮ್' ಎಂಬೀ ಮೂರು ಅಕ್ಷರಗಳಲ್ಲಿ ಹೇಳಲ್ಪಟ್ಟದ್ದೆಲ್ಲವೂ ಆಧಿಕ್ಯರೂಪವಾದ ಅರ್ಥವನ್ನು ಹೇಳುವುದರಿಂದ ಅಕಾರದಿಂದಲೇ ಹೇಳಲ್ಪಟ್ಟದೆ. । ಈ ಅಕಾರವು ಹೆಚ್ಚು ಉತ್ಕೃಷ್ಟಸ್ವರೂಪವುಳ್ಳದ್ದು. ಅತ್ಯಧಿಕವಾಗಿಯೂ ಹೆಚ್ಚು ಮಿತಿ (ಜ್ಞಾನ)ಯನ್ನು ಪ್ರತಿಪಾದಿಸುವ ಶಕ್ತಿಯಿದ್ದುದರಿಂದ 'ಮಾತೃ' ಎಂದೂ ಆಗುತ್ತದೆ. ('ನಾರಾಯಣ' ಎಂಬ ಶಬ್ದವೂ ಓಂಕಾರಕ್ಕೆ ವ್ಯಾಖ್ಯಾನರೂಪವಾದುದರಿಂದ ಅಕಾರದ ಅರ್ಥವೇ ಆಗಿಯದೆ ಎಂದು ಹೇಳುತ್ತಾರೆ.)

**ಭಾ॥** (a) ಏಕಾರ್ಥತ್ವಾದಕಾರೋಽಸೌ ನಕಾರತ್ವಮುಪಾಗತಃ । ದೀರ್ಘೀಭೂತಃ ಪುನಸ್ತೇನೈವಾಕಾರೇಣ ಸಹ ಸ್ಥಿತಃ ॥ (b) ಅಭಾವವಾಚ್ಯಕಾರಸ್ಯ ಹ್ಯರ್ಥೋ ರೇಫಃ ಕ್ಷಯಂ ವದನ್ । ಸೋಽಪ್ಯಕಾರೇಣ ಸಹಿತೋ ದೀರ್ಘತ್ವಂ ಸಮುಪಾಗತಃ ॥ (c) ಅಭಾವವಾಚ್ಯಕಾರಃ ಸ ಏಕಾರ್ಥಾದ್ಗತ್ಯಭಾವಯೋಃ । ಯಕಾರತ್ವಂ ಗತಸ್ತಸ್ಮಾನ್ನೋ ರೇಫಸ್ಯೋತ್ತರತ್ವತಃ ॥ ಣತ್ವಂ ಗತೋ ಹ್ಯಕಾರೋಽಸೌ ನೋ ವಿರುದ್ಧಾರ್ಥವಾಚಕಃ ॥

**ಅ** ॥ (a) (ಅನ್ಯತ್ವ ಅಂದರೆ ಬೇರೆ ಎಂದು ಅರ್ಥವುಳ್ಳ) ಈ ಅಕಾರವು ಏಕಾರ್ಥಕವಾದುದರಿಂದ 'ನ'ಕಾರತನವನ್ನು ಹೊಂದಿತು. ಪುನಃ ಬೇರೆ ಎಂಬೀ ಅರ್ಥವುಳ್ಳ ಆ ಅಕಾರದಿಂದಲೇ ಕೂಡಿದ್ದಾಗಿ ದೀರ್ಘತನವನ್ನು ಹೊಂದಿತು. ॥ (b) (ರೀಙಕ್ಷಯೇ ಎಂಬೀ ಧಾತು ವ್ಯಾಖ್ಯಾನದಿಂದ) ನಾಶವನ್ನು ಹೇಳುವ ರೇಫವು ಅಭಾವರೂಪ ಅರ್ಥವನ್ನು ಹೇಳುವ ಅಕಾರಕ್ಕೇನೇ ಅರ್ಥವಾಗಿಯದೆ. ಆ ರೇಫವೂ ಕೂಡ ಆಧಿಕ್ಯರೂಪ ಅರ್ಥವನ್ನು ಹೇಳುವ ಅಕಾರದಿಂದ ಸಹಿತವಾಗಿಯೇ ದೀರ್ಘತನವನ್ನು ಹೊಂದಿತು. ॥ (c) ಆ ಅಭಾವವನು ಹೇಳುವ ಅಕಾರವೇ (ಗತಿಃ=ಅಪಗತಿಯು ಅಂದರೆ ವಿನಾಶವು ಆದುವರಿಂದ) ಗತಿ ಅಭಾವ ಶಬ್ದಗಳಿಗೆ ಒಂದೇ ಅರ್ಥವಿರುವುದರಿಂದ ಯಕಾರತ್ವವನ್ನು ಹೊಂದಿತು. ಆ ಯಕಾರದಿಂದ (ಪರದಲ್ಲಿರತಕ್ಕ) ನಕಾರವು ರೇಫದ ಪರದಲ್ಲಿದ್ದುದರಿಂದ ('ರಷಾಭ್ಯಾಂ ನೋ ಣಃ ಸಮಾನಪದೇ' ಎಂಬೀ ಸೂತ್ರಾನುಸಾರವಾಗಿ) ಣತ್ವವನ್ನು ಹೊಂದಿತು. ಈ ಣತ್ವವನ್ನು ಹೊಂದಿದ ನಕಾರವು ವಿರುದ್ಧವೆಂಬ ಅರ್ಥವನ್ನು ಹೇಳುವ ಅಕಾರವೇ ಸರಿ.

**ಭಾ॥** (a) ಅನ್ಯತ್ವಾತ್ಸರ್ವಜೀವೇಭ್ಯೋ ಜಡೇಭ್ಯಶ್ಚ ಸದೈವ ಹಿ । ಸರ್ವದೋಷೋಜ್ಝಿತತ್ವಾಚ್ಚ ಸರ್ವತೋಽಪ್ಯಧಿಕತ್ವತಃ ॥ (b) ನಿರಾಸನಾಚ್ಚ ದೋಷಾಣಾಂ ಸ್ವಭಕ್ತೇಭ್ಯಃ ಸಮಂತತಃ । ಸರ್ವದೋಷವಿರುದ್ಧೋರುಗುಣಪೂರ್ಣಸ್ವರೂಪತಃ ॥ ನಾರಾಯಣ ಇತಿ ಪ್ರೋಕ್ತೋ ಹ್ಯಕಾರಾರ್ಥೋಽಯ

ಮೇವ ಹಿ । (e) ತಸ್ಮಾದಕಾರಬೀಜೇಯಂ ವಿಷ್ಣೋರ್ನಾರಾಯಣಾಭಿಧಾ ॥ ಪ್ರಣವಶ್ಚ ತತೋಽಕಾರಃ ಪ್ರಧಾನಂ ನಾಮ ಚಕ್ರಿಣಃ ॥

ಅ ॥ (a) (ನಾರಾಯಣ ಶಬ್ದವು ಅಕಾರದ ಸ್ವರೂಪವೂ, ಅದಕ್ಕೆ ಸಮಾನವೂ ಆಗಿದೆ ಎಂದು ಹೇಳಿ ಅದರ ಅರ್ಥವನು ಹೇಳುತ್ತಾರೆ.) ಎಲ್ಲಾ ಜೀವರಿಂದ ಭಿನ್ನನಾದುದರಿಂದಲೂ, (ಇದು ನಕಾರದ ಅರ್ಥವು) ಯಾವಾಗಲೂ (ಸ್ವಾಭಾವಿಕವಾಗಿಯೇ) ಜಡಗಳಿಂದಲೂ ಭಿನ್ನನಾದುದರಿಂದ (ಇದು ಅಕಾರದ ಅರ್ಥವು) ಈ ಭೇದವು ಸಾರ್ವಕಾಲಿಕವು. ಸ್ವಾಭಾವಿಕವೆಂಬುವುದು ('ಸದೈವ' ಎಂಬುವುದು ನಕಾರದಿಂದ ಮೇಲೆ ಇದ್ದ ಅಕಾರದಿಂದ ಪರವಾದ ಅಕಾರದ ಅರ್ಥವು) ಎಲ್ಲಾ ದೋಷಗಳಿಂದ ರಹಿತನಾದುದರಿಂದಲೂ (ಇದು ರೇಫದ ಅರ್ಥವು) ಸರ್ವರಿಂದಲೂ ಅತ್ಯುತ್ತಮನಾದುದರಿಂದ (ರೇಫದಿಂದ ಪರವಾದ ಅಕಾರಾರ್ಥವು). ॥ (b) ಸ್ವಭಕ್ತರಿಂದ ಎಲ್ಲಾ ದೋಷಗಳನು ದೂರೀಕರಿಸಿದರಿಂದಲೂ, (ಇದು ಯಕಾರದ ಅರ್ಥವು) ಸುತ್ತಮುತ್ತಲೂ, ಎಲ್ಲಾ ದೋಷಗಳಿಗೂ ವಿರುದ್ಧಗಳಾದ, ಉತ್ಕೃಷ್ಟಗಳಾದ ಅನಂತಾನಂತ ಗುಣಗಳಿಂದಲೇ ಪೂರ್ಣವಾದ ಸ್ವರೂಪವುಳ್ಳವನಾದುದರಿಂದ (ಇದು ಣಕಾರದ ಅರ್ಥವು) ನಾರಾಯಣನೆಂದು ಹೇಳಲ್ಪಟ್ಟಿದ್ದಾನೆ. ॥ (c) ಯಾವ ಕಾರಣದಿಂದ ಇದೇ ಅಕಾರಾರ್ಥವೆಂದು ಪ್ರಸಿದ್ಧವೋ ಅದರಿಂದ ಈ ನಾರಾಯಣವೆಂಬ ಹೆಸರು ಪ್ರಣವ (ಓಂಕಾರ)ವೂ ಕೂಡ ಅಕಾರಕ್ಕೆ ಬೀಜಭೂತಗಳು. ಸರ್ವ ಶಬ್ದಗಳಿಗೂ ಮೂಲಭೂತವಾದ ಅಕಾರವು ಶ್ರೀ ಪರಮಾತ್ಮನಿಗೆ ಮುಖ್ಯ ನಾಮಧೇಯವು.

ಭಾ॥ (a) ಅಕಾರನಾಮಾ ನಾನ್ಯೋಽಸ್ತಿ ತಮೃತೇ ಪುರುಷೋತ್ತಮಂ । (b) ಬ್ರಹ್ಮರುದ್ರಾದಿನಾಮಾನಿ ಬ್ರಹ್ಮಾದಿಷ್ವಪ್ಯಮುಖ್ಯತಃ ॥ ವರ್ತಂತೇ ನ ತ್ವಕಾರೋಽಯಂ ವರ್ತತೇ ಕೇಶವಂ ವಿನಾ । (c) ನಾರಾಯಣಾದಿ ನಾಮಾನಿ ನೃಣಾಂ ನಾಮ ಕ್ರಿಯಾಸ್ವಪಿ ॥ ವಿಹಿತಾನ್ಯಕಾರೋ ನೈವಾಯಂ ವಿಹಿತಸ್ತಮೃತೇ ಪ್ರಭುಂ । (d) ವಾಯುರ್ಬ್ರಹ್ಮಾಪಿ ಚಾಕಾರದೇವತೇ ನ ತು ನಾಮಿನೌ ॥ ಯಥಾ ವೇದಾಭಿಧೇಯೋಽನ್ಯೋ ವೇದಾಖ್ಯಾ ದೇವತಾ ಪರಾ । (e) ಏವಂ ನಾಮಾಭಿಮಾನೀ ತು ವಾಯುರ್ವಾಚ್ಯೋ ಜನಾರ್ದನಃ ॥ ತಸ್ಮಾದ ಇತಿ ನಾಮೈತದ್ವಿಷ್ಣೋಃ ಕೇವಲಮೇವ ಹಿ ॥

ಅ ॥ (a) ಕ್ಷರಾಕ್ಷರಪುರುಷರಿಂದ ಶ್ರೇಷ್ಠನಾದ ಆ ಹರಿಯನ್ನು ಹೊರತು ಮತ್ತೊಬ್ಬನು ಅಕಾರವೆಂದು ಹೆಸರುಳ್ಳವನು ಇಲ್ಲವೇ ಇಲ್ಲ. ॥ (b) ಬ್ರಹ್ಮ, ರುದ್ರ ಮೊದಲಾದ(ಹರಿಯ)ನಾಮಧೇಯಗಳೂ ಕೂಡ ಬ್ರಹ್ಮಾದಿಗಳಲ್ಲಿ ಅಮುಖ್ಯವಾಗಿಯೇ ಇರುತ್ತವೆ. ಈ ಅಕಾರವಾದರೂ ಶ್ರೀ ಹರಿಯನ್ನು ಹೊರತು ಎಲ್ಲಿಯೂ ಇಲ್ಲವೇ ಇಲ್ಲ. ಕಾರಣ ಪೂರ್ವದಲ್ಲಿ ಹೇಳಿದುದು ಯುಕ್ತವೇ ಆಯಿತು. ॥ (c) ('ಋತೇ ನಾರಾಯಣಾದೀನಿ ನಾಮಾನಿ ಪುರುಷೋತ್ತಮಃ । ಪ್ರಾದಾದನ್ಯತ್ರ ಭಗವಾನ್ ರಾಜೇವರ್ತೇ ಸ್ವಕಂ ಪುರಂ' ॥ ಇತ್ಯಾದಿ ರೀತಿಯಾಗಿ ನಾರಾಯಣ ಮೊದಲಾದ ನಾಮಗಳು ಬೇರೆ ಕಡೆ ಇಲ್ಲವೇ ಇಲ್ಲವೆಂದು ಶ್ರುತವಾಗುತ್ತದೆ. ಎಂದರೆ)— ನಾರಾಯಣ ಮೊದಲಾದ ನಾಮಧೇಯಗಳೂ ಕೂಡ, ಮನುಷ್ಯರಿಗೆ ನಾಮಧೇಯವೂ ಕ್ರಿಯೆಗಳೂ ಇವುಗಳಲ್ಲಿ ಹೇಳಲ್ಪಡುತ್ತವೆ. ಈ ಅಕಾರವಾದರೂ ಸರ್ವಸಮರ್ಥನಾದ ಆ ಹರಿಯನ್ನು ಹೊರತು ವಿಹಿತವೇ ಆಗಲಿಲ್ಲ. ॥ (d) ಮುಖ್ಯಪ್ರಾಣನಾಗಲೀ ಚತುರ್ಮುಖನಾಗಲೀ ರುದ್ರನಾಗಲೀ ಅಕಾರಕ್ಕೆ

ದೇವತೆಗಳು ಆಗಿದ್ದಾರೆ. 'ಆ' ಎಂಬ ನಾಮಧೇಯವುಳ್ಳವರಲ್ಲ. ಹೇಗೆ ವೇದಗಳಿಂದ ವಾಚ್ಯ ನಾದವನು ಮತ್ತೊಬ್ಬನು, ವೇದವೆಂದು ಹೆಸರುಳ್ಳ ದೇವತೆಯು ಇತರವಾದದು. ॥ (e) ಇದೇ ರೀತಿಯಾಗಿ 'ಅ' ಎಂಬ ನಾಮಧೇಯಕ್ಕೆ ಅಭಿಮಾನಿಯಾದರೂ ಮುಖ್ಯಪ್ರಾಣನು. ಜನಾ ರ್ದನನು (ಅಕಾರದಿಂದ) ಹೇಳಲ್ಪಡುವವನು ಆಗಿದ್ದಾನೆ. ಆದುದರಿಂದ 'ಅ' ಎಂಬ ನಾಮ ಧೇಯವು ಮುಖ್ಯವಾಗಿ ಶ್ರೀ ಪರಮಾತ್ಮನಿಗೇನೇ ಸರಿ; ಸರ್ವಶಾಸ್ತ್ರಸಿದ್ಧವು. ॥ ('ಅಕಾರೋ ಬ್ರಹ್ಮವಿಷ್ಣ್ವೀಶ ಕಮಠೇಷ್ವಂಗಣೇ ರಣೇ' ಎಂದು ನಾನಾರ್ಥರತ್ನಮಾಲಾದಲ್ಲಿ ಚತುರ್ಮುಖರುದ್ರ ರಿಗೆ 'ಅ' ಎಂಬ ನಾಮಧೇಯವು ಹೇಳಿದ್ದರೂ ಅಕಾರಕ್ಕೆ ಅಭಿಮಾನಿಗಳಾಗಿದ್ದ ಪ್ರಯುಕ್ತವೇ ಸಂಗತವಾಗುತ್ತದೆ.)

ಭಾ॥ (a) ವಿಶೇಷತೋಽಸ್ಯ ವ್ಯಾಖ್ಯಾನಂ ಬೃಹತೀನಾಂ ಸಹಸ್ರಕಂ । ತಸ್ಮಾ ತ್ಪ್ರೀತೋ ಭವೇದ್ವಿಷ್ಣುಃ ಶಂಸನಾದಸ್ಯ ಸರ್ವದಾ ॥ (b) ತಸ್ಮಾದ್ಯಜ್ಞೇಽಪಿ ವಾ ಶಂಸೇದಯಜ್ಞೇಽಪಿ ರಹಃ ಪುಮಾನ್ । ಧ್ಯಾತ್ವಾ ನಾರಾಯಣಂ ದೇವಂ ವಿಷ್ಣೋರನ್ನಂ ಹಿ ತತ್ಪರಂ ॥ ಇತ್ಯಾದಿ ಬ್ರಹ್ಮಸಾರೇ ॥

ಅ ॥ (a) ಬೃಹತೀ ಛಂದಸ್ಕಋಕ್ಕುಗಳ ಸಹಸ್ರವು ಈ ಅಕಾರಕ್ಕೆ ವಿಶೇಷಾಕಾರವಾಗಿ ವ್ಯಾಖ್ಯಾನರೂಪವಾಗಿದೆ. ಅದರಿಂದ ಈ ಬೃಹತೀಸಹಸ್ರವನ್ನು ಯಾವಾಗಲೂ ಸ್ತುತಿಸುವುದ ರಿಂದ ಶ್ರೀ ಪರಮಾತ್ಮನು ಸಂತುಷ್ಟನು ಆಗುವನು. ॥ (b) ಆದುದರಿಂದ ಮನುಷ್ಯನು ಯಾಗ ದಲ್ಲಿಯೂ ಯಾಗವಲ್ಲದಿರುವುದರಲ್ಲಿಯೂ ಏಕಾಂತದಲ್ಲಿ ಸ್ತುತಿಸತಕ್ಕುದು. ಆ ಬೃಹತೀ ಸಹಸ್ರವು ಶ್ರೀ ಹರಿಗೆ ಮುಖ್ಯವಾಗಿ ಅನ್ನಸ್ಥಾನೀಯವಾಗಿದೆ. (ಕಾರಣ) ಕ್ರೀಡಾದಿಗುಣವಿಶಿಷ್ಟ ನಾದ ನಾರಾಯಣನನ್ನು ಧ್ಯಾನಮಾಡಿಯೇ ಸ್ತುತಿಸತಕ್ಕುದು. ಇದೇ ಮೊದಲಾದ ವಿಷಯವು ಬ್ರಹ್ಮಸಾರದಲ್ಲಿ ಹೇಳಿಯದೆ.

ಭಾ॥ (a) ಪರಮವಿಕಾರೇಣ ಸಹ ವಿಕಾರಮಾತ್ರಸ್ಯಾಪಿ ಪ್ರಸ್ತುತತ್ವಾತ್ತದೇತ ತ್ಪಂಚವಿಧಮಿತಿ ಪರಾಮರ್ಶಃ । (b) ಸ್ವರಾಣಾಂ ನಿಯಮೋ ಯತ್ರ ಹ್ಯೃಚೋ ನಾಮ್ನೈವ ತಾಃ ಸ್ಮೃತಾಃ ॥ (c) ಅನ್ಯಾ ಮಿತಾಕ್ಷರಾ ಯಾಸ್ತು ತಾ ಗಾಥಾಃ ಪರಿಕೀರ್ತಿತಾಃ । (d) ಖಂಡವಾಕ್ಯಾನಿ ಕುಂಬ್ಯಾಃ ಸ್ಯುರಸಮಾನಿ ಪರಸ್ಪರಂ ॥ (e) ಯಜ್ಞಾಂಗಂ ಯಜುರುದ್ದಿಷ್ಟಂ ನಿಗದಂ ವಾಕ್ಯಮಾತ್ರಕಂ । ಇತ್ಯಾದಿ ಶಬ್ದನಿರ್ಣಯೇ ॥

ಅ ॥ (a) ಅತ್ಯುತ್ತಮ ವ್ಯಾಖ್ಯಾನದಿಂದ ಕೂಡಿಕೊಂಡು (ಪರಮವೆಂಬ ವಿಶೇಷಣ ದಿಂದ ಇತರವಾದ ಶಬ್ದಸಮುದಾಯವು ಕೇವಲ ವಿಕಾರವೆಂದು ತಿಳಿಯತಕ್ಕುದು ಕಾರಣ) ಕೇವಲ ವಿಕಾರವೂ ಪ್ರಸ್ತುತವಾದುದರಿಂದ, ಆ ಈ ಪರಮವಿಕಾರ (ಉತ್ತಮ ವ್ಯಾಖ್ಯಾನ ರೂಪವಾದ ಬೃಹತೀಸಹಸ್ರವೂ, ವಿಕಾರಮಾತ್ರರೂಪವಾದ ಇತರವಾದ ಶಬ್ದಸಮುದಾಯವೂ), ಐದು ವಿಧವು ಎಂಬ ಪರಾಮರ್ಶವು ಸಂಗತವೇ ಆಗುತ್ತದೆ. ॥ (b) ಎಲ್ಲಿ ಸ್ವರಗಳ ನಿಯ ಮವು ಅದೆಯೋ ಅವುಗಳೇ 'ಋಕ್ಕು'ಗಳೆಂದು ಹೇಳಲ್ಪಟ್ಟಿವೆ. ॥ (c) ಇತರಗಳಾದ ಸ್ವರ ನಿಯಮವಿಲ್ಲದಿರುವ ಛಂದೋಬದ್ಧಗಳಾದ ಯಾವ ಮಿತಾಕ್ಷರಗಳು ಇವೆಯೋ ಅವುಗಳು 'ಗಾಥಾ' ಎಂದು ಹೇಳಲ್ಪಟ್ಟಿವೆ. ॥ (d) ಪರಸ್ಪರವಾಗಿ ಪೂರ್ವೋತ್ತರಾರ್ಧಗಳಲ್ಲಿ ವಿಷಮ ಸಂಖ್ಯಾಕ್ಷರಗಳುಳ್ಳ ಖಂಡವಾಕ್ಯಗಳು 'ಕುಂಬ್ಯ'ಗಳು ಆಗುವುವು. ॥ (e) ಯಜ್ಞಕ್ಕೆ ಅಂಗ

ಭೂತವಾದ ವಾಕ್ಯವು 'ಯಜುಃ' ಎಂದು ಹೇಳಲ್ಪಟ್ಟಿದೆ. ಯಾಗಕ್ಕೆ ಅಂಗವಲ್ಲದಿರುವ ಕೇವಲ ವಾಕ್ಯವು 'ನಿಗದ' ಎಂದು ಹೇಳಲ್ಪಡುತ್ತದೆ. ॥ ಇವೇ ಮೊದಲಾದ ವಿಷಯವು ಶಬ್ದನಿರ್ಣಯ ದಲ್ಲಿ ಹೇಳಲ್ಪಟ್ಟಿದೆ.

ಭಾ॥ **(a)** ಅಕಾರಾರ್ಥತ್ವಾನ್ನಕಾರಸ್ಯ ಕಿಂಚಿನ್ಮೂಲಮಿವ । ತಸ್ಮಾನ್ಮೂಲತ್ವಾದಕಾರಾರ್ಥೋಽಪಿ ಜ್ಞೇಯ ಏವ ॥ **(b)** ನಾಯೋಗ್ಯಾನಾಂ ಸಮ್ಯಗ್ವಾಚ್ಯ ಇತಿ ಸ್ವಲ್ಪ ಏವ ಪ್ರಕಾಶಿತೋಽಸ್ಮಾಭಿಃ । **(c)** ವಾಚ ಉದ್ವರ್ತನಾಶಕ್ತೇಃ ಸ್ವಯಮೇವೋದ್ವರ್ತತೇ ॥ **(d)** ಯದ್ಧಿ ದೇವತಾಸು ಕರೋತಿ ತದಾತ್ಮನ್ಯಾಪತತಿ । **(e)** ತಸ್ಮಾದ್ದ್ರವ್ಯದಾನಂ ಜ್ಞಾನದಾನಂ ವಾ ಕಾಲೇ ಪಾತ್ರಾದ್ಯನುಸಾರೇಣೈವ ಕುರ್ಯಾತ್ ॥

ಅ ॥ (a) ನಕಾರಕ್ಕೆ (ಅಕಾರದ ಒಂದು ಭಾಗವಾದ ಅರ್ಥವನ್ನು ಪ್ರತಿಪಾದಿಸುವುದರಿಂದ) ಸ್ವಲ್ಪ ಅಕಾರಾರ್ಥಕತ್ವವಿದ್ದುದರಿಂದ, (ಶಬ್ದ ಹುಟ್ಟಲಿಕ್ಕೆ ಕಾರಣವಲ್ಲದಿದ್ದರೂ ಅರ್ಥಜ್ಞಾನಕ್ಕೆ ಉಪಾಯಭೂತವಾದುದರಿಂದ ಅಕಾರಕ್ಕೆ) ಬುಡದಂತೆ ಇರುವುದು. ಅರ್ಥಜ್ಞಾನಕ್ಕೆ ಕಾರಣೀಭೂತವಾಗಿ ಬುಡವಾದುದರಿಂದ ನಕಾರದಿಂದಲೂ ಕೂಡ ಅಕಾರದ ಅರ್ಥವನ್ನು ತಿಳಿದುಕೊಳ್ಳತಕ್ಕದ್ದೇ ಸರಿ. (ಆದುದರಿಂದ ಅದರ ಅರ್ಥವನ್ನು ಪ್ರತಿಪಾದಿಸತಕ್ಕದ್ದೆ.) ॥ (b) (ಎಲ್ಲಾ ಶಬ್ದಗಳಿಂದಲೂ ಅಕಾರಾರ್ಥವನ್ನು ತಿಳಿದುಕೊಳ್ಳಬೇಕಾದರೆ 'ಓಂಕಾರ, ನಾರಾಯಣ' ಶಬ್ದಗಳಿಂದಲೇ ಏತಕ್ಕೆ ತೋರಿಸಲಿಲ್ಲ ಎಂದರೆ) ಅಯೋಗ್ಯರಿಗೆ ಚೆನ್ನಾಗಿ ಹೇಳಬಾರದು ಎಂಬೀ ಅಭಿಪ್ರಾಯದಿಂದ (ಮಾರ್ಗವನ್ನು ತೋರಿಸುವುದಕ್ಕೋಸ್ಕರ) ಸ್ವಲ್ಪವಾಗಿಯೇ ನಮ್ಮಿಂದ ಪ್ರಕಾಶಿಸಲ್ಪಟ್ಟಿತು. (ಕಾರಣ ಯೋಗ್ಯರಾದ ಉತ್ತಮರಿಗೆ ಯಥಾ ಯೋಗ್ಯವಾಗಿ ಜ್ಞಾನವು ಆಗುವುದು.) ॥ (c) (ಜ್ಞಾನಯೋಗ್ಯರಿಗೂ, ಅನ್ನದಾನ ಯೋಗ್ಯರಿಗೂ 'ಅಕಾರಕ್ಕೆ ಮೂಲಭೂತವಾದ ನಕಾರವನ್ನು' ಪ್ರಕಟಿಸಿದರೆ ಮರದಂತೆ ನಕಾರವೇ ವಿನಾಶಿಯಾಗಬೇಕು. ಹೇಗೆತಾನೆ ತನಗೆ ನಾಶಬರುವುದೆಂದರೆ) ಅಕಾರಕ್ಕೆ ವಿನಾಶದಲ್ಲಿ ಶಕ್ತಿಯಿಲ್ಲದಿರುವುದರಿಂದ ತಾನೇ ವಿನಾಶಿಯಾಗುತ್ತಾನೆ. (ಯಾವಾಗ ಯೋಗ್ಯರಿಗೂ 'ನ' ಎಂದು ಹೇಳಿ ಅಕಾರವನ್ನು ಉಪದೇಶಿಸುವುದಿಲ್ಲವೋ, ಯೋಗ್ಯನಾದ ದರಿದ್ರನಿಗೆ ಅನ್ನದಾನಮಾಡುವುದಿಲ್ಲವೋ, ಆಗ ಅಕಾರಕ್ಕೇನೇ ನಾಶವು ಪ್ರಸಕ್ತವಾಯಿತು. ಅದಾದರೂ ಕೂಡಲಾರದು. ಏಕೆಂದರೆ, ವೇದಗಳು ನಿತ್ಯಗಳಾಗಿವೆ. ದೇವತೆಗಳಾದರೂ ವೇದಗಳ ಅಧೀನರಾಗಿರುತ್ತಾರೆ. ಕಾರಣ, ಪ್ರಯೋಗಿಸಿರುವ ಪುರುಷನೇ ನಾಶಹೊಂದುತ್ತಾನೆ.) ॥ (d) ಯಾವುದನ್ನು ದೇವತೆಗಳಲ್ಲಿ ಮಾಡುತ್ತಾನೋ ಅದು ತನ್ನಲ್ಲಿ ಬೀಳುತ್ತದೆ. [ತಾ ॥ ಅಯೋಗ್ಯರಿಗೆ ಜ್ಞಾನ, ಅನ್ನದಾನ ಮೊದಲಾದುವುಗಳನ್ನು ಮಾಡಿದರೆ 'ಪ್ರವಿಷ್ಟಃಕರ್ಣರಂಧ್ರೇಣ ಸ್ವಾನಾಂ ಭಾವಸರೋರುಹಂ' ಎಂಬೀ ರೀತಿಯಾಗಿ ಅಕಾರದಲ್ಲಿ ಪ್ರತಿಪಾದ್ಯಗಳಾದ ಭಗವದ್ರೂಪಗಳಿಗೂ, ಅದಕ್ಕೆ ಅಭಿಮಾನಿಗಳಾದ ಲಕ್ಷ್ಮೀ ಮೊದಲಾದವರಿಗೂ ಅಲ್ಲಿ ವಿಶೇಷ ಸನ್ನಿಧಾನವಿರುವುದಿಲ್ಲವೆಂದು ಆಗುವುದು. ಮತ್ತು ಅವರ ಗುಣಗಳನ್ನು ತಿಳಿಸದಿರುವುದರಿಂದಲೂ ಅವರಿಗೆ ಉಪಭೋಗ್ಯವಾದ ಅನ್ನ ಮೊದಲಾದುವುಗಳನ್ನು ಕೊಡದಿರುವುದರಿಂದಲೂ 'ಅಪೂಜಿತಾ ಅಧರ್ಮಾದಿ ದಾತಾರಸ್ತೇ ತಥಾಭಿಧಾಃ' ಅಂದರೆ ದೇವತೆಗಳನ್ನು ಪೂಜಿಸದಿದ್ದರೆ ಧರ್ಮಜ್ಞಾನಾದಿಗಳಿಂದ ರಹಿತರಾಗುತ್ತಾರೆ. ಕಾರಣ ಜ್ಞಾನ ಮೊದಲಾದುದು ಇಲ್ಲದಿರುವವನಾಗಿ ನರಕ ಮೊದಲಾದುದನ್ನು ಅನುಭವಿಸುತ್ತಾನೆ.] ॥ (e) ಆದುದರಿಂದ (ಅಂದರೆ ಅಯೋಗ್ಯರಿಗೆ ದಾನಮಾಡಿದರೂ, ಯೋಗ್ಯರಿಗೆ ದಾನಮಾಡದಿದ್ದರೂ ಅನರ್ಥವಾಗುವುದರಿಂದ)

ದ್ರವ್ಯ ದಾನವನ್ನಾಗಲೀ, ಜ್ಞಾನ ದಾನವನ್ನಾಗಲೀ ಯೋಗ್ಯ ಕಾಲದಲ್ಲಿ ಪಾತ್ರಾದಿಗಳನ್ನು ಅನುಸರಿಸಿಯೇ ಮಾಡಬೇಕು. (ಅಂದರೆ ಸತ್ಪಾತ್ರದಲ್ಲಿ ದಾನಮಾಡತಕ್ಕುದು. ಅಸತ್ಪಾತ್ರದಲ್ಲಿ ದಾನಮಾಡಬಾರದು.)

ಭಾ॥ **(a)** ಅಕಾರಸ್ಯೋಂಕಾರತಾತ್ವಕಾರಲೋಪೇನೈವ ಜಾತೇತಿ ಸತ್ಯಮೋಂಕಾರಃ । **(b)** ಅಕಾರಸ್ಯಾದೌ ಸ್ಥಿತತ್ವೇನ ಚ ಯಥಾರ್ಥರೂಪತ್ವಾತ್ ॥ **(c)** ಉಕಾರಾದಿವಿಕಾರಸಹಿತತ್ವಾತ್ಪುಷ್ಪಫಲಾತ್ಮಕಶ್ಚ । **(d)** ಅಕಾರಸ್ಯಾರ್ಥರೂಪಃ ಸನ್ನೇವ ಚ ಭಗವಾಂಸ್ತಮೇವೋಂಕಾರೋ ವಕ್ತಿ ॥

ಅ ॥ (a) ಅಕಾರಕ್ಕೆ 'ಓಂ'ಕಾರತ್ವವಾದರೂ ಅಕಾರ ಲೋಪದಿಂದಲೇ ಹುಟ್ಟಿತು. ಕಾರಣ 'ಓಂ'ಕಾರವು (ವ್ಯಾಖ್ಯೇಯವಾದ ಅಕಾರವನ್ನು ಅನುಸರಿಸಿಯೇ ಇರುವುದರಿಂದ) ಸತ್ಯವೆನಿಸುತ್ತದೆ. ಅಂತೂ ಓಂಕಾರದಲ್ಲಿ ಅಕಾರವು ಶ್ರುತವಾಗುವುದರಿಂದ ವ್ಯಾಖ್ಯಾನಮಾಡಿಸಿಕೊಳ್ಳಲಿಕ್ಕೆ ಯೋಗ್ಯವಾದ ಅಕಾರವನ್ನು ಅತಿಕ್ರಮಿಸದಿರುವುದರಿಂದ ಸತ್ಯತ್ವವು ಸಿದ್ಧವಾಗುತ್ತದೆ. (ಬೇರೆರೀತಿಯಾಗಿಯೂ ಸತ್ಯತ್ವವನ್ನು ಪ್ರತಿಪಾದಿಸುತ್ತಾರೆ.) ॥ (b) ಅಕಾರವು (ಓಂಕಾರದ) ಆದಿಯಲ್ಲಿಯೇ ಇದ್ದುದರಿಂದಲೂ ಮೂಲಭೂತವಾದ ಅಕಾರವು ಹೇಗೆ ಇದೆಯೋ ಅದನ್ನು ಅನುವಾದಮಾಡಿ ಅರ್ಥವನ್ನು ಪ್ರತಿಪಾದಿಸುವುದರಿಂದಲೂ, (ಓಂಕಾರವು 'ಸತ್ಯ' ವೆನಿಸಿಕೊಳ್ಳುತ್ತದೆ.) ಅಂತೂ ವ್ಯಾಖ್ಯೇಯವನ್ನು ಪ್ರಥಮತಃ ಅನುವಾದಮಾಡಿ ವ್ಯಾಖ್ಯಾನ ಮಾಡುವುದರಿಂದ 'ಸತ್ಯ' ವೆನಿಸಿಕೊಳ್ಳುತ್ತದೆ. ॥ (c) ಉಕಾರ ಮೊದಲಾದುವುಗಳ ವಿಕಾರದಿಂದೊಡಗೂಡಿದ ಪ್ರಯುಕ್ತವೂ (ಓಂಕಾರವು) ಪುಷ್ಪಫಲ ರೂಪವಾಗಿಯದೆ. ॥ (d) ಶ್ರೀಪರಮಾತ್ಮನು ಅಕಾರದ ಅರ್ಥರೂಪನಾಗಿ ಸರ್ವೋತ್ತಮನೇ (ಆಗಿರುವನು) ಆತನನ್ನೇ ಓಂಕಾರವು ಹೇಳುತ್ತದೆ. (ಅಂತೂ 'ಸತ್=ಉತ್ತಮಂ ಬ್ರಹ್ಮ ಪ್ರತಿಪಾದಕತಯಾ ಯಾತಿ' ಎಂಬೀ ವ್ಯುತ್ಪತ್ತಿಯಿಂದ ಓಂಕಾರವು ಸತ್ಯವು.)

ಭಾ॥ **(a)** ಅತಶ್ಚ ಸತ್ಯಮೋಂಕಾರಃ । ಯಮರ್ಥಮಕಾರೋ ವಕ್ತಿ ತಮೇವ ವಕ್ತೀತಿ ॥ **(b)** ನಕಾರಸ್ತ್ವಚ್ಛಿರಸ್ಕತ್ವಾನ್ಮೂಲಭೂತಸ್ಯಾಕಾರಸ್ಯಾಂತೇ ಸ್ಥಿತಿರೂಪತ್ವಾದಯಥಾಸ್ಥಿತೇರಸತ್ಯರೂಪಃ । ತಥಾಪ್ಯಕಾರಸ್ಯ ನಕಾರಸ್ಯ ಚೈಕಾರ್ಥತ್ವಾನ್ಮೂಲಭೂತಶ್ಚ ॥ **(c)** ತಸ್ಮಾದಕಾರಸ್ಯೈತದ್ವ್ಯಥಾವಾಗಾದಿಕಮಪಿ ವ್ಯಾಖ್ಯಾನಂ । ತಸ್ಮಾದ್ವಿಜಾನತಃ ಸರ್ವಮಪಿ ಭಗವನ್ನಾಮೈವ ॥ ೬ ॥

ಅ ॥ (a) ಯಾವ ಅರ್ಥವನ್ನು ಅಕಾರವು ಹೇಳುತ್ತದೋ ಆ ಅರ್ಥವನ್ನೇ ಓಂಕಾರವು ಹೇಳುತ್ತದೆ. ಆದುದರಿಂದಲೂ ಸತ್ಯವೆನಿಸುತ್ತದೆ. ॥ (b) ನಕಾರವಾದರೂ ಅಕಾರವು ಶಿರಸ್ಸುಳ್ಳದ್ದಾದುದರಿಂದ(ಅಂದರೆ)ಮೂಲಭೂತವಾದ ಅಕಾರವು ಅಂತ್ಯದಲ್ಲಿದ್ದುದರಿಂದ, ಮೂಲಭೂತವಾದ ಆಕಾರವನ್ನು ಪ್ರಥಮತಃ ಅನುವಾದಮಾಡಿ ಪ್ರವೃತ್ತವಾಗದಿರುವುದರಿಂದ ಅಸತ್ಯರೂಪವಾಗಿದೆ. ಅದರೂ ಅಕಾರಕ್ಕೂ ನಕಾರಕ್ಕೂ ಒಂದೇ ಅರ್ಥವಿರುವುದರಿಂದ (ಅಕಾರಕ್ಕೆ) ಮೂಲಭೂತವೂ ಆಗಿಯದೆ. ॥(c) ಆದುದರಿಂದ ವ್ಯರ್ಥವಾದ ಮಾತು ಮೊದಲಾದುದೂ ಅಕಾರಕ್ಕೇನೇ ವ್ಯಾಖ್ಯಾನವು. ಆದುದರಿಂದ ವಿಶೇಷವಾಗಿತಿಳಿದವನಿಗೆ ಎಲ್ಲವೂ ವಿಷ್ಣುವಿನ ನಾಮಧೇಯವೇ ಆಗುವುದು. ೬

ಮಂ || ತದ್ವಾ ಇದಂ ಬೃಹತೀಸಹಸ್ರಂ ಸಂಪನ್ನಂ ತದ್ಯಶಃ ಸ ಇಂದ್ರಃ ಸ ಭೂತಾನಾಮಧಿಪತಿಃ ಸ ಯ ಏವಮೇತಮಿಂದ್ರಂ ಭೂತಾನಾಮಧಿಪತಿಂ ವೇದ ವಿಸ್ರಸಾ ಹೈವಾಸ್ಮಾಲ್ಲೋಕಾತ್ಪ್ರೈತೀತಿ ಹ ಸ್ಮಾಹ ಮಹಿದಾಸ ಐತರೇಯಃ ಪ್ರೇತ್ಯೇಂದ್ರೋ ಭೂತ್ವೈಷು ಲೋಕೇಷು ರಾಜತಿ ತದಾಹುರ್ಯದನೇನ ರೂಪೇಣಾಮುಂ ಲೋಕಮಭಿಸಂಭವತೀ೩ ಅಥ ಕೇನ ರೂಪೇಣೇಮಂ ಲೋಕಮಾಭವತೀ೩ ಇತಿ ತದ್ಯದೇತತ್ ಸ್ತ್ರಿಯಾಂ ಲೋಹಿತಂ ಭವತ್ಯಗ್ನೇಸ್ತದ್ರೂಪಂ ತಸ್ಮಾತ್ತಸ್ಮಾನ್ನ ಬೀಭತ್ಸೇತಾಥ ಯದೇತತ್ಪುರುಷೇ ರೇತೋ ಭವತ್ಯಾದಿತ್ಯಸ್ಯ ತದ್ರೂಪಂ ತಸ್ಮಾತ್ತಸ್ಮಾನ್ನ ಬೀಭತ್ಸೇತ ಸೋಽಯಮಾತ್ಮೇಮಮಾತ್ಮಾನಮಮುಷ್ಮಾ ಆತ್ಮನೇ ಸಂಪ್ರಯಚ್ಛತ್ಯಸಾವಾತ್ಮಾಮುಮಾತ್ಮಾನಮಸ್ಮಾ ಆತ್ಮನೇ ಸಂಪ್ರಯಚ್ಛತಿ ತಾವನ್ಯೋನ್ಯಮಭಿಸಂಭವತೋಽನೇನ ಹ ರೂಪೇಣಾಮುಂ ಲೋಕಮಭಿಸಂಭವತ್ಯಮುನಾ ರೂಪೇಣೇಮಂ ಲೋಕಮಾಭವತಿ || ೭ ||

ಅ || ಸಂಪನ್ನಂ ವೈ=ಪೂರ್ವೋಕ್ತರೀತಿಯಾಗಿ ಸಂಪಾದಿಸಲ್ಪಟ್ಟ, ತದಿದಂ ಬೃಹತೀಸಹಸ್ರಂ=ಆ ಈ ಬೃಹತೀಸಹಸ್ರವು, ತದ್ಯಶಃ=ಆ ನಾರಾಯಣನ ಗುಣಕರ್ಮಗಳನ್ನು ಸಂಕೀರ್ತನ ಮಾಡತಕ್ಕದು. ಸಃ=ಆತನೇ, ಇಂದ್ರಃ=ಮುಖ್ಯವಾಗಿ ಇಂದ್ರನಾಮಕನು, ಸಃ=ಆತನೇ, ಭೂತಾನಾಂ=ಬ್ರಹ್ಮಾದಿಜೀವರಿಗೆ, ಅಧಿಪತಿಃ=ನಿಯಾಮಕನು. ಯಃ=ಯಾವಾತನು, ಏವಂ=ಪೂರ್ವೋಕ್ತಪ್ರಕಾರವಾಗಿ, ಏತಂ=ಈ ಬೃಹತೀಸಹಸ್ರಪ್ರತಿಪಾದ್ಯನಾದ ನಾರಾಯಣನನ್ನು, ಇಂದ್ರಂ=ಮುಖ್ಯವಾಗಿ ಇಂದ್ರನನ್ನಾಗಿಯೂ, ಭೂತಾನಾಂ=ಜೀವರಿಗೆ, ಅಧಿಪತಿಂ=ನಿಯಾಮಕನನ್ನಾಗಿಯೂ, ವೇದ=ತಿಳಿಯುತ್ತಾನೋ, ಸಃ=ಅವನು, ವಿಸ್ರಸಾ=ಸಂಸಾರಬಂಧವಿಂದ ಬಿಡಲ್ಪಟ್ಟವನಾಗಿ, ಅಸ್ಮಾತ್ ಲೋಕಾತ್=ಈ ಲೋಕದಿಂದ, ಪ್ರೈತಿ=(ವೈಕುಂಠ ಲೋಕವನ್ನು ಕುರಿತು) ಹೋಗುತ್ತಾನೆ, ಏವ ಹ=ನಿಶ್ಚಯವೇ. ಇತಿ ಹ=ಈ ಪ್ರಕಾರವಾಗಿಯೇ, ಐತರೇಯಃ ಮಹಿದಾಸಃ=ಇತರಾದೇವಿಯ ಮಗನಾದ ಮಹಿದಾಸರೂಪಿಯಾದ ಶ್ರೀಹರಿಯು, ಆಹ ಸ್ಮ=ಹೇಳಿದನು. ಸಃ=ಆ ಮಹಿದಾಸನೇ, ಇಂದ್ರಃ=ಇಂದ್ರನಾಮಕನು, (ಆ ಮಹಿದಾಸನು) ಪ್ರೇತ್ಯ=ಶ್ವೇತದ್ವೀಪಮೊದಲಾದ ಲೋಕದಿಂದ ಈ ಲೋಕವನ್ನು ಹೊಂದಿ, ಭೂತ್ವಾ=ಪ್ರಾದುರ್ಭವಿಸಿ, (ಅಂದರೆ ಮನುಷ್ಯರ ದೃಷ್ಟಿಗೆ ಗೋಚರನಾಗಿ), ಏಷು ಲೋಕೇಷು=ಈ ಲೋಕಗಳಲ್ಲಿ, ರಾಜತಿ=ಪ್ರಕಾಶಿಸುತ್ತಾನೆ. (ಈ ವಾಕ್ಯವೂ ಕೂಡ ಮಹಿದಾಸರೂಪಿಯಾದ ಶ್ರೀ ಪರಮಾತ್ಮನದ್ದೇ ಸರಿ.) (ಹೀಗೆ ಮಹಿದಾಸನಿಂದುಪದಿಷ್ಟರಾದ ಕೆಲವು ಶಿಷ್ಯರು) ತತ್=ಆ ವಿಷಯದಲ್ಲಿ, ಆಹುಃ=ಹೇಳುತ್ತಾರೆ (ಅಂದರೆ ಪ್ರಶ್ನೆಮಾಡುತ್ತಾರೆ.) ಅನೇನ ರೂಪೇಣ=ಈ ಭೂಮಿಯಲ್ಲಿರತಕ್ಕ ಪುಮ್‌ರೂಪದಿಂದ, ಅಮುಂ=ಸ್ವರ್ಗದಲ್ಲಿರತಕ್ಕ, ಲೋಕಂ=ಲೋಕಶಬ್ದವಾಚ್ಯವಾದ ಸ್ತ್ರೀರೂಪವನ್ನು, ಅಭಿಸಂಭವತಿ ಯತ್=ಕ್ರೀಡಿಸುತ್ತಾನೋ ಏನು, ಅಥ=ಮತ್ತು, ಕೇನ ರೂಪೇಣ=ಯಾವರೂಪದಿಂದ, ಇಮಂ ಲೋಕಂ=ಪೃಥಿವಿಯಲ್ಲಿರತಕ್ಕ ತನ್ನ ಸ್ತ್ರೀರೂಪವನ್ನು, ಆಭವತಿ=ಕ್ರೀಡಿಸುತ್ತಾನೆ. (ಈ ಪ್ರಕಾರವಾಗಿ ತನ್ನ ಶಿಷ್ಯರಿಂದ ಪ್ರಶ್ನೆಮಾಡಲ್ಪಟ್ಟ ಶ್ರೀ ಮಹಿದಾಸನು ಉತ್ತರವನ್ನು ಕೊಟ್ಟನು). ಸ್ತ್ರಿಯಾಂ=ಸ್ತ್ರೀಶರೀರದಲ್ಲಿ, ಯತ್ ಏತತ್ ಲೋಹಿತಂ=ಯಾವ ಈ ರಕ್ತವು, ಭವತಿ=ಇದೆಯೋ, ತತ್=ಅದು, ಅಗ್ನೇಃ=

ಅಗ್ನಿನಾಮಕನಾದ ಅಗ್ನಿಯಲ್ಲಿರತಕ್ಕ ಸ್ತ್ರೀರೂಪನಾದ ಶ್ರೀಹರಿಗೆ, ರೂಪಂ=ಸನ್ನಿಧಾನಪಾತ್ರವು, ತಸ್ಮಾತ್=ಆದುದರಿಂದ, ತಸ್ಮಾತ್=ಹೆಂಡತಿಯ ಶರೀರದಲ್ಲಿರತಕ್ಕ ರಕ್ತದಿಂದ, ನ ಬೀಭತ್ಸೇತ=(ಗಂಡನು) ಜುಗುಪ್ಸೆಮಾಡಬಾರದು, ಅಥ=ಆ ಮೇಲೆ, ಪುರುಷೇ=ಪುರುಷನಲ್ಲಿ, ಯತ್ ಏತತ್ ರೇತಃ=ಯಾವ ರೇತಸ್ಸು, ಭವತಿ=ಇದೆಯೋ, ತತ್=ಅದು, ಆದಿತ್ಯಸ್ಯ ಆದಿತ್ಯನಾಮಕನೂ ಆದಿತ್ಯನಲ್ಲಿರತಕ್ಕವನೂ ಪುಮ್‌ರೂಪನೂ ಆದ ಶ್ರೀ ಹರಿಗೆ, ರೂಪಂ=ಸನ್ನಿಧಾನ ಪಾತ್ರವು, ತಸ್ಮಾತ್=ಆದುದರಿಂದ, ತಸ್ಮಾತ್=ಗಂಡನ ಶರೀರದಲ್ಲಿರತಕ್ಕ ರೇತಸ್ಸಿನಿಂದ, ನ ಬೀಭತ್ಸೇತ=(ಹೆಂಡತಿಯು) ಜುಗುಪ್ಸೆಮಾಡಬಾರದು. ಸೋಽಯಂ=ಆ ಈ ಭೂಮಿಯಲ್ಲಿರತಕ್ಕ, ಆತ್ಮಾ=ಆತ್ಮಶಬ್ದವಾಚ್ಯನಾದ ಮಹಿದಾಸ ಮೊದಲಾದ ರೂಪವುಳ್ಳ ಶ್ರೀ ಹರಿಯು, ಇಮಂ=ಈ ಭೂಮಿಯಲ್ಲಿರತಕ್ಕುದು, ಹಾಗೆಯೇ ಮನುಷ್ಯಸ್ತ್ರೀಯರ ರಕ್ತದಲ್ಲಿರತಕ್ಕುದು ಆದ, ಆತ್ಮಾನಂ=ತನ್ನದಾದ ಸ್ತ್ರೀರೂಪವನ್ನು, ಅಮುಷ್ಮೈ=ಸ್ವರ್ಗಲೋಕದಲ್ಲಿರುವುದೂ, ಸೂರ್ಯನಲ್ಲಿರತಕ್ಕುದೂ, ದೇವತೆಗಳ ರೇತಸ್ಸಿನಲ್ಲಿರತಕ್ಕುದೂ ಆದ, ಆತ್ಮನೇ=ತನ್ನ ಪುರುಷರೂಪಕ್ಕೋಸ್ಕರವೇ, ಸಂಪ್ರಯಚ್ಛತಿ=ಕೊಡುತ್ತಾನೆ. ಅಸೌ=ಈ ಸೂರ್ಯನಲ್ಲಿರತಕ್ಕವನೂ ಸ್ವರ್ಗದಲ್ಲಿರತಕ್ಕವನೂ ಆದ, ಆತ್ಮಾ=ಶ್ರೀ ಹರಿಯು, ಅಮುಂ=ದೇವಸ್ತ್ರೀಯರ ರಕ್ತದಲ್ಲಿರುವ, ಆತ್ಮಾನಂ=ತನ್ನ ಸ್ತ್ರೀರೂಪವನ್ನೇ, ಅಸ್ಮೈ=ಈ ಮನುಷ್ಯರ ರೇತಸ್ಸಿನಲ್ಲಿರತಕ್ಕ, ಆತ್ಮನೇ=ಮಹಿದಾಸ ಮೊದಲಾದ ರೂಪವುಳ್ಳ ಶ್ರೀ ಪರಮಾತ್ಮನಿಗೋಸ್ಕರ, ಸಂಪ್ರಯಚ್ಛತಿ=ಕೊಡುತ್ತಾನೆ. ತೌ=ಆ ಸ್ವರ್ಗಭೂಮಿಯಲ್ಲಿರುವ ಪುರುಷ ಸ್ತ್ರೀರೂಪಗಳು, ಅನ್ಯೋಽನ್ಯಂ=ಪರಸ್ಪರವಾಗಿ, ಅಭಿಸಂಭವತಃ=ಕ್ರೀಡಿಸುತ್ತವೆ. ಅನೇನ ರೂಪೇಣ=ಭೂಮಿಯಲ್ಲಿರತಕ್ಕ ಮಹಿದಾಸ ಮೊದಲಾದ ಪುರುಷರೂಪದಿಂದ, ಅಮುಂ ಲೋಕಂ=ಸ್ವರ್ಗದಲ್ಲಿರತಕ್ಕ ದೇವಸ್ತ್ರೀಯರಲ್ಲಿರುವ ತನ್ನ ಸ್ತ್ರೀರೂಪವನ್ನೇ, ಅಭಿಸಂಭವತಿ ಹ=ಕ್ರೀಡಿಸುತ್ತಾನೆ. ಅಮುನಾ ರೂಪೇಣ=ಸ್ವರ್ಗದಲ್ಲಿರುವ ಪುರುಷಾಕಾರವಾದ ವಾಮನಾದಿರೂಪದಿಂದ, ಇಮಂ ಲೋಕಂ=ಭೂಮಿಯಲ್ಲಿರತಕ್ಕ ಮನುಷ್ಯಸ್ತ್ರೀಯರಲ್ಲಿರತಕ್ಕ ತನ್ನ ಸ್ತ್ರೀರೂಪವನ್ನೇ, ಆಭವತಿ=ಕ್ರೀಡಿಸುತ್ತಾನೆ. ॥ ೭ ॥

ತಾ ॥ (1) ಶ್ರೀ ಪರಮಾತ್ಮನು ಮಹಿದಾಸ ಮೊದಲಾದ ರೂಪದಿಂದ ಭೂಮಿಯಲ್ಲಿದ್ದವನಾಗಿ ಕ್ರೀಡಿಸುತ್ತಾನೆ. ಎಂದಾದರೆ ಕ್ರೀಡೆಯು ರಮಣಿಯರಿಂದ ಹೊರತು ಕೂಡಲಾರದು. ಆದರೆ ನಿತ್ಯದಲ್ಲಿಯೂ ಸುಖಸ್ವರೂಪನೂ ಸ್ವತಂತ್ರನೂ ಆದ ಶ್ರೀ ಹರಿಗೆ ಇತರರಿಂದ ಕ್ರೀಡೆಯು ಕೂಡಲಾರದ ಕಾರಣ ತನ್ನದಾದ ಸ್ತ್ರೀರೂಪದಲ್ಲಿಯೇ ತಾನು ಕ್ರೀಡಿಸುತ್ತಾನೆ ಎಂದು ಹೇಳಬೇಕಾಗುವುದು. ಆದುದರಿಂದ (೧) ಭೂಮಿಯಲ್ಲಿರತಕ್ಕ ಪುಮ್ ರೂಪವು ಸ್ವರ್ಗದಲ್ಲಿರತಕ್ಕ ಸ್ತ್ರೀರೂಪದಿಂದ ಕ್ರೀಡಿಸುತ್ತದೋ ಏನು? ಅಲ್ಲದೆ (೨) ಯಾವ ರೂಪವು ಯಾವ ಸ್ತ್ರೀರೂಪದಿಂದ ಕ್ರೀಡಿಸುವುದು? ಮತ್ತು ಈ ಎರಡು ಭಗವದ್ರೂಪವನ್ನು ಕೂಡಿಸುವ ರೂಪವು ಯಾವುದು? ಹೀಗೆ ಮೂರು ಪ್ರಕಾರವಾಗಿ ಮಹಿದಾಸ ರೂಪಿಯಾದ ಶ್ರೀ ಹರಿಯನ್ನು ಕುರಿತು ಆತನ ಶಿಷ್ಯರು ಪ್ರಶ್ನೆಮಾಡಿದರು. ಆಗ ಮಹಿದಾಸ ರೂಪಿಯಾದ ಶ್ರೀ ಹರಿಯು ಹೀಗೆ ಉತ್ತರವನ್ನು ಕೊಟ್ಟನು. (೨)ನೇ ಪ್ರಶ್ನೆಯು ಕಠಿನವಾದುದರಿಂದ ಪ್ರಥಮತಃ ಅದಕ್ಕೆ ಉತ್ತರವು. ಭೂಮಿಯಲ್ಲಿ ಮನುಷ್ಯಸ್ತ್ರೀಯರ ರಕ್ತದಲ್ಲಿರತಕ್ಕ ತನ್ನ ಸ್ತ್ರೀರೂಪದಿಂದಲೇ ಸ್ವರ್ಗದಲ್ಲಿದ್ದು ಸೂರ್ಯನಲ್ಲಿ ಇರತಕ್ಕುದೂ ದೇವತೆಗಳ ರೇತಸ್ಸಿನಲ್ಲಿರತಕ್ಕುದೂ ಆದ ತನ್ನ ಪುರುಷ ರೂಪವು ಕ್ರೀಡಿಸುತ್ತದೆ. (೩) ಮಹಿದಾಸ ಮೊದಲಾದ ಭೂಮಿಯಲ್ಲಿರತಕ್ಕ ಪ್ರಾದುರ್ಭಾವರೂಪವು ಇವುಗಳಿಗೆ ಸಂಬಂಧವನ್ನು ಪ್ರಾಪಿಸಿಕೊಡುವುದು. (೧) ದೇವ

ಸ್ತ್ರೀಯರ ರಕ್ತದಲ್ಲಿರತಕ್ಕ ತನ್ನ ಸ್ತ್ರೀರೂಪದಿಂದಲೇ ಭೂಮಿಯಲ್ಲಿ ಮನುಷ್ಯರ ರೇತಸ್ಸಿನಲ್ಲಿರತಕ್ಕ ಮಹಿದಾಸ ಮೊದಲಾದ ರೂಪವು ಕ್ರೀಡಿಸುತ್ತದೆ. (೩) ಸ್ವರ್ಗದಲ್ಲಿ ಸೂರ್ಯನಲ್ಲಿರತಕ್ಕ ವಿಷ್ಣುವೊದಲಾದ ಪ್ರತ್ಯೇಕ ರೂಪವುಳ್ಳ ಶ್ರೀ ಹರಿಯು ಇವುಗಳಿಗೆ (ಮೇಲಕ) ಸಂಬಂಧವನ್ನು ಪ್ರಾಪಿಸಿಕೊಡುವ ರೂಪವು.

ಭಾ॥ (a) ವಿದ್ಯಾಂತರೋಪದೇಶಾರ್ಥಂ ತದ್ವಾ ಇದಂ ಬೃಹತೀಸಹಸ್ರಮಿತಿ ಪುನಃ ಪುನಃ ಪರಾಮರ್ಶಃ । ತದಿದಂ ಬೃಹತೀಸಹಸ್ರಂ ತದ್ಯಶಸ್ತಸ್ಯ ನಾರಾಯಣಸ್ಯ ಯಶಃ ॥ (b) ಯಸ್ಯ ನಾರಾಯಣಸ್ಯೈತದ್ಯಶಃ ಸ ಭಗವಾನೇವೇಂದ್ರನಾಮಾ । ಸ ಹಿ ಯತ್ಪ್ರಥಮುತ ಇಂದ್ರೋ ಬಭೂವ ಸ್ವೇಚ್ಛಯಾ ಯಜ್ಞನಾಮಾ ॥ (c) ತಸ್ಮಾತ್ತಮೇವ ವೇದಾ ಇಂದ್ರಶಬ್ದೇನ ವದಂತಿ ಮುಖ್ಯತಃ । ಇದಿಪರಮೈಶ್ವರ್ಯ ಇತಿ ಧಾತೋಶ್ಚ ತಸ್ಯೈವ ಹಿ ಪರಮೈಶ್ವರ್ಯಂ ॥ (d) ಅನ್ಯೇಷಾಂ ತು ದ್ವಾದಶಾನಾಂ ತೇನ ದತ್ತಮೇವೇಂದ್ರತ್ವಂ ನ ತು ಮುಖ್ಯತಃ । ಅತೋ ವಿಷ್ಣಾವೇವೇಂದ್ರಶಬ್ದಂ ಪ್ರಯುಂಕ್ತೇ ಶ್ರುತಿಃ ॥

ಅ ॥ (a) (ಪೂರ್ವದಲ್ಲಿಹೇಳಿದ್ದಕ್ಕೆ ಸಂಗತವಾದ) ಇತರವಿದ್ಯೆಯನ್ನುಪದೇಶಮಾಡುವುದಕ್ಕೋಸ್ಕರ "ತದ್ವಾ ಇದಂ ಬೃಹತೀಸಹಸ್ರಂ" ಎಂದು ಮತ್ತೂ ಮತ್ತು ಪರಾಮರ್ಶವು (ಹಿಂದೆ ಹೇಳಿದುದನ್ನೇ ಹೇಳಿರುವುದು.) । ಆ ಈ ಬೃಹತೀಸಹಸ್ರವು "ತದ್ಯಶಃ" ಅಂದರೆ ಆ ನಾರಾಯಣನ ಗುಣಕರ್ಮಗಳನ್ನು ಸ್ತುತಿಸುವುದು. ॥ (b) ಯಾವ ನಾರಾಯಣನಿಗೆ ಈ ಬೃಹತೀಸಹಸ್ರವು ಯಶೋರೂಪವೋ, ಆ ಪರಮಾತ್ಮನೇವೇ "ಇಂದ್ರ" ನಾಮಕನು. ಅವನಾದರೆ ಯಾವಕಾರಣದಿಂದ ಪ್ರಥಮ ಮನ್ವಂತರದಲ್ಲಿ ತನ್ನ ಇಚ್ಛೆಯಿಂದಲೇ ಯಜ್ಞನಾಮಕನಾದ ಇಂದ್ರನು ಆಗಿದ್ದನೋ, ॥ (c) ಇಂದ್ರಪದವಿಯನ್ನು ಹೊಂದಿರುವುದರಿಂದ ಆತನನ್ನೇ ವೇದಗಳು ಮುಖ್ಯವಾಗಿ ಇಂದ್ರಶಬ್ದದಿಂದ ಹೇಳುತ್ತವೆ. । "ಇದಿ" ಎಂಬ ಧಾತುವು ಪರಮೈಶ್ವರ್ಯವೆಂಬ ಅರ್ಥದಲ್ಲಿ ಎಂದು ಧಾತುವ್ಯಾಖ್ಯಾನದಿಂದಲೂ ಕೂಡ ಆ ವಿಷ್ಣುವಿಗೇನೇ ಪರಮೈಶ್ವರ್ಯವು. ॥ (d) ಬೇರೆ ೧೨ ಇಂದ್ರರಿಗಾದರೂ ಆ ವಿಷ್ಣುವಿನಿಂದ ಕೊಡಲ್ಪಟ್ಟದ್ದೇ ಇಂದ್ರತ್ವವು ಮುಖ್ಯವಾಗಿ ಅಲ್ಲ. ಆದುದರಿಂದ ವಿಷ್ಣುವಿನಲ್ಲಿಯೇ ಇಂದ್ರಶಬ್ದವನ್ನು ಶ್ರುತಿಯು ಪ್ರಯೋಗಿಸುತ್ತದೆ.

ಭಾ॥ (a) ಮತ್ಸಿ ಸೋಮ ವರುಣಂ ಮತ್ಸಿ ಮಿತ್ರಂ ಮತ್ಸೀಂದ್ರಮಿಂದೋ ಪವಮಾನ ವಿಷ್ಣುಮಿತಿ । ನ ಚೇಂದ್ರಂ ವಿಷ್ಣುಂ ಚೇತಿ ಪೃಥಗನ್ವಯಃ ಕ್ರಿಯತೇ ॥ (b) ತದಾ ವರುಣಾದಿಷು ಪೃಥಕ್ಪೃಥಙ್ಮತ್ಸಿ ಶಬ್ದ ದರ್ಶನಾದತ್ರಾಪಿ ಪೃಥಙ್ಮತ್ಸಿಶಬ್ದೋ ದೃಶ್ಯೇತ । (c) ನ ಹಿ ಸರ್ವೇಷಾಂ ಪೃಥಙ್ಮತ್ಸಿಶಬ್ದ ದರ್ಶನೇ ಏಕಸ್ಯೈವಾನ್ಯಥಾತ್ವಂ ಯುಜ್ಯತೇ ॥ (d) ನ ಚಾತ್ರ ದ್ವಿತ್ವಗಮಕಂ ಚಕಾರಾದಿಕಂ ವಿದ್ಯತೇ । ತಸ್ಮಾತ್ಪ್ರಾತರ್ಭಗಂ ಪೂಷಣಂ ಬ್ರಹ್ಮಣಸ್ಪತಿಮಿತ್ಯಾದ್ಯಪ್ಯೇಕಸ್ಯೈವ ವಿಷ್ಣೋರ್ವಿಶೇಷಣಂ ॥

ಅ ॥ (a) ಸೋಮ= ಸೋಮಾಭಿಮಾನಿಯೇ, ವರುಣಂ= ವರುಣನನ್ನು, ಮತ್ಸಿ= ಸಂತೋಷೀಕರಿಸುತ್ತಿ. ಮಿತ್ರಂ= ಮಿತ್ರಾಖ್ಯಸೂರ್ಯನನ್ನು, ಮತ್ಸಿ= ಸಂತೋಷೀಕರಿಸುತ್ತಿ.

ಇಂದೋ= ಇಷ್ಟವನ್ನುಕೊಡುವ, ಪವಮಾನ= ಮುಖ್ಯಪ್ರಾಣನೇ, ಇಂದ್ರಂ= ಪರಮೈಶ್ವರ್ಯ ಸಂಪನ್ನನಾದ, ವಿಷ್ಣುಂ= ಶ್ರೀ ಪರಮಾತ್ಮನನ್ನು, ಮತ್ಸಿ= ಸಂತೋಷೀಕರಿಸುತ್ತಿ. (ಇಲ್ಲಿ ವಿಷ್ಣುವಿನಲ್ಲಿ "ಇಂದ್ರ" ಎಂಬೀ ವಿಶೇಷಣವನ್ನು ಕೊಟ್ಟಿರುವುದರಿಂದ 'ಇಂದ್ರ' ಶಬ್ದವು ವಿಷ್ಣು ಪರವೇ ಆಗಿರುತ್ತದೆ.) 'ಇಂದ್ರನನ್ನು ವಿಷ್ಣುವನ್ನು ಕೂಡ' ಎಂದು ಪ್ರತ್ಯೇಕವಾಗಿ ಅನ್ವಯವು ಮಾಡಲ್ಪಡುವುದಿಲ್ಲ. ॥ (b) ಏಕೆಂದರೆ, ಆ ಪಕ್ಷದಲ್ಲಿ ವರುಣಾದಿಗಳಲ್ಲಿ ಪ್ರತ್ಯೇಕ ಪ್ರತ್ಯೇಕ 'ಮತ್ಸಿ' ಎಂಬ ಶಬ್ದವು ತೋರುವುದರಿಂದ ಇಲ್ಲಿಯೂ ಕೂಡ ಪ್ರತ್ಯೇಕವಾಗಿ 'ಮತ್ಸಿ' ಶಬ್ದವು ಕಾಣಲ್ಪಡಬೇಕಾಗುವುದು. ॥ (c) ಎಲ್ಲಾ ಕಡೆಯಲ್ಲಿಯೂ ಬೇರೆ ಬೇರೆ 'ಮತ್ಸಿ' ಶಬ್ದವು ತೋರುವಾಗ ಒಂದಕ್ಕೇನೇ (ವಿಷ್ಣುವಿಗೇನೇ) ಬೇರೆರೀತಿಯಾಗಿ (ಮತ್ಸಿ ಶಬ್ದವಿಲ್ಲದೆ ಇರುವಿಕೆಯು) ಕೂಡಲಾರದು. ॥ (d) ಇಲ್ಲಿಯಾದರೂ ಇಂದ್ರನನ್ನೂ ವಿಷ್ಣುವನ್ನೂ ಕೂಡ ಎಂದು ದ್ವಿತ್ವ (ಎರಡರಧರ್ಮ) ವನ್ನು ತೋರಿಸುವ 'ಚಕಾರ' ಮೊದಲಾದುದು ಇಲ್ಲವಷ್ಟೇ. ಆದುದರಿಂದ 'ಪ್ರಾತರ್ಭಗಂ ಪೂಷಣಂ ಬ್ರಹ್ಮಣಸ್ಪತಿಂ' ಇದೇ ಮೊದಲಾದುದೂ ಕೂಡ ಒಬ್ಬ ವಿಷ್ಣುವಿಗೇನೇ ವಿಶೇಷವು.

ತಾ ॥ 'ಪ್ರಾತರಗ್ನಿಂ ಪ್ರಾತರಿಂದ್ರಂ ಹವಾಮಹೇ ಪ್ರಾತರ್ಮಿತ್ರಾ ವರುಣಾ ಪ್ರಾತರಶ್ವಿನಾ। ಪ್ರಾತರ್ಭಗಂ ಪೂಷಣಂ ಬ್ರಹ್ಮಣಸ್ಪತಿಂ ಪ್ರಾತಸ್ಸೋಮ ಮುತರುದ್ರಂ ಹುವೇಮ। ಪ್ರಾತರ್ಜಿತಂ ಭಗಮುಗ್ರಂ ಹುವೇಮ'(ಪ್ರಾತಃಕಾಲದಲ್ಲಿ ಅಗ್ನಿಯನ್ನೂ ಇಂದ್ರನನ್ನೂ ಮಿತ್ರನನ್ನೂ ವರುಣನನ್ನೂ ಅಶ್ವಿನೀದೇವತೆಗಳನ್ನೂ ಹೋಮಿಸುತ್ತೇವೆ. ಪ್ರಾತಃಕಾಲದಲ್ಲಿ ಷಡ್ಗುಣಪೂರ್ಣನೂ ಸರ್ವರಕ್ಷಕನೂ ಚತುರ್ಮುಖನಿಗೆ ಅಧಿಪತಿಯೂ ಆದ ಶ್ರೀ ವಿಷ್ಣುವನ್ನೂ ಹಾಗೆಯೇ ಸೋಮನನ್ನೂ ಮತ್ತು ರುದ್ರನನ್ನೂ ಹೋಮಿಸುತ್ತೇನೆ.) ಎಂಬೀಶ್ರುತಿಯಲ್ಲಿ 'ಪ್ರಾತರ್ಭಗಂ ಪೂಷಣಂ ಬ್ರಹ್ಮಣಸ್ಪತಿಂ' ಎಂಬುವ ಸ್ಥಳದಲ್ಲಿ 'ಪ್ರಾತಃ ಪೂಷಣಂ ಪ್ರಾತಃ ಬ್ರಹ್ಮಣಸ್ಪತಿಂ' ಎಂದು ಪ್ರತ್ಯೇಕ 'ಪ್ರಾತಃ' ಎಂಬುವ ಪದವು 'ಚ' ಶಬ್ದವೂ ಇಲ್ಲದಿರುವುದರಿಂದ ಈ ಪದಗಳು ವಿಷ್ಣುವಿಗೇನೇ ಗುಣಗಳನ್ನು ಸಮರ್ಪಿಸುತ್ತವೆ. ಅಂತೂ ಅಲ್ಲಿಯೂ ಪ್ರತ್ಯೇಕವಾಗಿ ಪ್ರಾತಃ ಎಂಬುವ ಪದಗಳನ್ನು ಇಟ್ಟುಕೊಂಡು ಮೂರು ದೇವತೆಗಳನ್ನು ಪ್ರತಿಪಾದಿಸುತ್ತದೆ ಎಂದು ಹೇಳಕೂಡದು. ಅದರಂತೆಯೇ ಇಲ್ಲಿಯೂ ಇಬ್ಬರು ದೇವತೆಗಳನ್ನು ಪ್ರತಿಪಾದಿಸುತ್ತದೆ ಎಂದು ಹೇಳಕೂಡದು.

**ಭಾ** ॥ (a) ಯತ್ರ ಚೈವಂ ಭೂತೇಷ್ವೇಕತ್ವೇ ವಿರೋಧೋ ದೃಶ್ಯತೇ ತತ್ರ ತೇನೈವ ವಿರೋಧೇನ ದ್ವಿತ್ವಂ ಭವತಿ। ಅನ್ಯಥೈಕತ್ವಮೇವ ॥ (b) ಯೋ ದೇವಾನಾಂ ನಾಮಧಾ ಏಕ ಏವೇತಿ ಚೋಕ್ತಂ। ಬಹುರೂಪತ್ವಾದ್ಬಹುವಚನಂ ಚ ವಿಷ್ಣೋರೇವ ಯುಜ್ಯತೇ ॥ (c) ತಸ್ಮಾನ್ಮುಖ್ಯತೋ ವಿಷ್ಣಾವೇವೇಂದ್ರಾದಿಶಬ್ದಾ ಅನ್ಯೇಷಾಮುಪಚಾರತಃ । (d) ಮತ್ಸಿ ಮಹಾಮಿಂದ್ರಮಿಂದೋ ಮದಾಯೇತ್ಯನ್ಯೇಂದ್ರಸ್ಯ ಪೃಥಗುಕ್ತೇಶ್ಚ ಮತ್ಸೀಂದ್ರಮಿಂದೋ ಪವಮಾನೇತಿ ಪೂರ್ವೋಕ್ತ ಇಂದ್ರೋ ವಿಷ್ಣುರೇವೇತಿ ಸಿದ್ಧಂ ॥

'ಋತಂ ಸತ್ಯಂ ಪರಂ ಬ್ರಹ್ಮ ಪುರುಷಂ ಕೃಷ್ಣಪಿಂಗಲಂ। ಊರ್ಧ್ವರೇತಂ ವಿರೂಪಾಕ್ಷಂ ಶಂಕರಂ ನೀಲಲೋಹಿತಂ' ॥ ಇದೇ ಮೊದಲಾದ ವಾಕ್ಯಗಳಲ್ಲಿ 'ಚಕಾರ' ಮೊದಲಾದುದು ಇಲ್ಲವಿದ್ದರೂ ಪೂರ್ವಾರ್ಧವು ವಿಷ್ಣುಪರವೆಂದೂ, ಉತ್ತರಾರ್ಧವು ರುದ್ರಪರವೆಂದೂ ಬೇರೆ ಬೇರೆ ವಾಕ್ಯವಾಗಿಯೇ ಹೇಗೆ ಕಲ್ಪಿಸಲ್ಪಡುವುದೋ, ಅದರಂತೆಯೇ ಇಲ್ಲಿಯೂ ಬೇರೆ ಬೇರೆ ವಾಕ್ಯಗಳೆಂದೇ ಏತಕ್ಕೆ ಅಂಗೀಕರಿಸಬಾರದು? ಅಂದರೆ:—

ಅ || (a) ಎಲ್ಲಿ ಬೇರೆ ಬೇರೆ ವಾಕ್ಯಗಳಿಂದೇ ತಿಳಿಸಿಕೊಡುವ 'ಚಕಾರ' ಮೊದಲಾದುದು ಇಲ್ಲದೆ ಇರುವ ವಾಕ್ಯಗಳಲ್ಲಿ ಏಕವಾಕ್ಯತ್ವವನ್ನು ಅಂಗೀಕರಿಸಿದರೆ ಪುನರುಕ್ತ್ಯಾದಿ ರೂಪ ವಿರೋಧವು ಕಾಣಲ್ಪಡುತ್ತದೋ, ಅಲ್ಲಿ ಅಲ್ಲಿ ಆ ವಿರೋಧದಿಂದಲೇ ದ್ವಿತ್ವವು (ಅಂದರೆ ಭೇದವು) ಇರುತ್ತದೆ. ಅಲ್ಲವಾದರೆ (ಅಂದರೆ ವಿರೋಧವಿಲ್ಲದಿದ್ದರೆ) ಏಕತ್ವ (ಅಭೇದ)ವೇ (ಪ್ರಕೃತ ವಿರೋಧಲೇಶವೂ ಇರುವುದಿಲ್ಲ). ॥ (b) ಯಾವಾತನು ದೇವತೆಗಳ ನಾಮಗಳನ್ನು ಧರಿಸಿದವನು ಒಬ್ಬನೇ ಸರಿ. ಈ ಪ್ರಕಾರವಾಗಿಯೂ ಹೇಳಲ್ಪಟ್ಟಿದೆ. (ಅಂತೂ ಸರ್ವಶಬ್ದವಾಚ್ಯತ್ವವು ವಿಷ್ಣುವಿಗೇನೇ ಸಮರ್ಥಿಸಲ್ಪಟ್ಟ ಪ್ರಯುಕ್ತ ಇಂದ್ರ ಶಬ್ದವೂ ವಿಷ್ಣುಪರವೇ ಸರಿ). ವಿಷ್ಣುವು ಬಹುರೂಪಿಯಾದುದರಿಂದ ಆತನಿಗೇನೇ 'ಆದಿತ್ಯಾನ್ಮಾರುತಂಗಣಂ' ಎಂಬೀ ಬಹುವಚನವೂ ಗಣತ್ವ (ಸಮೂಹತ್ವ)ವೂ ಯುಕ್ತವಾಗುತ್ತದೆ. ॥ (c) ಆದುದರಿಂದ 'ಇಂದ್ರ' ಮೊದಲಾದ ಶಬ್ದಗಳು ಮುಖ್ಯವಾಗಿ ವಿಷ್ಣುವಿನಲ್ಲಿಯೇ (ಇರುತ್ತವೆ). ಇತರರಿಗೆ ಅಮುಖ್ಯವಾಗಿಯೇ (ಇರುತ್ತವೆ). ॥ (d) 'ಇಂದೋ=ಇಷ್ಟಪ್ರದನೇ, ಮದಾಯ=ಸಂತೋಷಕ್ಕೋಸ್ಕರ, ಮಹಾಂ=ಅಗ್ರಜನಾದ, ಇಂದ್ರಂ=ದೇವೇಂದ್ರನನ್ನು, ಮತ್ಸಿ=ಸಂತೋಷಿಸುತ್ತೀ'. ಎಂಬೀ ಮೇಲಿನ ವಾಕ್ಯದಲ್ಲಿ ಮತ್ತೊಬ್ಬ ಇಂದ್ರ (ಪುರಂದರ)ನನ್ನು ಪ್ರತ್ಯೇಕವಾಗಿ ಹೇಳಿರುವುದರಿಂದಲೂ, 'ಮತ್ಸೀಂದ್ರಮಿಂದೋ ಪವಮಾನ' ಎಂಬೀ ಪೂರ್ವವಾಕ್ಯದಲ್ಲಿ ಹೇಳಲ್ಪಟ್ಟ ಇಂದ್ರನು (ಪುರಂದರನಲ್ಲ) ವಿಷ್ಣುವೇ ಎಂದು ಸಿದ್ಧವಾಯಿತು.

**ಭಾ||** **(a)** ಮಹತ್ವಂ ಚ ತಸ್ಯಾದಿತಿಪುತ್ರತ್ವೇಽಗ್ರಜತ್ವಮಾತ್ರಂ ನ ತು ಸಾಮರ್ಥ್ಯತಃ । ಮಹಪೂಜಾಯಾಮಿತಿ ಧಾತೋಃ । ಪೂಜ್ಯೋ ಹ್ಯಗ್ರಜೋ ಭವತಿ ॥ **(b)** ಆಯೋ ವಿವಾಯ ಸಚಥಾಯ ದೈವ್ಯ ಇಂದ್ರಾಯ ವಿಷ್ಣುಃ ಸುಕೃತೇ ಸುಕೃತ್ತರಃ । ವೇಧಾ ಅಜಿನ್ವತ್ತ್ರಿಷಧಸ್ಥ ಆರ್ಯಮೃತಸ್ಯ ಭಾಗೇ ಯಜಮಾನಮಾಭಜದಿತೀಂದ್ರಸ್ಯ ಪರಮಂ ದೈವಂ ಜನಕೋ ಯಜ್ಞಭಾಗಾದಿಪ್ರದಾತಾ ವಿಷ್ಣುರೇವ ಹಿ ಶ್ರೂಯತೇ ॥ **(c)** ಇಂದ್ರಶ್ಚ ಯಜಮಾನಃ । ತಸ್ಮಾತ್ತತ್ಪ್ರಸಾದಾದವತಾರಾಗ್ರಜತ್ವಮೇವ ತಸ್ಯ ಮಹತ್ತ್ವಂ॥

ಅ || (a) 'ಮತ್ಸಿಮಹಾಮಿಂದ್ರಂ' ಪುರಂದರನಿಗೆ ಮಹತ್ವವೆಂದರೆ ಅದಿತಿಯ ಮಕ್ಕಳಲ್ಲಿ ಮೊದಲು ಹುಟ್ಟುವಿಕೆಯು (ಅಂದರೆ ಕಾಲತಃ ಜ್ಯೈಷ್ಠತ್ವವು) ಸಾಮರ್ಥ್ಯದಿಂದಲ್ಲ. (ಸಾಮರ್ಥ್ಯಾಧಿಕ್ಯವು ವಿಷ್ಣುವಿಗೇನೇ ಸರಿ.) ॥ (b) ಸುಕೃತ್ತರಃ=ಚೆನ್ನಾಗಿ ಮಾಡುವವರಲ್ಲಿ ಶ್ರೇಷ್ಠನಾದ, ದೈವ್ಯಃ=ದೇವೇಂದ್ರನಿಗೆ ಇಷ್ಟನಾದ, ಯಃ=ಯಾವ, ವಿಷ್ಣುಃ=ಶ್ರೀ ಹರಿಯು, ಸುಕೃತೇ=ಚೆನ್ನಾಗಿ ಮಹಾವ್ರತಾಖ್ಯ ಯಾಗವನ್ನು ಮಾಡುವ ಇಂದ್ರನಿಗೋಸ್ಕರ, ಸಚಥಾಯ=ಸಖಿತ್ವಕ್ಕೋಸ್ಕರ, ಆ ವಿವಾಯ=ಸಂಯುಕ್ತನಾದನೋ, ತ್ರಿಷಧಸ್ಥಃ=ಶ್ವೇತದ್ವೀಪ, ಅನಂತಾಸನ, ವೈಕುಂಠವೆಂಬ ಮೂರುಸ್ಥಾನಗಳಲ್ಲಿರುವ, ವೇಧಾಃ=ವಿಶೇಷಾಕಾರವಾಗಿ (ಎಲ್ಲಾ ಜಗತ್ತುಗಳ) ಧಾರಣಪೋಷಣಗಳನ್ನು ಮಾಡುವ ವಿಷ್ಣುವು, ಆರ್ಯಂ=ಪೂಜ್ಯನಾದ ಇಂದ್ರನನ್ನು, ಅಜಿನ್ವತ್=ಹುಟ್ಟಿಸಿದನು. ಯಜಮಾನಂ=(ಮಹಾವ್ರತದಲ್ಲಿ) ಯಜಮಾನನಾದ ಇಂದ್ರನನ್ನು, ಋತಸ್ಯ=ಯಜ್ಞದ, ಭಾಗೇ=ಭಾಗದಲ್ಲಿ, ಆ ಭಜತ್=ಪ್ರಾಪಿಸಿಕೊಟ್ಟನು. (ಅಂದರೆ ಯಾಗದ ಭಾಗವೇ ಮೊದಲಾದುವುಗಳಿಂದೊಡಗೂಡಿದ ಪದವನ್ನು ಕೊಟ್ಟನು). ಎಂದು (ದೈವ್ಯಃ) ಇಂದ್ರನಿಗೆ ಸರ್ವೋತ್ತಮನಾದ ಇಷ್ಟದೇವತೆಯೂ, (ಅಜಿನ್ವತ್) ಇಂದ್ರನನ್ನು ಹುಟ್ಟಿಸಿದವನು, (ಋತಸ್ಯ ಭಾಗೇ) ಇಂದ್ರನಿಗೆ ಯಜ್ಞಭಾಗ ಮೊದಲಾದವುಗಳನ್ನು

ಕೊಡತಕ್ಕವನೂ ವಿಷ್ಣುವೆಂದೇ ಶ್ರುತಿ ಸಿದ್ಧವಾಗಿದೆ. (ಅಂತೂ ಪುರಂದರನಿಗೆ ಪ್ರಥಮದಲ್ಲಿ ಹುಟ್ಟಿದ ಪ್ರಯುಕ್ತ ಪೂಜ್ಯತ್ವ ರೂಪವೇ ಮಹತ್ವವು). ॥ (c) (ಸುಕೃತೇ=ಚೆನ್ನಾಗಿ ಮಾಡ ತಕ್ಕ ಇಂದ್ರನಿಗೋಸ್ಕರ, ಎಂದು ಪ್ರಕೃತವಾದುದರಿಂದ) ಇಂದ್ರನೇ ಯಜಮಾನನು. ಆದು ದರಿಂದ ಶ್ರೀ ವಿಷ್ಣುವಿನ ಅನುಗ್ರಹದಿಂದ್ರ, ಅವತಾರದಲ್ಲಿ ಮೊದಲು ಹುಟ್ಟುವಿಕೆಯೇ ಆ ಪುರಂದ ರನಿಗೆ ಮಹತ್ವವು.

ಭಾ॥ (a) ಅನ್ಯೇಂದ್ರೋ ಹ್ಯಹಂ ಪ್ರಥಮಃ ಪಿಬೇಯಮಹಂ ಪ್ರಥಮಃ ಪಿಬೇ ಯಮಿತಿ ವಾಯುನಾ ವಿವದಮಾನ ಆಜೌ ಪರಾಜಿತೋ ವಾಯುಂ ಪ್ರಸಾ ದಯಿತ್ವಾ ಚತುರ್ಥೇ ವಾಯುನಾ ಸಹ ಗ್ರಹಮಾಪ । (b) ವಿಷ್ಣುಸ್ತು ಕ್ರತುಂ ಸಚಂತ ಮಾರುತಸ್ಯ ವೇಧಸ ಇತಿ ವಾಯೋರಪಿ ವಿಧಾತೃತ್ವಂ ಶ್ರೂಯತೇ ॥ (c) ಡುಧಾಞ್ ಧಾರಣಪೋಷಣಯೋರಿತಿ ಧಾತೋರ್ವಿ ಶೇಷೇಣ ಧಾರಣಪೋಷಣಕರ್ತಾ ಹಿ ವೇಧಾಃ । ತಸ್ಮಾದ್ಭಗವತ ಏವೈತ ದ್ಯಶೋ ಬೃಹದುಕ್ಥಾದಿಕಂ ॥

ಅ ॥ (a) ಮತ್ತೊಬ್ಬ ಇಂದ್ರನಾದರೆ (ಪ್ರಸಿದ್ಧ ಇಂದ್ರನು) ನಾನು ಪ್ರಥಮತಃ ಕುಡಿ ಯುವೆನು, ನಾನು ಪ್ರಥಮತಃ ಕುಡಿಯುವೆನು ಎಂದು ವಾಯುವಿನಿಂದ ಜಗಳ ಮಾಡಿಕೊಂಡ ವನಾಗಿ ಯುದ್ಧದಲ್ಲಿ ಪರಾಜಿತನಾಗಿ (ಆ ಮೇಲೆ) ಮುಖ್ಯಪ್ರಾಣನನ್ನು ಸಂತೋಷೀಕರಿಸಿ ನಾಲ್ಕನೇ ದಿನದಲ್ಲಿ ಆ ಮುಖ್ಯಪ್ರಾಣನಿಂದ ಕೂಡಿಕೊಂಡೇ ಸೋಮ ಪಾತ್ರವನ್ನು ಹೊಂದಿದನು, (ಅಂದರೆ ಸೋಮವನ್ನು ಕುಡಿದನು). [ತಾ ॥ ಈ ವಿಷಯವು ಬ್ರಾಹ್ಮಣದಲ್ಲಿ ದ್ವಿತೀಯ ಪಂಚಕದಲ್ಲಿ ೯ನೇ ಅಧ್ಯಾಯದಲ್ಲಿ (೧)ನೇ ಖಂಡದಲ್ಲಿ ಸ್ಪಷ್ಟವಾಗಿ ಅದೆ. ॥ **'ದೇವಾ ವೈ ಸೋಮಸ್ಯ ರಾಜ್ಞೋಽಗ್ರಪೇಯೇನ ಸಮಪಾದಯನ್ನಹಂ ಪ್ರಥಮಃ ಪಿಬೇಯ ಮಹಂ ಪ್ರಥಮಃ ಪಿಬೇಯಮಿತ್ಯೇವಾಕಾಮಯಂತ । ತೇ ಸಂಪಾದಯಂತೋಽ ಬ್ರುವನ್ । ಹಂತಾಜಿಮಯಾಮ, ಸ ಯೋ ನ ಉಜ್ಜೇಷ್ಯತಿ । ಸ ಯೋ ನ ಉಜ್ಜೇ ಷ್ಯತಿ ಸ ಪ್ರಥಮಃ ಸೋಮಸ್ಯ ಪಾಸ್ಯತೀತಿ ತಥೇತಿ ತ ಆಜಿಮಯುಃ । ತೇಷಾಮಾ ಜಿಂಯತಾಮಭಿಸೃಷ್ಟಾನಾಂ ವಾಯುರ್ಮುಖಂ ಪ್ರಥಮಂ ಪ್ರತ್ಯಪದ್ಯತ । ಅಥೇಂ ದ್ರೋಽಥ ಮಿತ್ರಾವರುಣಾವಥಾಶ್ವಿನೌ । ಸೋಽವೇದಿಂದ್ರೋ ವಾಯುರ್ವಾವುದ್ಜೈ ಜಯತೀತಿ ತಮನುಪರಾಪತತ್ । ಸ ಹ ನಾವಥೋಜ್ಜಯಾವೇತಿ । ಸ ನೇತ್ಯಬ್ರವೀ ದಹಮೇವೋಜ್ಜೇಷ್ಯಾಮೀತಿ । ತೃತೀಯಂ ಮೇಥೋಜ್ಜಯಾವೇತಿ । ನೇತಿ ಹೈವಾ ಬ್ರವೀದಹಮೇವೋಜ್ಜೇಷ್ಯಾಮೀತಿ । ತುರೀಯಂ ಮೇಥೋಜ್ಜಯಾವೇತಿ । ತಥೇತಿ ತಂ ತುರೀಯೇ ತ್ಯಾರ್ಜತ । ತತ್ತುರೀಯಭಾಗಿಂದ್ರೋಽಭವತ್ । ತ್ರಿಭಾಗ್ವಾಯುಸ್ತೌ ಸ ಹೈವೇಂದ್ರವಾಯೂ ಉದಜಯತಾಂ'** ॥ ಅಂದರೆ ದೇವತೆಗಳೇ ಸೋಮರಸವನ್ನು ಪ್ರಥಮದಲ್ಲಿ ಪಾನಮಾಡುವುದನ್ನು ಸಂಪಾದಿಸಿಕೊಂಡರು. ಆಗ ನಾನು ಪ್ರಥಮದಲ್ಲಿ ಕುಡಿ ಯುವೆನು, ನಾನು ಪ್ರಥಮದಲ್ಲಿ ಕುಡಿಯುವೆನು ಎಂದೇ ಇಚ್ಛಿಸಿದರು. ಸೋಮವನ್ನು ಸಂಪಾ ದಿಸಿಕೊಂಡ ಆ ದೇವತೆಗಳು ಯುದ್ಧಮಾಡಿಕೊಳ್ಳುವ. ನಮ್ಮ ಪೈಕಿ ಯಾರು ಗೆಲ್ಲುವನೋ ಅವನು ಸೋಮವನ್ನು ಪ್ರಥಮದಲ್ಲಿ ಕುಡಿಯುವನು' ಎಂದು ಹೇಳಿದರು. ಹಾಗೆಯೇ ಆಗಲಿ ಎಂದು ಅವರು ಯುದ್ಧವನ್ನು ಹೊಂದಿದ್ದರು. ಯುದ್ಧಕ್ಕೆ ಹೋದವರ ಪೈಕಿ ವಾಯುವು ಪ್ರಥಮ ದಲ್ಲಿ ಹೊಂದಿದನು, ಆ ಮೇಲೆ ಇಂದ್ರನು, ಆಮೇಲೆ ಮಿತ್ರನು, ವರುಣನು, ಆಮೇಲೆ ಅಶ್ವಿನೀ

ದೇವತೆಗಳು. ಆ ಇಂದ್ರನಾದರೂ 'ವಾಯುವು ನಿಶ್ಚಯವಾಗಿ ಎಲ್ಲರನ್ನು ಗೆಲ್ಲುತ್ತಾನೆ' ಎಂದು ವಾಯುವನ್ನು ತಿಳಿದುಕೊಂಡನು. ಅಲ್ಲದೆ ಆ ವಾಯುವನ್ನು ಅನುಸರಿಸಿ ಬಂದನು. ಎಲೋ ವಾಯುವೇ ನಾವಿಬ್ಬರೂ ಒಟ್ಟಿಗೆ (ಎಲ್ಲರನ್ನು) ಗೆಲ್ಲುವ ಎಂದನು. ಆಗ ಆ ವಾಯುವು ಬೇಡ, ನಾನೇ ಗೆಲ್ಲುವೆನು ಎಂದು ಹೇಳಿದನು. ಆಮೇಲೆ ಮೂರನೇ ಆವರ್ತಿ ನಾವಿಬ್ಬರೂ ಒಟ್ಟಿಗೆ ಗೆಲ್ಲುವ ಎಂದನು. ಬೇಡ, ನಾನೇ ಗೆಲ್ಲುವೆನು ಎಂದು ಪುನಃ ವಾಯುವು ಹೇಳಿದನು. ಪುನಃ ನಾಲ್ಕನೇ ಆವರ್ತಿ ಒಟ್ಟಿಗೆ ಗೆಲ್ಲುವ ಎಂದು ಇಂದ್ರನು ಹೇಳಿದನು. (ಆಗ ವಾಯುವು) ಹಾಗೆ ಆಗಲಿ ಎಂದು ನಾಲ್ಕನೇ ಆವರ್ತಿ ಇಂದ್ರನನ್ನು ಅಂಗೀಕರಿಸಿದನು. ಆದುದರಿಂದ ಇಂದ್ರನು ನಾಲ್ಕನೇ ದಿನದಲ್ಲಿ ಹೊಂದಿದವನು ಆದನು. ವಾಯುವು ಮೂರುದಿನಗಳಲ್ಲಿಯೂ ಹೊಂದಿದವನಾದನು. ಆ ಇಂದ್ರವಾಯುಗಳು ಒಟ್ಟಿಗೇನೆ ಗೆದ್ದರು. ಎಂಬುವಲ್ಲಿ ಈ ಪ್ರಮೇಯವು ಸ್ಪಷ್ಟವಾಗಿದೆ.] ॥ (b) ವಿಷ್ಣುವಿಗಾದರೂ 'ಮಾರುತಸ್ಯ=ಮುಖ್ಯಪ್ರಾಣನಿಗೆ, ವೇಧಸಃ=ವಿಶೇಷಾಕಾರವಾಗಿ ಧಾರಣ ಪೋಷಣಗಳನ್ನು ಮಾಡುವ ಶ್ರೀ ಪರಮಾತ್ಮನಿಗೆ, ಕ್ರತುಂ=ಯಾಗವನ್ನು, ಸಂಚತ=ಕೂಡಿಸಿದರು.' ಎಂಬೀ ಶ್ರುತಿಯಿಂದ ಮುಖ್ಯಪ್ರಾಣನಿಗೂ ಸೃಷ್ಟಿಕರ್ತೃತ್ವವು ಶ್ರುತವಾಗುತ್ತದೆ. (ಅಂತೂ ಮುಖ್ಯಪ್ರಾಣನ ಧಾರಣಾದಿಗಳನ್ನು ವಿಷ್ಣುವೇ ಮಾಡಿಕೊಂಡು ಇದ್ದಾನೆ.)॥ (c) ಡುಧಾಞ್ ಧಾತುವು 'ಧರಿಸುವಿಕೆ, ಪೋಷಿಸುವಿಕೆ ಈ ಅರ್ಥಗಳಲ್ಲಿ ಇದೆ.' ಎಂಬೀ ಧಾತುವ್ಯಾಖ್ಯಾನದಿಂದ ವಿಶೇಷಾಕಾರವಾಗಿ ಧಾರಣ ಪೋಷಣಗಳನ್ನು ಮಾಡುವವನೇ 'ವೇಧಾಃ' ಎನ್ನಿಸಿಕೊಳ್ಳುತ್ತಾನೆ. ಆದುದರಿಂದ ಈ ಬೃಹದುಕ್ಥ ಮೊದಲಾದುದು ಶ್ರೀ ಪರಮಾತ್ಮನಿಗೇನೇ ಗುಣಕರ್ಮಗಳ ಸಂಕೀರ್ತನರೂಪವು.

ಭಾ॥ (a) ಖುಕ್ಸಹಸ್ರಾತ್ಮಕಂ ವಿಷ್ಣೋರ್ಯಶ ಇಂದ್ರಾಭಿಧಸ್ಯ ಚ । ಇಂದ್ರೋ ಹಿ ಪ್ರಥಮೋ ವಿಷ್ಣುರ್ಯಜ್ಞನಾಮಾ ಜಗತ್ಪತಿಃ ॥ (b) ತತ್ಪ್ರಸಾದಾದಥೇಂದ್ರತ್ವಂ ದ್ವಾದಶಾನ್ಯೇ ಪ್ರಪೇದಿರೇ । (c) ಪುರಂದರಸ್ತ್ವೇಕ ಏವ ವಾಸುದೇವಪ್ರಸಾದತಃ ॥ ದ್ವಿವಾರಮಿಂದ್ರತಾಮಾಪ ತಸ್ಮಾದ್ದ್ವಾದಶ ತೇ ಪರೇ । (d) ಅಗ್ರಜತ್ವಾದದಿತ್ಯಾಂ ತು ಮಹೇಂದ್ರೋ ನಾಮ ಚಾಭವತ್ ॥ ಮಹಾವ್ರತಂ ಕರ್ಮ ಕೃತ್ವಾ ಚೈವನಾಮ್ನಾ ಮಹೇಂದ್ರಕಃ । (e) ಮಹತ್ವಂ ಮುಖ್ಯತೋ ವಿಷ್ಣೋರ್ನ ಹ್ಯನ್ಯಸ್ಯ ಕದಾಚನ ॥ ಏವಂ ಯೋ ವೇದ ತಂ ವಿಷ್ಣುಂ ವಿಸ್ರಸ್ತೋ ಬಂಧತೋಽಖಿಲಾತ್ । ಅಸ್ಮಾಲ್ಲೋಕಾದ್ಧರೇರ್ಲೋಕಮೇತಿ ನಾಸ್ತ್ಯತ್ರ ಸಂಶಯಃ ॥ (f) ಇತ್ಯಾಹ ಭಗವಾನ್ವಿಷ್ಣುರ್ಮಹಿದಾಸಸ್ವರೂಪಕಃ । ಶ್ವೇತದ್ವೀಪಾದಿಕಾನ್ಪ್ರಾಪ್ಯ ಸ ಇಂದ್ರಾಖ್ಯೋ ಹರಿಃ ಸ್ವಯಂ ॥ ಮಹಿದಾಸಾಭಿಧೋ ಭೂತ್ವಾ ಲೋಕೇ ಷ್ವೇಷು ವಿರಾಜತಿ ॥

ಅ ॥ (a) ಇಂದ್ರನೆಂದು ಹೆಸರುಳ್ಳ ವಿಷ್ಣುವಿನ ಯಶಸ್ಸಾದರೂ ಬೃಹತೀಛಂದಸ್ಕವಾದ ಖುಕ್ಸಹಸ್ರಾತ್ಮಕವು. ಸರ್ವಲೋಕಗಳಿಗೆ ಸ್ವಾಮಿಯಾದ ವಿಷ್ಣುವು ಯಜ್ಞನಾಮಕನಾದ (ಗಳ) (ಇಂದ್ರರಪೈಕಿ) ೧. ಒಬ್ಬ ಇಂದ್ರನು. ॥ (b) ಆಮೇಲೆ ಬೇರೆ ಹನ್ನೆರಡು ಮಂದಿ ಆ ಯಜ್ಞನಾಮಕನಾದ ಇಂದ್ರನ ಅನುಗ್ರಹದಿಂದಲೇ ಇಂದ್ರತ್ವವನ್ನು ಹೊಂದಿದರು. ॥ (c) ಪುರಂದರನೊಬ್ಬನೇ ವಾಸುದೇವನ ಅನುಗ್ರಹದಿಂದ ಎರಡಾವರ್ತಿ ಇಂದ್ರತನವನ್ನು ಹೊಂದಿದನು. ಆದುದರಿಂದ (ವಿಷ್ಣುವಿನಿಂದ) ಬೇರೆಯಾದ ಇಂದ್ರರು ಹನ್ನೆರಡುಮಂದಿ. (ಈ ಅಭಿಪ್ರಾಯದಿಂದಲೇ

೧೩ ಎಂದು ಹೇಳದೆ ೧೨ ಎಂದು ಹೇಳಿರುವುದು.) [ತಾ॥ ೧೪ ಇಂದ್ರರ ಹೆಸರು ಈ ರೀತಿಯಾಗಿ ಇರುತ್ತದೆ. ೧ ಯಜ್ಞಃ, ೨ ರೋಚನಃ, ೩ ಸತ್ಯಜಿತ್, ೪ ತ್ರಿಶಿಖಃ, ೫ ವಿಭುಃ, ೬ ಮಂದ್ರದ್ರುತಃ, ೭ ಪುರಂದರಃ, ೮ ಬಲಿಃ, ೯ ಅದ್ಭುತಃ, ೧೦ ಶಂಭುಃ, ೧೧ ಧೃತಿಃ, ೧೨ ಋತಧಾಮಾ, ೧೩ ದಿವಸ್ಪತಿಃ, ೧೪ ಶುಚಿಃ. ಭಾಗವತ ಸ್ಕಂಧ ೮. ಅ. ೧-೨-೩. ಇದರಲ್ಲಿ ೬. ೭. ಪುರಂದರನೊಬ್ಬನೇ.] ॥ (d) ಅದಿತಿಯಲ್ಲಿಯೇ (ಪುರಂದರನು) (ವಾಮನನು ಅವತಾರ ಮಾಡುವುದಕ್ಕಿಂತ) ಪ್ರಥಮದಲ್ಲಿ ಹುಟ್ಟಿರುವುದರಿಂದ ಮಹೇಂದ್ರನಾಮಕನಾದನು. (ಪುರಂದರನು ವಿಷ್ಣುಪ್ರೀತ್ಯರ್ಥವಾಗಿ) ಮಹಾವ್ರತಾಖ್ಯಕರ್ಮವನ್ನು ಮಾಡಿಯೇ ಹೆಸರಿನಿಂದ ಮಹೇಂದ್ರನು ಆದನು. ॥ (e) ಮುಖ್ಯವಾಗಿ ಮಹತ್ವವು ವಿಷ್ಣುವಿಗೇನೇ. ಇತರರಿಗೆ ಯಾವಾಗಲೂ ಇಲ್ಲವೇ ಇಲ್ಲ. ಈ ಪ್ರಕಾರವಾಗಿ ಯಾವಾತನು ಆ ವಿಷ್ಣುವನ್ನು ತಿಳಿಯುತ್ತಾನೋ ಆತನು ಸರ್ವಸಂಸಾರ ಬಂಧದಿಂದಲೂ ಬಿಡಲ್ಪಟ್ಟವನಾಗಿ ಈ ಲೋಕದಿಂದ ವಿಷ್ಣುವಿನ ಲೋಕಕ್ಕೆ ಹೋಗುತ್ತಾನೆ. ಈ ವಿಷಯದಲ್ಲಿ ಸಂದೇಹವಿಲ್ಲ. ॥ (f) ಈ ಪ್ರಕಾರವಾಗಿ ಪೂಜ್ಯನಾದ ಮಹಿದಾಸರೂಪಿಯಾದ ವಿಷ್ಣುವು ಹೇಳಿದನು. ಇಂದ್ರನೆಂದು ಹೆಸರುಳ್ಳ ಆ ಯಜ್ಞನಾಮಕನಾದ ಹರಿಯು, ತಾನು ಶ್ವೇತದ್ವೀಪ ಮೊದಲಾದ ಸ್ಥಾನಗಳನ್ನು ಹೊಂದಿ (ಅಲ್ಲಿರತಕ್ಕ ಮೂಲರೂಪದಿಂದ ಐಕ್ಯವನ್ನು ಹೊಂದಿ ಪುನಃ ಅದೇ ಅಂಶದಿಂದ) ಮಹಿದಾಸನಾಮಕನಾಗಿ ಪ್ರಾದುರ್ಭವಿಸಿ ಈ ಲೋಕಗಳಲ್ಲಿ ವಿಶೇಷಾಕಾರವಾಗಿ ಪ್ರಕಾಶಿಸುತ್ತಾನೆ.

ಭಾ॥ (a) ತತ್ರ ಪೃಚ್ಛಂತಿ ಕೇಚಿತ್ತು ಯದ್ಯೇಷ ಭಗವಾನ್ಹರಿಃ । ಮಹಿದಾಸಾದಿ ರೂಪೇಣ ಭೂಮಿಷ್ಠೋ ರಮತೇ ಪ್ರಭುಃ ॥ (b) ತದಾ ಯದಾ ಸ್ತ್ರಿಯಾ ವಿಷ್ಣೋ ರಮತೇ ನಿತ್ಯಸತ್ಸುಖಃ । ಕಯಾ ಸ್ತ್ರಿಯಾ ರತಿಂ ಕುರ್ಯಾನ್ನ ಹ್ಯನ್ಯರತಿರಚ್ಯುತಃ ॥ (c) ಸ್ತ್ರೀರೂಪೇ ತತ್ಸ್ವಯಂ ಸ್ವಸ್ಮಿನ್ರಮತೇಽಸಾವಿತೀದೃಶಂ । ವಾಚ್ಯಂ ತತ್ರ ಚ ಭೂಮಿಷ್ಠರೂಪೇಣ ತು ದಿವಿ ಸ್ಥಿತಂ ॥ ಸ್ತ್ರೀರೂಪಂ ಕಿಮಸೌ ಗಚ್ಛೇತ್ (d) ಅಥ ಯದ್ಯೇವಮತ್ರ ಚ । ಸ್ತ್ರೀರೂಪಂ ಪೃಥಿವೀಸಂಸ್ಥಂ ಕೇನ ರೂಪೇಣ ಸಂವ್ರಜೇತ್ ॥ (e) ನ ಹ್ಯನ್ಯಗಮ್ಯೋ ಭಗವಾಂಸ್ತ್ರೀರೂಪೋಽಪಿ ಜನಾರ್ದನಃ । ಇತಿ ಪೃಷ್ಟಃ ಸ್ವಶಿಷ್ಯೈಃ ಸ ಮಹಿದಾಸೋಽವದದ್ಧರಿಃ ॥

ಅ॥ (a) (ಹೀಗೆ ಮಹಿದಾಸನಿಂದುಪದೇಶಿಸಲ್ಪಟ್ಟ) ಕೆಲವು ಶಿಷ್ಯರು ಆ ವಿಷಯದಲ್ಲಿ ಕೇಳುತ್ತಾರೆ. ಯಾವ ಪಕ್ಷದಲ್ಲಿ ಈ ಪೂಜ್ಯನಾದ, ಸಮರ್ಥನಾದ ಶ್ರೀ ಹರಿಯು ಮಹಿದಾಸ ಮೊದಲಾದ ರೂಪದಿಂದ ಭೂಮಿಯಲ್ಲಿದ್ದವನಾಗಿ ಕ್ರೀಡಿಸುತ್ತಾನೋ, (b) ಆಗ (ಕ್ರೀಡೆಯು ಸ್ತ್ರೀಯರು ಹೊರತು ಕೂಡದೆ ಇರುವುದರಿಂದ) ನಿರಂತರದಲ್ಲಿಯೂ ನಿರ್ದುಷ್ಟಸುಖ ಸ್ವರೂಪನಾದ ಶ್ರೀ ವಿಷ್ಣುವು ಸ್ತ್ರೀಯಿಂದ ಕ್ರೀಡಿಸುತ್ತಾನೆಂದಾದರೆ ಯಾವ ಸ್ತ್ರೀಯಿಂದ ಕ್ರೀಡೆಯನ್ನು ಮಾಡುವನು? ನಾಶವಿಲ್ಲದಿರುವ ಸ್ವತಂತ್ರನಾದ ಶ್ರೀ ಹರಿಯು ಇತರರಿಂದ ಕ್ರೀಡಿಸುವವನು ಆಗಲಾರನಷ್ಟೇ! ॥ (c) ಆದುದರಿಂದ ಈ ಹರಿಯು ಸ್ವಕೀಯವಾದ ಸ್ತ್ರೀರೂಪದಲ್ಲಿಯೇ ತಾನು ಕ್ರೀಡಿಸುತ್ತಾನೆ ಎಂದೀಪ್ರಕಾರ ಹೇಳತಕ್ಕದ್ದು. ಆವಾಗಲೂ ಭೂಮಿಯಲ್ಲಿರತಕ್ಕ ಪುಮ್ ರೂಪದಿಂದಲಾದರೂ, ಸ್ವರ್ಗದಲ್ಲಿರತಕ್ಕ ಸ್ತ್ರೀರೂಪವನ್ನು ಇವನು ಹೊಂದುವನೋ ಏನು, (ಎಂದು ಕೇಳಿದರು) ॥ (d) ಈ ವಿಷಯದಲ್ಲಿ ಹೀಗೆಯೇ ಅಂಗೀಕರಿಸಲ್ಪಡುವುದಾದರೆ ಆದರೂ ಪೃಥಿವಿಯಲ್ಲಿರತಕ್ಕ ತನ್ನ ಸ್ತ್ರೀರೂಪವನ್ನು ಯಾವ ರೂಪದಿಂದ ಕ್ರೀಡಿಸುವನು? ॥ (e) ಪೂಜ

ನಾದ ಜನಾರ್ದನನು (ಇತರ ಸ್ತ್ರೀಯಿಂದ ಪುರುಷರೂಪನು ಮಾತ್ರ ಕ್ರೀಡಿಸುವುದಿಲ್ಲವೆಂದಲ್ಲ) ಸ್ತ್ರೀರೂಪವುಳ್ಳವನೂ ಕೂಡ ಇತರ ಪುರುಷರಿಂದ ಪ್ರಾಪ್ಯನೂ ಆಗಲಾರನಷ್ಟೇ! ಈ ಪ್ರಕಾರವಾಗಿ ತನ್ನ ಶಿಷ್ಯರಿಂದ ಕೇಳಲ್ಪಟ್ಟ ಆ ಮಹಿದಾಸರೂಪಿಯಾದ ಹರಿಯು (ಮೇಲೆ ಹೇಳುವ ಪ್ರಕಾರ) ಹೇಳಿದನು.

ಭಾ॥ (a) ಸ್ತ್ರೀಷು ಯಲ್ಲೋಹಿತಂ ಲೋಕೇ ತತ್ರಾಗ್ನಿಸ್ಥೋ ಜನಾರ್ದನಃ। ಸ್ತ್ರೀರೂಪಃ ಸೋಽಗ್ನಿನಾಮೈವ ಜ್ವಲಜ್ಜ್ವಾಲಾಸಮಪ್ರಭಃ ॥ (b) ತಸ್ಮಾದ್ವಿಷ್ಣೋಃ ಸನ್ನಿಧಾನಾದ್ಭರ್ತಾ ಭಾರ್ಯಾಶರೀರಗಾತ್ । ನ ಬೀಭತ್ಸೇತೈವ ರಕ್ತಾತ್ (c) ತಥಾ ಪುಂರೇತಸಿ ಸ್ಥಿತಃ ॥ ಆದಿತ್ಯೇ ಸಂಸ್ಥಿತೋ ವಿಷ್ಣುರಾದೇರಾದಿತ್ಯನಾಮಕಃ। (d) ತಸ್ಮಾನ್ನ ರೇತಸೋ ಭಾರ್ಯಾ ಬೀಭತ್ಸೇತ ಪತಿ ಸ್ಥಿತಾತ್ ॥ ಪುಂರೂಪೋ ಭಗವಾನ್ವಿಷ್ಣೂ ರೇತಸಿಸ್ಥೋ ದ್ಯುಮತ್ಪ್ರಭಃ ॥

ಅ ॥ (a) ಎಲ್ಲಾ ಲೋಕಗಳಲ್ಲಿಯೂ ಸ್ತ್ರೀಯರಲ್ಲಿ ಯಾವುದೊಂದು ರಕ್ತವಿದೆಯೋ ಆ ರಕ್ತಗಳಲ್ಲಿ, ಅಗ್ನಿಯಲ್ಲಿರತಕ್ಕ ಸ್ತ್ರೀರೂಪವುಳ್ಳ ಜನಾರ್ದನನಿದ್ದಾನೆ. ಜ್ವಲಿಸತಕ್ಕ ಜ್ವಾಲೆಗೆ ಸಮಾನವಾದ ಪ್ರಭೆಯುಳ್ಳ ಆ ಹರಿಯು ಅಗ್ನಿನಾಮಕನೇ. ॥ (b) ಆದುದರಿಂದ ವಿಷ್ಣುಸನ್ನಿಧಾನವಿದ್ದುದರಿಂದ ಪತಿಯು ಹೆಂಡತಿಯ ಶರೀರದಲ್ಲಿರುವ ರಕ್ತದಿಂದ ಜುಗುಪ್ಸೆಯನ್ನು ಹೊಂದುವುದೇ ಇಲ್ಲ. ॥ (c) ಹಾಗೆಯೇ ಪುರುಷರ ರೇತಸ್ಸಿನಲ್ಲಿ, ಆದಿತ್ಯನಲ್ಲಿರತಕ್ಕ ವಿಷ್ಣುವು ಎಲ್ಲಾ ವಸ್ತುವಿಗೂ ಕಾರಣನಾದುದರಿಂದ ಆದಿತ್ಯನಾಮಕನಾಗಿದ್ದಾನೆ. ॥ (d) ಆದುದರಿಂದ ಮಿಂಚಿನಂತೆ ಕಾಂತಿಯುಳ್ಳ, ಅದರಲ್ಲಿರತಕ್ಕ ಪುರುಷರೂಪವುಳ್ಳ ಪೂಜ್ಯನಾದ ವಿಷ್ಣುವು ರೇತಸ್ಸಿನಲ್ಲಿ ಇದ್ದಾನೆ. ಆದುದರಿಂದ ಗಂಡನಲ್ಲಿರತಕ್ಕ ರೇತಸ್ಸಿನಿಂದ ಹೆಂಡತಿಯು ಜುಗುಪ್ಸೆಯನ್ನು ಹೊಂದುವುದಿಲ್ಲ.

ಭಾ॥ (a) ತಸ್ಮಾದ್ಯದ್ಭೂಮಿಗಂ ವಿಷ್ಣೋಃ ಸ್ತ್ರೀರೂಪಂ ತತ್ಸ್ವಯಂ ಹರಿಃ । ಪ್ರಾದುರ್ಭಾವಗತೋ ದದ್ಯಾದ್ದಿವಿಸ್ಥಿತಪುಮಾತ್ಮನಃ ॥ ಸೂರ್ಯಗಸ್ಯ ತಥಾ ಪುಂಸೋ ರೇತಸಿ ಸ್ಥಸ್ಯ ಚಾತ್ಮನಃ। (b) ದೇವೀಷು ಯಲ್ಲೋಹಿತಗಂ ಸ್ತ್ರೀರೂಪಂ ಪರಮಾತ್ಮನಃ ॥ ತತ್ಸೂರ್ಯಗತೋ ವಿಷ್ಣುಃ ಪುಂರೇತಸ್ಥಸ್ಯ ಚಾತ್ಮನಃ । ದದ್ಯಾದ್ಭೂಮಿಗತಸ್ಯೈವ (c) ರೂಪದ್ವಯಮಿದಂ ತತಃ ॥ ಪರಸ್ಪರಂ ಸಂಭವತಿ ವಿಷ್ಣೋರ್ನಿತ್ಯಸುಖಾತ್ಮಕಂ ॥

ಅ ॥ (a) ಆದುದರಿಂದ ಯಾವುದೊಂದು ವಿಷ್ಣುವಿನ ಭೂಮಿಯಲ್ಲಿರತಕ್ಕ ಸ್ತ್ರೀರೂಪವೋ ಆ ಸ್ವಕೀಯವಾದ ಸ್ತ್ರೀರೂಪವನ್ನೇ ಅವತಾರವನ್ನು ಮಾಡಿದ ಮಹಿದಾಸರೂಪಿಯಾದ ಶ್ರೀಹರಿಯು ಸ್ವರ್ಗದಲ್ಲಿದ್ದು ಪುರುಷರೂಪಿಯೂ, ಸೂರ್ಯನಲ್ಲಿರತಕ್ಕವನೂ, ಹಾಗೆಯೇ ಪುರುಷರ (ದೇವತೆಗಳ) ರೇತಸ್ಸಿನಲ್ಲಿರತಕ್ಕವನೂ ಆದ, ವಿಷ್ಣುವಿಗೆ ಕೊಡುತ್ತಾನೆ. ॥ (b) ದೇವಸ್ತ್ರೀಯರಲ್ಲಿ ಯಾವುದೊಂದು ಅವರ ರಕ್ತದಲ್ಲಿರತಕ್ಕ ಪರಮಾತ್ಮನ ಸ್ತ್ರೀರೂಪವೋ ಅದನ್ನು ಸೂರ್ಯನಲ್ಲಿರತಕ್ಕ ಆ ವಿಷ್ಣುವು ಮನುಷ್ಯರ ರೇತಸ್ಸಿನಲ್ಲಿರತಕ್ಕವನೂ, ಭೂಮಿಯಲ್ಲಿರತಕ್ಕವನೂ ಆದ ಮಹಿದಾಸರೂಪವುಳ್ಳ ತನಗೇನೇ ಕೊಡುತ್ತಾನೆ. ॥ (c) ಆದುದರಿಂದ ನಿರಂತರದಲ್ಲಿಯೂ ಸುಖಸ್ವರೂಪನಾದ ವಿಷ್ಣುವಿನ ಈ ಎರಡು ರೂಪಗಳು (ಅಂದರೆ ಸ್ವರ್ಗಭೂಮಿಯಲ್ಲಿರತಕ್ಕ ಪುರುಷ, ಸ್ತ್ರೀರೂಪಗಳು) ಪರಸ್ಪರವಾಗಿ ಕ್ರೀಡಿಸುತ್ತದೆ.

ಭಾ॥ (a) ಪ್ರಾದುರ್ಭಾವಸ್ಥಿತಂ ರೂಪಂ ಯಚ್ಚ ಭೂಮೌ ಪುಮಾತ್ಮಕಂ। ವಿಷ್ಣೋಸ್ತದಪಿ ದೇವೀಷು ಸ್ಥಿತಃ ಸ್ತ್ರೀರೂಪಕಾತ್ಮನಾ ॥ ಏವಮನ್ಯೋನ್ಯತೋ ವಿಷ್ಣೂರತಃ ಸ್ವಸ್ಮಿನ್ನ ಚಾನ್ಯತಃ । (b) ರಮಯಾ ರಮಮಾಣೋಽಪಿ ತತ್‌ಸ್ಥೇನೈವ ಸ್ತ್ರಿಯಾತ್ಮನಾ ॥ ರಮತೇ ನಾನ್ಯತಃ ಕ್ವಾಪಿ ರತಿರ್ವಿಷ್ಣೋಃ ಸುಖಾತ್ಮನಃ । (c) ರಮಯಾ ರಮಣಂ ತಸ್ಮಾದ್ರಮಾಯಾ ರತಿಪಾತ್ರತಾ ॥ ನೈವಾಸ್ಯಾ ರತಿದಾತೃತ್ವಂ ವಿಷ್ಣೋರ್ನ ಹ್ಯನ್ಯತೋ ರತಿಃ । ಇತ್ಯಾದಿ ಚ ॥

ಅ॥ (a) ಭೂಮಿಯಲ್ಲಿ ಅವತಾರರೂಪದಿಂದಿರತಕ್ಕ ಯಾವುದೊಂದು ವಿಷ್ಣುವಿನ ಪುರುಷರೂಪವಿದೆಯೋ, ಅದು ದೇವಸ್ತ್ರೀಯರಲ್ಲಿರತಕ್ಕ ಸ್ತ್ರೀರೂಪವುಳ್ಳ ತನ್ನಿಂದಲೇ ಕ್ರೀಡಿಸುತ್ತದೆ. (ಯಾವುದೊಂದು ಸ್ವರ್ಗದಲ್ಲಿ ಪುರುಷಾಕಾರವಾದ ರೂಪವಿದೆಯೋ, ಅದು ಮನುಷ್ಯಸ್ತ್ರೀಯರಲ್ಲಿರತಕ್ಕ ಸ್ತ್ರೀರೂಪವುಳ್ಳ ತನ್ನಿಂದಲೇ ಕ್ರೀಡಿಸುತ್ತದೆ.) ಈ ಪ್ರಕಾರವಾಗಿ ಪರಸ್ಪರವಾಗಿ ವಿಷ್ಣುವು ತನ್ನಲ್ಲಿಯೇ ಕ್ರೀಡಿಸಿಕೊಂಡಿದ್ದಾನೆ. ಮತ್ತೊಬ್ಬರಿಂದ ಕ್ರೀಡಿಸುವುದೇ ಇಲ್ಲ. ॥ (b) (ಶ್ರೀ ಹರಿಯು) ಲಕ್ಷ್ಮಿಯಿಂದ ಕ್ರೀಡಿಸುವವನಾದರೂ ಲಕ್ಷ್ಮಿಯಲ್ಲಿರತಕ್ಕ ಸ್ತ್ರೀರೂಪವುಳ್ಳ ತನ್ನಿಂದಲೇ ಕ್ರೀಡಿಸುತ್ತಾನೆ. ನಿರಂತರದಲ್ಲಿಯೂ ಸುಖರೂಪಿಯಾದ ವಿಷ್ಣುವಿಗೆ ಎಲ್ಲಿಯೂ ಇತರರಿಂದ ಕ್ರೀಡೆಯು ಇಲ್ಲವೇ ಇಲ್ಲ. ॥ (c) ಯಾವ ಕಾರಣದಿಂದ ವಿಷ್ಣುವಿಗೆ ಇತರರಿಂದ ಕ್ರೀಡೆಯು ಇಲ್ಲವೆಂದು ಪ್ರಸಿದ್ಧವೋ, ಆದುದರಿಂದ ಲಕ್ಷ್ಮಿಯಿಂದ ಕ್ರೀಡೆಯೆಂದರೆ ಲಕ್ಷ್ಮಿಗೆ ಕ್ರೀಡಾಪಾತ್ರತ್ವವೇ, ಕ್ರೀಡೆಯನ್ನು ಕೊಡುವಿಕೆಯು ಲಕ್ಷ್ಮಿಗೆ ಇಲ್ಲವೇ ಇಲ್ಲ. ಇದೇ ಮೊದಲಾದ ಪ್ರಮೇಯವು ನಿರೂಪಿಸಲ್ಪಟ್ಟಿದೆ.

ಭಾ॥ (a) ಸ ಏವ ಮಹಿದಾಸ ಇಂದ್ರನಾಮಾ ಪ್ರಾಪ್ಯೇಮಂ ಲೋಕಮುತ್ರಭೂತ್ವಾ ಪ್ರಾದುರ್ಭೂಯ ಮನುಷ್ಯದೃಷ್ಟಿಗೋಚರತಾಂ ಪ್ರಾಪ್ಯೈಷು ಲೋಕೇಷು ರಾಜತಿ । (b) ನಾತ್ರ ಪ್ರೇತ್ಯ ಶಬ್ದೋ ಮರಣ ವಾಚೀ । ಕಿಂತು ಪ್ರೇತಾಂ ಯಜ್ಞಸ್ಯ ಶಂಭುವೇತ್ಯಾದಿವತ್ಪ್ರಾಪ್ತಿವಾಚ್ಯೇವ । ನ ಹಿ ಮೃತಃ ಪುನರೇಷು ಲೋಕೇಷ್ವೇವ ರಾಜತಿ ॥ (c) ನ ಚ ಯಶೋಮಾತ್ರರಾಜನೇನ ಸ್ವಸ್ಯ ರಾಜನಂ ಭವತಿ । ಭಿನ್ನಪದಾರ್ಥತ್ವಾತ್ ॥ (d) ಯದ್ವಾ ಏತಿ ಚ ಪ್ರೈತಿ ಚೇತ್ಯಾದೌ ಪ್ರಾಪ್ತ್ಯರ್ಥೇಽಪಿ ವೇದೇಷು ಪ್ರಸಿದ್ಧತ್ವಾಚ್ಚ ॥ ಲಕ್ಷ್ಮಣಃ ಪ್ರೇತ್ಯ ಸುಗ್ರೀವಂ ಬಭಾಷೇ ರಾಮಚೋದಿತಂ । ಇತಿ ಸ್ಕಾಂದೇ ॥

ಅ॥ (a) ಆ ಮಹಿದಾಸನೇವೇ ಇಂದ್ರನಾಮಕನಾಗಿ ಭೂಮಿಗೆ ಸನ್ನಿಹಿತವಾದ ಶ್ವೇತದ್ವೀಪವನ್ನು ಹೊಂದಿ, ಈ ಭೂಲೋಕದಲ್ಲಿ ಮಹಿದಾಸನಾಮಕನಾಗಿ ಅಂದರೆ ಪ್ರಾದುರ್ಭವಿಸಿ, ಅಂದರೆ ಮನುಷ್ಯರ ದೃಷ್ಟಿಗೆ ಗೋಚರನಾಗಿ, ಈ ಲೋಕಗಳಲ್ಲಿ ಪ್ರಕಾಶಿಸುತ್ತಾನೆ. (ಕ್ರೀಡಿಸುತ್ತಾನೆ.) ॥ (b) ಇಲ್ಲಿ ಪ್ರೇತ್ಯ ಎಂಬ ಶಬ್ದವು ಮೃತಿ ಎಂಬ ಅರ್ಥವನ್ನು ಹೇಳತಕ್ಕುದು ಅಲ್ಲ. ಮತ್ತೆ ಶಂಭುವಾ=ಸುಖಾಶ್ರಯರಾದವರು, ಯಜ್ಞಸ್ಯ=ಯಾಗವನ್ನು ಕುರಿತು, ಪ್ರೇತಾಂ=ಪ್ರಾಪಿಸಿದರು. ಇದೇ ಮೊದಲಾದ ವಾಕ್ಯದಂತೆ ಪ್ರಾಪ್ತಿರೂಪ ಅರ್ಥವನ್ನು ಹೇಳತಕ್ಕುದೇ ಸರಿ.

ಸತ್ತ್ವವನು (ವೈಕುಂಠಾದಿ ಲೋಕಗಳಲ್ಲಿ ಪ್ರಕಾಶಿಸಿಯಾನು) ಪುನಃ ಈ ಲೋಕಗಳಲ್ಲಿಯೇ ಪ್ರಕಾಶಿಸಲಿಕ್ಕಿಲ್ಲವಷ್ಟೇ; ॥ (c) ಕೇವಲ ಯಶಸ್ಸಿನ ಪ್ರಕಾಶದಿಂದ ತನಗೆ ಪ್ರಕಾಶವು ಆಗಲಾರದು. ಬೇರೆ ಬೇರೆ ಪದಾರ್ಥವಾದುದರಿಂದ, (d) 'ಯಾವಬ್ರಹ್ಮನನ್ನೇ ಏತಿ ಚ=ಹೊಂದುತ್ತಾನೆ, ಪ್ರೈತಿ ಚ=ಚೆನ್ನಾಗಿ ಹೊಂದುತ್ತಾನೆ'. ಇದೇ ಮೊದಲಾದ ವಾಕ್ಯದಲ್ಲಿಯೂ ಪ್ರಾಪ್ತಿಯೆಂಬ ಅರ್ಥದಲ್ಲಿಯೂ ವೇದಗಳಲ್ಲಿಯೂ ಪ್ರಸಿದ್ಧವಾದುದರಿಂದಲೂ, (ಪ್ರೇತ್ಯಶಬ್ದವು ಮರಣವಾಚಕವಲ್ಲ) ಲಕ್ಷ್ಮಣನು ಸುಗ್ರೀವನನ್ನು, ಪ್ರೇತ್ಯ=ಪ್ರಾಪಿಸಿ, ರಾಮನ ಮಾತನ್ನು ಹೇಳಿದನು. ಹೀಗೆ ಸ್ಕಾಂದಪುರಾಣದಲ್ಲಿ.

**ಭಾ॥** **(a)** ಯದನೇನ ರೂಪೇಣಾಮುಂ ಲೋಕಮಭಿಸಂಭವತಿ । ಅನೇನ ಮಹಿದಾಸಾದಿರೂಪೇಣಾಮುಂ ಲೋಕಂ ದಿವಿಸ್ಥಂ ಸ್ವರೂಪಂ ॥ ಲೋಕ್ಯತ ಇತಿ ಸ್ವರೂಪವಾಚೀ ಲೋಕಶಬ್ದಃ । ಆತ್ಮಾನಮೇವ ಲೋಕಮುಪಾಸೀತೇತಿವತ್ ॥ **(b)** ಯಚ್ಛಬ್ದಃ ಕಿಂ ಶಬ್ದಾರ್ಥೇ । ಅನೇನ ರೂಪೇಣ ತದ್ರೂಪಮಭಿಸಂಭವತಿ ಕಿಂ ॥ ಉಭಯೋರಪಿ ಪರಿಹಾರದರ್ಶನಾದಸ್ಯಾಪಿ ಪ್ರಶ್ನತ್ವಮವಗಮ್ಯತೇ । ಯತಶ್ಚೋದೇತಿ ಸೂರ್ಯ ಇತ್ಯಾದಿವತ್ ॥ **(c)** ರಂಗಸ್ತು ಪ್ರಶ್ನವಿಷಯಸ್ಯ ದುರವಗಮತ್ವಂ ಪ್ರಕಾಶಯತಿ । ದುರ್ಗಮೇ ಪ್ರಶ್ನವಿಷಯೇ ಪ್ರಶ್ನೋ ರಂಗಯುತೋ ಭವೇತ್ ॥ ಇತಿ ಶಬ್ದನಿರ್ಣಯೇ ॥

ಅ ॥ (a) 'ಯತ್ ಅನೇನ ರೂಪೇಣ ಅಮುಂ ಲೋಕಂ ಅಭಿಸಂಭವತಿ' ಅಂದರೆ, ಅನೇನ ರೂಪೇಣ=ಮಹಿದಾಸ ಮೊದಲಾದ ರೂಪದಿಂದ, ಅಮುಂ ಲೋಕಂ=ಸ್ವರ್ಗದಲ್ಲಿರತಕ್ಕ ಲೋಕಶಬ್ದವಾಚ್ಯವಾದ ತನ್ನ ಸ್ತ್ರೀರೂಪವನ್ನು, 'ಲೋಕ್ಯತೇ ಇತಿ ಲೋಕಃ' ಎಂಬೀ ವ್ಯುತ್ಪತ್ತಿಯಿಂದ ಲೋಕ ಶಬ್ದವು ಸ್ವರೂಪವೆಂಬ ಅರ್ಥವನ್ನು ಹೇಳುತ್ತದೆ. ಲೋಕಂ=ಅವಶ್ಯವಾಗಿ ತಿಳಿಯಲಿಕ್ಕೆ ಯೋಗ್ಯನಾದ, ಆತ್ಮಾನಮೇವ=ಪರಮಾತ್ಮನನ್ನೇ, ಉಪಾಸೀತ=ಉಪಾಸನೆಮಾಡತಕ್ಕದು. ಇದರಂತೆಯೇ (ಲೋಕಶಬ್ದವು ತನ್ನಿಂದಲೇ ಸಂಪೂರ್ಣವಾಗಿ ತಿಳಿಯಲಿಕ್ಕೆ ಯೋಗ್ಯವಾದ ತನ್ನ ಸ್ವರೂಪವೆಂಬ ಅರ್ಥವನ್ನೇ ತಿಳಿಸುತ್ತದೆ). ॥ (b) 'ಯತ್' ಎಂಬ ಶಬ್ದವು 'ಕಿಮ್' ಎಂಬ ಶಬ್ದಾರ್ಥದಲ್ಲಿ ಇದೆ. ಭೂಮಿಯಲ್ಲಿರತಕ್ಕ ಈ ಪುಂರೂಪದಿಂದ ಸ್ವರ್ಗದಲ್ಲಿರತಕ್ಕ ಆ ತನ್ನ ಸ್ತ್ರೀರೂಪವನ್ನು ಕ್ರೀಡಿಸುತ್ತಾನೋ ಏನು? ಎರಡಕ್ಕೂ ಕೂಡ (ಅಂದರೆ 'ಕಿಮನೇನ ರೂಪೇಣ, ಅಥ ಕೇನ ರೂಪೇಣ ಈ ಎರಡಕ್ಕೂ ಕೂಡ) ಕೊನೆಗೆ ಸ್ಪಷ್ಟವಾಗಿ ಪರಿಹಾರವು ಕಾಣುವುದರಿಂದ ಇದು ಪ್ರಶ್ನೆಯೆಂದೇ ತಿಳಿಯಲ್ಪಡುತ್ತದೆ. ಸೂರ್ಯನು ಯಾರಿಂದ ಉದಯಿಸುತ್ತಾನೆ'. ಇದೇ ಮೊದಲಾದ ವಾಕ್ಯದಂತೆ. (c) ('ಅಭಿಸಂಭವತೀ ೩ ಆಭವತೀ ೩ ಎಂಬೀ ಎರಡು ಸ್ಥಳಗಳಲ್ಲಿರತಕ್ಕ ) ರಂಗವಾದರೂ ಕೇಳಲರ್ಹವಾದ ಅರ್ಥಕ್ಕೆ ಸುಖದಿಂದ ತಿಳಿಯಲಿಕ್ಕೆ ಅಶಕ್ಯತನವನ್ನು ಪ್ರಕಾಶಗೊಳಿಸುತ್ತದೆ. ಕೇಳಲರ್ಹವಾದ ಅರ್ಥವು ದುರ್ಗಮವಾಗುತ್ತಿರಲು ಪ್ರಶ್ನೆಯು ರಂಗದಿಂದೊಡಗೂಡಿದ್ದು ಆಗುವುದು. ಎಂದು ಶಬ ನಿರ್ಣಯದಲ್ಲಿ.

ಭಾ॥ (a) ಕೇನ ರೂಪೇಣೇಮಂ ಲೋಕಮಾಭವತಿ । ಕೇನ ಸ್ವರೂಪೇಣ ಭೂಮಿಷ್ಠೇನಾತ್ಮನ ಏವ ಸ್ತ್ರೀರೂಪೇಣ ವಿಷ್ಣುಃ ಸಂಬಧ್ಯತೇ ॥ (b) ಸೋಽಯಂ ಮಹಿದಾಸಾದಿಪ್ರಾದುರ್ಭಾವರೂಪ ಇದಂ ಭೂಮಿಷ್ಠ ಸ್ತ್ರೀರೂಪಂ ಲೋಹಿತಗತಂ ಚ ಸ್ವಕೀಯಮೇವ ರೂಪಮಮುಷ್ಮೈ ದಿವಿ ಷ್ಠಾಯ ಸ್ವಪುರುಷರೂಪಾಯ ಪ್ರಯಚ್ಛತಿ ದೇವರೇತಃ ಸ್ಥಿತಾಯ ಚ । (c) ದೇವೀಲೋಹಿತಸ್ಥಿತಮಾತ್ಮನಃ ಸ್ತ್ರೀರೂಪಂ ಮಹಿದಾಸಾದಿರೂಪೇ ಭ್ಯೋ ಮಾನುಷರೇತಃಸ್ಥಿತರೂಪೇಭ್ಯಶ್ಚ ದಿವಿಷ್ಠೈಶ್ಚ ವಿಷ್ಣ್ವಾದಿ ಸ್ವರೂಪೈಃ ಪ್ರಯಚ್ಛತಿ ಚ ॥

ಅ ॥ (a) 'ಕೇನ ರೂಪೇಣೇಮಂ ಲೋಕಮಾಭವತಿ' ಎಂದರೆ, ಶ್ರೀ ಪರಮಾತ್ಮನು ಯಾವ ಸ್ವರ್ಗದಲ್ಲಿರತಕ್ಕ ತನ್ನ ಪುರುಷರೂಪದಿಂದ ಭೂಮಿಯಲ್ಲಿರತಕ್ಕ ತನ್ನದೇ ಆದ ಸ್ತ್ರೀರೂಪ ದಿಂದ ಸಂಬಂಧಿಸಲ್ಪಡುತ್ತಾನೆ. ॥ (b) ಆ ಈ ಮಹಿದಾಸ ಮೊದಲಾದ ಅವತಾರರೂಪವುಳ್ಳ ಶ್ರೀ ಹರಿಯು, ಈ ಭೂಮಿಯಲ್ಲಿರತಕ್ಕ ಸ್ತ್ರೀರೂಪವುಳ್ಳದೂ, ಸ್ತ್ರೀಯರ ರಕ್ತದಲ್ಲಿ ಇರತಕ್ಕುದೂ ಆದ ತನ್ನದೇ ಸ್ತ್ರೀರೂಪವನ್ನು ಸ್ವರ್ಗದಲ್ಲಿ ಇರತಕ್ಕುದೂ, ದೇವತೆಗಳ ರೇತಸ್ಸಿನ್ನಲ್ಲಿ ಇರತಕ್ಕು ದೂ ಆದ ಈ ತನ್ನ ಪುರುಷರೂಪಕ್ಕೋಸ್ಕರವೇ ಕೊಡುತ್ತಾನೆ. ॥ (c) (ಶ್ರೀ ಹರಿಯು) ಸ್ವರ್ಗ ದಲ್ಲಿರತಕ್ಕ ವಿಷ್ಣುಮೊದಲಾದ ಸ್ವರೂಪಗಳಿಂದ, (ಸ್ವರ್ಗದಲ್ಲಿರತಕ್ಕ) ತನ್ನ ಸ್ತ್ರೀರೂಪವನ್ನು, (ಭೂಮಿಯಲ್ಲಿರತಕ್ಕ) ಮಹಿದಾಸ ಮೊದಲಾದ ರೂಪಗಳಿಗೋಸ್ಕರವೂ, ಹಾಗೆಯೇ, ದೇವ ಸ್ತ್ರೀಯರ ರಕ್ತನಲ್ಲಿರತಕ್ಕ ತನ್ನ ಸ್ತ್ರೀರೂಪವನ್ನು, ಮನುಷ್ಯರ ರೇತಸ್ಸಿನಲ್ಲಿ ಇರತಕ್ಕ ರೂಪಗಳಿ ಗೋಸ್ಕರವೂ ಕೊಡುತ್ತಾನೆ.

ಭಾ॥ (a) ತಾನಿ ಭೂಮಿಷ್ಠತ್ವೇನ ದಿವಿಷ್ಠತ್ವೇನ ದ್ವಿವಿಧತ್ವಾತ್ತಾವಿತ್ಯುಚ್ಯಂತೇ । (b) ಅಗ್ನೇಸ್ತದ್ರೂಪಮಗ್ನಿನಾಮ್ನೋ ವಿಷ್ಣೋಃ ಪ್ರತಿಮಾ ತತ್ಸನ್ನಿಧಾ ನಾತ್ ॥ ಏವಮಾದಿತ್ಯನಾಮ್ನೋ ವಿಷ್ಣೋಃ । ನ ಹ್ಯಗ್ನ್ಯಾದಿಸ್ವರೂಪ ಮೇವಂ ಲೋಹಿತಾದಿ ॥ (c) ನ ಚ ಲೌಕಿಕಸ್ತ್ರೀಪುರುಷಸಂಬಂಧಮಾತ್ರ ಮತ್ರೋಚ್ಯತೇ । ಅಪ್ರಸ್ತುತತ್ವಾತ್ತಸ್ಯ ॥ (d) ಭಗವಾನೇವ ಹ್ಯತ್ರ ಪ್ರಸ್ತುತಃ । ಅಸಾವಾತ್ಮೇತ್ಯಾತ್ಮಶಬ್ದಾಚ್ಚ ಭಗವಾನೇವೇತಿ ಜ್ಞಾಯತೇ ॥

ಅ ॥ (a) ಆ ಸ್ತ್ರೀಪುಂರೂಪಗಳು ಭೂಮಿಯಲ್ಲಿದ್ದುದರಿಂದ, ಸ್ವರ್ಗದಲ್ಲಿದ್ದುದರಿಂದ, (ಹೀಗೆ) ಎರಡು ಪ್ರಕಾರವಾದುದರಿಂದ 'ತೌ' ಎಂದು ಹೇಳಲ್ಪಡುತ್ತವೆ. ॥ (b) 'ಅಗ್ನೇಸ್ತ ದ್ರೂಪಂ' ಅಂದರೆ ಅಗ್ನಿನಾಮಕನೂ, (ಅಗ್ನಿಯಲ್ಲಿರತಕ್ಕವನೂ, ಸ್ತ್ರೀರೂಪನೂ) ಆದ ಶ್ರೀ ವಿಷ್ಣುವಿಗೆ ಸ್ತ್ರೀಶರೀರದಲ್ಲಿರತಕ್ಕ ರಕ್ತವು, ಆ ಹರಿಯ ಸನ್ನಿಧಾನದಿಂದ ಪ್ರತಿಮಾರೂಪವು. ಇದೇ ರೀತಿಯಾಗಿ (ಪುರುಷನ ರೇತಸ್ಸು) ಆದಿತ್ಯನಾಮಕನೂ, (ಆದಿತ್ಯನಲ್ಲಿರತಕ್ಕವನೂ, ಪುರುಷರೂಪನೂ) ಆದ ವಿಷ್ಣುವಿಗೆ (ಪ್ರತಿಮೆಯು) ಈ ಲೋಹಿತಮೊದಲಾದುದು (ಪುರುಷನ ರೇತಸ್ಸು) ಅಗ್ನಿ ಮೊದಲಾದ (ಆದಿತ್ಯರ) ವರ, ಸ್ವರೂಪವುಳ್ಳದ್ದಲ್ಲವಷ್ಟೆ. ॥ (c) ಇಲ್ಲಿ ಕೇವಲ ಲೋಕದಲ್ಲಿರತಕ್ಕ ಸ್ತ್ರೀಪುರುಷರ ಸಂಬಂಧವು ಹೇಳಲ್ಪಡುವುದಿಲ್ಲ. ಕೇವಲ ಸ್ತ್ರೀಪುರುಷರ ಸಂಬಂಧವು ಪ್ರಸ್ತುತವಾಗದೆ ಇರುವುದರಿಂದ, [ತಾ ॥ ಈ ಶ್ರುತಿಗೆ ಅದ್ವೈತಿಗಳು ಈ ರೀತಿ

ಯಾಗಿ ಅರ್ಥಮಾಡುವರು, 'ಸೋಽಯಮಾತ್ಮಾ=ಆ ಈ ಕನ್ನಿಕೆಯವರ ತಂದೆಯು, ಇಮಂ ಆತ್ಮಾನಂ=ಕನ್ನಿಕೆಯನ್ನು, ಅಮುಷ್ಮೈ ಆತ್ಮನೇ=ಈ ಯೋಗ್ಯವರನಿಗೋಸ್ಕರ, ಸಂಪ್ರಯಚ್ಛತಿ=ಕೊಡುತ್ತಾನೆ. ಅಸೌ ಆತ್ಮಾ=ವರನ (ಮದುವೆಮಾಡಿಕೊಳ್ಳತಕ್ಕವನ) ತಂದೆಯು, ಅಮುಂ ಆತ್ಮಾನಂ=ಈ ವರನನ್ನು, ಅಸ್ಮೈ ಆತ್ಮನೇ=ಈ ಕನ್ನಿಕೆಗೆ ಪತಿಯಾಗಿ, ಸಂಪ್ರಯಚ್ಛತಿ=ಕೊಡುತ್ತಾನೆ. ತೌ=ಆ ಗಂಡಹೆಂಡಂದಿಯರು, ಅನ್ಯೋಽನ್ಯಂ=ಪರಸ್ಪರವಾಗಿ, ಅಭಿಸಂಭವತಃ=ಕ್ರೀಡಿಸಿಕೊಂಡಿರುತ್ತಾರೆ.' ಈ ಅರ್ಥವು ಪ್ರಸ್ತುತವೇ ಆಗದಿರುವುದರಿಂದ ಅಸಂಗತವು. ॥] (d) ಇಲ್ಲಿ (ಅಂದರೆ 'ಏತದ್ಬ್ರಹ್ಮ' ಎಂಬೀ ಆರಣ್ಯಕದ ಆದಿಯಲ್ಲಿಯೂ ತದ್ಯಶಃ' ಎಂಬೀ ಖಂಡದ ಆದಿಯಲ್ಲಿಯೂ ಅಂತೂ ಉಪಕ್ರಮದಲ್ಲಿ) ಶ್ರೀ ಪರಮಾತ್ಮನೇ ಪ್ರಸ್ತುತನಾದವನು. 'ಅಸೌ ಆತ್ಮಾ' ಎಂದು ಶ್ರುತಿಯಲ್ಲಿ ಆತ್ಮ ಶಬ್ದವಿದ್ದುದರಿಂದಲೂ ಶ್ರೀ ಪರಮಾತ್ಮನೇ ಪ್ರಸ್ತುತನು ಎಂದು ತಿಳಿಯಲ್ಪಡುತ್ತದೆ.

ಭಾ॥ (a) ಆತ್ಮಶಬ್ದಃ ಪರೇ ವಿಷ್ಣೌ ನಾನ್ಯತ್ರ ಕ್ವಚಿದಿಷ್ಯತೇ । (b) ಗುಣ ಪೂರ್ತ್ಯಭಿಧಾಯೀ ಸ ನಾನ್ಯಸ್ಯ ಗುಣಪೂರ್ಣತಾ ॥ ಅಮುಖ್ಯಾತ್ಮಾನ ಏವಾತೋ ಬ್ರಹ್ಮಾದ್ಯಾಃ ಸರ್ವ ಏವ ಹಿ । ಇತ್ಯಾದಿ ಚ ಬ್ರಹ್ಮಾಂಡೇ ॥ (c) ಯದಕ್ಷರಂ ಪಂಚವಿಧಂ ಸಮೇತಿ ॥ ಸತ್ಯಸ್ಯ ಸತ್ಯಮನು ಯತ್ರ ಯುಜ್ಯತ ಇತ್ಯಾದಿನೋಕ್ತಾರ್ಥವಿಷಯೋದಾಹೃತ್ಯೈಃ ಶ್ಲೋಕೈರಪಿ ಭಗ ವತ ಏವ ಸ್ವರೂಪಾಣಾಂ ಪರಸ್ಪರಯೋಗಸ್ಯೋಕ್ತತ್ವಾತ್ । (d) ಗಾಯತ್ರ್ಯುಷ್ಣಿಗ್ಬೃಹತೀತ್ಯಾದಿನಾ ಭಗವತ ಏವ ಪಂಚವಿಧಸ್ಯ ಸ್ತ್ರೀರೂ ಪಸ್ಯ ಮಹಿದಾಸಾದಿ ಪಂಚ ಪುಂರೂಪಾಣಾಂ ಚ ಪ್ರಸ್ತುತತ್ವಾಚ್ಚ ॥ ೭ ॥

ಅ ॥ (a) ಆತ್ಮಶಬ್ದವು ಸರ್ವೋತ್ತಮನಾದ ವಿಷ್ಣುವಿನಲ್ಲಿಯೇ, ಬಾಕಿ ಎಲ್ಲಿಯೂ ಇಚ್ಛಿ ಸಲ್ಪಡುವುದಿಲ್ಲ. ॥ (b) ಆತ್ಮಶಬ್ದವು ಗುಣಪೂರ್ಣತ್ವವನ್ನು ಹೇಳುವುದು. (ಶ್ರೀ ಹರಿಯಿಂದ) ಇತರರಿಗೆ ಗುಣಪೂರ್ಣತ್ವವು ಇಲ್ಲ. ಆದುದರಿಂದ ಬ್ರಹ್ಮಾದಿಗಳೆಲ್ಲರೂ ಅಮುಖ್ಯವಾಗಿಯೇ ಆತ್ಮಶಬ್ದವಾಚ್ಯರು. ಇದೇಮೊದಲಾದ ವಿಷಯವು ಬ್ರಹ್ಮಾಂಡ ಪುರಾಣದಲ್ಲಿ. ॥ (c) ಯತ್= ಯಾವ, ಪಂಚವಿಧಂ=ನಾರಾಯಣಾದಿರೂಪದಿಂದ ಐದು ವಿಧವಾದ, ಅಕ್ಷರಂ=ಅಕ್ಷರಶಬ್ದ ವಾಚ್ಯನಾದ ಪರಬ್ರಹ್ಮನು, ಸಮೇತಿ=(ತನ್ನ ಸ್ತ್ರೀರೂಪಗಳಿಂದಲೇ) ಸಂಗತನಾಗುತ್ತಾನೆ ಸತ್ಯಸ್ಯ=ಸಾಧುಗುಣಪರಿಪೂರ್ಣನಾದ ಮುಖ್ಯಪ್ರಾಣನಿಗೆ, ಸತ್ಯಂ=ಸಾಧುಗುಣಗಳನ್ನು ಕೊಡುವ ಪರಬ್ರಹ್ಮನು, ಯತ್ರ=ಯಾವ ಸ್ವರೂಪದಲ್ಲಿ, ಅನುಯುಜ್ಯತೇ=ಅನುರೂಪವಾಗಿ ಕೂಡಲ್ಪಡುತ್ತಾನೆ., ಇದೇ ಮೊದಲಾದ ವಾಕ್ಯದಿಂದಲೂ ಹೇಳಲ್ಪಟ್ಟ ವಾಕ್ಯಾರ್ಥ ವಿಷಯಗ ಳಲ್ಲಿ ಉದಾಹೃತಗಳಾದ ಶ್ಲೋಕಗಳಿಂದಲೂ ಪರಮಾತ್ಮನ ಸ್ವರೂಪಗಳಿಗೇನೇ ಪರಸ್ಪರವಾಗಿ ಸಂಬಂಧವು ಹೇಳಲ್ಪಟ್ಟ ಪ್ರಯುಕ್ತವೂ, (d) 'ಗಾಯತ್ರೀ, ಉಷ್ಣಿಕ್, ಬೃಹತೀ' ಇದೇ ಮೊದ ಲಾದ ವಾಕ್ಯದಿಂದ, (ಅನಿರುದ್ಧಾದಿರೂಪದಿಂದ) ಐದುವಿಧವಾದ ಶ್ರೀ ಪರಮಾತ್ಮನದ್ದೇ ಸ್ತ್ರೀ ರೂಪವು ಮಹಿದಾಸ ಮೊದಲಾದ ಐದು ರೂಪಗಳೂ ಪ್ರಸ್ತುತಗಳಾಗಿವೆ. ಆದುದರಿಂದಲೂ (ಶ್ರೀ ಪರಮಾತ್ಮನೇ ಪ್ರಸ್ತುತನು).

ವಂ ॥ ತತ್ರೈತೇ ಶ್ಲೋಕಾಃ। ಯದಕ್ಷರಂ ಪಂಚವಿಧಂ ಸಮೇತಿ ಯುಜೋ ಯುಕ್ತಾ ಅಭಿಯತ್ಸಂವಹಂತಿ। ಸತ್ಯಸ್ಯ ಸತ್ಯಮನು ಯತ್ರ ಯುಜ್ಯತೇ ತತ್ರ ದೇವಾಃ ಸರ್ವ ಏಕಂ ಭವಂತಿ ॥ ಯದಕ್ಷರಾದಕ್ಷರಮೇತಿ ಯುಕ್ತಂ ಯುಜೋ ಯುಕ್ತಾ ಅಭಿಯತ್ಸಂವಹಂತಿ । ಸತ್ಯಸ್ಯ ಸತ್ಯಮನು ಯತ್ರ ಯುಜ್ಯತೇ ತತ್ರ ದೇವಾಃ ಸರ್ವ ಏಕಂ ಭವಂತಿ ॥ ಯದ್ವಾಚ ಓಮಿತಿ ಯಚ್ಚ ನೇತಿ ಯಚ್ಚಾಸ್ಯಾಃ ಕ್ರೂರಂ ಯದು ಚೋಲ್ಬಣಿಷ್ಣು । ತದ್ವಿಯಾಯ ಕವಯೋಽನ್ವಸಿಂದನ್ನಾಮಾಯತ್ತಾ ಸಮತೃಪ್ಯಂಚ್ಛ್ರುತೇಽಧಿ ॥ ಯಸ್ಮಿನ್ನಾಮಾ ಸಮತೃಪ್ಯಂಚ್ಛ್ರುತೇಽಧಿ ತತ್ರ ದೇವಾಃ ಸರ್ವಯುಜೋ ಭವಂತಿ | ತೇನ ಪಾಪ್ಮಾನಮಪಹತ್ಯ ಬ್ರಹ್ಮಣಾ ಸ್ವರ್ಗಂ ಲೋಕಮಪ್ಯೇತಿ ವಿದ್ವಾನ್ ॥ ನೈನಂ ವಾಚಾ ಸ್ತ್ರಿಯಂ ಬ್ರುವನ್ನೈನಮಸ್ತ್ರೀಪುಮಾನ್ ಬ್ರುವನ್ । ಪುಮಾಂಸನ್ನಬ್ರುವನ್ನೇನಂ ವದನ್ವದತಿ ಕಶ್ಚನ ॥ ಅಃಇತಿ ಬ್ರಹ್ಮ ತತ್ರಾಗತಮಹಮಿತಿ ತದ್ವಾ ಇದಂ ಬೃಹತೀಸಹಸ್ರಂ ಸಂಪನ್ನಂ ತಸ್ಯ ವಾ ಏತಸ್ಯ ಬೃಹತೀಸಹಸ್ರಸ್ಯ ಸಂಪನ್ನಸ್ಯ ಷಟ್‌ತ್ರಿಂಶತಮಕ್ಷರಾಣಾಂ ಸಹಸ್ರಾಣಿ ಭವಂತಿ ತಾವಂತಿ ಪುರುಷಾಯುಷೋಽಹ್ನಾಂ ಸಹಸ್ರಾಣಿ ಭವಂತಿ ಜೀವಾಕ್ಷರೇಣೈವ ಜೀವಾಹರಾಪ್ನೋತಿ ಜೀವಾಹ್ನಾ ಜೀವಾಕ್ಷರಮಿತ್ಯನಕಾಮಮಾರೋಽಥದೇವರಥಸ್ತಸ್ಯ ವಾಗುದ್ಧಿಃ ಶ್ರೋತ್ರೇ ಪಕ್ಷಸೀ ಚಕ್ಷುಷೀ ಯುಕ್ತೇ ಮನಃ ಸಂಗ್ರಹೀತಾ ತದಯಂ ಪ್ರಾಣೋಽಧಿತಿಷ್ಠತಿ ತದುಕ್ತಮೃಷಿಣಾಽತೇನ ಯಾತಂ ಮನಸೋ ಜವೀಯಸಾ ನಿಮಿಷಶ್ಚಿಜ್ಜವೀಯಸೇತಿ ಜವೀಯಸೇತಿ ॥ ೮ ॥

ಇತ್ಯೈತರೇಯೋಪನಿಷತ್ಸು ದ್ವಿತೀಯಾರಣ್ಯಕೇ
ತೃತೀಯೋಽಧ್ಯಾಯಃ ॥ ೨ ॥ ೩ ॥

ಅ ॥ ತತ್ರ=ಎಲ್ಲಾ ಶಬ್ದಗಳಿಂದಲೂ ಶ್ರೀ ಪರಮಾತ್ಮನೇ ಪ್ರತಿಪಾದ್ಯನಾಗಿದ್ದಾನೆ ಎಂಬೀ ಅರ್ಥದಲ್ಲಿ, ಏತೇ ಶ್ಲೋಕಾಃ=ಈ ಮಂತ್ರಗಳು, (ಹೇಳಲ್ಪಡುತ್ತವೆ.) ಯತ್=ಯಾವ, ಪಂಚವಿಧಂ=ನಾರಾಯಣ ಮೊದಲಾದ ರೂಪದಿಂದ ಐದು ವಿಧವಾದ, ಅಕ್ಷರಂ=ಅವಿನಾಶಿಯಾದ ಪರಬ್ರಹ್ಮನೋ, (ತತ್=ಅವನು) ಸಮೇತಿ=(ತನ್ನಲ್ಲಿಯೇ ಅರ್ಧನಾರೀ ನರಾಕಾರವಾದ ಸ್ತ್ರೀಪುಂರೂಪದಿಂದ) ಕೂಡುತ್ತಾನೆ. ಅಥವಾ ಐದು ವಿಧಗಳಾದ ನಾರಾಯಣ ಮೊದಲಾದ ತನ್ನಸ್ತ್ರೀರೂಪಗಳಿಂದ ಸಂಗತನಾಗುತ್ತಾನೆ. ಯುಜಃ=ಸ್ತ್ರೀಪುಮ್ ರೂಪದಿಂದ ಪರಸ್ಪರವಾಗಿ ಕೂಡಿರುವ, ಮತ್ತು ತಮ್ಮ ತಮ್ಮ ಹೆಂಡಂದಿಯರಿಂದೊಡಗೂಡಿದ ಅರ್ಧನಾರೀನರಾತ್ಮಕರೂಪಗಳಿಂದ ಕೂಡಿರುವ ದೇವತೆಗಳು, ಯುಕ್ತಾಃ=ಅಶ್ವರೂಪದಿಂದ ರಥದಲ್ಲಿ ಸಂಬದ್ಧರಾಗಿ, ಯತ್=ಯಾವ ನಾರಾಯಣಾಖ್ಯ ಪರಬ್ರಹ್ಮನನ್ನು, ಅಭಿಸಂವಹಂತಿ=ಹೊರುತ್ತಾರೋ, (ತತ್=ಅ), ಸತ್ಯಸ್ಯ=ಸಾಧುಗುಣಗಳುಳ್ಳ ಮುಖ್ಯಪ್ರಾಣನಿಗೆ, ಸತ್ಯಂ=ಸಾಧುಗುಣತ್ವವನ್ನು ಕೊಡುವ ನಾರಾಯಣಾಖ್ಯಪರಬ್ರಹ್ಮನು, ಯತ್ರ=ಯಾವ ತನ್ನರೂಪದಲ್ಲಿಯೇ, ಅನುಯುಜ್ಯತೇ=ಅರ್ಧನಾರೀನರಾತ್ಮಕರೂಪದಿಂದ ಅನುರೂಪವಾಗಿ ಕೂಡಲ್ಪಡುತ್ತಾನೋ, ತತ್ರ=

ಆನಾರಾಯಣಾಖ್ಯಪರಬ್ರಹ್ಮನಲ್ಲಿಯೇ, ಸರ್ವೇ ದೇವಾಃ=ಎಲ್ಲಾ ದೇವತೆಗಳು, ಏಕಂ ಭವಂತಿ= ಮುಕ್ತರಾಗಿ ಕೂಡುತ್ತಾರೆ; ಹೆಚ್ಚು ಅನುಕೂಲ ಮನಸ್ಸುಳ್ಳವರೂ ಆಗುತ್ತಾರೆ; ॥ ಯದಕ್ಷ ರಾತ್=ಯಾವ ನಾಶರಹಿತನಾದ ನಾರಾಯಣನಿಂದ, ಅಕ್ಷರಂ=ಅವತಾರ ರೂಪವು, ಯುಕ್ತಂ= ಸ್ತ್ರೀಪುಂರೂಪದಿಂದೊಡಗೂಡಿಯೇ, ಏತಿ=ಹೊರಗೆ ಬರುತ್ತದೆ. ಯುಜಃ ಯುಕ್ತಾಃ ಯತ್ ಅಭಿಸಂವಹಂತಿ, ತತ್ ಸತ್ಯಸ್ಯ ಸತ್ಯಂ ಯತ್ರ ಅನುಯುಜ್ಯತೇ ತತ್ರ ಸರ್ವೇ ದೇವಾಃ ಏಕಂ ಭವಂತಿ ...... ॥ ವಾಚಃ=ವಾಕ್ಸಮೂಹದ ಮಧ್ಯದಲ್ಲಿ, ಯತ್=ಯಾವ ಓಮ್ ಇತಿ=ಓಮ್ ಎಂಬ ಪದವೋ, (ಅಂಗೀಕಾರ ರೂಪಅರ್ಥವನ್ನು ಪ್ರತಿಪಾದಿಸುವುದು) ಯಚ್ಚ= ಯಾವ, ನೇತಿ=ಪ್ರತಿಷೇದಾರ್ಥವುಳ್ಳ 'ನ' ಎಂಬ ಪದವೋ, ಯಚ್ಚ=ಯಾವುದು, ಅಸ್ಯಾಃ=ಈ ವಾಕ್ಸಮೂಹದ ಮಧ್ಯದಲ್ಲಿ, ಕ್ರೂರಂ=ಅರ್ಥತಃ ಕಠಿಣವೋ, ಯತ್ ಉ ಚ=ಯಾವುದು, ಉಲ್ಬಣಿಷ್ಣು=ಶಬ್ದತಃ ಕಠಿಣವೋ, (ಇನ್ನು ಮಿತಾದಿ ಭೇದದಿಂದ ಐದು ವಿಧವಾದ ಎಷ್ಟು ವೈದಿಕ, ಲೌಕಿಕ ಪದಸಮುದಾಯವೋ), ತತ್=ಇವೆಲ್ಲವನ್ನು, ವಿಯೂಯ=ವಿಚಾರಿಸಿ, ಕವಯಃ=ದೇವತೆಗಳು, ನಾಮಾಯತ್ತಾ=ನಾಮಾರ್ಥಭೂತಗಳಾದ ವಿಷ್ಣುಮಹಿಮೆ ಮೊದಲಾ ದವುಗಳನ್ನು, ಅನ್ವವಿಂದನ್=ತಿಳಿದುಕೊಂಡರು. (ಆ ಜ್ಞಾನವು) ಶ್ರೃತೇ=ಪರಿಪಕ್ವವಾಗುತ್ತಿ ರಲು, ಅಧಿ=ಅಧಿಕವಾಗಿ, ಸಮತೃಪ್ಯನ್=ಕೃತಕೃತ್ಯರೂ (ಮುಕ್ತರು) ಆದರು. ॥ ಯಸ್ಮಿನ್= ಯಾವ ವಿಷ್ಣುವಿನಲ್ಲಿ, ನಾಮಾ=ನಾಮಾರ್ಥಭೂತಗಳಾದ ಗುಣಕರ್ಮಾದಿಗಳನ್ನು (ತಿಳಿದು ಆ ಜ್ಞಾನವು) ಅಧಿಶ್ರೃತೇ=ಪರಿಪಕ್ವವಾಗುತ್ತಿರಲು, ಸಮತೃಪ್ಯನ್=ಮುಕ್ತರಾದರೋ, ತತ್ರ=ಆ ವಿಷ್ಣುವಿನಲ್ಲಿಯೇ, ದೇವಾಃ=ದೇವತೆಗಳು, ಸರ್ವಯುಜಃ=ಎಲ್ಲಾ ಮನೋವಾಕ್ಕಾಯ ಕರ್ಮಗಳಿಂದೊಡಗೂಡಿದವರು, ಭವಂತಿ=ಆಗುತ್ತಾರೆ. ವಿದ್ವಾನ್=ತಿಳಿದವನು, ತೇನ ಬ್ರಹ್ಮಣಾ=ಆ ಪರಬ್ರಹ್ಮನ ಅನುಗ್ರಹದಿಂದ, ಪಾಪ್ಮಾನಂ=ಅಪ್ರಾರಬ್ಧಪಾಪವನ್ನು, ಅಪಹತ್ಯ= ನಾಶಮಾಡಿ, ಸ್ವರ್ಗಂ ಲೋಕಂ=ವೈಕುಂಠಾದಿ ಸ್ಥಾನವನ್ನು, ಅಪ್ಯೇತಿ=ಹೊಂದುತ್ತಾನೆ. ॥ ಏನಂ=ಈ ಸ್ತ್ರೀಪುಂರೂಪಿಯಾದ ವಿಷ್ಣುವನ್ನು, ವಾಚಾ=ಪ್ರಮಾಣವಿಲ್ಲದಿರುವ ಕೇವಲ ಮಾತಿ ನಿಂದ, ಸ್ತ್ರಿಯಂ=ಕೇವಲ ಸ್ತ್ರೀರೂಪನನ್ನು, ಬ್ರುವನ್=ಹೇಳುವವನು, ನ ವದತಿ=ಹೇಳುವು ದಿಲ್ಲ. (ಹಾಗೆಯೇ) ಏನಂ ಪುಮಾಂಸಂ=ಕೇವಲ ಪುರುಷರೂಪನನ್ನೇ, ಬ್ರುವನ್=ಹೇಳುವವನೂ ಕೂಡ, ನ ವದತಿ=ಹೇಳುವುದಿಲ್ಲ. ಏನಂ=ಈ ಹರಿಯನ್ನು, ಅಸ್ತ್ರೀಪುಮಾನ್=ಸ್ತ್ರೀರೂಪನೂ ಪುರುಷರೂಪನೂ ಅಲ್ಲವೇ ಅಲ್ಲವೆಂದು, ಬ್ರುವನ್=ಹೇಳುವವನೂ ಕೂಡ, ನ ವದತಿ=ಹೇಳು ವುದಿಲ್ಲ. (ಶ್ರೀ ಹರಿಗೆ ಎರಡು ರೂಪಗಳೂ ಇವೆಯಷ್ಟೆ)! (ಆದುದರಿಂದಲೇ) ಕಶ್ಚನ= ಯಾವನೊಬ್ಬನು, ಏನಂ=ಈ ಹರಿಯನ್ನು, ಸ್ತ್ರಿಯಂ ಪುಮಾಂಸಂ ವಾ=ಸ್ತ್ರೀಪುರುಷರೂಪವುಳ್ಳ ವನನ್ನಾಗಿಯೇ, ವದನ್=ಹೇಳಿದರೆ, (ಆತನು) ವದತಿ=ಹೇಳುತ್ತಾನೆಯೇ ಸರಿ. ಯಥಾರ್ಥ ಜ್ಞಾನಿಯಾಗಿ ಹೇಳುವವನೇ ಸರಿ. ॥ ಅಃ ಇತಿ=ಅಕಾರದಿಂದ, ಬ್ರಹ್ಮ=ಗುಣಪರಿಪೂರ್ಣವಾದ ವಸ್ತುವು, (ಉಚ್ಯತೇ=ಹೇಳಲ್ಪಡುತ್ತದೆ). ತತ್ರ=ಅಕಾರಕ್ಕೆ ಪೂರ್ಣರೂಪ ಅರ್ಥಪ್ರತಿಪಾದಕ ತ್ವವು ಸಿದ್ಧವಾಗುತ್ತಿರಲು, ಅಹಮಿತಿ=ನಾನೇ ಅಕಾರವಾಚ್ಯನೆಂದು, ಆಗತಂ=ಸಿದ್ಧವಾಯಿತು. (ನಾನು ಒಬ್ಬನೇ ಗುಣಪರಿಪೂರ್ಣನು, ಇತರರೆಲ್ಲರೂ ನನ್ನ ಅಧೀನರಾಗಿರುತ್ತಾರೆ. ಆದುದ ರಿಂದ ಅತ್ಯಲ್ಪರಾಗಿರುತ್ತಾರೆ. ಎಂದು ಮಹಿದಾಸರೂಪಿಯಾದ ಶ್ರೀ ಹರಿಯು ಹೇಳುವವನಾ ದನು. ಅಕಾರದ ಮೇಲೆ ಇದೇ ರೀತಿಯಾಗಿ ಓಂಕಾರವೂ ಬೃಹತೀಸಹಸ್ರವೂ ಕೂಡ ವಿಶೇಷಾ ಕಾರವಾಗಿ ವಿಷ್ಣುವನ್ನೇ ಪ್ರತಿಪಾದಿಸುತ್ತದೆ. ಎಂದೂ ತಿಳಿಯತಕ್ಕದು). ತತ್ ಇದಂ ಬೃಹತೀ ಸಹಸ್ರಂ=ಆ ಈ ಬೃಹತೀಸಹಸ್ರವು, ವೈಸಂಪನ್ನಂ=ಪೂರ್ವೋಕ್ತಪ್ರಕಾರವಾಗಿ ಸಂಪಾದಿಸಲ್ಪ

ಟ್ಟಿತು. ತಸ್ಯ ವೈ ಏತಸ್ಯ ಸಂಪನ್ನಸ್ಯ ಬೃಹತೀಸಹಸ್ರಸ್ಯ=ಆ ಈ ಸಂಪಾದಿತವಾದ ಬೃಹತೀ ಸಹಸ್ರಕ್ಕೆ, ಷಟ್ತ್ರಿಂಶತಂ=ಮೂವತ್ತಾರು, ಅಕ್ಷರಾಣಾಂ=ಅಕ್ಷರಗಳ, ಸಹಸ್ರಾಣಿ=ಸಾವಿರ ಗಳು, ಭವಂತಿ=ಆಗುತ್ತವೆ. ಪುರುಷಾಯುಷಃ=ಪುರುಷಾಯುಸ್ಸಿದ, ಅಹ್ನಾಂ=ಹಗಲಿಗೆ ಅಭಿ ಮಾನಿಗಳಾದ ಸೂರ್ಯರೂಪಗಳಲ್ಲಿರತಕ್ಕಪೂ, ಅಹರ್ನಾಮಕಗಳೂ, ಪುರುಷಾಕಾರಗಳೂ ಆದ ಭಗವದ್ರೂಪಗಳ, ಸಹಸ್ರಾಣ್ಯಪಿ=ಸಾವಿರಗಳೂ ಕೂಡ, ತಾವಂತಿ=ಅಷ್ಟು, (ಅಂದರೆ ಮೂವತ್ತಾರೇ) ಭವಂತಿ=ಆಗುತ್ತವೆ. (ಹೀಗೆ ಇರಲು ಶ್ರೀ ಪರಮಾತ್ಮನು ಕ್ರಿಡಾರ್ಥವಾಗಿ ಸ್ತ್ರೀರೂಪಗಳನ್ನೇ ಪುಂರೂಪಗಳನ್ನಾಗಿಯೂ, ಸೂರ್ಯನಲ್ಲಿ ಅಹರ್ನಾಮಕಗಳಾದ ಪುಂರೂಪ ಗಳನ್ನು ಸ್ತ್ರೀರೂಪಗಳನ್ನಾಗಿಯೂ ಮಾಡಿ) ಜೀವಾಕ್ಷರೇಣೈವ, ಜೀವ=ಬೃಹತೀಸಹಸ್ರವನ್ನು ಸ್ತುತಿಸುವ ಜೀವನಲ್ಲಿರತಕ್ಕ, ಅಕ್ಷರೇಣೈವ=ಬೃಹತೀಸಹಸ್ರದ ಅಕ್ಷರದಲ್ಲಿರುವುದೂ, ಪುರು ಷರ ಆಕಾರತ್ವವನ್ನು ಹೊಂದಿರುವುದೂ, ಆದ (೩೬೦೦೦) ಸ್ತ್ರೀರೂಪಸಮೂಹದಿಂದ, ಜೀವಾಹಃ, ಜೀವ=ಜೀವಾಖ್ಯ ಸೂರ್ಯನಲ್ಲಿರುವ, ಅಹಃ=ಅಹಶ್ಯಬ್ದವಾಚ್ಯವೂ, ಸ್ತ್ರೀಯರ ಆಕಾರವನ್ನು ಹೊಂದಿರುವುದೂ ಆದ, (೩೬೦೦೦) ಪುರುಷರೂಪ ಸಮೂಹವನ್ನು, ಆಪ್ನೋತಿ=ಹೊಂದು ತ್ತಾನೆ. ಜೀವಾಹ್ನಾ=ಸೂರ್ಯನಲ್ಲಿರುವ ಅಹರ್ನಾಮಕವಾದ ಪುರುಷರೂಪ ಸಮೂಹದಿಂದ, ಜೀವಾಕ್ಷರಂ=ಸ್ತುತಿಸುವ ಜೀವನಲ್ಲಿರುವ ಬೃಹತೀಸಹಸ್ರ ವರ್ಣದಲ್ಲಿರತಕ್ಕ ಸ್ತ್ರೀರೂಪ ಸಮೂ ಹವನ್ನು, ಆಪ್ನೋತಿ=ಹೊಂದುತ್ತಾನೆ. (ಆಗ ಸ್ತ್ರೀತ್ವಪುಂಸ್ತ್ವಗಳಿಗೆ ವ್ಯತ್ಯಾಸವಿರುವುದಿಲ್ಲ.) ಇತಿ=ಈ ಪ್ರಕಾರವಾಗಿ, ಅನಕಾಮಮಾರಃ=ಮುಖ್ಯಪ್ರಾಣನಿಗೆ ಉತ್ಪತ್ತಿಯನ್ನು ಇಚ್ಛಿಸುವವ ನಾಗಿ ಲಕ್ಷ್ಮೀದೇವಿಯಲ್ಲಿ ಕ್ರೀಡಿಸುತ್ತಾನೆ. ಕಾರಣ ಅನಕಾಮಮಾರನಾಮಕನಾದ ಶ್ರೀ ಪರಮಾ ತ್ಮನು, (ತನ್ನ ಇಚ್ಛೆಯಿಂದಲೇ ಸ್ತ್ರೀಪುಂರೂಪಗಳಿಂದ ಕ್ರೀಡಿಸುತ್ತಾನೆ.) ಅಥ=ಮೇಲೆ, ದೇವ ರಥಃ=ಹರಿವಾಯುಗಳ ರಥವು, ಅಥವಾ ದೇವತೆಗಳಿಂದ ನಿರ್ಮಾಣ ಮಾಡಲ್ಪಟ್ಟ ರಥವು, (ಹೇಳಲ್ಪಡುತ್ತದೆ. ಆ ರಥವು ಅಧ್ಯಾತ್ಮವು ದೇಹವೆಂದು. ಹೇಳಲ್ಪಡುತ್ತದೆ). ತಸ್ಯ=ದೇಹ ವೆಂಬ ರಥಕ್ಕೆ, ವಾಕ್=ವಚನಗಳಿಗೆ ಅಭಿಮಾನಿನಿಯಾದ ಪಾರ್ವತಿಯು, ಉದ್ಧಿಃ=ಸೆಳೆಯ ತಕ್ಕ ಹಗ್ಗದ ಸ್ವರೂಪವುಳ್ಳವಳು. ಶ್ರೋತ್ರೇ=ದಕ್ಷಿಣ, ವಾಮಕಿವಿಗಳಲ್ಲಿರುವ ಚಂದ್ರನು, ಆತನ ಹೆಂಡತಿಯು, ಪಕ್ಷಸೀ=ಬಲ, ಎಡಭಾಗಗಳಲ್ಲಿ ಅಶ್ವರೂಪವಾಗಿ ಇರುತ್ತಾರೆ. ಚಕ್ಷುಷೀ= ಬಲ, ಎಡಕಣ್ಣುಗಳಲ್ಲಿರುವ ಸೂರ್ಯ ಮತ್ತು ಅವನ ಹೆಂಡತಿಯು, ಯುಕ್ತೇ=ಎದುರಿನಲ್ಲಿರುವ ಅಶ್ವರೂಪರಾಗಿರುತ್ತಾರೆ. ಮನಃ=ಮನೋಽಭಿಮಾನಿಯಾದ ರುದ್ರನು, ಸಂಗೃಹೀತಾ= ಸಾರಥಿಯು, (ಹೀಗೆ ಆ ರಥವು ಅಧಿದೈವವು ರಥರೂಪವೇ ಆಗುತ್ತದೆ. ಅಧಿದೈವದಲ್ಲಿಯೂ ಕೂಡ) ತಸ್ಯ=ಆ ರಥಕ್ಕೆ, ವಾಕ್=ಪಾರ್ವತಿಯು, ಉದ್ಧಿಃ=ಸರ್ಪಾಕಾರವಾದ ಹಗ್ಗವು, ಶ್ರೋತ್ರೇ=ಚಂದ್ರರೋಹಿಣಿಯರು, ಪಕ್ಷಸೀ=ಎರಡು ಪಾರ್ಶ್ವಗಳಲ್ಲಿರುವ ಅಶ್ವರೂಪರು, ಚಕ್ಷುಷೀ ಹಿ=ಸೂರ್ಯಸಂಜ್ಞೆಯರು, ಯುಕ್ತೇ=ಎದುರಿನಲ್ಲಿರುವ ಅಶ್ವರೂಪರು. ಮನಃ= ರುದ್ರನು, ಸಂಗ್ರಹೀತಾ=ಸಾರಥಿಯು. (ಈ ಪ್ರಕಾರ ಈ ದೇವತೆಗಳನ್ನು ತಿಳಿಯತಕ್ಕದು). ತದಯಂ=ಆ ಈ, ಪ್ರಾಣಃ=ವಿಷ್ಣುವಾಯುಗಳು, ಅಧಿತಿಷ್ಠತಿ=(ಅಧ್ಯಾತ್ಮ, ಅಧಿದೈವ ಎಂಬೀ ಎರಡು ರಥಗಳನ್ನು) ಏರುತ್ತಾರೆ. ತತ್=ಹರಿವಾಯುಗಳು, ಎರಡು ವಿಧವಾದ ರಥವನ್ನು ಏರಿರುತ್ತಾರೆ ಎಂಬೀ ವಿಷಯವು, ಋಷಿಣಾ=ಸರ್ವಜ್ಞನಾದುದರಿಂದಲೇ ಎಲ್ಲಾ ವೇದಗಳನ್ನು ಆದಿಯಲ್ಲಿ ನೋಡಿರುವ ಹಯಗ್ರೀವರೂಪಿಯಾದ ಶ್ರೀ ಪರಮಾತ್ಮನಿಂದ, ಉಕ್ತಂ=ಮಂತ್ರ ರೂಪವಾಗಿ, ಹೇಳಲ್ಪಟ್ಟದೆ. (ಎರಡು ಸಮಗ್ರಮಂತ್ರ ಮಂತ್ರಾರ್ಥಗಳು ಈ ರೀತಿಯಾಗಿವೆ.) 'ಆತೇನ ಯಾತಂ ಮನಸೋ ಜವೀಯಸಾ ರಥಂ ಯಂ ವಾಮೃಭವಶ್ಚಕ್ರುರಶ್ವಿನಾ । ಯಸ್ಯ

ಯೋಗೇ ದುಹಿತಾ ಜಾಯತೇ ದಿವ ಉಭೇ ಅಹನೀ ಸುದಿನೇ ವಿವಸ್ವತಃ' ॥ ಅಶ್ವಿನಾ=ಅಶ್ವ ದಂತೆ ಮುಖವುಳ್ಳವರೂ, ಶೀಘ್ರಗಮನವುಳ್ಳವರೂ ಆದ ಹರಿವಾಯುಗಳಿರಾ! ಮನಸೋ ಜವೀ ಯಸಾ=ಅತಿಪಟುವಾದ ಶರೀರಾಖ್ಯರಥದಿಂದ, ಆಯಾತಂ=ಬನ್ನಿರಿ. (ಶರೀರದಲ್ಲಿ ಸನ್ನಿಹಿತ ರಾಗಿರಬೇಕು) ಯಂ ರಥಂ=ಯಾವ ರಥವನ್ನು, ವಾಂ=ನಿಮಗೋಸ್ಕರವೇ, ಋಭವಃ=ದೇವತೆ ಗಳು, ಚಕ್ರುಃ=ನಿರ್ಮಿಸಿರುವರೋ, ಯಸ್ಯ=ಯಾವ ರಥದ, ಯೋಗೇ=(ಹರಿವಿಷಯಕಗಳಾದ ಮನೋವಾಕ್ಕರ್ಮಗಳಿಂದ) ಸಂಬಂಧವು, (ಚೆನ್ನಾಗಿ ಆಗುತ್ತಿರಲು) ವಿವಸ್ವತಃ=ಸರ್ವತ್ರವ್ಯಾಪ್ತ ನಾದ ಶ್ರೀ ಪರಮಾತ್ಮನ ಪ್ರಸಾದದಿಂದ, (ಜೀವನಿಗೆ) ದಿವಃ=ಅರ್ಥವನ್ನು ಪ್ರಕಾಶಿಸುವ ವಿದ್ಯೆ ಯಿಂದ, ದುಹಿತಾ=ಹುಟ್ಟಿದ ಅಪರೋಕ್ಷಜ್ಞಾನವು, ಜಾಯತೇ=ಹುಟ್ಟುತ್ತದೆ. ಸುದಿನೇ= ಸುಖವನ್ನು ಕೊಡುವುದರಿಂದಲೂ, ಶೋಭನದಿನರೂಪವಾದುದರಿಂದಲೂ ಸುದಿನನಾಮಕಗ ಳಾದ, ಉಭೇ ಅಹನೀ=ಜೀವನ್ಮುಕ್ತಿ, ಮುಕ್ತ್ಯವಸ್ಥೆಗಳೂ ಕೂಡ, (ಆಗುತ್ತವೆ.) ॥ ಹೀಗೆ ಅಧಿದೈವದಲ್ಲಾದರೂ ಮನಸೋ ಜವೀಯಸಾ ...... ಆಯಾತಂ=ನಮ್ಮ ಯಾಗವನ್ನು ಕುರಿತು ಬನ್ನಿರಿ. ಯಸ್ಯ=ರಥಕ್ಕೆ, ಯೋಗೇ=ಶ್ರೀ ಪರಮಾತ್ಮನಿಂದ ಸಂಬಂಧವು ಆಗುತ್ತಿ ರಲು, (ಅದೇ ರಥದಲ್ಲಿ) ದಿವೋ ದುಹಿತಾ=ಎಲ್ಲಾ ಸ್ತ್ರೀಯರಲ್ಲಿಯೂ ಉತ್ತಮಳಾದ ಮಹಾ ಲಕ್ಷ್ಮಿಯೂ, ಭಾರತಿಯೂ, ಸುದಿನೇ ಉಭೇ) ಅಹನೀ=ಜೀವನ್ಮುಕ್ತಿ, ಮುಕ್ತ್ಯವಸ್ಥಾ ದೇವ ತೆಗಳೂ ಅಹೇಯರಾದುದರಿಂದಲೂ, ಜ್ಞಾನರೂಪರಾದುದರಿಂಲೂ, ಅಹಶ್ಶಬ್ದವಾಚ್ಯ ಲಕ್ಷ್ಮಿ ದೇವಿಯ ಮಕ್ಕಳೂ ಆದ ವಾಯುರೂಪಗಳೂ ಕೂಡ, ವಿವಸ್ವತಃ=ಶ್ರೀ ಪರಮಾತ್ಮನ ಸಕಾಶದಿಂದ, ಜಾಯಂತೇ=ಹುಟ್ಟುತ್ತಾರೆ. (ಅಂತೂ ರಥಾರೂಢರಾದ ಲಕ್ಷ್ಮೀನಾರಾಯಣ ರಿಂದ ಭಾರತೀಪ್ರಾಣರು ಹುಟ್ಟುತ್ತಾರೆ). (ಎರಡನೇ ಮಂತ್ರವು 'ನಿಮಿಷಶ್ಚಿಜ್ಜವೀಯಸಾ ರಥೇ ನಾಯಾತಮಶ್ವಿನಾ । ಅಂತಿಷದ್ಭೂತು ವಾಮವಃ' ॥ ನಿಮಿಷಶ್ಚಿಜ್ಜವೀಯಸಾ=ಕಣ್ಣನ್ನು ಮುಚ್ಚು ವುದಕ್ಕಿಂತಲೂ ಅತಿವೇಗವುಳ್ಳ, ರಥೇನ=ರಥದಿಂದ, ಅಶ್ವಿನಾ=ಹರಿವಾಯುಗಳಿರಾ! ಆಯಾ ತಂ=ಬನ್ನಿರಿ. ಅವಃ=ರಕ್ಷಣವು, ವಾಂ=ನಿಮ್ಮ, ಅಂತಿಷತ್=ಸಮೀಪದಲ್ಲಿಯೇ ಇರತಕ್ಕುದು, ಭೂತು=(ನನಗೆ) ಆಗಲಿ. (ಹೀಗೆ ಎರಡನೇ ಮಂತ್ರಾರ್ಥವು). ॥ ೮ ॥

**ಈ ಪ್ರಕಾರವಾಗಿ ಶ್ರೀಮನ್ಮಹೈತರೇಯೋಪನಿಷತ್ತಿನಲ್ಲಿ ಎರಡನೇ ಆರಣ್ಯಕದಲ್ಲಿ ಮೂರನೇ ಅಧ್ಯಾಯವು ಸಮಾಪ್ತವಾಯಿತು. ॥**

**ಭಾ॥** (a) ಯನ್ನಾರಾಯಣಾದಿರೂಪೇಣ ಪಂಚವಿಧಮಕ್ಷರಂ ಪರಂ ಬ್ರಹ್ಮ ತತ್ಸ್ವಸ್ಮಿನ್ನೇವ ಸ್ತ್ರೀಪುಂರೂಪೇಣ ಸಮೇತಿ । (b) ಯುಜೋ ದೇವಾಃ ಅಶ್ವರೂಪೇಣ ರಥೇ ಯುಕ್ತಾಃ ಸಂತೋ ಯನ್ನಾರಾಯಣಾಖ್ಯಂ ಪರಂ ಬ್ರಹ್ಮಾಭಿಸಂವಹಂತಿ ॥ (c) ತದೇತತ್ಸತ್ಯಸ್ಯ ಸತ್ಯಂ ನಾರಾಯಣಾಖ್ಯಂ ಬ್ರಹ್ಮ ಯತ್ರಾನುಯುಜ್ಯತೇ ಯಸ್ಮಿಂತ್ಸ್ವರೂಪ ಏವ ಸ್ತ್ರೀಪುಂರೂಪೇಣ ಯುಜ್ಯತೇ । (d) ತತ್ರ ತಸ್ಮಿನ್ನೇವ ಪರೇ ಬ್ರಹ್ಮಣಿ ನಾರಾಯಣಾಖ್ಯೇ ಸರ್ವದೇವಾ ಏಕೀಭವಂತಿ ಮುಕ್ತಾಃ ಸಂತೋ ಮಿಲಿತಾ ಭವಂತಿ ॥

ಅ ॥ (a) ಯಾವುದೊಂದು (ಗಾಯತ್ರ್ಯಾದಿಗಳಲ್ಲಿ ಪ್ರತಿಪಾದ್ಯವಾದದ್ದೂ) ನಾರಾಯಣ ಮೊದಲಾದ ರೂಪದಿಂದ ಐದು ಪ್ರಕಾರವುಳ್ಳದ್ದೂ, ಎಲ್ಲಾ ಛಂದಸ್ಸುಗಳಲ್ಲಿ ಪ್ರತಿಪಾದಿಸಿ ಕೊಳ್ಳಲ್ಪಡುವುದರಿಂದ ಅಕ್ಷರ ಶಬ್ದವಾಚ್ಯನೂ ಆದ ಪರಬ್ರಹ್ಮನೋ ಆ ಪರಬ್ರಹ್ಮನು ತನ್ನಲ್ಲಿಯೇ

ಅರ್ಧನಾರೀನರಾಕಾರವಾದ ಸ್ತ್ರೀಪುಂರೂಪದಿಂದ ಸಂಯುಕ್ತನಾಗುತ್ತಾನೆ. ॥ (b) ಸ್ತ್ರೀಪುಂ ರೂಪದಿಂದ ಪರಸ್ಪರವಾಗಿ ಸಂಯುಕ್ತರಾದ ದೇವತೆಗಳು, ಅಶ್ವರೂಪದಿಂದ ರಥದಲ್ಲಿ ಸಂಬದ್ಧ ರಾಗಿಯಾವ ನಾರಾಯಣನೆಂದು ಹೆಸರುಳ್ಳ ಪರಬ್ರಹ್ಮನನ್ನು ಒಯ್ಯುತ್ತಾರೋ, ॥ (c) ಆ ಈ ಸತ್ಯ ಶಬ್ದವಾಚ್ಯನಾದ ಮುಖ್ಯಪ್ರಾಣನಿಗೂ ಸತ್ಯತ್ವವನ್ನು ಕೊಡುವವನು ನಾರಾಯಣನೆಂಬ ಪರ ಬ್ರಹ್ಮನು "ಯತ್ರಾನುಯುಜ್ಯತೇ" ಅಂದರೆ ಯಾವ ತನ್ನ ರೂಪದಲ್ಲಿಯೇ ಅರ್ಧನಾರೀನರಾಕಾರ ವಾದ ಸ್ತ್ರೀಪುಂರೂಪದಿಂದ ಕೂಡಲ್ಪಡುತ್ತಾನೋ, ॥ (d) "ತತ್ರ" ಅಂದರೆ ನಾರಾಯಣನೆಂದು ಹೆಸರುಳ್ಳ ಆ ಪರಬ್ರಹ್ಮನಲ್ಲಿಯೇ ಎಲ್ಲಾ ದೇವತೆಗಳೂ ಏಕೀಭೂತರಾಗುತ್ತಾರೆ. ಅಂದರೆ ಮುಕ್ತರಾಗಿ ಸಾಯುಜ್ಯರೂಪದಿಂದ ಪರಮಾತ್ಮನಲ್ಲಿ ಪರಸ್ಪರವಾಗಿ ಯಾಗಲೀ ಕೂಡಿದವರು ಆಗುತ್ತಾರೆ.

ಭಾ॥ **(a)** ನಾಯಮೇಕೀಭಾವೋ ನಾಮ ಸ್ವರೂಪೈಕ್ಯಂ । ಕಿಂ ತ್ವೇಕಸ್ಥಾನೇ ವಾಸೋऽತ್ಯನುಕೂಲಚಿತ್ತತಾ ಚ ॥ **(b)** ಏಕೀಭೂಯ ನೃಪಾಸ್ಸರ್ವೇ ಽವವೃಷುಃ ಪಾಂಡವಂ ಶರೈಃ । ಏಕೀಭೂತಾ ತು ಸಾ ಸೇನಾ ಪಾಂಡವಾ ನಭ್ಯವರ್ತತೇತ್ಯಾದಿವತ್ ॥ **(c)** ನಚ್ವ್ಯೇಕೀಭಾವಶಬ್ದಃ ಸ್ವರೂಪೈಕತ್ವ ವಿಷಯೇ ಪ್ರಯುಜ್ಯಮಾನಃ ಕುತ್ರಚಿದ್ದೃಷ್ಟಃ । **(d)** ಏಕಃ ಪುರು ಷೋऽಪಿ ಯದಾ ದ್ವಿಧಾ ಭೂತ್ವಾ ಏಕೀಭವತೀತ್ಯುಚ್ಯತೇ ತದಾऽಪಿ ಸ್ಥಾನೈಕ್ಯಮೇವ । ಸ್ವರೂಪೈಕ್ಯಸ್ಯ ಪೂರ್ವಮೇವ ಸಿದ್ಧತ್ವಾತ್ ॥

ಅ ॥ (a) "ಸರ್ವ ಏಕಂ ಭವಂತಿ" ಎಂಬುವಲ್ಲಿರತಕ್ಕ ಈ ಏಕೀಭಾವವೆಂದರೆ ಸರ್ವಚೈತನ್ಯ ಗಳಿಗೆ ಅಭೇದವೆಂದಲ್ಲ. ಕಿಂತು ಒಂದೇ ಪ್ರದೇಶದಲ್ಲಿ ಆವಾಸವು, ಅತ್ಯನುಕೂಲವಾದ ಮನಸ್ಸುಳ್ಳ ತನವು. [ ತಾ ॥ "ಜೀವಸ್ಯ ಪರಮತ್ವಂ ತು ಬುದ್ಧಿಸಾರೂಪ್ಯಮೇವ ಚ" ಎಂಬೀ ವಚನಾನು ಸಾರವಾಗಿ ಒಂದೇ ವಿಷಯದಲ್ಲಿ ಒಂದೇ ವಿಧವಾದ ಬುದ್ಧಿಯಿರುವಿಕೆಯು.] ॥ (b) ಎಲ್ಲಾ ರಾಜರೂ ಒಟ್ಟಾಗಿ ಬಾಣಗಳಿಂದ ಪಾಂಡವರನ್ನು ಮುಳಿಸುರಿಸಿದರು. ಆ ಸೈನ್ಯವು ಒಂದಾಗಿ ಅಂದರೆ ಸ್ಥಾನೈಕ್ಯಮತ್ತ್ಯೈಕ್ಯಗಳನ್ನು ಹೊಂದಿ ಪಾಂಡವರನ್ನು ಎದುರುಗೊಂಡಿತು. ಇದೇ ಮೊದಲಾದ ವಾಕ್ಯಗಳಂತೆ, [ ತಾ ॥ ಇಲ್ಲಿ ಸರ್ವರಾಜರಿಗೂ, ಸರ್ವಸೈನ್ಯಕ್ಕೂ ಅಭೇದವು ಕೂಡಲಾರದಷ್ಟೇ! ಆದರೆ ಸ್ಥಾನ ಒಂದೇ ಆದುದರಿಂದಲೂ ಎಲ್ಲರ ಬುದ್ಧಿಯೂ ಒಂದೇ ವಿಷಯ ವುಳ್ಳದ್ದಾದುದರಿಂದಲೂ, ಏಕೀಭಾವ ಶಬ್ದಪ್ರಯೋಗವೆಂದು ಹೇಗೆ ಅಂಗೀಕರಿಸತಕ್ಕದೋ, ಅದೇ ರೀತಿಯಾಗಿ "ಏಕಂ ಭವಂತಿ" ಎಂಬುವಲ್ಲಿಯೂ ಅಂಗೀಕರಿಸತಕ್ಕದು.] ॥ (c) "ಚ್ವಿ" ಪ್ರತ್ಯ ಯಾಂತವಾದ ಏಕೀಭಾವ ಶಬ್ದವು ಪೂರ್ವದಲ್ಲಿ ಅಭೇದವಿದ್ದವನಿಗೇನೇ ಮೇಲೆಯೂ ಅಭೇದವು ಪ್ರತಿಪಾದಿಸಲ್ಪಡುತ್ತದೆ ಎಂಬೀ ವಿಷಯದಲ್ಲಿ ಪ್ರಯೋಗಿಸಲ್ಪಟ್ಟದ್ದು ಎಲ್ಲಿಯೂ ಕಾಣಲ್ಪಡಲೇ ಇಲ್ಲ. [ ತಾ ॥ "ಅಭೂತತದ್ಭಾವೇ ಸಂಪದ್ಯಮಾನೇ ಕರ್ತರಿ ಚ್ವಿಃ" ಎಂದು ಚ್ವಿಪ್ರತ್ಯಯವನ್ನು ವಿಧಿ ಸಿರುವುದರಿಂದ ಪೂರ್ವದಲ್ಲಿ ಅಭಿನ್ನನೇ ಆದ ಜೀವನಿಗೆ ಮುಕ್ತಿಯಲ್ಲಿ ಬ್ರಹ್ಮನಿಂದ ಐಕ್ಯವು ಹೇಳಲ್ಪಡುತ್ತದೆ, ಎಂದು ಹೇಳಕೂಡದು.] ॥ (d) (ಹಾಗಾದರೆ, "ಏಕೀಭೂಯ ಪುನಶ್ಶೇತೇ ನಿರ್ದೋಷೋ ಹರಿರಾದಿಕೃತ್" ಇದೇ ಮೊದಲಾದುವುಗಳಲ್ಲಿ ಒಬ್ಬ ಪರಮಾತ್ಮನಿಗೇನೇ ಪುನಃ ಐಕ್ಯವು ಹೇಳಲ್ಪಡುತ್ತದೆ. ಕಾರಣ ಪೂರ್ವದಲ್ಲಿ ಅಭಿನ್ನನಿಗೇನೇ ಪುನಃ ಅಭೇದವು ಎಲ್ಲಿಯೂ ತೋರುವುದಿಲ್ಲ ಎಂಬುವುದು ಹೇಗೆ ಸಂಗತವಾಗುತ್ತದೆ.) ಎಂದರೆ:- ಯಾವಾಗ ಗುಣ ಪರಿ

ಪೂರ್ಣನಾದ ಶ್ರೀ ಪರಮಾತ್ಮನು (ತನ್ನ ರೂಪಗಳಿಂದ) ಭೇದಶೂನ್ಯನಾದರೂ ಎರಡು ರೂಪಗಳನ್ನು ಹೊಂದಿ, ಐಕ್ಯವನ್ನು ಹೊಂದುತ್ತಾನೆ ಎಂದು ಹೇಳಲ್ಪಡುತ್ತಾನೋ, ಆವಾಗಲೂ ಒಂದೇ ಸ್ಥಾನದಲ್ಲಿ ಇರುವುದೇ, ಸ್ವರೂಪೈಕ್ಯವು ಪೂರ್ವದಲ್ಲಿಯೇ ಸಿದ್ಧವಾದುದರಿಂದ, [ತಾ ॥ "ಹರೇರಪಿ ಸ್ವರೂಪಾಣಾಮೇಕೀಭಾವೋ ಯದೋಚ್ಯತೇ । ಸಂಶ್ಲೇಷ ಏವ ಸಿದ್ಧತ್ವಾತ್ಸ್ವರೂಪೈಕ್ಯಸ್ಯ ನೋ ಭವಃ ॥" ಶ್ರೀ ಹರಿಯ ರೂಪಗಳಿಗೂ ಯಾವಾಗ ಐಕ್ಯವು ಹೇಳಲ್ಪಡುತ್ತದೋ, ಆಗ ಸ್ಥಾನೈಕ್ಯವೇ ಇಟ್ಟುಕೊಳ್ಳತಕ್ಕದು. ಸ್ವರೂಪೈಕ್ಯವು ಪೂರ್ವದಲ್ಲಿಯೇ ಸಿದ್ಧವಾದುದರಿಂದ ಪುನಃ ಉಂಟಾಗಲಾರದಷ್ಟೇ!]

**ಭಾ ॥ (a)** ನ ಚಾಜ್ಞಾತ ಏಕತ್ವೇ ಪುನರ್ಜ್ಞಾತೇ ಐಕ್ಯಂ ಪ್ರಾಪ್ತ ಇತಿ ಪ್ರಯೋಗೋ ದೃಶ್ಯತೇ । ಕಿಂ ತು ಜ್ಞಾತ ಇತ್ಯೇವ ಪ್ರಯುಜ್ಯತೇ ॥ ತಸ್ಮಾದ್ಭಾವಸಹಿತ ಏಕಶಬ್ದೋ ನ ಸ್ವರೂಪವಾಚೀ ॥ **(b)** ನ ಹಿ ಪೂರ್ವಂ ಭಿನ್ನಸ್ಯ ಪಶ್ಚಾತ್ಸ್ವರೂಪೈಕ್ಯಂ ಭವತಿ । ಕಿಂ ತು ಸಂಸರ್ಗ ಏವ ಭವತಿ । ತಸ್ಮಾದತ್ರಾಪಿ ಸಂಸರ್ಗ ಏವ ವಿವಕ್ಷಿತಃ ॥ **(c)** ಯದಕ್ಷರಂ ಪಂಚವಿಧಂ ಸಮೇತೀತ್ಯುಕ್ತಸ್ಯ ಸತ್ಯಸ್ಯ ಸತ್ಯಮನು ಯತ್ರ ಯುಜ್ಯತ ಇತಿ ಪರಾಮರ್ಶಂ ಕೃತ್ವಾ ತತ್ರ ದೇವಾಃ ಸರ್ವ ಏಕಂ ಭವಂತೀತ್ಯುಚ್ಯತೇ ತಸ್ಮಾನ್ನ ಪುನರುಕ್ತಿಃ । **(d)** ಯಸ್ಮಾದಕ್ಷರಾನ್ನಾರಾಯಣಾಖ್ಯಾತ್ಸ್ವಯಮೇವ ಭಗವಾನ್ಪ್ರಾದುರ್ಭಾವರೂಪೀ ಸ್ತ್ರೀಪುಂರೂಪೇಣ ಯುಕ್ತ ಆಗಚ್ಛತಿ। ತಾತ್ಪರ್ಯಾರ್ಥಂ ತಸ್ಯೈವಾರ್ಥಸ್ಯ ಪುನರಭ್ಯಾಸಃ ॥

ಅ ॥ (a) (ಹಾಗಾದರೆ ಸಂಸಾರಾವಸ್ಥೆಯಲ್ಲಿ ಭಿನ್ನನಾಗಿಯೇ ಕಾಣಲ್ಪಟ್ಟ ಜೀವನು ಮುಕ್ತಿಯಲ್ಲಿ ಅಭಿನ್ನನಾಗಿ ಕಾಣಲ್ಪಡುತ್ತಾನೆ. 'ಕಾರಣ ಏಕೀ ಭವಂತಿ' ಎಂಬೀ ಪ್ರಯೋಗವು ಸಂಗತವಾಗುವುದು.) ಎಂದರೆ- ಪೂರ್ವದಲ್ಲಿ ಅಭೇದವು ತಿಳಿಯಲ್ಪಡದೆ ಇದ್ದು ಮತ್ತೆ ತಿಳಿಯಲ್ಪಟ್ಟರೆ ಐಕ್ಯವನ್ನು ಹೊಂದಿದನು ಎಂಬೀ ಪ್ರಯೋಗವು ಕಾಣಲ್ಪಡುವುದಿಲ್ಲ. ಕಿಂತು ತಿಳಿಯಲ್ಪಟ್ಟಿತು ಎಂದೇ ಪ್ರಯೋಗಿಸಲ್ಪಡುತ್ತದೆ. ಆದುದರಿಂದ 'ಭಾವ' ಶಬ್ದದಿಂದೊಡಗೂಡಿದ ಏಕಶಬ್ದವು (ಪೂರ್ವದಲ್ಲಿ ಅಭಿನ್ನನಿಗೆ) ಸ್ವರೂಪೈಕ್ಯವನ್ನು ಹೇಳತಕ್ಕದು ಅಲ್ಲ. ॥ (b) (ಹಾಗಾದರೆ ಸಂಸಾರಾವಸ್ಥೆಯಲ್ಲಿ ಭಿನ್ನನೇ ಆದ ಜೀವನಿಗೆ ಮುಕ್ತಿಯಲ್ಲಿ ಬ್ರಹ್ಮನಿಂದ ಐಕ್ಯವು ಹೇಳಲ್ಪಡುತ್ತದೆ.) ಎಂದರೆ- ಸಂಸಾರಾವಸ್ಥೆಯಲ್ಲಿ ಭಿನ್ನನಾದವನಿಗೆ ಮೇಲೆ (ಮುಕ್ತಿಯಲ್ಲಿ) ಸ್ವರೂಪೈಕ್ಯವು ಆಗುವುದಿಲ್ಲ. (ಇದೇ ಅಭಿಪ್ರಾಯವು 'ನ ಹಿ ಭಿನ್ನಮಭಿನ್ನತಾಂ । ಗಚ್ಛದ್ದೃಷ್ಟಂ ಕ್ವಚಿತ್' ॥ ಎಂಬೀ ಸ್ಮೃತಿಯಲ್ಲಿ ಬೇರೆಯಾದ ವಸ್ತುವು ಅಭೇದವನ್ನು ಹೊಂದಿರುವುದು ಎಲ್ಲಿಯೂ ದೃಷ್ಟವಾಗುವುದಿಲ್ಲ ಎಂದು ಹೇಳಲ್ಪಟ್ಟಿದೆ.) (ನೀರಿಗೆ ನೀರನ್ನು ಸೇರಿಸಿದರೆ ಐಕ್ಯವು ತೋರಿಬರುವುದರಿಂದ ಪೂರ್ವದಲ್ಲಿ ಭಿನ್ನವಾದುದಕ್ಕೆ ಮೇಲೆ ಎಲ್ಲಿಯೂ ಐಕ್ಯವಿಲ್ಲವೆಂಬುವುದು ಹೇಗೆ ಯುಕ್ತವಾದೀತು) ಎಂದರೆ- ಕಿಂತು ಸಂಬಂಧವೇ ಆಗುತ್ತದೆ. (ಐಕ್ಯವಲ್ಲ, 'ಯಥೋದಕಂ ಶುದ್ಧೇ ಶುದ್ಧಮಾಸಿಕ್ತಂ ತಾದೃಗೇವ ಭವತಿ' ಅಂದರೆ ಪರಿಶುದ್ಧವಾದ ನೀರನ್ನು ಶುದ್ಧ ನೀರಿನಲ್ಲಿ ಸೇರಿಸಿದರೆ ಅದರಂತೆಯೇ ಆಗುತ್ತದೆ. ಅದೇ ಆಗುವುದು ಅಲ್ಲ. ಎಂಬೀ ಶ್ರುತಿಯಿಂದ ಸಂಬಂಧವೆಂದೇ ಅಂಗೀಕರಿಸತಕ್ಕದು.) ಆದುದರಿಂದ (ಅಂದರೆ ಪೂರ್ವದಲ್ಲಿ ಭೇದವೇ ಇದ್ದುದರಿಂದ ಮೇಲೆಯೂ ಅಭೇದವು ಕೂಡಲಾರದಾದ ಕಾರಣ) ಎಲ್ಲಿಯೂ (ಅಂದರೆ 'ಏಕಂ ಭವಂತಿ' ಎಂಬುವಲ್ಲಿಯೂ ಏಕೀಭಾವಶಬ್ದದಿಂದ) ಸಂಬಂಧವೇ ಹೇಳಲಿಕ್ಕೆ ಇಷ್ಟವಾದುದು. (ಸ್ವರೂಪೈಕ್ಯ

ವಲ್ಲವೇ ಅಲ್ಲ. ಆದುದರಿಂದ ಪ್ರತ್ಯಕ್ಷ, ಶ್ರುತ್ಯಾದಿ ವಿರುದ್ಧವಾದ ಕಾರಣ ಅದ್ವೈತಿಗಳ ವ್ಯಾಖ್ಯಾನವು ಅಸಂಗತವು.) ॥ (c) (ಯಾವ ಅಕ್ಷರಶಬ್ದವಾಚ್ಯನಾದ ನಾರಾಯಣಾದಿ ಐದು ರೂಪಗಳುಳ್ಳ ಶ್ರೀ ಹರಿಯು ತನ್ನಲ್ಲಿಯೇ ಕ್ರೀಡಿಸುತ್ತಾನೆ. ಎಂದು ಹೇಳಿರುವುದರಿಂದ, ಪುನಃ ಮೇಲಿನ ವಾಕ್ಯದಲ್ಲಿ, 'ಸತ್ಯಸ್ಯ ಸತ್ಯಂ' ನಾರಾಯಣಾದಿ ರೂಪಿಯಾದ ಶ್ರೀ ಹರಿಯು ಯಾವ ಸ್ವರೂಪದಲ್ಲಿಯೇ ಸ್ತ್ರೀಪುಂರೂಪದಿಂದ ಕ್ರೀಡಿಸುತ್ತಾನೆ ಎಂದು ಹೇಳಿರುವುದರಿಂದ ಪುನರುಕ್ತ ವಾಯಿತೆಂದರೆ-) 'ಯದಕ್ಷರಂ ಪಂಚವಿಧಂ ಸಮೇತಿ' ಎಂಬೀ ವಾಕ್ಯದಿಂದ ವಿಧಿಸಲ್ಪಟ್ಟವನಿಗೇನೇ, 'ಸತ್ಯಸ್ಯ ಸತ್ಯಮನು ಯತ್ರ ಯುಜ್ಯತೇ' ಎಂಬುವುದರಿಂದ ಅನುವಾದವನ್ನು ಮಾಡಿಕೊಂಡು ಅಂತಹ ಹರಿಯಲ್ಲಿ ಎಲ್ಲಾ ದೇವತೆಗಳೂ ಐಕ್ಯವನ್ನು ಹೊಂದುತ್ತಾರೆ. ಎಂದು ಹೇಳಲ್ಪಡುತ್ತದೆ. ಆದುದರಿಂದ ಪುನರುಕ್ತಿಯಿರುವುದಿಲ್ಲ. (ಅಂತೂ ಅಧಿಕಾರ್ಥವನ್ನು ವಿಧಿಸುವುದಕ್ಕೋಸ್ಕರವೇ ಒಂದಾವರ್ತಿ ಹೇಳಿರುವುದನ್ನು ಪುನಃ ಅನುವಾದ ಮಾಡಿದ್ದಾಗಿರುತ್ತದೆ. ಪುನಃ ವಿಧಾನಮಾಡಲಿಲ್ಲ. ಕಾರಣ ಪುನರುಕ್ತಿಯಿಲ್ಲ.) ॥ (d) ಯಾವ ಅಕ್ಷರಶಬ್ದವಾಚ್ಯನಾದ ನಾರಾಯಣನಿಂದ ಆ ಮೂಲರೂಪಿಯಾದ ಶ್ರೀ ಪರಮಾತ್ಮನೇ ಅವತಾರರೂಪವುಳ್ಳವನಾಗಿ ಸ್ತ್ರೀಪುಂರೂಪದಿಂದೊಡಗೂಡಿದವನಾಗಿ ಬರುತ್ತಾನೆ. (ಈ ಅರ್ಥವು) ತಾತ್ಪರ್ಯ ವಿಷಯೀಭೂತವಾದುದು ಎಂದು ತೋರಿಸುವುದಕ್ಕೋಸ್ಕರ ಹಿಂದೆ ಹೇಳಿರುವ ಅರ್ಥವನ್ನೇ ಪುನಃ ಅಭ್ಯಾಸವು (ಹೇಳಿರುವುದು.)

**ಭಾ** ॥ **(a)** ವಿಯೂಯ ವಿಚಾರ್ಯ ನಾಮಾಯತ್ವಾನ್ಯೇವ ನಾಮಾರ್ಥಭೂತಾನ್ಯೇವ ವಿಷ್ಣೋರ್ಮಾಹಾತ್ಮ್ಯಾದೀನ್ಯನ್ವವಿಂದನ್ । ತತಶ್ಚಾಧಿಕಂ ಸಮುತೃಪ್ಯನ್ ॥ ಶೃತೇ ಪರಿಪಕ್ವೇ ಸತಿ ಜ್ಞಾನೇ । **(b)** ಯಸ್ಮಿನ್ವಿಷ್ಣೌ ನಾಮಾನಿ ಜ್ಞಾತ್ವಾ ತಸ್ಮಿನ್ ಜ್ಞಾನೇ ಪರಿಪಕ್ವೇ ಸಮತೃಪ್ಯನ್ ತಸ್ಮಿನ್ನೇವ ದೇವಾಃ ಸರ್ವಯುಜೋ ಭವಂತೀತ್ಯವಧಾರಣಾರ್ಥಂ ಪುನರ್ವಚನಂ ॥ **(c)** ಸರ್ವಯುಜೋ ಭವಂತಿ ಮನೋವಾಕ್ಕರ್ಮಭಿಸ್ತತ್ರೈವ ಯುಕ್ತಾ ಭವಂತಿ ಅರ್ಥತಃ ಕಠಿನಂ ಕ್ರೂರಮುಲ್ಬಣಂ ಶ್ರವಣಾಪ್ರಿಯಂ॥ಇತಿ ಶಬ್ದನಿರ್ಣಯೇ॥

ಅ ॥ (a) 'ವಿಯೂಯ' ಅಂದರೆ ವಿಚಾರಿಸಿ, 'ನಾಮಾಯತ್ವಾನ್ಯೇವ ಅಂದರೆ' ನಾಮಾರ್ಥಭೂತಗಳೇ ಆದ ಶ್ರೀ ಹರಿಯ ಮಹಿಮೆ ಮೊದಲಾದವುಗಳನ್ನು ತಿಳಿದರು. ಆ ಮೇಲೆ ಹೆಚ್ಚು ತೃಪ್ತರಾದರು. (ಅಂದರೆ ಮುಕ್ತರಾದರು.) 'ಶೃತೇ' ಅಂದರೆ ಜ್ಞಾನವು ಪರಿಪಕ್ವವಾಗುತ್ತಿರಲು. ॥ (b) 'ಯಸ್ಮಿನ್' ಅಂದರೆ ಯಾವ ವಿಷ್ಣುವಿನಲ್ಲಿ, ನಾಮಾರ್ಥಭೂತಗಳಾದ ಗುಣಕರ್ಮಾದಿಗಳನ್ನು ತಿಳಿದು ಆ ಜ್ಞಾನವು ಪರಿಪಕ್ವವಾಗುತ್ತಿರಲು ಮುಕ್ತರಾದರೋ, ಆ ವಿಷ್ಣುವಿನಲ್ಲಿಯೇ ದೇವತೆಗಳು ಸಮಸ್ತಗಳಿಂದೊಡಗೂಡಿದವರು ಆಗುವರು. ಈ ಅರ್ಥವು ನಿಶ್ಚಿತವು ಎಂದು ತೋರಿಸುವುದಕ್ಕೋಸ್ಕರ ಪುನಃ ಹೇಳಿರುವುದು. ॥ (c) 'ಸರ್ವಯುಜೋ ಭವಂತಿ' ಎಂದರೆ ಮನಸ್ಸು ಮತ್ತು ಕರ್ಮಗಳಿಂದ ಆ ವಿಷ್ಣುವಿನಲ್ಲಿಯೇ ಕೂಡಿದವರು ಆಗುತ್ತಾರೆ. ಕ್ರೂರವೆಂದರೆ ಅರ್ಥದಿಂದ ಕಠಿಣವಾದುದು. ಉಲ್ಬಣವೆಂದರೆ ಕಿವಿಗೆ ಅಪ್ರಿಯ ಅಂದರೆ ಶಬ್ದದಿಂದ ಕಠಿಣವು ಎಂದು ಶಬ್ದನಿರ್ಣಯದಲ್ಲಿ.

**ಭಾ** ॥ **(a)** ಅಸ್ತ್ರೀಪುಮಾನ್ಬ್ರುವನ್ ಅಸ್ತ್ರೀಪುಮಾಂಸಂ ಬ್ರುವನ್ । ಸಪ್ತಸುಪ್ರಥಮೇತಿ ಸೂತ್ರಾತ್ । **(b)** ಸ್ವಾತಂತ್ರ್ಯೇ ವಿಭಕ್ತಿವ್ಯತ್ಯಯ ಇತಿ ಚ ॥

ಸ್ವತಂತ್ರೋ ಹಿ ಭಗವಾನ್ ತತ್ಪ್ರೇರಿತ ಏವ ತಂ ವದತೀತ್ಯಭಿಪ್ರಾಯಃ । (c) ವದನ್ವದತಿ ವದನ್ನೇವ ವದತಿ ॥ ವದನ್ನೇವ ನ ವದತಿ । ಭವತ್ಯೇವ ಹಿ ಭಗವಾನ್ ಸ್ತ್ರೀರೂಪಃ ಪುಂರೂಪಶ್ಚ ॥ ತಸ್ಮಾದ್ವದತ್ಯೇವ । ಅಪ್ರಸಿದ್ಧತ್ವಾನ್ನ ವದತಿ ಚ ॥

ಅ ॥ (a) 'ಅಸ್ತ್ರೀಪುಮಾನ್ ಬ್ರುವನ್' ಅಂದರೆ ಸ್ತ್ರೀರೂಪನೂ, ಪುಂರೂಪನೂ ಆಗುವುದಿಲ್ಲವೆಂದು ಹೇಳುವನು. ಏಳು ವಿಭಕ್ತಿಗಳಲ್ಲಿಯೂ ಪ್ರಥಮಾ ವಿಭಕ್ತಿಯು ಎಂಬೀ ಸೂತ್ರದಿಂದ 'ಅಸ್ತ್ರೀಪುಮಾಂಸಂ' ಎಂದು ದ್ವಿತೀಯಾವಿಭಕ್ತಿಯ ಬದಲಾಗಿ 'ಅಸ್ತ್ರೀಪುಮಾನ್' ಪ್ರಥಮಾ ವಿಭಕ್ತಿಯು. ॥ (b) ಸ್ವಾತಂತ್ರ್ಯರೂಪವಾದ ಅರ್ಥವು (ತಿಳಿಸಿಕೊಡುವಾಗ) ವಿಭಕ್ತಿಯು ಹೆಚ್ಚುಕಡಿಮೆಯಾಗುತ್ತದೆ. ಹೀಗೂ ಉಕ್ತವಾಗಿಯದೆ. ಅಂದರೆ ('ಅಸ್ತ್ರೀಪುಮಾಂಸಂ ವದನ್' ಎಂದು ಕರ್ಮತ್ವವನ್ನು ಹೇಳುವ ಬದಲಿಗೆ 'ಅಸ್ತ್ರೀಪುಮಾನ್' ಎಂದು ಪರಮಾತ್ಮನಿಗೆ ಕರ್ತೃತ್ವವನ್ನು ಹೇಳಿರುವುದರಿಂದ) ಸ್ವತಂತ್ರನಾದವನು ಶ್ರೀ ಪರಮಾತ್ಮನೇ, ಆ ಪರಮಾತ್ಮನಿಂದ ಪ್ರೇರಿಸಲ್ಪಟ್ಟವನಾಗಿಯೇ ಆ ಹರಿಯನ್ನು (ಆ ರೀತಿಯಾಗಿ) ಹೇಳುತ್ತಾನೆ ಎಂದು ಅಭಿಪ್ರಾಯವು. ॥ (c) 'ವದನ್ ವದತಿ' ಅಂದರೆ ಹೇಳುವವನೇ ಹೇಳುತ್ತಾನೆ. (ಅಂದರೆ (೧) ಈ ಹರಿಯನ್ನು, ಸ್ತ್ರೀರೂಪನೂ ಪುಂರೂಪನೂ ಆಗಿರುತ್ತಾನೆ. ಎಂದು ಹೇಳುವವನು ಹೇಳುತ್ತಾನೆ. (೨) ಸ್ತ್ರೀರೂಪನೂ, ಪುಂರೂಪನೂ ಅಲ್ಲ, ಎಂದು ಹೇಳುವವನೂ ಹೇಳುತ್ತಾನೆ.) ಹೇಳುವವನೇ ಹೇಳುವುದಿಲ್ಲ. (ಅಂದರೆ (೩) ಶ್ರೀ ಹರಿಯು ಸ್ತ್ರೀರೂಪನೂ, ಪುಂರೂಪನೂ ಆಗಿರುತ್ತಾನೆ ಎಂದು ಹೇಳುವವನೂ ಕೂಡ ಹೇಳುವುದೇ ಇಲ್ಲ.) (ಈ ಮೂರು ಅರ್ಥವು ಪರಸ್ಪರ ವಿರುದ್ಧವಾದ ಪ್ರಯುಕ್ತ ಹೇಗೆ ಸಂಗತವಾಗುತ್ತದೆ. ಎಂದರೆ- ಅದನ್ನು ಕ್ರಮವಾಗಿ ಉಪಪಾದನೆ ಮಾಡುತ್ತಾರೆ.) ಯಾವ ಕಾರಣದಿಂದ ಶ್ರೀ ಪರಮಾತ್ಮನು ಸ್ತ್ರೀರೂಪನೂ, ಪುಂರೂಪನೂ ಕೂಡ ಆಗುತ್ತಾನೋ, ಆದುದರಿಂದ ಸ್ತ್ರೀರೂಪನೂ ಪುಂರೂಪನೂ ಎಂದು ಹೇಳುವವನು ಹೇಳುತ್ತಾನೆಯೇ ಸರಿ. ಪ್ರಸಿದ್ಧ ಲೌಕಿಕ ಸ್ತ್ರೀಪುರುಷರಿಂದ ವಿಲಕ್ಷಣನಾದುದರಿಂದ (ಸ್ತ್ರೀರೂಪನೂ, ಪುಂರೂಪನೂ ಅಲ್ಲವೆಂದು ಹೇಳುವವನೂ) ಹೇಳುತ್ತಾನೆಯೇ ಸರಿ. ಸಂಪೂರ್ಣವಾಗಿ ವ್ಯವಹರಿಸಲಿಕ್ಕೆ ಅಸಾಧ್ಯನಾದುದರಿಂದ (ಸ್ತ್ರೀರೂಪನೂ, ಪುಂರೂಪನೂ ಎಂದು ಹೇಳುವವನೂ ಹೇಳುವುದೇ ಇಲ್ಲ.) ॥

**ಭಾ॥ (a)** ಸ್ತ್ರೀರೂಪಶ್ಚೈವ ಪುಂರೂಪೋ ಯಸ್ಮಾನ್ನಾರಾಯಣಃ ಸ್ಥಿತಃ । ಪುಮಾಂಸ್ತ್ರೀಚೇತಿ ವಾಚ್ಯೋಽತೋ ವೈಲಕ್ಷಣ್ಯಾನ್ನ ಚೋಚ್ಯತೇ ॥ **(b)** ವಿಷ್ಣೋರ್ನಪುಂಸಕಾಕಾರೋ ನೈವಾಸ್ತಿ ಕ್ವಚನ ಪ್ರಭೋಃ । ತಥಾಽಪ್ಯರಾಗಾಕೃಪ್ತತ್ವಾತ್ತಚ್ಛಬ್ದೈರಪಿ ಕಥ್ಯತೇ ॥ ಇತಿ ಗಾರುಡೇ ॥

ಅ ॥ (a) ಯಾವ ಕಾರಣದಿಂದ ನಾರಾಯಣನು ಸ್ತ್ರೀರೂಪನೂ, ಪುಂರೂಪನೂಕೂಡ ಆಗುತ್ತಾನೋ, ಆದುದರಿಂದ ಪುರುಷರೂಪನೂ, ಸ್ತ್ರೀರೂಪನೂ ಎಂದು ಹೇಳಲರ್ಹನು. (ಇದು ಒಂದನೇ ಅರ್ಥದಲ್ಲಿ ಪ್ರಮಾಣವು.) ವೈಲಕ್ಷಣ್ಯದಿಂದ (ಅಂದರೆ ಲೌಕಿಕ ಸ್ತ್ರೀಪುರುಷರಿಂದ ವಿಲಕ್ಷಣನಾದುದರಿಂದ) ಪುರುಷರೂಪನೂ, ಸ್ತ್ರೀರೂಪನೂ ಅಲ್ಲವೆಂದೂ ಹೇಳಲರ್ಹನು. (ಇದು ಎರಡನೇ ಅರ್ಥದಲ್ಲಿ ಪ್ರಮಾಣವು.) ವಿಲಕ್ಷಣನಾದುದರಿಂದ (ಅಂದರೆ ಅಪ್ರಸಿದ್ಧನಾದುದರಿಂದ) ಪುರುಷರೂಪನೂ, ಸ್ತ್ರೀರೂಪನೂ ಎಂದು ಹೇಳಲರ್ಹನಾದರೂ ಹೇಳಲ್ಪಡುವುದಿಲ್ಲ. (ಇದು ಮೂರನೇ ಅರ್ಥದಲ್ಲಿ ಪ್ರಮಾಣವು.) ॥ (b) ಯದ್ಯಪಿ ಸರ್ವಸಮರ್ಥನಾದ ಶ್ರೀ ಹರಿಗೆ

ನಪುಂಸಕಾಕಾರವು ಎಲ್ಲಿಯೂ ಇರುವುದೇ ಇಲ್ಲ. ಆದಾಗ್ಯೂ (ನಪುಂಸಕದಂತೆ ಸ್ತ್ರೀಪುರುಷರ) ಅನುರಾಗದಿಂದ ಸೆಳೆಯಲ್ಪಡದಿರುವ ಮನಸ್ಸುಳ್ಳವನಾದುದರಿಂದ (ಅಂದರೆ ಸ್ತ್ರೀಪುರುಷರ ಅನುರಾಗಕ್ಕೆ ವಿಷಯನಲ್ಲದಿರುವುದರಿಂದ) ಆ ನಪುಂಸಕಲಿಂಗಶಬ್ದಗಳಿಂದಲೂ ಹೇಳಲ್ಪಡುತ್ತಾನೆ. ಎಂದು ಗಾರುಡಪುರಾಣದಲ್ಲಿ.

ಭಾ॥ **(a)** ನಾರಾಯಣಾದಿರೂಪೇಣ ಪಂಚಧೈವ ಹರಿಃ ಸ್ಥಿತಃ । ತನ್ನಾಮಭಿಶ್ಚ ಸ್ತ್ರೀರೂಪೈಃ ಸಮೇತಿ ಸ್ವೈಃ ಸ ಕೇಶವಃ ॥ **(b)** ಯತ್ಸ್ಯಂದನಂ ವಹಂತ್ಯೇತೇ ದೇವಾ ಭಾರ್ಯಾಸಮನ್ವಿತಾಃ । ಅಧಿದೈವೇ ತಥಾಽಧ್ಯಾತ್ಮೇ **(c)** ಜೀವದೇಹಾತ್ಮಕಂ ರಥಂ ॥ ಸ ಸೂರ್ಯಃ ಸೂರ್ಯಭಾರ್ಯಾ ಚ ಚಕ್ಷುರ್ದ್ವಯಸಮಾಶ್ರಿತೌ । ವಹತೋಽಶ್ವಾತ್ಮಕೌ **(d)** ದೇಹಂ ನಾರಾಯಣ ರಥಾತ್ಮಕಂ ॥ ಸೋಮಶ್ಚ ರೋಹಿಣೀ ಚೈವ ದಕ್ಷವಾಮಶ್ರುತಿ ಸ್ಥಿತೌ । ಉಭಯೋಃ ಪಕ್ಷಯೋಃ ಸ್ಥಿತ್ವಾ ವಹತೋಽಶ್ವಾತ್ಮಕೌ ತಯೋಃ ॥

ಅ ॥ (a) ಶ್ರೀ ಹರಿಯು ನಾರಾಯಣ ಮೊದಲಾದ ಸ್ವರೂಪದಿಂದ ಐದುಪ್ರಕಾರನಾಗಿಯೇ ಇದ್ದಾನೆ. । ಆ ಕೇಶವನು ನಾರಾಯಣಮೊದಲಾದ ಹೆಸರುಗಳುಳ್ಳ ತನ್ನ ಸ್ತ್ರೀರೂಪಗಳಿಂದಲೇ ಕ್ರೀಡಿಸುತ್ತಾನೆ. ॥ (b) ಅಧಿದೈವದಲ್ಲಿ ಹಾಗೆಯೇ ಅಧ್ಯಾತ್ಮದಲ್ಲಿಯೂ ಈ ದೇವತೆಗಳು ತಮ್ಮ ಹೆಂಡತಿಯರಿಂದೊಡಗೂಡಿದವರಾಗಿ ಯಾವ ರಥವನ್ನು ಹೊರುತ್ತಾರೆ. ॥ (c) ಅಧಿದೈವದಲ್ಲಾದರೂ ಆ ಸೂರ್ಯನು ಸೂರ್ಯನ ಹೆಂಡತಿಯಾದ ಸಂಜ್ಞೆಯೂ ಪ್ರಸಿದ್ಧವಾದ ರಥವನ್ನೇ ಅಶ್ವರೂಪರಾಗಿ (ಎದುರಿಸಲ್ಲಿ) ಹೊರುತ್ತಾರೆ. ಹಾಗೆಯೇ ಅಧ್ಯಾತ್ಮದಲ್ಲಿ, ಅವರಿಬ್ಬರು ಜೀವನ ದೇಹರೂಪವಾದ ರಥವನ್ನೂ ಎರಡು ಕಣ್ಣುಗಳನ್ನೂ ಆಶ್ರಯಿಸಿದವರಾಗಿ ಹೊರುತ್ತಾರೆ. ॥ (d) ಹಾಗೆಯೇ ನಾರಾಯಣನಿಗೆ ರಥರೂಪವಾದ ಶರೀರವನ್ನು ಚಂದ್ರನೂ, ರೋಹಿಣಿಯೂ ಕೂಡ ಬಲ, ಎಡಕಿವಿಗಳಲ್ಲಿ ಇದ್ದವರಾಗಿ ಬಲ, ಎಡಪಾರ್ಶ್ವಗಳಲ್ಲಿ ಇದ್ದು ಅಶ್ವರೂಪರಾಗಿ ಹೊರುತ್ತಾರೆ.

ಭಾ॥ **(a)** ಉದ್ಧಾರಣಾರ್ಥಮೇತೇಷಾಮುಮಾ ವಾಚಿ ಸಮಾಸ್ಥಿತಾ । ನಾಗಾಕಾರೈವ ರಶ್ಮಿತ್ವಮಗಮದ್ವೈಷ್ಣವೇ ರಥೇ ॥ **(b)** ಮನಃ ಸ್ಥಿತಃ ಶಿವಶ್ಚಾತ್ರ ಮನೋ ನಾಮಾ ಮಹಾಬಲಃ । ಅಭವತ್ಸಾರಥಿರ್ವಿಷ್ಣೋಃ **(c)** ವಿಷ್ಣುರ್ವಾಯುಶ್ಚ ತಂ ರಥಂ ॥ ಪ್ರಕೃಷ್ಟಾನಂದರೂಪತ್ವಾತ್ಪ್ರಾಣಾಖ್ಯಾವಧಿತಿಷ್ಠತಃ । ತಾವೇವ ಚಾಶ್ವಿನಾಮಾನೌ ಹಯಾಸ್ಯೌ ಜಗದೀಶ್ವರೌ ॥ ಇತ್ಯಾದಿ ಗಾರುಡೇ ॥

ಅ ॥ (a) (ಅಧ್ಯಾತ್ಮರಥದಲ್ಲಿ) ಈ ಕಣ್ಣುಮೊದಲಾದ ಇಂದ್ರಿಯಗಳನ್ನು, ವೈಷ್ಣವ ರಥದಲ್ಲಾದರೂ ಈ ಅಶ್ವರೂಪರಾದ, ಸೂರ್ಯಾದಿಗಳನ್ನು ಸೆಳೆಯುವುದಕ್ಕೋಸ್ಕರ ಪಾರ್ವತಿಯು ವಾಗಿಂದ್ರಿಯದಲ್ಲಿ ಚೆನ್ನಾಗಿ ಆಶ್ರಿತಳಾಗಿ ಸರ್ಪಾಕಾರವಾಗಿಯೇ ರಶ್ಮಿತ್ವವನ್ನು (ಕಡಿವಾಣತನವನ್ನು) ಹೊಂದಿದಳು. ॥ (b) ಹಾಗೆಯೇ ರಥದಲ್ಲಿ, ಮನಸ್ಸಿನಲ್ಲಿ ಇರತಕ್ಕವನೂ, ಮನೋನಾಮಕನೂ, ಹೆಚ್ಚು ಸಾಮರ್ಥ್ಯವುಳ್ಳವನೂ ಆದ ರುದ್ರನು ವಿಷ್ಣುವಿಗೆ ಸಾರಥಿಯಾದನು. ॥ (c) ಉತ್ಕೃಷ್ಟ ಆನಂದಸ್ವರೂಪರಾದುದರಿಂದ ಪ್ರಾಣರೆಂದು ಹೆಸರುಳ್ಳ ವಿಷ್ಣು

ವಾಯುಗಳು ಆ ರಥವನ್ನು ಏರುತ್ತಾರೆ. ॥ ಆ ಹರಿವಾಯುಗಳೇ ಅಶ್ವಿನಾಮಕರೂ, ಕುದುರೆ ಯಂತೆ ಮುಖವುಳ್ಳವರೂ, ಜಗತ್ತಿಗೆ ನಿಯಾಮಕರೂ ಆಗಿರುತ್ತಾರೆ. ಇದೇ ಮೊದಲಾದ ವಿಷಯವು ಗಾರುಡದಲ್ಲಿ.

ಭಾ॥ (a) ತಸ್ಯೋಽಪನಿಷತ್ಸತ್ಯಸ್ಯ ಸತ್ಯಮಿತಿ ಪ್ರಾಣಾ ವೈ ಸತ್ಯಂ ತೇಷಾಮೇಷ ಸತ್ಯಮಿತಿ ಚ ಶ್ರುತಿಃ । (b) ಸರ್ವಸಾಧುಗುಣತ್ವಾತ್ತು ವಾಯುಃ ಸತ್ಯ ಇತೀರ್ಯತೇ ॥ ತಸ್ಯಾಪಿ ಸತ್ಯತಾ ದಾತಾ ಸಾಧುಪೂರ್ಣಗುಣೋ ಹರಿಃ । (c) ಸತ್ಯಸ್ಯ ಸತ್ಯ ಏತಸ್ಮಾತ್ ಸ್ತ್ರೀಪುಂರೂಪಃ ಸ ಕೇಶವಃ ॥ ಯಸ್ಮಿನ್ ಸ್ವಾತ್ಮನಿ ಯುಕ್ತಃ ಸ ರಮತೇ ಸ್ತ್ರೀಪುಮಾತ್ಮನಾ । (d) ಮುನಿಗಂಧರ್ವ ಪಿತ್ರಾದ್ಯೈರ್ನ ತತ್ಪ್ರಾಪ್ಯಂ ಕಥಂಚನ ॥ ಆಪ್ನುವಂತಿ ಸುರಾಃ ಸರ್ವೇ ತದ್ರೂಪಂ ಜಾಜ್ವಲತ್ಸದಾ । ಅರ್ಧನಾರೀ ಪುಮಾಕಾರಂ ॥

ಅ॥ (a) ಆ ಪರಮಾತ್ಮನ ರಹಸ್ಯಪ್ರಮೇಯವು. ಸಾಧುಗುಣಪರಿಪೂರ್ಣನಾದ ಮುಖ್ಯಪ್ರಾಣನಿಗೂ ಸತ್ಯತ್ವವನ್ನು ಕೊಡುವವನು. ಪ್ರಾಣಶಬ್ದವಾಚ್ಯರೆಲ್ಲರೂ ಸತ್ಯನಾಮ ಕರು. ಅವರೆಲ್ಲರಿಗೂ ಈ ಪರಮಾತ್ಮನು ಸತ್ಯತನವನ್ನು ಕೊಡುವವನು. ಹೀಗೂ ಶ್ರುತಿ ಇದೆ. ॥ (b) ಎಲ್ಲಾ ಸಾಧುಗುಣಗಳುಳ್ಳವನಾದುದರಿಂದಲೇ ಮುಖ್ಯಪ್ರಾಣನು ಸತ್ಯನೆಂದು ಹೇಳಲ್ಪಡುತ್ತಾನೆ. ॥ ಶ್ರೀ ಹರಿಯು ಆ ಮುಖ್ಯಪ್ರಾಣನಿಗೂ ಸತ್ಯತ್ವವನ್ನು ಕೊಡತಕ್ಕವನೂ, ನಿರ್ದುಷ್ಟ ಪರಿಪೂರ್ಣಗುಣಗಳುಳ್ಳವನೂ ಆಗಿರುತ್ತಾನೆ. ॥ (c) ಈ ಕಾರಣದಿಂದ ಸತ್ಯ ನಿಗೂ ಸತ್ಯತ್ವವನ್ನು ಕೊಡುವ ಆ ಕೇಶವನು ಸ್ತ್ರೀರೂಪನೂ, ಪುಂರೂಪನೂ ಆಗಿರುತ್ತಾನೆ. ಆ ಹರಿಯು ಯಾವ ತನ್ನ ರೂಪದಲ್ಲಿಯೇ ಸ್ತ್ರೀಪುಂರೂಪದಿಂದ ಕೂಡಿದವನಾಗಿ ಕ್ರೀಡಿಸು ತ್ತಾನೆ. ॥ (d) ಆ ಭಗವದ್ರೂಪವು ಮುನಿಗಳೂ, ಗಂಧರ್ವರೂ, ಪಿತೃದೇವತೆಗಳೂ ಇವರೇ ಮೊದಲಾದವರಿಂದ ಯಾವ ಪ್ರಕಾರದಿಂದಲೂ ಹೊಂದಲಸಾಧ್ಯವು. ॥ ಎಲ್ಲಾ ದೇವತೆಗಳೂ ಯಾವಾಗಲೂ ಪ್ರಕಾಶಿಸಿಕೊಂಡಿರತಕ್ಕುದೂ, ಅರ್ಧನಾರೀ ಪುರುಷಾಕಾರವಾದದೂ ಆದ ಆ ರೂಪವನ್ನು ಹೊಂದುತ್ತಾರೆ.

ಭಾ॥ (a) ತಸ್ಯ ವಾಮಸ್ಥಿತಾನಿ ಚ । ಸ್ತ್ರೀರೂಪಾಣಿ ತು ಸರ್ವಾಣಿ ವಿಷ್ಣೋ ರತ್ಯದ್ಭುತಾನಿ ಚ ॥ ವಿಷ್ಣೋರ್ಯಾನಿ ತು ಪುಂರೂಪಾಣ್ಯಾಸ್ಥಿತಾನ್ಯಸ್ಯ ದಕ್ಷಿಣೇ । (b) ತಾನ್ಯಸ್ಯೈವ ತು ರೂಪಾಣಿ ಯುಜ್ಯಂತೇಽತ್ರ ಪರಸ್ಪರಂ ॥ ಏಷ ನಾರಾಯಣೋ ದೇವೋ ಹ್ಯರ್ಧನಾರೀ ಪುಮಾತ್ಮಕಃ । (c) ಸರ್ವೇ ದೇವಾಸ್ಸಭಾರ್ಯಾಶ್ಚ ತಂ ಪ್ರಾಪ್ಯ ಪುರುಷೋತ್ತಮಂ ॥ ಏಕೀಭಾವಂ ಸ್ವಭಾರ್ಯಾಭಿರರ್ಧನಾರೀಪುಮಾತ್ಮನಾ । ಪ್ರಾಪ್ಯೈವೋಪಾಸತೇ ವಿಷ್ಣುಂ ಮುಕ್ತಾಃ ಸಂಸಾರಸಾಗರಾತ್ ॥

ಅ॥ (a) ಆ ವಿಷ್ಣುವಿನ ಅತ್ಯಾಶ್ಚರ್ಯಕರಗಳಾದ ಎಲ್ಲಾ ಸ್ತ್ರೀರೂಪಗಳೂ ಎಡ ಭಾಗದಲ್ಲಿರುವುವುಗಳು. ॥ ಈ ವಿಷ್ಣುವಿನ ಯಾವ ಪುರುಷರೂಪಗಳೋ, ಅವುಗಳು ಬಲಭಾಗ ದಲ್ಲಿ ಇರುತ್ತವೆ. ॥ (b) ಇಲ್ಲಿ ಈ ಹರಿಯ ಆ ರೂಪಗಳೇ (ಅಂದರೆ ಸ್ತ್ರೀರೂಪದ ಅರ್ಧವೂ ಪುರುಷ ರೂಪದ ಅರ್ಧವೂ ಕೂಡ) ಪರಸ್ಪರವಾಗಿ ಕ್ರೀಡಿಸುತ್ತವೆ. ಈ ಕ್ರೀಡಾದಿಗುಣವಿಶಿಷ್ಟ ನಾದ ನಾರಾಯಣನು ಅರ್ಧನಾರೀ ಪುರುಷರೂಪನಾಗಿರುತ್ತಾನೆ [ತಾ ॥ ಅರ್ಧನಾರೀ

ಪುರುಷಾಕಾರನಾದ ನಾರಾಯಣನ, ವಾಸುದೇವ ನಾರಾಯಣಿರೂಪಗಳಿಗೂ, ನಾರಾಯಣ, ವಾಸುದೇವೀರೂಪಗಳಿಗೂ, ಕ್ರೀಡೆಯು ಮತ್ತು ಎಲ್ಲಾ ರೂಪಗಳೂ ಏಕಕಾಲದಲ್ಲಿಯೇ ಕ್ರೀಡಿಸುತ್ತವೆ. ಅಂತಹ ರಮಣವು ಅತ್ಯಾಶ್ಚರ್ಯಕರವಾದುದರಿಂದ ರೂಪಗಳು ಅತ್ಯಾಶ್ಚರ್ಯಕರಗಳಾಗಿವೆ. ಮತ್ತು ಒಂದು ರೂಪವು ಅರ್ಧದಲ್ಲಿ ಬಿಳುಪು, ಅರ್ಧದಲ್ಲಿ ಕೆಂಪು. ಮತ್ತೊಂದು ರೂಪವು ಅರ್ಧ ಬಿಳುಪು, ಅರ್ಧ ಪೀತವು. ಇನ್ನೊಂದು ಅರ್ಧ ಸ್ತ್ರೀಭೂತವಾದ ವ್ಯಾಸಾತ್ಮಕವು, ಅರ್ಧಪುರುಷಭೂತನಾರಾಯಣಾತ್ಮಕವು. ಮತ್ತೊಂದು ಅರ್ಧಪುರುಷ ಮತ್ಸ್ಯಾತ್ಮಕವು, ಅರ್ಧ ಸ್ತ್ರೀಭೂತಕೃಷ್ಣಸ್ವರೂಪವು. ಇನ್ನೊಂದು ಅರ್ಧ ಸ್ತ್ರೀಭೂತಹಯಗ್ರೀವಸ್ವರೂಪವು, ಅರ್ಧ ಪುರುಷಹಯಗ್ರೀವಸ್ವರೂಪವು. ಇದೇ ಮೊದಲಾದ ಪ್ರಕಾರ ಅನೇಕಾನೇಕ ವರ್ಣಗಳು ಇರುವುದರಿಂದ ಅತ್ಯಾಶ್ಚರ್ಯಕರಗಳಾದ ರೂಪಗಳು ಪರಸ್ಪರವಾಗಿ ಕ್ರೀಡಿಸುತ್ತವೆ.] ॥ (c) ಹೆಂಡಂದಿಯರಿಂದೊಡಗೂಡಿದ ಎಲ್ಲಾ ದೇವತೆಗಳೂ ಆ ಪುರುಷೋತ್ತಮನನ್ನು ಪ್ರಾಪಿಸಿ ಒಂದೇ ಸ್ಥಾನವನ್ನು ಹೊಂದಿದ ತಮ್ಮ ತಮ್ಮ ಹೆಂಡಂದಿಯರಿಂದೊಡಗೂಡಿ ಅರ್ಧನಾರೀ ಪುರುಷಾಕಾರದಿಂದ ಏಕೀಭಾವವನ್ನು ಹೊಂದಿಯೇ ಸಂಸಾರವೆಂಬ ಸಮುದ್ರದಿಂದ ಬಿಡುಗಡೆ ಹೊಂದಿದವರಾಗಿ ವಿಷ್ಣುವನ್ನು ಧ್ಯಾನಿಸುತ್ತಾರೆ.

ಭಾ॥ **(a)** ಮೋದಂತೇ ಚ ರಮಂತೇ ಚ ವಿಭಾಗಂ ಚೇಚ್ಛಯಾಪ್ನುಯುಃ । ಬಹುಧಾ ಚ ಭವಂತ್ಯೇತೇ **(b)** ಸ್ತ್ರೀಪುಮಾತ್ಮಪೃಥಕ್ತ್ವತಃ ॥ ಪ್ರಸಾದಾದ್ವಾಸುದೇವಸ್ಯ ಭಾಗಃ ಸ್ತ್ರೀಪುಂಸ್ವರೂಪಿಣಃ । **(c)** ತೇನೈವ ನಿಯತಾ ನಿತ್ಯಂ ತದ್ವಶಾಸ್ತತ್ಪರಾಯಣಾಃ ॥ ರಮಂತೇ ನಾನ್ಯಗವ್ಯೋಽಸೌ ದೇಶೋ ವಿಷ್ಣೋಃ ಪರಾತ್ಮನಃ ॥

ಅ ॥ (a) ಅಲ್ಲಿ ಈ ದೇವತೆಗಳು ಆನಂದವನ್ನೇ ಹೊಂದುತ್ತಿರುತ್ತಾರೆ; ಕ್ರೀಡಿಸುತ್ತಾ ಇರುತ್ತಾರೆ; ಇಚ್ಛೆಯಿಂದಲೇ ವಿಭಾಗವನ್ನು ಹೊಂದುತ್ತಾರೆ; ಬಹುಪ್ರಕಾರವಾಗಿ (ಅನಂತ ರೂಪಗಳುಳ್ಳವರು) ಆಗುತ್ತಾರೆ. ॥ (b) ಈ ದೇವತೆಗಳು ವಾಸುದೇವನ ಅನುಗ್ರಹದಿಂದ ಸ್ತ್ರೀಪುಮಾತ್ಮಕ ರೂಪದಿಂದ ಪ್ರತ್ಯೇಕವಾಗಿ ಭಾಗಗಳಿಂದ ಸ್ತ್ರೀಪುರುಷರ ಸ್ವರೂಪವುಳ್ಳವರೇ ಬಹುಪ್ರಕಾರವಾಗಿ ಆಗುತ್ತಾರೆ. (ಅಂದರೆ ಅರ್ಧನಾರೀರೂಪದಿಂದ ವಿಶಿಷ್ಟಗಳಾದ ಅರ್ಧನಾರೀ ರೂಪಗಳು ಅನಂತಗಳಿವೆ.) ॥ (c) ಈ ದೇವತೆಗಳು ಆ ಪರಮಾತ್ಮನಿಂದಲೇ ನಿತ್ಯದಲ್ಲಿಯೂ ನಿಯಮಿಸಲ್ಪಟ್ಟವರೂ, ಆತನ ಅಧೀನರೂ ಆತನಲ್ಲಿಯೇ ಆಸಕ್ತರೂ ಆಗಿ ಕ್ರೀಡಿಸುತ್ತಾ ಇರುತ್ತಾರೆ. ಸರ್ವೋತ್ತಮನಾದ ವಿಷ್ಣುವಿನ ಈ ದೇಶವು ಇತರರಿಂದ ಹೊಂದಲಸಾಧ್ಯವು.

ಭಾ॥ **(a)** ಸ್ತ್ರೀಪುಂರೂಪೇಣ ಯುಕ್ತಂ ತದ್ವಿಷ್ಣ್ವಾಖ್ಯಂ ಪರಮಕ್ಷರಂ । ಅಕ್ಷರಾದೇವ ಪರಮಾತ್ಪುಂಸೋ ನಾರಾಯಣಾಭಿಧಾತ್ ॥ ಆಗಚ್ಛಂತಿ **(b)** ತದ್ವೈತೇ ಚ ದೇವಾ ಭಾರ್ಯಾಸಮನ್ವಿತಾಃ । ವಹಂತ್ಯಶ್ವಾದಿರೂಪೇಣ ರಥಸ್ಥಂ ಪರಮಂ ವಪುಃ ॥ ತತ್ಸರ್ವದೇವೈಃ ಪ್ರಾಪ್ಯಂ ಚ ನಾನ್ಯೈಃ ಕಥಮಪಿ ಕ್ವಚಿತ್ । **(c)** ಮಿತಾದಿಪಂಚರೂಪಂ ಯದ್ವಾಕ್ಯಂ ಲೋಕೇಽಥ ವಾ ಶ್ರುತೌ ॥ ನಾರಾಯಣಸ್ಯ ನಾಮ್ನೈತದಿತಿ ಜಾನಂತಿ ದೇವತಾಃ ॥

ಅ ॥ (a) ಸರ್ವೋತ್ತಮನೂ ಪುರುಷರೂಪನೂ ನಾರಾಯಣನೆಂದು ಹೆಸರುಳ್ಳವನೂ ಅಕ್ಷರಶಬ್ದವಾಚ್ಯನೂ ಆದ ಶ್ರೀ ಹರಿಯಿಂದಲೇ ಆ ವಿಷ್ಣುವೆಂದು ಹೆಸರುಳ್ಳವನೂ ಸರ್ವೋತ್ತಮನೂ ಅಕ್ಷರಶಬ್ದವಾಚ್ಯನೂ ಆದ ಪರಬ್ರಹ್ಮನು ಸ್ತ್ರೀಪುಂರೂಪದಿಂದೊಡಗೂಡಿದವನಾಗಿ

ಹೊರಗೆ ಬರುತ್ತಾನೆ. ॥ (b) ಆಗ ಈ ದೇವತೆಗಳು ಹೆಂಡಂದಿಯರಿಂದೊಡಗೂಡಿದವರಾಗಿ ಅಶ್ವ, ಸಾರಥಿ, ಮೊದಲಾದ ಸ್ವರೂಪದಿಂದ ರಥದಲ್ಲಿರತಕ್ಕುದೂ, ಸರ್ವೋತ್ತಮವೂ ಆದ ವಿಷ್ಣುಶರೀರವನ್ನು ಹೊರುತ್ತಾರೆ. ಆ ಶರೀರವು ಎಲ್ಲಾ ದೇವತೆಗಳಿಂದಲೂ ಹೊಂದಲು ಶಕ್ಯವಾದುದು. ಇತರರಿಂದ ಎಲ್ಲಿಯೂ ಹೇಗಾದರೂ ಹೊಂದಲು ಸಾಧ್ಯವಿಲ್ಲ. ॥ (c) ಮಿತ ಮೊದಲಾದ ಐದು ರೂಪವುಳ್ಳ ಯಾವುದೊಂದು ವಾಕ್ಯವು ಲೋಕದಲ್ಲಿ ಅಥವಾ ಶ್ರುತಿಯಲ್ಲಿ ಅದೆಯೋ, ಅದೆಲ್ಲವೂ ನಾರಾಯಣನಿಗೇನೇ ಹೆಸರು. ಎಂದು ದೇವತೆಗಳು ತಿಳಿಯುತ್ತಾರೆ. (ತಿಳಿದು ಮುಕ್ತಿಯನ್ನು ಹೊಂದುತ್ತಾರೆ).

ಭಾ॥ **(a)** ಮನೋವಾಕ್ಕರ್ಮಭಿಸ್ತಸ್ಮಾದ್ಯೋಗಮಾಪ್ನುವಂತಿ ತತ್ರ ತೇ। ಸರ್ವಶಬ್ದಾನ್ಹರೌ ನೇತುಂ ಕಸ್ಯ ದೇವಾನೃತೇ ಬಲಂ॥ **(b)** ವಾಯ್ವಂತಾಸ್ತಾರತಮ್ಯೇನ ವಿಷ್ಣುನಾಮಾರ್ಥವೇದಿನಃ। ಸಮ್ಯಗ್ವೇತ್ತಾ ಮಾರುತೋsತ್ರ ತಸ್ಮಾನ್ಮುಕ್ತೇಭ್ಯ ಏವ ಚ ॥ ಸುರೇಭ್ಯೋsಧಿಕಮಾನಂದಂ ನಿತ್ಯಂ ಭುಂಕ್ತೇ ಹರೇರನು। ಇತ್ಯಾದ್ಯರ್ಧನಾರೀನಾರಾಯಣತಂತ್ರೇ॥

ಅ॥ (a) (ಯಾವುದರಿಂದ ಎಲ್ಲಾ ವೇದಗಳಿಗೂ ನಾರಾಯಣನೇ ಅರ್ಥಭೂತನು ಎಂದು ತಿಳಿದು ಮುಕ್ತರಾದರೋ), ಆದುದರಿಂದ ಆ ನಾರಾಯಣನಲ್ಲಿಯೇ ಮನಸ್ಸು, ವಚನ, ಕರ್ಮಗಳಿಂದ ಆ ದೇವತೆಗಳು ವೇದ ವಿಚಾರಾಭಿಯೋಗವನ್ನು ಹೊಂದುವರು. ಎಲ್ಲಾ ಶಬ್ದಗಳನ್ನು ಶ್ರೀ ಹರಿಯಲ್ಲಿ ಹೊಂದಿಸಲಿಕ್ಕೆ ದೇವತೆಗಳನ್ನು ಹೊರತು ಯಾರಿಗೆ ಸಾಮರ್ಥ್ಯವು. ॥ (b) ಮುಖ್ಯಪ್ರಾಣನೇ ಅವಸಾನವಾಗಿವುಳ್ಳ ದೇವತೆಗಳು ತಾರತಮ್ಯವನ್ನನುಸರಿಸಿಯೇ ಶ್ರೀ ಹರಿಯ ನಾಮಾರ್ಥಗಳನ್ನು ತಿಳಿಯುತ್ತಾರೆ. ಇವರಲ್ಲಿ ಚೆನ್ನಾಗಿ ತಿಳಿಯತಕ್ಕವನು ಮುಖ್ಯಪ್ರಾಣನು. ಆದುದರಿಂದಲೇ ಆತನು ಮುಕ್ತರಾದ ಎಲ್ಲಾ ದೇವತೆಗಳಿಂದಲೂ ನಿತ್ಯದಲ್ಲಿಯೂ ಅಧಿಕವಾದ ಆನಂದವನ್ನೇ, ಶ್ರೀ ಹರಿಯನ್ನನುಸರಿಸಿ ಭೋಗಿಸುತ್ತಾನೆ. ಇದೇ ಮೊದಲಾದ ವಿಷಯವು ಅರ್ಧನಾರೀ ನಾರಾಯಣತಂತ್ರದಲ್ಲಿ ಇದೆ.

ಭಾ॥ **(a)** ಏವಂ ಸರ್ವೇ ಶಬ್ದಾ ಭಗವದ್ವಾಚಕಾ ಇತ್ಯುಕ್ತ್ವಾ ಅಕಾರೋ ವಿಶೇಷತೋ ನಾರಾಯಣವಾಚಕ ಇತ್ಯಾಹ। ಅ ಇತಿ ಬ್ರಹ್ಮೇತಿ॥ **(b)** ಇತಿ ಶಬ್ದೋsಭಿಧಾನಾಂತೇ ಯತ್ರ ವೈಶೇಷಿಕಂ ಹಿ ತತ್। ನಾಮ ಸ್ಯಾದಿತಿ ಮೇ ಸಾಕ್ಷಾನ್ನಿರ್ಣಯಃ ಸಮುದಾಹೃತಃ॥ ಇತಿ ಶಬ್ದನಿರ್ಣಯೇ॥ **(c)** ತತ್ರಾಗತಮಹಮಿತಿ। ಯಸ್ಮಾದ ಇತ್ಯಯಂ ಶಬ್ದಃ ಪ್ರಸ್ತುತಸ್ಯಾಭಾವಂ ವಿರೋಧಿನಮನ್ಯಂ ಚ ವದತಿ **(d)** ತಸ್ಮಾತ್ಪ್ರತ್ಯಕ್ಷತ್ವಾಜ್ಜೀವಜಡಾತ್ಮಕಸ್ಯ ಜಗತ ಏವಾನುಕ್ತಾವಪಿ ಪ್ರಸ್ತುತರೂಪತ್ವಾತ್ತದನ್ಯಸ್ತದ್ವಿರೋಧೀ ತತ್ರ ದೃಶ್ಯಮಾನ ದೋಷವರ್ಜಿತಶ್ಚಾಕಾರಶಬ್ದಾರ್ಥ ಇತಿ ಸಿಧ್ಯತಿ॥

॥ (a) ಪೂರ್ವೋಕ್ತಪ್ರಕಾರವಾಗಿ ಎಲ್ಲಾ ಶಬ್ದಗಳು ಶ್ರೀ ಹರಿಯನ್ನು ಪ್ರತಿಪಾದಿಸುತ್ತವೆ ಎಂದು ಹೇಳಿ ಅಕಾರವು ವಿಶೇಷಾಕಾರವಾಗಿ ನಾರಾಯಣನನ್ನು ಪ್ರತಿಪಾದಿಸುತ್ತದೆ. ಎಂದು ಹೇಳುತ್ತಾರೆ. ಅಕಾರದಿಂದ ಪೂರ್ಣವಾದ ವಸ್ತುವು (ಹೇಳಲ್ಪಡುತ್ತದೆ). ॥ (b) ಎಲ್ಲಿ ಯಾವ ಪದದ ಅಂತ್ಯದಲ್ಲಿ 'ಇತಿ' ಶಬ್ದವು ಅದೆಯೋ, ಆ ಪದವು ವಿಶೇಷಾಕಾರವಾಗಿ

ನನಗೆ ಹೆಸರು ಆಗುವುದು, ಎಂದು ಮುಖ್ಯವಾಗಿ ನಿಶ್ಚಯವು ಮಾಡಲ್ಪಟ್ಟಿದೆ. ಎಂದು ಶಬ್ದ ನಿರ್ಣಯದಲ್ಲಿ. (c) 'ತತ್ರಾಗತಮುಹಮಿತಿ' ಅಂದರೆ ಯಾವ ಕಾರಣದಿಂದ 'ಅ' ಎಂಬೀ ಶಬ್ದವು ಪ್ರಸ್ತುತದ ಅಭಾವವನು (ಇಲ್ಲದಿರುವಿಕೆಯನು) ವಿರೋಧಿಯನ್ನು, ಇತರ ವಾದುದನ್ನು, ಹೇಳುತ್ತದೋ, (d) ಆದುದರಿಂದ ಜೀವ, ಜಡರೂಪವಾದ ಪ್ರಪಂಚವನ್ನು ಹೇಳದೆ ಇದ್ದರೂ ಪ್ರತ್ಯಕ್ಷವಾದುದರಿಂದ, ಪದಾಂತರದಿಂದ, ಪ್ರಸ್ತುತಸ್ವರೂಪ ಉಳ್ಳದ್ದಾದುದ ರಿಂದ, ಹೇಯವಾದ ಜಗತ್ತಿನಿಂದ ಇತರನಾದವನೂ, ಹೇಯವಾದ ದೋಷಕ್ಕೆ ವಿರೋಧಿಯಾದ ಗುಣಸ್ವರೂಪನೂ, ಹೇಯವಾದ ದೋಷದಿಂದ ವರ್ಜಿತನೂ ಆದ ಶ್ರೀ ಹರಿಯು ಅಕಾರ ಶಬ್ದಕ್ಕೆ ಅರ್ಥಭೂತನು ಎಂದು ಸಿದ್ಧವಾಗುತ್ತದೆ.

ಭಾ॥ (a) ಮನಸಿ ಪ್ರಸ್ತುತತ್ವಾದವಚನೇಽಪಿ ಪ್ರಸ್ತುತಮೇವೇದಂ ಸರ್ವಂ। ದೃಷ್ಟಸಂಬಂಧಿತ್ವಾದದೃಷ್ಟಂ ಸರ್ವಮಪಿ ಪ್ರಸ್ತುತಂ ಭವತಿ॥ (b) ಭಗವಾಂಸ್ತ್ವ ಇತಿ ಪೃಥಗ್ವಿವಕ್ಷಿತತ್ವಾದೇವ ನ ಪ್ರಸ್ತುತಸಮುದಾಯೇ। (c) ನ ಚ ಶೂನ್ಯಸ್ಯಾಶಬ್ದಾರ್ಥತಾ॥ ಶೂನ್ಯಾಂಗೀಕಾರೇ ಹ್ಯಕಾರಸ್ಯಾ ಭಾವತಾಖ್ಯ ಏಕ ಏವಾರ್ಥ ಇತಿ ಸಿದ್ಧ್ಯತಿ। (d) ವಿಷ್ಣೋರಂಗೀ ಕಾರೇ ತ್ವಭಾವತಾಽನ್ಯತಾ ವಿರೋಧಿತೇತಿ ತ್ರಯೋಽಪ್ಯರ್ಥಾಃ ಸಮ್ಯಗೇವ ಸಿದ್ಧ್ಯಂತಿ॥

ಅ॥ (a) ಮನಸ್ಸಿನಲ್ಲಿ ಪ್ರಸ್ತುತವಾದುದರಿಂದ (ಮುಖತಃ) ಹೇಳದೆ ಇದ್ದರೂ ಈ ಎಲ್ಲಾ ಜಗತ್ತು ಪ್ರಸ್ತುತವೇ ಆಯಿತು. (ಕಾರಣ ಅತೀತವಾದುದೂ ವ್ಯವಹಿತವಾದುದೂ ಪ್ರಸ್ತು ತವೇ ಆಯಿತು.) ದೃಷ್ಟ ವಸ್ತುವಿನ ಸಂಬಂಧವಿದ್ದುದರಿಂದ ಅದೃಷ್ಟವಾದದ್ದೆಲ್ಲವೂ ಪ್ರಸ್ತುತವೇ ಆಗುತ್ತದೆ. (ಅಂತೂ ಅತೀಂದ್ರಿಯವೂ ಪ್ರಸ್ತುತವೇ ಆಯಿತು.) (b) ಶ್ರೀ ಪರಮಾತ್ಮನಾದರೂ ಅಕಾರದಿಂದ ಪ್ರತ್ಯೇಕವಾಗಿ ದೃಷ್ಟವಸ್ತು, ಅದೃಷ್ಟವಸ್ತುಗಳಿಂದ ವಿಲಕ್ಷಣನೆಂದು ಪ್ರತಿಪಾದಿಸಲಿಕ್ಕೆ ಇಷ್ಟನಾದುದರಿಂದಲೇ ಪ್ರಸ್ತುತ ವಸ್ತುಗಳ ಸಮೂಹದಲ್ಲಿ (ಎಣಿಸಲ್ಪಡತಕ್ಕವನು ಅಲ್ಲ.) (c) ಪ್ರಪಂಚ ಪ್ರತಿಷೇಧರೂಪವಾದ ಶೂನ್ಯವು 'ಅ' ಎಂಬ ಶಬ್ದದ ಅರ್ಥವು ಎಂದು ಹೇಳಕೂಡದು. ಅಕಾರವು ಶೂನ್ಯರೂಪವಾದ ಅರ್ಥವನು, ಪ್ರತಿ ಪಾದಿಸುತ್ತದೆ. ಎಂದು ಅಂಗೀಕರಿಸಿದರೆ ಸರ್ವವಸ್ತುವಿಗೆ ಪ್ರತಿಷೇಧರೂಪವಾದ ಒಂದೇ ಅರ್ಥವು ಸಿದ್ಧವಾಗುತ್ತದೆ. (d) ವಿಷ್ಣುವಿಗೆ ಅಕಾರವಾಚ್ಯತ್ವವನ್ನಂಗೀಕರಿಸಿದರೆ ದೋಷಾಭಾವವೂ, ಪ್ರಪಂಚದಿಂದ ಅನ್ಯತ್ವವೂ, ದೋಷವಿರೋಧಿಯಾದ ಗುಣರೂಪತ್ವವೂ, ಈ ಪ್ರಕಾರ ಮೂರು ಪ್ರವೃತ್ತಿನಿಮಿತ್ತಾರ್ಥಗಳು ಪ್ರಮಾಣಬಾಧವಿಲ್ಲದೇನೇ ಸಿದ್ಧಿಸುತ್ತವೆ.

ಭಾ॥ (a) ತಸ್ಮಾದಕಾರಸ್ಯ ಭಗವಾನೇವ ಮುಖ್ಯಾರ್ಥೋ ನ ಶೂನ್ಯಂ। ಏಕ ದೇಶಾರ್ಥತ್ವಾತ್॥ (b) ತಸ್ಮಾದಮುಖ್ಯಾರ್ಥತ್ವಾದನ್ಯಯುಕ್ತೇಽನ್ಯೈವಾ ಕಾರೇಣಾಭಾವ ಇತಿ ತದುಚ್ಯತೇ ನತ್ವ ಇತ್ಯೇವ ಕೇನಚಿತ್ಕ್ವಚಿತ್। ನ ಚ ತಥಾ ಪ್ರಯೋಗೋಽಸ್ತಿ॥ (c) ತಸ್ಮಾತ್ಪಾರತಂತ್ರ್ಯಾಲ್ಪಗುಣತ್ವಾದಿ ಸರ್ವವಸ್ತುಸ್ವಭಾವವಿರುದ್ಧಸ್ವಭಾವಂ ಸ್ವತಂತ್ರಂ ಪೂರ್ಣಗುಣಂ ಸರ್ವ ಜೀವಜಡೇಭ್ಯೋಽನ್ಯದಜ್ಞಾನದುಃಖಾಲ್ಪತ್ವಪಾರತಂತ್ರ್ಯೋತ್ಪತ್ತಿನಾಶಾದಿ ಸರ್ವದೋಷವಿವರ್ಜಿತಂ ಬ್ರಹ್ಮೈವಾಶಬ್ದಾರ್ಥಃ॥

ಅ ॥ (a) ಪ್ರವೃತ್ತಿನಿಮಿತ್ತವು ಪೂರ್ಣವಾಗಿ ಇದ್ದುದರಿಂದ ಅಕಾರಕ್ಕೆ ಶ್ರೀಹರಿಯೇ ಮುಖ್ಯವಾಗಿ ಅರ್ಥಭೂತನು, ಶೂನ್ಯವಲ್ಲವು. ಏಕದೇಶವೇ ಅರ್ಥವಾಗಿ ಇರುವುದರಿಂದ, (b) ಆದುದರಿಂದ ಮುಖ್ಯವಾದ ಅರ್ಥವಲ್ಲದಿರುವುದರಿಂದ ಭಾವಶಬ್ದದಿಂದೊಡಗೂಡಿದ ಅಕಾರದಿಂದಲೇ ಅಭಾವವೆಂದು ಆ ಶೂನ್ಯವು ('ನಾಭಾವ ಉಪಲಬ್ಧೇಃ' ಇತ್ಯಾದಿ ಸ್ಥಳದಲ್ಲಿ) ಪ್ರತಿಪಾದಿಸಲ್ಪಡುತ್ತದೆ. ಕೇವಲ ಅಕಾರದಿಂದ, ಯಾವ ವಾಕ್ಯದಿಂದಲೂ ಎಲ್ಲಿಯೂ ಪ್ರತಿಪಾದಿಸಲ್ಪಡುವುದಿಲ್ಲ, ಹಾಗೆ ಪ್ರಯೋಗವು ಇಲ್ಲವೇ ಇಲ್ಲ. (c) ಬೇರೆ ಅರ್ಥವು ಕೂಡಿರುವುದರಿಂದ ಪರಾಧೀನತೆಯು ಅಲ್ಪಗುಣವತ್ವವು ಇದೇ ಮೊದಲಾದುದು ಎಲ್ಲಾ ವಸ್ತುಗಳ ಸ್ವಭಾವವು. ಅದಕ್ಕೆ ವಿರುದ್ಧವಾದ ಸ್ವಭಾವವುಳ್ಳದ್ದೂ, ಸ್ವತಂತ್ರವಾದುದೂ, ಪರಿಪೂರ್ಣಗುಣಗಳುಳ್ಳದ್ದೂ, ಎಲ್ಲಾ ಜೀವರಿಂದಲೂ ಜಡಪದಾರ್ಥಗಳಿಂದಲೂ ಬೇರೆಯಾದುದೂ, ಅಜ್ಞಾನ, ದುಃಖ, ಅಲ್ಪತ್ವ, ಪರಾಧೀನತೆ, ಉತ್ಪತ್ತಿ, ನಾಶ, ಮೊದಲಾದ ಎಲ್ಲಾ ದೋಷಗಳಿಂದ ರಹಿತನೂ ಆದ ಪರಬ್ರಹ್ಮನೇ 'ಅ' ಎಂಬ ಶಬ್ದದ ಅರ್ಥಭೂತನು.

ಭಾ॥ **(a)** ಪೂರ್ಣಂ ಹಿ ಬ್ರಹ್ಮಶಬ್ದಸ್ಯಾರ್ಥಃ । ನ ಚ ದೋಷಯುಕ್ತಸ್ಯ ಪೂರ್ಣತಾ ॥ **(b)** ನ ಚ ಜೀವಜಡಾದ್ಯಪೂರ್ಣವಸ್ತ್ವಭಿನ್ನಸ್ಯ ಪೂರ್ಣತ್ವಂ ಭವತಿ । ತಸ್ಮಾದಕಾರಶಬ್ದಾರ್ಥ ಏವ ಬ್ರಹ್ಮಶಬ್ದಾರ್ಥಃ ॥ **(c)** ತದೇತದುಕ್ತಂ ಅಃ ಇತಿ ಬ್ರಹ್ಮೇತಿ । ಅಃ ಇತಿ ಪೃಥಕ್ತ್ವೇನ ವಚನಂ ತತ್ಸಮಮಧಿಕಂ ವಾ ಕಿಮಪಿ ನಾಸ್ತೀತಿ ದರ್ಶಯಿತುಂ ॥ **(d)** ವಿವೃತ್ತಾವಪಿ ಸರ್ಗಃ ಸ್ಯಾತ್ಸಂಹಿತಾಯಾಂ ಚ ಯತ್ರ ಹಿ । ಸಮಾನೋತ್ತಮಹೀನತ್ವಮುಚ್ಯತೇ ವಸ್ತುನೋಽಂಜಸಾ ॥ ಇತಿ ಶಬ್ದನಿರ್ಣಯೇ ॥

ಅ ॥ (a) ಪರಿಪೂರ್ಣವಾದುದೇ ಬ್ರಹ್ಮಶಬ್ದಕ್ಕೆ ಅರ್ಥವು. ದೋಷದಿಂದೊಡಗೂಡಿದವನಿಗೆ ಪೂರ್ಣತ್ವವಾದರೂ ಇರಲಾರದು. (b) ಜೀವ, ಜಡ ಮೊದಲಾದ ಅಪೂರ್ಣ ವಸ್ತುಗಳಿಂದ ಅಭಿನ್ನನಿಗಾದರೂ ಪೂರ್ಣತ್ವವು ಕೂಡಲಾರದು. ಆದುದರಿಂದ ಅಕಾರ ಶಬ್ದದ ಅರ್ಥವೇ ಬ್ರಹ್ಮಶಬ್ದಕ್ಕೂ ಅರ್ಥವು. (c) ಆದುದರಿಂದಲೇ 'ಅಃ ಇತಿ ಬ್ರಹ್ಮ' ಎಂದಿದು ಹೇಳಲ್ಪಟ್ಟದೆ. ('ಅ ಇತಿ ಬ್ರಹ್ಮ' ಎಂದು ಹೇಳಲು ಅರ್ಹವಾಗುತ್ತಿರಲು) 'ಅಃ ಇತಿ ಬ್ರಹ್ಮ' ಎಂದು ಬೇರೆಯಾಗಿ ಸಂಧಿಯಿಲ್ಲದೆ ಹೇಳಿರುವುದು, ಆ ವಸ್ತುವಿಗೆ ಸಮವಾದದ್ದಾಗಲೀ, ಅಧಿಕವಾದದ್ದಾಗಲೀ ಯಾವುದೊಂದೂ ಇಲ್ಲವೇ ಇಲ್ಲ. ಎಂದು ತೋರಿಸುವುದಕ್ಕೋಸ್ಕರ. (d) ಯಾವ ಪದದಲ್ಲಿ ಸಂಹಿತೆಯು (ಅಂದರೆ ಸಂಧಿಯು) (ಅವಶ್ಯವಾಗಿ ಹೇಳಲು ಶಕ್ಯವಾಗುತ್ತಿರಲು ಸಂಧಿ ಇಲ್ಲದೆ ಬೇರೆ ಬೇರೆಯಾಗಿ ನಿರ್ದೇಶ ಮಾಡಲ್ಪಡುತ್ತದೋ ಅಲ್ಲಿ) ಆ ವಸ್ತುವಿಗೆ ಸಮಾನ ಮತ್ತು ಉತ್ತಮವಾದ ಬೇರೆ ವಸ್ತುವು ಇಲ್ಲವೆಂದು ಹೇಳಲ್ಪಡುತ್ತದೆ. ವಿವೃತ್ತಿಯಲ್ಲಿಯೂ (ಅಂದರೆ ಸಂಧಿಯಿಲ್ಲದೆ ನಿರ್ದೇಶಮಾಡಿದ ಸ್ಥಳದಲ್ಲಿಯೂ) ವಿಸರ್ಗವೂ ಕೂಡ ಎಲ್ಲಿರುತ್ತದೋ, ಅಲ್ಲಿ ಚೆನ್ನಾಗಿ ಸಮಾನೋತ್ತಮರಾಹಿತ್ಯವು ಹೇಳಲ್ಪಡುತ್ತದೆ. ಎಂದು ಶಬ್ದನಿರ್ಣಯದಲ್ಲಿ. (ಒಂದನೇದಕ್ಕೆ, ಉದಾ:– 'ತಮೇವೈಕಂ ಜಾನಥ ಆತ್ಮಾನಂ' ಎಂದು ಇಲ್ಲಿ 'ಜಾನಥಾತ್ಮಾನಂ' ಎಂದು ಸಂಧಿಮಾಡಿ ಹೇಳಲು ಶಕ್ಯವಾಗುತ್ತಿರಲು ಸಂಧಿಮಾಡದೆ ಹೇಳಿರುವುದು ಆತ್ಮಶಬ್ದವಾಚ್ಯನಿಗೆ ಎಲ್ಲಾ ವಸ್ತುವಿನಿಂದಲೂ ವೈಲಕ್ಷಣ್ಯವನ್ನು ತಿಳಿಸುವುದಕ್ಕಾಗಿ ಎಂದು ತತ್ವಪ್ರಕಾಶಿಕೆಯಲ್ಲಿ. ಎರಡನೇದ್ದಕ್ಕೆ ಇದೇ ಉದಾಹರಣೆಯು.)

ಭಾ॥ (a) ಅಃ ಇತಿ ಬ್ರಹ್ಮ ಪೂರ್ಣಂ ವಸ್ತೂಚ್ಯತೇ । ತತ್ರಾಗತಮಹಮಿತಿ ॥ ತತ್ರಾಕಾರಸ್ಯ ಪೂರ್ಣವಾಚಿತ್ವೇಽಹಮೇವ ಸೋಽಕಾರ ವಾಚ್ಯ ಇತ್ಯಾಹ ಮಹಿದಾಸರೂಪೋ ಭಗವಾನ್ನಾರಾಯಣಃ । (b) ಅಹಮೇಕ ಏವ ಪರಿ ಪೂರ್ಣಃ ॥ ಅನ್ಯೇಷಾಂ ಸರ್ವೇಷಾಂ ಮದಧೀನತ್ವಾದಲ್ಪತ್ವಾದಿತಿ ॥ (c) ಮುಕ್ತೇಭ್ಯಃ ಪ್ರಲಯೇ ಲೀನೇಭ್ಯಶ್ಚ ಸರ್ವವಸ್ತುಭ್ಯಃ ಸದಾ ವಿಭಿನ್ನ ಏವ ಭಗವಾನಿತಿ ದರ್ಶಯಿತುಂ ಚ ಅಃ ಇತಿ ಪೃಥಗ್ವಚನಂ ॥

ಅ ॥ (a) ಅಕಾರದಿಂದ ಪೂರ್ಣವಾದ ವಸ್ತುವೇ ಹೇಳಲ್ಪಡುತ್ತದೆ. ತತ್ರಾಗತ ಮಹಮಿತಿ' ಅಂದರೆ ಅಕಾರವು ಪೂರ್ಣವಾದ ವಸ್ತುವನ್ನು ಹೇಳುತ್ತದೆ. ಎಂದು ಸಿದ್ಧವಾಗುತ್ತಿರಲು ನಾನೇ ಆ ಅಕಾರವಾಚ್ಯನು ಎಂದು ಮಹಿದಾಸರೂಪಿಯಾದ, ಪೂಜ್ಯನಾದ ನಾರಾಯಣನು ಹೇಳಿದನು. (b) ಇತರರೆಲ್ಲರೂ ತನ್ನ ಅಧೀನರಾದುದರಿಂದ ಅಲ್ಪರೇ ಆಗಿರುತ್ತಾರೆ. ಆದುದರಿಂದ ನಾನು ಒಬ್ಬನೇ ಪರಿಪೂರ್ಣನು ಎಂದನು. (c) ಶ್ರೀ ಪರಮಾತ್ಮನು ಮುಕ್ತರಿಂದಲೂ ಪ್ರಲಯದಲ್ಲಿ ತನ್ನ ಜಠರದಲ್ಲಿ ಇದ್ದ ಎಲ್ಲಾ ವಸ್ತುಗಳಿಂದಲೂ ಯಾವಾಗಲೂ ಭಿನ್ನನೇ ಆಗಿರುತ್ತಾನೆ. ಎಂದು ತೋರಿಸುವುದಕ್ಕೋಸ್ಕರವೂ 'ಅಃ ಇತಿ' ಸಂಧಿಯಿಲ್ಲದೆ ಪ್ರತ್ಯೇಕವಾಗಿ ಹೇಳಿರುವುದು.

ಭಾ॥ (a) ತಚ್ಚೋಕ್ತಂ ವಾಕ್ಯನಿರ್ಣಯೇ । ಮುಕ್ತಾ ಅಪಿ ನ ವಿಷ್ಣುತ್ವಂ ಯಾಂತಿ ತತ್ಸಮತಾಮಪಿ ॥ (b) ಆಧಿಕ್ಯಂ ಕುತ ಏವ ಸ್ಯಾನ್ಮುಕ್ತಾನಾಂ ಮುಕ್ತಿದಾತ್ಮತಃ । ಕುತ ಏವ ಪ್ರಲೀನಾನಾಂ ಪ್ರಲಯೇ ತು ತದಾತ್ಮತಾ ॥ (c) ಬ್ರಹ್ಮಶರ್ವೇಂದ್ರಪೂರ್ವಾಣಾಂ ಮುಕ್ತಾವಪಿ ನ ವಿಷ್ಣುತಾ । ಯದಾ ತದಾ ತು ಸಂಸಾರೇ ಕ್ವತದ್ರೂಪತ್ವಮಿಷ್ಯತೇ ॥ (d) ಅನ್ಯೋಽಸೌ ಸರ್ವತೋ ವಿಷ್ಣುಃ ಸ್ವಾತಂತ್ರ್ಯಾದ್ಗುಣಪೂರ್ತಿತಃ । ಸರ್ವವಸ್ತುಸ್ವಭಾವಸ್ಯ ವಿರುದ್ಧೋರುಸ್ವಭಾವಕಃ ॥ ಪಾರತಂತ್ರ್ಯಾಲ್ಪತಾಽಜ್ಞಾನಜನಿನಾಶಾದಿ ವರ್ಜಿತಃ ॥

ಅ ॥ (a) ಆ ಪ್ರಮೇಯವಾದರೂ ವಾಕ್ಯನಿರ್ಣಯದಲ್ಲಿ ಹೇಳಲ್ಪಟ್ಟಿದೆ. ಮುಕ್ತರೂ ಕೂಡ ವಿಷ್ಣುತ್ವವನ್ನೂ, ತತ್ಸಾಮ್ಯವನ್ನೂ ಕೂಡ ಹೊಂದುವುದಿಲ್ಲ. (b) ಮುಕ್ತರಿಗೂ ಮುಕ್ತಿಯನ್ನು ಕೊಡತಕ್ಕವನಾದುದರಿಂದ (ಆ ಮುಕ್ತರಿಗೆ ಶ್ರೀ ಹರಿಯಿಂದ) ಉತ್ತಮತ್ವವು ಹೇಗೆತಾನೇ ಆಗುವುದು? ಪ್ರಳಯಕಾಲದಲ್ಲಿ ಅಡಗಿರುವ (ಅಂದರೆ ಹೊಟ್ಟೆಯಲ್ಲಿ ಮಲಗಿರುವ) ವರಿಗೆ ಹರಿಸ್ವರೂಪತ್ವವು ಹೇಗೆ ಸಂಗತವಾಗುವುದು? (c) ಚತುರ್ಮುಖ, ರುದ್ರ, ಇಂದ್ರನೇ ಮೊದಲಾದ ದೇವತೆಗಳಿಗಾದರೂ ಮುಕ್ತಿಯಲ್ಲಿಯೂ ಕೂಡ ಯಾವಾಗ ವಿಷ್ಣುತ್ವವು (ಕೂಡುವುದಿಲ್ಲವೋ) ಆಗ ಸಂಸಾರದಲ್ಲಿ ಎಲ್ಲಿ ಹರಿಯ ಸ್ವರೂಪವು ಇಚ್ಛಿಸಲ್ಪಡುತ್ತದೆ? (d) ಈ ವಿಷ್ಣುವು ಸ್ವತಂತ್ರನಾದುದರಿಂದ ಎಲ್ಲಾ ವಸ್ತುವಿನಿಂದಲೂ ಭಿನ್ನನೂ, ಗುಣಪರಿಪೂರ್ಣನಾದುದರಿಂದ ಎಲ್ಲಾ ವಸ್ತುಗಳ ಸ್ವರೂಪಕ್ಕೆ ವಿರುದ್ಧಗಳಾದ ಉತ್ಕೃಷ್ಟ ಸ್ವಭಾವವುಳ್ಳವನೂ, ಪರಾಧೀನತೆ, ಅಲ್ಪತ್ವ, ಅಜ್ಞಾನ, ಉತ್ಪತ್ತಿ, ವಿನಾಶ ಮೊದಲಾದುವುಗಳಿಂದ ವಿರಹಿತನೂ ಆಗುತ್ತಾನೆ.

ಭಾ॥ (a) ಅಕಾರೇಣ ತತೋ ವಿಷ್ಣುಃ ಸಂಹಿತಾಯಾಂ ಪದಾತ್ಮನಾ । ಬಹ್ವೃಚೋಪನಿಷತ್ಪ್ರೋಕ್ತಃ (b) ತೇನೈವ ಪರಮಾತ್ಮನಾ ॥ ಮಹಿದಾಸಾವತಾರೇಣ ಸೋಽಹಮೇವಂವಿಧಸ್ತ್ವಿತಿ । ಮತ್ತೋಽನ್ಯೋ ನ ಹಿ ಪೂರ್ಣೋಽಸ್ತಿ ಯತೋಽಕಾರಶ್ಚ ಪೂರ್ಣತಾಂ ॥ ವಕ್ತಿ ತಸ್ಮಾದಕಾರೋಽಯಂ ಮಾಮೇವ ವದತಿ ಸ್ಫುಟಂ । (c) ನಾಭಾವ ವಾಚ್ಯಕಾರಃ ಸ್ವಾದರ್ಥತ್ರಯಯುತೋ ಯತಃ ॥ ಏಕಾರ್ಥತಾ ಹ್ಯಭಾವಸ್ಯ ನಿಷೇಧೈಕಸ್ವರೂಪತಃ । ಅನ್ಯತಾ ಚ ನಿಷೇಧಶ್ಚ ವಿರುದ್ಧತ್ವಮಿತಿ ತ್ರಯಃ ॥ ಅಕಾರಾರ್ಥಾ (d) ಹ್ಯಭಾವಸ್ಯ ನಿಷೇಧೈಕಸ್ವರೂಪತಃ । ಏಕದೇಶಸ್ವರೂಪತ್ವಾನ್ನಾಕಾರೇಣೈವ ಭಣ್ಯತೇ ॥ ಕಿಂ ತ್ವಭಾವ ಇತಿ ತ್ವೇವ ತೇನಾಕಾರೋದಿತೋ ಹರಿಃ । ಇತಿ ॥

ಅ॥ (a) ಆದುದರಿಂದ ಅಕಾರದಿಂದ ವಿಷ್ಣುವೇ ಸಂಧಿಯು (ಪ್ರಸಕ್ತವಾಗಿದ್ದರೂ, ವಿಸರ್ಗಸಹಿತವಾದ ಪದರೂಪದಿಂದ ಋಕ್ಶಾಖೆಗೆ ಸೇರಿದ ಐತರೇಯೋಪನಿಷತ್ತಿನಲ್ಲಿ ಹೇಳಲ್ಪಡುತ್ತಾನೆ. (b) ಆ ಮಹಿದಾಸಾವತಾರಿಯಾದ ಆ ಪರಮಾತ್ಮನಿಂದಲೇ ಆ ನಾನು (ಗುಣಾದಿಗಳಿಂದ) ಪೂರ್ಣನು. ಎಂದೂ ನನ್ನಿಂದ ಇತರನು ಪೂರ್ಣನು ಇಲ್ಲವೇ ಇಲ್ಲ. ಯಾವುದರಿಂದ ಅಕಾರವು ಗುಣಪೂರ್ಣತ್ವವನು ಹೇಳುತ್ತದೋ, ಆದುದರಿಂದ ಈ ಅಕಾರವು ನನ್ನನ್ನೇ ಚೆನ್ನಾಗಿ ಪ್ರತಿಪಾದಿಸುತ್ತದೆ. (ಎಂದೂ ಹೇಳಲ್ಪಟ್ಟಿತು.) (c) ಯಾವ ಕಾರಣದಿಂದ ಅಕಾರವು ಪ್ರವೃತ್ತಿಗೆ ನಿಮಿತ್ತಗಳಾದ ಮೂರು ಅರ್ಥಗಳಿಂದೊಡಗೂಡಿಯುದೆಯೋ, (ಆದುದರಿಂದಲೇ) ಅಭಾವವನು ಅಂದರೆ ಶೂನ್ಯವನು, ಪ್ರಾಗಭಾವವನ್ನಾಗಲೀ ಹೇಳತಕ್ಕುದಲ್ಲ. ಅಭಾವವಾದರೂ ಕೇವಲ ನಿಷೇಧವೇ ಸ್ವರೂಪವಾಗಿವುಳ್ಳದ್ದಾದುದರಿಂದ ಕೇವಲ ಅರ್ಥಸ್ವರೂಪವೇ ಆಗಿಯುದೆ. ಭೇದವು, ನಿಷೇಧವು. ವಿರೋಧವು ಎಂದು ಮೂರು ಅಕಾರಕ್ಕೆ ಅರ್ಥಗಳು. (d) ಅಭಾವವಾದರೂ ಕೇವಲ ನಿಷೇಧಸ್ವರೂಪವಾಗಿ ಉಳ್ಳದ್ದಾದುದರಿಂದ, ಏಕದೇಶಸ್ವರೂಪ ಉಳ್ಳದ್ದಾದುದರಿಂದ ಅಕಾರದಿಂದ ಹೇಳಲ್ಪಡುವುದೇ ಇಲ್ಲವು. ಕಿಂತು ಅಭಾವಪದದಿಂದಲೇ (ಅಭಾವರೂಪವಾದ ಅರ್ಥವು ಹೇಳಲ್ಪಡುತ್ತದೆ.) ಆದುದರಿಂದ ಅಕಾರದಿಂದ ಹೇಳಲ್ಪಟ್ಟವನು ಶ್ರೀ ಹರಿಯೇ ಸರಿ. ಎಂದು (ವಾಕ್ಯನಿರ್ಣಯದಲ್ಲಿ.)

ಭಾ॥ (a) ನ ಚ ನಿಷೇಧಸ್ವರೂಪೇ ವಿರುದ್ಧತಾ ಚಾನ್ಯತಾ ಚಾಸ್ತೀತ್ಯೇತಾವತಾ ಪೂರ್ಣಾರ್ಥತಾ ಭವತಿ । ತದಾಽರ್ಥತ್ರಯಕಲ್ಪನಸ್ಯ ವೈಯರ್ಥ್ಯಾತ್ । (b) ಉಕ್ತಂ ಹಿ ಶಬ್ದನಿರ್ಣಯೇ । ವಿರುದ್ಧತಾ ನಿಷೇಧಾನ್ಯಭಾವಯುಕ್ತೇ ಹಿ ಕೇವಲಃ । ಅಕಾರೋ ವರ್ತತೇ ತೇಷಾಮೇಕಾರ್ಥತ್ವನ್ಯಭಾವಕೇ ॥ ವರ್ತತೇಽಭಾವ ಇತ್ಯೇವ (c) ನತ್ವ ಇತ್ಯೇವ ಕೇವಲಃ । ಇತಿ ॥ ತಸ್ಮಾನ್ನಾರಾಯಣ ಏವಾಕಾರವಾಚ್ಯ ಇತಿ ಸಿದ್ಧಂ ॥

ಅ॥ (a) (ಅಕಾರಕ್ಕೆ) ನಿಷೇಧಸ್ವರೂಪವಿದ್ದರೆ ವಿರೋಧವೂ, ಭೇದವೂ ಅದೆ. ಇಷ್ಟರಿಂದ ಪರಿಪೂರ್ಣಾರ್ಥವು ಆಗುವುದಿಲ್ಲ ಆಗ ಶಬ್ದದ ಪ್ರವೃತ್ತಿಗೆ ನಿಮಿತ್ತವಾದ ಮೂರು ಅರ್ಥವನು ಕಲ್ಪಿಸುವುದು ವ್ಯರ್ಥವಾಗುವುದು. (b) (ಈ ಪ್ರಮೇಯವು) ಶಬ್ದನಿರ್ಣಯದಲ್ಲಿ ಹೇಳಲ್ಪಟ್ಟಿದೆ. ವಿರೋಧದಿಂದೊಡಗೂಡಿದ ವಸ್ತುವಿನಲ್ಲಿಯೂ, ನಿಷೇಧದಿಂದೊಡಗೂಡಿದ ವಸ್ತುವಿನಲ್ಲಿಯೂ, ಭೇದದಿಂದೊಡಗೂಡಿದ ವಸ್ತುವಿನಲ್ಲಿಯೂ ಕೇವಲ ಅಕಾರವು ಅದೆ,

ಪ್ರವೃತ್ತಿನಿಮಿತ್ತಗಳಾದ ಮೂರು ಅರ್ಥಗಳಮಧ್ಯದಲ್ಲಿ ಪ್ರವೃತ್ತಿಗೆ ಕಾರಣವಾದ ಒಂದು ಅರ್ಥ ಭೂತವಾದ ಅಭಾವದಲ್ಲಿ (ಭಾವದಿಂದಇತರವಾದುದರಿಂದಲೂ, ಭಾವಕ್ಕೆ ವಿರೋಧಿಯಾದು ದರಿಂದಲೂ) ಅಭಾವ ಎಂದೇ ಶಬ್ದವುಇದೆ. (c) ಕೇವಲ 'ಅ' ಎಂಬೀ ಶಬ್ದವು ಇಲ್ಲವೇ ಇಲ್ಲ. ಆದುದರಿಂದ ನಾರಾಯಣನೇ ಅಕಾರದಿಂದ ಹೇಳಲ್ಪಡುತ್ತಾನೆ ಎಂದು ಸಿದ್ಧನಾಯಿತು.

ಭಾ॥ (a) ಯತೋಽಕಾರಃ ಸದಾ ವಿಷ್ಣೋರ್ವಾಚಕತ್ವೇನ ಸಂಸ್ಥಿತಃ । ತಸ್ಮಾದ್ವರ್ಣತ್ರಯಾತ್ಮಾಽಯಂ ಪ್ರಣವೋಽಪಿ ತ್ರಯಾತ್ಮಕಂ ॥ ಹರಿಮೇವ ಸದಾ ವಕ್ತಿ ನೈವಾನ್ಯಂ ಕಂಚನ ಕ್ವಚಿತ್ । (b) ಸೃಷ್ಟಿಕರ್ತಾ ಬ್ರಹ್ಮನಾಮಾ ಯೋಽಸೃಜಚ್ಚತುರಾನನಂ ॥ ಅಂತರ್ಯಾಮೀ ವಿರಿಂಚಸ್ಯ ಸೋಽಕಾರಾರ್ಥೋ ಜನಾರ್ದನಃ । (c) ವೈಕುಂಠಲೋಕ ಆಸ್ತೇ ಸ ದ್ವಿತೀಯವಪುಷಾ ಹರಿಃ ॥ ಉಕಾರವಾಚ್ಯಃ ಸ ವಿಭುಃ (d) ನೃಸಿಂಹೋ ರುದ್ರನಾಮಕಃ । ರೌದ್ರತ್ವಾತ್ಸ ಶಿವಸ್ಯಾಪಿ ಸ್ರಷ್ಟಾ ಸಂಹಾರಕಾರಕಃ ॥ ಅಂತರ್ಯಾಮೀ ಶಿವಸ್ಯಾಪಿ ಮಕಾರಾರ್ಥಃ ಪ್ರಕೀರ್ತಿತಃ ॥

ಅ ॥ (a) ಯಾವ ಕಾರಣದಿಂದ ಅಕಾರವು ಯಾವಾಗಲೂ ವಿಷ್ಣುವನ್ನು ಹೇಳತಕ್ಕದ್ದಾಗಿದೆಯೋ, ಆದುದರಿಂದ 'ಅ', 'ಉ', 'ಮ್', ಎಂಬ ಮೂರುವರ್ಣಗಳ ಸ್ವರೂಪವುಳ್ಳ ಅಕಾರದ ವ್ಯಾಖ್ಯಾನರೂಪವಾದ ಪ್ರಣವವೂ ಕೂಡ ಮೂರು ಸ್ವರೂಪವುಳ್ಳ ಶ್ರೀ ಹರಿಯನ್ನೇ ಯಾವಾಗಲೂ ಹೇಳುತ್ತದೆ. ಇತರ ಯಾರನ್ನೂ ಎಲ್ಲಿಯೂ ಹೇಳುವುದಿಲ್ಲ. (b) ಸರ್ವ ಜಗತ್ತನ್ನು ಸೃಷ್ಟಿಮಾಡುವವನೂ, ಬ್ರಹ್ಮನಾಮಕನೂ ಆದ ಯಾವ ಶ್ರೀ ಹರಿಯು ಚತುರ್ಮುಖನನ್ನು ಸೃಷ್ಟಿಸಿದನೋ, ಆ ಜನಾರ್ದನನು ಚತುರ್ಮುಖನಿಗೆ ಅಂತರ್ಯಾಮಿಯೂ ಅಕಾರಾರ್ಥನೂ ಆಗಿರುತ್ತಾನೆ. (c) ಆ ಹರಿಯೇ ಎರಡನೇ ಶರೀರದಿಂದ ವೈಕುಂಠಲೋಕದಲ್ಲಿ ಇದ್ದಾನೆ. ಆ ಸಮರ್ಥನಾದ ಶ್ರೀ ಹರಿಯು (ಉನ್ನತವಾದ ಲೋಕದಲ್ಲಿ ಇದ್ದುದರಿಂದ) ಉಕಾರದಿಂದ ಹೇಳಲ್ಪಡುತ್ತಾನೆ. (d) ನೃಸಿಂಹರೂಪಿಯಾದ ಶ್ರೀ ಹರಿಯು ಕ್ರೂರನಾದುದರಿಂದ ರುದ್ರನೆಂದು ಹೆಸರುಳ್ಳವನು. ಆತನು ರುದ್ರನನ್ನು ಸೃಷ್ಟಿಸುವವನೂ ಸಂಹಾರ ಮಾಡುವವನೂ ಆಗಿರುತ್ತಾನೆ. ಅಲ್ಲದೆ ರುದ್ರನಿಗೂ ಅಂತರ್ಯಾಮಿಯಾಗಿ ಮಕಾರದ ಅರ್ಥಭೂತನೆಂದು ಹೇಳಲ್ಪಟ್ಟಿರುತ್ತಾನೆ.

ಭಾ॥ (a) ಏವಂ ತ್ರಿಯಾತ್ಮಕಂ ವಿಷ್ಣುಂ ಪ್ರಣವೋಽಯಂ ತ್ರಿಯಾತ್ಮಕಃ । ಏವಂ ಪೃಥಗಿವಾಚಷ್ಟೇ ಬಿಂದುರ್ವಕ್ತ್ಯನಿರುದ್ಧಕಂ ॥ (b) ಪ್ರದ್ಯುಮ್ನಾದ್ಯಾನ್ನಾದಪೂರ್ವಾಃ ಸರ್ವಾನ್ನಾರಾಯಣಾತ್ಮಕಾನ್ । ಪದ್ಮನಾಭಾದಿಕಾ ಏವ ಮೂರ್ತೀರ್ನಾರಾಯಣೋತ್ತರಾಃ ॥ ಪ್ರಣವೋಽಯಂ ವದತ್ಯಷ್ಟೌ ತಸ್ಮಾನ್ನಾನ್ಯಾಭಿಧಾಯಕಃ । ಇತಿ ತತ್ವಸಾರೇ ॥

ಅ ॥ (a) ಈ ಪ್ರಕಾರವಾಗಿ ಮೂರು ಸ್ವರೂಪವುಳ್ಳ ಶ್ರೀ ಹರಿಯನ್ನು ಹೀಗೆ ಮೂರುಪ್ರಕಾರವುಳ್ಳ ಈ ಪ್ರಣವವು ಪ್ರತ್ಯೇಕವಾಗಿಯೇ ಪ್ರತಿಪಾದಿಸುತ್ತದೆ. ಬಿಂದುವು ಅನಿರುದ್ಧರೂಪಿಯಾದ ಶ್ರೀ ಹರಿಯನ್ನು ಹೇಳುತ್ತದೆ. (b) ನಾದವೇ ಮೊದಲಾಗಿವುಳ್ಳವುಗಳು ಎಲ್ಲಾ ನಾರಾಯಣನೇ ಸ್ವರೂಪವಾಗಿವುಳ್ಳ, ಪ್ರದ್ಯುಮ್ನನೇ ಮೊದಲಾದವರನ್ನು (ಅಂದರೆ

ಪ್ರದ್ಯುಮ್ನ-ಸಂಕರ್ಷಣ-ವಾಸುದೇವ-ನಾರಾಯಣನನ್ನು ಪ್ರತಿಪಾದಿಸುತ್ತದೆ). ಪದ್ಮನಾಭನೇ ಆದಿಯಾಗಿವುಳ್ಳ ನಾರಾಯಣನೇ ಅಂತಿಮನಾಗಿವುಳ್ಳ ಎಂಟು ಮೂರ್ತಿಗಳನ್ನು ಈ ಪ್ರಣವವು ಹೇಳುತ್ತದೆ ಆದುದರಿಂದ ಇತರರನ್ನು ಹೇಳುವುದಿಲ್ಲ, ಎಂದು ತತ್ವಸಾರದಲ್ಲಿ ಇದೆ. (1) (ಪದ್ಮನಾಭ, (2) ದಾಮೋದರ, (3) ಸಂಕರ್ಷಣ, (4) ವಾಸುದೇವ, (5) ಪ್ರದ್ಯುಮ್ನ, (6) ಅನಿರುದ್ಧ, (7) ಪುರುಷೋತ್ತಮ, (8) ನಾರಾಯಣ ಈ ಎಂಟು ಭಗವದ್ರೂಪಗಳೂ ಪ್ರಣವ ಪ್ರತಿಪಾದ್ಯಗಳು.)

**ಭಾ||** **(a)** ಷಟ್ತ್ರಿಂಶತಿ ಸಹಸ್ರಾಣಿ ಬೃಹತ್ಯುಕ್ಥಾರ್ಣಗಾನಿ ತು । ಸ್ತ್ರೀರೂಪಾಣಿ ಹರೇಸ್ತಾವದಹ್ನಾಮಪ್ಯಭಿಮಾನಿಷು ॥ ಸೂರ್ಯರೂಪೇಷು ರೂಪಾಣಿ ಪುಮಾಕಾರಾಣಿ ಸರ್ವಶಃ । **(b)** ಏತೈಃ ಪುರುಷಗೈ ರೂಪೈರ್ಬೃಹತ್ಯುಕ್ಥವ್ಯವಸ್ಥಿತೈಃ ॥ ಕದಾಚಿದ್ಭಗವಾನ್ವಿಷ್ಣುಃ ಪುಮಾಕಾರಾಣಿ ತಾನಿ ಚ । ಕೃತ್ವಾ ಸೂರ್ಯಗತಾನ್ಯೇವ ಸ್ತ್ರೀರೂಪಾಣಿ ವಿಧಾಯ ಚ ॥ ತಾನ್ಯಾಪ್ನೋತಿ ಚ ಪುಂರೂಪೈಸ್ತೈರೇವಾಕ್ಷರಗಾನಿ ಚ । ಸ್ತ್ರೀರೂಪಾಣಿ ಜಗನ್ನಾಥಃ ಪ್ರಾಪ್ನೋ (ತಿ) **(c)** (ಆ) ತ್ಯಾತ್ಮೇಚ್ಛಯಾ ಪ್ರಭುಃ ॥ ಪುಂರೂಪಪ್ರಮದಾರೂಪ ಸ್ವರೂಪೈ ರಮತೇ ಸ್ವಯಂ । ಏಕೀಕೃತ್ಯ ಚ ತಾನ್ಯೇವ ದ್ವಿರೂಪೋರಮತೇ ತಥಾ ॥ **(d)** ಸ ಏವ ರಮತೇ ಮಾಯಾಂ ಸ್ಥಿತಾತ್ಮಸ್ತ್ರೀತನೌ ಹರಿಃ । ಪ್ರಾಣಸ್ಯೋತ್ಪತ್ತಿಕಾಮಃ ಸನ್ನನೇಚ್ಛಾ ಮಾರನಾಮಕಃ ॥ ಇತ್ಯರ್ಧನಾರೀನಾರಾಯಣತಂತ್ರೇ ॥

ಅ || (a) ಶ್ರೀ ಹರಿಗೆ ಮೂವತ್ತಾರುಸಹಸ್ರ (೩೬೦೦೦) ಸ್ತ್ರೀರೂಪಗಳು ಇವೆ. ಅಷ್ಟು ಪುರುಷಾಕಾರಗಳಾದ ರೂಪಗಳು. ಇವು ಬೃಹತೀಸಹಸ್ರಾಕ್ಷರಗಳಲ್ಲಿ ಇವೆ. (ಸ್ತ್ರೀರೂಪಗಳು ವ್ಯಂಜನಗಳಲ್ಲಿಯೂ ಪುರುಷರೂಪಗಳು ಸ್ವರಗಳಲ್ಲಿಯೂ ಇವೆ ಎಂದು 'ತು' ಶಬ್ದದಿಂದ ತಿಳಿಯುತ್ತದೆ.) ಅಷ್ಟೂ (ಅಂದರೆ ೩೬೦೦೦ ಸ್ತ್ರೀರೂಪಗಳೂ ಅಷ್ಟೂ ಪುರುಷರೂಪಗಳೂ ಕೂಡ ಅಹೋರಾತ್ರಾತ್ಮಕ ದಿವಸಗಳಿಗೆ ಅಭಿಮಾನಿಗಳಾದ ಎಲ್ಲಾ ಸೂರ್ಯರೂಪಗಳಲ್ಲಿಯೂ ಇವೆ. (b) ಕೆಲವು ವೇಳೆ ಪೂಜ್ಯನಾದ ವಿಷ್ಣುವು ಈ ಪುರುಷರಲ್ಲಿ ಇರತಕ್ಕುದೂ ಬೃಹತೀಸಹಸ್ರದ ವ್ಯಂಜನಾಕ್ಷರಗಳಲ್ಲಿ ಇರತಕ್ಕುದೂ ಆದ ಸ್ತ್ರೀರೂಪಗಳಿಂದ ಸೂರ್ಯನಲ್ಲಿ ಇರತಕ್ಕುವುಗಳೂ ಸೂರ್ಯನಿಂದ ನಿಯಮಿಸಲ್ಪಟ್ಟ ಹಗಲಿನಲ್ಲಿ ಇರುವವುಗಳೂ ಆದ ಪುರುಷಾಕಾರಗಳಾದ ರೂಪಗಳನ್ನು ಹೊಂದುತ್ತಾನೆ. ಅಥವಾ ಕೆಲವು ವೇಳೆ ಶ್ರೀಹರಿಯು ಬೃಹತೀಸಹಸ್ರದ ಸ್ವರದಲ್ಲಿರತಕ್ಕ ಪುರುಷರೂಪಗಳಿಂದ, ಸೂರ್ಯನಲ್ಲಿ ಇರುವವುಗಳೂ ಆತನಿಂದ ನಿಯಮಿಸಲ್ಪಟ್ಟ ರಾತ್ರಿಯಲ್ಲಿ ಇರುವವುಗಳೂ ಆದ ಸ್ತ್ರೀರೂಪಗಳನ್ನು ಹೊಂದುತ್ತಾನೆ. ಅಥವಾ ಶ್ರೀ ಹರಿಯು ಸೂರ್ಯನಲ್ಲಿಯೂ ಹಗಲಿನಲ್ಲಿಯೂ ಇರುವ ಈ ಪುಂರೂಪಗಳಿಂದಲೇ ಅಕ್ಷರದಲ್ಲಿರುವ ಸ್ತ್ರೀರೂಪಗಳನ್ನು ಹೊಂದುತ್ತಾನೆ. ಅಥವಾ ಸೂರ್ಯನಿಂದ ನಿಯಮಿಸಲ್ಪಟ್ಟ ರಾತ್ರಿಯಲ್ಲಿ ಇರುವವುಗಳೇ ಆದ ಸ್ತ್ರೀರೂಪಗಳಿಂದ ಸ್ವರದಲ್ಲಿರುವ ಪುರುಷಾಕಾರಗಳಾದ ರೂಪಗಳನ್ನು ಹೊಂದುತ್ತಾನೆ. ಅಥವಾ ಸೂರ್ಯನಲ್ಲಿ ಇರುವ ಸ್ತ್ರೀರೂಪಗಳನ್ನು ಸೂರ್ಯನಲ್ಲಿಯೇ ಇರುವ ಪುರುಷರೂಪಗಳಿಂದ ಹೊಂದುತ್ತಾನೆ. ಹಾಗೆಯೇ ಅಕ್ಷರದಲ್ಲಿಯೇ ಇರುವ ಪುರುಷರೂಪಗಳಿಂದ, ಅಕ್ಷರದಲ್ಲಿಯೇ ಇರುವ ಸ್ತ್ರೀರೂಪಗಳನ್ನು ಹೊಂದುತ್ತಾನೆ. ಕೆಲವು

ವೇಳೆ ಸೂರ್ಯನಲ್ಲಿರತಕ್ಕ ಪುರುಷಾಕಾರಗಳನ್ನು ಸ್ತ್ರೀರೂಪಗಳನ್ನಾಗಿಯೂ, ಸ್ತ್ರೀರೂಪಗಳನ್ನು ಪುರುಷಾಕಾರಗಳನ್ನಾಗಿಯೂ ಮಾಡಿ ಅವುಗಳಿಂದಲೇ ಅವುಗಳನ್ನು ಹೊಂದುತ್ತಾನೆ. ಕೆಲವು ವೇಳೆ ಸೂರ್ಯನಲ್ಲಿಯೂ ರಾತ್ರಿಯಲ್ಲಿಯೂ ಇರುವ ಸ್ತ್ರೀರೂಪಗಳನ್ನು ಪುರುಷಾಕಾರಗಳನ್ನಾಗಿಯೂ, ಅಕ್ಷರ (ಸ್ವರ) ಗಳಲ್ಲಿ ಇರುವ ಪುರುಷಾಕಾರಗಳನ್ನು ಸ್ತ್ರೀರೂಪಗಳನ್ನಾಗಿಯೂ ಮಾಡಿ ಅವುಗಳಿಂದಲೇ ಅವುಗಳನ್ನು ಹೊಂದುತ್ತಾನೆ. ಹೀಗೆಯೇ ಜಗತ್ತಿಗೆ ಸ್ವಾಮಿಯಾದ ಶ್ರೀ ಹರಿಯು ಅಕ್ಷರದಲ್ಲಿರುವ ಸ್ತ್ರೀರೂಪಗಳನ್ನು ಪುರುಷಾಕಾರಗಳನ್ನಾಗಿ ಮಾಡಿ, ಆ ಪುರುಷರೂಪಗಳಿಂದ ಸೂರ್ಯನಲ್ಲಿ ಇರುವ ಪುಂರೂಪಗಳನ್ನಾಗಿ ಮಾಡಿ ಅವುಗಳನ್ನು ಹೊಂದುತ್ತಾನೆ. ಹಾಗೆಯೇ ಸ್ತ್ರೀರೂಪಗಳನ್ನು ಏಕಕಾಲದಲ್ಲಿ ಅರ್ಧನಾರೀ ನರಾಕಾರಗಳನ್ನಾಗಿ ಮಾಡಿ, ಅಕ್ಷರದಲ್ಲಿರುವ ಪುಂಸ್ತ್ರೀರೂಪಗಳನ್ನು ಅರ್ಧನಾರೀ ರೂಪದಿಂದ ಮಾಡಿ, ಜೀವರಲ್ಲಿಯೂ ಅಕ್ಷರಗಳಲ್ಲಿಯೂ ಇರುವ ಅರ್ಧನಾರೀ ರೂಪಗಳಿಂದ ಸೂರ್ಯನಲ್ಲಿರುವ ರೂಪಗಳನ್ನು ಹೊಂದುತ್ತಾನೆ. (ಇತ್ಯಾದ್ಯನೇಕಾರ್ಥಗಳನ್ನು ತಿಳಿಯತಕ್ಕುದು. ಕಾರಣ ಶ್ರೀ ಹರಿಯು ರಮಣವು ಅತ್ಯಲೌಕಿಕವಾದುದು.) (c) ಪ್ರಭುವಾದ ಶ್ರೀ ಹರಿಯು ತನ್ನ ಇಚ್ಛೆಯಿಂದ ತಾನೇ ಪುರುಷಾಕಾರಗಳಾದ ಸ್ವರೂಪಗಳಿಂದಲೂ ಸ್ತ್ರೀಯರ ಆಕಾರವುಳ್ಳ ಸ್ವರೂಪಗಳಿಂದಲೂ ಕ್ರೀಡಿಸುತ್ತಾನೆ. ಹಾಗೆಯೇ ಅವುಗಳನ್ನೇ ಒಟ್ಟಿಗೆ ಕೂಡಿಸಿ ಎರಡು ರೂಪಗಳುಳ್ಳವನಾಗಿ ಕ್ರೀಡಿಸುತ್ತಾನೆ. (d) ಆ ಹರಿಯೇ ಮುಖ್ಯಪ್ರಾಣನಿಗೆ ಉತ್ಪತ್ತಿಯನ್ನು ಇಚ್ಛಿಸಿದವನಾಗಿ ಲಕ್ಷ್ಮಿಯಲ್ಲಿ ಅಥವಾ ಲಕ್ಷ್ಮಿಯಲ್ಲಿರುವ ತನ್ನ ಸ್ತ್ರೀಶರೀರದಲ್ಲಿ ಕ್ರೀಡಿಸುತ್ತಾನೆ. (ಆದುದರಿಂದ) 'ಅನಕಾಮಮಾರ'ನೆಂದು ಹೆಸರುಳ್ಳವನು. ಹೀಗೆ ಅರ್ಧನಾರೀನಾರಾಯಣ ತಂತ್ರದಲ್ಲಿ.

ಭಾ|| (a) ವಾಯೋರುತ್ಪತ್ತಿಕಾಮೋ ಮಾಯಾಂ ರಮಾಯಾಂ ರಮತ ಇತ್ಯನಕಾಮಮಾರಃ । (b) ಜೀವಸ್ಥಿತೇನಾಕ್ಷರಗೇನಾಕ್ಷರನಾಮ್ನಾ ಸ್ವರೂಪೇಣ ಜೀವಾಖ್ಯ ಸೂರ್ಯಸ್ಥಿತಮಹರಾಖ್ಯಂ ಸ್ವರೂಪಮಾಪ್ನೋತಿ ತೇನ ಚಾಕ್ಷರಾಖ್ಯಂ ಸ್ವರೂಪಮಾಪ್ನೋತಿ || ಯದಕ್ಷರಾದಕ್ಷರಮೇತಿ ಯುಕ್ತಮಿತ್ಯಸ್ಯ ವ್ಯಾಖ್ಯಾನರೂಪತ್ವಾಚ್ಛ್ರುತದವಸೀಯತೇ । (c) ಪುಮಾಂಸಂ ಸ್ತ್ರಿಯಂ ಚ ವದನ್ನೇವ ನ ವದತೀತ್ಯುಕ್ತತ್ವಾದುಭಯಾತ್ಮಕಂ ರೂಪಂ ಪ್ರತೀಯತೇ || (d) ಅಸ್ತ್ರೀಪುಮಾನಿತಿ ಬ್ರುವನ್ನಪಿ ನ ವದತೀತ್ಯುಕ್ತತ್ವಾಚ್ಚ ಸ್ತ್ರೀತ್ವಂ ಪುಂಸ್ತ್ವಂ ಚ ಪ್ರತೀಯತೇ ವಿಷ್ಣೋಃ ||

ಅ || (a) ಮುಖ್ಯಪ್ರಾಣನಿಗೆ ಉತ್ಪತ್ತಿಯನ್ನಿಚ್ಛಿಸಿದವನಾಗಿ, ಮಾಯಾಂ=ಲಕ್ಷ್ಮಿಯಲ್ಲಿ, ಕ್ರೀಡಿಸುತ್ತಾನೆ. ಎಂದು 'ಅನಕಾಮಮಾರ'ನೆಂದು ಹೆಸರುಳ್ಳವನು. (b) ಬೃಹತೀಸಹಸ್ರವನ್ನು ಸ್ತುತಿಸುವ ಜೀವನಲ್ಲಿ ಇರತಕ್ಕುದೂ ಆ ಅಕ್ಷರದಲ್ಲಿ ಇರತಕ್ಕುದೂ ಅಕ್ಷರನಾಮಕವೂ ಆದ ತನ್ನ ಸ್ವರೂಪದಿಂದ, ಜೀವನೆಂದು ಹೆಸರುಳ್ಳ ಸೂರ್ಯನಲ್ಲಿ ಇರತಕ್ಕುದೂ ಅಹರ್ನಾಮಕವೂ ಆದ ಸ್ವರೂಪವನ್ನು ಹೊಂದುತ್ತಾನೆ, (ಕ್ರೀಡಿಸುತ್ತಾನೆ.) ಜೀವನೆಂದು ಹೆಸರುಳ್ಳ ಸೂರ್ಯನಲ್ಲಿರತಕ್ಕ ಅಹರ್ನಾಮಕ ಸ್ವರೂಪದಿಂದ, ಜೀವ ಅಕ್ಷರನೆಂದು ಹೆಸರುಳ್ಳ ಸ್ವರೂಪವನ್ನು ಹೊಂದುತ್ತಾನೆ. || 'ಯದಕ್ಷರಾದಕ್ಷರಮೇತಿ ಯುಕ್ತಂ' ಎಂಬುವುದಕ್ಕೆ ವ್ಯಾಖ್ಯಾನರೂಪವಾದುದರಿಂದ ಇದು ಅವಸಾನಮಾಡಲ್ಪಡುತ್ತದೆ. [ತಾ || 'ಯದಕ್ಷರಾದಕ್ಷರಂ' ಎಂಬುವುದಕ್ಕೆ ವ್ಯಾಖ್ಯಾನರೂಪವಾದುದರಿಂದಲೇ ಆ ಶ್ಲೋಕಕ್ಕೆ ಯಾವುದೊಂದು ವಿಷ್ಣ್ವಾಖ್ಯ

ಬ್ರಹ್ಮನು ಬೃಹತ್ಯಕ್ಷರದಲ್ಲಿರುವ ರೂಪದಿಂದ ಅಹರ್ನಾಮಕ ಸೂರ್ಯನನ್ನು ಹೊಂದುತ್ತಾನೆ. ಸೂರ್ಯನಿಂದ ಅಕ್ಷರದಲ್ಲಿರುವವನನ್ನು ಹೊಂದುತ್ತಾನೆ. ಆ ಎರಡೂ ಸ್ತ್ರೀಪುಂರೂಪದಿಂದೊಡಗೂಡುತ್ತದೆ. ಹಾಗೆಯೇ ಅಕ್ಷರದಲ್ಲಿರತಕ್ಕ ರೂಪದಿಂದ ಅಕ್ಷರದಲ್ಲಿರುವ ಸ್ತ್ರೀರೂಪವನ್ನು ಹೊಂದುತ್ತಾನೆ. ಹೀಗೆ ಪರಸ್ಪರವಾಗಿ ಸ್ತ್ರೀಪುಂರೂಪದಿಂದೊಡಗೂಡಿದ ಭಗವದ್ರೂಪವನ್ನು ಸ್ತ್ರೀರೂಪದಿಂದ ಯುಕ್ತರಾದ ದೇವತೆಗಳು ಅಶ್ವರೂಪರಾಗಿ, ರಥದಲ್ಲಿ ನಿಯುಕ್ತರಾಗಿ ಹೊರುತ್ತಾರೆ. ಎಂದು ಅರ್ಥಾಂತರವನ್ನು ತಿಳಿಯತಕ್ಕದು.) (c) ಕೇವಲ ಪುರುಷರೂಪಿಯನ್ನಾಗಿಯೂ ಸ್ತ್ರೀರೂಪಿಯನ್ನಾಗಿಯೂ ಹೇಳುವವನೇ ಹೇಳುವುದಿಲ್ಲ ಎಂದು ಹೇಳಿರುವುದರಿಂದ ಎರಡು ಸ್ವರೂಪವುಳ್ಳ ರೂಪವೂ ತೋರುತ್ತದೆ. (d) ಸ್ತ್ರೀರೂಪನೂ ಪುರುಷರೂಪನೂ ಅಲ್ಲವೇ ಅಲ್ಲ. ಎಂದು ಹೇಳುವವನೂ ಹೇಳುವುದಿಲ್ಲ ಎಂದು ಹೇಳಿರುವುದರಿಂದಲೂ ಶ್ರೀ ಹರಿಗೆ ಸ್ತ್ರೀತ್ವವೂ ಪುಂಸ್ತ್ವವೂ ತೋರುತ್ತದೆ.

**ಭಾ॥ (a)** ನ ಚ ನಪುಂಸಕರೂಪಂ ಭಗವತಃ ಕುತ್ರಚಿದುಕ್ತಂ । ಪ್ರಸಿದ್ಧಮೇವ ಚ ರೂಪದ್ವಯಂ ॥ **(b)** ಅತೋ ನಪುಂಸಕೇ ವದನ್ನಪಿ ನ ವದತೀತಿ ನ ತದ್ವದನುಷಜ್ಯತೇ । ನಪುಂಸಕರೂಪೇ ಪ್ರಮಾಣಾಭಾವಾದೇವ ॥ **(c)** ಲೌಕಿಕ ಸ್ತ್ರೀಪುಂವಿಲಕ್ಷಣತ್ವಾದಸ್ತ್ರೀಪುಮಾನಿತ್ಯಪಿ ವದನ್ನಿತಿ ಭವತಿ ॥ **(d)** ಸ್ತ್ರೀಪುಂರೂಪದ್ವಯಂ ವಿಷ್ಣೋರ್ನ ತೃತೀಯಂ ಕಥಂಚನ ॥ ಸಾಕ್ಷಾನ್ನಪುಂಸಕಸ್ತಸ್ಮಾನ್ಮುಕ್ತಿಭಾಗೀ ನ ತು ಕ್ವಚಿತ್ । ಇತಿ ಬ್ರಹ್ಮಾಂಡೇ ।

ಅ ॥ (a) ಶ್ರೀ ಹರಿಗೆ ನಪುಂಸಕರೂಪವು ಎಲ್ಲಿಯೂ ಹೇಳಲ್ಪಡಲಿಲ್ಲ. ಎರಡೇ ರೂಪವು ಪ್ರಸಿದ್ಧವಾಗಿದೆ. (b) ಆದುದರಿಂದ (ಸ್ತ್ರೀ) ನಪುಂಸಕಗಳನ್ನು (ಪುಂ) ನಪುಂಸಕಗಳನ್ನು ಹೇಳುವವನೂ ಹೇಳುವುದಿಲ್ಲ. ಎಂದು ಅದರಂತೆಯೇ (ನ ಇ) ಅನುಷಂಗ ಮಾಡಲ್ಪಡುವುದಿಲ್ಲ. ನಪುಂಸಕರೂಪದಲ್ಲ ಪ್ರಮಾಣವಿಲ್ಲದಿರುವುದರಿಂದಲೇ. (c) ಲೋಕದಲ್ಲಿರುವ ಸ್ತ್ರೀಪುರುಷರಿಂದ ವಿಲಕ್ಷಣನಾದುದರಿಂದ 'ಅಸ್ತ್ರೀಪುಮಾನ್' ಎಂದು ಹೇಳುವವನೂ ಹೇಳುತ್ತಾನೆ ಎಂದೇ ಆಗುತ್ತಾನ. (d) ಶ್ರೀ ಹರಿಗೆ ಸ್ತ್ರೀರೂಪವೂ ಪುಂರೂಪವೂ ಎಂದೆರಡೇ ಇರುವುದು. ಯಾವ ಪ್ರಕಾರದಿಂದಲೂ ಮೂರನೇದಾದ ನಪುಂಸಕವು ಇಲ್ಲ. ಆದುದರಿಂದ (ಅಂದರೆ ಬಿಂಬರೂಪವು ನಪುಂಸಕವಾಗದೇನೇ ಇರುವುದರಿಂದ ಸ್ವಭಾವತಃ ನಪುಂಸಕಸ್ವರೂಪವು ಇಲ್ಲದೆ ಇರುವುದರಿಂದಲೇ) ಸ್ವಭಾವತಃ ನಪುಂಸಕರೂಪವು ಎಲ್ಲಿಯೂ ಮುಕ್ತಿಯನ್ನು ಹೊಂದಿಸಲಾರದು. ಎಂದು ಬ್ರಹ್ಮಾಂಡಪುರಾಣದಲ್ಲಿ ಅದೆ.

ತಾ ॥ ಈ ಅಧ್ಯಾಯದಲ್ಲಿ ಅನೇಕ ಸ್ಥಳದಲ್ಲಿ ಪರಮಾತ್ಮನಿಗೆ ಅಲೌಕಿಕವಾದ ಸ್ತ್ರೀಪುಂರೂಪಗಳು ಇವೆ ಎಂದು ಹೇಳಲ್ಪಟ್ಟಿದೆ. ಚೇತನವರ್ಗವೆಲ್ಲವೂ ಸ್ತ್ರೀರೂಪವೋ, ಪುಂರೂಪವೋ, ಅಥವಾ ಅರ್ಧನಾರೀರೂಪವೋ ಉಳ್ಳದ್ದಾಗಿಯೇ ಇದೆ. ಅಚೇತನ ವರ್ಗದಲ್ಲಿ ಸೇರಿದ ಕಲ್ಲು ಮುಂತಾದುವುಗಳು ನಪುಂಸಕಾಕಾರಗಳು. ಪರಮಾತ್ಮನಿಗೆ ನಪುಂಸಾಕಾರವಿಲ್ಲವು. ಅಚೇತನಗಳಲ್ಲಿ ಅಂತರ್ಯಾಮಿಯಾಗಿದ್ದರೂ, ಚೇತನೋತ್ತಮನಾದುದರಿಂದ, ವಿಲಕ್ಷಣವಾದ ಸ್ತ್ರೀರೂಪವೋ ಪುರುಷರೂಪವೋ ಉಳ್ಳವನಾಗಿಯೇ ಇರುತ್ತಾನೆ. ಶ್ರೀ ಹರಿಗೆ ನಪುಂಸಕಲಿಂಗನಾಮಗಳಿದ್ದಾಗ್ಯೂ, ನಪುಂಸಕಾಕಾರವು. ಅಂದರೆ ಅಚೇತನಾಕಾರವು ಇಲ್ಲವೇ ಇಲ್ಲ.

**ಭಾ॥ (a)** ನ ಚ ರಕ್ಷ ಇತಿ ನಪುಂಸಕ ಶಬ್ದಮಾತ್ರೇಣ ರಾವಣಾದಯೋ ನಪುಂಸಕಾ ಭವಂತಿ । ಭವತೀತಿ ಪದಾಭಾವಾದನಕಾಮುಮಾರ ಇತಿ ಭಗವ

ನ್ನಾಮ್ಯೈವೇತಿ ಜ್ಞಾಯತೇ ॥ (b) ಋಷ ಜ್ಞಾನ ಇತಿ ಹ್ಯಸ್ಮಾದ್ಧಾತೋಃ ಸರ್ವಜ್ಞ ಏಕರಾಟ್ । ವೇದದ್ರಷ್ಟಾ ಪರಮಋಷಿರ್ಹಯಾಸ್ಯಃ ಪುರುಷೋತ್ತಮಃ ॥ (c) ಮಂತ್ರಾಣಾಂ ಪ್ರಥಮೋ ದ್ರಷ್ಟಾ ಸರ್ವೇಷಾಂ ಯತ ಏವ ತು । ಋಷಿಣೋಕ್ತಮಿತಿ ಪ್ರಾಹುರ್ಮಂತ್ರೋಕ್ತಂ ಬ್ರಾಹ್ಮಣಾನ್ಯತಃ ॥ (d) ತತ್ಪ್ರಸಾದಾದ್ಧಿ ತಪಸಾ ಪಶ್ಚಾನ್ಮಂತ್ರಾನ್ಪ್ರಪೇದಿರೇ । ಬ್ರಹ್ಮಾದ್ಯಾ ಬ್ರಾಹ್ಮಣಂ ಪಶ್ಚಾತ್ತೈರ್ದೃಷ್ಟಮೃಷಿಭಿಃ ಪೃಥಕ್ ॥ ಮಂತ್ರಾಶ್ಚೋಪನಿಷಚ್ಚೈವ ॥

ಅ ॥ (a) ನಪುಂಸಕರೂಪವಿಲ್ಲದಿದ್ದರೆ ನಪುಂಸಕ ಶಬ್ದವಾಚ್ಯತ್ವವು ಹೇಗೆ ಸಂಗತವಾಗುವುದೆಂದರೆ:— 'ರಕ್ಷಃ' ಎಂಬ ಕೇವಲ ನಪುಂಸಕ ಶಬ್ದದಿಂದ ರಾವಣಮೊದಲಾದವರು ನಪುಂಸಕರು ಆಗುವುದಿಲ್ಲವಷ್ಟೇ! 'ಭವತಿ' ಎಂಬುವ ಪದವು ಇಲ್ಲದಿರುವುದರಿಂದ 'ಅನಕಾಮಮಾರಃ' ಎಂಬುವುದು ಶ್ರೀ ಹರಿಗೆ ನಾಮಧೇಯವೆಂದೇ ತಿಳಿಯಲ್ಪಡುತ್ತದೆ. (b) 'ಋಷ' ಎಂಬ ಧಾತುವು ಜ್ಞಾನವೆಂಬೀ ಅರ್ಥದಲ್ಲಿ ಇದೆ. ಎಂದು ಧಾತುವ್ಯಾಖ್ಯಾನದಿಂದ ಸರ್ವವನ್ನು ತಿಳಿದವನೂ, ಸ್ವತಂತ್ರನೂ, ವೇದಗಳನ್ನು ನೋಡಿದವನೂ, ಮುಖ್ಯಋಷಿಯೂ, ಎಲ್ಲಾ ಕ್ಷರ, ಅಕ್ಷರ ಪುರುಷರಿಂದ ಉತ್ತಮನೂ ಆದ ಹಯವದನನು. (c) ಯಾವ ಕಾರಣದಿಂದಲೇ ಎಲ್ಲಾ ಮಂತ್ರಗಳನ್ನು ಪ್ರಥಮದಲ್ಲಿ ನೋಡಿದವನೋ, ಆದುದರಿಂದ (ಅಂದರೆ ಪ್ರಥಮದಲ್ಲಿ ಮಂತ್ರದ್ರಷ್ಟನಾದುದರಿಂದ ಬ್ರಾಹ್ಮಣಾನಿ=ವಿನಿಯೋಜಕವಾಕ್ಯಗಳನ್ನು, ಮಂತ್ರದಲ್ಲಿ ಹೇಳಲ್ಪಟ್ಟಿರುವ ಅರ್ಥವನ್ನು ಋಷಿಯಿಂದ ಹೇಳಲ್ಪಟ್ಟದ್ದನ್ನಾಗಿ (ವಿದ್ವಾಂಸರು) ಹೇಳುತ್ತಾರೆ.) (d) ಆ ಪರಮಾತ್ಮನ ಅನುಗ್ರಹದಿಂದಲೇ ಬ್ರಹ್ಮಾದಿದೇವತಗಳು ಆ ಮೇಲೆ (ಶ್ರೀ ಹರಿಯ) ತಪಸ್ಸಿನಿಂದ ಮಂತ್ರಗಳನ್ನು ಹೊಂದಿದರು. ಆ ಮೇಲೆ ಬ್ರಾಹ್ಮಣವು ಬ್ರಹ್ಮಾದಿ ದೇವತೆಗಳಿಂದ ಕಾಣಲ್ಪಟ್ಟಿತು. ಮಂತ್ರಗಳೂ ಉಪನಿಷತ್ತುಗಳೂ ಕೂಡ ಮಧುಚ್ಛಂದ ಮೊದಲಾದ ಋಷಿಗಳಿಂದ ಪ್ರತ್ಯೇಕವಾಗಿ ಒಂದೊಂದು ಭಾಗದಿಂದ ಕಾಣಲ್ಪಟ್ಟವು.

ಭಾ॥ (a) ನಾಕೃತ್ವಾ ಸುಮಹತ್ತಪಃ । ಪ್ರಥಮಂ ತದ್ಧಯಾಸ್ಯೇನ ದೃಷ್ಟಂ ಕೇನಚಿದೀಕ್ಷ್ಯತೇ ॥ (b) ವಿನಾ ಪೃಥಕ್ತಪೋ ದೃಶ್ಯೇದ್ಬ್ರಾಹ್ಮಣಂ ಮುನಿಭಿರ್ಯತಃ । ಮಂತ್ರಾಶ್ಚೋಪನಿಷಚ್ಚೈವ ಬ್ರಾಹ್ಮಣಾದುತ್ತಮಾಸ್ತತಃ ॥ (c) ತತ್ರಾಪ್ಯುಪನಿಷಚ್ಛ್ರೇಷ್ಠಾ ಯುಕ್ತಾವಸ್ಥಾಧಿಗಮ್ಯತಃ ॥ ಇತ್ಯಾದಿ ಪ್ರಮಾಣವಿವೇಕೇ ॥

ಅ ॥ (a) ಪ್ರಥಮದಲ್ಲಿ ಹಯಗ್ರೀವನಿಂದ ಯಾವುದು ಕಾಣಲ್ಪಟ್ಟದೋ, ಆ ಮಂತ್ರಮೊದಲಾದುದು ಯಾರಿಂದಲೂ ಚೆನ್ನಾಗಿ ಶ್ರೇಷ್ಠವಾದ ತಪಸ್ಸನ್ನು ಮಾಡದೆ ಕಾಣಲ್ಪಡುವುದಿಲ್ಲ. (b) ವೇದ ದ್ರಷ್ಟರಾದ ಎಲ್ಲಾ ಬ್ರಹ್ಮಾದಿದೇವತೆಗಳಿಂದ (ಮಂತ್ರಗಳು ಮತ್ತು ಉಪನಿಷತ್ತುಗಳು ಇವುಗಳ ದರ್ಶನಕ್ಕೆ ಸಾಧನೀಭೂತವಾದ ತಪಸ್ಸನ್ನಪೇಕ್ಷಿಸಿ), ಪ್ರತ್ಯೇಕವಾದ ತಪಸ್ಸನ್ನು ಹೊರತು (ಅದೇ ತಪಸ್ಸಿನಿಂದ) ಬ್ರಾಹ್ಮಣವು ಯಾವ ಕಾರಣದಿಂದ ಕಾಣಲ್ಪಟ್ಟಿತೋ, ಆದುದರಿಂದ ಮಂತ್ರಗಳೂ, ಹಾಗೆ ಉಪನಿಷತ್ತುಗಳೂ ಕೂಡ ಬ್ರಾಹ್ಮಣ (ಪ್ರಯೋಜಕ ವಾಕ್ಯ) ದಿಂದ ಶ್ರೇಷ್ಠಗಳಾಗಿವೆ. (c) ಆ ಮಂತ್ರೋಪನಿಷತ್ತುಗಳ ಮಧ್ಯದಲ್ಲಿ ಉಪನಿಷತ್ತು ಧ್ಯಾನಾವಸ್ಥೆಯಲ್ಲಿ ಹೊಂದಲ್ಪಡುವ ಪ್ರಯುಕ್ತ ಶ್ರೇಷ್ಠವಾಗಿದೆ. ಇದೇ ಮೊದಲಾದುದು ಪ್ರಮಾಣವಿವೇಕವೆಂಬ ಗ್ರಂಥದಲ್ಲಿ ಹೇಳಿಯದೆ.

ಭಾ॥ (a) ತೇನ ರಥೇನಾಧ್ಯಾತ್ಮಂಶರೀರಾಖ್ಯೇನಾಧಿದೈವಂ ರಥರೂಪೇಣ । (b) ಋಭವ ಇತ್ಯತ್ರ ದೇವಾನಾಂ ಸಾಧಾರಣಂ ನಾಮ ॥ ಆದಿತ್ಯಾ ವಸವೋ ರುದ್ರಾ ವಿಶ್ವೇ ಋಭವ ಇತ್ಯಪಿ । ಸರ್ವದೇವಸಮಾಖ್ಯಾ ಚ ದ್ವಾದಶಾಷ್ಟಾದಿಕೇಷ್ವಪಿ ॥ ಇತಿ ಶಬ್ದನಿರ್ಣಯೇ ॥

ಅ ॥ (a) 'ತೇನ' ಅಂದರೆ ಅಧ್ಯಾತ್ಮದಲ್ಲಿ ಶರೀರವೆಂದು ಹೆಸರುಳ್ಳ ರಥದಿಂದ, ಅಧಿದೈವದಲ್ಲಿ ರಥರೂಪವಾದ ರಥದಿಂದ. (b) 'ಋಭವಶ್ಚಕ್ರ ರಶ್ಮಿನಾ' ಎಂಬುವಲ್ಲಿ ಋಭವಃ ಎಂಬುವುದು ದೇವತೆಗಳಿಗೆ ಸಾಧಾರಣವಾದ ನಾಮವು. ಹನ್ನೆರಡು ಆದಿತ್ಯರು, ಎಂಟು ವಸುಗಳು ಮೊದಲಾದವರಲ್ಲಿಯೂ ಕೂಡ (ಅಂದರೆ ೧೨ ಸೂರ್ಯರು, ೮ ವಸುಗಳು, ೧೧ ರುದ್ರರು ೧೦ ವಿಶ್ವೇದೇವತೆಗಳು, ೧೦೦೦ ಋಭುಗಳು). ಆದಿತ್ಯರು, ವಸುಗಳು, ರುದ್ರರು, ವಿಶ್ವೇದೇವತೆಗಳು, ಋಭುಗಳು ಎಂಬುವುದೂ ಎಲ್ಲಾ ದೇವತೆಗಳ ಸಮಾಖ್ಯೆಯೂ ಕೂಡ ಅದೆ. ಎಂದು ಶಬ್ದನಿರ್ಣಯದಲ್ಲಿ ಇದೆ.

ತಾ ॥ ೧೨ ಸೂರ್ಯರ ನಾಮಧೇಯ. ೧. ಇಂದ್ರೋ (೨) ವಿಷ್ಣು (೩) ರವಿಃ (೪) ಧಾತಾ, (೫) ಪೂಷಾ (೬) ತ್ವಷ್ಟಾ, (೭) ಅರ್ಯಮಾ, (೮) ಭಗಃ । (೯) ಮಿತ್ರೋ (೧೦) ವರುಣ (೧೧) ಪರ್ಜನ್ಯೋ (೧೨) ಸವಿತಾ, ದ್ವಾದಶೋ ಮತಃ ॥ ೮. ವಸುಗಳ ನಾಮವು. (೧) ಧ್ರುವಃ (೨) ಪ್ರಾಣೋ (೩) ದ್ಯುನಾಮಾ (೪) ಅರ್ಕೋ (೫) ವಹ್ನಿಃ (೬) ದೋಷೋ, (೭) ವಸುಃ (೮) ಧರಃ ॥ ವಸವೋಽಷ್ಟಾವಿಮೇ ಪ್ರೋಕ್ತಾಃ ॥ ೧೧ ರುದ್ರರು. (೧) ಅಜೈಕಪಾತ್ (೨) ಅಹಿರ್ಬುಧ್ನೋ (೩) ರುದ್ರೋ (೪) ವಾಮೋ (೫) ವೃಷಾಕಪಿಃ । (೬) ಮಹೇಶೋ (೭) ರೈವತೋ (೮) ಭೀಮೋ (೯) ಘೋರಃ (೧೦) ತತ್ಪುರುಷೋ (೧೧) ಭವಃ ॥ ಏವಮೇಕಾದಶ ಪ್ರೋಕ್ತಾಃ ॥ ೧೦ ವಿಶ್ವೇದೇವತೆಗಳ ಹೆಸರು. (೧) ಸತ್ಯೋ (೨) ವಸುಃ (೩) ಕ್ರತುಃ (೪) ದಕ್ಷಃ (೫) ಕಾಮಃ (೬) ಕಾಲೋ (೭) ಧನುಃ (೮) ಧರಃ ॥ (೯) ಪುರೂರವಾ (೧೦) ಆರ್ದ್ರವಶ್ಚ, ವಿಶ್ವೇದೇವಾ ದಶ ಸ್ಮೃತಾಃ ॥ ಹೀಗೆ ವಿಷ್ಣುರಹಸ್ಯವೆಂಬ ಪುರಾಣದಲ್ಲಿ ಅದೆ.

ಭಾ॥ (a) ನಿರ್ಮಿತೋ ದೈವತೈಃ ಸರ್ವೈರ್ವಿಷ್ಣುನಾ ವಾಯುನಾ ಸಹ । ಅಧಿಷ್ಠಿತೋ ರಥೋ ದಿವ್ಯಃ ಸೋಽಧ್ಯಾತ್ಮಂ ದೇಹನಾಮಕಃ ॥ (b) ಸಮ್ಯಗ್ಯೋಗೋ ಯದಾ ತಸ್ಯ ಮನೋವಾಕ್ಕರ್ಮಭಿರ್ಭವೇತ್ । ದೇಹಾಖ್ಯಸ್ಯ ರಥಸ್ಯೈವ (c) ತದಾ ನಾರಾಯಣಾತ್ಪ್ರಭೋಃ ॥ ವಿವಿಧಂ ವಾಸವತ್ವಾತ್ತು ವಿವಸ್ವನ್ನಾಮಕಾಚ್ಛುಭಂ । ಸಂಸಾರವಾರಕಂ ಜ್ಞಾನಂ ದಿವೋ ದುಹಿತೃನಾಮಕಂ ॥ ವಿಷ್ಣುತತ್ತ್ವಾಪರೋಕ್ಷಾಖ್ಯಂ (d) ಅಹನೀ ದ್ವೇ ಚ ಶೋಭನೇ । ಜ್ಞಾನಾವಸ್ಥಾ ಮುಕ್ತ್ಯವಸ್ಥೇತ್ಯುಭೇ ಏವಾಹನೀ ಪರೇ ॥

ಅ ॥ (a) (ಸಂಪೂರ್ಣಮಂತ್ರವನ್ನು ಪ್ರಮಾಣದಿಂದ ವ್ಯಾಖ್ಯಾನಮಾಡುತ್ತಾರೆ.) ಎಲ್ಲಾ ದೇವತೆಗಳಿಂದ ನಿರ್ಮಿಸಲ್ಪಟ್ಟ ಯಾವ ರಥವು ವಾಯುವಿನಿಂದೊಡಗೂಡಿದ ಶ್ರೀ ಹರಿಯಿಂದ ಏರಲ್ಪಟ್ಟದೋ, ಆ ದಿವ್ಯವಾದ ರಥವು ಅಧ್ಯಾತ್ಮವು ದೇಹವೆಂದು ಹೆಸರುಳ್ಳ ರಥವು. (b) ಆ ದೇಹವೆಂದು ಹೆಸರುಳ್ಳ ರಥಕ್ಕೇನೇ ಯಾವಾಗ (ಮನಸ್ಸಿನಿಂದ ಧ್ಯಾನವು, ಮಾತಿನಿಂದ ಸ್ತುತಿಯು, ಶರೀರಕರ್ಮದಿಂದ ನಮಸ್ಕಾರಾದಿಯು ಈ ಪ್ರಕಾರವಾಗಿ) ಮನಸ್ಸು,

ವಾಕ್, ಕರ್ಮಗಳಿಂದ ಸಂಬಂಧವು ಆಗುವುದೋ! (c) ಆಗ (ದೇಹದಲ್ಲಿ '೭೨೦೦೦' ಎಪ್ಪತ್ತೆರಡು ಸಹಸ್ರನಾಡಿಗಳಲ್ಲಿಯೂ, ಅಧಿದೈವದಲ್ಲಿಯೂ ಅನೇಕ ಸ್ಥಾನಗಳಲ್ಲಿಯೂ ಹೀಗೆ) ಅನೇಕ ರೂಪವಾಗಿ ವಾಸಮಾಡುವುದರಿಂದ 'ವಿವಸ್ವಾನ್' ಎಂದು ಹೆಸರುಳ್ಳವನೂ, ಸರ್ವಸಮರ್ಥನೂ ಆದ ನಾರಾಯಣನಿಂದ, ಮಂಗಲಕರವೂ, ಸಂಸಾರವನ್ನು ನಿವಾರಿಸುವುದೂ (ದ್ಯುಶಬ್ದದಿಂದಹೇಳಲ್ಪಡುವ ಮಹಾಲಕ್ಷ್ಮಿಯೇ ಅಭಿಮಾನಿಯಾಗಿಉಳ್ಳ ವೇದದ್ವಾರಾ ಮನಸ್ಸಿನಿಂದ ಹುಟ್ಟದಪ್ರಯುಕ್ತ) ದಿವೋದುಹಿತೃ ಎಂದು ಹೆಸರುಳ್ಳದ್ದೂ ಆದ ಹರಿತತ್ವಾಪರೋಕ್ಷವೆಂಬ ಜ್ಞಾನವು ಹುಟ್ಟುತ್ತದೆ. (d) ಜ್ಞಾನಾವಸ್ಥಾ ಮುಕ್ತ್ಯವಸ್ಥಾ ಎಂಬ ಶೋಭನಗಳಾದ ಎರಡೂ ಅಹಃ ಶಬ್ದವಾಚ್ಯಗಳು. (ಜ್ಞಾನವು ಪ್ರಕಾಶರೂಪವಾದುದರಿಂದಲೂ, ಮುಕ್ತಿಯು ಸ್ವರೂಪಪ್ರಕಾಶರೂಪವಾದುದರಿಂದಲೂ) ಮುಖ್ಯಗಳಾದ ಅಹಃ ಶಬ್ದವಾಚ್ಯಗಳು ಪೂರ್ವೋಕ್ತಗಳಾದ ಜೀವನ್ಮುಕ್ತಿ ಮುಕ್ತ್ಯವಸ್ಥಾರೂಪ ಎರಡೇ ಸರಿ. (ಈ ಎರಡು ಹುಟ್ಟುತ್ತವೆ. ಇವುಗಳನ್ನು ಸಂಪಾದಿಸಬೇಕು. ಹೀಗೆ ಅಧ್ಯಾತ್ಮವು.)

ಭಾ॥ (a) ಜಾಯಂತೇ ದೇವತಾಸ್ತ್ವೇಷಾಂ ಭಾರತೀ ವಾಯುರೇವ ಚ । ಜೀವನ್ಮುಕ್ತೇಶ್ಚ ಮುಕ್ತೇಶ್ಚ ದಾತಾ ರೂಪದ್ವಯಿಉ ಪ್ರಭುಃ ॥ (b) ಸರ್ವಸ್ತ್ರೀಣಾಮುತ್ತಮತ್ವಾದ್ದ್ಯೌರ್ನಾಮಾ ಶ್ರೀರುದಾಹೃತಾ । ದುಹಿತಾಽಸ್ಯಾ ಭಾರತೀ ತು (c) ನಿತ್ಯಾಹೇಯಸ್ವರೂಪತಃ ॥ ಅಹರಿತ್ಯುಚ್ಯತೇ ವಾಯುಜ್ಞಾನಾತ್ಮತ್ವಾತ್ತಥೈವ ಚ । (d) ಅಧಿದೈವೇ ರಥೇಽಪ್ಯೇತೇ ವಿಷ್ಣೋರ್ಲಕ್ಷ್ಮ್ಯಾಂ ಪ್ರಜಜ್ಞಿರೇ ॥ ರಥೇನ ತೇನ ದೇವೇಶೌ ವಿಷ್ಣುವಾಯೂ ಜಗತ್ಪತೀ । ಆಯಾತಮಿತಿ ದೇವೌ ತೌ ಪ್ರಾರ್ಥಯೇದ್ಯಜ್ಞಕರ್ಮಣಿ ॥ (e) ಅನ್ಯಥಾಽಪ್ಯರ್ಥಯೇದೇತೌ ಜ್ಞಾನೇಚ್ಛುಃ ಪುರುಷಃ ಸದಾ । ಜಪೇನ್ಮಂತ್ರದ್ವಯಂ ನಿತ್ಯಮಾತೇನ ನಿಮಿಷಸ್ತಥಾ ॥

ಅ॥ (a) ಈ ಅಪರೋಕ್ಷಜ್ಞಾನ ಮೊದಲಾದವುಗಳಿಗೆ ಅಭಿಮಾನಿದೇವತೆಗಳಾದ ಭಾರತಿಯೂ, ಜೀವನ್ಮುಕ್ತಿಯನ್ನೂ ಮುಕ್ತಿಯನ್ನೂ ಕೊಡುವ ಎರಡು ರೂಪಗಳುಳ್ಳ ಸರ್ವಸಮರ್ಥರಾದ ಮುಖ್ಯಪ್ರಾಣದೇವರೂ ಕೂಡ ಹುಟ್ಟುತ್ತಾರೆ. (b) ಎಲ್ಲಾ ಸ್ತ್ರೀಯರಲ್ಲಿಯೂ ಅತ್ಯುತ್ತಮಳಾದುದರಿಂದ ಮಹಾಲಕ್ಷ್ಮಿಯೇ ದ್ಯೌರ್ನಾಮಕಳಾಗಿ ಹೇಳಲ್ಪಟ್ಟಿದ್ದಾಳೆ. ಲಕ್ಷ್ಮಿಯ ಮಗಳಾದ ಭಾರತಿಯಾದರೂ ('ದಿವೋ ದುಹಿತಾ' ಎನ್ನಿಸಿಕೊಳ್ಳುತ್ತಾಳೆ.) (c) ನಿರಂತರದಲ್ಲಿಯೂ ಅಹೇಯಸ್ವರೂಪವುಳ್ಳವರಾದುದರಿಂದಲೂ, ಹಾಗೆಯೇ ಜ್ಞಾನಸ್ವರೂಪರಾದುದರಿಂದಲೂ (ಲಕ್ಷ್ಮಿಯ ಅಪತ್ಯಗಳಾದ ಎರಡು ವಾಯುರೂಪಗಳು) ಅಹಃ ಶಬ್ದವಾಚ್ಯಗಳೆಂದು ಹೇಳಲ್ಪಡುತ್ತವೆ. (d) ಅಧಿದೈವವಾದ ರಥದಲ್ಲಿಯೂ ಕೂಡ ಈ ದೇವತೆಗಳು ವಿಷ್ಣುವಿನಿಂದ ಲಕ್ಷ್ಮೀದೇವಿಯಲ್ಲಿ ಹುಟ್ಟಿದರು. (ಅಂದರೆ ರಥಾರೂಢರಾದ ಲಕ್ಷ್ಮೀನಾರಾಯಣರಿಂದ ಭಾರತೀಪ್ರಾಣರು ಹುಟ್ಟಿದರು. ಆ ರಥದಿಂದ ಎಲ್ಲಾ ದೇವತೆಗಳಿಗೆ ನಿಯಾಮಕರೂ ಜಗತ್ತಿಗೆ ಅಧಿಪತಿಗಳೂ ಆದ ವಿಷ್ಣುವಾಯುಗಳನ್ನು ಬನ್ನಿರಿ ಎಂದು ಯಜ್ಞಕರ್ಮದಲ್ಲಿ ಆ ದೇವತೆಗಳನ್ನು ಪ್ರಾರ್ಥಿಸತಕ್ಕದು. (e) ಜ್ಞಾನವನ್ನು ಇಚ್ಛಿಸುವ ಪುರುಷನು ಯಾವಾಗಲೂ 'ಆತೇನಯಾತಂ' ಹಾಗೆಯೇ, 'ನಿಮಿಷಶ್ಚಿತ್' ಎಂಬೀ ಎರಡು ಮಂತ್ರಗಳನ್ನು ಜಪಿಸುವವನಾಗಿ ರೀತ್ಯಂತರವಾಗಿಯೂ ಯಾವಾಗಲೂ ಈ ದೇವತೆಗಳನ್ನು ಪ್ರಾರ್ಥಿಸತಕ್ಕದು.

ಭಾ॥ (a) ರಕ್ಷಣಂ ವಾಂ ಸಮೀಪೇ ಸ್ಯಾನ್ಮಮೇತ್ಯಧ್ಯಾತ್ಮಮೇವ ಚ । ಹಯಾಸ್ಯತ್ವಾಚ್ಚಾಶ್ವಿನೌ ತಾವಿತ್ಯಾಹ ಪರಮಾ ಶ್ರುತಿಃ ॥ (b) ಐಂದ್ರಾಗ್ನೇಯಾದಿಕಾಶ್ಚೈವಂ ಸರ್ವೇ ಮಂತ್ರಾ ಹರಿಂ ಪರಂ । ವದಂತಿ ಮುಖ್ಯತೋ ನಾನ್ಯಂ ಸರ್ವನಾಮಾನಮಚ್ಯುತಂ ॥ (c) ಅಥವಾ ವಾಯುದೇವಸ್ಥಂ ಪೃಥಕ್ಸಂಸ್ಥಂ ಚ ಕೇಶವಂ । ಮಂತ್ರೋ ದ್ವಿವಚನೋ ವಕ್ತಿ ತಥಾ ಬಹುವಚಸ್ಸ್ವಪಿ ॥ ಇತ್ಯಾದ್ಯೈತರೇಯಸಂಹಿತಾಯಾಂ ॥

ಅ ॥ (a) ನಿಮ್ಮ ಸಮೀಪದಲ್ಲಿಯೇ ನನಗೆ ರಕ್ಷಣೆಯು ಆಗಲಿ ಹೀಗೆ ಅಧ್ಯಾತ್ಮವು. ಉತ್ಕೃಷ್ಟವಾದ ಶ್ರುತಿಯು ಕುದುರೆಯಂತೆ ಮುಖವುಳ್ಳವರಾದುದರಿಂದ ಅಶ್ವಿನ್‌ನಾಮಕರಾದ ಆ ವಿಷ್ಣುವಾಯುಗಳನ್ನು ಕುರಿತು ಹೀಗೆ ಹೇಳಿತು. (b) ಹೀಗೆ ಐಂದ್ರ ಆಗ್ನೇಯ ಮೊದಲಾದ ಎಲ್ಲಾ ಮಂತ್ರಗಳೂ ಕೂಡ ಸರ್ವೋತ್ತಮನಾದ ಶ್ರೀ ಪರಮಾತ್ಮನನ್ನೇ ಮುಖ್ಯವಾಗಿ ಪ್ರತಿಪಾದಿಸುತ್ತವೆ. ಇತರರನ್ನು ಸರ್ವನಾಮಕನನ್ನಾಗಿಯೂ; ಅಚ್ಯುತನನ್ನಾಗಿಯೂ ಮುಖ್ಯವಾಗಿ ಪ್ರತಿಪಾದಿಸುವುದೇ ಇಲ್ಲ. ('ಐಂದ್ರಸಾನಸಿಂರಯಿಂ' 'ಅಗ್ನಿಮೀಳೇ' ಇದೇ ಮೊದಲಾದುದು ಐಂದ್ರ ಆಗ್ನೇಯಾದಿ ಮಂತ್ರಗಳು.) (c) ('ಆತೇನಯಾತಂ' ಇದೇ ಮೊದಲಾದ) ಇಬ್ಬರನ್ನು ಪ್ರತಿಪಾದಿಸುವ ಮಂತ್ರವು, ವಾಯುದೇವರ ಶರೀರದಲ್ಲಿ ಇರತಕ್ಕುದು ಪ್ರತ್ಯೇಕವಾಗಿಯೂ ಇರುವ ಕೇಶವನನ್ನೇ ಪ್ರತಿಪಾದಿಸುತ್ತದೆ. ಅಥವಾ ದ್ವಿವಚನವಾದ ಮಂತ್ರವು ಪ್ರತ್ಯೇಕವಾಗಿ (ಎರಡು ರೂಪಗಳಿಂದ) ಇರುವ ಶ್ರೀ ಹರಿಯನ್ನೇ ಪ್ರತಿಪಾದಿಸುತ್ತದೆ. ('ಘರ್ಮಾ ಸಮಂತಾ ತ್ರಿವೃತಂ ವ್ಯಾಪತುಸ್ತಯೋರ್ಜುಷ್ಟಿಂ ಮಾತರಿಶ್ವಾ ಜಗಾಮ' ಘರ್ಮಾ=ಪ್ರಕಾಶಿಸಿಕೊಂಡಿರುವ, ಸಮಂತಾ=ವ್ಯಾಪ್ತರಾದ ಭಗವಂತರು, ತ್ರಿವೃತಂ=ತೇಜೋಽಬನ್ನಾತ್ಮಕ ಶರೀರವನ್ನು, ವ್ಯಾಪತುಃ=ವಿಶೇಷಾಕಾರವಾಗಿ ವ್ಯಾಪಿಸಿದರು. ತಯೋಃ=ಆ ಭಗವಂತರ, ಜುಷ್ಟಿಂ=ಸೇವೆಯನ್ನು, (ಮಾಡುವುದಕ್ಕೋಸ್ಕರ) ಮಾತರಿಶ್ವಾ=ವಾಯುದೇವರೂ ಕೂಡ, ಜಗಾಮ=ಹೊಂದಿದರು. ಇದೇ ಮೊದಲಾದುದು.) ಬಹುವಚನಯುಕ್ತಗಳಾದ ಮಂತ್ರಗಳಲ್ಲಿಯೂ ಅದೇ ರೀತಿಯಾಗಿ ತಿಳಿಯತಕ್ಕುದು. ('ವಿಶ್ವೇದೇವಾಃ ಶೃಣುತ' ಇದೇ ಮೊದಲಾದುದು). ಅಥವಾ ಬಹುವಚನವಾದ ಮಂತ್ರವೂ ಪ್ರತ್ಯೇಕರೂಪದಿಂದ ಇರತಕ್ಕ ಕೇಶವನನ್ನೇ ಪ್ರತಿಪಾದಿಸುತ್ತದೆ. ('ಇಂದ್ರೋ ಮಾಯಾಭಿಃ ಪುರುರೂಪ ಈಯತೇ ಯುಕ್ತಾ ಹ್ಯಸ್ಯ ಹರಯಃ ಶತಾ ದಶ' ಇಂದ್ರಃ=ಶ್ರೀ ಪರಮಾತ್ಮನು, ಮಾಯಾಭಿಃ=ತನ್ನ ಇಚ್ಛೆಗಳಿಂದ, ಪುರುರೂಪಃ=ಬಹುರೂಪಿಯಾಗಿ, ಈಯತೇ=ತಿಳಿಯಲ್ಪಡುತ್ತಾನೆ. ಅಸ್ಯ ಹಿ=ಈತನಿಗೇನೇ, ಹರಯಃ=ಹರಿನಾಮಕಗಳಾದ, ಶತಾನಿ=ನಾರಾಯಣಾದಿ ೧೦೦ ನಾಮಧೇಯಗಳೂ, ದಶ=ಮತ್ಸ್ಯಾದಿ (೧೦) ನಾಮಗಳೂ, ಯುಕ್ತಾಃ=ಉಪಪನ್ನಗಳು. ಇದೇ ಮೊದಲಾದುದು.) ಇದೇಮೊದಲಾದುದು ಐತರೇಯ ಸಂಹಿತೆಯಲ್ಲಿ ಹೇಳಿಯದೆ. ॥

ಭಾ॥ (a) ಸುಖಂ ದದತ ಇತಿ ಸುದಿನೇ । (b) ವಿವಸ್ವತೋ ವಿಷ್ಣೋಃ ಸಕಾಶಾದ್ದಿವೋ ದುಹಿತಾ ಅಹನೀ ಚ ಜಾಯಂತೇ ॥ ಅಹನೀ ಇತಿ ದ್ವಿವಚನೇನ ದ್ವಿತ್ವೇ ಸಿದ್ಧೇಽಪ್ಯುಭೇ ಇತಿ ವಚನಮಧ್ಯಾತ್ಮಾಧಿದೈವತಯೋರುಭಯೋರಪಿ ವಚನಾರ್ಥಂ । (c) ನ ಚ ಸೂರ್ಯರಥೋಽತ್ರ ವರ್ಣ್ಯತೇ ॥ ನ ಚಾಹೋರಾತ್ರೇ ಅಹನೀ ಇತ್ಯುಚ್ಯೇತೇ । ಸೂರ್ಯಸ್ಯಾಶ್ವಿನಾಮಾಭಾವಾತ್॥ಸಪ್ತಾಶ್ವತ್ವಾಚ್ಚ ತದ್ರಥಸ್ಯ । ಚತುರಶ್ವತ್ವಂ ಚಾತ್ರೋಚ್ಯತೇ ॥

ಅ ॥ (a) ಸುಖವನ್ನು ಕೊಡುತ್ತವೆ; ಆದುದರಿಂದ ಸುದಿನೇ ಎನ್ನಿಸಿಕೊಳ್ಳುತ್ತವೆ. (ವಿವಸ್ವತಃ=ಸೂರ್ಯನ, ಮತ್ತು ಆತನ ರಥಕ್ಕೆ, ಯೋಗೇ=ಸಂಬಂಧವಾಗುತ್ತಿರಲು, ದಿವಃ=ದ್ಯುಲೋಕದ, ದುಹಿತಾ=ಮಗುವಾದ ಪ್ರಕಾಶವು, ಉಭೇ ಅಹನೀ=ಹಗಲು ರಾತ್ರಿಗಳೂ ಕೂಡ, ಜಾಯಂತೇ=ಹುಟ್ಟುತ್ತವೆ. ಎಂಬೀ ಅಪವ್ಯಾಖ್ಯಾನವನ್ನು ತಿರಸ್ಕರಿಸುವುದಕ್ಕೋಸ್ಕರ ತನ್ನ ವ್ಯಾಖ್ಯಾನವನ್ನು ಪ್ರಕಟೀಕರಿಸುತ್ತಾರೆ.) (b) ವಿವಸ್ವತಃ ಅಂದರೆ ವಿಷ್ಣುವಿನ ಸಕಾಶದಿಂದ ವಿಷ್ಣುವಿನ ಅಪರೋಕ್ಷ ಜ್ಞಾನವು, ಜೀವನ್ಮುಕ್ತಿ ಮುಕ್ತ್ಯವಸ್ಥೆಗಳೂ ಕೂಡ ಹುಟ್ಟುತ್ತವೆ. 'ಅಹನೀ' ಎಂದು ದ್ವಿವಚನದಿಂದ ದ್ವಿತ್ವವು (ಎರಡು) ಎಂಬುವುದು ಸಿದ್ಧವಾಗಿದ್ದರೂ 'ಉಭೇ' ಎಂದು ಹೇಳಿರುವುದು ಅಧ್ಯಾತ್ಮ ಅಧಿದೈವತಗಳಿಬ್ಬರನ್ನು ಹೇಳುವುದಕ್ಕೋಸ್ಕರವಾಗಿದೆ. (ಅಪವ್ಯಾಖ್ಯಾನವನು ತಿರಸ್ಕರಿಸುತ್ತಾರೆ.) (c) ಈ ಮಂತ್ರದಲ್ಲಿ ಸೂರ್ಯನ ರಥವು ಹೇಳಲ್ಪಡುವುದಿಲ್ಲ. (ಜ್ಞಾಪಕವಿಲ್ಲದಿರುವುದರಿಂದ) (ಅಹಶ್ಚ ಅಹಶ್ಚ ಅಹನೀ ಎಂಬೀ ರೀತಿಯಾಗಿ ಅಹಃ ಶಬ್ದವಾಚ್ಯಗಳು ಎರಡು ಎಂದಾಗಲೀ ಎರಡು ದಿನಗಳೆಂದಾಗಲೀ ಹೇಳಲ್ಪಡುತ್ತವೆ). ಹಗಲು ರಾತ್ರಿಗಳು ಅಹನೀ ಎಂದು ಹೇಳಲ್ಪಡುವುದಿಲ್ಲ. (ಸರೂಪಗಳಿಗೇನೇ ಏಕಶೇಷವನು ವಿಧಿಸಿರುವುದರಿಂದ) ಸೂರ್ಯನಿಗೆ 'ಅಶ್ವಿ' ಎಂಬ ಹೆಸರು ಇಲ್ಲದಿರುವುದರಿಂದಲೂ (ಅಸಂಗತವು. ಅಂತೂ 'ಅಶ್ವಿನೌ' ಎಂಬ ಶ್ರುತಿವಿರೋಧ ಬರುತ್ತದೆ.) ಮತ್ತು ಆ ಸೂರ್ಯನ ರಥಕ್ಕೆ ಏಳು ಕುದುರೆಗಳು ಉಳ್ಳದ್ದು ಎಂದು ಇರುವುದರಿಂದಲೂ (ಅಸಂಗತವು.) 'ಸಪ್ತ ಯುಂಜಂತಿ ರಥಮೇಕಚಕ್ರಂ' ಅಂದರೆ ಏಳು ಕುದುರೆಗಳು ಒಂದು ಚಕ್ರವುಳ್ಳ ರಥವನ್ನು ಕೂಡಿಸುತ್ತವೆ. ಎಂಬೀ ಶ್ರುತಿಯಿರುವುದರಿಂದ ಈ ಮಂತ್ರದಲ್ಲಿ ನಾಲ್ಕು ಕುದುರೆಗಳು ಇರುವುದು ಎಂದು ಹೇಳಲ್ಪಡುತ್ತದೆ.

ಭಾ॥ (a) ಶ್ರೋತ್ರೇ ಪಕ್ಷಸೀ ಚಕ್ಷುಷೀ ಯುಕ್ತೇ ಇತ್ಯಧ್ಯಾತ್ಮಸಂಬಂಧಾಚ್ಚ । (b) ನ ಚ ರಾತ್ರೌ ಸುದಿನಮಿತಿ ಪ್ರಯೋಗೋ ದೃಷ್ಟಃ ॥ ಅಸುದಿನಸ್ಯಾಪಿ ತತ ಏವ ಜಾತತ್ವಾದ್ವ್ಯರ್ಥವಿಶೇಷಣತಾ ಚ । (c) ಅಸ್ಮಿನ್ಪಕ್ಷೇ ತು ಲೌಕಿಕಾಹವ್ಯಾವೃತ್ತ್ಯರ್ಥಂ ಸುದಿನೇ ಇತಿ ಯುಜ್ಯತೇ ॥ ಜೀವನ್ಮುಕ್ತಿಶ್ಚ ಮುಕ್ತಿಶ್ಚ ಹಿ ಮುಖ್ಯೇ ಸುದಿನೇ ॥

ಅ ॥ (a) ಶ್ರೋತ್ರೇ=ಕಿವಿಗಳಲ್ಲಿರುವ ಚಂದ್ರ, ರೋಹಿಣಿಯರು, ಪಕ್ಷಸೀ=ಪಾರ್ಶ್ವಗಳಲ್ಲಿ ಅಶ್ವರೂಪದಿಂದ ಇದ್ದಾರೆ. ಚಕ್ಷುಷೀ=ಕಣ್ಣಿನಲ್ಲಿರುವ ಸೂರ್ಯಸಂಜ್ಞೆಯರು, ಯುಕ್ತೇ=ಎದುರಿನಲ್ಲಿರುವ ಅಶ್ವರೂಪರು. ಎಂದು (ಅಶ್ವಗಳಿಗೆ) ಅಧ್ಯಾತ್ಮವಾದ ರಥ ಸಂಬಂಧವಿದ್ದುದರಿಂದಲೂ, (ಇಲ್ಲಿ ಹೇಳಿರುವ ವಿವಸ್ವತನಿಗಾದರೂ ಅಧ್ಯಾತ್ಮರಥ ಸಂಬಂಧವಿದ್ದುದರಿಂದಲೂ, ಸೂರ್ಯಾಶ್ವಗಳಿಗೂ ಸೂರ್ಯನಿಗೂ ಅಧ್ಯಾತ್ಮರಥ ಸಂಬಂಧವಿಲ್ಲದಿರುವುದರಿಂದಲೂ ಇದು ಸೂರ್ಯನ ರಥವಲ್ಲವು. ದೇಹವೆಂಬ ರಥದಲ್ಲಿ ಸೂರ್ಯನು ನಿಯಾಮಕನಲ್ಲ. ಇದು ಬ್ರಹ್ಮಸೂತ್ರ ಭಾಷ್ಯವೊದಲಾದುವುಗಳಲ್ಲಿ ಉಪಪಾದಿಸಲ್ಪಟ್ಟಿದೆ.) (b) (ಅಹಃ ಶಬ್ದದಿಂದ ಹಗಲು ರಾತ್ರಿಗಳನ್ನು ಅಂಗೀಕರಿಸಿದರೆ 'ಸುದಿನೇ' ಎಂಬುವುದು 'ರಾತ್ರಿ' ಎಂಬುವುದಕ್ಕೂ ವಿಶೇಷಣವು ಆಗಬೇಕಾಗುವುದು; ಅದು ಅಸಂಗತವೆಂದು ಹೇಳುತ್ತಾರೆ.) ರಾತ್ರಿಯಲ್ಲಿ ಸುದಿನವೆಂಬೀ ಪ್ರಯೋಗವು ಎಲ್ಲಿಯೂ ದೃಷ್ಟವಲ್ಲ. । ಮಹಾತ್ಮರ ದರ್ಶನಾದಿಗಳಿಂದ ಯುಕ್ತವಾದುದು ಸುದಿನವು. ಅದಲ್ಲದಿರುವುದೂ ಆ ಹರಿಯಿಂದಲೇ ಹುಟ್ಟಿರುವುದರಿಂದ ಸುದಿನವೆಂಬೀ ವಿಶೇಷವು ವ್ಯರ್ಥವೂ ಆಗುವುದು. (c) ಈ ಪೂರ್ವೋಕ್ತವಾದ ನಮ್ಮ ಪಕ್ಷದಲ್ಲಿ

ಆದರೂ ಲೌಕಿಕವಾದ ಅಹಃ (ಹಗಲನ್ನು) ಶಬ್ದವಾಚ್ಯವಾದುದನ್ನು ವ್ಯಾವರ್ತಿಸುವುದಕ್ಕೋಸ್ಕರ 'ಅಹನೀ' ಎಂಬುವುದಕ್ಕೆ 'ಸುದಿನೇ' ಎಂಬೀ ವಿಶೇಷವು ಯುಕ್ತವಾಗುತ್ತದೆ. ಜೀವನ್ಮುಕ್ತಿಯೂ ಮುಕ್ತಿಯೂ ಕೂಡ, ಮುಖ್ಯಗಳಾದ ಸುದಿನಶಬ್ದವಾಚ್ಯಗಳು.

ಭಾ॥ ಸ ಯ ಆತ್ಮಾನಮೇವ ಲೋಕಮುಪಾಸ್ತೇ ನ ಹಾಸ್ಯ ಕರ್ಮ ಕ್ಷೀಯತೇಽಸ್ಮಾದ್ಧ್ಯೇವಾತ್ಮನೋ ಯದ್ಯತ್ಕಾಮಯತೇ ತತ್ತತ್ಸೃಜತ ಇತಿ ಜ್ಞಾನಾವಸ್ಥಾಯಾಂ ಮುಕ್ತೌ ಭೋಗಬಾಹುಲ್ಯಕಾರಣತ್ವಾತ್ಸಾಽಪಿ ಮುಕ್ತಿವತ್ಸುದಿನಂ। (b) ನ ಹಿ ಮುಕ್ತಾವಾಧಿಕ್ಯಾರ್ಜನಮಸ್ತಿ ॥ ನ ಹೀಯತೇ ಯತ್ರ ಗತ್ವಾ ಯತ್ರ ಗತ್ವಾ ನ ವರ್ಧತ ಇತಿ ವಚನಾತ್। (c) ಅತೋ ಜ್ಞಾನೋತ್ಪತ್ತಿ ಸಮನಂತರಮೇವ ಮುಕ್ತೌ ನ ಪುನರಾರ್ಜನಮಸ್ತೀತಿ ಕಿಂಚಿತ್ಕಾಲಂ ಜ್ಞಾನಿತ್ವೇನಾವಸ್ಥಾನಮಪಿ ಸುದಿನಮೇವ ॥ (d) ಜ್ಞಾನಾತ್ಪೂರ್ವಂ ತು ಪತನಸಂಶಯಾದೇವ ನ ಸುದಿನಂ ॥

ಅ॥ (a) ಆ ಯಾವ ಪ್ರಸಿದ್ಧನಾದ ಅಧಿಕಾರಿಯು ಆತ್ಮಶಬ್ದವಾಚ್ಯನಾದ ಶ್ರೀ ಹರಿಯನ್ನೇ ಸರ್ವರಿಗೂ ಆಶ್ರಯನನ್ನಾಗಿ ಉಪಾಸನೆಮಾಡತಕ್ಕದು. (ಅಪರೋಕ್ಷವಾಗಿಯೂ ತಿಳಿಯತಕ್ಕದು) ಈ ಅಪರೋಕ್ಷಜ್ಞಾನಿಯ ಕರ್ಮವು ಕ್ಷೀಣವಾಗುವುದಿಲ್ಲ. ಆ ಮುಕ್ತನು ಯಾವು ಯಾವುದನ್ನು ಇಚ್ಛಿಸುತ್ತಾನೋ, ಅದೆಲ್ಲವನ್ನೂ ಈ ಪರಮಾತ್ಮನ ಪ್ರಸಾದದಿಂದ ಕರ್ಮವು ಸೃಷ್ಟಿಸುತ್ತದೆ. ಎಂದು ಶ್ರುತಿ ಯಿದ್ದುದರಿಂದ ಜ್ಞಾನಾವಸ್ಥೆಯಲ್ಲಿ, ಮುಕ್ತಿಯಲ್ಲಿ ಹೆಚ್ಚು ಭೋಗಗಳಿಗೆ ಕಾರಣವಾದುದರಿಂದ ಆ ಜ್ಞಾನಾವಸ್ಥೆಯೂ ಕೂಡ ಮುಕ್ತಿಯಂತೆ ಸುದಿನ ಎನ್ನಿಸಿಕೊಳ್ಳುತ್ತದೆ. (b) ಮುಕ್ತಿಯಲ್ಲಿ ಪುನಃ ಹೆಚ್ಚು ಸಂಪಾದನೆಯು ಇಲ್ಲವಷ್ಟೇ? ಎಲ್ಲಿಗೆ ಹೋಗಿ ಕ್ಷೀಣವಾಗುವುದಿಲ್ಲವೋ, (ಹ್ರಾಸವಿರುವುದಿಲ್ಲ ಮುಕ್ತಿಯಲ್ಲಿ) ಎಲ್ಲಿಗೆ ಹೋಗಿ ಪುನಃ ಅಭಿವೃದ್ಧಿಯನ್ನು ಹೊಂದುವುದಿಲ್ಲ. ಎಂಬೀ ವಚನದಿಂದ (ವೃದ್ಧಿಯೂ ಇರುವುದಿಲ್ಲ.) (c) ಆದುದರಿಂದ ಜ್ಞಾನವು ಹುಟ್ಟಿದೊಡನೆಯೇ ಮುಕ್ತಿಯಲ್ಲಿ ಪುನಃ ಸಂಪಾದನೆಯು ಇರುವುದಿಲ್ಲ. ಆದುದರಿಂದ ಸ್ವಲ್ಪಕಾಲದಲ್ಲಿ ಜ್ಞಾನಿಯಾಗಿರುವುದೂ ಕೂಡ ಸುದಿನವೆಂದೇ ಆಗುವುದು. (d) ಅಪರೋಕ್ಷಜ್ಞಾನ ಹುಟ್ಟುವುದಕ್ಕಿಂತ ಪೂರ್ವದಲ್ಲಾದರೂ ಉತ್ತಮರ ದ್ರೋಹ ಮೊದಲಾದುವುಗಳಿಂದ ಪುನಃ ಪತನ (ಬೀಳುವಿಕೆ)ವಾಗಬಹುದು ಎಂಬ ಸಂಶಯದಿಂದಲೇ ಸುದಿನವಲ್ಲವು. ಅಪರೋಕ್ಷಜ್ಞಾನಿಗಾದರೂ 'ತದವಸ್ಥಾವಧೃತೇಃ' 'ಬ್ರಹ್ಮಸಂಸ್ಥೋಽಮೃತಮೇತ್ಯೇವ' ಇದೇ ಮೊದಲಾದ ಸೂತ್ರ, ಶ್ರುತಿಗಳ ಸಾಮರ್ಥ್ಯದಿಂದ ಮೋಕ್ಷವು ನಿಯತವಾದುದರಿಂದ ಯಥಾಯೋಗ್ಯವಾಗಿ ಆನಂದೋತ್ಕರ್ಷವನ್ನು ಸಂಪಾದಿಸಿಕೊಡುವ ಸಾಧನಾನುಷ್ಠಾನವೂ ನಿಯತವಾದುದರಿಂದ ಜ್ಞಾನಾವಸ್ಥೆಯು ಸುದಿನ ಎನ್ನಿಸಿಕೊಳ್ಳುತ್ತದೆ.

ಭಾ॥ (a) ನ ಚಾಶ್ವಿರಥೋ ವರ್ಣ್ಯತೇ। ನ ಹ್ಯಶ್ವಿರಥಯೋಗಾದಹನೀ ಜಾಯೇತೇ ॥ ಏಕ ರಾಸಭಯುಕ್ತೋ ಹಿ ತದ್ರಥಃ। ತದ್ರಾಸಭೋ ನಾಸತ್ಯಾಸಹಸ್ರಮಿತಿ ವಚನಾತ್ ॥ (b) ನ ಚ ವಿವಸ್ವಚ್ಛಬ್ದೋಽಶ್ವಿನೋರ್ವಿದ್ಯತೇ। ಯೋ ದೇವಾನಾಂ ನಾಮಧಾ ಏಕ ಏವೇತಿ ವಿಷ್ಣೋಃ ಸರ್ವನಾಮಾನಿ ಪ್ರಸಿದ್ಧಾನಿ ಚ ॥ (c) ಯುಜೋ ಯುಕ್ತಾ ಅಭಿ ಯತ್ಸಂವ

ಹಂತೀತ್ಯಾದಿನಾ ತಸ್ಯೈವ ಪ್ರಸ್ತಾವಾಚ್ಚ । ಅತೋ ವಿಷ್ಣುರೇವ ಮುಖ್ಯತಃ ಸರ್ವನಾಮೋಕ್ತ ಇತಿ ಸಿದ್ಧಂ ॥ ೮ ॥

**ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತೇ ಶ್ರೀಮನ್ಮಹೈತರೇಯೋಪನಿಷದ್ಭಾಷ್ಯೇ ದ್ವಿತೀಯ ಪ್ರಪಾಟ್ಟಿಕೇ**

**॥ ತೃತೀಯೋಽಧ್ಯಾಯಃ ॥ ೨ ॥ ೩ ॥**

ಅ ॥ (a) ಅಶ್ವಿನೀ ದೇವತೆಗಳ ರಥವು ಹೇಳಲ್ಪಡುವುದಿಲ್ಲ. । ಅಲ್ಲದೆ ಅಶ್ವಿನೀದೇವತೆಗಳ ರಥದ ಸಂಬಂಧದಿಂದ ಅಹಃಶಬ್ದವಾಚ್ಯಗಳು ಹುಟ್ಟುವುದಿಲ್ಲ. । ಆ ಅಶ್ವಿನೀ ದೇವತೆಗಳ ರಥವಾದರೂ ಒಂದು ಕರ್ತೃಯಿಂದೊಡಗೂಡಿದ್ದಾಗಿರುತ್ತದೆ. । 'ತದ್ರಾಸಭೋನಾಸತ್ಯಾಸಹಸ್ರಮಾಜಾಯಮಸ್ಯ ಪ್ರಧನೇ ಜಿಗಾಯ' ಎಂಬೀ (ಋಗ್ವೇದ ಅಷ್ಟಕ ೧. ಅಧ್ಯಾಯ ೮.) ವಾಕ್ಯದಿಂದ ॥ (b) ವಿವಸ್ವತ್ ಎಂಬ ಶಬ್ದವು ಅಶ್ವಿನಿ ದೇವತೆಗಳಿಗೆ ಇರುವುದಿಲ್ಲ ಯಾವಾತನು ಎಲ್ಲಾ ದೇವತೆಗಳ ನಾಮಧಾರಕನು ಒಬ್ಬನೇ ಸರಿ ಎಂದು ವಿಷ್ಣುವಿಗೇನೇ ಎಲ್ಲಾ ನಾಮಧೇಯಗಳೂ ಪ್ರಸಿದ್ಧಗಳಾಗಿವೆ. ॥ (c) ಸ್ತ್ರೀಪುಂರೂಪದಿಂದ ಪರಸ್ಪರ ಸಂಯುಕ್ತರಾದ ಸೂರ್ಯಾದಿ ದೇವತೆಗಳು ಅಶ್ವರೂಪದಿಂದ ರಥದಲ್ಲಿ ಸಂಬದ್ಧರಾಗಿ ರಥವನ್ನು ಮತ್ತೂ ಪರಬ್ರಹ್ಮನನ್ನು ಹೊರುತ್ತಾರೆ. ಇದೇ ಮೊದಲಾದ ವಾಕ್ಯದಿಂದ, ವಿಷ್ಣುವೂ ಮತ್ತು ಅವನ ರಥಕ್ಕೇನೇ ಪ್ರಸ್ತುತಿ ಇದ್ದುದರಿಂದಲೂ (ಅಂದರೆ ಉಪಕ್ರಾಂತವಾದುದರಿಂದಲೂ ಪ್ರಾಣಾದಿ ಶಬ್ದವಾಚ್ಯನು ವಿಷ್ಣುವೇ ಸರಿ.) ಆದುದರಿಂದ ವಿಷ್ಣುವೇ ಮುಖ್ಯವಾಗಿ ಎಲ್ಲಾ ನಾಮಗಳಿಂದಲೂ ಪ್ರತಿಪಾದಿಸಲ್ಪಟ್ಟಿದ್ದಾನೆ. ಎಂದು ಸಿದ್ಧವಾಯಿತು. ॥ ೮ ॥

**ಈ ಪ್ರಕಾರವಾಗಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ನಿರ್ಮಿಸಲ್ಪಟ್ಟ ಶ್ರೀಮನ್ಮಹೈತರೇಯೋಪನಿಷದ್ಭಾಷ್ಯದಲ್ಲಿ ಎರಡನೇ ಪ್ರಪಾಟ್ಟಿಕದಲ್ಲಿ ಮೂರನೇ ಅಧ್ಯಾಯವು ಸಮಾಪ್ತವಾಯಿತು.**

**ವ್ಯಾಖ್ಯಯಾ ತ್ವೈತರೇಯಸ್ಯ ಪ್ರೀತೋ ಮಧ್ವಮುನಿರ್ಮಮ ।**
**ನಿವಾರಯನ್ನಪ್ರಕಾಶಂ ಸುಪ್ರಕಾಶಂ ದದಾತು ಮೇ ॥ ಶ್ರೀಃ ॥**



ಪೂರ್ಣೋನ್ಮೀಲದ್ಗುಣಾತ್ಮಾನಂ ಸ್ವತಂತ್ರಂ ವಿಶ್ವಭಾವನಂ ।
ನಾರಾಯಣಮಹಂ ವಂದೇ ಮರುದ್ಬ್ರಹ್ಮಾದಿಕಾಮದಂ ॥

**ಮಂ ॥ ಆತ್ಮಾ ವಾ ಇದಮೇಕ ಏವಾಗ್ರ ಆಸೀನ್ನಾನ್ಯತ್ಕಿಂಚನ ಮಿಷತ್ಸ ಈಕ್ಷತ ಲೋಕಾನ್ನು ಸೃಜಾ ಇತಿ ಸ ಇಮಾಂಲ್ಲೋಕಾನಸೃಜತಾಂಭೋಮರೀಚೀರ್ಮರಮಾಪೋಽದೋಽಂಭಃ ಪರೇಣ ದಿವಂ ದ್ಯೌಃ ಪ್ರತಿಷ್ಠಾಂಽತರಿಕ್ಷಂ ಮರೀಚಯಃ ಪೃಥಿವೀ ಮರೋ ಯಾ ಅಧಸ್ತಾತ್ತಾ ಆಪಃ ಸ ಈಕ್ಷತೇಮೇ ನು ಲೋಕಾ ಲೋಕಪಾಲಾನ್ನು ಸೃಜಾ ಇತಿ ಸೋಽದ್ಭ್ಯ ಏವ ಪುರುಷಂ ಸಮುದ್ಧೃತ್ಯಾಮೂರ್ಛಯತ್ತಮಭ್ಯತಪತ್ತಸ್ಯಾಭಿತಪ್ತಸ್ಯ ಮುಖಂ ನಿರಭಿದ್ಯತ ಯಥಾಂಡಂ ಮುಖಾದ್ವಾಗ್ವಾಚೋಽಗ್ನಿರ್ನಾಸಿಕೇ ನಿರಭಿದ್ಯೇತಾಂ ನಾಸಿಕಾಭ್ಯಾಂ ಪ್ರಾಣಃ ಪ್ರಾಣಾದ್ವಾಯುರಕ್ಷಿಣೀ ನಿರಭಿದ್ಯೇತಾಮಕ್ಷೀಭ್ಯಾಂ ಚಕ್ಷುಶ್ಚಕ್ಷುಷ ಆದಿತ್ಯಃ ಕರ್ಣೌ ನಿರಭಿದ್ಯೇತಾಂ ಕರ್ಣಾಭ್ಯಾಂ ಶ್ರೋತ್ರಂ ಶ್ರೋತ್ರಾದ್ದಿಶಸ್ತ್ವಙ್ನಿರಭಿದ್ಯತ ತ್ವಚೋ ಲೋಮಾನಿ ಲೋಮಭ್ಯ ಓಷಧಿವನಸ್ಪತಯೋ ಹೃದಯಂ ನಿರಭಿದ್ಯತ ಹೃದಯಾನ್ಮನೋ ಮನಸಶ್ಚಂದ್ರಮಾ ನಾಭಿರ್ನಿರಭಿದ್ಯತ ನಾಭ್ಯಾ ಅಪಾನೋಽಪಾನಾನ್ಮೃತ್ಯುಃ ಶಿಶ್ನಂ ನಿರಭಿದ್ಯತ ಶಿಶ್ನಾದ್ರೇತೋ ರೇತಸ ಆಪಃ ॥ ೧ ॥**

ಅ ॥ ಆತ್ಮಾ=ಆತ್ಮಶಬ್ದವಾಚ್ಯನಾದ ಶ್ರೀ ವಿಷ್ಣುವು, ಏಕಏವ=ಒಬ್ಬನೇವೇ, ಇದಂ=ಈ ಜಗತ್ತಿನ, ಅಗ್ರೇ=ಪ್ರಳಯಕಾಲದಲ್ಲಿ, ಆಸೀತ್=ಇದ್ದನು. ವಾ=('ಏಕೋನಾರಾಯಣ ಆಸೀತ್' ಇದು ಮೊದಲಾದ ಶ್ರುತಿಯಲ್ಲಿ) ಪ್ರಸಿದ್ಧವು. (ಲಕ್ಷ್ಮಿಯು ಪ್ರಳಯಕಾಲದಲ್ಲಿ ಇದ್ದರೂ ಶ್ರೀ ಹರಿಯ ಅಧೀನಳಾಗಿಯೇ ಇದ್ದುದರಿಂದ ಸ್ವತಂತ್ರಳಾಗಿ ಇಲ್ಲದಿರುವುದರಿಂದ ಈ ಪ್ರಕಾರವಾಗಿ ಹೇಳಿದ್ದಾಗಿರುತ್ತದೆ. ಅಥವಾ, ಇದಂ=ಈ ರಮಾದಿಗಳನ್ನು (ಅಪೇಕ್ಷಿಸಿ,) ಆತ್ಮಾ=ಏಕಏವ=ವಿಷ್ಣು ಒಬ್ಬನೇ ಅಗ್ರೇ=ಎಲ್ಲಾ ಗುಣಗಳಿಂದಲೂ ಶ್ರೇಷ್ಠನು, ಆಸೀತ್=ಆಗಿದ್ದನು. ಅನ್ಯತ್=ಹರಿಯಿಂದ ಇತರವಾದುದು, ಕಿಂಚನ=ಯಾವುದೊಂದು, ಮಿಷತ್=ಸ್ವತಂತ್ರವಾಗಿ ಜ್ಞಾನಮೊದಲಾದ ಗುಣಗಳಿಂದ ಪ್ರಕಾಶಿಸಿಕೊಂಡಿರುವುದು, ನ=ಇಲ್ಲವು. ಸಃ=ಆ ಹರಿಯು, ಲೋಕಾನ್=ಲೋಕಶಬ್ದವಾಚ್ಯರಾದ ಬ್ರಹ್ಮಾದಿ ದೇವತೆಗಳನ್ನು, ಅವರ ಅಧೀನಗಳಾದ ಸತ್ಯಾದಿಲೋಕಗಳನ್ನು, ಉತ್ಸೃಜಾ ಇತಿ=ಸೃಷ್ಟಿಮಾಡುವೆನೆಂದು, ಈಕ್ಷತ=ಇಚ್ಛೈಸಿದನು. ಸಃ=(ಹೀಗೆ ಇಚ್ಛೈಸಿದ) ಆ ಹರಿಯು, ಅಂಭಃ, ಮರೀಚೀಃ, ಮರಂ, ಆಪಃ=ಆಯಾಯ ಹೆಸರುಳ್ಳ, ಇಮಾನ್=ಈ, ಲೋಕಾನ್=ಲೋಕಗಳನ್ನು, ತದಭಿಮಾನಿಗಳನ್ನು, ಅಸೃಜತ=ಸೃಷ್ಟಿಮಾಡಿದನು. ಅದಃ=ಈ (ಪ್ರಥಮದಲ್ಲಿ ಹೇಳಲ್ಪಟ್ಟ) ಅಂಭಃ=(ಅಂ=ವಿಷ್ಣುವನ್ನು, ಬಿಭರ್ತಿ=ಧರಿಸುತ್ತದೆ, ಎಂಬೀವ್ಯುತ್ಪತ್ತಿಯಿಂದ) ಅಂಭಃಎಂಬುವ ಲೋಕವು, ದಿವಂಪರೇಣ=ಸ್ವರ್ಗದಿಂದ ಮೇಲೆ ಇರುವ ಶ್ವೇತದ್ವೀಪ, ಅನಂತಾಸನ, ವೈಕುಂಠವೆಂಬುವ ಸ್ಥಾನವು, ದಿವಂಪರೇಣ=ಮಹರ್ಲೋಕವೇ ಮೊದಲಾದವುಗಳು, ದ್ಯೌಃ=ಸ್ವರ್ಗವೂ, (ಅಂತೂ ಇವು ಏಳು ಅಂಭೋನಾಮಕಗಳು). ಪ್ರತಿಷ್ಠಾ=(ಪ್ರಕರ್ಷೇಣ ತಿಷ್ಠತಿ ಅತ್ರ ಎಂಬೀವ್ಯುತ್ಪತ್ತಿಯಿಂದ) ಮಹರಾದಿಗಳಲ್ಲಿಯೂ ಸ್ವರ್ಗದಲ್ಲಿಯೂ ಪ್ರತ್ಯಕ್ಷವಾಗಿಯೇ ಶ್ರೀ ಹರಿಯು ಇರುವುದರಿಂದ ಮಹರಾದಿಯು

ಪ್ರತಿಷ್ಠೆಯೆನ್ನಿಸಿಕೊಳ್ಳುತ್ತದೆ. (ಅಂತೂ ಸ್ವರ್ಗ ಮಹರ್ಲೋಕಮೊದಲಾದುದು ವಿಷ್ಣುವಿನ ಲೋಕವೇ ಆಯಿತು. ಕಾರಣ 'ಅಂಭಃ' ಎಂಬ ನಾಮವು ಯುಕ್ತವೇ ಸರಿ). ಮರೀಚಯಃ= (ಮರೀಚಯಃ=ಸೂರ್ಯನ ಕಿರಣಗಳು, ಅಯಂತೇ=ವಿಶೇಷಾಕಾರವಾಗಿ ಪ್ರವರ್ತಿಸುತ್ತವೆ. ಅತ್ರ=ಇಲ್ಲಿ, ಎಂಬೀವ್ಯುತ್ಪತ್ತಿಯಿಂದ) ತನ್ನಾಮಕವು, ('ಮರೀಚೀ' ಎಂಬುವಲ್ಲಿಯೂ ಮರೀಚಯಃ=ಅಸ್ಮಿನ್ ವರ್ತಂತೇ ಎಂಬೀವ್ಯುತ್ಪತ್ತಿಯನ್ನು ಅಂಗೀಕರಿಸತಕ್ಕದು.) ಅಂತರಿಕ್ಷಂ= ಅಂತರಿಕ್ಷಲೋಕವು. ಮರಃ=(ಮರಂತಿ=ಸಾಯುತ್ತಾರೆ, ಕ್ಷಿಪ್ರಂ=ಶೀಘ್ರವಾಗಿ, ಅತ್ರ= ಇಲ್ಲಿ, ಎಂಬೀ ವ್ಯುತ್ಪತ್ತಿಯಿಂದ) ಮರನಾಮಕವು, ಪೃಥಿವೀ=ಪೃಥಿವಿಯು, ಯಾಃ ಅಧಸ್ತಾತ್= ಬ್ರಹ್ಮಾಂಡವನ್ನು ಸೃಷ್ಟಿಸುವುದಕ್ಕಿಂತ ಪೂರ್ವದಲ್ಲಿ ಸೃಷ್ಟರಾದ ಯಾವ ದೇವತೆಗಳೋ, ತಾಃ= ಆ ದೇವತೆಗಳು, ಅಪಃ=ಅಪಃ ಎನ್ನಿಸಿಕೊಳ್ಳುತ್ತಾರೆ. (ಈ ದೇವತೆಗಳು ಲೋಕಗಳಿಗೆ ಅಭಿಮಾನಿಗಳಾದುದರಿಂದ ಲೋಕಶಬ್ದವಾಚ್ಯರು.) ಸಃ=ಆ ಹರಿಯು, ಇಮೇ ನು ಲೋಕಾಃ= (ಯಾವುವು ನನ್ನಿಂದ ಸೃಷ್ಟಿಸಲ್ಪಟ್ಟವೋ), ಇವುಗಳು ಲೋಕಶಬ್ದವಾಚ್ಯಗಳಷ್ಟೇ? (ಇನ್ನು ಮೇಲೆ) ಲೋಕಪಾಲಾನ್=ಲೋಕಪಾಲಕರಾದ ದೇವತೆಗಳನ್ನು, ಉತ್ಸೃಜಾ ಇತಿ=ಪುನಃ ಸೃಷ್ಟಿಸುವೆನೆಂದು, ಈಕ್ಷತ=ಇಚ್ಛಿಸಿದನು. (ಯದ್ಯಪಿ ಪೂರ್ವದಲ್ಲಿ ಸೃಷ್ಟರಾದ ಅಪ್‌ಶಬ್ದವಾಚ್ಯರಾದ ದೇವತೆಗಳೇ ಲೋಕಪಾಲಕರು, ಬೇರೆಯವರಲ್ಲ. ಆದರೂ ಬಾಹ್ಯಸೃಷ್ಟಿ, ಅಂತರ ಸೃಷ್ಟಿ ಇವುಮೊದಲಾದ ಅನೇಕ ಪ್ರಭೇದವಿರುವುದರಿಂದ ಪುನಃ ಬ್ರಹ್ಮಾಂಡದ ಒಳಗೂ ಸೃಷ್ಟಿಸುವೆನು ಎಂದು ತಾತ್ಪರ್ಯವು). ಸಃ=(ಈಪ್ರಕಾರ ಆಲೋಚಿಸಿದ) ಆ ಹರಿಯು, ಅದ್ಭ್ಯ ಏವ=ಪೂರ್ವದಲ್ಲಿ ಸೃಷ್ಟಿಸಲ್ಪಟ್ಟ ಅಪ್ ಶಬ್ದವಾಚ್ಯರೂ ಮಹತ್ತತ್ತ್ವವೇ ಮೊದಲಾದ ತತ್ತ್ವಗಳಿಗೆ ಅಭಿಮಾನಿಗಳೂ ಆದ ಬ್ರಹ್ಮಾದಿ ದೇವತೆಗಳಿಂದಲೇ, ಪುರುಷಂ=ಪುರುಷನಾಮಕನಾದ ಬ್ರಹ್ಮನನ್ನು, ಸಮುದ್ಧೃತ್ಯ=ರುದ್ರಾದ್ಯಂಶಗಳಿಂದೊಡಗೂಡಿಯೇ ಪ್ರತ್ಯೇಕಿಸಿ, (ಹಾಗೆಯೇ ಮಹದಾದಿ ತತ್ತ್ವಸ್ವರೂಪಗಳಾದ ಆಯಾಯ ಅಚೇತನ ಭಾಗಗಳನ್ನು) ಉದ್ಧರಿಸಿ, ಅಮೂರ್ಛಯತ್=ಮೂರ್ತವನ್ನು ಸೃಷ್ಟಿಸಿದನು. (ಚೇತನಾಚೇತನಾತ್ಮಕ ಒಂದು ರಾಶಿಯನ್ನು ಅಂದರೆ ಬ್ರಹ್ಮಾಂಡವನ್ನು ಸೃಷ್ಟಿಸಿದನು.) ತಂ=ಆ ಬ್ರಹ್ಮಾಂಡಕ್ಕೆ ಅಭಿಮಾನಿಯಾದ ಬ್ರಹ್ಮನನ್ನು, ಅಭ್ಯತಪತ್=(ಮುಖಮೊದಲಾದ ಅಂಗಗಳಿಂದೊಡಗೂಡಿದವನನ್ನಾಗಿ ಮಾಡಬೇಕೆಂದು) ಇಚ್ಛಿಸಿದನು. ತಸ್ಯ ಅಭಿತಪ್ತಸ್ಯ=(ಹೀಗೆ ಶ್ರೀ ಹರಿಯಿಂದ) ಇಚ್ಛಿಸಲ್ಪಟ್ಟ ಬ್ರಹ್ಮನಿಗೆ, ಅಂಡಂ ಯಥಾ=ಅಂಡಾಕಾರವಾದ, ಮುಖಂ=ಶಿರೋನಾಮಕ ಅಂಗವು, ನಿರಭಿದ್ಯತ=(ಪ್ರಥಮದಲ್ಲಿ) ಹುಟ್ಟಿತು. (ಆ ಶಿರಸ್ಸಿನಲ್ಲಿ) ಮುಖಂ=ಮುಖವು, ನಿರಭಿದ್ಯತ=ಹುಟ್ಟಿತು. ಮುಖಾತ್= ಬಾಯಿಯಿಂದ, ವಾಕ್=ವಾಕ್‌ನಾಮಕವಾದ ವಹ್ನಿಯು, (ಆಯಿತು). ವಾಚಃ=ವಾಕಿನಿಂದ, ಅಗ್ನಿಃ=ಅಗ್ನಿನಾಮಕವಾದ ರೂಪಾಂತರವು, (ಹುಟ್ಟಿತು.) (ಇಲ್ಲಿ ಮೇಲೆಯೂ ಪ್ರಥಮದ್ದು ಅಧ್ಯಾತ್ಮರೂಪವೆಂದೂ ಎರಡನೆದ್ದು ಅಧಿದೈವವೆಂದೂ ತಿಳಿಯತಕ್ಕದು.) ನಾಸಿಕೇ=ಮೂಗುಗಳು, ನಿರಭಿದ್ಯೇತಾಂ=ಹುಟ್ಟಿದವು. ನಾಸಿಕಾಭ್ಯಾಂ=ಮೂಗುಗಳಿಂದ, ಪ್ರಾಣಃ=ನಾಸಿಕ್ಯ ವಾಯುವು, (ಹುಟ್ಟಿತು.) ಪ್ರಾಣಾತ್=ಪ್ರಾಣದಿಂದ, ವಾಯುಃ=ಪ್ರಧಾನ ವಾಯುಪುತ್ರನು, (ಹುಟ್ಟಿದನು.) ಅಕ್ಷಿಣೀ=ಕಣ್ಣುಗಳು (ಗೋಲಕವು) ನಿರಭಿದ್ಯೇತಾಂ=ಹುಟ್ಟಿದವು. ಅಕ್ಷಿಭ್ಯಾಂ=ಕಣ್ಣುಗಳಿಂದ, ಚಕ್ಷುಃ=ಅಧ್ಯಾತ್ಮವಾದ ಚಕ್ಷುಸ್ಸು, (ಹುಟ್ಟಿತು). ಚಕ್ಷುಷಃ=ಕಣ್ಣಿನಿಂದ, ಆದಿತ್ಯಃ=ಅಧಿದೈವವಾದ ಆದಿತ್ಯನಾಮಕ ಸೂರ್ಯನು, (ಹುಟ್ಟಿದನು). ಕರ್ಣೌ= ಕಿವಿಗಳು, ನಿರಭಿದ್ಯೇತಾಂ=ಹುಟ್ಟಿದವು. ಕರ್ಣಾಭ್ಯಾಂ=ಕಿವಿಗಳಿಂದ, ಶ್ರೋತ್ರಂ=ಅಧ್ಯಾತ್ಮವಾದ ಶ್ರೋತ್ರನಾಮಕವು, (ಹುಟ್ಟಿತು). ಶ್ರೋತ್ರಾತ್=ಶ್ರೋತ್ರದಿಂದ, ದಿಶಃ=ದಿಕ್ಕಿಗೆ ಅಧಿ

ಪತಿಗಳಾದ ಮಿತ್ರ, ಧರ್ಮ, ವರುಣ ಕುಬೇರರು, (ಹುಟ್ಟಿದರು). ತ್ವಕ್=ತ್ವಗಿಂದ್ರಿಯವು, ನಿರಭಿದ್ಯತ=ಹುಟ್ಟಿತು. ತ್ವಚಃ=ತ್ವಕ್ಕಿನಿಂದ, ಲೋಮಾನಿ=ಲೋಮನಾಮಕರು, (ಹುಟ್ಟಿದರು.) ಲೋಮಭ್ಯಃ=ಲೋಮನಾಮಕರಿಂದ, ಓಷಧಿವನಸ್ಪತಯಃ=ಓಷಧ್ಯಾದಿ ನಾಮಕರಾದ ಪಾರಿಜಾತಾದಿದೇವತೆಗಳು, (ಬ್ರಹ್ಮನ ತ್ವಕ್ಕಿನಿಂದ ಹುಟ್ಟಿದರು.) ಹೃದಯಂ=ಹೃದಯವು, ನಿರಭಿದ್ಯತ=ಹುಟ್ಟಿತು. ಹೃದಯಾತ್=ಹೃದಯದಿಂದ, ಮನಃ=ಮನಸ್ಸು (ಹುಟ್ಟಿತು.) ಮನಸಃ=ಮನಸ್ಸಿನಿಂದ, ಚಂದ್ರಮಾಃ=(ಮನೋಭಿಮಾನಿಯಾದ) ಚಂದ್ರನು, (ಹುಟ್ಟಿದನು). (ಬುದ್ಧ್ಯಭಿಮಾನಿಗಳಾದ ಬುದ್ಧಿನಾಮಕರಾದ ಗರುಡಶೇಷರುದ್ರರು ಹುಟ್ಟಿದರು. ಹಸ್ತಗಳು, ಹಸ್ತಗಳಿಂದ ಇಂದ್ರನು, ಹಾಗೆಯೇ ಪಾದಗಳು, ಪಾದಗಳಿಂದ ಇಂದ್ರನ ಪುತ್ರನಾದ ಯಜ್ಞನು, ಗುದವು, ಅದರಿಂದ ನಿರ್ಋತಿ, ಯಮರು, ನಾಲಿಗೆಯು, ಅದರಿಂದ ವರುಣನು, ಅಂತೂ ಇವರೆಲ್ಲರೂ ಹುಟ್ಟಿದರು). ನಾಭಿಃ=ಹೊಕ್ಕಳು, ನಿರಭಿದ್ಯತ=ಹುಟ್ಟಿತು. ನಾಭ್ಯಾಃ=ಹೊಕ್ಕಳಿನಿಂದ, ಅಪಾನಃ=ಅಪಾನನಾಮಕನಾದ ಪ್ರಧಾನವಾಯುವು, ಅಪಾನಾತ್=ಅಪಾನನಿಂದ, ಮೃತ್ಯುಃ=ಮೃತ್ಯುನಾಮಕ ಪ್ರಧಾನವಾಯುವು, (ಹುಟ್ಟಿದನು). ಶಿಶ್ನಂ=ಗುಹ್ಯೇಂದ್ರಿಯವು, ನಿರಭಿದ್ಯತ=ಹುಟ್ಟಿತು. ಶಿಶ್ನಾತ್=ಶಿಶ್ನದಿಂದ, ರೇತಃ=ರೇತಸ್ಸು, (ಹುಟ್ಟಿತು). ರೇತಸಃ=ರೇತಸ್ಸಿನಿಂದ, ಆಪಃ=ಅಪ್‌ನಾಮಕನಾದ ಶಿವನು, (ಹುಟ್ಟಿದನು). ॥ ೧ ॥

ಭಾ॥ (a) ಓಂ ॥ ಏಕೋ ನಾರಾಯಣಸ್ತ್ವಾಸೀತ್ಪ್ರಲಯೇ ರಮಯಾ ಸಹ । ನಿತ್ಯಾತತ ಗುಣತ್ವಾತ್ಸ ಆತ್ಮೇತಿ ಶ್ರುತಿಪೂದಿತಃ ॥ (b) ಇದಂ ಸರ್ವಮಪೇಕ್ಷ್ಯಾಽಸೌ ಕಾಲತೋ ಗುಣತಸ್ತಥಾ । ಅಗ್ರ್ಯ ಏವ ಸಮಸ್ತೇಶಃ (c) ತದ್ವಶತ್ವಾದ್ರಮಾಽಪಿ ಸಾ ॥ ವಿದ್ಯಮಾನಾಽಪಿ ನಾಗ್ರಸ್ಥಾ ಗುಣೈರೂನಾ ತತೋ ಯತಃ । (d) ನ ಬ್ರಹ್ಮಾ ನ ಶಿವಶ್ಚಾಸೀನ್ನೈವಾನ್ಯಚ್ಚ ಮಿಷತ್ಕ್ವಚಿತ್ ॥ ಸುಪ್ತಾಸ್ತತ್ರ ಯತೋ ಜೀವಾಃ ಸರ್ವೇ ಬ್ರಹ್ಮಶಿವಾದಿಕಾಃ । (e) ಅಸುಪ್ತಾಃ ಶ್ರೀಶ್ಚ ಮುಕ್ತಾಶ್ಚ ಸ್ವತಂತ್ರೋನ್ಮೇಷವರ್ಜನಾತ್ ॥ ಅನುನ್ಮೇಷಾ ಏವ ತೇಽಪಿ (f) ಸ್ವತಂತ್ರೋನ್ಮೇಷ ಏಕರಾಟ್ । ನಾರಾಯಣೋ ನ ಚಾನ್ಯೋಽಸ್ತಿ ಪೂರ್ಣೋಽನ್ಯೋಲಗುಣಾತ್ಮಕಃ ॥

ಅ ॥ (a) ನಾರಾಯಣನೊಬ್ಬನೇವೇ ಪ್ರಲಯಕಾಲದಲ್ಲಿ ಲಕ್ಷ್ಮಿಯಿಂದೊಡಗೂಡಿಕೊಂಡು ಇದ್ದನು. ಆತನು ನಿತ್ಯಗಳೂ ವ್ಯಾಪ್ತಗಳೂ ಆದ ಗುಣಗಳುಳ್ಳವನಾದುದರಿಂದ ಆತ್ಮನೆಂದು ಶ್ರುತಿಗಳಲ್ಲಿ ಹೇಳಲ್ಪಟ್ಟಿದ್ದಾನೆ. ('ಹರೇರತ್ಯಂತಸಾಮೀಪ್ಯಂ ಲಯೋ ಲಕ್ಷ್ಯಾಃ ಪ್ರಕೀರ್ತಿತಃ । ಸುಪ್ತಿಸ್ತು ಪ್ರಕೃತೇಃ ಪ್ರೋಕ್ತಾ ಅಧೀನ ಭಗವದ್ರತಿಃ ॥ ಅನಾಸ್ಥಾಽನ್ಯತ್ರ ಚ ಪ್ರೋಕ್ತಾ' ॥ ಇತ್ಯಾದಿ ಪ್ರಮಾಣಗಳಿಂದ ಲಕ್ಷ್ಮಿಗೂ ನಾಶಾದಿಗಳು ಇವೆ ಯೆಂದು ಸಿದ್ಧವಾಗುವವು.) (b) ಈತನು ಲಕ್ಷ್ಮಿ ಮೊದಲಾದ ಎಲ್ಲಾ ಜಗತ್ತನ್ನು ಅಪೇಕ್ಷಿಸಿ, ಕಾಲದಿಂದಲೂ ಹಾಗೆಯೇ ಗುಣಗಳಿಂದಲೂ, ಎಲ್ಲರಿಗೂ ನಿಯಾಮಕನಾಗಿ ಶ್ರೇಷ್ಠನೇ ಆಗಿರುತ್ತಾನೆ. (c) ಆ ಲಕ್ಷ್ಮಿಯು ಇದ್ದಾಗ್ಯೂ ಯಾವ ಕಾರಣದಿಂದ ಗುಣಗಳಿಂದ ನಿಕೃಷ್ಟಳೋ, ಆದುದರಿಂದ ಲಕ್ಷ್ಮೀದೇವಿಯೂ ಕೂಡ ಶ್ರೀ ಹರಿಯ ಅಧೀನಳಾಗಿಯೇ ಇದ್ದುದರಿಂದ ಶ್ರೇಷ್ಠಳು ಅಲ್ಲ. (d) ಯಾವ ಕಾರಣದಿಂದ ಬ್ರಹ್ಮರುದ್ರರೇ ಮೊದಲಾದ ಎಲ್ಲಾ ಜೀವರು ಆ ಪ್ರಲಯಕಾಲದಲ್ಲಿ ಸುಪ್ತರಾಗಿರುವರೋ, (ಆದುದರಿಂದ) ಚತುರ್ಮುಖನೂ ಇರಲಿಲ್ಲ. ರುದ್ರನೂ ಇರಲಿಲ್ಲ. ಇತರವಾದುದು ಎಲ್ಲಿಯೂ ಕೂಡ ಎಚ್ಚರಿತವಾದದ್ದು ಇರಲೇ ಇಲ್ಲ. (e) ಲಕ್ಷ್ಮಿಯೂ

ಮುಕ್ತರೂ ಕೂಡ ಅಸುಪ್ತರಾಗಿದ್ದಾರೆ. ಸ್ವತಂತ್ರವಾಗಿ ಉನ್ಮೇಷವಿಲ್ಲದಿರುವುದರಿಂದ. ಅವರೂ ಕೂಡ ಉನ್ಮೇಷರಹಿತರೇ ಆಗಿರುತ್ತಾರೆ. (f) ಸ್ವತಂತ್ರವಾಗಿ ಉನ್ಮೇಷವುಳ್ಳವನೂ ಸ್ವತಂತ್ರನೂ ನಾರಾಯಣನೇ. ಇತರರು ಯಾರೂ ಪೂರ್ಣವಾದ ಉನ್ಮೀಲ (ಕಣ್ಣುಗಳನ್ನು ತೆರೆದು ಕೊಂಡು ಇರುವಿಕೆ) ಗುಣಸ್ವರೂಪರು ಅಲ್ಲವೇ ಅಲ್ಲ.

ಭಾ॥ **(a)** ಪರಾಧೀನೇನ ವಿತ್ತೇನ ಭುಂಜನ್ನಪಿ ಹಿ ಭಿಕ್ಷುಕಃ । ವಿತ್ತವಾನಿತಿ ನೈವೋಕ್ತಃ **(b)** ತಥಾ ಶ್ರೀರ್ಮುಕ್ತಿಗಾ ಅಪಿ ॥ ಮಿಷಂತೋಽಪ್ಯಸ್ವತಂತ್ರತ್ವಾನ್ನ ಮಿಷಂತಃ ಕಥಂಚನ । **(c)** ಸರ್ವದಾಽಪ್ಯೇಕ ಏವಾಯಂ ಸ್ವತಂತ್ರೋ ನಾಪರಃ ಕ್ವಚಿತ್ ॥ ಕಾಲಾಗ್ರ್ಯತ್ವಂ ವಕ್ತುಮಸ್ಯ ಪ್ರಲಯೇ ಸ್ಥಿತಿರುಚ್ಯತೇ ॥

ಅ ॥ (a) ಭಿಕ್ಷುಕನು ಪರಾಧೀನವಾದ ದ್ರವ್ಯದಿಂದ ಭೋಗಿಸುವವನಾದಾಗ್ಯೂ ದ್ರವ್ಯವುಳ್ಳವನೆಂದು ಹೇಳಲ್ಪಡುವುದಿಲ್ಲವಷ್ಟೆ. (b) ಹಾಗೆಯೇ ಲಕ್ಷ್ಮಿಯೂ ಮುಕ್ತರೂ ಕೂಡ ಯಾವಾಗಲೂ ಎಚ್ಚರಿತರಾಗಿ ಇದ್ದಾಗ್ಯೂ ಶ್ರೀ ಹರಿಯ ಅಧೀನರಾದುದರಿಂದ ಯಾವ ಪ್ರಕಾರದಿಂದಲೂ ಜಾಗ್ರತರು ಅಲ್ಲವೆಂದು (ಹೇಳಲ್ಪಡುತ್ತಾರೆ.) (c) ಯಾವಾಗಲೂ ಈ ಹರಿಯು ಒಬ್ಬನೇವೇ ಸ್ವತಂತ್ರನು. ಇತರನು ಎಲ್ಲಿಯೂ ಸ್ವತಂತ್ರನಾದವನು ಇಲ್ಲ. ಕಾಲದಿಂದಲೂ ಶ್ರೇಷ್ಠನಾಗಿದ್ದಾನೆ ಎಂದು ಉಪಪಾದಿಸುವುದಕ್ಕೋಸ್ಕರ ಈ ಹರಿಗೆ ಪ್ರಲಯಕಾಲದಲ್ಲಿಯೂ ಸ್ಥಿತಿಯು ಹೇಳಲ್ಪಡುತ್ತದೆ.

ಭಾ॥ **(a)** ಸ ಐಚ್ಛದ್ಭಗವಾನ್ವಿಷ್ಣುಃ ಸ್ರಷ್ಟುಂ ಲೋಕಾಭಿಮಾನಿನಃ । ಲೋಕಾಭಿಧಾನವದ್ದೇವಾನ್ಜಡಲೋಕಾಂಶ್ಚ ಶಾಶ್ವತಃ ॥ **(b)** ಸ ಲೋಕೇಭ್ಯಃ ಪೂರ್ವತನಾನಭಾಖ್ಯಾನ್ಮಹದಾದಿಕಾನ್ । ಬ್ರಹ್ಮಶರ್ವಾದಿಕಾನ್ಸೃಷ್ಟ್ವಾ ಜಡೈಃ ಸಹ ಜನಾರ್ದನಃ ॥ ದಿವಮಾಕಾಶಮುರ್ವೀಂ ಚ ಸಸೃಜೇಽಥ ದ್ವಿಸಪ್ತಕಾನ್ । **(c)** ಇತಿ ಸೃಷ್ಟ್ವಾ ಸ ಲೋಕಾಂಸ್ತು ಪುನಸ್ತಾನೇವ ಲೋಕಪಾನ್ ॥ ಅಂಡಾಂತಃ ಸ್ರಷ್ಟುಮೈಚ್ಛಚ್ಚ ತೇಷಾಂ ಪೂಜ್ಯತ್ವಸಿದ್ಧಯೇ । **(d)** ಅಮ್ಭಾಕೇಭ್ಯಸ್ತೇಭ್ಯಶ್ಚ ಪೂರ್ವಸೃಷ್ಟೇಭ್ಯ ಏವ ತು ॥ ಸರ್ವಜೀವಾಧಿಕತ್ವಾತ್ತು ಬ್ರಹ್ಮಾಣಂ ಪುರುಷಾಭಿಧಂ । ಅಂಶೇನೋದ್ಧೃತ್ಯ ರುದ್ರಾದ್ಯೈಃ ಸಹ ಚೈನಮಯೋಜಯತ್ ॥ ತಥೈವಾಚೇತನಾನಾಂ ಚ ಭಾಗಾನುದ್ಧೃತ್ಯ ಪಿಂಡವತ್ । ಚೇತನಾಚೇತನಂ ರಾಶಿಮೇಕಸ್ಥಂ ವಿದಧೇ ಪ್ರಭುಃ ॥

ಅ॥ (a) ಶಶ್ವದೇಕಪ್ರಕಾರನಾದ ಆ ಪೂಜ್ಯನಾದ ಶ್ರೀ ಹರಿಯು ಲೋಕಾಭಿಮಾನಿಗಳೂ ಲೋಕಶಬ್ದವಾಚ್ಯರೂ ಆದ ಬ್ರಹ್ಮಾದಿದೇವತೆಗಳನ್ನೂ ಜಡಭೂತಗಳಾದ ಸತ್ಯಾದಿ ಲೋಕಗಳನ್ನೂ ಕೂಡ ಸೃಷ್ಟಿಸುವುದಕ್ಕೋಸ್ಕರ ಇಚ್ಛಿಸಿದನು. (b) ಆ ಜನಾರ್ದನನು ಲೋಕಗಳಿಗಿಂತ ಮುಂಚಿನವರಾದ 'ಅಪ್' ಎಂದು ಹೆಸರುಳ್ಳ ಮಹದಾದಿಗಳಿಗೆ ಅಭಿಮಾನಿಗಳಾದ ಬ್ರಹ್ಮರುದ್ರಾದಿ ದೇವತೆಗಳನ್ನು ಜಡಪದಾರ್ಥಗಳಿಂದೊಡಗೂಡಿಯೇ ಸೃಷ್ಟಿಸಿ, ಆ ಮೇಲೆ ಸ್ವರ್ಗವನ್ನೂ ಆಕಾಶವನ್ನೂ ಭೂಮಿಯನ್ನೂ ಕೂಡ ಇದು ಮೊದಲಾದ ಹದಿನಾಲ್ಕು ಲೋಕ

ಗಳನ್ನೂ ಸೃಷ್ಟಿಸಿದನು. [ತಾ || ೧೪ ಲೋಕಗಳ ನಾಮಗಳು ೧ ಭೂಲೋಕ, ೨ ಭುವಃ, ೩ ಸುವಃ, ೪ ಮಹಃ, ೫ ಜನಃ, ೬ ತಪಃ, (೭) ಸತ್ಯಂ, ಇವು ೭ ಮೇಲಿನ ಲೋಕಗಳು. ೧ ಅತಲ, ೨ ವಿತಲ, ೩ ಸುತಲ, ೪ ತಲಾತಲ, ೫ ರಸಾತಲ, ೬ ಮಹಾತಲ, (೭) ಪಾತಾಲ, ಇವು ೭ ಕೆಳಗಿನ ಲೋಕಗಳು.] (c) ಈ ಪ್ರಕಾರವಾಗಿ ಆ ಹರಿಯು ಲೋಕಗಳನ್ನಾದರೂ ಸೃಷ್ಟಿಸಿ, ಪುನಃ ಆ ಪೂರ್ವದಲ್ಲಿ ಸೃಷ್ಟಿಸಲ್ಪಟ್ಟ ಲೋಕಪಾಲಕರನ್ನೇ ಬ್ರಹ್ಮಾಂಡದ ಒಳಗೂ ಆ ದೇವತೆಗಳಿಗೆ (ಅಧಿದೈವದಲ್ಲಿ, ಪ್ರಸಿದ್ಧಯಜ್ಞ ಮೊದಲಾದುದರಿಂದಲೂ, ಅಧ್ಯಾತ್ಮದಲ್ಲಿ ಪ್ರಾಣಾಗ್ನಿ ಹೋತ್ರಾದಿಯಿಂದಲೂ,) ಪೂಜ್ಯತ್ವವು ಸಿದ್ಧಿಯಾಗುವುದಕ್ಕೋಸ್ಕರ, ಸೃಷ್ಟಿಸುವುದಕ್ಕೋಸ್ಕರ ಇಚ್ಛಿಸಿದನು. (d) ಪೂರ್ವಸೃಷ್ಟೇಭ್ಯ ಏವ=ಪೂರ್ವದಲ್ಲಿ ಸೃಷ್ಟಿಸಲ್ಪಟ್ಟ, ಅಮ್ನಾಮ ಕೇಭ್ಯಃ=ಅಪ್ ಎಂದು ಹೆಸರುಳ್ಳ, ತೇಭ್ಯಶ್ಚ=ಆ ಚೇತನಗಳಿಂದಲೇ, (ರುದ್ರಾದಿಚೇತನರ ಅಂಶಗಳನ್ನು) ಉದ್ಧೃತ್ಯ=ಪೃಥಕ್ಕರಿಸಿ, ಬ್ರಹ್ಮಾಣಂ ಚ=ಬ್ರಹ್ಮನನ್ನೂ ಕೂಡ, ಅಂಶೇನ=ಅಂಶದಿಂದ, ಉದ್ಧೃತ್ಯ=ಪ್ರತ್ಯೇಕಿಸಿ, ರುದ್ರಾದ್ಯೈಃ=ರುದ್ರ ಮೊದಲಾದ ಅಪ್ರಧಾನರಿಂದ, ಸಹ ಚ=ಒಡಗೂಡಿ, ಅಯೋಜಯುತ್=ಕೂಡಿಸಿದನು. ತಥೈವ=ಹಾಗೆಯೇ, ಅಚೇತನಾನಾಂ ಚ=ಅಚೇತನಗಳ, ಭಾಗಾನ್=ಅಂಶಗಳನ್ನು, ಉದ್ಧೃತ್ಯ=ಉದ್ಧರಿಸಿ, ಚೇತನಾಚೇತನಂ ರಾಶಿಂ=ಚೇತನಾಚೇತನಾತ್ಮಕವಾದ ರಾಶಿಯನ್ನು, ಪಿಂಡವತ್ ಏಕಸ್ಥಂ=ಪಿಂಡದಂತೆ ಮಿಶ್ರೀಭಾವದಿಂದ ಇದ್ದುದನ್ನಾಗಿ, ವಿದಧೇ=ಮಾಡಿದನು. ಪ್ರಭುಃ=ಸರ್ವಸಮರ್ಥನಾದ ಶ್ರೀ ಹರಿಯು, ಪಿಂಡವತ್=ಪಿಂಡಾಕಾರನಾದ, ಸರ್ವಜೀವಾಧಿಕತ್ವಾತ್ತು=ಎಲ್ಲಾ ಜೀವರಿಂದಲೂ ಗುಣಪೂರ್ಣನಾದುದರಿಂದ, ಪುರುಷಾಭಿಧಂ=ಪುರುಷನೆಂದು ಹೆಸರುಳ್ಳ, ಬ್ರಹ್ಮಾಣಂ=ಚತುರ್ಮುಖನನ್ನು, ವಿದಧೇ=ಸೃಷ್ಟಿಸಿದನು.

ಭಾ|| **(a)** ಪುನರ್ಯೈಚ್ಛಜ್ಜಗನ್ನಾಥಸ್ತಸ್ಯಾಂಗೋತ್ಪತ್ತಿಮಚ್ಯುತಃ । ಅಂಡವನ್ಮುಖಮಸ್ಯಾಸೀತ್ಪ್ರಥಮಂ ತು ಶಿರೋಽಭಿಧಂ || **(b)** ಭಿನ್ನಮಾಸ್ಯಂ ಪುನಸ್ತಸ್ಯ ವಿಷ್ಣೋರೇವೇಚ್ಛಯಾ ಪ್ರಭೋಃ । ತತ್ರ ವಾಙ್ನಾಮಕಂ ರೂಪಂ ವಹ್ನೇರಾಸೀತ್ಪುರಾತನಂ || ತಸ್ಯೈವಾಥ ದ್ವಿತೀಯಂ ಚ ಯದಗ್ನಿರಿತಿ ಗೀಯತೇ । **(c)** ತಥೈವ ನಾಸಿಕಾತೋಽಭೂನ್ಮುಖ್ಯವಾಯೋಃ ಸುತೋ ಮರುತ್ || ಪ್ರಾಣೋ ವಾಯುರಿತಿ ದ್ವೇಧಾ ಚಕ್ಷುಷೋಽಭೂತ್ತಥಾ ರವಿಃ । ದ್ವಿರೂಪ ಏವ **(d)** ಕರ್ಣಾಭ್ಯಾಂ ಮಿತ್ರಥರ್ಮಾಽಪ್ಯವಿತ್ತಪಾಃ || ದಿಗ್ದೇವತಾ ದ್ವಿರೂಪೇಣ ಬಭೂವುಃ ಸರ್ವ ಏವ ಚ ||

ಅ || (a) ಪುನಃ ಜಗತ್ತಿಗೆ ಸ್ವಾಮಿಯಾದ ಅಚ್ಯುತನು ಆ ಬ್ರಹ್ಮನಿಗೆ ಮುಖ ಮೊದಲಾದ ಅಂಗಗಳ ಉತ್ಪತ್ತಿಯನ್ನು ಇಚ್ಛಿಸಿದನು. ಈ ಬ್ರಹ್ಮನಿಗೆ ಪ್ರಥಮದಲ್ಲಿ ಶಿರಸ್ಸೆಂದು ಹೆಸರುಳ್ಳ ಅಂಡಾಕಾರವಾದ ಮುಖವು ಆಯಿತು. (b) ಪುನಃ ಸರ್ವಸಮರ್ಥನಾದ ವಿಷ್ಣುವಿನ ಇಚ್ಛೆಯಿಂದಲೇ ಆ ಚತುರ್ಮುಖನಿಗೆ ವದನವು ಹುಟ್ಟಿತು. ಆ ಮುಖದಿಂದ ವಾಕ್ ಎಂದು ಹೆಸರುಳ್ಳ ವಹ್ನಿಯ ರೂಪವು ಆಯಿತು. ಪುನಃ ಆ ವಹ್ನಿಗೇನೇ ಪುರಾತನವಾದ ವಾಕ್ ನಾಮಕವಾದ ಯಾವ ರೂಪವು ಅಗ್ನಿಯೆಂದು ಹೇಳಲ್ಪಡುತ್ತದೋ, ಅದು ಎರಡನೇ ರೂಪವು. (c) ಹಾಗೆಯೇ ಮೂಗಿನಿಂದ ಮುಖ್ಯವಾಯುವಿನ ಮಗನಾದ ಶ್ವಾಸಾದಿರೂಪನೂ ಪ್ರಾಣವಾಯುವೂ ಈ ಪ್ರಕಾರ (ಅಧ್ಯಾತ್ಮ ಅಧಿದೈವವೆಂದು) ಎರಡು ಪ್ರಕಾರವಾಗಿ ಪ್ರಾಣನು ಹುಟ್ಟಿದನು. ಹಾಗೆಯೇ ಕಣ್ಣಿನಿಂದ ಎರಡು ರೂಪವುಳ್ಳ ಆದಿತ್ಯನು ಆದನು. (d) ಕಿವಿಗಳಿಂದ ದಿಕ್ಕು

ಗಳಿಗೆ ಅಧಿಪತಿಗಳಾದ ಮಿತ್ರ, ಧರ್ಮ, ವರುಣ ಕುಬೇರರು ಎಲ್ಲರೂ ಅಧ್ಯಾತ್ಮ ಅಧಿದೈವವೆಂಬೀ ಎರಡು ರೂಪದಿಂದ ಹುಟ್ಟಿದರು.

ಭಾ॥ (a) ಹೃದಯಾದ್ಗರುಡಾನಂತಶಿವಚಂದ್ರಾಃ ಪೃಥಕ್ಪೃಥಕ್ । ಮನೋಬುದ್ಧ್ಯಭಿಮಾನಾಶ್ಚ ತನ್ನಾಮಾನಶ್ಚ ಜಜ್ಞಿರೇ ॥ (b) ತ್ವಚಶ್ಚ ರೋಮನಾಮಾನೋ ವೃಕ್ಷನಾಮಾನ ಏವ ಚ । ದ್ವಿವಿಧಾಃ ಪಾರಿಜಾತಾದ್ಯಾ ಬಭೂವುರ್ಬ್ರಹ್ಮದೇಹತಃ ॥ (c) ಹಸ್ತಾಭ್ಯಾಂ ದ್ವಿವಿಧಃ ಶಕ್ರಃ ಪದ್ಭ್ಯಾಂ ತತ್ಸೂನುರೇವ ಚ । ಯಜ್ಞಸ್ತ್ವಜನಿ ಪಾಯೋಶ್ಚ ಯಮೋ ನಿರ್ಋತಿರೇವ ಚ ॥ (d) ರೇತೋಽಪ್ನಾಮಾ ದ್ವಿರೂಪಸ್ತು ಶಿವ ಏವ ಚ ಗುಹ್ಯತಃ । ಅಪಾನೋ ಮೃತ್ಯುರಿತಿ ಚ ಮುಖ್ಯೋ ನಾಭೇಸ್ತು ಮಾರುತಃ ॥ ೧ ॥

ಅ ॥ (a) ಮನಸ್ಸು ಬುದ್ಧಿಗಳಿಂದ ('ವೈದಿಕಂ ಗರುಡಶ್ಚೇಂದ್ರೋ ಯಜ್ಞಾದಿವಿಷಯಂ ಮನಃ' ಎಂದು ಹೇಳಿದ ರೀತಿಯಿಂದ) ಪ್ರತ್ಯೇಕ ಪ್ರತ್ಯೇಕ ಮನೋಬುದ್ಧಿಗಳಿಗೆ ಅಭಿಮಾನಿಗಳೂ ತತ್ತನ್ನಾಮಕರೂ ಆದ, ಗರುಡ, ಶೇಷ, ರುದ್ರ ಚಂದ್ರರು ಹುಟ್ಟಿದರು. (b) ತ್ವಕ್ಕಿನಿಂದ (ಅಧ್ಯಾತ್ಮದಲ್ಲಿ ರೋಮಗಳಿಗೆ ಅಭಿಮಾನಿಗಳಾದುದರಿಂದ) ರೋಮನಾಮಕರೂ (ಅಧಿದೈವದಲ್ಲಿ ದೇವತೆಗಳು ವೃಕ್ಷಸ್ವರೂಪರಾದುದರಿಂದ) ಪಾರಿಜಾತ ಮಂದರ ಮೊದಲಾದ ವೃಕ್ಷನಾಮಕರೂ (ಕಲ್ಪಲತಾದ್ಯೋಷಧಿನಾಮಕರೂ ಆದ ದ್ವಿವಿಧರಾದ ದೇವತೆಗಳೂ) ಬ್ರಹ್ಮದೇವರ ಶರೀರದಿಂದ ಹುಟ್ಟಿದರು. (c) ಕೈಗಳಿಂದ ಎರಡು ಪ್ರಕಾರನಾದ ಇಂದ್ರನೂ, ಕಾಲುಗಳಿಂದ ಎರಡು ಪ್ರಕಾರನಾದ ಇಂದ್ರನ ಮಗನಾದ ಯಜ್ಞನೂ ಹುಟ್ಟಿದನು. ಗುದದಿಂದ ಯಮನು, ಹಾಗೆಯೇ ನಿಋತಿಯು ಹುಟ್ಟಿದರು. (d) ಗುಹ್ಯಸ್ಥಾನದಿಂದ ರೇತೋನಾಮಕನೂ ಅಪ್‌ನಾಮಕನೂ ಅಧ್ಯಾತ್ಮ ಅಧಿದೈವವೆಂದು ಎರಡು ರೂಪವುಳ್ಳವನೂ ಆದ ರುದ್ರನು ಹುಟ್ಟಿದನು. ಅಪಾನನು ಮೃತ್ಯುವೆಂದು ಎರಡು ರೂಪಗಳುಳ್ಳ ಪ್ರಧಾನವಾಯುವೂ ಹೊಕ್ಕಳಿನಿಂದ (ಹುಟ್ಟಿದನು.) ॥ ೧ ॥

**ಮಂ ॥ ತಾ ಏತಾ ದೇವತಾಃ ಸೃಷ್ಟಾ ಅಸ್ಮಿನ್ಮಹತ್ಯರ್ಣವೇ ಪ್ರಾಪತಂಸ್ತಮಶನಾಪಿಪಾಸಾಭ್ಯಾಮನ್ವವಾರ್ಜತ್ತಾ ಏನಮಬ್ರುವನ್ನಾಯತನಂ ನಃ ಪ್ರಜಾನೀಹಿ ಯಸ್ಮಿನ್ಪ್ರತಿಷ್ಠಿತಾ ಅನ್ನಮದಾಮೇತಿ ತಾಭ್ಯೋ ಗಾಮಾನಯತ್ತಾ ಅಬ್ರುವನ್ನ ವೈ ನೋಽಯಮಲಮಿತಿ ತಾಭ್ಯೋಽಶ್ವಮಾನಯತ್ತಾ ಅಬ್ರುವನ್ನ ವೈ ನೋಽಯಮಲಮಿತಿ ತಾಭ್ಯಃ ಪುರುಷಮಾನಯತ್ತಾ ಅಬ್ರುವನ್ ಸುಕೃತಂ ಬತೇತಿ ಪುರುಷೋ ವಾವ ಸುಕೃತಂ ತಾ ಅಬ್ರವೀದ್ಯಥಾಽಽಯತನಂ ಪ್ರವಿಶತೇತ್ಯಗ್ನಿರ್ವಾಗ್ಭೂತ್ವಾ ಮುಖಂ ಪ್ರಾವಿಶದ್ವಾಯುಃ ಪ್ರಾಣೋ ಭೂತ್ವಾ ನಾಸಿಕೇ ಪ್ರಾವಿಶದಾದಿತ್ಯಶ್ಚಕ್ಷುರ್ಭೂತ್ವಾಽಕ್ಷಿಣೀ ಪ್ರಾವಿಶದ್ದಿಶಃ ಶ್ರೋತ್ರಂ ಭೂತ್ವಾ ಕರ್ಣೌ ಪ್ರಾವಿಶನ್ನೋಷಧಿವನಸ್ಪತಯೋ ಲೋಮಾನಿ ಭೂತ್ವಾ ತ್ವಚಂ ಪ್ರಾವಿಶಂಶ್ಚಂದ್ರಮಾ ಮನೋ ಭೂತ್ವಾ ಹೃದಯಂ ಪ್ರಾವಿಶನ್ಮೃತ್ಯುರಪಾನೋ ಭೂತ್ವಾ ನಾಭಿಂ ಪ್ರಾವಿಶದಾಪೋ ರೇತೋ ಭೂತ್ವಾ**

ಶಿಶ್ನಂ ಪ್ರಾವಿಶಂಸ್ತಮಶನಾಪಿಪಾಸೇ ಅಬ್ರೂತಾಮಾವಾಭ್ಯಾಮಭಿ
ಪ್ರಜಾನೀಹೀತಿ ತೇ ಅಬ್ರವೀದೇತಾಸ್ವೇವವಾನ್ದೇವತಾಸ್ವಾಭಜಾಮ್ಯೇ
ತಾಸು ಭಾಗಿನ್ಯೌ ಕರೋಮೀತಿ ತಸ್ಮಾದ್ಯಸ್ಯೈ ಕಸ್ಯೈ ಚ ದೇವತಾಯೈ
ಹವಿರ್ಗೃಹ್ಯತೇ ಭಾಗಿನ್ಯಾವೇವಾಸ್ಯಾಮಶನಾಪಿಪಾಸೇ ಭವತಃ ॥ ೨ ॥

ಅ ॥ ತಾ ಏತಾಃ ದೇವತಾಃ=ಆ ಈ ಅಗ್ನಿಮೊದಲಾದ ದೇವತೆಗಳು, ಸೃಷ್ಟಾಃ=(ಬ್ರಹ್ಮಶರೀರದಿಂದ ದ್ವಿರೂಪರಾಗಿ) ಸೃಷ್ಟಿಸಲ್ಪಟ್ಟವರಾಗಿ, ದೇವತಾಃ=ಶ್ರೀ ಹರಿಯನ್ನು ಸ್ತುತಿಸುವವರಾಗಿಯೂ, ದೇವತಾಃ=ದಿವ್ಯವಾದ ವಸ್ತ್ರಕುಂಡಲ ಮೊದಲಾದುವುಗಳಿಂದ ಪ್ರಕಾಶಿಸುವವರಾಗಿಯೇ, ಅಸ್ಮಿನ್=ಈದಾದ, ಮಹತಿ ಅರ್ಣವೇ=ಗರ್ಭೋದಕದಲ್ಲಿ ಯಾ ಶುದ್ಧೋದಕ ಸಮುದ್ರದಲ್ಲಿ, ಪ್ರಾಪತನ್=ಪ್ರವೇಶಿಸಿದರು. (ಆಗ ಆ ವಿಷ್ಣುವು ಅವರಿಗೆ ಅನ್ನದ ಆಕಾಂಕ್ಷೆಯನ್ನು ಹುಟ್ಟಿಸುವುದಕ್ಕೋಸ್ಕರ) ತಂ=ಆ ದೇವತೆಗಳ ಸಮುದಾಯನನ್ನು ಅಶನಾಪಿಪಾಸಾಭ್ಯಾಂ=ಅಶನೇಚ್ಛೆಯೂ ಪಾನೇಚ್ಛೆಯೂ ಇವುಗಳಿಗೆ ಅಭಿಮಾನಿಗಳಾದುದರಿಂದ ಆಯಾಯ ಹೆಸರುಳ್ಳ ವಾಯುರೂಪಗಳಿಂದ, ಅನ್ವವಾರ್ಜತ್=ಕೂಡಿಸಿದನು. (ಆ ಮೇಲೆ ಅವರಿಂದ ಅಭಿಮನ್ಯಮಾನವಾದ ಭೋಕ್ತೃತ್ವಶಕ್ತಿಯನ್ನು ಕೂಡಿಸಿದನು). ತಾಃ=ಆ ದೇವತೆಗಳು, (ನಾವು) ಯಸ್ಮಿನ್=ಯಾವ ಶರೀರದಲ್ಲಿ, ಪ್ರತಿಷ್ಠಿತಾಃ=ಇರುವವರಾಗಿ, ಅನ್ನಂ=ಅನ್ನವನ್ನು ಅದಾಮ=ಭಕ್ಷಿಸುತ್ತೇವೋ, ಆಯತನಂ=ಅಂತಹ ಭೋಗಗಳಿಗೆ ಉಪಯುಕ್ತವಾದ ಶರೀರವನ್ನು, ನಃ=ನಮಗೆ, ಪ್ರಜಾನೀಹಿ=ಚೆನ್ನಾಗಿ ಕೊಡು. ಇತಿ=ಈ ಪ್ರಕಾರವಾಗಿ, ಏನಂ=ಈ ವಿಷ್ಣುವನ್ನು, ಅಬ್ರುವನ್=ಹೇಳಿದರು. (ಎಲ್ಲಾ ಶರೀರಗಳಲ್ಲಿಯೂ ಪುರುಷಾಕಾರವಾದ ಶರೀರವೇ ವಿಶೇಷಾಕಾರವಾಗಿ ಭೋಗಗಳಿಗೆ ಆಶ್ರಯವಾದುದು ಎಂದು ತಿಳಿಸುವುದಕ್ಕೋಸ್ಕರ ಪ್ರಥಮದಲ್ಲಿ) ತಾಭ್ಯಃ=ಆ ದೇವತೆಗಳಿಗೋಸ್ಕರ, ಗಾಂ=ಗೋರೂಪ ಬ್ರಹ್ಮನನ್ನು, ಆನಯತ್=ಕೊಟ್ಟನು. ತಾಃ=ಆ ದೇವತೆಗಳು, (ಪ್ರವೇಶಮಾಡಿ) ನಃ=ನಮಗೆ, ಅಯಂ=ಈ ಗೋವಿನ ಆಕಾರವಾದ ಬ್ರಹ್ಮನ ಶರೀರವು, ನ ಅಲಂ=(ಭೋಗಗಳನ್ನು ಅನುಭವಿಸಲಿಕ್ಕೆ) ಸಾಕಾಗದು. ಇತಿ=ಈ ಪ್ರಕಾರ, ಅಬ್ರುವನ್=ಹೇಳಿದರು. ತಾಭ್ಯಃ=ಆ ದೇವತೆಗಳಿಗೋಸ್ಕರ ಅಶ್ವಂ=ಅಶ್ವಾಕಾರನಾದ ಬ್ರಹ್ಮನನ್ನು, ಆನಯತ್=ಕೊಟ್ಟನು. ತಾಃ=ಆ ದೇವತೆಗಳು, ಅಯಂ=ಈ ಅಶ್ವಾಕಾರವಾದ ಶರೀರವು, ನಃ=ನಮಗೆ, ಅಲಂ=ಭೋಗಕ್ಕೆ ಸಾಕಾಗುವುದು, ನ=ಅಲ್ಲ. ಇತಿ=ಈ ಪ್ರಕಾರವಾಗಿ, ಅಬ್ರುವನ್=ಹೇಳಿದರು. (ಆ ಮೇಲೆ) ತಾಭ್ಯಃ=ಆ ದೇವತೆಗಳಿಗೋಸ್ಕರ, ಪುರುಷಂ=(ಪೂರ್ವದಲ್ಲಿ ಸೃಷ್ಟಿಸಲ್ಪಟ್ಟ, ಚತುರ್ಮುಖನ) ಪುರುಷಾಕಾರವಾದ ಶರೀರವನ್ನು ಆನಯತ್=ಕೊಟ್ಟನು. ತಾಃ=ಆ ದೇವತೆಗಳು, (ಈ ಶರೀರವು) ಸುಕೃತಂ=(ನಮ್ಮ ಭೋಗಕ್ಕೆ) ಚೆನ್ನಾಗಿಯೇ ಸಾಕಾಗುವುದು, ಬತ=ಹರ್ಷವು. ಇತಿ=ಈಪ್ರಕಾರವಾಗಿ, ಅಬ್ರುವನ್=ಹೇಳಿದರು. (ಆದುದರಿಂದ ಈಗಲೂ ಕೂಡ ಜೀವರಿಗೆ ಎಲ್ಲಾ ಶರೀರಕ್ಕಿಂತಲೂ) ಪುರುಷಃ ವಾ ವ=ಪುರುಷಾಕಾರವಾದ ಶರೀರವೇ ಸುಕೃತಂ=ಚೆನ್ನಾಗಿ ಭೋಗಕ್ಕೆ ಸಾಕಾಗುವುದು. (ಆ ಮೇಲೆ ಶ್ರೀ ಹರಿಯು) ತಾಃ=ಆ ದೇವತೆಗಳನ್ನು ಕುರಿತು, ಯಥಾಯತನಂ=ನಿಮ್ಮ ನಿಮ್ಮ ಉತ್ಪತ್ತಿಸ್ಥಾನವನ್ನು ಅನುಸರಿಸಿ, (ಈ ಬ್ರಹ್ಮನ ಶರೀರವನ್ನು) ಪ್ರವಿಶತ=ಪ್ರವೇಶಮಾಡಿರಿ, ಇತಿ=ಈ ಪ್ರಕಾರ, ಅಬ್ರವೀತ್=ಹೇಳಿದನು. (ಈ ಪ್ರಕಾರವಾಗಿ ಶ್ರೀ ಹರಿಯ ಆಜ್ಞೆಯಾದ ಮೇಲೆ) ಅಗ್ನಿಃ=(ಅಧಿದೈವವಾದ) ಅಗ್ನಿನಾಮಕನಾದ ವಹ್ನಿಯು, ವಾಕ್=(ಅಧ್ಯಾತ್ಮನಾದ) ವಾಕ್‌ನಾಮಕನು, ಭೂತ್ವಾ=ಆಗಿ, ಮುಖಂ=ಬಾಯಿಯನ್ನು, ಪ್ರಾವಿಶತ್=ಪ್ರವೇಶಮಾಡಿದನು. ವಾಯುಃ=ಅಧಿದೈವವಾದ ವಾಯುವು, ಪ್ರಾಣಃ=ಅಧ್ಯಾತ್ಮ ಪ್ರಾಣನು,

ಭೂತ್ವಾ=ಆಗಿ, ನಾಸಿಕೇ=ಮೂಗುಗಳನ್ನು, ಪ್ರಾವಿಶತ್=ಪ್ರವೇಶಮಾಡಿದನು. ಆದಿತ್ಯಃ= ಅಧಿದೈವ ಆದಿತ್ಯನು, ಚಕ್ಷುಃ ಭೂತ್ವಾ=ಅಧ್ಯಾತ್ಮನಾಗಿ, ಅಕ್ಷಿಣೀ=ಕಣ್ಣುಗಳನ್ನು, ಪ್ರಾವಿಶತ್= ಪ್ರವೇಶಮಾಡಿದನು. ದಿಶಃ=ದಿಗಭಿಮಾನಿಗಳು, ಶ್ರೋತ್ರಂ ಭೂತ್ವಾ=ಅಧ್ಯಾತ್ಮರೂಪರಾಗಿ, ಕರ್ಣೌ=ಕಿವಿಗಳನ್ನು, ಪ್ರಾವಿಶನ್=ಪ್ರವೇಶಮಾಡಿದರು. ಓಷಧಿವನಸ್ಪತಯಃ=ಓಷಧ್ಯಾದಿ ಗಳು, ಲೋಮಾನಿ ಭೂತ್ವಾ=ರೋಮಗಳು ಆಗಿ, ತ್ವಚಂ=ತ್ವಗಿಂದ್ರಿಯವನ್ನು, ಪ್ರಾವಿಶನ್= ಪ್ರವೇಶಮಾಡಿದರು. ಚಂದ್ರಮಾಃ=ಚಂದ್ರನು, ಮನೋ ಭೂತ್ವಾ=ಮನೋಽಭಿಮಾನಿಯಾಗಿ, ಹೃದಯಂ=ಹೃದಯವನ್ನು, ಪ್ರಾವಿಶತ್=ಪ್ರವೇಶಮಾಡಿದನು. ಮೃತ್ಯುಃ=ಮೃತ್ಯುನಾಮಕ ಪ್ರಧಾನವಾಯುವು, ಅಪಾನೋ ಭೂತ್ವಾ=ಅಪಾನನಾಮಕ ಪ್ರಧಾನವಾಯುವು ಆಗಿ, ನಾಭಿಂ= ಹೊಕ್ಕಳನ್ನು, ಪ್ರಾವಿಶತ್=ಪ್ರವೇಶಮಾಡಿದನು. ಆಪಃ=ಜಲಾಭಿಮಾನಿಗಳು, ರೇತೋ ಭೂತ್ವಾ=ರೇತಸ್ಸಾಗಿ, ಶಿಶ್ನಂ=ಗುಹ್ಯೇಂದ್ರಿಯವನ್ನು , ಪ್ರಾವಿಶನ್=ಪ್ರವೇಶಮಾಡಿದರು. (ಹೀಗೆ ಎಲ್ಲಾ ದೇವತೆಗಳು ಪ್ರವೇಶಿಸಿದ ಮೇಲೆ) ತಂ=ಆ ವಿಷ್ಣುವನ್ನು, ಅಶನಾಪಿಪಾಸೇ=ಅಶನೇಚ್ಛೆ ಪಾನೇಚ್ಛೆಗಳು, ಅಬ್ರೂತಾಂ=ಹೇಳಿದವು. (ಅಂದರೆ ಅವುಗಳಿಗೆ ಅಭಿಮಾನಿಯಾದ ಎರಡು ರೂಪವುಳ್ಳ ವಾಯುವು ಹೇಳಿದನು). ಆವಾಭ್ಯಾಂ=ನಮಗೋಸ್ಕರ, ಅಭಿಪ್ರಜಾನೀಹಿ= ಆಜ್ಞಾಪಿಸು. (ಅಂದರೆ ನಿರಂತರದಲ್ಲಿಯೂ ನಾವಿಬ್ಬರೂ ಹೇಗೆ ನಿನ್ನ ಆಜ್ಞೆಯನ್ನು ಅನುಸರಿ ಸುತ್ತಾ ಇರುವೆವೋ, ಹಾಗೆಯೇ ಚೆನ್ನಾಗಿಯೇ ಆಜ್ಞಾಪಿಸು ಎಂದನು). ತೇ=ಆ ವಾಯುರೂ ಪಗಳನ್ನು ಕುರಿತು, (ಶ್ರೀ ಹರಿಯು) ಏತಾಸ್ವೇವ ದೇವತಾಸು=ಈ ವಹ್ನ್ಯಾದಿದೇವತೆಗಳ ಲ್ಲಿಯೇ, ವಾಂ=ನಿಮ್ಮನ್ನು ಆಭಜಾಮಿ=ಚೆನ್ನಾಗಿ ಪ್ರವೇಶಿಸುತ್ತೇನೆ. ಏತಾಸ್ವೇವ=ಈ ದೇವತೆ ಗಳಲ್ಲಿಯೇ, ವಾಂ=ನಿಮ್ಮನ್ನು, ಭಾಗಿನ್ಯೌ=ಆಯಾಯ ದೇವತೆಗಳ ಭಾಗಗಳನ್ನು ಅನುಭವಿಸು ವವರನ್ನಾಗಿ, ಕರೋಮಿ=ಮಾಡುತ್ತೇನೆ. ಇತಿ=ಈಪ್ರಕಾರ ಅಬ್ರವೀತ್=ಹೇಳಿದನು. ತಸ್ಮಾತ್=ಈಪ್ರಕಾರ ಶ್ರೀ ಹರಿಯು ಸಂಕಲ್ಪಿಸಿರುವುದರಿಂದ, ಯಸ್ಯೈ ಕಸ್ಯೈ ಚ ದೇವ ತಾಯೈ=ಯಾವುದಾದರೂ ದೇವತೆಗೋಸ್ಕರ, (ಯಾಗ ಮೊದಲಾದವುಗಳಲ್ಲಿ) ಹವಿಃ=ಹವಿಸ್ಸು, ಗೃಹ್ಯತೇ=ಕೊಡಲ್ಪಟ್ಟರೆ, ಅಸ್ಯಾಂ=ಈ ದೇವತೆಯಲ್ಲಿ, ಅಶನಾಪಿಪಾಸೇ=ತದಭಿಮಾನಿಗಳಾದ ಎರಡುರೂಪಗಳುಳ್ಳ ವಾಯುದೇವರು, ಭಾಗಿನ್ಯಾವೇವ=ಎಲ್ಲಾ ದೇವತೆಗಳ ಭಾಗಗಳನ್ನು ಭೋಗಿಸುವವರೇ, ಭವತಃ=ಆಗುತ್ತಾರೆ. ॥ ೨ ॥

ಭಾ॥ (a) ಏವಂ ರೂಪದ್ವಯೇನಾಪಿ ಸ್ತುವಂತೋ ವಿಷ್ಣುಮವ್ಯಯಂ । ದಿವ್ಯಾಂಬರಾಃ ಕುಂಡಲಿನಃ ಪ್ರಾವಿಶನ್ನುದಕಾರ್ಣವಂ ॥ (b) ತದಾಽಶನಾಪಿಪಾಸಾಖ್ಯಂ ದ್ವಿರೂಪಂ ಮಾರುತಂ ಪುನಃ । ತಸ್ಮಿನ್ದೇವಸಮೂಹೇ ತು ವಿಷ್ಣುಃ ಪ್ರಾವೇಶಯತ್ಪ್ರಭುಃ ॥ (c) ತೇಽಬ್ರುವನ್ದೇಹಿ ನೋ ವಾಸಂ ಯತ್ರ ಚಾನ್ನಮದಾಮಹೇ । ಗೋರೂಪಮೇಭ್ಯೋ ಬ್ರಹ್ಮಾಣಂ ದದೌ ನಾರಾಯಣಃ ಪ್ರಭುಃ ॥ (d) ತತ್ರ ಪ್ರವಿಶ್ಯ ತೇ ದೇವಾ ನಾಲಮಿತ್ಯಬ್ರುವನ್ಪುನಃ । ಅಶ್ವರೂಪಂ ವಿರಿಂಚಂ ಚ ಪುನರೇವಾವದತ್ಪ್ರಭುಃ ॥ (e) ತದ್ರೂಪೇಽಪಿ ಪ್ರವಿಶ್ಯೈವ ನಾಲಮಿತ್ಯಬ್ರುವನ್ಪುನಃ । ಪೂರ್ವಸೃಷ್ಟಂ ಪುಮಾಕಾರಂ ಬ್ರಹ್ಮಣೋಽದಾತ್ಪುನರ್ಹರಿಃ ॥ (f) ತದ್ದೃಷ್ಟ್ವೈವಾಲಮಿತ್ಯೂಚುರ್ವಿಶತೇತಿ ಸ ಚಾಬ್ರವೀತ್ । ವಿವಿಶುಶ್ಚ ಯಥೋತ್ಪನ್ನಾಃ ಸರ್ವೇ ದೇವಾಶ್ಚತುರ್ಮುಖಂ ॥

ಅ || (a) ಪೂರ್ವದಲ್ಲಿ ಹೇಳಿದಪ್ರಕಾರ ಅಧ್ಯಾತ್ಮ ಅಧಿದೈವವೆಂಬೀ ಎರಡು ರೂಪದಿಂದಲೂ (ಸೃಷ್ಟಿಸಲ್ಪಟ್ಟ ದೇವತೆಗಳು) ನಾಶಶೂನ್ಯನಾದ ಶ್ರೀ ಹರಿಯನ್ನು ಸ್ತೋತ್ರಮಾಡುವವರಾಗಿ ದಿವ್ಯವಾದ ವಸ್ತ್ರವುಳ್ಳವರೂ ಕುಂಡಲವುಳ್ಳವರೂ ಆಗಿ ಶುದ್ಧೋದಕ ಸಮುದ್ರವನ್ನು ಪ್ರವೇಶಿಸಿದರು. (b) ಆಗ ಅಶನಾಪಿಪಾಸಾ ಎಂದು ಹೆಸರುಳ್ಳ ಎರಡು ರೂಪವುಳ್ಳ ವಾಯುದೇವರನ್ನು ಪುನಃ ಆ ದೇವತೆಗಳ ಸಮುದಾಯದಲ್ಲಾದರೂ ಪ್ರಭುವಾದ ವಿಷ್ಣುವು ಪ್ರವೇಶಗೊಳಿಸಿದನು. (c) ಎಲ್ಲಿ ಇದ್ದು ಅನ್ನವನ್ನು ಭಕ್ಷಿಸುತ್ತೇವೋ ಅಂತಹ ವಾಸಸ್ಥಲವನ್ನು ನಮಗೆ ಕೊಡು ಎಂದು ಆ ದೇವತೆಗಳು ಹೇಳಿದರು. ಆಗ ಪ್ರಭುವಾದ ನಾರಾಯಣನು ಈ ದೇವತೆಗಳಿಗೋಸ್ಕರ ಗೋವಿನ ರೂಪವನ್ನು ಧರಿಸಿದ ಚತುರ್ಮುಖನನ್ನು ಕೊಟ್ಟನು. (d) ಆ ದೇವತೆಗಳು ಅಲ್ಲಿ ಪ್ರವೇಶಿಸಿ (ಇದು ನಮ್ಮ ಭೋಗಕ್ಕೆ) ಸಾಕಾಗದು ಎಂದು ಪುನಃ ಹೇಳಿದರು. ಶ್ರೀ ಹರಿಯು ಪುನಃ ಅಶ್ವಾಕಾರನಾದ ಚತುರ್ಮುಖನನ್ನು ಕೊಟ್ಟನು. (e) ಆ ರೂಪದಲ್ಲಿಯೂ ಪ್ರವೇಶಿಸಿಯೇ ಪುನಃ ಇದೂ ಸಾಕಾಗದು ಎಂದು ಹೇಳಿದರು. ಆಮೇಲೆ ಶ್ರೀ ಹರಿಯು ಪೂರ್ವದಲ್ಲಿಯೇ ಸೃಷ್ಟಿಸಲ್ಪಟ್ಟ ಚತುರ್ಮುಖನ ಪುರುಷಾಕಾರವಾದ ಶರೀರವನ್ನು ಕೊಟ್ಟನು. (f) ಆ ಶರೀರವನ್ನು ನೋಡಿದೊಡನೆಯೇ (ಇದು ನಮ್ಮ ಭೋಗಕ್ಕೆ) ಸಾಕಾಗುವುದು ಎಂದು ಹೇಳಿದರು. ಆಗ ಆ ಹರಿಯು ಹುಟ್ಟಿದಂತೆಯೇ (ಅಂದರೆ ಯಾವ ಯಾವ ಶರೀರಾವಯವದಿಂದ ಹುಟ್ಟಿರುವಿರೋ, ಆಯಾಯಸ್ಥಾನವನ್ನು ಅನುಸರಿಸಿಯೇ) ಪ್ರವೇಶಮಾಡಿರಿ ಎಂದನು. ಆಗ ಎಲ್ಲಾ ದೇವತೆಗಳೂ ಚತುರ್ಮುಖನನ್ನು ಪ್ರವೇಶಿಸಿದರು.

ಭಾ|| **(a)** ಅಶನಾಪಿಪಾಸಾನಾಮಾನೀ ತು ದ್ವಿರೂಪೋ ಮಾರುತೋಽವದತ್ |
ಕುರ್ವಾಣಾವಾಜ್ಞಾಮಾವಯೋಶ್ಚೈವ ಯಥಾ ತ್ವಚ್ಛಾಸನಾನುಗೌ || ನಿತ್ಯಂ ಭವಾವೇತಿ **(b)** ಹರಿಃ ಸರ್ವತ್ರ ಪ್ರವಿಶೇತ್ಯಮುಂ | ಆಹ ತಸ್ಮಾದ್ದೇವತಾನಾಂ ಸರ್ವಾಸಾಂ ಭಾಗಭುಙ್ಮರುತ್ || ಏಕ ಏವ ಪ್ರಾಣ ನಾಮಾ **(c)** ನಾಭಿಸ್ಥೋಽಪಿ ಸ ಏವ ತು | ಅಶನಾ ಪಿಪಾಸಾಽಪಾನಶ್ಚ ಮೃತ್ಯುಶ್ಚೇತಿ ಚತುರ್ವಿಧಃ || ಏಕ ಏವ ಮಹಾನ್ವಾಯುಃ ಸರ್ವದೇವೇಷು ಸಂಸ್ಥಿತಃ || ೨ ||

ಅ || (a) ಅಶನೇಚ್ಛೆಯೂ ಪಾನೇಚ್ಛೆಯೂ ಇವುಗಳಿಗೆ ಅಭಿಮಾನಿಯಾದ ಎರಡು ರೂಪಗಳುಳ್ಳ ವಾಯುದೇವರು (ನಾವಿಬ್ಬರು) ಹೇಗೆ ನಿರಂತರದಲ್ಲಿಯೂ ನಿನ್ನ ಅನುಜ್ಞೆಯನ್ನು ಅನುಸರಿಸುತ್ತಾ ಇರುವೆವೋ, ಹಾಗೆಯೇ ನಮ್ಮಿಬ್ಬರಿಗೂ ಆಜ್ಞೆಯನ್ನು ಮಾಡು ಎಂದು ಹೇಳಿದರು. (b) ಆಗ ಆ ಹರಿಯು ಈ ಎರಡು ರೂಪವುಳ್ಳ ವಾಯುದೇವರನ್ನು ಕುರಿತು ಎಲ್ಲಾ ವಹ್ನ್ಯಾದಿ ದೇವತೆಗಳಲ್ಲಿಯೂ ಪ್ರವೇಶ ಮಾಡು ಎಂದನು. ಆದುದರಿಂದ ಎಲ್ಲಾ ದೇವತೆಗಳ ಭಾಗವನ್ನು ಅನುಭವಿಸುವವನೂ, ಪ್ರಾಣನಾಮಕನೂ, ಅಶನಾಪಿಪಾಸಾನಾಮಕನೂ ಆದ ವಾಯುವು ಒಬ್ಬನೇವೇ ಸರಿ. (c) ಆತನೇ ನಾಭಿಯಲ್ಲಿಯೂ ಇರುವವನು. ಅಶನಾ, ಪಿಪಾಸಾ, ಅಪಾನಃ, ಮೃತ್ಯುಃ ಎಂಬೀ ನಾಲ್ಕುಪ್ರಕಾರನಾದವನೂ ಒಬ್ಬನೇ ಮುಖ್ಯವಾಯುವು ಎಲ್ಲಾ ದೇವತೆಗಳಲ್ಲಿಯೂ (ನಿಯಾಮಕನಾಗಿ) ಇರುತ್ತಿದ್ದಾನೆ. || ೨ ||

**ಮಂ || ಸ ಈಕ್ಷತೇಮೇ ನು ಲೋಕಾಶ್ಚ ಲೋಕಪಾಲಾಶ್ಚಾನ್ನಮೇಭ್ಯಃ ಸೃಜಾ ಇತಿ ಸೋಽಪೋಽಭ್ಯತಪತ್ತಾಭ್ಯೋಽಭಿತಪ್ತಾಭ್ಯೋ ಮೂರ್ತಿರಜಾಯತ ಯಾ ವೈ ಸಾ ಮೂರ್ತಿರಜಾಯತಾನ್ನಂ ವೈ ತತ್ತದೇನತ್ಸೃಷ್ಟಂ**

ಪರಾಙ್ ಅತ್ಯಜಿಘಾಂಸತ್ತದ್ವಾಚಾಽಜಿಘೃಕ್ಷತ್ತನ್ನಾಶಕ್ನೋದ್ವಾಚಾ
ಗೃಹೀತುಂ ಸ ಯದ್ಧೈನದ್ವಾಚಾಽಗ್ರಹೈಷ್ಯದಭಿವ್ಯಾಹೃತ್ಯ ಹೈವಾನ್ನ
ಮತ್ರಪ್ಸ್ಯತ್ತತ್ಪ್ರಾಣೇನಾಜಿಘೃಕ್ಷತ್ತನ್ನಾಶಕ್ನೋತ್ಪ್ರಾಣೇನ ಗೃಹೀತುಂ
ಸ ಯದ್ಧೈನತ್ಪ್ರಾಣೇನಾಗ್ರಹೈಷ್ಯದಭಿಪ್ರಾಣ್ಯ ಹೈವಾನ್ನಮತ್ರಪ್ಸ್ಯತ್ತ
ಚ್ಚಕ್ಷುಷಾಽಜಿಘೃಕ್ಷತ್ತನ್ನಾಶಕ್ನೋಚ್ಚಕ್ಷುಷಾ ಗೃಹೀತುಂ ಸ ಯದ್ಧೈ
ನಚ್ಚಕ್ಷುಷಾಽಗ್ರಹೈಷ್ಯದ್ದೃಷ್ಟ್ವಾ ಹೈವಾನ್ನಮತ್ರಪ್ಸ್ಯತ್ತಚ್ಛ್ರೋತ್ರೇ
ಣಾಜಿಘೃಕ್ಷತ್ತನ್ನಾಶಕ್ನೋಚ್ಛ್ರೋತ್ರೇಣ ಗೃಹೀತುಂ ಸ ಯದ್ಧೈನ
ಚ್ಛ್ರೋತ್ರೇಣಾಗ್ರಹೈಷ್ಯಚ್ಛ್ರುತ್ವಾ ಹೈವಾನ್ನಮತ್ರಪ್ಸ್ಯತ್ತತ್ತ್ವಚಾಽ
ಜಿಘೃಕ್ಷತ್ತನ್ನಾಶಕ್ನೋತ್ತ್ವಚಾ ಗೃಹೀತುಂ ಸ ಯದ್ಧೈನತ್ತ್ವಚಾಽ
ಗ್ರಹೈಷ್ಯತ್ ಸ್ಪೃಷ್ಟ್ವಾ ಹೈವಾನ್ನಮತ್ರಪ್ಸ್ಯತ್ತನ್ಮನಸಾಽಜಿಘೃಕ್ಷತ್ತನ್ನಾ
ಶಕ್ನೋನ್ಮನಸಾ ಗೃಹೀತುಂ ಸ ಯದ್ಧೈನನ್ಮನಸಾಽಗ್ರಹೈಷ್ಯದ್ಧ್ಯಾತ್ವಾ
ಹೈವಾನ್ನಮತ್ರಪ್ಸ್ಯತ್ತಚ್ಛಿಶ್ನೇನಾಜಿಘೃಕ್ಷತ್ತನ್ನಾಶಕ್ನೋಚ್ಛಿಶ್ನೇನ ಗೃ
ಹೀತುಂ ಸ ಯದ್ಧೈನಚ್ಛಿಶ್ನೇನಾಗ್ರಹೈಷ್ಯದ್ವಿಸೃಜ್ಯ ಹೈವಾನ್ನಮತ್ರ
ಪ್ಸ್ಯತ್ತದಪಾನೇನಾಜಿಘೃಕ್ಷತ್ತದಾಽವಯತ್ಸೈಷೋಽನ್ನಸ್ಯ ಗ್ರಹೋ
ಯದ್ವಾಯುರನ್ನಾಯುರ್ವಾ ಏಷ ಯದ್ವಾಯುಃ ಸ ಈಕ್ಷತ ಕಥ
ನ್ನ್ವಿದಂ ಮದೃತೇ ಸ್ಯಾದಿತಿ ಸ ಈಕ್ಷತ ಕತರೇಣ ಪ್ರಪದ್ಯಾ ಇತಿ ಸ
ಈಕ್ಷತ ಯದಿ ವಾಚಾಽಭಿವ್ಯಾಹೃತಂ ಯದಿ ಪ್ರಾಣೇನಾಭಿಪ್ರಾ
ಣಿತಂ ಯದಿ ಚಕ್ಷುಷಾ ದೃಷ್ಟಂ ಯದಿ ಶ್ರೋತ್ರೇಣ ಶ್ರುತಂ ಯದಿ
ತ್ವಚಾ ಸ್ಪೃಷ್ಟಂ ಯದಿ ಮನಸಾ ಧ್ಯಾತಂ ಯದ್ಯಪಾನೇನಾಭ್ಯಪಾ
ನಿತಂ ಯದಿ ಶಿಶ್ನೇನ ವಿಸೃಷ್ಟಮಥ ಕೋಽಹಮಿತಿ ಸ ಏತಮೇವ
ಸೀಮಾನಂ ವಿದಾರ್ಯೈತಯಾ ದ್ವಾರಾ ಪ್ರಾಪದ್ಯತ ಸೈಷಾ ವಿದೃತಿ
ರ್ನಾಮ ದ್ವಾಸ್ತದೇತನ್ನಾಂದನಂ ತಸ್ಯ ತ್ರಯ ಆವಸಥಾಸ್ತ್ರಯಃ
ಸ್ವಪ್ನಾ ಅಯಮಾವಸಥೋಽಯಮಾವಸಥೋಽಯಮಾವಸಥ ಇತಿ
ಸ ಜಾತೋ ಭೂತಾನ್ಯಭಿವ್ಯೈಖ್ಯತ್ಕಿಮಿಹಾನ್ಯಂ ವಾವದಿಷದಿತಿ ಸ ಏತ
ಮೇವ ಪುರುಷಂ ಬ್ರಹ್ಮ ತತಮಮಪಶ್ಯದಿದಮದರ್ಶಮಿತೀ೩ ೩
ತಸ್ಮಾದಿದಂದ್ರೋ ನಾಮೇದಂದ್ರೋ ಹ ವೈ ನಾಮ ತಮಿದಂದ್ರಂ
ಸಂತಮಿಂದ್ರ ಇತ್ಯಾಚಕ್ಷತೇ ಪರೋಕ್ಷೇಣ ಪರೋಕ್ಷಪ್ರಿಯಾ ಇವ
ಹಿ ದೇವಾಃ ಪರೋಕ್ಷಪ್ರಿಯಾ ಇವ ಹಿ ದೇವಾಃ ॥ ೩ ॥

ಇತ್ಯೈತರೇಯೋಪನಿಷತ್ಸು ದ್ವಿತೀಯಾರಣ್ಯಕೇ
ಚತುರ್ಥೋಽಧ್ಯಾಯಃ ॥ ೨ ॥ ೪ ॥

ಅ || ಸಃ=ಆ ಹರಿಯು, ಇಮೇ ನು=(ಇಷ್ಟರವರೇಗೆ ನನ್ನಿಂದ ಸೃಷ್ಟಿಸಲ್ಪಟ್ಟವುಗಳು) ಇವುಗಳೇ ಲೋಕಾಶ್ಚ=ರಳ ಲೋಕಗಳು. ಲೋಕಪಾಲಾಶ್ಚ=ಲೋಕಪಾಲಕರಾದ ದೇವತೆಗಳೂ ಕೂಡ, ನು=ಈಗ, ಏಭ್ಯಃ=ಈ ದೇವತೆಗಳಿಗೋಸ್ಕರ, ಅನ್ನಂ=ಅನ್ನವನ್ನು, ಸೃಜಾ ಇತಿ=ಸೃಷ್ಟಿಸುತ್ತೇನೆ ಎಂದು, ಈಕ್ಷತ=ಇಚ್ಛಿಸಿದನು. ಸಃ=ಆ ಹರಿಯು, ಅಪಃ=ಅಪ್ ಎಂದು ಹೆಸರುಳ್ಳ ಪೂರ್ವದಲ್ಲಿಯೇ ಸೃಷ್ಟಿಸಲ್ಪಟ್ಟ ಮಹದಾದಿ ತತ್ವಗಳಿಗೆ ಅಭಿಮಾನಿಗಳಾದ ಬ್ರಹ್ಮಾದಿದೇವತಗಳನ್ನು, ಅಭ್ಯತಪತ್=ಅತಿವಿಶಾಲಗಳಾದ ನೇತ್ರಗಳಿಂದ ಕಂಡನು. ಅಭಿತಪ್ತಾಭ್ಯಃ=ಹೀಗೆ ಹರಿಯಿಂದ ಕಾಣಲ್ಪಟ್ಟ, ತಾಭ್ಯಃ=ಆ ದೇವತೆಗಳಿಂದ, ಮೂರ್ತಿಃ=ಶರೀರವು, ಅಜಾಯತ=ಹುಟ್ಟಿತು. (ಅಂದರೆ ಎಲ್ಲಾ ದೇವತೆಗಳ ಶರೀರೈಕ ದೇಶಗಳಿಂದ ಮಿಲಿತವಾಗಿ ಚತುರ್ಮುಖ ಮೊದಲಾದ ಎಲ್ಲಾ ದೇವತೆಗಳಿಗೂ ಅಧಿಷ್ಠಾನ ಭೂತವಾದ ಒಂದು ಶರೀರವು ಪ್ರತ್ಯೇಕವಾಗಿ ಹುಟ್ಟಿತು.) ಸಾ=ಪ್ರಸಿದ್ಧವಾದ, ಯಾ ವೈ ಮೂರ್ತಿಃ=ಯಾವ ಶರೀರವು, ಅಜಾಯತ=ಹುಟ್ಟಿತೋ, ತತ್ ಅನ್ನಂ ವೈ=ಅದು ಅನ್ನರೂಪವೇ, ತತ್ ಏನತ್ ಸೃಷ್ಟಂ=ಆ ಈ ಸೃಷ್ಟಿಸಲ್ಪಟ್ಟ ಅನ್ನರೂಪಿಯಾದ ಚತುರ್ಮುಖಬ್ರಹ್ಮನು, ಪರಾಙ್ ಅತ್ಯಜಿಘಾಂಸತ್=(ಭೋಗಿಸುವ ದೇವತೆಗಳ ಸಮುದಾಯವನ್ನು ನೋಡಿ ಈ ದೇವತೆಗಳು ನನ್ನನ್ನು ಭಕ್ಷಿಸಿಬಿಡುತ್ತಾರೆ ಎಂಬೀ ಭೀತಿಯಿಂದೆಂಬಂತೆ ಕ್ರೀಡೆಯಿಂದಲೇ ಅವರನ್ನು) ಅತಿಕ್ರಮಿಸಿ ಸ್ವಲ್ಪ ಹಿಂದುಗಡೆ ತಿರುಗಿದನು. (ಹೀಗೆ ಅನ್ನಾತ್ಮಕ ರೂಪವು ಸ್ವಲ್ಪ ಹಿಂದೆ ತಿರುಗುತ್ತಿರಲು ಭೋಕ್ತೃರೂಪಿಯಾದ ಚತುರ್ಮುಖನು, ಎಲ್ಲಾ ದೇವತಗಳೂ ವಾಯುದೇವರ ಅನುಗ್ರಹವಿಲ್ಲದೆ ಅನ್ನವನ್ನು ಭೋಗಿಸಲಿಕ್ಕೆ ಅಶಕ್ತರೇ ಆಗಿರುತ್ತಾರೆ. ಮುಖ್ಯಪ್ರಾಣನು ಒಬ್ಬನೇ ಶಕ್ತನಾಗಿರುತ್ತಾನೆ. ಎಂದು ತಿಳಿದರೂ ನೀಚೋಚ್ಚಭಾವವನ್ನು ಪ್ರಕಾಶಗೊಳಿಸುವುದಕ್ಕೋಸ್ಕರ ಕ್ರೀಡೆಯಿಂದಲೇ) ತತ್=ಆ ಅನ್ನಾಖ್ಯ ರೂಪವನ್ನು, ವಾಚಾ=ವಾಗಭಿಮಾನಿಯಾದ ವಹ್ನಿಯಿಂದ, ಅಜಿಘೃಕ್ಷತ್=ಭಕ್ಷಿಸಲಿಕ್ಕೆ ಇಚ್ಛಿಸಿದನು. (ಭಕ್ಷಿಸಬೇಕೆಂದು ಇಚ್ಛೆಯುಳ್ಳವನಂತೆ ಪ್ರಯತ್ನವುಳ್ಳವನಾದನು). ತತ್=ಆ ಅನ್ನರೂಪವನ್ನು, ವಾಚಾ=ವಾಗಿಂದ್ರಿಯದಿಂದ, ಗೃಹೀತುಂ=ಭಕ್ಷಿಸುವುದಕ್ಕೋಸ್ಕರ, ನ ಅಶಕ್ನೋತ್=ಅಶಕ್ತನಂತ ಆದನು. ಸಃ=ಆ ಬ್ರಹ್ಮನು, ಏನತ್=ಅನ್ನ ರೂಪವನ್ನು, ವಾಚಾ=ವಾಗಿಂದ್ರಿಯದಿಂದ, ಅಗ್ರಹೈಷ್ಯತ್ ಯತ್=ಭಕ್ಷಿಸಲಿಕ್ಕೆ ಶಕ್ತನು ಆಗಿದ್ದರೆ, ಅನ್ನಂ ಅಭಿವ್ಯಾಹೃತ್ಯೈವ=ಚೆನ್ನಾಗಿ ಅನ್ನರೂಪವನ್ನು ಹೇಳಿಯೇ, ಅತ್ರಪ್ಸ್ಯತ್=ತೃಪ್ತನು ಆಗುವನು. (ಹಾಗೆ ತೃಪ್ತನು ಆಗುವುದಿಲ್ಲ. ಆದ ಕಾರಣ ವಾಗಿಂದ್ರಿಯದಿಂದ ಭಕ್ಷಿಸಲಿಕ್ಕೆ ಶಕ್ತನಲ್ಲ ಎಂದು ತಿಳಿಯುತ್ತದೆ. ಅಂತೂ ವಾಗಿಂದ್ರಿಯಕ್ಕೆ ಮಾತನಾಡತಕ್ಕ ಶಕ್ತಿಯು ಮಾತ್ರ ಇರುವುದು. ಅನ್ನವು ತೃಪ್ತಿಯನ್ನು ಹುಟ್ಟಿಸತಕ್ಕದು. ಆದುದರಿಂದ ವಾಗ್ವ್ಯಾಪಾರವನ್ನು ಮಾಡಿದರೂ ತೃಪ್ತಿಯು ಹುಟ್ಟದಿರುವುದರಿಂದ ವಾಗಿಂದ್ರಿಯದಿಂದ ಅನ್ನಭಕ್ಷಣವು ಕೂಡಲಾರದು. ಇನ್ನು ಮೇಲೆಯೂ ಇದೇ ರೀತಿಯಾಗಿ ತಿಳಿಯತಕ್ಕದು.) ತತ್=ಅನ್ನಾಖ್ಯರೂಪವನ್ನು, ಪ್ರಾಣೇನ=ಪ್ರಾಣದಿಂದ, ಅಜಿಘೃಕ್ಷತ್, ತತ್ ಪ್ರಾಣೇನ ಗೃಹೀತುಂ ನ ಅಶಕ್ನೋತ್, ಸಃ ಏನತ್ ಪ್ರಾಣೇನ ಅಗ್ರಹೈಷ್ಯತ್ ಯತ್...... ಅಭಿಪ್ರಾಣ್ಯ ಹ ಏವ=ಮೂಸಿನೋಡಿಯೇ, ಅನ್ನಂ ಅತ್ರಪ್ಸ್ಯತ್...... ತತ್ ಚಕ್ಷುಷಾ=ಕಣ್ಣಿನಿಂದ, ಅಜಿಘೃಕ್ಷತ್, ತತ್ ಚಕ್ಷುಷಾ ಗೃಹೀತುಂ ನಾಶಕ್ನೋತ್, ಸಃ ಏನತ್ ಚಕ್ಷುಷಾ ಅಗ್ರಹೈಷ್ಯತ್, ಯತ್ ಅನ್ನಂ..... ದೃಷ್ಟ್ವೈವ=ನೋಡಿಯೇ, ಅತ್ರಪ್ಸ್ಯತ್, ತತ್, ಶ್ರೋತ್ರೇಣ=ಕಿವಿಯಿಂದ, ಅಜಿಘೃಕ್ಷತ್ ತತ್ ಶ್ರೋತ್ರೇಣ ಗೃಹೀತುಂ ನಾಶಕ್ನೋತ್ ಸಃ ಏನತ್ ಶ್ರೋತ್ರೇಣ ಅಗ್ರಹೈಷ್ಯತ್ ಯತ್...... ಅನ್ನಂ ಶ್ರುತ್ವೈವ=ಅನ್ನವಾಚಕ ಶಬ್ದವನ್ನು ಕೇಳಿಯೇ ಅತ್ರಪ್ಸ್ಯತ್, ತತ್...... ತ್ವಚಾ=ತ್ವಗಿಂದ್ರಿಯದಿಂದ,

ಅಜಿಘೃಕ್ಷತ್ ತತ್ ತ್ವಚಾ, ಗೃಹೀತುಂ ನಾಶಕ್ನೋತ್, ಸಃ=ಏನತ್ ತ್ವಚಾ ಅಗ್ರಹೈಷ್ಯತ್, ಯತ್ ಹ ಅನ್ನಂ·····ಸ್ಪೃಷ್ಟ್ವೈವ=ಮುಟ್ಟಿಯೇ, ಅತ್ರಪ್ಸ್ಯತ್.. ತತ್=ಅದನ್ನು, ಮನಸಾ= ಮನಸ್ಸಿನಿಂದ, ಅಜಿಘೃಕ್ಷತ್ ತತ್ ಮನಸಾ ಗೃಹೀತುಂ ನಾಶಕ್ನೋತ್, ಸಃ=ಏನತ್ ಮನಸಾ ಅಗ್ರಹೈಷ್ಯತ್, ಯತ್ ಹ ಅನ್ನಂ··· ··ಧ್ಯಾತ್ವೈವ=ಧ್ಯಾನಿಸಿಯೇ, ಅತ್ರಪ್ಸ್ಯತ್·····ತತ್= ಅದನ್ನು ಶಿಶ್ನೇನ=ಗುಹ್ಯೇಂದ್ರಿಯದಿಂದ, ಅಜಿಘೃಕ್ಷತ್ ತತ್, ಶಿಶ್ನೇನ ಗೃಹೀತುಂ ನಾಶ ಕ್ನೋತ್, ಸಃ ಏನತ್ ಶಿಶ್ನೇನ ಅಗ್ರಹೈಷ್ಯತ್ ಯತ್, ಅನ್ನಂ······ವಿಸೃಜ್ಯೈವ=ರೇತೋ ರೂಪದಿಂದ ಶಿಶ್ನದಿಂದ ಹೊರಡಿಸಿಯೇ, ಅತ್ರಪ್ಸ್ಯತ್ ಹ ·····ತತ್=ಅನ್ನರೂಪವನ್ನು, (ಚತು ರ್ಮುಖನು) ಅಪಾನೇನ=ಅಪಾನಾಖ್ಯ ಪ್ರಧಾನವಾಯುವಿನಿಂದ, ಅಜಿಘೃಕ್ಷತ್=ಭಕ್ಷಿಸಲಿಕ್ಕೆ ಇಚ್ಛಿಸಿದನು; ತದಾ ಆಗ, ಆವಯತ್=ಶಕ್ತನಾದನು. (ಆದುದರಿಂದ) ಯತ್ ವಾಯುಃ= ಯಾವ ಅಪಾನಾಖ್ಯವಾಯುವೋ, ಸಾ ಏಷಃ=ಆ ಈತನು, ಅನ್ನಸ್ಯ=ಎಲ್ಲಾ ಅನ್ನವನ್ನು, ಗ್ರಹಃ=ಭೋಗಿಸುವವನು; ಯತ್ ವಾಯುಃ=ಯಾವ ವಾಯುವೋ, ಏಷಃ=ಇವನು, ಅನ್ನಾಯುಃ ವೈ=ಅನ್ನಕ್ಕೆ ಅಭಿಮಾನಿಯಾದ ಬ್ರಹ್ಮನಿಗೂ ಕೂಡ ಜೀವನಕ್ಕೆ ಕಾರಣನು. ವಾಯುರ್ವೈ=ಮುಖ್ಯಪ್ರಾಣನೇ, (ಎಲ್ಲಾ ದೇವತೆಗಳಿಗೂ) ಆಯುಃ=ಚೇಷ್ಟೆಯನ್ನು ಕೊಡು ವವನೂ, ಜ್ಞಾನವನ್ನು ಕೊಡುವವನೂ, ಮೋಕ್ಷವನ್ನು ಕೊಡುವವನೂ, ಸಃ=ಆ ಹರಿಯು, ಇದಂ=ಈ ಬ್ರಹ್ಮಾದಿ ದೇವತೆಗಳ ಸಮುದಾಯವು, ಮದೃತೇ=ನನ್ನನ್ನು ಹೊರತು, ಕಥಂ ನು=ಹೇಗೆ ತಾನೇ, ಸ್ಯಾತ್=(ತಮ್ಮ ತಮ್ಮ ಕಾರ್ಯವನ್ನು ಮಾಡಲಿಕ್ಕೆ ಸಮರ್ಥವಾದದ್ದು) ಆಗುವುದು? (ಎಷ್ಟು ಮಾತ್ರಕ್ಕೂ ಆಗಲಾರದು. ಆ ಕಾರಣ ಇದರ ಪ್ರವೃತ್ತಿಗಾಗಿ ಬ್ರಹ್ಮನ ಶರೀರದಲ್ಲಿ ನಾನು ಪ್ರವೇಶ ಮಾಡತಕ್ಕದ್ದೇ ಸರಿ.) ಇತಿ=ಈ ಪ್ರಕಾರ, (ಬ್ರಹ್ಮನ ಶರೀರದಲ್ಲಿ ದೇವತೆಗಳು ಪ್ರವೇಶ ಮಾಡುವುದಕ್ಕಿಂತ ಪೂರ್ವದಲ್ಲಿಯೇ) ಈಕ್ಷತ=ಇಚ್ಛಿಸಿದನು. ಸಃ=ಆ ಹರಿಯು, ಕತರೇಣ=ಯಾವ ಮಾರ್ಗದಿಂದ, (ಈ ಶರೀರವನ್ನು) ಪ್ರಪದ್ಯೈ=ಹೊಂದು ವೆನು, ಇತಿ=ಈ ಪ್ರಕಾರ, ಈಕ್ಷತ=ಇಚ್ಛಿಸಿದನು. ಸಃ=ಆ ಹರಿಯು, ವಾಚಾ=ವಾಗಿಂದ್ರಿ ಯಾಭಿಮಾನಿಯಾದ ದೇವತೆಯಿಂದ, ಮದೃತೇ=ನನ್ನನ್ನು ಹೊರತೇ, (ಅಂದರೆ ಸ್ವತಂತ್ರವಾ ಗಿಯೇ) ಅಭಿವ್ಯಾಹೃತಂ ಯದಿ=ಮಾತನಾಡಲ್ಪಡುವುದಾದರೆ, ಪ್ರಾಣೇನ=ಪ್ರಾಣದಿಂದ, ಅಭಿ ಪ್ರಾಣಿತಂ ಯದಿ=ಚೇಷ್ಟೆಮಾಡಲ್ಪಡುವುದಾದರೆ, ಚಕ್ಷುಷಾ=ತದಭಿಮಾನಿ ದೇವತೆಯಿಂದ, ದೃಷ್ಟಂ ಯದಿ=ಕಾಣಲ್ಪಡುವುದಾದರೆ, ಶ್ರೋತ್ರೇಣ=ತದಭಿಮಾನಿ ದೇವತೆಯಿಂದ, ಶ್ರುತಂ ಯದಿ=ಸ್ವತಂತ್ರವಾಗಿ ಕೇಳಲ್ಪಡುವುದಾದರೆ, ತ್ವಚಾ=ತ್ವಗಭಿಮಾನಿ ದೇವತೆಯಿಂದ, ಸ್ಪೃಷ್ಟಂ ಯದಿ=ಮುಟ್ಟಲ್ಪಡುವುದಾದರೆ, ಮನಸಾ=ತದಭಿಮಾನಿಯಿಂದ ಧ್ಯಾತಂ ಯದಿ=ಧ್ಯಾನಮಾಡ ಲ್ಪಡುವುದಾದರೆ ಅಪಾನೇನ=ಅಪಾನಾಖ್ಯ ವಾಯುವಿನಿಂದ, ಅಭ್ಯಪಾನಿತಂ ಯದಿ=ಸ್ವತಂತ್ರ ವಾಗಿ ಹೊರಗೆ (ಮಲಾದಿಗಳು) ಕಳುಹಿಸಲ್ಪಡುವುದಾದರೆ, ಶಿಶ್ನೇನ=ಗುಹ್ಯೇಂದ್ರಿಯಾಭಿ ಮಾನಿಯಿಂದ, ವಿಸೃಷ್ಟಂ ಯದಿ=ರೇತೋವಿಸರ್ಜನೆಯು ಮಾಡಲ್ಪಡುವುದಾದರೆ, ಅಥ=ಹಾಗಾ ದರೆ, ಅಹಂ=ನಾನು, ಕಃ=ವಿಷ್ಣು ಶಬ್ದವಾಚ್ಯನು ಹೇಗೆ ಆದೇನು? (ಅಂದರೆ ವಿಶೇಷಾಕಾರ ವಾಗಿ ಸರ್ವಚೇಷ್ಟಕನಾದುದರಿಂದಲೂ ಅತಿಸಾಮರ್ಥ್ಯವಿರುವುದರಿಂದಲೂ ನನಗೆ ವಿಷ್ಣುವೆಂಬೀ ನಾಮಧೇಯವು; ಆ ಹೆಸರೇ ಕೂಡದೆ ಹೋಗಬೇಕಾಗುವುದು.) ಇತಿ ಈ ಪ್ರಕಾರ, ಐಕ್ಷತ= ಇಚ್ಛಿಸಿದನು. (ಹೀಗೆ ಆಲೋಚಿಸಿ) ಸಃ=ಆ ಹರಿಯು, (ವಾಸುದೇವ ರೂಪದಿಂದ) ಏತಮೇವ ಸೀಮಾನಂ=ಈ ಮಸ್ತಕ ಪ್ರದೇಶವನ್ನೇ, ವಿದಾರ್ಯ=ಶೀಳಿಸಿ, ಏತಯಾ ದ್ವಾರಾ=ಸುಷುಮ್ನೆ ಎಂಬ ಶಿರಸ್ಸಿನಲ್ಲಿರುವ ನಾಡಿಯದ್ವಾರದಿಂದ, ಪ್ರಾಪದ್ಯತ=ಪ್ರವೇಶಿಸಿದನು. ಸಾ ಏಷಾ ದ್ವಾಃ=

ಆ ಈ ದ್ವಾರವು, ವಿದೃತಿರ್ನಾಮ=ಶೀಳಿಸಲ್ಪಡುವುದರಿಂದ ವಿದೃತಿನಾಮಕವು. ತತ್ ಏತತ್= ಆ ಈ ನಾಡೀದ್ವಾರವು, ನಾಂದನಂ=ಪೂರ್ಣಾನಂದಸ್ವರೂಪನಾದುದರಿಂದ ನಂದನನಾಮಕನಾದ ಶ್ರೀ ಹರಿಯ ಸಂಬಂಧಿಯಾದುದರಿಂದ, ನಾಂದನವೆಂದು ಹೇಳಲ್ಪಡುತ್ತದೆ. ತಸ್ಯ=ಆ ಹರಿಗೆ, ತ್ರಯಃ=ಮೂರು, ಆವಸಥಾಃ=ಸ್ಥಾನಗಳು. ಅಯಂ=ಈ ಅಕ್ಷೀರೂಪವಾದುದು, ಆವ ಸಥಃ=ಒಂದು ಸ್ಥಾನವು. ಅಯಂ=ಈ ಕಂಠರೂಪವಾದುದು, ಆವಸಥಃ=ಒಂದು ಸ್ಥಾನವು. ಅಯಂ=ಈ ಹೃದಯರೂಪವಾದುದು, ಆವಸಥಃ=ಒಂದು ಸ್ಥಾನವು; ಹೀಗೆ ೩ ಸ್ಥಾನಗಳು. ತ್ರಯಃ=ಈ ಮೂರು ಸ್ಥಾನಗಳೇ, ಸ್ವಪ್ನಾಃ=(ಸ್ವಃ=ಸ್ವತಂತ್ರನಾದ ವಿಷ್ಣುವು, ಜಾಗ್ರದಾದ್ಯವಸ್ಥೆ ಗಳನ್ನು ಪ್ರೇರಿಸುವುದಕ್ಕೋಸ್ಕರ ಈ ಸ್ಥಾನಗಳಲ್ಲಿ ಜೀವರೂಪವನ್ನು, ಆಪ್ನೋತಿ=ಹೊಂದು ತ್ತಾನೆ. ಎಂಬೀ ವ್ಯುತ್ಪತ್ತಿಯಿಂದ) ಸ್ವಪ್ನವೆನ್ನಿಸಿಕೊಳ್ಳುತ್ತವೆ. (ಅನಿರುದ್ಧ, ಪ್ರದ್ಯುಮ್ನ, ಸಂಕರ್ಷ ಣಾಖ್ಯರೂಪತ್ರಯವು ಕ್ರಮವಾಗಿ ೩ಸ್ಥಾನಗಳಲ್ಲಿ ಇರತಕ್ಕದು ಎಂದು ತಿಳಿಯತಕ್ಕದು) ಸಃ= ಆ ಹರಿಯು, ಜಾತಃ=ಮತ್ಸ್ಯಾದಿರೂಪದಿಂದ ಪ್ರಾದುರ್ಭವಿಸಿದಾಗ್ಯೂ, ಭೂತಾನಿ=ಎಲ್ಲಾ ಪ್ರಾಣಿಗಳನ್ನು, ಅಭಿವ್ಯೈಖ್ಯತ್=ಎಲ್ಲಾ ಕಾಲಗಳಲ್ಲಿಯೂ ವಿಶೇಷಾಕಾರವಾಗಿ ನೋಡಿಕೊಂಡೇ ಇದ್ದಾನೆ. (ರೂಪಾಂತರದಿಂದ) ಭೂತಾನಿ=ಎಲ್ಲಾ ಪ್ರಾಣಿಗಳನ್ನು, (ಪ್ರವೇಶಿಸಿದನು. ಮೂಲ ರೂಪಕ್ಕೂ ಅವತಾರರೂಪಕ್ಕೂ ಜ್ಞಾನ ವೊದಲಾದ ಎಲ್ಲಾ ಗುಣಗಳಿಂದಲೂ ಅಲ್ಪವಾದ ವಿಶೇ ಷವೂ (ಹೆಚ್ಚು ಕಡಿಮೆಯೂ) ಇರುವುದಿಲ್ಲ.) ಇಹ=ಈ ಜಗತ್ತಿನಲ್ಲಿ, ಅನ್ಯಂ=ನನ್ನಿಂದಿತರನನ್ನು, (ಅಸುರರನ್ನು ಕೊಲ್ಲತಕ್ಕವನನ್ನಾಗಿಯೂ, ಜ್ಞಾನವೊದಲಾದ ಗುಣಗಳನ್ನು ಕೊಡತಕ್ಕವನ ನ್ನಾಗಿಯೂ, ತಿಳಿದವರು) ವಾವದಿಷತ್ಕಿಂ=ಹೇಳುವರೋ ಏನು? (ಹೇಳುವುದೇ ಇಲ್ಲ.) ಇಹ= ಈ ಪ್ರಾಣಿಗಳಲ್ಲಿ, ಅನ್ಯಂ=ನನ್ನಿಂದ ಇತರನನ್ನು, ಚೇಷ್ಟೆಯನ್ನು ಕೊಡತಕ್ಕವನನ್ನಾಗಿಯೂ, ವಾವದಿಷತ್ಕಿಂ=ಹೇಳುವನೋ ಏನು? (ಹೇಳುವುದೇ ಇಲ್ಲ.) ಇತಿ=ಈ ಪ್ರಕಾರವಾಗಿ, (ತಿಳಿದು ದೈತ್ಯರನ್ನು ನಾಶವಾಡಬೇಕೆಂಬ ಇಚ್ಛೆಯಿಂದಲೂ ಸಜ್ಜನರಿಗೆ ಜ್ಞಾನವನ್ನು ಕೊಡುವುದಕ್ಕೋ ಸ್ಕರವೂ ಮತ್ಸ್ಯವೊದಲಾದ ಸ್ವರೂಪದಿಂದ) ಜಾತಃ=ಪ್ರಾದುರ್ಭೂತನಾಗಿ, ಭೂತಾನಿ=ಪ್ರಾಣಿ ಗಳನ್ನು (ಪ್ರೇರಣೆವಾಡಬೇಕೆಂಬ ಇಚ್ಛೆಯಿಂದ ಪ್ರವೇಶ ವಾಡಿದನು.) ಸಃ=ಆ ಹರಿಯು, ಏತಮೇವ ಪುರುಷಂ=ವ್ಯಾಸ, ಕೃಷ್ಣ, ಕಪಿಲ, ರಾಘವ ವೊದಲಾದ ರೂಪವನ್ನು, ತತಮಂ= ಅತಿಪರಿಪೂರ್ಣವಾದ, ಬ್ರಹ್ಮ=ಪರಬ್ರಹ್ಮನನ್ನಾಗಿ, ಅಪಶ್ಯತ್=ಕಂಡನು. (ತಥಾ ಚ, 'ನಾನೇ ಸ್ವತಂತ್ರನು, ನಾನೇ ಪೂರ್ಣಗುಣಗಳುಳ್ಳವನು' ಎಂದು ಕೃಷ್ಣ ರಾಮ ವೊದಲಾದ ಎಲ್ಲಾ ಅವ ತಾರ ರೂಪಿಯೂ ಕೂಡ ಯಾವಾಗಲೂ ಅನುಭವಿಸಿಕೊಂಡಿದ್ದಾನೆ.) ಇತಿ=ಯಾವ ಕಾರಣ ದಿಂದ, ಇದಂ=ನನ್ನ ಸ್ವರೂಪವನ್ನು, ಅದರ್ಶಂ=(ನಾನು ಗುಣಪೂರ್ಣನಾಗಿದ್ದೇನೆ. ಇತ್ಯಾದಿ ರೀತಿಯಿಂದ ಯಾವಾಗಲೂ) ನೋಡಿಕೊಂಡೇ ಇದ್ದೇನೋ, ತಸ್ಮಾತ್=ಆದುದರಿಂದ, (ನಾನು) ಇದಂದ್ರೋ ನಾಮ=ಇಂದ್ರನೆಂದು ಪ್ರಸಿದ್ಧನು (ಎಂದು, ಮಹಿದಾಸನ ವಾಕ್ಯವು.) ಇದಂ ದ್ರೋ ಹ ವೈ ನಾಮ=('ಇದಂ ದರ್ಶನಾತ್ ಇದಂದ್ರಃ' ಎಂಬೀ ವ್ಯುತ್ಪತ್ತಿಯಿಂದ) ತನ್ನ ಸ್ವರೂಪ ವನ್ನು ನೋಡುವುದರಿಂದ ಇದಂದ್ರನೆಂದು ಪ್ರಸಿದ್ಧನೋ, (ಆದುದರಿಂದ) ಇದಂದ್ರಂ ಸಂತಂ= ಇದಂದ್ರನಾಮಕನೇ ಆದ, ತಂ=ಆ ವಿಷ್ಣುವನ್ನು, (ಇದಂದ್ರನೆಂದು ಹೇಳದೆ) ಇಂದ್ರ ಇತಿ= ಇಂದ್ರನೆಂದೇ, ಪರೋಕ್ಷೇಣ=ಅಸ್ಪಷ್ಟವಾಗಿಯೇ, (ವೇದಾಭಿಮಾನಿಗಳು) ಆಚಕ್ಷತೇ=ಹೇಳು ತ್ತಾರೆ. ದೇವಾಃ=ದೇವತೆಗಳು, ಹಿ=ಯಾವ ಕಾರಣದಿಂದ, ಪರೋಕ್ಷಪ್ರಿಯಾಃ=ದೈತ್ಯರಿಗೆ ಚೆನ್ನಾಗಿ ಜ್ಞಾನವಾಗದಿರುವುದೇ ಪ್ರಿಯವಾಗಿ ಉಳ್ಳವರು. (ಇಂದ್ರನೆಂದು ಹೇಳಿದರೆ ಪ್ರಸಿದ್ಧ ಇಂದ್ರನೇ ಇವನು ಎಂಬೀ ಮಿಥ್ಯಾಜ್ಞಾನವು ದೈತ್ಯರಿಗೆ ಹುಟ್ಟುತ್ತದೆ. ಇದರಿಂದ ದೈತ್ಯರಿಗೆ

ಅಂಥಂತಮುಸ್ಸು ಪ್ರಾಪ್ತವಾಗುತ್ತದೆ. ಇದಂದ್ರನೆಂದು ಹೇಳಿದರೆ ಮಿಥ್ಯಾಜ್ಞಾನವು ಹುಟ್ಟಲಾರದು. ಆದುದರಿಂದ ಇದಂದ್ರನನ್ನು ಇಂದ್ರನೆಂದು ಹೇಳಿದ್ದು ಶ್ರುತ್ಯಾದಿಗಳಲ್ಲಿ ಸಂಗತವೇ ಆಗುತ್ತದೆ. ಅಪರೋಕ್ಷದರ್ಶಿಗಳಾದ ತತ್ವಜ್ಞಾನಿಗಳಲ್ಲಿ ದೇವತೆಗಳು ಪ್ರೀತಿಯನ್ನೇ ಮಾಡುತ್ತಾರೆ. ಆದುದರಿಂದ ಅಪರೋಕ್ಷಪ್ರಿಯತ್ವವೂ ಕೂಡ ದೇವತೆಗಳಿಗೆ ಅದೆ ಎಂದು ತಿಳಿಸಿಕೊಡುವುದಕ್ಕೋಸ್ಕರ ಇವ ಶಬ್ದವು. ‖ ೩ ‖

**ಈ ಪ್ರಕಾರ ಐತರೇಯೋಪನಿಷತ್ತಿನಲ್ಲಿ ಎರಡನೇ ಆರಣ್ಯಕದಲ್ಲಿ ನಾಲ್ಕನೇ ಅಧ್ಯಾಯವು ಸಮಾಪ್ತವಾಯಿತು.**

ಭಾ‖ (a) ಪುನರ್ರೈಚ್ಛತ್ಕೇಶವೋಽಸಾವನ್ನಮೇಭ್ಯಃ ಸೃಜಾ ಇತಿ । (b) ಅಬಾಖ್ಯಾ ದೇವತಾಃ ಪೂರ್ವಂ ಸೃಷ್ಟ್ವಾ ಬ್ರಹ್ಮಾದಿಕಾಃ ಪುನಃ ‖ ದದರ್ಶ ಸುವಿಶಾಲಾಭ್ಯಾಂ ನೇತ್ರಾಭ್ಯಾಂ ಪುಷ್ಕರೇಕ್ಷಣಃ । (c) ತದ್ದರ್ಶನಾತ್ತದಿಚ್ಛಾತಸ್ತಾಸಾಂ ದೇಹೋಽಭವತ್ಪೃಥಕ್ ‖ (d) ಸರ್ವಾಸಾಮಪಿ ದೇಹೈಕದೇಶೇಭ್ಯೋ ಮಿಲಿತಂ ಶುಭಂ । ಸರ್ವೈರಧಿಷ್ಠಿತಂ ಚೈವ ವಿರಿಂಚೇನ ವಿಶೇಷತಃ ‖ ದಿವ್ಯಾವಯವಸಂಪನ್ನಮೇಕಮೇವ ಸುಲೋಚನಂ ‖

ಅ ‖ (a) ಪುನಃ ಈ ಕೇಶವನು ಈ ಲೋಕಪಾಲಕರಾದ ದೇವತೆಗಳಿಗೋಸ್ಕರ ಅನ್ನವನ್ನು ಸೃಷ್ಟಿಸುತ್ತೇನೆ ಎಂದು ಇಚ್ಛಿಸಿದನು. (b) ಕಮಲದಳದಂತೆ ಕಣ್ಣುಗಳುಳ್ಳ ಶ್ರೀ ಹರಿಯು ಅಪ್ ಎಂದು ಹೆಸರುಳ್ಳ ಪೂರ್ವದಲ್ಲಿಯೇ ಸೃಷ್ಟರಾದ ಮಹದಾದಿ ತತ್ವಗಳಿಗೆ ಅಭಿಮಾನಿಗಳಾದ ಚತುರ್ಮುಖನೇ ಮೊದಲಾದ ದೇವತೆಗಳನ್ನು ಅತಿವಿಶಾಲಗಳಾದ ಕಣ್ಣುಗಳಿಂದ ನೋಡಿದನು. (c) ಈ ಪ್ರಕಾರ ಶ್ರೀ ಹರಿಯು ನೋಡಿದರಿಂದ ಆತನ ಇಚ್ಛಾನುಸಾರವಾಗಿ ಆ ದೇವತೆಗಳಿಗೆ ಬೇರೆ ಒಂದು ಶರೀರವು ಆಯಿತು. (d) ಆ ಎಲ್ಲಾ ದೇವತೆಗಳ ಶರೀರಗಳ ಏಕದೇಶಗಳಿಂದ ಕೂಡಿದ್ದಾಗಿಯೂ ಶುಭವಾಗಿಯೂ, ಎಲ್ಲಾ ದೇವತೆಗಳಿಂದಲೂ ಅಧಿಷ್ಠಿತವಾಗಿಯೂ, ವಿಶೇಷಾಕಾರವಾಗಿ ಚತುರ್ಮುಖನಿಂದ ಅಧಿಷ್ಠಿತವಾದುದೂ, ದಿವ್ಯಗಳಾದ ಅವಯವಗಳಿಂದೊಡಗೂಡಿದ್ದೂ ಶೋಭನಗಳಾದ ಕಣ್ಣುಗಳುಳ್ಳದ್ದೂ ಆದ ಒಂದೇ ಶರೀರವು (ಪ್ರತ್ಯೇಕವಾಗಿ ಹುಟ್ಟಿತು.)

ಭಾ‖ (a) ಭೋಗ್ಯಭೋಕ್ತ್ರಾತ್ಮನಾ ನಾಸ್ತಿ ತಸ್ಯ ದುಃಖಂ ಕಥಂಚನ । ತೇ ಹಿ ದೇವಾಃ ಸ್ವಯಂ ಭೋಗ್ಯಾಃ ಸ್ವಯಂ ಭೋಕ್ತಾರ ಏವ ಚ ‖ ಕ್ರೀಡಂತೇ ಮೋದಿನೋ ನಿತ್ಯಂ (b) ತಥಾಽಪ್ಯನ್ನಾತ್ಮಕಸ್ತ್ವಸೌ । ಕ್ರೀಡಯಾಽಪಾಕ್ರಮಿತ್ಕಿಂಚಿತ್ತಂ ತದಾಽಸೌ ಚತುರ್ಮುಖಃ ‖ ಅತ್ತುಂ ವಾಗಾದಿಭಿಃ ಸರ್ವೈರೈಚ್ಛನ್ನಾಪ್ಯಶಕತ್ತದಾ । (c) ಜಾನನ್ನಪಿ ಕ್ರೀಡಯೈವ ತಾರತಮ್ಯಂ ಪ್ರಕಾಶಯನ್ ‖ ಏವಂ ಚಕಾರ ಬ್ರಹ್ಮಾ ಸ ಕ್ವಾಜ್ಞಾನಂ ಲೋಕಕರ್ತರಿ । ಕ್ಷುತ್ಪಿಪಾಸಾದಯಶ್ಚೈವ ದೇವಾನಾಂ ಭೋಗಸಾಧಕಾಃ ‖ ನ ತು ಪೀಡಾಕರಾಸ್ತೇಷಾಮೈಶ್ವರ್ಯಾದಿಗುಣೋನ್ನತೇಃ ‖

ಅ ‖ (a) ಆ ಬ್ರಹ್ಮನಿಗೆ ಭೋಗ್ಯವಾದ ಸ್ವರೂಪದಿಂದಲೂ ಭೋಕ್ತೃಸ್ವರೂಪದಿಂದಲೂ, ಯಾವ ಪ್ರಕಾರದಿಂದಲೂ ದುಃಖವು ಇರುವುದಿಲ್ಲ. ಆ ದೇವತೆಗಳಾದರೂ ತಾವೇ

ಭೋಗ್ಯರೂ ಭೋಕ್ತೃಗಳೂ ಆಗಿರುತ್ತಾರೆ. ನಿರಂತರದಲ್ಲಿಯೂ ಸಂತೋಷವುಳ್ಳವರಾಗಿ ಕ್ರೀಡಿಸುತ್ತಾರೆ. (b) ಆದರೂ ಅನ್ನಸ್ವರೂಪಿಯಾದ ಈ ಚತುರ್ಮುಖನು ಕ್ರೀಡೆಯಿಂದ ಹಿಂದೆಕಿರುಗಿದನು. ಆಗ ಈ ಭೋಕ್ತೃರೂಪಿಯಾದ ಚತುರ್ಮುಖನು ಆ ಅನ್ನಾಖ್ಯ ರೂಪವನ್ನು, ವಾಗಭಿಮಾನಿಯಾದ ವಹ್ನಿಯೇ ಮೊದಲಾದ ಎಲ್ಲಾ ದೇವತೆಗಳಿಂದಲೂ ಭಕ್ಷಿಸುವುದಕ್ಕೋಸ್ಕರ ಇಚ್ಛಿಸಿದನು. ಆವಾಗಲೂ (ಆ ಅನ್ನರೂಪವನ್ನು ಭಕ್ಷಿಸಲಿಕ್ಕೆ) ಸಮರ್ಥನಾಗಲಿಲ್ಲ. (c) ಆ ಚತುರ್ಮುಖನು (ಎಲ್ಲಾ ದೇವತೆಗಳೂ ವಾಯುವಿನ ಅನುಗ್ರಹವಿಲ್ಲದೆ ಅನ್ನಭೋಜನದಲ್ಲಿ ಅಶಕ್ತರೇ ಆಗಿರುತ್ತಾರೆ, ವಾಯುವು ಒಬ್ಬನೇ ಸಮರ್ಥನು, ಎಂದು) ತಿಳಿದರೂ ನೀಚೋಚ್ಚಭಾವವನ್ನು ಪ್ರಕಾಶಗೊಳಿಸುವವನಾಗಿ ಕ್ರೀಡೆಯಿಂದಲೇ ಹೀಗೆ ಮಾಡಿದನು. (ಅಂದರೆ ವಹ್ನ್ಯಾದಿಗಳಿಂದ ಭಕ್ಷಿಸಲಿಕ್ಕೆ ಇಚ್ಛಿಸಿದನು.) ಎಲ್ಲಾ ಲೋಕಗಳನ್ನು ಸೃಷ್ಟಿ ಮಾಡತಕ್ಕ ಚತುರ್ಮುಖನಲ್ಲಿ ಅಜ್ಞಾನವು ಎಲ್ಲಿ? (ಎಷ್ಟು ಮಾತ್ರಕ್ಕೂ ಅಜ್ಞಾನವು ಇರಲಾರದು) (d) ಹಸಿವೆಯೂ ಪಾನಮಾಡಬೇಕೆಂಬ ಇಚ್ಛೆಯೂ ಇವುಗಳೇ ಮೊದಲಾದವುಗಳು, ದೇವತೆಗಳಿಗೆ ಭೋಗಕ್ಕೇನೇ ಸಾಧಕಗಳಾಗಿವೆ. ಆ ದೇವತೆಗಳಿಗೆ ಅಣಿಮಾದ್ಯೈಶ್ವರ್ಯವೇ ಮೊದಲಾದ ಗುಣಗಳ ಅಭಿವೃದ್ಧಿಯಿಂದ (ಕ್ಷುತ್ಪಿಪಾಸಾದಿಗಳು) ದುಃಖವನ್ನುಂಟುಮಾಡುವವುಗಳು ಆಗಲಾರವು.

**ಭಾ॥** **(a)** ಅನ್ನಮೂರ್ತಿಂ ತತೋ ಬ್ರಹ್ಮಾ ಪ್ರಧಾನೇನೈವ ವಾಯುನಾ । ಅಪಾನಾಖ್ಯೇನಾತ್ತುಮೈಚ್ಛತ್ತದೈವಾಶಕದಾಶು ಸಃ ॥ **(b)** ತಸ್ಮಾದ್ಭೋಕ್ತೈಕ ಏವಾಸೌ ಸರ್ವಸ್ಯಾನ್ನಸ್ಯ ಮಾರುತಃ । ತತ್ಪ್ರಸಾದಾತ್ಪರೇಽಶ್ನಂತಿ ಕಿಂಚಿತ್ಕಿಂಚಿನ್ನಚಾಖಿಲಂ ॥ **(c)** ಆಯೂರೂಪೋಽಖಿಲಾನಾಂ ಚ ದೇವಾನಾಂ ವಾಯುರೇವ ಹಿ । ಅನ್ನದೇವಸ್ಯ ಚಾಯುಃ ಸ ತಸ್ಮಾದ್ದೇವೋತ್ತಮೋ ಮರುತ್ ॥ **(d)** ಆಯುಃ ಶಬ್ದೋ ಜ್ಞಾನವಾಚೀ ಗತಿವಾಚೀ ಚ ಯತ್ತತಃ । ಚೇಷ್ಟಾಮೋಕ್ಷಜ್ಞಾನದಾತಾ ಸುರಾಣಾಂ ಮಾರುತಸ್ತತಃ ॥ ಅನ್ಯೋನ್ಯಗುಣದಾತೃತ್ವಾತ್ಸಮಾನೌ ಬ್ರಹ್ಮ ಮಾರುತೌ ॥

**ಅ॥** (a) ಆ ಮೇಲೆ ಭೋಕ್ತನಾದ ಚತುರ್ಮುಖನು ಅಪಾನನೆಂದು ಹೆಸರುಳ್ಳ ಪ್ರಧಾನ ವಾಯುವಿನಿಂದಲೇ ಅನ್ನರೂಪಿಯಾದ ಚತುರ್ಮುಖನನ್ನು ಭಕ್ಷಿಸಲಿಕ್ಕೆ ಇಚ್ಛಿಸಿದನು. ಆವಾಗಲೇ ಆ ಚತುರ್ಮುಖನು, ಶೀಘ್ರದಲ್ಲಿ (ಅಂದರೆ ತನ್ನ ವಿಶೇಷಪ್ರಯತ್ನವಿಲ್ಲದೇನೇ ಅತಿ ಶೀಘ್ರದಲ್ಲಿ) ಶಕ್ತನಾದನು. (b) ಆದುದರಿಂದ ಈ ಅಪಾನಾಖ್ಯ ವಾಯುವು ಒಬ್ಬನೇವೇ ಎಲ್ಲಾ ಅನ್ನವನ್ನು ಭೋಗಿಸುವವನು. ಆತನ ಅನುಗ್ರಹದಿಂದಲೇ ಇತರ ದೇವತೆಗಳು ಸ್ವಲ್ಪ ಸ್ವಲ್ಪವಾಗಿ ಭಕ್ಷಿಸುತ್ತಾರೆ. ಸರ್ವವನ್ನು ಭಕ್ಷಿಸಲಾರರು. (c) ಮುಖ್ಯಪ್ರಾಣನೇ ಎಲ್ಲಾ ದೇವತೆಗಳಿಗೂ ಜೀವನವನ್ನು ಕೊಡುವವನು. ಆತನೇ ಅನ್ನಕ್ಕೆ ಅಭಿಮಾನಿಯಾದ ಚತುರ್ಮುಖನಿಗೂ ಜೀವನ ಕಾರಣನು. ಆದುದರಿಂದ ಮುಖ್ಯಪ್ರಾಣನು ಎಲ್ಲಾ ದೇವತೆಗಳಿಂದಲೂ ಶ್ರೇಷ್ಠನಾಗಿರುತ್ತಾನೆ. (d) ಯಾವ ಕಾರಣದಿಂದ 'ಆಯುಃ' ಎಂಬ ಶಬ್ದವು ಜ್ಞಾನವೆಂಬುವ ಅರ್ಥವನ್ನೂ ಗತಿಯನ್ನೂ ಅಂದರೆ ಚೇಷ್ಟೆಯನ್ನು ಮೋಕ್ಷಗಮನವೆಂಬುವ ಅರ್ಥವನ್ನೂ ಹೇಳುತ್ತದೋ, ಆದುದರಿಂದ ಮುಖ್ಯಪ್ರಾಣನೇ ದೇವತೆಗಳಿಗೆ ಚೇಷ್ಟೆಯನ್ನೂ ಮುಕ್ತಿಯನ್ನೂ ಜ್ಞಾನವನ್ನೂ ಕೊಡುವವನು. ಆದುದರಿಂದ ಬ್ರಹ್ಮ ವಾಯುಗಳು ಪರಸ್ಪರವಾಗಿ ಗುಣಗಳನ್ನು ಕೊಡುವವರಾದುದರಿಂದ (ಅಂದರೆ ಮುಖ್ಯಪ್ರಾಣನು ಆಯುಸ್ಸನ್ನು ಕೊಡುವವನು, ಚತು

ಮುಖ್ಯನು ಅನ್ನರೂಪದಿಂದ ವಾಯುವಿಗೂ ಪುಷ್ಟಿಯನ್ನು ಮಾಡುವವನು ಆದಕಾರಣ) ಸಮಾನರೇ ಆಗಿರುತ್ತಾರೆ. [ತಾ॥ ಇದೇ ಅಭಿಪ್ರಾಯವು ಬ್ರಹದ್ಭಾಷ್ಯದಲ್ಲಿ ಹೇಳಲ್ಪಟ್ಟಿದೆ. 'ಅನ್ನಾಭಿಮಾನೀ ಬ್ರಹ್ಮೈವ ಪ್ರಾಣೋ ವಾಯುರುದಾಹೃತಃ। ಅನ್ಯೋನ್ಯಾನುಪ್ರವಿಷ್ಟೌ ತೌ ಸರ್ವ ದೇವೇಷು ಸಂಸ್ಥಿತೌ ॥ ವಾಯುಂ ವಿನಾ ಬ್ರಹ್ಮಣೋಽಪಿ ಶರೀರಂ ಪೂತಿಮೇಷ್ಯತಿ। ವಾಯುಶ್ಚ ಶೋಷಮಾಯಾತಿ ವಿನಾ ಬ್ರಹ್ಮಾಣಮಂಜಸಾ' ಎಂದು.]

ಭಾ॥ (a) ತಸ್ಮಾನ್ಮೋಕ್ಷೇ ಸುಖೇ ಜ್ಞಾನೇ ವಿಷ್ಣುಭಕ್ತ್ಯಾದಿಕೇಷ್ವಪಿ । ಸರ್ವೇಭ್ಯಶ್ಚಾಧಿಕೌ ತೌ ಹಿ ತಯೋರ್ವಿಷ್ಣುಃ ಪರಸ್ಸದಾ ॥ (b) ದೇವತಾನಾಂ ಪ್ರವೇಶಾತ್ತು ಪೂರ್ವಮೇವ ಜನಾರ್ದನಃ । ಇತ್ಥಮೈಕ್ಷತ ದೇವೇಶೋ (c) ಬ್ರಹ್ಮಾದ್ಯಾ ಯದಿ ಮಾಂ ವಿನಾ ॥ ಕ್ರಿಯಾದಿಷು ಸಮರ್ಥಾಃ ಸ್ಯುಃ ನ ಮೇ ವಿಷ್ಣ್ವಭಿಧಾ ಭವೇತ್ । (d) ಸರ್ವಚೇಷ್ಟಯಿತೃತ್ವಾಚ್ಚ ವಿಶಿಷ್ಟಬಲತಸ್ತಥಾ ॥ ವಿಷ್ಣುರಿತ್ಯಭಿಧಾ ಮಹ್ಯಂ ಸಾ ನ ಯುಕ್ತಾ ದಿವೌಕಸಾಂ । ಸ್ವತಂತ್ರತ್ವೇ (e) ತತಃ ಸರ್ವೇ ಮದ್ವಶಾ ಏವ ನಾನ್ಯಥಾ ॥ ತಸ್ಮಾದೇಷಾಂ ಪ್ರವೃತ್ತ್ಯರ್ಥಂ ಪ್ರವೇಕ್ಷ್ಯೇ ಸಹ ವಾಯುನಾ ॥

ಅ ॥ (a) ಆದುದರಿಂದ ಮುಕ್ತಿಯಲ್ಲಿಯೂ, ಸುಖದಲ್ಲಿಯೂ, ಜ್ಞಾನದಲ್ಲಿಯೂ, ವಿಷ್ಣುಭಕ್ತಿಸಾಮರ್ಥ್ಯ ಮೊದಲಾದವುಗಳಲ್ಲಿಯೂ, ಆ ಬ್ರಹ್ಮವಾಯುಗಳು ಎಲ್ಲರಿಂದಲೂ ಶ್ರೇಷ್ಠರೇ ಆಗಿರುತ್ತಾರೆ. ಅವರಿಬ್ಬರ ಸಕಾಶದಿಂದಲೂ ಶ್ರೀ ಹರಿಯು ಯಾವಾಗಲೂ ಉತ್ಕೃಷ್ಟನೇ ಆಗಿರುತ್ತಾನೆ. (b) ಬ್ರಹ್ಮಾದಿದೇವತೆಗಳಿಗೆ ಅಧಿಪತಿಯಾದ ಶ್ರೀ ಹರಿಯು (ಬ್ರಹ್ಮನ ಶರೀರದಲ್ಲಿ) ದೇವತೆಗಳು ಪ್ರವೇಶ ಮಾಡುವುದಕ್ಕಿಂತ ಪೂರ್ವದಲ್ಲಿಯೇ ಮೇಲೆ ಹೇಳುವ ಪ್ರಕಾರ ಇಚ್ಛಿಸಿದನು. (c) ಬ್ರಹ್ಮಾದಿದೇವತೆಗಳು ನನ್ನನ್ನು ಹೊರತೇ ಕ್ರಿಯೆ ಮೊದಲಾದವುಗಳಲ್ಲಿ ಸಮರ್ಥರಾಗಿದ್ದರೆ ನನಗೆ ವಿಷ್ಣುವೆಂಬ ಹೆಸರು ಕೂಡಲಾರದು. (d) ವಿಶೇಷಾಕಾರವಾಗಿ ಸರ್ವರಿಗೂ ಚೇಷ್ಟಕನಾದುದರಿಂದಲೂ, ಹಾಗೆಯೇ ಅತಿಸಾಮರ್ಥ್ಯವಿದ್ದುದರಿಂದಲೂ ನನಗೆ ವಿಷ್ಣುವೆಂಬೀ ಹೆಸರು. ದೇವತೆಗಳಿಗೆ ಸ್ವಾತಂತ್ರ್ಯವಿದ್ದರೆ ಆ ಹೆಸರು ನನಗೆ ಕೂಡಲಾರದು. (e) ಆದುದರಿಂದ ಎಲ್ಲರೂ ನನ್ನ ಅಧೀನರೇ ಆಗಿರುತ್ತಾರೆ. ಬೇರೆರೀತಿಯಾಗಿ ಅಲ್ಲ. ಆದಕಾರಣ ಈ ದೇವತೆಗಳ ಪ್ರವೃತ್ತಿಗಾಗಿ ವಾಯುವಿನಿಂದೊಡಗೂಡಿಯೇ ಪ್ರವೇಶಮಾಡುವೆನು.

ಭಾ॥ (a) ಇತಿ ಮತ್ವಾ ವಿರಿಂಚಸ್ಯ ಶರೀರಂ ಪ್ರವಿವೇಶ ಸಃ । ಮೂರ್ಧನ್ಯನಾಡ್ಯಾ ಪ್ರಥಮಂ ಬ್ರಹ್ಮವಾಯುಸಮನ್ವಿತಃ ॥ (b) ಅಗ್ನ್ಯಾದಯಸ್ತತಃ ಪಶ್ಚಾತ್ಪ್ರವಿಷ್ಟಾಸ್ತನ್ನಿಯೋಜಿತಾಃ । ಪ್ರಪದಾಭ್ಯಾಂ ತಥಾಽನ್ಯೇನ ರೂಪೇಣ ಪ್ರವಿವೇಶ ಸಃ ॥ (c) ಬಿಭರ್ತಿ ದೇಹಂ ತೇನೈವ ಮೂರ್ಧಾವಿಷ್ಟೇನ ಚೇಷ್ಟಯನ್ । ನಾರಾಯಣೋ ವಾಸುದೇವ ಇತಿ ದ್ವೇಧಾ ವ್ಯವಸ್ಥಿತಃ ॥ (d) ಮೂರ್ಧಾವಿಷ್ಟೋ ವಾಸುದೇವಸ್ತಸ್ಯ ಚಾವಾಸಥಾಸ್ತ್ರಯಃ । ಅಕ್ಷಿಕಂಠೋ ಹೃದಿತ್ಯೇವಂ ತ ಏವ ಸ್ವಪ್ನನಾಮಕಾಃ ॥ ಆಪ್ನೋತ್ಯತ್ರ ಸ್ವಯಂ ವಿಷ್ಣುರತಃ ಸ್ವಪ್ನಾಃ ಪ್ರಕೀರ್ತಿತಾಃ ॥

ಅ || (a) ಆ ಹರಿಯು ಪೂರ್ವೋಕ್ತಪ್ರಕಾರವಾಗಿ ಆಲೋಚಿಸಿ, ಬ್ರಹ್ಮನ ಶರೀರವನ್ನು ಶಿರಸ್ಸಿನಲ್ಲಿರುವ ಸುಷುಮ್ನಾಖ್ಯನಾಡಿಯಿಂದ ಪ್ರಥಮದಲ್ಲಿ ಬ್ರಹ್ಮವಾಯುಗಳಿಂದೊಡಗೂಡಿದವನಾಗಿ ಪ್ರವೇಶಿಸಿದನು. (b) ಆ ಮೇಲೆ ಅಗ್ನಿ ಮೊದಲಾದ ದೇವತೆಗಳು ಆ ಹರಿಯಿಂದಲೇ ಪ್ರೇರಿತರಾಗಿ ಪ್ರವೇಶಮಾಡಿದರು. ಆ ಹರಿಯು ಹಾಗೆಯೇ ಬೇರೆ ರೂಪದಿಂದ (ಚತುರ್ಮುಖನ) ಪಾದಾಗ್ರಗಳಿಂದ ಪ್ರವೇಶಿಸಿದನು. (c) 'ತೇನ'=ಅಂದರೆ ಪ್ರಥಮತಃ ಪಾದಾಗ್ರಗಳಲ್ಲಿ ಪ್ರವೇಶಮಾಡಿದ (ಆಮೇಲೆ 'ತಚ್ಛಿರೋಽಶ್ರಯತ' ಎಂದು ಹಿಂದೆ ಹೇಳಿದಪ್ರಕಾರ) ಶಿರಸ್ಸನ್ನು ಪ್ರವೇಶಮಾಡಿದ ಒಂದು ರೂಪದಿಂದಲೂ, ಪ್ರಥಮದಲ್ಲಿಯೇ ಶಿರಸ್ಸಿನಲ್ಲಿ ಪ್ರವೇಶಮಾಡಿದ ಮತ್ತೊಂದುರೂಪದಿಂದಲೂ, ಚೇಷ್ಟೆಯನ್ನುಂಟುಮಾಡುವವನಾಗಿ ಶರೀರವನ್ನು ಧರಿಸುತ್ತಾನೆ. ನಾರಾಯಣನು ವಾಸುದೇವನೆಂದು ಎರಡು ರೂಪಿಯಾಗಿಯೂ (ಶಿರಸ್ಸಿನಲ್ಲಿ) ಆಶ್ರಿತನಾಗಿರುತ್ತಾನೆ. (d) (ಪ್ರಸದ ಮೊದಲಾದ ಕ್ರಮದಿಂದ) ಶಿರಸ್ಸಿನಲ್ಲಿ ಪ್ರವಿಷ್ಟನಾದ ಯಾವ ವಾಸುದೇವನೋ, (ಯಾವ ನಾರಾಯಣನು ಪ್ರಥಮದಲ್ಲಿಯೇ ಶಿರಸ್ಸಿನಲ್ಲಿ ಪ್ರವಿಷ್ಟನಾಗಿರುತ್ತಾನೋ), ಆತನಿಗೂ ಕೂಡ, (ಅಂದರೆ ನಾರಾಯಣ ವಾಸುದೇವರಿಬ್ಬರಿಗೂ ಕೂಡ) ಕಣ್ಣು, ಕಂಠ, ಹೃದಯವೆಂಬೀ ಮೂರುಸ್ಥಾನಗಳು, ಅವುಗಳೇವೇ ಸ್ವಪ್ನವೆಂದು ಹೆಸರುಳ್ಳವುಗಳು. ಈ ಸ್ಥಾನತ್ರಯದಲ್ಲಿ ಶ್ರೀ ಹರಿಯು ತಾನೇ (ಜೀವಸ್ವರೂಪವನ್ನು, ಜಾಗ್ರದಾದ್ಯವಸ್ಥೆಗಳನ್ನು ಪ್ರೇರಿಸುವುದಕ್ಕೋಸ್ಕರ) ಹೊಂದುತ್ತಾನೆ. ಆದುದರಿಂದ ಸ್ವಪ್ನಗಳೆಂದು ಹೇಳಲ್ಪಟ್ಟವೆ.

ಭಾ|| **(a)** ಅನಿರುದ್ಧಾದಿರೂಪೇಣ ತ್ರಿಧಾ ತೇಷು ವ್ಯವಸ್ಥಿತಃ । ದಾತಾಽವಸ್ಥಾತ್ರಯಸ್ಯಾಸ್ಯ ಜೀವಸ್ಯ ಕ್ರಮಶೋ ವಿಭುಃ || **(b)** ಸುಷುಮ್ನಾಯಾಂ ವಾಸುದೇವೋ ಮೂರ್ಧನ್ಯೇವ ವ್ಯವಸ್ಥಿತಃ। ತಸ್ಯಾಮೇವ ಬ್ರಹ್ಮನಾಡ್ಯಾಂ ಸ್ಥಿತೋ ನಾರಾಯಣಃ ಪ್ರಭುಃ || **(c)** ಸ ಏವ ಭಗವಾನ್ವಿಷ್ಣುಃ ಪ್ರಾದುರ್ಭಾವಾತ್ಮನಾ ಪುನಃ । ಜಾತೋ ಮತ್ಸ್ಯಾದಿರೂಪೇಣ ಸರ್ವಭೂತೇಷು ಚಾವಿಶತ್ || **(d)** ಅಸುರಾಣಾಂ ನಿಹಂತಾರಂ ಜ್ಞಾನಾದಿಗುಣದಂ ತಥಾ । ಚೇಷ್ಟಾಪ್ರದಂ ಚ ಭೂತೇಷು ನ ಮದನ್ಯಂ ವದತ್ಯಪಿ || **(e)** ಇತಿ ಮತ್ವಾ ಜಗನ್ನಾಥೋ ದೈತ್ಯನಿಗ್ರಹಣೇಚ್ಛಯಾ । ಜ್ಞಾನದಾನಾರ್ಥಮಪಿ ತು **(f)** ಪ್ರಾದುರ್ಭೂತೋ ಭುವಿ ಪ್ರಭುಃ || ತಥಾ ಜೀವೇಷು ಸರ್ವೇಷು ಪ್ರವಿಷ್ಟಃ ಪ್ರೇರಣೇಚ್ಛಯಾ । ಕೋ ಹ್ಯನ್ಯಸ್ತ್ವಮೃತೇ ವಿಷ್ಣುಮೇತತ್ಕರ್ಮ ಕರಿಷ್ಯತಿ ||

ಅ || (a) ಶ್ರೀ ಹರಿಯು ಅನಿರುದ್ಧ ಮೊದಲಾದ ರೂಪದಿಂದ (ಅಂದರೆ ಅನಿರುದ್ಧ, ಪ್ರದ್ಯುಮ್ನ, ಸಂಕರ್ಷಣವೆಂಬೀ ರೂಪಗಳಿಂದ) ಮೂರು ಪ್ರಕಾರನಾಗಿ ಆ ಕಣ್ಣು, ಕಂಠ, ಹೃದಯವೆಂಬೀ ಮೂರು ಸ್ಥಾನಗಳಲ್ಲಿದ್ದಾನೆ. ಸರ್ವಸಮರ್ಥನಾದ ಶ್ರೀ ಹರಿಯು ಕ್ರಮವಾಗಿ ಈ ಜೀವನಿಗೆ ಜಾಗ್ರತ್, ಸ್ವಪ್ನ, ಸುಷುಪ್ತಿಗಳೆಂಬ ಮೂರು ಅವಸ್ಥೆಗಳನ್ನು ಕೊಡುವವನು. (b) ವಾಸುದೇವನು ಶಿರಸ್ಸಿನಲ್ಲಿಯೇ ಸುಷುಮ್ನಾಖ್ಯನಾಡಿಯಲ್ಲಿ ಇರುತ್ತಾನೆ. ಅದರ ಮಧ್ಯದಲ್ಲಿರತಕ್ಕ ಬ್ರಹ್ಮನಾಡಿಯಲ್ಲಿ ಪ್ರಭುವಾದ ನಾರಾಯಣನು ಇದ್ದಾನೆ. (c) ಆ (ಅಂದರೆ ಬ್ರಹ್ಮನಾಡಿಯಲ್ಲಿ ಪ್ರವೇಶ ಮಾಡಿದ) ಪೂಜ್ಯನಾದ ನಾರಾಯಣನೇ ಪುನಃ (ಚತುರ್ಮುಖನ ಹೃದಯಗುಹೆಯಲ್ಲಿ) ಪ್ರಾದುರ್ಭಾವಸ್ವರೂಪದಿಂದ ಆದನು. ಆ ಮತ್ಸ್ಯಾದಿ ಸ್ವರೂಪದಿಂದಲೇ ಎಲ್ಲಾ ಭೂತಗಳಲ್ಲಿಯೂ ಪ್ರವೇಶಿಸಿದನು. (d) (ಜ್ಞಾನಿಗಳು) ನನ್ನಿಂದ ಇತರನನ್ನು, ಅಸುರರಬಾಧ

ಒಳಗೆ ಕಾಲನೇಮಿ ಕಂಸಾದಿಗಳನ್ನು ಸಂಹಾರಕನನ್ನಾಗಿಯೂ ಹಾಗೆಯೇ (ನಿಯಮಿಸುವುದರಿಂದಲೂ ಬಾಹ್ಯತಃ ಉಪದೇಶದಿಂದಲೂ) ಜ್ಞಾನವೊದಲಾದ ಗುಣಗಳನ್ನು ಕೊಡತಕ್ಕವನನ್ನಾಗಿಯೂ ಪ್ರಾಣಿಗಳಿಗೆ ಚೇಷ್ಟೆಯನ್ನು ಕೊಡತಕ್ಕವನನ್ನಾಗಿಯೂ ಹೇಳುವುದೇ ಇಲ್ಲವು. (e) ಜಗತ್ತಿಗೆ ಸ್ವಾಮಿಯಾದ ಶ್ರೀ ಹರಿಯು ಹೀಗೆ ತಿಳಿದುಕೊಂಡು ದೈತ್ಯರನ್ನು ನಾಶವಮಾಡಬೇಕೆಂಬ ಇಚ್ಛೆಯಿಂದಲೂ (ಸಜ್ಜನರಿಗೆ) ಜ್ಞಾನದಾನಕ್ಕೋಸ್ಕರವೂ (ಚತುರ್ಮುಖನ ಹೃದಯದಲ್ಲಿ) ಪ್ರಾದುರ್ಭವಿಸಿದನು. (f) ಪ್ರಭುವಾದ ಶ್ರೀ ಹರಿಯು ಭೂಮಿಯಲ್ಲಿ (ವಸುದೇವ ವೊದಲಾದ) ಜೀವರಲ್ಲಿ ಪ್ರವಿಷ್ಟನಾಗಿ (ತದ್ದ್ವಾರಾ ಪ್ರಾದುರ್ಭೂತನಾಗಿ) ಹಾಗೆಯೇ ಎಲ್ಲಾ ಭೂತಗಳಲ್ಲಿಯೂ ಪ್ರೇರಣೆಮಾಡಬೇಕೆಂಬ ಇಚ್ಛೆಯಿಂದಲೂ ಪ್ರವೇಶಿಸಿದನು. ಆ ವಿಷ್ಣುವನ್ನು ಹೊರತು ಬೇರೆ ಯಾರು ಈ ಕರ್ಮವನ್ನು ಮಾಡುವನು?

ಭಾ॥ **(a)** ಸ ಸರ್ವಗುಣಸಂಪೂರ್ಣಂ ಸರ್ವಗಂ ನಿತ್ಯಮವ್ಯಯಂ । ಏತದೇವ ಸ್ವರೂಪಂ ಸ ತ್ವಪಶ್ಯದವತಾರಗಂ ॥ **(b)** ತಸ್ಮಾತ್ಸರ್ವಾವತಾರಾಶ್ಚ ಸರ್ವಜೀವೇಷು ಸಂಸ್ಥಿತಾಃ । ಪ್ರಾದುರ್ಭಾವಾಃ ಸರ್ವಗುಣೈಃ ಪೂರ್ಣಾ ಏವ ಸದಾ ಸ್ಥಿತಾಃ ॥ **(c)** ಪಶ್ಯಂತಿ ಚ ತಥಾ ನಿತ್ಯಂ ನಿರ್ದೋಷೋರು ಸ್ವಸಂವಿದಾ । **(d)** ಗುಣಪೂರ್ಣಸ್ವರೂಪಸ್ಯ ತ್ವಾಪರೋಕ್ಷ್ಯೇಣ ದರ್ಶನಾತ್ ॥ ಸರ್ವದೈವ ಹ್ಯಸೌ ವಿಷ್ಣುರಿದಂದ್ರೋ ನಾಮತೋ ಮತಃ ॥

ಅ ॥ (a) ಆ ಮೂಲರೂಪಿಯಾದ ನಾರಾಯಣನು ತನ್ನ ಸ್ವರೂಪವನ್ನು ಎಲ್ಲಾ ಗುಣಗಳಿಂದ ಪೂರ್ಣವನ್ನಾಗಿಯೂ, ಸರ್ವತ್ರವ್ಯಾಪ್ತವನ್ನಾಗಿಯೂ, ನಿತ್ಯವನ್ನಾಗಿಯೂ, ಅವಿನಾಶಿಯನ್ನಾಗಿಯೂ ತಿಳಿದನು. ಆ ರಾಮ ಕೃಷ್ಣಾದಿ ಎಲ್ಲಾ ಅವತಾರರೂಪವೂ ಕೂಡಾಅವತಾರವನ್ನು ಹೊಂದಿದ ರಾಮ ಕೃಷ್ಣಾದಿ ತನ್ನ ಸ್ವರೂಪವನ್ನು ಈ ಗುಣವಿಶಿಷ್ಟವಾದುದನ್ನಾಗಿಯೇ ಅನುಭವಿಸುತ್ತಿದೆ. (b) ಆದುದರಿಂದ (ಅಂದರೆ ಸರ್ವಗತತ್ವಾದಿಯು ಮೂಲರೂಪದಂತೆಯೇ ಅವತಾರ ರೂಪಕ್ಕೂ ಪ್ರತ್ಯಕ್ಷಸಿದ್ಧವಾದುದರಿಂದಲೇ) ಎಲ್ಲಾ ಭಗವದವತಾರಗಳೂ ಕೂಡ ಎಲ್ಲಾ ಜೀವರಲ್ಲಿಯೂ ಇರುತ್ತವೆ. ॥ ಪ್ರಾದುರ್ಭಾವರೂಪಗಳೆಲ್ಲವೂ ಎಲ್ಲಾ ಗುಣಗಳಿಂದಲೂ ಪರಿಪೂರ್ಣಗಳಾಗಿಯೇ ಯಾವಾಗಲೂ ಒಂದೇ ಪ್ರಕಾರದಿಂದ ಇರುತ್ತವೆ. (c) ಹಾಗೆಯೇ ಪ್ರಾದುರ್ಭಾವ ರೂಪಗಳು ನಿತ್ಯದಲ್ಲಿಯೂ ದೋಷಸಂಪರ್ಕವಿರದ ಉತ್ಕೃಷ್ಟವಾದ ತನ್ನ ಜ್ಞಾನದಿಂದ ನೋಡಿಕೊಂಡೇ ಇರುತ್ತವೆ (d) ಈ ವಿಷ್ಣುವು ಗುಣಭರಿತವಾದ ತನ್ನ ಸ್ವರೂಪವನ್ನು ಯಾವಾಗಲೂ ಪ್ರತ್ಯಕ್ಷವಾಗಿಯೇ ನೋಡುವುದರಿಂದ ಹೆಸರಿನಿಂದ (ಇದಂ=ತನ್ನ ಸ್ವರೂಪವನ್ನು, ದರ್ಶನಾತ್=ನೋಡುವುದರಿಂದ, ಎಂಬೀವ್ಯುತ್ಪತ್ತಿಯಿಂದ) ಇಂದ್ರನೆಂದು ಪ್ರಸಿದ್ಧನು.

ಭಾ॥ **(a)** ಬ್ರಹ್ಮಾದೀನಾಂ ಹಿ ಸರ್ವೇಷಾಂ ತತ್ಪ್ರಸಾದೇನ ಜಾಯತೇ ॥ ಜಾನಂತಿ ನ ಸ್ವತಸ್ತೇನ ನೇದಂದ್ರಾಸ್ತೇ ಪ್ರಕೀರ್ತಿತಾಃ ॥ **(b)** ರಮಾಽಪಿ ತತ್ಪ್ರಸಾದೇನ ಜಾನಾತಿ ಕಿಮುತಾಪರೇ । ಅಲ್ಪಜ್ಞಾನಾ ಅಲ್ಪಗುಣಾ ಅಲ್ಪಾನಂದಾಶ್ಚ ತೇಽಖಿಲಾಃ ॥ **(c)** ರಮಾಽಜಶಂಕರೇಂದ್ರಾದ್ಯಾಸ್ತೇನಾನಿಂದ್ರಾಃ ಕ್ರಮೇಣ ತೇ । ಪಾಪೈರಜ್ಞಾತತಾಂ ದೇವಾ ಮಾನಯಂತಿ ಸದಾತ್ಮನಃ ॥ ಹರ್ಷೇಣ **(d)** ತೇನ ವಿಷ್ಣುಃ ಸ ಇಂದ್ರ ಇತ್ಯಭಿಶಬ್ದ್ಯತೇ ।

ನೇದಂದ್ರತ್ವಾಸುರಾದೀನಾಂ ಜ್ಞಾಯೇತೇತಿ ಶ್ರುತಿರ್ಹರಿಂ || ಇಂದ್ರ ಇತ್ಯೇವ ವದತಿ ಪಾರೋಕ್ಷ್ಯೇಣೋರುಸದ್ಗುಣಂ । ಇತ್ಯಾದ್ಯೈತರೇಯ ಸಂಹಿತಾಯಾಂ ||

ಅ || (a) ಚತುರ್ಮುಖನೇ ಮೊದಲಾದ ಎಲ್ಲಾ ದೇವತೆಗಳಿಗೂ ಆ ಹರಿಯ ಅನುಗ್ರಹದಿಂದ (ಭಗವದ್ದರ್ಶನವು) ಆಗುತ್ತದೆ. ಆ ಚತುರ್ಮುಖಾದಿಗಳು ಸ್ವತಃ=ತಿಳಿಯಲಾರರು. ಆದುದರಿಂದ ಅವರು ಇದಂದ್ರರೆಂದು ಹೇಳಲ್ಪಡುವುದಿಲ್ಲ. (b) ಲಕ್ಷ್ಮಿಯೂ ಕೂಡ ಆತನ ಅನುಗ್ರಹದಿಂದಲೇ ತಿಳಿಯುತ್ತಾಳೆ. ಇತರರು (ಆತನ ಅನುಗ್ರಹದಿಂದಲೇ ತಿಳಿಯುತ್ತಾರೆ. ಎಂದು ಹೇಳತಕ್ಕದು) ಏನು ಇದೆ? ಇತರರೆಲ್ಲರೂ ಅಲ್ಪವಾದ ಜ್ಞಾನವುಳ್ಳವರೂ ಅಲ್ಪಗುಣಗಳುಳ್ಳವರೂ ಅಲ್ಪವಾದ ಸುಖವುಳ್ಳವರೂ ಆಗಿರುತ್ತಾರೆ. (c) ಆದಕಾರಣ ಲಕ್ಷ್ಮಿಯೂ ಚತುರ್ಮುಖನೂ ರುದ್ರನೂ ಇಂದ್ರನೂ ಇವರೇ ಮೊದಲಾದವರು ತಾರತಮ್ಯ ಕ್ರಮದಿಂದ ಇಂದ್ರ ಶಬ್ದಕ್ಕೆ ಮುಖ್ಯವಾಗಿ ವಾಚ್ಯತ್ವವಿಲ್ಲದಿದ್ದವರು ಆಗಿರುತ್ತಾರೆ. ಬ್ರಹ್ಮಾದಿ ದೇವತೆಗಳು ಶ್ರೀ ಪರಮಾತ್ಮನಿಗೆ ಪಾಪಿಷ್ಠರಿಂದ ತಿಳಿಯಲ್ಪಡದಿರುವಿಕೆಯನ್ನು ಯಾವಾಗಲೂ ಹರ್ಷಪೂರ್ವಕವಾಗಿ ಬಹುಮಾನಿಸುತ್ತಾರೆ. (d) ಆದುದರಿಂದ ಆ ವಿಷ್ಣುವು ಇಂದ್ರನೆಂದೂ ಹೇಳಲ್ಪಡುತ್ತಾನೆ. (ಶ್ರೀ ಹರಿಯು) ಇದಂದ್ರತ್ವವು ಅಸುರ ಮೊದಲಾದವರಿಂದ ತಿಳಿಯಲ್ಪಡಬಾರದು ಎಂದು ಶ್ರುತಿಯು ಪೂರ್ಣಸದ್ಗುಣಗಳುಳ್ಳ ಶ್ರೀ ಹರಿಯನ್ನು ಇಂದ್ರನೆಂದೇ ಪರೋಕ್ಷವಾಗಿ (ಅಂದರೆ ಅಸ್ಪಷ್ಟವಾಗಿಯೇ) ಹೇಳುತ್ತದೆ ಇದೇ ಮೊದಲಾದ ವಿಷಯವು ಐತರೇಯ ಸಂಹಿತೆಯಲ್ಲಿ ಉಕ್ತವಾಗಿದೆ.

ಭಾ|| **(a)** ಆತತಗುಣತ್ವಾದಾತ್ಮಾ ನಾರಾಯಣಃ । ಬ್ರಹ್ಮ ಪಂಥಾಃ ಸತ್ಯಂ ಕರ್ಮೇತಿ ತಸ್ಯೈವ ಪಂಚರಾತ್ರಪ್ರಸಿದ್ಧೈರೇವ ನಾಮಭಿರಾರಬ್ಧತ್ವಾಚ್ಚ || **(b)** ಮುಖ್ಯತಃ ಕರ್ಮನಾಮಾ ತು ಪ್ರಾದುರ್ಭಾವಾತ್ಮಕೋ ಹರಿಃ । ಅನಿರುದ್ಧತನುಶ್ಚೈವ ತತ್ರ ಹ್ಯಮಿತಚೇಷ್ಟಿತಃ || **(c)** ಕರ್ಮಾಭಾಸಾ ಜೀವ ಸಂಘಾಃ ಸತ್ಯಂ ಪ್ರದ್ಯುಮ್ನನಾಮಕಃ । ಸಂಕರ್ಷಣೋ ಹರಿಃ ಪಂಥಾ ಬ್ರಹ್ಮೋಕ್ತೋ ವಾಸುದೇವಕಃ || ಇತ್ಯಾದಿ ಹಿ ನಾಮನಿರ್ಣಯೇ || **(d)** ಮತ್ಸ್ವೇಂದ್ರಮಿಂದೋ ಪವಮಾನ ವಿಷ್ಣುಮಿತ್ಯಾದಿಶ್ರುತೌ ತಸ್ಮಿನ್ನೇವ ಪ್ರಸಿದ್ಧಸ್ಯೇಂದ್ರಶಬ್ದಸ್ಯಾತ್ರ ಬಹುಶೋಽಭ್ಯಾಸಾಚ್ಚ ||

ಅ || (a) ನಿರಂತರದಲ್ಲಿ ವಿಶೇಷತಃ ವ್ಯಾಪ್ತಗಳಾದ ಗುಣಗಳು ಇರುವುದರಿಂದ ಆತ್ಮಶಬ್ದವಾಚ್ಯನು ನಾರಾಯಣನು. ಆ ನಾರಾಯಣನದ್ದೇ (ಆದ ವಾಸುದೇವಾದಿ ರೂಪಗಳಿಗೆ) ಬ್ರಹ್ಮ, ಪಂಥಾಃ, ಸತ್ಯಂ, ಕರ್ಮ, ಎಂಬೀ ಪಂಚರಾತ್ರಾಗಮದಲ್ಲಿ ಪ್ರಸಿದ್ಧಗಳೇ ಆದ ನಾಮಗಳಿಂದ ಪ್ರಾರಂಭಿಸಲ್ಪಟ್ಟ ಪ್ರಯುಕ್ತವೂ, (ಆತ್ಮಶಬ್ದವಾಚ್ಯನು ನಾರಾಯಣನು.) (b) ಪ್ರಾದುರ್ಭಾವರೂಪಿಯಾದ, ಅನಿರುದ್ಧರೂಪಿಯಾದ ಶ್ರೀ ಹರಿಯೇ ಮುಖ್ಯವಾಗಿ ಕರ್ಮನಾಮಕನು. ಯಾವ ಕಾರಣದಿಂದ ಆ ಅನಿರುದ್ಧನ ಶರೀರದಲ್ಲಿ ಅಪರಿಮಿತವಾದ ಚೇಷ್ಟೆಯಿದೆಯೋ ಅದರಿಂದ,('ಕರ್ತೃತ್ವಾತ್ ಮಾತೃತ್ವಾಚ್ಚ' ಎಂಬೀವ್ಯುತ್ಪತ್ತಿಯಿಂದ) ಕರ್ಮನಾಮಕನು. (c) ಜೀವರ ಸಮುದಾಯಗಳು ಕರ್ಮಾಭಾಸಗಳೆನ್ನಿಸಿಕೊಳ್ಳುತ್ತವೆ. ಪ್ರದ್ಯುಮ್ನನಾಮಕನಾದ ಶ್ರೀ ಹರಿಯು 'ಸತ್ಯಂ' ಎನ್ನಿಸಿಕೊಳ್ಳುತ್ತಾನೆ. ಸಂಕರ್ಷಣ ನಾಮಕನಾದ ಶ್ರೀ ಹರಿಯು 'ಪಂಥಾಃ' ಎನ್ನಿಸಿಕೊಳ್ಳುತ್ತಾನೆ. ಸುಖರೂಪಿಯಾದ ವಾಸುದೇವನು 'ಬ್ರಹ್ಮ'ನೆಂದು ಹೇಳಲ್ಪ

ಟ್ಟಿದ್ದಾನೆ. ಇದೇ ಮೊದಲಾದುದು, ನಾಮ ನಿರ್ಣಯವೆಂಬ ಗ್ರಂಥದಲ್ಲಿ ಅದೆ. (d) 'ಮತ್ಸಿ ಇಂದ್ರಂ ಇಂದೋ ಪವಮಾನ ವಿಷ್ಣುಂ' ಇದೇಮೊದಲಾದ ಶ್ರುತಿಯಲ್ಲಿ ಆ ಹರಿಯಲ್ಲಿಯೇ ಪ್ರಸಿದ್ಧವಾದ ಇಂದ್ರ ಶಬ್ದಕ್ಕೆನೇ ಈ ಉಪನಿಷತ್ತಿನಲ್ಲಿಯೂ ('ಇಂದ್ರ ಉಪನಿಷಸಾದ' 'ತೇನೇಂದ್ರಸ್ಯ ಪ್ರಿಯಂ ಧಾಮೋಪೇಯಾಯ' 'ತಮಿಂದ್ರ ಉವಾಚ' 'ಸ ಇಂದ್ರಃ ಸ ಭೂತಾನಾಮಧಿಪತಿಃ' 'ಪ್ರೇತ್ಯೇಂದೋ ಭೂತ್ವಾ ಇದಮದರ್ಶಮಿತಿ' 'ತಸ್ಮಾದಿಂದ್ರೋ ನಾಮ' ಇದೇ ಮೊದಲಾದ ಪ್ರದೇಶದಲ್ಲಿಯೂ) ಅನೇಕಾವರ್ತಿ ಅಭ್ಯಾಸ ವಿರುವುದರಿಂದಲೂ, (ಈ ಉಪನಿಷತ್ತು ಭಗವದ್ವಿಷಯಕವೇ ಸರಿ.)

ಭಾ॥ (a) ಅಕಾರಸ್ಯ ಚ ವಿಷ್ಣಾವೇವ ಪ್ರಸಿದ್ಧಸ್ಯಾತ್ರಾಪ್ಯಭ್ಯಾಸಾತ್ । (b) ತಸ್ಯ ಯಥಾ ಕಪ್ಯಾಸಂ ಪುಂಡರೀಕಮೇವಮಕ್ಷಿಣೀ ಇತಿ ಸೂರ್ಯಮಂಡಲೇ ಪುಂಡರೀಕಾಕ್ಷತ್ವೇನ ನಿರ್ದಿಷ್ಟಸ್ಯಾತ್ರಾಪಿ ಯ ಏಷ ತಪತೀತ್ಯಾದಿನಾ ಬಹುಶೋಽಭ್ಯಾಸಾಚ್ಚ ॥ (c) ಸೂರ್ಯೋ ಹಿ ಹಿರಣ್ಯಾಕ್ಷಃ ಸವಿತಾ ದೇವ ಆಗಾದಿತಿ ಪಿಂಗಲಾಕ್ಷಃ ಪ್ರಸಿದ್ಧಃ । (d) ವಿರೂಪಾಕ್ಷಃ ಶಿವಃ ಸೂರ್ಯಃ ಸುರಾಚಾರ್ಯೋ ವಿನಾಯಕಃ ॥ ಪುಂಡರೀಕೇಕ್ಷಣೋ ವಿಷ್ಣುಃ ಸಹಸ್ರಾಕ್ಷಃ ಸುರಾಧಿಪಃ । ಇತಿ ಚ ಸ್ಕಾಂದೇ ॥

ಅ ॥ (a) ಶ್ರೀ ಹರಿಯಲ್ಲಿಯೇ ಪ್ರಸಿದ್ಧವಾದ ಅಕಾರಕ್ಕೂ ಕೂಡ ಈ ಉಪನಿಷತ್ತಿನಲ್ಲಿಯೂ ('ಅ ಇತಿ' 'ಅಂಭೋ ಮರೀಚೀಃ' 'ಅಕಾರೋ ವೈ ಸರ್ವಾ ವಾಕ್' ಇದು ಮೊದಲಾದ ಪ್ರದೇಶದಲ್ಲಿ) ಅಭ್ಯಾಸವಿದ್ದುದರಿಂದಲೂ, (b) (ಮತ್ತು ಸೂರ್ಯಮಂಡಲದಲ್ಲಿದ್ದ ಶ್ರೀ ವಿಷ್ಣುವು ಪುಂಡರೀಕಾಕ್ಷನೆಂದು ಪ್ರಸಿದ್ಧನಾಗಿದ್ದಾನೆ. ಆತನಿಗೇನೇ ಇಲ್ಲಿ ಬಹ್ವಾವರ್ತಿ ಅನುಸಂಧಾನವಿದ್ದುದರಿಂದಲೂ ಈ ಉಪನಿಷತ್ತು ವಿಷ್ಣುಪರವೇ ಆಗಿದೆ ಎಂದು ನಿರೂಪಿಸುತ್ತಾರೆ.) ಹೇಗೆ ಬಾಡದಿರುವ ಕಮಲವೋ ಹಾಗೆಯೇ ಆತನ ಕಣ್ಣುಗಳು ಎಂದು ಸೂರ್ಯಮಂಡಲದಲ್ಲಿ ಪುಂಡರೀಕಾಕ್ಷನೆಂದು ಹೇಳಲ್ಪಟ್ಟವನಿಗೇನೇ ಇಲ್ಲಿಯೂ ಕೂಡ 'ಯ ಏಷ ತಪತಿ' ಇತ್ಯಾದಿಯಿಂದ (ಅಂದರೆ 'ಪುರುಷರೂಪೇಣ ಯ ಏಷ ತಪತಿ' 'ಪ್ರಾಣೋ ಹ್ಯೇಷ ಯ ಏಷ ತಪತಿ' 'ಪ್ರಾಣಸ್ತ್ವಂ ಪ್ರಾಣಃ ಸರ್ವಾಣಿ ಭೂತಾನಿ' 'ಪ್ರಾಣೋ ಹ್ಯೇಷ ಯ ಏಷ ತಪತಿ' 'ಏಷ ತಪನ್ನೇವಾಸ್ಮೀತಿ ಹೋವಾಚ' ಇದು ಮೊದಲಾದ ಶ್ರುತಿಯಿಂದ) ಬಹ್ವಾವರ್ತಿ ಅಭ್ಯಾಸವಿದ್ದುದರಿಂದಲೂ, (c) ಸೂರ್ಯನಾದರೆ, 'ಪಿಂಗಲವಾದ ಕಣ್ಣುಗಳುಳ್ಳ ಸವಿತೃನಾಮಕ ದೇವತೆಯು ಉದಯಿಸಿದನು' ಎಂದು ಪಿಂಗಲಾಕ್ಷನೆಂದೇ ಪ್ರಸಿದ್ಧನಾಗಿದ್ದಾನೆ. (d) ರುದ್ರನು, ಸೂರ್ಯನು, ಬೃಹಸ್ಪತ್ಯಾಚಾರ್ಯರು, ಗಣಪತಿಯೂ ಕೂಡ ವಿರೂಪಾಕ್ಷನು. (ಲೋಕವಿಲಕ್ಷಣವಾದ ಕಣ್ಣುಗಳುಳ್ಳವರು.) ಶ್ರೀ ಹರಿಯು ಕಮಲಾಕ್ಷನು. ದೇವೇಂದ್ರನು ಸಹಸ್ರಾಕ್ಷನು. ಎಂದೂ ಸ್ಕಾಂದಪುರಾಣದಲ್ಲಿ ಅದೆ.

ಭಾ॥ (a) ಯೋ ದೇವಾನಾಂ ನಾಮಧಾ ಏಕ ಏವ । ನಾಮಾನಿ ಸರ್ವಾಣಿ ಯಮಾವಿಂಶತಿ ತಂ ವೈ ವಿಷ್ಣುಂ ಪರಮಮುದಾಹರಂತಿ ॥ ಯಮಿಂದ್ರಮಾಹುರ್ವರುಣಂ ಯಮಾಹುಃ । (b) ಚಂದ್ರಸೂರ್ಯಾದಯಃ ಶಬ್ದಾ ವಿಷ್ಣಾವೇವ ಹಿ ಮುಖ್ಯತಃ ॥ ಉಪಚಾರಾತ್ತದನ್ಯೇಷಾಂ ವಿಷ್ಣುನೈವ ಕೃತಾಃ ಪುರೇತ್ಯಾದಿನಾ ತಸ್ಯೈವ ಸರ್ವನಾಮವತ್ತ್ವಾಚ್ಚ । (c) ಣಕಾರೋ

ಬಲಂ ಷಕಾರಃ ಪ್ರಾಣ ಆತ್ಮೇತ್ಯಾದಿನಾಽಂತೇಽಪಿ ವಿಷ್ಣುಶಬ್ದವ್ಯಾಖ್ಯಾನೇನೋಪಸಂಹಾರಾಚ್ಚ ॥ **(d)** ಆತ್ಮಬ್ರಹ್ಮಾದಯಃ ಶಬ್ದಾಸ್ತ್ವಮೃತೇ ವಿಷ್ಣುಮವ್ಯಯಂ । ನ ವರ್ತಂತೇ ತದನ್ಯತ್ರ ಶೃಂಗಿಬೇರೇಽಗ್ನಿಶಬ್ದವತ್ ॥ ಇತಿ ಚ ಪಾದ್ಮೇ ॥

**ಅ** ॥ (a) ಯಾವಾತನು ಒಬ್ಬನೇ ಎಲ್ಲಾ ದೇವತೆಗಳ ನಾಮಧಾರಕನೋ, ಎಲ್ಲಾ ನಾಮಧೇಯುಗಳೂ ಯಾವಾತನನ್ನು ಹೊಂದುತ್ತವೋ, ಆತನನ್ನೇ ಸರ್ವೋತ್ತಮನಾದ ಶ್ರೀ ವಿಷ್ಣುವನ್ನಾಗಿ ಪ್ರತಿಪಾದಿಸುತ್ತಾರೆ. ಯಾವಾತನನ್ನು ಇಂದ್ರನನ್ನಾಗಿ ಹೇಳುತ್ತಾರೋ, ಯಾವಾತನನ್ನೇ ವರುಣನನ್ನಾಗಿಯೂ ಹೇಳುತ್ತಾರೆ. (b) ಚಂದ್ರ, ಸೂರ್ಯಮೊದಲಾದ ಎಲ್ಲಾ ಶಬ್ದಗಳೂ ವಿಷ್ಣುವಿನಲ್ಲಿಯೇ ಮುಖ್ಯವಾಗಿ ಇರುತ್ತವೆ. ವಿಷ್ಣುವಿನಿಂದ ಇತರರಿಗಾದರೂ ಶ್ರೀ ಹರಿಯಿಂದಲೇ ಪೂರ್ವದಲ್ಲಿ ಅಮುಖ್ಯವಾಗಿಯೇ ಮಾಡಲ್ಪಟ್ಟವೆ. ಇದೇ ಮೊದಲಾದ ಪ್ರಮಾಣದಿಂದ ಆತನಿಗೇನೇ ಎಲ್ಲಾ ನಾಮಧೇಯುಗಳೂ ಇದ್ದುದರಿಂದಲೂ, ಈ ಉಪನಿಷತ್ತಿನಲ್ಲಿ ವಿಷ್ಣುವೇ ಪ್ರತಿಪಾದಿತನಾಗಿದ್ದಾನೆ. (c) ಬಕಾರವು ಬಲರೂಪವು, ಷಕಾರವು, ಸರ್ವಚೇಷ್ಟಕನಾದ ಆತ್ಮನು. ಇದೇ ಮೊದಲಾದ ವಾಕ್ಯದಿಂದ ಅಂತ್ಯದಲ್ಲಿಯೂ ವಿಷ್ಣುಶಬ್ದವನ್ನು ವ್ಯಾಖ್ಯಾನಮಾಡಿ ಉಪಸಂಹಾರ ಮಾಡಿದರಿಂದಲೂ (ಅಂದರೆ ಅಂತ್ಯಗೊಳಿಸಿದರಿಂದಲೂ) (ಈ ಉಪನಿಷತ್ತು ವಿಷ್ಣುವಿಷಯಕವೇ ಆಗಿದೆ.) (d) ಆತ್ಮ, ಬ್ರಹ್ಮ ಮೊದಲಾದ ಎಲ್ಲಾ ಶಬ್ದಗಳೂ ಆ ಅವಿನಾಶಿಯಾದ ವಿಷ್ಣುವನ್ನು ಹೊರತು ಇರುವುದೇ ಇಲ್ಲವು. (e) ವಿಷ್ಣುವ್ಯತಿರಿಕ್ತರಲ್ಲಿ ಆರ್ದ್ರಕದಲ್ಲಿ ಅಗ್ನಿಶಬ್ದದಂತೆಯೇ,(ಅಂದರೆ 'ಆತ್ಮಾ ವಿರಿಂಚಃ ಸುಮನಾಃ' 'ತಸ್ಮಾದೇತದ್ಬ್ರಹ್ಮ ನಾಮ' ಇದು ಮೊದಲಾದ ಶ್ರುತಿಯಲ್ಲಿ, ವಿಷ್ಣುವ್ಯತಿರಿಕ್ತರಾದ ಬ್ರಹ್ಮಾದಿಗಳಲ್ಲಿಯೂ, ವಿಷ್ಣುವಿನಲ್ಲಿಯೇ ಪ್ರಸಿದ್ಧಗಳಾದ ನಾರಾಯಣಾದಿ ಶಬ್ದಗಳಿಂದ ವ್ಯತಿರಿಕ್ತಗಳಾದ ಆತ್ಮ, ಬ್ರಹ್ಮ ಮೊದಲಾದ ಶಬ್ದಗಳು, ಶೃಂಗಿಬೇರದಲ್ಲಿ ಅಂದರೆ ಚಿತ್ರಮೂಲದಲ್ಲಿ ದಾಹಕತ್ವವೆಂಬ ಗುಣಸಂಪರ್ಕದಿಂದ ಹೇಗೆ ಅಗ್ನಿಶಬ್ದವದೆಯೋ, ಅದರಂತೆಯೇ ಅಲ್ಪವಾದ ಗುಣಯೋಗದಿಂದ ಇರುತ್ತವೆ.) ಎಂದು ಪಾದ್ಮಪುರಾಣದಲ್ಲಿದೆ.

**ಭಾ** ॥ **(a)** ಏಕೋ ನಾರಾಯಣ ಆಸೀನ್ನ ಬ್ರಹ್ಮಾ ನ ಚ ಶಂಕರಃ । ಏಕೋ ನಾರಾಯಣ ಆಸೀನ್ನ ಬ್ರಹ್ಮಾ ನೇಶಾನಃ ॥ ವಾಸುದೇವೋ ವಾ ಇದಮಗ್ರ ಆಸೀನ್ನ ಬ್ರಹ್ಮಾ ನ ಚ ಶಂಕರಃ ಇತ್ಯಾದಿ ಶ್ರುತಿಭ್ಯಶ್ಚ । **(b)** ಅಗ್ರಶಬ್ದೋ ಗುಣಾಧಿಕ್ಯವಾಚೀ ॥ ಇದಂ ರಮಾಬ್ರಹ್ಮಶಿವಾದಿಕಂ ಸರ್ವಂ ಜಗದಪೇಕ್ಷ್ಯಾತ್ಯಗ್ರೇ ವಿಷ್ಣುರೇವಾಗ್ರ್ಯಃ ಸರ್ವಗುಣೈರಿತ್ಯರ್ಥಃ । **(c)** ತತ್ರ ಹೇತುಸ್ತದನ್ಯತ್ಕಿಂಚಿನ್ನ ಮಿಷದಾಸೀತ್ ॥ ಸರ್ವಸ್ಯಾಪ್ಯುನ್ಮೇಷಣಂ ನಾಸೀದಿತ್ಯರ್ಥಃ । ಸ್ವತ ಉನ್ಮೇಷಣಂ ಕಸ್ಯಾಪಿ ನಾಸ್ತಿ ॥ **(d)** ಅಸ್ತಿಶಬ್ದವದಾಸೀಚ್ಛಬ್ದೋಽಪಿ ಸರ್ವಕಾಲಸಾಧಾರಣಃ । ಭಗವತ್ಪ್ರಸಾದಾದೇವ ಸರ್ವದಾ ಸರ್ವಂ ಕಿಂಚಿದುನ್ಮಿಷತಿ ॥ ಸ್ವಾತಂತ್ರ್ಯೇಣ ಪೂರ್ಣೋನ್ಮೇಷೋ ವಿಷ್ಣುರೇವ ।

**ಅ** ॥ (a) ನಾರಾಯಣನೊಬ್ಬನೇ ಇರುತ್ತಿದ್ದನು; ಬ್ರಹ್ಮನೂ ಇರಲಿಲ್ಲ; ರುದ್ರನೂ ಇರಲಿಲ್ಲ; ನಾರಾಯಣನೊಬ್ಬನೇ ಇದ್ದನು, ಬ್ರಹ್ಮನೂ ಇರಲಿಲ್ಲ, ರುದ್ರನೂ ಇರಲಿಲ್ಲ. ವಾಸು

ದೇವನೇ ಈ ಜಗತ್ತಿನ ಪ್ರಳಯಕಾಲದಲ್ಲಿ ಇದ್ದನು. ಬ್ರಹ್ಮನೂ ಇರಲಿಲ್ಲ, ರುದ್ರನೂ ಇರಲಿಲ್ಲ. ಇದೇ ಮೊದಲಾದ ಶ್ರುತಿಗಳಿಂದಲೂ ಕೂಡ (ಆದಿ ಪದದಿಂದ 'ಬ್ರಹ್ಮ ವಾ ಇದಮಗ್ರ ಆಸೀತ್' ಇತ್ಯಾದಿ ಶ್ರುತಿಯು, 'ಏತಸ್ಯ ಜಗತೋ ಹ್ಯಗ್ರ ಆಸೀನ್ನಾರಾಯಣಃ ಪರಃ ಏಕ ಏವ ಶ್ರಿಯಾ ಸಾರ್ಧಂ' ಈ ಬ್ರಹ್ಮತರ್ಕವೊದಲಾದ ಸ್ಮೃತಿಯೂ ಗೃಹೀತವಾಗುತ್ತದೆ). (b) ಅಗ್ರ ಶಬ್ದವು (ಅ ೪. ಖಂ ೧. 'ಆತ್ಮಾ ವಾ ಇದಮೇಕ ಏವಾಗ್ರ ಆಸೀತ್' ಎಂಬುವಲ್ಲಿ ಇರತಕ್ಕದು.) ಗುಣಗಳ ಆಧಿಕ್ಯವನ್ನು ಪ್ರತಿಪಾದಿಸುತ್ತದೆ. 'ಇದಂ' ಅಂದರೆ ಈ ಲಕ್ಷ್ಮಿಚತುರ್ಮುಖ, ರುದ್ರ ವೊದಲಾದ ಎಲ್ಲಾ ಜಗತ್ತನ್ನು ಅಪೇಕ್ಷಿಸಿ, 'ಆತ್ಮೈವ ಅಗ್ರೇ' ಅಂದರೆ ಶ್ರೀ ಹರಿಯೇ ಎಲ್ಲಾ ಗುಣಗಳಿಂದಲೂ ಶ್ರೇಷ್ಠನಾಗಿದ್ದಾನೆ ಎಂದರ್ಥವು. (c) ಆ ಗುಣಾಗ್ರ್ಯತ್ವವಿಷಯದಲ್ಲಿ, 'ತದನ್ಯತ್ ಕಿಂಚಿತ್ ಮಿಷತ್ ನಾಸೀತ್' ಎಂಬುವುದು ಹೇತುವು. ಅಂದರೆ ಎಲ್ಲಾ ವಸ್ತುವಿಗೂ (ಸ್ವತಂತ್ರವಾಗಿ) ಉತ್ಕೃಷ್ಟಗುಣವಿರುವಿಕೆಯು ಇಲ್ಲವೇ ಇಲ್ಲವು ಎಂದರ್ಥವು. ಯಾರಿಗೂ ಸ್ವತಂತ್ರವಾಗಿ ಸ್ವಯೋಗ್ಯಗುಣಾನುಭವವೂ ಇಲ್ಲವು. (ಕಾರಣ ಲಕ್ಷ್ಮಿಗೂ ಮುಕ್ತರಿಗೂ ಸಹ ಗುಣಾನುಭವವು ಶ್ರೀ ಹರಿಯ ಅಧೀನವೇ ಸರಿ.) (d) 'ಅಸ್ತಿ ಬ್ರಹ್ಮ' ಎಂಬುವಲ್ಲಿ ಹೇಳಿದ 'ಅಸ್ತಿ' ಶಬ್ದದಂತೆಯೇ (೧ನೇ ಮಂತ್ರದಲ್ಲಿ 'ಅಗ್ರ ಆಸೀತ್' ಎಂಬುವಲ್ಲಿದ್ದ) ಆಸೀಚ್ಛಬ್ದವೂ ಕೂಡ ('ಪ್ರಯೋಗ ಏಕಕಾಲೀನಃ ಸರ್ವಕಾಲೇಽನುಷಜ್ಯತೇ' ಎಂಬೀ ವಚನಾನುಸಾರವಾಗಿ) ಎಲ್ಲಾ ಕಾಲಗಳಲ್ಲಿಯೂ ಸಮಾನವಾದುದೇ ಸರಿ. ಶ್ರೀ ಪರಮಾತ್ಮನ ಅನುಗ್ರಹದಿಂದಲೇ ಯಾವಾಗಲೂ ಬ್ರಹ್ಮಾದಿ ಎಲ್ಲಾ ವಸ್ತುವು ಸ್ವಲ್ಪವಾಗಿಯೇ ಜ್ಞಾನಾದಿಗುಣಗಳಿಂದ ಪ್ರಕಾಶಿಸಿ ಕೊಂಡದೆ. ಸ್ವತಂತ್ರವಾಗಿ ಜ್ಞಾನಾದಿ ಪೂರ್ಣಗುಣಗಳಿಂದ ಪ್ರಕಾಶಿಸಿಕೊಂಡಿರುವವನು ಶ್ರೀ ಹರಿಯೇ ಸರಿ.

**ಭಾ||** **(a)** ಉನ್ಮೇಷೋ ಗುಣಸಂಪೂರ್ತೇರುದ್ರಿಕ್ತಾನುಭವಃ ಸ್ಮೃತಃ । **(b)** ತದೇವ ಮಿಷಣಂ ನಾಮ ಸದ್ರೂಪಂ ಮಿನುತೇ ಯತಃ || ಮಿಷಚ್ಚ ನಾನ್ಯದ್ವಿಷ್ಣೋರ್ಹಿ ಕಿಮುತೋನ್ಮಿಷದಿಷ್ಯತೇ । **(c)** ಉಚ್ಚೈರ್ಮಿಷನ್ನಿ ಭಗವಾನ್ಸರ್ವದೈವ ಜನಾರ್ದನಃ || ಇತಿ ಚ ಸತ್ತತ್ತ್ವೇ || **(d)** ನಾಸ್ತಿ ನಾರಾಯಣಸಮಂ ನ ಭೂತಂ ನ ಭವಿಷ್ಯತಿ । ಇತಿ ಚ ಭಾರತೇ ||

ಅ || (a) ಜ್ಞಾನಾನಂದಾದಿ ಗುಣಗಳ ಪರಿಪೂರ್ಣತೆಯಿಂದ ಉತ್ಕೃಷ್ಟವಾದ ಅನುಭವವೇ ಉನ್ಮೇಷವೆಂದು ಹೇಳಲ್ಪಟ್ಟದೆ. (b) ಅತ್ಯುತ್ತಮವೂ ನಿರ್ದುಷ್ಟವೂ ಆದ ಸ್ವರೂಪವನ್ನು ಯಾವಕಾರಣದಿಂದ ವಿಷಯೀಕರಿಸುತ್ತದೋ, ಆದುದರಿಂದ ಉನ್ಮೇಷಣವೇ (ಮಿನುತೇ ಸತ್ ಎಂಬೀವ್ಯುತ್ಪತ್ತಿಯಿಂದ) ಮಿಷಣವೆನ್ನಿಸಿಕೊಳ್ಳುತ್ತದೆ. ಯಾವ ಕಾರಣದಿಂದ ಶ್ರೀ ಹರಿಯು ನಿರ್ದುಷ್ಟವಾದ ತನ್ನ ಸ್ವರೂಪವನ್ನು ವಿಷಯೀಕರಿಸುತ್ತಾನೋ ಆದುದರಿಂದ) ವಿಷ್ಣುವಿನಿಂದ ಇತರವಾದುದು ಸ್ವತಂತ್ರವಾಗಿ ಮಿಷತ್ತಾದದ್ದೇ (ಗುಣಗಳಿಂದ ಶೋಭಿಸಿಕೊಂಡಿರುವುದು) ಇಲ್ಲವು. ಉನ್ಮಿಷತ್ ಆದದ್ದು ಇಚ್ಛಿಸಲ್ಪಡುವುದಿಲ್ಲವೆಂದು ಹೇಳತಕ್ಕದು ಏನಿದೆ. (c) ಸ್ಪಷ್ಟವಾಗಿ ಯಾವಾಗಲೂ (ಬ್ರಹ್ಮನ) ಸ್ವರೂಪವನ್ನು ಚೆನ್ನಾಗಿ ತಿಳಿದವನು ಶ್ರೀ ಜನಾರ್ದನನೇ ಸರಿ. ಎಂದು ಸತ್ತತ್ತ್ವವೆಂಬ ಗ್ರಂಥದಲ್ಲಿ ಅದೆ. (d) ನಾರಾಯಣನಿಗೆ ಸಮಾನವಾದುದು ಇಲ್ಲವೇ ಇಲ್ಲ. ಭೂತಕಾಲದಲ್ಲಿ ಇರಲಿಲ್ಲ, ಭವಿಷ್ಯತ್ಕಾಲದಲ್ಲಿ ಇರುವುದಿಲ್ಲ ಎಂದು ಭಾರತದಲ್ಲಿ.

**ಭಾ||** **(a)** ಸರ್ವಜೀವಾನಾಂ ರಮಾಯಾಶ್ಚ ಪ್ರಲಯೇಽಪಿ ವಿದ್ಯಮಾನತ್ವಾದೇವ ನಾಗ್ರ ಇತಿ ಕಾಲಾಪೇಕ್ಷಯಾ । **(b)** ತದಧೀನಮಿಷತ್ವಾದನ್ಯೇಷಾ

ಮಗ್ರ್ಯಃ ಸ ಏವೇತ್ಯಾಶಯಃ ॥ ತದಧೀನತ್ವಮೇವ ತೇಷಾಂ ಸೃಷ್ಟ್ಯಾದಿನಾ ದರ್ಶಯತಿ । (c) ಸ್ಥೂಲಶರೀರಸ್ಯ ಪೂರ್ವಾಭಾವಸ್ತತ ಏವಾರ್ಥತಃ ಸಿದ್ಧ್ಯತಿ ॥ (d) ಪ್ರಲಯೇಽಪ್ಯಖಿಲಂ ದೇವೀ ರಮಾ ವಿಷ್ಣುಪ್ರಸಾದತಃ । ಜಾನಾತಿ ನಿತ್ಯಜ್ಞಾನೇನ ಮುಕ್ತಾ ಧ್ಯಾನಸ್ಥಿತಾ ಲಯೇ ॥ ಇತಿ ಚ ಸತ್ತತ್ವೇ ॥

ಅ ॥ (a) ಎಲ್ಲಾ ಜೀವರೂ ಲಕ್ಷ್ಮಿಯೂ ಕೂಡ ಪ್ರಲಯಕಾಲದಲ್ಲಿಯೂ ಕೂಡ ಇದ್ದುದರಿಂದಲೇ 'ಅಗ್ರೇ' ಎಂಬುವುದು ಕಾಲವನ್ನಪೇಕ್ಷಿಸಿ ಎಂದು ಹೇಳಕೂಡದು. [ತಾ ॥ (1) ಮುಕ್ತರಾದ ಎಲ್ಲಾ ಜೀವರೂ ಲಕ್ಷ್ಮಿಯೂ ಕೂಡ ಅಸುಪ್ತರಾಗಿಯೂ ಇತರ ಜೀವರು ಸ್ವರೂಪತಃ ಪ್ರಲಯಕಾಲದಲ್ಲಿಯೂ ಪ್ರಮಿತರಾದುದರಿಂದಲೇ ಇತರ ಸ್ವರೂಪವನ್ನು ನಿಷೇಧಿಸಿ ತನ್ನ ಸ್ವರೂಪವು ಪ್ರಕಾಶಿಸಿಕೊಂಡಿರುವುದರಿಂದ ಕಾಲತಃ ಅಗ್ರ್ಯತ್ವವನ್ನು ವಿವಕ್ಷಿಸಿ 'ಅಗ್ರೇ' ಎಂಬೀ ವಚನವು ಎಂಬುವುದು ಕೂಡಲಾರದು. (2) ಮುಕ್ತಾಮುಕ್ತ ಎಲ್ಲಾ ಜೀವರೂ ಲಕ್ಷ್ಮಿಯೂ ಕೂಡ ಪ್ರಲಯಕಾಲದಲ್ಲಿ ಇರುವುದರಿಂದ ಕಾಲಾಗ್ರ್ಯತ್ವವು ಇತರ ಸಾಧಾರಣವಾದುದರಿಂದ ಗುಣಾಗ್ರ್ಯತ್ವವನ್ನು ಬಿಟ್ಟು ಕೇವಲ ಕಾಲಾಗ್ರ್ಯತ್ವವು ಕೂಡಲಾರದು. (3) ಹಾಗಾದರೆ ಸಂಸಾರಿಗಳಿಗೆ ಜ್ಞಾನವಿಲ್ಲದಿರುವುದರಿಂದಲೂ ಇತರರೆಲ್ಲರಿಗೆ ಸ್ವಾತಂತ್ರ್ಯವಿಲ್ಲದಿರುವುದರಿಂದಲೂ ಕಾಲಾಗ್ರ್ಯತ್ವವಿದ್ದರೂ ಇಲ್ಲದಿರುವುದರಂತೆಯೇ ಆಯಿತು. ಕಾರಣ ಕಾಲಾಗ್ರ್ಯತ್ವವಸಾಧಾರಣವೇ ಆಯಿತು ಎಂದರೂ ಗುಣಾಗ್ರ್ಯತ್ವವನ್ನು ಬಿಟ್ಟು ಇದನ್ನುಪಪಾದಿಸಲಿಕ್ಕೆ ಬಾರದಿರುವುದರಿಂದ ಗುಣಾಗ್ರ್ಯತ್ವವನ್ನೇ ಹೇಳಿದ ಹಾಗಾಯಿತು.] (b) ಅನ್ಯರಿಗೆ ಶ್ರೀಹರಿಯ ಅಧೀನವಾದ ಗುಣಗಳಿರುವುದರಿಂದ ಎಲ್ಲರಿಂದಲೂ ಶ್ರೇಷ್ಠನು ಶ್ರೀಹರಿಯೇ ಸರಿ ಎಂದಭಿಪ್ರಾಯವು ಸೃಷ್ಟಿ ಮೊದಲಾದವುಗಳಿಂದ ಅವರಿಗೆ ಶ್ರೀ ಹರಿಯ ಅಧೀನತ್ವವನ್ನೇ ತೋರಿಸುತ್ತದೆ. (c) ಸ್ಥೂಲವಾದ ಶರೀರವು ಪೂರ್ವದಲ್ಲಿ ಇಲ್ಲವೆಂಬುದು, ಅದರಿಂದಲೇ (ಅಂದರೆ ಪರಾಧೀನ ವಿಶೇಷಾವಾಪ್ತಿರೂಪವಾದ ಸೃಷ್ಟಿಯನ್ನು ಹೇಳಿರುವುದರಿಂದಲೇ) ಅರ್ಥದಿಂದಲೇ ಸಿದ್ಧವಾಯಿತು. (ಮುಖ್ಯವಾಗಿ ಅಲ್ಲವು. ಅಂತೂ ಮುಖ್ಯತಃ ಲಬ್ಧವಾದ ಅರ್ಥವನ್ನು ಬಿಟ್ಟು ಕೇವಲ ಆರ್ಥಿಕವಾದ ಅರ್ಥವನ್ನು ಸ್ವೀಕಾರಮಾಡುವುದು ಅಯುಕ್ತವು.) (d) ಲಕ್ಷ್ಮೀದೇವಿಯು ವಿಷ್ಣುವಿನ ಪ್ರಸಾದದಿಂದ ಪ್ರಲಯಕಾಲದಲ್ಲಿಯೂ ಕೂಡ ಸರ್ವವನ್ನು ತಿಳಿಯುತ್ತಾಳೆ. ಮುಕ್ತರು ನಿತ್ಯ ಜ್ಞಾನದಿಂದ ಪ್ರಲಯಕಾಲದಲ್ಲಿ ಧ್ಯಾನದಲ್ಲಿರುತ್ತಾರೆ. (ಆಗ ನಿಖಿಲ ಸಾಕ್ಷಾತ್ಕಾರವುಳ್ಳವರು ಆಗಲಾರರು. ಅಂತೂ ಅವರ ಜ್ಞಾನವು ಶಕ್ತ್ಯವಸ್ಥೆಯಲ್ಲಿರುತ್ತದೆ ಅಲ್ಲದೆ ವ್ಯಕ್ತ್ಯವಸ್ಥೆಯಲ್ಲಿರುವುದಿಲ್ಲ.) ಎಂದು ಸತ್ತತ್ವದಲ್ಲಿ ಹೇಳಿಯದೆ.

ಭಾ॥ (a) ಬ್ರಹ್ಮಾದೀನಾಂ ಶರೀರಾಂತರಸ್ಯಾಪಿ ಪ್ರಲಯೇಽನುಕ್ತೇರೇವಾಭಾವಃ ಸಿದ್ಧ್ಯತಿ । (b) ಆತ್ಮಾ ಬ್ರಹ್ಮಾಗ್ರ ಇತ್ಯಾದಿ ಗುಣಾಗ್ರ್ಯತ್ವಂ ಹರೇರ್ವದೇತ್ ॥ ಕಾಲಜ್ಯೈಷ್ಠ್ಯಂ ನ ಯಸ್ಮಾತ್ತತ್ಸೃಷ್ಟ್ಯುಕ್ತೇರೇವ ಸಿದ್ಧ್ಯತಿ । ಇತಿ ವಾಕ್ಯನಿರ್ಣಯೇ ॥ (c) ಗುಣಾಗ್ರ್ಯತಾಯಾಮೇವ ಕಾಲಾಜ್ಯೈಷ್ಠ್ಯಸ್ಯಾಪ್ಯಂತರ್ಭಾವಾಚ್ಚ । ಅಂ ವಿಷ್ಣುಂ ಬಿಭರ್ತೀತ್ಯಂಭೋ ವಿಷ್ಣುಲೋಕಃ । ದಿವಃ ಪರೇ ಮಹರಾದಯಶ್ಚ । (d) ದಿವ್ಯಪಿ ಭಗವಾನ್ಪ್ರತಿತಿಷ್ಠತೀತಿ ಪ್ರತಿಷ್ಠಾ ॥ ತೇಷು ಸರ್ವೇಷು ಪ್ರತ್ಯಕ್ಷತಶ್ಚರತಿ ವಿಷ್ಣುಸ್ತಸ್ಮಾದಂಭ ಇತ್ಯುಚ್ಯತೇ । ದಿವಃ ಪರೇ ಹ್ಯಾಶ್ಚಾಂಭೋ ನಾಮಕಾ ಇತ್ಯರ್ಥಃ॥

ಅ ॥ (a) ವಾಯು ಮೊದಲಾದವರಿಗೆ ಲಿಂಗಶರೀರದಿಂದ ಅತಿರಿಕ್ತವಾದ ಸ್ಥೂಲ ಶರೀರದ ಅಭಾವವು ಹೇಳದಿದ್ದರೂ (ಸೃಷ್ಟಿಯನ್ನು ಹೇಳಿರುವುದರಿಂದ ಅರ್ಥದಿಂದಲೇ) ಸಿದ್ಧವಾಗುತ್ತದೆ. (ಅದಕ್ಕೋಸ್ಕರ ಆ ವಾಕ್ಯವು ಪ್ರವೃತ್ತವಾದದ್ದಲ್ಲವು. ಆ ಅರ್ಥವು ಅಭಿಪ್ರಾಯದಿಂದಲೇ ಸಿಗುವುದರಿಂದ ಶ್ರುತಿಯು ಅದಕ್ಕೋಸ್ಕರ ಪ್ರವೃತ್ತವಾದದ್ದಲ್ಲವು. ತಥಾ ಚ ಗುಣಾಗ್ರ್ಯತ್ವವನ್ನು ಪ್ರಧಾನವಾಗಿ ಪ್ರತಿಪಾದಿಸುವುದರಲ್ಲಿ ಆರ್ಥಿಕಾರ್ಥವನ್ನು ಸ್ಪಷ್ಟವಾಗಿ ತಿಳಿಯುತ್ತವೆ. ) .(b) 'ಆತ್ಮಾ ವಾ ಇದಮೇಕ ಏವಾಗ್ರ ಆಸೀತ್' 'ಬ್ರಹ್ಮ ವಾ ಇದಮಗ್ರಮಾಸೀತ್' ಇದು ಮೊದಲಾದ ವಾಕ್ಯವು ಗುಣಗಳಿಂದ ಅತಿ ಶ್ರೇಷ್ಠತ್ವವನ್ನು ಶ್ರೀ ಹರಿಗೆ ಪ್ರತಿಪಾದಿಸುತ್ತದೆ. ಯಾವ ಕಾರಣದಿಂದ ಆ ಕಾಲ ಜ್ಯೈಷ್ಠ್ಯವು ಸೃಷ್ಟಿಯನ್ನು ಹೇಳಿರುವುದರಿಂದಲೇ (ಸೃಷ್ಟಿ ಕರ್ತನಾದ ಪರಮಾತ್ಮನಿಗೆ) ಸಿದ್ಧವಾಗುತ್ತದೋ (ಆ ಕಾರಣ) ಕೇವಲ ಕಾಲಜ್ಯೈಷ್ಠ್ಯವನ್ನು ಹೇಳಲಾರದು. ಎಂದು ವಾಕ್ಯನಿರ್ಣಯವೆಂಬ ಗ್ರಂಥದಲ್ಲಿ ಇದೆ. (c) ಗುಣಾಗ್ರ್ಯತ್ವದಲ್ಲಿಯೇ ಕಾಲತಃ ಜ್ಯೇಷ್ಠತ್ವವೂ ಕೂಡಅಂತರ್ಭೂತವಾಗುವುದರಿಂದಲೂ ಕೂಡ ಅಂ=ವಿಷ್ಣುವನ್ನು, ಬಿಭರ್ತಿ=ಧರಿಸುತ್ತದೆ. ಎಂಬೀ ವ್ಯುತ್ಪತ್ತಿಯಿಂದ ಅಂಭಃ=ವಿಷ್ಣುಲೋಕವು. ಸ್ವರ್ಗದಿಂದ ಮೇಲೆ ಇರುವ ಮಹರಾದಿ ಲೋಕಗಳು ಸ್ವರ್ಗಲೋಕವೂ ಕೂಡ, (ಅಂಭೋನಾಮಕಗಳು.) (d) ಸ್ವರ್ಗದಲ್ಲಿಯೂ ಕೂಡ ಶ್ರೀ ಪರಮಾತ್ಮನು ಇರುತ್ತಾನೆ. ಆ ಕಾರಣ 'ಪ್ರತಿಷ್ಠಾ'ಎನ್ನಿಸಿಕೊಳ್ಳುತ್ತದೆ. ಆ ಎಲ್ಲಾ ಲೋಕಗಳಲ್ಲಿಯೂ ಪ್ರತ್ಯಕ್ಷವಾಗಿಯೇ ಶ್ರೀ ವಿಷ್ಣುವು ಸಂಚರಿಸುತ್ತಾನೆ. ಆದಕಾರಣ 'ಅಂಭಃ' ಎಂದು ಹೇಳಲ್ಪಡುತ್ತದೆ. ಸ್ವರ್ಗದಿಂದ ಮೇಲೆ ಇರುವವುಗಳೂ ಸ್ವರ್ಗವೂ ಕೂಡ 'ಅಂಭೋ'ನಾಮಕಗಳು ಎಂದರ್ಥವು.

ಭಾ॥ **(a)** ಸೂರ್ಯಮರೀಚೀನಾಂ ತತ್ರ ವಿಶೇಷೇಣ ವಿತತತ್ವಾದಂತರಿಕ್ಷಂ ಮರೀಚಯಃ। ಮರೀಚೀನಾಮಯನಾತ್ ॥ **(b)** ಪೃಥಿವ್ಯಾಂ ಕ್ಷಿಪ್ರಂ ಮರಂತೀತಿ ಪೃಥಿವೀಮರಃ। **(c)** ಭೂತೇಭ್ಯೋಽನಂತರಂ ತ್ವಂಡಂ ಸೃಷ್ಟ್ವಾ ವಿಷ್ಣುಃ ಪುರಾ ಪ್ರಭುಃ ॥ ಲೋಕಭೇದಾಂಶ್ಚ ಚಕ್ರೇಽತ್ರ ಪಶ್ಚಾದ್ಬ್ರಹ್ಮಾ ವಿಶೇಷತಃ। ಸಮ್ಯಕ್ಚಕಾರ ಲೋಕಾಂಸ್ತಾಂಲ್ಲೋಕಕರ್ತಾ ತತಃ ಸ ಚ ॥ ಇತಿ ಬ್ರಹ್ಮವೈವರ್ತೇ ॥ **(d)** ಯಾ ಅಧಸ್ತಾತ್ಪೂರ್ವಮೇವ ಸೃಷ್ಟಾ ದೇವತಾಸ್ತಾ ಆಪ ಇತ್ಯುಚ್ಯಂತೇ । ಆಪಾ ಇತ್ಯಾಪ ಇತೀತಿ ಪೂರ್ವಂ ಭಗವದಂಗಸೃಷ್ಟಾನಾಮೇವಾಪ್ತ್ಯಬ್ದೇನೋಕ್ತೇಃ ॥ ಅಯಂ ಪಿತ್ರೈತೇ ಪುತ್ರಾ ಇತಿ ಚ। ಆಹಂ ಮಾಂ ದೇವೇಭ್ಯೋ ವೇದ ಓಮದ್ದೇವಾನ್ವೇದೇತಿ ಚ ॥

ಅ ॥ (a) ಸೂರ್ಯ ಕಿರಣಗಳು ಅಲ್ಲಿ ವಿಶೇಷಾಕಾರವಾಗಿ ವ್ಯಾಪ್ತಗಳಾದುದರಿಂದ ಅಂತರಿಕ್ಷವು 'ಮರೀಚಯಃ' ಎನ್ನಿಸಿಕೊಳ್ಳುತ್ತದೆ. ಸೂರ್ಯ ಕಿರಣಗಳಿಗೆ, ವಿಶೇಷಾಕಾರವಾಗಿ ಗಮನರೂಪವಾದ ಪ್ರವೃತ್ತಿಯಿರುವುದರಿಂದ (b) ಪೃಥಿವಿಯಲ್ಲಿ ಶೀಘ್ರವಾಗಿ ಮರಣವನ್ನು ಹೊಂದುತ್ತಾರೆ. ಕಾರಣ ಪೃಥಿವಿಯು 'ಮರ' ಎನ್ನಿಸಿಕೊಳ್ಳುತ್ತದೆ. (c) ಪೂರ್ವದಲ್ಲಿ ಪ್ರಭುವಾದ ವಿಷ್ಣುವು ಮಹದಾದಿ ಸೃಷ್ಟಿಗಳ ದೆಸೆಯಿಂದ ಅನಂತರದಲ್ಲಿ (ಭೂತಗಳನ್ನು ಸೃಷ್ಟಿಮಾಡಿದ ಮೇಲೆ) ಬ್ರಹ್ಮಾಂಡವನ್ನು ಸೃಷ್ಟಿಮಾಡಿ, ಲೋಕ ಪ್ರಭೇದಗಳನ್ನೂ, (ಲೋಕಾಭಿಮಾನಿಗಳನ್ನೂ, ಲೋಕಪಾಲಕರನ್ನೂ ಕೂಡ) ಮಾಡಿದನು. ಆ ಮೇಲೆ ಚತುರ್ಮುಖನು ವಿಶೇಷಾಕಾರವಾಗಿ ಆ ಲೋಕಗಳನ್ನು ಚೆನ್ನಾಗಿ ಮಾಡಿದನು. ಆ ಕಾರಣ ಆ ಬ್ರಹ್ಮನೂ ಕೂಡ

ವಿಶೇಷಾಕಾರವಾಗಿ ಲೋಕ ಕರ್ತನೆಂದು (ಹೇಳಲ್ಪಡುತ್ತಾನೆ) ಎಂದು ಬ್ರಹ್ಮವೈವರ್ತದಲ್ಲಿ. (b) ಬ್ರಹ್ಮಾಂಡೋತ್ಪತ್ತಿಗಿಂತ ಪೂರ್ವದಲ್ಲಿಯೇ ಸೃಷ್ಟರಾದ ಯಾವ ದೇವತೆಗಳೋ, ಆ ದೇವತೆಗಳು 'ಆಪಃ' ಎಂದು ಹೇಳಲ್ಪಡುತ್ತಾರೆ. ಪೂರ್ವದಲ್ಲಿ (ಅಂದರೆ ೧ನೇ ಅಧ್ಯಾಯ ೨ನೇ ಖಂಡದಲ್ಲಿ ಮನಸ್ಸಿನಿಂದ ಅಬಭಿಮಾನಿಗಳೂ ವರುಣನೂ ಕೂಡ ಸೃಷ್ಟರಾದರು. ಎಂಬೀ) ಶ್ರೀ ಹರಿಯ ಅಂಗದಿಂದ ಸೃಷ್ಟರಾಗಿದ್ದಾರೆ ಎಂದು ಹೇಳಲ್ಪಟ್ಟ ದೇವತೆಗಳಿಗೇನೇ 'ಆಪ ಇತ್ಯಾಪಃ' (೧ನೇ ಅಧ್ಯಾಯ ಆನೇ ಖಂಡದಲ್ಲಿ ವಿವಾದಪೂರ್ವಕವಾಗಿ) ಅಪ್ ಶಬ್ದವಾಚ್ಯತ್ವವನ್ನು ನಿರ್ಣಯಿಸಿರುವುದರಿಂದ (ಅ. ೧. ಖಂ. ೮) ಇವನು ತಂದೆಯು; ಇವರು ಮಕ್ಕಳು ಎಂದೂ ಹೇಳಿಯದೆ. (ಕಾರಣ ಜಲವು ಪ್ರಕೃತ ಅಪ್ ಶಬ್ದವಾಚ್ಯವಾಗಲಾರದು.) (ಅ. ೧. ಖಂ. ೮) ಅಹಂ=ನಾನು, ಆ ದೇವೇಭ್ಯಃ=ದೇವಪರ್ಯಂತವಾಗಿ, ಮಾಂ=ನನ್ನನ್ನು, ವೇದ=ತಿಳಿಯುತ್ತೇನೆ. ಉ=ಮತ್ತು, ಆ ಮತ್=ನನ್ನ ಪರ್ಯಂತವಾಗಿಯೂ, ದೇವಾನ್=ದೇವತೆಗಳನ್ನು, ವೇದ=ತಿಳಿಯುತ್ತೇನೇ (ನಾನು ದೇವತೆಗಳಲ್ಲಿ ವ್ಯಾಪ್ತನು, ದೇವತೆಗಳೂ ನನ್ನಲ್ಲಿ ಆಶ್ರಿತರೂ) ಹೀಗೂ ಉಕ್ತವಾಗಿಯದೆ.

ಭಾ॥ (a) ಬ್ರಹ್ಮವಾಯೂ ಚ ತದ್ಭಾರ್ಯೇ ವೀಂದ್ರಶೇಷೌ ಚ ತತ್ಸ್ತ್ರಿಯತಾ। ಶಿವಸ್ತದ್ದಯಿತಾ ಶಕ್ರಕಾಮೌ ತದ್ದಯಿತಾದಯಃ ॥ ಸರ್ವೇ ಸುರಾಃ ಕ್ರಮೇಣೈವ ವಿಷ್ಣೋರ್ಜಾತಾ ಅಬಾಖ್ಯಕಾಃ। (b) ಜ್ಞಾನಾನಂದ ಬಲಾದ್ಯೇಷು ವಿಷ್ಣುಭಕ್ತೌ ಚ ಸರ್ವಶಃ ॥ ಹೀನಾಃ ಶತಗುಣೇನೈವ ಕ್ರಮೇಣಾನೇನ ತೇ ಮತಾಃ। (c) ತೇಭ್ಯಶ್ಚ ಋಷಯೋ ಮರ್ತ್ಯಾ ಹೀನಾ ಏವ ಕ್ರಮೇಣ ಚ ॥ ವಿಶೇಷತಸ್ತು ಮುಕ್ತಾನಾಂ ಸರ್ವ ಸಂಸಾರ ಬಂಧನಾತ್। ಕ್ರಮೋಽಯಂ ಸಮ್ಯಗುದ್ದಿಷ್ಟೋ ನಿತ್ಯಾನಂದೈಕಭೋಗಿನಾಂ ॥ (d) ನ ವಿಶೇಷೋ ಬ್ರಹ್ಮವಾಯ್ವೋರಧಿಕಾರಾವಿಭೇದತಃ। ನ ಶೇಷಶಿವಯೋಶ್ಚೈವ ತತ್ಪತ್ನೀನಾಂ ಚ ಸರ್ವಶಃ ॥ (e) ಸುಪರ್ಣಶೇಷಯೋಶ್ಚೈವ ಸಾಮ್ಯಂ ಸರ್ವಗುಣೇಷ್ವಪಿ। ಸಾಮ್ಯಮೇವೈತಯೋಃ ಪತ್ನ್ಯೋಃ ಸಾಮ್ಯಂ ಶಕ್ರಮನೋಜಯೋಃ ॥

ಅ ॥ (a) ಬ್ರಹ್ಮವಾಯುಗಳೂ, ಅವರ ಹೆಂಡಂದಿಯರೂ, (ಸರಸ್ವತೀಭಾರತಿಯರೂ,) ಗರುಡಶೇಷರೂ, ಅವರ ಹೆಂಡಂದಿಯರೂ, (ಸೌಪರ್ಣೀ ವಾರುಣಿಯರೂ,) ರುದ್ರನು, ಅವನ ಹೆಂಡತಿಯಾದ ಪಾರ್ವತಿಯು, ಇಂದ್ರಕಾಮರು, ಅವರ ಹೆಂಡಂದಿಯರೇ ಮೊದಲಾದ ಅಪ್ ಎಂದು ಹೆಸರುಳ್ಳ ಎಲ್ಲಾ ದೇವತೆಗಳು ವಿಷ್ಣುವಿನಿಂದ ಕ್ರಮವಾಗಿಯೇ ಹುಟ್ಟಿದರು. (b) ಜ್ಞಾನಾನಂದ ಸಾಮರ್ಥ್ಯ ಮೊದಲಾದುವುಗಳಲ್ಲಿಯೂ ವಿಷ್ಣುಭಕ್ತಿಯಲ್ಲಿಯೂ ಎಲ್ಲರೂ ಈ ಕ್ರಮದಿಂದಲೇ ೧೦೦, ೧೦೦, ಗುಣದಿಂದಲೇ ಕಡಿಮೆಯವರು ಎಂದು ಸಮ್ಮತರಾಗಿದ್ದಾರೆ. (c) ಅವರಿಂದಲೂ ಋಷಿಗಳೂ (ಮಧ್ಯಮಾಧಿಕಾರಿಗಳು) ಮನುಷ್ಯರು (ಅಧಮಾಧಿಕಾರಿಗಳು) ಕ್ರಮದಿಂದಲೇ ಕಡಿಮೆಯವರು. ಸರ್ವ ಸಂಸಾರಬಂಧದಿಂದ ಮುಕ್ತರೂ (ಬಿಡುಗಡೆಹೊಂದಿದವರೂ) ನಿತ್ಯದಲ್ಲಿಯೂ ಕೇವಲ ಆನಂದವನ್ನು ಅನುಭವಿಸುವವರೂ ಆದ ಮುಕ್ತರಿಗೆ ವಿಶೇಷಾಕಾರವಾಗಿ ಈ ಕ್ರಮವು ಚೆನ್ನಾಗಿ ಹೇಳಲ್ಪಟ್ಟದೆ. (d) ಬ್ರಹ್ಮ ವಾಯುಗಳಿಗೂ, ಶೇಷರುದ್ರರಿಗೂ ಅಧಿಕಾರದಲ್ಲಿ ಭೇದವಿಲ್ಲದಿರುವುದರಿಂದ ವಿಶೇಷವಿಲ್ಲವು. ಅವರ ಹೆಂಡಂದಿಯರಿಗೂ (ಅಂದರೆ ಸರಸ್ವತೀ ಭಾರತೀಯರಿಗೂ, ವಾರುಣೀ ಪಾರ್ವತಿಯರಿಗೂ) ಸರ್ವ ಪ್ರಕಾರದಿಂದಲೂ

ವಿಶೇಷವಿಲ್ಲವು. (e) ಗರುಡ ಶೇಷರಿಗೂ ಎಲ್ಲಾ ಗುಣಗಳಲ್ಲಿಯೂ ಸಾಮ್ಯವೇ. ಅವರ ಹೆಂಡತಿಯರಾದ ಸೌಪರ್ಣಿ ವಾರುಣಿಯರಿಗೂ ಸಾಮ್ಯವೇ. ಇಂದ್ರಕಾಮರಿಗೂ ಸಾಮ್ಯವೇ.

ಭಾ॥ (a) ಏತೇ ತು ಮಹದಾದೀನಾಂ ಸರ್ವೇಽಪಿ ಹ್ಯಭಿಮಾನಿನಃ । ಪೂರ್ವಸ್ಯ ಪ್ರತಿಬಿಂಬಶ್ಚ ಚರಮಸ್ತತ್ಸುತಸ್ತಥಾ ॥ ತದ್ವಶಾಶ್ಚಾಖಿಲಾ ವಿಷ್ಣೋರ್ನ ವಿಷ್ಣುಃ ಕಸ್ಯಚಿದ್ವಶೇ । ಮಹದಾದಿಮಾನಿನಶ್ಚೈತೇ ಜಾತಾಸ್ತೈಃ ಸಹ ಸರ್ವಶಃ ॥ (b) ಏತೇ ಲೋಕಾ ಇತಿ ಪ್ರೋಕ್ತಾ ಲೋಕಾನಾಮಭಿಮಾನಿನಃ । ತ ಏವ ಲೋಕಪಾಲಾಶ್ಚ ಯದಾ ಪಶ್ಚಾತ್ಪ್ರಜಜ್ಞಿರೇ ॥ ಪಶ್ಚಾಜ್ಜಾತೈರ್ಹಿ ರೂಪೈಸ್ತೈರ್ಲೋಕಸ್ಥಾನ್ಪಾಲಯಂತ್ಯಲಂ । ಇತ್ಯಾದಿ ಸತತ್ವಸಾರೇ ॥

ಅ ॥ (a) (ಯಾವ ಎಲ್ಲಾ ದೇವತೆಗಳು ಕ್ರಮವಾಗಿಯೇ ವಿಷ್ಣುವಿನಿಂದಲೇ ಹುಟ್ಟಿರುವರೋ), ಇವರೆಲ್ಲರೂ ಮಹದಾದಿ ತತ್ವಗಳಿಗೆ ಅಭಿಮಾನಿಗಳು. ಮಹದಾದಿ ಅಭಿಮಾನಿಗಳಾದ ಇವರೆಲ್ಲರೂ ಮಹದಾದಿ ತತ್ವಗಳಿಂದೊಡಗೂಡಿಯೇ ಹುಟ್ಟಿದರು. ಪೂರ್ವ ಪೂರ್ವದವರಿಗೆ ಮೇಲೆ ಮೇಲೆ ಇದ್ದವರು ಪ್ರತಿಬಿಂಬರಾಗಿರುತ್ತಾರೆ. ಪೂರ್ವದವರ ಮಕ್ಕಳೂ. ಅವರ ಅಧೀನರೂ ಕೂಡ. ಎಲ್ಲರೂ ವಿಷ್ಣುವಿನ ಅಧೀನರಾಗಿಯೇ ಇರುತ್ತಾರೆ. ಶ್ರೀ ಹರಿಯು ಯಾರ ಅಧೀನದಲ್ಲಿಯೂ ಇಲ್ಲವು. (b) ಮಹದಾದಿ ತತ್ವಾಭಿಮಾನಿಗಳೇ ಯಾವಾಗ ಬ್ರಹ್ಮಾಂಡವು ಹುಟ್ಟಿದ ಮೇಲೆ ಹುಟ್ಟಿದರೋ, ಆಗ ಅವರೇ ಲೋಕಗಳಿಗೆ ಅಭಿಮಾನಿಗಳಾಗಿ ಲೋಕರೆಂದು ಹೇಳಲ್ಪಡುತ್ತಾರೆ. ಅವರೇ ಮೇಲೆ ಹುಟ್ಟಿರುವ ಆ ರೂಪಗಳಿಂದ ಯಾವ ಕಾರಣದಿಂದ ಲೋಕದಲ್ಲಿರುವವರನ್ನು ಚೆನ್ನಾಗಿ ರಕ್ಷಿಸುತ್ತಾರೋ ಆಗ ಲೋಕಪಾಲಕರೂ ಕೂಡ ಆಗುತ್ತಾರೆ. ಇದೇ ಮೊದಲಾದುದು ತತ್ವಸಾರವೆಂಬುವ ಗ್ರಂಥದಲ್ಲಿ ಇದೆ.

ಭಾ॥ (a) ಅಮೂರ್ಛಯತ್ ಮೂರ್ತಮಕರೋತ್ । (b) ಅಗ್ನಿರ್ವಾಗ್ಭೂತ್ವೇತ್ಯಾದಿನಾ ಪಶ್ಚಾದೈಕ್ಯಪ್ರತೀತೇರೇಕಸ್ಯೈವ ರೂಪದ್ವಯಂ ತದಿತಿ ಪ್ರತೀಯತೇ ॥ ಪ್ರಜಾನೀಹಿ ಪ್ರಕರ್ಷೇಣಾನುಜಾನೀಹಿ । (c) ಅನ್ನದೇವತಾ ಚ ಸರ್ವದೇವತಾಯುಕ್ತೋ ವಿರಿಂಚ ಏವ ॥ ಗ್ರಸನಂ ಚೈತಸ್ಮಿನ್ಪ್ರವೇಶ ಏವ ನ ತು ಪೀಡಾ ತಸ್ಯ । (d) ಏಕ ಏವ ಹಿ ಬ್ರಹ್ಮಾ ಭೋಕ್ತೃಭೋಜ್ಯತ್ವೇನ ಸ್ಥಿತೋ ಭೋಜ್ಯರೂಪೇಣೈಕೀಭೂಯಾತಿತರಾಂ ಮುಮೋದೇತ್ಯರ್ಥಃ ॥

ಅ ॥ (a) (ಅ. ೪. ಖಂ. ೧.) 'ಅಮೂರ್ಛಯತ್' ಅಂದರೆ ಮೂರ್ತವನ್ನು ಮಾಡಿದನು. (ಚೇತನಾಚೇತನಾತ್ಮಕವಾದ ಒಂದು ರಾಶಿಯನ್ನು ಮಾಡಿದನು.) (b) (ಅ. ೪. ಖಂ. ೨.) ಅಗ್ನಿಯು ವಾಗಧಿಪತಿಯಾಗಿ, ಇದು ಮೊದಲಾದ ವಾಕ್ಯದಿಂದ ಮೇಲೆ ಐಕ್ಯಪ್ರತೀತಿಯಾಗುವುದರಿಂದ ಒಬ್ಬನಿಗೇನೇ ಆ ಎರಡು ರೂಪವೆಂದು ತೋರುತ್ತದೆ. 'ಪ್ರಜಾನೀಹಿ' ಚೆನ್ನಾಗಿ ಅನುಜ್ಞೆಯನ್ನು ಕೊಡು. (c) (ಅ. ೪. ಖಂ. ೩.) ಅನ್ನದೇವತೆಯೆಂದರೆ ಸರ್ವದೇವತೆಗಳಿಂದೊಡಗೂಡಿದ ಚತುರ್ಮುಖನೇವೇ. (ಆ ಅನ್ನದೇವತೆಯು) ಗ್ರಸನವೆಂದರೆ ಇವನಲ್ಲಿ ಅಂತಃಪ್ರವೇಶವೇ. ಅದರಿಂದ ಅವನಿಗೆ ದುಃಖವಿಲ್ಲವು. (d) ಒಬ್ಬ ಬ್ರಹ್ಮನೇವೇ (ವಿಶೇಷಬಲದಿಂದ) ಭೋಕ್ತೃರೂಪದಿಂದಲೂ ಭೋಜ್ಯರೂಪದಿಂದಲೂ, ಇದ್ದವನಾಗಿ, ಭೋಜ್ಯರೂಪದಿಂದ ಐಕ್ಯ

ವನ್ನು ಹೊಂದಿ (ಸಂಬಂಧವಿಶೇಷವನ್ನು ಹೊಂದಿ) ಅತ್ಯಂತವಾಗಿ ಸಂತೋಷವನ್ನು ಹೊಂದಿದನು. ಹೀಗೆ ಅರ್ಥವು.

ಭಾ॥ (a) ದೇವಾನಾಮುಪದ್ರವಾಭಾವಾದ್ಭೋಕ್ತೃತ್ವಶಕ್ತಿಯೋಜನಮೇವಾಶನಾಪಿಪಾಸಾಭ್ಯಾಮನ್ವವಾರ್ಜನಂ । ವಾಯುರೇವ ಚ ಭೋಕ್ತೃತ್ವಶಕ್ತಿರೂಪಃ ॥ (b) ಯದಿ ವಾಗಾದೀನಾಮೇವಾಭಿವ್ಯಾಹರಣಾದಿಶಕ್ತಿಃ ಸ್ಯಾನ್ಮಾಂ ವಿನಾ ತರ್ಹಿ ವಿಷ್ಣುತ್ವಂ ನ ಮಮ ಸ್ಯಾತ್ । ತಸ್ಮಾತ್ಕೋಽಹಂ ಭವಾನೀತ್ಯಾಕ್ಷೇಪಃ । (c) ವಿಶೇಷೇಣ ಪ್ರಾಣಯತಿ ಸರ್ವಾನ್ಸರ್ವೇಭ್ಯೋ ವಿಶಿಷ್ಟಶ್ಚೇತಿ ಹಿ ವಿಷ್ಣುಃ ॥ ಣಕಾರೋ ಬಲಂ ಷಕಾರಃ ಪ್ರಾಣ ಆತ್ಮೇತಿ ವ್ಯಾಖ್ಯಾನಾತ್ । (d) ತಸ್ಮಾನ್ಮತ್ಪ್ರೇರಿತಾ ಏವೈತೇ ಅಭಿವ್ಯಾಹಾರಾದಿ ಶಕ್ತಾ ಇತ್ಯಭಿಪ್ರಾಯಃ ॥

ಅ ॥ (a) (ಅ. ೪. ಖಂ. ೨.) (ಅಶನಾಪಿಪಾಸಗಳು, ಲೋಕದಲ್ಲಿ ಉಪದ್ರವದಿಂದಲೂ ಭೋಕ್ತೃತ್ವ ಶಕ್ತಿಯಿಂದಲೂ ಸಮನಿಯತಗಳು.) ದೇವತೆಗಳಿಗೆ ಉಪದ್ರವವಿಲ್ಲದಿರುವುದರಿಂದ 'ಅಶನಾ ಪಿಪಾಸಾಭ್ಯಾಮನ್ವವಾರ್ಜನಂ' ಅಂದರೆ ತದ್ವ್ಯಾಪ್ತವಾದ ಭೋಕ್ತೃತ್ವ ಸಾಮರ್ಥ್ಯದಿಂದ ಕೂಡಿಸುವುದೇ ವಿವಕ್ಷಿತವು. ಅಶನಾಪಿಪಾಸಗಳಿಗೆ ಅಭಿಮಾನಿಯಾದ ವಾಯುವೇ ಭೋಕ್ತೃತ್ವಸಾಮರ್ಥ್ಯಕ್ಕೆ ಅಭಿಮಾನಿಯಾದವನು. (b) (ಅ. ೪. ಖಂ. ೩.) ಯಾವ ಪಕ್ಷದಲ್ಲಿ ನನ್ನನ್ನು ಹೊರತೇ ವಾಗಭಿಮಾನಿ ಮೊದಲಾದವರಿಗೆ ಮಾತನಾಡುವಿಕೆಯೇ ಮೊದಲಾದುವುಗಳ ಸಾಮರ್ಥ್ಯವು ಆಗುವುದೋ, ಹಾಗಾದರೆ ನನಗೆ ವಿಷ್ಣುತ್ವವು ಕೂಡಲಾರದು. ಆದುದರಿಂದ ನಾನು ವಿಷ್ಣುಶಬ್ದವಾಚ್ಯನು ಹೇಗೆ ಆದೇನು? ಎಂದು ಆಕ್ಷೇಪವು. (c) ವಿಶೇಷಾಕಾರವಾಗಿ ಸರ್ವರನ್ನು ಬದುಕಿಸುತ್ತಾನೆ. ಎಲ್ಲರಿಂದಲೂ ಹೆಚ್ಚು ಸಾಮರ್ಥ್ಯವಿರುವವನು. ಆ ಕಾರಣ ವಿಷ್ಣುವೆನ್ನಿಸಿಕೊಳ್ಳುತ್ತಾನೆ. ಣಕಾರವು ಬಲರೂಪವು, ಷಕಾರವು ಚೆನ್ನಾಗಿ ಚೇಷ್ಟಕನು ಸ್ವಾಮಿಯು, 'ಎಂದು ವ್ಯಾಖ್ಯಾನದಿಂದ, (d) ಆದುದರಿಂದ ಈ ದೇವತೆಗಳು ನನ್ನಿಂದ ಪ್ರೇರಿಸಲ್ಪಟ್ಟವರಾಗಿಯೇ ವಾಗ್ವ್ಯವಹಾರ ಮೊದಲಾದುವುಗಳಲ್ಲಿ ಸಮರ್ಥರಾಗಿರುತ್ತಾರೆ. ಎಂದಭಿಪ್ರಾಯವು.

ಭಾ॥ (a) ಪೂರ್ಣಾನಂದಸ್ವರೂಪತ್ವಾನ್ನಂದನೋ ಭಗವಾನ್ । (b) ಪ್ರಾದುರ್ಭಾವರೂಪೇಣ ಜಾತೋಽಪಿ ಭಗವಾನ್ಸರ್ವಭೂತಾನ್ಯಭಿತಃ ಸರ್ವಕಾಲೇಷು ವಿಶೇಷೇಣ ಪಶ್ಯತ್ಯೇವ ॥ (c) ಇಹ ಭೂತೇಷು ಮತ್ತೋಽನ್ಯಂ ಪ್ರವರ್ತಕಂ ವದೇತ್ಕಿಮಿತ್ಯಾಕ್ಷೇಪಃ । (d) ಅಹಮೇವ ಸ್ವತಂತ್ರಃ ಪರಿಪೂರ್ಣಗುಣ ಇತಿ ಕೃಷ್ಣರಾಘವಾದಿ ಸರ್ವಾವತಾರರೂಪೋಽಪಿ ಸರ್ವದಾಽನುಭವತ್ಯೇವ ॥

ಅ ॥ (a) (ಅ. ೪. ಖಂ. ೩. ನಂದನ ಶಬ್ದಾರ್ಥವನ್ನು ಹೇಳುತ್ತಾರೆ.) ಪರಿಪೂರ್ಣವಾದ ಆನಂದ ಸ್ವರೂಪವುಳ್ಳವನಾದುದರಿಂದ ಶ್ರೀ ಹರಿಯು ನಂದನನೆನ್ನಿಸಿಕೊಳ್ಳುತ್ತಾನೆ. (b) ('ಸ ಜಾತೋ ಭೂತಾನ್ಯಭಿವ್ಯೈಖ್ಯತ್' ಎಂಬುವುದರ ಅರ್ಥವನ್ನು ಹೇಳುತ್ತಾರೆ.) ಶ್ರೀ ಹರಿಯು ಮತ್ಸ್ಯಾದಿ ಪ್ರಾದುರ್ಭಾವ ರೂಪದಿಂದ ಅವತರಿಸಿದಾಗ್ಯೂ ಎಲ್ಲಾ ಪ್ರಾಣಿಗಳನ್ನು 'ಅಭಿತಃ' ಅಂದರೆ ಎಲ್ಲಾ ಕಾಲಗಳಲ್ಲಿಯೂ ವಿಶೇಷಾಕಾರವಾಗಿ ನೋಡುತ್ತಾನೆಯೇ ಸರಿ. (c)

('ಕಿಮಿಹಾನ್ಯಂ' ಎಂಬುವುದರ ಅರ್ಥವು) ಈ ಜಗತ್ತಿನಲ್ಲಿ ಪ್ರಾಣಿಗಳಲ್ಲಿ ನನ್ನಿಂದ ಇತರನನ್ನು ಚೇಷ್ಟೆಯನ್ನು ಕೊಡುವವನನ್ನಾಗಿ (ವಿದ್ವಜ್ಜನರು) ಹೇಳುತ್ತಾರೋ ಏನು? ಎಂದು ಆಕ್ಷೇಪವು. ಹೇಳುವುದೇ ಇಲ್ಲವು. (d) ('ಸ ಏತಮೇವ ಪುರುಷಂ ಬ್ರಹ್ಮ ತತಮಮಪಶ್ಯತ್' ಎಂಬುವುದರ ಅರ್ಥವು.) ನಾನೇ ಸ್ವತಂತ್ರನು, ಪರಿಪೂರ್ಣವಾದ ಗುಣಗಳುಳ್ಳವನು ಎಂದು ಕೃಷ್ಣ ರಾಮ ಮೊದಲಾದ ಎಲ್ಲಾ ಅವತಾರರೂಪವೂ ಕೂಡ ಯಾವಾಗಲೂ ಅನುಭವಿಸಿಕೊಂಡೇ ಇದೆ.

ಭಾ॥ (a) ನಾಯಂ ದಶರಥಾಜ್ಜಾತೋ ನ ಚಾಪಿ ವಸುದೇವತಃ । ಕ್ವಾಸ್ಯಾಜ್ಞಾನಂ ಕುತೋ ದುಃಖಂ ಪ್ರಾದುರ್ಭಾವೇಷ್ವಪಿ ಪ್ರಭೋಃ॥ (b) ಪ್ರಾದುರ್ಭೂತಶ್ಚಿದಾನಂದಶರೀರೋ ರಾಘವಃ ಸ್ವಯಂ। ಸ್ತಂಭಾದ್ವಾ ನರದೇಹಾದ್ವಾ ನೈವಾಸ್ಯ ಪ್ರಾಕೃತೀ ತನುಃ ॥ (c) ದೈತ್ಯಾನಾಂ ಮೋಹನಾರ್ಥಾಯ ಸೋಽಜ್ಞಾನಾದ್ಯಂ ಪ್ರಕಾಶಯೇತ್ । ಪೂರ್ಣಚಿತ್ಸುಖರೂಪೋಽಪಿ ಸದಾ ಸರ್ವಾವತಾರಗಃ ॥ ಇತ್ಯಾದಿ ಸ್ಕಾಂದೇ ॥

ಅ ॥ (a) ಈ ಹರಿಯು ದಶರಥನಿಂದಲೂ ಹುಟ್ಟಲಿಲ್ಲ. ವಸುದೇವನಿಂದಲೂ ಹುಟ್ಟಲಿಲ್ಲ, ಪ್ರಭುವಾದ ಶ್ರೀ ಹರಿಗೆ ಅಜ್ಞಾನವು ಎಲ್ಲಿ ದುಃಖವು ಯಾವ ಕಾರಣದಿಂದ? (b) ರಾಮನು ತಾನೇ ಸ್ತಂಭದಿಂದ (ನರಸಿಂಹನಂತೆಯೇ) ಚಿದಾನಂದಾತ್ಮಕ ಶರೀರವುಳ್ಳವನಾಗಿ ಪ್ರಾದುರ್ಭೂತನಾದನು. ಮನುಷ್ಯರ ಶರೀರದಿಂದಲೂ ಋಷ್ಯಾದಿಗಳ ಶರೀರದಿಂದಲೂ ಸ್ತಂಭದಿಂದ ನರಸಿಂಹನಂತೆಯೇ ಪ್ರಾದುರ್ಭೂತನಾಗುವನು. ಶ್ರೀ ಹರಿಗೆ ಪ್ರಾಕೃತವಾದ ಶರೀರವು ಇಲ್ಲವೇ ಇಲ್ಲ. (c) ಯಾವಾಗಲೂ ಎಲ್ಲಾ ಅವತಾರಗಳನ್ನು ಹೊಂದುವವನೂ, ಪರಿಪೂರ್ಣವಾದ ಜ್ಞಾನಾನಂದಾತ್ಮಕ ಸ್ವರೂಪವುಳ್ಳವನಾದಾಗ್ಯೂ ಆ ಹರಿಯು ದೈತ್ಯರಿಗೆ ಮೋಹವನ್ನು ಹುಟ್ಟಿಸುವುದಕ್ಕೋಸ್ಕರ ಅಜ್ಞಾನ ಮೊದಲಾದುದನ್ನು ತೋರಿಸುವನು. ಇದೇ ಮೊದಲಾದ ವಿಷಯವು ಸ್ಕಾಂದಪುರಾಣದಲ್ಲಿ ಇದೆ.

ಭಾ॥ (a) ಏತಮೇವ ಪುರುಷಂ ವ್ಯಾಸ ಕೃಷ್ಣ ಕಪಿಲ ರಾಘವಾದಿರೂಪಂ ತತಮಮಪಶ್ಯತ್ । ತತಮಂ ತತತಮಂ ಪರಿಪೂರ್ಣತಮಂ ಬ್ರಹ್ಮಾಪಶ್ಯತ್ ॥ ಇದಂ ಮೇ ಸ್ವರೂಪಮದರ್ಶಮೇವಾಹಮಿತಿ । (b) ರಂಗಸ್ತ್ವವಧಾರಣೇ ॥ ರಂಗೋಽವಧಾರಣೇ ಚೈವ ಸಂವಾದೇ ಚ ಪ್ರಯುಜ್ಯತೇ । ಇತಿ ಪದವಿವೇಕೇ ॥ (c) ಅಪಶ್ಯದಿತ್ಯತ್ರ ನಾತೀತಕಾಲತ್ವಂ ವಿವಕ್ಷಿತಂ । ಅಭಿವ್ಯಕ್ತ್ಯದಿತ್ಯಭಿಶಬ್ದಸ್ಯಾನುಷಂಗಾತ್ ॥ (d) ಅಪಶ್ಯತ್ಪಶ್ಯತೀತಿ ಚೈಕಕಾಲಸಂಬಂಧಂ ವಿನಾ ವಕ್ತುಮಶಕ್ಯತ್ವಾತ್ತಥಾ ಪ್ರಯೋಗಃ ॥

ಅ ॥ (a) ಪುರುಷಶಬ್ದವಾಚ್ಯನಾದ ಶ್ರೀ ಹರಿಯನ್ನೇ ವ್ಯಾಸ, ಕೃಷ್ಣ, ಕಪಿಲ, ರಾಮ ಮೊದಲಾದ ರೂಪವುಳ್ಳವನನ್ನಾಗಿಯೂ ವ್ಯಾಪ್ತನನ್ನಾಗಿಯೂ ತಿಳಕೊಂಡನು. 'ತತಮಂ' ಅಂದರೆ ಅತ್ಯಂತವ್ಯಾಪ್ತನಾದ ಅಂದರೆ ಅತಿಶಯವಾಗಿ ಗುಣಪರಿಪೂರ್ಣನಾದ ಪರಬ್ರಹ್ಮನನ್ನು, ನೋಡಿದನು. ಈ ನನ್ನ ಸ್ವರೂಪವನ್ನು ನಾನು (ಗುಣಪರಿಪೂರ್ಣನಾಗಿದ್ದೇನೆ ಇತ್ಯಾದಿರೀತಿಯಿಂದ) ನೋಡಿಕೊಂಡೇ ಇದ್ದೇನೆ ಎಂದು. (b) ('ಅದರ್ಶಮಿತೀ೯೩' ಎಂಬುವಲ್ಲಿದ್ದ) ರಂಗವಾದರೂ ನಿಶ್ಚಯವೆಂಬ ಅರ್ಥದಲ್ಲಿದೆ. ರಂಗವು ಅವಧಾರಣಾರ್ಥದಲ್ಲಿಯೂ ಸಂವಾದ (ಸ್ವವಿಷಯವೇ ವಿಷಯವಾಗಿವುಳ್ಳ ಪ್ರಮಾಣಾಂತರವು) ರೂಪಾರ್ಥದಲ್ಲಿಯೂ ಪ್ರಯೋಗಿಸಲ್ಪಡುತ್ತದ. ಎಂದು

ಪದವಿವೇಕ ವೆಂಬುವಗ್ರಂಥದಲ್ಲಿ ಇದೆ. (c) 'ಅಪಶ್ಯತ್' ಎಂಬುವಲ್ಲಿ (ಅತೀತಾರ್ಥಕವಾದ ಲಙ್ ಪ್ರಯೋಗವಿದ್ದರೂ) ಭೂತಕಾಲತ್ವವು ವಿವಕ್ಷಿತವಲ್ಲವು. 'ಅಭಿವ್ಯೈಖ್ಯತ್' ಎಂಬುವಲ್ಲಿದ್ದ ಅಭಿಶಬ್ದವನ್ನು ಅನುಸಂಗಮಾಡಿಕೊಳ್ಳುವುದರಿಂದ, (ಅಂತೂ 'ಅಭಿ ಅಪಶ್ಯತ್' ಸುತ್ತಮುತ್ತಲೂ ಯಾವಾಗಲೂ ಅರ್ಥಗಳನ್ನು ನೋಡಿದನು. ಸಾರ್ವಕಾಲಿಕವೇ ಆಯಿತು.) (d) 'ಅಪಶ್ಯತ್' ಎಂದೂ 'ಪಶ್ಯತಿ' ಎಂದೂ ಏಕಕಾಲ ಸಂಬಂಧವನ್ನು ಹೊರತು ಹೇಳಲಿಕ್ಕೆ ಅಸಾಧ್ಯವಾದುದರಿಂದಲೇ ಆ ರೀತಿಯಾಗಿ ವ್ಯವಹಾರವು.

ಭಾ॥ (a) ಪ್ರಯೋಗ ಏಕಕಾಲೀನಃ ಸರ್ವಕಾಲೇಽನುಷಜ್ಯತೇ । ದದರ್ಶ ವಿಷ್ಣು ರಿತ್ಯಾದೌ ನಿತ್ಯಚಿದ್ರೂಪತೋ ಹರೇಃ ॥ ಇತ್ಯಾದಿ ಸತ್ತತ್ವೇ ॥ (b) ಪರೋಕ್ಷಪ್ರಿಯಾ ಇವೇತ್ಯಸುರಾಣಾಂ ಸಮ್ಯಗ್ದರ್ಶನೇನ ಪತನಂ ದೇವಾನಾಂ ಪ್ರಿಯಂ ತಥಾಽಪ್ಯಪರೋಕ್ಷದರ್ಶಿನ್ಯೇವ ಪ್ರೀತಿಂ ಕುರ್ವಂತೀತೀವ ಶಬ್ದಃ ॥ ೩ ॥

ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತೇ
ಶ್ರೀಮನ್ಮಹೈತರೇಯೋಪನಿಷದ್ಭಾಷ್ಯೇ ದ್ವಿತೀಯ ಪ್ರಪಾಟ್ಕೇ
॥ ಚತುರ್ಥೋಽಧ್ಯಾಯಃ ॥ ೨ ॥ ೪ ॥

ಅ ॥ (a) ಶ್ರೀ ಹರಿಯು ನಿತ್ಯದಲ್ಲಿಯೂ ಜ್ಞಾನಾನಂದ ಸ್ವರೂಪವುಳ್ಳವನಾದುದರಿಂದ ಶ್ರೀ ವಿಷ್ಣುವು ನೋಡಿದನು ಇದು ಮೊದಲಾದ ಪ್ರದೇಶದಲ್ಲಿ ಒಂದೇ ಕಾಲವನ್ನು ವಿಷಯೀಕರಿಸಿದ ಲಕಾರ ಪ್ರಯೋಗವು ಎಲ್ಲಾ ಕಾಲಗಳಲ್ಲಿಯೂ ಅನುಸಂಗಮಾಡಲ್ಪಡುತ್ತದೆ. (ಅಂದರೆ ಸಾರ್ವಕಾಲಿಕವಾದ ದರ್ಶನ ಮೊದಲಾದುದನ್ನು ಪ್ರತಿಪಾದಿಸುತ್ತದೆ.) (b) ಪರೋಕ್ಷಪ್ರಿಯಾ ಇವ ದೈತ್ಯರಿಗೆ ಚೆನ್ನಾಗಿ ಜ್ಞಾನವಿಲ್ಲದಿರುವುದರಿಂದ (ಅಂಧಂತಮಸ್ಸಿನಲ್ಲಿ) ಪತನವೇ ದೇವತೆಗಳಿಗೆ ಪ್ರಿಯವಾದುದು. ಆದರೂ ಪ್ರತ್ಯಕ್ಷವಾಗಿ ಯಥಾರ್ಥಜ್ಞಾನವುಳ್ಳವನಲ್ಲಿಯೇ ಪ್ರೀತಿಯನ್ನು ಮಾಡುತ್ತಾರೆ. ಈ ಅಭಿಪ್ರಾಯದಿಂದ ಇವ ಶಬ್ದವು. ॥ ೩ ॥

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ನಿರ್ಮಿಸಲ್ಪಟ್ಟ
ಶ್ರೀಮನ್ಮಹೈತರೇಯೋಪನಿಷದ್ಭಾಷ್ಯದಲ್ಲಿ ಎರಡನೇ ಪ್ರಪಾಟ್ಕದಲ್ಲಿ
ನಾಲ್ಕನೇ ಅಧ್ಯಾಯವು ಸಮಾಪ್ತವಾಯಿತು.

ಸಮಸ್ತಗುಣಪೂರ್ಣೇನ ಶ್ರೀಪ್ರಾಣಪತಿನೇರಿತಃ ।
ಸುದರ್ಶಯ ಚಮಹಂ ತೇನ ಪ್ರೀಣಾತು ಪುರುಷೋತ್ತಮಃ ॥

ರೇತಸಾ ವನಿತಾಗರ್ಭೇ ಶಿಶುನಾ ಗರ್ಭತೋ ಬಹಿಃ ।
ತತ್ಪಿತ್ರಾ ಸಹ ಚಾನ್ಯತ್ರ ಯ ಉದ್ಯೈತ್ಸೋಽವತಾದ್ಧರಿಃ ॥

ಮಂ ॥ ಹರಿಃ ಓಂ ॥ (ಅಪಕ್ರಾಮಂತು ಗರ್ಭಿಣ್ಯಃ) (ಗರ್ಭಿಣಿಯರು ಹೊರಡಲಿ) ಪುರುಷೇ ಹ ವಾ ಅಯಮಾದಿತೋ ಗರ್ಭೋ ಭವತಿ ಯದೇತದ್ರೇತ ಸ್ತದೇತತ್ಸರ್ವೇಭ್ಯೋಽಂಗೇಭ್ಯಸ್ತೇಜಸ್ಸಂಭೂತಮಾತ್ಮನ್ಯೇವಾತ್ಮಾನಂ ಬಿಭರ್ತಿ ತದ್ಯದಾ ಸ್ತ್ರಿಯಾಂ ಸಿಂಚತ್ಯಥೈನಜ್ಜನಯತಿ ತದಸ್ಯ ಪ್ರಥಮಂ ಜನ್ಮ ತತ್ಸ್ತ್ರಿಯಾ ಆತ್ಮಭೂಯಂ ಗಚ್ಛತಿ ಯಥಾ ಸ್ವಮಂಗಂ ತಥಾ ತಸ್ಮಾದೇನಾಂ ನ ಹಿನಸ್ತಿ ಸಾಽಸ್ಯೈತಮಾತ್ಮಾನಮತ್ರಗತಂ ಭಾವಯತಿ ಸಾ ಭಾವಯಿತ್ರೀ ಭಾವಯಿತವ್ಯಾ ಭವತಿ ತಂ ಸ್ತ್ರೀಗರ್ಭಂ ಬಿಭರ್ತಿ ಸೋಽಗ್ರ ಏವ ಕುಮಾರಂ ಜನ್ಮನೋಽಗ್ರೇಽಧಿಭಾವಯತಿ ಸ ಯತ್ಕುಮಾರಂ ಜನ್ಮನೋಽಗ್ರೇಽಧಿಭಾವಯತ್ಯಾತ್ಮಾನಮೇವ ತದ್ಭಾವಯತ್ಯೇಷಾಂ ಲೋಕಾನಾಂ ಸಂತತ್ಯಾ ಏವಂ ಸಂತತಾ ಹೀಮೇ ಲೋಕಾಸ್ತದಸ್ಯ ದ್ವಿತೀಯಂ ಜನ್ಮ ಸೋಽಸ್ಯಾಯಮಾತ್ಮಾ ಪುಣ್ಯೇಭ್ಯಃ ಕರ್ಮಭ್ಯಃ ಪ್ರತಿಧೀಯತೇಽಥಾಸ್ಯಾಯಮಿತರ ಆತ್ಮಾ ಕೃತಕೃತ್ಯೋ ವಯೋಗತಃ ಪ್ರೈತಿ ಸ ಇತಃ ಪ್ರಯನ್ನೇವ ಪುನರ್ಜಾಯತೇ ತದಸ್ಯ ತೃತೀಯಂ ಜನ್ಮ ತದುಕ್ತಮೃಷಿಣಾ ಗರ್ಭೇ ನು ಸನ್ನನ್ವೇಷಾಮವೇದಮಹಂ ದೇವಾನಾಂ ಜನಿಮಾನಿ ವಿಶ್ವಾ ॥ ಶತಂ ಮಾ ಪುರ ಆಯಸೀ ರರಕ್ಷನ್ನಧಃಶ್ಯೇನೋ ಜವಸಾ ನಿರದೀಯಮಿತಿ ಗರ್ಭ ಏವೈತಚ್ಛಯಾನೋ ವಾಮದೇವ ಏವಮುವಾಚ ಸ ಏವಂ ವಿದ್ವಾನಸ್ಮಾಚ್ಛರೀರಭೇದಾದೂರ್ಧ್ವ ಉತ್ಕ್ರಮ್ಯಾಮುಷ್ಮಿನ್ ಸ್ವರ್ಗೇ ಲೋಕೇ ಸರ್ವಾನ್ ಕಾಮಾನಾಪ್ತ್ವಾಽಮೃತಃ ಸಮಭವತ್ಸಮಭವತ್ ॥ ೧ ॥ (ಯಥಾಸ್ಥಾನಂ ಗರ್ಭಿಣ್ಯಃ)

ಇತ್ಯೈತರೇಯೋಪನಿಷತ್ಸು ದ್ವಿತೀಯಾರಣ್ಯಕೇ
ಪಂಚಮೋಽಧ್ಯಾಯಃ ॥ ೨ ॥ ೫ ॥

ಅ ॥ ಅಯಂ=ಈ ನಾರಾಯಣನು, ಆದಿತಃ=ಪ್ರಥಮದಲ್ಲಿ, ಪುರುಷೇ=ಪುರುಷನಲ್ಲಿ, ಗರ್ಭಃ=ಅನ್ನದಲ್ಲಿದ್ದವನಾಗಿ, ಭವತಿ=ಆಗುತ್ತಾನೆ. (ಅಂದರೆ ಪುರುಷನು ಅನ್ನವನ್ನು ಭೋಗಿಸುತ್ತಿರಲು ಅನ್ನದಿಂದ ಸಹಿತನಾಗಿಯೇ ಪುರುಷನನ್ನು ಪ್ರವೇಶಿಸುತ್ತಾನೆ.) (ಭುಕ್ತವಾದ ಅನ್ನವು ಪರಿಣತವಾಗುತ್ತಿರಲು) ಯತ್ ಏತತ್ ರೇತಃ=ಯಾವ ಈ ರೇತಸ್ಸು (ಹುಟ್ಟುತ್ತದೋ,) ತತ್ ಏತತ್=ಆ ಈ ರೇತಸ್ಸು, ಸರ್ವೇಭ್ಯಃ ಅಂಗೇಭ್ಯಃ=ಪುರುಷನ ಎಲ್ಲಾ ಅಂಗಗಳಿಂದಲೂ, ಸಂಭೂತಂ=ಉತ್ಪನ್ನವಾದುದು. ತೇಜಃ=ಸಾರರೂಪವಾದುದು. (ಹಾಗೆಯೇ), ತದ್ರೇತಃ=ಆ ರೇತಸ್ಸಿನಲ್ಲಿರತಕ್ಕ, ಯತ್ ಏತತ್ ರೇತಃ=ಯಾವ ಈ ರೇತೋನಾಮಕ ಭಗವದ್ರೂಪವೋ, ತದೇತ್=ಆ ಇದು, ಸರ್ವೇಭ್ಯಃ ಅಂಗೇಭ್ಯಃ=ಪುರುಷನ ಸರ್ವಾಂಗಗಳಿಂದಲೂ, ಸಂಭೂತಂ=ಆವಿರ್ಭೂತವಾದ, ತೇಜ ಏವ=ತೇಜಸ್ಸೇ, ಆತ್ಮಾನಂ=(ಆ ಈ ರೇತಸ್ಸಿನಲ್ಲಿರತಕ್ಕ) ಸ್ವರೂಪ

ವನ್ನು, (ಆ ಪುರುಷನಲ್ಲಿರತಕ್ಕ ಶ್ರೀ ಹರಿಯು) ಆತ್ಮನ್ಯೇವ=ಪುರುಷನಲ್ಲಿರತಕ್ಕ ತನ್ನಲ್ಲಿಯೇ, ಬಿಭರ್ತಿ=ಧರಿಸುತ್ತಾನೆ. ತತ್=ಆ ರೇತಸ್ಸಿನಲ್ಲಿರತಕ್ಕ ರೂಪವನ್ನು, (ರೇತಸ್ಸಿನಿಂದೊಡಗೂಡಿ) ಸ್ತ್ರಿಯಾಂ=ಸ್ತ್ರೀಯಲ್ಲಿ, ಯದಾ=ಯಾವಾಗ, (ಪುರುಷನಲ್ಲಿರತಕ್ಕ ಶ್ರೀಹರಿಯು ತಾನಾಗಿಯೇ,) ಸಿಂಚತಿ=ಸೇಕವಮಾಡುತ್ತಾನೋ, ಅಥ=ಆಗ, ಏನತ್=ಈ ರೇತಸ್ಸಿನಲ್ಲಿರತಕ್ಕ ರೂಪವನ್ನು, ಜನಯತಿ=(ಮಾತೃಶರೀರದಲ್ಲಿ) ಪ್ರಾದುರ್ಭವಿಸಿ ಕೊಡುತ್ತಾನೆ. ತತ್=ಸ್ಥಾನಾಂತರವನ್ನು ಹೊಂದುವುದೇ, ಅಸ್ಯ=ಪುರುಷನ ರೇತಸ್ಸಿನಲ್ಲಿರತಕ್ಕವನಿಗೆ, ಪ್ರಥಮಂ ಜನ್ಮ=ಪ್ರಥಮೋತ್ಪತ್ತಿಯು. ತತ್=ಆ ರೇತಸ್ಸಿನಲ್ಲಿರತಕ್ಕ ಭಗವದ್ರೂಪವು, ಯೋನಿಯನ್ನು ಪ್ರವೇಶಿಸಿದ ಪುರುಷನ ರೇತಸ್ಸು, ಸ್ತ್ರಿಯಾ=ಸ್ತ್ರೀಯಿಂದ, ಯಥಾ=ಹೇಗೆ, ಸ್ವಂ ಅಂಗಂ=ಸ್ವಕೀಯವಾದ ಅಂಗವೋ, ತಥಾ=ಹಾಗೆಯೇ. ಆತ್ಮಭೂಯಂ=(ಸ್ತ್ರೀಲೋಹಿತದಲ್ಲಿರತಕ್ಕ ತನ್ನ ಸ್ವರೂಪದಿಂದ) ಸಂಬಂಧವಿಶೇಷವನ್ನು. ಸ್ತ್ರೀಯ ಆತ್ಮಭಾವವನು, ಗಚ್ಛತಿ=ಹೊಂದುತ್ತಾನೆ. ತಸ್ಮಾತ್=ಆದುದರಿಂದ, (ಅಂದರೆ ರೇತಸ್ಸನ್ನು ಧರಿಸಿದ ಮೇಲೆ ತನ್ನ ಸ್ವರ್ಗಮೊದಲಾದ ಪುರುಷಾರ್ಥಕ್ಕೆ ಕಾರಣೀಭೂತವಾದ ಪುತ್ರೋತ್ಪತ್ತಿಗೆ ಕಾರಣೀಭೂತಗಳಾದುದರಿಂದ) ಏನಾಂ=ಹೆಂಡತಿಯನ್ನು, ನ ಹಿನಸ್ತಿ=(ಗಂಡನು,) ತಾಡನ ಮೊದಲಾದುದನ್ನು ಮಾಡಬಾರದು. ಸಾ=ಆ ಸ್ತ್ರೀಯು, ಅಸ್ಯ=ಈ ಗಂಡನ ಸಕಾಶದಿಂದ (ಹೊಂದಿದ,) ಅತ್ರಗತಂ=ತನ ಗರ್ಭದಲ್ಲಿರತಕ್ಕ, ಏತಂ ಆತ್ಮಾನಂ=ಈ ಪುತ್ರನನ್ನು, ಭಾವಯತಿ=ಸಂಭಾವಿಸತಕ್ಕದು. (ಹೀಗೆ ಮಾಡಿದರೆ) ಅಸ್ಯ=ಗಂಡನ ಸಂಬಂಧಿಯುವಳು. ಅತ್ರ=ತನ ಗರ್ಭದಲ್ಲಿರತಕ್ಕ ಮಗನಲ್ಲಿ, ಗತಂ=ಇರತಕ್ಕ, ಏತಂ ಆತ್ಮಾನಂ=ಈ ಪರಮಾತ್ಮನನ್ನೇ, ಸಾ=ಅವಳು, ಭಾವಯತಿ=ಪೂಜಿಸುತ್ತಾಳೆ. ಸಾ ಭಾವಯಿತ್ರೀ=ಪುತ್ರನನ್ನು ಪುತ್ರನಲ್ಲಿರತಕ್ಕ ಹರಿಯನ್ನೂ ಕೂಡ ಪೂಜಿಸುವ, ಸ್ತ್ರೀ=ಸ್ತ್ರೀಯು, ಭಾವಯಿತವ್ಯಾ=(ಗಂಡನಿಂದ) ಸಂಭಾವಿಸಿಕೊಳ್ಳಲಿಕ್ಕೆ ಯೋಗ್ಯಳು, ಭವತಿ=ಆಗುತ್ತಾಳೆ. ಗರ್ಭಂ=ಗರ್ಭದಲ್ಲಿರತಕ್ಕ, ತಂ=ಆ ಹರಿಯನ್ನು, ಬಿಭರ್ತಿ=ಧರಿಸುತ್ತಾಳೆ. (ಆದುದರಿಂದಲೂ ಸಂಭಾವನಾರ್ಹಳು.) ಸ್ತ್ರೀ ಗರ್ಭಂ=ಸ್ತ್ರೀಯ ಗರ್ಭವನ್ನು, ಬಿಭರ್ತಿ=(ಯಾವಾತನು) ಧರಿಸುತ್ತಾನೋ, ಸಃ=ಆ ಹರಿಯು, ಅಗ್ರ ಏವ=ಎಲ್ಲಾ ಗುಣಗಳಿಂದಲೂ ಶ್ರೇಷ್ಠನೇ ಸರಿ. ಕುಮಾರಂ=ಗರ್ಭದಲ್ಲಿರತಕ್ಕ ಮಗನನ್ನು, ಜನ್ಮನಃ ಅಗ್ರೇ=ಹುಟ್ಟುವುದಕ್ಕಿಂತ ಮುಂಚೆ, (ತಂದೆಯು) ಅಧಿಭಾವಯತಿ=ಆದರ ಪೂರ್ವಕವಾಗಿ ಪೂಜಿಸುತ್ತಾನೆ. ಸಃ=ಆ ತಂದೆಯು, ಕುಮಾರಂ=ಮಗನನ್ನು, ಜನ್ಮನೋಽಗ್ರೇ=ಹುಟ್ಟುವುದಕ್ಕಿಂತ ಪೂರ್ವದಲ್ಲಿ, ಅಧಿಭಾವಯತಿ ಇತಿಯತ್=ಪೂಜಿಸುತ್ತಾನೆ ಎಂಬುವುದು ಯಾವದೋ, ತತ್=ಅದು, ಆತ್ಮಾನಮೇವ=ಮಗನಲ್ಲಿರತಕ್ಕ ಪರಮಾತ್ಮನನ್ನೇ, ಭಾವಯತಿ=ಪೂಜಿಸುತ್ತಾನೆ. (ಪುತ್ರನ ಪೂಜೆಯೂ ಕೂಡ ಪುತ್ರನಲ್ಲಿರತಕ್ಕ ವಿಷ್ಣುವನ್ನು ಪೂಜಿಸುತ್ತೇನೆ ಎಂಬೀ ಬುದ್ಧಿಯಿಂದ ಮಾಡಲ್ಪಟ್ಟರೆ, ಶ್ರೀ ವಿಷ್ಣುವಿನ ಪೂಜೆಯೇ ಆಗುವುದು.) (ಪುತ್ರನಲ್ಲಿರತಕ್ಕ ವಿಷ್ಣುಪೂಜೆಯೂ) ಏತೇಷಾಂ ಲೋಕಾನಾಂ=ಈ ಪೃಥಿವೀಲೋಕಗಳ, ಸಂತತ್ಯೈ=ವ್ಯಾಪ್ತಿಗೋಸ್ಕರ, (ಯಾವಾಗಲೂ ಪ್ರಾಪ್ತಿಗೋಸ್ಕರ ಆಗುತ್ತದೆ.) (ಹೀಗೆ ಪೂಜಿಸುವವನು ಮೃತನಾಗಿ ಸ್ವರ್ಗವನ್ನು ಹೊಂದಿದರೂ ಎಲ್ಲಾ ಪುತ್ರರಲ್ಲಿ ಇದ್ದ ಪುಣ್ಯವನ್ನು ಹೊಂದುವವನಾದುದರಿಂದ, ಭೂಮಿಯಲ್ಲಿಯೇ ಜೀವಿಸುತ್ತಾ ಸಾಧನಗಳನ್ನು ಮಾಡುವವನಂತೆ ಇದ್ದಾನೆಂದು ತಿಳಿಯತಕ್ಕದು) ಏನಂ=ಈ ಪ್ರಕಾರ, (ಅಂದರೆ ಮಗನಲ್ಲಿದ್ದ ವಿಷ್ಣುವಿಗೇನೇ ಪೂಜೆಮಾಡುವುದು ಎಂಬೀ ಬುದ್ಧಿಯಿಂದ ಮಗನಿಗೆ ಪೂಜೆಮಾಡಿದರೆ) ಇಮೇ ಲೋಕಾಃ=ಭೂಮಿಯ ಪ್ರದೇಶವಿಶೇಷಗಳು, (ಈ ಪುರುಷನಿಂದ) ಸಂತತಾ ಹಿ=ವ್ಯಾಪ್ತಗಳೇವೇ (ಯಾವಾಗಲೂ ಪ್ರಾಪಿಸಲ್ಪಟ್ಟವುಗಳೇ ಆಗುತ್ತವೆ.) ಅಸ್ಯ=ಪರಮಾತ್ಮನಿಗೆ,

ತತ್=ತಾಯಿಯ ಶರೀರದಿಂದ ಭೂಮಿಯಲ್ಲಿ ಪುತ್ರನಲ್ಲಿರುವ ರೂಪದಿಂದ ಪ್ರಾದುರ್ಭಾವವೇ, ದ್ವಿತೀಯಂ ಜನ್ಮ=ಎರಡನೇ ಜನ್ಮವು. ಅಸ್ಯ=ಈ ಪರಮಾತ್ಮನಿಂದ, ಸೋಽಯಮಾತ್ಮಾ=ಆ ಈ ಪುತ್ರನಲ್ಲಿರತಕ್ಕ ರೂಪವಿಶೇಷವು, ಅಸ್ಯ=ಈ ಪಿತೃಜೀವನ, (ಪ್ರಯೋಜನಕ್ಕಾಗಿ), ಪುಣ್ಯೇಭ್ಯಃ ಕರ್ಮಭ್ಯಃ=ಪುಣ್ಯಕರ್ಮಗಳ ಸಿದ್ಧಿಗಾಗಿ, ಪ್ರತಿಧೀಯತೇ=(ಭೂಮಿಯಲ್ಲಿ ಕೆಲವು ಕಾಲ ಪರ್ಯಂತ) ವಿಧಿಸಲ್ಪಡುತ್ತದೆ. ಅಥ=ಆ ಮೇಲೆ, ಅಸ್ಯ=ಈ ಪರಮಾತ್ಮನ, ಇತರಃ=ಪುತ್ರ ನಾಮಕ ರೂಪದಿಂದ ಬೇರೆಯಾದ, ವಯೋಗತಃ=ಹೆಚ್ಚು ವಯಸ್ಸನ್ನು ಹೊಂದಿದ ಪಿತ್ರಂತ ರ್ಗತವಾದ, ಅಯಂ ಆತ್ಮಾ=ಈ ಪಿತೃನಾಮಕರೂಪವಿಶೇಷವು, ಕೃತಕೃತ್ಯಃ=ನಿಷ್ಪಾದಿಸಲ್ಪಟ್ಟ ವಿಹಿತ ಕರ್ಮವುಳ್ಳದ್ದಾಗಿ, (ಪಿತೃಜೀವನಲ್ಲಿರತಕ್ಕ ಕೃತಕೃತ್ಯತ್ವಾದಿಗಳಿಗೆ ನಿಯಾಮಕವಾಗಿ ಪ್ರೈತಿ=(ಪಿತೃಜೀವನ ಶರೀರವನ್ನು ಬಿಟ್ಟು, ಅವನಿಂದೊಡಗೂಡಿಯೇ) ಲೋಕಾಂತರವನ್ನು ಹೊಂದುತ್ತದೆ. ಸಃ=ಆ ಪರಮಾತ್ಮನು, ಇತಃ=ಭೂಲೋಕದಿಂದ, ಪ್ರಯನ್ನೇವ=(ಬೇರೆ ಕಡೆಗೆ) ಹೋಗುವವನಾಗಿಯೇ, ಪುನಃ=ಮತ್ತು, ಜಾಯತೇ=(ಪಿತೃಜೀವನಿಂದೊಡಗೂಡಿಯೇ ಬೇರೆ ಕಡೆಯಲ್ಲಿ) ಹುಟ್ಟುತ್ತಾನೆ. ತತ್=ಅದು, (ಪಿತೃಜೀವನಿಗೆ ಬೇರೆ ಕಡೆ ಉತ್ಪತ್ತಿಯೇ), ಅಸ್ಯ=ತದಂತರ್ಗತವಾದ ಭಗವದ್ರೂಪಕ್ಕೆ, ತೃತೀಯಂ ಜನ್ಮ=ಮೂರನೇ ಜನ್ಮವು. ತತ್=ಜೀವನು ಹುಟ್ಟುವಾಗ ತದಂತರ್ಗತನಾದ ಶ್ರೀ ಹರಿಯೂ ಹುಟುತ್ತಾನೆ ಎಂಬುವುದು, ಋಷಿಣಾ=ಮಂತ್ರದೃಷ್ಟನಾದ ಹಯಗ್ರೀವ ರೂಪಿಯಾದ ಶ್ರೀ ಹರಿಯಿಂದ, ಉಕ್ತಂ=ಮಂತ್ರ ದಲ್ಲಿ ಪ್ರತಿಪಾದಿಸಲ್ಪಟ್ಟಿದೆ. ಗರ್ಭೇ ನು=ಗರ್ಭದಲ್ಲಿಯೇ, ಸನ್=ಇರತಕ್ಕ, ಅಹಂ=ನಾನು, ಏಷಾಂ ದೇವಾನಾಂ=ಈ ವಿಷ್ಣ್ವಾದಿ ದೇವತೆಗಳ ವಿಶ್ವಾ=ಸಮಸ್ತಗಳಾದ, ಜನಿಮಾನಿ=ಜನ್ಮಗಳನು, ಅಹಂ=ದುಃಖಮೊದಲಾದ ಹೇಯವಿಲ್ಲದಿರುವವನಾಗಿಯೇ, ಅನ್ವವೇದಂ=ತಿಳಿದಿದ್ದೆನು. ಪುರಃ=ಪೂರ್ಣಗಳಾದ, ಆಯಸೀಃ=ವಿಶೇಷಾಕಾರವಾಗಿ ಜ್ಞಾನಿಗಳಾದ, ಶತಂ=(೧೦೦) ಶತಸಂಖ್ಯಾಕರಾದ ಆ ವಿಷ್ಣ್ವಾದಿ ದೇವತೆಗಳು, ಮಾ=ನನ್ನನ್ನು, ಅರಕ್ಷನ್=ರಕ್ಷಿಸಿ ದರು. ಅಧಃ=ದೇವತೆಗಳಿಂದ ರಕ್ಷಿಸಲ್ಪಟ್ಟ ಪ್ರಯುಕ್ತವೇ, ಅಹಂ=ನಾನು, ಶ್ಯೇನಃ=ಆನಂದ ಜ್ಞಾನ ಮೊದಲಾದ ಗುಣಗಳಿಂದ ಪೂರ್ಣನಾದ ವಿಷ್ಣುವೇ ಸ್ವಾಮಿಯಾಗಿ ಉಳ್ಳವನಾಗಿ, (ಅಂದರೆ ವಿಷ್ಣುವನ್ನು ಸ್ವಾಮಿಯನ್ನಾಗಿ ತಿಳಿದು) ಜವಸಾ=ವೇಗದಿಂದ, ನಿರದೀಯಂ=ತಾಯಿಯ ಹೊಟ್ಟೆಯಿಂದ ಹೊರಟು ಗರ್ಭವನ್ನು ದಾಟಿದವನಾಗಿದ್ದೇನೆ. ಇತಿ=ಹೀಗೆ, (ಉಕ್ತ ವಾಗಿದೆ.) ಗರ್ಭ ಏವ=ಗರ್ಭದಲ್ಲಿಯೇ, ಶಯಾನಃ=ಮಲಗಿದ್ದ, ವಾಮದೇವಃ=ವಾಮದೇವ ನಾಮಕ ಋಷಿಯು, ಏತತ್=ಇದನ್ನು, ಏವಂ=ಈ ಪ್ರಕಾರ, ಉವಾಚ=ಹೇಳಿದನು. ಏವಂ=ಈ ಪ್ರಕಾರ, ವಿದ್ವಾನ್=ತಿಳಿದ, ಸಃ=ಅಧಿಕಾರಿಯು, ಅಸ್ಮಾತ್=ಈ, ಶರೀರಭೇದಾತ್=ಶರೀರ ವಿಶೇಷವಾದ ಚರಮ ದೇಹದಿಂದ, ಊರ್ಧ್ವ ಉತ್ಕ್ರಮ್ಯ=ಬ್ರಹ್ಮನಾಡಿಯಿಂದ ಹೊರಟು ಹೋಗಿ, ಅಮುಷ್ಮಿನ್ ಸ್ವರ್ಗೇ ಲೋಕೇ=ಆನಂದರೂಪ ವಿಷ್ಣುಸ್ಥಾನಭೂತವಾದ ವೈಕುಂಠಾದಿ ಗಳಲ್ಲಿ, ಅಮೃತಃ=ಮುಕ್ತನಾಗಿ, ಸರ್ವಾನ್ ಕಾಮಾನ್=ತನಗೆ ಯೋಗ್ಯಗಳಾದ ಎಲ್ಲಾ ಅಭೀ ಷ್ಟಗಳನ್ನು, ಆಪ್ತ್ವಾ=ಸ್ವೀಕರಿಸಿ, ಸಮಭವತ್=ನಿತ್ಯದಲ್ಲಿಯೂ ಅನುಭವಿಸುತ್ತಾನೆ. ಸಮಭ ವತ್=ಅನುಭವಿಸುತ್ತಾನೆ. ॥ ೧ ॥ (ಯಥಾಸ್ಥಾನಂ ಗರ್ಭಿಣ್ಯಃ)=ಗರ್ಭಿಣಿಯರು ತಮ್ಮ ಸ್ಥಾನಕ್ಕೆ ಬರಬಹುದು). (ಈ ಮಂತ್ರವನ್ನು ಉಚ್ಚರಿಸುವಾಗ ಗರ್ಭಿಣಿಯರು ಹತ್ತಿರ ಇರಬಾ ರದು ಎಂದು ತಿಳಿಸಲ್ಪಟ್ಟಿದೆ).

**ಈ ಪ್ರಕಾರ ಐತರೇಯೋಪನಿಷತ್ತುಗಳಲ್ಲಿ ಎರಡನೇ ಆರಣ್ಯಕದಲ್ಲಿ ಐದನೆಯ ಅಧ್ಯಾಯವು ಸಮಾಪ್ತವಾಯಿತು.**

ಭಾ॥ (a) ಓಂ ॥ ಅಯಂ ನಾರಾಯಣೋ ದೇವಃ ಪುರುಷೇ ಪ್ರಥಮಂ ವಿಶೇತ್ ।
ಅನ್ನಸ್ಥೋಽನ್ನೇನ ಸಹಿತಃ (b) ತಸ್ಮಿನ್ರೇತಸ್ತ್ವಮಾಗತೇ ॥ ತಸ್ಮಿನ್ ಸ್ಥಿತಂ ಸ್ವರೂಪಂ ಸ ಪುರುಷಸ್ಥೋ ಬಿಭರ್ತ್ಯಜಃ । (c) ತದ್ರೂಪಂ ರೇತಸಾ ಸಾಕಂ ಸ್ವಯಂ ಪುಂಸಿ ಸ್ಥಿತೋ ಹರಿಃ ॥ ಸ್ತ್ರಿಯಾಂ ಸಿಂಚತಿ ತಸ್ಯೈವ ಸ್ಥಾನಾಂತರಗತೇಃ ಪ್ರಭೋಃ । ಪ್ರಥಮಂ ಜನ್ಮ ವಿಷ್ಣೋಸ್ತು ॥

ಅ ॥ (a) ಈ ಕ್ರೀಡಾದಿಗುಣವಿಶಿಷ್ಟನಾದ ನಾರಾಯಣನು, ಪ್ರಥಮದಲ್ಲಿ ಪುರುಷನಲ್ಲಿ ಅನ್ನದಲ್ಲಿದ್ದವನಾಗಿ ಅನ್ನದಿಂದೊಡಗೂಡಿಯೇ ( ಪುರುಷನನ್ನು ) ಪ್ರವೇಶ ಮಾಡುತ್ತಾನೆ. (b) ಆ ಭುಕ್ತನಾದ ಅನ್ನವು (ಪರಿಣತವಾಗಿ) ರೇತಸ್ತ್ವವನ್ನು ಹೊಂದುತ್ತಿರಲು, ಆ ರೇತಸ್ಸಿನಲ್ಲಿ ರತಕ್ಕ ರೇತೋನಾಮಕ ತನ್ನ ಸ್ವರೂಪವನ್ನು ಉತ್ಪತ್ತಿಯಿಲ್ಲದಿರುವ ಆ ಪುರುಷನಲ್ಲಿರತಕ್ಕ ಆ ಹರಿಯೇ ಧರಿಸುತ್ತಾನೆ. (c) ಆ ರೇತಸ್ಸಿನಲ್ಲಿರತಕ್ಕ ರೂಪವನ್ನು ರೇತಸ್ಸಿನಿಂದೊಡಗೂಡಿಯೇ ಸ್ತ್ರೀಯಲ್ಲಿ, ಪುರುಷನಲ್ಲಿರತಕ್ಕ ಶ್ರೀ ಹರಿಯು ತಾನಾಗಿಯೇ ಸೇಚಿಸುತ್ತಾನೆ. ಪ್ರಭುವಾದ, ಪುರುಷನ ರೇತಸ್ಸಿನಲ್ಲಿರತಕ್ಕ, ಆ ವಿಷ್ಣುವಿಗಾದರೂ ಬೇರೆ ಸ್ಥಾನವನ್ನು ಹೊಂದಿರುವುದರಿಂದ ಇದೇ ಪ್ರಥಮೋತ್ಪತ್ತಿಯು.

ಭಾ॥ (a) ಸ ತಸ್ಯಾ ಅಂಗವತ್ಪ್ರಭುಃ । ನೈನಾಂ ಹಿನಸ್ತ್ಯಾನುಕೂಲ್ಯಾತ್ (b) ಸಾ ಪುತ್ರಂ ಭಾವಯತ್ಯಥ ॥ ಪುತ್ರಸ್ಯ ಭಾವನಾ ಸೈವ ತದ್ಗತ್ವಾದ್ಧರಿಭಾವನಾ । ಸಂಭಾವಿತವ್ಯಾ ಸಾ ಚೈವ ಭರ್ತ್ರಾ ಪುತ್ರಶ್ಚ ಸಾದರಂ ॥ (c) ಸಂಭಾವನಂ ಕುಮಾರಸ್ಯ ಜಾನತಃ ಕೇಶವೇ ಭವೇತ್ । ತಸ್ಯೇತ್ಯರ್ಪಣಮಾತ್ರೇಣ ಪೂಜಿತೋ ಹಿ ಭವೇದ್ಧರಿಃ ॥ (d) ಪುತ್ರಸ್ಥಸ್ಯ ಹರೇಃ ಪೂಜಾಂ ಕುರ್ವತಃ ಪೃಥಿವೀಸ್ಥಿತಿಃ । ಸ್ವರ್ಗಸ್ಥಸ್ಯಾಪಿ ಭವತಿ ಪುತ್ರಪುಣ್ಯಂ ಯತೋಽಖಿಲಂ ॥

ಅ॥ (a) ಆ ಪ್ರಭುವಾದ ಪತ್ಯಂತರ್ಗತನಾದ ಶ್ರೀ ಹರಿಯು, ಆ ಸ್ತ್ರೀಯಲ್ಲಿ ಅಂತರ್ಗತವಾದ ರೂಪಕ್ಕೆ, ಅಂಗದಂತೆ ಅನುಕೂಲನಾದುದರಿಂದ ಈ ಭಾರ್ಯಾಂತರ್ಗತ ರೂಪವನ್ನು ತಾಡನಾದಿಗಳನ್ನು ಮಾಡುವುದಿಲ್ಲ. (b) ಸ್ತ್ರೀಯು ಪುತ್ರನನ್ನು ಪುತ್ರಾಂತರ್ಗತನಾದ ಶ್ರೀ ಹರಿಯನ್ನು ಪೂಜಿಸುತ್ತಾಳೆ. ಮಗನ ಪೂಜೆಯೂ ಕೂಡ ಪುತ್ರನಲ್ಲಿ (ಶ್ರೀ ಹರಿಯು) ಅಂತರ್ಗತನಾಗಿದ್ದುದರಿಂದ, ವಿಷ್ಣುಪೂಜೆಯೇ ಆಗುವುದು. ಆಕೆಯು ಗಂಡನಿಂದ ಪೂಜಿಸಿಕೊಳ್ಳಲಿಕ್ಕೆ ಯೋಗ್ಯಳು, ಪುತ್ರನೂ ಕೂಡ ಆದರಪೂರ್ವಕವಾಗಿ ಪೂಜಾರ್ಹನು. (c) ಪುತ್ರನ ಪೂಜೆಯು (ಮಗನಲ್ಲಿರತಕ್ಕ ವಿಷ್ಣುವನ್ನು ಪೂಜಿಸುತ್ತೇನೆ ಎಂದು) ತಿಳಿದವನಿಗೆ ವಿಷ್ಣುವಿನಲ್ಲಿಯೇ ಆಗುವುದು. (ಹೇಗೆ ಪ್ರತಿಮಾಭಿಷೇಕ ಅಲಂಕಾರಾದಿ ಪೂಜೆಯು) ತದಂತರ್ಗತನಾದ ಶ್ರೀ ಹರಿಗೆ ಎಂದು ಕೇವಲ ಅರ್ಪಣದಿಂದ ಶ್ರೀ ಹರಿಯು ಪೂಜಿಸಲ್ಪಡುವನೋ, (ಹಾಗೆಯೇ ಇಲ್ಲಿಯೂ ಕೂಡ) (d) ಪೂರ್ವದಲ್ಲಿ ಮಗನಲ್ಲಿರತಕ್ಕ ಶ್ರೀ ಹರಿಗೆ ಪೂಜೆಯನ್ನು ಮಾಡಿದವನಿಗೆ (ಅವಾಂತರ ಫಲವಾಗಿ) ಸ್ವರ್ಗದಲ್ಲಿದ್ದವನಿಗೂ ಕೂಡ (ಜನ್ಮಾಂತರವಿಲ್ಲದೇನೇ) ಪೃಥಿವಿಯಲ್ಲಿ ಸ್ಥಿತಿಯು ಆಗುವುದು. ಹೇಗೆಂದರೆ ಪುತ್ರನ ಪುಣ್ಯವೆಲ್ಲವೂ (ಸ್ವರ್ಗದಲ್ಲಿದ್ದವನಿಗೆ ಆಗುವುದು.)

ಭಾ॥ (a) ಅತ್ಯಲ್ಪಪುಣ್ಯಭಾಕ್ಸಸ್ಯಾನ್ನಾರ್ಚಯೇತ್ಕೇಶವಂ ಯದಿ । ಪೃಥಿವ್ಯಾಂ ಜನ್ಮ ಪುತ್ರಸ್ಯ ದ್ವಿತೀಯಂ ವಿಷ್ಣು ಜನ್ಮ ಹಿ ॥ (b) ಏತದ್ರೂಪಂ ನಿಧಾಯೈವ ಜೀವಾರ್ಥೇ ಧರ್ಮಕರ್ತವೇ । ಪಿತೃಸ್ಥೇನ ತು ರೂಪೇಣ ಗಚ್ಛತ್ಯನ್ಯತ್ರ ಕೇಶವಃ ॥ (c) ಪಿತುರನ್ಯತ್ರ ಜನನಂ ತೃತೀಯಂ ಜನ್ಮ ತದ್ಧರೇಃ । ಅಂತರ್ಯಾಮಿತಯೈವಂ ಹಿ ಸರ್ವಜೀವೇಷು ಸಂಸ್ಥಿತಂ ॥ (d) ಸರ್ವದೋಷೋಜ್ಝಿತಂ ವಿಷ್ಣುಂ ಕರ್ತಾರಂ ಸರ್ವಕರ್ಮಣಾಂ । ನಿತ್ಯಾನಂದಂ ಸ್ವತಂತ್ರಂ ಚ ಸರ್ವಜ್ಞಂ ಸರ್ವತೋಽಧಿಕಂ ॥ ಯೋ ವೇದ (e) ದೇಹಬಂಧಾತ್ಸ ವಿಮುಕ್ತೋ ನಿತ್ಯಮುತ್ತಮಾನ್ । ಭೋಗಾನ್ಭುಂಕ್ತೇ ಯಥಾ ಯೋಗ್ಯಮಿತಿ ವೇದಾನುಶಾಸನಂ ॥ ಇತ್ಯೈತರೇಯಸಂಹಿತಾಯಾಂ ॥

ಅ ॥ (a) (ಹಿಂದೆ ಹೇಳಿದ ಪ್ರಕಾರ ಜ್ಞಾನಪೂರ್ವಕವಾಗಿ) ಪುತ್ರಾಂತರ್ಗತನಾದ ಕೇಶವನನ್ನು ಪೂಜಿಸದಿದ್ದರೆ ಅತ್ಯಲ್ಪವಾದಪುಣ್ಯ (ಅ ನೇ ೧ ಅಂಶ)ವನ್ನು ಹೊಂದುವವನು ಆ ತಂದೆಯು ಆಗುವನು. (ಹಿಂದೆ ಹೇಳಿದ ಪ್ರಕಾರ) ಶ್ರೀ ಹರಿಯನ್ನು ಪೂಜಿಸಿದವನಿಗೆ ಆದರೂ ಪುತ್ರನ ಪುಣ್ಯವೆಲ್ಲವೂ ಆಗುವುದು. ಭೂಮಿಯಲ್ಲಿ ಪುತ್ರನಿಗೆ ಯಾವುದೊಂದು ಉತ್ಪತ್ತಿಯೋ, ಅದು ವಿಷ್ಣುವಿಗೆ ಎರಡನೇ ಜನ್ಮವು; ಪ್ರಸಿದ್ಧವು. (b) ಪಿತೃಜೀವನಿಗೋಸ್ಕರ ಪುಣ್ಯಕರ್ಮಗಳನ್ನು ಮಾಡುವುದಕ್ಕಾಗಿ, ಪುತ್ರಜೀವನಿಗೋಸ್ಕರ ಧರ್ಮಗಳನ್ನು ಮಾಡುವುದಕ್ಕಾಗಿ, ಪುತ್ರನಲ್ಲಿರತಕ್ಕ ರೂಪವನ್ನು (ಭೂಮಿಯಲ್ಲಿ) ಇರಿಸಿಯೇ ಶ್ರೀ ಹರಿಯು ಪಿತೃಜೀವನಲ್ಲಿರತಕ್ಕ ರೂಪವಿಶೇಷದಿಂದ (ಕೂಡಿಕೊಂಡು) ಲೋಕಾಂತರಕ್ಕೆ ಹೋಗುತ್ತಾನೆ. (c) ಪಿತೃಜೀವನಿಗೆ ಬೇರೆಕಡೆ (ಯಾವಾಗ) ಉತ್ಪತ್ತಿಯೋ, ಆಗ (ಆ ಶರೀರದಲ್ಲಿ ಆ ಜೀವನಿಂದೊಡಗೂಡಿ) ಪ್ರಾದುರ್ಭಾವವೇ ಶ್ರೀ ಹರಿಗೆ ಮೂರನೇ ಜನ್ಮವು. ಈ ಪ್ರಕಾರವಾಗಿ ಎಲ್ಲಾ ಜೀವರಲ್ಲಿಯೂ ಅಂತರ್ಯಾಮಿಯಾಗಿ ಇರತಕ್ಕವನೂ, (d) ಎಲ್ಲಾ ದೋಷಗಳಿಂದ ವಿರಹಿತನೂ ಆದ ಶ್ರೀ ಹರಿಯನ್ನು ಎಲ್ಲಾ ಪುಣ್ಯಕರ್ಮಗಳನ್ನು ಮಾಡತಕ್ಕವನನ್ನಾಗಿಯೂ, ನಿತ್ಯಾನಂದ ಸ್ವರೂಪನನ್ನಾಗಿಯೂ, ಸ್ವತಂತ್ರನನ್ನಾಗಿಯೂ, ಸರ್ವಜ್ಞನನ್ನಾಗಿಯೂ, ಲಕ್ಷ್ಮಿ ಚತುರ್ಮುಖ ಮೊದಲಾದ ಎಲ್ಲರಿಂದಲೂ ಉತ್ತಮನನ್ನಾಗಿಯೂ, ಯಾವಾತನು ತಿಳಿಯುತ್ತಾನೋ, (e) ಆತನು ಶರೀರವೆಂಬುವ ಬಂಧನದಿಂದ ಮುಕ್ತನಾಗಿ ನಿತ್ಯದಲ್ಲಿಯೂ ಅತ್ಯುತ್ತಮಗಳಾದ ಭೋಗಗಳನ್ನು ಯಥಾಯೋಗ್ಯವಾಗಿ ಅನುಭವಿಸುತ್ತಾನೆ. ಈ ಪ್ರಕಾರವಾಗಿ ಎಲ್ಲಾ ವೇದಗಳ ಆಜ್ಞೆಯು. ಹೀಗೆ ಐತರೇಯ ಸಂಹಿತೆಯಲ್ಲಿ ಅದೆ.

ಭಾ॥ (a) ನಾತ್ರ ಜೀವೋತ್ಪತ್ತಿಮಾತ್ರಮುಚ್ಯತೇ । ನ ಹಿ ಜೀವೋತ್ಪತ್ತಿಮಾತ್ರಪರಿಜ್ಞಾನಾದಮೃತತ್ವಂ ಭವತಿ ॥ ಜ್ಞಾತಮೇವ ಸರ್ವೈಃ ಪಿತಾಪುತ್ರಸಂಬಂಧಮಾತ್ರಂ ಪಶ್ವಾದಿಭಿರಪಿ । (b) ಗರ್ಭೇ ನು ಸನ್ನನ್ವೇಷಾಮವೇದಮಹಂ ದೇವಾನಾಂ ಜನಿಮಾನಿ ವಿಶ್ವೇತ್ಯುಕ್ತಾರ್ಥ ಉದಾಹೃತಮಂತ್ರೇ ದೇವಜನ್ಮ ಕಥನಾಚ್ಚ ॥ ವಿಷ್ಣುರ್ಹಿ ಪರಮೋ ದೇವಃ । (c) ತೇನೈವ ಸಹ ಸರ್ವೇಽಪಿ ದೇವಾ ಜೀವದೇಹಜನನೇ ಜಾಯಂತ ಇವ ॥ ಶರೀರಪ್ರಾಪ್ತಿರೇವ ಹಿ ಜನ್ಮಾನ್ಯೇಷಾಮಪಿ । ಅಯಮೇವ ವಿಶೇಷೋ ದೇವಾನಾಂ ದುಃಖಾಭೋಗಃ ॥ ಸ್ವಾತಂತ್ರ್ಯಂ ಚ ವಿಷ್ಣೋಃ ॥

ಅ ॥ (a) ಇಲ್ಲಿ (ಪರರಿಂದ ಹೇಳಲ್ಪಟ್ಟಂತೆ) ಕೇವಲ ಜೀವನಿಗೆ ಉತ್ಪತ್ತಿಯು ಹೇಳಲ್ಪಡುವುದಿಲ್ಲ. ಕೇವಲ ಜೀವನು ಹುಟ್ಟಿದನು ಎಂಬೀ ಜ್ಞಾನದಿಂದ ಮುಕ್ತಿಯು ಆಗುವುದಿಲ್ಲ. ಪಶುವೊದಲಾದ ಎಲ್ಲಾ ಜೀವರಿಂದಲೂ ಕೇವಲವಾಗಿ ತಂದೆ ಮಕ್ಕಳ ಸಂಬಂಧವು ತಿಳಿಯಲ್ಪಟ್ಟದೇ ಸರಿ (b) 'ಗರ್ಭೇ ನು ಸನ್......' ಹೇಳಲ್ಪಟ್ಟ ಅರ್ಥವುಳ್ಳ ಹೇಳಿದ ಮಂತ್ರದಲ್ಲಿ ವಿಷ್ಣ್ವಾದಿ ದೇವತೆಗಳಿಗೆ ಉತ್ಪತ್ತಿಯನ್ನು ಹೇಳಿರುವುದರಿಂದಲೂ, ಶ್ರೀ ಹರಿಯೇ ಸರ್ವೋತ್ತಮನಾದ ದೇವತೆಯು. (c) ಆ ವಿಷ್ಣುವಿನಿಂದಲೇ ಕೂಡಿಕೊಂಡು ಎಲ್ಲಾ ದೇವತೆಗಳೂ ಜೀವನಿಗೆ ದೇಹವು ಹುಟ್ಟುತ್ತಿರಲು ಹುಟ್ಟುತ್ತಾರಂತೆ. ಜೀವರಿಗೂ ಕೂಡ ಉತ್ಪತ್ತಿಯೆಂದರೆ ದೇಹಪ್ರಾಪ್ತಿಯೇ. ವಿಷ್ಣ್ವಾದಿ ದೇವತೆಗಳಿಗೆ ಈ ದುಃಖವನ್ನು ಭೋಗಿಸದೆ ಇರುವುದೇ ವಿಶೇಷವು. ಶ್ರೀ ಹರಿಗೆ ಸ್ವಾತಂತ್ರ್ಯವೂ ಕೂಡ ಅದೆ.

ಭಾ॥ **(a)** ಆತ್ಮನ್ಯೇವಾತ್ಮಾನಂ ಬಿಭರ್ತಿ ಆತ್ಮಾನಮೇವ ತದ್ಭಾವಯತೀತ್ಯಾದ್ಯಾತ್ಮಶಬ್ದಶ್ಚ ಮುಖ್ಯತೋ ವಿಷ್ಣಾವೇವ ಯುಜ್ಯತೇ । **(b)** ಣಕಾರೋ ಬಲಂ ಷಕಾರಃ ಪ್ರಾಣ ಆತ್ಮೇತಿ ವಿಷ್ಣುಶಬ್ದಾರ್ಥೈಕದೇಶವಾಚಿತ್ವಾಚ್ಚಾತ್ಮಶಬ್ದಸ್ಯ ॥ **(c)** ಏತಯಾ ದ್ವಾರಾ ಪ್ರಾಪದ್ಯತೇತಿ ತಸ್ಯೈವ ಶರೀರಪ್ರವೇಶಸ್ಯ ಪ್ರಸ್ತುತತ್ವಾಚ್ಚ । **(d)** ಜೀವಶರೀರಂ ಪರಿತ್ಯಜ್ಯಾನ್ಯತ್ರ ಗಮನಮಾತ್ರಂ ವಿಷ್ಣೋರಪ್ಯಸ್ತೀತಿ ಪ್ರೈತೀತ್ಯುಕ್ತೇಽಪ್ಯವಿರೋಧಃ ॥ ಕೃಷ್ಣರಾಘವಾದಿ ಸ್ವರೂಪಮೇವ ಹ್ಯಸೌ ನ ಪರಿತ್ಯಜತಿ ॥

ಅ ॥ (a) ತನ್ನ ಸ್ವರೂಪದಲ್ಲಿಯೇ ರೇತಸ್ಸಿನಲ್ಲಿರತಕ್ಕ ತನ್ನ ಸ್ವರೂಪವನ್ನು ಧರಿಸುತ್ತಾನೆ. ಪುತ್ರನಲ್ಲಿರತಕ್ಕ ಪರಮಾತ್ಮನನ್ನೇ ಪೂಜಿಸುತ್ತಾಳೆ. ಇದು ವೊದಲಾದ ಆತ್ಮಶಬ್ದವು ಮುಖ್ಯವಾಗಿ ವಿಷ್ಣುವಿನಲ್ಲಿಯೇ ಸಂಗತವಾಗುತ್ತದೆ. (b) 'ಣ' ಕಾರವು ಬಲರೂಪವು, 'ಷ' ಕಾರವು ಪ್ರಾಣರೂಪವು, (ಅಂದರೆ ಪ್ರೇರಕತ್ವಸ್ವರೂಪವು) ಮತ್ತು ಆತ್ಮ (ವ್ಯಾಪ್ತ)ಸ್ವರೂಪವು ಎಂದು ವಿಷ್ಣುಶಬ್ದಾರ್ಥದ ಏಕದೇಶವನ್ನು ಹೇಳುತ್ತದೆ. ಆದುದರಿಂದ (ಆಆತ್ಮಶಬ್ದವು) ವಿಷ್ಣುವಿನಲ್ಲಿಯೇ ಮುಖ್ಯವು. (c) 'ಏತಯಾ ದ್ವಾರಾ ಪ್ರಾಪದ್ಯತ' (ಅ. ೪. ಖಂ. ೩.) ಎಂಬುವುದರಿಂದ ಆ ವಿಷ್ಣುವಿಗೇನೇ ಶರೀರಪ್ರವೇಶವು ಪ್ರಸ್ತುತವಾದುದರಿಂದಲೂ (ಆತ್ಮಶಬ್ದವು ಭಗವತ್ಪರವೇ.) (d) ಜೀವನ ಈ ದೇಹವನ್ನು ಬಿಟ್ಟು ಕೇವಲ ಸ್ಥಾನಾಂತರಕ್ಕೆ ಪ್ರಯಾಣವು ವಿಷ್ಣುವಿಗೂ ಅದೆ. ಆದುದರಿಂದ 'ಪ್ರೈತಿ' ಎಂದು ಹೇಳಿದರೂ ವಿರೋಧವಿಲ್ಲವು. ಈ ಹರಿಯು ಕೃಷ್ಣರಾಘವ ವೊದಲಾದ ಸಂಜ್ಞೆಯುಳ್ಳ ದೇಹವನ್ನೇ ಬಿಡುವುದಿಲ್ಲ. ಶ್ರುತ್ಯಾದಿ ಪ್ರಸಿದ್ಧವು.

ಭಾ॥ **(a)** ಕೃಷ್ಣೋ ಹ್ಯತ್ಯಕ್ತದೇಹೋಽಪಿ ತ್ಯಕ್ತದೇಹವದೇವ ಚ । ಲೋಕಾನಾಂ ದರ್ಶಯಾಮಾಸ ಸ್ವರೂಪಸದೃಶಾಕೃತಿಂ ॥ **(b)** ಯೇನ ರೂಪೇಣ ಕಂಸಾದೀನ್ ಜಘ್ನೇ ತದ್ರೂಪಮೇವ ಹಿ । ಪೂಜ್ಯತೇಽದ್ಯಾಪಿ ಶರ್ವಾದ್ಯೈರ್ನಿರ್ಮಿತಾನ್ಯಾ ಶವಾಕೃತಿಃ ॥ **(c)** ಸ್ವರ್ಗಾರೋಹಣಕಾಲೇ ತು ಜನಾಸ್ತೇನೈವ ವೋಹಿತಾಃ । ಯತ್ತದ್ರೂಪಂ ನಿಜಂ ವಿಷ್ಣೋರ್ದೃಷ್ಟಂ ಸರ್ವಜನೈರ್ಭುವಿ ॥ ಅದ್ಯಾಪಿ ತದ್ದೇವಲೋಕೇ ಪೂಜ್ಯತೇ ಸರ್ವದೈವತೈಃ । ಇತ್ಯಾದಿ ಸ್ಕಾಂದೇ ॥

ಅ ॥ (a) ಶ್ರೀ ಕೃಷ್ಣನು ಬಿಡಲ್ಪಡದಿರುವ ಶರೀರವುಳ್ಳವನಾದಾಗ್ಯೂ (ಶರೀರವನ್ನು ಬಿಡದಿದ್ದವನಾದಾಗ್ಯೂ) ಬಿಡಲ್ಪಟ್ಟ ಶರೀರವುಳ್ಳವನಂತೆ (ಶರೀರವನ್ನು ಬಿಟ್ಟವನಂತೆ) ತನ್ನರೂಪಕ್ಕೆ ಸಮಾನವಾದ ಆಕಾರವನ್ನು ಜನರಿಗೆ ತೋರಿಸಿದನು.) (b) ಯಾವ ರೂಪದಿಂದ ಕಂಸ ಮೊದಲಾದವರನ್ನು ಸಂಹರಿಸಿದನೋ, ಆ ರೂಪವೇ ಈಗಲೂ ಕೂಡ ರುದ್ರಾದಿಗಳಿಂದ ಪೂಜಿಸಲ್ಪಡುತ್ತಿದೆ. ಬೇರೆ ಒಂದು ಶವದ ಆಕಾರವು ನಿರ್ಮಿಸಲ್ಪಟ್ಟಿತು. (c) ಆ ಆಕಾರದಿಂದಲೇ ಜನರು ಸ್ವರ್ಗಾರೋಹಣ ಸಮಯದಲ್ಲಾದರೂ ಮೋಹಿಸಲ್ಪಟ್ಟರು. ಶ್ರೀ ವಿಷ್ಣುವಿನ ನಿಜವಾದ ಯಾವ ಆ ಪ್ರಸಿದ್ಧರೂಪವು ಭೂಮಿಯಲ್ಲಿ ಎಲ್ಲಾ ಜನರಿಂದಲೂ ಕಾಣಲ್ಪಟ್ಟಿದೋ, ಆ ರೂಪವೇ ಈಗಲೂ ಕೂಡ ದೇವಲೋಕದಲ್ಲಿ ಎಲ್ಲಾ ದೇವತೆಗಳಿಂದಲೂ ಪೂಜಿಸಲ್ಪಡುತ್ತದೆ. ಇದೇ ಮೊದಲಾದುದು ಸ್ಕಾಂದಪುರಾಣದಲ್ಲಿದೆ.

ಭಾ॥ (a) ಪ್ರದರ್ಶ್ಯಾತಪ್ತತಪಸಾಮವಿತೃಪ್ತದೃಶಾಂ ನೃಣಾಂ । ಆದಾಯಾಂತರಧಾದ್ಯಸ್ತು ಸ್ವಬಿಂಬಂ ಲೋಕಲೋಚನಂ ॥ ಇತಿ ಚ ಭಾಗವತೇ ॥ (b) ಪ್ರೇತಾಂ ಯಜ್ಞಸ್ಯ ಶಂಭುರ್ವೇತ್ಯಾದಿವತ್ಪ್ರಕೃಷ್ಟಗತಿವಾಚ್ಯೇವಾಯಂ ಶಬ್ದಃ । ಪ್ರಕೃಷ್ಟಗತಿತ್ವಾದೇವ ಚ ಮರಣೇಽಪಿ ಪ್ರಯುಜ್ಯತೇ ॥ (c) ಏಷಾಮವೇದಮಹಮಿತ್ಯತ್ರಾಪಿ ಜೀವಭೇದ ಏವೋಕ್ತಃ । ಅನ್ಯಥಾ ಮಮ ಜನಿಮಾನೀತ್ಯೇವೋಚ್ಯೇತ ॥ ವ್ಯರ್ಥತಾ ಚೈಷಾಮಿತ್ಯಾದಿ ವಿಶೇಷಣಾನಾಂ । (d) ಅವೇದಮಿತ್ಯನೇನೈವ ಸ್ವಸ್ಯ ಸಿದ್ಧತ್ವಾದಹಮಿತ್ಯಪ್ಯಹೇಯತ್ವೇನೇತಿ ಕ್ರಿಯಾವಿಶೇಷಣಂ ॥ ಜನ್ಮ ಜಾನನ್ನಪಿ ದೇವಾನಾಂ ದುಃಖಾದಿಹೇಯರಹಿತತ್ವೇನ ವ್ಯಜಾನಾಮಿತ್ಯರ್ಥಃ । (e) ತಸ್ಮಾದಹಂ ಮನುರಿತ್ಯಾದಾವಪ್ಯಹೇಯಗುಣಂ ಭಗವಂತಮೇವಾಹಂಶಬ್ದೋವಕ್ತಿ॥ ಸರ್ವಾಂತ್ತರತ್ವಾತ್ತಸ್ಮಿನ್ನೇವಾಭವಮಿತ್ಯುತ್ತಮಪುರುಷಶಬ್ದೋಽಪಿ ಸರ್ವೋ ವರ್ತತೇ ॥

ಅ ॥ (a) ಸೌಂದರ್ಯಾತಿಶಯದಿಂದ ಎಲ್ಲರಿಂದಲೂ ನೋಡಲರ್ಹವಾದ ತನ್ನ ಶರೀರವನ್ನು ಮನುಷ್ಯರಿಗೆ ತೋರಿಸಿ, ಯಾವಾಗಲೂ ನೋಡಲಿಕ್ಕೆ ಸಾಧನೀಭೂತವಾದ ತಪಸ್ಸನ್ನು ಮಾಡದಿರುವ, ವಿಶೇಷತಃ ತೃಪ್ತಿಯನ್ನು ಹೊಂದದಿರುವ ಕಣ್ಣುಗಳುಳ್ಳ ಸಜ್ಜನರಿಗೆ, ಯಾವಾತನು ತನ್ನ ಮೂರ್ತಿಯನ್ನು ಹಿಡಿದುಕೊಂಡೇ ಅಂತರ್ಧಾನವನ್ನು ಹೊಂದಿದನೋ, (ಅದನ್ನು ಬಿಟ್ಟು ಹೋಗಲೇಇಲ್ಲವೋ) ಆತನು ಶ್ರೀ ಹರಿಯು ಎಂದೂ ಭಾಗವತದಲ್ಲಿದೆ. (b) 'ಪ್ರೇತಾಂ ಯಜ್ಞಸ್ಯ ಶಂಭುವಾ' ಇತ್ಯಾದಿಗಳಂತೆ ಈ 'ಪ್ರೈತಿ' ಎಂಬೀ ಶಬ್ದವು ಪ್ರಕೃಷ್ಟವಾದ ಗತಿರೂಪವಾದ ಅರ್ಥವನ್ನೇ ಹೇಳುತ್ತದೆ. (ಜೀವರ ದೇಹಗಳನ್ನು ಹೊಂದಿರುವ ವಿಷ್ಣ್ವಾದಿ ದೇವತೆಗಳಿಗೆ ದುಃಖವಿಲ್ಲದೇನೇ ಜೀವರ ದೇಹವನ್ನು ಬಿಟ್ಟು) ಉತ್ಕೃಷ್ಟ ಗತಿರೂಪವಾದುದರಿಂದಲೇ ಮರಣರೂಪವಾದ ಅರ್ಥದಲ್ಲಿಯೂ ಕೂಡ (ಈ 'ಪ್ರೈತಿ' ಎಂಬ ಶಬ್ದವು) ಪ್ರಯೋಗಿಸಲ್ಪಡುತ್ತದೆ. (c) 'ಏಷಾಮವೇದಮಹಂ' ಎಂಬುವಲ್ಲಿಯೂ ಜೀವೇಶ್ವರರ ಭೇದವೂ ಪರಸ್ಪರ ಜೀವಭೇದವೂ ಹೇಳಲ್ಪಟ್ಟಿದೆ. ಅಲ್ಲವಾದರೆ (ಅಂದರೆ ಅಭೇದವನ್ನು ವಿವಕ್ಷಿಸಿ, ತನಗೇನೇ ಅನೇಕ ಶರೀರಗಳನ್ನು ಪ್ರವೇಶಿಸಿ, ಉತ್ಪತ್ತಿಯನ್ನು ಅನುಭವಿಸುವಿಕೆಯು ಎಂದಭಿಪ್ರಾಯವಾಗಿದ್ದರೆ) 'ಮಮ ಜನಿಮಾನಿ' ಎಂದೇ ಅಶ್ರುತವಾದ ಪದವು ಕಲ್ಪಿಸಲ್ಪಡಬೇಕಾಗುವುದು. 'ಏಷಾಂ ದೇವಾನಾಂ ಅಹಂ' ಎಂಬೀ ವಿಶೇಷಗಳಿಗೆ ವೈಯರ್ಥ್ಯವೂ ಬರಬೇಕಾಗುವುದು. (d) 'ಅವೇದಂ'

ಎಂಬೀ ಉತ್ತಮ ಪುರುಷ ಪ್ರಯೋಗದಿಂದಲೇ ನಾನು ಸಿದ್ಧನಾದುದರಿಂದ 'ಅಹಂ' ಎಂಬು ವುದೂ ಕೂಡ ಹೇಯತ್ವವಿಲ್ಲದಿರೋಣದರಿಂದ ಎಂದು ಕ್ರಿಯಾ ವಿಶೇಷಣವು. ಉತ್ಪತ್ತಿಯನ್ನು ತಿಳಿದವನಾದಾಗ್ಯೂ ದೇವತೆಗಳಿಗೆ ದುಃಖ ಮೊದಲಾದ ಹೇಯಪದಾರ್ಥರಾಹಿತ್ಯದಿಂದ ತಿಳಿಯು ತ್ತೇನೆ ಎಂದರ್ಥವು. (e) ಆದುದರಿಂದ 'ಅಹಂ ಮನುಃ' ಇತ್ಯಾದಿ ಸ್ಥಳಗಳಲ್ಲಿಯೂ ಹೇಯ ವಲ್ಲದಿರುವ ಗುಣಗಳುಳ್ಳ ಶ್ರೀ ಪರಮಾತ್ಮನನ್ನೇ 'ಅಹಂ' ಶಬ್ದವು ಪ್ರತಿಪಾದಿಸುತ್ತದೆ. ಎಲ್ಲ ರಲ್ಲಿಯೂ ಅಂತರ್ಯಾಮಿಯಾದುದರಿಂದ ಆತನಲ್ಲಿಯೇ 'ಅಭವಂ' ಎಂಬೀ ಎಲ್ಲಾ ಉತ್ತಮ ಪುರುಷಶಬ್ದವೂ ಕೂಡ ಇರುತ್ತದೆ.

ಭಾ॥ (a) ಅಹೇಯತ್ವಾದಹಂ ವಿಷ್ಣುಃ ಸ ತು ಸರ್ವಾಂತರತ್ವತಃ । ಅಸ್ಮ್ಯಸ್ಮೀತ್ಯಾದಿಭಿಃ ಶಬ್ದೈರುಚ್ಯತೇಽನ್ಯೋಽಪಿ ಜೀವತಃ ॥ ಇತಿ ಬ್ರಹ್ಮವೈವರ್ತೇ ॥ (b) ನ ಚ ಮೂಢವ್ಯವಹಾರ ಏವ ವೇದನಿರ್ಣಯಾಯ ಭವತಿ । ಕಿಂ ತು ಸರ್ವೇಷಾಮನುಭವೋ ಯುಕ್ತಯಶ್ಚ ವಾಕ್ಯಾಂತರಂ ಚ ನಿರ್ಣಯ ಕಾರಣಂ ॥ (c) ತಸ್ಮಾತ್ಸರ್ವಜೀವಾದಿಭ್ಯೋಽನ್ಯಃ ಸರ್ವೋತ್ತಮೋ ವಿಷ್ಣುರೇವಾತ್ರೋಕ್ತಃ । (d) ನ ವೇದೇಷು ಪದಂ ಕಿಂಚಿದ್ವರ್ಣೋ ವಾ ವ್ಯರ್ಥ ಇಷ್ಯತೇ ॥ ಯಥಾಯೋಗ್ಯಂ ಚಾರ್ಥಭೇದ ಊಹ್ಯಃ ಸರ್ವತ್ರ ವೇದಿಭಿಃ । ಇತಿ ಶಬ್ದನಿರ್ಣಯೇ ॥

ಅ ॥ (a) ಶ್ರೀ ವಿಷ್ಣುವು ಅಹೇಯ ಗುಣಗಳುಳ್ಳವನಾದುದರಿಂದ 'ಅಹಂ' ಎನ್ನಿಸಿ ಕೊಳ್ಳುತ್ತಾನೆ. ಆತನೇ ಜೀವರಿಂದ ಭಿನ್ನನಾದಾಗ್ಯೂ ಪ್ರತಿಯೋಗಿಭೂತಗಳಾದ ಸರ್ವ ವಸ್ತು ಗಳಲ್ಲಿ ಅಂತರ್ಗತನಾದುದರಿಂದ 'ತತ್ವಮಸಿ' ಎಂದೂ ತನ್ನೊಳಗೂ ಇರುವುದರಿಂದ 'ಸೋಽಹ ಮಸ್ಮಿ' 'ಅಹಂ ಮನುರಭವಂ' ಎಂದೂ ಇದೇ ಮೊದಲಾದ ಶಬ್ದಗಳಿಂದ ಹೇಳಲ್ಪಡುತ್ತಾನೆ. ಎಂದು ಬ್ರಹ್ಮವೈವರ್ತದಲ್ಲಿ. (d) (ಲೋಕದಲ್ಲಿ 'ಅಹಮಸ್ಮಿ' ಮೊದಲಾದ ಶಬ್ದಗಳು ತನ್ನಲ್ಲಿಯೂ, 'ತತ್ವಮಸಿ' ಮೊದಲಾದ ಶಬ್ದಗಳು ಪ್ರತಿಯೋಗೀಭೂತರಾದ ಜೀವರಲ್ಲಿಯೂ ಪ್ರಯೋಗಿಸ ಲ್ಪಡುವುದರಿಂದ 'ಅಹಂ ಮನುರಭವಂ' ಇದು ಮೊದಲಾದ ಪ್ರದೇಶದಲ್ಲಿ ತನಗೆ ಮನ್ವಾದ್ಯ ಭೇದವೂ 'ತತ್ವಮಸಿ' ಇದು ಮೊದಲಾದ ಸ್ಥಳದಲ್ಲಿ ಜೀವನಿಗೆ ಬ್ರಹ್ಮಾಭೇದವೂ ನಿರ್ಣೀತ ವಾಗುತ್ತದೆ ಎಂದು ಹೇಳಕೂಡದು. ಏಕೆಂದರೆ-) ಅಜ್ಞರ ವ್ಯವಹಾರವೇ ವೇದಾರ್ಥವನ್ನು ನಿಶ್ಚೈಸಲಿಕ್ಕೆ ಆಗುವುದಿಲ್ಲ. ಮತ್ತು ಸರ್ವರ ವ್ಯವಹಾರವೂ, ಅನುಭವವೂ, ಯುಕ್ತಿಗಳೂ, ಬೇರೆ ವಾಕ್ಯವೂ ಕೂಡ ನಿಶ್ಚಯಹೇತುವು. (ನಿಶ್ಚಯವನ್ನು ಹುಟ್ಟಿಸುವವು.) (c) ಆದುದ ರಿಂದ (ಅಂದರೆ 'ಅಹಂ' ಮೊದಲಾದ ಶಬ್ದಗಳಿಗೆ ಶ್ರೀ ಹರಿಯಲ್ಲಿಯೇ ಮುಖ್ಯವಾಗಿ ಜ್ಞಾನಿ ಗಳಿಂದ ವ್ಯವಹರಿಸಲ್ಪಡುವುದರಿಂದಲೂ 'ನಾನು ಈಶ್ವರನಲ್ಲ' ಎಂಬೀ ಅನುಭವವೂ 'ವಿರುದ್ಧ ಧರ್ಮಾಶ್ರಯತ್ವ, ಮೊದಲಾದ ಯುಕ್ತಿಯೂ, 'ಅಹೇಯತ್ವಾದಹಂ ವಿಷ್ಣುಃ' ಇದು ಮೊದ ಲಾದ ನಿರ್ಣಾಯಕ ವಾಕ್ಯಾಂತರವೂ, ಇದ್ದುದರಿಂದ) ಎಲ್ಲಾ ಜೀವರೇ ಮೊದಲಾದ ಪ್ರಾಣಿ ಗಳಿಂದ ಭಿನ್ನನೂ, ಸರ್ವೋತ್ತಮನೂ ಆದ ವಿಷ್ಣುವೇ ಇಲ್ಲಿ ಹೇಳಲ್ಪಡುತ್ತಾನೆ. (d) ವೇದಾ ಭಿಜ್ಞರಿಂದ ವೇದಗಳಲ್ಲಿ ಯಾವುದೊಂದು ಪದವಾಗಲೀ, ಅಕ್ಷರವಾಗಲೀ ವ್ಯರ್ಥವೆಂದು ಇಚ್ಛಿಸ ಲ್ಪಡುವುದಿಲ್ಲ. ಎಲ್ಲಾ ಕಡೆಗಳಲ್ಲಿಯೂ ಯಥಾಯೋಗ್ಯವಾಗಿ ಬೇರೆ ಬೇರೆ ಅರ್ಥವು ಊಹಿಸಿ ಕೊಳ್ಳತಕ್ಕದು. (ಅನೇಕ ಪದಗಳಿಗೆ ವೈಯರ್ಥ್ಯವನ್ನು ಅಂಗೀಕರಿಸುವವನು ಶಾಸ್ತ್ರವಿಚಾರಕನೇ ಆಗಲಾರನು.) ಎಂದು ಶಬ್ದನಿರ್ಣಯದಲ್ಲಿದೆ.

ಭಾ॥ (a) ಶಬ್ದಾ ರೇತೋಽನ್ನಮಿತ್ಯಾದ್ಯಾ ಅಪಿ ತತ್ರ ಗತಂ ಹರಿಂ । ವದಂತ್ಯ ವಿಷ್ಣುವಾಚೀ ಹಿ ನ ಶಬ್ದಃ ಕ್ವಚಿದಿಷ್ಯತೇ ॥ ಇತಿ ಚ ॥ (b) ಭಾವಯತಿ ಸಂಭಾವಯತಿ । ಸೋಽಗ್ರ ಏವ ಸೋಽಗ್ರ್ಯೋ ವಿಷ್ಣುರೇವ ॥ ಪುತ್ರಸಂಭಾವನಮಪಿ ತತ್ರಸ್ಥಂ ವಿಷ್ಣುಂ ಸಂಭಾವಯಾಮೀತಿ ತತ್ತಸ್ಯೈವ ಭವತಿ । (c) ಏವಂ ಭಾವಯತಾಮೇವೈಷ ಪಂಥಾ ಉರುಗಾಯ ಇತ್ಯಾದ್ಯಪಿ ॥ ತಂ ಪಶ್ಯಂತಿ ಪಶವ ಇತ್ಯಾದ್ಯಪಿ ದಿವ್ಯಪಶ್ವಾದೀನಾಮೇವ । ಅನ್ಯೇಷಾಂ ಸ್ವಭಾವಪ್ರವೃತ್ತಿಃ ॥ (d) ತಾ ಏವ ದೇವತಾಃ ಶತಂ ಪುರ ಆಯುಸೀಽಜ್ಞಾನಿನ್ಯೋ ವಿಶೇಷತಃ । ಅಯ ಪಯ ಗತಾವಿತಿ ಧಾತೋಃ ॥ ಮಾನುಷಾನಪೇಕ್ಷ್ಯ ಪೂರ್ಣತ್ವಾತ್ಪುರಃ । ವಿಷ್ಣುರ್ಮುಖ್ಯತ ಏವ ಪೂರ್ಣಃ ॥

ಅ ॥ (a) 'ರೇತಃ ಅನ್ನಂ' ಇದು ಮೊದಲಾದ ಶಬ್ದಗಳೂ ಕೂಡ ಅವುಗಳಲ್ಲಿರತಕ್ಕ ಶ್ರೀ ಹರಿಯನ್ನೇ ಪ್ರತಿಪಾದಿಸುತ್ತವೆ. ವಿಷ್ಣುವನ್ನು ಪ್ರತಿಪಾದಿಸದಿರುವ ಶಬ್ದವು ಎಲ್ಲಿಯೂ ಇಚ್ಛಿಸಲ್ಪಡುವುದಿಲ್ಲ. ಎಂದೂ ಹೇಳಿಯದೆ. (b) ಭಾವಯತಿ=ಪೂಜಿಸುತ್ತಾಳೆ. ಸೋಽಗ್ರ ಏವ=ಆ ಶ್ರೇಷ್ಠನಾದವನು ವಿಷ್ಣುವೇ. ಮಕ್ಕಳನ್ನು ಪೂಜಿಸುವುದೂ ಕೂಡ ಮಕ್ಕಳಲ್ಲಿರತಕ್ಕ ವಿಷ್ಣುವನ್ನು ಪೂಜಿಸುತ್ತೇನೆ ಎಂದು (ಜ್ಞಾನವಿದ್ದರೆ) ಅದು ಆ ವಿಷ್ಣುವಿಗೇನೇ ಆಗುತ್ತದೆ. (c) ಈ ಪ್ರಕಾರವಾಗಿ (ಪುತ್ರರಲ್ಲಿರತಕ್ಕ ಶ್ರೀ ಹರಿಯನ್ನು) ಪೂಜಿಸುವವರಿಗೇನೇ 'ಏಷ ಪಂಥಾಃ ಉರುಗಾಯಃ' ಇದು ಮೊದಲಾದುದೂ ಕೂಡ ಅಂದರೆ 'ಏಷ ಪಂಥಾಃ' ಎಂಬುವಲ್ಲಿ ಹೇಳಿದ ಮುಕ್ತಿರೂಪ ಫಲವು. ಕೇವಲ ಪುತ್ರರನ್ನು ತಿಳಿದವರಿಗೆ ಅಲ್ಲ. 'ತಂ ಪಶ್ಯಂತಿ ಪಶವಃ' ಆ ಹರಿಯನ್ನು ಪಶುಗಳು ನೋಡುತ್ತವೆ. ಇದು ಮೊದಲಾದುದೂ ಕೂಡ (ಆದಿಪದದಿಂದ 'ತತ್ಸರ್ವೇ ಪಶವೋ ವಿದುಃ' ಎಂಬುವುದು) ಸ್ವರ್ಗದಲ್ಲಿರತಕ್ಕ ಪಶುಮೊದಲಾದವುಗಳಿಗೇನೇ ಭಗವದ್ದರ್ಶನವು.) ಬೇರೆ ಪಶುಮೊದಲಾದವುಗಳಿಗೆ ಸ್ವಭಾವದಿಂದಲೇ (ಮಾತ್ರಾದಿಗಳ ಅಧಿರೋಹಣಾದಿಗಳಲ್ಲಿ) ಪ್ರವೃತ್ತಿಯು. (d) ಶತಸಂಖ್ಯಾಕರಾದ ಆ ವಿಷ್ಣ್ವಾದಿ ದೇವತೆಗಳೇ, ಪುರಃ ಆಯಸೀಃ=ವಿಶೇಷಾಕಾರವಾಗಿ ಜ್ಞಾನವುಳ್ಳವರು. 'ಅಯ ಪಯ' ಎಂಬೀ ಧಾತುಗಳು, 'ಗತಿ' (ಜ್ಞಾನ) ಎಂಬ ಅರ್ಥದಲ್ಲಿ ಎಂದು ಧಾತುವ್ಯಾಖ್ಯಾನದಿಂದ. ಮನುಷ್ಯರನ್ನಪೇಕ್ಷಿಸಿ ಪೂರ್ಣಗಳಾದುದರಿಂದ 'ಪುರಃ' ಎನ್ನಿಸಿಕೊಳ್ಳುತ್ತವೆ. ವಿಷ್ಣುವು ಮುಖ್ಯವಾಗಿಯೇ ಪೂರ್ಣನಾಗಿರುತ್ತಾನೆ.

ಭಾ॥ (a) ನ ಚ ಶರೀರೈರ್ಜೀವೋ ರಕ್ಷಿತಃ । ಮುಖ್ಯೇ ಯುಜ್ಯಮಾನೇ ಚ ನಾಮುಖ್ಯಾರ್ಥಃ ಕಲ್ಪ್ಯಃ ॥ (b) ಶಮಸ್ಯ ವಿದ್ಯತ ಇತಿ ಶೀ ವಿಷ್ಣುಃ ಪೂರ್ಣಾನಂದತ್ವಾತ್ । ಸ ಏವ ಜ್ಞಾನತ್ವಾದ್ಯಶ್ಚೇತಿ ಶ್ಯಃ ॥ ಸೋಽಸ್ಯ ಜೀವಸ್ಯೇನ ಇತಿ ಶ್ಯೇನಃ । ವಿಷ್ಣುಂ ಸ್ವಾಮಿನಂ ಜ್ಞಾತ್ವೇತ್ಯರ್ಥಃ ॥ (c) ನಿರದೀಯಂ ನಿಷ್ಕ್ರಮ್ಯಾತೀತೋಽಸ್ಮಿ ಗರ್ಭವಾಸಂ ಸ್ವರಾನಂದೋ ವಿಷ್ಣುರತ್ರಗ ಇತಿ ಸ್ವರ್ಗಲೋಕೋ ವಿಷ್ಣುಲೋಕಃ । (d) ಅಮೃತಃ ಸನ್ಸರ್ವಾನ್ಕಾಮಾನಾಪ್ತ್ವಾ ತಾನೇವ ಸರ್ವಾನ್ಕಾಮಾನ್ಸಮಭವದನುಭವತಿ ॥

ಅ ॥ (a) (ಬಂಧಕವಾದುದರಿಂದ) ಶರೀರಗಳಿಂದ ಜೀವನು ರಕ್ಷಿಸಲ್ಪಡುವುದಿಲ್ಲ. (ಆದುದರಿಂದ 'ಪುರಃ' ಎಂಬುವುದಕ್ಕೆ ಶರೀರಗಳು ಎಂಬೀ ಪರರ ವ್ಯಾಖ್ಯಾನವು ಕೇವಲ ಅನುಚಿತವು.) (ದೇವತಾ ಪರತ್ವವನ್ನಂಗೀಕರಿಸಿ) ಮುಖ್ಯವಾದ ರಕ್ಷಣವೇ (ಅರ್ಥವಾಗಿ) ಕೂಡುತ್ತಿರಲು ಅಮುಖ್ಯವಾದ ಅರ್ಥವು ಕಲ್ಪಿಸಲ್ಪಡಬಾರದು. (b) ಸುಖವು ಇವನಿಗೆ ಇದೆ ಎಂದು ಪೂರ್ಣಾನಂದನಾದುದರಿಂದ ವಿಷ್ಣುವು 'ಶೀ' ಎನ್ನಿಸಿಕೊಳ್ಳುತ್ತಾನೆ. ಆ ಸುಖರೂಪನೇ ಜ್ಞಾನಸ್ವರೂಪನಾದುದರಿಂದ 'ಯಃ' ಎಂದೂ (ಅಂತೂ) 'ಶೀ ಚಾಸೌ ಯಶ್ಚ' ಎಂಬೀ ವ್ಯುತ್ಪತ್ತಿಯಿಂದ 'ಶ್ಯಃ' ಎನ್ನಿಸಿಕೊಳ್ಳುತ್ತಾನೆ. ಅವನೇ ಈ ಜೀವನಿಗೆ ಸ್ವಾಮಿಯು ಆದ ಪ್ರಯುಕ್ತ 'ಶ್ಯೇನಃ' (ಎನ್ನಿಸಿಕೊಳ್ಳುತ್ತಾನೆ). ವಿಷ್ಣುವನ್ನು ಮುಖ್ಯಸ್ವಾಮಿಯನ್ನಾಗಿ ತಿಳಿದು ಎಂದರ್ಥವು. (c) ನಿರದೀಯಂ=(ದುಃಖಗಳಿಂದ) ಹೊರಟು ಗರ್ಭವಾಸವನ್ನು ದಾಟಿದವನು ಆಗಿರುತ್ತೇನೆ. ಸ್ವರ್=ಆನಂದ ರೂಪನಾದ ವಿಷ್ಣುವು ಇಲ್ಲಿ ಇದ್ದಾನೆ. ಆದುದರಿಂದ ಸ್ವರ್ಗಲೋಕವು ವಿಷ್ಣುಲೋಕವು. (ಆದುದರಿಂದ 'ಸ್ವರ್ಗೇ ಲೋಕೇ ಸರ್ವಾನ್ ಕಾಮಾನ್' ಎಂಬುವುದಕ್ಕೆ ಪ್ರಸಿದ್ಧವಾದ ಸ್ವರ್ಗಲೋಕದಲ್ಲಿ ಎಲ್ಲಾ ಕಾಮಗಳನ್ನು ಅನುಭವಿಸಿ ಅಮೃತನಾದನು, ಅಂದರೆ ನಿರ್ಗುಣವಾದ ಮುಕ್ತಿಯನ್ನು ಹೊಂದಿದನು. ಎಂಬೀ ಪರರ ವ್ಯಾಖ್ಯಾನವು ಅಸಂಗತವು.) (d) ಮುಕ್ತನಾಗಿ ಸ್ವಯೋಗ್ಯಗಳಾದ ಎಲ್ಲಾ ಕಾಮಗಳನ್ನು ಸ್ವೀಕರಿಸಿ, ಆ ಎಲ್ಲಾ ಕಾಮಗಳನ್ನೇ, ಸಮಭವತ್=ನಿತ್ಯದಲ್ಲಿಯೂ ಅನುಭವಿಸುತ್ತಿರುತ್ತಾನೆ.

ಭಾ॥ (a) ಅಪೇಕ್ಷಿತ ವಸ್ತುಸ್ವೀಕಾರ ಆಪ್ತಿಃ । ಸಂಭವೋ ಭೋಗಃ । ತಾಂಸಮಭವತ್ತತೋ ಮನುಷ್ಯಾ ಅಜಾಯಂತೇತ್ಯಾದಿವತ್ ॥ (b) ಮುಕ್ತ್ಯನಂತರಮೇವ ಹ್ಯನುಪಚರಿತ ಸರ್ವಕಾಮಾವಾಪ್ತಿಃ । ಮುಖ್ಯ ಏವ ಚಾರ್ಥಃ ಸ್ವೀಕಾರ್ಯಃ ॥ (c) ಅಮುಕ್ತಾನಾಂ ವಿಷ್ಣುಲೋಕಗಾನಾಮಪಿ ನ ಸರ್ವಕಾಮಾವಾಪ್ತಿಃ । ಜಯವಿಜಯಾದೀನಾಮಪ್ರಿಯದರ್ಶನಾತ್ ॥ ಅತೋಽಮೃತಃ ಸನ್ಸರ್ವಾನ್ಕಾಮಾನಾಪ್ತ್ವೇತ್ಯರ್ಥಃ । (d) ಮುಕ್ತಃ ಕಾಮಾನವಾಪ್ನೋತಿ ಭುಂಕ್ತೇ ಚೈವ ಯಥೇಷ್ಟತಃ ॥ ಸರ್ವಾನಪಿ ನಿರಾತಂಕಃ ಸರ್ವದಾ ಚ ಹರೇರ್ವಶಃ । ಇತಿ ಸತ್ತತ್ವೇ ॥ ೧ ॥

## ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತೇ ಶ್ರೀಮನ್ಮಹೈತರೇಯೋಪನಿಷದ್ಭಾಷ್ಯೇ ದ್ವಿತೀಯಪ್ರಷಟ್ಕೇ ಪಂಚಮೋಽಧ್ಯಾಯಃ ॥ ೨ ॥ ೫ ॥

ಅ ॥ (a) ಇಚ್ಛಿಸಲ್ಪಟ್ಟ ವಸ್ತುಗಳನ್ನು ಸ್ವೀಕರಿಸುವುದು ಆಪ್ತಿಯು. ಸಂಭವವೆಂದರೆ ಭೋಗವು. (ಚತುರ್ಮುಖನು) ಆ ಸ್ತ್ರೀಯನ್ನು ಭೋಗಿಸಿದನು. ಆಮೇಲೆ ಮನುಷ್ಯರು ಹುಟ್ಟಿದರು. ಇದು ಮೊದಲಾದ ವಾಕ್ಯದಂತೆಯೇ. (b) ಮುಕ್ತಿಯನ್ನು ಹೊಂದಿದ ಮೇಲೆಯೇ ಮುಖ್ಯಗಳಾದ ಎಲ್ಲಾ ಕಾಮಗಳ ಪ್ರಾಪ್ತಿಯು. (ಸ್ವರ್ಗಪದಕ್ಕೂ ಸರ್ವಪದಕ್ಕೂ) ಮುಖ್ಯವಾದ ಅರ್ಥವೇ ಸ್ವೀಕರಿಸತಕ್ಕದು. (c) ವೈಕುಂಠದಲ್ಲಿದ್ದವರಿಗೂ ಅಮುಕ್ತರಾದವರಿಗೆ ಎಲ್ಲಾ ಕಾಮಗಳ ಪ್ರಾಪ್ತಿಯು ಇಲ್ಲವು. (ಸ್ವರ್ಗದಲ್ಲಿದ್ದವರಿಗೆ ಇಲ್ಲವೆಂದು ಹೇಳತಕ್ಕದು ಏನಿದೆ?) ಜಯ ವಿಜಯ ಮೊದಲಾದವರಿಗೆ ಅಪ್ರಿಯವಾದ ಶಾಪಾದಿ ನಿಮಿತ್ತವಾದ ದುಃಖವು ತೋರುವು

ದರಿಂದ । ಆದುದರಿಂದ ಮುಕ್ತನಾಗಿ ಎಲ್ಲಾ ಕಾಮಗಳನ್ನು ಹೊಂದಿ ಎಂದರ್ಥವು. (d) ಮುಕ್ತನು ಯಾವಾಗಲೂ ಶ್ರೀ ಹರಿಯ ಅಧೀನನಾಗಿ ನಿರಾತಂಕನಾಗಿಯೇ ಎಲ್ಲಾ ಕಾಮಗಳನ್ನು ಹೊಂದುತ್ತಾನೆ. ಯಥೇಷ್ಟವಾಗಿಯೇ ಭೋಗಿಸುತ್ತಾನೆ ಎಂದು ಸತ್ತತ್ವವೆಂಬ ಗ್ರಂಥದಲ್ಲಿದೆ. ॥ ೧ ॥

ಈ ಪ್ರಕಾರ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ನಿರ್ಮಿಸಲ್ಪಟ್ಟ
ಶ್ರೀಮನ್ಮಹೈತರೇಯೋಪನಿಷದ್ಭಾಷ್ಯದಲ್ಲಿ ಎರಡನೇ ಪ್ರಘಟ್ಟಕದಲ್ಲಿ
ಐದನೆಯ ಅಧ್ಯಾಯವು ಸಮಾಪ್ತವಾಯಿತು. ॥ ೨ ॥ ೫ ॥

ಪೂರ್ಣಾನಂದತಮಂ ಸರ್ವಪ್ರೇರಕಂ ಸರ್ವನಾಯಕಂ ।
ಮೋಕ್ಷದಂ ಭೋಗದಂ ಚೈವ ಮುಕುಂದಂ ಭಜ ಮೇ ಮನಃ ॥

ಮಂ ॥ ಹರಿಃ ಓಂ ॥ ಕೋಽಯಮಾತ್ಮೇತಿ ವಯಮುಪಾಸ್ಮಹೇ ಕತರಃ ಸ ಆತ್ಮಾ ಯೇನ ವಾ ಪಶ್ಯತಿ ಯೇನ ವಾ ಶೃಣೋತಿ ಯೇನ ವಾ ಗಂಧಾನಾಜಿಘ್ರತಿ ಯೇನ ವಾ ವಾಚಂ ವ್ಯಾಕರೋತಿ ಯೇನ ವಾ ಸ್ವಾದು ಚಾಸ್ವಾದು ಚ ವಿಜಾನಾತಿ ಯದೇತದ್ಧೃದಯಂ ಮನಶ್ಚೈತತ್ಸಂಜ್ಞಾನಮಾಜ್ಞಾನಂ ವಿಜ್ಞಾನಂ ಪ್ರಜ್ಞಾನಂ ಮೇಧಾ ದೃಷ್ಟಿರ್ಧೃತಿರ್ಮತಿರ್ಮನೀಷಾ ಜೂತಿಃ ಸ್ಮೃತಿಃ ಸಂಕಲ್ಪಃ ಕ್ರತುರಸುಃ ಕಾಮೋ ವಶ ಇತಿ ಸರ್ವಾಣ್ಯೇವೈತಾನಿ ಪ್ರಜ್ಞಾನಸ್ಯ ನಾಮಧೇಯಾನಿ ಭವಂತ್ಯೇಷ ಬ್ರಹ್ಮೈಷ ಇಂದ್ರ ಏಷ ಪ್ರಜಾಪತಿರೇತೇ ಸರ್ವೇ ದೇವಾ ಇಮಾನಿ ಚ ಪಂಚ ಮಹಾಭೂತಾನಿ ಪೃಥಿವೀ ವಾಯುರಾಕಾಶ ಆಪೋ ಜ್ಯೋತೀಂಷೀತ್ಯೇತಾನೀಮಾನಿ ಚ ಕ್ಷುದ್ರಮಿಶ್ರಾಣೀವ ಬೀಜಾನೀತರಾಣಿ ಚೇತರಾಣಿ ಚಾಂಡಜಾನಿ ಚ ಜಾರುಜಾನಿ ಚ ಸ್ವೇದಜಾನಿ ಚೋದ್ಭಿಜ್ಜಾನಿ ಚಾಶ್ವಾ ಗಾವಃ ಪುರುಷಾ ಹಸ್ತಿನೋ ಯತ್ಕಿಂಚೇದಂ ಪ್ರಾಣಿ ಜಂಗಮಂ ಚ ಪತತ್ರಿ ಚ ಯಚ್ಚ ಸ್ಥಾವರಂ ಸರ್ವಂ ತತ್ಪ್ರಜ್ಞಾನೇತ್ರಂ ಪ್ರಜ್ಞಾನೇ ಪ್ರತಿಷ್ಠಿತಂ ಪ್ರಜ್ಞಾನೇತ್ರೋ ಲೋಕಃ ಪ್ರಜ್ಞಾ ಪ್ರತಿಷ್ಠಾ ಪ್ರಜ್ಞಾನಂ ಬ್ರಹ್ಮ ಸ ಏತೇನ ಪ್ರಜ್ಞೇನಾತ್ಮನಾಽಸ್ಮಾಲ್ಲೋಕಾದುತ್ಕ್ರಮ್ಯಾಮುಷ್ಮಿನ್ಸ್ವರ್ಗೇ ಲೋಕೇ ಸರ್ವಾನ್ಕಾಮಾನಾಪ್ತ್ವಾಽಮೃತಃ ಸಮಭವತ್ಸಮಭವತ್ ॥ ೧ ॥

ಇತ್ಯೈತರೇಯೋಪನಿಷತ್ಸು ದ್ವಿತೀಯಾರಣ್ಯಕೇ
ಷಷ್ಠೋಽಧ್ಯಾಯಃ ॥ ೨ ॥ ೬ ॥

ಅ || ಅಯಂ ಆತ್ಮಾ=ಈ ವಿಷ್ಣುವು, ಕಃ=ಯಾವ ಲಕ್ಷಣವುಳ್ಳವನು, ಯಾವ ಹೆಸರುಳ್ಳವನು, ಯಾವ ರೂಪವಿಶೇಷದಿಂದೊಡಗೂಡಿದವನು, ಇತಿ=ಎಂದು, ವಯಂ=ನಾವು, ಉಪಾಸ್ಮಹೇ=ಧ್ಯಾನಿಸುವೆವು. (ಎಂದು ಲಕ್ಷ್ಮೀದೇವಿಯು ಮಹಿದಾಸನ ಹತ್ತಿರ ಪ್ರಶ್ನೆಮಾಡಿದಳು. ಶ್ರೀ ಹರಿಯನ್ನು ಮನುಷ್ಯರು ಹೇಗೆ ಧ್ಯಾನಿಸಬೇಕು? ದೇವತೆಗಳು ಹೇಗೆ ಧ್ಯಾನಿಸಬೇಕು? ಎಂದು ಪ್ರಶ್ನೆಯು. ಹೀಗೆ ಪ್ರಿಯಳಿಂದ ಕೇಳಲ್ಪಟ್ಟ ಶ್ರೀ ಹರಿಯು ಉತ್ತರವನ್ನು ಕೊಟ್ಟನು.) ಸಃ=ಆ, (ನಿನ್ನಿಂದ ಕೇಳಲ್ಪಟ್ಟ) ಆತ್ಮಾ=ಶ್ರೀ ಹರಿಯು, ಕತರಃ=ಪರಿಪೂರ್ಣವಾದ ಆನಂದವುಳ್ಳವನೆಂದು, (ಉಪಾಸ್ಯನು.) ಸಃ=ಪೂರ್ಣಾನಂದವು, (ಈ ಹರಿಗೆ) ಆತ್ಮಾ=ಸ್ವಭಾವವೇ, (ಆಗಂತುಕವಲ್ಲ) ಅಯಂ=ಈ ರಮಾ ಬ್ರಹ್ಮಾದಿಚೇತನಸಮುದಾಯವು, ಯೇನ=ಯಾವ ಶ್ರೀ ಹರಿಯ ಪ್ರೇರಣೆಯಿಂದ, ಪಶ್ಯತಿ=(ರೂಪವೊದಲಾದುದನ್ನು) ನೋಡುತ್ತದೋ, ಯೇನ ವಾ=ಯಾರ ಪ್ರೇರಣೆಯಿಂದ, ಶೃಣೋತಿ=(ಶಬ್ದಗಳನ್ನು) ಕೇಳುತ್ತದೋ, ಯೇನ ವಾ=ಯಾರ ಪ್ರೇರಣೆಯಿಂದ, ಗಂಧಾನ್=ಗಂಧಗಳನ್ನು, ಆಜಿಘ್ರತಿ=ವಾಸನೆ ತೆಗೆದುಕೊಳ್ಳುತ್ತದೋ, ಯೇನ ವಾ=ಯಾರ ಪ್ರೇರಣೆಯಿಂದ, ವಾಚಂ=ಲೌಕಿಕ ವೈದಿಕ, ಶಬ್ದರೂಪವಾದ ಮಾತನ್ನು, ವ್ಯಾಕರೋತಿ=ಆಡುತ್ತದೋ, ಯೇನ ವಾ=ಯಾರ ಪ್ರೇರಣೆಯಿಂದ, ಸ್ವಾದು ಚ=ರುಚಿಕರವಾದ ಪದಾರ್ಥವನ್ನು, ಅಸ್ವಾದು ಚ=ಅರುಚಿಯಾದ ಪದಾರ್ಥವನ್ನು, ವಿಜಾನಾತಿ=ತಿಳಿಯುತ್ತದೋ, (ಅಂತೂ ಯಾರ ಪ್ರೇರಣೆಯಿಂದಲೇ ಎಲ್ಲಾ ಇಂದ್ರಿಯ ವ್ಯಾಪಾರಗಳನ್ನು ಮಾಡುತ್ತದೋ,) ಸಃ=ಆತನೇ, ಆತ್ಮಾ=ಆತ್ಮಶಬ್ದವಾಚ್ಯನು. ಯತ್=ತಿಳಿಯುವವನಾದುದರಿಂದ 'ಯತ್' ಎಂದು ಹೇಳಲ್ಪಡುವವನು. ಏತತ್=ಸರ್ವರ ಸಮೀಪದಲ್ಲಿಯೇ ಇರುವವನಾದುದರಿಂದ 'ಏತತ್' ಎನ್ನಿಸಿ ಕೊಳ್ಳುತ್ತಾನೆ. (ಹೀಗೆಯೇ ಮೇಲೆಯೂ ತಿಳಿದುಕೊಳ್ಳತಕ್ಕದು.) ಹೃದಯಂ=ಹೃದಯದಲ್ಲಿ ಬಿಂಬರೂಪದಿಂದ ಇರುವವನು, ಮನಃ=ಮನನಮಾಡುವವನು, ಚ=ಗುಣಸಮೂಹಗಳನ್ನು ಕೊಡುವವನು, ಆ=ಪರಿಪೂರ್ಣನು, ಇ=ಭಕ್ತರಿಂದ ಹೊಂದಲ್ಪಡುವವನು, ತತ್=ವ್ಯಾಪ್ತನು, ಸಂಜ್ಞಾನಂ=ಯಥಾರ್ಥಜ್ಞಾನಸ್ವರೂಪನು, ಆಜ್ಞಾನಂ=ಚೆನ್ನಾಗಿ ಸರ್ವವಿಷಯಕ ಜ್ಞಾನಸ್ವರೂಪನು, ವಿಜ್ಞಾನಂ=ವಿವಿಧಜ್ಞಾನಸ್ವರೂಪನು, ಪ್ರಜ್ಞಾನಂ=ಪ್ರಕೃಷ್ಟಗುಣ ಜ್ಞಾನಸ್ವರೂಪನು, ಮೇಧಾ=ವಿಸ್ಮೃತಿರಹಿತನು, ದೃಷ್ಟಿಃ=ದರ್ಶನ ಸ್ವರೂಪನು, ಧೃತಿಃ=ಧೈರ್ಯರೂಪನು, ಧಾರಣಾ=(ಧರಿಸುವ) ಶಕ್ತಿಸ್ವರೂಪನು, ಮತಿಃ=ಪ್ರಮಾಣಗಳಲ್ಲಿ ವ್ಯಾಪ್ತನಾದವನು, (ವಾಚ್ಯನಾಗಿದ್ದವನು.) ಮನೀಷಾ=ಮನುನಾಮಕರಾದ ಬ್ರಹ್ಮಾದಿಗಳಿಗೆ ನಿಯಾಮಕನು, ಜೂತಿಃ=ಸರ್ವಪ್ರೇರಕನು, ಸ್ಮೃತಿಃ=ಯಾವಾಗಲೂ ಸರ್ವದೇಶಕಾಲಗಳಲ್ಲಿಯೂ ಸ್ವರೂಪಗಳಲ್ಲಿಯೂ ಸಮವಾಗಿಯೇ ಕ್ರೀಡಿಸುವವನು, ಸಂಕಲ್ಪಃ=ಸರ್ವವ್ಯವಸ್ಥೆಗೂ ಕಾರಣನು, ಕ್ರತುಃ=ಸರ್ವಕರ್ತನು, ಅಸುಃ=ದೋಷಗಳನ್ನು ನಿರಾಕರಿಸುವವನು, ಕಾಮಃ=ಅಮಿತ ಆನಂದರೂಪನು, ಅವಶಃ=ಸ್ವತಂತ್ರನು, ಇತಿ ಏತಾನಿ ಸರ್ವಾಣ್ಯೇವ=ಹೀಗೆ ಈ ಎಲ್ಲಾ ೨೩ ನಾಮಗಳು, ಪ್ರಜ್ಞಾನಸ್ಯ=ಪ್ರಜ್ಞಾನಸ್ವರೂಪನಾದ ಶ್ರೀ ಹರಿಗೆ, ನಾಮಧೇಯಾನಿ=ಹೆಸರು, ಭವಂತಿ=ಆಗುತ್ತವೆ. ಏಷಃ=ಈ, ಬ್ರಹ್ಮಾ=ಚತುರ್ಮುಖನು, ಏಷಃ=ಈ, ಇಂದ್ರಃ=ದೇವೇಂದ್ರನು, ಏಷಃ=ಈ, ಪ್ರಜಾಪತಿಃ=ರುದ್ರನು, ಏತೇ ಸರ್ವೇ ದೇವಾಃ=ಈ ದಕ್ಷಪ್ರಜಾಪತಿಯೇ ಮೊದಲಾದ ಎಲ್ಲಾ ದೇವತೆಗಳು, ಪೃಥಿವೀ=ಪೃಥಿವಿಯು, ವಾಯುಃ=ವಾಯುವು, ಆಕಾಶಃ=ಭೂತಾಕಾಶವು, ಆಪಃ=ಜಲವು, ಜ್ಯೋತೀಂಷಿ=ಅಗ್ನಿಯು, ಇತ್ಯೇತಾನಿ=ಎಂಬೀ, ಇಮಾನಿ ಚ ಪಂಚ ಮಹಾಭೂತಾನಿ=ಈ ಐದು ಭೂತಗಳು, ಇಮಾನಿ ಚ ಕ್ಷುದ್ರಮಿಶ್ರಾಣಿ=ಈ ಅಲ್ಪಗಳಾದ ಪುಣ್ಯಪಾಪಗಳಿಂದ

ಮಿಶ್ರಗಳಾದವುಗಳು, ಇತರಾಣಿ ಚ=ದೇವತೆಗಳಿಂದಿತರಗಳಾದ ಮನುಷ್ಯ ಪ್ರಾಣಿ ಸಮೂಹ ಗಳು, ಇತರಾಣಿ ಚ=ದೇವ, ಮನುಷ್ಯರಿಂದ ಭಿನ್ನಗಳಾದ ಅಸುರಾದಿ ಪ್ರಾಣಿ ಸಮೂಹಗಳು, ಅಂಡಜಾನಿ ಚ=ಪಕ್ಷಿಮೊದಲಾದವುಗಳು, ಜಾರುಜಾನಿ ಚ=ಜರಾಯು (ಗರ್ಭಕ್ಕೆ ಆವರಕ ವಾದ ಚರ್ಮಪುಟಕವು) ವಿನಿಂದ ಹುಟ್ಟಿದ ಮನುಷ್ಯಾದಿಗಳು, ಸ್ವೇದಜಾನಿ ಚ=ಬೆವರಿನಿಂದ ಹುಟ್ಟಿದ ಮತ್ಕುಣ (ಹೇಸು) ಮೊದಲಾದವುಗಳು, ಉದ್ಭಿಜ್ಜಾನಿ ಚ=ವೃಕ್ಷ ಮೊದಲಾದವುಗಳು, (ಹಾಗೆ ದೇವತೆಗಳ ಮನಸ್ಸು ಮೊದಲಾದವುಗಳಿಂದ ಹುಟ್ಟಿದ) ಅಶ್ವಾಃ=ಕುದುರೆಗಳು, ಗಾವಃ= ಗೋವುಗಳು, ಪುರುಷಾಃ=ಪುರುಷರು, ಹಸ್ತಿನಃ=ಆನೆಗಳು, ಯತ್ ಕಿಂ ಚ ಇದಂ ಪ್ರಾಣಿ= ಯಾವುದೊಂದು ಈ ಶಿಲಾಕಾಷ್ಠ ಮೊದಲಾದುದು, ಜಂಗಮಂ ಚ=ಸಂಚಾರಮಾಡತಕ್ಕುದು, ಪತತ್ರಿ=ಹಾರುವುದು, ಯಚ್ಚ ಸ್ಥಾವರಂ=ಸ್ಥಿರವಾದ ಪ್ರಾಣಿಸಮೂಹವು, ಸರ್ವಂ=ಸಮಸ್ತವೂ, ಬೀಜಾನೀವ=ಶಾಲ್ಯಾದಿಬೀಜಗಳಂತೆ ಬೇರೆ ಬೇರೆ ಸ್ವಭಾವವುಳ್ಳವುಗಳು, ತತ್ ಸರ್ವಂ=ಇವೆಲ್ಲ ವೂ, ಪ್ರಜ್ಞಾನೇತ್ರಂ=ಪ್ರಕೃಷ್ಟಜ್ಞಾನ ಸ್ವರೂಪನಾದ ಪರಮಾತ್ಮನೇ ನೇತೃ (ಒಯ್ಯತಕ್ಕುದು) ಆಗಿ ಉಳ್ಳದ್ದು. ಪ್ರಜ್ಞಾನೇ=ಪ್ರಕೃಷ್ಟಜ್ಞಾನಸ್ವರೂಪನಾದ ಪರಬ್ರಹ್ಮನಲ್ಲಿಯೇ, ಪ್ರತಿಷ್ಠಿತಂ= ಇರತಕ್ಕುದು. ಅಲೋಕಃ=ಪ್ರಾಕೃತದೇಹವಿಲ್ಲದಿರುವ, ಸಂಸಾರಿಗಳಿಂದ ನೋಡಲಿಕ್ಕೆ ಅಶಕ್ಯ ವಾದ, ಮುಕ್ತಸಮುದಾಯವು, ಪ್ರಜ್ಞಾನೇತ್ರಃ=ಬ್ರಹ್ಮನೇ ಪ್ರೇರಕವಾಗಿ ಉಳ್ಳದ್ದು. ಪ್ರಜ್ಞಾ= ಪ್ರಜ್ಞಾರೂಪನಾದ ಬ್ರಹ್ಮನು, ಪ್ರತಿಷ್ಠಾ=ಮತ್ತೊಬ್ಬ ಆಶ್ರಯವಿಲ್ಲದಿರುವವನು, ಪ್ರಜ್ಞಾನಂ= ಉತ್ಕೃಷ್ಟಜ್ಞಾನ ಸ್ವರೂಪನಾದ ವಿಷ್ಣುವೇ, ಬ್ರಹ್ಮ=ದೇಶದಿಂದಲೂ, ಕಾಲದಿಂದಲೂ, ಗುಣ ಗಳಿಂದಲೂ, ಅಪರಿಚ್ಛಿನ್ನನು. ಸಃ=ಸರ್ವ ಕರ್ಮಬಂಧದಿಂದ ಮುಕ್ತನಾದ ಪುರುಷನು, ಏತೇನ ಪ್ರಜ್ಞೇನ ಆತ್ಮನಾ=ಈ ಪ್ರಕೃಷ್ಟಜ್ಞಾನರೂಪನಾದ ವಿಷ್ಣುವಿನಿಂದ, (ಪ್ರೇರಿಸಲ್ಪಟ್ಟವ ನಾಗಿಯೇ) ಅಸ್ಮಾತ್ ಲೋಕಾತ್=ಈ ಚರಮದೇಹದಿಂದ, ಉತ್ಕ್ರಮ್ಯ=ಹೊರಟು (ವಿಷ್ಣು ಲೋಕಕ್ಕೆ ಹೋಗಿ) ಅಮುಷ್ಮಿನ್ ಸ್ವರ್ಗೇ ಲೋಕೇ=ವೈಕುಂಠಾದಿ ಲೋಕಗಳಲ್ಲಿ, ಅಮೃತಃ ಸನ್=ಮುಕ್ತನಾಗಿ, ಸರ್ವಾನ್ ಕಾಮಾನ್=ಎಲ್ಲಾ ಅಭೀಷ್ಟಗಳನ್ನು, ಆಪ್ತ್ವಾ=ಹೊಂದಿ, (ಆ ಹರಿಯ ಅನುಗ್ರಹದಿಂದಲೇ ಸರ್ವ ಕಾಮಗಳನ್ನು) ಸಮಭವತ್ ಸಮಭವತ್=ಅನುಭವಿ ಸುತ್ತಿರುತ್ತಾನೆ. ॥ ೧ ॥

ಈಪ್ರಕಾರ ಐತರೇಯೋಪನಿಷತ್ತಿನಲ್ಲಿ ಎರಡನೇ ಆರಣ್ಯಕದಲ್ಲಿ
ಆರನೇ ಅಧ್ಯಾಯವು ಸಮಾಪ್ತವಾಯಿತು. ॥ ೨ ॥ ೬ ॥

ಭಾ॥ (a) ಓಂ॥ ಅಯಂ ವಿಷ್ಣುರ್ಹಿ ಕಿಂ ರೂಪ ಉಪಾಸ್ಯೋಽಸ್ಮಾಭಿರಚ್ಯುತಃ। ಇತ್ಯಪೃಚ್ಛದ್ರಮಾದೇವೀ ಮಹಿದಾಸಂ ಜನಾರ್ದನಂ॥ (b) ಆಹ ತಾಂ ಮಹಿದಾಸೋಽಥ ಪೂರ್ಣಾನಂದತಮುಸ್ತ್ವಿತಿ। ಉಪಾಸ್ಯಸ್ತಾದೃಶೋ ಹ್ಯಸ್ಯ ಸ್ವಭಾವಃ ಪರಮಾತ್ಮನಃ॥ (c) ಯೇನ ಜೀವೋ ದರ್ಶನಾದೀನ್ ಪ್ರೇರಿತಃ ಕುರುತೇ ಸದಾ। ಯೋ ವಿಷ್ಣುರ್ಹೃದಯಮಿತಿ ಹೃದ್ಗತತ್ವಾತ್ಪ್ರ ಕೀರ್ತಿತಃ॥ (d) ಮಂತೃತ್ವಾನ್ಮನ ಇತ್ಯೇವ ಯಚ್ಚ ಜ್ಞಾನಸ್ವರೂಪತಃ। ಏತತ್ಸನ್ನಿಹಿತತ್ವಾಚ್ಚ ಪೂರ್ಣತ್ವಾದೇತಿ ಕೀರ್ತಿತಃ॥ (e) ಇತತ್ವಾಚ್ಚ ತತತ್ವಾಚ್ಚ ಸ ಇತನ್ನಾಮ ಕೇಶವಃ। ಗುಣಾನಾಮುಚ್ಚಯೋ ಯಸ್ಮಾತ್ಸ ಚ ಇತ್ಯೇವ ಶಬ್ದಿತಃ॥

ಅ ॥ (a) ಅವಿನಾಶಿಯಾದ ಈ ವಿಷ್ಣುವು ನಮ್ಮಿಂದ ಅಂದರೆ ಎಲ್ಲಾ ಭಗವದ್ಭಕ್ತರಿಂದಲೂ, ವಿಶೇಷತಃ ದೇವತೆಗಳಾದ ನಮ್ಮಿಂದ, ಯಾವ ಲಕ್ಷಣವುಳ್ಳವನಾಗಿಯೂ, ಯಾವ ಹೆಸರುಳ್ಳವನಾಗಿಯೂ, ಯಾವ ರೂಪವಿಶೇಷವುಳ್ಳವನಾಗಿಯೂ ಉಪಾಸನಾರ್ಹನು. ಹೀಗೆ ಲಕ್ಷ್ಮೀದೇವಿಯು ಮಹಿದಾಸರೂಪಿಯಾದ ಶ್ರೀ ಹರಿಯನ್ನು ಕುರಿತು ಪ್ರಶ್ನಿಸಿದಳು. (b) ಆ ಮೇಲೆ ಮಹಿದಾಸರೂಪಿಯಾದ ಶ್ರೀ ವಿಷ್ಣುವು ಆನಂದದಿಂದ ಅತಿ ಪರಿಪೂರ್ಣನೂ, ಈ ಪರಮಾತ್ಮನ ಸ್ವಭಾವವೂ, ಆನಂದ ರೂಪವೇ, ಎಂದೂ ಧ್ಯಾನಾರ್ಹನು. ಹೀಗೆ ಆ ಪ್ರಿಯೆಯನ್ನು ಕುರಿತು ಹೇಳಿದನು. (c) ಜೀವನು ಯಾವನಿಂದ ಪ್ರೇರಿಸಲ್ಪಟ್ಟವನಾಗಿಯೇ ಯಾವಾಗಲೂ ನೋಡುವಿಕೆ ಮೊದಲಾದವುಗಳನ್ನು ಮಾಡುತ್ತಾನೆ. ಯಾವ ವಿಷ್ಣುವು ಹೃದಯದಲ್ಲಿದ್ದುದರಿಂದ 'ಹೃದಯ'ನೆಂದು ಹೇಳಲ್ಪಟ್ಟಿದ್ದಾನೋ, (d) ಮನನ ಮಾಡುವುದರಿಂದ 'ಮನಃ' ಎಂದೂ, ಜ್ಞಾನ ಸ್ವರೂಪನಾದರಿಂದ 'ಯತ್' ಎಂದೂ, ಸನ್ನಿಹಿತನಾದುದರಿಂದ 'ಏತತ್' ಎಂದೂ, ಪರಿಪೂರ್ಣನಾದುದರಿಂದ 'ಆ' ಎಂದೂ ಹೇಳಲ್ಪಡುತ್ತಾನೆ. (e) ಆ ಕೇಶವನು (ರಕ್ಷಕನೆಂದು ಭಕ್ತರಿಂದ) ಪ್ರಾಪಿಸಲ್ಪಡುವುದರಿಂದ 'ಇ' ಎಂದೂ, ಸರ್ವಾಂತರ್ಗತನಾದುದರಿಂದ 'ತತ್' ಎಂದೂ ಪ್ರಸಿದ್ಧನು. ಆತನು ಯಾವ ಕಾರಣದಿಂದ ('ಗುಣೋರುಸಮುದಾಯೋಽಯಂ ವಾಸುದೇವಃ' ಎಂಬೀ ವಚನದಿಂದ) ಗುಣಗಳ ಸಮುದಾಯ ಸ್ವರೂಪನೋ, ಆದುದರಿಂದ 'ಚ' ಎಂದೇ ಹೇಳಲ್ಪಟ್ಟಿದ್ದಾನೆ.

ಭಾ॥ **(a)** ಸಮ್ಯಗ್ಜ್ಞಾನಸ್ವರೂಪತ್ವಾತ್ಸಂಜ್ಞಾನಮಿತಿ ಕೀರ್ತಿತಃ । ಆತತಜ್ಞಾನರೂಪತ್ವಾದಾಜ್ಞಾನಂ ಭಗವಾನ್ಹರಿಃ ॥ **(b)** ವಿವಿಧಜ್ಞಾನರೂಪತ್ವಾದ್ವಿಜ್ಞಾನಮಿತಿ ಕೀರ್ತಿತಃ। ಪ್ರಕೃಷ್ಟಾತ್ಮಗುಣಜ್ಞಾನರೂಪಃ ಪ್ರಜ್ಞಾನಮುಚ್ಯತೇ ॥ **(c)** ಅವಿಸ್ಮೃತಿತ್ವಾನ್ಮೇಧಾ ಸ ದೃಷ್ಟಿರ್ದರ್ಶನರೂಪತಃ । ಧೃತಿರ್ಧಾರಣರೂಪತ್ವಾನ್ಮತಿರ್ಮಾನು ತತತ್ವತಃ ॥ **(d)** ಮನುನಾಮ್ನಾಮಜಾದೀನಾಂ ಮನೀಷೇಶೋ ಯತೋ ಹರಿಃ । ಸರ್ವಪ್ರೇರಕರೂಪತ್ವಾಜ್ಜೂತಿರಿತ್ಯಭಿಧೀಯತೇ ॥

ಅ ॥ (a) ಯಥಾರ್ಥಜ್ಞಾನಸ್ವರೂಪನಾದುದರಿಂದ 'ಸಂಜ್ಞಾನ' ವೆಂದು ಹೇಳಲ್ಪಡುತ್ತಾನೆ. ('ವ್ಯಾಪ್ತಜ್ಞಾನಮಹಾಂಶುಮಾನ್ । ಸ್ಪಷ್ಟಾತಿಸ್ಪಷ್ಟವಿಶದಂ' ಇತ್ಯಾದಿ ವಾಕ್ಯದಿಂದ) ಚೆನ್ನಾಗಿ ವ್ಯಾಪ್ತವಾದ (ಸರ್ವವನ್ನು ವಿಷಯೀಕರಿಸುವ) ಜ್ಞಾನಸ್ವರೂಪನಾದುದರಿಂದ ಪೂಜ್ಯನಾದ ಶ್ರೀಹರಿಯು 'ಆಜ್ಞಾನ'ನೆನ್ನಿಸಿಕೊಳ್ಳುತ್ತಾನೆ. (b) ಅನೇಕ ವಿಷಯಕಜ್ಞಾನ ಸ್ವರೂಪನಾದುದರಿಂದ 'ವಿಜ್ಞಾನ'ನೆಂದು ಹೇಳಲ್ಪಡುತ್ತಾನೆ. ಪ್ರಕೃಷ್ಟ ಆತ್ಮಗುಣ ವಿಷಯಜ್ಞಾನಸ್ವರೂಪನಾಗಿ 'ಪ್ರಜ್ಞಾನ'ನೆಂದು ಹೇಳಲ್ಪಡುತ್ತಾನೆ. (c) ಆತನು ವಿಸ್ಮೃತಿಶೂನ್ಯನಾದುದರಿಂದ 'ಮೇಧಾ' ಎಂದೂ ಚಾಕ್ಷುಷ ಜ್ಞಾನಸ್ವರೂಪನಾದುದರಿಂದ 'ದೃಷ್ಟಿ'ಯೆಂದೂ, ಧೈರ್ಯಸ್ವರೂಪನಾದುದರಿಂದ ಅಥವಾ ಜಗತ್ತನ್ನು ಧರಿಸುವುದರಿಂದ, ಯಾ ಜ್ಞಾನಧಾರಣಾಶಕ್ತಿಸ್ವರೂಪನಾದುದರಿಂದ 'ಧೃತಿ'ಯೆಂದೂ, ಪ್ರಮಾಣಗಳಲ್ಲಿ ನಿಯಾಮಕನಾಗಿಯೂ, ಪ್ರತಿಪಾದ್ಯನಾಗಿಯೂ ವ್ಯಾಪ್ತನಾದುದರಿಂದ 'ಮತಿ'ಯೆಂದೂ ಹೇಳಲ್ಪಡುತ್ತಾನೆ. (d) ಯಾವ ಕಾರಣದಿಂದ ಮನುನಾಮಕರಾದ ಬ್ರಹ್ಮಾದಿ ದೇವತೆಗಳಿಗೆ ಹರಿಯು ನಿಯಾಮಕನೋ, ಕಾರಣ 'ಮನೀಷಾ' ಎಂದೂ ಸರ್ವರಿಗೂ ಪ್ರೇರಕನಾದುದರಿಂದ 'ಜೂತಿ'ಯೆಂದೂ ಹೇಳಲ್ಪಡುತ್ತಾನೆ.

ಭಾ॥ (a) ಸರ್ವದೇಶೇಷು ಕಾಲೇಷು ಸ್ವರೂಪೇಷು ಚ ಸರ್ವಶಃ । ಸಮಂ ರಮತ ಇತ್ಯೇವ ಸ್ಮೃತಿರ್ನಾಮ ಜನಾರ್ದನಃ ॥ (b) ಸರ್ವಸ್ಯ ಕ್ಲೃಪ್ತಿ ಕರ್ತೃತ್ವಾತ್ಸಂಕಲ್ಪ ಇತಿ ಗೀಯತೇ । ಕ್ರತುಃ ಸ ಸರ್ವಕರ್ತೃತ್ವಾದ ಸುರಸ್ಯಸನಾದ್ಧರಿಃ ॥ (c) ಅಮೇಯಾನಂದರೂಪತ್ವಾತ್ಕಾಮ ಇತ್ಯಭಿಧೀಯತೇ । ಅವಶಃ ಸ ಸ್ವತಂತ್ರತ್ವಾತ್ತ್ರಯೋವಿಂಶತಿ ನಾಮಕಂ ॥ ಯೋ ವೇದೈವಂ ಹರಿಂ ಸಮ್ಯಙ್ ಮುಚ್ಯತೇಽಖಿಲಸಂಸೃತೇಃ ॥

ಅ॥ (a) ಯಾವಾಗಲೂ ಎಲ್ಲಾ ದೇಶಗಳಲ್ಲಿಯೂ ಕಾಲಗಳಲ್ಲಿಯೂ ಎಲ್ಲಾ ಸ್ವರೂಪಗಳಲ್ಲಿಯೂ ಏಕಪ್ರಕಾರವಾಗಿಯೇ ಕ್ರೀಡಿಸುತ್ತಾನೆ ಎಂದೇ ಜನಾರ್ದನನು 'ಸ್ಮೃತಿ' ಎಂದು ಪ್ರಸಿದ್ಧನು. (b) ಸರ್ವರಿಗೂ ವ್ಯವಸ್ಥೆಯನ್ನು ಮಾಡತಕ್ಕವನಾದುದರಿಂದ 'ಸಂಕಲ್ಪ'ನೆಂದು ಹೇಳಲ್ಪಡುತ್ತಾನೆ. ಆ ಹರಿಯು ಸರ್ವವನ್ನು ಸೃಷ್ಟಿಸುವುದರಿಂದ 'ಕ್ರತು' ವೆಂದೂ (ದೋಷಗಳನ್ನು) ನಿರಾಕರಿಸುವುದರಿಂದ 'ಅಸು'ವೆಂದೂ (ಹೇಳಲ್ಪಡುತ್ತಾನೆ.) (c) ಅಪರಿಮಿತವಾದ ಆನಂದ ಸ್ವರೂಪನಾದುದರಿಂದ 'ಕಾಮ'ನೆಂದೂ ಹೇಳಲ್ಪಡುತ್ತಾನೆ. ಅತನು ತನ್ನ ಅಧೀನನೇ ಆದುದರಿಂದ 'ಅವಶ'ನೆಂದು (ಹೇಳಲ್ಪಡುತ್ತಾನೆ.) ಯಾವನು ಈ ಪ್ರಕಾರವಾಗಿ ಇಪ್ಪತ್ತಮೂರು (೨೩) ನಾಮಗಳುಳ್ಳ ಶ್ರೀ ಹರಿಯನ್ನು ಚೆನ್ನಾಗಿ ತಿಳಿಯುತ್ತಾನೋ, ಆತನು ಸರ್ವಸಂಸಾರದಿಂದಲೂ ಮುಕ್ತನಾಗುತ್ತಾನೆ.

ಭಾ॥ (a) ಬ್ರಹ್ಮಾ ಶಿವಶ್ಚ ಶಕ್ರಶ್ಚ ದೇವಾಶ್ಚಾನ್ಯೇ ಸಮಸ್ತಶಃ । ತಥೈವ ಪಂಚ ಭೂತಾನಿ ಪುಣ್ಯಪಾಪವಿಮಿಶ್ರಿತಾಃ ॥ ಕ್ಷುದ್ರಾತ್ಮಾನಸ್ತು ಯೇ ಮರ್ತ್ಯಾ ಇತರೇ ಅಸುರಾ ಅಪಿ । ಸರ್ವಂ ಜಗದಿದಂ ವಿಷ್ಣೋರ್ವಶೇ ತಿಷ್ಠತಿ ಸರ್ವದಾ ॥ (b) ತೇನೈವ ನೀಯತೇ ನಿತ್ಯಂ ತಸ್ಮಿನ್ನೇವ ಪ್ರತಿಷ್ಠಿತಂ । ಮುಕ್ತಾ ಯೇಽಲೋಕನಾಮಾನೋ ನೀಯಂತೇ ತೇಽಪಿ ವಿಷ್ಣುನಾ । (c) ಸ್ವಯಂ ಚಾನನ್ಯನಿಷ್ಠತ್ವಾತ್ಪ್ರತಿಷ್ಠೇತ್ಯಭಿಧೀಯತೇ । ದೇಶತಃ ಕಾಲತಶ್ಚೈವ ಗುಣತಶ್ಚಾತಿಪೂರ್ತಿತಃ ॥ ವಿಷ್ಣೋರ್ಬ್ರಹ್ಮೇತಿ ನಾಮ್ನೈತನ್ಮುಖ್ಯತೋಽನ್ಯತ್ರ ನ ಕ್ವಚಿತ್ । (d) ಸೋಽಲೋಕನಾಮಾ ಮುಕ್ತಸ್ತು ಚಿತಿಮಾತ್ರಸ್ವರೂಪತಃ ॥ ಪ್ರಕೃಷ್ಟಜ್ಞಾನರೂಪಸ್ಯ ಪ್ರಸಾದಾತ್ಪರಮಾತ್ಮನಃ । (e) ಅಸ್ಮಾದ್ದೇಹಾತ್ಸಮುತ್ಕ್ರಮ್ಯ ಗತ್ವೋರ್ಧ್ವಂ ಲೋಕಮುತ್ತಮಂ ॥ ಅಮೃತಃ ಸನ್ವಿಷ್ಣುಲೋಕೇ ಭೋಗಾನ್ಸಂಪ್ರಾಪ್ಯ ಪುಷ್ಕಲಾನ್ । ಭುಂಕ್ತೇ ಯಥೇಷ್ಟತೋ ನಿತ್ಯಮಿತಿ ವೇದಾನುಶಾಸನಂ ॥ ಇತ್ಯಾದ್ಯೈತರೇಯಸಂಹಿತಾಯಾಂ ॥

ಅ ॥ (a) ಚತುರ್ಮುಖನು, ರುದ್ರನು, ಇಂದ್ರನು ಇತರ ಎಲ್ಲಾ ದೇವತೆಗಳು, ಹಾಗೆಯೇ ಪೃಥಿವ್ಯಾದಿ ೫ ಭೂತಗಳೂ, ಪುಣ್ಯಪಾಪಗಳಿಂದ ಮಿಶ್ರಿತರಾದ ಅಲ್ಪಸ್ವಭಾವವುಳ್ಳ ಯಾವ ಮನುಷ್ಯರೋ, ಇವರಿಂದಿತರರಾದ ಅಸುರರೂ ಕೂಡ ಇರುವರೋ, ಈ ಎಲ್ಲಾ ಜಗತ್ತು ಯಾವಾಗಲೂ ಶ್ರೀ ವಿಷ್ಣುವಿನ ಅಧೀನದಲ್ಲಿಯೇ ಇರುತ್ತದೆ. (b) ಆ ಹರಿಯಿಂದಲೇ ನಿರಂತರದಲ್ಲಿಯೂ ಒಯ್ಯಲ್ಪಡುತ್ತದೆ. ಆತನಲ್ಲಿಯೇ ಆಶ್ರಿತವಾಗಿಯದೆ. ಅಲೋಕ ನಾಮ

ಕರಾದ ಯಾವ ಮುಕ್ತರೋ, ಅವರೂ ಕೂಡ ವಿಷ್ಣುವಿನಿಂದಲೇ ಒಯ್ಯಲ್ಪಡುತ್ತಾರೆ. (c) ತಾನು ಅನ್ಯಾಶ್ರಯನಿಲ್ಲದಿರುವುದರಿಂದ 'ಪ್ರತಿಷ್ಠಾ' ಎನ್ನಿಸಿಕೊಳ್ಳುತ್ತಾನೆ. ದೇಶದಿಂದಲೂ ಕಾಲದಿಂದಲೂ ಗುಣದಿಂದಲೂ ಅತಿಪೂರ್ಣನಾದುದರಿಂದ ವಿಷ್ಣುವಿಗೇನೇ ಮುಖ್ಯವಾಗಿ 'ಬ್ರಹ್ಮ'ನೆಂದು ನಾಮಧೇಯವು. ಇತರರಲ್ಲಿ ಎಲ್ಲಿಯೂ ಇರುವುದೇ ಇಲ್ಲವು. ಕೇವಲ ಜ್ಞಾನಸ್ವರೂಪನಾದುದರಿಂದ ಲೋಕ ವಿಲಕ್ಷಣನಾದ ಆ ಅಲೋಕನಾಮಕನಾದ, (ಸಕಲ ಕರ್ಮಬಂಧದಿಂದ) ಬಿಡಲ್ಪಟ್ಟ ಪುರುಷನಾದರೂ ಪ್ರಕೃಷ್ಟ ಜ್ಞಾನಸ್ವರೂಪನಾದುದರಿಂದ, ಶ್ರೀ ಪರಮಾತ್ಮನ ಪ್ರಸಾದದಿಂದ, (e) ಈ ಸ್ಥೂಲಶರೀರದಿಂದ ಹೊರಟು ಹೋಗಿ, ಅತ್ಯುತ್ತಮವಾದ ವಿಷ್ಣುಲೋಕಕ್ಕೆ ಹೋಗಿ, ಲಿಂಗ ಶರೀರರಹಿತನಾಗಿಯೇ ವೈಕುಂಠಲೋಕದಲ್ಲಿ ಪೂರ್ಣ ಭೋಗಗಳನ್ನು ಹೊಂದಿ, ನಿರಂತರದಲ್ಲಿಯೂ ಇಚ್ಛಾನುಸಾರವಾಗಿ ಅನುಭವಿಸುತ್ತಿರುತ್ತಾನೆ. ಎಂದು ಸರ್ವವೇದಗಳ ಅನುಜ್ಞೆಯು. ಇದೇ ಮೊದಲಾದ ಪ್ರಮೇಯವು ಐತರೇಯ ಸಂಹಿತೆಯಲ್ಲಿ ಅದೆ.

ಭಾ॥ (a) ಜಾನಂತ್ಯಾಽಪಿ ದೇವ್ಯಾ ಲೋಕಾನುಗ್ರಹಾರ್ಥಂ ವಿಶೇಷಜ್ಞಾನಾರ್ಥಂ ಚ ಕೋಽಯಮಾತ್ಮೇತಿ ಪೃಷ್ಟಃ ಸ ಭಗವಾನಾಹ । ಕತರಃ ಸ ಆತ್ಮೇತಿ ॥ ಕತರಃ ಆನಂದತಮಃ (b) ಯತ್ರೋಭಯೋಃ ಪ್ರಯೋಗೋ ನ ತತ್ರೈಕಾರ್ಥೌ ತರಪ್ತಮಾವಿತಿ ಶಬ್ದನಿರ್ಣಯೇ । (c) ಯತ್ಪ್ರೇರಣಾದಯಂ ಜೀವೋ ದರ್ಶನಾದೀನ್ಕರೋತಿ ಚ ॥ ರಮಾಬ್ರಹ್ಮಾದೀನಾಮಪಿ ತತ್ಪ್ರೇರಿತತ್ವಾತ್ । ಸರ್ವೇಷಾಂ ದರ್ಶನಾದಿಕಾರಣತ್ವಮೇಕೈಕಮಪಿ ತಸ್ಯ ಲಕ್ಷಣಂ ಭವತೀತಿ ವಾ ಶಬ್ದಃ ಸರ್ವತ್ರಾನುಷಜ್ಯತೇ ॥

ಅ॥ (a) ಸಾಮಾನ್ಯವಾಗಿ ಮೋಕ್ಷಯೋಗ್ಯರಿಗೆಲ್ಲರಿಗೂ ಅನುಗ್ರಹಿಸುವುದಕ್ಕೋಸ್ಕರವೂ ದೇವಾದಿಗಳಿಗೆ ವಿಶೇಷ ಜ್ಞಾನಾರ್ಥವಾಗಿಯೂ ತಿಳಿದವಳಾದಾಗ್ಯೂ ಲಕ್ಷ್ಮೀದೇವಿಯಿಂದ, ಈ ಆತ್ಮನು ಯಾವ ಲಕ್ಷಣವುಳ್ಳವನೆಂದು (ಉಪಾಸನಾ ಮಾಡತಕ್ಕುದು?) ಎಂದು ಕೇಳಲ್ಪಟ್ಟ ಆ ಪರಮಾತ್ಮನು ಹೇಳಿದನು. ಆತ್ಮನು ಕತರನು ಎಂದು, ಕತರಃ=ಪೂರ್ಣಾನಂದನು. (d) ಯಾವ ವಾಕ್ಯದಲ್ಲಿ ತರಪ್ ತಮಪ್ ಇವೆರಡರ ಪ್ರಯೋಗವಿಲ್ಲವೋ, ಆ ವಾಕ್ಯದಲ್ಲಿ ತರಪ್ ತಮಪ್‌ಗಳು ಒಂದೇ ಅರ್ಥವುಳ್ಳವುಗಳು. ಅಂದರೆ ಎರಡಕ್ಕೆ ಯಾವ ಅರ್ಥವದೆಯೋ ಅದು ಕೂಡಿ ಇವುಗಳಿಗೆ ಒಂದೇ ಅರ್ಥವು. ಎಂದು ಶಬ್ದನಿರ್ಣಯವೆಂಬ ಗ್ರಂಥದಲ್ಲಿದೆ. (c) ಈ ಜೀವನು ಯಾವ ಶ್ರೀ ಹರಿಯ ಪ್ರೇರಣೆಯಿಂದಲೇ ದರ್ಶನ ಮೊದಲಾದವುಗಳನ್ನು ಮಾಡುತ್ತಾನೋ, (ಆತನು ಆತ್ಮನು) ಲಕ್ಷ್ಮೀಬ್ರಹ್ಮಾದಿಗಳಿಗೂ ಆ ಹರಿಯಿಂದಲೇ ಪ್ರೇರಿಸಲ್ಪಡುವಿಕೆಯಿದ್ದುದರಿಂದ, ಅಂದರೆ ರಮಾದಿಗಳೂ ಶ್ರೀ ಹರಿಯಿಂದಲೇ ಪ್ರೇರಿತರಾದುದರಿಂದ (ಸರ್ವಸ್ವತಂತ್ರನು ಶ್ರೀ ಹರಿಯೇ ಸರಿ.) (d) ಸರ್ವರ ದರ್ಶನ ಮೊದಲಾದವುಗಳಿಗೆ ಕಾರಣನೆಂಬುವುದು ಒಂದೊಂದೂ ಕೂಡ ಆ ಹರಿಗೆ ಲಕ್ಷಣವಾಗುವುದು ಎಂದು 'ವಾ' ಶಬ್ದವು ಎಲ್ಲಾ ಕಡೆಯಲ್ಲಿಯೂ ಅನುಷಂಗ ಮಾಡಲ್ಪಡುತ್ತದೆ. ಅಂದರೆ ಪೂರ್ವವಾಕ್ಯದಲ್ಲಿದ್ದುದನ್ನು ಪ್ರಕೃತ ವಾಕ್ಯಕ್ಕೆ ಸೇರಿಸಿಕೊಳ್ಳುವುದು.

ಭಾ॥ (a) ಪ್ರಜಾಪತಿಃ ಶಿವಃ ಲಿಂಗಾಭಿಮಾನಿತ್ವಾತ್ । ಪ್ರಜಾಪತಿಃಶಿವಃ ಶೇಷೋ ಲಿಂಗಮಿತ್ಯಭಿಧೀಯತೇ ॥ ಲಿಂಗಾಭಿಮಾನೀ ಲೋಕಸ್ಯ ಸ್ರಷ್ಟಾ ಗಿರಿಶ ಏವ ಹಿ । ಇತಿ ಶೈವಪುರಾಣೇ ॥ (b) ಸಮಮಸ್ತ್ವನಯೋರ್ಯಾದ್ಧಮಿತಿ ಪ್ರಾಹ

ಪ್ರಜಾಪತಿಃ । ವಾಕ್ಯಂ ಶಿವಸ್ಯ ತಚ್ಛ್ರುತ್ವಾ ಶಕ್ರೋ ನೇತ್ಯಾಹ ಸತ್ವರಃ ॥ ಇತಿ ಭಾರತೇ ॥ (c) ಕ್ಷುದ್ರಮಿಶ್ರಾಣೀವ ಬೀಜಾನಿ ಶಾಲ್ಯಾದಿ ಬೀಜವತ್ । ಭಿನ್ನಸ್ವಭಾವಾ ಬ್ರಹ್ಮಾದಯಃ ಸರ್ವಜೀವಾಃ ॥ (d) ಬ್ರಹ್ಮಾದ್ಯಾಃ ಸರ್ವ ಏವೈತೇ ಜೀವಾ ಭಿನ್ನಸ್ವಭಾವಕಾಃ । ಯಥಾ ಶಾಲ್ಯಾದಿ ಬೀಜಾನಿ ಭಿನ್ನ ವೀರ್ಯಾಣಿ ಸರ್ವಶಃ ॥ ಇತಿ ಸತ್ತತ್ವೇ ॥

ಅ ॥ (a) ಪ್ರಜಾಪತಿಃ=ರುದ್ರನು, ಲಿಂಗಕ್ಕೆ ಅಭಿಮಾನಿಯಾದುದರಿಂದ, ಪ್ರಜಾ ಪತಿಯು ಶಿವನೆಂದೂ, ಶೇಷನೆಂದೂ, ಲಿಂಗನೆಂದೂ ಹೇಳಲ್ಪಡುತ್ತಾನೆ. ರುದ್ರನೇ ಲಿಂಗಕ್ಕೆ ಅಭಿಮಾನಿಯಾಗಿ ಸರ್ವ ಲೋಕವನ್ನು ಸೃಷ್ಟಿಸುತ್ತಾನಷ್ಟೇ? ಎಂದು ಶೈವಪುರಾಣದಲ್ಲಿದೆ. (b) ರುದ್ರನು ಇವರಿಬ್ಬರಿಗೆ ಏಕಪ್ರಕಾರವಾಗಿಯೇ ಯುದ್ಧವಾಗಲಿ ಎಂದು ಹೇಳಿದನು. ಇಂದ್ರನು ರುದ್ರನ ಆ ಮಾತನ್ನು ಕೇಳಿ ಶೀಘ್ರನಾಗಿ ತ್ವರಾಯುಕ್ತನಾಗಿ ಅಲ್ಲ (ಯುದ್ಧವು ಬೇಡ) ಎಂದನು. ಎಂದು ಭಾರತದಲ್ಲಿದೆ. (c) 'ಕ್ಷುದ್ರ ಮಿಶ್ರಾಣೀವ ಬೀಜಾನಿ' ಅಂದರೆ ಶಾಲ್ಯಾದಿಬೀಜಗಳಂ ತೆಯೇ, ಬ್ರಹ್ಮನೇ ಮೊದಲಾದ ಎಲ್ಲಾ ಜೀವರು ಬೇರೆಬೇರೆ ಸ್ವಭಾವವುಳ್ಳವರು. (d) ಹೇಗೆ ಎಲ್ಲಾ ಶಾಲ್ಯ ಮೊದಲಾದ ಬೀಜಗಳು ಬೇರೇಬೇರೆ, ವೀರ್ಯ (ಸ್ವಭಾವ)ವುಳ್ಳವುಗಳೋ, ಹಾಗೆಯೇ ಬ್ರಹ್ಮನೇ ಮೊದಲಾದ ಎಲ್ಲಾ ಈ ಜೀವರು ಬೇರೆಬೇರೆಯೇ ಸ್ವಭಾವವುಳ್ಳವರೇ, ಎಂದು ಸತ್ತತ್ವವೆಂಬ ಗ್ರಂಥದಲ್ಲಿದೆ.

ಭಾ॥ (a) ಪ್ರಥಮೇತರಾಣೀತಿ ಶಬ್ದೋ ಮಾನುಷಾಣಾಂ ದ್ವಿತೀಯೋಽಸುರಾ ದೀನಾಂ । (b) ಪ್ರಜ್ಞಾನೇತ್ರೋಽಲೋಕ ಇತಿ ॥ ಅಲೋಕಶಬ್ದೇನ ಮುಕ್ತಸಮುದಾಯ ಉಚ್ಯತೇ । ಬ್ರಹ್ಮಾದಿಸ್ಥಾವರಾಂತಸ್ಯ ಲೋಕಸ್ಯ ಸರ್ವಂ ತತ್ಪ್ರಜ್ಞಾನೇತ್ರಮಿತಿ ವಿಷ್ಣ್ವಧೀನತ್ವಸ್ಯ ಪೂರ್ವಮೇವೋಕ್ತತ್ವಾ ತ್ಪುನಃ ಪ್ರಜ್ಞಾನೇತ್ರೋಽಲೋಕ ಇತಿ ಮುಕ್ತವಿಷಯಮೇವ ॥ ಮುಕ್ತೋ ಹ್ಯಲೋಕ್ಯತ್ವಾದಲೋಕಃ । (c) ಅಂಡಜಾನಿ ಚೇತ್ಯಾದ್ಯುಕ್ತ್ವಾ ಪುನ ರಶ್ವಾ ಗಾವ ಇತ್ಯಾದಿ ದೇವಾದೀನಾಂ ಮನ ಆದೇರೇವ ಜಾತಾನಾಮಪಿ ಸ್ವೀಕಾರಾರ್ಥಂ ॥ ಅಂಡಜತ್ವಾದುತ್ಪತ್ತಿಪ್ರಕಾರೋಽಪಿ ವಿಷ್ಣ್ವಧೀನ ಇತಿ ಜ್ಞಾಪಯಿತುಂ ತತ್ಕಥನಂ । (d) ತಥಾಽಶ್ಮಾನಸ್ತೃಣಕಾಷ್ಠಾಶ್ಚ ಸರ್ವೇ ದಿಷ್ಟಕ್ಷಯೇ ಸ್ವಾಂ ಪ್ರಕೃತಿಂ ಭಜಂತ ಇತಿ ಭಾರತವಚನಾದಶ್ಮಾದೀನಾ ಮಪಿ ಪ್ರಾಣಿತ್ವಾತ್ತತ್ಸ್ವೀಕಾರಾರ್ಥಂ ಪ್ರಾಣೀತಿ ॥

ಅ ॥ (a) ಒಂದನೇ 'ಇತರಾಣಿ' ಎಂಬುವ ಶಬ್ದವು ಮನುಷ್ಯರಿಗೂ, ಎರಡನೇದ್ದು ಅಸುರರೇ ಮೊದಲಾದವರಿಗೆ. (b) 'ಪ್ರಜ್ಞಾನೇತ್ರೋಽಲೋಕಃ' ಅಂದರೆ ಅಲೋಕಶಬ್ದದಿಂದ ಮುಕ್ತರ ಸಮೂಹವು ಹೇಳಲ್ಪಡುತ್ತದೆ. ಬ್ರಹ್ಮನನ್ನಾರಂಭಿಸಿ ಸ್ಥಿರಪ್ರಾಣಿಪರ್ಯಂತವಾದ ಸರ್ವ ಲೋಕಕ್ಕೆ 'ಸರ್ವಂ ತತ್ಪ್ರಜ್ಞಾನೇತ್ರಂ' ಎಂಬುವುದರಿಂದ ಶ್ರೀ ಹರಿಯ ಅಧೀನತೆಯನ್ನು ಪೂರ್ವದಲ್ಲಿಯೇ ಹೇಳಿರುವುದರಿಂದ ಪುನಃ 'ಪ್ರಜ್ಞಾನೇತ್ರೋಽಲೋಕಃ' ಎಂಬುವುದು ಮುಕ್ತರ ವಿಷಯಕವೇ. ಮುಕ್ತನಾದರೂ (ಸಂಸಾರಿಗಳಿಂದ) ನೋಡಲಿಕ್ಕೆ ಅಶಕ್ಯನಾದುದರಿಂದ 'ಅಲೋಕ'ನೆನ್ನಿಸಿಕೊಳ್ಳುತ್ತಾನೆ. (c) 'ಅಂಡಜಾನಿ ಚ' ಇತ್ಯಾದಿಯನ್ನು ಹೇಳಿ ಪುನಃ 'ಅಶ್ವಾಃ, ಗಾವಃ' ಇದು ಮೊದಲಾದುದು, ದೇವತೆಗಳೇ ಮೊದಲಾದವರ ಮನಸ್ಸೇ ಮೊದಲಾದುದರಿಂ

ದಲೇ ಹುಟ್ಟಿದ ಅಶ್ವಾದಿಗಳಿಗೂ ಸ್ವೀಕಾರಕ್ಕೋಸ್ಕರ (ಕಾರಣ ಅಶ್ವಮೊದಲಾದವುಗಳು ಜರಾಯುಜಗಳಾದರೂ, ಪಕ್ಷಿಗಳು ಅಂಡಜಗಳಾದರೂ, ಸ್ಥಾವರಗಳು ಉದ್ಭಿಜ್ಜಗಳಾದರೂ ಪುನರುಕ್ತವಾಗಲಿಲ್ಲ.) ಅಂಡದಿಂದ ಹುಟ್ಟುವಿಕೆ ಇತ್ಯಾದಿಗಳ ಹುಟ್ಟತಕ್ಕ ಪ್ರಕಾರವೂ ಕೂಡ ಶ್ರೀವಿಷ್ಣುವಿನ ಅಧೀನವೇ ಎಂದು ತಿಳಿದುಕೊಳ್ಳುವುದಕ್ಕೋಸ್ಕರ ಆ ಅಂಡಜತ್ವಾದಿಗಳನ್ನು ಹೇಳಿದ್ದು. (ಆದುದರಿಂದ ಎರಡು ವಿಧಗಳೂ 'ಅಶ್ವಾ ಗಾವಃ' ಇದು ಮೊದಲಾದ ವಾಕ್ಯದಿಂದಲೇ ಕೂಡುತ್ತಿದ್ದರೂ ಪುನರುಕ್ತವಾಗಲಿಲ್ಲ.) (d) ('ಸಂಸ್ವೇದಜಾ ಅಂಡಜಾಶ್ಚೋದ್ಭಿದಶ್ಚ ಸರೀಸೃಪಾಃ ಕ್ರಿಮಯೋಽಥಾಪ್ಸು ಮತ್ಸ್ಯಾಃ ॥ ತಥಾಽಶ್ಮಾನಃ' ಬೆವರಿನಿಂದ ಹುಟ್ಟಿದವುಗಳೂ, ಅಂಡದಿಂದ ಹುಟ್ಟಿದವುಗಳೂ, ಭೂಮಿಯನ್ನು ಭೇದಿಸಿ ಬಂದ ತರುಗುಲ್ಮಾದಿಗಳೂ, ಜಲಪ್ರಾಣಿಗಳೂ, ಕ್ರಿಮಿಗಳೂ, ಹಾಗೆಯೇ ಜಲಗಳಲ್ಲಿರುವ ಮತ್ಸ್ಯಗಳೂ,) ಹಾಗೆಯೇ ಕಲ್ಲುಗಳೂ, ಹುಲ್ಲು, ಕಟ್ಟಿಗೆಗಳೂ ಎಲ್ಲವೂ ಕರ್ಮವು ನಾಶವಾದ ನಂತರ ಸ್ವಕೀಯವಾದ ಸ್ವಭಾವವನ್ನು ಹೊಂದುತ್ತವೆ. ಎಂದು ಭಾರತ (ಆದಿಪರ್ವ ಯಯಾತ್ಯಷ್ಟಕ ಸಂವಾದ) ವಾಕ್ಯದಿಂದಲೂ ಕಲ್ಲು ಮೊದಲಾದುವುಗಳಿಗೂ ಪ್ರಾಣಿತ್ವವಿದ್ದುದರಿಂದ ಅವುಗಳನ್ನು ಸ್ವೀಕರಿಸುವುದಕ್ಕೋಸ್ಕರ 'ಪ್ರಾಣಿ' ಎಂದು ಹೇಳಿರುವರು.

ತಾ ॥ ಚರಾಚರಾತ್ಮಕರಾದ ಜೀವರಿಗೂ ಕಲ್ಲು ಮೊದಲಾದುವುಗಳಿಗೂ ತಂತಮ್ಮಿಂದ ಅಭಿಮನ್ಯಮಾನಗಳಾದ ಚರಾಚರಾತ್ಮಕ ದೇಹಗಳಲ್ಲಿಯೂ ಕಲ್ಲು ಮೊದಲಾದ ಅಚೇತನಗಳಲ್ಲಿಯೂ, ಅಭಿಮಾನವನ್ನು ಸಂಪಾದಿಸಿಕೊಡುವ ಕರ್ಮವು ನಾಶವಾದ ಬಳಿಕ, ತಮಗೆ ಯೋಗ್ಯವಾದ ತಮ್ಮ ರೂಪವೇ ಸಿಗುವುದು ಎಂಬೀ ವಾಕ್ಯದಿಂದ ಕ್ರಿಮಿ ಮೊದಲಾದ ಪ್ರಾಣಿಗಳಂತೆಯೇ ಕಲ್ಲು ಮೊದಲಾದುವುಗಳೂ ಪ್ರಾಣಿಗಳೇ ಆಗಿವೆ. ಅಲ್ಲದೆ 'ಕರ್ಮಾಣಿ ತಾನಿ ಚ ಪೃಥಕ್ ಚೇತನಾನ್ಯೇವ ಸರ್ವಶಃ' ॥ ಎಂಬೀ ವಾಕ್ಯದಿಂದಲೂ ಕರ್ಮಗಳಿಗೆ ಚೇತನತ್ವವಿದ್ದಂತೆಯೇ ಕಲ್ಲು ಮೊದಲಾದವುಗಳಿಗೂ ಚೇತನತ್ವವನ್ನು ತಿಳಿಯತಕ್ಕದು.

ಭಾ॥ (a) ಗಮನ ಪತನ ಸ್ಥಿರತ್ವಾದಯೋಽಪಿ ಭಾವಾ ವಿಷ್ಣ್ವಧೀನಾ ಇತಿ ಜ್ಞಾಪಯಿತುಂ ಜಂಗಮಮಿತ್ಯಾದಿವಚನಂ । (b) ಸ ಏತೇನೇತ್ಯಲೋಕಶಬ್ದೋಕ್ತೋ ಮುಕ್ತಃ ಪರಾಮೃಶ್ಯತೇ ॥ ಸಕಲಕರ್ಮಬಂಧಮುಕ್ತ್ಯನಂತರಂ ಹಿ ಶರೀರಾದುತ್ಕ್ರಾಮತಿ । (c) ಪ್ರಕೃಷ್ಟಜ್ಞಾನರೂಪೇಣ ವಿಷ್ಣುನಾ ಪ್ರೇರಿತಃ ಪ್ರಜ್ಞೇನಾತ್ಮನೈವೋತ್ಕ್ರಮ್ಯ ತೇನೈವ ಸರ್ವಾನ್ಕಾಮಾನಾಪ್ತ್ವಾ ತೇನೈವ ಸರ್ವಾನ್ಕಾಮಾನ್ಭುಂಕ್ತ ಇತಿ ಸರ್ವತ್ರಾನುಷಜ್ಯತೇ ॥ (d) ಪ್ರಜ್ಞಾನೇತ್ರೋಽಲೋಕ ಇತ್ಯುಕ್ತೇ ಕಥಂ ಪ್ರಜ್ಞಾನೇತ್ರೋ ಮುಕ್ತ ಇತ್ಯಾಕಾಂಕ್ಷಾಯಾಂ ತಸ್ಯೈವ ವ್ಯಾಖ್ಯಾನಂ ಸ ಏತೇನ ಪ್ರಜ್ಞೇನಾತ್ಮನೇತ್ಯಾದಿ ॥ ಅನುಕ್ತವಿಶೇಷಣಾನಾಮಪಿ ಭಗವದಧೀನತ್ವಜ್ಞಾಪನಾರ್ಥಂ ಪ್ರಜ್ಞಾನೇತ್ರೋಽಲೋಕ ಇತಿ ಸಾಮಾನ್ಯವಚನಂ ॥

ಅ ॥ (a) (ಹಾಗಾದರೆ 'ಪ್ರಾಣಿ' ಶಬ್ದದಿಂದಲೇ ಸ್ಥಾವರ, ಜಂಗಮಾದಿ ಜಡಾಭಿಮಾನಿಗಳಿಗೂ ಪ್ರಾಪ್ತಿಯಾಗುತ್ತಿರಲು ಪ್ರತ್ಯೇಕವಾಗಿ ಜಂಗಮ ಮೊದಲಾದುವುಗಳನ್ನು ಸ್ವೀಕರಿಸಿದ್ದು ವ್ಯರ್ಥವೆಂದರೆ) ಹೋಗುವಿಕೆ, ಬೀಳುವಿಕೆ, ಸ್ಥಿರತ್ವ ಮೊದಲಾದ (ಆದಿ ಪದದಿಂದ ಮನುಷ್ಯತ್ವ, ಪಶುತ್ವ ಮೊದಲಾದ ಜಂಗಮನಿಷ್ಠಧರ್ಮಗಳೂ, ಗರುಡತ್ವ ಹಂಸತ್ವ ಮೊದಲಾದ ಧರ್ಮಗಳೂ, ಅಶ್ವತ್ಥಾದಿ ಸ್ಥಾವರ ಧರ್ಮಗಳೂ) ಎಲ್ಲಾ ಧರ್ಮಗಳೂ ವಿಷ್ಣುವಿನ ಅಧೀನಗಳು,

ಎಂದು ತಿಳಿಸುವುದಕ್ಕೋಸ್ಕರ 'ಜಂಗಮಂ' ಇದು ಮೊದಲಾದ ಮಾತು. (ಕಾರಣವ್ಯರ್ಥವಲ್ಲವು.) (b) 'ಸ ಏತೇನ' ಎಂಬುವಲ್ಲಿ ತತ್ ಶಬ್ದದಿಂದ 'ಅಲೋಕ' ಶಬ್ದದಿಂದ ಹೇಳಲ್ಪಟ್ಟ ಮುಕ್ತನು ಸ್ವೀಕರಿಸಲ್ಪಡುತ್ತಾನೆ. ಎಲ್ಲಾ ಕರ್ಮಬಂಧದಿಂದ ಬಿಡುಗಡೆ ಆದ ಮೇಲೆ, ಅಂದರೆ ಅಪ್ರಾರಬ್ಧವಾದುದಕ್ಕೆ ಜ್ಞಾನದಿಂದ ನಾಶವಾದ ಮೇಲೆ, ಪ್ರಾರಬ್ಧವಾದುದಕ್ಕೆ ಭೋಗದಿಂದ ನಾಶವಾದ ಮೇಲೆಯೂ ಶರೀರದಿಂದ ಹೊರಟುಹೋಗುತ್ತಾನೆ. (c) ಪ್ರಕೃಷ್ಟಜ್ಞಾನರೂಪನಾದ ವಿಷ್ಣುವಿನಿಂದ ಪ್ರೇರಿಸಲ್ಪಟ್ಟವನಾಗಿ, ಜ್ಞಾನರೂಪನಾದ ಶ್ರೀ ಹರಿಯ ಪ್ರಸಾದದಿಂದಲೇ (ಚರಮದೇಹದಿಂದ) ಹೊರಟುಹೋಗಿ, (ಮುಕ್ತಿಯನ್ನು ಹೊಂದಿ) ಆತನ ಅನುಗ್ರಹದಿಂದಲೇ ಎಲ್ಲಾ ಅಭೀಷ್ಟಗಳನ್ನು ಹೊಂದಿ, ಆತನ ಅನುಗ್ರಹದಿಂದಲೇ ಆ ಮುಕ್ತನು ಎಲ್ಲಾ ಭೋಗಗಳನ್ನು ಅನುಭವಿಸುತ್ತಾನೆ ಎಂದು ಎಲ್ಲಾ ಕಡೆಯಲ್ಲಿಯೂ ('ಪ್ರಜ್ಞೇನ ಆತ್ಮನಾ' ಎಂಬುವುದು) ಅನುವೃತ್ತಿ ಮಾಡಲ್ಪಡುತ್ತದೆ. (d) 'ಪ್ರಜ್ಞಾನೇತ್ರೋಲೋಕಃ' ಎಂದು ಹೇಳಿದೊಡನೆ ಮುಕ್ತನು ಹೇಗೆ ಪ್ರಜ್ಞಾನೇತ್ರನು? ಎಂದು ಆಕಾಂಕ್ಷೆ ಬರುತ್ತಿರಲು, 'ಸ ಏತೇನ ಪ್ರಜ್ಞೇನ ಆತ್ಮನಾ' ಇದು ಮೊದಲಾದುದು ಅದಕ್ಕೇನೇ ವ್ಯಾಖ್ಯಾನವು. (ಹಾಗಾದರೆ ವ್ಯಾಖ್ಯಾನವೇ ಸಾಕಾಗುವುದು. 'ಪ್ರಜ್ಞಾನೇತ್ರೋಲೋಕಃ' ಎಂದು ಪೂರ್ವವಾಕ್ಯವು ವ್ಯರ್ಥವೆಂದರೆ) ಇಲ್ಲಿ ಹೇಳದಿರುವ ವಿಶೇಷಗಳಿಗೂ ಶ್ರೀ ವಿಷ್ಣುವಿನ ಅಧೀನತ್ವವನ್ನು ತಿಳಿಸಿಕೊಡುವುದಕ್ಕೋಸ್ಕರ 'ಪ್ರಜ್ಞಾನೇತ್ರೋಲೋಕಃ' ಎಂದು ಸಾಮಾನ್ಯವಾದ ಮಾತು.

ತಾ || 'ಬ್ರಾಹ್ಮೇಣ ಜೈಮಿನಿರುಪನ್ಯಾಸಾದಿಭ್ಯಃ' (ಬ್ರಹ್ಮ ಸೂ. ಅಧ್ಯಾ ೪. ಪಾ ೪. ಸೂ ೫.) (೧) 'ಚಿತಿಮಾತ್ರೇಣ ತದಾತ್ಮಕತ್ವಾದಿತ್ಯೌಡುಲೋಮಿಃ (ಅ. ೪. ಪಾ ೪. ಸೂ. ೬) ॥ ೨ ॥ ಭಾವಂಜೈಮಿನಿರ್ವಿಕಲ್ಪಾಮ್ನಾತ್' (ಸೂ. ೧೧). ॥ ೩ ॥ 'ಸಂಕಲ್ಪಾದೇವಚ ತಚ್ಛ್ರುತೇಃ' (ಸೂ. ೮) ॥ ೪ ॥ (೧) (ಮುಕ್ತನು), ಬ್ರಾಹ್ಮೇಣ=ಬ್ರಹ್ಮಸಂಬಂಧಿಯಾದ ದೇಹದಿಂದಲೇ, (ಭೋಗಗಳನ್ನು ಅನುಭವಿಸುತ್ತಾನೆ) ಉಪನ್ಯಾಸಾದಿಭ್ಯಃ='ಸವಾ ಏಷಃ' ಎಂಬೀ ತದರ್ಥೋಪನ್ಯಾಸರೂಪವಾದ ಮಾಧ್ಯಂದಿನಾಯನ ಶ್ರುತಿಯಿಂದಲೂ, 'ಆದತ್ತೇ ಹರಿಹಸ್ತೇನ' ಎಂಬೀ ಸ್ಮೃತಿಯಿಂದಲೂ, 'ಗಚ್ಛಾಮಿ ವಿಷ್ಣುಪಾದಾಭ್ಯಾಂ' ಎಂಬೀ ಬೃಹತ್ತಂತ್ರದಲ್ಲಿ ಹೇಳಿದ ಯುಕ್ತಿಯಿಂದಲೂ, (ಎಂದು ಜೈಮಿನಿಯು ತಿಳಿಯುತ್ತಾನೆ.) (೨) (ಮುಕ್ತನು) ಚಿತಿಮಾತ್ರೇಣ=ಕೇವಲ ಜ್ಞಾನರೂಪವಾದ ದೇಹದಿಂದಲೇ, (ಭೋಗಗಳನ್ನು ಭೋಗಿಸುತ್ತಾನೆ.) ತದಾತ್ಮಕತ್ವಾತ್=ಮುಕ್ತನಿಗೆ ಕೇವಲ ಜ್ಞಾನಾತ್ಮಕ ಶರೀರವಿದ್ದುದರಿಂದ, ಕೇವಲ ಜ್ಞಾನಕ್ಕೇನೇ ಮುಕ್ತಸ್ವರೂಪತ್ವವಿದ್ದುದರಿಂದ, (ಶಬ್ದಾತ್='ಸರ್ವಂ ವಾ ಏತತ್' ಎಂದು ಔದ್ದಾಲಕ ಶ್ರುತಿಯಿದ್ದುದರಿಂದ) ಇತಿ=ಹೀಗೆ, ಔಡುಲೋಮಿಃ=ತನ್ನಾಮಕ ಋಷಿಯು (ಮನ್ಯತೇ=ತಿಳಿಯುತ್ತಾನೆ). (೩) ಜೈಮಿನಿಃ=ಜೈಮಿನ್ಯಾಚಾರ್ಯರು, ಭಾವಂ=ಮುಕ್ತನಿಗೆ ಜ್ಯೋತಿರ್ಮಯವಾದ ದೇಹದ ಇರುವಿಕೆಯನ್ನು, (ಮನ್ಯತೇ=ತಿಳಿಯುತ್ತಾನೆ). ವಿಕಲ್ಪಾಮ್ನಾನಾತ್='ಸವಾ ಏಷಃ' ಎಂಬೀ ಉದ್ದಾಲಕ ಶ್ರುತಿಯಲ್ಲಿ ಚಿನ್ಮಯ, ಅಚಿನ್ಮಯ, ಅನ್ಯತರ ದೇಹವತ್ತ್ವವನ್ನು ಪ್ರತಿಪಾದಿಸಿದುದರಿಂದ (೪) (ಬ್ರಹ್ಮ. ಸೂ. ೪ನೇ. ಅ. ಪಾ. ೪. ಸೂ. ೮) (ಮುಕ್ತನು, ಅನಿಷ್ಟೇತರ ಭೋಗಗಳನ್ನು ಅನುಭವಿಸುತ್ತಾನೆ) ಸಂಕಲ್ಪಾದೇವ ಚ ಅಪ್ರತಿಹತವಾದ ತನ್ನ ಇಚ್ಛೆಯಿಂದಲೇ, ತಚ್ಛ್ರುತೇಃ=ಆ ಅರ್ಥವನ್ನು 'ಸ ಯದಿ ಪಿತೃಲೋಕಕಾಮೋ ಭವತಿ' ಇತ್ಯಾದಿ ಶ್ರುತಿಯಲ್ಲಿ ಹೇಳಿರುವುದರಿಂದ ಇದೇ ಮೊದಲಾದುವುಗಳಿಗೆ, ಇಲ್ಲಿ ಹೇಳದಿರುವವುಗಳಿಗೆ ಭಗವದಧೀನತ್ವವನ್ನು ತಿಳಿಸಿಕೊಡುವುದಕ್ಕೋಸ್ಕರ 'ಪ್ರಜ್ಞಾ ನೇತ್ರೋಲೋಕಃ' ಎಂದು ಸಾಮಾನ್ಯವಾದ ಮಾತು.

ಭಾ॥ (a) ಅನಾರಬ್ಧಫಲಾನಾಂ ಚ ಪ್ರಾರಬ್ಧಾನಾಂ ಚ ಸರ್ವಶಃ । ಕರ್ಮಣಾಂ ದಾಹ ಏವಾಯಂ ಮುಕ್ತಿರಿತ್ಯಭಿಧೀಯತೇ ॥ (b) ಸ ತು ಮುಕ್ತಸ್ತತೋ ದೇಹಾದುದ್ಗಚ್ಛತಿ ಪರಾತ್ಮನಾ । ಪ್ರೇರಿತೋ ವಿಷ್ಣುಲೋಕಂ ಚ ಪ್ರಾಪ್ಯ ಭೋಗಾನವಾಪ್ಯ ಚ ॥ ಭುಂಕ್ತೇ ವಿಷ್ಣುಪ್ರಸಾದೇನ (c) ನ ವಿಷ್ಣೋರವಶಃ ಕ್ವಚಿತ್ । ವಿಷ್ಣುತಂತ್ರಾ ಇಮೇ ಸರ್ವೇ ಮುಕ್ತಾ ಅಪಿ ಯತೋಽಖಿಲಾಃ ॥ ಇತಿ ಬ್ರಹ್ಮಾಂಡೇ ॥ (d) ಬ್ರಹ್ಮೇಂದ್ರಾದಿ ಶಬ್ದಾ ವಿಷ್ಣಾವೇವ ಮುಖ್ಯತ ಇತಿ ತದ್ವ್ಯಾವೃತ್ತ್ಯಾ ಜೀವಾನಾಂ ಸ್ವೀಕಾರಾರ್ಥಮೇಷ ಇತ್ಯಾದಿಶಬ್ದಃ ॥ (e) ಸ ಹಿ ಭಗವಾನ್ಸ್ವನೇತೃಕೋಽಪಿ ನಾನುಗ್ರಾಹ್ಯಃ । ಅನುಗ್ರಾಹ್ಯತ್ವಂ ಹಿ ಬ್ರಹ್ಮಾದೀನಾಮತ್ರ ವಿವಕ್ಷಿತಂ ॥ ನೇಯತಾಽನುಗ್ರಾಹ್ಯತಾಽಪಿ ನ ಸಾ ವಿಷ್ಣೋಃ ಸ್ವತೋಽಪಿ ತು ! ಇತಿ ಶಬ್ದತತ್ವೇ ॥ ೧ ॥

**ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತೇ ಶ್ರೀಮನ್ಮಹೈತರೇಯೋಪನಿಷದ್ಭಾಷ್ಯೇ ದ್ವಿತೀಯ ಪ್ರಘಟ್ಟಕೇ ಷಷ್ಠೋಽಧ್ಯಾಯಃ ॥ ೨ ॥ ೬ ॥**

ಅ ॥ (a) ಅಪ್ರಾರಬ್ಧ ಫಲವುಳ್ಳ ಎಲ್ಲಾ ಕರ್ಮಗಳಿಗೂ, ಪ್ರಾರಬ್ಧ ಕರ್ಮಗಳಿಗೂ ನಾಶವೇ ಮುಕ್ತಿಯೆಂದು ಹೇಳಲ್ಪಡುತ್ತದೆ. (b) ಆ ಮೇಲೆ ಮುಕ್ತನಾದರೂ ಶ್ರೀ ಹರಿಯ ಅನುಗ್ರಹದಿಂದಲೇ ಚರಮದೇಹದಿಂದ ಹೊರಟುಹೋಗುತ್ತಾನೆ. ಶ್ರೀ ಹರಿಯಿಂದ ಪ್ರೇರಿತನಾಗಿಯೇ ವಿಷ್ಣುಲೋಕವನ್ನು ಹೊಂದಿ, ಸರ್ವ ಭೋಗಗಳನ್ನು ಪ್ರಾಪಿಸಿ, ವಿಷ್ಣುವಿನ ಅನುಗ್ರಹದಿಂದ ಅನುಭವಿಸುತ್ತಾನೆ. (c) ಯಾರೂ ಎಲ್ಲಿಯೂ ವಿಷ್ಣುವಿನ ಅನಧೀನರಾಗಿರುವುದೇ ಇಲ್ಲ. ಇವರೆಲ್ಲರೂ ವಿಷ್ಣುವಿನ ಅಧೀನರೇ, ಆಗಿರುತ್ತಾರಷ್ಟೇ ಎಂದು ಬ್ರಹ್ಮಾಂಡಪುರಾಣದಲ್ಲಿದೆ. (d) ಬ್ರಹ್ಮ, ಇಂದ್ರ ಮೊದಲಾದ ಎಲ್ಲಾ ಶಬ್ದಗಳು ವಿಷ್ಣುವಿನಲ್ಲಿಯೇ ಮುಖ್ಯವಾಗಿವೆ. ಎಂದು ಆ ವಿಷ್ಣುವನ್ನು ವ್ಯಾವೃತ್ತಿಸಿ (ವಿಷ್ಣುವನ್ನು ಬಿಟ್ಟು) ಜೀವರನ್ನು ಸ್ವೀಕರಿಸುವುದಕ್ಕೋಸ್ಕರ ('ಏಷಃ ಬ್ರಹ್ಮಾ ಏಷಃ ಇಂದ್ರಃ' ಇದು ಮೊದಲಾದ ಸ್ಥಳಗಳಲ್ಲಿ) ಏಷಃ=ಇದು ಮೊದಲಾದ ಶಬ್ದವು (e) ಆ ಪರಮಾತ್ಮನು ತಾನೇ ಪ್ರೇರಕನಾಗಿ ಉಳ್ಳವನಾದಾಗ್ಯೂ ಅನುಗ್ರಾಹ್ಯನಲ್ಲವು. ಇಲ್ಲಿ ಬ್ರಹ್ಮಾದಿಗಳಿಗೇನೇ ಅನುಗ್ರಹಾಹ್ಯತ್ವವು ಇಷ್ಟವಾಗಿದೆ. ಯಾವುದೊಂದು ಅನುಗ್ರಾಹ್ಯತ್ವರೂಪವಾದ ನೇಯತ್ವ (ಒಯ್ಯುವುದು) ಇದೆಯೋ, ಅದು ವಿಷ್ಣುವಿಗೆ ತನ್ನಿಂದಲೂ, ಪರರಿಂದಲೂ ಇಲ್ಲವೇ ಇಲ್ಲ. ಎಂದು ಶಬ್ದತತ್ವವೆಂಬುವ ಗ್ರಂಥದಲ್ಲಿದೆ. ॥ ೧ ॥

**ಈ ಪ್ರಕಾರ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ನಿರ್ಮಿಸಲ್ಪಟ್ಟ ಶ್ರೀಮನ್ಮಹೈತರೇಯೋಪನಿಷದ್ಭಾಷ್ಯದಲ್ಲಿ ಎರಡನೇ ಪ್ರಘಟ್ಟಕದಲ್ಲಿ ಆರನೇ ಅಧ್ಯಾಯವು ಸಮಾಪ್ತವಾಯಿತು. ॥ ೨ ॥ ೬ ॥**



ವೇದಾಧಾರಮುರುತ್ಸಂಸ್ಥಂ ವಾಗಾಧಾರಮ್ಯತಂ ಹರಿಂ ।
ಭಕ್ತಾನುಗ್ರಾಹಕಂ ವಂದೇ ನಿತ್ಯಂ ಸಾಧುಗಣೈಸ್ತತಂ ॥

ಮಂ ॥ ಹರಿಃ ಓಂ ॥ ವಾಙ್ ಮೇ ಮನಸಿ ಪ್ರತಿಷ್ಠಿತಾ ಮನೋ ಮೇ ವಾಚಿ ಪ್ರತಿಷ್ಠಿತಮಾವಿರಾವೀರ್ಮ ಏಧಿ ವೇದಸ್ಯ ಮ ಆಣೀಸ್ಥ ಶ್ರುತಂ ಮೇ ಮಾ ಪ್ರಹಾಸೀರನೇನಾಧೀತೇನಾಹೋರಾತ್ರಾತ್ಸಂದಧಾಮ್ಯೃತಂ ವದಿಷ್ಯಾಮಿ ಸತ್ಯಂ ವದಿಷ್ಯಾಮಿ ತನ್ಮಾಮವತು ತದ್ವಕ್ತಾರಮವತ್ವವತು ಮಾಮವತು ವಕ್ತಾರಮವತು ವಕ್ತಾರಂ ॥ ೧ ॥

ಇತ್ಯೈತರೇಯೋಪನಿಷತ್ಸು ದ್ವಿತೀಯಾರಣ್ಯಕೇ
ಸಪ್ತಮೋಽಧ್ಯಾಯಃ ॥ ೨ ॥ ೭ ॥

ಅ ॥ ಮೇ=ನನ್ನ, ವಾಕ್=ವಾಗಿಂದ್ರಿಯವು, ಅಥವಾ=ಮಾತು ಮನಸಿ=ಜ್ಞಾನಸ್ವರೂಪನಾದ ವಿಷ್ಣುವಿನಲ್ಲಿ, ಪ್ರತಿಷ್ಠಿತಾ=ಆಶ್ರಿತವಾಗಿಯದೆ. ಯಾ, ಹರಿವಿಷಯಕವೇ ಆಗಲಿ. ಮನಃ=ಮನೋನಾಮಕನಾದ ಶ್ರೀ ಹರಿಯು, ಮೇ=ನನ್ನ, ವಾಚಿ=ವಾಗಿಂದ್ರಿಯದಲ್ಲಿ, ಪ್ರತಿಷ್ಠಿತಂ=ವಿಷಯನಾಗಲಿ. (ಎಲೋ ಹರಿಯೇ) ಮೇ=ನನಗೆ, (ನೀನು) ಆವಿಃ ಏಧಿ=ಅಪರೋಕ್ಷ ವಿಷಯನಾಗು, ಆವೀಃ ಏಧಿ=ಅತಿಶಯವಾಗಿ ಪ್ರಕಟನಾಗು. ಮೇ=ನನ್ನಿಂದ ಉಪಾಸ್ಯನಾದ, ವೇದಸ್ಯ ಆಣೀಸ್ಥ=ಎಲ್ಲಾ ವೇದಸಮುದಾಯಕ್ಕೆ ಆಧಾರಭೂತನಾದ ಮುಖ್ಯಪ್ರಾಣನಲ್ಲಿ ರತಕ್ಕ ವಿಷ್ಣುವೇ, ಮೇ=ನನ್ನ, ಶ್ರುತಂ=ಶಾಸ್ತ್ರಶ್ರವಣದಿಂದುಂಟಾದ ವಿದ್ಯೆಯನ್ನು, ಮಾ ಪ್ರಹಾಸೀಃ=ಬಿಡಬೇಡ, (ಅಂದರೆ ನಾನು ಅಧ್ಯಯನ ಮಾಡಿದ ಶಾಸ್ತ್ರದಿಂದುಂಟಾದ ಯಥಾರ್ಥ ಜ್ಞಾನವಿಷಯನೇ ಯಾವಾಗಲೂ ಆಗು. ಯಾವಾಗಲೂ ಮರತು ಬಿಡಬೇಡ, ಎಲೋ ವಿಷ್ಣುವೇ,) ಅನೇನ ಅಧೀತೇನ =ನಿನ್ನ ವಿಷಯವಾದ ಅಧ್ಯಯನದಿಂದಲೇ, ಅಹೋರಾತ್ರಾನ್=ಹಗಲುರಾತ್ರಿಗಳನ್ನು, ಸಂದಧಾಮಿ=ಕೂಡಿಸುತ್ತೇನೆ. (ಅಂದರೆ ಎಲ್ಲಾ ಹಗಲುರಾತ್ರಿಗಳಲ್ಲಿಯೂ ನಿನ್ನ ವಿಷಯವಾದ ಅಧ್ಯಯನವನ್ನೇ ಮಾಡುವೆನು.) ಋತಂ=(ನಿನ್ನನ್ನು) ಯಾವಾಗಲೂ ಒಂದೇ ರೀತಿಯಾಗಿರತಕ್ಕವನನ್ನಾಗಿ, ವದಿಷ್ಯಾಮಿ=(ಶಿಷ್ಯರಿಗೆ) ಉಪದೇಶಿಸುವೆನು. ಸತ್ಯಂ=ಸಾಧುಗುಣಪರಿಪೂರ್ಣನನ್ನಾಗಿಯೂ, ಸರ್ವನಿಯಾಮಕನನ್ನಾಗಿಯೂ, ವದಿಷ್ಯಾಮಿ=ಹೇಳುವೆನು. ತತ್=ಆ ವಿಷ್ಣ್ವಾಖ್ಯಪರಬ್ರಹ್ಮನು, ಮಾಂ=ಶಿಷ್ಯನಾದ ನನ್ನನ್ನು, ಅವತು=ರಕ್ಷಿಸಲಿ. ತತ್=ಆ ಬ್ರಹ್ಮನು, ವಕ್ತಾರಂ=ಗುರುವನ್ನು, ಅವತು=ರಕ್ಷಿಸಲಿ. ಮಾಂ ಅವತು ಅವತು ವಕ್ತಾರಂ ಅವತು ವಕ್ತಾರಂ=(ಹಿಂದಿನಂತೆಯೇ ಅರ್ಥವು.) ॥ ೧ ॥

ಈ ಪ್ರಕಾರ ಐತರೇಯೋಪನಿಷತ್ತಿನಲ್ಲಿ ಎರಡನೇ ಆರಣ್ಯಕದಲ್ಲಿ
ಏಳನೇ ಅಧ್ಯಾಯವು ಸಮಾಪ್ತವಾಯಿತು. ॥ ೨ ॥ ೭ ॥

ಎರಡನೇ ಆರಣ್ಯಕವು ಸಂಪೂರ್ಣವಾಯಿತು. ॥ ಶ್ರೀಃ ॥

ಭಾ॥ (a) ಓಂ ವಾಙ್ಮೇ ಮನಸಿ ಪ್ರತಿಷ್ಠಿತಾ ಅವಬೋಧರೂಪೇ ವಿಷ್ಣೌ ಪ್ರತಿಷ್ಠಿತಾ । ಸ ಚ ವಿಷ್ಣುರ್ಮೇ ವಾಚಿ ಸ್ಥಿತಃ । (b) ಯದೇತದ್ಧೃದಯಂ ಮನಶ್ಚೇತಿ ವಿಷ್ಣುನಾಮಧೇಯೇಷೂಕ್ತತ್ವಾತ್ ॥ ಆವಿರಾವೀರ್ಮ ಏಧಿ

ಹೇ ವಿಷ್ಣೋ ಮಮಾವಿರಾವಿರ್ಭವ । ಅಣೇಸ್ಥಿತ ಅಣ್ಯಾಂ ಸ್ಥಿತ ವಿಷ್ಣೋ ಇತಿ ಸಂಬೋಧನಂ ॥ (c) ಆಧಾರಃ ಸರ್ವವೇದಾನಾಂ ವೇದಾಣೀ ಪ್ರಾಣ ಉಚ್ಯತೇ । ತಸ್ಮಿಂಸ್ಥಿತೋ ಹರಿರ್ನಿತ್ಯಮಾಣೇಸ್ಥ ಇತಿ ಗೀಯತೇ ॥ ಇತಿ ಶಬ್ದ ತತ್ವೇ ॥

ಅ ॥ (a) ನನ್ನ ವಾಗಿಂದ್ರಿಯವು 'ಮನಸಿ ಪ್ರತಿಷ್ಠಿತಾ' ಅಂದರೆ ಜ್ಞಾನರೂಪನಾದ ವಿಷ್ಣುವಿನಲ್ಲಿ ಆಶ್ರಿತವಾಗಿದೆ. ಆ ವಿಷ್ಣುವು ನನ್ನ ವಾಗಿಂದ್ರಿಯದಲ್ಲಿದ್ದಾನೆ. ಅಂದರೆ ವಾಗ್ವಿಷಯನಾಗಲಿ. (b) ಯಾವ ಈ ಬ್ರಹ್ಮನು ಹೃದಯನಾಮಕನೂ, ಮನೋನಾಮಕನೂ ಆಗಿರುತ್ತಾನೆ. ಎಂದು ವಿಷ್ಣುವಿನ ನಾಮಗಳಲ್ಲಿಯೇ ಹೇಳಿರುವುದರಿಂದ । 'ಆವಿರಾವೀರ್ಮ ಏಧಿ' ಅಂದರೆ ಎಲೋ ವಿಷ್ಣುವೇ ನನಗೆ ಪ್ರತ್ಯಕ್ಷವಿಷಯನಾಗು. 'ಆಣೇಸ್ಥ' ಅಂದರೆ ಆಣೇಸ್ಥಿತನೇ ಆಶ್ರಯಭೂತನಾದ ಮುಖ್ಯಪ್ರಾಣನಲ್ಲಿರತಕ್ಕ ವಿಷ್ಣುವೇ ಎಂದು ಸಂಬೋಧನವು. (c) ಎಲ್ಲಾ ವೇದಗಳಿಗೂ ಆಶ್ರಯಭೂತನಾದ ಮುಖ್ಯಪ್ರಾಣನು 'ವೇದಾಣೀ' ಎಂದು ಹೇಳಲ್ಪಡುತ್ತಾನೆ. ನಿತ್ಯದಲ್ಲಿಯೂ ಆ ಮುಖ್ಯಪ್ರಾಣನಲ್ಲಿರತಕ್ಕ ಶ್ರೀ ಹರಿಯು ಆಣೇಸ್ಥನೆಂದು ಹೇಳಲ್ಪಡುತ್ತಾನೆ. ಎಂದು ಶಬ್ದತತ್ವವೆಂಬ ಗ್ರಂಥದಲ್ಲಿದೆ.

ಭಾ॥ (a) ಆವಿರಾವೀರಿತಿ ದ್ವೈರ್ಘ್ಯಮತಿಶಯಾರ್ಥೇ । ಆಧಿಕ್ಯೇಽಧಿಕಮಿತಿ ಸೂತ್ರಾತ್ ॥ (b) ಅಣಶಬ್ದಸ್ಯ ಗತಿವಾಚಿತ್ವಾಚ್ಚಲಮಾಣಮುಚ್ಯತೇ । ತಸ್ಯ ಧಾರಣೇನ ತದ್ವಾನಾಣೀ ॥ ಸ್ಥಾಪಕ ಇತ್ಯರ್ಥಃ । (c) ಮೇ ಶ್ರುತಂ ಮಾ ಪ್ರಾಹಾಸೀಃ। ಮಮ ವಿದ್ಯಾಗೋಚರ ಏವ ಸರ್ವದಾ ಭವ॥ ವಿಸ್ಮೃತೋ ಮಾ ಭವ । (d) ಹೇ ವಿಷ್ಣೋ ಅನೇನ ತ್ವದ್ವಿಷಯೇಣಾ ವಾಧಿತೇನಾಹೋರಾತ್ರಾನ್ಸಂದಧಾಮಿ ॥ ಸರ್ವಾಹೋರಾತ್ರೇಷ್ವಪಿ ತ್ವದ್ವಿಷಯಾಧ್ಯಯನಮೇವ ಕರೋಮೀತ್ಯರ್ಥಃ ॥

ಅ ॥ (a) 'ಆವಿರಾವೀಃ' ಎಂಬೀ ದೀರ್ಘವು ಅತಿಶಯವೆಂಬುವ ಅರ್ಥದಲ್ಲಿ ಶಬ್ದಾಧಿಕ್ಯವಿದ್ದರೆ ಅರ್ಥಕ್ಕೆ ಆಧಿಕ್ಯವು. ಎಂಬೀ ಸೂತ್ರದಿಂದ (b) ('ಅಣಗತೌ' ಎಂಬುವ ಧಾತುವ್ಯಾಖ್ಯಾನದಿಂದ) ಅಣಶಬ್ದಕ್ಕೆ ಗತಿ (ಚಲನಕ್ರಿಯೇ) ಯೆಂಬುವ ಅರ್ಥವಿದ್ದುದರಿಂದ 'ಚಲಮಾಣ' ಎಂದು ಹೇಳಲ್ಪಡುತ್ತದೆ. ಅದನ್ನು ಧರಿಸುವುದರಿಂದ ಅದುಳ್ಳವನು 'ಆಣೀ' ಎನ್ನಿಸಿಕೊಳ್ಳುತ್ತಾನೆ. ಸ್ಥಾಪಕನೆಂದರ್ಥವು. (c) ನನ್ನ ಅಧ್ಯಯನವನ್ನು ಬಿಡಬೇಡ. ಯಾವಾಗಲೂ ನನ್ನ ವಿದ್ಯಾವಿಷಯನೇ ಆಗು. ಯಾವಾಗಲೂ ಮರತು ಬಿಡಬೇಡ. (d) ಎಲೋ ವಿಷ್ಣುವೇ! ಈ ನಿನ್ನ ವಿಷಯವಾದ ಅಧ್ಯಯನದಿಂದಲೇ ಹಗಲುರಾತ್ರಿಗಳನ್ನು ಧರಿಸುತ್ತೇನೆ. ಎಲ್ಲಾ ಹಗಲುರಾತ್ರಿಗಳಲ್ಲಿಯೂ ನಿನ್ನ ವಿಷಯವಾದ ಅಧ್ಯಯನವನ್ನೇ ಮಾಡುತ್ತೇನೆ, ಎಂದರ್ಥವು.

ಭಾ॥ (a) ಋತಂ ಯಥಾವದವಗತಂ ತ್ವಾಂ ವದಿಷ್ಯಾಮಿ । ಸತ್ಯಂ ಸಾಧುಗುಣೈಸ್ತತಂ ಸರ್ವನಿಯಂತಾರಂ ಚ ॥ (b) ತದ್ವಿಷ್ಣ್ವಾಖ್ಯಂ ಬ್ರಹ್ಮ ಮಾಮವತ್ವಿತಿ ತಸ್ಯೈವ ವಿಷ್ಣೋಃ ಪರೋಕ್ಷತ್ವೇನೈವ ಪ್ರಾರ್ಥನಂ । (c)

ವಾಙ್ಮ ಇತ್ಯಾದಿಕಂ ಖಂಡಂ ವಿಷ್ಣುಪ್ರಾರ್ಥನರೂಪಕಂ ಅವಿಘ್ನತ್ವಮಭೀಪ್ಸೂನಾಂ ಶಿಷ್ಯಾಣಾಂ ದೃಷ್ಟವಾನ್ ಹರಿಃ ॥ ಇತಿ ಚ ॥ ೧ ॥

**ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯ ವಿರಚಿತೇ ಶ್ರೀಮನ್ಮಹೈತರೇಯೋಪನಿಷದ್ಭಾಷ್ಯೇ ದ್ವಿತೀಯ ಪ್ರಪಾಟ್ಕೇ ಸಪ್ತಮೋಽಧ್ಯಾಯಃ ॥ ೨ ॥ ೭ ॥**

ಇತಿ ದ್ವಿತೀಯ ಪ್ರಪಾಟ್ಕಂ ಸಂಪೂರ್ಣಂ ॥ ೨ ॥

ಅ ॥ (a) ಋತಂ=ಯಥಾರ್ಥವಾಗಿ ತಿಳಿಯಲ್ಪಟ್ಟವನನ್ನು ಅಂದರೆ ಯಾವಾಗಲೂ ಏಕಪ್ರಕಾರನನ್ನಾಗಿ, ನಿನ್ನನ್ನು ಹೇಳುವೆನು. ಸತ್ಯಂ=ಸಾಧುಗುಣಗಳಿಂದ ವ್ಯಾಪ್ತನನ್ನಾಗಿಯೂ, ಸರ್ವರಿಗೂ ನಿಯಾಮಕನನ್ನಾಗಿಯೂ, (b) ಆ ವಿಷ್ಣ್ವಾಖ್ಯ ಪರಬ್ರಹ್ಮನು ನನ್ನನ್ನು ರಕ್ಷಿಸಲಿ ಎಂದು ಆ ವಿಷ್ಣುವಿಗೇನೇ ಪರೋಕ್ಷ (ಅಪ್ರತ್ಯಕ್ಷ) ವಾಗಿಯೇ ಪ್ರಾರ್ಥನೆಯು. (c) 'ವಾಙ್ಮೇ' ಇದು ಮೊದಲಾದ ಖಂಡವು ವಿಷ್ಣುವಿನ ಪ್ರಾರ್ಥನರೂಪವಾದದು. ಶ್ರೀ ಹರಿಯು ನಿರ್ವಿಘ್ನವನ್ನು ಇಚ್ಛಿಸುವ ಶಿಷ್ಯರಿಗೆ ನಿರ್ವಿಘ್ನವನ್ನೇ ಕಾಣಿಸುವವನು. ಹೀಗೂ ಉಕ್ತವಾಗಿದೆ. ॥ ೧ ॥

**ಈಪ್ರಕಾರ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ನಿರ್ಮಿಸಲ್ಪಟ್ಟ ಶ್ರೀಮನ್ಮಹೈತರೇಯೋಪನಿಷದ್ಭಾಷ್ಯದಲ್ಲಿ ಎರಡನೇ ಪ್ರಪಾಟ್ಕದಲ್ಲಿ ಏಳನೇ ಅಧ್ಯಾಯವು ಸಮಾಪ್ತವಾಯಿತು. ॥ ೨ ॥ ೭ ॥**

**ಎರಡನೇ ಪ್ರಪಾಟ್ಕವು ಸಂಪೂರ್ತಿಯಾಯಿತು ॥ ೨ ॥**

**ಕಲ್ಯಾಣಗುಣಪೂರ್ಣಾಯ ದೋಷದೂರಾಯ ವಿಷ್ಣವೇ ।
ಅನಂತಾಮ್ನಾಯ ವೇದ್ಯಾಯ ಶ್ರೀಪ್ರಾಣಪತಯೇ ನಮಃ ॥
ಸಮಸ್ತಗುಣಪೂರ್ಣೇನ ಶ್ರೀಪ್ರಾಣಪತಿನೇರಿತಃ ।
ಯದವೋಚಮಹಂ ತೇನ ಪ್ರೀಯತಾಂ ಕಮಲಾಲಯಃ ॥**



ವಿಷ್ಣುನಾಮಾರ್ಥರೂಪಾಣಾಂ ವೇದಾನಾಂ ಸಂಹಿತಾತ್ಮನಾಂ ।
ಲೌಕಿಕಾನಾಂ ಚ ಶಬ್ದಾನಾಂ ಮುಖ್ಯವಾಚ್ಯಂ ಹರಿಂ ಭಜೇ ॥

ಮೂ॥ ಹರಿಃ ಓಂ ॥ ಅಥಾತಃ ಸಂಹಿತಾಯಾಃ ಉಪನಿಷತ್ಪೃಥಿವೀ ಪೂರ್ವರೂಪಂ ದ್ಯೌರುತ್ತರರೂಪಂ ವಾಯುಸ್ಸಂಹಿತೇತಿ ಮಾಂಡೂಕೇಯ ಆಕಾಶಃ ಸಂಹಿತೇತ್ಯಸ್ಯ ಮಾಕ್ಷವ್ಯೋ ವೇದಯಾಂಚಕ್ರೇ ಸಹಾವಿಪರಿಹೃತೋ ಮೇಽನೇನ ಮೇಽಸ್ಯ ಪುತ್ರೇಣ ಸಮಾಗಾದಿತಿ ಸಮಾನೇ ವೈ ತತ್ಪರಿಹೃತೋ ಮೇನ ಇತ್ಯಾಗಸ್ತ್ಯಃ ಸಮಾನಂ ಹ್ಯೇತದ್ಭವತಿ ವಾಯುಶ್ಚಾಽಕಾಶಶ್ಚೇತ್ಯಧಿದೈವತಮಥಾಧ್ಯಾತ್ಮಂ ವಾಕ್ಪೂರ್ವರೂಪಂ ಮನ ಉತ್ತರರೂಪಂ ಪ್ರಾಣಸ್ಸಂಹಿತೇತಿ ಶೂರವೀರೋ ಮಾಂಡೂಕೇಯೋಽಥ ಹಾಸ್ಯ ಪುತ್ರ ಆಹ ಜ್ಯೇಷ್ಠೋ ಮನಃ ಪೂರ್ವರೂಪಂ ವಾಗುತ್ತರರೂಪಂ ಮನಸಾ ವಾ ಅಗ್ರೇ ಸಂಕಲ್ಪಯತ್ಯಥ ವಾಚಾ ವ್ಯಾಹರತಿ ತಸ್ಮಾನ್ಮನ ಏವ ಪೂರ್ವರೂಪಂ ವಾಗುತ್ತರರೂಪಂ ಪ್ರಾಣಸ್ತ್ವೇವ ಸಂಹಿತೇತಿ ಸಮಾನಮೇನಯೋರತ್ರ ಪಿತುಶ್ಚ ಪುತ್ರಸ್ಯ ಚ ಸ ಏಷೋಽಶ್ವರಥಃ ಪ್ರಷ್ಟಿವಾಹನೋ ಮನೋ ವಾಕ್ಪ್ರಾಣಸಂಹತಃ ಸ ಯ ಏವಮೇತಾಂ ಸಂಹಿತಾಂ ವೇದ ಸಂಧೀಯತೇ ಪ್ರಜಯಾ ಪಶುಭಿರ್ಯಶಸಾ ಬ್ರಹ್ಮವರ್ಚಸೇನ ಸ್ವರ್ಗೇಣ ಲೋಕೇನ ಸರ್ವಮಾಯುರೇತೀತಿ ನು ಮಾಂಡೂಕೇಯಾನಾಂ ॥ ೧ ॥

ಅ॥ ಎರಡನೇ ಪ್ರಘಟ್ಟಕದಲ್ಲಿ ಪ್ರತಿಪಾದ್ಯವಾದ ಅರ್ಥವನ್ನು ನಿರೂಪಿಸಿದ ಮೇಲೆ, ಅತಃ=ಮೋಕ್ಷವೆಂಬುವ ಮಹಾಫಲವಿದ್ದುದರಿಂದ, ಸಂಹಿತಾಯಾಃ='ವಿಷ್ಣು'ವೆಂಬ ನಾಮದ ಸಂಧಿದೇವತೆಯು, ತದ್ವ್ಯಾಖ್ಯಾನಭೂತವಾದ ಎಲ್ಲಾ ವೈದಿಕ ಶಬ್ದಗಳ ಸಂಧಿದೇವತೆಯು, ಮತ್ತು ಲೌಕಿಕ ಶಬ್ದಗಳ ಸಂಧಿ ದೇವತೆಯು (ಆಯಾಯ ಸಂಹಿತೆಯಲ್ಲಿರುವ ಎಲ್ಲಾ ವರ್ಣಗಳ), ಉಪನಿಷತ್=ಭಗವದ್ರೂಪಪ್ರತಿಪಾದನರೂಪವಾದ ರಹಸ್ಯವು, (ಹೇಳಲ್ಪಡುತ್ತದೆ.) ಪೃಥಿವೀ=ಪೃಥಿವಿಯಲ್ಲಿರತಕ್ಕ ಪೃಥಿವೀನಾಮಕ ವರಾಹರೂಪವು, ಪೂರ್ವರೂಪಂ=ಪೂರ್ವವರ್ಣ ಪ್ರತಿಪಾದ್ಯವು, ಪೂರ್ವವರ್ಣ ದೇವತೆಯು, ಪೂರ್ವವರ್ಣವೆಂದು ಹೆಸರುಳ್ಳದ್ದು. ದ್ಯೌಃ=ಸ್ವರ್ಗದಲ್ಲಿರತಕ್ಕ, ದ್ಯುನಾಮಕವಾದ ವಾಮನರೂಪವು, ಉತ್ತರರೂಪಂ=ಉತ್ತರವರ್ಣ ದೇವತೆಯು, ಉತ್ತರವರ್ಣ ಪ್ರತಿಪಾದ್ಯವು, ಉತ್ತರವರ್ಣನಾಮಕವು. ವಾಯುಃ=ವಾಯುವಿನಲ್ಲಿರತಕ್ಕ ವಾಯುನಾಮಕವಾದ, ನೃಸಿಂಹರೂಪವು, ಸಂಹಿತಾ=ಸಂಹಿತಾನಾಮಕವು, ಸಂಹಿತೆಯಲ್ಲಿರತಕ್ಕದ್ದು, ಸಂಧಿಪ್ರತಿಪಾದ್ಯವು. ಇತಿ=ಈ ಪ್ರಕಾರ, ಮಾಂಡೂಕೇಯಃ=ಮಾಂಡೂಕೇಯನಾಮಕಋಷಿಯು, (ತಿಳಿಯುತ್ತಾನೆ.) ಆಕಾಶಃ=ಚೆನ್ನಾಗಿ ಪ್ರಕಾಶಿಸುವುದರಿಂದ ಆಕಾಶನಾಮಕನಾದ ಆಕಾಶದಲ್ಲಿರತಕ್ಕ ನರಸಿಂಹನು, ಸಂಹಿತಾ=ವರ್ಣಗಳ ಮಧ್ಯದೇವತೆಯು, ಇತಿ=ಈ ಪ್ರಕಾರ, ಮಾಕ್ಷವ್ಯಃ=ಮಾಕ್ಷವ್ಯ ನಾಮಕ ಋಷಿಯು, ಅಸ್ಯ=ಈ ಮಾಂಡೂಕೇಯಋಷಿಯನ್ನು ಕುರಿತು, ವೇದಯಾಂಚಕ್ರೇ=ಬೋಧಿಸಿದನು. ಸ ಹ=ಮಾಂಡೂಕೇಯನು, ಮೇ=ನನ್ನ ಸಂಬಂಧಿಯಾದ, ನನ್ನಿಂದ ಧ್ಯಾನಿಸಲ್ಪಟ್ಟ, ಅಸ್ಯ=ಈ ಆಕಾಶನಾಮಕನಾದ ನರಸಿಂಹನ, ಪುತ್ರೇಣ=ಮಗನಾದ ವಾಯುವಿನಿಂದ, ಮಾಕ್ಷವ್ಯಃ=ಮಾಕ್ಷವ

ಖುಷಿಯು, ಸ ಸಮಗಾತ್=(ವಾಯುವಿನಲ್ಲಿದ್ದ ವಿಷ್ಣುವನ್ನು ಧ್ಯಾನಿಸದಿರುವುದರಿಂದ) ಸಂಗತನಾಗಲಿಲ್ಲ. ಇತಿ=ಈ ಕಾರಣದಿಂದ, ತೇನ=ಮಾಕ್ಷವ್ಯನಿಂದ, ಅವಿಪರಿಹೃತಃ=ತನ್ನ ಸಿದ್ಧಾಂತವು ನಿರಾಕರಿಸಲ್ಪಡಲಿಲ್ಲ. ಇತಿ=ಹೀಗೆ, ಮೇನೇ=ತಿಳಿದನು. ತತ್=ಆ ಉಪಾಸನೆಗಳು, ಸಮಾನೇ ನೈ=ಅವಿರುದ್ಧಗಳೇ ಆಗಿವೆ. (ಆಕಾಶದಲ್ಲಿಯೂ, ವಾಯುವಿನಲ್ಲಿಯೂ, ಇರತಕ್ಕ ಎರಡು ರೂಪಗಳಿಗೂ ಸಂಹಿತಾತ್ವ ಕೂಡುವುದರಿಂದ) ಮಾಂಡೂಕೇಯ ಖುಷಿಯ ಪಕ್ಷವು ಮಾಕ್ಷವ್ಯಖುಷಿಯಿಂದ) ಪರಿಹೃತಃ=ತಿರಸ್ಕೃತವೇ, (ಆಯಿತು). ಇತಿ=ಈ ಪ್ರಕಾರ, (ನಾನು) ಮೇನೇ=ತಿಳಿಯುತ್ತೇನೆ. ಇತಿ=ಹೀಗೆ, ಆಗಸ್ತ್ಯಃ=ಆಗಸ್ತ್ಯಖುಷಿಯು, (ತಿಳಿಯುತ್ತಾನೆ.) ('ಆಕಾಶಾದ್ವಾಯುಃ' ಎಂಬೀ ಶ್ರುತಿಯಿಂದ ಆಕಾಶವು ವಾಯುವಿನ ತಂದೆಯು. ಮಗನಿಂದ ತಂದೆಯು ಉತ್ತಮನಷ್ಟೆ. ಆಕಾಶದಲ್ಲಿಯೇ ವಿಷ್ಣುವನ್ನು ಧ್ಯಾನಿಸಿದರೆ ಹೆಚ್ಚಿನ ಫಲವು. ವಾಯುವಿನಲ್ಲಿ ಧ್ಯಾನಿಸಿದರೆ ಅಷ್ಟು ಫಲವಿಲ್ಲವು. ಹೀಗೆ ಅಗಸ್ತ್ಯನ ಅಭಿಪ್ರಾಯವು). (ಹೀಗೆ ಪೂರ್ವಪಕ್ಷಿಸಿ ಭಗವಂತನು ತನ್ನ ಸಿದ್ಧಾಂತವನ್ನು ನಿರೂಪಿಸುತ್ತಾನೆ). ಏತತ್=ಈ, ವಾಯುಶ್ಚ=ವಾಯುವು, ಆಕಾಶಶ್ಚ=ಆಕಾಶವೂ, ಇವೆರಡೂ, ಸಮಾನಂ ಹಿ=ಸಮವೇ, (ಅವಿರುದ್ಧವೇ), ಭವತಿ=ಆಗುತ್ತದೆ. (ಆಕಾಶಕ್ಕೆ ದೇವತೆಯಾದ ವಿನಾಯಕನು ಹುಟ್ಟುವುದಕ್ಕಿಂತ ಮೊದಲೇ ವಾಯುವು ವೈಕಾರಿಕಾಹಂಕಾರದಿಂದ ಹುಟ್ಟದ ಪ್ರಯುಕ್ತ ಗುಣಾಧಿಕನೂ ಬಲಾಧಿಕನೂ ಆಗಿರುತ್ತಾನೆ. ಪುನಃ ಭೂತಕೋಟಿಯಲ್ಲಿ ಆ ವಾಯುವಿಗೇನೇ ಆಕಾಶದಿಂದ ಉತ್ಪತ್ತಿಯು ಹೇಳಿರುವುದರಿಂದ, ಆಕಾಶವು ವಾಯುವಿಗೆ ತಂದೆಯಾದುದರಿಂದ ಅಧಿಕನಾದನು. ಅಂತೂ ಇಬ್ಬರಿಗೂ ಸಾಮ್ಯವೇ ಪ್ರಾಪ್ತವಾಯಿತು. ಆದುದರಿಂದ ಎರಡು ಪಕ್ಷಗಳೂ ಗ್ರಾಹ್ಯಗಳೇ ಆಗಿವೆ.) ಇತಿ=ಈ ಪ್ರಕಾರ, ಅಧಿದೈವತಂ=ದೇವತೆಯನ್ನಧಿಕರಿಸಿಕೊಂಡಿರತಕ್ಕ (ಸಂಹಿತೆಯ ರಹಸ್ಯವು ನಿರೂಪಿಸಲ್ಪಟ್ಟಿತು). ಅಥ=ಆ ಮೇಲೆ, ಅಧ್ಯಾತ್ಮಂ=ಆತ್ಮನನ್ನಧಿಕರಿಸಿರತಕ್ಕ (ಸಂಹಿತೆಯು ನಿರೂಪಿಸಲ್ಪಡುತ್ತದೆ.) ವಾಕ್=ವಾಗಿಂದ್ರಿಯದಲ್ಲಿರತಕ್ಕ ವಾಕ್‌ನಾಮಕವಾದ ಭಗವದ್ರೂಪವು, ಪೂರ್ವರೂಪಂ=ಪೂರ್ವವರ್ಣಪ್ರತಿಪಾದ್ಯವು. ಮನಃ=ಮನೋನಾಮಕವಾದ ಮನಸ್ಸಿನಲ್ಲಿರತಕ್ಕ ಭಗವದ್ರೂಪವು, ಉತ್ತರರೂಪಂ=ಉತ್ತರವರ್ಣ ಪ್ರತಿಪಾದ್ಯವು. ಪ್ರಾಣಃ=ಪ್ರಾಣನಾಮಕನಾದ ಪ್ರಾಣನಲ್ಲಿರತಕ್ಕ ಶ್ರೀ ಹರಿಯು, ಸಂಹಿತಾ=ಸಂಧಿದೇವತೆಯು, ವಾಕ್=ವಾಗಿಂದ್ರಿಯವು, ಪೂರ್ವರೂಪಂ=ಪ್ರಧಾನವು, ಮನಃ=ಅಂತಃಕರಣವು, ಉತ್ತರರೂಪಂ=ಅಪ್ರಧಾನವು, ಇತಿ=ಈ ಪ್ರಕಾರ, ಶೂರವೀರಃ ಮಾಂಡೂಕೇಯಃ=ಶೂರವೀರ ಮಾಂಡೂಕೇಯ ಖುಷಿಯು, (ತಿಳಿಯುತ್ತಾನೆ). ಅಥ=ಆ ಮೇಲೆ, ಅಸ್ಯ=ಶೂರವೀರ ಮಾಂಡೂಕೇಯನ, ಜ್ಯೇಷ್ಠಃ ಪುತ್ರಃ=ಹಿರಿಯ ಮಗನು, ಮನಃ=ಮನೋನಾಮಕವಾದ ವರಾಹ ರೂಪವು. ಪೂರ್ವರೂಪಂ=ಪೂರ್ವವರ್ಣ ಪ್ರತಿಪಾದ್ಯವು, ಮನಃ=ಅಂತಃಕರಣವು, ಪೂರ್ವರೂಪಂ=ಪ್ರಧಾನವು, ವಾಕ್=ವಾಕ್ ನಾಮಕವಾದ ವಾಮನ ರೂಪವು, ಉತ್ತರರೂಪಂ=ಉತ್ತರ ವರ್ಣ ಪ್ರತಿಪಾದ್ಯವು. ವಾಕ್=ವಾಗಿಂದ್ರಿಯವು, ಉತ್ತರ ರೂಪಂ=ಅಪ್ರಧಾನವು. ಮನಸಾ ವಾ=ಮನಸ್ಸಿನಿಂದ, ಅಗ್ರೇ=ಪ್ರಥಮದಲ್ಲಿ, ಸಂಕಲ್ಪಯತಿ=ಸಂಕಲ್ಪಿಸುತ್ತಾನೆ. ಅಥ=ಆ ಮೇಲೆ, ವಾಚಾ=ಮಾತಿನಿಂದ, ವ್ಯಾಹರತಿ=ಹೇಳುತ್ತಾನೆ. ತಸ್ಮಾತ್=ಆದುದರಿಂದ, ಮನ ಏವ=ಅಂತಃಕರಣವೇ, ಪೂರ್ವರೂಪಂ=ಪ್ರಧಾನವು. ವಾಕ್=ವಾಗಿಂದ್ರಿಯವು, ಉತ್ತರ ರೂಪಂ=ಅಪ್ರಧಾನವು. ಸಂಹಿತಾ ತು=ಸಂಧಿದೇವತೆಯಾದರೂ, ಪ್ರಾಣ ಏವ=ಪ್ರಾಣನಾಮಕನಾದ ಶ್ರೀಹರಿಯೇ, ಇತಿ=ಈ ಪ್ರಕಾರ, ಆಹ=ಹೇಳಿದನು. ಅತ್ರ=ಪ್ರಾಣಾಖ್ಯನಾದ ಪ್ರಾಣನಲ್ಲಿರತಕ್ಕ ನರಸಿಂಹನಿಗೆ ಸಂಹಿತಾದೇವತಾತ್ವವಿಷಯದಲ್ಲಿ, ಪಿತುಶ್ಚ=ತಂದೆಗೂ, ಪುತ್ರಸ್ಯ ಚ=ಮಗ

ನಿಗೂ, ಏನಯೋಃ=ಇವರಿಬ್ಬರ, ಸಮಾನಂ=(ಮತವು) ಸಮಾನವೇ. (ಇಬ್ಬರೂ ಪ್ರಾಣನೇ ಸಂಧಿದೇವತೆಯೆಂದು ಅಂಗೀಕರಿಸಿರುವರು. ವಾಙ್ಮನಸ್ಸುಗಳಿಗೆ ಪರಸ್ಪರವಾಗಿ ಪೂರ್ವೋತ್ತರ ರೂಪತ್ವವಿಷಯದಲ್ಲಿ 'ಮನಸಾ ವಾ ಅಗ್ರೇ ಸಂಕಲ್ಪಯತಿ' ಎಂದು ಯುಕ್ತಿಯನ್ನು ಉಪನ್ಯಾಸ ಮಾಡಿದರಿಂದ ಮಗನ ಪಕ್ಷವೇ ಶ್ರೇಷ್ಠವಾದುದು.) ಸ ಏಷಃ=ಆ ಈ ದೇಹಾಖ್ಯವಾದ, ಅಶ್ವ ರಥಃ=ಇಂದ್ರಿಯಾಖ್ಯವಾದ ಅಶ್ವದಿಂದೊಡಗೂಡಿದ ರಥವು, ಪ್ರಷ್ಟಿ ವಾಹನಃ=ಕೇಳಲರ್ಹವಾ ದುದಕ್ಕೆ ಉಪದೇಶಕನಾದ ಶ್ರೀಹರಿಗೆ ವಾಹನ ಭೂತವಾದುದು. ಮನೋವಾಕ್ಪ್ರಾಣಸಂಹತಃ= ಮನಸ್ಸು ವಾಕ್ಕು ಪ್ರಾಣಗಳಲ್ಲಿರತಕ್ಕ, ಮನಃ ವಾಕ್ ಪ್ರಾಣನಾಮಕನಾದ ಪರಮಾತ್ಮನಿಂದ ಸಂಬದ್ಧವಾಗಿದೆ. ಯಃ=ಯಾವ ಉಪಾಸಕನು, ಏವಂ=ಪೂರ್ವೋಕ್ತಪ್ರಕಾರ, ಏತಾಂ ಸಂಹಿತಾಂ=ಈ ಸಂಹಿತಾನಾಮಕ ಶ್ರೀ ಹರಿಯನ್ನು, ವೇದ=ತಿಳಿಯುತ್ತಾನೋ, ಸಃ=ಆತನು, ಸ್ವರ್ಗೇಣ ಲೋಕೇನ=ವೈಕುಂಠ ಮೊದಲಾದ ಮುಕ್ತಿಸ್ಥಾನದಿಂದ (ವಿಧಿಸಲ್ಪಡುತ್ತಾನೆ. ಅಂದರೆ ಮುಕ್ತನಾಗುತ್ತಾನೆ ಅಲ್ಲಿ). ಪ್ರಜಯಾ=ಪ್ರಕೃಷ್ಟಜ್ಞಾನದಿಂದಲೂ, ಪಶುಭಿಃ=ವೇದಗಳಿಂದಲೂ, ಯಶಸಾ=ಕೀರ್ತಿಯಿಂದಲೂ, ಬ್ರಹ್ಮವರ್ಚಸೇನ=ವಿಷ್ಣುವಿನ ಪ್ರಸಾದದಿಂದ ಚೆನ್ನಾಗಿ ಅಭಿವೃದ್ಧ ವಾದ ಸ್ವರೂಪತೇಜಸ್ಸಿನಿಂದಲೂ, ಸಂಧೀಯತೇ=ಕೂಡಿಸಲ್ಪಡುತ್ತಾನೆ. ಸರ್ವಂ=ನಿತ್ಯ ವಾದ, ಆಯುಃ=ಆಯುಸ್ಸನ್ನು, ಏತಿ=ಹೊಂದುತ್ತಾನೆ. (ಲೌಕಿಕ ಪ್ರಜಾದಿಗಳನ್ನು ಇಚ್ಛಿ ಸುವವನಾದರೆ ಅಂತಹ ಪ್ರಜಾದಿಗಳಿಂದಲೂ ಯುಕ್ತನಾಗಿ ಪೂರ್ಣವಾದ ಆಯುಸ್ಸನ್ನು ಹೊಂದುತ್ತಾನೆ.) ಇತಿ ನು=ಹೀಗೆಯೇ ಮಾಂಡೂಕೇಯಾನಾಂ=ಮಾಂಡೂಕೇಯರ ಸಂಬಂಧಿ ಗಳಾದ, ಅಂದರೆ ಮಾಂಡೂಕೇಯರಿಂದ ಧ್ಯಾನಿಸಲ್ಪಟ್ಟ ವಿದ್ಯೆಗಳು. ॥ ೧ ॥

**ಭಾ॥** **(a)** ಓಂ ವಿಷ್ಣುನಾಮ್ನಿ ಷಕಾರಸ್ಯ ಣಕಾರಸ್ಯ ಚ ಸಂಹಿತಾಂ । ವಿಷ್ಣೋ ಸ್ತು ಬಹುರೂಪಾಣಾಂ ವಾಚಿಕಾವೃಷಯೋ ವಿದುಃ ॥ **(b)** ತೌ ಚ ವರ್ಣೌ ಹರೇಃ ಸಮ್ಯಕ್ಸ್ವರೂಪಪ್ರತಿಪಾದಕೌ । ಬಹುಧೈವ ಸ್ಥಿತಸ್ಯಾಸ್ಯ ಸದೈವೈಕ ಸ್ವರೂಪಿಣಃ ॥ **(c)** ವಿಷ್ಣುನಾಮಾರ್ಥರೂಪತ್ವಾದ್ವೇದಾನಾಮಪಿ ಸರ್ವಶಃ। ಅನ್ಯೇಷಾಮಪಿ ಶಬ್ದಾನಾಂ ಸಂಹಿತಾ ವಿಷ್ಣುವಾಚಿಕಾಃ । ತದ್ವಾಚಕಾ ಸ್ತಥಾ ವರ್ಣಾಃ ಸರ್ವೇ ಲೌಕಿಕ ವೈದಿಕಾಃ ॥

ಅ ॥ (a) ವಿಷ್ಣುವೆಂಬ ನಾಮದಲ್ಲಿ 'ಷ'ಕಾರ, 'ಣ'ಕಾರಗಳ ಸಂಧಿಯನ್ನು ಶ್ರೀ ವಿಷ್ಣು ವಿನ ವಾಮನ, ಪ್ರದ್ಯುಮ್ನಾದಿ ಬಹುರೂಪಗಳಿಗೆ ಪ್ರತಿಪಾದಕವನ್ನಾಗಿ ಋಷಿಗಳು ಹೇಳುತ್ತಾರೆ. (b) ಆ 'ಷ'ಕಾರ, 'ಣ'ಕಾರಗಳು, ಚೆನ್ನಾಗಿ ವರಾಹ, ವಾಸುದೇವಾದಿ ಸ್ವರೂಪದಿಂದ ಬಹು ಪ್ರಕಾರವಾಗಿರತಕ್ಕವನೂ, ಯಾವಾಗಲೂ ಭೇದರಹಿತವಾದ ಸ್ವರೂಪವುಳ್ಳವನೂ ಆದ ಶ್ರೀ ಹರಿಯ ಸ್ವರೂಪವನ್ನು ಪ್ರತಿಪಾದಿಸುತ್ತವೆ. (c) ಎಲ್ಲಾ ವೇದಗಳಿಗೂ, ಇತರ ಶಬ್ದಗಳಿಗೂ ವಿಷ್ಣುನಾಮದ ಅರ್ಥ ಪ್ರತಿಪಾದಕತ್ವವಿದ್ದುದರಿಂದ (ಅವುಗಳ) ಪೂರ್ವೋತ್ತರ ವರ್ಣಗಳ ಸಂಧಿಗಳು ವಿಷ್ಣುಪ್ರತಿಪಾದಕಗಳು. ಹಾಗೆಯೇ ಪೌರುಷೇಯ ವಾಕ್ಯದಲ್ಲಿರುವವೂ ವೇದ ಗಳಲ್ಲಿರುವವೂ ಆದ ಎಲ್ಲಾ ವರ್ಣಗಳು ಆ ಣಕಾರ, ಷಕಾರಾರ್ಥಗಳನ್ನೇ ಪ್ರತಿಪಾದಿಸುತ್ತವೆ.

**ಭಾ॥** **(a)** ಪೃಥಿವೀನಾಮಕಂ ರೂಪಂ ಪೃಥುತ್ವಾತ್ಪೃಥಿವೀಸ್ಥಿತಂ । ದೇವತಾ ಪೂರ್ವವರ್ಣಸ್ಯ ಪೂರ್ವರೂಪಂ ತದುಚ್ಯತೇ ॥ **(b)** ದೇವತೋತ್ತರ ವರ್ಣಸ್ಯ ಕ್ರೀಡನಾಚ್ಚ ದ್ಯುನಾಮಕಂ । ದಿವಿ ಸ್ಥಿತಂ ಹರೇ ರೂಪಮು

ತ್ತರಂ ರೂಪಮುಚ್ಯತೇ ॥ (c) ವೇದಕತ್ವಾಚ್ಚಾಯನತ್ವಾದ್ರೂಪಂ ಯದ್ವಾಯುನಾಮಕಂ । ವಿಷ್ಣೋಸ್ತದ್ವರ್ಣಯೋರ್ಮಧ್ಯದೇವತೇತಿ ಪ್ರಕೀರ್ತಿತಂ ॥ ಸಂಹಿತಾನಾಮಕಂ ತಚ್ಚ ರೂಪದ್ವಯಸಹಸ್ಥಿತೇಃ ।

ಅ ॥ ವಿಸ್ತೃತವಾದುದರಿಂದ ಪೃಥಿವಿಯೆಂದು ಹೆಸರುಳ್ಳ ಪೃಥಿವಿಯಲ್ಲಿರತಕ್ಕ (ಹರಿಯು) ರೂಪವು ಪೂರ್ವ ವರ್ಣಕ್ಕೆ ದೇವತೆಯು. (ಯಾವುದರಿಂದ ಪೂರ್ವ ವರ್ಣಕ್ಕೆ ದೇವತೆಯೋ ಆದುದರಿಂದ) ಆ ರೂಪವು ಪೂರ್ವವರ್ಣವೆಂದು ಹೇಳಲ್ಪಡುತ್ತದೆ. (b) ಕ್ರೀಡಿಸುವುದರಿಂದ 'ದ್ಯು' ಎಂದು ಹೆಸರುಳ್ಳ ಸ್ವರ್ಗದಲ್ಲಿರಕ್ಕ ಶ್ರೀ ಹರಿಯ ರೂಪವು ಮೇಲಿನ ವರ್ಣಕ್ಕೆ ದೇವತೆಯು ಉತ್ತರವರ್ಣವೆಂದೂ ಹೇಳಲ್ಪಡುತ್ತದೆ. (c) ತಿಳಿಸಿಕೊಡುವುದರಿಂದಲೂ, ಆಶ್ರಯವಾದುದರಿಂದಲೂ, ಯಾವುದೊಂದು ವಾಯುವೆಂದು ಹೆಸರುಳ್ಳ ವಿಷ್ಣುವಿನ ರೂಪವಿದೆಯೋ, ಅದು ವರ್ಣಗಳ ಸಂಧಿದೇವತೆಯೆಂದು ಹೇಳಲ್ಪಟ್ಟದೆ. ಆ ರೂಪವು (ಪೂರ್ವೋತ್ತರ ವರ್ಣಗಳಿಂದ ಪ್ರತಿಪಾದ್ಯದೇವತೆಗಳ) ರೂಪದ್ವಯದಿಂದೊಡಗೂಡಿರುವುದರಿಂದ ಸಂಹಿತಾನಾಮಕವೂ ಆಗಿದೆ

ಭಾ॥ (a) ವರ್ಣದ್ವಯಂ ವಿಕಾರಂಚ ಷಕಾರಂ ಕೇಚಿದಬ್ರುವನ್ । ಷಕಾರಂ ಮಧ್ಯಮತ್ರೈವ ಣಕಾರಂ ಕೇಚಿದುತ್ತರಂ ॥ ಪೃಥಕ್ಕರಣಮೇವೈಷಾಂ ವರ್ಣಯೋರ್ಮಧ್ಯಮುಚ್ಯತೇ । (b) ಉಪಸರ್ಗಮಾತ್ರಂ ವೀತ್ಯಾಹುಃ ಕೇಚಿನ್ನಾಮ ಷ್ಣುಮಾತ್ರಕಂ ॥ ಷಕಾರಂ ಚ ಣಕಾರಂ ಚ ವರ್ಣೌ ಪೂರ್ವೋತ್ತರಾವಪಿ । (c) ವ್ಯಕ್ತಿರೇವೋಷ್ಮಣಸ್ತತ್ರ ಮಧ್ಯಮಿತ್ಯಭಿಧೀಯತೇ ॥ ಸರ್ವೇಽಪ್ಯೇತ ಉಪಾದೇಯಾಃ ಪಕ್ಷಾ ನಿರ್ದೋಷಕಾ ಯತಃ । ॥ ಇತ್ಯಾದ್ಯೈತರೇಯ ಸಂಹಿತಾಯಾಂ ॥

ಅ ॥ (a) 'ವಿ'ಕಾರವನ್ನೂ, 'ಷ'ಕಾರವನ್ನೂ, 'ಣ'ಕಾರವನ್ನೂ ಕೂಡ ಕೆಲವರು ಎರಡು ವರ್ಣವನ್ನಾಗಿ ಹೇಳಿದರು. (ಅಂತೂ 'ವಿ' ಎಂಬುವುದು ಪೂರ್ವವರ್ಣವು. 'ಷ್ಣು' ಎಂಬುವುದು ಮೇಲಿನ ವರ್ಣವು.) ಈ ಪಕ್ಷದಲ್ಲಿ 'ಷ'ಕಾರವನ್ನೇ ಮಧ್ಯವನ್ನಾಗಿ ಹೇಳುತ್ತಾರೆ. ಕೆಲವರು 'ಣ'ಕಾರವನ್ನು ಮೇಲಿನದ್ದನ್ನಾಗಿ ಹೇಳುತ್ತಾರೆ. (ಅಂತೂ 'ವಿಷ್' ಎಂಬುವುದು ಪೂರ್ವದ್ದು. 'ಣ' ಎಂಬುವುದು ಉತ್ತರದ್ದು. ಇಲ್ಲಿಯೂ ಷಕಾರವನ್ನೇ ಮಧ್ಯವನ್ನಾಗಿ ಹೇಳುತ್ತಾರೆ.) (ಒಂದನೇ ಕಲ್ಪದಲ್ಲಿ 'ಷ'ಕಾರವು, 'ಣ'ಕಾರದಿಂದೊಡಗೂಡಿ ಉತ್ತರವರ್ಣವು. ಎರಡನೇ ಕಲ್ಪದಲ್ಲಿ ಷಕಾರವು ವಿಕಾರದಿಂದೊಡಗೂಡಿ ಪೂರ್ವ ವರ್ಣವು. ಎರಡು ಕಲ್ಪದಲ್ಲಿಯೂ ಷಕಾರವು ಹೇಗೇ ಮಧ್ಯಮವಾಗುವುದು, ಎಂದರೆ) ಇಬ್ಬರ ಪಕ್ಷದಲ್ಲಿಯೂ ವಿಕಾರ ಷಕಾರಗಳಿಗೆ, ಷಕಾರ ಣಕಾರಗಳಿಗಾಗಲೀ ಪ್ರತ್ಯೇಕ ಉಚ್ಚಾರಣವೇ ಮಧ್ಯವೆಂದು ಹೇಳಲ್ಪಡುತ್ತದೆ. (b) ಕೆಲವರು 'ವಿ' ಎಂಬುವುದನ್ನು ಕೇವಲ ಉಪಸರ್ಗವೆಂದು ಹೇಳುತ್ತಾರೆ. 'ಷ್ಣು' ಎಂಬುವುದು ಕೇವಲ ನಾಮವು. ಷಕಾರವನ್ನೂ, ಣಕಾರವನ್ನೂ ಕೂಡ ಪೂರ್ವೋತ್ತರ ವರ್ಣಗಳನ್ನಾಗಿ ಹೇಳುತ್ತಾರೆ. (c) ಅದರಲ್ಲಿ ಊಷ್ಮವಾದ ಷಕಾರಕ್ಕೆ ವ್ಯಕ್ತಿಯೇ ಮಧ್ಯವೆಂದು ಹೇಳಲ್ಪಡುತ್ತದೆ. ಯಾವ ಕಾರಣದಿಂದ ಎಲ್ಲವೂ ದೋಷವಿಲ್ಲದಿರುವವುಗಳೋ (ಆದ ಕಾರಣ) ಈ ಎಲ್ಲಾ ಪಕ್ಷಗಳೂ ಸ್ವೀಕರಿಸಲಿಕ್ಕೆ ಯೋಗ್ಯಗಳೇ ಆಗಿವೆ. ಇದೇ ಮೊದಲಾದ ವಿಷಯವು ಐತರೇಯಸಂಹಿತೆಯಲ್ಲಿದೆ.

ಭಾ॥ **(a)** ಆಕಾಶಸ್ಥ ಆಕಾಶನಾಮಾ ಭಗವಾನ್ವರ್ಣಯೋರ್ಮಧ್ಯದೇವತೇತಿ ಮಾಕ್ಷವ್ಯಃ । ಉಭಯರೂಪಸಂಹಿತತ್ವಾತ್ಸಂಹಿತಾನಾಮಕಃ ॥ ಸ ಮಾಂಡೂಕೇಯಸ್ತೇನ ಮಾಕ್ಷವ್ಯೇಣಾಪರಿಹೃತಃ ಸ್ವಪಕ್ಷ ಇತಿ ಮೇನೇ । **(b)** ಮೇ ಮದೀಯೇನ ಮದುಪಾಸಿತೇನಾಸ್ಯಾಕಾಶಸ್ಯ ಪುತ್ರೇಣ ವಾಯುನಾ ನ ಸಮಾಗಾದಸೌ ಮಾಕ್ಷವ್ಯಃ ॥ ವಾಯುಸ್ಥ ವಿಷ್ಣ್ವನುಪಾಸನಾತ್ । ಯದ್ಯಪ್ಯಾಕಾಶಸ್ಥೋ ಭಗವಾನ್ಸಂಹಿತಾನಾಮಕೋ ಭವತಿ ॥ ತಥಾಽಪಿ ನ ವಾಯುಸ್ಥಸ್ಯಾಸಂಹಿತಾತ್ವಂ ಭವತೀತ್ಯಪರಿಹೃತತ್ವಂ । **(d)** ಪರಿಹೃತೋ ಮಾಂಡೂಕೇಯಪಕ್ಷ ಇತ್ಯಹಂ ಮೇನ ಇತ್ಯಾಗಸ್ತ್ಯಃ ॥ ಆಕಾಶೇ ವಿಷ್ಣೂಪಾಸನಸ್ಯಾಧಿಕಫಲತ್ವಾತ್ । ಪಿತಾ ಹ್ಯಾಕಾಶೋ ವಾಯೋಃ ॥

ಅ ॥ (a) ಆಕಾಶದಲ್ಲಿರತಕ್ಕ (ಚೆನ್ನಾಗಿ ಪ್ರಕಾಶಿಸುವುದರಿಂದ) ಆಕಾಶನಾಮಕನಾದ ಶ್ರೀ ಹರಿಯು ವರ್ಣಗಳ ಮಧ್ಯದೇವತೆಯು ಎಂದು ಮಾಕ್ಷವ್ಯಋಷಿಯು (ತಿಳಿದನು.) ಪೂರ್ವೋತ್ತರ ವರ್ಣದೇವತೆಗಳೆಂಬ ಎರಡು ರೂಪಗಳ ಸಂಧಿದೇವತೆಯಾದುದರಿಂದ ಸಂಹಿತೆಯೆಂದು ಹೆಸರುಳ್ಳವನು. ಆ ಮಾಂಡೂಕೇಯ ಋಷಿಯು ಆ ಮಾಕ್ಷವ್ಯ ಋಷಿಯಿಂದ ತನ್ನ ಸಿದ್ಧಾಂತವು ನಿರಾಕರಿಸಲ್ಪಡಲಿಲ್ಲ ಎಂದು ತಿಳಿದನು. (b) ನನ್ನ ಸಂಬಂಧಿಯಾದ ನನ್ನಿಂದುಪಾಸನೆಮಾಡಲ್ಪಟ್ಟ ಈ ಆಕಾಶದ ಪುತ್ರನಾದ ವಾಯುವಿನಿಂದ ಈ ಮಾಕ್ಷವ್ಯನು ಸಂಗತನಾಗಲಿಲ್ಲ. ವಾಯುವಿನಲ್ಲಿದ್ದ ವಿಷ್ಣುವನ್ನು ಉಪಾಸನೆಮಾಡದಿರುವುದರಿಂದ (c) ಯದ್ಯಪಿ ಆಕಾಶದಲ್ಲಿರತಕ್ಕ ಶ್ರೀ ಹರಿಯು ಸಂಹಿತೆಯೆಂದು ಹೆಸರುಳ್ಳವನು ಆಗುತ್ತಾನೆ. ಆದರೂ ವಾಯುವಿನಲ್ಲಿದ್ದವನಿಗೆ ಸಂಹಿತಾದೇವತಾತ್ವಾಭಾವವು ಆಗುವುದಿಲ್ಲ. ಆದುದರಿಂದ ನಿರಾಕರಿಸಲ್ಪಡಲಿಲ್ಲ. (d) ಮಾಂಡೂಕೇಯ ಋಷಿಯ ಪಕ್ಷವು (ಮಾಕ್ಷವ್ಯ ಋಷಿಯಿಂದ) ತಿರಸ್ಕರಿಸಲ್ಪಟ್ಟಿತು ಎಂದು ನಾನು ತಿಳಿಯುತ್ತೇನೆ. ಎಂದು ಆಗಸ್ತ್ಯಋಷಿಯು. ಆಕಾಶದಲ್ಲಿಯೇ ವಿಷ್ಣುವಿನ ಉಪಾಸನಕ್ಕೆ ಹೆಚ್ಚಿಗೆ ಫಲವಿದ್ದುದರಿಂದ ಆಕಾಶವು ವಾಯುವಿಗೂ ತಂದೆಯಷ್ಟೆ. ('ಆಕಾಶಾದ್ವಾಯುಃ' ಎಂಬೀ ಶ್ರುತಿಯಿಂದ. ಮಗನಿಂದ ತಂದೆಯು ಉತ್ತಮನಷ್ಟೆ, ಆದುದರಿಂದ ಆಕಾಶದಲ್ಲಿಯೇ ವಿಷ್ಣುವನ್ನು ಧ್ಯಾನಿಸಿದರೆ ಹೆಚ್ಚಿಗೆ ಫಲವು. ವಾಯುವಿನಲ್ಲಿ ಅಷ್ಟು ಇಲ್ಲವು.)

ಭಾ॥ **(a)** ಭಗವತಸ್ತು ಪಕ್ಷಃ ಸಮತ್ವಮೇವ ವಾಯ್ವಾಕಾಶಯೋರಿತಿ । ಆಕಾಶಸ್ಯ ಪಿತೃತ್ವಾದ್ವಾಯೋರ್ಬಲಾಧಿಕತ್ವಾಚ್ಚೋಭಯೋರುಪಾಸನಾಸ್ಥಾನತ್ವೇ ಸಾಮ್ಯಂ ॥ ತಸ್ಮಾದುಭಾವಪಿ ಗ್ರಾಹ್ಯೌ । **(b)** ತ್ವಗಿಂದ್ರಿಯದೇವತಾತ್ವೇನಾಕಾಶಾತ್ಪೂರ್ವಮೇವ ವಾಯೋಃ ಸಾತ್ವಿಕಾಹಂಕಾರಜತ್ವಾದ್ವಾಯೋರಾಕಾಶಾದ್ಗುಣಾಧಿಕತ್ವಂ ॥ ತಥಾಽಪ್ಯತ್ರಾಕಾಶಸ್ಯ ಪಿತೃತ್ವಂ ವ್ಯಾಪ್ತಿಶ್ಚಾಧಿಕೇತ್ಯುಪಾಸನಾಯಾಂ ಸಾಮ್ಯಂ । **(c)** ಅತ್ರ ಪ್ರಾಣಾಖ್ಯಸ್ಯ ಪ್ರಾಣೇ ಸ್ಥಿತಸ್ಯ ವಿಷ್ಣೋಃ ಸಂಹಿತಾನಾಮತ್ವೇ ಪಿತಾ ಪುತ್ರಯೋಃ ಸಾಮ್ಯಮೇವ । ಅನ್ಯತ್ರ ತು ಪುತ್ರಪಕ್ಷ ಏವ ಬಲೀಯಾನ್ ॥ ಯುಕ್ತಿಮತ್ವಾತ್ ।

ಅ || (a) ಎಲ್ಲವೂ ಪರಮಾತ್ಮನದ್ದೇ ಪಕ್ಷವು. ಉಪದೇಶದಿಂದ ಮೊದಲು ಇತರರಿಂದ ತಿಳಿಯಲ್ಪಡದೆ ಇದ್ದು ತನ್ನಿಂದ ಮಾತ್ರ ತಿಳಿಯಲ್ಪಟ್ಟ ಪಕ್ಷವು ಸ್ವಪಕ್ಷವು. ವಾಯುವಿಗೂ ಆಕಾಶಕ್ಕೂ ಇಬ್ಬರಿಗೂ ಸಾಮ್ಯವೇ ಎಂದು (ಶ್ರೀ ಹರಿಯು ತನ್ನ ಸಿದ್ಧಾಂತವನ್ನು ಹೇಳಿದನು.) ಆಕಾಶಕ್ಕೆ ಪಿತೃತ್ವವಿದ್ದಪ್ರಯುಕ್ತವೂ ವಾಯುವಿಗೆ ಹೆಚ್ಚುಬಲವಿದ್ದಪ್ರಯುಕ್ತವೂ ಇಬ್ಬರಿಗೂ ಉಪಾಸನಾಸ್ಥಾನತ್ವವಿಷಯದಲ್ಲಿ ಸಾಮ್ಯವೇ ಇದೆ. ಆದುದರಿಂದ ಎರಡು ಪಕ್ಷಗಳೂ ಗ್ರಾಹ್ಯಗಳೇ. (b) ವೈಕಾರಿಕ, ತೈಜಸ, ತಾಮಸ, ಎಂದು ಅಹಂಕಾರವು ಮೂರುವಿಧವು. ಆದರಲ್ಲಿ ವೈಕಾರಿಕವೆಂಬ ಸಾತ್ವಿಕ ಅಹಂಕಾರದಿಂದ 'ವೈಕಾರಿಕಾನ್ಮನೋ ಜಜ್ಞೇ ದೇವಾ ವೈಕಾರಿಕಾ ದಶ | ದಿಗ್ವಾತಾರ್ಕ ಪ್ರಚೇತೋಽಶ್ವಿ ವಹ್ನೀಂದ್ರೋಪೇಂದ್ರ ಮಿತ್ರಕಾಃ' ಎಂಬೀ ೧೦ ಇಂದ್ರಿಯಾಭಿಮಾನಿದೇವತೆಗಳು ಹುಟ್ಟಿದರು. ಆಮೇಲೆ ತೈಜಸಾಹಂಕಾರದಿಂದ ೫ ಇಂದ್ರಿಯಗಳೂ, ತಾಮಸಾಹಂಕಾರದಿಂದ ೫ ಭೂತಗಳೂ ಹುಟ್ಟಿದವು. 'ಆದಿಸೃಷ್ಟೌ ಪೂರ್ವಜಾ ಯೇ ತೇಽಧಿಕಾಃ ಸರ್ವತೋ ಗುಣೈಃ' ಎಂಬ ಪ್ರಮಾಣದಿಂದ ಆಕಾಶದಿಂದ ವಾಯುವು ಗುಣಾಧಿಕನು. ತ್ವಗಿಂದ್ರಿಯಕ್ಕೆ ದೇವತೆಯಾದುದರಿಂದ, ಆಕಾಶದೇವತೆಯಾದ ವಿನಾಯಕನು, ಹುಟ್ಟುವುದಕ್ಕಿಂತ ಮೊದಲೇ ವಾಯುವು ಸಾತ್ವಿಕಾಹಂಕಾರದಿಂದ ಹುಟ್ಟಿರುವುದರಿಂದ, ವಾಯುವಿಗೆ ಆಕಾಶಕ್ಕಿಂತ ಗುಣಾಧಿಕ್ಯವದೆ, ಆದರೂ ('ಆತ್ಮನಃ ಆಕಾಶಃಸ ಂಭೂತಃ' ಎಂಬೀ ಭೂತೋತ್ಪತ್ತಿಪ್ರಕರಣದಲ್ಲಿ) ಆಕಾಶಕ್ಕೆ ಪಿತೃತ್ವವೂ (ಭೂತಾಂತರ್ಗತಸ್ವರೂಪದಿಂದ ವಾಯುವಿಗಿಂತ) ವ್ಯಾಪ್ತಿಯೂ ಕೂಡ ಅಧಿಕವಾಗಿಯದೆ. ಎಂದು ಉಪಾಸನೆಯಲ್ಲಿ ಸಾಮ್ಯವು. (c) ('ಸಮಾನಮೇನಯೋರತ್ರ ಪಿತುಶ್ಚ ಪುತ್ರಸ್ಯ ಚ' ಎಂಬೀ ವಾಕ್ಯದಲ್ಲಿದ್ದ 'ಅತ್ರ' ಎಂಬೀ ಪದವನ್ನು ವ್ಯಾಖ್ಯಾನಮಾಡುತ್ತಾರೆ.) ಅತ್ರ=ಪ್ರಾಣನೆಂದು ಹೆಸರುಳ್ಳ, ಪ್ರಾಣನಲ್ಲಿರತಕ್ಕ ವಿಷ್ಣುವಿಗೆ ಸಂಹಿತಾನಾಮತ್ವವಿಷಯದಲ್ಲಿ ತಂದೆಯು ಮಗನು ಇವರಿಬ್ಬರ ಪಕ್ಷಗಳಿಗೆ ಸಾಮ್ಯವೇ. ವಾಙ್ಮನಸ್ಸುಗಳಿಗೆ ಪೂರ್ವೋತ್ತರ ವರ್ಣದೇವತಾತ್ವವಿಷಯದಲ್ಲಿ ಮಗನಪಕ್ಷವೇ ಬಲಿಷ್ಠವು. 'ಮನಸಾ ವಾ ಅಗ್ರೇ ಸಂಕಲ್ಪಯತಿ' ಎಂದು ಯುಕ್ತಿಯನ್ನುಪನ್ಯಾಸಮಾಡಿರುವುದರಿಂದ

ಭಾ|| **(a)** ಮನೋವಾಕ್ಪ್ರಾಣನಾಮಾಸೌ ಮನ ಆದಿಷು ಸಂಸ್ಥಿತೇಃ | ವಿಷ್ಣುಸ್ತಸ್ಯ ರಥೋ ದೇಹ ಇಂದ್ರಿಯಾಶ್ವಃ ಪ್ರಕೀರ್ತಿತ ಇತಿ ಚ || **(b)** ಪ್ರಷ್ಟಿಃ ಸ ಪೃಚ್ಛನೀಯತ್ವಾತ್ಪರಮಾತ್ಮಾ ಜನಾರ್ದನಃ | ವಕ್ತೃತ್ವಾಚ್ಚೈವ ವಾಙ್ನಾಮಾ ಮನೋ ಮಂತೃತ್ವಹೇತುತ ಇತಿ ಚ || **(c)** ಪ್ರಾಣನ್ನೇವ ಪ್ರಾಣೋ ನಾಮ ಭವತಿ | ವದನ್ವಾಕ್ಪಶ್ಯಂಶ್ಚಕ್ಷುಃ ಶೃಣ್ವನ್ ಶ್ರೋತ್ರಂ ಮನ್ವಾನೋ ಮನಸ್ತಾನ್ಯಸ್ಯೈತಾನಿ ಕರ್ಮ ನಾಮಾನ್ಯೇವೇತಿ ಚ ಶ್ರುತಿಃ || **(d)** ಮುಕ್ತಿರೇವ ಸ್ವರ್ಗಲೋಕಃ | ಅಮುಷ್ಮಿನ್ಸ್ವರ್ಗೇ ಲೋಕೇ ಸರ್ವಾನ್ಕಾಮಾನಾಪ್ತ್ವೇತಿ ಪ್ರಸ್ತುತತ್ವಾತ್ ||

ಅ || (a) ಈ ವಿಷ್ಣುವು ಮನಸ್ಸೇ ಮೊದಲಾದವುಗಳಲ್ಲಿ ಇದ್ದುದರಿಂದ 'ಮನಃ ವಾಕ್ ಪ್ರಾಣ' ಎಂದು ಹೆಸರುಳ್ಳವನು. ಆ ಹರಿಗೆ ದೇಹಾಖ್ಯವಾದ ಇಂದ್ರಿಯಗಳೆಂಬ ಅಶ್ವಗಳಿಂದ ಯುಕ್ತವಾದುದು ರಥವು ಎಂದು ಹೇಳಲ್ಪಟ್ಟದೆ. (b) ಆ ಪರಮಾತ್ಮನು ಕೇಳಲರ್ಹನಾದುದರಿಂದ 'ಪೃಷ್ಟಿ' ಎನ್ನಿಸಿಕೊಳ್ಳುತ್ತಾನೆ. ಜನಾರ್ದನನು ಹೇಳುವುದರಿಂದಲೇ ವಾಙ್ನಾಮಕನು. ಮನನ ಶಕ್ತಿಯನ್ನು ಕೊಡುವ ಕಾರಣ ಮನೋನಾಮಕನು ಎಂದೂ ಅದೆ. (c) ಚೆನ್ನಾಗಿ ಚೇಷ್ಟೆಮಾಡುವವನಾಗಿಯೇ ಪ್ರಾಣನಾಮಕನಾಗುತ್ತಾನೆ. ಹೇಳುವ ಶಕ್ತಿಯನ್ನು

ಕೊಡುವವನಾಗಿ ವಾಕ್‌ನಾಮಕನೂ, ದರ್ಶನಶಕ್ತಿಯನ್ನು ಕೊಡುವವನಾಗಿಯೇ ಚಕ್ಷುಃ ಎಂದೂ, ಶ್ರವಣ ಶಕ್ತಿಯನು ಕೊಡುವವನಾಗಿಯೇ ಶ್ರೋತ್ರ ಎಂದೂ, ಮನನ ಶಕ್ತಿಯನ್ನು ಕೊಡುವವನಾಗಿ ಮನೋನಾಮಕನೂ, ಈತನಿಗೆ ಆ ಇವುಗಳು ಕ್ರಿಯಾಪ್ರವೃತ್ತಿನಿಮಿತ್ತಕ ನಾಮಗಳೇ, ಎಂದೂ ಶ್ರುತಿಯಿದೆ. (d) ಸ್ವರ್ಗಲೋಕವೆಂದರೆ ಮೋಕ್ಷವೇ. ಸ್ವರ್ಗದಲ್ಲಿ ಎಲ್ಲಾ ಕಾಮಗಳನ್ನು ಹೊಂದಿ ಎಂದು ಪ್ರಸ್ತುತವಾದುದರಿಂದ.

ಭಾ॥ (a) ಮುಕ್ತಃ ಪ್ರಕೃಷ್ಟಜ್ಞಾನೈಶ್ಚ ವೇದೈರ್ವಿಷ್ಣೂತ್ಥತೇಜಸಾ । ನಿತ್ಯಾಯುಷಾ ಚ ಯುಕ್ತಃ ಸ್ಯಾತ್ಸಂಹಿತಾರೂಪವಿದ್ಧರೇರಿತಿ ಚ ॥ (b) ಪ್ರಕೃಷ್ಟತ್ವೇನ ಜನನಾತ್ಪ್ರಜೇತಿ ಜ್ಞಾನಂ । ಪಾಂತಿ ಶಂ ಸಾಧನಾಶ್ಚೇತಿ ಪಶವೋ ವೇದಾಃ ॥ (c) ಪರಬ್ರಹ್ಮಣೋ ವಿಷ್ಣೋರ್ವರಣಾದೇವ ಸಮ್ಯಕ್ಖ್ಯಾಯಿತಂ ಸ್ವರೂಪಂ ತೇಜಃ ಬ್ರಹ್ಮವರ್ಚಸಂ । (d) ಲೌಕಿಕಪ್ರಜಾದಿಕಮಪಿ ತದಿಚ್ಛತಾಂ ಯಥಾಯೋಗ್ಯಂ ಭವತಿ ॥ ಮಾಂಡೂಕೇಯೈಃ ಋಷಿಭಿರುಪಾಸಿತಾ ಏತಾ ವಿದ್ಯಾಃ ॥ ೧ ॥

ಅ ॥ (a) ಶ್ರೀ ಹರಿಯ ಸಂಹಿತಾನಾಮಕವಾದ ರೂಪವನ್ನು ಪ್ರಕೃಷ್ಟ ಜ್ಞಾನಗಳಿಂದಲೂ ವೇದಗಳಿಂದಲೂ, ವಿಷ್ಣುವಿನ ಪ್ರಸಾದದಿಂದ ಅಭಿವೃದ್ಧವಾದ ಸ್ವರೂಪ ತೇಜಸ್ಸಿನಿಂದಲೂ ಯುಕ್ತನಾಗಿ ಮುಕ್ತನಾಗುವನು. ನಿತ್ಯವಾದ ಆಯುಷ್ಯದಿಂದಲೂ ಯುಕ್ತನಾಗುವನು. ಹೀಗೂ ಅದೆ. (b) ಪ್ರಕೃಷ್ಟವಾಗಿ ಹುಟ್ಟುವ ಪ್ರಯುಕ್ತ ಪ್ರಜಾ ಅಂದರೆ ಜ್ಞಾನವು. ರಕ್ಷಿಸುತ್ತವೆ, ಮುಕ್ತಿಗೆ ಸಾಧನಗಳೂ ಆಗಿವೆ ಎಂದು ಪಶವಃ=ವೇದಗಳು. (c) ಪರಬ್ರಹ್ಮನಾದ ವಿಷ್ಣುವಿನ ಸ್ವೀಕಾರದಿಂದಲೇ (ಶ್ರೀ ಹರಿಯು, ಈತನು ತನ್ನವನು ಎಂದು ಭಕ್ತನನ್ನಾಗಿ ಸ್ವೀಕಾರ ಮಾಡಿರುವುದರಿಂದ) ವಿಷ್ಣುವಿನ ಭಜನದಿಂದ ಚೆನ್ನಾಗಿ ಅಭಿವೃದ್ಧವಾದ ಸ್ವರೂಪ ತೇಜಸ್ಸು ಬ್ರಹ್ಮವರ್ಚಸ್ಸೆನ್ನಿಸುತ್ತದೆ. (d) ಲೌಕಿಕ ಪ್ರಜಾದಿಗಳನ್ನು ಕೂಡ ಇಚ್ಛಿಸುವವರಿಗೆ ಅವರವರ ಯೋಗ್ಯತಾನುಸಾರವಾಗಿ ಅದು ಆಗುತ್ತದೆ. ಮಾಂಡೂಕೇಯ ಋಷಿಗಳಿಂದ ಉಪಾಸನೆಮಾಡಲ್ಪಟ್ಟ ಈ ವಿದ್ಯೆಗಳು. ॥ ೧ ॥

**ಮಂ ॥ ಅಥ ಶಾಕಲ್ಯಸ್ಯ ಪೃಥಿವೀ ಪೂರ್ವರೂಪಂ ದ್ಯೌರುತ್ತರರೂಪಂ ವೃಷ್ಟಿಃ ಸಂಧಿಃ ಪರ್ಜನ್ಯಃ ಸಂಧಾತಾ ತದುತಾಪಿ ಯತ್ರೈತದ್ಬಲವದನೂದ್ಗೃಹ್ಣನ್ಸಂದಧದಹೋರಾತ್ರೇ ವರ್ಷತಿ ದ್ಯಾವಾಪೃಥಿವ್ಯೌ ಸಮಧಾತಾಮಿತ್ಯುತಾಪ್ಯಾಹುರಿತೀನ್ವಧಿದೈವತಮಥಾಧ್ಯಾತ್ಮಂ ಪುರುಷೋ ಹ ವಾ ಅಯಂ ಸರ್ವ ಅಂದಂದ್ವೇವಿದಲೇ ಭವತ ಇತ್ಯಾಹುಸ್ತಸ್ಯೇದಮೇವ ಪೃಥಿವ್ಯಾ ರೂಪಮಿದಂ ದಿವಸ್ತತ್ರಾಯಮಂತರೇಣಾಽಕಾಶೋ ಯಥಾಽಸೌ ದ್ಯಾವಾಪೃಥಿವ್ಯಾವಂತರೇಣಾಕಾಶಸ್ತಸ್ಮಿನ್ಹಾಸ್ಮಿನ್ನಾಕಾಶೇ ಪ್ರಾಣ ಆಯತ್ತೋ ಯಥಾಽಮುಷ್ಮಿನ್ನಾಕಾಶೇ ವಾಯುರಾಯತ್ತೋ ಯಥಾಽಮೂನಿ ತ್ರೀಣಿ ಜ್ಯೋತೀಂಷ್ಯೇವಮಿಮಾನಿ ಪುರುಷೇ ತ್ರೀಣಿ ಜ್ಯೋತೀಂಷಿ ಯಥಾಽಸೌದಿವ್ಯಾದಿತ್ಯ ಏವಮಿದಂ ಶಿರಸಿ ಚಕ್ಷುರ್ಯಥಾಽಸಾವಂತರಿಕ್ಷೇ ವಿದ್ಯುದೇವಮಿದಮಾತ್ಮನಿ**

ಹೃದಯಂ ಯಥಾಽಯಮಗ್ನಿಃ ಪೃಥಿವ್ಯಾಮೇವಮಿದಮುಪಸ್ಥೇರೇತ ಏವ ಮುಹ ಸ್ಮ ಸರ್ವಲೋಕಮಾತ್ಮಾನಮನುವಿಧಾಯಾಹೇದಮೇವ ಪೃಥಿವ್ಯಾ ರೂಪಮಿದಂ ದಿವಃ ಸ ಯ ಏವಮೇತಾಂ ಸಂಹಿತಾಂ ವೇದ ಸಂಧೀಯತೇ ಪ್ರಜಯಾ ಪಶುಭಿರ್ಯಶಸಾ ಬ್ರಹ್ಮವರ್ಚಸೇನ ಸ್ವರ್ಗೇಣ ಲೋಕೇನ ಸರ್ವಮಾಯುರೇತಿ ॥ ೨ ॥

ಅ ॥ ಅಥ=ಮಾಂಡೂಕೇಯ ಋಷಿಯು ಉಪಾಸನೆ ಮಾಡಿದ ವಿದ್ಯೆಯನ್ನು ನಿರೂಪಿಸಿದ ಮೇಲೆ, ಶಾಕಲ್ಯಸ್ಯ=ಶಾಕಲ್ಯ ಸಂಬಂಧಿಯಾದ ವಿದ್ಯೆಯು. ಅಂದರೆ ಶಾಕಲ್ಯನಿಂದುಪಾಸನೆ ಮಾಡಲ್ಪಟ್ಟ ವಿದ್ಯೆಯು (ಹೇಳಲ್ಪಡುತ್ತದೆ). ಪೃಥಿವೀ=ಪೃಥಿವಿಯಲ್ಲಿರತಕ್ಕ ಪೃಥಿವೀ ನಾಮಕವಾದ ವಾಸುದೇವಾಖ್ಯರೂಪವು, ಪೂರ್ವರೂಪಂ=ಪೂರ್ವವರ್ಣಪ್ರತಿಪಾದ್ಯವು. ದ್ಯೌಃ=ದ್ಯುನಾಮಕವಾದ ಸ್ವರ್ಗದಲ್ಲಿರತಕ್ಕ ಸಂಕರ್ಷಣಾಖ್ಯರೂಪವು, ಉತ್ತರರೂಪಂ=ಉತ್ತರವರ್ಣಪ್ರತಿಪಾದ್ಯವು. ವೃಷ್ಟಿಃ=ಮಳೆಸುರಿಸುವುದರಿಂದ ವೃಷ್ಟಿನಾಮಕವಾದ ವೃಷ್ಟಿಯಲ್ಲಿರತಕ್ಕ ಪ್ರದ್ಯುಮ್ನಾಖ್ಯರೂಪವು, ಸಂಧಿಃ=ಸಂಹಿತಾ ದೇವತೆಯು, ಭಕ್ತರನ್ನು ಚೆನ್ನಾಗಿ ಪೋಷಿಸುವುದರಿಂದ ಸಂಧಿನಾಮಕವೂ. ಪರ್ಜನ್ಯಃ=ಉತ್ಕೃಷ್ಟವಾದ ಸಸ್ಯಾದಿಗಳನ್ನು ಹುಟ್ಟಿಸುವುದರಿಂದ ಪರ್ಜನ್ಯನಾಮಕನಾದ ಪರ್ಜನ್ಯಗಳಲ್ಲಿರುವ ಅನಿರುದ್ಧನು, ಸಂಧಾತಾ=ಚೆನ್ನಾಗಿ ಧರಿಸುವುದರಿಂದ, ಸಂಧಾತೃನಾಮಕರಾದ ಉಚ್ಚರಿಸುವ ಪುರುಷರಲ್ಲಿರುವವನು. ಚೆನ್ನಾಗಿ ಧರಿಸುವುದರಿಂದಲೂ, ದ್ಯಾವಾಪೃಥಿವಿಗಳಲ್ಲಿ ವೃಷ್ಟಿಯನ್ನು ಕೂಡಿಸುವುದರಿಂದಲೂ ಸಂಧಾತೃನಾಮಕನು. ತದುತ=ವೃಷ್ಟಿಗೆ ಸಂಧಿತ್ವವೂ ಪರ್ಜನ್ಯನಿಗೆ ಸಂಧಾತೃತ್ವವೂ ಕೂಡ, ಅಪಿ=ಸಂಭಾವಿತವೇ. ಯತ್ರ=ಯಾವಾಗ, ಏತತ್=ಈ ಪರ್ಜನ್ಯನು, ಬಲವತ್=ಬಲಿಷ್ಠ ಹೇಗೆ ಆದೀತೋ ಹಾಗೆ, ಅನೂದ್ಗೃಹ್ಣನ್=ಅನುಕೂಲವಾಗಿ ಚೆನ್ನಾಗಿ ಸಮುದ್ರದ ನೀರನ್ನು ತನ್ನ ಹೊಟ್ಟೆಯಲ್ಲಿ ಸ್ವೀಕರಿಸತಕ್ಕವನಾಗಿ, ಅಹೋರಾತ್ರೇ=ಹಗಲು ರಾತ್ರಿಗಳನ್ನು, ಸಂದಧತ್=ಅಭಿವ್ಯಾಪಿಸಿಕೊಂಡು, ವರ್ಷತಿ=ವರ್ಷಿಸುತ್ತಾನೆ. (ಆಗ) ದ್ಯಾವಾಪೃಥಿವ್ಯಾ=ಸ್ವರ್ಗಭೂಮಿಗಳೂ ಕೂಡ, ಸಮಧಾತಾಂ=ಕೂಡಿಸಲ್ಪಟ್ಟವು. ಇತಿ=ಹೀಗೆ, ಉತ ಅಪಿ=ಈಗಲೂ ಕೂಡ, ಆಹುಃ=(ಜನರು) ಹೇಳುತ್ತಾರೆ. ಇತಿ ನು=ಈ ಪ್ರಕಾರವಾಗಿಯೇ, ಅಧಿದೈವತಂ=ದೇವತೆಗಳನ್ನಧಿಕರಿಸತಕ್ಕ ಉಪಾಸನೆಯು ನಿರೂಪಿಸಲ್ಪಟ್ಟಿತು. ಅಥ=ಆ ಮೇಲೆ, ಅಧ್ಯಾತ್ಮಂ=ಪೃಥಿವ್ಯಧಿಷ್ಠಾನಕವಾದ ಸಂಹಿತಾರೂಪಗಳ ಅಧಿಷ್ಠಾನವು, (ಹೇಳಲ್ಪಡುತ್ತದೆ.) ಅಯಂ ಸರ್ವಃ, ಪುರುಷಃ=ಈ ಎಲ್ಲಾ ಪುರುಷದೇಹವು, ಆಂದಂ ಹವಾ=ಒಂದವಯವಿಯು. ತಸ್ಯ=ಆ ದೇಹಕ್ಕೆ, ದ್ವೇ ವಿದಲೇ=ಎರಡು ಪೂರ್ವೋತ್ತರ ಭಾಗಗಳು, ಭವತಃ=ಆಗುತ್ತವೆ. ಇತಿ=ಹೀಗೆ, ಆಹುಃ=ಹೇಳುತ್ತಾರೆ. ತಸ್ಯ=ಆ ದೇಹದ, ಇದಮೇವ=ಪಾದವನ್ನಾರಂಭಿಸಿ ಕಟಿ ಪರ್ಯಂತವಾದ ಕೆಳಗಿನ ಅರ್ಧವೇ, ಪೃಥಿವ್ಯಾ ರೂಪಂ=ಪೃಥಿವೀ ದೇವತೆಗೆ ಪ್ರತಿಮಾರೂಪವು. ಪೃಥಿವೀನಾಮಕನಾದ ವಾಸುದೇವನಿಗೆ ಪ್ರತಿಮಾರೂಪವು. ಇದಂ=ನಾಭಿಯನ್ನಾರಂಭಿಸಿ ಶಿರಃಪರ್ಯಂತವಾದ ಉತ್ತರಾರ್ಧವು, ದಿವಃ=ದ್ಯುಲೋಕದ, ರೂಪಂ=ಸಮಾನವು. ದ್ಯುದೇವತೆಗೂ, ದ್ಯುಲೋಕದಲ್ಲಿರತಕ್ಕವನೂ, ದ್ಯುನಾಮಕನೂ ಆದ ಸಂಕರ್ಷಣನಿಗೆ, ಪ್ರತಿಮಾಭೂತವು. (ವಾಕ್ಕು ವೃಷ್ಟಿಯ ಪ್ರತಿನಿಧಿಯು. ವೃಷ್ಟಿದೇವತೆಯ ಪ್ರತಿಮೆಯು. ಉಚ್ಚರಿಸುವ ಪುರುಷನು ಪರ್ಜನ್ಯನ ಪ್ರತಿನಿಧಿಯು. ಪರ್ಜನ್ಯದೇವತೆಯ ಪ್ರತಿಮೆಯು. ವೃಷ್ಟ್ಯಭಿಮಾನಿಯಾದ ಪ್ರದ್ಯುಮ್ನನಿಗೂ, ಪರ್ಜನ್ಯಾಭಿಮಾನಿಯಾದ ಅನಿರುದ್ಧನಿಗೂ ಪ್ರತಿಮಾ

ಭೂತವು.) ತತ್ರ=ಆ ದೇಹದಲ್ಲಿ, ಅಯಂ ಅಂತರೇಣ=ಪೂರ್ವೋತ್ತರಾರ್ಧಗಳ ಮಧ್ಯದಲ್ಲಿ ಯಾವುದೊಂದು, ಆಕಾಶಃ=ಆಕಾಶವು, (ಇರುತ್ತದೋ) (ಅಲ್ಲಿ ಆಕಾಶಾಭಿಮಾನಿಯಾದ ಗಣಪತಿಯು ಆಕಾಶಕ್ಕೆ ನಿಯಾಮಕನಾದ ನೃಸಿಂಹನೂ ಇದ್ದಾನೆ.) ಅಸೌ=ಈ ಆಕಾಶವು, ದ್ಯಾವಾಪೃಥಿವ್ಯೌ ಅಂತರೇಣ=ಸ್ವರ್ಗಭೂಮಿಗಳ ಮಧ್ಯದಲ್ಲಿ ಇರತಕ್ಕ , ಆಕಾಶೋ ಯಥಾ= ಆಕಾಶದಂತೆಯೇ, ತಸ್ಮಿನ್=ಆ ಪ್ರಸಿದ್ಧವಾದ, ಅಸ್ಮಿನ್=ಆಕಾಶೇ=ಈ ಆಕಾಶದ ಒಳಗೆ, ಪ್ರಾಣಃ=ವಾಯುವು, ಆಯತ್ತಃ ಹ=ಅಧಿಷ್ಠಿತವಾಗಿದೆ. (ಆ ಪ್ರಾಣಸು ಅಮುಷ್ಮಿನ್ ಆಕಾಶೇ=ಬಾಹ್ಯಾಕಾಶದಲ್ಲಿ, ಯಥಾ=ಹೇಗೆ, ವಾಯುಃ=ವಾಯುವು, ತದಭಿಮಾನಿ ದೇವತೆಯು, ವಾಯುನಾಮಕ ದಾಶರಥಿಯು, ಆಯತ್ತಃ=ಅಧಿಷ್ಠಿತವಾಗಿದೆಯೋ, (ಹಾಗೆ ತಿಳಿಯತಕ್ಕದು). ಅಮೂನಿ=ಹೊರಗೆ ಇರುವ, ತ್ರೀಣಿ ಜ್ಯೋತೀಂಷಿ=ಆದಿತ್ಯ ಮೊದಲಾದ ಮೂರು ಜ್ಯೋತಿಸ್ಸುಗಳೂ, ತನ್ನಾಮಕಗಳೂ, ಅವುಗಳಲ್ಲಿರತಕ್ಕವುಗಳೂ, ಆದ ಕಪಿಲಾದಿ ರೂಪಗಳೂ, ಯಥಾ=ಹೇಗೆ ಇರುತ್ತವೋ, ಏವಂ=ಹೀಗೆ, ಪುರುಷೇ=ಪುರುಷದೇ ಹದಲ್ಲಿಯೂ, ಇಮಾನಿ ತ್ರೀಣಿ ಜ್ಯೋತೀಂಷಿ=ಈ ಮೂರು ಜ್ಯೋತಿಸ್ಸುಗಳು, (ಸನ್ನಿಹಿತಗಳಾ ಗಿವೆ). ಯಥಾ=ಹೇಗೆ, ದಿವಿ=ಸ್ವರ್ಗದಲ್ಲಿ, ಅಸೌ=ಈ, ಆದಿತ್ಯಃ=ಆದಿತ್ಯಾಖ್ಯಜ್ಯೋತೀಸ್ಸೋ, ಏವಂ=ಹೀಗೆಯೇ, ಶಿರಸಿ=ಪುರುಷದೇಹದ ಶಿರಸ್ಸಿನಲ್ಲಿ, ಇದಂ ಚಕ್ಷುಃ=ಈಚಕ್ಷುಸ್ಸೆಂಬ ಜ್ಯೋತಿಸ್ಸು, ಚಕ್ಷುರ್ನಾಮಕ ಸೂರ್ಯನು, ಅದಕ್ಕೆ ನಿಯಾಮಕನಾದ ಕಪಿಲನು, (ಇದ್ದಾನೆ.) ಯಥಾ=ಹೇಗೆ, ಅಂತರಿಕ್ಷೇ=ಆಕಾಶದಲ್ಲಿ, ಅಸೌ=ಈ, ವಿದ್ಯುತ್=ಮಿಂಚು, ವಿದ್ಯುತ್ನಾಮಕನೂ, ವಿದ್ಯುತ್ತಿನಲ್ಲಿರತಕ್ಕವನೂ ಆದ ಹಂಸನೋ, ಏವಂ=ಈ ರೀತಿಯಾಗಿ, ಆತ್ಮನಿ=ದೇಹದಲ್ಲಿ, ಇದಂ ಹೃದಯಂ=ಈ ಹೃದಯಾಖ್ಯ ಜ್ಯೋತಿಸ್ಸು, ಯಥಾ=ಹೇಗೆ, ಪೃಥಿವ್ಯಾಂ=ಪೃಥಿವಿಯಲ್ಲಿ, ಅಯಂ=ಈ, ಅಗ್ನಿಃ=ಬೆಂಕಿಯೋ, ಅದಕ್ಕೆ ದೇವತೆಯೋ, ಅಗ್ನಿ ನಾಮಕನಾದ ಪರಶುರಾಮನೋ, ಏವಂ=ಹೀಗೆ, ಉಪಸ್ಥೇ=ಉಪಸ್ಥದಲ್ಲಿ, ಇದಂ ರೇತಃ= ಈ ರೇತಸ್ಸೆಂಬ ಜ್ಯೋತಿಸ್ಸು, ರೇತೋನಾಮಕನಾದ ಅಗ್ನಿಯು, ಪರಶುರಾಮನೂ ಕೂಡ, ಏವಮುಹ=ಹೇಳಿದ ರೀತಿಯಿಂದಲೇ, ಸರ್ವಲೋಕಂ=ಮೂರುಲೋಕದ ಸ್ವರೂಪವಾದ, ಆತ್ಮಾನಂ=ಪುರುಷದೇಹವನ್ನೇ, ಅನುವಿಧಾಯ=ಅನುಸಂಧಾನ ಮಾಡಿ, ಇದಮೇವ ಪೃಥಿವ್ಯಾ ರೂಪಂ ಇಪಂ ದಿವಃ ಇತಿ ಶಾಕಲ್ಯಃ ಆಹ ಯಃ ಏವಂ ಏತಾಂ ಸಂಹಿತಾಂ ವೇದ, ಸಃ ಪ್ರಜಯಾ ಪಶುಭಿಃ=ಯಶಸಾ ಬ್ರಹ್ಮವರ್ಚಸೇನ ಸ್ವರ್ಗೇಣ ಲೋಕೇನ ಸಂಧೀಯತೇ, ಸರ್ವಂ ಆಯುಃ ಏತಿ.. ...... ॥ ೨ ॥

ಭಾ॥ (a) ವರಾಹೋ ವಾಮನಃ ಸಿಂಹ ಇತಿ ರೂಪತ್ರಯಂ ಹರೇಃ। ಪೂರ್ವೋ ತ್ತರಾರ್ಣಮಧ್ಯೇಷು ಸ್ಥಿತ ಮುಕ್ತಂ ಸನಾತನಂ ॥ ಮಾಂಡೂಕೇಯೈ ರ್ಹಿ (b) ಶಾಕಲ್ಯೋ ವಾಸುದೇವಾದಿರೂಪಿಣಂ। ತೇಷು ಚೋಚ್ಚಾರಕೇ ಚ್ಛೈವ ಸ್ಥಿತಮಾಹ ಚತುರ್ವಿಧಂ ॥ ಭೂಮಿದ್ಯುವೃಷ್ಟಿಪರ್ಜನ್ಯನಾಮ್ನೋ ರ್ವ್ಯಾದಿಷು ಸಂಸ್ಥಿತಂ। (c) ಉರ್ವ್ಯಾದೀನಾಂ ಚತುರ್ಣಾಂ ಚ ದೇಹ ಏವ ಸ್ಥಿತಿಂ ಪುನಃ ॥ (d) ಅಧರಾರ್ಧಸ್ಯ ಚೋರ್ವ್ಯಾಶ್ಚ ಸಾಮ್ಯಮನ್ಯಸ್ಯ ವೈ ದಿವಾ। ವಾಚೋ ವೃಷ್ಟ್ಯೈವ ಸಾಮ್ಯಂ ಚ ಪರ್ಜನ್ಯೇನೈವ ಚಾತ್ಮನಃ ॥ ತೇಷಾಂ ತೇಷು ಸ್ಥಿತಿಂ ಚ್ಚೈವ ವಿಷ್ಣೋಶ್ಚ ಚತುರಾತ್ಮನಃ।

ಅ || (a) ಮಾಂಡೂಕೇಯಋಷಿಗಳಿಂದ ವರಾಹ, ವಾಮನ, ನರಸಿಂಹ ಎಂಬೀ ಶ್ರೀ ಹರಿಯ ಕಶ್ವದೇಕಪ್ರಕಾರವಾದ ಮೂರು ರೂಪವು ಪೂರ್ವವರ್ಣ, ಉತ್ತರವರ್ಣ ಮಧ್ಯಗಳಲ್ಲಿ ಇರತಕ್ಕುದಾಗಿ ಹೇಳಲ್ಪಟ್ಟದೆ. (b) ಶಾಕಲ್ಯಋಷಿಯೊದರೂ, ಪೃಥಿವೀ, ದ್ಯು, ವೃಷ್ಟಿ, ಪರ್ಜನ್ಯ, ಎಂಬೀ ನಾಮಧೇಯದಿಂದ ಪೃಥಿವ್ಯಾದಿ ೪ ರಲ್ಲಿರತಕ್ಕ, ವಾಸುದೇವ ಮೊದಲಾದ ಸ್ವರೂಪವುಳ್ಳ ನಾಲ್ಕುಪ್ರಕಾರನಾದ (ಶ್ರೀ ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧನಾಮಕನಾದ) ಶ್ರೀ ವಿಷ್ಣುವನ್ನು ಆ ಪೂರ್ವೋತ್ತರ ಮಧ್ಯವರ್ಣಗಳಲ್ಲಿಯೂ ಉಚ್ಚರಿಸುವ ಪುರುಷನಲ್ಲಿಯೂ ಇರತಕ್ಕವನನ್ನಾಗಿ ಹೇಳುತ್ತಾನೆ. (c) ಪೃಥಿವಿ ಮೊದಲಾದ ನಾಲ್ಕುಗಳಿಗೂ ಅವುಗಳಲ್ಲಿರತಕ್ಕ ರೂಪಗಳಿಗೂ ದೇಹದಲ್ಲಿಯೇ ಅವಸ್ಥಾನವನ್ನು ಪುನಃ ಹೇಳುತ್ತಾನೆ. (d) ಪಾದವನ್ನಾರಂಭಿಸಿ ಕಟಿಪರ್ಯಂತವಾದ ಪೂರ್ವಾರ್ಧಕ್ಕೂ ಪೃಥಿವಿಗೂ ಸಾಮ್ಯವನ್ನೂ, ಇತರವಾದ ನಾಭಿಯನ್ನಾರಂಭಿಸಿ ಶಿರಃಪರ್ಯಂತವಾದ ಉತ್ತರಾರ್ಧಕ್ಕೆ ದ್ಯುಲೋಕದಿಂದ ಸಾಮ್ಯವನ್ನೂ, ವಾಗಿಂದ್ರಿಯಕ್ಕೆ ವೃಷ್ಟಿದೇವತೆಯಿಂದ ಸಾಮ್ಯವನ್ನೂ, ಶರೀರದಲ್ಲಿರತಕ್ಕ ಉಚ್ಚರಿಸುವ ಪುರುಷನಿಗೆ ಪರ್ಜನ್ಯನಿಂದಲೇ ಸಾಮ್ಯವನ್ನೂ ಕೂಡ ಹೇಳುತ್ತಾನೆ. ಆ ಪೃಥಿವ್ಯಾದಿಗಳಿಗೆ ಪೂರ್ವಾರ್ಧಾದಿಗಳಲ್ಲಿ ಸ್ಥಿತಿಯನ್ನು ಹೇಳುತ್ತಾನೆ. ವಾಸುದೇವಾದಿ ನಾಲ್ಕುಸ್ವರೂಪನಾದ ವಿಷ್ಣುವಿಗಾದರೂ, ಅಧರಾರ್ಧಾದಿಗಳಲ್ಲಿಯೂ ಅವುಗಳಲ್ಲಿರತಕ್ಕ ದೇವತೆಗಳಲ್ಲಿಯೂ, (ವಿಶೇಷಾಕಾರವಾಗಿ ನಿಯಾಮಕನಾದುದರಿಂದ) ಸ್ಥಿತಿಯನ್ನೂ ಕೂಡ ಹೇಳುತ್ತಾನೆ.

ಭಾ|| (a) ಆಕಾಶಸ್ಯಾಂತರಾಕಾಶೇ ನೃಸಿಂಹಸ್ಯಾತ್ರ ಸಂಸ್ಥಿತಿಂ | ವಾಯೋಃ ಪ್ರಾಣಾತ್ಮತಾಂ ಚೈವ ತತ್ರ ದಾಶರಥೇಃ ಸ್ಥಿತಿಂ || (b) ಸೂರ್ಯವಿದ್ಯುದ್ಧುತಾಶಾನಾಂ ದೃಗ್ಘೃದ್ರೇತಃಸು ಚ ಸ್ಥಿತಿಂ | ಕಪಿಲಸ್ಯ ಚ ಹಂಸಸ್ಯ ಜಾಮದಗ್ನ್ಯಸ್ಯ ತೇಷು ಚ || ಸ್ಥಿತಿಂ ವದತಿ ವಿದ್ಯೇಯಮಪಿ ಮೋಕ್ಷಪ್ರದಾಯಿನೀತ್ಯಾದಿ ಚ | (c) ವರ್ಷಣಾದ್ವೃಷ್ಟಿಃ || ಪರಂ ಜನಯತೀತಿ ಪರ್ಜನ್ಯನಾಮಾ ವಿಷ್ಣುಃ | ಸಂಧಿನೋತೀತಿ ಸಂಧಿಃ || ಧಿನು ಪುಷ್ಟಾವಿತಿ ಧಾತುಃ | (d) ಸಮ್ಯಗ್ಧಾರಣಾತ್ಸಂಧಾತಾ || ವರ್ಷಣಮೇವ ದ್ಯಾವಾಪೃಥಿವ್ಯೋಃ ಸಂಧಾನಂ | ಪರ್ಜನ್ಯಸ್ಥೋ ಭಗವಾಂಸ್ತು ತತ್ಕರ್ತಾ || ೨ ||

ಅ || (a) ಆಕಾಶಾಭಿಮಾನಿಯಾದ ವಿಘ್ನೇಶನಿಗೆ ಆಕಾಶದ ಒಳಗೆ ಸ್ಥಿತಿಯನ್ನೂ, ಈ ಅಭಿಮಾನಿಯಲ್ಲಿ ನಿಯಾಮಕನಾಗಿ (ಆಕಾಶಾಖ್ಯ) ನರಸಿಂಹನಿಗೆ ಸಂಸ್ಥಿತಿಯನ್ನೂ, ವಾಯುವಿಗೆ ಪ್ರಾಣಾಂತರ್ಗತತ್ವವನ್ನು ಆ ವಾಯುವಿನಲ್ಲಿ (ವಾಯುವೆಂದು ಹೆಸರುಳ್ಳ) ಶ್ರೀ ರಾಮನಿಗೆ ಸಂಸ್ಥಿತಿಯನ್ನೂ, (ಶಾಕಲ್ಯನು ಹೇಳುತ್ತಾನೆ.) (b) ಚಕ್ಷುರ್ಹೃದಯ ರೇತೋನಾಮಕರಾದ ಸೂರ್ಯ, ಮಿಂಚು, ಅಗ್ನಿ ಇವುಗಳಿಗೆ, ದೃಕ್=ಕಣ್ಣು, ಹೃತ್=ಹೃದಯ, ರೇತಸ್ಸು=ರೇತಸ್ಸುಗಳಲ್ಲಿಯೂ, ಸ್ಥಿತಿಯನ್ನೂ, ಕಣ್ಣು ಮೊದಲಾದವುಗಳಲ್ಲಿರತಕ್ಕ ಸೂರ್ಯಾದಿಗಳಲ್ಲಿ ಕ್ರಮದಿಂದ ಚಕ್ಷುಸ್ಸೇ ಮೊದಲಾದ ಹೆಸರುಳ್ಳ ಕಪಿಲ, ಹಂಸ, ಪರಶುರಾಮರಿಗೆ ಸ್ಥಿತಿಯನ್ನೂ ಕೂಡ ಶಾಕಲ್ಯಋಷಿಯು ಹೇಳುತ್ತಾನೆ. ಈ ವಿದ್ಯೆಯೂ ಕೂಡ ಮುಕ್ತಿಯನ್ನು ಕೊಡತಕ್ಕದು. ಇದೇ ಮೊದಲಾದ ಪ್ರಮೇಯವು ನಿರೂಪಿಸಲ್ಪಟ್ಟದೆ. (c) ವರ್ಷಿಸುವುದರಿಂದ ವೃಷ್ಟಿಯೆನ್ನಿಸುತ್ತಾನೆ ('ಜನನಾತ್ಪರಸಸ್ಯಾದೇಃ ಪರ್ಜನ್ಯಃ' ಎಂಬೀ ವಚನಾನುಸಾರವಾಗಿ) ಉತ್ಕೃಷ್ಟವಾದ ಸಸ್ಯಾದಿಗಳನ್ನು ಹುಟ್ಟಿಸುತ್ತಾನೆ ಎಂದು ಪರ್ಜನ್ಯನಾಮಕನು ವಿಷ್ಣುವು. ಭಕ್ತರನ್ನು ಚೆನ್ನಾಗಿ ಪೋಷಿಸುತ್ತಾನೆ ಎಂದು, ಸಂಧಿನಾಮಕನು. 'ಧಿನು' ಎಂಬ ಧಾತುವು ಪುಷ್ಟಿಯೆಂಬ ಅರ್ಥ

ದಲ್ಲಿದೆ. ಎಂದು ಧಾತುವ್ಯಾಖ್ಯಾನವು. (d) ಚೆನ್ನಾಗಿ ಧರಿಸುವುದರಿಂದ 'ಸಂಧಾತಾ' ಎನ್ನಿಸುತ್ತಾನೆ. ಆಕಾಶ ಭೂಮಿಗಳಿಗೆ ಮಳೆ ಸುರಿಸುವುದೇ ಸಂಧಾನಕ್ರಿಯೆಯು. ಪರ್ಜನ್ಯನಲ್ಲಿರತಕ್ಕ ಶ್ರೀ ಹರಿಯೇ ಅದನ್ನು ಮಾಡುವವನು. ॥ ೨ ॥

ಮಂ ॥ ಅಥಾತೋ ನಿರ್ಭುಜಪ್ರವಾದಾಃ ಪೃಥಿವ್ಯಾಯತನಂ ನಿರ್ಭುಜಂ ದಿವ್ಯಾಯತನಂ ಪ್ರತೃಣ್ಣಮಂತರಿಕ್ಷಾಯತನಮುಭಯಮಂತರೇಣಾಥ ಯದ್ಯೇನಂ ನಿರ್ಭುಜಂ ಬ್ರುವಂತಮುಪವದೇದಚ್ಯೋಷ್ಠಾ ಅವರಾಭ್ಯಾಂ ಸ್ಥಾನಾಭ್ಯಾಮಿತ್ಯೇನಂ ಬ್ರೂಯಾದಥ ಯದ್ಯೇನಂ ಪ್ರತೃಣ್ಣಂ ಬ್ರುವಂತಮುಪವದೇದಚ್ಯೋಷ್ಠಾ ಉತ್ತರಾಭ್ಯಾಂ ಸ್ಥಾನಾಭ್ಯಾಮಿತ್ಯೇನಂ ಬ್ರೂಯಾದ್ಯಸ್ತ್ವೇವೋಭಯಮಂತರೇಣಾಹ ತಸ್ಯ ನಾಸ್ತ್ಯುಪವಾದೋ ಯದ್ಧಿ ಸಂಧಿಂ ವಿವರ್ತಯತಿ ತನ್ನಿರ್ಭುಜಸ್ಯ ರೂಪಮಥ ಯಚ್ಛುದ್ಧೇ ಅಕ್ಷರೇ ಅಭಿವ್ಯಾಹರತಿ ತತ್ಪ್ರತೃಣ್ಣಸ್ಯಾಗ್ರಉ ಏವೋಭಯಮಂತರೇಣೋಭಯಂ ವ್ಯಾಪ್ತಂ ಭವತ್ಯನ್ನಾದ್ಯಕಾಮೋ ನಿರ್ಭುಜಂ ಬ್ರೂಯಾತ್ಸ್ವರ್ಗಕಾಮಃ ಪ್ರತೃಣ್ಣಮುಭಯಕಾಮ ಉಭಯಮಂತರೇಣಾಥ ಯದ್ಯೇನಂ ನಿರ್ಭುಜಂ ಬ್ರುವಂತಂ ಪರ ಉಪವದೇತ್ಪೃಥಿವೀಂ ದೇವತಾಮಾರಃ ಪೃಥಿವೀ ತ್ವಾ ದೇವತಾರಿಷ್ಯತೀತ್ಯೇನಂ ಬ್ರೂಯಾದಥ ಯದ್ಯೇನಂ ಪ್ರತೃಣ್ಣಂ ಬ್ರುವಂತಂ ಪರ ಉಪವದೇದ್ದಿವಂ ದೇವತಾಮಾರೋ ದ್ಯೌಸ್ತ್ವಾ ದೇವತಾ ರಿಷ್ಯತೀತ್ಯೇನಂ ಬ್ರೂಯಾದಥ ಯದ್ಯೇನಮುಭಯಮಂತರೇಣ ಬ್ರುಂವತಂ ಪರ ಉಪವದೇದಂತರಿಕ್ಷಂ ದೇವತಾಮಾರೋಽಂತರಿಕ್ಷಂ ತ್ವಾ ದೇವತಾರಿಷ್ಯತೀತ್ಯೇನಂ ಬ್ರೂಯಾದ್ಯಥಾ ತು ಕಥಾ ಚ ಬ್ರುವನ್ವಾ ಬ್ರುವಂತಂ ವಾ ಬ್ರೂಯಾದಭ್ಯಾಶಮೇವ ಯತ್ತಥಾ ಸ್ಯಾನ್ನತ್ವೇವಾನ್ಯತ್ಕುಶಲಾದ್ಬ್ರಾಹ್ಮಣಂ ಬ್ರೂಯಾದತಿದ್ಯುಮ್ನ ಏವ ಬ್ರಾಹ್ಮಣಂ ಬ್ರೂಯಾನ್ನಾತಿದ್ಯುಮ್ನೇ ಚ ನ ಬ್ರಾಹ್ಮಣಂ ಬ್ರೂಯಾನ್ನಮೋ ಅಸ್ತು ಬ್ರಾಹ್ಮಣೇಭ್ಯ ಇತಿ ಹಸ್ಮಾಹ ಶೂರವೀರೋ ಮಾಂಡೂಕೇಯಃ ॥ ೩ ॥

ಅ ॥ ಅಥ=ಪೂರ್ವೋತ್ತರವರ್ಣಸಂಧಿವಿಷಯಕವಾದ ವಿದ್ಯೆಯನ್ನು ಉಪದೇಶಿಸಿದ ಮೇಲೆ, ಅಥವಾ ಶಿಷ್ಯರಿಗೆ ಅಧಿಕಾರಸಂಪತ್ತ್ಯನಂತರದಲ್ಲಿ, ಅತಃ=ಮುಕ್ತಿಮೊದಲಾದ ಮಹಾಫಲವಿದ್ದುದರಿಂದ, ನಿರ್ಭುಜಪ್ರವಾದಾಃ=ಸಂಹಿತಾ ಪದಕ್ರಮವಿಷಯಕಗಳಾದ ಪ್ರಕೃಷ್ಟವಿದ್ಯೆಗಳು, (ಉಪದೇಶಿಸಲ್ಪಡುತ್ತವೆ.) ನಿರ್ಭುಜಂ=ಭಂಗವಿಲ್ಲದಿರುವುದರಿಂದ ನಿರ್ಭುಜಶಬ್ದವಾಚ್ಯವಾದ ಸಂಹಿತೆಯು, ಪೃಥಿವ್ಯಾಯತನಂ=ಪೃಥಿವಿಯಲ್ಲಿರತಕ್ಕ ಪೃಥಿವೀನಾಮಕ ವರಾಹದೇವತಾಕವಾದುದು. ಪ್ರತೃಣ್ಣಂ=ಪದವು, ದಿವ್ಯಾಯತನಂ=ಸ್ವರ್ಗದಲ್ಲಿರತಕ್ಕ ದ್ಯುನಾಮಕನಾದ ವಾಮನಾಖ್ಯಹರಿಯೇ ಆಶ್ರಯವಾಗಿ ಉಳ್ಳದ್ದು. ಉಭಯಮಂತರೇಣ=ಕ್ರಮವೆಂಬುವುದು, ಅಂತರಿಕ್ಷಾಯತನಂ=ಅಂತರಿಕ್ಷದಲ್ಲಿರತಕ್ಕ ಅಂತರಿಕ್ಷನಾಮಕ ನರಸಿಂಹನೇ ದೇವತೆಯಾಗಿ ಉಳ್ಳದ್ದು. (ಆದುದರಿಂದ ಏತಾದೃಶಜ್ಞಾನಪೂರ್ವಕವಾಗಿ ಸಂಹಿತಾದಿಗಳನ್ನು ಅಧ್ಯಯನ

ಮಾಡತಕ್ಕವನು ಪೂಜ್ಯನೇ ಸರಿ. ನಿಂದಾರ್ಹನಲ್ಲ.) ಅಥ=ಅಥವಾ, ಏನಂ ನಿರ್ಭುಜಂ ಬ್ರುವಂತಂ=ಈ ಸಂಹಿತೆಯನ್ನು ಅಧ್ಯಯನ ಮಾಡತಕ್ಕ ವಿಷ್ಣುಭಕ್ತನನ್ನು, (ಯಾವನೊಬ್ಬ ಮನುಷ್ಯನು) ಉಪವದೇತ್ ಯದಿ=ನಿಂದಿಸಿದ ಪಕ್ಷದಲ್ಲಿ, ಅವರಾಭ್ಯಾಂ ಸ್ಥಾನಾಭ್ಯಾಂ=ನಿಕೃಷ್ಟಗಳಾದ ಭೂಮ್ಯಂತರಿಕ್ಷಸ್ಥಾನಗಳಿಂದಲೂ, ಅಚ್ಯೋಷ್ಠಾಃ=ಬಿದ್ದವನಾಗಿರುತ್ತಿ, ಇತಿ=ಈ ಪ್ರಕಾರ, ಏನಂ=ಈ ನಿಂದಿಸಿದವನನ್ನು, ಬ್ರೂಯಾತ್=(ಅಧ್ಯಯನ ಮಾಡತಕ್ಕವನು, ಯಾ ವಿಷ್ಣುಭಕ್ತರ ನಿಂದೆಯನ್ನು ಸಹಿಸಲಾರದ ಇತರನು), ಹೇಳತಕ್ಕುದು. ಅಥ=ಅಥವಾ, ಏನಂ ಪ್ರತೃಣ್ಣಂ ಬ್ರುವಂತಂ=ಈ ಪದಾಧ್ಯಯನ ಮಾಡತಕ್ಕ ವಿಷ್ಣುಭಕ್ತನನ್ನು, ಉಪವದೇತ್ ಯದಿ=ನಿಂದಿಸಿದ ಪಕ್ಷದಲ್ಲಿ, ಉತ್ತರಾಭ್ಯಾಂ ಸ್ಥಾನಾಭ್ಯಾಂ=ಅಂತರಿಕ್ಷ ಸ್ವರ್ಗಗಳಿಂದ, ಅಚ್ಯೋಷ್ಠಾಃ=ಚ್ಯುತನಾಗಿರುತ್ತಿ, ಇತಿ=ಹೀಗೆ, ಏನಂ=ಈ ನಿಂದಕನನ್ನು, ಬ್ರೂಯಾತ್=ಹೇಳತಕ್ಕುದು .ಯಸ್ತು=ಯಾವಾತನು, ಉಭಯಮಂತರೇಣ=ಕ್ರಮವನ್ನು, ಆಹ=ಅಧ್ಯಯನ ಮಾಡುತ್ತಾನೋ, ತಸ್ಯ=ಆತನಿಗೆ, ಉಪವಾದಃ=ನಿಂದೆಯು, ನಾಸ್ತ್ಯೇವ=ಇಲ್ಲವೇ ಇಲ್ಲ. (ಕ್ರಮಾಧ್ಯಯನ ಮಾಡತಕ್ಕವನ ನಿಂದೆಯು ನರಕಾದ್ಯನರ್ಥಗಳಿಗೆ ಗುರಿಯಾದುದರಿಂದ ಅತಿ ದುಷ್ಟವಾಯಿತು. ಆದುದರಿಂದ ಆತನ ನಿಂದೆಯನ್ನು ಸರ್ವಥಾ ಮಾಡಬಾರದು.) ಜ್ಞಾನ ಪೂರ್ವಕವಾಗಿ ವಿಷ್ಣುವೆಂಬ ನಾಮವನ್ನು ಉಚ್ಚರಿಸುವುದರಿಂದಲೇ ಎಲ್ಲಾ ವೈದಿಕ ಸಂಹಿತೆಗಳನ್ನು ಅಧ್ಯಯನ ಮಾಡಿದ ಫಲವು ಲಬ್ಧವಾಗುತ್ತದೆ ಎಂದು ನಿರೂಪಿಸುತ್ತಾರೆ. ವಿಷ್ಣುನಾಮದಲ್ಲಿ) ಯತ್=ಯಾವಪಕ್ಷದಲ್ಲಿ, ಸಂಧಿಂ=ಷಕಾರ ಣಕಾರಗಳ ಮೇಲನವನ್ನು, ವಿವರ್ತಯತಿ=ಉಚ್ಚರಿಸುತ್ತಾನೋ, ತತ್=ಹಾಗಾದರೆ, ತತ್ ಹಿ=ಅದೇ, ನಿರ್ಭುಜಸ್ಯ ರೂಪಂ=ಸರ್ವವೈದಿಕ ಸಂಹಿತಾರೂಪವು. ಅಂದರೆ ಸರ್ವಸಂಹಿತಾಧ್ಯಯನ ಫಲಪ್ರದವು. ಅಥ=ಅಥವಾ, ಯತ್=ಯಾವಪಕ್ಷದಲ್ಲಿ, ಶುದ್ಧೇ ಅಕ್ಷರೇ=ಅಸಂಶ್ಲಿಷ್ಟಗಳಾದ 'ಷ ಣು' ಎಂಬ ಪದಗಳನ್ನು, ಅಭಿವ್ಯಾಹರತಿ=ಉಚ್ಚರಿಸುತ್ತಾನೋ, ತತ್=ಹಾಗಾದರೆ, ತತ್=ಆ ಉಚ್ಚರಿಸಲ್ಪಡತಕ್ಕ ಶಬ್ದತತ್ವವು, ಪ್ರತೃಣ್ಣಸ್ಯ=ಪದಸ್ವರೂಪವು. (ಯೇನ=ಯಾವುದರಿಂದ,) ಉಭಯಂ=ಸಂಹಿತಾಪದವೆಂಬೀ ಎರಡು, ವ್ಯಾಪ್ತಂ ಭವತಿ=ವ್ಯಾಪ್ತವಾಗುತ್ತದೋ, (ಅದೇ) ಉಭಯಮಂತರೇಣ=ಕ್ರಮವೆಂದು ಹೇಳಲ್ಪಡುತ್ತದೆ. ಅಗ್ರೇ ಉ=ಅತಿಶಯವಾಗಿ ಶ್ರೇಷ್ಠವೇ ಸರಿ. ಅನ್ನಾದ್ಯಕಾಮಃ=ಮುಕ್ತಿಯಲ್ಲಿ ಅನ್ನಮೊದಲಾದ ಭೋಗ ಬಾಹುಲ್ಯವನ್ನು ಇಚ್ಛಿಸುವವನು, ನಿರ್ಭುಜಂ=ವಿಷ್ಣುವೆಂಬೀ ಸಂಹಿತಾ ರೂಪವಾದ ನಾಮವನ್ನು, ಬ್ರೂಯಾತ್=ಹೇಳತಕ್ಕುದು. ಸ್ವರ್ಗಕಾಮಃ=ಮುಕ್ತಿಯನ್ನು ಇಚ್ಛಿಸುವವನು. ಪ್ರತೃಣ್ಣಂ='ವಿ ಷ ಣು' ಎಂಬೀ ಪದಾತ್ಮಕವಾದ ನಾಮವನ್ನು, ಬ್ರೂಯಾತ್=ಹೇಳತಕ್ಕುದು. ಉಭಯಕಾಮಃ=ಮುಕ್ತಿ ಭೋಗ ಎರಡನ್ನೂ ಇಚ್ಛಿಸುವವನು, ಉಭಯಮಂತರೇಣ='ವಿಷ್ಣುಃ' 'ವಿ ಷ ಣುಃ' ಎಂಬೀ ಎರಡು ರೀತಿಯಾಗಿಯೂ, ಬ್ರೂಯಾತ್=ಹೇಳತಕ್ಕುದು. ಅಥ=ಅಥವಾ, ಏನಂ ನಿರ್ಭುಜಂ ಬ್ರುವಂತಂ=ಸಂಹಿತೆಯನ್ನು ಅಧ್ಯಯನ ಮಾಡತಕ್ಕ ವಿಷ್ಣುಭಕ್ತನನ್ನು, ಪರಃ=ಅಸುರ ಸ್ವಭಾವವುಳ್ಳ ಸರ್ವಶತ್ರುವು, ಉಪವದೇತ್ ಯದಿ=ನಿಂದಿಸಿದ ಪಕ್ಷದಲ್ಲಿ, ಪೃಥಿವೀಂ ದೇವತಾಂ=ನನ್ನಿಂದ ಅಧ್ಯಯನ ಮಾಡಲ್ಪಡತಕ್ಕ ಸಂಹಿತೇಗೆ ಯಾವುದೊಂದು ಪೃಥಿವಿಯಲ್ಲಿರತಕ್ಕ ಪೃಥಿವೀನಾಮಕವಾದ ವರಾಹಾಖ್ಯದೇವತೆಯೋ, ಆ ದೇವತೆಯನ್ನೇ ಆರಃ=ದೂಷಿಸತಕ್ಕವನಾಗಿದ್ದಿ. (ಏಕೆಂದರೆ ವರಾಹನೇ ದೇವತೆಯಾಗಿವುಳ್ಳ ಸಂಹಿತೆಯನ್ನು ಅಧ್ಯಯನ ಮಾಡುವ ಕಾಲದಲ್ಲಿ ನನ್ನನ್ನು ದೂಷಿಸಿದರೂ ಆ ವರಾಹರೂಪಿ ಶ್ರೀಹರಿಯನ್ನೇ, ದೂಷಿಸಿದ ಹಾಗಾಯಿತು. ಆದುದರಿಂದ) ಪೃಥಿವೀ ದೇವತಾ=ಸಂಹಿತಾಪ್ರತಿಪಾದ್ಯವಾದ ವರಾಹಾಖ್ಯ ದೇವತೆಯು, ತ್ವಾ=ನಿನ್ನನ್ನು ರಿಷ್ಯತಿ=ನಾಶಮಾಡುವದು. ಅಂಧಂತಮಸ್ಸಿನಲ್ಲಿ ಬೀಳಿಸುವದು. ಇತಿ=ಈ ಪ್ರಕಾರ, ಏನಂ=ನಿಂದಕನನು

ಕುರಿತು, ಬ್ರೂಯಾತ್=ಹೇಳತಕ್ಕುದು. ಅಥ=ಅಥವಾ, ಏನಂ ಪ್ರತೃಣ್ಣಂ ಬ್ರುವಂತಂ=ಪದವನ್ನು ಅಧ್ಯಯನ ಮಾಡುವವನನ್ನು, ಪರಃ=ವಿಷ್ಣುವೈಷ್ಣವದ್ವೇಷಿಯಾದ ತಮೋಯೋಗ್ಯನು, ಉಪವದೇತ್ ಯದಿ=ನಿಂದಿಸಿದ ಪಕ್ಷದಲ್ಲಿ, ದಿವಂ ದೇವತಾಂ=ದ್ಯುನಾಮಕವಾದ ವಾಮನಾಖ್ಯ ದೇವತೆಯನ್ನು, ಆರಃ, ದ್ಯೌಃ ದೇವತಾ=ವಾಮನಾಖ್ಯ ದೇವತೆಯು, ತ್ವಾ, ರಿಷ್ಯತಿ, ಇತಿ, ಏನಂ ಬ್ರೂಯಾತ್. ಅಥ=ಅಥವಾ, ಏನಂ ಉಭಯಮಂತರೇಣ ಬ್ರುವಂತಂ=ಕ್ರಮವನ್ನು ಅಧ್ಯಯನ ಮಾಡತಕ್ಕವನನ್ನು, ಪರಃ ಉಪವದೇತ್ ಯದಿ, ಅಂತರಿಕ್ಷಂ ದೇವತಾಂ=ಅಂತರಿಕ್ಷನಾಮಕ ನರಸಿಂಹಾಖ್ಯದೇವತೆಯನ್ನು, ಆರಃ,=ಅಂತರಿಕ್ಷಂ ದೇವತಾ=ನರಸಿಂಹನು, ತ್ವಾ, ರಿಷ್ಯತಿ, ಇತಿ, ಏನಂ, ಬ್ರೂಯಾತ್. ನಿಂದಿಸುವ ಸ್ವಭಾವವುಳ್ಳ ಪುರುಷನು ನಿಂದಿಸಿದರೂ ಕೂಡ ಜ್ಞಾನಿಯಾದವನು ಸರ್ವಸಹಿಷ್ಣುವಾದುದರಿಂದ ಅದನ್ನೂ ಕೂಡ ಸಹಿಸತಕ್ಕುದೇ, ಆದುದರಿಂದ ಈ ರೀತಿಯಾಗಿ ಪ್ರತ್ಯುತ್ತರವನ್ನು ಏಕೆ ಕೊಡತಕ್ಕುದು ಎಂದರೆ, ಲೋಕದಲ್ಲಿ ವಾದಿ ಪ್ರತಿವಾದಿಗಳಿಗೆ) ಯಥಾ ತು=ಹೇಗೆ, ಕಥಾ ಚ=ಕಥೆಯು ಪ್ರವೃತ್ತವಾಪರೆ, (ವಾದಿಯು ಹೇಳಿದುದಕ್ಕೆ ಪ್ರತಿವಾದಿಯು ಪ್ರತ್ಯುತ್ತರವನ್ನು ಕೊಡುತ್ತಾನೋ, ಸುಮ್ಮನೆ ಕೂತುಕೊಳ್ಳಲಾರನೋ, ಹೀಗೆ ಪ್ರಕೃತದಲ್ಲಿಯೂ, ಆದರೆ ತನ್ನನ್ನು ಮಾತ್ರ ನಿಂದಿಸೋಣ ಇದು ಮೊದಲಾದುದನ್ನು ಸಹಿಸಿಕೊಳ್ಳತಕ್ಕುದು. ಇದಾದರೂ ದೇವತಾ ವಿಷಯಕವೂ ಆಗುವುದು ದೇವತೆಯನ್ನು ಸ್ತುತಿಸುವ ಕಾಲದಲ್ಲಿ ಮಾಡಲ್ಪಡತಕ್ಕ ನಿಂದಾದಿಗಳು ಸ್ತುತಿಸಲ್ಪಡತಕ್ಕ ದೇವತೆಗೇನೇ ದ್ರೋಹರೂಪವಾಗುತ್ತದೆ. ಆದುದರಿಂದ ಅಂತಹುದನ್ನು ಸಹಿಸಕೂಡದು.) ಬ್ರುವನ್ ವಾ=(ಸಂಹಿತೆಯೇ ಮೊದಲಾದ ಶ್ರುತಿಸಮುದಾಯಗಳನ್ನು) ಅಧ್ಯಯನ ಮಾಡತಕ್ಕವನಾಗಲೀ, ಅಧ್ಯಯನ ಮಾಡದಿರುವವನಾಗಲೀ, ಬ್ರುವಂತಂ=ನಿಂದಿಸತಕ್ಕವನನ್ನು, ವಾ=ನಿಂದಿಸದೆ ಇರುವವನನ್ನಾಗಲೀ (ಅಂದರೆ ರೀತ್ಯಂತರದಿಂದ ತನಗೆ ದ್ರೋಹಮಾಡತಕ್ಕವನನ್ನಾಗಲೀ), ಯತ್=ಯಾವ ಶಾಪರೂಪವಾದ ಮಾತನ್ನು, ಬ್ರೂಯಾತ್=ಹೇಳುವನೋ, ತತ್=ಆ ಮಾತು, ಅಭ್ಯಾಶಮೇವ=ಸಮೀಪದಲ್ಲಿಯೇ, (ಶೀಘ್ರದಲ್ಲಿಯೇ) ತಥಾ=ಸತ್ಯವೇ, ಸ್ಯಾತ್=ಆಗುವುದು. (ಯಾವಾಗಲೂ ವ್ಯರ್ಥವಾಗಲಾರದು). ಬ್ರಾಹ್ಮಣಂ=ಪರಬ್ರಹ್ಮಪ್ರಾಪ್ತಿಯೋಗ್ಯವನ್ನು ಕುರಿತು, ಕುಶಲಾತ್ ಅನ್ಯತ್=ಅಕುಶಲವನ್ನು, ಅಂದರೆ ಆತಗೆ ಅನರ್ಥವನ್ನು ಉಂಟುಮಾಡತಕ್ಕ ಶಾಪರೂಪವಾದ ಮಾತನ್ನು, ನ ತು ಏವ ಬ್ರೂಯಾತ್=ಹೇಳಲಿಕ್ಕೇನೆ ಕೂಡದು. (ಅಯೋಗ್ಯ ಜನರನ್ನೇ ಹೀಗೆ ಹೇಳತಕ್ಕುದು. ಮೋಕ್ಷಯೋಗ್ಯರನ್ನು ಕುರಿತು ಹೇಳಬಾರದು). ಅತಿದ್ಯುಮ್ನೀ ಏವ=ಪ್ರಕಾಶ ಸ್ವರೂಪನಾದುದರಿಂದ ದ್ಯುಮ್ನಶಬ್ದವಾಚ್ಯನಾದ ವಿಷ್ಣುವಿನ ಆಜ್ಞೆಯನ್ನು ಅತಿಕ್ರಮಿಸಿ ಇರುವವನಾದರೇನೇ, ಅಂದರೆ ವಿಷ್ಣುವಿನ ಆಜ್ಞಾರೂಪಗಳಾದ ಶ್ರುತಿಸ್ಮೃತಿಗಳಲ್ಲಿ ಹೇಳಿದ ಧರ್ಮಗಳನ್ನು ಉಲ್ಲಂಘಿಸುವವನಾದರೇನೇ, ಬ್ರಾಹ್ಮಣಂ=ಮೋಕ್ಷಯೋಗ್ಯನಾದ ಪುರುಷನನ್ನು ಕುರಿತು, ಬ್ರೂಯಾತ್=(ಶಿಕ್ಷಾರ್ಥವಾಗಿ ಲೋಕಚ್ಯುತನಾಗಿದ್ದಿ ಎಂದೇ) ಹೇಳತಕ್ಕುದು. (ಲೋಕಚ್ಯುತನಾಗು ಎಂದು ಹೇಳಬಾರದು.) ನಾತಿದ್ಯುಮ್ನೀ ಚ=ಶ್ರೀ ಹರಿಯ ಆಜ್ಞೆಯನ್ನು ಅನುಸರಿಸಿರುವವನಾದರೆ, ಬ್ರಾಹ್ಮಣಂ=ಮೋಕ್ಷಯೋಗ್ಯನಾದ ಅಂತಹ ಪುರುಷನನ್ನು ಕುರಿತು, ನ ಬ್ರೂಯಾತ್=ಹೇಳಲೇಕೂಡದು. (ಆದುದರಿಂದ ಬ್ರಾಹ್ಮಣರು ಶಾಪಕ್ಕೆ ಅವಿಷಯರಾದುದರಿಂದಲೂ, ಪೂಜ್ಯರಾದುದರಿಂದಲೂ), ಬ್ರಾಹ್ಮಣೇಭ್ಯಃ=ಮುಕ್ತಿಯೋಗ್ಯರಾದವರಿಗೋಸ್ಕರ ನಮಃ=ನಮಸ್ಕಾರವು, ಅಸ್ತು=ಆಗಲಿ, ಇತಿ=ಹೀಗೆ, ಶೂರವೀರಃ ಮಾಂಡೂಕೇಯಃ=ಮಾಂಡೂಕೇಯ ಋಷಿಯು, ಆಹ ಸ್ಮ ಹ=ಹೇಳಿದನು. ॥ ೩ ॥

ಭಾ॥ (a) ಪೃಥಿವೀಸ್ಥೋ ವರಾಹಸ್ತು ಸಂಹಿತಾದೇವತೋದಿತಾ । ದಿವಿಷ್ಠೋ ವಾಮನಶ್ಚೈವ ಸಂಪ್ರೋಕ್ತಃ ಪದದೇವತಾ ॥ (b) ನೃಸಿಂಹಸ್ತ್ವಂತರಿಕ್ಷಸ್ಥೋ ಭಗವಾನ್ಕ್ರಮದೇವತಾ । ಸ್ವಾಧ್ಯಾಯಮೇವಂ ಧ್ಯಾತ್ವಾ ಯಃ ಕರೋತ್ಯುಪವದೇನ್ನತಂ ॥ (c) ತಸ್ಯಾಪವದಿತಾ ಯಾತಿ ತ್ರೈಲೋಕ್ಯಾದಧ ಏವ ಹಿ । ನಾಶಮಾಪ್ನೋತಿ ನಿರಯೇ ತಸ್ಮಾದಪವದೇನ್ನತಂ ॥ (d) ಗಚ್ಛತ್ಯಧ ಇತಿ ಬ್ರೂಯಾದನ್ಯಂ ಬ್ರಾಹ್ಮಣತಸ್ತಥಾ । ಬ್ರಹ್ಮಪ್ರಾಪ್ತೇರ್ಹಿ ಯೋಗ್ಯೋ ಯೋ ಬ್ರಾಹ್ಮಣಃ ಸ ನ ಚೇತರಃ ॥ ಇತಿ ಚ ॥

ಅ ॥ (a) ಪೃಥಿವಿಯಲ್ಲಿರತಕ್ಕ ಪೃಥಿವೀನಾಮಕ ವರಾಹನಾದರೂ ಸಂಹಿತಾದೇವತೆಯಾಗಿ ಹೇಳಲ್ಪಟ್ಟಿದ್ದಾನೆ. ಸ್ವರ್ಗದಲ್ಲಿರತಕ್ಕ ದ್ಯುನಾಮಕನಾದ ವಾಮನನಾದರೂ ಪದದೇವತೆಯಾಗಿ ಹೇಳಲ್ಪಟ್ಟಿದ್ದಾನೆ (b) ಅಂತರಿಕ್ಷದಲ್ಲಿರತಕ್ಕ ಅಂತರಿಕ್ಷನಾಮಕನಾದ ಪೂಜ್ಯನಾದ ನರಸಿಂಹನಾದರೂ ಕ್ರಮಕ್ಕೆ ದೇವತೆಯು. ಈ ಪ್ರಕಾರ ಧ್ಯಾನಿಸಿಕೊಂಡು ಯಾವಾತನು ಜ್ಞಾನಪೂರ್ವಕವಾಗಿ ಸಂಹಿತಾಽಧ್ಯಯನವನ್ನು ಮಾಡುತ್ತಾನೋ, ಆತನನ್ನು ನಿಂದಿಸಬಾರದು. (c) ಸಂಹಿತಾ ಪದಗಳನ್ನು ಅಧ್ಯಯನಮಾಡತಕ್ಕವನಿಗೆ ನಿಂದಕನು ಹೋಗುತ್ತಾನೆ. (ಅಂದರೆ ಕ್ರಮವಾಗಿ ಭೂಮ್ಯಂತರಿಕ್ಷ, ಅಂತರಿಕ್ಷಸ್ವರ್ಗ, ಈ ಎರಡು ಲೋಕಗಳಿಂದ ಚ್ಯುತನಾಗುತ್ತಾನೆ.) (ಕ್ರಮಪಾಠ ನಿಂದಕನು) ಲೋಕತ್ರಯಗಳಿಂದ ಕೆಳಗೆ ನರಕದಲ್ಲಿಯೇ ದುಃಖವನ್ನು ಹೊಂದುತ್ತಾನೆ. ಆದುದರಿಂದ ಆತನನ್ನು ನಿಂದಿಸಬಾರದು. (d) ಹಾಗೆ, ಬ್ರಾಹ್ಮಣನಿಂದ ಇತರನಾದವನನ್ನೇ ಅಧೋಲೋಕಕ್ಕೆ ಹೋಗುತ್ತಿ ಎಂದು ಹೇಳತಕ್ಕದು. ಯಾವಾತನು ಪರಬ್ರಹ್ಮಪ್ರಾಪ್ತಿಗೆ ಯೋಗ್ಯನೋ, ಆತನೇ ಬ್ರಾಹ್ಮಣನು; ಇತರನಲ್ಲ; ಹೀಗೂ ಉಕ್ತವಾಗಿದೆ.

ಭಾ॥ (a) ಭಂಜನ ವರ್ಜಿತತ್ವಾನ್ನಿರ್ಭುಜಂ ಸಂಹಿತಾ । ತೃಣ ಚ್ಛೇದನ ಇತಿ ಧಾತೋಃ ಪ್ರತೃಣ್ಣಂ ಪದಂ ॥ ಉಭಯಮಂತರೇಣ ಕ್ರಮಃ । (b) ನಿರ್ಭುಜಮೂಲತ್ವಾತ್ಪದಾದೀನಾಂ ತದ್ವಿಷಯ ಪ್ರವಾದಾ ಅಪಿ ನಿರ್ಭುಜ ಪ್ರವಾದಾ ಇತ್ಯೇವೋಚ್ಯಂತೇ ॥ (c) ಪೃಥಿವೀಕ್ಷಿತ ಪೃಥಿವೀನಾಮಕ ವಿಷ್ಣ್ವಾಯತನಂ ಪೃಥಿವ್ಯಾಯತನಮಿತ್ಯಾದಿ । (d) ಅವರಾಭ್ಯಾಂ ಪೃಥಿವ್ಯಂತರಿಕ್ಷಾಭ್ಯಾಂ ಚ್ಯುತೋಽಸೀತಿ ॥ ಉತ್ತರಾಭ್ಯಾಮಂತರಿಕ್ಷದ್ಯುಭ್ಯಾಂ ।

ಅ ॥ (a) ಭಂಗ (ಖಂಡ, ತುಂಡು) ಇಲ್ಲದಿರುವುದರಿಂದ ನಿರ್ಭುಜವೆಂದರೆ ಸಂಹಿತೆಯು. ತೃಣ ವೆಂಬುವುದು ಚ್ಛೇದನವೆಂಬ ಅರ್ಥದಲ್ಲಿದೆ ಎಂದು ಧಾತುವ್ಯಾಖ್ಯಾನದಿಂದ ಪ್ರತೃಣ್ಣವೆಂದರೆ ಪದವು. ಸಂಹಿತಾಪದಗಳೆಂಬ ಎರಡರ ಗರ್ಭೀಭೂತವಾದುದರಿಂದ ಕ್ರಮವು 'ಉಭಯಮಂತರೇಣ' ಎನ್ನಿಸಿಕೊಳ್ಳುತ್ತದೆ. (b) ಪದಕ್ರಮಜಟೆಗಳಿಗೆ ಸಂಹಿತಾಮೂಲತ್ವವಿದ್ದುದರಿಂದ (ಅಂದರೆ ಸಂಹಿತಾಜ್ಞಾನಾಧೀನಜ್ಞಾನತ್ವವಿದ್ದುದರಿಂದ) ಯಾ, ಸಂಹಿತಾಶ್ರಿತವಾದುದರಿಂದ ಪದಾದಿವಿಷಯಕ ವಿದ್ಯೆಗಳೂ ಕೂಡ ಸಂಹಿತಾವಿದ್ಯೆಗಳೆಂದೇ ಹೇಳಲ್ಪಡುತ್ತವೆ. [ತಾ ॥ ಆದುದರಿಂದ ಸಂಹಿತಾವಿಷಯಕವಾದ ವಿದ್ಯೆಯನ್ನು ಪ್ರತಿಪಾದಿಸುತ್ತೇನೆ ಎಂದು ಪ್ರತಿಜ್ಞಾಮಾಡಿದ್ದರೂ ಪದಕ್ರಮವಿಷಯಕ ವಿದ್ಯೆಯನ್ನೂ ಪ್ರತಿಪಾದನೆಮಾಡಿದ್ದು ಅಸಂಗತವಲ್ಲವು. 'ಸಂಹಿತಾಪಾಠತಃ ಪ್ರೋಕ್ತಂ ದ್ವಿಗುಣಂ ಪದಪಾಠತಃ । ತ್ರಿಗುಣಂ ಕ್ರಮಪಾಠೇ ಸ್ಯಾಜ್ಜಟಾ

ಪಾಠೇ ತು ಷಡ್ಗುಣಂ ॥ ಮಹಾಭಾರತಪಾಠಸ್ತು ವೇದತುಲ್ಯಃ ಪ್ರಕೀರ್ತಿತಃ' ॥ (ವರಾಹ ಪುರಾಣ, ಚಾತುರ್ಮಾಸಮಾಹಾತ್ಮ್ಯೇ, ೧೧೦ನೇ ಅಧ್ಯಾಯ, ಉತ್ತರೋತ್ತರಗಳು ಶ್ರೇಷ್ಠಗಳು.] (c) ಪೃಥಿವಿಯಲ್ಲಿರತಕ್ಕ ಪೃಥಿವೀನಾಮಕನಾದ ವರಾಹಾಖ್ಯ ಶ್ರೀ ಹರಿಗೆ ಆಶ್ರಯವಾದುದು ಪೃಥಿವ್ಯಾಯತನವು. ಇದು ಮೊದಲಾದುದನ್ನು ಹೀಗೆ ತಿಳಿಯತಕ್ಕದು. (d) ಅವರಗಳಾದ ಪೃಥಿವ್ಯಂತರಿಕ್ಷಸ್ಥಾನಗಳಿಂದ ಚ್ಯುತನಾಗಿದ್ದಿ ಎಂದು । ಮೇಲಿನ ಅಂತರಿಕ್ಷದ್ಯುಲೋಕಗಳಿಂದ.

**ಭಾ॥** (a) ಕ್ರಮಸ್ವಾಧ್ಯಾಯಕೃದ್ಯಸ್ತಂ ವಿಶೇಷೇಣ ನ ನಿಂದಯೇತ್ । ಲೋಕತ್ರಯಾದಪಿ ಭ್ರಷ್ಟೋ ಯಸ್ಮಾತ್ತನ್ನಿಂದಕೋ ಭವೇದಿತಿ ಚ ॥ (b) ತಸ್ಮಾದತಿದುಷ್ಟತ್ವಾತ್ತನ್ನಿಂದಕೋ ನಾಸ್ತ್ಯೇವೇತ್ಯುಕ್ತಂ ತಸ್ಯ ನಾಸ್ತ್ಯ ಪವಾದ ಇತಿ । ತಂ ಕೃಷ್ಣಂ ಪುಂಡರೀಕಾಕ್ಷಂ ಕೋ ನು ಯುಧ್ಯೇತ ಬುದ್ಧಿಮಾನಿತ್ಯಾದಿವತ್ ॥ (c) ಉಪವದೇದಿತ್ಯುಕ್ತೋ ಮನುಷ್ಯಮಾತ್ರಃ। ಪರ ಉಪವದೇದಿತ್ಯಸುರಃ ॥ ಸರ್ವ ಶತ್ರುತ್ವಾತ್ । (d) ಅಮುಕ್ತಿಯೋಗ್ಯೈಸ್ತು ನರೈರ್ವಿದುಷಾಂ ನಿಂದನೇ ಕೃತೇ ॥ ಬ್ರೂಯಾಲ್ಲೋಕಚ್ಯುತೋಽಸೀತಿ ನಿಂದಿತೋಽಸುರಸರ್ಗಗೈಃ । ನಾಶಯಿಷ್ಯತಿ ವಿಷ್ಣುಸ್ತ್ವಾಮಂಧೇ ತಮಸಿ ಪಾತಯೇತ್ ॥ ಇತಿ ಬ್ರೂಯಾನ್ನತು ಬ್ರೂಯಾದ್ದೇವ ಸರ್ಗಾತ್ಮಕಂ ಕ್ವಚಿತ್ ॥ ಇತಿ ಚ ॥

ಅ ॥ (a) ಯಾವಕಾರಣದಿಂದ ಕ್ರಮವನ್ನು ಅಧ್ಯಯನ ಮಾಡತಕ್ಕವನನ್ನ ನಿಂದಿಸತಕ್ಕವನು ಮೂರುಲೋಕದಿಂದಲೂ ಪರಿಭ್ರಷ್ಟನು ಆಗುವನೋ, ಆದುದರಿಂದ ಯಾವಾತನು ಕ್ರಮರೂಪವಾದ ವೇದಾಧ್ಯಯನವನ್ನು ಮಾಡುತ್ತಾನೋ, ಆತನನ್ನು ವಿಶೇಷಾಕಾರವಾಗಿ ನಿಂದಿಸಬಾರದು. ಹೀಗೂ ಉಕ್ತವಾಗಿದೆ. (b) ಆದುದರಿಂದ (ಕ್ರಮಾಧ್ಯೇತೃವಿನ ನಿಂದೆಯು ಅನರ್ಥಕಾರಿಯಾದುದರಿಂದ) ಅತ್ಯಂತದುಷ್ಟವಾದ ಪ್ರಯುಕ್ತ ಆತನನ್ನ ನಿಂದಿಸತಕ್ಕವನು ಇಲ್ಲವೇ ಇಲ್ಲ. ಎಂದು ಹೇಳಿದಹಾಗಾಯಿತು 'ತಸ್ಯ ನಾಸ್ತ್ಯಪವಾದಃ' ಎಂಬುವುದಕ್ಕೆ. ಕಮಲ ದಲದಂತೆ ಕಣ್ಣುಗಳುಳ್ಳ ಆ ಕೃಷ್ಣನ ಕೂಡೆ ಬುದ್ಧಿಯುಳ್ಳ ಯಾವಾತನು ಯುದ್ಧಮಾಡುವನು? ಇತ್ಯಾದಿಯಂತೆ [ತಾ ॥ ಜರಾಸಂಧಮೊದಲಾದವರಿಗೆ ಕೃಷ್ಣನ ಸಂಗಡ ಯುದ್ಧವಾಗುತ್ತಿದ್ದರೂ ಆ ಕೃಷ್ಣನಿಂದೊಡಗೂಡಿರುವ ಯುದ್ಧವು ಅನರ್ಥಫಲಕ್ಕೆ ಕಾರಣವಾಗಿರುವುದರಿಂದ ಅತ್ಯಂತ ದುಷ್ಟವಾಗಿರುವುದರಿಂದ ಯುದ್ಧವೇ ಇಲ್ಲ ಎಂಬೀವ್ಯಪದೇಶವು ಹೇಗೋ, ಅದರಂತೆಯೇ ನಿಂದಕನು ಇಲ್ಲ ಎಂಬೀವ್ಯಪದೇಶವು.] (c) 'ಉಪವದೇತ್ ಅಜ್ಯೋಷ್ಠಾಃ' ಎಂಬುವಲ್ಲಿ ಉಪವದೇತ್ ಎಂಬುವುದರಿಂದ ಹೇಳಲ್ಪಟ್ಟವನು ಕೇವಲ ಮನುಷ್ಯನು. 'ಪರ ಉಪವದೇತ್' ಎಂಬುವಲ್ಲಿದ್ದ ಉಪವದೇತ್ ಎಂಬುವುದರಿಂದ ಹೇಳಲ್ಪಟ್ಟವನು ಅಸುರನು. ಸರ್ವರಿಗೂ ಶತ್ರುಭೂತನಾದುದರಿಂದ. (d) ಮುಕ್ತಿಗೆ ಯೋಗ್ಯರಲ್ಲವಿರುವ ಮನುಷ್ಯರಿಂದ ಜ್ಞಾನಿಗಳ ನಿಂದೆಯು ಮಾಡಲ್ಪಡುತ್ತಿರಲು ಲೋಕಗಳಿಂದ ಪರಿಭ್ರಷ್ಟನು ಆಗಿದ್ದಿ, ಹೀಗೆ ಹೇಳತಕ್ಕುದು. ಅಸುರರ ಸೃಷ್ಟಿಯಲ್ಲಿದ್ದವರಿಂದ ನಿಂದಿಸಲ್ಪಟ್ಟವನು, ಶ್ರೀ ಹರಿಯು ನಿನ್ನನ್ನು ನಾಶಮಾಡುವನು, ಅಂದರೆ ಅಂಧಂತಮಸ್ಸಿನಲ್ಲಿ ಬೀಳಿಸುವನು. ಎಂದೇ ಹೇಳತಕ್ಕುದು. ಎಲ್ಲಿಯೂ ದೇವ ಸ್ವಭಾವವುಳ್ಳ ಮೋಕ್ಷಯೋಗ್ಯನನ್ನು ಕುರಿತು ಹೇಳಲೇ ಬಾರದು,

ಭಾ|| (a) ಷಣಯೋಃ ಸಂಧಿಕರಣಾತ್ಸಂಹಿತಾಽಧ್ಯಯನಂ ಭವೇತ್ । ವಿಷ್ ಣು ಸ್ತ್ವಿತಿ ಯೋ ಬ್ರೂಯಾತ್ಪದಾಧ್ಯಾಯೀ ಭವೇತ ಸಃ ॥ (b) ಸಂಧ್ಯುಕ್ತಿಶ್ಚ ವಿಭಾಗಶ್ಚ ದ್ವಯಂ ವ್ಯಾಪ್ತಂ ಕ್ರಮೇಣ ತು । ತಸ್ಮಾದ್ದ್ವಿಧಾಽಪಿ ವಚಸಾ ತ್ಕ್ರಮಾಧ್ಯಾಯೀ ಭವೇತ ಸಃ॥ (c) ಭೋಗವೃದ್ಧಿಂ ಚಯೋ ಮೋಕ್ಷ ಇಚ್ಛೇದ್ವಿಷ್ಣವ ಇತ್ಯಸೌ । ಮೋಕ್ಷಕಾಮೋ ವಿಷಣವೇ ದ್ವಯಕಾಮೋ ದ್ವಯಂ ವದೇತ್ ॥ (d) ವಿಷ್ಣುನಾಮಾತ್ಮಕತ್ವಾಚ್ಚಾಥ ಸಂಹಿತ ಪದಕ್ರಮಾಃ । ಸರ್ವವೇದ ಸ್ಥಿತಾ ಮೋಕ್ಷ ತದ್ಭೋಗದ್ವಯಸಾಧಕಾಃ ॥ ತಜ್ಜ್ಞಾನಾಮೇವ ನಾನ್ಯೇಷಾಮಿತಿ ವೇದಾನುಶಾಸನಂ । (e) ಸಂಹಿತಾದ್ಯಾ ಬ್ರುವನ್ವಾಪಿ ಯ ಏವಂ ವಿನ್ನ ಚಾಬ್ರುವನ್ ॥ ಪರಿವಾದಂ ಬ್ರುವಂತಂ ವಾ ನ ಬ್ರುವಂತ ಮಥಾಪಿವಾ । ಯದ್ವದೇತ್ತತ್ತಥೈವ ಸ್ಯಾತ್ಕ್ಷಿಪ್ರಮೇವ ನ ಸಂಶಯಃ ॥ ಇತಿ ಚ ॥

ಅ || (a) (ವಿಷ್ ಎಂಬುವುದು ಪೂರ್ವವರ್ಣವು, 'ಣು' ಎಂಬುವುದು ಉತ್ತರವರ್ಣವು ಎಂಬ ಪಕ್ಷದಲ್ಲಿ) ಷಕಾರ ಣಕ್ಕಾರಗಳಿಗೆ ಸಂಧಿಯನ್ನು ಮಾಡಿರುವುದರಿಂದ ('ವಿಷ್ಣುಃ' ಎಂಬ) ಸಂಹಿತಾಽಧ್ಯಯನವು ಆಗುವುದು. ('ಅಗ್ನಿಮೀಳೇ ಎಂಬುವಲ್ಲಿ ಅಗ್ನಿಮ್ ಎಂಬೀ ಮಕಾರಕ್ಕೂ ಈಕಾರಕ್ಕೂ ಅತಿಸಂಬದ್ಧವಾಗಿ ಉಚ್ಚಾರಣೆಯಾಗುತ್ತಿರಲು 'ಅಗ್ನಿಮೀಳೇ' ಎಂಬೀ ಸಂಹಿತಾಧ್ಯಯನವಾಗುವುದೋ ಹಾಗೆಯೇ ತಿಳಿಯತಕ್ಕದು.) ಯಾವಾತನು 'ವಿಷ್ ಣುಃ' ಎಂದು (ಷಕಾರ ಣಕಾರಗಳನ್ನು ಅಸಂಶ್ಲಿಷ್ಟವಾಗಿ) ಹೇಳುವನೋ ಆತನು ಪದಾಧ್ಯಾಯಿಯಾಗುವನು. ('ಅಗ್ನಿಮ್ ಈಳೇ' ಎಂದು ಮಕಾರ ಈಕಾರಗಳನ್ನು ಅಸಂಶ್ಲಿಷ್ಟವಾಗಿ ಹೇಳುವವನು ಹೇಗೆ ಪದಾಧ್ಯಾಯಿಯು ಆಗುವನೋ, ಹಾಗೆಯೇ ತಿಳಿಯತಕ್ಕದ್ದು.) (b) ಕ್ರಮದಿಂದಲಾದರೂ ('ವಿಷ್ಣುಃ' ಎಂಬೀ ಷಕಾರ ಣಕಾರಗಳ) ಸಂಧಿವಚನವು ('ಣುಃ' ಎಂಬ) ವಿಭಾಗವೂ ಎರಡೂ ವ್ಯಾಪ್ತವಾಗಿದೆ. ಆದುದರಿಂದ ವಿಷ್ಣುಃ ಣುಃ ಎಂಬೀ ಎರಡು ರೀತಿಯಾಗಿಯೂ ಮಾತು ಇದ್ದುದರಿಂದ ಆತನು ಕ್ರಮಾಧ್ಯಯನ ಮಾಡತಕ್ಕವನು ಆಗುವನು. (c) ಯಾವಾತನು ಮುಕ್ತಿಯಲ್ಲಿ ಅನ್ನಾದಿ ಭೋಗಬಾಹುಲ್ಯವನ್ನು ಯಾ, ಆನಂದಾನುಭವ ವೃದ್ಧಿಯನ್ನು ಇಚ್ಛಿಸುತ್ತಾನೋ, ಈತನು ವಿಷ್ಣವೇ ನಮಃ ಎಂದು ಸಂಹಿತಾರೂಪವಾದ ನಾಮವನ್ನು ಹೇಳತಕ್ಕದು. ಮುಕ್ತಿಯನ್ನು ಇಚ್ಛಿಸುವವನು ವಿಷಣವೇ ನಮಃ ಎಂದು ಪದಾತ್ಮಕವಾದ ನಾಮವನ್ನು ಹೇಳತಕ್ಕದು. ಮುಕ್ತಿ ಮತ್ತು ಭೋಗ ಎರಡನ್ನೂ ಇಚ್ಛಿಸುವವನು, ವಿಷ್ಣವೇ, ವಿಷಣವೇ ಎಂದು ಎರಡನ್ನೂ ಹೇಳತಕ್ಕದು. (d) ಹಾಗೆಯೇ ವಿಷ್ಣುವೆಂಬ ನಾಮಕ್ಕೆ ವ್ಯಾಖ್ಯಾನಭೂತವಾದುದರಿಂದ ಎಲ್ಲಾ ವೇದಗಳಲ್ಲಿಯೂ ಇರತಕ್ಕ ಸಂಹಿತೆ ಪದಕ್ರಮಗಳು ಮುಕ್ತಿ ಅಲ್ಲಿದ್ದ ಭೋಗ ಎರಡನ್ನೂ ಸಾಧಿಸಿ ಕೊಡುತ್ತವೆ, ಸಂಹಿತಾದಿ ಪ್ರತಿಪಾದ್ಯ ಭಗವತ್ಸ್ವರೂಪವನ್ನು ತಿಳಿದವರಿಗೇನೇ, ಇತರರಿಗೆ ಸಾಧಕವಾಗಲಾರವು. ಹೀಗೆ ಸರ್ವವೇದಗಳ ಅನುಜ್ಞೆಯು. (e) ಈಪ್ರಕಾರ ತಿಳಿದ ಯಾವಾತನು ಸಂಹಿತೆ ಮೊದಲಾದ ಶ್ರುತಿಸಮೂಹಗಳನ್ನು ಅಧ್ಯಯನ ಮಾಡತಕ್ಕವನಾಗಲೀ, ಮಾಡದಿರುವವನಾಗಲೀ, ನಿಂದೆಯನ್ನು ಮಾಡತಕ್ಕವನನ್ನಾಗಲೀ ಮಾಡದಿರುವವನನ್ನಾಗಲೀ (ಅಂದರೆ ರೀತ್ಯಂತರದಿಂದ ತನಗೆ ದ್ರೋಹಮಾಡತಕ್ಕವನನ್ನಾಗಲೀ), ಯಾವನೊಬ್ಬ ಪುರುಷನನ್ನಾಗಲೀ ಯಾವುದೊಂದು ಶಾಪರೂಪವಾದ ಮಾತನ್ನು ಹೇಳುವನೋ, ಆವಚನವು ಶೀಘ್ರವಾಗಿ ಸತ್ಯವೇ ಆಗುವುದು. (ವ್ಯರ್ಥವಾಗಲಾರದು) ಸಂದೇಹ ವಿಲ್ಲವು, ಹೀಗೂ ಉಕ್ತವಾಗಿದೆ.

ಭಾ॥ (a) ಅಗ್ರ ಏವ । ಅಗ್ರ್ಯಮೇವೋಭಯಮಂತರೇಣ ॥ (b) ದ್ಯುಮ್ನೋ ದ್ಯುತಿಸ್ವರೂಪತ್ವಾದ್ವಿಷ್ಣುರೇವ ಪ್ರಕೀರ್ತಿತಃ । ಯೋಽತಿಕ್ರಾಮತಿ ತಸ್ಯಾಜ್ಞಾಮತಿದ್ಯುಮ್ನಃ ಪ್ರಕೀರ್ತಿತಃ ॥ (c) ಮೋಕ್ಷಯೋಗ್ಯೋಽಪಿ ಯಸ್ತ್ವೇವಮತಿದ್ಯುಮ್ನೋ ಭವೇತ್ಪುಮಾನ್ । ಲೋಕಚ್ಯುತೋಽಸೀತ್ಯೇವಂ ತಂ ಬ್ರೂಯಾನ್ನಾಜ್ಞಾಸ್ಥಿತಂ ಕ್ವಚಿತ್ ॥ (d) ಲೋಕಚ್ಯುತೋ ಭವೇತ್ಯೇನಮಪಿ ನೈವ ವದೇತ್ಕ್ವಚಿತ್ । ಚ್ಯುತೋಽಸೀತಿ ತು ಶಿಕ್ಷಾರ್ಥಂ ಬ್ರೂಯಾನ್ನೈವಾನ್ಯಥಾ ಕ್ವಚಿತ್ ॥ ಇತಿ ಚ ॥ ೩ ॥

ಅ ॥ (a) ಕ್ರಮವು ಸಂಹಿತಾಪದಗಳಿಂದ ಶ್ರೇಷ್ಠವೇ ಸರಿ. (b) ಪ್ರಕಾಶಸ್ವರೂಪನಾದುದರಿಂದ ದ್ಯುಮ್ನಶಬ್ದವಾಚ್ಯನು ವಿಷ್ಣುವೇ ಹೇಳಲ್ಪಟ್ಟಿದ್ದಾನೆ. ಆತನ ಅನುಜ್ಞೆಯನ್ನು ಯಾರು ಅತಿಕ್ರಮಿಸುತ್ತಾನೋ ಆತನು ಅತಿದ್ಯುಮ್ನನೆಂದು ಹೇಳಲ್ಪಡುತ್ತಾನೆ. (c) ಯಾವ ಪುರುಷನು ಮುಕ್ತಿಗೆ ಯೋಗ್ಯನಾಗಿದ್ದರೂ ಈ ಪ್ರಕಾರ ಅತಿದ್ಯುಮ್ನನು ಆಗುವನೋ, (ಅಂದರೆ ವಿಷ್ಣುವಿನ ಆಜ್ಞಾರೂಪ ಶ್ರುತಿಸ್ಮೃತಿಗಳಲ್ಲಿ ಹೇಳಲ್ಪಟ್ಟ ಧರ್ಮವನ್ನು ಉಲ್ಲಂಘಿಸುತ್ತಾನೋ ಆ ಮುಕ್ತಿಯೋಗ್ಯನಾದ ಪುರುಷನನ್ನು ಲೋಕಗಳಿಂದ ಪರಿಭ್ರಷ್ಟನಾಗಿದ್ದಿ ಎಂದೇ ಹೇಳತಕ್ಕುದು. ಭಗವದಾಜ್ಞೆಯನ್ನು ಅನುಸರಿಸಿರತಕ್ಕ ಮುಕ್ತಿಯೋಗ್ಯನಾದ ಪುರುಷನನ್ನು ಎಲ್ಲಿಯೂ (ಲೋಕಚ್ಯುತನಾಗಿದ್ದಿ ಎಂದೂ) ಹೇಳಕೂಡದು. (d) ಈತನನ್ನು ಕುರಿತು ಲೋಕಚ್ಯುತನಾಗು ಎಂದೂ ಎಲ್ಲಿಯೂ ಹೇಳಕೂಡದು. ಲೋಕಚ್ಯುತನಾಗಿದ್ದಿ ಎಂದು ಶಿಕ್ಷೆಗೋಸ್ಕರವೇ ಹೇಳತಕ್ಕುದು. ಬೇರೆ ರೀತಿಯಾಗಿ ಎಲ್ಲಿಯೂ ಹೇಳಕೂಡದು. ಹೀಗೂ ಉಕ್ತವಾಗಿದೆ. ॥ ೩ ॥

**ಮಂ ॥ ಅಥಾತೋಽನುವ್ಯಾಹಾರಾಃ ಪ್ರಾಣೋ ವಂಶ ಇತಿ ವಿದ್ಯಾತ್ಸಯ ಏನಂ ಪ್ರಾಣಂ ವಂಶಮುಪವದೇಚ್ಛಕ್ನುವಂತಂ ಚೇನ್ಮನ್ಯೇತ ಪ್ರಾಣಂ ವಂಶಂ ಸಮಧಾಂ ಪ್ರಾಣಂ ಮಾ ವಂಶಂ ಸಂದಧತಂ ನ ಶಕ್ನೋಷೀತ್ಯಾಹ ಪ್ರಾಣಸ್ತ್ವಾ ವಂಶೋ ಹಾಸ್ಯತೀತ್ಯೇನಂ ಬ್ರೂಯಾದಥ ಚೇದಶಕ್ನುವಂತಂ ಮನ್ಯೇತ ಪ್ರಾಣಂ ವಂಶಂ ಸಮಧಿತ್ಸಿಷಂತಂ ನಾಶಕಃ ಸಂಧಾತುಂ ಪ್ರಾಣಸ್ತ್ವಾ ವಂಶೋ ಹಾಸ್ಯತೀತ್ಯೇನಂ ಬ್ರೂಯಾದ್ಯಥಾ ತು ಕಥಾ ಚ ಬ್ರುವನ್ತ್ಸಾ ಬ್ರುವಂತಂ ವಾ ಬ್ರೂಯಾದಭ್ಯಾಶಮೇವ ಯತ್ತಥಾ ಸ್ಯಾನ್ನತ್ವೇವಾನ್ಯತ್ಕುಶಲಾದ್ಬ್ರಾಹ್ಮಣಂ ಬ್ರೂಯಾದತಿದ್ಯುಮ್ನ ಏವ ಬ್ರಾಹ್ಮಣಂ ಬ್ರೂಯಾನ್ನಾತಿ ದ್ಯುಮ್ನೇ ಚ ನ ಬ್ರಾಹ್ಮಣಂ ಬ್ರೂಯಾನ್ನಮೋ ಅಸ್ತು ಬ್ರಾಹ್ಮಣೇಭ್ಯಃ ಇತಿ ಹ ಸ್ಮಾಹ ಶೂರವೀರೋ ಮಾಂಡೂಕೇಯಃ ॥ ೪ ॥**

ಅ ॥ ಅಥ=ಸಂಹಿತಾದಿಗಳನ್ನು ಉಪಾಸನೆ ಮಾಡಿದವನಿಗೆ ಯಾವುದಾದರೊಂದು ವಿಷಯದಲ್ಲಿ ನಿಂದೆಯು ಪ್ರಾಪ್ತವಾಗುತ್ತಿರಲು ಪ್ರತ್ಯುತ್ತರವನ್ನು ಕೊಡತಕ್ಕ ಪ್ರಕಾರವನ್ನು ನಿರೂಪಿಸಿದಮೇಲೆ, ಅತಃ=ಪ್ರಯೋಜನವಿದ್ದುದರಿಂದ, ಅನುವ್ಯಾಹಾರಾಃ=ಆತ್ಮನ ಜ್ಞಾನಸಾಮರ್ಥ್ಯವನ್ನನುಸರಿಸಿ ಶ್ರೀ ಹರಿಯ ಉಪಾಸನಾವಿಷಯದಲ್ಲಿಯೇ ಉಪಾಸಕನಿಗೆ ಅಶಕ್ತಿಮೊದಲಾದ ದೋಷವನ್ನು ಹೇಳತಕ್ಕವನನ್ನು ಕುರಿತು ಹೇಳತಕ್ಕ ವ್ಯವಹಾರ ವಿಶೇಷಗಳು, (ತೋರಿಸಲ್ಪಡು

ತ್ತವೆ.) ಪ್ರಾಣಃ=ವಿಷ್ಣುವು ವಾಯುವೂ ಕೂಡ, ವಂಶ ಇತಿ=ಸರ್ವರಿಗೂ ಆಶ್ರಯಭೂತರಾದುದರಿಂದ ವಂಶಸ್ಥಾನೀಯರೆಂದು, ವಿದ್ಯಾತ್=ಉಪಾಸನೆ ಮಾಡತಕ್ಕದು. ಸಃ=ಪ್ರಸಿದ್ಧನಾದ, ಯಃ=ಯಾವ ಪುರುಷನು, ವಂಶಂ ಪ್ರಾಣಂ=ಸರ್ವಾಶ್ರಯರಾದ ಹರಿವಾಯುಗಳನ್ನು ಕುರಿತು ಇರತಕ್ಕ, (ಹರಿವಾಯುಗಳ ಉಪಾಸಕನಾದ), ಏನಂ=ಈ ಅಧಿಕಾರಿಯನ್ನು, ಉಪವದೇತ್=(ಪ್ರಾಣಪ್ರೀತಿಯನ್ನು ಸಂಪಾದನೆ ಮಾಡುವವಿಷಯದಲ್ಲಿ ನೀನು ಸಮರ್ಥನಲ್ಲ ಇತ್ಯಾದಿ ರೀತಿಯಿಂದ) ನಿಂದಿಸುತ್ತಾನೋ, (ಹಾಗಾದರೆ), ಏನಂ=ನಿಂದಿಸತಕ್ಕ ಪುರುಷನನ್ನು ಕುರಿತು, (ಈ ಪ್ರಾಣೋಪಾಸಕನು) 'ಶಕ್ನುವಂತಂ ಮನ್ಯೇತ ಚೇತ್,=ತನ್ನನ್ನು ಜ್ಞಾನಸಾಮರ್ಥ್ಯಯುಕ್ತನನ್ನಾಗಿ ತಿಳಿದ ಪಕ್ಷದಲ್ಲಿ, (ದೇವಾದ್ಯುತ್ತಮಾಧಿಕಾರಿಯಾದ ಪಕ್ಷದಲ್ಲಿ), ಪ್ರಾಣಂ ವಂಶಂ=ಸರ್ವಾಶ್ರಯರಾದ ಹರಿವಾಯುಗಳನ್ನು, ಸಮಧಾಂ=ಚೆನ್ನಾಗಿ ಧರಿಸಿದ್ದೇನೆ, (ಅಂದರೆ ಹರಿವಾಯುಗಳಿಗೆ ಪ್ರೀತಿಯನ್ನು ಸಂಪಾದಿಸಿದವನು ಆಗಿರುತ್ತೇನೆ.) ವಂಶಂ ಪ್ರಾಣಂ=ಸರ್ವಾಶ್ರಯರಾದ ಹರಿವಾಯುಗಳನ್ನು, ಸಂದಧತಂ ಮಾ=ಚೆನ್ನಾಗಿ ಧರಿಸಿದ ನನ್ನನ್ನು, ನ ಶಕ್ನೋಷಿ=ಪ್ರಾಣಪ್ರೀತಿಯನ್ನು ಸಂಪಾದನೆ ಮಾಡುವ ವಿಷಯದಲ್ಲಿ) ಸಮರ್ಥನಲ್ಲ. ಇತಿ=ಈ ಪ್ರಕಾರ (ನೀನು) ಆಹ=ಹೇಳಿದಿ. (ಆದಕಾರಣ), ವಂಶಃ ಪ್ರಾಣಃ=ಸರ್ವಾಶ್ರಯರಾದಹರಿವಾಯುಗಳು, ತ್ವಾ=ನಿನ್ನನ್ನು, ಹಾಸ್ಯತಿ=(ಈ ಲೋಕದಲ್ಲಿಯೂ ಪರಲೋಕದಲ್ಲಿಯೂ) ಪರಿತ್ಯಾಗಮಾಡುತ್ತಾರೆ. ಇತಿ=ಈ ಪ್ರಕಾರ, ಬ್ರೂಯಾತ್=ಹೇಳತಕ್ಕದು. ಅಥ=ಹಾಗೆಯೇ ಅಯಂ=ಈ ಪ್ರಾಣೋಪಾಸಕನು, ಅಶಕ್ನುವಂತಂ=(ತನ್ನನ್ನು) ಅಲ್ಪಜ್ಞಾನ ಶಕ್ತಿಯುಳ್ಳವನನ್ನಾಗಿ, ಮನ್ಯೇತ ಚೇತ್=ತಿಳಿದಪಕ್ಷದಲ್ಲಿ, (ಅಂದರೆ ಗಂಧರ್ವ ಪಿತ್ರಾದ್ಯಲ್ಪಾಧಿಕಾರಿಯಾದರೆ) ಏನಂ, ಪ್ರಾಣಂ ವಂಶಂ ಸಮಧಿತ್ಸಿಷಂತಂ=ಸರ್ವಾಧಾರನಾದ ಪ್ರಾಣನನ್ನುಪಾಸನೆ ಮಾಡಲಿಕ್ಕೆ ಇಚ್ಛಿಸಿದ (ಅಂದರೆ ಪ್ರಾಣಪ್ರೀತಿಯನ್ನು ಸಂಪಾದನೆ ಮಾಡುವುದರಲ್ಲಿ ಉದ್ಯೋಗವುಳ್ಳ) ನನ್ನನ್ನು, ಸಂಧಾತುಂ=ಸಂಧಿಮಾಡಲಿಕ್ಕೆ, ನಾಶಕಃ=ಸಮರ್ಥನಲ್ಲ. (ಅಂದರೆ ನನಗೆ ಪ್ರೀತಿಯನ್ನು ಮಾಡಲಿಕ್ಕೆ ನೀನು ಸಮರ್ಥನಲ್ಲ). ಆದುದರಿಂದ, ತ್ವಾ, ವಂಶಃ ಪ್ರಾಣಃ, ಹಾಸ್ಯತಿ=ಪರಿತ್ಯಾಗ ಮಾಡುವರು. ಇತಿ ಬ್ರೂಯಾತ್, ಹೇಳತಕ್ಕದು. 'ಯಥಾತು ಕಥಾಚ ಬ್ರುವನ್ನಾ ಬ್ರುವಂತಂ' ॥ ೪ ॥

ಭಾ॥ (a) ಭಗವದುಪಾಸಕಸ್ಯ ಯಸ್ಮಿನ್ಕಸ್ಮಿಂಶ್ಚಿದ್ದೋಷೇ ಉಕ್ತೇ ತಂ ಪ್ರತ್ಯುಕ್ತಿಪ್ರಕಾರಃ ಪೂರ್ವಂ ದರ್ಶಿತಃ। ಅನುವ್ಯಾಹಾರಶಬ್ದೇನ ಭಗವದುಪಾಸನಾವಿಷಯ ಏವಾಸ್ಯಾಶಕ್ತ್ಯಾದಿದೋಷಂ ವದತಃ ಪ್ರತ್ಯುಕ್ತಿರುಚ್ಯತೇ ॥ ನಿರ್ಭರ್ಜಂ ವದಂತಮಿತ್ಯಾದಿತ್ವವಸ್ಥಾಮಾತ್ರದರ್ಶನಂ । (b) ಆತ್ಮನೋ ಜ್ಞಾನಸಾಮರ್ಥ್ಯಾನುಸಾರೇಣ ವಕ್ತವ್ಯತ್ವಾದನುವ್ಯಾಹಾರಃ ॥ (c) ಸರ್ವಾಧಾರತ್ವತೋ ವಂಶ ಇತ್ಯುಪಾಸೀತ ಯೋ ಹರಿಂ । ವಾಯುಂ ಚ ಮುಕ್ತಿಮಾಪ್ನೋತಿ ಯ ಏವಂ ತದುಪಾಸಕಂ ॥ ನಿಂದೇತ ವಿಷ್ಣುವಿಜ್ಞಾನವಿಷಯೇ ತಂ ವದೇತ ಸಃ। (d) ವಿಷ್ಣುನಾ ವಂಶಭೂತೇನ ವಾಯುನಾ ಸಹಿತಂ ತಥಾ ॥ ನ ಶಕ್ನೋಷೀತಿ ಮಾಮಾತ್ಥ ಹಾಸ್ಯತಸ್ತ್ವಾಮತೋ ಹಿ ತೌ । ಜ್ಞಾನಸಾಮರ್ಥ್ಯವಾನಿತ್ಥಂ ಬ್ರೂಯಾದ್ದೇವಾದಿರುತ್ತಮಃ ॥

ಅ ॥ (a) ಶ್ರೀ ಹರಿಯನ್ನು ಉಪಾಸನೆ ಮಾಡಿದವನಿಗೆ ಭಗವದುಪಾಸನೆಯಿಂದ ಅತಿರಿಕ್ತವಾದ ಯಾವುದಾದರೊಂದು ವಿಷಯದಲ್ಲಿ, ದೋಷವು ಹೇಳಲ್ಪಡುತ್ತಿರಲು ಆತನನ್ನು ಕುರಿತು ಪ್ರತ್ಯುತ್ತರ ಕೊಡತಕ್ಕ ರೀತಿಯು ಪೂರ್ವಖಂಡದಲ್ಲಿ ತೋರಿಸಲ್ಪಟ್ಟದೆ. (ಈ

ಖಂಡದಲ್ಲಿ) ಅನುವ್ಯಾಹಾರ ಶಬ್ದದಿಂದ ಭಗವದುಪಾಸನಾ ವಿಷಯದಲ್ಲಿಯೇ ಈ ಉಪಾಸಕನಿಗೆ ಅಶಕ್ತಿಮೊದಲಾದುದನ್ನು ಹೇಳತಕ್ಕವನಿಗೆ ಪ್ರತ್ಯುತ್ತರವು ಹೇಳಲ್ಪಡುತ್ತದೆ. 'ನಿರ್ಭುಜಂ ವದಂತಂ' ಇದು ಮೊದಲಾದ ಪೂರ್ವಖಂಡದಲ್ಲಿದ್ದ ವಾಕ್ಯವಾದರೂ ಅವಸ್ಥೆಯನ್ನು ಮಾತ್ರ ತೋರಿಸಿದ್ದು. (ಅಲ್ಲದೆ ನಿಂದೆಗೆ ನಿರ್ಭುಜಾದಿ ವಿಷಯತ್ವವನ್ನು ತೋರಿಸಿದ್ದಲ್ಲ. ಅವಸ್ಥೆಯನು ತೋರಿಸದಿದ್ದರೆ ಭಗವನ್ನಿಂದೆಯಲ್ಲಿ ಪರ್ಯವಸಾನವಾಗಲಾರದು.). (d) ತನ್ನ ಜ್ಞಾನಸಾಮರ್ಥ್ಯವನ್ನು ಅನುಸರಿಸಿ ಹೇಳತಕ್ಕುದು ಆದುದರಿಂದ 'ಅನುವ್ಯಾಹಾರ' ಎನ್ನಿಸಿಕೊಳ್ಳುತ್ತದೆ. (c) ಯಾವಾತನು ಶ್ರೀ ಹರಿಯನ್ನೂ ವಾಯುವನ್ನೂ ಕೂಡ ಸರ್ವರಿಗೂ ಆಶ್ರಯನಾದುದರಿಂದ, 'ವಂಶ'ರೆಂದು ಉಪಾಸನೆ ಮಾಡುತ್ತಾನೋ, ಆತನು ಮುಕ್ತಿಯನ್ನು ಹೊಂದುತ್ತಾನೆ. ಯಾರು ಈ ಪ್ರಕಾರವಾಗಿ ಆ ಹರಿವಾಯುಗಳನ್ನು ಉಪಾಸನೆ ಮಾಡತಕ್ಕವನನ್ನು ಶ್ರೀ ಹರಿಯ ವಿಜ್ಞಾನವಿಶೇಷದಲ್ಲಿ ನಿಂದಿಸುವನೋ, ಆ ನಿಂದಕನನ್ನು ಆ ಪ್ರಾಣೋಪಾಸಕನು ಹೇಳತಕ್ಕುದು. (b) ಸರ್ವಾಶ್ರಯರಾದುದರಿಂದ ವಂಶಸ್ಥಾನೀಯನಾದ ವಿಷ್ಣುವಿನಿಂದಲೂ ಹಾಗೂ ವಾಯುವಿನಿಂದಲೂ ಯುಕ್ತನಾದ (ಅಂದರೆ ಹರಿವಾಯುಗಳನ್ನು ಉಪಾಸನೆಮಾಡತಕ್ಕ) ನನ್ನನ್ನು (ನೀನು ಆ ಹರಿವಾಯುಗಳ ಪ್ರೀತಿಯನ್ನು ಸಂಪಾದಿಸುವ ವಿಷಯದಲ್ಲಿ) ಸಮರ್ಥನಲ್ಲ ಎಂದು ಹೇಳಿದಿ. ಆದುದರಿಂದ ನಿನ್ನನ್ನು ಆ ಹರಿವಾಯುಗಳು ನಿಶ್ಚಯವಾಗಿ ಬಿಡುವರು. ಈ ಪ್ರಕಾರವಾಗಿ ಜ್ಞಾನಸಾಮರ್ಥ್ಯವುಳ್ಳ ದೇವಾದ್ಯುತ್ತಮಾಧಿಕಾರಿಯು ಹೇಳತಕ್ಕುದು.

ಭಾ॥ **(a)** ಅನ್ಯೋ ಗಂಧರ್ವಪಿತ್ರಾದಿರಲ್ಪಜ್ಞಾನಬಲೋ ಹಿ ಯಃ । ಸ ಬ್ರೂಯಾದ್ವಿಷ್ಣುವಾಯುಭ್ಯಾಂ ಸಂಧಿಮಿಚ್ಛಂತಮೇವ ಮಾಂ ॥ ಸಂಧಾತುಂ ನಾಶಕೋ ಯಸ್ಮಾದ್ಧಾಸ್ಯತಸ್ತ್ವಾಮತೋ ಹಿ ತಾವಿತಿ ಚ । **(b)** ಸ ಯ ಏನಂ ಪ್ರಾಣಂ ವಂಶಮುಪವದೇತ್ಪ್ರಾಣಂ ಪ್ರತ್ಯೇನಮುಪಾಸಕಮುಪವದೇತ್ ॥ ಪ್ರಾಣಸ್ಯ ವಿಷ್ಣೋಃ ಪ್ರಿಯತ್ವಂ ತವ ನ ಪ್ರಾಪ್ಸ್ಯತೀತಿ । **(c)** ನಾಶಕಃ ಸಂಧಾತುಂ ಮಯಾ ಸಹ ಸಂಧಾನಂ ಕರ್ತುಂ ನಾಶಕಃ ॥ ಮಮ ಪ್ರೀತಿಂ ಕರ್ತುಂ ನಾಶಕಃ । **(d)** ತದ್ಭಕ್ತಭಕ್ತೇಷ್ವಪಿ ಯೋ ನ ಕುರ್ಯಾತ್ಪ್ರೀತಿಮಂಜಸಾ ॥ ವಿಷ್ಣುರ್ಜಹಾತಿ ತಂ ಪಾಪಮಿಹ ಚಾಮುತ್ರ ಚ ಪ್ರಭುಃ ॥ ಇತಿ ಚ ಭಾರತೇ ॥ ೪ ॥

ಅ ॥ (a) ಇತರರಾದ, ಅಲ್ಪವಾದ ಜ್ಞಾನವು ಶಕ್ತಿಯೂ ಉಳ್ಳ ಯಾವ ಗಂಧರ್ವಪಿತ್ರಾದ್ಯಲ್ಪಾಧಿಕಾರಿಯೋ, ಆತನು ಹರಿವಾಯುಗಳಿಂದ ಸಂಧಿಯನ್ನು ಇಚ್ಛಿಸುವ (ಅಂದರೆ ಅವರ ಪ್ರೀತಿಸಂಪಾದನೋದ್ಯುಕ್ತನಾದ) ನನ್ನನ್ನೇ ಯಾವಕಾರಣದಿಂದ (ಅವರ ಪ್ರೀತಿಸಂಪಾದನೆಯಲ್ಲಿಯೂ ಸಮರ್ಥನಲ್ಲ ಎಂದು ಹೇಳಿದಿಯೋ,) ಆದುದರಿಂದ ಸಂಧಿಯನ್ನು ಮಾಡಲಿಕ್ಕೆ ಸಮರ್ಥನಲ್ಲ. (ಅಂದರೆ ನನಗೆ ಪ್ರೀತಿಯನ್ನು ಮಾಡಲಿಕ್ಕೆ ಸಮರ್ಥನಲ್ಲ.) ಆದುದರಿಂದ ಆ ಹರಿವಾಯುಗಳು ನಿನ್ನನ್ನು ಬಿಡುವರು, ಹೀಗೂ ಉಕ್ತವಾಗಿದೆ. (b) 'ಸ ಯ ಏನಂ ಪ್ರಾಣಂ ವಂಶಮುಪವದೇತ್' ಅಂದರೆ ಪ್ರಾಣನನ್ನು ಕುರಿತು ಇರತಕ್ಕ ಈ ಉಪಾಸಕನನ್ನು ನಿಂದಿಸತಕ್ಕುದು. (ಈ ಉಪಾಸನೆಯಿಂದ) ನಿನಗೆ ವಿಷ್ಣುವಿನ ಪ್ರೀತಿವಿಷಯತ್ವವು ಪ್ರಾಪಿಸಲಾರದು. (ಅಂದರೆ ನಿನ ಉಪಾಸನೆಯು ಆ ಹರಿವಾಯುಗಳಿಗೆ ಪ್ರೀತಿಯನ್ನು ಹುಟ್ಟಿಸಲಾರದು.) ಎಂದು

ನಿಂದಿಸತಕ್ಕುದು. (c) ನಾಶಕಃ ಸಂಧಾತುಂ=ನನ್ನಿಂದೊಡಗೂಡಿ ಸಂಧಿಯನ್ನು ಮಾಡಲಿಕ್ಕೆ ಸಮರ್ಥನಲ್ಲ. ಅಂದರೆ ನನಗೆ ಪ್ರೀತಿಯನ್ನು ಮಾಡಲಿಕ್ಕೆ ಸಮರ್ಥನಲ್ಲ. (d) ಆ ಹರಿವಾಯುಗಳ ಭಕ್ತರಾದ ದೇವಾದಿಗಳ ಭಕ್ತರಾದ ಗಂಧರ್ವಾದಿಗಳಲ್ಲಿಯೂ ಯಾವಾತನು ಚೆನ್ನಾಗಿ ಪ್ರೀತಿಯನ್ನು ಮಾಡುವುದಿಲ್ಲವೋ, ಅಂತಹ ಪಾಪಿಯನ್ನು ಸರ್ವಸಮರ್ಥನಾದ ಶ್ರೀ ಹರಿಯು ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ಬಿಡುತ್ತಾನೆ, ಎಂದೂ ಭಾರತದಲ್ಲಿದೆ. ॥ ೪ ॥

ಮಂ ॥ ಅಥ ಖಲ್ವಾಹುರ್ನಿರ್ಭುಜವಕ್ತ್ರಾಃ ಪೂರ್ವಮಕ್ಷರಂ ಪೂರ್ವರೂಪಮುತ್ತರಮುತ್ತರರೂಪಂ ಯೋಽವಕಾಶಃ ಪೂರ್ವರೂಪೋತ್ತರರೂಪೇ ಅಂತರೇಣ ಸಾ ಸಂಹಿತೇತಿ ಸ ಯ ಏವಮೇತಾಂ ಸಂಹಿತಾಂ ವೇದ ಸಂಧೀಯತೇ ಪ್ರಜಯಾ ಪಶುಭಿರ್ಯಶಸಾ ಬ್ರಹ್ಮವರ್ಚಸೇನ ಸ್ವರ್ಗೇಣ ಲೋಕೇನ ಸರ್ವಮಾಯುರೇತ್ಯಥ ವಯಂ ಬ್ರೂಮೋ ನಿರ್ಭುಜವಕ್ತ್ರಾ ಇತಿ ಹ ಸ್ಮಾಹ ಹ್ರಸ್ವೋ ಮಾಂಡೂಕೇಯಃ ಪೂರ್ವಮೇವಾಕ್ಷರಂ ಪೂರ್ವರೂಪಮುತ್ತರಮುತ್ತರರೂಪಂ ಯೋಽವಕಾಶಃ ಪೂರ್ವರೂಪೋತ್ತರರೂಪೇ ಅಂತರೇಣ ಯೇನ ಸಂಧಿಂ ವಿವರ್ತಯತಿ ಯೇನ ಸ್ವರಾಸ್ವರಂ ವಿಜಾನಾತಿ ಯೇನ ಮಾತ್ರಾಮಾತ್ರಾಂ ವಿಭಜತೇ ಸಾ ಸಂಹಿತೇತಿ ಸ ಯ ಏವಮೇತಾಂ ಸಂಹಿತಾಂ ವೇದ ಸಂಧೀಯತೇ ಪ್ರಜಯಾ ಪಶುಭಿರ್ಯಶಸಾ ಬ್ರಹ್ಮವರ್ಚಸೇನ ಸ್ವರ್ಗೇಣ ಲೋಕೇನ ಸರ್ವಮಾಯುರೇತ್ಯಥ ಹಾಸ್ಯ ಪುತ್ರ ಆಹ ಮಧ್ಯಮಃ ಪ್ರಾತೀಬೋಧೀ ಪುತ್ರೋಽಕ್ಷರೇ ಖಲ್ವಿಮೇ ಅವಿಕರ್ಷನ್ನನೇಕೀಕುರ್ವನ್ಯಥಾ ವರ್ಣಮಾಹ ತದ್ಯಾಸೌ ಮಾತ್ರಾಪೂರ್ವರೂಪೋತ್ತರರೂಪೇ ಅಂತರೇಣ ಸಂಧಿ ವಿಜ್ಞಾಪನೀ ಸಾಮ ತದ್ಭವತಿ ಸಾಮ್ನೈವಾಹಂ ಸಂಹಿತಾಂ ಮನ್ಯ ಇತಿ ತದಪ್ಯೇತದೃಷಿಣೋಕ್ತಂ ಬೃಹಸ್ಪತೇ ನ ಪರಃ ಸಾಮ್ನೋ ವಿದುರಿತಿ ಸ ಯ ಏವಮೇತಾಂ ಸಂಹಿತಾಂ ವೇದ ಸಂಧೀಯತೇ ಪ್ರಜಯಾ ಪಶುಭಿರ್ಯಶಸಾ ಬ್ರಹ್ಮವರ್ಚಸೇನ ಸ್ವರ್ಗೇಣ ಲೋಕೇನ ಸರ್ವಮಾಯುರೇತಿ ॥ ೫ ॥

ಅ ॥ ಅಥ=ಆಮೇಲೆ, (ಪ್ರಮೇಯಾಂತರವು ನಿರೂಪಿಸಲ್ಪಡುತ್ತದೆ.) ನಿರ್ಭುಜವಕ್ತ್ರಾಃ=ಸಂಹಿತೆಯು ಮುಖದಲ್ಲಿವುಳ್ಳ, ನಿರ್ಭುಜವಕ್ತ್ರನಾಮಕವಾದ ಕೆಲವು ಋಷಿಗಳು, ಪೂರ್ವಂ ಅಕ್ಷರಂ=ಪೂರ್ವಾಕ್ಷರದಲ್ಲಿರತಕ್ಕ ಪೂರ್ವಾಕ್ಷರನಾಮಕನಾದ ವರಾಹಾಖ್ಯರೂಪವು, ಪೂರ್ವರೂಪಂ=ಪೂರ್ವವರ್ಣಪ್ರತಿಪಾದ್ಯವು. ಉತ್ತರಂ=ಉತ್ತರವರ್ಣದಲ್ಲಿರತಕ್ಕ ತನ್ನಾಮಕವಾದ ವಾಮನಾಖ್ಯರೂಪವು, ಉತ್ತರರೂಪಂ=ಉತ್ತರವರ್ಣಪ್ರತಿಪಾದ್ಯವು. ಪೂರ್ವರೂಪೋತ್ತರರೂಪೇ ಅಂತರೇಣ=ಪೂರ್ವೋತ್ತರವರ್ಣಗಳ ಮಧ್ಯದಲ್ಲಿರತಕ್ಕ, ಯಃ=ಯಾವ, ಅವಕಾಶಃ=ರಕ್ಷಿಸುವುದರಿಂದಲೂ, ಪ್ರಕಾಶಿಸುವುದರಿಂದಲೂ ಅವಕಾಶನಾಮಕನಾದ ನರಸಿಂಹನೋ, ಸಃ=ಆ ದೇವತೆಯು, ಸಂಹಿತಾ=ಸಂಹಿತಾನಾಮಕವು. ಇತಿ=ಈ ಪ್ರಕಾರ, ಆಹುಃ ಖಲು=ಹೇಳುತ್ತಾರೆ, ನಿಶ್ಚಯವು. ಯಃ ಏವಂ ಏತಾಂ ಸಂಹಿತಾಂ ವೇದ, ಸಃ ಪ್ರಜಯಾ ಪಶುಭಿಃ ಯಶಸಾ

ಬ್ರಹ್ಮವರ್ಚಸೇನ ಸ್ವರ್ಗೇಣ ಲೋಕೇನ ಸಂಧಿಯತೇ ಸರ್ವಂ ಆಯುಃ ಏತಿ...... ಅಥ= ಆ ಮೇಲೆ, (ಹೀಗೆ ಹೇಳತಕ್ಕ ನಿರ್ಭುಜವಕ್ತ್ರರನ್ನು ಕುರಿತು), ಹ್ರಸ್ವೋ ಮಾಂಡೂಕೇಯಃ= ತನ್ನಾಮಕ ಋಷಿಯು, ನಿರ್ಭುಜವಕ್ತ್ರಾ ಇತಿ=ನಿರ್ಭುಜವಕ್ತ್ರನಾಮಕ ಋಷಿಗಳೇ ಎಂದು ಸಂಬೋಧಿಸಿ, ವಯಂ=ನಾವು, 'ಪೂರ್ವಂ ಏವ' ಅಕ್ಷರಂ=ಪೂರ್ವಾಕ್ಷರದಲ್ಲಿರತಕ್ಕ ವರಾಹನೇ, ಪೂರ್ವರೂಪಂ=ಪೂರ್ವವರ್ಣಪ್ರತಿಪಾದ್ಯನು. ಉತ್ತರಂ=ಉತ್ತರಾಕ್ಷರದಲ್ಲಿರತಕ್ಕ ವಾಮನನೇ, ಉತ್ತರರೂಪಂ=ಉತ್ತರವರ್ಣ ಪ್ರತಿಪಾದ್ಯನು. (ಈ ವಿಷಯದಲ್ಲಿ ನಮಗೆ ಪ್ರತಿಪತ್ತಿಯಿಲ್ಲವೆಂದು 'ಏವ'ಕಾರದಿಂದ ಹೇಳುತ್ತಾರೆ.) ಪೂರ್ವರೂಪೋತ್ತರ ರೂಪೇ ಅಂತರೇಣ= ಪೂರ್ವೋತ್ತರ ವರ್ಣಗಳ ಮಧ್ಯದಲ್ಲಿ, ಯೋಽವಕಾಶಃ=ಯಾವ ನರಸಿಂಹನು ಹೇಳಲ್ಪಟ್ಟದ್ದಾನೋ, (ಆ ಸ್ಥಾನದಲ್ಲಿ), ಯೇನ=ಯಾವ ವೇದವ್ಯಾಸದೇವರಿಂದ (ಅವರ ಪ್ರೇರಣೆಯಿಂದ) ಸಂಧಿಂ=ಪೂರ್ವೋತ್ತರವರ್ಣಗಳ ಸಂಧಿಯನ್ನು, (ಜೀವನು) ವಿವರ್ತಯತಿ=ವಿಶೇಷವಾಗಿ ಉಚ್ಚರಿಸುತ್ತಾನೋ, ಯೇನ=ಯಾರಿಂದ, ಸ್ವರಾಸ್ವರಂ=ಉದಾತ್ತವೇ ಸ್ವರವು, ಇತರವು ವಿಸ್ವರವು ಎಂದು, ವಿಜಾನಾತಿ=ತಿಳಿಯುತ್ತಾನೋ, (ಅಂದರೆ ಇದು ಸ್ವರವಲ್ಲವು ಬೇರೆಯೇ ಸರಿ ಎಂದು ತಿಳಿದು ಕ್ಲಪ್ತಸ್ವರದಿಂದಲೇ ಅಕ್ಷರವನ್ನು ಉಚ್ಚರಿಸುತ್ತಾನೋ) ಯೇನ=ಯಾರಿಂದ, ಮಾತ್ರಾಮಾತ್ರಾಂ ವಿಭಜತೇ=ಹ್ರಸ್ವ ದೀರ್ಘವಿಭಾಗವನ್ನು ಮಾಡುತ್ತಾನೋ, ಸಾ=ಆ ವೇದವ್ಯಾಸಾಖ್ಯರೂಪವು, ಸಂಹಿತಾ=ಸಂಹಿತಾನಾಮಕವು ಇತಿ=ಈ ಪ್ರಕಾರವಾಗಿ, ಬ್ರೂಮಃ= ಹೇಳುತ್ತೇವೆ, ಇತಿ=ಹೀಗೆ, ಆಹ ಸ್ಮ=ಹೇಳಿದನು. ಯಃ ಏವಂ ಸಂಹಿತಾಂ ವೇದ ಸಃ ಪ್ರಜಯಾ ಪಶುಭಿಃ ಯಶಸಾ ಬ್ರಹ್ಮವರ್ಚಸೇನ ಸ್ವರ್ಗೇಣ ಲೋಕೇನ ಸಂಧೀಯತೇ ಸರ್ವಂ ಆಯುಃ ಏತಿ.... ಅಥ ಹ=ಆ ಮೇಲೆ, ಅಸ್ಯ=ಹ್ರಸ್ವ ಮಾಂಡೂಕೇಯರ, ಪುತ್ರಃ=ಮಗನಾದ, ಪ್ರಾತೀಬೋಧೀ ಪುತ್ರಃ=ಪ್ರಾತೀಬೋಧೀನಾಮಕ ಭಾರ್ಯೆಯಲ್ಲಿ ಹುಟ್ಟಿದ, ಮಧ್ಯಮಃ=ಮಧ್ಯಮನಾಮಕ ಋಷಿಯು, 'ಇಮೇ ಖಲು ಅಕ್ಷರೇ=ಈ ಪೂರ್ವೋತ್ತರ ವರ್ಣಗಳನ್ನು, ಅವಿಕರ್ಷನ್= (ಹಿಂದಿನ ಮತಗಳಲ್ಲಿದ್ದಂತೆ) ಸೆಳೆಯದಿದ್ದವನಾಗಿ, ಅನೇಕೀಕುರ್ವನ್=ಸಂಶ್ಲೇಷವನ್ನೂ ಪ್ರಾಪಿಸದಿದ್ದವನಾಗಿ (ಅಂದರೆ ಪೂರ್ವೋತ್ತರವರ್ಣ ದೇವತೆಗಳಿಗೆ ಏಕತ್ವವನ್ನೂ ಕೂಡ ಚಿಂತಿಸದಿದ್ದವನಾಗಿ) ಯಥಾವರ್ಣಂ=ವರ್ಣಗಳ ಸ್ಥಿತಿಯನ್ನು ಅತಿಕ್ರಮಿಸದೆ, ಆಹ=ಹೇಳುತ್ತಾನೋ. (ಅಂದರೆ ಯಾರ ಅನುಗ್ರಹದಿಂದ ಪುರುಷನು ಸಮವಾಗಿಯೇ ಅಕ್ಷರೋಚ್ಚಾರಣವನ್ನು ಮಾಡುತ್ತಾನೋ), ತತ್=ಆ ಮೂರ್ತಿಯು ಸಾಮವು. ಯಾಽಸೌ=ಯಾವ ಮೂರ್ತಿಯು, ಮಾತ್ರಾ=(ಮಾಪಯತಿ=ತಿಳಿಸಿಕೊಡುತ್ತಾನೆ. ತ್ರಾಯತೇ ಚ=ರಕ್ಷಿಸುತ್ತಾನೆ. ಎಂಬೀ ವ್ಯುತ್ಪತ್ತಿಯಿಂದ) ಮಾತ್ರಾನಾಮಕವೋ, ಮಾತ್ರಾನಿಯಾಮಕವೋ, (ಯಾವ ಮೂರ್ತಿಯು) ಪೂರ್ವರೂಪೋತ್ತರ ರೂಪೇ ಅಂತರೇಣ=ಚೆನ್ನಾಗಿ ಉಚ್ಚರಿಸಲ್ಪಟ್ಟ ಪೂರ್ವೋತ್ತರ ವರ್ಣಗಳ ಮಧ್ಯದಲ್ಲಿದ್ದು, ಸಂಧಿವಿಜ್ಞಪನೀ=ಸಂಧಿಪ್ರೇರಕವಾಗುತ್ತದೋ, ತತ್=ಆ ಮೂರ್ತಿಯು, ಸಾಮ=ಸರ್ವರೂಪಗಳಲ್ಲಿಯೂ, ಸಮವಾದುದರಿಂದ ಸಾಮನಾಮಕವಾದ ವಾಸುದೇವನೆಂದು ಹೆಸರುಳ್ಳದ್ದು, ಭವತಿ=ಪ್ರಮಾಣ ಪ್ರಮಿತವಾಗಿದೆ. (ಆದುದರಿಂದ) ಅಹಂ=ನಾನು, ಸಾಮೈವ=ಸಾಮನಾಮಕವಾದ ವಾಸುದೇವ ರೂಪವನ್ನೇ, ಸಂಹಿತಾಂ= ಸಂಹಿತಾಪ್ರತಿಪಾದ್ಯ ದೇವತೆಯನ್ನಾಗಿ, ಮನ್ಯೇ=ತಿಳಿಯುತ್ತೇನೆ'. ಇತಿ=ಈ ಪ್ರಕಾರ, ಆಹ=ಹೇಳಿದನು. ತತ್ ಅಪಿ ಏತತ್=ಆ ಈ ಸಾಮಶಬ್ದವಾಚ್ಯತ್ವವು, ಋಷಿಣಾ=ಮಂತ್ರದ್ರಷ್ಟೃವಿನಿಂದ, ಉಕ್ತಂ=ಹೇಳಲ್ಪಟ್ಟದೆ. ಬೃಹಸ್ಪತೇ='ವಾಗ್ವಿ ಬೃಹತೀ ತಸ್ಯಾಃ ಏಷ ಪತಿಃ' ಎಂಬೀ ಶ್ರುತಿಯಿಂದ ವೇದವಾಕ್ಯಕ್ಕೆ ಪತಿಯಾದ ವಾಯುವೇ, ಸಾಮ್ನಃ=ವಿಷ್ಣುವಿನ ಸಕಾಶದಿಂದ, ಪರಃ=ಉತ್ತಮವಾದ ಯಾವುದನ್ನೂ, ನ ವಿದುಃ=(ಯಾರು) ತಿಳಿಯುವುದಿಲ್ಲವೋ,

(ವಿಷ್ಣುವನ್ನೇ ಸರ್ವೋತ್ತಮನನ್ನಾಗಿ ಯಾರು ತಿಳಿಯುತ್ತಾರೋ, ಅಂಥವರಿಗೋಸ್ಕರ ನನ್ನನ್ನು ಹೇಳು.) ಇತಿ=ಹೀಗೆ, ಹೇಳಲ್ಪಟ್ಟಿದೆ. ಯಃ ಏವಂ ಏತಾಂ ಸಂಹಿತಾಂ ವೇದ, ಸಃ ಪ್ರಜಯಾ ಪಶುಭಿಃ ಯಶಸಾ ಬ್ರಹ್ಮವರ್ಚಸೇನ ಸ್ವರ್ಗೇಣ ಲೋಕೇನ ಸಂಧೀಯತೇ, ಸರ್ವಂ ಆಯುಃ ಏತಿ........ ॥ ೫ ॥

ಭಾ॥ (a) ಪೂರ್ವವರ್ಣಸ್ಥಿತಂ ಯತ್ತದ್ರೂಪಂ ಪೂರ್ವಾಕ್ಷರಾಭಿಧಂ । ವರಾಹಾಖ್ಯಂ ಹರೇರನ್ಯವರ್ಣಗಂ ವಾಮನಾಭಿಧಂ ॥ ಉತ್ತರಾಕ್ಷರಸಂಜ್ಞಂ ಚ (b) ವರ್ಣಯೋರಂತರಸ್ಥಿತಂ । ಅವನಾತ್ಕಾಶನಾಚ್ಚೈತದವಕಾಶಾಭಿಧಂ ಹರೇಃ ॥ ನೃಸಿಂಹರೂಪಮಿತ್ಯಾಹುಃ (c) ನಿರ್ಭುಜಾಸ್ಯಾಸ್ತಥಾಽವದತ್ । ಹ್ರಸ್ವೋ ಯೇನಾಕ್ಷರೋಚ್ಚಾರೋ ಮಾತ್ರಾಸಂಧಿಸ್ವರಾತ್ಮಕಃ ॥ ವ್ಯಾಸರೂಪೋ ಹರಿಃ ಸಾಕ್ಷಾತ್ಸಂಹಿತಾನಾಮಕಸ್ತ್ವಿತಿ । (d) ತತ್ಪುತ್ರೋ ಮಧ್ಯಮಃ ಪ್ರಾಹ ಸಾಮೋಚ್ಚಾರಣಕಾರಣಃ ॥ ಸಾಮನಾಮಾ ವಾಸುದೇವಃ ಸಂಹಿತಾನಾಮವಾನಿತಿ ॥ ಇತಿ ಚ ॥

ಅ ॥ (a) ಪೂರ್ವಾಕ್ಷರದಲ್ಲಿರತಕ್ಕ ಪೂರ್ವಾಕ್ಷರನಾಮಕ ವರಾಹನೆಂದು ಹೆಸರುಳ್ಳ, ಶ್ರೀ ಹರಿಯ ಯಾವುದೊಂದು ರೂಪವಿದೆಯೋ, ಆ ರೂಪವು ಪೂರ್ವಾಕ್ಷರದಿಂದ ಪ್ರತಿಪಾದ್ಯವು. ಉತ್ತರವರ್ಣದಲ್ಲಿರತಕ್ಕ ಉತ್ತರಾಕ್ಷರವೆಂದು ಹೆಸರುಳ್ಳ ವಾಮನಾಖ್ಯರೂಪವು ಉತ್ತರವರ್ಣ ಪ್ರತಿಪಾದ್ಯವು. (b) ಪೂರ್ವೋತ್ತರವರ್ಣಗಳ ಮಧ್ಯದಲ್ಲಿರುವ, (ಸರ್ವಜಗತ್ತನ್ನು) ರಕ್ಷಿಸುವುದರಿಂದಲೂ ಪ್ರಕಾಶಿಸುವುದರಿಂದಲೂ, ಅವಕಾಶವೆಂದು ಹೆಸರುಳ್ಳ ಶ್ರೀಹರಿಯ ನರಸಿಂಹ ರೂಪವನ್ನ (ಸಂಹಿತಾನಾಮಕವನ್ನಾಗಿ) ಹೇಳುತ್ತಾರೆ. (c) ಹಾಗೆಯೇ ಹ್ರಸ್ವಮಾಂಡೂಕೇಯ ಋಷಿಯು, ನಿರ್ಭುಜವಕ್ತ್ರ ಋಷಿಗಳೇ (ಎಂದು ಸಂಬೋಧಿಸಿ) 'ಯಾವ ಶ್ರೀ ಹರಿಯ ಪ್ರೇರಣೆಯಿಂದ, ಮಾತ್ರಾ ಸಂಧಿಸ್ವರವಿಷಯವಾದ ಅಕ್ಷರೋಚ್ಚಾರಣೆಯು ಆಗುವುದೋ, ಅಂತಹ ಸಾಕ್ಷಾತ್ ವ್ಯಾಸಸ್ವರೂಪಿಯಾದ ಶ್ರೀ ಹರಿಯೇ ಸಂಹಿತಾನಾಮಕನು, (ಬೇರೆ ಎರಡು ಹಿಂದಿನಂತೆಯೇ), ಎಂದು ಹೇಳಿದನು. (d) ಆ ಹ್ರಸ್ವಮಾಂಡೂಕೇಯ ಋಷಿಯ ಮಗನಾದ ಮಧ್ಯಮನಾಮಕ ಋಷಿಯು 'ಸಮವಾಗಿಯೇ ಅಕ್ಷರೋಚ್ಚಾರಣಕ್ಕೆ ಕಾರಣನಾದ ಸಾಮನಾಮಕನಾದ ವಾಸುದೇವನು ಸಂಹಿತಾನಾಮಕನು' ಎಂದು ಹೇಳಿದನು. ಹೀಗೂ ಉಕ್ತವಾಗಿದೆ.

ಭಾ॥ (a) ಮಾಪಯತಿ ತ್ರಾಯತಿ ಚೇತಿ ಮಾತ್ರಾ ಭಗವಾನ್ । ಯಥೋಚ್ಚಾರಿತವರ್ಣಯೋರ್ಮಧ್ಯಸ್ಥಿತಶ್ಚ ॥ (b) ಮಾ ಣಸ್ತೇನೇಭ್ಯೋ ಯೇ ಅಭಿದ್ರುಹಸ್ಪದೇ ನಿರಾಮಿಣೋ ರಿಪವೋಽನ್ನೇಷು ಜಾಗೃಧುಃ । ಯೇಷಾಂ ಸ್ವೈತನ್ನಾಪರಂ ಕಿಂಚನ್ಯೈಕಂ ಬ್ರಹ್ಮಣಸ್ಪತೇ ಬ್ರೂಹಿ ತೇಭ್ಯಃ ಕದಾಚಿತ್ ॥ (c) ಅಥೋ ಶಮೇನೋಪರತಾ ಮನುಷ್ಯಾ ಯೇ ಧರ್ಮಿಣೋ ಬ್ರೂಹಿ ತೇಭ್ಯಃ ಸದಾ ನಃ । ಆ ದೇವಾನಾಮೋಹತೇ ವಿವ್ರಯೋ ಹೃದಿ ಬೃಹಸ್ಪತೇ ನ ಪರಃ ಸಾಮ್ನೋ ವಿದುಃ ॥ (d) ಅಭಿದ್ರುಹಸ್ಪದೇ ಅಭಿತೋ ದ್ರೋಹಸ್ಯ ನಿತ್ಯ ನಿರತಿಶಯದುಃಖಸ್ಯಾಂಧತಮಸಸ್ಯ ಯೋಗ್ಯಾಃ ॥

ಅ || (a) (ತತ್ವಾದಿಗಳನ್ನು) ತಿಳಿಸಿಕೊಡುತ್ತಾನೆ, (ಸರ್ವವನ್ನೂ,) ರಕ್ಷಿಸುತ್ತಾನೆ, ಎಂದು ಮಾತ್ರಾಶಬ್ದವಾಚ್ಯನು ಶ್ರೀ ಹರಿಯು ಯೋಗ್ಯರೀತಿಯಿಂದ ಉಚ್ಚರಿಸಲ್ಪಟ್ಟ ಪೂರ್ವೋತ್ತರವರ್ಣಗಳ ಮಧ್ಯದಲ್ಲಿರತಕ್ಕವನು. (b) ಬ್ರಹ್ಮಣಃ=ವೇದಕ್ಕೆ, ಪತೇ=ಸ್ವಾಮಿಯಾದ ವಾಯುವೇ, ಯೇ=ಯಾರು, ಅಭಿದ್ರುಹಸ್ಪದೇ=ನಿತ್ಯದುಃಖಕ್ಕೆ ಆಸ್ಪದವಾದ ಅಂಧಂತಮಸ್ಸಿನಲ್ಲಿ ಇರಲಿಕ್ಕೆ ಯೋಗ್ಯರೋ, ನಿರಾಮಿಣಃ=ಪೂರ್ಣಾನಂದಸ್ವರೂಪನಾದ ಶ್ರೀ ಹರಿಯು ಸ್ವಾಮಿಯೆಂದು ಯಾರಿಗೆ ಜ್ಞಾನವಿದೆಯೋ ಅವರು ರಾಮಿಗಳು, ಅವರಿಂದ ಬಹಿರ್ಭೂತರು ನಿರಾಮಿಗಳು, (ಅಂದರೆ ಐಕ್ಯಜ್ಞಾನದಿಂದ ಶ್ರೀ ಹರಿಗೆ ನೀಚತ್ವವನ್ನು ತಿಳಿದವರು.) ರಿಪವಃ=ಶತ್ರುಭೂತರು. ಅನ್ನೇಷು=ಭೋಗ್ಯವಸ್ತುಗಳಲ್ಲಿ, ಜಾಗೃಧುಃ=ಭೋಗಗಳಲ್ಲಿ ಆಕಾಂಕ್ಷಾವುಳ್ಳವರು. ಯೇಷಾಂ=ಯಾರಿಗೆ, ಏತತ್=ಈ ಸರ್ವೋತ್ತಮನಾದ ಪರಬ್ರಹ್ಮನು, ನ=ಇಲ್ಲವೆಂದು ಪಕ್ಷವೋ, ಏಕೆ ಇಲ್ಲವೆಂದರೆ- ಕಿಂಚನ=ಆತನಿಂದ ನಿಯಮ್ಯವಾದ ಯಾವುದೊಂದು ಜಗತ್ತು, ನ=ಇಲ್ಲ. ಕಿಂಚನ ಏಕಂ=ನಿರ್ಗುಣವೇ ಆದ ವಸ್ತುವು ಅದೆ. ಅಪರಂ ಕಿಂಚನ=ಇತರವಾದ ಅನಿರ್ವಾಚ್ಯವಾದ ಜಗತ್ತು ಇದೆ. (ಹೀಗೆ ಯಾರು ಹೇಳುತ್ತಾರೋ), ತೇಭ್ಯಃ, ಸ್ತೇನೇಭ್ಯಃ=ಅಂತಹ ತಸ್ಕರರಿಗೋಸ್ಕರ, ನಃ=ನಮ್ಮನ್ನು, ಕದಾಚಿತ್=ಯಾವಾಗಲೂ, ಮಾ ಬ್ರೂಹಿ=ಹೇಳಬೇಡ. (c) ಅಥೋ=ಮತ್ತು, ಬೃಹಸ್ಪತೇ=ವೇದಕ್ಕೆ ಅಧಿಪತಿಯಾದ ಮುಖ್ಯಪ್ರಾಣನೇ, ಧರ್ಮಿಣಃ=ನಿವೃತ್ತಧರ್ಮವುಳ್ಳ, ಯೇ ಮನುಷ್ಯಾಃ=ಯಾವ ಮನುಷ್ಯರು, ಶಮೇನ=ವಿಷ್ಣ್ವಾಸಕ್ತಿಯಿಂದ, ಉಪರತಾಃ=ಆತನಲ್ಲಿಯೇ ಆಸಕ್ತರಾಗಿರುವರೋ, ಸಾಮ್ನಃ=ವಿಷ್ಣುವಿನ ದೆಸೆಯಿಂದ, ಪರಃ=ಇತರ ಯಾವದನ್ನೂ, ನ ವಿದುಃ=ತಿಳಿಯುವುದಿಲ್ಲವೋ, ದೇವಾನಾಂ=ದೇವತೆಗಳಿಗೆ, ವ್ರಯಃ=ನಿಯಾಮಕನಾದ ಪರಬ್ರಹ್ಮನನ್ನು, ಹೃದಿ=ಮನಸ್ಸಿನಲ್ಲಿ, ಆ=ಚೆನ್ನಾಗಿ, ವ್ಯೋಹತೇ=ಧ್ಯಾನಿಸುತ್ತಾರೋ, ತೇಭ್ಯಃ=ಅಂತಹವರಿಗೋಸ್ಕರ, ನಃ=ನಮ್ಮನ್ನು, ಸದಾ=ಯಾವಾಗಲೂ, ಬ್ರೂಹಿ=ಹೇಳು. (d) ಅಭಿದ್ರುಹಸ್ಪದೇ=ಸುತ್ತಮುತ್ತಲೂ ದ್ರೋಹಕ್ಕೆ, ಅಂದರೆ ನಿತ್ಯದಲ್ಲಿಯೂ ನಿರತಿಶಯವಾದ ದುಃಖವುಳ್ಳ ಅಂಧಂತಮಸ್ಸಿಗೆ, ಯೋಗ್ಯರಾದವರು.

(ಪೂರ್ವಋಕ್ಕಿನಲ್ಲಿ ಐಕ್ಯಜ್ಞಾನಿಗಳೂ ಕಾಮಿಗಳೂ ಪರಬ್ರಹ್ಮನು ನಿರ್ಗುಣನು ಎಂದು ತಿಳಿದವರು ಸ್ತೇನರೆಂದೂ ಅವರಿಗೆ ತಮಸ್ಸೇ ಫಲವೆಂದೂ ಹೇಳಲ್ಪಟ್ಟದೆ. ಅವರು ಶಾಸ್ತ್ರವನ್ನು, ಪರಬ್ರಹ್ಮನನ್ನು ಕದ್ದುಕೊಳ್ಳುವುದರಿಂದ ಸ್ತೇನರು ಎಂದಭಿಪ್ರಾಯದಿಂದ ಪ್ರಮಾಣವನ್ನು ಹೇಳುತ್ತಾರೆ.

ಭಾ|| (a) ಐಕಾತ್ಮ್ಯಂ ನಾಮ ಯದಿದಂ ಕೇಚಿದ್ಬ್ರೂಯುರನ್ಯೈಪುಣಾಃ | ಶಾಸ್ತ್ರತತ್ವಮವಿಜ್ಞಾಯ ತಥಾ ವಾದಬಲಾ ಜನಾಃ || ಕಾಮಕ್ರೋಧಾಭಿಭೂತತ್ವಾದಹಂಕಾರ ವಶಂಗತಾಃ | (b) ಯಾಥಾತಥ್ಯಮವಿಜ್ಞಾಯ ಶಾಸ್ತ್ರಾಣಾಂ ಶಾಸ್ತ್ರದಸ್ಯವಃ || ಬ್ರಹ್ಮಸ್ತೇನಾ ನಿರಾನಂದಾ ಅಪಕ್ವಮನಸೋಽಶಿವಾಃ | (c) ವೈಗುಣ್ಯಮೇವ ಪಶ್ಯಂತಿ ನ ಗುಣಾನಿ ನಿಯುಂಜತೇ || ತೇಷಾಂ ತಮಃಶರೀರಾಣಾಂ ತಮ ಏವ ಪರಾಯಣಮಿತಿ ಮೋಕ್ಷಧರ್ಮೇ ಭಗವದ್ವಚನಾದೇವಂವಿಧಾ ಏವ ಸ್ತೇನಾಃ || (d) ಅಭಿದ್ರುಹಸ್ಪದಸ್ಥಾಶ್ಚ | ನಿರಾಮಿಣಃ ರಾಮಸ್ಯ ರಮಣರೂಪಸ್ಯ ಪೂರ್ಣಾನಂದಸ್ವರೂಪಸ್ಯ ವಿಷ್ಣೋರ್ಜೀವಸ್ವರೂಪತಾಜ್ಞಾನೇನ ನೀಚತಾ ವಿದಃ | ತ ಏವ ರಿಪವಶ್ಚ ತಸ್ಯ ||

ಅ || (a) ಯಾವುದೊಂದು, ಐಕಾತ್ಮ್ಯಂ=(ಏಕಶ್ಚಾಸೌ ಆತ್ಮಾ ಚ ಏಕಾತ್ಮಾ, ತಸ್ಯ ಭಾವಃ ಐಕಾತ್ಮ್ಯಂ, ಎಂಬೀ ವ್ಯುತ್ಪತ್ತಿಯಿಂದ) ಎಲ್ಲಾ ಜೀವರಿಗೂ ಬ್ರಹ್ಮೈಕ್ಯವಿದೆಯೋ, ಇದನ್ನು ಪಾಂಡಿತ್ಯವಿಲ್ಲದಿರುವ ಕೆಲವರು ಕೇವಲವಾಗಿ 'ಅಹಂ ಬ್ರಹ್ಮಾಸ್ಮಿ' ಇದು ಮೊದಲಾದ ಶಾಸ್ತ್ರಗಳಿಗೆ ಅಭಿಪ್ರೇತವಾದ ಅರ್ಥವನ್ನು ತಿಳಿಯದೆ ಹೇಳುವರು. ಜನರು ಐಕ್ಯವನ್ನು ಪ್ರತಿಪಾದನಮಾಡತಕ್ಕದಕ್ಕೆ ಸಮಾನವಾದ, ಸಮಾನವಿಭಕ್ತಿಕತ್ವಮೊದಲಾದ ಸ್ವರೂಪವುಳ್ಳ ವಾದವೇ ಬಲವಾಗಿ ಉಳ್ಳವರು. (ಅಂದರೆ 'ಅಹಂ ಬ್ರಹ್ಮಾಸ್ಮಿ' ಇತ್ಯಾದಿ ವಾಕ್ಯಗಳಿಗೆ ತಾತ್ಪರ್ಯವನ್ನು ತಿಳಿಯದೆ ಆಪಾತತಃ ತೋರುವ ಅರ್ಥದಲ್ಲಿಯೇ ಭ್ರಾಂತರು.) ವಿಷಯಾಭಿಲಾಷೆಯು ಕ್ರೋಧವು ಇವುಗಳಿಂದ ತಿರಸ್ಕೃತರಾದುದರಿಂದ ಅಹಂಕಾರದ ಅಧೀನತೆಯನ್ನು ಹೊಂದಿರುವರು. (b) ಭೇದಪರಗಳಾದ ಶಾಸ್ತ್ರಗಳ ಯೋಗ್ಯವಾದ ಅರ್ಥವನ್ನು ತಿಳಿಯದೆ, ಆ ಶಾಸ್ತ್ರಗಳನ್ನು ಅಯಥಾರ್ಥಪ್ರತಿಪಾದಕಗಳೆಂದು ತಿಳಿದವರು, ಪರಬ್ರಹ್ಮನನ್ನು ಕದ್ದುಕೊಂಡವರು, (ಅಂದರೆ ಬ್ರಹ್ಮನಿಗೆ ನಿರ್ಗುಣತ್ವ, ನಿರಾಕಾರತ್ವ ಮೊದಲಾದವುಗಳನ್ನು ಪ್ರತಿಪಾದಿಸುವವರು) ಆನಂದರಹಿತರು, ಪಕ್ವವಲ್ಲದ ಮನಸ್ಸುಳ್ಳವರು. ಅಮಂಗಲರು. (c) (ಜೀವಬ್ರಹ್ಮರಿಗೆ ಯಥಾರ್ಥವಾಗಿ) ನಿರ್ಗುಣತ್ವವನ್ನೇ ತಿಳಿಯುತ್ತಾರೆ. ಸಾರ್ವಜ್ಞಾದಿಗುಣಗಳನ್ನು (ಶ್ರೀ ಹರಿಯ ಸ್ವರೂಪದಿಂದ) ಕೂಡಿಸುವುದಿಲ್ಲ. ತಮೋಗುಣಪ್ರಚುರವಾದ ಶರೀರವುಳ್ಳ ಆ ದೈತ್ಯರಿಗೆ ನರಕವಿಶೇಷವೇ ಪ್ರಾಪ್ಯವು. ಎಂದು ಮೋಕ್ಷಧರ್ಮ ಸಮಾಖ್ಯಾರೂಪವಾದ ಭಗವದ್ವಾಕ್ಯದಿಂದ ಇಂತಹವರೇ (ಶಾಸ್ತ್ರಪ್ರಾಮಾಣ್ಯವನ್ನೂ ಬ್ರಹ್ಮನ ಗುಣಗಳನ್ನೂ ಅಪಲಾಪ ಮಾಡತಕ್ಕವರೇ) ಸ್ತೇನರು ವಿವಕ್ಷಿತರಾಗಿರುತ್ತಾರೆ. (d) ದ್ರೋಹಕ್ಕೆ ಆಶ್ರಯವಾದ ತಮಸ್ಸಿನಲ್ಲಿರುವವರು. ನಿರಾಮಿಣಃ=ಕ್ರೀಡಾಸ್ವರೂಪನೂ ಪೂರ್ಣಾನಂದಸ್ವರೂಪನೂ ಆದ ವಿಷ್ಣುವಿಗೆ ಜೀವಸ್ವರೂಪತ್ವಜ್ಞಾನದಿಂದ (ಜೀವೈಕ್ಯಜ್ಞಾನದಿಂದ) ನೀಚತ್ವವನ್ನು ತಿಳಿದವರು. ಅಸುರಸ್ವಭಾವವುಳ್ಳ ಅವರೇ ಆ ಹರಿಗೆ ಶತ್ರುಗಳೂ ಆಗಿರುತ್ತಾರೆ.

ಭಾ|| **(a)** ಅವಜಾನಂತಿ ಮಾಂ ಮೂಢಾ ಮಾನುಷೀಂ ತನುಮಾಶ್ರಿತಂ | ಪರಂ ಭಾವಮಜಾನಂತೋ ಮಮ ಭೂತಮಹೇಶ್ವರಂ || ಮೋಘಾಶಾ ಮೋಘಕರ್ಮಾಣೋ ಮೋಘಜ್ಞಾನಾ ವಿಚೇತಸಃ || ರಾಕ್ಷಸೀಮಾಸುರೀಂ ಚೈವ ಪ್ರಕೃತಿಂ ಮೋಹಿನೀಂ ಶ್ರಿತಾಃ | ಇತ್ಯಾದಿ (ಗೀ. ಅ. ೯. ಶ್ಲೋ. ೧೧. ೧೨.) ವಚನಾದಸುರಾದಯಃ || **(b)** ಅನ್ಯೇಷು ಜಾಗೃಧುಃ ಭೋಗಮಾತ್ರಗೃಧ್ನವಃ| ಯೇಷಾಮೇತತ್ಸರ್ವೋತ್ತಮಂ ವಾಸುದೇವಾಖ್ಯಂ ಪರಂ ಬ್ರಹ್ಮ ನಾಸ್ತೀತಿ ಪಕ್ಷಃ ಈಶಿತವ್ಯೇ ವಿದ್ಯಮಾನೇ ಹೀಶ್ವರೋ ಭವತೀತಿ || **(c)** ನ ಚಾಪರಂ ಕಿಂಚಿತ್ಪರಮಾಪೇಕ್ಷಯಾ ಹ್ಯಪರಮಿತಿ | ಕಿಂ ತರ್ಹಿ ಕಿಂಚನೈಕಂ ಕಿಮಪ್ಯೇಕಮೇವ ವಸ್ತ್ವಸ್ತಿ ನ ಪರಮಪರಂ ಚೇತಿ ತೇಷಾಂ ಪಕ್ಷಃ|| **(d)** ಅಸತ್ಯಮಪ್ರತಿಷ್ಠಂ ತೇ ಜಗದಾಹುರನೀಶ್ವರಂ | ಅಪರಸ್ಪರಸಂಭೂತಂ ಕಿಮನ್ಯತ್ಕಾಮಹೈತುಕಂ || ಏತಾಂ ದೃಷ್ಟಿಮವಷ್ಟಭ್ಯ ನಷ್ಟಾತ್ಮಾನೋಽಲ್ಪಬುದ್ಧಯಃ | ಪ್ರಭವಂತ್ಯುಗ್ರಕರ್ಮಾಣಃ ಕ್ಷಯಾಯ ಜಗತೋಽಹಿತಾಃ || ಈಶ್ವರೋಽಹಮಹಂ ಭೋಗೀ ಸಿದ್ಧೋಽಹಂ ಬಲವಾನ್ಸುಖೀ | ಇತ್ಯಾದಿ (ಗೀ. ಅ. ೧೬. ಶ್ಲೋ. ೮. ೯. ೧೪.) ವಚನಾತ್ ||

ಅ || (a) ಮೂಢರು ತನ್ನ ಭೂತಮಹೇಶ್ವರಂ=ಕಾಲದಿಂದಲೂ ದೇಶದಿಂದಲೂ ಗುಣದಿಂದಲೂ ಅಂತ್ಯವಿಲ್ಲದಿರುವ ಸರ್ವೋತ್ತಮನಾದ, ಯಾಥಾರ್ಥ್ಯವನ್ನು ತಿಳಿಯದಿದ್ದವರಾಗಿ ಮನುಷ್ಯ ಸಂಬಂಧಿಯಾದ ಶರೀರವನ್ನು ಆಶ್ರಯಿಸಿದ (ಅಂದರೆ ಮೂಢರಿಗೆ ಮನುಷ್ಯರಂತೆ ತೋರುವ) ನನ್ನನ್ನು ತಿರಸ್ಕರಿಸುತ್ತಾರೆ. ವ್ಯರ್ಥವಾದ ಆಶೆಯುಳ್ಳವರೂ (ಅಂದರೆ ಭಗವದ್ವೇಷಿಗಳು ಅಭಿಲಷಿತವಾದ ಯಾವುದನ್ನು ಹೊಂದಲಾರರು) ವ್ಯರ್ಥವಾದ ಯಾ ಯಜ್ಞಾದಿಕರ್ಮವುಳ್ಳವರು. (ಅವರ ಯಜ್ಞಾದಿಕರ್ಮಗಳೂ ನಿಷ್ಫಲಗಳೇ ಸರಿ.) ವ್ಯರ್ಥವಾದ ಜ್ಞಾನವುಳ್ಳವರೂ, (ಅಂದರೆ ಅವರಿಗೆ ತತ್ವವಿಷಯಕವಾದ ಜ್ಞಾನವೂ ಇಲ್ಲವೇ ಇಲ್ಲ. ಬ್ರಹ್ಮ ರುದ್ರಾದಿಗಳಲ್ಲಿ ಭಕ್ತ್ಯಾದಿ ರೂಪವಾದ ಯಾವುದೊಂದು ಉಪಾಯದಿಂದಲೂ ಆಮುಷ್ಮಿಕವಾದ ಪುರುಷಾರ್ಥವು ಸಿಗಲಾರದು.) ವಿರುದ್ಧವಾದ ಮನಸ್ಸು ಉಳ್ಳವರೂ ಆಗಿ ಮೋಹಗೊಳಿಸುವ ರಾಕ್ಷಸರಿಗೂ ಅಸುರರಿಗೂ ಸಂಬಂಧಿಯಾದ ಪ್ರಕೃತಿಯನ್ನು ಆಶ್ರಯಿಸಿದರು. ಇದೇ ಮೊದಲಾದ ವಾಕ್ಯದಿಂದ (ಗೀ. ಅ೯. ಶ್ಲೋ. ೧೧. ೧೨.) (ತಿರಸ್ಕಾರ ಮೊದಲಾದವುಗಳಿಂದೊಡಗೂಡಿದ) ಅಸುರ ಮೊದಲಾದವರೇ (ರಿಪುಗಳು.) (b) ಅನ್ನೇಷು ಜಾಗೃಧುಃ=ಎಲ್ಲಾ ಭೋಗ್ಯವಸ್ತುಗಳಲ್ಲಿಯೂ ಅಭಿಲಾಷೆಯುಳ್ಳವರು. ಯಾರಿಗೆ ಈ ಸರ್ವಗುಣಗಳಿಂದಲೂ ಅತ್ಯುತ್ತಮನಾದ ವಾಸುದೇವನೆಂದು ಹೆಸರುಳ್ಳ ಪ್ರರಬ್ರಹ್ಮನು ಇಲ್ಲವೆಂದು ಪಕ್ಷವಿದೆಯೋ, (ಏಕೆ ಇಲ್ಲವೆಂದರೆ-) ನಿಯಮ್ಯವಾದುದು ಇದ್ದರೇನೇ ನಿಯಾಮಕನು ಆಗುತ್ತಾನೆ. (ಅಂತೂ ನಿಯಮ್ಯವಾದುದು ಯಾವುದೂ ಇಲ್ಲದಿರುವುದರಿಂದ ಸರ್ವೋತ್ತಮನಾದುದೂ ಇಲ್ಲ. ನಿಯಮ್ಯಸ್ವರೂಪವೇ ಮಿಥ್ಯಾಭೂತವಾಗಿದೆ.) (c) (ಉತ್ತಮನಿಲ್ಲದಿರುವುದರಿಂದಲೇ) ಸರ್ವೋತ್ತಮನನ್ನು ಅಪೇಕ್ಷಿಸಿ ಇತರವಾದ ಅಥವ ಯಾವುದೊಂದು ಜಗತ್ತು ಇಲ್ಲವೇ ಇಲ್ಲ. ಹಾಗಾದರೆ ಮತ್ತೇನದೆ? ಅಂದರೆ-ಕಿಂಚನ ಏಕಂ=ಯಾವುದೋ ಒಂದು ನಿರ್ಗುಣವಾದುದೇ ವಸ್ತುವು ಅದೆ. ಸರ್ವೋತ್ತಮನಾದ ಸಗುಣವಾಸುದೇವನು, ಇತರ ನಿಯಮ್ಯ ಜಗತ್ತೂ ಕೂಡ (ನಿಯಮ್ಯ ನಿಯಾಮಕರೂಪ ಪ್ರಪಂಚವು ಮಿಥ್ಯಾಭೂತವಾದುದರಿಂದ) ಇಲ್ಲವೆಂದು ಅವರ ಪಕ್ಷವು. (d) ಅವರು ಜಗತ್ತನ್ನು ಅಯಥಾರ್ಥವನ್ನಾಗಿಯೂ ಪ್ರತಿಷ್ಠಾಪಕ ಪ್ರಮಾಣವಿಲ್ಲದಿರುವುದನ್ನಾಗಿಯೂ (ಜ್ಞಾನಬಾಧ್ಯವನ್ನಾಗಿಯೂ) ನಿಯಾಮಕ ರಹಿತವಾದುದನ್ನಾಗಿಯೂ (ಈಶ್ವರಾಧಿಷ್ಠಿತವಾದ ಪ್ರಕೃತಿಯಿಂದ ಮಹತತ್ವ ಅದರಿಂದ ಅಹಂಕಾರತತ್ವ ಈ ಪ್ರಕಾರವಾಗಿ) ಪರಸ್ಪರವಾಗಿ ಉತ್ಪತ್ತಿರಹಿತವಾದುದನ್ನಾಗಿಯೂ (ಸತ್ಯವಲ್ಲದಿದ್ದರೆ) ಎಂತಹುದೆಂದರ ಸತ್ತಿನಿಂದಲೂ ಅಸತ್ತಿನಿಂದಲೂ ಬೇರೆ (ವಿಲಕ್ಷಣವು)ಯನ್ನಾಗಿಯೂ, (ಪರಸ್ಪರ ಸಂಭೂತವಲ್ಲದಿದ್ದರೆ) ಎಂತಹುದೆಂದರೆ ಅವಿದ್ಯೆಯೇ ಹೇತುವಾಗಿ ಉಳ್ಳದ್ದೆಂಬುದನ್ನಾಗಿಯೂ ಹೇಳುತ್ತಾರೆ. ಇಂತಹ ಜ್ಞಾನವನ್ನು ಹೊಂದಿ ದುಷ್ಟಸ್ವಭಾವವುಳ್ಳವರೂ ಅಲ್ಪಬುದ್ಧಿಯುಳ್ಳವರೂ (ಅಂದರೆ ಕೇವಲ ಅಧಿಷ್ಠಾನದಲ್ಲಿ ಯಥಾರ್ಥಜ್ಞಾನವುಳ್ಳವರೂ) ಕ್ರೂರವಾದ ಕರ್ಮಗಳುಳ್ಳವರೂ ಆದವರು ಜಗತ್ತಿಗೆ ಅಹಿತರಾಗಿ ಜಗತ್ತನ್ನು ನಾಶಮಾಡುವುದಕ್ಕೋಸರ ಸಮರ್ಥರಾಗುತ್ತಾರೆ. (ಈ ಶತ್ರುವನ್ನು ನಾನು ಕೊಂದೆನು, ಇತರರನ್ನು ಕೊಲ್ಲುವೆನು.) ನಾನೇ ಪರಮೇಶ್ವರನು, ನಾನೇ ಸರ್ವಭೋಗವುಳ್ಳವನು, ನಾನೇ ಕೃತಕೃತ್ಯನು, ಅತಿಸಾಮರ್ಥ್ಯವುಳ್ಳವನು, ಪೂರ್ಣಸುಖವುಳ್ಳವನು, ಇದೇ ಮೊದಲಾದ ವಾಕ್ಯದಿಂದ.

**ಭಾ|| (a) ಬ್ರಹ್ಮಣಸ್ಪತೇ ಬ್ರಹ್ಮಣೋ ವೇದಸ್ಯ ಪತೇ ವಾಯೋ । ಅಥ ಹೇಮಮಾಸನ್ಯಂ ಪ್ರಾಣಮೂಚುಃ ॥ ಏಷ ಉ ಏವ ಬ್ರಹ್ಮಣಸ್ಪತಿರ್ವಾಗ್ವೈ ಬ್ರಹ್ಮ ತಸ್ಯಾ ಏಷ ಪತಿಸ್ತಸ್ಮಾದು ಬ್ರಹ್ಮಣಸ್ಪತಿರಿತ್ಯಾದಿ ಶ್ರುತೇ ರೇತಾದೃ**

ಶೇಭ್ಯೋ ಮಾ ಬ್ರೂಹಿ । (b) ಶಮೇನ ವಿಷ್ಣುನಿಷ್ಠಯಾ ಉಪ ಸಮೀಪೇ ತಸ್ಮಿನ್ನೇವ ರತಾಃ ಸಾಮ್ನೋ ವಿಷ್ಣೋಃ ಪರಂ ಕಿಮಪಿ ನ ವಿದುಃ ॥ ತದೇವ ದೇವಾನಾಂ ಪ್ರಯಃ । ಸರ್ವದೇವಾನಾಂ ಪರತಮಂ ವಿಷ್ಣ್ವಾಖ್ಯಂ ಬ್ರಹ್ಮ ಹೃದಾ ವ್ಯೋಹತೇ ॥ (c) ವಾಸುದೇವಾದಿರೂಪೇಣ ವರಂ ನಿಯಾಮಕಂ ಚೇತಿ ಪ್ರಯಃ । ತೇಭ್ಯೋ ಬ್ರೂಹಿ ॥ (d) ವಾಯುಂ ವಿದ್ಯಾಃ ಸಮಾಸಾದ್ಯ ಸರ್ವಾಸಾಂ ಪತಿಮೂಚಿರೇ । ಸ್ತೇನೇಭ್ಯೋ ಮೈವ ನೋ ಬ್ರೂಹಿ ಬ್ರೂಹ್ಯಥೋ ವೈಷ್ಣವೇಷು ಚೇತಿ ಚ ॥ (e) ಸಾಮನಾಮ್ನಾ ಶ್ರುತಿರ್ಯಸ್ಮಾದ್ವಿಷ್ಣುಮಾಹ ತತಃ ಪ್ರಿಯಂ । ತನ್ನಾಮ ವಿಷ್ಣೋರಿಹ ತು ಸಂಹಿತಾರ್ಥಂ ವದೇದ್ಯತಃ ॥ ಇತಿ ಚ ॥ (f) ಸಾಮನಾಮ್ನಃ ಸಂಹಿತಾ ಶಬ್ದಾರ್ಥತ್ವಾದ್ವಿಷ್ಣೋಸ್ತಸ್ಯ ನಾಮ್ನಃ ಶ್ರುತಿಸಿದ್ಧತ್ವಾಚ್ಚ ಸಾಮನಾಮ್ನೋ ವಾಸುದೇವರೂಪಸಮಾಖ್ಯಾಸು ಪಂಚರಾತ್ರೇ ಪಠಿತತ್ವಾಚ್ಚ ತದ್ರೂಪಂ ಸಂಹಿತಾನಾಮಕಮಿತಿ ಯುಕ್ತಮಿತ್ಯಭಿಪ್ರಾಯಃ ॥ ೫ ॥

ಅ ॥ (a) ಬ್ರಹ್ಮಣಸ್ಪತೇ=ವೇದಕ್ಕೆ ಅಧಿಪತಿಯಾದ ಮುಖ್ಯಪ್ರಾಣನೇ, ಅಥ ಹ= ಆಮೇಲೆ, ಇಮಂ=ಈ, ಆಸನ್ಯಂ=ಮುಖದಲ್ಲಿರತಕ್ಕ, ಪ್ರಾಣಂ=ಮುಖ್ಯಪ್ರಾಣನನ್ನು, ಊಚುಃ=ಹೇಳುತ್ತಾರೆ. ಏಷಃ ಉ ಏವ=ಈತನೇ, ಬ್ರಹ್ಮಣಸ್ಪತಿಃ=ವೇದಕ್ಕೆ ಅಧಿಪತಿಯು, ವಾಗ್ವೈ=ವಚನವೇ, ಬ್ರಹ್ಮ=ಬ್ರಹ್ಮಶಬ್ದವಾಚ್ಯವು. ತಸ್ಯಾಃ=ಆ ಸರಸ್ವತಿಗೆ, ಏಷಃ=ಈತನು, ಪತಿಃ=ಅಧಿಪತಿಯು. ತಸ್ಮಾತ್ ಉ=ಆದುದರಿಂದಲೇ, ಬ್ರಹ್ಮಣಸ್ಪತಿಃ=ವೇದಕ್ಕೂ ಅಧಿಪತಿಯು, ಇದೇ ಮೊದಲಾದ ಶ್ರುತಿಯಿರುವುದರಿಂದ (ವಾಯುವು ವೇದಕ್ಕೆ ಅಧಿಪತಿಯು) ಇಂತಹ ಸ್ತೇನರಿಗೋಸ್ಕರ (ನಮ್ಮನ್ನು) ಹೇಳಬೇಡ. (b) ಶಮೇನ=ವಿಷ್ಣ್ವಾಸಕ್ತಿಯಿಂದ, ಉಪ= ಸಮೀಪದಲ್ಲಿ, ಆತನಲ್ಲಿಯೇ ಆಸಕ್ತರು. ಸಾಮಶಬ್ದವಾಚ್ಯನಾದ ವಿಷ್ಣುವಿನ ದೆಸೆಯಿಂದ ಇತರವಾದ ಯಾವುದನ್ನೂ ತಿಳಿಯುವುದಿಲ್ಲ. ಅದೇವೇ ದೇವತೆಗಳಿಗೆ ಶ್ರೇಷ್ಠವಾಗಿ ನಿಯಾಮಕವು. ಎಲ್ಲಾ ದೇವತೆಗಳಿಗೂ ಸರ್ವೋತ್ತಮನಾದ ವಿಷ್ಣುವೆಂದು ಹೆಸರುಳ್ಳ ಪರಬ್ರಹ್ಮನನ್ನು ಮನಸ್ಸಿನಿಂದ ಧ್ಯಾನಿಸುತ್ತಾರೆ. (c) ವಾಸುದೇವಾದಿ ಸ್ವರೂಪದಿಂದ ಶ್ರೇಷ್ಠವೂ ನಿಯಾಮಕವೂ ಕೂಡ ಆಗಿದೆ. ಆದುದರಿಂದ 'ಪ್ರಯಃ' ಎನ್ನಿಸಿಕೊಳ್ಳುತ್ತದೆ. ಅಂತಹ ವಿಷ್ಣುಭಕ್ತರಿಗೋಸ್ಕರ (ನಮ್ಮನ್ನು) ಹೇಳು. (ಉಪದೇಶಿಸು.) (d) ಎಲ್ಲಾ ವಿದ್ಯೆಗಳು ವಾಯುದೇವರನ್ನು ಹೊಂದಿ ಎಲ್ಲಾ ವಿದ್ಯೆಗಳಿಗೆ ಅಧಿಪತಿಯನ್ನಾಗಿ ಹೇಳಿದವು. ನಮ್ಮನ್ನು ಬ್ರಹ್ಮಸ್ತೇನರಿಗೋಸ್ಕರ ಹೇಳಬೇಡ ಹಾಗೆಯೇ ವಿಷ್ಣುಭಕ್ತರಲ್ಲಿ ಹೇಳು. ವಿಷ್ಣುಭಕ್ತರಿಗೆ ಉಪದೇಶಿಸು. ಹೀಗೂ ಉಕ್ತವಾಗಿದೆ. (e) ಯತಃ=ಯಾವ ಕಾರಣದಿಂದ, ತನ್ನಾಮ=ಸಾಮಎಂಬ ಹೆಸರು, ಸಂಹಿತಾರ್ಥಂ= ಸಂಹಿತಾಶಬ್ದಾರ್ಥವನ್ನು, ವದೇತ್=ಹೇಳುತ್ತದೋ, (ಆದುದರಿಂದ), ಇಹ ತು=ಈ ಭಗವನ್ನಾಮಗಳ ಮಧ್ಯದಲ್ಲಿ, ತನ್ನಾಮ=ಸಾಮ ವೆಂಬ ಹೆಸರು, ವಿಷ್ಣೋಃ=ಶ್ರೀ ಪರಮಾತ್ಮನಿಗೆ, ಪ್ರಿಯಂ=ಪ್ರೀತಿವಿಷಯವಾದುದು. ಯಸ್ಮಾತ್=ಯಾವ ಕಾರಣದಿಂದ, ಪ್ರಿಯಂ=ಪ್ರಿಯವಾದುದೋ, ತತಃ=ಆದುದರಿಂದ, ಸಾಮನಾಮ್ನಾ=ಸಾಮವೆಂಬ ಹೆಸರಿನಿಂದ, ವಿಷ್ಣುಂ=ಶ್ರೀ ಪರಮಾತ್ಮನನ್ನು, ಶ್ರುತಿಃ=ಶ್ರುತಿಯು, ಆಹ=ಹೇಳುತ್ತದೆ. ಈ ವಾಕ್ಯದಿಂದ. (f) ಸಾಮವೆಂಬ ನಾಮಧೇಯಕ್ಕೆ ಸಂಹಿತಾಶಬ್ದಾರ್ಥತ್ವವು ತಿಳಿಯುವುದರಿಂದಲೂ, ವಿಷ್ಣುವಿಗೆ ಆ ನಾಮಧೇಯವು ಶ್ರುತಿಸಿದ್ಧವಾಗಿದೆಯೆಂದು ತಿಳಿದುಬರುವುದರಿಂದಲೂ, ಸಾಮವೆಂಬ ನಾಮಧೇಯಕ್ಕೆ

ವಾಸುದೇವರೂಪ ಸಮಾಖ್ಯೆಗಳಲ್ಲಿ ಪಂಚರಾತ್ರಾಗಮದಲ್ಲಿ ಹೇಳಿರುವುದರಿಂದಲೂ, ಆ ವಾಸುದೇವರೂಪವು ಸಂಹಿತಾನಾಮಕವೆಂಬುವುದು ಯುಕ್ತವೆಂದು ಅಭಿಪ್ರಾಯವು. ॥ ೫ ॥

ಮಂ ॥ ಬೃಹದ್ರಥಂತರಯೋ ರೂಪೇಣ ಸಂಹಿತಾ ಸಂಧೀಯತ ಇತಿ ತಾರ್ಕ್ಷ್ಯೋ ವಾಗ್ವೈ ರಥಂತರಸ್ಯ ರೂಪಂ ಪ್ರಾಣೋ ಬೃಹತ ಉಭಾಭ್ಯಾಮು ಖಲು ಸಂಹಿತಾ ಸಂಧೀಯತೇ ವಾಚಾ ಚ ಪ್ರಾಣೇನ ಚೈತಸ್ಯಾಂ ಹ ಸ್ಮೋಪನಿಷದಿ ಸಂವತ್ಸರಂ ಗಾ ರಕ್ಷಯತೇ ತಾರ್ಕ್ಷ್ಯ ಏತಸ್ಯಾಂ ಹ ಸ್ಮ ಮಾತ್ರಾಯಾಂ ಸಂವತ್ಸರಂ ಗಾ ರಕ್ಷಯತೇ ತಾರ್ಕ್ಷ್ಯಸ್ತದಪ್ಯೇತದೃಷಿಣೋಕ್ತಂ ರಥಂತರಮಾಜಭಾರಾ ವಸಿಷ್ಠಃ ॥ ಭರದ್ವಾಜೋ ಬೃಹದಾಚಕ್ರೇ ಅಗ್ನೇರಿತಿ ಸ ಯ ಏವಮೇತಾಂ ಸಂಹಿತಾಂ ವೇದ ಸಂಧೀಯತೇ ಪ್ರಜಯಾ ಪಶುಭಿರ್ಯಶಸಾ ಬ್ರಹ್ಮವರ್ಚಸೇನ ಸ್ವರ್ಗೇಣ ಲೋಕೇನ ಸರ್ವಮಾಯುರೇತಿ ವಾಕ್ಪ್ರಾಣೇನ ಸಂಹಿತೇತಿ ಕೌಂಠರವ್ಯಃ ಪ್ರಾಣಃ ಪವಮಾನೇನ ಪವಮಾನೋ ವಿಶ್ವೈರ್ದೇವೈರ್ವಿಶ್ವೇದೇವಾಃ ಸ್ವರ್ಗೇಣ ಲೋಕೇನ ಸ್ವರ್ಗೋ ಲೋಕೋ ಬ್ರಹ್ಮಣಾ ಸೈಷಾಽವರಪರಾ ಸಂಹಿತಾ ಸ ಯೋ ಹೈತಾಮವರಪರಾಂ ಸಂಹಿತಾಂ ವೇದೈವಂ ಹೈವ ಸ ಪ್ರಜಯಾ ಪಶುಭಿರ್ಯಶಸಾ ಬ್ರಹ್ಮವರ್ಚಸೇನ ಸ್ವರ್ಗೇಣ ಲೋಕೇನ ಸಂಧೀಯತೇ ಯಥೈಷಾ ಸಂಹಿತಾ ಸ ಯದಿ ಪರೇಣ ವೋಪಸೃತಃ ಸ್ವೇನ ವಾಽರ್ಥೇನಾಭಿವ್ಯಾಹರೇದಭಿವ್ಯಾಹಾರ್ಷನ್ನೇವ ವಿದ್ಯಾದ್ದಿವಂ ಸಂಹಿತಾಽಗಮದ್ವಿದುಷಾಂ ದೇವಾನಾಮೇವಂ ಭವಿಷ್ಯತೀತಿ ಶಶ್ವತ್ತಥಾ ಸ್ಯಾತ್ಸ ಯ ಏವಮೇತಾಂ ಸಂಹಿತಾಂ ವೇದ ಸಂಧೀಯತೇ ಪ್ರಜಯಾ ಪಶುಭಿರ್ಯಶಸಾ ಬ್ರಹ್ಮವರ್ಚಸೇನ ಸ್ವರ್ಗೇಣ ಲೋಕೇನ ಸರ್ವಮಾಯುರೇತಿ ವಾಕ್ಸಂಹಿತೇತಿ ಪಂಚಾಲಚಂಡೋ ವಾಚಾ ವೈ ವೇದಾಸ್ಸಂಧೀಯಂತೇ ವಾಚಾ ಛಂದಾಂಸಿ ವಾಚಾ ಮಿತ್ರಾಣಿ ಸಂದಧತಿ ವಾಚಾ ಸರ್ವಾಣಿ ಭೂತಾನ್ಯಥೋ ವಾಗೇವೇದಂ ಸರ್ವಮಿತಿ ತದ್ಯತ್ರೈತದಧೀತೇ ವಾ ಭಾಷತೇ ವಾ ವಾಚಿ ತದಾ ಪ್ರಾಣೋ ಭವತಿ ವಾಕ್ತದಾ ಪ್ರಾಣಂ ರೇಹ್ಯಥ ಯತ್ರ ತೂಷ್ಣೀಂ ವಾ ಭವತಿ ಸ್ವಪಿತಿ ವಾ ಪ್ರಾಣೇ ತದಾ ವಾಗ್ಭವತಿ ಪ್ರಾಣಸ್ತದಾ ವಾಚಂ ರೇಢಿ ತಾವನ್ಯೋನಂ ರೀಹ್ಯೋ ವಾಗ್ವೈ ಮಾತಾ ಪ್ರಾಣಃ ಪುತ್ರಸ್ತದಪ್ಯೇತದೃಷಿಣೋಕ್ತಮೇಕಃ ಸುಪರ್ಣಃ ಸ ಸಮುದ್ರಮಾವಿವೇಶ ಸ ಇದಂ ವಿಶ್ವಂ ಭುವನಂ ವಿಚಷ್ಟೇ ॥ ತಂ ಪಾಕೇನ ಮನಸಾಽಪಶ್ಯಮಂತಿತಸ್ತಂ ಮಾತಾ ರೇಢಿ ಸ ಉ ರೇಢಿ ಮಾತರಮಿತಿ ಸ ಯ ಏವಮೇತಾಂ ಸಂಹಿತಾಂ ವೇದ ಸಂಧೀಯತೇ ಪ್ರಜಯಾ ಪಶುಭಿರ್ಯಶಸಾ ಬ್ರಹ್ಮವರ್ಚಸೇನ ಸ್ವರ್ಗೇಣ ಲೋಕೇನ

ಸರ್ವಮಾಯುರೇತ್ಯಥಾತಃ ಪ್ರಜಾಪತಿಸಂಹಿತಾ ಜಾಯಾ ಪೂರ್ವ ರೂಪಂ ಪತಿರುತ್ತರರೂಪಂ ಪುತ್ರಃ ಸಂಧಿಃ ಪ್ರಜನನಂ ಸಂಧಾನಂ ಸೈಷಾಽದಿತಿಃ ಸಂಹಿತಾಽದಿತಿರ್ಹೀದಂ ಸರ್ವಂ ಯದಿದಂ ಕಿಂ ಚ ಪಿತಾ ಚ ಮಾತಾ ಚ ಪುತ್ರಶ್ಚ ಪ್ರಜನನಂ ಚ ತದಪ್ಯೇತದೃಷಿಣೋಕ್ತ ಮದಿತಿರ್ಮಾತಾ ಸ ಪಿತಾ ಸ ಪುತ್ರ ಇತಿ ಸ ಯ ಏವಮೇತಾಂ ಸಂಹಿತಾಂ ವೇದ ಸಂಧೀಯತೇ ಪ್ರಜಯಾ ಪಶುಭಿರ್ಯಶಸಾ ಬ್ರಹ್ಮವರ್ಚಸೇನ ಸ್ವರ್ಗೇಣ ಲೋಕೇನ ಸರ್ವಮಾಯುರೇತಿ ಸರ್ವ ಮಾಯುರೇತಿ ॥ ೬ ॥

ಇತ್ಯೈತರೇಯೋಪನಿಷತ್ಸು ತೃತೀಯಾರಣ್ಯಕೇ
ಪ್ರಥಮೋಽಧ್ಯಾಯಃ ॥ ೩ ॥ ೧ ॥

ಅ ॥ 'ಬ್ರಹದ್ರಥಂತರಯೋಃ' ಬೃಹತ್=ಬೃಹತ್ ಎಂದು ಹೆಸರುಳ್ಳ ಬೃಹತ್ಸಾಮಕ್ಕೆ ದೇವತೆಯಾದ ನಾರಾಯಣನು, ರಥಂತರಯೋಃ=ರಥಂತರನಾಮಕಳಾದ ರಥಂತರಸಾಮಕ್ಕೆ ದೇವತೆಯಾದ ಲಕ್ಷ್ಮಿಯೂ ಇವರಿಬ್ಬರ, ರೂಪೇಣ=ರೂಪಗಳಿಂದ, ಸಂಹಿತಾ ಸಂಹಿತಾನಾಮಕ ವಾದ ಅರ್ಧನಾರೀನರಾಕಾರವಾದ ಲಕ್ಷ್ಮೀನಾರಾಯಣಾತ್ಮಕ ರೂಪವು, ಸಂಧೀಯತೇ= ಕೂಡಿಸಲ್ಪಡುತ್ತದೆ. (ಇಲ್ಲಿ ಕೂಡಿಸಲ್ಪಡತಕ್ಕ ರೂಪಕ್ಕೆ ಸಂಹಿತಾತ್ವವನ್ನು ಹೇಳಿರುವುದರಿಂದ ರಥಂತರವೆಂದು ಹೆಸರುಳ್ಳ ಲಕ್ಷ್ಮೀದೇವಿಯು ಪೂರ್ವವರ್ಣಕ್ಕೆ ದೇವತೆಯೆಂದೂ, ಬೃಹತ್ ಎಂದು ಹೆಸರುಳ್ಳ ನಾರಾಯಣನು ಉತ್ತರವರ್ಣಕ್ಕೆ ದೇವತೆಯೆಂದೂ ಸೂಚಿತವಾಯಿತು. ಪೂರ್ವೋತ್ತರವರ್ಣಗಳ ಸಂಧಿಯೇ 'ಸಂಹಿತಾ' ಎಂದು ಹೇಳಲ್ಪಡುತ್ತದೆ.) ಇತಿ=ಈ ಪ್ರಕಾರವಾಗಿ, ತಾರ್ಕ್ಷ್ಯಃ=ತಾರ್ಕ್ಷ್ಯನೆಂದು ಪ್ರಸಿದ್ಧನಾದ ಮುನಿಯು, (ಹೇಳುತ್ತಾನೆ.) ರಥಂತರಸ್ಯ=ರಥಂ ತರನಾಮಕ ಲಕ್ಷ್ಮಿಯ, ರೂಪಂ=ಸ್ವರೂಪವು, ವಾಕ್=ಸರಸ್ವತಿಯಲ್ಲಿರತಕ್ಕುದೂ, ಸರಸ್ವತೀ ನಾಮಕವೂ, ವೈ=ಪ್ರಸಿದ್ಧವು. ಬೃಹತಃ=ಬೃಹನ್ನಾಮಕನಾದ ನಾರಾಯಣನ, ರೂಪಂ= ಸ್ವರೂಪವು, ಪ್ರಾಣಃ=ಪ್ರಾಣನಲ್ಲಿರತಕ್ಕುದು, ಪ್ರಾಣನಾಮಕವು, ವಾಚಾ ಚ ಪ್ರಾಣೇನ ಚ= ಉಭಾಭ್ಯಾಂ ಉ=ರಥಂತರ ಬೃಹದ್ರೂಪರಾದ ವಾಕ್ ಪ್ರಾಣನಲ್ಲಿರತಕ್ಕ ಲಕ್ಷ್ಮೀನಾರಾಯಣ ರಿಂದಲೇ, ಸಂಹಿತಾ=ಸಂಹಿತಾನಾಮಕವಾದ ಅರ್ಧನಾರೀ ನರಾಕಾರವಾದ ಲಕ್ಷ್ಮೀನಾರಾಯಣಾಖ್ಯ ರೂಪವು, ಸಂಧಿಯತೇ ಖಲು=ಕೂಡಿಸಲ್ಪಡುತ್ತದೆಂದು ಪ್ರಸಿದ್ಧವು. (ಯಾವಾತನು ಈ ವಿದ್ಯೆಯನ್ನು ಅಧ್ಯಯನ ಮಾಡಿರುತ್ತಾನೋ, ಅಂತಹ ತಾರ್ಕ್ಷ್ಯನೂ ಕೂಡ ಅನಾಯಾಸ ದಿಂದ ಈ ವಿದ್ಯೆಯನ್ನು ಸಂಪಾದಿಸಲಿಲ್ಲ ಮತ್ತೆ.) ಏತಸ್ಯಾಂ-ಹ ಸ್ಮ ಉಪನಿಷದಿ=ಈ ರಹಸ್ಯ ವಿದ್ಯೆಯನ್ನು ಸಂಪಾದಿಸುವುದಕ್ಕೋಸ್ಕರ, ಸವತ್ಸರಂ=ಸಂವತ್ಸರ ಪರ್ಯಂತ, ಗಾಃ=(ಗುರುವಿನ) ಗೋವುಗಳನ್ನು, ತಾರ್ಕ್ಷ್ಯಃ=ತಾರ್ಕ್ಷ್ಯನಾಮಕ ಮುನಿಯು, ರಕ್ಷಯತೇ=ರಕ್ಷಿಸಿದನು. ಏತಸ್ಯಾಂ ಮಾತ್ರಾಯಾಂ=ಕೇವಲ ಈ ವಿದ್ಯೆಯು ಪ್ರಾಪ್ತಿಯಾಗುವುದಕ್ಕೋಸ್ಕರ, ಸಂವತ್ಸರಂ= ಒಂದು ವತ್ಸರಪರ್ಯಂತ, ತಾರ್ಕ್ಷ್ಯಃ=ತಾರ್ಕ್ಷ್ಯನಾಮಕ ಮುನಿಯು, ರಕ್ಷಯತೇ ಹ ಸ್ಮ= ರಕ್ಷಿಸಿದನು. (ಬೇರೆ ಪ್ರಯೋಜನಕ್ಕಾಗಿ ಅಲ್ಲ.) ತತ್ ಏತತ್=ಅ ಈ ಲಕ್ಷ್ಮೀನಾರಾಯಣ ರಿಗೆ ರಥಂತರ ಬೃಹಚ್ಛಬ್ದವಾಚ್ಯತ್ವವು, ಋಷಿಣಾಪಿ=ಮಂತ್ರದೃಷ್ಟ್ಯವಿನಿಂದಲೂ (ಮಂತ್ರ ದಲ್ಲಿ), ವಸಿಷ್ಠಃ=ವಸಿಷ್ಠ ಋಷಿಯು, (ಪ್ರಥಸಪ್ರಥಾಖ್ಯ ರಾಜರ ಯಜ್ಞದಲ್ಲಿ ಹೋತನು ಆಗಿ ಅನಿರುದ್ಧಾದಿ ಚತುರ್ಮೂರ್ತಿಯಾದ ಶ್ರೀ ಹರಿಯನ್ನು ಸ್ತುತಿಸಿ ಆತನ ಅನುಗ್ರಹದಿಂದ), ರಥಂ

ತರಂ=ರಥಂತರನಾಮಕ ಲಕ್ಷ್ಮೀರೂಪವನ್ನು ಆಜಭಾರ=ಅಪಹರಿಸಿದನು. (ಅಂದರೆ ಲಕ್ಷ್ಮಿಯು ತನ್ನ ಸಮೀಪಕ್ಕೆ ಬಂದು ತನಗೂ ಪ್ರಥಸಪ್ರಥರಿಗೂ ಹೇಗೆ ಪುರುಷಾರ್ಥವನ್ನು ಕೊಟ್ಟಾಳೋ, ಆ ರೀತಿಯಾಗಿ ಮಾಡಿದನು.) ಭರದ್ವಾಜಃ=ಭರದ್ವಾಜರೂ ಕೂಡ, ಅಗ್ನೇಃ=ಅಗ್ನಿಶಬ್ದವಾಚ್ಯನಾದ ಚತುರ್ಮೂರ್ತಿಯಾದ ಶ್ರೀಹರಿಯಿಂದ, ಬೃಹತ್=ಬೃಹತ್ ಎಂಬ ನಾರಾಯಣ ರೂಪವನ್ನು, ಆಚಕ್ರೇ=ಕರಿಸಿದನು. ಇತಿ=ಈ ಪ್ರಕಾರವಾಗಿ, ಉಕ್ತಂ=ಹೇಳಲ್ಪಟ್ಟದೆ. ಯಃ ಏವಂ ಏತಾಂ ಸಂಹಿತಾಂ ವೇದ ಸಃ ಪ್ರಜಯಾ ಪಶುಭಿಃ ಯಶಸಾ ಬ್ರಹ್ಮವರ್ಚಸೇನ ಸ್ವರ್ಗೇಣ ಲೋಕೇನ ಸಂಧಿಯತೇ ಸರ್ವಂ ಆಯುಃ ಏತಿ...... (ಈ ಪ್ರಕಾರವಾಗಿ ತಾರ್ಕ್ಷ್ಯಮತವನ್ನನುಸರಿಸಿ ಸಂಹಿತಾದೇವತೆಯಾದ ಅರ್ಧನಾರೀಸರಾಕಾರವಾದ ಒಂದು ಭಗವನ್ಮೂರ್ತಿಯನ್ನು ಹೇಳಿ ಕೌಂಠರವ್ಯಮತವನ್ನು ಅನುಸರಿಸಿ ಎರಡೆರಡು ದೇವತಾಸ್ವರೂಪಗಳಾದ ಐದು ಸಂಹಿತಾ ಮೂರ್ತಿಗಳನ್ನು ಹೇಳುತ್ತಾರೆ.) ಕೌಂಠರವ್ಯಃ=ಕುಂಠರವ್ಯನ ಮಗನಾದ ಕೌಂಠರವ್ಯನಾಮಕ ಮುನಿಯು, ವಾಕ್=ಲಕ್ಷ್ಮೀದೇವಿಯು, ಪ್ರಾಣೇನ=ವಿಷ್ಣುವಿನಿಂದ ಸಹಿತಳಾಗಿ, ಸಂಹಿತಾ=ಒಂದು ಸಂಹಿತಾದೇವಿಯು, ಪ್ರಾಣಃ=ಆ ವಿಷ್ಣುವು, ಪವಮಾನೇನ=ವಾಯುವಿನಿಂದೊಡಗೂಡಿ ಎರಡನೇ ಸಂಹಿತೆಯು. ಪವಮಾನಃ=ವಾಯುವು, ವಿಶ್ವೈರ್ದೇವೈಃ=ಸರಸ್ವತ್ಯಾದಿ ಸಮಸ್ತ ದೇವತೆಗಳಿಂದೊಡಗೂಡಿ, ಮೂರನೇ ಸಂಹಿತೆಯು. ವಿಶ್ವೇ ದೇವಾಃ=ಆ ಸಮಸ್ತ ದೇವತೆಗಳು, ಸ್ವರ್ಗೇಣ ಲೋಕೇನ=ಸ್ವರ್ಗಕ್ಕೆ ಅಭಿಮಾನಿಯಾದ ಸರ್ವವನ್ನು ನೋಡುವುದರಿಂದ, ಪ್ರಕಾಶಿಸುವುದರಿಂದ ಲೋಕನಾಮಕನಾದ ಶಿವನಿಂದೊಡಗೂಡಿ, (ನಾಲ್ಕನೇ ಸಂಹಿತೆಯು.) ಸ್ವರ್ಗೋ ಲೋಕಃ=ಶಿವನು, ಬ್ರಹ್ಮಣಾ=ಚತುರ್ಮುಖನಿಂದೊಡಗೂಡಿ, ಸಂಹಿತೇತಿ=ಐದನೇ ಸಂಹಿತೆಯೆಂದು, ಆಹ=ಹೇಳಿದನು. ಸೈಷಾ ಸಂಹಿತಾ=ಆ ಈ ಸಂಹಿತೆಯು, ಅವರಪರಾ=ನೀಚರು ಉತ್ತಮರು ಇವರಿಂದೊಡಗೂಡಿರುವುದರಿಂದ ಅವರಪರಾ ಎಂದು ಹೇಳಲ್ಪಡುತ್ತದೆ. (ಎರಡೆರಡರ ಮಧ್ಯದಲ್ಲಿ ಒಂದು ನಿಕೃಷ್ಟವು, ಬೇರೆ ಒಂದು ಉತ್ತಮವು. ಅದರಲ್ಲಿ ಪ್ರಥಮಾ ವಿಭಕ್ತಿಯಿಂದ ಹೇಳಿರುವುದು ಎಡಭಾಗದಲ್ಲಿರುವುದು, ತೃತೀಯಾ ವಿಭಕ್ತಿಯಿಂದ ಹೇಳಲ್ಪಟ್ಟದ್ದು ಬಲಭಾಗದಲ್ಲಿರತಕ್ಕದ್ದು. ಹೀಗೆ ಈ ಎಲ್ಲಾ ಸಂಹಿತಾದೇವತಾ ಮೂರ್ತಿಗಳು, ಹರಿಹರರ ಮೂರ್ತಿಯಂತೆ ಪರಸ್ಪರವಾಗಿ ಮಿಲಿತಗಳೇ ಆಗಿವೆ ಎಂದು ತಿಳಿಯತಕ್ಕದು.) ಸಃ=ಪ್ರಸಿದ್ಧನಾದ, ಯಃ ಹ=ಯಾವ ಅಧಿಕಾರಿಯು, ಏತಾಂ ಅವರಪರಾಂ ಸಂಹಿತಾಂ=ಈ ಅವರಪರನಾಮಕವಾದ ಸಂಹಿತೆಯನ್ನು, ವೇದ=ತಿಳಿಯುತ್ತಾನೋ, ಸಃ=ಆತನು, ಯಥಾ=ಹೇಗೆ, ಏಷಾ ಸಂಹಿತಾ=ಈ ಈ ಸಂಹಿತೆಯು, (ಒಡಗೂಡಿಯೇ ಅದೆಯೋ.) ಏವಮೇವ=ಹೀಗೆಯೇ, ಪ್ರಜಯಾ ಪಶುಭಿಃ ಯಶಸಾ ಬ್ರಹ್ಮವರ್ಚಸೇನ ಸ್ವರ್ಗೇಣ ಲೋಕೇನ......ಸಂಧೀಯತೇ, ಹ=ಕೂಡಿಸಲ್ಪಡುತ್ತಾನೆ. ಸಃ=ಈ ವಿದ್ಯೆಯನ್ನು ತಿಳಿದವನು, ಪರೇಣ ವಾ ಸ್ವೇನ ವಾ ಅರ್ಥೇನ ಉಪಸೃತಃ=ಪರಪ್ರಯೋಜನದಿಂದಾಗಲೀ ತನ್ನ ಪ್ರಯೋಜನದಿಂದಾಗಲೀ ಸಮೀಪಿಸಿದವನಾಗಿ, (ಅಂದರೆ ಪರರ ಪ್ರಯೋಜನಕ್ಕಾಗಲೀ ತನ್ನ ಪ್ರಯೋಜನಕ್ಕಾಗಲೀ) ಅಭಿವ್ಯಾಹಾರಯೇತ್ ಯದಿ=(ಮಂತ್ರವನ್ನು) ಉಚ್ಚರಿಸಿದ ಪಕ್ಷದಲ್ಲಿ, ಅಭಿವ್ಯಾಹಾರ್ಷನ್ನೇವ=ಹೇಳಲಿಕ್ಕೆ ಇಚ್ಛಿಸಿದವನಾಗಿಯೇ, (ಹೇಳುವುದಕ್ಕಿಂತ ಮೊದಲೇ) ಸಂಹಿತಾ=ಸಂಹಿತಾರೂಪನಾದ ಹರಿಯು, ದಿವಂ=ಸ್ವರ್ಗವನ್ನು, ಅಗಮತ್=(ದೇವತೆಗಳಲ್ಲಿ ಅನುಗ್ರಹಮಾಡಲಿಕ್ಕೆ) ಹೋದನು. (ಆದುದರಿಂದ) ವಿದುಷಾಂ ದೇವಾನಾಂ=ಮುಖ್ಯತಃ ಜ್ಞಾನಿಗಳಾದ ದೇವತೆಗಳಿಗೇನೇ, ಏವಂ=ಹಿಂದೆ ಹೇಳಿದ ಸಂಪೂರ್ಣ ವಿದ್ಯಾಫಲವು, ಭವಿಷ್ಯತಿ=ಆಗುವುದು. ಇತಿ=ಈ ಪ್ರಕಾರವಾಗಿ, ವಿದ್ಯಾತ್=ತಿಳಿಯತಕ್ಕುದು. (ಹೀಗೆಯೇ ಧ್ಯಾನಿಸತಕ್ಕ ಪುರುಷನಿಗೆ ದೇವತೆಗಳ ಅನುಗ್ರಹದಿಂದ ಹೇಳಿದ ಫಲವೆಲ್ಲವೂ) ತಥಾ=ಹಾಗೆಯೇ ಶಶ್ವತ್=ನಿತ್ಯವೂ, ಸ್ಯಾತ್=

ಆಗುವುದು. ಯಃ=ಯಾವ ಅಧಿಕಾರಿಯು, ಏವಂ ಏತಾಂ ಸಂಹಿತಾಂ=ಪೂರ್ವೋಕ್ತಪ್ರಕಾರವಾಗಿ ತಾರ್ಕ್ಷ್ಯನಿಂದಲೂ ಕೌಂಠರವ್ಯನಿಂದಲೂ ಹೇಳಲ್ಪಟ್ಟ ಈ ಸಂಹಿತೆಯನ್ನು, ವೇದ, ಸಃ ಪ್ರಜಯಾ ಪಶುಭಿಃ ಯಶಸಾ ಬ್ರಹ್ಮವರ್ಚಸೇನ ಸ್ವರ್ಗೇಣ ಲೋಕೇನ ಸಂಧೀಯತೇ ಸರ್ವಂ ಆಯುಃ ಏತಿ....... ವಾಕ್=ಸರಸ್ವತಿಯು, ಸಂಹಿತಾ ಇತಿ=ವರ್ಣಗಳ ಮಧ್ಯದೇವತೆಯೂ ಸಂಹಿತಾನಾಮಕಳೂ ಎಂದು, ಪಂಚಾಲಚಂಡಃ=ಪಂಚಾಲಚಂಡನಾಮಕ ಮುನಿಯು, (ತಿಳಿಯುತ್ತಾನೆ.) ವಾಚಾ ವೈ=ವಾಗ್ದೇವತೆಯಾದ ಸರಸ್ವತಿಯಿಂದಲೇ, ವೇದಾಃ=ವೇದಗಳು, ಸಂಧೀಯಂತೇ=ಕೂಡಿಸಲ್ಪಡುತ್ತವೆ. (ಸರಸ್ವತಿಯ ಪ್ರೇರಣೆಯಿಂದಲೇ ಸಂಹಿತೆಯಾಗಿ ಉಚ್ಚರಿಸಲ್ಪಡುತ್ತವೆ.) ಛಂದಾಂಸಿ=ಗಾಯತ್ರಿ ಮೊದಲಾದ ಛಂದಸ್ಸುಗಳೂ ಕೂಡ, ವಾಚಾ=ಸರಸ್ವತಿಯಿಂದಲೇ, ಸಂಧೀಯಂತೇ=ಕೂಡಿಸಲ್ಪಡುತ್ತವೆ. ಮಿತ್ರಾಣಿ=ಲೋಕದಲ್ಲಿ ಮಿತ್ರರನ್ನೂ ಕೂಡ, ವಾಚಾ=ಸರಸ್ವತಿಯಿಂದಲೇ, ಸಂದಧತಿ=ಕೂಡಿಸುತ್ತಾರೆ. (ಅಂದರೆ ಪರಸ್ಪರವಾಗಿ ಪ್ರೀತಿರೂಪಸಂಧಿಯನ್ನು ಮಾಡುತ್ತಾರೆ.) ಸರ್ವಾಣಿ ಭೂತಾನಿ=ಎಲ್ಲಾ ಭೂತಗಳೂ, ವಾಚಾ=ಸರಸ್ವತಿಯಿಂದಲೇ, ಸಂಧೀಯಂತೇ=ವ್ಯವಹಾರ ವಿಷಯಗಳಾಗುತ್ತವೆ. ಅಥೋ=ಆದುದರಿಂದ, ಇದಂ ಸರ್ವಂ=ಈ ಎಲ್ಲವೂ, ವಾಗೇವ=ಸರಸ್ವತ್ಯಧೀನವೇ, ಇತಿ=ಹೀಗೆ, ಪಂಚಾಲಚಂಡನಾಮಕ ಮುನಿಯು ಹೇಳುತ್ತಾನೆ. (ಅಂತೂ ವೇದಾದಿಗಳ ಸಂಧಾನವನ್ನು ಮಾಡುವುದರಿಂದ ಸರಸ್ವತಿಯು ಸಂಹಿತಾ ಎನ್ನಿಸಿಕೊಳ್ಳುತ್ತಾಳೆ.) ತತ್=ಆದುದರಿಂದ, (ಸರಸ್ವತಿಯು ಸರ್ವವೇದಾದಿ ರೂಪವಾದ ವಚನಕ್ಕೆ ನಿಯಾಮಕಳಾದುದರಿಂದ), ಯತ್ರ=ಯಾವಾಗ (ಪುರುಷನು), ಏತತ್=ಈ ವೇದಾದಿಗಳನ್ನು, ಅಧೀತೇ ವಾ=ಅಧ್ಯಯನ ಮಾಡುತ್ತಾನೋ, ಭಾಷತೇ ವಾ=ಅಧ್ಯಯನ ಮಾಡಿಸುತ್ತಾನೋ, ಲೌಕಿಕ ಭಾಷಣವನ್ನಾಗಲೀ ಮಾಡುತ್ತಾನೋ, ತದಾ=ಆಗ, ಪ್ರಾಣಃ=ಚೇಷ್ಟಕನಾದುದರಿಂದ ಪ್ರಾಣನಾಮಕನಾದ ಪ್ರಾಣನಲ್ಲಿರತಕ್ಕ ಶ್ರೀ ಪರಮಾತ್ಮನು, ವಾಚಿ ಭವತಿ=ವಾಗಾಶ್ರಿತನಾಗುತ್ತಾನೆ. (ವಾಚ್ಯನಾದುದರಿಂದ ಆತನ ಅಧೀನನಂತೆ ಆಗುತ್ತಾನೆ.) ತದಾ=ಅಧ್ಯಯನಾದಿ ಕಾಲದಲ್ಲಿ, ವಾಕ್=ಸರಸ್ವತಿಯು, ಪ್ರಾಣಂ=ಶ್ರೀಹರಿಯನ್ನು, ರೇಢಿ=ನುಂಗುತ್ತಾಳೆ. (ವಾಚ್ಯನಾದುದರಿಂದ ಸ್ವಾಧೀನನನ್ನೆಂಬಂತೆ ಮಾಡುತ್ತಾಳೆ.) ಅಥ=ಆ ಮೇಲೆ, ಯತ್ರ=ಯಾವಾಗ, (ಪುರುಷನು) ತೂಷ್ಣೀಂ ವಾ ಭವತಿ=ಮೆಲ್ಲಗೆ ವೇದಾದಿಗಳನ್ನು ಉಚ್ಚರಿಸುವವನು ಆಗುತ್ತಾನೋ, ಸ್ವಪಿತಿ ವಾ=ಸುಪ್ತನಾಗುತ್ತಾನೋ, ತದಾ=ಆಗ, ವಾಕ್=ಸರಸ್ವತಿಯು, ಪ್ರಾಣೇ ಭವತಿ=ಪ್ರಾಣಾಶ್ರಿತಳು ಆಗುತ್ತಾಳೆ. (ಪ್ರಾಣನಲ್ಲಿರತಕ್ಕ ಪರಮಾತ್ಮನಲ್ಲಿಯೇ ಆಚ್ಛಾದಿತಳಾಗುತ್ತಾಳೆ.) ತದಾ=ಆವಾಗ, ಪ್ರಾಣಃ=ಶ್ರೀಹರಿಯು, ವಾಚಂ=ಸರಸ್ವತಿಯನ್ನು, ರೇಢಿ=ನುಂಗುವವನಂತೆ ಇದ್ದಾನೆ. (ಸ್ವವಾಚಕತ್ವ ಶಕ್ತಿಯನ್ನು ಒಳಗೆ ಇರಿಸುತ್ತಾನೆ.) ತೌ=ಆ ವಾಕ್ಪ್ರಾಣರು, ಅನ್ಯೋನ್ಯಂ=ಪರಸ್ಪರವಾಗಿ, ರೀಢಃ=ಆಸ್ವಾದನ ಮಾಡುತ್ತಾರೆ. ವಾಗ್ವೈ=ಸರಸ್ವತಿಯೇ, ಮಾತಾ=ತಾಯಿಯು, ಪ್ರಾಣಃ=ವಾಯುಸ್ಥನಾದ ಶ್ರೀ ಹರಿಯು, ಪುತ್ರಃ=ಮಗನು, (ಸರಸ್ವತ್ಯಭಿಮನ್ಯಮಾನವಾದ ವೇದದಿಂದ ಶ್ರೀ ಹರಿಯು ಅಭಿವ್ಯಕ್ತನಾಗುವುದರಿಂದ ಪುತ್ರನೆಂದೂ, ಸರಸ್ವತಿಯು ಅಭಿವ್ಯಂಜಕಳಾದುದರಿಂದ ತಾಯಿಯೆಂದೂ ಹೇಳಲ್ಪಡುತ್ತಾರೆ. ಇದು ಔಪಚಾರಿಕವೆಂದು ತಿಳಿಯತಕ್ಕದು.) ತತ್ ಏತತ್ ಅಪಿ=ವಾಕ್ಪ್ರಾಣರಿಗೆ ಮಾತೃ ಪುತ್ರಭಾವವು ಪರಸ್ಪರವಾಗಿ ಆಸ್ವಾದಯಿತೃತ್ವವೂ ಕೂಡ, ಋಷಿಣಾ=ಮಂತ್ರದ್ರಷ್ಟ್ರನಿಂದ ಉಕ್ತಂ=ಹೇಳಲ್ಪಟ್ಟಿದೆ. ಸಃ=ಆ ದ್ವಿರೂಪನಾಗಿ ಹೇಳಲ್ಪಟ್ಟವನಾದಾಗ್ಯೂ, ಏಕಃ=ಸ್ವಗತಭೇದ ರಹಿತನಾದ, ಸುಪರ್ಣಃ=ಚೆನ್ನಾಗಿ ಪರಮಾನಂದರೂಪನಾದ ಶ್ರೀ ಹರಿಯು, ಸಮುದ್ರಂ=ಕ್ಷೀರ ಸಮುದ್ರವನ್ನು, ಆವಿವೇಶ=ಪ್ರವೇಶಿಸಿದನು. (ಶ್ವೇತದ್ವೀಪದಲ್ಲಿ ಮಲಗುತ್ತಾನೆ.) ಸಃ=ಆತನೇ, ಇದಂ ವಿಶ್ವಂ ಭುವನಂ=ಈ

ಸಮಸ್ತ ಜಗತ್ತನ್ನೂ, ವಿಚಷ್ಟೇ=(ಸ್ವಾಭಾವಿಕ ಪ್ರಜ್ಞೆಯಿಂದಲೇ) ನೋಡುತ್ತಾನೆ. ತಂ=ಆ ಹರಿಯನ್ನು, ಪಾಕೇನ=ಪರಿಪಕ್ವವಾದ, ಮನಸಾ=ಮನಸ್ಸಿನಿಂದ, ಅಂತಿತಃ=ಸಮೀಪದಲ್ಲಿಯೇ, (ನಾನು) ಅಪಶ್ಯಂ=ನೋಡಿದೆನು. (ಇದು ಬ್ರಹ್ಮನ ವಾಕ್ಯವು.) ತಂ=ಆ ವಿಷ್ಣುವನ್ನು, ಮಾತಾ=ಸರಸ್ವತಿಯು, ರೇಳ್ಹಿ=ಆಸ್ವಾದನೆ ಮಾಡುತ್ತಾಳೆ. ಸ ಉ=ಆ ವಿಷ್ಣುವು, ಮಾತರಂ=ಸರಸ್ವತಿಯನ್ನು, ರೇಳ್ಹಿ=ಆಸ್ವಾದನೆಮಾಡುತ್ತಾನೆ. ಇತಿ=ಈ ಪ್ರಕಾರ, (ಮಿತ್ರಭಾವದಿಂದ ಪ್ರತಿಪಾದ್ಯ ಪ್ರತಿಪಾದಕರಾಗಿ ಇರುತ್ತಾರೆ.) ಯಃ ಏವಂ ಏತಾಂ ಸಂಹಿತಾಂ ವೇದ ಸಃ ಪ್ರಜಯಾ ಪಶುಭಿಃ ಯಶಸಾ ಬ್ರಹ್ಮವರ್ಚಸೇನ ಸ್ವರ್ಗೇಣ ಲೋಕೇನ ಸಂಧೀಯತೇ ಸರ್ವಂ ಆಯುಃ ಏತಿ . . . . ಅಥ=ಆಮೇಲೆ, ಅತಃ=ಮಹಾಫಲವಿರುವುದರಿಂದ, ಪ್ರಜಾಪತಿ ಸಂಹಿತಾ=ರುದ್ರನಿಂದ ಹೇಳಲ್ಪಟ್ಟಸಂಹಿತೆಯು, (ನಿರೂಪಿಸಲ್ಪಡುತ್ತದೆ.) ಜಾಯಾ=ಜಯಶಾಲಿಯಾದುದರಿಂದ ಜಾಯಾ ಶಬ್ದವಾಚ್ಯನಾದ ಹೆಂಡತಿಯಲ್ಲಿರತಕ್ಕ ವಾಸುದೇವನು, ಪೂರ್ವರೂಪಂ=ಪೂರ್ವವರ್ಣದೇವತೆಯು. ಪತಿಃ=ರಕ್ಷಿಸುವುದರಿಂದ ಪತಿನಾಮಕನಾದ ಪತಿಯಲ್ಲಿರತಕ್ಕ ಸಂಕರ್ಷಣನು, ಉತ್ತರರೂಪಂ=ಉತ್ತರವರ್ಣದೇವತೆಯು. ಪುತ್ರಃ=ದುರ್ಗಂಧ ಸ್ವರೂಪವಾಗಿರುವುದರಿಂದ ಪುನ್ನಾಮಕವಾದ ನರಕದಿಂದ ರಕ್ಷಿಸುವ ಪ್ರಯುಕ್ತ ಪುತ್ರನಾಮಕನಾದ ಪುತ್ರನಲ್ಲಿರತಕ್ಕ ಪ್ರದ್ಯುಮ್ನನು, ಸಂಧಿಃ=ವರ್ಣಗಳ ಮಧ್ಯದೇವತೆಯು. ಪೋಷಿಸುವುದರಿಂದ ಸಂಧಿನಾಮಕನೂ ಕೂಡ, ಪ್ರಜನನಂ=ಪ್ರಜೋತ್ಪತ್ತಿ ಕರ್ಮದಲ್ಲಿರತಕ್ಕ ಚೆನ್ನಾಗಿ ಹುಟ್ಟಿಸುವುದರಿಂದ ಪ್ರಜನನನಾಮಕನಾದ ಅನಿರುದ್ಧನು, ಸಂಧಾನಂ=ಪೂರ್ವೋತ್ತರವರ್ಣಗಳಿಗೆ ಸಂಹಿತೆಯಾಗಿ ಉಚ್ಚಾರಣರೂಪವಾದ ಕರ್ಮದಲ್ಲಿರತಕ್ಕವನು, ಸಂಧಾನವನ್ನು ಮಾಡತಕ್ಕವನಾದುದರಿಂದ ಸಂಧಾನನಾಮಕನೂ ಕೂಡ, ಸಾ ಏಷಾ ಸಂಹಿತಾ=ಆ ಈ ಸಂಹಿತಾ ದೇವತೆಯಾದ ಶ್ರೀ ಹರಿಯು, ಅದಿತಿಃ=ಸರ್ವವನ್ನು ಸ್ವೀಕರಿಸುವುದರಿಂದ ಅದಿತಿನಾಮಕನು. ಯದಿದಂ ಕಿಂಚ=ಯಾವುದು ಯಾವುದು ಅದೆಯೋ, ಇದಂ ಸರ್ವಂ=ಈ ಎಲ್ಲವೂ, ಪಿತಾ ಚ=ತಂದೆಯೂ, ಮಾತಾ ಚ=ತಾಯಿಯೂ, ಪುತ್ರಶ್ಚ=ಮಗನೂ, ಪ್ರಜನನಂ ಚ=ಪ್ರಜೋತ್ಪತ್ತಿಕರ್ಮವೂ ಕೂಡ, ಅದಿತಿಃ ಹಿ=ಅದಿತಿನಾಮಕವಿಷ್ಣ್ವಧೀನವೇ, (ಪಿತ್ರಾದಿ ಎಲ್ಲಾ ಶಬ್ದಸಮುದಾಯವೂ ಆತನನ್ನೇ ಪ್ರತಿಪಾದಿಸುತ್ತದೆ.) ತತ್ ಏತತ್ ಅಪಿ=ಆ ಈ ಎಲ್ಲವೂ ವಿಷ್ಣುವಿಗೆ ಅದಿತಿ ಶಬ್ದವಾಚ್ಯತ್ವವೂ ಪಿತ್ರಾದಿ ಶಬ್ದವಾಚ್ಯತ್ವಾದಿಯೂ ಕೂಡ, ಋಷಿಣಾ=ಮಂತ್ರದ್ರಷ್ಟೃವಿನಿಂದ, 'ಸಃ=ಆ ಹರಿಯು, ಅದಿತಿಃ=ಅದಿತಿಶಬ್ದವಾಚ್ಯನು. ಮಾತಾ=ಪೂಜಿಸುವುದರಿಂದ ಮಾತೃಶಬ್ದವಾಚ್ಯನು. ಸಃ=ಆತನು, ಪಿತಾ=ರಕ್ಷಿಸುವುದರಿಂದ ಪಿತೃಶಬ್ದವಾಚ್ಯನು, ಪುತ್ರಃ=ಪುತ್ರಶಬ್ದವಾಚ್ಯನು'. ಇತಿ=ಈ ಪ್ರಕಾರ ಉಕ್ತಂ=ಹೇಳಲ್ಪಟ್ಟಿದೆ. ಯಃ ಏವಂ ಏತಾಂ ಸಂಹಿತಾಂ ವೇದ ಸಃ ಪ್ರಜಯಾ ಪಶುಭಿಃ ಯಶಸಾ ಬ್ರಹ್ಮವರ್ಚಸೇನ ಸ್ವರ್ಗೇಣ ಲೋಕೇನ ಸಂಧೀಯತೇ ಸರ್ವಂ=ಆಯುಃ ಏತಿ ......... ॥ ೬ ॥

**ಈ ಪ್ರಕಾರವಾಗಿ ಐತರಯೋಪನಿಷತ್ತುಗಳಲ್ಲಿ ಮೂರನೇ ಆರಣ್ಯಕದಲ್ಲಿ ಒಂದನೇ ಅಧ್ಯಾಯವು ಸಮಾಪ್ತವಾಯಿತು. ॥ ೩ ॥ ೧ ॥ ಶ್ರೀಃ ॥**

ಭಾ॥ (a) ದೇವತಾ ಪೂರ್ವವರ್ಣಸ್ಯ ಲಕ್ಷ್ಮೀರೇವ ಪ್ರಕೀರ್ತಿತಾ । ನಾರಾಯಣಸ್ತೂತ್ತರಸ್ಯ ತೌ ವಾಕ್ಪ್ರಾಣಾಭಿಧೌ ಮತೌ ॥ (b) ಮಧ್ಯಸ್ಥಃ ಸಂಹಿತಾನಾಮಾ ಸೋಽರ್ಧನಾರೀ ಪುಮಾತ್ಮಕಃ । ವೇದಾತ್ಮಕತ್ವಾದ್ವಾಚ್ಯಾಖ್ನೀ ಲಕ್ಷ್ಮೀರೇವ ಪ್ರಕೀರ್ತಿತಾ ॥ (c) ಪ್ರಾಣನಾಮಾ ಪ್ರಣೇತೃತ್ವಾತ್ಸಾಕ್ಷಾನ್ನಾರಾಯಣಃ ಸ್ವಯಂ । ರಮಿತ್ವಾನಂದ ಉದ್ದಿಷ್ಟಃ ಸಂಭೋ

ಗ್ಯಂ ಥಮುದಾಹೃತಂ ॥ ವಿಷ್ಣುಭೋಗ್ಯಾ ರತಿತರಾ ಲಕ್ಷ್ಮೀರೇವ ರಥಂತರಂ । (d) ನಾರಾಯಣೋ ಬೃಹತ್ವಾತ್ತು ಬೃಹನ್ನಾಮಾ ಪ್ರಕೀರ್ತಿತಃ ॥ ರಥಂತರಸ್ಯ ಬೃಹತೋ ದೇವತೇ ಚೈವ ತಾವುಭೌ । ವಾಕ್ಪ್ರಾಣಸಂಸ್ಥಿತೌ ಚೈವ (e) ತಾಭ್ಯಾಮೇವ ಹಿ ಸಂಧಿತಂ ॥ ಲಕ್ಷ್ಮೀನಾರಾಯಣಂ ರೂಪಂ ಸಂಹಿತಾನಾಮಕಂ ಶುಭಂ । (f) ಏತಾಂ ವಿದ್ಯಾಮವಾಪ್ತುಂ ಹಿ ವತ್ಸರಂ ಗಾ ಅರಕ್ಷತ ॥ ತಾರ್ಕ್ಷ್ಯ ಏತಾವನ್ಮಾತ್ರಂ ಚ ಸಮುದ್ದಿಶ್ಯ ನ ಚಾಪರಂ ॥

ಅ ॥ (a) (ರಥಂತರಶಬ್ದದಿಂದಹೇಳಲ್ಪಟ್ಟ) ಲಕ್ಷ್ಮೀದೇವಿಯೇ, ಪೂರ್ವವರ್ಣಕ್ಕೆ ದೇವತೆಯಾಗಿ ಹೇಳಲ್ಪಟ್ಟಿದ್ದಾಳೆ. ಬೃಹನ್ನಾಮಕನಾದ ನಾರಾಯಣನಾದರೂ ಉತ್ತರವರ್ಣಕ್ಕೆ ದೇವತೆಯು. ಆ ಲಕ್ಷ್ಮೀನಾರಾಯಣರು ವಾಕ್‌ಪ್ರಾಣ ನಾಮಕರಾಗಿ ಹೇಳಲ್ಪಡುತ್ತಾರೆ. (b) ಆ (ರಥಂತರ ಬೃಹದ್ರೂಪರಾದ ಪೂರ್ವೋತ್ತರವರ್ಣಗಳಲ್ಲಿರತಕ್ಕ ಲಕ್ಷ್ಮೀನಾರಾಯಣರಿಂದ ಕೂಡಿಸಲ್ಪಟ್ಟ) ವರ್ಣಗಳ ಮಧ್ಯದಲ್ಲಿರತಕ್ಕ ಅರ್ಧನಾರೀನರಸ್ವರೂಪವಾದ ರೂಪವಿಶೇಷವು ಸಂಹಿತಾನಾಮಕವು. ವೇದಗಳಿಗೆ ಅಭಿಮಾನಿಯಾಗಿರುವುದರಿಂದ ಲಕ್ಷ್ಮಿಯೇ ವಾಕ್‌ನಾಮಕಳಾಗಿ ಹೇಳಲ್ಪಡುತ್ತಾಳೆ. (c) ನಾರಾಯಣನು ಸ್ವತಂತ್ರಪ್ರೇರಕನಾದುದರಿಂದ ಮುಖ್ಯವಾಗಿ ಪ್ರಾಣನಾಮಕನು. 'ರಂ' ಎಂದು ಆನಂದವು ಹೇಳಲ್ಪಡುತ್ತದೆ. 'ಥಂ' ಎಂಬುವುದು ಚೆನ್ನಾಗಿ ಭೋಗ್ಯವೆಂದು ಹೇಳಲ್ಪಡುತ್ತದೆ. ವಿಷ್ಣುವಿಗೆ ಭೋಗ್ಯಳಾದ ವಿಶಿಷ್ಟಸುಖರೂಪಳಾದ ಲಕ್ಷ್ಮಿಯೇ 'ರಥಂತರ' ಎನ್ನಿಸುತ್ತಾಳೆ. (d) ನಾರಾಯಣನು ಪೂರ್ಣನಾದುದರಿಂದಲೇ ಬೃಹತ್‌ನಾಮಕನಾಗಿ ಹೇಳಲ್ಪಡುತ್ತಾನೆ. ಆ ಲಕ್ಷ್ಮೀನಾರಾಯಣರಿಬ್ಬರು ರಥಂತರ ಬೃಹತ್ ನಾಮಕಸಾಮಗಳಿಗೆ ದೇವತೆಗಳು. ರಥಂತರಕ್ಕೆ ಪ್ರತಿಮೆಯಾದ ಸರಸ್ವತಿ (ವಾಕ್) ಯಲ್ಲಿಯೂ, ಬೃಹತ್‌ನಾಮಕಸಾಮಕ್ಕೆ ಪ್ರತಿಮೆಯಾದ ಪ್ರಾಣನಲ್ಲಿಯೂ ಇರುವವರು. (e) ಅವರಿಬ್ಬರಿಂದಲೇ ಮಂಗಲಪ್ರದವಾದ ಸಂಹಿತಾನಾಮಕವಾದ (ಅರ್ಧನಾರೀನರಾಕಾರವಾದ) ಲಕ್ಷ್ಮೀನಾರಾಯಣಾಖ್ಯರೂಪವು ಸಂಧಿತವಾಗಿಯದೆ. ಪ್ರಸಿದ್ಧವು. (f) ತಾರ್ಕ್ಷ್ಯನಾಮಕಋಷಿಯು ಈ ವಿದ್ಯೆಯನ್ನು ಹೊಂದುವುದಕ್ಕೋಸ್ಕರವೇ ವತ್ಸರಪರ್ಯಂತವಾಗಿ, ಗುರುವಿನ ಗೋವುಗಳನ್ನು ರಕ್ಷಿಸುತ್ತಿದ್ದನು. ಈ ವಿದ್ಯೆಯನ್ನು ಹೊಂದುವುದಕ್ಕೋಸ್ಕರವೇ, ಇತರವಾದ ಪ್ರಯೋಜನವನ್ನು ಉದ್ದೇಶಿಸಿ ಅಲ್ಲವೇ ಅಲ್ಲ.

ಭಾ॥ (a) ಸಂಹಿತಾದೇವತಾ ಬಹ್ವ್ಯ ಇತಿ ಕುಂತರವಾತ್ಮಜಃ । ದ್ವಯಂ ದ್ವಯಂ ದೇವತಾನಾಂ ಮಿಲಿತಂ ಹರಿಶರ್ವವತ್ ॥ ಸಂಹಿತಾನಾಮಕಂ ತತ್ರ ವರ್ಣಮಧ್ಯಸ್ಯ ದೇವತಾ । (b) ತಯೋರೇಕಂ ದೇವತಯೋಃ ಪರಮನ್ಯತ್ತ್ವಥಾವರಂ ॥ ಅವರಸ್ಯ ಪರಸ್ಯಾಪಿ ಸಂಯೋಗಾತ್ಸಂಹಿತಾ ತು ಸಾ । ಪ್ರೋಕ್ತಾಽವರಪರೇತ್ಯೇವ (c) ವಾಕ್ಪ್ರಾಣಾಖ್ಯೌ ರಮಾಚ್ಯುತೌ ॥ ಸಂಹಿತೈಕಾ ತಥೈವಾನ್ಯಾ ಕೇಶವೋ ವಾಯುಸಂಯುತಃ । ವಾಯುಃ ಸ ಪವಮಾನಾಖ್ಯೋ ದೇವತಾಶ್ಚಾಖಿಲಾ ಅಪಿ ॥ ತೃತೀಯಾ ಸಂಹಿತಾ ಪ್ರೋಕ್ತಾ (d) ದೇವತಾಸ್ತಾಃ ಸಶಂಕರಾಃ । ಚತುರ್ಥೀ ಸಂಹಿತಾ ಪ್ರೋಕ್ತಾ ಶಂಕರೋ ಬ್ರಹ್ಮಣಾ ಸಹ ॥ ಪಂಚಮೀ ಸಂಹಿತಾ ಚೈವ ಸಂಹಿತಾ ಮೋಕ್ಷದಾಇಮಾಃ ॥

ಅ || (a) ಸಂಹಿತಾದೇವತೆಗಳು ಅನೇಕವುಂಟು ಎಂದು ಕುಂತರವಋಷಿಯ ಮಗನಾದ ಕೌಂತರವ್ಯಋಷಿಯು ಹೇಳುತ್ತಾನೆ. ದೇವತೆಗಳ ಎರಡೆರಡು ವಿಷ್ಣುರುದ್ರರಂತೆಯೇ (ಹೇಗೆ ಒಂದೇ ಸಂಸ್ಥಾನವಿಶೇಷದಲ್ಲಿ ಅರ್ಧದಲ್ಲಿ ಶಂಕರನು ಅರ್ಧದಲ್ಲಿ ನಾರಾಯಣನು ಎಂದು ಅವರು ಮಿಲಿತರಾಗಿರುವರೋ ಹಾಗೆಯೇ) ಮಿಲಿತವಾಗಿ ಸಂಹಿತಾನಾಮಕವಾಗಿ, ಆ ಪೂರ್ವೋತ್ತರವರ್ಣ ತನ್ಮಧ್ಯಗಳ ಮಧ್ಯದಲ್ಲಿ ಮಧ್ಯವರ್ಣಕ್ಕೆ ದೇವತೆಯು. (b) ಆ ಎರಡೆರಡು ದೇವತೆಗಳ ಮಧ್ಯದಲ್ಲಿ ಒಂದು ಶ್ರೇಷ್ಠವು. ಹಾಗೆಯೇ ಬೇರೆ ಒಂದು ನಿಕೃಷ್ಟವು. ಆ ಸಂಹಿತೆಯಾದರೂ ನಿಕೃಷ್ಟದ ಮತ್ತು ಉತ್ತಮದ ಸಂಬಂಧದಿಂದಲೇ ಅವರಪರಾ ಎಂದೇ ಹೇಳಲ್ಪಟ್ಟದೆ. (c) ವಾಕ್ಪ್ರಾಣರೆಂದು ಹೆಸರುಳ್ಳ ಲಕ್ಷ್ಮೀನಾರಾಯಣರು ಒಂದು ಸಂಹಿತೆಯು. ಹಾಗೆಯೇ ಕೇಶವನು ವಾಯುವಿನಿಂದೊಡಗೂಡಿದವನಾಗಿ ಎರಡನೇ ಸಂಹಿತೆಯು ಪವಮಾನನೆಂದು ಹೆಸರುಳ್ಳ ಆ ವಾಯುವೂ ಎಲ್ಲಾ ದೇವತೆಗಳೂ ಕೂಡ ಮೂರನೇ ಸಂಹಿತೆಯಾಗಿ ಹೇಳಲ್ಪಟ್ಟದ್ದಾರೆ. (d) ಆ ದೇವತೆಗಳು ರುದ್ರನಿಂದೊಡಗೂಡಿದವರಾಗಿ ನಾಲ್ಕನೇ ಸಂಹಿತೆಯಾಗಿ ಹೇಳಲ್ಪಟ್ಟದ್ದಾರೆ. ರುದ್ರನು ಬ್ರಹ್ಮನಿಂದೊಡಗೂಡಿ ಐದನೇ ಸಂಹಿತೆಯಾಗಿಯೂ ಹೇಳಲ್ಪಟ್ಟದ್ದಾನೆ. ಈ ಎಲ್ಲಾ ಸಂಹಿತೆಗಳೂ ಮುಕ್ತಿಯನ್ನು ಕೊಡತಕ್ಕವುಗಳು.

ಭಾ|| **(a)** ಪ್ರಥಮಾಯಾಂ ದ್ವಿತೀಯಾಯಾಂ ವಿಷ್ಣುರೇವ ಪರೋ ಮತಃ | ತೃತೀಯಾಯಾಂ ವಾಯುರೇವ ಚತುರ್ಥ್ಯಾಂ ಸರ್ವದೇವತಾಃ || ವಿರಿಂಚ ಏವ ಪಂಚಮ್ಯಾಮವರಾ ಇತರೇ ತತಃ | **(b)** ಪ್ರಥಮಾಯಾಂ ಸಂಹಿತಾಯಾಮವರೋ ವಾಮಭಾಗಗಃ || ದ್ವಿತೀಯಾಯಾಂ ತು ಪರಮಸ್ತೃತೀಯಾಯಾಂ ತಥಾಽವರಃ | ಚತುರ್ಥ್ಯಾಂ ಪರಮಶ್ಚೈವ ಪಂಚಮ್ಯಾಂ ವಾಮಗೋಽವರಃ || **(c)** ಅವರಾದ್ಯಾಃ ಪರಾಂತಾ ಯದೇತಾಃ ಸರ್ವಾಶ್ಚ ಸಂಹಿತಾಃ | ತತೋಽವರಪರಾಃ ಪ್ರೋಕ್ತಾ ನೈವೋಕ್ತಾಸ್ತಾಃ ಪರಾಽವರಾಃ || **(d)** ಅಭಿಮಾನೀ ದ್ಯುಲೋಕಸ್ಯ ಶಿವಃ ಸರ್ವಸ್ಯ ಲೋಕನಾತ್ | ದ್ಯೋತನಾಚ್ಚ ||

ಅ || (a) ಒಂದನೇ ಸಂಹಿತೆಯಲ್ಲಿಯೂ ಎರಡನೇ ಸಂಹಿತೆಯಲ್ಲಿಯೂ ವಿಷ್ಣುವೇ ಸರ್ವೋತ್ತಮನೆಂದು ಸಮ್ಮತನು. ಮೂರನೇ ಸಂಹಿತೆಯಲ್ಲಿ ವಾಯುವೇ ಉತ್ತಮನು. (ವಿಶ್ವೇದೇವಶಬ್ದದಿಂದ ಸರಸ್ವತ್ಯಾದಿಗಳನ್ನು ಪರಿಗೃಹಿಸಿರುವುದರಿಂದ) ನಾಲ್ಕನೇಸಂಹಿತೆಯಲ್ಲಿ ಸರಸ್ವತ್ಯಾದಿ ಸರ್ವದೇವತೆಗಳು ಉತ್ತಮರು. ಐದನೇ ಸಂಹಿತೆಯಲ್ಲಿ ಚತುರ್ಮುಖನೇ ಉತ್ತಮನು. ಬೇರೆಯವರು ತಂತಮ್ಮ ಸಂಹಿತೆಯಲ್ಲಿ ನಿಕೃಷ್ಟರು. (b) (ರೀತ್ಯಂತರದಿಂದ ಅವರಪರಾ ಎಂಬುವುದನ್ನು ವ್ಯಾಖ್ಯಾನಮಾಡುತ್ತಾರೆ.) ಒಂದನೇ ಸಂಹಿತೆಯಲ್ಲಿ ಎಡಭಾಗದಲ್ಲಿದ್ದ ಲಕ್ಷ್ಮಿಯು ಅವರಳು. ಎರಡನೇ ಸಂಹಿತೆಯಲ್ಲಿ (ವಾಮಭಾಗದಲ್ಲಿದ್ದ ವಿಷ್ಣುವು) ಸರ್ವೋತ್ತಮನು. ಹಾಗೆಯೇ ಮೂರನೇ ಸಂಹಿತೆಯಲ್ಲಿ (ವಾಮಭಾಗದಲ್ಲಿದ್ದ ಸರ್ವದೇವಸಮುದಾಯವು) ನಿಕೃಷ್ಟವು. ನಾಲ್ಕನೇಸಂಹಿತೆಯಲ್ಲಿ (ವಾಮಭಾಗದಲ್ಲಿಯೇ ಇರತಕ್ಕ ಸರಸ್ವತ್ಯಾದಿದೇವಸಮುದಾಯವು) ಉತ್ತಮವು. ಐದನೇ ಸಂಹಿತೆಯಲ್ಲಿ ವಾಮಭಾಗದಲ್ಲಿದ್ದ ಶಿವನು ನಿಕೃಷ್ಟನು. (ಅಂತೂ ಅವರಪರಭಾವವನ್ನು ಕ್ರಮದಿಂದ ಅನುವೃತ್ತಿಮಾಡಿರುವುದರಿಂದಲೂ ಈ ಸಂಹಿತೆಯು ಅವರಪರಾ ಎನ್ನಿಸಿಕೊಳ್ಳುತ್ತದೆ. ಎಂದು ಹೇಳಿದ ಹಾಗಾಯಿತು.) (c) (ಪ್ರಕಾರಾಂತರದಿಂದಲೂ ಅವರಪರತ್ವವನ್ನು ಉಪಪಾದಿಸುತ್ತಾರೆ.) ಯಾವ ಕಾರಣದಿಂದ ಈ ಎಲ್ಲಾ ದೇವತೆಗಳೂ

ಸಂಹಿತೆಗಳೂ ವಿಷ್ಣುವಿಗಿಂತ ನಿಕೃಷ್ಟಳಾದ ಲಕ್ಷ್ಮಿಯೇ ಆದಿಯಾಗಿ ಉಳ್ಳವುಗಳೋ, ರುದ್ರನಿಗಿಂತ ಉತ್ತಮನಾದ ಚತುರ್ಮುಖನೇ ಅಂತಿಮವಾಗಿಉಳ್ಳವುಗಳೋ, ಆದುದರಿಂದಲೂ (ಶಬ್ದಶಾಸ್ತ್ರದಲ್ಲಿ ಪ್ರತ್ಯಾಹಾರಸಂಜ್ಞೆಯಂತೆ) ಅವರಪರಾ ಎಂದು ಹೇಳಲ್ಪಟ್ಟದ್ದಾವೆ. ಆ ಸಂಹಿತೆಗಳೇ ಪರಾವರಗಳಾಗಿ ಹೇಳಲ್ಪಡುವುದಿಲ್ಲ. (ಅಂದರೆ ೧ನೇ ಸಂಹಿತೆಯು ನಿಕೃಷ್ಟವು. ೨ನೇದ್ದು ಪರವು. ೩ನೇದ್ದು ನಿಕೃಷ್ಟವು. ೪ನೇದ್ದು ಪರವು. ೫ನೇದ್ದು ಅವರವು. ಎಂದು ಎಷ್ಟು ಮಾತ್ರಕ್ಕೂ ತಾತ್ಪರ್ಯವಲ್ಲವು.) (d) ಸರ್ವವಸ್ತುವನ್ನೂ ನೋಡುವುದರಿಂದಲೂ ಪ್ರಕಾಶಿಸುವುದರಿಂದಲೂ ರುದ್ರನು 'ದ್ಯುಲೋಕ' ಎನ್ನಿಸುತ್ತಾನೆ. (ಇದು ಶಾಖಾಂತರವನ್ನು ಅನುಸರಿಸಿ.) (ಈ ಉಪನಿಷತ್ತನ್ನನುಸರಿಸಿ) ಶಿವನು ಸ್ವರ್ಗಲೋಕಕ್ಕೆ ಅಧಿಪತಿಯಾಗಿ 'ಸ್ವರ್ಗ' ಎನ್ನಿಸಿಕೊಳ್ಳುತ್ತಾನೆ. ಅಥವಾ 'ಸ್ವೋ ವಿಷ್ಣುಸ್ತದ್ಗತೇರ್ವಾಯುಃ ತದ್ಗೋ ಮುಕ್ತಸ್ಸದಾಶಿವಃ ॥ ಅತಃ ಸ್ವರ್ಗಃ' ॥ ಎಂದು ಛಾಂದೋಗ್ಯಭಾಷ್ಯವನ್ನು ಅನುಸರಿಸಿ ಸ್ವತಂತ್ರನಾದ ವಿಷ್ಣುವಿನಲ್ಲಿ ಆಸಕ್ತನಾದ ವಾಯುವಿನಲ್ಲಿದ್ದುದರಿಂದ 'ಸ್ವರ್ಗಃ' ಎನ್ನಿಸುತ್ತಾನೆ. ಸರ್ವವನ್ನು ನೋಡುವುದರಿಂದ 'ಲೋಕಃ' ಎನ್ನಿಸುತ್ತಾನೆ.

**ಭಾ॥** **(a)** ಯದಿ ಬ್ರೂಯಾನ್ಮಂತ್ರಮೇತಮಥಾಪಿ ವಾ। ಆತ್ಮಾರ್ಥೇಽಥ ಪರಾರ್ಥೇ ವಾ ಚಿಂತಯೇದೇವಮಂಜಸಾ ॥ **(b)** ವಿದ್ವಾಂಸೋ ದೇವತಾ ಯಸ್ಮಾತ್ತಸ್ಮ್ಯಕ್ತೇನ ಮಹತ್ಫಲಂ। ತೇಷಾಮೇವ ಹರಿಶ್ಚೈವ ಸಂಹಿತಾರೂಪಕಃ ಪ್ರಭುಃ॥ ಅಗಮದ್ದೇವಲೋಕಂ ಹಿ ಕರ್ತುಂ ದೇವೇಷ್ವನುಗ್ರಹಂ। **(c)** ಇತಿ ಚಿಂತಯತ ಸ್ತೇಷಾಂ ಪ್ರಸಾದಾತ್ಫಲಮಂಜಸಾ ॥

ಅ ॥ (a) (ಈ ವಿದ್ಯೆಯನ್ನು ತಿಳಿದವನು) ಯಾವ ಪಕ್ಷದಲ್ಲಿ ಈ ಮಂತ್ರವನ್ನು ತನ್ನ ಪ್ರಯೋಜನಕ್ಕಾಗಲೀ ಪರರ ಪ್ರಯೋಜನಕ್ಕಾಗಲೀ ಹೇಳುವನೋ, ಮತ್ತು ಈ ಪ್ರಕಾರ ಚೆನ್ನಾಗಿ ಚಿಂತಿಸುತ್ತಾನೋ (b) ಯಾವ ಕಾರಣದಿಂದ ದೇವತೆಗಳೇ ಚೆನ್ನಾಗಿ ಜ್ಞಾನಿಗಳೋ, ಆದುದರಿಂದ ಆ ದೇವತೆಗಳಿಗೇನೇ ಚೆನ್ನಾಗಿ ಸಂಪೂರ್ಣ ವಿದ್ಯಾಫಲವು ಆಗುವದು. ಸಂಹಿತಾರೂಪವುಳ್ಳ ಸರ್ವಸಮರ್ಥನಾದ ಶ್ರೀ ಹರಿಯೇ ದೇವತೆಗಳಲ್ಲಿ ಅನುಗ್ರಹವನ್ನು ಮಾಡುವುದಕ್ಕೋಸ್ಕರ ಸ್ವರ್ಗಲೋಕವನ್ನು ಕುರಿತು ಹೋದನು. (c) ಈ ಪ್ರಕಾರ ಧ್ಯಾನಿಸತಕ್ಕ ಪುರುಷನಿಗೆ ಆ ದೇವತೆಗಳ ಪ್ರಸಾದದಿಂದ ಚೆನ್ನಾಗಿ ಫಲವು ಆಗುವದು.

**ಭಾ॥** **(a)** ಪಂಚಾಲಚಂಡೋ ವಾಚಂ ತು ಬ್ರಹ್ಮಾಣೀಂ ಹಿ ಸರಸ್ವತೀಂ। ಮನ್ಯತೇಽಸ್ಯಾಃ ಪುತ್ರವಚ್ಚ ದೇವಂ ನಾರಾಯಣಂ ಪ್ರಭುಂ ॥ **(b)** ವೇದೈರ್ಹಿ ವ್ಯಜ್ಯತೇ ವಿಷ್ಣುಃ ಸಾ ಚ ವೇದಾಭಿಮಾನಿನೀ। ಪ್ರಾಣಸ್ಥೋ ಭಗವಾನ್ವಿಷ್ಣುಃ ಪ್ರಾಣನಾಮಾ ಪ್ರಣೇತೃತಃ ॥ **(c)** ಬ್ರಹ್ಮಣೋಽಪಿ ಪಿತಾ ನಿತ್ಯಂ ಭಗವಾನ್ಪುರುಷೋತ್ತಮಃ। ಉಪಚರ್ಯತೇ ಪುತ್ರ ಇತಿ ವೇದೈರ್ಯದ್ವ್ಯಜ್ಯತೇ ಹರಿಃ ॥ **(d)** ಸಾ ದೇವೀ ಸಂಹಿತಾ ನಾಮ್ನೋ ವಾಚ್ಯೋಽಸ್ಯಾ ವಿಷ್ಣುರೇವ ಹಿ ॥

ಅ ॥ (a) ಪಂಚಾಲಚಂಡನಾಮಕಮುನಿಯು, ವಾಚಂ=ಚತುರ್ಮುಖನ ಪತ್ನಿಯಾದ ಸರಸ್ವತಿಯನ್ನು, (ವರ್ಣಗಳ ಮಧ್ಯದೇವತೆಯನ್ನಾಗಿಯೂ ಸಂಹಿತಾನಾಮಕಳನ್ನಾಗಿಯೂ) ತಿಳಿಯುತ್ತಾನೆ. ಕ್ರೀಡಾದಿಗುಣವಿಶಿಷ್ಟನಾದ ಪ್ರಭುವಾದ ನಾರಾಯಣನನ್ನು ಈ ಸರಸ್ವತಿಯು

ಪುತ್ರನಂತೆ ತಿಳಿಯುತ್ತಾನೆ. (b) ಶ್ರೀ ವಿಷ್ಣುವು ವೇದಗಳಿಂದಲೇ ಅಭಿವ್ಯಕ್ತನಾಗುತ್ತಾನಷ್ಟೆ? ಆ ಸರಸ್ವತಿಯಾದರೂ ವೇದಗಳಿಗೆ ಅಭಿಮಾನಿಯಾಗಿದ್ದಾಳೆ. (ಆದುದರಿಂದ ಶ್ರೀ ಹರಿಗೆ ಪುತ್ರತ್ವವೂ ಸರಸ್ವತಿಗೆ ಮಾತೃತ್ವವೂ ಉಪಪನ್ನವಾಗುತ್ತದೆ.) ಪ್ರಾಣನಲ್ಲಿರತಕ್ಕ ಪೂಜ್ಯನಾದ ವಿಷ್ಣುವು ಚೆನ್ನಾಗಿ ಪ್ರೇರಕನಾದುದರಿಂದ ಪ್ರಾಣನಾಮಕನು. (c) ಯಾವ ಕಾರಣದಿಂದ ಶ್ರೀ ಹರಿಯು ವೇದಗಳಿಂದ ಅಭಿವ್ಯಕ್ತನಾಗುತ್ತಾನೋ, ಆದುದರಿಂದಲೇ ಚತುರ್ಮುಖನಿಗೂ ನಿತ್ಯದಲ್ಲಿಯೂ ಜನಕನಾದ ಕ್ಷರಾಕ್ಷರಪುರುಷರಿಂದ ಶ್ರೇಷ್ಠನಾದ ಶ್ರೀ ಹರಿಯು ಪುತ್ರನೆಂದು ಅಮುಖ್ಯವಾಗಿಯೇ ಹೇಳಲ್ಪಡುತ್ತಾನೆ. (d) ಆ ಸರಸ್ವತೀದೇವಿಯು (ಸಂಹಿತಾಽಭಿಮಾನಿ ಯಾದುದರಿಂದ) ಸಂಹಿತಾನಾಮಕಳು. ಈ ಸರಸ್ವತಿಗೆ ವಿಷ್ಣುವೇ ವಾಚ್ಯನಾದವನು. ಶ್ರುತ್ಯಾದಿ ಪ್ರಸಿದ್ಧವು.

ಭಾ|| **(a)** ಪ್ರಾಜಾಪತ್ಯಾಖ್ಯಶರ್ವೇಣ ಪ್ರೋಕ್ತಾಽನ್ಯಾ ಸಂಹಿತಾಽಪಿ ಹಿ | ವಿಷ್ಣುರೇವಾದಿತಿರ್ನಾಮ ಸರ್ವಸ್ಯಾತ್ತಾ ಯತಃ ಪ್ರಭುಃ || **(b)** ಸ ಏವ ಪಿತೃಸಂಸ್ಥಸ್ತು ಪಾತೃತ್ವಾತ್ಪಿತೃನಾಮಕಃ | ದೇವತೋತ್ತರವರ್ಣಸ್ಯ ಮಾತೃಸ್ಥೋ ಮಾತೃನಾಮಕಃ || ಮಾನನಾತ್ಪೂರ್ವವರ್ಣಸ್ಯ ದೇವತೇತಿ ಪ್ರಕೀರ್ತಿತಃ | **(c)** ಪೋಷಕತ್ವಾತ್ಸಂಧಿನಾಮಾ ವರ್ಣಯೋರಂತರಸ್ಥಿತಃ || ಸ ಏವ ಪುತ್ರಸಂಸ್ಥಶ್ಚ ಪುತ್ರನಾಮಾ ಜನಾರ್ದನಃ | ತ್ರಾಣಾತ್ಪೂತಿತ ಏವಾಸೌ ವರ್ಣಸಂಧಾನಕರ್ಮಣಿ || ಸಂಧಾನನಾಮಾ ಸಂಧಾನಕರ್ತೃತ್ವಾತ್ಪುರುಷೋತ್ತಮಃ | **(d)** ಪ್ರಜಾತಿಕರ್ಮಸಂಸ್ಥಶ್ಚ ಸ ಏವ ಪ್ರಜನಾಭಿಧಃ || ಜನಕತ್ವಾತ್ಪರೋ ವಿಷ್ಣುರೇವಂ ವಿಷ್ಣುರ್ಹಿ ಸಂಹಿತಾ ||

ಅ || (a) ಪ್ರಜಾಪತಿಯೆಂದು ಹೆಸರುಳ್ಳ ರುದ್ರನಿಂದ ಹೇಳಲ್ಪಟ್ಟ ಇತರ ಸಂಹಿತೆಯೂ ಕೂಡ (ನಿರೂಪಿಸಲ್ಪಡುತ್ತದೆ) ಯಾವ ಕಾರಣದಿಂದ ಪ್ರಭುವಾದ ಶ್ರೀ ವಿಷ್ಣುವು ಚೇತನಾಚೇತನಾತ್ಮಕವಾದ ಸರ್ವಜಗತ್ತಿಗೂ ಭಕ್ಷಕನೋ, (ಆದುದರಿಂದ ಸಂಹಿತಾದೇವತೆಯಾದ) ಶ್ರೀ ಹರಿಯೇ ಅದಿತಿನಾಮಕನು. (b) ಆ ಅದಿತಿನಾಮಕ ವಿಷ್ಣುವೇ ತಂದೆಯಲ್ಲಿಯೂ ಇರತಕ್ಕವನು. ರಕ್ಷಿಸುವುದರಿಂದ 'ಪಿತೃ' ಎಂದು ಹೆಸರುಳ್ಳವನು. ಆತನೇವೇ ಉತ್ತರವರ್ಣಕ್ಕೆ ದೇವತೆಯು. ಅದಿತಿನಾಮಕ ವಿಷ್ಣುವೇ ಮಾತೃವಿನಲ್ಲಿರತಕ್ಕವನು. ಸಂಭಾವಿಸುವುದರಿಂದ ಮಾತೃನಾಮಕನು. ಪೂರ್ವವರ್ಣಕ್ಕೆ ದೇವತೆಯೆಂದೂ ಹೇಳಲ್ಪಡುತ್ತಾನೆ. (c) ಆತನೇ ಪೋಷಿಸುವುದರಿಂದ ಸಂಧಿನಾಮಕನು. ವರ್ಣಗಳ ಮಧ್ಯದಲ್ಲಿರತಕ್ಕವನು. ಆ ಜನಾರ್ದನನೇ ಪುತ್ರನಲ್ಲಿರತಕ್ಕವನು. ದುರ್ಗಂಧಾತ್ಮಕವಾದುದರಿಂದ ಪುನ್ನಾಮಕವಾದ ನರಕದಿಂದ ರಕ್ಷಿಸುವುದರಿಂದಲೇ ಪುತ್ರನಾಮಕನು. ಈ ಪುರುಷೋತ್ತಮನು ವರ್ಣಸಂಧಾನಕರ್ಮದಲ್ಲಿ ಇರತಕ್ಕವನು. ವರ್ಣಗಳ ಸಂಧಾನವನ್ನು ಮಾಡುವುದರಿಂದ ಸಂಧಾನನಾಮಕನು. (d) ಆತನೇವೇ ಪ್ರಜೋತ್ಪತ್ತಿಕರ್ಮದಲ್ಲಿರತಕ್ಕವನು. ಸರ್ವೋತ್ತಮನಾದ ವಿಷ್ಣುವೇ ಚೆನ್ನಾಗಿ ಹುಟ್ಟಿಸುವುದರಿಂದ ಪ್ರಜನನನಾಮಕನು. ಈ ಪ್ರಕಾರವಾಗಿ ವಿಷ್ಣುವೇ ಸಂಹಿತಾದೇವತೆಯು.

ಭಾ|| **(a)** ವಾಸುದೇವಾದಿರೂಪೇಣ ಚತುರ್ಧೈವಂ ವ್ಯವಸ್ಥಿತಃ | **(b)** ಸ ಏವ ದಿವಿ ಸಂಸ್ಥಶ್ಚ ದ್ಯುನಾಮಾ ಕ್ರೀಡನಾತ್ಪ್ರಭುಃ || ಅಂತರೇವೇಕ್ಷಣಾಚ್ಚೈವ ಸೋಽಂತರಿಕ್ಷೋಽಂತರಿಕ್ಷಗಃ | **(c)** ಪೃಥಿವೀ ಪೃಥಿವೀಸ್ಥಶ್ಚ ಪ್ರಥಿತ

ತ್ವಾಜ್ಜನಾರ್ದನಃ ॥ ಮುಖ್ಯಾರ್ಥತ್ವಾತ್ಸರ್ವನಾಮ್ನಾಂ ಸರ್ವದೇವಾಭಿಧೋ ಹರಿಃ । ವಿಶ್ವೇದೇವಾ ಇತಿ ಪ್ರೋಕ್ತೋ ಬಹುಧಾ ತೇಷು ಸಂಸ್ಥಿತಃ ॥ (d) ಜ್ಞಾನದ್ಯುತೇರ್ದೇವನಾಮಾ ಸ್ಥಿತೋ ದೇವೇಷು ಕೇಶವಃ । ಗಾಂ ಧಾರಯಂಶ್ಚ ಗಂಧರ್ವೋ ಗಂಧರ್ವೇಷು ವ್ಯವಸ್ಥಿತಃ ॥ (e) ಮಾನನಾನ್ಮಾನುಷೋ ನಾಮ ಮಾನುಷೇಷು ಸ್ಥಿತೋ ಹರಿಃ । ಪಾಲನಾತ್ಪಿತೃನಾಮಾಽಸೌ ಪಿತೃಷ್ವೇವ ವ್ಯವಸ್ಥಿತಃ ॥ (f) ರತೇಃ ಪ್ರಾಣೇಽಸುರಾಖ್ಯಶ್ಚ ಸೋಽಸುರೇಷು ವ್ಯವಸ್ಥಿತಃ । ಏವಂ ಪಂಚಜನೇಷುಸ್ಥೋ ಹರಿಃ ಪಂಚಜನಾಭಿಧಃ ॥ (g) ಜಾತನಾಮಾ ಜಾತಸಂಸ್ಥಃ ಪ್ರಾದುರ್ಭೂತಗುಣತ್ವತಃ । ಜನಿಕ್ರಿಯಾಸ್ಥಿತಶ್ಚಾಸೌ ಜನಿತ್ವಮಿತಿ ಗೀಯತೇ ॥ ಜನಿಂ ಯಸ್ಮಾತ್ತವಯತಿ ತವನಂ ಹಿ ಪ್ರಕಾಶನಂ । ಇತಿ ಚ ॥

ಅ ॥ (a) ಮಾತ್ರಾದಿಶಬ್ದವಾಚ್ಯವಾದ ವಾಸುದೇವಾದಿರೂಪದಿಂದ ಈ ಪ್ರಕಾರವಾಗಿ ವಿಷ್ಣುವು (ಅದಿತಿಶಬ್ದವಾಚ್ಯನಾಗಿ) ನಾಲ್ಕು ಪ್ರಕಾರನಾಗಿ ಇರುತ್ತಾನೆ. (ಉದಾಹೃತಮಂತ್ರಶೇಷದಲ್ಲಿ ಪುತ್ರಜನನರಿಗೆ ಅದಿತಿತ್ವವನ್ನು ಹೇಳದಿರುವುದರಿಂದ ಅದೂ ಸಿಗುವುದಕ್ಕೋಸ್ಕರ ಸಂಪೂರ್ಣಶ್ರುತಿಯನ್ನು ವ್ಯಾಖ್ಯಾನಮಾಡುತ್ತಾರೆ. ಸಂಪೂರ್ಣಶ್ರುತಿಯು ಹೀಗೆ ಇದೆ. 'ಅದಿತಿರ್ದ್ಯೌರದಿತಿರಂತರಿಕ್ಷಮದಿತಿರ್ಮಾತಾ ಸ ಪಿತಾ ಸ ಪುತ್ರಃ ॥ ವಿಶ್ವೇದೇವಾ ಅದಿತಿಃ ಪಂಚ ಜನಾಃ ಅದಿತಿರ್ಜಾತಮದಿತಿರ್ಜನಿತ್ವಂ') ॥ (b) ಆ ಅದಿತಿನಾಮಕವಿಷ್ಣುವೇ, ದ್ಯೌಃ=ಸ್ವರ್ಗದಲ್ಲಿರತಕ್ಕವನು. ಕ್ರೀಡಿಸುವುದರಿಂದ ದ್ಯುನಾಮಕನೂ ಕೂಡ, ಪ್ರಭುವು ಅಂತರಿಕ್ಷಂ=ತನ್ನೊಳಗೆ ಸರ್ವವನ್ನು ನೋಡುವುದರಿಂದಲೂ ಸರ್ವಾಂತರ್ಗತನಾಗಿ ನೋಡುವುದರಿಂದಲೂ ಅಂತರಿಕ್ಷನಾಮಕನು. ಅಂತರಿಕ್ಷದಲ್ಲಿರತಕ್ಕವನು. (c) ಜನಾರ್ದನನು ಸರ್ವತ್ರವ್ಯಾಪ್ತನಾದುದರಿಂದ ಪೃಥಿವೀನಾಮಕನು. ಪೃಥಿವಿಯಲ್ಲಿರತಕ್ಕವನು. (ಮಾತೃ ಪಿತೃ ಪುತ್ರ ಶಬ್ದಗಳನ್ನು ಪೂರ್ವದಲ್ಲಿಯೇ ವ್ಯಾಖ್ಯಾನಮಾಡಿರುವುದರಿಂದ 'ವಿಶ್ವೇದೇವಾಃ' ಎಂಬುವುದನ್ನು ಎಲ್ಲಾ ದೇವತೆಗಳಿಗೆ ಯಾವುದು ಪ್ರತ್ಯೇಕ ಪ್ರತ್ಯೇಕನಾಮುಗಳೋ, ಅವುಗಳಿಂದಲೂ ವಾಚ್ಯನು. 'ವಿಶ್ವೇದೇವಾಃ' ಎಂಬೀ ಸಮುದಾಯನಾಮದಿಂದಲೂ ವಾಚ್ಯನು ಎಂದಭಿಪ್ರಾಯದಿಂದ ವ್ಯಾಖ್ಯಾನಮಾಡುತ್ತಾರೆ.) ಶ್ರೀ ಹರಿಯು ಎಲ್ಲಾ ನಾಮುಗಳಿಗೂ ಮುಖ್ಯವಾಚ್ಯನಾದುದರಿಂದ ಸರ್ವದೇವ ಎಂದು ಹೆಸರುಳ್ಳವನು. ಆ ದೇವತೆಗಳಲ್ಲಿ ಬಹುರೂಪಿಯಾಗಿದ್ದವನಾಗಿ 'ವಿಶ್ವೇ' ಎಂದೂ ಜ್ಞಾನ, ಪ್ರಕಾಶಸ್ವರೂಪನಾದುದರಿಂದ ದೇವನೆಂದೂ ಅಂತೂ ವಿಶ್ವೇದೇವಾಃ ಎಂದು ಹೇಳಲ್ಪಡುತ್ತಾನೆ. (d) (ಪಂಚಜನಾಃ=೧ ದೇವ, ೨ ಗಂಧರ್ವ, ೩ ಮಾನುಷ, ೪ ಪಿತೃ, ೫ ಅಸುರರೆಂಬ ಐದು ಜನರ ಯಾವ ಪೃಥಕ್‌ನಾಮುಗಳೋ ಅವುಗಳಿಂದ ವಾಚ್ಯನಾಗುತ್ತಾನೆ. ಪಂಚಜನಾಃ ಎಂಬೀ ಸಮುದಾಯ ನಾಮದಿಂದ ವಾಚ್ಯನೂ ಆಗುತ್ತಾನೆ. ಎಂದಭಿಪ್ರಾಯದಿಂದ ದೇವಾದಿಶಬ್ದಗಳನ್ನು ವ್ಯಾಖ್ಯಾನಮಾಡುತ್ತಾರೆ.) ಕೇಶವನು ಜ್ಞಾನಪ್ರಕಾಶ ಸ್ವರೂಪನಾದುದರಿಂದ ದೇವನಾಮಕನಾಗಿ ದೇವತೆಗಳಲ್ಲಿದ್ದಾನೆ. ಶ್ರೀ ಹರಿಯು ಭೂಮಿಯನ್ನು ಯಾ ಸ್ವರ್ಗವನ್ನು ಯಾ ವೇದವಚನವನ್ನು ಧರಿಸುವವನಾಗಿ ಗಂಧರ್ವನಾಮಕನಾಗಿ ಗಂಧರ್ವರಲ್ಲಿದ್ದಾನೆ. (e) ಶ್ರೀ ಹರಿಯು ಸರ್ವರಿಂದಲೂ ಪೂಜ್ಯನಾದುದರಿಂದ ಮಾನುಷನಾಮಕನಾಗಿ ಮನುಷ್ಯರಲ್ಲಿ ಇದ್ದಾನೆ. ('ಮನೋರ್ಜಾತಾವಙ್ಯಾತೌ ಷುಕ್ತ' ಎಂದು ಸ್ಮರಣದಿಂದ ಸರ್ವರಿಗೂ ಬಹುಮಾನವನ್ನು ಮಾಡುವುದರಿಂದಲಾಗಲೀ ಮಾನುಷಃ ಎನ್ನಿಸುತ್ತಾನೆ.) ಈ ಹರಿಯು ರಕ್ಷಿಸುವುದರಿಂದ ಪಿತೃನಾಮಕ

ನಾಗಿ ಪಿತೃಗಳಲ್ಲಿಯೇ ಇರುತ್ತಾನೆ. (f) ಆತನು ಅಸುನಾಮಕನಾದ ಪ್ರಾಣನಲ್ಲಿ ಆಸಕ್ತನಾದುದರಿಂದ ಅಸುರ ಎಂದು ಹೆಸರುಳ್ಳವನಾಗಿ ಅಸುರರಲ್ಲಿ ಇರುತ್ತಾನೆ. ಈ ಪ್ರಕಾರವಾಗಿ ಐದು ಜನರಲ್ಲಿರತಕ್ಕ ಶ್ರೀ ಹರಿಯು ಪಂಚಜನ ಎಂದು ಹೆಸರುಳ್ಳವನಾಗಿರುತ್ತಾನೆ. (g) ನಿರಂತರದಲ್ಲಿಯೂ ಪ್ರಾದುರ್ಭೂತಗುಣಗಳುಳ್ಳವನಾದುದರಿಂದ ಜಾತನಾಮಕನಾಗಿ ಜಾತ (ಹುಟ್ಟಿದ ಪದಾರ್ಥ) ಗಳಲ್ಲಿ ಇರುತ್ತಾನೆ. ಈತನು ಜನಿತ್ವಶಬ್ದದಿಂದ ಹೇಳಲ್ಪಟ್ಟ ಉತ್ಪತ್ತಿಕ್ರಿಯೆಯಲ್ಲಿ ಇದ್ದವನಾಗಿಯೂ 'ಜನಿತ್ವ' ಎಂದು ಹೇಳಲ್ಪಡುತ್ತಾನೆ. ಯಾವ ಕಾರಣದಿಂದ ಉತ್ಪತ್ತಿಯನ್ನು ಪ್ರಕಾಶಿಸುತ್ತಾನೋ ಆದುದರಿಂದಲೂ 'ಜನಿತ್ವ' ಎಂದು ಹೇಳಲ್ಪಡುತ್ತಾನೆ. 'ತವಸ'ವೆಂದರೆ ಪ್ರಕಾಶಿಸುವುದು. ಹಿ ಶಬ್ದದಿಂದ 'ತೇವರ್ಧಂತ ಸ್ವತವಸೋ ಮಹಿತ್ವನಾ' ಎಂಬೀಪ್ರಯೋಗವನ್ನು ಸೂಚಿಸುತ್ತಾರೆ. ಹೀಗೂ ಉಕ್ತವಾಗಿದೆ. 'ರಥಂತರಮಾಜಭಾರಾ ವಸಿಷ್ಠಃ' ಎಂದು ಉದಾಹೃತವಾದ ಮಂತ್ರ ಮಂತ್ರಾರ್ಥಗಳು ಈ ರೀತಿಯಾಗಿವೆ. 'ಪ್ರಥಶ್ಚ ಯಸ್ಯ ಸಪ್ರಥಶ್ಚ ನಾಮಾನುಷ್ಟುಭಸ್ಯ ಹವಿಷೋ ಹವಿರ್ಯತ್ । ಧಾತುರ್ದ್ಯುತಾನಾತ್ಸವಿತುಶ್ಚ ವಿಷ್ಣೋ ರಥಂತರಮಾಜಭಾರಾ ವಸಿಷ್ಠಃ' ॥ ಹವಿಷಃ=ತನ್ನ ಮುಖದಲ್ಲಿ ಸರ್ವಜಗತ್ತನ್ನು ಹೋಮಿಸುವುದರಿಂದ ಹವಿರ್ನಾಮಕನಾದ, ಅನುಷ್ಟುಭಸ್ಯ=ಅನುಷ್ಟುಪ್‌ಪ್ರತಿಪಾದ್ಯನಾದ ನರಸಿಂಹನ, ಮುಖದಲ್ಲಿ, ಯಸ್ಯ=ಯಾವ ರಾಜನಿಗೆ, ಪ್ರಥಶ್ಚ ನಾಮ, 'ಪ್ರಥ'ಎಂಬನಾಮಧೇಯವಿದೆಯೋ, ಯಸ್ಯ=ಯಾರಿಗೆ, ಸಪ್ರಥಶ್ಚ ನಾಮ, 'ಸಪ್ರಥ'ಎಂಬೀನಾಮಧೇಯವೋ, ಸೋಽಪಿ=ಅವರಿಬ್ಬರೂ, ಹವಿಃ=ಹವಿಸ್ಸನ್ನು, ಯತ್=ಪ್ರಾಪಿಸಿಕೊಟ್ಟರೋ, (ಅಂತಹ ಯಜ್ಞದಲ್ಲಿ,) ವಸಿಷ್ಠಃ=ವಸಿಷ್ಠ ಋಷಿಯು, ಧಾತುಃ, ದ್ಯುತಾನಾತ್, ಸವಿತುಶ್ಚ, ವಿಷ್ಣೋಃ=ಧಾತ್ರಾದಿನಾಮಕವಾದ ಅನಿರುದ್ಧಾದಿರೂಪಚತುಷ್ಟಯದಿಂದ, ರಥಂತರಂ=ರಥಂತರನಾಮಕಳಾದ ಲಕ್ಷ್ಮಿಯನ್ನು, ಆಜಭಾರ=ಕರದನು.

(ಈ ಮಂತ್ರವನ್ನು ವ್ಯಾಖ್ಯಾನಮಾಡುತ್ತಾರೆ.)

ಭಾ॥ (a) ಪ್ರಥಶ್ಚ ಸಪ್ರಥಶ್ಚೈವ ರಾಜಾನೌ ಮತ್ಸ್ಯದೇಶಜೌ । ಯಾಪಯಾಮಾಸತುರ್ವಿಷ್ಣೋರ್ಹವಿರ್ನಾಮ್ನೋ ಹವಿರ್ಮುಖೇ ॥ ಅನುಷ್ಟುಬ್ದೇವತಾ ಯಸ್ತು ನೃಸಿಂಹೋ ಜಗತೋಽಸ್ಯ ಚ । ಸ್ವಮುಖೇ ಹವನಾದೇವ ಹವಿರಿತ್ಯಭಿಧೀಯತೇ ॥ (b) ತಸ್ಮಿನ್ಯಜ್ಞೇ ವಸಿಷ್ಠಸ್ತು ಚತೂರೂಪಾಜ್ಜನಾರ್ದನಾತ್ । ಆಜಹಾರ ಶ್ರಿಯಂ ದೇವೀಂ ರಥಂತರವರಾಭಿಧಾಂ ॥ (c) ಚತುರ್ಮೂರ್ತಿಃ ಸ್ತುತಸ್ತೇನ ಪ್ರೇಷಯಾಮಾಸ ತಾಂ ಶ್ರಿಯಂ । ಸಾ ಚಾಸ್ಮೈ ಪ್ರದದೌ ವಿದ್ಯಾಂ ಪ್ರದದೌ ಚ ಪುನರ್ಹರಿಂ ॥ (d) ಧಾತೇತ್ಯುಕ್ತೋಽನಿರುದ್ಧಸ್ತು ಪ್ರದ್ಯುಮ್ನಸ್ತು ದ್ಯುನಾಮಕಃ । ವಾಸುದೇವಃ ಪ್ರಸವಿತಾ ಸರ್ವಸ್ಯ ಪ್ರಸವಾದ್ವಿಭುಃ । ಸಂಕರ್ಷಣೋ ವಿಷ್ಣುನಾಮಾ ಪ್ರಣೇತೃತ್ವಾದ್ಬಲಾದಪಿ ॥

ಅ ॥ (a) ಅನುಷ್ಟುಪ್‌ದೇವತಾ='ಉಗ್ರಂ ವೀರಂ' ಇತ್ಯಾದಿ ನೃಸಿಂಹಾನುಷ್ಟುಪ್‌ದೇವತೆಯಾದ, ಯಸ್ತು ನೃಸಿಂಹಃ=ಯಾವ ನರಸಿಂಹನು, ಸ್ವಮುಖೇ=ತನ್ನ ಮುಖದಲ್ಲಿ, ಅಸ್ಯ ಚ ಜಗತಃ=ಈ ಜಗತ್ತಿನ, ಹವನಾತ್=ಹೋಮದಿಂದ, ಹವಿಃ ಇತಿ ಅಭಿಧೀಯತೇ=ಹವಿಃ ಎಂದು ಗಾನಮಾಡಲ್ಪಡುತ್ತಾನೋ, ತಸ್ಯ=ಅಂತಹ, ಹವಿರ್ನಾಮ್ನಃ=ಹವಿಸ್ಸೆಂದು ಹೆಸರುಳ್ಳ, ವಿಷ್ಣೋಃ=ಅನುಷ್ಟುಪ್ ಎಂದು ಹೆಸರುಳ್ಳ ನರಸಿಂಹನ, ಮುಖೇ=ಮುಖದಲ್ಲಿ, ಪ್ರಥಶ್ಚ ಸಪ್ರಥಶ್ಚೈವ=ಪ್ರಥಸಪ್ರಥರೆಂಬ, ಮತ್ಸ್ಯದೇಶಜೌ=ಮತ್ಸ್ಯದೇಶದಲ್ಲಿ ಹುಟ್ಟಿರುವ, ರಾಜಾನೌ=

ಇಬ್ಬರು ರಾಜರು, ಹವಿಃ=ಹವಿಸ್ಸನ್ನು, ಯಾಪಯಾವಾಸತುಃ=ಹೊಂದಿಸಿದರು. (b) ಆ ಯಜ್ಞದಲ್ಲಿ ವಸಿಷ್ಠನಾದರೂ ನಾಲ್ಕುರೂಪವುಳ್ಳ ಜನಾರ್ದನನಿಂದ 'ರಥಂತರವರಾ' ಎಂದು ಹೆಸರುಳ್ಳ ಲಕ್ಷ್ಮೀದೇವಿಯನ್ನು, ಆಜಹಾರ=ಕರಿಸಿದನು. (c) ಅನಿರುದ್ಧಾದಿ ಚತೂರೂಪಿಯು ಆ ವಸಿಷ್ಠನಿಂದ ಸ್ತುತಿಸಲ್ಪಟ್ಟವನಾಗಿ ಆ ಲಕ್ಷ್ಮಿಯನ್ನು ಕಳುಹಿಸಿದನು. (ಅಂದರೆ ತನ್ನಲ್ಲಿರತಕ್ಕವಳನ್ನು ವ್ಯಕ್ತೀಕರಿಸಿದನು.) ಆ ಲಕ್ಷ್ಮಿಯು ಈ ವಸಿಷ್ಠನಿಗೋಸ್ಕರ ವಿದ್ಯೆಯನ್ನು ಉಪದೇಶಿಸಿದಳು. ಮತ್ತು ಶ್ರೀ ಹರಿಯನ್ನು ಕೊಟ್ಟಳು. (d) ಆಯಾಯಕಾಲದಲ್ಲಿ ಪ್ರಾಪ್ತನಿರೋಧನಿವೃತ್ತಿಗೆ ಆಧಾರನಾದುದರಿಂದ ಅನಿರುದ್ಧನಾದರೂ ಧಾತಾ ಎಂದು ಹೇಳಲ್ಪಡುತ್ತಾನೆ. ಪ್ರಕೃಷ್ಟವಾದ ಕಾಂತಿಯಿರುವುದರಿಂದ ಪ್ರದ್ಯುಮ್ನನಾಮಕ ಶ್ರೀ ಹರಿಯಾದರೂ ಕಾಂತಿವಿಸ್ತಾರದಿಂದೊಡಗೂಡಿರುವುದರಿಂದ ದ್ಯುನಾಮಕನು. ('ವಾನಾತ್ಸೂತೇರ್ದೇವನಾದ್ವಾಸುದೇವಃ' ಇತ್ಯಾದ್ಯುಕ್ತಪ್ರಕಾರ) ವಾಸುದೇವಶಬ್ದವಾಚ್ಯನಾದ ಶ್ರೀ ಹರಿಯು ಎಲ್ಲಾ ಜಗತ್ತಿಗೂ ಮೋಕ್ಷಾಖ್ಯಪುರುಷಾರ್ಥವನ್ನು ಹುಟ್ಟಿಸುವುದರಿಂದ (ಕೊಡುವುದರಿಂದ) 'ಸವಿತಾ' ಎಂದು ಹೇಳಲ್ಪಡುತ್ತಾನೆ. ಚೆನ್ನಾಗಿ ಸೆಳೆಯುವುದರಿಂದ ಸಂಕರ್ಷಣನಾಮಕನಾದ ಶ್ರೀ ಹರಿಯು ಚೆನ್ನಾಗಿ ಒಯ್ಯುವುದರಿಂದಲೂ ಬಲರೂಪನಾದುದರಿಂದಲೂ ವಿಷ್ಣುನಾಮಕನು ('ಭರದ್ವಾಜೋ ಬೃಹದಾಚಕ್ರೇ ಅಗ್ನೇಃ' ಎಂಬೀ ಉದಾಹೃತವಾದ ಮಂತ್ರ ಮಂತ್ರಾರ್ಥಗಳು ಈ ರೀತಿಯಾಗಿವೆ.) 'ತೇಽವಿಂದನ್ಮನಸಾ ದೀಧ್ಯಾನಾ ಯಜುಷ್ಕನ್ನಂ ಪ್ರಥಮಂ ದೇವಯಾನಂ । ಧಾತುರ್ದ್ಯುತಾನಾತ್ಸವಿತುಶ್ಚ ವಿಷ್ಣೋರ್ಭರದ್ವಾಜೋ ಬೃಹದಾಚಕ್ರೇ ಅಗ್ನೇಃ' ॥ ತೇ=ಪೂರ್ವಮಂತ್ರದಲ್ಲಿ ಪ್ರಸ್ತುತರಾದ ಪ್ರಥ ಸಪ್ರಥ ವಸಿಷ್ಠರು, ಭರದ್ವಾಜಃ=ಭರದ್ವಾಜನೂ ಕೂಡ, ಯಜುಃ ಸ್ಕನ್ನಂ ಪ್ರಥಮಂ ದೇವಯಾನಂ=ಯಜುರಾದಿಶಬ್ದವಾಚ್ಯ ಸಂಕರ್ಷಣಾದಿ ನಾಲ್ಕುಸ್ವರೂಪವುಳ್ಳ ಶ್ರೀ ವಿಷ್ಣುವನ್ನು, ದೀಧ್ಯಾನಾಃ=ಧ್ಯಾನಮಾಡುವವರಾಗಿ, ಮನಸಾ=ಮನಸ್ಸಿನಿಂದ, ಅವಿಂದನ್=ನೋಡಿದರು. (ಅವರಲ್ಲಿ) ಭರದ್ವಾಜಃ=ಭರದ್ವಾಜಋಷಿಯು, ಧಾತುಃ ದ್ಯುತಾನಾತ್ ಸವಿತುಃ ವಿಷ್ಣೋಃ ಚ=ಧಾತ್ರಾದಿಶಬ್ದವಾಚ್ಯವಾದ, ಅಗ್ನೇಃ=ಶ್ರೇಷ್ಠನಾದುದರಿಂದ ಅಗ್ನಿನಾಮಕ ಅನಿರುದ್ಧಾದಿ ರೂಪಚತುಷ್ಟಯದಿಂದ, ಬೃಹತ್=ಪೂರ್ಣವಾದುದರಿಂದ ಬೃಹತ್‌ನಾಮಕ ನಾರಾಯಣರೂಪವನ್ನು, ಆಚಕ್ರೇ=ಕರಿಸಿದನು. (ಈ ಮಂತ್ರವನ್ನು ವ್ಯಾಖ್ಯಾನಮಾಡುತ್ತಾರೆ.)

**ಭಾ॥** (a) ಚತೂರೂಪಂ ಪರಂ ವಿಷ್ಣುಂ ರಾಜಾನೌ ಪ್ರಥ ಸಪ್ರಥೌ । ಭರದ್ವಾಜೋ ವಸಿಷ್ಠಶ್ಚ ಧ್ಯಾತ್ವಾಽವಿಂದನ್ಪರಾತ್ಪರಂ ॥ (b) ಯಜನೀಯೋ ಯಜುರ್ನಾಮಾ ವಿಷ್ಣುಃ ಸಂಕರ್ಷಣಾಭಿಧಃ । ಜೀವಾನಾಂ ಸ್ಕಂದನಾದೇವ ಸ್ಕನ್ನಃ ಪ್ರದ್ಯುಮ್ನ ಉಚ್ಯತೇ ॥ (c) ಪ್ರಥಮೋ ವಾಸುದೇವಸ್ತು ದೇವಯಾನೋಽನಿರುದ್ಧಕಃ । ಪ್ರಾಪ್ಯೋ ದೇವೈರ್ಯತೋ ನಿತ್ಯಮನಿರುದ್ಧಾಭಿಧೋ ಹರಿಃ ॥ (d) ತಸ್ಮಾದೇವಂ ಚತುರ್ಮೂರ್ತೇಃ ಸ್ತುತಿಸಂತೋಷಿತಾದ್ಧರೇಃ । ಆಜಹಾರ ಭರದ್ವಾಜೋ ರೂಪಂ ನಾರಾಯಣಾಭಿಧಂ ॥ (e) ತದ್ಬೃಹನ್ನಾಮಕಂ ವಿಷ್ಣೋಶ್ಚಾತುರಾತ್ಮ್ಯಾತ್ಸಮುದ್ಗತಂ । ಭರದ್ವಾಜಮುಪಾಗಮ್ಯ ಪ್ರಾದಾನ್ಮೋಕ್ಷವರಂ ಪರಂ ॥ (f) ಚತುರ್ಮೂರ್ತಿಃ ಸ ಭಗವಾನಗ್ನಿರಿತ್ಯಭಿಧೀಯತೇ । ಅಗ್ರ್ಯತ್ವಾತ್ಸರ್ವಭೂತಾನಾಮೇವಂ ॥

ಅ || (a) ಪ್ರಥ ಸಪ್ರಥರೆಂಬ ಇಬ್ಬರು ರಾಜರೂ ಭರದ್ವಾಜನು ವಸಿಷ್ಠನೂ ಕೂಡ ಸರ್ವೋತ್ತಮನಾದ, 'ಯಜುಃ ಸ್ಕನ್ನಂ ಪ್ರಥಮಂ ದೇವಯಾನಂ' ಎಂದು ನಾಲ್ಕುಸ್ವರೂಪವುಳ್ಳ ವಿಷ್ಣುವನ್ನು ಧ್ಯಾನಮಾಡಿ ಕ್ಷರಾಕ್ಷರ ಪುರುಷರಿಂದುತ್ತಮನನ್ನು ನೋಡಿದರು. (b) ಪಿತೃಗಳಿಗೂ ದೇವತೆಗಳಿಗೂ ಸ್ವಧಾದಿಗಳನ್ನು ಚೆನ್ನಾಗಿ ಸೆಳೆದುಕೊಡುವುದರಿಂದ ಸಂಕರ್ಷಣನೆಂದು ಹೆಸರುಳ್ಳ ಶ್ರೀ ವಿಷ್ಣುವು ಯಾಗಮಾಡಿಸಿಕೊಳ್ಳಲರ್ಹನಾಗಿ ಯಜುರ್ನಾಮಕನು. ಸೃಷ್ಟಿಯಿಂದ ಚೆನ್ನಾಗಿ ಪ್ರಕಾಶಿಸುವುದರಿಂದ ಪ್ರದ್ಯುಮ್ನನಾಮಕನಾದ ಶ್ರೀ ಹರಿಯು (ಸ್ವಾಂತರ್ಗತರಾದ) ಜೀವರನ್ನು ಸೃಷ್ಟಿಸುವುದರಿಂದಲೇ 'ಸ್ಕನ್ನಃ' ಎಂದು ಹೇಳಲ್ಪಡುತ್ತಾನೆ. (c) (ವಾಸುದೇವಶಬ್ದ ಪ್ರವೃತ್ತಿನಿಮಿತ್ತಗಳಾದ ಗುಣಗಳಿಂದ ಶ್ರೇಷ್ಠನಾದ) ವಾಸುದೇವನು (ಎಲ್ಲಾ ಗುಣಗಳಿಂದಲೂ ಉತ್ತಮನಾದುದರಿಂದಲೂ ಪ್ರಥಮಾವತಾರನಾದುದರಿಂದಲೂ) ಪ್ರಥಮಃ ಎನ್ನಿಸುತ್ತಾನೆ. ಸ್ವಪ್ರಾಪ್ತಿಗೆ ದೇವತೆಗಳಿಗೆ ನಿರೋಧಕನಾಗದಿರುವುದರಿಂದ ಅನಿರುದ್ಧ ಎಂದು ಹೆಸರುಳ್ಳ ಶ್ರೀ ಹರಿಯು ನಿರಂತರದಲ್ಲಿಯೂ ಯಾವ ಕಾರಣದಿಂದ ದೇವತೆಗಳಿಂದ ಪ್ರಾಪ್ಯನೋ, ಆದುದರಿಂದ ಅನಿರುದ್ಧನು 'ದೇವಯಾನಃ' ಎನ್ನಿಸುತ್ತಾನೆ. (d) ಆದುದರಿಂದ ಈ ಪ್ರಕಾರವಾಗಿ ನಾಲ್ಕು ಸ್ವರೂಪವುಳ್ಳ ಸ್ತೋತ್ರದಿಂದ ಸಂತೋಷಿಸಲ್ಪಟ್ಟ ಶ್ರೀ ಹರಿಯಿಂದ ಭರದ್ವಾಜಋಷಿಯು ನಾರಾಯಣನೆಂದು ಹೆಸರುಳ್ಳ ರೂಪವನ್ನು ಕರಿಸಿದನು. (e) ವಿಷ್ಣುವಿನ ವಾಸುದೇವಾದಿ ನಾಲ್ಕು ರೂಪದಿಂದ ಆವಿರ್ಭೂತವಾದ ಬೃಹನ್ನಾಮಕ ಆ ರೂಪವು ಭರದ್ವಾಜಋಷಿಯನ್ನು ಹೊಂದಿ ಉತ್ತಮವಾದ ಮೋಕ್ಷಶ್ರೇಷ್ಠವನ್ನು ಕೊಟ್ಟಿತು. (f) ನಾಲ್ಕುಸ್ವರೂಪವುಳ್ಳ ಶ್ರೀ ಹರಿಯೂ ಈ ಪ್ರಕಾರವಾಗಿ ಬ್ರಹ್ಮಾದಿ ಎಲ್ಲಾ ಪ್ರಾಣಿಗಳಲ್ಲಿಯೂ ಶ್ರೇಷ್ಠನಾದುದರಿಂದ ಅಗ್ನಿಯು ಎಂದು ಹೇಳಲ್ಪಡುತ್ತಾನೆ. ('ವಾಗ್ವೈ ರಥಂತರಸ್ಯ ರೂಪಂ ಪ್ರಾಣೋ ಬೃಹತಃ ಇತ್ಯಧ್ಯಾತ್ಮಂ' ಪ್ರಾಣನಲ್ಲಿರತಕ್ಕ ಪ್ರಾಣನಾಮಕ ನಾರಾಯಣನನ್ನು ಉಪಾಸನಾಮಾಡಬೇಕು ಎಂಬೀ ವಿಷಯದಲ್ಲಿ ಪ್ರಮಾಣವಾಗಿ ಅಭಿಪ್ರೇತವಾದ 'ಅವಿಂದಂತೇಽತಿ ಹಿತಂ' ಎಂಬೀ ಮಂತ್ರಮಂತ್ರಾರ್ಥವು ಈ ರೀತಿಯಾಗಿದೆ.) 'ಅವಿಂದನ್ತೇಽತಿಹಿತಂ ಯದಾಸೀದ್ಯಜ್ಞಸ್ಯ ಧಾಮ ಪರಮಂ ಗುಹಾಯತ್ । ಧಾತುರ್ದ್ಯುತಾನಾತ್ಸವಿತುಶ್ಚ ವಿಷ್ಣೋರ್ಭರದ್ವಾಜೋಽಭರನ್ಘರ್ಮಮೇತೇ' ॥ ತೇ=ಆ ಪ್ರಥ ಸಪ್ರಥ ವಸಿಷ್ಠ ಭರದ್ವಾಜರು, ಯಜ್ಞಸ್ಯ=ಸರ್ವಜ್ಞನಾದ ವಿಷ್ಣುವಿನ, ಪರಮಂ=ಉತ್ತಮವಾದ, ಧಾಮ=ತೇಜೋರೂಪವಾದ, ಅತಿಹಿತಂ='ಸಯುಜಾ ಸಖಾಯಾ' ಎಂಬೀ ಶ್ರುತಿಯಿಂದ ಜೀವರಿಗೆ ಉಪಕಾರಕವಾದ, ಯತ್=ಯಾವ ರೂಪವು, ಗುಹಾಯತ್=ಹೃದಯಗುಹಾಂತರ್ಗತವಾಗಿ, ಆಸೀತ್=ಇದೆಯೋ, (ಅಂತಹ ಅಧ್ಯಾತ್ಮವಾದ ನಾಲ್ಕುರೂಪವುಳ್ಳ ನಾರಾಯಣರೂಪವನ್ನು) ಅವಿಂದನ್=ತಿಳಿದರು. ಸೂರ್ಯಾತ್=ಜ್ಞಾನಿಗಳಿಂದ ಪ್ರಾಪ್ಯನಾದುದರಿಂದ ಸೂರ್ಯನಾಮಕನಾದ, ಧಾತುಃ ದ್ಯುತಾನಾತ್ ಸವಿತುಶ್ಚ ವಿಷ್ಣೋಃ=ಧಾತ್ರಾದಿಪದಗಳಿಂದ ಹೇಳಲ್ಪಟ್ಟ ಅನಿರುದ್ಧಾದಿ ನಾಲ್ಕುಸ್ವರೂಪದಿಂದ, ಏತೇ=ಈ ಪ್ರಥಾದಿ ನಾಲ್ಕುಜನರು, ಘರ್ಮಂ=ಎಲ್ಲಾ ಲೋಕವನ್ನು ನಾಶಮಾಡುವುದರಿಂದ ಘರ್ಮನಾಮಕನಾದ ನರಸಿಂಹನನ್ನು, ಆ ಅಭರನ್=ಅಪಹರಿಸಿದರು. (ಈ ಮಂತ್ರವನ್ನು ವ್ಯಾಖ್ಯಾನಮಾಡುತ್ತಾರೆ.)

ಭಾ|| **(a)** ಚತ್ವಾರ ಏವ ತೇ । ಅವಿಂದಂಸ್ತಂ ಚತುರ್ಮೂರ್ತಿಂ ಸಾಕ್ಷಾನ್ನಾರಾಯಣಂ ಪ್ರಭುಂ ॥ ಗುಹಾಯಾಂ ಸಂಸ್ಥಿತಮಪಿ ಹ್ಯತೀವ ಹಿತಮಸ್ಯ ಚ । **(b)** ಸರ್ವಜ್ಞತ್ವಾದ್ಯಜ್ಞನಾಮ್ನೋ ವಿಷ್ಣೋಸ್ತೇಜಃ ಪರಂ ಹಿ ತತ್ ॥ ತಸ್ಮಾದೇವ ಚತುರ್ಮೂರ್ತೇಃ ಸೂರಿಪ್ರಾಪ್ಯತ್ವಹೇತುತಃ । ಸೂರ್ಯನಾಮ್ನೋಽಹರನ್ಘರ್ಮನಾಮಾನಂ ತಂ ನೃಸಿಂಹಕಂ ॥ **(c)** ಘರ್ಷಣಾ

ತ್ಸರ್ವಲೋಕಸ್ಯ ನೃಸಿಂಹೋ ಘರ್ಮ ಉಚ್ಯತೇ । ನಿರ್ಗತ್ಯ ಸ ಚತು ರ್ಮೂರ್ತೇರ್ವಿಪ್ರಕ್ಷತ್ರಾಭಿಸಂಸ್ತುತಾತ್ ॥ ಪ್ರಥಾದೀನಾಂ ಚತುರ್ಣಾಂ ಚ ಪುರುಷಾರ್ಥಚತುಷ್ಟಯಂ । ದತ್ವಾ ಜಗಾಮ ಭಗವಾನ್ ಸ್ವಕೀಯಾಂ ತನುಮೇವ ಚ ॥ (d) ವಸಿಷ್ಠಾಚ್ಚ ಭರದ್ವಾಜಾದ್ಧೋತ್ರಧ್ವರ್ಯ್ವೋರ್ನೃಪೌ ತು ತೌ । ಯಥೇಷ್ಟಸಿದ್ಧಿಂ ಸಂಪ್ರಾಪ್ತೌ ಸಮ್ಯಗಿಷ್ಟಾಜ್ಜನಾರ್ದನಾತ್ ॥ ಇತ್ಯಾದ್ಯೃಗ್ವೇದಸಂಹಿತಾಯಾಂ ॥

ಅ ॥ (a) ಆ ಪ್ರಥಾದಿ ನಾಲ್ಕುಜನರೇ ಈ ಜೀವಸಮುದಾಯಕ್ಕೆ ಅತ್ಯಂತಹಿತಕರನಾದ ಹೃದಯಗುಹೆಯಲ್ಲಿಯೂ ಇರತಕ್ಕ ಚತುರ್ಮೂರ್ತಿಯಾದ ನಾರಾಯಣನನ್ನೇ (ಹೇಗೆ ಅಧಿದೈವದಲ್ಲಿ) ತಿಳಿದರೋ, (ಅದೇ ರೀತಿಯಾಗಿ) ಪ್ರಭುವಾದ ಶ್ರೀ ಹರಿಯನ್ನು ಪ್ರತ್ಯಕ್ಷವಾಗಿಯೂ ತಿಳಿದರು. (b) ಸರ್ವಜ್ಞನಾದುದರಿಂದ ಯಜ್ಞನಾಮಕನಾದ ವಿಷ್ಣುವಿನ ಉತ್ತಮವಾದ ಪ್ರಸಿದ್ಧ ತೇಜಸ್ಸು (ಗುಹಾಂತರ್ಗತವಾಗಿ) ಅದೆ. ಹಿ ಶಬ್ದದಿಂದ 'ಯಜ್ಞೋ ವಿಷ್ಣುರ್ದೇವತಾ, ಇದಂ ಜ್ಯೋತಿಹೃದಯ ಆಹಿತಂ ಯತ್, ಪ್ರಾಣೇಷು ಹೃದ್ಯಂತರ್ಜ್ಯೋತಿಃ, ಜ್ಯೋತಿಶ್ಚರಣಾಭಿಧಾನಾತ್, ತೇಜಃಸ್ವರೂಪಂ ಚ ಗೃಹಂ ಪ್ರಾಜ್ಞೈರ್ಧರ್ಮೇತಿ ಕಥ್ಯತೇ' ಇತ್ಯಾದಿ ಶ್ರುತ್ಯಾದಿಗಳನ್ನು ಸೂಚಿಸುತ್ತಾರೆ. ಅದುದರಿಂದಲೇ ಜ್ಞಾನಿಗಳಾದ ಬ್ರಹ್ಮಾದಿಗಳಿಂದ ಪ್ರಾಪ್ಯನಾದುದರಿಂದ ಸೂರ್ಯನಾಮಕವಾದ ಅನಿರುದ್ಧಾದಿ ಚತುರ್ಮೂರ್ತಿಯಿಂದ ಘರ್ಮನಾಮಕನಾದ ಆ ನರಸಿಂಹನನ್ನು ಹೊಂದಿದರು. (c) ಎಲ್ಲಾ ಲೋಕವನ್ನು ನಾಶಮಾಡುವುದರಿಂದ ನರಸಿಂಹನು ಘರ್ಮನೆಂದು ಹೇಳಲ್ಪಡುತ್ತಾನೆ. ಆ ಪೂಜ್ಯನಾದ ನರಸಿಂಹನು ಬ್ರಾಹ್ಮಣರಿಂದಲೂ ಕ್ಷತ್ರಿಯರಿಂದಲೂ ಸ್ತುತಿಸಲ್ಪಟ್ಟ ಅನಿರುದ್ಧಾದಿ ಚತುರ್ಮೂರ್ತಿಯಿಂದ ಹೊರಟು ಪ್ರಥ ಮೊದಲಾದ ನಾಲ್ಕುಜನರಿಗೆ ನಾಲ್ಕುಪುರುಷಾರ್ಥವನ್ನು ಕೊಟ್ಟು, ತನ್ನ ಶರೀರವನ್ನೇ ಹೊಂದಿದನು. (d) ಆ ಪ್ರಥಸಪ್ರಥರೆಂಬ ರಾಜರಾದರೂ ಹೋತನಾದ ವಸಿಷ್ಠನಿಂದಲೂ ಅಧ್ವರ್ಯುವಾದ ಭರದ್ವಾಜನಿಂದಲೂ ಚೆನ್ನಾಗಿ ಯಾಗಮಾಡಿಸಲ್ಪಟ್ಟ ಜನಾರ್ದನನಿಂದ ಇಚ್ಛಾನುಸಾರವಾದ ಅಭೀಷ್ಟವನ್ನು ಹೊಂದುವವರಾದರು. ಇದು ಮೊದಲಾದ ವಿಷಯವು ಋಗ್ವೇದಸಂಹಿತೆಯಲ್ಲಿ ಹೇಳಿಯದೆ.

ಭಾ॥ (a) ಯಸ್ಯ ಪ್ರಥ ಇತಿ ನಾಮ ಸ ಚ ಹವಿರ್ನಾಮ್ನೋ ವಿಷ್ಣೋರ್ಹವಿರ್ಯತ್ ಅಯತ್ । ಅಟೋ ಲೋಪೇನಾಂತರ್ಣೀತ ಣಿಚ್‌ತ್ವೇನ ಅಯಾಪಯದಿತ್ಯರ್ಥಃ ॥ ಏವಂ ಸಪ್ರಥ ಇತಿ ಯಸ್ಯ ನಾಮಾಸೌ । ಹವಿರ್ಯದಿತಿ ಪೃಥಕ್ಸಂಬಂಧಃ ॥ (b) ಆಚಕ್ರೇ ಆಕಾರಯಾಮಾಸ । ಅವಿಂದಂತೇ ತೇ ಅವಿಂದನ್ನಿತ್ಯಧ್ಯಾತ್ಮಾಧಿದೈವತಯೋರುಭಯತ್ರಾಪಿ ಭಗವಂತಮವಿಂದನ್ನಿತ್ಯರ್ಥಃ ॥ ದೇವಯಾನಂ ಗುಹಾ ಯತ್ । ಇತಿ ವಚನಾತ್ ॥

ಅ ॥ (a) ಯಸ್ಯ=ಯಾವ ರಾಜನಿಗೆ, ಪ್ರಥ ಇತಿ ನಾಮ=ಪ್ರಥನೆಂಬ ಹೆಸರು ಅದೆಯೋ, ಸ ಚ=ಆ ರಾಜನು, ಹವಿರ್ನಾಮ್ನಃ ವಿಷ್ಣೋಃ=ಹವಿರ್ನಾಮಕನಾದ ನರಸಿಂಹನ, (ಮುಖದಲ್ಲಿ) ಹವಿಃ=ಹವಿಸ್ಸನ್ನು, ಯತ್=ಅಂದರೆ, ಅಯತ್=ಪ್ರಾಪಿಸಿಕೊಟ್ಟನು. ಅಟಗೆ ಲೋಪವಾಗಿ ಣಿಚ್ ಅಂತರ್ಗತವಾಗಿರುವುದರಿಂದ, ಅಯಾಪಯತ್=ಹೊಂದಿಸಿದನು. ಎಂದರ್ಥವು. ಈ ಪ್ರಕಾರವಾಗಿ ಸಪ್ರಥನೆಂದು ಯಾವ ರಾಜನಿಗೆ ಹೆಸರೋ, ಈತನು, ಹವಿಃ=ಹವಿ

ಸ್ಸನ್ನು , ಯತ್=ಪ್ರಾಪಿಸಿಕೊಟ್ಟನು, ಈ ಪ್ರಕಾರವಾಗಿ ಪ್ರತ್ಯೇಕ ಪ್ರತ್ಯೇಕ ಇಟ್ಟುಕೊಳ್ಳತಕ್ಕದು. (ಇಲ್ಲವಾದರೆ ಏಕವಚನವೇ ಕೂಡಲಾರದು.) (b) ಆಚಕ್ರೇ=ಕರಿಸಿದನು. 'ಅವಿಂದನ್ತೇ' 'ತೇಽವಿಂದನ್' ಎಂಬೀ ಮಂತ್ರಗಳಲ್ಲಿ ಅಧ್ಯಾತ್ಮ ಅಧಿದೈವತ ಎಂಬೀ ಎರಡರಲ್ಲಿಯೂ ಶ್ರೀಹರಿಯನ್ನು ತಿಳಿದರು, ಎಂದರ್ಥವು. ದೇವಯಾನಂ ಗುಹಾ ಯತ್, ಎಂಬೀ ವಚನಗಳಿಂದ

ತಾ ॥ 'ಅವಿಂದನ್ತೇ' ಎಂಬೀ ಮಂತ್ರದಲ್ಲಿ 'ಗುಹಾಯತ್' ಎಂದು ವಿಶೇಷಣವಿದ್ದುದರಿಂದ ಅಧ್ಯಾತ್ಮಪರವು 'ತೇಽವಿಂದನ್' ಎಂಬೀ ಮಂತ್ರದಲ್ಲಿ 'ದೇವಯಾನಂ' ಎಂದು ವಿಶೇಷಣವಿದ್ದುದರಿಂದ ಅಧಿದೈವಪರವು. (ಆದುದರಿಂದ ಪೂರ್ವಾರ್ಧಕ್ಕೆ ಪೌನರುಕ್ತ್ಯವಿಲ್ಲವು.) 'ಏಕಃ ಸುಪರ್ಣಃ ಸ ಸಮುದ್ರಮಾವಿವೇಶ' ಎಂಬೀ ಮಂತ್ರದಲ್ಲಿ, ಸಃ=ಎಂಬೀ ಪರಾಮರ್ಶವಿಷಯವನ್ನು ತೋರಿಸತಕ್ಕ ಮಂತ್ರಮಂತ್ರಾರ್ಥವು ಈ ರೀತಿಯಾಗಿದೆ. 'ಚತುಷ್ಕಪರ್ದಾ ಯುವತಿಃ ಸುಪೇಶಾ ಘೃತಪ್ರತೀಕಾ ವಯುನಾನಿ ವಸ್ತೇ । ತಸ್ಯಾಂ ಸುಪರ್ಣಾ ವೃಷಣಾ ನಿಷೇದತುರ್ಯತ್ರ ದೇವಾ ದಧಿರೇ ಭಾಗಧೇಯಂ' ॥ ಯಾ=ಯಾವ ಲಕ್ಷ್ಮೀದೇವಿಯು, ಚತುಷ್ಕಪರ್ದಾ=ಎರಡುಪಾರ್ಶ್ವಗಳಲ್ಲಿಯೂ ಸೀಮಂತ ಪ್ರದೇಶದಲ್ಲಿಯೂ ಹಿಂದುಕಡೆಯಲ್ಲಿಯೂ ಈ ಪ್ರಕಾರ ನಾಲ್ಕು ಪ್ರಕಾರವಾಗಿ ಮಾಡಲ್ಪಟ್ಟ ಜಟಾಕಲಾಪ (ಹೆರಳುಗಳು) ಉಳ್ಳವಳೋ, ಯುವತಿಃ=ನಿತ್ಯದಲ್ಲಿಯೂ ಯೌವನಸಂಪನ್ನಳೋ, ಸುಪೇಶಾ=ಶೋಭನ ಅವಯವವುಳ್ಳವಳೋ, ಘೃತಪ್ರತೀಕಾ=ಪ್ರಕಾಶಮಾನ ದೇಹವುಳ್ಳವಳೋ, ವಯುನಾನಿ=ಜ್ಞಾನಗಳನ್ನು , ವಸ್ತೇ=ಆಚ್ಛಾದಿಸುತ್ತಾಳೆ. (ಜ್ಞಾನಪೂರ್ಣಳೋ 'ತ್ವದ್ದತ್ತಯಾ ವಯುನಯೇದಮಚಷ್ಟ ವಿಶ್ವಂ' ಎಂದು ಭಾಗವತದಲ್ಲಿ ಪ್ರಯೋಗವಿದ್ದುದರಿಂದ) ತಸ್ಯಾಂ=ಆ ಲಕ್ಷ್ಮಿಯನ್ನು, ಸುಪರ್ಣಾ=ಚೆನ್ನಾಗಿ ಪರಮಾನಂದರೂಪಗಳಾದ, ವೃಷಣಾ=ಎಲ್ಲಾ ಅಭೀಷ್ಟಗಳನ್ನು ಹೊಂದಿಸಿ ಕೊಡುವ ಭಗವದ್ರೂಪವಿಶೇಷಗಳು, ನಿಷೇದತುಃ=ಸಂಗತಗಳಾದವು. (ಕ್ರೀಡಿಸಿದವು.) 'ರಮಯಾ ರಮಮಾಣೋಽಪಿ ತತ್ಥ್ನೇನೈವ ಶ್ರಿಯಾತ್ಮನಾ । ರಮತೇ' ಎಂದು ಹೇಳಿರುವುದರಿಂದ ತನಗೆ ಕ್ರೀಡಾರ್ಥವಾಗಿ ಆ ಲಕ್ಷ್ಮಿಯಲ್ಲಿ ಇರುವವುಗಳಾದವು. ಯತ್ರ ಯಾವ ದ್ವಿರೂಪನಾದ ಶ್ರೀ ಹರಿಯಲ್ಲಿ, ದೇವಾಃ=ದೇವತೆಗಳು, ಭಾಗಧೇಯಂ=ತಂತಮಗೆ ವಿಹಿತವಾದ ಕರ್ಮವನ್ನು, ದಧಿರೇ=ಸಮರ್ಪಿಸಿದರೋ. (ಈ ಶ್ರುತಿಯನ್ನು ವ್ಯಾಖ್ಯಾನಮಾಡುತ್ತಾರೆ.)

ಭಾ॥ ಚತುಃಶಿಖಂಡಾಂ ತು ರಮಾಂ ದ್ವಿರೂಪೋ ಭಗವಾನ್ಹರಿಃ । ಪರಮಾನಂದರೂಪತ್ವಾತ್ಸುಪರ್ಣ ಇತಿ ನಾಮಕಃ ॥ ರಮಯಾಮಾಸ ತಸ್ಯಾಂ ಚ ನಿಷಣ್ಣಃ ಸರ್ವದೈವ ಸಃ ॥

ಅ ॥ ಪರಮಾನಂದ ಸ್ವರೂಪನಾದುದರಿಂದ ಸುಪರ್ಣನೆಂದು ಹೆಸರುಳ್ಳ ಎರಡು ರೂಪಗಳುಳ್ಳ ಪೂಜ್ಯನಾದ ಶ್ರೀ ಹರಿಯು, ನಾಲ್ಕುವೇಣಿಯಾಗಿ ಮಾಡಲ್ಪಟ್ಟ ಕೇಶಪಾಶವುಳ್ಳ ಲಕ್ಷ್ಮೀದೇವಿಯನ್ನಾದರೂ ಕ್ರೀಡಿಸಿದನು. ಆತನು ಯಾವಾಗಲೂ ಆ ಲಕ್ಷ್ಮೀದೇವಿಯಲ್ಲಿಯೇ ಸಂಗತನಾದನು.

(ಈ ಪ್ರಕಾರವಾಗಿ 'ಸಃ' ಎಂಬೀ ಪರಾಮರ್ಶಾರ್ಥವು ಪ್ರಕೃತವಾಗಿದೆ ಎಂದು ತೋರಿಸಿ 'ಏಕಃ ಸುಪರ್ಣಃ' ಎಂಬೀ ಮಂತ್ರವನ್ನು ವ್ಯಾಖ್ಯಾನಮಾಡುತ್ತಾ 'ಅಪಶ್ಯಂ' ಎಂದು ಹೇಳಿದವನು ಚತುರ್ಮುಖನು ಎನ್ನುತ್ತಾರೆ.)

ಭಾ॥ (a) ಏಕ ಏವ ಚ ವಿಷ್ಣುಃ ಸ ಪ್ರವಿಷ್ಟಃ ಕ್ಷೀರಸಾಗರಂ । ಸರ್ವಂ ಪಶ್ಯತ್ಯಸೌ ದೇವಃ ಪೂರ್ಣಾಕುಂಠೇನ ಚೇತಸಾ ॥ ಪರಿಪಕ್ವೇನ ಮನಸಾಪ

ಶ್ಯಮಿತ್ಯಾಹ ತಂ ತ್ವಜಃ । (b) ಮಾತೇವ ವ್ಯಂಜಕತ್ವಾತ್ತಾಂ ಪ್ರಾಣಸ್ಥಾಂ ವಾಕ್ಸರಸ್ವತೀ ॥ ಲಿಹತೇ ಲಿಹ್ಯತ ಇವ ಪ್ರಾಣಸ್ಥೇನ ತು ಸಾ ಸದಾ । (c) ಸ್ವಯಂ ತು ಭಗವಾನ್ವಿಷ್ಣುರ್ವಾಕ್ಪತೇರ್ಬ್ರಹ್ಮಣೋಽಪಿ ಹಿ ॥ ನಿತ್ಯಃ ಪಿತಾ ಸ್ವತಂತ್ರಶ್ಚ ನಾಸ್ಯ ಮಾತಾ ಪಿತಾಽಪಿ ಚ । ಇತ್ಯಾದಿ ಚ ॥ ೬ ॥

**ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತೇ ಶ್ರೀಮನ್ಮಹೈತರೇಯೋಪನಿಷದ್ಭಾಷ್ಯೇ ತೃತೀಯ ಪ್ರಪಾಟ್ಕೇ ಪ್ರಥಮೋಽಧ್ಯಾಯಃ ॥ ೩ ॥ ೧ ॥**

ಅ ॥ (a) ದ್ವಿರೂಪಿಯಾಗಿ ಹೇಳಲ್ಪಟ್ಟವನಾದಾಗ್ಯೂ ಸ್ವಗತಭೇದರಹಿತನೇ ಆದ ಶ್ರೀ ಹರಿಯು ಕ್ಷೀರಸಮುದ್ರವನ್ನು ಪ್ರವೇಶಿಸಿದನು. ಈ ಹರಿಯು ಪರಿಪೂರ್ಣವಾದ ಕುಂದುರಹಿತ ವಾದ ಮನಸ್ಸಿನಿಂದ ಎಲ್ಲಾ ಭುವನವನ್ನು ನೋಡುತ್ತಾನೆ. ಆ ಹರಿಯನ್ನಾದರೂ ಪರಿಪಕ್ವ ವಾದ ಮನಸ್ಸಿನಿಂದ (ನಾನು) ನೋಡಿದೆನು. ಎಂದು ಚತುರ್ಮುಖನು ಹೇಳುತ್ತಾನೆ. (b) ತಾಯಿಯಂತೆ ವ್ಯಕ್ತೀಕರಿಸುವವಳಾದುದರಿಂದ ಮಾತಾ ಎಂದು ಹೇಳಲ್ಪಟ್ಟ ವೇದಾಭಿಮಾನಿನಿ ಯಾದ ಸರಸ್ವತಿಯು ಪ್ರಾಣನಲ್ಲಿರತಕ್ಕ ಆ ಹರಿಯನ್ನು ಆಸ್ವಾದನೆ ಮಾಡುವವಳಂತೆ ಇದ್ದಾಳೆ. (ಅಂದರೆ ಆತನ ಗುಣಗಳನ್ನು ಪ್ರತಿಪಾದಿಸುತ್ತಾಳೆ.) ಆ ಸರಸ್ವತಿಯು ಯಾವಾಗಲೂ ಪ್ರಾಣ ನಲ್ಲಿರತಕ್ಕ ಪರಮಾತ್ಮನಿಂದಲಾದರೂ (ಆತನಿಗೆ ಅತಿಪ್ರಿಯಳಾದುದರಿಂದ) ಆಸ್ವಾದನೆ ಮಾಡ ಲ್ಪಡುವವಳಂತೆ ಇದ್ದಾಳೆ. (c) ಪೂಜ್ಯನಾದ ವಿಷ್ಣುವಾದರೂ ತಾನಾಗಿಯೇ ಸರಸ್ವತಿಗೆ ನಿಯಾಮಕನಾದ ಚತುರ್ಮುಖನಿಗೂ ಕೂಡ ಜನಕನು, ನಿತ್ಯಭೂತನು, ಸ್ವತಂತ್ರನೂ ಕೂಡ ಆಗಿರುತ್ತಾನೆ. ಈತನಿಗೆ ತಾಯಿಯಾಗಲೀ ತಂದೆಯಾಗಲೀ ಇಲ್ಲವೇ ಇಲ್ಲ. ಇದೇ ಮೊದಲಾದ ವಿಷಯವು ಹೇಳಲ್ಪಟ್ಟಿದೆ. ॥ ೬ ॥

**ಈ ಪ್ರಕಾರವಾಗಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ನಿರ್ಮಿಸಲ್ಪಟ್ಟ ಶ್ರೀಮನ್ಮಹೈತರೇಯೋಪನಿಷದ್ಭಾಷ್ಯದಲ್ಲಿ ಮೂರನೇ ಪ್ರಪಾಟ್ಕದಲ್ಲಿ ಒಂದನೇ ಅಧ್ಯಾಯವು ಸಮಾಪ್ತವಾಯಿತು. ॥ ೩ ॥ ೧ ॥**

**ಯೋಽಂತಃ ಸ್ಥಿತ್ವಾ ಸರ್ವಕರ್ಮಕರ್ತಾ ಸ ಭಗವಾನ್ವಿಭುಃ ।**
**ಪ್ರೀತೋಽಸ್ತ್ವನೇನ ಮಧ್ವೇಶೋ ರೂಪ್ಯಪೀಠಗತೋ ಹರಿಃ ॥**



ಅಸ್ಥಿಮಜ್ಜಾಪರ್ವಗತಂ ಸರ್ವಗಂ ಮೃತ್ಯುನಾಶನಂ ।
ವಂದೇ ದುರ್ಗಾಪತಿಂ ವಿಷ್ಣುಂ ಸರ್ವವೇದೋದಿತಂ ಪ್ರಭುಂ ॥

ಮಂ ॥ ಪ್ರಾಣೋ ವಂಶ ಇತಿ ಸ್ಥವಿರಃ ಶಾಕಲ್ಯಸ್ತದ್ಯಥಾ ಶಾಲಾವಂಶೇ ಸರ್ವೇಽನ್ಯೇ ವಂಶಾಃ ಸಮಾಹಿತಾಃ ಸ್ಯುರೇವಮಸ್ಮಿನ್ಪ್ರಾಣೇ ಚಕ್ಷುಃ ಶ್ರೋತ್ರಂ ಮನೋ ವಾಗಿಂದ್ರಿಯಾಣಿ ಶರೀರಂ ಸರ್ವ ಆತ್ಮಾ ಸಮಾಹಿತಸ್ತಸ್ಯೈತಸ್ಯಾತ್ಮನಃ ಪ್ರಾಣ ಊಷ್ಮರೂಪಮಸ್ಥೀನಿ ಸ್ಪರ್ಶರೂಪಂ ಮಜ್ಜಾನಃ ಸ್ವರರೂಪಂ ಮಾಂಸಂ ಲೋಹಿತಮಿತ್ಯೇತದನ್ಯಚ್ಚತುರ್ಥಮಂತಸ್ಥರೂಪಮಿತಿ ಹ ಸ್ಮಾಹ ಹ್ರಸ್ವೋ ಮಾಂಡೂಕೇಯಸ್ತ್ರಯಂ ತ್ವೇವ ನ ಏತತ್ಪ್ರೋಕ್ತಂ ತಸ್ಯೈತಸ್ಯ ತ್ರಯಸ್ಯಾಸ್ಥ್ನಾಂ ಮಜ್ಜ್ಞಾಂ ಪರ್ವಣಾಮಿತಿ ತ್ರೀಣೀತಃ ಷಷ್ಠಿ ಶತಾನಿ ತ್ರೀಣೀತಸ್ತಾನಿ ಸಪ್ತವಿಂಶತಿಶತಾನಿ ಭವಂತಿ ಸಪ್ತ ಚ ವೈ ಶತಾನಿ ವಿಂಶತಿಶ್ಚ ಸಂವತ್ಸರಸ್ಯಾಹೋರಾತ್ರಾಃ ಸ ಏಷೋಽಹಃ ಸಮ್ಮಾನಶ್ಚಕ್ಷುರ್ಮಯಃ ಶ್ರೋತ್ರಮಯಶ್ಛಂದೋಮಯೋ ಮನೋಮಯೋ ವಾಙ್ಮಯ ಆತ್ಮಾ ಸ ಯ ಏವಮೇತಮಹಃ ಸಮ್ಮಾನಂ ಚಕ್ಷುರ್ಮಯಂ ಶ್ರೋತ್ರಮಯಂ ಛಂದೋಮಯಂ ಮನೋಮಯಂ ವಾಙ್ಮಯಮಾತ್ಮಾನಂ ವೇದಾಹ್ನಾಂ ಸಾಯುಜ್ಯಂ ಸರೂಪತಾಂ ಸಲೋಕತಾಮಶ್ನುತೇ ಪುತ್ರೀ ಪಶುಮಾನ್ಭವತಿ ಸರ್ವಮಾಯುರೇತಿ ॥ ೧ ॥

ಅ ॥ ಪ್ರಾಣಃ=ಮುಖ್ಯವಾಯುವು, ವಂಶ ಇತಿ=ಸರ್ವಾಶ್ರಯನಾದುದರಿಂದ ವಂಶಸ್ಥಾನೀಯನೆಂದು, ಸ್ಥವಿರಃ ಶಾಕಲ್ಯಃ=ಸ್ಥವಿರಶಾಕಲ್ಯನೆಂಬ ಋಷಿಯು, ಆಹ=ಹೇಳುತ್ತಾನೆ. ತತ್=ಆ ವಿಷಯದಲ್ಲಿ ದೃಷ್ಟಾಂತವು ಹೇಳಲ್ಪಡುತ್ತದೆ. ಯಥಾ=ಹೇಗೆ, ಶಾಲಾವಂಶೇ=ಮನೆಯ ಮಾಡಿನ ಮಧ್ಯದಲ್ಲಿರತಕ್ಕ ಬಿದುರಿನಲ್ಲಿ, ಸರ್ವೇ ಅನ್ಯೇ ವಂಶಾಃ=ಎಲ್ಲಾ ಇತರ ಬಿದುರುಗಳು, ಸಮಾಹಿತಾಃ ಸ್ಯುಃ=ಅದನ್ನಾಶ್ರಯಿಸಿ ಇರುತ್ತಾವೋ, ಏವಂ=ಈ ಪ್ರಕಾರವಾಗಿ, ಅಸ್ಮಿನ್ ಪ್ರಾಣೇ=ಈ ಮುಖ್ಯಪ್ರಾಣನಲ್ಲಿ, ಚಕ್ಷುಃ=ಕಣ್ಣು, ಶ್ರೋತ್ರಂ=ಕಿವಿಯು, ಮನಃ=ಮನಸ್ಸು, ವಾಕ್=ಮಾತು, ಇಂದ್ರಿಯಾಣಿ=ಇತರಗಳಾದ ತ್ವಗ್ಘ್ರಾಣಾದಿ ಇಂದ್ರಿಯಗಳೂ, ಶರೀರಂ=ಶರೀರವೂ, (ಪ್ರತ್ಯೇಕ ಪ್ರತ್ಯೇಕವಾಗಿ) ಸರ್ವಃ ಆತ್ಮಾ=ಚಕ್ಷುರಾದಿ ಎಲ್ಲಾ ಇಂದ್ರಿಯಗಳ ಸಮುದಾಯರೂಪವೂ ಚೇತನವೂ ಕೂಡ, ಸಮಾಹಿತಃ=ಚೆನ್ನಾಗಿ ಆಶ್ರಿತವಾಗಿದೆ. (ಹಾಗೆಯೇ ಇವುಗಳಿಗೆ ಅಭಿಮಾನಿಗಳಾದ ಶ್ರೋತ್ರಾದಿ ಶಬ್ದವಾಚ್ಯರಾದ ದೇವತೆಗಳೂ ಕೂಡ ಆಶ್ರಿತರಾಗಿದ್ದಾರೆ. ಈ ಎಲ್ಲಾ ಇಂದ್ರಿಯಾದಿಗಳಲ್ಲಿಯೂ ತದಭಿಮಾನಿಗಳಲ್ಲಿಯೂ), ಆತ್ಮಾ=ಪರಮಾತ್ಮನು, ಸರ್ವಃ=ಬಹುರೂಪಿಯಾಗಿ, ಸಮಾಹಿತಃ=ಚೆನ್ನಾಗಿ ನಿಯಾಮಕನಾಗಿರುತ್ತಾನೆ. ತಸ್ಯ ಆತ್ಮನಃ=ಆ ಚೇತನಾತ್ಮಕವಾದ ಸರ್ವ ಸಮುದಾಯಕ್ಕೆ, ಆತ್ಮನಃ=ನಿಯಾಮಕನಾದ, ಏತಸ್ಯ ಆತ್ಮನಃ=ಶ್ರೀ ಪರಮಾತ್ಮನ ಮೂಲರೂಪ ಸಂಬಂಧಿಯಾದ, ಪ್ರಾಣಃ=ಪ್ರಾಣನಲ್ಲಿರತಕ್ಕ ಪ್ರಾಣನಾಮಕನಾದ ಶ್ರೀ ಹರಿಯು, ಊಷ್ಮರೂಪಂ=ಊಷ್ಮಾಕ್ಷರ ಪ್ರತಿಪಾದ್ಯನು, ಸಮರ್ಥನಾದುದರಿಂದ ಸರ್ವರಿಂದಲೂ ಸಹಿಸಲಶಕ್ಯನಾದುದರಿಂದ ಊಷ್ಮನಾಮಕನು,

ಊಷ್ಮಾಕ್ಷರದಲ್ಲಿರತಕ್ಕವನು. ಅಸ್ಥೀನಿ=ಅಧಿಕವಾಗಿ ಸ್ಥಿರವಾದುದರಿಂದ ಅಸ್ಥಿನಾಮಕವಾದ ಅಸ್ಥಿಯಲ್ಲಿರತಕ್ಕ ಅನೇಕ ರೂಪವುಳ್ಳ ಭಗವದ್ರೂಪವು, ಸ್ಪರ್ಶರೂಪಂ=ಸ್ಪರ್ಶಾಕ್ಷರ ಪ್ರತಿಪಾದ್ಯವು, ಮುಟ್ಟಲಿಕ್ಕೆ ಕಾರಣವಾದುದರಿಂದ ಸ್ಪರ್ಶನಾಮಕವು, ಸ್ಪರ್ಶಾಕ್ಷರದಲ್ಲಿರತಕ್ಕುದು. ಮಜ್ಜಾನಃ=ಮದವನ್ನು ಹುಟ್ಟಿಸುವುದರಿಂದ ಮಜ್ಜಾ ಎಂದು ಹೆಸರುಳ್ಳ ಮಜ್ಜಾದಲ್ಲಿರತಕ್ಕ ಬಹುರೂಪವುಳ್ಳ ಭಗವದ್ರೂಪವು, ಸ್ವರರೂಪಂ=ಸ್ವರಾಕ್ಷರ ಪ್ರತಿಪಾದ್ಯವು, ತನ್ನಲ್ಲಿಯೇ ಕ್ರೀಡಿಸುವುದರಿಂದ ಸ್ವರನಾಮಕವು, ಸ್ವರಾಕ್ಷರದಲ್ಲಿರತಕ್ಕದು. ಅನ್ಯತ್ ಪೂರ್ವೋಕ್ತರೂಪಗಳಿಂದ ಇತರವಾದ, ಚತುರ್ಥಂ=ನಾಲ್ಕನೇದಾದ, ಮಾಂಸಂ ಲೋಹಿತಂ ಇತ್ಯೇತತ್=ಮಾಂಸಲೋಹಿತಗಳಲ್ಲಿರತಕ್ಕ (ಮಾಂ ಸಾರಯತಿ ಎಂಬೀ ವ್ಯುತ್ಪತ್ತಿಯಿಂದ) ಪ್ರಮಾಣವನ್ನು ಪ್ರವರ್ತಿಸುವುದರಿಂದ ಮಾಂಸನಾಮಕವಾದ ರಕ್ತವರ್ಣವಾದುದರಿಂದ ಲೋಹಿತನಾಮಕವಾದ ಭಗವದ್ರೂಪವು, ಅಂತಸ್ಥರೂಪಂ=ಅಂತಸ್ಥಾಕ್ಷರ ಪ್ರತಿಪಾದ್ಯವು, ಸರ್ವಾಂತರ್ಗತವಾದುದರಿಂದ ಅಂತಸ್ಥನಾಮಕವು, ಅಂತಸ್ಥಾಕ್ಷರದಲ್ಲಿರತಕ್ಕುದು. ಇತಿ ಹ=ಈ ಪ್ರಕಾರವಾಗಿ, ಸ್ಥವಿರಃ ಶಾಕಲ್ಯಃ=ಸ್ಥವಿರಶಾಕಲ್ಯಋಷಿಯು, ಆಹ ಸ್ಮ=ಹೇಳಿದನು. ಹ್ರಸ್ವೋ ಮಾಂಡೂಕೇಯಃ=ಹ್ರಸ್ವಮಾಂಡೂಕೇಯ ಋಷಿಯಾದರೂ, ಇತಿ=ಮೇಲೆ ಹೇಳುವ ಪ್ರಕಾರ, ಆಹ ಸ್ಮ=ಹೇಳಿದನು. ನಃ=ನಮ್ಮ ಪಕ್ಷದಲ್ಲಿ, ಏತತ್ ತ್ರಯಂ ತು ಏವ=ಅಸ್ಥಿಮಜ್ಜಾ ಪರ್ವಗಳೆಂಬ ಮೂರೇ ಪ್ರೋಕ್ತಂ=ಹೇಳಲ್ಪಟ್ಟದೆ. ನಃ=ನಮಗೋಸ್ಕರ, ಏತತ್ ತ್ರಯಮೇವ=ಅಸ್ಥಿಮಜ್ಜಾಪರ್ವಗಳಲ್ಲಿರತಕ್ಕ ತ್ರಿವಿಧರೂಪವೇ, ಪ್ರೋಕ್ತಂ=ಉಪಾಸ್ಯವಾಗಿ ಗುರುಗಳಿಂದ ಹೇಳಲ್ಪಟ್ಟದೆ. ಅಸ್ಥ್ನಾಂ ಮಜ್ಜ್ಞಾಂ ಪರ್ವಣಾಂ ಇತಿ ತ್ರಯಸ್ಯ ತಸ್ಯ ಏತಸ್ಯ=ಈ ಮೂರರಲ್ಲಿರತಕ್ಕ ಅಧಿಕವಾಗಿ ಸ್ಥಿರವಾಗಿರುವುದರಿಂದಲೂ, ಮದವನ್ನು ಹುಟ್ಟಿಸುವುದರಿಂದಲೂ, ಉತ್ಕೃಷ್ಟಜ್ಞಾನಸ್ವರೂಪನಾದುದರಿಂದಲೂ, ಅಸ್ಥಿಮಜ್ಜಾಪರ್ವನಾಮಕ ಭಗವದ್ರೂಪ ಸಮುದಾಯದ ಮಧ್ಯದಲ್ಲಿ, ಇತಃ=ಬಲಭಾಗದಲ್ಲಿ, ತ್ರೀಣಿ ಷಷ್ಟಿ ಶತಾನಿ=ಅರವತ್ತರಿಂದ ಹೆಚ್ಚಾದ ಮುನ್ನೂರು. (೩೬೦) ॥ ಇತಃ=ಎಡಭಾಗದಲ್ಲಿ, ತ್ರೀಣಿ ಷಷ್ಟಿ ಶತಾನಿ=ಷಷ್ಟ್ಯುತ್ತರ ತ್ರಿಶತಗಳು (೩೬೦). ತಾನಿ=ಎರಡು ಭಾಗದಲ್ಲಿರತಕ್ಕ ಭಗವದ್ರೂಪಗಳು, ಸಪ್ತವಿಂಶತಿ ಶತಾನಿ ಭವಂತಿ=ಇಪ್ಪತ್ತರಿಂದ ಹೆಚ್ಚಾದ ಏಳುನೂರುಗಳು (೭೨೦) ಆಗುತ್ತವೆ. ಸಂವತ್ಸರಸ್ಯ ಅಹೋರಾತ್ರಾಃ=ಸಂವತ್ಸರದ ಹಗಲು ರಾತ್ರಿಗಳೂ ಕೂಡ, ಸಪ್ತ ಚ ವೈ ಶತಾನಿ ವಿಂಶತಿಶ್ಚ=೭೨೦ ಆಗುತ್ತವೆ. (ಆದುದರಿಂದ ೭೨೦ ಭಗವದ್ರೂಪಗಳೂ) ಅಹೋರಾತ್ರಾಃ=ಅಪಹರಿಸಲಸಾಧ್ಯವಾದುದರಿಂದಲೂ ರತಿಯನ್ನು ಕೊಡುವುದರಿಂದಲೂ, ಅಹೋರಾತ್ರನಾಮಕಗಳು, ಅಹೋರಾತ್ರಗಳಲ್ಲಿರತಕ್ಕವುಗಳು. ಸ ಏಷಃ=ಆ ಈ ಹರಿಯು, ಅಹಃ ಸಂಮಾನಃ=ಹಗಲುಗಳಿಂದ ಸಮಸಂಖ್ಯಾತನಾದುದರಿಂದ 'ಅಹಃ ಸಂಮಾನಃ' ಎನ್ನಿಸುತ್ತಾನೆ. (ಅಧ್ಯಾತ್ಮಗತಗಳಾದ ವಿಷ್ಣುರೂಪಗಳು ಹಗಲುಗಳಿಂದ ಸಮಸಂಖ್ಯಾಕಗಳು.) ಸಃ ಏಷಃ ಆತ್ಮಾ=ಆ ಈ ಆತ್ಮನು, ಚಕ್ಷುರ್ಮಯಃ=ಪೂರ್ಣದರ್ಶನ ಶಕ್ತಿಯುಳ್ಳವನು. ಶ್ರೋತ್ರಮಯಃ=ಪೂರ್ಣ ಶ್ರವಣಶಕ್ತಿಯುಳ್ಳವನು. ಛಂದೋಮಯಃ=ಸತ್ಯಕಾಮನು, ಮನೋಮಯಃ=ಪರಿಪೂರ್ಣ ಮನನಶಕ್ತಿಯುಳ್ಳವನು. ವಾಙ್ಮಯಃ=ಸರ್ವ ವಕ್ತೃತ್ವಶಕ್ತಿಯುಳ್ಳವನು, ಆತ್ಮಾ=ಬಲರೂಪನು. ಯಃ=ಯಾವಾತನು, ಏವಂ=ಪೂರ್ವೋಕ್ತಪ್ರಕಾರವಾಗಿ, ಏತಂ ಅಹಃ ಸಂಮಾನಂ ಆತ್ಮಾನಂ=ಈ, ದಿನ ಸಮಸಂಖ್ಯೆಯುಳ್ಳ ಶ್ರೀ ಹರಿಯನ್ನು, ಚಕ್ಷುರ್ಮಯಂ ಶ್ರೋತ್ರಮಯಂ ಛಂದೋಮಯಂ ಮನೋಮಯಂ ವಾಙ್ಮಯಂ=ಚಕ್ಷುರ್ಮಯಾದಿ ಸ್ವರೂಪನನ್ನಾಗಿ, ವೇದ=ತಿಳಿಯುತ್ತಾನೋ, ಸಃ=ಆತನು, ಅಹ್ನಾಂ=ಅಹರ್ನಾಮಕ ಭಗವದ್ರೂಪಗಳ, ಸಾಯುಜ್ಯಂ=ಒಟ್ಟಿಗೆ ಇರುವಿಕೆಯನ್ನು, ಸರೂಪತಾಂ=ಸಮಾನರೂಪವತ್ವವನ್ನು, ಸಲೋಕತಾಂ=ಸಮಾನ

ಲೋಕವನ್ನು ಅಶ್ನುತೇ=ಹೊಂದುತ್ತಾನೆ. ಪುತ್ರೀ=ಜ್ಞಾನಾಖ್ಯ ಪುತ್ರನುಳ್ಳವನು, ಪಶುಮಾನ್=ಕ್ಷೀಯುವಮಾನವಾದ ಸ್ವರೂಪಸುಖವುಳ್ಳವನು, ಭವತಿ=ಆಗುತ್ತಾನೆ. (ಭಗವದ್ಪ್ರಸಾಯುಜ್ಯಾದಿಗಳನ್ನು ಹೊಂದಿ ಸ್ವರೂಪ ಸುಖಾನುಭವವುಳ್ಳವನು ಆಗುತ್ತಾನೆ.) ಸರ್ವಂ ಆಯುಃ ಏತಿ=ಪೂರ್ಣವಾದ ನಿತ್ಯವಾದ ಆಯುಸ್ಸನ್ನು ಹೊಂದುತ್ತಾನೆ. ॥ ೧ ॥

ಭಾ॥ **(a)** ಓಂ ॥ ಗೃಹಸ್ಯಾಚ್ಛಾದನಾದೀನಾಂ ಮಧ್ಯವಂಶೋ ಯಥಾಽಶ್ರಯಃ । ತಥೇಂದ್ರಿಯಾಭಿಮಾನ್ಯಾದಿದೇವಾನಾಂ ವಾಯುರಾಶ್ರಯಃ ॥ **(b)** ತೇಷು ಸರ್ವೇಷು ಭಗವಾನ್ಬಹುರೂಪೋ ಹರಿಃ ಸ್ಥಿತಃ । ವಿಷ್ಣುನಾಮಾಕ್ಷರೇಷ್ವೇವಮನ್ಯೇಷ್ವಪಿ ತದರ್ಥತಃ ॥ **(c)** ಪ್ರಾಣನಾಮಾಽಪಿ ಭಗವಾನ್ಪ್ರಾಣಸ್ಥಶ್ಚೋಷ್ಮಸು ಸ್ಥಿತಃ । ಊಷ್ಮನಾಮಾ ಸಮರ್ಥತ್ವಾತ್ಸ ಏವ ಭಗವಾನ್ಹರಿಃ ॥ **(d)** ಪೂರ್ಣತ್ವಾದಾತ್ಮನಾಮಾಽಸೌ ಪ್ರತಿಮತ್ವಾದಮುಷ್ಯ ತು । ಸಂಘಾತ ಆತ್ಮಶಬ್ದೋಕ್ತೋ ॥

ಅ । (a) ಹೇಗೆ ಮನೆಗೆ ಆವರಕವಾದ ಫಲಕ (ಹಲಿಗೆ) ಮೊದಲಾದ ಉಪವಂಶಾದಿಗಳಿಗೆ ಮಧ್ಯದಲ್ಲಿದ್ದ ಬಿದುರು ಆಶ್ರಯುವ್ವೋ, ಹಾಗೆಯೇ ಇಂದ್ರಿಯಾಭಿಮಾನಿಗಳೇ ಮೊದಲಾದ ಶರೀರಾಭಿಮಾನಿಗಳೂ ಸಂಘಾತಾಭಿಮಾನಿಗಳೂ ಆದ ದೇವತೆಗಳಿಗೆ ವಾಯುದೇವರು ಆಶ್ರಯರು. (b) ಆ ಎಲ್ಲಾದರಲ್ಲಿಯೂ ಬಹುರೂಪಿಯಾದ ಪೂಜ್ಯನಾದ ಶ್ರೀ ಹರಿಯು ಇದ್ದಾನೆ. (ಅಥವಾ ಯಾವಾತನು ಈ ಎಲ್ಲಾ ಪ್ರಾಣಾದಿಗಳಲ್ಲಿ ಆತ್ಮಾ=ಅಂತರ್ಯಾಮಿಯಾಗಿ ಇರುತ್ತಾನೋ ಆತನೇ) ಎಲ್ಲಾ ವಿಷ್ಣುನಾಮಾಕ್ಷರಗಳಲ್ಲಿ, ಅದಕ್ಕೆ ವ್ಯಾಖ್ಯಾನರೂಪವಾದುದರಿಂದ ಈ ಪ್ರಕಾರವಾಗಿ (ಅಂದರೆ ವಿಷ್ಣುನಾಮಾಕ್ಷರಗಳಲ್ಲಿದ್ದಂತೆಯೇ) ಇತರ ವೇದಾದ್ಯಕ್ಷರಗಳಲ್ಲಿಯೂ ಇದ್ದಾನೆ. (c) ಶ್ರೀ ಹರಿಯು ಪ್ರಾಣನಾಮಕನೂ ಪ್ರಾಣನಲ್ಲಿರತಕ್ಕವನೂ ಆಗಿರುತ್ತಾನೆ. ಆ ಪೂಜ್ಯನಾದ ಶ್ರೀ ಹರಿಯೇ ಊಷ್ಮಾಕ್ಷರಗಳಲ್ಲಿರತಕ್ಕವನು. (ಶತ್ರುಗಳನ್ನು ಸುಡುವುದರಲ್ಲಿ ನಾಶಮಾಡುವುದರಲ್ಲಿ) ಸಮರ್ಥನಾದುದರಿಂದ ಊಷ್ಮನಾಮಕನು. (d) ಈ ಹರಿಯು ಪೂರ್ಣ (ಚೆನ್ನಾಗಿ ವ್ಯಾಪ್ತ)ನಾದುದರಿಂದ ಆತ್ಮನಾಮಕನು. ಸಂಘಾತವಾದರೂ ಈ ಹರಿಗೆ ಪ್ರತಿಮೆಯಾದುದರಿಂದಲೇ ಆತ್ಮ ಶಬ್ದದಿಂದ ಹೇಳಲ್ಪಟ್ಟಿದೆ.

ತಾ ॥ ಪೂರ್ಣವಾದುದರಿಂದಲ್ಲ. ಆತ್ಮಾ=ಸಂಘಾತವು, ಆತ್ಮಪದದಿಂದ ಪ್ರಾಣ ಇಂದ್ರಿಯ ಶರೀರ ಸಪ್ತಧಾತುಗಳು ತದಭಿಮಾನಿಸ್ವರೂಪ ಚೇತನಾಚೇತನ ಸಮುದಾಯವು ಗೃಹೀತವಾಗುತ್ತದೆ.

ಭಾ॥ **(a)** ಹೃಸ್ಥಿರಶ್ಚಾಸ್ಥಿನಾಮಕಃ । ಅಸ್ಥಿಸ್ಥಿತೋ ಹರಿಃ ಸ್ಪರ್ಶಸಂಸ್ಥಿತಃ ಸ್ಪರ್ಶನಾಮಕಃ ॥ ಸ್ಪರ್ಶಹೇತುತ್ವತಃ ಸ್ಪರ್ಶನಾಮಾ ಸ ಭಗವಾನ್ಹರಿಃ । **(b)** ಮಜ್ಜಾಸು ಸ್ಥಃ ಸ ಮಜ್ಜಾಖ್ಯೋ ಮುದಂ ಜನಯತೀತಿ ಹ ॥ ಸ ಏವ ಸ್ವರಸಂಸ್ಥಶ್ಚ ಸ್ವರಾಖ್ಯಃ ಸ್ವರತೇಃ ಪ್ರಭುಃ । **(c)** ಪ್ರಮಾಣಂ ಸಾರಯೇದ್ಯಸ್ಮಾನ್ಮಾಂಸಾಖ್ಯೋ ಮಾಂಸಸಂಸ್ಥಿತಃ ॥ ಲೋಹಿತಾಖ್ಯೋ ರಕ್ತವರ್ಣೋ ಲೋಹಿತಸ್ಥೋ ಜನಾರ್ದನಃ । **(d)** ಅಸ್ಥಿಸ್ಥಾನ್ಯೇವ ರೂಪಾಣಿ ಪರ್ವಸ್ವಪಿ ಹರೇರ್ಯತಃ ॥ ಅತ ಏವ ವಿಭಕ್ತಾನಿ ಸಂಖ್ಯಾ

ತೇಷಾಂ ಪೃಥಕ್ಚ ತತ್ । ತಸ್ಮಾತ್ಸಪ್ತ ಶತಾನ್ಯೇವ ದೇಹೇ ವಿಂಶಚ್ಚ ತಸ್ಯ ಹಿ ॥ ರೂಪಾಣಿ ವಿಷ್ಣೋರ್ಭಾಗೇ ತು ಷಷ್ಟ್ಯುತ್ತರಶತತ್ರಯಂ ॥

ಅ ॥ (a) ಶ್ರೀ ಹರಿಯು ('ವಾಯುಶ್ಚ ವಾಯುಸಂಸ್ಥಶ್ಚ ಕದಾಚಿನ್ನ ಹಿ ತಿಷ್ಠತಃ' ಇತ್ಯಾದ್ಯುಕ್ತರೀತಿಯಾಗಿ) ಏಕತ್ರ ಸ್ಥಿರನಲ್ಲ. ನಿತ್ಯಸಂಚಾರಿಯು, ಅಸ್ಥಿನಾಮಕನು, ಅಸ್ಥಿಯಲ್ಲಿರತಕ್ಕವನು, ಆ ಪೂಜ್ಯನಾದ ಶ್ರೀ ಹರಿಯೇ ಸ್ಪರ್ಶಾಕ್ಷರದಲ್ಲಿರತಕ್ಕವನು. ಸ್ಪರ್ಶಾಕ್ಷರ ಪ್ರತಿಪಾದ್ಯನು. ಸ್ಪರ್ಶಕ್ಕೆ ಕಾರಣನಾದುದರಿಂದ ಸ್ಪರ್ಶನಾಮಕನು. (b) ಆ ಹರಿಯು ಮದವನ್ನು ಹುಟ್ಟಿಸುತ್ತಾನೆ. ಆದುದರಿಂದಲೇ ಮಜ್ಜಾ ಎಂದು ಹೆಸರುಳ್ಳವನು. 'ಮಜ್ಜಾ'ಗಳಲ್ಲಿರತಕ್ಕವನು. ಆ ಪ್ರಭುವೇ ಸ್ವರಾಕ್ಷರದಲ್ಲಿರತಕ್ಕವನು. ಸ್ವರಮಣನಾದುದರಿಂದ ಸ್ವರ ಎಂದು ಹೆಸರುಳ್ಳವನು. (c) ಜನಾರ್ದನನು ಯಾವ ಕಾರಣದಿಂದ ಪ್ರಮಾಣಭೂತವಾದ ವೇದಾದಿಗಳನ್ನು ಪ್ರವರ್ತಿಸುತ್ತಾನೋ, ಆದುದರಿಂದ ಮಾಂಸನೆಂದು ಹೆಸರುಳ್ಳವನು. ಮಾಂಸದಲ್ಲಿರತಕ್ಕವನು ರಕ್ತವರ್ಣನಾಗಿ ಲೋಹಿತ ಎಂದು ಹೆಸರುಳ್ಳವನು. ಲೋಹಿತದಲ್ಲಿರತಕ್ಕವನು. (d) ಯಾವ ಕಾರಣದಿಂದ ಶ್ರೀ ಹರಿಯ ಅಸ್ಥಿಯಲ್ಲಿರತಕ್ಕ ರೂಪಗಳೇ ಪರ್ವ (ಗಂಟು)ಗಳಲ್ಲಿಯೂ ಇವೆಯೋ, ಆದುದರಿಂದಲೇ ಆ ಪರ್ವಗಳಲ್ಲಿರತಕ್ಕ ರೂಪಗಳಿಗೆ ಪ್ರತ್ಯೇಕ ಸಂಖ್ಯೆಯು ಇರುವುದಿಲ್ಲ. ಆದುದರಿಂದ ಆ ಹರಿಗಾದರೂ ಅಸ್ಮದಾದಿಗಳ ಶರೀರದಲ್ಲಿ ಆ ವಿಷ್ಣುವಿನ ರೂಪಗಳು ಏಳುನೂರ ಇಪ್ಪತ್ತು. (೭೨೦). ಒಂದೊಂದು ಭಾಗದಲ್ಲಾದರೂ ಅರುವತ್ತರಿಂದ ಹೆಚ್ಚಾದ ಮುನ್ನೂರು. (೩೬೦). ತತ ಏವ ವಿಭಕ್ತಾನಿ=ಅಸ್ಥಿಯಲ್ಲಿರತಕ್ಕ ರೂಪಗಳಿಂದಲೇ (ಪರ್ವದಲ್ಲಿರತಕ್ಕ ರೂಪಗಳು) ವಿಭಕ್ತಗಳು.

ತಾ ॥ ತಥಾ ಚ ಪರ್ವದಲ್ಲಿರತಕ್ಕವುಗಳಿಗೇನೇ ಸ್ಥಾನದ್ವಯಸಂಬಂಧವಿಲ್ಲದಿರುವುದರಿಂದ 'ತ್ರಯಂ ತ್ವೇವ ನ ಏತತ್ಪ್ರೋಕ್ತಂ ಎಂದು ಮೂರುವಿಧವೆಂದು ಹೇಳಿರುವುದು ಸಂಗತವೇ. 'ಅಶೀತಿಸಹಸ್ರಂ ಭವತಿ' ಎಂದು ಉತ್ತರ ಖಂಡದಿಂದ ವಿರೋಧವೂ ಇಲ್ಲ, ವಿಭಾಗವಾದಾಗ್ಯೂ ಸಮಾನವಾದ ನಾಮವಿದ್ದುದರಿಂದಲೂ ಲಕ್ಷಣ ಸಾಮ್ಯವಿದ್ದುದರಿಂದಲೂ ಮೂಲ ಮೂಲಿಗಳಿಗೆ ಒಂದೇ ವ್ಯೂಹತನವನ್ನು ವಿವಕ್ಷಿಸಿಕೊಂಡು ಏಳುನೂರಇಪ್ಪತ್ತು ಎಂದು ಉಕ್ತಿಯು.

ಭಾ॥ **(a)** ತಾನ್ಯೇವ ವಿಷ್ಣೋಃ ರೂಪಾಣಿ ವತ್ಸರಾಹಸ್ಸುಸರ್ವಶಃ । ಅಹರ್ನಾಮಾ ಚ ಭಗವಾನಹಾರ್ಯತ್ವಾತ್ಪ್ರಕೀರ್ತಿತಃ ॥ **(b)** ಅಹೋಭಿಃ ಸಮಸಂಖ್ಯಾನಿ ಯಸ್ಮಾದಧ್ಯಾತ್ಮಗಾನಿ ತು । ರೂಪಾಣಿ ವಿಷ್ಣೋಸ್ತೇನಾಯಮಹಸ್ಸಮ್ಮಾನ ಉಚ್ಯತೇ ॥ **(c)** ಪೂರ್ಣದರ್ಶನಶಕ್ತಿತ್ವಾಚ್ಚಕ್ಷುರ್ಮಯ ಉದೀರಿತಃ । ತಾದೃಕ್ಶ್ರವಣಶಕ್ತಿತ್ವಾತ್ತಥಾ ಶ್ರೋತ್ರಮಯಃ ಸ್ಮೃತಃ ॥ ಛಂದೋಮಯಃ ಸತ್ಯಕಾಮೋ ಮಂತ್ರವಕ್ತ್ರಬಲಾತ್ಮಕಃ । **(d)** ಏವಂ ವಿದ್ವಾಂಸ್ತಸ್ಯ ರೂಪಾಣ್ಯಾಪ್ನೋತಿ ಜ್ಞಾನಪುತ್ರವಾನ್ ॥ ಪೀಯಮಾನಂ ಶಮಾಪ್ನೋತಿ ಪ್ರಾಪ್ಯಾಹರ್ನಾಮಕಂ ಹರಿಂ ॥ ೧ ॥

ಅ ॥ (a) ಯಾವ ವಿಷ್ಣುರೂಪಗಳು (ಅಸ್ಥ್ಯಾದಿಗಳಲ್ಲಿರತಕ್ಕವುಗಳಾಗಿ ಏಳುನೂರ ಇಪ್ಪತ್ತು ಸಂಖ್ಯೆಯುಳ್ಳವುಗಳೋ) ಅವುಗಳೇ ಸಂವತ್ಸರದ ಅಹೋರಾತ್ರಗಳಲ್ಲಿವೆ. ಶ್ರೀ ಹರಿಯು ಅಪಹರಿಸಲಸಾಧ್ಯನಾದುದರಿಂದ ಅಹರ್ನಾಮಕನಾಗಿ ಹೇಳಲ್ಪಡುತ್ತಾನೆ. (b) ಯಾವ ಕಾರಣದಿಂದ ವಿಷ್ಣುವಿನ ಅಧ್ಯಾತ್ಮದಲ್ಲಿರತಕ್ಕ ರೂಪಗಳಾದರೂ ದಿನಗಳಿಂದ ಸಮ

ಸಂಖ್ಯೆಯುಳ್ಳವುಗಳೋ, ಅದರಿಂದ ಈ ಹರಿಯು 'ಅಹಃ ಸಂಮಾನಃ' ಎಂದು ಹೇಳಲ್ಪಡುತ್ತಾನೆ. (c) ಪೂರ್ಣದರ್ಶನ ಸಾಮರ್ಥ್ಯವಿರುವುದರಿಂದ ಚಕ್ಷುರ್ಮಯನಾಗಿ ಹೇಳಲ್ಪಡುತ್ತಾನೆ. ಹಾಗೆಯೇ ಪೂರ್ಣಶ್ರವಣ ಸಾಮರ್ಥ್ಯವಿರುವುದರಿಂದ ಶ್ರೋತ್ರಮಯನಾಗಿ ಹೇಳಲ್ಪಡುತ್ತಾನೆ. ಛಂದೋಮಯಃ=ಕಾಮಪೂರ್ಣನು, (ಕಾಮಪೂರ್ತಿಯೆಂದರೆ ಕಾಮಿತವಾದುದಕ್ಕೆ ಪ್ರತಿಹತಿ ಯಿಲ್ಲದಿರುವಿಕೆಯು, ಅಂದರೆ) ಸತ್ಯಕಾಮನು. ಪೂರ್ಣಮನನ ಶಕ್ತನು. ಪೂರ್ಣವಚನ ಶಕ್ತನು. ಪೂರ್ಣಬಲಸ್ವರೂಪನು. (d) ಈ ಪ್ರಕಾರವಾಗಿ (ಆ ಹರಿಯ ರೂಪಗಳನ್ನು) ತಿಳಿದ ವನು ಜ್ಞಾನಾಖ್ಯ ಪುತ್ರನುಳ್ಳವನಾಗಿ ಆತನ ರೂಪಗಳನ್ನು ಹೊಂದುತ್ತಾನೆ. ಅಹರ್ನಾಮಕನಾದ ಶ್ರೀ ಹರಿಯನ್ನು ಹೊಂದಿ ಪ್ರೀಯಮಾನವಾದ ಸುಖವನ್ನು ಹೊಂದುತ್ತಾನೆ. ಅಂದರೆ ಸ್ವರೂ ಪಸುಖವನ್ನನುಭವಿಸುತ್ತಾನೆ. ॥ ೧ ॥

**ಮಂ ॥ ಅಥ ಕೌಂಠರವ್ಯಸ್ತ್ರೀಣಿ ಷಷ್ಟಿಶತಾನ್ಯಕ್ಷರಾಣಾಂ ತ್ರೀಣಿ ಷಷ್ಟಿಶತಾನ್ಯೂಷ್ಮಣಾಂ ತ್ರೀಣಿ ಷಷ್ಟಿಶತಾನಿ ಸಂಧೀನಾಂ ಯಾನ್ಯಕ್ಷರಾಣ್ಯವೋಚಾಮಾಹಾನಿ ತಾನಿ ಯಾನೂಷ್ಮಣೋಽವೋಚಾಮ ರಾತ್ರಯಸ್ತಾ ಯಾನ್ಸಂಧೀನವೋಚಾಮಾಹೋರಾತ್ರಾಣಾಂ ತೇ ಸಂಧಯ ಇತ್ಯಧಿದೈವತಮಥಾಧ್ಯಾತ್ಮಂ ಯಾನ್ಯಕ್ಷರಾಣ್ಯಧಿದೈವತಮವೋಚಾಮಾಸ್ಥೀನಿ ತಾನ್ಯಧ್ಯಾತ್ಮಂ ಯಾನೂಷ್ಮಣೋಽಧಿದೈವತಮವೋಚಾಮ ಮಜ್ಜಾನಸ್ತೇಽಧ್ಯಾತ್ಮಮೇಷ ಹ ವೈ ಸಂಪ್ರತಿ ಪ್ರಾಣೋ ಯನ್ಮಜ್ಜೈತದ್ರೇತೋ ನ ಹ ವಾ ಋತೇ ಪ್ರಾಣಾದ್ರೇತಃ ಸಿಚ್ಯತೇ ಯದ್ವಾ ಋತೇ ಪ್ರಾಣಾದ್ರೇತಃ ಸಿಚ್ಯೇತ ಪೂಯೇನ್ನ ಸಂಭವೇದ್ಯಾನ್ತ್ಸಂಧೀನಧಿದೈವತಮವೋಚಾಮ ಪರ್ವಾಣಿ ತಾನ್ಯಧ್ಯಾತ್ಮಂ ತಸ್ಯೈತಸ್ಯ ತ್ರಯಸ್ಯಾಸ್ಥ್ನಾಂ ಮಜ್ಜ್ಞಾಂ ಪರ್ವಣಾಮಿತಿ ಪಂಚೇತಶ್ಚತ್ವಾರಿಂಶಚ್ಛತಾನಿ ಪಂಚೇತಸ್ತದಶೀತಿಸಹಸ್ರಂ ಭವತ್ಯಶೀತಿಸಹಸ್ರಂ ವಾ ಅರ್ಕಲಿನೋ ಬೃಹತೀರಹರಭಿಸಂಪಾದಯಂತಿ ಸ ಏಷೋಽಕ್ಷರಸಮ್ಮಾನಶ್ಚಕ್ಷುರ್ಮಯಃ ಶ್ರೋತ್ರಮಯ ಶ್ಛಂದೋಮಯೋ ಮನೋಮಯೋ ವಾಙ್ಮಯ ಆತ್ಮಾ ಸ ಯ ಏವಮೇತಮಕ್ಷರಸಮ್ಮಾನಂ ಚಕ್ಷುರ್ಮಯಂ ಶ್ರೋತ್ರಮಯಂ ಛಂದೋಮಯಂ ಮನೋಮಯಂ ವಾಙ್ಮಯಮಾತ್ಮಾನಂ ವೇದಾಕ್ಷರಾಣಾಂ ಸಾಯುಜ್ಯಂ ಸರೂಪತಾಂ ಸಲೋಕತಾಮಶ್ನುತೇ ಪುತ್ರೀ ಪಶುಮಾನ್ಭವತಿ ಸರ್ವಮಾಯುರೇತಿ ॥ ೨ ॥**

ಅ ॥ ಅಥ=ಆ ಮೇಲೆ, ಕೌಂಠರವ್ಯಃ=ಕೌಂಠರವ್ಯಋಷಿಯು, (ಹೇಳುತ್ತಾನೆ.) ತ್ರೀಣಿ ಷಷ್ಟಿಶತಾನಿ ಅಕ್ಷರಾಣಾಂ=ಅಕ್ಷರಗಳ ಷಷ್ಟ್ಯುತ್ತರ ತ್ರಿಶತಗಳು, (೩೬೦), (ಇಲ್ಲಿ ಅಕ್ಷರಶಬ್ದದಿಂದ ವಿಷ್ಣುನಾಮದಲ್ಲಿರತಕ್ಕ ಣಕಾರರೂಪವಾದ ಸ್ಪರ್ಶಾಕ್ಷರವು ಹೇಳಲ್ಪಡುತ್ತದೆ. ಅಂತೂ) ಅಕ್ಷರಾಣಾಂ=ಣಕಾರದಲ್ಲಿರತಕ್ಕ ಅಕ್ಷರನಾಮಕಗಳಾದ ಭಗವದ್ರೂಪಗಳ, ತ್ರೀಣಿ ಷಷ್ಟಿಶತಾನಿ=ಮುನ್ನೂರ ಅರವತ್ತು. ಊಷ್ಮಣಾಂ=ವಿಷ್ಣುನಾಮದಲ್ಲಿರತಕ್ಕ ಷಕಾರರೂಪ ಊಷ್ಮಾಕ್ಷರದಲ್ಲಿರತಕ್ಕ ಶತ್ರುಸಂಹಾರದಲ್ಲಿ ಸಮರ್ಥವಾದುದರಿಂದ ಊಷ್ಮನಾಮಕಗಳಾದ ಭಗವ

ದ್ರೂಪಗಳ, ತ್ರೀಣಿ ಷಷ್ಟಿ ಶತಾನಿ=ಮುನ್ನೂರ ಅರ್ವತ್ತು. ಸಂಧೀನಾಂ=ಷಕಾರ ಣಕಾರಗಳ ಸಂಧಿಯಲ್ಲಿರತಕ್ಕ, ಸಂಧಾನದಿಂದ ಸಂಧಿನಾಮಕಗಳಾದ ವಿಷ್ಣುರೂಪಗಳ, ತ್ರೀಣಿ ಷಷ್ಟಿ ಶತಾನಿ=ಮುನ್ನೂರ ಅರ್ವತ್ತು. (ಈ ಪ್ರಕಾರವಾಗಿ ಇವುಗಳೇವೇ ಇತರನಾಮಗಳಲ್ಲಿ ಸೇರಿದ ಐವತ್ತು ವರ್ಣಗಳ ಮಧ್ಯದಲ್ಲಿ) ಅಕ್ಷರಾಣಾಂ=ಊಷ್ಮವಲ್ಲದ ಎಲ್ಲಾ ವರ್ಣಗಳ ಅವುಗಳಲ್ಲಿ ರತಕ್ಕ ಆಯಾಯ ಹೆಸರುಳ್ಳ ಭಗವದ್ರೂಪಗಳ, ತ್ರೀಣಿ ಷಷ್ಟಿ ಶತಾನಿ=ಮುನ್ನೂರ ಅರ್ವತ್ತು. ಊಷ್ಮಣಾಂ=ಊಷ್ಮಗಳಲ್ಲಿರತಕ್ಕ ಊಷ್ಮನಾಮಕಗಳಾದ ಭಗವದ್ರೂಪಗಳ, ತ್ರೀಣಿ ಷಷ್ಟಿ ಶತಾನಿ=ಮುನ್ನೂರ ಅರ್ವತ್ತು. ಸಂಧೀನಾಂ=ಸಂಧಿಗಳಲ್ಲಿರತಕ್ಕ ಸಂಧಿನಾಮಕ ಭಗವದ್ರೂಪಗಳ, ತ್ರೀಣಿ ಷಷ್ಟಿ ಶತಾನಿ=ಮುನ್ನೂರ ಅರ್ವತ್ತು. (ಒಟ್ಟುಕೂಡಿ ಸಾವಿರದ ಎಂಭತ್ತು ಸಂಖ್ಯೆಯುಳ್ಳವುಗಳು ಆಗುತ್ತವೆ. ಅವುಗಳಲ್ಲಿ) ಯಾನಿ ಅಕ್ಷರಾಣಿ=ವಿಷ್ಣುನಾಮದಲ್ಲಿರತಕ್ಕವುಗಳೂ, ನಾಮಾಂತರಗಳಲ್ಲಿರತಕ್ಕವುಗಳೂ, ಊಷ್ಮಭಿನ್ನಗಳೂ, ಊಷ್ಮಗಳಲ್ಲಿರತಕ್ಕವುಗಳೂ, ಊಷ್ಮನಾಮಕಗಳೂ ಆದ ಯಾವ ಭಗವದ್ರೂಪಗಳನ್ನು, ಅವೋಚಾಮ=ಹೇಳಿದೆವೋ, ತಾನಿ=ಅವುಗಳು, ಅಹಾನಿ=ಅಹಾರ್ಯವಾದುದರಿಂದ ಅಹರ್ನಾಮಕಗಳು. ಸಂವತ್ಸರದ ಅಹರ್ನಿಯಾಮಕಗಳು. ಯಾನ್ ಊಷ್ಮಣಃ=ಊಷ್ಮನಾಮಕ ಯಾವ ರೂಪಗಳನ್ನು, ಅವೋಚಾಮ=ಹೇಳಿದೆವೋ, ತಾಃ=ಆ ರೂಪಗಳು, ರಾತ್ರಯಃ=ರತಿಯನ್ನು ಕೊಡುವುದರಿಂದ ರಾತ್ರಿನಾಮಕಗಳು, ಸಂವತ್ಸರದ ರಾತ್ರಿಗಳಲ್ಲಿರತಕ್ಕವುಗಳು. ಯಾನ್ ಸಂಧೀನ್ ಅವೋಚಾಮ=ಸಂಧಿಯಲ್ಲಿರತಕ್ಕ ಯಾವ ಭಗವದ್ರೂಪಗಳನ್ನು, ಹೇಳಿದೆವೋ, ತೇ=ಆ ರೂಪವಿಶೇಷಗಳು, ಅಹೋರಾತ್ರಾಣಾಂ ಸಂಧಯಃ=ಅಹೋರಾತ್ರಾಭಿಮಾನಿಗಳ ಸಂಧಿಯಲ್ಲಿರತಕ್ಕವುಗಳು ಸಂಧಿನಾಮಕಗಳು. ಇತಿ=ಈ ಪ್ರಕಾರವಾಗಿ, ಅಧಿದೈವತಂ=ಅಧಿದೈವತ ಭಗವದ್ರೂಪಗಳು. ಅಥ=ಆ ಮೇಲೆ, ಅಧ್ಯಾತ್ಮಂ=ಅಧ್ಯಾತ್ಮ ಭಗವದ್ರೂಪಗಳು, (ಹೇಳಲ್ಪಡುತ್ತವೆ.) ಯಾನಿ ಅಕ್ಷರಾಣಿ ಅಧಿದೈವತಂ ಅವೋಚಾಮ=ಅಧಿದೈವದಲ್ಲಿ ಯಾವ ಅಕ್ಷರನಾಮಕ ಭಗವದ್ರೂಪಗಳನ್ನು ಹೇಳಿದೆವೋ, ತಾನಿ ಅಧ್ಯಾತ್ಮಂ ಅಸ್ಥೀನಿ=ಆ ರೂಪಗಳು ಅಧ್ಯಾತ್ಮದಲ್ಲಿ ಅಸ್ಥಿಯಲ್ಲಿರತಕ್ಕವುಗಳು ಅಸ್ಥಿನಾಮಕಗಳು. ಅಧಿದೈವತಂ ಯಾನ್ ಊಷ್ಮಣಃ ಅವೋಚಾಮ=ಅಧಿದೈವದಲ್ಲಿ ಯಾವ ರೂಪವಿಶೇಷಗಳನ್ನು ಊಷ್ಮನಾಮಕಗಳನ್ನಾಗಿ ಹೇಳಿದೆವೋ, ತೇ ಅಧ್ಯಾತ್ಮಂ ಮಜ್ಜಾನಃ=ಆ ಪ್ರಾದುರ್ಭಾವಗಳು ಅಧ್ಯಾತ್ಮದಲ್ಲಿ ಮಜ್ಜಾದಲ್ಲಿರತಕ್ಕವುಗಳು, ಮದಜನಕಗಳಾದುದರಿಂದ ಮಜ್ಜಾನಾಮಕಗಳು. ಯತ್=ಯಾವ ಕಾರಣದಿಂದ, ಏಷಃ ಪ್ರಾಣಃ=ಈ ವಾಯುವು, ಸಂಪ್ರತಿ=ಚೆನ್ನಾಗಿ, (ವಿಶೇಷಾಕಾರವಾಗಿ) ಮಜ್ಜಾ ಹ ವೈ=ಮಜ್ಜೆಯಲ್ಲಿಯೇ ಸನ್ನಿಹಿತನೋ, (ಆದುದರಿಂದಲೇ, ಪ್ರಾಣಃ=ವಿಷ್ಣುವು, ಮಜ್ಜಾ=ಮಜ್ಜಾದಲ್ಲಿಯೇ ಇತರಧಾತುಗಳಿಗಿಂತ ವಿಶೇಷಾಕಾರವಾಗಿ ಸನ್ನಿಹಿತನು. ಅಥವಾ ಯತ್ ಮಜ್ಜಾ=ಯಾವುದು ಮಜ್ಜಾ ಎನ್ನಿಸುತ್ತದೋ, ಏಷ ಹ ವೈ=ಇದೇವೇ, ಸಂಪ್ರತಿ=ಚೆನ್ನಾಗಿ, ಪ್ರಾಣಃ=ವಾಯುವಿಗೆ ವಿಶೇಷತಃ ಸನ್ನಿಧಾನಪಾತ್ರವು.) (ಆದುದರಿಂದಲೇ) ಪ್ರಾಣಃ=ವಿಷ್ಣುವೂ ಕೂಡ, (ಪ್ರಾಣನಾಮಕ ವಿಷ್ಣುವಿಗೆ ವಿಶೇಷಸನ್ನಿಧಾನಪಾತ್ರವು.) ಏತತ್=ಈ ಮಜ್ಜೆಯೇ, ರೇತಃ=ರೇತಸ್ಸು, (ಆಗುತ್ತದೆ. ರೇತಸ್ಸಿನಲ್ಲಿ ಪ್ರಾಣನು ವಿಶೇಷತಃ ಸನ್ನಿಹಿತನಾಗಿದ್ದಾನೆ. ಆದುದರಿಂದ ಮಜ್ಜಾದಲ್ಲಿ ವಿಶೇಷಾಕಾರವಾಗಿ ಪ್ರಾಣನ ಸನ್ನಿಧಾನವು ನಿಶ್ಚಿತವಾಗುತ್ತದೆ.) ಪ್ರಾಣಾತ್ ಋತೇ=ಪ್ರಾಣನನ್ನು ಹೊರತು, ರೇತಃ=ರೇತಸ್ಸು, ನ ಸಿಚ್ಯತೇ ಹ ವೈ=ಸೇಚಿಸಲ್ಪಡುವುದಿಲ್ಲವಷ್ಟೇ. (ಪ್ರಾಣನಸನ್ನಿಧಾನವನ್ನು ಹೊರತು ರೇತಸ್ಸು ಗರ್ಭತನವನ್ನು ಹೊಂದುವುದಿಲ್ಲ. ತಥಾಚ ಇತರಧಾತುಗಳಿಗೆ ಗರ್ಭೀಭಾವಯೋಗ್ಯತೆಯೇ ಇಲ್ಲದಿರುವುದರಿಂದಲೂ, ರೇತಸ್ಸಿಗೇನೇ ಇರುವುದರಿಂದಲೂ ಆ ರೇತಸ್ಸಿನಲ್ಲಿ ವಿಶೇಷತಃ ಪ್ರಾಣನಸನ್ನಿಧಾನವು ತಿಳಿಯಲ್ಪಡುತ್ತದೆ.) ಪ್ರಾಣಾತ್ ಋತೇ=ಪ್ರಾಣನ ಸನ್ನಿ

ಥಾನವನ್ನು ಹೊರತು, ರೇತಃ=ರೇತಸ್ಸು, (ಸ್ತ್ರೀಯರಲ್ಲಿ) ಸಿಚ್ಯೇತ ಯದ್ವಾ=ಸೇಚಿಸಲ್ಪಟ್ಟರೆ, ಪೂಯೇತ್=ದುರ್ಗಂಧಯುಕ್ತವೇ ಆಗುತ್ತದೆ. (ಎಲ್ಲಿಯಾದರೂ ಹೊರಟದ್ದಾಗಿ ನಾಶವಾಗುವುದು.) ನ ಸಂಭವೇತ್=ಗರ್ಭವಾಗುವುದಿಲ್ಲ. (ಆದುದರಿಂದ ರೇತಸ್ಸು ಗರ್ಭವಾಗಲಿಕ್ಕೆ ಕಾರಣವಾದುದ್ದು ಪ್ರಾಣನಸನ್ನಿಧಾನವೇ.) ಯಾನ್ ಸಂಧೀನ್=ಯಾವ ಸಂಧಿನಾಮಕ ಪ್ರಾದುರ್ಭಾವಗಳನ್ನು, ಅಧಿದೈವತಂ=ಅಧಿದೈವತದಲ್ಲಿ, ಅವೋಚಾಮ=ಹೇಳಿದೆವೋ, ತಾನಿ=ಅವುಗಳು, ಅಧ್ಯಾತ್ಮಂ=ಅಧ್ಯಾತ್ಮದಲ್ಲಿ, ಪರ್ವಾಣಿ=ಪರ್ವನಾಮಕಗಳು, ಪರ್ವದಲ್ಲಿರತಕ್ಕವುಗಳು. ಅಸ್ಥ್ನಾಂ ಮಜ್ಞಾಂ ಪರ್ವಣಾಂ ಇತಿ ತಸ್ಯ ಏತಸ್ಯ ತ್ರಯಸ್ಯ=ಅಸ್ಥ್ಯಾದಿ ಮೂರರಲ್ಲಿ ಅಂತರ್ಗತನಾದ, ಅಸ್ಥ್ಯಾದಿನಾಮಕನಾದ ಶ್ರೀ ಹರಿಯ (ರೂಪಗಳು) ಇತಃ=ಬಲಭಾಗದಲ್ಲಿ, ಪಂಚಶತಾನಿ ಚತ್ವಾರಿಂಶತ್=ಐನೂರನಲ್ವತ್ತು. (೫೪೦). ಇತಃ=ಎಡಭಾಗದಲ್ಲಿಯೂ, ಪಂಚಶತಾನಿ ಚತ್ವಾರಿಂಶತ್=ಐನೂರನಲ್ವತ್ತು. (೫೪೦). ತತ್=ಎರಡು ಭಾಗದಲ್ಲಿದ್ದ ರೂಪಸಮುದಾಯವು, (ಒಟ್ಟುಕೂಡಿ) ಅಶೀತಿಸಹಸ್ರಂ ಭವತಿ=ಸಾವಿರದ ಎಂಭತ್ತು (೧೦೮೦) ಆಗುತ್ತದೆ. ಅಶೀತಿಸಹಸ್ರಂ=ಸಾವಿರದ ಎಂಭತ್ತು ಸಂಖ್ಯೆಯುಳ್ಳ ಪ್ರಾದುರ್ಭಾವಗಳು, ಅರ್ಕಲಿನಃ=ಸೂರ್ಯನಲ್ಲಿಯೂ ಶ್ಯೇನಾಕಾರವಾದ ಚಿತಿಯಲ್ಲಿಯೂ ಅಡಗಿದ್ದಾಗಿ ಅದೃಶ್ಯನಾಗಿ ಇರುವವುಗಳು. ಬೃಹತೀಃ=ಪೂರ್ಣಗಳಾದುದರಿಂದ ಬೃಹತೀನಾಮಕಗಳು, ಬೃಹತೀಸಹಸ್ರಪ್ರತಿಪಾದ್ಯಗಳು. ಅರ್ಕಲಿನಃ=(೧೦೮೦) ಸೂರ್ಯನಲ್ಲಿರುವ ವಿಷ್ಣುನಾಮಾಕ್ಷರ ರೂಪವಿಶೇಷಗಳು, (ಪುರುಷನಲ್ಲಿದ್ದು) ಬೃಹತೀಃ=ಬೃಹತೀಸಹಸ್ರವನ್ನು, ಅಹಃ=ಯಜ್ಞವನ್ನೂ ದಿವಸವನ್ನೂ ಕೂಡ, ಅಭಿಸಂಪಾದಯಂತಿ=ಸಂಪಾದಿಸುತ್ತವೆ. (ಈ ಪ್ರಾದುರ್ಭಾವಗಳೇವೇ ಪುರುಷ ಶರೀರದಲ್ಲಿದ್ದು ವಚನಗಳಿಗೆ ಪ್ರೇರಕಗಳಾಗಿ ಬೃಹತೀಸಹಸ್ರವನ್ನು ಸಂಪಾದಿಸುತ್ತವೆ. ಸೂರ್ಯನಲ್ಲಿದ್ದು ದಿವಸಗಳನ್ನು ಸಂಪಾದಿಸುತ್ತವೆ. ಚಿತಿಯಲ್ಲಿದ್ದು ಯಜ್ಞಗಳನ್ನು ಸಂಪಾದಿಸುತ್ತವೆ.) ಸ ಏಷಃ=ಆ ಈ ಅಸ್ಥ್ಯಾದಿಗಳಲ್ಲಿರತಕ್ಕ ಶ್ರೀ ಹರಿಯು, ಅಕ್ಷರ ಸಂಮಾನಃ=ಊಷ್ಮಾಕ್ಷರ ಸಂಧಿಭೇದದಿಂದ ಮೂರುವಿಧವಾದ ವರ್ಣದಲ್ಲಿರತಕ್ಕ ರೂಪಕ್ಕೆ ಸಮಾನವಾದ ಸಂಖ್ಯೆಯುಳ್ಳವನು. (೧೦೮೦ ರೂಪಗಳುಳ್ಳವನು) ಚಕ್ಷುರ್ಮಯಃ ಶ್ರೋತ್ರಮಯಃ ಛಂದೋಮಯಃ ಮನೋಮಯಃ ವಾಙ್ಮಯಃ ಆತ್ಮಾ ಯಃ ಏವಂ ಏತಂ ಅಕ್ಷರಸಂಮಾನಂ ಚಕ್ಷುರ್ಮಯಂ ಶ್ರೋತ್ರಮಯಂ ಛಂದೋಮಯಂ ಮನೋಮಯಂ ವಾಙ್ಮಯಂ ಆತ್ಮಾನಂ ವೇದ ಸಃ ಅಕ್ಷರಾಣಾಂ ಸಾಯುಜ್ಯಂ ಸರೂಪತಾಂ ಸಲೋಕತಾಂ ಅಶ್ನುತೇ ಪುತ್ರೀ ಪಶುಮಾನ್ ಭವತಿ ಸರ್ವಂ ಆಯುಃ ಏತಿ......॥ ೨ ॥

ಭಾ॥ (a) ಏವಮುಕ್ತಪ್ರಕಾರೇಣ ತಸ್ಯ ಹ್ಯಕ್ಷರನಾಮಕಂ । ಅಶೀತ್ಯುತ್ತರಸಾಹಸ್ರ ರೂಪಂ ವರ್ಣೇಷು ಸಂಸ್ಥಿತಂ ॥ ವಿಷ್ಣುನಾಮ್ನೋಽಥ ವಾಽನ್ಯೇಷು ಪಂಚಾಶತ್ಸಂಖ್ಯಕೇಷ್ವಪಿ । ತಾವತ್ಸಂಖ್ಯಾನಿ (b) ದೇಹೇಷು ಪೃಥಙ್ಮಜ್ಜಾಸ್ಥಿಪರ್ವಸು ॥ ರೂಪಾಣಿ ವಿಷ್ಣೋಸ್ತಾವಂತಿ ಚೇಷ್ಟಕಾನಿ ಪೃಥಕ್ಪೃಥಕ್ । (c) ಅರ್ಕಸ್ಥಿತಬೃಹತ್ಯಾಖ್ಯರೂಪಾಣ್ಯಹ್ನಾಂ ಚ ಸರ್ವಶಃ ॥ ಸಂಪಾದಕಾನಿ ತಾನ್ಯೇವ ತಾನ್ಯಕ್ಷರಮಿತಾನಿ ಚ । ಅಸ್ಥ್ಯಾದಿಸ್ಥಿತರೂಪಾಣಿ ತಾನ್ಯುಪಾಸ್ಯ ವಿಮುಚ್ಯತೇ ॥ ಇತಿ ಚ ॥

ಅ ॥ (a) ಏವಂ=ಈ ಪ್ರಕಾರವಾಗಿ, (ಅಂದರೆ ಹೇಗೆ ಹ್ರಸ್ವಮಾಂಡೂಕೇಯ ಋಷಿಯು ಹೇಳಿದಪ್ರಕಾರ ೭೨೦ ರೂಪಗಳನ್ನು ತಿಳಿದು ವಿಮುಕ್ತನಾಗುತ್ತಾನೋ, ಅದೇ ರೀತಿಯಾಗಿ)

ಉಕ್ತಪ್ರಕಾರೇಣ=ಕೌಂತರವ್ಯಋಷಿಯು ಹೇಳಿದಪ್ರಕಾರ (೧೦೮೦ ರೂಪಗಳನ್ನು ಉಪಾಸನೆ ಮಾಡಿ ಮುಕ್ತನಾಗುತ್ತಾನೆ.) ತಸ್ಯ ಹಿ=ಆ ವಿಷ್ಣುವಿನ, ಅಕ್ಷರನಾಮಕಂ=ಅಕ್ಷರ ಊಷ್ಮ ಸಂಧಿ ನಾಮಕವಾದ, ಅಶೀತ್ಯುತ್ತರ ಸಾಹಸ್ರರೂಪಂ=ಸಾವಿರದ ಎಂಭತ್ತು ರೂಪವು, ವಿಷ್ಣು ನಾಮ್ನಃ=ವಿಷ್ಣುವೆಂಬ ನಾಮದ, ವರ್ಣೇಷು=ಅಕ್ಷರೋಷ್ಮಸಂಧಿಗಳಲ್ಲಿಯೂ, ಅಥವಾ=ಅನ್ಯೇ ಷು=ಇತರನಾಮಗಳ ಅಕ್ಷರೋಷ್ಮಸಂಧಿಗಳಲ್ಲಿಯೂ, ಸಂಸ್ಥಿತಂ=ಇರುತ್ತದೆ. ಪಂಚಾಶತ್ಸಂ ಖ್ಯಕೇಷ್ವಪಿ=ಐವತ್ತುಸಂಖ್ಯೆಯುಳ್ಳ ವರ್ಣಗಳಲ್ಲಿಯೂ, ತಾವತ್ಸಂಖ್ಯಾನಿ=ಅಷ್ಟುಸಂಖ್ಯೆಯುಳ್ಳ ರೂಪಗಳು (ಇರುತ್ತವೆ.) (b) ಶರೀರಗಳಲ್ಲಿ ಮಜ್ಜಾ ಅಸ್ಥಿ ಪರ್ವಗಳಲ್ಲಿ ಪ್ರತ್ಯೇಕ ಪ್ರತ್ಯೇಕ ವಾಗಿ (೧೬೦ ಸಂಖ್ಯೆಯಿಂದ ಇರತಕ್ಕ) ವಿಷ್ಣುವಿನ ರೂಪಗಳು (ಮಿಲಿತಗಳಾಗಿ) ತಾವಂತಿ= ಸಾವಿರದ ಎಂಭತ್ತು ರೂಪಗಳು. ಪ್ರತ್ಯೇಕ ಪ್ರತ್ಯೇಕ ಚೇಷ್ಟೆಯನ್ನುಂಟುಮಾಡುವವುಗಳು. (ಅಂದರೆ ಈ ರೂಪಗಳು ಮಜ್ಜಾದಿಗಳಲ್ಲಿದ್ದು ರೇತಸ್ಸೇ ಮೊದಲಾದ ಸ್ವರೂಪದಿಂದ ಪರಿಣಾಮ ನಿಯಾಮಕಗಳಾಗಿಯೂ, ಪುರುಷಶರೀರದಲ್ಲಿದ್ದು ವಾಕ್ಪ್ರೇರಕಗಳಾಗಿಯೂ, ಚಿತಿಯಲ್ಲಿದ್ದು ಯಾಗಪ್ರವರ್ತಕಗಳಾಗಿಯೂ, ಸೂರ್ಯಾದಿಗಳಲ್ಲಿದ್ದು ಅಹರಾದಿ ಪ್ರವರ್ತಕಗಳಾಗಿಯೂ ಆಗಿವೆ.) (c) ಸೂರ್ಯನಲ್ಲಿ (ಲೀನವಾಗಿ) ಇದ್ದುದರಿಂದ (ಅರ್ಕಲಿನಾಮಕಗಳಾದ) ಬೃಹತೀ ಎಂದು ಹೆಸರುಳ್ಳವುಗಳು ರೂಪಗಳು. ಅವುಗಳೇವೇ ಎಲ್ಲಾ ದಿವಸಗಳಿಗೂ ಸಂಪಾದಕಗಳು. ಆ ಅಸ್ಥ್ಯಾದಿಗಳಲ್ಲಿರತಕ್ಕ ರೂಪಗಳು ಅಕ್ಷರಸಮಸಂಖ್ಯಾಕಗಳು. ಅವುಗಳನ್ನು ಉಪಾಸನೆ ಮಾಡಿ ಮುಕ್ತನಾಗುತ್ತಾನೆ. ಹೀಗೂ ಉಕ್ತವಾಗಿದೆ.

ಭಾ|| **(a)** ತಸ್ಯೈತಸ್ಯಾತ್ಮನಸ್ತಸ್ಯ ಶರೀರಾಖ್ಯಸ್ಯಾತ್ಮನೋ ಯ ಆತ್ಮಾ ಆದಾನಾದಿ ಕರ್ತಾ ತಸ್ಯ ಪರಮಾತ್ಮನ ಏತಸ್ಯಾಸ್ಥ್ನಾಂ ಮಜ್ಜ್ಞಾಂ ಪರ್ವಣಾಂ ಮಿಲಿ ತಾನಾಮಪಿ ವಿಂಶೋತ್ತರಸಪ್ತಶತತ್ವೋಕ್ತೇಸ್ತತ್ರ ವಿಷ್ಣುರೂಪಾಣ್ಯೇವೋ ಚ್ಯಂತ ಇತಿ ಸಿದ್ಧಂ || **(b)** ಅಸ್ಥ್ಯಾದೀನ್ಯೇವ ಚೇದಶೀತ್ಯುತ್ತರಸಹಸ್ರಾಣಿ ಸಂತಿ ಹಿ । ವಿಷ್ಣುಷ್ಣುರಿತ್ಯೇತಾನಿ ವಿಷ್ಣುನ್ನಾಮಗತಾನ್ಯೂಷ್ಮಾಕ್ಷರ ಸಂಧಿನಾಮಕಾನಿ ತದ್ಗತ ಭಗವದ್ರೂಪಾಣಿ ಮುಖ್ಯತಸ್ತನ್ನಾಮಕಾನಿ || **(c)** ಅಹಾರ್ಯತ್ವಾದಹರ್ನಾಮಾ ರಾತ್ರಿನಾಮಾ ರತಿಪ್ರದಃ । ಸಂಧಾನಾ ತ್ಸಂಧಿನಾಮಾಽಸೌ ಸ್ವಯಂ ನಾರಾಯಣಃ ಪ್ರಭುಃ || **(d)** ಸಂಧ್ಯೂಷ್ಮಾ ಕ್ಷರಗಾಣ್ಯಸ್ಯ ವಿಷ್ಣೋಃ ರೂಪಾಣಿ ಸರ್ವಶಃ । ಸಂಧ್ಯಾ ರಾತ್ರಿದಿವಾಸ್ಥಾನಿ ಸಾಶೀತಿಕ ಸಹಸ್ರಕಂ ||

ಅ || (a) ತಸ್ಯ ಏತಸ್ಯ ಆತ್ಮನಃ=ಆ ಈ ಶರೀರವೆಂದು ಹೆಸರುಳ್ಳ ಆತ್ಮನಿಗೆ, ಯಃ ಆತ್ಮಾ=ಯಾರು ಆದಾನಾದಿಗಳನ್ನು ಮಾಡತಕ್ಕವನೋ, ಆ ಪರಮಾತ್ಮನಿಗೆ ಅಸ್ಥಿಮಜ್ಜಾ ಪರ್ವಗಳೆಂಬ ಮಿಲಿತಗಳಿಗೂ ಇಪ್ಪತ್ತರಿಂದ ಹೆಚ್ಚಾದ ಏಳು ನೂರುಗಳನ್ನು (೭೨೦) ಹೇಳಿರು ವುದರಿಂದ ಅಲ್ಲಿ ವಿಷ್ಣುರೂಪಗಳೇ ಹೇಳಲ್ಪಡುತ್ತವೆ ಎಂದು ಸಿದ್ಧವಾಯಿತು. (b) ಅಸ್ಥಿಮೊದ ಲಾದವುಗಳೇ ಆಗಿದ್ದರೆ ಎಂಭತ್ತರಿಂದ ಹೆಚ್ಚಾದ ಸಾವಿರಗಳು (೧೦೮೦) ಇವೆಯಷ್ಟೆ. ವಿಷ್ಣು ಷ್ಣುಃ ಎಂಬೀ ವಿಷ್ಣುನಾಮದಲ್ಲಿರತಕ್ಕವುಗಳು ಊಷ್ಮಾಕ್ಷರ ಸಂಧಿನಾಮಕಗಳಾದ ಅವುಗಳಲ್ಲಿರ ತಕ್ಕ ಭಗವದ್ರೂಪಗಳು ಮುಖ್ಯವಾಗಿ ಅಸ್ಥ್ಯಾದಿನಾಮಕಗಳು. (c) ಪ್ರಭುವಾದ ನಾರಾ ಯಣನು ತಾನಾಗಿ ತಿರಸ್ಕರಿಸಲಿಕ್ಕೆ ಅಶಕ್ಯನಾದುದರಿಂದ ಅಹರ್ನಾಮಕನು. ರತಿಯನ್ನು ಕೊಡತಕ್ಕವನಾದ್ದರಿಂದ ರಾತ್ರಿನಾಮಕನು. ಈತನು ಹಗಲು ರಾತ್ರಿಗಳಿಗೆ ಸಂಧಿಯನ್ನು ಮಾಡತಕ್ಕ

ವನಾದುದರಿಂದ ಸಂಧಿನಾಮಕನು. (d) ಸಂಧಿಊಷ್ಮಾಕ್ಷರಗಳಲ್ಲಿರತಕ್ಕ ಎಂಭತ್ತರಿಂದ ಹೆಚ್ಚಾದ ಸಹಸ್ರಸಂಖ್ಯೆಯುಳ್ಳ (೧೮೦೦) ಈ ವಿಷ್ಣುವಿನ ಸರ್ವರೂಪಗಳು ಸಂಧ್ಯಾ ರಾತ್ರಿ ಹಗಲುಗಳಲ್ಲಿರತಕ್ಕವುಗಳು.

ಭಾ॥ (a) ತಾನ್ಯೇವಾಸ್ಥಿಷು ಮಜ್ಜಾಸು ಪರ್ವಸ್ವಪಿ ಚ ಸರ್ವಶಃ । ಪರಜ್ಞಾನಾತ್ತು ಪರ್ವಾಣಿ ವಿಷ್ಣೋಃ ರೂಪಾಣಿ ತಾನಿ ಹಿ ॥ (b) ಅಸ್ಥಾನಾನ್ಮದನಾಚ್ಚೈವ ಹ್ಯಸ್ಥಿಮಜ್ಜಾಭಿಧಾನಿ ಚ । ವ್ಯಕ್ತಿರ್ಮಜ್ಜಾಸು ತಸ್ಯೈವ ಪ್ರಾಣೋ ಮಜ್ಜಾಸು ಸಂಸ್ಥಿತಃ ॥ (c) ಮಜ್ಜೈವ ರೇತೋ ಭವತಿ ರೇತಸಿಸ್ಥೋ ವಿಶೇಷತಃ । ಪ್ರಾಣಸ್ತೇನ ಹಿ ತದ್ರೇತೋ ಯುಕ್ತಂ ಪ್ರಾಣೇನ ಸರ್ವದಾ ॥ ಯದಿ ಪ್ರಾಣೋ ನ ತದ್ರೇತೋ ನ ಗರ್ಭತ್ವಂ ವ್ರಜೇತ್ಕ್ವಚಿತ್ ॥

ಅ ॥ (a) ಆ ಸರ್ವರೂಪಗಳೇ ಅಸ್ಥಿಗಳಲ್ಲಿಯೂ ಮಜ್ಜಾಗಳಲ್ಲಿಯೂ ಪರ್ವಗಳಲ್ಲಿಯೂ ಇವೆ. ವಿಷ್ಣುವಿನ ಆ ರೂಪಗಳು ಉತ್ತಮವಾದ ಜ್ಞಾನದಿಂದಲೇ ಪರ್ವನಾಮಕಗಳು. (b) ಅಸ್ಥಿರವಾದುದರಿಂದಲೂ ಮದವನ್ನು ಹುಟ್ಟಿಸುವುದರಿಂದಲೂ ಅಸ್ಥಿಮಜ್ಜಾನಾಮಕಗಳು. ಆ ವಿಷ್ಣುವಿಗೇನೇ ಮಜ್ಜಾಗಳಲ್ಲಿ ವಿಶೇಷ ಸನ್ನಿಧಾನವಿದೆ. ಪ್ರಾಣನು ಮಜ್ಜಾಗಳಲ್ಲಿ ವಿಶೇಷತಃ ಸನ್ನಿಹಿತನು. (c) ಮಜ್ಜೆಯೇ ರೇತಸ್ಸು ಆಗುತ್ತದೆ. ಪ್ರಾಣನು ವಿಶೇಷತಃ ರೇತಸ್ಸಿನಲ್ಲಿ ಸನ್ನಿಹಿತನು. ಆ ಕಾರಣದಿಂದ (ಅಂದರೆ ಪ್ರಾಣನು ರೇತಸ್ಸಿನಲ್ಲಿ ವಿಶೇಷತಃ ಸನ್ನಿಹಿತನಾದುದರಿಂದ) ಪ್ರಾಣನಿಂದೊಡಗೂಡಿದ ಆ ರೇತಸ್ಸು ಸರ್ವದಾ ನಿಯಮವಾಗಿ ಗರ್ಭತನವನ್ನು ಹೊಂದುವದು. ಪ್ರಾಣನು ರೇತಸ್ಸಿನಲ್ಲಿ ಸನ್ನಿಹಿತನು ಆಗದೆ ಇದ್ದರೆ ಆ ರೇತಸ್ಸು ಎಲ್ಲಿಯೂ (ಕಲಿಯುಗದಲ್ಲಿ ಮಾನುಷಾದಿಗಳಲ್ಲಿ) ಗರ್ಭತನವನ್ನು ಹೊಂದಲಾರದು.

ಭಾ॥ (a) ವಿಶೇಷಪ್ರಾಣಸಂಬಂಧವರ್ಜಿನಾನ್ಯತ ಏವ ಹಿ । ನ ಮಾಂಸಾದೀನಿ ಗರ್ಭತ್ವಂ ಯಾಂತ್ಯತಃ ಸ ಹಿ ರೇತಸಿ ॥ ವಿಶೇಷೇಣ ಸ್ಥಿತಃ ಪ್ರಾಣಃ ಪ್ರಾಣೇ ಚೈವ ವಿಶೇಷತಃ । ಸ್ಥಿತೋ ನಾರಾಯಣೋ ದೇವಸ್ತಸ್ಮಾನ್ಮಜ್ಜಾಸು ಚ ಸ್ಥಿತಃ ॥ ಇತಿ ಚ ॥ (b) ಮಜ್ಜಾಸ್ವಧಿಕಸನ್ನಿಧಾನಜ್ಞಾಪನಾರ್ಥಮಿದಂ ವಚನಂ । ಅಶೀತ್ಯುತ್ತರಸಹಸ್ರವರ್ಣಾನಾಮಭಾವಾಚ್ಚ ತತ್ಸ್ಥ ವಿಷ್ಣುರೂಪಾಣ್ಯೇವ ತತ್ಸಂಖ್ಯಾನೀತಿ ಸಿದ್ಧಂ ॥ (c) ಅರ್ಕೇ ನಿಲೀನತ್ವೇನಾದೃಶ್ಯತ್ವೇನ ಸ್ಥಿತಾ ಭಗವತ್ಪ್ರಾದುರ್ಭಾವಾ ಅರ್ಕಲಿನಃ । ತ ಏವ ಶರೀರೇ ಸ್ಥಿತ್ವಾ ಸಹಸ್ರಂ ಬೃಹತೀಃ ಸಂಪಾದಯಂತಿ ॥ (d) ವಾಕ್ಪ್ರೇರಕತ್ವಾದ್ವಿಷ್ಣುನಾಮಾರ್ಥವತ್ತ್ವಾದೇವ ಚ ಬೃಹತಿಸಹಸ್ರಸ್ಯ ತದ್ದೇವತಾತ್ವೈತಾನ್ಯೇವಾಶೀತ್ಯುತ್ತರಸಹಸ್ರರೂಪಾಣಿ ಏತಾನ್ಯೇವಾಹಃ ಪ್ರವರ್ತಕಾನಿ ಚ । (e) ಅಹಃ ಶಬ್ದೇನ ಯಜ್ಞೋ ದಿವಸಶ್ಚೋಭಾವಪ್ಯಭಿಪ್ರೇತೌ ॥ ಯಜ್ಞಾನಾಂ ದಿವಸಾನಾಂ ಚ ಸಾಶೀತಿಕಸಹಸ್ರಕೈಃ । ವಿಷ್ಣುಃ ಪ್ರವರ್ತಕೋ ರೂಪೈರ್ಬೃಹತ್ಯುಕ್ಥಸ್ಯ ಚಾಂಜಸಾ ॥ ಬೃಹತ್ಯುಕ್ಥೇನ ವಾಚ್ಯಾನಿ ರೂಪಾಣ್ಯೇತಾನ್ಯಧೀಶಿತುಃ । ಇತಿ ಚ ॥ ೨ ॥

ಅ ॥ (a) ಆದುದರಿಂದಲೇ ವಿಶೇಷತಃ ಪ್ರಾಣಸಂಬಂಧವಿಲ್ಲದಿರುವ ಮಾಂಸಾದಿಗಳು ಗರ್ಭತ್ವವನ್ನು ಹೊಂದುವುದಿಲ್ಲ. ಆದುದರಿಂದ ಆ ಪ್ರಾಣನೇ ರೇತಸ್ಸಿನಲ್ಲಿ ವಿಶೇಷತಃ ಸನ್ನಿಹಿತನಾಗಿದ್ದಾನೆ. ಕ್ರೀಡಾದಿಗುಣವಿಶಿಷ್ಟನಾದ ನಾರಾಯಣನು ವಿಶೇಷತಃ ಪ್ರಾಣನಲ್ಲಿ ಸನ್ನಿಹಿತನು. ಆದುದರಿಂದ ಶ್ರೀಹರಿಯೇ ಮಜ್ಜಾಗಳಲ್ಲಿದ್ದಾನೆ ಹೀಗೂ ಅದೆ. (b) ಮಜ್ಜಾಗಳಲ್ಲಿ ಅಧಿಕವಾಗಿ ಸನ್ನಿಧಾನವನ್ನು ತಿಳಿಸಿಕೊಡುವುದಕ್ಕೋಸ್ಕರ ಈ ಮಾತು. ಎಂಭತ್ತರಿಂದ ಹೆಚ್ಚಾದ ಸಾವಿರ ವರ್ಣಗಳು ಇಲ್ಲದಿರುವುದರಿಂದ (ಅಕ್ಷರಗಳಿಗೂ ಊಷ್ಮಗಳಿಗೂ ಸಂಧಿಯಿಂದ ಮಿಲಿತಗಳಿಗೂ ಸಾವಿರದ ಎಂಭತ್ತು ಇಲ್ಲದಿರುವುದರಿಂದ) ಅಕ್ಷರೋಷ್ಮ ಸಂಧಿಯಲ್ಲಿರತಕ್ಕ ವಿಷ್ಣುರೂಪಗಳೇ ಸಾವಿರದ ಎಂಭತ್ತು ಸಂಖ್ಯೆಯುಳ್ಳವುಗಳು ಎಂದು ಸಿದ್ಧವಾಯಿತು. (c) ಸೂರ್ಯನಲ್ಲಿ ಅಡಗಿದ್ದಾಗಿ ಅದೃಶ್ಯವಾಗಿ ಇರತಕ್ಕ ಭಗವತ್ಪ್ರಾದುರ್ಭಾವಗಳು ಅರ್ಕಲಿನಃ ಎನ್ನಿಸುತ್ತವೆ. ಅವುಗಳೇ ಶರೀರದಲ್ಲಿದ್ದು ಬೃಹತೀಸಹಸ್ರವನ್ನು ಸಂಪಾದಿಸುತ್ತವೆ. (d) (ಸೂರ್ಯನಲ್ಲಿರತಕ್ಕ ಯಾವ ರೂಪಗಳು ಪುರುಷನಲ್ಲಿದ್ದು ಬೃಹತಿಯನ್ನು ಸಂಪಾದಿಸುತ್ತವೋ), ಅವುಗಳೇ ಬೃಹತೀಸಹಸ್ರಕ್ಕೆ ವಾಕ್ಪ್ರೇರಕತ್ವವಿದ್ದುದರಿಂದಲೇ ವಿಷ್ಣುನಾಮಕ್ಕೆ ಅರ್ಥಭೂತವಾದುದರಿಂದಲೇ ವಿಷ್ಣುನಾಮಾಕ್ಷರಗಳಲ್ಲಿರತಕ್ಕ ತತ್ಪ್ರತಿಪಾದ್ಯಗಳಾದ ಎಂಭತ್ತರಿಂದ ಹೆಚ್ಚಾದ ಸಾವಿರರೂಪಗಳು ಬೃಹತೀಸಹಸ್ರದಲ್ಲಿರತಕ್ಕವುಗಳು. ಬೃಹತೀಸಹಸ್ರಪ್ರತಿಪಾದ್ಯ ದೇವತೆಗಳು. ಸೂರ್ಯನಲ್ಲಿರತಕ್ಕ ರೂಪಗಳೇ ಅಹಃ ಪ್ರವರ್ತಕಗಳು, (ಹಗಲನ್ನು ಪ್ರವರ್ತಿಸುತ್ತವೆ.) (e) ಅಹಃ ಶಬ್ದದಿಂದ ಯಾಗವು ದಿನವು ಎರಡೂ ಕೂಡ ಅಭಿಪ್ರೇತಗಳು. ಶ್ರೀ ವಿಷ್ಣುವು ಸಾವಿರದ ಎಂಭತ್ತು ರೂಪಗಳಿಂದ ಯಾಗಗಳಿಗೂ ದಿನಗಳಿಗೂ ಬೃಹತ್ಯುಕ್ಥಕ್ಕೂ ಪ್ರವರ್ತಕನು. ಸರ್ವಸ್ವಾಮಿಯಾದ ಶ್ರೀ ಹರಿಯ ಆ ರೂಪಗಳೇ ಬೃಹತ್ಯುಕ್ಥದಿಂದಲೂ ವಾಚ್ಯಗಳು ಹೀಗೂ ಉಕ್ತವಾಗಿದೆ. ॥ ೨ ॥

ಮಂ ॥ ಚತ್ವಾರಃ ಪುರುಷಾ ಇತಿ ಬಾಧ್ವಃ ಶರೀರಪುರುಷಚ್ಛಂದಃ ಪುರುಷೋ ವೇದಪುರುಷೋ ಮಹಾಪುರುಷ ಇತಿ ಶರೀರಪುರುಷ ಇತಿ ಯಮವೋಚಾಮ ಸ ಯ ಏವಾಯಂ ದೈಹಿಕ ಆತ್ಮಾ ತಸ್ಯ ಯೋಽಯಮಶರೀರಃ ಪ್ರಜ್ಞಾತ್ಮಾ ಸರಸಚ್ಛಂದಃ ಪುರುಷ ಇತಿ ಯಮವೋಚಾಮಾಕ್ಷರಸಮಾಮ್ನಾಯ ಏವ ತಸ್ಯೈತಸ್ಯಾಕಾರೋ ರಸೋ ವೇದಪುರುಷ ಇತಿ ಯಮವೋಚಾಮ ಯೇನ ವೇದಾನ್ವೇದ ಋಗ್ವೇದಂ ಯಜುರ್ವೇದಂ ಸಾಮವೇದಂ ತಸ್ಯೈತಸ್ಯ ಬ್ರಹ್ಮಾ ರಸಸ್ತಸ್ಮಾದ್ಬ್ರಾಹ್ಮಣಂ ಬ್ರಹ್ಮಿಷ್ಠಂ ಕುರ್ವೀತ ಯೋ ಯಜ್ಞಸ್ಯೋಲ್ಬಣಂ ಪಶ್ಯೇನ್ಮಹಾಪುರುಷ ಇತಿ ಯಮವೋಚಾಮ ಸಂವತ್ಸರ ಏವ ಪ್ರಧ್ವಂಸಯನ್ನನ್ಯಾನಿ ಭೂತಾನ್ಯೇಕ್ಯಾ(ನಿ) ಭಾವಯನ್ನನ್ಯಾನಿ ತಸ್ಯೈತಸ್ಯಾಸಾವಾದಿತ್ಯೋ ರಸಃ ಸ ಯಶ್ಚಾಯಮಶರೀರಃ ಪ್ರಜ್ಞಾತ್ಮಾ ಯಶ್ಚಾಸಾವಾದಿತ್ಯಃ ಏಕಮೇತದಿತಿ ವಿದ್ಯಾತ್ತಸ್ಮಾತ್ಪುರುಷಂ ಪುರುಷಂ ಪ್ರತ್ಯಾದಿತ್ಯೋ ಭವತಿ ತದಪ್ಯೇತದೃಷಿಣೋಕ್ತಂ ಚಿತ್ರಂ ದೇವಾನಾಮುದಗಾದನೀಕಂ ಚಕ್ಷುರ್ಮಿತ್ರಸ್ಯ ವರುಣಸ್ಯಾಗ್ನೇಃ ॥ ಆಪ್ರಾ ದ್ಯಾವಾಪೃಥಿವೀ ಅಂತರಿಕ್ಷಂ ಸೂರ್ಯ ಆತ್ಮಾ ಜಗತಸ್ತಸ್ಥುಷಶ್ಚೇತ್ಯೇತಾಮನುವಿಧಂ ಸಂಹಿತಾಂ

ಸಂಧೀಯಮಾನಾಂ ಮನ್ಯ ಇತಿ ಹ ಸ್ಮಾಹ ಬಾಧ್ವ ಏತಂ ಹ್ಯೇವ ಬಹ್ವೃಚಾ ಮಹತ್ಯುಕ್ಥೇ. ಮೀಮಾಂಸಂತ ಏತಮಗ್ನಾವಧ್ವರ್ಯವ ಏತಂ ಮಹಾವ್ರತೇ ಛಂದೋಗಾ ಏತಮಸ್ಯಾಮೇತಂ ದಿವ್ಯೇತಂ ವಾಯಾವೇತಮಾಕಾಶ ಏತಮಪ್ಸ್ವೇತಮೋಷಧೀಷ್ವೇತಂ ವನಸ್ಪತಿ ಷ್ವೇತಂ ಚಂದ್ರಮಸ್ಯೇತಂ ನಕ್ಷತ್ರೇಷ್ವೇತಂ ಸರ್ವೇಷು ಭೂತೇಷ್ವೇತ ಮೇವ ಬ್ರಹ್ಮೇತ್ಯಾಚಕ್ಷತೇ ಸ ಏಷ ಸಂವತ್ಸರ ಸಮ್ಮಾನಶ್ಚಕ್ಷುರ್ಮ ಯಃ ಶ್ರೋತ್ರಮಯಶ್ಛಂದೋಮಯೋ ಮನೋಮಯೋ ವಾಙ್ಮ ಯ ಆತ್ಮಾ ಸ ಯ ಏವಮೇತಂ ಸಂವತ್ಸರಸಮ್ಮಾನಂ ಚಕ್ಷುರ್ಮ ಯಂ ಶ್ರೋತ್ರಮಯಂ ಛಂದೋಮಯಂ ಮನೋಮಯಂ ವಾಙ್ಮ ಯಮಾತ್ಮಾನಂ ಪರಸ್ಮೈ ಶಂಸತಿ ॥ ೩ ॥

ಅ ॥ ಬಾಧ್ವಃ=ಸಂಸಾರಬಾಧವುಳ್ಳವರಿಂದ ಪ್ರಾಪ್ಯನಾದ ವಿಷ್ಣುವಿನ ಆಜ್ಞಾನುಸಾರ ವಾಗಿ ಮುಕ್ತಿಯನ್ನು ಕೊಡತಕ್ಕ ವಾಯುವು, ಶರೀರ ಪುರುಷಃ ಛಂದಃ ಪುರುಷಃ ವೇದಪುರುಷಃ ಮಹಾ ಪುರುಷಃ ಇತಿ=ಶರೀರ ಪುರುಷಾದಿಗಳೆಂದು, ಚತ್ವಾರಃ ಪುರುಷಾಃ=ನಾಲ್ಕು ಪುರುಷರು, (ಇರುತ್ತಾರೆ.) ಇತಿ=ಎಂದು, (ಹೇಳುತ್ತಾನೆ.) ಯಂ=ಯಾರನ್ನು, ಶರೀರ ಪುರುಷ ಇತಿ= ಶರೀರ ಪುರುಷನೆಂದು, ಅವೋಚಾಮ=ಹೇಳಿದೆವೋ, ಯಃ ಏವ=ಯಾವಾತನು, ಅಯಂ ದೈಹಿಕ ಆತ್ಮಾ=ಎಲ್ಲಾ ದೇಹಗಳಿಗೂ ಅಭಿಮಾನಿಯಾದ ಶಿವನೋ, ಸ ಏವ=ಆತನೇ, ತಸ್ಯ= ಆ ಶಿವನಿಗೆ, ಯೋಽಯಂ=ಯಾವ ಈ ದೇಹದಲ್ಲಿರತಕ್ಕ, ಅಶರೀರಃ=ಪ್ರಾಕೃತ ಶರೀರರಹಿತ ನಾದ, ಪ್ರಜ್ಞಾತ್ಮಾ=ಪ್ರಕೃಷ್ಟ ಜ್ಞಾನರೂಪನಾದ ಅನಿರುದ್ಧನಾಮಕ ಹರಿಯೋ, ಸಃ=ಆತನು, ರಸಃ=ಶರೀರ ಪುರುಷರಿಂದ ಪ್ರಾಪ್ಯನಾದುದರಿಂದ ತನ್ನಿಯಾಮಕನಾಗಿ ಅಲ್ಲಿದ್ದು ಸಾರರೂಪನು. ಯಂ=ಯಾರನ್ನು, ಛಂದಃ ಪುರುಷಃ ಇತಿ=ಛಂದಃಪುರುಷನೆಂದು, ಅವೋಚಾಮ=ಹೇಳಿ ದೆವೋ, ಸಃ=ಆತನು, ಅಕ್ಷರ ಸಮಾಮ್ನಾಯಃ=ಎಲ್ಲಾ ವರ್ಣಗಳಿಗೂ ಅಭಿಮಾನಿಯಾದ ಶೇಷನೇ, ತಸ್ಯ ಏತಸ್ಯ=ಆ ಈ ಶೇಷನಿಗೆ, ಅಕಾರಃ=ಅ ಎಂಬ ಕರೆಯಲ್ಪಡುವ ಅಕಾರದಲ್ಲಿರ ತಕ್ಕ ವಾಸುದೇವನು, ರಸಃ=ಸಾರರೂಪನು. ಯಂ=ಯಾರನ್ನು, ವೇದ ಪುರುಷ ಇತಿ= ವೇದ ಪುರುಷನೆಂದು, ಅವೋಚಾಮ=ಹೇಳಿದೆವೋ, ಸಃ=ಆ ಪುರುಷನು, ಅಯಮೇವ= ಇವನೇ ಸರಿ. (ಜನರು) ಯೇನ=ಯಾರಿಂದ ಪ್ರೇರಿತರಾಗಿ, ವೇದಾನ್=ವೇದಗಳನ್ನು, ಋಗ್ವೇದಂ=ಋಗ್ವೇದವನ್ನು, ಯಜುರ್ವೇದಂ=ಯಜುರ್ವೇದವನ್ನು, ಸಾಮವೇದಂ=ಸಾಮ ವೇದವನ್ನು, ವೇದ=ತಿಳಿಯುತ್ತಾರೋ, (ಅಂತೂ ಸರ್ವವೇದಗಳಿಗೆ ಅಭಿಮಾನಿಯಾದವನು ಗರುಡನೇ ಸರಿ.) ತಸ್ಯ ಏತಸ್ಯ=ಆ ಈ ವೇದಪುರುಷನಿಗೆ, ಬ್ರಹ್ಮಾ=ಜ್ಞಾನಗಳಿಂದ ಪೂರ್ಣ ನಾದುದರಿಂದಲೂ ಬ್ರಹ್ಮಾಖ್ಯಋತ್ವಿಕ್‌ನಲ್ಲಿಷ್ಟುದರಿಂದಲೂ ಬ್ರಹ್ಮಾ ಎಂದು ಹೆಸರುಳ್ಳ ಸಂಕರ್ಷ ಣನು, ರಸಃ=ಸಾರರೂಪನು. ತಸ್ಮಾತ್=ಆದುದರಿಂದ, (ಬ್ರಹ್ಮಾಖ್ಯ ಋತ್ವಿಜನಲ್ಲಿ ವಿಶೇಷಾ ಕಾರವಾಗಿ ಸಂಕರ್ಷಣನು ಇದ್ದುದರಿಂದ) ಯಃ=ಯಾವಬ್ರಹ್ಮಾಖ್ಯ ಋತ್ವಿಜನು, ಯಜ್ಞಸ್ಯ= ಯಾಗದ, ಉಲ್ಬಣಂ=ಕ್ರೂರದೋಷವನ್ನು, ಪಶ್ಯೇತ್=ನೋಡುತ್ತಾನೋ, (ಕೃತಕರಣಾದಿ ವೈಗುಣ್ಯ ಪ್ರಸಕ್ತಿಯನ್ನು ನೋಡಿ ಅದಕ್ಕೆ ಪ್ರತಿಕ್ರಿಯೆಯನ್ನು ಆಲೋಚಿಸುತ್ತಾನೋ,) (ಅಂತಹ) ಬ್ರಹ್ಮಿಷ್ಠಂ=ಬ್ರಹ್ಮಜ್ಞಾನಿಯೇ ಆದ, ಬ್ರಹ್ಮಾಣಂ=ಬ್ರಹ್ಮನನ್ನು, ಕುರ್ವೀತ=ಮಾಡತಕ್ಕದು. (ಆತನಲ್ಲಿಯೇ ವಿಶೇಷಾಕಾರವಾಗಿ ಹರಿಸನ್ನಿಧಾನಕ್ಕೆ ಯೋಗ್ಯತೆಯಿರುವುದು.) ಯಂ=

ಯಾರನ್ನು, ಮಹಾಪುರುಷ ಇತಿ=ಮಹಾಪುರುಷನೆಂದು, ಅಪ್ರೋಚಾಮ=ಹೇಳಿದೆವೋ, ಸಃ=ಆತನು, ಸಂವತ್ಸರ ಏವ=ಸಂವತ್ಸರಾಭಿಮಾನಿಯಾದ ಬ್ರಹ್ಮನೇ. ಅನ್ಯಾನಿ ಭೂತಾನಿ= ಕೆಲವು ಪ್ರಾಣಿಗಳನ್ನು, ಪ್ರಧ್ವಂಸಯನ್=ನಾಶೀಕರಿಸುವವನಾಗಿ, ಅನ್ಯಾನಿ=ಕೆಲವು ಪ್ರಾಣಿಗಳನ್ನು, ಐಕ್ಯಾಭಾವಯನ್=ಲೀನಭಾವವನ್ನು ಪ್ರಾಪಿಸಿಕೊಡುವವನಾಗಿ (ಇರುತ್ತಾನೆ. ಸಂವತ್ಸರರೂಪವಾದ ಕ್ಲಪ್ತಕಾಲವು ಪೂರ್ಣವಾಗೋಣ, ಕೆಲವರು ಹೊರಗೇನೇ ನಷ್ಟವಾದ ಶರೀರವುಳ್ಳವರಾಗುತ್ತಾರೆ. ಕೆಲವು ಮಂಡೂಕಾದಿಗಳು ಸರ್ಪಾದಿಗಳಲ್ಲಿ ಅಡಗಿದ ದೇಹವುಳ್ಳವುಗಳು ಆಗುತ್ತವೆ, ಎಂದು ಪ್ರಸಿದ್ಧಿಯು. ಇವೆಲ್ಲವೂ ಕಾಲಾಭಿಮಾನಿಯಾದ ಬ್ರಹ್ಮನಕೃತ್ಯವು) (ಯಾ ಅನ್ಯಾನಿ=ಭಗವದ್ವಿರೋಧಿಗಳಾದ ಭೂತಗಳನ್ನು, ಪ್ರಧ್ವಂಸಯನ್=ತಮಸ್ಸಿನಲ್ಲಿ ಹಾಕುವವನಾಗಿ, ಅನ್ಯಾನಿ=ಮುಕ್ತಿಯೋಗ್ಯಜೀವರನ್ನು, ಐಕ್ಯಾಭಾವಯನ್=ಮುಕ್ತಿಯಲ್ಲಿ ತನ್ನೊಳಗೆ ಸ್ಥಾನೈಕ್ಯವನ್ನು ಪ್ರಾಪಿಸುವವನಾಗಿ), ತಸ್ಯ ಏತಸ್ಯ=ಸಂವತ್ಸರನಾಮಕನಾದ ಬ್ರಹ್ಮನಿಗೆ, ಅಸೌ ಆದಿತ್ಯಃ=ಆದಿತ್ಯಮಂಡಲದಲ್ಲಿರತಕ್ಕ ಜಗತ್ತಿಗೆ ಆದಿಭೂತನಾದುದರಿಂದಲೂ ಸರ್ವಭೂತಗಳಲ್ಲಿ ವ್ಯಾಪ್ತನಾದುದರಿಂದಲೂ ಸರ್ವಜೀವರಿಗೆ ನಿಯಾಮಕನಾದುದರಿಂದಲೂ ಆದಿತ್ಯನಾಮಕನಾದ ಪ್ರದ್ಯುಮ್ನನು, ರಸಃ=ಸಾರರೂಪನು. ಸಃ=ಪ್ರಸಿದ್ಧನಾದ, ಯಶ್ಚ ಅಯಂ=ಯಾವ ಈ ದೇಹದಲ್ಲಿ ಸನ್ನಿಹಿತನಾದ, ಅಶರೀರಃ=ಪ್ರಾಕೃತಶರೀರ ರಹಿತನಾದ, ಪ್ರಜ್ಞಾತ್ಮಾ=ಪ್ರಕೃಷ್ಟಜ್ಞಾನರೂಪನಾದ, ಎಲ್ಲಾ ದೇಹಗಳಲ್ಲಿರತಕ್ಕ ಅನಿರುದ್ಧನೋ, ಯಶ್ಚ ಅಸೌ ಆದಿತ್ಯಃ=ಯಾವ ಈ ಆದಿತ್ಯನಲ್ಲಿರತಕ್ಕ ಪ್ರದ್ಯುಮ್ನನೋ, ಏತತ್=ಈ ರೂಪದ್ವಯವನ್ನು, ಏಕಮಿತಿ=ಅತ್ಯಂತಾಭಿನ್ನವಾದದ್ದೆಂದು, ವಿದ್ಯಾತ್=ತಿಳಿಯತಕ್ಕದ್ದು. (ಸಂಕರ್ಷಣ ವಾಸುದೇವರೂ ಕೂಡ ಅಭಿನ್ನರೆಂದು ತಿಳಿಯುತಕ್ಕದ್ದು.) ತಸ್ಮಾತ್=ಪುರುಷದೇಹದಲ್ಲಿರತಕ್ಕ ಅನಿರುದ್ಧನಿಗೂ ಆದಿತ್ಯಮಂಡಲದಲ್ಲಿರಕ್ಕ ಪ್ರದ್ಯುಮ್ನನಿಗೂ ಐಕ್ಯವಿದ್ದುದರಿಂದಲೇ, ಆದಿತ್ಯಃ=ಆದಿತ್ಯನಲ್ಲಿರತಕ್ಕ ವಿಷ್ಣುವು ಪುರುಷಂ ಪುರುಷಂ ಪ್ರತಿ=ಪ್ರತಿ ಪುರುಷರಲ್ಲಿಯೂ ಭವತಿ=ನಿಯಾಮಕನಾಗಿ ಆಯಾಯ ದೇಹದಲ್ಲಿರತಕ್ಕವನು ಆಗುತ್ತಾನೆ. ಆದಿತ್ಯನಲ್ಲಿದ್ದು ಸರ್ವರಿಗೂ ನನಗೆ ಅಭಿಮುಖನಾಗಿ ಆದಿತ್ಯನು ಇದ್ದಾನೆ ಎಂಬೀ ಪ್ರತೀತಿಯನ್ನು ಹುಟ್ಟಿಸುವವನೂ ಆಗುತ್ತಾನೆ. ತದಪ್ಯೇತತ್=ಆ ಈ ಶಿವಾದಿ ಸರ್ವದೇವನಿಯಾಮಕತ್ವಾದಿಯು, ಋಷಿಣಾ=ಮಂತ್ರದ್ರಷ್ಟ್ರನಿಂದ, ಉಕ್ತಂ=ಹೇಳಲ್ಪಟ್ಟಿದೆ. ಚಿತ್ರಂ=ಅತ್ಯಂತ ಚಿದ್ರೂಪನೂ ಪರಮಚೇತನನೂ, ದೇವಾನಾಂ=ಬ್ರಹ್ಮಾದಿ ಸರ್ವದೇವತೆಗಳಿಗೆ, ಅನೀಕಂ=(ಅನನಾತ್ ಅನ್) ಚೇಷ್ಟಕನೂ (ಈಶಿತೃತ್ವಾತ್ ಈ) ನಿಯಾಮಕನೂ, (ಕರ್ತೃತ್ವಾತ್ಕಂ) ಸೃಷ್ಟಿಕರ್ತನೂ, ಮಿತ್ರಸ್ಯ ವರುಣಸ್ಯ ಅಗ್ನೇಃ=ಮಿತ್ರಾದಿ ಸರ್ವದೇವತೆಗಳಿಗೆ, ಚಕ್ಷುಃ=ಜ್ಞಾನಪ್ರದನಾದ, ಸೂರ್ಯಃ=ಸೂರ್ಯನಲ್ಲಿರತಕ್ಕ ಶ್ರೀ ಹರಿಯು, ಉದಗಾತ್=ಉದಯಿಸಿದನು. ಜಗತಃ ತಸ್ಥುಷಶ್ಚ=ಜಂಗಮ ಸ್ಥಾವರಾತ್ಮಕ ಸರ್ವಜೀವರನ್ನು, ಆತ್ಮಾ=ತನ್ನ ವಶದಲ್ಲಿ ಸ್ಥಾಪಿಸಿರುವುದರಿಂದಲೂ ಪ್ರಲಯಕಾಲದಲ್ಲಿ ಭಕ್ಷಿಸುವುದರಿಂದಲೂ ಆತ್ಮಾ ಎಂದು ಹೇಳಲ್ಪಟ್ಟ, ಸೂರ್ಯಃ=ಜ್ಞಾನಿಪ್ರಾಪ್ಯನಾದುದರಿಂದ ಸೂರ್ಯನಾಮಕನಾದ ಶ್ರೀ ಹರಿಯು, ದ್ಯಾವಾಪೃಥಿವೀ=ಸ್ವರ್ಗಭೂಮಿಗಳನ್ನೂ, ಅಂತರಿಕ್ಷಂ=ಅಂತರಿಕ್ಷಲೋಕವನ್ನೂ, ಆ=ಚೆನ್ನಾಗಿ, ಆಪ್ರಾಃ=ತನ್ನ ಪ್ರಕಾಶದಿಂದ ಪೂರ್ಣೀಕರಿಸಿದನು. ಇತಿ=ಈ ಪ್ರಕಾರ, ಋಷಿಯಿಂದ ಹೇಳಲ್ಪಟ್ಟಿದೆ. ಏತಾಂ ಸಂಹಿತಾಂ=ಈ ಸರ್ವವೈದಿಕ ಪೂರ್ವೋತ್ತರವರ್ಣ ಸಂಧಿರೂಪವಾದ ಸಂಹಿತೆಯನ್ನು, (ಯಾವಾಗ ೪ ಪ್ರಕಾರನಾದ ವಿಷ್ಣುವು ಸಂಹಿತಾ ದೇವತೆಯೆಂದು ತಿಳಿಯಲ್ಪಡುತ್ತಾನೋ ಹಾಗೆಯೇ ಪೂರ್ವವರ್ಣಕ್ಕೆ ನಾರಾಯಣನು ದೇವತೆಯು, ಉತ್ತರವರ್ಣಕ್ಕೆ ಸರ್ವ ಪ್ರಾದುರ್ಭಾವರೂಪಗಳು ದೇವತೆಗಳು ಎಂದೂ ತಿಳಿಯಲ್ಪಡುತ್ತಾರೋ, ಆವಾಗಲೇ) ಅನುವಿಧಂ=ಪ್ರಕಾರವನ್ನನುಸರಿಸಿ, (ಚೆನ್ನಾಗಿ) ಸಂಧೀಯಮಾನಾಂ=ಸಂಧಿತವನ್ನಾಗಿ,

(ಅಹಂ=ನಾನು) ಮನ್ಯೇ=ತಿಳಿಯುತ್ತೇನೆ. ಇತಿ ಹ=ಹೀಗೆಯೇ, ಬಾಧ್ವಃ=ಬಾಧ್ವಋುಷಿಯು, ಆಹ ಸ್ಮ=ಹೇಳಿದನು. ಏತಂ ಹಿ ಏವ=ಈ ವಿಷ್ಣುವನ್ನೇ, ಬಹ್ವೃಚಾಃ=ಋಗ್ವೇದಿಗಳು, ಮಹತ್ಯುಕ್ಥೇ=ಬೃಹತೀ ಸಹಸ್ರದಲ್ಲಿ, ಮೀಮಾಂಸಂತೇ=ವಿಚಾರ ಮಾಡುತ್ತಾರೆ. (ಬೃಹತೀಸಹಸ್ರ ಪ್ರತಿಪಾದ್ಯನನ್ನಾಗಿ ತಿಳಿಯುತ್ತಾರೆ). ಏತಂ=ಈ ವಿಷ್ಣುವನ್ನು, ಅಗ್ನೌ=ಇಷ್ಟಕಾನಿರ್ಮಿತವಾದ ಚಿತಿಯಲ್ಲಿದ್ದ ಅಗ್ನಿಯಲ್ಲಿ, ಅಧ್ವರ್ಯವಃ=ಯಜುರ್ವೇದಿಗಳು, ಮೀಮಾಂಸಂತೇ=ಧ್ಯಾನಿಸುತ್ತಾರೆ. ಏತಂ=ಈ ವಿಷ್ಣುವನ್ನೇ, ಮಹಾವ್ರತೇ=ಮಹಾವ್ರತಾಖ್ಯ ಸ್ತೋತ್ರದಲ್ಲಿ, ಛಂದೋಗಾಃ=ಸಾಮವೇದಿಗಳು, ಮೀಮಾಂಸಂತೇ=ತತ್ಪ್ರತಿಪಾದ್ಯ ದೇವತೆಯನ್ನು ತಿಳಿಯುತ್ತಾರೆ. ಏತಂ=ಈ ವಿಷ್ಣುವನ್ನು, ಅಸ್ಯಾಂ=ಈ ಪೃಥಿವಿಯಲ್ಲಿಯೂ, ಏತಂ=ಈ ವಿಷ್ಣುವನ್ನು, ದಿವಿ=ಸ್ವರ್ಗಲೋಕದಲ್ಲಿಯೂ, ಏತಂ=ಈತನನ್ನು, ವಾಯೌ=ವಾಯುವಿನಲ್ಲಿಯೂ, ಏತಂ=ಈತನನ್ನು, ಆಕಾಶೇ=ಆಕಾಶದಲ್ಲಿಯೂ, ಏತಂ=ಈತನನ್ನು, ಅಪ್ಸು=ಜಲಗಳಲ್ಲಿಯೂ, ಏತಂ=ಈತನನ್ನು, ಓಷಧೀಷು=ಪಕ್ವಫಲವುಳ್ಳವುಗಳಲ್ಲಿಯೂ, ಏತಂ=ಈತನನ್ನು, ವನಸ್ಪತಿಷು=ವೃಕ್ಷಗಳಲ್ಲಿಯೂ, ಏತಂ=ಇವನನ್ನು, ಚಂದ್ರಮಸಿ=ಚಂದ್ರನಲ್ಲಿಯೂ, ಏತಂ=ಇವನನ್ನು, ನಕ್ಷತ್ರೇಷು=ನಕ್ಷತ್ರಗಳಲ್ಲಿಯೂ, ಏತಂ=ಈ ಹರಿಯನ್ನು, ಸರ್ವೇಷು ಭೂತೇಷು=ಎಲ್ಲಾ ಪ್ರಾಣಿಗಳಲ್ಲಿಯೂ, (ವ್ಯಾಪ್ತನನ್ನಾಗಿ ಜ್ಞಾನಿಗಳು ವಿಚಾರಮಾಡುತ್ತಾರೆ.) ಏತಮೇವ=ಇವನನ್ನೇ, ಬ್ರಹ್ಮೇತಿ=ಪೂರ್ಣಗುಣಸ್ವರೂಪನೆಂದು, ಆಚಕ್ಷತೇ=ಹೇಳುತ್ತಾರೆ. (ಹೀಗೆ ಬಾಧ್ವನು ಹೇಳುತ್ತಾನೆ). ಸ ಏಷಃ ಆತ್ಮಾ=ಆ ಈ ಶ್ರೀ ಹರಿಯು, ಸಂವತ್ಸರ ಸಂಮಾನಃ=ಚತುರ್ಮುಖನಿಗೆ ಸದೃಶನು. (ಚೆನ್ನಾಗಿ ಆವಾಸಮಾಡುವವರಿಗೆ ರತಿಯನ್ನು ಕೊಡುವುದರಿಂದ ಸಂವತ್ಸರನು ಚತುರ್ಮುಖನು. ಆತನು ಬಹುರೂಪಿಯಾಗಿ ಬಹು ಜಗತ್ತನ್ನು ಅಧಿಷ್ಠಾನೀಕರಿಸಿಕೊಂಡು ಆಯಾಯ ಜಗತ್ತಿಗೆ ನಿಯಾಮಕನಾಗುತ್ತಾನೆ. ಆ ಚತುರ್ಮುಖನ ಅನಂತರೂಪಗಳಲ್ಲಿ ಶ್ರೀ ಹರಿಯು ತಾನೂ ಅಷ್ಟುರೂಪಗಳಿಂದ ಆ ಚತುರ್ಮುಖನಿಗೆ ನಿಯಾಮಕನಾಗಿದ್ದಾನೆ. ಆದುದರಿಂದ ಸಂವತ್ಸರ ಸಂಮಾನನೆಂದು ಹೇಳಲ್ಪಡುತ್ತಾನೆ.) ಚಕ್ಷುರ್ಮಯಃ ಶ್ರೋತ್ರಮಯಃ ಛಂದೋಮಯಃ ಮನೋಮಯಃ ವಾಙ್ಮಯಃ ಆತ್ಮಾ. ಸಃ=ಪ್ರಸಿದ್ಧನಾದ, ಯಃ=ಯಾವ ಪುರುಷನು, ಏವಂ=ಈ ಪ್ರಕಾರವಾಗಿ, ಏತಂ ಸಂವತ್ಸರ ಸಂಮಾನಂ ಚಕ್ಷುರ್ಮಯಂ ಶ್ರೋತ್ರಮಯಂ ಛಂದೋಮಯಂ ಮನೋಮಯಂ ವಾಙ್ಮಯಂ, ಆತ್ಮಾನಂ=ಶ್ರೀಹರಿಯನ್ನು, ಪರಸ್ಮೈ=ಅಯೋಗ್ಯರಿಗೋಸ್ಕರ, ಶಂಸತಿ=ಉಪದೇಶಿಸುತ್ತಾನೋ, ಹಾಗೆಯೇ, ಪರಸ್ಮೈ=ಆಚಾರ್ಯಪಿತೃಗಳಿಂದಿತರನಿಗೋಸ್ಕರ, (ಅವನಿಂದ ಮಾಡಲ್ಪಡತಕ್ಕ ಮಹಾವ್ರತಾಖ್ಯ ಕರ್ಮದಲ್ಲಿ) ಶಂಸತಿ=(ಬೃಹತೀಸಹಸ್ರಾದಿ ಶಸ್ತ್ರದಿಂದ) ಉಪದೇಶಿಸುತ್ತಾನೋ, ಯಾ ಪರಸ್ಮೈ=ಆಚಾರ್ಯ ಪಿತೃಗಳಿಂದ ಇತರನನ್ನು ಉದ್ದೇಸಿಶಿ, (ಮಹಾವ್ರತಾಖ್ಯ ಸ್ತೋತ್ರದಿಂದ) ಆತ್ಮಾನಂ=ಶ್ರೀ ಹರಿಯನ್ನು ಶಂಸತಿ=ಉಪದೇಶಿಸುತ್ತಾನೋ, (ಇದಕ್ಕೆ ಮೇಲಿನ ಖಂಡದಿಂದ ಅನ್ವಯವು.) ॥ ೩ ॥

ಭಾ॥ (a) ಸಂಸಾರಬಾಧಿತ್ವೈಃ ಪ್ರಾಪ್ಯೋ ಬಾಧ್ವೋ ವಾಯುರುದಾಹೃತಃ । ಸ ಹಿ ಮೋಕ್ಷಪ್ರದೋ ವಿಷ್ಣೋರಾಜ್ಞಯಾ ಸ ಉವಾಚ ಹ ॥ (b) ಸರ್ವದೇಹಾಭಿಮಾನೀ ತು ಶರೀರಪುರುಷಃ ಶಿವಃ । ಸರ್ವವರ್ಣಾಭಿಮಾನೀ ಚ ಶೇಷೋಽಸೌ ಛಾಂದಸಃ ಪುಮಾನ್ ॥ (c) ಸರ್ವವೇದಾಭಿಮಾನ್ಯೇವ ಗರುಡೋ ವೇದಪೂರುಷಃ । ಸಂವತ್ಸರಾಭಿಮಾನೀ ತು ಬ್ರಹ್ಮೈವ ಹಿ ಮಹಾಪುಮಾನ್ ॥ (d) ಸಾರಃ ಶಿವಸ್ಯಾನಿರುದ್ಧನಾಮಾ ದೇಹಸ್ಥಿತೋ

ಹರಿಃ । ಅ ಇತ್ಯಾಕ್ರಿಯತೇ ಯಸ್ಮಾದ್ವಾಸುದೇವೋ ಹ್ಯಕಾರಕಃ ॥ ಶೇಷಸ್ಯ ಸಾರಃ ಸ ವಿಭುಃ (e) ಬ್ರಹ್ಮಾಖ್ಯೋ ಜ್ಞಾನಬೃಂಹಣಾತ್ । ಸಂಕರ್ಷಣಾಖ್ಯಸ್ತು ಹರಿಃ ಸಾರಃ ಸ ಗರುಡಸ್ಯ ಚ ॥ ಬ್ರಹ್ಮರ್ತ್ವಿಕ್ಸಂಸ್ಥಿತಶ್ಚಾಸೌ (f) ತಸ್ಮಾದ್ಬ್ರಹ್ಮಿಷ್ಠಮೇವ ಹಿ । ಕುರ್ಯಾದ್ಬ್ರಹ್ಮರ್ತ್ವಿಜಂ ತಸ್ಮಿನ್ವಿಶೇಷೇಣ ಸ್ಥಿತೋ ಹರಿಃ ॥

ಅ ॥ (a) ಸಂಸಾರದಲ್ಲಿ ಪೀಡಿಸಿಕೊಳ್ಳಲ್ಪಟ್ಟವರಿಂದ ಪ್ರಾಪ್ಯನಾದ ವಾಯುವು ಬಾಧ್ವನೆಂದು ಹೇಳಲ್ಪಡುತ್ತಾನೆ. ಆತನೇ ವಿಷ್ಣುವಿನ ಆಜ್ಞೆಯಿಂದ ಮುಕ್ತಿಯನ್ನು ಕೊಡತಕ್ಕವನು ಎಂದು ಹೇಳಿದನು. (b) ಎಲ್ಲಾ ದೇಹಗಳಿಗೂ ಅಭಿಮಾನಿಯಾದ ಶಿವನಾದರೂ ಶರೀರಪುರುಷನೆನ್ನಿಸುತ್ತಾನೆ. ಎಲ್ಲಾ ವರ್ಣಗಳಿಗೂ ಅಭಿಮಾನಿಯಾದ ಈ ಶೇಷನು ಛಂದಸ್ಸಂಬಂಧಿಯಾದ ಪುರುಷನೆನ್ನಿಸುತ್ತಾನೆ. (c) ಎಲ್ಲಾ ವೇದಗಳಿಗೂ ಅಭಿಮಾನಿಯಾದ ಗರುಡನೇ ವೇದಪುರುಷನು. ಸಂವತ್ಸರಕ್ಕೆ ಅಭಿಮಾನಿಯಾದ ಬ್ರಹ್ಮನೇವೇ ಮಹಾಪುರುಷನು. (d) ದೇಹದಲ್ಲಿರತಕ್ಕ ಅನಿರುದ್ಧನಾಮಕನಾದ ಶ್ರೀ ಹರಿಯು ಶಿವನಿಗೆ ಸಾರರೂಪನು. ಯಾವ ಕಾರಣದಿಂದ ವಾಸುದೇವನು 'ಅ' ಎಂದು ಕರೆಯಲ್ಪಡುತ್ತಾನೋ ಆದುದರಿಂದ 'ಅ' ಎಂದು ಕರೆಯಲ್ಪಡುವ ಆ ವಿಭುವು ಶೇಷನಿಗೆ ಸಾರರೂಪನು. (e) ಜ್ಞಾನಪೂರ್ಣನಾದುದರಿಂದ ಬ್ರಹ್ಮನೆಂದು ಹೆಸರುಳ್ಳ ಸಂಕರ್ಷಣನಾಮಕ ಆ ಹರಿಯು ಗರುಡನಿಗೆ ಸಾರರೂಪನು. ಈತನು ಬ್ರಹ್ಮಾಖ್ಯಋತ್ವಿಜನಲ್ಲಿರುವವನು. (f) ಯಾವ ಕಾರಣದಿಂದ ಆ ಬ್ರಹ್ಮಾಖ್ಯಋತ್ವಿಜನಲ್ಲಿ ಶ್ರೀ ಹರಿಯು ವಿಶೇಷಾಕಾರವಾಗಿ ಇರುತ್ತಾನೋ, ಆದುದರಿಂದ ಬ್ರಹ್ಮಾಖ್ಯಋತ್ವಿಜನನ್ನು (ಆತನಿಗೆ ಉತ್ತಮಾಧಿಷ್ಠಾನ ಸಿಗುವುದಕ್ಕೋಸ್ಕರ) ಬ್ರಹ್ಮಜ್ಞಾನಿಯನ್ನೇ ಮಾಡತಕ್ಕುದು.

ಭಾ॥ (a) ಬ್ರಹ್ಮಣಃ ಸಾರಭೂತಸ್ತು ಪ್ರದ್ಯುಮ್ನೋ ಭಗವಾನ್ಹರಿಃ । ಸ ಏವಾದಿತ್ಯಸಂಸ್ಥಶ್ಚ ಸಹ್ಯಾದಿರ್ಜಗತೋ ವಿಭುಃ ॥ ತತಶ್ಚ ಸರ್ವಭೂತೇಷು ಜೀವಾನಾಂ ವಿನಿಯಾಮಕಃ । (b) ಸ ಏವಾದಿತ್ಯಗೋ ವಿಷ್ಣುರ್ಯಃ ಪ್ರದ್ಯುಮ್ನಾಭಿಧೋ ಹರಿಃ ॥ ಸ ಏವ ಸರ್ವದೇಹೇಷು ಚಾನಿರುದ್ಧತನುಃ ಸ್ಥಿತಃ । ಸಂಕರ್ಷಣೋ ವಾಸುದೇವ ಇತ್ಯೇಕಃ ಸ ಚತುರ್ವಿಧಃ ॥ (c) ಪ್ರತಿಪೂರುಷಮೇತಸ್ಮಾತ್ ಸ್ಥಿತೋ ವಿಷ್ಣುರ್ನಿಯಾಮಕಃ । ಆದಿತ್ಯಾದಿಷು ಚ ಸ್ಥಿತ್ವಾ ದ್ಯೋತಕೋಽಸೌ ಪ್ರತಿ ಪ್ರತಿ ॥ (d) ಸ ಚೇತನತಮತ್ವಾದ್ಧಿ ಚಿತ್ರಮಿತ್ಯಭಿಧೀಯತೇ । ಮುಖ್ಯತ್ವಾತ್ಸರ್ವದೇವಾನಾಮನನಾದೀಶಿತೃತ್ವತಃ ॥ ಕರ್ತೃತ್ವಾದಪ್ಯನೀಕಂ ಸ ಉದ್ಯೈತ್ಸೂರ್ಯಸ್ಥಿತೋ ಹರಿಃ । (e) ಜ್ಞಾನದತ್ವಾಚ್ಚ ದೇವಾನಾಂ ಚಕ್ಷುರೇತೇನ ದರ್ಶನಾತ್ ॥ ಆಪೂರಯತ್ಸರ್ವಲೋಕಾನ್ಪ್ರಕಾಶೇನ ಜನಾರ್ದನಃ । (f) ಆದಾನಾತ್ಸರ್ವಜೀವಾನಾಮುತ್ಪತ್ತ್ಯಪ್ರಲಯೇಽಪಿ ಚ । ಆತ್ಮೇತ್ಯುಕ್ತಃ ಸ ಭಗವಾನ್ಜಗತಃ ಸ್ಥಾವರಸ್ಯ ಚ ॥

ಅ ॥ (a) ಸಂವತ್ಸರನಾಮಕ ಬ್ರಹ್ಮನಿಗಾದರೂ ಪೂಜ್ಯನಾದ ಪ್ರದ್ಯುಮ್ನನಾಮಕ ಶ್ರೀ ಹರಿಯು ಸಾರರೂಪನು. ಆತನೇ ಆದಿತ್ಯನಲ್ಲಿರತಕ್ಕವನು. ಆ ವಿಭುವೇ ಜಗತ್ತಿಗೆ ಆದಿಯು, ಸರ್ವಪ್ರಾಣಿಗಳಲ್ಲಿಯೂ ವ್ಯಾಪ್ತನು. ಜೀವರಿಗೆ ವಿಶೇಷತಃ ನಿಯಾಮಕನು. (ಆದಿತ್ವಾತ್

'ಆದಿಃ' ತತತ್ವಾತ್ 'ತ್' ನಿಯಾಮಕತ್ವಾತ್ 'ಯಃ' ಎಂಬೀವ್ಯುತ್ಪತ್ತಿಯಿಂದ ಆದಿತ್ಯನಾವು ಕನು.) (b) ಆದಿತ್ಯನಲ್ಲಿರತಕ್ಕ ಪ್ರದ್ಯುಮ್ನನಾಮಕನಾದ ಯಾವ ಶ್ರೀ ಹರಿಯೋ, ಅನಿರುದ್ಧ ಸ್ವರೂಪಿಯಾದ ಶ್ರೀ ಹರಿಯು ಎಲ್ಲಾ ದೇಹಗಳಲ್ಲಿಯೂ ಇದ್ದಾನೋ, ಆಯಾಯ ರೂಪವು ಒಂದೇ, ಅತ್ಯಂತಾಭಿನ್ನವೇ, ಎನೇ ಏವ ಶಬ್ದವು ಆದಿತ್ಯನಲ್ಲಿರತಕ್ಕವನು ವಿಷ್ಣುವೇ, ಮಂಡಲಾಂತ ರ್ಗತ ಪ್ರಸಿದ್ಧ ಸೂರ್ಯನಲ್ಲವೇ ಅಲ್ಲ, ಎಂದು ನಿಶ್ಚಾಯಕವು. ಸಂಕರ್ಷಣನು ವಾಸುದೇವನು ಎಂಬೀ ರೂಪದ್ವಯವೂ ಅತ್ಯಂತಾಭಿನ್ನವೇ. ಈ ಪ್ರಕಾರವುಳ್ಳ ಆ ಹರಿಯೂ ಪೂರ್ವವರ್ಣ ಪ್ರತಿಪಾದ್ಯ ನಾರಾಯಣನಿಂದ ಅತ್ಯಂತಾಭಿನ್ನನೇ ಸರಿ. (ಉತ್ತರವರ್ಣಪ್ರತಿಪಾದ್ಯವಾದ ಪ್ರಾದುರ್ಭಾವ ಸಮುದಾಯವೂ ಕೂಡ ಪೂರ್ವವರ್ಣಪ್ರತಿಪಾದ್ಯರೂಪದಿಂದಲೂ ಸಂಹಿತಾಪ್ರತಿಪಾದ್ಯರಾದ ಅನಿರುದ್ಧಾದಿಗಳಿಂದಲೂ ಪರಸ್ಪರವಾಗಿ ಅತ್ಯಂತಾಭಿನ್ನವು. (c) ಯಾವ ಕಾರಣದಿಂದ ಎಲ್ಲಾ ಪುರುಷರಲ್ಲಿಯೂ ಯಾವ ವಿಷ್ಣುವು ನಿಯಾಮಕನಾಗಿದ್ದಾನೋ, ಈತನೇವೇ ಆದಿತ್ಯಾದಿಗಳಲ್ಲಿದ್ದು ಪ್ರಕಾಶಕನು. ಏತಸ್ಮಾತ್=ಪುರುಷಾದಿತ್ಯರಲ್ಲಿರತಕ್ಕ ರೂಪಗಳಿಗೆ ಐಕ್ಯವಿದ್ದುದರಿಂದಲೇ ಎಲ್ಲಾ ಪುರುಷರಿಗೂ ನನಗೆ ಅಭಿಮುಖನಾಗಿ ಪ್ರಕಾಶಕನು. (ಎಂದು ಆದಿತ್ಯನು ಪ್ರತೀತಿಯನ್ನು ಹುಟ್ಟಿಸುತ್ತಾನೆ.) ಅಥವಾ ಪುರುಷಾದಿತ್ಯರಲ್ಲಿರತಕ್ಕ ರೂಪಗಳಿಗೆ ಐಕ್ಯವಿದ್ದುದರಿಂದಲೇ ಆದಿತ್ಯನಲ್ಲಿರತಕ್ಕ ವಿಷ್ಣುವು ಎಲ್ಲಾ ಪುರುಷರಲ್ಲಿಯೂ ಚಕ್ಷುಸ್ಸಿನಲ್ಲಿ ನಿಯಾಮಕನಾಗಿದ್ದಾನೆ. (ಅತ ಏವ 'ಸೂರ್ಯಮಂಡಲಗೋ ವಿಷ್ಣು ರ್ದೇಹೇ ಚಕ್ಷುಷಿ ಚ ಸ್ಥಿತಃ' ॥ ಎಂದು ಹೇಳುವರು.) ಯಾ, ಪುರುಷರಲ್ಲಿರತಕ್ಕ ರೂಪದಿಂದ ಐಕ್ಯವಿದ್ದುದರಿಂದಲೇ, ಆದಿತ್ಯಾದಿಷು= ಆದಿತ್ಯನಲ್ಲಿರತಕ್ಕ ಪ್ರದ್ಯುಮ್ನನು, ವರ್ಣಗಳಲ್ಲಿರತಕ್ಕ ವಾಸುದೇವನು, ವೇದಗಳಲ್ಲಿರತಕ್ಕ ಸಂಕರ್ಷಣನೂ ಕೂಡ ಪ್ರತಿಪುರುಷರಿಗೂ ಪ್ರಕಾಶಕನೂ ಜ್ಞಾನಕ್ಕೆ ಕಾರಣನೂ ಆಗುತ್ತಾನೆ. ಅನಿರುದ್ಧನಿಂದ ಐಕ್ಯವಿದ್ದುದರಿಂದಲೇ ನಾರಾಯಣನು, ವಾಸುದೇವನು, ಸಂಕರ್ಷಣನು, ಪ್ರದ್ಯುಮ್ನನು, ಪ್ರಾದುರ್ಭಾವಸ್ವರೂಪಿಯೂ ಕೂಡ ಎಲ್ಲಾ ಪುರುಷರಿಗೂ ನಿಯಾಮಕನಾಗಿದ್ದಾನೆ. (d) ಆ ಸೂರ್ಯನಲ್ಲಿರತಕ್ಕ ಶ್ರೀ ಹರಿಯು ಅತಿಶಯಿತ ಚಿದ್ರೂಪನಾದುದರಿಂದಲೂ ಎಲ್ಲಾ ದೇವತೆಗಳ ಮಧ್ಯದಲ್ಲಿ ಪ್ರಧಾನನಾದುದರಿಂದಲೂ ಚಿತ್ರನು ಎಂದು ಹೇಳಲ್ಪಡುತ್ತಾನೆ. ಬ್ರಹ್ಮಾದಿ ಎಲ್ಲಾ ದೇವತೆಗಳಿಗೆ ಚೇಷ್ಟಕನಾದುದರಿಂದ (ಅನ್ ಎಂದೂ) ನಿಯಾಮಕನಾದುದರಿಂದ (ಈ ಎಂದೂ) ಸರ್ವಕರ್ತನಾದುದರಿಂದ (ಕಂ ಎಂದೂ ಅಂತೂ) 'ಅನೀಕ' ಎನ್ನಿಸಿಕೊಳ್ಳುತ್ತಾನೆ. ಸೂರ್ಯನಲ್ಲಿರತಕ್ಕ ಆ ಹರಿಯು ಉದಯಿಸಿದನು. (e) ದೇವತೆಗಳಿಗೆ ಜ್ಞಾನವನ್ನು ಕೊಡುವುದರಿಂದ 'ಚಕ್ಷುಃ' ಎನ್ನಿಸಿಕೊಳ್ಳುತ್ತಾನೆ. ಈತನು ಚಕ್ಷುಸ್ಸನ್ನು ಅಧಿಷ್ಠಾನೀಕರಿಸಿಕೊಂಡು ನೋಡುವುದರಿಂದ ಚಕ್ಷುರ್ನಿಯಾಮಕನು. ಶ್ರೀ ಜನಾರ್ದನನು ಪ್ರಕಾಶದಿಂದ ಎಲ್ಲಾ ಲೋಕಗಳನ್ನು ಪ್ರಕಾಶದಿಂದ ಪೂರ್ಣೀಕರಿಸಿದನು. (f) ಆ ಹರಿಯು ಸ್ಥಾವರ ಜಂಗಮಾತ್ಮಕ ಸರ್ವ ಜಗತ್ತನ್ನೂ ಸರ್ವಜೀವರನ್ನೂ ಸೃಷ್ಟಿಸುವುದರಿಂದಲೂ, ಪ್ರಲಯಕಾಲದಲ್ಲಿ ಭಕ್ಷಿಸುವುದರಿಂದಲೂ 'ಆತ್ಮಾ' ಎಂದು ಹೇಳಲ್ಪಡುತ್ತಾನೆ.

ಭಾ॥ (a) ಏವಂ ಚತುರ್ವಿಧೋ ವಿಷ್ಣುಃ ಸಂಹಿತಾ ದೇವತಾ ಯದಾ । ಜ್ಞಾಯತೇ ಪೂರ್ವವರ್ಣಸ್ಯ ರೂಪಂ ನಾರಾಯಣಾಭಿಧಂ ॥ ಪ್ರಾದುರ್ಭಾವಾಃ ಸಮಸ್ತಾಶ್ಚ ಚರಮಾರ್ಣಸ್ಯ ದೇವತಾಃ । ತದಾ ತು ಸಂಹಿತಾಂ ಸಮ್ಯಙ್ ಮನ್ಯೇಽಹಂ ಸಂಧಿತಾಮಿತಿ ॥ (b) ಆಹ ವಾಯುರಿಮಂ ವಿಷ್ಣುಂ ಬೃಹತ್ಯುಕ್ಥಸ್ಯ ದೇವತಾಂ । ಮಹಾವ್ರತಾಖ್ಯಸ್ತೋತ್ರಸ್ಯ ಚೇಷ್ಟಕಾನಾಂ ಚ

ದೇವತಾಂ ॥ ಏತಮೇವಾಖಿಲಜಗದ್ವ್ಯಾಪ್ತಂ ಪೂರ್ಣಗುಣಾತ್ಮಕಂ । (c) ಸಂವಸದ್ರತಿದಾತೃತ್ವಾದ್ಬ್ರಹ್ಮಾ ಸಂವತ್ಸರಾಭಿಧಃ ॥ ನಿಯಾಮಕಃ ಸ ಜೀವಾನಾಂ ಸರ್ವೇಷಾಂ ಪ್ರಭುರೀಶ್ವರಃ । ಅನಂತಮೂರ್ತಿರ್ಬ್ರಹ್ಮಾ ಸಾವನಂತಜಗದಾಸ್ಥಿತಃ । (d) ನಿಯಾಮಕಸ್ತಸ್ಯ ವಿಷ್ಣುಸ್ತಾವದ್ರೂಪೇಷು ಸಂಸ್ಥಿತಃ ॥ ತತ್ಸಂವತ್ಸರಸಮ್ಮಾನಸ್ಸ ವಿಷ್ಣುಃ ಪರಮೇಶ್ವರ: ॥ ೩ ॥

ಅ ॥ (a) ಪೂರ್ವೋಕ್ತಪ್ರಕಾರವಾಗಿ ಯಾವಾಗ ನಾಲ್ಕುಪ್ರಕಾರವುಳ್ಳ ಶ್ರೀ ಹರಿಯು ಸಂಹಿತಾದೇವತೆಯೆಂದು ತಿಳಿಯಲ್ಪಡುತ್ತಾನೋ, ಪೂರ್ವವರ್ಣಕ್ಕೆ ನಾರಾಯಣನೆಂದು ಹೆಸರುಳ್ಳ ರೂಪವು ದೇವತೆಯೆಂದೂ, ಉತ್ತರವರ್ಣಕ್ಕೆ ಎಲ್ಲಾ ಪ್ರಾದುರ್ಭಾವರೂಪಗಳು ದೇವತೆಗಳೆಂದೂ ತಿಳಿಯಲ್ಪಡುತ್ತದೋ, ಆವಾಗಲೇ ಚೆನ್ನಾಗಿ ಸರ್ವವೈದಿಕ ಪೂರ್ವೋತ್ತರವರ್ಣ ಸಂಧಿರೂಪವಾದುದನ್ನು ಸಂಧಿತವಾದುದನ್ನಾಗಿ ನಾನು ತಿಳಿಯುತ್ತೇನೆ. ಈ ಪ್ರಕಾರವಾಗಿ ವಾಯುವು ಹೇಳಿದನು. (b) ವಾಯುವು ಈ ಪೂರ್ವಪ್ರಸ್ತುತನಾದ ನಾರಾಯಣನನ್ನೂ ಅನಿರುದ್ಧಾದಿ ಚತೂರೂಪಿಯನ್ನೂ ಪ್ರಾದುರ್ಭಾವರೂಪಿಯನ್ನೂ ಕೂಡ ಬೃಹತ್ಯುಕ್ಥಕ್ಕೆ ದೇವತೆಯನ್ನಾಗಿಯೂ, ಮಹಾವ್ರತಾಖ್ಯಸ್ತೋತ್ರಕ್ಕೂ ಇಷ್ಟಕಗಳಿಗೂ ದೇವತೆಯನ್ನಾಗಿಯೂ (ಅಂದರೆ ಮಹಾವ್ರತದಲ್ಲಿ ಚಯನಮಾಡಲಿಕ್ಕೆ ಯೋಗ್ಯಗಳಾದ ಇಟ್ಟಿಕೆಗಳಲ್ಲಿ ಅಧಿಷ್ಠಿತವಾದ ದೇವತೆಯನ್ನಾಗಿಯೂ) ಹೇಳುತ್ತಾನೆ. ಈತನನ್ನೇ ಎಲ್ಲಾ ಜಗತ್ತುಗಳಲ್ಲಿ ವ್ಯಾಪ್ತನನ್ನಾಗಿಯೂ ಪೂರ್ಣಗುಣಸ್ವರೂಪಿಯನ್ನಾಗಿಯೂ ಹೇಳುತ್ತಾನೆ. (c) ಚತುರ್ಮುಖನು ಶಾಸ್ತ್ರದಲ್ಲಿ ಹೇಳಿದ ಪ್ರಕಾರ ಆವಾಸಮಾಡುವವರಿಗೆ ರಮಣ(ಸುಖ)ಪ್ರದನಾದುದರಿಂದ ಸಂವತ್ಸರನೆಂದು ಹೆಸರುಳ್ಳವನು. ಆ ಪ್ರಭುವಾದ ಈಶ್ವರನು ಎಲ್ಲಾ ಜೀವರಿಗೂ ನಿಯಾಮಕನು. ಈ ಬ್ರಹ್ಮನು ಅನಂತಮೂರ್ತಿಯಾಗಿ ಅನಂತಜಗತ್ತಿಗೆ ನಿಯಾಮಕನಾಗಿದ್ದಾನೆ. (d) ವಿಷ್ಣುವು ಆ ಬ್ರಹ್ಮನ ಅಷ್ಟುರೂಪಗಳಲ್ಲಿಯೂ ನಿಯಾಮಕನಾಗಿ ಇರುತ್ತಾನೆ. ಆದುದರಿಂದ ಪರಮೇಶ್ವರನಾದ ಆ ವಿಷ್ಣುವು ಸಂವತ್ಸರಸಂಮಾನಃ ಎನ್ನಿಸುತ್ತಾನೆ. ॥ ೩ ॥

**ಮಂ ॥ ದುಗ್ಧದೋಹಾ ಅಸ್ಯ ವೇದಾ ಭವಂತಿ ನ ತಸ್ಯಾನೂಕ್ತೇ ಭಾಗೋಽಸ್ತಿ ನ ವೇದ ಸುಕೃತಸ್ಯ ಪಂಥಾನಮಿತಿ ತದಪ್ಯೇತದೃಷಿಣೋಕ್ತಂ ಯಸ್ತಿತ್ಯಾಜ ಸಚಿವಿದಂ ಸಖಾಯಂ ನ ತಸ್ಯ ವಾಚ್ಯಪಿ ಭಾಗೋ ಅಸ್ತಿ ॥ ಯದೀಂ ಶೃಣೋತ್ಯಲಕಂ ಶೃಣೋತಿ ನ ಹಿ ಪ್ರವೇದ ಸುಕೃತಸ್ಯ ಪಂಥಾಮಿತಿ ನ ತಸ್ಯಾನೂಕ್ತೇ ಭಾಗೋಽಸ್ತಿ ನ ವೇದ ಸುಕೃತಸ್ಯ ಪಂಥಾನಮಿತ್ಯೇತತ್ತದುಕ್ಥಂ ಭವತಿ ತಸ್ಮಾದೇವಂ ವಿದ್ವಾನ್ನ ಪರಸ್ಮಾ ಅಗ್ನಿಂ ಚಿನುಯಾನ್ನ ಪರಸ್ಮೈ ಮಹಾವ್ರತೇನ ಸ್ತುವೀತ ನ ಪರಸ್ಮಾ ಏತದಹಃ ಶಂಸೇತ್ಕಾಮಂ ಪಿತ್ರೇವಾಽಚಾರ್ಯಾಯ ವಾ ಶಂಸೇದಾತ್ಮನ ಏವಾಸ್ಯ ತತ್ಕೃತಂ ಭವತಿ ಸ ಯಶ್ಚಾಯಮಶರೀರಃ ಪ್ರಜ್ಞಾತ್ಮಾ ಯಶ್ಚಾಸಾವಾದಿತ್ಯ ಏಕಮೇತದಿತ್ಯವೋಚಾಮ ತೌ ಯತ್ರ ವಿಹೀಯೇತೇ ಚಂದ್ರಮಾ ಇವಾದಿತ್ಯೋ ದೃಶ್ಯತೇ ನ ರಶ್ಮಯಃ ಪ್ರಾದುರ್ಭವಂತಿ ಲೋಹಿನೀ ದ್ಯೌರ್ಭವತಿ ಯಥಾ ಮಂಜಿಷ್ಠಾಃ ವ್ಯಸ್ತಃ**

ಪಾಯುಃ ಕಾಕಕುಲಾಯಗಂಧಿಕಮಸ್ಯ ಶಿರೋ ನಾಯತಿ ಸಂಪ
ರೇತೋಽಸ್ಯಾತ್ಮಾ ನ ಚಿರಮಿವ ಜೀವಿಷ್ಯತೀತಿ ವಿದ್ಯಾತ್ಸ ಯತ್ಕರಣೀ
ಯಂ ಮನ್ಯೇತ ತತ್ಕುರ್ವೀತ ಯದಂತಿ ಯಚ್ಚ ದೂರಕ ಇತಿ ಸಪ್ತ
ಜಪೇದಾದಿತ್ಪ್ರತ್ನಸ್ಯ ರೇತಸ ಇತ್ಯೇಕಾ ಯತ್ರ ಬ್ರಹ್ಮಾ ಪವಮಾನೇತಿ
ಷಳುದ್ವಯಂ ತಮುಸಸ್ವರೀತ್ಯೇಕಾಽಥಾಪಿ ಯತ್ರ ಛಿದ್ರ ಇವಾದಿತ್ಯೋ
ದೃಶ್ಯತೇ ರಥನಾಭಿರಿವಾಭಿಖ್ಯಾಯೇತ ಛಿದ್ರಾಂ ವಾ ಛಾಯಾಂ
ಪಶ್ಯೇತ್ತದಪ್ಯೇವಮೇವ ವಿದ್ಯಾದಥಾಪ್ಯಾದರ್ಶೇ ಪೋದಕೇ ವಾ
ಜಿಹ್ಮಶಿರಸಂ ವಾಽಶಿರಸಂ ವಾಽತ್ಮಾನಂ ಪಶ್ಯೇದ್ವಿಪರ್ಯಸ್ತೇ ವಾ
ಕನ್ಯಾಕೇ ಜಿಹ್ಮೇನ ವಾ ದೃಶ್ಯೇಯಾತಾಂ ತದಪ್ಯೇವಮೇವ ವಿದ್ಯಾ
ದಥಾಪ್ಯಪಿಧಾಯಾಕ್ಷಿಣೀ ಉಪೇಕ್ಷೇತ ತದ್ಯಥಾ ಬಟರಕಾಣಿ
ಸಂಪತಂತೀವ ದೃಶ್ಯಂತೇ ತಾನಿ ಯದಾ ನ ಪಶ್ಯೇತ್ತದಪ್ಯೇವಮೇವ
ವಿದ್ಯಾದಥಾಪ್ಯಪಿಧಾಯ ಕರ್ಣಾ ಉಪಶೃಣುಯಾತ್ಸ ಏಷೋಽಗ್ನೇ
ರಿವ ಪ್ರಜ್ವಲತೋ ರಥಸ್ಯೇವೋಪಬ್ದಿಸ್ತಂ ಯದಾ ನ ಶೃಣುಯಾತ್ತದ
ಪ್ಯೇವಮೇವ ವಿದ್ಯಾದಥಾಪಿ ಯತ್ರ ನೀಲ ಇವಾಗ್ನಿರ್ದೃಶ್ಯತೇ
ಯಥಾ ಮಯೂರಗ್ರೀವಾಽಮೇಘೇ ವಾ ವಿದ್ಯುತಂ ಪಶ್ಯೇನ್ಮೇಘೇ ವಾ
ವಿದ್ಯುತಂ ನ ಪಶ್ಯೇನ್ಮಹಾಮೇಘೇ ವಾ ಮರೀಚೀರಿವ ಪಶ್ಯೇತ ತದ
ಪ್ಯೇವಮೇವ ವಿದ್ಯಾದಥಾಪಿ ಯತ್ರ ಭೂಮಿಂ ಜ್ವಲಂತೀಮಿವ
ಪಶ್ಯೇತ ತದಪ್ಯೇವಮೇವ ವಿದ್ಯಾದಿತಿ ಪ್ರತ್ಯಕ್ಷದರ್ಶನಾನ್ಯಥ ಸ್ವಪ್ನಾಃ
ಪುರುಷಂ ಕೃಷ್ಣಂ ಕೃಷ್ಣದಂತಂ ಪಶ್ಯತಿ ಸ ಏನಂ ಹಂತಿ ವರಾಹ
ಏನಂ ಹಂತಿ ಮರ್ಕಟ ಏನಮಾಸ್ಕಂದಯತ್ಯಾಶು ವಾಯುರೇನಂ
ಪ್ರವಹತಿ ಸುವರ್ಣಂ ಖಾದಿತ್ವಾಽಪಗಿರಿತಿ ಮಧ್ವಶ್ನಾತಿ ಬಿಸಾನಿ
ಭಕ್ಷಯತ್ಯೇಕಪುಂಡರೀಕಂ ಧಾರಯತಿ ಖರೈರ್ವರಾಹೈರ್ಯುಕ್ತೈ
ರ್ಯಾತಿ ಕೃಷ್ಣಾಂ ಧೇನುಂ ಕೃಷ್ಣವತ್ಸಾಂ ನಲದಮಾಲೀ ದಕ್ಷಿಣಾ
ಮುಖೋ ವ್ರಾಜಯತಿ ಸ ಯದ್ಯೇತೇಷಾಂ ಕಿಂಚಿತ್ಪಶ್ಯೇದುಪೋಷ್ಯ
ಪಾಯಸಂ ಸ್ಥಾಲೀಪಾಕಂ ಶ್ರಪಯಿತ್ವಾ ರಾತ್ರೀಸೂಕ್ತೇನ ಪ್ರತ್ಯೃಚಂ
ಹುತ್ವಾನ್ಯೇನಾನ್ನೇನ ಬ್ರಾಹ್ಮಣಾನ್ ಭೋಜಯಿತ್ವಾ ಚರುಂ ಸ್ವಯಂ
ಪ್ರಾಶ್ನೀಯಾತ್ಸ ಯೋಽತೋಽಶ್ರುತೋಽಗತೋಽಮತೋಽನತೋಽದೃ-
ಷ್ಟೋಽವಿಜ್ಞಾತೋಽನಾದಿಷ್ಟಃ ಶ್ರೋತಾ ಮಂತಾ ದ್ರಷ್ಟಾಽದೇಷ್ಟಾ
ಘೋಷ್ಟಾ ವಿಜ್ಞಾತಾ ಪ್ರಜ್ಞಾತಾ ಸರ್ವೇಷಾಂ ಭೂತಾನಾಮಂತರ
ಪುರುಷಃ ಸಮ ಆತ್ಮೇತಿ ವಿದ್ಯಾತ್ ॥ ೪ ॥

ಅ ॥ (ಯಾವಾತನು ಶ್ರೀ ಹರಿಯನ್ನು ಮುಕ್ತಿಗೆ ಅಯೋಗ್ಯನಾದವನಿಗೋಸ್ಕರ ಉಪ
ದೇಶಿಸುತ್ತಾನೋ, ಆತನಿಗೋಸ್ಕರ ಮಹಾವ್ರತದಲ್ಲಿ ಪೌರೋಹಿತ್ಯವನ್ನು ಮಾಡುತ್ತಾನೋ)

ಅಸ್ಯ=ಈ ಆತ್ಮಶಂಸನವನ್ನು ಮಾಡತಕ್ಕವನ, ವೇದಾಃ=ವೇದಗಳು, ದುಗ್ಧದೋಹಾಃ ಭವಂತಿ= ಹಿಂದೆ ಕರೆಯಲ್ಪಟ್ಟ ರಸ (ಫಲ)ವುಳ್ಳವುಗಳೇ, ದೋಹನ ಮಾಡಲ್ಹರ್ಹಫಲವುಳ್ಳವುಗಳು ಅಲ್ಲ. ಅಂದರೆ ಫಲಾಧಾಯಕಗಳು ಆಗುವುದಿಲ್ಲ. ತಸ್ಯ=ಸ್ತುತಿಸತಕ್ಕವನಿಗೆ, ಅನೂಕ್ತೇ=ಅಧೀತ ವಾದ ಶಾಸ್ತ್ರದಲ್ಲಿ, ಭಾಗಃ=ಫಲವೂ ಕೂಡ, ನಾಸ್ತಿ=ಇಲ್ಲ. (ವೇದಾಧ್ಯಯನದಿಂದುಂಟಾದ ದೃಷ್ಟಾದೃಷ್ಟ ಫಲಗಳನ್ನು ಪ್ರತ್ಯೇಕ ನಿಷೇಧಿಸುವುದಕ್ಕೋಸ್ಕರ ೨ ವಾಕ್ಯಗಳು ಪ್ರವೃತ್ತಗಳಾದು ದರಿಂದ ಪುನರುಕ್ತವಾಗಲಿಲ್ಲ.) ಸುಕೃತಸ್ಯ=ಗಂಗಾಸ್ನಾನಾದಿ ಕರ್ಮದ, ಪಂಥಾನಂ= ಮಾರ್ಗವನ್ನು, (ಫಲವನ್ನು) ನ ವೇದ=ಹೊಂದುವುದಿಲ್ಲ, ತತ್ ಏತತ್ ಅಪಿ=ಅಯೋಗ್ಯರಿಗೆ ಉಪದೇಶಾದಿಗಳನ್ನು ಮಾಡತಕ್ಕವನಿಗೆ ಅಧ್ಯಯನ ಫಲವೂ ಸುಕೃತ ಫಲವೂ ಕೂಡ ಇಲ್ಲ ಎಂಬುವುದೂ ಕೂಡ, ಋಷಿಣಾ=ಮಂತ್ರದ್ರಷ್ಟ್ರನಿಂದ, ಉಕ್ತಂ=ಹೇಳಲ್ಪಟ್ಟಿದೆ. 'ಯಃ= ಯಾವ ಪುರುಷನು, ಸಚಿವಿದಂ=ಕರ್ಮಸಂಚಯವನ್ನು ತಿಳಿದ, ಸಖಾಯಂ=ಪ್ರೀತಿಯಿಂದ ಒಂದು ಶರೀರದಲ್ಲಿದ್ದು ಉಪಕಾರಕನಾದ ನಾರಾಯಣನನ್ನು, ತಿತ್ಯಾಜ=ಬಿಡುತ್ತಾನೋ, (ಅಯೋಗ್ಯರಿಗೆ ಉಪದೇಶಿಸುತ್ತಾನೋ) ತಸ್ಯ=ಆತನಿಗೆ, ವಾಚಿ ಅಪಿ=ವೇದ ವಾಕ್ಯವು ಅಧೀತ ವಾದರೂ ಕೂಡ, ಭಾಗಃ=ಫಲವು, ನಾಸ್ತಿ=ಇಲ್ಲ. ಯದೀಂ=ಯಾವುದನ್ನೇ, ಶೃಣೋತಿ= ಕೇಳುತ್ತಾನೋ, (ಅದೆಲ್ಲವೂ) ಅಲಕಂ ಶೃಣೋತಿ=ಅರತಿರೂಪವಾದ ಅಂಧಂತಮಸ್ಸಿನ ಪ್ರಾಪ್ತಿಗೆ ಸಾಧನವನ್ನಾಗಿಯೇ ಕೇಳುತ್ತಾನೆ. (ಅಂದರೆ ಶ್ರುತವಾದುದೆಲ್ಲವೂ ಅಂಧಂತಮಸ್ಸಿನ ಪ್ರಾಪ್ತಿಗೆ ಸಾಧನವೇ ಆಗುತ್ತದೆ). ಅಲಕಂ ಭವತಿ=ರೌರವಾದಿ ನರಕಸಾಧನವೂ ಆಗುತ್ತದೆ. ಸುಕೃತಸ್ಯ ಪಂಥಾಂ=ಸ್ವರ್ಗಾದಿಯನ್ನು ಕೂಡ, ನ ಹಿ ಪ್ರವೇದ=ಹೊಂದುವುದೇ ಇಲ್ಲ'. ಇತಿ=ಈ ಪ್ರಕಾರ, (ಹೇಳಲ್ಪಟ್ಟಿದೆ). (ಶ್ರೀ ಹರಿಯ ತ್ಯಾಗವು ೪ ವಿಧವು. ೧. ಆ ಹರಿಯೇ ಇಲ್ಲ ಇತ್ಯಾದಿ ಜ್ಞಾನರೂಪವಾದುದು. ೨. ಲಕ್ಷ್ಮೀ ಬ್ರಹ್ಮಾದಿಗಳಿಗೆ ತಾರತಮ್ಯ ವಿಷಯದಲ್ಲಿ ವಿಪರೀತ ಜ್ಞಾನಾದಿರೂಪವು. ೩. ನಿಷಿದ್ಧಕರ್ಮಕರಣ ಮೊದಲಾದುದು. ೪. ಅಯೋಗ್ಯರಿಗೆ ಉಪದೇಶಿಸುವಿಕೆ ಇತ್ಯಾದಿಯು. ಇವುಗಳಲ್ಲಿ ೧. ೨. ರಿಂದ ಅಂಧಂತಮಃ ಪ್ರಾಪ್ತಿಯು. ೩. ರಿಂದ ನರಕ ಪ್ರಾಪ್ತಿಯು. ೪ರಿಂದ ಅಧ್ಯಯನದ ಸುಕೃತ ಫಲದ ಪ್ರಾಪ್ತಿಯಾಗದೆ ಇರುವಿಕೆ. ಎಂದು ಪ್ರಮಾಣ ಪ್ರಸಿದ್ಧವು. ಆದುದರಿಂದ ಅಯೋಗ್ಯೋಪದೇಶ ರೂಪವಾದ ತ್ಯಾಗಕ್ಕೇನೇ ಈ ಎಲ್ಲಾ ಫಲವು ಹೇಗೆ ಸಂಗತವಾಗುವುದು. ಯಾವುದರಿಂದ ಸಮಾಖ್ಯಾರೂಪವಾಗಿ ಈ ಶ್ರುತಿಯು ಉದಾಹರಿಸಲ್ಪಡುತ್ತದೆ. ಎಂದರೆ ಈ ಎಲ್ಲಾ ಫಲವು ಅಯೋಗ್ಯೋಪದೇಶಕನಿ ಗೇನೇ ಇಲ್ಲಿ ಹೇಳಲ್ಪಡುವುದಿಲ್ಲ. ೪ ವಿಧ ತ್ಯಾಗವನ್ನು ಮಾಡುವವರಿಗೂ ಕೂಡ ಹೇಳಲ್ಪಡು ತ್ತದೆ. ಆದರೂ ಪ್ರಸ್ತುತವಾದ ಪರಶಂಸನಾದಿರೂಪವಾದ ೪ನೇ ತ್ಯಾಗದಲ್ಲಿ) ತಸ್ಯ=ಆತನಿಗೆ, ಅನೂಕ್ತೇ=ಅಧೀತವಾದ ಶಾಸ್ತ್ರದಲ್ಲಿ, ಭಾಗಃ=ಫಲವು, ನಾಸ್ತಿ=ಇಲ್ಲ. ಸುಕೃತಸ್ಯ ಪಂಥಾ ನಂ=ಗಂಗಾಸ್ನಾನಾದಿ ಕರ್ಮದ ಫಲವನ್ನು, ನ ವೇದ=ಹೊಂದುವುದಿಲ್ಲ. ಇತಿ=ಈ ಪ್ರಕಾರ ೨ ದೋಷವೇ, ('ಯದೀಂ ಶೃಣೋತ್ಯಲಕಂ ಶೃಣೋತಿ' ಎಂಬುವುದರಿಂದ ಹೇಳಲ್ಪಟ್ಟ ದೋಷವು ಇಲ್ಲ.) ಏತತ್=ಇದೇವೇ ತದುಕ್ತಂ ಭವತಿ='ನ ತಸ್ಯ ವಾಚ್ಯಪಿ ಭಾಗೋಽಸ್ತಿ ನ ವೇದ ಸುಕೃತಸ್ಯ ಪಂಥಾಂ' ಎಂಬೀ ಮಂತ್ರಖಂಡದಿಂದ ಹೇಳಲ್ಪಟ್ಟದ್ದು ಆಗುತ್ತದೆ. ತಸ್ಮಾತ್= ೪ನೇ ತ್ಯಾಗಕ್ಕೆ ದೋಷದ್ವಯರೂಪವಾದ ಅನರ್ಥ ಫಲವಿದ್ದುದರಿಂದ, ಏವಂ ವಿದ್ವಾನ್= ಆತನಿಗೆ ಅನರ್ಥಫಲವನ್ನು ತಿಳಿದವನು, ಪರಸ್ಮೈ=ಆಚಾರ್ಯಪಿತೃಗಳ ಸಕಾಶದಿಂದ ಇತರ ರಿಗೋಸ್ಕರ, ಅಗ್ನಿಂ ನ ಚಿನುಯಾತ್=ಇಷ್ಟಕಾನಿರ್ಮಿತವಾದ ಚಿತಿಯಲ್ಲಿ ಅಗ್ನಿಯನ್ನು ಪ್ರತಿಷ್ಠಾ ಮಾಡಿ ಅದರಲ್ಲಿ ಹೋಮಾದಿಗಳನ್ನು ಮಾಡಬಾರದು. ಪರಸ್ಮೈ=ಇತರರಿಗೋಸ್ಕರ, ಮಹಾವ್ರ ತೇನ=ತನ್ನಾಮಕಸ್ತೋತ್ರದಿಂದ, ನ ಸ್ತುವೀತ=ಸ್ತೋತ್ರಮಾಡಬಾರದು. ಪರಸ್ಮೈ=ಇತರ

ತ್ತಾನೋ, ಕೃಷ್ಣವತ್ಸಾಂ=ಕಪ್ಪುಕರುವುಳ್ಳ, ಕೃಷ್ಣಾಂ ಧೇನುಂ=ಕಪ್ಪುಧೇನುವನ್ನು, ನಲದ ಮಾಲೀ=ಕೆಂಪು ಕಹ್ಲಾರ ಪುಷ್ಪರಚಿತವಾದ ಮಾಲಿಕೆಯನ್ನು ಧರಿಸಿದವನಾಗಿ, ದಕ್ಷಿಣಾ ಮುಖಃ=ದಕ್ಷಿಣದಿಕ್ಕಿಗೆ ಅಭಿಮುಖನಾಗಿ, ವ್ರಾಜಯತಿ=ಕಳುಹಿಸುತ್ತಾನೆ. ತದಪಿ=ಅದನ್ನೂ ಕೂಡ, ಏವಮೇವ=ಹೀಗೆಯೇ, ವಿದ್ಯಾತ್=ತಿಳಿಯತಕ್ಕದು. ಸಃ=ಪ್ರಸಕ್ತಮರಣವುಳ್ಳ ಪುರುಷನು, ಏತೇಷಾಂ=ಇವುಗಳ ಮಧ್ಯದಲ್ಲಿ, ಕಿಂಚಿತ್=ಯಾವುದನ್ನು ಆದರೂ, ಪಶ್ಯೇತ್ ಯದಿ=ನೋಡಿದ ಪಕ್ಷದಲ್ಲಿ, ಉಪೋಷ್ಯ=(ಅದರಿಂದ ಸೂಚಿಸಲ್ಪಟ್ಟ ಅಪಮೃತ್ಯುವಿನ ಪರಿಹಾರ ಕ್ಕಾಗಿ) ಉಪವಾಸಮಾಡಿ, ಸ್ಥಾಲೀಪಾಕಂ=ಸ್ಥಾಲಿಯಲ್ಲಿ ಪಾಕವುಳ್ಳ (ಪಾತ್ರದಲ್ಲಿ ಬೇಯಿಸಿದ) ಪಾಯಸಂ=ಪರಮಾನ್ನವನ್ನು, ಶ್ರಪಯಿತ್ವಾ=ಬೇಯಿಸಿ, ರಾತ್ರೀ ಸೂಕ್ತೇನ ಪ್ರತ್ಯೃಚಂ= ರಾತ್ರೀಸೂಕ್ತದಲ್ಲಿ ಪ್ರತಿಪಾದ್ಯವಾದ ರಾತ್ರಿಶಬ್ದವಾಚ್ಯವಾದ ಸ್ತ್ರೀರೂಪವಾದ ಭಗವನ್ಮೂರ್ತಿ ಯನ್ನೂ ದುರ್ಗಾದೇವಿಯನ್ನೂ ಕೂಡ ಉದ್ದೇಶಿಸಿ, ಹುತ್ವಾ=ಹೋಮಿಸಿ, ಅನ್ಯೇನ ಅನ್ನೇನ= ಪ್ರತ್ಯೇಕವಾಗಿ ಬೇಯಿಸಿದ ಅನ್ನದಿಂದ, ಬ್ರಾಹ್ಮಣಾನ್=ಬ್ರಾಹ್ಮಣರನ್ನು, ಭೋಜಯಿತ್ವಾ= ಭೋಜನ ಮಾಡಿಸಿ, ಚರುಂ=ಹವಿಃಶೇಷವನ್ನು, ಸ್ವಯಂ=ತಾನು, ಪ್ರಾಶ್ನೀಯಾತ್=ಭೋಜಿ ಸತಕ್ಕದು. (ಹಾಗಾದರೆ ಪಾಯಸದಿಂದ ಪ್ರೀತನಾದ ಶ್ರೀ ಹರಿಯೂ ದುರ್ಗಾದೇವಿಯೂ ಕೂಡ ಅಪಮೃತ್ಯುವನ್ನು ಪರಿಹರಿಸುತ್ತಾರೆ. ಕಾಲಮೃತ್ಯುವಾದರೆ ಜ್ಞಾನದ್ವಾರಾ ಮುಕ್ತಿಯನ್ನು ಹೊಂದಿಸುತ್ತಾರೆ.) (ಈ ಪ್ರಕಾರ ಪ್ರಾಸಂಗಿಕವಾದ ಪ್ರಮೇಯವನ್ನು ನಿರೂಪಿಸಿ, ಪ್ರಕೃತ ವನ್ನು ಅನುಸರಿಸುತ್ತಾರೆ.) ಸಃ=ಪ್ರಸಿದ್ಧನಾದ, ಯಃ=ಯಾವ ಪರಮಾತ್ಮನು, ಅತಃ=ದೇಶ ಕಾಲಗುಣಗಳಿಂದ ವ್ಯಾಪ್ತನಾದುದರಿಂದಲೂ ಪರಿಪೂರ್ಣನಾದುದರಿಂದಲೂ ಅತ ಶಬ್ದವಾಚ್ಯನು, ಅಶ್ರುತಃ=ಸಂಪೂರ್ಣವಾಗಿ ಕೇಳಲಿಕ್ಕೆ ಅಶಕ್ಯನು, ಪೂರ್ಣನಾದುದರಿಂದ ಸಂಪೂರ್ಣವಾಗಿ ತಿಳಿಯಲಿಕ್ಕೆ ಅಶಕ್ಯನು, ಅಮತಃ=ಸಂಪೂರ್ಣವಾಗಿ ಮನನ ಮಾಡಲಿಕ್ಕೆ ಅಶಕ್ಯನು, ಅನತಃ= ಯಾವಾತನಿಗೂ ಪ್ರಹ್ವೀಭೂತನಲ್ಲ. (ಅಂದರೆ ಸ್ವತಂತ್ರನು) ಅದೃಷ್ಟಃ=ಸಂಪೂರ್ಣವಾಗಿ ನೋಡಲಿಕ್ಕೆ ಅಶಕ್ಯನು, ಅವಿಜ್ಞಾತಃ=ವಿಶೇಷವಾಗಿ ತಿಳಿಯಲಿಕ್ಕೆ ಅಶಕ್ಯನು, ಅನಾದಿಷ್ಟಃ= ಸಂಪೂರ್ಣವಾಗಿ ಆಜ್ಞಾಪಿಸಲಿಕ್ಕೆ ಅಶಕ್ಯನು, ಶ್ರೋತಾ=ಸರ್ವವನ್ನು ಕೇಳತಕ್ಕವನು. ಮಂತಾ= ಮನನ ಮಾಡತಕ್ಕವನು, ದ್ರಷ್ಟಾ=ನೋಡತಕ್ಕವನು, ಆದೇಷ್ಟಾ=ಉಪದೇಶಕನು. ಘೋಷ್ಟಾ= ಧ್ವನಿಯನ್ನು ಮಾಡತಕ್ಕವನು, ವಿಜ್ಞಾತಾ=ವಿವಿಧವಾಗಿ ತಿಳಿಯುವವನು, ಪ್ರಜ್ಞಾತಾ= ಪ್ರಕೃಷ್ಟವಾಗಿ ತಿಳಿಯುವವನು, ಸರ್ವೇಷಾಂ ಭೂತಾನಾಂ ಅಂತರ ಪುರುಷಃ=ಎಲ್ಲಾ ಜೀವರ ಒಳಗೆ ಇರುವವನು, ಪೂರ್ಣನಾದುದರಿಂದ ಪುರುಷಶಬ್ದವಾಚ್ಯನು. ಸಮಃ=ಎಲ್ಲಾ ರೂಪ ಗಳಲ್ಲಿಯೂ ಏಕಪ್ರಕಾರನು. ಆತ್ಮಾ=ಸರ್ವಜೀವ ನಿಯಾಮಕನು, ಇತಿ=ಈ ಪ್ರಕಾರ, ವಿದ್ಯಾತ್=ತಿಳಿಯತಕ್ಕದು. (ಅದರಿಂದ ಸಂಸಾರದಿಂದ ಮುಕ್ತಿಯಾಗುತ್ತದೆ). ॥ ೪ ॥

ತಾ ॥ 'ಯದಂತಿ ಯಚ್ಚ ದೂರಕೇ' ಎಂಬೀ ೭ ಋಕ್ಕು ಮತ್ತು ತದರ್ಥಗಳು. 'ಯದಂತಿ ಯಚ್ಚ ದೂರಕೇ ಭಯಂ ವಿಂದತಿ ಮಾಮಿಹ । ಪವಮಾನ ವಿತಜ್ಜಹಿ' ॥ ಪವಮಾನ=ಪವಿತ್ರೀ ಕರಿಸುವುದರಿಂದ ಪವಮಾನಶಬ್ದವಾಚ್ಯನಾದ ವಾಯುವೇ, ಇಹ=ಸಮೀಪದಲ್ಲಿ, ದೂರಕೇ= ದೂರಪ್ರದೇಶದಲ್ಲಿ, ಯಚ್ಚ ಭಯಂ=ಯಾವುದೊಂದು ಭಯವು, ಮಾಂ=ನನ್ನನ್ನು, ವಿಂದತಿ= ಹೊಂದುತ್ತದೋ, ತತ್=ಅಂತಹ ಭಯವನ್ನು, ವಿಜಹಿ=ನಾಶಮಾಡು. ॥ ೧ ॥ 'ಪವಮಾನಃ ಸೋ ಅದ್ಯ ನಃ ಪವಿತ್ರೇಣ ವಿಚರ್ಷಣಿಃ । ಯಃ ಪೋತಾ ಸ ಪುನಾತು ನಃ' ॥ ವಿಚರ್ಷಣಿಃ= ಬಹುಪ್ರಜೆಗಳುಳ್ಳ, ಸಃ=ಪ್ರಸಿದ್ಧನಾದ, ಯಃ ಪವಮಾನಃ=ಯಾವ ವಾಯುವು, ನಃ=ನಮಗೆ

ಸ್ವಾಮಿಯಾದ, ಪವಿತ್ರೇಣ=ಪವಿತ್ರೀಕರಿಸಿ ರಕ್ಷಿಸುವುದರಿಂದ ಪವಿತ್ರನಾಮಕನಾದ ಶ್ರೀ ಹರಿಯ ಪ್ರಸಾದದಿಂದ, ಪೋತಾ=ಎಲ್ಲಾ ಲೋಕಗಳನ್ನು ಪವಿತ್ರೀಕರಿಸುತ್ತಾನೋ, ಸಃ=ಆಂಹತ ವಾಯುವು, ನಃ=ನಮ್ಮನ್ನೂ ಕೂಡ, ಅದ್ಯ=ಈಗ, ಪುನಾತು=ಪವಿತ್ರೀಕರಿಸಲಿ. ॥ ೨ 'ಯತ್ತೇ ಪವಿತ್ರಮರ್ಚಿಷ್ಯಗ್ನೇ ವಿತತಮಂತರಾ । ಬ್ರಹ್ಮ ತೇನ ಪುನೀಹಿ ನಃ' ॥ ಅಗ್ನೇ ಸರ್ವಾಂಗಪ್ರೇರಕನಾದುದರಿಂದ ಅಗ್ನಿನಾಮಕನಾದ ವಾಯುವೇ, ಅಂತರಾ=ಪುರುಷದ ಮಧ್ಯದಲ್ಲಿ, ಅರ್ಚಿಷಿ=ವ್ಯಾಪ್ತವಾದ ತೇಜಸ್ಸಿನಲ್ಲಿ, ವಿತತಂ=ವ್ಯಾಪ್ತವಾದ, ತೇಜಸ್ಸುಳ್ಳ, ತ್ ಪವಿತ್ರಂ ಬ್ರಹ್ಮ=ಯಾವ ಪವಿತ್ರನಾದ ಪರಬ್ರಹ್ಮನೋ, ತೇನ=ಆ ಪರಬ್ರಹ್ಮನಿಂದ, ನಃ= ನಮ್ಮನ್ನು, ಪುನೀಹಿ=ಪವಿತ್ರೀಕರಿಸು. ॥ ೩ ॥ 'ಯತ್ತೇ ಪವಿತ್ರಮರ್ಚಿವದಗ್ನೇ ತೇನ ಪುನೀಹಿ ನಃ । ಬ್ರಹ್ಮಸವೈಃ ಪುನೀಹಿ ನಃ' ॥ ಅಗ್ನೇ=ವಾಯುವೇ, ತೇ=ನಿನಗೆ ಸ್ವಾಮಿಭೂತವಾದ, ಅರ್ಚಿವತ್=ಕಾಂತಿಯುಕ್ತವಾದ, ಯತ್ ಪವಿತ್ರಂ ಬ್ರಹ್ಮ=ಯಾವ ಪವಿತ್ರನಾದ ಪರಬ್ರಹ್ಮನೋ, ತೇನ=ಆತನಿಂದ, ನಃ=ನಮ್ಮನ್ನು, ಪುನೀಹಿ=ಪವಿತ್ರೀಕರಿಸು. ಬ್ರಹ್ಮಸವೈಃ=ಪರಬ್ರಹ್ಮನ ಜ್ಞಾನಾಖ್ಯಸಂತತಿಗಳಿಂದ, ನಃ=ನಮ್ಮನ್ನು, ಪುನೀಹಿ=ಜ್ಞಾನವನ್ನು ಹುಟ್ಟಿಸಿಯೂ ಪವಿತ್ರೀಕರಿಸು. ॥ ೪ ॥ 'ಉಭಾಭ್ಯಾಂ ದೇವ ಸವಿತಃ ಪವಿತ್ರೇಣ ಸವೇನ ಚ । ಮಾಂ ಪುನೀಹಿ ವಿಶ್ವತಃ' ॥ ಸವಿತಃ=ಜ್ಞಾನವನ್ನು ಹುಟ್ಟಿಸುವುದರಿಂದ ಸವಿತೃನಾಮಕನಾದ, ದೇವ=ಕ್ರೀಡಾದಿ ಗುಣವಿಶಿಷ್ಟನಾದ ವಾಯುವೇ, ಪವಿತ್ರೇಣ=ಬ್ರಹ್ಮನಿಂದ, ಸವೇನ ಚ=ಜ್ಞಾನಾಖ್ಯಪ್ರಸೂತಿಯಿಂದಲೂ, ಉಭಾಭ್ಯಾಂ=ಎರಡರಿಂದ, ಮಾಂ=ನನ್ನನ್ನು, ವಿಶ್ವತಃ=ಎಲ್ಲಾದರಿಂದಲೂ, ಪುನೀಹಿ=ಪವಿತ್ರೀಕರಿಸು. (ಪ್ರಸಾದಮಾತ್ರದಿಂದಲ್ಲ. ಎರಡೂ ಆವಶ್ಯಕವು.) ॥ ೫ ॥ 'ತ್ರಿಭಿಷ್ಟ್ವಂ ದೇವ ಸವಿತಃ ವರ್ಷಿಷ್ಠೈಃ ಸೋಮ ಧಾಮಭಿಃ । ಅಗ್ನೇ ದಕ್ಷೈಃ ಪುನೀಹಿ ನಃ' ॥ ಅಗ್ನೇ ಸವಿತಃ ದೇವ ಸೋಮ=ಸೌಮ್ಯಸ್ವರೂಪನೇ, ತ್ವಂ=ನೀನು, ವರ್ಷಿಷ್ಠೈಃ=ಭಕ್ತರಿಗೆ ಅಭಿಲಷಿತವಾದುದನ್ನು ಸೇಚಿಸುವ, ದಕ್ಷೈಃ ತ್ರಿಭಿಃ ಧಾಮಭಿಃ=ಸಮರ್ಥಗಳಾದ ಕ್ಷೀರಾಬ್ಧಿ ಮೊದಲಾದ ಮೂರು ಮಂದಿರಗಳಲ್ಲಿರತಕ್ಕ ಭಗವದ್ರೂಪಗಳಿಂದ, ನಃ=ನಮ್ಮನ್ನು, ಪುನೀಹಿ=ಪವಿತ್ರೀಕರಿಸು. ॥ ೬ ॥ 'ಪುನಂತು ಮಾಂ ದೇವಜನಾಃ ಪುನಂತು ವಸವೋ ಧಿಯಾ । ವಿಶ್ವೇ ದೇವಾಃ ಪುನೀತ ಮಾ ಜಾತವೇದಃ ಪುನೀಹಿ ಮಾ' ॥ ಜಾತವೇದಃ=ಸರ್ವಜ್ಞನಾದ ವಾಯುವೇ, ಧಿಯಾ=ಜ್ಞಾನದಿಂದ, (ನಿನ್ನ ಅನುಮತಿಯಿಂದ,) ದೇವಜನಾಃ=ದೇವದೂತರು, ಪುನಂತು=ಪವಿತ್ರೀಕರಿಸಲಿ. ವಸವಃ=ವಸುಗಳು, ಮಾಂ=ನನ್ನನ್ನು, ಪುನಂತು=ಪವಿತ್ರೀಕರಿಸಲಿ. ವಿಶ್ವೇದೇವಾಃ=ವಿಶ್ವೇದೇವತೆಗಳಿರಾ! ಮಾಂ=ನನ್ನನ್ನು, ಪುನೀತ=ಪವಿತ್ರೀಕರಿಸಿರಿ. (ಅವರು ಹೇಗೆ ಪವಿತ್ರೀಕರಿಸುತ್ತಾರೋಹಾಗೆಯೇ ನೀನು,) ಮಾ=ನನ್ನನ್ನು, ಪುನೀಹಿ=ಪವಿತ್ರೀಕರಿಸು. ॥ ೭ ॥ 'ಆದಿತ್ಪ್ರತ್ನಸ್ಯ ರೇತಸೋ ಜ್ಯೋತಿಷ್ಪಶ್ಯಂತಿ ವಾಸರಂ । ಪರೋ ಯದಿಧ್ಯತೇ ದಿವಾ' ॥ ಪ್ರತ್ನಸ್ಯ=ಪುರಾತನನಾದ, ರೇತಸಃ=ಮಹಾರತಿಯುಳ್ಳ ವಿಷ್ಣುವಿನ, ವಾಸರಂ=ತನ್ನ ಸನ್ನಿಧಾನದಿಂದ ಸುಖಪಡಿಸುವ, ಯತ್ ಜ್ಯೋತಿಃ= ಯಾವುದೊಂದು ಜ್ಯೋತಿಸ್ಸು, ದಿವಾಪರಃ=ಸ್ವರ್ಗದಿಂದ ಮೇಲೆ ಇರುವ ವೈಕುಂಠಲೋಕದಲ್ಲಿ, ಇಧ್ಯತೇ=ಪ್ರಕಾಶಿಸಲ್ಪಡುತ್ತದೋ, ತತ್=ಆ ಜ್ಯೋತೀರೂಪವು, ಆತ್ ಇತ್=ಅಕಾರವಾಚ್ಯನಾದ ಶ್ರೀ ಹರಿಯ ಅನುಗ್ರಹದಿಂದಲೇ, ಪಶ್ಯಂತಿ=(ಉಪಾಸಕರು) ನೋಡುತ್ತಾರೆ. ॥ ೧ ॥

'ಯತ್ರ ಬ್ರಹ್ಮಾ ಪವಮಾನೇತ್ಯಾದಿ' ೭ ಋಕ್ಕು ಅವುಗಳ ಅರ್ಥಗಳು ಈ ರೀತಿಯಾಗಿವೆ. 'ಯತ್ರ ಬ್ರಹ್ಮಾ ಪವಮಾನಃ ಛಂದಸ್ಯಾಂ ೩ ವಾಚಂ ವದನ್ । ಗ್ರಾವ್ಣಾ ಸೋಮೇ ಮಹೀಯತೇ ಸೋಮೇನಾನಂದಂ ಜನಯನ್ನಿಂದ್ರಾಯೇಂದೋ ಪರಿಸ್ರವ' ॥ ಇಂದೋ=ಇಷ್ಟಪ್ರದನಾದ, ಪವಮಾನ=ವಾಯುವೇ, ಬ್ರಹ್ಮಾ=ಮುಕ್ತಚತುರ್ಮುಖನು, ಯತ್ರ=ಯಾವ ವಿಷ್ಣುವಿನ ಲೋಕದಲ್ಲಿ, ಛಂದಸ್ಯಾಂ=ಛಂದಸ್ಸಂಬಂಧಿಯಾದ, ವಾಚಂ=ವೇದವಚನವನ್ನು,

ವದನ್=ವ್ಯಾಖ್ಯಾನಮಾಡುವವನಾಗಿ, ಸೋಮೇ=ಸೌಮ್ಯಸ್ವರೂಪನಾದುದರಿಂದ ಸೋಮ ನಾಮಕ ಭಗವದ್ವಿಷಯದಲ್ಲಿ, ಗ್ರಾವ್ಣಾ=ಹಿಂಡಲ್ಪಟ್ಟ, ಸೋಮೇನ=ಸೋಮರಸದಿಂದ, (ಯಾಗ ಮಾಡಿ, ಆತನ ಅನುಗ್ರಹದಿಂದ ತನಗೆ) ಆನಂದಂ=ಸಂತೋಷವನ್ನು, ಜನಯನ್=ಹುಟ್ಟಿಸು ವವನಾಗಿ, (ಮುಕ್ತಸಮೂಹಗಳಿಂದ) ಮಹೀಯತೇ=ಪೂಜಿಸಲ್ಪಡುತ್ತಾನೆ. ಇಂದ್ರಾಯ= ವಿಷ್ಣುವಿಗೋಸ್ಕರ, ಮಾಂ=ನನ್ನನ್ನು, ಪರಿಸ್ರವ=ಕೇಳಿಸು. ॥ ೧ ॥ 'ಯತ್ರ ಜ್ಯೋತಿರಜಸ್ರಂ ಯಸ್ಮಿನ್ ಲೋಕೇ ಸ್ವರ್ಹಿತಂ । ತಸ್ಮಿನ್ಮಾಂ ಧೇಹಿ ಪವಮಾನಾಮೃತೇ ಲೋಕೇ ಅಕ್ಷಿತ ಇಂದ್ರಾ ಯೇಂದೋ ಪರಿಸ್ರವ' ॥ ಯತ್ರ=ಯಾವ ಲೋಕದಲ್ಲಿ, ಅಜಸ್ರಂ=ನಿರಂತರದಲ್ಲಿಯೂ, ಜ್ಯೋತಿಃ=ಪ್ರಕಾಶವು, ಯಸ್ಮಿನ್ ಲೋಕೇ=ಯಾವ ಲೋಕದಲ್ಲಿ, ಸ್ವರ್=ಆನಂದರೂಪ ವಾದ ಬ್ರಹ್ಮವು, ಹಿತಂ=ಇಡಲ್ಪಟ್ಟದೋ, ಅಮೃತೇ=ಅಲ್ಲಿದ್ದವರಿಗೆ ಮರಣವನ್ನು ಪ್ರಾಪಿಸಿ ಕೊಡದಿರುವ, ಅಕ್ಷಿತೇ=ಸ್ವಯಂ ನಾಶರಹಿತವಾದ, ತಸ್ಮಿನ್ ಲೋಕೇ=ಆ ಲೋಕದಲ್ಲಿ, ಪವಮಾನ=ವಾಯುವೇ, ಮಾಂ=ನನ್ನನು , ಧೇಹಿ=ಇಡು. ಇಂದೋ=ವಾಯುವೇ, ಇಂದ್ರಾಯ=ಇಂದ್ರನಿಗೋಸ್ಕರ, ಪರಿಸ್ರವ=ಪ್ರಾಪಿಸಿಕೊಡು. ॥ ೨ ॥ 'ಯತ್ರಾನುಕಾಮಂ ಚರಣಂ ತ್ರಿನಾಕೇ ತ್ರಿದಿವೇ ದಿವಃ । ಲೋಕಾ ಯತ್ರ ಜ್ಯೋತಿಷ್ಮಂತಸ್ತತ್ರ ಮಾಮಮೃತಂ ಕೃಧೀಂದ್ರಾಯೇಂದೋ ಪರಿಸ್ರವ' ॥ ತ್ರಿನಾಕೇ, ತ್ರಿ=ಮೂರುವಿಧವಾದ, ನಾಕೇ=ಪರಮಸುಖ ಸಾಧನವಾದ, ತ್ರಿದಿವೇ=ತ್ರಿದಿವಶಬ್ದವಾಚ್ಯವಾದ, ಶ್ವೇತದ್ವೀಪವೊದಲಾದ, ಯತ್ರ=ಯಾವ ಲೋಕದಲ್ಲಿ, ಅನುಕಾಮಂ ಚರಣಂ=ಸ್ವೇಚ್ಛಾನುಸಾರವಾಗಿ ಸಂಚಾರವೂ ಭಕ್ಷಣವೂ ಇದೆಯೋ, ಯತ್ರ=ಯಾವ ಲೋಕದಲ್ಲಿ, ದಿವಃ=ಸರಸ್ವತಿಯ, ಜ್ಯೋತಿಷ್ಮಂತಃ ಲೋಕಾಃ=ಪ್ರಕಾಶವುಳ್ಳ ಲೋಕಗಳು, ಇವೆಯೋ, ತತ್ರ=ಅಲ್ಲಿ, ಮಾಂ=ನನ್ನನು , ಅಮೃತಂ=ಮುಕ್ತನನ್ನು, ಕೃಧಿ= ಮಾಡು. ಇಂದ್ರಾಯ ಇಂದೋ ಪರಿಸ್ರವ...... ॥ ೩ ॥ 'ಯತ್ರ ಕಾಮಾ ನಿಕಾಮಾಶ್ಚ ಯತ್ರ ಬ್ರಧ್ನಸ್ಯ ವಿಷ್ಟಪಂ । ಸ್ವಧಾ ಚ ಯತ್ರ ತೃಪ್ತಿಶ್ಚ ತತ್ರ ಮಾಮಮೃತಂ ಕೃಧೀಂದ್ರಾಯೇಂದೋ ಪರಿಸ್ರವ' ॥ ಯತ್ರ=ಯಾವ ಲೋಕದಲ್ಲಿ, ಕಾಮಾಶ್ಚ=ಭೋಗಕ್ಕೋಸ್ಕರ ವಿಷಯಗಳು, ನಿಕಾ ಮಾಃ=ಯಥೇಷ್ಟವಾಗಿ ಇವೆಯೋ, ಯತ್ರ=ಎಲ್ಲಿ, ಬ್ರಧ್ನಸ್ಯ ವಿಷ್ಟಪಂ=ಸೂರ್ಯನಸ್ಥಾನವೋ, ಯತ್ರ=ಎಲ್ಲಿ, ಸ್ವಧಾ ಚ=ಸುಖವು, ತೃಪ್ತಿಶ್ಚ=ಅಲಂಬುದ್ಧಿಯೂ, ತದಭಿಮಾನಿದೇವತೆಗಳೂ, (ಇರುತ್ತಾರೋ,) ತತ್ರ ಮಾಂ ಅಮೃತಂ ಕೃಧಿ ಇಂದೋ ಇಂದ್ರಾಯ ಪರಿಸ್ರವ...... ॥ ೪ ॥ 'ಯತ್ರ ರಾಜಾ ವೈವಸ್ವತೋ ಯತ್ರಾವರೋಧನಂ ದಿವಃ । ಯತ್ರಾಮೂರ್ಯಹ್ವತೀರಾಪಸ್ತತ್ರ ಮಾಮಮೃತಂ ಕೃಧೀಂದ್ರಾಯೇಂದೋ ಪರಿಸ್ರವ' ॥ ಯತ್ರ=ಯಾವ ಲೋಕದಲ್ಲಿ, ವೈವ ಸ್ವತೋ ರಾಜಾ=ಮುಕ್ತಯಮನು ರಾಜನೋ, ಯತ್ರ=ಎಲ್ಲಿ, (ಎಲ್ಲಾ ದೇವಸ್ತ್ರೀಯರು) ದಿವಃ ಅವರೋಧನಂ=ಸರಸ್ವತೀದೇವಿಯ ಪರಿವಾರಭೂತರೋ, ಯತ್ರ=ಎಲ್ಲಿ, ಯಹ್ವತೀಃ ಅಮೂಃ ಆಪಃ=ಹರಿಯುತ್ತಿರುವ ಈ ಗಂಗಾದಿದೇವತೆಗಳೋ, ತತ್ರ ಮಾಂ ಅಮೃತಂ ಕೃಧಿ ಇಂದೋ ಇಂದ್ರಾಯ ಪರಿಸ್ರವ..... ॥ ೫ ॥ 'ಯತ್ರಾನಂದಾಶ್ಚ ಮೋದಾಶ್ಚ ಮುದಃ ಪ್ರಮುದ ಆಸತೇ । ಕಾಮಸ್ಯ ಯತ್ರಾಪ್ತಾಃ ಕಾಮಾಸ್ತತ್ರ ಮಾಮಮೃತಂ ಕೃಧೀಂದ್ರಾಯೇಂದೋ ಪರಿಸ್ರವ' ॥ ಯತ್ರ=ಯಾವ ಲೋಕದಲ್ಲಿ, ಆನಂದಾಶ್ಚ=ಅಪರೋಕ್ಷಜ್ಞಾನವ್ಯಂಗ್ಯಗಳೂ ವಿಷಯೋಪಾಧಿ ರಹಿತಗಳೂ ಆದ ತನ್ನ ಸುಖವಿಶೇಷಗಳು, ಮೋದಾಶ್ಚ=ಭೋಗವೇ ನಿಮಿತ್ತವಾಗಿವುಳ್ಳ ಸುಖ ವಿಶೇಷಗಳು, ಮುದಃ=ಅಲ್ಪಭೋಗವೇ ನಿಮಿತ್ತವಾಗಿ ಉಳ್ಳವುಗಳೂ, ಪ್ರಮುದಃ=ಅತ್ಯಂತ ಪ್ರಕೃಷ್ಟವಿಷಯೋತ್ಥ ಸುಖವಿಶೇಷಗಳೂ, ಆಸತೇ=ಇರುತ್ತವೋ, ಯತ್ರ=ಎಲ್ಲಿ, ಕಾಮಸ್ಯ ಕಾಮಾಃ=ಇಚ್ಛಾವಿಷಯಗಳೂ, ಆಪ್ತಾಃ=ಪೂರ್ಣಗಳೋ, ತತ್ರ ಮಾಂ ಅಮೃತಂ ಕೃಧಿ ಇಂದೋ ಇಂದ್ರಾಯ ಪರಿಸ್ರವ..... ॥ ೬ ॥ 'ಉದ್ವಯಂ ತಮಸಸ್ಪರಿ ಜ್ಯೋತಿಷ್ಪಶ್ಯಂತ ಉತ್ತರಂ ।

ದೇವಂ ದೇವತ್ರಾಸೂರ್ಯಮಗನ್ಮ ಜ್ಯೋತಿರುತ್ತಮಂ' ॥ ತಮಸಃ=ಅಜ್ಞಾನದಿಂದ, ಉತ್ ವಯಂ=ಎದ್ದ ನಾವು (ಅಂದರೆ ಅಜ್ಞಾನದಿಂದ ಬಿಡುಗಡೆಹೊಂದಿದ) ಉತ್ತರಂ=ಸರ್ವೋತ್ತಮನಾದ ವಿಷ್ಣ್ವಾಖ್ಯನಾದ, ಜ್ಯೋತಿಃ=ಪ್ರಕಾಶಸ್ವರೂಪವನ್ನು, ಪರಿಪಶ್ಯಂತಃ=ನೋಡುವವರಾಗಿ, (ಆತನನ್ನೇ) ದೇವತ್ರಾದೇವಂ=ದೇವತೆಗಳಿಗೂ ದೇವತ್ವವನ್ನು ಕೊಡುವವನನ್ನಾಗಿಯೂ, ಸೂರ್ಯಂ=ಜ್ಞಾನಿಗಳಿಂದ ಪ್ರಾಪ್ಯನಾದುದರಿಂದ ಸೂರ್ಯನಾಮಕನಾದ, ಉತ್ತಮಂ ಜ್ಯೋತಿಃ=ಅತ್ಯುತ್ತಮ ಜ್ಯೋತೀರೂಪನನ್ನಾಗಿಯೂ, ಅಗನ್ಮ=ಹೊಂದಿದೆವು, ॥ ೧ ॥ (ರಾತ್ರೀ ಸೂಕ್ತ ತದರ್ಥಗಳು ಈ ರೀತಿಯಾಗಿವೆ.) 'ರಾತ್ರೀ ವ್ಯಖ್ಯದಾಯತೀ ಪುರುತ್ರಾ ದೇವ್ಯಾ ಅಕ್ಷಭಿಃ। ವಿಶ್ವಾ ಅಧಿಶ್ರಿಯೋಽಧಿತ' ॥ ರಾತ್ರೀ ದೇವೀ=ರತಿಯನ್ನು ಕೊಡುವುದರಿಂದ ರಾತ್ರಿನಾಮಕಳಾದ ದೇವಿಯೂ ಸ್ತ್ರೀರೂಪನಾದ ವಿಷ್ಣುವೂ ದುರ್ಗಾದೇವಿಯೂ ಕೂಡ, ಆಯತೀ=ಬರುವವರಾಗಿ, ಪುರುತ್ರಾ=ಬಹುಸಂಖ್ಯಾಕಗಳಾದ, ಅಕ್ಷಭಿಃ=ನಯನಗಳಿಂದ, ಪುರುತ್ರಾ=ಬಹುಪ್ರಕಾರವಾಗಿ, ವ್ಯಖ್ಯತ್=ಜಗತ್ತನ್ನು ನೋಡಿದರು. ವಿಶ್ವಾಃ ಅಧಿ=ಸರ್ವಲೋಕಗಳಲ್ಲಿ, ವಿಶ್ವಾಃ ಶ್ರಿಯಃ=ಸರ್ವಸಂಪತ್ತುಗಳನ್ನು, ಅಧಿತ=ಧರಿಸಿದನು. ॥ ೧ ॥ 'ಓರ್ವಪ್ರಾ ಅಮರ್ತ್ಯಾ ನಿವತೋ ದೇವ್ಯು೯ದ್ವತಃ। ಜ್ಯೋತಿಷಾ ಬಾಧತೇ ತಮಃ' ॥ ದೇವೀ=ಸ್ತ್ರೀರೂಪನಾದ ವಿಷ್ಣುವು, ನಿವತಃ=ನೀಚರಾದ, ಉದ್ವತಃ=ಉತ್ತಮರಾದ, ಅಮರ್ತ್ಯಾಃ=ಬ್ರಹ್ಮಾದಿದೇವತೆಗಳನ್ನು, ಆ ಉರು ಅಪ್ರಾಃ=ಉತ್ಕೃಷ್ಟವಾಗಿ ಸುತ್ತಮುತ್ತಲೂ, ಪೂರ್ಣೀಕರಿಸಿದರು. ತಮಃ=ಅವರ ಅಜ್ಞಾನವನ್ನು, ಜ್ಯೋತಿಷಾ=ಕರಣವಾದ ಜ್ಞಾನದಿಂದ, ಬಾಧತೇ=ನಾಶಮಾಡುತ್ತಾನೆ. ॥ ೨ ॥ 'ನಿರು ಸ್ವಸಾರಮಸ್ಕೃತೋಷಸಂ ದೇವ್ಯಾಯತೀ । ಅಪೇದುಹಾಸತೇ ತಮಃ' ॥ ಆಯತೀ ದೇವೀ=ಬರತಕ್ಕ ವಿಷ್ಣ್ವಾದಿದೇವತೆಯು, ಉಷಸಂ ಉ=ಶುಕ್ಲವರ್ಣವೂ, ಉಷೋನಾಮಕವೂ ಆದ, ಸ್ವಸಾರಂ=ಸುಖಾತ್ಮಕವಾದ ತನ್ನ ಸ್ವರೂಪವನ್ನೇ, ನಿಃ=ಅತ್ಯಂತವಾಗಿ, ಅಸ್ಕೃತ= ಮಾಡಿದನು. (ಸೂರ್ಯಾದಿಗಳಲ್ಲಿದ್ದವನಾಗಿ) ತಮಃ ಇತ್=ತಮಸ್ಸನ್ನು ಕೂಡ, ಅಪಹಾಸತೇ ಉ=ನಿರಾಕರಿಸುತ್ತಾನೆಯೇ ಸರಿ. ॥ ೩ ॥ 'ಸಾ ನೋ ಅದ್ಯ ಯಸ್ಯಾ ವಯಂ ನಿ ತೇ ಯಾಮನ್ನವಿಕ್ಷ್ಮಹಿ। ವೃಕ್ಷೇ ನ ವಸತಿಂ ವಯಃ' ॥ ಸಾ=ಆ ರಾತ್ರಿಯು, ನಃ=ನಮಗೆ ಸ್ವಾಮಿಯು. ಯಸ್ಯಾಃ=ಯಾವ ರಾತ್ರಿಯ, ಯಾಮನ್=ನಿಗ್ರಹಿಸುವುದರಿಂದ ಯಮನಾಮಕವಾದ ಅಥವಾ ಪ್ರಲಯಕಾಲದಲ್ಲಿ ತನ್ನೊಳಗೆ ಪ್ರವೇಶಿಸಿ ಬಂಧಿಸುವುದರಿಂದ ಯಾಮನಾಮಕವಾದ ಜಠರದಲ್ಲಿ, ಅದ್ಯ=ಇರುವ ಕಾಲದಲ್ಲಿ, ವಯಃ=ಪಕ್ಷಿಗಳು, ವೃಕ್ಷೇ ವಸತಿಂ ನ=ಮರದಲ್ಲಿ ಆವಾಸವನ್ನೆಂಬಂತೆ, ತೇ ವಯಂ=ಆ ನಾವು, ನಿ ಅವಿಕ್ಷ್ಮಹಿ=ಪ್ರವೇಶಿಸುತ್ತೇವೆ. ॥ ೪ ॥ 'ನಿ ಗ್ರಾಮಾಸೋ ಅವಿಕ್ಷತ ನಿ ಪದ್ವಂತೋ ನಿ ಪಕ್ಷಿಣಃ। ನಿ ಶ್ಯೇನಾಸಶ್ಚಿದರ್ಥಿನಃ' ॥ ಗ್ರಾಮಾಸಃ=ಗ್ರಾಮನಾಮಕರಾದ ಅಸುರರೂ, ಪದ್ವಂತಃ=ಕೇವಲ ಪಾದಸಂಚಾರಿಗಳಾದ ಮನುಷ್ಯರೂ, ನಿ ಅವಿಕ್ಷತ= (ನಿನ್ನಲ್ಲಿ) ಪ್ರವೇಶಿಸಿದರು. ಪಕ್ಷಿಣಃ=ಗರುಡಾದಿಪಕ್ಷಿಗಳೂ ಕೂಡ, ನ್ಯವಿಶನ್=ಪ್ರವೇಶಿಸಿದರು. ಶ್ಯೇನಾಸಃ=ಸುಖರೂಪನಾದ ವಿಷ್ಣುವೇ ಚೆನ್ನಾಗಿ (ಮುಖ್ಯ) ಸ್ವಾಮಿಯು ಎಂದು ಜ್ಞಾನವುಳ್ಳ ದೇವೋತ್ತಮರೂ ಕೂಡ, ನಿ ಅವಿಕ್ಷನ್=ಪ್ರವೇಶಿಸಿದರು. ಅರ್ಥಿನಶ್ಚಿತ್=ಪುರುಷಾರ್ಥವನ್ನು ಹೊಂದಿದ ಮುಕ್ತರೂ ಕೂಡ, ನಿ ಅವಿಕ್ಷನ್=ಪ್ರವೇಶಿಸಿದರು. ('ಆವೃತ್ತೈವೋಪಸರ್ಗಸ್ಯ ಕ್ರಿಯಾವೃತ್ತಿರ್ಭವಿಷ್ಯತಿ' ಎಂಬೀ ವಚನದಿಂದ ಕ್ರಿಯಾಕ್ಕೇನೇ ಆವೃತ್ತಿಯು.) ॥ ೫ ॥

'ಯಾವಯಾ ವೃಕ್ಯಂ ೯ ವೃಕಂ ಯವಯಸ್ತೇನಮೂರ್ಮ್ಯೇ। ಅಥಾನಃ ಸುತರಾ ಭವ' ॥ ಊರ್ಮ್ಯೇ = ಅಂಗೀಕರಿಸಲ್ಪಟ್ಟ ಪ್ರಮಾಣವುಳ್ಳ ದೇವಿಯೇ, ವೃಕ್ಯಂ = ಅಸುರಸ್ವಭಾವವುಳ್ಳ ಜನವನ್ನು, ಯಾವಯ=ಹೊರಪಡಿಸು. ವೃಕಂ=ವೃಕಾಸುರನನ್ನು, ಯವಯ=

ನಾಶಮಾಡು. ಸ್ತೇನಂ=ಬ್ರಹ್ಮಸ್ತೇನನನ್ನು, (ಅಂದರೆ ಪರಬ್ರಹ್ಮನಿಗೆ ನಿರಾಕಾರತ್ವಾದಿಗಳನ್ನು ಹೇಳುವ ಮಹಾಸುರನನ್ನು,) ಯುವಯ=ನಿರಾಕರಿಸು. ಅಥ=ನಮ್ಮಿಂದ ಅವರಿಗೆ ವಿಯೋಗಾನಂತರದಲ್ಲಿ, ನಃ=ನಮಗೆ, ಸುತರಾ ಭವ=ಅತಿಶಯ ಸುಖಪ್ರದಳು ಆಗು. ॥ ೬ ॥ 'ಉಪ ಮಾ ಪೇಪಿಶತ್ತಮಃ ಕೃಷ್ಣಂ ವ್ಯಕ್ತಮಸ್ಥಿತ । ಉಷ ಋಣೇ ವಯಾತಯ' ॥ ಉಷಃ=ಪ್ರಕಾಶ ರೂಪಳಾದ ದೇವಿಯೇ, ಪೇಪಿಶತ್=ಅಜ್ಞರಿಗೆ ಮನೋರಮವಾದ, ಕೃಷ್ಣಂ=ಕೃಷ್ಣವರ್ಣವಾದ, ವ್ಯಕ್ತಂ=ಸ್ಪಷ್ಟವಾದ, ತಮಃ=ಯಾವ ಭಾವರೂಪಾಜ್ಞಾನವು, ಮಾ ಉಪ=ನನ್ನ ಸಮೀಪದಲ್ಲಿ, ಆಸ್ಥಿತ=ಚೆನ್ನಾಗಿ ಜ್ಞಾನಕ್ಕೆ ಆವರಕವಾಗಿ, ಇರುತ್ತದೆಯೋ, ತತ್=ಅದನ್ನು, ಋಣಾ ಇವ=ಸಾಲಗಳೆನ್ನೆಂಬಂತೆ, ಯಾತಯ=ಹೊರಪಡಿಸು. (ಹೇಗೆ ಸತ್ಪುರುಷನು ಋಣಪರಿಹಾರದಲ್ಲಿ ಅತಿಜಾಗರೂಕನು ಆಗುತ್ತಾನೋ ಹಾಗೆಯೇ ಅವಹಿತಳಾಗಿ, ನಾಶಮಾಡು.) ॥ ೭ ॥ 'ಉಪ ತೇ ಗಾ ಇವಾಕರಂ ವೃಣೀಷ್ವ ದುಹಿತರ್ದಿವಃ। ರಾತ್ರಿಸ್ತೋಮಂ ನ ಜಿಗ್ಯುಷೇ' ॥ ದಿವಃ ದುಹಿತಃ=ಜ್ಞಾನವ್ಯಂಗ್ಯಳಾದ ರಾತ್ರಿಯೇ, ಗಾ ಇವ=ಗೋವುಗಳೆನ್ನೆಂಬಂತೆ, ಜಿಗ್ಯುಷೇ=ಜಯವುಳ್ಳವನಿಗೋಸ್ಕರ, ಸ್ತೋಮಂ ನ=ಸ್ತುತಿಯನ್ನೆಂಬಂತೆ, ತೇ=ನಿನ್ನ, ಸ್ತೋಮಂ=ಸ್ತುತಿಯನ್ನು, ಉಪ=ನಿನ್ನ ಸಮೀಪದಲ್ಲಿಯೇ, ಆ=ಚೆನ್ನಾಗಿ, ಅಕರಂ=ಮಾಡಿದೆನು. (ಹೇಗೆ ನಿರುಪಾಧಿಕವಾಗಿ ಬ್ರಾಹ್ಮಣರಿಗೋಸ್ಕರ ಗೋವುಗಳನ್ನು ದಾನಮಾಡುವರೋ, ಹೇಗೆ ರಾಷ್ಟ್ರೀಯರು ಜಯಶೀಲನಾದ ರಾಜನಿಗೋಸ್ಕರ ಸಂತೋಷಾತಿಶಯದಿಂದ ಸ್ತುತಿಸುತ್ತಾರೋ), ಹಾಗೆಯೇ ಸ್ತುತಿಯನ್ನು ಮಾಡಿದೆನು. ನಾನು ಮಾಡಿದ ಸ್ತುತಿಯನ್ನು, ವೃಣೀಷ್ವ=ಅಂಗೀಕರಿಸು. ॥ ೮ ॥ ೪ ॥

ಭಾ॥ **(a)** ಯ ಏನಂ ವಕ್ತ್ಯಯೋಗ್ಯೇಭ್ಯೋ ಯೋऽಥ ಚೈನಂ ಮಹಾವ್ರತೇ । ಕರ್ಮಣ್ಯಾಚಾರ್ಯತೋऽನ್ಯಸ್ಯ ಶಂಸೇತ ಪಿತೃತೋऽಥ ವಾ ॥ ಮಹಾವ್ರತೇನ ಸ್ತೋತ್ರೇಣ ಸ್ತುವೀತೈನಮಥಾಪಿ ವಾ । ಮಹಾವ್ರತೇ ಚಿತಿಂ ವಾऽಪಿ ಕುರ್ಯಾನ್ನಾಸ್ಯ ಫಲಂ ಶ್ರುತೇಃ ॥ ಸುಕೃತಸ್ಯ ಫಲಂ ಚೈವ ನಾಸೌ ಸಮ್ಯಗವಾಪ್ಸ್ಯತಿ । **(b)** ಪ್ರತ್ಯಕ್ಷಜ್ಞಾನಿನೋऽಪ್ಯೇತದಾನಂದಹ್ರಾಸಕೃದ್ಭವೇತ್ ॥ ಪ್ರತ್ಯಕ್ಷಜ್ಞಾನಿನೋ ಮೋಕ್ಷೋ ನ ಕಥಂಚಿದ್ಧೀಯತೇ । **(c)** ಆಚಾರ್ಯಮೇವ ತಂ ವಿದ್ಯಾದ್ಗುಣೈರ್ಯಃ ಸ್ವಾತ್ಮನೋऽಧಿಕಃ ॥ ಗುಣಾಧಿಕಸ್ಯ ತೇನೈವ ಶಂಸನಾದಿ ನ ದುಷ್ಯತಿ ।

ಅ ॥ (a) ಯಾವಾತನು ಈ ಪರಮಾತ್ಮನನ್ನು, ಮುಕ್ತಿಗೆ ಅಯೋಗ್ಯರಾದವರಿಗೋಸ್ಕರ ಉಪದೇಶಿಸುತ್ತಾನೋ, ಮತ್ತು ಈ ಪರಮಾತ್ಮನನ್ನು ಉದ್ದೇಶಿಸಿ, ಮಹಾವ್ರತಾಖ್ಯ ಯಾಗದಲ್ಲಿ, ಕರ್ಮಗಳನ್ನು ಆಚಾರ್ಯರಿಂದ ಅಥವಾ ತಂದೆಯವರಿಂದ ಇತರನಾದವನಿಗೋಸ್ಕರ (ಹೋಮಿಸುವವನು ಬೃಹತೀ ಸಹಸ್ರವನ್ನು) ಹೊಗಳುತ್ತಾನೋ, ಅಥಾಪಿ (ಉದ್ಗಾತನು) ಮಹಾವ್ರತಾಖ್ಯ ಸ್ತೋತ್ರದಿಂದ, ಇವನನ್ನು ಉದ್ದೇಶಿಸಿ ಸ್ತುತಿಸುತ್ತಾನೋ (ಅಧ್ವರ್ಯುವು) ಮಹಾವ್ರತದಲ್ಲಿ ಇಷ್ಟಕಾಚಯನ ಮೊದಲಾದ ಋತ್ವಿಜನ (ಪುರೋಹಿತನ) ಕಾರ್ಯವನ್ನು ಮಾಡುತ್ತಾನೋ, ಇವನ ಶ್ರುತಿಗೆ ಫಲವಿಲ್ಲವು. (ಇವನಿಂದ ಅಧೀತವಾದ ಶಾಸ್ತ್ರವು ಫಲಾಧಾಯಕವು ಆಗಲಾರದು) ಈತನು ಗಂಗಾಸ್ನಾನ ಮೊದಲಾದ ಕರ್ಮದ ಫಲವನ್ನು ಕೂಡ ಚೆನ್ನಾಗಿ ಹೊಂದಲಾರನು. (b) ಅಪರೋಕ್ಷ ಜ್ಞಾನಿಗೂ ಕೂಡ ಅಯೋಗ್ಯೋಪದೇಶಾದಿಯು ಆನಂದಕ್ಕೆ ಕ್ಷೀಣತೆಯನ್ನು ಮಾಡುವುದಾಗಿ ಆಗುವುದು. ಅಪರೋಕ್ಷ ಜ್ಞಾನಿಯಾದವನಿಗೆ ಯಾವ ಪ್ರಕಾರದಿಂದಲೂ ಮುಕ್ತಿಯು ತಪ್ಪಲಾರದು. (c) ಯಾರು

ತನ್ನಿಂದ ಗುಣಗಳಿಂದ ಶ್ರೇಷ್ಠನೋ, ಆತನನ್ನೇ ಆಚಾರ್ಯನನ್ನಾಗಿ ತಿಳಿಯತಕ್ಕದು. ಆದುದರಿಂದ (ಆಚಾರ್ಯಶಬ್ದವು ಗುಣಾಧಿಕ ಪರವಾದುದರಿಂದ) ಗುಣಗಳಿಂದ ಶ್ರೇಷ್ಠನಾದವನಿಗೇನೇ ಸ್ತುತಿಮೊದಲಾದುದು ದುಷ್ಟವಾಗಲಾರದು.

ಭಾ|| (a) ಅಯೋಗ್ಯಸ್ಯೋಪದೇಶೇ ತು ಕೃತೇಹೌತ್ರಾದಿಕೇಽಪಿ ವಾ । ಪ್ರಾಯಶ್ಚಿತ್ತಾರ್ಥಮೇತತ್ತು ಶಂಸೀತ ಶತವಾರಕಂ || ಅನ್ಯಥಾ ಮಾನುಷೇಷ್ವೇವ ಜಾಯತೇ ನ ದಿವಂ ವ್ರಜೇತ್ । (b) ಯೋಗ್ಯಾ ಅಸ್ಯಾಶ್ಚ ವಿದ್ಯಾಯಾ ದೇವಾ ಋಷಯ ಏವ ಚ || ಏಕದೇಶಜ್ಞಾನಯೋಗ್ಯಾ ಮಾನುಷಾ ಉತ್ತಮಾ ಯದಿ । (c) ಕರ್ಮಸಂಚಯವೇತ್ತಾರಂ ತ್ಯಜೇನ್ನಾರಾಯಣಂ ಹಿ ಯಃ || ಪ್ರೀತ್ಯೈಕದೇಶಸಂಸ್ಥತ್ವಾತ್ಸ ಖಾಯುಮಿತಿ ಚೋದಿತಂ । (d) ನ ವಿದ್ಯಾಯಾಃ ಫಲಂ ತಸ್ಯ ಶ್ರುತಂ ಚ ನರಕಾವಹಂ || ನೈವ ಪ್ರಾಪ್ನೋತಿ ಸುಕೃತಂ ಸಂತ್ಯಾಗಾತ್ಪರಮಾತ್ಮನಃ ||

ಅ || (a) ಅಯೋಗ್ಯನಿಗೆ (ಪ್ರಮಾದಾದಿಗಳಿಂದ) ಉಪದೇಶವಾಗಲೀ ಯಾ ಹೋತೃತ್ವಮೊದಲಾದದ್ದಾಗಲೀ ಮಾಡಲ್ಪಟ್ಟರೆ ಪ್ರಾಯಶ್ಚಿತ್ತಕ್ಕಾಗಿ (ಪ್ರಾಯಃ ಪಾಪಮಿತಿ ಪ್ರೋಕ್ತಂ ಚಿತ್ತಂ ತಸ್ಯ ವಿಶೋಧನಂ' ಎಂದು ಹೇಳಿದ ಪ್ರಕಾರ ಪಾಪಗಳನ್ನು ನಿರಾಕರಿಸುವುದಕ್ಕಾಗಿ) ಈ ಬಾಹ್ವವಿದ್ಯೆಯನ್ನು ನೂರಾವರ್ತಿ ಸ್ತುತಿಸತಕ್ಕದು. ಇಲ್ಲವಾದರೆ ಮನುಷ್ಯನಲ್ಲಿಯೇ ಪುನಃ ಪುನಃ ಹುಟ್ಟುತ್ತಾನೆ. ಸ್ವರ್ಗವನ್ನು ಸಹ ಹೊಂದಲಾರನು. (ಮುಕ್ತಿಯನ್ನು ಹೊಂದಲಾರನೆಂದು ಏನು ಹೇಳತಕ್ಕದಿದೆ. (b) ಈ ವಿದ್ಯೆಗೆ ದೇವತೆಗಳು ಹಾಗೆ ಋಷಿಗಳು ಯೋಗ್ಯರು. ಮನುಷ್ಯರೂ ಉತ್ತಮರಾಗಿದ್ದರೆ (ಚತುರ್ಗುಣೋಪಾಸಕರಾಗಿದ್ದರೆ) ಏಕದೇಶಜ್ಞಾನಕ್ಕೆ ಮಾತ್ರ ಯೋಗ್ಯರು. (c) ಯಾರು ಕರ್ಮಸಮುದಾಯವನ್ನು ತಿಳಿದ ಪ್ರೀತಿಪೂರ್ವಕವಾಗಿ ಒಂದು ದೇಹದಲ್ಲಿದ್ದುದರಿಂದ ಮಿತ್ರನೆಂದು ಹೇಳಲ್ಪಟ್ಟ ನಾರಾಯಣನನ್ನು ಬಿಡುತ್ತಾನೋ. (d) ಆತನ ವಿದ್ಯೆಗೆ ಫಲವಿಲ್ಲವು. ಕಲಿತ ಶಾಸ್ತ್ರವೂ ನರಕವನ್ನು ಪ್ರಾಪಿಸಿಕೊಡತಕ್ಕದಾಗಿ ಆಗುತ್ತದೆ. ಶ್ರೀ ಪರಮಾತ್ಮನನ್ನು ಬಿಟ್ಟಿರುವುದರಿಂದ ಸುಕೃತವನ್ನು ಹೊಂದಲಾರನು.

ಭಾ|| (a) ಮುಖ್ಯತ್ಯಾಗೋ ಹರೇರೇಷ ಯನ್ನಾಸ್ತೀತಿ ವದೇದಮುಂ । ತತ್ಸಮಂ ವಾಽಧಿಕಂ ವಾಽಪಿ ಬ್ರೂಯಾದ್ವೈಕ್ಯಮಥಾಪಿ ವಾ || (b) ಐಶ್ವರ್ಯಾದಿ ಗುಣಾನಾಂ ವಾ ಹ್ರಾಸಂ ನಾಸ್ತಿತ್ವಮೇವ ವಾ । ತತ್ಪ್ರಸಾದಂ ವಿನಾ ಮೋಕ್ಷಂ ಬ್ರೂಯಾದ್ವಾ ಕಸ್ಯಚಿತ್ಕ್ವಚಿತ್ || (c) ಐಕ್ಯಂ ವಾ ಬ್ರಹ್ಮಶರ್ವಾದೇರ್ಮುಕ್ತಾನ್ವೈಕ್ಯಮಥಾಪಿ ವಾ । ವ್ಯತ್ಯಾಸಂ ಚಾವತಾರಾಣಾಂ ಜೀವಾಭೇದಮಮುಷ್ಯ ವಾ || (d) ಭೇದಜ್ಞಾನಂ ತದ್ಗುಣಾನಾಂ ತೇನ ವಾಽಥ ಮಿಥೋಽಪಿವಾ । ತಥೈವ ತತ್ಕ್ರಿಯಾಣಾಂ ಚ ತದ್ರೂಪಾಣಾಮಥಾಪಿ ವಾ || (e) ಅಸಾಮ್ಯದರ್ಶನಂ ವಾಽಪಿ ತದ್ಗುಣಾನಾಂ ಪರಸ್ಪರಂ । ದೇಹ ದೇಹಿ ವಿಭೇದಂ ಚ ತಸ್ಮಿನ್ನವಯವೇಷು ವಾ || (f) ಪರಸ್ಪರಂ ಭೇದದೃಷ್ಟಿಂ ತೇನ ವಾ ಕುತ್ರಚಿತ್ಕ್ವಚಿತ್ । ದೋಷಸಂಸರ್ಗಮಸ್ಯಾಪಿ ಸ್ವತಃ ಪರತ ಏವ ವಾ || ಅಜ್ಞಾನತೋ ಜ್ಞಾನತೋ ವಾ

ನಿರ್ದೇಹತ್ವಮಮುಷ್ಯ ಚ । (g) ತದ್ದೇಹಸ್ಯ ಪ್ರಾಕೃತತ್ವಮಚಿದಾನಂದ ದೇಹತಾಂ ॥ ಪ್ರಾದುರ್ಭಾವೇಷ್ವಪಿ ವಿಭೋರ್ದೇಹತ್ಯಾಗೋದ್ಭವಾದಿಕಂ । ಅಜ್ಞಾನದುಃಖಾಸಾಮರ್ಥ್ಯಪಾರವಶ್ಯಾದಿಕಂ ತಥಾ ॥ (h) ಅತದ್ವಶತ್ವಂ ಕಸ್ಯಾಪಿ ಕದಾಚಿತ್ಕ್ವಚಿದಪ್ಯುತ । ಪರಿಮಾಣಂ ಬಲಾದೇರ್ವಾ ತಸ್ಯ ವಿಷ್ಣೋರ್ಮಹಾತ್ಮನಃ ॥ ಭೇದಾಭೇದದೃಶಿರ್ವಾಸ್ಯ ಜೀವೈರ್ವಾ (i) ಸ್ವಗುಣಾದಿಭಿಃ । ತರ್ಕೈಸ್ತಸ್ಯಾಪಲಾಪೋ ವಾ ತತ್ರ ರಕ್ತೇನ ಚೇತಸಾ ॥ ತ್ಯಾಗಾನಾಮೇವ ಮುಕ್ತಾನಾಂ ತರ್ಕಾದ್ಯೈಃ ಸಾಧನಂ ತಥಾ । ಅಚಿಂತ್ಯ ವಿಭವೇಽಪ್ಯಸ್ಮಿನ್ನಸಂಭವನಿರೂಪಣಂ ॥ ಸ ಏವ ಮುಖ್ಯತಸ್ತ್ಯಾಗೋ ವಾಸುದೇವಸ್ಯ ಕೀರ್ತಿತಃ ॥

ಅ ॥ (a) (ಶ್ರೀ ಹರಿಯ ತ್ಯಾಗವು ೪ ವಿಧವು. ಆತನೇ ಇಲ್ಲ ಇತ್ಯಾದಿ ಜ್ಞಾನರೂಪ ವಾದುದು ೧ ನೇದ್ದು. ಅದನ್ನು ವಿವರಿಸುತ್ತಾರೆ). ಯಾವುದೊಂದು ಈ ಹರಿಯನ್ನು ಇಲ್ಲ ವೆಂದು ಹೇಳುವನೋ ಇದು ಶ್ರೀ ಹರಿಯ ಮುಖ್ಯವಾಗಿ ಬಿಡೋಣವು. ಆತನಿಗೆ ಸಮಾನಿಕ ನನ್ನಾಗಲೀ ಆತನಿಂದುತ್ತಮನನ್ನಾಗಲೀ ಅಥವಾ (ತಂತಮಗೆ ಅಭಿಮತನಾದ ಈಶ್ವರನಿಂದ) ಐಕ್ಯವನ್ನಾಗಲೀ ಹೇಳುವನೋ, (b) ಐಶ್ವರ್ಯಮೊದಲಾದ ಗುಣಗಳ ಹ್ರಾಸವನ್ನಾಗಲೀ, ಅವುಗಳ ರಾಹಿತ್ಯವನ್ನೇ ಆಗಲೀ ಹೇಳುವನೋ, ಯಾರಿಗಾದರೂ ಎಲ್ಲಿಯಾದರೂ ಆತನ ಅನು ಗ್ರಹವಿಲ್ಲದೇನೇ ಮುಕ್ತಿಯನ್ನಾಗಲೀ ಹೇಳುವನೋ. (c) ಬ್ರಹ್ಮ ರುದ್ರ ವಿಷ್ಣ್ವಾದಿಗಳಿಗೆ ಐಕ್ಯವನ್ನಾಗಲೀ ಮುಕ್ತಿಯಲ್ಲಿ ತ್ರಿಮೂರ್ತಿಗಳಿಗೆ ಐಕ್ಯವನ್ನಾಗಲೀ ಅಥವಾ ಬ್ರಹ್ಮರುದ್ರರಿಗೆ ವಿಷ್ಣುವಿನಿಂದ ಐಕ್ಯವನ್ನಾಗಲೀ ವ್ಯಾಸಾದ್ಯವತಾರಗಳಿಗೆ ವ್ಯತ್ಯಾಸವನ್ನು ಅಂದರೆ ವ್ಯಾಸಾದಿಗಳು ಭಗವದವತಾರರಲ್ಲರೆಂದೂ, ಅವತಾರರಲ್ಲದ ಬಲಪೃಥ್ವಾದಿಗಳಿಗೆ ಅವತಾರತ್ವವನ್ನೂ ಈ ಹರಿಗೆ ಸರ್ವಜೀವಾಭೇದವನ್ನೂ ಹೇಳುತ್ತಾನೋ. (d) ಆ ಹರಿಯ ಗುಣಗಳಿಗೆ ಆತನಿಂದಾಗಲೀ ಅಥವಾ ಪರಸ್ಪರವಾಗಿ ಆಗಲೀ ಭೇದಜ್ಞಾನವನ್ನೂ ಹಾಗೆಯೇ ಆತನ ಕ್ರಿಯೆಗಳಿಗೆ ಆತನಿಂದಲೂ ಪರಸ್ಪರವಾಗಿಯೂ ಭೇದಜ್ಞಾನವನ್ನೂ ಮತ್ತು ಆತನ ರೂಪಗಳಿಗೆ ಮೂಲರೂಪಿಯಿಂದಲೂ ಪರಸ್ಪರವಾಗಿ ಭೇದಜ್ಞಾನವನ್ನು, (e) (ಕೃಷ್ಣನು ನಾರಾಯಣನಲ್ಲ ಕೃಷ್ಣರಾಮರು ಭಿನ್ನರು ಈಪ್ರಕಾರವಾಗಿ ಆತನ ರೂಪಗಳಿಗೆ) ಅಸಾಮ್ಯದರ್ಶನವು. ಆತನ ಗುಣಗಳಿಗೆ ಅಸಮತ್ವ ವನ್ನು ನೋಡುವುದೂ ರಾಮನು ಸಂಪೂರ್ಣಾವತಾರನು ಕೃಷ್ಣನಲ್ಲ. ಶ್ರೀ ಹರಿಯಲ್ಲಿ ಜ್ಞಾನವು ಬಹಳ, ಬಲವು ಅಲ್ಪವು. ಈ ಪ್ರಕಾರ ಆತನ ರೂಪಗಳಿಗೂ ಗುಣಗಳಿಗೂ ಪರಸ್ಪರವಾಗಿ ಅಸಾಮ್ಯದರ್ಶನವನ್ನಾಗಲೀ, ದೇಹಕ್ಕೂ ದೇಹಿಗೂ ಭೇದವನ್ನು ಆತನಲ್ಲಿ ಅವಯವಗಳಲ್ಲ್ಯಾ ಗಲೀ, (f) ಪರಸ್ಪರವಾಗಿ ಭೇದಜ್ಞಾನವು ಯಾ ಅವಯವಗಳಿಗೆ ಅವಯವಿಯಿಂದ ಭೇದ ಜ್ಞಾನವಾಗಲೀ, ಕಾಲವಿಶೇಷದಲ್ಲಿ ಕೆಲವು ವಿಷಯದಲ್ಲಿ ಈ ಮೂಲರೂಪಿಗೆ ಸ್ವಾಭಾವಿಕವಾ ಗಿಯೇ ಶಾಪಾದಿಗಳಿಂದಾಗಲೀ ಅಜ್ಞಾನದಿಂದಾಗಲೀ ಜ್ಞಾನದಿಂದಾಗಲೀ ಅಶಕ್ತಿ ಮೊದ ಲಾದ ದೋಷಸಂಸರ್ಗವನ್ನು ಹೇಳುವನು. ಅಥವಾ ಅಜ್ಞಾನಾಖ್ಯ ಶಾಪಾದಿಗಳಿಂದಾಗಲೀ ಜ್ಞಾನಾಖ್ಯಸ್ವಭಾವದಿಂದಾಗಲೀ ದೋಷಸಂಪರ್ಕವು. ಈ ಹರಿಗೆ ಶರೀರವಿಲ್ಲದಿರುವಿಕೆಯನ್ನು ಹೇಳುವನೋ, (g) ಆತನ ಶರೀರಕ್ಕೂ ಪ್ರಕೃತಿ ಸಂಬಂಧಿತ್ವವನ್ನು ರಾಮಕೃಷ್ಣ ಮೊದಲಾದ ಅವತಾರಗಳಲ್ಲಿಯೂ ಆಹರಿಗೆ ಚಿದಾನಂದಾತ್ಮಕ ದೇಹಾಭಾವವನ್ನೂ (ಆದುದರಿಂದಲೇ) ಶರೀರ ಪರಿತ್ಯಾಗ, ಉತ್ಪತ್ತಿ ಮೊದಲಾದ ಅಜ್ಞಾನ ದುಃಖ, ಸಾಮರ್ಥ್ಯವಿಲ್ಲದಿರುವಿಕೆ, ಪರಾಧೀನತೆ,

ಮೊದಲಾದ ಕ್ಷುತ್ ಪಿಪಾಸಾದಿಗಳನ್ನೂ ಹಾಗೆಯೇ ಹೇಳುವನು. (h) ಯಾವಾಗಲೂ ಎಲ್ಲಿಯೂ ಯಾರಿಗೂ ತದಧೀನತೆಯಿಲ್ಲದಿರುವುದನ್ನ ಮತ್ತು ಆ ಮಹಾನುಭಾವನಾದ ವಿಷ್ಣುವಿನ ಸಾಮರ್ಥ್ಯ ಮೊದಲಾದುದಕ್ಕೆ ಪರಿಭಿನ್ನ (ಅಲ್ಪ) ಪರಿಮಾಣವನ್ನ ಈತನಿಗೆ ಜೀವರಿಂದಾಗಲೀ ತನ್ನ ಗುಣಕ್ರಿಯಾ ಸಂಯೋಗಾದಿಗಳಿಂದಾಗಲೀ ಭೇದಾಭೇದ ಜ್ಞಾನವಾಗಲೀ (ಇದ್ದರೆ ಇದೆಲ್ಲವೂ ತ್ಯಾಗವೇ). (i) ಶುಷ್ಕತರ್ಕಗಳಿಂದಾಗಲೀ ಈಶ್ವರನಿಲ್ಲ ಎಂಬುವುದೇ ಮೊದಲಾದುದರಲ್ಲಿ ಆಗ್ರಹಯುಕ್ತವಾದ ಅಥವಾ ಶುಷ್ಕತರ್ಕಕ್ಕೂ ಪ್ರಾಮಾಣ್ಯ ವಿಷಯದಲ್ಲಿ ಆಗ್ರಹ ಯುಕ್ತವಾದ ಮನಸ್ಸಿನಿಂದ ಆ ಹರಿಯು ಅಪಲಾಪವು (ತ್ಯಾಗವೇ.) ಹಾಗೆಯೇ ಈ ಪ್ರಕಾರ ಇಷ್ಟರ ವರೆಗೆ ಹೇಳಿದ ತ್ಯಾಗಗಳಿಗೆ ಶುಷ್ಕ ತರ್ಕ ಮೊದಲಾದವುಗಳಿಂದ ಸಾಧಿಸುವಿಕೆಯೂ ತ್ಯಾಗವೇ. ಈ ಹರಿಯಲ್ಲಿ ಅಪರಿಮಿತ ಐಶ್ವರ್ಯವಿದ್ದರೂ (ಏಕ ಕಾಲದಲ್ಲಿ ಅಣುತ್ವ, ಮಹತ್ವ ಮೊದಲಾದ ಲೋಕವಿರುದ್ಧ ಧರ್ಮಗಳು ಕೂಡಲಾರದೆಂದು ನಿರೂಪಣವೂ ತ್ಯಾಗವು. ಆ ಹಿಂದೆ ಹೇಳಿರುವುದೇ ಶ್ರೀಹರಿಗೆ ಮುಖ್ಯವಾಗಿ ತ್ಯಾಗವಾಗಿ ಹೇಳಲ್ಪಟ್ಟಿದೆ. (ಶ್ರೀ ಹರಿಯು ೪ ತ್ಯಾಗಗಳ ಮಧ್ಯದಲ್ಲಿ ೧ನೇ ತ್ಯಾಗವು ಇಷ್ಟರ ವರೇಗೆ ನಿರೂಪಿಸಲ್ಪಟ್ಟಿತು).

ಭಾ॥ **(a)** ರಮಾಬ್ರಹ್ಮಾದಿಕಾನಾಂ ಚ ತಾರತಮ್ಯಾನಭಿಜ್ಞತಾ । ಸಂಶಯಶ್ಶೋಕ್ತತತ್ತ್ವೇಷು ಜಗನ್ಮಿಥ್ಯಾತ್ವದರ್ಶನಂ ॥ ಅಸ್ಮೃತಿರ್ವಾಸುದೇವಸ್ಯ ತದ್ಭಕ್ತಾನಾಂ ಚ ನಿಂದನಂ। ದ್ವಿತೀಯ ಏಷ ತ್ಯಾಗಸ್ತು ವಿಷ್ಣೋರೇವ ಪ್ರಕೀರ್ತಿತಃ ॥ **(b)** ನಿಷಿದ್ಧಕರ್ಮಕರಣಂ ವಿಹಿತಸ್ಯ ಚ ವರ್ಜನಂ । ತ್ಯಾಗಸ್ತೃತೀಯೋ ಹಿ ಹರೇಶ್ಚತುರ್ಥೋಽಯೋಗ್ಯಪೂರುಷೇ ॥ ಉಪದೇಶಃ ಕೇಶವಸ್ಯ ಯಥಾ ಶಾಸ್ತ್ರೋದಿತ ಕ್ರಮಾತ್ । **(c)** ಆಚಾರ್ಯಪಿತ್ರೋರನ್ಯತ್ರ ತಥೈವ ಚ ಮಹಾವ್ರತೇ । ಹೌತ್ರೌದ್ಗಾತ್ರಾಧ್ವರ್ಯವಾಣಿ ತ್ಯಾಗ ಏವಂ ಚತುರ್ವಿಧಃ ॥

ಅ ॥ (a) ಲಕ್ಷ್ಮೀ ಚತುರ್ಮುಖ ಮೊದಲಾದವರಿಗೆ ನೀಚೋಚ್ಚಭಾವವನ್ನು ತಿಳಿದಿರುವುದು. (ತರತಮಭಾವವನ್ನು ತಿಳಿಯದಿದ್ದರೆ ಉತ್ಕರ್ಷಜ್ಞಾನವು ಹುಟ್ಟಲಾರದು.) ಶಾಸ್ತ್ರದಲ್ಲಿ ಹೇಳಿದ ತತ್ವಗಳಲ್ಲಿ ಸಂದೇಹವೂ, ಜಗತ್ತು ಮಿಥ್ಯಾಭೂತವಾದದ್ದೆಂದು ತಿಳಿಯುವುದು (ಪ್ರಪಂಚಕ್ಕೆ ಮಿಥ್ಯಾತ್ವವಿದ್ದರೆ ಶ್ರೀ ಹರಿಯು ಪ್ರಪಂಚಕ್ಕೆ ಕಾರಣನೆಂಬುವುದೇ ಮೊದಲಾದುದು ಅಸತ್ಯವಾಗಬೇಕಾಯಿತು.) ವಾಸುದೇವನನ್ನು ಸ್ಮರಿಸದೆ ಇರುವುದು, ಭಗವದ್ಭಕ್ತರನ್ನು ನಿಂದಿಸುವುದು, (ಆತನ ಭಕ್ತರನ್ನು ನಿಂದಿಸಿದರೆ ಆತನನ್ನೇ ನಿಂದಿಸಿದಂತೆ ಆಗುವುದು). ಇದು ಶ್ರೀ ವಿಷ್ಣುವಿನದ್ದೇ ಎರಡನೇ ತ್ಯಾಗವಾಗಿ ಹೇಳಲ್ಪಡುತ್ತದೆ. (b) (ಶಾಸ್ತ್ರದಲ್ಲಿ) ನಿಷೇಧಿಸಲ್ಪಟ್ಟ ಕರ್ಮಗಳನ್ನೂ ಮಾಡುವುದೂ ವಿಹಿತವಾದವುಗಳನ್ನೂ ಬಿಡುವುದು. ನಿಷಿದ್ಧಕರ್ಮಗಳನ್ನು ಬಿಡುವುದು ವಿಹಿತವಾದುದನ್ನು ಮಾಡುವುದೂ ಶ್ರೀ ಹರಿಗೆ ಪ್ರಿಯವಾದುದರಿಂದ ಅವುಗಳನ್ನು ಬಿಟ್ಟರೆ ಭಗವದಾಜ್ಞೆಯನ್ನುಲ್ಲಂಘಿಸಿದರಿಂದ) ಮೂರನೇದ್ದೂ ಶ್ರೀ ಹರಿಗೇನೇ ತ್ಯಾಗವಾಗುತ್ತದೆ. ಅಯೋಗ್ಯನಾದ ಪುರುಷನಲ್ಲಿ ಶಾಸ್ತ್ರದಲ್ಲಿ ಹೇಳಿದ ಪ್ರಮೇಯಗಳನ್ನು ಅತಿಕ್ರಮಿಸದೆ ಶ್ರೀಹರಿಯ ಉಪದೇಶವು ೪ನೇ ತ್ಯಾಗವು. (ಹಾಗಾದರೆ ವೈಷ್ಣವಾಗ್ರೇಸರನಾದ ಭೀಮಸೇನನು ವಿಪ್ರಚಿತ್ಯಂಶನಾದ ಮಾಗಧನಿಗೆ ಹೇಗೆ ವಿಷ್ಣೂತ್ಕರ್ಷಾದಿಗಳನ್ನು ಪ್ರತಿಪಾದಿಸಿದನೆಂದು ಆಕ್ಷೇಪಿಸಕೂಡದು? ಪರಪಕ್ಷ ದೂಷಣಕ್ಕಾಗಿ ಖಂಡಶಃ ಪ್ರಮೇಯಗಳನ್ನು ಉಪನ್ಯಾಸ ಮಾಡಿರುವುದು ದೋಷಾಧಾಯಕವಲ್ಲ.) (c) (ಹೇಗೆ ಅಯೊಗ್ಯೋಪದೇಶವೋ)

ಹಾಗೆಯೇ ಆಚಾರ್ಯ ಪಿತೃಗಳಿಂದ ಬೇರೆಯೊದವನಲ್ಲಿ ಮಹಾವ್ರತದಲ್ಲಿ ಹೋತುವಿನ ಕೃತ್ಯವೂ ಉದ್ಗಾತೃತನವೂ ಅಧ್ವರ್ಯುವಿನ ಕೃತ್ಯಗಳೂ ೪ನೇ ತ್ಯಾಗವು. ಈ ಪ್ರಕಾರ ನಾಲ್ಕುವಿಧ ತ್ಯಾಗವೂ ಹೇಳಲ್ಪಟ್ಟಿತು.

ತಾ || ಶ್ರೀಹರಿಯ ತ್ಯಾಗಕ್ಕೆ ಅನರ್ಥ ಫಲಗಳನ್ನು ತಿಳಿದವನು ಆಚಾರ್ಯ ಮತ್ತು ತಂದೆಯು ಇವರು ಹೊರತು ಬೇರೆಯವನ ಉದ್ದೇಶದಿಂದ ಇಷ್ಟಕಾನಿರ್ಮಿತವಾದ ಚಿತಿಯಲ್ಲಿ ಅಗ್ನಿಯನ್ನು ಪ್ರತಿಷ್ಠೆ ಮಾಡಿ ಹೋಮಾದಿಗಳನ್ನು ಮಾಡಬಾರದು. ಮಹಾವ್ರತಾಖ್ಯ ಸ್ತೋತ್ರದಿಂದ ಸ್ತುತಿಸಬಾರದು. ಬೃಹತೀಸಹಸ್ರವನ್ನು ಹೊಗಳಬಾರದು. ಇತ್ಯಾದಿ ಕೃತ್ಯಗಳನ್ನು ಮಾಡಬಾರದು.

ಭಾ|| (a) ತ್ಯಾಗದ್ವಯಾತ್ತು ಪ್ರಥಮಾತ್ಪ್ರಾಪ್ಯತೇಽಂಧಂತಮಃ ಕ್ರಮಾತ್ | ತೃತೀಯಾನ್ನಿರಯಪ್ರಾಪ್ತಿಶ್ಚತುರ್ಥಾನ್ನ ದಿವಂ ವ್ರಜೇತ್ || (b) ಉಪದಿಷ್ಟೇಽಪಿ ಯಸ್ತತ್ವೇ ಸಂಶಯಂ ಕುರುತೇ ಪುಮಾನ್ | ಸೋಽಂಧಂತಮೋ ವ್ರಜೇದನ್ಯೋ ನಿರಯಾಯೈವ ಗಚ್ಛತಿ || (c) ಸ ಏವ ಭಗವಾನ್ವಿಷ್ಣುರೇತೈರ್ದೋಷೈರ್ವಿನಾ ಯದಿ | ಜ್ಞಾಯತೇ ಮುಕ್ತಿದಃ ಸಾಕ್ಷಾನ್ನಾತ್ರ ಕಾರ್ಯಾ ವಿಚಾರಣಾ || (d) ಯದಿ ಜ್ಞಾನಂ ನಾತಿಪಕ್ವಂ ಸರಾಗಂ ಚ ಮನೋ ಭವೇತ್ | ತದಾ ಸ್ವರ್ಗಾದಿಲೋಕಾಪ್ತಿಃ ಸಂಶಯಶ್ಚೇತ್ಕ್ವಚಿತ್ಕ್ವಚಿತ್ || ಆವೃತ್ತಿರೇವ ಸಂಸಾರೇ ಯಾವನ್ನಿಸ್ಸಂಶಯೋ ಭವೇತ್ | (e) ಪುನರಾವೃತ್ತಿಹೀನಂ ತು ತಮೋಽಂಧಂ ಮುಕ್ತಿರೇವ ಚ || ಪೂರ್ವಂ ತು ನಿಸ್ಸುಖಂ ತತ್ರ ನಿರ್ದುಃಖಂ ಚಾಪರಂ ಮತಂ | ನಿಶ್ಶೇಷಗುಣಹೀನಂ ಚ ಪೂರ್ವಂ ನಿರ್ದೋಷಕಂ ಪರಂ ||

ಅ || (a) ಪ್ರಥಮುದ್ದಾದ ಎರಡು ತ್ಯಾಗಗಳಿಂದ ಕ್ರಮವಾಗಿ ಅಂಧಂತಮಸ್ಸು ಪ್ರಾಪಿಸಲ್ಪಡುತ್ತದೆ. (ಅಂದರೆ ೧ನೇ ತ್ಯಾಗದಿಂದ ಅಂಧತಾಮಿಸ್ರವೂ ೨ನೇ ತ್ಯಾಗದಿಂದ ತಾಮಿಸ್ರವೂ, 'ತಾಮಿಸ್ರ ಶ್ಚಾಂಧತಾಮಿಸ್ರೌ ದ್ವೌ ನಿತ್ಯಾ ಸಂಪ್ರಕೀರ್ತಿತೌ' ಹೀಗೆ ೨ ವಿಧವು). (೩) ಮೂರನೇ ತ್ಯಾಗದಿಂದ ರೌರವಾದಿ ನರಕಪ್ರಾಪ್ತಿಯು. ನಾಲ್ಕನೇದರಿಂದ ಸ್ವರ್ಗವನ್ನು ಹೊಂದುವುದಿಲ್ಲ. (ಶ್ರವಣಫಲವೂ ಇಲ್ಲವು. ಇದರಿಂದ 'ಶ್ರುತಂ ಚ ನರಕಾವಹಂ' ಎಂಬುವುದನ್ನು ವಿವರಿಸಿದಂತೆ ಆಯಿತು). (b) ಯಾವ ಪುರುಷನು ತತ್ವವು ಉಪದೇಶಿಸಲ್ಪಟ್ಟಾಗ್ಯೂ ಸಂದೇಹವನ್ನೇ ಮಾಡುತ್ತಾನೋ ಆತನು ಅಂಧಂತಮಸ್ಸನ್ನು ಹೊಂದುತ್ತಾನೆ. ಮತ್ತೊಬ್ಬನು (ಗುರುವಿನಿಂದ ಉಪದೇಶಿಸಲ್ಪಡದಿರುವ ತತ್ವವುಳ್ಳವನು ತಾನಾಗಿ ಸಂಶಯವುಳ್ಳವನು) ನರಕಕ್ಕೇನೇ ಹೋಗುತ್ತಾನೆ. (c) ಆ ಪೂಜ್ಯನಾದ ವಿಷ್ಣುವೇ ಹಿಂದೆ ಹೇಳಿರುವ ದೋಷಗಳಿಂದ ವಿರಹಿತನಾಗಿ ಅಪರೋಕ್ಷವಾಗಿ ತಿಳಿಯಲ್ಪಟ್ಟರೆ ಸಾಕ್ಷಾನ್ಮುಕ್ತಿಯನ್ನೇ ಕೊಡುತ್ತಾನೆ. ಅಥವಾ ಮುಖ್ಯತ್ಯಾಗಾದಿ ದೋಷರಹಿತನಾದ ಪುರುಷನಿಂದ ತಿಳಿಯಲ್ಪಟ್ಟರೆ ಮುಕ್ತಿಯನ್ನು ಕೊಡುತ್ತಾನೆ. ಈ ವಿಷಯದಲ್ಲಿ ವಿಚಾರಮಾಡಕೂಡದು. (d) ಬೇರೆಯವನು ನರಕಕ್ಕೇನೇ ಹೋಗುತ್ತಾನೆಂದು ಹೇಳಿದುದು ಅಸಂಗತವು. ಶ್ರೀಹರಿಯು ಸರ್ವೋತ್ತಮನೆಂದು ನಿಶ್ಚಯವುಳ್ಳವರಿಗೆ ಅನೇಕ ವಾಕ್ಯಗಳಿಂದ ವಿರೋಧವನ್ನು ನೋಡಿ ಅಲ್ಲಲ್ಲಿ ಸಂಶಯವಿದ್ದರೆ ನರಕವಾಗುತ್ತದೆ ಎಂದಂಗೀಕರಿಸಿದರೆ 'ಯೈರ್ನಿಶ್ಚಿತಂ ಪರತ್ವಂ ತು ವಿಷ್ಣೋಃ ಪ್ರಾಯೋ ನ ಯಾತನಾಂ | ಬ್ರಹ್ಮಹತ್ಯಾದಿಭಿರಪಿ ಯಾಂತ್ಯಾಧಿಕ್ಯೇ ಚಿರಂ ನ ತು' || ಎಂಬೀ ವಚನವಿರೋಧ ಬರುತ್ತದೆ ಎಂದರೆ) ಯಾವ

ಪಕ್ಷದಲ್ಲಿ ಜ್ಞಾನವು ಅತಿ ಪಕ್ವವಾಗುವುದಿಲ್ಲವೋ, ಮನಸ್ಸು ಸ್ವರ್ಗಾದಿಗಳಲ್ಲಿಯೇ ಅನುರಾಗ ಯುಕ್ತವಾಗುತ್ತದೋ, ಆಗ ಸ್ವರ್ಗಮೊದಲಾದ ಲೋಕಪ್ರಾಪ್ತಿಯು ಆಗುತ್ತದೆ. ಕೆಲವು ಕೆಲವು ಕಡೆ ಸಂಶಯವಿದ್ದರೆ ಸಂಸಾರದಲ್ಲಿ ಪುನಃ ಪುನಃ ಆವೃತ್ತಿಯೇ. (ನರಕ ಪ್ರಾಪ್ತಿಯಾಗು ವುದಿಲ್ಲ). ಎಷ್ಟು ಕಾಲಪರ್ಯಂತ ಸಂಶಯ ರಹಿತನು ಆಗುವನೋ, (e) ಅಂಧಂತಮಸ್ಸು ಮುಕ್ತಿಯೂ ಕೂಡ ಪುನಃ ಆವೃತ್ತಿಯಿಲ್ಲದಿರುವುದು. (ಅಂದರೆ ವಾಪಾಸು ಬರುವುದಿಲ್ಲ). ಅವುಗಳಲ್ಲಿ ಪ್ರಥಮದ್ದು (ತಮಸ್ಸು) ಸುಖಲೇಶವಿಲ್ಲದಿರುವುದು. ಮೇಲಿನದ್ದು (ಮುಕ್ತಿಯು) ದುಃಖಲೇಶವೂ ಇಲ್ಲದಿರುವುದು. ಮತ್ತು ೧ ನೇದ್ದು ಸುಖಾಪಾದಕ ಸರ್ವಗುಣಗಳಿಂದಲೂ ವಿರಹಿತವಾದುದು. ೨ನೇದ್ದು ದುಃಖಾಪಾದಕ ದೋಷಗಂಧರಹಿತವಾದುದು.

ಭಾ|| (a) ವಿಮಿಶ್ರಗತಯಸ್ತ್ವನ್ಯಾಃ ಪುನರಾವೃತ್ತಿಸಂಯುತಾಃ । ಅಸುರಾ ದೇವತಾ ಮರ್ತ್ಯಾ ಯೋಗ್ಯಾ ಏತೇಷು ಚ ಕ್ರಮಾತ್ ॥ ನ ಚ ತೇಷಾಂ ಸಂಕರೋಽಸ್ತಿ ಯಥಾಯೋಗ್ಯಾ ಹಿ ತದ್ಗತಿಃ । (b) ಮಾನುಷೇಷೂ ತ್ತಮಾ ಮುಕ್ತಿಮಧಮಾ ನಿರಯಂ ತಥಾ ॥ ಆಪ್ನುವಂತಿ ಮನುಷ್ಯೇಷು ಮಧ್ಯಮಾಃ ಸೃತಿಭಾಗಿನಃ । (c) ನಿಯಮೋಽಯಂ ನಾನ್ಯಥಾ ಸ್ಯಾದಚ್ಛಿ ದ್ರತ್ವಂ ಯಥಾ ಭವೇತ್ ॥ ದೋಷೇಽಥವಾ ಗುಣೇ ವಾಽಪಿ ತದಾ ದೈತ್ಯಾಃ ಸುರಾ ಅಪಿ । (d) ಸ್ವಾಂ ಸ್ವಾಂ ಗತಿಂ ಸಮಾಯಾಂತಿ ತಾವತ್ಸಂಸಾರ ಭಾಗಿನಃ ॥ ಅಚ್ಛಿದ್ರತ್ವಂ ನೈವ ಸರ್ವೈಃ ಕದಾಚಿತ್ಪ್ರಾಪ್ಯತೇ ಯತಃ । (e) ಸೃಷ್ಟಿಸ್ಥಿತಿಲಯಾದೀನಾಂ ನೋಚ್ಛೇದಸ್ತೇನ ಕುತ್ರಚಿತ್ ॥ ತಸ್ಮಾ ದ್ದೋಷಾನ್ಪ್ರಹಾಯ್ಯೈವ ವಿಷ್ಣುಂ ಸರ್ವೋತ್ತಮೋತ್ತಮಂ । ಜಾನೀಯಾ ತ್ತೇನ ಮುಕ್ತಿಃ ಸ್ಯಾದಪರೋಕ್ಷದೃಶೇರನು ॥

ಅ || (a) ಸುಖದುಃಖಗಳಿಂದ ಮಿಶ್ರವಾದ ಗತಿಯುಳ್ಳ ಇತರರು (ಭೂ ಸ್ವರ್ಗ ನರಕ ಗಳಲ್ಲಿ ನಿತ್ಯದಲ್ಲಿ ಆವಾಸವಿಲ್ಲದಿರುವುದರಿಂದ) ಪುನಃ ಪುನಃ ಆವೃತ್ತಿಯುಕ್ತರಾಗಿದ್ದಾರೆ. ಇವುಗ ಳಲ್ಲಿ ಕ್ರಮವಾಗಿ ಅಸರರೂ ದೇವತೆಗಳೂ ಮನುಷ್ಯರೂ ಯೋಗ್ಯರು. ಆ ಅಸುರಾದಿಗಳಿಗೆ ಫಲ ಸಂಕರವು ಇಲ್ಲ. ಅವರವರ ಯೋಗ್ಯತಾನುಸಾರ ಅವರಿಗೆ ಗತಿಯಿದೆ. (b) ಮನುಷ್ಯರಲ್ಲಿ ಉತ್ತಮರು ಮುಕ್ತಿಯನ್ನು ಹಾಗೆಯೇ ಅಧಮರು ನಿತ್ಯ ನರಕವನ್ನು ಹೊಂದುತ್ತಾರೆ. ಮನುಷ್ಯ ರಲ್ಲಿ ಮಧ್ಯಮರು ಸಂಸಾರವನ್ನು ಹೊಂದುತ್ತಾರೆ. (ಅಂದರೆ ಸರ್ವದಾ ಸಂಸಾರಕ್ಕೇನೇ ಯೋಗ್ಯರು). (c) ಈ ನಿಯಮವು ವ್ಯತ್ಯಾಸವಾಗಲಾರದು. ಹೇಗೆ ಪೂರ್ಣತ್ವವಾಗುವುದೋ ದೋಷದಲ್ಲಿ ಅಥವಾ ಗುಣದಲ್ಲಿ, ಆಗ ದೋಷಪೂರ್ಣರಾದ ದೈತ್ಯರೂ, ಗುಣಪೂರ್ಣರಾದ ದೇವತೆಗಳೂ, (d) ತಮ್ಮ ತಮ್ಮ ಗತಿಯನು ಹೊಂದುತ್ತಾರೆ. ಅಷ್ಟುಕಾಲ ಸಂಸಾರವನ್ನು ಹೊಂದುತ್ತಿರುತ್ತಾರೆ. ಯಾವಕಾರಣದಿಂದ ಯಾವಾಗಲೂ ಸರ್ವರಿಂದ ಪೂರ್ಣತ್ವವು ಪ್ರಾಪಿಸ ಲ್ಪಡುವುದಿಲ್ಲವೋ, (e) ಆದುದರಿಂದ ಸೃಷ್ಟಿಸ್ಥಿತಿನಾಶಮೊದಲಾದುದಕ್ಕೆ ಎಲ್ಲಿಯೂ ನಾಶವು ಇಲ್ಲ. ಆದುದರಿಂದ (ಅನರ್ಥ-ಫಲವಿದ್ದುದರಿಂದ) ಮುಖ್ಯತ್ಯಾಗ ಮೊದಲಾದ ದೋಷಗಳನ್ನು ಬಿಟ್ಟೇ ವಿಷ್ಣುವನ್ನು ಚತುರ್ಮುಖ ಮೊದಲಾದ ಎಲ್ಲರಿಂದ ಉತ್ತಮಳಾದ ಲಕ್ಷ್ಮಿಯಿಂದಲೂ ಉತ್ತಮನನ್ನಾಗಿ ತಿಳಿಯತಕ್ಕದು. ಅದರಿಂದ ಅಪರೋಕ್ಷ ಜ್ಞಾನಾನಂತರದಲ್ಲಿ ಮುಕ್ತಿಯಾಗು ವುದು.

ಭಾ॥ (a) ಸೂರ್ಯಮಂಡಲಗೋ ವಿಷ್ಣುರ್ದೇಹೇ ಚಕ್ಷುಷಿ ಸಂಸ್ಥಿತಃ । ಅನಿರುದ್ಧಶ್ಚ ಹೃದಯೇ ನ ಚ ಭೇದೋಽನಯೋಃ ಕ್ವಚಿತ್ ॥ ಅನ್ಯೇಷಾಮಪಿ ರೂಪಾಣಾಮಿತಿ ವಿದ್ಯಾದ್ವಿಚಕ್ಷಣಃ । (b) ದ್ವಿರೂಪಃ ಸ ಯದಾ ವಿಷ್ಣುರಪಗಚ್ಛತಿ ದೇಹತಃ ॥ ತದೈವ ದುರ್ನಿಮಿತ್ತಾನಿ ಜಾಯಂತೇ ನಾನ್ಯದಾ ಕ್ವಚಿತ್ । (c) ತಸ್ಮಾತ್ತೇಷಾಂ ದರ್ಶನೇ ತು ಕರ್ತವ್ಯಂ ಪಾರಲೌಕಿಕಂ ॥ ಸರ್ವಮೇವ ಜಪೇಚ್ಚೈವ ಯದಂತೀತ್ಯಾದಿಕಾ ಋಚಃ । (d) ಋಗ್ಭಿಃ ಷಡ್ಭಿರ್ವಾಯುರೇವ ಪವಮಾನಾದಿ ನಾಮಕಃ ॥ ಸ್ತೂಯತೇ ಸೋಽಂಗನೇತೃತ್ವಾದಗ್ನಿರಿತ್ಯಭಿಧೀಯತೇ ॥

ಅ ॥ (a) ಸೂರ್ಯಮಂಡಲದಲ್ಲಿರತಕ್ಕ ಪ್ರದ್ಯುಮ್ನನು ಪುರುಷ ದೇಹದಲ್ಲಿ ಚಕ್ಷುಸ್ಸಿನಲ್ಲಿದ್ದಾನೆ. ಹೃದಯದಲ್ಲಿ ಅನಿರುದ್ಧನು ಇದ್ದಾನೆ. ಹೃದಯ ಚಕ್ಷುಸ್ಸುಗಳಲ್ಲಿರತಕ್ಕ ಈ ಅನಿರುದ್ಧ ಪ್ರದ್ಯುಮ್ನರಿಗೆ ಎಲ್ಲಿಯೂ ಭೇದವಿಲ್ಲ. ಇತರ ರೂಪಗಳಿಗೂ ಭೇದವಿಲ್ಲವೆಂದೇ ಜ್ಞಾನಿಯು ತಿಳಿಯತಕ್ಕದು. (b) ಯಾವಾಗ ಅನಿರುದ್ಧ ಪ್ರದ್ಯುಮ್ನಾಖ್ಯ ಎರಡು ರೂಪಗಳುಳ್ಳ ಶ್ರೀ ವಿಷ್ಣುವು ಶರೀರದಿಂದ ಹೊರಡಲಿಕ್ಕೆ ಇಚ್ಛಿಸುತ್ತಾನೋ. ಆವಾಗಲೇ ದುರ್ನಿಮಿತ್ತಗಳು ಹುಟ್ಟುತ್ತವೆ. ಇತರ ಸಮಯದಲ್ಲಿ ಎಲ್ಲಿಯೂ ಹುಟ್ಟುವುದಿಲ್ಲ. (c) ಆದುದರಿಂದ ದುರ್ನಿಮಿತ್ತಗಳ ದರ್ಶನವಾಗೋಣ ಎಲ್ಲಾ ಪರಲೋಕಕ್ಕೆ ಸಾಧನೀಭೂತವಾದ ಮೃತಿಕಾಲದಲ್ಲಿ ಮಾಡಲರ್ಹವಾದ ಜಪ ಮೊದಲಾದುದು ಮಾಡತಕ್ಕದು. (ಕಾಲಮೃತ್ಯುವಾದರೂ ಅಪಮೃತ್ಯುವಾಗಿದ್ದರೂ ಎರಡು ಕಲ್ಪದಲ್ಲಿಯೂ) 'ಯದಂತಿ ಯಚ್ಚ' ಮೊದಲಾದ ಋಕ್ಕುಗಳನ್ನೇ ಜಪಿಸತಕ್ಕದು. (d) (ಯದಂತೀತ್ಯಾದಿ ಖರಲ್ಲಿ ೧. ೨. ಋಕ್ಕುಗಳು ಪವಮಾನ ಸಂಬಂಧಿಗಳು. ೩. ೪. ಅಗ್ನಿ ಸಂಬಂಧಿಗಳು ೫ ಸವಿತೃ ಸಂಬಂಧಿಯು, ೬ ಸವಿತೃ, ಅಗ್ನಿ, ಸೋಮ, ಸಂಬಂಧಿಯು ಎಂಬು ತೋರುತ್ತದೆ. ಆದುದರಿಂದ ೬ಕ್ಕೆ ದೇವತೆಯನ್ನು ಹೇಳುತ್ತಾರೆ.) ಆರು ಋಕ್ಕುಗಳಿಂದ ಪವಮಾನ ಮೊದಲಾದ ನಾಮಗಳುಳ್ಳ ವಾಯುವೇ ಸ್ತುತಿಸಲ್ಪಡುತ್ತಾನೆ. ಆ ವಾಯುವು ಸರ್ವಶರೀರಗಳಿಗೆ ಪ್ರವರ್ತಕನಾದುದರಿಂದ ಅಗ್ನಿಯೆಂದು ಹೇಳಲ್ಪಡುತ್ತಾನೆ. (ಷಡ್ಭಿಃ ಎಂದು ಹೇಳಿರುವುದರಿಂದ ೬ನೇ ದಕ್ಕೆ ದೇವಜನಾದಿಗಳಿಂದ ಯುಕ್ತನಾದ ಜಾತವೇದಾ ನಾಮಕನಾದ ವಾಯುವೇ ದೇವತೆಯೆಂದು ಹೇಳಿದ ಹಾಗಾಯಿತು.)

ಭಾ॥ (a) ಪರಸ್ಯ ಬ್ರಹ್ಮಣೋ ವಿಷ್ಣೋರ್ಜ್ಞಾಪನಾಖ್ಯಪ್ರಸೂತಿಭಿಃ । ವಾಯುಃ ಪುನಾತಿ ಯಲ್ಲೋಕಾನ್ಸವಿತಾ ತೇನ ಕಥ್ಯತೇ ॥ (b) ಪವಿತ್ರಂ ನಾಮ ಸಾಕ್ಷಾತ್ತತ್ಪರಂ ಬ್ರಹ್ಮ ಜನಾರ್ದನಃ । ಪ್ರಸಾದಯಿತ್ವಾ ತಂ ವಿಷ್ಣುಂ ತೇನ ಲೋಕಾನ್ಪುನಾತ್ಯಸುಃ ॥ (c) ಜ್ಞಾನಾಖ್ಯಪ್ರಸವೇನಾಪಿ ಸ್ವಯಂ ವಾಯುಃ ಪುನಾತ್ಯಯಂ । ಪ್ರಾಣಾಗ್ನೇರರ್ಚಿಷೋ ದೇಹೇ ವಿತತಾಸ್ತೇಷು ಕೇಶವಃ ॥ ಅರ್ಚಿಷ್ಮಾನ್ಸಿತತೋ ನಿತ್ಯಂ ವಾಯುಸ್ತೇನ ಪುನಾತ್ಯಯಂ । (d) ಯತ್ರ ಬ್ರಹ್ಮೇತಿ ಷಡ್ಭಿಶ್ಚ ಪ್ರಾರ್ಥನೀಯಃ ಸ ಮಾರುತಃ ॥ ಮೋಚಯಿತ್ವೈವ ಸಂಸಾರಾದ್ವಿಷ್ಣೋರ್ಲೋಕೇ ಕೃಧೀತಿ ಚ ॥

ಅ ॥ (a) ವಾಯುವು ಪರಬ್ರಹ್ಮಶಬ್ದವಾಚ್ಯನಾದ ವಿಷ್ಣುವಿನ ಜ್ಞಾಪನ (ತಿಳಿಸಿಕೊಡುವುದು) ನಾಮಕ ಸಂತತಿಗಳಿಂದ ಸವಿತಾ ಎಂದು ಹೇಳಲ್ಪಡುತ್ತಾನೆ. ಯಾವುದರಿಂದ (ಪರ

ಬ್ರಹ್ಮನು ಪ್ರೇರಕನಾದುದರಿಂದ ವಿಷ್ಣುವಿನ ಸ್ವರೂಪವನ್ನು ತಿಳಿಸಿಕೊಟ್ಟು) ಎಲ್ಲಾ ಲೋಕಗಳನ್ನು ಪವಿತ್ರೀಕರಿಸುತ್ತಾನೋ, ಆದುದರಿಂದ ಪವಮಾನನೆಂದು ಹೇಳಲ್ಪಡುತ್ತಾನೆ. (b) ಪರಬ್ರಹ್ಮ ಶಬ್ದವಾಚ್ಯನಾದ ಜನಾರ್ದನನು ಮುಖ್ಯವಾಗಿ ಪವಿತ್ರೀಕರಿಸಿ ರಕ್ಷಿಸುವುದರಿಂದ ಪವಿತ್ರನಾಮಕನು. ಪ್ರಾಣನು ಆ ವಿಷ್ಣುವನ್ನು ಸಂತೋಷೀಕರಿಸಿ ಆ ವಿಷ್ಣುವಿನಿಂದ ಎಲ್ಲಾ ಲೋಕಗಳನ್ನು ಪವಿತ್ರೀಕರಿಸುತ್ತಾನೆ. (c) ಈ ಸಾಕ್ಷಾತ್ ವಾಯುವೇ ಜ್ಞಾನಾಖ್ಯ ಸಂತತಿಯಿಂದಲೂ ಪವಿತ್ರೀಕರಿಸುತ್ತಾನೆ. ಶರೀರದಲ್ಲಿ ಪ್ರಾಣಾಖ್ಯ ಅಗ್ನಿಯ ಜ್ವಾಲೆಗಳು ವ್ಯಾಪ್ತಗಳಾಗಿವೆ. ಅವುಗಳಲ್ಲಿ ಮಹಾತೇಜಸ್ಸುಳ್ಳ ಕೇಶವನು ನಿರಂತರದಲ್ಲಿಯೂ ವ್ಯಾಪ್ತನು. ಈ ವಾಯುವು ಅದರಿಂದ (ಅಂದರೆ ಜ್ಞಾನವನ್ನು ಹುಟ್ಟಿಸಿ) ಪವಿತ್ರೀಕರಿಸುತ್ತಾನೆ. (d) ಯತ್ರ ಬ್ರಹ್ಮೇತ್ಯಾದಿ ೬ ಋಕ್ಕುಗಳಿಂದಲೂ ಎಲೋ ವಾಯುವೇ! ಸಂಸಾರದಿಂದ ಬಿಡಿಸಿಯೇ ವಿಷ್ಣುವಿನ ಲೋಕದಲ್ಲಿ ಮಾಡು ಎಂದು ಆ ವಾಯುವು ಪ್ರಾರ್ಥಿಸಲ್ಪಡಬೇಕು.

ಭಾ॥ **(a)** ಆದಿತ್ಪ್ರತ್ನಸ್ಯೇತಿ ವಿಷ್ಣುಃ ಸ್ತುತ್ಯೋ ವೈಕುಂಠಲೋಕಗಃ । ಆದಿತ್ಯಮಂಡಲಸ್ಥಶ್ಚ ಸಾಕ್ಷಾನ್ನಾರಾಯಣಃ ಪ್ರಭುಃ ॥ **(b)** ಉದ್ವಯಂತ್ವಿತಿ ಮಂತ್ರೇಣ ಸ್ತುತ್ಯೋ ವಾಯೋರಪೀಶ್ವರಃ । ಅಪಮೃತ್ಯುಭಯಂ ತಸ್ಯ ಯದಂತೀತ್ಯೃಗ್ಜಪಾದ್ವ್ರಜೇತ್ ॥ **(c)** ಕಾಲಮೃತ್ಯುರ್ಯದಿ ಭವೇತ್ತಥಾ ಜನ್ಮಾದಿಕಂ ಭಯಂ । ಅನ್ಯಾಭಿಃ ಕರ್ಮತಃ ಪೂತೋ ಯತ್ರ ಬ್ರಹ್ಮೇತಿ ವೈಷ್ಣವಂ ॥ ಲೋಕಂ ವ್ರಜೇತ್ತಥಾನ್ಯಾಭ್ಯಾಂ ವಿಷ್ಣುರ್ಮೋಕ್ಷಸುಖಪ್ರದಃ । **(d)** ಇಷ್ಟಪ್ರದಾನಶೀಲತ್ವಾದಿಂದುರ್ವಾಯುಃ ಸ ಏವ ಚ ॥ ಸೋಮಃ ಸೌಮ್ಯಸ್ವರೂಪತ್ವಾತ್ಪವಮಾನಶ್ಚ ಪಾವನಾತ್ । ವಿಷ್ಣುಃ ಪುರಾತನತ್ವಾತ್ತು ಪ್ರತ್ನೋ ರೇತೋ ಮಹಾರತಿಃ ॥

ಅ ॥ (a) 'ಆದಿತ್ಪ್ರತ್ನಸ್ಯ' ಎಂಬುವುದರಿಂದ ವೈಕುಂಠಲೋಕದಲ್ಲಿದ್ದ ವಿಷ್ಣುವು ಸ್ತೋತ್ರ ಮಾಡಿಸಿಕೊಳ್ಳಲರ್ಹನು. (b) 'ಉದ್ವಯಂ' ಎಂಬೀ ಮಂತ್ರದಿಂದ ವಾಯುವಿಗೂ ನಿಯಾಮಕನಾದ ಆದಿತ್ಯಮಂಡಲದಲ್ಲಿರತಕ್ಕ ಪ್ರಭುವಾದ ನಾರಾಯಣನೇ ಸ್ತುತ್ಯನು. ಆತನಿಗೆ 'ಯದಂತಿ ಯಚ್ಚ' ಎಂಬೀ ಪ್ರಥಮ ಋಕ್ಕಿನ ಜಪದಿಂದ ಅಪಮೃತ್ಯುಭಯವು ಪರಿಹಾರವಾಗುತ್ತದೆ. (c) ಕಾಲಮೃತ್ಯುವಾಗಿದ್ದರೆ ಉತ್ಪತ್ತಿ ಮೊದಲಾದ ಭೀತಿಯು ಪರಿಹೃತವಾಗುತ್ತದೆ. ಇತರಗಳಾದ 'ಪವಮಾನಃ ಸೋ ಅದ್ಯ ನಃ' ಇದು ಮೊದಲಾದ ೬ ಋಕ್ಕುಗಳಿಂದ ಕರ್ಮಗಳಿಂದ ಶುದ್ಧಾಂತಃಕರಣನಾಗಿ 'ಯತ್ರ ಬ್ರಹ್ಮೇತ್ಯಾದಿ' ೬ ಋಕ್ಕುಗಳಿಂದ ವೈಕುಂಠಲೋಕಕ್ಕೆ ಹೋಗುತ್ತಾನೆ. ಹಾಗೆಯೇ ಇತರಗಳಾದ 'ಆದಿತ್ಪ್ರತ್ನಸ್ಯ' 'ಉದ್ವಯಂ' ಎಂಬೀ ಋಕ್ಕುಗಳಿಂದ ವಿಷ್ಣುವು ಮೋಕ್ಷ ಸುಖವನ್ನು ಕೊಡುತ್ತಾನೆ. ('ಆದಿತ್ಪ್ರತ್ನಸ್ಯ' ಎಂಬುವಲ್ಲಿ ವಾಸರ ಪದದಿಂದ ಮೋಕ್ಷಸುಖವನ್ನು ಕೊಡುತ್ತಾನೆ ಎಂದು ಹೇಳಿರುವುದರಿಂದ 'ಉದ್ವಯಂ' ಎಂಬುವಲ್ಲಿ ಜ್ಯೋತಿರಗನ್ಮ ಎಂಬುವುದರಿಂದ ಸಾಯುಜ್ಯವನ್ನು ಹೇಳಿರುವುದರಿಂದಲೂ ಹೇಳಿದ್ದು ಯುಕ್ತವು. ಇದರಿಂದ ಉಪನಿಷತ್ಪಾಠವನ್ನತಿಕ್ರಮಿಸಿ ವ್ಯಾಖ್ಯಾನ ಮಾಡುವ ವಿಷಯದಲ್ಲಿ ಫಲಕ್ರಮವೂ ನಿಯಾಮಕವೂ ಎಂದು ಹೇಳಿದ ಹಾಗಾಯಿತು). (d) ಇಷ್ಟವನ್ನು ಕೊಡುವ ಸ್ವಭಾವವುಳ್ಳವನಾದುದರಿಂದ ಇಂದು ಶಬ್ದವಾಚ್ಯನು ವಾಯುವು, ಆತನೇ ಸೌಮ್ಯಸ್ವರೂಪನಾದುದರಿಂದ ಸೋಮನಾಮಕನು. ಪವಿತ್ರೀಕರಿಸುವುದರಿಂದ ಪವಮಾನ ನಾಮಕನು. ವಿಷ್ಣುವು ಅತಿ ಪುರಾತನನಾದುದರಿಂದ ಪ್ರತ್ನಃ ಎನ್ನಿಸುತ್ತಾನೆ. ಮಹಾ ಸುಖವುಳ್ಳವನಾಗಿ ರೇತಃ ಎನ್ನಿಸುತ್ತಾನೆ.

ಭಾ॥ (a) ದೇವತ್ರಾದೇವ ಏವಾಸೌ ಸರ್ವದೇವೇಶ್ವರೋ ಯತಃ । ಸೂರ್ಯಶ್ಚ ಸೂರಿಭಿಃ ಪ್ರಾಪ್ಯೋ ನಿತ್ಯಾನಂದೋ ರಮಾಪತಿಃ ॥ (b) ದೇಶತಃ ಕಾಲತಶ್ಚೈವ ಗುಣತಶ್ಚಾಪಿ ಪೂರ್ತಿತಃ । ಅತ ಇತ್ಯುಚ್ಯತೇ ವಿಷ್ಣುಃ ಸಂತತೋ ಹ್ಯತ ಉಚ್ಯತೇ ॥ ತೃತೀಯವರ್ಣೋಽತಿಶಯೇ ಯತಸ್ತೇನಾತಿರೇವ ವಾ । ಅತ ಇತ್ಯುಚ್ಯತೇ ವಿಷ್ಣುಃ (c) ಸಮ್ಯಕ್ ಶ್ರುತ್ಯಾದ್ಯಶಕ್ಯತಃ ॥ ಪೂರ್ಣತ್ವಾದ್ಭಗವಾನ್ವಿಷ್ಣುರಶ್ರುತತ್ವಾದಿನೋದಿತಃ । (d) ಅಂತಸ್ಥಃ ಸರ್ವಜೀವಾನಾಂ ಪೂರ್ಣತ್ವಾತ್ಪುರುಷಾಭಿಧಃ ॥ ಸಮಃ ಸ ಸರ್ವರೂಪೇಷು ಸರ್ವಜೀವನಿಯಾಮಕಃ । ಇತಿ ವಿದ್ಯಾತ್ಪರಂ ವಿಷ್ಣುಂ ಮುಚ್ಯತೇ ತೇನ ಸಂಸೃತೇಃ ॥ ಇತ್ಯಾದಿ ಚ ॥

ಅ ॥ (a) ಯಾವ ಕಾರಣದಿಂದ ಈಹರಿಯೇ ಎಲ್ಲಾ ದೇವತೆಗಳಿಗೂ ನಿಯಾಮಕನೋ ಆದುದರಿಂದ ಈತನೇ ದೇವತ್ರಾದೇವನು. ನಿರಂತರದಲ್ಲಿಯೂ ಆನಂದಸ್ವರೂಪನಾದ ಲಕ್ಷ್ಮೀಪತಿಯಾದ ಶ್ರೀ ಹರಿಯು ಜ್ಞಾನಿಗಳಿಂದ ಪ್ರಾಪ್ಯನಾಗಿ ಸೂರ್ಯನಾಮಕನು. (b) ವಿಷ್ಣುವು ಎಲ್ಲಾ ದೇಶಗಳಿಂದಲೂ ಕಾಲದಿಂದಲೂ ಗುಣಗಳಿಂದಲೂ ಪೂರ್ಣನಾದುದರಿಂದಲೇ 'ಅತಃ' ಎಂದು ಹೇಳಲ್ಪಡುತ್ತಾನೆ. ಚೆನ್ನಾಗಿ ವ್ಯಾಪ್ತನು (ವಿಸ್ತೃತನು) ಎಂದು 'ಅತಃ' ಎಂಬುವುದರಿಂದ ಹೇಳಲ್ಪಡುತ್ತಾನೆ. ಯಾವಕಾರಣದಿಂದ ಮೂರನೇ ವರ್ಣವು ಅತಿಶಯವೆಂಬೀ ಅರ್ಥದಲ್ಲಿ ಇದೆಯೋ ಆದುದರಿಂದ ಅತಿ ಎಂಬುವುದೇ ಅತಃ ಎಂದು ಹೇಳಲ್ಪಡುತ್ತದೆ. [ತಾ ॥ 'ತೃತೀಯೋಽತಿಶಯೇ' ಎಂಬೀ ಸೂತ್ರದಿಂದ ಯಾವ ವರ್ಣವು ಎಲ್ಲಿ ಆವಶ್ಯಕವೋ ಅದರ ಮುಂಚಿನಯಾ ಮೇಲಿನ ಮೂರನೇ ವರ್ಣವು ಅರ್ಥಕ್ಕೆ ಆಧಿಕ್ಯವು ವಿವಕ್ಷಿತವಾದರೆ ಆಗುತ್ತದೆ. ಆಕಾರಣದಿಂದ ಅತಿ ಶಬ್ದದಿಂದ ತಿಳಿಯಲ್ಪಡುವ ಮೂರುವಿಧ ವ್ಯಾಪ್ತಿಗೆ ಮುಖ್ಯತ್ವರೂಪ ಆಧಿಕ್ಯವನ್ನು ವಿವಕ್ಷಾಮಾಡಿ ಅತಿ ಶಬ್ದದ ಕೊನೆಯಲ್ಲಿರುವ ಇಕಾರಕ್ಕೆ ಮೂರನೇ ವರ್ಣವಾದ ಹ್ರಸ್ವವಾದ ಅಕಾರವು ಪ್ರಾಪ್ತಿಯಾದರೆ ಅತಿಃ ಎಂಬುವುದೇ ಅತಃ ಎಂದು ಹೇಳಲ್ಪಡುತ್ತಧೆ. ವಿಷ್ಣುವೇ ಅತಃ ಎಂಬ ಶಬ್ದದಿಂದ ಹೇಳಲ್ಪಡುತ್ತಾನೆ. (c) ಪೂಜ್ಯನಾದ ವಿಷ್ಣುವು ಗುಣಪೂರ್ಣನಾದಪ್ರಯುಕ್ತ (ತಮ್ಮ ಯೋಗ್ಯತಾನುಸಾರವಾಗಿ ಅಲ್ಪವಾದುದೂ ಪೂರ್ಣವಾದುದರಿಂದ ಆತನ ಪ್ರಸಾದವಿಲ್ಲದೆ ಸ್ವತಂತ್ರವಾಗಿ) ಶ್ರವಣಾದಿಗಳಿಗೆ ಅಶಕ್ಯನಾದುದರಿಂದ ಅಶ್ರುತತ್ವ ಮೊದಲಾದ ಪದದಿಂದ ಹೇಳಲ್ಪಡುತ್ತಾನೆ. (d) ಸರ್ವ ಜೀವರ ಅಂತರ್ಗತನಾಗಿ (ಅಂತಃ ರಮತೆ ಎಂಬ ವ್ಯುತ್ಪತ್ತಿಯಿಂದ) ಅಂತರನೆಂದೂ ಪೂರ್ಣನಾದುದರಿಂದ (ಪುರವಃ=ಪೂರ್ಣಗಳಾದ ಷಟ್=ಆರು ಗುಣಗಳು ಯಸ್ಯ ಎಂಬ ವ್ಯುತ್ಪತ್ತಿಯಿಂದ) ಪುರುಷನಾಮಕನು. ಆತನು ಎಲ್ಲಾ ರೂಪಗಳಲ್ಲಿಯೂ ಸಮನು. ಎಲ್ಲಾ ಜೀವರಿಗೂ ನಿಯಾಮಕನು. ಈ ಪ್ರಕಾರವಾಗಿ ಸರ್ವೋತ್ತಮನಾದ ವಿಷ್ಣುವನ್ನು ತಿಳಿಯತಕ್ಕುದು. ಆ ರೀತಿಯಾಗಿ ತಿಳಿದುದರಿಂದ ಸಂಸಾರದಿಂದ ಬಿಡಲ್ಪಡುತ್ತಾನೆ. ಇದು ಮೊದಲಾದ ವಿಷಯವು ಹೇಳಲ್ಪಟ್ಟಿದೆ.

ಭಾ॥ (a) ಶರೀರಪುರುಷಾದೀನಾಂ ಪ್ರಾಪ್ಯತ್ವಾತ್ತದುಪಾಸ್ಯತ್ವಾತ್ತೇಷಾಂ ನಿಯಾಮಕತ್ವೇನ ತೇಭ್ಯೋಽಪ್ಯುತ್ತಮತ್ವೇನ ತೇಷು ಸ್ಥಿತತ್ವಾಚ್ಚ ತೇಷಾಂ ಸಾರ ಇತ್ಯುಚ್ಯತೇ ಭಗವಾನ್ । (b) ಯದೀಂ ಏವ ಅಲಕಂ ಅರಕಂ ಯತ್ಕಿಂಚಿಚ್ಛೃಣೋತಿ ತತ್ಸರ್ವಮರತಿರೂಪಾಂಧತಮಃ ಪ್ರಾಪ್ತಿಕಾರಣಮೇವ ತಸ್ಯ ಭವತಿ ॥ ತಸ್ಯ ಹಿ ಸರ್ವರತ್ಯಭಾವೋ ರತಿವಿರುದ್ಧದುಃಖಂ ಚ

ಪೂರ್ಣಂ । (c) ಪರಸ್ಮೈ ಶಂಸನಮಾತ್ರಾದರತಿರೇವೇತ್ಯತಃ ಪ್ರಸ್ತುತೇ ಚತುರ್ಥ್ಯತ್ಯಾಗೇ ತು ನ ತಸ್ಯ ವಾಚ್ಯಪಿ ಭಾಗೋ ಅಸ್ತಿ॥ ನ ಹಿ ಪ್ರವೇದ ಸುಕೃತಸ್ಯ ಪಂಥಾಮಿತಿ ದೋಷದ್ವಯಮೇವೇತ್ಯವಧಾರಯತಿ । ನ ತಸ್ಯಾನೂಕ್ತೇ ಭಾಗೋಽಸ್ತಿ ನ ವೇದ ಸುಕೃತಸ್ಯ ಪಂಥಾನಮಿತ್ಯೇತತ್ತದುಕ್ತಂ ಭವತೀತಿ ॥ (d) ಅಲಕಂ ಶೃಣೋತೀತಿ ತ್ಯಾಗದ್ವಯಸ್ಯ ಮುಖ್ಯತಸ್ತೃತೀಯಸ್ಯಾಪಿ ನರಕಂ ಶೃಣೋತೀತಿ ಕಿಂಚಿದ್ಭವತಿ ॥

ಅ ॥ (a) ಶರೀರ ಪುರುಷಾದಿಗಳಿಗೆ ಪ್ರಾಪ್ಯನಾದುದರಿಂದಲೂ ಅವರಿಂದ ಉಪಾಸ್ಯನಾದುದರಿಂದಲೂ ಅವರಿಗೆ ನಿಯಾಮಕನಾಗಿ ಅವರಿಂದಲೂ ಉತ್ತಮನಾಗಿ ಅವರಲ್ಲಿದ್ದುದರಿಂದಲೂ ಶ್ರೀ ಹರಿಯು ಅವರಿಗೆ ಸಾರನೆಂದು ಹೇಳಲ್ಪಡುತ್ತಾನೆ. (b) 'ಯದೀಂ' ಎಂಬುವಲ್ಲಿ ಈಂ ಅಂದರೆ ಏವ, ಅಲಕಂ ಅಂದರೆ ಅರಕಂ ದುಃಖರೂಪವಾದ ಯಾವುದನ್ನಾದರೂ ಕೇಳುತ್ತಾನೋ, ಅದೆಲ್ಲವೂ ಆತನಿಗೆ ದುಃಖಾತ್ಮಕವಾದ ಅಂಧಂತಮಸ್ಸಿನ ಪ್ರಾಪ್ತಿಗೆ ಕಾರಣವೇ ಆಗುತ್ತದೆ. ಆತನಿಗೆ (ತಮಸ್ಸನ್ನು ಹೊಂದಿದವನಿಗೆ) ಎಲ್ಲಾ ರತಿಯ (ಸುಖದ) ರಾಹಿತ್ಯವೂ, ಸುಖವಿರುದ್ಧವಾದ ದುಃಖವೂ ಕೂಡ ಪರಿಪೂರ್ಣವಾಗಿದೆ. (c) ಮತ್ತೊಬ್ಬನಿಗೋಸ್ಕರ (ಅಯೋಗ್ಯನಿಗೋಸ್ಕರ) ಉಪದೇಶದಿಂದಲೇ ತಮಸ್ಸು ಆಗುತ್ತದೋ ಏನು. (ಆಗುವುದಿಲ್ಲ) ಆದುದರಿಂದ ಪ್ರಸ್ತುತವಾದ ನಾಲ್ಕನೇ ತ್ಯಾಗದಲ್ಲಿ ಆದರೂ ಆ ನಾರಾಯಣನನ್ನು ಬಿಟ್ಟವನಿಗೆ ವೇದವಾಕ್ಯವು ಅಧೀತವಾದರೂ ಫಲವಿಲ್ಲ. ಸ್ವರ್ಗಾದಿ ಫಲವನ್ನು ಹೊಂದುವುದೇ ಇಲ್ಲ. ಈ ಪ್ರಕಾರವಾಗಿ ಎರಡು ದೋಷವೆಂದೇ 'ನ ತಸ್ಯ ಅನೂಕ್ತೇ ಭಾಗೋಽಸ್ತಿ ನ ವೇದ ಸುಕೃತಸ್ಯ ಪಂಥಾನಮಿತ್ಯೇತತ್ತದುಕ್ತಂ ಭವತಿ' ಎಂಬೀ ವಾಕ್ಯದಿಂದ ನಿಶ್ಚಯಿಸುತ್ತಾರೆ. (d) 'ಅಲಕಂ ಶೃಣೋತಿ' ಎಂದು ಹೇಳಲ್ಪಟ್ಟ ಫಲವು ಎರಡು ತ್ಯಾಗಗಳಿಗೂ ಮುಖ್ಯವಾಗಿ ಮೂರನೇ ತ್ಯಾಗಕ್ಕೂ ನರಕಸಾಧನವನ್ನು ಕೇಳುತ್ತಾನೆ ಎಂದು ಅರ್ಥವನ್ನಂಗೀಕರಿಸುವುದರಿಂದ ಅಮುಖ್ಯವಾಗಿ ಆಗುವುದು.

ಭಾ॥ (a) ತೌ ಯದ್ಯೈವಾಸ್ಮಾಚ್ಛರೀರಾದ್ವಿಹೀಯೇತೇ ತದ್ಯೈವೈತಾನಿ ನಿಮಿತ್ತಾನಿ ಪಶ್ಯಂತೀತಿ ನಿಯಮಃ । ನ ಚ ತದಾ ಪಶ್ಯತ್ಯೇವೇತಿ ॥ ವಾಸೇನ ರಮಯತೀತಿ ವಾಸರಂ ವಿಷ್ಣುಜ್ಯೋತೀತಿಃ । (b) ಯತ್ರ ಬ್ರಹ್ಮಾ ವೇದವಾಕ್ಯಂ ವ್ಯಾಚಕ್ಷಾಣೋ ಮುಖ್ಯೈರ್ಯಜನ್ ॥ ಸೋಮೇನ ಚ ಸುತೇನೇಶಮಾಸ್ತೇ ಲೋಕೇ ಹರೇರ್ಹಿ ಸಃ । ಇತಿ ಸ್ಕಾಂದೇ ॥ (c) ಗ್ರಾವ್ಣಾ ಸೋಮವಿಷಯೇ ಸೋಮೇನೇಷ್ಟ್ವಾ ಮಹೀಯತೇ ತೇನೈವ ವಿಷ್ಣುಪ್ರೀತ್ಯಾ ಸ್ವಸ್ಯಾನಂದಂ ಜನಯನ್ । ಸ್ವರಾನಂದರೂಪೋ ವಿಷ್ಣುಃ ॥ (d) ದಿವೋ ದೇವ್ಯಾ ಅವರೋಧನಂ ತಸ್ಯಾಃ ಪರಿವಾರಭೂತಾಃ ಸರ್ವದೇವ್ಯಃ ದ್ಯೌರ್ನಾಮ ವಾಯುಪತ್ನೀ । ಅಜನಯೋ ಮರುತೋ ವಕ್ಷಣಾಭ್ಯೋ ದಿವ ಆವಕ್ಷಣಾಭ್ಯ ಇತ್ಯಾದೇಃ ॥ (e) ಯಹ್ವತೀಃ ಸ್ಯಂದಮಾನಾಃ । ಸರ್ವೇಷ್ವದ ಜಗತ್ಪ್ರಾಣ ಮಾಮಾದಾಯ ಪರಿಶ್ರವ ॥ ಯತ್ರಾಸೌ ಭಗವಾನ್ವಿಷ್ಣುಃ ತ್ವಂ ಹಿ ಮೋಕ್ಷಪ್ರದಃ ಸದೇತಿ ಚ

ಅ॥ (a) (ಶರೀರತ್ಯಾಗಕಾಲದಲ್ಲಿ ಕೆಲವು ವೇಳೆ ದುರ್ನಿಮಿತ್ತಗಳು ಕಾಣದಿರುವುದರಿಂದ ಈ ನಿಯಮವು ಹೇಗೆ ಕೂಡಬಹುದೆಂದರೆ) ಆ ಅನಿರುದ್ಧ ಪ್ರದ್ಯುಮ್ನರು ಯಾವಾಗ ಈ ಶರೀರದಿಂದ ಹೊರಟು ಹೋಗುತ್ತಾರೋ ಆವಾಗಲೇ ಈ ದುರ್ನಿಮಿತ್ತಗಳನ್ನು ನೋಡುತ್ತಾರೆಂದು ನಿಯಮವು. ಶರೀರತ್ಯಾಗಕಾಲದಲ್ಲಿ ನೋಡುತ್ತಾನೆಯೇ ಸರಿ ಎಂದು ನಿಯಮವಿಲ್ಲ. ಹೃದಯದಲ್ಲಿ ತನ್ನ ಸನ್ನಿಧಾನದಿಂದ ಕ್ರೀಡಿಸುತ್ತಾನೆ ಎಂದು ವಾಸರ ಎಂದರೆ ವಿಷ್ಣುವಿನ ಜ್ಯೋತಿಸ್ಸು. (b) ಎಲ್ಲಿ ಚತುರ್ಮುಖನು ವೇದವಾಕ್ಯವನ್ನು ವ್ಯಾಖ್ಯಾನಮಾಡುವವನಾಗಿ ಯಾಗಗಳಿಂದ ಹಿಂಡಲ್ಪಟ್ಟ ಸೋಮರಸದಿಂದ ಸರ್ವಸ್ವಾಮಿಯಾದ ಶ್ರೀ ಹರಿಯನ್ನು ಪೂಜಿಸುವವನಾಗಿರುತ್ತಾನೋ, ಆತನು ವಿಷ್ಣುವಿನ ಲೋಕದಲ್ಲಿ ಇರುತ್ತಾನೆ. ಎಂದು ಸ್ಕಾಂದಪುರಾಣದಲ್ಲಿದೆ. (c) ಸೌಮ್ಯಸ್ವರೂಪನಾದುದರಿಂದ ಸೋಮನಾಮಕ ಭಗವದ್ವಿಷಯದಲ್ಲಿ ಹಿಂಡಲ್ಪಟ್ಟ ಸೋಮರಸದಿಂದ ಯಾಗಮಾಡಿ ಆ ಯಾಗದಿಂದಲೇ ವಿಷ್ಣುವಿನ ಪ್ರೀತಿಯಿಂದ ತನಗೆ ಆನಂದವನ್ನು ಹುಟ್ಟಿಸುವವನಾಗಿ (ಇತರ ಮುಕ್ತರಿಂದ) ಪೂಜಿಸಲ್ಪಡುತ್ತಾನೆ. (ಯಸ್ಮಿನ್ ಲೋಕೇ ಸ್ವರ್ಹಿತಂ ಎಂಬುವಲ್ಲಿ ಸ್ವಃ ಅಂದರೆ ಸುಖವೆಂದಂಗೀಕರಿಸಿದರೆ ಯತ್ರಾನಂದಾಶ್ಚ ಮೋದಾಶ್ಚ ಎಂಬುವುದರಿಂದ ಪುನರುಕ್ತಿಯಾಗುವುದು. ಎಂದರೆ) ಸ್ವರ್=ಆನಂದಸ್ವರೂಪನಾದ ವಿಷ್ಣುವು. (d) ದಿವಃ=ಸರಸ್ವತೀದೇವಿಯು, ಅವರೋಧನಂ=ಅವಳ ಪರಿವಾರವಾಗಿರತಕ್ಕ ಎಲ್ಲಾ ದೇವಿಯರು ದ್ಯಾಃ, ಅಂದರೆ (ಭೂತಪೂರ್ವಗತಿಯಿಂದ) ಸರಸ್ವತಿಯು ವಾಯುದೇವರ ಪತ್ನಿ ಎನ್ನಿಸುತ್ತಾಳೆ. ತ್ವಂ=ನೀನು, ಮರುತಃ=ವಾಯುದೇವರ, * ವಕ್ಷಣಾಭ್ಯಃ=ವಚನಗಳಿಂದ, ಆ=ಚೆನ್ನಾಗಿ, ವಕ್ಷಣಾಭ್ಯಃ=ಪ್ರವಚನಗಳಿಗೋಸ್ಕರ, ವೇದಶಾಸ್ತ್ರಗಳ ಪಠನಮಾಡಲಿಕ್ಕೂ ವಿಶಿಷ್ಟವ್ಯಾಖ್ಯಾನಕ್ಕೂ ಕೂಡ, ದಿವಃ=ಸರಸ್ವತೀದೇವಿಯ ಸಕಾಶದಿಂದ, ಅಜನಯಃ=ಅಭಿವ್ಯಕ್ತನಾಗಿರುವಿ. ಇದುಮೊದಲಾದ ಪ್ರಯೋಗದಿಂದ (ಈ ಅರ್ಥವು ಸಿದ್ಧವಾಗುವುದು.) (e) ಯಹ್ವತೀಃ=ಹರಿಯುತ್ತಿರುವ, ಸರ್ವರಿಗೂ ಇಷ್ಟಪ್ರದನಾದ, ಜಗಚ್ಚೇಷ್ಟಕನಾದ ಮುಖ್ಯಪ್ರಾಣನೇ, ನನ್ನನ್ನು, ಹಿಡಿದುಕೊಂಡು ಎಲ್ಲಿ ಈ ಪೂಜ್ಯನಾದ ವಿಷ್ಣುವು ಇದ್ದಾನೋ ಅಲ್ಲಿಗೆ ನನ್ನನ್ನು ಪ್ರಾಪಿಸಿಕೊಡು. ನೀನೇ ಯಾವಾಗಲೂ ಸರ್ವರಿಗೆ ಮುಕ್ತಿಯನ್ನು ಕೊಡತಕ್ಕವನು. ಹೀಗೂ ಅದೆ.

ಭಾ॥ **(a)** ಇಂದುರಿಷ್ಟಪ್ರದತ್ವಾದ್ಯೋ ವಾಯುರಾದಾಯ ಗಚ್ಛತಿ । ಇಂದ್ರನಾಮ್ನಃ ಕೇಶವಸ್ಯ ಸಮೀಪಂ ಮುಕ್ತಮಂಜಸಾ ॥ ಇತಿ ಚ ॥ **(b)** ಅನನ್ಯಹೇತುಕಂ ಸಾಕ್ಷಾದ್ಭಗವದ್ಭಕ್ತಿರೂಪಕಂ । ಸುಖಮಾನಂದ ಇತ್ಯುಕ್ತೋ ಮೋದೋ ಭೋಗನಿಮಿತ್ತಕಃ ॥ ಪ್ರಮೋದಸ್ತದ್ವಿಶೇಷೋಕ್ತೋ ಮುನ್ನಾಮಾತ್ಯಲ್ಪಭೋಗತಃ । ಇತ್ಯೃಗ್ವೇದಸಂಹಿತಾಯಾಂ ॥ **(c)** ತಮಸಃ ಸಕಾಶಾತ್ ಉದ್ಗತಾ ವಯಮುತ್ತರಂ ಸರ್ವೋತ್ತಮಂ ವಿಷ್ಣ್ವಾಖ್ಯಂ ಜ್ಯೋತಿಃ ಪರಿಪಶ್ಯಂತಸ್ತಮೇವ ದೇವತ್ರಾದೇವಂ ದೇವವಿಷಯೇಽಪಿ ದೇವಮಗನ್ಮ । **(d)** ತದೇವ ಜ್ಯೋತಿಷ್ಷ್ವೇನೋತ್ತರತ್ವೇನ ಚ ಪಶ್ಯಂತ ಇತಿ ದರ್ಶನೇ ಇತ್ಥಂ ಭಾವವಿಧಾನಾರ್ಥಂ ಪೂರ್ವಂ॥ ತಥೈವಾಸೌ ಭಗವಾನುತ್ತಮಜ್ಯೋತಿಃ । **(e)** ನ ಠಾಜಾದಿಷ್ವಿವಾವಿದ್ಯಮಾನಭಕ್ತಿಮಾತ್ರಮಿದಮಿತಿ ಜ್ಞಾಪಯಿತುಮಗನ್ಮ ಜ್ಯೋತಿರುತ್ತಮಮಿತಿ

* ವಚ ಪರಿಭಾಷಣೇ, ಸನ್ ಪ್ರತ್ಯಯ, 'ಚೋಃ ಕುಃ' ಎಂಬುವುದರಿಂದ ಕುತ್ವವು. ಇಣ್ಕೋಃ ಷತ್ವಂ ಕಷಯೋಗೇಕ್ಷಃ ತಥಾ ಚ ವಕ್ಷಣಾ.

ಪುನರ್ವಚನಂ ॥ ಅರ್ಚಿಷೋಽಂಶಾ ವರ್ತುಲಾಸ್ತು ನಾಮ್ನಾ ವಟರಕಾಃ ಸ್ಮೃತಾಃ । ಇತಿ ಶಬ್ದನಿರ್ಣಯೇ ॥

ಅ ॥ (a) ಇಷ್ಟವನ್ನು ಕೊಡತಕ್ಕವನಾದುದರಿಂದ ಇಂದುಶಬ್ದವಾಚ್ಯನಾದ ಯಾವ ವಾಯುವು ಪರಮೈಶ್ವರ್ಯಸಂಪನ್ನನಾದ ಇಂದ್ರನಾಮಕನಾದ ಕೇಶವನ ಸಮೀಪಕ್ಕೆ ಚೆನ್ನಾಗಿ ಮುಕ್ತನನ್ನು ಹಿಡಿದುಕೊಂಡು ಹೋಗುತ್ತಾನೆ. ಹೀಗೂ ಅದೆ. (b) ಬೇರೆ ಕಾರಣದಿಂದ ಹುಟ್ಟದಿರುವ (ವಿಷಯೋಪಾಧಿರಹಿತವಾದ) ಸಾಕ್ಷಾದ್ಭಗವದ್ಭಕ್ತಿಯಿಂದಲೇ ವ್ಯಕ್ತವಾಗುವ ಸ್ವರೂಪಸುಖವಿಶೇಷವು **ಆನಂದ** ಎನ್ನಿಸಿಕೊಳ್ಳುತ್ತದೆ. ಭೋಗವೇ ನಿಮಿತ್ತವಾಗಿವುಳ್ಳ ಸುಖವು **ಮೋದಃ** ಎನ್ನಿಸಿಕೊಳ್ಳುತ್ತದೆ. ಅತ್ಯಂತಪ್ರಕೃಷ್ಟವಿಷಯಗಳಿಂದ ಹುಟ್ಟಿರುವ ಸುಖವಿಶೇಷವು **ಪ್ರಮೋದ** ಎನ್ನಿಸಿಕೊಳ್ಳುತ್ತದೆ. ಅಲ್ಪಭೋಗದಿಂದ ಹುಟ್ಟುವ ಸುಖವು **ಮುತ್** ಎಂದು ಹೆಸರುಳ್ಳದ್ದು. ಎಂದು ಋಗ್ವೇದಸಂಹಿತೆಯಲ್ಲಿ. (c) ('ಉದ್ವಯಂ ತಮಸಸ್ಪರಿ' ಎಂಬುವುದರ ಅರ್ಥವನ್ನು ನಿರೂಪಿಸುತ್ತಾರೆ.) ಅಜ್ಞಾನ ಸಕಾಶದಿಂದ ಮೇಲಕ್ಕೆಬಂದ (ಅಜ್ಞಾನಶೂನ್ಯರಾದ) ನಾವು ಸರ್ವೋತ್ತಮವಾದ ವಿಷ್ಣುವೆಂದು ಹೆಸರುಳ್ಳ ಜ್ಯೋತಿಸ್ಸನ್ನು ನೋಡುತ್ತಾ ಅತನನ್ನೇ ದೇವತೆಗಳವಿಷಯದಲ್ಲಿಯೂ ದೇವತ್ವವನ್ನು ಕೊಡುವವನನ್ನಾಗಿ ಹೊಂದಿದೆವು. (d) ಆ ಪರ ಬ್ರಹ್ಮನನ್ನೇ ಪ್ರಕಾಶಸ್ವರೂಪತ್ವದಿಂದಲೂ ಸರ್ವೋತ್ತಮತ್ವದಿಂದಲೂ ನೋಡುವವರು, ಎಂದು ನೋಡುವುದರಲ್ಲಿ ಈಪ್ರಕಾರ ಸ್ವಭಾವವನ್ನು ವಿಧಿಸುವುದಕ್ಕೋಸ್ಕರ ಮುಂಚಿನದ್ದು. (ಅಂದರೆ ಪೂರ್ವಾರ್ಧದ ಉತ್ತರಜ್ಯೋತಿಃ ಎಂಬುವುದು.) ಈಪ್ರಕಾರ ಉತ್ತಮಜ್ಯೋತಿಃ ಎಂಬುವುದು ಯಾವದೋ ಅದು ಹಾಗೆಯೇ ಸರಿ. (e) ಈ ನಮ್ಮ ಭಜನವು ರಾಜ ಮೊದಲಾದವರಲ್ಲಿ ಎಂಬಂತೆ ಇಲ್ಲದಿರುವುದರ ಕೇವಲ ಭಕ್ತಿಯಲ್ಲ ಎಂದು ತಿಳಿಸಿಕೊಡುವುದಕ್ಕೋಸ್ಕರ (ಅಂದರೆ ಉತ್ತಮಜ್ಯೋತೀರೂಪವಾದ ಬ್ರಹ್ಮಪ್ರಾಪ್ತಿರೂಪಫಲವು ಅನುಭವಸಿದ್ಧವಾದುದರಿಂದ, ಇಲ್ಲ ದಿರುವುದನ್ನು ಉಪಾಸನೆಮಾಡಿದರೆ ಫಲವು ಹುಟ್ಟದಿರುವುದರಿಂದ ಫಲದಸಾಮರ್ಥ್ಯದಿಂದಲೇ ಉಪಾಸನೆಯೂ ಯಥಾರ್ಥವಾಗಿಯೇ ಸಿದ್ಧವಾಗುವುದು ಎಂದು ತಿಳಿಸಿಕೊಡುವುದಕ್ಕೋಸ್ಕರ) 'ಅಗನ್ಮ ಜ್ಯೋತಿರುತ್ತಮಂ' ಎಂದು ಮತ್ತು (ಉತ್ತರಾರ್ಧದ) ವಾಕ್ಯವು. ಪ್ರಕಾಶದ ಅಂಶಗಳು ವರ್ತುಲಾಕಾರಗಳೇವೆ. (ದೀರ್ಘಾಕಾರಗಳಾದ ಅಂಶಗಳಲ್ಲ.) ಹೆಸರಿನಿಂದ ವಟರಕಗಳೆಂದು ಸ್ಮರಿಸಲ್ಪಟ್ಟವೆ. ಎಂದು ಶಬ್ದನಿರ್ಣಯದಲ್ಲಿದೆ.

ಭಾ॥ **(a)** ಬೃಹತ್ತಮಂ ಮಧು ಯದಿ ಸಹಾಪೂಪಂ ಪ್ರಭಕ್ಷಯೇತ್ । ಸ್ವಪ್ನೇ ತಸ್ಯಾಚಿರಾನ್ಮೃತ್ಯೋ ರಕ್ತಾಬ್ಜೇ ವಾ ಶಿರೋ ಧೃತಃ ॥ ಇತಿ ಬ್ರಹ್ಮಾಂಡೇ॥ **(b)** ರಾತ್ರ್ಯಾಸ್ತು ದೇವತಾ ದುರ್ಗಾ ದುಃಸ್ವಪ್ನೇ ಸಾ ಪ್ರಪೂಜಿತಾ । ಪಾಯಸೇನ ಹರೇರ್ನ್ಮೃತ್ಯುಂ ರಾತ್ರಿಸೂಕ್ತಾದಕಾಲಿಕಂ ॥ ಯದಿ ಕಾಲಿಕ ಮೃತ್ಯುಃ ಸ್ಯಾತ್ಪದಂ ಸಾ ಪರಮಂ ನಯೇತ್ । ಸಹೈವ ವಿಷ್ಣುನಾ ಭಕ್ತಂ ವಿಷ್ಣೋಸ್ತದ್ವೇದಿನಂ ತಥಾ ॥ **(c)** ರತಿದತ್ವಾತ್ಪರೋ ವಿಷ್ಣುರ್ಮುಖ್ಯೋ ತೋ ರಾತ್ರಿರುಚ್ಯತೇ । ತದಾಶ್ರಯತ್ವಾದ್ದುರ್ಗಾಽಪಿ ರಾತ್ರಿರಿತ್ಯಭಿಧೀಯತೇ॥ **(d)** ಸ್ತ್ರೀರೂಪಃ ಸ ಪರೋ ವಿಷ್ಣುಃ ಪಾಯಸೇಷ್ಟೋ ಹಿ ಮೋಕ್ಷದಃ । ತಸ್ಮಾದುಭೌ ಸಹೈವೇಜ್ಯೌ ಭಕ್ತ್ಯಾ ದುಃಸ್ವಪ್ನದರ್ಶನೇ ॥

ಅ || (a) ಸ್ವಪ್ನದಲ್ಲಿ ಅತಿದೊಡ್ಡದಾದ ಅಪೂಪಸಹಿತವಾದ ಮಧುವನ್ನು ಚೆನ್ನಾಗಿ ಭಕ್ಷಿಸಿದ ಪಕ್ಷದಲ್ಲಿ ಆತನಿಗೆ, ಶಿರಸ್ಸಿನಲ್ಲಿ ಧರಿಸಲ್ಪಟ್ಟ ರಕ್ತಕಮಲವುಳ್ಳವನಂತೆ ಶೀಘ್ರದಲ್ಲಿಯೇ ಮರಣವು ಸಂಭವಿಸುವುದು. ಎಂದು ಬ್ರಹ್ಮಾಂಡಪುರಾಣದಲ್ಲಿದೆ. (b) (ರಾತ್ರೀಸೂಕ್ತವನ್ನು ವ್ಯಾಖ್ಯಾನಮಾಡುವುದಕ್ಕೋಸ್ಕರ ಅಧಿಕಾರವನ್ನೂ ಫಲವನ್ನೂ ಪ್ರತಿಪಾದ್ಯವನ್ನೂ ಪ್ರತಿಪಾದಿಸುತ್ತಾರೆ.) ರಾತ್ರೀಸೂಕ್ತಕ್ಕಾದರೂ, ವಿಷ್ಣುನಾ ಸಹೈವ ದುರ್ಗಾ=ವಿಷ್ಣುವಿನಿಂದೊಡಗೂಡಿಯೇ ದುರ್ಗಾದೇವಿಯು, ದೇವತೆಯು. ದುಃಸ್ವಪ್ನವು ಹುಟ್ಟುತ್ತಿರಲು ಆ ದೇವತೆಯು ಪಾಯಸಾದಿಗಳಿಂದ ಚೆನ್ನಾಗಿ ಪೂಜಿಸಲ್ಪಟ್ಟರೆ ಆ ರಾತ್ರಿಸೂಕ್ತದ್ವೇಷೆಯಿಂದ ಅಕಾಲಿಕವಾದ ಅಪಮೃತ್ಯುವನ್ನು ಪರಿಹರಿಸುತ್ತದೆ. ಕಾಲಿಕಮೃತ್ಯುವಾಗಿದ್ದರೆ ಆ ದುರ್ಗಾಪರಮೇಶ್ವರರು ವಿಷ್ಣುವಿನ ಭಕ್ತನಾದ ಹಾಗೆಯೇ ತನ್ನೊಳಗೆ ಇರತಕ್ಕ ರಾತ್ರಿನಾಮಕ ಶ್ರೀ ಹರಿಯನ್ನು ತಿಳಿದವನನ್ನು ಉತ್ತಮಸ್ಥಾನವಾದ ವೈಕುಂಠಲೋಕಕ್ಕೆ ಕರಕೊಂಡು ಹೋಗುತ್ತಾರೆ. (c) ರತಿ (ಸುಖ)ಯನ್ನು ಕೊಡುವುದರಿಂದ ಸರ್ವೋತ್ತಮನಾದ ವಿಷ್ಣುವೇ ಮುಖ್ಯವಾಗಿ ರಾತ್ರಿಯೆಂದು ಹೇಳಲ್ಪಡುತ್ತಾನೆ. ಆ ಹರಿಯನ್ನು ಆಶ್ರಯಿಸಿಕೊಂಡು ಇರುವುದರಿಂದ ದುರ್ಗಾದೇವಿಯೂ ಕೂಡ ರಾತ್ರಿಯೆಂದು ಹೇಳಲ್ಪಡುತ್ತಾಳೆ. (d) ಸ್ತ್ರೀರೂಪನಾದ ಆ ಸರ್ವೋತ್ತಮನಾದ ವಿಷ್ಣುವು ಪಾಯಸದಿಂದ ಪ್ರೀತನಾಗಿಯೇ ಮುಕ್ತಿಯನ್ನು ಕೊಡುತ್ತಾನೆ. ಆದುದರಿಂದ ದುಃಸ್ವಪ್ನಗಳು ಕಂಡರೆ ಇಬ್ಬರು ಒಟ್ಟಿಗೇನೇ (ಆ ದುರ್ಗೆಯೂ ಶ್ರೀ ಹರಿಯೂ ಇವರಿಬ್ಬರು) ಮಾಹಾತ್ಮ್ಯಜ್ಞಾನಪೂರ್ವಕಸುದೃಢಸ್ನೇಹದಿಂದ ಪೂಜಿಸಲ್ಪಡಬೇಕು.

ಭಾ|| (a) ಬಹುಭಿರ್ನಯನೈರ್ವಿಷ್ಣುರ್ಬಹುಧೇದಂ ದದರ್ಶ ಹ । ಆಯನ್ನ ರ್ವೇಷು ಲೋಕೇಷು ಧೃತಾಸ್ತೇನೈವ ಹಿ ಶ್ರಿಯಃ ॥ (b) ನೀಚಾನುಚ್ಚಾಂಶ್ಚ ಜೀವಾನ್ಸ ಬ್ರಹ್ಮಾದೀನುರ್ವಪೂರಯತ್ । ಜ್ಞಾನೇನ ಬಾಧತೇಽಜ್ಞಾನಂ (c) ಸ್ವಸಾರಂ ಸ್ವಂ ತಥಾಽಕರೋತ್ ॥ ಉಷ ಆಖ್ಯಂ ಶುಕ್ಲ ವರ್ಣಂ ಪ್ರಮುದಾರೂಪಮೇವ ಚ । ತಮಶ್ಚಾಪಾಕರೋತ್ಯೇವ ತದಾ ಸೂರ್ಯಾದಿಷು ಸ್ಥಿತಃ ॥ (d) ಸ ನಃ ಸ್ವಾಮೀ ಯದುದರೇ ಯಮುನಾದ್ಯಾಮುನಾಮಕೇ । ಅವಿಕ್ಷ್ಮಹಿ ವಯಂ ಸರ್ವೇ ವೃಕ್ಷೇ ಯದ್ವತ್ಪತತ್ರಿಣಃ ॥

ಅ || (a) (ರಾತ್ರೀಸೂಕ್ತದ ಪ್ರತಿಋಕ್ಕುಗಳಿಗೂ ಕ್ರಮವಾಗಿ ವ್ಯಾಖ್ಯಾನಮಾಡುತ್ತಾರೆ.) (೧ನೇ ಋಕ್ಕು) ವಿಷ್ಣುವು ಅನೇಕನಯನಗಳಿಂದ, ಬಹುಪ್ರಕಾರವಾದ ಈ ಜಗತ್ತನ್ನು ಬರುತ್ತಾ, ನೋಡುವವನಾದನು. ಆತನಿಂದಲೇ ಎಲ್ಲಾ ಲೋಕಗಳಲ್ಲಿಯೂ ಸಂಪತ್ತುಗಳು ಧರಿಸಲ್ಪಟ್ಟಿವೆ. (b) ೨ ಆ ಹರಿಯು ನೀಚರೂ ಉತ್ತಮರೂ ಆದ ತೃಣವೊದಲಾದ ಚತುರ್ಮುಖನೇ ಮೊದಲಾದ ಎಲ್ಲಾ ಜೀವರನ್ನೂ ಬಹುಪ್ರಕಾರವಾಗಿ ಪೂರ್ಣೀಕರಿಸಿದನು. ಅವರ ಅಜ್ಞಾನವನ್ನು ಜ್ಞಾನದಿಂದ ನಾಶಗೊಳಿಸುತ್ತಾನೆ. (c) ೩ ಹಾಗೆಯೇ ಉಷೋನಾಮಕವಾದ ಶುಕ್ಲ ವರ್ಣವಾದ ಪ್ರಮುದಾಸ್ವರೂಪವಾದ ತನ್ನ ಸ್ವರೂಪವನ್ನೇ ಶ್ರೇಷ್ಠವನ್ನಾಗಿ ಮಾಡಿದನು. ಆಗ ಸೂರ್ಯಾದಿಗಳಲ್ಲಿರತಕ್ಕ ಶ್ರೀ ಹರಿಯು ಅಜ್ಞಾನಾಂಧಕಾರವನ್ನೂ ಕೂಡ ನಿರಾಕರಿಸುತ್ತಾನೆಯೇ ಸರಿ. (d)೪ (ದುಷ್ಟರನ್ನ) ನಿಗ್ರಹಿಸುವುದರಿಂದ ಯಾಮುನೆಂದು ಹೆಸರುಳ್ಳ, ಯಾವ ರಾತ್ರೀದೇವತೆಯ ಹೊಟ್ಟೆಯಲ್ಲಿ ನಾವೆಲ್ಲರೂ ವೃಕ್ಷದಲ್ಲಿ ಹಕ್ಕಿಗಳೆಂಬಂತೆ ಪ್ರವಿಷ್ಟರಾಗಿದ್ದೇವೋ ಅಂತಹ ರಾತ್ರಿದೇವತೆಯು ನಮಗೆ ಸ್ವಾಮಿಯು.

ಭಾ॥ (a) ಶ್ಯೇನಾಖ್ಯಾಸ್ತು ಸುಖೀನತ್ವಾದಾಸಮಂತಾತ್ಸುರೋತ್ತಮಾಃ। ಪದ್ವಂತೋ ಮಾನುಷಾಶ್ಚೈವ ಪಾದಮಾತ್ರಪ್ರಯಾಯಿನಃ ॥ (b) ಗ್ರಾಮಾಖ್ಯಾ ಬಹುಲತ್ವಾತ್ತು ದೈತ್ಯಾ ಏವ ಪ್ರಕೀರ್ತಿತಾಃ। ಅರ್ಥಿನಸ್ತು ಕೃತಾರ್ಥತ್ವಾನ್ಮುಕ್ತಾ ಏವ ಶ್ರುತಾಃ ಶ್ರುತೌ ॥ (c) ಊರೀಕೃತಪ್ರಮಾಣತ್ವಾದೂರ್ವ್ಯಃ ಸ ಭಗವಾನ್ಹರಿಃ । ವೃಕಾಸ್ತೇನೈವ ನಿರ್ಯಾಪ್ಯಾ ವೃಕಾಃ ಕ್ರೂರತ್ವತೋಽಸುರಾಃ ॥ (d) ತತ್ಸ್ವಭಾವಾಶ್ಚ ವೃಕ್ಯಾಃ ಸ್ಯುಃ ಸ್ತೇನಾಸ್ತತ್ರ ಮಹಾಸುರಾಃ । ಬ್ರಹ್ಮಸ್ತೇನಾ ಯತಸ್ತೇ ಹಿ ನಿತ್ಯಮೈಕಾತ್ಮ್ಯವೇದಿನಃ । ವಿಷ್ಣುಃ ಸುಖತರಶ್ಚೈವ ಭಕ್ತಾನಾಂ ಭವತಿ ಪ್ರಭುಃ ॥

ಅ ॥ (a) ಈ ದೇವಶ್ರೇಷ್ಠರು ಚೆನ್ನಾಗಿ ಸರ್ವದೇಶಕಾಲಗಳಲ್ಲಿಯೂ ಸುಖರೂಪಿಯಾದ ವಿಷ್ಣುವೇ ಸ್ವಾಮಿಯಾಗಿ ಉಳ್ಳವರಾದುದರಿಂದ ಶ್ಯೇನರೆಂದು ಹೆಸರುಳ್ಳವರು. ಕೇವಲ ಪಾದಗಳಿಂದ ಸಂಚಾರಮಾಡುವ ಮನುಷ್ಯರು (ಅಶ್ವಗವಾದಿಗಳೂ ಕೂಡ) 'ಪದ್ವಂತಃ' ಎನ್ನಿಸುತ್ತಾರೆ. (b) ಬಾಹುಲ್ಯವಿದ್ದುದರಿಂದಲೇ (ಗ್ರಾಮದಲ್ಲಿದ್ದುದರಿಂದಲ್ಲ) ಗ್ರಾಮ ಎಂದು ಹೆಸರುಳ್ಳವರು ದೈತ್ಯರೇ ಹೇಳಲ್ಪಡುತ್ತಾರೆ. ಕೃತಾರ್ಥರಾದುದರಿಂದ ಮುಕ್ತರೇ ಅರ್ಥಿಗಳೆಂದು ಶ್ರುತಿಯಲ್ಲಿ ಹೇಳಲ್ಪಟ್ಟದ್ದಾರೆ. (c) (೬) ಇದು ತನ್ನ ಪ್ರಮಿತಿಯನ್ನು ಹುಟ್ಟಿಸಲಿ ಎಂದು ತನ್ನಿಂದ ಅಂಗೀಕರಿಸಲ್ಪಟ್ಟ ಪ್ರಮಾಣವುಳ್ಳವನಾದುದರಿಂದ ಆ ಪೂಜ್ಯನಾದ ಶ್ರೀ ಹರಿಯು ಊರ್ವ್ಯಃ ಎನ್ನಿಸುಸುತ್ತಾನೆ. ಆತನಿಂದಲೇ ವೃಕರು (ಅಸುರರು) ಹೊರಪಡಿಸಿಕೊಳ್ಳಲ್ಪಡಬೇಕು. (ಚೆನ್ನಿನಾಯಿಯಂತೆ) ಕ್ರೂರರಾದುದರಿಂದ ಅಸುರರು ವೃಕರೆನ್ನಿಸುತ್ತಾರೆ. (d) ಅಸುರ ಸ್ವಭಾವವುಳ್ಳ ಪಿಶಾಚಾದಿಗಳೂ ರಾಕ್ಷಸರೂ ಕೂಡ ವೃಕ್ಯರೆನ್ನಿಸುತ್ತಾರೆ. ಅವರಲ್ಲಿ ಮಹಾಸುರರು ಸ್ತೇನರು. ಏಕೆಂದರೆ ನಿತ್ಯದಲ್ಲಿಯೂ (ಅನಾದಿಕಾಲವನ್ನು ಆರಂಭಿಸಿ) ಆ ಮಣಿಮದಾದಿ ದೈತ್ಯರು ಜೀವಬ್ರಹ್ಮರಿಗೆ ಐಕ್ಯವನ್ನು ಹೇಳುವವರೋ, ಆದುದರಿಂದ ಸ್ತೇನರು ಅಂದರೆ ಪರಬ್ರಹ್ಮನನ್ನೇ ಅಪಲಾಪ ಮಾಡಿದವರು. ಪ್ರಭುವಾದ ಶ್ರೀ ವಿಷ್ಣುವು ಭಕ್ತರಿಗೆ ಸುಖಪ್ರದನೂ ಕೂಡ ಆಗುತ್ತಾನೆಯೇ ಸರಿ. (ತಥಾ ಚ, ಸು=ಸುಖವನ್ನು ತರತಿ=ದಾನಮಾಡುತ್ತಾನೆ. ಆದುದರಿಂದ ಸುತರಾ ಎಂದು ವ್ಯುತ್ಪತ್ತಿಯನ್ನು ತೋರಿಸಿದಂತೆ ಆಯಿತು).

ಭಾ॥ (a) ಕೃಷ್ಣಂ ವ್ಯಕ್ತಂ ತಮೋಽಜ್ಞಾನಮಜ್ಞಾನಾಂ ಪೇಶಲಂ ಹಿ ತತ್ । ತದ್ವ್ಯಾತಯತ್ಯೃಣಮಿವ ಭಗವಾನ್ಪುರುಷೋತ್ತಮಃ ॥ ಸ ಏವ ಚೋಷಾಃ ಕಥಿತಃ ಪ್ರಕಾಶತ್ವಾಜ್ಜನಾರ್ದನಃ । (b) ಜಯಿನಃ ಸ್ತೋಮಮಿವ ಚ ಬ್ರಾಹ್ಮಣಾಯ ಯಥಾ ಚ ಗಾಃ॥ ಉಪಾಕರಂ ತಥಾ ಸ್ತೋಮಂ ತವಾಹಂ ತದ್ಗೃಣೀಷ್ವ ಚ । (c) ದ್ಯೌರಿತಿ ಜ್ಞಾನಮುದ್ದಿಷ್ಟಂ ತದ್ವ್ಯಂಗ್ಯತ್ವಾಜ್ಜನಾರ್ದನಃ ॥ ದುಹಿತಾ ದಿವ ಇತ್ಯುಕ್ತ (d) ಏವಮರ್ಥೇನ ಪೂಜ್ಯತೇ । ರಾತ್ರಿಸೂಕ್ತೇನ ಭಗವಾನ್ಸಾಕ್ಷಾನ್ನಾರಾಯಣಃ ಪ್ರಭುಃ ॥ ತತ್ಸನ್ನಿಧಾನಾದ್ದುರ್ಗಾಯಾ ಏಷೋಽರ್ಥ ಉಪಚಾರತಃ । ಏವಂ ಸ್ತುತಸ್ತಥೈವೇಷ್ಟೋ ಭಗವಾನ್ಮೋಕ್ಷದೋ ಭವೇತ್ ॥

ಅ ॥ (a) (೭) ಕೃಷ್ಣವರ್ಣವಾದ ಅನುಭವಸಿದ್ಧವಾದ ಯಾವುದೊಂದು, ತಮಃ=ಭಾವರೂಪಾಜ್ಞಾನವೋ, ಅದು ಅಜ್ಞರಿಗೇನೇ ಮನೋಹರವು. ಆ ಅಜ್ಞಾನವನ್ನು ಪೂಜ್ಯನಾದ ಪುರುಷೋತ್ತಮನು ಋಣ (ಸಾಲ) ವನ್ನೆಂಬಂತೆ ಪರಿಹರಿಸುತ್ತಾನೆ. (ಸತ್ಪುರುಷನು ಋಣ ಪರಿಹಾರದಲ್ಲಿ ಹೇಗೆ ದೀಕ್ಷಾಯುಕ್ತನೋ, ಹಾಗೆಯೇ) ಪ್ರಕಾಶಸ್ವರೂಪನಾದುದರಿಂದ ಆ ಜನಾರ್ದನನೇ 'ಉಷಾಃ' ಎಂದು ಹೇಳಲ್ಪಡುತ್ತಾನೆ. (b) (೮) ಜಯಶೀಲನಾದ ರಾಜನಿಗೋಸ್ಕರ ಸ್ತುತಿಯನ್ನೆಂಬಂತೆ, ಬ್ರಾಹ್ಮಣನಿಗೋಸ್ಕರ ಗೋವುಗಳೆನ್ನೆಂಬಂತೆ, ನಾನು ನಿನ್ನ ಸ್ತುತಿಯನ್ನು ನಿನ್ನ ಸಮೀಪದಲ್ಲಿಯೇ ಚೆನ್ನಾಗಿ ಮಾಡಿದೆನು. ನಾನು ಮಾಡಿದ ಆ ಸ್ತುತಿಯನ್ನು ಅಂಗೀಕರಿಸು. (c) 'ದ್ಯೌಃ' ಅಂದರೆ ಜ್ಞಾನವೆಂದು ಹೇಳಲ್ಪಟ್ಟಿದೆ. ಜನಾರ್ದನನು ಜ್ಞಾನದಿಂದ ಪ್ರಕಟೀಕರಿಸಿಕೊಳ್ಳಲಿಕ್ಕೆ ಅರ್ಹನಾದುದರಿಂದ 'ದುಹಿತಾ ದಿವಃ'ಎಂದು ಹೇಳಲ್ಪಡುತ್ತಾನೆ. (d) ಈ ಅಭಿಪ್ರಾಯದಿಂದಲೇ ರಾತ್ರೀಸೂಕ್ತದಿಂದ, ಪೂಜ್ಯನಾದ ಪ್ರಭುವಾದ ಶ್ರೀ ನಾರಾಯಣನು ಮುಖ್ಯವಾಗಿಯೇ ಪೂಜಿಸಲ್ಪಡುತ್ತಾನೆ. ಅಂತಹ ಹರಿಯ ಸನ್ನಿಧಾನದಿಂದ ದುರ್ಗಾದೇವಿಗೆ ಅಮುಖ್ಯವಾಗಿ ಈ ಅರ್ಥವು (ಅನೇಕಕಣ್ಣುಗಳಿಂದ ಬಹುಪ್ರಕಾರವಾದ ಜಗತ್ತನ್ನು ಕಂಡನು ಇತ್ಯಾದಿವಾಕ್ಯವು ಸರ್ವಜ್ಞತ್ವಾದಿರೂಪ ಅರ್ಥವು,) ಹೇಳಲ್ಪಟ್ಟಿದೆ. ಈ ಪ್ರಕಾರ (ಅರ್ಥಾನುಸಂಧಾನಪೂರ್ವಕವಾಗಿ) ಸ್ತುತಿಸಲ್ಪಟ್ಟ ಹಾಗೆಯೇ (ಪಾಯಸದಿಂದ) ಇಷ್ಟನಾದ ಭಗವಂತನು ಮುಕ್ತಿಯನ್ನು ಕೊಡುವವನು ಆಗುವನು.

ಭಾ॥ **(a)** ಯದಂತೀತ್ಯಾದ್ಯೃಚಃ ಸರ್ವಾ ಅಪಿ ದುಃಸ್ವಪ್ನದರ್ಶನೇ । ಜಪ್ಯಾ ಏವ ವಿಶೇಷೋಽಯಂ ಹೋಮೋ ದುಃಸ್ವಪ್ನದರ್ಶನೇ ॥ **(b)** ಪರೋಕ್ಷಜ್ಞಾನಿನೋ ವಿಷ್ಣುರಾಪರೋಕ್ಷ್ಯಂ ವ್ರಜೇತ್ತ್ವರನ್ । ಅಪರೋಕ್ಷದೃಶಃ ಪ್ರೀತಃ ಸುಖಾಧಿಕ್ಯಂ ಕರೋತ್ಯಜಃ ॥ ಮುಕ್ತಸ್ಯ **(c)** ದ್ವಿವಿಧೈಸ್ತಸ್ಮಾಜ್ಜಪೋ ಯಾಗಶ್ಚ ಸರ್ವಥಾ । ಕರ್ತವ್ಯೋ ನ್ಯಾಸಿಭೀರಾತ್ರೀಸೂಕ್ತಂ ಜಪ್ಯಂ ತ್ರಿಶೋಽಂಜಸಾ ॥ ಇತ್ಯೈತರೇಯಸಂಹಿತಾಯಾಂ ॥ ೪ ॥

ಅ ॥ (a) ('ಸ ಯದ್ಯೇಷಾಂ ಕಿಂಚಿತ್ಪಶ್ಯೇತ್ ರಾತ್ರೀಸೂಕ್ತೇನ ಪ್ರತ್ಯೃಚಂ ಹುತ್ವಾ' ಎಂದು ಹೇಳಿರುವುದರಿಂದ 'ಯದಂತಿ' ಇತ್ಯಾದಿಗಳಿಗೆ ದುಃಸ್ವಪ್ನ ಪರಿಹಾರಕತ್ವವು ಇಲ್ಲವೆಂದು ತೋರುತ್ತದೆ. ಅದನ್ನು ತಿರಸ್ಕರಿಸುತ್ತಾರೆ.) ದುಃಸ್ವಪ್ನವು ತೋರಿದರೆ 'ಯದಂತಿ ಯಚ್ಚ' ಮೊದಲಾದ ಎಲ್ಲಾ ಋಕ್ಕುಗಳು ಜಪಿಸಲ್ಪಡಬೇಕು. ದುಃಸ್ವಪ್ನವು ಕಂಡರೆ ಈ ಪಾಯಸವೇ ದ್ರವ್ಯವಾಗಿವುಳ್ಳ, ರಾತ್ರಿದೇವತೆಯೇ ದೇವತೆಯಾಗಿವುಳ್ಳ, ಈ ಹೋಮವಿಶೇಷವು ರಾತ್ರೀಸೂಕ್ತದಿಂದ ಮಾಡಲ್ಪಡಬೇಕು. (b) (ರಾತ್ರೀಸೂಕ್ತದಿಂದ ಹೋಮಿಸಲ್ಪಟ್ಟ ಪಾಯಸದಿಂದ ಇಷ್ಟನಾದ ಶ್ರೀ ಹರಿಯು ಮುಕ್ತಿಯನ್ನು ಕೊಡುತ್ತಾನೆಂದು ಹೇಳಿದುದು ಅಯುಕ್ತವು. ಜ್ಞಾನವೇ ಮುಕ್ತಿಗೆ ಕಾರಣವಾದುದರಿಂದ. ಜ್ಞಾನದ್ವಾರಾ ಎಂದು ಹೇಳುವುದಾದರೆ ಇತರ ವಿದ್ಯೆಗಳಿಗೂ ಸಮಾನವೇ, ಈ ಸೂಕ್ತಕ್ಕೆಮಾತ್ರ ಏನು ವಿಶೇಷವು. ಎಂದರೆ) ಪರೋಕ್ಷಜ್ಞಾನಿಗೆ ಶ್ರೀ ಹರಿಯು ಶೀಘ್ರದಲ್ಲಿ ಪ್ರತ್ಯಕ್ಷತ್ವವನ್ನು ಕೊಡುತ್ತಾನೆ. (ಅಂತೂ ಶೀಘ್ರದಲ್ಲಿ ಅಪರೋಕ್ಷಾದಿಗಳಿಗೆ ಕಾರಣೀಭೂತವಾದುದರಿಂದ ಈ ಸೂಕ್ತಕ್ಕೇನೇ ವಿಶೇಷವು.) ಅಪರೋಕ್ಷಜ್ಞಾನಿಗೆ ಪ್ರೀತನಾಗಿ ಉತ್ಪತ್ತಿಶೂನ್ಯನಾದ ಶ್ರೀ ಹರಿಯು ಮುಕ್ತನಿಗೆ ಸುಖಾಧಿಕ್ಯವನ್ನು ಮಾಡುತ್ತಾನೆ. (c) ಆದುದರಿಂದ ಪರೋಕ್ಷಾಪರೋಕ್ಷ ಜ್ಞಾನಿಗಳಿಬ್ಬರಿಂದಲೂ ಸರ್ವಪ್ರಕಾರದಿಂದಲೂ ಜಪವೂ ಯಾಗವೂ ಕೂಡ ಮಾಡಲ್ಪಡತಕ್ಕುದು. ಸನ್ಯಾಸಿಗಳಿಂದ ಚೆನ್ನಾಗಿ ಮೂರಾವರ್ತಿ ರಾತ್ರೀಸೂಕ್ತವು ಜಪಿಸಲ್ಪಡಬೇಕು. ಎಂದು ಐತರೇಯ ಸಂಹಿತೆಯಲ್ಲಿ ಅದೆ. ॥ ೪ ॥

ಮಂ ॥ ಅಥ ಖಲ್ವಿಯಂ ಸರ್ವಸ್ಯೈ ವಾಚ ಉಪನಿಷತ್ಸರ್ವಾ ಹ್ಯೇವೇಮಾಃ ಸರ್ವಸ್ಯೈ ವಾಚ ಉಪನಿಷದ ಇಮಾಂ ತ್ವೇವಾಚಕ್ಷತೇ ಪೃಥಿವ್ಯಾ ರೂಪಂ ಸ್ಪರ್ಶಾ ಅಂತರಿಕ್ಷಸ್ಯೋಷ್ಮಾಣೋ ದಿವಃ ಸ್ವರಾ ಅಗ್ನೇ ರೂಪಂ ಸ್ಪರ್ಶಾ ವಾಯೋರೂಷ್ಮಾಣ ಆದಿತ್ಯಸ್ಯ ಸ್ವರಾ ಋಗ್ವೇದಸ್ಯ ರೂಪಂ ಸ್ಪರ್ಶಾ ಯಜುರ್ವೇದಸ್ಯೋಷ್ಮಾಣಃ ಸಾಮವೇದಸ್ಯ ಸ್ವರಾ ಶ್ಚಕ್ಷುಷೋ ರೂಪಂ ಸ್ಪರ್ಶಾಃ ಶ್ರೋತ್ರಸ್ಯೋಷ್ಮಾಣೋ ಮನಸಃ ಸ್ವರಾಃ ಪ್ರಾಣಸ್ಯ ರೂಪಂ ಸ್ಪರ್ಶಾ ಅಪಾನಸ್ಯೋಷ್ಮಾಣೋ ವ್ಯಾನಸ್ಯ ಸ್ವರಾ ಅಥ ಖಲ್ವಿಯಂ ದೈವೀ ವೀಣಾ ಭವತಿ ತದನುಕೃತಿರಸೌ ಮಾನುಷೀ ವೀಣಾ ಭವತಿ ಯಥಾಽಸ್ಯಾಃ ಶಿರ ಏವಮಮುಷ್ಯಾಃ ಶಿರೋ ಯಥಾಽಸ್ಯಾ ಉದರಮೇವಮಮುಷ್ಯಾ ಅಂಭಣಂ ಯಥಾಽ ಸ್ಯೈ ಜಿಹ್ವೈವಮಮುಷ್ಯೈ ವಾದನಂ ಯಥಾಽಸ್ಯಾಸ್ತಂತ್ರಯ ಏವಮ ಮುಷ್ಯಾ ಅಂಗುಲಯೋ ಯಥಾಽಸ್ಯಾಃ ಸ್ವರಾ ಏವಮಮುಷ್ಯಾಃ ಸ್ವರಾ ಯಥಾಽಸ್ಯಾಃ ಸ್ಪರ್ಶಾ ಏವಮಮುಷ್ಯಾಃ ಸ್ಪರ್ಶಾ ಯಥಾ ಹ್ಯೇವೇಯಂ ಶಬ್ದವತೀ ತರ್ದ್ಮವತ್ಯೇವಮಸೌ ಶಬ್ದವತೀ ತರ್ದ್ಮವತೀ ಯಥಾ ಹ್ಯೇವೇಯಂ ಲೋಮಶೇನ ಚರ್ಮಣಾಽಪಿಹಿತಾ ಭವತ್ಯೇವಮಸೌ ಲೋಮಶೇನ ಚರ್ಮಣಾಽಪಿಹಿತಾ ಲೋಮಶೇನ ಹ ಸ್ಮ ವೈ ಚರ್ಮಣಾ ಪುರಾ ವೀಣಾ ಅಪಿದಧತಿ ಸ ಯೋ ಹೈತಾಂ ದೈವೀಂ ವೀಣಾಂ ವೇದ ಶ್ರುತವದನೋ ಭವತಿ ಭೂಮಿ ಪ್ರಾಸ್ಯ ಕೀರ್ತಿರ್ಭವತಿ ಯತ್ರ ಕ್ವ ಚಾಽರ್ಯಾ ವಾಚೋ ಭಾಷಂತೇ ವಿದುರೇನಂ ತತ್ರಾಥಾತೋ ವಾಗ್ರಸೋ ಯಸ್ಯಾಂ ಸಂಸದ್ಯಧೀಯಾ ನೋ ವಾ ಭಾಷಮಾಣೋ ವಾ ನ ವಿರುರುಚಿಷೇತ ತತ್ರೈತಾಮೃಚಂ ಜಪೇದೋಷ್ಠಾಪಿಧಾನಾ ನಕುಲೀ ದಂತೈಃ ಪರಿವೃತಾ ಪವಿಃ ಸರ್ವಸ್ಯೈ ವಾಚ ಈಶಾನಾ ಚಾರು ಮಾಮಿಹ ವಾದಯೇದಿತಿ ವಾಗ್ರಸಃ ॥ ೫ ॥

ಅ ॥ ಅಥ=ಅನಂತರದಲ್ಲಿ, ಸರ್ವಸ್ಯೈ ವಾಚೇ=ಎಲ್ಲಾ ವಚನಗಳ, ಉಪನಿಷತ್= ರಹಸ್ಯರೂಪವಾದ, ಇಯಂ ಖಲು=(ಎಲ್ಲಾ ವಚನಗಳೂ ವಿಷ್ಣುಶಬ್ದಾರ್ಥ ಪ್ರತಿಪಾದಕಗಳಾ ದುದರಿಂದ) ಲೌಕಿಕ ವೈದಿಕ ಸರ್ವವಾಗ್ವಿಷಯಕವಾದ ವಿದ್ಯೆಯು, (ಹೇಳಲ್ಪಡುತ್ತದೆ.) ಯದ್ಯಪಿ, ಸರ್ವಾ ಹಿ ಏವ ಇಮಾಃ=ಪೂರ್ವೋಕ್ತ ವಿದ್ಯೆಗಳೆಲ್ಲವೂ (ವಿಷ್ಣುಶಬ್ದಾರ್ಥ ಪ್ರತಿಪಾದಕ ಗಳಾದುದರಿಂದ) ಸರ್ವಸ್ಯೈ ವಾಚೇ=ಎಲ್ಲಾ ವಚನಗಳ, ಉಪನಿಷದಃ=ರಹಸ್ಯಗಳೇ, (ಆದರೂ ಅವುಗಳಕ್ಕಿಂತಲೂ ಮುಖ್ಯವಾಗಿಯೇ ಸರ್ವವಾಗ್ವಿಷಯಕವಾದುದರಿಂದ) ಇಮಾಂ ತ್ವೇವ=ಈ ಮೇಲೆ ಹೇಳುವ ವಿದ್ಯೆಯನ್ನೇ, (ಎಲ್ಲಾ ವಚನಗಳ ರಹಸ್ಯವೆಂದು ಎಲ್ಲಾ ಜ್ಞಾನಿ ಗಳೂ) ಆಚಕ್ಷತೇ=ಹೇಳುತ್ತಾರೆ. ಪೃಥಿವ್ಯಾಃ ರೂಪಂ=ಪೃಥಿವಿಯಲ್ಲಿರತಕ್ಕ ವಿಷ್ಣುವಿನ ಪೃಥಿವೀನಾಮಕರೂಪವು, ಸ್ಪರ್ಶಾಃ=ಸ್ಪರ್ಶಾಕ್ಷರಪ್ರತಿಪಾದ್ಯವು. ಅಂತರಿಕ್ಷಸ್ಯ=ಅಂತರಿಕ್ಷ ದಲ್ಲಿರತಕ್ಕ ವಿಷ್ಣುವಿನ ಅಂತರಿಕ್ಷನಾಮಕರೂಪವು, ಊಷ್ಮಾಣಃ=(ಶಷಸಹ ಎಂಬ) ಊಷ್ಮಾ ಕ್ಷರಪ್ರತಿಪಾದ್ಯವು. ದಿವಃ=ದ್ಯುಲೋಕದಲ್ಲಿದ್ದ ವಿಷ್ಣುವಿನ ದ್ಯುನಾಮಕರೂಪವು, ಸ್ವರಾಃ=

ಸ್ವರಾಕ್ಷರಪ್ರತಿಪಾದ್ಯವು. ಅಗ್ನೇಃ ರೂಪಂ=ಅಗ್ನಿಯಲ್ಲಿರತಕ್ಕ ಶ್ರೀ ಹರಿಯ ಅಗ್ನಿನಾಮಕ ರೂಪವು, ಸ್ಪರ್ಶಾಃ=ಸ್ಪರ್ಶಾಕ್ಷರಪ್ರತಿಪಾದ್ಯವು. (ಮೇಲೆಯೂ ಇದೇ ರೀತಿಯಾಗಿ ವ್ಯಾಖ್ಯಾನ ಮಾಡತಕ್ಕದು.) ವಾಯೋಃ ಊಷ್ಮಾಣಃ, ಆದಿತ್ಯಸ್ಯ ಸ್ವರಾಃ, ಋಗ್ವೇದಸ್ಯ ರೂಪಂ ಸ್ಪರ್ಶಾಃ ಯಜುರ್ವೇದಸ್ಯ ಊಷ್ಮಾಣಃ, ಸಾಮವೇದಸ್ಯ ಸ್ವರಾಃ, ಚಕ್ಷುಷೋ ರೂಪಂ ಸ್ಪರ್ಶಾಃ, ಶ್ರೋತ್ರಸ್ಯೋಷ್ಮಾಣಃ, ಮನಸಃ ಸ್ವರಾಃ, ಪ್ರಾಣಸ್ಯ ರೂಪಂ ಸ್ಪರ್ಶಾಃ, ಅಪಾನಸ್ಯ ಊಷ್ಮಾಣಃ, ವ್ಯಾನಸ್ಯ ಸ್ವರಾಃ, (ಈಪ್ರಕಾರ ಅಧಿಲೋಕ, ಅಧಿದೈವ, ಅಧಿವೇದ, ಅಧೀಂದ್ರಿಯ, ಅಧಿಪ್ರಾಣ ಐದುವಿಧಗಳಾದ ಪೃಥಿವ್ಯಾದಿನಾಮಕ ಮೂರುರೂಪಗಳು ಸ್ಪರ್ಶಾದ್ಯಕ್ಷರಗಳಿಗೆ ದೇವತೆಗಳೆಂದು ತಿಳಿಯಲ್ಪಡಬೇಕು.) ಅಥ ಖಲು=ಇನ್ನುಮೇಲೆ, (ಬೇರೆ ವಿದ್ಯೆಯು ಹೇಳಲ್ಪಡುತ್ತದೆ.) ಇಯಂ=ಬ್ರಹ್ಮಾದಿಗಳ ಶರೀರವು, ದೈವೀ ವೀಣಾ ಭವತಿ=(ಪರಮಾತ್ಮನ ಗುಣಗಳಗಾನಕ್ಕೆ ಕಾರಣೀಭೂತವಾದುದರಿಂದ) ಕ್ರೀಡಾದಿಗುಣವಿಶಿಷ್ಟನಾದ ಶ್ರೀ ವಿಷ್ಣುವಿನ ಸಂಬಂಧಿಯಾದ ವೀಣೆಯು ಆಗುತ್ತದೆ. ಅಸೌ ಮಾನುಷೀ ವೀಣಾ=ಈ ಲೋಕಸಿದ್ಧವಾದ ಮನುಷ್ಯಸಂಬಂಧಿಯಾದ ವೀಣೆಯು, ತದನುಕೃತಿಃ=ಆ ದೈವೀವೀಣೆಯನ್ನು ಅನುಕರಣಮಾಡುತ್ತಾ ಅದರ ಸಾದೃಶ್ಯವುಳ್ಳದ್ದು, ಭವತಿ=ಆಗುತ್ತದೆ. ಯಥಾ=ಹೇಗೆ, ಅಸ್ಯಾಃ ಶಿರಃ=ದೈವೀವೀಣೆಯ ಶಿರಸ್ಸೋ, ಏವಂ ಅಮುಷ್ಯಾಃ ಶಿರಃ=ಮಾನುಷ ವೀಣೆಯ ಶಿರಸ್ಸು, (ಶಿಖರವು) ಯಥಾ=ಹೇಗೆ, ಅಸ್ಯಾಃ=ದೈವೀವೀಣೆಯ, ಉದರಂ=ಹೊಟ್ಟೆಯೋ, ಏವಂ=ಹೀಗೆ, ಅಮುಷ್ಯಾಃ=ಮನುಷ್ಯವೀಣೆಯ, ಅಂಭಣಂ=ಉದರತುಲ್ಯವಾದ ಮಧ್ಯಭಾಗವು. ('ಅಭಿರಭಿಶಬ್ದೇ' ಅಧಿಕರಣೇ ಲ್ಯುಟ್ ಶಬ್ದೋತ್ಪತ್ತಿಸ್ಥಾನವು ಅಧೋಭಾಗದಲ್ಲಿರತಕ್ಕದು, ಒಳಗೆ ಅವಕಾಶಯುಕ್ತವಾದುದು. ದೊಡ್ಡ ಅವಯವವುಳ್ಳದ್ದು.) ಯಥಾ=ಹೇಗೆ, ಅಸ್ಯೈ=ದೈವೀವೀಣೆಗೆ, ಜಿಹ್ವಾ=ನಾಲಿಗೆಯೋ, ಏವಂ=ಹೀಗೆ, ಅಮುಷ್ಯೈ=ಮನುಷ್ಯವೀಣೆಗೆ, ವಾದನಂ=ಶಲಾಕೆಯು. ಅಂದರೆ ಮೇಲಿನ ಭಾಗದಲ್ಲಿದ್ದ ಅವಯವವಿಶೇಷವು. ಯಥಾ=ಹೇಗೆ, ಅಸ್ಯಾಃ=ದೈವೀವೀಣೆಯ, ಅಂಗುಲಯಃ=ಬೆರಳುಗಳೋ, ಏವಂ=ಹೀಗೆ, ಅಮುಷ್ಯಾಃ=ಮನುಷ್ಯವೀಣೆಗೆ, ತಂತ್ರಯಃ=ತಂತಿಗಳೋ, ಯಥಾ=ಹೇಗೆ, ಅಸ್ಯಾಃ ದೈವೀವೀಣೆಗೆ, ಸ್ವರಾಃ=ಅಜ್ವರ್ಣಗಳೋ, ಯಾ ಉದಾತ್ತಾದಿಗಳೋ, ಏವಂ ಅಮುಷ್ಯಾಃ ಸ್ವರಾಃ=ಷಡ್ಜಮಧ್ಯಮಾದಿಸ್ವರಗಳು. ಯಾ ಅಜ್ವರ್ಣವ್ಯಂಜಕಗಳಾದ ಧ್ವನಿವಿಶೇಷಗಳು. ಅಥವಾ ಉದಾತ್ತಾದಿವ್ಯಂಜಕಗಳಾದ ಧ್ವನಿವಿಶೇಷಗಳು. ಯಥಾ ಅಸ್ಯಾಃ ಸ್ಪರ್ಶಾಃ=ಸ್ಪರ್ಶಯೋಗ್ಯಗಳಾದ ಅವಯವವಿಶೇಷಗಳೋ, ಏವಂ ಅಮುಷ್ಯಾಃ ಸ್ಪರ್ಶಾಃ……ಯಥಾ ಹಿ ಏವ=ಹೇಗೆ ತಾನೇ, ಇಯಂ=ದೇವವೀಣೆಯು, ಶಬ್ದವತೀ=ಧ್ವನಿಯುಳ್ಳದ್ದೋ, ತರ್ದ್ಮವತೀ=ಕರ್ಣಪೀಡನ ಮೊದಲಾದ ಹಿಂಸೆಯುಳ್ಳದ್ದೋ, ಏವಂ ಅಸೌ ಶಬ್ದವತೀ ತರ್ದ್ಮವತೀ ……ಯಥಾ ಹಿ ಏವ ಇಯಂ=ಲೋಮಶೇನ ಚರ್ಮಣಾ=ರೋಮಯುಕ್ತವಾದ ಚರ್ಮದಿಂದ, ಅಪಿಹಿತಾ ಭವತಿ=ಆಚ್ಛಾದಿತವಾಗುತ್ತದೋ, ಏವಂ ಅಸೌ ಲೋಮಶೇನ ಚರ್ಮಣಾ ಅಪಿಹಿತಾ……ಲೋಮಶೇನ ಚರ್ಮಣಾ=ರುರು (ಜಿಂಕೆ) ಮೊದಲಾದವುಗಳ ಚರ್ಮದಿಂದಲೇ, ಪುರಾ=ಬಾರಿಸುವುದಕ್ಕಿಂತ ಮುಂಚೆಯೂ (ಮೇಲೆಯೂ) ವೀಣಾಃ=ವೀಣೆಗಳನ್ನು, (ಬಾರಿಸುವವರು ಅವುಗಳ ರಕ್ಷಣೆಗಾಗಿ) ಅಪಿದಧತಿ=ಆಚ್ಛಾದಿಸುತ್ತಾರೆ. ಯಃ=ಯಾವ ಪುರುಷನು, ಏತಾಂ ದೈವೀ ವೀಣಾಂ ವೇದ=ಬ್ರಹ್ಮಾದಿಗಳ ಶರೀರಗಳನ್ನು ವಿಷ್ಣುವಿನ ವೀಣೆಯೆಂದು, ಭಕ್ತಿಯಿಂದ ತಿಳಿಯುತ್ತಾನೋ, ಸಃ ಶ್ರುತವದನಃ ಭವತಿ=ಆತನು ಅಧ್ಯಯನ ಮಾಡಲ್ಪಟ್ಟ ಶಾಸ್ತ್ರವು ಮುಖದಲ್ಲಿ ಉಳ್ಳವನಾಗುತ್ತಾನೆ. (ಅಂದರೆ ವಿದ್ಯೆಯಿಂದ ಪರಿಪೂರ್ಣವಾದ ಮುಖವುಳ್ಳವನಾಗುತ್ತಾನೆ.) ಭೂಮಿಪ್ರಾಸ್ಯ ಕೀರ್ತಿಃ ಭವತಿ=ಭೂಮಿಯಲ್ಲಿ ವ್ಯಾಪಿಸಿಕೊಂಡಿರುವ ಯಶಸ್ಸುಳ್ಳವನು ಆಗುತ್ತಾನೆ. ಅಥವಾ, ಅಸ್ಯ=ಇವನ, ಕೀರ್ತಿಃ=ಯಶಸ್ಸು,

ಭೂಮಿಸ್ಪಾ=ಭೂಮಿಯಲ್ಲಿ ಪೂರ್ಣವಾದುದು, ಭವತಿ=ಆಗುತ್ತದೆ. ಆರ್ಯಾಃ=ಜ್ಞಾನ ವೃದ್ಧರು, ಯತ್ರ ಕ್ವಚ=ಯಾವುದಾದರೂ ಸಭೆಯಲ್ಲಿ, ವಾಚೋ ಭಾಷಂತೇ=ವಾಗ್ವ್ಯವಹಾರ ವನ್ನು ಮಾಡುತ್ತಾರೋ, ತತ್ರ=ಆ ಸಭೆಯಲ್ಲಿ ಅವರ ಮಧ್ಯದಲ್ಲಿ, ಏನಂ ವಿದುಃ=ಈತನನ್ನು ಎಣಿಕೆಮಾಡುತ್ತಾರೆ. (ನಿಯಮವಾಗಿ ಹೊಗಳುತ್ತಾರೆ.) ಅಥ=ಮೇಲೆ, (ಪ್ರಸಂಗಸಂಗತಿ ಯಿಂದ ವಿದ್ಯೆಯ ಆಧಿಕ್ಯಸಂಪಾದನೆಗಾಗಿ, ಜಪಿಸತಕ್ಕ ಮಂತ್ರದ ನಿರೂಪಣವನ್ನು ಪ್ರತಿಜ್ಞಾ ಮಾಡುತ್ತಾರೆ) ವಾಗ್ರಸಃ=ವಚನಗಳ ಸಾರಭೂತವಾದ ಮಂತ್ರವಿಶೇಷವು, (ಹೇಳಲ್ಪಡುತ್ತದೆ.) ಯಸ್ಯಾಂ ಸಂಸದಿ=ಯಾವ ಸಭೆಯಲ್ಲಿ, ಅಧೀಯಾನೋ ವಾ ಭಾಷಮಾಣೋ ವಾ=ವ್ಯಾಖ್ಯಾನ ಮಾಡುವವನಾಗಲೀ, ಕಥೆಯನ್ನು ಮಾಡುವವನಾಗಲೀ, ನ ವಿರುರುಚಿಷೇತ=ಸಭಿಕರಿಗೆ ಪ್ರೀತಿ ಪಾತ್ರನಾಗುವುದಿಲ್ಲವೋ, ತತ್ರ=ಅಂತಹ ಸಭೆಯಲ್ಲಿಯೂ, ತೇಜಸ್ವಿನ ಪ್ರಾಪ್ತಿಗಾಗಿ, ಏತಾಂ ಋಚಂ ಜಪೇತ್=ಈ ಮೇಲೆ ಹೇಳುವ ಋಕ್ಕನ್ನು ಜಪಿಸತಕ್ಕುದು. ಓಷ್ಠಾಪಿಧಾನಾ ನ=ಔಡು ಗಳು (ತುಟಿಗಳು) ಆಚ್ಛಾದನೆಮಾಡತಕ್ಕ ವಸ್ತ್ರಗಳಂತೆಯೇ ಯಾರಿಗೆ ಇವೆಯೋ ಅವಳು ಓಷ್ಠಾಪಿಧಾನಾನ ಎನ್ನಿಸುತ್ತಾಳೆ. ಅಥವಾ ವಿಷ್ಣ್ವಾಖ್ಯದೇವತೆಗೆ ತುಟಿಗಳೆರಡು ಎರಡು ಕವಾಟಗಳಂತಿವೆಯೋ, ಕುಲೀ=ಅಡಗಿದ ಎಲ್ಲಾ ಕಶ್ಮಲವುಳ್ಳ, ದಂತೈಃ ಪರಿವೃತಾ=ದಂತಾಭಿ ಮಾನಿದೇವತೆಗಳಿಂದ ಯುಕ್ತವಾದ, ಪವಿಃ=ಸಮಸ್ತವನ್ನು ರಕ್ಷಿಸುವ, ಸರ್ವವಸ್ತುವಿನಿಂದಲೂ ಉತ್ತಮವಾದ, ಸರ್ವಸ್ಯೈ ವಾಚೇ ಈಶಾನಾ=ಎಲ್ಲಾ ವಚನಗಳಿಗೂ ನಿಯಾಮಕವಾದ, ವಾಕ್ ನಾಮಕವಾದ ಭಗವನ್ಮೂರ್ತಿಯು, ಚಾರು=ಸರ್ವರಿಗೂ ಮನೋರಂಜಕವಾಗುವಂತೆ, ಮಾಂ=ನನ್ನನ್ನು, ಇಹ=ಈ ಸಭೆಯಲ್ಲಿ, ವಾದಯೇತ್=ಹೇಳಿಸತಕ್ಕುದು. ಇತಿ=ಈ ಪ್ರಕಾರ ಈ ಋಕ್ಕು, ವಾಗ್ರಸಃ=ಎಲ್ಲಾ ವಚನಗಳ ಸಾರಭೂತವಾದುದು. ॥ ೫ ॥

ಭಾ॥ **(a)** ಅಥ ಸರ್ವವಾಗ್ವಿಷಯಾ ವಿದ್ಯೋಚ್ಯತೇ । ವಿಷ್ಣುಶಬ್ದಾರ್ಥತ್ವಾತ್ಸ ರ್ವವಾಚಾಂ ॥ ಪೂರ್ವೋಕ್ತಾ ಅಪಿ ಸರ್ವವಾಗುಪನಿಷದ ಏವ । ತಥಾಽಪಿ ಮುಖ್ಯತ ಏವ ಸರ್ವವಾಗ್ವಿಷಯತ್ವಾದ್ವಕ್ಷ್ಯಮಾಣಾಮೇವ ಸರ್ವಸ್ಯೈ ವಾಚ ಉಪನಿಷದಿತಿ ಸರ್ವೇಽಪ್ಯಾಚಕ್ಷತೇ ॥ **(b)** ಪೃಥಿವ್ಯಾದಿ ಸ್ಥಿತೋ ವಿಷ್ಣುಃ ಪೃಥಿವ್ಯಾದ್ಯಭಿಧಾನವಾನ್ । ಸ್ಪರ್ಶಾದೀನಾಂ ದೇವತಾಽ ಸೌ ಕ್ರಮೇಣೈವ ಪ್ರಕೀರ್ತಿತಃ ॥ **(c)** ತಸ್ಯ ವಿಷ್ಣೋರಯಂ ದೇಹೋ ವೀಣಾ ಸಾಕ್ಷಾತ್ಪ್ರಕೀರ್ತಿತಾ । ದೈವೀ ವೀಣಾ ತತಃ ಸೇಽಯಂ ಲೋಕ ಸಿದ್ಧಾ ತು ಮಾನುಷೀ ॥ **(d)** ಬ್ರಹ್ಮಾದಿದೇಹಾನ್ಯೋ ವೇದ ವಿಷ್ಣೋ ರ್ವೀಣೇತಿ ಭಕ್ತಿತಃ । ವಿದ್ಯಾಪೂರ್ಣಸುಖಃ ಸ ಸ್ಯಾದ್ಭೂಮಿಪೂರಿತ ಕೀರ್ತಿಮಾನ್ ॥

ಅ ॥ (a) ಇನ್ನು ಮೇಲೆ ಎಲ್ಲಾ ವಚನಗಳೇ ವಿಷಯವಾಗಿವುಳ್ಳ ವಿದ್ಯೆಯು ಹೇಳ ಲ್ಪಡುತ್ತದೆ. ಎಲ್ಲಾ ವಚನಗಳಿಗೂ ವಿಷ್ಣುಶಬ್ದಾರ್ಥಪ್ರತಿಪಾದಕತ್ವ ವಿದ್ದುದರಿಂದ ಅಪಿ= ಯದ್ಯಪಿ, ಪೂರ್ವದಲ್ಲಿ ಹೇಳಲ್ಪಟ್ಟ ವಿದ್ಯೆಗಳೂ, ಎಲ್ಲಾ ವಚನಗಳ ರಹಸ್ಯರೂಪಗಳೇವೆ, ಆದರೂ ಅವುಗಳಕ್ಕಿಂತ ಮುಖ್ಯವಾಗಿಯೇ ಎಲ್ಲಾ ವಚನಗಳೇವೇ ವಿಷಯವಾಗಿವುಳ್ಳವುಗಳು ಆದುದರಿಂದ, ಮೇಲೆ ಹೇಳತಕ್ಕುದನ್ನೇ ಎಲ್ಲಾ ವೇದವಚನಗಳ ರಹಸ್ಯವೆಂದು ಎಲ್ಲಾ ಜ್ಞಾನಿ ಗಳೂ ಹೇಳುತ್ತಾರೆ. (b) ಪೃಥಿವ್ಯಾದಿಗಳಲ್ಲಿರತಕ್ಕ ಶ್ರೀ ಹರಿಯು ಪೃಥಿವಿ ಮೊದಲಾದ ನಾಮ ಧೇಯಗಳುಳ್ಳವನು. ಈತನು ಕ್ರಮದಿಂದಲೇ ಸ್ಪರ್ಶಾದ್ಯಕ್ಷರಗಳಿಗೆ ದೇವತೆಯಾಗಿ ಹೇಳಲ್ಪಡು

ತ್ತಾನೆ. (c) ಈ (ಬ್ರಹ್ಮಾದಿಗಳ) ಶರೀರವು ವಿಷ್ಣುವಿಗೆ ವೀಣಾಸ್ಥಾನೀಯವು. ಆದುದರಿಂದ ದೇಹಾಖ್ಯವಾದುದು, ಮುಖ್ಯವಾಗಿ ದೈವೀವೀಣೆಯಾಗಿ ಹೇಳಲ್ಪಡುತ್ತದೆ. ಆ ಈ ಲೋಕ ಪ್ರಸಿದ್ಧವಾದ ವೀಣೆಯಾದರೂ ಮನುಷ್ಯರ ಸಂಬಂಧಿಯಾದುದು. (d) ಯಾವಾತನು ಬ್ರಹ್ಮಾದಿಗಳ ಶರೀರಗಳನ್ನು ವಿಷ್ಣುವಿನ ವೀಣೆಯೆಂದು ಭಕ್ತಿಯಿಂದ ತಿಳಿಯುತ್ತಾನೋ, ಆತನು ವಿದ್ಯೆಯಿಂದ ಪರಿಪೂರ್ಣವಾದ ಸುಖಗಳುಳ್ಳವನೂ ಭೂಮಿಯಲ್ಲಿ ತುಂಬಿದ ಯಶಸ್ಸುಳ್ಳವನೂ ಆಗುವನು.

ಭಾ|| **(a)** ವಿದ್ಯಾಧಿಕ್ಯಾರ್ಥಮೇವೈತಾಂ ವಾಕ್ಸಾರಾಮೃಚಂ ಜಪೇತ್ | ಧ್ಯಾತ್ವಾ ನಾರಾಯಣಂ ದೇವಂ ಸ್ತ್ರೀರೂಪಂ ವಾಚಿ ಸಂಸ್ಥಿತಂ || **(b)** ಓಷ್ಠಾಪಿಧಾನೇತ್ಯೇಷಾ ಹ್ಯೃಕ್ಸಾರೋ ವಾಚಃ ಪ್ರಕೀರ್ತಿತಃ| ವಿಷ್ಣೋರ್ಹಿ ವಾಚಿ ಸಂಸ್ಥಸ್ಯೈವೋಷ್ಠಾವೇತೌ ಪಿಧಾನವತ್ || **(c)** ಕುಲೀತಿ ಚೋಕ್ತೋ ಭಗವಾನ್ಪ್ರಲೀನಾಶೇಷಕುತ್ಸಿತಃ | ಪಾತಿ ಸರ್ವಂ ವಿಶಿಷ್ಟಶ್ಚ ಸರ್ವಸ್ಮಾದಿತ್ಯತಃ ಪವಿಃ || ಸರ್ವವಾಗೀಶ್ವರೋ ವಿಷ್ಣುಃ ಸ್ತ್ರೀರೂಪೋ ಮಾಂ ಸುವಾದಯೇತ್ | ಇತಿ ಚ || **(d)** ನೇತ್ಯುಪಮಾನಾರ್ಥಂ | ಓಷ್ಠಾವಪಿಧಾನವದಸ್ಯೇತಿ || ನ ಚ ವಿಷ್ಣೋರನ್ಯಾ ಸರ್ವಸ್ಯಾ ವಾಚ ಈಶಾನಾ | ಸ ಹಿ ಮುಖ್ಯತಃ ಸರ್ವೇಶ್ವರಃ || ತಸ್ಯೈವ ಪ್ರಸ್ತುತತ್ವಾದ್ವಕ್ಷ್ಯಮಾಣತ್ವಾಚ್ಚ | **(e)** ಶ್ರಿಯಃ ಪತಿರ್ಯಜ್ಞಪತಿರ್ಜಗತ್ಪತಿರ್ಗಿರಾಂಪತಿರ್ಲೋಕಪತಿರ್ಧರಾಪತಿರಿತಿ ಭಾಗವತೇ || ಯೋ ವಾಚಿ ತಿಷ್ಠನ್ವಾಚೋಽಂತರೋ ಯಂ ವಾಙ್ನ ವೇದೇತ್ಯಾದಿ ಶ್ರುತಿಶ್ಚ | ಸ್ತ್ರೀಲಿಂಗತ್ವಂ ದೇವತೇತ್ಯಾದಿವದಪಿ ಯುಜ್ಯತೇ | ಸ್ತ್ರೀರೂಪತ್ವಾಚ್ಚ || ೫ ||

ಅ || (a) ವಿದ್ಯೆಯು ಅಧಿಕಸಂಪಾದನೆಯಾಗುವುದಕ್ಕೋಸ್ಕರವೇ ಸರ್ವವಾಕ್ಕುಗಳಲ್ಲಿ ಅತಿಶ್ರೇಷ್ಠವಾದ ಈ ಋಕ್ಕನ್ನೂ ಕೂಡ, ಸ್ತ್ರೀರೂಪವುಳ್ಳವನೂ ವಾಗಿಂದ್ರಿಯದಲ್ಲಿರತಕ್ಕವನೂ ಆದ ನಾರಾಯಣದೇವರನ್ನು ಧ್ಯಾನಮಾಡಿಕೊಂಡು ಜಪಿಸತಕ್ಕುದು. (b) 'ಓಷ್ಠಾಪಿಧಾನಾ' ಎಂಬೀ ಋಕ್ಕು ವಾಕ್ಸಾರವಾಗಿ ಹೇಳಲ್ಪಟ್ಟದೆ. ವಾಗಿಂದ್ರಿಯದಲ್ಲಿರತಕ್ಕ ವಿಷ್ಣುವಿಗಾದರೂ ಈ ಓಷ್ಠಗಳು (ಔಡು, ತುಟಿ) ಆಚ್ಛಾದನೆಮಾಡತಕ್ಕ ವಸ್ತ್ರಗಳಂತಿವೆ. (c) ಪೂಜ್ಯನಾದ ಶ್ರೀ ಹರಿಯು ಚೆನ್ನಾಗಿ ಅಡಗಿದ ಸರ್ವ ಕಶ್ಮಲಗಳು ಉಳ್ಳವನಾಗಿ ಅಂದರೆ ಕಶ್ಮಲಸಂಪರ್ಕವೇ ಯಾವಾಗಲೂ ಇಲ್ಲದಿರುವವನಾಗಿ ಕುಲೀ ಎಂದೂ ಹೇಳಲ್ಪಡುತ್ತಾನೆ. ಸರ್ವರನ್ನೂ ರಕ್ಷಿಸುತ್ತಾನೆ. ಎಲ್ಲರಿಂದಲೂ ಉತ್ತಮನಾಗಿದ್ದಾನೆ. ಆದುದರಿಂದ 'ಪವಿಃ' ಎನ್ನಿಸುತ್ತಾನೆ. ಎಲ್ಲಾ ವಚನಗಳಿಗೂ ನಿಯಾಮಕನಾದ ಸ್ತ್ರೀರೂಪನಾದ ವಿಷ್ಣುವು ನನ್ನನ್ನು ಚೆನ್ನಾಗಿ ಹೇಳಿಸಲಿ ಹೀಗೂ ಅದೆ. (d) ನ ಎಂಬುವುದು ಉಪಮಾರ್ಥಕವು. ಇವನಿಗೆ ತುಟಿಗಳು ಆಚ್ಛಾದನೆ ವಸ್ತ್ರಗಳಂತೆ ಎಂದು ವಿಷ್ಣುವಿನಿಂದ ಇತರಳಾದ ಸರಸ್ವತಿಯೂ ಕೂಡ ಎಲ್ಲಾ ವಚನಗಳಿಗೆ ನಿಯಾಮಕಳಲ್ಲ. ಆಹರಿಯೇ ಮುಖ್ಯವಾಗಿ ಎಲ್ಲರಿಗೂ ನಿಯಾಮಕನು. ಆತನಿಗೇನೇ ಪ್ರಸ್ತುತಿ (ಹಿಂದೆ ಪ್ರಸ್ತಾವ) ಯಿದ್ದುದರಿಂದಲೂ ಮೇಲೆಹೇಳಲ್ಪಡುವುದರಿಂದಲೂ, (ಅಂದರೆ ಈ ಉಪನಿಷತ್ತಿನಲ್ಲಿ 'ಏತದ್ವೈ ಬ್ರಹ್ಮೈತತ್ಸತ್ಯಂ' ಎಂದು ಪರಬ್ರಹ್ಮನನ್ನೇ ಉಪಕ್ರಮಿಸಿರುವುದರಿಂದಲೂ, 'ಏತಸ್ಯೈ ಸಂಹಿತಾಯೈ ಣಕಾರೋ ಬಲಂ' ಎಂದು ವಿಷ್ಣುನಾಮವನ್ನು ವಾಖ್ಯಾನಮಾಡಿ ಉಪಸಂಹಾರ ಮಾಡಿ

ರುವುದರಿಂದಲೂ, ಈ ಖಂಡದಲ್ಲಿ ಹೇಳಿದ ಋಕ್ಕೂ ಕೂಡ ಭಗವದ್ವಿಷಯಕವೇ ಆಗಬೇಕು. ಇತರ ವಿಷಯಕವೆಂದು ಹೇಳಿದರೆ ಉಪಕ್ರಮೋಪಸಂಹಾರಗಳಿಂದ ವಿರೋಧ ಬರುವುದು. ಅಥವಾ ಋಗ್ವೇದದಖಿಲಗಳಲ್ಲಿ 'ಓಷ್ಠಾಪಿಧಾನಾ' ಎಂಬುವುದಕ್ಕಿಂತ ಪೂರ್ವದಲ್ಲಿ ವಿಷ್ಣುವೇ ಪ್ರಸ್ತುತನಾದುದರಿಂದಲೂ, ಮೇಲೆಯೂ ಅವನೇ ಹೇಳಲ್ಪಡುವುದರಿಂದಲೂ ಭಗವದ್ವಿಷಯಕವೇ ಆಗಬೇಕು.) (e) ಲಕ್ಷ್ಮೀಪತಿಯಾದ ಶ್ರೀ ಪರಬ್ರಹ್ಮನು ಸರ್ವ ಯಾಗಗಳಿಗೆ ಅಧಿಪತಿಯು. ಉತ್ಪತ್ತಿಯನ್ನು ಹೊಂದಿದ ಬ್ರಹ್ಮರುದ್ರಾದಿ ಸರ್ವ ಜಗತ್ತಿಗೂ ಪಾಲಕನು. ಎಲ್ಲಾ ವಚನ ಗಳಿಗೂ ಮುಖ್ಯವಾಗಿ ಅಧಿಪತಿಯು ೧೪ ಲೋಕಗಳಿಗೂ (೧ ಭೂಲೋಕ. ೨ ಭುವರ್ಲೋಕ. ೩ ಸುವರ್ಲೋಕ. ೪ ಮಹರ್ಲೋಕ. ೫ ಜನೋಲೋಕ. ೬ ತಪೋಲೋಕ. ೭ ಸತ್ಯಲೋಕ. ೧ ಅತಲ. ೨ ವಿತಲ. ೩ ಸುತಲ. ೪ ತಳಾತಳ. ೫ ರಸಾತಳ. ೬ ಮಹಾತಳ. ೭ ಪಾತಾಳ.) ಭೂಪತಿಯು. ಎಂದು ಭಾಗವತದಲ್ಲಿದೆ. ಯಾವಾತನು ವಾಗಿಂದ್ರಿಯದಲ್ಲಿದ್ದವನಾಗಿ, ವಾಗಭಿಮಾನಿಯಿಂದ ಭಿನ್ನನೋ, ಯಾವಾತನನ್ನು ಸರಸ್ವತಿಯೂ ತಿಳಿಯುವುದಿಲ್ಲವೋ, ಇದು ಮೊದಲಾದ ಶ್ರುತಿಯೂ ಕೂಡ ಅದೆ. ಸ್ತ್ರೀಲಿಂಗತ್ವವು ದೇವತಾ ಇತ್ಯಾದಿಗಳಂತೆಯೇ (ಶಬ್ದಸ್ವಭಾವವಾದುದರಿಂದ) ಯುಕ್ತವಾಗುತ್ತದೆ. ಸ್ತ್ರೀರೂಪವುಳ್ಳವನಾದುದರಿಂದಲೂ (ಸ್ತ್ರೀಲಿಂಗತ್ವವು ಯುಕ್ತವಾಗುತ್ತದೆ). ॥ ೫ ॥

**ಮಂ ॥ ಅಥ ಹಾಸ್ಮಾ ಏತತ್ಕೃಷ್ಣಹಾರೀತೋ ವಾಗ್ಬ್ರಾಹ್ಮಣಮಿವೋಪೋದಾಹರತಿ ಪ್ರಜಾಪತಿಃ ಪ್ರಜಾಃ ಸೃಷ್ಟ್ವಾ ವ್ಯಸ್ರಂಸತ ಸಂವತ್ಸರಃ ಸ ಚ್ಛಂದೋಭಿರಾತ್ಮಾನಂ ಸಮದಧಾದ್ಯಚ್ಛಂದೋಭಿರಾತ್ಮಾನಂ ಸಮದಧಾತ್ತಸ್ಮಾತ್ಸಂಹಿತಾ ತಸ್ಯೈ ವಾ ಏತಸ್ಯೈ ಸಂಹಿತಾಯೈ ಣಕಾರೋ ಬಲಂ ಷಕಾರಃ ಪ್ರಾಣ ಆತ್ಮಾ ಸಯೋ ಹ್ಯೆತೌ ಣಕಾರಷಕಾರಾವನು ಸಂಹಿತಮೃಚೋ ವೇದ ಸಬಲಾಂ ಸಪ್ರಾಣಾಂ ಸಂಹಿತಾಂ ವೇದಾಯುಷ್ಯಮಿತಿ ವಿದ್ಯಾತ್ಸ ಯದಿ ವಿಚಿಕಿತ್ಸೇತ್ಸ ಣಕಾರಂ ಬ್ರವಾಣೀ೩ ಅಣಕಾರಾ೩ ಇತಿ ॥ ಸಣಕಾರಮೇವ ಬ್ರೂಯಾತ್ಸಷಕಾರಂ ಬ್ರವಾಣೀ೩ ಅಷಕಾರಾ೩ ಇತಿ ॥ ಸಷಕಾರಮೇವ ಬ್ರೂಯಾತ್ತೇ ಯದ್ವಯಮನುಸಂಹಿತಮೃಚೋಽಧೀಮಹೇ ಯಚ್ಚ ಮಾಂಡೂಕೇಯೀಯಮಧ್ಯಾಯಂ ಪ್ರಬ್ರೂಮಸ್ತೇನ ನೋ ಣಕಾರಷಕಾರಾವುಪಾಪ್ತಾವಿತಿ ಹ ಸ್ಮಾಹ ಹ್ರಸ್ವೋ ಮಾಂಡೂಕೇಯೋಽಥ ಯದ್ವಯಮನುಸಂಹಿತ ಮೃಚೋಽಧೀಮಹೇ ಯಚ್ಚ ಮಾಂಡೂಕೇಯೀಯಮಧ್ಯಾಯಂ ಪ್ರಬ್ರೂಮಸ್ತೇನ ನೋ ಣಕಾರಷಕಾರಾವುಪಾಪ್ತಾವಿತಿ ಹ ಸ್ಮಾಹ ಸ್ಥವಿರಃ ಶಾಕಲ್ಯ ಏತದ್ಧಸ್ಮ ವೈತದ್ವಿದ್ವಾಂಸ ಆಹು ಋಷಯಃ ಕಾವಷೇಯಾಃ ಕಿಮರ್ಥಾ ವಯಮಧ್ಯೇಷ್ಯಾಮಹೇ ಕಿಮರ್ಥಾ ವಯಂ ಯಕ್ಷ್ಯಾಮಹೇ ವಾಚಿ ಹಿ ಪ್ರಾಣಂ ಜುಹುಮಃ ಪ್ರಾಣೇ ವಾ ವಾಚಂ ಯೋ ಹ್ಯೇವ ಪ್ರಭವಃ ಸ ಏವಾಪ್ಯಯಸ್ತಾ ಏತಾಃ ಸಂಹಿತಾ ನಾನಂತೇವಾಸಿನೇ ಪ್ರಬ್ರೂಯಾನ್ನಾಸಂವತ್ಸರವಾಸಿನೇ ನಾಪ್ರವಕ್ತ್ರ ಇತ್ಯಾಚಾರ್ಯಾ ಆಚಾರ್ಯಾಃ ॥ ೬ ॥**

## ಇತ್ಯೈತರೇಯೋಪನಿಷತ್ಸು ತೃತೀಯಾರಣ್ಯಕೇ ದ್ವಿತೀಯೋಽಧ್ಯಾಯಃ ॥ ೩ ॥ ೨ ॥

## ॥ ತೃತೀಯಾರಣ್ಯಕಂ ಸಂಪೂರ್ಣಂ ॥

ಅ ॥ ಅಥ=ವಿಷ್ಣುವೆಂಬ ನಾಮವು ಸರ್ವಗುಣಪೂರ್ತಿಯನ್ನು ಪ್ರತಿಪಾದಿಸುವ ಎಲ್ಲಾ ವಚನಗಳಿಗೂ ವ್ಯಾಖ್ಯೇಯವಾದುದರಿಂದಲೇ, ಅಥವಾ ಇನ್ನು ಮೇಲೆ ಈಗ ಸರ್ವಶಾಸ್ತ್ರಾರ್ಥವು ಹೇಳಲ್ಪಡುತ್ತದೆ. ಕೃಷ್ಣಹಾರೀತಃ=ಹರಿತಋಷಿಯ ಮಗನಾದ ಕೃಷ್ಣನೆಂಬುವನು, ಅಸ್ಮೈ= ತನ್ನ ಸೇವೆಯನ್ನು ಮಾಡುವ ಶಿಷ್ಯನಿಗಾಗಲೀ, ಪುತ್ರನಿಗೆ ಆಗಲೀ, ಯೋಗ್ಯಜನರಿಗೋಸ್ಕರವಾಗಲೀ, ಏತತ್=ಮೇಲೆ ಹೇಳುವ, ವಾಗ್ಬ್ರಾಹ್ಮಣಂ=ಸರ್ವವಾಗ್ವಿಷಯವಾದ ಬ್ರಾಹ್ಮಣವನ್ನು ಇವ=ವ್ಯಕ್ತವಾಗಿ, ಉಪೋದಾಹರತಿ=ಉಪದೇಶಿಸುತ್ತಾನೆ. ಸಂವತ್ಸರಃ=ಕಾಲಾಭಿಮಾನಿಯೂ, ಆವಾಸಮಾಡುವವರಿಗೆ ಸುಖಪ್ರದನೂ ಆದ, ಪ್ರಜಾಪತಿಃ=ಚತುರ್ಮುಖ ಬ್ರಹ್ಮನು, ಪ್ರಜಾಃ=ಪ್ರಜೆಗಳನ್ನು, ಸೃಷ್ಟ್ವಾ=ಸೃಷ್ಟಿಮಾಡಿ, ವ್ಯಸ್ರಂಸತ=ಶ್ರಾಂತನಾದನು. (ಆ ಮೇಲೆ ಶ್ರಾಂತಿಪರಿಹಾರಕ್ಕಾಗಿ), ಸಃ=ಆ ಬ್ರಹ್ಮನು, ಛಂದೋಭಿಃ=ಎಲ್ಲಾ ವೇದಗಳಿಂದಲೂ, (ನಾರಾಯಣನನ್ನು ಸ್ತೋತ್ರಮಾಡಿ, ಸ್ತುತಿಯಿಂದ ಪ್ರಸನ್ನನಾದ ಆ ನಾರಾಯಣನಿಂದಲೇ) ಆತ್ಮಾನಂ=ತನ್ನ ದೇಹವನ್ನು ಸಮಧಾತ್=ಕೂಡಿಸಿದನು. (ಸಂಧಾನ ಮಾಡಿ ತನ್ನ ದೇಹಕ್ಕೆ ದಾರ್ಢ್ಯವನ್ನು ಮಾಡಿದನು.) ಯತ್=ಯಾವ ಕಾರಣದಿಂದ, ಛಂದೋಭಿಃ=ವೇದಗಳಿಂದ (ಸ್ತುತಿಸಲ್ಪಟ್ಟ ಶ್ರೀಹರಿಯಿಂದ) ಆತ್ಮಾನಂ=ತನ್ನನ್ನು, ಸಮಧಾತ್=ಕೂಡಿಸಿದನೋ, ತಸ್ಮಾತ್=ಆದುದರಿಂದ (ಚತುರ್ಮುಖನಿಂದ ತನ್ನ ದೇಹದಲ್ಲಿ ಸಂಧಿತನಾದುದರಿಂದಲೇ ಶ್ರೀ ಹರಿಯು), ಸಹಿಂತಾ= ಸಂಹಿತೆಯೆಂದು ಹೇಲ್ಪಡುತ್ತಾನೆ. ತಸ್ಯೈ ವಾ ಏತಸ್ಯೈ ಸಂಹಿತಾಯೈ=ಆ ಈ ಸಂಹಿತಾನಾಮಕನಾದ ವಿಷ್ಣುವಿನ, ಬಲಂ=ಸಾಮರ್ಥ್ಯವು, ಣಕಾರಃ=ವಿಷ್ಣುನಾಮದಲ್ಲಿದ್ದ 'ಣ'ಎಂಬ ವರ್ಣದಿಂದ ಪ್ರತಿಪಾದಿಸಲ್ಪಡುತ್ತದೆ. ಪ್ರಾಣಃ=ರಮಾ ಬ್ರಹ್ಮಾದಿ ಸರ್ವ ಪ್ರೇರಕತ್ವವು, ಆತ್ಮಾ= ಸರ್ವ ಗುಣಗಳಿಂದಲೂ, ಸರ್ವ ದೇಶಗಳಿಂದಲೂ ಸರ್ವಕಾಲಗಳಿಂದಲೂ ವ್ಯಾಪಿಸಿಕೊಂಡು ಇರುವಿಕೆಯು. ಷಕಾರಃ=ವಿಷ್ಣುನಾಮದಲ್ಲಿದ್ದ 'ಷ' ಶಬ್ದದಿಂದ ಪ್ರತಿಪಾದಿಸಲ್ಪಡುತ್ತದೆ. ಯಃ= ಯಾವ ಪುರುಷನು, ಏತೌ ಣಕಾರ ಷಕಾರೌ=ಈ ಣಕಾರ ಷಕಾರಗಳನ್ನು, (ಣ ಎಂಬುವುದರಿಂದ ವಿಷ್ಣುವಿನ ಪೂರ್ಣಬಲವೂ, ಷ ಶಬ್ದದಿಂದ ಸರ್ವನಿಯಾಮಕತ್ವವೂ ದೇಶಕಾಲ ಗುಣಾದಿಗಳಿಂದ ವ್ಯಾಪ್ತಿಯೂ) ಋಚೋಽನು ಸಂಹಿತಂ=ಎಲ್ಲಾ ವಾಕ್ಯಗಳ ಸಂಹಿತೆಗಳನ್ನನುಸರಿಸಿ, (ಎಲ್ಲಾ ವಾಕ್ಸಂಹಿತೆಗಳಲ್ಲಿ, ಅದಕ್ಕಾಗಿ) ವೇದ ತಿಳಿಯುತ್ತಾನೋ, (ಅಂದರೆ ಅಕ್ಷರಗಳ ಎರಡರ ಸಂಯೋಗ ರೂಪವಾದ ಸಂಹಿತೆಯಿಂದ ಹಿಂದೆ ಹೇಳಿರುವುದೇ ಎಲ್ಲಾ ಕಡೆಗಳಲ್ಲಿಯೂ ಹೇಳಲ್ಪಡುತ್ತದೆ. ಎಂದು ತಿಳಿಯುತ್ತಾನೋ) ಸಃ ಹ=ಆತನೇ, ಸಂಹಿತಾಂ=ಸಂಹಿತಾ ನಾಮಕನಾದ ವಿಷ್ಣುವನ್ನು, ಸಬಲಾಂ=ಸಂಪೂರ್ಣ ಬಲಯುಕ್ತನನ್ನಾಗಿ, ಸಪ್ರಾಣಾಂ=ಸರ್ವಪ್ರೇರಕತ್ವ ಮೊದಲಾದ ಶಕ್ತ್ಯಾದಿಯುಕ್ತನನ್ನಾಗಿಯೂ ವೇದ=ತಿಳಿಯುತ್ತಾನೆ. (ಇತರನು ತಿಳಿಯಲಾರನು.) (ಈ ಪ್ರಕಾರ ತಿಳಿಯುವುದು). ಆಯುಷ್ಯಂ=ನಿತ್ಯಾಯು ರೂಪವಾದ ಮುಕ್ತಿಗೆ ಸಾಧನವು. ಇತಿ=ಈ ಪ್ರಕಾರ, ವಿದ್ಯಾತ್=ತಿಳಿಯತಕ್ಕದು. ಅಥವಾ ಈ ಪ್ರಕಾರ, ಯಾರು ತಿಳಿಯುತ್ತಾನೋ, (ಆತನು ಸಂಸಾರದಿಂದ ಮುಕ್ತನಾಗಿ) ಆಯುಷ್ಯಂ=ನಿತ್ಯಾಯುಸ್ಸನ್ನು, (ಹೊಂದುವನು.) ಸಃ=ಆ ಉಪಾಸಕನು, ಸಣಕಾರಂ=ಣಕಾರ

ಯುಕ್ತವಾದುದನ್ನು, ಬ್ರವಾಣೀಂ=ಹೇಳುವೆನೋ, ಅಥವಾ ಅಣಕಾರಾಂ=ಣಕಾರ ರಹಿತವಾದುದನ್ನು, (ಹೇಳುವೆನೋ) ಇತಿ=ಈ ಪ್ರಕಾರವಾಗಿ, ವಿಚಿಕಿತ್ಸೇತ ಯದಿ=ಸಂಶಯಗ್ರಸ್ತನಾದರೆ, (ಎಲ್ಲಾ ಸಂಹಿತೆಗಳನ್ನು ಣ ಶಬ್ದದಿಂದ ಹೇಳಲ್ಪಡುವ ವಿಷ್ಣುಸಾಮರ್ಥ್ಯವನ್ನು ಹೇಳುತ್ತವೆ ಎಂಬೀ ಅನುಸಂಧಾನಪೂರ್ವಕವಾಗಿ ಹೇಳುವೆನೋ, ಅನುಸಂಧಾನವಿಲ್ಲದೇನೇ ಹೇಳುವೆನೋ ಎಂದು ಸಂಶಯವನ್ನು ಮಾಡಿದರೆ ಆ ವಿಷಯದಲ್ಲಿ ನಿರ್ಣಯವನ್ನು ಹೇಳುತ್ತೇವೆ.) ಸಣಕಾರಮೇವ ಬ್ರೂಯಾತ್=ಣಕಾರಸಹಿತವಾದುದನ್ನಾಗಿಯೇ ಹೇಳತಕ್ಕದು. ಸ ಷಕಾರಂ=ಷಕಾರ ಸಹಿತವಾದುದನ್ನಾಗಿ, ಬ್ರವಾಣೀಂ=ಹೇಳುವೆನೋ ಅಷಕಾರಾಂ=ಷಕಾರ ರಹಿತವಾದುದನ್ನಾಗಿಯೇ ಹೇಳುವೆನೋ, ಇತಿ=ಹೀಗೆ ಸಂಶಯಪಟ್ಟರೆ, ಸ ಷಕಾರಮೇವ ಬ್ರೂಯಾತ್=ಷಕಾರ ಸಹಿತವಾದುದನ್ನೇ (ಅಂದರೆ ಷ ಶಬ್ದದಿಂದ ಶ್ರೀ ಹರಿಗೆ ಸರ್ವಪ್ರೇರಕತ್ವವೂ, ಸರ್ವತ್ರ ವ್ಯಾಪ್ತಿಯೂ ವಾಚ್ಯವಾಗುತ್ತದೆ ಎಂದು ಅನುಸಂಧಾನ ಪೂರ್ವಕವಾಗಿಯೇ) ಹೇಳತಕ್ಕದು. ತೇ ವಯಂ=ಹೀಗೆ ತಿಳಿದುಕೊಂಡ ನಾವು, ಯತ್=ಯಾವ ಕಾರಣದಿಂದ, ಅನುಸಂಹಿತಂ ಋಚಃ=ಸಂಹಿತಾಯುಕ್ತವಾಗಿ ಋಕ್ಕುಗಳನ್ನು, ಅಧೀಮಹೇ=ಅಧ್ಯಯನ ಮಾಡುತ್ತೇವೋ, ಯಚ್ಚ=ಯಾವದೊಂದು, ಮಾಂಡೂಕೇಯೀಯಂ=ಮಾಂಡೂಕೇಯ ಋಷಿಯಿಂದ ದೃಷ್ಟವಾದ ಅಧ್ಯಾಯಂ=ಸ್ವಾಧ್ಯಾಯವನ್ನು, (ಸರ್ವವೇದ ಪುರಾಣಾದಿಗಳನ್ನು) ಪ್ರಬ್ರೂಮಃ=ಅಧ್ಯಯನ ಮಾಡುತ್ತೇವೋ, ಅಥವಾ ಶಿಷ್ಯರಿಗೋಸ್ಕರ ಉಪದೇಶಿಸುತ್ತೇವೋ, ತೇನ=ಆ ಕಾರಣದಿಂದ, ನಃ=ನಮಗೆ, ಣಕಾರ ಷಕಾರೌ ಉಪಾತ್ತೌ=ಣ ಶಬ್ದ ಷ ಶಬ್ದಾರ್ಥರೂಪನಾದ ವಿಷ್ಣುವು ಪ್ರಾಪಿಸಲ್ಪಟ್ಟನು. (ಎಲ್ಲಾ ವಾಕ್ಯಗಳೂ ಣಕಾರ ಷಕಾರಗಳ ವ್ಯಾಖ್ಯಾನ ರೂಪವೇ ಆಗಿವೆ.) ಇತಿ=ಹೀಗೆ, ಹ್ರಸ್ವೋ ಮಾಂಡೂಕೇಯಃ=ಹ್ರಸ್ವಮಾಂಡೂಕೇಯ ಋಷಿಯು, ಆಹ ಸ್ಮಹ=ಹೇಳಿದನು. (ಇದೇ ಅರ್ಥದಲ್ಲಿ ಇತರ ಋಷಿಗಳ ಸಮ್ಮತಿಯನ್ನು ಹೇಳುತ್ತಾರೆ.) ಅಥ ಯತ್ ವಯಂ ಅನುಸಂಹಿತಂ ಋಚಃ ಅಧೀಮಹೇ ಯಚ್ಚ ಮಾಂಡೂಕೇಯೀಯಂ ಅಧ್ಯಾಯಂ ಪ್ರಬ್ರೂಮಃ ತೇನ ನಃ ಣಕಾರ ಷಕಾರೌ ಉಪಾತ್ತೌ ಇತಿ······ಸ್ಥವಿರಃ ಶಾಕಲ್ಯಃ=ಸ್ಥವಿರಶಾಕಲ್ಯ ಋಷಿಯು, ಆಹ ಸ್ಮ ಹ=ಹೇಳಿದನು. (ಎಲ್ಲಾ ಋಷಿಗಳೂ ಇದೇ ರೀತಿಯಾಗಿ ಹೇಳುತ್ತಾರೆ.) ತತ್ ಏತತ್=ಆ ಈ ಪ್ರಮೇಯವನ್ನು, ವಿದ್ವಾಂಸಃ=ತಿಳಿದ, ಕಾವಷೇಯಾಃ ವೈ ಋಷಯಃ=ಕಾವಷೇಯರೆಂದು ಪ್ರಸಿದ್ಧರಾದ ಋಷಿಗಳವರು, ಆಹುಃ ಹ ಸ್ಮ=ಹೇಳಿರುವರು. (ಏನೆಂದರೆ) ವಯಂ=ನಾವು, ಕಿಮರ್ಥಾಃ=ಯಾವ ಪ್ರಯೋಜನವನ್ನು ಇಚ್ಛಿಸುವವರಾಗಿ, ಅಧ್ಯೇಷ್ಯಾಮಹೇ=ಅಧ್ಯಯನ ಮಾಡುವೆವು. (ವಿಷ್ಣುನಾಮಾರ್ಥವನ್ನು ಅನುಸಂಧಾನ ಮಾಡಿಕೊಂಡು ವಿಷ್ಣುಮಂತ್ರ ಜಪಾದಿಗಳೊಂದೇ ಅತ್ಯುತ್ತಮ ಫಲಪ್ರದವಾದುದರಿಂದ ವಿಷ್ಣುನಾಮದಿಂದ ವ್ಯತಿರಿಕ್ತವಾದ ಸರ್ವವೇದಾಧ್ಯಯನದಿಂದಲೂ ನಮಗೆ ಯಾವ ಪ್ರಯೋಜನವಾಗಬಹುದು. ಯಾವದೂ ಆಗಲಾರದು). ವಯಂ=ನಾವು, ಕಿಮರ್ಥಾಃ=ಯಾವ ಪ್ರಯೋಜನವನ್ನು ಇಚ್ಛಿಸುವವರಾಗಿ, ಯಕ್ಷ್ಯಾಮಹೇ=ಯಾಗ ಮಾಡುತ್ತೇವೆ. (ಯಾಗಗಳಿಂದ ನಮಗೆ ಯಾವಪ್ರಯೋಜನವಾಗಬಹುದು? ಯಾವುದೂ ಆಗಲಾರದು.) (ಅಥವಾ ವಿಷ್ಣುನಾಮಾರ್ಥವನ್ನನುಸಂಧಾನ ಮಾಡದೆ, ಇತರ ವಿಷಯಕ ಅಧ್ಯಯನ ಯಜ್ಞ ಮೊದಲಾದ ಕಾರ್ಯಗಳಿಂದ ನಮಗೆ ಯಾವ ಪ್ರಯೋಜನವಾಗ ಬಹುದು? ಯಾವದೂ ಆಗಲಾರದು. ತಥಾ ಚ ವಿಷ್ಣುನಾಮಾರ್ಥ ಅನುಸಂಧಾನ ಪೂರ್ವಕವಾಗಿಯೇ ವೇದಗಳನ್ನು ಅಧ್ಯಯನ ಮಾಡುವೆವು, ಯಾವಾಗ ಮಾಡುವೆವು?) ಅಥವಾ ವಾಚಿ ಹಿ ಪ್ರಾಣಂ ಜುಹುಮಃ=ವಾಕ್ಕಿನಲ್ಲಿ ಪ್ರಾಣನನ್ನು ಹೋಮಿಸುತ್ತೇವೆ. (ಅಂದರೆ 'ವಿಷ್ಣವೇ ನಮಃ' ಎಂಬೀ ಮಂತ್ರವನ್ನೇ ಜಪಿಸುತ್ತಾ

ಪ್ರಾಣವ್ಯಾಪಾರವನ್ನು ಜಪವೆಂಬ ವಾಗ್ವ್ಯಾಪಾರದಲ್ಲಿ ನಿಯೋಜಿಸುತ್ತೇವೆ.) ಪ್ರಾಣೇ ವಾಚಂ=ಪ್ರಾಣಸಲ್ಲಿ ವಾಕ್ಕನ್ನು ಹೋಮಿಸುತ್ತೇವೆ. (ಪ್ರಾಣಸಲ್ಲಿ ವಾಗಿಂದ್ರಿಯದ ಹೋಮವೆಂದರೆ ಮೌನವೇ, ಅಂತೂ ಮೌನದಿಂದಲೇ ವಿಷ್ಣುಶಬ್ದಾರ್ಥವನ್ನು ಧ್ಯಾನಿಸುವೆವು.) (ವಿಷ್ಣುವಿಷಯಕವೇ ಆದ ಅಧ್ಯಯನಾದಿಗಳನ್ನು ಮಾಡಬೇಕು. ಇತರ ವಿಷಯಕವಾದುದನ್ನು ಮಾಡಬಾರದು. ಎಂದು ಹೇಳಲ್ಪಟ್ಟಿತು. ಅದೇಕೆಂದರೆ) ಯೋ ಹಿ ಏವ=ಯಾವ ಶ್ರೀ ಹರಿಯು, ಪ್ರಭವಃ=ಸರ್ವಜಗದುತ್ಪಾದಕನೋ, ಸ ಏವ=ಆತನೇ, ಅಪ್ಯಯಃ=ಸಂಹಾರಕನು. (ಮತ್ತೊಬ್ಬನಾಗಲಾರನು. ಆದುದರಿಂದ ರಮಾಪತಿಯಾದ ಶ್ರೀ ನಾರಾಯಣನೇ ಸರ್ವಜಗಜ್ಜನ್ಮಾದಿಕಾರಣನೂ ಸರ್ವೋತ್ತಮನೂ ದೋಷವಿದೂರನೂ ಅಪರಿಮಿತ ಗುಣಪರಿಪೂರ್ಣನೂ ಆದುದರಿಂದ ವಿಷ್ಣುವಿಷಯಕವೇ ಆದ ಅಧ್ಯಯನಾದಿಗಳನ್ನು ಮಾಡಬೇಕು. ಇತರ ವಿಷಯಕವಾದುದನ್ನು ಮಾಡಬಾರದು.) ಹೀಗೆ ಮಹಿದಾಸದೇವರು ಉಪನಿಷತ್ಪ್ರತಿಪಾದ್ಯವಾದ ಅರ್ಥವು ಅತಿರಹಸ್ಯವಾಗಿದೆ ಎಂದು ತಿಳಿಸುತ್ತಾ ಉಪಸಂಹಾರ ಮಾಡುತ್ತಾರೆ). ತಾ ಏತಾಃ ಸಂಹಿತಾಃ=ಆ ಈ ಪೂರ್ವೋತ್ತರವರ್ಣ ಸಂಧಿಪ್ರತಿಪಾದ್ಯಗಳಾದ ಸಂಹಿತಾನಾಮಕ ಭಗವದ್ರೂಪಗಳನ್ನು, ಅನಂತೇವಾಸಿನೇ=ಇತರ ವಿದ್ಯೆಗಳಲ್ಲಿ ತನ್ನ ಶಿಷ್ಯತನವನ್ನು ಹೊಂದದೆ ಇರುವವನಿಗೋಸ್ಕರ, ನ ಪ್ರಬ್ರೂಯಾತ್=ಪ್ರಥಮದಲ್ಲಿಯೇ ಉಪದೇಶಿಸಬಾರದು. ಅಸಂವತ್ಸರ ವಾಸಿನೇ=ಇತರ ವಿದ್ಯೆಗಳಲ್ಲಿ ತನ್ನ ಶಿಷ್ಯತನವನ್ನು ಹೊಂದಿದ್ದರೂ ಒಂದು ಸಂವತ್ಸರಪರ್ಯಂತ ಆವಾಸಮಾಡದೆ ಇದ್ದವನಿಗೋಸ್ಕರ, ನ ಪ್ರಬ್ರೂಯಾತ್=ಹೇಳಬಾರದು. (ತಥಾ ಚ ಒಂದುಸಂವತ್ಸರ ಆವಾಸ ಮಾಡಿ, ಇತರ ವಿದ್ಯೆಗಳಲ್ಲಿ ಶಿಷ್ಯತನವನ್ನು ಹೊಂದಿ, ವಿಷ್ಣುಭಕ್ತಿ ಮೊದಲಾದ ಗುಣಭರಿತನಾಗಿದ್ದರೆ ಅಂಥವನಿಗೋಸ್ಕರ ಉಪದೇಶಿಸಬೇಕು. ಅಪ್ರವಕ್ತ್ರೇ=ವಿಷ್ಣುಭಕ್ತಿ ಮೊದಲಾದ ಗುಣಭರಿತನಾಗಿದ್ದರೂ) ಪ್ರವಚನಶಕ್ತಿ ರಹಿತನಾದವನಿಗೋಸ್ಕರ, ನ ಪ್ರಬ್ರೂಯಾತ್=ಹೇಳಬಾರದು. (ವಿಶಿಷ್ಟವ್ಯಾಖ್ಯಾನ ಮೊದಲಾದ ಗುಣಪೂರ್ಣನಿಗೋಸ್ಕರವೇ ಹೇಳಬೇಕು.) ಇತಿ=ಈ ಪ್ರಕಾರ, ಆಚಾರ್ಯಾಃ ಆಚಾರ್ಯಾಃ=ಉಪನಿಷತ್ತನ್ನು ಉಪದೇಶ ಮಾಡಿರುವ ಮಹಿದಾಸ ಮೊದಲಾದ ಋಷಿಗಳವರು, ಆಹುಃ=ಹೇಳುತ್ತಾರೆ. ಹಿಂದೆ ಹೇಳಿರುವ ವಿಷಯವೆಲ್ಲವೂ ನಿಶ್ಚಯವಾಗಿ ಸರ್ವಪ್ರಮಾಣಗಳಿಂದಲೂ ಸಿದ್ಧವಾಗಿದೆ ಎಂದು ತಿಳಿಸಿಕೊಡುವುದಕ್ಕೋಸ್ಕರ, 'ಆಚಾರ್ಯಾಃ' ಎಂಬುವುದನ್ನು ಎರಡಾವರ್ತಿ ಉಪಯೋಗಿಸಿರುವರು. ॥ ೩ ॥

**ಈ ಪ್ರಕಾರವಾಗಿ ಐತರೇಯೋಪನಿಷತ್ತುಗಳಲ್ಲಿ ಮೂರನೇ ಅರಣ್ಯಕದಲ್ಲಿ ಎರಡನೇ ಅಧ್ಯಾಯವು ಸಮಾಪ್ತವಾಯಿತು. ॥ ೩ ॥ ೨ ॥**

**ಈ ಪ್ರಕಾರವಾಗಿ ಮೂರನೇ ಆರಣ್ಯಕವು ಸಂಪೂರ್ತಿಯಾಯಿತು. ॥ ಶ್ರೀಃ ॥**

ಭಾ॥ (a) ಸಂವತ್ಸರ ಇತಿ ವಿಶೇಷಣಾದ್ವಿರಿಂಚ ಏವಾತ್ರ ಪ್ರಜಾಪತಿಃ । ಬ್ರಹ್ಮಾ (ವಿಶ್ವಃ) ವಿರಿಂಚಿಃ ಕತಮಃ ಸ್ವಯಂಭೂಃ ಪ್ರಜಾಪತಿಃ ಸಂವತ್ಸರ ಇತ್ಯಾದಿ ಶ್ರುತೇಃ ॥ (b) ಶ್ರಾಂತೋ ಬ್ರಹ್ಮಾ ಸರ್ವವೇದೈಃ ಸ್ತುತ್ವಾ ನಾರಾಯಣಂ ಪ್ರಭುಂ। ತೇನೈವ ಸಮ್ಯಕ್ಸಂಧಾಯ ದಾರ್ಢ್ಯಂ ದೇಹಸ್ಯ ಸೋಽಕರೋತ್॥ (c) ಸಂಧಾನಾತ್ಸಂಹಿತೇತ್ಯುಕ್ತೋ ವಿಷ್ಣುರೇವ ಸನಾತನಃ। ವಿಷ್ಣುನಾಮ್ನಿ ಣಶಬ್ದೇನ ವಿಷ್ಣೋರ್ಬಲಮುದೀರ್ಯತೇ ॥ ಣ ಇತ್ಯಾಕ್ರಿಯಮಾಣತ್ವಾಣ್ಣಕಾರೋಽಸ್ಯ ಬಲಂ ಮತಂ। (d) ವಿಷ್ಣುನಾಮ್ನಿ ಷಕಾರೇಣ

ರಮಾಬ್ರಹ್ಮೇಶಪೂರ್ವಿಣಃ । ಪ್ರಣೇತೃತಾಽಖಿಲಸ್ಯೈವ ವಿಷ್ಣೋರುಕ್ತಾ ತಥಾಽತ್ಮತಾ ॥ (e) ಆತತತ್ವಂ ಸರ್ವಗುಣೈರ್ದೇಶತಃ ಕಾಲತಸ್ತಥಾ । ಆತ್ಮಶಬ್ದೋದಿತಂ ತಚ್ಚ ಷಶಬ್ದೇನಾಭಿಧೀಯತೇ ॥

ಅ ॥ (a) ಸಂವತ್ಸರಃ ಎಂದು ವಿಶೇಷಣವಿದ್ದುದರಿಂದ (ಸಂವತ್ಸರೋ ವೈ ಪ್ರಜಾಪತಿಃ ಎಂದು ಶ್ರುತಿಯಿದ್ದುದರಿಂದ) ಇಲ್ಲಿ ಪ್ರಜಾಪತಿಯೆಂದರೆ ಚತುರ್ಮುಖಬ್ರಹ್ಮನೇ (ದಕ್ಷ ಮೊದಲಾದವರು ಅಲ್ಲ.) (ಅಲ್ಲಿಯೂ ಸಂವತ್ಸರ ಶಬ್ದವು ಏಕೆ ಬ್ರಹ್ಮಪರವಾಗಬೇಕೆಂದರೆ) ಚತುರ್ಮುಖಬ್ರಹ್ಮನು ವಿರಿಂಚಿಯು (ವಿಶ್ವನು) ಕೆತಮನು, ಸ್ವಯಂಭೂಃ ಪ್ರಜಾಪತಿಯು ಸಂವತ್ಸರನು. (ಈ ಶಬ್ದಗಳು ಏಕಾರ್ಥಪ್ರತಿಪಾದಕಗಳು) ಎಂದಿದೇ ಮೊದಲಾದ ಶ್ರುತಿಯಿದ್ದುದರಿಂದ, (ಚತುರ್ಮುಖನೇ ಆಗಬೇಕು). (b) (ಪ್ರಜೆಗಳನ್ನು ಸೃಷ್ಟಿಮಾಡಿ) ಶ್ರಾಂತನಾದ ಬ್ರಹ್ಮನು (ಶ್ರಮಪರಿಹಾರಕ್ಕಾಗಿ) ಪ್ರಭುವಾದ ನಾರಾಯಣನನ್ನು ಎಲ್ಲಾ ವೇದಗಳಿಂದಲೂ ಸ್ತುತಿಸಿ, (ಸ್ತುತಿಯಿಂದ ಸಂತುಷ್ಟನಾದ) ಆ ನಾರಾಯಣನಿಂದಲೇ (ತನ್ನ ದೇಹವನ್ನು) ಚೆನ್ನಾಗಿ ಕೂಡಿಸಿ, (ತನ್ನ) ದೇಹಕ್ಕೆ ದೃಢತನವನ್ನು ಮಾಡಿದನು. (c) ಯಾವಾಗಲೂ ಏಕಪ್ರಕಾರನಾದ ವಿಷ್ಣುವೇ ಸ್ತುತಿಯಿಂದ ಕೂಡಿರುವುದರಿಂದಲೂ, ಚತುರ್ಮುಖಬ್ರಹ್ಮನಲ್ಲಿ ಸನ್ನಿಧಾನವಿದ್ದುದರಿಂದಲೂ, ಚತುರ್ಮುಖ ದೇಹದಲ್ಲಿ ಸಂಧಿತನಾದುದರಿಂದಲೂ, ಸಂಹಿತಾ ಎಂದು ಹೇಳಲ್ಪಡುತ್ತಾನೆ. ವಿಷ್ಣುವೆಂಬ ನಾಮದಲ್ಲಿ ಣ ಶಬ್ದದಿಂದ ವಿಷ್ಣುವಿನ ಬಲವು ಹೇಳಲ್ಪಡುತ್ತದೆ. ಣ ಎಂದು ಹೇಳುವುದರಿಂದ ಣಕಾರವು ಈ ಹರಿಯ ಬಲವೆಂದು ಸ್ಮರಿಸಲ್ಪಟ್ಟಿದೆ. (d) ವಿಷ್ಣು ನಾಮದಲ್ಲಿದ್ದ ಷಕಾರದಿಂದ ಲಕ್ಷ್ಮೀ, ಚತುರ್ಮುಖ, ರುದ್ರ ಮೊದಲಾದ ಎಲ್ಲಾ ಜಗತ್ತಿನ ಪ್ರೇರಕತ್ವವೂ ವಿಷ್ಣುವಿಗೆ ಹೇಳಲ್ಪಡುತ್ತದೆ. ಹಾಗೆಯೇ ಆತ್ಮತ್ವವೂ ಹೇಳಲ್ಪಡುತ್ತದೆ. (e) ಎಲ್ಲಾ ಗುಣಗಳಿಂದಲೂ ದೇಶಗಳಿಂದಲೂ ಹಾಗೆಯೇ ಕಾಲಗಳಿಂದಲೂ ವ್ಯಾಪ್ತತ್ವವು ಆತ್ಮ ಶಬ್ದದಿಂದ ಹೇಳಲ್ಪಟ್ಟಿದೆ. ಅದೂ ಕೂಡ ಷ ಶಬ್ದದಿಂದ ಹೇಳಲ್ಪಡುತ್ತದೆ.

ಭಾ॥ (a) ಷ ಇತ್ಯಾಕ್ರಮಾಣತ್ವಂ ಪ್ರಣೇತೃತ್ವಂ ಚ ಪೂರ್ಣತಾ । ವಿಷ್ಣೋಃ ಷಕಾರ ಇತ್ಯುಕ್ತಾ ವೀತ್ಯುಕ್ತಸ್ಯ ವಿಶಿಷ್ಟತಾ ॥ ಅಂತ್ಯಸ್ಥಿತ ಉಕಾರಸ್ತು ತಾಚ್ಛೀಲ್ಯಾದಿ ಹರೇರ್ವದೇತ್ । (b) ಏವಂ ವಿಶಿಷ್ಟಪ್ರಾಣತ್ವಮಾತತತ್ವಂ ಚ ಸರ್ವತಃ ॥ ವಿಶಿಷ್ಟಂ ಚ ಬಲಂ ವಿಷ್ಣೋಃ ಸರ್ವಸ್ಮಾಚ್ಛೀಲಮಿತ್ಯಪಿ । ಉದಿತಂ ವಿಷ್ಣುಶಬ್ದೇನ (c) ತಸ್ಮಾದೃಕ್ಸಂಹಿತಾಮನು ॥ ವರ್ಣದ್ವಯಸಮಾಯೋಗೇ ಷ್ಣುಶಬ್ದಸ್ಯಾರ್ಥಮೇವ ತು । ವಿಷ್ಣೋಃ ಪ್ರಾಣತ್ವಮಾತ್ಮತ್ವಂ ಬಲಂ ಚೈವಾತ್ರ ವೇತ್ತಿ ಯಃ ॥ (d) ಸ ಏವ ವಿಷ್ಣೋರ್ಬಲವಿತ್ತಥಾ ಪ್ರಾಣತ್ವವಿದ್ಭವೇತ್ । ಸ ಏವ ಮುಕ್ತಃ ಸಂಸಾರಾನ್ನಿತ್ಯಾಯುಷ್ಮಾನ್ಭವಿಷ್ಯತಿ ॥

ಅ ॥ (a) ಷ ಎಂಬುವುದರಿಂದ ಹೇಳಲ್ಪಡತಕ್ಕ ವಿಷ್ಣುವಿಗೆ ಸರ್ವಪ್ರೇರಕತ್ವವೂ ಗುಣಾದಿಪೂರ್ಣತ್ವವೂ ಕೂಡ ಸಕಾರವೆಂದು ಹೇಳಲ್ಪಟ್ಟಿದೆ. ಹೇಳಲ್ಪಟ್ಟ ಸಾಮರ್ಥ್ಯ ಮೊದಲಾದುದಕ್ಕೆ ವಿ ಎಂಬುವುದರಿಂದ ಇತರರಲ್ಲಿರತಕ್ಕ ಬಲಾದಿಗಳಿಂದ ಅತ್ಯುತ್ತಮತ್ವವು ಹೇಳಲ್ಪಡುತ್ತದೆ. ಅಂತ್ಯದಲ್ಲಿದ್ದ ಉಕಾರವಾದರೂ (ಉನ್ ಎಂಬುವುದರ ರೂಪವಾದರೆ ತಾಚ್ಛೀಲ್ಯ (ಅದರ ಸ್ವಭಾವತ್ವ)ವನ್ನು ಹೇಳುತ್ತದೆ. (ಸ್ವತಂತ್ರವಾದ ಉ ವರ್ಣವೆಂದಂಗೀಕರಿಸಿದರೆ ಆದಿಪದದಿಂದ ಹೇಳ

ಲ್ಪಟ್ಟ) ಉಚ್ಚತನವನ್ನು ಹೇಳುತ್ತದೆ. (ಉಚ್ಚತ್ವವೆಂದರೆ ಗುಣಗಳಿಗೆ ಪ್ರತ್ಯೇಕವಾಗಿಯೂ ಅವಧಿರಾಹಿತ್ಯವೂ ಸ್ವಾತಂತ್ರ್ಯವೂ ದೋಷಾಭಾವವೂ). (b) ಈ ಪ್ರಕಾರವಾಗಿ ಶ್ರೀ ವಿಷ್ಣುವಿಗೆ ಇತರರೆಲ್ಲರಿಂದಲೂ ಹೆಚ್ಚಾದ ಪ್ರೇರಕತ್ವವೂ ಗುಣಾದಿ ಎಲ್ಲಾದರಿಂದಲೂ ವ್ಯಾಪ್ತತ್ವವೂ, ಸರ್ವಾಧಿಕವಾದ ಸಾಮರ್ಥ್ಯವೂ ಇವೆಲ್ಲವೂ ತತ್ಸ್ವಭಾವವೆಂದೂ ವಿಷ್ಣುಶಬ್ದದಿಂದ ಹೇಳಲ್ಪಟ್ಟಿದೆ. (c) ಆದುದರಿಂದ (ಅಂದರೆ ವಿಷ್ಣುಶಬ್ದಕ್ಕೆ ಹೀಗೆ ಮಹಾರ್ಥವಿದ್ದುದರಿಂದ) ಋಕ್ಸಂಹಿತೆಯನ್ನನುಸರಿಸಿ ಎರಡು ವರ್ಣಗಳು ಸಂಗತವಾಗೋಣ. ಷ್ಣು ಎಂಬ ಶಬ್ದದ ಅರ್ಥವನ್ನು ವಿಷ್ಣುವಿಗೆ ಸರ್ವ ಪ್ರೇರಕತ್ವವನ್ನು ಆತ್ಮತ್ವವನ್ನು ಸಾಮರ್ಥ್ಯವನ್ನೂ ಕೂಡ ಜಿಜ್ಞಾಸುಗಳ ಮಧ್ಯದಲ್ಲಿ ಯಾವಾತನು ತಿಳಿಯುತ್ತಾನೋ, (d) ಆತನೇವೇ ವಿಷ್ಣುವಿನ ಸಾಮರ್ಥ್ಯವನ್ನು ತಿಳಿದವನು. ಹಾಗೆಯೇ ಪ್ರೇರಕತ್ವವನ್ನು ತಿಳಿದವನು ಆಗುವನು. ಆತನೇ ಸಂಸಾರದಿಂದ ಮುಕ್ತನಾಗಿ ನಿತ್ಯಾಯುಷ್ಯವುಳ್ಳವನು ಆಗುವನು.

ಭಾ॥ **(a)** ಸಂಹಿತಾ ಸಹಿತತ್ತ್ವೇನ ಯದೃಚೋಽಧೀಮಹೇ ವಯಂ । ವೇದಾನನ್ಯಾನ್ಪುರಾಣಂ ವಾ **(b)** ತೇನ ವಿಷ್ಣುಪದೋದಿತಃ ॥ ಅವಾಪ್ಯೋ ಭಗವಾನ್ ಸ್ಯಾನ್ನಸ್ತನ್ನಾಮಾರ್ಥಾ ಯತೋಽಖಿಲಾಃ । ಇತ್ಯಾಹುರೃಷಯಃ ಸರ್ವೇ **(c)** ಕಿಮನ್ಯಾಧ್ಯಯನಾದ್ಭವೇತ್ ॥ ಯಜ್ಞೈ ರ್ವೇತ್ಯೃಷಯೋಽಪ್ಯನ್ಯೇ ಕಾವಷೇಯಾ ವದಂತಿ ಹಿ । **(d)** ಮೌನೇನ ವಿಷ್ಣುಶಬ್ದಾರ್ಥಂ ಧ್ಯಾಯಂತೋ ವಾಚಮೇವ ವಾ ॥ ಜುಹುಮೋ ವಿಷ್ಣುನಾಮಾಖ್ಯಂ ಜಪಂತೋ ಮಂತ್ರಮೇವ ವಾ । ನಮಸ್ಕಾರಸಮಾಯುಕ್ತಂ ಜುಹುಮಃ ಪ್ರಾಣಮತ್ರ ಹಿ ॥ **(e)** ಕಿಮನ್ಯೈರ್ಬಹುಭಿಃ ಕಾರ್ಯೈರೇತಸ್ಯೈವಾಧಿಕತ್ವತಃ । ಏತದರ್ಥಾನುಸಂಧಾನಪೂರ್ವಂ ವೇದಾನಥಾಪಿ ವಾ ॥ ಅಧೀಮಹೇ ಯಜಾಮೋ ವಾ ನಾನ್ಯಥಾ ತು ಕಥಂಚನ ॥

ಅ ॥ (a) ಸಂಹಿತಾನಾಮಕ ಭಗವಂತನನ್ನು ಪ್ರತಿಪಾದಿಸುತ್ತವೆ ಎಂದು ತಿಳಿದುಕೊಂಡು ನಾವು ಯಾವ ಕಾರಣದಿಂದ ಋಕ್ಕುಗಳನ್ನೂ ಬೇರೆ ಸರ್ವವೇದಗಳನ್ನೂ ಪುರಾಣವನ್ನಾಗಲೀ ಅಧ್ಯಯನ ಮಾಡುತ್ತೇವೋ ಯಾ ಶಿಷ್ಯರಿಗೆ ಉಪದೇಶಿಸುತ್ತೇವೋ, (b) ಆ ಕಾರಣದಿಂದ ವಿಷ್ಣು ಎಂಬ ಪದದಿಂದ ಹೇಳಲ್ಪಟ್ಟ ಣಶಬ್ದ ಷ ಶಬ್ದಾರ್ಥರೂಪನಾದ ಭಗವಂತನು ನಮಗೆ ಪ್ರಾಪಿಸಲ್ಪಟ್ಟವನು ಆಗುವನು. ಏಕೆಂದರೆ ಎಲ್ಲಾ ವಚನಗಳೂ ಆ ವಿಷ್ಣುವೆಂಬನಾಮದ ಅರ್ಥಭೂತಗಳೇ ಆಗಿವೆ. ಈ ಪ್ರಕಾರ ಎಲ್ಲಾ ಋಷಿಗಳೂ ಹೇಳುತ್ತಾರೆ. (c) (ಈ ಪ್ರಮೇಯುವನ್ನು ತಿಳಿದ) ಇತರರಾದ ಕಾವಷೇಯಋಷಿಗಳೂ ಕೂಡ (ವಿಷ್ಣುನಾಮಾರ್ಥಾನುಸಂಧಾನವಿಲ್ಲದೆ) ಇತರ ವಿಷಯಕ ಅಧ್ಯಯನದಿಂದಲಾಗಲೀ ಯಾಗಗಳಿಂದಲಾಗಲೀ ಏನು ಪ್ರಯೋಜನವಾಗಬಹುದು (ಯಾವದೂ ಆಗಲಾರದು) ಹೀಗೆ ಹೇಳುತ್ತಾರೆ. (d) ಯಾವ ಪಕ್ಷದಲ್ಲಿ ವಿಷ್ಣುಶಬ್ದಾರ್ಥವನ್ನೇ ಧ್ಯಾನಮಾಡುತ್ತಾ ಮೌನದಿಂದ ಈ ಪ್ರಾಣನಲ್ಲಿ ವಾಗಿಂದ್ರಿಯವನ್ನು ಅಂದರೆ ನಮಸ್ಕಾರದಿಂದೊಡಗೂಡಿದ ವಿಷ್ಣುನಾಮಾಖ್ಯವಾದ ಮಂತ್ರವನ್ನು ಹೋಮಿಸುವೆವೋ, ವಿಷ್ಣುಶಬ್ದಾರ್ಥವನ್ನೇ ಧ್ಯಾನಮಾಡುತ್ತಾ, ನಮಸ್ಕಾರಯುಕ್ತವಾದ ವಿಷ್ಣುನಾಮಾಖ್ಯವಾದ ಮಂತ್ರವನ್ನೇ ಜಪಿಸುತ್ತಾ, ಈ ವಾಗಭಿಮಾನಿಯಲ್ಲಿ ಪ್ರಾಣನನ್ನು ಹೋಮಿಸುವೆವೋ, (e) ಹಾಗಾದರೆ ಇದಕ್ಕೇನೇ (ವಿಷ್ಣುಮಂತ್ರಜಪಾದಿಗಳಿಗೇನೇ) ಹೆಚ್ಚು ಫಲವಿದ್ದುದರಿಂದ ವಿಷ್ಣುನಾಮದಿಂದ ಇತರಗಳಾದ ವೇದಾದಿಗಳಿಂದಲೂ, ಅಶ್ವಮೇಧ ವಾಜಪೇಯ ಮೊದಲಾದ ಅನೇಕಯಾಗಗಳಿಂದಲೂ,

ಏನು ಪ್ರಯೋಜನವು? ತಥಾಚ ಈ ವಿಷ್ಣುನಾಮಾರ್ಥಾನುಸಂಧಾನ ಪೂರ್ವಕವಾಗಿಯೇ ವೇದಗಳನ್ನು ಅಧ್ಯಯನಮಾಡುವೆವು. ಯಾಗಮಾಡುವೆವು. ಯಾವ ಪ್ರಕಾರದಿಂದಲೂ ಬೇರೆ ರೀತಿಯಲ್ಲ.

ಭಾ॥ (a) ಏಷ ಏವ ಹಿ ಸರ್ವೇಷಾಂ ವೇದಾನಾಮರ್ಥ ಈರಿತಃ । ವಿಷ್ಣುನಾಮೋದಿತೋ ಯೋಽರ್ಥಸ್ತದ್ವ್ಯಾಖ್ಯಾನ್ಯದ್ವಚೋಽಖಿಲಂ ॥ (b) ಏವಂ ವಿಶಿಷ್ಟಪ್ರಾಣಾತ್ಮಬಲಾದ್ಯಖಿಲಸದ್ಗುಣೈಃ । ಪೂರ್ಣಸ್ವಭಾವಃ ಸರ್ವೇಷಾಂ ವಚಸಾಮರ್ಥ ಈರಿತಃ ॥ (c) ಸಂಹಿತಾಖ್ಯಾನಿ ವಿಷ್ಣೋಸ್ತು ರೂಪಾಣ್ಯೇತಾನಿ ಸರ್ವಶಃ । ಅನ್ಯವಿದ್ಯಾಸ್ವಶಿಷ್ಯಸ್ಯ ನ ಬ್ರೂಯಾತ್ಪ್ರಥಮಂ ಕ್ವಚಿತ್ ॥ (d) ವ್ಯಾಖ್ಯಾನಶಕ್ತಿಹೀನಾಯ ನೈವ ಬ್ರೂಯಾತ್ಕಥಂಚನ । ವೈಷ್ಣವಾಯ ಸುವೃತ್ತಾಯ ಮೇಧಾಶ್ರದ್ಧಾಯುತಾಯ ಚ ॥ ಗುರೋಃ ಶುಶ್ರೂಷಕಾಯೈವ ಬ್ರೂಯಾದಿತ್ಯನುಶಾಸನಂ । ಇತಿ ಚ ॥

ಅ ॥ (a) ಹಿಂದೆ ಹೇಳಿದಪ್ರಕಾರ ವಿಷ್ಣುವೆಂಬ ನಾಮದಿಂದ ಹೇಳಲ್ಪಟ್ಟ ಯಾವ ಅರ್ಥವೋ, ಈ ಅರ್ಥವೇ ಎಲ್ಲಾ ವೇದಗಳಿಗೂ ಅರ್ಥವಾಗಿ ಹೇಳಲ್ಪಟ್ಟಿದೆ. ಇತರವಾದ ಎಲ್ಲಾ ವಚನವೂ ಆ ವಿಷ್ಣುನಾಮಕ್ಕೇನೇ ವ್ಯಾಖ್ಯಾನಭೂತವಾದುದು. (b) ಈ ಪ್ರಕಾರ, (ಅಥವಾ) ವಿಷ್ಣುನಾಮಕ್ಕೆ ಇದ್ದಂತೆಯೇ ಎಲ್ಲಾ ವೇದಾದಿವಚನಗಳಿಗೂ ಸರ್ವರಿಂದ ಅಧಿಕಗಳಾದ ಪ್ರೇರಕತ್ವವೂ ದೇಶಾದಿವ್ಯಾಪ್ತಿಯೂ ಸಾಮರ್ಥ್ಯವೂ (ಜ್ಞಾನವೂ) ಇವುಗಳೇ ಮೊದಲಾದ, ಪ್ರತ್ಯೇಕವಾಗಿಯೂ ಅವಧಿರಹಿತಗಳಾದ ನಿರ್ದುಷ್ಟಗಳಾದ ಗುಣಗಳಿಂದ ಪರಿಪೂರ್ಣವಾದ ಸ್ವಭಾವವು ಅರ್ಥವಾಗಿ ಹೇಳಲ್ಪಟ್ಟದೆ. (c) ವಿಷ್ಣುವಿನ ಸಂಹಿತಾನಾಮಕಗಳಾದ ಈ ಎಲ್ಲಾ ರೂಪಗಳನ್ನೂ ಇತರ ವಿದ್ಯೆಗಳಲ್ಲಿ ಶಿಷ್ಯನಾಗದೆ ಇದ್ದವನಿಗೆ ಪ್ರಥಮದಲ್ಲಿಯೇ ಎಲ್ಲಿಯೂ ಹೇಳಬಾರದು. (d) ಪಾಠಹೇಳುವ ಶಕ್ತಿರಹಿತನಾದವನಿಗೋಸ್ಕರವೂ ಯಾವ ಪ್ರಕಾರದಿಂದಲೂ ಹೇಳಬಾರದು. ವಿಷ್ಣುಭಕ್ತನೂ, ಸತ್ಕರ್ಮದಲ್ಲಿ ಆಸಕ್ತನೂ, ಪ್ರತಿಭಾ ಆಸ್ತಿಕ್ಯಬುದ್ಧಿ ಇವುಗಳಿಂದೊಡಗೂಡಿದವನೂ, ಗುರುಗಳನ್ನ ಸೇವಿಸತಕ್ಕವನೂ, ಆದ ಶಿಷ್ಯನಿಗೇನೇ ಹೇಳಬೇಕು. ಹೀಗೆ (ಸ್ಮೃತಿಕಾರರ) ಅನುಜ್ಞೆಯು. ಹೀಗೂ ಅದೆ.

ಭಾ॥ (a) ಯ ಏತೇನ ಣ ಇತಿ ಶಬ್ದೇನಾಽಕ್ರಿಯಮಾಣಂ ವಿಷ್ಣೋಃ ಪೂರ್ಣಬಲಂ ಷಶಬ್ದೇನಾಽಕ್ರಿಯಮಾಣಂ ದೇಶತಃ ಕಾಲತೋ ಗುಣತಶ್ಚಾತತತ್ವಂ ಚ ಸರ್ವಾ ಸಂಹಿತಾಮನು ತದರ್ಥತ್ವೇನ ವೇದ। ಅಕ್ಷರದ್ವಯಸಂಯೋಗರೂಪಯಾ ಸಂಹಿತಯೈತದೇವ ಸರ್ವತ್ರೋಚ್ಯತ ಇತಿ ಸ ಸಂಪೂರ್ಣಬಲಂ ಸರ್ವಪ್ರಣೇತೃತ್ವಶಕ್ತ್ಯಾದಿಯುಕ್ತಂ ವಿಷ್ಣುಂ ವೇದ ॥ (b) ಅಥೇತ್ಯಾದಿಕಾ ಅಪಿ ಸಂಹಿತಾರೂಪಾ ಏವ । ಪದವರ್ಣಯೋಃ ಪೃಥಗನಭಿವ್ಯಾಹಾರಾತ್ ॥ ತಸ್ಮಾತ್ಸರ್ವಶಬ್ದಾ ವಿಷ್ಣುನಾಮವ್ಯಾಖ್ಯಾನರೂಪಾ ಏವ । (c) ಯದ್ವಾಯಂ ಸಂಹಿತಾಯುಕ್ತತ್ವೇನಚೋಽಧೀಮಹೇ ತೇನಾಸ್ಮಾಕಂ ಣಶಬ್ದ ಷಶಬ್ದಾರ್ಥರೂಪೋ ವಿಷ್ಣುರುಪಾತ್ತಃ ॥ ತದ್ವ್ಯಾಖ್ಯಾನತ್ವಾತ್ಸರ್ವವಾಚಾಂ । ವೀತ್ಯುಪಸರ್ಗತ್ವಾದುಕಾರಸ್ಯ ಚ ತಾರ್ಕ್ಷ್ಯೇ

ಲ್ಯಾರ್ಥತ್ವಾದುಕ್ತಾರ್ಥವಿಶೇಷಣರೂಪತ್ವೇನ ಪ್ರಸಿದ್ಧತ್ವಾನ್ನ ಪೃಥಕ್ತ ಯೋರ್ವ್ಯಾಖ್ಯಾನಮತ್ರ ಕೃತಂ॥ ಋಚ ಇತಿ ಸರ್ವವಾಚಾಮುಪಲಕ್ಷಣಂ। (d) ಅತಃ ಸರ್ವವೇದಾದಿಶಬ್ದೋದಿತಃ ಸರ್ವಗುಣಪರಿಪೂರ್ಣೋ ಭಗ ವಾನ್ನಾರಾಯಣ ಇತಿ ಸಿದ್ಧಂ॥ (e) ಸರ್ವೈಶ್ಚ ವೈದಿಕಪದೈರಪಿ ಲೋಕ ಶಬ್ದೈರ್ಮೇಘಾಗ್ನಿವಾರಿಧಿತಲಾದಿರವೈಶ್ಚ ಸರ್ವೈಃ। ಏಕೋಽಭಿಧೇಯ ಪರಿಪೂರ್ಣಗುಣಃ ಪ್ರಿಯೋಽಲಂ ನಾರಾಯಣೋ ಮಮ ಸದೈವ ಸುತುಷ್ಟಿ ಮೇತು ॥ ೬ ॥

ಅ ॥ (a) ಯಃ=ಯಾವ ಅಧಿಕಾರಿಯು, ಏತೇನ=ಈ ವಿಷ್ಣುನಾಮದಲ್ಲಿದ್ದ, ಣ ಇತಿ ಶಬ್ದೇನ=ಣ ಎಂಬ ಶಬ್ದದಿಂದ, ಆಕ್ರಿಯಮಾಣಂ=ಹೇಳಲ್ಪಡುವ, ವಿಷ್ಣೋಃ=ಶ್ರೀ ಹರಿಯ, ಪೂರ್ಣಬಲಂ=ಪರಿಪೂರ್ಣ ಸಾಮರ್ಥ್ಯವನ್ನು, ವೇದ=ತಿಳಿಯುತ್ತಾನೋ, ಷ ಶಬ್ದೇನ=ಷ ಎಂಬ ಶಬ್ದದಿಂದ, ಆಕ್ರಿಯಮಾಣಂ=ಹೇಳಲ್ಪಡುವ, ದೇಶತಃ ಕಾಲತಃ ಗುಣತಶ್ಚ ಆತತತ್ವಂ= ದೇಶಕಾಲಗುಣಗಳಿಂದ ವ್ಯಾಪ್ತಿಯನ್ನೂ, ಚ=ಪ್ರೇರಕತ್ವವನ್ನೂ ಕೂಡ, ಸರ್ವಾಂ ಸಂಹಿತಾಂ ಅನು=ಎಲ್ಲಾ (ಋಕ್ಕುಗಳ) ಸಂಹಿತೆಯನ್ನು ಅನುಸರಿಸಿ, ತದರ್ಥತ್ವೇನ=ಣಕಾರಷಕಾರಗಳ ಅರ್ಥವಾಗಿ, ವೇದ=ತಿಳಿಯುತ್ತಾನೋ, ಅಕ್ಷರದ್ವಯಸಂಯೋಗರೂಪಯಾ ಸಂಹಿತಯಾ= ಎರಡು ಅಕ್ಷರಗಳ ಸಂಯೋಗರೂಪವಾದ ಸಂಹಿತೆಯಿಂದಲೂ, ಏತದೇವ=ಷ್ಣು ಎಂಬ ಶಬ್ದಾ ರ್ಥವೇ, ಸರ್ವತ್ರ=ಎಲ್ಲಾ ವೇದಾದಿಗಳಲ್ಲಿಯೂ, ಉಚ್ಯತೇ=ಹೇಳಲ್ಪಡುತ್ತದೆ. ಇತಿ= ಈ ಪ್ರಕಾರ, ವೇದ=ತಿಳಿಯುತ್ತಾನೋ, ಸಃ=ಆತನೇ, ಸಂಪೂರ್ಣಬಲಂ=ಪರಿಪೂರ್ಣಸಾಮ ರ್ಥ್ಯವುಳ್ಳ, ಸರ್ವ ಪ್ರಣೇತೃತ್ವ ಶಕ್ತ್ಯಾದಿಯುಕ್ತಂ=ಸರ್ವ ಪ್ರೇರಕತ್ವಶಕ್ತಿಯೂ ವ್ಯಾಪ್ತತ್ವವೂ ಇದೇ ಮೊದಲಾದವುಗಳಿಂದೊಡಗೂಡಿದ ವಿಷ್ಣುವನ್ನು ತಿಳಿಯುತ್ತಾನೆ. (b) ಅಥೇತ್ಯಾದಿಕಾ ಅಪಿ=ಅಥ ಇತಿ ಎಂಬುವುದೇ ಮೊದಲಾದವೂ ಕೂಡ, ಸಂಹಿತಾರೂಪಾ ಏವ=ಸಂಹಿತಾರೂಪ ಗಳೇವೇ ಸರಿ. ಪದವರ್ಣಯೋಃ=ಪದದಲ್ಲಿರತಕ್ಕ ವರ್ಣಗಳಿಗೆ, ಪೃಥಕ್ ಅನಭಿವ್ಯಾಹಾ ರಾತ್=ಪ್ರತ್ಯೇಕ ಹೇಳೋಣವಿಲ್ಲದಿರುವುದರಿಂದ, (ಮಧ್ಯೆ ನಿಲ್ಲಿಸಿ ಉಚ್ಚಾರಣವಿಲ್ಲದಿರುವುದರಿಂದ) ತಸ್ಮಾತ್=ಆದುದರಿಂದ, ಸರ್ವ ಶಬ್ದಾಃ=ಎಲ್ಲಾ ಶಬ್ದಗಳೂ, ವಿಷ್ಣುನಾಮ ವ್ಯಾಖ್ಯಾನರೂಪಾ ಏವ=ವಿಷ್ಣುವೆಂಬ ನಾಮಧೇಯಕ್ಕೆ ವ್ಯಾಖ್ಯಾನರೂಪಗಳೇವೇ ಆಗಿವೆ. (c) ಯತ್=ಯಾವ ಕಾರಣದಿಂದ, ವಯಂ=ನಾವು, ಸಂಹಿತಾಯುಕ್ತತ್ವೇನ=ಸಂಹಿತಾನಾಮಕ ಭಗವಂತನನ್ನು ಪ್ರತಿಪಾದಿಸುವುದರಿಂದ ಣಕಾರ ಷಕಾರಾರ್ಥರೂಪನು ವಿಷ್ಣುವೆಂದು ಋಚಃ=ಋಕ್ಕುಗಳನ್ನು, ಅಧೀಮಹೇ=ಅಧ್ಯಯನಮಾಡುತ್ತೇವೋ, ತೇನ=ಅದರಿಂದ, ಅಸ್ಮಾಕಂ=ನಮಗೆ, ಣ ಶಬ್ದ ಷ ಶಬ್ದಾರ್ಥರೂಪಃ=ಣ ಶಬ್ದ ಷ ಶಬ್ದಗಳಿಗೆ ಅರ್ಥಭೂತನಾದ, ವಿಷ್ಣುಪದದಿಂದ ಹೇಳಲ್ಪಟ್ಟ, ವಿಷ್ಣುಃ=ಶ್ರೀ ಹರಿಯು, ಉಪಾತ್ತಃ=ಪ್ರಾಪಿಸಲ್ಪಟ್ಟನು. ಸರ್ವ ವಾಚಾಂ=ಎಲ್ಲಾ ವಚನ ಗಳಿಗೂ, ತದ್ವ್ಯಾಖ್ಯಾನತ್ವಾತ್=ವಿಷ್ಣುವೆಂಬುವುದರ ಅರ್ಥಪ್ರತಿಪಾದಕತ್ವವಿದ್ದುದರಿಂದ (ಉಪ ನಿಷತ್ತಿನಲ್ಲಿ ವಿಕಾರ ಉಕಾರಗಳಿಗೆ ಏಕೆ ಅರ್ಥವು ಹೇಳಲ್ಪಡಲಿಲ್ಲ? ಎಂದರೆ) ವೀತ್ಯುಪಸರ್ಗ ತ್ವಾತ್=ವಿ ಎಂಬುವುದು ಉಪಸರ್ಗವಾದುದರಿಂದಲೂ, ಉಕಾರಸ್ಯ ಚ=ಉಕಾರಕ್ಕೆ, ತಾಚ್ಛೀ ಲ್ಯಾರ್ಥತ್ವಾತ್=ತತ್ಸ್ವಭಾವಾರ್ಥತ್ವ ವಿದ್ದುದರಿಂದಲೂ, ಉಕ್ತಾರ್ಥವಿಶೇಷಣರೂಪತ್ವೇನ= ಹೇಳಿದ ಅರ್ಥಗಳಲ್ಲಿ ವಿಶೇಷಣ ನಿರೂಪಕವಾಗಿ, ಪ್ರಸಿದ್ಧತ್ವಾತ್=ಪ್ರಸಿದ್ಧಿಯಿದ್ದುದರಿಂದ, ಪೃಥಕ್=ಪ್ರತ್ಯೇಕವಾಗಿ, ತಯೋಃ=ಆ ವಿಕಾರ ಉಕಾರಗಳಿಗೆ, ವ್ಯಾಖ್ಯಾನಂ=ವ್ಯಾಖ್ಯಾನವು,

ಅತ್ರ=ಈ ಉಪನಿಷತ್ತಿನಲ್ಲಿ, ನ ಕೃತಂ=ಮಾಡಲ್ಪಡಲಿಲ್ಲ. ಋಚ ಇತಿ=ಋಚಃ ಎಂಬುವುದು, ಸರ್ವವಾಚಾಂ=ವೇದಪುರಾಣ ಮೊದಲಾದ ಎಲ್ಲಾ ವಾಕ್ಯಗಳಿಗೂ, ಉಪಲಕ್ಷಣಂ=ತನ್ನ ಅರ್ಥವನ್ನು ಬಿಡದೆ ಇತರಾರ್ಥಗಳಿಗೂ ಗ್ರಾಹಕವು. (d) ಅತಃ=ಆದುದರಿಂದ, ಭಗವಾನ್ ನಾರಾಯಣಃ=ಪೂಜ್ಯನಾದ ನಾರಾಯಣನೇ, ಸರ್ವ ವೇದಾದಿಶಬ್ದೋದಿತಃ=ಎಲ್ಲಾ ವೇದಗಳೇ ಮೊದಲಾದ ಶಬ್ದಗಳಿಂದ ಪ್ರತಿಪಾದಿತನೆಂದೂ, ಸರ್ವ ಗುಣಪರಿಪೂರ್ಣ ಇತಿ=ಎಲ್ಲಾ ಗುಣಗಳಿಂದಲೂ ಪರಿಪೂರ್ಣನಾಗಿದ್ದಾನೆಂದೂ, ಸಿದ್ಧಂ=ಸಿದ್ಧವಾಯಿತು. [ತಾ || ೨ನೇ ಆರಣ್ಯಕದಲ್ಲಿ ೧ನೇ ಅಧ್ಯಾಯದ ಉಪಕ್ರಮದಲ್ಲಿ ಏಷ ಪಂಥಾಃ ಎಂಬುವಲ್ಲಿ ಸಕಲಗುಣಪರಿಪೂರ್ಣನಾಗಿ ಸರ್ವೋತ್ತಮನಾದುದರಿಂದ ನಾರಾಯಣನೇ ಮೋಕ್ಷೇಚ್ಛುಗಳಿಂದ ಉಪಾಸ್ಯನೆಂದು ಪ್ರತಿಜ್ಞಾ ಮಾಡಿ ಆತನೇ ಸರ್ವೋತ್ಕೃಷ್ಟನೆಂದು ಆ ಅಧ್ಯಾಯದ ೮ ಖಂಡಗಳಿಂದ ವಿಸ್ತರಿಸಲ್ಪಟ್ಟಿತು. ಆ ಹೇತುಭೂತವಾದ ಗುಣಪೂರ್ಣತ್ವವನ್ನು ೨ನೇ ಅಧ್ಯಾಯದಲ್ಲಿ 'ಪ್ರಾಣಋಚಃ ಇತ್ಯೇವ ವಿದ್ಯಾತ್' ಎಂಬುವ ಪರ್ಯಂತ ಹೇಳಿ ಆ ವಿಷಯದಲ್ಲಿಯೇ 'ವಿಶ್ವಾಮಿತ್ರಂ ಹ್ಯೇತದಹಃ' ಇತ್ಯಾದಿ ಶಿಷ್ಟಾಧ್ಯಾಯದಿಂದ ಆಖ್ಯಾಯಿಕೆಯು (ಹಿಂದಿನ ವೃತ್ತಾಂತವು) ಹೇಳಲ್ಪಟ್ಟಿತು. ೩ನೇ ಅಧ್ಯಾಯದಲ್ಲಿ' ಯೋ ಹ ವಾ ಆತ್ಮಾನಂ' ಇತ್ಯಾದಿಯಿಂದ ಪೂರ್ವಾಧ್ಯಾಯದಲ್ಲಿ ಹೇಳಿದ ಬೃಹತೀ ಸಹಸ್ರದಿಂದ ಪ್ರತಿಪಾದ್ಯನಾಗಿದ್ದಾನೆಂದೂ ಆದುದರಿಂದಲೇ ಬೃಹತೀಸಹಸ್ರಕ್ಕೆ ವ್ಯಾಖ್ಯಾನಭೂತಗಳಾದ ಸರ್ವ ಶಬ್ದಗಳಿಂದ ವಾಚ್ಯನಾಗಿದ್ದಾನೆಂದೂ ವಿಶದೀಕರಿಸಲ್ಪಟ್ಟಿದೆ. ೪ನೇ ಅಧ್ಯಾಯದಲ್ಲಿ 'ಆತ್ಮಾ ವಾ ಇದಮೇಕ ಏವಾಗ್ರ ಆಸೀತ್' ಇತ್ಯಾದಿಯಿಂದ ಆತನಿಗೇನೇ ಸರ್ವ ಜಗತ್ಕಾರಣತ್ವವನ್ನು ಹೇಳಿ ಸಮನ್ವಯವು ಹೇಳಲ್ಪಟ್ಟಿದೆ. ೫ನೇ ಅಧ್ಯಾಯದಲ್ಲಿ 'ಪುರುಷೋ ಹ ವಾ' ಇತ್ಯಾದಿಯಿಂದ ಅವಾಂತರ ಸೃಷ್ಟಿಪರಗಳಾದ ಪುರುಷ ಸ್ತ್ರೀ ಮೊದಲಾದ ಶಬ್ದಗಳಿಗೆ ಸಮನ್ವಯವು ಹೇಳಲ್ಪಟ್ಟಿದೆ. ೬ನೇ ಅಧ್ಯಾಯದಲ್ಲಿ 'ಕೋಽಯಮಾತ್ಮಾ' ಇತ್ಯಾದಿಯಿಂದ ವಿಶೇಷ ಗುಣಗಳ ಪ್ರಾಪ್ತಿಗಾಗಿ 'ಯದೇತ ದ್ಧೃದಯಂ ಮನಃ' ಇತ್ಯಾದಿಯಿಂದ ಸಮನ್ವಯವು ಹೇಳಲ್ಪಟ್ಟಿತು. ೭ನೇ ಅಧ್ಯಾಯದಲ್ಲಿ 'ವಾಙ್ಮೇ ಮನಸಿ' ಇತ್ಯಾದಿಯಿಂದ ಸ್ಪಷ್ಟವಾಗಿ ಸರ್ವ ವಚನಗಳಿಗೂ ವಿಷಯೀಭೂತನೆಂದು ಹೇಳಲ್ಪಟ್ಟಿದ್ದಾನೆ. ೩ನೇ ಆರಣ್ಯಕದಲ್ಲಿ ಸರ್ವ ವಚನಗಳಿಗೂ ವ್ಯಾಖ್ಯೇಯವಾದ ವಿಷ್ಣುವೆಂಬನಾಮದ ಸಂಹಿತೆಯಿಂದ ಪ್ರತಿಪಾದ್ಯನಾಗಿದ್ದಾನೆಂದು ಹೇಳಿರುವುದರಿಂದ ಸರ್ವ ಶಬ್ದಗಳ ಸಮನ್ವಯವೇ ೧. ೨. ಅಧ್ಯಾಯಗಳಿಂದ ಹೇಳಲ್ಪಟ್ಟಿತು. ಯಾವ ಕಾರಣದಿಂದ ಈಪ್ರಕಾರ ವೇದ ಮೊದಲಾದ ಎಲ್ಲಾ ಶಬ್ದಗಳಿಂದಲೂ ಹೇಳಲ್ಪಟ್ಟಿದ್ದಾನೋ, ಆಕಾರಣ ಸರ್ವ ಗುಣಪೂರ್ಣನಾದ, ಪೂಜ್ಯನಾದ ನಾರಾಯಣನೇ ಸರ್ವೋತ್ತಮನು. ಆದುದರಿಂದ ಆತನೇ ಉಪಾಸ್ಯನೆಂದು ಯಾವುದೊಂದು ಉಪಕ್ರಮದಲ್ಲಿ ಹೇಳಲ್ಪಟ್ಟಿದೋ ಅದು ಉಚಿತವೆಂದು ಸಿದ್ಧವಾಯಿತು.] (e) (ಈಪ್ರಕಾರವಾಗಿ ಭಾಷ್ಯವನ್ನು ಸಮಾಪಿಸಿದ ಸರ್ವಜ್ಞ ಚೂಡಾಮಣಿಗಳಾದ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯವರ್ಯರು ಈ ಉಪನಿಷತ್ತಿನಲ್ಲಿ ಸರ್ವ ಶಬ್ದ ಸಮನ್ವಯಮುಖದಿಂದ, ಅಪರಿಮಿತ ಗುಣವಿಶಿಷ್ಟನಾಗಿಯೂ ಪರಮೋತ್ಕೃಷ್ಟನಾದ ವಾಯು ಅಧಿಷ್ಠಿತನಾಗಿಯೂ ಸ್ತುತಿಸಲ್ಪಟ್ಟ ಪೂಜ್ಯನಾದ ನಾರಾಯಣನನ್ನೇ ಅದೇರೀತಿಯಾಗಿ ಅಂತ್ಯದಲ್ಲಿಯೂ ಸಂತೋಷಿಸುತ್ತಾರೆ.) ಸರ್ವೈಶ್ಚ ವೈದಿಕಪದೈಃ=ವೇದಾದಿಗಳಲ್ಲಿದ್ದ ಅಗ್ನಿ ಮೊದಲಾದ ಎಲ್ಲಾ ಪದಗಳಿಂದಲೂ, ಲೋಕಶಬ್ದೈರಪಿ=ಪ್ರಾಕೃತಶಬ್ದಗಳಿಂದಲೂ, ಮೇಘಾಗ್ನಿವಾರಿಧಿ ತಲಾದಿಭವೈಶ್ಚ=ಮೇಘಗಳೂ ಅಗ್ನಿಯೂ ಸಮುದ್ರ, ಪ್ರದೇಶ, ಭೇರೀತಾಡನ ಇವುಗಳೇ ಮೊದಲಾದವುಗಳಿಂದ ಹುಟ್ಟಿರುವ, ಸರ್ವೈಃ=ಧ್ವನ್ಯಾತ್ಮಕಗಳಾದ ಎಲ್ಲಾ ಶಬ್ದಗಳಿಂದಲೂ ಕೂಡ, (ಅವುಗಳಿಂದ ವ್ಯಕ್ತವಾಗುವ ವರ್ಣದ್ವಾರಾ) ಏಕ ಏವ=ಒಬ್ಬನೇ

ಅಭಿಧೇಯ ಪರಿಪೂರ್ಣ ಗುಣಃ=ಹೇಳಲ್ಪಡತಕ್ಕ ಪರಿಪೂರ್ಣಗಳಾದ ಗುಣಗಳುಳ್ಳ, ಮಮ=ನನಗೆ, ಅಲಂ ಪ್ರಿಯಃ=ಅತಿ ಪ್ರಿಯನಾದ, ನಾರಾಯಣಃ=ಲಕ್ಷ್ಮೀಪತಿಯಾದ ಶ್ರೀ ಪರಮಾತ್ಮನು, ಸದೈವ=ಯಾವಾಗಲೂ, ಅಲಂ ಸುತುಷ್ಟಿಂ=ಚೆನ್ನಾಗಿ ಅತಿಸಂತೋಷವನ್ನು, ಏತು=ಹೊಂದಲಿ. ॥ ೬ ॥

ತಾವು ಪರಮ ಆಪ್ತರಾಗಿದ್ದರೇನೇ ತಮ್ಮ ಗ್ರಂಥವನ್ನು ಪ್ರಮಾಣವೆಂದು ಅಂಗೀಕರಿಸಿಯಾರು. ಆದಪ್ರಯುಕ್ತ ತಮ್ಮ ಸ್ವರೂಪಜ್ಞಾನವೂ ವಿಷ್ಣುವಿನ ಜ್ಞಾನದಂತೆ ಮುಕ್ತಿಗೆ ಅಂಗವಾದುದರಿಂದ ತಮ್ಮ ಸ್ವರೂಪವನ್ನು ನಿರೂಪಿಸುತ್ತಾ ಗ್ರಂಥನಿರ್ಮಾಣವನ್ನು ಪರಮಾಪ್ತನಾದ ಶ್ರೀ ಲಕ್ಷ್ಮೀಪತಿಯಲ್ಲಿ ಸಮರ್ಪಿಸುತ್ತಾರೆ. ಆಪ್ತನೆಂದರೆ- ಯಥಾರ್ಥವನ್ನೇ ಹೇಳುವವನೂ, ವಿವಕ್ಷಿತವಾದ ಅರ್ಥಜ್ಞಾನ ಇರತಕ್ಕವನೂ, ಹೇಳಬೇಕೆಂಬ ಇಚ್ಛಾ ಇರತಕ್ಕವನೂ, ಬೋಧಿಸಲಿಕ್ಕೆ ಉಪಯುಕ್ತಗಳಾದ ಇಂದ್ರಿಯಗಳಲ್ಲಿ ಪಟುತ್ವವುಳ್ಳವನೂ, ಪರರನ್ನು ವಂಚಿಸಬೇಕೆಂಬ ಇಚ್ಛೆಯಿಲ್ಲದಿರುವವನು.

ಭಾ॥ (a) ಯಸ್ಯ ತ್ರೀಣ್ಯುದಿತಾನಿ ವೇದವಚನೇ ರೂಪಾಣಿ ದಿವ್ಯಾನ್ಯಲಂ ಬಟ್ತದ್ದರ್ಶತಮಿತ್ಥಮೇವ ನಿಹಿತಂ ದೇವಸ್ಯ ಭರ್ಗೋ ಮಹತ್ । ವಾಯೋ ರಾಮವಚೋನಯಂ ಪ್ರಥಮಕಂ ಪೃಕ್ಷೋ ದ್ವಿತೀಯಂ ವಪುರ್ಮಧ್ವೋ ಯತ್ತು ತೃತೀಯಕಂ ಕೃತಮಿದಂ ಭಾಷ್ಯಂ ಹಿ ತೇನ ಪ್ರಭೌ ॥ (b) ಹನುಶಬ್ದೋ ಜ್ಞಾನವಾಚೀ ಹನೂಮಾನ್ಮತಿಶಬ್ದಿತಃ । ರಾಮಸ್ಯ ಸ್ವೃತರೂಪಸ್ಯ ವಾಚಸ್ತೇನಾನಯಂತ ಹಿ ॥ (c) ಭೃತಮೋ ಭೀಮ ಇತ್ಯುಕ್ತೋ ವಾಚೋ ಮಾ ಮಾತರಃ ಸ್ಮೃತಾಃ । ಋಗಾದ್ಯಾ ಇತಿಹಾಸಂ ಚ ಪುರಾಣಂ ಪಂಚರಾತ್ರಕಂ ॥ ಪ್ರೋಕ್ತಾಃ ಸಪ್ತ ಶಿವಾಸ್ತತ್ರ ಶಯೋ ಭೀಮಸ್ತತಃ ಸ್ಮೃತಃ । (d) ಮಧ್ವಿತ್ಯಾನಂದ ಉದ್ದಿಷ್ಟೋ ವೇತಿ ತೀರ್ಥಮುದಾಹೃತಂ ॥ ಮಧ್ವ ಆನಂದತೀರ್ಥಃ ಸ್ಯಾತ್ತೃತೀಯಾ ಮಾರುತೀ ತನುಃ । ಇತಿ ಸೂಕ್ತಗತಂ ರೂಪತ್ರಯಮೇತನ್ಮಹಾತ್ಮನಃ । ಯೋ ವೇದ ವೇದವಿತ್ಸಸ್ಯಾತ್ತತ್ತ್ವವಿತ್ತತ್ಪ್ರಸಾದತಃ । ಇತಿ ಚ ॥

ಅ ॥ (a) ಯಸ್ಯ ವಾಯೋಃ ದೇವಸ್ಯ=ಯಾವ ಬಲ ಜ್ಞಾನ ಸ್ವರೂಪರಾದ, ಕ್ರೀಡಾದಿ ಗುಣವಿಶಿಷ್ಟರಾದ ವಾಯುದೇವರ, ಅಲಂ ದಿವ್ಯಾನಿ=ಅತ್ಯದ್ಭುತಗಳಾದ, ತ್ರೀಣಿ ರೂಪಾಣಿ=ಮೂರು ರೂಪಗಳು, ವೇದವಚನೇ=ಬಳಿತ್ಥೇತ್ಯಾದಿ ವೇದಮಂತ್ರದಲ್ಲಿ, ಉದಿತಾನಿ=ಹೇಳಲ್ಪಟ್ಟವೋ, ಯಸ್ಯ=ಯಾವ ವಾಯುದೇವರ, ತತ್=ಆ ಮೂಲರೂಪವು, ಬಟ್=ಬಲಾತ್ಮಕವು. ದರ್ಶತಂ=ಜ್ಞಾನಸ್ವರೂಪವು, (ದೃಶ ಧಾತುವಿಗೆ ಔಣಾದಿಕವಾದ ಅತಚ್ ಪ್ರತ್ಯಯವು. ಇದರಿಂದ ವಾಯು ಶಬ್ದವನ್ನು ನಿರ್ವಚನ ಮಾಡಿದಂತೆ ಆಯಿತು. 'ವ' ಶಬ್ದವು ಬಲವಾಚಕವು. 'ಆಯ್' ಎಂಬುವುದು ಗತ್ಯರ್ಥಕವು. (ಜ್ಞಾನಾರ್ಥಕವು) ಆ ಮೇಲೆ 'ಉಣ್' ಪ್ರತ್ಯಯವು. ಅಂತೂ ವಶ್ಚಾಸೌ ಆಯುಶ್ಚ ವಾಯುಃ ಎಂದು). ಭರ್ಗಃ=ಭರಣ (ಪೋಷಿಸುವಿಕೆ) ಗಮನಗಳನ್ನು ಮಾಡತಕ್ಕುದು. (ಡುಭೃ ಞ ಭರಣೇ, ಗಮ್ಲೃ ಗತೌ, ಈ ಧಾತುಗಳಿಂದ 'ಅಸುನ್' ಪ್ರತ್ಯಯವು. ಡಿತ್ 'ಟ' ಗೆ ಲೋಪವು. ಇದೂ ವಾಯು ಶಬ್ದಕ್ಕೆ ವ್ಯಾಖ್ಯಾನವು. 'ವಾ ಗತಿಗಂಧನಯೋಃ' ಎಂಬುವುದರಿಂದ 'ಕೃವಾ ಪಾ ಜಿಮಿಸ್ವದಿ ಸಾಧ್ಯ ಶೂಭ್ಯ ಉಣ್' ಎಂದು

'ಉಣ್' ಪ್ರತ್ಯಯವು. ಧಾತುಗಳಿಗೆ ಅನೇಕಾರ್ಥತ್ವವಿದ್ದುದರಿಂದ 'ಮಾ' ಧಾತುವು ಭರಣಾರ್ಥದಲ್ಲಿಯೂ ಇದೆ.) ಮಹತ್=ಶ್ರೇಷ್ಠವು. (ಮಯ ಶ್ರೇಷ್ಠತ್ವೇ, ಎಂಬುವುದರಿಂದ 'ಉಣ್' ತಥಾಚ ವಾಯುಃ) ಯಸ್ಯ=ಯಾವ ವಾಯುದೇವರ, (ಅವತಾರಗಳಲ್ಲಿ) ನಿಹಿತಂ=ಇಡಲ್ಪಟ್ಟ ರೂಪವೂ, ಇತ್ಥಮೇವ=ಇದೇರೀತಿಯಾಗಿ, (ವೈಷಮ್ಯ ಇಲ್ಲವೇ ಇಲ್ಲ) ಯಸ್ಯ=ಯಾವ ವಾಯುದೇವರ, ಪ್ರಥಮಕಂ=ಒಂದನೇ ರೂಪವು, ರಾಮವಚೋನಯಂ=ರಾಮವಿಷಯಕಗಳಾದ, ಮೂಲರಾಮಾಯಣ ಮೊದಲಾದ ವಾಕ್ಯಗಳನ್ನು ಶಿಷ್ಯರಲ್ಲಿ ಪ್ರವರ್ತಿಸತಕ್ಕದು. ಯಸ್ಯ=ಯಾವ ವಾಯುದೇವರ, ದ್ವಿತೀಯಂ ವಪುಃ=ಎರಡನೇ ಶರೀರವು, ಪೃಕ್ಷಃ=ಶತ್ರುಗಳ ಸೈನ್ಯವನ್ನು ನಾಶಮಾಡತಕ್ಕದು. (ಪೃತ್ ಶಬ್ದವು ಸೈನ್ಯವಾಚಕವು, ಆ ಕರ್ಮವಾಚಕವಾದ ಪದವು ಉಪಪಾದವಾಗಲು 'ಕ್ಷೈ ಕ್ಷಯೇ, ಎಂಬುವುದಕ್ಕೆ 'ಆತೋऽನುಪಸರ್ಗೇ ಕಃ' ಎಂದು ಕ ಪ್ರತ್ಯಯವು. ತಕಾರಕ್ಕೆ ಲೋಪವು.) ಯಸ್ಯ=ಯಾವ ವಾಯುದೇವರ, ಯತ್ತು ತೃತೀಯಕಂ ಮಧ್ವಃ=ಯಾವ ಮೂರನೇದ್ದಾದ ಮಧ್ವಾಖ್ಯ ರೂಪವಿದೆಯೋ,('ಮಧು ದ್ಯೌ ರಸ್ತು ನಃ ಪಿತಾ' ಇತ್ಯಾದಿ ಪ್ರಯೋಗದಿಂದ ಮಧು ಶಬ್ದವು ಸುಖವಾಚಕವು. 'ವಾ' ಗತಿಗಂಧನಯೋಃ ಎಂಬುವುದರಿಂದ ಕರಣಾರ್ಥದಲ್ಲಿ ಘಞರ್ಥದಲ್ಲಿ ಕಃ ಅಂತೂ ವ ಶಬ್ದವು ಶಾಸ್ತ್ರಾಪರಪರ್ಯಾಯ ತೀರ್ಥವಾಚಕವು. 'ಸುಖಸಾಧನಂ ತೀರ್ಥಂ ಅಸ್ಯೇತಿ' ವ್ಯುತ್ಪತ್ತಿಯಿಂದ ಸುಖಸಾಧನೀಭೂತವಾದ ಶಾಸ್ತ್ರವನ್ನು ನಿರ್ಮಿಸಿದವರು.) ತೇನ=ಆ ವಾಯುಸ್ವರೂಪರಾದ ಮಧ್ವಾಚಾರ್ಯರಿಂದ, ಪ್ರಭೌ=ಸರ್ವಸ್ವಾಮಿಯಾದ ಶ್ರೀ ಹರಿವಿಷಯದಲ್ಲಿ, ಇದಂ ಭಾಷ್ಯಂ=ಈ ಭಾಷ್ಯವು, ಕೃತಂ=ಮಾಡಲ್ಪಟ್ಟಿತು. ಹಿ=ಶ್ರುತಿ ಪ್ರಸಿದ್ಧವು. (b) ('ಬಳಿತ್ಥೇತ್ಯಾದಿ ಸೂಕ್ತವನ್ನು ಅನುಕ್ರಮಣಿಕೆಯಲ್ಲಿ ದಕ್ಷಿಣಾಗ್ನಿ ಗಾರ್ಹಪತ್ಯ ಆಹವನೀಯ ಎಂಬೀ (೩) ಅಗ್ನಿಪರವಾಗಿ ವ್ಯಾಖ್ಯಾನ ಮಾಡಿರುವುದರಿಂದ ವಾಯು ದೇವರ ಮೂರು ರೂಪಗಳನ್ನು ಈ ಸೂಕ್ತವು ಪ್ರತಿಪಾದಿಸುತ್ತದೆ. ಎಂಬುವುದು ಹೇಗೆ ಸಂಗತವಾಗಬಹುದೆಂದರೆ ಕೇವಲ ಅಗ್ನಿಪರವಲ್ಲವೇ ಅಲ್ಲ. ಕಿಂತು ಪ್ರಾಣಾಖ್ಯಅಗ್ನಿಪರವೇ ಸರಿ ಎಂದಭಿಪ್ರಾಯದಿಂದ ಪ್ರಮಾಣದಿಂದ ವಾಯುದೇವರ ರೂಪತ್ರಯ ವಿಷಯಕವಾಗಿ ವ್ಯಾಖ್ಯಾನಮಾಡುತ್ತಾರೆ.) ಹನುಶಬ್ದಃ=ಹನು ಎಂಬ ಶಬ್ದವು, ಜ್ಞಾನವಾಚೀ=ಜ್ಞಾನವೆಂಬ ಅರ್ಥವನ್ನು ಹೇಳುತ್ತದೆ. ('ಹನ ಹಿಂಸಾಗತ್ಯೋಃ' ಎಂಬಧಾತುವಿನಿಂದ 'ಶೃಸ್ವೃಸ್ನಿಹಿತ್ರಪ್ಯಸಿವಸಿ ಹನಿಕ್ಲಿದಿ ಬಂಧಿಮನಿಭ್ಯಶ್ಚ, ಎಂಬುವುದರಿಂದ ಉಕಾರವು. ಗತ್ಯರ್ಥಗಳಿಗೆ ಜ್ಞಾನಾರ್ಥತ್ವವಿದ್ದುದರಿಂದ ಜ್ಞಾನವಾಚಕವು.) ಹನುಮಾನ್=ಜ್ಞಾನವುಳ್ಳ ಹನುಮಂತನೇ, ಮತಿಶಬ್ದಿತಃ=ಸಾಧಿತೇ ಮತಿಃ ಎಂಬೀ ೧ನೇ ಋಕ್ಕಿನಲ್ಲಿದ್ದ ಮತಿ ಎಂಬ ಶಬ್ದದಿಂದ ಹೇಳಲ್ಪಡುತ್ತಾನೆ. ('ಮನು ಅವಬೋಧನೇ' ಎಂಬುವುದರಿಂದ 'ಕರ್ತರಿ ಕ್ತಿನ್' ಪ್ರತ್ಯಯವು.) ('ಋತಸ್ಯ ಧೇನಾ ಅನಯಂತ' ಎಂಬುವುದನ್ನು ವ್ಯಾಖ್ಯಾನಮಾಡುತ್ತಾರೆ.) ಸ್ವೃತರೂಪಸ್ಯ=('ಋತಂ ಯಥಾರ್ಥವಿಜ್ಞಾನಂ' ಎಂಬೀವಚನದಿಂದ) ಯಥಾರ್ಥಜ್ಞಾನಸ್ವರೂಪರಾದ, ('ಋ ಗತೌ' ಎಂಬುವುದರಿಂದ ಭಾವಾರ್ಥದಲ್ಲಿ ಕ್ತ ಪ್ರತ್ಯಯವು) ಅಥವಾ, ಯಾವಾಗಲೂ ಒಂದೇ ಪ್ರಕಾರವಾಗಿ ತಿಳಿಯಲ್ಪಟ್ಟ, ('ಋಗತಾವಿತಿ ಧಾತೋಸ್ತು ಪೂರ್ವಾವಗತವತ್ಸದಾ । ಸ್ಥಿತೇರ್ಬ್ರಹ್ಮರ್ತಮಿತ್ಯುಕ್ತಂ' ಎಂಬ ವಚನದಿಂದ, ಕರ್ತರಿ ಕ್ತ ಪ್ರತ್ಯಯವು). ರಾಮಸ್ಯ=ರಾಮದೇವರ, (ಧೇಟ್ ಪಾನೇ, ಧಯಂತೇ, ಪಿಬಂತಿ, ಆಸು ಮುಮುಕ್ಷವಃ ರಾಮಕಥಾಮೃತಂ ಎಂದು ಧೇನಾಃ) ವಾಚಃ=ಮೂಲರಾಮಾಯಣ ಮೊದಲಾದ ಮಾತುಗಳು, ತೇನ=ಆ ಹನುಮಂತನಿಂದ, ಅನಯಂತ ಹಿ=(ಶಿಷ್ಯರಲ್ಲಿ) ಒಯ್ಯಲ್ಪಟ್ಟವು. (ಅಥವಾ ಧೇಟ್‌ಶುದ್ಧಾ, ಅಪಶಬ್ದಾದಿ ದೋಷರಹಿತಗಳಾದ ಸಂದೇಶರೂಪ ಮಾತುಗಳನ್ನು ಸೀತೆಯನ್ನು ಕುರಿತು ತೆಗೆದುಕೊಂಡು ಹೋದರು). (c) (೨ನೇ ಋಕ್ಕನ್ನು ವ್ಯಾಖ್ಯಾನಮಾಡುತ್ತಾರೆ) ಭೃತಮಃ=ಯಾರಲ್ಲಿ

ಪ್ರಮಾಣಗಳು ಧರಿಸಲ್ಪಟ್ಟವೋ, ಆತನು (ಪ್ರಮಾಣಗಳನ್ನು ಧರಿಸಿದವನು). ಭೀಮ ಇತ್ಯುಕ್ತಃ= ಭೀಮನೆಂದು ಹೇಳಲ್ಪಡುತ್ತಾನೆ. ('ಭೃಞ ಭರಣೇ' ಎಂಬುವುದರಿಂದ ಔಣಾದಿಕವಾದ ಈಕಾರ ಪ್ರತ್ಯಯವಾಗೋಣ, ಭೀ=(ಭೃತಾಃ) ಧರಿಸಲ್ಪಟ್ಟ, ಮಾಃ=ಪ್ರಮಾಣಗಳು, ಯಸ್ಮಿನ್, ಆತನು ಭೀಮನು.) ವಾಚಃ=ಆ ಮಾತುಗಳೇವೇ, ಮಾಃ=ಜ್ಞಾನವನ್ನು ಹುಟ್ಟಿಸುವವುಗಳಾಗಿ, ಮಾತರಃ=ಮಾತೃಗಳೆಂದು, ಸ್ಮೃತಾಃ=ಸ್ಮರಿಸಲ್ಪಟ್ಟವೆ. ಋಗಾದ್ಯಾಃ=ಋಗ್ವೇದಾದಿ ೪ ವೇದ ಗಳು, ಇತಿಹಾಸಶ್ಚ=ಇತಿಹಾಸವು, ಪುರಾಣಂ=ಪುರಾಣಸಮೂಹವು, ಪಂಚರಾತ್ರಕಂ=ಪಂಚ ರಾತ್ರಾಗಮವು, ಸಪ್ತ ಶಿವಾಃ=ಇವೇಳು ಮಂಗಳಕರಗಳಾಗಿ, ಪ್ರೋಕ್ತಾಃ=ಹೇಳಲ್ಪಟ್ಟವೆ. (ಯಾವ ಕಾರಣದಿಂದ) ತತ್ರ ಶಯಃ=ಅವುಗಳ ವಿಚಾರದಲ್ಲಿ ಆಸಕ್ತನೋ, ತತಃ=ಆದುದ ರಿಂದ, ಭೀಮಃ=ಭೀಮನೆಂದು, ಸ್ಮೃತಃ=ಸ್ಮರಿಸಲ್ಪಟ್ಟಿದ್ದಾನೆ. (d) ಮಧ್ವಿತಿ=('ಮಧು ದ್ವಾ ರಸ್ತು ನಃ ಪಿತಾ' ಕಾಮಾನಲಂ ಮಧುಲವೈಃ ಶಮಯನ್ ದುರಾಪೈಃ, ಇತ್ಯಾದಿಪ್ರದೇಶಗಳಲ್ಲಿ) ಮಧು ಎಂಬುವುದರಿಂದ, ಆನಂದಃ=ಸಂತೋಷವು, ಉದ್ದಿಷ್ಟಃ=ಹೇಳಲ್ಪಟ್ಟಿತು. ವೇತಿ=ವ ಎಂಬುವುದರಿಂದ, ತೀರ್ಥಂ=ಶಾಸ್ತ್ರವು, ಉದಾಹೃತಂ=ಹೇಳಲ್ಪಟ್ಟಿತು. ಮಧ್ವಃ=ಮಧ್ವ ಶಬ್ದವಾಚ್ಯರು, ಆನಂದತೀರ್ಥಃ=ಆನಂದತೀರ್ಥಾಚಾರ್ಯರು, ಸ್ಯಾತ್=ಆಗುವರು. (ವಾ ಧಾತುವಿಗೆ ಅವಗತಿಯೆಂಬ ಅರ್ಥವಿದ್ದುದರಿಂದ ಜ್ಞಾನಕ್ಕೆ ಸಾಧನವಾದ ಶಾಸ್ತ್ರವು ವ ಎಂಬು ವುದರಿಂದ ಹೇಳಲ್ಪಡುತ್ತದೆ. ತಥಾ ಚ ಮಧು=ಆನಂದಕರವಾದ, ವ=ಶಾಸ್ತ್ರವು, ಯಸ್ಮಾತ್= ಯಾರಿಂದಲೋ, ಸಃ=ಅವನು, ಮಧುವಃ, ಉಕಾರಲುಪ್ತವಾಗಿ ಮಧ್ವಃ ಎಂದಾಯಿತು.) ಇತಿ=ಈಪ್ರಕಾರವಾಗಿ, ಮಹಾತ್ಮನಃ=ಮಹಾನುಭಾವರಾದ ವಾಯುದೇವರ, ಸೂಕ್ತಗತಂ= ಬಳಿತ್ಥಾ ಸೂಕ್ತದಲ್ಲಿ ಪ್ರತಿಪಾದಿಸಲ್ಪಟ್ಟ, ಏತತ್ ರೂಪತ್ರಯಂ=ಈ ಹನುಮತ್ ಭೀಮ ಮಧ್ವಾ ಖ್ಯರೂಪವನ್ನು, ಯಃ=ಯಾವಾತನು, ವೇದ=ತಿಳಿಯುತ್ತಾನೋ, ವೇದವಿತ್=ವೇದದ ಅರ್ಥ ವನ್ನು ತಿಳಿದ, ಸಃ=ಆತನು, ತತ್ಪ್ರಸಾದತಃ=ಆ ವಾಯುದೇವರ ಅನುಗ್ರಹದಿಂದ, ತತ್ವವಿತ್= ಯಥಾರ್ಥಜ್ಞಾನಿಯು, ಸ್ಯಾತ್=ಆಗುವನು, ಇತಿ ಚ.

ಭಾ॥ (a) ಸಾಧಕೋ ರಾಮವಾಕ್ಯಾನಾಂ ತತ್ಸಮೀಪಗತಃ ಸದಾ । ಹನೂಮಾ ನ್ಪ್ರಥಮೋ ಜ್ಞೇಯೋ ಭೀಮಸ್ತು ಬಹುಭುಕ್ಷಿತೋಃ॥ ಪೃತನಾಕ್ಷಯಕಾರೀ ಚ ದ್ವಿತೀಯಸ್ತು (b) ತೃತೀಯಕಃ। ಪೂರ್ಣಪ್ರಜ್ಞಸ್ತಥಾಽಽನಂದತೀರ್ಥ ನಾಮಾ ಪ್ರಕೀರ್ತಿತಃ ॥ ದಶೇತಿ ಸರ್ವಮುದ್ದಿಷ್ಟಂ ಸರ್ವಂ ಪೂರ್ಣ ಮಿಹೋಚ್ಯತೇ । ಪ್ರಜ್ಞಾ ಪ್ರಮತಿರುದ್ದಿಷ್ಟಾ ಪೂರ್ಣಪ್ರಜ್ಞಸ್ತತಃ ಸ್ಮೃತಃ ॥ (c) ಆಸಮಂತಾತ್ಸತಿತ್ವೇ ತು ಗೂಢಂ ಕಲಿಯುಗೇ ಹರಿಂ । ಅಸತ್ಯ ಮಪ್ರತಿಷ್ಠಂ ಚ ಜಗದೇತದನೀಶ್ವರಂ ॥ ವದದ್ಭಿರ್ಗೂಹಿತಂ ಸಂತಂ ತೃತೀಯೋಽಸುರ್ಮಥಾಯತಿ । (d) ಯೇನ ವಿಷ್ಣೋರ್ಹಿ ವಪ್ರಾಖ್ಯಾ ನ್ಗುಣಾನಜ್ಞಾಪಿಸುಃ ಪರಾನ್ ॥ ಈಶಾನಾಸಃ ಸೂರಯಶ್ಚ ನಿಗೂಢಾನ್ನಿ ರ್ಗುಣೋಕ್ತಿಭಿಃ । (e) ತ್ರೇತಾಯಾಂ ದ್ವಾಪರೇ ಚೈವ ಕಲೌ ಚೈತೇ ಕ್ರಮಾತ್ತ್ರಯಃ ॥ ಏತೇಷಾಂ ಪರಮೋ ವಿಷ್ಣುರ್ನೇತಾ ಸರ್ವೇಶ್ವರೇಶ್ವರಃ । ಸ್ವಯಂಭುಬ್ರಹ್ಮಸಂಜ್ಞೋಽಸೌ ಪರಸ್ಮೈ ಬ್ರಹ್ಮಣೇ ನಮಃ ॥ ಇತಿ ಚ ॥

ಅ || (a) (ಈ ಪ್ರಕಾರ ವ್ಯಾಖ್ಯಾನ ಮಾಡಲ್ಪಟ್ಟ ಮೂರು ಋಕ್ಕುಗಳಲ್ಲಿ ಉಳಿದ ಕೆಲವು ಪದಗಳನ್ನು ಪ್ರಮಾಣಾಂತರದಿಂದ ವ್ಯಾಖ್ಯಾನ ಮಾಡುತ್ತಾರೆ.) ರಾಮವಾಕ್ಯಾನಾಂ=ರಾಮ ದೇವರ ಆಜ್ಞಾರೂಪಗಳಾದ ವಾಕ್ಯಗಳನ್ನು, ಸಾಧಕಃ=ಸಾಧಿಸತಕ್ಕ, ಸದಾ=ಯಾವಾಗಲೂ, ತತ್ಸಮೀಪಗತಃ=ಆ ರಾಮದೇವರ ಸಮೀಪದಲ್ಲಿಯೇ ಇರತಕ್ಕ, ಹನುಮಾನ್=ಹನುಮಂತನು, ಪ್ರಥಮಃ=ವಾಯುದೇವರ ಪ್ರಥಮಾವತಾರನಾಗಿ, ಜ್ಞೇಯಃ=ತಿಳಿಯಲ್ಪಡಬೇಕು. ಪಿತೋಃ ಬಹುಬುಕ್=('ಅನ್ನಂ ವೈ ಪಿತುಃ' ಎಂಬ ಶ್ರುತಿಯಿಂದ) ಅನ್ನದ ಬಾಹುಳ್ಯವನ್ನು ಭೋಗಿಸುವವನು, (ಅಂದರೆ ಬಹ್ವನ್ನ ಭೋಕ್ತನು, ಪ್ರತನಾಕ್ಷಯಕಾರೀ ಚ=ದುಷ್ಟ ಸೈನ್ಯದ ನಾಶವನ್ನು ಮಾಡತಕ್ಕವನೂ ಆದ, ಭೀಮಸ್ತು=ಭೀಮನಾದರೂ, ದ್ವಿತೀಯಃ=ವಾಯು ದೇವರ ಎರಡನೇ ಅವತಾರವು (b) ತೃತೀಯಕಃ=ಮೂರನೇ ರೂಪವು, ಪೂರ್ಣಪ್ರಜ್ಞಃ=ಪೂರ್ಣಪ್ರಜ್ಞನಾಮಕವು, ತಥಾ=ಹಾಗೆಯೇ, ಅನಂದ ತೀರ್ಥನಾಮಾ=ಆನಂದತೀರ್ಥನಾಮಕವಾಗಿಯೂ, ಪ್ರಕೀರ್ತಿತಃ=ಹೇಳಲ್ಪಟ್ಟಿದೆ. 'ದಶೇತಿ='ದಶೇತಿ ವೈ ಸರ್ವಂ' ಎಂದಿದೇ ಉಪನಿಷತ್ತಿನಲ್ಲಿ ದಶ ಎಂಬುವುದರಿಂದ, ಸರ್ವಂ ಉದ್ದಿಷ್ಟಂ=ಸರ್ವವು ಎಂದು ಹೇಳಲ್ಪಟ್ಟಿದೆ. ಸರ್ವಂ=ಸರ್ವ ಎಂಬುವುದಾದರೂ, ಇಹ=ಇಲ್ಲಿ, ಪೂರ್ಣಂ ಉಚ್ಯತೇ=ಪರಿಪೂರ್ಣವಾಗಿ ಹೇಳಲ್ಪಡುತ್ತದೆ. ಪ್ರಮತಿಃ=ಪ್ರಮತಿಯೆಂಬುವುದರಿಂದ, ಪ್ರಜ್ಞಾ=ಪ್ರಜ್ಞೆಯು, ಉದ್ದಿಷ್ಟಾ=ಹೇಳಲ್ಪಡುತ್ತದೆ. ತತಃ=ಆದಪ್ರಯುಕ್ತ ದಶಪ್ರಮತಿ ಎಂಬ ಶಬ್ದದಿಂದ, ಪೂರ್ಣಪ್ರಜ್ಞಃ=ಪೂರ್ಣಪ್ರಜ್ಞಾಚಾರ್ಯರವರು, ಸ್ಮೃತಃ=ಸ್ಮರಿಸಲ್ಪಟ್ಟಿದ್ದಾರೆ. (c) ಏತತ್ ಜಗತ್=ಈ ಜಗತ್ತು, ಅಸತ್ಯಂ=ಮಿಥ್ಯಾಭೂತವು, (ಏಕೆಂದರೆ) ಅಪ್ರತಿಷ್ಟಂ=ಜ್ಞಾನಭಾಧ್ಯವು, (ಆದುದರಿಂದಲೇ) ಅನೀಶ್ವರಂ=ಈಶ್ವರ ರಹಿತವಾದುದು. (ಸತ್ಯವಾದುದಕ್ಕೇನೇ ಈಶ್ವರನ ಅಪೇಕ್ಷೆ ಇರುವುದು ಎಂದು). ವದದ್ಭಿಃ=ಹೇಳುವವರಿಂದ, ಕಲಿಯುಗೇ=ಕಲಿಯುಗದಲ್ಲಿ, ಗೂಹಿತಂ ಸಂತಂ=ಸಂವೃತನಾಗಿರತಕ್ಕ, (ಅಂದರೆ ಸತ್ಯ ಜಗಜ್ಜನ್ಮಾದಿ ಕಾರತಣತ್ವ ಮೊದಲಾದ ಗುಣವಿಶಿಷ್ಟತನದಿಂದ ಆಚ್ಛಾದಿತನು, ಅಂತಹ ಗುಣಗಳು ಇಲ್ಲದಿರುವವನು ಗೂಢಂ ಎಂಬುವುದರದ್ದೇ ವಿವರಣವು.) ಗೂಢಂ=ಆಚ್ಛಾದಿತನಾದ, ಹರಿಂ=ಶ್ರೀ ಪರಮಾತ್ಮನನ್ನು ಆ ಸಮಂತಾತ್ ಪತಿತ್ವೇ ತು=ಚೆನ್ನಾಗಿ ಸರ್ವಸ್ವಾಮಿತ್ವ ವಿಷಯದಲ್ಲಿ ಆದರೂ, ತೃತೀಯಃ ಅಸುಃ=ಮೂರನೇ ಅವತಾರರಾದ ಮುಖ್ಯಪ್ರಾಣದೇವರಾದರೂ, ಮಥಾಯತಿ=ಮಥನಮಾಡುತ್ತಾರೆ. (ಶಾಸ್ತ್ರದಿಂದ ವಿಚಾರಮಾಡಿ ನಿಶ್ಚಯಿಸುತ್ತಾರೆ.) (d) ಯೇನ=ಯಾವ ವಾಯುದೇವರಿಂದ, ವಿಷ್ಣೋಸ್ತು=ವಿಷ್ಣುವಿನ, ವರ್ಪಾಖ್ಯಾನ್=(ವೃಞವರಣೇ ಎಂಬ ಧಾತುವಿನ ದೆಶೆಯಿಂದ ಕರ್ಮಣಿ ಅಸುನ್ ಪ್ರತ್ಯಯವು. ಪುಗಾಗಮವು ಧಾತುವಿಗೆ ಗುಣವು. ತಥಾ ಚ ಸರ್ವರಿಂದಲೂ ವರಣೀಯಗಳು). ವರ್ಪಗಳೆಂದು ಹೆಸರುಳ್ಳ, ನಿರ್ಗುಣೋಕ್ತಿಭಿಃ=ಗುಣರಹಿತನು, ನಿರಾಕಾರನು, ಜೀವ ಬ್ರಹ್ಮರಿಗೆ ಭೇದವಿಲ್ಲವು ಎಂಬಿತ್ಯಾದಿ ವಚನಗಳಿಂದ, ನಿಗೂಢಾನ್=ಅತ್ಯಂತ ಆಚ್ಛಾದಿತಗಳಾದ, ಪರಾನ್=ಉತ್ತಮಗಳಾದ, ಗುಣಾನ್=ಜ್ಞಾನ ಆನಂದ ಮೊದಲಾದ ಅಪರಿಮಿತ ಗುಣಗಳನ್ನು, ಈಶಾನಾಸಃ=ರುದ್ರಮೊದಲಾದ ದೇವತೆಗಳೂ, ಸೂರಯಶ್ಚ=ಇತರರಾದ ಜ್ಞಾನಿಗಳೂ ಕೂಡ, ಅಜ್ಞಾಸಿಸುಃ=ತಿಳಿದರೋ, (ಅಂತಹ ವಾಯುದೇವರು ಶಾಸ್ತ್ರದಿಂದ ನಿಶ್ಚಯಿಸುತ್ತಾರೆ.) (e) ತ್ರೇತಾಯಾಂ=ತ್ರೇತಾಯುಗದಲ್ಲಿ, ದ್ವಾಪರೇ ಚೈವ=ದ್ವಾಪರ ಯುಗದಲ್ಲಿಯೂ, ಕಲೌ ಚ=ಕಲಿಯುಗದಲ್ಲಿಯೂ, ಏತೇ ತ್ರಯಃ=ಈ ಹನುಮದ್ಭೀಮಮಧ್ವರೆಂಬ ಮೂವರು, ಕ್ರಮಾತ್=ಕ್ರಮದಿಂದ, (ಅವತೀರ್ಣಾಃ=ಅವತಾರ ಮಾಡಿದವರು.) ಏತೇಷಾಂ=ಈ ಮೂವರಿಗೂ, ಪರಮಃ=ಸರ್ವೋತ್ತಮನಾದ, ಸರ್ವೇಶ್ವರೇಶ್ವರಃ=ಸರ್ವರಿಗೂ ನಿಯಾಮಕರಾದ ಚತುರ್ಮುಖಾದಿಗಳಿಗೂ ನಿಯಾಮಕನಾದ ವಿಷ್ಣುಃ=ಶ್ರೀ ಪರಮಾ

ತ್ಮನು, ನೇತಾ=ಪ್ರೇರಕನು. ಅಸೌ=ಈ ಹರಿಯು, ಸ್ವಯಂಭು ಬ್ರಹ್ಮ ಸಂಜ್ಞಃ=ಸ್ವಯಂಭು ಬ್ರಹ್ಮನೆಂದು ಹೆಸರುಳ್ಳವನು, ಪರಸ್ಮೈ=ಸರ್ವೋತ್ತಮನಾದ, ಬ್ರಹ್ಮಣೇ=ಗುಣಪರಿಪೂರ್ಣನಾದ ಶ್ರೀ ನಾರಾಯಣನಿಗೋಸ್ಕರ, ನಮಃ=ನಮಸ್ಕಾರವು, ಇತಿ ಚ.

(ಬಳಿತ್ಥಾ ಸೂಕ್ತ ಮತ್ತು ಅದರ ಅರ್ಥಗಳು ಈ ರೀತಿಯಾಗಿವೆ.) ಬಳಿತ್ಥಾ ತದ್ವಪುಷೇ ಧಾಯಿ ದರ್ಶತಂ ದೇವಸ್ಯ ಭರ್ಗಃ ಸಹಸೋ ಯತೋಽಜನಿ ॥ ಯದೀಮುಪಹ್ವರತೇ ಸಾಧತೇ ಮತಿರ್ಋತಸ್ಯ ಧೇನಾ ಅನಯಂತ ಸಸ್ರುತಃ ॥ ಸಹಸಃ=(ಷಹ ಮರ್ಷಣೇ) ಶತ್ರುಗಳ ವೇಗವನ್ನು ಸಹಿಸುವ, ದೇವಸ್ಯ=ಕ್ರೀಡಾದಿ ಗುಣವಿಶಿಷ್ಟರಾದ ವಾಯುದೇವರ, ತತ್=ಆ ಮೂಲರೂಪವು, ಬಟ್=ಬಲಾತ್ಮಕವು. ದರ್ಶತಂ=ಜ್ಞಾನರೂಪವು. ('ಭೃಮೃದೃಶ್‌ಯಜಿ ಪರ್ವಿಪಚ್ಯಮಿತಮಿನಮಿಹರ್ಯರ್ಭ್ಯೋಽತಚ್' ಎಂಬೀ ಉಣಾದಿ ಸೂತ್ರದಲ್ಲಿ ದೃಶ್ ಧಾತುವಿಗೆ 'ಅತಚ್' ಪ್ರತ್ಯಯವನ್ನು ವಿಧಿಸಿದ್ದಾರೆ. ಅಥವಾ ದರ್ಶನ=ಜ್ಞಾನದಿಂದ, ತತಂ=ವ್ಯಾಪ್ತವಾದುದು ದರ್ಶತಂ ಎನ್ನಿಸುತ್ತದೆ.) ಯತಃ=ಯಾರಿಂದ, ಅಜನಿ=ತಾನು ಹುಟ್ಟಿರುವನೋ, ಯತಃ=ಯಾರಿಂದ, ವಪುಷೇ=ಅವತಾರಕ್ಕೋಸ್ಕರ, ಇತ್ಥಾ=ಈ ಪ್ರಕಾರವೇ, (ಬಲಾದ್ಯಾತ್ಮಕವಾಗಿಯೇ) ಅಧಾಯಿ=ಧರಿಸಲ್ಪಟ್ಟಿದೆಯೋ, ತಸ್ಯ ದೇವಸ್ಯ=ಆ ವಾಯುದೇವರ, ಭರ್ಗಃ=ಭರಣಗಮನಗಳನ್ನು ಮಾಡತಕ್ಕ, ಯತ್ ಈಂ=ಯಾವ, ಮತಿಃ=ಹನುಮದಾಖ್ಯ ಪ್ರಥಮ ರೂಪವು, ಋತಸ್ಯ=ಯಥಾರ್ಥಜ್ಞಾನಸ್ವರೂಪನಾದ, ಒಂದೇ ಪ್ರಕಾರವಾಗಿ ಯಾವಾಗಲೂ ತಿಳಿಯಲ್ಪಟ್ಟ ರಾಮನ, ಉಪ=ಸಮೀಪದಲ್ಲಿ ಹ್ವರತೇ=ಯಾವಾಗಲೂ ಇರುತ್ತದೆ. ಸಸ್ರುತಃ=ಅತ್ಯಂತ ಅಮೃತವನ್ನು ಸುರಿಸುವ, ಧೇನಾಃ=ಮಾತುಗಳನ್ನು, ಸಾಧತೇ=ಸಾಧಿಸುತ್ತದೆ. ಮತ್ತು ಋತಸ್ಯ=ರಾಮನನ್ನು ಪ್ರತಿಪಾದಿಸುವ, ಸಸ್ರುತಃ=ಅಮೃತಸ್ರಾವಿಗಳಾದ, ಧೇನಾಃ=ರಾಮಾಯಣ ಮೊದಲಾದ ಮಾತುಗಳು, ತೇನ=ಹನುಮಂತನಿಂದ, ಅನಯಂತ=(ಶಿಷ್ಯರನ್ನು ಕುರಿತು) ಒಯ್ಯಲ್ಪಟ್ಟವು. ಅಥವಾ ಸಂದೇಶ ರೂಪಗಳಾದ ಮಾತುಗಳು ಸೀತೆಯನ್ನು ಕುರಿತು ಒಯ್ಯಲ್ಪಟ್ಟವು. ॥ ೧ ॥ 'ಪೃಕ್ಷೋ ವಪುಃ ಪಿತುಮಾನ್ನಿತ್ಯ ಆಶಯೇ ದ್ವಿತೀಯಮಾ ಸಪ್ತಶಿವಾಸು ಮಾತೃಷು । ತೃತೀಯಮಸ್ಯ ವೃಷಭಸ್ಯ ದೋಹಸೇ ದಶಪ್ರಮತಿಂ ಜನಯಂತ ಯೋಷಣಃ ॥' ವೃಷಭಸ್ಯ=(ವೃಷ ಸೇಚನೇ) ಭಕ್ತರಿಗೆ ಸರ್ವಾಭಿಲಷಿತಗಳನ್ನು ವರ್ಷಿಸುವ, ಅಥವಾ (ವೃಷ ಸ್ನೇಹೇ) ಭಕ್ತರಲ್ಲಿ ಅನುರಾಗವುಳ್ಳ, ಅಥವಾ ಭಗವದ್ಭಕ್ತರಲ್ಲಿ ಶ್ರೇಷ್ಠನಾದ, ಅಥವಾ (ವೃಷ ಶಕ್ತ್ಯತಿಶಯೇ ಎಂಬೀ ಧಾತುವಿನಿಂದ) ಬಹುಶಕ್ತಿ ಸಂಪನ್ನರಾದ ವಾಯುದೇವರ, ದ್ವಿತೀಯಂ ವಪುಃ=ಎರಡನೇ ರೂಪವು, ಸಪ್ತ=ಏಳು ಸಂಖ್ಯಾಕಗಳಾದ, ಆ ಶಿವಾಸು=ಪರಮ ಮಂಗಲಗಳಾದ, ಮಾತೃಷು=ಋಗಾದಿ ಪ್ರಮಾಣಗಳಲ್ಲಿ, ನಿತ್ಯಃ=ನಿರಂತರದಲ್ಲಿಯೂ, ಶಯೇ=ಮಲಕೊಳ್ಳುತ್ತದೆ. ('ಲೋಪಸ್ತ ಆತ್ಮನೇಪದೇಷು' ಎಂದು 'ತ'ಕಾರಕ್ಕೆ ಲೋಪವಾಗಿ ಅಯ್ ಆದೇಶವಾದರೆ ಶಯೇ ಎಂದು ರೂಪವಾಗುತ್ತದೆ. ಅಂತೂ ಭೀಮನಾಮಕವು.) ಪೃಕ್ಷಃ=ಕುರು ಸೈನ್ಯವನ್ನು ನಾಶಮಾಡಿದವನು. ಪಿತುಮಾನ್=ಬಹ್ವನ್ನವನ್ನು ಭೋಗಿಸತಕ್ಕವನು, ಅಸ್ಯ ವೃಷಭಸ್ಯ=ಇಂತಹ ವಾಯುದೇವರ, ದಶಪ್ರಮತಿಂ=ಪೂರ್ಣಪ್ರಜ್ಞನಾಮಕವಾದ, ತೃತೀಯಂ ವಪುಃ=ಮೂರನೇ ಅವತಾರವನ್ನು ದೋಹಸೇ=ಜ್ಞಾನ ದೋಹನಕ್ಕಾಗಿ, (ಜ್ಞಾನ ಸಂಪಾದನೆಗಾಗಿ) ಯೋಷಣಃ=ಸ್ತ್ರೀಯರು, ಜನಯಂತ=ಹುಟ್ಟಿಸಿದರು. ॥ ೨ ॥ 'ನಿರ್ಯದೀಂ ಬುಧ್ನಾನ್ಮಹಿಷಸ್ಯ ವರ್ಪಸ ಈಶಾನಾಸಃ ಶವಸಾಕ್ರಂತ ಸೂರಯಃ । ಯದೀಮನು ಪ್ರದಿವೋ ಮಧ್ವ ಆಧವೇ ಗುಹಾಸಂತಂ ಮಾತರಿಶ್ವಾ ಮಥಾಯತಿ ॥', ಬುಧ್ನಾತ್ ಯತ್ ಈಂ=ಯಾವ ಪೂರ್ಣಪ್ರಜ್ಞಾಚಾರ್ಯರಿಂದಲೇ, ಮಹಿಷಸ್ಯ=ಸರ್ವರಿಂದ ಪೂಜಿಸಲ್ಪಡತಕ್ಕ ಐಶ್ವರ್ಯಾದಿ

ಆರು ಗುಣಗಳುಳ್ಳ ಶ್ರೀ ಹರಿಯು, ವರ್ಪಸಃ=ಸರ್ವರಿಂದಲೂ ಅಂಗೀಕರಿಸಲಿಕ್ಕೆ ಯೋಗ್ಯವಾದುದರಿಂದ ವರ್ಪನಾಮಕಗಳಾದ ಗುಣಗಳನ್ನು, ಈಶಾನಾಸಃ=ಈಶಾನ ಮೊದಲಾದ ದೇವತೆಗಳೂ, ಸೂರಯಃ=ಇತರ ಜ್ಞಾನಿಗಳೂ ಕೂಡ, ಶವಸಾ=ಸುಖದಿಂದ, ನಿಃ=ಅತ್ಯಂತವಾಗಿ, ಅಕ್ರಂತ=ತಿಳಿದರು. (ಯದ್ಯಪಿ 'ಬಂಧೇರ್ಬ್ರಧಿ ಬುಧೀಚ' ಎಂಬೀ ಉಣಾದಿ ಸೂತ್ರದಲ್ಲಿ 'ಬಂಧ ಬಂಧನೇ' ಎಂಬೀ ಧಾತುವಿನ ದೆಶೆಯಿಂದ 'ಬುಧ' ಆದೇಶವಾದರೆ 'ನಕ್' ಪ್ರತ್ಯಯ ಮಾಡಿದರೆ, ಬುಧ್ನಾತ್=ಜ್ಞಾನೋಪದೇಶಕರಾದ ಎಂದು ಸಿಗುವುದು. ಋಗ್ಭಾಷ್ಯ ಟೀಕೆಯಲ್ಲಿ 'ಅಬುಧ್ನೇ ರಾಜಾ' ಎಂಬುವಲ್ಲಿ 'ಬುಧ ಅವಗಮನೇ' ಆ ಮೇಲೆ 'ನಕ್' ಅದರ ನಿಷೇಧವೇ, 'ಅಬುಧ್ನಂ' ಎಂಬುವುದು ಎಂದು ಹೇಳಲ್ಪಟ್ಟದೆ. ಆದರೂ ಪ್ರಕೃತವಾದ ಅರ್ಥವನ್ನು ವಿವಕ್ಷಿಸಿ ಅರ್ಥಾಂತರವನ್ನು ತಿಳಿಯತಕ್ಕುದು.) ಅಥವಾ ಧಾತ್ವರ್ಥಭೂತವಾದ ಬಂಧವು ಬಕ್ತಿರೂಪವು. 'ಅನುಬಂದಶ್ಚ ಭಕ್ತಿಸ್ಸ್ಯಾತ್, ಎಂಬೀ ವಚನದಿಂದ. ತಥಾಚ ಭಗವದ್ಭಕ್ತರಲ್ಲಿ ಅಗ್ರೇಸರನಾದ, ಯಾ ಭಕ್ತಿಯು ಜ್ಞಾನಸ್ವರೂಪವಾದುದರಿಂದ ಜ್ಞಾನಸ್ವರೂಪರಾದ, ಯದೀಂ=ಯಾವ ವಾಯುದೇವರಿಂದಲೇ, ಪ್ರದಿವಃ=ಪ್ರಕಾಶಾದಿ ಸ್ವರೂಪರಾದ, ಮಧ್ವಾಃ=ಆನಂದ ತೀರ್ಥಾಖ್ಯರಾದ, ಮಾತರಿಶ್ವಾ=(ಮಾತರಿ ಶ್ವಯತಿ ಎಂಬೀವ್ಯುತ್ಪತ್ತಿಯಿಂದ)ಪ್ರಮಾಣ ಭೂತಗಳಾದ ಋಗಾದಿಗಳಲ್ಲಿ ಸಂಚರಿಸುತ್ತಿರುವ ವಾಯುದೇವರು, ಗುಹಾಸಂತಂ=(ಕಲಿಯುಗದಲ್ಲಿ ದುರ್ವಾದಿಗಳಿಂದ) ಆಚ್ಛಾದಿತನಾಗಿರತಕ್ಕ ಶ್ರೀಹರಿಯನ್ನು ('ಗುಹೂ ಸಂವರಣೇ' ಎಂಬ ಧಾತುವಿನಿಂದ ಷಿದ್ಭಿದಾದಿಭ್ಯೋಙ ಎಂಬುವುದರಿಂದ ಸ್ತ್ರೀಲಿಂಗದಲ್ಲಿ ಕರ್ಮಣಿ ಅಙ್, ಅಂತೂ ಗುಹ್ಯತೇ ಇತಿ ಗುಹಾ, ಗುಹಾತ್ವೇನ=ಗೂಹಿತನಾಗಿ, ಸಂತಂ=ಇರತಕ್ಕವನು.) ಅನು=ಋಗಾದಿ ಶಾಸ್ತ್ರಗಳನ್ನನುಸರಿಸಿ, ಆಧವೇ=ಚೆನ್ನಾಗಿ ಸರ್ವಸ್ವಾಮಿತ್ವ ವಿಷಯದಲ್ಲಿ, ಮಥಾಯತಿ=ಶಾಸ್ತ್ರದಿಂದ ವಿಚಾರಮಾಡಿ ನಿಶ್ಚಯಿಸುತ್ತಾರೆ. ॥ ೩ ॥ 'ಪ್ರಯಕ್ಷಿತುಃ' ಪರಮಾನ್ನೀಯತೇ ಪರ್ಯಾ ಪೃಕ್ಷುಧೋ ವೀರುಧೋ ದಂಸು ರೋಹತಿ । ಉಭಾ ಯದಸ್ಯ ಜನುಷಂ ಯದಿನ್ವಂತ ಆದಿದ್ಯವಿಷ್ಠೋ ಅಭವದ್ಘೃಣಾ ಶುಚಿಃ ॥ ಯತ್=ಯಾವ ವಾಯುವಿನ ರೂಪತ್ರಯುವು, ಪರಮಾತ್=ಸರ್ವೋತ್ತಮನಾದ, ಪಿತುಃ=ಜನಕನಾದ ನಾರಾಯಣನಿಂದ, ಪ್ರ ನೀಯತೇ=ಉತ್ತಮವಾಗಿ ಪ್ರೇರಿಸಲ್ಪಡುತ್ತದೋ, ಪೃಕ್ಷುಧಃ=ಪ್ರಶ್ನೆಗಳನ್ನು, ವೀರುಧಃ=ಲತೆಗಳೆನ್ನೆಂಬಂತೆ, ದಂಸು=ಹಲ್ಲುಗಳಲ್ಲಿ, ಪರ್ಯಾ ರೋಹತಿ=ಖಂಡಖಂಡವಾಗಿ ಮಾಡುತ್ತದೆ. ಅಸ್ಯ=ಈ ವಾಯುವಿನ, ಯತ್ ಜನುಷಂ=ಯಾವ ಉತ್ಪತ್ತಿಯನ್ನು, ಉಭಾ=ಲಕ್ಷ್ಮೀನಾರಾಯಣರಿಬ್ಬರು, ಯತ್=ಯಾವ ಕಾರಣದಿಂದ, ಇನ್ವತಃ=ಪ್ರೇರಿಸುತ್ತಾರೋ, ಆತ್ ಇತ್=ಈ ಕಾರಣದಿಂದಲೇ, ಆತ್ ಇತ್=ಇವರಿಬ್ಬರಿಂದಲೇ, ಘೃಣಾ=ದಯೆಯಿಂದ, ಶುಚಿಃ=ಶುದ್ಧರಾದ ವಾಯುದೇವರು, ಯವಿಷ್ಠಃ=ಸರ್ವಶ್ರೇಷ್ಠರು, ಅಭವತ್=ಆದರು. ॥ ೪ ॥ 'ಆದಿನ್ಮಾತ್ರಾರಾವಿಶದ್ಯಾಸ್ವಾಶುಚಿರಹಿಂಸ್ಯಮಾನ ಉರ್ವಿಯಾ ವಿವಾವೃಧೇ । ಅನು ಯತ್ಪೂರ್ವಾ ಅರುಹತ್ಸನಾಜುವೋ ನಿ ನವ್ಯಸೀಷ್ವವರಾಸು ಧಾವತೇ' ॥ ಆತ್ ಇತ್=ಈ ಲಕ್ಷ್ಮೀನಾರಾಯಣರ ಪ್ರಸಾದದಿಂದಲೇ, ಮಾತ್ರಾಃ=ಅಂಜನಾ ಕುಂತೀ ಮಧ್ಯಗೇಹಸ್ತ್ರೀಯರನ್ನು, ಆವಿಶತ್=ಪ್ರವೇಶಿಸಿದನು. ಯಾಸು=ಯಾವ ಮಾತೃಗಳಲ್ಲಿ, ಆ ಶುಚಿಃ=ಅತಿಶುದ್ಧನಾದ, ಅಹಿಂಸ್ಯಮಾನಃ=ಗರ್ಭಪೀಡೆಯಿಲ್ಲದಿರುವವನಾಗಿಯೇ, ಉರ್ವಿಯಾ=ದೇವಶ್ರೇಷ್ಠನಾಗಿಯೇ, ವಿವವೃಧೇ=ಅಭಿವೃದ್ಧನಾದನು. ಅಥವಾ ಶ್ರೀ ಮಧ್ವಾಚಾರ್ಯರು, ಆತ್ ಇತ್=ಲಕ್ಷ್ಮೀನಾರಾಯಣರ ಪ್ರಸಾದದಿಂದ, ಮಾತ್ರಾಃ=ಋಗಾದಿ ವಿದ್ಯೆಗಳನ್ನು ಆವಿಶತ್=ಪ್ರವೇಶಿಸಿದರು. ಯಾಸು=ಯಾವ ವಿದ್ಯೆಗಳಲ್ಲಿ, ಆಶುಚಿಃ=ಅಜ್ಞಾನಾದಿ ದೋಷರಹಿತರಾಗಿ, ಅಹಿಂಸ್ಯಮಾನಃ=ಪೂರ್ವಪಕ್ಷಿಯಿಂದ ಪ್ರಯೋಗಿಸಲ್ಪಟ್ಟ ಪ್ರಮಾಣಾಭಾಸ

ಗಳಿಂದ ಪೀಡಿಸಲ್ಪಡದಿದ್ದವನಾಗಿ ಉರ್ವಿಯಾ ವಿವಾವೃಧೇ, ಪೂರ್ವಾಃ=ಅನಾದಿಭೂತಗಳಾದ, ಸನಾಜುವಃ=(ಜುಗತೌ) ಯಾವಾಗಲೂ ಒಂದೇ ಪ್ರಕಾರವಾಗಿಯೇ ಇರುವ, ಅಥವಾ (ಜುಷೀ ಪ್ರೀತಿಸೇವನಯೋಃ) ಸನಾತನನಾದ ಭಗವಂತನನ್ನು ಸೇವಿಸುವ, (ಅಂದರೆ ಪ್ರತಿಪಾದಿಸುವ), ಋಗ್ವೇದವೇ ಮೊದಲಾದ ಅಪೌರುಷೇಯ ವಿದ್ಯೆಗಳನ್ನು, ಅನ್ವಾರುಹತ್=ಉಪಕ್ರಮ ಮೊದಲಾದ ಲಿಂಗವನ್ನು ಅನುಸರಿಸಿ ಕ್ರಮವಾಗಿ ತನ್ನ ವಚನ ಮತ್ತು ಪ್ರಮಾಣ ಇವುಗಳಿಂದ ಪದಾರ್ಥ ತಾತ್ಪರ್ಯ ಸಹಿತಗಳನ್ನಾಗಿ ಪ್ರತಿಪಾದಿಸಿದರು. ನವ್ಯಸೀಷು=ನೂತನಗಳಾದ, ಅವರಾಸು=ಪೌರುಷೇಯ ವಾದುದರಿಂದ ಜಾತ್ಯಾನಿಕೃಷ್ಟಗಳಾದ ಭಾರತ, ಭಾಗವತ ಮೊದಲಾದ ವಿದ್ಯೆಗಳಲ್ಲಿ, ನಿಧಾವತೇ=ಓಡುತ್ತಾರೆ. ಅಂದರೆ ಅವುಗಳ ತಾತ್ಪರ್ಯವನ್ನು ನಿರ್ಣಯಿಸುತ್ತಾರೆ.

**ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವರ್ಯರು** ಶ್ರೀವಿಷ್ಣುವಿನ ಸ್ವರೂಪವನ್ನು ಪ್ರತಿಪಾದಿಸಿಯೇ ಗ್ರಂಥದ ಉಪಸಂಹಾರವು ಸಮುಚಿತವೆಂದು ಅಭಿಪ್ರಾಯವುಳ್ಳವರಾಗಿ ನಿತ್ಯದಲ್ಲಿಯೂ ಪ್ರತ್ಯಕ್ಷನಾಗಿಯೇ ಇರುವ ಶ್ರೀ ಭಗವಂತನನ್ನು ಸಂಬೋಧಿಸಿ ಸ್ತೋತ್ರ ನಮಸ್ಕಾರಗಳನ್ನು ಮಾಡುತ್ತಾರೆ.

**ಭಾ॥** ಪೂರ್ಣಾಗಣ್ಯಗುಣೋದಾರಧಾಮ್ನೇ ನಿತ್ಯಾಯ ವೇಧಸೇ । ಅಮಂದಾನಂದಸಾಂದ್ರಾಯ ಪ್ರೇಯಸೇ ವಿಷ್ಣವೇ ನಮಃ

**ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತೇ ಶ್ರೀಮನ್ಮಹೈತರೇಯೋಪನಿಷದ್ಭಾಷ್ಯೇ ತೃತೀಯ ಪ್ರಪಾಟ್ಠಕೇ ದ್ವಿತೀಯೋಽಧ್ಯಾಯಃ ॥ ೩ ॥ ೨ ॥ ಶ್ರೀಃ ॥**

॥ ತೃತೀಯಪ್ರಪಾಟ್ಠಕಃ ಸಂಪೂರ್ಣಃ ॥

**ಶ್ರೀಮದೈತರೇಯೋಪನಿಷದ್ಭಾಷ್ಯಂ ಸಂಪೂರ್ಣಂ**

**ಅ ॥** ಪೂರ್ಣಾಗಣ್ಯಗುಣೋದಾರ ಧಾಮ್ನೇ, ಪೂರ್ಣ=ಪ್ರತ್ಯೇಕವಾಗಿಯೂ ಅವಧಿಯಿಲ್ಲದಿರುವ, ಅಗಣ್ಯ=ಎಣಿಕೆ ಮಾಡಲಿಕ್ಕೆ ಅಶಕ್ಯಗಳಾದ, ಗುಣ=ಜ್ಞಾನಾನಂದಾದ್ಯಪರಿಮಿತಗುಣಗಳೇವೇ, ಉದಾರ=ಉತ್ಕೃಷ್ಟವಾದ, ಧಾಮ್ನೇ=ಸ್ವರೂಪವಾಗಿವುಳ್ಳ, ನಿತ್ಯಾಯ=ನಾಶರಹಿತನಾದ, ವೇಧಸೇ=ಸರ್ವಜ್ಞನಾದ, ಅಥವಾ, ಸರ್ವಜಗತ್ತಿಗೂ ಸೃಷ್ಟಿಕರ್ತನಾದ, ಅಮಂದಾನಂದಸಾಂದ್ರಾಯ, ಅಮಂದ=ಸಂಖ್ಯಾಪರಿಮಾಣಗಳಿಂದ ಅವಧಿಯಿಲ್ಲದಿರುವ, ಆನಂದ=ಸಂತೋಷದಿಂದ, ಸಾಂದ್ರಾಯ=ನಿಬಿಡನಾದ, (ಪೂರ್ಣನಾದ) ಪ್ರೇಯಸೇ=ಅತಿಶಯವಾಗಿ ಪ್ರಿಯನಾದ, ವಿಷ್ಣವೇ=ಶ್ರೀ ಪರಮಾತ್ಮನಿಗೋಸ್ಕರ, ನಮಃ=ನಮಸ್ಕಾರವು, ಅಸ್ತು=ಆಗಲಿ.

**ತಾ ॥** ಶ್ರೀ ಭಗವಂತನಿಗೆ ಜ್ಞಾನಾನಂದಾದ್ಯಪರಿಮಿತಗುಣಪರಿಪೂರ್ಣತ್ವವು ಅಸಂಭಾವಿತವಲ್ಲ ಎಂದು ತಿಳಿಸಿಕೊಡುವುದಕ್ಕೋಸ್ಕರ, ಸರ್ವ ಜಗತ್ಕರ್ತೃತ್ವವನ್ನೂ ಅದನ್ನು ಸಮರ್ಥಿಸುವುದಕ್ಕೋಸ್ಕರ ಸಾರ್ವಜ್ಞವನ್ನೂ ಉಪಪಾದಿಸಿರುವರು. ಜ್ಞಾನವು ಆನಂದದ ಅಭಿವೃದ್ಧಿಗೆ

ಕಾರಣೀಭೂತವಾದುದರಿಂದ ಜ್ಞಾನವನ್ನು ಪ್ರತ್ಯೇಕವಾಗಿಯೂ ಹೇಳಿರುವರು. 'ಅನಿತ್ಯತ್ವಂ ದೇಹಹಾನಿರ್ದುಃಖಪ್ರಾಪ್ತಿರಪೂರ್ಣತಾ । ನಾಶಶ್ಚತುರ್ವಿಧೋ ಜ್ಞೇಯಸ್ತದಭಾವೋ ಹರೇಸ್ಸದಾ' ॥ ಅಂತೂ ನಾಲ್ಕುವಿಧವಾದ ನಾಶದ ಸಂಸರ್ಗರಹಿತನೆಂದು ತಿಳಿಸಿಕೊಡುವುದಕ್ಕೋಸ್ಕರ ನಿತ್ಯನೆಂದು ನಿರೂಪಿಸಿರುವರು. ಶಮದಮಾದ್ಯಧಿಕಾರಸಂಪನ್ನರಾಗಿ ಭಕ್ತಿಪೂರ್ವಕವಾಗಿ ಈ ಗ್ರಂಥವನ್ನು ಗುರುಮುಖದಿಂದ ಅಧ್ಯಯನ ಮಾಡುವವರಿಗೆ ಆತ್ಯಂತಿಕದುಃಖನಿವೃತ್ತಿಪೂರ್ವಕಸ್ವರೂಪಾನಂದಾವಿರ್ಭಾವರೂಪವಾದ ಮುಕ್ತಿಯು ಲಭಿಸುವುದೆಂದು ತಿಳಿಸಿಕೊಡುವುದಕ್ಕೋಸ್ಕರ ಆನಂದವನ್ನು ಪ್ರತ್ಯೇಕವಾಗಿಯೂ ಹೇಳಿರುವರು. ಈ ಪ್ರಕಾರವಾಗಿ ಅಂತ್ಯದಲ್ಲಿಯೂ ಭಗವಂತನಿಗೆ ನಮಸ್ಕರಿಸಿ ಗ್ರಂಥವನ್ನು ಸಮಾಪ್ತಿಮಾಡಿರುವರು. ಹೀಗೆ ಅಶೇಷವು ಅತಿಮಂಗಲವು.

ಈ ಪ್ರಕಾರ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವರ್ಯರಿಂದ ನಿರ್ಮಿಸಲ್ಪಟ್ಟ ಶ್ರೀಮನ್ಮಹೈತರೇಯೋಪನಿಷದ್ಭಾಷ್ಯದಲ್ಲಿ ಮೂರನೇ ಪ್ರಘಟ್ಟಕದಲ್ಲಿ ಎರಡನೇ ಅಧ್ಯಾಯವು ಸಮಾಪ್ತವಾಯಿತು. ॥ ೩ ॥ ೨ ॥

**ಶ್ರೀಮನ್ಮಹೈತರೇಯೋಪನಿಷದ್ಭಾಷ್ಯವು ಸಮಾಪ್ತವಾಯಿತು. ॥ ಶ್ರೀಃ ॥**

ಯೇನೋಪನಿಷದಃ ಪೂರ್ವಂ ವಿವೃತಾ ದೇಶಭಾಷಯಾ ।
ತೈತ್ತಿರೀಯ ಪ್ರಶ್ನ ಕೇನ ಮಾಂಡೂಕ್ಯಾಥರ್ವಣಾಭಿಧಾಃ ॥ ೧ ॥

ವಿದ್ವದ್ದ್ವಿರಾಜಮಮುಪಿಸ್ಥಿತಪಾಠಶಾಲಾ
ಯಸ್ಯಾಭವದ್ಗುರುಕುಲಂ ಮನನಾನುಕೂಲಂ ।
ಅಧ್ವರ್ಯುವರ್ಯಗುರುರಾಯಸುತೇನ ತೇನ
ನಾರಾಯಣೇನ ವಿವೃತಾ ಪುನರೈತರೇಯೀ ॥ ೨ ॥

ಟೀಕಾದಿಪೂರ್ವವಚನಾನ್ಯನುರುಧ್ಯ ಯಥಾಮತಿ ।
ಕೃತೇಽಸ್ಮಿನ್ಯದಿ ಮೇ ದೋಷಃ ಸ್ಯಾತ್ತಂ ಕ್ಷಾಮ್ಯಂತು ಸಜ್ಜನಾಃ ॥ ೩ ॥
ಅತ್ರೋಪನಿಷದಾಂ ಷಟ್ಕಂ ವ್ಯಾಖ್ಯಾತಂ ಯತ್ಕೃಪಾಬಲಾತ್ ।
ತದೌಪನಿಷದಾಯ್ಯೈವ ಪುರುಷಾಯಾರ್ಪಯಾಮ್ಯಹಂ ॥ ೪ ॥
ಯತ್ಪ್ರೇರಣಾದನುದಿನಂ ಸರ್ವಕರ್ಮಾಣಿ ಕುರ್ಮಹೇ ।
ದೇವೌ ಮಂಗಲದಾತಾರೌ ಕೃಷ್ಣಮಧ್ವೌ ಪುನರ್ನಮಃ ॥ ೫ ॥

**॥ ಶ್ರೀ ಕೃಷ್ಣಾರ್ಪಣಮಸ್ತು ॥**



## ಶ್ರೀಮನ್ಮಧ್ವಾಚಾರ್ಯರಿಂದ ವಿರಚಿತಗಳಾದ ೮ ಉಪನಿಷದ್ಭಾಷ್ಯಗಳಲ್ಲಿ

# ಉದಾಹರಿಸಿದ ಪ್ರಮಾಣಗ್ರಂಥಗಳ ಹೆಸರು.



ಯೋಽಗ್ರೇಽಭೂದ್ವಿಶ್ವಗರ್ಭಃ ಸುಖನಿಧಿರಮಿತೈರ್ವಾಸುದೇವಾದಿರೂಪೈಃ
ಕ್ರೀಡನ್ ದೇವೈರಜಾದ್ಯೈರಗಣಿತಸುಗುಣೋ ನಿತ್ಯನೀಚೋಚ್ಚಭಾವೈಃ ।
ವೇದೈರ್ವೇದ್ಯೋಽಸ್ತದೋಷೋಽಪ್ಯಸುರಜನಮನೋ ಮೋಹಯನ್ಮರ್ತ್ಯವೃತ್ತ್ಯಾ
ಭಕ್ತಾನಾಂ ಮುಕ್ತಿದಾತಾ ದ್ವಿಷದಸುಖಕರಃ ಪಾತು ಸೋಽಸ್ಮಾನ್ಮಹೇಶಃ ॥

ಯಾವ ಭಾಷ್ಯದಲ್ಲಿ ಈ ಪ್ರಮಾಣಗಳು ಉದಾಹೃತಗಳಾಗಿವೆಯೋ. ಅದಕ್ಕೆ *

ಈಶ. ಕಾಠ. ತೈತ್ತಿ. ತಲ. ಷಟ್ಪ್ರ. ಆಥ. ಮಾಂ. ಐತ.

೧. ಅಭಿಧಾನ.
೨. ಅರ್ಧನಾರೀನಾರಾಯಣತಂತ್ರ
೩. ಆತ್ಮಸಂಹಿತಾ.
೪. ಆದಿತ್ಯಪುರಾಣ.
೫. ಋಗ್ವೇದ.
೬. ಋಕ್ಸಂಹಿತಾ.
೭. ಋಗ್ವೇದಸಂಹಿತಾ.
೮. ಐತರೇಯಸಂಹಿತಾ.
೯. ಕರ್ಮತತ್ವ.
೧೦. ಕೌಷಾರವಶ್ರುತಿಃ.
೧೧. ಕೌರ್ಮ.
೧೨. ಗತಿಸಾರ.
೧೩. ಗಾರುಡ.
೧೪. ಗೀತಾ.
೧೫. ಚಾತುರಾತ್ಮ್ಯ.
೧೬. ತತ್ವಸಂಹಿತಾ.
೧೭. ತತ್ವನಿರ್ಣಯ.
೧೮. ತತ್ವಸಾರ.
೧೯. ತತ್ವವಿವೇಕ.
೨೦. ತೈತ್ತಿರೀಯೋಪನಿಷತ್ತು.
೨೧. ನಾರದೀಯಪುರಾಣ.
೨೨. ನಾಮನಿರುಕ್ತಿ.
೨೩. ನಾರಾಯಣಸಂಹಿತಾ.
೨೪. ನಾಮನಿರ್ಣಯ.
೨೫. ನಾರಸಿಂಹಪುರಾಣ.

# ಪ್ರಮಾಣಗ್ರಂಥಗಳಹೆಸರು.

ಈಶ. ಕಾಠ. ತೈತ್ತಿ. ತಲ. ಷಟ್ಪ್ರ. ಅಥ. ಮಾಂ. ಐತ.

೨೬. ನೈರ್ಗುಣ್ಯ.
೨೭. ಪದವಿವೇಕ.
೨೮. ಪರಮಶ್ರುತಿಃ.
೨೯. ಪಂಚರಾತ್ರಾಗಮ.
೩೦. ಪರಮಸಂಹಿತಾ.
೩೧. ಪಾದ್ಮ.
೩೨. ಪಿಪ್ಪಲಾದಶಾಖಾ.
೩೩. ಪ್ರಕ್ಲೃಪ್ತ.
೩೪. ಪ್ರವೃತ್ತ.
೩೫. ಪ್ರಕಾಶಿಕಾ.
೩೬. ಪ್ರತ್ಯಯ.
೩೭. ಪ್ರತ್ಯಾಹಾರ.
೩೮. ಪ್ರಕಟಶ್ರುತಿಃ
೩೯. ಪ್ರಜಾಪತಿಸಂಹಿತಾ.
೪೦. ಪ್ರಭಂಜನ.
೪೧. ಪ್ರಮಾಣವಿವೇಕ.
೪೨. ಬ್ರಹ್ಮಸಾರ.
೪೩. ಬ್ರಹ್ಮಾಂಡಪುರಾಣ.
೪೪. ಬ್ರಹ್ಮಸೂತ್ರ.
೪೫. ಬ್ರಹ್ಮತರ್ಕ.
೪೬. ಬ್ರಹ್ಮವೈವರ್ತ.
೪೭. ಬೃಹದಾರಣ್ಯಕ.
೪೮. ಬೃಹತ್ಸಂಹಿತಾ.
೪೯. ಭಾರತ.
೫೦. ಭಾಗವತ.
೫೧. ಮಹಾಸಂಹಿತಾ.
೫೨. ಮಹೋಪನಿಷತ್.
೫೩. ಮಹಾಯೋಗ.
೫೪. ಮಹಾವಾರಾಹ.
೫೫. ಮಾರ್ಕಂಡೇಯ.
೫೬. ಮಾಹಾತ್ಮ್ಯ.
೫೭. ಮುಕ್ತವಿವೇಕ.
೫೮. ಮೂಲಶ್ರುತಿಃ.
೫೯. ಯಜುಸ್ಸಂಹಿತಾ.
೬೦. ಯಜುರ್ವಿವೇಕ.

ಈಶ. ಕಾಠ. ತೈತ್ತಿ. ತಲ. ಷಟ್ಪ್ರ. ಆಥ. ಮಾಂ. ಐತ.

೬೧. ರಾಮಸಂಹಿತಾ.
೬೨. ವ್ಯಾಸಸ್ಮೃತಿಃ.
೬೩. ವಾಮನ.
೬೪. ವಾರಾಹ.
೬೫. ವಾಕ್ಯನಿರ್ಣಯ.
೬೬. ವ್ಯಾಹೃತಿತತ್ತ್ವ.
೬೭. ವ್ಯಾಹೃತಿಸಾರ.
೬೮. ವಿದ್ಯಾನಿರ್ಣಯ.
೬೯. ವೇದಾರ್ಥವಿವೇಕ.
೭೦. ಶಬ್ದತತ್ತ್ವ.
೭೧. ಶಬ್ದನಿರ್ಣಯ.
೭೨. ಶೈವಪುರಾಣ.
೭೩. ಸತ್ತತ್ತ್ವ.
೭೪. ಸಂಕಲ್ಪ.
೭೫. ಸ್ಕಾಂದಪುರಾಣ.
೭೬. ಸೌಕರಾಯಣಶ್ರುತಿಃ.
೭೭. ಹರಿವಂಶ.

ಯತ್ಪಾದಪಂಕಜರಜಃ ಶಿರಸಾ ಬಿಭರ್ತಿ
ಶ್ರೀರಬ್ಜಜಶ್ಚ ಗಿರಿಶಃ ಸಹ ಲೋಕಪಾಲೈಃ ।
ಲೀಲಾತನುಃ ಸ್ವಕೃತಸೇತುಪರೀಪ್ಸಯಾ ಯಃ
ಕಾಲೇ ದಧತ್ಸ ಭಗವಾನ್ ಸ್ವಕೃತೇನ ತುಷ್ಯೇತ್ ॥

ವ್ಯಾಸಾಯ ಭವನಾಶಾಯ ಶ್ರೀಶಾಯ ಗುಣರಾಶಯೇ ।
ಹೃದ್ಯಾಯ ಶುದ್ಧವಿದ್ಯಾಯ ಮಧ್ವಾಯ ಚ ನಮೋನಮಃ ॥

॥ ಶ್ರೀ ಮಧ್ವೇಶಾರ್ಪಣಮಸ್ತು ॥



# ಪ್ರಮಾಣಲಕ್ಷಣದ ಮುನ್ನುಡಿ.



"ಲಕ್ಷ್ಮೀಪತೇಽಮಲವಿಚಿತ್ರಮಹಾವಿಭೂತೇ
ಸರ್ವೇಶ ಸರ್ವವರದ ಪ್ರಣತಾರ್ತಿಹಾರಿನ್ ।
ಶ್ರೀಮಧ್ವ ನಿರ್ಜರವರಾರ್ಯಗುರೋಽಸುದೀನಂ
ಮಾಂ ದೀನನಾಥ ಪರಿಪಾಹಿ ಕೃಪಾಂಬುರಾಶೇ ॥"

"ಯೋ ವಿಪ್ರಲಂಭವಿಪರೀತಮತಿಪ್ರಭೂತ-
ವಾದಾನ್ನಿರಸ್ಯಕೃತವಾನ್ಭುವಿ ತತ್ವವಾದಮ್ ।
ಸರ್ವೇಶ್ವರೋ ಹರಿರಿತಿ ಪ್ರತಿಪಾದಯಂತ-
ಮಾನಂದತೀರ್ಥಮುನಿವರ್ಯಮಹಂ ನಮಾಮಿ ॥"

"ದುರ್ವಾದಿಮತ್ತೇಭಮಹಾಂಕುಶಂ ಲಸತ್
ಶ್ರೀಮಧ್ವಶಾಸ್ತ್ರಾಂಬುಜದಿವ್ಯಹಂಸಂ ।
ಗುಣಾಬ್ಧಿಮಜ್ಞಾನತಮೋದಿನೇಶಂ
ಜಯಾರ್ಯಮೀಡೇ ಸುಜನಾಬ್ಧಿಚಂದ್ರಂ ॥"

ಶ್ರೀಮಧ್ವಾಚಾರ್ಯರು ರಚಿಸಿದ ಮೂವತ್ತೇಳು ಗ್ರಂಥಗಳಲ್ಲಿ, (1) ಪ್ರಮಾಣ ಲಕ್ಷಣವು, (2) ಕಥಾಲಕ್ಷಣವು, (3) ಉಪಾಧಿ ಖಂಡನವು, (4)ಮಾಯಾವಾದ ಖಂಡನವು, (5) ಪ್ರಪಂಚ ಮಿಥ್ಯಾತ್ವಾನುಮಾನ ಖಂಡನವು, (6) ತತ್ವಸಂಖ್ಯಾನವು, (7) ತತ್ವವಿವೇಕವು, (8) ತತ್ವೋದ್ಯೋತವು, (9) ಕರ್ಮನಿರ್ಣಯವು, (10) ವಿಷ್ಣುತತ್ವನಿರ್ಣಯವು, ಇವುಗಳು ದಶಪ್ರಕರಣಗಳೆಂದು ಪ್ರಸಿದ್ಧಗಳಾಗಿವೆ.

"ಶಾಸ್ತ್ರೈಕದೇಶಸಂಬದ್ಧಂ ಶಾಸ್ತ್ರಕಾರ್ಯಾಂತರೇ ಸ್ಥಿತಂ ।
ಆಹುಃ ಪ್ರಕರಣಂ ನಾಮ ಶಾಸ್ತ್ರಭೇದಂ ವಿಪಶ್ಚಿತಃ" ॥

ಶಾಸ್ತ್ರದ ಒಂದು ಭಾಗವನ್ನು ಸಂಬಂಧಿಸಿ ಶಾಸ್ತ್ರಾರ್ಥವನ್ನು ಸಾಧಿಸುವುದಕ್ಕಾಗಿ ಹೊರಟ ಗ್ರಂಥವನ್ನು ಪ್ರಕರಣವೆಂದು ವಿದ್ವಾಂಸರು ಹೇಳುತ್ತಾರೆ. ಮೇಲಿನ ಪ್ರಕರಣಗಳ ಹೆಸರುಗಳಿಂದಲೇ ಅವು ಯಾವ ಯಾವ ಶಾಸ್ತ್ರಾಂಶವನ್ನು ಬೋಧಿಸುತ್ತವೆ ಎಂದು ಸ್ಪಷ್ಟವಾಗಿ ತಿಳಿಯುವುದು. ಶ್ರೀಮದಾಚಾರ್ಯರು ರಚಿಸಿದ ಭಾಷ್ಯಾದಿಗಳಲ್ಲಿ ಅಲ್ಲಲ್ಲಿ ಹೇಳಿರುವ ತತ್ವಗಳನ್ನು ಈ ಪ್ರಕರಣಗಳಲ್ಲಿ ಸಂಗ್ರಹಿಸಿ ಏಕತ್ರ ತಿಳಿಸುವರು. ಈ ಪ್ರಕರಣಗಳು, ತತ್ರಾಪಿ ಈ ಸಂಚಿಕೆಯಲ್ಲಿ ಸೇರಿದವುಗಳು, ಅತಿ ಕಠಿಣವಾಗಿರುವವು. ವಿಷಯಗಳೇ ಕಠಿನಗಳು, ಪರಿಭಾಷೆಯು ವಿಸ್ತಾರವಾಗಿರುವುದು. ಗ್ರಂಥರಚನೆಯು ಸೂತ್ರಕ್ರಮವನ್ನು ಅನುಸರಿಸಿ ಇರುವುದು. ಒಂದೊಂದು ಪದವು ವಿಶೇಷಾರ್ಥಗರ್ಭಿತವಾಗಿರುವುದು. ಪ್ರಕರಣಗಳ ತಾತ್ಪರ್ಯವನ್ನು ವಾಚಕರಿಗೆ ಸುಲಭರೀತಿಯಿಂದ ತಿಳಿಸುವುದಕ್ಕಾಗಿ ಮುಖ್ಯವಾದ ಅಂಶಗಳನ್ನು ಮಾತ್ರ ಮುಂದೆ ವಿವರಿಸಿದೆ. ಶಾಸ್ತ್ರಾರ್ಥವು ಸುಲಭವಲ್ಲ. ಓದುವವರು ಅದಕ್ಕೆ ಬಹಳವಾಗಿ ಮನಸ್ಸುಕೊಡಬೇಕು. ಒಂದು ಸಲ ಓದಿ ವಿಷಯವು ತಿಳಿಯದಿದ್ದರೆ, ಎರಡು, ಮೂರು, ನಾಲ್ಕಾವರ್ತಿ ಓದಬೇಕು. ಆಗ ಅರ್ಥವು ಚೆನ್ನಾಗಿ ಪ್ರಕಾಶವಾಗುವುದು. ಇಂಗ್ಲೀಷ್ ಗ್ರಂಥ ಮಾಡರ್ನ್ ಫಿಲಾಸಫಿ (Modern philosophy) ಎಂಬುವುದರಲ್ಲಿ ಡಾಕ್ಟರ್ ರಾಜರ್ಸ್ (Dr. A. K. Rogers) ಎಂಬುವವರು (No one can become a philosopher without

thinking, and thinking hard on his own account.) ತತ್ವಜ್ಞಾನಿ ಆಗ ಬೇಕಾದರೆ ತಾನೇ ಬುದ್ಧಿಖರ್ಚುಮಾಡಬೇಕು. ಮತ್ತು ಬಹಳವಾಗಿ ಖರ್ಚುಮಾಡಬೇಕು. ಎಂದು ಹೇಳಿರುವರು. ಹಿಂದೆ ಶಾಸ್ತ್ರಾಭ್ಯಾಸ ಮಾಡದಿದ್ದವರಿಗೆ ಪ್ರಥಮ ಪರಿಚಯಮಾಡಿ ಕೊಡುವ ದೃಷ್ಟಿಯಿಂದ ಬರೆದ ಪ್ರಯುಕ್ತವು, ಗ್ರಂಥ ವಿಸ್ತಾರ ಭೀತಿಯಿಂದಲು, ಪ್ರಕರಣ ಗಳ ವಿವರಣವನ್ನು ಬಹಳ ಮಟ್ಟಿಗೆ ಸಂಕೋಚ ಮಾಡಬೇಕಾಯಿತು. ಹೆಚ್ಚಿಗೆ ತಿಳಿಯಲು ಅಪೇಕ್ಷಿಸುವವರು ಟೀಕಾ-ಟಿಪ್ಪಣಿಗಳ ಸಹಾಯದಿಂದಲೂ, ಮತ್ತು ಸದ್ಗುರುಗಳ ಮುಖ ದಿಂದಲೂ ತಿಳಯಬೇಕು.

2. ನ್ಯಾಯ, ವೈಶೇಷಿಕ, ಸಾಂಖ್ಯ, ಯೋಗ, ಪೂರ್ವಮೀಮಾಂಸ, ಉತ್ತರಮೀ ಮಾಂಸ ಇವು ಷಡ್ದರ್ಶನಗಳೆಂದು ಬಹುಕಾಲವಾಗಿ ಖ್ಯಾತಿಹೊಂದಿವೆ. ಉತ್ತರಮೀಮಾಂ ಸಕ್ಕೆ ಬ್ರಹ್ಮಮೀಮಾಂಸವೆಂದೂ ವೇದಾಂತವೆಂದೂ ಹೆಸರು ಬಂದಿದೆ. ಆರು ಶಾಸ್ತ್ರಗಳಿಗೂ ಪ್ರತ್ಯೇಕ ಸೂತ್ರಗಳಿವೆ. ಗೌತಮರು ನ್ಯಾಯಸೂತ್ರಗಳನ್ನೂ, ಕಣಾದರು ವೈಶೇಷಿಕ ಸೂತ್ರ ಗಳನ್ನೂ, ಕಪಿಲರು ಸಾಂಖ್ಯಸೂತ್ರಗಳನ್ನೂ, ಪತಂಜಲಿಗಳು ಯೋಗಸೂತ್ರಗಳನ್ನೂ, ಜೈಮಿ ನಿಗಳು ಪೂರ್ವಮೀಮಾಂಸಾ ಸೂತ್ರಗಳನ್ನೂ, ವೇದವ್ಯಾಸರು (ಬಾದರಾಯಣರು) ವೇದಾಂತ ಸೂತ್ರಗಳನ್ನೂ ರಚಿಸಿದರು. ಶಾಸ್ತ್ರವಿಚಾರಕ್ಕೆ ಪ್ರಮಾಣಗಳನ್ನು ಮೊದಲು ನಿಶ್ಚಯಮಾಡಕೊ ಳ್ಳುವದು ಅತ್ಯಾವಶ್ಯಕವು. ಮ್ಯಾಕ್ಸ್ ಮುಲ್ಲರ್ (Max Muller) ತಾನು ಬರದ ಷಡ್ದರ್ಶನ ಸಂಗ್ರಹದಲ್ಲಿ (Six Systems of Philosophy) ಈ ಆಚಾರ್ಯರುಗಳು ಪ್ರಮಾಣ ಲಕ್ಷಣಗಳನ್ನು ಮೊದಲು ನಿರೂಪಣೆ ಮಾಡಿರುವುದು ಅತಿ ಶ್ಲಾಘನೀಯವೆಂದು ಹೊಗಳಿರು ತ್ತಾನೆ. ಮತ್ತು ಪಾಶ್ಚಾತ್ಯರು ಪೂರ್ವದಲ್ಲಿ ಪ್ರಮಾಣಗಳಿಗೆ ಇವರಂತೆ ದೃಷ್ಟಿಕೊಟ್ಟದ್ದರೆ ವ್ಯರ್ಥ ಕಂಠಶೋಷಕ್ಕೆ ಅವಕಾಶವಿರುತ್ತಿರಲಿಲ್ಲವೆಂದು ಬರೆದಿದ್ದಾನೆ. ನ್ಯಾಯಸೂತ್ರಗಳಲ್ಲೂ ಮತ್ತು ಆಧುನಿಕ ನ್ಯಾಯ ಗ್ರಂಥಗಳಲ್ಲೂ ಪ್ರಮಾಣಗಳ ವಿಚಾರವು ಬಹಳವಾಗಿದೆ. ವೇದಾಂತ ಸೂತ್ರಗಳಲ್ಲಿ ಪ್ರಮಾಣಗಳ ವಿವರಣವು ಹೆಚ್ಚಿಗೆ ಇರುವುದಿಲ್ಲ. ಶ್ರೀ ವೇದವ್ಯಾಸರು ಬ್ರಹ ತರ್ಕವೆಂಬ ಒಂದು ಗ್ರಂಥಮಾಡಿ, ಅದರಲ್ಲಿ ನ್ಯಾಯಶಾಸ್ತ್ರಗಳ ವಿಷಯಗಳನ್ನು ನಿರೂಪಣೆ ಮಾಡಿರುತ್ತಾರೆ. ಈ ಗ್ರಂಥವು ಈಗ ದುರ್ಲಭವಾಗಿರುತ್ತದೆ.

ಪ್ರಮಾಣಲಕ್ಷಣವು, ಕಥಾಲಕ್ಷಣವು ಎರಡು ಬ್ರಹ್ಮತರ್ಕವನ್ನನುಸರಿಸಿ ಬರೆಯಲ್ಪಟ್ಟಿವೆ ಎಂದು ಆಚಾರ್ಯರು ಸ್ಪಷ್ಟವಾಗಿ ಹೇಳಿದ್ದಾರೆ. ಇದಲ್ಲದೆ ಭಾಷ್ಯಾದಿಗಳಲ್ಲಿ ನೂರಾರು ಕಡೆ ಬ್ರಹ್ಮತರ್ಕದ ವಾಕ್ಯಗಳನ್ನು ಉದಾಹರಿಸಿರುತ್ತಾರೆ. ವಿಷ್ಣುತತ್ವನಿರ್ಣಯದಲ್ಲಿ ಪ್ರಮಾಣಗಳ ಬಲಾಬಲಗಳನ್ನು ವಿಚಾರಮಾಡುತ್ತ '**ಅದುಷ್ಟಮಿಂದ್ರಿಯಂ ತ್ವಕ್ಷಂ ತರ್ಕೋಽದುಷ್ಟಸ್ತ ಥಾನುಮಾ**......'ಇತ್ಯಾದಿ ಬ್ರಹ್ಮತರ್ಕವಾಕ್ಯಗಳನ್ನೇ ಉದ್ಧರಿಸಿ ಪ್ರಮಾಣಲಕ್ಷಣತ್ವೇನ ಉದಾ ಹರಿಸಿರುತ್ತಾರೆ. ಬ್ರಹ್ಮತರ್ಕವೆಂಬ ಗ್ರಂಥವನ್ನು ರಚಿಸಿರುವುದರಿಂದಲೇ ವೇದವ್ಯಾಸರು ಬ್ರಹ್ಮ ಸೂತ್ರಗಳಲ್ಲಿ ಪ್ರಮಾಣಲಕ್ಷಣವನ್ನು ವಿಸ್ತರಿಸಲಿಲ್ಲವೆಂದು ಊಹಿಸಬೇಕಾಗಿದೆ.

3. ನೈಯ್ಯಾಯಿಕ ಮೊದಲಾದವರು ಹೇಳಿದ ಪ್ರಮಾಣಲಕ್ಷಣಗಳು ದೋಷಯುಕ್ತ ಗಳಾದುದರಿಂದ ಶ್ರೀಮದಾಚಾರ್ಯರು ಪ್ರಮಾಣಗಳ ನಿಜವಾದ ಲಕ್ಷಣವನ್ನು ತಿಳಿಸುವುದಕ್ಕೂ, ಅನ್ಯರು ಹೇಳುವ ಲಕ್ಷಣಗಳಲ್ಲಿ ಇರುವ ದೋಷಗಳನ್ನು ತೋರಿಸುವುದಕ್ಕೂ, ಈ ಪ್ರಕರಣವನ್ನು ಬರೆಯಬೇಕಾಯಿತು. ಪ್ರಮಾಣಗಳ ವಿಚಾರವು ಬ್ರಹ್ಮಜ್ಞಾನವೆಂಬ ಮಂದಿರಕ್ಕೆ ಮೊದಲಿನ ಮೆಟ್ಟಲಾಗಿದೆ. ಆದುದರಿಂದಲೇ ಆಚಾರ್ಯರು ಬ್ರಹ್ಮಸಿದ್ಧಿಗೋಸ್ಕರ ಈ ಗ್ರಂಥವನ್ನು ಬರೆದೆ ನೆಂದು ಹೇಳಿರುತ್ತಾರೆ.

4. (1) ಪ್ರತ್ಯಕ್ಷ, (2) ಅನುಮಾನ, (3) ಆಗಮ, (4) ಉಪಮಾನ, (5) ಅರ್ಥಾಪತ್ತಿ, (6) ಅಭಾವ, (7) ಐತಿಹ್ಯ, (8) ಸಂಭವ, (9) ಚೇಷ್ಟೆ, ಇವುಗಳಲ್ಲಿ ಬೇರೆ ಬೇರೆ ಮತದವರು ಹೆಚ್ಚುಕಡಿಮೆ ಸಂಖ್ಯೆಗಳನ್ನು ಪ್ರಮಾಣಗಳೆಂದು ಸ್ವೀಕರಿಸಿರುವರು. ಚಾರ್ವಾಕನು ಪ್ರತ್ಯಕ್ಷವನ್ನು ಮಾತ್ರ ಪ್ರಮಾಣವೆಂದು ಅಂಗೀಕರಿಸುವನು. ಅನುಮಾನಕ್ಕೆ ಪ್ರಾಮಾಣ್ಯವನ್ನು ಒಪ್ಪದಿದ್ದರೂ, ತನ್ನ ಪಕ್ಷವನ್ನು ಸಾಧಿಸುವುದಕ್ಕೆ ಅವನಿಗೆ ಅನುಮಾನವನ್ನು ಉಪಯೋಗಿಸದೆ ನಿರ್ವಾಹವಿಲ್ಲ. ಬೌದ್ಧರು, ವೈಶೇಷಿಕರು ಪ್ರತ್ಯಕ್ಷಾನುಮಾನಗಳನ್ನು ಮಾತ್ರ ಪ್ರಮಾಣಗಳೆಂದು ಒಪ್ಪುವರು. ಸಾಂಖ್ಯರು ಪ್ರತ್ಯಕ್ಷಾನುಮಾನಾಗಮಗಳು ಮಾತ್ರ ಪ್ರಮಾಣಗಳೆನ್ನುವರು ನೈಯ್ಯಾಯಿಕರು ಇವುಗಳೊಡನೆ ಉಪಮಾನವನ್ನು ಕೂಡಿಸಿ ಪ್ರಮಾಣಗಳು ನಾಲ್ಕು ಎನ್ನುವರು. ಇನ್ನು ಕೆಲವರು ಅಭಾವವನ್ನು, ಅರ್ಥಾಪತ್ತಿಯನ್ನು ಬೇರೆಬೇರೆ ಪ್ರಮಾಣವೆಂದು ಹೇಳುವರು. ಶ್ರೀಮದಾಚಾರ್ಯರು ಪ್ರತ್ಯಕ್ಷ, ಅನುಮಾನ, ಅಗಮವೆಂದು ಮೂರೇ ವಿಧವಾಗಿ ಪ್ರಮಾಣವನ್ನು ವಿಭಾಗಿಸುವರು. ಉಪಮಾನಾದಿಗಳು ಇವುಗಳಲ್ಲೇ ಅಂತರ್ಭಾವವನ್ನು ಹೊಂದುವ ಕ್ರಮವನ್ನು ತೋರಿಸುವರು.

5. ಜ್ಞಾನವು ಯಥಾರ್ಥವೆಂದೂ, ಸಂಶಯವೆಂದೂ, ಭ್ರಾಂತಿ ಎಂದೂ ಮೂರು ವಿಧವಾಗಿರುವುದು. ಯಥಾರ್ಥಜ್ಞಾನಕ್ಕೂ, ಅದರ ಸಾಧನಕ್ಕೂ ಪ್ರಮಾಣವೆಂದು ಹೆಸರು. ಯಥಾರ್ಥಜ್ಞಾನವು ಕೇವಲವೆನಿಸುವುದು. ಅದರ ಸಾಧನವು ಅನುಪ್ರಮಾಣವು ಎನಿಸುವುದು. ಕೇವಲಪ್ರಮಾಣವು ಈಶಜ್ಞಾನವು, ಲಕ್ಷ್ಮೀಜ್ಞಾನವು, ಯೋಗಿಜ್ಞಾನವು, ಅಯೋಗಿಜ್ಞಾನವೆಂದು ಆಶ್ರಯವನ್ನು ಹಿಡಿದು ನಾಲ್ಕು ವಿಧವಾಗಿರುವುದು. ಪರಮಾತ್ಮನ ಜ್ಞಾನವು ಆದ್ಯಂತವಿಲ್ಲದುದು. ಸಾರ್ವತ್ರಿಕವು ಮತ್ತು ಸ್ವತಂತ್ರವು. ಲಕ್ಷ್ಮೀಜ್ಞಾನವು ಈಶಾಧೀನವು. ಆದ್ಯಂತರಹಿತವು. ಪರಮಾತ್ಮನ ವಿನಹ ಸಾರ್ವತ್ರಿಕವು. ಸ್ಪಷ್ಟತೆಯಲ್ಲಿ ಪರಮಾತ್ಮನ ಜ್ಞಾನಕ್ಕೂ, ಲಕ್ಷ್ಮೀಜ್ಞಾನಕ್ಕೂ ಭೇದವಿದೆ. ಯೋಗಿಗಳು ಋಜುಗಳು, ತಾತ್ವಿಕರು, ಅತಾತ್ವಿಕರೆಂದು ಮೂರು ವಿಧಗಳಾಗಿರುವರು. ಇವರುಗಳ ಜ್ಞಾನದಲ್ಲಿ ತಾರತಮ್ಯ ಇರುವುದು. ಅಸ್ಮದಾದಿಗಳು ಅಯೋಗಿಗಳು. ನಮ್ಮ ಜ್ಞಾನವು ಅಲ್ಪವು, ಆದ್ಯಂತವುಳ್ಳದ್ದು.

6. ಪ್ರತ್ಯಕ್ಷವೆಂದರೆ ದೋಷರಹಿತವಾದ ಇಂದ್ರಿಯಕ್ಕೂ, ಅದಕ್ಕೆ ಯೋಗ್ಯವಾದ ಅರ್ಥಕ್ಕೂ ಸಂಬಂಧವು. ಕಣ್ಣಿಗೂ ಬಣ್ಣಕ್ಕೂ ಸಂಬಂಧವಾದರೆ ಇದು ಕೆಂಪು, ಅದು ಹಳದಿ ಎಂಬ ಜ್ಞಾನವು ಉಂಟಾಗುವುದು. ಈ ಸಂಬಂಧಕ್ಕೆ ಪ್ರತ್ಯಕ್ಷವೆಂದು ಹೆಸರು. ಪಂಚಜ್ಞಾನೇಂದ್ರಿಯಗಳಿಂದ ಐದು ವಿಧವಾದ ಅರ್ಥಜ್ಞಾನ ಉಂಟಾಗುವುದು. ಇದಲ್ಲದೆ ಮನಸ್ಸು ಎಂಬುದು ಒಂದು ಒಳಗಿನ ಇಂದ್ರಿಯವು ಇರುವುದು. ಇದು ಹಿಂದೆ ಅನುಭವಿಸಿದ ವಿಷಯವನ್ನು ಪುನಃ ನಮಗೆ ಪ್ರತ್ಯಕ್ಷೀಕರಿಸುವುದು. ನಾನು ನಿನ್ನೆ ಇದುಮಾಡಿದ್ದೆನು, ಕಳೆದ ವರ್ಷ ಅಲ್ಲಿಗೆ ಹೋಗಿದ್ದೆನು ಎಂಬ ಇತ್ಯಾದಿ ಜ್ಞಾನವು ಮನಸ್ಸಿನಿಂದ ಇತರ ಇಂದ್ರಿಯಾಪೇಕ್ಷೆ ಇಲ್ಲದೆ ಉಂಟಾಗುವುದು. ಇದಕ್ಕೆ ಸ್ಮೃತಿ ಎಂದು ಹೆಸರು. ಮನಸ್ಸು ಮತ್ತು ಕಣ್ಣು, ಕಿವಿ ಮೊದಲಾದುವುಗಳು ಜ್ಞಾನವನ್ನು ಉಂಟುಮಾಡುವುದಕ್ಕೆ ಸಹಾಯಭೂತಗಳು. ಇವುಗಳಿಗೆ ಸಾಧನಗಳೆಂದು ಹೆಸರು. ಜ್ಞಾನವನ್ನು ಹೊಂದುವವನು ಬೇರೆ, ಅವನಿಗೆ ಆತ್ಮನು ಜೀವನು ಎಂದು ಹೆಸರು. ಜೀವನಿಗೆ ಮೇಲೆ ಹೇಳಿದ ಇಂದ್ರಿಯಗಳು ಮನಸ್ಸು ಅಲ್ಲದೆ ಅವನಿಗೆ ಸ್ವರೂಪೇಂದ್ರಿಯಗಳು ಬೇರೆ ಇರುವವು. ಇವು ಕೇವಲ ಜ್ಞಾನಸ್ವರೂಪವಾದವುಗಳು. ಸ್ವರೂಪೇಂದ್ರಿಯಕ್ಕೆ ಸಾಕ್ಷಿ ಎಂದು ಹೆಸರು. ಸಾಕ್ಷಿಯು ಜ್ಞಾನಸಾಧನವಾದುದರಿಂದ, ಅನುಪ್ರಮಾಣವೇ. ಜೀವನಿಗೆ ಕಾಲ, ದಿಕ್ಕು, ಧರ್ಮಾಧರ್ಮ, ಪ್ರಾಮಾಣ್ಯಾಪ್ರಾಮಾಣ್ಯ ಇವುಗಳು ಸಾಕ್ಷಿಯಿಂದ ತಿಳಿಯುವುದು.

ಅರ್ಥ ಇಂದ್ರಿಯ ಇವುಗಳ ಸನ್ನಿಕರ್ಷವೇ ಪ್ರತ್ಯಕ್ಷವೆಂದು ಹೇಳಿದ್ದರೂ ಜ್ಞಾನ ಉಂಟಾಗಬೇಕಾದರೆ ಇಷ್ಟು ಮಾತ್ರ ಸಾಲದು. ಆತ್ಮನಿಗೂ ಮನಸ್ಸಿಗೂ ಸಂಬಂಧವಾಗಬೇಕು. ಮನಸ್ಸಿಗೂ ಇಂದ್ರಿಯಕ್ಕೂ ಸಂಬಂಧವಾಗಬೇಕು, ಮತ್ತು ಇಂದ್ರಿಯಕ್ಕೂ ಅರ್ಥಕ್ಕೂ ಸಂಬಂಧವಾಗಬೇಕು, ಇಷ್ಟಾದರೇನೆ ಜ್ಞಾನ ಉಂಟಾಗುವುದು. ಇಂದ್ರಿಯಗಳಾಗಲೀ, ಅರ್ಥವಾಗಲೀ ದೋಷಯುಕ್ತವಾದರೆ ಯಥಾರ್ಥಜ್ಞಾನ ಉಂಟಾಗುವುದಿಲ್ಲ. ಸಾಕ್ಷಿಯು ದೋಷಯುಕ್ತವಾಗುವುದಿಲ್ಲ. ಆದುದರಿಂದ ತದ್ವಾರಾ ಉಂಟಾಗುವ ಜ್ಞಾನವು ಯಾವಾಗಲೂ ಯಥಾರ್ಥವೇ ಆಗಿರುತ್ತದೆ.

7. ಅನುಮಾನಕ್ಕೆ ಮೂಲಾಧಾರವು ವ್ಯಾಪ್ತಿಯು. ಎರಡು ವಸ್ತುಗಳು ಯಾವಾಗಲು ಜೊತೆಯಾಗಿ ಇರುವುದಾದರೆ, ಅವುಗಳಿಗೆ ಇರುವಸಂಬಂಧವು ವ್ಯಾಪ್ತಿಎನಿಸಿ ಕೊಳ್ಳುತ್ತದೆ. A, B ಎಂಬ ಎರಡು ವಸ್ತುಗಳು ಸೇರಿರುವುದಾದರೆ A ಇದ್ದಲ್ಲೆಲ್ಲಾ B ಇರಬಹುದು. ಆದರೆ B ಇದ್ದಲ್ಲೆಲ್ಲಾ A ಇರಬೇಕೆಂದು ನಿಯಮವಿಲ್ಲ. ಬೆಂಕಿ ಹೊಗೆ ಇವುಗಳಲ್ಲಿ ಹೊಗೆಯಿದ್ದಲ್ಲೆಲ್ಲಾ ಬೆಂಕಿ ಇರುತ್ತದೆ. ಬೆಂಕಿ ಇದ್ದಲ್ಲೆಲ್ಲಾ ಹೊಗೆಇರುವುದಿಲ್ಲ. ಮನುಷ್ಯತ್ವ ಇದ್ದಲ್ಲೆಲ್ಲಾ ಮರ್ತ್ಯತ್ವ ಇರುತ್ತದೆ. ಆದರೆ ಮರ್ತ್ಯತ್ವ ಇದ್ದಲ್ಲೆಲ್ಲಾ ಮನುಷ್ಯತ್ವ ಇರುವುದಿಲ್ಲ. A ಎಂಬುವ ವಸ್ತುವಿಗೆ ಲಿಂಗವೆಂದು ಹೆಸರು. B ಎಂಬುವ ವಸ್ತುವಿಗೆ ಲಿಂಗಿ ಎಂದು ಹೆಸರು. ಉದಾಹರಣೆಗಳಲ್ಲಿ ಹೊಗೆಯು, ಮನುಷ್ಯತ್ವವು ಲಿಂಗಗಳು. ಬೆಂಕಿಯು ಮರ್ತ್ಯತ್ವವು. ಲಿಂಗಿಗಳು ಲಿಂಗಕ್ಕೂ, ಲಿಂಗಿಗೂ ಇರುವ ಸಂಬಂಧಕ್ಕೆ ವ್ಯಾಪ್ತಿ ಎಂದು ಹೆಸರು. ಲಿಂಗಕ್ಕೆ ವ್ಯಾಪಕವೆಂದೂ, ಲಿಂಗಿಗೆ ವ್ಯಾಪ್ಯವೆಂದೂ ಹೆಸರು. ವ್ಯಾಪ್ತಿಜ್ಞಾನವಿನಹ ಅನುಮಾನವು ಜ್ಞಾನವನ್ನುಂಟುಮಾಡಲಾರದು. ಬಾಹ್ಯಪ್ರತ್ಯಕ್ಷವು ವರ್ತಮಾನಕಾಲದಲ್ಲಿದ್ದ ವಸ್ತುಜ್ಞಾನವನ್ನು ಮಾತ್ರ ಉಂಟುಮಾಡುವುದು. ಅನುಮಾನವು ಭೂತ, ವರ್ತಮಾನ, ಭವಿಷ್ಯತ್ಕಾಲದ ವಸ್ತುಜ್ಞಾನವನ್ನುಉಂಟುಮಾಡಲಾಪುದು. ನದಿಯಲ್ಲಿ ಪ್ರವಾಹವು ಇವತ್ತು ಕಂಡರೆ ನಿನ್ನೆ ಬೆಟ್ಟದಮೇಲೆ ಮಳೆಯಾಗಿರಬೇಕೆಂದು ಊಹಿಸುವೆವು. ಕಪ್ಪುಮೋಡಹಾಕಿದರೆ ಮುಂದೆ ಮಳೆಬರುವುದೆಂದು ಊಹಿಸುವೆವು.

8. ನೈಯ್ಯಾಯಿಕರು ಅವರನ್ನು ಅನುಸರಿಸಿ ಅದ್ವೈತಿಗಳು, ಅನುಮಾನವು ಐದು ಅವಯುವಗಳು ಉಳ್ಳದ್ದಾಗಬೇಕೆಂದು ಒಂದುನಿಯಮವನ್ನು ಮಾಡಿಕೊಂಡಿರುವರು. ಇನ್ನು ಕೆಲವರು ಮೂರು ಅವಯುವಗಳಿರಬೇಕೆಂದು ಹೇಳುವರು. ಆಚಾರ್ಯರು ಈ ನಿಯಮವೇ ತಪ್ಪು, ಎಷ್ಟು ಅವಯುವಗಳಿಂದ ಪರನಿಗೆ ಜ್ಞಾನಉಂಟಾಗುವುದೋ ಅಷ್ಟೇ ಉಪಯೋಗಿಸಬಹುದೆಂದು ಹೇಳುವರು. ಪಂಚಾವಯುವಗಳು ಯಾವು ಎಂದರೆ—(1)ಪ್ರತಿಜ್ಞೆಯು (2)ಹೇತು (3) ದೃಷ್ಟಾಂತ (4) ಉಪನಯ (5) ನಿಗಮನ. ಈ ರೀತಿಯಾಗಿ ಧೂಮಾನುಮಾನವನ್ನು ಹೇಳಿದರೆ ಅದರ ಆಕಾರವು ಹೀಗಾಗುವುದು. (1) ಪರ್ವತವು ಅಗ್ನಿವುಳ್ಳದ್ದಾಗಿದೆ. (2) ಹೊಗೆ ಇರುವುದರಿಂದ. (3) ಅಡಿಗೆಮನೆಯಂತೆ. (4) ಪರ್ವತದಲ್ಲಿ ಹೊಗೆಯಿದೆ. (5) ಆದುರಿಂದ ಅಲ್ಲಿ ಬೆಂಕಿ ಇದೆ. ಇಲ್ಲಿ ನಾಲ್ಕು, ಐದು ಅವಯುವಗಳು ಅನಾವಶ್ಯಕ ವೆಂದು ಸ್ಪಷ್ಟವಾಗಿ ತಿಳಿಯುವುದು. ಪರ್ವತದಲ್ಲಿ ಹೊಗೆ ಇದೆ ಎಂಬುವುದು ಎರಡನೆಯ ಅವಯುವವಾದ ಹೇತುವಿನಿಂದಲೇ ನಿಶ್ಚಯವಾಗುವುದು. ಐದನೆ ಅವಯುವವು ಪ್ರತಿಜ್ಞೆಯಲ್ಲಿ ಅಡಗಿರುವುದು. ಅನಾವಶ್ಯಕವಾದ ಪದಗಳನ್ನು ಉಪಯೋಗಿಸುವುದು ಅಧಿಕವೆಂಬ ನಿಗ್ರಹಸ್ಥಾನವು, ಆದುದರಿಂದ ಉಪನಯ ನಿಗಮನಗಳು ಅನುಮಾನದಲ್ಲಿ ಸೇರಿಸುವುದು ದೋಷವು. ಪಾಶ್ಚಾತ್ಯರೀತಿಯಲ್ಲಿ ಅನುಮಾನದಾಕಾರವು ಇಂತಿರುವುದು. (1) ಹೊಗೆ ಇದ್ದಲ್ಲೆಲ್ಲಾ ಬೆಂಕಿ ಇರುವುದು. (2) ಪರ್ವತದಲ್ಲಿ ಹೊಗೆಯಿದೆ. (3) ಆದುದರಿಂದ ಅಲ್ಲಿ ಬೆಂಕಿ ಇದೆ. ಅವರು ವ್ಯಾಪ್ತಿಯನ್ನೇ ಮೊದಲು

ಹೇಳುವರು. ಅದನ್ನು ಸೂಚಿಸುವ ದೃಷ್ಟಾಂತವನ್ನು ಅನುಮಾನದಲ್ಲಿ ಸೇರಿಸಿರುವರು. ಪ್ರತಿಜ್ಞೆಗೆ ಬದಲಾಗಿ ನಿಗಮನವನ್ನು ಹೇಳುವರು. ಹೇತುವನ್ನು ಉಪನಯದ ಆಕಾರವಾಗಿ ಹೇಳುವರು ಅಂತು ಅವರುಗಳಿಗೂ ಮೂರೇ ಅವಯವಗಳು ಸಾಕಾಗಿರುತ್ತವೆ.

9. ಪ್ರತಿಜ್ಞೆ, ಹೇತು, ದೃಷ್ಟಾಂತಗಳು ವಾಕ್ಯರೂಪಗಳು. "ಪರ್ವತವು ಬೆಂಕಿ ಉಳ್ಳದ್ದಾಗಿದೆ" ಎಂಬುವ ವಾಕ್ಯವು ಪ್ರತಿಜ್ಞೆ ಎನಿಸಿಕೊಳ್ಳುತ್ತದೆ. ಅಗ್ನಿಯಿಂದ ಕೂಡಿದಪರ್ವತಕ್ಕೆ ಪಕ್ಷವೆಂದು ಹೆಸರು. ಹೊಗೆಗೆ ಲಿಂಗವೆಂದು ಹೆಸರು. ಅಡಿಗೆಮನೆಗೆ (ವ್ಯಾಪ್ತಿಸ್ಮರಣೆ ಇದ್ದರೆ) ಉದಾಹರಣವೆಂದು ಹೆಸರು. ಮತ್ತು ಹೊಗೆಗೆ ಸಾಧನವೆಂದೂ, ಬೆಂಕಿಗೆ ಸಾಧ್ಯವೆಂದೂ, ಪರ್ವತಕ್ಕೆ ಸಾಧ್ಯವಿರುವ ಧರ್ಮಿಎಂದೂ ವ್ಯವಹಾರವಿರುವುದು. ಇದೇ ರೀತಿಯಾಗಿ ಎಲ್ಲಾ ಅನುಮಾನಗಳಿಗೂ ಅಂಗಗಳನ್ನು ತಿಳಿಯಬೇಕು. ಪಕ್ಷ, ಲಿಂಗ, ಉದಾಹರಣಗಳು ಅರ್ಥರೂಪಗಳಾಗಿರುವುವು.

10. ನೈಯ್ಯಾಯಿಕರು ತರ್ಕವನ್ನು ಹೆಚ್ಚಾಗಿ ಉಪಯೋಗಿಸುವುದರಿಂದ, ತಾರ್ಕಿಕರು ಎನಿಸಿಕೊಳ್ಳುತ್ತಾರೆ. ತರ್ಕವೆಂದರೆ, ವಾದಿಗೆ ಅನಿಷ್ಟವಾದುದನ್ನು ಅಂಗೀಕಾರಮಾಡಬೇಕಾಗುತ್ತದೆಯೆಂದು ತೋರಿಸುವುದು. ವಾದಿಯು, ಕಾರಣವಾದ ವಸ್ತುವು, ಕಾರ್ಯಕ್ಕಿಂತ ಮುಂಚಿನ ಕಾಲದಲ್ಲಿ ಇರುತ್ತದೆಯೆಂದು ಒಪ್ಪಿರುವನು. ಅವನು ವಸ್ತ್ರಕ್ಕೆ ನೂಲು ಕಾರಣವೆಂದರೆ, ತರ್ಕಕ್ಕೆ ಅವಕಾಶವಿಲ್ಲ. ಹಾಗಲ್ಲದೆ ವಸ್ತ್ರಕ್ಕೆ ವಸ್ತ್ರವೇಕಾರಣವೆಂದರೆ, ಆಗ ಕಾರ್ಯವಾದ ವಸ್ತ್ರವು ಅದು ಹುಟ್ಟುವುದಕ್ಕೂ ಮೊದಲೇ ಇತ್ತೆಂದು ಹೇಳಿದ ಹಾಗೆ ಆಯಿತು. ಒಂದೇ ವಸ್ತ್ರವು ಕಾರಣವು, ಕಾರ್ಯವು ಆಗಿರುತ್ತದೆ ಎಂದು ಒಪ್ಪಬೇಕು. ಇದು ವಾದಿಗೆ ಅನಿಷ್ಟವಾದ ಕಾರಣ, ವಸ್ತ್ರಕ್ಕೆ ವಸ್ತ್ರವು ಕಾರಣವೆಂಬುವ ಮಾತು ಬಿಟ್ಟುಬಿಡುವನು. ಹೀಗೆ ಉಪಪನ್ನವಾಗುವ ದೋಷಗಳನ್ನು ತೋರಿಸುವುದೇ ತರ್ಕದ ಕೆಲಸವು. ವಸ್ತ್ರಕ್ಕೆ ವಸ್ತ್ರವು ಕಾರಣವೆಂದರೆ, ಆತ್ಮಾಶ್ರಯವೆನ್ನುವ ದೋಷವಾಗುವುದು. ಇಂತಹ ದೋಷಗಳನ್ನು ಅಪಾದನೆ ಮಾಡುವಿಕೆಯು ಅನುಮಾನದಲ್ಲಿ ಸೇರುವುದು.

11. ದೋಷಗಳು ಅನೇಕ ವಿಧಗಳಾಗಿರುವುವು. ಇವುಗಳಿಗೆ ನಿಗ್ರಹಸ್ಥಾನಗಳೆಂದೂ, ಜಾತಿಗಳೆಂದೂ ಪ್ರಸಿದ್ಧ ಹೆಸರುಗಳಿರುವುವು. ತಾರ್ಕಿಕರು ಇವುಗಳನ್ನು 23, 24 ವಿಧಗಳಾಗಿ ವಿಭಾಗಿಸಿ, ಅವುಗಳ ಲಕ್ಷಣಗಳನ್ನು ಬೇರೆಬೇರೆಯಾಗಿ ತೋರಿಸಿ, ಹೆಚ್ಚು ಗಡಿಬಿಡಿ ಮಾಡುವರು. ಶ್ರೀಮದಾಚಾರ್ಯರು ನಿಜವಾದ ನಿಗ್ರಹಸ್ಥಾನಗಳೆಲ್ಲವೂ, (1) ವಿರೋಧ, (2) ಅಸಂಗತಿ, (3) ನ್ಯೂನ, (4) ಅಧಿಕ, (5) ಸಂವಾದ, (6) ಅನುಕ್ತಿ, ಈ ಆರು ವಿಧಗಳಲ್ಲೇ ಅಂತರ್ಭೂತಗಳೆಂದು ತೋರಿಸುವರು. "ಜಾತಿ" ಎಂದರೆ ವಾಕ್ಯದಲ್ಲಿ ಪರಸ್ಪರ ವಿರೋಧವಿರೋಣವು. "ಬಂಜೆಯ ಮಗನು," "ಮೂಕನ ಕಥೆಯು" ಇತ್ಯಾದಿಗಳು. ಸ್ವವಚನವಿರೋಧವು, ಸ್ವನ್ಯಾಯವಿರೋಧವು, ಸ್ವಕ್ರಿಯಾವಿರೋಧವು, ಎಂದು ಜಾತಿಯು ಮೂರೇ ವಿಭಾಗವುಳ್ಳದ್ದು.

12. ಪ್ರತ್ಯಕ್ಷಕ್ಕಿಂತ ಅನುಮಾನವು ಹೆಚ್ಚಿಗೆ ವಿಷಯಗಳನ್ನು ತಿಳಿಸುವುದು. ಅನುಮಾನಕ್ಕಿಂತಲೂ ಆಗಮವು ಹೆಚ್ಚಿಗೆ ವಿಷಯಗಳನ್ನು ತಿಳಿಸುವುದು. ಆಗಮವೆಂದರೆ ಅನ್ವಯಾದಿಗಳಿಂದ ಕೂಡಿದ ಪದಸಮೂಹವು. ಅರ್ಥವುಳ್ಳ ವಾಕ್ಯವು. ಆಗಮವು ಪೌರುಷೇಯವೆಂದೂ, ಅಪೌರುಷೇಯವೆಂದೂ ಎರಡು ವಿಧವು. ವೇದಗಳು, ಇವುಗಳಲ್ಲಿ ಉಪನಿಷತ್ತುಗಳು ಸೇರಿದವುಗಳು, ಅಪೌರುಷೇಯಗಳು. ಅಪೌರುಷೇಯವು ಯಥಾರ್ಥಜ್ಞಾನವನ್ನೇ ಉಂಟುಮಾಡುವುದು. ಪ್ರತ್ಯಕ್ಷದಂತೆ ಸ್ವತಃಪ್ರಮಾಣವು, ಅಂದರೆ ವೇದವು ಯಥಾರ್ಥಜ್ಞಾನವನ್ನುಂಟು

ಮಾಡುವುದರಲ್ಲಿ ಪರಾಪೇಕ್ಷೆಯಿಲ್ಲದೇನೇ ಉಂಟುಮಾಡುವುದು. ವೇದಗಳು ಅಪೌರುಷೇಯ ಗಳು; ಅನಾದಿ ನಿತ್ಯಗಳು. ಎಂದು ವಿಷ್ಣುತತ್ವನಿರ್ಣಯಾದಿ ಗ್ರಂಥಗಳಲ್ಲಿ ಆಚಾರ್ಯರು ಸಮ ರ್ಥಿಸಿರುವರು. ಈ ಪ್ರಕರಣದಲ್ಲಿ ಆ ವಿಷಯವನ್ನು ಹೇಳಲಿಲ್ಲ. ಅಜ್ಞಾನವಿಪ್ರಲಂಭಾದಿ ದೋಷಗಳು ಪುರುಷನಿಗೆ ಸಂಭವಿಸುವುದರಿಂದ, ಪೌರುಷೇಯ ವಾಕ್ಯವು ಅಯಥಾರ್ಥವನ್ನು ಕೆಲವು ಸಮಯದಲ್ಲಿ ತಿಳಿಸುವುದುಂಟು. ಜ್ಞಾನಿಯೂ, ಆಪ್ತನು ಆದವನ ವಚನವು ಪ್ರಮಾಣ ವಾಗುವುದು. ವೇದಗಳಲ್ಲಿ ಪರಸ್ಪರ ವಿರೋಧಾರ್ಥಗಳನ್ನು ಬೋಧಿಸುವಂತೆ ವಾಕ್ಯಗಳು ಕಂಡು ಬರುವವು. ಅವು ಎಲ್ಲವೂ ಪ್ರಮಾಣಗಳಾದ ಪ್ರಯುಕ್ತ ನಿಜವಾದ ವಿರೋಧವು ಇರಲಿಕ್ಕೆ ಸಾಧ್ಯವಿಲ್ಲ. ಉಪಕ್ರಮೋಪಸಂಹಾರಾದಿಗಳಿಂದ ವಿರೋಧವಾಕ್ಯಗಳಿಗೆ ಸಮನ್ವಯಮಾಡಿ ನಿಜವಾದ ಅರ್ಥವನ್ನು ತಿಳಿಯಬೇಕು. ಉಪಕ್ರಮಾದಿಗಳ ವಿಚಾರವು ಅನುಮಾನದಲ್ಲೇ ಅಂತ ರ್ಭಾವವಾಗುವುದು.

12. ಇಂದ್ರಿಯಕ್ಕೆ ಗೋಚರವಾಗುವ ವಿಷಯಗಳಲ್ಲಿ ಪ್ರತ್ಯಕ್ಷವೇ ಉತ್ತಮವಾದ ಪ್ರಮಾಣವು. ಅತೀಂದ್ರಿಯ ವಿಷಯಗಳಲ್ಲಿ, ವೇದಗಳು ಮತ್ತು ತದನುಸಾರಿಯಾದ ಇತಿಹಾಸ ಪುರಾಣಗಳು ಉತ್ತಮ ಪ್ರಮಾಣಗಳು. ಪ್ರತ್ಯಕ್ಷವನ್ನಾಗಲೀ ಆಗಮವನ್ನಾಗಲೀ ಆಶ್ರಯಿಸದ ಅನುಮಾನವು ನಿಷ್ಪ್ರಯೋಜನವು. ಈ ಪ್ರಕಾರ ಪ್ರಮಾಣಗಳ ಬಲಾಬಲಗಳನ್ನು ತಿಳಿದು ವಸ್ತುತ ತ್ವವನ್ನು ನಿಶ್ಚೈಸಬೇಕು.

**"ನಿಜಪೂರ್ಣಸುಖಾಮಿತಬೋಧತನುಃ ಪರಶಕ್ತಿರನಂತಗುಣಃ ಪರಮಃ |**
**ಅಜರಾಮರಣಃ ಸಕಲಾರ್ತಿಹರಃ ಕಮಲಾಪತಿರೀಡ್ಯತಮೋಽವತು ನಃ ||"**

**|| ಶ್ರೀಕೃಷ್ಣಾರ್ಪಣಮಸ್ತು ||**

ಮಧ್ವಮುನೀಂದ್ರದಾಸ.



|| ಶ್ರೀಃ ||

# ಪ್ರಮಾಣಲಕ್ಷಣವು.

ಸಮೀರಹೃದ್ಗತಂ ನತ್ವಾ ರಮಾವಾಮಾರ್ಥಗಂ ಹರಿಂ ।
ಪ್ರಮಾಣಲಕ್ಷಣವ್ಯಾಖ್ಯಾಂ ಕುರ್ವೇ ಕರ್ಣಾಟಭಾಷಯಾ ॥ ೧ ॥

**ಶ್ರೀಮದ್ಧನುಮದ್ಭೀಮಮಧ್ವಾಂತರ್ಗತರಾಮಕೃಷ್ಣವೇದವ್ಯಾಸಾತ್ಮಕ ಲಕ್ಷ್ಮೀಹಯಗ್ರೀವಾಯ ನಮಃ || ಹರಿಃ ಓಂ ||**

**ಮೂ ॥ ಅಶೇಷಗುರುಮೀಶೇಶಂ ನಾರಾಯಣಮನಾಮಯಂ | ಸಂಪ್ರಣಮ್ಯ ಪ್ರವಕ್ಷ್ಯಾಮಿ ಪ್ರಮಾಣಾನಾಂ ಸ್ವಲಕ್ಷಣಂ ॥**

ಅ ॥ ಅಶೇಷಗುರುಂ=ಎಲ್ಲರಿಗೆ ಅಂದರೆ ರಮಾಬ್ರಹ್ಮಾದಿಗಳಿಗೆ ಉಪದೇಶಕನಾದ, ಈಶೇಶಂ=ಪ್ರಭುಗಳಾದ ರಮಾಬ್ರಹ್ಮಾದಿಗಳಿಗೆ ನಿಯಾಮಕನಾದ, (ಸರ್ವೋತ್ತಮನಾದ) ಅನಾಮಯಂ=ಸರ್ವದೋಷದೂರನಾದ, ನಾರಾಯಣಂ=ನಾರಾಯಣನನ್ನು, ಸಂಪ್ರಣಮ್ಯ=ಭಕ್ತ್ಯಾದಿಸಹಿತವಾಗಿ ವಂದಿಸಿ, (ನಾನು), ಪ್ರಮಾಣಾನಾಂ ಯಥಾರ್ಥ ಜ್ಞಾನಗಳ ಮತ್ತು ಯಥಾರ್ಥ ಜ್ಞಾನಕರಣಗಳ, ಸ್ವಲಕ್ಷಣಂ=ಸ್ವರೂಪಭೂತವಾದ ಲಕ್ಷಣವನ್ನು, ಪ್ರವಕ್ಷ್ಯಾಮಿ=ಉದ್ದೇಶ ವಿಭಾಗಾದಿ ಸಹಿತವಾಗಿ ಹೇಳುವೆನು.

ತಾ ॥ ಎಲ್ಲರೂ ತಮಗೆ ಸುಖವೇ ಆಗಬೇಕು, ದುಃಖವು ಆಗಬಾರದೆಂದು ಅಪೇಕ್ಷಿಸುವರು. ದುಃಖಲೇಶವೂ ಇಲ್ಲದ ಕೇವಲ ಸ್ವರೂಪಾನಂದಾನುಭವಾತ್ಮಕವಾದ ಶಾಶ್ವತಸ್ಥಿತಿಗೆ (ಪುರುಷಾರ್ಥ)ಕ್ಕೆ ಮೋಕ್ಷವೆಂದು ಹೆಸರು. ಇಂತಹ ಮೋಕ್ಷವು ಪರಬ್ರಹ್ಮಾಖ್ಯ ನಾರಾಯಣನು ಪ್ರತ್ಯಕ್ಷನಾಗದೆ ಆಗಲಾರದು. ಆ ಪ್ರತ್ಯಕ್ಷವು ಪ್ರಮಾಣದಿಂದಲೇ ಅವನನ್ನು ತಿಳಿದರೆ ಲಭಿಸುವುದು. ಅನ್ಯಥಾ ಆಗಲಾರದು. ಪ್ರಮಾಣವಿಂತಹುದು, ದುಮಾ೯ನ (ಅಪ್ರಮಾಣ) ಇಂತಹುದು ಎಂದು ನಿರ್ಣಯಿಸುವುದಕ್ಕಾಗಿ **ಶ್ರೀಮದಾಚಾರ್ಯರು** ಈ ಗ್ರಂಥವನ್ನು ರಚಿಸುವರು. ಆದ ಪ್ರಯುಕ್ತ ಇದಕ್ಕೆ ಪ್ರಮಾಣಲಕ್ಷಣವೆಂದು ಹೆಸರು. ಮೇಲಿನ ಶ್ಲೋಕದಲ್ಲಿ ದೇವತಾನತಿರೂಪಮಂಗಳವನ್ನು ಮಾಡಿ ತಾವು ಇಂತಹ ವಿಷಯವನ್ನು ತಿಳಿಸುವೆನೆಂದು ಪ್ರತಿಜ್ಞೆ ಮಾಡಿರುವರು.

### ಪ್ರಮಾಣಗಳಿಗೆ ಸಾಮಾನ್ಯ ಲಕ್ಷಣವನ್ನು ಹೇಳುವರು.

**ಮೂ ॥ ಯಥಾರ್ಥಂ ಪ್ರಮಾಣಂ ॥ ೧ ॥**

ಅ ॥ ಪ್ರಮಾಣಂ=ಪ್ರಮೆಯು ಮತ್ತು ಪ್ರಮೆಯನ್ನು ಹುಟ್ಟಿಸುವುದು, ಯಥಾರ್ಥಂ=ನಿಜವಾದ ಜ್ಞಾನವು, ನಿಜವಾದ ಜ್ಞಾನವನ್ನು ಹುಟ್ಟಿಸುವುದು.

ತಾ ॥ (1) ಯಥಾರ್ಥಂ ಎಂಬುವುದಕ್ಕೆ ಯಥಾರ್ಥತ್ವಂ ಎಂದು ಅರ್ಥಮಾಡಬೇಕು. ಇದೇ ಪ್ರಮಾಣ ಸಾಮಾನ್ಯ ಲಕ್ಷಣವು. (2) ಇಲ್ಲಿ ಪ್ರಮಾಣವೆಂದರೆ ಯಥಾರ್ಥಜ್ಞಾನವು ಮತ್ತು ಯಥಾರ್ಥಜ್ಞಾನಸಾಧನವೆಂಬು ಅರ್ಥವು.

ಇದು ಘಟವು ಎಂದು ತಿಳಿಯುವುದಕ್ಕೆ ಜ್ಞಾನವೆಂದು ಹೆಸರು. ಕಣ್ಣು ಮುಂತಾದ ಇಂದ್ರಿಯಗಳು ಲಿಂಗವು ಮತ್ತು ಆಗಮವು ಈ ಜ್ಞಾನಕ್ಕೆ ಸಾಧನಗಳು. ಇವೆರಡು ಪ್ರಮಾಣದಲ್ಲಿ ಸೇರಿರುವುವು. ಜ್ಞಾನವು(೧), ಯಥಾರ್ಥ (೨), ವಿಪರೀತ (೩), ಸಂಶಯವೆಂದು ಮೂರು ಪ್ರಕಾರವಾಗಿರುವುದು. (೧) ಘಟವನ್ನು ನೋಡಿ ಇದು ಘಟವು ಎಂದು ತಿಳಿಯುವುದು **ಯಥಾರ್ಥವು.** ಅಂದರೆ ವಸ್ತು ಇರುವ ಹಾಗೆ ತಿಳುವಿಕೆಯು ಯಥಾರ್ಥಜ್ಞಾನವು. (೨) ಶುಕ್ತಿಯನ್ನು ನೋಡಿ ಇದು ಬೆಳ್ಳಿಯೆಂದು ತಿಳಿಯುವುದು **ವಿಪರೀತಜ್ಞಾನವು.** ಅಂದರೆ ವಸ್ತುವು ಇದ್ದಹಾಗೆ ತಿಳಿಯದೆ ಅನ್ಯಥಾ ತಿಳಿಯುವುದು. (೩) ಇದು ಮನುಷ್ಯನೋ ಅಲ್ಲವೋ ಅಥವಾ ವೃಕ್ಷವೋ ಎಂದು ನಿಶ್ಚಯವಲ್ಲದ ಜ್ಞಾನವು **ಸಂಶಯವು.** ಈ ಮೂರರಲ್ಲಿ ಯಥಾರ್ಥ ಜ್ಞಾನವು ಮಾತ್ರ ಪ್ರಮಾಣವು. ತದಿತರಗಳೆರಡು ಅಪ್ರಮಾಣಗಳು. ಅಥವಾ ದುರ್ಜ್ಞಾನಗಳು. ಘಟವು, ಮನುಷ್ಯನು, ವೃಕ್ಷವು ಇವು ಮೊದಲಾದವುಗಳು ವಿಷಯಗಳು, ಜ್ಞೇಯಗಳು ಆದ ಪ್ರಯುಕ್ತ ಇವುಗಳು ಪ್ರಮಾಣಗಳಾಗುವುದಿಲ್ಲ. ಪ್ರಮಾಣಗಳಿಂದ ತಿಳಿಯಲ್ಪಡುತ್ತವೆ. ॥ ೧ ॥

**ಪ್ರಮಾಣಗಳ ವಿಭಾಗವನ್ನು ತೋರಿಸುತ್ತಾರೆ.**

**ಮೂ ॥ ತದ್ದ್ವಿವಿಧಂ ॥ ಕೇವಲಮನುಪ್ರಮಾಣಂ ಚ ॥ ೨ ॥**

**ಅ ॥** ತತ್=ಹಿಂದೆ ಹೇಳಿದ ಪ್ರಮಾಣವು, ಕೇವಲಂ=ಕೇವಲ ಪ್ರಮಾಣವು, ಅನುಪ್ರಮಾಣಂ ಚ=ಅನುಪ್ರಮಾಣವು, (ಎಂದು) ದ್ವಿವಿಧಂ=ಎರಡು ವಿಧವು.

**ಮೂ ॥ ಯಥಾರ್ಥಜ್ಞಾನಂ ಕೇವಲಂ ॥ ೩ ॥**

**ಅ ॥** ಕೇವಲಂ=ಕೇವಲಪ್ರಮಾಣವು, ಯಥಾರ್ಥಜ್ಞಾನಂ=ನಿಜವಾದ ಜ್ಞಾನವು, ಇದ್ದ ಹಾಗೆ ತಿಳಿದುಕೊಳ್ಳುವಿಕೆಯು.

**ತಾ ॥** ಕೇವಲ ಪ್ರಮಾಣಕ್ಕೆ ಯಥಾರ್ಥ ಜ್ಞಾನತ್ವವು ಲಕ್ಷಣವು— ಲಕ್ಷಣದಲ್ಲಿ ಎರಡು ಪದಗಳನ್ನು ಉಪಯೋಗಿಸಿರುವರು. **ಯಥಾರ್ಥಂ** ಎಂಬುವುದರಿಂದ ಸಂಶಯ ವಿಪರ್ಯಯಗಳು ಪ್ರಮಾಣಗಳು ಅಲ್ಲವೆಂದೂ, **ಜ್ಞಾನಂ** ಎಂಬುವುದರಿಂದ, ಜ್ಞಾನಸಾಧನವು ಕೇವಲ ಪ್ರಮಾಣವಲ್ಲವೆಂದೂ ಸೂಚಿಸಿರುವರು. ವಿಷಯವು ಇದ್ದಂತೆ ತಿಳುವಿಕೆಗೆ ಕೇವಲ ಪ್ರಮಾಣವೆಂದು ಹೆಸರು.

'ಅನವಧಾರಣ ಜ್ಞಾನಂ **ಸಂಶಯಃ**' ನಿಶ್ಚಯವಲ್ಲದ ಜ್ಞಾನವು **ಸಂಶಯವು.** ಒಂದು ವಸ್ತುವಿನಲ್ಲಿ ಅಸಾಧಾರಣಧರ್ಮ ಅಂದರೆ ಅದರಲ್ಲಿ ಮಾತ್ರ ಇರುವ ಧರ್ಮವು, ಮತ್ತು ಸಾಮಾನ್ಯ ಧರ್ಮಗಳು ಅಂದರೆ ಅದರಲ್ಲೂ ಮತ್ತೂ ಇತರ ವಸ್ತುಗಳಲ್ಲಿರುವ ಧರ್ಮಗಳು ಇರುವವು. ನಮಗೆ ಸಾಮಾನ್ಯಧರ್ಮ ಮಾತ್ರ ಕಂಡರೆ ವಸ್ತು ವಿಶೇಷ ನಿಶ್ಚಯವಾಗುವುದಿಲ್ಲ. **ಉದಾ:-** ದೂರದಲ್ಲಿ ಇದ್ದ ಒಂದು ವಸ್ತುವು ಉನ್ನತವಾಗಿದ್ದರೆ ಆ ಉನ್ನತತ್ವವು ವೃಕ್ಷಕ್ಕೂ ಮನುಷ್ಯನಿಗೂ ಇರುವ ಸಾಮಾನ್ಯಧರ್ಮವಾದ ಕಾರಣ ಸಾಮಾನ್ಯ ಧರ್ಮವನ್ನು ಮಾತ್ರ ಕಂಡರೆ ಆ ವಸ್ತುವು ವೃಕ್ಷವೆಂದಾಗಲೀ, ಮನುಷ್ಯನೆಂದಾಗಲೀ ನಿಶ್ಚಯಿಸುವುದಕ್ಕಾಗುವುದಿಲ್ಲ. ಸಂಶಯ ಉಂಟಾಗುತ್ತದೆ. ಅದೇ ವಸ್ತುವು ಸಂಚರಿಸಿದರೆ ಈ **ಅಸಾಧಾರಣ ಧರ್ಮವು** ಮನುಷ್ಯವೃಕ್ಷಗಳ ಪೈಕಿ ಮನುಷ್ಯನಲ್ಲಿ ಮಾತ್ರ ಇರುವುದರಿಂದ ಆ ವಸ್ತುವು ಮನುಷ್ಯನೆಂದು ನಿಶ್ಚಯಿಸುವೆವು. ಅಸಾಧಾರಣಧರ್ಮಜ್ಞಾನಾಭಾವಸಹಕೃತಸಾಧಾರಣ ಧರ್ಮದರ್ಶನವೇ ಸಂಶಯಕ್ಕೆ ಕಾರಣವು.

ಅನ್ಯಮತಗಳಲ್ಲಿ ಸಂಶಯಕ್ಕೆ ಕೆಲವರು ಮೂರು ಕಾರಣಗಳಿಂದೂ ಬೇರೆ ಕೆಲವರು ಐದು ಕಾರಣಗಳಿಂದೂ ಹೇಳುವರು. ಇವುಗಳನ್ನು ನಿರಾಕರಿಸಿ ಮೇಲೆ ಹೇಳಿದ್ದು ಒಂದೇ ಕಾರಣವೆಂದು ಸಿದ್ಧಾಂತ ಮಾಡಿರುವರು. ಈ ವಿಷಯವು ಟೀಕೆ ಟಿಪ್ಪಣಿಗಳ ಅವಲೋಕನದಿಂದ ಸ್ಪಷ್ಟವಾಗುವುದು.

ಒಂದು ವಸ್ತುವಿನ ವಿಷಯದಲ್ಲಿ ಸಂಶಯ ಜ್ಞಾನವು ಮೂರು ಪ್ರಕಾರ ಬರಬಹುದು. (1) ಈ ವಸ್ತುವು ನಮಗೆ ತಿಳಿದ ನಾಲ್ಕೈಂಟರಲ್ಲಿ ನಿಶ್ಚಯವಾಗಿ ಒಂದಾಗಿದೆ. ಆದರೆ ಆ ವಸ್ತುಗಳ ಪೈಕಿ ಇಂತಹುದೇ ಎಂದು ತಿಳಿಯಲಾಗುವುದಿಲ್ಲ. ಹೀಗೆ ಉಂಟಾಗುವ ಸಂಶಯಕ್ಕೆ **ಸಮಾನಾನೇಕಕೋಟಿರೂಪವಾದನಿರ್ದಿಷ್ಟಕೋಟಿಕ**ವೆಂದು ಹೆಸರು. ಉದಾ:- ಇದು ವೃಕ್ಷವು, ಮತ್ತು ಹಲಸು, ಮಾವು, ಅಶ್ವತ್ಥ ಇವುಗಳಲ್ಲಿ ಒಂದಾಗಿರಬೇಕು. ಆದರೆ ಇವುಗಳ ಪೈಕಿ ಯಾವ ಜಾತಿಯದೆಂದು ತಿಳಿಯಲಾಗುವುದಿಲ್ಲ. (೩) ಈ ವಸ್ತುವು ಬಹುಶಃ ಇದೇ ಆಗಿರಬೇಕು. ಎಂದು ತಿಳಿದರೂ ನಿಶ್ಚಯವು ಇಲ್ಲದೆ ಇರೋಣ. ಇಂತಹ ಸಂಶಯಕ್ಕೆ **ಅನ್ಯತರಕೋಟಿಪ್ರಧಾನರೂಪವಾದ ನಿರ್ದಿಷ್ಟಕೋಟಿಕವೆಂದೂ** ಅಥವಾ **ಊಹೆ** ಎಂದೂ ಹೆಸರು. ಉದಾ:- ಇದು ಪ್ರಾಯಶಃ ಮಾವೇ ಆಗಿರಬೇಕು. ಆದರೆ ಖಂಡಿತವಾಗಿ ತಿಳಿಯಲಾಗುವುದಿಲ್ಲವೆಂಬ ಜ್ಞಾನವು. (3) ವಸ್ತುಸ್ವರೂಪ ನಿರ್ದೇಶ ಮಾಡುವುದಕ್ಕೆ ಸಾಧ್ಯವಿಲ್ಲದೆ ಇರುವ ಸಂಶಯಕ್ಕೆ **ಅನಿರ್ದಿಷ್ಟಕೋಟಿಕ** ಅಥವಾ **ಅನಧ್ಯವಸಾಯ** ಎಂದು ಹೆಸರು. ಉದಾ:- ಈ ವಸ್ತುವು ಏನಾಗಿರಬಹುದು. ಅಥವಾ ಈ ವೃಕ್ಷ ಯಾವ ಜಾತಿಯಾಗಿರಬಹುದು ಎಂದು ಉಂಟಾಗುವ ಸಂಶಯ.

"ವಿಪರೀತ ನಿಶ್ಚಯಃ **ವಿಪರ್ಯಯಃ**" ವಿಪರ್ಯಯವೆಂದರೆ ವಿಪರೀತವಾಗಿ ತಿಳಿದುಕೊಳ್ಳುವಿಕೆಯು. ಉದಾ:- ಚಿಪ್ಪನ್ನು ನೋಡಿ ಚಿಪ್ಪೆಂದು ತಿಳಿಯದೆ ಇದು ಬೆಳ್ಳಿಯೆಂದು ತಿಳಿಯೋಣವು. ॥ ೩ ॥

### ಅನುಪ್ರಮಾಣ ಲಕ್ಷಣವನ್ನು ಹೇಳುವರು.

**ಮೂ ॥ ತತ್ಸಾಧನ ಮನುಪ್ರಮಾಣಂ ॥ ೪ ॥**

**ಅ** ॥ ತತ್=ಹಿಂದೆ ಹೇಳಿದ ಕೇವಲ ಪ್ರಮೆಗೆ, ಸಾಧನಂ=ಕಾರಣವಾದದ್ದು, ಅನುಪ್ರಮಾಣಂ=ಅನುಪ್ರಮಾಣವು.

**ತಾ** ॥ ಸಾಧನವು ಕಾರಣದಲ್ಲಿ ಅಂತರ್ಭೂತವಾಗಿರುತ್ತದೆ. ಆತ್ಮ, ಕಾಲ, ಇಂದ್ರಿಯಾದಿಗಳು ಇವು ಯಥಾರ್ಥಜ್ಞಾನಕ್ಕೆ ಕಾರಣಗಳಾದರೂ ಇವೆಲ್ಲವು ಸಾಧನಗಳೆಂದು ಹೇಳಲಾಗುವುದಿಲ್ಲ. **ಸಾಧನ** ವೆಂದರೆ ಕರ್ತೃ, ಕರ್ಮ, ಇವು ಇದ್ದಾಗ್ಯೂ ಯಾವುದು ಇಲ್ಲದಿದ್ದರೆ ಕಾರ್ಯವಾಗಲಾರದೋ, ಮತ್ತು ಯಾವುದು ಇದ್ದರೇನೇ ಕಾರ್ಯವಾಗುವುದೋ ಅದು ಆ ಕಾರ್ಯಕ್ಕೆ ಸಾಧನವು. ಕಟ್ಟಿಗೆಯು (ಕರ್ಮ) ಕಡಿಯುವವನು (ಕರ್ತೃ) ಇವು ಇದ್ದಾಗ್ಯೂ ಕೊಡಲಿ (ಸಾಧನ) ಇಲ್ಲದೇ ಕಡಿಯುವಿಕೆ ಎಂಬ ಕ್ರಿಯೆಯು ಆಗಲಾರದು. ಅದರಂತೆಯೇ ಆತ್ಮನು (ಕರ್ತೃ) ವಿಷಯಗಳು (ಕರ್ಮ) ಇವು ಇದ್ದರೂ ಇಂದ್ರಿಯಾದಿ ಅನುಪ್ರಮಾಣಗಳು (ಸಾಧನವು) ಇಲ್ಲದೆ ಜ್ಞಾನಾಖ್ಯ ಕ್ರಿಯೆಯು ಆಗಲಾರದು. ಆದುದರಿಂದಲೇ ಅನುಪ್ರಮಾಣವನ್ನು ಕೇವಲ ಪ್ರಮಾಣಕ್ಕೆ ಸಾಧನವೆಂದು ಹೇಳಿರುವರು. ಜ್ಞಾನವು ಚೇತನನಲ್ಲಿ ಆಶ್ರಿತವಾಗಿರುವುದು. ಚೇತನನು ಜ್ಞಾನಕ್ಕೆ ವಿಷಯನೂ ಆಗ ಬಹುದು. ಆದುದರಿಂದ ಅವನು ಪ್ರಮಾತೃ

(ಜ್ಞಾನಕ್ಕೆ ಆಶ್ರಯನು) ಪ್ರಮೇಯ (ಜ್ಞಾನಕ್ಕೆ ವಿಷಯ)ನೂ ಕೂಡ ಆಗುವನು. ಘಟಪಟಾದಿಗಳು ಅಚೇತನಗಳಾದ ಪ್ರಯುಕ್ತ ಜ್ಞಾನಕ್ಕೆ ವಿಷಯಗಳು ಮಾತ್ರ ಆಗುವುವು. ॥ ೪ ॥

**ಕೇವಲ ಪ್ರಮಾಣದ ಪ್ರಭೇದವನ್ನು ತೋರಿಸುವರು.**

**ಮೂ ॥ ಕೇವಲಂ ಚತುರ್ವಿಧಂ। ಈಶಲಕ್ಷ್ಮೀಯೋಗ್ಯಯೋಗಿಭೇದೇನ ॥ ೫ ॥**

ಅ ॥ ಈಶ=ಸರ್ವನಿಯಾಮಕನಾದ ಹರಿಯು, ಲಕ್ಷ್ಮೀ=ಲಕ್ಷ್ಮೀದೇವಿಯು, ಯೋಗಿ=ಧ್ಯಾನಪ್ರಭಾವವುಳ್ಳ ಜೀವನು, ಅಯೋಗಿ=ಯೋಗ ರಹಿತ ಜೀವನು, ಭೇದೇನ=ಇವರ ಜ್ಞಾನದ ಭೇದದಿಂದ, ಕೇವಲಂ=ಕೇವಲ ಪ್ರಮಾಣವು, ಚತುರ್ವಿಧಂ=ನಾಲ್ಕುಪ್ರಕಾರವಾದುದು. ॥ ೫ ॥

ತಾ ॥ ಹಿಂದೆ ಕೇವಲ ಪ್ರಮಾಣಕ್ಕೆ ಅನುಪ್ರಮಾಣವು ಸಾಧನವೆಂದು ಹೇಳಲ್ಪಟ್ಟಿತು. ಕೇವಲವು ಅನುಪ್ರಮಾಣದಿಂದ ಹುಟ್ಟುವುದೆಂದು ಹೇಳಿದಂತೆ ಆಯಿತು. ಈಶ ಲಕ್ಷ್ಮಿಯರ ಜ್ಞಾನವು ಅನುಪ್ರಮಾಣದಿಂದ ಹುಟ್ಟುವದೋ ಎಂಬೀಶಂಕೆಯನ್ನು ಪರಿಹರಿಸುವರು.

**ಮೂ ॥ ಪೂರ್ವದ್ವಯಮನಾದಿ ನಿತ್ಯಂ ॥ ೬ ॥**

ಅ ॥ ಪೂರ್ವದ್ವಯಂ=ಮೊದಲು ಹೇಳಿದ ಎರಡು ಅಂದರೆ (ಈಶ ಲಕ್ಷ್ಮಿಯರ ಕೇವಲ ಜ್ಞಾನಗಳು) ಅನಾದಿ ನಿತ್ಯಂ=ಉತ್ಪತ್ತಿರಹಿತವೂ ನಾಶರಹಿತವೂ ಆದವುಗಳು.

**ಈಶಲಕ್ಷ್ಮೀ ಜ್ಞಾನಿಗಳಿಗೆ ಭೇದವನ್ನು ತಿಳಿಸುವರು.**

**ಮೂ ॥ ಸ್ವಾತಂತ್ರ್ಯಪಾರತಂತ್ರ್ಯಾಭ್ಯಾಂ ತದ್ವಿಶೇಷಃ। ಪೂರ್ವಂ ಸ್ವಪರಗತಾಖಿಲವಿಶೇಷ ವಿಷಯಂ। ದ್ವಿತೀಯ ಮೀಶೇಽನ್ಯೇಭ್ಯೋಽಧಿಕಂ ॥ ೭ ॥**

ಅ ॥ ಸ್ವಾತಂತ್ರ್ಯಪಾರತಂತ್ರ್ಯಾಭ್ಯಾಂ=ಸ್ವಾತಂತ್ರ್ಯ=ಅನನ್ಯಾಧೀನತೆಯು, ಪಾರತಂತ್ರ್ಯಾಭ್ಯಾಂ=ಅನ್ಯಾಧೀನತೆಯೂ ಇವುಗಳಿಂದ, ತದ್ವಿಶೇಷಃ=ಅವರಭೇದವು, ಪೂರ್ವಂ=ಮೊದಲಿನದು (ಈಶಜ್ಞಾನವು) ಸ್ವಪರ... ವಿಷಯಂ=ಸ್ವ=ತನ್ನಲ್ಲಿಯೂ, ಪರ=ಇತರರಲ್ಲಿಯೂ, ಗತ=ಇರುವ, ಅಖಿಲ=ಸಮಸ್ತಗಳಾದ, ವಿಶೇಷ=ವಿಶೇಷಗಳನ್ನು, ವಿಷಯಂ=ವಿಷಯೀಕರಿಸತಕ್ಕದ್ದು. ದ್ವಿತೀಯಂ=ಎರಡನೇಯದು, (ಲಕ್ಷ್ಮೀ ಜ್ಞಾನವು), ಈಶೇ=ಪರಮಾತ್ಮನ ವಿಷಯದಲ್ಲಿ, ಅನ್ಯೇಭ್ಯಃ=ಬ್ರಹ್ಮಾದಿಗಳ ಜ್ಞಾನಗಳಿಂದ, ಅಧಿಕಂ=ಅಧಿಕವನ್ನು ವಿಷಯೀಕರಿಸತಕ್ಕದ್ದು.

ತಾ ॥ ಅನಾದಿ ನಿತ್ಯತ್ವವು ಸಮಾನವಾದರೂ ಈಶ ಜ್ಞಾನವು ಇತರಾಪೇಕ್ಷೆ ಇಲ್ಲದೇ ಸ್ವತಂತ್ರವಾದದ್ದು, ಲಕ್ಷ್ಮೀಜ್ಞಾನವು ಈಶಾಧೀನವಾದುದು. ಸ್ವತಂತ್ರ ಜ್ಞಾನತ್ವವು ಈಶಜ್ಞಾನಕ್ಕೂ, ಈಶೈಕಾಧೀನಜ್ಞಾನತ್ವವು ಲಕ್ಷ್ಮೀಜ್ಞಾನಕ್ಕೂ ಲಕ್ಷಣವು, ಮತ್ತು ಈಶಜ್ಞಾನವು ಸರ್ವವನ್ನು ವಿಷಯೀಕರಿಸುವುದು. ಲಕ್ಷ್ಮೀಜ್ಞಾನವು ಈಶನ ವಿಷಯದಲ್ಲಿ ಇತರ ಬ್ರಹ್ಮಜ್ಞಾನಿಗಳ ಜ್ಞಾನಕ್ಕಿಂತಲೂ ಹೆಚ್ಚಿಗೆ ಅರ್ಥಗಳನ್ನು ವಿಷಯೀಕರಿಸುವುದು. ॥ ೭ ॥

**ಮೂ ॥ ಅಸಾರ್ವತ್ರಿಕಂ। ಅನ್ಯತ್ರ ಸರ್ವವಿಷಯಂ। ಸ್ಪಷ್ಟತ್ವೇಭೇದಃ ॥ ೮ ॥**

ಅ ॥ ಅಸಾರ್ವತ್ರಿಕಂ=ಈಶ್ವರನಲ್ಲಿ ಸರ್ವವನ್ನೂ ವಿಷಯೀಕರಿಸದಿರುವುದು, ಅನ್ಯತ್ರ=ಈಶನ ಹೊರತು ಇತರ ವಿಷಯಗಳಲ್ಲಿ, ಸರ್ವವಿಷಯಂ=ಸರ್ವವನ್ನೂ ವಿಷಯೀಕರಿಸುವುದು, ಸ್ಪಷ್ಟತ್ವೇ=ಸ್ಪಷ್ಟತೆಯಲ್ಲಿ, ಭೇದಃ=ಭೇದವಿದೆ.

ತಾ ॥ ಈಶನಲ್ಲಿ ಲಕ್ಷ್ಮೀಜ್ಞಾನವು ಸರ್ವವನ್ನು ವಿಷಯೀಕರಿಸುವುದಿಲ್ಲ. ಈಶಾತಿರಿಕ್ತರಲ್ಲಿ ಸರ್ವವನ್ನು ವಿಷಯೀಕರಿಸುವುದು. ಆದರೆ ಇದರಲ್ಲೂ ಈಶಲಕ್ಷ್ಮೀ ಜ್ಞಾನಗಳಿಗೆ ಸ್ಪಷ್ಟತೆಯಿಂದ ಭೇದವಿದೆ. ಸ್ಪಷ್ಟತೆ ಎಂದರೆ ಜ್ಞಾನದ ಧರ್ಮವಿಶೇಷವು. ಈಶಜ್ಞಾನವು ಹೇಗೆ ನಿರತಿಶಯ ಸ್ಪಷ್ಟತೆಯುಳ್ಳದ್ದೋ ಲಕ್ಷ್ಮೀಜ್ಞಾನವು ಯಾವ ವಿಷಯದಲ್ಲೂ ಅಷ್ಟು ಸ್ಪಷ್ಟತೆಯುಳ್ಳದ್ದಾಗಿ ಇರುವುದಿಲ್ಲ.

ಯೋಗವೆಂದರೆ ಪರಮಾತ್ಮನಲ್ಲಿ ಮನಸ್ಸನ್ನು ನಿಲ್ಲಿಸುವಿಕೆಯು. ಅಥವಾ ಭಗವದ್ಧರ್ಮಾನುಷ್ಠಾನವು. ಈ ಪ್ರಭಾವಲಬ್ಧವಾದ ಜ್ಞಾನವು ಯೋಗಿಜ್ಞಾನವೆಂದು ಸಾಮಾನ್ಯ ಲಕ್ಷಣವು. (1) ಇದು ಋಜುಯೋಗಿಜ್ಞಾನ, (2) ತಾತ್ವಿಕ ಯೋಗಿಜ್ಞಾನ, (3) ಅತಾತ್ವಿಕ ಯೋಗಿಜ್ಞಾನವೆನ್ನುವ ಭೇದದಿಂದ ಯೋಗಿಜ್ಞಾನವು ಮೂರು ವಿಧವಾಗಿದೆ. ಅದರಲ್ಲಿ ಋಜುಯೋಗಿಜ್ಞಾನವು ಹಿಂದಿನ ಜ್ಞಾನಗಳಂತೆ ಅನುಪ್ರಮಾಣದಿಂದ ಹುಟ್ಟುವುದಿಲ್ಲವೆಂದು ನಿರೂಪಿಸಿ ಅದರ ಲಕ್ಷಣವನ್ನೂ, ಸ್ವರೂಪ ವಿಶೇಷವನ್ನೂ ಕೂಡ ಹೇಳುವರು.

**ಮೂ ॥ ಯೋಗಿಜ್ಞಾನಂ ಋಜೂನಾಮನಾದಿ ನಿತ್ಯಂ । ಈಶೇ ಜೀವೇಭ್ಯೋಽಧಿಕಂ । ಅನ್ಯತ್ರಾಲೋಚನೇ ಸರ್ವವಿಷಯಂ । ಕ್ರಮೇಣ ವರ್ಧಮಾನಂ । ಆಮುಕ್ತೇಃ । ತತೋಽವ್ಯಯಂ ॥ ೯ ॥**

ಅ ॥ ಋಜೂನಾಂ=ಋಜುಗಳ, ಯೋಗಿಜ್ಞಾನಂ=ಯೋಗಿಗಳ ಸ್ವರೂಪಜ್ಞಾನವು, ಅನಾದಿ ನಿತ್ಯಂ=ಉತ್ಪತ್ತಿನಾಶವು ಇರದಿರುವುದು, "ಯೋಗಿಜ್ಞಾನೇ" ಎಂದು ಕ್ವಚಿತ್ ಪಾಠವಿರುವುದು, ಆ ಪಕ್ಷದಲ್ಲಿ ಯೋಗಿಜ್ಞಾನಗಳ ಮಧ್ಯದಲ್ಲಿ ಋಜುಗಳ ಜ್ಞಾನವು ಅನಾದಿ ನಿತ್ಯವೆಂದರ್ಥವು. ಜೀವೇಭ್ಯಃ=(ಏವ) ಸ್ವೇತರ ಜೀವರುಗಳ ಜ್ಞಾನದಿಂದಲೇ, ಈಶೇ ಅಧಿಕಂ= ಪರಮಾತ್ಮನಲ್ಲಿ ಹೆಚ್ಚಾಗಿ ಇರುವುದು, ಅಧಿಕ ವಿಷಯವಾಗಿರುವುದು, ಎಂದು ಒಂದು ಲಕ್ಷಣವು, ಅನ್ಯತ್ರ=ಈಶ ಲಕ್ಷ್ಮಿಯರನ್ನು ಹೊರತು ಇತರಗಳಲ್ಲಿ, ಆಲೋಚನೇ=ಮನಸ್ಸಿನಲ್ಲಿ ಯೋಚಿಸಿದರೆ, ಸರ್ವವಿಷಯಂ=ಸಕಲವನ್ನು ವಿಷಯೀಕರಿಸುವುದು ಋಜುಯೋಗಿ ಜ್ಞಾನವು ಎಂದು ಬೇರೊಂದು ಲಕ್ಷಣವು.

ಋಜುಜ್ಞಾನವು ಅನಾದಿನಿತ್ಯವಾದರೇ ಯೋಗಿಜ್ಞಾನವು (ಯೋಗದ ದೆಸೆಯಿಂದ ಹುಟ್ಟಿದ ಜ್ಞಾನವು,) ಹೇಗಾಗುವುದೆನ್ನುವ ಆ ಶಂಕೆಯನ್ನು ಪರಿಹರಿಸುವರು. ಆಮುಕ್ತೇಃ=ಮೋಕ್ಷವಾಗುವತನಕ, ಕ್ರಮೇಣ=ಕಾಲಕ್ರಮದಿಂದ, ವರ್ಧಮಾನಂ=ಬೆಳೆಯುತ್ತಾ ಇದೆ. ಯೋಗಿಜ್ಞಾನಕ್ಕೆ ಯೋಗದ ದೆಸೆಯಿಂದ ವೃದ್ಧಿಯಿರುವುದರಿಂದ "ಯೋಗಜವು" ಎಂದು ಹೆಸರು. ತತಃ=ಆಮೇಲೆ-ಮೋಕ್ಷವಾದಕೂಡಲೇ, ಅವ್ಯಯಂ=ಹ್ರಾಸವಿಲ್ಲದಾಗಿರುತ್ತದೆ.

ತಾ ॥ ಋಜುಯೋಗಿಜ್ಞಾನವು ಈಶ ಲಕ್ಷ್ಮೀಜ್ಞಾನಗಳಂತೆ ಅನಾದಿ ನಿತ್ಯವಾಗಿ ಇದೆ. ಸರ್ವಯೋಗಿಜ್ಞಾನವು ಅನಾದಿ ನಿತ್ಯವಾಗಿರದಿರುವುದರಿಂದ ಹಿಂದಿನ ಎರಡು ಜ್ಞಾನಗಳ ಸಂಗಡ ಇದನ್ನು ಜೋಡಿಸಲಿಲ್ಲ.

ಬ್ರಹ್ಮ (ಚತುರ್ಮುಖ) ಪದಯೋಗ್ಯರಾದ ಜೀವರು ಋಜುಗಳೆನಿಸುವರು, ಅವರಜ್ಞಾನವು (1) **ಸ್ವರೂಪ ಜ್ಞಾನವು,** (2) **ವೃತ್ತಿ ಜ್ಞಾನ** ವೆಂದು ಎರಡು ವಿಧವಾದುದು. ಅವುಗಳಲ್ಲಿ ಈಶ್ವರಾದಿ ವಿಷಯಕ ಜ್ಞಾನವು ಅನಾದಿ ನಿತ್ಯವು. ಅನಾದಿಕಾಲದಿಂದ ಅಭಿವ್ಯಕ್ತವಾಗುತ್ತಲಿದೆ. ಈಶ್ವರಾತಿರಿಕ್ತ ವಿಷಯಕ ಮನೋವೃತ್ತಿ ಜ್ಞಾನವು ಯೋಗ ಸಹಿತವಾದ ಪ್ರತ್ಯಕ್ಷಾದ್ಯನು ಪ್ರಮಾಣದಿಂದ ಹುಟ್ಟುವುದು. ಆದರೂ ಒಂದರ ಮೇಲೆ ಇನ್ನೊಂದು ಎಂದು ಹುಟ್ಟುವದೆನ್ನುವ

ಪ್ರವಾಹದಿಂದ ಅನಾದಿ ಯಾಗಿದೆ. "ಏವಂ ಪ್ರಲಯಕಾಲೇಽಪಿ ಪ್ರತಿಭಾತ ಪರಾವರಃ ಮುಖ್ಯ ವಾಯುಃ" ಎನ್ನುವ ಪ್ರಮಾಣಾನುಸಾರವಾಗಿ ಪ್ರಲಯಕಾಲದಲ್ಲಿ ಮನೋವೃತ್ತಿ ಪ್ರವಾಹವು ನಿವೃತ್ತಿಯನ್ನು ಹೊಂದುವುದಿಲ್ಲ. ಮುಕ್ತಿಯಲ್ಲಿ ಅದು ನಿವೃತ್ತವಾಗಿ ಸ್ವರೂಪಜ್ಞಾನ ಮಾತ್ರ ಉಳಿಯುವುದು. ಎರಡೂ ನಿಯಮವಾಗಿ ಯಥಾರ್ಥವಾಗಿರುತ್ತವೆ. ಋಜುವ್ಯತಿರಿಕ್ತ ತಾತ್ವಿಕಾತಾತ್ವಿಕ ಜೀವಜ್ಞಾನಗಳ ದಸೆಯಿಂದಲೇ ಈಶ ಲಕ್ಷ್ಮಿಯರಲ್ಲಿ ಅಧಿಕ ವಿಷಯಕ ಜ್ಞಾನವು ಋಜು ಯೋಗಿಜ್ಞಾನವು. ಅನ್ಯತ್ರ (ಈಶ ಲಕ್ಷ್ಮಿಯರನ್ನು ಬಿಟ್ಟು) ಆಲೋಚನೇ ಸತಿ ಸರ್ವ ವಿಷಯಕಂ ಜ್ಞಾನಂ ಎಂದು ಋಜುಯೋಗಿಗಳ ಸ್ವರೂಪ ಮನೋವೃತ್ತಿ ಜ್ಞಾನಸಾಧಾರಣವಾದ ಲಕ್ಷಣಾಂತರವು. ಮುಖ್ಯವಾಗಿ ಈಶ ಲಕ್ಷ್ಮಿಯರನ್ನೂ, ಅವರ ಗುಣಾದಿಗಳನ್ನೂ ತಮ್ಮ ಯೋಗ್ಯತಾನುಸಾರವಾಗಿ ವಿಷಯೀಕರಿಸಿ ತದತಿರಿಕ್ತ ಸರ್ವವನ್ನು ಆಲೋಚನೆ ಯೆನ್ನುವ ಸಹಕಾರಿಯಿಂದ ಒಡಗೂಡಿ ವಿಷಯೀಕರಿಸುವ ಯೋಗ್ಯತೆಯುಳ್ಳದ್ದು ಋಜುಯೋಗಿಜ್ಞಾನವೆಂದು ತಾತ್ಪರ್ಯವು. ಈ ಜ್ಞಾನಉಳ್ಳ ಬ್ರಹ್ಮವಾಯ್ವಾದಿ ಋಜುಗಳು ಸರ್ವಜ್ಞರೆನಿಸುವರು. ಇವರು ಸರ್ವವನ್ನು ತಿಳಿಯುವಂತೆ ಬೇರೆ ಯಾರು ತಿಳಿಯುವುದಿಲ್ಲ. ॥ ೯ ॥

### ತಾತ್ವಿಕಾತಾತ್ವಿಕಯೋಗಿ ಜ್ಞಾನಲಕ್ಷಣವನ್ನು ಹೇಳುವರು.

**ಮೂ ॥ ತತೋಽರ್ವಾಕ್ಕ್ರಮೇಣ ಹ್ರಸಿತಂ । ಸಾದಿ ಚ ತಾತ್ವಿನ್ಯತ್ರ ॥ ೧೦ ॥**

ಅ ॥ ತತಃ=(ತೇಭ್ಯಃ) ಋಜುಗಳದೆಸೆಯಿಂದ, ಅರ್ವಾಕ್=(ಕಡಿಮೆ)ತಾತ್ವಿಕಾತಾತ್ವಿಕ ಯೋಗಿಗಳ ಜ್ಞಾನವು, ತತಃ=ಈಶನದೆಸೆಯಿಂದ, ಅರ್ವಾಕ್=(ಅನ್ಯತ್ರ) ಬಿಟ್ಟು ಉಳಿದವರಲ್ಲಿ, ಕ್ರಮೇಣ=ಕ್ರಮದಿಂದ, (ಹಿಂದಿನವರಿಂದ ಮುಂದಿನವರಲ್ಲಿ) ಹ್ರಸಿತಂ=ಕಿಂಚಿತ್ ಹ್ರಾಸಯುಕ್ತವಾಗಿದೆ. (ಸ್ವಲ್ಪ ಸ್ವಲ್ಪ ಕಡಿಮೆಯಾಗಿಕೊಂಡಿದೆ.) ತಾತ್ವಿಕೇಭ್ಯಃ=ತತ್ವಾಭಿಮಾನಿ ದೇವತೆಗಳದೆಸೆಯಿಂದ, ಅನ್ಯತ್ರ=ಅನ್ಯರಾದ ಅತಾತ್ವಿಕ ದೇವತೆಗಳಲ್ಲಿ, ಸಾದಿ ಚ =ಉತ್ಪತ್ತಿಯುಳ್ಳದ್ದಾಗಿರುತ್ತದೆ.

ತಾ ॥ ತತ್ವಾಭಿಮಾನಿ ದೇವತೆಗಳೇ ತಾತ್ವಿಕ ಯೋಗಿಗಳು. ಇವರಿಗೆ (1)ಸ್ವರೂಪಜ್ಞಾನ, (2) ವೃತ್ತಿಜ್ಞಾನವೆಂದು ಎರಡು ವಿಧ ಜ್ಞಾನವಿದೆ. ಈಶ್ವರಾದಿ ವಿಷಯದಲ್ಲಿ ಇದನ್ನು ಮೊದಲು ವಿಷಯೀಕರಿಸಿದ್ದು ಎನ್ನುವ ಭಾವವಿಲ್ಲದಿರೋಣವೇ ಅವರ ಸ್ವರೂಪಜ್ಞಾನಕ್ಕೆ ಅನಾದಿತ್ವವು. ಈಶ್ವರಾದಿ ವಿಷಯದಲ್ಲಿ ಒಂದರ ಮೇಲೊಂದು ಜ್ಞಾನವೆನ್ನುವ ಆ ಜ್ಞಾನಪ್ರವಾಹಕ್ಕೆ ಇದು ಮೊದಲೆನ್ನುವ ಭಾವವಿಲ್ಲದಿರೋಣವೇ ಅವರ ವೃತ್ತಿಜ್ಞಾನಕ್ಕೆ ಅನಾದಿತ್ವವು. ಹೀಗೆ ಅನಾದಿಯಾಗಿರುವ ಈಶನನ್ನು ಬಿಟ್ಟುಳಿದ ಸರ್ವದಲ್ಲಿ ಆಲೋಚನೆಮಾಡಿದರೂ (ಹ್ರಸಿತಂ) ಅಲ್ಪವಾಗಿರುವ ಜ್ಞಾನವು ತಾತ್ವಿಕ ಯೋಗಿಗಳ ಜ್ಞಾನವು, ಎಂದು ಲಕ್ಷಣವು. ಇವರ ಸ್ವರೂಪಜ್ಞಾನವು ನಿಯಮದಿಂದ ಯಥಾರ್ಥವು. (ಬಾಹ್ಯ) ವೃತ್ತಿಜ್ಞಾನವು ಸಾದಿಯಾಗಿರುವುದು ಕೆಲವು ಅಯಥಾರ್ಥವೂ ಕೂಡ ಆಗುವುದು. ತಾತ್ವಿಕರಲ್ಲದಿದ್ದವರು ಅತಾತ್ವಿಕಯೋಗಿಗಳು. ಈಶನನ್ನು ಬಿಟ್ಟುಳಿದ ಸರ್ವದಲ್ಲಿ ಜ್ಞಾನವೂ(ಕಿಂಚಿನ್ಮಾತ್ರ) ಸ್ವಲ್ಪಮಾತ್ರ(ಹ್ರಾಸಯುಕ್ತಂ) ಅಜ್ಞಾನಯುಕ್ತವಾದ ಜ್ಞಾನವು, ಎಂದು ಅತಾತ್ವಿಕ ಯೋಗಿಗಳ ಸ್ವರೂಪಜ್ಞಾನವು, ವೃತ್ತಿಜ್ಞಾನವು ಇವುಗಳ ಸಾಧಾರಣ ಲಕ್ಷಣವು. ಇವರ ಜ್ಞಾನವೂ ಕೂಡ ಸ್ವರೂಪ, ವೃತ್ತಿ(ಬಾಹ್ಯ) ಎಂದು ಎರಡು ವಿಧವಾಗಿದೆ. ಅದರಲ್ಲಿ ಅನಾದಿಯಿಂದ ಅಭಿವ್ಯಕ್ತವಾಗದ ಸ್ವರೂಪವು ಈಶ್ವರಾದಿ ವಿಷಯದಲ್ಲಿ ಕದಾಚಿತ್ ಅಭಿವ್ಯಕ್ತವಾಗುವುದು. ಈ ರೀತಿಯಾಗಿ ಅಭಿವ್ಯಕ್ತಿಗೆ ಇದು ಮೊದಲೆನ್ನುವ ಭಾವವಿರೋಣವೇ ಸ್ವರೂಪಜ್ಞಾನಕ್ಕೆ ಸಾದಿ

ತ್ವವು. ಈಶ್ವರಾದಿ ವಿಷಯದಲ್ಲಿ ಮೊದಲು ಹುಟ್ಟದಿರುವದಾಗಿರುವ ಪ್ರವಾಹವು ಕದಾಚಿತ್ ಹುಟ್ಟುವುದೆನ್ನುವ ಇದಂ ಪ್ರಥಮತಾವತ್ವವೇ ಬಾಹ್ಯಜ್ಞಾನ ಪ್ರವಾಹಕ್ಕೆ ಸಾದಿತ್ವವು. ಇವರ ಸ್ವರೂಪಜ್ಞಾನವು ಯಥಾರ್ಥವು. ಬಾಹ್ಯವು ಕದಾಚಿತ್ ಅಯಥಾರ್ಥವು. ॥ ೧೦ ॥

**ಅಯೋಗಿಜ್ಞಾನ ಲಕ್ಷಣವನ್ನು ಹೇಳುವರು.**

**ಮೂ ॥ ಅಯೋಗಿ ಜ್ಞಾನಮುತ್ಪತ್ತಿ ವಿನಾಶವತ್ । ಅಲ್ಪಂ ॥ ೧೧ ॥**

ಅ ॥ ಅಯೋಗಿಜ್ಞಾನಂ=ಅಯೋಗಿಜ್ಞಾನವು, ಉತ್ಪತ್ತಿ ವಿನಾಶವತ್=ಉತ್ಪತ್ತಿ ನಾಶ ಉಳ್ಳದ್ದು. ಅಲ್ಪಂ=ಈಶಾದನ್ಯತ್ರ ಅತ್ಯಂತ ಅಲ್ಪವಿಷಯುವಾದುದು.

ತಾ ॥ ತಾತ್ವಿಕ ದೇವಾದಿ ವ್ಯತಿರಿಕ್ತ ಜೀವರು ಅಯೋಗಿಗಳು. ಅವರ ಸ್ವರೂಪಜ್ಞಾನ ಬಾಹ್ಯಜ್ಞಾನಗಳೆರಡೂ ಉತ್ಪತ್ತಿ ನಾಶಗಳುಳ್ಳವುಗಳು, ಸ್ವರೂಪಜ್ಞಾನಕ್ಕೆ ಈಶ್ವರಾದಿ ವಿಷಯುವಾಗಿ ಕದಾಚಿದಭಿವ್ಯಕ್ತಿಯೇ ಉತ್ಪತ್ತಿಯು, ಬಾಹ್ಯಜ್ಞಾನಕ್ಕೆ ಸ್ವರೂಪದಿಂದಲೇ ಉತ್ಪತ್ತಿಯು. ಈ ರೀತಿಯಾಗಿ ಉತ್ಪತ್ತಿ ವಿನಾಶವು ಹಿಂದೆ ಹೇಳಿದ ಅತಾತ್ವಿಕ ಯೋಗಿಜ್ಞಾನದಲ್ಲೂ ಸಮಾನವಾದುದರಿಂದ ಲಕ್ಷಣವಾಗಲಾರದು. ಅದಕ್ಕಾಗಿ ಪ್ರತ್ಯೇಕ ಲಕ್ಷಣವನ್ನು ಹೇಳುತ್ತಾರೆ. (ಈಶಾದನ್ಯತ್ರಾತ್ಯಂತಾಲ್ಪ ವಿಷಯುವೆಂದು) ಈಶನನ್ನು ಬಿಟ್ಟಿರುವ ವಸ್ತುಗಳಲ್ಲಿ ಬಹ್ವಜ್ಞಾನ ಉಳ್ಳದ್ದು ಎಂದು ತಾತ್ಪರ್ಯವು. "ಈಶಾದನ್ಯತ್ರ ಅಜ್ಞಾನ ಪ್ರಚುರಂ"ಎಂದು ಪದ್ಧತಿಯಲ್ಲಿ ಹೇಳಿರುವರು.

(1) ಪ್ರತ್ಯಕ್ಷಜ, (2) ಅನುಮಾನಜ, (3) ಆಗಮಜಗಳೆಂದು ಉತ್ಪತ್ತಿಯುಳ್ಳ ಸರ್ವ ಕೇವಲ ಪ್ರಮಾಣವು ತ್ರಿವಿಧವು. ಅದರಲ್ಲಿಯೂ (1) ಘ್ರಾಣ, (2) ರಸನ, (3) ಚಕ್ಷುಃ, (4) ತ್ವಕ್, (5) ಶ್ರೋತ್ರ, (6) ಮನಃ ಎನ್ನುವ ಭೇದದಿಂದ ಅನುಪ್ರಮಾಣ ರೂಪವಾದ ಪ್ರತ್ಯಕ್ಷವು ಆರುವಿಧವಾದುದರಿಂದ ಅವುಗಳಿಂದ ಹುಟ್ಟಿದ ಕೇವಲ ಪ್ರತ್ಯಕ್ಷ ಪ್ರಮಾಣವು, (1) ಘ್ರಾಣಜ, (2) ರಾಸನ, (3) ಚಾಕ್ಷುಷ, (4) ತ್ವಾಚ, (5) ಶ್ರೋತ್ರಜ, (6) ಮನೋಜಗಳೆಂದು ಅವಾಂತರ ಭೇದದಿಂದ ಆರು ವಿಧವು.

(1) ಸಾಧಾರಣಾನುಮಾನಜನ್ಯ, (2) ದೂಷಣಾನುಮಾನ ಜನ್ಯವೆಂದು ಅನುಮಾನಜ ಕೇವಲ ಪ್ರಮಾಣವು ಎರಡು ವಿಧವು, (1) ಪೌರುಷೇಯಾಗಮಜನ್ಯ ಮತ್ತು (2) ಅಪೌರುಷೇಯಾಗಮಜನ್ಯವೆಂದು ಆಗಮಜ ಕೇವಲಪ್ರಮಾಣವೆಂದು ಸಹ ತಿಳಿಯಬೇಕು. ॥ ೧೧ ॥

**ಅನುಪ್ರಮಾಣವನ್ನು ವಿಭಾಗ ಮಾಡುವರು.**

**ಮೂ ॥ ಅನುಪ್ರಮಾಣಂ ತ್ರಿವಿಧಂ । ಪ್ರತ್ಯಕ್ಷಮನುಮಾನಮಾಗಮ ಇತಿ॥೧೨॥**

ಅ ॥ ಪ್ರತ್ಯಕ್ಷಂ=ಪ್ರತ್ಯಕ್ಷವು, ಅನುಮಾನಂ=ಅನುಮಾನವು, ಆಗಮಃ=ಆಗಮವು, ಇತಿ=ಹೀಗೆಂದು, ಅನುಪ್ರಮಾಣಂ=ಅನುಪ್ರಮಾಣವು, ತ್ರಿವಿಧಂ=ಮೂರುಪ್ರಕಾರ ಉಳ್ಳದ್ದು.

ತಾ ॥ ಕೇವಲಪ್ರಮಾಣಕ್ಕೆ ಕಾರಣವಾದ ಅನುಪ್ರಮಾಣವು, ಪ್ರತ್ಯಕ್ಷಾನುಮಾನ ಆಗಮವೆಂದು ತ್ರಿವಿಧವೇ ಆಗಿರುತ್ತದೆ. ಕೆಲವರು ಪ್ರತ್ಯಕ್ಷ ಒಂದೇ ಎಂತಲೂ, ಕೆಲವರು ಪ್ರತ್ಯಕ್ಷ, ಅನುಮಾನ ಇವು ಎರಡೇ ಎಂತಲೂ, ಮೂರರಿಂದ ಕಡಿಮೆ ಸಂಖ್ಯೆಯನ್ನು ಹೇಳುವರು. ಇನ್ನು ಕೆಲವರು (1) ಅರ್ಥಾಪತ್ತಿ, (2) ಉಪಮಾನ ಇವೇ ಮೊದಲಾದ ಅಧಿಕ ಪ್ರಮಾಣಗಳನ್ನು ಹೇಳುವರು. ಪ್ರಮಾಣವಿರದಿರುವುದರಿಂದ ಇವರು ಕಲ್ಪಿಸಿದಂತೆ ಮೂರರಿಂದ ಕಡಿಮೆಯಾದುದಲ್ಲ, ಮೂರರಿಂದ ಅಧಿಕವಾಗಿ ಕಲ್ಪಿಸಿದುದರಲ್ಲಿ ಕೆಲವು ಈ ಮೂರರಲ್ಲಿಯೇ ಅಡ

ಗುವುದರಿಂದಲೂ ಕೆಲವು ಅಪ್ರಾಮಾಣಿಕವಾದುದರಿಂದಲೂ ಅನುಪ್ರಮಾಣಗಳು ಮೂರೇ ವಿಧವೆಂದು ನಿರ್ಧಾರಣೆಯನ್ನು ಮಾಡುವರು-ಇವುಗಳಲ್ಲಿ "ಪ್ರಾಯೇಣಾಸನ್ನಾವ್ಯವಹಿತವರ್ತಮಾನಕತಿಪಯಾರ್ಥಗ್ರಾಹಕಂ **ಪ್ರತ್ಯಕ್ಷಂ**" ಮನೋವ್ಯತಿರಿಕ್ತಗಳಾದ (1) ಘ್ರಾಣ, (2) ರಸನ, (3) ಚಕ್ಷು, (4) ತ್ವಕ್, (5) ಶ್ರೋತ್ರಗಳು ಸಮೀಪದಲ್ಲಿದ್ದು (ಸ್ವಸನ್ನಿಕೃಷ್ಟವಾದ) ಅಡ್ಡವಿಲ್ಲದಿರುವ ವರ್ತಮಾನ ಕಾಲಗಳಲ್ಲಿರುವ ಕೆಲವು ಪದಾರ್ಥಗಳ (ಗ್ರಾಹಕ) ಪ್ರತ್ಯಕ್ಷವೆನ್ನುವ ಜ್ಞಾನವನ್ನು ಹುಟ್ಟಿಸುತ್ತದೆ. ಈ ಪ್ರತ್ಯಕ್ಷಜ್ಞಾನವನ್ನು ಹುಟ್ಟಿಸುವುದಕ್ಕೆ ಪ್ರತ್ಯಕ್ಷ ಪ್ರಮಾಣವೆಂದು ಹೆಸರು. ಹಿಂದೆ ಹೇಳಿದ ಘ್ರಾಣಾದಿಗಳು ಬಾಹ್ಯೇಂದ್ರಿಯಗಳು. ಮನಸ್ಸು ಅಂತರಿಂದ್ರಿಯವು, "ಅನಾಸನ್ನಾತೀತಾನಾಗತವ್ಯವಹಿತಾರ್ಥಗೋಚರ **ಮನುಮಾನಂ**" ದೂರದಲ್ಲಿರುವ ಹಿಂದಿನ ಕಾಲದಲ್ಲಿದ್ದು ಮುಂದಿನ ಕಾಲದಲ್ಲಿರುವ ತಡೆಯಿಂದೊಡಗೂಡಿದ ಪದಾರ್ಥಗಳ ಅನುಮಿತಿಯೆನ್ನುವ ಜ್ಞಾನವನ್ನು ಹುಟ್ಟಿಸುವ ಪ್ರಮಾಣವು **ಅನುಮಾನವು**. ಇದು ಪ್ರತ್ಯಕ್ಷವನ್ನಾಗಲೀ, ಆಗಮವನ್ನಾಗಲೀ ಅನುಸರಿಸುತ್ತ ಇರುವುದರಿಂದ ಅನುಮಾನವೆಂದು ವ್ಯವಹರಿಸಲ್ಪಡುತ್ತದೆ.

"ಸ್ವಾತಂತ್ರ್ಯೇಣಾಶೇಷಾರ್ಥವಿಷಯ **ಆಗಮಃ**" ಪ್ರತ್ಯಕ್ಷಾನುಮಾನಾಪೇಕ್ಷೆಯಿಲ್ಲದೆ ಈಶ್ವರ ಧರ್ಮಾಧರ್ಮ, ಸ್ವರ್ಗ ನರಕಾದ್ಯಶೇಷಾರ್ಥವಿಷಯಕಶಾಬ್ದಜ್ಞಾನವನ್ನು ಹುಟ್ಟಿಸುವ ಪ್ರಮಾಣವು **ಆಗಮವು**. ಇವುಗಳಲ್ಲಿ ಪ್ರತ್ಯಕ್ಷದಿಂದ ಅಧಿಕ ವಿಷಯ ಜ್ಞಾನವನ್ನು ಹುಟ್ಟಿಸುವುದು ಅನುಮಾನವು. ಇದರಿಂದಧಿಕ ಜ್ಞಾನವನ್ನು ಹುಟ್ಟಿಸುವುದಾಗಮವು. ಈ ಕ್ರಮವನ್ನು ಹಿಡಿದು ಪ್ರತ್ಯಕ್ಷವು ಮೊದಲನೇಯದು, ಅನುಮಾನವು ಎರಡನೆಯದು, ಆಗಮವು ಮೂರನೆಯದೆಂದು ಶಿಸಿರುವರಾಚಾರ್ಯರು. ॥ ೧೨ ॥

(1) "ಅರ್ಥಂಪ್ರತಿ (ಸ್ವಸ್ವವಿಷಯಂಪ್ರತಿ) ಸ್ಥಿತಂ ಅಕ್ಷಂ ಪ್ರತ್ಯಕ್ಷಂ" (ತಮಗೆ ಯೋಗ್ಯಗಳಾದ ಗಂಧಾದಿಗಳ ಜ್ಞಾನವನ್ನು ಹುಟ್ಟಿಸುವ ಘ್ರಾಣಾದೀಂದ್ರಿಯಗಳು ಪ್ರತ್ಯಕ್ಷವು). (2) "ಪ್ರಮಾಣಾಂತರಾನುಸರಣೇನೈವಾರ್ಥಪ್ರಮಾಪಕಮನುಮಾನಂ" (ಪ್ರತ್ಯಕ್ಷವು ಅಥವಾ ಆಗಮವು ಇವುಗಳ ಸಹಾಯದಿಂದ ಜ್ಞಾನವನ್ನು ಹುಟ್ಟಿಸುವುದನುಮಾನವು). (b) "ಸಮ್ಯಗತೀಂದ್ರಿಯಾರ್ಥಾವಗಮಕ ಆಗಮಃ" (ಇತರ ಸಹಾಯವಿರದೆ ಸ್ವತಂತ್ರವಾಗಿ ಚೆನ್ನಾಗಿ ಅತೀಂದ್ರಿಯ ಜ್ಞಾನವನ್ನು ಹುಟ್ಟಿಸುವುದಾಗಮವು). ಎನ್ನುವ ಶಬ್ದನಿರ್ವಚನದಿಂದಲೇ ಪ್ರತ್ಯಕ್ಷಾನುಮಾನಾಗಮ ಲಕ್ಷಣಗಳು ವಿದಿತಗಳಾದರೂ ಪ್ರತ್ಯಕ್ಷದಲ್ಲಿ ಈ ಲಕ್ಷಣವನ್ನು ವಿಶದೀಕರಿಸುವುದಕ್ಕಾಗಿಯೂ ಅನುಮಾನಾಗಮಗಳು ಯಾವುವೆನ್ನುವುದನ್ನು ಅಭಿನಯಿಸುವುದಕ್ಕಾಗಿಯೂ ಪ್ರತ್ಯಕ್ಷಾದಿಗಳಿಗೆ ಪುನಃ ಕ್ರಮೇಣ ಲಕ್ಷಣವನ್ನು ಹೇಳುವರು.

**ಮೂ ॥ ನಿರ್ದೋಷಾರ್ಥೇಂದ್ರಿಯಸನ್ನಿಕರ್ಷಃ ಪ್ರತ್ಯಕ್ಷಂ । ನಿರ್ದೋಷೋಪಪತ್ತಿರನುಮಾನಂ । ನಿರ್ದೋಷಃ ಶಬ್ದ ಆಗಮಃ ॥ ೧೩ ॥**

**ಅ** ॥ ನಿರ್ದೋಷ=ದೋಷವಿರದ, ಅರ್ಥ=ವಿಷಯವು, ಇಂದ್ರಿಯ=ಹಿಂದೆ ಹೇಳಿದ ದೋಷವಿರದ ಮನ ಆದಿ ಷಡಿಂದ್ರಿಯಗಳು ಇವುಗಳ, ಸನ್ನಿಕರ್ಷಃ=ಸಂಬಂಧವು, ಪ್ರತ್ಯಕ್ಷಂ=ಪ್ರತ್ಯಕ್ಷ ಪ್ರಮಾಣವು. ನಿರ್ದೋಷ=ದೋಷವಿರದ, ಉಪಪತ್ತಿಃ=ಲಿಂಗವು, ಅನುಮಾನಂ=ಅನುಮಾನ ಪ್ರಮಾಣವು. ನಿರ್ದೋಷಃ=ಅಜ್ಞಾನ, ವಿಪರ್ಯಯ, ಸಂಶಯ, ಪ್ರಮಾದ, ವಿಪ್ರಲಂಭಾದಿ ದೋಷರಹಿತವಾದ, ಶಬ್ದಃ=ವಾಕ್ಯವು, ಆಗಮಃ=ಆಗಮ ಪ್ರಮಾಣವು.

**ತಾ** ॥ ದೋಷರಹಿತಗಳಾದ ಇಂದ್ರಿಯಗಳು, ದೋಷರಹಿತಗಳಾದ ಅರ್ಥಗಳು ಸಂಬಂಧಿಸಿದರೆ ಆ ಸಂಬಂಧವು ಪ್ರತ್ಯಕ್ಷವೆಂಬ ಅನುಪ್ರಮಾಣವಾಗುವುದು. ಈ ಅನುಪ್ರಮಾಣ ವಿಭಾಗ

ವನ್ನು ಮುಂದೆ ಮಾಡುವವರು, ಅದರಲ್ಲಿ ಮನಸ್ಸು, ಕಣ್ಣು, ಕಿವಿ ಮೊದಲಾದುವುಗಳು ಷಡಿಂದ್ರಿಯಗಳು. ಕಣ್ಣಿಗೆ ತಿಳಿಯಲರ್ಹವಾದ ರೂಪವು (ಬಣ್ಣ) ಕಿವಿಗೆ ತಿಳಿಯಲರ್ಹವಾದ ಶಬ್ದವು, ಘ್ರಾಣಕ್ಕೆ ತಿಳಿಯಲರ್ಹವಾದ ವಾಸನೆಯು, ಹೀಗೆ ಆಯಾಯ ಇಂದ್ರಿಯಗಳಿಗೆ ತಿಳಿಯಲು ಯೋಗ್ಯವಾದ ವಿಷಯಗಳು.ಅರ್ಥಗಳೆನ್ನಿಸಿಕೊಳ್ಳುತ್ತವೆ. ಆದ ಕಾರಣ (1) ಆತ್ಮ, (2) ಆಕಾಶ, (3) ಕಾಲ, (4) ದಿಕ್ಕು ಇವು ಯಾವ ಬಾಹ್ಯೇಂದ್ರಿಯಗಳಿಂದಲೂ ತಿಳಿಯಲು ಸಾಧ್ಯವಲ್ಲವಾದ ಕಾರಣ ಅವುಗಳು ಇತರ ವಿಷಯಗಳಂತೆ ಬಾಹ್ಯಪ್ರತ್ಯಕ್ಷಗಳಲ್ಲವೆಂದು ಸೂಚಿಸುವುದಕ್ಕಾಗಿ ಅರ್ಥವೆಂಬುವ ಶಬ್ದವನ್ನು ಹಾಕಿರುವರು. ಮೇಲೆ ಹೇಳಿದ ಆಕಾಶಾದಿಗಳು ಸಾಕ್ಷಿಗೆ ಇಂದ್ರಿಯಾಪೇಕ್ಷೆ ಇಲ್ಲದೆ ಗೋಚರಗಳಾಗುವುವು. (ಈ ಸಾಕ್ಷಿಸ್ವರೂಪವು ಮುಂದೆ ವಿದಿತವಾಗುವುದು.) ಆಕಾಶಾದಿಗಳು ಬಾಹ್ಯೇಂದ್ರಿಯ ವಿಷಯವೆಂಬೀ ಅರ್ಥದಲ್ಲಿ ಸೇರುವುದಿಲ್ಲ. ಅರ್ಥವು ಮತ್ತು ಇಂದ್ರಿಯಗಳು ನಿರ್ದುಷ್ಟಗಳಾಗಿರಬೇಕು. ಹಾಗಾದರೆ ಅವುಗಳ ಸನ್ನಿಕರ್ಷವು ಪ್ರತ್ಯಕ್ಷವೆನಿಸುವುದು. ಅರ್ಥವಾಗಲೀ ಇಂದ್ರಿಯವಾಗಲೀ ಅಥವಾ ಎರಡೂ ದೋಷಯುಕ್ತವಾದರೆ ಅವುಗಳಿಗೆ ಸನ್ನಿಕರ್ಷವಾಗದೆ ಹೋಗಬಹುದು. ಆಗ ಜ್ಞಾನವೇ ಉಂಟಾಗುವುದಿಲ್ಲ. ಅಥವಾ ಸನ್ನಿಕರ್ಷವಾದರೂ ಸಂಶಯವೋ ಭ್ರಮೆಯೋ ಉಂಟಾಗುವುದು. ಹೊರತು ಯಥಾರ್ಥಜ್ಞಾನವುಂಟಾಗುವುದಿಲ್ಲ. ಅತಿ ಸಾಮಿಪ್ಯ (ಬಹಳ ಹತ್ತಿರ ವಿರೋಣ) ಅತಿದೂರತ್ವ (ಬಹಳ ದೂರದಲ್ಲಿ ಇರೋಣ) ಸೌಕ್ಷ್ಮ್ಯ (ಬಹಳಸೂಕ್ಷ್ಮವಾಗಿ ಇರೋಣ) ವ್ಯವಧಾನ (ಮರೆಮಾಡಲ್ಪಡೋಣ) ಇವೇ ಮೊದಲಾದುದು ಅರ್ಥದೋಷಗಳೆಂದೆನಿಸಿಕೊಳ್ಳುವುವು. ಇಂದ್ರಿಯಗಳೀಗೆ ಕಾಚ ಕಾಮಲಾದಿ ರೋಗ ವಾರ್ಧಿಕ್ಯಾದಿಗಳು ದೋಷಗಳು. ಮನಸ್ಸಿಗೆ ರಾಗಾದಿಗಳಿಂದ ಇಂದ್ರಿಯಗಳಲ್ಲಿ ನಿಂತು ಅರ್ಥವನ್ನು ವಿಷಯೀಕರಿಸದೆ ಇರೋಣವೇ ದೋಷವು. ಮಾರ್ಗದಲ್ಲಿ ಹೋಗುತ್ತಾ ಕಣ್ಣಿಗೆ ಎಷ್ಟೋ ವಿಷಯಗಳು ಸನ್ನಿಕೃಷ್ಟಗಳಾದರೂ ಮನಸ್ಸು ಅವುಗಳಲ್ಲಿ ನಿಲ್ಲದಿರುವುದರಿಂದ ಅವು ತಿಳಿಯುವುದಿಲ್ಲ. ಇದು ಮನಸ್ಸಿನ ದೋಷವೆಂದು ಹೇಳುವರು. ಮತ್ತು ಪುಸ್ತಕವನ್ನು ಓದುತ್ತಿರುವಾಗ ಯಾರಾದರೂ ಬಂದರೂ ತಿಳಿಯುವುದಿಲ್ಲ. ಅದು ಮನಸ್ಸಿನ ದೋಷದಿಂದಲೇವೇ. ಇಂತಹ ದೋಷಗಳಿಲ್ಲದ ಇಂದ್ರಿಯ, ಅರ್ಥ ಇವುಗಳ ಸಂಬಂಧವೇ ಪ್ರತ್ಯಕ್ಷವೆಂದು ತಿಳಿಸಿರುವರು. ಅರ್ಥಗಳಿಗೆ ಪರಸ್ಪರ ಸಂಬಂಧದಿಂದ ಪ್ರತ್ಯಕ್ಷವಾಗುವುದಿಲ್ಲ. ಇಂದ್ರಿಯಕ್ಕೂ ತದ್ಯೋಗ್ಯವಾದ ಅರ್ಥಕ್ಕೂ ಸಂಬಂಧವನ್ನು ಪ್ರತ್ಯಕ್ಷವೆಂದು ಹೇಳಿರುವರು. ಈ ಪ್ರತ್ಯಕ್ಷವಿಭಾಗಾದಿಗಳನ್ನು ಮುಂದೆ ಮಾಡುವರು.

## ಅನುಮಾನ ನಿರೂಪಣವು.

ಉಪಪತ್ತಿ ಎಂದರೆ ಲಿಂಗವು. ಲಿಂಗವೆಂದರೆ "ಸಾಹಚರ್ಯಬಲೇನಾರ್ಥಗಮಕಂ **ಲಿಂಗಂ**" ವ್ಯಾಪ್ತಿ ಎಂಬ ಸಂಬಂಧದಿಂದ ವ್ಯಾಪಕವಾದ ವಸ್ತುವಿನ ಅನುಮಿತಿಯನ್ನು ಹುಟ್ಟಿಸುವುದು. ಹೊಗೆಗೆ ಯಾವಾಗಲೂ ಬೆಂಕಿಯ ವ್ಯಾಪ್ತಿಯೆಂಬ ಸಂಬಂಧ ಇರುವುದು. ನಾವು ಹೊಗೆಯನ್ನು ನೋಡಿದ ಮಾತ್ರವೇ ಇಲ್ಲಿ ಬೆಂಕಿ ಉಂಟೆಂದು ತಿಳಿಯುವೆವು. ಆದುದರಿಂದ ಆ ಧೂಮವು ವಹ್ನಿಯ ಪ್ರಮೆಯನ್ನು (ಅನುಮತಿಯನ್ನು) ಹುಟ್ಟಿಸುವುದರಿಂದ **ಲಿಂಗ**ವೆನಿಸುವುದು. ಇದೇ ರೀತಿಯಿಂದ ಸರ್ವತ್ರ ಲಿಂಗವನ್ನು ತಿಳಿಯಬೇಕು. "ಸಾಹಚರ್ಯ"ವೆಂದರೆ ವ್ಯಾಪ್ತಿಯು. ಲಿಂಗವೇ ಈ ವ್ಯಾಪ್ತಿಯುಕ್ತವಾದುದರಿಂದ ವ್ಯಾಪ್ತ ಮತ್ತು ವ್ಯಾಪ್ಯವೆಂತಲೂ ವ್ಯವಹರಿಸಲ್ಪಡುತ್ತದೆ. ಯಾವುದರಿಂದ ಲಿಂಗಕ್ಕೆ ವ್ಯಾಪ್ತಿಯೋ ಅದು **ವ್ಯಾಪಕವು**. ಆದುದರಿಂದ ವಹ್ನಿಯು ವ್ಯಾಪಕವು. ಧೂಮವು ವ್ಯಾಪ್ಯವೆಂತಲೂ ಎನಿಸುವುದು. ಅನುಮಿತಿ ಪ್ರತಿಬಂಧಕವು **ಉಪಪತ್ತಿ ದೋಷವು.** ಅನುಮಿತಿ ಪ್ರತಿಬಂಧಕವೆಂದರೆ ಅನುಮಿತಿಯನ್ನು ಹುಟ್ಟಿಸದಿರುವುದು. ಅಥವಾ ಸಂಶಯ ವಿಷ

ರ್ಯವನ್ನು ಹುಟ್ಟಿಸುವುದು.ಹ್ಯಾಪ್ತಿಯು ಸಮುಚಿತ ದೇಶವೃತ್ತಿತ್ವವು ಸದನುಮಾನ ಲಕ್ಷಣವು. ಈ ಅನುಮಾನಲಕ್ಷಣ ರಹಿತವಾದುದು ಅನುಮಾನಾಭಾಸವು (ದುಷ್ಟಾನುಮಾನವು).

ಪ್ರತ್ಯಕ್ಷಾನುಮಾನಗಳ ಪೈಕಿ ಇಂದ್ರಿಯ ರೂಪವಾದ ಪ್ರತ್ಯಕ್ಷ ಪ್ರಮಾಣವು **ಅಜ್ಞಾತಕರಣವು.** ಅಂದರೆ ಕಣ್ಣು, ಕಿವಿ ಇತ್ಯಾದಿಗಳ ಸ್ವರೂಪವು ತಿಳಿಯಲ್ಪಡದೆ ಇದ್ದರೂ ಸ್ವಯೋಗ್ಯವಾದ ಅರ್ಥದ ಜ್ಞಾನವನ್ನು ಹುಟ್ಟಿಸುವುದು. ಉ— ಘಟವನ್ನು ನೋಡಿದರೆ, ಇದು ಘಟವೆಂದು ಜ್ಞಾನ ಮಾತ್ರ ಬರುವುದು. ಅನುಮಾನವು **ಜ್ಞಾತಕರಣವು** ತಾನು ತಿಳಿಯಲ್ಪಟ್ಟದ್ದಾಗಿ ವ್ಯಾಪಕಾನುಮಿತಿಯನ್ನು ಹುಟ್ಟಿಸುವುದು. ಉ— ಧೂಮವು ಉಂಟೆಂದು ತಿಳಿದರೆ ವಹ್ನಿ ಉಂಟೆಂದು ತಿಳಿಯುವುದು. ಇದೇ ರೀತಿಯಾಗಿ **ಆಗಮವು ಜ್ಞಾತಕರಣವು.** ಶಬ್ದವನ್ನು ಕೇಳಿದರೇನೇ ಅದರಿಂದ ಶಾಬ್ದ ಪ್ರಮಿತಿಯು ಹುಟ್ಟುವುದು.

ಹಿಂದೆ ಹೇಳಿದ ವ್ಯಾಪ್ತಿಯು (1) ಅನ್ವಯವ್ಯಾಪ್ತಿ, (2) ವ್ಯತಿರೇಕವ್ಯಾಪ್ತಿ ಎಂದು ಎರಡು ವಿಧವು. (1) ಹೇತು (ವ್ಯಾಪ್ಯ), ಸಾಧ್ಯ (ವ್ಯಾಪಕ)ಗಳಿಗೆ ಇರುವ ವ್ಯಾಪ್ತಿಯು **ಅನ್ವಯವ್ಯಾಪ್ತಿಯು.** ಉ— (ಯತ್ರ ಧೂಮಃ ತತ್ರ ವಹ್ನಿಃ) ಎಲ್ಲಿ ಹೊಗೆ ಉಂಟೋ ಅಲ್ಲಿ ಬೆಂಕಿಯು ಉಂಟೆನ್ನುವುದು. (2) ಸಾಧ್ಯಾಭಾವ ಹೇತ್ವಭಾವಗಳಿಗೆ ಇರುವ ವ್ಯಾಪ್ತಿಯು **ವ್ಯತಿರೇಕವ್ಯಾಪ್ತಿಯು.** ಉ— (ಯತ್ರ ವಹ್ನ್ಯಭಾವಃ ತತ್ರ ಧೂಮಾಭಾವಃ) ಎಲ್ಲಿ ಬೆಂಕಿ ಇಲ್ಲವೋ ಅಲ್ಲಿ ಹೊಗೆಯು ಇಲ್ಲ. ವ್ಯಾಪ್ತಿಯುಳ್ಳ ಲಿಂಗವೆಂದಿರುವುದು **ಕೇವಲಾನ್ವಯಿ,** (2) **ಕೇವಲ ವ್ಯತಿರೇಕಿ** (3) **ಅನ್ವಯವ್ಯತಿರೇಕಿ**ಯೆಂದು ಮೂರುವಿಧವೆಂದು ನೈಯಾಯಿಕರು ಹೇಳುವರು. ವ್ಯತಿರೇಕವ್ಯಾಪ್ತಿಯು ಅನ್ವಯವ್ಯಾಪ್ತಿಯಂತೆ ಸಾಕ್ಷಾದನುಮಿತಿಯಲ್ಲಿ ಕಾರಣವಲ್ಲ. ಆದರೂ ಅನ್ವಯವ್ಯಾಪ್ತಿಯನ್ನು ತಿಳಿಸಿ, ಕೊಟ್ಟು ಪರಂಪರಯಾ ಕಾರಣವಾಗುತ್ತದೆ. ಆದುದರಿಂದ ಕೇವಲ ವ್ಯತಿರೇಕಿಯು ಅನ್ವಯಿ ಲಿಂಗದಂತೆ ಸಾಕ್ಷಾದನುಮಿತಿಯಲ್ಲಿ ಕಾರಣವಾಗುವುದಿಲ್ಲ. ಆದುದರಿಂದ (1) **ಕೇವಲಾನ್ವಯಿ** ಲಿಂಗ, (2) **ಅನ್ವಯವ್ಯತಿರೇಕಿ**ಲಿಂಗವೆಂದೆರಡೇ ವಿಧವೆಂದು ಸಿದ್ಧಾಂತವು. ಯಾವುದನ್ನು ಸಾಧಿಸುವೆವೋ ಅದು **ಸಾಧ್ಯವು.** ಯಾವುದರ ದೆಸೆಯಿಂದ ಸಾಧಿಸುವೆವೋ ಅದು **ಸಾಧಕವೆಂದು ಯಾ ಹೇತು** ಎಂದು ಹೆಸರುಗೊಳ್ಳುವುದು. ಉ- ಧೂಮಾನುಮಾನದಲ್ಲಿ ಧೂಮದ ದೆಸೆಯಿಂದ ವಹ್ನಿಯನ್ನು ಸಾಧಿಸುವುದರಿಂದ ಧೂಮವು ಹೇತುವು, ವಹ್ನಿಯು ಸಾಧ್ಯವು.

"ಸಾಧ್ಯ ಧರ್ಮವಾನ್ ಧರ್ಮೀಪಕ್ಷಃ" (1) ಸಾಧ್ಯರೂಪ ಧರ್ಮವುಳ್ಳ ಧರ್ಮಿಗೆ **ಪಕ್ಷ**ವೆಂದು ಹೆಸರು. ಧೂಮಾನುಮಾನದಲ್ಲಿ ವಹ್ನಿಯು ಸಾಧ್ಯವಾದುದರಿಂದ ವಹ್ನಿರೂಪ ಧರ್ಮವುಳ್ಳದ್ದು ಪಕ್ಷವು. ಅಂದರೆ ಪರ್ವತವು. "ಸಾಧ್ಯ ಸಮಾನ ಧರ್ಮವಾನ್ ಧರ್ಮೀ**ಸಪಕ್ಷಃ**" ಸಾಧ್ಯವಲ್ಲದ ಮತ್ತು ಸಾಧ್ಯದಂತಿರುವ ಧರ್ಮದಿಂದ ಯುಕ್ತವಾದ ಧರ್ಮಿಯು **ಸಪಕ್ಷವು.** ಅಡಿಗೆಮನೆಯ(ಮಹಾನಸದ)ಲ್ಲಿ ಪ್ರತ್ಯಕ್ಷ ಪ್ರಮಾಣದಿಂದ ಧೂಮಕ್ಕೂ, ವಹ್ನಿಗೂ ಸಾಹಚರ್ಯ ನಿಶ್ಚಯವಿರುವುದರಿಂದ ಮತ್ತು ಸಾಧ್ಯ ಸಮಾನವಾದ ವಹ್ನಿಯು ಅಡಿಗೆಮನೆಯಲ್ಲೂ ಇರುವುದರಿಂದ ಅಡಿಗೆಮನೆಯು ಧೂಮಾನುಮಾನದಲ್ಲಿ ಸಪಕ್ಷವೆನಿಸುವುದು. ಎಲ್ಲಿ ಸಾಧ್ಯವಾದುದು ವಹ್ನಿಯು ನಿಶ್ಚಿತವಾಗಿಯದೋ ಅದು ಸಪಕ್ಷವು. (3) "ಸಾಧ್ಯ ತತ್ಸಮಾನ ಧರ್ಮರಹಿತೋ ಧರ್ಮೀ ವಿಪಕ್ಷಃ" ಸಾಧ್ಯಧರ್ಮವಾಗಲೀ ಸಾಧ್ಯ ಸಮಾನಧರ್ಮವಾಗಲೀ ಇಲ್ಲದಿರುವ ಬೇರೆ ಧರ್ಮ ಉಳ್ಳದ್ದು **ವಿಪಕ್ಷವು.** ಎಲ್ಲಿ ಸಾಧ್ಯವು ಇಲ್ಲವೆಂಬೀ ನಿಶ್ಚಯವಿದೆಯೋ ಅದು ವಿಪಕ್ಷವು. **ಉ—** ಅಗಾಧ ನೀರು ತುಂಬಿದ ಸರೋವರದಲ್ಲಿ ಅಗ್ನಿ ಇರುವುದಿಲ್ಲ. ಧೂಮಾನುಮಾನದಲ್ಲಿ ಇದಕ್ಕೆ ವಿಪಕ್ಷವೆಂದು ಹೆಸರು.

"ಪಕ್ಷವ್ಯಾಪಕಂ ಸಪಕ್ಷವೃತ್ತಿ ಅವಿದ್ಯಮಾನವಿಪಕ್ಷಂ **ಕೇವಲಾನ್ವಯಿ**" ಎಲ್ಲಾ ಪಕ್ಷದಲ್ಲಿಯೂ ಇದ್ದು ಸಪಕ್ಷದಲ್ಲಿಯೂ ಇದ್ದು ವಿಪಕ್ಷವಿರದುದು ಕೇವಲಾನ್ವಯಿ ಅನುಮಾನವು. ಇದು (1) ಸಪಕ್ಷವ್ಯಾಪಕಂ, ಸಪಕ್ಷದಲ್ಲಿ ಎಲ್ಲಾ ಕಡೆಗಳಲ್ಲಿ ಇರುವುದು. (2) ತದೇಕ ದೇಶ ವೃತ್ತಿ, ಕೆಲವು ಸಪಕ್ಷದಲ್ಲಿ ಮಾತ್ರವಿರೋಣ ಎಂದು ಎರಡು ವಿಧವು.

(1) "ಧರ್ಮಾ ಧರ್ಮೌ" (ಪುಣ್ಯಪಾಪಗಳು) "ಕಸ್ಯಚಿತ್ಪ್ರತ್ಯಕ್ಷೌ" (ಒಬ್ಬನಿಗೆಪ್ರತ್ಯಕ್ಷ ವಾಗುವುದು.) "ಪ್ರಮೇಯತ್ವಾತ್" (ಯಥಾರ್ಥ ಜ್ಞಾನಕ್ಕೆ ವಿಷಯವಾಗುವುದರಿಂದ) ರೂಪಾದಿವತ್ ಎಂದು, ಇಲ್ಲಿ ಧರ್ಮಾ ಧರ್ಮೌ ಎಂಬುವುದು ಪಕ್ಷವು. ಕಸ್ಯಚಿತ್ಪ್ರತ್ಯಕ್ಷತ್ವ ಎಂಬುವುದು ಸಾಧ್ಯವು. ಪ್ರಮೇಯತ್ವಾತ್ ಎಂಬುವುದು ಹೇತುವು (ಲಿಂಗವು). ಪ್ರಮೇಯತ್ವವು ಕೇವಲಾನ್ವಯಿಯು. ಎಲ್ಲಾ ವಸ್ತುಗಳಲ್ಲಿರುವ ಧರ್ಮವು ಕೇವಲಾನ್ವಯಿ ಎನಿಸುವುದು. ಇದು ಧರ್ಮ ಮತ್ತು ಅಧರ್ಮವೆನ್ನುವ ಎರಡು ಪಕ್ಷಭಾಗಗಳಲ್ಲಿ ಇರುವುದು. ಸಪಕ್ಷಗಳಾದ ರೂಪಾದಿ ಸರ್ವದಲ್ಲಿ ಇರುವುದು ವಿಪಕ್ಷವಿಲ್ಲದಿರುವುದು. ಆದುದರಿಂದ ಇದು (1ನೇ) ಕೇವಲಾನ್ವಯಿ ಅನುಮಾನವು. (2) ಹಿಂದೆ ಹೇಳಿದ ಪಕ್ಷಸಾಧ್ಯ ಸ್ಥಳದಲ್ಲಿ "ಗುಣತ್ವಾತ್" (ಗುಣತ್ವದ ದೆಸೆಯಿಂದ) ಎಂದು ಹೇತುವನ್ನು ಪ್ರಯೋಗಿಸಿದರೆ ಆ ಗುಣತ್ವವು ಸಪಕ್ಷಗಳಾದ ಗುಣಾದಿಗಳಲ್ಲಿರುವುದು. ಘಟಾದಿಗಳಲ್ಲಿರುವುದಿಲ್ಲವಾದುದರಿಂದ ಎರಡನೇ ಕೇವಲಾನ್ವಯಿ ಅನುಮಾನವು. (2) "ಪಕ್ಷವ್ಯಾಪಕಂ ಅವಿದ್ಯಮಾನ ಸಪಕ್ಷಂ ವಿಪಕ್ಷಾದ್ವ್ಯಾವೃತ್ತಂ **ಕೇವಲವ್ಯತಿರೇಕಿ**." ಎಲ್ಲಾ ಪಕ್ಷದಲ್ಲಿದ್ದು ಸಪಕ್ಷರಹಿತವಾಗಿ ವಿಪಕ್ಷದಲ್ಲಿರುವುದು **ಕೇವಲವ್ಯತಿರೇಕಿ** ಅನುಮಾನವು. ಉ— "ಈಶ್ವರಃ (ಜಗದೀಶ್ವರನು) "ಸರ್ವಜ್ಞಃ" (ಸರ್ವವನ್ನು ತಿಳಿದವನು) "ಸರ್ವಕರ್ತೃತ್ವಾತ್" (ಸರ್ವವನ್ನು ಸೃಷ್ಟಿಮಾಡುವಿಕೆಯ ದೆಸೆಯಿಂದ) ಇಲ್ಲಿ ಸರ್ವಜ್ಞತ್ವವು ಸಾಧ್ಯವು ಪಕ್ಷನಾದ ಈಶ್ವರನಲ್ಲಿ ಇರುವುದು ವಿನಹ ಬೇರೆ ಯಾವ ಕಡೆಯಲ್ಲಿಯೂ ಇರುವುದಿಲ್ಲ. ಆದುದರಿಂದ ಸರ್ವಕರ್ತೃತ್ವಹೇತುವು ಸಪಕ್ಷ ರಹಿತವಾಗಿ ಪಕ್ಷನಾದ ಈಶ್ವರನಲ್ಲಿದ್ದು ಈಶ್ವರಾತಿರಿಕ್ತ ಸರ್ವವಿಪಕ್ಷದಲ್ಲಿಯೂ ಇರದಿರುವುದರಿಂದ ಕೇವಲ ವ್ಯತಿರೇಕಿ ಅನುಮಾನವೆನಿಸುವುದು.

"ಪಕ್ಷವ್ಯಾಪಕಂ ಸಪಕ್ಷವೃತ್ತಿ ವಿಪಕ್ಷಾದ್ವ್ಯಾವೃತ್ತಂ **ಅನ್ವಯ ವ್ಯತಿರೇಕಿ**." ಎಲ್ಲಾ ಪಕ್ಷದಲ್ಲಿದ್ದು ಸಪಕ್ಷದಲ್ಲಿದ್ದು ವಿಪಕ್ಷದಲ್ಲಿರದಿರುವುದು ಅನ್ವಯ ವ್ಯತಿರೇಕಿ ಅನುಮಾನವು. ಇದು ಕೇವಲಾನ್ವಯಿಯಂತೆ (1) ಸಪಕ್ಷವ್ಯಾಪಕ (2) ತದೇಕ ದೇಶವೃತ್ತಿ ಎಂದೆರಡು ವಿಧವು. (1) "ಜೀವಃ ನಿತ್ಯಃ ನಾಶಕಾರಣ ಶೂನ್ಯತ್ವಾತ್" (ನಾಶಕಾರಣವಿಲ್ಲದಿರುವುದರ ದೆಸೆಯಿಂದ) ನಾಶಕಾರಣ ಶೂನ್ಯತ್ವವು ನಿತ್ಯತ್ವ ಸಾಧ್ಯವಿದ್ದಲ್ಲಿ ಎಲ್ಲಾ ಕಡೆಯಲ್ಲಿರುವುದರಿಂದ ಒಂದನೆಯದು. ಅದೇ ಪಕ್ಷಸಾಧ್ಯ ಸ್ಥಳದಲ್ಲಿ "ಚೇತನತ್ವಾತ್"ಎಂದು ಪ್ರಯೋಗಿಸಿದರೆ ಆ ಚೇತನತ್ವವು ನಿತ್ಯತ್ವ ಸಾಧ್ಯವಿರುವ ಸಪಕ್ಷನಾದ ಈಶ್ವರನಲ್ಲಿದ್ದರೂ ಅದೇ ರೀತಿಯಾಗಿ ಸಪಕ್ಷವಾದ ಗಗನಾದಿಗಳಲ್ಲಿರದಿರುವುದರಿಂದ ಸಪಕ್ಷೈಕದೇಶವೃತ್ತಿಯಾದ (2ನೇ) ಅನ್ವಯವ್ಯತಿರೇಕಿಯು. ಹಿಂದೆ ಹೇಳಿದ (1) ಕೇವಲಾನ್ವಯಿ (2) ಕೇವಲ ವ್ಯತಿರೇಕಿ (3) ಅನ್ವಯವ್ಯತಿರೇಕಿ ಲಕ್ಷಣಗಳಲ್ಲಿ ಬಾಧಿತಾದಿಗಳಲ್ಲ್ಯತಿವ್ಯಾಪ್ತಿ ಪರಿಹಾರಕ್ಕೆ "ನಿರ್ದೋಷಂ" ಎಂತಲೂ ವಿಶೇಷಣವನ್ನು ಕೊಡಬೇಕು.

(1) **ದೃಷ್ಟಂ** (2) **ಸಾಮಾನ್ಯತೋದೃಷ್ಟಂ**, ಪ್ರತ್ಯಕ್ಷಕ್ಕೆ ಯೋಗ್ಯವಾದ ಅರ್ಥದ ಅನುಮಿತಿಗೆ ಕಾರಣವಾದದ್ದು (2)ಪ್ರತ್ಯಕ್ಷಕ್ಕೆ ಅಯೋಗ್ಯವಾದ ಅರ್ಥದಅನುಮಿತಿಗೆ ಕಾರಣವಾದುದು ಎಂದುಪುನಃ ಎರಡು ವಿಧವು. ಉ— (1) ಪರ್ವತೋಽಗ್ನಿಮಾನ್, ಧೂಮವತ್ವಾತ್, ಎನ್ನುವಲ್ಲಿ ಧೂಮವು ೧ನೇ ಅನುಮಾನವು. (2) ಈತನು ಚಕ್ಷುರಿಂದ್ರಿಯ ಉಳ್ಳವನು. ರೂಪಜ್ಞಾನವಿರೋಣದರ ದೆಸೆಯಿಂದ ಎನ್ನುವ ಸ್ಥಳದಲ್ಲಿ ರೂಪಜ್ಞಾನವು ಎರಡನೇ ಅನುಮಾನವು.

ಪುನಃ (1) **ಕಾರಣಾನುಮಾನಂ** (ಕಾರಣವಾಗಿ ತನ್ನಕಾರ್ಯಾನುಮಿತಿಯನ್ನು ಹುಟ್ಟಿಸುವುದು.) (2) **ಕಾರ್ಯಾನುಮಾನಂ** (ಕಾರ್ಯವಾಗಿ ತನ್ನ ಕಾರಣಾನುಮಿತಿಯನ್ನು ಹುಟ್ಟಿಸುವದು.) (3) **ಸಾಮಾನ್ಯಾನುಮಾನಂ**=ಕಾರ್ಯವೂ ಕಾರಣವೂ ಆಗದಿರುವುದು ಕಾರಣವು ಕಾರ್ಯವು ಆಗದಿರುವುದರ ಅನುಮಿತಿಯನ್ನು ಹುಟ್ಟಿಸುವುದು ಎಂದು ತ್ರಿವಿಧನನು ಮಾನವು. ಉ— (1) ಅಯಂಕಾಲಃ (ಈ ಕಾಲವು) ಸನ್ನಿಹಿತವೃಷ್ಟಿಮಾನ್ (ಸಮೀಪದಲ್ಲಿ ಮಳೆ ಯುಳ್ಳದ್ದಾಗುವುದು) ವಿಶಿಷ್ಟಮೇಘೋನ್ನತಿಮತ್ವಾತ್, (ಮಿಂಚುಮೊದಲಾದುವುಗಳಿಂದ ಕೂಡಿದ ಕಪ್ಪುಮೋಡದಿಂದಯುಕ್ತವಾಗುವುದರದೆಸೆಯಿಂದ) ಎನ್ನುವ ಸ್ಥಳದಲ್ಲಿ ವಿಶಿಷ್ಟ ಮೇಘೋನ್ನತಿಯು ಮಳೆಗೆ ಕಾರಣವಾಗಿ ಆಮಳೆಯ ಅನುಮಿತಿಯನ್ನು ಹುಟ್ಟಿಸುವುದು. ಇದು ಒಂದನೇ ಅನುಮಾನವು. (2) ಹಿಂದೆ ಹೇಳಿದ ಧೂಮವು ವಹ್ನಿಯ ಕಾರ್ಯವಾಗಿ ತನ್ನ ಕಾರಣವಾದ ವಹ್ನ್ಯನುಮಿತಿಯನ್ನು ಹುಟ್ಟಿಸುವುದು. ಇದು ಎರಡನೆಯ ಅನುಮಾನವು. (3) ಏತದ್ರೂಪವಾನ್ (ಈ ರೂಪ ಉಳ್ಳದ್ದು) ಏತದ್ರಸಾತ್ (ಈರಸವಿರೋಣದರದೆಸೆಯಿಂದ) ಎನ್ನು ವಲ್ಲಿ ಏತದ್ರಸವು ಏತದ್ರೂಪಕ್ಕೆ ಕಾರ್ಯವೂ ಕಾರಣವೂ ಕೂಡ ಆಗದೆ ಏತದ್ರೂಪದನುಮಿ ತಿಯನ್ನು ಹುಟ್ಟಿಸುತ್ತದೆ. ಇದು ಮೂರನೆಯ ಅನುಮಾನವು. ಈ ವ್ಯಾಪ್ಯ ವ್ಯಾಪಕಗಳಲ್ಲಿ ಕೆಲವು ಕಡೆ ದೇಶದಿಂದ ವ್ಯಾಪ್ತಿಯು ಕೆಲವು ಕಡೆ ಕಾಲದಿಂದ ವ್ಯಾಪ್ತಿಯೂ ಸಹ ಇದೆ.

ಈ ರೀತಿಯಾಗಿ ಬಹುಪ್ರಕಾರದಿಂದ ಅನುಮಾನವು ಶಾಸ್ತ್ರದಲ್ಲಿ ವ್ಯವಹರಿಸಲ್ಪಡುತ್ತದೆ. (1) ವ್ಯಾಪ್ತಿಯು (2) ಸಮುಚಿತ ದೇಶಾದಿಯಲ್ಲಿ ಸಿದ್ಧಿ (ನಿಶ್ಚಯ) ಎಂದು ಅನುಮಾನಕ್ಕೆರಡು ಸಾಮರ್ಥ್ಯವು(ಬಲವು)(1) ವ್ಯಾಪ್ತಿ (2) ಪಕ್ಷ ಧರ್ಮತೆ (ಪಕ್ಷದಲ್ಲೇ ಇರೋಣ) ಎಂದೆರಡು ಬಲವೆಂದು ತಾರ್ಕಿಕರು ಹೇಳುವರು. ವ್ಯಾಪ್ತಿಯು ಬೇಕೇಬೇಕು ಪಕ್ಷಧರ್ಮತೆಯ ನಿಯಮವಿಲ್ಲ. (1) ಏಕೆಂದರೆ, "ಊರ್ಧ್ವದೇಶೋ ವೃಷ್ಟಿಮಾನ್ ಅಧೋದೇಶೇ ನದೀಪೂರಾತ್" ಅಂದರೆ ಕೆಳಗಡೆ ಇರುವ ನದೀಪ್ರವಾಹವನ್ನು ಕಂಡು ಮೇಲುಭಾಗದಲ್ಲಿ ಬಹಳ ಮಳೆಯಾಗಿರಬೇಕೆಂದೇ ಎಲ್ಲರೂ ನಿಶ್ಚೈಸುವರು. ಇಂತಹ ಸ್ಥಳದಲ್ಲಿ ನದೀಪೂರವೆಂಬೀಹೇತುವು ಊರ್ಧ್ವದೇಶವೆಂಬೀ ಪಕ್ಷದಲ್ಲಿರುವುದಿಲ್ಲ. ಆದುದರಿಂದ ಸಮುಚಿತ ದೇಶದಲ್ಲಿ ಇದ್ದರೇನೇ ಸಾಕೆಂದು ಸಿದ್ಧಾಂತವು. ಈ ವ್ಯಾಪ್ತಿಯು ಕೆಲವುಕಡೆ ಪ್ರತ್ಯಕ್ಷಪ್ರಮಾಣದಿಂದ ತಿಳಿಯಲು ಶಕ್ಯವಾಗುವುದು. ಉ - ಮಹಾನಸಾದಿಗಳಲ್ಲಿ ಧೂಮಾಗ್ನಿಗಳಿಗೆ ಸಾಹಚರ್ಯವು ಪ್ರತ್ಯಕ್ಷದಿಂದ ಜ್ಞಾತವಾಗುತ್ತದೆ.

ಕೆಲವು ಕಡೆಯಲ್ಲಿ ವ್ಯಾಪ್ತಿಯನುಮಾನ ಗಮ್ಯವಾಗುವುದು. ಉ - "ಜೀವಚ್ಛರೀರಂ ಸಾತ್ಮಕಂ ಪ್ರಾಣಾದಿಮತ್ವಾತ್" ಎನ್ನುವ ಕೇವಲ ವ್ಯತಿರೇಕಿ ಸ್ಥಳದಲ್ಲಿ ಎಲ್ಲಿ ಪ್ರಾಣಾದಿಮತ್ವ ವಿರುವುದೋ ಅಲ್ಲಿ ಸಾತ್ಮಕತ್ವವಿರುವುದೆಂದು ಅನ್ವಯವ್ಯಾಪ್ತಿಗೆ ಜೀವಚ್ಛರೀರಸಾಮಾನ್ಯ ಪಕ್ಷ ವಾದುದರಿಂದ ದೃಷ್ಟಾಂತವಿಲ್ಲ. ಎಲ್ಲಿ ಸಾತ್ಮಕತ್ವವಿರುವುದಿಲ್ಲವೋ ಅಲ್ಲಿ ಪ್ರಾಣಾದಿಮತ್ವವಿರು ವುದಿಲ್ಲ. ಗಡಿಗೆಯಂತೆ, ಎಂದು ವ್ಯತಿರೇಕ ವ್ಯಾಪ್ತಿಯನ್ನು ಹೇಳಬೇಕು. ಈ ವ್ಯತಿರೇಕವ್ಯಾಪ್ತಿಯು ಸಾಕ್ಷಾದನುಮಿತ್ಯಂಗವಾಗದಿರುವುದರಿಂದ ಪ್ರಾಣಾದಿಮತ್ವಕ್ಕೆ ಅನ್ವಯವ್ಯಾಪ್ತಿಯ ನಿಶ್ಚಾಯಕ ವಾಗುವುದು.

"ಪ್ರಾಣಾದಿಮತ್ವಂ ಸಾತ್ಮಕತ್ವವ್ಯಾಪ್ತಂ ಸಾತ್ಮಕತ್ವಾಭಾವ ವ್ಯಾಪಕಾಭಾವ ಪ್ರತಿಯೋಗಿ ತ್ವಾತ್" ಯಾವುದು ಯಾವ ಅಭಾವವ್ಯಾಪಕಾಭಾವಪ್ರತಿಯೋಗಿಯೋ ಅದು ಅದರಿಂದ ವ್ಯಾಪ್ತವು. ಧೂಮವು ವಹ್ನ್ಯಭಾವವ್ಯಾಪಕವಾದ ಧೂಮಾಭಾವ ಪ್ರತಿಯೋಗಿಯು ವಹ್ನಿಯಿಂದ ವ್ಯಾಪ್ತವೂ ಆಗಿದೆ ಎಂದು ಪ್ರಾಣಾದಿಮತ್ವಕ್ಕೆ ವ್ಯಾಪ್ತಿಯು ಅನುಮಾನದಿಂದ ಸಿದ್ಧಿಸುವುದು.

ಕೆಲವು ಕಡೆಯಲ್ಲಿ ವ್ಯಾಪ್ತಿಯು ಆಗಮ ಗಮ್ಯವೂ ಆಗುವುದು. ಉ— ಬ್ರಾಹ್ಮಣೋ ನ ಹಂತವ್ಯಃ ಗೌರ್ನ ಪದಾ ಸ್ಪ್ರಷ್ಟವ್ಯಾ, ಎಂದು ಆಗಮಸಿದ್ಧವಾದ ವ್ಯಾಪ್ತಿಯು. ಯಾವನು ಬ್ರಾಹ್ಮಣನೋ ಆತನು ಕೊಲ್ಲಲ್ಪಡುವವನಲ್ಲ. ಯಾವುದು ಹಸುವೋ ಅದು ಕಾಲಿನಿಂದ ಒದಿಸಿಕೊಳ್ಳ ತಕ್ಕದ್ದಲ್ಲ. ಎಂದು ವ್ಯಾಪ್ತಿಯು.

## ಆಗಮ ನಿರೂಪಣವು.

ಕಚಟತಪಾನಾಂ ಜಬಗಡತ್ವಾತ್, ಎನ್ನುವ ಅರ್ಥವಿರದಿರುವುದರಿಂದಾಗಲೀ, ಕುಂಡಮ ಜಾಜಿನಂ ದಶದಾಡಿಮಾನಿ ಷಡಪೂಪಾಃ, ಎನ್ನುವದರಂತೆ ಅನ್ವಯವಿರದಿರುವುದರಿಂದಾಗಲೀ (1) ಅಬೋಧಕತ್ವವು, ಯಾವ ಅರ್ಥವನ್ನೂ ಬೋಧಿಸದಿರೋಣವು. (2) ವಿಪರೀತ ಬೋಧಕತ್ವವು, ವಿಪರೀತವಾದ ಅರ್ಥವನ್ನು ತಿಳಿಸಿಕೊಡುವಿಕೆಯು. ಉ— ಜಗತ್ತು ಸುಳ್ಳು ಈಶ್ವರನು ಸರ್ವಜ್ಞನು ಅಲ್ಲ. (3) ಜ್ಞಾತ ಜ್ಞಾಪಕತ್ವವು ತಿಳಿದಿರುವ ಅರ್ಥವನ್ನೇ ಮತ್ತು ಮತ್ತು ತಿಳಿಸುವಿಕೆ, ಉ— ಅಗ್ನಿಯು ಬಿಸಿಯಾಗಿದೆ, ಬೆಲ್ಲವು ಮಧುರವಾಗಿದೆ, (4) ಅಪ್ರಯೋಜನತ್ವವು. ಕಾಗೆಗೆ ಹಲ್ಲೆಷ್ಟು ಇವೆ ಎಂದು ಮೊದಲಾದ ಪ್ರಯೋಜನ ಇಲ್ಲದಿರುವ ಅರ್ಥವನ್ನು ತಿಳಿಸುವಿಕೆಯು.(5) ಅನಭಿಮತ ಪ್ರಯೋಜನತ್ವವು. ವಿರಕ್ತನ ಹತ್ತಿರ ನೀನು ವ್ಯಾಪಾರ ಮಾಡಿ ಜೀವಿಸು ಎಂದು ಮೊದಲಾದುದನ್ನು ಅಧಿಕಾರಿಗೆ ಇಷ್ಟವಲ್ಲದೇ ಇರುವುದನ್ನು ಬೋಧಿಸುವುದು. (6) ಅಶಕ್ಯ ಸಾಧನ ಪ್ರತಿಪಾದನವು. ಮುಮೂರ್ಷು ಆದವನಿಗೆ ಹಿಮವತ್ಪರ್ವತದಲ್ಲಿ ಮೃತಸಂಜೀವಿನೀ ಎಂಬೀ ಔಷಧವಿದೆ. ಅದನ್ನು ತಂದರೆ ಮರಣಭಯಪರಿಹಾರವಾಗುವುದು. ಎಂದು ಅಸಾಧ್ಯವಾದುದನ್ನು ಬೋಧಿಸುವುದು. (7) ಲಘೂಪಾಯೇ ಸತಿ ಗುರೂಪಾಯೋಪದೇಶನವು. ತೃಷಿತನಾದ ದಾಕ್ಷಿಣಾತ್ಯನಿಗೆ ತೃಷೆಪರಿಹಾರಕ್ಕೋಸ್ಕರ ಗಂಗಾತೀರಕ್ಕೆ ಹೋಗಿ ಅಲ್ಲಿ ಭಾವಿಯನ್ನಗೆದರೆ ನೀರು ಸಿಗುವುದು. ಅದರಿಂದ ತೃಷೆಯನ್ನು ಪರಿಹರಿಸಿಕೊ ಎಂಬಂತೆ ಸುಲಭವಾದ ಉಪಾಯವಿದ್ದರೂ ಅದನ್ನುಬಿಟ್ಟು ದುರ್ಲಭವಾದುದನ್ನು ಬೋಧಿಸುವಿಕೆಯು. ಇದೇ ಮೊದಲಾದವುಗಳು ಶಬ್ದದೋಷಗಳು. ಇಂತಿಹ ದೋಷರಹಿತವಾದ ವಾಕ್ಯವು ಆಗಮವು. ಪ್ರಥಮ ಮೊದಲಾದ ವಿಭಕ್ತ್ಯಂತ ವರ್ಣಗಳೇ ಪದವು. ಆಕಾಂಕ್ಷಾ, ಸನ್ನಿಧಿ, ಯೋಗ್ಯತೆಗಳುಳ್ಳ ಪದಗಳ ಸಮೂಹವೇ ವಾಕ್ಯವು. ತಥಾ ಚ ನಿರ್ದೋಷವಾಗಿ ಆಕಾಂಕ್ಷಾ ಸನ್ನಿಧಿ ಯೋಗ್ಯತಾವತ್ಪದ ಸಮೂಹವೇ ಆಗಮವೆಂದು ಪರ್ಯವಸಿತಾರ್ಥವು. ಇಲ್ಲಿ ಪದವೆನ್ನುವುದರಿಂದ ಹಿಂದೆ ಹೇಳಿದ ನಿರಭಿಧೇಯತ್ವಕ್ಕೂ ಆಕಾಂಕ್ಷಾಸನ್ನಿಧಿಯೆನ್ನುವುದರಿಂದ ನಿರನ್ವಯತ್ವಕ್ಕೂ, ಯೋಗ್ಯತೆ ಎನ್ನುವುದರಿಂದ ವಿಪರೀತ ಬೋಧಕತ್ವಕ್ಕೂ ನಿರಾಸವಾಗೋಣ, ಉಳಿದ ದೋಷನಿರಾಸ ಮಾಡುವುದಕ್ಕೆ ನಿರ್ದೋಷಪದವು. ಯದ್ಯಪಿ ವರ್ಣಗಳು ನಿತ್ಯವ್ಯಾಪ್ತಗಳಾಗಿ ಒಂದು ವರ್ಣದ ಪ್ರತೀತಿಕಾಲದಲ್ಲಿ ಬೇರೊಂದು ವರ್ಣವು ಪ್ರತೀತ ವಾಗುವುದಿಲ್ಲ. ಹೀಗೆ ಇರಲು ವರ್ಣಮೇಳನರೂಪ ಪದವಾಗಲೀ, ಪದಸಮುದಾಯರೂಪ ವಾಕ್ಯವಾಗಲೀ ಪ್ರತೀತವಾಗುವುದು ದುರ್ಲಭವು. ಆದರೂ ಮೊದಲು ಮೊದಲು ಕೇಳಿದ ವರ್ಣಾನುಭವದಿಂದ ಸಂಸ್ಕಾರವು ಹುಟ್ಟುತ್ತದೆ. ಆ ಸಂಸ್ಕಾರದಿಂದ ಕೂಡಿದ, ಇದಕ್ಕೆ ಇದು ಅರ್ಥವು, ಎನ್ನುವವಾಚ್ಯ ವಾಚಕಭಾವ ಗ್ರಹಣಜನ್ಯ ಸಂಸ್ಕಾರಾನುಗೃಹೀತವಾದ ಕೊನೆಯ ವರ್ಣ, ಸನ್ನಿಕೃಷ್ಟವಾದ ಶ್ರೋತ್ರವೇ ಅನೇಕ ವರ್ಣಗಳಲ್ಲಿಯೂ ಒಂದು ಪದವೆನ್ನುವ ಬುದ್ಧಿಯನ್ನು ಹುಟ್ಟಿಸುತ್ತದೆ. ಹಾಗೆ ಪೂರ್ವ ಪೂರ್ವ ಪದಾನುಭವದಿಂದ ಹುಟ್ಟಿದ ಸಂಸ್ಕಾರ ಸಹಕೃತವಾದ ಅಂತ್ಯಪದವನ್ನು ವಿಷಯೀಕರಿಸಿದ ಶ್ರೋತ್ರವು ಆಕಾಂಕ್ಷಾದ್ಯನುಸಾರದಿಂದ ಒಂದಾದ ವಾಕ್ಯವೆನ್ನುವ ಬುದ್ಧಿಯನ್ನು ಹುಟ್ಟಿಸುತ್ತದೆ. ಆದುದರಿಂದ ಒಟ್ಟಿಗೆ ಪ್ರತೀತಗಳಾಗದಿರುವವರ್ಣಗಳಿಗೂ ಪದಗಳಿಗೂ ಕೂಡ ಸಮುದಾಯವು ಉಪಪನ್ನವಾಗುವುದು,

ಈ ಆಗಮವೂ ಕೂಡ ಚೆನ್ನಾಗಿ ಕೇಳಿ ತಿಳಿಯಲ್ಪಟ್ಟುದಾಗಿ ಅರ್ಥಸ್ಮರಣೆಯಿಂದ ಕೂಡಿಕೊಂಡುಶಾಬ್ದನ್ಯಾಯಾನುಸಂಧಾನಸಹಿತವಾಗಿಯೇ ಅರ್ಥಬೋಧಕವಾಗುತ್ತದೆ. ವಿನಹ ಪ್ರತ್ಯಕ್ಷದಂತೆ ಸತ್ತಾ (ಸ್ಥಿತಿ) ಮಾತ್ರದಿಂದ ಬೋಧಕವಾಗುವುದಿಲ್ಲ. ಪದಕ್ಕೆ ಅರ್ಥದಲ್ಲಿ ಶಕ್ತಿ ಅಥವಾ ಸಮಯ. ಯದ್ವಾ ಸಂಕೇತವಿದೆ. ವೈದಿಕ ಸಂಕೇತವು ಈಶ್ವರನ ಇಚ್ಛೆಯು. ಉ— ಇಂದ್ರ ಶಬ್ದಕ್ಕೆ ಸ್ವರ್ಗಾಧಿಪತಿಯು, ಚಂದ್ರ ಶಬ್ದಕ್ಕೆ ನಕ್ಷತ್ರಾಧಿಪತಿಯು. ಆಧುನಿಕ ಸಂಕೇತವು ಪರಿಭಾಷೆಯು. **ಪರಿಭಾಷಾ** ಅಂದರೆ ಮಕ್ಕಳು ಮೊದಲಾದವರಿಗೆ ಹೆಸರಿಡುವ ತಂದೆ ಮೊದಲಾದವರ ಇಚ್ಛೆಯು. ಉ— ದೇವದತ್ತಶಬ್ದಕ್ಕೆ ಒಬ್ಬನು, ಯಜ್ಞದತ್ತ ಎನ್ನುವ ಹೆಸರಿಗೆ ಇನ್ನೋರ್ವನು, ಎಂದು ಮೊದಲಾಗಿ ಆಧುನಿಕ ಸಂಕೇತ ಸ್ಥಳದಲ್ಲಿಯೂ "ಏಕಾದಶೇಽಹ್ನಿ ಪಿತಾ ನಾಮ ಕುರ್ಯಾತ್"ಎನ್ನುವ ಶ್ರುತಿಯಿರುವುದರಿಂದ ಈಶ್ವರೇಚ್ಛೆಯೇ ಶಕ್ತಿಯು ಎಂದು ಕೆಲವು ತಾರ್ಕಿಕಾದಿಗಳು ಹೇಳುವರು. ಶಬ್ದಕ್ಕೆ ಸ್ವಾಭಾವಿಕವಾದ ವಾಚ್ಯವಾಚಕರೂಪವಾದ ಸಂಬಂಧವೇ ಶಕ್ತಿಯೆಂದುಆಚಾರ್ಯರು. ಶಕ್ಯವು ಅರ್ಥವು. ಶಕ್ತವು ಪದವು. ಈ ಶಕ್ತಿಗ್ರಹವು (ಶಕ್ತಿಯನ್ನು ತಿಳಿಯುವುದು.) ಇಂತಿಹ ಪ್ರಕೃತಿ ಪ್ರತ್ಯಯಗಳ ಸಂಬಂಧದಿಂದ ಈ ವಿಧ ಶಬ್ದವಾಗುವುದು. ಅದಕ್ಕೆ ಇಂತಿಹುದರ್ಥವೆಂದು ವ್ಯಾಕರಣದಿಂದಲೂ ಆಗುವುದು. ಸಾದೃಶ್ಯದಿಂದಲೂ, ಕೋಶದಿಂದಲೂ, ಆಪ್ತರಾದ ತಂದೆ ಗುರು ಮೊದಲಾದವರ ಉಪದೇಶದಿಂದಲೂ, ಪರಸ್ಪರ ಮಾತನ್ನಾಡುವುದನ್ನು ಕೇಳುವುದು ಮೊದಲಾದುವುಗಳಿಂದಲೂ ಆಗುವುದು. ದ್ರವ್ಯ ಮೊದಲಾದುದು ಧರ್ಮಿಯು, ಅಥವಾ ವ್ಯಕ್ತಿಯು. ಅದರಲ್ಲಿ ಜಾತಿಯು ಅಥವಾ ಅಸಾಧಾರಣ ಧರ್ಮವಿದೆ. ಆ ಜಾತಿ ವ್ಯಕ್ತಿಗಳಿಗೆ ಸಂಬಂಧವಿದೆ. ಉ= ಮನುಷ್ಯ ಮನುಷ್ಯತ್ವ, ತತ್ಸಂಬಂಧವು, ಇವುಗಳಲ್ಲಿ ಮನುಷ್ಯ ಮೊದಲಾದ ಶಬ್ದಕ್ಕೆ ಮನುಷ್ಯತ್ವ ಜಾತಿಯೇ ವಾಚ್ಯವು. (ಅರ್ಥವು) ಮನುಷ್ಯ ಮೊದಲಾದ ವ್ಯಕ್ತಿಗಳು ಲಕ್ಷ್ಯಗಳು, ಎಂದು ಭಾಟ್ಟಮತದವರು ಹೇಳುವರು. ಜಾತಿವಿಶಿಷ್ಟ ವ್ಯಕ್ತಿಗಳು ವಾಚ್ಯಗಳೆಂದು ವೈಶೇಷಿಕರು. ಕೆಲವುಕಡೆ ಜಾತಿಯು, ಕೆಲವುಕಡೆ ವ್ಯಕ್ತಿಯು ವಾಚ್ಯವೆಂದು ವೈಯಾಕರಣರು. ಕೆಲವುಕಡೆ ಜಾತಿಯು, ಕೆಲವುಕಡೆ ವ್ಯಕ್ತಿಯು, ಕೆಲವುಕಡೆ ಆಕೃತಿಯು (ಆಕಾರವು) ಎಂದು ನೈಯಾಯಿಕೈಕದೇಶಿಗಳು, ಅನ್ಯಾಪೋಹವೇ ವಾಚ್ಯವೆಂದು ಬೌದ್ಧರು.

ವ್ಯಕ್ತಿಗಳೇ ಶಬ್ದವಾಚ್ಯಗಳು. ತಾರ್ಕಿಕ ಮತದಂತೆ ಸಿದ್ಧಾಂತದಲ್ಲಿ ಎಲ್ಲಾ ವ್ಯಕ್ತಿಗಳಲ್ಲಿ ಒಂದೇ ಜಾತಿ ಇಲ್ಲದಿದ್ದರೂ ಅನಂತ ವ್ಯಕ್ತಿಯಲ್ಲಿ ಶಕ್ತಿಜ್ಞಾನವಾಗುವುದರಲ್ಲಿ ಸಾದೃಶ್ಯವು ನಿಮಿತ್ತವೆಂದು ಆಚಾರ್ಯರು ಉಪದೇಶಿಸುವರು. ಸಾಮಾನ್ಯವಾಗಿ ಅನ್ವಯಯೋಗ್ಯಗಳಾದ ಇತರ ಪದಾನ್ವಿತ ಸ್ವಾರ್ಥವೇ ಶಬ್ದದ ವಾಚ್ಯ (ಅರ್ಥವು) ಎಂಬು ತಾತ್ಪರ್ಯವು.

ಶಕ್ತಿಜ್ಞಾನ ಕಾಲದಲ್ಲಿಯೇ ಸಾಮಾನ್ಯವಾಗಿ ಅನ್ವಯಜ್ಞಾನವಾದರೂ ವಿಶೇಷವಾಗಿ ಇತರ ಪದಪ್ರಯೋಗಮಾಡಲು ವಿಶೇಷಾನ್ವಯಬೋಧವಾಗುವುದು. ಆದುದರಿಂದ ಅನ್ವಿತಾಭಿಧಾನವಾದವು ಆಚಾರ್ಯರ ಸಿದ್ಧಾಂತವು. ಭಟ್ಟಮತರೀತ್ಯಾ ಅಭಿಹಿತಾನ್ವಯವಾದವಲ್ಲ.

ಆಗಮವು ನಿತ್ಯಾನಿತ್ಯವೆಂದು (2) ವಿಧವು. ಅಪೌರುಷೇಯವಾದ ವೇದವು ನಿತ್ಯವು. ಪುರಾಣಾದಿಗಳು ಆಪ್ತೋಕ್ತ ವಾಕ್ಯಗಳೂ ಕೂಡ ಪೌರುಷೇಯಗಳು ಅನಿತ್ಯಗಳು. ಆಗಮ ಸ್ಥಳದಲ್ಲಿ ಒಂದು ವಾಕ್ಯವನ್ನು ಕೇಳಲು ಮೊದಲು ಆ ಶಬ್ದಜ್ಞಾನವಾಗುವುದು. ವೈದಿಕದಲ್ಲಿ ಶಿಕ್ಷಾದಿಗಳಿಂದಲೂ, ಲೌಕಿಕಗಳಲ್ಲಿ ಹಿಂದೆ ಹೇಳಿದ ವ್ಯಾಕರಣಾದಿಗಳಿಂದಲೂ, ಶಕ್ತಿಜ್ಞಾನ (ಶಬ್ದಾರ್ಥಜ್ಞಾನ) ವಾಗಿದ್ದರೆ ಈ ಶಬ್ದಕ್ಕೆ ಇದರ್ಥವೆಂದು (ಉಪಸ್ಥಿತಿ) ಶಕ್ತಿ ಸ್ಮರಣೆ ಬರುವುದು. ಆ ಮೇಲೆ ಇದು ಕಾರಣವು, ಇದು ಕ್ರಿಯೆಯು, ಇದು ಇದರ ಸಂಬಂಧಿಯಾದುದು. ಇವುಗಳ

ಸಂಬಂಧಕ್ಕೆ ಬಾಧವಿಲ್ಲ. ಆದುದರಿಂದ ಇವುಗಳು ಪರಸ್ಪರವಾಗಿ ಆಕಾಂಕ್ಷಾಯುಕ್ತಗಳು. ವಿಪರೀತ ಬೋಧಕವಾದ ದೋಷವಿಲ್ಲವೆಂದು ತಿಳಿಯೋಣ ಕರ್ತೃಕರ್ಮಕ್ರಿಯಾನ್ವಯ ಜ್ಞಾನ ವಾಗುವುದು. ಅದರಲ್ಲಿ ಮೊದಲು ಕೇಳಿ ತಿಳಿದ ವಾಕ್ಯವು (ಆಗಮವು) ಅನುಪ್ರಮಾಣವು, ಕೊನೆಗೆ ಹುಟ್ಟಿದ ಕರ್ತೃಕ್ರಿಯಾದಿ ಅನ್ವಯಜ್ಞಾನವು ಕೇವಲ ಪ್ರಮಾಣವು. ಪದಾರ್ಥ ಶಕ್ತಿ ಸ್ಮರಣೆಯು ವ್ಯಾಪಾರವು. ಆಕಾಂಕ್ಷಾ ಜ್ಞಾನಾದಿಗಳು ಸಹಕಾರಿಗಳು. ಹಿಂದೆ ಹೇಳಿದ ದೋಷ ಗಳಿದ್ದರೆ ಪೌರುಷೇಯ ವಾಕ್ಯವು ಆಭಾಸವಾಗುವುದು. ॥ ೧೩ ॥

ಪ್ರತ್ಯಕ್ಷಾನುಮಾನಾಗಮಗಳೆಂದು ಈ ಪ್ರಕಾರ ಮೂರೇ ಪ್ರಮಾಣಗಳೆಂದು ಆಚಾರ್ಯರು ಹೇಳಿದರು. ಇತರರು ಅರ್ಥಾಪತ್ತಿ ಉಪಮಾನ ಎಂಬುವ ಇನ್ನೆರಡು ಪ್ರಮಾಣಗಳನ್ನಂಗೀ ಕರಿಸುವರು. ಇವೆರಡು ಅನುಮಾನದಲ್ಲಿ ಸೇರಿರುವುದೆಂದು ತೋರಿಸುವರು.

**ಮೂ ॥ ಅರ್ಥಾಪತ್ತ್ಯುಪಮೇ ಅನುಮಾವಿಶೇಷಃ ॥ ೧೪ ॥**

ಅ ॥ ಅರ್ಥಾಪತ್ತಿ=ಅನುಪಪನ್ನವಾದ ಅರ್ಥದ ಪ್ರಮಿತಿಯು, ಉಪಮೇ=(ಉಪಮಾ ನವು) ಸಾದೃಶ್ಯ ಪ್ರಮೆಗೆ ಸಾಧನವಾದುದು ಇವೆರಡು, ಅನುಮಾವಿಶೇಷಃ=ಅನುಮಾನವಿಶೇ ಷವೇ ವಿನಹ ಪ್ರಮಾಣಾಂತರವಲ್ಲ.

ತಾ ॥ ಅರ್ಥಾಪತ್ತಿಯು ಶ್ರುತಾರ್ಥಾಪತ್ತಿ, ದೃಷ್ಟಾರ್ಥಾಪತ್ತಿ ಎಂದು ಎರಡು ವಿಧವು. **ಅರ್ಥಾಪತ್ತಿ** ಅಂದರೆ ಅರ್ಥದಿಂದ ಲಭಿಸಿದ ಜ್ಞಾನ, ಜೀವವಂತನಾದ ಚೈತ್ರನು ಮನೆಯಲ್ಲಿ ಇಲ್ಲ ವೆಂದು ಹೇಳಿದರೆ, ಅವನು ಹೊರಗೆ ಹೋಗಿರುವನೆಂದು ನಿಶ್ಚಯವಾಗುವುದು. ಇದು ಕೇಳಿ ತಿಳಕೊಂಡರೆ ಅದಕ್ಕೆ **ಶ್ರುತಾರ್ಥಾಪತ್ತಿ** ಎಂದು ಹೆಸರು. ಹಾಗಲ್ಲದೆ, ಮಿತ್ರನಾದ ಚೈತ್ರನು ಮನೆಯಲ್ಲಿ ಇಲ್ಲದಿರುವುದನ್ನು ನೋಡಿದ ದೇವದತ್ತನು, ಚೈತ್ರನು ಜೀವವಂತನಾಗಿದ್ದಾನೆ ಮನೆ ಯಲ್ಲಿ ಇಲ್ಲ, ಆದುದರಿಂದ ಅವನು ಹೊರಗೆ ಹೋಗಿರುವನು ಎಂದು ತಿಳಿಯುವನು, ಹೀಗೆ ತಿಳಿಯುವುದಕ್ಕೆ **ದೃಷ್ಟಾರ್ಥಾಪತ್ತಿ** ಎಂದು ಹೆಸರು. ಇವೆರಡು ಅನುಮಾನದಲ್ಲಿ ಅಡಗಿರುವವು. ಜೀವವಂತನಾದವನು ಮನೆಯಲ್ಲಿಯೋ ಅಥವಾ ಹೊರಗೋ ಇದ್ದೇ ಇರಬೇಕು. ಮನೆಯಲ್ಲಿ ಇಲ್ಲವಾದ ಪ್ರಯುಕ್ತ ಹೊರಗೆ ಇದ್ದಾನೆಂದು ನಿಶ್ಚಯವು. ಚೈತ್ರನು ಹೊರಗೆ ಇದ್ದಾನೆಂದು ಸಾಧ್ಯವು. ಜೀವವಂತನಾಗಿ ಗೃಹದಲ್ಲಿರದಿರುವಿಕೆಯು ಹೇತುವು. ಆದುದರಿಂದ ಅನುಮಾನ ದಂಗಗಳೆಲ್ಲವೂ ಅರ್ಥಾಪತ್ತಿಯಲ್ಲಿ ಇರುವುವು.

**ಉಪಮಾನ**ವೆಂದರೆ ಸಾದೃಶ್ಯಜ್ಞಾನಸಾಧನವು. ಜೀಬ್ರಾವೆಂಬುವ ಮೃಗವು ಕುದುರೆ ಯಂತೆ ಇರುವುದೆಂದು ತಿಳಿದರೆ ಆ ಜೀಭ್ರವನ್ನು ನೋಡಿದರೆ, ಸಾಮಾನ್ಯಲಕ್ಷಣಜ್ಞಾನದಿಂದ ಇದು ಜೀಬ್ರ ಎಂದು ತಿಳಿಯುವುದು. ಇದು ಕೂಡ ಅನುಮಾನಾಂತರವೇ ಹೊರತು ಬೇರೆ ಪ್ರಮಾಣವಲ್ಲ. ಉಪಮಾನವು ಮೂರು ವಿಧವಾಗಿ ಇರುವುದು. ಇದು ಟೀಕಾಗ್ರಂಥಗಳನ್ನು ನೋಡಿ ತಿಳಿಯಬೇಕು. ॥ ೧೪ ॥

ಭಟ್ಟಮತದವರು ಹೇಳುವ ಅಭಾವರೂಪ ಪ್ರಮಾಣಾಂತರಕ್ಕೆ ಅಂತರ್ಭಾವವನ್ನು ಹೇಳುವರು.

**ಮೂ ॥ ಅಭಾವೋಽನುಮಾ ಪ್ರತ್ಯಕ್ಷಂ ಚ ॥ ೧೫ ॥**

ಅ ॥ ಅಭಾವಃ=ಭಟ್ಟೋಕ್ತವಾದ ಅಭಾವಪ್ರಮಾಣವು, ಅನುಮಾ=ಅನುಮಾನವು, ಪ್ರತ್ಯಕ್ಷಂ ಚ=ಪ್ರತ್ಯಕ್ಷವೂ ಕೂಡ ಆಗುವುದು, (ಅನುಮಾನ ಪ್ರತ್ಯಕ್ಷಗಳಲ್ಲಿ ಸೇರುವುದು.) ಇದನ್ನು ಅನುಪಲಬ್ಧಿ ಎಂದೂ ಹೇಳುವರು.

ತಾ ॥ ಅಭಾವವನ್ನು ತಿಳಿಸುವ ಪ್ರಮಾಣವು ಅಭಾವವು. ಅದು ಮೂರು ವಿಧವು. (೧) ಪ್ರತ್ಯಕ್ಷಪ್ರತಿಯೋಗಿಕಾಭಾವವಿಷಯವಾದ ಪ್ರಮಾಣವು. ಉ—(ನಾಸ್ತ್ಯತ್ರ ಘಟಃ) ಇಲ್ಲಿ ಗಡಿಗೆ ಇಲ್ಲವೆನ್ನುವುದು. (೨) ಅನುಮಾನಿಕಾರ್ಥಪ್ರತಿಯೋಗಿಕಾಭಾವವಿಷಯವಾದ ಪ್ರಮಾಣವು. ಉ— (ರೂಪಜ್ಞಾನರಹಿತಸ್ಯ ನಾಸ್ತಿ ಚಕ್ಷುರಿತಿ,) ಬಿಳಿಪು ಮೊದಲಾದ ರೂಪಜ್ಞಾನವಿರದವಗೆ ಕಣ್ಣಿಲ್ಲವೆನ್ನುವುದು. (೩) ಆಗಮಾರ್ಥಪ್ರತಿಯೋಗಿಕಾಭಾವವಿಷಯವಾದ ಪ್ರಮಾಣವು. ಉ— ('ವೈಧೀ ಹಿಂಸಾ ನ ಪಾಪಸಾಧನಮಿತಿ') ವೇದೋಕ್ತವಾದ ಪಶುವಿನ ಹಿಂಸೆಯು ಪಾಪಕಾರಣವಾದುದಲ್ಲ ಎನ್ನುವುದು. ಈ ರೀತಿಯಾಗಿ ಭಾಟ್ಟರು ಹೇಳುವರು. ಇದರಲ್ಲಿ (1) ನೇಯದು ಪ್ರತ್ಯಕ್ಷಾನುಮಾನಗಳಲ್ಲಿ ಅಂತರ್ಭೂತವಾಗುತ್ತದೆ ಎಂದು ಈ ವಾಕ್ಯದಿಂದ ಹೇಳುವರು. (2)ನೇಯದು (ವಿಮತಃ) ಸಂದಿಗ್ಧನಾದವನು (ಚಕ್ಷೂರಹಿತಃ) ಕಣ್ಣಿಲ್ಲದಿರುವವನು. (ರೂಪಾಜ್ಞತ್ವಾತ್) ರೂಪಜ್ಞಾನವಿರದಿರುವುದರದೆಸೆಯಿಂದ (ಜಾತ್ಯಂಧವತ್) ಹುಟ್ಟುಕುರುಡನಂತೆ, ಎಂದನುಮಾನ ಪ್ರಯೋಗವು ಸಂಭಾವಿವಾತಗುವುದರದೆಸೆಯಿಂದ ಅನುಮಾನದಲ್ಲಿ ಸೇರುವುದು. (3) ನೇಯದು ಆಗಮದಲ್ಲಿ ಸೇರುವುದು. ಆದುದರಿಂದ ಹಿಂದೆ ಹೇಳಿದ ಮೂರುವಿಧ ಪ್ರಮಾಣವೆನ್ನುವ ವಿಭಾಗವು ಯುಕ್ತವಾದುದು. ಇಲ್ಲಿ ಎರಡನೇ ಮೂರನೆಯ ಅಭಾವ ಪ್ರಮಾಣಗಳು ಅನುಮಾನಾಗಮಗಳೆನ್ನುವುದರಲ್ಲಿ ವಾದಿಯ ವಿವಾದ ವಿರದಿರುವುದರಿಂದ ಅವುಗಳೀಗಂತರ್ಭಾವವನ್ನು ಹೇಳದೆ ಪ್ರಥಮದಕ್ಕೆನೇ ಅನುಮಾನ ಪ್ರತ್ಯಕ್ಷಗಳಲ್ಲಿ ಅಂತರ್ಭಾವವನ್ನು ಹೇಳಿದರು. "ಅರ್ಥಾಪತ್ತ್ಯುಪಮಾಭಾವಾಃ ಅನುಮಾವಿಶೇಷಾಃ" ಎಂದೊಂದೇ ವಾಕ್ಯದಿಂದ ಅಂತರ್ಭಾವವನ್ನು ಹೇಳದೆ ಎರಡು ವಾಕ್ಯಗಳಿಂದ ಅಂತರ್ಭಾವವನ್ನು ಹೇಳಿರುವುದು. ಅರ್ಥಾಪತ್ತ್ಯುಪಮಾನ ಇವುಗಳಿಗೆ ಅನುಮಾನದಲ್ಲಿಯೇ ಅಂತರ್ಭಾವವು. ಅಭಾವಕ್ಕೆ ಅನುಮಾನದಲ್ಲಿ ಪ್ರತ್ಯಕ್ಷದಲ್ಲಿ ಇವೆರಡರಲ್ಲಿ ಅಂತರ್ಭಾವವನ್ನು ಹೇಳುವುದಕ್ಕಾಗಿ ಇರುವುದು. ಅನುಮಾನದಿಂದ ಪ್ರತ್ಯಕ್ಷ ಪ್ರಬಲವಾದುದರಿಂದ "ಅಭಾವಃ ಪ್ರತ್ಯಕ್ಷಮನುಮಾ ಚ" ಎಂದು ಪ್ರತ್ಯಕ್ಷವನ್ನು ಮೊದಲು ಹೇಳುವುದನ್ನು ಬಿಟ್ಟು ಅನುಮಾನವನ್ನು ಮೊದಲು ಹೇಳಿರುವುದು. ಅಭಾವಕ್ಕೆ ಹೆಚ್ಚಾಗಿ ಅನುಮಾನದಲ್ಲಿ ಅಂತರ್ಭಾವವೆಂದು ಜ್ಞಾಪನೆಯನ್ನು ಮಾಡುವುದಕ್ಕಾಗಿ ಇರುತ್ತದೆ. ॥ ೧೫ ॥

ಈಗ ಹಿಂದೆಹೇಳಿದ ಅಭಾವಗ್ರಾಹಕಪ್ರಮಾಣಕ್ಕೆ ಎರಡರಲ್ಲಿ ಅಂತರ್ಭಾವವನ್ನು ತೋರಿಸುವರು.

**ಮೂ ॥ ಪರಾಮರ್ಶಾಪರಾಮರ್ಶವಿಶೇಷಾತ್ ॥ ೧೬ ॥**

ಅ ॥ ಪರಾಮರ್ಶ=ಸಂದೇಹ, ಅಪರಾಮರ್ಶ=ಅಸಂದೇಹ, ಈ ವಿಧವಾದ, ವಿಶೇಷಾತ್=ವಿಶೇಷದ ದೆಸೆಯಿಂದ, ಏತತ್ಪೂರ್ವಕವಾದುದರದೆಸೆಯಿಂದ ಅಭಾವಪ್ರಮಾಣವು ಅನುಮಾನದಲ್ಲಿಯೂ ಪ್ರತ್ಯಕ್ಷದಲ್ಲಿಯೂ ಅಂತರ್ಭೂತವಾಗುವುದು.

ತಾ ॥ ಇಲ್ಲಿ ಘಟಉಂಟೋ ಯಾ-ಇಲ್ಲವೋ? ಎಂದು ಸಂಶಯ ಪೂರ್ವಕವಾಗಿ ಘಟವು ಕಾಣದಿರಲು ಯೋಗ್ಯಾನುಪಲಬ್ಧಿರೂಪವಾದ ಅಭಾವಪ್ರಮಾಣವು ಅನುಮಾನದಲ್ಲಿ ಅಂತರ್ಭವಿಸುವುದು. ಗಡಿಗೆಯು ಇಲ್ಲಿಲ್ಲ, ಅದು ಕಾಣಲರ್ಹವಾಗಿ ಕಾಣದಿರುವುದರದೆಸೆಯಿಂದ, ಎಂದು ಅನುಮಾನ ಪ್ರಯೋಗ ಮಾಡಲು ಬರುವುದು. ಹಿಂದೆ ಹೇಳಿದ ಸಂದೇಹವಿರದೆ ಮೊದಲೇ ಇಲ್ಲಿ ಗಡಿಗೆ ಇಲ್ಲವೆಂದು ಶೀಘ್ರದಲ್ಲಿ ಅಭಾವಗ್ರಾಹಕ ಪ್ರಮಾಣವು ಪ್ರತ್ಯಕ್ಷದಲ್ಲಿ ಅಂತರ್ಭವಿಸುವುದು. ॥ ೧೬ ॥

ಈಗ ಬೇರೆ ವಾದಿಗಳು ಸಂಭವ ಪರಿಶೇಷಗಳು ಪ್ರತ್ಯಕ್ಷಾದಿ ಪ್ರಮಾಣತ್ರಯಗಳ ದೆಸೆಯಿಂದ ಪ್ರತ್ಯೇಕವಾದ ಪ್ರಮಾಣಗಳೆಂದು ಹೇಳುವರು. ಅವುಗಳಿಗೆ ಅಂತರ್ಭಾವವನ್ನು ಹೇಳುವರು.

**ಮೂ ॥ ಸಂಭವಪರಿಶೇಷಾವನುಮಾ ॥ ೧೭ ॥**

ಅ ॥ ಸಂಭವಪರಿಶೇಷೌ=ಸಂಭವಪ್ರಮಾಣವು, ಪರಿಶೇಷಪ್ರಮಾಣವು ಇವೆರಡು, ಅನುಮಾ=ಅನುಮಾನಗಳೇ, ಪ್ರತ್ಯೇಕ ಪ್ರಮಾಣಗಳಲ್ಲ, ಅನುಮಾನದಲ್ಲಿಯೇ ಅಂತರ್ಭೂತಗಳಾಗುವವು ಎಂದು ತಾತ್ಪರ್ಯವು.

ತಾ ॥ ಸ್ವಲ್ಪ ಪ್ರಮೇಗೆ ಕಾರಣವಾದ ಬಹುಲ ಜ್ಞಾನವು ಸಂಭವವು. ಉ— ನೂರು (ರೂಪಾಯಿ) ಉಂಟೆಂದು ತಿಳಿದರೆ ಐವತ್ತು (ರೂಪಾಯಿ) ಉಂಟೆನ್ನುವ ಪ್ರಮೆಯು ಹುಟ್ಟುವುದು. ತಿಳಿದ ಅನೇಕವಸ್ತುಗಳಲ್ಲಿ ಕೆಲವು ಇಂತಿಹುದೆಂದು ಅಥವಾ ಇಂತಿಹುದು ಅಲ್ಲವೆಂದು ತಿಳಿಯೋಣ ಉಳಿದುದು ಇಂತಿಹುದೆಂದು ಪ್ರಮೆಯು ಹುಟ್ಟುವುದು. ಇದು, (1) ವಿಧಿಮುಖವು, (2) ನಿಷೇಧಮುಖವು ಎಂದು ಎರಡು ವಿಧವು ಪರಿಶೇಷವು. (1) ಚೈತ್ರ ಮೈತ್ರರಲ್ಲಿ ಇವನು ಚೈತ್ರನೆಂದು ಹೇಳಿದರೆ ಉಳಿದವನು ಮೈತ್ರನೆಂದು ತಿಳಿಯುವುದು. ಇದು ಮೊದಲನೆಯ ಪರಿಶೇಷ ಪ್ರಮಾಣವು. ಅದೇ ಸ್ಥಳದಲ್ಲಿ ಈತನು ಚೈತ್ರನಲ್ಲವೆಂದು ತಿಳಿದರೆ ಹಾಗಾದರೆ ಈತನು ಮೈತ್ರನೆಂದು ತಿಳಿಯುವುದು ಇದು ಎರಡನೆಯ ಪರಿಶೇಷವು, ಎಂದು ಕೆಲವರು ಹೇಳುವರು. ಈ ಸಂಭವ ಪರಿಶೇಷಗಳಿಗೂ ಅನುಮಾನದಲ್ಲಿಯೇ ಅಂತರ್ಭಾವವು (ವಿಪ್ರತಿಪನ್ನಃ ಪಂಚಾಶದ್ವಾನ್, ಶತವತ್ವಾತ್, ಸಂಪ್ರತಿಪನ್ನವತ್) ಸಂದಿಗ್ಧನಾದವನು (50) (ರೂಪಾಯಿ) ಉಳ್ಳವನು, ನೂರು ರೂಪಾಯಿಗಳಿರುವುದರ ದೆಸೆಯಿಂದ, ನೂರುರೂಪಾಯಿವುಳ್ಳ ಬೇರೊಬ್ಬನಂತೆ, ಎಂದನುಮಾನ ಪ್ರಯೋಗಮಾಡಲು ಶಕ್ಯವಾಗುವುದು. ಆದುದರಿಂದ ಸಂಭವವು ಅನುಮಾನದಲ್ಲಿಯೇ ಸೇರುವುದು. (ವಿಮತೋ ಮೈತ್ರಃ ಚೈತ್ರಮೈತ್ರಯೋರನ್ಯತರತ್ವೇಸತಿ ಅಚೈತ್ರತ್ವಾತ್ ವ್ಯತಿರೇಕೇಣ ಮೈತ್ರವವತ್,) ಸಂದಿಗ್ಧನಾದವನು ಮೈತ್ರನಾಗಿರುತ್ತಾನೆ. ಚೈತ್ರ ಮೈತ್ರರಲ್ಲಿ ಒಬ್ಬನಾಗಿ ಚೈತ್ರನಲ್ಲದಿರುವುದರ ದೆಸೆಯಿಂದ, ವ್ಯತಿರೇಕ ವ್ಯಾಪ್ತಿಯಿಂದ ಮೈತ್ರನಂತೆ ಎಂದು ಎರಡಕ್ಕೂ ಅನುಮಾನ ಪ್ರಯೋಗವು ಶಕ್ಯವಾಗುವುದರಿಂದ ಅನುಮಾನದಲ್ಲಿಯೇ ಪರಿಶೇಷವು ಅಂತರ್ಭವಿಸುವುದು. ಇತರರು ಹೇಳುವ ಎಲ್ಲಾ ಪ್ರಮಾಣಗಳಿಗೂ ಹಿಂದೆ ಹೇಳಿದಂತೆ ಅಂತರ್ಭಾವವು ಉಪಪನ್ನವಾದುದರದ್ದೆಸೆಯಿಂದ, ಪ್ರತ್ಯಕ್ಷಾನುಮಾನಾಗಮಗಳೆನ್ನುವ ಮೂರೇ ಪ್ರಮಾಣಗಳೆಂದು ಸಿದ್ಧವಾಗುತ್ತದೆ. ಇಲ್ಲಿ "ಅಭಾವಸಂಭವಪರಿಶೇಷಾ ಅನುಮಾ" ಎಂದು ಒಂದೇ ವಾಕ್ಯದಲ್ಲಿ ಹೇಳದೆ ವಾದಿವಿವಾದವಿರುವುದು, ಇಲ್ಲದಿರುವುದು ಈ ಎರಡರ ದೆಸೆಯಿಂದ ಪ್ರತ್ಯೇಕವಾಗಿ ಎರಡು ವಾಕ್ಯದಿಂದ ನಿರೂಪಿಸಿರುವರು. ॥ ೧೭ ॥

ಈಗ ಹಿಂದೆ ಹೇಳಿದ ಅನುಮಾನ ವಿಶೇಷವಾದ ತರ್ಕಸ್ವರೂಪವನ್ನು ವಿವರಿಸುವರು.

**ಮೂ ॥ ಆತ್ಮಾನ್ಯೋನ್ಯಾಶ್ರಯ ಚಕ್ರಕಾನವಸ್ಥಾಕಲ್ಪನಾಗೌರವ ಶ್ರುತದೃಷ್ಟಹಾನಾದಯೋದೂಷಣಾನುಮಾ ॥ ೧೮ ॥**

ಅ ॥ (1) ಆತ್ಮಾಶ್ರಯ, (2) ಅನ್ಯೋನ್ಯಾಶ್ರಯ, (3) ಚಕ್ರಕಾಶ್ರಯ, (4) ಅನವಸ್ಥಾ, (5) ಕಲ್ಪನಾಗೌರವ, (6) ಶ್ರುತಹಾನ, (7) ದೃಷ್ಟಹಾನ, (8) ಅಶ್ರುತಕಲ್ಪನ, (9) ಅದೃಷ್ಟಕಲ್ಪನ, ಇವುಗಳೊಂಭತ್ತು ಕೂಡ, ದೂಷಣಾನುಮಾ=ಪರನ ಪಕ್ಷವನ್ನು ದೂಷಿ

ಸತರ್ಕ್ಕ ಅನುಮಾನವು. ಅಂತೂ ಅನುಮಾನದಲ್ಲಿ ಅಂತರ್ಭವಿಸುವುವು— ಅಂದರೆ ಇವುಗಳ ಪ್ರಸಂಜನೆಯು (ಆಪಾದನೆಯು) ಅನುಮಾನವೆಂದು ತಾತ್ಪರ್ಯವು.

ತಾ ॥ ಪ್ರತಿವಾದಿಯು ವ್ಯಾಪ್ಯವನ್ನು ಒಪ್ಪಿಕೊಂಡರೆ (ಅದರವ್ಯಾಪಕವನ್ನಂಗೀಕರಿಸದಿದ್ದರೆ) ಆತನನ್ನು ಕುರಿತು, ಅನಿಷ್ಟವಾದ ವ್ಯಾಪಕವನ್ನು (ನೀನಂಗೀಕರಿಸಬೇಕೆಂದು) ಜ್ಞಾಪಿಸುವುದು **ತರ್ಕವು**, ಈ ಅನಿಷ್ಟವು (1) ಪ್ರಾಮಾಣಿಕಹಾನವು (ಪ್ರಮಾಣಸಿದ್ಧವಾದುದನ್ನು ಬಿಡೋಣ) (2) ಅಪ್ರಾಮಾಣಿಕಕಲ್ಪನೆಯು (ಪ್ರಮಾಣವಿರದಿರುವುದನ್ನುಕಲ್ಪಿಸೋಣವು) ಎಂದೆರಡು ವಿಧವು. ಆ ಅನಿಷ್ಟವೇ ಪುನಃ (1) ಆತ್ಮಾಶ್ರಯತ್ವವು. (2) ಅನ್ಯೋನ್ಯಾಶ್ರಯತ್ವವು. (3) ಚಕ್ರಕಾಶ್ರಯತ್ವವು. (4) ಅನವಸ್ಥೆಯು. (5) ಕೇವಲಾನಿಷ್ಟವೆಂದು ಐದು ವಿಧವು. ಇವುಗಳಲ್ಲಿ ಮೊದಲನೆಯ ನಾಲ್ಕು ಅಪ್ರಾಮಾಣಿಕ ಕಲ್ಪನಾತ್ಮಕವು. ಆತ್ಮಾಶ್ರಯತ್ವಾದಿಗಳು ಎಲ್ಲಿಯೂ ಪ್ರಮಾಣ ಪ್ರಸಿದ್ಧಗಳಾಗಿಲ್ಲ. ಐದನೆಯದು, (1) ಪ್ರಾಮಾಣಿಕಹಾನ (2) ಅಪ್ರಾಮಾಣಿಕ ಕಲ್ಪನೋಭಯಾತ್ಮಕವು, ಅದರಲ್ಲಿಯೂ ಮೊದಲನೆಯದು (1) ಶ್ರುತಹಾನವು. (ವೇದಪ್ರಸಿದ್ಧವಾದುದನ್ನು ಬಿಡೋಣವು.) (2) ದೃಷ್ಟಹಾನವು. (ಪ್ರತ್ಯಕ್ಷಸಿದ್ಧವಾದುದನ್ನು ಬಿಡೋಣವು.) ಎಂದೆರಡುವಿಧವು. ಎರಡನೆಯ ಅಪ್ರಾಮಾಣಿಕ ಕಲ್ಪನೆಯು (1) ಅಶ್ರುತ ಕಲ್ಪನೆಯು (ವೇದದಲ್ಲಿ ಹೇಳದಿರುವುದನ್ನು ಕಲ್ಪಿಸುವುದು), (2) ಅದೃಷ್ಟ ಕಲ್ಪನೆಯು (ಪ್ರತ್ಯಕ್ಷವಾಗದಿರುವುದನ್ನು ಕಲ್ಪಿಸುವುದು), ಎಂದು ಎರಡು ವಿಧವು. ಈ ಅಶ್ರುತಾದೃಷ್ಟಕಲ್ಪನವೇ ಕಲ್ಪನೆಗಳನೇಕವಾದರೆ ಕಲ್ಪನಾಗೌರವವೆಂದಾಗುವುದು. ಪ್ರಮಾಣವಿಲ್ಲದ ಒಂದೊಂದು ಅಬದ್ಧವನ್ನು ಕಲ್ಪಿಸಿದರೆ ಅಶ್ರುತಕಲ್ಪನೆಯು ಅದೃಷ್ಟಕಲ್ಪನೆಯೆಂದಾಗುವುದು. "ಶೃಂಗಾಗ್ರೇ ಶಶಕಸ್ಯ ಭಾನಿ ಗಣಯನ್ನಂಧೋಽಕ್ಷಿ ವಂಧ್ಯಾಸುತಃ" ಮೊಲದ ಕೋಡಿನಲ್ಲಿ ಹಗಲು ನಕ್ಷತ್ರಗಳನ್ನು ಎಣಿಸುವ ಕುರುಡನಾದ ಬಂಜೆಯ ಮಗನೆನ್ನುವಂತೆ ಅನೇಕವಾದ ಅಬದ್ಧವನ್ನು ಕಲ್ಪಿಸಿದರೆ ಕಲ್ಪನಾಗೌರವವು. ಈವಿಧವಾಗಿ ಅನಿಷ್ಟವೈದುವಿಧವಾದುದರಿಂದ ಆ ಅನಿಷ್ಟಾಪಾದನ ರೂಪವಾದ ತರ್ಕವು ಐದು ವಿಧವಾಗಿರುತ್ತದೆ. ಈ ತರ್ಕಕ್ಕೆ (1) ವ್ಯಾಪ್ತಿಯು, (2) ತರ್ಕಾಪ್ರತಿಘಾತವು (ತರ್ಕಾಪ್ರತಿಹತಿಯು), (3) ವಿಪರ್ಯಯ ಪರ್ಯವಸಾನವು, (4) ಪ್ರಸಂಜನೀಯಸ್ಯ ಅನಿಷ್ಟತ್ವವು, (5) ಪ್ರತಿಪಕ್ಷಾಸಾಧಕತ್ವವು (ಅಥವಾ ಅನನುಬಂಧಿತ್ವವು) ಎಂದು ಐದು ಅಂಗಗಳು. "ವ್ಯಾಪ್ತಿಸ್ತರ್ಕಾಪ್ರತಿಹತಿರವಸಾನಂ ವಿಪರ್ಯಯೇ । ಅನಿಷ್ಟಾನನುಕೂಲತ್ವೇ ಇತಿ ತರ್ಕಾಂಗಪಂಚಕಂ ॥ ಅಂಗಪಂಚಕಸಂಪನ್ನಸ್ತತ್ವಜ್ಞಾನಾಯ ಕಲ್ಪತೇ । ಅಂಗಾನಾಮುತವೈಕಲ್ಯೇ ತರ್ಕಸ್ಯಾಭಾಸತಾ ಭವೇತ್" ॥ ಎನ್ನುವ ವಚನಾನುಸಾರವಾಗಿ ಪ್ರಸಂಜಕ (ಆಪಾದಕ)ಕ್ಕೆ ಪ್ರಸಂಜನೀಯ (ಆಪಾದ್ಯ) ದಿಂದ ವ್ಯಾಪ್ತಿಯು, ಪ್ರತಿ ತರ್ಕದ ವಿರೋಧವಿರದಿರೋಣವು, ಆಪಾದಕಾಪಾದ್ಯಗಳ ವಿಪರ್ಯಯ(ಅಭಾವ)ದಲ್ಲಿ ಪರ್ಯವಸಾನವು. ಆಪಾದ್ಯವುಪ್ರತಿವಾದಿಗನಿಷ್ಟವಾ(ಇಷ್ಟವಲ್ಲದಾ)ಗಿ ಇರುವುದು. ಆಪಾದ್ಯಕ್ಕೆ ಪ್ರತಿವಾದಿಗೆ ಅನನುಕೂಲತ್ವವು (ಆಪಾದ್ಯವು ಅನುಕೂಲವಲ್ಲದಿರುವುದು) ಇವೆಲ್ಲಾ ಉದಾಹರಣಗಳಿಂದ ಸ್ಪಷ್ಟಗಳಾಗುವವು. ಈ ಅಂಗಗಳಿದ್ದರೆ ಆ ತರ್ಕವು ತತ್ವಜ್ಞಾನವನ್ನು ಹುಟ್ಟಿಸುವುದು. ಇಲ್ಲವಾದರೆ ಆ ತರ್ಕವು ಆಭಾಸವಾಗುವುದು. (ದುಷ್ಟವಾಗುವುದು.)

ಹಿಂದೆ ಹೇಳಿದ ಆತ್ಮಾಶ್ರಯತ್ವಾದಿ ಪ್ರಸಂಗಗಳು ಕೆಲವು ಕಡೆ ಉತ್ಪತ್ತಿಯಲ್ಲಿ, ಕೆಲವು ಕಡೆ ಜ್ಞಪ್ತಿಯಲ್ಲಿಯೂ (ಜ್ಞಾನದಲ್ಲಿಯೂ) ಉಪಾಧಿಖಂಡನದಲ್ಲಿ ಹೇಳಿದಂತೆ, ಕೆಲವುಕಡೆ ಪ್ರವೃತ್ತಿಯಲ್ಲಿಯೂ ಪ್ರಯೋಗಿಸಿಕೊಳ್ಳಲ್ಪಡುತ್ತವೆ. "ತಸ್ಯೈವೋತ್ಪತ್ತಿಜ್ಞಪ್ತ್ಯರ್ಥಂ ತದುತ್ಪತ್ತಿಜ್ಞಪ್ತ್ಯಪೇಕ್ಷಾಯಾಂ ಸ್ವಾಪೇಕ್ಷಯಾ ಪೂರ್ವಭಾವಿತ್ವಮಾತ್ಮಾಶ್ರಯಃ" ಅದರ ಉತ್ಪತ್ತಿ ಯಾ ಜ್ಞಾನಕ್ಕೋ

ಸ್ಕರ ಅದರುತ್ಪತ್ತ್ಯಾದಿಯನ್ನಪೇಕ್ಷಿಸಿದರೆ ತನ್ನಿಂದ ಮೊದಲು ತಾನಿರಬೇಕಾಗಿರುವುದು **ಆತ್ಮಾಶ್ರಯವು.** ಉದಾ--- ಪಟವು ತಂತುಗಳಿಂದ ಹುಟ್ಟುವುದೆಂದರೆ ಇದು ಪ್ರಾಮಾಣಿಕವು. ಪಟವು ಅದೇ ಪಟದಿಂದ ಹುಟ್ಟುವುದೆಂದರೆ ಆತ್ಮಾಶ್ರಯವು. ಸರ್ವತ್ರ ಕಾರಣವು ಕಾರ್ಯಕ್ಕಿಂತ ಪೂರ್ವದಲ್ಲಿ ದೃಷ್ಟವಾಗಿರುವುದು. ಕಾರಣಗಳಾದ ತಂತುಗಳು ಕಾರ್ಯವಾದ ಪಟಕ್ಕಿಂತ ಪೂರ್ವದಲ್ಲಿ ಇರುವುವು. ಆದುದರಿಂದ ಪಟಕ್ಕೆ ತಂತುಗಳು ಕಾರಣವೆಂದು ಹೇಳಲಾಗುವುದು. ಪಟಕ್ಕೆ ಪಟವೇ ಕಾರಣವೆಂದರೆ, ಕಾರ್ಯವಾದ ಪಟವು, ತಾನು ಕಾರ್ಯವಾಗುವುದಕ್ಕಿಂತ ಪೂರ್ವದಲ್ಲಿಯೇ ಕಾರಣರೂಪದಿಂದ ಇರಬೇಕಾಗುವುದು. ಒಂದೇವಸ್ತು ಪರಸ್ಪರ ಕಾರಣಕಾರ್ಯರೂಪಗಳಾಗಿ ದೃಷ್ಟವಲ್ಲ. ಆದುದರಿಂದ ಹೀಗೆ ಹೇಳಿದರೆ ಆತ್ಮಾಶ್ರಯವು. (2) ಹಿಂದೆ ಹೇಳಿದ ಪಟಕ್ಕೆ ಪಟವೇ ಕಾರಣವಾಗುವುದಾದರೆ ಪೂರ್ವಭಾವಿಯಾಗಲೀ ಎನ್ನುವ ತರ್ಕಕ್ಕೆ ವಿರೋಧಿಯಾಗಿ (ಯದಿ ಪಟಸ್ಯ ಪಟ ಏವ ಕಾರಣಂ ನ ಸ್ಯಾತ್, ತರ್ಹಿ ಇದಂ ಆಪಾದ್ಯತೇ) ಪಟಕ್ಕೆ ಪಟವೇ ಕಾರಣವಾಗದಿದ್ದರೆ— ಹಾಗಾದರೆ ಇಂತಿಹ ಅನಿಷ್ಟವು ಆರೋಪಿಸಲ್ಪಡುವುದು, ಎಂದು ಪ್ರತಿತರ್ಕವಿಲ್ಲದಿರುವುದರಿಂದ ಪ್ರತಿತರ್ಕಪ್ರತಿಘಾತವೇ 'ಪ್ರತಿತರ್ಕಾಪ್ರತಿಹತಿ'ಯೆನ್ನುವ ತರ್ಕದೆರಡನೆಯಂಗವಿದೆ. (4) ತನ್ನ ಅಭಾವದ ಕಾಲದಲ್ಲಿ ತಾನಿರುವುದೆನ್ನುವುದೇ ಆಪಾದ್ಯವಾದ ಪೂರ್ವಭಾವಿತ್ವವು. ಇದು ಅಪ್ರಾಮಾಣಿಕವಾದುದು. ಮತ್ತು ತಾನಿರದಿರುವಾಗ ತಾನಿರುವುದೆನ್ನುವುದು ವ್ಯಾಹತವು (ವಿರುದ್ಧ ವಚನವು). ಆದುದರಿಂದ ಇದು ಪರನಿಗೆ ಇಷ್ಟವಲ್ಲ. ಆದುದರಿಂದಲೇ ಅನಿಷ್ಟತ್ವರೂಪವಾದ ನಾಲ್ಕನೆಯ ತರ್ಕಾಂಗವಿದು. (5) "ನಚೈವಮೇವಾಪಾದಕಂ ಪ್ರತ್ಯಾಪಾದಯಿತುಂ ಶಕ್ಯತೇ" ಈ ರೀತಿಯಾಗಿ ತರ್ಕವನ್ನು ಹೇಳುವವನನ್ನು ಕುರಿತು ವ್ಯಾಹತವಾದುದರಿಂದಲೇ ನನಗನುಕೂಲವಾಗಿದೆಂದು ಹೇಳಲು ಅಶಕ್ಯವಾದುದರಿಂದ ಅನನುಕೂಲತ್ವರೂಪವಾದ ಐದನೆಯ ತರ್ಕಾಂಗವಿದೆ. (3) "ಸ ಚೇತ್ ಪೂರ್ವಭಾವಿತ್ವಮಂಗೀಕ್ರಿಯತೇ ತದಾ ನ ಸ್ವಸ್ಯ ಸ್ವಯಂ ಕಾರಣಂ". ಪಟಕ್ಕೆ ಪಟವು ಪೂರ್ವಭಾವಿಯಲ್ಲವು. ಆದುದರಿಂದ ತನಗೆ ತಾನು ಕಾರಣವು ಆಗುವುದಿಲ್ಲವೆಂದು ವಿಪರ್ಯಯ ಪರ್ಯವಸಾನ ರೂಪವಾದ ಮೂರನೆಯ ತರ್ಕಾಂಗವಿದೆ. ಇದು ಉತ್ಪತ್ತಿಯಲ್ಲಿ ಆತ್ಮಾಶ್ರಯವು. ಇದೇ ರೀತಿಯಾಗಿ ಜ್ಞಪ್ತಿಯ (ಜ್ಞಾನದ)ಲ್ಲಿಯೂ ಅದರ ಜ್ಞಾನವನ್ನು ಕುರಿತು ಅದರ ಜ್ಞಾನವೇ ಕಾರಣವೆಂದರೆ ಹಿಂದೆ ಹೇಳಿದಂತೆ ಆತ್ಮಾಶ್ರಯತ್ವವನ್ನು ತಿಳಿಯಬಹುದು. ಮುಂದೆ ಹೇಳುವ ಅನ್ಯೋನ್ಯಾಶ್ರಯತ್ವ ಮೊದಲಾದುವುಗಳಲ್ಲಿಯೂ ಇದೇ ರೀತಿಯಾಗಿ ವ್ಯಾಪ್ತ್ಯಾದಿ ತರ್ಕಾಂಗ ಪಂಚಕವನ್ನು ತಿಳಿಯಬೇಕು.

"ಯದುತ್ಪತ್ತ್ಯಾದ್ಯಧೀನಂ ಯದುತ್ಪತ್ತ್ಯಾದಿ ತದುತ್ಪತ್ತ್ಯರ್ಥಂ ತದುತ್ಪತ್ತ್ಯಪೇಕ್ಷಾಯಾಂ ಅನ್ಯೋನ್ಯಾಶ್ರಯತ್ವ ಪ್ರಸಂಗಃ" ಎರಡು ಪದಾರ್ಥಗಳಲ್ಲಿ ಇದಕ್ಕದು ಅದಕ್ಕಿದು ಕಾರಣವೆಂದು ಅನ್ಯೋನ್ಯಕಾರಣತ್ವವನ್ನಂಗೀಕರಿಸಿದರೆ ಅನ್ಯೋನ್ಯಪೂರ್ವಭಾವಿತ್ವ ರೂಪವಾದ **ಅನ್ಯೋನ್ಯಾಶ್ರಯತ್ವವು** ಆಪಾದ್ಯವು. (3) "ಬಹೂನಾಂ ಚಕ್ರವತ್ಕಾರ್ಯಕಾರಣಭಾವಾಭ್ಯುಪಗಮೋ ಪೂರ್ವಭಾವಿತ್ವಲಕ್ಷಣಂ **ಚಕ್ರಕಾಶ್ರಯತ್ವಂ.**" ಬಹು ಪದಾರ್ಥಗಳಲ್ಲಿ ಇದಕ್ಕದು ಅದಕ್ಕಿನ್ನೊಂದು ಇನ್ನೊಂದಕ್ಕೆ ಮತ್ತೊಂದು ಮತ್ತೊಂದಕ್ಕೆ ಪುನಃ ಮೊದಲನೆಯದು. ಎಂದೀವಿಧವಾಗಿ ಚಕ್ರಾಕಾರದಂತೆ ಅಂಗೀಕರಿಸಿದರೆ ಪರಂಪರಯಾ ಪೂರ್ವಭಾವಿತ್ವರೂಪವಾದ ಚಕ್ರಕಾಶ್ರಯತ್ವವು. (4) "ಉತ್ಪತ್ತ್ಯಾದಾವನ್ಯೋತ್ಪತ್ತ್ಯಾದ್ಯಪೇಕ್ಷಾಯಾ ಅಪರ್ಯವಸಾನೇ ಮೂಲಕ್ಷಯಾಪರನಾಮಕ ಪ್ರತೀತಕಾರ್ಯವಿಲೋಪಲಕ್ಷಣಾ **ಽನವಸ್ಥಾ.**" ಲೆಖ್ಖವಿಲ್ಲದ ಮತ್ತು ಪ್ರಮಾಣಸಿದ್ಧವಲ್ಲದ ಕಾರಣ ಪರಂಪರೆಗಳನ್ನು ಕಲ್ಪನೆಮಾಡಿದರೂ ಮೂಲಕಾರಣ ಲಭ್ಯವಾಗದೆ ಇರೋಣದರಿಂದ

ಕಾರ್ಯಸಿದ್ಧಿಯಾಗದೆ ಇರುವಿಕೆಯು **ಅನವಸ್ಥೆಯು.** ಉ — ಪ್ರಮಾಣಸಿದ್ಧವಲ್ಲದ ವಿಷಯದಲ್ಲಿ (A) ಎಂಬುವುದು (B)ಯಿಂದ ಹುಟ್ಟಿತು. (B) ಎಂಬುವುದು (C)ಯಿಂದ ಹುಟ್ಟಿತು. ಹೀಗೆ ಕಾರಣ ಪರಂಪರೆಗಳನ್ನು ಕಲ್ಪಿಸಿದರೂ ಮೂಲಕಾರಣ ಸಿಗದಿರುವುದರಿಂದ ಪ್ರತೀತ ಕಾರ್ಯ (A) ಎಂಬುವುದೆ ಅಲಭ್ಯವಾಗುವುದು. ಪ್ರಮಾಣಸಿದ್ಧ ವಿಷಯದಲ್ಲಿ ಅನವಸ್ಥೆಯು ದೋಷವಲ್ಲ. ಉ— ಬೀಜದಿಂದ ವೃಕ್ಷ ವೃಕ್ಷದಿಂದ ಬೀಜ, ಈ ಕಾರ್ಯಕಾರಣ ಪರಂಪರೆಗಳು.

**ಶ್ರುತಹಾನಕ್ಕೆ** ಉ— "ಯದೀಶ್ವರೋ ನ ಸರ್ವಜ್ಞಃ ತರ್ಹಿ ನ ಜಗತ್ಕರ್ತಾ ಸ್ಯಾತ್" ಯಾವಾಗ ಈಶ್ವರನು ಸರ್ವಜ್ಞನಲ್ಲವೋ ಹಾಗಾದರೆ ಜಗತ್ಕರ್ತನಾಗದಿರಲಿ ಎಂಬುವ ಆಪಾದನೆಯು. ಇಲ್ಲಿ ಈಶ್ವರನಿಗೆ "ಯಃ ಸರ್ವಜ್ಞಃ ಸರ್ವವಿತ್" ಎನ್ನುವ ವೇದದಿಂದ ಸರ್ವಜ್ಞತ್ವವು. "ಯತೋವಾ ಇಮಾನಿ ಭೂತಾನಿ ಜಾಯಂತೇ" ಎನ್ನುವುದರಿಂದ ಸರ್ವಕರ್ತೃತ್ವವೂ ಕೂಡ ಶ್ರುತವಾಗಿದೆ. ಅದರಲ್ಲಿ ಸರ್ವಜ್ಞತ್ವಹಾನವನ್ನಂಗೀಕರಿಸಿದರೆ ಸರ್ವಕರ್ತೃತ್ವಹಾನಾಪಾದನವು ಮಾಡಲ್ಪಡುವುದು. **ದೃಷ್ಟಹಾನಕ್ಕೆ** ಉ— ಪರ್ವತದಲ್ಲಿ ಧೂಮವು ಇದೆ ಎಂದು ಒಪ್ಪಿ ಅಗ್ನಿಯಿಲ್ಲವೆಂದು ಹೇಳಿದರೆ ಧೂಮವು ಇಲ್ಲದೆ ಹೋಗಲಿ ಎಂದು ಆಪಾದನೆ ಮಾಡುವುದು. **ಅಶ್ರುತಕಲ್ಪನೆಗೆ** ಉ — ಈಶ್ವರನು ದುಃಖಿಯಲ್ಲವೆಂದು ಶ್ರುತ್ಯಾಧಾರದಿಂದ ಒಪ್ಪಿ. ಜೀವೇಶ್ವರರಿಗೆ ಅಭೇದವನ್ನು ಹೇಳಿದರೆ ಈಶ್ವರನು ದುಃಖಿಯಾಗಲಿ, ಎಂದು ಆಪಾದನೆಯು. **ಅದೃಷ್ಟಕಲ್ಪನೆಗೆ** ಉ — ಒಂದೇ ನೀರನ್ನು ಇಬ್ಬರುಕುಡಿದಲ್ಲಿ ಒಬ್ಬನು ತನ್ನನ್ನು ಆ ನೀರು ಸುಡುತ್ತದೆ ಎಂದು ಹೇಳಿದರೆ ಆ ನೀರು ಇತರರನ್ನು ಸುಡಬೇಕು ಎಂದು ಆಪಾದನೆಯು. ಕುಡಿದ ನೀರು ಸುಡುವುದು ಇತರರಿಗೆ ದೃಷ್ಟವಲ್ಲದ ಕಾರಣ ಇದಕ್ಕೆ ಅದೃಷ್ಟ ಕಲ್ಪನೆಯೆಂದು ಹೆಸರು.

(1) ಸ್ವಪಕ್ಷಸಾಧನಾನುಮಾನವು (2) ಪರಪಕ್ಷದೂಷಣಾನುಮಾನವೆಂದೆರಡು ವಿಧವು ಅನುಮಾನವು. (1) ಪರ್ವತವು ವಹ್ನಿಯುಳ್ಳದುದು, ಧೂಮವು ಇರುವದರದೆಸೆಯಿಂದ ಎಂದು ಒಂದನೇದ್ದು. ಎರಡನೆಯದು ಎರಡುವಿಧವು. (1)"ನಾಯಂ ನಿರಗ್ನಿಕಃ ಅನಿಧೂಮವತ್ವಾತ್" ಇದು ವಹ್ನಿಯಿಲ್ಲದ್ದಲ್ಲ. ಧೂಮವಿರದುದಲ್ಲವಾದುದರದ್ದೆಸೆಯಿಂದ ಎಂದು ಒಂದು ವಿಧವು. (2) ಧೂಮವನ್ನು ಒಪ್ಪಿ ಅಗ್ನಿಯನ್ನು ಒಡಂಬಡದಿದ್ದರೆ ಅಗ್ನ್ಯಭಾವದಿಂದ ತನಗೆ ಇಷ್ಟವಾದ ಧೂಮದ ಅಭಾವವಾಗುವುದೆಂದು ಆಪಾದನೆಮಾಡುವುದು. ಅನಿಷ್ಟಪ್ರಸಂಗರೂಪವಾದ ಪರಪಕ್ಷದೂಷಣಾನುಮಾನವು. ॥ ೧೮ ॥

ವಾಕ್ಯತಾತ್ಪರ್ಯಜ್ಞಾಪಕಗಳಾದ ಉಪಕ್ರಮಾದಿ ಪ್ರಮಾಣಗಳಿಗೆ ಅಂತರ್ಭಾವವನ್ನು ಹೇಳುವರು.

**ಮೂ ॥ ಉಪಕ್ರಮೋಪಸಂಹಾರ ತದೈಕರೂಪ್ಯಾಭ್ಯಾಸಾಪೂರ್ವತಾಫಲಾ-ರ್ಥವಾದಾಶ್ಚ ॥ ೧೯ ॥**

**ಅ** ಚ ಶಬ್ದದಿಂದ ಹಿಂದೆ ಹೇಳಿದ 'ಅನುಮಾ' ಎಂಬುವುದಕ್ಕೆ ಅನುಕರ್ಷವು. (ಅನ್ವಯಕ್ಕೆ ಕೂಡಿಸಿಕೊಳ್ಳುವುದು.) ಉಪಕ್ರಮ=ಪ್ರಕರಣದ ಆದಿಭಾಗವು, ಉಪಸಂಹಾರ=ಪ್ರಕರಣದ ಅಂತ್ಯಭಾಗವು, ತದೈಕರೂಪ್ಯ=ಉಪಕ್ರಮ ಮತ್ತು ಉಪಸಂಹಾರಗಳಿಗೆ ಒಂದೇ ಅರ್ಥ ವಿರೋಣವು, ಅಭ್ಯಾಸ=ಒಂದೇ ಅರ್ಥದ ಪದವನ್ನು ಮತ್ತು ಮತ್ತು ಹೇಳೋಣವು, ಅಪೂರ್ವತಾ=ಹೆಚ್ಚಾಗಿ ಇತರ ಪ್ರಮಾಣಗಳಿಂದ ತಿಳಿಯದ ಅರ್ಥವಿರುವಿಕೆಯು, ಫಲ=ಫಲವು, ಅರ್ಥವಾದ=ಸ್ತುತಿ, ನಿಂದಾ, ಪರಕೃತಿ, ಪುರಾಕಲ್ಪವೆಂಬ ಅರ್ಥವಾದವು, ಇವುಗಳು, ಅನುಮಾ= ಅನುಮಾನಗಳು. (ಅನುಮಾನದಲ್ಲಿ ಅಂತಭೂ೯ತಗಳಾಗುವವು.)

ತಾ ॥ ಗುಣಸಂಕೀರ್ತನೆಯನ್ನು ಮಾಡುವುದು. (1) ಸ್ತುತಿಯು. ಉ-'ವಾಯುರ್ವೈ ಕ್ಷೇಪಿಷ್ಠಾ ದೇವತಾ' ಇತ್ಯಾದಿಯು. (2) ನಿಂದಾ ಎಂದರೆ ದೋಷವನ್ನು ಹೇಳುವುದು. ಉ— 'ಮೋಘಮನ್ನಂ ವಿಂದತೇ ಅಪ್ರಚೇತಾಃ' ಇತ್ಯಾದಿಯು. (3) ಪರಕೃತಿಯು ಅಂದರೆ ಕರ್ತೃ ನಾಮನಿರ್ದೇಶಪೂರ್ವಕವಾಗಿ ಹಿಂದಿನವರ ಕಥೆಯನ್ನು ಹೇಳುವುದು. ಅಥವಾ ಏಕಕರ್ತೃಕ ವಾದ ಕಥೆಯು. ಉ— 'ಪ್ರಜಾಪತಿರಕಾಮಯತ ಪ್ರಜಾಃ ಸೃಜೇಯೇತಿ' ಇತ್ಯಾದಿಯು. (4) ಸಾಮಾನ್ಯವಾಗಿ ಹಿಂದಿನವರ ಕಥೆಯನ್ನು ಹೇಳುವುದು ಪುರಾಕಲ್ಪವು, ಅಥವಾ ಬಹುಕರ್ತೃ ಕವಾದ ಕಥೆಯು. ಉ— 'ದೇವಾ ಅಬ್ರುವನ್ನುಪ ನ ಆವರ್ತಸ್ವ' ಇತ್ಯಾದಿಯು. ಈ ಉಪ ಕ್ರಮಾದಿಗಳು ವೇದಾದಿ ಪ್ರಮಾಣವಾಕ್ಯಗಳ ತಾತ್ಪರ್ಯವನ್ನು ತಿಳಿಸುವುದರಿಂದ ಅನುಮಾನ ಗಳಾಗುತ್ತವೆ. ಅನುಮಾನಕ್ರಮವು ಹೇಗೆಂದರೆ:— "ಈ ವಾಕ್ಯವು ಇಂತಹ ಅರ್ಥದಲ್ಲಿ ತಾತ್ಪ ರ್ಯವುಳ್ಳದಾಗಿರುತ್ತದೆ. ಇಂತಹ ಉಪಕ್ರಮಾದಿ ಯುಕ್ತವಾದುದರಿಂದ, ನಿಶ್ಚಿತವಾದ ಬೇರೆ ವಾಕ್ಯದಂತೆ" ಈ ಉಪಕ್ರಮಾದಿಗಳಿಗೆ ಪ್ರತ್ಯೇಕಗಳಾದ ಉದಾಹರಣೆಗಳು ಬ್ರಹ್ಮಸೂತ್ರ ಭಾಷ್ಯ, ಅನುವ್ಯಾಖ್ಯಾನಾದಿಗಳಲ್ಲಿ ವಿದಿತಗಳಾಗುವುವು. ಈ ಉಪಕ್ರಮಾದಿಗಳು ಅನುಮಾನ ಪ್ರಮಾಣದಲ್ಲಿ ಅಂತರ್ಭೂತಗಳಾಗುವುದರಿಂದ ಪ್ರಮಾಣಗಳು ಮೂರೇ ಎಂದು ಹೇಳಿದುದು ಅಸಂಗತವಲ್ಲ. ॥ ೧೯ ॥

ಇವುಗಳು ಅನುಮಾನದಲ್ಲಿ ಅಂತರ್ಭೂತಗಳೆಂದು ಹೇಳಿ ಅವುಗಳಿಗೆ "ಉಪಕ್ರಮೋ ಪಸಂಹಾರಾವಭ್ಯಾಸೋಽಪೂರ್ವತಾಫಲಂ । ಅರ್ಥವಾದೋಪಪತ್ತೀ ಚ ಲಿಂಗಂ ತಾತ್ಪರ್ಯ ನಿರ್ಣಯೇ ॥" ಎಂಬ ಸ್ಮೃತಿಯಲ್ಲಿ ಉಪಪತ್ತಿಯೆಂದು ಪ್ರತ್ಯೇಕೋಕ್ತಿಗೆ ಸಮಾಧಾನವನ್ನು ಹೇಳುವರು.

**ಮೂ ॥ ಉಪಪತ್ತಿವಿಶೇಷಾಃ ॥ ೨೦ ॥**

ಅ ॥ (ಹಿಂದೆ ಹೇಳಿದ ಉಪಕ್ರಮಾದಿಗಳು) ಉಪಪತ್ತಿವಿಶೇಷಾಃ=ಅನುಮಾನವಿಶೇಷ ಗಳು.

ತಾ ॥ ಪಾಂಡವರು ಕೌರವರಲ್ಲೇ ಸೇರಿದವರಾದ್ದರಿಂದ ಕೌರವಶಬ್ದದಿಂದ ಅವರಿಗೂ ಗ್ರಹಣವಾದರೂ 'ಸಂತಾನಬೀಜಂ ಕುರುಪಾಂಡವಾನಾಂ' ಎಂದು ಭಾಗವತ ದಶಮಸ್ಕಂಧದಲ್ಲಿ ಸಾಮಾನ್ಯವಿಶೇಷಭಾವದಿಂದ ಪಾಂಡವರಿಗೆ ಕೌರವರಿಂದ ಪ್ರತ್ಯೇಕೋಕ್ತಿಯು ಇರುತ್ತದೆ. ಕೌರವರೆಂದರೆ ಸಾಮಾನ್ಯ ಶಬ್ದವಾದುದರಿಂದ, ಕುರುವಂಶದವರು. ಎಲ್ಲರೂ ಆಗುವರು. ಪಾಂಡವರೆಂದರೆ ವಿಶೇಷಶಬ್ದವಾದುದರಿಂದ ಪಾಂಡುಪುತ್ರರು ಮಾತ್ರವೇ ಆಗುವರು. ಸಾಕ್ಷಾತ್ ಘಟಕಲಶಗಳಂತೆ ನಿರ್ವಿಶೇಷವಾದ ಅಭೇದವಿಲ್ಲದಿರುವುದರಿಂದ ಕೌರವಪದದಿಂದ ಪಾಂಡವಾತಿ ರಿಕ್ತ ಕೌರವರಿಗೆ ಹೇಗೆ ಗ್ರಹಣವಾಗುವುದೋ, ಹಾಗೆಯೇ ಉಪಕ್ರಮಾದಿಗಳು ಉಪಪತ್ತಿವಿಶೇಷ ಗಳು. ಉಪಪತ್ತಿಯು ಸಾಮಾನ್ಯವು. ಆದಕಾರಣ ಸಾಮಾನ್ಯವಿಶೇಷಭಾವದಿಂದ ಪ್ರತ್ಯೇ ಕೋಕ್ತಿಯು ಕೂಡುತ್ತದೆ. ॥ ೨೦ ॥

ಈ ರೀತಿಯಾಗಿ ಪ್ರತ್ಯೇಕೋಕ್ತಿಗೆ ಸಾಮಾನ್ಯವಿಶೇಷಭಾವದಿಂದ ನಿರ್ವಾಹವನ್ನು ಮಾಡಿ ಉಪಕ್ರಮಾದಿಗಳಿಗೆ ಅನುಮಾನದಲ್ಲಿ ಅಂತರ್ಭಾವವನ್ನು ಹೇಳುವುದಕ್ಕೆ ಕಾರಣವನ್ನು ಹೇಳು ವರು.

**ಮೂ ॥ ತ ಏವ ಸೋಪಪತ್ತಯೋ ಲಿಂಗಾನಿ ॥ ೨೧ ॥**

ಅ ॥ ತ ಏವ=ಪೂರ್ವೋಕ್ತ ಉಪಕ್ರಮಾದಿಗಳೇ, ಸೋಪಪತ್ತಯಃ=ಉಪಪತ್ತಿಯಿಂದ ಕೂಡಿದವುಗಳು. ಲಿಂಗಾನಿ=ವ್ಯಾಪಕಪ್ರಮಿತಿಯನ್ನು ಹುಟ್ಟಿಸುವವುಗಳು. (ಎಂದು ಹಿಂದೆ ಹೇಳಿದ ಸ್ಮೃತಿಯಲ್ಲಿ ಹೇಳಲ್ಪಟ್ಟಿವೆ.)

ತಾ ॥ 'ಉಪಕ್ರಮೋಪಸಂಹಾರೌ' ಎಂಬ ಸ್ಮೃತಿಯಲ್ಲಿ ಉಪಪತ್ತಿಗೆ ಲಿಂಗತ್ವವು ಹೇಗೆ ಹೇಳಲ್ಪಡುತ್ತದೋ, ಹಾಗೆಯೇ ಇಲ್ಲಿ ಉಪಕ್ರಮಾದಿಗಳಿಗೂ ಲಿಂಗತ್ವವು ಹೇಳಲ್ಪಡುತ್ತದೆ. ಆದುದರಿಂದ ಹಿಂದಿನ ಸ್ಮೃತಿಯಲ್ಲಿ ಸಾಮಾನ್ಯವಿಶೇಷಭಾವದಿಂದ ಉಪಪತ್ತಿಯ ಪೃಥಗುಕ್ತಿಯು ಎಂದು ವ್ಯಾಖ್ಯಾನವನ್ನು ಮಾಡಿ ಅನುಮಾನದಲ್ಲಂತರ್ಭಾವವನ್ನಂಗೀಕರಿಸಿ ಪ್ರಮಾಣವು ಮೂರೇ ಎಂದು ಹೇಳಿದ್ದು ಯುಕ್ತವಾಗುತ್ತದೆ. ಅಥವಾ ಹೇಗೆ ಉಪಪತ್ತಿಯು ಲಿಂಗವೋ, ವ್ಯಾಪ್ತಿಯ ಬಲದಿಂದ ಅರ್ಥಾಂತರವನ್ನು ಹುಟ್ಟಿಸುವುದೋ, ಅದರಂತೆ ಎಲ್ಲಿ ಯಾವುದು ಉಪಕ್ರಮಿಸಲ್ಪಡುವುದೋ ಅಲ್ಲಿ ಅದು ಅಪವಾದವಿಲ್ಲದುದಾದರೆ, ಅಂದರೆ ಮೊದಲು ಹೇಳಿದ್ದಕ್ಕೆ ವಿರೋಧೋಕ್ತಿಯು ಇಲ್ಲವಾದರೆ ಅದರ ತಾತ್ಪರ್ಯವಿಷಯವು ಎಂಬ ವ್ಯಾಪ್ತಿಬಲದಿಂದ ಉಪಕ್ರಮಾದಿಗಳು ವ್ಯಾಪಕಾರ್ಥಬೋಧಕಗಳಾಗುವವು. ಆದಕಾರಣ ಉಪಕ್ರಮಾದಿಗಳಿಗೆ ಅನುಮಾನದಲ್ಲಿ ಅಂತರ್ಭಾವವು ಯುಕ್ತವೆಂದು 'ತ ಏವ' ಎಂಬ ವಾಕ್ಯದಲ್ಲಿ ಹೇಳುವರು. ಈ ರೀತಿಯಾಗಿ ವ್ಯಾಪ್ತ್ಯಪೇಕ್ಷೆಯಿಂದ ಅರ್ಥಾಂತರಬೋಧಕಗಳಾದ ಉಪಕ್ರಮಾದಿಗಳಿಗೆ ವ್ಯಾಪ್ತ್ಯಪೇಕ್ಷೆಯಿಲ್ಲದೆ ಬೋಧಕವಾದ ಆಗಮದಲ್ಲಿ ಅಂತರ್ಭಾವವನ್ನು ಕೆಲವರು ಹೇಳುವುದು ಯುಕ್ತವಾಗಲಾರದೆಂದು ಸೂಚಿತವಾಗುವುದು. ಆದರೆ ಈ ಉಪಕ್ರಮಾದಿಗಳಿಗೆ ಆಗಮಾರ್ಥಬೋಧಕತ್ವವು ಉಂಟೆಂದು ಜ್ಞಾಪಿಸುವುದಕ್ಕಾಗಿ ಹಿಂದಿನ ವಾಕ್ಯದಲ್ಲಿ ಕೂಡಿಸದೆ ಪ್ರತ್ಯೇಕವಾಗಿ ಇವುಗಳನ್ನು ಹೇಳಿರುವರು. ॥ ೨೧ ॥

ಇದೇ ರೀತಿಯಾಗಿ ಸಮಾಖ್ಯಾದಿಪ್ರಮಾಣಗಳಿಗೂ ಅಂತರ್ಭಾವವನ್ನು ಹೇಳುವರು.

**ಮೂ ॥ ಸಮಾಖ್ಯಾ ವಾಕ್ಯಪ್ರಕರಣಸ್ಥಾನಾನಿ ಚ ॥ ಲಿಂಗವಿಶೇಷಾಃ ॥ ೨೨ ॥**

ಅ ॥ ಚ ಶಬ್ದದಿಂದ ಹಿಂದಿನ ಮೂಲದಲ್ಲಿರುವ ಅನುಮಾ ಶಬ್ದವನ್ನು ಇಲ್ಲಿ ಗ್ರಹಣ ಮಾಡಬೇಕೆಂದು ಇಲ್ಲಿ ಸೂಚಿಸುವರು. ಸಮಾಖ್ಯಾವಾಕ್ಯಪ್ರಕರಣಸ್ಥಾನಾನಿ=(1) ಸಮಾಖ್ಯೆಯು, (2) ವಾಕ್ಯವು, (3) ಪ್ರಕರಣವು, (4) ಸ್ಥಾನವು, ಇವುಗಳು ಲಿಂಗವಿಶೇಷಾಃ= ಲಿಂಗ (ಅನುಮಾನದ) ವಿಶೇಷಗಳು.

ತಾ ॥ (1) **ಸಮಾಖ್ಯೆಯು** ಬೇರೆಕಡೆಯಲ್ಲಿ ನಿಶ್ಚಯಿಸಿದ ಸಮಾನಾರ್ಥವುಳ್ಳ ವಾಕ್ಯವು. ಇದು ಅರ್ಥದಿಂದ ಶಬ್ದದಿಂದ ಎಂದು ಎರಡು ವಿಧವಾದುದು. (2) **ವಾಕ್ಯವು**(a) ಆಕಾಂಕ್ಷೆ, (b) ಯೋಗ್ಯತಾ, (c) ಸನ್ನಿಧಿಯುಳ್ಳ ಪದಗಳ ಸಮೂಹವು, (a) ಯಾವ ಪದಕ್ಕೆ ಯಾವ ಪದವನ್ನು ಬಿಟ್ಟದ್ದರೆ ಅನ್ವಯಬೋಧವಾಗುವುದಿಲ್ಲವೋ ಆ ಪದಗಳ ಪರಸ್ಪರ ಸಂಬಂಧವೇ (ಕೂಡುವಿಕೆಯು) ಆಕಾಂಕ್ಷೆಯು. ಉ— "ಪುಸ್ತಕವನ್ನು ತಕೊಂಡು ಬಾ" ಎಂಬಲ್ಲಿ ಒಂದೊಂದೇ ಪದವನ್ನು ಹೇಳಿದ್ದಲ್ಲಿ ಅನ್ವಯಾರ್ಥವು ಆಗುವುದಿಲ್ಲ. ಇವುಗಳಿಗೆ ಇರುವ ಪರಸ್ಪರ ಸಂಬಂಧವೇ ಆಕಾಂಕ್ಷೆಯು. (d) ವಾಕ್ಯದಲ್ಲಿರುವ ಪದಗಳಿಗೆ ಪ್ರಮಾಣ ವಿರೋಧವಿಲ್ಲದೆ ಇರುವಿಕೆಯು **ಯೋಗ್ಯತೆಯು.** ಉ- ಚೈತ್ರನು ಕಣ್ಣಿನಿಂದ ಕೇಳಿದನು, ಕಿವಿಯಿಂದ ನೋಡಿದನು. ಇದು ಯೋಗ್ಯತೆಯಿಲ್ಲದ ವಾಕ್ಯವು. (c) ವಾಕ್ಯದಲ್ಲಿರುವ ಪದಗಳನ್ನು ಅರ್ಥವಾಗುವಂತೆ ವಿಲಂಬವಿಲ್ಲದೆ ಉಚ್ಚರಿಸೋಣದರಿಂದ ಪದಗಳಿಗೆ ಇರುವ **ಸಾಮೀಪ್ಯಕ್ಕೆ ಸನ್ನಿಧಿ**ಯೆಂದು ಹೆಸರು. ಉ— "ದನವನ್ನು ಹೊಡೆಕೊಂಡು ಬಾ" ಎಂಬ ಪದಗಳನ್ನು ಮಧ್ಯೇ ಬಹಳಹೊತ್ತು ಬಿಟ್ಟು ಹೇಳಿದರೆ ಆ ಪದ

ಗಳಿಗೆ ಸನ್ನಿಧಿಯು ಇರುವುದಿಲ್ಲ. (3) ಯಾವುದಾದರೊಂದು ದೃಷ್ಟಿಯಿಂದ ಒಂದೇ ಅರ್ಥವನ್ನು ಬೋಧಿಸುವ ವಾಕ್ಯ ಸಮುದಾಯವು **ಪ್ರಕರಣವು.** (4) **ಸ್ಥಾನ**ವೆಂದರೆ ಅಂತಹ ಪ್ರಕರಣ ಸಮುದಾಯವು. ಇವುಗಳು ಅನುಮಾ=ಅನುಮಾನದಲ್ಲಿ ಅಂತರ್ಭೂತಗಳಾಗುವವು. ॥ ೨೨ ॥

**ಮೂ ॥ ವ್ಯಾಪ್ತಿರುಪಪತ್ತಿಮೂಲಂ ॥ ೨೩ ॥**

**ಅ ॥** ವ್ಯಾಪ್ತಿಃ=ವ್ಯಾಪ್ತಿಜ್ಞಾನವು, ಉಪಪತ್ತಿಮೂಲಂ=ಅನುಮಿತಿಯನ್ನು ಹುಟ್ಟಿಸುವುದರಲ್ಲಿ ಕಾರಣವಾಗುವುದು.

**ತಾ ॥** ಕಿವಿಯು ಚನ್ನಾಗಿರುವವನಿಗೆ ಶಬ್ದವು ಕೇಳಿಸುವುದು. ಕಿವುಡನಿಗೆ ಕೇಳಿಸುವುದಿಲ್ಲ. ಅದರಂತೆ ವ್ಯಾಪ್ತಿಜ್ಞಾನವಿರುವವನಿಗೆ ಮಾತ್ರ ವ್ಯಾಪ್ಯಜ್ಞಾನದಿಂದ ವ್ಯಾಪಕಜ್ಞಾನವು ಹುಟ್ಟುವುದು. ಇಲ್ಲದವನಿಗೆ ವ್ಯಾಪ್ಯಜ್ಞಾನವಿದ್ದರೂ ವ್ಯಾಪಕಜ್ಞಾನವು ಉಂಟಾಗಲಾರದು. ಅನುಮಾನವೂ ಉಂಟಾಗುವುದಿಲ್ಲ. ಸಾಧನವಿದ್ದ (ಹೇತುವಿದ್ದ) ಸ್ಥಳದಲ್ಲೆಲ್ಲಾ ಸಾಧ್ಯವಿರಬೇಕು. ಮತ್ತು ಸಾಧ್ಯವಿರದ ಸ್ಥಳದಲ್ಲಿ ಸಾಧನವಿರಬಾರದು. ಇಂತಹ ಸಂಬಂಧವೇ 'ವ್ಯಾಪ್ತಿ' ಎಂದೆನಿಸುವುದು. ಇದಕ್ಕೇನೇ **ಅವಿನಾಭಾವ**ವೆಂದೂ **ಅವ್ಯಭಿಚರಿತ ಸಂಬಂಧ**ವೆಂದೂ ಹೆಸರು.॥೨೩॥

ಅನುಮಾನವು (1) ಸ್ವಾರ್ಥ (2) ಪರಾರ್ಥವೆಂದೆರಡು ವಿಧವು. (1) ತಾನೇ ಅನುಮಿತಿಯನ್ನು ಮಾಡಿಕೊಳ್ಳುವುದು **ಸ್ವಾರ್ಥವು.** (2) ಪರೋಪದೇಶದಿಂದ ಅನುಮಿತಿಯನ್ನು ಮಾಡಿಕೊಳ್ಳುವುದು **ಪರಾರ್ಥವು.** ಇದರ ಅವಾಂತರ ವಾಕ್ಯಗಳು ಅವಯವಗಳೆನಿಸುವವು. ಈ ಅವಯವಗಳು (1)ಜಿಜ್ಞಾಸಾ (2)ಸಂಶಯ (3)ಶಕ್ಯಪ್ರಾಪ್ತಿ (4)ಪ್ರಯೋಜನ (5)ಸಂಶಯವ್ಯುದಾಸ (6) ಪ್ರತಿಜ್ಞಾ (7) ಹೇತು (8) ಉದಾಹರಣ (9) ಉಪನಯ (10) ನಿಗಮನಗಳು ಈ ಪ್ರಕಾರ 10 ವಿಧವೆಂದು ಜರನ್ನೈಯಾಯಿಕರು ಹೇಳುವರು. ಪ್ರತಿಜ್ಞಾದಿಗಳು ಐದೇ ಎಂದು ನವೀನನೈಯಾಯಿಕರು ಹೇಳುವರು. (1) ಪ್ರತಿಜ್ಞಾ ಹೇತು ಉದಾಹರಣಗಳು ಅಥವಾ ಉದಾಹರಣ ಉಪನಯ ನಿಗಮನಗಳು ಅಂತೂ ಮೂರೇ ಎಂದು ಮೀಮಾಂಸಕರೂ, ಉದಾಹರಣೋಪನಯಗಳು ಎರಡೇ ಎಂದು ಬೌದ್ಧರೂ ಹೇಳುತ್ತಾರೆ. ಇವುಗಳಲ್ಲಿ ಮೂರನೆಯದಾದ ಮೀಮಾಂಸಕರ ಪಕ್ಷವನ್ನು ಬಿಟ್ಟು ಉಳಿದ ಪಕ್ಷಗಳನ್ನು ಪ್ರಕೃತದೂಷಿಸುತ್ತಾರೆ.

**ಮೂ ॥ ಸಾ ಪ್ರತಿಜ್ಞಾಹೇತುದೃಷ್ಟಾಂತರೂಪಾ ॥ ೨೪ ॥**

**ಅ ॥** ಸಾ=ಉಪಪತ್ತಿಯನ್ನು ತಿಳಿಸುವ ವಾಕ್ಯವು (ಪರೋಪದೇಶವು), ಪ್ರತಿಜ್ಞಾ ಹೇತು ದೃಷ್ಟಾಂತರೂಪಾ (1) ಪ್ರತಿಜ್ಞಾ=ಪರೋಪದೇಶಕ್ಕೋಸ್ಕರ ಪಕ್ಷವಚನವು, (2) ಹೇತು= ಹೇತುವು, (3) ದೃಷ್ಟಾಂತ=ದೃಷ್ಟಾಂತವನ್ನು ಪ್ರತಿಪಾದಿಸುವ ಉದಾಹರಣೆಯು, ಇವುಗಳೇ ರೂಪಾ=ಸ್ವರೂಪವಾಗುಳ್ಳದ್ದು. ಇವುಗಳಿಗೆ ಕ್ರಮದಿಂದ ಉದಾಹರಣೆಯು. (1) ಪರ್ವತವು ಬೆಂಕಿಯುಳ್ಳದ್ದು, (2) ಹೊಗೆಯಿರುವುದರಿಂದ, (3) ಎಲ್ಲಿ ಹೊಗೆಯುಂಟೋ ಅಲ್ಲಿ ಬೆಂಕಿಯು ಇರುತ್ತದೆ, ಅಡಿಗೆ ಮನೆಯಂತೆ.

**ತಾ ॥** (1) ಸಾಧರ್ಮ್ಯದೃಷ್ಟಾಂತವು (2)ವೈಧರ್ಮ್ಯದೃಷ್ಟಾಂತವು ಎಂದು ದೃಷ್ಟಾಂತವು ಎರಡು ವಿಧವು. (1) ಅನ್ವಯವ್ಯಾಪ್ತಿಗ್ರಹಣ ಸ್ಥಲವು **ಸಾಧರ್ಮ್ಯದೃಷ್ಟಾಂತವು.** ಧೂಮಾನುಮಾನಕ್ಕೆ ಅಡಿಗೆ ಮನೆಯು. ವ್ಯತಿರೇಕವ್ಯಾಪ್ತಿಗ್ರಹಣಸ್ಥಳವು **ವೈಧರ್ಮ್ಯದೃಷ್ಟಾಂತವು.** ಅದೇಅನುಮಾನಕ್ಕೆ ಕೊಳವು. ದೃಷ್ಟಾಂತವು ಎರಡು ವಿಧವಾದುದರಿಂದ ಉದಾಹರಣೆಯೂ

(1) ಸಾಧರ್ಮ್ಯೋದಾಹರಣೆ (2) ವೈಧರ್ಮ್ಯೋದಾಹರಣೆ ಎಂದು ಎರಡು ವಿಧವು. ಉದಾ:— (1) ಯಾವುದು ಹೊಗೆಯುಳ್ಳದ್ದೋ ಅದು ಬೆಂಕಿಯುಳ್ಳದ್ದು ಅಡಿಗೆಮನೆಯಂತೆ. (2) ಯಾವುದುಬೆಂಕಿಯುಳ್ಳದ್ದಲ್ಲವೋ ಅದುಹೊಗೆಯುಳ್ಳದ್ದಲ್ಲ ಕೊಳದಂತೆ. ಈ ವಿಧವಾಗಿ ಮೂರೇ ಅವಯವಗಳಿಂದ ಪರಬೋಧನೆಯು ಬೋಧಿಸಲು ಶಕ್ಯವಾದುದರಿಂದ ಹಿಂದೆಹೇಳಿದ 10, 5, ಅವಯವಗಳೆನ್ನುವ ನಿಯಮಗಳು ಅಸಂಗತಗಳು.

ಅಥವಾ ದೃಷ್ಟಾಂತಪದಕ್ಕೆ ಕೇವಲ ದೃಷ್ಟಾಂತವೆಂದು ಅರ್ಥವು. ಹಿಂದಿನಂತೆ ಉದಾಹರಣೆಯೆಂದು ಅರ್ಥವಲ್ಲವು. ಸಾ=ಉಪಪತ್ತಿಪ್ರತಿಪಾದಕವಾಕ್ಯವು ಪ್ರತಿಜ್ಞಾಹೇತುರೂಪವಾದುದು. ಮತ್ತು ದೃಷ್ಟಾಂತರೂಪವಾದುದು. ಪರ್ವತವು ವಹ್ನಿಮತ್ತಾಗಿದೆ, ಧೂಮವತ್ವದ ದೆಸೆಯಿಂದ ಮಹಾನಸದಂತೆ ಎಂಬ ಉಪದೇಶವಾಕ್ಯವು ಹಿಂದೆ ಹೇಳಿದ ಮೂರುಅವಯವಗಳೆನ್ನುವ ಪಕ್ಷಕ್ಕಿಂತ ಸ್ವಲ್ಪಕಡಿಮೆಯಾದ ಪಕ್ಷಾಂತರವು. ವ್ಯಾಪ್ತಿಯನ್ನು ಹೇಳದೆ ಇರುವುದರಿಂದ ವಿವಾದದಿಂದಲೇ ವ್ಯಾಪ್ತ್ಯಾದಿಗಳು ಬೋಧಿತಗಳಾಗುತ್ತವೆ. ಇದರಂತೆಯೇ ಉದಾಹರಣೋಪನಯನಿಗಮನಗಳಿಂದಾಗಲೀ ಉದಾಹರಣೋಪನಯ ಇವೆರಡರಿಂದಾಗಲೀ ಪರಬೋಧನೆಯು ಶಕ್ಯವಾಗುವುದು. ದೃಷ್ಟಾಂತದ ಸಾದೃಶ್ಯದಿಂದ ಹೇತುವನ್ನು ಪಕ್ಷದಲ್ಲಿ ಉಪಸಂಹಾರಮಾಡುವುದು **ಉಪನಯವು**. ಅದು ಎರಡುಪ್ರಕಾರ ಈ ಪರ್ವತವು ಮಹಾನಸದಂತೆ ದೂಮವುಳ್ಳದ್ದಾಗಿದೆ ಎಂದು **ಸಾಧರ್ಮ್ಯೋಪನಯನವು**. ಈ ಪರ್ವತವು ಕೊಳದಂತೆ ಧೂಮಾಭಾವವುಳ್ಳದ್ದಲ್ಲವೆಂದು **ವೈಧರ್ಮ್ಯೋಪನಯವು**. ಹೇತುವನ್ನು ಮೊದಲುಗೊಂಡು ಪಕ್ಷದಲ್ಲಿ ಸಾಧ್ಯೋಪಸಂಹಾರವು **ನಿಗಮನವು** ಈ ಪರ್ವತವು ಧೂಮವತ್ತಾದುದರಿಂದ ವಹ್ನಿಮತ್ತು ಆಗಿರುತ್ತದೆ ಎಂದು.

ಜರನ್ನೈಯಾಯಿಕರು ಹೇಳುವ ಅವಯವಗಳಲ್ಲಿ- (1)ಜಿಜ್ಞಾಸಾ ಅಂದರೆ ಜ್ಞಾನೇಚ್ಛೆಯು (2) ಸಂಶಯವೆಂದರೆ ಜ್ಞಾನವಿಶೇಷವು. (3) ಸಂಶಯವ್ಯುದಾಸವೆಂದರೆ ಸಂಶಯಾಭಾವವು. ಇವೇ ಮೊದಲಾದುವು ಕೆಲವು ಅರ್ಥರೂಪಗಳಾದುದರಿಂದ ಶಬ್ದಗಳೇ ಅಲ್ಲವು. ಹೀಗಿರಲು ವಾಕ್ಯರೂಪಗಳಾದ ಅವಯವಗಳು ಆಗಲಾರವು. ಇವುಗಳ ನಿಯಮವೂ ಕೂಡಲಾರದು. ಮತ್ತು ಉಪನಯ, ನಿಗಮನಗಳು ಪ್ರತಿಜ್ಞಾ, ಹೇತು ವಾಕ್ಯಗಳಿಂದಲೇ ಸಿದ್ಧಿಸುತ್ತವೆಯಾದುದರಿಂದ ಅವುಗಳೂ ಗತಾರ್ಥಗಳು. ॥ ೨೪ ॥

ಹಿಂದೆ ಹೇಳಿದ ಮೂರು ಅವಯವಗಳೆಂಬ ಮೂರನೇ ಪಕ್ಷವೂ ಕೂಡುವುದಿಲ್ಲವೆಂದು ಹೇಳುತ್ತಾರೆ.

**ಮೂ ॥ ಹೇತುಗರ್ಭಾ, ಪ್ರತಿಜ್ಞಾ, ಕೇವಲಾಽಪಿ ॥ ೨೫ ॥**

**ಅ ॥** ಇಲ್ಲಿ 'ಉಪಪತ್ತಿಜ್ಞಾಪಿಕಾ' ಎಂಬಪದವನ್ನು ಇಟ್ಟುಕೊಳ್ಳಬೇಕು. ಹೇತುಗರ್ಭಾ= ಧೂಮವಿರುವುದರಿಂದ ಪರ್ವತವು ವಹ್ನಿಮತ್ತಾಗಿದೆ ಎಂಬ ವಾಕ್ಯದಿಂದ ಕೂಡಿದ, ಕೇವಲಾಽಪಿ= ಬೇರೆ ಅವಯವದಿಂದ ರಹಿತವಾದರೂ, ಪ್ರತಿಜ್ಞಾ=ಪ್ರತಿಜ್ಞೆಯು, ಉಪಪತ್ತಿಜ್ಞಾಪಿಕಾ=ಉಪಪತ್ತಿಯನ್ನು ಬೋಧಿಸುತ್ತದೆ.

**ತಾ ॥** ಜನರ ಬುದ್ಧಿವಿಶೇಷದಲ್ಲಿ ಹೆಚ್ಚುಕಡಿಮೆ ಇರುವುದರಿಂದ ಎಷ್ಟು ಅವಯವಗಳಿಂದ ಪರನಿಗೆ ಬೋಧೆಯಾಗುತ್ತದೋ ಅಷ್ಟೇ ಅವಯವಗಳನ್ನು ಪ್ರಯೋಗಿಸಬೇಕು. ಅಧಿಕವಾಗಿ ಪ್ರಯೋಗಿಸಿದರೆ ಅಧಿಕನಿಗ್ರಹಸ್ಥಾನವೆಂಬ ದೋಷವು ಸಂಭವಿಸುವುದು. ಆದುದರಿಂದ 'ಧೂಮವತ್ತಾದ ಪರ್ವತವು ವಹ್ನಿಮತ್ತಾಗಿದೆ' ಎಂಬುವುದರಿಂದಲೇ ಸಾಧ್ಯವ್ಯಾಪ್ತ್ಯಾದಿ ಸಕಲಜ್ಞಾನವೂ

ಪರನಿಗಾದರೆ ಅಷ್ಟೇ ಅವಯವಗಳ ಪ್ರಯೋಗವೇ ಉಪಪತ್ತಿಜ್ಞಾಪಕವಾಗುತ್ತದೆ. ಮೂರು ಎರಡು ಎಂಬೀ ನಿಯಮಗಳು ಅನಾವಶ್ಯಕಗಳು. ಯಾರಿಗೆ ಇಷ್ಟರಿಂದ ಬೋಧವಾಗುವುದಿಲ್ಲವೋ ಆತನ ಸಲುವಾಗಿ ಹಿಂದೆ ಹೇಳಿದ ಮೂರವಯವಗಳನ್ನೂ ಪ್ರಯೋಗಿಸಬಹುದೆಂಬ ಅಭಿಪ್ರಾಯದಿಂದ 'ಪ್ರತಿಜ್ಞಾ ಹೇತುದೃಷ್ಟಾಂತರೂಪಾ' ಎಂದು ಹಿಂದೆ ಹೇಳಿದುದು. ॥ ೨೫ ॥

ಬೇರೆ ಕಾರಣದಿಂದಲೂ ಅವಯವಗಳ ನಿಯಮವು ಕೂಡುವುದಿಲ್ಲವೆನ್ನುತ್ತಾರೆ.

**ಮೂ ॥ ಸಿದ್ಧೌ ಪ್ರತಿಜ್ಞಾಯಾಂ ಹೇತುಮಾತ್ರಂ ಚ ॥ ೨೬ ॥**

ಅ ॥ ಪ್ರತಿಜ್ಞಾಯಾಂ=ಪ್ರತಿಜ್ಞೆಯು, ಸಿದ್ಧೌ=ಸಿದ್ಧವಾಗಲು, ಹೇತುಮಾತ್ರಂ ಚ= ಹೇತುಮಾತ್ರವೇ, ಉಪಪತ್ತಿಜ್ಞಾಪಕವಾಗುತ್ತದೆ.

ತಾ ॥ 'ಪರ್ವತದಿಂದ ಬೆಂಕಿಯನ್ನು ತಾ' ಎಂದು ಹೇಳಲು ಇನ್ನೊಬ್ಬನು 'ಅಲ್ಲಿ ಬೆಂಕಿಯಿಲ್ಲ' ವೆಂದನು. ಮೊದಲನೆಯವನಿಗೆ ಅಲ್ಲಿ' ಅಗ್ನಿಯಿದೆ' ಎಂಬುದರಿಂದಲೇ ಪ್ರತಿಜ್ಞೆಯು ನಿಶ್ಚಿತವಾಯಿತು. ಎರಡನೆಯವನು 'ಅದು ಹೇಗೆ ನಿನಗೆ ತಿಳಿಯಿತು?' ಎಂದರೆ ಮೊದಲನೆಯವನು 'ಹೊಗೆ ಇರುವುದರಿಂದ' ಎಂದು ಉತ್ತರಕೊಡುವನು. ಹೀಗೆ ಯಾವಾಗ ಹೇಳುವನೋ ಆಗ 'ಧೂಮವತ್ತ್ವಾದುದರಿಂದ,' ಎಂಬ ಹೇತುಮಾತ್ರದಿಂದಲೇ ಎರಡನೆಯವನಿಗೆ ಉಪಪತ್ತಿಜ್ಞಾನವಾಗುವುದು. ಬೇರೆ ಅವಯವಾಪೇಕ್ಷೆ ಇಲ್ಲವು. ಆದಕಾರಣ ಅವಯವ ನಿಯಮವು ಇರುವುದಿಲ್ಲ. ॥ ೨೬ ॥

ಇನ್ನೊಂದು ಕಾರಣದಿಂದಲೂ ಅವಯವ ನಿಯಮವು ಅಯುಕ್ತವೆನ್ನುವರು.

**ಮೂ ॥ ದೃಷ್ಟಾಂತಃ ಸ ಪ್ರತಿಜ್ಞೋ ಹೇತುಗರ್ಭಃ ॥ ೨೭ ॥**

ಅ ॥ ಹೇತುಗರ್ಭಃ = ಹೇತುವಿನಿಂದ ಸಹಿತವಾದ, ಸಪ್ರತಿಜ್ಞಃ = ಪ್ರತಿಜ್ಞೆಯಿಂದ ಕೂಡಿದ, ದೃಷ್ಟಾಂತಃ=ದೃಷ್ಟಾಂತ ವಚನವು ಉಪಪತ್ತಿಜ್ಞಾಪಕವಾಗುತ್ತದೆ.

ತಾ ॥ ಧೂಮವತ್ತ್ವಾದ ಮಹಾನಸದಂತೆ ಪರ್ವತವು ಅಗ್ನಿಮತ್ತಾಗಿದೆ. ಎಂದು ಹೇತುಗರ್ಭವಾದ ಪ್ರತಿಜ್ಞೆಯಿಂದ ಕೂಡಿದ ದೃಷ್ಟಾಂತವಚನವು ಉಪಪತ್ತಿಜ್ಞಾಪಕವಾಗುತ್ತದೆ. ಇದನ್ನು ಕೇಳುವವನಿಗೆ ಬೇರೆಯಾವ ಆಕಾಂಕ್ಷೆಯೂ ಹುಟ್ಟುವುದಿಲ್ಲ. ಆಕಾಂಕ್ಷಾನುಸಾರವಾಗಿಯೇ ಶಬ್ದವನ್ನು ಪ್ರಯೋಗಿಸುವುದು ಶಾಸ್ತ್ರಮರ್ಯಾದೆಯಾಗಿದೆ. ಆದಕಾರಣವೂ ಅವಯವನಿಯಮವು ಇರುವುದಿಲ್ಲ. ॥ ೨೭ ॥

ಹಿಂದೆ 'ನಿರ್ದೋಷೋಪಪತ್ತಿರನುಮಾ' ಎಂದು ನಿರೂಪಿಸಿರುವರು. ಅದರಲ್ಲಿ ಉಪಪತ್ತಿದೋಷವು ಇಂತಹುದೆಂದು ಈಗ ನಿರೂಪಿಸುತ್ತಾರೆ. ಉಪಪತ್ತಿದೋಷವು ಸಾಕ್ಷಾದ್ದೋಷವು ವಾಚನಿಕ ದೋಷವೆಂದು ಎರಡುಪ್ರಕಾರ. ಯಾವುದು ಸಾಧನಾನುಮಾನದಲ್ಲಿ ಸಾಧನಕ್ಕೂ, ದೂಷಣಾನುಮಾನದಲ್ಲಿ ದೂಷಣಕ್ಕೂ ವಿರೋಧಿಯು ಆಗುವುದೋ ಅದು ಉಪಪತ್ತಿಗೆ **ಸಾಕ್ಷಾದ್ದೋಷವು**. ಅದನ್ನು ವಿಭಾಗಪೂರ್ವಕವಾಗಿ ಆದಿಯಲ್ಲಿ ನಿರೂಪಿಸುವರು.

**ಮೂ ॥ ಉಪಪತ್ತಿದೋಷೌ ವಿರೋಧಾಸಂಗತೀ ॥ ೨೮ ॥**

ಅ ॥ ವಿರೋಧಾಸಂಗತೀ, ವಿರೋಧ=ಅನ್ವಯಯೋಗ್ಯತೆಯಿಲ್ಲದಿರುವಿಕೆಯು, ಅಸಂಗತೀ=ಆಕಾಂಕ್ಷಾ ಇಲ್ಲದೆ ಇರುವಿಕೆಯೂ ಇವುಗಳು, ಉಪಪತ್ತಿದೋಷೌ=ಅನುಮಾನ ದೋಷಗಳು.

ತಾ ॥ ಇವುಗಳು ಅರ್ಥಕ್ಕೂ ವಚನಕ್ಕೂ ದೋಷಗಳಾಗುವುವು. ಅರ್ಥವು ಅಸಾಧುವಾದರೆ ಅದನ್ನು ಪ್ರತಿಪಾದಿಸುವ ವಚನವೂ ಅಸಾಧುವಾಗುವುದು. ॥ ೨೮ ॥

ವಚನಕ್ಕೇನೇ ಅಸಾಧುತ್ವಾಪಾದಕವಾದುದು ವಾಚನಿಕದೋಷವು, ಅದನ್ನು ವಿಭಾಗಪೂರ್ವಕ ತೋರಿಸುವರು.

**ಮೂ ॥ ನ್ಯೂನಾಧಿಕೇ ವಾಚನಿಕೇ ॥ ೨೯ ॥**

ಅ ॥ ನ್ಯೂನಾಧಿಕೇ, ನ್ಯೂನ=ಆವಶ್ಯಕವಾದುದಕ್ಕಿಂತ ಕಡಿಮೆಯಾಗುವುದು, ಅಧಿಕೇ=ಆವಶ್ಯಕವಾದುದಕ್ಕಿಂತ ಹೆಚ್ಚಿಗೆಯಾಗುವುದು, ಇವೆರಡೂ ವಾಚನಿಕೇ=ವಚನದೋಷಗಳು. (ಪ್ರಯೋಗಿಸುವ ಶಬ್ದದೋಷಗಳು.)

ತಾ ॥ ಪರನಿಗೆ ಬೋಧವಾಗುವುದಕ್ಕಿಂತ ಹೆಚ್ಚಿಗೆ ವಾಕ್ಯ ಯಾ ಪದಗಳನ್ನು ಪ್ರಯೋಗಿಸುವುದು ಅಧಿಕವೆಂಬ ವಚನ ದೋಷವು. ಕಡಿಮೆ ಪ್ರಯೋಗಿಸುವುದು ನ್ಯೂನವೆಂಬ ವಚನ ದೋಷವು. ॥ ೨೯ ॥

ಪರನಿಂದ ನಿರೂಪಿಸಲ್ಪಟ್ಟ ಸಮಸ್ತ ನಿಗ್ರಹಸ್ಥಾನಗಳೂ ಮೇಲೆ ಹೇಳಿದ ವಿರೋಧಾದಿ ನಿಗ್ರಹಸ್ಥಾನಗಳಲ್ಲಿಯೇ ಅಂತರ್ಭಾವವನ್ನು ಹೊಂದುತ್ತವೆಯೆಂದು ತೋರಿಸುವರು.

**ಮೂ ॥ ಸಂವಾದಾನುಕ್ತಿಯುತಾಸ್ತ ಏವ ನಿಗ್ರಹಾಃ ॥ ೩೦ ॥**

ಅ ॥ ಸಂವಾದ=ವಿವಾದಯುಕ್ತ ಪ್ರಮೇಯವನ್ನಂಗೀಕರಿಸುವುದು, ಅನುಕ್ತಿ=ಪರಬೋಧನೆಗೋಸ್ಕರ ಅವಶ್ಯ ಹೇಳಬೇಕಾದುದನ್ನು ಹೇಳದಿರುವುದು, ಇವುಗಳಿಂದ ಯುತಾಃ=ಯುಕ್ತಗಳಾದ, ತ ಏವ=ಹಿಂದೆ ಹೇಳಿದ ವಿರೋಧಾದಿಗಳೇ, ನಿಗ್ರಹಾಃ=ನಿಗ್ರಹಸ್ಥಾನಗಳು.

ತಾ ॥ ವಿದ್ವಾಂಸರು ಶಾಸ್ತ್ರ ವಿಚಾರದಲ್ಲಿ ಉಪಯೋಗಿಸುವ ವಾಕ್ಯಪ್ರಬಂಧವು **'ಕಥೆ'** ಎನಿಸುವುದು. ಸ್ವಪಕ್ಷವನ್ನು ಸಾಧಿಸುವ ಪರಪಕ್ಷವನ್ನು ದೂಷಿಸುವ ಸಂಕಲ್ಪಭಂಗರೂಪವಾದ ಪರಾಹಂಕಾರ ಖಂಡನೆಯು **ಪರಾಜಯವು**. ಇದೇ **ನಿಗ್ರಹವು**. ಕಥೆಯಲ್ಲಿ ಅಖಂಡಿತಾಹಂಕಾರನಾದ ಪರನಿಂದ ಮಾಡಲ್ಪಡುವ ಪರಾಹಂಕಾರ ಖಂಡನೆಯೇ ನಿಗ್ರಹವು. ತನ್ನಿಮಿತ್ತವಾದುದು **ನಿಗ್ರಹಸ್ಥಾನವು**. ಎಂದು ನಿಗ್ರಹಸ್ಥಾನಲಕ್ಷಣವು. ಇಲ್ಲಿ ತಾರ್ಕಿಕರು ಹೇಳುವುದೇನೆಂದರೆ— ತತ್ವಾಪ್ರತಿಪತ್ತಿಗೆ ಜ್ಞಾಪಕವಾದುದು ನಿಗ್ರಹಸ್ಥಾನವು. ಅದು ಅಪ್ರತಿಪತ್ತಿ, ವಿಪ್ರತಿಪತ್ತಿ ಎಂದೆರಡು ವಿಧವಾಗಿರುತ್ತದೆ. ಪರನು ಹೇಳಿದುದನ್ನೂ, ತಾನು ಹೇಳಬೇಕಾದುದನ್ನೂ ತಿಳಿಯದಿರುವುದು ಅಪ್ರತಿಪತ್ತಿಯು, ವಿಪರೀತವಾಗಿ ತಿಳಿಯುವುದು ವಿಪ್ರತಿಪತ್ತಿಯು. ಈ ವಿಧವಾದ ನಿಗ್ರಹಸ್ಥಾನಗಳು (1)ಪ್ರತಿಜ್ಞಾಹಾನಿ, (2)ಪ್ರತಿಜ್ಞಾಂತರ, (3)ಪ್ರತಿಜ್ಞಾವಿರೋಧ, (4) ಪ್ರತಿಜ್ಞಾಸನ್ಯಾಸ, (5)ಹೇತ್ವಂತರ, (6)ಅರ್ಥಾಂತರ, (7)ನಿರರ್ಥಕ, (8)ಅವಿಜ್ಞಾತಾರ್ಥಕ, (9)ಅಪಾರ್ಥಕ, (10) ಅಪ್ರಾಪ್ತಕಾಲ, (11)ನ್ಯೂನ, (12) ಅಧಿಕ, (13)ಪುನರುಕ್ತ, (14) ಅನನುಭಾಷಣ, (15)ಅಜ್ಞಾನ, (16) ಅಪ್ರತಿಭಾ, (17)ವಿಕ್ಷೇಪ, (18)ಮತಾನುಜ್ಞಾ, (19) ಪರ್ಯನುಯೋಜ್ಯೋಪೇಕ್ಷಣ, (20)ನಿರನುಯೋಜ್ಯಾನುಯೋಗ, (21)ಅಪಸಿದ್ಧಾಂತ, (22) ಹೇತ್ವಾಭಾಸ, (23)ಉದಾಹರಣಾಭಾಸ, (24)ತರ್ಕಪರಾಹತಿ, ಎಂದು ಇಪ್ಪತ್ತನಾಲ್ಕು ಇರುತ್ತವೆ. ಈ ಪ್ರತಿಜ್ಞಾಹಾನ್ಯಾದಿಗಳು ಕಥೆಯಕಾಲದಲ್ಲಿ ಮಾತ್ರ ನಿಗ್ರಹಸ್ಥಾನಗಳಾಗುವುವು. ಇತರ ಕಾಲಗಳಲ್ಲಿ ಅಥವಾ ಅಪಸ್ಮಾರಾದಿ ಅವಸ್ಥೆಗಳಲ್ಲಾಗಲೀ ಉಪಯೋಗಿಸಿದರೆ ನಿಗ್ರಹಸ್ಥಾನಗಳಾಗುವುದಿಲ್ಲ. ಇಂತಹ ದಶೆಯಲ್ಲಿ ಪ್ರಯೋಗಿಸಲ್ಪಟ್ಟವುಗಳು ತತ್ಕಾಲದಲ್ಲಿ ತತ್ವಾನಿರ್ಣಯಹೇತು

ಗಳಾದುದರಿಂದ ನಿಗ್ರಹಸ್ಥಾನಗಳಂತೆ ತೋರುತ್ತವೆಯಾದರೂ ಪ್ರತಿವಾದ್ಯಪೇಕ್ಷೆಯಿಂದ ತತ್ತ್ವನಿರ್ಣಯಹೇತುಗಳಲ್ಲದಿರುವುದರಿಂದ ನಿಗ್ರಹಸ್ಥಾನಗಳಾಗುವುದಿಲ್ಲವು.

ಈ ವಿಧವಾಗಿ ನಿಗ್ರಹಸ್ಥಾನಗಳನ್ನು ಸಾಮಾನ್ಯಲಕ್ಷಣದಿಂದ ನಿರೂಪಿಸಿ ಪ್ರತಿಜ್ಞಾಹಾನ್ಯಾದಿ ವಿಶೇಷಗಳು ಮುಂದೆ ಹೇಳಲ್ಪಡುವುವು. (1) ಕಥೆಯಲ್ಲಿ ವಾದಿಯು ಅಥವಾ ಪ್ರತಿವಾದಿಯು ತನ್ನ ಪಕ್ಷವನ್ನು ಸ್ಥಾಪಿಸುವುದಕ್ಕೆ ತಾನು ಹೇಳಿದ ಸಾಧ್ಯದೃಷ್ಟಾಂತಾದಿಗಳನ್ನು ತನ್ನ ಇಷ್ಟವನ್ನು ನಿರ್ವಹಿಸಲು ಅವುಗಳು ಅಶಕ್ತಗಳೆಂದು ತಿಳಿದು ತ್ಯಾಗಮಾಡುವುದು '**ಪ್ರತಿಜ್ಞಾಹಾನಿಯು**' ಉದಾ:— ಪರ್ವತವು ಅಗ್ನಿಯುಳ್ಳದ್ದಾಗಿದೆ, ಕೆಂಪಾಗಿರುವುದರಿಂದ ಎಂದು ಚೈತ್ರನು ಹೇಳಲು ಅದಕ್ಕೆ ಮೈತ್ರನು ಆ ಕೆಂಪು ವಸ್ತ್ರದಲ್ಲಿಯೂ ಗುಲಾಬಿಹೂವು ಇತ್ಯಾದಿಗಳಲ್ಲಿದ್ದರೂ ಅಲ್ಲಿ ಅಗ್ನಿಯು ಇಲ್ಲದ ಕಾರಣ ವ್ಯಭಿಚಾರರೂಪ ದೋಷವು ಬಂದಿತೆಂದು ಹೇಳಲು ಚೈತ್ರನು 'ಪರ್ವತದಲ್ಲಿ ಅಗ್ನಿಯುಂಟೆಂದು ನಾನು ಹೇಳುವುದಿಲ್ಲ' ಎಂದು ಹೇಳುವುದು ಪ್ರತಿಜ್ಞಾ ಹಾನಿಯು. ಇದು ಸಂದರ್ಭಾನುಸಾರವಾಗಿ ಸಂವಾದದಲ್ಲಿಯೂ ಅಸಂಗತಿಯಲ್ಲಿಯೂ ಸೇರುವುದು. (2) ಮೊದಲು ಪ್ರಯೋಗ ಮಾಡಿದ ಸಾಧ್ಯಭಾಗದಲ್ಲಿ ದೋಷವನ್ನು ಪರಿಹರಿಸುವ ಇಚ್ಛೆಯಿಂದ ಅಧಿಕವಾಗಿ ಕೂಡಿಸುವುದು '**ಪ್ರತಿಜ್ಞಾಂತರ**'ವು. ಪ್ರತಿಜ್ಞೆಯು, ಉದಾಹರಣದಲ್ಲಿ ಪ್ರಯೋಜ್ಯಭಾಗವು, ನಿಗಮನವು. ಇವು ಮೂರು ಸಾಧ್ಯಭಾಗಗಳಾಗುತ್ತವೆ. ಉದಾ:— ಚೈತ್ರನು 'ಅನಿತ್ಯಗಳು' ಮಾಡಲ್ಪಟ್ಟುದರಿಂದ, ಎಂದು ಹೇಳಲು, ಮೈತ್ರನು 'ಅನಿತ್ಯಗಳು ಯಾವುವು?' ಎಂದು ಕೇಳುವನು. ಆಗ ಚೈತ್ರನು 'ವಾಕ್ಯಗಳು' ಎಂಬ ಪದವನ್ನು 'ಅನಿತ್ಯಗಳು' ಎಂಬ ಪದಕ್ಕೆ ಕೂಡಿಸುವನು. ಇದು ಪ್ರತಿಜ್ಞಾಂತರವು. ಮತ್ತು ಮೈತ್ರನು 'ವೇದಗಳು ವಾಕ್ಯಗಳಾದರೂ ಅನಿತ್ಯಗಳಲ್ಲ'ವೆಂದು ದೂಷಿಸುವನು. ಆಗ ಚೈತ್ರನು 'ಪೌರುಷೇಯ'ವೆಂಬ ವಿಶೇಷಣವನ್ನು 'ವಾಕ್ಯಗಳು' ಎಂಬ ಪದಕ್ಕೆ ಸೇರಿಸುವನು. ಇದೂ ಪ್ರತಿಜ್ಞಾಂತರವು. ಇದೂ ನಮ್ಮ ಸಂವಾದಾಸಂಗತಿಗಳಲ್ಲಿಯೇ ಸೇರುವುದು. (3) ತಾನು ಹೇಳಿದ ವಾಕ್ಯದಲ್ಲಿ ಅವಾಂತರ ವಾಕ್ಯಗಳಿಗಾಗಲಿ ಪದಗಳಿಗಾಗಲಿ ಪರಸ್ಪರ ವ್ಯಾಹತಿಯು (ವಿರೋಧವು) ಇದ್ದರೆ **ಪ್ರತಿಜ್ಞಾವಿರೋಧ**ವಾಗುವುದು. ಉದಾ:— ಚೈತ್ರನು 'ಈತನು ಬಂಜೆಯ ಮಗನು' ಗಂಡುಸಾದುದರಿಂದ ಎಂದರೆ ಬಂಜೆಗೆ ಮಕ್ಕಳು ಇರಲು ಸಾಧ್ಯವಲ್ಲದ ಕಾರಣ ಬಂಜೆ ಮತ್ತು ಮಗ ಈ ಪದಗಳಿಗೆ ವಿರೋಧವು ತೋರುತ್ತದೆ. ಕಾರಣ ಇದು ಪ್ರತಿಜ್ಞಾವಿರೋಧವೆಂಬ ನಿಗ್ರಹಸ್ಥಾನವು. ಇದು ನಮ್ಮ ವಿರೋಧದಲ್ಲಿ ಸೇರುವುದು. (4) ತಾನು ಮೊದಲು ಹೇಳಿದುದನ್ನು ತಾನೇ ಹೇಳಲಿಲ್ಲವೆನ್ನುವುದು **ಪ್ರತಿಜ್ಞಾಸನ್ಯಾಸವು**. ಉದಾ:— 'ಪರ್ವತವು ಅಗ್ನಿಯುಳ್ಳದು, ಪ್ರಮೇಯವಾದುದರಿಂದ,' ಎಂದು ಪ್ರಯೋಗಿಸಲು ಪ್ರತಿವಾದಿಯಿಂದ ವ್ಯಭಿಚಾರವು ಹೇಳಲ್ಪಡಲು 'ಪರ್ವತವು ಅಗ್ನಿಯುಳ್ಳದೆಂದು ಯಾವಾತನು ಹೇಳಿದನು.' ಅಥವಾ 'ಪರಮತವನ್ನನುಸರಿಸಿ ಹೇಳಿದುದು' ಎಂದು ತಾನು ಹೇಳಿದುದನ್ನು ಅಪಲಾಪಮಾಡುವುದು ಪ್ರತಿಜ್ಞಾಸನ್ಯಾಸವು. ಇದೂ ಸಹ ವಿರೋಧದಲ್ಲಿಯೇ ಸೇರುವುದು. (5) ಪ್ರತಿವಾದಿಯು ಹೇಳಿದ ದೋಷವನ್ನು ಪರಿಹಾರ ಮಾಡುವ ಇಚ್ಛೆಯಿಂದ ವಾದಿಯು ಪ್ರಯೋಗಿಸಿದ ಪ್ರಯೋಗದ ಸಾಧಕಾಂಶದಲ್ಲಿ ಅಧಿಕ ಪದವನ್ನು ಕೂಡಿಸುವುದು **ಹೇತ್ವಂತರವು**. (1) ಹೇತುವು. (2) ಉದಾಹರಣೆಯಲ್ಲಿ 'ಯೋ ಯೋ ಧೂಮವಾನ್' ಎನ್ನುವ ಪ್ರಯೋಜಕ ಭಾಗವು, (3) ಉಪನಯವು ಎಂದು ಸಾಧಕಾಂಶವು ಮೂರುವಿಧವಾಗಿರುತ್ತದೆ. ಉದಾ:— ಈ ಪಶುವು ಆಕಳು ಆಗಿರುತ್ತದೆ, ಹೆಣ್ಣಾದುದರಿಂದ, ಎಂದು ಚೈತ್ರನು ಹೇಳಲು ಮೈತ್ರನು 'ಎಮ್ಮೆ, ಕುದುರೆ, ಕುರಿ ಮೊದಲಾದುವುಗಳಲ್ಲಿ ವ್ಯಭಿಚಾರವು ಬಂತೆನಲು' ಚೈತ್ರನು ಹೇತುವಾದ ಹೆಣ್ಣುತನಕ್ಕೆ ಸಾಸ್ನಾದಿಮತ್ತ್ವ (ಕುತ್ತಿಗೆಯ ಅಡಿ ಜೋಲುವ ಚರ್ಮವು ಸಾಸ್ನಾ) ವಿಶೇಷಣವನ್ನು

ಸೇರಿಸಿಕೊಳ್ಳುವನು. ಇದು ಹೇತ್ವಂತರವು. ಇದು ಯಥಾಯೋಗ್ಯವಾಗಿ ಸಂವಾದದಲ್ಲಿಯೂ ಅಸಂಗತದಲ್ಲಿಯೂ ಸೇರುವುದು. (6) ವಸ್ತುತಃ ಉಪಯುಕ್ತವಾಗಿದ್ದರೂ ಪ್ರಕೃತಕ್ಕೆ ಅನುಪಯುಕ್ತವಾದ ವಚನವು **ಅರ್ಥಾಂತರವು.** ಉದಾ:— ಪರ್ವತವು ವಹ್ನಿಯುಳ್ಳದ್ದಾಗಿದೆ, ಪರ್ವತವು ವೃಕ್ಷಾದಿಗಳುಳ್ಳದ್ದಾಗಿದೆ ಎಂದು ಎರಡನೆಯ ವಾಕ್ಯವು ವಸ್ತುತಃ ಯುಕ್ತವಾದರೂ ಪ್ರಕೃತ ಅಗ್ನಿಯನ್ನು ಸಾಧಿಸಲಿಕ್ಕೆ ಅನುಪಯುಕ್ತವಾಗಿದೆ. ಇದು ಅಸಂಗತದಲ್ಲಿ ಸೇರುವುದು. (7) ಅರ್ಥವಾಗದೆ ಇರುವ ಶಬ್ದಗಳನ್ನು ಉಪಯೋಗಿಸುವುದು **ನಿರರ್ಥಕವು.** ಉದಾ:— 'ಕ ಚ ಟ ತ ಪ' ಇತ್ಯಾದಿ ಅರ್ಥವಿಲ್ಲದ ಶಬ್ದಗಳು. ವಾದಿಯು ಸಂಸ್ಕೃತದಲ್ಲಿ ಮಾತನಾಡುವಾಗ ಅವನಿಗೆ ತಿಳಿಯದ ಇಂಗ್ಲೀಸು ಭಾಷೆಯನ್ನು ಪ್ರತಿವಾದಿಯು ಉಪಯೋಗಿಸುವುದು. ಇದೂ ಅಸಂಗತವು. (8) ಮೂರಾವರ್ತಿ ಹೇಳಿದರೂ ಪ್ರತಿವಾದಿಗೆ ಅಥವಾ ಸಭಿಕರಿಗೆ ಅರ್ಥವೇ ಆಗದಿರುವ ಪದಪ್ರಯೋಗವು **ಅವಿಜ್ಞಾತಾರ್ಥಕವು.** ಉದಾ:— ಗುಡ್ಡೆಯು ಬೆಂಕಿಯುಳ್ಳದು ಎಂದು ಹೇಳುವ ಬದಲಿಗೆ "ಕಶ್ಯಪತನಯಾಧೃತಿಹೇತುರಯಂ ತ್ರಿನಯನತನಯಾಸನಸಮಾನನಾಮಧೇಯಯುಕ್ತಃ" ಎಂದು ಪ್ರಯೋಗಿಸುವುದು. ಅ ॥ (ಕಶ್ಯಪತನಯಾ=ಭೂಮಿಯ, ಧೃತಿ=ಧರಿಸುವುದಕ್ಕೆ, ಹೇತುಃ=ಕಾರಣೀಭೂತವಾದ, ಪರ್ವತವು. ತ್ರಿನಯನತನಯ=ಮುಕ್ಕಣ್ಣನ ಮಗನಾದ ಷಣ್ಮುಖನ, ಆಸನ=ವಾಹನವಾದ ನವಿಲಿನ (ಶಿಖಿಯ), ಸಮಾನನಾಮಧೇಯಃ=ಸಮಾನವಾದ ನಾಮಧೇಯವುಳ್ಳುದರಿಂದ ಯುಕ್ತವಾದುದು. 'ಶಿಖಿನೌ ವಹ್ನಿಬರ್ಹಿಣೌ' ಎಂಬೀ ಕೋಶದಿಂದ ಬೆಂಕಿಗೂ ನವಿಲಿಗೂ ಸಮಾನವಾದ ನಾಮಧೇಯವೆಂದು ತಿಳಿಯತಕ್ಕದ್ದು.) ಇದೂ ಅಸಂಗತವು. (9) ಅನ್ವಯವಿಲ್ಲದ ಪದವಾಕ್ಯಪ್ರಯೋಗಗಳು **ಅಪಾರ್ಥಕವು.** ಉದಾ:— ಹಂಪಿಜಾತ್ರೆ, ಮಜ್ಜಿಗೆಪಳದ್ಯ ಇತ್ಯಾದಿ, ಇದೂ ಅಸಂಗತವು. (10) ಕಥಾಕ್ರಮವನ್ನು ತಪ್ಪಿಸಿ ವಾಕ್ಯವನ್ನು ಪ್ರಯೋಗಿಸುವುದು **ಅಪ್ರಾಪ್ತಕಾಲವು. ಉ:—** ಪರ್ವತವು ಬೆಂಕಿಯುಳ್ಳುದಾಗಿದೆ. ಹೊಗೆಯಿರುವುದರಿಂದ ಎಂಬ ಕ್ರಮವನ್ನು ತಪ್ಪಿಸಿ ಹೊಗೆಯುಳ್ಳುದಾದುದರಿಂದ, ಬೆಂಕಿಯುಳ್ಳದಾಗಿದೆ, ಪರ್ವತವು, ಎಂದು ಹೇಳುವುದು. ಇದು ನಿಗ್ರಹಸ್ಥಾನವೇ ಆಗುವುದಿಲ್ಲ. ಕಾರಣ, ಇದು ದೋಷವೇ ಅಲ್ಲ. (11) ತನ್ನ ಸಿದ್ಧಾಂತಕ್ಕೆ ಅವಶ್ಯವಾಗಿ ಹೇಳಬೇಕಾದ ವಾಕ್ಯಗಳಲ್ಲಿ ಕೆಲವನ್ನು ಬಿಡುವುದು '**ನ್ಯೂನ**'ವು. ಉದಾ:— 'ಪರ್ವತವು ಹೊಗೆಯಿರುವುದರಿಂದ' ಎಂದಿಷ್ಟೇ ಹೇಳುವುದು. ಇದು ನ್ಯೂನದಲ್ಲಿ ಸೇರುವುದು. (12) ಪರಸ್ಪರ ಅನ್ವಯಯುಕ್ತವಾಗಿ ಪ್ರಕೃತೋಪಯುಕ್ತವಾಗಿ ಪುನರುಕ್ತವಲ್ಲದ ಕೃತಕಾರ್ಯವನ್ನು ತಿಳಿಸುವವಾಕ್ಯವು '**ಅಧಿಕ**'ವು. ಉದಾ:— ಪರ್ವತದಲ್ಲಿ ಅಗ್ನಿಯಿದೆ ಹೊಗೆ ಇರುವುದರಿಂದ, ಪ್ರಕಾಶ ವಿಶೇಷವಿರುವುದರಿಂದಲೂ ಎಂದು ಇಲ್ಲಿ ಪ್ರಕಾಶವಿಶೇಷವೆಂಬ ವಾಕ್ಯವು ಅಧಿಕವು. ಇದು ಅಧಿಕದಲ್ಲಿ ಸೇರುವುದು. (13) ತನ್ನ ಮಾತಿನಿಂದಲೇ ಸಿದ್ಧವಾದ ಅರ್ಥವನ್ನು ಪ್ರಯೋಜನವಿಲ್ಲದೆ ಇನ್ನೊಂದಾವರ್ತಿಯೂ ಹೇಳುವುದು **ಪುನರುಕ್ತಿಯು.** ಇದು ಅಧಿಕದಲ್ಲಿ ಸೇರುವುದು. (14) ವಾದಿಯಿಂದ ಹೇಳಲ್ಪಟ್ಟುದಾಗಿ ಸಭೆಯವರಿಂದ ತಿಳಿಯಲ್ಪಟ್ಟಿರುವ ಅರ್ಥವುಳ್ಳುದಾಗಿ ವಾದಿಯಿಂದ ಅಥವಾ ಸಭ್ಯರಿಂದ ಪುನಃ ಅನುವಾದ ಮಾಡಿ ಹೇಳಲ್ಪಟ್ಟುದಾಗಿ ಉಚ್ಚಾರಮಾಡಲರ್ಹವಾದ ಶಬ್ದಕ್ಕೆ ತನ್ನ ಅಜ್ಞಾನವನ್ನು ವ್ಯಕ್ತಗೊಳಿಸದಿರುವ ಕಥಾವಿಚ್ಛೇದವನ್ನು ಮಾಡದಿರುವ ಪ್ರತಿವಾದಿಯಿಂದ ಪ್ರತ್ಯುತ್ತರವನ್ನು ಕೊಡದಿರುವುದು **ಅನನುಭಾಷಣವು.** ಇದು ನ್ಯೂನ, ಯಾ ಅನುಕ್ತಿಯಾಗಿರುತ್ತದೆ. (15)ವಾದಿಯು ಮೂರುಸಲ ಹೇಳಿದರೂ ಸಭೆಯವರಿಗೆ ಆ ವಾಕ್ಯದ ಅರ್ಥವು ಗೊತ್ತಾದರೂ ಪ್ರತಿವಾದಿಯು ತನಗೆ ಅದರ ಅರ್ಥವಾಗಲಿಲ್ಲವೆನ್ನುವುದು '**ಅಜ್ಞಾನವು**, ಇದೂ ಅನುಕ್ತಿಯು. (16) ವಾದಿಯು ಹೇಳಿದುದಕ್ಕೆ

ಪ್ರತ್ಯುತ್ತರವನ್ನು ಕೊಡಲು ತಿಳಿಯದಿರುವುದು **ಅಪ್ರತಿಭಾ.** ಇದು ಅನುಕ್ತಿಯೇ ಆಗಿರುತ್ತದೆ. (17) ಉತ್ತರವನ್ನು ಕೊಡಲಿಕ್ಕೆ ತಿಳಿಯದಿರುವಾಗ ಯಾವುದಾದರೊಂದು ನೆಪವನ್ನು ಹೇಳಿ ಕಥೆಯನ್ನು ಭಂಗಗೊಳಿಸುವುದು. **ವಿಕ್ಷೇಪವು,** ಇದೂ ಅನುಕ್ತಿಯೇ. (18)ಪರನಿಗೆ ಅನಿಷ್ಟವಾಗುವುದೆಂಬ ಭ್ರಮೆಯಿಂದ ಇಷ್ಟವನ್ನು ಆರೋಪಿಸುವುದು **ಮತಾನುಜ್ಞೆಯು.** ಇದು ಅಸಂಗತದಲ್ಲಿ ಸೇರುವುದು. (19) ಒಂದು ನಿಗ್ರಹಸ್ಥಾನವನ್ನು ಅವಶ್ಯ ಪ್ರಯೋಗಮಾಡಬೇಕಾಗಿರಲು ಅದನ್ನು ಆ ಕಾಲದಲ್ಲಿ ಮಾಡದೆ ಇರುವುದು **ಪರ್ಯನುಯೋಜ್ಯೋಪೇಕ್ಷಣವು.** ಇದೂ ಅಸಂಗತವೇ. (20)ನಿಗ್ರಹಸ್ಥಾನಕ್ಕೆ ಯೋಗ್ಯವಲ್ಲದ ಸ್ಥಳದಲ್ಲಿ ನಿಗ್ರಹಸ್ಥಾನವನ್ನು ಉದ್ಭಾವನೆಮಾಡುವುದು **ನಿರನುಯೋಜ್ಯಾನುಯೋಗವು.** ಇದು ಛಲ, ಜಾತಿ, ಹಾನ್ಯಾದ್ಯಾಭಾಸ, ಅಪ್ರಾಪ್ತಕಾಲೇ ಗ್ರಹಣವೆಂದು ನಾಲ್ಕು ವಿಧವು. ಇದು ವಿರೋಧದಲ್ಲೇ ಸೇರುವುದು. (21) ಯಾವುದಾದರೊಂದು ತನ್ನ ಶಾಸ್ತ್ರಸಿದ್ಧಾಂತಕ್ಕೆ ವಿರೋಧವಾದುದನ್ನಂಗೀಕರಿಸುವುದು **ಅಪಸಿದ್ಧಾಂತವು.** ಇದೂ ವಿರೋಧವೇ. (22)ಹೇತುವಿಗೆ (1)ಪಕ್ಷದಲ್ಲಿ ವ್ಯಾಪಕವಾಗಿರುವಿಕೆ, (2) ಸಪಕ್ಷದಲ್ಲಿರುವಿಕೆ, (3) ವಿಪಕ್ಷದಲ್ಲಿಲ್ಲದೇ ಇರುವಿಕೆ, (4)ಅಬಾಧಿತ ವಿಷಯತ್ವವು, (5)ಅಸತ್ಪ್ರತಿಪಕ್ಷತ್ವ ಎಂದು ಐದು ರೂಪಗಳಿರುತ್ತವೆ. ಇವುಗಳಲ್ಲಿ ಕೆಲವೇ ಇರೋಣವು **ಹೇತ್ವಾಭಾಸವು.** ಇದು ವಿರೋಧದಲ್ಲಿ ಸೇರುವುದು. (23) ಉದಾಹರಣೆಗೆ ಇರಬೇಕಾದ ಸಾಧ್ಯ, ಸಾಧನ, ಆಶ್ರಯ, ವ್ಯಾಪ್ತಿ ಮೊದಲಾದುವುಗಳಲ್ಲಿ ಕೆಲವೇ ಇರೋಣವು **ಉದಾಹರಣಾಭಾಸಗಳು.** ಇದೂ ವಿರೋಧವೇ. (24) ಆತ್ಮಾಶ್ರಯ, ಅನ್ಯೋನ್ಯಾಶ್ರಯ ಇತ್ಯಾದಿ ದೋಷಗಳಿಂದ ಯುಕ್ತಗಳಾದುದೇ **ತರ್ಕಪರಾಹತಿಯು.** ಇದು ಅಸಿದ್ಧಾದಿಗಳಲ್ಲಿ ಅಂತರ್ಭೂತವು. ಈ ಪ್ರಕಾರವಾಗಿ ಪರಮತದಲ್ಲಿ ಹೇಳಿದ ನಿಗ್ರಹಸ್ಥಾನಗಳು ವಿರೋಧಾದಿಗಳಲ್ಲೇ ಸೇರುತ್ತವೆ ॥ ೩೦ ॥

ಈಗ ಹಿಂದೆ ಹೇಳಿಯುಳಿದ ಪ್ರತ್ಯಕ್ಷಶೇಷವನ್ನು ಹೇಳುವರು.

**ಮೂ ॥ ಪ್ರತ್ಯಕ್ಷಂ ಸಪ್ತವಿಧಂ । ಸಾಕ್ಷಿಷಡಿಂದ್ರಿಯಭೇದೇನ ॥ ೩೧ ॥**

**ಅ ॥** ಪ್ರತ್ಯಕ್ಷಂ=ಪ್ರತ್ಯಕ್ಷವು, ಸಾಕ್ಷಿಷಡಿಂದ್ರಿಯಭೇದೇನ, ಸಾಕ್ಷಿ=ಸಾಕ್ಷಿಯು (ಸ್ವರೂಪೇಂದ್ರಿಯವು), ಷಡಿಂದ್ರಿಯ=ಶ್ರೋತ್ರ, ತ್ವಕ್, ಚಕ್ಷುಸ್ಸು, ಜಿಹ್ವಾ, ಘ್ರಾಣ, ಮನೋರೂಪಗಳಾದ ಆರು ಇಂದ್ರಿಯಗಳ, ಭೇದೇನ=ಭೇದದಿಂದ, ಸಪ್ತವಿಧಂ=ಏಳುವಿಧವು.

**ತಾ ॥** ಪ್ರತ್ಯಕ್ಷವು ಹಿಂದೆ ಹೇಳಿದಂತೆ ಏಳುವಿಧವು. ಇನ್ನೊಂದು ಪ್ರಕಾರವಾಗಿ ಎರಡು ವಿಧವು. ಪ್ರಮಾತೃಸ್ವರೂಪೇಂದ್ರಿಯವು ಅದಕ್ಕಿಂತ ಬೇರೆಯಾದುದು ಎಂದು. ಅದರಲ್ಲಿ ಪ್ರಮಾತೃಸ್ವರೂಪೇಂದ್ರಿಯವೇ '**ಸಾಕ್ಷಿ**' ಎನಿಸುತ್ತದೆ. ಅದು ಆತ್ಮಸ್ವರೂಪವಾಗಿಯೂ ಜ್ಞಾನಸ್ವರೂಪವಾಗಿಯೂ ಇರುತ್ತದೆ. ಅದಕ್ಕೆ ಆತ್ಮಸ್ವರೂಪ, ಸ್ವರೂಪಾನಂದ, ಅವಿದ್ಯಾದಿಗಳು, ಸುಖದುಃಖಾದಿಗಳು, ಧರ್ಮಾಧರ್ಮಗಳು, ಅವ್ಯಾಕೃತಾಕಾಶವು, ಕಾಲವು ಇವೇ ಮೊದಲಾದುವು ವಿಷಯಗಳಾಗುತ್ತವೆ. ಹಾಗೂ ಕಾಲದಲ್ಲಿ ಕ್ಷಣಲವಾದಿಭೇದಗಳೂ, ಅವುಗಳ ಪರಿಮಾಣಗಳೂ, ಜ್ಞಾನ ಪ್ರಾಮಾಣ್ಯಾಪ್ರಾಮಾಣ್ಯಗಳೂ ಇವುಗಳೆಲ್ಲ ಸಾಕ್ಷಿವಿಷಯಗಳು. ಈ ಸುಖಾದಿಗಳು ಸಾಕ್ಷಿವ್ಯತಿರಿಕ್ತ ಇಂದ್ರಿಯವಿಷಯಗಳಾಗುವ ಪಕ್ಷದಲ್ಲಿ ಒಂದುವೇಳೆ ಅಪರೋಕ್ಷ ಭ್ರಮವಿಷಯಗಳಾಗಬೇಕಾಗುವುದು. ಸ್ವರೂಪಾತಿರಿಕ್ತೇಂದ್ರಿಯಗಳು ದೋಷದಿಂದ ಕೂಡಿ ಕದಾಚಿತ್ ಭ್ರಾಂತಿಯನ್ನು ಹುಟ್ಟಿಸುವವು. ಸಾಕ್ಷಿಯು ಯಾವಾಗಲೂ ಪ್ರಮಿತಿಯನ್ನೇ ಹುಟ್ಟಿಸುವುದು. ಅಲ್ಲದೆ ಭ್ರಾಂತಿಯನ್ನು ಹುಟ್ಟಿಸಲಾರದು. ಕಾಲಾದಿಗಳಿಗೆ ರೂಪಾದಿಗಳಿಲ್ಲದಿರುವುದರಿಂದ ಚಕ್ಷುರಾದಿ ಇಂದ್ರಿಯಗಳಿಗೆ ವಿಷಯಗಳಾಗುವುದಿಲ್ಲ. ಆದುದರಿಂದಲೂ ಸಾಕ್ಷಿಗನೇ

ವಿಷಯಗಳಾಗಬೇಕು. ಮನಸ್ಸಿಗೆ ಆತ್ಮಾಧೀನತ್ವವಿರುವುದರಿಂದ ಯಾವುದರ ಜ್ಞಾನವನ್ನೂ ಹುಟ್ಟಿಸುವುದರಲ್ಲಿ ಸ್ವಾತಂತ್ರ್ಯವಿಲ್ಲ. ವ್ಯಾಪ್ತ್ಯನುಸಂಧಾನರಹಿತರಿಗೂ ಕಾಲಾದಿಪ್ರತೀತಿಯಾಗುವುದರಿಂದ ಅನುಮಾನದಿಂದಲೂ ಕಾಲಾದಿಜ್ಞಾನವು ಆಗುವುದಿಲ್ಲ. ಹುಟ್ಟುಕಿವುಡನಿಗೂ ಕಾಲಾದಿಜ್ಞಾನವಾಗುವುದರಿಂದ ಆಗಮಕ್ಕೂ ವಿಷಯವಲ್ಲ. ಸಾಕ್ಷಿವ್ಯತಿರಿಕ್ತವಾದ ಇಂದ್ರಿಯವು ಹಿಂದೆ ಹೇಳಿದಂತೆ ಆರುವಿಧವು. ಮಹತ್ವವೂ ರೂಪವೂ ಉಳ್ಳ ದ್ರವ್ಯಗಳು, ರೂಪಸ್ಪರ್ಶಸಂಖ್ಯಾದಿ ಕೆಲವು ಗುಣಗಳು, ಕರ್ಮಗಳು, ಜಾತಿಗಳೂ ಕೂಡಾ ಚಕ್ಷುಸ್ಸಿಗೂ ತ್ವಕ್ಕಿಗೂ ವಿಷಯಗಳು. ವಾಯುವು, ಸ್ಪರ್ಶವು, ತದ್ಗತಜಾತಿಯೂ ತ್ವಕ್ಕಿಗೇ ವಿಷಯಗಳು. ಶಬ್ದ ತದ್ಗತಜಾತಿಗಳು ಶ್ರೋತ್ರಕ್ಕೆ ವಿಷಯಗಳು. ರಸವು ತದ್ಗತಜಾತಿಯು ಜಿಹ್ವೆಗೆ ವಿಷಯಗಳು. ಗಂಧವೂ ತದ್ಗಜಾತಿಯೂ ಘ್ರಾಣಕ್ಕೆ ವಿಷಯಗಳು. ಈ ಚಕ್ಷುರಾದಿ ಇಂದ್ರಿಯಗಳ ಸಂಬಂಧದಿಂದ ಹಿಂದೆ ಹೇಳಿದ ಸಮಸ್ತ ವಿಷಯಗಳೂ ಮನಸ್ಸಿಗೆ ವಿಷಯಗಳಾಗುತ್ತವೆ. ಈ ರೀತಿಯಾಗಿ ಇಂದ್ರಿಯಗಳ ಭೇದದಿಂದ ತತ್ಸಂಬಂಧಾತ್ಮಕವಾದ ಪ್ರತ್ಯಕ್ಷವೂ ಏಳು ವಿಧವು. ಈ ವಿಧವಾದ ಏಳು ಸನ್ನಿಕರ್ಷಗಳಿಂದ ಹುಟ್ಟುವ ಪ್ರತ್ಯಕ್ಷ ಜ್ಞಾನಗಳು, (1) ಸ್ವರೂಪವು, (2) ಶ್ರಾವಣವು, (3) ತ್ವಾಚವು, (4) ಚಾಕ್ಷುಷವು, (5) ರಾಸನವು, (6) ಘ್ರಾಣಜವು, (7) ಮಾನಸವು ಎಂದು ಏಳು ವಿಧವು. ಸ್ವರೂಪಜ್ಞಾನದಲ್ಲಿ ಉತ್ಪತ್ತಿಗೆ ಬದುಲಾಗಿ ವ್ಯಕ್ತಿಯನ್ನು ತಿಳಿಯಬೇಕು. ಹಿಂದೆ ಹೇಳಿದ ದೋಷಗಳಿಲ್ಲವಾದರೆ ಇಂದ್ರಿಯಗಳಿಂದ ಈ ಪ್ರತ್ಯಕ್ಷಪ್ರಮೆಯು ಹುಟ್ಟುವ ಕ್ರಮವು ಹೇಗೆಂದರೆ:- ಆತ್ಮನಿಗೂ, ಮನಸ್ಸಿಗೂ ಮೊದಲು ಸಂಯೋಗವಾಗಬೇಕು. ಮನಸ್ಸಿಗೂ, ಶ್ರೋತ್ರಾದಿ ಇಂದ್ರಿಯಗಳಿಗೂ, ಹಾಗೇ ಶ್ರೋತ್ರಾದಿ ಇಂದ್ರಿಯಗಳಿಗೂ ಶಬ್ದಾದ್ಯರ್ಥಗಳಿಗೂ, ಸಂಯೋಗವಾಗಿ ಪ್ರತ್ಯಕ್ಷಜ್ಞಾನವು ಹುಟ್ಟುತ್ತದೆ. ಸ್ವರೂಪಜ್ಞಾನವು ಅಭಿವ್ಯಕ್ತವಾಗುತ್ತದಷ್ಟೆ. ಕಿವಿಯಿಂದ ಆಯಾಯ ಶಬ್ದಪ್ರತ್ಯಕ್ಷವಾಗುವುದೇ ಶ್ರಾವಣ ಪ್ರತ್ಯಕ್ಷವು. ತ್ವಕ್ಕಿನಿಂದ ಉಷ್ಣಶೀತ ಸ್ಪರ್ಶಜ್ಞಾನವು, ಸ್ಪರ್ಶವದ್ದ್ರವ್ಯಜ್ಞಾನವು ಆಗುವುದೇ ತ್ವಾಚಪ್ರತ್ಯಕ್ಷವು. ಚಕ್ಷುಸ್ಸಿನಿಂದ ಬಿಳಿದು, ಕಪ್ಪು ಮೊದಲಾದ ರೂಪಜ್ಞಾನವೂ, ರೂಪವುಳ್ಳ ದ್ರವ್ಯಜ್ಞಾನವೂ ಆಗುವುದು. ಇದು ಚಾಕ್ಷುಷಪ್ರತ್ಯಕ್ಷವು. ಜಿಹ್ವೆಯಿಂದ ಸಿಹಿ, ಹುಳಿ ಮೊದಲಾದ ರಸಾದಿ ಜ್ಞಾನವಾಗುವುದು, ಇದು ರಾಸನಪ್ರತ್ಯಕ್ಷವು. ಘ್ರಾಣದಿಂದ ಸುವಾಸನೆ ದುರ್ವಾಸನೆ ಮೊದಲಾದ ಜ್ಞಾನವಾಗುವುದು ಇದು ಘ್ರಾಣಜ ಪ್ರತ್ಯಕ್ಷವು. ಶ್ರೋತ್ರ ಮೊದಲಾದ ಬಾಹ್ಯೇಂದ್ರಿಯ ಸಂಬಂಧವಿಲ್ಲದೆ ಮನಸ್ಸಿನಿಂದ ನಾನು ನನ್ನದು ಮೊದಲಾದ ಆತ್ಮ ಹಾಗೂ ಆತ್ಮಗತ ಗುಣಾದಿವಿಷಯಕ ಜ್ಞಾನವಾಗುವುದು. ಇದು ಮಾನಸ ಪ್ರತ್ಯಕ್ಷವು. ಹಿಂದೆ ಹೇಳಿದ ಪ್ರತ್ಯಕ್ಷ ಜ್ಞಾನಕ್ಕೆ ಅಪರೋಕ್ಷಜ್ಞಾನವೆಂತಲೂ ಶಾಸ್ತ್ರ ವ್ಯವಹಾರವು ಇರುತ್ತದೆ. ಉಪಾಸನೆಯಿಂದುಂಟಾಗುವ ಭಗವದಪರೋಕ್ಷಜ್ಞಾನವು ಸ್ವರೂಪೇಂದ್ರಿಯದಿಂದಲೇ ಆಗುವುದು. ಹಿಂದೆ ಹೇಳಿದ ಆರು ಇಂದ್ರಿಯಗಳು ದೋಷಯುಕ್ತಗಳಾಗಿದ್ದರೆ ವಿಪರೀತಜ್ಞಾನವು (ಭ್ರಾಂತಿ, ಸಂಶಯ ಮೊದಲಾದ ಅಯಥಾರ್ಥಜ್ಞಾನಗಳು) ಹುಟ್ಟುತ್ತದೆ. ಉದಾ:– (ಶುಕ್ತಿ) ಚಿಪ್ಪುವಿಗೂ, ಕಣ್ಣಿಗೂ ಸಂಯೋಗವಾದರೂ ಶುಕ್ತಿಯಲ್ಲಿರುವ ಚಾಕಚಕ್ಯ (ಬೆಳ್ಳಿಯಂತೆ ಹೊಳೆಯುವಿಕೆ) ರೂಪದೋಷದಿಂದ ಶುಕ್ತಿಯೆಂದು ಜ್ಞಾನವಾಗದೆ ಬೆಳ್ಳಿಯೆಂಬ ಭ್ರಾಂತಿಯು ಹುಟ್ಟುತ್ತದೆ. ಯಥಾರ್ಥಜ್ಞಾನವನ್ನು ಹುಟ್ಟಿಸುವ ಸ್ವಭಾವವುಳ್ಳದಾದರೂ ಶುಕ್ತಿಯ ಸಂಬಂಧವೇ ಇರುವುದಾದರೂ ಚಕ್ಷುಸ್ಸು ಏನೂ ಸಂಬಂಧವಿರದ ರಜತ (ಬೆಳ್ಳಿ) ಜ್ಞಾನವನ್ನು ಹಿಂದೆ ಹೇಳಿದ ದೋಷರೂಪ ಸಹಕಾರಿ ಸಾಮರ್ಥ್ಯದಿಂದ ಇದು ಬೆಳ್ಳಿ, ಎಂಬ ವಿಪರೀತಜ್ಞಾನವನ್ನು ಹುಟ್ಟಿಸುತ್ತದೆ. ಘ್ರಾಣದಿಂದ ಗ್ರಾಮಸೂಕರ, ಶುನಕ, ಕಾಕಾದಿಗಳಿಗೆ ದುರ್ಗಂಧದಲ್ಲಿ ಸುಗಂಧಭ್ರಮೆಯೂ, ಜಿಹ್ವೆಯಿಂದ ವಿರಸದಲ್ಲಿ ಸುರಸಭ್ರಮೆಯೂ,

ಕಣ್ಣಿನಿಂದ ಪತಂಗಕ್ಕೆ ದೀಪದಲ್ಲಿ ಫಲಭ್ರಮೆಯೂ, ತ್ವಕ್ಕಿನಿಂದ ಕಾಮುಕರಿಗೆ ಪರನಾರೀಶರೀರದಲ್ಲಿ ಸುಖಸ್ಪರ್ಶಭ್ರಮೆಯೂ, ಶ್ರೋತ್ರದಿಂದ ಕುರಂಗಕ್ಕೆ ವ್ಯಾಧಗೀತದಲ್ಲಿ ಸುಗೀತಭ್ರಮೆಯೂ, ಕಿವಿಯಿಂದ ವಿಪ್ರಲಂಭಕ (ವಂಚಕ) ವಾಕ್ಯದಲ್ಲಿ ಸಾಧುವಾಕ್ಯಭ್ರಮೆಯೂ, ಮನಸ್ಸಿನಿಂದ ಅಸ್ವತಂತ್ರನಾದ ಜೀವನಲ್ಲಿ ಸ್ವಾತಂತ್ರ್ಯಭ್ರಮೆಯೂ ಆಯಾ ಇಂದ್ರಿಯಗಳ ದೋಷಗಳಿಂದ ಹುಟ್ಟುವುವು. ಇಲ್ಲಿ ಇನ್ನೂ ಅನೇಕ ವಿಷಯಗಳನ್ನು ಶಾಸ್ತ್ರದಿಂದ ತಿಳಿಯಬಹುದು.

ಹಿಂದೆ ಹೇಳಿದ ಪ್ರತ್ಯಕ್ಷವು ಇನ್ನೊಂದು ಪ್ರಕಾರವಾಗಿ ಈಶ, ಲಕ್ಷ್ಮೀ, ಯೋಗಿ, ಅಯೋಗಿ ಪ್ರತ್ಯಕ್ಷ ಭೇದದಿಂದ ನಾಲ್ಕು ವಿಧವು. ಇವುಗಳಲ್ಲಿ ಈಶ, ಲಕ್ಷ್ಮೀ ಪ್ರತ್ಯಕ್ಷಗಳು ಸರ್ವದಾ ಸ್ವರೂಪೇಂದ್ರಿಯ ಸನ್ನಿಕರ್ಷಾತ್ಮಕಗಳೇ. ಈಶ್ವರನ ಪ್ರತ್ಯಕ್ಷಜ್ಞಾನವು ಸರ್ವಾರ್ಥ ವಿಷಯವಾದುದು. ನಿಯಮದಿಂದ ಯಥಾರ್ಥವೇ ಆದುದು. ಈಶ್ವರ ಸ್ವರೂಪವಾದುದು. ಅನಾದಿ ನಿತ್ಯವೂ, ಸ್ವತಂತ್ರವೂ, ನಿರತಿಶಯ ಸ್ಪಷ್ಟವೂ ಆಗಿರುತ್ತದೆ. ಈಶ್ವರನಲ್ಲಿ ಸರ್ವವನ್ನೂ ವಿಷಯೀಕರಿಸದೆ ಈಶ್ವರಾತಿರಿಕ್ತ ಸ್ಥಲದಲ್ಲಿ ಆಲೋಚನೆಯಿಲ್ಲದೆ ಸರ್ವವನ್ನೂ ವಿಷಯೀಕರಿಸ ತಕ್ಕುದು ಲಕ್ಷ್ಮೀಪ್ರತ್ಯಕ್ಷವು. ಇದೂ ನಿಯಮದಿಂದ ಯಥಾರ್ಥವೂ, ಲಕ್ಷ್ಮೀಸ್ವರೂಪವೂ, ಅನಾದಿ ನಿತ್ಯವೂ, ಈಶ್ವರಮಾತ್ರಾಧೀನವೂ, ಅವನ ಜ್ಞಾನದಿಂದ ಕಿಂಚಿನ್ನ್ಯೂನವಾದ ಸ್ಪಷ್ಟತ್ವವುಳ್ಳುದೂ ಆಗಿರುತ್ತದೆ. ಸ್ಪಷ್ಟತ್ವವೆಂದರೆ ಅಪರೋಕ್ಷತ್ವಾದಿಯಂತೆ ಜ್ಞಾನಗತವಾದ ಧರ್ಮವಿಶೇಷವು. ವಿಷಯನಿಮಿತ್ತವಾದುದಲ್ಲ. ಈಶ್ವರ ಪ್ರತ್ಯಕ್ಷವು ಸ್ವತಂತ್ರವು. ಲಕ್ಷ್ಮೀಪ್ರತ್ಯಕ್ಷವು ಪರತಂತ್ರವೆಂದು ಇವುಗಳಿಗೆ ಭೇದವು.

ಬ್ರಹ್ಮಪದ ಯೋಗ್ಯಜೀವರು ಋಜುಯೋಗಿಗಳು. ಅವರ ಕರಣ ಪ್ರತ್ಯಕ್ಷವು ಮುಕ್ತಿಯವರೆಗೆ ಸ್ವರೂಪಾಸ್ವರೂಪೋಭಯವಿಧ ಇಂದ್ರಿಯಸನ್ನಿಕರ್ಷಾತ್ಮಕವು. ಮುಕ್ತಿಯಲ್ಲಿ ಸ್ವರೂಪವೇ ಅವರ ಫಲ(ಜ್ಞಾನರೂಪ) ಪ್ರತ್ಯಕ್ಷವು. ಈಶ್ವರನನ್ನು ಹೊರತು ಇತರತ್ರ ಆಲೋಚನೆ ಮಾಡಿದರೆ ಸರ್ವವಿಷಯಕವಾಗಿರುತ್ತದೆ. ಈಶ್ವರನಲ್ಲಿ ಆಲೋಚಿಸಿದರೂ ಸರ್ವವನ್ನು ವಿಷಯೀಕರಿಸುವುದಿಲ್ಲವು. ಈ ಜ್ಞಾನವು-ಸ್ವರೂಪವು ಮನೋವೃತ್ತಿರೂಪವು ಎಂದು ಎರಡು ವಿಧವು. ಇವುಗಳಲ್ಲಿ ಸ್ವರೂಪವು ಅನಾದಿ ನಿತ್ಯವು. ಯೋಗದ ಸಾಮರ್ಥ್ಯದಿಂದ ಮುಕ್ತಿಯಪರ್ಯಂತ ವ್ಯಕ್ತ್ಯತಿಶಯ ಯುಕ್ತವಾದುದು. ಮುಕ್ತಿಯಲ್ಲೇಕಪ್ರಕಾರವಾಗಿರುವುದು. ವೃತ್ತಿಜ್ಞಾನವು ಪ್ರವಾಹದಿಂದ ಅನಾದಿಯು. ಅಂದರೆ ಒಂದು ನಷ್ಟವಾಗುವಾಗ ಇನ್ನೊಂದು ಹುಟ್ಟುವದು. ಯೋಗಾನುಗೃಹೀತವಾದ ಹಿಂದಿನ ಕರಣ ಪ್ರತ್ಯಕ್ಷದಿಂದ ಜನ್ಯವು. ಅದು ಮುಕ್ತಿಯಲ್ಲಿ ಇರುವದಿಲ್ಲವು. ಈ ಎರಡು ವಿಧ ಜ್ಞಾನವೂ ನಿಯಮದಿಂದ ಯಥಾರ್ಥವು. ಈಶ್ವರನಲ್ಲೂ ಇತರ ಜೀವರಿಗಿಂತ ಹೆಚ್ಚಾಗಿ ವಿಷಯೀಕರಿಸುವುದು.

ಇವರಿಂದ ವ್ಯತಿರಿಕ್ತರಾದ ತತ್ವಾಭಿಮಾನಿದೇವತೆಗಳು ತಾತ್ವಿಕಯೋಗಿಗಳು. ಅನಾದಿಯಾಗಿ ಈಶ್ವರನಿಂದ ಇತರತ್ರ ಆಲೋಚಿಸಿದರೂ ಸರ್ವವನ್ನು ವಿಷಯೀಕರಿಸದೆ ಇರುವುದು ಇವರ ಜ್ಞಾನವು. ಇದು ಕೂಡಾ ಸ್ವರೂಪವು, ಬಾಹ್ಯವು (ಮನೋ ವೃತ್ತಿರೂಪ) ಎಂದೆರಡು ಪ್ರಕಾರ. ಹಿಂದಿನವರ ಜ್ಞಾನದಂತೆ ಅನಾದಿಯಾಗಿದೆ. ಸ್ವರೂಪವು ಯಥಾರ್ಥವೇ. ಬಾಹ್ಯವು ಒಮ್ಮೊಮ್ಮೆ ಅಯಥಾರ್ಥವೂ ಆಗುವದು.

ಇವರಿಂದಲೂ ಅನ್ಯರಾದ ದೇವತೆಗಳು ಅತಾತ್ವಿಕಯೋಗಿಗಳು. ಇವರ ಜ್ಞಾನವು ಆದಿಯುಳ್ಳುದು. ಈಶ್ವರನಿಂದ ಇತರತ್ರ ಅಲ್ಪಾಜ್ಞಾನಯುಕ್ತವಾಗಿದೆ. ಇದೂ ಸ್ವರೂಪಬಾಹ್ಯವೆಂದು ಎರಡು ವಿಧವು. ಸ್ವರೂಪವು ಅನಾದಿಯಾದರೂ ಆಗಾಗ ವ್ಯಕ್ತಿಯಾಗುವುದರಿಂದ ಸಾದಿಯು ಎನಿಸಿದೆ. ಸ್ವರೂಪವು ನಿಯಮದಿಂದ ಯಥಾರ್ಥವು. ಬಾಹ್ಯವು ಒಮ್ಮೊಮ್ಮೆ ಅಯಥಾರ್ಥವೂ ಆಗುತ್ತದೆ. ಹೀಗೆ ಯೋಗಿಗಳು ಮೂರು ವಿಧರು.

ಇವರೆಲ್ಲರಿಂದಲೂ ಅನ್ಯರಾದ ಜೀವರು ಅಯೋಗಿಗಳು. ಇವರ ಜ್ಞಾನವು ಈಶ್ವರವ್ಯತಿರಿಕ್ತ ವಿಷಯಗಳಲ್ಲೂ ಅಜ್ಞಾನ ಪ್ರಚುರ (ಹೆಚ್ಚು ಅಜ್ಞಾನಯುಕ್ತ)ವಾಗಿದೆ. ಈ ಜ್ಞಾನವೂ ಸ್ವರೂಪ, ಬಾಹ್ಯವೆಂದೆರಡು ವಿಧವು. ಪೂರ್ವದವರಂತೆಯೇ ಉತ್ಪತ್ತಿವಿನಾಶವುಳ್ಳದು.

ಈ ಅಯೋಗಿಗಳು (1) ಮುಕ್ತಿಯೋಗ್ಯರು, (2) ನಿತ್ಯಸಂಸಾರಿಗಳು, (3) ತಮೋಯೋಗ್ಯರು ಎಂದು ಮೂರುವಿಧರು. ಅವರ ಸ್ವರೂಪಜ್ಞಾನವು ಯೋಗ್ಯತಾನುಸಾರವಾಗಿರುವುದು. ಈ ಮೂವರ ಬಾಹ್ಯಜ್ಞಾನವು ಒಮ್ಮೊಮ್ಮೆ ಯಥಾರ್ಥವು ಒಮ್ಮೊಮ್ಮೆ ಅಯಥಾರ್ಥವೂ ಆಗುತ್ತಿರುವುದು. ಯೋಗಿಗಳ ಪ್ರತ್ಯಕ್ಷವು ದೇಶಾಂತರ ಕಾಲಾಂತರದಲ್ಲಿರತಕ್ಕವುಗಳನ್ನೂ ವಿಷಯೀಕರಿಸುತ್ತದೆ. ಅಯೋಗಿಗಳ ಪ್ರತ್ಯಕ್ಷವು ಆಯಾದೇಶ ಕಾಲಗಳಲ್ಲಿರತಕ್ಕ ವಸ್ತುಗಳನ್ನೇ ವಿಷಯೀಕರಿಸುತ್ತದೆ. ಈ ಪ್ರತ್ಯಕ್ಷವು ಕ್ವಚಿತ್ ಅತೀತವರ್ತಮಾನವಾದ ಅರ್ಥವನ್ನು ವಿಷಯೀಕರಿಸುತ್ತದೆ. ಉ:—'ಇದು ಅದೇ ಮಡಿಕೆಯಾಗಿರುತ್ತದೆ.' ಎಂದು ಇಲ್ಲಿ ಅದೇ ಎಂಬ ಅಂಶದಲ್ಲಿ ಅತೀತವಿಷಯತ್ವವೂ 'ಇದು ಮಡಿಕೆ' ಎಂಬ ವಿಷಯದಲ್ಲಿ ವರ್ತಮಾನ ವಿಷಯತ್ವವೂ ಇರುತ್ತದೆ. ಈ ಜ್ಞಾನಕ್ಕೆ 'ಪ್ರತ್ಯಭಿಜ್ಞೆ' ಎಂದು ಹೆಸರು. ಇದು ಪೂರ್ವದ ಅನುಭವದಿಂದ ಮನಸ್ಸಿನಲ್ಲಿ ಹುಟ್ಟಿದ ಸಂಸ್ಕಾರದಿಂದೊಡಗೂಡಿದ ಚಕ್ಷುರಾದಿ ಇಂದ್ರಿಯಗಳಿಂದ ಹುಟ್ಟುತ್ತದೆ. ಅಂತೂ ಸಂಸ್ಕಾರಸಹಕೃತಗಳಾದ ಇಂದ್ರಿಯಗಳಿಂದ ಪ್ರತ್ಯಭಿಜ್ಞೆಯು ಹುಟ್ಟುತ್ತದೆ. ಈ ರೀತಿಯಾಗಿ ಎಲ್ಲಾ ಇಂದ್ರಿಯಗಳಿಂದ ಪ್ರತ್ಯಭಿಜ್ಞೆಯು ಹುಟ್ಟುವುದರಿಂದ ಅದೂ ಪ್ರತ್ಯಕ್ಷವೇ ಆಗಿರುತ್ತದೆ. ಹಿಂದೆ ಹೇಳಿದ ಪ್ರತ್ಯಕ್ಷವು 'ಇದು ಘಟವು' ಇತ್ಯಾದಿಯು ವರ್ತಮಾನ ಮಾತ್ರವಿಷಯವಾದುದು. ಹಾಗೂ ಇದಕ್ಕೆ ಕಾರಣವಾದುದು ಚಕ್ಷುರಾದಿಕರಣ ಪ್ರತ್ಯಕ್ಷವೇ.

"ಪ್ರತ್ಯಕ್ಷವು ನಿರ್ವಿಕಲ್ಪಕ, ಸವಿಕಲ್ಪಕವೆಂದು ಎರಡುವಿಧ. ವಿಶೇಷಣವಿಶೇಷ್ಯಭಾವವನ್ನು ವಿಷಯೀಕರಿಸದೆ ದ್ರವ್ಯಗುಣಾದಿ ವಸ್ತುಸ್ವರೂಪವನ್ನು ಮಾತ್ರ 'ಇದು ಏನೋಒಂದು' ಎಂದು ವಿಷಯೀಕರಿಸತಕ್ಕದು ನಿರ್ವಿಕಲ್ಪವು. ಸವಿಕಲ್ಪಕಗಳಲ್ಲಿ 'ಇವನು ಚೈತ್ರನು' ಎಂದು ನಾಮವಿಶಿಷ್ಟವಿಷಯಕವಾದುದು, 'ಇದು ಬಿಳುಪು, ಇದು ಹಳದಿಯು' ಎಂದುಗುಣ ವಿಶಿಷ್ಟವಿಷಯಕವಾದುದು, 'ಈತನು ಬ್ರಾಹ್ಮಣನು ಈತನು ಮನುಷ್ಯನು' ಎಂದು ಜಾತಿವಿಶಿಷ್ಟವಿಷಯಕವಾದುದು. 'ನಡಿಯುತ್ತಾನೆ' ಎಂದು ಕ್ರಿಯಾವಿಶಿಷ್ಟ ವಿಷಯಕವಾದುದು, ಇವು **ಸವಿಕಲ್ಪಕಜ್ಞಾನಗಳು**" ಎಂದು ತಾರ್ಕಿಕರು ಹೇಳುವರು. 'ನಿರ್ವಿಕಲ್ಪವು ಒಂದೇ ಪ್ರತ್ಯಕ್ಷವು' ಎಂದು ಬೌದ್ಧರು ಹೇಳುವರು. ಈ ಮತಗಳು ಸರಿಯಲ್ಲ. ಅವರ ಮತದಲ್ಲಿ ಗುಣಾದಿಗಳಿಗೂ ದ್ರವ್ಯಾದಿಗಳಿಗೂ ಭೇದವಿರುವುದರಿಂದ ನಿರ್ವಿಕಲ್ಪಕದಲ್ಲಿ ಗುಣಾದಿಗಳನ್ನು ಬಿಟ್ಟು ವಸ್ತುಸ್ವರೂಪವು ಮಾತ್ರವಿಷಯವಾಗಬಹುದು ಆದರೆ ಸಿದ್ಧಾಂತದಲ್ಲಿ ತತ್ತ್ವವಿವೇಕಾದಿಗ್ರಂಥಗಳಲ್ಲಿ ಹೇಳಿದಂತೆ ಗುಣಾದಿಗಳಿಗೆ ದ್ರವ್ಯಾದಿಗಳಿಂದ ಅತ್ಯಂತಭೇದವಾಗಲೀ ನಿರ್ವಿಶೇಷಾಭೇದವಾಗಲೀ ಇಲ್ಲದಿರುವುದರಿಂದ ಎಲ್ಲಾ ಪ್ರತ್ಯಕ್ಷದಲ್ಲಿಯೂ ಗುಣಾದಿ ವಿಶಿಷ್ಟಬೋಧವೇ ಆಗುವುದು. ಇದು ಸಾಕ್ಷಿಸಿದ್ಧವಾಗಿರುವುದರಿಂದ ಸವಿಕಲ್ಪಕವೇ ವಿನಹ ನಿರ್ವಿಕಲ್ಪಕವು ಇರುವುದಿಲ್ಲ. ಈ ನಿರ್ವಿಕಲ್ಪಕದಲ್ಲಿ ಪ್ರಮಾಣವೂ ಇರುವುದಿಲ್ಲವೆಂದು ಇತರ ಗ್ರಂಥಗಳಿಂದ ತಿಳಿಯುವುದು.

ಪ್ರತ್ಯಕ್ಷಜ್ಞಾನಹೇತುವಾದ ಸನ್ನಿಕರ್ಷವು (1) **ಸಂಯೋಗ**, (2) ಸಂಯುಕ್ತಸಮವಾಯ, (3) ಸಂಯುಕ್ತಸಮವೇತ ಸಮವಾಯ, (4) ಸಮವಾಯ, (5) ಸಮವೇತಸಮವಾಯ, (6) ವಿಶೇಷಣವಿಶೇಷ್ಯಭಾವ ಎಂದು ಆರುವಿಧವು. ಅವುಗಳಲ್ಲಿ (1) 'ಇದುಘಟವು' 'ಇದು ಪಟವು' ಇತ್ಯಾದಿ ಬಹಿರ್ದ್ರವ್ಯಪ್ರತ್ಯಕ್ಷದಲ್ಲಿ ಚಕ್ಷುರ್ಘಟಾದಿ **ಸಂಯೋಗವೂ** ತ್ವಕ್ ಘಟಾದಿ

ಸಂಯೋಗವೂ ಕಾರಣವು. ನಾನು ನನ್ನದು ಇತ್ಯಾದಿ ಆತ್ಮಪ್ರತ್ಯಕ್ಷದಲ್ಲಿ ಮನಃಸಂಯೋಗವೂ ಕಾರಣವು. (2) ಘಟದಲ್ಲಿ ರೂಪವಿದೆ. ಆತ್ಮನಲ್ಲಿ ಜ್ಞಾನವಿದೆ ಇತ್ಯಾದಿ ಆತ್ಮಗತಗುಣ ಪ್ರತ್ಯಕ್ಷ ದಲ್ಲಿಯೂ 'ಘಟವು ಚಲಿಸುತ್ತದೆ' 'ಘಟದಲ್ಲಿ ಘಟತ್ವವಿದೆ' ಇತ್ಯಾದಿ ಕರ್ಮಸಾಮಾನ್ಯಪ್ರತ್ಯಕ್ಷ ದಲ್ಲಿಯೂ **ಸಂಯುಕ್ತಸಮವಾಯುವು**. (3)'ಘಟರೂಪದಲ್ಲಿ ರೂಪತ್ವವಿದೆ. ಘಟಕರ್ಮದಲ್ಲಿ ಕರ್ಮತ್ವವಿದೆ' ಇತ್ಯಾದಿ ಗುಣತ್ವ, ಕರ್ಮತ್ವಸಾಮಾನ್ಯ ಪ್ರತ್ಯಕ್ಷದಲ್ಲಿ **ಸಂಯುಕ್ತಸಮವೇತ ಸಮವಾಯುವು**. (4) ಇದು ಶಬ್ದವು, ಇದುಕಕಾರವು. ಇತ್ಯಾದಿ ಶಬ್ದಪ್ರತ್ಯಕ್ಷದಲ್ಲಿ **ಸಮವಾಯುವು**. (5) ಶಬ್ದದಲ್ಲಿ ಶಬ್ದತ್ವವಿದೆ. ಕಕಾರದಲ್ಲಿ ಕತ್ವವಿದೆ ಇತ್ಯಾದಿ ಶಬ್ದಗತ ಸಾಮಾನ್ಯ ಪ್ರತ್ಯಕ್ಷದಲ್ಲಿ **ಸಮವೇತಸಮವಾಯುವು**. (6) 'ಘಟವು ಇಲ್ಲ, ಘಟದಲ್ಲಿ ರೂಪಸಮವಾಯ ವಿದೆ' ಇದೇ ಮೊದಲಾದ ಅಭಾವ ಮತ್ತು ಸಮವಾಯ ಇವುಗಳ ಪ್ರತ್ಯಕ್ಷದಲ್ಲಿ ಇಂದ್ರಿಯ ಸಂಯುಕ್ತವಿಶೇಷಣವಿಶೇಷ್ಯಭಾವಸನ್ನಿಕರ್ಷವು. 'ಘಟವು ರೂಪಾಭಾವವುಳ್ಳದ್ದು, ಕರ್ಮಾಭಾವ ವುಳ್ಳದ್ದು, ಪಟತ್ವಾಭಾವವುಳ್ಳದ್ದು, ಇತ್ಯಾದಿ ಪ್ರತ್ಯಕ್ಷದಲ್ಲಿ 'ಘಟವು ರೂಪಸಮವಾಯವುಳ್ಳದ್ದು', ಕರ್ಮಸಮವಾಯವುಳ್ಳದ್ದು, ಜಾತಿಸಮವಾಯವುಳ್ಳದ್ದು', ಇತ್ಯಾದಿ ಸಮವಾಯ ಪ್ರತ್ಯಕ್ಷದ ಲ್ಲಿಯೂ ಇಂದ್ರಿಯಸಂಯುಕ್ತ ಸಮವೇತ ವಿಶೇಷಣವಿಶೇಷ್ಯಭಾವವು ಕಾರಣವು. 'ಘಟರೂಪವು ರಸತ್ವಾಭಾವವುಳ್ಳದ್ದು, ರೂಪತ್ವಸಮವಾಯವುಳ್ಳದ್ದು' ಇತ್ಯಾದಿ ಪ್ರತ್ಯಕ್ಷದಲ್ಲಿ ಸಂಯುಕ್ತಸಮ ವೇತಸಮವೇತವಿಶೇಷಣ ವಿಶೇಷ್ಯಭಾವವು. 'ಶಬ್ದವು ಇಲ್ಲ ಕಕಾರವು ಇಲ್ಲ' ಇತ್ಯಾದಿ ಪ್ರತ್ಯಕ್ಷ ದಲ್ಲಿಯೂ, 'ಆಕಾಶವು ಶಬ್ದಸಮವಾಯವುಳ್ಳದ್ದು.' ಇತ್ಯಾದಿ ಪ್ರತ್ಯಕ್ಷದಲ್ಲಿಯೂ ಸಮವೇತ ವಿಶೇಷಣವಿಶೇಷ್ಯಭಾವವು. 'ಕಕಾರವು ಗತ್ವಾಭಾವವುಳ್ಳದ್ದು, ಕತ್ವಸಮವಾಯವುಳ್ಳದ್ದು' ಇದೇ ಮೊದಲಾದ ಪ್ರತ್ಯಕ್ಷಗಳಲ್ಲಿ ಸಮವೇತ ಸಮವೇತ ವಿಶೇಷಣವಿಶೇಷ್ಯಭಾವಸನ್ನಿಕರ್ಷವು ಕಾರ ಣವು. ಇದು ದಿಙ್ಮಾತ್ರಪ್ರದರ್ಶನೆಯಾಗಿರುತ್ತದೆ' ಎಂದೂ ತಾರ್ಕಿಕರು ಕಲ್ಪಿಸಿಕೊಂಡಿರು ವರು. ಇದೂ ಕೂಡಾ ಅಸಂಗತವು. ಗುಣಾದಿಗಳಿಗೆ ಗುಣ್ಯಾದಿಗಳಿಂದ ಹಿಂದೆ ಹೇಳಿದಂತೆ ಭೇದವಿಲ್ಲ, ಅವರು ಭಿನ್ನಗಳಿಗೆ ಸಮವಾಯವನ್ನಂಗೀಕರಿಸುವರು. ಸಮವಾಯವೇ ಕೂಡದಿರುವು ದರಿಂದ ಅವರು ವರ್ಣಿಸುವ ಸಮವಾಯದಿಂದ ಕೂಡಿದ ಸನ್ನಿಕರ್ಷಗಳೂಕೂಡುವುದಿಲ್ಲವು. ॥೩೧॥

'ಅಂದು ಘಟವನ್ನು ನೋಡಿದ್ದೆನು. ಆತನು ದೇವದತ್ತನಾಗಿದ್ದನು.' ಎಂಬಿವೇ ಮೊದ ಲಾದ ಸ್ಮೃತಿ (ಸ್ಮರಣೆ) ಗೆ ಹಿಂದೆ ಹೇಳಿದ ಪ್ರತ್ಯಕ್ಷದಲ್ಲೇ ಅಂತರ್ಭಾವವನ್ನು ಹೇಳುತ್ತಾರೆ.

**ಮೂ ॥ ಮಾನಸ ಪ್ರತ್ಯಕ್ಷಜಾ ಸ್ಮೃತಿಃ ॥ ೩೨ ॥**

**ಅ ॥** ಸ್ಮೃತಿಃ=ಸ್ಮರಣೆಯು, ಮಾನಸಪ್ರತ್ಯಕ್ಷಜಾ=ಮನೋರೂಪ ಪ್ರತ್ಯಕ್ಷದಿಂದಲೇ ಹುಟ್ಟತಕ್ಕದು.

**ತಾ ॥** ಸ್ಮೃತಿಯು ಪ್ರತ್ಯಕ್ಷವಲ್ಲವು. ಏಕೆಂದರೆ ಅದು ಚಕ್ಷುರಾದಿ ಕರಣಗಳಿಂದ ಹುಟ್ಟುವುದಿಲ್ಲ. ಅದು ಸಂಸ್ಕಾರದಿಂದ ಹುಟ್ಟುತ್ತದಷ್ಟೆ. ಸಂಸ್ಕಾರದಿಂದ ಹುಟ್ಟಿಯೂ, ಅದು ಪ್ರತ್ಯಕ್ಷಜ್ಞಾನವಾದರೆ ಸಂಸ್ಕಾರವೂ ಪ್ರತ್ಯಕ್ಷಪ್ರಮಾಣವಾಗಬೇಕಾಗುವುದು. ಅಜ್ಞಾತಕರಣ ವಾದುದರಿಂದ ಅನುಮಾನವೂ, ಆಗಮವೂ ಅಲ್ಲವಷ್ಟೆ. ಪ್ರತ್ಯಕ್ಷವಲ್ಲದೆ ಯಥಾರ್ಥವಾದರೆ ಇದರ ಕಾರಣವಾದ ಸಂಸ್ಕಾರದಲ್ಲಿ 'ಯಥಾರ್ಥಂ ಪ್ರಮಾಣಂ' ಎಂಬ ಪ್ರಮಾಣಲಕ್ಷಣಕ್ಕೆ ಅತಿ ವ್ಯಾಪ್ತಿಯು ಬರುವುದು. ಈ ಎಲ್ಲಾ ಆಶಂಕೆಗಳ ಪರಿಹಾರಕ್ಕಾಗಿ 'ಮಾನಸಪ್ರತ್ಯಕ್ಷಜಾ ಸ್ಮೃತಿಃ' ಎಂದು ಹೇಳಿದರು. ಈ ಸ್ಮೃತಿಯು ಚಕ್ಷುರಾದಿಗಳಿಂದ ಹುಟ್ಟದಿದ್ದರೂ ಮನಸ್ಸಿ

ನಿಂದ ಹುಟ್ಟತಕ್ಕುದಾಗಿದೆ. ಕಾರಣ, ಕೇವಲ ಪ್ರಮಾಣವೇ. ಇದಕ್ಕೆ ಕಾರಣವು ಮನಸ್ಸಾದುದುದರಿಂದ ಸಂಸ್ಕಾರಕ್ಕೆ ಬೇರೆ ಪ್ರಾಮಾಣ್ಯವನ್ನು ಕಲ್ಪಿಸಬೇಕಾಗಿಲ್ಲ. ಆದರೆ ಸ್ಮರಣೆಯನ್ನು ಹುಟ್ಟಿಸತಕ್ಕ ಮನಸ್ಸಿಗೆ ಸಂಸ್ಕಾರವು ಮಧ್ಯೇ (ಚಕ್ಷುರಾದಿಗಳಿಗೆ ಸಂಯೋಗದಂತೆ) ವ್ಯಾಪಾರವಾಗಿದೆ. ಅಲ್ಲದೆ ಕರಣವಲ್ಲವು. ಮನಸ್ಸು ಬಾಹ್ಯೇಂದ್ರಿಯವನ್ನು ಸಂಬಂಧಿಸಿಕೊಂಡು ತತ್ತದ್ರೂಪಾದಿ ಜ್ಞಾನವನ್ನು ಹುಟ್ಟಿಸುತ್ತದೆ. ಈ ಬಾಹ್ಯೇಂದ್ರಿಯಸಂಬಂಧವಿಲ್ಲದೆ ಸ್ವತಂತ್ರವಾಗಿ ಸ್ಮರಣೆಯನ್ನೂ ಹುಟ್ಟಿಸುತ್ತದೆ. ಆದಕಾರಣ, ಸ್ಮರಣೆಗೆ ಮನಸ್ಸೇ ಕಾರಣವಾದುದರಿಂದ ಸಂಸ್ಕಾರವು ವ್ಯಾಪಾರವಾದುದರಿಂದ ಆ ಸಂಸ್ಕಾರದಲ್ಲಿ ಯಥಾರ್ಥಜ್ಞಾನಸಾಧನತ್ವರೂಪವಾದ ಪ್ರಮಾಣಲಕ್ಷಣಕ್ಕೆ ಅತಿವ್ಯಾಪ್ತಿಯು ಇರುವುದಿಲ್ಲ. ಕಾರಣ, ಸ್ಮೃತಿಯು ಮಾನಸಪ್ರತ್ಯಕ್ಷವೇ ಅಲ್ಲದೆ ಬೇರಲ್ಲ.

ಇದು ಯಥಾರ್ಥವು, ಅಯಥಾರ್ಥವು ಎಂದು ಇತರಅನುಭವದಂತೆಯೇ ಎರಡು ವಿಧವು. ಈ ಸ್ಮೃತಿಗೆ ಪ್ರಾಮಾಣ್ಯವನ್ನಂಗೀಕರಿಸದಿದ್ದರೆ ಅತೀತಾದಿ ವಿಷಯದಲ್ಲಿ ಪ್ರಮಾಣವೇ ಇಲ್ಲವಾದೀತು. ಚಕ್ಷುರಾದಿಗಳಿಂದ ಹುಟ್ಟುವ ಪ್ರತ್ಯಭಿಜ್ಞೆಗೆ ಸಂಸ್ಕಾರವು ಹೇಗೆ ಸಹಕಾರಿಯೋ, ಹಾಗೆಯೇ ಮನಸ್ಸಿನಿಂದ ಹುಟ್ಟುವ ಸ್ಮರಣೆಗೂ ಸಂಸ್ಕಾರವು ಸಹಕಾರಿಯು. ಆದುದರಿಂದ ಪ್ರತ್ಯಭಿಜ್ಞೆಯಂತೆ ಇದೂ ಕೂಡ ಪ್ರತ್ಯಕ್ಷಪ್ರಮಾಣವೇ ಆಗುವುದು. ಯೋಗಿಪ್ರತ್ಯಕ್ಷದಲ್ಲಿ ಯೋಗಜಧರ್ಮವು ಪ್ರತ್ಯಾಸತ್ತಿ (ಸಂಬಂಧ) ಯಾಗುವಂತೆ ಈ ಸ್ಮರಣೆಯಲ್ಲೂ ಸಂಸ್ಕಾರವು ಪ್ರತ್ಯಾಸತ್ತಿಯಾಗುವುದರಲ್ಲಿ ಯಾವ ದೋಷವೂ ಬರುವುದಿಲ್ಲ. ॥ ೩೨ ॥

ಸ್ಮೃತಿಯೂ ಅನುವಾದವೂ ಎರಡೂ ಪ್ರಮಾಣವಲ್ಲವೆಂದು ಪ್ರಾಭಾಕರನು ಹೇಳುವನು. 'ಅನಧಿಗತಾರ್ಥಗಂತೃ ಪ್ರಮಾಣಂ' ಎಂದು ಆತನು ಪ್ರಮಾಣಲಕ್ಷಣವನ್ನು ಹೇಳುವನು. 'ಬೇರೆ ಪ್ರಮಾಣಗಳಿಂದ ತಿಳಿಯಲ್ಪಡದ ಅರ್ಥವನ್ನು ವಿಷಯೀಕರಿಸುವುದು ಪ್ರಮಾಣವು' ಎಂದು ಅರ್ಥವು. ಸ್ಮೃತಿಯು ಪೂರ್ವಾನುಭೂತವಿಷಯವನ್ನೇ ವಿಷಯೀಕರಿಸುವುದರಿಂದಲೂ ಅನುವಾದವು ಪ್ರಮಾಣಾಂತರ ಸಿದ್ಧಾರ್ಥಬೋಧಕವಾಕ್ಯವಾದುದರಿಂದಲೂ ಇವೆರಡೂ ಆತನ ಮತದಲ್ಲಿ ಅಪ್ರಮಾಣಗಳೆನ್ನುತ್ತಾನೆ. ಅದು ಅಸಂಗತವೆಂದು ಎರಡಕ್ಕೂ ಪ್ರಾಮಾಣ್ಯವನ್ನು ಸಾಧಿಸುವರು.

**ಮೂ ॥ ಸ್ಮೃತ್ಯನುವಾದಯೋರ್ನಾಪ್ರಾಮಾಣ್ಯಂ ॥ ೩೩ ॥**

ಅ ॥ ಸ್ಮೃತ್ಯನುವಾದಯೋಃ=ಸ್ಮೃತಿ ಮತ್ತು ಅನುವಾದಗಳಿಗೆ, ಅಪ್ರಾಮಾಣ್ಯಂ= ಅಪ್ರಾಮಾಣ್ಯವು, ನ=ಇಲ್ಲ.

ತಾ ॥ ಪ್ರಮಾಣಾಂತರದಿಂದ ತಿಳಿದ ಅರ್ಥವನ್ನೇ ತಿಳಿಸುವುದರಿಂದ ಸ್ಮೃತಿಗೂ ಅನುವಾದಕ್ಕೂ ಅಪ್ರಾಮಾಣ್ಯವನ್ನು ಹೇಳಲು ಬರುವುದಿಲ್ಲ. ಹಾಗೆ ಹೇಳುವುದಾದರೆ ಪ್ರತ್ಯಕ್ಷಾದಿ ಪ್ರಮಾಣಸಿದ್ಧಾರ್ಥವನ್ನು ಅನುವಾದ ಮಾಡುವ 'ಅಗ್ನಿರ್ಹಿಮಸ್ಯ ಭೇಷಜಂ' ಅಂದರೆ 'ಬೆಂಕಿಯು ಚಳಿಗೆ ಔಷಧವು' ಎನ್ನುವ ಆಗಮಕ್ಕೂ ಅಪ್ರಾಮಾಣ್ಯವನ್ನು ಹೇಳಬೇಕಾಗುವುದು. ಆದಕಾರಣ, ಯಥಾರ್ಥವಾದುದರಿಂದ ಇವೆರಡೂ ಪ್ರಮಾಣಗಳಾಗುತ್ತವೆ. ॥ ೩೩ ॥

ಇತರನು ಹೇಳುವುದೇನೆಂದರೆ:—'ಅದು ಘಟವು' ಇತ್ಯಾದಿ ಸ್ಮೃತಿಯು ಅತೀತವಾದ ಘಟಾದಿಯನ್ನು ವಿಷಯೀಕರಿಸುವುದಷ್ಟೆ. ಆ ಘಟಾದಿಯು ಸ್ಮೃತಿಕಾಲದಲ್ಲಿಲ್ಲ. ಇಲ್ಲವಾದ ಅರ್ಥವನ್ನು ವಿಷಯೀಕರಿಸುವುದರಿಂದ ಸ್ಮೃತಿಯು ಅಯಥಾರ್ಥವು. ಆದಕಾರಣ, ಮನೋ

ರೂಪ ಅನುಪ್ರಮಾಣಜನ್ಯವಾಗುವುದಿಲ್ಲ. ಅದನ್ನು ನಿರಾಕರಿಸಿ ಸ್ಮೃತಿಗೆ ಯಾಥಾರ್ಥ್ಯವನ್ನು ಸಾಧಿಸುವರು.

**ಮೂ ॥ ಯಥಾರ್ಥತ್ವಾನುಭವಾತ್ ॥ ೩೪ ॥**

ಅ ॥ ಯಥಾರ್ಥತ್ವಾನುಭವಾತ್='ಮಾನಸಂ ತದ್ಧಿ ವಿಜ್ಞಾನಂ ತಚ್ಚ ಸಾಕ್ಷಿಪ್ರಮಾಣಕಂ' ಎಂದು ಅನುವ್ಯಾಖ್ಯಾನದಲ್ಲಿ ಸ್ಮೃತಿಯು ಸಾಕ್ಷ್ಯನುಭವಸಿದ್ಧವೆಂದು ಹೇಳಿರುವುದರಿಂದ ಸ್ಮೃತಿಗೆ ಅಪ್ರಾಮಾಣ್ಯವು ಇಲ್ಲ.

ತಾ ॥ ಅನುಭೂತಗಳಾದ ದೇಶಕಾಲಗಳಲ್ಲಿ ಅರ್ಥವಿಲ್ಲವಾದರೆ ಆ ಜ್ಞಾನವು ಅಯಥಾರ್ಥವಾಗುವುದು. ಅಲ್ಲದೆ ಜ್ಞಾನಕಾಲದಲ್ಲಿ ವಿಷಯವಿಲ್ಲವಾದರೆ ಜ್ಞಾನವು ಅಯಥಾರ್ಥವಾಗುವುದಿಲ್ಲವು. ಹಾಗಾಗುವುದಾದರೆ ಅತೀತಾರ್ಥವನ್ನು ಸಾಧಿಸುವ ಅನುಮಾನಕ್ಕೆ ಅಯಾಥಾರ್ಥ್ಯವು ಹೇಳಬೇಕಾದೀತು. ಸ್ಮೃತಿಯಾದರೋ ಆ ದೇಶಕಾಲಗಳಲ್ಲಿ ಆ ವಿಧವಾಗಿತ್ತು. ಎಂದು ನಿವೃತ್ತಪೂರ್ವಾವಸ್ಥಾ (ಕಳೆದು ಹೋದ ಮೊದಲಿನ ಅವಸ್ಥಾ) ವಿಶಿಷ್ಟವನ್ನು ವಿಷಯೀಕರಿಸುತ್ತದೆ. ಆ ದೇಶಕಾಲಗಳಲ್ಲಿ ಘಟವು ಆ ವಿಧವಾಗಿದ್ದುದು ನಿಜವಾದುದರಿಂದ ಅದನ್ನು ವಿಷಯೀಕರಿಸುವ ಸ್ಮೃತಿಯು ಯಥಾರ್ಥ(ಪ್ರಮಾಣ)ವೇ ಆಗುವುದು. ಸ್ಮೃತಿಯು ಇದು ಆಗ ಆ ರೀತಿಯಾಗಿತ್ತು ಎಂದು ನಿವೃತ್ತಪೂರ್ವಾವಸ್ಥಾವಿಶಿಷ್ಟವನ್ನು ವಿಷಯೀಕರಿಸುತ್ತದೆ. ಇದಕ್ಕೆ ಕಾರಣವಾದ ಪೂರ್ವಾನುಭವವು 'ಇದು ಘಟವು' (ಏತದ್ದೇಶಕಾಲಸಂಬಂಧಿಯು ಘಟವು) ಎಂದು ಹುಟ್ಟಿರುವುದು. ಅನುಭವದಲ್ಲಿ ವಿಷಯೀಕರಿಸದಿದ್ದುದನ್ನು ವಿಷಯೀಕರಿಸುವುದರಿಂದ ಸ್ಮೃತಿಯು ಅಪ್ರಮಾಣವೆನ್ನುವುದಾದರೆ ಭೂತಭವಿಷ್ಯದರ್ಥವಿಷಯಕ ಅನುಭವವೆಲ್ಲಾ ಅಪ್ರಮಾಣವಾಗಬೇಕಾಗುವುದು. ಯೋಗೀಂದ್ರರ ಪ್ರತ್ಯಕ್ಷದಲ್ಲಿ ಯೋಗಜಧರ್ಮವು ಪ್ರತ್ಯಾಸತ್ತಿಯಂತೆ ಸಂಸ್ಕಾರರೂಪ ಸಹಕಾರಿಯುಕ್ತವಾದ ಮನಸ್ಸೂ ಪೂರ್ವದಲ್ಲಿ ಅನುಭೂತವಲ್ಲದ ನಿವೃತ್ತಪೂರ್ವಾವಸ್ಥೆಯನ್ನು ವಿಷಯೀಕರಿಸುವುದು. ದೋಷರೂಪ ಸಹಕಾರಿ ಸಾಮರ್ಥ್ಯದಿಂದ, ಕಣ್ಣಿನಿಂದ ಇಲ್ಲದೇ ಇರುವ ಬೆಳ್ಳಿಯ ಜ್ಞಾನವು ಹೇಗೆ ಹುಟ್ಟುವುದೋ ಹಾಗೆಯೇ ಈ ಸ್ಮೃತಿಯೂ ಹುಟ್ಟುವುದು, ಸಾಕ್ಷ್ಯನುಭವಸಿದ್ಧವಾದುದರಿಂದ ಯಾವ ದೋಷವೂ ಇರುವುದಿಲ್ಲ. ॥ ೩೪ ॥

ಸ್ಮೃತಿಪ್ರಾಮಾಣ್ಯಾಂಗೀಕಾರದಲ್ಲಿ ಯುಕ್ತ್ಯಂತರವನ್ನು ಹೇಳುವರು.

**ಮೂ ॥ ಅಹಾನೇಶ್ಚ ॥ ೩೫ ॥**

ಅ ॥ ಅಹಾನೇಶ್ಚ = ಅನಿಷ್ಟವಿಲ್ಲದಿರುವುದರಿಂದಲೂ ಸ್ಮೃತಿಪ್ರಾಮಾಣ್ಯವನ್ನಂಗೀಕರಿಸಬೇಕು.

ತಾ ॥ **ಅನಿಷ್ಟವು** (1) **ಪ್ರಾಮಾಣಿಕಹಾನವು** (ಪ್ರಮಾಣಸಿದ್ಧವಾಗಿರುವುದನ್ನು ಬಿಡುವುದು), (2) **ಅಪ್ರಾಮಾಣಿಕಕಲ್ಪನ** (ಪ್ರಮಾಣವಿಲ್ಲದುದನ್ನು ಕಲ್ಪಿಸುವುದು.) ಎಂದು ಎರಡು ವಿಧವು. ಇವುಗಳಲ್ಲಿ ಸ್ಮೃತಿಗೆ ಪ್ರಾಮಾಣ್ಯವನ್ನಂಗೀಕರಿಸಿದರೆ ಯಾವ ವಿಧವಾದ ಅನಿಷ್ಟವೂ ಇಲ್ಲದಿರುವುದರಿಂದ ಸ್ಮೃತಿಪ್ರಾಮಾಣ್ಯವನ್ನಂಗೀಕರಿಸುವುದು ಯುಕ್ತವು.

ಹಿಂದೆ ಹೇಳಿದ ತರ್ಕವು ಸ್ವಯಂ ಅಪ್ರಮಾಣವೇ ಆಗಿದ್ದು ಪ್ರಮಾಣಾನುಗ್ರಾಹಕವಾಗುವುದು. 'ಪರ್ವತವು ಅಗ್ನಿಯುಳ್ಳದು, ಧೂಮವಿರುವುದರಿಂದ' ಎಂಬಲ್ಲಿ ಧೂಮರೂಪಪ್ರಮಾಣವಿಷಯವಾದ ಅಗ್ನಿಗೆ 'ಪರ್ವತವು ನಿರಗ್ನಿಕವು' ಎಂದು ಅಭಾವಶಂಕೆಯನ್ನು ಮಾಡಲು ಆ ಪ್ರಮಾಣವಿಪರ್ಯಯಶಂಕೆಯನ್ನು 'ನಿರಗ್ನಿಕವಾದಲ್ಲಿ ನಿರ್ಧೂಮವಾದೀತು. ಇಲ್ಲವಾದರೆ

ಕಾರಣವಿಲ್ಲದೆ ಕಾರ್ಯವು ಹುಟ್ಟಬಹುದು.' ಎಂಬ ತರ್ಕವು ವ್ಯವಚ್ಛೇದಿಸುವುದು. ಧೂಮವನ್ನಂಗೀಕರಿಸಿ ಅಗ್ನಿಯನ್ನಂಗೀಕರಿಸದಿದ್ದರೆ ಧೂಮವನ್ನು ಅಂಗೀಕರಿಸುವುದೂ ಅಯುಕ್ತವು ಏಕೆಂದರೆ ಅಗ್ನಿಯಿಂದಷ್ಟೆ ಧೂಮವು ಹುಟ್ಟುವುದು ಅಂತಹ ಅಗ್ನಿಯಿಲ್ಲದೆ ಧೂಮವು ಇರುವುದಾದರೆ ಆ ಧೂಮವು ಕಾರಣವಿಲ್ಲದೇನೇ ಹುಟ್ಟಬೇಕಾಗುವುದು. ಎಂದು ತರ್ಕವನ್ನು ಪ್ರಯೋಗಿಸಲು ಆಗ ಪ್ರತಿವಾದಿಯು ಧೂಮವನ್ನಂಗೀಕರಿಸಿದ್ದ ಪ್ರಯುಕ್ತ ನಿರ್ವಾಹವಿಲ್ಲದೆ ಅಗ್ನಿಯನ್ನೂ ಅಂಗೀಕರಿಸುವನು. ಆಗ ಈ ತರ್ಕದಿಂದ ವಹ್ನ್ಯಭಾವಶಂಕಾವ್ಯವಚ್ಛೇದವಾಗುವುದು. ಇದೇ ತರ್ಕಕ್ಕೆ ಪ್ರಮಾಣಾನುಗ್ರಾಹಕತ್ವವು. ಈ ವಿಧ ಶಂಕಾವ್ಯವಚ್ಛೇದವೇ **ಅನುಗ್ರಹವು.**

ತರ್ಕಕ್ಕೆ ಪ್ರಾಮಾಣ್ಯವನ್ನು ಸಮ್ಮತಿಸುವುದರಲ್ಲಿ (1) ಪ್ರಾಮಾಣಿಕ ಹಾನಿ, (2) ಅಪ್ರಾಮಾಣಿಕ ಕಲ್ಪನಾ ಎಂಬ ಎರಡು ವಿಧದ ಅನಿಷ್ಟವೂ ಇಲ್ಲವಾದುದರಿಂದ ತರ್ಕವನ್ನು ಸಮ್ಮತಿಸುಸುವುದು ಯುಕ್ತವು. ಈ ತರ್ಕವು ವಿಪರ್ಯಯಪರ್ಯವಸಾನಪೂರ್ವಕವಾಗಿ (ಆಪತ್ತಿಕೊಟ್ಟುದಕ್ಕೆ ವಿಪರೀತವಾಗಿ) ಪ್ರವರ್ತಿಸುವುದು. ಅಲ್ಲದೆ ಸ್ವತಂತ್ರವಾಗಿ ಪ್ರವರ್ತಿಸುವುದಿಲ್ಲ. ಆದರೂ ವ್ಯಾಪ್ತಿಪಕ್ಷಧರ್ಮತಾಧೀನವಾದ ಅನುಮಾನದಂತೆ ಪ್ರಮಾಣವಾಗುವುದು. ಸಿದ್ಧಾಂತದಲ್ಲೂ ಕ್ವಚಿತ್ ತರ್ಕವು ಅನುಗ್ರಾಹಕವಾಗುವುದೆಂದು ಹೇಳುವರು. ಲಿಂಗಪರಾಮರ್ಶದಿಂದ ಮೊದಲು 'ಪರ್ವತವು ಧೂಮವತ್ತಾದರೂ ನಿರಗ್ನಿಕವು ಏತಕ್ಕಾಗಬಾರದು'? ಎಂಬ ವ್ಯಭಿಚಾರಶಂಕೆಯೂ, ಅನಂತರದಲ್ಲಿ 'ಧೂಮವತ್ತಾದರೂ ನಿರಗ್ನಿಕವಾಗಲಿ.' ಎಂಬ ಬಾಧಸತ್ಪ್ರತಿಪಕ್ಷಶಂಕೆಯೂ ಈ ಎರಡುವಿಧ ಶಂಕಾವ್ಯವಚ್ಛೇದವನ್ನು ಮಾಡುವುದರಿಂದ ತರ್ಕಕ್ಕೆ ಅನುಗ್ರಾಹಕತ್ವವು.

ಅನುಗ್ರಾಹಕತ್ವವೂ ಎರಡು ವಿಧವು. ಒಂದನೇದು ತರ್ಕವು ವ್ಯಭಿಚಾರಶಂಕೆಯನ್ನು ಪರಿಹರಿಸಿ ವ್ಯಾಪ್ತಿಜ್ಞಾನವನ್ನು ಹುಟ್ಟಿಸಿ ಪರಾಮರ್ಶವನ್ನು ಹುಟ್ಟಿಸುವುದು. ಎರಡನೇದು ಲಿಂಗ ಪರಾಮರ್ಶವು ಹುಟ್ಟುತ್ತಿರಲು ತರ್ಕವು ವಿರುದ್ಧಪ್ರಮಾಣದಿಂದುಂಟಾದ ಬಾಧಸತ್ಪ್ರತಿಪಕ್ಷಗಳ ಸಂಶಯವನ್ನು ಪರಿಹರಿಸಿ ವಹ್ನ್ಯನುಮಿತಿ ರೂಪವಾದ ಕೇವಲ ಪ್ರಮಾಣವನ್ನು ಹುಟ್ಟಿಸುತ್ತದೆ. ಹೀಗಾದರೂ ಅನುಮಾನಕ್ಕೆ ಉಪಜೀವಕವಾದ ಪ್ರತ್ಯಕ್ಷಕ್ಕೆ ಹೇಗೆ ಸ್ವತಃ ಪ್ರಾಮಾಣ್ಯವೂ ಅನುಮಾನಾನುಗ್ರಾಹಕತ್ವವೂ ಇದೆಯೋ ಅದೇ ರೀತಿಯಾಗಿ ತರ್ಕಕ್ಕೂ ಸ್ವತಃ ಪ್ರಾಮಾಣ್ಯವೂ ಪ್ರಮಾಣಾನುಗ್ರಾಹಕತ್ವವೂ ಇರುತ್ತದೆ. ಪರಮತದಂತೆ ಸ್ವತಃ ಅಪ್ರಾಮಾಣ್ಯವಿದ್ದು ಪ್ರಮಾಣಾನುಗ್ರಾಹಕತ್ವವಲ್ಲವು. ಆದಕಾರಣ ಸಿದ್ಧಾಂತವಿರೋಧವಿರುವುದಿಲ್ಲ. ಇದೇ ರೀತಿಯಾಗಿ ಬೇರೆ ಕಡೆಗಳಲ್ಲಿಯೂ ಪ್ರಮಾಣಾನುಗ್ರಾಹಕತ್ವವನ್ನು ತಿಳಿಯ ತಕ್ಕುದು. ॥ ೩೫ ॥

ಹಿಂದೆ ಸರ್ವನಿಗ್ರಹಸ್ಥಾನಗಳಿಗೂ ವಿರೋಧಾದಿಗಳಲ್ಲೇ ಅಂತರ್ಭಾವವನ್ನು ಹೇಳಿರುತ್ತಾರೆ. ಈಗಲಾದರೂ ವಿರೋಧಕ್ಕೆ ವಿಭಾಗಪೂರ್ವಕವಾಗಿ ವಿಷಯವನ್ನು ಬೋಧಿಸುವರು.

**ಮೂ ॥ ವಿರೋಧೋ ಮಾನಸ್ವವಾಕ್ಯಾಭ್ಯಾಂ ॥ ೩೬ ॥**

ಅ ॥ ವಿರೋಧಃ=ವಿರೋಧವು, ಮಾನಸ್ವವಾಕ್ಯಾಭ್ಯಾಂ=ಪ್ರಮಾಣ ಹಾಗೂ ಸ್ವವಾಕ್ಯವೂ ಇವುಗಳ ಭೇದದಿಂದ (ಎರಡು ವಿಧವು.)

ತಾ ವಿರೋಧವು, ಸಮಯಬಂಧ, ಪ್ರಶ್ನಪ್ರತಿವಚನ, ಸ್ವಪಕ್ಷಸಾಧನ, ಪರಪಕ್ಷನಿರಾಕರಣಗಳೆಂಬ ಅಂಗಗಳಿಂದ ಯುಕ್ತವಾದ ಕಥೆಯಲ್ಲಿ ಸರ್ವರೂಪ ಅನುಮಾನಸಾಧಾರಣವೂ, ಅಸಾಧಾರಣವೂ ಎಂದು ಎರಡುವಿಧವು. ಅವುಗಳಲ್ಲಿ ಅಸಾಧಾರಣವು ಪ್ರಮಾಣವಿರೋಧವೂ, ಸ್ವವಾಕ್ಯವಿರೋಧವೂ ಎಂದು ಎರಡು ವಿಧವು. ॥ ೩೬ ॥

ಇವುಗಳಲ್ಲಿ ಮಾನವಿರೋಧನಿರೂಪಣೆಯು ಅಧಿಕವು. ಸ್ವವಾಕ್ಯ ವಿರೋಧನಿರೂಪಣೆಯು ಸ್ವಲ್ಪವಿರುವುದರಿಂದ ಮೊದಲು ಅದನ್ನು ತೋರಿಸುವರು.

**ಮೂ ॥ ಸ್ವವಾಕ್ಯವಿರೋಧೋಽಪಸಿದ್ಧಾಂತಜಾತಿರೂಪೇಣ ॥ ೩೭ ॥**

ಅ ॥ ಸ್ವವಾಕ್ಯವಿರೋಧಃ=ಸ್ವವಾಕ್ಯವಿರೋಧವು, ಅಪಸಿದ್ಧಾಂತ ಜಾತಿರೂಪೇಣ= ಅಪಸಿದ್ಧಾಂತ, ಜಾತಿ ಇವುಗಳ ಭೇದದಿಂದ (ಎರಡು ವಿಧವು.)

ತಾ ॥ ತನ್ನ ವಾಕ್ಯಗಳಿಗೆ ಪರಸ್ಪರ ವಿರೋಧವು ಸ್ವವಾಕ್ಯವಿರೋಧವು. ಪೂರ್ವಾಚಾರ್ಯರಿಂದ ಪ್ರಾಮಾಣಿಕವಾಗಿ ಅಂಗೀಕರಿಸಲ್ಪಟ್ಟ ಅರ್ಥಕ್ಕೆ ವಿರುದ್ಧಾರ್ಥಾಂಗೀಕಾರವು **ಅಪಸಿದ್ಧಾಂತವು.** ಪೂರ್ವಾಚಾರ್ಯರ ವಚನವೂ ತನ್ನಿಂದ ಅಂಗೀಕೃತವಾದ್ದರಿಂದ ಸ್ವವಾಕ್ಯವೇ ಆಗುವುದು.

ತನ್ನ ವಚನಗಳ ಸಂಬಂಧದಿಂದ ಉಂಟಾಗುವ ವಿರೋಧವು ಅಂದರೆ ಒಂದೇ ವಾಕ್ಯದಲ್ಲಿ ಉಂಟಾಗುವ ವಿರೋಧವು **ಜಾತಿಯು** ಅಪಸಿದ್ಧಾಂತವು ವಾಕ್ಯಾಂತರದಿಂದ ಉಂಟಾಗುವುದು. ಈ ವಿಧವಾಗಿ ಸ್ವವಾಕ್ಯವಿರೋಧವು, ಎರಡು ಪ್ರಕಾರವಾಗಿರುತ್ತದೆ. ॥ ೩೭ ॥

ಜಾತಿಯು ಸ್ವವಚನವಿರೋಧವು, ಸ್ವಕ್ರಿಯಾವಿರೋಧವು, ಸ್ವನ್ಯಾಯವಿರೋಧವು ಎಂದು ಮೂರು ವಿಧವಾಗಿರುತ್ತದೆ. ಒಂದನೇ ಜಾತಿಗೆ ಅನುಮಾನದ ಪ್ರತಿಜ್ಞೆಯಲ್ಲಿ ಉದಾಹರಣವನು ತೋರಿಸುವರು.

**ಮೂ ॥ ಜಾತಿರ್ನ ಮೇಯೋ ಮಾನಾಪೇಕ್ಷೇತ್ಯಾದಿಕಾ ॥ ೩೮ ॥**

ಅ ॥ ಮೇಯೇ=ಮಾನದಿಂದ ತಿಳಿಯಲ್ಪಡುವುದರಲ್ಲಿ, ಮಾನಾಪೇಕ್ಷಾ=ಪ್ರಮಾಣಾಪೇಕ್ಷೆಯು, ನ=ಇರುವುದಿಲ್ಲ ಎಂಬುವುದೇ ಒಂದನೇ ಜಾತಿಗೆ ಉದಾಹರಣೆಯು. 'ಇತ್ಯಾದಿಕಾ' ಎಂಬ ಪದದಿಂದ ಸಮಯಬಂಧಾದಿಗಳಲ್ಲಿಯೂ ಇದೇ ಉದಾಹರಣೆಯು ಎಂದು ಸೂಚಿಸುವರು.

ತಾ ॥ ಮಾನದಿಂದಲೇ ತಿಳಿಯುವುದು ಮೇಯವು. ಅದು ಮಾನಾಪೇಕ್ಷೆಯುಳ್ಳುದಲ್ಲವೆಂದರೆ ಈ ಮಾತಿಗೂ ಮೇಯವೆಂಬ ಪದಕ್ಕೂ ವಿರೋಧವಿರುವುದರಿಂದ 'ತನ್ನ ತಾಯಿಯು ಬಂಜೆ' ಎನ್ನುವಂತೆ ವಿರುದ್ಧವಾಗುವುದು. ಆದುದರಿಂದಿದು **ಸ್ವವಚನವಿರೋಧವಾದ ಜಾತಿಯು.**

ಸ್ವಕ್ರಿಯಾವಿರೋಧಕ್ಕೂ ಇದೇ ಉದಾಹರಣೆಯು. 'ಮೂಕನು ನಾನು' ಇಲ್ಲಿ ಮೂಕನೆಂಬ ಪದದಿಂದ ವಚನಕ್ರಿಯೆ (ಮಾತುನಾಡುವಿಕೆ) ಇಲ್ಲದವನು ಎಂದು ಹೇಳಲ್ಪಡುತ್ತಾನೆ. ಆದರೆ ಹಾಗೆ ತಾನೇ ಹೇಳುವುದರಿಂದ ವಚನಕ್ರಿಯೆಯು ತೋರಿಬರುವುದು. ಇದರಂತೆ ಮೇಯವು ಮಾನಾಪೇಕ್ಷವಲ್ಲವೆನ್ನುವವನು ಮಾನವನ್ನು ಪ್ರಯೋಗಿಸಿದರೆ **ಸ್ವಕ್ರಿಯಾವಿರೋಧರೂಪಜಾತಿಯು.** ॥ ೩೮ ॥

ಮೂರನೇ ಸ್ವನ್ಯಾಯವಿರೋಧಕ್ಕೂ ಇದೇ ಉದಾಹರಣೆಯು. ಆ ಪ್ರಕಾರವನ್ನೇ ತೋರಿಸುವರು.

**ಮೂ ॥ ಮೇಯೇ ಮಾನಾಪೇಕ್ಷಾಸ್ತೀತಿ ಚ ತೇನೈವ ನ್ಯಾಯೇನ ಸಿದ್ಧತ್ವಾತ್ ॥**

ಅ ॥ ಮೇಯೇ=ಪ್ರಮೇಯದಲ್ಲಿ, ಮಾನಾಪೇಕ್ಷಾ=ಪ್ರಮಾಣಾಪೇಕ್ಷೆಯು, ಅಸ್ತೀತಿ ಚ=ಇರುತ್ತದೆಯೆಂದು, ತೇನೈವನ್ಯಾಯೇನ=ಆ ಪೂರ್ವದಲ್ಲಿ ಹೇಳಿದ ನ್ಯಾಯದಿಂದಲೇ, ಸಿದ್ಧತ್ವಾತ್=ಸಿದ್ಧವಾಗುವುದರಿಂದ,

**ತಾ ॥** ಮೇಯದಲ್ಲಿ ಮಾನಾಪೇಕ್ಷೆಯು ಇಲ್ಲವೆನ್ನುವವನು ಮೇಯವನ್ನು ಸಾಧಿಸುವುದಕ್ಕಾಗಿ 'ಮೇಯಂ ನ ಮಾನಾಪೇಕ್ಷಂ' ಎಂದು ಪ್ರತಿಜ್ಞೆಯನ್ನು ಮಾಡುವನು. ಮೇಯದಲ್ಲಿ ಮಾನಾಪೇಕ್ಷೆಯಿಲ್ಲವೆನ್ನುವ ತನಗೆ ಅಭೀಷ್ಟವಾದ ಪ್ರಮೇಯದಲ್ಲಿ ಇದೇ ಪ್ರಮಾಣವೆಂದು ಅಭಿಪ್ರಾಯವು. ಆವಾಗ ಈ ನ್ಯಾಯದಿಂದಲೇ ಮೇಯದಲ್ಲಿ ಮಾನಾಪೇಕ್ಷೆಯು ಇರುತ್ತದೆ ಎಂಬುದು ಏರ್ಪಡುವುದರಿಂದ ಇದು **ಸ್ವನ್ಯಾಯವಿರೋಧವಾದ ಜಾತಿಯು.** ಅಂದರೆ 'ವಿವಾದ ವಿಷಯವಾದ ಪ್ರಮೇಯವು ಪ್ರಮಾಣಾಪೇಕ್ಷೆಯುಳ್ಳದ್ದು, ಪ್ರಮೇಯತ್ವಧರ್ಮವಿರುವುದರಿಂದ, ಮೇಯದಲ್ಲಿ ಮಾನಾಪೇಕ್ಷೆಯಿಲ್ಲವೆಂದು ನಿನಗೆ ಅಭಿಮತವಾದ ಪ್ರಮೇಯದಂತೆ, ಎಂದು ಪರನು ಹೇಳುವ ನ್ಯಾಯದಂತೆ, ಪರನು ಸಾಧಿಸುವ ಪ್ರಮೇಯಕ್ಕೆ ವಿರುದ್ಧವನ್ನು ಸಾಧಿಸಲಿಕ್ಕೆ ಬರುವುದರಿಂದ ಇದು ಸ್ವನ್ಯಾಯವಿರೋಧವು. ॥ ೩೯ ॥

ಈ ಜಾತಿಯು ಸ್ವವಾಕ್ಯವಿರೋಧದಲ್ಲಿ ಮಾತ್ರ ಅಂತರ್ಭೂತವಾಗುವುದಲ್ಲವು. ಮಾನವಿರೋಧದಲ್ಲೂ ಅಂತರ್ಭವಿಸುತ್ತದೆ ಎಂದು ಹೇಳುವರು.

**ಸೂ ॥ ಮಾನವಿರೋಧಶ್ಚ ॥ ೪೦ ॥**

**ಅ ॥** ಮಾನವಿರೋಧಶ್ಚ=ಪ್ರಮಾಣ ವಿರೋಧವೂ ಕೂಡ ಅದು ಆಗುವುದು.

**ತಾ ॥** ಹಿಂದೆ ಹೇಳಿದಂತೆ ಅನುಮಾನ ಪ್ರಯೋಗ ಮಾಡಲಿಕ್ಕೆ ಬರುವುದರಿಂದ ಸ್ವನ್ಯಾಯವಿರೋಧರೂಪ ಜಾತಿಯು ಮಾನ ವಿರೋಧದಲ್ಲೂ ಅಂತರ್ಭವಿಸುವುದು. ಈ ರೀತಿಯಾಗಿ ವಿರೋಧವಿಭಾಗಾದಿಗಳನ್ನು ಹೇಳಿದುದರಿಂದ ಪ್ರತಿಜ್ಞಾ ಸನ್ಯಾಸ, ಪ್ರತಿಜ್ಞಾ ವಿರೋಧ, ಅಪಸಿದ್ಧಾಂತಗಳಿಗೂ, ನಿರನುಯೋಜ್ಯಾನುಯೋಗವಿಶೇಷವಾದ ಜಾತಿಗೂ ವಿರೋಧದಲ್ಲೇ ಅಂತರ್ಭಾವವು ಸೂಚಿತವಾಗುವುದು. ಸ್ವವಾಕ್ಯವಿರೋಧವು ಅಪಸಿದ್ಧಾಂತ ಜಾತಿ ಎಂದು ಎರಡು ಪ್ರಕಾರವೆಂದು ಬಾಯಿಬಿಟ್ಟು ಹೇಳಿರುವುದರಿಂದ ಅಪಸಿದ್ಧಾಂತವೂ ಕೂಡ ವಿರೋಧದಲ್ಲೇ ಅಂತರ್ಭವಿಸುವುದು. ಪರರಿಂದ ಹೇಳಲ್ಪಡುವ ಜಾತಿಗೂ ಸ್ವನ್ಯಾಯವಿರೋಧದಲ್ಲೇ ಅಂತರ್ಭಾವವು. ಪಕ್ಷಧರ್ಮತ್ವದಿಂದ ಯುಕ್ತವಾದರೂ ದೂಷಿಸಲು ಅಸಾಮರ್ಥ್ಯವುಳ್ಳ ಉತ್ತರವು **ಜಾತಿಯು.** ಅಸಾಮರ್ಥ್ಯವು, ಸಾಧಾರಣ, ಅಸಾಧಾರಣವೆಂದು ಎರಡು ವಿಧವು. ಅದರಲ್ಲಿ ಸಾಧಾರಣಾಸಾಮರ್ಥ್ಯವು **ಸ್ವವ್ಯಾಹತಿಯು.** ಅಸಾಧಾರಣಾಸಾಮರ್ಥ್ಯವು ಯುಕ್ತಾಂಗಹೀನತ್ವವು, ಅಯುಕ್ತಾಂಗಾಧಿಕತ್ವವು, ಅವಿಷಯವೃತ್ತಿತ್ವವೆಂದು ಮೂರು ವಿಧವಾಗಿರುತ್ತದೆ. ಈ ಎರಡುವಿಧ ಅಸಾಮರ್ಥ್ಯವೂ ಕೆಲವು ಜಾತಿಗಳಲ್ಲಿ ಅಂಗಾಂಗೀಭಾವವಿಲ್ಲದೆ ಪ್ರತ್ಯೇಕವಾಗಿಯೂ, ಕೆಲವಲ್ಲಿ ಒಂದಕ್ಕೊಂದು ಸಂಬಂಧಿಸಿಕೊಂಡೂ ಪ್ರವರ್ತಿಸುವುದು.

ಆ ಜಾತಿಗಳು— (1) ಪ್ರತಿ ಧರ್ಮಸಮ, (2) ಉತ್ಕರ್ಷಸಮ, (3) ಅಪಕರ್ಷಸಮ, (4) ವರ್ಣ್ಯಸಮ, (5) ಅವರ್ಣ್ಯಸಮ, (6) ವಿಕಲ್ಪಸಮ, (7) ಸಾಧ್ಯಸಮ, (8) ಪ್ರಾಪ್ತಿಸಮ, (9) ಅಪ್ರಾಪ್ತಿಸಮ, (10) ಪ್ರಸಂಗಸಮ, (11) ಪ್ರತಿದೃಷ್ಟಾಂತಸಮ, (12) ಅನುತ್ಪತ್ತಿಸಮ, (13) ಸಂಶಯಸಮ, (14) ಪ್ರಕರಣಸಮ, (15) ಹೇತುಸಮ, (16) ಅರ್ಥಾಪತ್ತಿಸಮ, (17) ಅವಿಶೇಷಸಮ, (18) ಉಪಪತ್ತಿಸಮ, (19) ಉಪಲಬ್ಧಿಸಮ, (20) ಅನುಪಲಬ್ಧಿಸಮ, (21) ನಿತ್ಯಸಮ, (22) ಅನಿತ್ಯಸಮ, (23) ಕಾರ್ಯಸಮವೆಂದು ಇಪ್ಪತ್ತಮೂರು ಆಗಿರುತ್ತದೆ. ಈ ಎಲ್ಲಕ್ಕೂ ಲಕ್ಷ್ಯ, ಲಕ್ಷಣ, ಉತ್ಥಾನ, ಪಾತನ, ಅವಸರ, ಫಲ, ಮೂಲ ಎಂದು ಏಳು ಅಂಗಗಳು. ಹಿಂದೆ ಹೇಳಿದ 23 ಜಾತಿ ಪ್ರಭೇದಗಳೂ, ಏಳು ಅಂಗಗಳೂ ತಾರ್ಕಿಕರಿಂದ

ಅಂಗೀಕರಿಸಲ್ಪಟ್ಟಿವೆ. ಇವುಗಳ ಲಕ್ಷಣಾದಿಗಳನ್ನು ಟೀಕಾದಿಗಳಿಂದ ತಿಳಿಯಬೇಕು. ಇವುಗಳೆಲ್ಲವೂ ಸ್ವನ್ಯಾಯವಿರೋಧದಲ್ಲೇ ಅಂತರ್ಭಾವವನ್ನು ಹೊಂದುತ್ತವೆ. ॥ ೪೦ ॥

ಈಗ ಹಿಂದೆ ಹೇಳಲ್ಪಟ್ಟಿರುವ 'ನಿರನುಯೋಜ್ಯಾನುಯೋಗಾಂಗವಾದ ಛಲಕ್ಕೆ ಅಸಂಗತದಲ್ಲಿ ಅಂತರ್ಭಾವವನ್ನು ಹೇಳುವರು.

**ಮೂ ॥ ಛಲಮಸಂಗತಂ ॥ ೪೧ ॥**

ಅ ॥ ಛಲಂ=ಛಲವು, ಅಸಂಗತಂ=ಅಸಂಗತಿಯೇ.

ತಾ ॥ ವಾದಿಯು ಹೇಳಿದ ವಾಕ್ಯಕ್ಕೆ ವಾದಿಗೆ ಸಮ್ಮತವಲ್ಲದ ಅರ್ಥವನ್ನು ಕಲ್ಪಿಸಿ ಅದನ್ನು ದೂಷಿಸುವುದರಿಂದ ವಾದಿವಾಕ್ಯಕ್ಕೆ ಭಂಗವನ್ನುಂಟುಮಾಡುವುದೇ **ಛಲವು.** ಲಕ್ಷಣದಿಂದಲೇ ಇದು ಅಸಂಗತದಲ್ಲಿ ಅಂತರ್ಭವಿಸುವುದೆಂದು ತಿಳಿಯುತ್ತದೆ. ॥ ೪೧ ॥

ಇಷ್ಟು ಮಾತ್ರವಲ್ಲವು. ಮತ್ತು—

**ಮೂ ॥ ಅನ್ಯಚ್ಚ ॥ ೪೨ ॥**

ಅ ॥ (ಛಲವು) ಅನ್ಯಚ್ಚ=ಇತರವೂ ಕೂಡ.

ತಾ ॥ ಛಲವಾಕ್ಯಕ್ಕೂ ಅರ್ಥಾಂತರವನ್ನು ಕಲ್ಪಿಸಿ ದೂಷಣೆಮಾಡಲು ಬರುವುದರಿಂದ ಸ್ವವಚನ ನ್ಯಾಯದಿಂದವಿರೋಧದಲ್ಲಿಯೂ ಛಲವು ಅಂತರ್ಭವಿಸುವುದು. ಅದಲ್ಲದೆ ಅಸಂಗತದಲ್ಲಿ ಮಾತ್ರವೇ ಅಂತರ್ಭಾವವಲ್ಲವು. ವಿರೋಧವು (1) ಪ್ರಮಾಣವಿರೋಧ, (2) ಸ್ವವಾಕ್ಯವಿರೋಧವೆಂದೆರಡು ವಿಧವು. ಸ್ವವಾಕ್ಯವಿರೋಧವೂ (1) ಅಪಸಿದ್ಧಾಂತ, (2) ಜಾತಿಯೆಂದು ಎರಡು ವಿಧವು. ಸ್ವವ್ಯಾಹತಿರೂಪವಾದ ಆ ಜಾತಿಯೂ (1) ಸ್ವವಚನವಿರೋಧ, (2) ಸ್ವಕ್ರಿಯಾ ವಿರೋಧ, (3) ಸ್ವನ್ಯಾಯವಿರೋಧವೆಂದು ಮೂರು ವಿಧವು. ಅವುಗಳಲ್ಲಿ ಸ್ವವಚನವಿರೋಧದಲ್ಲಿ ಛಲವು ಅಡಗಿತೆಂದು ಅಭಿಪ್ರಾಯವು.

ನಿರನುಯೋಜ್ಯಾಂಶಗಳಾದ ಹಾನ್ಯಾದ್ಯಾಭಾಸ, ಅಪ್ರಾಪ್ತಕಾಲಗ್ರಹಣ, ಇವೂ ಅಸಂಗತದಲ್ಲಿಯೇ ಸೇರಿದವೆಂದು ಇದೇ ಮೂಲದಿಂದ ಹೇಳುವರು.

**ಮೂ ॥ ಅನ್ಯಚ್ಚ ॥**

ಅ ॥ ಹಿಂದೆ ಹೇಳಿದ ಛಲಜಾತಿಯಿಂದ ಅತಿರಿಕ್ತವಾದ ನಿರನುಯೋಜ್ಯದ ಅಂಶದ್ವಯವೂ ಕೂಡ (ಅಸಂಗತದಲ್ಲಿಯೇ ಅಂತರ್ಭವಿಸುತ್ತದೆ). (ಪ್ರತ್ಯೇಕವಲ್ಲವು).

ತಾ ॥ ಪ್ರತಿಜ್ಞಾಹಾನ್ಯಾದಿಗಳಲ್ಲಿ ಯೋಗ್ಯವಾದ ನಿಗ್ರಹಸ್ಥಾನವನ್ನು ಬಿಟ್ಟು, ಅಯುಕ್ತವಾದ ನಿಗ್ರಹಸ್ಥಾನವನ್ನು ಉಪಯೋಗಿಸುವುದು, ಅಥವಾ ಪ್ರತಿಜ್ಞಾಹಾನ್ಯಾದಿಗಳಿಗೆ ಪ್ರಾಪ್ತಿಯಿಲ್ಲದ ಸ್ಥಳದಲ್ಲಿ ಅವುಗಳನ್ನು ಉಪಯೋಗಿಸುವುದು **ಹಾನ್ಯಾದ್ಯಾಭಾಸವು.** ಪ್ರತಿಜ್ಞಾಹಾನ್ಯಾದಿಗಳನ್ನು ಉಪಯೋಗಿಸಲಿಕ್ಕೆ ಯೋಗ್ಯವಾದ ಕಾಲವನ್ನು ಬಿಟ್ಟು ಅಕಾಲದಲ್ಲಿ ಅವುಗಳನ್ನು ಉಪಯೋಗಿಸಿದರೆ **ಅಪ್ರಾಪ್ತಕಾಲದಲ್ಲಿ ಗ್ರಹಣವು.** ಇವೆರಡೂ ಲಕ್ಷಣದಿಂದಲೇ ಅಸಂಗತಿಯಲ್ಲಿಯೇ ಸೇರಿರುವುವೆಂದು ವ್ಯಕ್ತವಾಗುವುದು.

ಇದೇ ಮೂಲದಿಂದ ಇತರ ನಿಗ್ರಹಸ್ಥಾನಗಳಿಗೂ ವಿರೋಧಾದಿ ಆರು ದೋಷಗಳಲ್ಲಿಯೇ ಅಂತರ್ಭಾವವನ್ನೂ ಸೂಚಿಸಿರುವರು. ॥ ೪೨ ॥

'ಛಲಂ ಅಸಂಗತಂ' ಎಂದು ಹೇಳಿದ ಛಲವು (1) ವಾಕ್ಛಲವು, (2) ಸಾಮಾನ್ಯ ಛಲವು, (3) ಉಪಚಾರಛಲವೆಂದು ಮೂರು ವಿಧವು. ಅವುಗಳಲ್ಲಿ ಮುಖ್ಯಾರ್ಥ ವಿವಕ್ಷೆಯಿಂದ ಪ್ರಯೋಗಿಸಲ್ಪಟ್ಟ ವಾಕ್ಯಕ್ಕೆ ಮುಖ್ಯವೇ ಆದ ಅರ್ಥಾಂತರವನ್ನು ಕಲ್ಪಿಸಿ ದೂಷಣೆ ಮಾಡುವಿಕೆಯು (1) **ವಾಕ್ಛಲವು.** ಇತರಾಭಿಪ್ರಾಯವನ್ನು ಕಲ್ಪಿಸಿ, ಹೇಳಿದ್ದನ್ನು ದೂಷಿಸುವುದು (2) **ಸಾಮಾನ್ಯಛಲವು.** ಅಮುಖ್ಯಾರ್ಥವಿವಕ್ಷೆಯಿಂದ ಪ್ರಯುಕ್ತವಾದ ವಾಕ್ಯಕ್ಕೆ ಮುಖ್ಯಾರ್ಥವನ್ನು ಕಲ್ಪಿಸಿ ದೂಷಿಸುವುದು (3) **ಉಪಚಾರಛಲವು.** ಅದರಲ್ಲಿ ವಾಕ್ಛಲಾದಿಗೆ ಅಸಂಗತಿಯಲ್ಲಿ ಅಂತರ್ಭಾವವನ್ನು ವ್ಯಕ್ತೀಕರಿಸುವುದಕ್ಕೆ ಒಂದಕ್ಕೆ ಅಂತರ್ಭಾವವು ತಿಳಿದರೆ ಅದರಂತೆ ಇತರಗಳಿಗೂ ತಿಳಿಯುವುದು ಸುಕರವಾಗುವುದೆಂದಭಿಪ್ರಾಯದಿಂದ ವಾಕ್ಛಲವನ್ನುದಾಹರಿಸುವರು.

**ಮೂ || ಗೃಷ್ಟಿವಿವಕ್ಷಯಾ ಗಾಮಾನಯೇತ್ಯುಕ್ತೇ ಪೃಥಿವೀ ವಿವಕ್ಷಯಾ ಗವಾನಯನಮಶಕ್ಯಮಿತಿವತ್ || ೪೩ ||**

**ಅ ||** ಗೃಷ್ಟಿವಿವಕ್ಷಯಾ=ಒಮ್ಮೆ ಕರುಹಾಕಿದ ಗೋವೆಂದು ವಿವಕ್ಷೆಯಿಂದ, ಗಾಮಾನಯ=ಗೋವನ್ನು ತಾ, ಇತ್ಯುಕ್ತೇ=ಎಂದು ಹೇಳಲು, ಪೃಥಿವೀ ವಿವಕ್ಷಯಾ=ಭೂಮಿಯ ವಿವಕ್ಷೆಯಿಂದ, ಗವಾನಯನಂ=ಪೃಥಿವಿಯನ್ನು ತರುವುದು, ಅಶಕ್ಯಂ=ಶಕ್ಯವಲ್ಲವು, ಇತಿವತ್=ಇದರಂತೆಯೇ (ವಾಕ್ಛಲವು ಅಸಂಗತವು).

**ತಾ ||** ಗೃಷ್ಟಿ ಶಬ್ದಕ್ಕೆ ಒಮ್ಮೆ ಕರುಹಾಕಿದ ದನವೆಂದರ್ಥವು. "ಹಸುವನ್ನು ತಾ" ಎಂಬೀ ಇಚ್ಛೆಯಿಂದ "ಗಾಮಾನಯ" ಎಂದು ವಾದಿಯು ಪ್ರಯೋಗಿಸುವಾಗ ಗೋಶಬ್ದಕ್ಕೆ ಹಸುವೆಂದೂ ಭೂಮಿಯೆಂದೂ ಎರಡೂ ಅರ್ಥವಿರುವುದರಿಂದ "ಭೂಮಿಯನ್ನು ತೆಗೆದುಕೊಂಡು ಬಾ" ಎಂಬಿಚ್ಛೆಯಿಂದ ಪ್ರಯೋಗಿಸಿದ್ದೆಂದು ತಿಳಿದು, 'ಭೂಮಿಯನ್ನು ತೆಗೆದುಕೊಂಡು ಬರುವುದು ಸರ್ವಥಾ ಶಕ್ಯವಲ್ಲವು' ಎಂದು ಪ್ರತಿವಾದಿಯು ದೂಷಿಸುವನು. ಇದು ವಾಕ್ಛಲವು. ಇಲ್ಲಿ ಗೋಶಬ್ದಕ್ಕೆ ಹಸುವು, ಪೃಥಿವಿಯು ಎನ್ನುವ ಎರಡರ್ಥಗಳು ಮುಖ್ಯವೇ ಆದರೂ ವಾದಿಯಿಂದ ದೂಷಿಸುವುದಕ್ಕೆ ವಿವಕ್ಷಿತವಾದ ಅರ್ಥವೊಂದು, ಪ್ರತಿವಾದಿಯಿಂದ ದೂಷಿಸುವುದಕ್ಕೆ ವಿವಕ್ಷಿತಾರ್ಥವು ಬೇರೊಂದು ಆದುದರಿಂದಲೇ ಇದು ಅಸಂಗತವು.

ರೂಢಿಯಿಂದ ಅಥವಾ ಯೋಗದಿಂದ ಪ್ರತಿಪಾದಿಸಲ್ಪಟ್ಟ ಅರ್ಥವು **ಮುಖ್ಯಾರ್ಥವು.** ಬಹುಪ್ರಯೋಗದಿಂದಲೇ ಸಿದ್ಧವಾದ ಅರ್ಥವು **ರೂಢ್ಯರ್ಥವು.** ಶಬ್ದಗಳ ಪ್ರಯೋಗಕ್ಕೆ ಪ್ರವೃತ್ತಿ ನಿಮಿತ್ತವಿದ್ದರೆ **ಯೋಗಾರ್ಥವು.** || ೪೩ ||

ಈಗ ಹೇತ್ವಾಭಾಸಾದಿಗಳಿಗೆ ಅಂತರ್ಭಾವವನ್ನು ಹೇಳುವುದಕ್ಕೋಸ್ಕರ ಅನುಮಾನ ವಿರೋಧವನ್ನು ಹೇಳುವರು.

**ಮೂ || ತ್ರಿವಿಧೋ ವಿರೋಧಃ || ಪ್ರತಿಜ್ಞಾಹೇತುದೃಷ್ಟಾಂತಭೇದೇನ || ೪೪ ||**

**ಅ ||** ಪ್ರತಿಜ್ಞಾ ಹೇತು ದೃಷ್ಟಾಂತಭೇದೇನ=ಪ್ರತಿಜ್ಞಾವಿರೋಧವು, ಹೇತುವಿರೋಧವು, ದೃಷ್ಟಾಂತವಿರೋಧವು ಎನ್ನುವ ಭೇದದಿಂದ (ಅನುಮಾನದ ಸಾಧಾರಣರೂಪವಾಗಿಯೂ, ಅಸಾಧಾರಣರೂಪವಾಗಿಯೂ ಸಂಭಾವಿತವಾದ,) ವಿರೋಧಃ=ವಿರೋಧವು, ತ್ರಿವಿಧಃ=ಮೂರು

**ತಾ ||** ವಿರೋಧವು ಸಾಕ್ಷಾದರ್ಥದೋಷವು. ತದ್ವಾರಾ ವಚನದೋಷವು ಈ ರೀತಿಯಾಗಿ ವಿರೋಧವು ಅರ್ಥವಚನ ದೋಷವಾದುದರಿಂದ ಇಲ್ಲಿ ಪ್ರತಿಜ್ಞಾಪದದಿಂದ ಉಪಲಕ್ಷಣತ್ವ

ದಿಂದ ಪಕ್ಷವನ್ನೂ ಕೂಡ ಪರಿಗ್ರಹಿಸಬೇಕು. ಹಾಗೆ ಹೇತುಪದದಿಂದ ಲಿಂಗವನ್ನೂ, ದೃಷ್ಟಾಂತ ವಚನದಿಂದ ಉದಾಹರಣೆಯನ್ನೂ ಕೂಡ ಪರಿಗ್ರಹಿಸಬೇಕು. ಇವುಗಳಲ್ಲಿ ಪ್ರತಿಜ್ಞಾವಿರೋಧವು ಸಾಧಾರಣವು. ಹೇತುವಿರೋಧವೂ, ದೃಷ್ಟಾಂತವಿರೋಧವೂ ಅಸಾಧಾರಣವು. ॥ ೪೪ ॥

ಪ್ರತಿಜ್ಞಾವಿರೋಧಕ್ಕೆ ಲಕ್ಷಣವನ್ನು ಹೇಳುವರು.

**ಮೂ ॥ ಪ್ರಮಾಣವಿರುದ್ಧಾರ್ಥಪ್ರತಿಜ್ಞಾ ಪ್ರತಿಜ್ಞಾವಿರೋಧಃ ॥ ೪೫ ॥**

ಅ ॥ ಪ್ರಮಾಣವಿರುದ್ಧಾರ್ಥ ಪ್ರತಿಜ್ಞಾ = ಪ್ರತ್ಯಕ್ಷಾದಿಪ್ರಮಾಣದಿಂದ ವಿರುದ್ಧವಾದ ಅರ್ಥವನ್ನು ಬೋಧಿಸುವ ಪ್ರತಿಜ್ಞೆಯು, ಪ್ರತಿಜ್ಞಾವಿರೋಧಃ=ಪ್ರತಿಜ್ಞಾವಿರೋಧವು.

ತಾ ॥ ಪ್ರಮಾಣವಿರೋಧದಂತೆ ಸ್ವವಾಕ್ಯವಿರೋಧವೂ ಪ್ರತಿಜ್ಞಾವಿರೋಧವಾದುದ ರಿಂದ ಮೂಲದಲ್ಲಿ 'ಪ್ರಮಾಣಸ್ವವಾಕ್ಯವಿರುದ್ಧಾರ್ಥಪ್ರತಿಜ್ಞಾ, ಪ್ರತಿಜ್ಞಾವಿರೋಧಃ' ಎಂದು ಹೇಳಬೇಕಿತ್ತು. ಆದರೂ ಸ್ವವಾಕ್ಯವಿರೋಧದಲ್ಲಿ ಹೇತ್ವಾಭಾಸಗಳಿಗೆ ಅಂತರ್ಭಾವವಿಲ್ಲದಿರು ವುದರಿಂದ ಅವುಗಳ ಅಂತರ್ಭಾವಕಥನೆಗೋಸ್ಕರ ಈ ಗ್ರಂಥವು ಪ್ರವೃತ್ತವಾದುದರಿಂದಲೂ, ಆ ರೀತಿಯಾಗಿ ಹೇಳದೆ 'ಪ್ರಮಾಣವಿರುದ್ಧಾರ್ಥ ಪ್ರತಿಜ್ಞಾ' ಎಂದು ಮಾತ್ರ ಹೇಳಿದರು ॥ ೪೫ ॥

ಹೇತುವಿರೋಧವನ್ನು ತೋರಿಸುವರು.

**ಮೂ ॥ ಹೇತುಸ್ವರೂಪಾಸಿದ್ಧಿರವ್ಯಾಪ್ತಿಶ್ಚೇತಿ ಹೇತುವಿರೋಧಃ ॥ ೪೬ ॥**

ಅ ॥ ಹೇತುಸ್ವರೂಪಾಸಿದ್ಧಿಃ=ಲಿಂಗಕ್ಕೆ ಸ್ವೋಚಿತಸ್ಥಾನದಲ್ಲಿ ಅಪ್ರಮಿತಿಯು (ಪ್ರಮಿತಿ ಯಿಲ್ಲದಿರೋಣವು) (ಎಲ್ಲಿ ಯಾವ ಹೇತುವು ಇರಬೇಕೆಂದು ವಾದಿಯ ಅಭಿಪ್ರಾಯವೋ, ಅಲ್ಲಿ ಅದರ ಜ್ಞಾನವು ಆಗದಿರುವಿಕೆಯು), ಅವ್ಯಾಪ್ತಿಶ್ಚ=ವ್ಯಾಪ್ತ್ಯಭಾವವೂ ಕೂಡ, ಇತಿ=ಎಂದು, ಹೇತುವಿರೋಧಃ=ಲಿಂಗ ಮತ್ತು ತದ್ವಚನಗತ ವಿರೋಧವು.

ತಾ ॥ ಸಿದ್ಧಾಂತದಲ್ಲಿ ಸಮುಚಿತದೇಶದಲ್ಲಿ ಪ್ರಮಿತಿಯಿಲ್ಲದಿರುವಿಕೆಯು, (ಅಸಿದ್ಧಿಯು) ವ್ಯಾಪ್ತಿರಾಹಿತ್ಯವೂ, ಇವೆರಡೂ ಲಿಂಗ, ಲಿಂಗವಚನಗಳ ವಿರೋಧವು. ॥ ೪೬ ॥

ದೃಷ್ಟಾಂತ ವಿರೋಧವನ್ನು ಪ್ರದರ್ಶನೆ ಮಾಡುವರು.

**ಮೂ ॥ ಸಾಧ್ಯಸ್ಯ ಸಾಧನಸ್ಯ ವಾಽನನುಗಮೋ ದೃಷ್ಟಾಂತ ವಿರೋಧಃ ॥ ೪೭ ॥**

ಅ ॥ ಸಾಧ್ಯಸ್ಯ=ಸಾಧ್ಯಕ್ಕೆ, ಸಾಧನಸ್ಯ=ಸಾಧನಕ್ಕಾಗಲೀ, ಅನನುಗಮಃ=ಇಲ್ಲದಿರು ವಿಕೆಯು, ದೃಷ್ಟಾಂತವಿರೋಧಃ=ದೃಷ್ಟಾಂತವಿರೋಧವು.

ತಾ ॥ ಸಾಧ್ಯವಾಗಲೀ, ಸಾಧನವಾಗಲೀ ಎರಡರಲ್ಲೊಂದು ದೃಷ್ಟಾಂತದಲ್ಲಿ ಇರುವು ದೆಂದು ಪ್ರಮಿತಿಯಿಲ್ಲದಿರುವಿಕೆಯು ದೃಷ್ಟಾಂತವಿರೋಧವು. ಸಾಧ್ಯವಿರದಿದ್ದರೆ **ಸಾಧ್ಯವೈಕಲ್ಯ ವೆಂದೂ,** ಸಾಧನವಿರದಿದ್ದರೆ **ಸಾಧನವೈಕಲ್ಯವೆಂದೂ** ಶಾಸ್ತ್ರವ್ಯವಹಾರವು. ಸಾಧರ್ಮ್ಯ ದೃಷ್ಟಾಂತದಲ್ಲಿ ಸಾಧನವೂ, ಸಾಧ್ಯವೂ ದೃಷ್ಟಾಂತದಲ್ಲಿರಬೇಕು. ಇರದಿದ್ದರೆ ಅದು ಸಾಧರ್ಮ್ಯ ದೃಷ್ಟಾಂತದ ವಿರೋಧವು. ವೈಧರ್ಮ್ಯದೃಷ್ಟಾಂತದಲ್ಲಿ ಸಾಧ್ಯಾಭಾವವೂ, ಸಾಧನಾಭಾವವೂ, ಉಭಯಾಭಾವವಾಗಲೀ ಇರಬೇಕು. ಅದರಲ್ಲಿ ಸಾಧ್ಯಾಭಾವಪ್ರಮಿತಿಯಿಲ್ಲದಿದ್ದರೆ, ಸಾಧನಾ ಭಾವಪ್ರಮಿತಿಯಿಲ್ಲದಿದ್ದರೆ, ಉಭಯಾಭಾವಪ್ರಮಿತಿಯಿಲ್ಲದಿದ್ದರೂ, ಸಾಧ್ಯವ್ಯಾವೃತ್ತಿವೈಕಲ್ಯ, ಸಾಧನವ್ಯಾವೃತ್ತಿವೈಕಲ್ಯರೂಪವಾದ ದೃಷ್ಟಾಂತ ವಿರೋಧವೆಂದು ತಿಳಿಯಬೇಕು. ॥ ೪೭ ॥

ಈಗ ಸಪ್ರತಿಸಾಧನವೆಂಬ ನಾಲ್ಕನೆಯ ವಿರೋಧವು ಇರುವುದರಿಂದ 'ತ್ರಿವಿಧೋ ವಿರೋಧಃ' ಎಂದು ಹಿಂದೆ ಹೇಳಿದ್ದು ಅಸಂಗತವು, ಎಂಬೀ ಆಶಂಕೆಯನ್ನು ಪರಿಹರಿಸುವರು.

**ಮೂ ॥ ಪ್ರತಿಜ್ಞಾಯಾಃ ಸಮಬಲವಿರೋಧ ಏವ ಸಪ್ರತಿಸಾಧನಃ ॥ ೪೮ ॥**

ಅ ॥ ಪ್ರತಿಜ್ಞಾಯಾಃ=ಪ್ರತಿಜ್ಞೆಗೆ, ಸಮಬಲವಿರೋಧ ಏವ=ಸಮಾನಬಲವುಳ್ಳ ಪ್ರಮಾಣ ವಿರೋಧವೇ, ಸಪ್ರತಿಸಾಧನಃ=ಸಪ್ರತಿಸಾಧನೆಯು.

ತಾ ॥ ಪ್ರತಿಜ್ಞಾ (ಪ್ರಮಾಣ) ವಿರೋಧವು- ಪ್ರಬಲ ಪ್ರಮಾಣವಿರೋಧ, ಸಮಬಲ ಪ್ರಮಾಣವಿರೋಧ, ಎಂದು ಎರಡು ವಿಧವು. ಅವುಗಳಲ್ಲಿ ಮೊದಲನೆಯದು ವಾದಿಯ ಪ್ರತಿಜ್ಞಾ ವಾಕ್ಯಕ್ಕೆ ಅಪ್ರಾಮಾಣ್ಯವನ್ನು ತಿಳಿಸಿಕೊಡುವುದು. ಎರಡನೆಯದು ವಾದಿಯ ಪ್ರತಿಜ್ಞಾವಾಕ್ಯದಿಂದ ಯಥಾರ್ಥಜ್ಞಾನ ಉಂಟಾಗುವುದರಲ್ಲಿ ತಡೆಮಾಡುವುದು. ಆದುದರಿಂದ ಸಪ್ರತಿಸಾಧನೆಗೆ ಪ್ರತಿಜ್ಞಾವಿರೋಧದಲ್ಲಿಯೇ ಅಂತರ್ಭಾವವು ಕೂಡುವುದು. ಆದುದರಿಂದ'ತ್ರಿವಿಧೋ ವಿರೋಧಃ' ಎಂದು ಹೇಳಿದ್ದು ಸಂಗತವೇ ಆಗುವುದು. ಸಪ್ರತಿಸಾಧನವೆಂದರೆ ಸತ್ಪ್ರತಿಪಕ್ಷವೆಂದು ತಾರ್ಕಿಕರು ಹೇಳುವರು. ಇದು ಹೇತುವಿರೋಧವಲ್ಲವೆಂದು, 'ಸಮಬಲವಿರೋಧ ಏವ' ಎಂಬಲ್ಲಿ ಏವಕಾರ ದಿಂದ ಸೂಚಿಸುವರು. ಇದರಿಂದ ಪ್ರಬಲ ಪ್ರಮಾಣ ವಿರೋಧಕ್ಕೂ ಹೇತು ದೋಷತ್ವವಿಲ್ಲ ವೆಂದೂ ವ್ಯಾವರ್ತಿಸಿದಂತಾಗುವುದು. ॥ ೪೮ ॥

ಈಗ ಉಪಾಧಿ ವಿರೋಧವೆಂದು ಬೇರೊಂದು ಇರುವುದರಿಂದ ಹಿಂದಿನ ವಿರೋಧ ವಿಭಾಗವು ಅಸಂಗತವೆಂಬೀ ಶಂಕೆಯನ್ನು ಪರಿಹರಿಸುವರು.

**ಮೂ ॥ ಸ ಏವೋಪಾಧಿ ದೋಷೋಽಪಿ ॥ ೪೯ ॥**

ಅ ॥ ಸ ಏವ=ಪೂರ್ವೋಕ್ತಸಪ್ರತಿಸಾಧನವೇ, ಉಪಾಧಿದೋಷಃ=ಉಪಾಧಿಯಿಂದೂ ಹಿಸಿಕೊಳ್ಳತಕ್ಕದೋಷವು.

ತಾ ॥ ಸಾಧ್ಯವು ಇದ್ದಲ್ಲೆಲ್ಲಾ ಇದ್ದು ಸಾಧನವಿದ್ದಲ್ಲಿ ಇಲ್ಲದಿದ್ದುದು **ಉಪಾಧಿಯು.**

ಉದಾ:—"ಪರ್ವತವು, ಹೊಗೆಯುಳ್ಳದ್ದು, ಬೆಂಕಿಯಿರುವುದರಿಂದ, ಅಡಿಗೆಮನೆಯಂತೆ" ಎಂಬಲ್ಲಿ ಹಸಿಕಟ್ಟಿಗೆಯ ಸಂಯೋಗವು ಉಪಾಧಿಯು. ಇಲ್ಲಿ ಹೊಗೆ (ಸಾಧನ) ಇದ್ದಲ್ಲೆಲ್ಲಾ ಹಸಿಕಟ್ಟಗೆಯ ಸಂಯೋಗವು ಇದ್ದೇ ಇರುವುದು. ಕಾರಣ ಸಾಧ್ಯವ್ಯಾಪಕವಾಯಿತು. ಆದರೆ ಬೆಂಕಿಯಿದ್ದ ಕಬ್ಬಿಣದ ಗೋಲಿನಲ್ಲಿ ಹಸಿಕಟ್ಟಿಗೆಯ ಸಂಯೋಗವಿಲ್ಲ. ಕಾರಣ ಸಾಧನಾವ್ಯಾಪಕ ವಾಯಿತು. ಈ ಉಪಾಧಿಯು ತಾನೇ ದೋಷವಲ್ಲ. ಆದರೂ 'ಸಪ್ರತಿಸಾಧನ'ವೆಂಬೀ ದೋಷ ವನ್ನು ತೋರಿಸಿಕೊಡುತ್ತದೆ. ಆದುದರಿಂದ ಸಮಬಲವಿರೋಧದಲ್ಲಿಯೇ ಅಂತರ್ಭಾವವನ್ನು ಹೊಂದುತ್ತದೆ. ಈ ಉಪಾಧಿಗೂ ಅದ್ವೈತಮತದಲ್ಲಿ ಜೀವಬ್ರಹ್ಮರ ಭೇದಕಲ್ಪಕವಾದ ಉಪಾ ಧಿಗೂ ಏನೂ ಸಂಬಂಧವಿಲ್ಲ. ಇಲ್ಲಿ ಹೇಳಿದ ಉಪಾಧಿಯು ಅನುಮಾನದ ದೋಷವು. ॥ ೪೯ ॥

ಈಗ ಹಿಂದೆ ಹೇಳಿದ ಪ್ರತಿಜ್ಞಾವಿರೋಧಾದಿಗಳಿಗೆ ಉದಾಹರಣೆಯನ್ನು ಹೇಳುವರು.

**ಮೂ ॥ ಸರ್ವ ಏತೇ ದೃಶ್ಯತ್ವಾನುಮಾನೇ ದ್ರಷ್ಟವ್ಯಾಃ ॥ ೫೦ ॥**

ಅ ॥ 'ಸರ್ವೇ, ಏತೇ'=ಈ ಎಲ್ಲಾ ಪ್ರತಿಜ್ಞಾವಿರೋಧಾದಿಗಳು, ದೃಶ್ಯತ್ವಾನುಮಾನೇ= ದೃಶ್ಯತ್ವಾನುಮಾನದಲ್ಲಿ, ದ್ರಷ್ಟವ್ಯಾಃ=ತಿಳಿಯಲ್ಪಡುವುವು. ದೃಶ್ಯತ್ವಾನುಮಾನವು:—"ವಿವಾದ ಪದಂ=ಇದು, ಸತ್ಯ ಸುಳ್ಳು ಎಂಬೀ ಜಗಳಕ್ಕೆ ಗುರಿಯಾದ ಜಗತ್ತು, ಮಿಥ್ಯಾ=ಸುಳ್ಳು,

ದೃಶ್ಯತ್ವಾತ್=ಜ್ಞಾನವಿಷಯವಾದುದರಿಂದ, ಯದ್ದೃಶ್ಯಂ=ಯಾವುದು ದೃಕ್ = (ಜ್ಞಾನ) ಗೋಚರವಾಗುವುದೋ, ತನ್ಮಿಥ್ಯಾ=ಅದು ಮಿಥ್ಯಾಭೂತವಾದುದು, ಯಥಾ ಶುಕ್ತಿರಜತಂ= ಹೇಗೆ ಶುಕ್ತಿರಜತವೋ, ತಥಾ ಚೇದಂ ದೃಶ್ಯಂ=ಹಾಗೆಯೇ (ಶುಕ್ತಿರಜತದಂತೆ) ಈ ವಿವಾದ ಪದವು ದೃಶ್ಯವು. ತಸ್ಮಾತ್ತಥಾ=ಆ ದೃಶ್ಯತ್ವವಿರುವುದರಿಂದ ಶುಕ್ತಿರಜತದಂತೆ ವಿವಾದಪದವೂ ಮಿಥ್ಯಾಭೂತವು. (ಹಿಂದಿನ ದೋಷಗಳಿಗೆ ದೃಶ್ಯತ್ವಾನುಮಾನವು ಉದಾಹರಣೆಯೆಂದು ಭಾವವು). ॥ ೫೦ ॥

ಅವುಗಳ ಪೈಕಿ ಪ್ರತಿಜ್ಞೆಯು ಪ್ರಬಲ ಪ್ರಮಾಣವಿರೋಧವನ್ನು ಪ್ರತಿಪಾದನೆಮಾಡುವರು.

**ಮೂ ॥ ಪ್ರತ್ಯಕ್ಷಾಗಮಾದಿಭಿರ್ಜಗತಃ ಸತ್ಯತ್ವಾತ್ ॥ ೫೧ ॥**

ಅ ॥ ಪ್ರತ್ಯಕ್ಷಾಗಮಾದಿಭಿಃ=ಸನ್‌ಘಟಃ, ಇತ್ಯಾದಿ ಪ್ರತ್ಯಕ್ಷಗಳಿಂದಲೂ, 'ವಿಶ್ವಂ ಸತ್ಯಂ' ಇತ್ಯಾದ್ಯಾಗಮಗಳಿಂದಲೂ 'ವಿಶ್ವಂ ಸತ್ಯಂ, ಅರ್ಥಕ್ರಿಯಾಕಾರಿತ್ವಾತ್' (ಘಟದಿಂದ ಜಲಾಹರಣವು, ಅಗ್ನಿಯಿಂದ ಶೀತನಿವೃತ್ತಿಯು ಇದೇ ಮೊದಲಾದ ಪದಾರ್ಥಕ್ರಿಯಾಕಾರಿತ್ವದ ದೆಸೆಯಿಂದ ಅಂತಹ ಕಾರ್ಯಗಳಲ್ಲಿ ಉಪಯುಕ್ತವಾದುದರಿಂದ) ಇತ್ಯಾದ್ಯನುಮಾನಗಳಿಂದಲೂ ಇವೇ ಮೊದಲಾದ ಪ್ರಬಲ ಪ್ರಮಾಣಗಳಿಂದ, ಜಗತಃ=ಜಗತ್ತಿಗೆ, ಸತ್ಯತ್ವಾವಗಮಾತ್=ಸತ್ಯತ್ವ ನಿಶ್ಚಯವಾಗುವುದರಿಂದ, "ವಿವಾದಪದಂ (ಜಗತ್) ಮಿಥ್ಯಾ" ಎನ್ನುವ ಪ್ರತಿಜ್ಞೆಯು ಪ್ರಬಲ ಪ್ರಮಾಣ ವಿರುದ್ಧವಾಗುವುದು. ॥ ೫೧ ॥

ಈಗ ದೃಶ್ಯತ್ವ ರೂಪಹೇತುವಿಗೆ ಸ್ವರೂಪಾಸಿದ್ಧಿಯನ್ನು ಉಪಪಾದಿಸುವರು.

**ಮೂ ॥ ತತ್ಪಕ್ಷೇ ದೃಶ್ಯತ್ವಸ್ಯ ಚ ಮಿಥ್ಯಾತ್ವಾತ್ ॥ ೫೨ ॥**

ಅ ॥ ತತ್ಪಕ್ಷೇ=ವಿಶ್ವಮಿಥ್ಯಾತ್ವವಾದಿಯ ಪಕ್ಷದಲ್ಲಿ, ದೃಶ್ಯತ್ವಸ್ಯಚ=ದೃಶ್ಯತ್ವಹೇತು ವಿಗೂ, ಮಿಥ್ಯಾತ್ವಾತ್=ಅಸತ್ಯತ್ವವಿರುವುದರಿಂದ, (ದೃಶ್ಯತ್ವಹೇತುವು ಸ್ವರೂಪಾಸಿದ್ಧವು.)

ತಾ ॥ ದೃಶ್ಯತ್ವಹೇತುವಿನಲ್ಲಿ ಮಿಥ್ಯಾತ್ವವಿಲ್ಲವು. ಅಲ್ಲದೆ ಸತ್ಯತ್ವವೇ ಇದೆ ಎಂದು ವಾದಿಯು ಹೇಳಿದರೆ ಆ ದೃಶ್ಯತ್ವಹೇತುವಿನಲ್ಲಿ ದೃಶ್ಯತ್ವವಿದೆಯೋ? ಇಲ್ಲವೋ? ಇಲ್ಲವಾದರೆ ಅದರ ಜ್ಞಾನವಿಲ್ಲವೆಂದಾಗಲು ಅಜ್ಞಾನರೂಪ ಅಸಿದ್ಧಿದೋಷವು ಬರುವುದು. ದೃಶ್ಯತ್ವದಲ್ಲಿ ದೃಶ್ಯತ್ವವಿದೆ ಎನ್ನುವ ಪಕ್ಷದಲ್ಲಿ, ಮಿಥ್ಯಾತ್ವರೂಪ ಸಾಧ್ಯವಿರದ ದೃಶ್ಯತ್ವದಲ್ಲಿ ದೃಶ್ಯತ್ವವು ಇರುವುದರಿಂದ ವ್ಯಭಿಚಾರದೋಷಬರುವುದು. ಆದುದರಿಂದ ದೃಶ್ಯತ್ವದಲ್ಲಿ ಮಿಥ್ಯಾತ್ವವಿರುವುದೆಂದು ಅಂಗೀಕರಿಸಲೇಬೇಕು. ಆಗ ದೃಶ್ಯತ್ವ ಹೇತುವು "ಮಿಥ್ಯಾ" ಎಂದರೆ ದೃಶ್ಯತ್ವವು ಅಸತ್ತು (ಇಲ್ಲ) ಎಂದು ಅರ್ಥವಾಗುವುದು. ಹಾಗಾದರೆ ಹೇತುವು ಸ್ವರೂಪಾಸಿದ್ಧವಾಗುವುದು. ॥ ೫೨ ॥

ಮಿಥ್ಯಾತ್ವವು ಅಸತ್ಯತ್ವವೆಂದರೆ ಸ್ವರೂಪಾಸಿದ್ಧಿಯು ಬರುವುದು. ಪರಂತು ಮಿಥ್ಯಾತ್ವ ವೆಂದರೆ ಅನಿರ್ವಚನೀಯತ್ವವು. ಆದುದರಿಂದ ದೃಶ್ಯತ್ವವು ಅನಿರ್ವಚನೀಯವೆಂದರೆ ಅವಿದ್ಯಮಾನ ವೆಂದರ್ಥವಾಗುವುದಿಲ್ಲ. ಪರಂತು ಅನಿರ್ವಚನೀಯ ದೃಶ್ಯತ್ವವು ವಿದ್ಯಮಾನವಾದುದರಿಂದ ಸ್ವರೂಪಾಸಿದ್ಧಿಯಿಲ್ಲ. ಆದುದರಿಂದ ದೃಶ್ಯತ್ವವು ಹೇಗೆ ಸ್ವರೂಪಾಸಿದ್ಧವು ಎಂಬೀ ಶಂಕೆ ಯನ್ನು ಖಂಡಿಸುವರು.

**ಮೂ ॥ ಅನಿರ್ವಚನೀಯಸ್ಯ ಪ್ರತಿವಾದಿನೋಽಸಿದ್ಧತ್ವಾತ್ ॥ ೫೩ ॥**

ಅ ॥ ಅನಿರ್ವಚನೀಯಸ್ಯ=ಅನಿರ್ವಚನೀಯಕ್ಕೆ, ಪ್ರತಿವಾದಿನಃ=ಪ್ರತಿವಾದಿಗೆ ಗಳಿಗೆ), ಅಸಿದ್ಧತ್ವಾತ್=ಅಪ್ರಸಿದ್ಧವಾದುದರಿಂದ.

ತಾ ॥ ಸತ್ತು ಎಂದೂ, ಅಸತ್ತೆಂದೂ ಎರಡೂ ಹೇಳಲಶಕ್ಯವಾದ ವಸ್ತುವು ಅನಿರ್ವಚನೀಯವು. ಇಂತಹ ಅನಿರ್ವಚನೀಯ ದೃಶ್ಯತ್ವವನ್ನು ಪ್ರತಿವಾದಿಗಳಾದ ದ್ವೈತಿಗಳು ಒಪ್ಪದಿರುವುದರಿಂದ ಹೇತುವು ವಾದಿಪ್ರತಿವಾದಿಗಳಿಬ್ಬರಿಗೂ ಸಿದ್ಧವಾಗಬೇಕಾದುದರಿಂದಲೂ ದೃಶ್ಯತ್ವವು ಅನಿರ್ವಚನೀಯವೆಂದು ವಾದಿಯು ಕಲ್ಪಿಸಿದರೂ ಅನುಮಾನವು ದುಷ್ಟವೇ (ಸ್ವರೂಪಾಸಿದ್ಧವೇ) ಆಗುವುದು.

ಅಗ್ನಿಮತ್ವವನ್ನು ಸಾಧಿಸುವಾಗ್ಗೆ ಧೂಮವತ್ವ ಮಾತ್ರವನ್ನೇ ಹೇತುವನ್ನಾಗಿ ಹೇಳುವುದೇ ಹೊರತು ಮಲಿನಧೂಮವತ್ವ, ಅಮಲಿನ ಧೂಮವತ್ವ ಇತ್ಯಾದಿ ವಿಶೇಷಗಳನ್ನು ಹೇಗೆ ವಿವಕ್ಷಿಸುವುದಿಲ್ಲವೋ ಹಾಗೆಯೇ ಅನಿರ್ವಚನೀಯತ್ವಾದಿ ವಿಶೇಷಗಳನ್ನು ವಿವಕ್ಷಿಸದೆ, ಕೇವಲ ದೃಶ್ಯತ್ವವೇ ಜಗನ್ಮಿಥ್ಯಾತ್ವದಲ್ಲಿ ಹೇತುವು. ಆಗ ಅನಿರ್ವಚನೀಯತ್ವಾದಿಗಳು ಸಿದ್ಧವಾಗದಿದ್ದರೂ ದೃಶ್ಯತ್ವಸಾಮಾನ್ಯವು ಪ್ರತಿವಾದಿಗೂ ಸಿದ್ಧವಾದುದರಿಂದ ಹೇತುವು ಸ್ವರೂಪಾಸಿದ್ಧವಾಗುವುದಿಲ್ಲ ಎಂಬೀ ಪೂರ್ವಪಕ್ಷವನ್ನೂ ಹಿಂದೆ ಹೇಳಿದ ಮೂಲದಿಂದಲೇ ದೂಷಿಸುವರು.

**ಅನಿರ್ವಚನೀಯಸ್ಯೇತಿ** ॥

ಅ ॥ ಅನಿರ್ವಚನೀಯಸ್ಯ=ಅನಿರ್ವಚನೀಯ ದೃಶ್ಯತ್ವಕ್ಕೆ (ಪ್ರತಿವಾದಿಯ ಮತದಲ್ಲಿ ಅಸಿದ್ಧವಾದುದರಿಂದ ಸ್ವರೂಪಾಸಿದ್ಧವೇ ಆಗುವುದು.)

ತಾ ॥ ಧೂಮಾನುಮಾನದಲ್ಲಿ ಮಲಿನಧೂಮ, ಅಮಲಿನಧೂಮ ಎಂಬೀ ವಿಶೇಷಗಳನ್ನು ವಿವಕ್ಷಿಸದಿದ್ದರೂ, ಅವೆರಡು ವಿಶೇಷಗಳೂ ಉಭಯರಿಗೂ ಸಮ್ಮತವಾಗಿವೆ. ಕಾರಣ ಅವೆರಡರಲ್ಲೂ ಸಾಧಾರಣವಾಗಿದ್ದ ಧೂಮತ್ವಸಾಮಾನ್ಯವು ನಿರ್ದುಷ್ಟವಾಗಬಹುದು. ಪ್ರಕೃತದಲ್ಲಿ ನಿರ್ವಚನೀಯತ್ವ, ಅನಿರ್ವಚನೀಯತ್ವ ಎಂಬೀ ವಿಶೇಷಗಳಲ್ಲಿ ಅನಿರ್ವಚನೀಯವನ್ನು ಪ್ರತಿವಾದಿಯು ಒಪ್ಪದಿರುವುದರಿಂದ ಉಭಯಸಾಧಾರಣವಾದ ದೃಶ್ಯತ್ವವೇ ಕೂಡುವುದಿಲ್ಲ. ಆದುದರಿಂದ ಸ್ವರೂಪಾಸಿದ್ಧವೇ ಆಯಿತು. ॥ ೫೪ ॥

ಈಗ ದೃಶ್ಯತ್ವಹೇತುವಿಗೆ ಅವ್ಯಾಪ್ತಿಯ (ವ್ಯಭಿಚಾರವ)ನ್ನು ಹೇಳುವರು:—

**ಮೂ ॥ ಆತ್ಮನೋಽಪಿ ದೃಶ್ಯತ್ವಾತ್** ॥ ೫೫ ॥

ಅ ॥ ಆತ್ಮನೋಽಪಿ=ಆತ್ಮನಿಗೂ, ದೃಶ್ಯತ್ವಾತ್=ದೃಶ್ಯತ್ವವಿರುವುದರಿಂದ, ಅವ್ಯಾಪ್ತಿಃ=ವ್ಯಭಿಚಾರವು.

ತಾ ॥ ಮಾಯಾವಾದಿಯೂ, ವೇದಾಂತ ಶ್ರವಣಾದಿಗಳಿಂದ ಪರಮಾತ್ಮನ ಜ್ಞಾನವುಂಟಾಗುವುದೆಂದೊಪ್ಪುವನು. ಆದುದರಿಂದ ಜ್ಞಾನಗೋಚರತ್ವರೂಪದೃಶ್ಯತ್ವವು ಆತ್ಮನಲ್ಲಿ ಇರುವುದೆಂದೂ ಅಂಗೀಕರಿಸಲೇ ಬೇಕು. ಆಗ ಜಗತ್ತಿನಲ್ಲಿ ದೃಶ್ಯತ್ವವಿರುವುದರಿಂದ ಮಿಥ್ಯಾತ್ವವಿದೆಯೆಂದು ಹೇಳತಕ್ಕವರು ಪರಮಾತ್ಮನಲ್ಲಿಯೂ ದೃಶ್ಯತ್ವವಿರುವುದರಿಂದ ಮಿಥ್ಯಾತ್ವವಿರುವುದೆಂದು ಹೇಳಬೇಕು. ಆದರೆ ಮಾಯಾವಾದಿಗಳು ಆತ್ಮನು ಸತ್ಯನೆಂದೇ ಹೇಳುವರು. ಕಾರಣ ಮಿಥ್ಯಾತ್ವವನ್ನು ಆತ್ಮನಲ್ಲಿ ಒಪ್ಪದಕಾರಣ ಅಲ್ಲಿದ್ದ ದೃಶ್ಯತ್ವಕ್ಕೆ ವ್ಯಭಿಚಾರವು ತಪ್ಪಲಾರದು. ॥೫೫॥

ಈಗ ಶುಕ್ತಿರಜತಾದಿ ದೃಷ್ಟಾಂತದಲ್ಲಿ ಸಾಧ್ಯಾನನುಗಮುವನ್ನು (ಸಾಧ್ಯವೈಕಲ್ಯವನ್ನು) ಹೇಳುವರು.

**ಮೂ ॥ ಶುಕ್ತಿರಜತಾದೇರನಿರ್ವಚನೀಯತ್ವಾಭಾವಾತ್ ॥ ೫೫ ॥**

ಅ ॥ ಶುಕ್ತಿರಜತಾದೇಃ=ಶುಕ್ತಿರಜತಾದಿಗೆ, ಅನಿರ್ವಚನೀಯತ್ವಾಭಾವಾತ್=ಅನಿರ್ವಚನೀಯತ್ವರೂಪಸಾಧ್ಯವಿಲ್ಲದಿರುವುದರಿಂದ, (ದೃಷ್ಟಾಂತವು ಸಾಧ್ಯವಿಕಲವು).

ತಾ ॥ ಅನಿರ್ವಚನೀಯತ್ವವೇ ಮಿಥ್ಯಾತ್ವವೆಂದು ವಾದಿಗೆ ಅಭಿಪ್ರಾಯವು. "ಅಸದೇವ ರಜತಂ ಪ್ರತ್ಯಭಾತ್" ರಜತವು ಅಸತ್ತಾಗಿಯೇ ತೋರಿತು, ಎಂದು ಪರಾಮರ್ಶವು (ಸ್ಮರಣೆಯು) ಭ್ರಮೋತ್ತರಕಾಲದಲ್ಲಿ ಹುಟ್ಟುವುದರಿಂದ ಶುಕ್ತಿರಜತವು ಅಸತ್ತು. ಅನಿರ್ವಚನೀಯವಲ್ಲವು, ಎಂದು ನಿಶ್ಚಯವಾಗುವುದು. ಆದುದರಿಂದ ಶುಕ್ತಿರಜತದಲ್ಲಿ ಅನಿರ್ವಚನೀಯತ್ವರೂಪ ಸಾಧ್ಯವಿಲ್ಲದಿರುವುದರಿಂದ ದೃಷ್ಟಾಂತದಲ್ಲಿ ಸಾಧ್ಯವೈಕಲ್ಯವು. ॥ ೫೫ ॥

ದೃಷ್ಟಾಂತದಲ್ಲಿ ಸಾಧನಾನನುಗಮುವನ್ನು (ಸಾಧನ ವೈಕಲ್ಯವನ್ನು) ಉಪಪಾದಿಸುವರು—

**ಮೂ ॥ ಅನಿರ್ವಚನೀಯ ದೃಶ್ಯತ್ವಾಭಾವಾತ್ ॥ ೫೬ ॥**

ಅ ॥ ಅನಿರ್ವಚನೀಯ ದೃಶ್ಯತ್ವಾಭಾವಾತ್=ಅನಿರ್ವಚನೀಯವಾದ ದೃಶ್ಯತ್ವವು (ದ್ವೈತಿಗಳ ಮತದಲ್ಲಿ) ಇಲ್ಲದಿರುವುದರಿಂದ, (ಶುಕ್ತಿರಜತದೃಷ್ಟಾಂತವು ಸಾಧನ ವಿಕಲವು) ಅಥವಾ ಅನಿರ್ವಚನೀಯವೆಂದಭಿಮತವಾದ ಶುಕ್ತಿರಜತದಲ್ಲಿ ದೃಶ್ಯತ್ವವಿಲ್ಲದಿರುವುದರಿಂದ ದೃಷ್ಟಾಂತದಲ್ಲಿ ಸಾಧನವೈಕಲ್ಯವು.

ತಾ ॥ ಅನಿರ್ವಚನೀಯವು ದೃಶ್ಯತ್ವವೆಂದು ಪರಸಂಮತವಾದುದು. ಅಸತ್ತಾದ ಶುಕ್ತಿರಜತದಲ್ಲಿ ಅನಿರ್ವಚನೀಯ ದೃಶ್ಯತ್ವವು ಪ್ರತಿವಾದಿಗೆ ಅಸಮ್ಮತವಾದುದರಿಂದ ದೃಷ್ಟಾಂತವು ಸಾಧನವಿಕಲವು. ದೃಗ್ವಿಷಯತ್ವವು ದೃಶ್ಯತ್ವವೆಂದು ಪರಾಭಿಮತವು. ಅಲ್ಲಿ ವಿಷಯತ್ವವು ಹಿಂದೆ ಹೇಳಿದಂತೆ ಜ್ಞಾನ ಜನಕೇಂದ್ರಿಯ ಸನ್ನಿಕರ್ಷ ಯೋಗಿತ್ವರೂಪವು. 'ಇದಂ ರಜತಂ' ಎನ್ನುವ ಜ್ಞಾನವು ಶುಕ್ತಿಯನ್ನು ನೋಡಿದರೇನೇ ಹುಟ್ಟುವುದರಿಂದ, ಆ ವಿಷಯತ್ವವು ಶುಕ್ತಿಗೇನೇ ಇರುವುದು, ಅಸತ್ತಾದ ರಜತಕ್ಕಿಲ್ಲವು. ಆದುದರಿಂದ ದೃಗ್ವಿಷಯತ್ವವು ಶುಕ್ತಿರಜತದಲ್ಲಿರುವುದರಿಂದ ದೃಷ್ಟಾಂತವು ಸಾಧನವಿಕಲವು. ಇದು ಎರಡು ಪ್ರತಿವಾದಿಯ ರೀತಿಯಿಂದ ದೋಷವು. ವಾದಿಯ ರೀತಿಯಿಂದಲೂ ಈ ದೋಷವು ಬರುವುದು. ಮಾಯಾವಾದಿಯೂ ಶುಕ್ತಿರಜತವು ಪ್ರಾತಿಭಾಸಿಕ (ಪ್ರತಿಭಾಸ (ಜ್ಞಾನ) ಕಾಲದಲ್ಲಿ ಮಾತ್ರ ತೋರತಕ್ಕದ್ದು, ಇತರ ಸಮಯದಲ್ಲಿಲ್ಲದಿದ್ದದ್ದು) ಎಂದು ಅಂಗೀಕರಿಸುವನು. ಅಲ್ಲದೆ ದೃಶ್ಯತ್ವವು ಅಂತಃಕರಣ ಪರಿಮಾಣ ರೂಪವಾದ ಜ್ಞಾನ ವಿಷಯತ್ವವು, ಅದು ಕೇವಲ ಅಜ್ಞಾನಕಲ್ಪಿತವಾದ (ಪ್ರಾತಿಭಾಸಿಕ) ವಸ್ತುವಿನಲ್ಲಿ ಕೂಡುವುದಿಲ್ಲ, ಪರಂತು ಚೆನ್ನಾಗಿ ಲೋಕವ್ಯವಹಾರಗೋಚರವಾದ ಘಟಾದಿಗಳಲ್ಲೇ ಇರುವುದು, ಎಂದೂ ಮಾಯಾವಾದಿಯು ಅಂಗೀಕರಿಸುವನು. ಆದುದರಿಂದ ಅಜ್ಞಾನಕಲ್ಪಿತ ಶುಕ್ತಿರಜತಾದಿಯಲ್ಲಿ ದೃಶ್ಯತ್ವವು ಕೂಡುವುದಿಲ್ಲವೆಂದೂ ಅವನು ಒಪ್ಪಲೇಬೇಕು. ಆಗ ದೃಷ್ಟಾಂತ (ಶುಕ್ತಿರಜತ) ದಲ್ಲಿ ಸಾಧನ ವೈಕಲ್ಯವು. ॥ ೫೬ ॥

ಹಿಂದೆ ಪ್ರಬಲಪ್ರಮಾಣವಿರೋಧವನ್ನು ಹೇಳಿ, ನಂತರದಲ್ಲಿ ಸಮಬಲಪ್ರಮಾಣವಿರೋಧವನ್ನು ಹೇಳಬೇಕಾಗಿದ್ದರೂ ಹಿಂದೆ ದೃಷ್ಟಾಂತವಿರೋಧವನ್ನು ಹೇಳಿದ ನಂತರದಲ್ಲಿ 'ಪ್ರತಿಜ್ಞಾಯಾಃ ಸಮಬಲವಿರೋಧ ಏವ ಸತ್ಪ್ರತಿಸಾಧನಃ', ಎಂದು ಸಮಬಲವಿರೋಧಕ್ಕೆ ಸತ್ಪ್ರತಿಸಾಧನ

ವೆಂದು ಹೆಸರು ಹೇಳಿರುವರು. ಅದೇ ಕ್ರಮವನ್ನು ಅನುಸರಿಸಿ, ಸಮಬಲಪ್ರಮಾಣವಿರೋಧ ವನ್ನು ಉಪಪಾದಿಸುವರು.

**ಮೂ || ಮಾನಸಿದ್ಧತ್ವಾದಿತಿ ಸಪ್ರತಿಸಾಧನತ್ವಾಚ್ಚ || ೫೭ ||**

ಅ || ಮಾನಸಿದ್ಧತ್ವಾದಿತಿ = ಪ್ರಮಾಣಸಿದ್ಧವಾದುದರಿಂದ ಎಂದು, ಸಪ್ರತಿಸಾಧನತ್ವಾತ್=ಪ್ರತಿಪಕ್ಷದಿಂದ ಕೂಡಿರುವಿಕೆಯದೆಸೆಯಿಂದ "ವಿವಾದಪದವು ಮಿಥ್ಯೆಯು" ಎನ್ನುವ ಪ್ರತಿಜ್ಞೆಯು, ಸಪ್ರತಿಸಾಧನೆಯು, (ಸತ್ಪ್ರತಿಪಕ್ಷವು) ಚ ಶಬ್ದದಿಂದ ಸೋಪಾಧಿಕವೂ ಕೂಡ ಆಗುವುದೆಂದು ಸೂಚಿಸಲ್ಪಡುವುದು.

ತಾ || (ವಿಮತಂ ಸತ್ಯಂ ಮಾನಸಿದ್ಧತ್ವಾತ್ ಬ್ರಹ್ಮವತ್) ಹಿಂದಿನಂತೆ "ವಿವಾದ ವಿಷಯವಾದ ಜಗತ್ತು ಸತ್ಯವಾದುದು, ಪ್ರಮಾಣಪ್ರಮಿತವಾಗಿರುವ ದೆಸೆಯಿಂದ ಬ್ರಹ್ಮನಂತೆ, ಎಂದು ಸಾಧಿಸಲು ಶಕ್ಯವಾದುದರಿಂದ 'ವಿಮತಂ ಮಿಥ್ಯಾ,' ಎನ್ನುವ ಪ್ರತಿಜ್ಞೆಯು ಸತ್ಪ್ರತಿ ಪಕ್ಷವು ಮತ್ತು ಅಮಾನಸಿದ್ಧತ್ವವು (ಪ್ರಮಾಣವಿರುದ್ಧತ್ವವು) ಉಪಾಧಿಯಾಗುವುದು. ಆ ಅನುಮಾನಸಿದ್ಧತ್ವವು ಮಿಥ್ಯಾತ್ವರೂಪಸಾಧ್ಯವಿರುವ ಶುಕ್ತಿರಜತದಲ್ಲಿರುವದರ ದೆಸೆಯಿಂದ ಸಾಧ್ಯ ವ್ಯಾಪಕವು ದೃಶ್ಯತ್ವರೂಪ ಸಾಧನವಿರುವ ಘಟಾದಿಜಗತ್ತಿನಲ್ಲಿ ಅಂದರೆ ಮಾನಸಿದ್ಧವಾದುದರಲ್ಲಿ ಮಾನಸಿದ್ಧತ್ವೋಪಾಧಿಯಿರದಿರುವುದರಿಂದ ಅದು ಸಾಧನಾವ್ಯಾಪಕವೂ ಕೂಡ ಆಗುವುದು, ಈ ಉಪಾಧಿಯು ಪಕ್ಷದ ದೆಸೆಯಿಂದ ವ್ಯಾಪ್ಯವಾಗಿ ತನ್ನಿಂದ ವ್ಯಾಪ್ತವಾದ ಮಿಥ್ಯಾತ್ವವನ್ನು ವ್ಯಾವರ್ತಿಸುವುದು. || ೫೭ ||

ಪ್ರತ್ಯಕ್ಷವು ವರ್ತಮಾನಕಾಲದಲ್ಲಿಯೇ ಪದಾರ್ಥಗಳ ಸತ್ಯತೆಯನ್ನು ವಿಷಯೀಕರಿಸುತ್ತದೆ. ಭವಿಷ್ಯತ್ಕಾಲಿಕವನ್ನು ವಿಷಯೀಕರಿಸುವುದಿಲ್ಲವು. 'ವಿಶ್ವಂ ಮಿಥ್ಯಾ' ಎನ್ನುವ ಅನುಮಾನವು, ಭವಿಷ್ಯತ್ಕಾಲಿಕ ಮಿಥ್ಯಾತ್ವವನ್ನು ವಿಷಯೀಕರಿಸುವುದು. ಆವೆಯಲ್ಲಿ ಪಾಕಕ್ಕಿಟ್ಟಿರುವ ಘಟದಲ್ಲಿ ಶ್ಯಾಮತ್ವವನ್ನು ವಿಷಯೀಕರಿಸುವ ಪ್ರತ್ಯಕ್ಷವು ಆ ಘಟವು ಪಕ್ವವಾದ ಮೇಲೆ ಕೆಂಪು ಆಗುವು ದೆಂದು ಭವಿಷ್ಯತ್ಕಾಲಿಕ ಕೆಂಪುಬಣ್ಣವನ್ನು ವಿಷಯೀಕರಿಸುವ ಪ್ರಮಾಣಕ್ಕೆ ಹೇಗೆ ಬಾಧಕವು ಆಗು ವುದಿಲ್ಲವೋ, ಹಾಗೇನೇ 'ಸನ್‌ಘಟಃ' ಇತ್ಯಾದಿ ವರ್ತಮಾನ ಸತ್ತಾಗ್ರಾಹಿ ಪ್ರತ್ಯಕ್ಷದಿಂದ 'ವಿಶ್ವಂ ಮಿಥ್ಯಾ' ಎನ್ನುವ ಭವಿಷ್ಯತ್ಕಾಲಿಕ ಸತ್ತಾಭಾವವಿಷಯಕ ಪ್ರತಿಜ್ಞೆಯು (ಬಾಧ್ಯ) ವಿರುದ್ಧವಾಗುವು ದಿಲ್ಲವೆಂಬ ಪರನ ಆಶಂಕೆಯನ್ನು ಪರಿಹರಿಸುವರು.

**ಮೂ || ಜಗತ್ಸತ್ಯತ್ವಗ್ರಾಹಿ ಪ್ರತ್ಯಕ್ಷಸ್ಯ ವರ್ತಮಾನಮಾತ್ರಗ್ರಾಹಿತ್ವೇ ಅನುಮಾನಾಗಮಪ್ರಾಮಾಣ್ಯಗ್ರಾಹಿಣೋಽಪಿ ಪ್ರತ್ಯಕ್ಷತ್ವಾವಿಶೇಷಾದುತ್ತರ ಕ್ಷಣೇ ಪ್ರಾಮಾಣ್ಯಂ ನ ಸೇತ್ಸ್ಯತೀತಿ ಭೇದಾದಿವಾಕ್ಯಾನಾಮೇವ ಪ್ರಾಮಾಣ್ಯಂ ಸ್ಯಾತ್ || ೫೮ ||**

ಅ || ಜಗತ್ಸತ್ಯತ್ವಗ್ರಾಹಿ ಪ್ರತ್ಯಕ್ಷಸ್ಯ=ಘಟವು ಇದೆ, ಎಂಬಿತ್ಯಾದಿ ಜಗತ್ಸತ್ಯತ್ವವನ್ನು ಗ್ರಹಿಸುವ ಪ್ರತ್ಯಕ್ಷಕ್ಕೆ, ವರ್ತಮಾನಮಾತ್ರಗ್ರಾಹಿತ್ವೇ=ವರ್ತಮಾನವಸ್ತುವನ್ನು ಮಾತ್ರ ಗ್ರಹಿಸು ವುದೆಂದಂಗೀಕರಿಸಿದರೆ, ಅನುಮಾನಾಗಮಪ್ರಾಮಾಣ್ಯಗ್ರಾಹಿಣಃ='ವಿಶ್ವಂ ಮಿಥ್ಯಾ' ಎನ್ನುವ ಅನುಮಾನವು 'ನೇಹ ನಾನಾಸ್ತಿ ಕಿಂಚನ' ಎಂಬ ಆಗಮವು ಇವುಗಳ ಪ್ರಾಮಾಣ್ಯವನ್ನು ಗ್ರಹಿ ಸುವ ಪ್ರತ್ಯಕ್ಷಕ್ಕೂ ಕೂಡ, ಪ್ರತ್ಯಕ್ಷತ್ವಾವಿಶೇಷಾತ್=ಜಗತ್ಸತ್ಯತ್ವಗ್ರಾಹಿಪ್ರತ್ಯಕ್ಷದಿಂದ ಸಾಮ್ಯ

ವಿರುವುದರ ದೆಸೆಯಿಂದ, ಉತ್ತರಕ್ಷಣೇ=ಉತ್ತರಕ್ಷಣದಲ್ಲಿ, ಪ್ರಾಮಾಣ್ಯಂ ನ ಸೇತ್ಸ್ಯತೀತಿ= ಪ್ರಾಮಾಣ್ಯವು ಸಿದ್ಧಿಸುವುದಿಲ್ಲವಾದುದರ ದೆಸೆಯಿಂದ, ಭೇದಾದಿವಾಕ್ಯಾನಾಮೇವ=ದ್ವಾ ಸುಪ್ರ ರ್ಣೇತ್ಯಾದಿ ಭೇದವಾಕ್ಯಗಳಿಗೂ,(ವಿಶ್ವಂ ಸತ್ಯಂ ಮಾನಸಿದ್ಧತ್ವಾತ್ ಇತ್ಯಾದ್ಯನುಮಾನಗಳಿಗೂ,) ಇವುಗಳಿಗೇನೇ, ಪ್ರಾಮಾಣ್ಯಂ ಸ್ಯಾತ್=ಪ್ರಮಾಣತ್ವವು ಸಿದ್ಧಿಸಬೇಕಾಗುವುದು.

ತಾ ॥ ಜಗತ್ಸತ್ಯತ್ವವನ್ನು ಗ್ರಹಿಸುವ ಪ್ರತ್ಯಕ್ಷವು ವರ್ತಮಾನದಲ್ಲಿರುವುದನ್ನು ಮಾತ್ರ ಗ್ರಹಿಸುವದೆನ್ನುವುದಾದರೆ, ಜಗನ್ಮಿಥ್ಯಾತ್ವಗ್ರಾಹಿಯಾದ ಅನುಮಾನಕ್ಕೂ, ಆಗಮಕ್ಕೂ ಇರುವ ಪ್ರಾಮಾಣ್ಯವನ್ನು ತಾವೇ (ಅನುಮಾನ-ಆಗಮಗಳೇ) ಗ್ರಹಿಸುತ್ತವೆಂದು ಹೇಳಬೇಕಾಗುವುದು. ಅದು ಅಯುಕ್ತವು. ತಮ್ಮ ಪ್ರಾಮಾಣ್ಯವನ್ನು ತಾವೇ (ಆ ಪ್ರಮಾಣಗಳೇ) ಗ್ರಹಿಸುತ್ತವೆನ್ನು ವುದು ಅನುಭವವಿರುದ್ಧವಾದುದು. ಈ ಅನುಮಾನಾಗಮಗಳ ಪ್ರಾಮಾಣ್ಯವನ್ನು ಇತರಾನು ಮಾನಾಗಮಗಳು ಗ್ರಹಿಸುತ್ತವೆನ್ನುವುದಾದರೆ, ಆ ಅನುಮಾನಾಗಮಗಳ ಪ್ರಾಮಾಣ್ಯವನ್ನು ತದಿತರಗಳಿಂದು ಹೀಗೆ ಅನವಸ್ಥೆಯಾಗಬೇಕಾಗುವುದು. ಜಗನ್ಮಿಥ್ಯಾತ್ವಗ್ರಾಹಿಗಳಾದ ಅನುಮಾ ನಾಗಮಗಳಪ್ರಾಮಾಣ್ಯವನ್ನು ಪ್ರತ್ಯಕ್ಷವು ಗ್ರಹಿಸುತ್ತದೆಂದಂಗೀಕರಿಸುವುದಾದರೆ, ಆಗ ಆ ಪ್ರತ್ಯ ಕ್ಷವು ಪ್ರತ್ಯಕ್ಷತ್ವಧರ್ಮದಿಂದ ಹಿಂದಿನ ಸತ್ಯತ್ವಗ್ರಾಹಿಪ್ರತ್ಯಕ್ಷದಿಂದ ಸಮಾನವಾದುದರಿಂದ ಅದ ರಂತೆ ಇದೂ ಕೂಡ, ವರ್ತಮಾನ ಮಾತ್ರ ಗ್ರಾಹಿಯಾಗಬೇಕಾಗುವುದು. ಹಾಗಾದರೆ ಆ ಪ್ರತ್ಯಕ್ಷದಿಂದ ಉತ್ತರಕ್ಷಣದಲ್ಲಿ ಅನುಮಾನಾಗಮಪ್ರಾಮಾಣ್ಯವು ಸಿದ್ಧಿಸುವುದಿಲ್ಲವು. ಆದುದ ರಿಂದ ಜಗನ್ಮಿಥ್ಯಾತ್ವಪ್ರತಿಪಾದಕಾನುಮಾನಾಗಮಗಳಿಗೆ ವರ್ತಮಾನದಲ್ಲಿ ಪ್ರಾಮಾಣ್ಯವಿರಬೇಕೇ ಹೊರತು ಉತ್ತರಕ್ಷಣದಲ್ಲಿ (ಭವಿಷ್ಯತ್ ಕಾಲದಲ್ಲಿ) ಪ್ರಾಮಾಣ್ಯವಿರಲು ಸಾಧ್ಯವಿಲ್ಲ. ಆದುದ ರಿಂದ ತದ್ವಿರುದ್ಧಗಳಾದ ಅನುಮಾನಾಗಮಗಳಿಗೆ ಭವಿಷ್ಯತ್ ಕಾಲದಲ್ಲಿ ಪ್ರಾಮಾಣ್ಯವು ಸಿದ್ಧಿ ಸುವುದು. ॥ ೫೮ ॥

ಸಾಕ್ಷಿವ್ಯತಿರಿಕ್ತ ಪ್ರತ್ಯಕ್ಷವು ವರ್ತಮಾನ ಮಾತ್ರಗ್ರಾಹಿಯು, ಸಾಕ್ಷಿಪ್ರತ್ಯಕ್ಷವು ಭವಿಷ್ಯ ತ್ತನ್ನೂ ಕೂಡ ಗ್ರಹಿಸುವುದು. ಆದುದರಿಂದ ಉತ್ತರಕ್ಷಣದಲ್ಲಿ ಮಿಥ್ಯಾತ್ವಾನುಮಾನಾಗಮ ಪ್ರಾಮಾಣ್ಯವನ್ನು ಸಾಕ್ಷಿಯು ಗ್ರಹಿಸುವುದು. ಆದುದರಿಂದ ಹಿಂದೆ ಹೇಳಿದ ದೋಷವಿಲ್ಲವೆಂದರೆ ಅದನ್ನು ದೂಷಿಸುವರು.

**ಮೂ ॥ ತಸ್ಯ ಸಾಕ್ಷಿಸಿದ್ಧತ್ವಂ ಚೇಜ್ಜಗತ್ಸತ್ಯತ್ವಮಪಿ ಸಾಕ್ಷಿಸಿದ್ಧಂ ॥ ೫೯ ॥**

ಅ ॥ ತಸ್ಯ=ಆ ಜಗನ್ಮಿಥ್ಯಾತ್ವಗ್ರಾಹಿಗಳಾದ ಅನುಮಾನಾಗಮಗಳ ಪ್ರಾಮಾಣ್ಯಕ್ಕೆ, ಸಾಕ್ಷಿಸಿದ್ಧತ್ವಂ ಚೇತ್=ಸಾಕ್ಷಿಸಿದ್ಧತ್ವವಿದೆಯೆಂದರೆ, ಜಗತ್ಸತ್ಯತ್ವಮಪಿ=ಜಗತ್ಸತ್ಯತ್ವವೂ ಕೂಡ, ಸಾಕ್ಷಿಸಿದ್ಧಂ=ಸಾಕ್ಷಿಯಿಂದಲೇ ಸಿದ್ಧವಾಗುವುದು.

ತಾ ॥ ಜಗನ್ಮಿಥ್ಯಾತ್ವಗ್ರಾಹಕಗಳಾದ ಅನುಮಾನಾಗಮ ಪ್ರಾಮಾಣ್ಯವು ಸಾಕ್ಷಿಸಿದ್ಧ ವಾಗುವುದಾದರೆ ಜಗತ್ಸತ್ಯತ್ವವೂ ಸಾಕ್ಷಿಯಿಂದಲೇ ಸಿದ್ಧವಾಗುವುದೆಂದು ಹೇಳುವೆವು. ಆಗ ಸಾಕ್ಷಿಗೆ ವರ್ತಮಾನಮಾತ್ರಗ್ರಾಹಿತ್ವವಿಲ್ಲದಿರುವ ದೆಸೆಯಿಂದ ಮಿಥ್ಯಾತ್ವಾನುಮಾನದಿಂದ ಸಾಧಿ ಸಲ್ಪಡುವ ಜಗತ್ತಿಗೆ ಭವಿಷ್ಯದ್ಬಾಧ್ಯತ್ವದ ಅಭಾವವು ಸಾಕ್ಷಿಯಿಂದಲೇ ಸಿದ್ಧಿಸುವುದು. ಆಗ ಹಿಂದೆ ಹೇಳಿದ ಪ್ರತ್ಯಕ್ಷವಿರೋಧವು ಅನುಮಾನಕ್ಕೆ ದುರ್ವಾರವಾಗುವುದು. ॥ ೫೯ ॥

ಹಿಂದೆ ಹೇಳಿದ ಪ್ರತ್ಯಕ್ಷವಿರೋಧದಲ್ಲಿ ಅನ್ಯರು ಆಶಂಕಿಸುವರು. ಶುಕ್ತಿರಜತಾದಿ ವಿಷಯ ದಲ್ಲಿ ಪ್ರತ್ಯಕ್ಷವು ಪ್ರಾಮಾಣ್ಯವನ್ನು ವ್ಯಭಿಚರಿಸುವುದು. ಆದುದರಿಂದ ಸರ್ವತ್ರದಲ್ಲಿ ಪ್ರತ್ಯಕ್ಷ

ಪ್ರಾಮಾಣ್ಯದಲ್ಲಿ ವಿಶ್ವಾಸವಿಲ್ಲವು. ಹಾಗಾದಮೇಲೆ ಹಿಂದೆ ಅನುಮಾನಕ್ಕೆ ಪ್ರತ್ಯಕ್ಷವಿರೋಧವೆಂದು ಹೇಳಿದುದೇ ಅಸಂಗತವೆಂದರೆ ಅದನ್ನು ದೂಷಿಸುವರು.

**ಮೂ ॥ ವ್ಯಭಿಚಾರಶ್ಚೇದಾಗಮಾರ್ಥಾನುಮಾನಿರ್ದೋಷತ್ವಾಧ್ಯವಸಾಯೇ ಚ ಸಮಃ ॥ ೬೦ ॥**

ಅ ॥ ವ್ಯಭಿಚಾರಶ್ಚೇತ್=ಪ್ರತ್ಯಕ್ಷಕ್ಕೆ ಕೆಲವು ಕಡೆ ಪ್ರಾಮಾಣ್ಯ ವ್ಯಭಿಚಾರವು (ಬರುವುದು. ಆದುದರಿಂದ ವಿಶ್ವಾಸವಿಲ್ಲವೆಂದರೆ) ಆಗಮಾರ್ಥಾನುಮಾನಿರ್ದೋಷತ್ವಾಧ್ಯವಸಾಯೇ ಚ=''ನೇಹ ನಾನಾಸ್ತಿ ಕಿಂಚನ'' ಇತ್ಯಾದಿಯಾದ ವೇದಾರ್ಥನಿಶ್ಚಯದಲ್ಲಿಯೂ, ದೃಶ್ಯತ್ವಾದ್ಯನುಮಾನಗಳ ನಿರ್ದೋಷತ್ವ ನಿಶ್ಚಯದಲ್ಲಿಯೂ, ಮಾನಸಿದ್ಧತ್ವಾದ್ಯನುಮಾನವು ದೋಷಯುಕ್ತವೆಂಬೀ ವಿಷಯದಲ್ಲಿಯೂ, ಸಮಃ=ಪ್ರತ್ಯಕ್ಷವ್ಯಭಿಚಾರವು ಸಮಾನವಾಗಿಯದೆ.

ತಾ ॥ ಪ್ರತ್ಯಕ್ಷಕ್ಕೆ ಕೆಲವು ಕಡೆ ವ್ಯಭಿಚಾರ ಕಂಡ ಪ್ರಯುಕ್ತ ವಿಶ್ವಸನೀಯ (ಪ್ರಮಾಣವೆಂದು ವಿಶ್ವಾಸಾರ್ಹ)ವಾಗುವುದಿಲ್ಲವು. ಆದುದರಿಂದ ಆ ಪ್ರತ್ಯಕ್ಷವಿರೋಧವು, ಅನುಮಾನಕ್ಕೆ ಬರುವುದಿಲ್ಲವು. ಎಂದು ಹೇಳುವ ವಾದಿಯನ್ನು ಕೇಳುವೆವು. ನಿನ್ನಿಂದ ಪ್ರಮಾಣವೆಂದು ದಾಹರಿಸಲ್ಪಟ್ಟಿರುವ 'ನೇಹ ನಾನಾಸ್ತಿ ಕಿಂಚನ' ಇತ್ಯಾದ್ಯಾಗಮದ ಅಶೇಷಭೇದಾಭಾವ ರೂಪಾರ್ಥವು (ಐಕ್ಯವು) ದೃಶ್ಯತ್ವಾದ್ಯನುಮಾನವು ನಿರ್ದೋಷವು, ನನ್ನಿಂದುಕ್ತವಾದ, ಮಾನಸಿದ್ಧತ್ವಾದ್ಯನುಮಾನವು ಸದೋಷವು ಎನ್ನುವ ನಿಶ್ಚಯವು ಯಾವ ಪ್ರಮಾಣದಿಂದಾಗುವುದು?

ಅಸಂಭವ ವಿರೋಧದಿಂದ ಆಯಾಯ ಪ್ರಮಾಣದಿಂದಲೇ ಅವು ನಿಶ್ಚಯವಾಗುವುದೆಂದು ಹೇಳಲಶಕ್ಯವು. ಇತರಾಗಮಾದಿಗಳಿಂದ ಎಂದು ಹೇಳಿದರೆ ಅಲ್ಲಿಯೂ ನಿಶ್ಚಯಕ್ಕೋಸ್ಕರ ಆಗಮಾದಿ ಪರಂಪರೆಯನ್ನು ಕಲ್ಪಿಸಿದರೆ ಅನವಸ್ಥೆಯು ಆಗುವುದು. ಪ್ರತ್ಯಕ್ಷದಿಂದೆಂದು ಹೇಳಬೇಕು. ನೀನು ಹೇಳುವಂತೆ ಪ್ರತ್ಯಕ್ಷಕ್ಕೆ ಅಲ್ಲಲ್ಲಿ ವ್ಯಭಿಚಾರವು ಕಂಡುಬರುವುದರಿಂದ ಅದು ಅವಿಶ್ವಸನೀಯವಾಗುವುದು. ಹಾಗಾದರೆ ಆ ಪ್ರತ್ಯಕ್ಷದಿಂದ ಹಿಂದೆ ಹೇಳಿದ ಆಗಮಾರ್ಥನಿಶ್ಚಯಾದಿಗಳು ಸಿದ್ಧಿಸುವುದಿಲ್ಲವು. ಅನುಮಾನಕ್ಕೆ, ನಿರ್ದೋಷತ್ವಾಧ್ಯವಸಾಯವು, ನನ್ನ ಅನುಮಾನಕ್ಕೆ ಸದೋಷತ್ವಾಧ್ಯವಸಾಯವೂ ಕೂಡ ಆಗುವುದಿಲ್ಲವು. ಪೂರ್ವೋಕ್ತವಾದ ಅನಿಷ್ಟವನ್ನೇ (ಅವಿಶ್ವಸನೀಯ) ಇಲ್ಲಿಯೂ ಹೇಳಲು ಶಕ್ಯವಾಗಿದ್ದರೂ, ಅದನ್ನು ಶಿಷ್ಯರು ಊಹಿಸಿಕೊಳ್ಳುವರು ಎಂಬೀ ಅಭಿಪ್ರಾಯದಿಂದ ದೋಷಾಂತರವನ್ನೇ ಆಚಾರ್ಯರು ಹೇಳಿದರು. ॥೬೦॥

ಯದ್ಯಪಿ ಈ ಪಕ್ಷದಲ್ಲಿ ಅಭೇದಾಗಮಕ್ಕೆ ಅಭೇದಾರ್ಥನಿಶ್ಚಯವಾಗುವುದಿಲ್ಲವೆನ್ನುವುದರಿಂದಲೇ ಪರನಿಗನಿಷ್ಟವಾಗುವುದು. ಆದರೂ ಅದರಲ್ಲಿ ಅಧಿಕ ದೋಷವನ್ನೂ ಕೂಡ ಹೇಳುವರು.

**ಮೂ ॥ ಅತ ಉತ್ತರದಿವಸೇಽಭೇದವಾಕ್ಯಸ್ಯ ಭೇದೋಽರ್ಥಃ ಸ್ಯಾತ್ ॥ ೬೧ ॥**

ಅ ॥ ಅತಃ = ಪ್ರತ್ಯಕ್ಷವುಅವಿಶ್ವಸನೀಯವಾದುದರಿಂದ, ಅಭೇದಾರ್ಥನಿಶ್ಚಾಯಕವಾಗದೆ ಇರುವುದರದೆಸೆಯಿಂದ, ಅಭೇದವಾಕ್ಯಸ್ಯ='ನೇಹ ನಾನಾಸ್ತಿ' ಎಂಬ ವಾಕ್ಯಕ್ಕೆ, ಉತ್ತರ ದಿವಸೇ=ಉತ್ತರ ದಿವಸದಲ್ಲಿ, ಭೇದಃ ಅರ್ಥಃ ಸ್ಯಾತ್=ಭೇದವೇ ಅರ್ಥವು ಎಂದಾಗಲಿ ಎಂದಿಷ್ಟ ಹಾನಿಯು ಮಾತ್ರವಲ್ಲವು, ಅನಿಷ್ಟಪ್ರಾಪ್ತಿಯೂ ಆಗುವುದು.

ತಾ ॥ ''ನೇಹ ನಾನಾಸ್ತಿ''ಎನ್ನುವ ಆಗಮಕ್ಕೆ ಅಭೇದವೇ ಅರ್ಥವೆಂದು ನಿಶ್ಚಯವಾಗದಿರುವುದಾದರೆ, ''ಪರಸ್ಪರ ವಿರೋಧಗಳಲ್ಲಿ ಒಂದರ ನಿಷೇಧವು ಇನ್ನೊಂದರಿಂದ ವ್ಯಾಪಕವನ್ನು

ಬೋಧಿಸುವುದು'' ಎನ್ನುವ ನ್ಯಾಯದಿಂದ ಉತ್ತರ ದಿವಸದಲ್ಲಿ (ಮೂರನೇ ದಿನದಲ್ಲಿ) ಭೇದವೇ ಅರ್ಥವಾಗಲಿ ಎಂದು ಪರನಿಗನಿಷ್ಟಪ್ರಾಪ್ತಿರೂಪದೋಷಾಂತರವು. ಯದ್ಯಪಿ ಇಲ್ಲಿ ''ಉತ್ತರ ದಿವಸೇ'' ಎಂದು ಹೇಳದೆ ಇರುವುದಾದರೂ, ಅತಃ ಇತ್ಯಾದಿಯಿಂದಲೇ ಈ ಅರ್ಥವು ಸಿದ್ಧಿಸುವುದು. ಆದರೂ ಹಿಂದಿನ ಪಕ್ಷದಂತೆ ಪ್ರತ್ಯಕ್ಷವು ವರ್ತಮಾನಮಾತ್ರಗ್ರಾಹಿಯು ಎಂದು ಹೇಳಿದರೂ ''ನೇಹ ನಾನಾಸ್ತಿ'' ಎನ್ನುವ ವಾಕ್ಯಕ್ಕೆ ಅಭೇದವೇ ಅರ್ಥವೆಂದು ನಿಶ್ಚಾಯಕವಾದ ಪ್ರತ್ಯಕ್ಷಕ್ಕೂ ವರ್ತಮಾನಮಾತ್ರಗ್ರಾಹಿತ್ವವು ಪ್ರಾಪ್ತವಾಗುವುದರ ದೆಸೆಯಿಂದ ಆ ವಾಕ್ಯಕ್ಕೆ ಉತ್ತರ ದಿವಸದಲ್ಲಿ ಅಭೇದಾರ್ಥ ನಿಶ್ಚಯವಾಗದಿರಲಿ, ಎಂದು ದೋಷವನ್ನೂ ಕೂಡ ಹೇಳುವುದಕ್ಕೆ 'ಉತ್ತರ ದಿವಸೇ' ಎಂದು ಹೇಳಿರುವರು. ॥ ೬೧ ॥

ಈಗ ದೃಶ್ಯತ್ವಾನುಮಾನಕ್ಕೆ ನಿರ್ದೋಷತ್ವಾಧ್ಯವಸಾಯವು ಆಗದಿರುವ ಪಕ್ಷದಲ್ಲಿ ದೋಷವನ್ನು ಹೇಳುವರು.

**ಮೂ ॥ ನಿರ್ದೋಷಾನುಮಾಯಾಃ ಸದೋಷತ್ವಂ ॥ ೬೨ ॥**

ಅ ॥ ನಿರ್ದೋಷಾನುಮಾಯಾಃ=ನಿರ್ದೋಷವೆಂದಂಗೀಕರಿಸಿದ ದೃಶ್ಯತ್ವಾದ್ಯನುಮಾನಕ್ಕೆ, ಸದೋಷತ್ವಂ=ದೋಷಯುಕ್ತತ್ವವು (ದುಷ್ಟತ್ವವು) ಪ್ರಾಪ್ತವಾಗುವುದು.

ತಾ ॥ ಶುಕ್ತಿರಜತಾದಿಯಲ್ಲಿ ಪ್ರತ್ಯಕ್ಷಪ್ರಾಮಾಣ್ಯಕ್ಕೆ ವ್ಯಭಿಚಾರವು ಕಾಣುವುದರಿಂದ ಪ್ರತ್ಯಕ್ಷದಿಂದ ನಿರ್ದೋಷವೆಂದಗೀಕರಿಸಿದ ದೃಶ್ಯತ್ವಾದ್ಯನುಮಾನಕ್ಕೂ ದೋಷಾಭಾವದ ನಿಶ್ಚಯವಾಗುವುದಿಲ್ಲವಾದರೆ ದೋಷಾಭಾವಾಭಾವವು ಇರುವುದೆಂದಾಗುವುದು. ದೋಷಾಭಾವಾಭಾವವು ದೋಷರೂಪವಾದುದರಿಂದ ಆ ಅನುಮಾನಕ್ಕೆ ಸದೋಷತ್ವ(ದುಷ್ಟತ್ವ)ವೂ ಘಟಿಸುವುದು. ॥ ೬೨ ॥

ಹಾಗೆ ಸಿದ್ಧಾಂತಿಯಿಂದುಕ್ತವಾದ ಮಾನಸಿದ್ಧತ್ವಾದ್ಯನುಮಾನಕ್ಕೆ ಸದೋಷತ್ವನಿಶ್ಚಯವಾಗದಿದ್ದರೂ ದೋಷವನ್ನು ಹೇಳುವರು.

**ಮೂ ॥ ಸದೋಷಾನುಮಾಯಾ ನಿರ್ದೋಷತ್ವಂ ॥ ೬೩ ॥**

ಅ ॥ ಸದೋಷಾನುಮಾಯಾಃ=ದೋಷಯುಕ್ತವೆಂದು ನಿನ್ನಿಂದ ಅಭ್ಯುಪಗತವಾದ ಮಾನಸಿದ್ಧತ್ವಾದ್ಯನುಮಾನಕ್ಕೆ,ನಿರ್ದೋಷತ್ವಂ=ದೋಷವಿರದಿರುವಿಕೆಯು(ಪ್ರಾಪ್ತವಾಗುವುದು.)

ತಾ ॥ ಹಿಂದೆ ಹೇಳಿದಂತೆ ಪ್ರತ್ಯಕ್ಷದಿಂದ ಮಾನಸಿದ್ಧತ್ವಾದಿಸಿದ್ಧಾಂತಾನುಮಾನಕ್ಕೆ ನಿನ್ನ ರೀತಿಯಿಂದ ಸದೋಷತ್ವಾಧ್ಯವಸಾಯವಾಗದಿರುವುದಾದರೆ ನನಗೆ (ಸಿದ್ಧಾಂತಿಗೆ) ಇಷ್ಟವಾದ ನಿರ್ದೋಷತ್ವವು ಸಿದ್ಧಿಸುವುದು. ಈ ರೀತಿಯಾಗಿ ಆಗಮಾರ್ಥಕ್ಕೆ ವ್ಯವಸ್ಥೆಯಿಲ್ಲದೇ ಹೋಗಬೇಕಾಗುವುದು. ॥ ೬೩ ॥

ಇಷ್ಟುಮಾತ್ರವಲ್ಲ, ಪರಂತು ಸರ್ವ ವ್ಯವಸ್ಥೆಗಳು ಪ್ರತ್ಯಕ್ಷಮೂಲಕಗಳಾದುದರಿಂದ ಯಾವುದೊಂದು ವ್ಯವಸ್ಥೆಯೂ ಸಿದ್ಧಿಸುವುದಿಲ್ಲವೆಂದು ಹೇಳಿರುವರು.

**ಮೂ ॥ ಇತ್ಥವ್ಯವಸ್ಥಾ ॥ ೬೪ ॥**

ಅ ॥ ಇತ್ಥವ್ಯವಸ್ಥಾ=ಹೀಗೆಂದು, ಇದಂ ರಜತಂ=ಇದು ರಜತವು, ಎನ್ನುವುದೇ ಮೊದಲಾದ ಪ್ರತ್ಯಕ್ಷವು ಅಪ್ರಮಾಣವು. ನೇದಂ ರಜತಂ=ಇದು ರಜತವಲ್ಲವು ಎನ್ನುವುದೇ ಮೊದಲಾದ ಪ್ರತ್ಯಕ್ಷವು ಪ್ರಮಾಣವು. ಎಂದು ಮೊದಲಾದ ವ್ಯವಸ್ಥೆಯು ಸರ್ವಥಾ ಇಲ್ಲವೆಂದಾಗುವುದು. ಹಾಗಾದುದರಿಂದ ಸರ್ವ ವ್ಯವಹಾರೋಚ್ಛೇದವೇ ಆಗಬೇಕಾಗುವುದು. ॥ ೬೪ ॥

ಹಿಂದೆ "ಹೇತುಸ್ವರೂಪಾಸಿದ್ಧಿರವ್ಯಾಪ್ತಿರಿತಿ ಹೇತುವಿರೋಧಃ" ಎಂದುಕ್ತವಾದುದಸಂಗತವು. ಇತರಗಳಾದ ಹೇತುವಿರೋಧಗಳೂ ಕೂಡ ಇವೆ ಎನ್ನುವ ಆ ಶಂಕೆಯನ್ನು ಪರಿಹರಿಸುವರು.

**ಮೂ ॥ ಆಶ್ರಯಸಾಧ್ಯವ್ಯಧಿಕರಣಾಸಿದ್ಧಯೋ ನ ದೂಷಣಂ ॥ ೬೫ ॥**

ಅ ॥ ಆಶ್ರಯಸಾಧ್ಯವ್ಯಧಿಕರಣಾಸಿದ್ಧಯಃ= (1) ಆಶ್ರಯಾಸಿದ್ಧಿಯು, (2) ಸಾಧ್ಯಾಸಿದ್ಧಿಯು, (3) ವ್ಯಧಿಕರಣಾಸಿದ್ಧಿಯು ಎಂದಿವುಗಳು, ನ ದೂಷಣಂ=ದೂಷಣವಲ್ಲವು.

ತಾ ॥ (1)" ಗಗನಕುಸುಮವು ಸುಗಂಧಿಯಾಗಿದೆ, ಪುಷ್ಪತ್ವವಿರುವುದರಿಂದ" ಎಂಬಲ್ಲಿ ಸುಗಂಧಕ್ಕೆ ಆಶ್ರಯವಾದ ಗಗನಕುಸುಮವೇ ಅಪ್ರಸಿದ್ಧವಾದುದರಿಂದ ಈ ಅನುಮಾನದಲ್ಲಿ ಆಶ್ರಯಾಸಿದ್ಧಿಯೆಂದು ಹೇಳುವರು. (2) ಅನುಮಾನದಿಂದ ಪೂರ್ವದಲ್ಲಿ ಸಾಧ್ಯಧರ್ಮಕ್ಕೆ ಸಿದ್ಧಿಯಿಲ್ಲದಿರುವುದು ಸಾಧ್ಯಾಸಿದ್ಧಿಯು. ಈ ಭೂಮಿಯು ಮೊಲದ ಕೋಡಿನಿಂದ ಗೆರೆಮಾಡಲ್ಪಟ್ಟಿದೆ, ಭೂತ್ವಧರ್ಮದಿಂದ, (3) ಶಬ್ದವು ಅನಿತ್ಯವು, ಘಟವು ಮಾಡಲ್ಪಟ್ಟದ್ದು ಆದುದರಿಂದ, ಎಂಬೀ ಅನುಮಾನದಲ್ಲಿ ಹೇತುವು ಪಕ್ಷದಲ್ಲಿಲ್ಲದಿರುವುದರಿಂದ ವ್ಯಧಿಕರಣಾಸಿದ್ಧಿಯು. ಎಂದು ಇವೆಲ್ಲವೂ ದೋಷಗಳಾಗುವುದಿಲ್ಲ. ॥ ೬೫ ॥

ಅದರ ಕಾರಣವನ್ನು ಹೇಳುವರು.

**ಮೂ ॥ ಅತಿಪ್ರಸಂಗಾಭಾವಾತ್ ॥ ೬೬ ॥**

ಅ ॥ ಆಶ್ರಯಾಸಿದ್ಧಿ, ಸಾಧ್ಯಾಸಿದ್ಧಿ, ವ್ಯಧಿಕರಣಾಸಿದ್ಧಿಗಳಿಗೆ ದೂಷಣತ್ವ ಇಲ್ಲವೆಂದರೆ, ಅತಿಪ್ರಸಂಗಾಭಾವಾತ್=ಏನೊಂದನಿಷ್ಟಪ್ರಸಂಗವಿಲ್ಲದಿರುವುದರಿಂದ ದೂಷಣಗಳಲ್ಲವು. ॥ ೬೬ ॥

ಅತಿಪ್ರಸಂಗವಿಲ್ಲದಿದ್ದರೆ ದೂಷಣತ್ವವಿಲ್ಲವೆನ್ನುವುದನ್ನುಪಪಾದನೆ ಮಾಡುವರು.

**ಮೂ ॥ ಅತಿಪ್ರಸಂಗೇನ ಹಿ ದೋಷತ್ವಾದೋಷತ್ವೇ ಕಲ್ಪ್ಯೇ ॥ ೬೭ ॥**

ಅ ॥ ಅತಿಪ್ರಸಂಗೇನ=ಅನಿಷ್ಟಪ್ರಸಂಗದಿಂದ, ದೋಷತ್ವಾದೋಷತ್ವೇ=ದೋಷತ್ವವೂ, ಅದೋಷತ್ವವೂ ಎಂದಿವುಗಳು, ಕಲ್ಪ್ಯೇ=ಕಲ್ಪನಾಯೋಗ್ಯಗಳಾಗುವುವು. ಎನ್ನುವುದು, ಹಿ= ಪ್ರಸಿದ್ಧವು.

ತಾ ॥ ಯಾವುದಕ್ಕೆ ದೋಷತ್ವವನ್ನಂಗೀಕರಿಸದಿದ್ದರೆ ಅನಿಷ್ಟಪ್ರಸಂಗವಾಗುವುದೋ, ಅದಕ್ಕೆ ದೋಷತ್ವವು. ಉ:— ಸ್ವರೂಪಾಸಿದ್ಧಿಗೆ ದೋಷತ್ವವನ್ನಂಗೀಕರಿಸದಿದ್ದರೆ, ಹ್ರದಾದಿಗೆ ಧೂಮವತ್ವದಿಂದ ಅಗ್ನಿಮತ್ವಪ್ರಸಂಗವಾಗುವುದು. ಯಾವುದಕ್ಕೆ ಅದೋಷತ್ವವನ್ನಂಗೀಕರಿಸದಿದ್ದರೆ ಅನಿಷ್ಟಪ್ರಸಂಗವಾಗುವುದೋ ಅದಕ್ಕೆ ಅದೋಷತ್ವವು. ಉ:— ವ್ಯಾಪ್ತಿಗೆ ಅದೋಷತ್ವವನ್ನಂಗೀಕರಿಸದಿದ್ದರೆ ಸಾಧ್ಯಸಿದ್ಧಿಯಾಗದಿರುವ ಪ್ರಸಂಗದಿಂದ ಅದಕ್ಕೆ ಅದೋಷತ್ವವು. ಈ ರೀತಿಯಾಗಿ ಅದೋಷತ್ವಕ್ಕೆ ಹೇಗೆ ಅತಿಪ್ರಸಂಗಾಧೀನತ್ವವೋ ಅದರಂತೆ ದೋಷತ್ವಕ್ಕೂ ಅತಿಪ್ರಸಂಗಾಧೀನತ್ವದಿಂದ ಆಶ್ರಯಾಸಿದ್ಧ್ಯಾದಿಗಳಿಗೂ ದೋಷತ್ವವನ್ನಂಗೀಕರಿಸದಿದ್ದರೆ, ಅತಿಪ್ರಸಂಗವಿಲ್ಲದಿರುವುದರ ದೆಸೆಯಿಂದ ದೋಷತ್ವವಿಲ್ಲವು. ಇಲ್ಲಿ'ಅತಿಪ್ರಸಂಗೇನ ದೋಷತ್ವಂ ಕಲ್ಪ್ಯಂ' ಎಂದಿಷ್ಟೇ ಪ್ರಕೃತೋಪಯುಕ್ತವಾದರೂ, ಅದೋಷತ್ವಗ್ರಹಣವು, ಹಿಂದೆ ಹೇಳಿದಂತೆ ದೃಷ್ಟಾಂತಾರ್ಥವಾಗಿರುತ್ತದೆ. ಅಥವಾ ಯಾವುದಕ್ಕೆ ದೋಷತ್ವವನ್ನಂಗೀಕರಿಸದಿದ್ದರೆ ಅತಿಪ್ರಸಂಗವಿರುವುದೋ, ಅದಕ್ಕೆ ದೋಷತ್ವವು, ಯಾವುದಕ್ಕೆ ಅದೋಷತ್ವವನ್ನಂಗೀಕರಿಸಿದರೆ ಅತಿಪ್ರಸಂಗ

ವಿರುವುದಿಲ್ಲವೋ ಅದಕ್ಕೆ ಅದೋಷತ್ವವು, ಎಂದು ಅನ್ವಯವ್ಯತಿರೇಕವ್ಯಾಪ್ತಿಗಳಿಂದ ದೋಷತ್ವಾದೋಷತ್ವಗಳಿಗೆ ಅತಿಪ್ರಸಂಗ ಸದ್ಭಾವಾಸದ್ಭಾವಾಧೀನತ್ವವಿರುವುದರ ದೆಸೆಯಿಂದ, ಆಶ್ರಯಾಸಿದ್ಧ್ಯಾದಿಗಳಿಗೆ ಅದೂಷಣತ್ವವನ್ನಂಗೀಕರಿಸಿದರೆ, ಅತಿ ಪ್ರಸಂಗವಿರದಿರುವುದರಿಂದ, ಅವುಗಳಿಗೆ ದೂಷಣತ್ವವಿಲ್ಲವೆಂದಭಿಪ್ರಾಯವು. ॥ ೬೭ ॥

ಕಾರಣಾಂತರದಿಂದಲೂ ಆಶ್ರಯಾಸಿದ್ಧ್ಯಾದಿಗಳಿಗೆ ದೋಷತ್ವವಿಲ್ಲವೆಂದು ಹೇಳುವರು.

**ಮೂ ॥ ವ್ಯಾಪ್ತಿರೇವ ಹಿ ಪ್ರಯೋಜಿಕಾ ॥ ೬೮ ॥**

ಅ ॥ (ಸಾಧ್ಯಸಿದ್ಧಿಯಲ್ಲಿ) ವ್ಯಾಪ್ತಿರೇವ=ವ್ಯಾಪ್ತಿಯೇ, (ಉಪಲಕ್ಷಣತ್ವದಿಂದ ವಿವಕ್ಷಿತ ಸ್ಥಳದಲ್ಲಿ ಸಿದ್ಧಿಯೂ ಕೂಡ,) ಪ್ರಯೋಜಿಕಾ=ಪ್ರಯೋಜಕವು. ಅಲ್ಲದೆ ಸದಾಶ್ರಯತ್ವವು, ಸಾಧ್ಯಸಿದ್ಧಿಯು ಸಾಧ್ಯಸಾಧನಗಳಿಗೆ ಸಾಮಾನಾಧಿಕರಣ್ಯವು, ಪ್ರಯೋಜಕಗಳಲ್ಲವು ಎನ್ನುವದು, ಹಿ=ಪ್ರಸಿದ್ಧವು.

ತಾ ॥ ಸಾಧ್ಯಸಿದ್ಧಿಯಲ್ಲಿ ವ್ಯಾಪ್ತಿಯು, ಸಮುಚಿತ ದೇಶದಲ್ಲಿ ಸಿದ್ಧಿಯೂ ಕೂಡ ಇವೆರಡೇ ಪ್ರಯೋಜಕಗಳು ಅಲ್ಲದೆ ಸದಾಶ್ರಯತ್ವಾದಿಗಳಿಲ್ಲದಿದ್ದರೆ, ಸಾಧ್ಯಾಸಿದ್ಧಿಪ್ರಸಂಗವಿಲ್ಲದಿರುವುದರ ದೆಸೆಯಿಂದ ಸದಾಶ್ರಯತ್ವವು (ವಿದ್ಯಮಾನಾಶ್ರಯ ಯುಕ್ತತ್ವವು) ಅನುಮಿತಿಯ ದೆಸೆಯಿಂದ ಪೂರ್ವದಲ್ಲಿ ಸಾಧ್ಯಪ್ರಸಿದ್ಧಿಯು ಸಾಧ್ಯಸಾಧನಗಳಿಗೆ ಸಾಮಾನಾಧಿಕರಣ್ಯವು, ಎಂದಿವುಗಳಾಗಲೀ ಪ್ರಯೋಕಜಗಳಲ್ಲವು. ವ್ಯಾಪ್ತಿಯಿರುವಾಗ ಯಾವುದಾದರೊಂದು ಕಡೆಯಲ್ಲಿ ಬೇರೆ ದೋಷದಿಂದ ಕೂಡದಿರುವ ಕೇವಲ ಆಶ್ರಯಾಸಿದ್ಧ್ಯಾದಿಗಳಿಂದ ಸಾಧ್ಯದ ಅಸಿದ್ಧಿಯು ದೃಷ್ಟವಾಗುವುದಿಲ್ಲವು. ಅಂದರೆ ಅಂತಹ ಆಶ್ರಯಾಸಿದ್ಧ್ಯಾದಿ ಸ್ಥಳದಲ್ಲಿ ಬಂಜೆಯ ಮಗನು ಮಾತನಾಡುವುದಿಲ್ಲವು ಪುತ್ರತ್ವದಿಂದ. ಎಂದು ಮೊದಲಾದ ಕಡೆಯಲ್ಲಿ ವ್ಯಾಪ್ತ್ಯಾದಿಯಿಲ್ಲದಿರುವುದರಿಂದಲೇ ಅನುಮಾನವು ದುಷ್ಟವಾಗುವುದು. ಆಶ್ರಯವಾದ ವಂಧ್ಯಾಸುತನಿಲ್ಲದಿರುವುದರಿಂದ ಆಶ್ರಯಾಸಿದ್ಧ್ಯಾದಿಗಳಿಂದ ದುಷ್ಟವಲ್ಲವು. ॥ ೬೮ ॥

ವ್ಯಾಪ್ತಿಯುಕ್ತವಾದ ಸಾಧನವು ಸಮುಚಿತದೇಶದಲ್ಲಿರುವುದಾಗಿ ಸಾಧ್ಯಕ್ಕೆ ಪ್ರಯೋಜಕವಾಗುವುದು, ಎಂದು, ಇದನ್ನುಪಪಾದನೆಮಾಡುವರು.

**ಮೂ ॥ ಅಸತ್ಯಪಿ ವ್ಯಾಪ್ತಿರಸ್ತ್ಯೇವ ॥ ೬೯ ॥**

ಅ ॥ ವ್ಯಾಪ್ತಿಃ=ಪ್ರಯೋಜಿಕವಾದ ವ್ಯಾಪ್ತಿಯು, ಅಸತ್ಯಪಿ=(ಆಶ್ರಯವು,) ಅಸತ್ತಾದರೂ, ಇಲ್ಲವಾದರೂ ಸಾಧ್ಯಸಾಧನಗಳಿಗಿದ್ದೇ ಇದೆ.

ತಾ ॥ "ವಂಧ್ಯಾಸುತನು ಮಾತನಾಡುವುದಿಲ್ಲವು. ಅಚೇತನತ್ವದಿಂದ" ಎನ್ನುವಲ್ಲಿ ಆಶ್ರಯವಿಲ್ಲವಾದರೂ "ಎಲ್ಲಿ ಅಚೇತನತ್ವವಿದೆಯೋ ಅಲ್ಲಿ ಅವಕ್ತೃತ್ವವೂ ಇದೆ, ಘಟಾದಿಯಂತೆ" ಎಂದು ವ್ಯಾಪ್ತಿಯಿದೆ. ಈ ವಾಪ್ತಿಯಿಂದ ಯುಕ್ತವಾದ ಅಚೇತನತ್ವರೂಪ ಸಾಧನವು ಅವಕ್ತೃತ್ವರೂಪ ಸಾಧ್ಯವನ್ನು ಸಾಧಿಸುವುದು. ಆದುದರಿಂದ ಆಶ್ರಯಾಸಿದ್ಧಿಯು ದೂಷಣವಲ್ಲವು. ಇದೇ ರೀತಿಯಾಗಿ "ಜೀವಚ್ಛರೀರಜಾತಂ ಸಾತ್ಮಕಂ, ಪ್ರಾಣಾದಿಮತ್ವಾತ್" ಇತ್ಯಾದಿ ಸ್ಥಳಗಳಲ್ಲಿ ಸಾಧ್ಯಪ್ರಸಿದ್ಧಿಯಿಲ್ಲವಾದರೂ ಪ್ರಯೋಜಕವಾದ ವ್ಯಾಪ್ತಿಯು ಇದೆ. "ಜೀವಚ್ಛರೀರಜಾತಂ ಸಾತ್ಮಕಂ ಪಾಣ್ರಾದಿಮತ್ವಾತ್" ಎನ್ನುವಲ್ಲಿ ಜೀವಿಸುವ ಸರ್ವಶರೀರವೂ ಪಕ್ಷವಾಗಿದೆ. ಬೇರೆಕಡೆ ಹೇತುವುಸಾಧ್ಯವೂ ಇರುವುದಿಲ್ಲವಾದುದರಿಂದ ಅನ್ವಯವ್ಯಾಪ್ತಿಗೆ ದೃಷ್ಟಾಂತವಿಲ್ಲವು.

ಆದುದರಿಂದ ಸಾಧ್ಯಪ್ರಸಿದ್ಧಿಯಿಲ್ಲವು. ಆದರೂ ಕೇವಲ ವ್ಯತಿರೇಕವ್ಯಾಪ್ತಿ ಇದೆ. ಅದುಸಾಕ್ಷಾತ್ ಪ್ರಯೋಜಕವಾಗದಿದ್ದರೂ ಅನ್ವಯವ್ಯಾಪ್ತಿ ಸಾಧನದ್ವಾರಾ ಪ್ರಯೋಜಕವಾಗುವುದು. ಆ ಅನ್ವಯವ್ಯಾಪ್ತಿಯು ಸಾಕ್ಷಾತ್‌ಪ್ರಯೋಜಕವಾಗಿ ಇದೆ ಎಂದು ತಾತ್ಪರ್ಯವು. ಆದುದರಿಂದ ಸಾಧ್ಯಾಸಿದ್ಧಿಯು ದೂಷಣವಾಗುವುದಿಲ್ಲವು. ಇದರಂತೆ "ಸಮುದ್ರವು ಉಕ್ಕುತ್ತಿದೆ, ಚಂದ್ರೋದಯವಾಗಿರುವುದರಿಂದ" ಎನ್ನುವಲ್ಲಿ ವೃದ್ಧಿಮತ್ವ ರೂಪಸಾಧ್ಯವು, ಚಂದ್ರೋದಯ ರೂಪಸಾಧನವು ಎರಡೂ ಒಂದುಕಡೆಯಲ್ಲಿ ಕೂಡಿಕೊಂಡಿಲ್ಲವು. ಆದುದರಿಂದ ಸಾಧ್ಯಸಾಧನಗಳಿಗೆ ಸಾಮಾನಾಧಿಕರಣ್ಯವಿಲ್ಲವಾದರೂ "ಯಾವಾಗ ಚಂದ್ರೋದಯವಾಗುವುದೋ ಆವಾಗ ಸಮುದ್ರವು ಉಕ್ಕುವುದು" ಎಂದು ಪ್ರಯೋಜಕವಾದ ವ್ಯಾಪ್ತಿಯಿದೆ. ಆದುದರಿಂದ ವ್ಯಧಿಕರಣಾಸಿದ್ಧಿಯು ದೂಷಣವಾಗುವುದಿಲ್ಲವು. ಇದರಂತೆ ಬೇರೆ ಕಡೆಯಲ್ಲಿಯೂ ತಿಳಿಯುವುದು. ॥ ೭೯ ॥

ಈಗ ಅಸದಾಶ್ರಯವಾದಹೇತುವಿಗೆ ವ್ಯಾಪ್ತಿಯನ್ನಂಗೀಕರಿಸದಿರುವುದಾದರೆ ದೋಷವನ್ನು ಹೇಳುವರು.

**ಮೂ ॥ ಅಸದಾಶ್ರಯಸ್ಯ ಸಾಧಕತ್ವಂ ನೇತ್ಯಪಿ ವ್ಯಾಪ್ತಿಂ ವಿನಾ ಕಥಂ ನಿವಾರ್ಯತೇ ॥ ೭೦ ॥**

ಅ ॥ ಅಸಧಾಶ್ರಯಸ್ಯ=ಅಸತ್ತಾದ ಆಶ್ರಯಕ್ಕೆ ಮತ್ತು ಅಸತ್ತಾದ ಆಶ್ರಯಯುಕ್ತವಾದ ಹೇತುವಿಗೆ, ಸಾಧಕತ್ವಂ ನ=ಸಾಧಕತ್ವವಿಲ್ಲವು, ಇತಿ=ಹೀಗೆಂದು, ವ್ಯಾಪ್ತಿಮಪಿ ವಿನಾ=ವ್ಯಾಪ್ತಿಯನ್ನು ಹೇತುವನ್ನೂ ಕೂಡ ಹೊರತು, ಕಥಂ ನಿವಾರ್ಯತೇ=ಹೇಗೆ ನಿನ್ನಿಂದ ನಿವಾರಣೆ ಮಾಡಲ್ಪಡುತ್ತದೆ.

ತಾ ॥ ಅಸದಾಶ್ರಯತ್ವವಿಲ್ಲವೆಂದು ಸಾಧಿಸುವ ವಾದಿಯು ಈ ಸಾಧನೆಯಲ್ಲಿ ಪ್ರಮಾಣವಿದೆಯೆಂದು ಹೇಳುವನೋ, ಅಥವಾ ಇಲ್ಲವೆನ್ನುವನೋ, ಪ್ರಮಾಣವಿಲ್ಲದೆ ಇಷ್ಟಸಿದ್ಧಿಯಾಗದಿರುವುದರಿಂದ ಪ್ರಮಾಣವಿಲ್ಲವೆನ್ನುವ ಪಕ್ಷವು ಸಂಭವಿಸುವುದಿಲ್ಲವು. ಪ್ರಮಾಣವಿದೆ ಎನ್ನುವ ಪಕ್ಷದಲ್ಲಿ ಈ ಸಾಧನೆಯಲ್ಲಿ ಪ್ರತ್ಯಕ್ಷವು, ಆಗಮವೂ ಕೂಡ ಇರದಿರುವುದರಿಂದ ಅನುಮಾನವೇ ಪ್ರಮಾಣವೆಂದು ಹೇಳಬೇಕು. ಅಲ್ಲಿ "ವಂಧ್ಯಾಸುತೋ ನಾನುಮಾನಾಂಗಂ ಅಸತ್ವಾತ್" ಎಂದು ಅಸತ್ತನ್ನು ಪಕ್ಷೀಕರಿಸಿಕೊಂಡು ಸಾಧಿಸುವುದೋ ಅಥವಾ 'ವಂಧ್ಯಾಸುತಾಶ್ರಿತಃ ಅಚೇತನತ್ವ ಹೇತುಃ ನಸಾಧಕಃ ಅಸದಾಶ್ರಯತ್ವಾತ್' ಎಂದು ಅಸದಾಶ್ರಯಯುಕ್ತವಾದ ಹೇತುವನ್ನು ಪಕ್ಷೀಕರಿಸಿಕೊಂಡು ಸಾಧಿಸುವುದೋ? ಒಂದನೆಯ ಸಾಧನಕ್ಕೂ 'ವಂಧ್ಯಾಸುತಃ' ಎನ್ನುವ ಆಶ್ರಯವು ಅಸತ್ತಾದುದರಿಂದ, ಎರಡನೆಯ ವಂಧ್ಯಾಸುತಾಶ್ರಿತಾಚೇತನತ್ವ ಹೇತುವು ಅಸದಾಶ್ರಿತವಾದ ಅಸತ್ತಾಗಿರುವುದರ ದೆಸೆಯಿಂದಲೂ, ಈ ಎರಡು ಸಾಧನವು, ಅಸದಾಶ್ರಯವೇ ಆಗುವುದು. ಈ ರೀತಿಯಾಗಿ ಅಸದಾಶ್ರಯಗಳಾದರೂ ಅನುಮಾನಗಳಲ್ಲಿ ಸಾಧ್ಯಸಾಧನಗಳಿಗೆ ವ್ಯಾಪ್ತಿಯಿರುವುದರಿಂದ ಸಾಧಕವಾಗುವುದೆಂದರೆ ಇದರಂತೆ ಸರ್ವತ್ರದಲ್ಲಿ ಅಸದಾಶ್ರಯವಾದರೂ ವ್ಯಾಪ್ತಿಯಿರುವುದರಿಂದಲೇ, ಸಾಧಕವಾಗುವುದೆಂದು, ವ್ಯಾಪ್ತಿಯೇ ಪ್ರಯೋಜಕವೆಂದು ಒಪ್ಪಬೇಕು. ಪರಸಾಧನೆಗೆ ವ್ಯಾಪ್ತಿಯಿಲ್ಲವಾದರೆ, ವ್ಯಾಪ್ತಿರಹಿತವಾದ ಹೇತುವು ಸಾಧಕವೂ ಬಾಧಕವೂ ಕೂಡ ಆಗದಿರುವುದರಿಂದ, ಅಸದಾಶ್ರಯಕ್ಕೆ ಸಾಧಕತ್ವವಿಲ್ಲವೆಂದು, ಪರನಿಂದ ಸಾಧಿಸಲಿಕ್ಕೆ ಬರಲಾರದು. ಆದುದರಿಂದಲೂ, ವ್ಯಾಪ್ತಿಯೇ ಪ್ರಯೋಜಕವೆಂದು ಅಂಗೀಕರಿಸಬೇಕು. ಅಸತ್ತುಧರ್ಮಶೂನ್ಯವಾದುದರಿಂದ ಸಾಧ್ಯಸಾಧನ ರೂಪಧರ್ಮಾಶ್ರಯತ್ವವು ಕೂಡದಿರುವುದರದೆಸೆಯಿಂದ ಅಸದಾಶ್ರಯವಾದ ಹೇತುವು ಸಾಧಕವು ಹೇಗಾಗುವುದೆನ್ನುವುದಕ್ಕೂ ಇದೇ ಉತ್ತರವು.

'ಅಸದಾಶ್ರಯಸ್ಯ ಸಾಧಕತ್ವಂ ನೇತ್ಯಪಿ ವ್ಯಾಪ್ತಿಂ ವಿನಾ ಕಥಂ ನಿವಾರ್ಯತೇ' ಎಂದು. ಅಸದಾಶ್ರಯಸ್ಯ=ಅಸದಾಶ್ರಯಕ್ಕೆ, ಸಾಧಕತ್ವಂ ನೇತ್ಯಪಿ=ಸಾಧಕತ್ವವು ಇಲ್ಲವೆನ್ನುವುದೂ ಕೂಡ, ವ್ಯಾಪ್ತಿಂ ವಿನಾ=ಅಸತ್ತಿಗೆ ವ್ಯಾಪ್ತಿಯುಳ್ಳ ಸಾಧ್ಯಸಾಧನಾಶ್ರಯತ್ವವನ್ನು ಹೊರತು ಸಾಧಕತ್ವವು, ಕಥಂ ನಿವಾರ್ಯತೇ=ಹೇಗೆ ನಿವಾರಣೆ ಮಾಡಲ್ಪಡುತ್ತದೆ.? ಎಂದೆರಡನೆಯ ಅರ್ಥವು. 'ಅಸತ್ ಸಾಧ್ಯಸಾಧನಾಶ್ರಯೋ ನ ಭವತಿ ನಿರ್ಧರ್ಮಕತ್ವಾತ್ ಎಂದು ನಿನ್ನ ಸಾಧನದಲ್ಲಿಯೂ ಅಸತ್ತಿಗೆ ಸಾಧ್ಯಸಾಧನಾಶ್ರಯತ್ವವನ್ನಂಗೀಕರಿಸದೆ ನಿರ್ಧರ್ಮಕತ್ವಹೇತುವಿನಿಂದ ಹೇಗೆ ನಿವಾರಣೆ ಮಾಡಲ್ಪಡುತ್ತದೆಂಬ ಭಾವನೆಯು. ಈ ಪಕ್ಷದಲ್ಲಿ ಅಪಿ ಶಬ್ದದಿಂದ 'ಅಸನ್ನಾಸ್ತಿ ಅಸತಃ ನ ಸಾಧನಾಶ್ರಯತ್ವಂ' ಇತ್ಯಾದ್ಯಸದ್ವಿಷಯಕ ವ್ಯವಹಾರಾನುಪಪತ್ತಿಯು, ಕೂಡಿಸಿಕೊಳ್ಳಲ್ಪಡುತ್ತದೆ. ॥ ೭೦ ॥

ಕಾರಣಾಂತರದಿಂದಲೂ ನಿರ್ಧರ್ಮಕತ್ವದಿಂದ ಅಸತ್ತಿಗೆ ಸಾಧ್ಯಸಾಧನಾಶ್ರಯತ್ವಾಭಾವವು ಯುಕ್ತವಲ್ಲವೆಂದು ಹೇಳುವರು.

**ಮೂ ॥ ಅಸದಾಶ್ರಯಮಿತ್ಯಾದಿ ವಿಶೇಷಣತ್ವಸಂಭವೇ ಕಥಮವ್ಯಾಪ್ತಿಃ ॥ ೭೧ ॥**

ಅ ॥ ಅಸದಾಶ್ರಯಂ=ಅಸದಾಶ್ರಯವುಳ್ಳಸಾಧನವು, ನ (ಸಾಧಕಂ=ಸಾಧಕವಲ್ಲ,) ಇತ್ಯಾದಿ ವಿಶೇಷಣತ್ವಸಂಭವೇ=ಇದೇ ಮೊದಲಾದ ವಿಶೇಷಣತ್ವವು ಸಂಭವಿಸಲು, ಕಥಂ ಅವ್ಯಾಪ್ತಿಃ=ವ್ಯಾಪ್ತಿಯುಳ್ಳ ಸಾಧ್ಯಸಾಧನಾಶ್ರಯತ್ವಾಭಾವವು ಹೇಗೆ?

ತಾ ॥ ಅಸದಾಶ್ರಯಯುಕ್ತವಾದ ಸಾಧನವು ಸಾಧಕವಾಗುವುದಿಲ್ಲ. ಎಂದು ಹೇಳುವವನಿಂದ ಅಸತ್ತಿಗೆ ಸಾಧನದಲ್ಲಿ ವಿಶೇಷಣತ್ವವು ಒಪ್ಪಿಕೊಂಡಂತಾಗುವುದು. ವಿಶೇಷಣತ್ವವೆಂದರೆ— ವಿಶೇಷ್ಯವನ್ನು ಇತರದ ದೆಸೆಯಿಂದ ವ್ಯಾವರ್ತಿಸುವಿಕೆಯು (ವ್ಯಾವರ್ತಕತ್ವ ಧರ್ಮವು.) ಉ:— ಶುಕ್ಲವಾದ ಘಟವು, ಇಲ್ಲಿ ಘಟದಲ್ಲಿ ವಿಶೇಷಣವಾದ ಶುಕ್ಲತ್ವಧರ್ಮವು, ವಿಶೇಷ್ಯವಾದ ಘಟವನ್ನು ನೀಲಾದಿಘಟದ ದೆಸೆಯಿಂದ ಪ್ರತ್ಯೇಕವಾಗಿ ತೋರಿಸುವುದು. ಪ್ರಕೃತದಲ್ಲಿ, ಸಾಧನದಲ್ಲಿ ವಿಶೇಷಣವಾದ "ಅಸದಾಶ್ರಯಂ ಸಾಧನಂ" ಎನ್ನುವಲ್ಲಿ ವಿಶೇಷ್ಯವಾದ ಸಾಧನವನ್ನು ಸದಾಶ್ರಯದ ದೆಸೆಯಿಂದ ವ್ಯಾವರ್ತಿಸುವುದರಿಂದ ಅಸತ್ತಿಗೂ ವಿಶೇಷಣತ್ವಧರ್ಮವಿದೆ. ಆಗ "ಅಸತ್ ಸಾಧ್ಯಸಾಧನಾಶ್ರಯೋ ನ ಭವತಿ ನಿರ್ಧರ್ಮಕತ್ವಾತ್" ಎನ್ನುವ ಪರಸಾಧನವು, ನಿರ್ಧರ್ಮಕತ್ವ ಹೇತುವಿಲ್ಲದಿರುವುದರಿಂದ, ಅಸತ್ತಿಗ ಸಾಧ್ಯಸಾಧನ ಧರ್ಮಾಶ್ರಯತ್ವಾಭಾವವನ್ನು ಹೇಗೆ ಸಾದಿಸುವುದು? ಸಾಧಿಸಲಾಗದು. 'ಅಸದಾಶ್ರಯವಾದ' ಎನ್ನುವ ವಿಶೇಷಣವಿಲ್ಲದೆ 'ನ ಸಾಧಕಂ' ಎಂದು ಕೇವಲವಾಗಿ ನಿಷೇಧಿಸಲಿಕ್ಕೆ ಬರುವುದು. ॥ ೭೧ ॥

ಈ ರೀತಿಯಾಗಿ ಅಸದಾಶ್ರಯತ್ವವು ಆಶ್ರಯಾ ಸಿದ್ಧಿಗೆ ಲಕ್ಷಣವೆನ್ನುವ ಪಕ್ಷವನ್ನು ದೂಷಿಸಿ, ಅಭಾವಕ್ಕೆ ನಿರ್ಧರ್ಮಕತ್ವವಿರುವುದರಿಂದ ಅಭಾವಾಶ್ರಯತ್ವವು ಆಶ್ರಯಾಸಿದ್ಧಿಗೆ ಲಕ್ಷಣವೆಂದು ಬೇರೆ ಕೆಲವರು ಹೇಳುವ ಆಶ್ರಯಾಸಿದ್ಧಿಗೆ ದೂಷಣತ್ವವನ್ನು ನಿರಾಕರಿಸುವರು.

**ಮೂ ॥ ನ ಚಾತ್ಯಂತಾಭಾವೋಽಪಿ ಸರ್ವಧರ್ಮರಹಿತಃ । ಪ್ರಮೇಯತ್ವಾದ್ಯನುಭವಾತ್ ॥ ೭೨ ॥**

ಅ ॥ ಪ್ರಮೇಯತ್ವಾದ್ಯನುಭವಾತ್=ಪ್ರಮಾವಿಷಯತ್ವ, ಅಭಿಧಾವಿಷಯತ್ವ ಮೊದಲಾದ ಧರ್ಮಗಳು ತಿಳಿದುಬರುವುದರಿಂದ, ಅತ್ಯಂತಾಭಾವೋಽಪಿ=ಅಪ್ರಾಮಾಣಿಕ ಪ್ರತಿಯೋಗಿಕ

ವಾದ ಅತ್ಯಂತಾಭಾವವೂ ಕೂಡ, ಸರ್ವಧರ್ಮರಹಿತಃ=ಎಲ್ಲಾ ಧರ್ಮಶೂನ್ಯವಾದುದು, ನ ಚ=ಅಲ್ಲ.

ತಾ ॥ ಅತ್ಯಂತಾಭಾವವೆಂದು ಹೆಸರನ್ನು ಹೇಳುವುದರಿಂದಲೇ ಅಭಿಧೇಯತ್ವಾದಿ ಧರ್ಮವು ಹೇಳಿದಂತಾಯಿತು. ಅಲ್ಲದೆ ಅತ್ಯಂತಾಭಾವವು ಸರ್ವಧರ್ಮರಹಿತವೆಂದು ಹೇಳುವಾಗ ಸರ್ವ ಧರ್ಮರಹಿತತ್ವವೆಂಬ ಧರ್ಮವು ಉಂಟೆಂದು ಅಂಗೀಕರಿಸಲೇಬೇಕು. ಅಲ್ಲವಾದರೆ ವಾದಿಯು ಹೇಗೆ ತಾನು ತಿಳಿಯುವನು? ಹೇಗೆ ಉಪದೇಶವನ್ನಾದರೂ ಮಾಡುವನು? ಉಪದೇಶಮಾಡ ದಿದ್ದರೆ ಶಿಷ್ಯನು ಹೇಗೆ ತಿಳಿದಾನು? ಆದುದರಿಂದ ಅತ್ಯಂತಾಭಾವವು ನಿರ್ಧರ್ಮಕವಲ್ಲವು. ಆ ಅಭಾವಾಶ್ರಯತ್ವವು ಆಶ್ರಯಾಸಿದ್ಧಿಗೆ ಲಕ್ಷಣವು ಆಗದಿರುವುದರಿಂದ ದೂಷಣವಲ್ಲವು. ॥ ೭೨ ॥

ಈಗ ಪೂರ್ವದಲ್ಲಿ ಹೇಳಿದ ಅತಿಪ್ರಸಂಗಾಭಾವರೂಪ ಹೇತುವಿನಿಂದ ಅತಿರಿಕ್ತವಾದ ಅಪ್ರಸಿದ್ಧಸಾಧ್ಯವುಳ್ಳ ಹೇತುವಿಗೂ, ಸಾಧಕತ್ವಖ್ಯಾಪನರೂಪವಾದ ಹೇತುವಿನಿಂದಲೂ, ಅಪ್ರ ಸಿದ್ಧಸಾಧ್ಯಕವಾದ ಹೇತುವಿಗೆ ಸಾಧಕತ್ವವನ್ನು ಸಾಧಿಸುವರು.

**ಮೂ ॥ ಪರಿಶೇಷಾರ್ಥಾಪತ್ತಿಪ್ರಾಮಾಣ್ಯಾಭ್ಯುಪಗಮಾಚ್ಚ ॥ ೭೩ ॥**

ಅ ॥ ಪರಿಶೇಷಕ್ಕೂ, ಅರ್ಥಾಪತ್ತಿಗೂ, ಪ್ರಾಮಾಣ್ಯವು ಸರ್ವರಿಂದಲೂ ಅಂಗೀಕರಿಸ ಲ್ಪಡುವುದರಿಂದ, (ಸಾಧ್ಯಾಪ್ರಸಿದ್ಧಿಯು ದೂಷಣವಲ್ಲವು.)

ತಾ ॥ ಚೈತ್ರಮೈತ್ರರಲ್ಲಿ ಈತನು ಚೈತ್ರನೆಂದು ಹೇಳಿದರೆ ಮತ್ತೊಬ್ಬನು ಮೈತ್ರನೆಂಬೀ ಪರಿಶೇಷಕ್ಕೂ, ಜೀವವಂತನಾದ ಚೈತ್ರನು ಮನೆಯೊಳಗಿಲ್ಲವೆಂದರೆ, ಮನೆಯಿಂದ ಹೊರಗಿದ್ದಾನೆ, ಎಂಬೀ ಅರ್ಥಾಪತ್ತಿಗೂ ಪ್ರಾಮಾಣ್ಯವನ್ನು ಎಲ್ಲರೂ ಅಂಗೀಕರಿಸಿದ್ದಾರೆ. ಪರಿಶೇಷದಲ್ಲಿ ಕಾಣದೆ ಇದ್ದವನು ಮೈತ್ರನೆನ್ನುವ ಸಾಧ್ಯವು, ಅರ್ಥಾಪತ್ತಿಯಲ್ಲಿ ಮನೆಯ ಹೊರಗಿರುತ್ತಾನೆಯೆನ್ನುವ ಸಾಧ್ಯವು ಅಪ್ರಸಿದ್ಧಗಳಾದರೂ ಸಿದ್ಧವಾಗುವುವು, ಎಂದು ಸರ್ವಸಮ್ಮತವಾದುದರಿಂದ ಸಾಧ್ಯಾ ಪ್ರಸಿದ್ಧಿಯು ದೂಷಣವಲ್ಲವು. ॥ ೭೩ ॥

ಇನ್ನೊಂದು ಹೇತುವಿನಿಂದಲೂ ಸಾಧ್ಯಾಪ್ರಸಿದ್ಧಿಯು ದೂಷಣವಲ್ಲ. ಅಪ್ರಸಿದ್ಧಸಾಧ್ಯಕ ಹೇತುವಿಗೆ ಅಸಾಧಕತ್ವವಿಲ್ಲವೆಂದು ಹೇಳುವರು.

**ಮೂ ॥ ವಿಮತಂ ಸಕರ್ತೃಕಮಿತ್ಯತ್ರ ಸರ್ವಜ್ಞತ್ವಸ್ಯ ಪಕ್ಷಧರ್ಮತಾ ಬಲೇನ ಸಿದ್ಧ್ಯಂಗೀಕಾರಾತ್ ॥ ೭೪ ॥**

ಅ ॥ 'ವಿಮತಂ ಸಕರ್ತೃಕಂ ಇತಿ ಅತ್ರ=ವಿಮತಿವಿಷಯವಾದ ಭೂಮಿಪರ್ವತ ಮೊದಲಾದದು ಕರ್ತೃಯುಕ್ತವಾಗಿದೆ, (ಕಾರ್ಯತ್ವದ ದೆಸೆಯಿಂದ ಘಟದಂತೆ) ಎನ್ನುವಲ್ಲಿ' ಪಕ್ಷಧರ್ಮತಾಬಲೇನ=ಹೇತುವಿಗೆ ಪಕ್ಷವೃತ್ತಿತ್ವಬಲದಿಂದ, ಸರ್ವಜ್ಞತ್ವಸ್ಯ=ಸರ್ವವಿಷಯಕ ಜ್ಞಾನವತ್ವಕ್ಕೆ, ಸಿದ್ಧ್ಯಂಗೀಕಾರಾತ್=ಕರ್ತನಲ್ಲಿ ಪ್ರಮಿತಿಯನ್ನು ನೈಯ್ಯಾಯಿಕರು ಅಂಗೀಕರಿ ಸುವ ದೆಸೆಯಿಂದ ಅಪ್ರಸಿದ್ಧ ಸಾಧ್ಯಕವಾದ ಹೇತುವು ಅಸಾಧಕವಾಗುವುದಿಲ್ಲವು.

ತಾ ॥ ಯದ್ಯಪಿ ಕಾರ್ಯತ್ವಹೇತುವು ಸಕರ್ತೃಕತ್ವ (ಕರ್ತೃಮತ್ವ) ದಿಂದ ವ್ಯಾಪ್ತ ವಾಗಿ ಅದನ್ನೇ ಸಾಧಿಸುವದು ಆದರೂ ಒಂದು ಕಾರ್ಯವನ್ನು ಮಾಡಬೇಕಾದರೆ ಅನೇಕ ಸಾಮ ಗ್ರ್ಯಾದಿಗಳನ್ನು ಕರ್ತನು ತಿಳಿದಿರಬೇಕು. ಹೀಗಿರುವಾಗ ಭೂಭೂಧರಾದ್ಯನೇಕ ಕಾರ್ಯ ಸಮುದಾಯವನ್ನು ಮಾಡುವ ಕರ್ತನು ಸರ್ವಜ್ಞನೇ ಆಗಬೇಕು. ಆದುದರಿಂದ ಕಾರ್ಯತ್ವ

ಹೇತವು ಭೂಭೂಧರಾದ್ಯನೇಕ ಕಾರ್ಯಗಳಲ್ಲಿ ಪಕ್ಷಧರ್ಮತಾಬಲದಿಂದ ಕರ್ತನನ್ನು ಸಾಧಿಸುವಾಗ ಆತನಲ್ಲಿ ಸರ್ವಜ್ಞತ್ವವನ್ನು ಕೂಡ ಸಾಧಿಸುವುದು. ಈ ಸರ್ವಜ್ಞತ್ವವು ಕರ್ತನಾದ ಈಶ್ವರನಲ್ಲಿರುವುದಲ್ಲದೆ ಬೇರೆ ಯಾರಲ್ಲಿಯೂ ಅನುಮಿತಿಯ ದೆಸೆಯಿಂದ ಮೊದಲು ಸಿದ್ಧವಲ್ಲವು. ಆದುದರಿಂದ ಅಪ್ರಸಿದ್ಧವಾದ ಸರ್ವಜ್ಞತ್ವರೂಪಸಾಧ್ಯವುಳ್ಳ ಕಾರ್ಯತ್ವಹೇತುವು ಅಸಾಧಕವಾಗುವುದಿಲ್ಲವು. ಅಂದರೆ ಸಾಧ್ಯಾಪ್ರಸಿದ್ಧಿಯು ದೂಷಣವಾಗುವದಿಲ್ಲವು. ಮತ್ತು ಭೂಭೂಧರಾದಿಗಳಲ್ಲಿ ಇರತಕ್ಕದ್ದು ಕಾರ್ಯತ್ವಹೇತುವು. ಈಶ್ವರನಿಷ್ಠವಾದ ಸರ್ವಜ್ಞತ್ವವನ್ನು ಸಾಧಿಸುವ ದೆಸೆಯಿಂದ ಹೇತುವು ವ್ಯಧಿಕರಣವು (ಸಾಧ್ಯವಿರುವಲ್ಲಿರದುದು) ಆದರೂ ಅಸಾಧಕವಾಗುವುದಿಲ್ಲವು. ಅಂದರೆ ವ್ಯಧಿಕರಣಾಸಿದ್ಧಿಯು ದೂಷಣವಲ್ಲವೆನ್ನುವುದು ಜ್ಞಾಪಿತವಾಗುವುದು. ಇನ್ನು ಕಾರ್ಯತ್ವವು ಪಕ್ಷಧರ್ಮತಾಬಲದಿಂದ ಈಶ್ವರನಲ್ಲಿ ಸರ್ವಜ್ಞತ್ವವನ್ನು ಸಾಧಿಸುವುದರ ದೆಸೆಯಿಂದಲೇ ದೃಷ್ಟಾಂತವಿಲ್ಲದಿರುವುದರಿಂದ ಕಾರ್ಯತ್ವ ಹೇತುವಿಗೆ ಸರ್ವಜ್ಞತ್ವದಿಂದ ವ್ಯಾಪ್ತಿಗ್ರಹಣವಾಗದಿರುವುದರಿಂದ, ಉದಾಹರಣರೂಪವಾದ ಅವಯವವಿಲ್ಲವು. ಅದಿಲ್ಲದೆ ಪಕ್ಷಧರ್ಮತಾಬಲದಿಂದ ಸಾಧಕವಾದ ಮೇಲೆ ಪರಾರ್ಥಾನುಮಾನದಲ್ಲಿ ಪಂಚಾವಯವ ನಿಯಮವಿದೆ ಎನ್ನುವುದು ಅಸಂಗತವು ಎಂದೂ ಕೂಡ ವಿದಿತವಾಗುವುದು. ॥ ೭೪ ॥

ಹಿಂದೆ ಅಪ್ರಸಿದ್ಧ ಸಾಧ್ಯವುಳ್ಳ ಪರಿಶೇಷಾರ್ಥಾಪತ್ತಿಗಳಿಗೆ ಪ್ರಾಮಾಣ್ಯವನ್ನಂಗೀಕರಿಸಿದರೂ ಅಪ್ರಸಿದ್ಧ ಸಾಧ್ಯವುಳ್ಳ ಅನುಮಾನಕ್ಕೆ ಸಾಧಕತ್ವ ವಿಷಯದಲ್ಲಿ ಏನು ಹೇಳಿದಂತಾಗುವುದೆನ್ನುವುದನ್ನು ಪ್ರತಿಪಾದಿಸುವರು.

**ಮೂ ॥ ಪರಿಶೇಷೋಽರ್ಥಾಪತ್ತಿರನುಮಾನಮಿತ್ಯವಿಶೇಷಃ । ಉಪಪತ್ತಿಮಾತ್ರತ್ವಾತ್ ॥ ೭೫**

ಅ ॥ ಉಪಪತ್ತಿಮಾತ್ರತ್ವಾತ್=ಪರಿಶೇಷಾರ್ಥಾಪತ್ತಿಗಳಿಗೆ ಅನುಮಾನದಂತೆ ಕೇವಲವಾಗಿ ಅನ್ಯಥಾನುಪಪತ್ತಿಮತ್ವವಿರುವುದರ ದೆಸೆಯಿಂದ, ಪರಿಶೇಷಃ ಅರ್ಥಾಪತ್ತಿಃ=ಪರಿಶೇಷವು, ಅರ್ಥಾಪತ್ತಿಯೂ ಕೂಡ, ಅನುಮಾನಮಿತಿ=ಅನುಮಾನವೆಂಬುವುದರಿಂದ, (ಅತಿ ಬೇರೆಯಾದ ಅರ್ಥವುಳ್ಳದ್ದು ಅಲ್ಲದಿರುವುದರಿಂದ), ಅವಿಶೇಷಃ=(ಪರಿಶೇಷ ಅರ್ಥಾಪತ್ತಿಗಳಿಗೂ, ಅನುಮಾನ ಎಂಬುವುದಕ್ಕೂ) ವಿಶೇಷವಿಲ್ಲವು.

ತಾ ॥ ಅನುಮಾನದಂತೆ ಅನ್ಯಥಾನುಪಪತ್ತಿಮತ್ವವಿರುವುದರ ದೆಸೆಯಿಂದ, "ಪರಿಶೇಷಃ ಅರ್ಥಾಪತ್ತಿಃ ಅನುಮಾನಂ" ಎನ್ನುವ ಶಬ್ದಗಳು ಘಟಪಟಶಬ್ದಗಳಂತೆ ಬೇರೆ ಬೇರೆ ಅರ್ಥವುಳ್ಳ ಶಬ್ದಗಳಲ್ಲವು. ಅಂದರೆ ಪರಿಶೇಷವು, ಅರ್ಥಾಪತ್ತಿಯು, ಅನುಮಾನವು ಎಂದೆಲ್ಲಾ ಒಂದೇ ಆಗಿರುತ್ತದೆ. ಹಾಗಾದಮೇಲೆ ಅಪ್ರಸಿದ್ಧ ಸಾಧ್ಯಗಳಾದ ಪರಿಶೇಷಾರ್ಥಾಪತ್ತಿಗಳಿಗೆ ಸಾಧಕತ್ವವಿರುವುದೆಂದರೆ, ಆ ವಿಧವಾದ ಅನುಮಾನಕ್ಕೇನೇ ಸಾಧಕತ್ವವಿದೆಯೆಂದು ಹೇಳಿದಂತಾಗುವುದು.

ಈ ಪರಿಶೇಷಾರ್ಥಾಪತ್ತಿಗಳು ಅನ್ಯಥಾನುಪಪತ್ತಿಮತ್ವಗಳು ಇರುವುದಾದರೂ ಹೇಗೆ ಅನುಮಾನಗಳು ಆಗುವುವು ಎನ್ನುವುದನ್ನು ಉಪಪಾದಿಸುವರು.

**ಮೂ ॥ ಉಪಪತ್ತೇಶ್ಚ ವ್ಯಾಪ್ತ್ಯಪೇಕ್ಷಾ ಸರ್ವಥಾಂಗೀಕಾರ್ಯೇತ್ಯಾಗ್ರಹಮಾತ್ರೇಣ ಭೇದಃ ॥ ೭೬ ॥**

ಅ ॥ ಉಪಪತ್ತೇಶ್ಚ=ಅನ್ಯಥಾನುಪಪತ್ತಿಗೂ ಕೂಡ, ವ್ಯಾಪ್ತ್ಯಪೇಕ್ಷಾ = ವ್ಯಾಪ್ತಿಯ ಅಪೇಕ್ಷೆಯು, ಸರ್ವಥಾ=ಸರ್ವಪ್ರಕಾರದಿಂದ, ಅಂಗೀಕಾರ್ಯಾ=ಅಂಗೀಕರಿಸಲ್ಪಡುವುದು,

ಇತಿ=ಆದಕಾರಣದ ದೆಸೆಯಿಂದ, ಆಗ್ರಹಮಾತ್ರೇಣ=ಹೀಗೆ ಆಗಬೇಕೆಂದು ಕೇವಲ ಹಠದಿಂದ, ಭೇದಃ=(ಪರಿಶೇಷಾರ್ಥಾಪತ್ತಿಗಳಿಗೆ ಅನುಮಾನದ ದೆಸೆಯಿಂದ) ಭೇದವು, (ಪರನಿಂದಂಗೀಕರಿಸ

ತಾ ॥ ಅನ್ಯಥಾನುಪತ್ತಿಯೆಂದರೆ ಒಂದನ್ನಗಲಿ ಇನ್ನೊಂದಕ್ಕೆ ಅನವಸ್ಥಾನವು (ಇಲ್ಲಧಿರುವಿಕೆಯು) ಇದು ವ್ಯಾಪ್ತಿಯಿಲ್ಲವಾದರೆ ಕೂಡುವುದಿಲ್ಲವು.

ಚೈತ್ರಮೈತ್ರರಲ್ಲಿ ಕಾಣುತ್ತಿರುವಾತನು ಚೈತ್ರನಲ್ಲವೆನ್ನುವ ಪ್ರಸಕ್ತಪ್ರತಿಷೇಧವು ಪರಿಶಿಷ್ಯಮಾಣಬುದ್ಧಿಯನ್ನು ಬಿಟ್ಟು ಅನುಪಪನ್ನವಾಗುವದು. ಈ ಅನುಪನ್ನವಾಗುವಿಕೆಯು ಪರಿಶೇಷದಲ್ಲಿ ಅನ್ಯಥಾನುಪಪತ್ತಿಯು. 'ಅಯಂ ಮೈತ್ರೋ ಭವತಿ, ಚೈತ್ರಮೈತ್ರಯೋರನ್ಯತರತ್ವೇ ಸತಿ ಅಚೈತ್ರತ್ವಾತ್, ವ್ಯತಿರೇಕೇಣ ಚೈತ್ರವತ್' ಎಂದು ಪರಿಶೇಷದಲ್ಲಿ ಅನುಮಾನಾಕಾರವು. ಜೀವಿಸುತ್ತಿರುವ ಚೈತ್ರನು ಗೃಹದಲ್ಲಿ ಇಲ್ಲವು, ಎನ್ನುವ ನಿಷೇಧವು ಮನೆಯ ಹೊರಗಿರುವಿಕೆಯನು ಬಿಟ್ಟು ಅನುಪಪನ್ನವಾಗುವುದು. ಈ ಅನುಪಪತ್ತಿಯೇ ಅರ್ಥಾಪತ್ತಿಯಲ್ಲಿ ಅನ್ಯಥಾನುಪಪತ್ತಿಯು. ಈ ಅನ್ಯಥಾನುಪಪತ್ತಿಯು ಸ್ವತಂತ್ರವಾಗಿ ಜ್ಞಾನವನ್ನುಂಟುಮಾಡುವುದಿಲ್ಲ. ಪರಂತು ವ್ಯಾಪ್ತಿಯ ಸಹಾಯದಿಂದಲೇ. ವ್ಯಾಪ್ತಿಯಿಂದ ಅರ್ಥವನ್ನು ಬೋಧಿಸುವುದು ಅನುಮಾನವೆಂದು ಹಿಂದೆಯೇ ಹೇಳಿಯದೆ. ಕಾರಣ ಅರ್ಥಾಪತ್ತಿಯೂ ಅನುಮಾನವೇ ಆಗುವುದು. 'ಜೀವನ್ ಚೈತ್ರೋ, ಬಹಿರಾಸ್ತೇ, (ಹೊರಗಿದ್ದಾನೆ), ಜೀವನವತ್ವೇ ಸತಿ ಗೃಹೇಽಸತ್ವಾತ್' ಜೀವವಂತನಾಗಿ ಮನೆಯಲ್ಲಿಲ್ಲದುದರಿಂದ, ಇದು ಅನುಮಾನಾಕಾರವು ಯೋ ಜೀವನ್ ಯತ್ರ (ಗೃಹೇ) ನಾಸ್ತಿ, ಸಃ ತತಃ ಅನ್ಯತ್ರಾಸ್ತೇ, (ಬಹಿರಾಸ್ತೇ, ಎಂದು ವ್ಯಾಪ್ತಿಯು) ವ್ಯಾಪ್ತಿಯ ಬಲದಿಂದ ಅರ್ಥಬೋಧಕವಾದದ್ದೂ ಅನುಮಾನವಲ್ಲವೆಂದರೆ ಧೂಮತ್ವಾನುಮಾನವೂ ಅನುಮಾನವಾಗಲಿಕ್ಕಿಲ್ಲ. ಪರಂತು ಅರ್ಥಾಪತ್ತಿಯೇ ಆಗಬೇಕಾದೀತು. ಆದುದರಿಂದ ಪರಿಶೇಷವೂ, ಅರ್ಥಾಪತ್ತಿಯೂ ಪ್ರತ್ಯೇಕ ಮಾನಗಳೆಂಬುವುದಕ್ಕೆ ಯುಕ್ತಿಯಿಲ್ಲ. ಅಲ್ಲದೆ ಹಾಗೆ ಹೇಳುವುದು ಕೇವಲ ಆಗ್ರಹದಿಂದಲೇ ಸರಿ. ಎಂದು ತಿಳಿಯ ಬೇಕು. ॥ ೬೬ ॥

ಪ್ರಸಂಗ ಸಂಗತಿಯಿಂದ ಉಪಮಾನಕ್ಕೂ ಅನುಮಾನದಲ್ಲಿಯೇ ಅಂತರ್ಭಾವವನ್ನು ಹೇಳುವರು—

**ಮೂ ॥ ಉಪಮಾನಸ್ಯಾಪಿ ವ್ಯಾಪ್ತಿರೂಪತ್ವಾತ್** ॥ ೬೭ ॥

ಅ ॥ ಉಪಮಾನಸ್ಯಾಪಿ=ಉಪಮಾನಕ್ಕೂ ಕೂಡ, ವ್ಯಾಪ್ತಿರೂಪತ್ವಾತ್=ವ್ಯಾಪ್ತಿಯ ಬಲದಿಂದಲೇ ಅರ್ಥಬೋಧಕತ್ವವಿರುವುದರಿಂದ, (ಅನುಮಾನದಲ್ಲಿಯೇ ಅಂತರ್ಭಾವವು. ಅಲ್ಲದೆ ಪ್ರತ್ಯೇಕವೆಂದು ಹಠದಿಂದಲೇ ಹೇಳಬೇಕು). ॥ ೬೭ ॥

ಉಪಮಾನದಲ್ಲಿ ವ್ಯಾಪ್ತಿಯು ಹೇಗೆಂದು ತೋರಿಸುವರು.

**ಮೂ ॥ ನ ಹಿ ಸ್ವಸದೃಶೇನಾಸದೃಶಂ ಕ್ವಚಿದ್ದೃಷ್ಟಂ** ॥ ೬೮ ॥

ಅ ॥ ಸ್ವಸದೃಶೇನ=ತನಗೆ ಸದೃಶವಾದ ಬೇರೊಂದರಿಂದ, ಅಸದೃಶಂ=ತಾನು ಸದೃಶವಲ್ಲದ್ದಾಗಿ, ನ ಹಿ ದೃಷ್ಟಂ=ತೋರಲಿಲ್ಲವು.

ತಾ ॥ ಸಾದೃಶ್ಯಜ್ಞಾನೋಪಯುಕ್ತವಾದುದು (ಜನಕವು) ಉಪಮಾನವೆನ್ನಿಸುವುದು. **ಉ:—** ಗೋವಿಗೆ ಸದೃಶವಾದದ್ದು ಗವಯವು, ಎಂದು ಆಪ್ತನ ಮಾತನ್ನು ಕೇಳಿದಾತನು

ಕಾಡಿಗೆ ಹೋಗಿ ಗೋವಿನಂತೆ ಇದ್ದ ಮೃಗವನ್ನು ನೋಡಿದರೆ ಇದೇ ಗವಯವೆಂದು ತಿಳಿಯು ವನು. ಈ ಜ್ಞಾನದಲ್ಲಿ ಕಾರಣವಾದದ್ದು 'ಇದು ಗೋವಿನಂತೆ ಉಂಟು' ಎಂಬೀ ಸಾದೃಶ್ಯಜ್ಞಾನವು. ಅದೇ ಉಪಮಾನ. ಇಲ್ಲಿ ಗೋಸದೃಶವಾದದ್ದು ಗವಯ, ಎಂಬುವುದು ವ್ಯಾಪ್ತಿಯಿಂದಲೇ 'ಇದು ಗವಯ' ವೆಂಬೀ ಜ್ಞಾನವನ್ನುಂಟುಮಾಡಿಕೊಡುತ್ತದೆ. ಹೇಗೆಂದರೆ, ಯಾವುದು ಗೋಸದೃಶವಾದ ಪ್ರಾಣಿಯೋ, ಅದು ಗವಯ, ವೆಂಬೀ ವ್ಯಾಪ್ತಿಜ್ಞಾನ ಬಂದಮೇಲೆ ಇದು ಗವಯ, ಗೋಸದೃಶವಾದ್ದರಿಂದ ಎಂದು ತಿಳಿಯುತ್ತಾನೆ. ಇದು ಅನುಮಾನವೆಂದು ಸ್ಪಷ್ಟವಾಗುವುದು, ಅನುಮಾನಾಕಾರವು. 'ಅಯಂ ಗವಯಪದವಾಚ್ಯಃ' ಅಗೋತ್ವೇಸತಿ ಗೋಸದೃಶತ್ವಾತ್, ವ್ಯತಿರೇಕೇಣ ಅಶ್ವವತ್, ಇದು ನೈಯಾಯಿಕರ ಮತದಲ್ಲಿ. ಮೀಮಾಂಸಕರ ರೀತಿಯಾಗಿ ಹೀಗೆ ತಿಳಿಯತಕ್ಕದು. "ಗವಯಃ ಗೋಸದೃಶಃ ಗೋಗತಸಾದೃಶ್ಯ ಪ್ರತಿಯೋಗಿತ್ವಾತ್, ಯಃ ಯತ್ಸಾದೃಶ್ಯಪ್ರತಿಯೋಗೀ, ಸಃ ತತ್ಸದೃಶಃ" ಯಮೋ ಯಮಾಂತರೇಣ ॥ ೭೮ ॥

ಅಭಾವವೆಂಬ ಪ್ರಮಾಣಾಂತರವೂ ಉಂಟು, ಎಂದು ಕೆಲವರು ಹೇಳುವರು. ಅದನ್ನೂ ದೂಷಿಸಿ, ಅನುಮಾನದಲ್ಲಿ ಅಂತರ್ಭಾವವನ್ನು ಉಪಪಾದಿಸುವರು.

**ಮೂ ॥ ಯೋಗ್ಯಾನುಪಲಬ್ಧೇಶ್ಚ ಲಿಂಗತ್ವಂ ॥ ೭೯ ॥**

ಅ ॥ ಯೋಗ್ಯಾನುಪಲಬ್ಧೇಶ್ಚ=ಪ್ರತ್ಯಕ್ಷಯೋಗ್ಯವಾದ ಭಾವಪದಾರ್ಥದ ಉಪಲಬ್ಧಿಯ (ಪ್ರತ್ಯಕ್ಷದ) ಅಭಾವಕ್ಕೂ ಕೂಡ, ಲಿಂಗತ್ವಂ=ಅನುಮಾನತ್ವವು, (ಯೋಗ್ಯಾನುಪಲಬ್ಧಿಯು ಅನುಮಾನದಲ್ಲೇ ಅಂತರ್ಭವಿಸುವುದು.)

ತಾ ॥ 'ಇಲ್ಲಿ ಪುಸ್ತಕವಿಲ್ಲವು, ಎಂಬೀ ಅಭಾವಜ್ಞಾನಕ್ಕೆ ಪುಸ್ತಕವು ತೋರದಿರುವುದೇ (ಅನುಪಲಬ್ಧಿಯೇ) ಕಾರಣವು. ಅದೇ ಅಭಾವ ಪ್ರಮಾಣವೆನ್ನುವರು.

ಆ ಅನುಪಲಬ್ಧಿಯು ಅಭಾವಜ್ಞಾನವನ್ನು ಹೇತುರೂಪವಾಗಿಯೇ ತಾನು ಉಂಟುಮಾಡುವುದು. ಅಂದರೆ "ಅತ್ರ ಘಟೋ ನಾಸ್ತಿ=ಇಲ್ಲಿ ಘಟವಿಲ್ಲವು, ಯೋಗ್ಯತ್ವೇ ಸತಿ ಅನುಪಲಭ್ಯಮಾನತ್ವಾತ್=ಯೋಗ್ಯವಾಗಿದ್ದು ತೋರದಿರುವುದರಿಂದ" ಎಂದು ಅನುಮಾನರೀತಿಯನ್ನೇ ಹೊಂದುವುದಾದ ಕಾರಣ ಪ್ರತ್ಯೇಕ ಪ್ರಮಾಣವಲ್ಲವು. ॥ ೭೯ ॥

ಈಗ ಅಭಾವವು ಯಾಕೆ ಪ್ರಮಾಣಾಂತರವಲ್ಲ ಎಂಬ ಆಕ್ಷೇಪಕ್ಕೆ ಪರಿಹಾರೋತ್ತರವನು ಕೊಡುತ್ತಾರೆ.

**ಮೂ ॥ ಅವಿಶೇಷಾತ್ ॥ ೮೦ ॥**

ಅ ॥ ಅವಿಶೇಷಾತ್ = ಅನುಮಾನಕ್ಕಿಂತ ನೀವು ಹೇಳತಕ್ಕ ಅಭಾವಕ್ಕೆ ವಿಶೇಷವಿಲ್ಲವಾದುದರಿಂದ.

ತಾ ॥ ಅನುಮಾನವು ವ್ಯಾಪ್ತಿಯ ಮೂಲಕ ಅರ್ಥವನ್ನು ಬೋಧಿಸುತ್ತದೆ. ಹೀಗೆಯೇ ಅಭಾವ ಪ್ರಮಾಣವೂ ವ್ಯಾಪ್ತಿಯಿಂದಲೇ ಅಭಾವಜ್ಞಾನವನ್ನುಂಟುಮಾಡುತ್ತದೆ. ಯಾವುದು ಎಲ್ಲಿ ನೋಡಲಿಕ್ಕೆ ಯೋಗ್ಯವಾಗಿದ್ದು ತೋರುವುದಿಲ್ಲವೋ, ಅದು ಅಲ್ಲಿ ಇಲ್ಲವು, ಎಂಬೀ ವ್ಯಾಪ್ತಿಯಿಲ್ಲದೆ "ಇಲ್ಲಿ ಈ ವಸ್ತುವಿಲ್ಲ"ವೆಂಬೀ ಜ್ಞಾನವಾಗಲಾರದು. ಆದುದರಿಂದ ಅದೂ ಅನುಮಾನವೇ ಆಗುವುದು.

ಅಲ್ಲದೆ ಅನುಪಲಬ್ಧಿಸಾಮಾನ್ಯವು ಅಭಾವಪ್ರಮಾಣವೆಂದರೆ ಈಶ್ವರಾನುಪಲಬ್ಧಿಯು, ಧರ್ಮಾಧರ್ಮಾದ್ಯನುಪಲಬ್ಧಿಯೂ, ಈಶ್ವರಾದ್ಯಭಾವಪ್ರಮಾಣವಾಗಬೇಕಾದೀತು. ಆದುದರಿಂದ ಯೋಗ್ಯಾನುಪಲಬ್ಧಿಯೇ ಅಭಾವಪ್ರಮಾಣವೆನ್ನಬೇಕು. ಅದು ವ್ಯಾಪ್ತಿಯಿಂದಲೇ ಅರ್ಥಬೋಧಕವೆಂದು ಹೇಳಿದೆ.

ಮತ್ತು ಅನುಪಲಬ್ಧಿಗೆ ಅಭಾವಗಮಕತ್ವವನ್ನಂಗೀಕರಿಸುವುದಾದರೆ ಅನುಪಲಬ್ಧಿಯು ಉಪಲಬ್ಧಿಯ ಅಭಾವವೇ, ಆ ಅಭಾವಜ್ಞಾನದಲ್ಲಿಯೂ ಇನ್ನೊಂದು ಅನುಪಲಬ್ಧಿಯನ್ನು ಅಂಗೀಕರಿಸುವುದಾದರೆ ಇದೇ ಮೂಲದಿಂದ, ಅನವಸ್ಥಾದೋಷವನ್ನು ಹೇಳುವರು.

**ಅವಿಶೇಷಾತ್ ॥**

ಅ ॥ ಅನುಪಲಬ್ಧಿಗೂ ಅಭಾವತ್ವದಿಂದ ವಿಶೇಷವಿಲ್ಲವಾದುದರಿಂದ,

ತಾ ॥ ಆ ಅನುಪಲಬ್ಧಿಗೂ ಜ್ಞಾಪಕವಾಗಿ ಬೇರೊಂದನುಪಲಬ್ಧಿಯೂ, ಅದಕ್ಕೆ ಮತ್ತೊಂದೂ ಎಂಬೀರೀತಿಯಾಗಿ ಅನುಪಲಬ್ಧಿ ಪರಂಪರೆಯನ್ನಂಗೀಕರಿಸಿದರೆ ಅನವಸ್ಥೆಯು. ಅನುಪಲಬ್ಧಿಗೆ ಲಿಂಗತ್ವದಿಂದ ಪ್ರಾಮಾಣ್ಯವನ್ನು ಹೇಳುವ ಆಚಾರ್ಯರ ಪಕ್ಷದಲ್ಲಿ ಲಿಂಗವಾದ ಅನುಪಲಬ್ಧಿಯ ಜ್ಞಾನವು ಸಾಕ್ಷಿಯಿಂದಲೇ ಆಗುವುದು. ಬೇರೊಂದನುಪಲಬ್ಧಿಯ ಅಪೇಕ್ಷೆಯಿಲ್ಲವು. ಕಾರಣ ಅನವಸ್ಥೆಯು ಬರುವುದಿಲ್ಲ.

ಸಾಕ್ಷಿಯು ಸ್ವವಿಷಯಕಜ್ಞಾನಸ್ವರೂಪವಾದುದರಿಂದ ಸಾಕ್ಷಿಗಿನ್ನೊಂದು ಗ್ರಾಹಕವು, ಅದಕ್ಕೆ ಬೇರೊಂದು, ಎಂಬೀ ಗ್ರಾಹಕ ಪರಂಪರೆಯಿಂದಲೂ ಅನವಸ್ಥಾಪ್ರಸಂಗವಿಲ್ಲವು. ಆ ಸಾಕ್ಷಿಯು ವಿಶೇಷಬಲದಿಂದ ತನಗೆ ತಾನೇ ಗ್ರಾಹಕವಾಗುವುದು. ಮತ್ತು ಈ ಅನುಪಲಬ್ಧಿಯು ಚಕ್ಷುರಾದಿಯಂತೆ ಅಜ್ಞಾತವಾಗಿ ಕರಣವಾಗುತ್ತದೆ. ಲಿಂಗವಾದರೆ ಜ್ಞಾತಕರಣವಾದುದರಿಂದ ಗ್ರಾಹಕಾಂತರಾಪೇಕ್ಷೆಯಿಂದ ಅನವಸ್ಥೆಯು ಬರಬಹುದು. ಅಜ್ಞಾತಕರಣವಾದುದರಿಂದ ಲಿಂಗವಲ್ಲವು. ಅನವಸ್ಥಾಪ್ರಸಂಗವಿಲ್ಲವೆಂದರೆ ಅದನ್ನೂ ಇದರಿಂದಲೇ ದೂಷಿಸುವರು.

**ಅವಿಶೇಷಾತ್ ॥**

ತಾ ॥ ಹಾಗಾದರೆ ಗಾಢ ನಿದ್ದೆಯಲ್ಲಿಯೂ ಉಪಲಭ್ಯಾಭಾವವು ಇದೆ. ಅದರಲ್ಲಿಯೂ ಅನುಪಲಬ್ಧಿತ್ವವು ಸಮಾನವಾದುದರಿಂದ, ಆಗ ಅದು ಅಭಾವವನ್ನು ಬೋಧಿಸುವ ಪ್ರಸಂಗವು ಬರುವುದು. ಅದು ಅಭಾವಬೋಧಕವಾಗದಿರುವುದರಿಂದ ಅಜ್ಞಾತಕರಣವಲ್ಲ. ಜ್ಞಾತಕರಣವಾದ ಅನುಮಾನವೇ.

ಕಣ್ಣು, ಕಿವಿ, ಮೊದಲಾದುವು ಇದ್ದರೂ, ಕೆಲವು ವೇಳೆ ರೂಪಾದಿಗಳ ಜ್ಞಾನವು ಹೇಗೆ ಬರುವುದಿಲ್ಲವೋ, ಹಾಗೆ ಸುಷುಪ್ತಿಯಲ್ಲಿಯೂ ಅನುಪಲಬ್ಧಿಯಿದ್ದರೂ ಅಭಾವಜ್ಞಾನವಾಗುವುದಿಲ್ಲವೆನ್ನುವುದಕ್ಕೂ ಇದೇ ದೂಷಣವು.

**ಅವಿಶೇಷಾತ್ ॥**

ತಾ ॥ ಚಕ್ಷುರಾದಿಗಳಿಗೆ ಅರ್ಥಸನ್ನಿಕರ್ಷರೂಪವಾದ ಅವಾಂತರವ್ಯಾಪಾರವಿರುವುದಾದರೆ ಅದು ಜ್ಞಾನವನ್ನು ಹುಟ್ಟಿಸುವುದು. ಇಲ್ಲವಾದರೆ ಇಲ್ಲವು. ಎಂಬೀ ವಿಶೇಷವಿದೆ. ಅನುಪಲಬ್ಧಿಗೆ ಆ ವಿಶೇಷವಿಲ್ಲ. ಕಾರಣ ಸುಪ್ತಿಯಲ್ಲಿ ಅಭಾವಜ್ಞಾನವು ಹುಟ್ಟುವುದಿಲ್ಲವೆಂದು ಹೇಳಲಶಕ್ಯವು. ॥ ೮೦ ॥

'ತ್ರಿವಿಧೋ ವಿರೋಧಃ' ಎಂದು ಹೇಳಿದ್ದಕ್ಕೆ ಪ್ರಯೋಜನವನ್ನು ಹೇಳುವರು.

**ಮೂ || ಉಕ್ತದೋಷೇಷ್ವೇವಾಶೇಷಾನುಮಾನದೋಷಾಣಾಮಂತರ್ಭಾವಃ|| || ೮೧ ||**

ಅ || ಉಕ್ತದೋಷೇಷ್ವೇವ=ಹಿಂದೆ ಹೇಳಿದದೋಷಗಳಲ್ಲಿಯೇ, ಅಶೇಷಾನುಮಾನ ದೋಷಾಣಾಂ=ಎಲ್ಲಾ ಅನುಮಾನದೋಷಗಳಿಗೂ, ಅಂತರ್ಭಾವಃ=ಅಂತರ್ಭಾವವು.

ತಾ || ಈ ಹಿಂದೆ ಹೇಳಿದ ಪ್ರತಿಜ್ಞಾವಿರೋಧಾದಿ ದೋಷಗಳಲ್ಲಿಯೇ ಪರರ ಹೇತ್ವಾಭಾಸಾದಿ ಸಮಸ್ತದೋಷಗಳಿಗೂ ಅಂತರ್ಭಾವವು. ಆದುದರಿಂದ ಅವರು ಹೇಳತಕ್ಕ ಹೇತ್ವಾಭಾಸಾದಿಗಳು ನಾವು ಹೇಳಿದ ದೋಷಗಳಿಂದ ಅತಿರಿಕ್ತಗಳಲ್ಲವು. || ೮೧ ||

ಈಗ ಸಾಧ್ಯಾವಿಶಿಷ್ಟತ್ವವೆಂಬ ಬೇರೊಂದು ದೋಷಾಂತರವಲ್ಲವೆಂದು ಸಾಧಿಸುವರು.

**ಮೂ || ಸಾಧ್ಯಾವಿಶಿಷ್ಟೋಽಸಿದ್ಧಃ || ೮೨ ||**

ಅ || ಸಾಧ್ಯಾವಿಶಿಷ್ಟಃ=ಸಾಧ್ಯಾಭಿನ್ನವಾದ ಹೇತುವು, ಅಸಿದ್ಧಃ=ಅಸಿದ್ಧವೇ, (ಅಸಿದ್ಧಕ್ಕಿಂತ ಪ್ರತ್ಯೇಕವಲ್ಲವು).

ತಾ || "ಪರ್ವತಃ=ಪರ್ವತವು, ಅಗ್ನಿಮಾನ್=ಬೆಂಕಿಯುಳ್ಳದ್ದು, ಅಗ್ನಿಮತ್ವಾತ್=ಬೆಂಕಿ ಯಿರುವುದರಿಂದ" ಎಂಬೀ ಅನುಮಾನದಲ್ಲಿ ಸಾಧ್ಯವೂ ಹೇತುವೂ ಒಂದೇ ಆಗಿದೆ. ಆದುದರಿಂದ ಹೇತುವು ಸಾಧ್ಯಾಭಿನ್ನವಾಗುವುದು. ಆದರೆ ಅಲ್ಲಿ ಅಸಿದ್ಧಿದೋಷವೇ ಹೊರತು ಬೇರೆ ದೋಷವಿಲ್ಲ. ಇಲ್ಲಿ ಅಗ್ನಿಯು ಸಾಧ್ಯವು. ಅದು ಮೊದಲು ಸಿದ್ಧವಾಗಿಲ್ಲವು. ಆಗಿದ್ದರೆ ಪುನಃ ಅದನ್ನು ಸಾಧಿಸುವುದೇಕೆ? ಆದುದರಿಂದ ಸಾಧಿಸತಕ್ಕ ಅಗ್ನಿಯು ಮೊದಲು ಸಿದ್ಧವಾಗಿಲ್ಲ. ಅದೇ ಹೇತುವಾದ್ದರಿಂದ ಹೇತುವೂ ಸಿದ್ಧವಾಗಿಲ್ಲವೆಂದು ಹೇಳಿಯೇ ತೀರಬೇಕು. ಆಗ ಹೇತುವು ಅಸಿದ್ಧವೇ ಆಯಿತು. ಕಾರಣ ಸಾಧ್ಯಾವಿಶಿಷ್ಟವು ಪ್ರತ್ಯೇಕ ದೋಷವಲ್ಲವು. || ೮೨ ||

ಹಿಂದೆ ಹೇಳಿದ ಆಶ್ರಯಾಸಿದ್ಧಿಯು ದೂಷಣವಲ್ಲವೆಂದು ಹೇಳುವುದು, ಪಕ್ಷ (ಆಶ್ರಯ) ವೇ ಇಲ್ಲವಾದರೆ ಬರತಕ್ಕ ಆಶ್ರಯಾಸಿದ್ಧಿ ದೋಷಪರವು.

ಹಾಗಾದರೆ ಸಿದ್ಧಸಾಧನವು ದೋಷಾಂತರವಿದೆಯೆಂಬೀ ಆಕ್ಷೇಪವನ್ನು ಪರಿಹರಿಸುವರು.

**ಮೂ || ಸಿದ್ಧಸಾಧಕೋಽಸಂಗತಃ || ೮೩ ||**

ಅ || ಸಿದ್ಧಸಾಧಕಃ=ಸಿದ್ಧಸಾಧನೆಯುಳ್ಳ ಹೇತುವು, ಅಸಂಗತಃ=ಅಸಂಗತವು,

ತಾ || ಸಿದ್ಧಸಾಧನವೆಂದರೆ ತಿಳಿದುದ್ದನ್ನೇ ಸಾಧಿಸುವುದು. ತಿಳಿದುದನ್ನೇ ಸಾಧಿಸಿದರೆ ಅಸಂಗತವಾಗುತ್ತದೆ. ಕಾರಣ ಸಿದ್ಧಸಾಧನಕ್ಕೆ ಅಸಂಗತಿಯಲ್ಲೇ ಅಂತರ್ಭಾವವು, ಪ್ರತ್ಯೇಕ ವಲ್ಲವು. || ೮೩ ||

ಈ ರೀತಿಯಾಗಿ ಪ್ರಮಾಣಸ್ವರೂಪವನ್ನೂ, ಪ್ರಮಾಣದೋಷದ ಸ್ವರೂಪವನ್ನೂ ಹೇಳಿ, ತಾವು ಹೇಳಿದ "ಯಥಾರ್ಥಂ ಪ್ರಮಾಣಂ" ಎನ್ನುವ ಪ್ರಮಾಣ ಲಕ್ಷಣವನ್ನು ದೃಢಮಾಡುವುದಕ್ಕೋಸ್ಕರ ಪರರು ಹೇಳತಕ್ಕ ಪ್ರಮಾಣಲಕ್ಷಣಗಳನ್ನು ಕ್ರಮೇಣ ನಿರಾಕರಿಸುವ ಆಚಾರ್ಯರು ಮೊದಲು ಭಾಟ್ಟರು ಹೇಳುವ ಲಕ್ಷಣವನ್ನು ದೂಷಿಸುವರು.

**ಮೂ ॥ ನ ಪ್ರಮಾಸಾಧನಂ ಪ್ರಮಾಣಂ ॥ ೮೪ ॥**

ಅ ॥ ಪ್ರಮಾಸಾಧನಂ = ಪ್ರಮೆಗೆ ಕಾರಣವಾದುದು, ಪ್ರಮಾಣಂ = ಪ್ರಮಾಣವು, (ಎನ್ನುವ ಲಕ್ಷಣವು) ನ=ಕೂಡುವುದಿಲ್ಲವು.

ತಾ ॥ 'ಅಯಂ ಘಟಃ' ಎಂದು ಜ್ಞಾನವುಂಟಾದ ಮೇಲೆ, 'ಜ್ಞಾತೋ ಘಟಃ' ಘಟವು ತಿಳಿಯಲ್ಪಟ್ಟಿತು, ಹಾಗೆಯೇ 'ಪ್ರಕಟೋ ಘಟಃ' ಘಟವು ಪ್ರಕಟವಾಗಿ ತೋರಿತು, ಎಂಬೀಜ್ಞಾನವು ನಿಯಮೇನ ಬರುವುದು. ಇವೆರಡು ಜ್ಞಾನದಲ್ಲಿ ಜ್ಞಾತತೆ, ಪ್ರಾಕಟ್ಯಗಳು ವಿಷಯಗಳು. ಮೊದಲು ಹುಟ್ಟಿದ 'ಅಯಂ ಘಟಃ' ಎಂಬೀ ಜ್ಞಾನವು ವಿಷಯದಲ್ಲಿ ಹುಟ್ಟುವ ಜ್ಞಾತತಾರೂಪವಾದ ಪ್ರಮೆಗೆ ಕಾರಣವು, ಅಂತೂ 'ಅಯಂ ಘಟಃ' ಎಂಬಿತ್ಯಾದಿ ಜ್ಞಾನವು ಕರಣವು.

ಇದೇ ಪ್ರಮಾಣವು ಎಂಬೀ ಅಭಿಪ್ರಾಯದಿಂದ ಭಾಟ್ಟರು 'ಪ್ರಮಾಸಾಧನಂ ಪ್ರಮಾಣಂ' ಎಂದು ಹೇಳುವರು. ಇದೇ ರೀತಿಯಾಗಿ ಅನುಮಿತ್ಯಾದಿ ಸ್ಥಲದಲ್ಲಿಯೂ ತಿಳಿಯಬೇಕು. ಅವರ ಮತದಲ್ಲಿ ಜ್ಞಾನಕ್ಕೆ ಮುಖ್ಯವಾಗಿ ಪ್ರಾಮಾಣ್ಯವಿರುವುದರಿಂದ ಜ್ಞಾನಕ್ಕೆ ಈ ಲಕ್ಷಣವು. ಆದುದರಿಂದ ಇಂದ್ರಿಯದ ಸನ್ನಿಕರ್ಷದಲ್ಲಿಯೂ, ಭ್ರಮಾದಿಗಳಲ್ಲಿಯೂ ಅವ್ಯಾಪ್ತಿ, ಅತಿವ್ಯಾಪ್ತ್ಯಾದಿ ದೋಷಗಳಿಲ್ಲವು. ಇಂತಹ ಲಕ್ಷಣವು ಉಪಪನ್ನವಾಗುವುದಿಲ್ಲವು. ॥ ೮೪ ॥

ಉಪಪನ್ನವಾಗದಿರಲಿಕ್ಕೆ ಕಾರಣವನ್ನು ಹೇಳುವರು.

**ಮೂ ॥ ಜ್ಞಾನವ್ಯತಿರಿಕ್ತಪ್ರಮಾಯಾಂ ಪ್ರಮಾಣಾಭಾವಾತ್ ॥ ೮೫ ॥**

ಅ ॥ ಜ್ಞಾನವ್ಯತಿರಿಕ್ತಪ್ರಮಾಯಾಂ=ಜ್ಞಾನಾತಿರಿಕ್ತವಾದ ಪ್ರಮೇಯವನ್ನು ಆಶ್ರಯಿಸಿರುವ ಪ್ರಮೆಯಲ್ಲಿ, ಪ್ರಮಾಣಾಭಾವಾತ್=ಪ್ರಮಾಣವಿಲ್ಲದಿರುವುದರಿಂದ, ಲಕ್ಷಣವು ಅಸಂಭವಿಯಾಗುವುದು, ಆದುದರಿಂದ ಈ ಲಕ್ಷಣವು ಅಯುಕ್ತವಾಗುವುದು.

ತಾ ॥ ಪ್ರಮಾ ಎಂದರೆ ಜ್ಞಾನವೇ. ಪರರು ಹೇಳುವಂತೆ ಪ್ರಮೇಯನಿಷ್ಠವಾದುದಲ್ಲವು. ಪ್ರಮೇಯನಿಷ್ಠವಾಗಿದೆ ಎಂಬ ವಿಷಯದಲ್ಲಿ ಪ್ರಮಾಣವಿಲ್ಲವು. ಜ್ಞಾತೋ ಘಟಃ, ಪ್ರಕಟೋ ಘಟಃ, ಎನ್ನುವಲ್ಲಿ ಜ್ಞಾನವೇ ಘಟಾದಿರೂಪ ಪ್ರಮೇಯ ವಿಶೇಷಣತ್ವದಿಂದ ಪ್ರತೀತವಾಗುವುದು. ಆದುದರಿಂದ 'ಜ್ಞಾತೋ ಘಟಃ' ಇತ್ಯಾದಿ ಪ್ರತ್ಯಕ್ಷವು ಪ್ರಮೇಯ ಧರ್ಮವಾದ ಜ್ಞಾತತೆಯಲ್ಲಿ ಪ್ರಮಾಣವಾಗುವುದಿಲ್ಲವು. ಅಂದರೆ ದ್ವಿಷ್, ಇಷ್ ಇತ್ಯಾದಿ ಧಾತ್ವರ್ಥಕ್ರಿಯೆಯು ಕರ್ತೃನಿಷ್ಠವಾದುದು. ಅದು ಯಾವಾಗ ಕರ್ತೃಪ್ರಾಧಾನ್ಯದಿಂದ ವ್ಯವಹರಿಸಿಕೊಳ್ಳಲ್ಪಡುವುದೋ, ಆಗ ಕರ್ತೃಧರ್ಮತ್ವದಿಂದಲೇ ಪ್ರತೀಯಮಾನವಾಗುವುದು. ಉ:— "ದೇವದತ್ತೋ ಘಟಮಿಚ್ಛತಿ, ದ್ವೇಷ್ಟೀತಿ ॥" ದೇವದತ್ತನು ಘಟವನ್ನು ಇಚ್ಛಿಸುತ್ತಾನೆ, ದ್ವೇಷಿಸುತ್ತಾನೆ ಎಂದು ಕರ್ಮಪ್ರಾಧಾನ್ಯದಿಂದ ವ್ಯವಹರಿಸಿಕೊಳ್ಳುವುದಾದರೆ ಕರ್ಮವಿಶೇಷಣವಾಗಿ ಪ್ರತೀಯಮಾನವಾಗುವುದು. ಉ:— ಘಟ ಇಷ್ಟಃ ದ್ವಿಷ್ಟ ಇತಿ ಘಟವು ಇಚ್ಛಿಸಲ್ಪಟ್ಟಿತು, ದ್ವೇಷಿಸಲ್ಪಟ್ಟಿತು, ಎಂದು ಆದು ಸ್ವಪ್ರಾಧಾನ್ಯ (ಕ್ರಿಯಾಪ್ರಾಧಾನ್ಯ)ದಿಂದ ವ್ಯವಹರಿಸಿಕೊಳ್ಳಲ್ಪಡುವುದಾದರೆ ಸ್ವತಂತ್ರವಾಗಿಯೇ (ವಿಶೇಷಣಭಾವವಿಲ್ಲದೆ) ಪ್ರತೀಯಮಾನವಾಗುವುದು. ಉ:— ಇಚ್ಛಾ, ದ್ವೇಷಃ ಇತಿ. ಇಚ್ಛೆಯು, ದ್ವೇಷವು ಎಂದು ಹೇಗೋ, ಇದರಂತೆಯೇ ಜ್ಞಾಧಾತ್ವರ್ಥವಾದ ಜ್ಞಾನರೂಪಕ್ರಿಯೆಯು ಕರ್ತೃಪ್ರಾಧಾನ್ಯವಾದರೆ, "ದೇವದತ್ತೋಜಾನಾತಿ, ದೇವದತ್ತನು ತಿಳಿಯುತ್ತಾನೆ." ಎಂದು ಕರ್ತನಾದ ದೇವದತ್ತ ವಿಶೇಷಣವಾಗಿ ಪ್ರತೀಯಮಾನವಾಗುತ್ತದೆ. ಸ್ವಪ್ರಾಧಾನ್ಯದಿಂದ ವ್ಯವಹರಿಸು

ವುದಾದರೆ 'ಜ್ಞಾನಂ' (ಜ್ಞಾನವು) ಎಂದು ಸ್ವತಂತ್ರವಾಗಿತೋರುತ್ತದೆ. ಕರ್ಮಪ್ರಾಧಾನ್ಯದಿಂದ ವ್ಯವಹರಿಸುವುದಾದರೆ 'ಜ್ಞಾತೋ ಘಟಃ' ಘಟವು ತಿಳಿಯಲ್ಪಟ್ಟಿತೆಂದು ಘಟರೂಪವಿಷಯವಿಶೇಷಣ ವಾಗಿ ಪ್ರತೀಯಮಾನವಾಗುತ್ತದೆ. ಆದುದರಿಂದ ಜ್ಞಾನವೇ 'ಜ್ಞಾತೋ ಘಟಃ' ಎಂಬಲ್ಲಿ ವಿಷಯ ವಿಶೇಷಣವಾಗಿ ಪ್ರತೀಯಮಾನವಾಗುವುದಲ್ಲದೆ, ಅತಿರಿಕ್ತವಾದ 'ಪ್ರಮಾ' ಎನ್ನುವ ವಿಷಯ ಧರ್ಮವಲ್ಲವು. ಪ್ರಕಟವೆಂಬಲ್ಲಿಯೂ ಪ್ರಾಕಟ್ಯವೆಂದರೆ ಜ್ಞಾನವೇ. 'ಇಷ್ಟೋ ಘಟಃ' ಎಂಬು ವಲ್ಲಿ ಇಚ್ಛೆಯು ಆತ್ಮಧರ್ಮವಾದರೂ ಹೇಗೆ ಘಟರೂಪ (ಕರ್ಮ) ವಿಷಯವಿಶೇಷಣವಾಗಿ ತೋರುವುದೋ, ಹಾಗೆ ಆತ್ಮಧರ್ಮವಾದ ಜ್ಞಾನವು 'ಜ್ಞಾತೋ ಘಟಃ' ಎಂದು ವಿಷಯವಿಶೇಷ ಣವಾಗಿ ತೋರುವುದು. ಇಚ್ಛೆಯು ಘಟದಲ್ಲಿ ವಿಷಯವಿಷಯೀಭಾವ ಸಂಬಂಧದಿಂದ ವಿಶೇಷಣ ವಾಗುವುದು. ಜ್ಞಾನವು ಘಟದಲ್ಲಿ ವಿಷಯವಿಷಯೀಭಾವ ಸಂಬಂಧದಿಂದಲೇ ವಿಶೇಷಣವಾಗು ವುದು. ಕಾರಣ ಭಾಟ್ಟರ ಲಕ್ಷಣವು ಯುಕ್ತವಲ್ಲವು. ॥ ೮೫ ॥

ಮೀಮಾಂಸಕೈಕದೇಶಿಯಿಂದುಕ್ತವಾದ ಪ್ರಮಾಣಲಕ್ಷಣವನ್ನು ಖಂಡಿಸುವರು.

**ಮೂ ॥ ನ ಚಾಜ್ಞಾತಪರಿಚ್ಛಿತ್ತಿರೇವ ಪ್ರಮೇತ್ಯತ್ರ ಕಿಂಚಿನ್ಮಾನಮ್ ॥ ೮೬ ॥**

ಅ ॥ ಅಜ್ಞಾತಪರಿಚ್ಛಿತ್ತಿರೇವ=ಅನಿಶ್ಚಿತವಾದ ಅರ್ಥದ ಯಥಾರ್ಥಜ್ಞಾನವೇ, 'ಪ್ರಮಾ'= ಪ್ರಮೆಯು, ಇತ್ಯತ್ರ=ಎನ್ನುವಲ್ಲಿ, ಕಿಂಚಿನ್ಮಾನಂ=ಯಾವುದಾದರೊಂದು ಪ್ರಮಾಣವು, ನ ಚ= ಇಲ್ಲವೇ ಇಲ್ಲವು.

ತಾ ॥ ಅನಿಶ್ಚಿತ ವಿಷಯಕ ಯಥಾರ್ಥಜ್ಞಾನವು ಪ್ರಮೆಯು. ತತ್ಸಾಧನವು ಪ್ರಮಾಣವು. ಎಂದು ಹೇಳುವ ಲಕ್ಷಣವು ಯುಕ್ತವಲ್ಲವು. ಜ್ಞಾತಪರಿಚ್ಛಿತ್ತಿಯಲ್ಲಿ (ಜ್ಞಾತಾರ್ಥ ವಿಷಯಕ ಯಥಾರ್ಥಜ್ಞಾನದಲ್ಲಿ) ಪ್ರಮಾತ್ವವಿರುವುದರಿಂದ, ಈ ಲಕ್ಷಣವಿಲ್ಲದಿರುವುದರಿಂದ ಅವ್ಯಾಪ್ತಿಬರುವುದು. ಜ್ಞಾತಪರಿಚ್ಛಿತ್ತಿಯು ಅಪ್ರಮೆಯು. ತತ್ಸಾಧನವು ಅಪ್ರಮಾಣವು ಎನ್ನು ವುದರಲ್ಲಿ ಪ್ರಮಾಣವಿಲ್ಲವು. ಈರೀತಿಯಾಗಿ ಲಕ್ಷಣವು ದುಷ್ಟವಾಗುವುದರಿಂದ ಆಯುಕ್ತವು.॥೮೬॥

ಜ್ಞಾತಾರ್ಥಪರಿಚ್ಛಿತ್ತಿಗೆ ಪ್ರಮಾತ್ವವನ್ನೂ, ತತ್ಸಾಧನಕ್ಕೆ ಪ್ರಮಾಣತ್ವವನ್ನೂ ಅಂಗೀಕರಿ ಸುವುದಾದರೆ ಜ್ಞಾತಾರ್ಥವಿಷಯಕವಾದ ಸ್ಮೃತಿಗೂ, ಅನುವಾದಾದಿಗೂ ಪ್ರಮಾತ್ವವನ್ನಂಗೀ ಕರಿಸಬೇಕಾಗುವುದು. ಎನ್ನುವ ಆಪತ್ತಿಯನ್ನು ಇಷ್ಟಾಪತ್ತಿಯಿಂದ ಪರಿಹರಿಸುವರು.

**ಮೂ ॥ ಯಾಥಾರ್ಥ್ಯಮೇವ ಪ್ರಾಮಾಣ್ಯಮಿತ್ಯಂಗೀಕಾರಾತ್ ॥ ೮೭ ॥**

ಅ ॥ ಯಥಾರ್ಥಮೇವ=ಯಾಥಾರ್ಥ್ಯತ್ವವೇ, ಪ್ರಾಮಾಣ್ಯಂ=ಪ್ರಮಾಣತ್ವವು. ಇತ್ಯಂ ಗೀಕಾರಾತ್=ಎಂದಂಗೀಕರಿಸುವುದರಿಂದ, (ಜ್ಞಾತಾರ್ಥವಾದ ಸ್ಮೃತಿಗೂ, ಅನುವಾದಾದಿಗೂ ಪ್ರಮಾತ್ವಾಪತ್ತಿಯು ನಮಗಿಷ್ಟವೇ. ಅನಿಷ್ಟವಲ್ಲವು.)

ತಾ ॥ ಹಿಂದೆ ಹೇಳಿದಂತೆ ಯಥಾವಸ್ಥಿತ ಜ್ಞೇಯವಿಷಯೀಕಾರಿ ಜ್ಞಾನತ್ವವೇ ಜ್ಞಾನ ಪ್ರಾಮಾಣ್ಯವು, ತತ್ಸಾಧನತ್ವವು ಕರಣಪ್ರಾಮಾಣ್ಯವು. ಎಂದು ಅಂಗೀಕರಿಸಿದ ನಮಗೆ ಸ್ಮೃತಿಗೆ ಜ್ಞಾತಾರ್ಥವಾದುದಕ್ಕೂ ತತ್ಸಾಧನಮನಸ್ಸಿಗೂ ಪ್ರಾಮಾಣ್ಯವು ಸಮ್ಮತವೇ. ಅನಿಷ್ಟ ವಲ್ಲವು. ಆದುದರಿಂದ ಅತಿಪ್ರಸಂಗವಿಲ್ಲವು. ಎಂದು ಮೀಮಾಂಸಕೈಕದೇಶಿಪ್ರಮಾಣಲಕ್ಷಣ ಖಂಡನವು. ॥ ೮೭ ॥

ಈಗ ಸ್ಮೃತಿಗೆ ಪ್ರಾಮಾಣ್ಯವನ್ನಂಗೀಕರಿಸದ ಪ್ರಾಭಾಕರರ ಲಕ್ಷಣವನ್ನು ದೂಷಿಸುವರು.

**ಮೂ ॥ ನ ಚಾನುಭೂತಿರೇವ ಪ್ರಮಾಣಂ । ಸ್ಮೃತ್ಯಾದಾವವ್ಯಾಪ್ತೇಃ ॥ ೮೮ ॥**

ಅ ॥ ಸ್ಮೃತ್ಯಾದೌ=ಸ್ಮೃತಿಯು, ಪ್ರತ್ಯಕ್ಷವು, ಯುಕ್ತಿ, ವೇದಾದಿಯು ಇವುಗಳಲ್ಲಿ ಅವ್ಯಾಪ್ತೇಃ=ಅವ್ಯಾಪ್ತಿಬರುವುದರಿಂದ, ಅನುಭೂತಿರೇವ=ಅನುಭವವೇ, ಪ್ರಮಾಣಂ=ಪ್ರಮಾಣವು ಎನ್ನುವಲಕ್ಷಣವು, ನಚ=ಯುಕ್ತವಲ್ಲವು.

ತಾ ॥ ಸಂಸ್ಕಾರದಿಂದ ಹುಟ್ಟುವ ಜ್ಞಾನಕ್ಕೆ ಸ್ಮೃತಿಯೆಂದು ಹೆಸರು. ತದಿತರವಾದ ಜ್ಞಾನವು ಅನುಭೂತಿಯು. ಅನುಭೂತಿಯೇ ಪ್ರಮಾಣವೆಂದು ಪ್ರಾಭಾಕರರಲಕ್ಷಣವು. ಅನುಭವವು ಸ್ಮೃತಿಯು ಎಂದೆರಡೇ ವಿಧಜ್ಞಾನವು. ಎಂದಂಗೀಕರಿಸುವುದರಿಂದ ಅಯಥಾರ್ಥ ಅನುಭವವೆಂದು ಇತರ ಮತಗಳಲ್ಲಿ ಅಂಗೀಕರಿಸುವ ಭ್ರಮೆಯನ್ನೇ ಅಂಗೀಕರಿಸದೆ ಇರುವುದರಿಂದ ಇದರಲ್ಲಿ ಅತಿವ್ಯಾಪ್ತಿಗೆ ಅವಕಾಶವಿಲ್ಲವೆಂದು ಅವರು ಸಾಧಿಸುವರು. ಈ ಲಕ್ಷಣವು ಅಸಂಗತವು ಏತಕ್ಕೆಂದರೆ ಸ್ಮೃತಿಯಲ್ಲಿಯೂ ವೇದಾದಿಗಳಲ್ಲಿಯೂ ಪ್ರತ್ಯಕ್ಷದಲ್ಲಿಯೂ ಅನುಮಾನದಲ್ಲಿಯೂ ಅವ್ಯಾಪ್ತಿಬರುತ್ತದೆ. ಇವುಗಳು ಎಲ್ಲರಿಂದಲೂ ಪ್ರಮಾಣಗಳೆಂದು ಅಂಗೀಕರಿಸಲ್ಪಟ್ಟವೆ. ॥ ೮೮ ॥

ಹಿಂದೆ ಹೇಳಿದ ಸ್ಮೃತಿವೇದಾದಿಗಳಿಗೆ ಪ್ರಾಮಾಣ್ಯವಿದ್ದರೆ ಅವ್ಯಾಪ್ತಿ ಯುಕ್ತವಾಗುವುದು. ಅವುಗಳಿಗೆ ಪ್ರಾಮಾಣ್ಯವೇ ಹೇಗೆ? ಎಂಬುವುದನ್ನುಪಪಾದಿಸುವರು.

**ಮೂ ॥ ವೇದಾನುಮಾನಾದಿ ಪ್ರಾಮಾಣ್ಯಪ್ರಸಿದ್ಧೇಶ್ಚ ॥ ೮೯ ॥**

ಅ ॥ ವೇದಾನುಮಾನಾದಿ ಪ್ರಾಮಾಣ್ಯಪ್ರಸಿದ್ಧೇಶ್ಚ=ವೇದವು ಅನುಮಾನವು ಆದಿಪದೋಕ್ತವಾದ ಸ್ಮೃತಿಯು, ಅನುಪ್ರಮಾಣವಾದ ಪ್ರತ್ಯಕ್ಷವು ಇವುಗಳ ಪ್ರಾಮಾಣ್ಯ ಪ್ರಸಿದ್ಧಿಯಾಗಿರುವುದರಿಂದ, ॥ ೮೯ ॥

ಈ ಪ್ರಸಿದ್ಧಿಯು ಲೌಕಿಕ ಮಾತ್ರವಲ್ಲ. ಶ್ರುತಿಯಲ್ಲಿಯೂ ಇವುಗಳಿಗೆ ಪ್ರಾಮಾಣ್ಯವನ್ನು ಹೇಳಿರುವುದರಿಂದ ಲೌಕಿಕ ಪ್ರಸಿದ್ಧಿಯು ಸಮೂಲವೆಂದು ತೋರಿಸುವರು.

**ಮೂ ॥ "ಸ್ಮೃತಿಃ ಪ್ರತ್ಯಕ್ಷಮೈತಿಹ್ಯಮನುಮಾನಶ್ಚತುಷ್ಟಯಂ॥ ಪ್ರಮಾಣಮಿತಿ ವಿಜ್ಞೇಯಂ ಧರ್ಮಾದ್ಯರ್ಥೇ ಬುಭೂಷುಭಿಃ ।" ಇತಿಶ್ರುತೇಶ್ಚ ॥ ೯೦ ॥**

ಅ ॥ ಬುಭೂಷುಭಿಃ=ತಿಳಿಯಲಿಚ್ಛೆಯುಳ್ಳವರಿಂದ, ಧರ್ಮಾದ್ಯರ್ಥೇ=ಅತೀಂದ್ರಿಯಗಳು, ಐಂದ್ರಿಯಕಗಳು ಈ ವಿಷಯದಲ್ಲಿ, ಸ್ಮೃತಿಃ=ಸ್ಮೃತಿಯು, ಪ್ರತ್ಯಕ್ಷಂ=ಪ್ರತ್ಯಕ್ಷವು, ಐತಿಹ್ಯಂ=ಐತಿಹ್ಯವು, ಅನುಮಾನಃ=ಅನುಮಾನವು ಎಂದಿವುಗಳ, ಚತುಷ್ಟಯಂ=ನಾಲ್ಕು ಸಮುದಾಯವು, ಪ್ರಮಾಣಂ=ಪ್ರಮಾಣವು ಎಂದು, ವಿಜ್ಞೇಯಂ=ತಿಳಿಯಲ್ಪಡಬೇಕಾಗುವುದು. ಇತಿ=ಹೀಗೆಂದು, ಶ್ರುತೇಶ್ಚ=ಶ್ರುತಿಯ ದೆಸೆಯಿಂದಲೂ ಪ್ರಾಮಾಣ್ಯನಿಶ್ಚಯವಾಗುವುದು. ॥೯೦॥

ಉದಾಹೃತ ಶ್ರುತಿಯಲ್ಲಿ ಐತಿಹ್ಯವು ನಾಲ್ಕನೇ ಪ್ರಮಾಣವೆಂದು ಕಂಡುಬರುವುದರಿಂದ ಪ್ರಮಾಣತ್ರಿತ್ವಕ್ಕೆ ಭಂಗ ಬರುವುದೆಂಬ ಆಶಂಕೆಯನ್ನು ಪರಿಹರಿಸುವರು.

**ಮೂ ॥ ಐತಿಹ್ಯಮಾಗಮಭೇದಃ ॥ ೯೧ ॥**

ಅ ॥ ಐತಿಹ್ಯಂ=ಈ ವಿಷಯದಲ್ಲಿ ವೃದ್ಧರು ಹೀಗೆ ಹೇಳುವರು ಎನ್ನುವ ಪೂರ್ವವೃತ್ತಾಂತವು (ಯಥಾರ್ಥವಾದರೆ) ಆಗಮಭೇದಃ=ಆಗಮವಿಶೇಷವೇ ॥ ೯೧ ॥

ನೈಯ್ಯಾಯಿಕೋಕ್ತ ಪ್ರಮಾಣಲಕ್ಷಣವನ್ನು ನಿರಾಕರಿಸುವರು.

**ಮೂ || ನ ಚ ಸಮ್ಯಗನುಭವಸಾಧನಂ ಪ್ರಮಾಣಂ | ಈಶ್ವರಜ್ಞಾನಾದಾವ ವ್ಯಾಪ್ತೇಃ || ೯೨ ||**

ಅ || ಸಮ್ಯಗನುಭವಸಾಧನಂ=ಯಥಾರ್ಥಾನುಭವಸಾಧನವು, ಪ್ರಮಾಣಂ=ಪ್ರಮಾಕರಣವು, (ಎನ್ನುವ ಲಕ್ಷಣವು) ಈಶ್ವರಾದೌ=ಈಶ್ವರನಲ್ಲಿಯೂ ತಜ್ಜ್ಞಾನಾದಿಗಳಲ್ಲಿಯೂ, ಈ ಲಕ್ಷಣವು ಇರುವುದರಿಂದ, ಅವ್ಯಾಪ್ತೇಃ=ಅವ್ಯಾಪ್ತಿಯು ಬರುವುದರಿಂದ, ನ ಚ=ಯುಕ್ತವಲ್ಲವು.

ತಾ || ಯಾವುದಿದ್ದರೆ ನಿಯಮದಿಂದ ಪ್ರಮೆಯು ಆಗುವುದೋ, ಇಲ್ಲವಾದರೆ ಆಗುವುದಿಲ್ಲವೋ ಅದು ಪ್ರಮಾಸಾಧನವು. ಆದುದರಿಂದ ಈಶ್ವರಾದಿಗಳಲ್ಲಿ ಈ ಲಕ್ಷಣವಿಲ್ಲವೆಂದು ನೈಯಾಯಿಕರ ತಾತ್ಪರ್ಯವು. ಆದರೂ 'ತನ್ಮೇಪ್ರಮಾಣಂ ಶಿವಃ' ಎಂದು ಅವರ ಗ್ರಂಥಗಳಲ್ಲಿ ಈಶ್ವರನು ಪ್ರಮಾಣವೆಂದಂಗೀಕರಿಸಿರುವುದರಿಂದ ಈಶ್ವರನಲ್ಲಿಯೂ ತಜ್ಜ್ಞಾನದಲ್ಲಿಯೂ ಅಸ್ಮದಾದಿ ಜ್ಞಾನದಲ್ಲಿಯೂ ಸಮ್ಯಗನುಭವಸಾಧನ ಲಕ್ಷಣವಿಲ್ಲದಿರುವುದರಿಂದ ಅವ್ಯಾಪ್ತಿಯು ಬರುವುದರಿಂದ ಈ ಲಕ್ಷಣವು ಅಯುಕ್ತವು. 'ಈಶ್ವರಾತಿರಿಕ್ತ ಸಮ್ಯಗನುಭವಸಾಧನಂ' ಎಂದು ವಿಶೇಷಣವನ್ನು ಕೊಟ್ಟು ಈಶ್ವರನಲ್ಲಿ ನಿವಾರಣಮಾಡಿದರೂ ತಜ್ಜ್ಞಾನದಲ್ಲಿ ಅವ್ಯಾಪ್ತಿಯು ಬಂದೇ ಬರುವುದು, ಎಂಬ ಅಭಿಪ್ರಾಯವು. || ೯೨ ||

ಹಾಗಾದರೆ ಜ್ಞಾನವು ಪ್ರಮಾಣವೇ ಅಲ್ಲವು. ಅದು ಪ್ರಮಾಣ ಫಲವಾದುದರಿಂದ ಅಲ್ಲಿ ಅವ್ಯಾಪ್ತಿಯು ಬರುವುದಿಲ್ಲವೆನ್ನುವ ಆಶಂಕೆಯನ್ನು ಪರಿಹರಿಸುವರು.

**ಮೂ || ಅಪ್ರಾಮಾಣ್ಯೇ ಪ್ರಮಾಣಾಭಾವಾಚ್ಚ || ೯೩ ||**

ಅ || ಜ್ಞಾನಕ್ಕೆ ಪ್ರಮಾಣಫಲತ್ವವನ್ನಂಗೀಕರಿಸಿ, ಅಪ್ರಾಮಾಣ್ಯೇ=ಪ್ರಮಾಣತ್ವವನ್ನಂಗೀಕರಿಸದಿರುವುದರಲ್ಲಿ, ಪ್ರಮಾಣಾಭಾವಾತ್=ಪ್ರಮಾಣವಿಲ್ಲದಿರುವುದರಿಂದಲೂ, ಚ ಶಬ್ದಸೂಚಿತವಾದ, "ಸ್ಮೃತಿಃ ಪ್ರತ್ಯಕ್ಷಂ" ಇತ್ಯಾದಿ ಪ್ರಮಾಣವಿರೋಧದ ದೆಸೆಯಿಂದಲೂ, ಜ್ಞಾನವೂ ಕೂಡ ಪ್ರಮಾಣವೆಂದು ಸಿದ್ಧವಾಗುವುದು. ಅಲ್ಲಿ ಅವ್ಯಾಪ್ತಿಬರುವುದರಿಂದ ಲಕ್ಷಣವು ಯುಕ್ತವಾಗುವುದಿಲ್ಲವು. || ೯೩ ||

ಮತ್ತು ಈ ಲಕ್ಷಣಕ್ಕೆ ಸಾಕ್ಷಿಜ್ಞಾನದಲ್ಲಿ ಅವ್ಯಾಪ್ತಿಯನ್ನು ಹೇಳುವುದಕ್ಕೋಸ್ಕರ ಅದಕ್ಕೆ ಮೊದಲು ಪ್ರಾಮಾಣ್ಯವನ್ನಂಗೀಕರಿಸದಿದ್ದರೆ ಬಾಧಕವನ್ನು ಹೇಳುವರು.

**ಮೂ || ಪ್ರಾಮಾಣ್ಯಜ್ಞಾನೇ ಚ || ೯೪ ||**

ಅ || ಚಶಬ್ದದಿಂದ ಹಿಂದಿನವಾಕ್ಯದಿಂದ "ಪ್ರಮಾಣಾಭಾವಾತ್" ಎಂದು ಅನುವರ್ತಿಸಿಕೊಳ್ಳಲ್ಪಡುತ್ತದೆ. ಪ್ರಾಮಾಣ್ಯಜ್ಞಾನೇ=ಪ್ರಾಮಾಣ್ಯಜ್ಞಾನಾರ್ಥವಾಗಿ, ಪ್ರಮಾಣಾಭಾವಾತ್=ಪ್ರಮಾಣಾಂತರ ವಿಲ್ಲದಿರುವುದರಿಂದ, ಅದಕ್ಕೊಂದು ಪ್ರಮಾಣವನ್ನಂಗೀಕರಿಸಬೇಕು.

ತಾ || ಜ್ಞಾನಪ್ರಾಮಾಣ್ಯವನ್ನು ನಿಶ್ಚಯಿಸುವುದಕ್ಕೆ ಒಂದು ಪ್ರಮಾಣವನ್ನಂಗೀಕರಿಸಬೇಕು. ಅದೇ ಸಾಕ್ಷಿ ಯೆಂದೆನಿಸುವುದು. ಇಲ್ಲವಾದರೆ ಸರ್ವಜ್ಞಾನಪ್ರಾಮಾಣ್ಯವು ಅಪ್ರಾಮಾಣಿಕವಾಗಬೇಕಾಗುವುದು. || ೯೪ ||

ಜ್ಞಾನಪ್ರಾಮಾಣ್ಯನಿಶ್ಚಯಕ್ಕೋಸ್ಕರ ಸಮ್ಯಗನುಭವಸಾಧನವಾದುದು, ಬೇರೆ ಯಾವುದಾದರೊಂದು ಅಂಗೀಕರಿಸಲ್ಪಡುವುದು. ಆದುದರಿಂದ ಸರ್ವಜ್ಞಾನಪ್ರಾಮಾಣ್ಯಕ್ಕೆ ಅಪ್ರಾಮಾಣಿಕತ್ವಪ್ರಸಂಗವಿಲ್ಲವೆಂಬುದನ್ನು ದೂಷಿಸುವರು.

**ಮೂ || ತತ್ರಾಪ್ಯಂಗೀಕಾರೇಽನವಸ್ಥಿತೇಃ || ೯೫ ||**

ಅ || ತತ್ರಾಪಿ=ಪ್ರಾಮಾಣ್ಯಜ್ಞಾನಾರ್ಥವಾಗಿ ಅಂಗೀಕರಿಸಲ್ಪಡುವ ಸಮ್ಯಗನುಭವಸಾಧನವಾದ ಪ್ರಮಾಣದಲ್ಲಿಯೂ, ಅಂಗೀಕಾರೇ=(ಪ್ರಾಮಾಣ್ಯಜ್ಞಾನವು ಪ್ರಮಾಣಾಂತರದಿಂದ ಎಂದು) ಅಂಗೀಕರಿಸಿದರೆ, ಅನವಸ್ಥಿತೇಃ=ಅನವಸ್ಥಾ ಪ್ರಸಂಗವಾಗುವುದರಿಂದ, ಸಾಕ್ಷಿಜ್ಞಾನದಿಂದಲೇ ಸರ್ವಜ್ಞಾನಪ್ರಾಮಾಣ್ಯವು ತಿಳಿಯಲ್ಪಡುವುದೆಂದಂಗೀಕರಿಸಬೇಕು.

ತಾ || ಸರ್ವಜ್ಞಾನಪ್ರಾಮಾಣ್ಯಜ್ಞಾನಾರ್ಥವಾಗಿ ಪ್ರತ್ಯೇಕ ಒಂದು ಸಮ್ಯಗನುಭವಸಾಧನ ಪ್ರಮಾಣವನ್ನು ಅಂಗೀಕರಿಸುವುದಾದರೆ, ಅದರ ಪ್ರಾಮಾಣ್ಯವು, ಪ್ರಮಾಣಸಿದ್ಧವೋ? ಅಲ್ಲವೋ? ಅಲ್ಲವೆಂದರೆ ತಾನು ಅಸಿದ್ಧ ಪ್ರಾಮಾಣ್ಯವಾಗಿದ್ದರೆ ಇನ್ನೊಂದರ ಪ್ರಾಮಾಣ್ಯವನ್ನು ನಿಶ್ಚಯಿಸಲಾರದು. ಆದುದರಿಂದ ಜ್ಞಾನಪ್ರಾಮಾಣ್ಯಜ್ಞಾನವೇ ಆಗದಿರಬೇಕಾಗುವುದು. ಪ್ರಮಾಣಸಿದ್ಧವೆನ್ನುವ ಪಕ್ಷದಲ್ಲಿಯೂ ತನ್ನಿಂದಲೇ ಸಿದ್ಧವಾಗುವುದೋ? ಬೇರೆ ಪ್ರಮಾಣದಿಂದಲೋ? ತನ್ನಿಂದಲೇ ತನ್ನಪ್ರಾಮಾಣ್ಯ ಜ್ಞಾನವಾಗುವುದೆಂದರೆ ಮೊದಲಿನ ಪ್ರಾಮಾಣ್ಯಜ್ಞಾನವು ಮೊದಲಿನ ಜ್ಞಾನದಿಂದಲೇ ಆಗುವುದು. ಅದಕ್ಕಾಗಿ ಬೇರೊಂದು ಸಮ್ಯಗನುಭವಸಾಧನವನ್ನು ಅಂಗೀಕರಿಸಬೇಕಿಲ್ಲವು. ಬೇರೆ ಪ್ರಮಾಣದಿಂದೆನ್ನುವಪಕ್ಷದಲ್ಲಿ, ಅದರ ಪ್ರಾಮಾಣ್ಯವು ಮತ್ತೊಂದರಿಂದ ಸಿದ್ಧವಾಗುವುದು. ಆ ಮತ್ತೊಂದರ ಪ್ರಾಮಾಣ್ಯವು ಇನ್ನೊಂದರಿಂದ ಸಿದ್ಧವಾಗುವುದು ಎಂಬ ಅನವಸ್ಥೆಯು ಬರುವುದು, ಆದುದರಿಂದ ಸಾಕ್ಷಿಯಿಂದಲೇ ಸರ್ವಪ್ರಮಾಣ ಪ್ರಾಮಾಣ್ಯವು ಜ್ಞಾತವಾಗುವುದೆಂದಂಗೀಕರಿಸಬೇಕು. ಆ ಸಾಕ್ಷಿಯು ಸ್ವಪ್ರಕಾಶವಾದುದರಿಂದ (ಸ್ವವಿಷಯಕಜ್ಞಾನವಾದುದರಿಂದ) ಪ್ರಮಾಣಾಂತರಾಪೇಕ್ಷೆಯಿಲ್ಲದಿರುವುದರಿಂದ ಅನವಸ್ಥಾ ಪ್ರಸಂಗವಿಲ್ಲವು. ಆಸಾಕ್ಷಿಯು ಆತ್ಮಸ್ವರೂಪಜ್ಞಾನವು. ಅದಕ್ಕೆ ಸ್ವಪ್ರಕಾಶದಲ್ಲಿ 'ಮಾಂ ಅಹಂ ಜಾನಾಮಿ, ನನ್ನನ್ನು ನಾನು ತಿಳಿಯುವೆನು, ಎನ್ನುವ ಅನುಭವವೇ ಪ್ರಮಾಣವು. || ೯೫ ||

ಈ ರೀತಿಯಾಗಿ ''ಪ್ರಮಾಣ ಪ್ರಾಮಾಣ್ಯ ಜ್ಞಾನಾರ್ಥವಾಗಿ ಸ್ವಪ್ರಕಾಶವಾದ ಆತ್ಮಸ್ವರೂಪವಾದ ಸಾಕ್ಷಿಯನ್ನಂಗೀಕರಿಸುವೆನು ಎಂದು ನೈಯಾಯಿಕನು ಹೇಳಿದರೆ'' ಅದಕ್ಕೂ ದೂಷಣೆಯನ್ನು ಹೇಳುವರು.

**ಮೂ || ಸ್ವಪ್ರಕಾಶಾತ್ಮಾಂಗೀಕಾರೇ ತತ್ರಾವ್ಯಾಪ್ತೇಃ || ೯೬ ||**

ಅ || ಸ್ವಪ್ರಕಾಶಾತ್ಮಾಂಗೀಕಾರೇ=ಸ್ವಪ್ರಕಾಶಾತ್ಮಸ್ವರೂಪವಾದ ಸಾಕ್ಷಿಜ್ಞಾನರೂಪ ಪ್ರಮಾಣವನ್ನು ಅಂಗೀಕರಿಸಿದರೆ, ತತ್ರ=ಅದರಲ್ಲಿ, ಅವ್ಯಾಪ್ತೇಃ=ಅವ್ಯಾಪ್ತಿಯು ಬರುವುದರಿಂದ, (ಸಮ್ಯಗನುಭವಸಾಧನಂ ಪ್ರಮಾಣಂ, ಎನ್ನುವ ಲಕ್ಷಣವು ಅಯುಕ್ತವಾಗುವುದು).

ತಾ || ಸ್ವಪ್ರಕಾಶವಾಗಿ ಆತ್ಮಸ್ವರೂಪವಾದ ಸಾಕ್ಷಿ ಜ್ಞಾನರೂಪ ಪ್ರಮಾಣವು ಅಂಗೀಕರಿಸಲ್ಪಡುವುದಾದರೆ, ಅದು ಸಮ್ಯಗನುಭವವೇ ಆಗಿರುತ್ತದೆ. ಅಲ್ಲದೆ ಸಮ್ಯಗನುಭವ ಸಾಧನವಾಗುವುದಿಲ್ಲ. ಆದುದರಿಂದ ಸಮ್ಯಗನುಭವ ಸಾಧನತ್ವರೂಪವಾದ ಪ್ರಮಾಣ ಲಕ್ಷಣವು ಸಾಕ್ಷಿಪ್ರಮಾಣದಲ್ಲಿ ಇಲ್ಲದಿರುವುದರಿಂದ ಅವ್ಯಾಪ್ತವಾಗುವುದು. ಅತ ಏವ ಅಯುಕ್ತವು. ಯಥಾರ್ಥಸ್ಮೃತಿಯಲ್ಲಿ ಅವ್ಯಾಪ್ತಿ ಬರುವುದೆಂಬುದು ಈಶ್ವರಜ್ಞಾನಾದೌ ಎಂದು ಹಿಂದೆ ಹೇಳಿದ ಆದಿಪದದಿಂದಲೇ ಸಂಗೃಹೀತವಾಗಿದೆ. ಆ ಸ್ಮೃತಿಯು ಪ್ರಮಾಣವೆಂದು, 'ಸ್ಮೃತ್ಯನುವಾದಯೋರ್ನಾಪ್ರಾಮಾಣ್ಯಂ' ಎಂದು ಹಿಂದೆ ಸಾಧಿಸಿರುವರು. ಈಗ ಆ ಸ್ಮೃತಿಗೆ ಪ್ರಾಮಾಣ್ಯವನ್ನಂಗೀಕರಿಸುವುದಿಲ್ಲವಾದರೆ ಬಾಧಕವನ್ನು ಹೇಳುವರು. || ೯೬ ||

**ಮೂ॥ ಸ್ಮೃತೇಶ್ಚ ಪ್ರಾಮಾಣ್ಯಾನಂಗೀಕಾರೇಽನುಭೂತಂ ಮಯೇತ್ಯತ್ರ ಪ್ರಮಾಣಾಭಾವಾತ್ ॥ ೯೭ ॥**

ಅ ॥ ಸ್ಮೃತೇಃ=ಸ್ಮೃತಿಗೆ, ಪ್ರಾಮಾಣ್ಯಾನಂಗೀಕಾರೇ=ಪ್ರಾಮಾಣ್ಯದ ಅಂಗೀಕಾರ ವಿಲ್ಲವಾದರೆ, ಮಯಾ=ನನ್ನಿಂದ, ಅನುಭೂತಂ=(ಇದು)ಅನುಭವಿಸಲ್ಪಟ್ಟಿತು, ಇತ್ಯತ್ರ=ಎಂಬ ಸ್ಥಳದಲ್ಲಿ,ಪ್ರಮಾಣಾಭಾವಾತ್=ಪ್ರಮಾಣವಿಲ್ಲದಿರುವುದರಿಂದ (ಪ್ರಮಾಣವೆಂದಂಗೀಕರಿಸಬೇಕು).

ತಾ ॥ ಸ್ಮೃತಿಯು ಪ್ರಮಾಣವಲ್ಲವಾದರೆ, ಈ ವಸ್ತುವು ಮೊದಲು ನನ್ನಿಂದ ಅನುಭವಿ ಸಲ್ಪಟ್ಟಿತು. ಎನ್ನುವುದು ಸ್ಮೃತಿಯುನ್ನು ಬಿಟ್ಟು ಬೇರೆ ಪ್ರಮಾಣ ವಿಲ್ಲದಿರುವುದರಿಂದ ಅದು ಅಪ್ರಾಮಾಣಿಕವಾಗಬೇಕಾಗುವುದು. ಅದು ಅಪ್ರಾಮಾಣಿಕವಾಗುವುದಿಲ್ಲ. ಆದುದರಿಂದ, ಸ್ಮೃತಿಗೆ ಪ್ರಾಮಾಣ್ಯವನ್ನು ಒಪ್ಪಲೇಬೇಕು. ಎಂದುತಾತ್ಪರ್ಯವು.

ಇದರ ಮೇಲೆ ಪ್ರತಿವಾದಿಯು ಶಂಕಿಸುವನು. ಸ್ಮೃತಿಯು ಪ್ರಮಾಣವಾದರೂ ಲಿಂಗತ್ವೇನೈವ ಪ್ರಮಾಣವಾಗುವುದು. ಹೇಗಂದರೆ ಪಟುತರವಾದ ಅನುಭವವು ಸಂಸ್ಕಾರ ವನ್ನುಂಟುಮಾಡುತ್ತದೆ. ಆ ಸಂಸ್ಕಾರವು ಸಮಾನವಾದ ವಸ್ತು ದರ್ಶನವೇ ಮೊದಲಾದ ತಿಳಿಸಿ ಕೊಡುವ ಸಾಮಗ್ರಿಗಳಿಂದ ಉದ್ಬುದ್ಧವಾಗಿ ಸ್ಮೃತಿಯುನ್ನು ಹುಟ್ಟಿಸುವುದು. ಆದುದರಿಂದ ಸಂಸ್ಕಾರ ಜನ್ಯವಾದ ಸ್ಮೃತಿಯು ಸಂಸ್ಕಾರಕ್ಕೆ ಹೇತುವಾಗುವುದು. ಈತನು ಈ ಸಂಸ್ಕಾರ ವುಳ್ಳವನು. ಈ ಸ್ಮೃತಿಯು ಇರುವುದರಿಂದ, ಯಾವನು ಯಾವಕಾರ್ಯಯುಕ್ತನೋ, ಆತನು ಆ ಕಾರಣ ಯುಕ್ತನಾಗುವನು. ಘಟದಲ್ಲಿ ದಂಡಯುಕ್ತನಾದ ಕುಲಾಲನಂತೆ, ಎಂದು ಆಸ್ಮೃತಿಯಿಂದ ಸಂಸ್ಕಾರಾನುಮಾನಪ್ರಕಾರವು. ಆ ಸಂಸ್ಕಾರವೂ ಕೂಡ ತನ್ನ ಕಾರಣವಾದ ಪೂರ್ವಾನುಭವಕ್ಕೆ ಲಿಂಗವಾಗುವುದು. 'ಅಯಂ, ಪೂರ್ವಾನುಭವವಾನ್ ಸಂಸ್ಕಾರವತ್ವಾತ್' ಎಂದು ಹಿಂದಿನಂತೆ ಅನುಮಾನಪ್ರಕಾರವು. ಆದುದರಿಂದ ನನ್ನಿಂದ ಇದು ಅನುಭೂತವಾಯಿತೆಂಬ ಪೂರ್ವಾನುಭವವು ಅಪ್ರಾಮಾಣಿಕವಾಗುವುದಿಲ್ಲವು. ॥ ೯೭ ॥

ಸ್ಮೃತಿಯು ಕೇವಲ ಪ್ರಮಾಣವಾಗದಿದ್ದರೂ ಅನುಮಾನವಾದುದರಿಂದ, ಸಮ್ಯಗನುಭವ ಸಾಧನತ್ವ ಬರುವುದರಿಂದ ಪ್ರಮಾಣಲಕ್ಷಣೋಕ್ತ ವ್ಯಾಪ್ತಿಯಿಲ್ಲವು. ಎಂದು ಈ ಶಂಕೆಯನ್ನು ಪರಿಹರಿಸುವರು.

**ಮೂ॥ ಲಿಂಗತ್ವೇನ ಪ್ರಾಮಾಣ್ಯೇ ಕಲ್ಪನಾ ಗೌರವಂ ॥ ೯೮ ॥**

ಅ ॥ ಲಿಂಗತ್ವೇನ=ಸ್ಮೃತಿಗೆ ಅನುಮಾನತ್ವದಿಂದ, ಪ್ರಾಮಾಣ್ಯೇ=ಪ್ರಾಮಾಣ್ಯವು ಕಲ್ಪಿ ಸಲ್ಪಟ್ಟರೆ, ಕಲ್ಪನಾಗೌರವಂ=ಕಲ್ಪನಾಗೌರವ ಪ್ರಸಂಗವು.

ತಾ ॥ ಸ್ಮೃತಿಗೆ ಸಾಕ್ಷಾತ್ಪೂರ್ವಾನುಭೂತಾರ್ಥವಿಷಯದಲ್ಲಿ ಕೇವಲ ಪ್ರಮಾಣತ್ವವೇ ಸಂಭವಿಸುತ್ತಿರಲು ಸ್ಮೃತಿಯು ಸಂಸ್ಕಾರದಲ್ಲಿ ಲಿಂಗವು. ಸಂಸ್ಕಾರವು ಪೂರ್ವಾನುಭವದಲ್ಲಿ ಲಿಂಗವು. ಎಂದು ಪ್ರಾಮಾಣಿಕವಾದ ಅನೇಕಕಲ್ಪನೆಯನ್ನು ಮಾಡಿದರೆ ಕಲ್ಪನಾಗೌರವ ಪ್ರಸಂಗ ವಾಗುವುದು. ಆದುದರಿಂದ ಸ್ಮೃತಿಯು ಕೇವಲ ಪ್ರಮಾಣವೆಂದಂಗೀಕರಿಸುವುದೇ ಲಘುವಾದ ಕಲ್ಪನೆಯು. ॥ ೯೮ ॥ ದೋಷಾಂತರವನ್ನೂ ಹೇಳುವರು.

**ಮೂ ॥ ದೃಷ್ಟಹಾನಿಶ್ಚ ॥ ೯೯ ॥**

ಅ ॥ ಸ್ಮೃತಿಗೆ ಲಿಂಗತ್ವೇನ ಪ್ರಾಮಾಣ್ಯವನ್ನಂಗೀಕರಿಸಿದರೆ ಪ್ರತ್ಯೇಕ ಪ್ರಮಾಣವೆಂದು ದೃಷ್ಟವಾದ ಪ್ರತ್ಯಕ್ಷಾದಿಗೂ ಲಿಂಗತ್ವದಿಂದಲೇ ಪ್ರಾಮಾಣ್ಯವನ್ನು ಹೇಳಬೇಕಾಗುವುದು. ಆದು ದರಿಂದ ಪ್ರತ್ಯಕ್ಷಕ್ಕೇನೇ ಪ್ರಥಕ್ಪ್ರಾಮಾಣ್ಯವು ಸಿದ್ಧಿಸಲಾರದು.

ತಾ ॥ ಸ್ಮೃತಿಯು ಅನುಮಾನರೂಪ ಪ್ರಮಾಣವಾದರೆ ಪ್ರತ್ಯಕ್ಷಾದಿಯು ಅನುಮಾನ ಪ್ರಮಾಣವೇ ಆಗಬೇಕಾಗುವುದು. ॥ ೯೯ ॥

ಈಗ ತಾನು ಹೇಳಿದ "ಯಥಾರ್ಥಂ ಪ್ರಮಾಣಂ" ಎಂಬೀ ಪ್ರಮಾಣ ಲಕ್ಷಣವನ್ನು ಪರೀಕ್ಷೆ ಮಾಡುವರು. "ಯಥಾರ್ಥಂ" ಎಂಬೀಪದದಿಂದ, ೧ ಯಥಾವಸ್ಥಿತ, ೨ ಜ್ಞೇಯ ವಿಷಯಿಾಕಾರಿ (ಅಂದರೆ ವಸ್ತುವು ಯಾವರೀತಿ ಇದೆಯೋ ಅದೇರೀತಿಯಾಗಿ ತಿಳಿದುಕೊಳ್ಳುವುದು). ಎಂದು ಲಬ್ಧವಾಗುವುದು.

ಪ್ರತ್ಯಯವು (ಜ್ಞಾನವು) ೧ ಸ್ಮೃತಿ ೨ ಅನುಭವವೆಂದೆರಡುವಿಧವು. ಅನುಭವವು ಸ್ವತಃ ಪ್ರಮಾಣವು. ಸ್ಮೃತಿಯಲ್ಲಿ ಯಥಾವಸ್ಥಿತತ್ವವು ಇಲ್ಲದಿರುವುದರಿಂದ ಅದನ್ನು ಪ್ರಮಾಣವೆಂದಂಗೀಕರಿಸುವುದಾದರೆ ಮೇಲಿನ ಲಕ್ಷಣದಲ್ಲಿದ್ದ ಯಥಾವಸ್ಥಿತತ್ವಾಂಶವನ್ನು ಸಂಕೋಚಮಾಡಬೇಕಾಗುವುದು. ಇಲ್ಲವಾದರೆ ಅವ್ಯಾಪ್ತಿ ಬರುವುದು. ಎಂದು ಪರನು ಆಶಂಕಿಸಿದರೆ ಸಮಾಧಾನವನ್ನು ಹೇಳುವರು.

**ಮೂ ॥ ಸ್ಮೃತಿಪ್ರಮಾಣದ್ವೈವಿಧ್ಯಮಾತ್ರಕಲ್ಪನೇ ಮಿಥ್ಯಾಜ್ಞಾನಾದೇರ್ನಿರಾಸಾದನುಭವವಿರೋಧಃ ॥ ೧೦೦ ॥**

ಅ ॥ ಸ್ಮೃತಿಪ್ರಮಾಣದ್ವೈವಿಧ್ಯಕಲ್ಪನೇ="ಸ್ಮೃತಿಯು ಯಥಾರ್ಥಾನುಭವವು" ಎಂದು ಜ್ಞಾನದ ಎರಡೇ ಪ್ರಕಾರವನ್ನು ಕಲ್ಪಿಸಿದರೆ, ಮಿಥ್ಯಾಜ್ಞಾನಾದೇಃ=ವಿಪರ್ಯಯ ಸಂಶಯಗಳಿಗೂ, ನಿರಾಸಾತ್=ನಿರಾಕರಣ ಮಾಡಿದಂತಾಗುವುದರಿಂದ, ಅನುಭವವಿರೋಧಃ=ಅನುಭವಕ್ಕೆ ವಿರೋಧವಾಗುವುದು, ಆದುದರಿಂದ ಪ್ರತ್ಯಯವು ಎರಡೇ ಎಂಬೀ ವಚನವಯುಕ್ತವು. ॥ ೧೦೦ ॥

ವಿಪರ್ಯಯಾದಿ ವಿಷಯಕವಾದ ಅನುಭವವಿದ್ದರೆ ವಿರೋಧವಾಗಬಹುದು. ಆದರೆ ಆ ಅನುಭವವೇ ಇಲ್ಲ; ಅನುಭವವಿಲ್ಲದಿದ್ದರೂ 'ರಜತಜ್ಞಾನವಾನಹಂ' ಎಂಬುವದು ಪ್ರಯೋಗ ಮಾತ್ರವು. ಎಂಬೀ ವಿಷಯವನ್ನು ನಿರಾಕರಿಸುವರು.

**ಮೂ ॥ ತದನುಭವಾಭಾವ ಇತ್ಯುಕ್ತೇಽನುಭವಃ ಸ್ಮೃತಿಶ್ಚ ನಾಸ್ತೀತ್ಯುಕ್ತೇ ಕಿಮುತ್ತರಂ ॥ ೧೦೧ ॥**

ಅ ॥ ತದನುಭವಾಭಾವ ಇತಿ=ವಿಪರ್ಯಯ, ಸಂಶಯ ಇವುಗಳ ಅನುಭವವಿಲ್ಲವೆಂದು, ಉಕ್ತೇ=ವಾದಿಯು ಹೇಳುವುದಾದರೆ, ಅನುಭವಶ್ಚ=ಅನುಭವವೂ, ಸ್ಮೃತಿಶ್ಚ=ಸ್ಮೃತಿಯೂ ಕೂಡ, ನಾಸ್ತೀತ್ಯುಕ್ತೇ=(ಪ್ರತಿವಾದಿಯು) ಇಲ್ಲವೆಂದು ಹೇಳಿದರೆ, ಕಿಮುತ್ತರಂ=ವಾದಿಯು ಏನು ಉತ್ತರವನ್ನು ಕೊಟ್ಟಾನು. ॥ ೧೦೧ ॥

ವಿಪರ್ಯಯಾದಿಗಳ ಅನುಭವವು ಇಲ್ಲವಾದರೆ ಅನುಭವಸ್ಮೃತಿಗಳೂ ಇರದೆ ಹೋಗಲಿ, ಎಂದು ಪ್ರತಿವಾದಿಯಾದ ಸಿದ್ಧಾಂತಿಯು ಹೇಳುವುದು ಅಸಂಗತವು. ಅನುಭವ ಸ್ಮೃತಿಗಳನ್ನು ಸಿದ್ಧಾಂತಿಗಳೂ ಅಂಗೀಕಾರ ಮಾಡುತ್ತಾರೆ. ಆದುದರಿಂದ ಈಗ ನಿರಾಕರಣೆ ಮಾಡಿದರೆ ನಿಮ್ಮ ಸಿಂದ್ಧಾಂತ ವಿರೋಧವಾದೀತು. ಎಂದು ಆಕ್ಷೇಪಿಸತಕ್ಕ ವಾದಿಯಾದ ಪರನಿಗೆ ಉತ್ತರವನ್ನು ಕೊಡುವರು.

**ಮೂ ॥ ಸ್ವಸಿದ್ಧ್ಯೈಃ ಸಾಧನಂ ಪರಸಿದ್ಧ್ಯೈರ್ದೂಷಣಂ ॥ ೧೦೨ ॥**

ಅ ॥ ಸ್ವಸಿದ್ಧ್ಯೈಃ=ತನ್ನ ಸಿದ್ಧಾಂತದಲ್ಲಿ ಸಿದ್ಧಗಳಾದ ನ್ಯಾಯಗಳಿಂದ, ಸಾಧನಂ= ಸಾಧನೆಯು (ಮಾಡಬೇಕಾದುದು), ಪರಸಿದ್ಧ್ಯೈಃ=ಪರರ ಮತದಲ್ಲಿ ಸಿದ್ಧಗಳಾದ ನ್ಯಾಯಗಳಿಂದ, ದೂಷಣಂ=ದೂಷಣವು, (ಮಾಡತಕ್ಕದ್ದು).

ತಾ ॥ ಸ್ವಪಕ್ಷಸಾಧನೆಯು, ಪರಪಕ್ಷ ನಿರಾಕರಣೆಯು, ಇವೆರಡನ್ನು ವಾದಿಯಾಗಲೀ, ಪ್ರತಿವಾದಿಯಾಗಲೀ ಮಾಡಬೇಕಾದುದು. ಅವುಗಳಲ್ಲಿ ಸ್ವಪಕ್ಷಸಾಧನೆಯನ್ನು ಉಭಯ ಸಮ್ಮತ ವಾದ ನ್ಯಾಯಗಳಿಂದ ಸಾಧಿಸಬೇಕು. ಪರನಿರಾಕರಣೆಯನ್ನು ಪರಮತದಲ್ಲಿ ಸಿದ್ಧವಾದ ನ್ಯಾಯಗಳಿಂದಲೇ ಮಾಡಬಹುದು. ಹಾಗೆ ದೂಷಿಸತಕ್ಕವನು ಉಪಯೋಗಿಸುವ ನ್ಯಾಯ ಗಳು ಅವನ ಮತದಲ್ಲಿ ಸಿದ್ಧವಾದವುಗಳೇ ಆಗಬೇಕೆಂಬ ನಿಯಮವಿಲ್ಲವು. ॥ ೧೦೨ ॥

ಹೀಗೆ ಹೇಳಿದರೆ ಪ್ರಕೃತಕ್ಕೇನು ಪ್ರಯೋಜನವಾಯಿತೆಂಬ ಆಕ್ಷೇಪಕ್ಕೆ ಸಮಾಧಾನ ವನ್ನು ಹೇಳುವರು.

**ಮೂ ॥ ಅತೋ ನ ದೂಷಣೇ ಅಪಸಿದ್ಧಾಂತಾದಿ ॥ ೧೦೩ ॥**

ಅ ॥ ಅತಃ=ಪರನ್ಯಾಯದಿಂದಲೇ, ಪರರು ಹೇಳಿದುದನ್ನು ನಿರಾಕಾರ ಮಾಡಬಹು ದಾದುದರಿಂದ, ದೂಷಣೇ=ದೂಷಣಾನುಮಾನದಲ್ಲಿ, ಅಪಸಿದ್ಧಾಂತಾದಿ=ಅಪಸಿದ್ಧಾಂತಾದಿ (ಸಿದ್ಧಾಂತ ವಿರೋಧ) ದೋಷಗಳು, ನ=ಆಪಾದನೆಮಾಡಲಯೋಗ್ಯಗಳು.

ತಾ ॥ ಪರಮತವನ್ನು ಪರನ್ಯಾಯಗಳಿಂದಲೇ ದೂಷಿಸಬೇಕಾದುದರಿಂದ, ಸ್ವಮತದ ನ್ಯಾಯಕ್ಕೂ, ದೂಷಣೆಮಾಡುವುದಕ್ಕೆ ಉಪಯೋಗಿಸುವ ನ್ಯಾಯಕ್ಕೂ, ವಿರೋಧವಿದ್ದರೂ, ದೂಷಣರೂಪವಾದ ಅನುಮಾನದಲ್ಲಿ ಅಪಸಿದ್ಧಾಂತಾದಿದೋಷಗಳು ಬರವುದಿಲ್ಲವು, ಎಂಬೀ ವಿಷಯವು ಸ್ಪಷ್ಟವಾಯಿತು. ॥ ೧೦೩ ॥

ಈಗ ಇಷ್ಟವಾದ್ದನ್ನು ಆಪತ್ತಿಕೊಡುವುದೇ ಮತಾನುಜ್ಞೆಯೆಂಬ ದೋಷವು, ಎಂಬೀ ಅಭಿಪ್ರಾಯದಿಂದ, ತತ್ಸ್ವರೂಪವನ್ನು ಅನುವಾದಮಾಡುತ್ತಾ, ಪ್ರಕೃತ ದೂಷಣಾನುಮಾನ ದೋಷರೂಪವಾಟ ಮತಾನುಜ್ಞೆಗೆ ಹೇಳಿದವುಗಳಲ್ಲೇ ಅಂತರ್ಭಾವವನ್ನು ಹೇಳುವರು:—

**ಮೂ ॥ ಇಷ್ಟಾಪತ್ತಿಃ ಸಿದ್ಧಸಾಧನತ್ವಾದಸಂಗತಮೇವ ॥ ೧೦೪ ॥**

ಅ ॥ ಇಷ್ಟಾಪತ್ತಿಃ=ಇಷ್ಟಾಪಾದನರೂಪವಾದಮತಾನುಜ್ಞೆಯು, ಸಿದ್ಧಸಾಧನತ್ವಾತ್= ಸಿದ್ಧಸಾಧನರೂಪವಾದುದರಿಂದ, ಅಸಂಗತಮೇವ=(ಯಾವ ಅಸಂಗತದಲ್ಲಿ ಸಿದ್ಧಸಾಧನೆಗೆ ಅಂತರ್ಭಾವವನ್ನು ಹೇಳಿಯದೋ) ಆ ಅಸಂಗತದಲ್ಲಿಯೇ ಸೇರುತ್ತದೆ.

ತಾ ॥ ಸಿಂಹವು ಮುಂದಕ್ಕೆ ಹೋಗಿ, ತಿರುಗಿ ಹಿಂದೆನೋಡುವುದು ಹೇಗೋ ಹಾಗೆಯೇ ಮುಂದೆ ಹೋಗಿ ಹಿಂದಿನ ವಿಚಾರ ಮಾಡುವುದು **ಸಿಂಹಾವಲೋಕನನ್ಯಾಯವು.** ಆದುದ ರಿಂದ ನಿಗ್ರಹಸ್ಥಾನಗಳಿಗೆ ಅಂತರ್ಭಾವವನ್ನು ಹೇಳುವ 'ಅನ್ಯಚ್ಚ' ಇತ್ಯಾದಿ ಸ್ಥಳದಲ್ಲಿಯೇ ಈ ಮತಾನುಜ್ಞೆಗೆ ಅಂತರ್ಭಾವವನ್ನು ಹೇಳದೆ ಇಲ್ಲಿ ಹೇಳುವುದು ಅಸಂಗತವಲ್ಲವು. ॥ ೧೦೪ ॥

ಈ ರೀತಿಯಾಗಿ ಪ್ರಮಾಣಾದಿಸ್ವರೂಪವನ್ನು ನಿರೂಪಿಸಿ ಆ ನಿರೂಪಣೆಗೆ ಪ್ರಯೋಜನ ವನ್ನು ಮತ್ತು ಆ ನಿರೂಪಣೆಗೆ ಮೂಲಭೂತವಾದ ಗ್ರಂಥವಿದೆ ಎಂಬುದನ್ನೂ ತೋರಿಸುವರು:—

**ಮೂ ॥ ಆನಂದತೀರ್ಥಮುನಿನಾ ಬ್ರಹ್ಮತರ್ಕೋಕ್ತಮಾರ್ಗತಃ ।**
**ಮಾನಲಕ್ಷಣಮಿತ್ಯುಕ್ತಂ ಸಂಕ್ಷೇಪಾದ್ಬ್ರಹ್ಮಸಿದ್ಧಯೇ ॥ ೧೦೫ ॥**

ಅ ॥ ಆನಂದತೀರ್ಥಮುನಿನಾ=ಆನಂದತೀರ್ಥರೆಂದು ಪ್ರಸಿದ್ಧರಾದ ಮುನಿಗಳಿಂದ, ಬ್ರಹ್ಮತರ್ಕೋಕ್ತ ಮಾರ್ಗತಃ=ಬ್ರಹ್ಮತರ್ಕವೆಂಬ ವೇದವ್ಯಾಸರಚಿತ ಗ್ರಂಥದಲ್ಲಿ ಹೇಳಿದ ರೀತಿ ಯನ್ನನುಸರಿಸಿ, ಬ್ರಹ್ಮಸಿದ್ಧಯೇ=ಪರಬ್ರಹ್ಮನ ತತ್ವಜ್ಞಾನಕ್ಕೋಸ್ಕರ, ಮಾನಲಕ್ಷಣಂ=ಪ್ರಮಾಣ

ಲಕ್ಷಣವು, ಸಂಕ್ಷೇಪಾತ್=ಶಬ್ದಸಂಕ್ಷೇಪದಿಂದಲೇ, ಇತಿ=ಪೂರ್ವೋಕ್ತ ಪ್ರಕಾರ, ಉಕ್ತಂ=ಹೇಳಲ್ಪಟ್ಟಿತು.

ತಾ ॥ ಲಕ್ಷಣಾದಿಗಳನ್ನು ನಿರೂಪಿಸಿ ವಿಮರ್ಶಿಸಿದ ವೇದಾದಿಗಳಿಂದ ಬ್ರಹ್ಮಜ್ಞಾನವಾಗುವುದು. ಆನಂದತೀರ್ಥಮುನಿನಾ ಎನ್ನುವುದರಿಂದ ಪರಮಾಪ್ತರಾದ ವಾಯುದೇವರ ಅವತಾರರಾದವರಿಂದ ಹೇಳಲ್ಪಟ್ಟಿತೆಂದು ಸೂಚಿತವಾಗುವುದು. ಬ್ರಹ್ಮತರ್ಕೋಕ್ತಮಾರ್ಗತಃ, ಎಂಬುವುದರಿಂದ ಈ ಗ್ರಂಥವು ಕೇವಲ ಕಲ್ಪಿತವಲ್ಲವು. ಉತ್ತಮವಾದ ಮೂಲಪ್ರಮಾಣವದೆ ಎಂದು ಸೂಚಿತವಾಗುವುದು. ಇದರಿಂದ ಆಚಾರ್ಯರ ಸ್ವರೂಪವನ್ನು ತಿಳಿಯದಿದ್ದ ಮಧ್ಯಮಾಧಿಕಾರಿಗಳಿಗೂ ವಿಶ್ವಾಸಾರ್ಹವೆಂದು ಸೂಚಿತವಾಯಿತು. ಇತ್ಯುಕ್ತಂ, ಎನ್ನುವುದರಿಂದ ಬ್ರಹ್ಮತರ್ಕದಲ್ಲಿ ಹೇಳಿದ ರೀತಿಯನ್ನೂ ತಿಳಿಯದ ಅಧಮಾಧಿಕಾರಿಗಳಿಗೂ ಯುಕ್ತ್ಯಾದಿಗಳಿರುವುದರಿಂದ ವಿಶ್ವಾಸಾರ್ಹವೆಂದು ಸೂಚಿತವಾಗುವುದು. ಸಂಕ್ಷೇಪಾತ್ ಎಂಬುವುದರಿಂದ ಶ್ರೋತೃಗಳ ಬುದ್ಧಿಯನ್ನನುಸರಿಸಿ ಶಬ್ದಸಂಕ್ಷೇಪದಿಂದ ಹೇಳಿರುವರು. ಅಧಿಕವಾದರೆ ತಿಳಿಯದೆ ಹೋದೀತು ಎಂದು ಸೂಚಿತವಾಯಿತು. ಬ್ರಹ್ಮಸಿದ್ಧಯೇ ಎಂಬುವುದರಿಂದ ಈ ಪ್ರಕರಣಕ್ಕೆ ಬ್ರಹ್ಮಜ್ಞಾನವೇ ಪ್ರಯೋಜನವೆಂದು ಜ್ಞಾಪಿತವಾಗುವುದು. ॥ ೧೦೫ ॥

ಈಗ ಪ್ರಕರಣವನ್ನು ಸಮಾಪ್ತಿ ಮಾಡಿ ಭಗವತ್ಪಾದಾಚಾರ್ಯರು ಅಂತ್ಯದಲ್ಲಿಯೂ ಸ್ವೇಷ್ಟದೇವತಾ ಪ್ರಣಾಮವನ್ನು ಮಾಡುವರು.

**ಮೂ ॥ ಅಶೇಷಮಾನಮೇಯೈಕಸಾಕ್ಷಿಣೇಽಕ್ಷಯಮೂರ್ತಯೇ । ಅಜೇಶಪುರುಹೂತೇಡ್ಯ ನಮೋ ನಾರಾಯಣಾಯ ತೇ ॥ ೧೦೬ ॥**

ಅ ॥ ಅಜೇಶ ಪುರುಹೂತೇಡ್ಯ=ಪುತ್ರನಾದ ಚತುರ್ಮುಖ, ಶಂಕರ, ದೇವೇಂದ್ರರಿಂದ ಸ್ತುತ್ಯನಾದವನೇ, ಅಶೇಷಮಾನಮೇಯೈಕಸಾಕ್ಷಿಣೇ=ಅಖಿಲಗಳಾದ ಪ್ರಮಾಣಗಳನ್ನು, ಪ್ರಮೇಯಗಳನ್ನೂ ಪ್ರತ್ಯಕ್ಷವಾಗಿ ತಿಳಿಧಿರುವ (ಸರ್ವಜ್ಞನಾದ) ಅಕ್ಷಯಮೂರ್ತಯೇ=ನಾಶವಿಲ್ಲದಿರುವ ಜ್ಞಾನಾನಂದಾದ್ಯಾತ್ಮಕ ದಿವ್ಯ ಶರೀರಯುಕ್ತನಾದ, ನಾರಾಯಣಾಯ=ಗುಣಪೂರ್ಣ, ದೋಷದೂರನಾದ, ತೇ=ನಿನಗೋಸ್ಕರ, ನಮಃ=ನಮಸ್ಕಾರವು.

ತಾ 'ಅಶೇಷಮಾನಮೇಯೈಕಸಾಕ್ಷಿಣೇ' ಎನ್ನುವುದರಿಂದ, ನಾರಾಯಣನು ಸರ್ವಜ್ಞನಾದುದರಿಂದ ನಮಸ್ಕಾರಕ್ಕೆ ಅವನೇ ಯೋಗ್ಯನೆಂದು ಸೂಚಿತವಾಗುವುದು. ಈಶ್ವರನಿಗೆ ಶರೀರವಿದ್ದರೆ ಮರಣಾದಿಪ್ರಸಂಗವು. ಶರೀರವಿಲ್ಲದೆಹೋದರೆ ಸರ್ವಜ್ಞತ್ವವು ಕೂಡಲಾರದೆಂಬೀ ಆಶಂಕೆಯನ್ನು ಪರಿಹರಿಸುವುದಕ್ಕೋಸ್ಕರ 'ಅಕ್ಷಯಮೂರ್ತಯೇ' ಎಂದು ಹೇಳಿದುದ್ದು. ಅಕ್ಷಯವೆಂದರೆ ನಿತ್ಯವಾದ್ದರಿಂದ ಮರಣಾದಿ ಪ್ರಸಂಗವಿಲ್ಲವು. ಶರೀರವಿರುವುದರಿಂದ ನಿಖಿಲವನ್ನು ತಿಳಿಯುವುದೂ ಯುಕ್ತವೆಂದು ಸೂಚಿತವಾಯಿತು. 'ಅಜೇಶಪುರುಹೂತೇಡ್ಯ' ಎಂದು ಹೇಳಿದುದರಿಂದ, ಅಜಾದಿವಂದ್ಯನಾದವನು, ಸರ್ವೋತ್ತಮನು ಎಂದು ತಿಳಿಯುವುದು. ಆದುದರಿಂದಲೂ ನಾರಾಯಣನು ವಂದನಾರ್ಹನೆಂದು ಸೂಚಿತವಾಯಿತು. ॥ ೧೦೬ ॥

**ಪ್ರಮಾಣಲಕ್ಷಣವ್ಯಾಖ್ಯಾ ಖ್ಯಾತಾ ಕರ್ನಾಟಭಾಷಯಾ ।**
**ರಾಮಕೃಷ್ಣೇನ ಮಾಧಿಷ್ಣ್ಯ ಪ್ರೀತಯೇ ರಜತಾಲಯೇ ॥**

**॥ ಶ್ರೀ ಕೃಷ್ಣಾರ್ಪಣಮಸ್ತು ॥**



ಶ್ರೀಮದ್ಧನುಮದ್ಭೀಮಮಧ್ವಾಂತರ್ಗತರಾಮಕೃಷ್ಣಹರಿಃ ॥ ಓಂ ॥

ಮೂಲ. ಪುಟ.

ಅಶೇಷಗುರುಮೀಶೇಶಂ ನಾರಾಯಣಮನಾಮಯಂ । ... ...
ಸಂಪ್ರಣಮ್ಯ ಪ್ರವಕ್ಷ್ಯಾಮಿ ಪ್ರಮಾಣಾನಾಂ ಸ್ವಲಕ್ಷಣಂ ॥ ... ೭
೧ ಯಥಾರ್ಥಂ ಪ್ರಮಾಣಂ ... ... ... ... ... ೭
೨ ತದ್ದ್ವಿವಿಧಂ ॥ ಕೇವಲಮನುಪ್ರಮಾಣಂ ಚ ... ... ... ೮
೩ ಯಥಾರ್ಥಜ್ಞಾನಂ ಕೇವಲಂ ... ... ... ... ... ೮
೪ ತತ್ಸಾಧನಮನುಪ್ರಮಾಣಂ ... ... ... ... ... ೯
೫ ಕೇವಲಂ ಚತುರ್ವಿಧಂ । ಈಶಲಕ್ಷ್ಮೀಯೋಗ್ಯಯೋಗಿಭೇದೇನ ... ೧೦
೬ ಪೂರ್ವದ್ವಯಮನಾದಿ ನಿತ್ಯಂ ... ... ... ... ,,
೭ ಸ್ವಾತಂತ್ರ್ಯಪಾರತಂತ್ರ್ಯಾಭ್ಯಾಂ ತದ್ವಿಶೇಷಃ । ಪೂರ್ವಂ ಸ್ವಪರಗತಾಖಿಲವಿಶೇಷವಿಷಯಂ । ದ್ವಿತೀಯಮೀಶಾದನ್ಯೇಭ್ಯೋಽಧಿಕಂ ... ,,
೮ ಅಸಾರ್ವತ್ರಿಕಂ । ಅನ್ಯತ್ರ ಸರ್ವವಿಷಯಂ । ಸ್ಪಷ್ಟತ್ವೇ ಭೇದಃ ... ೧೦
೯ ಯೋಗಿಜ್ಞಾನಂ ಋಜೂನಾಮನಾದಿ ನಿತ್ಯಂ । ಈಶೇ ಜೀವೇಭ್ಯೋಽಧಿಕಂ । ಅನ್ಯತ್ರಾಲೋಚನೇ ಸರ್ವವಿಷಯಂ । ಕ್ರಮೇಣ ವರ್ಧಮಾನಂ । ಆಮುಕ್ತೇಃ । ತತೋಽವ್ಯಯಂ ... ... ... ... ... ೧೧
೧೦ ತತೋಽರ್ವಾಕ್ ಕ್ರಮೇಣ ಹ್ರಸಿತಂ । ಸಾದಿ ಚ ತಾತ್ತ್ವಿಕೇಭ್ಯೋಽನ್ಯತ್ರ ೧೨
೧೧ ಅಯೋಗಿಜ್ಞಾನಮುತ್ಪತ್ತಿವಿನಾಶವತ್ । ಅಲ್ಪಂ ... ... ೧೩
೧೨ ಅನುಪ್ರಮಾಣಂ ತ್ರಿವಿಧಂ । ಪ್ರತ್ಯಕ್ಷಮನುಮಾನಮಾಗಮ ಇತಿ ... ೧೩
೧೩ ನಿರ್ದೋಷಾರ್ಥೇಂದ್ರಿಯಸನ್ನಿಕರ್ಷಃ ಪ್ರತ್ಯಕ್ಷಂ । ನಿರ್ದೋಷೋಪಪತ್ತಿರನುಮಾನಂ । ನಿರ್ದೋಷಃ ಶಬ್ದ ಆಗಮಃ ... ... ೧೪
೧೪ ಅರ್ಥಾಪತ್ತ್ಯುಪಮೇ ಅನುಮಾವಿಶೇಷಃ ... ... ... ೨೧
೧೫ ಅಭಾವೋಽನುಮಾ ಪ್ರತ್ಯಕ್ಷಂ ಚ ... ... ... ,,
೧೬ ಪರಾಮರ್ಶಾಪರಾಮರ್ಶವಿಶೇಷಾತ್ ... ... ... ೨೨
೧೭ ಸಂಭವಪರಿಶೇಷಾವನುಮಾ ... ... ... ... ೨೩
೧೮ ಆತ್ಮಾನ್ಯೋನ್ಯಾಶ್ರಯಚಕ್ರಕಾನವಸ್ಥಾಕಲ್ಪನಾಗೌರವಶ್ರುತದೃಷ್ಟಹಾನಾದಯೋ ದೂಷಣಾನುಮಾ ... ... ... ... ,,
೧೯ ಉಪಕ್ರಮೋಪಸಂಹಾರತದೈಕರೂಪ್ಯಾಭ್ಯಾಸಾಪೂರ್ವತಾಫಲಾರ್ಥವಾದಾಶ್ಚ ... ... ... ... ... ... ... ೨೬
೨೦ ಉಪಪತ್ತಿವಿಶೇಷಾಃ ... ... ... ... ... ೨೭
೨೧ ತ ಏವ ಸೋಪಪತ್ತಯೋ ಲಿಂಗಾನಿ ... ... ... ,,
೨೨ ಸಮಾಖ್ಯಾ ವಾಕ್ಯಪ್ರಕರಣಸ್ಥಾನಾನಿ ಚ । ಲಿಂಗವಿಶೇಷಾಃ ... ೨೮
೨೩ ವ್ಯಾಪ್ತಿರುಪಪತ್ತಿಮೂಲಂ ... ... ... ... ೨೯
೨೪ ಸಾ ಪ್ರತಿಜ್ಞಾಹೇತುದೃಷ್ಟಾಂತರೂಪಾ ... ... ... ,,
೨೫ ಹೇತುಗರ್ಭಾ, ಪ್ರತಿಜ್ಞಾ, ಕೇವಲಾಽಪಿ ... ... ... ೩೦
೨೬ ಸಿದ್ಧಾ ಪ್ರತಿಜ್ಞಾಯಾಂ ಹೇತುಮಾತ್ರಂ ಚ ... ... ... ೩೧

| ಮೂಲ. | | ಪುಟ. |
|---|---|---|
| ೨೭ | ದೃಷ್ಟಾಂತಃ ಸ ಪ್ರತಿಜ್ಞೋ ಹೇತುಗರ್ಭಃ ... ... ... | ೩೧ |
| ೨೮ | ಉಪಪತ್ತಿದೋಷೌ ವಿರೋಧಾಸಂಗತೀ ... ... ... | ,, |
| ೨೯ | ನ್ಯೂನಾಧಿಕೇ ವಾಚನಿಕೇ ... ... ... ... ... | ೩೨ |
| ೩೦ | ಸಂವಾದಾನುಕ್ತಿಯುತಾಸ್ತ ಏವ ನಿಗ್ರಹಾಃ ... ... ... | ,, |
| ೩೧ | ಪ್ರತ್ಯಕ್ಷಂ ಸಪ್ತವಿಧಂ । ಸಾಕ್ಷಿಷಡಿಂದ್ರಿಯಭೇದೇನ ... ... | ೩೫ |
| ೩೨ | ಮಾನಸ ಪ್ರತ್ಯಕ್ಷಜಾ ಸ್ಮೃತಿಃ... ... ... ... ... | ೩೯ |
| ೩೩ | ಸ್ಮೃತ್ಯನುವಾದಯೋರ್ನಾಪ್ರಾಮಾಣ್ಯಂ ... ... ... | ೪೦ |
| ೩೪ | ಯಥಾರ್ಥತ್ವಾನುಭವಾತ್ ... ... ... ... ... | ೪೧ |
| ೩೫ | ಅಹಾನೇಶ್ಚ ... ... ... ... ... ... | ,, |
| ೩೬ | ವಿರೋಧೋ ಮಾನಸ್ವವಾಕ್ಯಾಭ್ಯಾಂ ... ... ... ... | ೪೨ |
| ೩೭ | ಸ್ವವಾಕ್ಯವಿರೋಧೋಽಪಸಿದ್ಧಾಂತಜಾತಿರೂಪೇಣ ... ... | ೪೩ |
| ೩೮ | ಜಾತಿರ್ನ ಮೇಯೋ ಮಾನಾಪೇಕ್ಷೇತ್ಯಾದಿಕಾ ... ... ... | ,, |
| ೩೯ | ಮೇಯೋ ಮಾನಾಪೇಕ್ಷಾಸ್ತೀತಿ ಚ ತೇನೈವ ನ್ಯಾಯೇನ ಸಿದ್ಧತ್ವಾತ್ | ,, |
| ೪೦ | ಮಾನವಿರೋಧಶ್ಚ ... ... ... ... ... ... | ೪೪ |
| ೪೧ | ಛಲಮಸಂಗತಂ ... ... ... ... ... ... | ೪೫ |
| ೪೨ | ಅನ್ಯಚ್ಚ ... ... ... ... ... ... ... | ,, |
| ೪೩ | ಗೃಷ್ಟಿವಿವಕ್ಷಯಾ ಗಾಮಾನಯೇತ್ಯುಕ್ತೇ ಪೃಥಿವೀ ವಿವಕ್ಷಯಾ ಗವಾನಯನಮಶಕ್ಯಮಿತಿವತ್ ... ... ... ... | ೪೬ |
| ೪೪ | ತ್ರಿವಿಧೋ ವಿರೋಧಃ । ಪ್ರತಿಜ್ಞಾಹೇತುದೃಷ್ಟಾಂತಭೇದೇನ ... | ,, |
| ೪೫ | ಪ್ರಮಾಣವಿರುದ್ಧಾರ್ಥಪ್ರತಿಜ್ಞಾ ಪ್ರತಿಜ್ಞಾವಿರೋಧಃ ... ... | ೪೭ |
| ೪೬ | ಹೇತುಸ್ವರೂಪಾಸಿದ್ಧಿರವ್ಯಾಪ್ತಿಶ್ಚೇತಿ ಹೇತುವಿರೋಧಃ ... ... | ,, |
| ೪೭ | ಸಾಧ್ಯಸ್ಯ ಸಾಧನಸ್ಯ ವಾಽನನುಗಮೋ ದೃಷ್ಟಾಂತ ವಿರೋಧಃ ... | ,, |
| ೪೮ | ಪ್ರತಿಜ್ಞಾಯಾಃ ಸಮಬಲವಿರೋಧ ಏವ ಸಪ್ರತಿಸಾಧನಃ... ... | ೪೮ |
| ೪೯ | ಸ ಏವೋಪಾಧಿ ದೋಷೋಽಪಿ ... ... ... ... | ,, |
| ೫೦ | ಸರ್ವ ಏತೇ ದೃಶ್ಯತ್ವಾನುಮಾನೇ ದ್ರಷ್ಟವ್ಯಾಃ ... ... ... | ,, |
| ೫೧ | ಪ್ರತ್ಯಕ್ಷಾಗಮಾದಿಭಿರ್ಜಗತಃ ಸತ್ಯತ್ವಾತ್ ... ... ... | ೪೯ |
| ೫೨ | ತತ್ಪಕ್ಷೇ ದೃಶ್ಯತ್ವಸ್ಯ ಚ ಮಿಥ್ಯಾತ್ವಾತ್ ... ... ... | ,, |
| ೫೩ | ಅನಿರ್ವಚನೀಯಸ್ಯ ಪ್ರತಿವಾದಿನೋಽಸಿದ್ಧತ್ವಾತ್ ... ... | ,, |
| ೫೪ | ಆತ್ಮನೋಽಪಿ ದೃಶ್ಯತ್ವಾತ್ ... ... ... ... ... | ೫೦ |
| ೫೫ | ಶುಕ್ತಿರಜತಾದೇರನಿರ್ವಚನೀಯತ್ವಾಭಾವಾತ್ ... ... ... | ೫೧ |
| ೫೬ | ಅನಿರ್ವಚನೀಯ ದೃಶ್ಯತ್ವಾಭಾವಾತ್ ... ... ... ... | ,, |
| ೫೭ | ಮಾನಸಿದ್ಧತ್ವಾದಿತಿ ಸಪ್ರತಿಸಾಧನತ್ವಾಚ್ಚ ... ... ... | ೫೨ |

ಮೂಲ. ಪುಟ.

೫೮ ಜಗತ್ಸತ್ಯತ್ವಗ್ರಾಹಿ ಪ್ರತ್ಯಕ್ಷಸ್ಯ ವರ್ತಮಾನಮಾತ್ರಗ್ರಾಹಿತ್ವೇ ಅನುಮಾನಾಗಮಪ್ರಾಮಾಣ್ಯಗ್ರಾಹಿಣೋऽಪಿ ಪ್ರತ್ಯಕ್ಷತ್ವಾವಿಶೇಷಾದುತ್ತರಕ್ಷಣೇ ಪ್ರಾಮಾಣ್ಯಂ ನ ಸೇತ್ಸ್ಯತೀತಿ ಭೇದಾದಿವಾಕ್ಯಾನಾಮೇವ ಪ್ರಾಮಾಣ್ಯಂ ಸ್ಯಾತ್ ... ... ... ... ... ... ೫೨

೫೯ ತಸ್ಯ ಸಾಕ್ಷಿಸಿದ್ಧತ್ವಂ ಚೇಜ್ಜಗತ್ಸತ್ಯತ್ವಮಪಿ ಸಾಕ್ಷಿಸಿದ್ಧಂ... ...

೬೦ ವ್ಯಭಿಚಾರಶ್ಚೇದಾಗಮಾರ್ಥಾನುಮಾನಿರ್ದೋಷತ್ವಾಧ್ಯವಸಾಯೇ ಚ ಸಮಃ . . ... ... ... ... ... ೫೪

೬೧ ಅತ ಉತ್ತರದಿವಸೇऽಭೇದವಾಕ್ಯಸ್ಯ ಭೇದೋऽರ್ಥಃ ಸ್ಯಾತ್ ... ,,

೬೨ ನಿರ್ದೋಷಾನುಮಾಯಾಃ ಸದೋಷತ್ವಂ .. . ... ೫೫

೬೩ ಸದೋಷಾನುಮಾಯಾ ನಿರ್ದೋಷತ್ವಂ ... .. ... ,,

೬೪ ಇತ್ಯವ್ಯವಸ್ಥಾ .. ... ... ... ... ... ,,

೬೫ ಆಶ್ರಯಸಾಧ್ಯವ್ಯಧಿಕರಣಾಸಿದ್ಧಯೋ ನ ದೂಷಣಂ ... ... ೫೬

೬೬ ಅತಿಪ್ರಸಂಗಾಭಾವಾತ್ ... ... ... ... ... ,,

೬೭ ಅತಿಪ್ರಸಂಗೇನ ಹಿ ದೋಷತ್ವಾದೋಷತ್ವೇ ಕಲ್ಪ್ಯೇ ... ... ,,

೬೮ ವ್ಯಾಪ್ತಿರೇವ ಹಿ ಪ್ರಯೋಜಿಕಾ ... ... ... ... ೫೭

೬೯ ಅಸತ್ಯಪಿ ವ್ಯಾಪ್ತಿರಸ್ತ್ಯೇವ ... ... ... ... .. ,,

೭೦ ಅಸದಾಶ್ರಯಸ್ಯ ಸಾಧಕತ್ವಂ ನೇತ್ಯಪಿ ವ್ಯಾಪ್ತಿಂ ವಿನಾ ಕಥಂ ನಿವಾರ್ಯತೇ ... ... .. ... ... ... ... ೫೮

೭೧ ಅಸದಾಶ್ರಯಮಿತ್ಯಾದಿ ವಿಶೇಷಣತ್ವಸಂಭವೇ ಕಥಮವ್ಯಾಪ್ತಿಃ ... ೫೯

೭೨ ನ ಚಾತ್ಯಂತಾಭಾವೋऽಪಿ ಸರ್ವಧರ್ಮರಹಿತಃ । ಪ್ರಮೇಯತ್ವಾದ್ಯನುಭವಾತ್ ... ... ... ... ... . . ... ,,

೭೩ ಪರಿಶೇಷಾರ್ಥಾಪತ್ತಿಪ್ರಾಮಾಣ್ಯಾಭ್ಯುಪಗಮಾಚ್ಚ ... ... ೬೦

೭೪ ವಿಮತಂ ಸಕರ್ತೃಕಮಿತ್ಯತ್ರ ಸರ್ವಜ್ಞತ್ವಸ್ಯ ಪಕ್ಷಧರ್ಮತಾಬಲೇನ ಸಿದ್ಧ್ಯಂಗೀಕಾರಾತ್... .. ... ... ... ,,

೭೫ ಪರಿಶೇಷೋऽರ್ಥಾಪತ್ತಿರನುಮಾನಮಿತ್ಯವಿಶೇಷಃ । ಉಪಪತ್ತಿಮಾತ್ರತ್ವಾತ್ ... ... ... ... ... ... ... ೬೧

೭೬ ಉಪಪತ್ತೇಶ್ಚ ವ್ಯಾಪ್ತ್ಯಪೇಕ್ಷಾ ಸರ್ವಥಾಂಗೀಕಾರ್ಯೇತ್ಯಾಗ್ರಹಮಾತ್ರೇಣ ಭೇದಃ .. ... ... .. ... ... ,,

೭೭ ಉಪಮಾನಸ್ಯಾಪಿ ವ್ಯಾಪ್ತಿರೂಪತ್ವಾತ್... ... ... ... ೬೨

೭೮ ನ ಹಿ ಸ್ವಸದೃಶೇನಾಸದೃಶಂ ಕ್ವಚಿದ್ದೃಷ್ಟಂ ... ... ... ,,

೭೯ ಯೋಗ್ಯಾನುಪಲಬ್ಧೇಶ್ಚ ಲಿಂಗತ್ವಂ ... ... ... ... ೬೩

೮೦ ಅವಿಶೇಷಾತ್ ... ... ... ... ... ... ,,

೮೧ ಉಕ್ತದೋಷೇಷ್ವೇವಾಶೇಷಾನುಮಾನದೋಷಾಣಾಮಂತರ್ಭಾವಃ ೬೫

೮೨ ಸಾಧ್ಯಾವಿಶಿಷ್ಟೋऽಸಿದ್ಧಃ . .. .. ... ... ,,

ಮೂಲ.

೮೩ ಸಿದ್ಧಸಾಧಕೋಽಸಂಗತಃ ... ೬೫
೮೪ ನ ಪ್ರಮಾಸಾಧನಂ ಪ್ರಮಾಣಂ ... ೬೬
೮೫ ಜ್ಞಾನವ್ಯತಿರಿಕ್ತಪ್ರಮಾಯಾಂ ಪ್ರಮಾಣಾಭಾವಾತ್ ... ,,
೮೬ ನ ಚಾಜ್ಞಾತಪರಿಚ್ಛಿತ್ತಿರೇವ ಪ್ರಮೇತ್ಯತ್ರ ಕಿಂಚಿನ್ಮಾನಮ್ ... ೬೭
೮೭ ಯಾಥಾರ್ಥ್ಯಮೇವ ಪ್ರಾಮಾಣ್ಯಮಿತ್ಯಂಗೀಕಾರಾತ್ ... ,,
೮೮ ನ ಚಾನುಭೂತಿರೇವ ಪ್ರಮಾಣಂ । ಸ್ಮೃತ್ಯಾದಾವವ್ಯಾಪ್ತೇಃ ... ೬೮
೮೯ ವೇದಾನುಮಾನಾದಿ ಪ್ರಾಮಾಣ್ಯಪ್ರಸಿದ್ಧೇಶ್ಚ ... ,,
೯೦ ಸ್ಮೃತಿಃ ಪ್ರತ್ಯಕ್ಷಮೈತಿಹ್ಯಮನುಮಾನಶ್ಚತುಷ್ಟಯಂ । ಪ್ರಮಾಣಮಿತಿ
ವಿಜ್ಞೇಯಂ ಧರ್ಮಾದ್ಯರ್ಥೇ ಬುಭೂಷುಭಿಃ ಇತಿಶ್ರುತೇಶ್ಚ ... ,,
೯೧ ಐತಿಹ್ಯಮಾಗಮಭೇದಃ ... ,,
೯೨ ನ ಚ ಸಮ್ಯಗನುಭವಸಾಧನಂ ಪ್ರಮಾಣಂ ಈಶ್ವರಜ್ಞಾನಾದಾವವ್ಯಾಪ್ತೇಃ ೬೯
೯೩ ಅಪ್ರಾಮಾಣ್ಯೇ ಪ್ರಮಾಣಾಭಾವಾಚ್ಚ ... ,,
೯೪ ಪ್ರಾಮಾಣ್ಯಜ್ಞಾನೇ ಚ ... ,,
೯೫ ತತ್ಪ್ರಾಪ್ತ್ಯಂಗೀಕಾರೇಽನವಸ್ಥಿತೇಃ ... ೭೦
೯೬ ಸ್ವಪ್ರಕಾಶಾತ್ಮಾಂಗೀಕಾರೇ ತತ್ರಾವ್ಯಾಪ್ತೇಃ ... ,,
೯೭ ಸ್ಮೃತೇಶ್ಚ ಪ್ರಾಮಾಣ್ಯಾನಂಗೀಕಾರೇಽನುಭೂತಂ ಮಯೇತ್ಯತ್ರ ಪ್ರಮಾ
ಣಾಭಾವಾತ್ ... ೭೧
೯೮ ಲಿಂಗತ್ವೇನ ಪ್ರಾಮಾಣ್ಯೇ ಕಲ್ಪನಾ ಗೌರವಂ ... ,,
೯೯ ದೃಷ್ಟಹಾನಿಶ್ಚ ... ,,
೧೦೦ ಸ್ಮೃತಿಪ್ರಮಾಣದ್ವೈವಿಧ್ಯಮಾತ್ರಕಲ್ಪನೇ ಮಿಥ್ಯಾಜ್ಞಾನಾದೇರ್ನಿರಾಸಾ
ದನುಭವವಿರೋಧಃ ... ೭೨
೧೦೧ ತದನುಭವಾಭಾವ ಇತ್ಯುಕ್ತೇಽನುಭವಃ ಸ್ಮೃತಿಶ್ಚ ನಾಸ್ತೀತ್ಯುಕ್ತೇ
ಕಿಮುತ್ತರಂ ... ,,
೧೦೨ ಸ್ವಸಿದ್ಧ್ಯೈ ಸಾಧನಂ ಪರಸಿದ್ಧ್ಯೈ ದೂಷಣಂ ... ೭೩
೧೦೩ ಅತೋ ನ ದೂಷಣೇ ಅಪಸಿದ್ಧಾಂತಾದಿ ... ,,
೧೦೪ ಇಷ್ಟಾಪತ್ತಿಸ್ಸಿದ್ಧಸಾಧನತ್ವಾದಸಂಗತಮೇವ ... ,,
೧೦೫ ಆನಂದತೀರ್ಥಮುನಿನಾ ಬ್ರಹ್ಮತರ್ಕೋಕ್ತಮಾರ್ಗತಃ । ...
ಮಾನಲಕ್ಷಣಮಿತ್ಯುಕ್ತಂ ಸಂಕ್ಷೇಪಾದ್ಬ್ರಹ್ಮಸಿದ್ಧಯೇ ॥ ... ೭೪
೧೦೬ ಅಶೇಷಮಾನಮೇಯೈಕಸಾಕ್ಷಿಣೇಽಕ್ಷಯಮೂರ್ತಯೇ । ...
ಅಜೇಶಪುರುಹೂತೇಡ್ಯ ನಮೋ ನಾರಾಯಣಾಯ ತೇ ॥ ... ,,

ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತಂ

ಪ್ರಮಾಣಲಕ್ಷಣಂ ಸಂಪೂರ್ಣಂ.

# ಕಥಾಲಕ್ಷಣದ ಮುನ್ನುಡಿ.

॥ ಶ್ರೀ ಮಧ್ವವಲ್ಲಭ ವೇದವ್ಯಾಸಾಯ ನಮಃ ॥

ಗೌತಮರ ನ್ಯಾಯಸೂತ್ರಗಳಲ್ಲಿ ಪದಾರ್ಥಗಳು ಹದಿನಾರು ಇರುವವು ಎಂದು ಹೇಳಲ್ಪಟ್ಟಿದೆ. ಅವುಗಳಪೈಕಿ, ವಾದ, ಜಲ್ಪ, ವಿತಂಡಗಳು ಮೂರು ಪದಾರ್ಥಗಳು. ಇವುಗಳು ಕಥಾ ವಿಭಾಗಗಳು, ಆದುದರಿಂದ ಅವುಗಳ ನಿಜವಾದ ಲಕ್ಷಣವನ್ನು ತಿಳಿಸುವುದಕ್ಕಾಗಿ ಶ್ರೀಮದಾಚಾರ್ಯರು ಈ ಪ್ರಕರಣವನ್ನು ರಚಿಸಿದರು. ಈ ಗ್ರಂಥವು ಬ್ರಹ್ಮತರ್ಕವನ್ನನುಸರಿಸಿದೆ. ಆಚಾರ್ಯರು ತಾವು ರಚಿಸಿದ ಬೃಹದ್ಭಾಷ್ಯದಲ್ಲಿ ಕಥಾಲಕ್ಷಣವನ್ನು ನಿರೂಪಿಸುವಾಗ ಬ್ರಹ್ಮತರ್ಕದ ವಾಕ್ಯಗಳನ್ನೇ ಉದಾಹರಿಸಿದ್ದಾರೆ. (ಬೃಹದಾರಣ್ಯಕೋಪನಿಷದ್ಭಾಷ್ಯ ಪುಟಗಳು ೪೦, ೪೧ ಕುಂಭಕೋಣದ ಪ್ರತಿಗಳಲ್ಲಿ ನೋಡಬೇಕು)· ಈ ಪ್ರಮಾಣದಲ್ಲಿ ಬೌದ್ಧಾದಿಗಳು ತತ್ವವಿಪ್ಲಾವಕರು ಎಂದು ಹೇಳಿರುವುದರಿಂದ ಬ್ರಹ್ಮತರ್ಕವು ಬೌದ್ಧನ ಕಾಲಕ್ಕೆ ಅನಂತರದ್ದು ಆದುದರಿಂದ ವೇದವ್ಯಾಸ ಪ್ರಣೀತವಲ್ಲವೆಂದು ಪಾಶ್ಚಾತ್ಯವಿದ್ಯೆಕಲಿತವರು ಹೇಳಬಹುದು. ಆದರೆ ವೇದವ್ಯಾಸರು ಯಃಕಶ್ಚನ ಗ್ರಂಥಕಾರರಾದರೆ ಈ ಆಕ್ಷೇಪವು ಸರಿಹೋಗುವುದು. ಅವರು ಪರಮಾತ್ಮನ ಅವತಾರರು ತ್ರಿಕಾಲಜ್ಞರು ಎಂದು ಒಪ್ಪುವದಾದರೆ ಮುಂದಿನ ವಿಷಯಗಳನ್ನು ಗ್ರಂಥದಲ್ಲಿ ತಿಳಿಸಬಲ್ಲವರಾದುದರಿಂದ, ಕೇವಲ ಬೌದ್ಧರ ಹೆಸರು ಬ್ರಹ್ಮತರ್ಕದಲ್ಲಿ ತೋರುವುದರಿಂದ ಅದು ನವೀನ ಗ್ರಂಥವೆಂದು ಹೇಳಲಾಗುವುದಿಲ್ಲ. ವೇದವ್ಯಾಸರು ಪರಮಾತ್ಮನ ಅವತಾರರೆಂದು ಅನೇಕ ಪ್ರಮಾಣಗಳನ್ನು ತೋರಿಸಿ, ಮಹಾಭಾರತ ತಾತ್ಪರ್ಯ ನಿರ್ಣಯಾದಿ ಗ್ರಂಥಗಳಲ್ಲಿ ಶ್ರೀಮದಾಚಾರ್ಯರು ಸಮರ್ಥಿಸಿರುತ್ತಾರೆ.

2. ವಾದಿ ಪ್ರತಿವಾದಿಗಳು ಸಭೆಯಲ್ಲಿ ಕೂಡಿ ತಮ್ಮ ಪಕ್ಷವನ್ನು ಸಾಧಿಸುವುದಕ್ಕೋ, ಪರಪಕ್ಷವನ್ನು ನಿರಾಕರಿಸುವುದಕ್ಕೋ ನಡಿಸುವಚರ್ಚೆಗೆ **ಕಥೆ** ಎಂದು ಹೆಸರು. ತತ್ವವನ್ನು ನಿರ್ಣಯಿಸುವುದಕ್ಕಾಗಿ ನಡಿಸುವ ಚರ್ಚೆಯು **ವಾದ**ವೆನಿಸುವುದು. ಷಟ್ಪ್ರಶ್ನೋಪನಿಷತ್ತಿನಲ್ಲಿ ಪಿಪ್ಪಲಾದರಿಗೂ ಸುಕೇಶಾದಿಗಳಿಗೂ ನಡೆದ ಚರ್ಚೆಯು ವಾದವು. ಕಾಠಕೋಪನಿಷತ್ತಿನಲ್ಲಿ ನಾಚಿಕೇತರಿಗೂ, ಯಮದೇವರಿಗೂ ನಡೆದ ಚರ್ಚೆಯು ವಾದವು. ಜಯವನ್ನು ಪಡೆಯಬೇಕೆಂಬ ಸ್ಪರ್ಧೆಯಿಂದ ನಡಿಸುವ ಕಥೆಯು **ಜಲ್ಪವು**. ಬೃಹದಾರಣ್ಯಕದಲ್ಲಿ ಜನಕರಾಯನ ಸಭೆಯಲ್ಲಿ ಯಾಜ್ಞವಲ್ಕ್ಯರಿಗೂ, ಇತರ ಬ್ರಾಹ್ಮಣರಿಗೂ ನಡೆದ ಕಥೆಯು ಜಲ್ಪವು. ಪರಮತ ನಿರಾಕರಣೆಯೇ ಮುಖ್ಯೋದ್ದೇಶವಾಗಿರುವ ಕಥೆಯು **ವಿತಂಡವು**. ಆಚಾರ್ಯರು ಮಾಡಿದ "ಪ್ರಪಂಚಮಿಥ್ಯಾತ್ವಾನುಮಾನ ಖಂಡನವು" ಇದಕ್ಕೆ ಉದಾಹರಣೆಯಾಗುವುದು.

3. ಸಭೆಯಲ್ಲಿ ಚರ್ಚಿಸುವುದಾದರೆ ಜಲ್ಪವಿತಂಡಗಳಿಗೆ ಪ್ರಾಶ್ನಿಕರುಬೇಕು. ವಾದಕ್ಕೆ ಬೇಕೆಂದು ನಿಯಮವಿಲ್ಲ. ಪ್ರಾಶ್ನಿಕರೆಂದರೆ ಮಧ್ಯಸ್ಥರು. ಅವರಿಗೆ ವಾದಿ ಪ್ರತಿವಾದಿಗಳಿಬ್ಬರನ್ನೂ ಪ್ರಶ್ನೆಮಾಡುವ ಹಕ್ಕಿರುವುದರಿಂದ ಅವರಿಗೆ ಪ್ರಾಶ್ನಿಕರೆಂದು ಹೆಸರು ಮತ್ತು ಅವರಿಗೆ ಪರೀಕ್ಷಕರೆಂದು ಹೆಸರಿರುತ್ತದೆ. ಅವರು ಒಂದು, ಮೂರು, ಐದು ಹೀಗೆ ವಿಷಮ ಸಂಖ್ಯೆಗಳುಳ್ಳವರಾಗಿರಬೇಕು. ವಿಷ್ಣುಭಕ್ತರು ಜ್ಞಾನಿಗಳು, ನಿಷ್ಪಕ್ಷಪಾತಿಗಳು ಆಗಿರಬೇಕು.

4. ಕಥೆಯಲ್ಲಿ ಸೋತವನು ಜಯಿಸಿದವನ ಮತವನ್ನನುಸರಿಸಬೇಕು. ಅಲ್ಲದೆ ಹಟದಿಂದ ತನ್ನ ಮತವನ್ನೇ ಪ್ರಕಟಸುವನಾದರೆ ದಂಡಾರ್ಹನಾಗುವನು, ಇಂತಹ ತತ್ವವಿಪ್ಲವಕರ್ತೃಗಳನ್ನು ಕ್ಷತ್ರಿಯ, ವೈಶ್ಯ, ಶೂದ್ರರಾದರೆ ರಾಜನು ಶಿರಚ್ಛೇದ ಮಾಡಬೇಕೆಂದೂ, ಬ್ರಾಹ್ಮಣನಾದರೆ ನಾಲಿಗೆ ಕತ್ತರಿಸಬೇಕೆಂದೂ ಬ್ರಹ್ಮತರ್ಕದಲ್ಲಿ ಹೇಳಿದೆ. ಇದು ಯುಗಾಂತರ ಧರ್ಮವೆಂದು ತೋರುತ್ತದೆ. ಕಲಿಕಾಲದಲ್ಲಿ ಅನುಷ್ಠಾನಕ್ಕೆಯೋಗ್ಯವಲ್ಲವೆಂದು ಆಚಾರ್ಯರು ಹೇಳಲಿಲ್ಲ.

5. ಕಥಾಲಕ್ಷಣದಲ್ಲಿ ವರ್ಣಿಸಿದಂತೆ ಕಥೆಗಳು ಈಗ ನಡೆಯುವುದು ಅಪೂರ್ವವಾಗಿದೆ. ಹಿಂದೂರಾಜರು ಇಂತಹ ಸಭೆಗಳು ನಡೆಸುವಕ್ರಮವು ನಿಂತುಹೋಯಿತು. ಮಠಾಧಿಪತಿಗಳು ಅಲ್ಲಲ್ಲಿ ಸಭೆಗಳು ನಡಿಸಿದರೂ ಈ ಕ್ರಮವನ್ನು ವಿಶೇಷವಾಗಿ ಅನುಸರಿಸುವಂತೆ ಕಾಣುವುದಿಲ್ಲ. ಆಚಾರ್ಯರ ಕಾಲದಲ್ಲಿ ಇಂತಹ ಕಥೆಗಳು ಅನೇಕ ಸ್ಥಳಗಳಲ್ಲಿ ನಡಿಯುತ್ತಿದ್ದವೆಂದು ತಿಳಿದು ಬರುತ್ತದೆ. ಶ್ರೀ ಮಧ್ವವಿಜಯದಲ್ಲಿ ಆಚಾರ್ಯರು ಅನೇಕ ವಾದಿಗಳನ್ನು ಸಭೆಗಳಲ್ಲಿ ಜಯಿಸಿದಂತೆ ವರ್ಣಿಸಲ್ಪಟ್ಟಿದೆ. ಪದ್ಮನಾಭತೀರ್ಥರು, ನರಹರಿತೀರ್ಥರು, ತ್ರಿವಿಕ್ರಮಪಂಡಿತಾಚಾರ್ಯರು ಇವರುಗಳು ಪರಾಜಿತರಾಗಿ ಆಚಾರ್ಯರಲ್ಲಿ ಶಿಷ್ಯತ್ವವನ್ನು ವಹಿಸಿದರು, ಆಗಿನ ಕಾಲದಲ್ಲಿ ಇಂತಹ ಕಥೆಗಳು ನಡೆಯದೆ ಇದ್ದರೆ ಈ ಪ್ರಕರಣವು ಬರೆಯುವುದೇ ಅನಾವಶ್ಯಕವಾಗಿ ಇರುತ್ತಿತ್ತು. ಆಚಾರ್ಯರ ಶಿಷ್ಯರು ಪ್ರಶಿಷ್ಯರು ನೂರಾರು ವಾದಿಗಳನ್ನು ಸಭೆಗಳಲ್ಲಿ ಜಯಿಸಿ, ಮಧ್ವಮತಾವಲಂಬಿಗಳನ್ನಾಗಿ ಮಾಡಿದರು. ವೈದಿಕವಿದ್ಯೆಯೇ ಮೂಲೆಗೆ ಬಿದ್ದಂತೆ ಇರುವ ಈ ಕಾಲದಲ್ಲಿ ವಾದಾದಿಗಳಿಂದ ಮಧ್ವಮತ ಪ್ರಚಾರವನ್ನು ಯೋಗ್ಯಜನರಲ್ಲಿ ಮಾಡುವುದು ಅಸಾಧ್ಯವೆಂದು ತೋರುವುದು. ಪ್ರಕೃತ ಕಾಲಾನುಸಾರವಾಗಿ ಉಪನ್ಯಾಸಗಳಿಂದಲೂ, ಪ್ರಾಕೃತಭಾಷೆಗಳಲ್ಲಿ ಗ್ರಂಥರಚನೆಗಳಿಂದಲೂ, ತತ್ವಜ್ಞಾನವನ್ನೂ ಹರಡುವಂತೆ ಮಾಡಿದರೆ, ಸಜ್ಜನೋಪಕಾರವಾಗುವದಲ್ಲದೆ, ಮತಾಭಿಮಾನವೂ, ಶ್ರದ್ಧೆಯೂ, ಭಕ್ತಿಯೂ ಹೆಚ್ಚುವುದು. ಪುರಂದರದಾಸರು, ಜಗನ್ನಾಥದಾಸರು ಮೊದಲಾದ ಮಹಾನುಭಾವರುಗಳು ಹಾಕಿದ ಮೇಲ್ಪಂಕ್ತಿಯನ್ನನುಸರಿಸಿ ದೇಶಭಾಷೆಗಳಮೂಲಕವಾಗಿ ಹರಿಕಥಾಮೃತವನ್ನು ಬೀರುವುದು ಅತ್ಯಗತ್ಯವೆಂದು ಕಾಣಿಸುವುದು.

– ಮಧ್ವ ಮುನೀಂದ್ರದಾಸ.



॥ ಶ್ರೀಃ ॥

# ಕಥಾಲಕ್ಷಣವು.



ಶ್ರೀಮದಾನಂದತೀರ್ಥಾರ್ಯಹೃದಯಾಮಲಮಂದಿರಾ ।
ಇಂದಿರಾರ್ಚಿತಪಾದಾಬ್ಜ ದೇವತಾ ಪಾತು ನಃ ಸದಾ ॥

**ಶ್ರೀಮದ್ಧನುಮದ್ಭೀಮಮಧ್ವಾಂತರ್ಗತ ರಾಮಕೃಷ್ಣವೇದವ್ಯಾಸಾತ್ಮಕ ಶ್ರೀಲಕ್ಷ್ಮೀಹಯಗ್ರೀವಾಯ ನಮಃ ॥ ಹರಿಃ ಓಂ ॥**

**ಮೂ ॥ ನೃಸಿಂಹಮಖಿಲಾಜ್ಞಾನತಿಮಿರಾಶಿಶಿರದ್ಯುತಿಂ । ಸಂಪ್ರಣಮ್ಯ ಪ್ರವಕ್ಷ್ಯಾಮಿ ಕಥಾಲಕ್ಷಣಮಂಜಸಾ ॥ ೧ ॥**

ಅ ॥ ಅಖಿಲಾಜ್ಞಾನತಿಮಿರಾಶಿಶಿರದ್ಯುತಿಂ, ಅಖಿಲ=ಸಮಸ್ತಗಳಾದ, ಅಜ್ಞಾನತಿಮಿರ=ಅಜ್ಞಾನವೆಂಬ ಅಂಧಕಾರಕ್ಕೆ, ಅಶಿಶಿರ=ಉಷ್ಣವಾದ, ದ್ಯುತಿಂ=ಕಾಂತಿಯುಳ್ಳ ಸೂರ್ಯನಂತಿರುವ, ನೃಸಿಂಹಂ=ನರಸಿಂಹದೇವರನ್ನು, ಸಂಪ್ರಣಮ್ಯ=ಭಕ್ತಿಪೂರ್ವಕವಂದಿಸಿ, ಕಥಾಲಕ್ಷಣಂ=ಕಥೆಯ ಲಕ್ಷಣವನ್ನು, ಅಂಜಸಾ=ಚೆನ್ನಾಗಿ, ಪ್ರವಕ್ಷ್ಯಾಮಿ=ಹೇಳುತ್ತೇನೆ.

ತಾ ॥ ಅಂಧಕಾರವನ್ನು ಸೂರ್ಯನು ನಾಶಗೊಳಿಸುವಂತೆ ಮನಸ್ಸಿನ ಅಜ್ಞಾನವನ್ನು ಪರಿಹರಿಸುವುದರಲ್ಲಿ ಅತ್ಯಂತಸಮರ್ಥರಾದ ಶ್ರೀ ನರಸಿಂಹದೇವರನ್ನು ನಮಸ್ಕರಿಸಿ ನೈಯಾಯಿಕಾದಿಗಳು ಹೇಳುವ ಕಥಾಲಕ್ಷಣವನ್ನು ದೂಷಿಸಿ ಸತ್ಕಥಾಲಕ್ಷಣವನ್ನು ಹೇಳುವುದಕ್ಕೆ ಉದ್ಯುಕ್ತರಾದ ಶ್ರೀಮದಾಚಾರ್ಯರು ಮಂಗಳವನ್ನು ಪ್ರತಿಜ್ಞಾಪೂರ್ವಕವಾಗಿ ನಿಬಂಧನೆಮಾಡುತ್ತಾರೆ. ॥ ೧ ॥

ಕಥೆಯನ್ನು ವಿಭಾಗಪೂರ್ವಕವಾಗಿ ನಿರ್ದೇಶಿಸುತ್ತಾರೆ—

**ಮೂ ॥ ವಾದೋ ಜಲ್ಪೋ ವಿತಂಡೇತಿ ತ್ರಿವಿಧಾ ವಿದುಷಾಂ ಕಥಾ ॥ ೨ ॥**

ಅ ॥ ವಿದುಷಾಂ=ಜ್ಞಾನಿಗಳಿಗೆ (ಸಮ್ಮತವಾದ), ಕಥಾ=ಕಥೆಯು, ವಾದಃ=ವಾದವು, ಜಲ್ಪಃ=ಜಲ್ಪವು, ವಿತಂಡಾ ಇತಿ=ವಿತಂಡಾ ಎಂತೆಂದು, ತ್ರಿವಿಧಾ=ಮೂರುಪ್ರಕಾರವುಳ್ಳದ್ದು. (ಅಥವಾ) ವಿದುಷಾಂ=ಯಥಾರ್ಥವನ್ನು ತಿಳಿದವರ(ಮತದಲ್ಲಿ), ಕಥಾ=ಕಥೆಯು, ತ್ರಿವಿಧಾ=ಮೂರೇವಿಧವು.

ತಾ ॥ ಸಭೆಯಲ್ಲಿ ವಾದಿಪ್ರತಿವಾದಿಗಳಾಗಿ ನಡಿಸುವ ಕಥೆಯು ಮೇಲೆ ಹೇಳಿದಂತೆ ಮೂರುಪ್ರಕಾರ. ಹೆಚ್ಚುಪ್ರಕಾರವುಳ್ಳದ್ದೆಂದು ಅಥವಾ ಕಡಿಮೆ ಪ್ರಕಾರವುಳ್ಳದೆಂದಾಗಲೀ ಹೇಳುವುದು ಪ್ರಾಜ್ಞರಿಗೆ ಸಮ್ಮತವಲ್ಲ. ಸಭೆಯಲ್ಲಿ ವಾದಿಪ್ರತಿವಾದಿಗಳಾದ ವಿದ್ವಾಂಸರು ಪೂರ್ವಪಕ್ಷ, ಉತ್ತರಪಕ್ಷ ಇವುಗಳ ಬಲಾಬಲವನ್ನು ತಿಳಿಯುವುದಕ್ಕೋಸ್ಕರ ನಡಿಸುವ ಚರ್ಚೆಗೆ 'ಕಥೆ' ಎಂದುಹೆಸರು. ॥ ೨ ॥

ವಾದಕಥೆಯನ್ನು ನಿರೂಪಿಸುತ್ತಾರೆ—

**ಮೂ ॥ ತತ್ತ್ವನಿರ್ಣಯಮುದ್ದಿಶ್ಯ ಕೇವಲಂ ಗುರುಶಿಷ್ಯಯೋಃ । ಕಥಾನ್ಯೇಷಾಮಪಿ ಸತಾಂ ವಾದೋ ನಾ ಸಮಿತೇಃ ಶುಭಾ ॥ ೩ ॥**

ಅ || ಕೇವಲಂ=ಮುಖ್ಯವಾಗಿ, ತತ್ವನಿರ್ಣಯಂ=ವಸ್ತುಯಾಥಾರ್ಥ್ಯವನ್ನು, ಉದ್ದಿಶ್ಯ=ಉದ್ದೇಶಿಸಿ, ಗುರುಶಿಷ್ಯಯೋಃ=ಗುರುಶಿಷ್ಯರಿಗಾಗಲೀ, ಸತಾಂ=ಸಜ್ಜನರಾದ, ಅನ್ಯೇಷಾಮಪಿ=ಇತರರಿಗಾಗಲೀ(ನಡಿಸುವ),ಕಥಾ=ಕಥೆಯು, ವಾದಃ='ವಾದ' ಎಂದು ಅನ್ನಿಸಿಕೊಳ್ಳುತ್ತದೆ. ಸಮಿತೇರ್ವಾ=ಸಭೆಗಾಗಲಿ, ಶುಭಾ=ತತ್ವನಿರ್ಣಯರೂಪ ಶುಭ ಫಲಪ್ರದವಾದುದು.

ತಾ || ಗುರುಶಿಷ್ಯರಾಗಲೀ, ಗುರುಶಿಷ್ಯಭಾವವಿಲ್ಲದ ಇತರ ಸಜ್ಜನರಾಗಲೀ, ತತ್ವನಿರ್ಣಯಕಾಮುಕರಾಗಿ ನಡಿಸತಕ್ಕ ಕಥೆಯು '**ವಾದಕಥೆ**'ಯು. ಮತ್ತು ತತ್ವವನ್ನು ತಿಳಿದ ಜ್ಞಾನಿಗಳು ಸಭೆಯವರಿಂದ ಪ್ರಾರ್ಥಿತರಾಗಿ ಅವರಿಗೆ ತತ್ವವನ್ನು ತಿಳಿಸುವುದಕ್ಕೋಸ್ಕರ ನಡಿಸುವ ಕಥೆಯೂ ವಾದದಲ್ಲಿಯೇ ಸೇರುವುದು. 'ತತ್ವ'ವೆಂದರೆ ಪ್ರಮಾಣಸಿದ್ಧವಾದ ವಸ್ತುವು. ನಿರ್ಣಯವೆಂದರೆ ನಿಶ್ಚಯಿಸುವುದು. ಅಂದರೆ ಒಂದು ವಸ್ತುವಿನ ವಿಷಯವಾಗಿ ಅಜ್ಞಾನ, ಸಂಶಯ, ಭ್ರಮೆ, ಸಾಮಾನ್ಯಜ್ಞಾನ ಇವುಗಳ ಪೈಕಿ ಯಾವುದಾದರೂ ಒಂದು ಇರಬಹುದು. ಆ ಮೊದಲಿನ ಮೂರನ್ನು ಹೋಗಲಾಡಿಸಿ ಯಥಾರ್ಥಜ್ಞಾನವನ್ನುಂಟುಮಾಡುವುದಕ್ಕೂ ಮತ್ತು ನಾಲ್ಕನೆಯದರಲ್ಲಿ ದಾರ್ಢ್ಯವನ್ನುಂಟುಮಾಡುವುದಕ್ಕೂ ನಿರ್ಣಯವೆಂದು ಹೆಸರು. || ೩ ||

ಜಲ್ಪಕಥೆಯನ್ನು ನಿರೂಪಿಸುತ್ತಾರೆ—

**ಮೂ || ಖ್ಯಾತ್ಯಾದ್ಯರ್ಥಂ ಸ್ಪರ್ಧಯಾ ವಾ ಸತಾಂ ಜಲ್ಪ ಇತೀರ್ಯತೇ || ೪ ||**

ಅ || ಖ್ಯಾತ್ಯಾದ್ಯರ್ಥಂ=ಯಶಸ್ಸೇಮೊದಲಾದ ಪ್ರಯೋಜನಕ್ಕಾಗಿ, ಸ್ಪರ್ಧಯಾ ವಾ=ಮಾತ್ಸರ್ಯದಿಂದ ಪರರನ್ನು ಸೋಲಿಸುವುದಕ್ಕೋಸ್ಕರವಾಗಲೀ(ಮಾಡುವ), ಸತಾಂ=ಸಜ್ಜನರ (ಕಥೆಯು), ಜಲ್ಪ ಇತಿ=ಜಲ್ಪವೆಂದು, ಈರ್ಯತೇ=ಅನ್ನಿಸುತ್ತದೆ.

ತಾ || ತತ್ವಜ್ಞಾನಯೋಗ್ಯರು ಖ್ಯಾತಿಬರಬೇಕೆಂದಾಗಲೀ ಪರನಿಗೆ ಅವಮಾನವಾಗಬೇಕೆಂದಾಗಲೀ ನಡಿಸುವ ಕಥೆಯು 'ಜಲ್ಪ'ವೆನಿಸುವುದು. ಈ ಕಥೆಯಲ್ಲಿ ತತ್ವನಿರ್ಣಯದ ಉದ್ದೇಶವಿರುವುದಿಲ್ಲ. || ೪ ||

ವಿತಂಡಾಕಥೆಯನ್ನು ನಿರೂಪಿಸುತ್ತಾರೆ—

**ಮೂ || ವಿತಂಡಾ ತು ಸತಾಮನ್ಯೈಸ್ತತ್ವಮೇಷು ನಿಗೂಹಿತಂ || ೫ ||**

ಅ || ಸತಾಂ=ಸಜ್ಜನರಿಗೆ, ಅನ್ಯೈಃ=ಅಸಜ್ಜನರಿಂದ ಕೂಡಿ ನಡಿಯುವ ಕಥೆಯು, ವಿತಂಡಾ ತು=ವಿತಂಡಾ ಕಥೆಯು, ಏಷು=ಈ ಅಸಜ್ಜನರಲ್ಲಿ, ತತ್ವಂ=ಯಥಾರ್ಥವು, ನಿಗೂಹಿತಂ=ಆಚ್ಛಾದಿಸತಕ್ಕದು.

ತಾ || ಖ್ಯಾತ್ಯಾದಿಫಲೋದ್ದೇಶದಿಂದ ಸಜ್ಜನರೂ ಅಸಜ್ಜನರೂ ಕೂಡಿ ನಡಿಸುವ ಕಥೆಯೇ '**ವಿತಂಡಾ ಕಥೆಯು**' ಇಲ್ಲಿ ಜಲ್ಪಕಥೆಗೂ ವಿತಂಡಾಕಥೆಗೂ ಕಥೆಯನ್ನು ನಡಿಸುವ ರೀತಿಯಲ್ಲಿ ವ್ಯತ್ಯಾಸವಿರುವುದರಿಂದ ಭೇದವನ್ನು ತಿಳಿಯತಕ್ಕದ್ದು. ಅದು ಹೇಗೆಂದರೆ:- ಜಲ್ಪಕಥೆಯಲ್ಲಿ ವಾದಿ ಪ್ರತಿವಾದಿಗಳಿಬ್ಬರೂ ಸ್ವಪಕ್ಷಸ್ಥಾಪನೆಯನ್ನೂ, ಪರಪಕ್ಷನಿರಾಕರಣೆಯನ್ನೂ, ಮಾಡಬೇಕು. ವಿತಂಡಾ ಕಥೆಯಲ್ಲಾದರೆ ಸ್ವಪಕ್ಷಸ್ಥಾಪನೆಯನ್ನು ಮಾಡದೆ ಪರಪಕ್ಷವನ್ನು ಮಾತ್ರ ನಿರಾಕರಿಸಬೇಕು. ವಿತಂಡದಲ್ಲಿ ಪರಪಕ್ಷನಿರಾಕರಣೆಯೇ ಜಯವೆನಿಸುವುದು. ಸ್ವಪಕ್ಷಸಾಧನೆಯು ಅಗತ್ಯವಿಲ್ಲ. ಸ್ವಪಕ್ಷದ ತತ್ವವನ್ನು ಅಸಜ್ಜರಿಗೆ ತಿಳಿಸುವುದು ಅಯುಕ್ತವೆಂದು ಶಾಸ್ತ್ರೋಕ್ತಿ ಇದೆ.

ಕೆಲವರು ಜಲ್ಪವಿತಂಡ ಕಥೆಗಳಲ್ಲಿದ್ದಂತೆಯೇ ವಾದ ಕಥೆಯಲ್ಲಿಯೂ ಪ್ರಾಶ್ನಿಕರು ಅಗತ್ಯರೆಂದೆನ್ನುತ್ತಾರೆ. ಆಚಾರ್ಯರು ಈ ನಿಯಮವು ಅಯುಕ್ತವೆಂದು ತಿಳಿಸುತ್ತಾರೆ—

**ಮೂ || ಸ್ವಯಂ ವಾ ಪ್ರಾಶ್ನಿಕೈರ್ವಾದೇ ಚಿಂತಯೇತ್ತತ್ತ್ವನಿರ್ಣಯಂ || ೬ ||**

ಅ || ವಾದೇ=ವಾದಕಥೆಯಲ್ಲಿ, ಸ್ವಯಂ=ತಾನೇ ಆಗಲಿ ಅಂದರೆ ವಾದಿಯು ಪ್ರತಿವಾದಿಯಿಂದ ಪ್ರತಿವಾದಿಯು ವಾದಿಯಿಂದ, ಪ್ರಾಶ್ನಿಕೈರ್ವಾ=ಪ್ರಾಶ್ನಿಕರಿಂದ ಕೂಡಿಯಾಗಲಿ, ತತ್ತ್ವನಿರ್ಣಯಂ=ತತ್ತ್ವನಿಶ್ಚಯವನ್ನು, ಚಿಂತಯೇತ್=ಮಾಡತಕ್ಕದ್ದು.

ತಾ || (1)ಯಾವ ವಿಧದ ಕಥೆಯನ್ನು ನಡಿಸಬೇಕು, (2) ಯಾವ ವಿಷಯದಲ್ಲಿ, (3) ಯಾವ ದೇಶಕಾಲಗಳಲ್ಲಿ, (4) ವಿವಾದಕ್ಕೆ ಬಂದವರೊಳಗೆ ಯಾರು ಪೂರ್ವಪಕ್ಷವನ್ನು ಮಾಡಬೇಕು, (5) ವಾದಿಪ್ರತಿವಾದಿಗಳ ಗುಣದೋಷಗಳು ಇತ್ಯಾದಿಗಳನ್ನು ನಿಶ್ಚಯಿಸುವುದು ಪ್ರಾಶ್ನಿಕರ ಕರ್ತವ್ಯವಾಗಿದೆ. ಮತ್ತು ಜಯಾಪಜಯಗಳನ್ನು ನಿಶ್ಚೈಸುವುದು ಇವರಕೆಲಸವಾಗಿರುತ್ತದೆ. ಜಲ್ಪವಿತಂಡಗಳಲ್ಲಿ ವಾದಿಪ್ರತಿವಾದಿಗಳು ದುರಾಗ್ರಹಿಗಳಾಗಿರಬಹುದಾದುದರಿಂದ ಇವುಗಳನ್ನು ನಡಿಸುವಾಗ ಪ್ರಾಶ್ನಿಕರು ಇದ್ದೇತೀರಬೇಕು. ತತ್ತ್ವನಿರ್ಣಯದ ಉದ್ದೇಶವುಳ್ಳ ಸಜ್ಜನರವಾದದಲ್ಲಿ ಆಗ್ರಹವಿಲ್ಲದಿರುವ ಕಾರಣ ಪ್ರಾಶ್ನಿಕರು ಬೇಕು ಎಂಬ ನಿಯಮವಿಲ್ಲ. ದೈವವಶದಿಂದ ಬಂದರೆ ಅವರನ್ನು ಬಿಡಬೇಕೆಂಬ ನಿಯಮವೂ ಇಲ್ಲ. || ೬ ||

ಪ್ರಾಶ್ನಿಕರ ಲಕ್ಷಣವನ್ನು ನಿರೂಪಿಸುತ್ತಾರೆ—

**ಮೂ || ರಾಗದ್ವೇಷವಿಹೀನಾಸ್ತು ಸರ್ವವಿದ್ಯಾವಿಶಾರದಾಃ | ಪ್ರಾಶ್ನಿಕಾ ಇತಿ ವಿಜ್ಞೇಯಾ ವಿಷಮಾ ಏಕ ಏವ ವಾ || ೭ ||**

ಅ || ರಾಗದ್ವೇಷವಿಹೀನಾಃ, ರಾಗ = ಪಕ್ಷಪಾತವು, ದ್ವೇಷ = ವೈರವು ಇವುಗಳಿಂದ, ವಿಹೀನಾಃ=ರಹಿತರಾದ, ಸರ್ವವಿದ್ಯಾವಿಶಾರದಾಃ, ಸರ್ವ=ಸಮಸ್ತಗಳಾದ, ವಿದ್ಯಾ=ಕಥೆಗಳಲ್ಲಿ ಉಪಯುಕ್ತವಾದ ವಿದ್ಯೆಯಲ್ಲಿ, ವಿಶಾರದಾಃ=ಕುಶಲರಾದ ವಿದ್ವಾಂಸರು, ಪ್ರಾಶ್ನಿಕಾ ಇತಿ= ಪ್ರಾಶ್ನಿಕರು ಎಂದು, ವಿಜ್ಞೇಯಾಃ=ತಿಳಿಯತಕ್ಕದ್ದು. (ಅವರಾದರೂ) ವಿಷಮಾಃ=ಮೂರು ಐದು, ಏಳು ಈ ಪ್ರಕಾರ ವಿಷಮ ಸಂಖ್ಯೆಯವರಾಗಲೀ, ಏಕ ಏವ ವಾ=ಒಬ್ಬರೇ ಆಗಲೀ (ಆಗತಕ್ಕದು).

ತಾ || ಪ್ರಾಶ್ನಿಕರು ರಾಗದ್ವೇಷಾದಿ ದೋಷಯುಕ್ತರಾಗಿದ್ದರೆ ಸತ್ತಾದ ಪಕ್ಷವನ್ನೇ ಅಸತ್ತನ್ನಾಗಿಯೂ, ಅಸತ್ತಾದ ಪಕ್ಷವನ್ನು ಸತ್ತನ್ನಾಗಿಯೂ ಹೇಳಬಹುದು. ವಿದ್ಯಾಶೂನ್ಯರಾದರೆ ಜಯಾಪಜಯ ನಿರ್ಣಯದಲ್ಲಿ ಅಶಕ್ತರಾದಾರು. ಆದಕಾರಣ ಬುದ್ಧಿಪೂರ್ವಕವಾಗಲಿ, ಅಬುದ್ಧಿಪೂರ್ವಕವಾಗಲಿ ವೈಷಮ್ಯವನ್ನು ಆಚರಿಸದೆ ಯಥಾರ್ಥವನ್ನು ತಿಳಿದುಕೊಂಡು ಹೇಳುವವರೇ ಪ್ರಾಶ್ನಿಕರು. ಅವರೊಳಗೆ ಪರಸ್ಪರ ಮತಭೇದ ಬಂದರೆ ಬಹುಮತದಂತೆ ವ್ಯವಸ್ಥೆಮಾಡಬೇಕೆಂತಲೂ, ವಿಷಮಸಂಖ್ಯೆಯವರಾಗಬೇಕೆಂದೂ ಹೇಳಿದ್ದಾಗಿರುತ್ತದೆ. || ೭ ||

ಪ್ರಾಶ್ನಿಕರು ಒಬ್ಬನೇ ಆದರೆ ಪೂರ್ವೋಕ್ತವಾದ ಬಹುಮತವು ಕೂಡುವುದಿಲ್ಲವಾದ ಕಾರಣ ಹಾಗೂ ಬಹುಮತವಿಲ್ಲದೆ ಜಯಪರಾಜಯಗಳನ್ನು ನಿಶ್ಚೈಸುವುದೂ, ಯುಕ್ತವಲ್ಲವಾದ ಕಾರಣ ಪ್ರಾಶ್ನಿಕರು 3, 5, 7 ಹೀಗೆ ವಿಷಮಸಂಖ್ಯೆಯವರಾಗಬೇಕೆಂದು ಕೆಲವರು ಹೇಳುವರು. ಇದು ನಿಯಮವಲ್ಲ; ಯೋಗ್ಯನಾದರೆ ಪ್ರಾಶ್ನಿಕನು ಒಬ್ಬನೇ ಆದರೂ ಸಾಕೆಂದು ಆಚಾರ್ಯರ ಮತವಿರುತ್ತದೆ. ಅದಕ್ಕಾಗಿ ಯೋಗ್ಯನಾದ ಪ್ರಾಶ್ನಿಕನ ಲಕ್ಷಣವನ್ನು ಹೇಳುತ್ತಾರೆ.—

**ಮೂ ॥ ಅಶೇಷಸಂಶಯಚ್ಛೇತ್ತಾ ನಿಸ್ಸಂಶಯ ಉದಾರಧೀಃ । ಏಕಶ್ಚೇತ್ಪ್ರಾಶ್ನಿಕೋ ಜ್ಞೇಯಃ ಸರ್ವದೋಷವಿವರ್ಜಿತಃ ॥ ೮ ॥**

ಅ ॥ ಅಶೇಷಸಂಶಯಚ್ಛೇತ್ತಾ, ಅಶೇಷ=ಸಮಸ್ತಗಳಾದ, ಸಂಶಯ=ಸಂದೇಹಗಳನ್ನು, ಛೇತ್ತಾ=ಪರಿಹರಿಸುವ, ನಿಃಸಂಶಯಃ=ಸ್ವಯಂಸಂಶಯಶೂನ್ಯನಾದ, ಉದಾರಧೀಃ, ಉದಾರ=ಅತಿಕುಶಲವಾದ, ಧೀಃ=ಬುದ್ಧಿಯುಳ್ಳ, ಸರ್ವದೋಷವಿವರ್ಜಿತಃ, ಸರ್ವದೋಷ=ಸಮಸ್ತದೋಷಗಳಿಂದ, ವಿವರ್ಜಿತಃ=ರಹಿತನಾದ ಮಹಾಪುರುಷನು, ಏಕಶ್ಚೇತ್=ಒಬ್ಬನಾಗಿದ್ದರೂ, ಪ್ರಾಶ್ನಿಕಃ=ಪ್ರಾಶ್ನಿಕನೆಂದು, ಜ್ಞೇಯಃ=ತಿಳಿಯತಕ್ಕದ್ದು. ॥ ೮ ॥

ಪ್ರಾಶ್ನಿಕರಲ್ಲಿ ಅವಶ್ಯಗಳಾದ ಗುಣಗಳನ್ನು ನಿರೂಪಿಸುತ್ತಾರೆ.

**ಮೂ ॥ ಏಕೋ ವಾ ಬಹವೋ ವಾ ಸ್ಯುರ್ವಿಷ್ಣುಭಕ್ತಿಪರಾಸ್ಸದಾ । ವಿಷ್ಣುಭಕ್ತಿರ್ಹಿ ಸರ್ವೇಷಾಂ ಸದ್ಗುಣಾನಾಂ ಸ್ವಲಕ್ಷಣಂ ॥ ೯ ॥**

ಅ ॥ (ಪ್ರಾಶ್ನಿಕನು) ಏಕೋ ವಾ=ಒಬ್ಬನಾಗಲಿ, ಬಹವೋವಾ=ಬಹಳ ಜನರಾಗಲಿ, ಸದಾ=ಯಾವಾಗಲೂ, ವಿಷ್ಣುಭಕ್ತಿಪರಾಃ, ವಿಷ್ಣುಭಕ್ತಿ=ಪರಮಾತ್ಮನ ಭಕ್ತಿಯನ್ನು ಮಾಡುವುದರಲ್ಲಿ, ಪರಾಃ=ಆಸಕ್ತರು, ಸ್ಯುಃ=ಆಗತಕ್ಕದ್ದು. ಹಿ=ಯಾವಕಾರಣದಿಂದ, ಸರ್ವೇಷಾಂ=ಸಮಸ್ತರಾದ, ಸದ್ಗುಣಾನಾಂ=ಸದ್ಗುಣವುಳ್ಳ ಪುರುಷರಿಗೆ, ವಿಷ್ಣುಭಕ್ತಿಃ=ಹರಿಭಕ್ತಿಯು, ಸ್ವಲಕ್ಷಣಂ=ಸ್ವಾಭಾವಿಕ ಧರ್ಮವು. ॥ ೯ ॥

ವಾದಕಥೆಯನ್ನು ನಡೆಸುವ ರೀತಿಯನ್ನು ನಿರೂಪಿಸುತ್ತಾರೆ.—

**ಮೂ ॥ ಪೃಷ್ಟೇನಾಗಮ ಏವಾದೌ ವಕ್ತವ್ಯಃ ಸಾಧ್ಯಸಿದ್ಧಯೇ ॥ ೧೦ ॥**

ಅ ॥ ಪೃಷ್ಟೇನ=ಪ್ರತಿವಾದಿಯಿಂದ ಪ್ರಶ್ನಿಸಲ್ಪಟ್ಟ ವಾದಿಯಿಂದ, ಆದೌ=ಪ್ರಥಮದಲ್ಲಿ, ಆಗಮ ಏವ=ಆಗಮವೇ, ಸಾಧ್ಯಸಿದ್ಧಯೇ, ಸಾಧ್ಯ=ತತ್ವನಿರ್ಣಯರೂಪ ಫಲದ, ಸಿದ್ಧಯೇ=ಲಾಭಕ್ಕೋಸ್ಕರ, ವಕ್ತವ್ಯಃ=ಹೇಳತಕ್ಕದ್ದು.

ತಾ ॥ ವಿಚಾರ್ಯವಾದ ವಿಷಯದಲ್ಲಿ ಪ್ರತಿವಾದಿಯು ವಾದಿಯನ್ನು ಕುರಿತು ಪ್ರಮಾಣ ಪ್ರಶ್ನೆಯನ್ನು ಮಾಡಬೇಕು. ಅದಕ್ಕೆ ವಾದಿಯು ವಾದಕಥೆಯಲ್ಲಿ ಆಗಮ ಪ್ರಮಾಣವನ್ನೇ ಹೇಳಬೇಕು. ॥ ೧೦ ॥

ಆಗಮ ಪ್ರಮಾಣವನ್ನೇ ಹೇಳಬೇಕು. ಅನುಮಾನವನ್ನು ಏಕೆ ಹೇಳಬಾರದೆಂಬೀ ಅಂಶವನ್ನು ಪರಿಹರಿಸುತ್ತಾರೆ.—

**ಮೂ ॥ ನೈಷಾ ತರ್ಕೇಣಾಪನೇಯಾ ಮತಿರಿತ್ಯಾಹ ಹಿ ಶ್ರುತಿಃ ॥ ೧೧ ॥**

ಅ ॥ ಹಿ=ಯಾವಕಾರಣದಿಂದ, ಶ್ರುತಿಃ=ಉಪನಿಷತ್ತು, ಏಷಾ=ಈದಾದ, ಮತಿಃ=ತತ್ವವಿಷಯಕಜ್ಞಾನವು, ತರ್ಕೇಣ=ಅನುಮಾನದಿಂದ, ಆನೇಯಾ=ಹುಟ್ಟುವುದು, ಅಪನೇಯಾ=ನಿರಾಕಾರ್ಯವಾದದ್ದು, ನ ಇತಿ=ಅಲ್ಲವೆಂದು, ಆಹ=ಹೇಳುತ್ತದೆ.

ತಾ ॥ ಕಾಠಕೋಪನಿಷತ್ತಿನಲ್ಲಿ ತತ್ವವಿಷಯಕ ಬುದ್ಧಿಯು ಅನುಮಾನಸಾಧ್ಯವಲ್ಲವೆಂದು ಹೇಳಿರುವ ಪ್ರಯುಕ್ತ ಪ್ರಥಮದಲ್ಲಿ ಅನುಮಾನವನ್ನು ಹೇಳದೆ ಆಗಮವನ್ನೇ ತತ್ವನಿರ್ಣಯೋದ್ದೇಶವುಳ್ಳ ವಾದಕಥೆಯಲ್ಲಿ ಹೇಳತಕ್ಕದ್ದು.

ಈ ಪ್ರಕಾರ ವಾದಿಯು ಸ್ವಪಕ್ಷಸ್ಥಾಪನಾರ್ಥವಾಗಿ ಹೇಳಿದರೆ ಪ್ರತಿವಾದಿಯು ಅದನ್ನು ದೂಷಿಸಬೇಕೆಂದು ಹೇಳುತ್ತಾರೆ.—

**ಮೂ ॥ ಅನ್ಯಾರ್ಥ ಏವಾಗಮಸ್ಯ ವಕ್ತವ್ಯಃ ಪ್ರತಿವಾದಿನಾ ॥ ೧೨ ॥**

ಅ ॥ ಪ್ರತಿವಾದಿನಾ=ಪ್ರತಿವಾದಿಯಿಂದ, ಆಗಮಸ್ಯ=(ವಾದಿಯು ಹೇಳಿದ) ಶ್ರುತಿಗೆ, ಅನ್ಯಾರ್ಥ ಏವ=ವಾದಿ ಸಮ್ಮತವಾದ ಅರ್ಥಕ್ಕಿಂತ ಬೇರೆ ಅರ್ಥವೇ, ವಕ್ತವ್ಯಃ=ಹೇಳತಕ್ಕದ್ದು.

ಪ್ರಮಾಣವನ್ನು ದೂಷಿಸುವುದು ಎರಡು ಪ್ರಕಾರ. ಅದು ಪ್ರಮಾಣವೇ ಅಲ್ಲವೆಂದೂ ಅಥವಾ ಅದಕ್ಕೆ ಅರ್ಥವೇ ಬೇರೆಯೆಂದೂ ಹೇಳಬೇಕು ವಾದ್ಯುಕ್ತಪ್ರಮಾಣಗಳು ಸದಾಗಮಗಳಾದುದರಿಂದ ಸರ್ವಥಾ ಅಪ್ರಾಮಾಣ್ಯವನ್ನು ಹೇಳಲು ಅಶಕ್ಯವಾದುದರಿಂದ ವಾದಿಸಮ್ಮತವಾದ ಅರ್ಥದಿಂದ ಬೇರೆ ಅರ್ಥವನ್ನೇ ಹೇಳಬೇಕು. ॥ ೧೨ ॥

ಸದಾಗಮಗಳಾವುವೆಂದು ನಿರೂಪಿಸುತ್ತಾರೆ.—

**ಮೂ ॥ ಋಗ್ಯಜುಃ ಸಾಮಾಥರ್ವಾಶ್ಚ ಭಾರತಂ ಪಂಚರಾತ್ರಕಂ । ಮೂಲ ರಾಮಾಯಣಂ ಚೈವ ಸಂಪ್ರೋಚ್ಯಂತೇ ಸದಾಗಮಾಃ । ಅನುಕೂಲಾ ಯ ಏತೇಷಾಂ ತೇ ಚ ಪ್ರೋಕ್ತಾಃ ಸದಾಗಮಾಃ ॥ ೧೩ ॥**

ಅ ॥ ಋಗ್ಯಜುಃಸಾಮಾಥರ್ವಾಶ್ಚ=ಋಕ್, ಯಜುಸ್ಸು, ಸಾಮ, ಅಥರ್ವ ಎಂದು ಪ್ರಸಿದ್ಧಗಳಾದ ನಾಲ್ಕು ವೇದಗಳು, ಭಾರತಂ=ಭಾರತವು, ಪಂಚರಾತ್ರಂ=ಪಂಚರಾತ್ರಾಗಮವೂ, ಮೂಲರಾಮಾಯಣಂ ಚ=ಶತಕೋಟಿವಿಸ್ತಾರವುಳ್ಳದ್ದೆಂದು ಪ್ರಸಿದ್ಧವಾದ ಮೂಲ ರಾಮಾಯಣವೂ, ಏವ=ಇವುಗಳೇ, ಸದಾಗಮಾಃ=ಸದಾಗಮಗಳೆಂದು, ಸಂಪ್ರೋಚ್ಯಂತೇ=ಹೇಳಲ್ಪಡುತ್ತವೆ. ಏತೇಷಾಂ=ಈ ಋಗಾದಿಗಳಿಗೆ, ಅನುಕೂಲಾಃ=ಅನುಸಾರಿಗಳೂ (ಅಂದರೆ ಸಮಾನಾರ್ಥಗಳು) ಯಾವುವು ಇರುತ್ತವೋ, ತೇ ಚ=ಅವುಗಳೂ ಕೂಡ, ಸದಾಗಮಾಃ=ಸದಾಗಮಗಳೆಂದು, ಪ್ರೋಕ್ತಾಃ=ಹೇಳಲ್ಪಟ್ಟದ್ದಾವೆ.

ತಾ ॥ ಋಗಾದಿ ವೇದಗಳು ಅವುಗಳಿಗನುಸಾರಿಗಳಾದ ಪೌರುಷೇಯ ಗ್ರಂಥಗಳೂ ಸದಾಗಮಗಳೆಂದು ಪರಿಗಣಿತಗಳಾಗಿದ್ದಾವೆ. ಕಾರಣ ಅವುಗಳಿಗೆ ಸರ್ವಥಾ ಅಪ್ರಾಮಾಣ್ಯವನ್ನು ಹೇಳದೆ ಅರ್ಥಾಂತರವನ್ನೇ ಹೇಳಬೇಕು.

ವಾದಿಯು ಸದಾಗಮಗಳನ್ನೇ ಪ್ರಮಾಣಗಳನ್ನಾಗಿ ಹೇಳಿದರೆ ಪ್ರತಿವಾದಿಯು ಅರ್ಥಾಂತರವನ್ನು ಹೇಳಿ ದೂಷಿಸಲಿ. ದುರಾಗಮವನ್ನೇ ವಾದಿಯು ಹೇಳಿದರೆ ಪ್ರತಿವಾದಿಗೆ ಅಪ್ರಾಮಾಣ್ಯವನ್ನು ಹೇಳಿ ದೂಷಿಸಲು ಸಾಧ್ಯವಿರುವ ಪ್ರಯುಕ್ತ ಆಗಮಕ್ಕೆ ಅರ್ಥಾಂತರವನ್ನೇ ಕಲ್ಪಿಸಬೇಕೆಂಬ ನಿಯಮವು ಅಸಂಗತವೆಂಬೀ ಶಂಕೆಯನ್ನು ಪರಿಹರಿಸುತ್ತಾರೆ.—

**ಮೂ ॥ ಅನ್ಯೇ ದುರಾಗಮಾ ನಾಮ ತೈರ್ನ ಸಾಧ್ಯಂ ಹಿ ಸಾಧ್ಯತೇ ॥ ೧೪ ॥**

ಅ ॥ ಅನ್ಯೇ=ಹಿಂದೆ ಹೇಳಿರುವವುಗಳಿಂದ ಬೇರೆ ಆಗಮಗಳು, ದುರಾಗಮಾ ನಾಮ=ದುರಾಗಮಗಳೆಂದು ಪ್ರಸಿದ್ಧಗಳಾಗಿವೆ. ತೈಃ=ಆ ದುರಾಗಮಗಳಿಂದ, ಹಿ=ಯಾವಕಾರಣದಿಂದ, ಸಾಧ್ಯಂ=ಉದ್ದಿಷ್ಟಫಲವು, ನ ಸಾಧ್ಯತೇ=ಸಾಧಿಸಲ್ಪಡುವುದಿಲ್ಲ.

ತಾ || ತತ್ವನಿರ್ಣಯೋದ್ದೇಶವುಳ್ಳ ವಾದಿಯು ದುರಾಗಮಗಳನ್ನು ಪ್ರಯೋಗ ಮಾಡಲೇ ಬಾರದು. ಅವುಗಳಿಂದ ತತ್ವವು ನಿರ್ಣೀತವಾಗಲಾರದು. ಕಾರಣ ವಾದಿಯು ಸದಾಗಮಗಳನ್ನೇ ಹೇಳಬೇಕು. ಅದಕ್ಕೆ ಪ್ರತಿವಾದಿಯು ಅರ್ಥಾಂತರವನ್ನೇ ಹೇಳಬೇಕು. || ೧೪ ||

ಪ್ರತಿವಾದಿಗೆ ಇಷ್ಟೇ ಕೆಲಸವಲ್ಲ. ಇನ್ನೂ ಕರ್ತವ್ಯವಿದೆಯೆಂದು ಹೇಳುತ್ತಾರೆ.—

**ಮೂ || ಸ್ವಪಕ್ಷ ಆಗಮಶ್ಚೈವ ವಕ್ತವ್ಯಃ ಪ್ರತಿವಾದಿನಾ || ೧೫ ||**

ಅ || ಪ್ರತಿವಾದಿನಾ=ಪ್ರತಿವಾದಿಯಿಂದ, ಸ್ವಪಕ್ಷೇ=ತನ್ನ ಪಕ್ಷದಲ್ಲಿ (ಅಂದರೆ ತನಗೆ ಸಮ್ಮತವಾದ ಅರ್ಥದಲ್ಲಿ), ಆಗಮಶ್ಚ=ಆಗಮಪ್ರಮಾಣವೂ ಕೂಡ, ವಕ್ತವ್ಯ ಏವ=ಹೇಳತಕ್ಕದು.

ತಾ || ವಾದಿಯ ಆಗಮಕ್ಕೆ ಪ್ರತಿವಾದಿಯು ಬೇರೆ ಅರ್ಥವನ್ನು ಕಲ್ಪಿಸಿದರೂ ವಾದಿಪಕ್ಷವು ನಿರಾಕೃತವಾಯಿತಲ್ಲದೆ ತನ್ನ (ಪ್ರತಿವಾದಿಯ) ಪಕ್ಷವು ಸಿದ್ಧವಾಗಿಲ್ಲವಾದ ಪ್ರಯುಕ್ತ ಅದಕ್ಕಾಗಿ ಬೇರೆ ಆಗಮ ಪ್ರಮಾಣವನ್ನು ಹೇಳಲೇ ಬೇಕು. || ೧೫ ||

ಈ ಪ್ರಕಾರ ಪ್ರತಿವಾದಿಯು ಸ್ವಪಕ್ಷಸ್ಥಾಪನ ಪರಪಕ್ಷ ನಿರಾಕರಣ ಮಾಡಿದ ಮೇಲೆ ವಾದಿಯು ಮಾಡತಕ್ಕದನ್ನು ನಿರೂಪಿಸಿರುತ್ತಾರೆ.—

**ಮೂ || ತಸ್ಯಾಪ್ಯನ್ಯಾರ್ಥತಾ ಸಾಧ್ಯಾ ವಾದಿನಾ ಸ್ವಾರ್ಥಸಿದ್ಧಯೇ | ಅನ್ಯಾರ್ಥತಾ ನಿರಾಕಾರ್ಯಾ ಸ್ವಾಗಮಸ್ಯ ವಿನಿಶ್ಚಯಾತ್ || ೧೬ ||**

ಅ || ವಾದಿನಾಪಿ=ವಾದಿಯಿಂದಲೂ ಕೂಡ, ಸ್ವಾರ್ಥಸಿದ್ಧಯೇ=ತನಗೆ ಸಮ್ಮತವಾದ ಅರ್ಥಸಿದ್ಧಿಗೋಸ್ಕರ, ತಸ್ಯಾಪಿ=ಆ ಪ್ರತಿವಾದಿಯ ಆಗಮಕ್ಕೆ, ಅನ್ಯಾರ್ಥತಾ=ಆತನಿಗೆ ಸಮ್ಮತವಾದ ಅರ್ಥಕ್ಕಿಂತ ಬೇರೆ ಅರ್ಥವನ್ನು, ಸಾಧ್ಯಾ=ಸಾಧಿಸತಕ್ಕದು. ಸ್ವಾಗಮಸ್ಯ=ತಾನು ಮೊದಲು ಹೇಳಿದ ಆಗಮಕ್ಕೆ, ಅನ್ಯಾರ್ಥತಾ=ಪ್ರತಿವಾದಿಯು ಹೇಳಿದ ಅರ್ಥಾಂತರವನ್ನು, ವಿನಿಶ್ಚಯಾತ್=ತತ್ವನಿರ್ಣಯವನ್ನು ಉದ್ದೇಶಿಸಿ, ನಿರಾಕಾರ್ಯಾ=ನಿರಾಕರಿಸತಕ್ಕದ್ದು. || ೧೬ ||

ಪ್ರತಿವಾದಿಯು ತನ್ನ (ವಾದಿಯ) ಆಗಮಕ್ಕೆ ಬೇರೆ ಅರ್ಥವನ್ನು ಕಲ್ಪಿಸಿಕೊಂಡಿರುವಾಗ ಹೇಗೆ ವಾದಿಯು ತನಗೆ ಸಮ್ಮತವಾದ ಅರ್ಥವನ್ನು ಸಾಧಿಸಬೇಕೆಂದು ನಿರೂಪಿಸುತ್ತಾರೆ.—

**ಮೂ || ಉಪಪತ್ತ್ಯವಕಾಶೋಽತ್ರ ಹ್ಯಾಗಮಾರ್ಥವಿನಿರ್ಣಯೇ || ೧೭ ||**

ಅ || ಹಿ=ಯಾವಕಾರಣದಿಂದ, ಅತ್ರ=ಈ, ಆಗಮಾರ್ಥವಿನಿರ್ಣಯೇ=ವೇದಾರ್ಥವನ್ನು ನಿಶ್ಚಯಮಾಡುವುದರಲ್ಲಿ, ಉಪಪತ್ತ್ಯವಕಾಶಃ, ಉಪಪತ್ತಿ=ಯುಕ್ತಿಗಳಿಗೆ, ಅವಕಾಶಃ=ಅವಸರವು.

ತಾ || ವಾದಿಪ್ರತಿವಾದಿಗಳು ತಾವುತಾವು ಹೇಳಿದ ಆಗಮಗಳಿಗೆ ತಾವು ತಾವು ಹೇಳಿದುದೇ ಅರ್ಥವೆಂದು ಆಗ್ರಹಪಡುವಾಗ ವಾದಿಯು ಶಾಸ್ತ್ರದಲ್ಲಿ ಹೇಳಿದ ಉಪಕ್ರಮಾದಿ ಯುಕ್ತಿಗಳಿಂದ ತನಗೆ ಸಮ್ಮತವಾದ ಅರ್ಥವನ್ನು ಸಾಧಿಸಬೇಕು. || ೧೭ ||

ವಾದಿಯು ಇಷ್ಟುಮಾಡಿದರೆ ವಾದಕಥೆಯು ಮುಗಿಯುತ್ತೋ ಎಂದರೆ ಇಲ್ಲವೆಂತ ಹೇಳುತ್ತಾರೆ.—

**ಮೂ || ವಾದ್ಯಾಗಮಾರ್ಥೇ ನಿರ್ಣೀತೇ ಆಗಮಾರ್ಥಃ ಪರಸ್ಯ ತು | ನಿರ್ಣೇಯಃ ಸಹಿತೈಃ ಪಶ್ಚಾತ್ತತೋ ನಿಃಶೇಷನಿರ್ಣಯಃ || ೧೮ ||**

ಅ ॥ ವಾದ್ಯಾಗಮಾರ್ಥೇ=ವಾದಿಯು ಹೇಳಿದ ಶ್ರುತ್ಯರ್ಥವು, ನಿರ್ಣೀತೇ ಸತಿ=ನಿಶ್ಚಿತವಾಗುತ್ತಿರಲು, ಪಶ್ಚಾತ್=ಅನಂತರ, ಪರಸ್ಯ=ಪ್ರತಿವಾದಿಯ, ಆಗಮಾರ್ಥಸ್ತು=ಶ್ರುತ್ಯರ್ಥವಾದರೂ, ಸಹಿತೈಃ=ಕೂಡಿದವರಿಂದ, ನಿರ್ಣೇಯಃ=ನಿಶ್ಚೈಸತಕ್ಕದು. ತತಃ=ಅನಂತರದಲ್ಲಿ, ನಿಃಶೇಷನಿರ್ಣಯಃ, ನಿಃಶೇಷ=ಶಂಕಾರಹಿತವಾಗಿ, ನಿರ್ಣಯಃ=ತತ್ವನಿಶ್ಚಯವು. (ಆಗುತ್ತದೆ.)

ತಾ ॥ ವಾದಿಯು ಉಪಕ್ರಮಾದಿಯುಕ್ತಿಗಳಿಂದ ಸ್ವಪಕ್ಷಸಾಧನೆಯನ್ನೂ ಪರಪಕ್ಷ ನಿರಾಕರಣೆಯನ್ನೂ ಮಾಡಿದ ಅನಂತರ ಪ್ರತಿವಾದಿಯು ಅವುಗಳನ್ನು ನಿರಾಕರಿಸಲು ಅಸಮರ್ಥನಾದರೆ ತನ್ನ ಪ್ರತಿವಾದಿಭಾವವನ್ನು ಬಿಟ್ಟು ಸುಹೃದ್ಭಾವದಿಂದ ವಾದಿಯಿಂದ ಕೂಡಿಕೊಂಡು ತಾನು ಹೇಳಿದ ಆಗಮಾರ್ಥವನ್ನು ನಿಶ್ಚಯಿಸತಕ್ಕದು. ಹೀಗೆ ಮಾಡಿದರೆ ಉಭಯರ ಆಗಮಾರ್ಥವೂ ನಿಶ್ಚಿತವಾಗುವುದು. ॥ ೧೮ ॥

ಪ್ರತಿವಾದಿಯು ಪ್ರತ್ಯಕ್ಷಗಮ್ಯವಾದ ವಸ್ತುವಿನಲ್ಲಿಯೂ ಪ್ರಮಾಣವನ್ನು ಕೇಳಿದರೆ ವಾದಿಯು ಯಾವಪ್ರಮಾಣವನ್ನು ಹೇಳಬೇಕು? ಮೊದಲು ಆಗಮಪ್ರಮಾಣವನ್ನೇ ಹೇಳಬೇಕೆಂದು ಹಿಂದೆ ಹೇಳಿದೆ. ಪ್ರತಿವಾದಿಯು ಕೇಳುವ ವಿಷಯದಲ್ಲಿ ಆಗಮವಿಲ್ಲವಾದಕಾರಣ ಪ್ರಮಾಣಾಂತರವನ್ನು ಹೇಳಬಹುದೋ ಬಾರದೋ ಎಂಬ ಸಂಶಯವನ್ನು ಪರಿಹರಿಸುತ್ತಾರೆ.—

**ಮೂ ॥ ಪ್ರತ್ಯಕ್ಷಸಿದ್ಧೇಷ್ವರ್ಥೇಷು ಪ್ರಶ್ನೇ ಮಾಮಕ್ಷಜಂ ವದೇತ್ । ಜ್ಞಾನಂ ವಾ ಜ್ಞಾನಸಿದ್ಧೇಷು ನಾನುಮಾಂ ಪ್ರಥಮಂ ವದೇತ್ ॥ ೧೯ ॥**

ಅ ॥ ಪ್ರತ್ಯಕ್ಷಸಿದ್ಧೇಷು=ಚಕ್ಷುರಾದಿ ವಿಷಯಗಳಾದ, ಅರ್ಥೇಷು=ವಸ್ತುಗಳಲ್ಲಿ, ಪ್ರಶ್ನೇ=ಪ್ರಮಾಣಪ್ರಶ್ನೆಯು ಬರುತ್ತಿರಲು, ಅಕ್ಷಜಂ=ಪ್ರತ್ಯಕ್ಷರೂಪವಾದ, ಮಾಂ=ಪ್ರಮಾಣವನ್ನೂ, ಜ್ಞಾನಸಿದ್ಧೇಷು=ಕೇವಲಸಾಕ್ಷಿಗಮ್ಯಗಳಾದ ಆಂತರಪದಾರ್ಥಗಳಲ್ಲಿ ಪ್ರಮಾಣ ಪ್ರಶ್ನೆಯು ಬರುತ್ತಿರಲು, ಜ್ಞಾನಂ ವಾ=ಸಾಕ್ಷಿಪ್ರಮಾಣವನ್ನಾಗಲಿ, ವದೇತ್=ಹೇಳತಕ್ಕದ್ದು. ಅನುಮಾಂ=ಅನುಮಾನಪ್ರಮಾಣವನ್ನು, ಪ್ರಥಮಂ=ಪ್ರಥಮದಲ್ಲಿ, ನ ವದೇತ್=ಹೇಳಬಾರದು.

ತಾ ॥ ಆಗಮವನ್ನೇ ಪ್ರಥಮದಲ್ಲಿ ಹೇಳಬೇಕೆಂದು ಹೇಳಿದುದು ಪ್ರಥಮದಲ್ಲಿ ಅನುಮಾನವನ್ನು ಹೇಳಬಾರದೆಂಬ ಅಭಿಪ್ರಾಯದಿಂದಲ್ಲದೆ ಪ್ರತ್ಯಕ್ಷಸಿದ್ಧಗಳಾದ ವಸ್ತುಗಳಲ್ಲಿಯೂ ಕೂಡಾ ಆಗಮವನ್ನೇ ಹೇಳಬೇಕೆಂಬ ಅಭಿಪ್ರಾಯದಿಂದಲ್ಲ. ॥ ೧೯ ॥

ಒಬ್ಬನ ಮಾತಿನಿಂದ ಸಿದ್ಧವಾಗಬಹುದಾದ ವಸ್ತುವು ತತ್ವವೋ ಅತತ್ವವೋ ಎಂದು ವಾದಕಥೆಯಲ್ಲಿ ಪ್ರಶ್ನೆಮಾಡಿದರೆ ಯಾವ ಪ್ರಮಾಣವನ್ನು ಹೇಳಬೇಕು. ತತ್ಕಾಲದಲ್ಲಿ ಪ್ರತ್ಯಕ್ಷವಿಲ್ಲ. ಋಗಾದಿವೇದಗಳಲ್ಲಿ ಇದು ಒಳಗೊಂಡಿಲ್ಲ. ಆಪ್ತವಚನಗಳಾದ ಮೂಲರಾಮಾಯಣಾದಿ ಸದಾಗಮಗಳಲ್ಲಿ ಸೇರಲಿಲ್ಲ. ಈ ಪ್ರಸಂಗದಲ್ಲಿ ಏನುಮಾಡಬೇಕೆಂಬ ಶಂಕೆಯನ್ನು ಪರಿಹರಿಸುತ್ತಾರೆ.–

**ಮೂ ॥ ಪರತುಷ್ಟಿಕರಂ ವಾಕ್ಯಂ ವದೇತಾಂ ಯದಿ ವಾದಿನೌ ।**
**ಸ ಏವಾತ್ರಾಗಮೋ ಜ್ಞೇಯಃ ಪರತುಷ್ಟಿರ್ಹಿ ತತ್ಫಲಂ ॥ ೨೦ ॥**

ಅ ॥ ವಾದಿನೌ=ವಾದಿಪ್ರತಿವಾದಿಗಳು, ಪರತುಷ್ಟಿಕರಂ, ಪರ=ಪ್ರಶ್ನೆಮಾಡಿದವನಿಗೆ, ತುಷ್ಟಿಕರಂ=ಸಮಾಧಾನಕರವಾದ ವಾಕ್ಯಂ=ಲೌಕಿಕವಾಕ್ಯವನ್ನು, ವದೇತಾಂ ಯದಿ=ಹೇಳಿದ ಪಕ್ಷದಲ್ಲಿ, ತದಾ=ಆಗ, ಅತ್ರ=ಈ ಪ್ರಶ್ನೆಮಾಡಿದ ವಿಷಯದಲ್ಲಿ, ಸ ಏವ=ಲೌಕಿಕವಾಕ್ಯವೇ, ಆಗಮಃ=ಆಗಮಾಖ್ಯಪ್ರಮಾಣವೆಂದು, ಜ್ಞೇಯಃ=ತಿಳಿಯತಕ್ಕದು. ಹಿ=ಯಾವಕಾರಣದಿಂದ,

ತತ್ಫಲಂ, ತತ್=ಆ ಋಗಾದ್ಯಾಗಮಗಳನ್ನೇ ಹೇಳಬೇಕೆಂಬ ಅಂಗೀಕಾರದ, ಫಲಂ=ಪ್ರಯೋಜನವು, ಪರತುಷ್ಟಿಃ, ಪರ=ಪ್ರಶ್ನಿಸಿದವನ, ತುಷ್ಟಿಃ=ಮನಃಸಂತೋಷವು.

ತಾ ॥ ಋಗಾದ್ಯಾಗಮಗಳಲ್ಲಿ ಪ್ರಾಮಾಣ್ಯವು ಉಭಯಸಮ್ಮತವಾಗಿರುವುದರಿಂದ ನಾವು ಋಗಾದ್ಯಾಗಮಗಳನ್ನೇ ಹೇಳಬೇಕೆಂದು ಅಂಗೀಕಾರಮಾಡಿದುದು. ಅವುಗಳನ್ನು ಹೇಳಿದರೆ ಮನಸ್ಸಿಗೆ ತೃಪ್ತಿಯಾಗುವುದು. ಅದೇ ರೀತಿ ಸತ್ಯವಾದಿಯಾದ ಪುರುಷನವಾಕ್ಯವೂ ಪ್ರಮಾಣವಾಗಲಡ್ಡಿಯಿಲ್ಲ. ಉಭಯಸಮ್ಮತವಾಗಿದ್ದರೆ ಮನಸ್ತೃಪ್ತಿರೂಪಫಲವು ಋಗಾದಿಗಳಿಂದಾಗುವಂತೆ ಲೌಕಿಕವಾಕ್ಯದಿಂದಲೂ ಆಗುವಕಾರಣ ಅದನ್ನೂ ಪ್ರಮಾಣವಾಗಿ ಹೇಳಬಹುದು. ॥ ೨೦ ॥

ವಾದವನ್ನು ಎಷ್ಟುಕಾಲಪರ್ಯಂತ ನಡಿಸಬೇಕೆಂದು ಅಪ್ಪಣೆಕೊಡುತ್ತಾರೆ.-

**ಮೂ ॥ ಏವಂ ನಿರ್ಣಯಪರ್ಯಂತಂ ವಾದೇ ಸುಬಹವೋಽಪಿ ಹಿ ।**
**ಘಟೇಯುಶ್ಚಿರಕಾಲಂ ಚ ಜಲ್ಪೇ ಯಾವತ್ಪರೋ ಜಿತಃ ॥ ೨೧ ॥**

ಅ ॥ ಏವಂ=ಹಿಂದೆಹೇಳಿದರೀತಿಯಾಗಿ ಅಂದರೆ ಪ್ರಮಾಣತರ್ಕಾದಿಗಳಿಂದ, ವಾದೇ=ವಾದಕಥೆಯಲ್ಲಿ, ನಿರ್ಣಯಪರ್ಯಂತಂ=ತತ್ವನಿರ್ಣಯರೂಪಫಲವಾಗುವ ವರೇಗೆ, ಬಹವೋಽಪಿ ಹಿ=ಬಹುಮಂದಿಗಳಾದಾಗ್ಯೂ, ಚಿರಕಾಲಂ=ಬಹುಕಾಲ, ಘಟೇಯುಃ=(ಕೂಡಿ) ಕಥೆಯನ್ನು ನಡಿಸುವರು. ಜಲ್ಪೇ=ಜಲ್ಪಕಥೆಯಲ್ಲಿ, ಪರಃ=ವಾದಿ ಪ್ರತಿವಾದಿಗಳಲ್ಲೊಬ್ಬನು, ಯಾವತ್=ಎಷ್ಟುಕಾಲ ಪರ್ಯಂತವಾಗಿ, ಜಿತಃ=ಪರಾಜಿತನಾಗುತ್ತಾನೋ (ಅಷ್ಟುಕಾಲದ ವರೇಗೆ ವಾದಿಸುವರು.)

ತಾ ॥ ವಾದಕಥೆಯಲ್ಲಿ ಒಬ್ಬನಿಗೆ ಪರಾಜಯ ಬಂದಾಗ್ಯೂ ಉದ್ದಿಷ್ಟವಾದ ತತ್ವನಿರ್ಣಯರೂಪ ಫಲವು ಆಗುವ ವರೇಗೂ ಕಥೆಯನ್ನು ಪೂರೈಸಬಾರದು. ಹಾಗೂ ಇತರ ಕಥೆಗಳಂತೆ ಇಬ್ಬರೇ ಮಾಡಬೇಕೆಂಬ ನಿಯಮವೂ ಇಲ್ಲ. ಇವರಿಬ್ಬರ ಹೊರತು ಸಭೆಯಲ್ಲಿರತಕ್ಕವರ ಪ್ರಶ್ನೆಗೂ ಉತ್ತರವನ್ನು ಕೊಡಬೇಕು. ಇಲ್ಲವಾದರೆ ವಿಷಯವು ಸಂಧಿಗ್ಧವಾಗಿ ತತ್ವನಿರ್ಣಯಾಖ್ಯ ಫಲವು ಆಗಲಾರದು. ಆದಕಾರಣ ಈ ಕಥೆಯನ್ನು ಬಹಳ ಜನರು ನಡಿಸಬಹುದೆಂಬ ಅಭಿಪ್ರಾಯದಿಂದ 'ಸುಬಹವೋಽಪಿ' ಎಂದು ಹೇಳಿರುತ್ತಾರೆ. ಹಾಗಾದರೆ ಬಂದವರೆಲ್ಲ ಪ್ರಶ್ನೆಮಾಡುತ್ತಿದ್ದರೆ ಅವಸಾನವೇ ಇಲ್ಲವೆಂದು ಭಾವಿಸಬಾರದು. 'ಹೆಚ್ಚು ಜನರು ಬರುತ್ತಾರೆ ಇರುತ್ತಾರೆ' ಎಂಬ ನಿಯಮವಿಲ್ಲದಿರುವುದರಿಂದ ಸಾಧನ ದೂಷಣಗಳು ಮಿತಗಳಾಗಿರುವುದರಿಂದಲೂ ಸ್ವಲ್ಪ ವಿಲಂಬದಿಂದ ಅಂತ್ಯವಾಗ ಬಹುದಾದುದರಿಂದ ಕೊನೆಮುಟ್ಟದೆನ್ನುವಂತಿಲ್ಲ. ಈ ಪ್ರಕಾರ ವಾದಕಥೆಯನ್ನು ಹೇಳಿ ಜಲ್ಪಕಥೆಯನ್ನು ಸಂಕ್ಷೇಪವಾಗಿ ಹೇಳುತ್ತಾರೆ. ಸಭ್ಯ, ಸಭಾಪತಿ, ಪ್ರಾಶ್ನಿಕಾದಿ ಪೂರ್ವಕವಾಗಿ ಕಥಾಸಮಯಾದಿ ನಿಯಮಗಳನ್ನು ಮಾಡಿಕೊಂಡು ಪ್ರಾಶ್ನಿಕರು ಅಥವಾ ವಾದಿಯು ಕೇಳಿದ ವಿಷಯದಲ್ಲಿ ಪ್ರತಿವಾದಿಯು ಪ್ರಮಾಣವನ್ನು ಹೇಳಬೇಕು. ಹೀಗೆ ವಾದಿಪ್ರತಿವಾದಿಗಳು ಸ್ವಪರಪಕ್ಷಗಳನ್ನು ಸಾಧಿಸಿ ದೂಷಿಸುತ್ತಾ ಇಬ್ಬರಲ್ಲಿ ಒಬ್ಬನಿಗೆ ಪರಾಜಯ ಬರುವ ಪರ್ಯಂತ ಕಥೆಯನ್ನು ನಡಿಸಬೇಕು. ಈ ಜಲ್ಪಕಥೆಯು ಜಯಫಲಕವಾಗಿರುವುದರಿಂದ ಯಾರಾದರೊಬ್ಬನಿಗೆ ಪರಾಜಯ ಉಂಟಾದಕೂಡಲೇ ಕಥೆಯನ್ನು ನಿಲ್ಲಿಸತಕ್ಕದ್ದು. ॥ ೨೧ ॥

ಇನ್ನುಮುಂದೆ ವಾದಕಥೆಯಲ್ಲಿಪರಾಜಯ ಹೇತುವನ್ನು ನಿರೂಪಿಸುತ್ತಾರೆ.-

**ಮೂ ॥ ತತ್ವನಿರ್ಣಯವೈಲೋಮ್ಯಂ ವಾದೇ ಸಾಕ್ಷಾತ್ಪರಾಜಯಃ ॥ ೨೨ ॥**

ಅ ॥ ವಾದೇ=ವಾದಕಥೆಯಲ್ಲಿ, ತತ್ವನಿರ್ಣಯವೈಲೋಮ್ಯಂ, ತತ್ವನಿರ್ಣಯ=ತತ್ವನಿರ್ಣಯಾಖ್ಯಫಲಕ್ಕೆ, ವೈಲೋಮ್ಯಂ=ವಿರುದ್ಧವಚನವು ಅಥವಾ ವಿರುದ್ಧಾಚರಣೆಯು, ಸಾಕ್ಷಾತ್=ಮುಖ್ಯವಾಗಿ, ಪರಾಜಯಃ=ಅಪಜಯಹೇತುವಾಗಿರುತ್ತದೆ.

ತಾ ॥ ವಾದಕಥೆಯಲ್ಲೂ ತತ್ವನಿರ್ಣಯಕ್ಕೆ ವಿರುದ್ಧಾಚರಣೆಯನ್ನೊಮ್ಮೆ ಮಾಡಿದರೆ ಎಚ್ಚರಿಸಬೇಕು. ಮತ್ತು ಮತ್ತು ವಿರೋಧವನ್ನುಂಟುಮಾಡಿದರೆ ಅದು ಕಥಾವಸಾನಕಾರಣವಾಗುತ್ತದೆ. ಆದುದರಿಂದಲೇ ಇದು ಮುಖ್ಯವು. ಇತರ ಪರಾಜಯ ಹೇತುಗಳು ಕಥಾವಸಾನಕಾರಣಗಳಲ್ಲದುದರಿಂದ ಅಮುಖ್ಯಗಳು. ॥ ೨೨ ॥

ತತ್ವನಿರ್ಣಯವೈಲೋಮ್ಯವನ್ನಾಚರಿಸಿದರೆ ಏನುಮಾಡತಕ್ಕುದೆಂದು ನಿರೂಪಿಸುತ್ತಾರೆ.—

**ಮೂ ॥ ಸಂವಾದೇ ಶ್ಲಾಘ್ಯತೈವ ಸ್ಯಾದ್ಗುರುತ್ವಮಿತರಸ್ಯ ಚ ।**
**ತತ್ವನಿರ್ಣಯವೈಲೋಮ್ಯೇ ನಿಂದ್ಯೋ ದಂಡ್ಯೋಽಥವಾ ಭವೇತ್ ॥ ೨೩ ॥**

ಅ ॥ ತತ್ವನಿರ್ಣಯವೈಲೋಮ್ಯೇ=ಹಿಂದೆ ಹೇಳಿದ ತತ್ವನಿರ್ಣಯ ವೈಲೋಮ್ಯವು ಪ್ರಾಪ್ತವಾದರೆ, ಸಂವಾದೇ=ತನ್ನ ತಪ್ಪನ್ನು ತಾನು ಅಂಗೀಕಾರಮಾಡಿದರೆ, ಶ್ಲಾಘ್ಯತೈವ=ಸ್ತೋತ್ರವಿಷಯತ್ವವೇ,ಸ್ಯಾತ್=ಆದೀತು. (ಈ ಸಂದರ್ಭದಲ್ಲಿ) ಇತರಸ್ಯಚ=ತತ್ವವನ್ನು ತಿಳಿದುಕೊಂಡಿದ್ದ ಇನ್ನೊಬ್ಬನಿಗೆ, ಗುರುತ್ವಂ=ಗುರುಭಾವವು, ಸ್ಯಾತ್=ಆದೀತು. ಅಥವಾ=ತನ್ನ ದೋಷವನ್ನು ತಾನು ಅಂಗೀಕಾರಮಾಡದಿದ್ದಲ್ಲಿ, ನಿಂದ್ಯಃ=ನಿಂದಾರ್ಹನು, ದಂಡ್ಯಃ=ಶಿಕ್ಷಾರ್ಹನು, ಭವೇತ್=ಆದಾನು.

ತಾ ॥ ತನ್ನ ತಪ್ಪನ್ನೊಪ್ಪಿಕೊಂಡವನು ಜ್ಞಾನವುಳ್ಳವನಾದುದರಿಂದ ಸ್ತುತ್ಯನೇ ಅಲ್ಲದೆ ಪರಾಜಿತನೆಂದು ನಿಂದ್ಯನಲ್ಲ. ತಪ್ಪನ್ನೊಪ್ಪದಿದ್ದಲ್ಲಿ ನಿಂದ್ಯನೇ. ಪ್ರಬಲವಾದ ತಪ್ಪನ್ನು ಮಾಡಿದ್ದಲ್ಲಿ ದಂಡನೀಯನೆಂದು ತಿಳಿಯತಕ್ಕದ್ದು. ॥ ೨೩ ॥

ಜಲ್ಪದಲ್ಲಿ ಪರಾಜಯಪರ್ಯಂತ ಕಥೆಯನ್ನು ನಡಿಸಬೇಕೆಂದು ಹಿಂದೆ ಹೇಳಿಯದೆ. ಅದರಲ್ಲಿ ಪರಾಜಯಹೇತುವನ್ನು ನಿರೂಪಿಸುತ್ತಾರೆ.—

**ಮೂ ॥ ವಿರೋಧಾಸಂಗತಿನ್ಯೂನತೂಷ್ಣೀಂಭಾವಾದಿಭಿರ್ಜಿತಃ ॥**
**ಭವೇಜ್ಜಲ್ಪೇ ವಿತಂಡಾಯಾಂ ನ್ಯಾಯೋ ಜಲ್ಪವದೀರಿತಃ ॥ ೨೪ ॥**

ಅ ॥ ಜಲ್ಪೇ=ಜಲ್ಪಕಥೆಯಲ್ಲಿ, ವಿರೋಧಾಸಂಗತಿನ್ಯೂನತೂಷ್ಣೀಂಭಾವಾದಿಕೈಃ, ವಿರೋಧ=ವಿರೋಧವು, ಅಸಂಗತಿ=ಅಸಂಗತಿಯು, ನ್ಯೂನ=ನ್ಯೂನವು, ತೂಷ್ಣೀಂಭಾವ=ಮೂಕನಂತೆ ಸುಮ್ಮಗಿರೋಣವು, ಇವುಗಳೇ ಆದಿಕೈಃ=ಮೊದಲಾಗಿವುಳ್ಳ ನಿಗ್ರಹಸ್ಥಾನಗಳಿಂದ (ಪರಾಜಯಹೇತುಗಳಿಂದ), ಜಿತಃ=ಪರಾಜಿತನು, ಭವೇತ್=ಆದಾನು. ವಿತಂಡಾಯಾಂ=ವಿತಂಡಾ ಕಥೆಯಲ್ಲಿಯೂ, ನ್ಯಾಯಃ=ನ್ಯಾಯವು, ಜಲ್ಪವತ್=ಜಲ್ಪಕಥೆಯಂತೆಯೇ, ಈರಿತಃ=ಹೇಳಲ್ಪಟ್ಟಿದೆ.

ತಾ ॥ ಜಲ್ಪಕಥೆಯಲ್ಲಿಯೂ ವಿತಂಡಾ ಕಥೆಯಲ್ಲಿಯೂ ವಿರೋಧಾದಿ ನಿಗ್ರಹಸ್ಥಾನಗಳು ಪ್ರಾಪ್ತವಾದರೆ ಪರಾಜಯವುಂಟಾಗುವುದು. ॥ ೨೪ ॥

ಜಲ್ಪ ಮತ್ತು ವಿತಂಡಾ ಕಥೆಗಳಲ್ಲಿ ವಿರೋದಾದಿ ನಿಗ್ರಹಸ್ಥಾನಗಳು ಪ್ರಾಪ್ತವಾದರೆ ಏನು ಮಾಡಬೇಕೆಂಬುದನ್ನು ನಿರೂಪಿಸುತ್ತಾರೆ.—

**ಮೂ ॥ ಸಂವಾದೇ ದಂಡ್ಯತಾ ನ ಸ್ಯಾದ್ವಿತಂಡಾಜಲ್ಪಯೋರಪಿ । ಪರಾಜಿತತಮಾತ್ರಂ ಸ್ಯಾನ್ನಿಂದ್ಯೋ ದಂಡ್ಯೋಽಪಿ ವಾನ್ಯಥಾ ॥ ೨೫ ॥**

ಅ ॥ ವಿತಂಡಾಜಲ್ಪಯೋರಪಿ=ವಿತಂಡಾಜಲ್ಪಕಥೆಗಳಲ್ಲಿಯೂ, ಸಂವಾದೇ=ತಪ್ಪನ್ನೊಪ್ಪಿಕೊಂಡರೆ, ದಂಡ್ಯತಾ=ದಂಡಾರ್ಹತ್ವವು, ನ ಸ್ಯಾತ್=ಆಗಲಿಕ್ಕಿಲ್ಲ. ಪರಾಜಿತತ್ವಮಾತ್ರಂ=ಕೇವಲಪರಾಜಯವು, ಸ್ಯಾತ್=ಆದೀತು. ಅನ್ಯಥಾ=ತಪ್ಪನ್ನೊಪ್ಪಿಕೊಳ್ಳದಿದ್ದರೆ, ನಿಂದ್ಯಃ=ನಿಂದಾರ್ಹನು, ದಂಡ್ಯೋಽಪಿ=ದಂಡಾರ್ಹನೂಕೂಡ, ಸ್ಯಾತ್=ಆದಾನು.

ತಾ ॥ ವಾದದಂತೆ ಪ್ರಕೃತಕಥೆಗಳಲ್ಲಿಯೂ ಪ್ರಾಪ್ತವಾದ ದೋಷವನ್ನು ವಾದಿಪ್ರತಿವಾದಿಗಳು ಅಂಗೀಕಾರಮಾಡಿದರೆ ಪರಾಜಯವೂ ಅದರಿಂದ ಕಥಾವಸಾನವೂ ಆಗುವುದೇ ಹೊರತು ನಿಂದಾರ್ಹನಾಗಲಾರನು. ಪ್ರಾಪ್ತದೋಷಗಳನ್ನಂಗೀಕರಿಸದಿದ್ದಲ್ಲಿ ನಿಂದ್ಯರೂ ದಂಡ್ಯರೂ ಆಗುತ್ತಾರೆ. ॥ ೨೫ ॥

ವಾದಿಪ್ರತಿವಾದಿಗಳ ನಿಗ್ರಹಸ್ಥಾನ ನಿರೂಪಣ ಪ್ರಸಂಗದಲ್ಲಿ ಪ್ರಾಶ್ನಿಕರ ಅಪರಾಧಗಳನ್ನೂ ನಿರೂಪಿಸುತ್ತಾರೆ.—

**ಮೂ ॥ ಅನುವಾದಾದಿರಾಹಿತ್ಯಂ ನೈವ ಜಲ್ಪೇಽಪಿ ದೂಷಣಂ ॥ ೨೬ ॥**

ಅ ॥ ಜಲ್ಪೇಽಪಿ=ಜಲ್ಪಕಥೆಯಲ್ಲೂ ಕೂಡ, ಅನುವಾದಾದಿರಾಹಿತ್ಯಂ, ಅನುವಾದ=ವಾದಿಯ ಮಾತನ್ನು ಪ್ರತಿವಾದಿಗೆ ಪ್ರತಿವಾದಿಯ ಮಾತನ್ನು ವಾದಿಗೆ ಹೇಳೋಣವೇ, ಆದಿ=ಮೊದಲಾದುದರ, ರಾಹಿತ್ಯಂ=ಅಭಾವವು, ದೂಷಣಂ=ದೋಷವು, ನೈವ=ಅಲ್ಲವೇ ಅಲ್ಲ.

ತಾ ॥ ಪ್ರಾಶ್ನಿಕರು ವಾದಿಪ್ರತಿವಾದಿಗಳ ಅರ್ಥಗಳನ್ನು ಅನುವಾದ ಮಾಡಬೇಕು. ತಿಳಿಯದಿದ್ದರೆ ಬೋಧಿಸಬೇಕು. ಇವೆರಡನ್ನು ಮಾಡದಿದ್ದರೂ ಪ್ರಾಶ್ನಿಕರ ಅಪರಾಧವೆಂದು ಕೆಲವರು ಹೇಳುತ್ತಾರೆ. ಆದರೆ ಇದು ದೋಷವಲ್ಲ. ಮೇಲೆ ಪ್ರಾಶ್ನಿಕರ ಕರ್ತವ್ಯವೆಂದು ಹೇಳಿರುವುದನ್ನು ಅವರು ಮಾಡದಿದ್ದಲ್ಲಿ ದೋಷವಾಗುವುದು. ॥ ೨೬ ॥

ವಾದಿಪ್ರತಿವಾದಿಗಳಿಗೆ ಕಥಾರಂಭಾನಂತರದಲ್ಲಿ ಬರುವ ನಿಗ್ರಹಸ್ಥಾನವನ್ನು ನಿರೂಪಿಸಿ ಕಥೆಯ ಮೊದಲೇ ಬರತಕ್ಕ ನಿಗ್ರಹಸ್ಥಾನಗಳನ್ನು ನಿರೂಪಿಸುತ್ತಾರೆ.—

**ಮೂ ॥ ವಿದ್ಯಾಹೀನತ್ವಲಿಂಗೇಽಪಿ ವಾದಿನೋಃ ಸ್ಯಾತ್ಪರಾಜಯಃ ॥ ೨೭ ॥**

ಅ ॥ ವಾದಿನೋಃ=ವಾದಿಪ್ರತಿವಾದಿಗಳಲ್ಲಿ, ವಿದ್ಯಾಹೀನತ್ವಲಿಂಗೇ=ವಿದ್ಯಾನ್ಯೂನತಾಜ್ಞಾಪಕವಾದ ಗುರುತು (ಇದ್ದರೆ), ಪರಾಜಯಃ=ಪರಾಜಯವು, ಸ್ಯಾತ್=ಆಗುತ್ತದೆ.

ತಾ ॥ ಇಬ್ಬರಲ್ಲಿ ಒಬ್ಬನು ಮತ್ತೊಬ್ಬನಿಂದ ವಿದ್ಯೆಯಲ್ಲಿ ಕಡಿಮೆಯಾದವನು ಎಂದು ಪ್ರಾರಂಭದಲ್ಲೇ ತಿಳಿದರೆ ಆಗಲೇ ಪರಾಜಯವು ಆಗುವುದು. ಕಥೆಗೆ ಅವಕಾಶವೇ ಇರುವುದಿಲ್ಲ.॥೨೭॥

ನಿಗ್ರಹಸ್ಥಾನಗಳು ಹಿಂದೆ ಹೇಳಿರುವುದಕ್ಕಿಂತ ಹೆಚ್ಚಿಗೆ ಇರುವಾಗ ಅವುಗಳಿಂದಲೇ ಪರಾಜಯವೆಂದು ಹೇಗೆ ಕೂಡುತ್ತದೆಯೆಂಬೀ ಆಶಂಕೆಯನ್ನು ಪರಿಹರಿಸುತ್ತಾರೆ.

**ಮೂ ॥ ತದಭಾವಾನ್ನೈವ ಷಟ್ಕಾದನ್ಯೋ ನಿಗ್ರಹ ಇಷ್ಯತೇ । ಅಂತರ್ಭಾವಾದಿಹಾನ್ಯೇಷಾಂ ನಿಗ್ರಹಾಣಾಮಿತಿ ಸ್ಮ ಹ ॥ ೨೮ ॥**

ಅ ॥ ಅನ್ಯೇಷಾಂ=ಇಲ್ಲಿ ಸ್ಪಷ್ಟವಾಗಿ ಹೇಳದ ಮತ್ತು ಇತರರಿಂದ ಪ್ರತ್ಯೇಕ ಪ್ರತ್ಯೇಕವಾಗಿ ನಿಗ್ರಹಸ್ಥಾನಗಳೆಂದು ಅಂಗೀಕರಿಸಲ್ಪಟ್ಟ, ನಿಗ್ರಹಾಣಾಂ=ನಿಗ್ರಹಸ್ಥಾನಗಳಿಗೆ, ಇಹ=ಇಲ್ಲಿ ಹೇಳಿದ ನಿಗ್ರಹಸ್ಥಾನಗಳಲ್ಲಿ, ಅಂತರ್ಭಾವಾತ್=ಅಂತರ್ಭಾವವಿರುವುದರಿಂದ, ತದಭಾ-

ವಾತ್=ಕೆಲವಕ್ಕೆ ನಿಗ್ರಹಸ್ಥಾನತ್ವವೂ ಕೊಡದಿರುವುದರಿಂದ, ಷಟ್ಕಾತ್=ಆರು ನಿಗ್ರಹಸ್ಥಾನಗಳಿಂದ, ಅನ್ಯಃ=ಇತರವಾದ, ನಿಗ್ರಹಃ=ನಿಗ್ರಹಸ್ಥಾನವು, ನೈವ ಇಷ್ಯತೇ=ಅಂಗೀಕರಿಸಲ್ಪಡುವುದಿಲ್ಲ. ಇತಿ=ಈ ವಿಷಯವು, ಸ್ಮ ಹ=ಶಾಸ್ತ್ರಗಳಲ್ಲಿ ಪ್ರಸಿದ್ಧವಾದುದು.

ತಾ ॥ ಪರನು ಎಲ್ಲಾ ನಿಗ್ರಹಸ್ಥಾನಗಳನ್ನು ಇಲ್ಲಿ ಹೇಳಲಿಲ್ಲವೆಂದು ಶಂಕಿಸಲು ಅವುಗಳ ಮಧ್ಯೇ ಕೆಲವು ದೋಷಗಳೇ (ನಿಗ್ರಹಸ್ಥಾನಗಳೇ) ಅಲ್ಲವೆಂದೂ ಮಿಕ್ಕವು ತಾವು ಹೇಳಿದ ಆರು ನಿಗ್ರಹಸ್ಥಾನಗಳಲ್ಲೇ ಅಂತರ್ಭೂತವಾಗಿದೆಯೆಂದೂ ಅಂತೂ ನಿಗ್ರಹಸ್ಥಾನಗಳು ಆರೇ ಇರತಕ್ಕವುಗಳೆಂದೂ ನಿರೂಪಿಸಿದರು. ಈ ವಿಷಯವು ಪ್ರಮಾಣಲಕ್ಷಣದಲ್ಲಿ ವಿವರಿಸಲ್ಪಟ್ಟಿದೆ. ॥ ೨೮ ॥

ಕಥೆಯಪೂರ್ವದಲ್ಲಿ ವಾದಿಪ್ರತಿವಾದಿಗಳ ವಿದ್ಯೆಯ ಹೆಚ್ಚುಕಡಿಮೆಗಳನ್ನು ಗೊತ್ತುಮಾಡಲಾಗುವುದಿಲ್ಲ. ಆದುದರಿಂದ ಪೂರ್ವದಲ್ಲಿಯೇ ಪರಾಜಯವುಂಟಾಗುವುದು ಅಸಂಗತವು ಎಂಬೀ ಆಶಂಕೆಯನ್ನು ಪರಿಹರಿಸುತ್ತಾರೆ.—

**ಮೂ ॥ ವಿದ್ಯಾಪರೀಕ್ಷಾಪೂರ್ವೈವ ವೃತ್ತಿರ್ಜಲ್ಪವಿತಂಡಯೋಃ ॥ ೨೯ ॥**

ಅ ॥ ಜಲ್ಪವಿತಂಡಯೋಃ=ಜಲ್ಪವಿತಂಡಕಥೆಗಳಲ್ಲಿ, ವೃತ್ತಿಃ=ವಾದಿಪ್ರತಿವಾದಿಗಳ ಪ್ರವೃತ್ತಿಯು, ವಿದ್ಯಾಪರೀಕ್ಷಾಪೂರ್ವೈವ=ಪೂರ್ವದಲ್ಲಿ ವಿದ್ಯೆಯನ್ನು ಪರೀಕ್ಷಿಸಿಯೇ ಆಗತಕ್ಕದು.

ತಾ ॥ ಜಲ್ಪ ಮತ್ತು ವಿತಂಡಾಕಥೆಗಳಲ್ಲಿ ವಾದಿಪ್ರತಿವಾದಿಗಳನ್ನು ಕಥೆಯಲ್ಲಿ ಪ್ರವೃತ್ತಿಗೊಳಿಸಬೇಕಾದರೆ ಪ್ರಾಶ್ನಿಕರು ಅವರ ವಿದ್ಯೆಯನ್ನು ವಾದಕಥೆಯಿಂದ ಮೊದಲು ಪರೀಕ್ಷಿಸಿಯೇ ಪ್ರವೃತ್ತಿಗೊಳಿಸಬೇಕು. ಆದುದರಿಂದ ಹಿಂದೆ ಹೇಳಿದುದು ಯುಕ್ತವು. ॥ ೨೯ ॥

ವಿರೋಧಾದಿ ನಿಗ್ರಹಸ್ಥಾನಗಳನ್ನು ಹಿಂದೆ ಹೇಳಿದ್ದಾರೆ. ಅದರಲ್ಲಿ ವಿಶೇಷವನ್ನು ಈಗ ಹೇಳುತ್ತಾರೆ.

**ಮೂ ॥ ಸ್ಖಲಿತತ್ವಾದಿಮಾತ್ರೇಣ ನ ತತ್ರಾಪಿ ಪರಾಜಯಃ ॥ ೩೦ ॥**

ಅ ॥ ತತ್ರ=ಜಲ್ಪವಿತಂಡಾಕಥೆಗಳಲ್ಲಿ, ಸ್ಖಲಿತತ್ವಾದಿಮಾತ್ರೇಣ=ಕೇವಲ ಸ್ಖಲನದಿಂದ ಉಂಟಾಗುವ ವಿರೋಧಾದಿಗಳಿಂದ, ಪರಾಜಯಃ=ಅಪಜಯವು, ನ=ಇಲ್ಲ.

ತಾ ॥ ಜಲ್ಪವಿತಂಡಗಳಲ್ಲಿ ಕಿವಿಕೇಳದಿರೋಣ, ಅಪಸ್ಮಾರಾದಿ ರೋಗಗಳು ಇವುಗಳಿಂದ ನಿಗ್ರಹಸ್ಥಾನವುಂಟಾದರೆ ಅವುಗಳು ಪರಾಜಯಕ್ಕೆ ಕಾರಣಗಳಾಗಲಾರವು. ॥ ೩೦ ॥

**ಮೂ ॥ ವಾದಜಲ್ಪ ವಿತಂಡಾನಾಂ ಇತಿ ಶುದ್ಧಂ ಸ್ವಲಕ್ಷಣಂ ॥ ೩೧ ॥**

ಅ ॥ ವಾದಜಲ್ಪವಿತಂಡಾನಾಂ=ವಾದಕಥೆ, ಜಲ್ಪಕಥೆ, ವಿತಂಡಾಕಥೆ, ಎಂಬೀ ತ್ರಿವಿಧಕಥೆಗಳಿಗೆ ಇತಿ=ಈವರೆಗೆ ಹೇಳಿದಂತಹದ್ದೇ, ಸ್ವಲಕ್ಷಣಂ=ನಿಜವಾದ ಲಕ್ಷಣವು. (ಆದುದರಿಂದಲೇ) ಶುದ್ಧಂ=ದೋಷಶೂನ್ಯವು. ॥ ೩೧ ॥

**ಮೂ ॥ ಆನಂದತೀರ್ಥಮುನಿನಾ ಬ್ರಹ್ಮತರ್ಕಾನುಸಾರತಃ । ಕಥಾಲಕ್ಷಣಮಿತ್ಯುಕ್ತಂ ಪ್ರೀತ್ಯರ್ಥಂ ಶಾರ್ಙ್ಗಧನ್ವನಃ ॥ ೩೨ ॥**

ಅ || ಶಾರ್ಙ್ಗಧನ್ವನಃ=ಶಾರ್ಙ್ಗ ವೆಂಬ ಧನುಸ್ಸುಳ್ಳ ಶ್ರೀಪರಮಾತ್ಮನ, ಪ್ರೀತ್ಯರ್ಥಂ=ಸಂತೋಷಕ್ಕಾಗಿ, ಆನಂದತೀರ್ಥಮುನಿನಾ=ಶ್ರೀಮದಾನಂದತೀರ್ಥಾಚಾರ್ಯ (ಶ್ರೀಮನ್ಮಧ್ವಾಚಾರ್ಯ)ರಿಂದ, ಬ್ರಹ್ಮತರ್ಕಾನುಸಾರತಃ=ಬ್ರಹ್ಮತರ್ಕವನ್ನನುಸರಿಸಿ, ಇತಿ=ಈ ಪ್ರಕಾರವಾಗಿ, ಕಥಾಲಕ್ಷಣಂ=ತ್ರಿವಿಧ ಕಥೆಗಳ ಲಕ್ಷಣವು, ಉಕ್ತಂ=ಹೇಳಲ್ಪಟ್ಟಿತು.

ತಾ || ಈ ಕಥಾಲಕ್ಷಣವನ್ನು ಪರಮಾಪ್ತರಾದ ಶ್ರೀಮದಾಚಾರ್ಯರು ವೇದವ್ಯಾಸರಿಂದ ರಚಿತವಾದ ಬ್ರಹ್ಮತರ್ಕರೂಪ ಪ್ರಮಾಣವನ್ನನುಸರಿಸಿ ಹೇಳಿದಕಾರಣ ಇದು ಆಪ್ತೋಕ್ತವೂ ಪ್ರಾಮಾಣಿಕವೂ ಆಗಿರುತ್ತದೆ. ॥ ೩೨ ॥

**ಮೂ ॥ ಸದೋದಿತಾಮಿತಜ್ಞಾನಪೂರವಾರಿತಹೃತ್ತಮಾಃ। ನರಸಿಂಹಃ ಪ್ರಿಯತಮಃ ಪ್ರೀಯತಾಂ ಪುರುಷೋತ್ತಮಃ ॥ ೩೩ ॥**

**ಇತಿ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯ ವಿರಚಿತಂ**
**ಕಥಾಲಕ್ಷಣಂ ಸಂಪೂರ್ಣಂ.**

ಅ || ಸದೋದಿತಾಮಿತಜ್ಞಾನಪೂರವಾರಿತಹೃತ್ತಮಾಃ, ಸದೋದಿತ=ಅನಾದಿಯಿಂದ ಆವಿರ್ಭೂತವಾದ (ಅಂದರೆ ಪ್ರಳಯಕಾಲದಲ್ಲಿಯೂ ತಿರೋಹಿತವಲ್ಲದ), ಅಮಿತ=ಆಲೋಚಿಸುವಾಗ ಸಮಸ್ತವನ್ನೂ ವಿಷಯೀಕರಿಸುವ, ಜ್ಞಾನಪೂರ=ಜ್ಞಾನಪ್ರವಾಹದಿಂದ, ವಾರಿತ=ನಾಶಗೊಳಿಸಿದ, ಹೃತ್ತಮಾಃ=ಅಜ್ಞಾನವುಳ್ಳ, ಪ್ರಿಯತಮಃ=ಸ್ವಭಾವತಃ ಪ್ರೀತಿಪಾತ್ರನಾದ ಪುರುಷೋತ್ತಮಃ=ಕ್ಷರಾಕ್ಷರ ಪುರುಷರಲ್ಲಿ ಶ್ರೇಷ್ಠನಾದ, ನರಸಿಂಹಃ=ಶ್ರೀನರಸಿಂಹ ಮೂರ್ತಿಯು, ಪ್ರೀಯತಾಂ=ಸಂತುಷ್ಟನಾಗಲಿ.

ತಾ || ಸ್ವಾಭಾವಿಕಭಕ್ತಿಭರಿತರಾದ ಶ್ರೀಮದಾಚಾರ್ಯರು ಋಜುಜ್ಞಾನವನ್ನು ತನಗೆ ದಯಪಾಲಿಸಿದುದರಿಂದ ಪರಮೋಪಕಾರಿಯೂ ಅಂತ್ಯಂತ ಪ್ರೀತಿಪಾತ್ರನೂ ಆದ ಶ್ರೀನರಸಿಂಹನನ್ನು ಸ್ತುತಿಸಿ ಮಂಗಲವನ್ನೆಸಗಿ ಗ್ರಂಥವನ್ನು ಸಮಾಪ್ತಿಗೊಳಿಸಿದರು.

**ಪದ್ಮಾಪದ್ಮಜವಂದ್ಯಾಯ ಪದ್ಮಪತ್ರನಿಭೇಕ್ಷಣ ।**
**ಪದ್ಮನಾಭಾಯ ರಾಮಾಯ ನಮಃ ಸತ್ಪದ್ಮಮಾಲಿನೇ ॥**

**ಇತಿ ಕಥಾಲಕ್ಷಣದ ಕನ್ನಡಾರ್ಥವು ಮುಗಿದುದು.**

**ಶ್ರೀ ಕೃಷ್ಣಾರ್ಪಣಮಸ್ತು**



# ಉಪಾಧಿಖಂಡನದ ಮುನ್ನುಡಿ.

॥ ಶ್ರೀ ಮಧ್ವವಲ್ಲಭವೇದವ್ಯಾಸಾಯ ನಮಃ ॥

ಉಪಾಧಿಖಂಡನದಲ್ಲಿ ನಿರೂಪಿಸಿರುವ ಕೆಲವು ಮುಖ್ಯ ವಿಷಯಗಳನ್ನು ವಾಚಕ ಮಹಾಶಯರಿಗೆ ಸುಬೋಧವಾಗುವಂತೆ ಸಂವಾದರೂಪದಿಂದ ಇಲ್ಲಿ ಸೂಚಿಸುತ್ತದೆ.

ಭೇದವಾದಿಯು (ದ್ವೈತಿ) ತನ್ನ ಮನೆಯಲ್ಲಿ ಒಂದು ಪುಸ್ತಕವನ್ನಿಟ್ಟುಕೊಂಡು ಓದುತ್ತಿರುವನು. ಅಲ್ಲಿಗೆ ಐಕ್ಯವಾದಿಯು (ಅದ್ವೈತಿ) ಬಂದು ಸ್ವಲ್ಪ ಹೊತ್ತು ನಿಂತುಕೊಳ್ಳುವನು.

**ಐಕ್ಯವಾದಿ-** ಸ್ವಾಮಿಾ! ನೀವು ಓದುತ್ತಿರುವ ಪುಸ್ತಕವು ಯಾವುದು? ಏಕಾಗ್ರಚಿತ್ತದಿಂದ ಓದುತ್ತಿರುವಿರಿ. ಅದರಲ್ಲಿ ಏನು ಅಷ್ಟು ಸ್ವಾರಸ್ಯವು? ಅದು ಏನು ಕಾದಂಬರಿಯೋ ಅಥವಾ ನವೀನ ನಾಟಕವೇ? ನಾನು ಬಂದು ಐದು ನಿಮಿಷವಾಯಿತು. ತಾವು ತಲೆ ಎತ್ತಿ ನೋಡಲಿಲ್ಲ.

**ಭೇದವಾದಿ-** ಸ್ವಾಮಿಾ! ತಾವು ಬಂದು ಐದು ನಿಮಿಷವಾಯಿತೇ? ಕ್ಷಮಿಸಬೇಕು. ಕೂತುಕೊಳ್ಳಿರಿ. ಇದು ನಾಟಕವೂ ಅಲ್ಲ. ಕಾದಂಬರಿಯೂ ಅಲ್ಲ. ಇದು ಕಬ್ಬಿಣದ ಕಳ್ಳೆಯಂತೆ ಇರುವುದು. ಕಠಿಣವಾದ ಗ್ರಂಥವು. ನಾಲ್ಕೆಂಟಾವರ್ತಿ ಓದಿದರೇನೇ ಅರ್ಥವಾಗುವುದು. ಕಬ್ಬಿನಂತೆ ಚೆನ್ನಾಗಿ ಸವಿದು ತಿನ್ನುವವರಿಗೆ ಅತಿ ರುಚಿಕರವು. ಆದುದರಿಂದಲೇ ನನ್ನ ಮನಸ್ಸು ಈ ಗ್ರಂಥದಲ್ಲಿ ಲೀನವಾಗಿತ್ತು. ತಮ್ಮ ಆಗಮನವು ನನ್ನ ತಿಳುವಳಿಕೆಗೆ ಬರಲಿಲ್ಲ.

**ಐಕ್ಯ-** ಈ ಗ್ರಂಥಕ್ಕೆ ಇಷ್ಟು ಮಹಿಮೆ ಇರುವುದೇ ಇದರ ಹೆಸರೇನು?

**ಭೇದ-** ಇದಕ್ಕೆ ಉಪಾಧಿಖಂಡನವೆಂದು ಹೆಸರು. ನಮ್ಮ ಮೂಲ ಗುರುಗಳಾದ ಶ್ರೀ ಮಧ್ವಾಚಾರ್ಯರು ರಚಿಸಿದ ಪ್ರಕರಣಗಳಲ್ಲಿ ಇದೊಂದು.

**ಐಕ್ಯ-** ಉಪಾಧಿಖಂಡನವೇ? ನಮ್ಮ ಶ್ರೀ ಶಂಕರಾಚಾರ್ಯರ ಉಪಾಧಿವಾದಕ್ಕೆ ಇದು ಖಂಡನವೇನು?

**ಭೇದ-** ಹೌದು. ಶ್ರೀ ಶಂಕರಾಚಾರ್ಯರ ಉಪಾಧಿವಾದವನ್ನೂ ಮತ್ತು ಭಾಸ್ಕರಾಚಾರ್ಯರ ಉಪಾಧಿವಾದವನ್ನೂ ಈ ಪುಟ್ಟ ಗ್ರಂಥದಲ್ಲಿ ಖಂಡಿಸಿರುವರು.

**ಐಕ್ಯ-** ಎಲ್ಲಿ ಸ್ವಲ್ಪ ಓದಿ ಕೇಳೋಣ.

**ಭೇದ-** "ನಾರಾಯಣೋಽಗಣ್ಯಗುಣನಿತ್ಯೈಕನಿಲಯಾಕೃತಿಃ । ಅಶೇಷ ದೋಷ ರಹಿತಃ ಪ್ರೀಯತಾಂ ಕಮಲಾಲಯಃ" ॥

**ಐಕ್ಯ-** ಇದು ಏನು ಸ್ವಾಮಿಾ ಮಂಗಳ ಶ್ಲೋಕದ ಪೂರ್ವಾರ್ಧದಲ್ಲೇ ಇಷ್ಟು ಅಪದ್ಧಗಳಿವೆ. ಮುಂದೆ ಗ್ರಂಥದಲ್ಲಿ ಇನ್ನು ಎಷ್ಟಿರಬಹುದೋ?

**ಭೇದ-** ಮಂಗಳ ಶ್ಲೋಕದಲ್ಲಿ ಏನು ಅಪದ್ಧ ಕಂಡಿರಿ?

**ಐಕ್ಯ-** ನಾರಾಯಣನೆಂದರೆ ಪರಬ್ರಹ್ಮನಲ್ಲವೇ? ಆ ಪರಬ್ರಹ್ಮನು ನಿರ್ಗುಣನೆಂದು ವೇದಗಳು ಸಾರುತ್ತಿವೆ. ಈ ಮಂಗಳಶ್ಲೋಕದಲ್ಲಿ ಅವನು ಅಗಣ್ಯಗುಣನೆಂದು ವರ್ಣಿಸಿರುವರು. ಇದು ಒಂದನೆಯ ಅಪದ್ಧವು. ಅಥವಾ ನಾರಾಯಣನೆಂದರೆ ಸಗುಣ ಬ್ರಹ್ಮನೆಂದು ಹೇಳೋಣವೇ.

ನಾರಾಯಣನು ಈ ಪಕ್ಷದಲ್ಲಿ ಅಗಣ್ಯಗುಣನೆಂದರೆ ದೋಷಬರುವುದಿಲ್ಲ. ಸಗುಣ ಬ್ರಹ್ಮನ ಗುಣಗಳು ಶಾಶ್ವತಗಳಲ್ಲ. ಆದುದರಿಂದ 'ನಿತ್ಯ' ಶಬ್ದವನ್ನು ಉಪಯೋಗಿಸುವುದರಿಂದ ಎರಡನೆಯ ಅಪಸಿದ್ಧವು ಪ್ರಾಪ್ತವಾಯಿತು. ಮತ್ತು 'ಏಕ' ಶಬ್ದವನ್ನು ಒಂದು ಉಪಯೋಗಿಸಿರುವರು. ನಾರಾಯಣನು ನಿತ್ಯವಾದ ಅಗಣ್ಯಗುಣಗಳುಳ್ಳವನಾದರೆ ಜೀವನ ಪಾಡೇನು? ಜೀವ ಬ್ರಹ್ಮರು ಐಕ್ಯವಂತರೆಂದು ಶಾಸ್ತ್ರವು ಉದ್ಘೋಷಿಸುತ್ತಿರುವುದು. 'ಏಕ' ಶಬ್ದಪ್ರಯೋಗದಿಂದ ಪರಬ್ರಹ್ಮನು ಮಾತ್ರ ಅಗಣ್ಯಗುಣನೆಂದಾದರೆ ಜೀವನು ಅಗಣ್ಯಗುಣನಲ್ಲವೆಂದು ಏರ್ಪಡುವುದು. ಪರಸ್ಪರ ಸ್ವಾಭಾವಿಕವಾದ ವಿರುದ್ಧಧರ್ಮಗಳುಳ್ಳವರೆಂದಾಗುವುದು. ಜೀವನು ಅಲ್ಪಗುಣನು. ಪರ ಬ್ರಹ್ಮನು ಮಾತ್ರ ಅಗಣ್ಯಗುಣನು ಅಂದರೆ ಇವರಿಗೆ ಐಕ್ಯಕೂಡುವುದು ಹೇಗೆ? ಬೆಂಕಿ ನೀರಿನಂತೆ ಇವರಿಗೆ ಭೇದವು ನಿತ್ಯವಾಗಬೇಕಾಗುವುದು. ಇದು ಶಾಸ್ತ್ರಾರ್ಥಕ್ಕೆ ವಿರೋಧವಲ್ಲವೇ? ಇದು ಮೂರನೆಯ ಅಪಸಿದ್ಧವು. ನಿಮ್ಮ ಮತವಾದರೂ ಎಂತಹದು ಎಂದು ತಿಳಿಸುವಿರಾ?

**ಭೇದ–** ನೀವು ಮೂರು ಪೂರ್ವಪಕ್ಷಗಳನ್ನು ಮಾಡಿರುವಿರಿ. ಇವುಗಳಲ್ಲಿ ಒಂದನೆಯದನ್ನು ಕರ್ಮನಿರ್ಣಯ ಗ್ರಂಥದಲ್ಲಿ ನಿರಾಕರಣೆ ಮಾಡಿರುವರು. ಎರಡನೆಯದನ್ನು ವಿಷ್ಣುತತ್ತ್ವನಿರ್ಣಯಾದಿ ಗ್ರಂಥಗಳಲ್ಲಿ ನಿರಾಕರಣೆ ಮಾಡಿರುವರು. ಮೂರನೆಯದನ್ನು ಈ ಗ್ರಂಥದಲ್ಲಿ ನಿರಾಕರಣೆ ಮಾಡಿರುವರು. ನಮ್ಮ ಮತದಲ್ಲಿ ಜೀವಬ್ರಹ್ಮರಿಗೆ ಅತ್ಯಂತ ಪಾರಮಾರ್ಥಿಕವಾದ ಭೇದವಿರುವುದು. ಇದು ನಿತ್ಯವಾದುದು. ಜೀವನಿಗೆ ಅನಾದಿಯಾದ ಅವಿದ್ಯೆ (ತಪ್ಪು ಜ್ಞಾನ), ಕಾಮ, (ಇಚ್ಛೆ) ಕರ್ಮ ಇವುಗಳ ಸಂಬಂಧವಿರುವುದು. ತನ್ಮೂಲಕವಾಗಿ ಜೀವನಿಗೆ ದುಃಖಾದ್ಯನರ್ಥಗಳು ಉಂಟಾಗುವುವು. ಇವುಗಳು ನಾಶವಾಗಬೇಕಾದರೆ ಬಂಧವಿಮೋಚನೆ ಆಗಬೇಕು. ಆ ವಿಮೋಚನೆಗೆ ಪರಮಾತ್ಮನ ಮುಖ್ಯ ಪ್ರಸಾದವೇ ಕಾರಣವಾಗಿರುವುದು. ಪ್ರಸಾದ ಲಭಿಸಬೇಕಾದರೆ ಪರಮಾತ್ಮನ ಅಪರೋಕ್ಷದರ್ಶನವು ಅಗತ್ಯವು. ಅಪರೋಕ್ಷಜ್ಞಾನವಾಗಬೇಕಾದರೆ ಪರಮಾತ್ಮನ ಸ್ವರೂಪವನ್ನು ಯಥಾರ್ಥವಾಗಿ ತಿಳಿಯಬೇಕು. ಪರಮಾತ್ಮನ ಸ್ವರೂಪವನ್ನು ತಿಳಿಸುವುದಕ್ಕಾಗಿಯೇ ವೇದಗಳು ಬ್ರಹ್ಮಮೀಮಾಂಸಾ ಶಾಸ್ತ್ರವು, ಅವನು ನಿಖಿಲಗುಣಪೂರ್ಣನೆಂದು ನಿಶ್ಶೇಷ ದೋಷವರ್ಜಿತನೆಂದು ಕೊಂಡಾಡುತ್ತಿರುವುವು.

**ಐಕ್ಯ–** ಇದೇ ಶಾಸ್ತ್ರಾರ್ಥವು! ಚೆನ್ನಾಗಾಯಿತು.

"ಸರ್ವಂ ಖಲ್ವಿದಂ ಬ್ರಹ್ಮ" "ಸೋಹಮಸ್ಮಿ" "ಏಕಮೇವಾದ್ವಿತೀಯಂ"

ಇತ್ಯಾದಿ ಶ್ರುತಿಗಳು ಪರಬ್ರಹ್ಮನೊಬ್ಬನೇ ಸತ್ಯನು ಜೀವಬ್ರಹ್ಮರಿಗೆ ಐಕ್ಯವು, ಜಡಪ್ರಪಂಚವು ಮಿಥ್ಯಾಭೂತವಾದುದು ಎಂದು ಉಪದೇಶಿಸುವುದಿಲ್ಲವೇ. ನಿಜವಾದ ಶಾಸ್ತ್ರಾರ್ಥವನ್ನು ಹೇಳುವೆನು, ಕೇಳಿ. ಸತ್ಯವಾಗಿಯೂ ಜೀವಬ್ರಹ್ಮರಿಗೆ ಸ್ವರೂಪೈಕ್ಯವಿದ್ದರೂ, ಜೀವನಿಗೆ ಅವಿದ್ಯೆ ಮೂಲಕವಾಗಿ ಐಕ್ಯವು ತಿಳಿಯದೆ ಸಂಸಾರದಲ್ಲಿ ಬಿದ್ದು ದುಃಖಿಸುತ್ತಿರುವನು. "ತತ್ತ್ವಮಸಿ" "ಅಹಂ ಬ್ರಹ್ಮಾಸ್ಮಿ" ಇತ್ಯಾದಿ ಶ್ರುತಿಗಳ ಉಪದೇಶವನ್ನು ತೆಗೆದುಕೊಂಡು ಶ್ರವಣಮನನಾದಿಗಳಿಂದ ಐಕ್ಯವನ್ನು ಸಾಕ್ಷಾತ್ಕಾರಮಾಡಿಕೊಂಡರೆ ಅಜ್ಞಾನವು, ತನ್ನಿಮಿತ್ತವಾದ ಸಂಸಾರವು ತಕ್ಷಣವೇ ನಾಶವಾಗಿ ಬ್ರಹ್ಮಭಾವವನ್ನು ಹೊಂದುವನು. ಭೇದವು ಅಜ್ಞಾನದಿಂದ ಹುಟ್ಟಿದ ಕಾರಣ ಜ್ಞಾನೋದಯದಿಂದ ನಾಶವಾಗುವುದು. ಅಜ್ಞಾನವು ಎರಡುವಿಧವಾಗಿ ಸಂಸಾರಕ್ಕೆ ಕಾರಣವಾಗುವುದು. ಒಂದನೆಯದು ಐಕ್ಯರಾದ ಜೀವಬ್ರಹ್ಮರಿಗೆ ಭೇದವು ಕಲ್ಪಿಸುವುದು. ಇದು ಅಜ್ಞಾನಾಕಾರವಾದ ಅಥವಾ ಅಜ್ಞಾನದಿಂದ ಹುಟ್ಟಿದ ಉಪಾಧಿಯ ಕಾರ್ಯವು. ಎರಡನೆಯದು ಅಸತ್ಯವಾದ ಜಡ ಪ್ರಪಂಚವನ್ನು ಕಲ್ಪಿಸುವುದು. ಶುಕ್ತಿಯಲ್ಲಿ ಬೆಳ್ಳಿಯು ಕಾಣಿಸು

ವಂತೆ ಪರಮಾತ್ಮನಲ್ಲಿ ಜಡಪ್ರಪಂಚವು ಕಾಣಿಸುತ್ತಿರುವುದು. ಇದಕ್ಕೂ ಅಜ್ಞಾನವೇ ಕಾರಣ ವಾದರೂ ಈ ಅಜ್ಞಾನಕ್ಕೆ ಮಾಯೆಯೆಂದು ಹೆಸರಿರುವುದು. ಜಡರಾಶಿಯು ಅಸತ್ಯವು, ಅಜ್ಞಾನದಿಂದ ನಿರ್ಮಿತವಾದುದು ಎಂದು ಹೇಳುವ ಶಾಸ್ತ್ರವು ಮಾಯಾವಾದವೆನ್ನಿಸುವುದು. ಜೀವರಾಶಿಯು ನಿತ್ಯವು ಆದರೆ ಜೀವರಲ್ಲಿ ಪರಸ್ಪರ ತೋರುವ ಭೇದವು ಪಾರಮಾರ್ಥಿಕವಲ್ಲ, ಜೀವ ಬ್ರಹ್ಮರಲ್ಲಿ ತೋರುವ ಭೇದವೂ ಪಾರಮಾರ್ಥಿಕವಲ್ಲ. ಸತ್ಯವಾಗಿಯೂ ಇರುವ ಐಕ್ಯವು ತಿಳಿಯದೆ ಇರುವುದಕ್ಕೆ ಕಾರಣ ಉಪಾಧಿಯು, ಎಂದು ಬೋಧಿಸುವ ಶಾಸ್ತ್ರಕ್ಕೆ ಉಪಾಧಿವಾದವೆಂದು ಹೆಸರು. ಮಾಯೆಯಿಂದ ಜಡಪ್ರಪಂಚವು ಉಪಾಧಿಯಿಂದ ಚೇತನಪ್ರಪಂಚವು ಹುಟ್ಟುವುವು. ಅಜ್ಞಾನವೇ ಸಂಸಾರಕ್ಕೂ ಜೀವನ ದುಃಖಾದಿಗಳಿಗೂ ಕಾರಣವು. ಅಜ್ಞಾನನಾಶವೇ ಮುಕ್ತಿಯು. ಜೀವಬ್ರಹ್ಮೈಕ್ಯಜ್ಞಾನವು ಜಗನ್ಮಿಥ್ಯಾತ್ವಜ್ಞಾನವು ಜ್ಞಾನನಾಶಕ್ಕೆ ಹೇತುಗಳಾಗಿವೆ.

**ಭೇದ-** ನಿಮ್ಮ ಮಾಯಾವಾದವನ್ನು ಖಂಡಿಸಿ ಶ್ರೀಮದಾಚಾರ್ಯರು ಬೇರೆ ಒಂದು ಪ್ರಕರಣವನ್ನು ಬರೆದಿರುವರು. ಅದಿಂತಿರಲಿ. ನಿಮ್ಮ ಉಪಾಧಿವಾದವನ್ನು ಸ್ವಲ್ಪ ವಿಚಾರಮಾಡಬಹುದೇ?

**ಐಕ್ಯ-** ಏಕೆ ಆಗಬಾರದು? ನಿಮ್ಮ ಆಕ್ಷೇಪವೇನು? ಅದಕ್ಕೆ ಈಗಲೇ ಸಮಾಧಾನವನ್ನು ಹೇಳುವೆನು.

**ಭೇದ-** ನೀವು ಶಾಸ್ತ್ರಕ್ಕೆ ವಿಷಯ, ಅಧಿಕಾರಿ, ಪ್ರಯೋಜನ, ಸಂಬಂಧ ಇವುಗಳು ಇರಬೇಕೆಂದು ಒಪ್ಪುವಿರಲ್ಲವೇ?

**ಐಕ್ಯ-** ಅಡ್ಡಿಯೇನು? ಅನುಬಂಧಗಳಿಲ್ಲದ ಶಾಸ್ತ್ರವು ಒಂದುಂಟೇ? ಉನ್ಮತ್ತ ಪ್ರಲಾಪಕ್ಕೆ ಅನುಬಂಧಗಳು ಬೇಕೆಂದಿಲ್ಲ. ವೇದಾಂತ ಶಾಸ್ತ್ರಕ್ಕೆ ಅನುಬಂಧಗಳು ಅತ್ಯಾವಶ್ಯಕಗಳು.

**ಭೇದ-** ಸಂತೋಷ. ನಾವಿಬ್ಬರೂ ಒಪ್ಪುವ ವಿಷಯವು ಒಂದು ನಿರ್ಧಾರಮಾಡಿಕೊಂಡು ಅನಂತರ ಮುಂದಿನ ಚರ್ಚೆಯನ್ನು ಸಾಗಿಸುವುದೇ ಲೇಸು. (1) ಬ್ರಹ್ಮ ಒಬ್ಬನೇ ಸತ್ಯ (2) ಜೀವ ಬ್ರಹ್ಮರಿಗೆ ಐಕ್ಯ (3) ಜೀವ ಬ್ರಹ್ಮರಿಗೆ ಇರುವುದಾಗಿ ತೋರುವ ಭೇದವು ಅಜ್ಞಾನ ಕಲ್ಪಿತವು (4) ಅಜ್ಞಾನ ನಾಶವೇ ಮೋಕ್ಷವು. ಇದಲ್ಲವೇ ನಿಮ್ಮ ಮತವು? ಇದೇ ಶಾಸ್ತ್ರಾರ್ಥವಾದರೆ ಶಾಸ್ತ್ರಕ್ಕೆ ಅನುಬಂಧ ಚತುಷ್ಟಯವು ಕೂಡುವುದಿಲ್ಲವಲ್ಲ?

**ಐಕ್ಯ-** ಅದು ಏಕೆ ಅನುಬಂಧಗಳು ಕೂಡುವುದಿಲ್ಲ?

**ಭೇದ-** ಅದ್ವೈತವಾದಕ್ಕೆ ಅಜ್ಞಾನವೇ ಮೂಲಾಧಾರವು. ಅಜ್ಞಾನವೆಂಬುವ ಅಡಿಗಟ್ಟಿನ ಮೇಲೆ ಮಾಯೋಪಾಧಿಗಳೆಂಬ ಎರಡು ಸ್ತಂಭಗಳನ್ನು ನಿರ್ಮಿಸಿ ಅವುಗಳ ಮೇಲೆ ಮನೋಹರವಾದ ಅದ್ವೈತವೆಂಬ ಹರ್ಮ್ಯವನ್ನು ಕಟ್ಟಿರುವಿರಿ. ಅಡಿಗಟ್ಟು, ಸ್ತಂಭಗಳು ಕರಗಿಹೋದರೆ ಉಪ್ಪರಿಗೆಯ ಗತಿ ಏನು? ಅದು ನಿರಾಲಂಬವಾಗಿ ಆಕಾಶದಲ್ಲೇ ನಿಲ್ಲಲು ಸಾಧ್ಯವೇ?

**ಐಕ್ಯ-** ಅಜ್ಞಾನವೇಕೆ ಅಲಭ್ಯವಾಗುವುದು?

**ಭೇದ-** ಅಜ್ಞಾನವು ಇರುವುದಾದರೆ ಯಾರಲ್ಲಿರುವುದೆಂದು ವಿಚಾರಿಸುವೆನು. ಬ್ರಹ್ಮನಲ್ಲೋ ಅಥವಾ ಜೀವನಲ್ಲೋ?

**ಐಕ್ಯ-** ಯಾರಾದರೂ ಒಬ್ಬರಲ್ಲಿ ಇರಬೇಕೆಂದು ಏನು ನಿಯಮ? ಪ್ರತ್ಯೇಕವಾಗಿಯೇ ಏಕೆ ಇರಬಾರದು?

**ಭೇದ-** ಅಜ್ಞಾನವು ಪ್ರತ್ಯೇಕವಾಗಿ ಇರುವ ಒಂದು ವಸ್ತುವಲ್ಲ. ಹಾಗಿದೆ ಎಂದು ಒಪ್ಪಿದರೂ ಅದು ಸತ್ಯವೇ ಅಸತ್ಯವೇ ಎಂದು ವಿಚಾರ ಬರುವುದು. ಸತ್ಯವಾದರೆ ಅದ್ವೈತ

ಹಾನಿಯಾಗುವುದು ಅಸತ್ಯವಾದರೆ ಶಾಸ್ತ್ರವು ಅತತ್ವಾವೇದಕವಾಗುವುದು, (ಸುಳ್ಳನ್ನೂ ಬೋಧಿಸುವುದಾಗುವುದು). ಇವೇ ಮೊದಲಾದ ಆಕ್ಷೇಪಗಳು ಮಾಯಾವಾದ ಖಂಡನದಲ್ಲಿ ವಿಶದವಾಗಿ ತಿಳಿಸಿರುವರು. ಇದಲ್ಲದೇ ಆಶ್ರಯವಿಲ್ಲದ ಜ್ಞಾನವಾಗಲಿ, ಅಜ್ಞಾನವಾಗಲಿ ಲೋಕ ದಲ್ಲಿ ಇರುವುದಿಲ್ಲ. ಜ್ಞಾತೃ (ತಿಳಿಯುವವನು), ಜ್ಞೇಯ (ತಿಳಿಯುವ ವಿಷಯ), ಇವೆರಡು ಇಲ್ಲದೇ ಲೋಕದಲ್ಲಿ ಜ್ಞಾನಾಜ್ಞಾನಗಳು ಕಾಣುವುದಿಲ್ಲ. ಬಲವಂತನೊಬ್ಬನು ಇಲ್ಲದೇ ಬಲ ಉಂಟೇ? ಧೈರ್ಯಶಾಲಿ ಇಲ್ಲದೇ ಧೈರ್ಯವಿರುವುದೇ? ಪ್ರೀತಿಸುವವನು ಪ್ರೀತಿಪಾತ್ರವು ಇಲ್ಲದೇ ಪ್ರೀತಿವುಂಟೇ ಇವುಗಳು ಆಶ್ರಯಶೂನ್ಯವಾದರೆ ಅಚಿಂತ್ಯಗಳಾಗುವುವು. ಅದರಂತೆ ಆಶ್ರಯ ವಿಲ್ಲದೇ ವಿಷಯವಿಲ್ಲದೇ ಜ್ಞಾನಾಜ್ಞಾನಗಳು ಅಚಿಂತ್ಯಗಳಾಗುವುವು. ಆದುದರಿಂದ ಅಜ್ಞಾನವು ಯಾರಲ್ಲಾದರು ಆಶ್ರಯಿಸಿರಬೇಕು.

**ಐಕ್ಯ**- ಹಾಗಾದರೆ ಅಜ್ಞಾನವು ಬ್ರಹ್ಮನನ್ನೇ ಆಶ್ರಯಿಸಿರುವುದೆಂದು ಹೇಳುವೆನು.

**ಭೇದ**- ಶಹಬಾಸ್! ಅಹ್ಹಹ್ಹ! ಅಜ್ಞಾನವು ಪರಮಾತ್ಮನಲ್ಲಿ ಹೋಗಿಸೇರಿತೇ? ಅಹಹ! ಚೆನ್ನಾಗಿ ಹೇಳಿದಿರಿ, ಚೆನ್ನಾಗಿ ಹೇಳಿದಿರಿ!

**ಐಕ್ಯ**- ಇದೇನು ನಿಮಗೆ ಇಷ್ಟು ಅಪಹಾಸ್ಯವಾಗಿ ಕಾಣುವುದೇ?

**ಭೇದ**- ಈಗ ನೀವಲ್ಲವೇ ಬೆಂಕಿ ನೀರಿನಂತೆ ವಿರುದ್ಧ ಧರ್ಮಗಳಿರುವ ವಸ್ತುಗಳಿಗೆ ಐಕ್ಯ ಕೂಡುವುದಿಲ್ಲವೆಂದು ಹೇಳಿದುದು ಒಂದೇ ಸೂರ್ಯನಲ್ಲಿ ತೇಜಸ್ಸು ಅಂಧಕಾರವು, ಒಂದೇ ಚಂದ್ರ ನಲ್ಲಿ ಶೈತ್ಯವು ಔಷ್ಣ್ಯವು ಒಂದೇ ಬ್ರಹ್ಮನಲ್ಲಿ ಸಾರ್ವಜ್ಞತೆಯು ಅಜ್ಞಾನವು ಹೇಗೆ ಕೂಡುವುದು. ಇದು ಚೋದ್ಯವಲ್ಲವೇ? "ಸತ್ಯಂ ಜ್ಞಾನಮನಂತಂ ಬ್ರಹ್ಮ" ಎಂದು ಬ್ರಹ್ಮನಿಗೆ ಲಕ್ಷಣ ಹೇಳಲ್ಪ ಟ್ಟಿದೆ. "ಯಃ ಸರ್ವಜ್ಞಃ ಸರ್ವವಿತ್" ಎಂದು ಪರಬ್ರಹ್ಮನ ಸರ್ವಜ್ಞತೆಯನ್ನು ಶ್ರುತಿಯು ಪ್ರಕಟಿಸುತ್ತದೆ. ಅವನಲ್ಲಿ ಅಜ್ಞಾನವಿದೆಯೆಂದು ಹೇಳಲಿಲ್ಲ; ಮತ್ತೂ ಇರಲು ಸಾಧ್ಯವೂ ಇಲ್ಲ.

**ಐಕ್ಯ**- ಶ್ರುತಿಯಲ್ಲಿ ಹೇಳಿದ ಬ್ರಹ್ಮನ ಸಾರ್ವಜ್ಞತೆಯು ಪಾರಮಾರ್ಥಿಕವಲ್ಲ ಮತ್ತು ಸರ್ವಜ್ಞನಿಗೆ ಅಜ್ಞಾನವಿರುವುದು ಆಶ್ಚರ್ಯವಲ್ಲ. ಸರ್ವಜ್ಞನಾಗಬೇಕಾದರೆ ಅಜ್ಞಾನದಿಂದಲೇ ಆಗಬೇಕೆಂದು ನಮ್ಮ ಮತವು. ಅದನ್ನು ಈಗಲೇ ದೃಢಪಡಿಸುವೆನು. ಸರ್ವಜ್ಞನಲ್ಲಿ ಅಜ್ಞಾನವಿರದು ಎಂದೂಹಿಸುವರಲ್ಲವೇ ಹಾಗಾದರೆ ನೀವು ಒಂದು ದೃಷ್ಟಾಂತ ತೋರಿಸಬೇಕು. "ದೇವದತ್ತನು ಸರ್ವಜ್ಞನು. ಅವನಲ್ಲಿ ಅಜ್ಞಾನವಿಲ್ಲ. ಅವನಂತೆ ಪರಬ್ರಹ್ಮನು ಸರ್ವಜ್ಞನು. ಆದುದರಿಂದ ಅವ ನಲ್ಲೂ ಅಜ್ಞಾನವಿಲ್ಲ." ಹೀಗೆ ದೃಷ್ಟಾಂತ ತೋರಿಸುವಿರಾ?

**ಭೇದ**- ಸ್ವಾಮಿ! ಪರಬ್ರಹ್ಮನನ್ನು ಬಿಟ್ಟು ಬೇರೆ ಸರ್ವಜ್ಞರು ಯಾರೂ ಇಲ್ಲವಾದ ಕಾರಣ ದೃಷ್ಟಾಂತಕೊಡಲು ಸಾಧ್ಯವಿಲ್ಲ.

**ಐಕ್ಯ**- "ಯಾವನಲ್ಲಿ ಅಜ್ಞಾನವಿದೆಯೋ ಅವನು ಸರ್ವಜ್ಞನಲ್ಲ" ಎಂದು ಯುಕ್ತಿಯನ್ನು ಉಪಯೋಗಿಸುವಿರಿ. ಇದಕ್ಕಾದರೂ ದೃಷ್ಟಾಂತ ಉಂಟೇ?

**ಭೇದ**- ನಮ್ಮೆಲ್ಲರಲ್ಲಿ ಅಜ್ಞಾನವಿದೆ. ನಾವು ಸರ್ವಜ್ಞರಲ್ಲ. ಆದುದರಿಂದ ಅಜ್ಞಾನ ಇದ್ದವನು ನಮ್ಮಂತೆ ಸರ್ವಜ್ಞನಲ್ಲವೆಂದು ಊಹಿಸಲಾಗುವುದು. ಸರ್ವಜ್ಞನಾದವನನ್ನು ತಂದು ಅವನಲ್ಲಿ ಅಜ್ಞಾನವಿಲ್ಲವೆಂದು ತೋರಿಸಲು ಸಾಧ್ಯವಿಲ್ಲ.

**ಐಕ್ಯ**- ಎರಡು ವಿಧ ದೃಷ್ಟಾಂತವು ಇಲ್ಲದಿರುವಾಗ ಸರ್ವಜ್ಞನಲ್ಲಿ ಅಜ್ಞಾನವು ಇರಲಾರ ದೆಂದು ನೀವು ಊಹಿಸುವುದು ಹೇಗೆ?

ಭೇದ- ಇದೇನು?

ಐಕ್ಯ- ಅದು ಪುಸ್ತಕ.

ಭೇದ- ಇದು?

ಐಕ್ಯ- ಅದು ಕುರ್ಚಿ.

ಭೇದ- ಈ ವಿಷಯಗಳಲ್ಲಿ ನಿಮಗೆ ಜ್ಞಾನವಿದೆಯಲ್ಲವೇ? ಅದೇ ವಿಷಯದಲ್ಲಿ ಅಜ್ಞಾನವು ಇರುವುದೋ?

ಐಕ್ಯ- ಇಲ್ಲ.

ಭೇದ- ಮದರಾಸಿನಲ್ಲಿ ನಿಮ್ಮ ಮಿತ್ರನು ಈಗ ಏನು ಮಾಡುತ್ತಿರುವನು?

ಐಕ್ಯ- ನನಗೆ ಜೋತಿಷ್ಯ ಗೊತ್ತಿಲ್ಲ. ಹೇಳಲಾರೆನು.

ಭೇದ- ಈ ವಿಷಯದಲ್ಲಿ ನಿಮಗೆ ಅಜ್ಞಾನವಿದೆ. ಅದೇ ವಿಷಯದಲ್ಲಿ ಜ್ಞಾನವು ಇರುವುದೋ?

ಐಕ್ಯ- ಇಲ್ಲ.

ಭೇದ- ಆದುದರಿಂದ ನಮ್ಮ ಅನುಭವದಲ್ಲಿ ಯಾವ ವಿಷಯದಲ್ಲಿ ಜ್ಞಾನವಿರುವುದೋ ಆ ವಿಷಯದಲ್ಲಿ ಅಜ್ಞಾನವು ಇರುವುದಿಲ್ಲ. ಯಾವ ವಿಷಯದಲ್ಲಿ ಅಜ್ಞಾನವು ಇರುವುದೋ ಆ ವಿಷಯದಲ್ಲಿ ಜ್ಞಾನವು ಇರುವುದಿಲ್ಲ. ಪರಬ್ರಹ್ಮನು ಸರ್ವಜ್ಞನು. ಅಂದರೆ ಸರ್ವವಿಷಯವನ್ನು ತಿಳಿದವನು. ಆದುದರಿಂದ ಯಾವ ವಿಷಯದಲ್ಲೂ ಅವನಿಗೆ ಅಜ್ಞಾನವಿರುವುದಿಲ್ಲ. ನಿಮ್ಮ ಮತದಲ್ಲಿ ಸರ್ವಜ್ಞನಿಗೆ ಅಜ್ಞಾನವೆಂದು ಹೇಳಿದರೆ ಅದು ಹೇಗೆ ಯುಕ್ತವಾಗುವುದು?

ಐಕ್ಯ- ಒಬ್ಬನಿಗೆ ಒಂದು ವಸ್ತು ವಿಷಯಕಜ್ಞಾನ ಉಂಟಾಗಬೇಕಾದರೆ ಕಣ್ಣುಮೊದಲಾದ ಇಂದ್ರಿಯ ಪ್ರಮಾಣಗಳಿಂದಾಗಲೀ, ಭ್ರಾಂತಿಮೂಲಕವಾಗಿಯಾಗಲೀ, ಅಥವಾ ಸ್ವಭಾವ ಸಿದ್ಧವಾದ ಪ್ರಜ್ಞೆಯಿಂದಾಗಲೀ ಆಗುವುದು. ನಮ್ಮ ಜ್ಞಾನವೆಲ್ಲವೂ ಈ ಮೂರು ತರಗತಿಯಲ್ಲೇ ಸೇರುವುದು. ಸರ್ವಜ್ಞನ ಜ್ಞಾನವೂ ಈ ಮೂರು ತರಗತಿಯಲ್ಲೇ ಸೇರಬೇಕು. ಅಂದ ಮೇಲೆ ಸರ್ವಜ್ಞನ ಸರ್ವಜ್ಞತೆಯು ಅಜ್ಞಾನದಿಂದಲೇ ಉಂಟಾದದ್ದಲ್ಲವೇ?

ಭೇದ- ಅದು ಹೇಗೆ?

ಐಕ್ಯ- ಭ್ರಾಂತಿ ಅಜ್ಞಾನದಿಂದುಂಟಾದುದು ಎಂಬುವುದು ಸ್ಪಷ್ಟವಷ್ಟೆ. ನಮ್ಮ ಇಂದ್ರಿಯಾದಿಗಳು ಸತ್ಯಗಳಲ್ಲ, ಅಜ್ಞಾನದಿಂದುಂಟಾದ ಉಪಾಧಿಗಳು. ಇವುಗಳಿಂದ ಹುಟ್ಟಿದ ಜ್ಞಾನವು ಅಜ್ಞಾನ ನಿರ್ಮಿತವಲ್ಲವೇ? ಮತ್ತು ಲೋಕದಲ್ಲಿರುವ ಸಮಸ್ತವಸ್ತುಗಳು ಅಜ್ಞಾನದಿಂದ ನಿರ್ಮಿತವಾದವುಗಳು, ಆ ಸಮಸ್ತ ವಸ್ತುಗಳ ಜ್ಞಾನದಿಂದ ಸರ್ವಜ್ಞನಾಗಬೇಕಾದರೆ ಅಂತಹ ಜ್ಞಾನಕ್ಕೂ ಅಜ್ಞಾನವೇ ಕಾರಣ.

ಭೇದ- ಹಾಗಾದರೆ ಸೃಷ್ಟಿಗೆ ಪೂರ್ವದಲ್ಲಿ ನಿಮ್ಮ ಮತರೀತ್ಯಾ ಯಾವ ವಸ್ತುಗಳು ಇಲ್ಲವಾದ ಪ್ರಯುಕ್ತ ಪರಬ್ರಹ್ಮನು ಜ್ಞಾನಶೂನ್ಯನೆಂದು ಹೇಳಬೇಕಾಗುವುದು. ಇರಲಿ. ಸ್ವಾಭಾವಿಕವಾದ ಪ್ರಜ್ಞೆಯನ್ನು ಮರೆತುಬಿಟ್ಟರಲ್ಲ. ಬ್ರಹ್ಮನು ಇಂದ್ರಿಯಾದಿ ಪ್ರಮಾಣಗಳಿಂದಾಗಲೀ, ಭ್ರಾಂತಿಯಿಂದಾಗಲೀ ಸರ್ವಜ್ಞನಾಗುವನೆಂದು ಹೇಳುವುದಿಲ್ಲ. ಸ್ವಾಭಾವಿಕವಾದ, ಅನಾದಿನಿತ್ಯವಾದ ತನ್ನ ಪ್ರಜ್ಞೆಯಿಂದಲೇ ಅವನು ಸರ್ವಜ್ಞನಾಗಿರುವನು.

**ಐಕ್ಯ**- ಹಾಗಾದರೂ ಅಜ್ಞಾನವೇ ಅವನ ಸಾರ್ವಜ್ಞ್ಯಕ್ಕೆ ಕಾರಣ. "ಇದು ನನ್ನ ಪುಸ್ತಕ, ಇದು ನನ್ನ ಮನೆ, ಇದು ನನ್ನ ದೇಹ" ಎಂದು ಜ್ಞಾನವುಂಟಾಗಬೇಕಾದರೆ ಅಹಂಕಾರಕ್ಕೂ, ವಸ್ತುವಿಗೂ ಸಂಬಂಧವುಂಟಾಗಬೇಕು. ಅದು ವಿನಹ ಮಮಾಕಾರದ ಜ್ಞಾನವುಂಟಾಗುವುದಿಲ್ಲ. ಮಮಾಕಾರವಿಲ್ಲದೆ ಸ್ವಾಭಾವಿಕ ಪ್ರಜ್ಞೆಯೇ ಇಲ್ಲ. ಪರಮಾತ್ಮನು ಸಂಗವರ್ಜಿತನು. 'ಅಸಂಗೋ ಹ್ಯಯಂ ಪುರುಷಃ' ಎಂದು ಬ್ರಹ್ಮನಿಗೆ ಸಂಗರಾಹಿತ್ಯವು ಹೇಳಲ್ಪಟ್ಟಿದೆ. ಸಂಬಂಧವಿಲ್ಲದೆ ವಸ್ತು ಜ್ಞಾನವುಂಟಾಗಬೇಕಾದರೆ ಅಜ್ಞಾನದಿಂದಲೇ ಆಗಬೇಕು.

**ಭೇದ**- ಶ್ರುತಿಗೆ ನೀವು ಹೇಳುವ ಅರ್ಥವು ಸರಿಯಲ್ಲ. ವಸ್ತುಸಂಬಂಧನಿಮಿತ್ತ ಲೇಪ ಇಲ್ಲದವನೆಂದು ಶ್ರುತಿಯ ಅರ್ಥವು. ಸಂಬಂಧವೇ ಇಲ್ಲದವನೆಂದು ಅರ್ಥವಲ್ಲ. ಅಜ್ಞಾನದಿಂದ ಜ್ಞಾನವುಂಟಾಗುವುದೆಂಬುದು ನ್ಯಾಯವಲ್ಲ. ಹಾಗಾದರೆ ಕತ್ತಲೆಯಿಂದ ಬೆಳಕು, ದುಃಖದಿಂದ ಸುಖ ಉಂಟಾಗಬೇಕಾಗುವುದು. ಪರಮಾತ್ಮನ ಸರ್ವಜ್ಞತೆಯು ಅಜ್ಞಾನದಿಂದ ಉಂಟಾದದ್ದು ಅಲ್ಲ. ಅವನಲ್ಲಿ ಅಜ್ಞಾನಕ್ಕೆ ಎಳ್ಳಷ್ಟು ಅವಕಾಶವಿಲ್ಲ. ಅಜ್ಞಾನಕ್ಕೆ ಸ್ಥಳಾಂತರವನ್ನು ಕಲ್ಪಿಸಬೇಕು.

**ಐಕ್ಯ**- ಆಗಲಿ. ಅಜ್ಞಾನವು ಜೀವನನ್ನು ಆಶ್ರಯಿಸಿ ಇರುವದೆಂದು ಹೇಳುವೆನು.

**ಭೇದ**- ಸ್ವಲ್ಪ ನಿಧಾನಿಸಿ! ಇರುವುದು ಒಂದು ಬ್ರಹ್ಮಮಾತ್ರವೇ ಆದರೆ ಜೀವನು ಎಲ್ಲಿಂದ ಬಂದನು? ಜೀವನು ಸಿಕ್ಕಿದ ಮೇಲೆ ಅವನಲ್ಲಿ ಅಜ್ಞಾನವು ಆಶ್ರಯಿಸಿ ಅದೆಯೆಂದು ಕಲ್ಪಿಸಬಹುದು. ಜೀವನೇ ಇನ್ನು ಸಿಗಲಿಲ್ಲವಲ್ಲ.

**ಐಕ್ಯ**- ಅದೇಕೆ? ಉಪಾಧಿನಿಮಿತ್ತ ಬ್ರಹ್ಮನಿಗೂ, ಜೀವನಿಗೂ ಭೇದ ತೋರುವುದು. ಉಪಾಧಿಯಿಂದ ಕೂಡಿದ ಜೀವನಲ್ಲಿ ಅಜ್ಞಾನವು ಆಶ್ರಯಿಸಿ ಇರುವುದು.

**ಬೇದ**- ಉಪಾಧಿಯಿಂದಲ್ಲವೇ ಬ್ರಹ್ಮನು ಜೀವನಾಗಿ ತೋರುವನು. ಆ ಉಪಾಧಿಯ ಸ್ವಭಾವವು ಎಂತಹುದು? ಅದೇನು ಸತ್ಯವೇ? ಅಲ್ಲ ಅಜ್ಞಾನದಿಂದ ಕಲ್ಪಿತವೇ? ಸತ್ಯವೆಂದರೆ ಅದ್ವೈತಹಾನಿಯಾಗುವುದು. ಅಜ್ಞಾನದಿಂದ ಕಲ್ಪಿತವೆಂದರೆ ಅನ್ಯೋನ್ಯಾಶ್ರಯದೋಷ ಬರುವುದು.

**ಐಕ್ಯ**- ತಮಗೆ ಉಪಾಧಿಯ ಸ್ವಭಾವವು ಚೆನ್ನಾಗಿ ಗೊತ್ತಾದಂತೆ ಇಲ್ಲ. ಒಂದು ದೃಷ್ಟಾಂತ ಕೊಡುವೆನು. ಕನ್ನಡಿ ನೋಡಿದ್ದೀರಲ್ಲವೇ, ಅದನ್ನು ಎದುರಿಗೆ ಇಟ್ಟುಕೊಂಡರೆ ನಮಗೆ ಪ್ರತಿಮುಖವು ಕಾಣಿಸುವುದು. ನಮ್ಮ ಮುಖವೇ ಬಿಂಬವು, ಕನ್ನಡಿಯು ಉಪಾಧಿಯು, ಪ್ರತಿಮುಖವು ಪ್ರತಿಬಿಂಬವು. ಬ್ರಹ್ಮನು ಬಿಂಬದಂತಿರುವನು, ಜೀವನು ಪ್ರತಿಬಿಂಬದಂತಿರುವನು. ಅಂತಃಕರಣಾದಿಗಳು (ಬುದ್ಧಿ, ಮನಸ್ಸು, ದೇಹ, ಇಂದ್ರಿಯಾದಿಗಳು) ಉಪಾಧಿಗಳು. ಬಿಂಬ ಒಂದೇ ಆದರೂ ಕನ್ನಡಿಯ ಸಾನ್ನಿಧ್ಯವಿರುವುದರಿಂದ ಪ್ರತಿಮುಖವು ಕಾಣಿಸುವುದು. ಅಂತಃಕರಣಾದಿಗಳು ಇರುವುದರಿಂದ ಒಂದೇ ಬ್ರಹ್ಮನು ಅನೇಕ ಜೀವರಂತೆ ಕಾಣಿಸುವನು. ಉಪಾಧಿಯಿಂದ ಕೂಡಿದ ಜೀವನಿಗೇನೇ ಅಜ್ಞಾನವು.

**ಭೇದ**- (ಕನ್ನಡಿಯು ಬಿಂಬಗೆ ಭ್ರಮೆಯನ್ನುಂಟುಮಾಡುವುದು) ಅಂತಃಕರಣಾದಿ ಉಪಾಧಿಗಳು ಪ್ರತಿಬಿಂಬಕ್ಕೆ ಭ್ರಮೆಯನ್ನುಂಟುಮಾಡುವವು. ಅಸತ್ಯವಾದ ಉಪಾಧಿಯು ಯಾವ ಕಾರ್ಯವನ್ನೂ ಉಂಟುಮಾಡಲಾರದು. ಅಜ್ಞಾನವನ್ನಾದರೂ ಹುಟ್ಟಿಸಬೇಕಾದರೆ ಸತ್ಯವಾದ ಒಂದು ಉಪಾಧಿ ಬೇಕು. ಹೇಗೆ ಕನ್ನಡಿ ಇಲ್ಲದಿದ್ದರೆ ಪ್ರತಿಬಿಂಬ ಇರುವುದಿಲ್ಲವೋ, ಅದರಂತೆ ಸತ್ಯವಾದ ಉಪಾಧಿ ಇಲ್ಲದೆ ಜೀವನು ದೃಶ್ಯನಾಗಲಾರನು. ಉಪಾಧಿ ಸತ್ಯವೆಂದು

ಒಪ್ಪಿದರೆ ಅದ್ವೈತವಾದವು ನಷ್ಟವಾಗುವುದು. ಉಪಾಧಿಯು ಅಜ್ಞಾನದಿಂದ ಕಲ್ಪಿತವೆಂದರೆ ಯಾವುದು ಮೊದಲನೇಯದು, ಯಾವುದು ಎರಡನೇಯದು, ಯಾರು ತಂದೆ, ಯಾರು ಮಗ ಎಂಬುವ ವ್ಯವಸ್ಥೆಮಾಡಲಾಗುವುದಿಲ್ಲ.

**ಐಕ್ಯ**- ಉಪಾಧಿ ಅಜ್ಞಾನಗಳು ಬೀಜವೃಕ್ಷದಂತೆ ಇರುವುವು. ಬೀಜದಿಂದ ವೃಕ್ಷವು, ವೃಕ್ಷದಿಂದ ಬೀಜವು ಹೇಗೆ ಉತ್ಪನ್ನವಾಗುವುದೋ, ಹಾಗೆಯೇ ಉಪಾಧಿಯಿಂದ ಅಜ್ಞಾನವು, ಅಜ್ಞಾನದಿಂದ ಉಪಾಧಿಯು ಇವುಗಳ ಪರಂಪರೆಯು ಉತ್ಪನ್ನವಾಗುವುದು.

**ಭೇದ**- ಬೀಜವೃಕ್ಷಗಳಲ್ಲಿ ನಮ್ಮ ಸ್ಥೂಲದೃಷ್ಟಿಗೆ ಯಾವುದು ಮೊದಲು ಯಾವುದು ಎರಡನೆಯದು ಹುಟ್ಟಿದ್ದೆಂದು ತಿಳಿಯುವುದಿಲ್ಲ. ಮತ್ತು ಅವುಗಳು ಒಂದರಿಂದ ಇನ್ನೊಂದು ಪರಂಪರೆಯಾಗಿ ಹುಟ್ಟುವದು ಪ್ರತ್ಯಕ್ಷಸಿದ್ಧವಾಗಿದೆ. ಅಜ್ಞಾನ ಉಪಾಧಿಗಳ ಮಾತು ಹೀಗಲ್ಲ. ಅವುಗಳು ಪ್ರತ್ಯಕ್ಷಗೋಚರಗಳಲ್ಲ. ಶಾಸ್ತ್ರದಿಂದಲೂ ಯುಕ್ತಿಯಿಂದಲೂ ಅವುಗಳನ್ನು ನೀವು ಸಾಧಿಸಬೇಕು. ಆದುದರಿಂದಲೇ ಮೊದಲು ಅಜ್ಞಾನವು, ಅನಂತರ ಅದರಿಂದ ಉಪಾಧಿಯು ಹುಟ್ಟಿತೆಂದು ಹೇಳುವಿರಿ. ಇದು ಸರಿಯಾಗದಿದ್ದರೆ ಮೊದಲು ಉಪಾಧಿ ಅನಂತರ ಅದರಿಂದ ಅಜ್ಞಾನ ಹುಟ್ಟಿತೆಂದು ಹೇಳುವಿರಿ. ಅಂತು ನಿಮ್ಮ ಮತವನ್ನು ಸ್ಥಾಪಿಸಬೇಕಾದರೆ ಪ್ರಥಮದಲ್ಲಿ ಅಜ್ಞಾನವೋ, ಉಪಾಧಿಯೋ ಒಂದು ನಿಶ್ಚಯಿಸದೆ ಸಾಧ್ಯವಿಲ್ಲ. ಪ್ರಥಮದಲ್ಲಿ ಅಜ್ಞಾನವಿತ್ತು ಎಂದರೂ, ಅಥವಾ ಉಪಾಧಿ ಇತ್ತು ಎಂದರೂ ದೋಷಗಳು ತಪ್ಪುವುದಿಲ್ಲ. ಅಪಸಿದ್ಧಾಂತವೋ, ಅನ್ಯೋನ್ಯಾಶ್ರಯವೋ, ಅನವಸ್ಥೆಯೋ ಯಾವದಾದರೊಂದಕ್ಕೆ ಗುರಿಯಾಗಬೇಕು.

**ಐಕ್ಯ**- ಅಜ್ಞಾನದಿಂದ ಉಪಾಧಿ, ಉಪಾಧಿಯಿಂದ ಜೀವಬ್ರಹ್ಮ ಭೇದ, ಭಿನ್ನನಾದ ಜೀವನಲ್ಲಿ ಅಜ್ಞಾನವು ಆಶ್ರಯಿಸಿ ಇರುವುದೆಂದು ಹೇಳುವೆನು. ನೀವು ಹೇಳುವ ದೋಷಗಳು ಇದಕ್ಕೆ ತಗಲುವುದಿಲ್ಲ.

**ಭೇದ**- ನಿಜವೇ! ನೀವು ಹೇಳುವುದು A ಯಿಂದ B, B ಯಿಂದ C, C ಯಿಂದ A ಹುಟ್ಟುತ್ತದೆ ಅಂದಂತೆ ಆಯಿತು. ಇದಕ್ಕೆ ಚಕ್ರಕಾಪತ್ತಿ ದೋಷವೆಂದು ಹೆಸರು. ಅಜ್ಞಾನಾಧೀನವಾದುದು ಉಪಾಧಿ; ಉಪಾಧಿಯ ಅಧೀನವಾದುದು ಭೇದ; ಭಿನ್ನನಾದ ಜೀವನನ್ನು ಆಶ್ರಯಿಸುವುದು, ಯಥಾಪ್ರಕಾರ ಅಜ್ಞಾನ. ತಲೆ ಸುತ್ತಿ ಬಂದು ಮೂಗನ್ನು ಹಿಡದಂತೆ ಆಯಿತು.

**ಐಕ್ಯ**- ಉಪಾಧಿಯು ಅಂತಃಕರಣಾದಿ ರೂಪವಾದರೆ ನೀವು ಹೇಳುವ ದೋಷಗಳು ಪ್ರಾಪ್ತವಾಗುವವು. ಅದು ಕೇವಲ ಅಜ್ಞಾನಾಕಾರವೇ, ಆದ ಪ್ರಯುಕ್ತ ಈ ದೋಷಗಳು ತಗಲುವುದಿಲ್ಲ.

**ಭೇದ**- ಉಪಾಧಿಯು ಅಜ್ಞಾನಾಕಾರವಾದರೆ ಮತ್ತು ಅಜ್ಞಾನದಿಂದ ಹುಟ್ಟಿದುದು ಎಂದು ಹೇಳಿದರೆ, ತನ್ನಿಂದ ತಾನೇ ಹುಟ್ಟಿತು ಎಂದಂತೆ ಆಗುವುದು. ಇದು ಆತ್ಮಾಶ್ರಯ ದೋಷವು. ಅಜ್ಞಾನಕ್ಕೂ, ಉಪಾಧಿಗೂ ಭೇದವೇ ಇಲ್ಲವೆಂದರೆ ಅಪಸಿದ್ಧಾಂತಾದಿ ದೋಷಗಳು ಬರುವುವು.

**ಐಕ್ಯ**- ನೀವು ಅಜ್ಞಾನವೂ, ಜೀವ ಬ್ರಹ್ಮ ಭೇದವೂ ಅನಾದಿಗಳೆಂದು ತಿಳಿಯಬೇಕು. ಅನಾದಿಗಳಿಗೆ ಅನ್ಯೋನ್ಯಾಶ್ರಯ ದೋಷ ಬರುವುದಿಲ್ಲ.

**ಭೇದ**- ಭೇದವೂ, ಅಜ್ಞಾನವೂ ಅನಾದಿಗಳಾಗಲಿ. ಅವುಗಳಿಗೆ ಏನಾದರೂ ಸಂಬಂಧವಿರುವುದೇ ಇಲ್ಲವೇ? ಸಂಬಂಧವಿಲ್ಲದಿದ್ದರೆ ಭೇದವು ಅಜ್ಞಾನದಿಂದ ಉಂಟಾಯಿತೆಂದು ಹೇಗೆ

ಹೇಳುವುದು. ಭೇದದಿಂದಲೇ ಅಜ್ಞಾನ ಉಂಟಾಯಿತೆಂದು ಏಕೆ ಹೇಳಬಾರದು. ಆದುದರಿಂದ ಅಜ್ಞಾನ, ಭೇದ ಇವುಗಳು ಅನಾದಿಗಳಾದರೂ ಅವುಗಳಿಗೆ ಒಂದು ವಿಧ ಸಂಬಂಧ ಕಲ್ಪಿಸಬೇಕು. ಅಜ್ಞಾನನಿಮಿತ್ತವಾಗಿ ಭೇದ ಎಂದು ಹೇಳಿದರೆ, ಭೇದಕ್ಕೆ ಅನಾದಿತ್ವ ಕೂಡುವುದು ಹೇಗೆ.

ಕನ್ನಡಿಯೇ ಇಷ್ಟು ಅನರ್ಥಕ್ಕೆ ಕಾರಣವೆಂದು ಊಹಿಸುವೆನು. ಬಿಂಬ ಪ್ರತಿಬಿಂಬಗಳಿಗೆ ಐಕ್ಯವಿರುವುದೆಂದು ಭಾವಿಸಿ, ಆ ಭಾವನೆಯನ್ನು ಅನುಸರಿಸಿ ಸಿದ್ಧಾಂತವನ್ನು ಮಾಡಿರುವಿರಿ. ಆದರೆ ವಸ್ತುಸ್ಥಿತಿಯಲ್ಲಿ ಬಿಂಬ ಪ್ರತಿಬಿಂಬಗಳಿಗೆ ಐಕ್ಯವಿರುವುದಿಲ್ಲ, ಪರಂತು ಭೇದವೇ ಇರುವುದು. ಮುಖದ ಮೇಲೆ ಬಿದ್ದ ಬೆಳಕು ಕನ್ನಡಿಯಲ್ಲಿ ಪ್ರತಿಫಲಿಸಿ ಪ್ರತಿಮುಖವಾಗಿ ಕಾಣಿಸುವುದು. ಮುಖಕ್ಕೂ ಮುಖದ ಮೇಲಿನ ಬೆಳಕಿಗೂ ಭೇದವಿರುವುದಿಲ್ಲವೇ? ಕತ್ತಲೆಯಲ್ಲಿ ಕನ್ನಡಿ ಹಿಡಿದರೂ ಪ್ರತಿಮುಖ ಕಾಣಿಸುವುದಿಲ್ಲ. ಬಿಂಬ ಪ್ರತಿಬಿಂಬಗಳಿಗೆ ಐಕ್ಯವಿದೆ ಎಂದು ಹೇಳಿದರೆ ಮುಖಕ್ಕೂ, ಫೋಟೋಗ್ರಾಫ್, ಎಂಬ ಚಿತ್ರಕ್ಕೂ ಐಕ್ಯ ಹೇಳಬೇಕಾಗುವುದು. ನೀವಾದರೂ ಮುಖಕ್ಕೂ, ಅದರ ಚಿತ್ರಕ್ಕೂ ಐಕ್ಯವನ್ನು ಹೇಳುವುದಿಲ್ಲ. ಬಿಂಬ ಪ್ರತಿಬಿಂಬಗಳಿಗೆ ಇಲ್ಲದ ಐಕ್ಯವನ್ನು ಕಲ್ಪಿಸಿ ಐಕ್ಯಕ್ಕಾಗಿ, ಭೇದವು ಸುಳ್ಳೆಂದು ಕಲ್ಪಿಸಿ, ಭೇದಕ್ಕೆ ಅಜ್ಞಾನೋಪಾಧಿಗಳು ಕಾರಣಗಳೆಂದು ಕಲ್ಪಿಸಿ, ಆ ಅಜ್ಞಾನೋಪಾಧಿಗಳ ಸ್ವರೂಪವನ್ನು ಹೇಳಲು ಸಾಧ್ಯವಾಗದೆ ನರಳಾಡಬೇಕಾಯಿತು.

**ಐಕ್ಯ**- ಅಸತ್ಯವಾದ ಭೇದವನ್ನೂ ಅಸತ್ಯವಾದ ಉಪಾಧಿಯನ್ನು ಕಲ್ಪಿಸಿದರೆ ನೀವು ಹೇಳುವಂತೆ ಅನೇಕ ಸಂಕಟಗಳು ಪ್ರಾಪ್ತವಾಗುವವು. ಉಪಾಧಿಯು ಸತ್ಯ, ಅದರಿಂದುಂಟಾಗುವ ಭೇದವು ಸತ್ಯ ಎಂದು ಹೇಳಿದರೆ ಯಾವ ದೋಷವೂ ತಗಲುವುದಿಲ್ಲ. ಮತ್ತು ಐಕ್ಯವೂ ಸಿದ್ಧಿಸುವುದು. ಮಾಯಾವಾದಿಗಳ ಮತದಲ್ಲಿ, ಸತ್ಯವೆಂದರೆ ನಿತ್ಯವೆಂದರ್ಥವಾದ ಪ್ರಯುಕ್ತ, ಅವರುಗಳು ಉಪಾಧಿ ಸತ್ಯವೆಂದು ಒಪ್ಪುವುದಿಲ್ಲ. ಭಾಸ್ಕರಾಚಾರ್ಯರ ಮತದಲ್ಲಿ ಸತ್ಯವಸ್ತುಗಳು ಅನಿತ್ಯಗಳಾಗಿರಬಹುದು. ಆದುದರಿಂದ ಅವರ ಮತದಲ್ಲಿ, ಸತ್ಯೋಪಾಧಿಪ್ರಯುಕ್ತ ಅದ್ವೈತಹಾನಿಯಾಗುವುದಿಲ್ಲ.

**ಭೇದ**- ಭೇದವೂ, ಉಪಾಧಿಯೂ ಸತ್ಯಗಳೆಂಬುವುದು ನಮಗೆ ಸಮ್ಮತವೇ. ನೀವು ಉಪಾಧಿಯಿಂದ ಭೇದ ಹುಟ್ಟುವುದು ಎಂದು ಹೇಳುವಿರಿ, ಇದು ನಿಜವಲ್ಲ. ಉಪಾಧಿಯು ಇದ್ದ ಭೇದವನ್ನು ಸ್ಪಷ್ಟಪಡಿಸುವುದು. ಹೊರತು ಇಲ್ಲದ ಭೇದವನ್ನು ಸೃಷ್ಟಿಸುವುದಿಲ್ಲ.

**ಐಕ್ಯ**- ನೀವು ಹೇಳುವುದು ಸರಿಯಲ್ಲ. ಭೇದವನ್ನುಂಟುಮಾಡುವುದೇ ಉಪಾಧಿಯ ಕೆಲಸವು. ಆರು ಮೊಳದ ಬಿಳಿಯ ವಸ್ತ್ರವನ್ನು ತೆಗೆದುಕೊಳ್ಳಿರಿ. ಅದರಲ್ಲಿ ಏನು ಭೇದವೂ ಇರುವುದಿಲ್ಲ. ಮೂರು ಮೊಳದ ವಸ್ತ್ರವನ್ನು ಕೆಂಪು ಮಸಿಯಲ್ಲಿ ಅದ್ದಿದರೆ ಅಷ್ಟು ಭಾಗವು ಮಾತ್ರ ಕೆಂಪೇರುವುದು. ಇದು ಕೆಂಪು, ಇದು ಬಿಳಿಪು ಎಂಬುವ ಭೇದವನ್ನು ಕೆಂಪು ಮಸಿರೂಪವಾದ ಉಪಾಧಿಯು ಉಂಟುಮಾಡಿತು.

**ಭೇದ**- ಕೆಂಪು ಮಸಿಯು ಮೊದಲೇ ಇದ್ದ ಭೇದವನ್ನು ವ್ಯಕ್ತಪಡಿಸಿತಲ್ಲದೆ ಹುಟ್ಟಿಸಲಿಲ್ಲ. ಮೂರು ಮೊಳದ ಕೆಂಪು ಭಾಗಕ್ಕೂ, ಮೂರು ಮೊಳದ ಬಿಳಿಭಾಗಕ್ಕೂ ಮೊದಲಿನಿಂದಲೂ ಭೇದ ಇದ್ದೇ ಇದೆ. ಇವೆರಡಕ್ಕೂ ಐಕ್ಯವಿದ್ದರೆ ಮಡಿವಾಳನಿಗೆ ಹೋಗಿ ಬಂದ ಮೇಲೆ, ಉಪಾಧಿನಷ್ಟದಿಂದ ಮೂರೇಮೊಳ ವಸ್ತ್ರ ಆಗಬೇಕು. ಆರುಮೊಳ ವಸ್ತ್ರವಾಗಲು ಕಾರಣವಿಲ್ಲ. ಮಸಿಯು ಭೇದವನ್ನುಂಟುಮಾಡುವುದಾದರೆ ಒಂದು ಕೆಂಪು ವಸ್ತ್ರವು ಇನ್ನೊಂದು ಬಿಳಿಯ ವಸ್ತ್ರವು ಎಂದು, ಎರಡು ವಸ್ತ್ರಗಳಾಗಿ ತೋರಬೇಕು.

**ಐಕ್ಯ-** ದೇವದತ್ತನು ಕುಂಡಲವನ್ನು ಧರಿಸಿದರೆ ಕುಂಡಲಿಯೆಂದೂ, ದಂಡವನ್ನು ಹಿಡಿದರೆ ದಂಡಿಯೆಂದೂ ಹೇಳಿಸಿಕೊಳ್ಳುವನು. ಈ ದಂಡ ಕುಂಡಲಾದಿ ಉಪಾಧಿಗಳು ಭೇದ ಕಾರಕಗಳಲ್ಲವೇ?

**ಭೇದ-** ದೇವದತ್ತನು ಕುಂಡಲವಿಶಿಷ್ಟನೂ, ದಂಡವಿಶಿಷ್ಟನೂ ಎಂಬು ತೋರುವುದೇ ಹೊರತು ಈ ಉಪಾಧಿಗಳು ಭೇದವನ್ನು ತೋರಿಸುವುದಿಲ್ಲ. ಹಾಗೆ ಅವುಗಳು ಭೇದಕಾರಕಗಳು, ಎಂಬುವಪಕ್ಷದಲ್ಲಿ ಅನರ್ಥಪ್ರಾಪ್ತವಾಗುವುದು. ದಂಡನಾಶದಿಂದ ದಂಡವಿಶಿಷ್ಟವು ನಾಶಹೊಂದುವುದು. ಬ್ರಹ್ಮನು ದೇವದತ್ತನಂತೆ ಇರುವನು. ಅಜ್ಞಾನವು ಅಥವಾ ಉಪಾಧಿಯು ಕುಂಡಲದಂತೆ ಇರುವುದು. ಇವುಗಳಿಂದ ಯುಕ್ತನಾದ ಜೀವನು ಬ್ರಹ್ಮನಿಂದ ಭಿನ್ನನೆಂದು ಕಾಣಿಸುವನು, ಎಂದು ಹೇಳುವುದಾದರೆ ಉಪಾಧಿನಾಶದಿಂದ ಉಪಾಧಿವಿಶಿಷ್ಟವಾದ ಜೀವಗೇನೇ ನಾಶವಾಗಬೇಕು. ಮತ್ತು ದೇವದತ್ತನಿಗೆ ಕುಂಡಲಾದಿಗಳು ಭೇದಜ್ಞಾನವನ್ನುಂಟುಮಾಡುವುದಿಲ್ಲ.

**ಐಕ್ಯ-** ನೀವು ವಿಶಿಷ್ಟನಾದ ಜೀವನು ನಾಶಹೊಂದುವನೆಂದು ಹೇಳಿದದು ನನಗೆ ಅರ್ಥವಾಗಲಿಲ್ಲ. ಅದನ್ನು ವಿವರಿಸಿರಿ.

**ಭೇದ-** ದಂಡ ಕುಂಡಲಗಳಿಗೆ ವಿಶೇಷಣಗಳೆಂದು ಹೆಸರು. ದೇವದತ್ತನಿಗೆ ವಿಶೇಷ್ಯನೆಂದು ಹೆಸರು. ವಿಶೇಷಣಗಳಿಂದೊಡಗೂಡಿದ ವಿಶೇಷ್ಯವು ವಿಶಿಷ್ಟವೆನಿಸುವುದು. ಇದು ನಮ್ಮ ಮತದಲ್ಲಿ ಪ್ರತ್ಯೇಕವಾದ ಒಂದು ಪದಾರ್ಥವು. ವಿಶೇಷಣ ವಿಶೇಷ್ಯಗಳಲ್ಲದೆ ವಿಶಿಷ್ಟವೆಂಬುವದು ಒಂದು ಜ್ಞಾನಕ್ಕೆ ವಿಷಯವಾಗಿದೆ. ವಿಶೇಷಣವಾಗಲೀ, ವಿಶೇಷ್ಯವಾಗಲೀ ನಷ್ಟವಾದರೆ ವಿಶಿಷ್ಟವೆಂಬುವುದು ನಷ್ಟವಾಗುವುದು. ಇತರ ಮತದಲ್ಲಿ ವಿಶಿಷ್ಟವನ್ನು ಪದಾರ್ಥಾಂತರವೆಂದು ಒಪ್ಪುವುದಿಲ್ಲ. ಆದರೆ ಅದು ಪ್ರತ್ಯೇಕ ಒಂದು ಪದಾರ್ಥವೆಂದು ಒಪ್ಪಬೇಕೆಂಬುವುದಕ್ಕೆ ಬಲವಾದ ಕಾರಣಗಳಿರುವುವು. (ಟೀಕಾದಿ ಗ್ರಂಥಗಳಿಂದ ಇದು ತಿಳಿಯಬೇಕು.)

**ಐಕ್ಯ-** ಆಗಲಿ, ಆಕಾಶವು ಅಖಂಡವಾಗಿರುವುದು. ಒಂದು ಮನೆ ಕಟ್ಟಿದರೆ ಮಠಾಕಾಶವೆಂದೂ ಭೇದ ಉಂಟಾಗುವುದು. ಇದಕ್ಕೆ ಗೋಡೆಗಳು, ಮಾಡು ಈ ಉಪಾಧಿಗಳೇ ಕಾರಣಗಳು. ಇಲ್ಲಿ ಹಿಂದೆ ಇಲ್ಲದೇ ಇದ್ದ ಭೇದವನ್ನು ಉಪಾಧಿಗಳು ಉಂಟುಮಾಡುವುವು.

**ಭೇದ-** ಈ ದೃಷ್ಟಾಂತವೂ ನಿಮಗೆ ವಿರೋಧವೇ ಆಗುವುದು. ಆಕಾಶದಲ್ಲಿ ಇರುವ ಭೇದವು ಜ್ಞಾನಿಗಳಿಗೆ ಉಪಾಧಿ ಸಹಾಯವಿಲ್ಲದೇನೇ ತಿಳಿಯುವುದು. ಮೂಢರಿಗೆ ಗೋಡೆ ಮುಂತಾದ ಉಪಾಧಿಗಳ ದ್ವಾರಾ ತಿಳಿಯುವುದು. ಇಲ್ಲಿ ಮೇಘ ಇದೆ, ಅಲ್ಲಿ ಮೇಘ ಇಲ್ಲ. ಇಲ್ಲಿ ಪಕ್ಷಿ ಇದೆ, ಅಲ್ಲಿ ಪಕ್ಷಿ ಇಲ್ಲ, ಎಂದು ವ್ಯವಹಾರ ಮಾಡುವೆವು. ಇವುಗಳಿಂದಲೇ ಆಕಾಶದಲ್ಲಿ ಭೇದವಿರುವುದು ಎಂದು ನಿಶ್ಚಯವಾಗುವುದು. ಉಪಾಧಿಯು ಇದನ್ನು ಸ್ಪಷ್ಟಪಡಿಸುವುದು. ಇಷ್ಟು ಮಾತ್ರವಲ್ಲ. ಜೀವರಿಗೂ, ಜೀವಬ್ರಹ್ಮರಿಗೂ ಐಕ್ಯವಿರುವುದಾದರೆ, ಒಬ್ಬರಿಗಾಗುವ ಸುಖದುಃಖಗಳು, ಎಲ್ಲರಿಗೂ ಏಕರೀತಿಯಿಂದ ಆಗಬೇಕು.

**ಐಕ್ಯ-** ಇದು ಯಾರು ಮಾಡಿದ ಕಟ್ಟಳೆಯು? ಜೀವಬ್ರಹ್ಮರಿಗೆ ಐಕ್ಯವಿದ್ದರೆ ಸುಖದುಃಖಾದಿಗಳು ಏಕೆ ಇಬ್ಬರಿಗೆ ಒಂದೇ ರೀತಿಯಿಂದ ಆಗಬೇಕು? ನಿಮ್ಮ ಕಾಲಿನಲ್ಲಿ ಮುಳ್ಳು ಚುಚ್ಚಿದರೆ, ಕೈಗೆ ನೋವಾಗುವುದೋ? ಬಾಯಿಯಲ್ಲಿ ಸಕ್ಕರೆ ಹಾಕಿದರೆ, ಕಿವಿಗೆ ಸಂತೋಷವಾಗುವುದೋ? ನಿಮ್ಮ ಚೈತನ್ಯ ಒಂದೇ ಆದಾಗ್ಯೂ, ಉಪಾಧಿಗಳು (ಕೈಕಾಲುಗಳು) ಬೇರೆಯಾದುದರಿಂದ, ಒಂದಕ್ಕಾದ ಸುಖದುಃಖವು ಇನ್ನೊಂದಕ್ಕಾಗುವುದಿಲ್ಲ.

ಭೇದ- ನಿಮ್ಮ ದೃಷ್ಟಾಂತವೇ ನಿಮಗೆ ಮೃತ್ಯುವಾಗುವುದು. ಕಾಲಿನಲ್ಲಿ ಮುಳ್ಳು ಚುಚ್ಚಿದರೆ, ಕೈಗೆ ದುಃಖವಾಗುವುದಿಲ್ಲ. ಆದರೆ ಕೈಯ್ಯು ಮುಳ್ಳು ತೆಗೆಯುವುದಕ್ಕೆ ಏಕೆ ಪ್ರಯತ್ನಿಸುವುದು. ಉಪಾಧಿಗಳಿಗಲ್ಲ ದುಃಖ. ಉಪಾಧಿಗಳ ಮೂಲಕವಾಗಿ ಚೈತನ್ಯಕ್ಕೆ ಸುಖದುಃಖಗಳಾಗುವುವು. ಕಾಲಿನಿಂದ ಉಂಟಾದ ಚೈತನ್ಯದ ದುಃಖವನ್ನು ನಿವಾರಣೆ ಮಾಡುವುದಕ್ಕೆ, ಇನ್ನೊಂದು ಉಪಾಧಿಯಾದ ಕೈಯ್ಯು ಪ್ರವರ್ತಿಸುವುದು. ಚೈತನ್ಯ ಒಂದೇ ಆಗಿದ್ದರೆ ಸುಖದುಃಖಾದಿಗಳು ಒಂದೇ ರೀತಿಯಿಂದ ಆಗಬೇಕು.

ಐಕ್ಯ- ಸಂಶ್ಲಿಷ್ಟೋಪಾಧಿ (ಅನೇಕ ಅವಯವಗಳಿಂದ ಕೂಡಿದ ಒಂದೇ ದೇಹವಾದ ಉಪಾಧಿ) ಇದ್ದಲ್ಲಿ ನೀವು ಹೇಳಿದುದು ನಿಜವಾಗಬಹುದು. ವಿಶ್ಲಿಷ್ಟೋಪಾಧಿಯಲ್ಲಿ (ಬೇರೆ ಬೇರೆ ದೇಹಗಳಿದ್ದಲ್ಲಿ) ನೀವು ಹೇಳುವ ನಿಯಮವು ಕೂಡುವುದಿಲ್ಲ. ಒಬ್ಬ ಯೋಗಿಯು ಐವತ್ತು ದೇಹಗಳನ್ನು ಏಕಕಾಲದಲ್ಲಿ ಧರಿಸಿದರೆ ಆಯಾ ದೇಹಗಳಲ್ಲಿ ಆಗುವ ಸುಖದುಃಖಗಳ ಅನುಸಂಧಾನವು ಅವನಿಗೆ ಆಗುವುದೆಂದು ನಾವು ಹೇಗೆ ನಿಶ್ಚಯಿಸಬಹುದು.

ಭೇದ- ಯೋಗಿಗೆ ಸುಖದುಃಖಾದಿ ಅನುಸಂಧಾನವಾಗುವುದು, ನಮ್ಮ ಪ್ರತ್ಯಕ್ಷಕ್ಕೆ ಗೋಚರವಾಗದಿದ್ದರೂ, ಅನುಸಂಧಾನವು ಇರುವದೆಂದು ಊಹಿಸಬಹುದು, ಹಾಗೆ ಅನುಸಂಧಾನವಿಲ್ಲದಿದ್ದರೆ, ಅನೇಕ ದೇಹಗಳನ್ನು ತೆಗೆದುಕೊಳ್ಳುವುದರಿಂದ, ಯೋಗಿಗೆ ಮತ್ತಾವ ಪ್ರಯೋಜನವೂ ಇರುವುದಿಲ್ಲ. ಪ್ರಯೋಜನವಿಲ್ಲದೆ ಜ್ಞಾನಿಯಾದವನು ಒಂದೂ ಕಾರ್ಯವನ್ನು ಮಾಡಲಾರನು.

ಐಕ್ಯ- ಅನುಸಂಧಾನವಿಲ್ಲದಿದ್ದರೂ ಅನೇಕ ದೇಹಗಳು ತೆಗೆದುಕೊಳ್ಳುವುದೇ ಒಂದು ಪ್ರಯೋಜನವೆಂದು ಏಕೆ ಭಾವಿಸಕೂಡದು.

ಭೇದ- ನಿಮ್ಮ ಮತರೀತ್ಯಾ ಯೋಗಿಗಳಲ್ಲದ ನಾವೆಲ್ಲರೂ ಲಕ್ಷಾಂತರ ದೇಹಗಳನ್ನು ಧರಿಸಿರುತ್ತೇವೆ. ಯೋಗಿಯು ಅದೇ ರೀತಿಯಾಗಿ ಅನುಸಂಧಾನವಿಲ್ಲದೆ, ಇಚ್ಛಾಪೂರ್ವಕವಾಗಿ ಅನೇಕ ದೇಹಗಳನ್ನು ಸ್ವೀಕರಿಸುವುದರಲ್ಲಿ ಏನು ವಿಶೇಷವಿರುವುದು. ಅನುಸಂಧಾನವಿದ್ದರೆ ಯೋಗಿಯ ದೇಹಧಾರಣೆಗೆ ಪ್ರಯೋಜನವಿರುವುದು. ಆದುದರಿಂದ ಜೀವರಿಗೆ, ಮತ್ತು ಜೀವಬ್ರಹ್ಮರಿಗೆ ಸ್ವರೂಪೈಕ್ಯವಿದ್ದರೆ ಸುಖದುಃಖಾದಿಭೋಗಾನುಸಂಧಾನವು ಒಂದೇ ರೀತಿಯಿಂದ ಇರಬೇಕು. ಭೇದವೇ ಪ್ರತ್ಯಕ್ಷಸಿದ್ಧವಾಗಿರುವುದು. ಜೀವನು ಅಲ್ಪಜ್ಞನು, ಅಲ್ಪಶಕ್ತನು ಆಗಿರುವನು. ಇದು ಎಲ್ಲರ ಅನುಭವಕ್ಕೂ ವೇದ್ಯವಾಗಿದೆ. ಪರಮಾತ್ಮನು ಸರ್ವಜ್ಞನು, ಸರ್ವಶಕ್ತನು ಆಗಿರುವನು. ಇವರಿಬ್ಬರಿಗೆ ಐಕ್ಯವು ಸರ್ವಥಾ ಕೂಡಲಾಗದು. ಆದುದರಿಂದ ನಿಮ್ಮ ಮತದಲ್ಲಿ ಅಡಿಗಟ್ಟಾಗಿರುವ ಅಜ್ಞಾನವು ಸಿದ್ಧಿಸುವುದಿಲ್ಲ. ಅಜ್ಞಾನ ಸಿದ್ಧಿಯಾಗದಿದ್ದರೆ ವಿಷಯಾಧಿಕಾರಿ ಪ್ರಯೋಜನಗಳು ಇಲ್ಲದೆ ಹೋಗುವುವು. ಇವುಗಳಿಲ್ಲದ ಮೇಲೆ ಸಂಬಂಧವೆಲ್ಲಿಯದು? ನೀವು ಹೇಳುವುದೇ ಶಾಸ್ತ್ರಾರ್ಥವಾದರೆ ಶಾಸ್ತ್ರವು ಅನಾರಂಭಣೀಯವಾಗುವುದು. ಆದರೆ ಅದು ಶಾಸ್ತ್ರಾರ್ಥವಲ್ಲ. ಶ್ರುತಿಗಳನ್ನು ಸರಿಯಾಗಿ ಪರ್ಯಾಲೋಚನೆಮಾಡಿದರೆ ಭೇದವೇ ಸತ್ಯವೆಂದೂ, ಪರಮಾತ್ಮನೇ ಸರ್ವೋತ್ತಮನೆಂದೂ ಜೀವರು ತದಧೀನರೆಂದೂ ಸ್ಪಷ್ಟವಾಗುವುದು.

ಐಕ್ಯ- ನೀವು ಹೇಳುವುದು ನಿಜವೆಂದು ಕಾಣುತ್ತದೆ. ಆದರೂ ನನ್ನ ಮನಸ್ಸಿನ ಸಂದೇಹವು ಸಂಪೂರ್ಣ ನಿವೃತ್ತಿಯಾಗಲಿಲ್ಲ. ನದಿಗಳು ಸಮುದ್ರವನ್ನು ಹೋಗಿ ಸೇರಿದಮೇಲೆ ಅದರೊಂದಿಗೆ ಐಕ್ಯವನ್ನು ಹೊಂದಿಲ್ಲವೆ. ಮತ್ತು ಘಟಮಠಗಳು ನಷ್ಟವಾದ ಮೇಲೆ, ಅವುಗಳಿಂದ ಪ್ರತ್ಯೇಕಿಸಲ್ಪಟ್ಟ ಆಕಾಶವು, ಅಖಂಡ ಆಕಾಶದೊಡನೆ ಐಕ್ಯಹೊಂದುವುದಿಲ್ಲವೇ? ಈ ವಿಷಯದಲ್ಲಿ ನೀವು ಹೇಳಿದುದು ನನ್ನ ಮನಸ್ಸಿಗೆ ಸಮರ್ಪಕವಾಗಲಿಲ್ಲ.

**ಭೇದ-** ನೀವು ಐಕ್ಯಕ್ಕೂ, ಸಾದೃಶ್ಯಕ್ಕೂ ಇರುವ ಭೇದವನ್ನು ತಿಳಿಯದೆ ಇರುವುದರಿಂದ ಈ ದೃಷ್ಟಾಂತಗಳು ನಿಮ್ಮನ್ನು ಭಾಧಿಸುತ್ತಿರುವುವು.ಅವೆರಡಕ್ಕೂ ಇರುವ ಭೇದವನ್ನು ಗ್ರಹಿಸಿದರೆ ವಿಷಯವು ಸುಲಭವಾಗಿ ತಿಳಿಯುವುದು. ಸುಭದ್ರೆಯನ್ನು ಅಪಹರಿಸಿದ ಸನ್ಯಾಸಿಗೂ, ವಿರಾಟನ ಮನೆಯಲ್ಲಿ ನಾಟ್ಯವನ್ನು ಕಲ್ಪಿಸುತ್ತಿದ್ದ ಬೃಹನ್ನಳಿಗೂ, ಕುರುಕ್ಷೇತ್ರದಲ್ಲಿ ಗೀತೋಪದೇಶವನ್ನು ಪಡೆದ ಅರ್ಜುನನಿಗೂ ಐಕ್ಯವಿದೆ. ಉಪಾಧಿಗಳು, ಅಂದರೆ ಹೊರಗಿನ ವೇಷಗಳು ಬೇರೆ ಬೇರೆಯಾಗಿದ್ದುವು. ನಾಲ್ಕು ಭಾಹುಗಳು ಚಕ್ರಶಂಖಾದ್ಯಾಯುಧಗಳು ಧರಿಸಿದ ಪೌಂಡ್ರಕವಾಸುದೇವನಿಗೂ, ಶ್ರೀ ಕೃಷ್ಣನಿಗೂ ಸಾದೃಶ್ಯವೇ ಹೊರತು ಐಕ್ಯವಲ್ಲ. ಎರಡು ವಸ್ತುಗಳು ಐಕ್ಯವೆಂದರೆ ಒಂದು ನಷ್ಟವಾದರೆ, ಇನ್ನೊಂದು ನಷ್ಟವಾಗಬೇಕು. ಒಂದಕ್ಕೆ ಸುಖವಾದರೆ ಇನ್ನೊಂದಕ್ಕೆ ಸುಖವಾಗಬೇಕು, ದುಃಖವಾದರೆ ಇನೊಂದಕ್ಕೂ ದುಃಖವಾಗಬೇಕು. ಹೀಗಾಗದಿದ್ದರೆ ಅವುಗಳಿಗೆ ಭೇಧವೇ ಸರಿ. ಎಷ್ಟು ಹೋಲಿಕೆ ಇದ್ದಾಗ್ಯೂ ಐಕ್ಯವಾಗುವುದಿಲ್ಲ. ನದಿಗಳಿಗೂ, ಸಮುದ್ರಕ್ಕೂ ಸಾದೃಶ್ಯವೇ ಹೊರತು ಐಕ್ಯವಿರುವುದಿಲ್ಲ. ಸಮುದ್ರವೆಂದರೆ ಅಸಂಖ್ಯಾತವಾದ ನೀರುಬಿಂದುಗಳ ಸಮೂಹವು. ಇದು ವಿಭಾಗಿಸಲು ಸಾಧ್ಯವಾಗುತ್ತದೆ. ಆದುದರಿಂದ ಒಂದು ಭಾಗವು ಆವಿಯಾಗಿ ಆಕಾಶದಲ್ಲಿ ಮೇಘರೂಪದಿಂದ ಇರುವುದು. ಇನ್ನೊಂದು ಭಾಗ ಮಳೆಯಾಗಿ ಸುರಿದು ನದಿ ಬಾವಿಗಳಲ್ಲಿ ತುಂಬುವುದು. ಈ ಎಲ್ಲಾ ನೀರಿಗೆ ಐಕ್ಯವಾದರೆ ಬಾವಿನೀರು ನಾವು ಕುಡಿದ ಕೂಡಲೆ ಸಮುದ್ರವು ಇಲ್ಲದೆ ಹೋಗಬೇಕು. ಆಕಾಶವು ಸಮುದ್ರಗಳು ಅಂಶಿಗಳು, ಭಾಗಗಳುಳ್ಳವುಗಳು. ಒಂದಂಶಕ್ಕೂ ಇನ್ನೊಂದಂಶಕ್ಕೂ ಸಾದೃಶ್ಯವಿರುವುದು. ಮತ್ತು ಒಂದಂಶಕ್ಕೂ, ಅಂಶಿಗೂ ಸಾದೃಶ್ಯವಿರುವುದು. ಅಂಶಗಳ ಸಮೂಹವೇ ಅಂಶಿ ಎನಿಸುವುದು. ಬ್ರಹ್ಮನು ಅಂಶಿ, ಜೀವರು ಅಂಶರು ಎಂದು ವ್ಯವಹಾರವಿದ್ದರೂ, ಆಕಾಶ ಸಮುದ್ರಗಳಂತೆ ಬ್ರಹ್ಮನು ವಿಭಾಗಿಸಲ್ಪಡುವವನಲ್ಲ, ಮತ್ತು ಜೀವರು ಅವನ ತುಂಡುಗಳಲ್ಲ. ಜೀವರು ಅಂಶರೆಂದರೆ ಎಳ್ಳಷ್ಟು ಪರಮಾತ್ಮನ ಸಾದೃಶ್ಯಉಳ್ಳವರೆಂದು ಅರ್ಥ. ದಾರಗಳು ಕೂಡಿ ವಸ್ತ್ರವಾದಂತೆ ಎಲ್ಲಾ ಜೀವರೂ ಕೂಡಿದರೆ ಪರಮಾತ್ಮನು ಆಗುವನು ಎಂದು ಅರ್ಥವಲ್ಲ. ಕೋಟಿ ಸೊನ್ನೆಗಳು ಸೇರಿದರೂ ಒಂದು ಎಂಬ ಸಂಖ್ಯೆ ಆಗಲಾರದು. ಸಮುದ್ರದ ನೀರು ಬಿಂದುಗಳಿಗೆ ಇರುವ ಭೇದವು ನಮಗೆ ಸ್ಪಷ್ಟವಾಗಿ ತಿಳಿಯುವುದಿಲ್ಲ. ಆಕಾಶದಲ್ಲಿರುವ ನಕ್ಷತ್ರಗಳಂತೆ ಅವು ಇರುವುವು. ನಕ್ಷತ್ರಗಳು ದೂರ'ಇರುವುದರಿಂದ ಅವುಗಳಲ್ಲಿ ಇರುವ ಭೇದವು ಸ್ಪಷ್ಟವಾಗಿ ನಮಗೆ ಗೊತ್ತಾಗುವುದು. ಒಂದು ನಕ್ಷತ್ರಕ್ಕೂ ಇನ್ನೊಂದು ನಕ್ಷತ್ರಕ್ಕೂ ಸಾದೃಶ್ಯವಿರುವುದೇ ಹೊರತು ಐಕ್ಯವಿರುವುದೇ? ವಸ್ತ್ರದಲ್ಲಿರುವ ನೂಲುಗಳಿಗೆ ಪರಸ್ಪರ ಸಾದೃಶ್ಯವಿರುವುದು, ಐಕ್ಯವಿರುವುದಿಲ್ಲ. ಮಾರೀಚನಿಗೂ, ಸೀತಾದೇವಿ ಎದುರಿಗೂ ತಿರುಗುತ್ತಿದ್ದ ಜಿಂಕೆಗೂ ಐಕ್ಯವಿತ್ತು. ಜಿಂಕೆಯು ಹತವಾಗಲೂ, ಮಾರೀಚನು ಹತನಾದನು. ಈ ದೃಷ್ಟಾಂತಗಳನ್ನು ನೋಡಲಾಗಿ ಪರಮಾತ್ಮನಿಗೂ, ಜೀವರಿಗೂ ಅತ್ಯಂತಭೇದವೇ ಇರುವುದೆಂದು ಸಿದ್ಧವಾಗುವುದು. "ದಾಸೋಹಂ" ಎಂದು ಉಪಾಸನೆ ಮಾಡುವುದೇ ಮುಕ್ತಿಗೆ ಕಾರಣವಾಗುವುದು. ಐಕ್ಯವು ಎಷ್ಟು ಮಾತ್ರಕ್ಕೂ ಸತ್ಯವಲ್ಲ.

**ಐಕ್ಯ-** ನೀವು ಹೇಳಿದುದು ಯುಕ್ತವೆಂದು ನನಗೆ ತೋರುವುದು. ಆಚಾರ್ಯರು ಮಾಡಿದ ಮಂಗಳ ಶ್ಲೋಕವನ್ನು ದೂಷಿಸಿದ ಅಪರಾಧವನ್ನು ಕ್ಷಮಿಸಬೇಕು. ಈ ಪುಸ್ತಕವನ್ನು ಕೊಟ್ಟರೆ ಇದನ್ನು ಓದಿ ಗುರುಮುಖದಿಂದ ತತ್ವವನ್ನು ತಿಳಿದು ಶ್ರೀಮದಾಚಾರ್ಯರ ಮಾರ್ಗಾನುಯಾಯಿ ಆಗಿ ಕೃತಾರ್ಥನಾಗುವೆನು.

**ಭೇದ-** ತಥಾಸ್ತು, ನಾವು ಮಂಗಳವನ್ನು ಹಾಡೋಣ.

ಉಭಯರೂ,

“ನಮೋಽಮಂದನಿಜಾನಂದಸಾಂದ್ರಸುಂದರಮೂರ್ತಯೇ
ಇಂದಿರಾಪತಯೇ ನಿತ್ಯಾನಂದಭೋಜನದಾಯಿನೇ ”॥

ಶ್ರೀ ಕೃಷ್ಣಾರ್ಪಣಮಸ್ತು.

– ಮಧ್ವಮುನೀಂದ್ರದಾಸ.



|| ಶ್ರೀಃ ||

# ಉಪಾಧಿಖಂಡನವು.

ವೇದವೇದಾಂತಸಿದ್ಧಾಂತನಿತಾಂತಪ್ರತಿಭಾಸಿತಂ ।
ಸಾದರಜ್ಞಾನವರದಂ ವಂದೇ ಶ್ರೀಪ್ರಾಣನಾಯಕಂ ॥

**ಶ್ರೀಮದ್ಧನುಮದ್ಭೀಮಮಧ್ವಾಂತರ್ಗತರಾಮಕೃಷ್ಣವೇದವ್ಯಾಸಾತ್ಮಕ**
**ಶ್ರೀಲಕ್ಷ್ಮೀಹಯಗ್ರೀವಾಯ ನಮಃ || ಹರಿಃ || ಓಂ ||**

**ಮೂ || ನಾರಾಯಣೋಽಗಣ್ಯಗುಣನಿತ್ಯೈಕನಿಲಯಾಕೃತಿಃ ।**
**ಅಶೇಷದೋಷರಹಿತಃ ಪ್ರೀಯತಾಂ ಕಮಲಾಲಯಃ ॥**

ಅ || ಅಗಣ್ಯಗುಣನಿತ್ಯೈಕನಿಲಯಾಕೃತಿಃ=ಎಣಿಸಲಶಕ್ಯಗಳಾದ (ಜ್ಞಾನಾನಂದಾದಿ) ಗುಣಗಳಿಗೆ ಯಾವಾಗಲೂ ಮುಖ್ಯವಾದ ಆಶ್ರಯವಾಗಿ ಸ್ವರೂಪವುಳ್ಳ, ಅಶೇಷದೋಷರಹಿತಃ= ಸರ್ವದೋಷ ಶೂನ್ಯನಾದ, ಕಮಲಾಲಯಃ=ಲಕ್ಷ್ಮೀಪತಿಯಾದ, ನಾರಾಯಣಃ=ಶ್ರೀ ಪರ ಮಾತ್ಮನು (ನಮಗೆ), ಪ್ರೀಯತಾಂ=ಸಂತುಷ್ಟನಾಗಲಿ (ಪ್ರಸಾದವನ್ನು ಮಾಡಲಿ).

ತಾ || ವೇದಾದಿಶಾಸ್ತ್ರಗಳು (1) ವಿಷಯ, (2) ಪ್ರಯೋಜನ, (3) ಅಧಿಕಾರಿ, (4) ಸಂಬಂಧ ಇವುಗಳಿಂದ ಕೂಡಿಕೊಂಡು ಇರುವವು. ಇದರಲ್ಲಿ ದ್ವೈತಾದ್ವೈತಗಳು ವೈದಿಕಗಳಂತೆ ಕಾಣಿಸಿದರೂ, "ವೇದಾದಿ ಶಾಸ್ತ್ರಗಳಿಗೆ" ವಿಷಯವು ಯಾವದು, ಅಧಿಕಾರಿಯು ಯಾರು, ಪ್ರಯೋಜನವು ಎಂತಹುದು ಎಂಬೀ ವಿಷಯಗಳಲ್ಲಿ ವಿರುದ್ಧಾಭಿಪ್ರಾಯಗಳಿರುವವು. ಜೀವನು ಪರಮಾತ್ಮನಿಂದ ಅತ್ಯಂತ ಭಿನ್ನನು. ಆತನಿಗೆ ಅನಾದಿಗಳಾದ ಅವಿದ್ಯಾಕಾಮಕರ್ಮಾದಿಗಳಿಂದ ಒಂದು ವಿಧ ಬಂಧವಿರುವುದು, ಇದು ಜೀವನ ದುಃಖಾದಿಗಳಿಗೆ ಕಾರಣವಾಗಿರುವುದು. ಇವುಗಳು ಪರಮಾತ್ಮನ ಪ್ರತ್ಯಕ್ಷ, ಪರಮಪ್ರಸಾದದಿಂದ ನಾಶಹೊಂದುವುದು. ಆತನ ಪ್ರತ್ಯಕ್ಷವು ಶಾಸ್ತ್ರದಿಂದ ಪರಮಾತ್ಮನ ಸ್ವರೂಪವನ್ನು ಯಥಾರ್ಥವಾಗಿ ತಿಳಿದು ಉಪಾಸನೆಯನ್ನು ಮಾಡುತ್ತಿದ್ದರೆ ಕ್ರಮ ದಿಂದಾಗುವುದು, ಆ ಪರಮಾತ್ಮನು ಅನಂತಕಲ್ಯಾಣಗುಣಪೂರ್ಣ ದೋಷಲೇಶರಹಿತವಾದ ಸ್ವರೂಪವುಳ್ಳವನೆಂದು ಬೋಧಿಸುವುದಕ್ಕಾಗಿ ಸಕಲ ವೇದಗಳು ಪ್ರವರ್ತಿಸುತ್ತಿವೆ, ಇದಕ್ಕೆ ಸಹಕಾರಿಯಾಗಿ ಬ್ರಹ್ಮಮೀಮಾಂಸಾ ಶಾಸ್ತ್ರವು ಬಾದರಾಯಣಾಚಾರ್ಯರಿಂದ ರಚಿಸಲ್ಪಟ್ಟಿದೆ, ಇದಕ್ಕೆ ಅನಂತಕಲ್ಯಾಣಗುಣಪೂರ್ಣನಾದ ದೋಷಲೇಶರಹಿತನಾದ ಜೀವಜಡಗಳಿಂದ ಅತ್ಯಂತ ಭಿನ್ನನಾದ ಪರಮಾತ್ಮನೇ ವಿಷಯನು, ತಜ್ಜ್ಞಾನಪ್ರಸಾದದ್ವಾರಾ ಬಂಧನಿವೃತ್ತಿಪೂರ್ವಕ ಸ್ವರೂ ಪಾನಂದಾವಿರ್ಭಾವರೂಪ ಮೋಕ್ಷವೇ ಪ್ರಯೋಜನವು, ಭಕ್ತಿಶಮಾದಿಯುಕ್ತನಾಗಿ ಆ ಪರಮಾ ತ್ಮನ ತಿಳಿಯಲಿಚ್ಛಿಸುವ ಜೀವನೇ ಅಧಿಕಾರಿಯು, ಎಂದು ಆ ಶಾಸ್ತ್ರವು ಬೋಧಿಸುತ್ತದೆ ಎಂದು ದ್ವೈತಿಗಳು ಹೇಳುವರು.

ಹಿಂದೆ ಹೇಳಿದ ಸಿದ್ಧಾಂತಕ್ಕೆ ವಿರುದ್ಧವಾಗಿ ಜೀವನು ಪರಮಾತ್ಮನ ಸ್ವರೂಪನು. ಈತ ನಿಗೆ ನಾನು ಪರಮಾತ್ಮನಿಂದ ಭಿನ್ನನೆಂದು ಮೊದಲಾದಾಕಾರವಾದ ಅಜ್ಞಾನವಿದೆ. ಇದರಿಂದಲೇ ದುಃಖಾದ್ಯನರ್ಥವು. ಇದು ಅಪರಮಾರ್ಥವಾದುದು. ಈ ಅಜ್ಞಾನವು, ಮತ್ತೂ ತತ್ಕಾರ್ಯ ದುಃಖಾದಿಯು (ಅಹಂ ಬ್ರಹ್ಮಾಸ್ಮಿ) ನಾನು ಪರಮಾತ್ಮನೆನ್ನುವ ಅದ್ವೈತಜ್ಞಾನದಿಂದ ನಿವೃತ್ತ

ವಾಗುವುದು. ಈ ಜ್ಞಾನವನ್ನು ಹುಟ್ಟಿಸುವುದಕ್ಕೆ ಸಕಲ ವೇದಾಂತಶಾಸ್ತ್ರಗಳು ಪ್ರವರ್ತಿಸುತ್ತವೆ. ಇದಕ್ಕೆ ಇತಿಕರ್ತವ್ಯತಾರೂಪವಾದ ಸಹಕಾರಿಯಾದುದು ಬ್ರಹ್ಮಮೀಮಾಂಸಾ ಶಾಸ್ತ್ರವು. ಇದಕ್ಕೆ ಜೀವಬ್ರಹ್ಮಾತ್ಮೈಕ್ಯವೇ ವಿಷಯವು. ಅದ್ವೈತಜ್ಞಾನದ್ವಾರಾ ಅಜ್ಞಾನನಿವೃತ್ತಿಯೇ ಪ್ರಯೋಜನವು. ಇದನ್ನು ತಿಳಿಯಲಿಚ್ಛಿಸುವವನು ಅಧಿಕಾರಿಯು, ಯಥಾಯೋಗ್ಯವಾಗಿ ಸಂಬಂಧವು. ಎಂದು ಅದ್ವೈತವಾದಿಗಳು ಹೇಳುವರು. ಇವರು ಹೇಳುವ ವಿಷಯಾದಿಗಳನ್ನೂ ದೂಷಿಸಿ ಹಿಂದೆಹೇಳಿದ ವಿಷಯಾದಿಗಳನ್ನೂ ಶಾಸ್ತ್ರಕ್ಕೆ ಸಾಧಿಸುವುದಕ್ಕಾಗಿ ಈಪ್ರಕರಣವನ್ನು ಶ್ರೀಮದಾಚಾರ್ಯರು ಆರಂಭಿಸುವವರಾಗಿ ಮೇಲಿನ ಮಂಗಳಶ್ಲೋಕವನ್ನು ನಿಬಂಧನ ಮಾಡಿದರು.

**ಮೂ || ಅಜ್ಞತಾಽಖಿಲಸಂವೇತ್ತುರ್ಘಟತೇ ನ ಕುತಶ್ಚನ ||**

ಅ || ಅಖಿಲಸಂವೇತ್ತುಃ, ಅಖಿಲ=ಎಲ್ಲವನ್ನೂ, ಸಂವೇತ್ತುಃ=ತಿಳಿಯುವವನಿಗೆ (ಸರ್ವಜ್ಞಗೆ), ಅಜ್ಞತಾ=ಅಜ್ಞಾನವು, ಕುತಶ್ಚನ=ಯಾವವಿಷಯದಲ್ಲಿಯೂ, ನ ಘಟತೇ=ಕೂಡುವುದಿಲ್ಲವು.

ತಾ || (ಅಹಂ ಇದಂ ಜಾನಾಮಿ), 'ನಾನು ಇದನ್ನು ತಿಳಿಯುತ್ತೇನೆ' ಎಂದಿದು ಜ್ಞಾನಾಕಾರವು. ಇಲ್ಲಿ 'ತಿಳಿಯುತ್ತೇನೆ' ಎಂಬುವುದು ಜ್ಞಾನವು. ಆ ಜ್ಞಾನಕ್ಕೆ 'ಇದನ್ನು' ಎಂಬುವುದು ವಿಷಯವು. "ನಾನು" ಎಂಬುವುದು ಆಶ್ರಯವು. (ಅಹಂ ಇದಂ ನ ಜಾನಾಮಿ) 'ನಾನು ಇದನ್ನು ತಿಳಿಯದವನಾಗಿರುತ್ತೇನೆ' ಎಂದಿದು ಅಜ್ಞಾನಾಕಾರವು. ಇದರಲ್ಲಿ 'ನ ಜಾನಾಮಿ' ಎಂಬುವುದು ಅಜ್ಞಾನವು. 'ಇದನ್ನು' ಎನ್ನುವುದು ವಿಷಯವು. 'ನಾನು' ಎನ್ನುವುದು ಆಶ್ರಯವು. ಆಶ್ರಯ ವಿಷಯಗಳು ಇಲ್ಲದೆ ಜ್ಞಾನಾಜ್ಞಾನಗಳು ಇರಲಾರವು. ಮತ್ತು ಜ್ಞಾನದಿಂದ ಅಜ್ಞಾನವು ನಾಶಹೊಂದಲ್ಪಡುವುದರಿಂದ ಪರಮಾತ್ಮನಿಗೆ ಯಾವುದೊಂದು ವಿಷಯದಲ್ಲಿಯೂ ಅಜ್ಞಾನವು ಇರುವುದಿಲ್ಲವು. ಆತನು ಸರ್ವವಿಷಯಕ ಜ್ಞಾನವುಳ್ಳವನಾದುದರಿಂದ ಅಜ್ಞಾನಕ್ಕೆ ಆಶ್ರಯನಾಗುವುದಿಲ್ಲವು. ಸರ್ವವೂ ಆತನ ಜ್ಞಾನಕ್ಕೆ ವಿಷಯವಾದುದರಿಂದ ನಾರಾಯಣನು ಅಗಣ್ಯಗುಣನೆಂದರೆ ಅದ್ವೈತವಾದಿಗಳು ಆಕ್ಷೇಪಿಸುವರು. ಜೀವಬ್ರಹ್ಮೈಕ್ಯವೇ ಸಕಲ ಶಾಸ್ತ್ರಕ್ಕೆ ಮುಖ್ಯ ಪ್ರತಿಪಾದ್ಯವು. 'ನಾರಾಯಣನು ಸದಾ ಅನಂತಗುಣನು, ಜೀವನು ಅಲ್ಪಗುಣನು' ಎಂಬಾದರೆ ಅನಂತಗುಣನಿಗೂ, ಅಲ್ಪಗುಣನಿಗೂ ಐಕ್ಯವು ಕೂಡಲಾರದು. ಪರಸ್ಪರ ವಿರುದ್ಧ ಧರ್ಮವುಳ್ಳ ಬೆಂಕಿ ನೀರುಗಳಂತೆ ಒಂದಾಗದೆ ಇರಬೇಕಾಗುವುದು. ಹಾಗಾದರೆ ಶಾಸ್ತ್ರವು ಹಿಂದೆ ಹೇಳಿದ ವಿಷಯ ಪ್ರಯೋಜನಾಧಿಕಾರಿ ಸಂಬಂಧಗಳು ಇಲ್ಲದೆ ಅನಾರಂಭಣೀಯವಾಗಬೇಕಾಗುವುದು. ನಾರಾಯಣನಿಗೆ ಅಗಣ್ಯಗುಣವಿರುವುದು ಪಾರಮಾರ್ಥಿಕವಲ್ಲವು. ಮತ್ತು ಅಪಾರಮಾರ್ಥಿಕವೆಂದು ಹೇಳಿದರೇನೇ ಆ ಜೀವಬ್ರಹ್ಮೈಕ್ಯವು ಕೂಡುವುದು. ಆದ್ದರಿಂದ ನಾರಾಯಣನು ಅಗಣ್ಯಗುಣನೆಂದು ಹೇಳಿದುದು ಅಸಂಗತವು.

ಈ ವಿಧವಾಗಿ ಸಾಧಿಸುವ ಅದ್ವೈತವಾದದ ರೀತಿಯಿಂದ ಶಾಸ್ತ್ರಕ್ಕೆ ವಿಷಯಾದಿಗಳೇ ಕೂಡುವುದಿಲ್ಲವು. ಏತಕ್ಕೆಂದರೆ ಇವುಗಳೆಲ್ಲವೂ ಅಜ್ಞಾನದಿಂದ ಕಲ್ಪಿಸಿಕೊಂಡಿವೆ ಎಂದು ಅದ್ವೈತಿಗಳು ಸಾಧಿಸುವರು. ಅಂತಹ ಅಜ್ಞಾನವೇ ಸಿದ್ಧಿಸುವುದಿಲ್ಲವೆಂದು ಶ್ರೀಮದಾಚಾರ್ಯರು ಹೇಳುವರು.

ಆ ಅಜ್ಞಾನಕ್ಕೆ ವಿಷಯವು ಕೂಡಾ ಇಲ್ಲವು. ಜ್ಞಾನಕ್ಕೆ ವಿಷಯವಾದುದು ಅದೇಕಾಲದಲ್ಲಿ ಅದೇ ಮನುಷ್ಯನಿಗೆ ಅಜ್ಞಾನಕ್ಕೆ ವಿಷಯವಾಗುವುದಿಲ್ಲವು. ಆದುದರಿಂದ ಜ್ಞಾನಾಶ್ರಯನು ಅಜ್ಞಾನಾಶ್ರಯನಾಗುವುದಿಲ್ಲ. ಆಶ್ರಯವಿಷಯಗಳಿರದಿರುವುದರಿಂದ ಪರಮಾತ್ಮನು ಅಜ್ಞಾನಾ

ಶ್ರಯನೆನ್ನುವ ಅದ್ವೈತವಾದವು ಅಸಂಗತವು. ಇಲ್ಲಿ "ಅಸಂಗೋಽಹ್ಯಯಂ ಪುರುಷಃ" ಈಶ್ವರನು ಅಸಂಗನು. ಸರ್ವವಿಷಯಾದಿ ಸಂಬಂಧವಿಲ್ಲದವನು ಎನ್ನುವ ವೇದವಚನ ವಿರೋಧ ಬರುವುದರಿಂದ ಸರ್ವವಿಷಯಕ ಜ್ಞಾನವುಳ್ಳವನು ಈಶ್ವರನಾಗಬೇಕಾದರೆ ಅಜ್ಞಾನದಿಂದಲೇ ಆಗಬೇಕು. ಆದುದರಿಂದ ಈಶ್ವರನು ಅಜ್ಞಾನಾಶ್ರಯನಾಗುವನೆಂದು ಪ್ರತಿವಾದಿಯ ಆಕ್ಷೇಪವು ಬರುವುದು. ಆದರೆ ಹಿಂದಿನ ಶ್ರುತಿಯಲ್ಲಿ ತೋರುವ ಅಸಂಗನೆನ್ನುವುದಕ್ಕೆ ವಿಷಯಾದಿ ಸಂಬಂಧ ವಿರದವನೆಂದರ್ಥವಲ್ಲವು. ಹಾಗೆ ಹೇಳುವುದಾದರೆ "ಸರ್ವಗತನು ಸರ್ವವ್ಯಾಪ್ತನು" (ಸರ್ವ ಸಂಬಂಧವಿರುವವನು) ಎನ್ನುವುದಕ್ಕೆ ವಿರುದ್ಧವಾಗುವುದು. ಕಿಂತು ಅಸಂಗನೆಂದರೆ ಬೇರೆ ವಸ್ತುವಿನ ಸಂಬಂಧದಿಂದುಂಟಾಗುವ ಪುಣ್ಯಪಾಪಾದಿಲೇಪವಿರದವನು ಎಂದೇ ಅರ್ಥವು ಪರಮಾತ್ಮನಲ್ಲಿ ಇದೇ ಅಸಂಗತ್ವವೆನ್ನುವುದು ಭಗವದ್ಗೀತೆಯ ಶ್ರೀಕೃಷ್ಣನ ವಾಕ್ಯದಿಂದ ನಿಶ್ಚಿತವಾಗುವುದು.

"ಯಥಾಕಾಶಸ್ಥಿತೋ ನಿತ್ಯಂ ವಾಯುಃ ಸರ್ವತ್ರಗೋ ಮಹಾನ್ ।
ತಥಾ ಸರ್ವಾಣಿ ಭೂತಾನಿ ಮತ್ಸ್ಥಾನೀತ್ಯುಪಧಾರಯ ॥"(ಅ೯. ಶ್ಲೋ೬.)

ಮತ್ತು ಪರಮಾತ್ಮಗೆ ಅದ್ವೈತವಾದಿಗಳು ಹೇಳುವಂತೆ ಭ್ರಾಂತ್ಯಾದಿಗಳಿಂದ ಸರ್ವಜ್ಞತ್ವವಲ್ಲವು. ಪರಂತು, ಸ್ವರೂಪಜ್ಞಾನದಿಂದಲೇ. ಎನ್ನುವ ವಿಷಯವನ್ನು 'ಅಖಿಲ ಸಂವೇತ್ತುಃ' ಎನ್ನುವಲ್ಲಿ 'ಸಂವೇತೃ' ಎನ್ನುವ ಸ್ವಭಾವಾರ್ಥಕತೃಪ್ರತ್ಯಯದಿಂದ ಜ್ಞಾಪಿಸುವರು.

ಈಗ ಅದ್ವೈತವಾದದಲ್ಲಿ ಸರ್ವಜ್ಞನಾದ ಪರಬ್ರಹ್ಮಗೆ ಬೇರೆ ವಿಧದಿಂದ ಅಜ್ಞಾನವು ಸಂಗತವಾಗುವುದೆಂದು ಶಂಕಿಸಿಕೊಂಡು ನಿರಾಕರಿಸುವರು.—

**ಮೂ ॥ ಉಪಾಧಿಭೇದಾದ್ಘಟತ ಇತಿ ಚೇತ್ಸಸ್ವಭಾವತಃ ॥ ೨ ॥**
**ಅಜ್ಞಾನತೋ ವಾ ದ್ವೈತಸ್ಯ ಸತ್ಯತಾ ಸ್ವತ ಏವ ಚೇತ್ ।**
**ಅನವಸ್ಥಿತಿರಜ್ಞಾನ ಹೇತೌ ವಾಽನ್ಯೋನ್ಯಸಿದ್ಧಿತಾ ॥ ೩ ॥**

ಅ ॥ (ಹಿಂದೆ ಹೇಳಿದ ಅಜ್ಞಾನವು) ಉಪಾಧಿಭೇದಾತ್=ಅಂತಃಕರಣಾದಿರೂಪೋಪಾಧಿ ನಿಮಿತ್ತಕ ಭೇದದ ದೆಸೆಯಿಂದ, ಘಟತೇ=ಕೂಡುವುದು, ಇತಿ ಚೇತ್=ಹೀಗಂದರೆ, ಸಃ=ಆ ಉಪಾಧಿಯು, ಸ್ವಭಾವತಃ=ಸ್ವಾಭಾವಿಕವಾದುದೋ, (ಬೇರೊಂದರಿಂದ ಕಲ್ಪಿಸಿಕೊಳ್ಳದಾಗದಿರುವುದೋ) ಅಜ್ಞಾನತೋ ವಾ=ಅಜ್ಞಾನದ ದೆಸೆಯಿಂದ ಹುಟ್ಟಿದುದೋ ಎಂದೆರಡು ವಿಧವಾಗಿ ವಿಕಲ್ಪಿಸಿಕೊಂಡು ಮೊದಲನೇ ಪಕ್ಷವನ್ನು ದೂಷಿಸುವರು. ಸ್ವತ ಏವ ಚೇತ್=ಆ ಉಪಾಧಿಯು ಸ್ವಾಭಾವಿಕವೆಂದು ಪ್ರಥಮ ಪಕ್ಷವನ್ನಂಗೀಕರಿಸಿದರೆ, ದ್ವೈತಸ್ಯ=ಬ್ರಹ್ಮನ ದೆಸೆಯಿಂದ ದ್ವಿತೀಯವಾದ ಉಪಾಧಿಗೆ, ಸತ್ಯತಾ=ಸತ್ಯತ್ವ (ಪಾರಮಾರ್ಥಿಕತ್ವ)ವು, ಸ್ಯಾತ್=ಸಂಭವಿಸಲಿ. ಆವಾಗ ಅದ್ವೈತ ವಾದಕ್ಕೆ ಭಂಗಬರುವುದು. ಎರಡನೆಯ ಪಕ್ಷವನ್ನು ದೂಷಿಸುವರು ಅಜ್ಞಾನಹೇತೌ=ಅಜ್ಞಾನಕ್ಕೆ ಹೇತುವಾದ ಉಪಾಧಿಯು. ಅಜ್ಞಾನಹೇತೌ=ಅಜ್ಞಾನವೇ ಹೇತುವಾಗಿಯುಳ್ಳುದು. (ಅಜ್ಞಾನದ ದೆಸೆಯಿಂದ ಹುಟ್ಟಿದುದು.) ಎಂದು ಒಪ್ಪಿಕೊಂಡರೆ, ಅನವಸ್ಥಿತಿಃ=ಅನವಸ್ಥೆಯು ಬರುವುದು. (ಉಪಾಧಿಯ ದೆಸೆಯಿಂದ ಅಜ್ಞಾನವು, ಅಜ್ಞಾನದ ದೆಸೆಯಿಂದ ಉಪಾಧಿಯು ಹುಟ್ಟುವುದು. ಎಂದೀರೀತಿಯಾಗಿ ಉಪಾಧ್ಯಜ್ಞಾನಪರಂಪರೆಗೆ ಅಂತವಿರದಿರುವುದರಿಂದ ಯಾವುದರಿಂದಲೂ, ಯಾವುದೂ ಕಲ್ಪಿಸಿಕೊಳ್ಳುವುದಿಲ್ಲವು. ಅದನ್ನು ತಿಳಿಯುವುದಕ್ಕೂ ಆಗುವುದಿಲ್ಲವು. ಹೀಗೆಂದು ಅನವಸ್ಥಾದೋಷವು ಬರುವುದು.) ಅನೇಕಾಜ್ಞಾನವು ಅನೇಕೋಪಾಧಿಯಿಂದು ಹೇಳದೆ, ಒಂದು ಅಜ್ಞಾನವು, ಒಂದುಪಾಧಿಯು, ಇವುಗಳು

ಪರಸ್ಪರ ನಿಮಿತ್ತಗಳೆಂದಂಗೀಕರಿಸಿದರೆ ಅದನ್ನು ದೂಷಿಸುವರು. 'ವಾ' ಹಿಂದೆ ಹೇಳಿದ ವ್ಯವಸ್ಥೆಯನ್ನಂಗೀಕರಿಸಿದರೆ, 'ಅನ್ಯೋನ್ಯಸಿದ್ಧಿತಾ' ಅಜ್ಞಾನೋಪಾಧಿಗಳಿಗೆ ಅನ್ಯೋನ್ಯಾಶ್ರಯವೆನ್ನುವ ದೋಷವು ಸಂಭವಿಸುವುದು. ॥ ೨ ॥

ತಾ ॥ ಅದ್ವೈತವಾದಿಗಳಲ್ಲಿ ಕೆಲವರು ಬ್ರಹ್ಮನಲ್ಲಿ ಅಜ್ಞಾನವನ್ನು ಕೆಲವರು ಜೀವನಲ್ಲಿ ಅಜ್ಞಾನವನ್ನು ಅಂಗೀಕರಿಸುವರು. ಹೀಗಿರಲು ಹಿಂದೆ "ಅಜ್ಞತಾಽಖಿಲಸಂವೇತ್ತುಃ" ಎನ್ನುವುದರಿಂದ (1) ಸರ್ವಜ್ಞನಾದ ಬ್ರಹ್ಮನಿಗಜ್ಞಾನವು ಸಲ್ಲದೆಂದು ದೂಷಿಸಿದರೂ, ವಾಚಸ್ಪತಿಪಕ್ಷದಂತೆ (2) ಜೀವನಿಗಜ್ಞಾನವು ಸಂಗತವಾಗುವುದು, ಜೀವಬ್ರಹ್ಮೈಕ್ಯವಾದದಲ್ಲಿ ಬ್ರಹ್ಮನಲ್ಲಿ ಅಜ್ಞಾನವಿಲ್ಲವೆನ್ನುವುದರಿಂದ ಜೀವನಲ್ಲಿಯೂ ಅಜ್ಞಾನವಿಲ್ಲವೆಂತಲೇ ಆಗುವುದು. ಆದರೂ ಮುಖವು ಭೇದವಿಲ್ಲದೆ ಒಂದೇಯಾಗಿದ್ದರೂ ಕನ್ನಡಿಯನ್ನು ಮುಖದಿದಿರು ಹಿಡಿದರೆ ಕನ್ನಡಿಯಲ್ಲಿನ್ನೊಂದು ಮುಖವು ಕಾಣಿಸುವುದು. ಇಲ್ಲಿ ನಿಜವಾದ ಮುಖವು ಬಿಂಬವೆಂತಲೂ ಕನ್ನಡಿಯು ಉಪಾಧಿ ಎಂದು ಕನ್ನಡಿಯಲ್ಲಿ ಕಾಣಿಸುವ ಮುಖದ ಛಾಯೆಯು ಪ್ರತಿಬಿಂಬ (ಪ್ರತಿಮುಖ) ವೆಂತಲೂ ಹೇಳಿಸಿಕೊಳ್ಳಲ್ಪಡುವುವು. ಇದರಲ್ಲಿ ಬಿಂಬವಾದ ಒಂದು ಮುಖವು ನಿಜವಾದುದು. ಪ್ರತಿಬಿಂಬವಾದ ಎರಡನೆಯ ಮುಖವು ಕನ್ನಡಿಯೆನ್ನುವ ಉಪಾಧಿಯಿಂದ ಕಲ್ಪಿತವಾದುದು. ಬಿಂಬವಾದ ಮುಖವು ಸ್ವಚ್ಛವಾಗಿದ್ದರೂ, ಕನ್ನಡಿಯ ಕಲೆಮೊದಲಾದ ದೋಷಗಳು ಪ್ರತಿಮುಖದಲ್ಲಿ ಹೇಗೆ ತೋರುವವೋ. ಅದರಂತೆ ಬ್ರಹ್ಮನು ಬಿಂಬನು. ಅಂತಃಕರಣವು ಉಪಾಧಿಯು, ಜೀವನು ಪ್ರತಿಬಿಂಬನು. ಅ ಉಪಾಧಿಯಾದ ಅಂತಃಕರಣದ ದೋಷವಾದ ಅಜ್ಞಾನವು ಪ್ರತಿಬಿಂಬನಾದ ಜೀವನಲ್ಲಿ ತೋರುವುದು. ಆದುದರಿಂದ ಹಿಂದೆ ಹೇಳಿದ ಅಜ್ಞತೆಯು ಜೀವನಲ್ಲಿ ಸಂಗತವಾಗುವುದು. ಹೀಗೆಂದು ವಾದಿಸುವ ವಾದವು ಯುಕ್ತವಾಗುವುದಿಲ್ಲವು, ಹೇಗೆಂದರೆ, ಈ ಉಪಾಧಿಯು ಕಲ್ಪಿತವಲ್ಲದ ಸತ್ಯವೆಂದರೆ, ಬ್ರಹ್ಮನೊಂದು ಸತ್ಯವು. ಈ ಉಪಾಧಿಯೊಂದು ಸತ್ಯವು—ಎಂದು ಎರಡು ಸತ್ಯಗಳು ಪ್ರಸಕ್ತಗಳಾಗುವವು. ಹೀಗೆಂದರೆ ಒಂದೇ ಸತ್ಯವೆನ್ನುವ ಅದ್ವೈತವಾದವು ಒಡೆದು ಹೋಗುವುದು, ಆಗ **ಅಪಸಿದ್ಧಾಂತ** ದೋಷವು ಬರುವುದು. ಅಜ್ಞಾನದಿಂದ ಉಪಾಧಿಯು ಕಲ್ಪಿತವಾಗುವುದೆಂದರೆ, ಅಜ್ಞಾನದಿಂದ ಉಪಾಧಿಯು, ಕಲ್ಪಿತವು. ಆ ಉಪಾಧಿಯಿಂದ ಬೇರೊಂದು ಅಜ್ಞಾನವು ಕಲ್ಪಿತವು. ಪುನಃ ಆ ಅಜ್ಞಾನದಿಂದ ಬೇರೊಂದು ಉಪಾಧಿಯು, ಉಪಾಧಿಯಿಂದ ಅಜ್ಞಾನವು, ಎಂದನೇಕಾಜ್ಞಾನೋಪಾಧಿಗಳನ್ನು ಕಲ್ಪಿಸಿದರೆ **ಅನವಸ್ಥೆ**ಯೆನ್ನುವ ದೋಷವು ಸಂಭವಿಸುವದು. ಒಂದಜ್ಞಾನವು, ಒಂದುಪಾಧಿಯೆಂದೆರಡೇ ಒಂದರಿಂದೊಂದು ಕಲ್ಪಿತವೆಂದರೆ ಅನ್ಯೋನ್ಯಾಶ್ರಯತ್ವವು. ॥ ೩ ॥

ಉಪಾಧಿಯು ಅಜ್ಞಾನಕಲ್ಪಿತವು, ಅಜ್ಞಾನವು ಉಪಾಧಿಕಲ್ಪಿತವು, ಎಂದಂಗೀಕರಿಸುವದಾದರೆ ಹಿಂದೆ ಹೇಳಿದ ಅನ್ಯೋನ್ಯಾಶ್ರಯತ್ವವು ಬರುವುದು. ಹಾಗಲ್ಲವು. ಉಪಾಧಿಯು ಅಜ್ಞಾನಕಲ್ಪಿತವೆಂದಂಗೀಕರಿಸುವೆನು. ಅಜ್ಞಾನವು( ಅಂತಃಕರಣಾದಿ) ಉಪಾಧಿಕಲ್ಪಿತವೆಂದಂಗೀಕರಿಸುವುದಿಲ್ಲವು. ಆದುದರಿಂದ ಅನ್ಯೋನ್ಯಾಶ್ರಯತ್ವವಿಲ್ಲವು. ಪರಂತು, ಜೀವಬ್ರಹ್ಮಭೇದವೇ ಉಪಾಧಿಕಲ್ಪಿತವು. ಆದುದರಿಂದ ಬ್ರಹ್ಮಭಿನ್ನನಾದ ಜೀವಗೆ 'ಅಜ್ಞತಾ' ಕೂಡುವುದು ಎಂದಾಶಂಕಿಸಲು ಅದನ್ನು ಪರಿಹರಿಸುವರು.

**ಮೂ ॥ ಚಕ್ರಕಾಪತ್ತಿರಥವಾ ॥ ೪ ॥**

**ಅ** ॥ ಅಥವಾ = ಹಿಂದೆ ಹೇಳಿದ ಪಕ್ಷವನ್ನು ಬಿಟ್ಟು ಪೂರ್ವೋಕ್ತರೀತಿಯಿಂದ ಪಕ್ಷಾಂತರವನ್ನಂಗೀಕರಿಸಿದರೆ, **ಚಕ್ರಕಾಪತ್ತಿಃ**=ಚಕ್ರಕಾಶ್ರಯತ್ವದೋಷವು ಆಪಾದಿಸಲ್ಪಡು

ವುದು. ಅಥವಾ=ಅಥ, ಹಿಂದೆ ಹೇಳಿದ ಪಕ್ಷವನ್ನು ಬಿಟ್ಟು ಪೂರ್ವೋಕ್ತರೀತ್ಯಾ ಪಕ್ಷಾಂತರವನ್ನಂಗೀಕರಿಸಿದರೆ ಚಕ್ರಕಾಪತ್ತಿಃ = ಚಕ್ರಕಾಶ್ರಯತ್ವದೋಷವು ಆಪಾದಿಸಲ್ಪಡುವುದು. ವಾ=ಅಂತಃಕರಣಾದಿಯೇ ಜೀವಬ್ರಹ್ಮಭೇದಹೇತುವಾದ ಉಪಾಧಿಯೆಂದಂಗೀಕರಿಸುವ ವಾಚಸ್ಪತಿಪಕ್ಷದ ದೆಸೆಯಿಂದ ಅನ್ಯವಾದ ಅಜ್ಞಾನವೇ ಜೀವಬ್ರಹ್ಮಭೇದಹೇತುವಾದ ಉಪಾಧಿಯುಂದಂಗೀಕರಿಸುವ ವಿವರಣಕಾರಪಕ್ಷದಲ್ಲಿ ''ಆತ್ಮಾಶ್ರಯತ್ವಾದಿಕಮಿತಿ'' ಆತ್ಮಾಶ್ರಯತ್ವಾದಿದೋಷವು ಬರುವುದು. ಅದ್ವೈತಭಾಷ್ಯಕ್ಕೆ ವಾಚಸ್ಪತ್ಯವು ವಿವರಣವು ಎಂದೆರಡು ಟೀಕೆಗಳು. ವಾಚಸ್ಪತಿ ಪಕ್ಷದಲ್ಲಿ ಜೀವಬ್ರಹ್ಮಭೇದದಲ್ಲಿ ಅಂತಃಕರಣಶರೀರಾದಿಯು ಉಪಾಧಿಯು, ವಿವರಣಕಾರ ಪಕ್ಷದಲ್ಲಿ ಅಜ್ಞಾನವೇ ಉಪಾಧಿಯು ಎಂದೆರಡು ವಿಧವು.

ತಾ || ಹಿಂದೆ ಅಜ್ಞಾನವು, ಅಂತಃಕರಣಾದಿಯು ಎಂದೆರಡು ಪರಸ್ಪರ ಕಲ್ಪಿತಗಳೆಂದರೆ ಅನ್ಯೋನ್ಯಾಶ್ರಯತ್ವವನ್ನು ಹೇಳಿದರು. ಈಗ ಅಜ್ಞಾನವು ಅಂತಃಕರಣಾದಿಯು, ಜೀವಬ್ರಹ್ಮಭೇದವು ಎಂದು ಮೂರನ್ನಂಗೀಕರಿಸಿದರೂ ಅಜ್ಞಾನವು ಸಿದ್ಧವಾದರೆ ಅದರಿಂದ ಕಲ್ಪಿಸಲ್ಪಟ್ಟಿರುವ ಉಪಾಧಿಯು ಸಿದ್ಧವಾಗುವುದು. ಉಪಾಧಿಯು ಸಿದ್ಧವಾದರೆ, ಆ ಉಪಾಧಿಯಿಂದ ಕಲ್ಪಿತ ಭೇದವುಳ್ಳ ಜೀವನಲ್ಲಿ ಅಜ್ಞಾನವೆಂದು ಪರಂಪರೆಯಾಗಿ ಎರಡುಕೋಟಿಯನ್ನೇ ಒಪ್ಪಿಕೊಂಡರೆ ಹಿಂದಿನಂತೆ ಅನ್ಯೋನ್ಯಾಶ್ರಯವು ತಪ್ಪಲಾರದು. ಆದರೂ ಅಜ್ಞಾನವು,ಅದರಿಂದ ಉಪಾಧಿಯು ಅದರಿಂದ ಜೀವಬ್ರಹ್ಮಭೇದವು, ಭಿನ್ನನಾದ ಜೀವನಲ್ಲಿ ಅಜ್ಞಾನವು ಎಂದು ಪ್ರತ್ಯೇಕವಾಗಿ ಕಲ್ಪಿಸುವದಾದರೆ, ಅಜ್ಞಾನವು ಸಿದ್ಧವಾದರೆ ಅದರಿಂದ ಕಲ್ಪಿತವಾದ ಉಪಾಧಿಯು ಸಿದ್ಧವಾಗುವುದು. ಉಪಾಧಿಯು ಸಿದ್ಧವಾಗಲು ಅದರಿಂದ ಕಲ್ಪಿತವಾದ ಜೀವಬ್ರಹ್ಮಭೇದವು ಸಿದ್ಧವಾಗುವುದು. ಜೀವಬ್ರಹ್ಮಭೇದವು ಸಿದ್ಧವಾದರೆ ಭಿನ್ನನಾದ ಜೀವನಲ್ಲಿ ಅಜ್ಞಾನವು ಸಿದ್ಧಿಸುವುದು ಎಂದು ಚಕ್ರಕಾಶ್ರಯತ್ವದೋಷವು ಆಪಾದಿಸಲ್ಪಡುವುದು.

(ವಾಚಸ್ಪತಿ ಪಕ್ಷರೀತಿಯಿಂದ ದೋಷವು)- ಅಂತಃಕರಣಾದಿರೂಪವಾದ ಉಪಾಧಿಯಿಂದ ಜೀವಬ್ರಹ್ಮ ಭೇದವು ಕಲ್ಪಿತವಲ್ಲವು. ಕಿಂತು ಅಜ್ಞಾನರೂಪವಾದ ಉಪಾಧಿಯಿಂದಲೇ ಅದು ಕಲ್ಪಿತವು, ಆದುದರಿಂದ ಅಜ್ಞಾನವೇ ಉಪಾಧಿಯೆನ್ನುವ ವಿವರಣಕಾರಪಕ್ಷದಲ್ಲಿ ಹಿಂದೆ ಹೇಳಿದ ದೋಷವು ಬರುವುದಿಲ್ಲವು. ಅದಕ್ಕಾಗಿ "ವಾ" ಎನ್ನುವ ಯೋಜನಾಂತರದಿಂದ ದೋಷಾಂತರವನು ಸೂಚಿಸುವರು. ಹಿಂದೆ ಹೇಳಿದಂತೆ ಜೀವಬ್ರಹ್ಮ ಭೇದಕ್ಕೆ ಅಂತಃಕರಣಾದಿಯು ಉಪಾಧಿಯಲ್ಲವು. ಆದುದರಿಂದ ಹಿಂದೆ ಹೇಳಿದ ದೋಷಗಳು ಲಗ್ನಗಳಾಗುವುದಿಲ್ಲವು. ಕಿಂತು ಆ ಜೀವಬ್ರಹ್ಮ ಭೇದಕ್ಕೆ ಅಜ್ಞಾನವೇ ಉಪಾಧಿಯು, ಎಂದಂಗೀಕರಿಸುವುದಾದರೆ ಈ ಪಕ್ಷವು ದುಷ್ಟವೇ ಆಗುವುದು. ಹೇಗಂದರೆ, ಅಜ್ಞಾನವು ಯಾವುದನ್ನು ಆಶ್ರಯಿಸದೆ ಜೀವಬ್ರಹ್ಮ ಭೇದವನ್ನು ಹುಟ್ಟಿಸುವುದಾದರೆ ಇದರಂತೆ ಸಂಬಂಧವಿರದ ಘಟಾದಿ ಭೇದವನ್ನು ಹುಟ್ಟಿಸಬೇಕಾಗುವುದು ಎಂದು ಮೊದಲಾದ **ಅತಿಪ್ರಸಂಗವು** ಸಂಭವಿಸುವುದು. ಆದುದರಿಂದ ಯಾವುದಾದರೊಂದನ್ನು ಸಂಬಂಧಿಸಿಕೊಂಡು (ಭೇದಕ) ಭೇದನಿಮಿತ್ತವಾಗುವುದೆಂದಂಗೀಕರಿಸಲೇ ಬೇಕು. ಆವಾಗಲೂ ಕನ್ನಡಿಯು ಬಿಂಬವಾದ ಮುಖವು, ಪ್ರತಿಬಿಂಬವಾದ ಪ್ರತಿಮುಖವು ಇವೆರಡರಲ್ಲಿ ಸೂಕ್ಷ್ಮರೂಪದಿಂದ ಸಂಬಂಧಿಸಿಕೊಂಡಿರುವ ಬೇರೊಂದು ಸೂಕ್ಷ್ಮಮುಖವನ್ನು ಸಂಬಂಧಿಸಿಕೊಂಡು ಮುಖ ಪ್ರತಿ ಮುಖಗಳಿಗೆ ಭೇದಕವಾಗುವುದು. ಈ ದರ್ಪಣರೂಪವಾದ ಉಪಾಧಿಯು ಸೂಕ್ಷ್ಮಮುಖವನ್ನು ಸಂಬಂಧಿಸಿಕೊಂಡು ಭೇದಕವಾದರೂ ತಾಯಿಗೆ ಕಿರಿಮಗನ ಮೇಲೆ ಪಕ್ಷಪಾತವಿರುವಂತೆ ಪ್ರತಿಬಿಂಬ ಪಕ್ಷಪಾತವಿರುವುದಾಗಿ ತನ್ನಲ್ಲಿರುವ ಕಲೆ ಮೊದಲಾದುದನ್ನು ಮೊಗದಲ್ಲಿ ತೋರಿಸದೆ ಪ್ರತಿಮುಖದಲ್ಲಿ ತೋರಿಸುವುದು ಹೇಗೋ, ಇದರಂತೆ ಅಜ್ಞಾನರೂಪವಾದ ಉಪಾಧಿಯು ಬಿಂಬ

ಪ್ರತಿಬಿಂಬಭಾವದಿಂದಿರುವ ಬ್ರಹ್ಮಜೀವರನ್ನು ಸಂಬಂಧಿಸಿಕೊಂಡಿರುವ ಸೂಕ್ಷ್ಮ ಚೈತನ್ಯವನ್ನು ಸಂಬಂಧಿಸಿಕೊಂಡು ಭೇದಕವಾಗುವುದು. ಪ್ರತಿಬಿಂಬ ಪಕ್ಷಪಾತವಿರುವುದರಿಂದ ಪ್ರತಿಬಿಂಬನಾದ ಜೀವನಲ್ಲಿ ತನ್ನ ಕಾರ್ಯವಾದ ದುಃಖಾದಿಯನ್ನು ತೋರಿಸುತ್ತದೆ ಎಂದೀ ರೀತಿಯಾಗಿ ಹೇಳಲ್ಪಡುತ್ತದೆ. ಈ ಪಕ್ಷದಲ್ಲಿಯೂ ಅಜ್ಞಾನರೂಪವಾದ ಉಪಾಧಿಯು ಅಜ್ಞಾನದಿಂದ ಕಲ್ಪಿತವಾಗುವುದಿಲ್ಲವೆಂದರೆ ಅಂತಃಕರಣವು ಅಜ್ಞಾನಕಲ್ಪಿತವಲ್ಲವೆಂದರೆ **ಅಪಸಿದ್ಧಾಂತವು** ಬರುವುದೆಂದು ಹಿಂದೆ ಹೇಳಿದಂತೆ, ಈ ಉಪಾಧಿಯೂ ಕೂಡ ಅಜ್ಞಾನಕಲ್ಪಿತವಾಗದಿರುವುದಾದರೆ ಬ್ರಹ್ಮನಲ್ಲಿದ್ದ ಬೇರೊಂದು ಸತ್ಯಪದಾರ್ಥವೆಂದೇರ್ಪಡುವುದು. ಆಗ ಅದ್ವೈತಭಂಗವಾಗುವುದರಿಂದ **ಅಪಸಿದ್ಧಾಂತವು**. ಆ ಅಜ್ಞಾನರೂಪವಾದ ಉಪಾಧಿಯು ಬ್ರಹ್ಮವ್ಯತಿರಿಕ್ತ ಸರ್ವ ಪದಾರ್ಥದಂತೆ ಅಜ್ಞಾನದಿಂದ ಕಲ್ಪಿತವಾಗುವುದೆಂದರೆ ಆಗ ತನಗೆ ತಾನೇ (ಕಲ್ಪಕ) ನಿಮಿತ್ತವಾಗುವ ಸಂಭವ ಬರುವುದರಿಂದ **ಆತ್ಮಾಶ್ರಯತ್ವ** ದೋಷವು ಬರುವುದು. ಆದುದರಿಂದಿದು ಕೂಡ ಯುಕ್ತವಾಗುವುದಿಲ್ಲವು. ಮತ್ತು ಅಜ್ಞಾನವು ಜೀವಬ್ರಹ್ಮ ಭೇದವು ಇವೆರಡು ಅನಾದಿಯೇ ಒಂದರಿಂದೊಂದು ಹುಟ್ಟಿದುದಲ್ಲವು, ಆದರೂ ಅಜ್ಞಾನ ಸಂಬಂಧವಿರುವ ಬೇರೆ ಅನಾದಿಪದಾರ್ಥದಂತೆ ಜೀವಬ್ರಹ್ಮ ಭೇದವೂ ಕೂಡ ಅಜ್ಞಾನಾಧೀನವಾಗುವುದು. ಆದುದರಿಂದ ಅಜ್ಞಾನವು ಅನಾದಿಯಾದುದರಿಂದ ಅಜ್ಞಾನಕಲ್ಪಿತವಾಗುವುದಿಲ್ಲವು. ಆದುದರಿಂದಲೇ ಆತ್ಮಾಶ್ರಯವಿಲ್ಲವು. ಜೀವಬ್ರಹ್ಮ (ವಿಭಾಗವು) ಭೇದವೂ ಕೂಡ ಅನಾದಿಯಾದುದರಿಂದ ಅಜ್ಞಾನಕಲ್ಪಿತವಾಗುವುದಿಲ್ಲವು. ಆದುದರಿಂದಲೇ ಅನ್ಯೋನ್ಯಾಶ್ರಯವು ಕೂಡ ಇಲ್ಲವೆಂದು ಕೆಲವರು ಆಶಂಕಿಸುವರು. ಇದು ಕೂಡ ಅಯುಕ್ತವೆಂದು ಹಿಂದಿನ ಮೂಲದಿಂದಲೇ ಸೂಚಿತವಾಗುವುದು. ಓರ್ವನಿಂದ ಇನ್ನೋರ್ವಗೆ ಏನಾದರು ಒಂದು ವಿಧದ ಉಪಕಾರವಿರುವುದಾದರೆ ಸ್ವಾಮಿ ಭೃತ್ಯರಂತೆ ಓರ್ವನು ನಿಯಾಮಕನು, ಬೇರೋರ್ವನು ಆತನ ಅಧೀನನು (ನಿಯಮ್ಯನು) ಎಂದಿರುವಂತೆ ಜೀವಬ್ರಹ್ಮ ಭೇದಕ್ಕೆ ಅಜ್ಞಾನದಿಂದ ಉತ್ಪತ್ತಿರೂಪವಾಗಲಿ, ಜ್ಞಪ್ತಿ (ಜ್ಞಾನ) ರೂಪವಾಗಲಿ ಉಪಕಾರವಿರುವುದಾದರೆ ಆ ಜೀವಬ್ರಹ್ಮ ವಿಭಾಗವು ಅಜ್ಞಾನಾಧೀನವಾಗಬಹುದು. ಅನೆರಡು ಉಪಕಾರಗಳಿಲ್ಲವಾದರೆ ಜೀವಬ್ರಹ್ಮ ಭೇದವು ಅಜ್ಞಾನಾಧೀನವಲ್ಲವೆಂತಲೇ ಆಗುವುದು. ಒಂದೇ ದಾರಿಯಲ್ಲಿ ನಡೆಯುತ್ತಿರುವ ಚೈತ್ರ ಮೈತ್ರರಂತೆ, ನೈಯಾಯಿಕಾದಿ ಮತದಲ್ಲಿ ನಿತ್ಯವಾದ ದ್ರವ್ಯತ್ವ ಜಾತಿಯಲ್ಲಿ ಗುಣಿತ್ವ ಪ್ರಯುಕ್ತತ್ವ (ಪ್ರಯೋಜ್ಯತ್ವ)ವಿರುವುದರಿಂದ, ಆ ದ್ರವ್ಯತ್ವವು ಗುಣವತ್ವದ ಅಧೀನವು ಹೇಗಾಗುವುದೋ, ಅದರಂತೆ ಜೀವಬ್ರಹ್ಮ ಭೇದವು ಅಜ್ಞಾನ ಪ್ರಯುಕ್ತತ್ವರೂಪವಾದ ಉಪಕಾರದಿಂದ ಅಜ್ಞಾನಾಧೀನವೆಂದೆನಿಸುವುದು. ಆದುದರಿಂದ ದೋಷವಿಲ್ಲವೆಂದರೆ, ಪ್ರಯುಕ್ತಿಯಲ್ಲಿಯೋ ಆತ್ಮಾಶ್ರಯಾದಿಯು ಹಿಂದಿನಂತೆ ಬರುವುದು, ಹೇಗಂದರೆ ಅಜ್ಞಾನವು ಅಜ್ಞಾನ ಪ್ರಯುಕ್ತವೆಂದರೆ ಆತ್ಮಾಶ್ರಯವು. ದ್ರವ್ಯತ್ವ ಜಾತಿಯು ವ್ಯಂಗ್ಯ(ಜ್ಞಾಪ್ಯ)ವು. ಗುಣಿತ್ವವು ವ್ಯಂಜಕ(ಜ್ಞಾಪಕ)ವು. ಗುಣಿತ್ವವು ವ್ಯಂಗ್ಯವು, ದ್ರವ್ಯತ್ವವು ವ್ಯಂಜಕವು ಅಲ್ಲವು, ಮತ್ತು ಘಟಾದಿಯು ಬೆಳಕಿನಿಂದ ವ್ಯಂಗ್ಯವೇ, ಅಲ್ಲದೆ ವ್ಯಂಜಕವಲ್ಲವು. ಆಲೋಕವು ವ್ಯಂಜಕವೇ, ಅಲ್ಲದೆ ವ್ಯಂಗ್ಯವಲ್ಲವು. ಪರಸ್ಪರ ಪ್ರಯುಕ್ತತ್ವವಿಲ್ಲವಾದುದರಿಂದ ದ್ರವ್ಯತ್ವವು ಗುಣಿತ್ವಪ್ರಯುಕ್ತವೇ ಘಟಾದಿಯು ಆಲೋಕ ಪ್ರಯುಕ್ತವೇ, ಎಂದರೆ ಅನ್ಯೋನ್ಯಾಶ್ರಯವಿಲ್ಲವು. ಪ್ರಕೃತದಲ್ಲಿ ಜೀವಬ್ರಹ್ಮ (ವಿಭಾಗ) ಭೇದವು ಅಜ್ಞಾನಪ್ರಯುಕ್ತವು, ಅಜ್ಞಾನವು (ಅವಿದ್ಯೆಯು) ಭಿನ್ನನಾದ ಜೀವನನ್ನಾಶ್ರಯಿಸುತ್ತದೆಂದರೆ ಭೇದ ಪ್ರಯುಕ್ತವೆಂತಲೇ ಆಗುವುದು. ಈ ರೀತಿಯಾಗಿ ಪರಸ್ಪರ ಪ್ರಯುಕ್ತಗಳೆಂದರೆ ಪ್ರಯುಕ್ತಿಗೇನೆ ಪ್ರತಿಬಂಧಕವಾದುದರಿಂದ ಅನ್ಯೋನ್ಯಾಶ್ರಯವು ಬಂದೇ ಬರುವುದು. ಈ ಆತ್ಮಾಶ್ರಯಾದಿ ದೋಷಗಳು ಉತ್ಪತ್ತಿಜ್ಞಪ್ತಿಗಳಲ್ಲಿ ಮಾತ್ರವಲ್ಲವು, ಪ್ರವೃತ್ತಿ ಪ್ರಯುಕ್ತಿ

ಗಳಲ್ಲಿಯೂ ಬರುವವು; ಅಲ್ಲವಾದರೆ ತನ್ನ ಹೆಗಲಿನಲ್ಲಿ ತಾನು ಕೂಡಬೇಕಾಗುವುದು. ಏಕ ಕಾಲದಲ್ಲಿ ಚೈತ್ರನ ಹೆಗಲಿನಲ್ಲಿ ಮೈತ್ರನು, ಮೈತ್ರನ ಹೆಗಲಿನಲ್ಲಿ ಚೈತ್ರನು ಕೂಡಬೇಕಾಗುವುದು. ಹಿಂದೆ ದರ್ಪಣಾದ್ಯುಪಾಧಿಯಿಂದ ಒಂದೇ (ಮುಖವು) ಮುಖಪ್ರತಿಮುಖಗಳಾಗಿ ಬಿಂಬ ಪ್ರತಿ ಬಿಂಬ ಭಾವದಿಂದಿರುತ್ತದೋ, ಅದರಂತೆ ಚಿತ್ತಿನಿಂದ ಜೀವಬ್ರಹ್ಮರು ಅಜ್ಞಾನರೂಪವಾದ ಉಪಾಧಿಯಿಂದ ಬಿಂಬ ಪ್ರತಿಬಿಂಬ ಭಾವದಿಂದಿರುವರು ಎಂದು ಹೇಳಿದ ದೃಷ್ಟಾಂತ ದಾರ್ಷ್ಟಾಂತಿಕ ಭಾವವು ಕೂಡ ಯುಕ್ತವಲ್ಲವು. ಬಿಂಬ ಪ್ರತಿಬಿಂಬಗಳಿಗೈಕ್ಯವು ಪ್ರತ್ಯಕ್ಷಾದಿ ವಿರುದ್ಧವಾದುದ ರಿಂದಲೂ, ಸಾಧಕ ಪ್ರತ್ಯಕ್ಷಾದಿ ಪ್ರಮಾಣವಿರದಿರುವುದರಿಂದಲೂ ಯುಕ್ತವಲ್ಲವೆಂದು ವಿಷ್ಣುತತ್ವ ನಿರ್ಣಯಾದಿ ಗ್ರಂಥಗಳಲ್ಲಿ ನಿರಾಕರಿಸಿರುವರು. (ಎಂದು ಮಾಯಾವಾದಿ ಮತನಿರಾಕರಣಂ) ॥೨॥

ಭಾಸ್ಕರನು ಶಂಕಿಸುತ್ತಾನೆ, ಸಂಸಾರದಶೆಯಲ್ಲಿ ಅನಂತ ಅಂತಃಕರಣಗಳು, ಸೂಕ್ಷ್ಮೋ ಪಾಧಿಗಳು, ದೇಹಾದಿಗಳು, ಸ್ಥೂಲಗಳಾದ ಉಪಾಧಿಗಳು, ಇವುಗಳು ಸತ್ಯವಾದವುಗಳು. ಅಜ್ಞಾನ ಕಲ್ಪಿತಗಳಲ್ಲ. ಈ ಉಪಾಧಿಗಳಿಂದ ಬ್ರಹ್ಮನು ಅನಂತ ಜೀವಭಾವವನ್ನು ಹೊಂದು ವನು, ಅಂದರೆ **ಸತ್ಯವಾದ ಉಪಾಧಿಯಿಂದ** ಸತ್ಯವಾದ ಜೀವಬ್ರಹ್ಮಭೇದವು ಹುಟ್ಟುತ್ತದೆ. ಆ ಭೇದವು ಉಪಾಧಿನಷ್ಟವಾದ ನಂತರದಲ್ಲಿ ನಾಶವನ್ನು ಹೊಂದುವುದು. ಅನಂತರ ಮುಕ್ತಿ ಯಲ್ಲಿ ಸ್ವಾಭಾವಿಕವಾದ ಅಭೇದವೇ ಇರುವುದು. ಭೇದವು ಸಂಸಾರದಲ್ಲಿ ಉಪಾಧಿಯಿಂದ ಹುಟ್ಟುತ್ತದೆ, ನಷ್ಟವಾಗುತ್ತದೆ. ಆದುದರಿಂದದು ಸ್ವಾಭಾವಿಕವಲ್ಲವು, ಆದುದರಿಂದಲೇ ಅದ್ವೈ ತವಾದಕ್ಕೆ ವಿರೋಧವಿಲ್ಲವು. ಅಜ್ಞಾನವು ಉಪಾಧಿಕಲ್ಪಿತವಾದರೂ ಉಪಾಧಿಯು ಅಜ್ಞಾನಕ ಲ್ಪಿತವಾಗದಿರುವುದರಿಂದ ಹಿಂದೆ ಮಾಯಾವಾದಿಗಳಿಗೆ ಬಂದಿರುವಂತೆ ನಮ್ಮ ಮತದಲ್ಲಿ ಅನವ ಸ್ಥಾದಿ ದೋಷಗಳು ಬರುವುದಿಲ್ಲವು. ಮತ್ತು ತಂತುಪಟಗಳಂತೆ ಅಂದರೆ ನೂಲುಗಳು ಅದರ ಸಮೂಹದಿಂದುಂಟಾದ ವಸ್ತ್ರದಂತೆ ಬ್ರಹ್ಮನು ಅಂಶಿಯು, ಜೀವನು ಬ್ರಹ್ಮನ ಅಂಶನು. ಆದುದ ರಿಂದ ಅಭೇದವಿದ್ದರೂ ಸತ್ಯವಾದಭೇದವೂ ಇದೆ. ಮಾಯಾವಾದಿಗಳು ಹೇಳುವಂತೆ ಬಿಂಬ ಪ್ರತಿಬಿಂಬಭಾವವಿರದಿರುವುದರಿಂದ ಭೇದವು ಮಿಥ್ಯಾಭೂತವಲ್ಲವು. ಅಂಶಿಯು ಒಂದು ವಿಧವು ಅಂಶವು ಇನ್ನೊಂದು ವಿಧವಾದುದು ಲೋಕದಲ್ಲಿ ಕಂಡುಬರುವಂತೆ, ಬ್ರಹ್ಮನು ಸರ್ವಜ್ಞನಾ ದರೂ ಜೀವನು (ಅಲ್ಪಜ್ಞ) ಅಸರ್ವಜ್ಞನಾಗುವನು. ಆದುದರಿಂದ 'ಅಜ್ಞತಾಽಖಿಲಸಂವೇತ್ತುಃ' ಎಂದು ಹಿಂದೆ ಮಾಯಾವಾದಿಗಳಿಗೆ ಹೇಳಿದ ದೋಷವು ಬರುವದಿಲ್ಲವು. ಈ ರೀತಿಯಾಗಿ ಆಕ್ಷೇ ಪಿಸಲು ಅದನ್ನು ಪರಿಹರಿಸುವರು.—

**ಮೂ ॥ ಭೇದಶ್ಚೋಪಾಧಿತಃ ಕುತಃ । ವಿದ್ಯಮಾನಸ್ಯ ಭೇದಸ್ಯ ಜ್ಞಾಪಕೋ ನೈವ ಕಾರಕಃ ॥ ೪ ॥ ಉಪಾಧಿರ್ದೃಷ್ಟಪೂರ್ವೋ ಹಿ ॥ ೫ ॥**

ಅ ॥ ಭೇದಃ=ಜೀವ ಬ್ರಹ್ಮಭೇದವು, ಉಪಾಧಿತಃ=ಸತ್ಯೋಪಾಧಿಯ ದೆಸೆಯಿಂದ, ಕುತಃ=(ಯಾವ ಕಾರಣದಿಂದ) ಏತಕ್ಕೆ, (ಭವತಿ=ಆಗುವುದು), ಅಂದರೆ ಆಗುವುದಿಲ್ಲವು. ಚ=ಸರ್ವಜ್ಞಾಸರ್ವಜ್ಞಾದಿ ಭೇದವೂ ಕೂಡ ಆಗುವುದಿಲ್ಲವು (ಹುಟ್ಟುವುದಿಲ್ಲವು). ಏತಕ್ಕಂದರೆ ಹಿ=ಯಾವಕಾರಣದದೆಸೆಯಿಂದ, ಉಪಾಧಿಃ=ಉಪಾಧಿಯು, (ನಿಮಿತ್ತವು). ವಿದ್ಯಮಾನಸ್ಯ= ಮೊದಲೇ ಇರುತ್ತಿರುವ, ಭೇದಸ್ಯ=ಭೇದಕ್ಕೆ, ಜ್ಞಾಪಕಃ=ಜ್ಞಾನವನ್ನು ಹುಟ್ಟಿಸುವುದಾಗಿ, ದೃಷ್ಟಪೂರ್ವಃ=ಮೊದಲಿನಿಂದ ಕಂಡುಬರುವುದು. ಅಲ್ಲದೆ, ಕಾರಕಃ=ಮೊದಲಿಲ್ಲದ ಭೇದ ವನ್ನು ಹುಟ್ಟಿಸುವುದಾಗಿ, ದೃಷ್ಟಪೂರ್ವಃ=ಮೊದಲಿನಿಂದ ಕಂಡುಬರುವುದು. ನ ಭವತ್ಯೇವ= ಇಲ್ಲವೇ ಇಲ್ಲವು. ಆದುದರಿಂದ ಉಪಾಧಿಯದೆಸೆಯಿಂದ ಭೇದವು ಯಾವ ಕಾರಣದಿಂದಾಗು ವುದು. ॥ ೪ ॥

ತಾ ॥ ಮಾಯಾವಾದಿ ಮತದಲ್ಲಿ ಹಿಂದೆ ಹೇಳಿದಂತೆ, ಅನವಸ್ಥಾದಿ ದೋಷಗಳು ಸಂಭವಿಸಿದರೂ, ಅಂಗುಲ್ಯವಷ್ಟಂಭರೂಪವಾದ ಉಪಾಧಿಯಿಂದ ಚಂದ್ರಭೇದಪ್ರತೀತಿಯಾಗುವುದರ ದೆಸೆಯಿಂದ ಅದರಂತೆ ಅಜ್ಞಾನಾದಿರೂಪವಾದ ಉಪಾಧಿಯಿಂದ ಜೀವಬ್ರಹ್ಮಭೇದಪ್ರತೀತಿಯಾಗಬಹುದು. ಈ ಮತದಲ್ಲಿ ಸತ್ಯೋಪಾಧಿಯಿಂದ ಸತ್ಯವಾದ ಜೀವಬ್ರಹ್ಮಭೇದವು ಹುಟ್ಟುವುದೆನ್ನುವುದೇ ಯುಕ್ತವಾಗುವುದಿಲ್ಲವು. ಏತಕ್ಕೆಂದರೆ ಲೋಕದಲ್ಲಿ ಮಹಾರಜನೆಯು (ವಸ್ತ್ರಕ್ಕೆ ಛಾಯೆ ಕೊಡುವ ಮಂಜಿಷ್ಟಾದಿ ಕೆಂಪು ಬಣ್ಣವು) ಈ ವಿಧವಾದ ಉಪಾಧಿಯು ಮೊದಲಿದ್ದೇ ಇರುವ ಪಟದ ಅವಯವ ಭೇದವನ್ನು ಚೆನ್ನಾಗಿ ತಿಳಿಸುವುದು. ಅಲ್ಲದೆ ಅವಯವಿಯಾದ ಪಟಾದಿಗಳ ಭೇದವನ್ನು ಹುಟ್ಟಿಸುವುದಿಲ್ಲವು. ಇದರಂತೆ ಈ ಸತ್ಯೋಪಾಧಿಯು ಮೊದಲಿಲ್ಲದ ಜೀವ ಬ್ರಹ್ಮಭೇದವನ್ನು ಹುಟ್ಟಿಸಲಾರದು. (ಅದಕ್ಕೆ ಕಾರಕವಾಗಲಾರದು). ಆದರೂ ಮೊದಲಿರುತ್ತಿರುವ ಭೇದವನ್ನು ಚೆನ್ನಾಗಿ ತಿಳಿಸುವುದು. ಆದುದರಿಂದ ನಿಷ್ಪ್ರಯೋಜನವಾದುದಲ್ಲವು. ಈ ರೀತಿಯಾಗಿ ಮೊದಲಿನಿಂದ ದೃಷ್ಟವಾಗಿದೆ. ಹೀಗೆನ್ನುವುದರಿಂದ ಇದು ಪ್ರತ್ಯಕ್ಷಸಿದ್ಧವೆಂದು ಸೂಚಿತವಾಗುವುದು. ಪರೋಕ್ತಿಯು ಈ ಪ್ರತ್ಯಕ್ಷವಿರುದ್ಧವೆಂತಲೂ ಸೂಚಿತವಾಗುವುದು.

ಮಹಾರಜನಾದಿಯು ಪಟಾವಯವ ಭೇದವನ್ನು ಜ್ಞಾಪಿಸುವುದಲ್ಲವು. ಪಟದ ಭೇದವನ್ನು ಹುಟ್ಟಿಸುವುದು. ಹೀಗೆಂದರೆ ಎರಡು ಪಟಗಳೆಂದು ಕಾಣಿಸಬೇಕಾಗುವುದು. ಓರ್ವನೇ ದೇವದತ್ತನು, ದಂಡವು ಮತ್ತು ಕುಂಡಲವು, ಈ ಎರಡುಪಾಧಿಗಳ ಸಂಬಂಧದಿಂದ ದಂಡೀ, (ದಂಡವುಳ್ಳವನು) ಮತ್ತು ಕುಂಡಲೀ(ಕುಂಡಲವುಳ್ಳವನು) ಎಂದು ಭಿನ್ನನಾಗಿ ಕಾಣಿಸುವನು, ಅಂದರೆ ಓರ್ವನಲ್ಲಿ ಭೇದವು ಪ್ರತೀತವಾಗುವುದು. ಅದರಂತೆ ಇಲ್ಲಿಯೂ ಉಪಾಧಿಯಿಂದ ಜೀವಬ್ರಹ್ಮಭೇದವು ಹುಟ್ಟುವುದೆಂದರೆ ಅದುಕೂಡ ಇಲ್ಲವು. ಅಲ್ಲಿಯೂ ದೇವದತ್ತನು ಭಿನ್ನ(ಬೇರೆಯವ)ನೆಂದು ಪ್ರತೀತಿಯಾಗುವುದಿಲ್ಲವು. ಮತ್ತು ದಂಡಸಂಬಂಧದಿಂದ ದಂಡವಿಶಿಷ್ಟನು. ಕುಂಡಲ ಸಂಬಂಧದಿಂದ ಕುಂಡಲವಿಶಿಷ್ಟನು ಎಂದು ಪ್ರತ್ಯೇಕವಾಗಿ ಎರಡು ವಿಶಿಷ್ಟಗಳು ಹುಟ್ಟುವುವು. ಈ ವಿಶಿಷ್ಟವು ಪದಾರ್ಥಾಂತರವು. ಇದರಂತೆ ಪ್ರಕೃತದಲ್ಲಿ ಅಂತಃಕರಣಾದಿಯಾದ (ವಿಶೇಷಣ) ಉಪಾಧಿ ಸಂಬಂಧದಿಂದ ಜೀವರೂಪವಾದ ವಿಶಿಷ್ಟವು ಹುಟ್ಟುವುದು ಎನ್ನುವುದು ಯುಕ್ತವಲ್ಲವು. ಹಾಗಾದರೆ ದಂಡನಾಶದಿಂದ ದಂಡವಿಶಿಷ್ಟನಾಶದಂತೆ ಅಂತಃಕರಣಾದಿಯ ನಾಶದಿಂದ ಜೀವನಾಶವಾಗಬೇಕಾಗಿ ಬರುವುದು. ಆ ರೀತಿಯಾದರೆ ಮುಂಚೆ ಬ್ರಹ್ಮನದೆಸೆಯಿಂದ ಜೀವಗೆ ಅಭೇದವನ್ನು ಹೇಳಲಿಕ್ಕೆ ಬರಲಾರದು, ಜೀವನು ನಷ್ಟನಾದರೂ ಚಿತ್ತಿಗೆ ಅಭೇದವನ್ನು ಹೇಳುವುದಾದರೆ ಆ ವಿಶೇಷ್ಯನಾದ (ಚಿತ್ತಿ) ಬ್ರಹ್ಮಗೆ ಅಂತಃಕರಣಾದಿ ಸಂಬಂಧದಿಂದ ತತ್ಕಾರ್ಯವಾದ ಅಜ್ಞಾನ ದುಃಖಾದಿ ಬಂಧವು ಶಾಸ್ತ್ರಶ್ರವಣಾದಿಯಿಂದ ಅಪರೋಕ್ಷಜ್ಞಾನವಾಗಲು ಆ ಬಂಧನಿವೃತ್ತಿಯು(ಧ್ವಂಸವು) ಕೂಡ ಪ್ರಾಪ್ತವಾಗುವುದು. ಏತಕ್ಕೆಂದರೆ ಬಂಧವು ಯಾರಲ್ಲಿಯೋ, ಅಲ್ಲಿಯೇ (ಮೋಕ್ಷವು) ಬಂಧನಿವೃತ್ತಿಯು ಎಂದು ನಿಯಮವಿದೆ ಈ ಪಕ್ಷದಲ್ಲಿ 'ಅಜ್ಞತಾಽಖಿಲಸಂವೇತ್ತುರ್ಘಟತೇ ನ ಕುತಶ್ಚನ' ಎಂದು ಹಿಂದೆ ಹೇಳಿದ ದೋಷವೇ ತಲೆದೋರುವುದು.

ಆಕಾಶವೊಂದಾದರೂ ಘಟದೊಳಗಿರುವ ಆಕಾಶವು ಘಟಾಕಾಶವೆಂದೂ, ಮಠದೊಳಗಿರುವ ಆಕಾಶವು ಮಠಾಕಾಶವೆಂದೂ ವ್ಯವಹರಿಸಲ್ಪಡುವುದು. ಈ ಘಟಮಠಾದ್ಯುಪಾಧಿಗಳಿಂದ ಒಂದೇ ಆಕಾಶದಲ್ಲಿ ಹೇಗೆ ಭೇದವು ಕಾಣಿಸುವುದೋ, (ಇದು ಬೇರೊಂದು ವಿಧದ ಉಪಾಧಿಯು), ಇದರಂತೆ ಜೀವಬ್ರಹ್ಮಭೇದವು ಸಂಗತವಾಗುವುದೆನ್ನುವ ಆಶಂಕೆಯನ್ನು ಪರಿಹರಿಸುವರು.

**ಮೂ ॥ ಖೇಽಪಿ ದೇಶಾಂತರಸ್ಯ ಸಃ । ಜ್ಞಾಪಕೋ ವಿದ್ಯಮಾನಸ್ಯ ಮೂಢ ಬುದ್ಧಿವ್ಯಪೇಕ್ಷಯಾ ॥ ೫ ॥**

ಅ ॥ ಖೇऽಪಿ=ಅವ್ಯಾಕೃತಾಕಾಶದಲ್ಲಿಯೂ ಕೂಡ, ವಿದ್ಯಮಾನಸ್ಯ=ಮೊದಲೇ ಇದ್ದಿರುವ, ದೇಶಾಂತರಸ್ಯ=ಪ್ರದೇಶವಿಶೇಷಕ್ಕೆ (ಅಂಶವಿಶೇಷಕ್ಕೆ), ಸಃ=ಉಪಾಧಿಯು, ಜ್ಞಾಪಕ ಏವ=ಜ್ಞಾಪಿಸುವುದು, (ತಿಳಿಸುವುದು) ಎಂದಂಗೀಕರಿಸಲ್ಪಡುತ್ತದೆ, ಖೇऽಪಿ=ಭೂತಾಕಾಶದಲ್ಲಿಯೂ, ವಿದ್ಯಮಾನಸ್ಯ=ಮೊದಲೇ ಇದ್ದಿರುವ, ದೇಶಾಂತರಸ್ಯ=ಪ್ರದೇಶಭೇದಕ್ಕೆ, ಜ್ಞಾಪಕಃ=ತಿಳಿಸುವುದಾಗಿ, ಸಃ=ಉಪಾಧಿಯು, ಅಂಗೀಕರಿಸಲ್ಪಡುತ್ತದೆ, ಮೊದಲಿಲ್ಲದ ಭೇದವನ್ನು ಹುಟ್ಟಿಸುವುದಿಲ್ಲವು, ಇದು ಕೂಡ, ಮೂಢಬುದ್ಧಿವ್ಯಪೇಕ್ಷಯಾ=ಮೂಢರ ಬುದ್ಧಿಗನುಸಾರವಾಗಿ ಜ್ಞಾಪಿಸಲ್ಪಡುವುದು.

ತಾ ॥ ಅವ್ಯಾಕೃತಾಕಾಶವು ತನ್ನ ಅಂಶಗಳಾದ ಪ್ರದೇಶಗಳಿಂದ ಅತ್ಯಂತಾಭಿನ್ನವಾದರೂ ಘಟಾದ್ಯುಪಾಧಿಗಳು ಆ ಪ್ರದೇಶಗಳಲ್ಲಿ ಮೊದಲಿನಿಂದ ವಿದ್ಯಮಾನವಾದ (ಇರುವ) ವಿಶೇಷವನ್ನೇ ತಿಳಿಸುವವು. ಅಲ್ಲದೆ ಇಲ್ಲದಿರುವ ಭೇದವನ್ನು ಹುಟ್ಟಿಸುವುದಿಲ್ಲವು. ಭೂತಾಕಾಶದಲ್ಲಿ ಮೊದಲಿಂದಿರುವ ಪ್ರದೇಶಭೇದವನ್ನು ಘಟಾದ್ಯುಪಾಧಿಗಳು ತಿಳಿಸುವವು. ಅಲ್ಲದೆ ಮೊದಲಿಲ್ಲದ ಭೇದವನ್ನು ಹುಟ್ಟಿಸುವುದಿಲ್ಲವು. ಯದ್ಯಪಿ ಭೇದವು ವಸ್ತುವಿನ (ಭೇದ ಯಾವುದರಲ್ಲಿರುವುದೋ ಆ ವಸ್ತುವಿನ) ಸ್ವರೂಪವು. ಆ ವಸ್ತುವು ತಿಳಿದು ಬರುವಾಗಲೇ ಆ ಭೇದವೂ ತಿಳಿದು ಬರುವುದು. ಘಟಮಠಾದ್ಯುಪಾಧಿಯಿಂದ ತಿಳಿಯಬೇಕಾಗಿಲ್ಲವು. ಹಾಗಾದರೂ ಆ ವಸ್ತುವಿಗೂ ಅದರಲ್ಲಿರುವ ಭೇದಕ್ಕೂ ಅಭೇದವಿದ್ದರೂ ರಾಜನಿಲ್ಲದಲ್ಲಿ ರಾಜಕಾರ್ಯವನ್ನು ನಿರ್ವಹಿಸುವ ಓರ್ವ ಪ್ರತಿನಿಧಿಯು ಇರುವಂತೆ, ಭೇದಕಾರ್ಯವನ್ನು ನಡಿಸುವ ಪ್ರತಿನಿಧಿಯಾದ ಒಂದು ವಿಶೇಷವೆನ್ನುವ ಪದಾರ್ಥವಿದೆ, ಆ ವಿಶೇಷದಿಂದ ಭೇದಕ್ಕೆ ಧರ್ಮಿಯಾದ ವಸ್ತುವು ತಿಳಿದು ಬರುವಾಗ ವಸ್ತುರೂಪವಾದ ಭೇದವು ಮೂಢರಿಗೆ ತಿಳಿದು ಬರುವುದಿಲ್ಲವು. ಘಟಮಠಾದ್ಯುಪಾಧಿಸಂಬಂಧದಿಂದ ಆ ಭೇದವು ತಿಳಿಯಲ್ಪಡುವುದು, ಪ್ರಾಜ್ಞರು ಘಟಮಠಾದ್ಯುಪಾಧಿಸಂಬಂಧವಿಲ್ಲದೆಯೂ ವಿಶೇಷವನ್ನಾಗಲಿ ಭೇದವನ್ನಾಗಲೀ ತಿಳಿದುಕೊಳ್ಳುವರು. ಈ ಅಭಿಪ್ರಾಯದಿಂದಲೇ ಹಿಂದೆ ಅವ್ಯಾಕೃತಾಕಾಶಸ್ವೀಕಾರಪಕ್ಷದಲ್ಲಿ 'ದೇಶಾಂತರಸ್ಯ' ಎನ್ನುವುದಕ್ಕೆ 'ದೇಶವಿಶೇಷಸ್ಯ' ಎಂದು ವಿವರಣೆಮಾಡಿದ್ದಾಗಿದೆ. ಆದುದರಿಂದ ಈ ದೃಷ್ಟಾಂತದಿಂದಲೂ ಪ್ರತಿವಾದಿಯಿಂದ ಜೀವಬ್ರಹ್ಮಭೇದವು ನಿರ್ವಹಿಸಲಶಕ್ಯವು. ಆತನು ಮೊದಲಿಲ್ಲದ ಜೀವಬ್ರಹ್ಮ ಭೇದವನ್ನು ಅಂತಃಕರಣಾದ್ಯುಪಾಧಿಯು ಹುಟ್ಟಿಸುವುದೆಂದು ಸಾಧಿಸುವನು. ಅದಕ್ಕೆ ಈ ದೃಷ್ಟಾಂತವು ವಿಷಮವಾಗಿದೆ. ॥ ೫ ॥

ಈ ವಿಧವಾದ ಉಪಾಧಿಯು ಮೊದಲಿದ್ದ ಭೇದವನ್ನು ಜ್ಞಾಪಿಸುವುದಲ್ಲವು. ಮೊದಲಿಲ್ಲದ ಭೇದವನ್ನು ಹುಟ್ಟಿಸುವುದೆಂದಂಗೀಕರಿಸಿದರೆ ಬಾಧಕವನ್ನು ಹೇಳುವರು—

**ಮೂ ॥ ನ ಚೇದುಪಾಧಿಸಂಬಂಧ ಏಕದೇಶೀऽಥ ಸರ್ವಗಃ |**
**ಏಕದೇಶೀऽನವಸ್ಥಾ ಸ್ಯಾತ್ಸರ್ವಗಶ್ಚೇನ್ನ ಭೇದಕಃ ॥ ೬ ॥**

ಅ ॥ ನ ಚೇತ್=ಉಪಾಧಿಯು ವಿದ್ಯಮಾನಭೇದಕ್ಕೆ ಜ್ಞಾಪಕವಲ್ಲವು, ಅವಿದ್ಯಮಾನಕ್ಕೆ ಕಾರಕವು ಎನ್ನುವುದಾದರೆ, ಉಪಾಧಿಸಂಬಂಧಃ=ಆ ಉಪಾಧಿಸಂಬಂಧವು, ಏಕದೇಶೀ=ಆಕಾಶದ ಒಂದು ಅಂಶದಲ್ಲಿ ಇದ್ದು ಭೇದವನ್ನು ಹುಟ್ಟಿಸುವುದೋ? ಅಥ=ಅಲ್ಲವಾದರೆ, ಸರ್ವಗಃ=ಸರ್ವದೇಶದಲ್ಲಿದ್ದು, ಭೇದಕಾರಕವಾಗುವುದೋ? ಏಕದೇಶೀ ಚೇತ್=ಏಕದೇಶದಲ್ಲಿದ್ದು ಭೇದಕಾರಕವಾಗುವುದೆನ್ನುವುದಾದರೆ, ಅನವಸ್ಥಾ=ಅನವಸ್ಥೆಯು, ಸ್ಯಾತ್=ಆಗುವುದು. ಸರ್ವಗಶ್ಚೇತ್=ಸರ್ವದೇಶದಲ್ಲಿದ್ದುದಾದರೆ, ಭೇದಕಃ=ಭೇದಕಾರಕವು, ನ ಸ್ಯಾತ್=ಆಗಲಾರದು.

ತಾ || ಉಪಾಧಿಯು ಮೊದಲಿರುವ ಭೇದವನ್ನು ಜ್ಞಾಪಿಸುವುದಲ್ಲವು. ಇಲ್ಲದ ಭೇದವನ್ನು ಹುಟ್ಟಿಸುವುದೆನ್ನುವುದಾದರೆ, ಆ ಉಪಾಧಿಯು ಭೇದ್ಯವನ್ನು ಸಂಬಂಧಿಸದೆ ಭೇದವನ್ನು ಹುಟ್ಟಿಸುವುದಿಲ್ಲವು. ಸಂಬಂಧವಿಲ್ಲದೆ ಹುಟ್ಟಿಸುವುದಾದರೆ ಕಾಶ್ಮೀರದೇಶದಲ್ಲಿರುವ ಮಹಾರಜನೆಯು ಸಂಬಂಧವಿರದ ಕೇರಲದೇಶದ ವಸ್ತ್ರದಲ್ಲಿ ಭೇದವನ್ನು ಹುಟ್ಟಿಸಬೇಕಾಗಿ ಬರುವುದು. ಆದುದರಿಂದ ಸಂಬಂಧಿಸಿಕೊಂಡು ಭೇದಕವಾಗುವುದೆಂದಂಗೀಕರಿಸಲೇಬೇಕು. ಪ್ರಕೃತದಲ್ಲಿ ಘಟಾದ್ಯುಪಾಧಿಗೂ, ಆಕಾಶಕ್ಕೂ ಇರುವ ಸಂಬಂಧವು ಸರ್ವಾಕಾಶದಲ್ಲಿರುವುದಾದರೆ, ಸರ್ವಾಕಾಶವು ಘಟಾಕಾಶವೇ ಆಗಬೇಕಾಗುವುದು. ಅಲ್ಲದೆ ಆಕಾಶವು ಬೇರೆಯಾದುದು, ಘಟಾಕಾಶವು ಬೇರೆಯಾದುದೆಂದು ಭೇದವು ಹುಟ್ಟಲಾರದು. ಆದುದರಿಂದ ಏಕದೇಶಸಂಬಂಧವೇ ಭೇದಹೇತುವೆಂದಂಗೀಕರಿಸಲೇ ಬೇಕು. ಏಕದೇಶವೆಂದಾಗುವುದು ಉಪಾಧಿಯಿಂದಲೇ ಆಗುವುದಲ್ಲದೆ, ಸ್ವಭಾವದಿಂದಿರುವುದಿಲ್ಲವು. ಆ ಏಕದೇಶವು ಅದೇ ಉಪಾಧಿಯಿಂದುಂಟಾಗುವುದೆಂದರೆ ಆತ್ಮಾಶ್ರಯವು ಪ್ರಸಕ್ತವಾಗುವುದು. ಬೇರೊಂದುಪಾಧಿಯಿಂದ ಹುಟ್ಟಿದ ಏಕದೇಶವನ್ನು ಸಂಬಂಧಿಸಿಕೊಂಡು ಉಪಾಧಿಯು ಆಕಾಶಭೇದವನ್ನು ಹುಟ್ಟಿಸುವುದಾದರೆ ಅನ್ಯೋನ್ಯಾಶ್ರಯವು. ಘಟಾದ್ಯುಪಾಧಿಯು ಸಂಬಂಧಿಸುವ ಏಕದೇಶವು ಬೇರೊಂದುಪಾಧಿಯಿಂದ ಆದುದು, ಆ ಉಪಾಧಿಯು ಮತ್ತೊಂದು ಏಕದೇಶವನ್ನು ಸಂಬಂಧಿಸಿಕೊಂಡು ಭೇದಕವಾಗುವುದು. ಇದೇ ರೀತಿಯಾಗಿ ವ್ಯವಸ್ಥೆಯಿರದ ಪರಂಪರೆಯನ್ನು ಕಲ್ಪಿಸಿದರೆ ಅನವಸ್ಥೆಯು ಪ್ರಸಕ್ತವಾಗುವುದು. ಆದುದರಿಂದ ಆ ಪ್ರದೇಶವು ಉಪಾಧಿಕೃತವಲ್ಲವು. ಪರಂತು ಸ್ವಾಭಾವಿಕವೆಂದಗೀಕರಿಸಬೇಕು. ಹೀಗಾದಮೇಲೆ ಮೊದಲಿದ್ದ ಭೇದವು ಉಪಾಧಿಯಿಂದ ಹುಟ್ಟಲಾರದಾದುದರಿಂದ ಜ್ಞಾಪಕವಾಗುವುದು. ಉಪಾಧಿಯು ವಿದ್ಯಮಾನ ಭೇದಕ್ಕೆ ಜ್ಞಾಪಕವೇ, ಅಲ್ಲದೆ ಕಾರಕವಲ್ಲವು. ಎಂದು ನಿಶ್ಚಿತವಾಗುವುದು.

ಪ್ರದೇಶವೃತ್ತಿಯೆಂದರೆ ಅಂಶವೃತ್ತಿಯೆಂದರ್ಥವಲ್ಲವು. ಹಾಗಂದರೆ ಹಿಂದೆ ಹೇಳಿದಂತೆ ಅನವಸ್ಥಾದಿ ದೋಷಗಳು ಪ್ರಸಕ್ತಗಳಾಗಬಹುದು, ಮತ್ತು ಸ್ವಾತ್ಯಂತಾಭಾವಸಮಾನಾಧಿಕರಣವೆಂದು (ಒಂದೇ ಕಡೆಯಲ್ಲಿ ತನ್ನ ಅಭಾವದಿಂದ ಕೂಡಿ ತಾನಿರುವುದೆಂದು ಅರ್ಥವು). (ಉ) ಒಂದು ಮರದ ತುದಿಯಲ್ಲಿ ಒಂದು ಕೋತಿಯು ಕೂತಿರ್ದರೆ, ಕೂತುಗೊಳಿಸಿಕೊಂಡ ವೃಕ್ಷದ ಮೇಲುಗಡೆಯಲ್ಲಿ ಕಪಿಸಂಯೋಗವು ಕೆಳಗಡೆಯಲ್ಲಿ ಕಪಿಸಂಯೋಗಾಭಾವವು (ಕೋತಿಯಿರದಿರುವಿಕೆಯು) ಇರುವುದು, ಆಗ ಒಂದೇ ವೃಕ್ಷದಲ್ಲಿ ಕಪಿಸಂಯೋಗಾಭಾವದಿಂದ ಕೂಡಿದ ಕಪಿಸಂಯೋಗವಿದೆ. ಆದುದರಿಂದ ಈ ಕಪಿಸಂಯೋಗವು **'ಸ್ವಾತ್ಯಂತಾಭಾವಸಮಾನಾಧಿಕರಣವೆನ್ನುವುದು'** ಇದೇ ಪ್ರಕೃತದಲ್ಲಿ 'ಪ್ರದೇಶವೃತ್ತಿ'ಯೆಂದು ಹೇಳುವೆನೆನ್ನುವ ಮಧ್ಯದಲ್ಲಿ ತಟಸ್ಥನಾದ ತಾರ್ಕಿಕನ ಆಶಂಕೆಯು ಯುಕ್ತವಲ್ಲವು. ಏತಕ್ಕೆಂದರೆ, ಪರಸ್ಪರ ವಿರೋಧವಿರುವುದರಿಂದ ಭಾವಾಭಾವಗಳು ಒಂದು ಕಡೆ ಇರಲಾರವು. (ತಾನಿರುವಲ್ಲಿಯೇ ತನ್ನ ಅಭಾವವು ಇರಲಾರದು). ಈ ರೀತಿಯಾಗಿ ವಿರೋಧವಿರುವದೆಸೆಯಿಂದ ಆಕಾಶದಲ್ಲಿ ಉಪಾಧಿಸಂಯೋಗವು ಸಂಯೋಗಾಭಾವವು ಕೂಡ ಇದೆ ಆದುದರಿಂದ ಸರ್ವಾಕಾಶವು ಘಟಾಕಾಶವಾಗಲಿ ಎಂದಾಗಲಿ, ಪ್ರದೇಶವೃತ್ತಿಯಾದುದರಿಂದ ಅನವಸ್ಥಾದಿ ದೋಷಪ್ರಸಕ್ತಿಯಾಗಲಿ ಬರುವುದಿಲ್ಲವೆಂದು ಪರಿಹರಿಸಿಕೊಳ್ಳಲಾಗದು—'ಇಹ ಪಕ್ಷೀ' ಇಲ್ಲಿ ಪಕ್ಷಿಯಿದೆ 'ನೇಹಪಕ್ಷೀ' ಇಲ್ಲಿ ಪಕ್ಷಿಯಿಲ್ಲವು ಎಂದು ಪ್ರತೀತವಾಗುವುದು. ಪ್ರತೀತವಾದುದರಲ್ಲಿ ವಿರೋಧವಿಲ್ಲವೆಂದರೆ ಪ್ರತೀತಿಯು ಆಕಾಶದ ಅಂಶಭೇದದಿಂದಲೇ ಆಗುವುದು. ಸ್ವಾತ್ಯಂತಾಭಾವಸಾಮಾನಾಧಿಕರಣ್ಯದಿಂದಲ್ಲವು— ಸಿದ್ಧಾಂತದಲ್ಲಿ ಭೂತಾಕಾಶದ ಅಂಶಗಳಿಗೆ ಭೇದವನ್ನಂಗೀಕರಿಸಲ್ಪಡುವುದರಿಂದ ಭಾವಾಭಾವಗಳಿಗೆ ಸಾಮಾನಾಧಿಕರಣ್ಯಪ್ರತೀತಿಯೇ (ಒಂದೇ ಕಡೆಯಲ್ಲಿ ಪ್ರತೀತಿಯೇ) ಅಸಿದ್ಧವು. || ೬ ||

ಸತ್ಯೋಪಾಧಿಕೃತವಾದ ಸತ್ಯಭೇದವು ಎನ್ನುವ ಹಿಂದೆ ಹೇಳಿದ ಭಾಸ್ಕರಮತದಲ್ಲಿ ದೋಷಾಂತರವನ್ನು ಹೇಳುವರು—

**ಮೂ ॥ ಸುಖದುಃಖಾದಿಭೋಗಶ್ಚ, ಸ್ವರೂಪೈಕ್ಯೇ ನ ಭೇದತಃ ॥**
**ದೃಶ್ಯೋ ಹ್ಯುಪಾಧಿಭೇದೇಽಪಿ ಹಸ್ತಪಾದಾದಿಗೋ ಯಥಾ ॥ ೭ ॥**

ಅ ॥ ಸ್ವರೂಪೈಕ್ಯೇ=ಸ್ವಾಭಾವಿಕವಾದ (ಸತ್ಯವಾದ) ಅಭೇದವಿರುವುದಾದರೆ, ಯಥಾ= ಹೇಗೆ, ಹಸ್ತಪಾದಾದಿಗಃ, ಹಸ್ತ=ಕೈಗಳು, ಪಾದ=ಕಾಲುಗಳು, ಆದಿ=ಮೊದಲಾದ (ಉಪಾಧಿ ಭೇದವಿದ್ದರೂ) ಅವುಗಳನ್ನು, ಗಃ=ಹೊಂದಿರುವ, ಸುಖದುಃಖಾದಿಭೋಗವು ಆಗುವುದೋ? ತಥಾ=ಹಾಗೆ, ಉಪಾಧಿಭೇದೇಽಪಿ=ಶರೀರಮೊದಲಾದ ಉಪಾಧಿಭೇದವಿರುವುದಾದರೂ, ಸ್ವರೂ ಪೈಕ್ಯೇ=ಜೀವಬ್ರಹ್ಮರಿಗೆ ಸ್ವಾಭಾವಿಕವಾದ (ಸತ್ಯವಾದ) ಭೇದವಿರುವುದಾದರೆ, ಸುಖದುಃಖಾದಿ ಭೋಗಶ್ಚ=ಸುಖವು ದುಃಖವು ಇವುಗಳೂ, ಅಲ್ಪಜ್ಞತ್ವ ಸರ್ವಜ್ಞತ್ವಾದಿಗಳ (ಅನುಭವವು) ಅನು ಸಂಧಾನವೂ, ಭೇದತಃ=ಭೇದದಿಂದ, ದೃಶ್ಯಃ=ಕಾಣಲ್ಪಡುವುದು, ನ ಸ್ಯಾತ್=ಆಗದಿರಲಿ, (ಸುಖದುಃಖಾದ್ಯನುಸಂಧಾನವೇ ಆಗಲಿ), ಹಿ= (ಸ್ವರೂಪೈಕ್ಯಕ್ಕೂ, ಸುಖದುಃಖಾದ್ಯನುಸಂಧಾ ನಕ್ಕೂ ವ್ಯಾಪ್ತಿಯು) ಪ್ರಸಿದ್ಧವಾಗಿದೆ. ॥ ೭ ॥

ತಾ ॥ ಹೇಗಾದರೂ ಹಿಂದೆ ಹೇಳಿದ ಆಕಾಶಾದಿ ಭೇದವು ಔಪಾಧಿಕವಾದರೂ, ಜೀವ ಬ್ರಹ್ಮರಿಗೂ ಜೀವರಿಗೂ ಕೂಡ, ಇರುವ ಭೇದವು ಸ್ವಾಭಾವಿಕವೆಂದು ಒಪ್ಪಲೇ ಬೇಕು. ಇಲ್ಲ ವಾದರೆ ಸ್ವಾಭಾವಿಕೈಕ್ಯವಿರುವುದಾದರೆ, ಸ್ವಾಭಾವಿಕೈಕ್ಯವಿರುವ ಓರ್ವ ಮೈತ್ರಾತ್ಮನಿಗಾಗುವ ಏಕಕಾಲದ ಸುಖದುಃಖಾನುಸಂಧಾನದಂತೆ, ಜೀವ-ಬ್ರಹ್ಮರಿಗೂ, ಜೀವರಿಗೂ ಏಕದಾ ಎಲ್ಲ ರಿಗೂ ಸುಖದುಃಖಾದ್ಯನುಸಂಧಾನವಾಗಬೇಕಾಗುವುದು. ಅಂದರೆ ಒಬ್ಬನು ನನಗೆ ಸುಖ ವಾಗಲಿ, ದುಃಖವಾಗಲಿ ಆಗುವುದೆಂದು ಅನುಭವಿಸುವಾಗ, ಎಲ್ಲರಿಗೂ ಐಕ್ಯವಾದರೆ ಇತರರು ಕೂಡಾ ನನಗೆ ಸುಖವಾಗಲಿ ದುಃಖವಾಗಲಿ ಆಗುತ್ತದೆಂದು ಅನುಭವಿಸಬೇಕು. ಆ ರೀತಿ ಯಾಗಿ ಒಂದೇ ಕಾಲದಲ್ಲಿ ಎಲ್ಲರಿಗೂ ಸುಖದುಃಖಾದ್ಯನುಸಂಧಾನವು ಆಗದಿರುವುದರಿಂದ ಎಲ್ಲ ರಿಗೂ ಸ್ವರೂಪೈಕ್ಯವುಂಟೆಂದು ಕಲ್ಪಿಸಲಾಗದು.

ಪರನು ಸುಖದುಃಖಾದಿಗಳು ಅಂತಃಕರಣಧರ್ಮಗಳಾದುದರಿಂದ ಸುಖದುಃಖಾದಿಭೇದವು ಅಂತಃಕರಣಗಳಿಗೆ ಭೇದವನ್ನು ಕಲ್ಪಿಸುವುದಕ್ಕೆ ಸಾಧನವಾಗುವುದಲ್ಲದೇ ಆತ್ಮೈಕ್ಯಕ್ಕೆ ಬಾಧಕ ವಾಗುವುದಿಲ್ಲವೆಂದು ಆಶಂಕಿಸಲು ಅದನ್ನು ಪರಿಹರಿಸುವುದಕ್ಕಾಗಿ ಅನುಸಂಧಾನಾರ್ಥವಾದ 'ಭೋಗ' ಶಬ್ದವನ್ನು ಪ್ರಯೋಗಿಸಿರುವರು. ಸುಖದುಃಖಾದಿಭೇದದಿಂದ ಚೇತನರ ಭೇದವು ಸಿದ್ಧವಾಯಿತೆಂದು ಹೇಳುವುದಿಲ್ಲ. ಆದರೆ ಪರನು ಆತ್ಮಸ್ವರೂಪೈಕ್ಯವನ್ನು ಪ್ರತಿಪಾದಿಸಿದರೆ ಸುಖದುಃಖಾದ್ಯನುಭವವು ಎಲ್ಲರಿಗೂ ಆತ್ಮೈಕ್ಯವಿರುವುದರಿಂದ ಏಕರೀತಿಯಿಂದ ಇರಬೇಕಾ ಗುವುದು ಎಂದಾಪಾದಿಸುವುದು.

ಇಲ್ಲಿ ಪರನು ಆಕ್ಷೇಪಿಸುವನು. ಬ್ರಹ್ಮನು, ಅಂಶಿಯು. ಜೀವರು, ಅವನ ಅಂಶರು. ಆದುದರಿಂದ ಯಾರಿಗೆ ಸುಖದುಃಖಾದ್ಯನುಸಂಧಾನವನ್ನು ಕಲ್ಪಿಸುವಿರಿ? (1) ಬ್ರಹ್ಮನಿಗೆ ಕಲ್ಪಿಸ ಲಾಗುವುದಿಲ್ಲ. ಆತನು ಆನಂದಸ್ವರೂಪನಾದಪ್ರಯುಕ್ತ ಮತ್ತು ಬಾಹ್ಯಸುಖಾನುಭವಕ್ಕೆ ಬೇಕಾದ ಅಂತಃಕರಣಾದಿಗಳು ಇಲ್ಲದಪ್ರಯುಕ್ತ ನೀವು ಹೇಳುವ ಸುಖಾದ್ಯನುಸಂಧಾನವು ಆತನಲ್ಲಿ ಕೂಡುವುದಿಲ್ಲ. (2) ಅಂಶರಾದ ಜೀವರಿಗೂ ಸುಖದುಃಖಾದ್ಯನುಸಂಧಾನವು ಕಲ್ಪಿಸಲಾಗುವು

ದಿಲ್ಲ. ಏತಕ್ಕೆಂದರೆ ಎಲ್ಲಿ ಎಲ್ಲಿ ಸ್ವಾಭಾವಿಕೈಕ್ಯವಿದೆಯೋ, ಅಲ್ಲಲ್ಲಿ ಸುಖದುಃಖಾದ್ಯನುಸಂಧಾನವು ಎಂದು ವ್ಯಾಪ್ತಿಯಿಲ್ಲವು. ಹಸ್ತಪಾದಗಳಲ್ಲಿರತಕ್ಕ ಅಂಶಗಳಿಗೆ ಸ್ವರೂಪೈಕ್ಯವಿದ್ದರೂ ಪರಸ್ಪರವಾಗಿ ಸುಖದುಃಖಾದ್ಯನುಸಂಧಾನವಿಲ್ಲದಿರುವುದರಿಂದ ವ್ಯಭಿಚಾರವು ಬರುವುದು. ಎಂದು ಮೇಲೆ ಹೇಳಿದ ಪರನ ಆಶಂಕೆಯು ಯುಕ್ತವಲ್ಲವು. ಅಂಶಗಳುಳ್ಳ ಅಂಶಿಗೆ ಸುಖಾದ್ಯನುಭವವಿಲ್ಲದೆ ಅಂಶಗಳಿಗೆ ಮಾತ್ರ ಸುಖಾದ್ಯನುಭವವಿರುವುದು ಲೋಕದಲ್ಲಿ ದೃಷ್ಟವಲ್ಲವು. ಮತ್ತು ಬ್ರಹ್ಮನು ಅಭೋಕ್ತೃ ಎಂದು ಹೇಳುವುದೂ ಯುಕ್ತವಲ್ಲವು. ಆದುದರಿಂದ ಸ್ವರೂಪೈಕ್ಯವಿದ್ದರೆ ಜೀವಬ್ರಹ್ಮರಿಗೆ ಏಕರೀತಿಯಿಂದ ಸುಖದುಃಖಾದ್ಯನುಸಂಧಾನವು ಆಗಬೇಕು.

ಮತ್ತು ಉಪಾಧಿಗಳು ಮಾತ್ರ ಸುಖದುಃಖಾದ್ಯನುಸಂಧಾನಕ್ಕೆ ಕಾರಣವಲ್ಲವು. ಹಾಗೆ ಹೇಳಿದ ಪಕ್ಷದಲ್ಲಿ ಪರನು ವ್ಯಾಪ್ತಿಯು ಕೂಡುವುದಿಲ್ಲವೆಂದು ಮೇಲೆ ಹೇಳಿದ ದೂಷಣೆಯು ಯುಕ್ತವಾಗುತ್ತಿತ್ತು. ಸ್ವರೂಪೈಕ್ಯವು ಸುಖದುಃಖಾದ್ಯನುಸಂಧಾನಕ್ಕೆ ಕಾರಣವೆಂದು ಹೇಳಿದುದರಿಂದ ವ್ಯಾಪ್ತಿಯು ಸಂಗತವೇ ಆಗುತ್ತದೆ. ಚೈತ್ರನ ಒಂದು ಅಂಶವಾದ ಪಾದಕ್ಕೆ ಮುಳ್ಳು ನೆಟ್ಟರೆ ಇನ್ನೊಂದು ಅಂಶವಾದ ಹಸ್ತವು ಮುಳ್ಳನ್ನು ತೆಗಿಯಲಿಕ್ಕೆ ಪ್ರವರ್ತಿಸುವುದು. ಇಲ್ಲಿ ಸ್ವರೂಪೈಕ್ಯವಿರುವುದರಿಂದಲೇ ಪಾದದಲ್ಲಿ ಉಂಟಾದ ಚೈತ್ರನ ದುಃಖವನ್ನು ನಿವಾರಿಸುವುದಕ್ಕಾಗಿ ಅವನ ಇನ್ನೊಂದು ಅಂಶವು ಪ್ರವರ್ತಿಸುವುದು.

ಮತ್ತು ಪರನು ಆಶಂಕಿಸುವನು. ಸ್ವರೂಪೈಕ್ಯವಿರುವುದರಿಂದ ಸುಖದುಃಖಾದ್ಯನುಸಂಧಾನವು ಏಕರೀತಿಯಿಂದ ಇರುವುದೆಂದು ಹೇಳಲಾಗುವುದಿಲ್ಲ. ಒಂದೇ ಚೈತ್ರನಿಗೆ ಕಳದ ವರ್ಷದಲ್ಲಿ ಉಂಟಾದ ಸುಖವು ಈಗ ವರ್ತಮಾನಕಾಲದಲ್ಲಿ ಉಂಟಾದ ಸುಖವು ಒಂದೇ ರೀತಿಯಿಂದ ಅನುಭವಿಸಲ್ಪಡುವುದಿಲ್ಲ. ಸುಖಸ್ಮರಣೆಯು ಸುಖಾನುಭವವೂ ಬೇರೆಯಾಗಿಯೇ ಇರುವವು ಎಂದು ಈ ದೂಷಣೆಯು ಯುಕ್ತವಲ್ಲವು.

ಅನುಸಂಧಾನಕ್ಕೆ ತತ್ಕಾಲಾನುಭವವು ಅವಶ್ಯವಲ್ಲವು. ಈ ಸುಖವು ನನ್ನಿಂದ ಅನುಭವಿಸಲ್ಪಟ್ಟಿತು. ಈ ಸುಖವನ್ನು ನಾನು ಅನುಭವಿಸುತ್ತಿದ್ದೇನೆ. ಎಂದು ನನ್ನ (ಸ್ವೀಯತಯಾ) ಸುಖದುಃಖಗಳು ಎಂದು ತಿಳಿಯುವುದೇ 'ಅನುಸಂಧಾನವು' ಈ ಅನುಸಂಧಾನವು ಗತಸುಖದಲ್ಲಿಯೂ ವರ್ತಮಾನ ಸುಖದಲ್ಲಿಯೂ ಇರುವುದರಿಂದ ಸ್ವರೂಪೈಕ್ಯವಿದ್ದರೆ ಸುಖಾದ್ಯನುಸಂಧಾನವಿರಲೇಬೇಕು.

ಮತ್ತು ಪರನು ಆಶಂಕಿಸುವನು. ಸ್ವರೂಪೈಕ್ಯವೇ ಸುಖದುಃಖಾದ್ಯನುಸಂಧಾನಕ್ಕೆ ಕಾರಣವೆಂದೆನಲಾಗದು. ಹಾಗೆ ಹೇಳುವುದಾದರೆ ಸ್ವರೂಪೈಕ್ಯವಿರುವ ಚೈತ್ರನ ಕಾಲಿಗೆ ಮುಳ್ಳು ತಗಲಿದರೆ ಕೈಯ್ಯಲ್ಲಿಯೂ ಮತ್ತು ಸರ್ವಾಂಗದಲ್ಲಿಯೂ ಮುಳ್ಳು ತಗಲಿಯದೆ ಎಂದು ದುಃಖಾನುಭವವು ಆಗಬೇಕಾಗುವುದು. ಹೀಗೆ ಆಗುವುದಿಲ್ಲ. ಆದಪ್ರಯುಕ್ತ ಸುಖಾದಿಭೇದಕ್ಕೆ ಉಪಾಧಿಭೇದವೇ ಕಾರಣವೆಂದು ಹೇಳಬೇಕು. ಪ್ರಕೃತ ಚೈತ್ರಮೈತ್ರರಿಗೆ ಉಪಾಧಿಭೇದವಿರುವುದರಿಂದ ಚೈತ್ರನ ಸುಖವು ಮೈತ್ರನಿಗೆ ಆಗುವುದಿಲ್ಲ. ಮೈತ್ರನ ದುಃಖವು ಚೈತ್ರನಿಗೆ ಆಗುವುದಿಲ್ಲ. ಆದುದರಿಂದ ಸ್ವರೂಪೈಕ್ಯಕ್ಕೂ ಸುಖದುಃಖಾದ್ಯನುಸಂಧಾನಕ್ಕೂ ಪರಸ್ಪರ ಸಂಬಂಧವಿಲ್ಲ. ಪರಂತು ಉಪಾಧಿ ಭೇದಾಭಾವವೇ ಸುಖಾದ್ಯನುಸಂಧಾನಕ್ಕೆ ಪ್ರಯೋಜಕವು.

ಈ ಆಶಂಕೆಯೂ ಯುಕ್ತವಲ್ಲವು. ಗರ್ಭಸ್ಥವಾದ ಶಿಶುವಿಗೂ ತಾಯಿಗೂ ಉಪಾಧಿಭೇದವಿಲ್ಲದಿದ್ದರೂ ಸ್ವರೂಪೈಕ್ಯವಿಲ್ಲವಾದ ಕಾರಣ ಸುಖದುಃಖಾದ್ಯನುಸಂಧಾನವು ಏಕರೀತಿಯಿಂದ ಆಗುವುದಿಲ್ಲ. ಆದುದರಿಂದ ಸ್ವರೂಪೈಕ್ಯವೂ ಕೂಡ ಸುಖದುಃಖಾದ್ಯನುಸಂಧಾನಕ್ಕೆ ಅವಶ್ಯವೆಂದು ತಿಳಿಯುವುದು. ॥ ೭ ॥

ಕೇವಲ ಉಪಾಧಿಭೇದಾಭಾವವು ಅನುಸಂಧಾನದಲ್ಲಿ ಪ್ರಯೋಜಕವೆಂದರೆ ಉಪಾಧಿಭೇದವಿರುವಲ್ಲಿ ಅನುಸಂಧಾನವಾಗುವುದರಿಂದ ದೋಷವು (ವ್ಯತಿರೇಕ ವ್ಯಭಿಚಾರ) ಬರುವುದು. ಆದುದರಿಂದ ಆರೀತಿಯಾಗಿ ಹೇಳುವುದಿಲ್ಲ. ಪರಂತು ಸಂಶ್ಲಿಷ್ಟೋಪಾಧಿಭೇದಾಭಾವವು ಅನುಸಂಧಾನದಲ್ಲಿ ಪ್ರಯೋಜಕವೆನ್ನುವೆನು. ಹಸ್ತಪಾದಾದಿಗಳು ಸಂಶ್ಲಿಷ್ಟೋಪಾಧಿಗಳು. ಅಂದರೆ ಒಂದೇ ಅವಯವಿಯ ಅವಯವಗಳು. ಅಲ್ಲಿ ಸಂಶ್ಲಿಷ್ಟೋಪಾಧಿಭೇದವಿದ್ದರೂ ವಿಶ್ಲಿಷ್ಟೋಪಾಧಿಭೇದವಿಲ್ಲವು, (ಒಂದೇ ಅವಯವಿ ಅವಯವಗಳಲ್ಲದ ಉಪಾಧಿಗಳು ವಿಶ್ಲಿಷ್ಟೋಪಾಧಿಗಳು). ಆ ವಿಶ್ಲಿಷ್ಟೋಪಾಧಿಭೇದಾಭಾವವೆನ್ನುವ ಪ್ರಯೋಜಕವಿರುವುದರಿಂದ ಅನುಸಂಧಾನವಾಗುವುದು. ಜೀವ ಬ್ರಹ್ಮರಿಗೂ, ಜೀವರಿಗೂ ವಿಶ್ಲಿಷ್ಟೋಪಾಧಿಭೇದವಿದೆ. ಆ ವಿಶ್ಲಿಷ್ಟೋಪಾಧಿಭೇದಾಭಾವವಿರದಿರುವುದರಿಂದ ಅನುಸಂಧಾನವಾಗುವುದಿಲ್ಲ ಎನ್ನುವ ಪಕ್ಷವನ್ನೂದೂಷಿಸುವರು.

**ಮೂ ॥ ನಾನಾದೇಹಗಭೋಗಾನುಸಂಧಾನಂ ಯೋಗಿನೋ ಯಥಾ ।**
**ನ ಚೇದ್ಭೋಗಾನುಸಂಧಾನಂ ತದಿಚ್ಛಾ ಯೋಗಿನಃ ಕುತಃ ॥ ೮ ॥**

ಅ ॥ ಯಥಾ=ಹೇಗೆ, ನಾನಾದೇಹಗಭೋಗಾನುಸಂಧಾನಂ, ನಾನಾದೇಹಗ=ಅನೇಕ ಶರೀರಗಳಲ್ಲಾಗುವ, ಭೋಗಾನುಸಂಧಾನಂ=ಸುಖಾದ್ಯನುಭವವು, ಯೋಗಿನಃ=ಯೋಗಿಗೆ, ದೃಷ್ಟಂ=ಕಾಣಲ್ಪಡುವುದೋ, ತಥಾ=ಹಾಗೆ, (ಜೀವ-ಬ್ರಹ್ಮರಿಗೂ, ಜೀವರಿಗೂ ಅನುಸಂಧಾನವಾಗುವುದು). (ಯೋಗಿಗೆ) ಭೋಗಾನುಸಂಧಾನಂ=ಅನೇಕ ಶರೀರಗಳಲ್ಲಿದ್ದ ಭೋಗಾನುಸಂಧಾನವು, ನ ಚೇತ್=ಆಗುವುದಿಲ್ಲವಾದರೆ, ಯೋಗಿನಃ=ಯೋಗಿಗೆ, ತದಿಚ್ಛಾ=ಅನೇಕ ಶರೀರಗಳನ್ನು ತೆಗೆದುಕೊಳ್ಳುವೆನು ಎಂಬೀ ಇಚ್ಛೆಯು, ಕುತಃ=ಯಾವಕಾರಣದಿಂದಾಗುವುದು.

ತಾ ॥ ಜೀವಬ್ರಹ್ಮರಿಗೆ ವಿಶ್ಲಿಷ್ಟೋಪಾಧಿಭೇದವಿರುವುದರಿಂದ ಸುಖಾದ್ಯನುಸಂಧಾನವಾಗುವುದಿಲ್ಲವೆಂದು ಹೇಳಕೂಡದು. ಏತಕ್ಕೆಂದರೆ ಸೌಭರ್ಯಾದಿ ಯೋಗಿಗಳು ಏಕಕಾಲದಲ್ಲಿ ಅನೇಕ ದೇಹಗಳನ್ನು ಧಾರಣೆಮಾಡಿ ಆಯಾದೇಹಗತ ಸುಖಾದಿಗಳ ಅನುಸಂಧಾನವುಳ್ಳವರಾಗಿರುತ್ತಾರೆ. "ಸೌಭರಿಶ್ಚ ಮಹಾಯೋಗೀ ಪಂಚಾಶಜ್ಜನ್ಮಸಂಸ್ಮೃತಿಂ……………… ಸ್ವೇಚ್ಛಯೈವ ತತಶ್ಚ್ಯುದ್ಧೋ ರಾಹುಮುಕ್ತ ಇವೋಡುಪಃ" ಎಂದು ಆಗ್ನೇಯಪುರಾಣದಲ್ಲಿ ಹೇಳಲ್ಪಟ್ಟಿದೆ. ಆ ಯೋಗಿಗೆ ವಿಶ್ಲಿಷ್ಟೋಪಾಧಿಬೇದವಿದ್ದರೂ ಸ್ವರೂಪೈಕ್ಯವಿರುವುದರಿಂದ ಸುಖಾದ್ಯನುಸಂಧಾನವು ಒಂದೇ ರೀತಿಯಾಗಿ ಎಲ್ಲಾದೇಹಗಳಿಂದಲೂ ಆಗುವುದು. ಯೋಗಿಗೆ ನಾನಾದೇಹದ ಸುಖಾದ್ಯನುಸಂಧಾನವಾಗುವುದು ಪರನಿಗೆ ತಿಳಿಯುವುದಿಲ್ಲವಾದರೂ ಅದನ್ನು ಊಹಿಸಬೇಕು. ಯೋಗಿಯು ಜ್ಞಾನಿಯು, ವಿವೇಕಿಯು ಆದುದರಿಂದ ಪ್ರಯೋಜನವಿಲ್ಲದೇ ಅನೇಕ ದೇಹಗಳನ್ನೂ ಧಾರಣೆ ಮಾಡಲಾರನು. ಹಾಗೆ ಧಾರಣೆ ಮಾಡುವುದಕ್ಕೆ ಆಯಾ ದೇಹಗತ ಸುಖಾನುಭವವೇ ಪ್ರಯೋಜನವೆಂದು ಹೇಳಬೇಕು. ಬೇರೆಯಾವ ಪ್ರಯೋಜನವೂ ಇಲ್ಲವು. ॥೮॥

ಯೋಗಿಗೆ ಅನೇಕ ಶರೀರಧಾರಣೇಚ್ಛೆಯು ಸುಖಾದ್ಯನುಸಂಧಾನಕ್ಕಾದರೆ ಹಿಂದೆ ಹೇಳಿದುದು ಉಚಿತವಾಗಬಹುದು. ಅದು ಅನುಸಂಧಾನಕ್ಕೋಸ್ಕರವಲ್ಲವು. ಪರಂತು ದೇಹಬಾಹುಳ್ಯಕ್ಕೋಸ್ಕರವೇ, ಅದೇ ದೇಹಬಾಹುಳ್ಯವನ್ನೂ ಹುಟ್ಟಿಸುತ್ತದೆ. ಅದರಿಂದ ಪ್ರಾರಬ್ಧಕರ್ಮನಾಶವಾಗುವುದು. ಆದುದರಿಂದ ನಿಷ್ಪ್ರಯೋಜನವಲ್ಲವು. ಭೋಗವೆಂದರೆ ಸುಖದುಃಖಗಳು. ಇವುಗಳಿರುವಾಗ ಅನುಸಂಧಾನವಿರಲೇಬೇಕೆನ್ನುವ ನಿಯಮವಿಲ್ಲವು. ಅನುಸಂಧಾನವಿಲ್ಲದೆಯೂ ಯೋಗಿಯ ಬೇರೆ ಬೇರೆ ದೇಹಗಳಲ್ಲಿ ಭೋಗವಾಗುವುದು. ಅದನ್ನು ದೂಷಿಸುವರು.—

**ಮೂ || ಅನುಸಂಧಾನರಹಿತದೇಹಬಾಹುಲ್ಯಮನ್ಯಥಾ ||**
**ಸಿದ್ಧಮೇವ ಹಿ ತತ್ಪಕ್ಷೇ ವಿಶೇಷೋ ಯೋಗಿನಃ ಕುತಃ || ೯ ||**

ಅ || ಅನುಸಂಧಾನರಹಿತದೇಹಬಾಹುಲ್ಯಂ, ಅನುಸಂಧಾನ=ಸುಖಾದ್ಯನುಸಂಧಾನದಿಂದ, ರಹಿತ=ಇರದಿರುವ, ದೇಹ ಬಾಹುಲ್ಯಂ=ಶರೀರಬಹುತ್ವವು, ಅನ್ಯಥಾ ಹಿ=ಯೋಗಿತ್ವವಿಲ್ಲದಿರುವುದಾದರೂ ಅಯೋಗಿಗೂ ಕೂಡ, ತತ್ಪಕ್ಷೇ=ಅದ್ವೈತಿಯಪಕ್ಷದಲ್ಲಿ, ಸಿದ್ಧಮೇವ=ಪ್ರಸಿದ್ಧವೇಆಗಿದೆ, ಹಾಗಾದ ಮೇಲೆ, ಯೋಗಿನಃ=ಯೋಗಿಗೆ, ವಿಶೇಷಃ=ಅಯೋಗಿಯದೆಸೆಯಿಂದ ಅನೇಕ ಶರೀರಾಧಿಷ್ಠಾತೃತ್ವ ವಿಶೇಷವು, ಕುತಃ=ಯಾತರ ದೆಸೆಯಿಂದುಂಟಾಗುವುದು. || ೯ ||

ತಾ || ಅನುಸಂಧಾನವಿರದ ಕೇವಲ ದೇಹಬಾಹುಲ್ಯಗೋಸ್ಕರ ಯೋಗಿಯು ಇಚ್ಛೆಯೆಂದು ಕಲ್ಪನೆಯು ಸಲ್ಲದು. ಹಾಗಾದರೆ ಸರ್ವಾದ್ವೈತವಾದದಲ್ಲಿ ಆ ವಿಧ ದೇಹಬಾಹುಲ್ಯವು ಅಯೋಗಿಗಳಾದ ಚೈತ್ರಮೈತ್ರಾದಿಗಳಿಗೂ ಇದೆ. ಹಾಗಾದನೋಲೆ ಆ ಅಯೋಗಿಗಳ ದೆಸೆಯಿಂದ ಯೋಗಿಗೆ (ಅನೇಕ ಶರೀರಾಧಿಷ್ಠಾತೃತ್ವವಿಶೇಷವು) ಓರ್ವನೇ ಅನೇಕ ಶರೀರದಲ್ಲಿ ಸನ್ನಿಹಿತನಾಗಿರುವನೆನ್ನುವ ವಿಷಯುವೆಲ್ಲಿದೆ. ಯೋಗಿಗಳು ಅಯೋಗಿಗಳು ಸಮವೇ ಆದರು. ಹಾಗಲ್ಲವು. ಪುರಾಣದಲ್ಲಿ ಅಯೋಗಿಗಳದೆಸೆಯಿಂದ ಯೋಗಿಗೆ ವಿಶೇಷವು ತೋರುವುದು. ಅದರಿಂದ ತಿಳಿಯುವುದು, ಯೋಗಿಗೆ ಕೇವಲ ನೇಹ ಬಾಹುಲ್ಯದ ಇಚ್ಛೆಯು ಅಲ್ಲವು. ಪರಂತು ಅನುಸಂಧಾನಗೋಸ್ಕರವೆಂದು ತಿಳಿಯುವುದು. ಆದುದರಿಂದ ಯೋಗಿಗೆ ಅನುಸಂಧಾನೇಚ್ಛೆಯಿರುವುದೆಂದು ಸಿದ್ಧವಾಗುವುದು.

ಇನ್ನು ಹೇಳಬೇಕು, ಯೋಗಿಗೆ ಅನೇಕ ಶರೀರಗತವಾದ ಸುಖಾದಿಯು ಅನುಸಂಧಾನವಿಲ್ಲವಾದರೂ ಯೋಗಿಗೇನೇ ಅನೇಕ ಶರೀರಗಳಿರುದೆನ್ನುವ ವಿಶೇಷವು ಕೂಡುವುದು. ಅಯೋಗಿಗಲ್ಲವು. ಆ ಅನೇಕ ಶರೀರಗಳು ಆ ಯೋಗಿಗೆ ಭೋಗಗೋಸುಗವಾಗುವವು. ಭೋಗವೆನ್ನುವುದು ಅನುಸಂಧಾನವಿಲ್ಲದೇನೂ ಆಗುವುದು. ಸಕಲ ಚೇತನರಿಗೂ ಅಭೇದವಿದ್ದರೂ ಅನೇಕ ಶರೀರಗಳು ಅಯೋಗಿಯಾದ ದೇವದತ್ತನ ಕರ್ಮಫಲಭೋಗಾರ್ಥವಾಗುವುದಿಲ್ಲವು. ಎಂದು ಹೇಳುವುದು ಯುಕ್ತವಲ್ಲವು. ಅದ್ವೈತವಾದದಲ್ಲಿ ಸರ್ವ ಶರೀರಗತಾತ್ಮರಿಗೂ, ಅಯೋಗಿಯಾದ ದೇವದತ್ತನದೆಸೆಯಿಂದ ಅಭೇದವಿರುವುದರಿಂದ ಸರ್ವಕರ್ಮಗಳು ದೇವದತ್ತಸಂಬಂಧಿಗಳೇ ಅಗುವವು. ಆದುದರಿಂದ ಸರ್ವಶರೀರಗಳು ದೇವದತ್ತನ ಭೋಗಾರ್ಥಗಳಾಗುವುದಿಲ್ಲವೆಂದು ನುಡಿಯಲಾಗದು. || ೯ ||

ಇನ್ನು ಅಭೇದವಿದ್ದರೂ ದೇವದತ್ತೋಪಾಧಿಕೃತಕರ್ಮವೇ ದೇವದತ್ತಸಂಬಂಧಿಯು. ಬೇರೆ ಇರುವ ಕರ್ಮವು ದೇವದತ್ತಸಂಬಂಧಿಯಾಗುವುದಿಲ್ಲವು ಎನ್ನುವುದು ಸಲ್ಲದು. ಸರ್ವಾತ್ಮರಿಗೂ ದೇವದತ್ತನ ದೆಸೆಯಿಂದ ಅಭೇದವಿದ್ದಮೇಲೆ ಸರ್ವೋಪಾಧಿಗಳಿಗೂ ದೇವದತ್ತೋಪಾಧಿತ್ವವೇ ಪ್ರಾಪ್ತವಾಗುವುದು. ಅಭೇದವಿದ್ದರೂ ದೇವದತ್ತಕರ್ಮನಿರ್ಮಿತವಾದುದೇ ದೇವದತ್ತೋಪಾಧಿಯು. ಇತರವಲ್ಲವೆನ್ನುವುದನ್ನು ದೂಷಿಸುವರು.—

**ಮೂ || ಸಿದ್ಧೌ ಹಿ ಕರ್ಮಭೇದಸ್ಯ ಸ್ಯಾದುಪಾಧಿವಿಭಿನ್ನತಾ |**
**ತತ್ಸಿದ್ಧೌ ಚೈವ ತತ್ಸಿದ್ಧಿ ರಿತ್ಯನ್ಯೋನ್ಯವ್ಯಪಾಶ್ರಯಃ || ೧೦ ||**

ಅ || ಕರ್ಮಭೇದಸ್ಯ=ಈ ಕರ್ಮವು ದೇವದತ್ತನದ್ದೇ, ಈ ಕರ್ಮವು ಯಜ್ಞದತ್ತನದ್ದೇ ಎಂದು ಕರ್ಮಭೇದದ, ಸಿದ್ಧೌ=ಸಿದ್ಧಿಯಾದರೆ, ಉಪಾಧಿವಿಭಿನ್ನತಾ=ಇದು ದೇವದತ್ತೋ

ಪಾಧಿಯು, ಇದು ಯಜ್ಞದತ್ತೋಪಾಧಿಯು ಎಂದು ಉಪಾಧಿಭೇದವು, ಸ್ಯಾತ್=ಸಿದ್ಧವಾಗುವುದು. ಸ್ವರೂಪಭೇದವಿದ್ದರೆ ಅದು ಉಪಾಧಿಭೇದದಲ್ಲಿ ನಿಮಿತ್ತವಾಗಬಹುದು ಸ್ವರೂಪಾಭೇದವನ್ನಂಗೀಕರಿಸಿರುವುದರಿಂದ ಕರ್ಮಭೇದವನ್ನು ಹೊರತು ಬೇರೆ ನಿಮಿತ್ತವನ್ನು ಹೇಳಲಿಕ್ಕೆ ಬರುವುದಿಲ್ಲವು. ತತ್ಸಿದ್ಧೌ=ಉಪಾಧಿಭೇದ ಸಿದ್ಧಿಯಾದರೆ, ತತ್ಸಿದ್ಧಿಃ=ಕರ್ಮಭೇದದ ಸಿದ್ಧಿಯಾಗುವುದು. ಇದರಲ್ಲಿಯೂ ಹಿಂದಿನಂತೆ ಸ್ವರೂಪಭೇದವಿಲದಿರುವುದರಿಂದ ಅದು ನಿಮಿತ್ತವಾಗುವುದಿಲ್ಲವು. ಪರಂತು ಉಪಾಧಿಭೇದವೇ ನಿಮಿತ್ತವು. ಇತಿ=ಹೀಗೆಂದು, ಅನ್ಯೋನ್ಯವ್ಯಪಾಶ್ರಯಃ=ಅನ್ಯೋನ್ಯಾಶ್ರಯದೋಷವು ಸಂಭವಿಸುವುದು. ॥ ೧೦ ॥

ತಾ ॥ ಮತ್ತು ಯೋಗಿಯ ದೃಷ್ಟಾಂತದಿಂದ ಹುಟ್ಟುವ ದೂಷಣೆಗಳನ್ನು ನಿರಾಕರಿಸುವರು. ಯೋಗಿಯು ಅನೇಕ ದೇಹಗಳನ್ನು ಧರಿಸುವುದರಿಂದ ಕರ್ಮಕ್ಷಯವೆಂಬುವ ಪ್ರಯೋಜನವಿರುವುದರಿಂದ, ಅದಕ್ಕಾಗಿ ಅನೇಕ ದೇಹಗಳನ್ನು ಧಾರಣೆ ಮಾಡುವನು. ಆಯಾ ದೇಹಗಳಿಂದ ಕರ್ಮಾನುಸಾರ ಸುಖಾದಿಗಳನ್ನೂ ಅನುಭವಿಸುವನು. ದೇವದತ್ತನ ಮಾತು ಹಾಗಲ್ಲ. ಎಲ್ಲಾ ದೇಹಗಳು ಯೋಗಿಯ ಅನೇಕ ದೇಹಗಳಂತೆ ದೇವದತ್ತನ ಕರ್ಮದಿಂದ ಎಲ್ಲಾ ದೇಹಗಳೂ ಬರುವುದಿಲ್ಲವು. ಕರ್ಮವು ಬೇರೆಯಾದುದರಿಂದ ಉಪಾಧಿಯು (ದೇಹವು) ಬೇರೆಯಾಗಿರುವುದು. ಉಪಾಧಿಗಳು (ವಿಶ್ಲಿಷ್ಟಗಳು) ಬೇರೆಯಾದುದರಿಂದ, ಸ್ವರೂಪೈಕ್ಯವಿದ್ದರೂ ದೇವದತ್ತನಿಗೂ, ಯಜ್ಞದತ್ತನಿಗೂ ಸುಖಾದ್ಯನುಸಂಧಾನವು ಏಕರೀತಿಯಿಂದ ಆಗುವುದಿಲ್ಲ. ಹೀಗೆ ಪರನು ಆಕ್ಷೇಪಿಸಿದರೆ ಹೇಳುವರು. ಕರ್ಮಭೇದವು ಸ್ವರೂಪಭೇದದಿಂದ ಆಗುವುದು. ಇಲ್ಲವಾದರೆ ಉಪಾಧಿಭೇದದಿಂದ ಎಂದು ಹೇಳಬೇಕು. ಹೀಗೆ ಹೇಳಿದರೆ ಉಪಾಧಿಭೇದದಿಂದ ಕರ್ಮಭೇದವು ಮತ್ತು ಕರ್ಮಭೇದದಿಂದ ಉಪಾಧಿಭೇದವು ಎಂದು ಹೇಳಬೇಕಾಗುವುದು. ಇದು ಅನ್ಯೋನ್ಯಾಶ್ರಯವು. ಅಲ್ಲ. ಕರ್ಮಗಳೆಲ್ಲ ಬೇರೆ ವ್ಯಕ್ತಿಗಳು, ಉಪಾಧಿಗಳೆಲ್ಲ ಬೇರೆ ವ್ಯಕ್ತಿಗಳು, ಬೀಜವೃಕ್ಷಗಳಂತೆ ಅವುಗಳು ಪರಸ್ಪರ ಪರಂಪರೆಯಾಗಿ ಕಾರಣಗಳಾಗುವವೆಂದರೆ ಇದು ಕೂಡಲಾರದು. ಬೀಜವೃಕ್ಷಗಳಲ್ಲಿ ಪರಂಪರಾ ಕಾರಣತ್ವವು ಪ್ರತ್ಯಕ್ಷಸಿದ್ಧವು. ಕರ್ಮ ಉಪಾಧಿಗಳ ವಿಷಯದಲ್ಲಿ ಪರಂಪರಾ ಪರಸ್ಪರ ಕಾರಣತ್ವವು ಯಾವ ಪ್ರಮಾಣದಿಂದಲೂ ಸಿದ್ಧವಾಗುವುದಿಲ್ಲ. ಆದುದರಿಂದ ಕರ್ಮ ಉಪಾಧಿಗಳು ಬೇರೆ ಬೇರೆ ವ್ಯಕ್ತಿಗಳೆಂದರೆ ಅನವಸ್ಥೆಯು ಬರುವುದು. ಮತ್ತೂ ಹೇಳಬಹುದು. ಅವುಗಳು ಅನಾದಿಗಳಾದಪ್ರಯುಕ್ತ ಪರಂಪರಾ ಕಾರಣತ್ವವು ಕೂಡುತ್ತದೆ. ಅಂದರೆ ಕರ್ಮ ಉಪಾಧಿ ಇವುಗಳು ಮೂಲವ್ಯಕ್ತಿಗಳೆಂಬುವ ವಿಷಯದಲ್ಲಿ ಯಾವ ಪ್ರಮಾಣವೂ ಇಲ್ಲವಾದಕಾರಣ ಇದು ಸಲ್ಲದು. ಆದುದರಿಂದ ಸ್ವರೂಪೈಕ್ಯವಿರುವದರಿಂದ ಯೋಗಿಗೆ ಅನೇಕ ದೇಹಗಳಿಂದ ಸುಖಾದ್ಯನುಸಂಧಾನವನ್ನು ಮಾಡುವನೆಂದು ಹೇಳಬೇಕು. ॥೧೦॥

ಈ ರೀತಿಯಾಗಿ ಅಸತ್ಯೋಪಾಧಿನಿಮಿತ್ತಕವಾದ(ಅಧ್ಯಸ್ತ) ಅಸತ್ಯಭೇದವನ್ನಂಗೀಕರಿಸುವ ಮತ್ತೂ ಸತ್ಯೋಪಾಧಿನಿಮಿತ್ತಕವಾದ ಸತ್ಯಭೇದವನ್ನು ಅಂಗೀಕರಿಸುವ ಅದ್ವೈತವಾದಿಗಳ ಪಕ್ಷಗಳನ್ನು ಪ್ರತ್ಯೇಕವಾಗಿ ನಿರಾಕರಿಸಿ ಉಭಯ ಸಾಧಾರಣದೋಷದಿಂದಲೂ ದೂಷಿಸುವರು-

**ಮೂ ॥ ಆತ್ಮಸ್ವಭಾವಭೇದಸ್ಯ ವಿದೋಷತ್ವೇನ ಚಾಖಿಲಃ ॥**
**ಪ್ರತ್ಯಕ್ಷಾದಿವಿರೋಧಾಚ್ಚ ದುಷ್ಟಃ ಪಕ್ಷೋಽಯಮಂಜಸಾ ॥ ೧೧ ॥**

ಅ॥ ಆತ್ಮಸ್ವಭಾವಭೇದಸ್ಯ, ಆತ್ಮ=ಜೀವಾತ್ಮ ಪರಮಾತ್ಮರಿಗೂ ಜೀವರಿಗೂ ಕೂಡ ಇರುವ, ಸ್ವಭಾವಭೇದಸ್ಯ=ಸ್ವರೂಪ ನಿಮಿತ್ತಕವಾದ (ಮಿಥ್ಯೋಪಾಧಿನಿಮಿತ್ತಕವಲ್ಲದ) ಭೇದಕ್ಕೆ (ಆತ್ಮಭೇದವು ಸ್ವಭಾವದಿಂದಲೇ ಇರುವುದೆನ್ನುವ ಪಕ್ಷಕ್ಕೆ), ವಿದೋಷತ್ವೇನ = ದೋಷವಿರ

ದಿರುವುದರಿಂದ, ಚ, ಪ್ರಾಮಾಣಿಕತ್ವೇನ ಚ=ಪ್ರಮಾಣಸಿದ್ಧವಾದುದರಿಂದಲೂ, ಅಯಂ ಅಖಿಲಃ ಪಕ್ಷಃ=ಈ ಎಲ್ಲಾ ಅದ್ವೈತಪಕ್ಷವು, (ಸಿದ್ಧಾಂತವು), ಪ್ರತ್ಯಕ್ಷಾದಿವಿರೋಧಾತ್=ಪ್ರತ್ಯಕ್ಷಾದಿ ಪ್ರಮಾಣವಿರೋಧವಿರುವುದರದೆಸೆಯಿಂದಲೂ, ಚ, ಪ್ರಮಾಣಾಭಾವಾಚ್ಚ=ಸಾಧಕಪ್ರಮಾಣವಿಲ್ಲ ದಿರುವುದರದೆಸೆಯಿಂದಲೂ, ಅಂಜಸಾ=ಚನ್ನಾಗಿ, ದುಷ್ಟಃ=ದೋಷಯುಕ್ತವಾದುದು. ॥ ೧೧ ॥

ತಾ ॥ ಶಾಸ್ತ್ರದ ಸಿದ್ಧಾಂತದ ಸ್ಥಾಪನೆಯು, ಪರಪಕ್ಷ ನಿರಾಕರಣೆಯಿಂದಲೂ ಸ್ವಪಕ್ಷದ ಸಾಧನೆಯಿಂದಲೂ ನಿರ್ದುಷ್ಟವೆನಿಸುವುದು. ಪರಪಕ್ಷ ಪ್ರತಿಕ್ಷೇಪವು ಬಾಧಕಪ್ರಮಾಣವುಂಟೆಂದು, ಸಾಧಕಪ್ರಮಾಣವಿಲ್ಲವೆಂದು ಕೂಡ ತೋ-ಸುವ ಭೇದದ ದೆಸೆಯಿಂದ ಎರಡು ವಿಧವು. ಸ್ವಪಕ್ಷಸಾಧನೆಯೂ ಕೂಡ ಸಾಧಕಪ್ರಮಾಣವಿರುವುದು, ಬಾಧಕಪ್ರಮಾಣವಿಲ್ಲವೆಂದೂ ಕೂಡ ತೋರಿಸುವ ಭೇದದ ದೆಸೆಯಿಂದ ಎರಡು ವಿಧವು. ಹೀಗಿರಲು ಪ್ರಕೃತದಲ್ಲಿ ಜೀವಪರಮಾತ್ಮರಿಗೂ ಜೀವರಿಗೂ ಇರುವ ಭೇದವು ಸ್ವಾಭಾವಿಕವಾದುದು, ಮಿಥ್ಯಾಭೂತವಲ್ಲವು, ಎನ್ನುವ ಪಕ್ಷಕ್ಕೆ ಬಾಧಕಪ್ರಮಾಣವಿಲ್ಲದಿರುವುದರ ದೆಸೆಯಿಂದಲೂ, ಸಾಧಕಪ್ರಮಾಣವಿರುವುದರಿಂದಲೂ, ಮತ್ತೂ ಪ್ರತಿವಾದಿಪಕ್ಷಕ್ಕೆ ಬಾಧಕಪ್ರಮಾಣವಿರುವುದರಿಂದಲೂ ಸಾಧಕಪ್ರಮಾಣವಿಲ್ಲದಿರುವುದರಿಂದಲೂ ಪ್ರತಿವಾದಿಪಕ್ಷವಾದ ಅಭೇದವು ಸಂಪೂರ್ಣ ನಿರಾಕರಿಸಲ್ಪಟ್ಟಿತು. ॥ ೧೧ ॥

ಇದರ ಮೇಲೆ ಪುನರಾಶಂಕೆಯು. ಜೀವೇಶ್ವರರಿಗೂ ಪರಸ್ಪರವಾಗಿ ಜೀವರಿಗೂ ಇರುವ ಭೇದವು ಪ್ರತ್ಯಕ್ಷಾದಿಸಿದ್ಧವು. ತದಭೇದವು ಪ್ರತ್ಯಕ್ಷಾದಿವಿರುದ್ಧವು— ಎಂದು ಹೇಳಿದುದು ಅಸಂಗತವು. ಸರ್ವರಿಗೂ 'ಅಹಂ' ಎಂದು ಸ್ವಾತ್ಮನೇ ಪ್ರತ್ಯಕ್ಷನಾಗುವನು. ಅಲ್ಲದೇ ಪರಮಾತ್ಮನಾಗಲೀ, ಪರಾತ್ಮನಾಗಲೀ, ಪ್ರತ್ಯಕ್ಷನಾಗುವುದಿಲ್ಲ. ಆಗ ಪ್ರತ್ಯಕ್ಷನಾದ ಸ್ವಾತ್ಮನಲ್ಲಿಯೂ ಅಪ್ರತ್ಯಕ್ಷನಾದ ಪರಮಾತ್ಮನಲ್ಲಿಯೂ, ಪರಾತ್ಮನಲ್ಲಿಯೂ ಇರುವ ಭೇದವು ಪ್ರತ್ಯಕ್ಷ ಅಪ್ರತ್ಯಕ್ಷ ಧರ್ಮವಾಗುವುದು. ಅಪ್ರತ್ಯಕ್ಷವಾದ ವಾಯುವಿನಲ್ಲಿಯೂ ಪ್ರತ್ಯಕ್ಷವಾದ ವನಸ್ಪತಿಯಲ್ಲಿಯೂ ಇರುವ ಸಂಯೋಗರೂಪವಾದ ಧರ್ಮವು ಹೇಗೆ ಪ್ರತ್ಯಕ್ಷವಾಗುವುದಿಲ್ಲವೋ ಅದರಂತೆ ಪ್ರತ್ಯಕ್ಷಾಪ್ರತ್ಯಕ್ಷ ಧರ್ಮವಾದುದರಿಂದ ಈ ಭೇದವು ಪ್ರತ್ಯಕ್ಷವಾಗಲಾರದು. ಆದುದರಿಂದ ಭೇದಪ್ರತ್ಯಕ್ಷವುಂಟೆಂದು, ಪ್ರತ್ಯಕ್ಷಾದಿ ವಿರೋಧವೆಂದು ಹೇಗೆ ಹೇಳಿದುದೆನ್ನುವ ಆಶಂಕೆಯನ್ನು ಪರಿಹರಿಸಲಿಚ್ಛಿಸಿಕೊಂಡು ಮೊದಲು ಜೀವಭೇದವು ಪ್ರತ್ಯಕ್ಷವಾಗುವುದೆಂದು ಸಮರ್ಥಿಸುವರು.

**ಮೂ ॥ ಚೇಷ್ಟಾಲಿಂಗೇನ ಸಾತ್ಮತ್ವೇ ಪರದೇಹಸ್ಯ ಸಾಧಿತೇ ॥**
**ಅನ್ಯತ್ವಂ ಸ್ವಾತ್ಮನಸ್ತಸ್ಮಾತ್ಸರ್ವೈರೇವಾನುಭೂಯತೇ ॥ ೧೨ ॥**

ಅ ॥ ಪರದೇಹಸ್ಯ=ಅನ್ಯನ ಶರೀರಕ್ಕೆ, ಸಾತ್ಮತ್ವೇ=ಜೀವಸಹಿತತ್ವವು, ಚೇಷ್ಟಾಲಿಂಗೇನ=ಹಿತಪ್ರಾಪ್ತಿಯು ಅಹಿತಪರಿಹಾರವು, ಇವುಗಳಿಗೆ ಇಚ್ಛಾಪೂರ್ವಕವಾದ ವ್ಯಾಪಾರರೂಪವಾದ ಲಿಂಗದಿಂದ, ಸಾಧಿತೇ=ಸಾಧಿಸಲ್ಪಡುತ್ತಿರಲು, ತಸ್ಮಾತ್=ಆ ಪರನದೆಸೆಯಿಂದ, ಸ್ವಾತ್ಮನಃ=ತನಗೆ, ಅನ್ಯತ್ವಂ=ಭೇದವು, ಸರ್ವೈಃ=ಎಲ್ಲರಿಂದಲೂ, ಅನುಭೂಯತ ಏವ=ಪ್ರತ್ಯಕ್ಷೀಕರಿಸಲ್ಪಡುತ್ತದೆ. ಪ್ರತ್ಯಕ್ಷವಾಗಿ ತಿಳಿಯಲ್ಪಟ್ಟೇ ಇರುವುದು. ॥ ೧೨ ॥

ತಾ ॥ ಸಿದ್ಧಾಂತದಲ್ಲಿ ಒಂದು ಕೋಲು ಎರಡು ಕಲ್ಲುಗಳ ಮೇಲೆ ನಿಂತಿರುವಂತೆ ಒಂದೇ ಭೇದವು ಎರಡು ಧರ್ಮಿಯಲ್ಲಿರುವುದಿಲ್ಲವು. ಪರಂತು ದ್ರೋಣನು ಕೌರವರ ಪಕ್ಷದಲ್ಲಿದ್ದು ಪಾಂಡವರನ್ನು ಪ್ರೀತಿಸುವಂತೆ ಒಂದು ಧರ್ಮಿಯಲ್ಲಿದ್ದು ಇನ್ನೊಂದು ಪ್ರತಿಯೋಗಿಯನ್ನಪೇಕ್ಷಿಸುತ್ತದೆ, ಎಂದು ಅನುವ್ಯಾಖ್ಯಾನಾದಿಗ್ರಂಥದಲ್ಲಿ ಸಾಧಿಸಿರುವರು. ಆ ಭೇದವು

ಪ್ರತ್ಯಕ್ಷವಾಗಬೇಕಾದರೆ ಧರ್ಮಿಯು ಪ್ರತ್ಯಕ್ಷವೂ, ಪ್ರತಿಯೋಗಿಯು ಸ್ಮರಣೆಯೂ ಇರಬೇಕು. ಪ್ರಕೃತದಲ್ಲಿ ಧರ್ಮಿಯಾದ ಸ್ವಾತ್ಮನು ಪ್ರತ್ಯಕ್ಷನಾಗುವನು, ಪ್ರತಿಯೋಗಿ ಸ್ಮರಣಕಾರಣವಾದ ಅನುಭವವು ಚೇಷ್ಟಾಲಿಂಗವಾದ ಅನುಮಾನದ ದೆಸೆಯಿಂದಾಗುವುದು. (ಉ) ಪರಶರೀರಂ (ತನ್ನ ದೆಸೆಯಿಂದ ಇತರನ ಶರೀರವು) ಸಾತ್ಮಕಂ (ಆತ್ಮನಿಂದ ಸಹಿತವಾದುದು) ಚೇಷ್ಟಾವತ್ವಾತ್, ಹಿತಪ್ರಾಪ್ತಿಯ ಅಹಿತಪರಿಹಾರದ ಇಚ್ಛಾಪೂರ್ವಕ (ಇಚ್ಛೆಯಿಂದ ಹುಟ್ಟಿದ) ವ್ಯಾಪಾರ (ಪ್ರಯತ್ನ) ವತ್ವದದೆಸೆಯಿಂದ ಸ್ವಶರೀರವತ್ (ತನ್ನ ಶರೀರದಂತೆ) ಎಂದು ಪರಾತ್ಮನಾದ ಪ್ರತಿಯೋಗಿಯ ಸ್ಮರಣೆಗೆ ಹೇತುವಾದ ಅನುಭವವು ಬರುವುದು. ಇಲ್ಲಿ ಪರಶರೀರಂ (ಪರಶರೀರವು) ಹಿತಾಹಿತ ಪ್ರಾಪ್ತಿಪರಿಹಾರೇಚ್ಛಾಪೂರ್ವಕ ವ್ಯಾಪಾರ ರಹಿತಂ ನ ಭವತಿ—(ಹಿತಪ್ರಾಪ್ತಿಯ ಅಹಿತಪರಿ ಹಾರದ ಇಚ್ಛೆಯಿಂದ ಹುಟ್ಟಿದ ವ್ಯಾಪಾರಧಿಂದ ವಿರಹಿತವಾದುದಲ್ಲವು) ಪ್ರಾಣಾದಿಮತ್ವರೂಪ ಶರೀರತ್ವಾತ್ (ಶರೀರವಿಶೇಷತ್ವದೆಸೆಯಿಂದ) ಮಚ್ಛರೀರವತ್ (ನನ್ನ ಶರೀರದಂತೆ) ಎಂದು ಸಾಧಿಸಿದರೆ— ಮೊದಲಿನ ಅನುಮಾನದಲ್ಲಿ ಹೇತ್ವಸಿದ್ಧಿಶಂಕಾವಾರಣವಾಗುವದು. ಆದುದ ರಿಂದ ಈ ರೀತಿಯಾಗಿ ಪರಶರೀರದಲ್ಲಿ ಓರ್ವ ಆತ್ಮನ ಸ್ಮರಣೆಯು ಬರಲು ಆತನಂತೆ ಪ್ರಯತ್ನ ವಿರದ ತನ್ನನ್ನು ಪ್ರತ್ಯಕ್ಷದಿಂದ ತಿಳಿದು ಆತನು ತಾನಲ್ಲವು (ಅಹಂ ಪರಾತ್ಮಾ ನ) ಎಂದು ಪರಾತ್ಮನದೆಸೆಯಿಂದ (ಅನ್ಯತ್ವ) ಭೇದವು ತನ್ನಲ್ಲಿ ಪ್ರತ್ಯಕ್ಷವಾಗುವುದು. ಪ್ರತ್ಯಕ್ಷರೂಪ ಪ್ರಮಾಣ ಸಿದ್ಧವಾದುದರಿಂದ ಈ ಭೇದವು ಸತ್ಯವಾದುದು, ಆದುದರಿಂದಲೇ ಸ್ವಾಭಾವಿಕವೆಂದು ಕೂಡ ಸಿದ್ಧವಾಗುವುದು. ಇದರಿಂದ ಮಿಥ್ಯೋಪಾಧಿಕೃತ ಮಿಥ್ಯಾಭೇದವೆನ್ನುವ ಪಕ್ಷವು ದೂಷಿತ ವಾಯಿತು. ಪ್ರತ್ಯಕ್ಷಕ್ಕೆ ಪ್ರಾಮಾಣ್ಯವು "ಪ್ರತ್ಯಕ್ಷವಚ್ಚ ಪ್ರಾಮಾಣ್ಯಂ" ಎಂದು ಮೊದಲಾಗಿ ಅನುವ್ಯಾಖ್ಯಾನಾದಿಗಳಲ್ಲಿ ಸಾಧಿಸಲ್ಪಟ್ಟಿದೆ. ಈ ಭೇದವು ಸತ್ಯೋಪಾಧಿಕೃತವೆನ್ನುವ ಪಕ್ಷವು ಹಿಂದೆ ದೂಷಿತವಾಗಿದೆ. ಅಂತು ಜೀವಭೇದವು ಪ್ರತ್ಯಕ್ಷವು. ॥ ೧೨ ॥

ಈ ರೀತಿಯಾಗಿ ಜೀವಭೇದಪ್ರತ್ಯಕ್ಷವು ಕೂಡುವುದಿಲ್ಲವೆನ್ನುವ ಅಸಂಭವಾಶಂಕೆಯನು ಪರಿಹರಿಸಿ ಈಗ ಜೀವೇಶ್ವರ ಭೇದಪ್ರತ್ಯಕ್ಷವನ್ನು ಸಮರ್ಥಿಸುವರು.—

**ಮೂ ॥ ಅಜ್ಞತಾ ಚಾಲ್ಪಶಕ್ತಿತ್ವಂ ದುಃಖಿತ್ವಂ ಸ್ವಲ್ಪಕರ್ತೃತಾ । ಸರ್ವಜ್ಞತ್ವಾ ದೀಶಗುಣ ವಿರುದ್ಧಾ ಹ್ಯನುಭೂತಿಗಾಃ ॥ ೧೩ ॥**

ಅ ॥ ಅಜ್ಞತಾ=ಅಲ್ಪಜ್ಞತ್ವವು (ಸ್ವಲ್ಪವನ್ನು ತಿಳಿದಿರುವಿಕೆಯು), ಅಲ್ಪಶಕ್ತಿತ್ವಂ= ಸ್ವಲ್ಪಸಾಮರ್ಥ್ಯವಿರುವಿಕೆಯು, ದುಃಖಿತ್ವಂ=ದುಃಖವಿರುವಿಕೆಯು, ಸ್ವಲ್ಪಕರ್ತೃತಾ=ಸ್ವಲ್ಪಕಾ ರ್ಯವನ್ನು ಮಾಡುವಿಕೆಯು ಇವುಗಳು, ಸರ್ವಜ್ಞತ್ವಾದೀಶಗುಣವಿರುದ್ಧಾಃ=ಸರ್ವಜ್ಞತ್ವವು (ಸರ್ವವನ್ನು ತಿಳಿದಿರುವಿಕೆಯು) ಆದಿ ಸರ್ವಶಕ್ತಿತ್ವವು ದುಃಖರಹಿತತ್ವವು ಸರ್ವಕರ್ತೃತ್ವವು, ಈ ವಿಧಗಳಾದ, ಈಶಗುಣ=ಈಶ್ವರನ ಗುಣಗಳದೆಶೆಯಿಂದ, ವಿರುದ್ಧಾಃ=ವಿರುದ್ಧಗಳಾಗಿ (ಈಶ್ವರನಲ್ಲಿರದವುಗಳಾಗಿ), ಜೀವನಿಷ್ಠತಯಾ=ಜೀವನಲ್ಲಿರುವಿಕೆಯಿಂದ, ಅನುಭೂತಿಗಾಃ= ಪ್ರತ್ಯಕ್ಷ ವಿಷಯಗಳಾಗಿವೆ, ಹಿ=ಯಾವಕಾರಣದದೆಸೆಯಿಂದಲೋ, ತಸ್ಮಾತ್=ಆದಕಾರಣದ ದೆಸೆಯಿಂದ, ತಸ್ಮಾತ್=ಆ ಈಶ್ವರನದೆಸೆಯಿಂದ, ಸ್ವಾತ್ಮನಃ=ಜೀವನಿಗೆ, ಅನ್ಯತ್ವಂ=ಭೇದವು, ಸರ್ವೈಃ=ಎಲ್ಲರಿಂದ, ಅನುಭೂಯತೇ ಏವ=ಪ್ರತ್ಯಕ್ಷವಾಗಿಯೇ ಕಾಣಲ್ಪಡುತ್ತದೆ, ಎಂದು ಹಿಂದಿನ ಮೂಲವನ್ನು ಕೂಡಿಸಿಕೊಂಡು ಯೋಜನೆಯು. ॥ ೧೩ ॥

ತಾ ॥ ಸರ್ವಜ್ಞತ್ವವು, ಸರ್ವಶಕ್ತಿತ್ವವು, ದುಃಖರಹಿತತ್ವವು, ಸರ್ವಕರ್ತೃತ್ವವು, ಈಶ್ವರ ನಲ್ಲಿಯೇ ಇರುವ ಗುಣಗಳು, (ಈಶ್ವರನಲ್ಲಿರದ) ಇವುಗಳಿಗೆ ವಿರುದ್ಧಗಳಾದವುಗಳು,

(1) ಅಲ್ಪಜ್ಞತ್ವವು, (2) ಅಲ್ಪಶಕ್ತಿತ್ವವು, (3) ದುಃಖಿತ್ವವು, (4)ಅಲ್ಪಕರ್ತೃತ್ವವು, ಈ ಗುಣಗಳು ಜೀವನಲ್ಲಿಯೇ ಇರುವವುಗಳು. ಅಭೇದವಿರುವುದಾದರೆ ಒಂದೇವಿಧ ಗುಣಗಳು ಜೀವೇಶ್ವರರಲ್ಲಿ ರಬೇಕಾಗುವುವು. ಆ ರೀತಿಯಾಗಿರದೆ ಈಶ್ವರನ ಸರ್ವಜ್ಞತ್ವಾದಿಗುಣಗಳಿಗೆ ವಿರುದ್ಧಗಳಾದ ಅಲ್ಪಜ್ಞತ್ವಾದಿಗುಣಗಳು ತನ್ನಲ್ಲಿವೆ. 'ನಾಹಂ ಸರ್ವಜ್ಞಃ' ನಾನು ಸರ್ವಜ್ಞನಲ್ಲವು ಎಂದು ಅನುಭವಿಸುವ ಜೀವನಿಗೆ ನಾನು ಈಶ್ವರನಲ್ಲವು ಎಂದು ಈಶ್ವರನೇ ಪ್ರತಿಯೋಗಿಯಾಗಿಯೂ ತಾನು ಅನುಯೋಗಿಯಾಗಿಯೂ ಇರುವ ಭೇದಪ್ರತ್ಯಕ್ಷವಾಗುವುದು. ಈ ಪ್ರತ್ಯಕ್ಷವು ಅತಿ ಸ್ಪಷ್ಟವಾಗಿದೆಂದು ತಿಳಿಸುವುದಕ್ಕಾಗಿ ಅಲ್ಪಜ್ಞತ್ವಾದ್ಯನೇಕವಿರುದ್ಧ ಧರ್ಮಗಳನ್ನುದಾಹರಿಸಿರುವರು. ಇದರಿಂದ 'ಜೀವೇಶ್ವರೌ' (ಜೀವೇಶ್ವರರು) ಧರ್ಮಿಸತ್ತಾಸಮಾನಸತ್ತಾಕಭೇದವಂತೌ (ಧರ್ಮಿಯಲ್ಲಿರುವ ಭೇದದ ಸತ್ತೆಗೆ (ಸ್ಥಿತಿಗೆ) ಸದೃಶವಾದ ಸತ್ತೆಯುಳ್ಳ (ಪಾರಮಾರ್ಥಿಕವಾದ) ಭೇದವುಳ್ಳವರು) ಪರಸ್ಪರವಿರುದ್ಧ ಧರ್ಮಾಧಿಕರಣತ್ವಾತ್ (ಅನ್ಯೋನ್ಯವಾಗಿ ವಿರುದ್ಧ ಧರ್ಮಗಳಿರುವಿಕೆಯ ದೆಶೆಯಿಂದ) ಜಲಾನಲವತ್ (ನೀರು ಬೆಂಕಿ ಇವುಗಳಂತೆ) ಎಂದು ಈ ಭೇದವು ಅನುಮಾನ ಸಿದ್ಧವು ಕೂಡ ಆಗಿರುವುದೆಂದು ಸೂಚಿತವಾಗುವುದು. ॥ ೧೩ ॥

ಹಿಂದೆ ಹೇಳಿದ ಜೀವನಲ್ಲಿರುವ ಅಜ್ಞತ್ವಾದಿಗುಣವಿರುದ್ಧಗಳಾದ ಸರ್ವಜ್ಞತ್ವಾದಿಗುಣಗಳು ಈಶ್ವರನಲ್ಲಿರುವುದಾದರೆ ಪೂರ್ವೋಕ್ತವು ಯುಕ್ತವಾಗ ಬಹುದು ಅದೇ ಅಪ್ರಾಮಾಣಿಕವೆಂದರೆ ಅಪ್ರಾಮಾಣಿಕವಲ್ಲವು ಪ್ರಾಮಾಣಿಕವಾಗಿದೆಂದು ಹೇಳುವರು.—

**ಮೂ ॥ ಸಾರ್ವಜ್ಞ್ಯಾದಿಗುಣಾ ವಿಷ್ಣೋಃ ಶ್ರುತಿಷು ಪ್ರತಿಪಾದಿತಾಃ ॥**

ಅ ॥ ವಿಷ್ಣೋಃ=ಈಶ್ವರನ, ಸಾರ್ವಜ್ಞ್ಯಾದಿಗುಣಾಃ=(I)ಸರ್ವಜ್ಞತ್ವವು (II) ಸರ್ವಶಕ್ತಿತ್ವವು, (III) ನಿರ್ದುಃಖತ್ವವು, (IV) ಸರ್ವಕತೃತ್ವವು ಈಗುಣಗಳು. ಶ್ರುತಿಷು= (1) "ಯಃ ಸರ್ವಜ್ಞಃ ಸರ್ವವಿತ್, (2) ಪರಾಸ್ಯಶಕ್ತಿರ್ವಿವಿಧೈವ ಶ್ರೂಯತೇ, (3) ಯ ಆತ್ಮಾಽಪಹತಪಾಪ್ಮಾ, (4) ಸ ಹಿ ಸರ್ವಸ್ಯಕರ್ತಾ ಇದೆ ಮೊದಲಾದ) ವೇದಗಳಲ್ಲಿ, ಪ್ರತಿಪಾದಿತಾಃ= ಹೇಳಲ್ಪಟ್ಟಿವೆ.

ತಾ ॥ ಈಶ್ವರನ ಸರ್ವಜ್ಞತ್ವಾದಿ ಗುಣಗಳು ಯಃ ಸರ್ವಜ್ಞಃ ಸರ್ವವಿತ್, ಇದೇ ಮೊದಲಾದ ಆಗಮಗಳಲ್ಲಿ ಕಥಿತಗಳಾಗಿವೆ. ಅಪ್ರಾಮಾಣಿಕವಲ್ಲವು, ಜೀವರಲ್ಲಿ ತದ್ವಿರುದ್ಧಗಳಾದ, ಅಲ್ಪಜ್ಞತ್ವಾದಿಗಳು ಪ್ರತ್ಯಕ್ಷಸಿದ್ಧವಾಗಿವೆ. ಆದುದರಿಂದ ಹಿಂದೆಹೇಳಿದ ಭೇದಸಮರ್ಥನೆಯು ಯುಕ್ತವು. ಮತ್ತು ಭೇದವು, ವಸ್ತುಸ್ವರೂಪವಾದುದು. ಹಾಗಾದ ಮೇಲೆ ವಸ್ತುತಿಳಿದು ಬರುವಾಗ ತತ್ಸ್ವರೂಪವಾದ ಭೇಧವು, ತಿಳಿದೇ ತಿಳಿಯುವುದು. ಅದಕ್ಕಾಗಿ ಪ್ರತಿಯೋಗಿಜ್ಞಾನವೇ ಏತಕ್ಕೆ ಬೇಕಾಗುವುದು. ಅದನ್ನು ಉಪಪಾದಿಸುವುದಕ್ಕಾಗಿ ಸರ್ವಜ್ಞತ್ವಾದಿ ವಿರುದ್ಧಧರ್ಮೋಪನ್ಯಾಸವನ್ನೇಕೆ ಮಾಡಬೇಕು. ಎನ್ನುವ ಆಶಂಕೆಯು ಉಚಿತವಲ್ಲವು. ನಿರ್ವಿಶೇಷ (ವಿಶೇಷವಿಲ್ಲದೆ) ವಸ್ತುಸ್ವರೂಪವೇ ಆದುದು ಭೇದವೆಂದರೆ. ವಸ್ತುಸ್ವರೂಪವನ್ನು, ಪರನು ಅಂಗೀಕರಿಸುವ ಪ್ರಯುಕ್ತವಾಗಿ ಪರರಿಗೂ ನಮಗೂ ವಿವಾದವಿಲ್ಲದಿರಬೇಕಾಗುವುದು. ಆದುದರಿಂದ ಆರೀತಿಯಲ್ಲವು. ಪರಂತು ಭೇದವೆಂದರೆ ಅನ್ಯೋನ್ಯಾಭಾವವು (ತಾದಾತ್ಮ್ಯನಿಷೇಧವು) ರೂಪಾದಿಗಳು ಘಟಾದಿವಸ್ತುಗಳಿಂದ ಹೇಗೆ ಸವಿಶೇಷಾಭಿನ್ನಗಳೋ, ಹಾಗೆ ಭೇದವು ತನ್ನಧರ್ಮಿಯಾದ ವಸ್ತುವಿನಿಂದ ಸವಿಶೇಷಾಭಿನ್ನವೆಂದು ಭೇದವು ವಸ್ತುಸ್ವರೂಪವೆನ್ನುವುದರ ಅರ್ಥವು, ಆ ಅನ್ಯೋನ್ಯಾಭಾವವು ಪ್ರತಿಯೋಗಿಯ ಅಪೇಕ್ಷೆಯಿಂದಲೇ ಪ್ರತೀತವಾಗುವುದು. ಅಂದರೆ ವಸ್ತುವಿನ ಬೇರೆ ಧರ್ಮದಿಂದ ಪ್ರತೀತಿಯಲ್ಲಿ ಪ್ರತಿಯೋಗಿಪ್ರತೀತಿಯು ಬೇಡವಾದರೂ ಅನ್ಯೋನ್ಯಾಭಾವತ್ವ

ಧರ್ಮದಿಂದ ವಸ್ತು ಪ್ರತೀತಿಯಾಗಬೇಕಾದರೆ ಪ್ರತಿಯೋಗಿ ಪ್ರತೀತಿಯು ಬೇಕು. ಆದುದರಿಂದ ಪ್ರತಿಯೋಗಿ ಪ್ರತೀತಿಯ ಅನುಸರಣೆಯು ಯುಕ್ತವಾದುದು. ಆ ಅನ್ಯೋನ್ಯಾಭಾವವು ವಸ್ತು ಸ್ವರೂಪವಾದರೂ, ಸಾದೃಶ್ಯಾದಿ ದೋಷಗಳಿಂದ ವಸ್ತುಪ್ರತೀತವಾದರೂ ಪ್ರತೀತವಾಗುವು ದಿಲ್ಲವು. ಅದಕ್ಕಾಗಿ ಮೂಲದಲ್ಲಿ ಅಜ್ಞತ್ವ ಸರ್ವಜ್ಞತ್ವಾದಿ ವಿರುದ್ಧಧರ್ಮೋಪನ್ಯಾಸವು ಸಂಗತ ವಾಗುವುದು. ಈ ಭೇದವು ಅನ್ಯೋನ್ಯಾಭಾವವು ಒಂದೆಯಾಗಿದೆ ಅಲ್ಲದೆ ಬೇರೆಮತದಲ್ಲಿ ಹೇಳು ವಂತೆ ಬೇರೆಯಾದುದಲ್ಲವು, ಎಂದು ಸೂಚಿಸುವುದಕ್ಕಾಗಿ. "ಆತ್ಮಸ್ವಭಾವ ಭೇದಸ್ಯ" ಎಂದು ಭೇದಶಬ್ದವು ಪ್ರಸಕ್ತವಾದುದರಿಂದ ಇಲ್ಲಿ "ಭಿನ್ನತ್ವಂ ಸ್ವಾತ್ಮನಸ್ತಸ್ಮಾತ್" ಎಂದು ಹೇಳಬೇಕಾಗಿ ದ್ದರೂ ಅದನ್ನು ಬಿಟ್ಟು "ಅನ್ಯತ್ವಂ ಸ್ವಾತ್ಮನಸ್ತಸ್ಮಾತ್" ಎಂದು ಪ್ರಯೋಗಿಸಿರುವರು. ॥ ೧೪ ॥

ಹಿಂದೆ "ಯಃ ಸರ್ವಜ್ಞಃ" ಇತ್ಯಾದಿ ಶ್ರುತಿಗಳಲ್ಲಿ ಈಶ್ವರನಿಗೆ ಸಾರ್ವಜ್ಞ್ಯಾದಿ ಗುಣಗಳು ಶ್ರುತಗಳಾದುದರಿಂದ ಅವುಗಳಿಂದ ಜೀವೇಶ್ವರಭೇದವು ಸಿದ್ಧಿಸುತ್ತದೆಂದು ಸಮರ್ಥಿಸಿದರು. ಆದರೆ ಆ ಶ್ರುತಿಯಲ್ಲಿ ಆ ಸಾರ್ವಜ್ಞ್ಯಾದಿ ಗುಣಗಳು ಸತ್ಯವಾದವುಗಳೆಂದು ಹೇಳುವುದಿಲ್ಲವು. ಹಾಗಾದ ಮೇಲೆ ಅವುಗಳು (ಅತಾತ್ವಿಕ) ಅಸತ್ಯಗಳೆಂದಾಗುವವು. ಅವುಗಳಿಂದ ಸಾಧಿಸುವ ಭೇದವಾದರೂ, ತಾತ್ವಿಕವೆಂದು ನೀವು ಭಾವಿಸಿರುವಿರಿ. (ಮಿಥ್ಯಾಭೂತ) ಅಸತ್ಯಗಳಾದ ವಿರುದ್ಧ ಧರ್ಮಗಳಿಂದ ತಾತ್ವಿಕವಾದ ಭೇದವನ್ನು ಸಾಧಿಸಲಶಕ್ಯವು. ಹಾಗೆ ಸಾಧಿಸುವುದಾದರೆ ಶುಕ್ತಿಯಲ್ಲು (ಚಿಪ್ಪಿನ)ಲ್ಲಿ 'ಇದಂ ರಜತಂ' ಇದು ಬೆಳ್ಳಿಯು ಎಂದು ಜ್ಞಾನ ಬರುವಾಗ ಅದರಲ್ಲಿ ಶುಕ್ತಿತ್ವವು ಆರೋಪಿತ ರಜತತ್ವವು, ಇವೆರಡು ವಿರುದ್ಧ ಧರ್ಮಗಳು ಇರುವುದರಿಂದ, ಆ ಆರೋ ಪಿತ ವಿರುದ್ಧ ಧರ್ಮಗಳ ದೆಸೆಯಿಂದ, ಶುಕ್ತಿಯಲ್ಲಿಯೂ ಪಾರಮಾರ್ಥಿಕ ಭೇದವು ಸಿದ್ಧಿಸಬೇ ಕಾಗುವುದು. ಆದುದರಿಂದ ಆರೋಪಿತ ಸಾರ್ವಜ್ಞ್ಯಾದಿಗಳಿಂದ ಜೀವೇಶ್ವರರಿಗೆ ಪಾರಮಾರ್ಥಿಕ ಭೇದಸಾಧನೆಯು ಅಸಂಗತವು ಎನ್ನುವುದರ ಆಶಂಕೆಯನ್ನು ಪರಿಹರಿಸುವರು.

**ಮೂ ॥ ಸತ್ಯಃ ಸೋ ಅಸ್ಯ ಮಹಿಮೇತ್ಯಾದಿವಾಕ್ಯಾನ್ಮೃಷಾ ನ ಚ ॥ ೧೪ ॥**

ಅ ॥ ಸಃ=ಆ ವೇದೋಕ್ತವಾದ, ಅಸ್ಯ=ಈ ಹರಿಯ, ಮಹಿಮಾ=ಸರ್ವಜ್ಞತ್ವಾದಿ ಮಾಹಾತ್ಮ್ಯೆಯು, ಸತ್ಯಃ=ಯಥಾರ್ಥವಾದುದು, ಇತ್ಯಾದಿವಾಕ್ಯಾತ್=ಇದೇ ಮೊದಲಾದ ಬೇರೆ ವೇದ ವಚನದ ದೆಸೆಯಿಂದ, ಮೃಷಾ=ಮಿಥ್ಯಾಭೂತವಾದುದು, ನ=ಅಲ್ಲವು. ॥ ೧೪ ॥

**ತಾ** ॥ 'ಯಃ ಸರ್ವಜ್ಞಃ' ಇತ್ಯಾದಿ ವಾಕ್ಯದಲ್ಲಿ ಪರಮೇಶ್ವರನ ಸರ್ವಜ್ಞತ್ವಾದಿ ಗುಣ ಗಳಿಗೆ ಸತ್ಯತ್ವವು ತಿಳಿಯುವುದಿಲ್ಲವಾದರೂ 'ಸತ್ಯಃ ಸೋಽಸ್ಯ ಮಹಿಮಾ......' ಇದೇ ಮೊದ ಲಾದ ವಾಕ್ಯಾಂತರದಿಂದ ಸ್ಪಷ್ಟವಾಗಿ ತಿಳಿದುಬರುವುದು, ಆರೋಪಿತವಲ್ಲವು. ಆದುದರಿಂದ ಈ ಧರ್ಮಗಳಿಂದ ಹಿಂದೆ ಭೇದಸಾಧನೆ ಮಾಡಿದದು ಸಂಗತವೇ ಆಗುವುದು.

ಇಲ್ಲಿ 'ಯಃ ಸರ್ವಜ್ಞಃ..... ' ಇತ್ಯಾದಿ ವಾಕ್ಯದಲ್ಲಿ ಪರಮೇಶ್ವರನ ಗುಣಗಳಿಗೆ ಸತ್ಯತ್ವವು ಪ್ರತೀತವಾಗುವುದಿಲ್ಲವೆನ್ನುವ ಆಶಂಕೆಯನ್ನು ಸ್ಪಷ್ಟವಾಗಿ ಸರ್ವಜ್ಞತ್ವಾದಿ ಗುಣಗಳಿಗೆ ಸತ್ಯತೆ ಯನ್ನು ಪ್ರತಿಪಾದಿಸುವ ಶ್ರುತಿಯಿಂದಲೇ ಸಮಾಧಾನಗೊಳಿಸಿದರು.

ಹಾಗಾದರೆ 'ಯಃ ಸರ್ವಜ್ಞಃ' ಇತ್ಯಾದಿ ಪೂರ್ವೋಕ್ತಾಗಮವು ಇದಂ ರಜತಂ ಎನ್ನುವ ಜ್ಞಾನವು ರಜತ ಸತ್ಯತ್ವವನ್ನು ವಿಷಯೀಕರಿಸದೆ ಇರುವಂತೆ ಸರ್ವಜ್ಞತ್ವಾದಿಗಳಿಗೆ ಸತ್ಯತ್ವವನ್ನು ವಿಷಯೀಕರಿಸದೆ ಇರಲಿ. ಸರ್ವಜ್ಞತ್ವಾದಿಗಳು ಮಿಥ್ಯಾಭೂತವೇ ಆಗಲಿ, ಎನ್ನುವಾಶಂಕೆಯು ಬಾಧಕಪ್ರಮಾಣವಿಲ್ಲವಾದುದರಿಂದ ಯುಕ್ತವಲ್ಲವೆಂದು ಹೇಳುವರು.

**ಮೂ || ನ ಚ ವೇದೋಕ್ತಮಿಥ್ಯಾತ್ವೇ ಮಾನಂ ತನ್ಮಾನತಾಪಿ ನ ||**

ಅ || (ವೇದೋಕ್ತ ಮಿಥ್ಯಾತ್ವೇ) ವೇದ=ವೇದ (ದಲ್ಲಿ) ದಿಂದ, ಉಕ್ತ=ಹೇಳಲ್ಪಟ್ಟಿರುವ ಪ್ರಮೇಯಕ್ಕೆ, ಮಿಥ್ಯಾತ್ವೇ=ಮಿಥ್ಯಾತ್ವ ವಿಷಯುದಲ್ಲಿ, ಮಾನಂ=ಪ್ರಮಾಣವು, ನ ಚ=ಇಲ್ಲವೇ ಇಲ್ಲವು. ತನ್ಮಾನತಾಪಿ=ಮಿಥ್ಯಾತ್ವ ವಿಷಯುದಲ್ಲಿ ಪರನಿಂದ ಶಂಕಿಸಲ್ಪಡುವ ಮಾನಕ್ಕೂ ಕೂಡ, ಮಾನತಾಽಪಿ=ಪ್ರಮಾಣತ್ವವೂ ಕೂಡ, ನಾಪಿ=ಇಲ್ಲವೂ ಕೂಡ ಎಂದು ಅಪಿ ಶಬ್ದಕ್ಕೆ ಎರಡು ಕಡೆಯಲ್ಲಿ ಸಂಬಂಧವು. || ೧೪ ||

ತಾ || ಇಲ್ಲಿ 'ತದುಕ್ತಮಿಥ್ಯಾತ್ವೇ' ಎಂದು ಹೇಳದೆ 'ವೇದೋಕ್ತ ಮಿಥ್ಯಾತ್ವೇ' ಎಂದು ಹೇಳಿದುದರಿಂದ "ನಿತ್ಯಾ ವೇದಾಃ ಸಮಸ್ತಾಶ್ಚ" ಇತ್ಯಾದಿ ಪ್ರಮಾಣದಿಂದ ವೇದಕ್ಕೆ ಅಪೌರುಷೇಯತ್ವವಿದೆ. ಅದರಿಂದ ಕರಣದೋಷನಿಮಿತ್ತವಾದ ದೋಷವಿಲ್ಲವೆಂದು ಸೂಚಿತವಾಗುವುದು. (ಶುಕ್ತಿ) "ಇದಂ ರಜತಂ" ಎನ್ನುವ ಜ್ಞಾನವು ಮನುಷ್ಯಗೆ ಹುಟ್ಟುವುದು. ಅಲ್ಲಿ ದೋಷವಾಗಲಿ ಚಾಕಚಕ್ಯಾದಿ (ಬೆಳ್ಳಿಯಂತೆ ಚಕಚಕವಾಗಿ ಹೊಳೆಯುವುದು) ಅರ್ಥದೋಷವಾಗಲಿ ನಿಮಿತ್ತವಾಗುವುದು. ಆದುದರಿಂದ ಆಜ್ಞಾನವು ಅಪ್ರಮಾಣವಾಗುವುದು. "ಯಃ ಸರ್ವಜ್ಞಃ" ಇತ್ಯಾದಿ ವೇದವು ಅಪೌರುಷೇಯವು (ಪುರುಷಕೃತವಲ್ಲವು) ನಿತ್ಯವು (ಉತ್ಪತ್ತಿಯಿಲ್ಲವು). ಆದುದರಿಂದ ಅದರ ಪ್ರಾಮಾಣ್ಯಕ್ಕೆ ಉತ್ಪತ್ತ್ಯಪವಾದಕವಾದ ಕರಣದೋಷವಿಲ್ಲವು. ಅದರ ಜ್ಞಪ್ತಿಗೆ (ಜ್ಞಾನಕ್ಕೆ) ಅಪವಾದವಾದ ಬಾಧಕ ಪ್ರಮಾಣವೂ ಇಲ್ಲವು. ಆದುದರಿಂದ ಅಪ್ರಮಾಣವಾಗುವದಿಲ್ಲವು. ಪರಂತು ಪ್ರಮಾಣವೇ ಆಗುವುದು. ಈ ರೀತಿಯಾಗಿ ವೇದವು ಅಪೌರುಷೇಯವಾದುದರಿಂದ ಯಾವುದಾದರೂ ಪ್ರಾಮಾಣ್ಯದೋಷವಿಲ್ಲವಾದರೂ, ಆ ವೇದಾರ್ಥವನ್ನು ಗ್ರಹಿಸುವವನ ಇಂತಿಷ ಪದಕ್ಕೆ ಮತ್ತು ಇಂತಿಹ ವಾಕ್ಯಕ್ಕೆ ಇಂತಿಹುದರಲ್ಲಿ (ಅರ್ಥದಲ್ಲಿ) ಶಕ್ತಿಯು ಮತ್ತು ತಾತ್ಪರ್ಯವು, ಎಂದು ಜ್ಞಾನವಿರದಿರುವಿಕೆಯನ್ನುವ ದೋಷವಿದೆ, ಈ ದೋಷದಿಂದ ವೇದದಿಂದ ಹುಟ್ಟಿದ, ಜ್ಞಾನದಲ್ಲಿ ಅಪ್ರಾಮಾಣ್ಯವನ್ನೇ ಹೇಳಬೇಕಾಗುವುದು ಎನ್ನುವುದು ಯುಕ್ತವಲ್ಲವು.

ಶಕ್ತಿತಾತ್ಪರ್ಯಾಪರಿಜ್ಞಾನರೂಪವಾದ ಆ ಪ್ರತಿಪತ್ತೃದೋಷವೂ ಕೂಡ ಬಾಧಕಪ್ರಮಾಣವಿರುವುದಾದರೆ ಊಹಿಸಲ್ಪಡುವುದು. ಪ್ರತೀತಾರ್ಥದಲ್ಲಿ ಬಾಧಕವಿಲ್ಲವಾದುದರಿಂದ ಆ ದೋಷವು ಕೂಡ ಇಲ್ಲವೆಂದು ನಿಶ್ಚಯವಾಗುವುದು. ಹಾಗಾದರೆ 'ನೇಹ ನಾನಾಸ್ತಿ ಕಿಂಚನ'(ಈ ಜಗತ್ತಿನಲ್ಲಿ ಬ್ರಹ್ಮನಿಂದ ಬೇರೆಯಾದುದು ಇಲ್ಲವು,) ಇತ್ಯಾದಿ ಶ್ರುತಿಗಳು, ಬ್ರಹ್ಮನಲ್ಲಿ ತೋರುವ ಸರ್ವಜ್ಞತ್ವಾದಿ ವಿಶಿಷ್ಟವಾದ ಸ್ವರೂಪವು ಮಿಥ್ಯಾಭೂತವಾದುದು. ವಿಶಿಷ್ಟಾಕಾರತ್ವ ಧರ್ಮದ ದೆಸೆಯಿಂದ, ನೀಲರೂಪವಿಶಿಷ್ಟವಾದುದು ಆಕಾಶವು ಎಂದು ಮೊದಲಾದ ವಿಶಿಷ್ಟಾಕಾರದಂತೆ, ಇದೇಮೊದಲಾದ ಅನುಮಾನಗಳು, ಸಾರ್ವಜ್ಞ್ಯಾದಿ ಮಿಥ್ಯಾತ್ವದಲ್ಲಿ ಮಾನಗಳಿವೆ. ಹೀಗಿರಲು 'ನ ಚ ವೇದೋಕ್ತಮಿಥ್ಯಾತ್ವೇಮಾನಂ' ಎಂದು ಹೇಗೆ ಹೇಳುವುದು. ಆದುದರಿಂದ 'ಯಃ ಸರ್ವಜ್ಞಃ 'ಇತ್ಯಾದಿ ಶ್ರುತಿಗಳು ವ್ಯಾವಹಾರಿಕ ಸಾರ್ವಜ್ಞ್ಯಾದಿ ವಿಷಯಕಗಳು, ಪಾರಮಾರ್ಥಿಕ ವಿಷಯಕಗಳಲ್ಲವು,ಎನ್ನುವಾಶಂಕೆಯು ಯುಕ್ತವಲ್ಲವು. 'ನೇಹನಾನಾಸ್ತಿ ಕಿಂಚನ'ಎನ್ನುವ ಶ್ರುತಿಗೆ ಸಾರ್ವಜ್ಞ್ಯಾದಿಮಿಥ್ಯಾತ್ವದಲ್ಲಿ ಪ್ರಮಾಣತ್ವವೂ ಕೂಡ ಇಲ್ಲವೆಂದು 'ಮಿಥ್ಯಾತ್ವಂ ಯದಿ ದುಃಖಾದೇಸ್ತದ್ವಾಕ್ಯಸ್ಯಾಗ್ರತೋ ಭವೇತ್' (ಬ್ರಹ್ಮ ವ್ಯತಿರಿಕ್ತವಾದವೆಲ್ಲದಕ್ಕೂ ಮಿಥ್ಯಾತ್ವವನ್ನು ಹೇಳುವುದಾದರೆ ಎಲ್ಲದರ ನಡುವೆ 'ನೇಹ ನಾನಾಸ್ತಿಕಿಂಚನ' ಎನ್ನುವ ವಾಕ್ಯವು ಸೇರಿರುವುದರಿಂದ ಅದಕ್ಕೂ ಮಿಥ್ಯಾತ್ವವನ್ನೇ ಹೇಳಬೇಕು. ಆಗ ಎಲ್ಲವು ಮಿಥ್ಯೆಯೆಂದು ಹೇಳುವ ವಚನವೇ ಇಲ್ಲವೆಂದು ಸಿದ್ಧಿಸುವುದು. ಎಂದು ಮೊದಲಾಗಿ ಅನುವ್ಯಾಖ್ಯಾನಾದಿಗಳಲ್ಲಿ ಸಮರ್ಥಿಸಲ್ಪಡುವುದು. ||೧೪||

ಇಷ್ಟರ ವರೆಗೆ ಅದ್ವೈತಮತದಲ್ಲಿ ಅಜ್ಞಾನವು ಸಂಘಟಿಸುವದಿಲ್ಲವೆಂದುಪಪಾದನೆಯನ್ನು ಮಾಡಿದರು. ಇನ್ನುಮುಂದೆ ಅಜ್ಞಾನವು ಕೂಡದಿರುವುದರಿಂದ ಅದ್ವೈತಮತದಲ್ಲಿ ಅಧಿಕಾರ್ಯಾದಿಗಳು ಉಪಪನ್ನಗಳಾಗುವುದಿಲ್ಲವು ಎಂದು ಹೇಳುವರು.—

**ಮೂ ॥ ಅತೋಽಜ್ಞಾಸಂಭವಾದೇವ ನಾಧಿಕಾರ್ಯೈಕ್ಯವಾದಿನಾಮ್ ॥೧೫॥**
**ಅತೋ ನಾಜ್ಞಾತಮಿತಿ ಚ ವಿಷಯೋ ವಿಷಯಾಂತರೇ ॥**
**ಅಜ್ಞಾಭಾವಾತ್ಫಲಂ ಕಸ್ಯ ಯೋಗಃ ಶಶನೃಶೃಙ್ಗಯೋಃ ॥ ೧೬ ॥**

ಅ ॥ ಅತಃ=ಆದುದರಿಂದ ಅಜ್ಞಾಸಂಭವಾದೇವ, ಅಜ್ಞ=ಅಜ್ಞಾನಾಶ್ರಯು (ಅಜ್ಞಾನವುಳ್ಳವ)ನಿಗೆ, ಅಸಂಭವಾದೇವ=ಸಂಭವವಿಲ್ಲವಾಪುದರಿಂದಲೇ, ಐಕ್ಯವಾದಿನಾಂ=ಅದ್ವೈತವಾದಿಗಳ, (ಮತೇ=ಮತದಲ್ಲಿ,) ಅಧಿಕಾರೀ=ಓದಿ ತಿಳಿದುಕೊಳ್ಳುವವನು ಶಾಸ್ತ್ರದ ಫಲಾರ್ಥಿಯೂ, ನ (ಏವ)=(ಇಲ್ಲವೇ) ಇಲ್ಲವು. ॥ ೧೫ ॥ ಅತಃ=ಅಜ್ಞಾಸಂಭವದ ದೆಸೆಯಿಂದ, ಅಜ್ಞಾತಂ=ಅಜ್ಞಾನವಿಷಯವಾದುದು (ತಿಳಿಯಲ್ಪಡದಿರುವುದು) ನ ಇತಿ=ಇಲ್ಲವಾದುದರಿಂದ, ವಿಷಯಃ=ವಿಷಯವು, ನ=ಇಲ್ಲವು, ವಿಷಯಾಂತರೇ=ದೇಶಾಂತರದಲ್ಲಿ,(ಭೇದವಾದದಲ್ಲಿ)ಅಧಿಕಾರ್ಯಾದಿಃ=ಅಧಿಕಾರಿ ಮೊದಲಾದುದು, ಸಂಭವತಿ=ಸಂಭವಿಸುವುದು ಎಂದು ಶೇಷಪೂರಣದಿಂದ ಯೋಜನೆಯು, ಅಜ್ಞಾಭಾವಾತ್=ಅಜ್ಞಾನಿ ಸಂಘಟಿಸದಿರುವುದರ ದೆಸೆಯಿಂದ, ಫಲಂ=ಪ್ರಯೋಜನವು, ಕಸ್ಯ=ಯಾವಾತಗೆ, ಭವೇತ್=ಆಗುವುದು, ಯಾವಾತಗೂ ಇಲ್ಲವು. ಈ ವಿಧವಾಗಿ ಅಧಿಕಾರಿಯು ವಿಷಯವು ಪ್ರಯೋಜನವು ಸಹ ಕೂಡದಿರುವುದರ ದೆಸೆಯಿಂದ, ಯೋಗಃ=ಸಂಬಂಧವು, ಶಶನೃಶೃಂಗಯೋಃ=ಶಶವಿಷಾಣವು ನರವಿಷಾಣವು ಇವುಗಳ ಸಂಬಂಧದಂತೆ, ಅನುಪಪನ್ನಃ=ಉಪನ್ನವಾಗುವುದಿಲ್ಲವು. ॥ ೧೬ ॥

ತಾ ॥ ಒಂದು ಶಾಸ್ತ್ರಕ್ಕೆ ಅಜ್ಞನು(ಆ ಶಾಸ್ತ್ರದಲ್ಲಿ ಹೇಳುವ ಪ್ರಮೇಯವನ್ನು ಬೇರೆಯಾವುದರಿಂದಲೂ ತಿಳಿಯದವನು)ಅಧಿಕಾರಿಯಾಗುವನು. ಆತನೇ ತಿಳಿಯದ ಪ್ರಮೇಯವನ್ನು ತಿಳಿದು ಅದರ ಪ್ರಯೋಜನವನ್ನು ಹೊಂದುವೆನೆಂದು ಅರ್ಥಿಸುವನು. ತಿಳಿದವನಾದರೆ ಅರ್ಥಿಸುವದಿಲ್ಲವು. ಹಾಗೆ(ಅಜ್ಞಾತ)ತಿಳಿಯಲ್ಪಡದ ಪ್ರಮೇಯವೇ ಆ ಶಾಸ್ತ್ರಕ್ಕೆ ವಿಷಯವಾಗುವುದು. ಅಲ್ಲದೆ ಶಾಸ್ತ್ರವು ಪರಬೋಧನೆಗೆ ಪ್ರವೃತ್ತವಾಗಿರುವುದರಿಂದ ಅದಕ್ಕೆ(ಜ್ಞಾತ) ತಿಳಿದುದು ವಿಷಯವಾಗುವುದಿಲ್ಲವು. ಅಜ್ಞನಾದ ಅಧಿಕಾರಿಯಿರುವುದಾದರೆ ಆತಗೆ ಈ ಶಾಸ್ತ್ರವನ್ನು ಓದಿತಿಳಿಯುವುದರಿಂದ ಅಜ್ಞಾನನಿವೃತ್ತಿರೂಪವಾದ ಫಲ(ಪ್ರಯೋಜನ)ವಾಗಬಹುದು. ಈ ರೀತಿಯಾಗಿ ಅಜ್ಞನಾದ ಅಧಿಕಾರಿಯು ಅಜ್ಞಾತವಾದವಿಷಯವು ಅಜ್ಞಾನನಿವೃತ್ತಿರೂಪವಾದ ಪ್ರಯೋಜನವೂ ಕೂಡಾ ಇರುವವುಗಳಾದರೆ ಆ ಅಧಿಕಾರ್ಯಾದಿಗಳಿಗೆ ಸಂಬಂಧವು ಕೂಡುವುದು. ಅಧಿಕಾರ್ಯಾದಿಗಳಿಲ್ಲವಾದರೆ ಇಲ್ಲವಾದ ಶಶವಿಷಾಣ ನರವಿಷಾಣಗಳಿಗೆ ಸಂಬಂಧವೂ ಕೂಡಲಾರದು. ಈ ವಿಧವಾಗಿರಲು ಶಾಸ್ತ್ರಪ್ರವೃತ್ತಿಗೆ ಮುಖ್ಯಪ್ರಯೋಜಕಗಳಾದವುಗಳು ಅಧಿಕಾರಿವಿಷಯ ಪ್ರಯೋಜನಸಂಬಂಧಗಳು, ಇವುಗಳಿಗೆ ಮೂಲವಾದುದು ಹಿಂದೆ ಹೇಳಿದಂತೆ ಅಜ್ಞಾನವಾಗಿದೆ. ಆ ಅಜ್ಞಾನವು ಹಿಂದೆ ದೂಷಿಸಿದ ಪ್ರಯುಕ್ತವಾಗಿ ಸರ್ವಥಾ ಸಂಭವಿಸದಿರುವುದರಿಂದ ತನ್ಮೂಲಕಗಳಾದ ಅಧಿಕಾರ್ಯಾದಿಗಳು ಅದ್ವೈತಶಾಸ್ತ್ರದಲ್ಲಿ ಯುಕ್ತವಾಗುವುದಿಲ್ಲವು. ಆದುದರಿಂದ ಅಧಿಕಾರ್ಯಾದಿರಹಿತವಾದ ಅದ್ವೈತಶಾಸ್ತ್ರವು ಯಾರಿಂದಲೂ ಆರಂಭಣೀಯವಾಗುವುದಿಲ್ಲವು. ಹಿಂದೆಹೇಳಿದ ಅಜ್ಞಾನದೂಷಣೆಯು ದ್ವೈತವಾದದಲ್ಲಿ ಬರುವುದಿಲ್ಲವಾದುದರಿಂದ ಅದರಲ್ಲಿ ಅಧಿಕಾರಿಯು, ವಿಷಯವು, ಪ್ರಯೋಜನವು, ಸಂಬಂಧವು, ಇವೆಲ್ಲವು ಸಂಭವಿಸುವವು. ಮುಂದೆ ಇದರ ಉಪಪಾದನೆಯನ್ನು ಮಾಡುವರು. ॥ ೧೬ ॥

ಹಿಂದೆ ಅದ್ವೈತಮತದಲ್ಲಿ ಆಶ್ರಯವು ವಿಷಯವೂ ಕೂಡದಿರುವುದರಿಂದ ಅಜ್ಞಾನವು ಸಂಭವಿಸುವುದಿಲ್ಲವೆಂದು ದೂಷಿಸಿರುವುದು ಅಸಙ್ಗತವು. ಆಶ್ರಯವಿಷಯವು ಬ್ರಹ್ಮನಾಗಲಿ ಜೀವನಾಗಲಿ ಆಗುವನು. ಅದು ದುರ್ಘಟ (ಅನುಪಪನ್ನ)ವೆಂದು ಹಿಂದೆ ಸಮರ್ಥಿಸಿರುವುದು ಕೂಡ ಯುಕ್ತವಲ್ಲವು. ಸಾಧುವಿಗೆ ಮಾನಹಾನಿಯಾಗುವುದು ದೂಷಣವು. ಅಲ್ಲದೆ (ಕೇಡಿ) ಮೂರ್ಖನಿಗೆ ದೂಷಣವಲ್ಲವು, ಇದರಂತೆ ಹಿಂದೆ ಉಪಪಾದನೆ ಮಾಡಿದ ದೌರ್ಘಟ್ಯ (ಅನುಪಪನ್ನತ್ವ)ವು ಪರಮಾರ್ಥಸತ್ಯವಾದುದಕ್ಕೆ ದೂಷಣವು. ಅಲ್ಲದೆ ಆರೋಪಿತವಾದ ಅಜ್ಞಾನಕ್ಕೆ ದೂಷಣವಲ್ಲವು, ಪರಂತು ಭೂಷಣವೇ, ಅದಲ್ಲವಾದರೆ ಅಜ್ಞಾನಕ್ಕೆ ಆರೋಪಿತತ್ವವೇ ಕೂಡದಿರಬೇಕಾಗುವುದು, ಈ ವಿಷಯವು ಅದ್ವೈತವಾದಿಯಿಂದ ಉಕ್ತವಾಗಿದೆ. "ದುರ್ಘಟತ್ವಮವಿದ್ಯಾಯಾ ಭೂಷಣಂ ನ ತು ದೂಷಣಂ । ಕಥಂಚಿದ್ಘಟಮಾನತ್ವೇಽವಿದ್ಯಾತ್ವಂ ದುರ್ಘಟಂ ಭವೇತ್ ॥" ಅವಿದ್ಯಾಯಾಃ=ಅಜ್ಞಾನಕ್ಕೆ, ದುರ್ಘಟತ್ವಂ=ಅನುಪಪನ್ನತ್ವವು, ಭೂಷಣಂ=ಅಲಂಕಾರವು, ದೂಷಣಂ=ದೋಷವು, ನ ತು ಅಲ್ಲವೇ ಅಲ್ಲವು, ಕಥಂಚಿದ್ಘಟಮಾನತ್ವೇ=ಪ್ರಯತ್ನಪೂರ್ವಕವಾಗಿ ಆಶ್ರಯಾದಿನಿರೂಪಣೆಯಿಂದ ಉಪಪಾದನ ಮಾಡಲ್ಪಡುವಿಕೆಯಿರುವುದಾದರೂ ಆಗ ಅದಕ್ಕೆ ಅವಿದ್ಯಾತ್ವಂ=ಅಜ್ಞಾನತ್ವವು, ದುರ್ಘಟಂ=ಅನುಪಪನ್ನವು, ಭವೇತ್=ಆಗುವುದು. ಆದುದರಿಂದ (ಅವಿದ್ಯಾ) ಅಜ್ಞಾನ ಸ್ವಭಾವವೇ ದೂಷ್ಯವಾದುದರಿಂದ ವಿಷದಲ್ಲಿರುವ ಕ್ರಿಮಿಗೆವಿಷವು ತಗಲದಂತೆ ಯಾವ ದೋಷವೂ ಅದಕ್ಕೆ ತಗಲುವುದಿಲ್ಲವು, ಈ ರೀತಿಯಾಗಿರಲು ಅಜ್ಞಾನಾಸಂಭವದಿಂದ ಅದ್ವೈತಮತದಲ್ಲಿ ಅಧಿಕಾರ್ಯಾದಿಗಳು ಕೂಡುವುದಿಲ್ಲವೆನ್ನುವುದು ಹೇಗೆಎನ್ನುವಾಶಂಕೆಯನ್ನು ಸಿಂಹಾವಲೋಕನನ್ಯಾಯದಿಂದ ಪರಿಹರಿಸುವರು.

**ಮೂ ॥ ದುರ್ಘಟತ್ವಂ ಭೂಷಣಂ ಚೇತ್ಸ್ಯಾದವಿದ್ಯಾತ್ವಮಾತ್ಮನಃ ॥**
**ಅಂಧಂತಮೋಽಪ್ಯಲಂಕಾರೋ ನಿತ್ಯದುಃಖಂ ಶಿರೋಮಣಿಃ ॥ ೧೭ ॥**

ಅ ॥ ದುರ್ಘಟತ್ವಂ=ಅವಿದ್ಯೆಗೆ ಉಪಪತ್ತಿಯಾಗದಿರುವದು, ಭೂಷಣಂ=ಅಲಂಕಾರವು, ಸ್ಯಾಚ್ಚೇತ್=ಆಗುವದಾದರೆ, ಆತ್ಮನಃ=ಆತ್ಮನಿಗೆ, ಅವಿದ್ಯಾತ್ವಂ=ಅವಿದ್ಯಾತ್ವ(ಅಜ್ಞಾನ)ವು, ಸ್ಯಾತ್=ಆಗಲಿ, ಹೀಗೆ ನಿತ್ಯದುಃಖಂ = ನಿತ್ಯದುಃಖರೂಪವಾದ, ಅಂಧಂತಮಃ=ಅಂಧಂತಮಸ್ಸು, ಶಿರೋಮಣಿಃ = ಶಿರೋರತ್ನಭೂತವಾದ, ಅಲಂಕಾರಃ = ಭೂಷಣವು, ಸ್ಯಾತ್=ಆಗಲಿ. ॥ ೧೭ ॥

ತಾ ॥ 'ಅಜ್ಞತಾಽಖಿಲಸಂವೇತ್ತುಃ' ಎಂದಾರಂಭಿಸಿಕೊಂಡು ಆಶ್ರಯಾದ್ಯನುಪಪತ್ತಿಯಿಂದ ಅಜ್ಞಾನಾನುಪಪತ್ತಿಯೆಂದು ಹೇಳಿದ ದೂಷಣವೆಲ್ಲವು ಆರೋಪಿತವಾದ ಅವಿದ್ಯೆಗೆ ಅಲಂಕಾರವು ದೋಷವಲ್ಲವೆಂದು ಅಂಗೀಕರಿಸುವುದಾದರೆ ಪರಮಾರ್ಥಸತ್ಯನಾದರೂ ಆತ್ಮನೇ ಅವಿದ್ಯೆಯೆಂದಂಗೀಕರಿಸಬೇಕಾಗುವುದು. ಆತ್ಮನು ಬೇರೆ, ಆತ್ಮನಲ್ಲಿರುವ ಅವಿದ್ಯೆಯೊಂದು ಬೇರೆ ಎಂದು ಎರಡು ಪದಾರ್ಥವನ್ನು ಒಪ್ಪಿಕೊಂಡರೆ ಗೌರವವು. ಆತ್ಮನು ಅವಿದ್ಯೆಯೆಂದು ಒಂದೇ ಎಂದು ಕಲ್ಪಿಸಿದರೆ ಕಲ್ಪನಾಲಾಘವವಿದೆ. ಆತ್ಮನೇ ಅವಿದ್ಯೆಯೆಂದಂಗೀಕರಿಸುವುದಾದರೆ ಆ ಅವಿದ್ಯೆಯು ಆತ್ಮನಿಗೆ ಆವರಣ (ಮುಚ್ಚಳ) ವೆಂದಂಗೀಕರಿಸಬೇಕಾಗುವುದು. ಹಾಗಾದರೆ ಆತ್ಮನು ನಿತ್ಯನಾದುದರಿಂದ ತತ್ಸ್ವರೂಪವಾದ ಅವಿದ್ಯೆಯಿಂದ ಆತ್ಮನು ಯಾವಾಗಲೂ ಮುಚ್ಚಿಕೊಂಡೇ ಇರಬೇಕಾಗುವುದು. ಒಂದು ವೇಳೆಯಾದರೂ ಪ್ರಕಾಶನಾಗದೆ ಇರಬೇಕಾಗುವುದು. ಮತ್ತು ಅವಿದ್ಯಾನಿವೃತ್ತಿಯೇ ಮೋಕ್ಷವಾದುದರಿಂದ ಆತ್ಮನಿವೃತ್ತಿಯಾಗಬೇಕಾಗುವುದು. ಇದೇ ಮೊದಲಾದ ಅನುಪತ್ತಿ (ದೂಷಣೆ) ಯು ಅವಿದ್ಯೆಗೆ ಭೂಷಣವೆಂದು ಸಮಾಧಾನವನ್ನು ಹೇಳಬಹುದು. ಈವಿಧ ದೋಷವು ಸಂಭವಿಸುವುದರ ದೆಸೆಯಿಂದ ಅನುಪತ್ತಿಯನ್ನು ಪರಿಹರಿಸಬೇಕು.

ಇಲ್ಲವಾದರೆ ಅಜ್ಞಾನವನ್ನಾಗಲಿ ಬಿಡಬೇಕು; ಬೇರೆ ಉಪಾಯವಿಲ್ಲವು. 'ಅಹಮಜ್ಞಃ' (ನಾನು ಅಜ್ಞಾನವುಳ್ಳವನು.) ಎಂದಾತ್ಮನಲ್ಲಿ ಅಜ್ಞಾನವು ಪ್ರತೀತವಾದುದರಿಂದ, ಅದರಲ್ಲಿ ದೌರ್ಘಟ್ಯವು ಭೂಷಣವೆಂದು ಕಲ್ಪಿಸುವುದು. ಆತ್ಮನೇ ಅಜ್ಞಾನವೆಂದು ಪ್ರತೀತಿಯಿಲ್ಲವು. ಆದುದರಿಂದ ಆರೀತಿ ಕಲ್ಪಿಸುವುದಿಲ್ಲವೆನ್ನುವುದಾದರೆ ಈ ಕಲ್ಪನೆಯು ಅಜ್ಞಾನಕ್ಕೂ ಪ್ರತೀತಿಯಿಲ್ಲವಾದುದರಿಂದ ಪ್ರಕೃತದಲ್ಲಿಯೂ ಸಮಾನವೇ. ಬ್ರಹ್ಮನು ಸರ್ವಜ್ಞನಾದುದರಿಂದ ಆತನಲ್ಲಿ ಅಜ್ಞಾನವು ಪ್ರತೀತವಾಗುವುದಿಲ್ಲವು. ಪರಮಾತ್ಮಾಭಿನ್ನನಾದ ಉಪಾಧ್ಯವಚ್ಛಿನ್ನನಾದ ನಾನು ಅಜ್ಞನೆಂದು ಜೀವನಲ್ಲಿಯೂ ಅಜ್ಞಾನವು ಪ್ರತೀತವಾಗುವುದಿಲ್ಲವು. ಜೀವನು ಜ್ಞಾನಾನಂದಾದ್ಯಾತ್ಮಕನಾದ ಆತ್ಮಸ್ವರೂಪನು. ಆ ಸ್ವರೂಪವು ಪ್ರಕಾಶವಾಗುವುದಿಲ್ಲವು. ಅದಕ್ಕಾಗಿ ಆತ್ಮಾತಿರಿಕ್ತವಾದ ಸ್ವರೂಪಪ್ರಕಾಶಕ್ಕೆ ಆವರಕವಾದ ಅಜ್ಞಾನವನ್ನು ಅಂಗೀಕರಿಸಬೇಕೆನ್ನುವುದಾದರೆ ಆ ಸ್ವರೂಪ ಪ್ರಕಾಶವಾಗದಿರುವುದು ನಾವು ಹೇಳುವ ಆತ್ಮರೂಪವಾದ ಅವಿದ್ಯೆಯಿಂದಲೇ ಆಗಬಹುದು. ಅದಕ್ಕಾಗಿ ಪ್ರತ್ಯೇಕವಾಗಿ ಅವಿದ್ಯೆಯನ್ನು ಒಪ್ಪಬೇಕೆಂದಿಲ್ಲವು. ಮತ್ತು ಪ್ರತಿವಾದಿಯಿಂದ ಉಕ್ತವಾದ ದೋಷಗಳಿಂದ ಉಂಟಾದ ದೌರ್ಘಟ್ಯವು ಭೂಷಣವೆಂದು ಹೇಳಿದರೆ ದೋಷಕ್ಕೂ, ಭೂಷಣಕ್ಕೂ ಭೇದವಿಲ್ಲವೆಂದಾಗುವುದು. ಹಾಗಾದರೆ ಸುಖಕ್ಕೂ, ದುಃಖಕ್ಕೂ ವ್ಯತ್ಯಾಸವಿಲ್ಲದೇ ಹೋಗುವದು. ವೇದಾರ್ಥಜ್ಞಾನದಿಂದ ಮುಕ್ತಿಯೆಂದರೂ, ನಿತ್ಯದುಃಖವೆಂದರೂ ಒಂದೇ ಆಗಬೇಕಾಗುವುದು. ಆದುದರಿಂದ ಅಜ್ಞಾನದ ದೌರ್ಘಟ್ಯವು ಭೂಷಣವೆಂದು ಹೇಳುವುದು ಅಸಂಗತವು. ಇದರಿಂದ ಪರಬ್ರಹ್ಮನಿಗೆ ಅಜ್ಞಾನವನ್ನಂಗೀಕರಿಸುವವರಿಗೆ ಅನರ್ಥಪ್ರಾಪ್ತಿಯಾಗುವುದೆಂದು ಸೂಚಿತವಾಗುವುದು. ॥ ೧೭ ॥

ವೇದವೇದಾಂತಗಳಿಗೆ ಜೀವಬ್ರಹ್ಮರ ಏಕತ್ವದಲ್ಲಿ ತಾತ್ಪರ್ಯವೆಂದಂಗೀಕರಿಸಿದರೆ ಅಧಿಕಾರ್ಯಾದಿಗಳು ಉಪಪನ್ನಗಳಾಗದಿರುವುದರಿಂದ ಅನಾರಂಭಣೀಯತ್ವವು ಪ್ರಾಪ್ತವಾಗುವುದು. ಭೇದಪಕ್ಷದಲ್ಲಿ ಅಧಿಕಾರ್ಯಾದಿಗಳು ಸಂಭವಿಸುವುದರಿಂದ ಆರಂಭಣೀಯತ್ವವು ಪ್ರಾಪ್ತವಾಗುವುದೆಂದು 'ವಿಷಯಾಂತರೇ' ಎನ್ನುವುದರಿಂದ ಉಕ್ತವಾಗಿದೆ, ಅದನ್ನೀಗ ವಿವರಿಸುವರು.

**ಮೂ ॥ ಅತಃ ಪರೋ ಮಾತ್ರಯೇತಿ ಪೂರ್ವಶ್ರುತಿನಿದರ್ಶಿತಃ। ಅನ್ಯಮೀಶಮಿತಿಶ್ರುತ್ಯಾ ಭಿನ್ನಜೀವದೃಶಂ ಗತಃ । ಭಿನ್ನತ್ವೇನಾತ್ಮಸಾದೃಶ್ಯದೋಯದೇತಿಶ್ರುತೇಃ ಸದಾ ॥ ೧೮ ॥**

ಅ ॥ ಅತಃ=ಐಕ್ಯಪಕ್ಷದಲ್ಲಿ ಅಧಿಕಾರ್ಯಾದಿ ಸಂಭವವಿಲ್ಲದಿರುವುದರದೆಸೆಯಿಂದ, ಪರೋಮಾತ್ರಯೇತಿ ಪೂರ್ವಶ್ರುತಿನಿದರ್ಶಿತಃ, "ಪರೋಮಾತ್ರಯೇತಿ=ಪರೋಮಾತ್ರಯಾ ತನ್ವಾವೃಧಾನ ನತೇ ಮಹಿತ್ವಮನ್ವಶ್ನುವಂತಿ" ಎಂದು, ಪೂರ್ವ=ಮೊದಲಾದ, ಶ್ರುತಿ=ವೇದಗಳಿಂದ, ನಿದರ್ಶಿತಃ=ಬೋಧಿಸಲ್ಪಟ್ಟಿರುವ ಪರಮೇಶ್ವರನು, ಅನ್ಯಮೀಶಮಿತಿಶ್ರುತ್ಯಾ="ಜುಷ್ಟಂ ಯದಾ ಪಶ್ಯತ್ಯನ್ಯಮೀಶಮಸ್ಯ ಮಹಿಮಾನಮಿತಿ ವೀತ ಶೋಕಃ" ಎನ್ನುವ ಶ್ರುತ್ಯಾ=ವೇದದಿಂದ, ಭಿನ್ನಜೀವದೃಶಂ=ಭಿನ್ನನಾದ ಜೀವನ ಶಾಸ್ತ್ರಸಾಧ್ಯವಾದ ಜ್ಞಾನವನ್ನು, ಗತಃ ಸನ್=ಪ್ರಾಪ್ತನಾಗಿ (ಜ್ಞಾನವಿಷಯನಾಗಿ,) ಯದೇತಿಶ್ರುತೇಃ ಯದೇತಿ 'ಯದಾಪಶ್ಯಃ ಪಶ್ಯತೇ ರುಗ್ಮವರ್ಣಂ ಕರ್ತಾರಮೀಶಂ ಪುರುಷಂ ಬ್ರಹ್ಮ ಯೋನಿಮ್ ತದಾವಿದ್ವಾನ್ಪುಣ್ಯಪಾಪೇ ವಿಧೂಯ ನಿರಂಜನಃ ಪರಮಂ ಸಾಮ್ಯಮುಪೈತಿ' ಎನ್ನುವ, ಶ್ರುತೇಃ =ವೇದದ ದೆಸೆಯಿಂದ, ಸದಾ=ಧ್ವಂಸವಿಲ್ಲದಿರುವ (ಸದಾತನವಾದ) ಭಿನ್ನತ್ವೇನ=ಅನ್ಯತ್ವದಿಂದ (ಭೇದದಿಂದ,) ಜೀವಸ್ಯ=ಉತ್ತಮಜೀವನಿಗೆ=ಆತ್ಮಸಾದೃಶ್ಯದಃ=ತನ್ನದಾದ ಅಭಿವ್ಯಕ್ತವಾದ ಆನಂದಾದಿ ರೂಪವಮೋಕ್ಷಸಾದೃಶ್ಯವ(ಉಪಮೆಯು)ನ್ನು

ಕೊಡುವವನು, ಭವೇತ್=ಆಗುವನು. ವಿಷಯಾದಿಃ = ದ್ವೈತಪಕ್ಷದಲ್ಲಿ ವಿಷಯಾದಿಯು, ಉಪಪನ್ನಃ=(ಇತಿ ಶೇಷಃ) ಯುಕ್ತಿಯುಕ್ತವಾಗುವುದು. ॥ ೧೮ ॥

ತಾ ॥ ವೇದವೇದಾಂತಗಳಿಗೆ ಅದ್ವೈತವಾದದಲ್ಲಿ ವಿಷಯಾದಿಗಳು ಸಂಭವಿಸದಿರುವುದರ ದೆಸೆಯಿಂದ; "ಪರೋ ಮಾತ್ರಯಾ ತನ್ವಾವೃಧಾನ ನ ತೇ ಮಹಿತ್ವಮನ್ವಶ್ನುವಂತಿ" ತನ್ವಾ= ಶರೀರದಿಂದ, ವೃಧಾನ=ಅಭಿವೃದ್ಧನಾದ, (ವ್ಯಾಪ್ತನಾದ) ವಿಷ್ಣೋ=ವಿಷ್ಣುವೇ, ತ್ವಂ=ನೀನು, ಗುಣಗಳ ಪರಿಮಿತಿಯದೆಸೆಯಿಂದ, ಪರಃ=ಅತೀತನು, ಅಸಿ=ಆಗಿರುತ್ತೀ. ತೇ=ನಿನ್ನ, ಮಹಿತ್ವಂ=ಮಹಿಮೆಯನ್ನು, ಕೇऽಪಿ=ಯಾರು, ನಾನ್ವಶ್ನುವಂತಿ=ಹೊಂದುವುದಿಲ್ಲವು. ಇದೇ ಮೊದಲಾದ ಶ್ರುತಿಗಳಲ್ಲಿ ಗುಣಪೂರ್ಣನೆಂದು ಅನಿತರಸಾಧಾರಣ ಮಹಿಮೆಯುಳ್ಳವನೆಂದು ಶ್ರುತ ನಾದ ಪರಮೇಶ್ವರನು, "ಜುಷ್ಟಂ ಯದಾ ಪಶ್ಯತ್ಯನ್ಯಮೀಶಮಸ್ಯ ಮಹಿಮಾನಮಿತಿ ವೀತ ಶೋಕಃ" ಅಧಿಕಾರಿಯು, ಜುಷ್ಟಂ=ಸರ್ವಸೇವ್ಯನಾದ, ಅನ್ಯಂ=ಜೀವನದೆಸೆಯಿಂದ ಭಿನ್ನ ನಾದ, ಈಶಂ=ಭಗವಂತನನ್ನು, ಅಸ್ಯ=ಈ ಭಗವಂತನ, ಮಹಿಮಾನಂ=ಮಾಹಾತ್ಮ್ಯೆಯನ್ನು, (ತದೇತತ್ಸತ್ಯಂ=ಇತ್ಯಾದಿ ಪೂರ್ವೋಕ್ತಪ್ರಕಾರದಿಂದ), ಯದಾ=ಯಾವಾಗ, ಪಶ್ಯತಿ=ನೋಡು ತ್ತಾನೋ. ತದಾ=ಆಗ, ವೀತಶೋಕಃ=ಮುಕ್ತನು, ಭವೇತ್=ಆಗುವನು. ಎಂಬುವ ಶ್ರುತಿ ಯಿಂದ ಜೀವಜಡಭಿನ್ನನೆಂದು ಜೀವನ ಶಾಸ್ತ್ರಶ್ರವಣಾದಿಜನಿತವಾದ ತತ್ವಜ್ಞಾನಕ್ಕೆ ವಿಷಯನಾಗಿ, "ಯದಾಪಶ್ಯಃ ಪಶ್ಯತೇ ರುಗ್ಮವರ್ಣಂ" ಎಂಬುವ ಶ್ರುತಿಯಿಂದ ಸದಾತನವಾದ ಮುಕ್ತಿಯನ್ನು ಕೊಡುವವನು ಆಗುವನು. ಆದುದರಿಂದ ದ್ವೈತಪಕ್ಷದಲ್ಲಿ ವಿಷಯಾದಿಗಳು ಉಪಪನ್ನಗಳಾ ಗುವವು. ವೇದವೇದಾಂತಗಳಿಗೆ ಅದ್ವೈತರೀತಿಯಿಂದ ವಿಷಯಾದಿಗಳು ಉಪಪನ್ನಗಳಾಗುವುದಿ ಲ್ಲವೆಂದು ಸರ್ವಥಾ ವಿಷಯಾದಿಗಳಿಲ್ಲವೆಂದರ್ಥವಲ್ಲವು. ಭೇದವಾದದ ರೀತಿಯಿಂದ ವಿಷಯಾದಿ ಗಳು ಉಪಪನ್ನಗಳಾಗುವವು. ದ್ವೈತರೀತಿಯಿಂದ ಗುಣಪೂರ್ಣನಾದ ಪರಮೇಶ್ವರನೇ ವಿಷ ಯನು. ಇದು ಮೂಲದಲ್ಲಿ ಮೊದಲನೇ ಭಾಗದಿಂದ ಸಮರ್ಥಿಸಲ್ಪಡುವುದು. ಆ ಪರಮೇ ಶ್ವರನಿಂದ ಭಿನ್ನನಾದ ಜೀವನೇ ಅಧಿಕಾರಿಯು. ಇದು ಎರಡನೇ ಭಾಗದಿಂದ ಸಮರ್ಥಿಸಲ್ಪಡು ವುದು. ಪರಮಾತ್ಮನಿಂದ ಕೊಡಲ್ಪಡುವ ಸದಾ ಅಭಿವ್ಯಕ್ತ (ಪ್ರಕಾಶಮಾನ) ವಾದ ಜ್ಞಾನಾ ನಂದಾದಿಸಾದೃಶ್ಯರೂಪರಾದ ಮೋಕ್ಷವೇ ಪ್ರಯೋಜನವು. ಇದು ಮೂರನೇ ಭಾಗದಿಂದ ಸಮರ್ಥಿ ಸಲ್ಪಡುವುದು, ಅದರಲ್ಲಿ 'ಜೀವದ್ಯಶಂ ಗತಃ' ಎನ್ನುವುದರಿಂದ(I) ಅಧಿಕಾರಿ, (II)ವಿಷಯುಗಳಿಗೆ (I) ಜ್ಞಾತೃ, (II) ಜ್ಞೇಯಭಾವವೆನ್ನುವ ಸಂಬಂಧವು, ಶಾಸ್ತ್ರಸಾಧ್ಯವಾದ ಎನ್ನುವುದರಿಂದ, (I) ಶಾಸ್ತ್ರ, (II) ಅಧಿಕಾರಿಗೆ, (I) ಪಾಠ್ಯ, (II) ಪಾಠಕಭಾವವು, (I) ಶಾಸ್ತ್ರ, (II) ವಿಷಯ ಗಳಿಗೆ, (I) ಜ್ಞಾಪ್ಯ, (II)ಜ್ಞಾಪಕಭಾವವು, ಸಾದೃಶ್ಯದಃ, ಎನ್ನುವುದರಿಂದ (I) ವಿಷಯ (II) ಪ್ರಯೋಜನಗಳಿಗೆ (I) ದಾತೃ (II) ದೇಯಭಾವವು, ಅಲ್ಲಿ 'ಜೀವಸ್ಯ' ಎನ್ನುವುದರಿಂದ (I) ಅಧಿಕಾರಿ, (II) ಪ್ರಯೋಜನಗಳಿಗೆ, (I) ಪ್ರಾಪ್ಯ, (II) ಪ್ರಾಪಕಭಾವವು ಅಥವಾ (I) ಭೋಕ್ತೃ, (II) ಭೋಗ್ಯಭಾವವು. ಇದೇಮೊದಲಾಗಿ ಸಂಬಂಧಗಳು ಕೂಡ ಸಮ ರ್ಥಿಸಲ್ಪಡುವವು. ಈ ಸಂಬಂಧಗಳಲ್ಲಿ ಕೆಲವು ಬೇರೆ ವಿಧವಾಗಿಯೂ ಶಾಸ್ತ್ರದಲ್ಲಿ ವ್ಯವಹ ರಿಸಿಕೊಳ್ಳಲ್ಪಡುವವು. ಇಲ್ಲಿ 'ಅಪ್ರಾಪ್ತೇ ಶಾಸ್ತ್ರಮರ್ಥವತ್' ಎನ್ನುವ ನ್ಯಾಯದಿಂದ ಅಜ್ಞಾತ ವಾದುದೇ ಶಾಸ್ತ್ರಕ್ಕೆ ವಿಷಯವಾಗುವುದು. ಹೀಗಿರಲು 'ಈಶ್ವರಃ' ಎನ್ನುವ ಪದದಿಂದಲೇ ಈಶ್ವ ರನು ಜ್ಞಾತನಾಗುವನು. ಆ ಜ್ಞಾತನಾದ ಈಶ್ವರನು ಹೇಗೆ ಶಾಸ್ತ್ರಕ್ಕೆ ವಿಷಯನಾಗುವನು? ಎನ್ನುವ ಆಶಂಕೆಯು ತಲೆದೋರುವುದು. ಆದರೂ ಈಶ್ವರಪದದಿಂದ ಓರ್ವ ಈಶ್ವರನಿರುವ ನೆಂದು ಆತನ ಸತ್ತಾಮಾತ್ರವು ಜ್ಞಾತವಾದರೂ ಆ ಈಶ್ವರನು ಅಪರಿಮಿತ ಗುಣಾಕರನು,

ಮಹಾಮಹಿಮನು, ಎಂದು ಶ್ರುತ್ಯುಕ್ತರೀತಿಯಿಂದ ಜ್ಞಾತನಾಗುವುದಿಲ್ಲವು. ಆ ವಿಧವಾಗಿ ಅಜ್ಞಾತನಾದ ಈಶ್ವರನೇ ಶಾಸ್ತ್ರಕ್ಕೆ ವಿಷಯನೆನ್ನುವುದನ್ನು ತಿಳಿಸುವುದಕ್ಕಾಗಿ 'ಪರೋಮಾತ್ರಯೇತಿ' ಎಂದು ಹೇಳಿರುವರು. ಆ ಈಶ್ವರನು ಸಾಮಾನ್ಯರೂಪದಿಂದ ಅಗಣ್ಯಗುಣಾಶ್ರಯನೆಂತಲೂ, ವಿಶೇಷರೂಪದಿಂದ, ಜ್ಞಾನಾನಂದಾದಿ ಗುಣಾಶ್ರಯನೆಂತಲೂ ಬೋಧಿಸುವುದಕ್ಕಾಗಿ ಸಕಲ ಶಾಸ್ತ್ರಗಳು ಪ್ರವರ್ತಿಸುತ್ತವೆ. ಅಜ್ಞನೇ ಅಧಿಕಾರಿಯಾಗುವನು. ಆ ಅಧಿಕಾರಿಯು ಈಶ್ವರನ ದೆಸೆಯಿಂದ ಅಭಿನ್ನನಾದರೆ ಈಶ್ವರನಂತೆ ಸರ್ವಜ್ಞನಾಗಬೇಕಾಗುವುದರಿಂದ ಆತಗೆ ಅಜ್ಞತಾ ಕೂಡುವುದಿಲ್ಲವು. ಅದಕ್ಕಾಗಿ 'ಭಿನ್ನಜೀವದೃಶಂ ಗತಃ' ಎಂದು ಹೇಳಿರುವರು. ಆ ಭೇದವು ಶ್ರುತಿಯಿಂದ ಸಿದ್ಧವಾಗಿದೆಂದು ಜ್ಞಾಪಿಸುವುದಕ್ಕಾಗಿ 'ಅನ್ಯಮೀಶಂಎಂಬ' ಶ್ರುತಿಯನ್ನುದಾಹರಿಸಿರುವರು.

ಹಿಂದೆ ಅದ್ವೈತಪಕ್ಷದಲ್ಲಿ ಅಧಿಕಾರ್ಯಾದಿಯುಪಪನ್ನವಾಗುವುದಿಲ್ಲವೆನ್ನುವುದರಿಂದಲೇ ದ್ವೈತಪಕ್ಷದಲ್ಲಿ ಭಿನ್ನನಾದವನೇ ಅಧಿಕಾರಿಯೆಂದು ಸಿದ್ಧವಾದರೂ ಪೂರ್ವದಲ್ಲಿ ಪ್ರತ್ಯಕ್ಷಾದಿ ಸಿದ್ಧವಾದುದು ಭೇದವೆಂದು ಹೇಳಿರುವರು. ಅದರಲ್ಲಿ ಪ್ರತ್ಯಕ್ಷಾನುಮಾನಗಳು 'ಅಜ್ಞತಾ ಚ' ಇತ್ಯಾದಿಯಿಂದ ದರ್ಶಿತಗಳಾದವು. ಆ ಭೇದದಲ್ಲಿ ಆಗಮವುಂಟೆಂದು ತೋರಿಸುವುದಕ್ಕೆ ಈ ಶ್ರುತ್ಯುದಾಹರಣೆಯು, ಯದ್ಯಪಿ ಸದೃಶವಾದುದು ಭಿನ್ನವೇ ಆಗುವುದು. ಆದುದರಿಂದ 'ಭಿನ್ನತ್ವೇನಾತ್ಮಸಾದೃಶ್ಯದಃ' ಎನ್ನುವಲ್ಲಿ 'ಭಿನ್ನತ್ವೇನ' ಎಂದು ಹೇಳುವುದು ಆವಶ್ಯಕವಲ್ಲವು. ಆದರೂ ತತ್ಸ್ವರೂಪವನ್ನು ಶೀಘ್ರವಾಗಿ ಬೋಧಿಸುವುದಕ್ಕೆ ಭಿನ್ನತ್ವೇನ ಎಂದು ಪ್ರಯೋಗಿಸಲ್ಪಟ್ಟಿರುತ್ತದೆ. ಯಥಾಯೋಗ್ಯವಾಗಿ ಜ್ಞಾನಾನಂದಾದಿಪರಮಾತ್ಮಸಾದೃಶ್ಯವೇ ಮೋಕ್ಷವು ಎನ್ನುವುದರಲ್ಲಿ ವಾದಿವಿಪ್ರತಿಪತ್ತಿಯನ್ನು ಪರಿಹರಿಸುವಗೋಸುಗ 'ಯದೇತಿ' ಎಂದು ಶ್ರುತಿಯನ್ನುದಾಹರಿಸಿರುವರು. ॥

ಈ ವಿಧವಾಗಿ ಅದ್ವೈತಮತದಲ್ಲಿ ವಿಷಯಾದಿರಾಹಿತ್ಯಪ್ರಯುಕ್ತವಾಗಿ ಅನಾರಂಭಣೀಯತ್ವಪ್ರಾಪ್ತಿಯಾಗುವುದರ ದೆಸೆಯಿಂದ ಆ ಅದ್ವೈತಮತವು ಯುಕ್ತವಾಗುವುದಿಲ್ಲವು. ಆದುದರಿಂದ ನಾರಾಯಣನಿಗೆ ಅಗಣ್ಯಗುಣಾಶ್ರಯತ್ವವು ಯುಕ್ತವೆಂದು ಉಪಪಾದಿಸಲ್ಪಟ್ಟಿತು. ನಾರಾಯಣನು ಅಗಣ್ಯಗುಣಾಶ್ರಯನೆಂದು ತಿಳಿದರೆ ಸಾಕು. ಈ ಉಪಪಾದನೆಗೆ ಏನು ಪ್ರಯೋಜನವೆನ್ನುವ ಆಕ್ಷೇಪವನ್ನು ಪರಿಹರಿಸುವರು—

**ಮೂ ॥ ಮಾಯಾವಾದತಮೋವ್ಯಾಪ್ತಮಿತಿ ತತ್ತ್ವದೃಶಾ ಜಗತ್ ॥**
**ಭಾತಂ ಸರ್ವಜ್ಞಸೂರ್ಯೇಣ ಪ್ರೀತಯೇ ಶ್ರೀಪತೇಃ ಸದಾ ॥ ೧೯ ॥**

ಅ ॥ ಸರ್ವಜ್ಞಸೂರ್ಯೇಣ = ಸರ್ವಜ್ಞಾಚಾರ್ಯರೆನ್ನುವ ಸೂರ್ಯನಿಂದ, ಮಾಯಾವಾದತಮೋವ್ಯಾಪ್ತಂ, ಮಾಯುವಾದ = ಸರ್ವವು ಮಾಯಾ (ಅಜ್ಞಾನ) ಕಲ್ಪಿತವೆಂದು ಸಾಧಿಸುವ ವಾದವೆನ್ನುವ, ತಮಃ = ಅಂಧಕಾರದಿಂದ, (ಅಜ್ಞಾನದಿಂದ), ವ್ಯಾಪ್ತಂ = ವ್ಯಾಪಿಸಿಕೊಂಡಿರುವ, ಜಗತ್ = ಲೋಕವು, ಜನವು, ಇತಿ = ಪೂರ್ವೋಕ್ತಪ್ರಕಾರದಿಂದ, ತತ್ತ್ವದೃಶಾ = ತತ್ತ್ವಜ್ಞಾನಸಾಧಕಾಲೋಕದಿಂದ, ನಾರಾಯಣನು ಅನಂತಕಲ್ಯಾಣಗುಣಾಡ್ಯಾಶ್ರಯನು ವಿಶ್ವವು ಪಾರಮಾರ್ಥಿಕವಾದುದು ಅಲ್ಲದೆ ಅಜ್ಞಾನಕಲ್ಪಿತವಲ್ಲವು. ಎಂದಿದೇ ಮೊದಲಾದ ತತ್ತ್ವಜ್ಞಾನದಿಂದ, ಸದಾ = ಯಾವಾಗಲೂ, ಶ್ರೀಪತೇಃ = ಮಹಾಲಕ್ಷ್ಮೀರಮಣನ, ಪ್ರೀತಯೇ = ಸಂತೋಷಕ್ಕೋಸ್ಕರ, ಭಾತಂ = ಪ್ರಕಾಶಿಸಲ್ಪಟ್ಟಿತು. ॥ ೧೯ ॥

ತಾ ॥ ಮಾಯಾವಾದಿಗಳಿಂದ ಕಲ್ಪಿಸಲ್ಪಟ್ಟಿರುವ ದುರ್ಯುಕ್ತಿಗಳು ನಿರಾಕರಿಸಲ್ಪಟ್ಟವು. ಅದರಿಂದ ಸಾಧುಗಳ ಮನಸ್ಸಿನಲ್ಲಿ ತುಂಬಿರುವ ಅಜ್ಞಾನವು ಹೋಗಲಾಡಿಸಲ್ಪಟ್ಟಿತು. ಇದರಿಂದ

ಏಕಾಂತಭಕ್ತನಾದ ತನಗೆ ಇತರ ಪ್ರಯೋಜನವಿಲ್ಲವಾದುದರಿಂದ ಸದಾ ಲಕ್ಷ್ಮೀಪತಿಯು ಪ್ರೀತಿಯಾಗುವುದು ಎಂದಭಿಪ್ರಾಯವು. ॥ ೧೯ ॥

ಮೂ॥ ನಮೋಽಮಂದನಿಜಾನಂದಸಾಂದ್ರಸುಂದರಮೂರ್ತಯೇ ।
ಇಂದಿರಾಪತಯೇ ನಿತ್ಯಾನಂದಭೋಜನದಾಯಿನೇ ॥ ೨೦ ॥

ಇತಿ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯವಿರಚಿತ
ಉಪಾಧಿಖಂಡನಂ ಸಂಪೂರ್ಣಂ.

ಅ॥ ಅಮಂದನಿಜಾನಂದಸಾಂದ್ರಸುಂದರಮೂರ್ತಯೇ, ಅಮಂದ=ಪೂರ್ಣವಾದ, ನಿಜ=ಸ್ವಾಭಾವಿಕವಾದ, ಆನಂದ=ಸುಖದಿಂದ, ಸಾಂದ್ರ=ನಿಬಿಡವಾದ, ಮೂರ್ತಯೇ=ಶರೀರವುಳ್ಳ, ನಿತ್ಯಾನಂದ ಭೋಜನದಾಯಿನೇ, ನಿತ್ಯ=ನಾಶವಿರದ, ಆನಂದ=ಸ್ವರೂಪಸುಖದ, ಭೋಜನ=ಭೋಗವನ್ನು, ದಾಯಿನೇ=ಕೊಡುವಶೀಲನಾದ, ಇಂದಿರಾಪತಯೇ=ಲಕ್ಷ್ಮೀಪತಿಗೋಸ್ಕರ, ನಮಃ=ನಮಸ್ಕಾರವು.

ಇಂತು ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತಂ
ಉಪಾಧಿಖಂಡನದ ಕನ್ನಡವ್ಯಾಖ್ಯಾನವು ಮುಗಿದುದು.

ಉಪಾಧಿಖಂಡನವ್ಯಾಖ್ಯಾ ರೂಪ್ಯಪೀಠಭುವಾ ಕೃತಾ ।
ಶ್ರೀಕೃಷ್ಣಪ್ರೀತಿಕಾಮೇನ ರಾಮಕೃಷ್ಣೇನ ಭಾಷಯಾ ॥

॥ ಶ್ರೀ ಕೃಷ್ಣಾರ್ಪಣಮಸ್ತು ॥



ಶ್ರೀಮದ್ಧನುಮದ್ಭೀಮಮಧ್ವಾಂತರ್ಗತರಾಮಕೃಷ್ಣ ವೇದವ್ಯಾಸಾತ್ಮಕ
ಲಕ್ಷ್ಮೀಹಯಗ್ರೀವಾಯ ನಮಃ ಹರಿಃ ॥ ಓಂ ॥



ಮೂಲ.

ನಾರಾಯಣೋಽಗಣ್ಯಗುಣನಿತ್ಯೈಕನಿಲಯಾಕೃತಿಃ ।
ಅಶೇಷದೋಷರಹಿತಃ ಪ್ರೀಯತಾಂ ಕಮಲಾಲಯಃ ॥


೧ ಅಜ್ಞಾತಾಽಖಿಲಸಂವೇತ್ತುರ್ಘಟತೇ ನ ಕುತಶ್ಚ ನ
೨ ಉಪಾಧಿಭೇದಾದ್ಘಟತ ಇತಿ ಚೇತ್ಸಸ್ವಭಾವತಃ ... ... .. ೧೦೭
೩ ಅಜ್ಞಾನತೋ ವಾ ದ್ವೈತಸ್ಯ ಸತ್ಯತಾ ಸ್ವತ ಏವ ಚೇತ್ । ... ,,
ಅನವಸ್ಥಿತಿರಜ್ಞಾನ ಹೇತೌ ವಾಽನ್ಯೋನ್ಯಸಿದ್ಧಿತಾ ... ... ,,
೪ ಚಕ್ರಕಾಪತ್ತಿರಥವಾ ... . .. ... ೧೦೮
೪ ಭೇದಶ್ಚೋಪಾಧಿತಃ ಕುತಃ । ೧೧೧
ವಿದ್ಯಮಾನಸ್ಯ ಭೇದಸ್ಯ ಜ್ಞಾಪಕೋ ನೈವ ಕಾರಕಃ ... ... ,,
ಉಪಾಧಿರ್ದೃಷ್ಟಪೂರ್ವೋ ಹಿ ... . ... ... ,,
೫ ಖೇಽಪಿ ದೇಶಾಂತರಸ್ಯ ಸಃ । ೧೧೨
ಜ್ಞಾಪಕೋ ವಿದ್ಯಮಾನಸ್ಯ ಮೂಢಬುದ್ಧ್ಯಪೇಕ್ಷಯಾ .. . . ,,
೬ ನ ಚೇದುಪಾಧಿಸಂಬಂಧ ಏಕದೇಶೇಽಥ ಸರ್ವಗಃ .. ... ೧೧೩
ಏಕದೇಶೇಽನವಸ್ಥಾ ಸ್ಯಾತ್ಸರ್ವಗಶ್ಚೇನ್ನ ಭೇದಕಃ ... ... ,,
೭ ಸುಖದುಃಖಾದಿಭೋಗಶ್ಚ, ಸ್ವರೂಪೈಕ್ಯೇ ನ ಭೇದತಃ ... ... ೧೧೫
ದೃಶ್ಯೋ ಹ್ಯುಪಾಧಿಭೇದೇಽಪಿ ಹಸ್ತಪಾದಾದಿಗೋ ಯಥಾ . . ,,
೮ ನಾನಾದೇಹಗಭೋಗಾನುಸಂಧಾನಂ ಯೋಗಿನೋ ಯಥಾ . . . ೧೧೭
ನಚೇದ್ಭೋಗಾನುಸಂಧಾನಂ ತದಿಚ್ಛಾ ಯೋಗಿನಃ ಕುತಃ . ... ,,
೯ ಅನುಸಂಧಾನರಹಿತದೇಹಬಾಹುಲ್ಯಮನ್ಯಥಾ ... .. ... ೧೧೮
ಸಿದ್ಧಮೇವ ಹಿ ತತ್ಪಕ್ಷೇ ವಿಶೇಷೋ ಯೋಗಿನಃ ಕುತಃ ... ... ,,
೧೦ ಸಿದ್ಧೌ ಹಿ ಕರ್ಮಭೇದಸ್ಯ ಸ್ಯಾದುಪಾಧಿವಿಭಿನ್ನತಾ ... ... ,,
ತತ್ಸಿದ್ಧೌ ಚೈವ ತತ್ಸಿದ್ಧಿರಿತ್ಯನ್ಯೋನ್ಯವ್ಯಪಾಶ್ರಯಃ ... ... ,,
೧೧ ಆತ್ಮಸ್ವಭಾವಭೇದಸ್ಯ ವಿದೋಷತ್ವೇನ ಚಾಖಿಲಃ ... .. ... ೧೧೯
ಪ್ರತ್ಯಕ್ಷಾದಿವಿರೋಧಾಚ್ಚ ದುಷ್ಟಃ ಪಕ್ಷೋಽಯಮಂಜಸಾ ... ,,
೧೨ ಚೇಷ್ಟಾಲಿಂಗೇನ ಸಾತ್ಮತ್ವೇ ಪರದೇಹಸ್ಯ ಸಾಧಿತೇ ... .. ೧೨೦
ಅನ್ಯತ್ವಂ ಸ್ವಾತ್ಮನಸ್ತಸ್ಮಾತ್ಸರ್ವೈರೇವಾನುಭೂಯತೇ ... ... ,,
೧೩ ಅಜ್ಞತಾ ಚಾಲ್ಪಶಕ್ತಿತ್ವಂ ದುಃಖಿತ್ವಂ ಸ್ವಲ್ಪಕರ್ತೃತಾ ... ... ೧೨೧
ಸರ್ವಜ್ಞತ್ವಾದೀಶಗುಣವಿರುದ್ಧಾ ಹ್ಯನುಭೂತಿಗಾಃ ... ... ,,
ಸಾರ್ವಜ್ಞ್ಯಾದಿಗುಣಾ ವಿಷ್ಣೋಃ ಶ್ರುತಿಷು ಪ್ರತಿಪಾದಿತಾಃ .. ೧೨೨
೧೪ ಸತ್ಯಃ ಸೋ ಅಸ್ಯ ಮಹಿಮೇತ್ಯಾದಿವಾಕ್ಯಾನ್ಮೃಷಾ ನ ಚ .. ... ೧೨೩
ನ ಚ ವೇದೋಕ್ತಮಿಥ್ಯಾತ್ವೇ ಮಾನಂ ತನ್ಮಾನತಾಽಪಿ ನ ... .. ೧೨೪
೧೫ ಅತೋಽಜ್ಞಾಸಂಭವಾದೇವ ನಾಧಿಕಾರ್ಯೈಕ್ಯವಾದಿನಾವರ್ .. ೧೨೫

| ಮೂಲ. | | ಪುಟ. |
|---|---|---|
| ೧೬ | ಅತೋ ನಾಜ್ಞಾತಮಿತಿ ಚ ವಿಷಯೋ ವಿಷಯಾಂತರೇ ... ... | ೧೨೪ |
| | ಅಜ್ಞಾಭಾವಾತ್ಫಲಂ ಕಸ್ಯ ಯೋಗಃ ಶಶಶೃಙ್ಗಯೋಃ ... ... | ,, |
| ೧೭ | ದುರ್ಘಟತ್ವಂ ಭೂಷಣಂ ಚೇತ್ಸ್ಯಾದವಿದ್ಯಾತ್ವಮಾತ್ಮನಃ ... ... | ೧೨೬ |
| | ಅಂಧಂತಮೋಽಪ್ಯಲಂಕಾರೋ ನಿತ್ಯದುಃಖಂ ಶಿರೋಮಣಿಃ ... | ,, |
| ೧೮ | ಅತಃ ಪರೋಮಾತ್ರಯೇತಿ ಪೂರ್ವಶ್ರುತಿನಿದರ್ಶಿತಃ । ಅನ್ಯಮೀಶಮಿತಿ ಶ್ರುತ್ಯಾ ಭಿನ್ನಜೀವದೃಶಂ ಗತಃ । ಭಿನ್ನತ್ವೇನಾತ್ಮಸಾದೃಶ್ಯದೋ ಯದೇತಿಶ್ರುತೇಃ ಸದಾ ... ... ... ... ... | ೧೨೮ |
| ೧೯ | ಮಾಯಾವಾದತಮೋವ್ಯಾಪ್ತಮಿತಿ ತತ್ವದೃಶಾ ಜಗತ್ ... ... | ೧೨೯ |
| | ಭಾತಂ ಸರ್ವಜ್ಞಸೂರ್ಯೇಣ ಪ್ರೀತಯೇ ಶ್ರೀಪತೇಃ ಸದಾ ... | ,, |
| ೨೦ | ನಮೋಽಮಂದನಿಜಾನಂದಸಾಂದ್ರಸುಂದರಮೂರ್ತಯೇ । ... | ೧೩೦ |
| | ಇಂದಿರಾಪತಯೇ ನಿತ್ಯಾನಂದಭೋಜನದಾಯಿನೇ ॥ ... ... | ,, |

ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತಂ

ಉಪಾಧಿಖಂಡನಂ ಸಂಪೂರ್ಣಂ.



|| ಶ್ರೀಃ ||

# ಮಾಯಾವಾದಖಂಡನದ ಮುನ್ನುಡಿ.

|| ಶ್ರೀ ಮಧ್ವವಲ್ಲಭ ವೇದವ್ಯಾಸಾಯ ನಮಃ ||

"ಮಾಯಾ", "ಮಾಯಾವಾದ", "ಮಾಯಾವಾದಿ" ಎಂಬೀ ಪದಗಳನ್ನು ವಿಶೇಷ ಶಾಸ್ತ್ರಾಭ್ಯಾಸ ಮಾಡದವರುಗಳು ಅನೇಕಾವರ್ತಿ ಕೇಳಿರಬಹುದು. ಅವುಗಳು ಪ್ರಸಿದ್ಧಪದಗಳಾಗಿವೆ. ಸಂಸ್ಕೃತಭಾಷೆಯಲ್ಲಿ 'ಮಾಯಾ' ಶಬ್ದಕ್ಕೆ ಅನೇಕ ಅರ್ಥಗಳುಂಟು. ಪ್ರಕೃತದಲ್ಲಿ 'ಮಾಯಾ' ಎಂದರೆ ಅಜ್ಞಾನವೆಂದು ಅರ್ಥವು. ಮಾಯುವಾದವೆಂದರೆ ಈ ಜಗತ್ತು ಅಸತ್ಯವೆಂದೂ, ಮಾಯೆಯಿಂದ ನಿರ್ಮಿತವಾದದ್ದು ಎಂದೂ ಹೇಳುವ ವಾದವು. ಖಂಡನವೆಂದರೆ ಆ ವಾದದಲ್ಲಿರುವ ದೋಷಗಳನ್ನು ತೆಗೆದು ತೋರಿಸಿ ನಿರಾಕರಣೆಮಾಡುವುದು.

ಮಾಯಾವಾದವು ಅದ್ವೈತಮತದಲ್ಲಿ ಮುಖ್ಯವಾದ ಒಂದು ಪ್ರಕರಣವಾಗಿರುತ್ತದೆ. ಇದನ್ನು ನಿರಾಕರಣಮಾಡಿ ಸ್ವಮತವನ್ನು ಸ್ಥಾಪನೆಮಾಡುವ ಈ ಗ್ರಂಥವನ್ನು ಶ್ರೀಮದಾಚಾರ್ಯರು ರಚಿಸಿರುತ್ತಾರೆ.

ಅದ್ವೈತ ಮತವೆಂದರೆ ಇಂತಹುದು, ಮಾಯುವಾದವೆಂದರೆ ಇಂತಹುದು ಎಂದು ಮೊದಲು ತಿಳಿದುಕೊಳ್ಳುವದು ಆವಶ್ಯಕವು. ಪ್ರತ್ಯಕ್ಷ, ಅನುಮಾನ, ಆಗಮವೆಂದೂ ಪ್ರಮಾಣವು ಮೂರು ಪ್ರಕಾರವಾಗಿ ಇರುತ್ತದೆ. ಪ್ರತ್ಯಕ್ಷಾನುಮಾನಗಳಿಂದ ಚೇತನಾಚೇತನಾತ್ಮಕವಾದ ಈ ಪ್ರಪಂಚ ಜ್ಞಾನವು ನಮಗೆ ಸಿದ್ಧಿಸುತ್ತದೆ. ಸರ್ವೋತ್ತಮನಾದ ಪರಮಾತ್ಮನು ಈ ಜಗತ್ತಿನಂತೆ ನಮಗೆ ಪ್ರತ್ಯಕ್ಷಾನುಮಾನಗಳಿಗೆ ಗೋಚರನಾಗುವುದಿಲ್ಲ. ಅವನನ್ನು ತಿಳಿಯಬೇಕಾದರೆ ಶಾಸ್ತ್ರದಿಂದಲೇ ತಿಳಿಯಬೇಕು. ಆದುದರಿಂದ ಶಾಸ್ತ್ರಸಹಾಯವನ್ನು ಎಲ್ಲಾಮತಗಳು ಅಪೇಕ್ಷಿಸುವವು. ಜಡ ಪ್ರಕೃತಿ, ಜೀವ, ಪರಮಾತ್ಮ ಈ ಮೂರು ತತ್ವಗಳನ್ನು ಎಲ್ಲಾ ಆಸ್ತಿಕ ಮತದವರು ಒಪ್ಪಿರುತ್ತಾರೆ. ಈ ಮೂರುತತ್ವಗಳ ಪರಸ್ಪರ ಸಂಬಂಧವು ತಿಳಿಸಿಕೊಡುವುದೇ ಆಯಾ ಮತಗಳ ಮುಖ್ಯೋದ್ದೇಶವಾಗಿರುತ್ತದೆ. ಜಗತ್ತು ಸತ್ಯವೆಂದೂ ಜಗತ್ತಿಗೂ ಜೀವರಾಶಿಗೂ ಪರಮಾತ್ಮನಿಗೂ ಇರತಕ್ಕ ಪರಸ್ಪರಭೇದಗಳು ಸತ್ಯವೆಂದೂ ನಿತ್ಯವೆಂದೂ ಈ ಮೂರು ತತ್ವಗಳಿಂದ ಪಂಚಭೇದ ಏರ್ಪಡುವದೆಂದೂ ದ್ವೈತಸಿದ್ಧಾಂತವಾಗಿರುತ್ತದೆ.

ಅದ್ವೈತಮತರೀತ್ಯಾ, ಮೇಲೆ ಹೇಳಿದ ಮೂರು ತತ್ವಗಳಿಗೆ ಇರತಕ್ಕ ಭೇದವು ಸತ್ಯವಲ್ಲ. ನಿತ್ಯವಲ್ಲ. ಕೇವಲ ಮಿಥ್ಯಾಭೂತವಾದದ್ದು. (1)ವ್ಯಾವಹಾರಿಕ (2)ಪಾರಮಾರ್ಥಿಕವೆಂದು ಎರಡು ದೆಶೆಗಳಿರುವುವು. ವ್ಯಾವಹಾರಿಕ ದೆಶೆಯಲ್ಲಿ ಈ ಭೇದವು ಕಂಡು ಬರುತ್ತದೆ. ಪಾರಮಾರ್ಥಿಕ ದೆಶೆಯಲ್ಲಿ ಪರಬ್ರಹ್ಮ ಒಂದು ಹೊರತು ಇನ್ನು ಯಾವ ವಸ್ತುವೂ ಇರುವುದಿಲ್ಲ. ಸಂಸಾರವು ಅದರಲ್ಲಿ ಉಂಟಾಗತಕ್ಕ ಸುಖದುಃಖಗಳೂ ಅಸತ್ಯಗಳು. ಸ್ವಪ್ನದಲ್ಲಿ ಕಾಣುವ ಗಜತುರಗಾದಿಗಳು ಹೇಗೆ ಅಸತ್ಯವೋ ಅದರಂತೆಯೇ ಈ ವ್ಯಾವಹಾರಿಕ ಪ್ರಪಂಚದಲ್ಲಿ ತೋರುವ ಎಲ್ಲಾ ಜಡಪದಾರ್ಥಗಳು ಅಸತ್ಯಗಳು, ಅಜ್ಞಾನದಿಂದ ನಿರ್ಮಿತವಾದುವುಗಳು. ಕತ್ತಲೆಯಲ್ಲಿ ಹಗ್ಗವು ಹಾವಿನಂತೆ ಕಂಡುಬರುವುದು. ಹಾಗೆಯೇ ಈ ಪ್ರಪಂಚವು ಅಜ್ಞಾನದಿಂದ ನಮಗೆ ತೋರುವುದು. ದೀಪ ತೆಗೆದುಕೊಂಡು ಹೋಗಿ ನೋಡುವಾಗ ಹಗ್ಗದ ಜ್ಞಾನವುಬಂದು ಹಾವು ಎಂದು ತೋರಿದ್ದು ಭ್ರಮೆಯೆಂದು ತಿಳಿಯುವುದು. ಅದರಂತೆಯೇ ಅಜ್ಞಾನ ನಿವೃತ್ತಿಯಾದರೆ ಜಗತ್ತು ಇಲ್ಲದೇ ಹೋಗುವುದು. ಈ ಜಗತ್ತು ಎಂಬುವ ಹಾವಿಗೆ ಪರಮಾತ್ಮನು ಹಗ್ಗದೋಪಾದಿ

ಯಲ್ಲಿ ಇರುವನು. ಅಂದರೆ ಸತ್ಯವಾದ ಹಗ್ಗದಲ್ಲಿ ಸುಳ್ಳಾದ ಹಾವು ಹೇಗೆ ಕಾಣಿಸುವುದೋ ಹಾಗೆಯೇ ಸತ್ಯವಾದ ಬ್ರಹ್ಮನಲ್ಲಿ ಸಮಸ್ತ ಅಚೇತನ ಪ್ರಪಂಚವು ಆರೋಪವಾಗಿದ್ದು ಕಾಣಿಸುವುದು. ಮಾಯೆಯೆಂಬ ಕತ್ತಲೆಯನ್ನು ಜ್ಞಾನವೆಂಬ ಬೆಳಕಿನಿಂದ ಕಳೆದರೆ ಜಗತ್ತು ನಷ್ಟವಾಗಿ ಪರಬ್ರಹ್ಮ ಮಾತ್ರ ಉಳಿಯುವುದು. ಕ್ರಿಮಿ ಕೀಟಾದಿಗಳು ಮೊದಲು ಚತುರ್ಮುಖ ಬ್ರಹ್ಮ ಪರ್ಯಂತ ಇರುವ ಸಮಸ್ತ ಚೇತನಗಳಿಗೂ, ಆ ಪರಬ್ರಹ್ಮನಿಗೂ ಐಕ್ಯವು. ಈ ಚೇತನಗಳೇ ಆ ಪರಬ್ರಹ್ಮನು. ಆ ಪರಬ್ರಹ್ಮನೇ ಈ ಚೇತನಗಳಾಗಿ ಕಾಣಿಸಿಕೊಳ್ಳುತ್ತಾನೆ. ಅಜ್ಞಾನ ನಿಮಿತ್ತವಾಗಿ ಚೇತನಗಳಿಗೂ ಪರಬ್ರಹ್ಮನಿಗೂ ಇರುವ ಐಕ್ಯವು ಗೊತ್ತಾಗುವುದಿಲ್ಲ. ಪರಬ್ರಹ್ಮನು ನಿರ್ಗುಣನೂ, ನಿರ್ವಿಶೇಷನೂ ಆಗಿರುತ್ತಾನೆ. ಅವನನ್ನು ಯಾವ ಗುಣದಿಂದಲಾಗಲೀ ಯಾವ ವಿಶೇಷಣಗಳಿಂದಾಗಲೀ, ವರ್ಣನೆ ಮಾಡುವುದಕ್ಕೆ ಆಗುವುದಿಲ್ಲ. ಅವನಲ್ಲಿ ಯಾವ ಧರ್ಮಗಳೂ ಯಾವ ಗುಣಗಳೂ ಇರುವುದಿಲ್ಲ. ಪರಬ್ರಹ್ಮನು ಕರ್ತನಲ್ಲ, ಭೋಕ್ತನಲ್ಲ, ಜ್ಞಾನಿಯಲ್ಲ, ಸುಖಿ ಅಲ್ಲ, ಆದರೆ ಅವನು ಜ್ಞಾನಮಯನು, ಸುಖಮಯನು ಅಂದರೆ ಜ್ಞಾನವು ಸುಖವು ಅವನ ಸ್ವರೂಪವಾಗಿರುತ್ತದೆ. ಇಂತಹ ಬ್ರಹ್ಮಭಾವವನ್ನು ಹೊಂದುವುದೇ ಮೋಕ್ಷವು. ಅಜ್ಞಾನವು ಭೇದಪ್ರಪಂಚಕ್ಕೂ ತನ್ನಿಮಿತ್ತ ಸಂಸಾರಕ್ಕೂ ಕಾರಣವಾದುದರಿಂದ, ಅಜ್ಞಾನ ನಿವೃತ್ತಿಯಾದರೆ ಐಕ್ಯವು ಸಿದ್ಧಿಸುವುದು. ಅಜ್ಞಾನ ನಿವೃತ್ತಿಯೇ ಮುಕ್ತಿಯು, ಇದೇ ಪರಮ ಪುರುಷಾರ್ಥವು, ಇದಕ್ಕೆ ಜ್ಞಾನ ವೊಂದೇ ಸಾಧನವು. ಇವೇ ಮೊದಲಾದ ವಿಷಯಗಳನ್ನು ವೇದಾದಿ ಶಾಸ್ತ್ರಗಳು ನಿರೂಪಣೆ ಮಾಡುವವೆಂದು ಅದ್ವೈತ ಸಿದ್ಧಾಂತವು.

ಈ ಮಾಯಾವಾದಖಂಡನದಲ್ಲಿ ಅದ್ವೈತಿಗಳು ಮಾಡಬಹುದಾದ ಅನೇಕ ಪೂರ್ವಪಕ್ಷಗಳಿಗೆ ದೋಷಗಳನ್ನು ಹೇಳಿ ನಿರಾಕರಣವನ್ನು ಮಾಡುತ್ತಾರೆ. ಈ ವಿವಾದವನ್ನು ಸಂವಾದರೂಪವಾಗಿ ತೋರಿಸಿದರೆ ಸುಲಭವಾಗಿ ಅರ್ಥವಾಗುವುದು.

**ಮಾಯಾವಾದಿ**- ಅಯ್ಯಾ! ನಿಮ್ಮ ಆಚಾರ್ಯರು ನಮ್ಮ ಮತವನ್ನು ಧ್ವಾಂತವೆಂದು ಮಂಗಳಶ್ಲೋಕದಲ್ಲಿ ಹೇಳಿರುವರು. ಅದು ಸರಿಯಲ್ಲ. ನಮ್ಮ ಮತವು ಅಂಧಕಾರವೆಂದು ಹೇಗೆ ಹೇಳಲಾಗುವದು. ಶ್ರುತಿ ಸ್ಮೃತಿ ಮೀಮಾಂಸಾ ಶಾಸ್ತ್ರಗಳ ಮುಖ್ಯ ಉದ್ದೇಶವು ಜೀವಬ್ರಹ್ಮರ ಐಕ್ಯಪ್ರತಿಪಾದನೆ ಮಾಡುವುದಷ್ಟೆ. ಪರಬ್ರಹ್ಮನು ಸುಖಸ್ವರೂಪನೂ, ಸರ್ವಶಕ್ತನೂ, ಜ್ಞಾನಮಯನೂಆಗಿರುತ್ತಾನೆ. ಜೀವನು ಅಲ್ಪಶಕ್ತನು, ಅಲ್ಪಜ್ಞನು ದುಃಖಿಯಾಗಿರುತ್ತಾನೆ. ಜೀವಬ್ರಹ್ಮರೀಗೆ ಶಾಸ್ತ್ರದಲ್ಲಿ ಹೇಳುವಂತೆ ಐಕ್ಯವು ಸತ್ಯವಾದರೆ ಜೀವನಲ್ಲಿ ತೋರುವ ದುಃಖ ಮೊದಲಾದವುಗಳು ಅಸತ್ಯವಾಗಿರಬೇಕಷ್ಟೆ. ಆದುದರಿಂದ ಈ ಜಗತ್ತು ಈ ಭೇದವು ಎಲ್ಲವೂ ಅಜ್ಞಾನ ನಿಮಿತ್ತವಾದದ್ದು, ಅಸತ್ಯವಾದದ್ದು ಎಂದು ಸಿದ್ಧವಾಗುತ್ತದೆ.

**ತತ್ವವಾದಿ**- ಶಾಸ್ತ್ರವು ಐಕ್ಯವನ್ನು ಪ್ರತಿಪಾದನೆಮಾಡುವುದು ಎಂದು ಹೇಳುವಿರಿ. ಮೊದಲು ನಿಮ್ಮ ಶಾಸ್ತ್ರದಲಕ್ಷಣವು ಹೇಗಿರುವುದೋ ಹೇಳಬೇಕು.

**ಮಾಯಾವಾದಿ**- ಶಾಸ್ತ್ರಕ್ಕೆ ಮೂರು ಲಕ್ಷಣಗಳು ಇರುವುವು. (1)ಅಯಥಾರ್ಥವನ್ನು ಅಂದರೆ ಅಸತ್ಯವನ್ನು ಪ್ರತಿಪಾದನೆಮಾಡಕೂಡದು. ಹಾಗೆ ಮಾಡುವುದಾದರೆ ಆ ಶಾಸ್ತ್ರವು ಅನಾರಂಭಣೀಯವು ಅಂದರೆ ಗುರುಗಳಿಗೆ ಹೇಳುವುದಕ್ಕೂ ಶಿಷ್ಯರಿಗೆ ಕೇಳುವುದಕ್ಕೂ ಯೋಗ್ಯವಾದದ್ದಲ್ಲ. (2) ಶಾಸ್ತ್ರವು ಅಪೂರ್ವಾರ್ಥವನ್ನು ಹೇಳಬೇಕು. ನಮಗೆ ತಿಳಿದ ವಿಷಯವನ್ನೇ ತಿಳಿಸುವುದಾದರೆ ಆ ಶಾಸ್ತ್ರವು ಅನಾರಂಭಣೀಯವು. ಹೀಗೆ ತಿಳಿಸುವ ಶಾಸ್ತ್ರಕ್ಕೆ ಸಿದ್ಧಸಾಧನತೆ ಅಂದರೆ ತಿಳಿದದ್ದನ್ನೇ ತಿಳಿಸಿ ಕೊಡುವುದು, ಎಂಬ ದೋಷವು ಬರುವುದು. (3) ಶಾಸ್ತ್ರಕ್ಕೆ ಅನು

ಬಂಧ ಚತುಷ್ಟಯಗಳು ಕೂಡಬೇಕು. ಅಂದರೆ ವಿಷಯ, ಪ್ರಯೋಜನ, ಅಧಿಕಾರಿ, ಸಂಬಂಧ ಇವುಗಳು ಕೂಡಬೇಕು. ಇವುಗಳಿಲ್ಲದಿದ್ದರೆ ಆ ಶಾಸ್ತ್ರವು ಅನಾರಂಭಣೀಯವೇ ಸರಿ.

**ತತ್ವವಾದಿ**- "ವಿಮತಮನಾರಂಭಣೀಯಂ ಅನ್ಯಥಾ ಪ್ರತಿಪಾದಕತ್ವಾತ್." ಅಯ್ಯಾ! ನೀವು ಹೇಳುವುದು ಶಾಸ್ತ್ರಲಕ್ಷಣವಾದರೆ ಅದ್ವೈತಮತವು ಅನಾರಂಭಣೀಯವಾಗುವುದು. ನಿಮ್ಮ ಮತವು ಅಸತ್ಯವನ್ನು ಪ್ರತಿಪಾದನೆಮಾಡುವುದು. ಆದುದರಿಂದ ಪ್ರವಚನಕ್ಕೆ ಯೋಗ್ಯವಲ್ಲ, ಬೌದ್ಧ ಶಾಸ್ತ್ರದಂತೆ ನಿಮ್ಮ ಶಾಸ್ತ್ರವು ವರ್ಜ್ಯವಾಡಬೇಕಾಗುವುದು.

**ಮಾಯಾವಾದಿ**- ನಮ್ಮ ಮತದಲ್ಲಿ ಅಯಥಾರ್ಥವು ಯಾವುದೂ ಇರುವುದಿಲ್ಲ. ಅಸತ್ಯವನ್ನು ಪ್ರತಿಪಾದನೆ ಮಾಡುವುದಿಲ್ಲ. ಯಾವುದು ಅಸತ್ಯವೆಂದು ನಿಮ್ಮ ಅಭಿಪ್ರಾಯ?

**ತತ್ವವಾದಿ**- 'ನ ಹಿ ಬ್ರಹ್ಮಾತ್ಮೈಕ್ಯಸ್ಯ ಯಾಥಾರ್ಥ್ಯಂ.' ಜೀವಬ್ರಹ್ಮರ ಐಕ್ಯವು ನಿಮ್ಮ ಮತದಲ್ಲಿ ಅಯಥಾರ್ಥವಷ್ಟೇ. ಅಂತಹ ಅಯಥಾರ್ಥವನ್ನು ಪ್ರತಿಪಾದನೆಮಾಡುವ ಶಾಸ್ತ್ರವು ಅನಾರಂಭಣೀಯವಲ್ಲವೆ?

**ಮಾಯಾವಾದಿ**- ಜೀವಬ್ರಹ್ಮರ ಐಕ್ಯವು ಅಯಥಾರ್ಥವೆಂದು ಯಾರು ಹೇಳಿದರು? ಅಯಥಾರ್ಥವೆಂದು ಒಪ್ಪುವಪಕ್ಷಕ್ಕೆ ನೀವು ಹೇಳಿದಹಾಗೆ ಶಾಸ್ತ್ರಕ್ಕೆ ಅನಾರಂಭಣೀಯತ್ವವು ಬರುವುದು. ಜೀವಬ್ರಹ್ಮರ ಐಕ್ಯವು ಸತ್ಯವೇ ಸರಿ. ಅಸತ್ಯವಲ್ಲ.

**ತತ್ವವಾದಿ**- ಅಯ್ಯಾ! ಜೀವಬ್ರಹ್ಮರ ಐಕ್ಯವು ಸತ್ಯವಾದರೆ ಆ ಐಕ್ಯವು ಬ್ರಹ್ಮಸ್ವರೂಪವೋ, ಅಥವಾ ಬ್ರಹ್ಮನನ್ನು ಬಿಟ್ಟು ಪ್ರತ್ಯೇಕವಾಗಿರುವುದೋ ಹೇಳಬೇಕು. ಇದು ಎರಡು ಹೊರತು ಮೂರನೇ ಪ್ರಕಾರವೂ (Alternative) ಇರುವುದೋ?

**ಮಾಯಾವಾದಿ**- "ಮೂರನೇ ಪ್ರಕಾರವೂ ಇಲ್ಲ. ಐಕ್ಯವು ಬ್ರಹ್ಮಸ್ವರೂಪವಲ್ಲ. ಪ್ರತ್ಯೇಕವಾಗಿರತಕ್ಕದ್ದು ಎಂದು ಹೇಳಿದರೆ ಏನು ದೋಷವು ಬರುವುದು"?

**ತತ್ವವಾದಿ**- "ಅದ್ವೈತಹಾನಿಃ"— ಅಯ್ಯಾ! ನಿಮ್ಮ ಅದ್ವೈತವೇ ನಷ್ಟವಾಗುವದು. ಮೊದಲಿಗೆ ಮೋಸಬರುವದು. ಐಕ್ಯವು ಸತ್ಯವೆಂದು ಒಪ್ಪಿರುತ್ತೀರಿ. ಮತ್ತು ಈಗ ಬ್ರಹ್ಮನನ್ನು ಬಿಟ್ಟು ಪ್ರತ್ಯೇಕವಾಗಿರತಕ್ಕ ವಸ್ತುವೆಂದು ಒಪ್ಪಿರುತ್ತೀರಿ. ಆದುದರಿಂದ ಬ್ರಹ್ಮ (1), ಐಕ್ಯ (2) ಈ ಎರಡು ಸತ್ಯವಸ್ತುಗಳನ್ನು ಒಪ್ಪಿದಂತಾಯಿತು. ನೀವು ದ್ವೈತಿಗಳಾದಿರಿ. ಅದ್ವೈತವು ನಷ್ಟವಾಯಿತು.

**ಮಾಯಾವಾದಿ**- ಹಾಗಾದರೆ ಐಕ್ಯವು ಪ್ರತ್ಯೇಕವಾಗಿರತಕ್ಕ ವಸ್ತುವಲ್ಲ. ಬ್ರಹ್ಮನ ಸ್ವರೂಪವೇ ಸರಿ. ಈಗ ಏನು ದೋಷವೂ ಬರುವುದಿಲ್ಲ.

**ತತ್ವವಾದಿ**- ಅದ್ವೈತವೇನೋ ಸಿದ್ಧವಾಗುವದು. ಆದರೆ ಶಾಸ್ತ್ರಕ್ಕೆ ಸಿದ್ಧಸಾಧನತಾ ದೋಷವು ಬರುವದು.

**ಮಾಯಾವಾದಿ**- ಅದು ಹೇಗೆ?—

**ತತ್ವವಾದಿ**- "ಸ್ವಪ್ರಕಾಶತ್ವಾದಾತ್ಮನಃ"—"ತನ್ನ ಸ್ವರೂಪವು ಸ್ವತಸ್ಸಿದ್ಧವಾದ ಕಾರಣ ಜೀವಬ್ರಹ್ಮರಿಗೆ ಐಕ್ಯಸಿದ್ಧಕಾರಣ, ಮತ್ತು ಐಕ್ಯವು ಬ್ರಹ್ಮನ ಸ್ವರೂಪವಾದಕಾರಣ ಇದು ಸ್ವತಏವ ತಿಳಿದ ವಿಷಯವಾಗಿರಬೇಕು. ಬೇರೆ ಇನ್ನೊಂದರಿಂದ ಐಕ್ಯವು ತಿಳಿದುಕೊಳ್ಳಬೇಕಾಗಿರುವುದಿಲ್ಲ. ಆದುದರಿಂದ ಶಾಸ್ತ್ರಕ್ಕೆ ಸಿದ್ಧಸಾಧನತಾದೋಷವು ಬರುವದು".

**ಮಾಯಾವಾದಿ-** ವಾ! ವಾ! ಸ್ವಲ್ಪತಡೆಯಿರಿ. ಐಕ್ಯವು ಬ್ರಹ್ಮನ ಸ್ವರೂಪವಾದ ಮಾತ್ರದಲ್ಲೇ ಸಿದ್ಧಸಾಧನತಾದೋಷವು ಬರುವುದಿಲ್ಲ. ಬ್ರಹ್ಮನು ಸ್ವಪ್ರಕಾಶನೇ ಸರಿ. 'ನಾನು' ಎಂಬ ಜ್ಞಾನಮಾತ್ರ ಸ್ವತಸ್ಸಿದ್ಧವಾಗಿದೆ. ಆದರೆ ಐಕ್ಯವೆಂಬ ವಿಶೇಷಾಕಾರವಾದ ಜ್ಞಾನವು ಸ್ವತಸ್ಸಿದ್ಧವಾಗಿರುವುದಿಲ್ಲ. ಇದು ಉಪದೇಶದಿಂದಲೇ ಬರಬೇಕು. ಆದುದರಿಂದ ಈ ಐಕ್ಯವನ್ನು ಪ್ರತಿಪಾದನೆಮಾಡುವ ಶಾಸ್ತ್ರಕ್ಕೆ ಸಿದ್ಧಸಾಧನತಾದೋಷವು ಬರುವುದಿಲ್ಲ. ನಿಮ್ಮ ಮತದಲ್ಲಿ ಘಟಕ್ಕೂ ಅದರ ರೂಪಕ್ಕೂ ಅಭೇದವನ್ನು ಹೇಳುತ್ತೀರಿ. ಆದರೆ ಘಟಜ್ಞಾನವು ಬಂದಕೂಡಲೇ ರೂಪಜ್ಞಾನವು ಬರುತ್ತದೋ? ಇಲ್ಲವಷ್ಟೆ? ಕತ್ತಲೆಯಲ್ಲಿ ಮುಟ್ಟಿನೋಡಿದರೆ ಘಟಜ್ಞಾನವು ಬರುತ್ತದೆ. ಆದರೆ ಅದರ ಬಣ್ಣ (ರೂಪ) ಕಪ್ಪೋ ಕೆಂಪೋ ಹೇಳಲಾಗುವದಿಲ್ಲ. ಆದುದರಿಂದ ರೂಪವು (ಬಣ್ಣ) ಘಟದ ಸ್ವರೂಪವಾಗಿದ್ದಾಗ್ಯೂ ಹೇಗೆ ಘಟಜ್ಞಾನವು ಬಂದಕೂಡಲೇ ರೂಪಜ್ಞಾನವು ಬರಬೇಕೆಂದು ನಿಯಮವಿಲ್ಲವೋ, ಹಾಗೆಯೇ ಐಕ್ಯವು ಬ್ರಹ್ಮನ ಸ್ವರೂಪವಾಗಿದ್ದಾಗ್ಯೂ, ಬ್ರಹ್ಮನು ಸ್ವಪ್ರಕಾಶನಾಗಿದ್ದಾಗ್ಯೂ, ಐಕ್ಯಜ್ಞಾನವು ಸ್ವತಸ್ಸಿದ್ಧವಾಗಿ ಇರಬೇಕೆಂದು ನಿಯಮವಿಲ್ಲ.

**ತತ್ವವಾದಿ-** ಘಟಕ್ಕೂ ನಿಮ್ಮ ಬ್ರಹ್ಮನಿಗೂ ಒಂದು ವ್ಯತ್ಯಾಸವಿದೆ. ಅದು ಮರತು ಬಿಟ್ಟಿರೆಂದು ಕಾಣುತ್ತದೆ— ಘಟದ ವಿಷಯದಲ್ಲಿ ನೀವು ಹೇಳಿದ್ದು ಸರಿಯೆ. ಘಟವು ಗುಣ ವಿಶಿಷ್ಟವಾಗಿದೆ. ಆದುದರಿಂದ ಘಟಜ್ಞಾನವು ಬಂದರೂ ರೂಪಜ್ಞಾನವು ಬಾರದೆ ಇರಬಹುದು. ಇದು ಧರ್ಮದಿಂದಕೂಡಿದ ಧರ್ಮಿಯಲ್ಲಿ ಸಿದ್ಧವಾಗುತ್ತದೆ. ಆದರೆ "ನಿರ್ವಿಶೇಷತ್ವಾದಾತ್ಮನೋ ನಾನಧಿಗತೋ ವಿಶೇಷಃ" ನಿಮ್ಮ ಮತದಲ್ಲಿ ಬ್ರಹ್ಮನು ನಿರ್ವಿಶೇಷನು, ನಿರ್ಗುಣನು ಎಂದು ಹೇಳುವುದರಿಂದ, ಐಕ್ಯವು ಅವನಲ್ಲಿರುವ ಒಂದು ಗುಣವಲ್ಲವಾದಕಾರಣ ಯಾವಾಗಲೂ ಸ್ವತಸ್ಸಿದ್ಧವಾಗಿಯೇ ಇರಬೇಕು. (1) ಆದುದರಿಂದ ಐಕ್ಯವು ಅಯಥಾರ್ಥವೆಂದರೆ ಶಾಸ್ತ್ರಕ್ಕೆ ಅನಾರಂಭಣೀಯತ್ವವು ಮೊದಲೇ ಬರುವದು. (2) ಐಕ್ಯವೂ ಸತ್ಯವೂ ಮತ್ತು ಬ್ರಹ್ಮನಿಂದ ಭಿನ್ನವೂ ಎಂದು ಒಪ್ಪಿದರೆ ಅದ್ವೈತವೇ ನಷ್ಟವಾಗುವದು. (3) ಐಕ್ಯವೂ ಸತ್ಯವೂ ಬ್ರಹ್ಮ ಭಿನ್ನವಲ್ಲ. ಬ್ರಹ್ಮಸ್ವರೂಪವೇ ಎಂದರೆ ಸಿದ್ಧಸಾಧನತಾದೋಷವು ಬರುವದು. (4) ಅಥವಾ ಬ್ರಹ್ಮನು ಗುಣವಿಶಿಷ್ಟನು, ಎಂದು ಒಪ್ಪಬೇಕಾಗುವದು. ಇವುಗಳ ಹೊರತು ಮಾರ್ಗಾಂತರವಿರುವದಿಲ್ಲ.

**ಮಾಯಾವಾದಿ-** ಅಯ್ಯೋ! ಮಾತಿನ ಚಮತ್ಕಾರದಿಂದ ನನ್ನನ್ನು ಮರುಳುಮಾಡಬೇಕೆಂದು ಪ್ರಯತ್ನಿಸುವಿರಿ. ಇದು ಸಾಧ್ಯವಲ್ಲ. ಐಕ್ಯವೆಂದರೆ ನಿಮಗೆ ಅರ್ಥವೇ ಆಗಲಿಲ್ಲ. ನಿಮ್ಮ ಮತದಲ್ಲಿ ಐಕ್ಯವು ಹೇಳುವದಿಲ್ಲವಾದಕಾರಣ ಅದು ಇಂತಹುದು ಎಂದು ನಿಮಗೆ ತಿಳಿಯಲಾರದು.

**ತತ್ವವಾದಿ-** ನಮ್ಮ ಮತದಲ್ಲಿ ಜೀವಬ್ರಹ್ಮರಿಗೆ ಐಕ್ಯವನ್ನು ಸರ್ವಥಾ ಹೇಳುವುದಿಲ್ಲ. ಆದಾಗ್ಯೂ ಐಕ್ಯವೆಂದರೆ ಇಂತಹದು ಎಂದು ನಮಗೆ ಚೆನ್ನಾಗಿ ಗೊತ್ತಿರುತ್ತದೆ. ನಮ್ಮ ಮತದಲ್ಲಿ ಪರಮಾತ್ಮನ ಮೂಲರೂಪಕ್ಕೂ ರಾಮಕೃಷ್ಣಾದ್ಯವತಾರರೂಪಗಳಿಗೂ ಐಕ್ಯವನ್ನು ಹೇಳುತ್ತೇವೆ. ಹಾಗೆಯೇ ಜೀವೋತ್ತಮರಾದ ವಾಯುದೇವರಿಗೂ ಅವರ ಅವತಾರ ರೂಪಗಳಾದ ಹನುಮ, ಭೀಮ, ಮಧ್ವ ಈ ರೂಪಗಳಿಗೂ ಐಕ್ಯವನ್ನು ಹೇಳುತ್ತೇವೆ. ಮತ್ತು ಅಸ್ಮದಾದಿ ಜೀವರಿಗೆ ಅನೇಕ ಜನ್ಮಗಳು ಬಂದಿರುವವು. ಇನ್ನುಮುಂದೆಯೂ ಜನ್ಮಗಳು ಬರುವವು. ದೇಶ, ಕಾಲ, ಯೋನಿಭೇದಗಳಿಂದ ಬೇರೆ ಬೇರೆ ದೇಹಗಳು ಬಂದಿದ್ದಾಗ್ಯೂ ಆಯಾದೇಹಗಳಲ್ಲಿ ಚೈತನ್ಯವು ಒಂದೇ ಆದುದರಿಂದ ಬೇರೆಯಾಗಿ ಕಾಣುವ ಆಯಾಚೈತನ್ಯಗಳಿಗೆ ಐಕ್ಯವನ್ನು ಹೇಳುವೆವು. ಎರಡಾಗಿ ಕಾಣುವ ಪದಾರ್ಥಗಳು ನಿಶ್ಚಯವಾಗಿಯೂ ಒಂದೇ ಆಗಿರುವುದು

ಎಂದು ಹೇಳುವಸಂಬಧಕ್ಕೆ ಐಕ್ಯವೆಂದು ಹೆಸರು. ನೀವೂ ಇದೇ ಅರ್ಥದಲ್ಲಿ 'ಐಕ್ಯ' ವೆಂಬಪದ ವನ್ನು ಉಪಯೋಗಿಸುವಿರಿ ಅಲ್ಲವೇ?

**ಮಾಯಾವಾದಿ-** ಹೌದು. ನೀವು ಪರಮಾತ್ಮನ ಮೂಲರೂಪಕ್ಕೂ ರಾಮಕೃಷ್ಣಾದಿ ಅವತಾರರೂಪಗಳಿಗೂ ಹೇಳುವ ಐಕ್ಯವು ಸತ್ಯವೇ ಅಸತ್ಯವೇ.?

**ತತ್ವವಾದಿ-** ನಾವು ಹೇಳುವ ಐಕ್ಯವು ಸತ್ಯವು.

**ಮಾಯಾವಾದಿ-** ಸತ್ಯವಾದರೆ ಅದು ಪರಮಾತ್ಮನ ಸ್ವರೂಪವೇ ಅಥವಾ ಬೇರೆಯಾಗಿ ಇರತಕ್ಕ ವಸ್ತುವೇ.

**ತತ್ವವಾದಿ-** ಹೇಗೆ ಹೇಳಿದರೂ ನಮಗೆ ಭಾದಕವು ಬರುವುದಿಲ್ಲ. ನಮ್ಮ ಪರಬ್ರಹ್ಮನು ಅನಂತಾನಂತ ಕಲ್ಯಾಣಗುಣಪೂರ್ಣನಾದಕಾರಣ ಐಕ್ಯವು ಅವನ ಸ್ವರೂಪವಾಗಿ ಇರುವುದರಲ್ಲಿ ಯಾವ ದೋಷವೂ ಬರುವುದಿಲ್ಲ. ಅಲ್ಲದೆ ಅನಂತಾನಂತ ಕೋಟಿತತ್ವಗಳನ್ನು ನಾವು ಒಪ್ಪಿ ಕೊಳ್ಳುವ ಕಾರಣ ಐಕ್ಯವು ಪ್ರತ್ಯೇಕವಾಗಿ ಇರುವ ಒಂದು ತತ್ವವೆಂದರೆ ಯಾವ ದೋಷವೂ ಬರು ವುದಿಲ್ಲ.

**ಮಾಯಾವಾದಿ-** ಮೂಲರೂಪಕ್ಕೂ ಅವತಾರರೂಪಗಳಿಗೂ ಇರುವ ಐಕ್ಯವು ಪರ ಮಾತ್ಮನ ಸ್ವರೂಪವೆಂದರೆ ಸಿದ್ಧಸಾಧನತಾ ದೋಷವುಬರುವುದಿಲ್ಲವೇ?

**ತತ್ವವಾದಿ-** ನಮ್ಮಶಾಸ್ತ್ರಕ್ಕೆ ಈ ದೋಷವು ಬರುವುದಿಲ್ಲ. ಪರಮಾತ್ಮನ ಮೂಲರೂಪ ಕ್ಕೂ ಅವತಾರರೂಪಗಳಿಗೂ ಇರುವ ಐಕ್ಯವು ಸರ್ವಜ್ಞನಾದ ಪರಮಾತ್ಮನಿಗೆ ಸಕಲಕಾಲದಲ್ಲಿ ಯೂ ತಿಳಿದೇ ಇದೆ. ಆದರೆ ಶಾಸ್ತ್ರವು ಅವನ ಪ್ರಯೋಜನಕ್ಕಾಗಿ ಹೊರಟದ್ದು ಅಲ್ಲ. ಆ ಪರ ಮಾತ್ಮನ ರೂಪಗಳಿಗೆ ಇರುವ ಐಕ್ಯವು ಅಥವಾ ಜೀವೋತ್ತಮರ ಅವತಾರರೂಪಗಳಿಗೆ ಇರುವ ಐಕ್ಯವು ನಮಗೆ ಸ್ವತಸ್ಸಿದ್ಧವಲ್ಲ. ಇವುಗಳು ನಮಗೆ ಉಪದೇಶದಿಂದಲೇ ತಿಳಿಯುವುದು. ಆದು ದರಿಂದ ಶಾಸ್ತ್ರಕ್ಕೆ ಸಿದ್ಧಸಾಧನತಾ ದೋಷಬರುವುದಿಲ್ಲ.

**ಮಾಯುವಾದಿ-** ಜೀವನಿಗೆ ಅನೇಕ ಜನ್ಮಗಳು ಇದ್ದಾಗ್ಯೂ ಹೇಗೆ ಆಯಾ ದೇಹಗಳ ಲ್ಲಿದ್ದ ಚೈತನ್ಯದ ಐಕ್ಯವು ಸ್ವತಸ್ಸಿದ್ಧವಾಗಿ ತಿಳಿಯುವುದಿಲ್ಲವೋ ಹಾಗೆಯೇ ಜೀವನಿಗೂ ಬ್ರಹ್ಮ ನಿಗೂ ಇರತಕ್ಕ ಐಕ್ಯವೂ ಕೂಡಾ ತಿಳಿಯುವುದಿಲ್ಲ. ಇದಕ್ಕೆ ಕಾರಣವು ಮಾಯಾ (ಅಜ್ಞಾನ). ಶಾಸ್ತ್ರದ ಮುಖ್ಯೋದ್ದೇಶವು ಐಕ್ಯವನ್ನು ಪ್ರತಿಪಾದನೆ ಮಾಡುವುದಲ್ಲ. ಅಜ್ಞಾನ ನಿವೃತ್ತಿಯನ್ನು ಮಾಡುವುದೇ ಅದರ ಮುಖ್ಯ ಉದ್ದೇಶವು. ಅಜ್ಞಾನ ನಿವೃತ್ತಿಯಾದ ಕ್ಷಣದಲ್ಲೇ ಐಕ್ಯವು ತಾನಾಗಿಯೇ ಸಿದ್ಧವಾಗುವುದು.

**ತತ್ವವಾದಿ-** ಅಯ್ಯೊ! ಅಜ್ಞಾನವು ನಿಮಗೆ ಸಾಧಕವಾಗಲಾರದು. ನಿಮ್ಮ ಮತದ ಪ್ರಕಾರ ಅಜ್ಞಾನವು ಕೂಡುವುದಿಲ್ಲ. ಐಕ್ಯಕ್ಕೆ ಹೇಳಿದ ದೋಷಗಳೆಲ್ಲಾ ಅಜ್ಞಾನಕ್ಕೂ ಹೇಳ ಬಹುದು. ನೀವು ಉದಾಹರಿಸುವ ಅಜ್ಞಾನವು ಸತ್ಯವೇ ಅಸತ್ಯವೇ? ಅಸತ್ಯವೆಂದರೆ ಶಾಸ್ತ್ರಕ್ಕೆ ಅನಾಲಂಭಣೀಯತ್ವವು ಒದಗಿತು. ಸತ್ಯವೆಂದರೆ ಪರಬ್ರಹ್ಮನ ಸ್ವರೂಪವೇ ಪ್ರತ್ಯೇಕವೇ ಎಂತ ಹೇಳಬೇಕಾಗುವುದು. ಪ್ರತ್ಯೇಕವೆಂದರೆ ಅದ್ವೈತ ಹಾನಿಯಾಗುವುದು. ಅಜ್ಞಾನವು ಬ್ರಹ್ಮನ ಸ್ವರೂಪವೆಂದರೆ ಸಿದ್ಧಸಾಧನತಾ ದೋಷವು ಬರುವುದಲ್ಲದೆ ಇನ್ನು ಅನೇಕ ದೋಷಗಳು ಬರುವುವು. ಬ್ರಹ್ಮನು ಜ್ಞಾನಮಯನು ಅವನ ಸ್ವರೂಪವು ಅಜ್ಞಾನವಾಗಿರಲಿಕ್ಕಿಲ್ಲ. ಮತ್ತು ಬ್ರಹ್ಮನು ನಿರ್ವಿ ಶೇಷನು ಎಂದು ಹೇಳುವುದರಿಂದ ಅಜ್ಞಾನವು ಬ್ರಹ್ಮನಲ್ಲಿರತಕ್ಕ ಒಂದು ಧರ್ಮವೆಂದು ಹೇಳಲಾ ಗುವುದಿಲ್ಲ. ಆದುದರಿಂದ ಅಜ್ಞಾನವನ್ನು ಆಶ್ರಯಿಸಿ ಯಾವ ಲಾಭವು ಹೊಂದಲಾಗುವುದು?

**ಮಾಯಾವಾದಿ-** ಅಜ್ಞಾನವು ಬ್ರಹ್ಮನಿಗೆ ಒಂದು ಆವರಣವಾಗಿರುವುದು.

**ತತ್ವವಾದಿ-** ಆವರಣವೆಂದರೇನು?

**ಮಾಯಾವಾದಿ-** ಆವರಣವೆಂದರೇ ಮುಸುಕು.

**ತತ್ವವಾದಿ-** ಹಾಗಾದರೆ ಅಜ್ಞಾನವು ಯಾರಿಗೆ ಮುಸುಕಾಗಿರುವುದು, ಬ್ರಹ್ಮನಿಗೋ, ಅಲ್ಲದೆ ಅವನ ಧರ್ಮಕ್ಕೋ, "ಸಿದ್ಧತ್ವಾತ್ಸ್ವರೂಪಸ್ಯ ವಿಶೇಷಾಭಾವಾಚ್ಚ ನಾಜ್ಞಾನಂ ಕಸ್ಯಚಿದಾವರಕಂ" । ಅಜ್ಞಾನವು ಆವರಣವಾಗಲಿಕ್ಕಿಲ್ಲ. ಬ್ರಹ್ಮನಿಗೆ ಯಾವ ವಿಶೇಷ ಧರ್ಮವು ಇಲ್ಲವಾದ ಕಾರಣ ಯಾವ ಧರ್ಮಕ್ಕೂ ಅಜ್ಞಾನ ಆವರಣವಾಗಲಿಕ್ಕೆ ಅವಕಾಶವಿಲ್ಲ. ಮತ್ತು ಬ್ರಹ್ಮನು ಸ್ವಯಂಪ್ರಕಾಶನಾದುದರಿಂದ ಅವನಿಗೆ ಅಜ್ಞಾನವು ಆವರಣವಾಗಲಿಕ್ಕಿಲ್ಲ. ಆದುದರಿಂದ ಅಜ್ಞಾನವು ಹೇಗೂ ಅದ್ವೈತ ಮತದಲ್ಲಿ ಕೂಡುವುದಿಲ್ಲ.

**ಮಾಯಾವಾದಿ-** ಆಗಲಿ, ಶಾಸ್ತ್ರವು ಸಿದ್ಧಾರ್ಥಬೋಧಕವಾದರೆ ಏನು ದೋಷ?

**ತತ್ವವಾದಿ-** ಅಪೂರ್ವಾರ್ಥವು ಹೇಳುವುದೇ ಶಾಸ್ತ್ರದ ಲಕ್ಷಣವೆಂದು ಇದುವರೇಗೆ ನೀವು ಒಪ್ಪಿರುತ್ತೀರಿ. ಅದೂ ಅಲ್ಲದೆ ನಿಮ್ಮ ಮತರೀತ್ಯಾ ತಿಳಿಯದೆ ಇರುವ ಸತ್ಯಪದಾರ್ಥದ ಜ್ಞಾನ ಸಾಧನವೇ ಪ್ರಮಾಣವೆಂದು ಹೇಳುವಿರಿ. ಆದುದರಿಂದ ಅಜ್ಞಾನ ನಿವೃತ್ತಿಯಾಗಲೀ ಐಕ್ಯವಾಗಲೀ ಶಾಸ್ತ್ರದ ಉದ್ದೇಶವಾದರೆ ನೀವು ಹೇಳುವ ಲಕ್ಷಣಕ್ಕೆ ವಿರೋಧ ಬರುವುದು. ಮತ್ತು ಅಜ್ಞಾನವೇ ಕೂಡದೆ ಇರುವುದರಿಂದ ಅನುಬಂಧ ಚತುಷ್ಟಯಗಳು ನಷ್ಟವಾಗುವುವು.

**ಮಾಯಾವಾದಿ-** ಅದು ಹೇಗೆ?

**ತತ್ವವಾದಿ-** "ಮಿಥ್ಯಾತ್ವೇ ಚೈಕ್ಯಸ್ಯಾತತ್ವಾವೇದಕತ್ವಮಾಗಮಸ್ಯ ಸ್ಯಾತ್ ।" ಐಕ್ಯವು ಶಾಸ್ತ್ರಕ್ಕೆ ವಿಷಯವು. ಐಕ್ಯವು ಅಸತ್ಯವಾದರೆ ವಿಷಯವೂ ಅಸತ್ಯವಾಗುವುದು. ಸತ್ಯವೆಂದು ಒಪ್ಪಿದರೆ ಇದು ವರೇಗೆ ಹೇಳಿದ ದೋಷಗಳು ಕೂಡುವವು. ಮತ್ತು ಐಕ್ಯವು ಸತ್ಯವಾಗದಿದ್ದರೆ ತದ್ವಿರೋಧಿಯಾದ ಭೇದವು ಸತ್ಯವೆಂದು ನಿಶ್ಚಯವಾಗುವುದು.

**ಮಾಯಾವಾದಿ-** ಐಕ್ಯವು ಬ್ರಹ್ಮಸ್ವರೂಪವೆಂದರೆ ಶಾಸ್ತ್ರಕ್ಕೆ ಅದು ವಿಷಯವಾಗುವದರಲ್ಲಿ ಏನು ದೋಷ?

**ತತ್ವವಾದಿ-** ಬ್ರಹ್ಮಸ್ವರೂಪವಾದರೆ ಸಿದ್ಧಸಾಧನತಾದೋಷವೇ ಬರುವದು. ಸಿದ್ಧವಾದ ಅರ್ಥವು ಯಾವ ಶಾಸ್ತ್ರಕ್ಕೂ ವಿಷಯವಾಗಲಾರದು. ಮತ್ತು "ಏವಮೇವ ಪ್ರಯೋಜನಮಪಿ ನಿರಸ್ತಮ್" ಅಜ್ಞಾನವೇ ನಿಮ್ಮ ಮತದಲ್ಲಿ ಕೂಡುವದಿಲ್ಲವಾದಕಾರಣ ತನ್ನಿವೃತ್ತಿರೂಪವಾದ ಪ್ರಯೋಜನವೂ ಕೂಡುವದಿಲ್ಲ. ಅಜ್ಞಾನ ನಿವೃತ್ತಿಯೇ ಮುಕ್ತಿಯಾದರೆ, ಆ ಮುಕ್ತಿಯು ಬ್ರಹ್ಮನ ಸ್ವರೂಪವಾದ್ದರಿಂದ ಮೊದಲಿನಿಂದಲೂ ಸಿದ್ಧವಾಗಿಯೇ ಇರುತ್ತದೆ. ಆದುದರಿಂದ ಶಾಸ್ತ್ರಕ್ಕೆ ಪ್ರಯೋಜನವು ಇರುವದಿಲ್ಲ, ಮತ್ತು ಅಧಿಕಾರಿಯು ಸಹಾ ಶಾಸ್ತ್ರಕ್ಕೆ ಇಲ್ಲದಂತಾಯಿತು. ವಿಷಯಪ್ರಯೋಜನವಿಲ್ಲದ ಮೇಲೆ ಶಾಸ್ತ್ರವನ್ನು ಹೇಳುವವರು ಯಾರು? ಕೇಳುವವರು ಯಾರು? ಈ ಮೂರೂ ಇಲ್ಲದ ಮೇಲೆ ಸಂಬಂಧವು ಎಲ್ಲಿಂದ ಕೂಡುವದು? ಅನುಬಂಧ ಚತುಷ್ಟಯಗಳು ಇಲ್ಲದೆ ಇರುವದರಿಂದ ಮಾಯಾವಾದವು ಅನಾರಂಭಣೀಯವು.

**ಮಾಯಾವಾದಿ-** ಅಜ್ಞಾನವು 'ಸತ್' ಅಲ್ಲ 'ಅಸತ್' ಅಲ್ಲ. ಇವೆರಡರಲ್ಲಿ ಯಾವದಾದರೂ ಒಂದು ಆಗಿದ್ದರೆ ನೀವು ಹೇಳುವ ದೋಷಗಳು ಬರುತ್ತವೆ. ಆದರೆ ಅಜ್ಞಾನವು ಸದಸದ್ವಿಲಕ್ಷಣವು, ಅಂದರೆ ಸತ್ ಅಲ್ಲ ಮತ್ತು ಅಸತ್ ಅಲ್ಲದದು. ನೀವು ಹೇಳಿದ ಎಲ್ಲಾ ದೂಷಣೆಗಳು ವ್ಯರ್ಥವು.

**ತತ್ವವಾದಿ**- ಅಯ್ಯಾ! ನಮ್ಮ ಮತದಲ್ಲಿ 'ಸತ್' 'ಅಸತ್' ಒಪ್ಪುತ್ತೇವೆ. ಸರ್ವ ಲೋಕಾನುಭವವೂ ಹೀಗೆಯೇ ಇರುವದು. ಸದಸದ್ವಿಲಕ್ಷಣವೆಂದರೆ ನನಗೇನೂ ಅರ್ಥವಾಗ ಲಿಲ್ಲ. ಅದು ಹೇಗೆ ಇರುವದ್ದೋ? ಸ್ವಲ್ಪ ವಿವರಿಸಿರಿ, ಅಥವಾ ಒಂದು ಉದಾಹರಣೆ ಕೊಟ್ಟರೆ ಕೃತಜ್ಞನಾಗುವೆನು.

**ಮಾಯಾವಾದಿ**- ಶಕ್ಯವಲ್ಲದನ್ನು ನೀವು ಅಪೇಕ್ಷಿಸುವಿರಿ. ಪರಬ್ರಹ್ಮನಿಗಿಂತಲೂ ಈ ಅಜ್ಞಾನವು ದುರ್ಘಟವಾದದ್ದು. ಬ್ರಹ್ಮನು ಸತ್ ಎಂದು ಹೇಳುವೆನು. **ಶಶವಿಷಾಣವು** (ಮೊಲದ ಕೊಂಬು) ಅಸತ್ ಎಂದು ಹೇಳುವೆನು. ಸದಸದ್ವಿಲಕ್ಷಣಕ್ಕೆ ಯಾವ ಉದಾಹರಣವೂ ಕೊಡಲಿಕ್ಕೆ ಶಕ್ಯವಲ್ಲ. ಮತ್ತು ವಿವರಿಸಲಿಕ್ಕೂ ಸಾಧ್ಯವಿಲ್ಲ ಇದಕ್ಕೆ ನಾವು ಅನಿರ್ವಚನೀಯ ವೆನ್ನುತ್ತೇವೆ.

**ತತ್ವವಾದಿ**- ಹೇಳಲಿಕ್ಕೂ ತಿಳಿಯಲಿಕ್ಕೂ ಸಾಧ್ಯವಲ್ಲದ ಅನಿರ್ವಚನೀಯವು ನಿಮಗೆ ಏನು ಉಪಕಾರವನ್ನು ಮಾಡಬಲ್ಲದು. ಸರ್ವಾನುಭವವಿರುದ್ಧವಾದ ಸದಸದ್ವಿಲಕ್ಷಣವು ಇರುವದೆಂದು ಹೇಗೆ ಗೊತ್ತಾಯಿತು? ಅಜ್ಞಾನನಿವೃತ್ತಿಗಿಂತಲೂ ಅಜ್ಞಾನಸ್ವರೂಪವನ್ನು ಅರ್ಥ ಮಾಡಿಕೊಳ್ಳುವದೇ ಕಷ್ಟವಾಗಿರುತ್ತದಲ್ಲ.

**ಮಾಯಾವಾದಿ**- ಅದು ಏಕೆ? ಸತ್ ಎಂದು ಒಂದು ವಿಭಾಗ. ಅಸತ್ ಎಂದು ಎರಡನೇಯ ವಿಭಾಗ. ಸದಸತ್ ಎಂದು ಮೂರನೇಯ ವಿಭಾಗ. ಸದಸದ್ವಿಲಕ್ಷಣವೆಂದು ನಾಲ್ಕನೇಯ ವಿಭಾಗ. ಸದಸದ್ವಿಲಕ್ಷಣ ವಿಲಕ್ಷಣವೆಂದು ಐದನೇಯ ವಿಭಾಗ.

**ತತ್ವವಾದಿ**- ಅಯ್ಯಾ! ರಸಗಳು ಎಷ್ಟು ವಿಧವಾಗಿರುವವು?

**ಮಾಯಾವಾದಿ**- ಉಪ್ಪು, ಹುಳಿ, ಖಾರ, ಸಿಹಿ, ಖಹಿ, ವಗರು ಎಂದು ಷಡ್‌ರಸಗಳು ಸುಪ್ರಸಿದ್ಧಗಳಷ್ಟೆ. ಇದು ಏನು ನನ್ನನ್ನು ಕೇಳುತ್ತೀರಿ?

**ತತ್ವವಾದಿ**- ಷಡ್‌ರಸಗಳು ಅಲ್ಲ. ಇನ್ನು ಎರಡು ರಸಗಳುಂಟು. ಅವುಗಳನ್ನು ಮರತುಬಿಟ್ಟಿರಿ.

**ಮಾಯಾವಾದಿ**- ಅವು ಯಾವು?

**ತತ್ವವಾದಿ**- ರಸವಿಲಕ್ಷಣ ಎಂದು ಏಳನೇ ರಸವು. ರಸವಿಲಕ್ಷಣ ವಿಲಕ್ಷಣವೆಂದು ಎಂಟನೇ ರಸವು ಇರುವುದು.

**ಮಾಯಾವಾದಿ**- ಸರ್ವಥಾ ಇಲ್ಲ. ರಸವಿಲಕ್ಷಣವೆಂದಾಗಲೀ ರಸವಿಲಕ್ಷಣ ವಿಲಕ್ಷಣವೆಂದಾಗಲೀ ಲೋಕದಲ್ಲಿ ಯಾರು ಕೇಳಿದ್ದೂ ಅನುಭವಿಸಿದ್ದೂ ಇಲ್ಲ. ಇಂಥಾ ಏಳನೇ ಎಂಟನೇ ರಸಗಳು ಸರ್ವಾನುಭವವಿರುದ್ಧಗಳು ಇಲ್ಲವೆಂದು ನಿಶ್ಚಯವು. ಹೀಗಾದರೆ ರಸವು ಎಂಟು ವಿಧವೆಂತ ಮಾತ್ರ ಏಕೆ ಹೇಳಬೇಕು. ಎಷ್ಟು ವಿಲಕ್ಷಣಗಳು ಸೇರಿಸಿದರೆ ಅಷ್ಟು ರಸ ಗಳು ಏರ್ಪಡುವುವು. ಆದರೆ ಅನುಭವದಲ್ಲಿ ಆರು ರಸಗಳು ಮಾತ್ರ ಇರುತ್ತವೆ.

**ತತ್ವವಾದಿ**- ಸ್ವಾಮಿ! ಅದರಂತೆಯೇ ಸತ್ ಅಸತ್ ಮತ್ತು ದೇಶ ಕಾಲಾದಿ ವ್ಯವಸ್ಥೆ ಗಳಿಂದ ಸದಸತ್ (ಅನಿತ್ಯಗಳು) ಕೂಡಾ ಮೂರು ಪ್ರಕಾರವೇ ಸರ್ವಲೋಕಾನುಭವವಾಗಿದೆ. ವಿಲಕ್ಷಣಗಳನ್ನು ಸೇರಿಸಿ ಐದು ವಿಧವಾಗಿ ಮಾಡಿರುತ್ತೀರಿ. ಅರ್ಥವೇನೂ ಇಲ್ಲ. ಕೇವಲ ಶಬ್ದಗಳೇ ಆಗಿವೆ. ಆದುದರಿಂದ ಅಜ್ಞಾನವು ಸದಸದ್ವಿಲಕ್ಷಣವೆಂದೂ ತನ್ನಿವೃತ್ತಿ ಸದಸದ್ವಿಲ ಕ್ಷಣ ವಿಲಕ್ಷಣವೆಂದು ನೀವು ಹೇಳಿದಾಗ್ಯೂ ಏನು ಪ್ರಯೋಜನವೂ ಉಂಟಾಗುವುದಿಲ್ಲ. ಆದು

ದರಿಂದ "ಅಜ್ಞಾನಾಸಂಭವೇನ ಚತುರ್ಥಪ್ರಕಾರಾಭಾವಾತ್ಪಂಚಮಪ್ರಕಾರತಾಽಪಿ ನಿರಸ್ತಾ |" ಅಜ್ಞಾನವೇ ಕೂಡದೆ ಇರುವ ಕಾರಣ ಸದಸದ್ವಿಲಕ್ಷಣವಾದ ನಾಲ್ಕನೇ ಪ್ರಕಾರವೂ ಸದಸದ್ವಿಲಕ್ಷಣ ವಿಲಕ್ಷಣವಾದ ಐದನೇ ಪ್ರಕಾರವೂ ಎಲ್ಲಿಂದ ಬರುವುದು.

**ಮಾಯಾವಾದಿ-** ಅಯ್ಯಾ! ಶ್ರುತಿ ಸ್ಮೃತಿ ಮೀಮಾಂಸಾ ಶಾಸ್ತ್ರಗಳು ಅದ್ವೈತವನ್ನು ಮಾಯಾವಾದವನ್ನು ಪ್ರತಿಪಾದನೆ ಮಾಡುತ್ತವೆ. ನೀವು ಅದ್ವೈತ ಶಾಸ್ತ್ರವೂ ಮಾಯಾವಾದವೂ ಅನಾರಂಭಣೀಯವೆಂದು ಹೇಳುವಿರಿ. ಆದುದರಿಂದ ಶ್ರುತಿ ಸ್ಮೃತಿ ಮೀಮಾಂಸಾಶಾಸ್ತ್ರಗಳು ಅನಾರಂಭಣೀಯಗಳಾದವು.

**ತತ್ವವಾದಿ-** ಶ್ರುತಿ, ಸ್ಮೃತಿ, ಮೀಮಾಂಸಾಶಾಸ್ತ್ರಗಳ ಅಭಿಪ್ರಾಯವು ಅದ್ವೈತವಲ್ಲ. ಹಾಗೆ ಅದ್ವೈತವನ್ನು ಅವುಗಳು ಪ್ರತಿಪಾದನೆ ಮಾಡಿದರೆ ಅನಾರಂಭಣೀಯಗಳೇ ಆಗುತ್ತವೆ. ಆದರೆ ಅವುಗಳು ದ್ವೈತವನ್ನೇ ಪ್ರತಿಪಾದನೆ ಮಾಡುತ್ತವೆ. ಈ ಶಾಸ್ತ್ರಗಳ ಮುಖ್ಯೋದ್ದೇಶವು ವಿಷ್ಣು ಸರ್ವೋತ್ತಮನೆಂದೂ ಸ್ವತಂತ್ರನೆಂದೂ ನಿರ್ದೋಷನೆಂದೂ ಅನಂತ ಕಲ್ಯಾಣಗುಣಪೂರ್ಣನೆಂದೂ ಜಗತ್ತು ಸತ್ಯವೆಂದೂ ಜೀವರಾಶಿಗಳು ಹರಿಯ ಅನುಚರರೆಂದೂ ಭೇದವು ಸತ್ಯವೆಂದೂ ಪ್ರತಿಪಾದನೆ ಮಾಡುವದಾಗಿರುತ್ತದೆ.

**ಮಾಯಾವಾದಿ-** 'ಮಾಯಾ ಮಾತ್ರಮಿದಂ ದ್ವೈತಂ ಅದ್ವೈತಂ ಪರಮಾರ್ಥತಃ' ಎಂದು ಗೌಡಪಾದಕಾರಿಕೆಯು ಸಾರುತ್ತದಲ್ಲಾ! ಶ್ರುತಿಯ ಅಭಿಪ್ರಾಯವು ದ್ವೈತವೆಂದು ಹೇಗೆ ಹೇಳುವಿರಿ?

**ತತ್ವವಾದಿ-** ಅಯ್ಯಾ! ಕ್ಷಮಿಸಬೇಕು. 'ಮಾಯಾಮಾತ್ರಂ' ಇತ್ಯಾದಿಗಳು ಗೌಡಪಾದಕಾರಿಕೆಯೆಂದು ನಾವು ಒಪ್ಪುವುದಿಲ್ಲ. ಅವುಗಳು ಉಪನಿಷತ್ತುಗಳೇ. ಈ ಶ್ರುತಿಯ ಅಭಿಪ್ರಾಯವು ನಿಮಗೆ ಗೊತ್ತಾಗಲಿಲ್ಲ. 'ಮಾಯಾ' ಅಂದರೆ ಅಜ್ಞಾನವಲ್ಲ. 'ದ್ವೈತಂ' ಅಂದರೆ ಜೀವಬ್ರಹ್ಮರಿಗೆ ಇರುವ ಭೇದವಲ್ಲ. 'ಅದ್ವೈತಂ' ಅಂದರೆ ಇವರಿಗೆ ಇರುವುದಾಗಿ ನೀವು ಹೇಳುವ ಐಕ್ಯವಲ್ಲ. 'ಮಾಯಾ' ಎಂದರೆ ಭಗವದಿಚ್ಛೆಯು ಎಂದರ್ಥ. 'ಅದ್ವೈತಂ' ಅಂದರೆ ಪರಮಾತ್ಮನು ಎಂದರ್ಥ. 'ದ್ವೈತಂ' ಅಂದರೆ ಅಸ್ವತಂತ್ರನಾದ ಜೀವನಿಗೆ ಇರುವ ಅನಾದಿಯಾದ ಸ್ವಾತಂತ್ರ್ಯಜ್ಞಾನವು. ಜೀವನು ಅಸ್ವತಂತ್ರನು. ತನ್ನ ಎಲ್ಲಾ ಚೇಷ್ಟೆಗಳೂ ಭಗವದಧೀನವಾಗಿರುವುವು. ಇದು ತಿಳಿಯದೆ ಅಜ್ಞಾನದಿಂದ ತಾನು ಸ್ವತಂತ್ರಕರ್ತನೆಂದು ಭಾವಿಸಿಕೊಳ್ಳುವನು. ಈ ಅಜ್ಞಾನವು ಭಗವದಿಚ್ಛೆಯಿಂದ ಉಂಟಾಗುವುದು. ಆ ಭಗವದಿಚ್ಛೆಯಿಂದಲೇ ನಿವೃತ್ತಿಯಾಗುವುದು.

**ಮಾಯಾವಾದಿ-** ದ್ವೈತಪರವಾದ ಶ್ರುತಿಸ್ಮೃತಿ ವಾಕ್ಯಗಳು ಏನಾದರೂ ಇರುತ್ತವೋ

**ತತ್ವವಾದಿ-** ಅನೇಕ ವಾಕ್ಯಗಳು ಇರುವುವು. ಶ್ರೀಕೃಷ್ಣನು ಗೀತಾ 15ನೇ ಅಧ್ಯಾಯದಲ್ಲಿ 'ದ್ವಾವಿಮೌ ಪುರುಷೌ ಲೋಕೇ ಕ್ಷರಶ್ಚಾಕ್ಷರ ಏವ ಚ । ಇತ್ಯಾದಿ ಶ್ಲೋಕಗಳಿಂದ ವಿಷ್ಣು ಸರ್ವೋತ್ತಮತ್ವವನ್ನು ಭೇದ ತಾರತಮ್ಯಗಳನ್ನು ಅರ್ಜುನನಿಗೆ ಬೋಧಿಸಿರುತ್ತಾನೆ. ಕಾಠಕ ಶ್ರುತಿಯಲ್ಲಿ 'ಇಂದ್ರಿಯೇಭ್ಯಃ ಪರಾಹ್ಯರ್ಥಾ ಅರ್ಥೇಭ್ಯಶ್ಚ ಪರಂ ಮನಃ' ಇತ್ಯಾದಿ ಮಂತ್ರಗಳಿಂದ ಇದೇ ಅರ್ಥವು ಪ್ರತಿಪಾದಿಸಲ್ಪಡುತ್ತದೆ. 'ಓಂ ಭೂಮ್ನಃ ಕ್ರತುವಜ್ಜ್ಯಾಯಸ್ತ್ವಂ ತಥಾಚ ದರ್ಶಯತಿ ಓಂ' ಎಂಬುವ ಬ್ರಹ್ಮಸೂತ್ರವು ಇದೇ ಅರ್ಥವನ್ನು ಹೇಳುವುದು. ಆದುದರಿಂದ ಶ್ರುತಿ ಸ್ಮೃತಿ ಮೀಮಾಂಸಾಶಾಸ್ತ್ರಗಳಿಗೆ ಐಕ್ಯವಾಗಲಿ ಅಜ್ಞಾನನಿವೃತ್ತಿಯಾಗಲಿ ವಿಷಯವಲ್ಲ. ಪರಬ್ರಹ್ಮನು ಸಕಲ ಜೀವ ಜಡಾತ್ಮಕ ಪ್ರಪಂಚದ ದೆಸೆಯಿಂದ ಪರಮಾರ್ಥದಲ್ಲೂ ಅತ್ಯಂತ ಭಿನ್ನನು ನಿಖಿಲಗುಣ ಪೂರ್ಣನು, ಸಮಸ್ತ ದೋಷರಹಿತನು ಎಂದು ಪ್ರತಿಪಾದನೆ ಮಾಡುವುದೇ ಆ

ಶಾಸ್ತ್ರಗಳಿಗೆ ಮುಖ್ಯ ವಿಷಯವು. ವಿವಿಧ ಸಾಂಸಾರಿಕದುಃಖದರ್ಶನಗಳಿಂದ ವಿರಕ್ತನಾಗಿ ಶಮದಮಾದಿ ಸಂಪತ್ತುಳ್ಳವನಾಗಿ ಮೋಕ್ಷಾಪೇಕ್ಷೆಯುಳ್ಳ ಮನುಷ್ಯನೇ ಈ ಶಾಸ್ತ್ರಕ್ಕೆ ಅಧಿಕಾರಿಯು. ಸಾಂಸಾರಿಕ ರೂಪವಾದ ದುಃಖನಿವೃತ್ತಿಯೂ, ಸ್ವರೂಪಾನಂದಾವಿರ್ಭಾವರೂಪವಾದ ಪರಮಾನಂದ ಪ್ರಾಪ್ತಿಯೂ ಈ ಶಾಸ್ತ್ರಕ್ಕೆ ಪ್ರಯೋಜನವು. ಸಮಸ್ತ ಅನಿಷ್ಟನಿವೃತ್ತಿಗೂ, ಇಷ್ಟಪ್ರಾಪ್ತಿಗೂ ಪರಮಾತ್ಮನ ಪರಮಪ್ರಸಾದವೊಂದೇ ಕಾರಣವಾಗಿರುತ್ತದೆ.

ಆದುದರಿಂದ "ನಾಸ್ತಿ ನಾರಾಯಣಸಮಂ ನ ಭೂತಂ ನ ಭವಿಷ್ಯತಿ ।
ಏತೇನ ಸತ್ಯವಾಕ್ಯೇನ ಸರ್ವಾರ್ಥಾನ್ ಸಾಧಯಾಮ್ಯಹಂ ॥"

॥ ಶ್ರೀ ಕೃಷ್ಣಾರ್ಪಣಮಸ್ತು ॥

— ಮಧ್ವಮುನೀಂದ್ರದಾಸ.



॥ ಶ್ರೀಃ ॥

# ಮಾಯಾವಾದ ಖಂಡನವು.

ಶ್ರೀರಾಮಂ ಹನುಮತ್ಸೇವ್ಯಂ ಶ್ರೀಕೃಷ್ಣಂ ಭೀಮಸೇವಿತಂ ।
ಶ್ರೀವ್ಯಾಸಂ ಶ್ರೀಮದಾನಂದತೀರ್ಥಸಂಸೇವಿತಂ ಭಜೇ ॥

**ಶ್ರೀಮದ್ಧನುಮದ್ಭೀಮಮಧ್ವಾಂತರ್ಗತರಾಮಕೃಷ್ಣವೇದವ್ಯಾಸಾತ್ಮಕ ಲಕ್ಷ್ಮೀಹಯಗ್ರೀವಾಯ ನಮಃ ॥ ಹರಿಃ ಓಂ ॥**

**ಮೂ ॥ ನರಸಿಂಹೋಽಖಿಲಾಜ್ಞಾನಮತಧ್ವಾಂತದಿವಾಕರಃ ।
ಜಯತ್ಯಮಿತಸಜ್ಜ್ಞಾನಸುಖಶಕ್ತಿಪಯೋನಿಧಿಃ ॥ ೧ ॥**

ಅ ॥ ಅಖಿಲಾಜ್ಞಾನಮತಧ್ವಾಂತದಿವಾಕರಃ, ಅಖಿಲ=ಸಮಸ್ತ ಅಚೇತನಪ್ರಪಂಚವು, ಅಜ್ಞಾನ=ಅಜ್ಞಾನಕಲ್ಪಿತವೆಂದು, ಮತ=ಸಿದ್ಧಾಂತವಾದ, ಧ್ವಾಂತ=ಕತ್ತಲೆಗೆ, ದಿವಾಕರಃ=ಸೂರ್ಯನಂತಿರುವ, ಅಮಿತಸಜ್ಜ್ಞಾನಸುಖಶಕ್ತಿಪಯೋನಿಧಿಃ, ಅಮಿತ=ಮಿತಿಲ್ಲಯಿದ, ಸತ್=ನಿರ್ಮಲವಾದ, ಜ್ಞಾನ=ತಿಳುವಳಿಕೆಯು, ಸುಖ=ಸಂತೋಷವು, ಶಕ್ತಿ=ಸಾಮರ್ಥ್ಯವು, ಇವುಗಳಿಂದ, ಪಯೋನಿಧಿಃ=ಸಮುದ್ರದಂತಿರುವ, ನರಸಿಂಹಃ=ನರಸಿಂಹನಾಮಕನಾದ ಪರಮಾತ್ಮನು, ಜಯತಿ=ಉತ್ತಮನಾಗಿರುತ್ತಾನೆ. ॥ ೧ ॥

ತಾ ॥ ಸೂರ್ಯನು ಕತ್ತಲೆಯನ್ನು ನಾಶಿಸುವಂತೆ, ನರಸಿಂಹನು ಸಕಲ ಅಚೇತನ ಪ್ರಪಂಚವು ಅಜ್ಞಾನಮೂಲಕವಾದುದರಿಂದ ವಸ್ತುತಃ ಸುಳ್ಳಾಗಿರುತ್ತದೆಂಬ ಮತವನ್ನು ನಾಶಿಸುವನೆಂತ ಹೇಳಿದ್ದರಿಂದ ನಮಗೆ ಅಜ್ಞಾನದಿಂದ ಬರುವ ಅನಿಷ್ಟಯಾವತ್ತನ್ನೂ ನಾಶ ಮಾಡುವವನೆಂದು, ಸಮುದ್ರದಲ್ಲಿ ತುಂಬಿದ ನೀರಿನಂತೆ ಯಥಾರ್ಥಜ್ಞಾನ, ದುಃಖಸಂಸ್ಪರ್ಶವಿಲ್ಲದಿರುವ ಸುಖ, ಅಪ್ರತಿಹತಸಾಮರ್ಥ್ಯ ಇವುಗಳಿರುವವನೆಂದು ಹೇಳಿದ್ದರಿಂದ ಯಾವಾಗಲೂ ದುಃಖಸ್ಪರ್ಶವಿಲ್ಲದಿರುವ ನಿತ್ಯಸುಖರೂಪವಾದ ಮೋಕ್ಷವನ್ನು ಆ ಪರಮಾತ್ಮನು ನಮಗೆ ದಯಪಾಲಿಸುತ್ತಾನೆಂದು, ಇಂತಹ ಪರಮಾತ್ಮನು ಪ್ರಕೃತ ಈ ಗ್ರಂಥನಿರ್ಮಾಣಕಾರ್ಯಕ್ಕೆ ಬರುವ ವಿಘ್ನಗಳನ್ನು ಪರಿಹರಿಸಿ ಗ್ರಂಥಸಮಾಪ್ತಿಯನ್ನು ಮಾಡಿಸುತ್ತಾನೆಂದು, ಆದಕಾರಣ ಎಲ್ಲಾ ಶಿಷ್ಯರೂ ಗ್ರಂಥಾರಂಭದಲ್ಲಿ ಮಂಗಳವನ್ನು ಅವಶ್ಯವಾಗಿ ಮಾಡಬೇಕೆಂದು ಈ ಶ್ಲೋಕದಿಂದ ಆಚಾರ್ಯರು ತಿಳಿಸಿದರು. ॥ ೧ ॥

ಅಚೇತನ ಪ್ರಪಂಚವು ಅಜ್ಞಾನಕಲ್ಪಿತವೆಂಬ ಮತವು ಕತ್ತಲೆಯಂತಿರತಕ್ಕುದೆಂದು ಪೂರ್ವಶ್ಲೋಕದಲ್ಲಿ ಹೇಳಿದ್ದನ್ನು ಕೇಳಿ, "ಜೀವಬ್ರಹ್ಮಾಭೇದವೇ ಸಕಲಶಾಸ್ತ್ರಗಳ ಮುಖ್ಯಾರ್ಥವಾದುದರಿಂದ ಅಚೇತನ ಪ್ರಪಂಚವು ಸುಳ್ಳು ಎಂದು ಹೇಳದಿದ್ದರೆ ಜೀವನಲ್ಲಿರುವ ದುಃಖಾದಿಯೂ ಈಶ್ವರನಲ್ಲಿರುವ ಸರ್ವಜ್ಞತ್ವಾದಿಯೂ ಸತ್ಯವಾದುದರಿಂದ, ನೀರು ಮತ್ತು ಬೆಂಕಿಯು ಇವುಗಳಂತಿರುವ ಜೀವಬ್ರಹ್ಮರಿಗೆ, ಅಭೇದವು ಕೂಡಲಾರದು. ಅಂತಹ ಅಭೇದವು ಕೂಡಬೇಕಾದರೆ ಸಕಲ ಅಚೇತನವೂ (ದುಃಖಾದಿ ಪ್ರಪಂಚವೂ) ಅಜ್ಞಾನಕಲ್ಪಿತ (ಸುಳ್ಳು) ವೆಂದು ಅವಶ್ಯವಾಗಿ ಹೇಳಬೇಕಾದುದರಿಂದ ನನ್ನ ಮತವು ಕತ್ತಲೆಯಂತಿರತಕ್ಕದ್ದು ಹೇಗೆ?" ಎಂದು ಅದ್ವೈತಿಯು ಶಂಕಿಸಿದರೆ ಅದಕ್ಕೆ ಉತ್ತರವನ್ನು ಈ ಪ್ರಕಾರವಾಗಿ ಕೊಡುತ್ತಾರೆ—

**ಮೂ ॥ ವಿಮತಮನಾರಂಭಣೀಯಂ । ಅನ್ಯಥಾ ಪ್ರತಿಪಾದಕತ್ವಾತ್ । ಯದಿತ್ಥಂ ತತ್ತಥಾ ಯಥಾ ಸಂಪ್ರತಿಪನ್ನಮ್ ॥ ೨ ॥**

ಅ ॥ ವಿಮತಂ=ವಿವಾದವಿಷಯವಾದದ್ದು (ಶಾಸ್ತ್ರವು), ಅನಾರಂಭಣೀಯಂ=ಆರಂಭ ಮಾಡತಕ್ಕುದಲ್ಲ, ಜ್ಞಾನಿಗಳಿಂದ ಸ್ವೀಕಾರಮಾಡತಕ್ಕದ್ದಲ್ಲ, ಅನ್ಯಥಾ ಪ್ರತಿಪಾದಕತ್ವಾತ್, ಅನ್ಯಥಾ=ಸರ್ವದೇಶಕಾಲಗಳಲ್ಲಿಯೂ ಇಲ್ಲದೇ ಇರುವ ಅರ್ಥವನ್ನು, ಪ್ರತಿಪಾದಕತ್ವಾತ್=ಹೇಳುವಕಾರಣ, ಯತ್=ಯಾವ ಶಾಸ್ತ್ರವು, ಇತ್ಥಂ=ಸುಳ್ಳುಹೇಳುವುದೋ, ತತ್=ಆ ಶಾಸ್ತ್ರವು, ತಥಾ=ಆರಂಭಮಾಡುತಕ್ಕುದಲ್ಲ, ಯಥಾ=ಹೇಗೆ, ಸಂಪ್ರತಿಪನ್ನಂ=ಸಮ್ಮತವಾದದ್ದು. (ಬೌದ್ಧ ಶಾಸ್ತ್ರವು). ॥ ೨ ॥

ತಾ ॥ ವೇದಾದಿಗಳು ಜೀವಬ್ರಹ್ಮರ ಐಕ್ಯವನ್ನು ಪ್ರತಿಪಾದಿಸುವುದಾದರೆ ಅನಾರಂಭಣೀಯಗಳಾಗಬೇಕು. ಏಕೆಂದರೆ, ಜೀವಬ್ರಹ್ಮರ ಐಕ್ಯವು ಅದ್ವೈತಮತಪ್ರಕಾರವೂ ಅಸತ್ಯವೇ ಆಗಬೇಕಾಗುವುದರಿಂದ ಇಂತಹ ಐಕ್ಯವನ್ನು ಬೋಧಿಸುವ ಶಾಸ್ತ್ರವು ಅಯಥಾರ್ಥವನ್ನು ಬೋಧಿಸುವುದೆಂದು ಆಯಿತು. ಅಯಥಾರ್ಥವನ್ನು ಬೋಧಿಸುವ ಶಾಸ್ತ್ರವು ಅನಾರಂಭಣೀಯವೆಂದು ವಾದಿಪ್ರತಿವಾದಿಗಳು ಅಂಗೀಕರಿಸಿದ ವಿಷಯವು. ದೃಷ್ಟಾಂತ ಬೌದ್ಧಮತವು. ॥ ೨ ॥

ನಮ್ಮ ಶಾಸ್ತ್ರವು ಅಯಥಾರ್ಥಪ್ರತಿಪಾದನೆಯನ್ನು ಮಾಡುವುದಿಲ್ಲ. ಅನಾರಂಭಣೀಯವಾಗುವುದು ಹೇಗೆ? ಎಂದು ಅದ್ವೈತಿಯು ಶಂಕಿಸಿದರೆ ಉತ್ತರಕೊಡುತ್ತಾರೆ—

**ಮೂ ॥ ನ ಹಿ ಬ್ರಹ್ಮಾತ್ಮೈಕ್ಯಸ್ಯ ಯಾಥಾರ್ಥ್ಯಂ ತತ್ಪಕ್ಷೇ ॥ ೩ ॥**

ಅ ॥ ತತ್ಪಕ್ಷೇ, ತತ್=ಮಾಯಾವಾದಿಯ, ಪಕ್ಷೇ=ಸಿದ್ಧಾಂತದಲ್ಲಿ, ಬ್ರಹ್ಮಾತ್ಮೈಕ್ಯಸ್ಯ=ಜೀವಬ್ರಹ್ಮಾಭೇದಕ್ಕೆ, ಯಾಥಾರ್ಥ್ಯಂ=ಸತ್ಯತೆಯು, ಹಿ=ಯಾವ ಕಾರಣದಿಂದ, ನ=ಇಲ್ಲವೋ.

ತಾ ॥ ಅದ್ವೈತಮತದಲ್ಲಿ ಜೀವಬ್ರಹ್ಮರ ಐಕ್ಯವು ಶಾಸ್ತ್ರಕ್ಕೆ ವಿಷಯವೆಂದು ಅದ್ವೈತಿಯ ಸಿದ್ಧಾಂತವು. ಮತ್ತು ಐಕ್ಯವು ಪಾರಮಾರ್ಥಿಕವಲ್ಲವೆಂದೂ ಆತನ ಮತವು. ಆದುದರಿಂದ ಆತನ ರೀತಿಯಿಂದಲೇ ಶಾಸ್ತ್ರವು ಅಯಥಾರ್ಥವನ್ನು ಬೋಧಿಸುವುದೆಂದು ಸಿದ್ಧವಾಯಿತು. ॥ ೩ ॥

ಜೀವಬ್ರಹ್ಮಾಭೇದವು ಬ್ರಹ್ಮನಿಂದ ಬೇರೆಯಾದರೂ ಸತ್ಯವೆಂದು ಆತನು ಶಂಕಿಸಿದರೆ ಉತ್ತರವನ್ನು ಕೊಡುತ್ತಾರೆ—

**ಮೂ ॥ ಅದ್ವೈತಹಾನೇಃ ಸ್ವರೂಪಾತಿರೇಕೇ ॥ ೪ ॥**

ಅ ॥ ಹಿಂದಿನ ಮೂಲದಿಂದ 'ಬ್ರಹ್ಮಾತ್ಮೈಕ್ಯಸ್ಯ' 'ಯಾಥಾರ್ಥ್ಯಂ' ಎಂಬ ಎರಡು ಪದಗಳನ್ನು ಇಲ್ಲಿಗೆ ತಂದುಕೊಳ್ಳಬೇಕು. ಬ್ರಹ್ಮಾತ್ಮೈಕ್ಯಸ್ಯ=ಜೀವಬ್ರಹ್ಮಾಭೇದಕ್ಕೆ, ಸ್ವರೂಪಾತಿರೇಕೇ, ಸ್ವರೂಪ=ಬ್ರಹ್ಮಸ್ವರೂಪದಿಂದ, ಅತಿರೇಕೇ=ಬೇರೆಯೆಂದು ಒಪ್ಪುತ್ತಿರಲು, ಯಾಥಾರ್ಥ್ಯೇ=ಸತ್ಯತೆಯು ಇರುತ್ತಿರಲು, ಅದ್ವೈತಹಾನೇಃ, ಅದ್ವೈತ=ಸತ್ಯವಾದ ವಸ್ತು ಒಂದೇ ಎರಡನೇದ್ದು ಇಲ್ಲವೆಂಬುವ ಮತಕ್ಕೆ, ಹಾನೇಃ=ನಾಶಬರುವುದಾದ ಕಾರಣ. ॥ ೪ ॥

ತಾ ॥ ಜೀವಬ್ರಹ್ಮಾಭೇದವು ಬ್ರಹ್ಮಸ್ವರೂಪವೋ? ಅವನಿಂದ ಬೇರೆಯೋ? ಬೇರೆ ಎಂಬ ಪಕ್ಷದಲ್ಲಿ ಅಸತ್ಯವೋ? ಸತ್ಯವೋ? ಅಸತ್ಯವಾದರೆ ಶಾಸ್ತ್ರವು ಅಯಥಾರ್ಥಪ್ರತಿಪಾದಕವಾಗಿ ಅನಾರಂಭಣೀಯವಾಯಿತು. ಸತ್ಯವಾದರೆ ಬ್ರಹ್ಮನೆಂಬ ಒಂದು ವಸ್ತು ಸತ್ಯ. ಅಭೇದವೆಂಬುದೊಂದು ಸತ್ಯವು. ಹೀಗೆ ಸತ್ಯಪದಾರ್ಥಗಳು ಎರಡೆಂದೊಪ್ಪಿದ ಕಾರಣ ಸತ್ಯವಾದುದು

ಒಂದೇ ಇರುವುದು ಎಂದು ಹೇಳುವ ಮತವು ಹಾಳಾಯಿತು. ॥ ೪ ॥

ಜೀವಬ್ರಹ್ಮಾಭೇದವು ಬ್ರಹ್ಮಸ್ವರೂಪವಾಗಿ ಸತ್ಯವಾದ ಕಾರಣ ಅದ್ವೈತಮತಕ್ಕೆ ಭಂಗವೂ, ಶಾಸ್ತ್ರವು ಅಯಥಾರ್ಥಪ್ರತಿಪಾದಕವೂ ಆಗಲಿಲ್ಲವೆಂದು ಹೇಳಿದರೆ ಉತ್ತರವನ್ನು ಕೊಡುತ್ತಾರೆ—

**ಮೂ ॥ ಅನತಿರೇಕೇ ಸ್ವಪ್ರಕಾಶತ್ವಾದಾತ್ಮನಃ ಸಿದ್ಧಸಾಧನತಾ ॥ ೫ ॥**

**ಅ ॥** ಇಲ್ಲಿ 'ಬ್ರಹ್ಮಾತ್ಮೈಕ್ಯ' 'ಶಾಸ್ತ್ರಸ್ಯ' 'ಸ್ಯಾತ್' ಎಂಬ ಪದಗಳನ್ನು ಇಟ್ಟುಕೊಳ್ಳಬೇಕು. ಬ್ರಹ್ಮಾತ್ಮೈಕ್ಯೇ=ಜೀವಬ್ರಹ್ಮಾಭೇದವು, ಅನತಿರೇಕೇ=ಬ್ರಹ್ಮನಿಂದ ಬೇರೆಯಾಗದೆ (ಬ್ರಹ್ಮನ ಸ್ವರೂಪವೇ) ಆದ ಪಕ್ಷದಲ್ಲಿ, ಆತ್ಮನಃ=ಬ್ರಹ್ಮಾಭಿನ್ನನಾದ ಜೀವನಿಗೆ, ಸ್ವಪ್ರಕಾಶತ್ವಾತ್=ಯಾವಾಗಲೂ 'ನಾನು' ಎಂಬುವ ತಿಳುವಳಿಕೆ ಇದ್ದ ಕಾರಣ, ಶಾಸ್ತ್ರಸ್ಯ=ಶಾಸ್ತ್ರಕ್ಕೆ, ಸಿದ್ಧಸಾಧನತಾ=ತಿಳಿದ ಅರ್ಥವನ್ನು ಬೋಧಿಸುವಿಕೆಯು, ಸ್ಯಾತ್=ಆಗುತ್ತದೆ. ॥ ೫ ॥

**ತಾ ॥** ಯಾವ ಶಬ್ದವು ನಮಗೆ ಮುಂಚೆಯೇ ತಿಳಿದ ವಿಷಯವನ್ನು ಬೋಧಿಸುತ್ತದೋ ಆ ಶಬ್ದವನ್ನು ನಾವು ಕೇಳುವುದಿಲ್ಲ. ಹೀಗೆ ಲೋಕದಲ್ಲಿ ದೃಷ್ಟವಾದ ಕಾರಣ ಅದ್ವೈತವು ಬ್ರಹ್ಮಸ್ವರೂಪವಾದರೆ, ಬ್ರಹ್ಮಾಭಿನ್ನನಾದ ಜೀವನು 'ನಾನು' ಎಂಬುವ ಜ್ಞಾನಕ್ಕೆ ಸರ್ವದಾ ವಿಷಯನಾಗಿ ನಿಶ್ಚಿತನಾದುದರಿಂದ ಆ ಬ್ರಹ್ಮಾಭಿನ್ನವಾದ ಅಭೇದವೂ ಕೂಡಾ ಶಾಸ್ತ್ರವನ್ನು ಓದುವ ಮೊದಲೇ ನಿಶ್ಚಿತವಾಗಬೇಕಾಯಿತು. ನಿಶ್ಚಿತಾರ್ಥವನ್ನು ಬೋಧಿಸುವ ಶಾಸ್ತ್ರವನ್ನು ಗುರುವು ಹೇಳತಕ್ಕದ್ದೂ, ಶಿಷ್ಯನು ಕೇಳತಕ್ಕದ್ದೂ ಕೂಡ ಅನಾವಶ್ಯಕವಾಯಿತು. ॥ ೫ ॥

ತನ್ನ ಸ್ವರೂಪವು ಆತ್ಮನಿಗೆ ಪರಬೋಧೆಯಿಲ್ಲದೆ ತಿಳಿದಿದ್ದರೂ, ಐಕ್ಯವೆಂಬ ವಿಶೇಷಾಕಾರ ಜ್ಞಾನವಿಲ್ಲದೆ ಇರುವುದರಿಂದ ಶಾಸ್ತ್ರಕ್ಕೆ ಸಿದ್ಧಸಾಧನತಾ ದೋಷ ಬರುವುದಿಲ್ಲವೆಂದು ಅದ್ವೈತಿಯು ಶಂಕಿಸಲು ಉತ್ತರವನ್ನು ಹೇಳುತ್ತಾರೆ—

**ಮೂ ॥ ನಿರ್ವಿಶೇಷತ್ವಾದಾತ್ಮನೋ ನಾನಧಿಗತೋ ವಿಶೇಷಃ ॥ ೬ ॥**

ಆತ್ಮನಃ=ಚೈತನ್ಯಕ್ಕೆ, ನಿರ್ವಿಶೇಷತ್ವಾತ್=ಯಾವ ವಿಶೇಷವೂ ಇಲ್ಲದಿರುವಕಾರಣ, ಅನಧಿಗತಃ=ತಿಳಿಯದೇಇದ್ದ, ವಿಶೇಷಃ=ವಿಶೇಷವು ಅಂದರೆ ವಿಶೇಷರೂಪವಾದ ಧರ್ಮವು, ನ=ಇಲ್ಲ. ॥ ೬ ॥

**ತಾ ॥** ಪರಮತದಲ್ಲಿ ಚೈತನ್ಯಕ್ಕೆ ಯಾವ ವಿಶೇಷವೂ ಇಲ್ಲದಿರುವ ಕಾರಣ, ಅದ್ವೈತವು ಚೈತನ್ಯದ ವಿಶೇಷವೆಂದು ಹೇಳಲಾಗುವುದಿಲ್ಲ. ಮತ್ತು ಚೈತನ್ಯದಿಂದ ಅತ್ಯಂತಾಭಿನ್ನವೆಂದು ಹೇಳಬೇಕು. ಇಂತಹ ಚೈತನ್ಯಜ್ಞಾನವು ಯಾವಾಗಲೂ ಇದ್ದ ಮೇಲೆ ಅದ್ವೈತಜ್ಞಾನವೂ ಸರ್ವದಾ ಇದೆಯೆಂದು ಒಪ್ಪಬೇಕಾಗುವುದು. ಹೀಗೆ ನಿಶ್ಚಿತವಾದ ಅದ್ವೈತಬೋಧಕಶಾಸ್ತ್ರವು ಸಿದ್ಧಾರ್ಥಬೋಧಕವಾಗಿ ಅನಾರಂಭಣೀಯವಾಯಿತು. ॥ ೬ ॥

ಅದ್ವೈತವು ಚೈತನ್ಯಾಭಿನ್ನವಾಗಿ ನಿಶ್ಚಿತವಾದರೂ ಶಾಸ್ತ್ರಕ್ಕೆ ಸಿದ್ಧಸಾಧನತಾರೂಪದೋಷವು ಬರುವುದಿಲ್ಲ. ಶಾಸ್ತ್ರವು ಸಾಕ್ಷಾತ್ ಅದ್ವೈತಪ್ರತಿಪಾದಕವಲ್ಲ. ಮತ್ತು ಆವರಣವಾದ ಅಜ್ಞಾನದ ನಿವೃತ್ತಿಯನ್ನು ಬೋಧಿಸುತ್ತದೆ. ಅಜ್ಞಾನನಿವೃತ್ತಿಯಾದರೆ ಅದ್ವೈತವು ತಾನಾಗಿ ನಮಗೆ ತಿಳಿಯುತ್ತದೆ. ಅಜ್ಞಾನನಿವೃತ್ತಿಯು ಪೂರ್ವದಲ್ಲಿ ಶಾಸ್ತ್ರ ಓದಬೇಕಾದರೆ ಮುಂಚೆ ಸಿದ್ಧವಾಗದಿದ್ದುದರಿಂದ ಶಾಸ್ತ್ರವು ಸಿದ್ಧಾರ್ಥಬೋಧಕವಾಗುವುದಿಲ್ಲ ಎಂಬುವ ಪರನ ಪ್ರಶ್ನೆಗೆ ಉತ್ತರ—

**ಮೂ॥ ಸಿದ್ಧತ್ವಾತ್ಸ್ವರೂಪಸ್ಯ ವಿಶೇಷಾಭಾವಾಚ್ಚ ನಾಜ್ಞಾನಂ ಕಸ್ಯಚಿದಾವರಕಂ ॥ ೭ ॥**

ಅ ॥ ಸ್ವರೂಪಸ್ಯ=ಆತ್ಮಸ್ವರೂಪಕ್ಕೆ, ಸಿದ್ಧತ್ವಾತ್='ನಾನು' ಎಂಬ ಜ್ಞಾನದಿಂದ ನಿಶ್ಚಯವಿರುವ ಕಾರಣ, ವಿಶೇಷಾಭಾವಾಚ್ಚ=ಯಾವ ವಿಶೇಷಧರ್ಮವೂ ಆತ್ಮನಲ್ಲಿ ಇಲ್ಲದೇ ಇರುವುದರಿಂದಲೂ, ಅಜ್ಞಾನಂ=ಅಜ್ಞಾನವು, ಕಸ್ಯಚಿತ್=ಯಾವುದಕ್ಕೂ (ಆತ್ಮನಿಗೂ ಆತನ ಧರ್ಮಕ್ಕೂ ಕೂಡ), ಆವರಕಂ=ಅಡಗಿಸುವಂಥಾದ್ದು, ನ=ಅಲ್ಲ. ॥ ೭ ॥

ತಾ ॥ ಲೋಕದಲ್ಲಿ ಕತ್ತಲೆಯಿಂದ ಒಂದು ಪದಾರ್ಥವು ಅಡಗಿದ್ದರೆ ಕತ್ತಲೆಯನ್ನು ಆ ಪದಾರ್ಥಕ್ಕೆ ಆವರಣವೆಂದು ಹೇಳುತ್ತಾರೆ. ಆವರಣ (ಅಡಗಿಸುವ) ವಸ್ತುವು ಆವ್ರಿಯಮಾಣ (ಅಡಗಿಸಿಕೊಳ್ಳುವ) ವಸ್ತುವಿನಿಂದ ಕೂಡಿರುವಂಥಾದ್ದು ಎಲ್ಲಾ ಕಡೆಯಲ್ಲಿಯೂ ತಿಳಿಯಲ್ಪಟ್ಟದೆ. ಪ್ರಕೃತ ಆತ್ಮಸ್ವರೂಪವು ಸರ್ವದಾ ನಿಶ್ಚಿತವಾದುದರಿಂದಲೂ ಆತ್ಮನಲ್ಲಿ ಯಾವ ವಿಧವಾದ ವಿಶೇಷ ಧರ್ಮವೂ ಇಲ್ಲದಿರುವುದರಿಂದಲೂ ಆತ್ಮನಿಗೂ ಆತ್ಮನಲ್ಲಿರುವ ವಿಶೇಷಧರ್ಮಕ್ಕೂ ಅಜ್ಞಾನವು ಅಡಗಿಸುವಂಥಾದ್ದಲ್ಲ. ಹೀಗೆ ಅಡಗಿಸಿಕೊಳ್ಳತಕ್ಕ ಪದಾರ್ಥವು ಇಲ್ಲದೇ ಇರುವ ಕಾರಣ ಅಡಗಿಸುವ ಅಜ್ಞಾನವೂ ಕೂಡ ಇಲ್ಲವೆಂದು ಒಪ್ಪಬೇಕು. ಹೀಗೆ ಅಜ್ಞಾನವೇ ಇಲ್ಲದಿರುವ ಕಾರಣ ಅಜ್ಞಾನನಿವೃತ್ತಿಯನ್ನು ಬೋಧಿಸಿ ಶಾಸ್ತ್ರವು ಸಿದ್ಧಾರ್ಥಬೋಧಕವಲ್ಲವೆನ್ನುವ ಮತವು ಅಸಂಗತವಾಯಿತು. ॥ ೭ ॥

ಶಾಸ್ತ್ರವು ಸಿದ್ಧಾರ್ಥಬೋಧಕವಲ್ಲವೆಂದು ಸಾಧಿಸಲು ಆಗದೆ ಕಡೆಗೆ ಅದು ಸಿದ್ಧಾರ್ಥಬೋಧಕವೇ ಆದರೂ ಏನು ದೋಷವೆಂದು ಅದ್ವೈತಿಯು ಶಂಕಿಸಿದರೆ, ಶಾಸ್ತ್ರವು ಕೇಳುವವರಿಗೆ ತಿಳಿಯದ ಅರ್ಥವನ್ನು ಬೋಧಿಸಲು ಹೊರಟಿರುವುದರಿಂದ, ಅವರಿಗೆ ತಿಳಿದ ಅರ್ಥವನ್ನೇ ಬೋಧಿಸಿದರೆ ಅವರಿಂದ ಶಾಸ್ತ್ರವು ಅನಾರಂಭಣೀಯವಾಗುವುದೆಂಬುದು ಒಂದು ದೋಷವು ಸ್ಪಷ್ಟವಾಯಿತು. ಎರಡನೆಯ ದೋಷವನ್ನು ಹೇಳುತ್ತಾರೆ—

**ಮೂ ॥ ಅನಧಿಗತಾರ್ಥಗಂತೃ ಪ್ರಮಾಣಮಿತಿ ಚ ತನ್ಮತಮ್ ॥ ೮ ॥**

ಅ ॥ ಇಲ್ಲಿ ಅರ್ಥವೆಂದರೆ ಸತ್ಯಪದಾರ್ಥವು. ಗಂತೃ ಎಂದರೆ ಜ್ಞಾನಸಾಧನ, ಅನಧಿಗಾತಾರ್ಥಗಂತೃ, ಅನಧಿಗತ=ತಿಳಿಯದೇ ಇರುವ, ಅರ್ಥ=ಸತ್ಯಪದಾರ್ಥದ, ಗಂತೃ=ಜ್ಞಾನಸಾಧನವು, ಪ್ರಮಾಣಮಿತಿಚ=ಪ್ರಮಾಣವೆಂದು, ತನ್ಮತಂ, ತತ್=ಅವನ, ಮತಂ=ಸಿದ್ಧಾಂತವು.

ತಾ ॥ ಭಾಟ್ಟರು (ಪ್ರಾಭಾಕರರು) ಯಾರಿಗೂ ಶಾಸ್ತ್ರ ಓದುವ ಮೊದಲು ತಿಳಿಯದಿರುವ ಯಥಾರ್ಥವನ್ನು ಬೋಧಿಸುವಂತಾದ್ದು ಪ್ರಮಾಣವೆಂದು ಹೇಳುತ್ತಾರೆ. ಅದ್ವೈತಿಗಳೂ ಕೂಡ, ವಾದಿಪ್ರತಿವಾದಿಗಳು ಕೂಡಿ ಒಂದು ವಿಷಯವನ್ನು ಚರ್ಚಿಸುವಾಗ ಭಾಟ್ಟರು ಹೇಳುವಂತೆಯೇ ತಾವೂ ಹೇಳುವೆವೆಂದು ಒಪ್ಪಿರುತ್ತಾರೆ. ಆದ ಕಾರಣ ಭಾಟ್ಟರು ಹೇಳುವ ಪ್ರಮಾಣಲಕ್ಷಣವೇ ಅದ್ವೈತಿಗಳಿಗೂ ಆಗಿರುತ್ತದೆ. ಶಾಸ್ತ್ರ ಓದುವ ಮೊದಲು ತಿಳಿಯದೇ ಇರುವ ಅರ್ಥವನ್ನು ಬೋಧಿಸತಕ್ಕದ್ದೇ ಪ್ರಮಾಣವಾದುದರಿಂದ, ಪ್ರಕೃತ ಶಾಸ್ತ್ರವು ತಿಳಿದ ಅರ್ಥವನ್ನೇ ಬೋಧಿಸುವುದಾದರೆ ಅದ್ವೈತಿಯು ಹೇಳಿದ ಪ್ರಮಾಣಲಕ್ಷಣವು ಅವನ ಶಾಸ್ತ್ರದಲ್ಲಿಲ್ಲವೆಂದು ಅವನ ಮಾತಿನಿಂದ ಹೇಳಿದ ಹಾಗಾಯಿತು. ಅಂತೂ ಶಾಸ್ತ್ರವುಅಪ್ರಮಾಣವಾಯಿತೆಂದು ಬೇರೆ ಹೇಳಬೇಕಾಗಿಲ್ಲ.

ಈ ವರೆಗೆ ಪ್ರಥಮ ಮೂಲದಲ್ಲಿ ಸೇರಿದ 'ಅನ್ಯಥಾಪ್ರತಿಪಾದಕತ್ವಾತ್' ಎಂಬುವ ವಾಕ್ಯಕ್ಕೆ ಯಾವ ದೇಶಕಾಲದಲ್ಲಿಯೂ ಇಲ್ಲದೇ ಇರುವ ಅರ್ಥವನ್ನು ಬೋಧಿಸುವಂಥಾದ್ದು ಎಂದು ಅರ್ಥವನ್ನಿಟ್ಟುಕೊಂಡು ಈ ಅರ್ಥವನ್ನೇ ಸಾಧಿಸಿದರು. ಈಗ ಆ ವಾಕ್ಯಕ್ಕೆ ವಿಷಯ ಪ್ರಯೋಜನ ಅಧಿಕಾರಿ ಸಂಬಂಧಗಳು ಇಲ್ಲದಿರುವ ಶಾಸ್ತ್ರವೆಂದು ಅರ್ಥವನ್ನಿಟ್ಟುಕೊಂಡು ಅದ್ವೈತಿಯ ಶಾಸ್ತ್ರದಲ್ಲಿ ವಿಷಯಾದಿಗಳು ಇಲ್ಲವೆಂಬುದನ್ನು ಸಾಧಿಸುತ್ತಾರೆ—

**ಮೂ ॥ ಅಜ್ಞಾನಾಸಂಭವಾದೇವ ತನ್ಮತಮಖಿಲಮಪಾಕೃತಮ್ ॥ ೯ ॥**

ಅ ॥ ಅಜ್ಞಾನಾಸಂಭವಾದೇವ, ಅಜ್ಞಾನ=ಅಜ್ಞಾನವು, ಅಸಂಭವಾದೇವ=ಕೂಡದೇ ಇರುವುದರಿಂದ, ತನ್ಮತಂ, ತತ್=ಅದ್ವೈತಿಗೆ, ಮತಂ=ಸಮ್ಮತವಾದ, ಅಖಿಲಂ=ಸಮಸ್ತವು, (ವಿಷಯಪ್ರಯೋಜನ ಅಧಿಕಾರಿಸಂಬಂಧ ಸಮುದಾಯವು),ಅಪಾಕೃತಂ=ನಿರಾಕರಿಸಲ್ಪಟ್ಟಿತು.॥

ತಾ ॥ ಅಜ್ಞಾತವಾದದ್ದೇ ಶಾಸ್ತ್ರಕ್ಕೆ ವಿಷಯವಾಗಬೇಕು. ಪೂರ್ವದಲ್ಲಿ ಹೇಳಿದಂತೆ ಅದ್ವೈತಿಮತದಲ್ಲಿ ಅಜ್ಞಾನವು ಕೂಡದಿರುವ ಕಾರಣ ಶಾಸ್ತ್ರಕ್ಕೆ ಅಜ್ಞಾತವಾದ ವಿಷಯಾದಿಯು ಇಲ್ಲವೆಂದಾಯಿತು. ॥ ೯ ॥

ಹೀಗೆ ಅಜ್ಞಾನವಿಲ್ಲದಿರುವಕಾರಣ ಅದ್ವೈತಶಾಸ್ತ್ರಕ್ಕೆ ವಿಷಯವಿಲ್ಲವೆಂದು ಸಾಧಿಸಿ ಇನ್ನೊಂದು ವಿಧದಿಂದಲೂ ವಿಷಯವಿಲ್ಲವೆಂದು ಸಾಧಿಸುತ್ತಾರೆ—

**ಮೂ ॥ ಮಿಥ್ಯಾತ್ವೇ ಚೈಕ್ಯಸ್ಯಾತತ್ತ್ವಾವೇದಕತ್ವಮಾಗಮಸ್ಯ ಸ್ಯಾತ್ ॥೧೦॥**

ಅ ॥ ಐಕ್ಯಸ್ಯ=ಜೀವಬ್ರಹ್ಮಾಭೇದಕ್ಕೆ, ಮಿಥ್ಯಾತ್ವೇಚ=ಅಸತ್ಯತ್ವ ವಿದ್ದಪಕ್ಷದಲ್ಲಿ, ಆಗಮಸ್ಯ=ಶಾಸ್ತ್ರಕ್ಕೆ, ಅತತ್ವಾವೇದಕತ್ವಂ, ಅತತ್ವ=ಯಾವದೇಶಕಾಲದಲ್ಲಿಯೂ ಇಲ್ಲದಿರುವ ಅರ್ಥದ, ಆವೇದಕತ್ವಂ=ತಿಳಿಸುವಿಕೆಯು, ಸ್ಯಾತ್=ಆಗುತ್ತದೆ. ॥ ೧೦ ॥

ತಾ ॥ ಜೀವಬ್ರಹ್ಮಾಭೇದವೇ ಶಾಸ್ತ್ರಕ್ಕೆ ವಿಷಯವೆಂದು ಪರನ ಅಭಿಪ್ರಾಯವು. ಆ ಅಭೇದವು ಆತ್ಮನಿಂದ ಬೇರೆಯೋ ಅಥವಾ ಆತ್ಮಸ್ವರೂಪವೋ? ಆತ್ಮನಿಂದ ಬೇರೇ ಎಂಬುವ ಪಕ್ಷದಲ್ಲಿ ಸತ್ಯವೋ ಅಸತ್ಯವೋ? ಆತ್ಮನಿಂದಬೇರೆಯಾಗಿ ಸತ್ಯವಾದರೆ ಆತ್ಮ ಮತ್ತು ಅಭೇದ ಎಂದು ಸತ್ಯಪದಾರ್ಥಗಳು ಎರಡಾದುದರಿಂದ, ಸತ್ಯಪದಾರ್ಥವು ಒಂದೇ ಎನ್ನುವ ಮತವು ಅಸಂಗತವಾಯಿತು. ಆತ್ಮನಿಂದ ಬೇರೆಯಾಗಿ ಅಸತ್ಯವಾದರೆ ಅಸತ್ಯವಾದ ಅರ್ಥವನ್ನು (ಅಭೇದವನ್ನು) ಬೋಧಿಸುವ ಶಾಸ್ತ್ರವು ಅತತ್ವಾವೇದಕ (ಅಪ್ರಮಾಣ) ವಾಯಿತು. ॥ ೧೦ ॥

ಅಭೇದವು ಆತ್ಮನಿಂದ ಬೇರೆಯಾಗಿ ಅಸತ್ಯವಾದರೆ ಇನ್ನೊಂದು ದೋಷವನ್ನು ಹೇಳುತ್ತಾರೆ—

**ಮೂ ॥ ಸತ್ಯತಾ ಚ ಭೇದಸ್ಯ ॥ ೧೧ ॥**

ಅ ॥ ಭೇದಸ್ಯ=ಜೀವಬ್ರಹ್ಮರು ಬೇರೆ ಬೇರೆ ಎನ್ನುವ ಪದಾರ್ಥಕ್ಕೆ, ಸತ್ಯತಾ ಚ=ಸತ್ಯತ್ವವೂ ಕೂಡ, ಸ್ಯಾತ್=ಆಗುತ್ತದೆ. ॥ ೧೧ ॥

ತಾ ॥ ಲೋಕದಲ್ಲಿ ಒಂದು ವಸ್ತುವು ಚೇತನವಲ್ಲವೆಂದರೆ ಜಡವೆಂದು ಸಿದ್ಧವಾಗುವುದು. ಜಡವಲ್ಲವೆಂದರೆ ಚೇತನವೆಂಬು ಸ್ಪಷ್ಟವಾಗುವುದು. ಅಂತೆಯೇ ಪರಸ್ಪರ ವಿರುದ್ಧಗಳಾದ ಜೀವಬ್ರಹ್ಮರ ಭೇದ ಮತ್ತು ಅಭೇದ ಇವುಗಳಲ್ಲಿ ಒಂದು ಸುಳ್ಳಾದರೆ ಉಳಿದುದು ಸತ್ಯವಾಗುವುದು.

ಪ್ರಕೃತ ಜೀವಬ್ರಹ್ಮರ ಅಭೇದವು ಸುಳ್ಳಾದರೆ ಭೇದವು ಸತ್ಯವಾಗಬೇಕಾಗುವುದು. ಆದ್ದರಿಂದ ಐಕ್ಯವನ್ನು ಆತ್ಮನಿಂದ ಬೇರೆಯಾಗಿ ಸುಳ್ಳೆಂತಲೂ ಅಥವಾ ಸತ್ಯವೆಂತಲೂ ಸಾಧಿಸಲಿಕ್ಕಾಗುವುದಿಲ್ಲ. ಆದಕಾರಣ ಆತ್ಮಸ್ವರೂಪವೆಂದೇ ಹೇಳಬೇಕಾಯಿತು. ಹಾಗೆ ಹೇಳಿದರೆ ಆತ್ಮಸ್ವರೂಪವು 'ನಾನು' ಎಂಬ ಜ್ಞಾನಕ್ಕೆ ಸರ್ವದಾ ವಿಷಯವಾಗಿ ನಿಶ್ಚಿತವಾದುದರಿಂದ ತತ್ಸ್ವರೂಪವಾದ ಜೀವಬ್ರಹ್ಮರ ಅಭೇದವೂ ನಿಶ್ಚಿತವಾಯಿತು. ಅಂತಹ ನಿಶ್ಚಿತವಾದ ಅಭೇದವು ಶಾಸ್ತ್ರಕ್ಕೆ ವಿಷಯವಾಗಲಾರದು. ॥ ೧೧ ॥

ಈ ಪ್ರಕಾರ ಶಾಸ್ತ್ರಕ್ಕೆ ವಿಷಯುವಿಲ್ಲವೆಂದು ಸಾಧಿಸಿ ಈಗ ಪ್ರಯೋಜನವಿಲ್ಲವೆಂದು ಸಾಧಿಸುತ್ತಾರೆ—

**ಮೂ ॥ ಏವಮೇವ ಪ್ರಯೋಜನಮಪಿ ನಿರಸ್ತಮ್ ॥ ೧೨ ॥**

ಅ ॥ ಏವಮೇವ=ಹೀಗೆಯೇ, ಪ್ರಯೋಜನಮಪಿ=(ಶಾಸ್ತ್ರಕ್ಕೆ) ಫಲವೂ ಕೂಡ, ನಿರಸ್ತಂ=ತಿರಸ್ಕರಿಸಲ್ಪಟ್ಟಿತು.

ತಾ ॥ ಅದ್ವೈತಿಮತದಲ್ಲಿ ಅಜ್ಞಾನವಿಲ್ಲದಿರುವ ಪ್ರಯುಕ್ತ ಅಜ್ಞಾತವಾದ ವಿಷಯುವು ಹೇಗೆ ಇಲ್ಲವೋ ಹಾಗೆಯೇ ಅಜ್ಞಾನವೇ ಇಲ್ಲದಿರುವುದರಿಂದ ಅಜ್ಞಾನ ನಿವೃತ್ತಿರೂಪ ಪ್ರಯೋಜನವೂ ಇಲ್ಲ. ॥ ೧೨ ॥

ಇನ್ನೊಂದು ವಿಧದಿಂದಲೂ ಅದ್ವೈತಶಾಸ್ತ್ರಕ್ಕೆ ಪ್ರಯೋಜನವಿಲ್ಲವೆಂದು ಸಾಧಿಸುತ್ತಾರೆ—

**ಮೂ ॥ ಸ್ವರೂಪತ್ವಾನ್ಮೋಕ್ಷಸ್ಯ ಪೂರ್ವಮೇವ ಸಿದ್ಧತ್ವಾತ್ ।**

ಅ ॥ ಇಲ್ಲಿ 'ಪ್ರಯೋಜನಂ' ಮತ್ತು 'ನಿರಸ್ತಂ' ಎಂಬೆರಡು ಪದಗಳನ್ನು ಹಿಂದಿನಿಂದ ತೆಗೆದು ಕೊಳ್ಳಬೇಕು. ಮೋಕ್ಷಸ್ಯ=ಅಜ್ಞಾನನಿವೃತ್ತಿರೂಪಮೋಕ್ಷಕ್ಕೆ, ಸ್ವರೂಪತ್ವಾತ್=ಆತ್ಮಸ್ವರೂಪವೆಂದು ಅಂಗೀಕರಿಸದ್ದರಿಂದ, ಸ್ವರೂಪಸ್ಯ=ಸ್ವರೂಪಕ್ಕೆ, ಪೂರ್ವಮೇವ=ಶಾಸ್ತ್ರಓದುವ ಮೊದಲೇ, ಸಿದ್ಧತ್ವಾತ್=ನಿಶ್ಚಯುವಿರುವುದರಿಂದ, ಪ್ರಯೋಜನಂ=ಫಲವು, ನಿರಸ್ತಂ= ನಿರಾಕರಿಸಲ್ಪಟ್ಟಿತು. ॥ ೧೩ ॥

ತಾ ॥ ಅಜ್ಞಾನನಿವೃತ್ತಿರೂಪ ಮೋಕ್ಷವನ್ನು ಅದ್ವೈತಿಯು ಆತ್ಮಸ್ವರೂಪವೆಂದು ಒಪ್ಪಿರುತ್ತಾನೆ. ಆತ್ಮಸ್ವರೂಪವು ಶಾಸ್ತ್ರಓದುವಮೊದಲೇ ನಿಶ್ಚಿತವಿರುವುದರಿಂದ ತದಭಿನ್ನವಾದ (ಆತ್ಮಸ್ವರೂಪದಿಂದ ಬೇರೆಯಲ್ಲದ) ಅಜ್ಞಾನನಿವೃತ್ತಿರೂಪಮೋಕ್ಷವೂ ಕೂಡ ಶಾಸ್ತ್ರವನ್ನೋದುವ ಮೊದಲೇ ನಿಶ್ಚಿತವಿರುವುದರಿಂದ ಅಂತಹ ಮೋಕ್ಷವು ಆ ಶಾಸ್ತ್ರಸಾಧ್ಯವಾದ ಪ್ರಯೋಜನವಾಗಲಾರದು. ॥ ೧೩ ॥

ಇದುವರೆಗೆ ಇಷ್ಟಸಿದ್ಧಿಕಾರನ ಮತದಲ್ಲಿ ಹೇಳುವ ಪ್ರಯೋಜನವನ್ನು ಶಂಕಿಸಿ ದೂಷಿಸಿದರು. ಈಗ ಆನಂದಬೋಧನಮತದಲ್ಲಿ ಹೇಳುವ ಶಾಸ್ತ್ರದ ಪ್ರಯೋಜನವನ್ನು (ಶಂಕಿಸುತ್ತಾರೆ)ಶಂಕಿಸಿಕೊಂಡು ದೂಷಿಸುತ್ತಾರೆ. ಹೇಗೆಂದರೆ, ಅವಿದ್ಯಾನಿವೃತ್ತಿರೂಪ ಮೋಕ್ಷವು ಆತ್ಮಸ್ವರೂಪವಲ್ಲ. ಮತ್ತು ಬೇರೆಯಾಗಿಯೇ ಇದೆ. ಆದರೆ ಈ ಮೋಕ್ಷವು ಸತ್ಯವಾದರೆ ಅದ್ವೈತಹಾನಿಯು ಬರುತ್ತದೆ. ಅಸತ್ಯವಾದರೆ ಇಂತಹ ಮೋಕ್ಷವೇ ಇಲ್ಲವೆಂದಾಗುತ್ತದೆ. ಅಲ್ಲದೆ ಸತ್ಯಾಸತ್ಯವೆಂದು ಹೇಳಿದರೆ ವಿರೋಧವು ಬರುತ್ತದೆ. ಸದಸದ್ವಿಲಕ್ಷಣವೆಂದು(ಸತ್ಯ ಮತ್ತು ಅಸತ್ಯ ಇವೆರಡರಿಂದ ಬೇರೆ ಎಂದು) ಹೇಳಿದರೆ ಅಜ್ಞಾನನಿವೃತ್ತಿಯು ಆಗುವುದಿಲ್ಲ. ಏಕೆಂದರೆ- ಅಜ್ಞಾನವು ಸದಸದ್ವಿಲಕ್ಷಣ

ವೆಂದು ಒಪ್ಪಿದ್ದರಿಂದ ಅಜ್ಞಾನನಿವೃತ್ತಿಯು ಸದಸದ್ವಿಲಕ್ಷಣವೆಂದು ಹೇಳಲಾಗುವುದಿಲ್ಲ. ಪ್ರತಿಯೋಗಿಯೂ ಅದರ ಅಭಾವವೂ ಇವುಗಳು ಬೇರೆ ಬೇರೆ ವಿಧವಾಗಿರುತ್ತವೆಂದು ಅವನ ಮತವಾದುದರಿಂದ, ಆದಕಾರಣ ಅಜ್ಞಾನನಿವೃತ್ತಿರೂಪ ಮೋಕ್ಷವು ಸದಸದ್ವಿಲಕ್ಷಣ ವಿಲಕ್ಷಣವೆಂದು ಐದನೇ ವಿಧವನ್ನು ಹೇಳಬೇಕು. ಅಂತಹ ಸದಸದ್ವಿಲಕ್ಷಣ ವಿಲಕ್ಷಣವಾದ ಅಜ್ಞಾನನಿವೃತ್ತಿರೂಪ ಪ್ರಯೋಜನವು ಇರುವುದರಿಂದ ಶಾಸ್ತ್ರವು ನಿಷ್ಪ್ರಯೋಜನವು ಹೇಗೆ? ಎಂದು ಶಂಕಿಸಿದರೆ ಉತ್ತರವನ್ನು ಹೇಳುತ್ತಾರೆ—

**ಮೂ ॥ ಅಜ್ಞಾನಾಸಂಭವೇನ ಚತುರ್ಥಪ್ರಕಾರಾಭಾವಾತ್ಪಂಚಮಪ್ರಕಾರತಾಽಪಿ ನಿರಸ್ತಾ ॥ ೧೪ ॥**

ಅ ॥ ಇಲ್ಲಿ'ಮೋಕ್ಷಸ್ಯ'ಎಂಬುವ ಪದವನ್ನು ಇಟ್ಟುಕೊಳ್ಳಬೇಕು. ಅಜ್ಞಾನಾಸಂಭವೇನ, ಅಜ್ಞಾನ=ಅಜ್ಞಾನವು, ಅಸಂಭವೇನ=ಪೂರ್ವದಲ್ಲಿ ಹೇಳಿದಂತೆ ಕೂಡದಿರುವುದರಿಂದ, ಚತುರ್ಥಪ್ರಕಾರಾಭಾವಾತ್, ಚತುರ್ಥ=ನಾಲ್ಕನೆಯದಾದ, ಪ್ರಕಾರ=ಸದಸದ್ವಿಲಕ್ಷಣರೂಪವಾದ ವಿಧವು, ಅಭಾವಾತ್=ಇಲ್ಲದಿರುವುದರಿಂದ,ಮೋಕ್ಷಸ್ಯ=ಮೋಕ್ಷಕ್ಕೆ,ಪಂಚಮ ಪ್ರಕಾರತಾಽಪಿ, ಪಂಚಮ=ಐದನೆಯದಾದ, ಪ್ರಕಾರತಾಽಪಿ=ಸದಸದ್ವಿಲಕ್ಷಣ ವಿಲಕ್ಷಣರೂಪವಾದ ಪ್ರಕಾರವೂ ಕೂಡ, ನಿರಸ್ತಾ=ತಿರಸ್ಕರಿಸಲ್ಪಟ್ಟಿತು. ॥ ೧೪ ॥

ತಾ ॥ ಅದ್ವೈತಿಮತದಲ್ಲಿ ಅಜ್ಞಾನರೂಪವಾದ ಪದಾರ್ಥವು ಇದ್ದರೆ ಆ ಅಜ್ಞಾನವು ಸದಸದ್ವಿಲಕ್ಷಣವಾದ ನಾಲ್ಕನೇ ಪ್ರಕಾರವುಳ್ಳದ್ದಾಗಿ ಅದರ ನಿವೃತ್ತಿರೂಪವಾದ ಮೋಕ್ಷವು ಸದಸದ್ವಿಲಕ್ಷಣ ವಿಲಕ್ಷಣವಾದ ಐದನೆಯ ಪ್ರಕಾರವುಳ್ಳದ್ದಾಗಬಹುದು. ಪೂರ್ವದಲ್ಲಿ ಹೇಳಿದಂತೆ ಅಜ್ಞಾನವೇ ಅವನ ಮತದಲ್ಲಿ ಕೂಡದಿರುವುದರಿಂದ ಸದಸದ್ವಿಲಕ್ಷಣವಾದ ನಾಲ್ಕನೆಯ ಪ್ರಕಾರವೇ ಇಲ್ಲವಾದುದರಿಂದ ಸದಸದ್ವಿಲಕ್ಷಣ ವಿಲಕ್ಷಣವಾದ ಐದನೆಯ ಪ್ರಕಾರವುಳ್ಳ ಅಜ್ಞಾನ ನಿವೃತ್ತಿರೂಪ ಮೋಕ್ಷವು ಸುತರಾಂ ಇಲ್ಲವೆಂದಾಯಿತು. ॥ ೧೪ ॥

ಇನ್ನು ಅಜ್ಞಾನವು ಕೂಡದಿರುವುದರಿಂದ ಅದ್ವೈತಿಶಾಸ್ತ್ರಕ್ಕೆ ಅಧಿಕಾರಿಯೂ ಇಲ್ಲವೆಂದು ಸಾಧಿಸುತ್ತಾರೆ—

**ಮೂ ॥ ವಿಷಯಪ್ರಯೋಜನಾಭಾವಾದೇವ ಅಧಿಕಾರೀ ಚ ॥ ೧೫ ॥**

ಇಲ್ಲಿ 'ನಿರಸ್ತಃ' ಎಂಬ ಪದವನ್ನಿಟ್ಟುಕೊಳ್ಳಬೇಕು. ವಿಷಯಪ್ರಯೋಜನಾಭಾವಾತ್, ವಿಷಯ=ವಿಷಯವೂ, ಪ್ರಯೋಜನ=ಫಲವೂ, ಅಭಾವಾತ್=ಇಲ್ಲದಿರುವುದರಿಂದ, ಅಧಿಕಾರೀ ಚ=ಅಧಿಕಾರಿಯೂ (ಗ್ರಂಥವನ್ನು ಓದತಕ್ಕವನೂ ಹೇಳತಕ್ಕವನೂ), ನಿರಸ್ತಃ=ಇಲ್ಲವೆಂದಾಯಿತು. ॥ ೧೫ ॥

ತಾ ॥ ಯಾವ ಪುರುಷನು ತನಗೆ ಇಷ್ಟವಾದ ಫಲವನ್ನು ಬಯಸಿಕೊಂಡು ಯಾವ ಶಾಸ್ತ್ರದಲ್ಲಿ ಒಂದು ವಿಷಯವನ್ನು ಚರ್ಚಿಸುತ್ತಾನೋ ಅವನು ಆ ಶಾಸ್ತ್ರದಲ್ಲಿ ಅಧಿಕಾರಿಯೆಂದು ಹೇಳಬೇಕು. ಪ್ರಕೃತ ಅದ್ವೈತಿಶಾಸ್ತ್ರದಲ್ಲಿ ಪೂರ್ವದಲ್ಲಿ ಹೇಳಿದಂತೆ ವಿಷಯವೂ ಪ್ರಯೋಜನವೂ ಇಲ್ಲದಿದ್ದಮೇಲೆ ಅವುಗಳಿಂದ ಕೂಡಿರುವ ಅಧಿಕಾರಿಯೂ ಕೂಡ ಇಲ್ಲವೆಂದಾಯಿತು. ॥

ಈಗ ಅಜ್ಞಾನವು ಇಲ್ಲದಿರುವಪ್ರಯುಕ್ತ ಸಂಬಂಧವಿಲ್ಲವೆಂಬುದನ್ನೂ ಸಾಧಿಸುತ್ತಾರೆ—

**ಮೂ ॥ ತದಭಾವಾದೇವ ಸಂಬಂಧೋಽಪಿ ॥ ೧೬ ॥**

ಅ || ಇಲ್ಲಿ 'ನಿರಸ್ತಃ' ಎಂಬ ಪದವನ್ನು ಇಟ್ಟುಕೊಳ್ಳಬೇಕು. ತದಾಭಾವಾದೇವ, ತತ್=ವಿಷಯಪ್ರಯೋಜನಾಧಿಕಾರಿಗಳು, ಅಭಾವಾದೇವ=ಇಲ್ಲದಿರುವುದರಿಂದ, ಸಂಬಂಧೋಽಪಿ=ಸಂಬಂಧವೂಕೂಡ, ನಿರಸ್ತಃ=ಇಲ್ಲವೆಂದಾಯಿತು. ॥ ೧೫ ॥

ತಾ || ಸಂಬಂಧವೆಂದರೆ ವಿಷಯ, ಪ್ರಯೋಜನ, ಅಧಿಕಾರಿ, ಶಾಸ್ತ್ರ ಇವುಗಳಿಗೆ ಪರಸ್ಪರ ಅನ್ವಯವು. ಗ್ರಂಥಕ್ಕೂ ವಿಷಯಕ್ಕೂ ಬೋಧ್ಯ=ಬೋಧಕಬಾವ ಸಂಬಂಧ (ವಿಷಯುಯವನ್ನು ಬೋಧಿಸುವಂಥಾದ್ದು ಗ್ರಂಥ, ಗ್ರಂಥದಿಂದ ತಿಳಿಯಲಿಕ್ಕೆ ಯೋಗ್ಯವಾದದ್ದು ವಿಷಯ) ಗ್ರಂಥಕ್ಕೂ ಅಧಿಕಾರಿಗೂ ಪಠ್ಯ ಪಾಠಕಭಾವ ಸಂಬಂಧ. (ಪಠನಮಾಡಲಿಕ್ಕೆ ಯೋಗ್ಯವಾದದ್ದು ಗ್ರಂಥ, ಪಠನಮಾಡತಕ್ಕವನು ಅಧಿಕಾರಿ). ಶಾಸ್ತ್ರಕ್ಕೂ ಪ್ರಯೋಜನಕ್ಕೂ ಜನ್ಯ ಜನಕಭಾವ ಸಂಬಂಧ (ಶಾಸ್ತ್ರವು ಫಲಕ್ಕೆ ಕಾರಣ, ಫಲವು ಶಾಸ್ತ್ರದಿಂದ ಜನ್ಯ). ಈ ರೀತಿಯಾಗಿ ಶಾಸ್ತ್ರದಲ್ಲಿ ಅನೇಕ ಸಂಬಂಧಗಳು ಇರತಕ್ಕದ್ದು. ಪ್ರಕೃತ ಅದ್ವೈತಿ ಶಾಸ್ತ್ರಕ್ಕೆ ವಿಷಯಪ್ರಯೋಜನ ಅಧಿಕಾರಿಗಳು ಪೂರ್ವದಲ್ಲಿ ಹೇಳಿದಂತೆ ಇಲ್ಲದೇ ಇರುವುದರಿಂದ ಅವುಗಳಿಂದ ಕೂಡಿದ ಸಂಬಂಧವೂ ಇಲ್ಲವೆಂದಾಯಿತು. ॥ ೧೫ ॥

ಇದು ವರೆಗೆ ಜೀವಬ್ರಹ್ಮಾಭೇದವೇ ವೇದಾದಿ ಸರ್ವಶಾಸ್ತ್ರಾರ್ಥವಾದರೆ ಶಾಸ್ತ್ರವು ಅನಾರಂಭಣೀಯವಾಗಲಿ ಎಂಬುವ ದೋಷವು ಬರುವುದರಿಂದ, ಆ ಜೀವಬ್ರಹ್ಮಾಭೇದವು ಶಾಸ್ತ್ರದ ಮುಖ್ಯಾರ್ಥವಲ್ಲವೆಂಬುವ ವಿಷಯುವನ್ನು ಸಮರ್ಥಿಸಿದರು. ಈಗ ಪರಮಾಪ್ತತಮರಾದ ಶ್ರೀಕೃಷ್ಣದೇವರು ಭಗವದ್ಗೀತೆಯಲ್ಲಿ ಅ. ೧೫ ಶ್ಲೋಕ (೧೬ರಿಂದ ೨೦ರ ವರೇಗೆ) ಮುತ್ತು ಅನಂತವೇದಗಳಲ್ಲಿಯೂ ವಿಷ್ಣುಸರ್ವೋತ್ತಮತ್ವವೇ ಸರ್ವಶಾಸ್ತ್ರವಿಷಯವೆಂದು ಹೇಳಿದ್ದರಿಂದ ಅದೇ (ವಿಷ್ಣುಸರ್ವೋತ್ತಮತ್ವವೇ) ಸಕಲವೇದಾದಿ ಶಾಸ್ತ್ರವಿಷಯವು ಜೀವಬ್ರಹ್ಮಾಭೇದವಲ್ಲವೆಂದು ಸಾಧಿಸುತ್ತಾರೆ.—

**ಮೂ || ದ್ವಾವಿಮೌ ಪುರುಷೌ ಲೋಕೇ ಕ್ಷರಶ್ಚಾಕ್ಷರ ಏವ ಚ। ಕ್ಷರಃ ಸರ್ವಾಣಿಭೂತಾನಿ ಕೂಟಸ್ಥೋಽಕ್ಷರ ಉಚ್ಯತೇ || ೧೬ ||**

ಅ || ಲೋಕೇ=ಅಸ್ವತಂತ್ರವಾದ ಜಗತ್ತಿನಲ್ಲಿ, ಇಮೌ=ಪ್ರಮಾಣ ಪ್ರಮಿತರಾದ (ಪ್ರಮಾಣಗಳಿಂದ ತಿಳಿದುಬಂದ), ಪುರುಷೌ=ಚೇತನರು, ಕ್ಷರಶ್ಚ=ಕ್ಷರಚೇತನವೆಂದು, ಅಕ್ಷರಶ್ಚ=ಅಕ್ಷರಚೇತನವೆಂದು, ದ್ವಾವೇವ=ಇಬ್ಬರೇ ಸರಿ. ಸರ್ವಾಣಿ=ಸಮುಸ್ತಗಳಾದ, ಭೂತಾನಿ=ಚತುರ್ಮುಖನೇ ಮೊದಲಾದ ಜೀವರಾಶಿಗಳು, ಕ್ಷರಃ=ದೇಹನಾಶವಿರುವುದರಿಂದ ಕ್ಷರವೆಂದು ಹೇಳಲ್ಪಡುತ್ತವೆ. ಕೂಟಸ್ಥಃ, ಕೂಟ=ಅವ್ಯಾಕೃತಾಕಾಶದಂತೆ, ಸ್ಥಃ=ಇರುವ (ಆಕಾಶದಂತೆ ದೇಹನಾಶಾವಿನಾಶಗಳಿಲ್ಲದಿರುವ) ಮಹಾಲಕ್ಷ್ಮಿಯು, ಅಕ್ಷರಃ=(ಯಾವಾಗಲೂ ದೇಹನಾಶವಿಲ್ಲದಿರುವ ಕಾರಣ) ಅಕ್ಷರಳೆಂದು, ಉಚ್ಯತೇ=ಹೇಳಲ್ಪಡುತ್ತಾಳೆ. || ೧೬ ||

ತಾ || ಲೋಕದಲ್ಲಿ ಒಬ್ಬನು ಉತ್ತಮನಾಗಬೇಕಾದರೆ ಅವನಿಂದ ಅಧಮರು ಇರಬೇಕಾದ್ದು ಅವಶ್ಯಕ. ಅದರಲ್ಲಿ ಈ ಶ್ಲೋಕದಿಂದ ಅಧಮರನ್ನು ಹೇಳಿದರು. || ೧೬ ||

ಉತ್ತಮರು ಯಾರೆಂಬುದನ್ನು ಹೇಳುತ್ತಾರೆ.—

**ಮೂ || ಉತ್ತಮಃ ಪುರುಷಸ್ತ್ವನ್ಯಃ || ೧೭ ||**

ಅ || ಅನ್ಯಃ=ಪೂರ್ವದಲ್ಲಿ ಹೇಳಿದ ಚೇತನರಿಂದ ಇತರನಾದ, ಪುರುಷಸ್ತು=ನಾರಾಯಣನೇ, ಉತ್ತಮಃ=ಪ್ರಧಾನನು. || ೧೭ ||

ತಾ ॥ ಲಕ್ಷ್ಮೀದೇವಿಯು ಮೊದಲುಗೊಂಡು ಪಿಪೀಲಿಕಾ (ಇರುವೆ) ಪರ್ಯಂತವಿರುವ ಸಕಲ ಚೇತನ ಸಮುದಾಯದಿಂದಲೂ ಪರಮಾತ್ಮನೇ ಉತ್ತಮನೆಂದು ಅಭಿಪ್ರಾಯ. ॥ ೧೭ ॥

ಈ ವಿಷಯದಲ್ಲಿ ಪ್ರಮಾಣವಾಗಿ ಶ್ರುತಿಯನ್ನು ಉದಾಹರಿಸುತ್ತಾರೆ.—

**ಮೂ ॥ ಪರಮಾತ್ಮೇತ್ಯುದಾಹೃತಃ ॥ ೧೮ ॥**

ಅ ॥ ಪರಮಾತ್ಮೇತಿ=ಪರಮಾತ್ಮನೆಂದು, ಉದಾಹೃತಃ=ವೇದದಲ್ಲಿ ಹೇಳಲ್ಪಟ್ಟಿದ್ದಾನೆ. ಆ ವೇದವು ಯಾವುದೆಂದರೆ- "ತಸ್ಯಾಃ ಶಿಖಾಯಾ ಮಧ್ಯೇ ಪರಮಾತ್ಮಾ ವ್ಯವಸ್ಥಿತಃ" ಇದು ನಾರಾಯಣಸೂಕ್ತ, ೧೧ನೇ ಋಕ್ಕು. ಇಲ್ಲಿ ಪರಮಾತ್ಮಾ ಎಂಬುವ ಶಬ್ದದಿಂದ ಪರಮ= ಉತ್ತಮನಾದ, ಆತ್ಮ=ಚೇತನನೆಂದು ಅರ್ಥವಾಗುವುದರಿಂದ, ಪರಮಾತ್ಮನೇ ಸರ್ವೋತ್ತಮ ಚೇತನನೆಂದು ಸಿದ್ಧವಾಗುತ್ತದೆ. ॥ ೧೮ ॥

ಈ ವಿಷಯದಲ್ಲಿ ಯುಕ್ತಿಯನ್ನು ಹೇಳುತ್ತಾರೆ.—

**ಮೂ ॥ ಯೋ ಲೋಕತ್ರಯಮಾವಿಶ್ಯ ಬಿಭರ್ತಿ ॥ ೧೯ ॥**

ಅ ॥ ಯಃ=ಯಾವ ಪರಮಾತ್ಮನು, ಲೋಕತ್ರಯಂ=ಮೂರು ಲೋಕಗಳನ್ನು, ಆವಿಶ್ಯ=ಪ್ರವೇಶಿಸಿ, ಬಿಭರ್ತಿ=ಪೋಷಿಸುತ್ತಾನೋ. ॥ ೧೯ ॥

ತಾ ॥ ಲೋಕದಲ್ಲಿ ಯಾರನ್ನು ಯಾರು ಪೋಷಿಸುತ್ತಾನೋ ಅವನು (ಪೋಷಕನು) ಅವನಿಂದ (ಪೋಷ್ಯನಿಂದ) ಉತ್ತಮನೆಂಬುದು ಸಿದ್ಧವಾದುದರಿಂದ ಪರಮಾತ್ಮನೂ ಕೂಡ ಮೂರು ಲೋಕಗಳನ್ನು ಪಾಲನೆ ಮಾಡುವುದರಿಂದ ಸರ್ವರಿಂದಲೂ ಉತ್ತಮನೆಂದು ಸಿದ್ಧವಾಯಿತು. ॥ ೨೯ ॥

ಮನೆಯೊಳಗಿದ್ದ ಪದಾರ್ಥವು ಮನೆ ಸುಡುವಾಗ ಹೇಗೆ ನಾಶವಾಗುತ್ತದೋ ಹಾಗೆಯೇ ಪರಮಾತ್ಮನು ಮೂರು ಲೋಕಗಳ ಒಳಗಿದ್ದು ಪಾಲನೆ ಮಾಡುವುದಾದರೆ ಆ ಮೂರು ಲೋಕಗಳಿಗೂ ನಾಶವುಂಟಾಗುವಾಗ ಇವನಿಗೂ (ಪರಮಾತ್ಮನಿಗೂ) ನಾಶವುಂಟಾಗುತ್ತದೋ ಎಂಬ ಶಂಕೆಗೆ ಉತ್ತರವನ್ನು ಹೇಳುತ್ತಾರೆ—

**ಮೂ ॥ ಅವ್ಯಯ ಈಶ್ವರಃ ॥ ೨೦ ॥**

ತಾ ॥ ಈಶ್ವರಃ=ಸರ್ವಸಮರ್ಥನಾದ ಪರಮಾತ್ಮನು, ಅವ್ಯಯಃ=ನಾಶವಿಲ್ಲದವನು.॥

ಇಂತಹ ಸರ್ವೋತ್ತಮನಾದ ಪರಮಾತ್ಮನು ಯಾರೆಂದರೆ ಸಪ್ರಮಾಣವಾಗಿ ಉತ್ತರವನ್ನು ಹೇಳುತ್ತಾರೆ—

**ಮೂ ॥ ಯಸ್ಮಾತ್ ಕ್ಷರಮತೀತೋಽಹಮಕ್ಷರಾದಪಿ ಚೋತ್ತಮಃ ।**
**ಅತೋಽಸ್ಮಿ ಲೋಕೇ ವೇದೇ ಚ ಪ್ರಥಿತಃ ಪುರುಷೋತ್ತಮಃ ॥ ೨೧ ॥**

ಅ ॥ ಯಸ್ಮಾತ್=ಯಾವ ಕಾರಣದಿಂದ, ಅಹಂ=ನಾನು, ಕ್ಷರಂ=ದೇಹನಾಶವಿರುವ ಚತುರ್ಮುಖಾದಿ ಚೇತನ ಸಮುದಾಯವನ್ನೂ, ಅತೀತಃ=ದಾಟಿದವನೋ, (ಉತ್ತಮನೋ)

ಅಕ್ಷರಾದಪಿ=ದೇಹನಾಶವಿಲ್ಲದೇ ಇರುವ ಲಕ್ಷ್ಮಿಯಿಂದಲೂ ಕೂಡ, ಲೋಕೇ=ಅನಿತ್ಯವಾದ ಪುರಾಣಾದಿಗಳಲ್ಲಿಯೂ, ವೇದೇ ಚ=ನಿತ್ಯವಾದ ವೇದದಲ್ಲಿಯೂ ಕೂಡ, ಪುರುಷೋತ್ತಮಃ= ಪುರುಷಶ್ರೇಷ್ಠನೆಂದು, ಪ್ರಥಿತಃ=ಪ್ರಸಿದ್ಧನು. ॥ ೨೧ ॥

ತಾ ॥ ಈ ವಾಕ್ಯವು ಸಾಕ್ಷಾತ್ ಶ್ರೀಕೃಷ್ಣನಿಂದಲೇ ಉಕ್ತವಾಗಿರುವುದರಿಂದ ಪರಮಾತ್ಮನೇ ಶ್ರೀಕೃಷ್ಣನೆಂದೂ ಅವನೇ ಸರ್ವೋತ್ತಮನೆಂದೂ ಸಿದ್ಧವಾಯಿತು. ॥ ೨೧ ॥

ಶ್ರೀಕೃಷ್ಣದೇವರು ತಾನೇ ಸರ್ವೋತ್ತಮನಾದ ಪರಮಾತ್ಮನೆಂದು ತಿಳಿಯುವವರಿಗೆ ಫಲವನ್ನು ಹೇಳುತ್ತಾರೆ.---

**ಮೂ ॥ ಯೋ ಮಾಮೇವಮಸಂಮೂಢೋ ಜಾನಾತಿ ಪುರುಷೋತ್ತಮಂ ।
ಸ ಸರ್ವವಿದ್ಭಜತಿ ಮಾಂ ಸರ್ವಭಾವೇನ ಭಾರತ! ॥ ೨೨ ॥**

ಅ ॥ ಯಃ=ಯಾವಾತನು, ಏವಂ=ಪೂರ್ವೋಕ್ತಪ್ರಕಾರವಾಗಿ, ಅಸಂಮೂಢಃ= ಭ್ರಮೆ ಯಿಲ್ಲದವನಾಗಿ, ಮಾಂ=ನನ್ನನ್ನು, ಪುರುಷೋತ್ತಮಂ=ಪುರುಷೋತ್ತಮನನ್ನಾಗಿ, ಜಾನಾತಿ=ತಿಳಿಯುತ್ತಾನೋ. ಸಃ=ಆತನು, ಸರ್ವವಿತ್ ಸನ್=ಸಕಲ ಶಾಸ್ತ್ರಗಳನ್ನು ತಿಳಿದವನಾಗಿ, ಸರ್ವಭಾವೇನ=ಸರ್ವಪ್ರಕಾರದಿಂದಲೂ (ತಂದೆಯೂ ತಾಯಿಯೂರಕ್ಷಕನೂ ಎಲ್ಲವೂ ಪರಮಾತ್ಮನೇ ಎಂದು), ಹೇಭಾರತ!=ಎಲೈ ಭರತಕುಲೋತ್ಪನ್ನನಾದ ಅರ್ಜುನನೇ!, ಮಾಂ= ನನ್ನನ್ನು, ಭಜತಿ=ಸೇವಿಸುತ್ತಾನೆ. ॥ ೨೨ ॥

ಈ ಪ್ರಮೇಯವನ್ನು ಅಯೋಗ್ಯನಾದ ಯಾವ ಪುರುಷನಿಗೂ ಹೇಳಬಾರದೆಂದು ಹೇಳುತ್ತಾರೆ.

**ಮೂ॥ ಇತಿಗುಹ್ಯತಮಂ ಶಾಸ್ತ್ರಮಿದಮುಕ್ತಂ ಮಯಾನಘ! ॥ ೨೩ ॥**

ಅ॥ ಹೇ ಅನಘ!=ಎಲೈ ಪಾಪರಹಿತನಾದ ಅರ್ಜುನನೇ! ಮಯಾ=ನನ್ನಿಂದ, ಇತಿ= ಪೂರ್ವೋಕ್ತಪ್ರಕಾರವಾಗಿ, ಉಕ್ತಂ=ಹೇಳಲ್ಪಟ್ಟ, ಇದಂ=ಈ, ಶಾಸ್ತ್ರಂ=ಶಾಸ್ತ್ರವು, ಗುಹ್ಯತಮಂ=ಅತ್ಯಂತ ಗೋಪ್ಯವಾದದ್ದು, (ಅಯೋಗ್ಯರಿಗೆ ಹೇಳಬಾರದೆಂದಭಿಪ್ರಾಯ.) ॥ ೨೩ ॥

ಈ ಪ್ರಮೇಯವನ್ನು ತಿಳಿದವನಿಗೆ ಬೇರೆ ಪ್ರಮೇಯವನ್ನೂ ಹೇಳುತ್ತಾರೆ.—

**ಮೂ ॥ ಏತದ್ಬುಧ್ವಾ ಬುದ್ಧಿಮಾನ್ ಸ್ಯಾತ್ ಕೃತಕೃತ್ಯಶ್ಚ ಭಾರತ! ॥ ೨೪ ॥**

ಅ ॥ ಹೇ ಭಾರತ! ಎಲೈ ಅರ್ಜುನನೇ! ಏತತ್=ಈ ಪ್ರಮೇಯವನ್ನೂ, ಬುಧ್ವಾ= ಶಾಸ್ತ್ರದಿಂದ ತಿಳಿದು, ಬುದ್ಧಿಮಾನ್=ಪ್ರತ್ಯಕ್ಷದಿಂದ ತಿಳಿದವನೂ, ಕೃತಕೃತ್ಯಶ್ಚ, ಕೃತ= ಸಂಪಾದಿಸಲ್ಪಟ್ಟ, ಕೃತ್ಯಶ್ಚ=ಪ್ರಯೋಜನವುಳ್ಳವನೂ ಕೂಡ (ಮುಕ್ತನೂ ಕೂಡ), ಸ್ಯಾತ್= ಆಗುತ್ತಾನೆ. ॥ ೨೪ ॥

ನಾರಾಯಣನೇ ಪುರುಷೋತ್ತಮನೆಂಬುದಕ್ಕೆ ಶ್ರುತಿರೂಪಪ್ರಮಾಣವನ್ನು ಹೇಳುತ್ತಾರೆ.—

**ಮೂ ॥ ಇಂದ್ರಿಯೇಭ್ಯಃ ಪರಾಹ್ಯರ್ಥಾ ಅರ್ಥೇಭ್ಯಶ್ಚ ಪರಂ ಮನಃ । ಮನಸಸ್ತು ಪರಾ ಬುದ್ಧಿರ್ಬುದ್ಧೇರಾತ್ಮಾ ಮಹಾನ್ ಪರಃ ॥ ಮಹತಃ ಪರಮವ್ಯಕ್ತಮವ್ಯಕ್ತಾತ್ಪುರುಷಃ ಪರಃ । ಪುರುಷಾನ್ನ ಪರಂ ಕಿಂಚಿತ್ಸಾ ಕಾಷ್ಠಾ ಸಾ ಪರಾ ಗತಿಃ ॥ ೨೫ ॥**

ಅ ॥ ಇಂದ್ರಿಯೇಭ್ಯಃ=ಇಂದ್ರಿಯಾಭಿಮಾನಿದೇವತೆಗಳಿಂದ, ಅರ್ಥಾಃ=ಅರ್ಥಾಭಿಮಾನಿ ದೇವತೆಗಳು, ಪರಾಃ=ಉತ್ತಮರು. ಅರ್ಥೇಭ್ಯಶ್ಚ=ಅರ್ಥಾಭಿಮಾನಿ ದೇವತೆಗಳಿಂದ, ಮನಃ= ಮನೋಭಿಮಾನಿ ದೇವಸಮುದಾಯವು, ಪರಂ=ಉತ್ತಮವು. ಮನಸಃ=ಮನೋಽಭಿಮಾನಿ ದೇವತೆಗಳಿಂದ, ಬುದ್ಧಿಃ=ಬುದ್ಧಿತತ್ವಾಭಿಮಾನಿಯಾದ ಸರಸ್ವತಿಯು, ಪರಾ=ಉತ್ತಮಳು, ಬುದ್ಧೇಃ=ಬುಧ್ಧಿತತ್ವಾಭಿಮಾನಿಯಾದಸರಸ್ವತಿಯಿಂದ, ಮಹಾನ್=ಮಹತ್ತತ್ವಾಭಿಮಾನಿಯಾದ, ಆತ್ಮಾ=ಚತುರ್ಮುಖ ಬ್ರಹ್ಮನು, ಪರಃ=ಉತ್ತಮನು. ಮಹತಃ=ಮಹತ್ತತ್ವಾಭಿಮಾನಿಯಾದ ಚತುರ್ಮುಖನಿಂದ, ಅವ್ಯಕ್ತಂ=ಅವ್ಯಕ್ತತತ್ವಾಭಿಮಾನಿನಿಯಾದ ಲಕ್ಷ್ಮಿಯು, ಪರಂ=ಶ್ರೇಷ್ಠಳು. ಅವ್ಯಕ್ತಾತ್=ಲಕ್ಷ್ಮಿಯಿಂದ, ಪುರುಷಃ=ಪೂರ್ಣಷಡ್ಗುಣನಾದ ನಾರಾಯಣನು, ಪರಃ=ಉತ್ತಮನು. ಪುರುಷಾತ್=ನಾರಾಯಣನಿಂದ, ಪರಂ=ಉತ್ತಮವಾದದ್ದು, ಕಿಂಚಿತ್=ಯಾವುದೊಂದೂ, ನ=ಇಲ್ಲ. ಸಾ=ಆ ಪರಮಾತ್ಮನೇ, ಕಾಷ್ಠಾ =ಉತ್ತಮತ್ವಕ್ಕೆ ಅವಧಿಭೂತನು. (ನಾರಾಯಣನೇ ಉತ್ತಮತ್ವಕ್ಕೆ ಅವಧಿ ಎಂದರೆ ಅವನಿಂದಮೇಲೆ ಉತ್ತಮರು ಇಲ್ಲವೆಂದು ಅಭಿಪ್ರಾಯ) ಈ ವಿಷಯದಲ್ಲಿ ಪ್ರಮಾಣ. ಆ ಪರಮಾತ್ಮನು, ಪರಾ ಗತಿಃ=ಸರ್ವಶಾಸ್ತ್ರದಲ್ಲಿ, ಸರ್ವೋತ್ತಮನೆಂದು ಪ್ರತಿಪಾದ್ಯನು. ॥ ೨೫ ॥

ವಿಷ್ಣುವೇ ಸರ್ವೋತ್ತಮನೆಂಬ ವಿಷಯಕ್ಕೆ ಬ್ರಹ್ಮಸೂತ್ರವನ್ನು ಪ್ರಮಾಣವಾಗಿ ಹೇಳುತ್ತಾರೆ.—

**ಮೂ ॥ ಓಂ ಭೂಮ್ನಃ ಕ್ರತುವಜ್ಜ್ಯಾಯಸ್ತ್ವಂ ತಥಾ ಚ ದರ್ಶಯತಿ ಓಂ ॥೨೬॥**

ಅ ॥ ಭೂಮ್ನಃ=ಸರ್ವೋತ್ತಮತ್ವರೂಪ ಗುಣಕ್ಕೆ, ಜ್ಯಾಯಸ್ತ್ವಂ=ಮುಖ್ಯವಾಗಿ ವೇದ ಪ್ರತಿಪಾದ್ಯತ್ವವು, ಕ್ರತುವತ್=ಯಾಗದಂತೆ, ಅಸ್ತಿ=ಇದೆ. ತಥಾ=ಹಾಗೇ, ಶ್ರುತಿಃ='ಭೂಮೈವ ದೇವಃ' ಎಂಬುವ ವೇದವು, ದರ್ಶಯತಿ=ತೋರಿಸುತ್ತದೆ, ಇಲ್ಲಿ 'ಅಸ್ತಿ' 'ಶ್ರುತಿ' ಎಂಬೆರಡು ಪದಗಳನ್ನು ಅಧ್ಯಾಹರಿಸಿಕೊಂಡಡೆ. ॥ ೨೬ ॥

ಈ ಪ್ರಕಾರವಾಗಿ ವಿಷ್ಣುಸರ್ವೋತ್ತಮತ್ವವೇ ಸಕಲ ಶಾಸ್ತ್ರಾರ್ಥವೆಂದು ಸಾಧಿಸಿ ಸಮಾಪ್ತಿ ಮಾಡುತ್ತಾರೆ.—

**ಮೂ ॥ ಇತಿ ವಿಷ್ಣೋಃ ಸರ್ವೋತ್ತಮತ್ವಮೇವ ಶಾಸ್ತ್ರಾರ್ಥತ್ವೇನ ಭಗವತಾ ಶ್ರುತ್ಯಾ ಚ ಅಭಿಹಿತಂ ॥ ೨೭ ॥**

ಅ ॥ ಇತಿ=ಹೀಗೆ, ವಿಷ್ಣೋಃ=ನಾರಾಯಣನಿಗೆ, ಸರ್ವೋತ್ತಮತ್ವಮೇವ=ಸರ್ವೋತ್ತಮತ್ವವೇ, ಭಗವತಾ=ಕೃಷ್ಣನಿಂದ, ಶ್ರುತ್ಯಾ ಚ=ವೇದದಿಂದಲೂಕೂಡ, ಅಭಿಹಿತಂ=ಹೇಳಲ್ಪಟ್ಟಿತು.

ಹೀಗೆ ಪ್ರಕರಣಾರ್ಥವನ್ನು ಹೇಳಿ ಇದಕ್ಕೆ ಪ್ರಯೋಜನವನ್ನು ಹೇಳುತ್ತಾರೆ.—

**ಮೂ ॥ ಇತಿ ಸರ್ವಜ್ಞಮುನಿನಾ ಮಾಯಾವಾದತಮೋಽಖಿಲಂ । ನಿರಸ್ತಂ ತತ್ವವಾದೇನ ಸತಾಂ ಸಂಶಯನುತ್ತಯೇ ॥ ೨೮ ॥**

ಅ ॥ ಇತಿ=ಹೀಗೆ, ಸರ್ವಜ್ಞಮುನಿನಾ=ಆನಂದತೀರ್ಥಾಚಾರ್ಯರಿಂದ, ಅಖಿಲಂ= ಸಮಸ್ತವಾದ, ಮಾಯಾವಾದತಮಃ, ಮಾಯಾವಾದ=ಮಾಯಿಶಾಸ್ತ್ರವೆಂಬ, ತಮಃ= ಕತ್ತಲೆಯು, ತತ್ವವಾದೇನ=ದ್ವೈತಶಾಸ್ತ್ರದಿಂದ, ಸತಾಂ=ಸಜ್ಜನರಿಗೆ, ಸಂಶಯನುತ್ತಯೇ

ಸಂಶಯ=(ಅದ್ವೈತವೇ ಶಾಸ್ತ್ರಾರ್ಥವೋ ಅಥವಾ ವಿಷ್ಣುಸರ್ವೋತ್ತಮತ್ವವೇ ಶಾಸ್ತ್ರಾರ್ಥವೋ ಎಂಬ) ಸಂಶಯದ, ನುತ್ತಯೇ=ನಾಶಕ್ಕೋಸ್ಕರ, ನಿರಸ್ತಂ=ನಿರಾಕರಿಸಲ್ಪಟ್ಟಿತು. ॥ ೨೮ ॥

ತಾ ॥ ಈ ಪ್ರಕರಣಕ್ಕೆ ಮೇಲೆ ಇರದ ಸಂಶಯನಿವೃತ್ತಿಯು ಅವಾಂತರ ಪ್ರಯೋಜನವು, ಮೋಕ್ಷವೇ ಮುಖ್ಯ ಪ್ರಯೋಜನವೆಂದು ತಾತ್ಪರ್ಯವು. ॥ ೨೮ ॥

ಪ್ರಕರಣಾರ್ಥವನ್ನು ಸಮಾಪ್ತಿಮಾಡಿ ಈ ಪ್ರಕರಣದಲ್ಲಿ ಹೇಳಿದ ವಿಷ್ಣುಸರ್ವೋತ್ತಮತ್ವವನ್ನೇ ಹೇಳತಕ್ಕ ಭಾರತವಾಕ್ಯವನ್ನು ಮಂಗಳರೂಪವಾಗಿ ಪಠಿಸುತ್ತಾರೆ—

**ಮೂ ॥ ನಾಸ್ತಿ ನಾರಾಯಣಸಮಂ ನ ಭೂತಂ ನ ಭವಿಷ್ಯತಿ । ಏತೇನ ಸತ್ಯವಾಕ್ಯೇನ ಸರ್ವಾರ್ಥಾನ್ ಸಾಧಯಾಮ್ಯಹಮ್ ॥**

**ಇತಿ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯ ವಿರಚಿತಂ**
**ಮಾಯಾವಾದ ಖಂಡನಂ ಸಂಪೂರ್ಣಂ.**

ಅ ॥ ನಾರಾಯಣಸಮಂ=ನಾರಾಯಣನಿಗೆ ಸಮಾನವಾದ ವಸ್ತುವು, ನಾಸ್ತಿ=ಈಗ ಇಲ್ಲ, ನ ಭೂತಂ=ಮುಂಚೆ ಇರಲಿಲ್ಲ, ನ ಭವಿಷ್ಯತಿ=ಇನ್ನು ಮುಂದೆಯೂ ಇರಲಾರದು. ಏತೇನ=ಈ ದಾವ, ಸತ್ಯವಾಕ್ಯೇನ=ಯಥಾರ್ಥವಾಕ್ಯದಿಂದ, ಅಹಂ=ನಾನು, ಸರ್ವಾರ್ಥಾನ್ ಸರ್ವ=ಸಮಸ್ತಗಳಾದ, ಅರ್ಥಾನ್=ಅರ್ಥಗಳನ್ನು, ಸಾಧಯಾಮಿ=ಸಾಧಿಸುತ್ತೇನೆ.

ತಾ ॥ ಇದರಿಂದ ಈ ಪ್ರಕರಣದಲ್ಲಿ ಹೇಳಿದ ಸರ್ವೋತ್ತಮನಾದ ಪರಮ ಮಂಗಳರೂಪನಾದ ವಿಷ್ಣುವಿನ ಸಂಕೀರ್ತನೆಯನ್ನು ಮಾಡಿದುದರಿಂದ ಗ್ರಂಥಾಂತ್ಯದಲ್ಲಿ ಪರಮಮಂಗಳವನ್ನು ಮಾಡಿದ ಹಾಗಾಯಿತು. ॥ ೨೮ ॥

ಸಾಂದ್ರಭಕ್ತಿಮರಂದ್ರಾರ್ದ್ರ ಮಧ್ವಮಾನಸ ಪಂಕಜೇ ।
ವಸಂತಂ ಸಂತತಂ ಕಂಸಧ್ವಂಸಿ ಹಂಸಂ ಭಜೇನಿಶಂ ॥

**ಇಂತು ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತ**
**ಮಾಯಾವಾದಖಂಡನದ ಕನ್ನಡವ್ಯಾಖ್ಯಾನವು ಮುಗಿದುದು.**

**ವಿಬುಧಪ್ರಿಯತೀರ್ಥಾತ್ತ ಕೌಶಲೇನ ಪ್ರಪಂಚಿತಂ ।**
**ರಾಮಾಚಾರ್ಯೇಣ ಕರ್ಣಾಟವಾಙ್ಮಯಾ ಮಾಯಿವಿಖಂಡನಂ ॥**

॥ ಶ್ರೀ ಕೃಷ್ಣಾರ್ಪಣಮಸ್ತು ॥



॥ ಶ್ರೀಃ ॥

# ಪ್ರಪಂಚಮಿಥ್ಯಾತ್ವಾನುಮಾನಖಂಡನದ ಮುನ್ನುಡಿ.

॥ ಶ್ರೀಮಧ್ವವಲ್ಲಭವೇದವ್ಯಾಸಾಯ ನಮಃ ॥

"ನಮೋಽಗಣಿತಕಲ್ಯಾಣಗುಣಪೂರ್ಣಾಯ ವಿಷ್ಣವೇ ।
ಸತ್ಯಾಶೇಷಜಗಜ್ಜನ್ಮಪೂರ್ವಕರ್ತ್ರೇ ಮುರದ್ವಿಷೇ ॥"

**ಸೂಚನೆ:—** ಜಗತ್ತು ಸತ್ಯವೆಂದು ವಾದಿಸುವ ಸತ್ಯವಾದಿಯು ಒಂದು ಪುಸ್ತಕವನ್ನು ಹತ್ತಿರ ಇಟ್ಟುಕೊಂಡು ಕೂತಿರುವನು. ಅಲ್ಲಿಗೆ ಜಗತ್ತು ಮಿಥ್ಯೆಯೆಂದು ವಾದಿಸುವ ಮಿಥ್ಯಾವಾದಿಯು ಬರುವನು. ಸತ್ಯವಾದಿಯು ಆತನಿಗೆ ಸ್ವಾಗತವನ್ನು ಕೊಡದೆ, ಸುಮ್ಮನೆ ನೋಡುತ್ತ ಕೂತಿರುವನು. ಅನಂತರ ಅವರಿಗೆ ಈ ಸಂಭಾಷಣೆಯು ನಡೆಯುವುದು.

**ಮಿಥ್ಯಾವಾದಿಯು-** ಏನು ರಾಯರೆ! ಕ್ಷೇಮವೇ? ನನ್ನನ್ನು ಮರೆತುಬಿಟ್ಟಂತೆ ಕಾಣುತ್ತದೆ. "ನೀನು ಯಾರು, ಬಾ, ಕೂತುಕೋ" ಎಂದು ಸಾಮಾನ್ಯವಾಗಿ ಅಪರಚಿತರು ಬಂದರೂ ಹೇಳುವುದುಂಟು. ಇದೂ ಕೂಡ ತಾವು ಹೇಳದೆ ಇರುವುದನ್ನು ಕಂಡು ನನಗೆ ಆಶ್ಚರ್ಯವಾಗುತ್ತದೆ. ಹಳೆಯ ಸ್ನೇಹಿತರನ್ನು 3 ತಿಂಗಳು ಕಾಣದಿದ್ದರೆ ಹೀಗೆ ಮರೆಯುವುದುಂಟೇ?

**ಸತ್ಯವಾದಿಯು-** 'ವಿಶ್ವಂ ಮಿಥ್ಯಾ ದೃಶ್ಯತ್ವಾತ್' (ಎಲ್ಲವೂ ಸುಳ್ಳಾದದ್ದು. ಕಾಣಿಸುವುದರಿಂದ).

**ಮಿಥ್ಯಾ-** (ಸ್ವಗತ—ಈ ರಾಯನಿಗೆ ಹುಚ್ಚು ಹಿಡಿತೇನು? ಬಂದವನನ್ನು ನುಂಗುವಂತೆ ರೆಪ್ಪೆಹಾಕದೆ ನೋಡುತ್ತಿದ್ದಾನೆ. ಬಾ, ಇಲ್ಲ, ಹೋಗು, ಇಲ್ಲ. ಮಾತನಾಡಿಸಿದರೆ ಬಾಯಿಗೆ ಬಂದಂತೆ ಒದರುತ್ತಾನೆ. ಆಗಲಿ, ಇದರ ತತ್ವವನ್ನು ತಿಳಿಯುವೆನು.) ಪ್ರಕಾಶ-ರಾಯರೆ! ನಾನು, ಗುರುತು ತಿಳಿಯಲಿಲ್ಲವೇ? ನಿಮ್ಮ ಮಿತ್ರನು, ಶಾಸ್ತ್ರಿಯು.

**ಸತ್ಯ-** ಓಹೋ! ನೀವೇ ಬನ್ನಿ, ಕೂತುಕೊಳ್ಳಿರಿ.

**ಮಿಥ್ಯಾ-** ತಾವು ಮೊದಲು ಏನೋ ಹೇಳಿದಿರಲ್ಲವೇ, ಅದೇನು?

**ಸತ್ಯ-** ಅದೇ ನನ್ನನ್ನು ಇಷ್ಟು ಬುದ್ಧಿಗೇಡಿಯನ್ನು ಮಾಡಿತು. 'ವಿಶ್ವಂ ಮಿಥ್ಯಾ ದೃಶ್ಯತ್ವಾತ್' ತಾವು ನನ್ನ ಕಣ್ಣಿಗೆ ಕಾಣಿಸುವುದರಿಂದ, ತಾವು ಮಿಥ್ಯೆಯಾಗಿರಬಹುದೆಂದು ಯೋಚಿಸಿದೆನು. ಆದುದರಿಂದ ಮಾತನಾಡಲಿಲ್ಲ.

**ಮಿಥ್ಯಾ-** ರಾಯರೆ, ನಿಮಗೆ ಯಾವಾಗಲು ನಮ್ಮ ಮತದಲ್ಲಿ ಹುಳುಕು ತೆಗೆಯುವುದೇ ಕಸಬಾಗಿದೆ. 'ವಿಶ್ವಂ ಮಿಥ್ಯಾ ದೃಶ್ಯತ್ವಾತ್' ಎನ್ನುವುದೇನೋ ನಿಜವೇ. ಈ ಉತ್ತಮಾನುಮಾನವನ್ನು ಇಷ್ಟು ಸುಲಭದಲ್ಲೇ ನಿರಾಕರಿಸಲಾಗುವುದಿಲ್ಲ. ನೀವು ಹಾಸ್ಯವನ್ನು ಬಿಟ್ಟು ಸಾವಧಾನದಿಂದ ವಿಚಾರಮಾಡುವುದಾದರೆ ಅದನ್ನು ನಿಮಗೆ ರೂಪಿಸಿಕೊಡುತ್ತೇನೆ.

**ಸತ್ಯ-** ಈ ಪುಸ್ತಕದಲ್ಲಿ, ನಿಮ್ಮ ಉತ್ತಮವಾದ ಅನುಮಾನವನ್ನು ಖಂಡಿಸಿರುತ್ತಾರೆ.

**ಮಿಥ್ಯಾ-** ಇಷ್ಟು ಚಿಕ್ಕ ಪುಸ್ತಕದಲ್ಲೇ? ಅದು ಬರೆದವರಾರು. ಅದರ ಹೆಸರೇನು?

**ಸತ್ಯ-** ಇದರ ಹೆಸರು ಪ್ರಪಂಚಮಿಥ್ಯಾತ್ವಾನುಮಾನಖಂಡನವೆಂದು.

**ಮಿಥ್ಯಾ-** ಅಪ್ಪಪ್ಪ! ಆಕಾರ ಚಿಕ್ಕದಾದರೂ, ಅರ್ಭಟೆಯು ಬಲವಾಗಿದೆ. ಇದೇನು ಇಷ್ಟು ದೊಡ್ಡ ಹೆಸರು.

**ಸತ್ಯ-** ಪ್ರಪಂಚ+ಮಿಥ್ಯಾತ್ವ+ಅನುಮಾನ+ಖಂಡನವು.

ಇದರಲ್ಲಿ ಮೊದಲು ಮೂರು ಮಾತುಗಳನ್ನು ನಿಮ್ಮ ಮತದ ಪ್ರಕರಣವನ್ನು ತಿಳಿಸುವುದಕ್ಕಾಗಿ ಹೇಳಿದೆ. ನಾಲ್ಕನೆಯ ಮಾತು ಈ ಪುಸ್ತಕದ ಉದ್ದೇಶವನ್ನು ತಿಳಿಸುವುದಕ್ಕಾಗಿ ಹೇಳಿದೆ. ಇದು ಶ್ರೀ ಮಧ್ವಾಚಾರ್ಯರು ರಚಿಸಿದ ಪ್ರಕಣಗಳಲ್ಲೊಂದು. ಇದಕ್ಕೆ ಜಯತೀರ್ಥರು ಒಂದು ಟೀಕೆಯನ್ನು, ಶ್ರೀ ವ್ಯಾಸರಾಯರು, ಶ್ರೀನಿವಾಸತೀರ್ಥರು ಟಿಪ್ಪಣಿಗಳನ್ನು ಬರೆದಿರುವರು. ಇದಲ್ಲದೆ ಶ್ರೀ ಜಯತೀರ್ಥರು ಇದೇ ವಿಷಯವನ್ನು ವಿಸ್ತಾರವಾಗಿ **'ವಾದಾವಳಿ'** ಎಂಬ ಸ್ವತಂತ್ರ ಗ್ರಂಥದಲ್ಲಿ ನಿರೂಪಿಸಿರುವರು. ಇದಕ್ಕೆ ಶ್ರೀ ರಾಘವೇಂದ್ರ ಸ್ವಾಮಿಗಳವರು **'ಭಾವದೀಪಿಕೆ'** ಎಂಬ ವ್ಯಾಖ್ಯಾನವನ್ನು ಬರೆದಿರುವರು. ಮತ್ತು ಶ್ರೀ ವ್ಯಾಸರಾಯರು ನ್ಯಾಯಾಮೃತವೆಂಬ ಗ್ರಂಥದಲ್ಲಿ ಇದೇ ಅನುಮಾನದ ದೂಷಣೆಯನ್ನು ಬಹು ಚಮತ್ಕಾರದಿಂದ ಮಾಡಿರುವರು. ಮಧುಸೂದನ ಸರಸ್ವತಿಗಳೆಂಬುವರು ನ್ಯಾಯಾಮೃತಕ್ಕೆ ಖಂಡನರೂಪವಾಗಿ **ಅದ್ವೈತಸಿದ್ಧಿ** ಎಂಬುವ ಗ್ರಂಥವನ್ನು ಬರೆದರು. ಈ ಖಂಡನಕ್ಕೆ ಖಂಡನವಾಗಿ ರಾಮಾಚಾರ್ಯರೆಂಬುವರು **ತರಂಗಿಣಿ** ಎಂಬುವ ಗ್ರಂಥವನ್ನು ಬರೆದರು. ಆದುದರಿಂದ ಈ ಪ್ರಕರಣವು ಚಿಕ್ಕದಾದರೂ ಇದರ ಗಲಾಟೆಯು ದೊಡ್ಡದಾಗಿದೆ.

**ಮಿಥ್ಯಾ-** ಏನು ಬರೆದಿದ್ದಾರೋ ಸ್ವಲ್ಪ ಕೇಳೋಣ, ದಯವಿಟ್ಟು ಓದಿ.

**ಸತ್ಯ-** "ವಿಮತಂ ಮಿಥ್ಯಾ, ದೃಶ್ಯತ್ವಾತ್, ಯದಿತ್ಥಂ ತತ್ತಥಾ, ಯಥಾ ಸಂಪ್ರತಿಪನ್ನಂ" (ವಿಮತವು ಮಿಥ್ಯೆಯು, ದೃಶ್ಯತ್ವದ ದೆಸೆಯಿಂದ, ಯಾವುದು ಇಂತಹುದೋ ಅದು ಅಂತಹುದೇ. ಉಭಯವಾದಿಗಳಿಗೆ ಸಮ್ಮತವಾದದ್ದಂತೆ).

**ಮಿಥ್ಯಾ-** ಇದು ನಮ್ಮ ಅನುಮಾನವನ್ನು ಅನುವಾದ ಮಾಡಿದ್ದೆಂದು ತಿಳಿಯಬೇಕೋ? ನೀವು "ವಿಶ್ವಂ ಮಿಥ್ಯಾ" ಎಂದು ಮೊದಲು ಹೇಳಿದಿರಿ. ಇಲ್ಲಿ 'ವಿಮತಂ ಮಿಥ್ಯಾ' ಎಂದು ಹೇಳಿರುವುದು. ಅದು ಏಕೆ?

**ಸತ್ಯ-** "ವಿಮತಂ" ಎಂದರೆ ವ್ಯಾಜ್ಯವಿಲ್ಲವು. ಯಾವುದು ನಮ್ಮೊಳಗೆ ವಿವಾದಕ್ಕೆ ವಿಷಯವೋ ಅದೇ ವಿಮತವು. ಈ ಪದವನ್ನು ಉಪಯೋಗಿಸಿದರೆ, ನಿಮ್ಮ ಅನುಮಾನಕ್ಕೆ ಬಲವು. ಅಲ್ಲದೆ "ವಿಶ್ವಂ" ಎಂಬ ಪದವನ್ನು ಉಪಯೋಗಿಸಿದರೆ, ನಾವು ಆಕ್ಷೇಪಿಸುವುದಕ್ಕೆ ಅವಕಾಶ ಕೊಡುತ್ತದೆ. 'ವಿಶ್ವ' ಶಬ್ದಕ್ಕೆ ಪ್ರಪಂಚವೆಂದೂ, ಸರ್ವವೆಂದೂ, ಪರಮಾತ್ಮನೆಂದೂ (ವಿಶ್ವಂ ವಿಷ್ಣುರ್ವಷಟ್ಕಾರಃ ಎಂದು ವಿಷ್ಣುಸಹಸ್ರನಾಮವು), ಅರ್ಥಗಳಿರುವುವು. ಪರಮಾತ್ಮನು ಮಿಥ್ಯೆಯಲ್ಲವೆಂದು, ನಿಮ್ಮ ಒಪ್ಪಿಗೆ ಇದೆ. 'ವಿಶ್ವಂ ಮಿಥ್ಯಾ' ಎಂದರೆ ಪರಮಾತ್ಮನು ಮಿಥ್ಯೆಯೆಂದು ಹೇಳಿದರೋ ಎಂದು ಆಶಂಕಿಸುವುದಕ್ಕೆ ಅವಕಾಶವಾಗುವುದು. ಮತ್ತು (ವಿಶ್ವಂ 'ಮಿಥ್ಯಾ' ಅಂದರೆ ಸಮಸ್ತವು ಮಿಥ್ಯೆಯೆಂದಂತೆ ಆಗುವುದು. ಅದರಲ್ಲಿ ಪರಮಾತ್ಮನು ದೃಷ್ಟಾಂತವಾದ ಶುಕ್ತಿರಜತವು ಅಡಗಿಹೋಗುವುವು. ಇಂತಹ ಆಕ್ಷೇಪಗಳಿಗೆ ಸ್ಥಲವಿಲ್ಲದಂತೆ 'ವಿಮತಂ' ಎಂಬ ಶಬ್ದವನ್ನು ಉಪಯೋಗಿಸಿರುವರು. ಇದೇ ಕಾರಣದಿಂದ "ಯಥಾ ಶುಕ್ತಿರಜತಂ" ಎಂದು ಉಪಯೋಗಿಸದೆ, "ಯಥಾ ಸಂಪ್ರತಿಪನ್ನಂ" ಎಂದು ಉಪಯೋಗಿಸಿರುವರು. ಆದಷ್ಟುಮಟ್ಟಿಗೆ ಆಕ್ಷೇಪಕ್ಕೆ ಅವಕಾಶಕೊಡದೆ ಇರುವ ಪದಗಳನ್ನು ಉಪಯೋಗಿಸಬೇಕೆಂಬ

ಅಭಿಪ್ರಾಯದಿಂದಲೇ ಈ ಪದಗಳನ್ನು ಉಪಯೋಗಿಸಿರುವರು. ನಾವು ಸತ್ಯವೆಂದೂ, ನೀವು ಮಿಥ್ಯೆಯೆಂದೂ ಹೇಳುವ ವಸ್ತುಗಳೆಲ್ಲವು, ವಿಮತವೆಂಬುವದರಲ್ಲಿ ಅಡಗುವವು. ನಾವು ನೀವು ಇಬ್ಬರು ಕೂಡ ಮಿಥ್ಯೆಯೆಂದು ಒಪ್ಪುವುದು ಯಾವುದಿದ್ದರೂ, ಅವೆಲ್ಲವೂ ಸಂಪ್ರತಿಪನ್ನದಲ್ಲಿ ಸೇರುವುದು. ಅನುಮಾನವನ್ನು ಹೀಗೆ ಅನುವಾದ ಮಾಡಿದುದರಿಂದ ವಿವಾದಕ್ಕೆ ಕಾರಣವಾದ ಪದಗಳು ಎರಡೇ ಉಳಿದವು. 'ಮಿಥ್ಯೆ'ಯೆಂದರೆ ಏನು? 'ದೃಶ್ಯತ್ವ'ವೆಂದರೆ ಏನು? ಇವೆರಡಕ್ಕೆ ನಮಗೆ ತೃಪ್ತಿಯಾಗುವಂತೆ ಅರ್ಥನಿರೂಪಣೆ ಮಾಡಿದರೆ ನಿಮ್ಮ ಅನುಮಾನವನ್ನು ಈಗಲೇ ಅಂಗೀಕರಿಸುವೆನು.

**ಮಿಥ್ಯಾ**- ನಮಗೆ ಇಷ್ಟು ಉಪಕಾರ ಮಾಡಿದ್ದಕ್ಕಾಗಿ ಕೃತಜ್ಞರಾಗಿದ್ದೇವೆ. ಅನುಮಾನಕ್ಕೆ ಪಂಚಾವಯವಗಳು ಇರಬೇಕಲ್ಲವೇ (1) ಪರ್ವತವು ಬೆಂಕಿಯುಳ್ಳದ್ದಾಗಿದೆ. (2) ಹೊಗೆಯದೆಸೆಯಿಂದ, (3) ಅಡಿಗೆ ಮನೆಯಂತೆ, (4) ಪರ್ವತದಲ್ಲಿ ಹೊಗೆಯಿದೆ (5) ಆದುದರಿಂದ ಅಲ್ಲಿಬೆಂಕಿ ಇದೆ.- ಈ ರೀತಿಯಾಗಿ ನಾವು ಅನುಮಾನವನ್ನು ಪ್ರಯೋಗಿಸುವೆವು. ಇದರಲ್ಲಿ ನಾಲ್ಕನೆ, ಐದನೆ ಅವಯವಗಳಾದ, ಉಪನಯ, ನಿಗಮನಗಳನ್ನು ಈ ಪುಸ್ತಕದಲ್ಲಿ ಏಕೆ ಉಪಯೋಗಿಸಲಿಲ್ಲ.

**ಸತ್ಯ**- ಅವುಗಳು ಅನಾವಶ್ಯಕಗಳು, ಉಪನಯವು ಎರಡನೆ ಅವಯವದಲ್ಲಿ ಅಡಗಿದೆ, ನಿಗಮನವು ಒಂದನೆಯದರಲ್ಲಿ ಅಡಗಿದೆ. ಅನಾವಶ್ಯಕಗಳಾದ ಪದಗಳನ್ನು ಉಪಯೋಗಿಸಿದರೆ ಅಧಿಕವೆಂಬ ನಿಗ್ರಹಸ್ಥಾನವು ಪ್ರಾಪ್ತವಾಗುವುದು. ಇದನ್ನು ಪ್ರಮಾಣಲಕ್ಷಣದಲ್ಲಿ ಸ್ಪಷ್ಟವಾಗಿ ತಿಳಿಸಿರುತ್ತಾರೆ.

**ಮಿಥ್ಯಾ**- ಆಗಲಿ ಈ ಅನುಮಾನಕ್ಕೆ ನೀವು ಹೇಳುವ ದೋಷವೇನು?

**ಸತ್ಯ**- ಅನುಮಾನವು ದೋಷಪುಂಜವಾಗಿದೆ ಎಂದು, ಮತ್ತು ಎಲ್ಲಾ ಅನುಮಾನ ದೋಷಗಳಿಗೂ ಇದು ನಿದರ್ಶನವಾಗಿದೆ. "ಸರ್ವ ಏತೇ ದೋಷಾಃ ದೃಶ್ಯತ್ವಾನುಮಾನೇ ದ್ರಷ್ಟವ್ಯಾಃ" ಎಂದು ಪ್ರಮಾಣಲಕ್ಷಣದಲ್ಲಿ ಶ್ರೀಮದಾಚಾರ್ಯರು ತೋರಿಸಿರುವರು.

**ಮಿಥ್ಯಾ**- ಪ್ರಮಾಣಲಕ್ಷಣದ ಮಾತುಹಾಗಿರಲಿ. ಈಗ ಈ ಪ್ರಕರಣದ ವಿಚಾರವನ್ನು ಮಾತ್ರ ಮಾಡೋಣ. ನಮ್ಮ ಅನುಮಾನಕ್ಕೆ ಏನುಏನು ದೋಷಗಳನ್ನು ಹೊರಿಸುವರೋ ಅವುಗಳನ್ನು ಒಂದೊಂದಾಗಿ ಹೇಳಿದರೆ ತಕ್ಕ ಸಮಾಧಾನವನ್ನು ಕೊಡುವೆನು. ಸುಮ್ಮನೆ ದೋಷಪುಂಜವೂ, ಗೀಷಪುಂಜವೂ ಅಂದರೆ ಫಲವೇನು?

**ಸತ್ಯ**- ದೋಷ ಪುಂಜನೆಂದು ಹೇಳಿದುದು ತಪ್ಪಾದರೆ ಕ್ಷಮಿಸಬೇಕು. ನಾವು ಪಂಚಾವಯವವನ್ನು ಉಪಯೋಗಿಸದೆ ಇದ್ದದ್ದು ದೋಷವೆಂದು ಹೇಳಿದಿರಿ. ಹೀಗೆ ನಮ್ಮೊಳಗೆ ಜಗಳ ಬರಬಾರದು. ಆದುದರಿಂದ ತಾವು ಸಂಕ್ಷೇಪವಾಗಿ ತಮ್ಮ ನ್ಯಾಯಗಳನ್ನು ನನಗೆ ತಿಳಿಸಿದರೆ ಅವುಗಳನ್ನನುಸರಿಸಿಯೇ ನಿಮ್ಮ ಅನುಮಾನಕ್ಕೆ ತಗಲುವ ದೋಷಗಳಿದ್ದರೆ ತಿಳಿಸುವೆನು.

**ಮಿಥ್ಯಾ**- ಇದು ಒಳ್ಳೆಯ ಕ್ರಮವೇ. ಉಪನಯನಿಗಮನಗಳು ನಿಮಗೆ ಅನಾವಶ್ಯಕಗಳಾದುದರಿಂದ, ನಾನು ಅವುಗಳನ್ನು ಪ್ರಕೃತಕ್ಕೆ ಬಿಟ್ಟು ಬಿಡುತ್ತೇನೆ. "ಯದಿತ್ಥಂ ತತ್ತಥಾ" ಎಂಬುವುದು ವ್ಯಾಪ್ತಿಯನ್ನು ಮಾತ್ರ ತಿಳಿಸುವುದರಿಂದ ಅದನ್ನು ಬಿಟ್ಟು ಬಿಡೋಣ. ಉಳಿದುದು ಇಷ್ಟು ಮಾತ್ರ (1) ವಿಮತಂ ಮಿಥ್ಯಾ (2) ದೃಶ್ಯತ್ವಾತ್ (3) ಯಥಾ ಸಂಪ್ರತಿಪನ್ನಂ. ಧೂಮಾನುಮಾನವನ್ನು ಮೂರು ಅವಯವಗಳಿಂದ ಹೇಳಿದರೆ ಹೀಗಾಗುತ್ತದೆ. (1) ಪರ್ವ

ತವು ಅಗ್ನಿಯುಳ್ಳದ್ದಾಗಿದೆ (2) ಹೊಗೆಯು ದೆಸೆಯಿಂದ (3) ಅಡಿಗೆಯು ಮನೆಯಂತೆ. ಅನುಮಾನಗಳ ಸಾಮಾನ್ಯಾಕಾರವನ್ನು ಹೀಗೆ ತೋರಿಸಬಹುದು.

(1) A B (2) C (3) D ಇಲ್ಲಿ ವಿಮತವು ಪರ್ವತವು A ಸ್ಥಾನದಲ್ಲಿರುವವು. ಮಿಥ್ಯೆ, ಅಗ್ನಿ ಇವುಗಳು B ಸ್ಥಾನದಲ್ಲಿರುವುವು. ಸಂಪ್ರತಿಪನ್ನವಾದ ಶುಕ್ತಿರಜತವು, ಅಡಿಗೆ ಮನೆಯೂ ಇವುಗಳು D ಸ್ಥಾನದಲ್ಲಿರುವುವು. D ಸ್ಥಾನದಲ್ಲಿರುವುದು ದೃಷ್ಟಾಂತ ಎನಿಸಿಕೊಳ್ಳುವುದು. C ಸ್ಥಾನದಲ್ಲಿರುವುದು ಹೇತುವೆನಿಸಿಕೊಳ್ಳುವುದು. ಇದಕ್ಕೆ ಲಿಂಗವೆಂದೂ, ಸಾಧನವೆಂದೂ ಹೆಸರಿರುವುದು. B ಸ್ಥಾನದಲ್ಲಿರುವುದಕ್ಕೆ ಸಾಧ್ಯವೆಂದೂ, ವಿಶೇಷಣವೆಂದೂ ಹೆಸರಿರುವುದು. A ಸ್ಥಾನದಲ್ಲಿರುವುದಕ್ಕೆ ಆಶ್ರಯವೆಂದೂ, ಧರ್ಮಿಯೆಂದೂ ಹೆಸರಿರುವುದು.

"A. B." ಗೆ ಪಕ್ಷವೆಂದು, ಪ್ರತಿಜ್ಞೆಯ ಅರ್ಥವು ಎಂದೂ ಹೆಸರಿರುವುದು. ಪಕ್ಷದಲ್ಲಿರುವ ಧರ್ಮದ ಸಮಾನವಾದ, ಧರ್ಮವಿರುವುದು ಸಪಕ್ಷವು. ಅಂದರೆ B ಮತ್ತು C ಕೂಡಿರುವದೂ B ಮಾತ್ರವಿರುವುದು, A ಅಲ್ಲದ ಇತರವಾದದ್ದು ಸಪಕ್ಷವು. ಧೂಮಾನುಮಾನದಲ್ಲಿ ಅಡಿಗೆ ಮನೆಯು ಸಪಕ್ಷವು. B ಮತ್ತು C ಎರಡು ಇಲ್ಲದೆ ಇರುವುದೂ B ಮಾತ್ರ ಇಲ್ಲದಿರುವುದೂ ವಿಪಕ್ಷವು. ಧೂಮಾನುಮಾನಕ್ಕೆ ನೀರುತುಂಬಿದ ಸರೋವರವು ವಿಪಕ್ಷವಾಗುವುದು. (ಇವುಗಳ ವಿಶೇಷನಿರೂಪಣೆಯನ್ನು ಪ್ರಮಾಣಲಕ್ಷಣದಿಂದ ತಿಳಿಯಬೇಕು.) ಇಲ್ಲಿವರೆಗೆ ನಿಮಗೂ ನಮಗೂ ಏನಾದರೂ ಭಿನ್ನಾಭಿಪ್ರಾಯವಿರುವುದೋ?

**ಸತ್ಯ-** ತಾವು ಹೇಳಿದ್ದೆಲ್ಲ ನಮಗೆ ಒಪ್ಪಿಗೆಯಾಗಿಯೇ ಇದೆ.

**ಮಿಥ್ಯಾ-** ಅನುಮಾನದ ದೋಷಗಳು ಅನೇಕವಿರುವವು. ಅವುಗಳನ್ನೆಲ್ಲಾ ವಿವರಿಸಬೇಕೆಂದು ಅಪೇಕ್ಷಿಸುವಿರೇನು?

**ಸತ್ಯ-** ಅನೇಕ ದೋಷಗಳೇ! ನಾವು ವಿರೋಧ, ಅಸಂಗತಿ, ನ್ಯೂನ, ಸಂವಾದ, ಅನುಕ್ತಿ ಇಷ್ಟೇದೋಷಗಳನ್ನು ಒಪ್ಪುವೆವು.

**ಮಿಥ್ಯಾ-** ಹಾಗಾದರೆ ನೀವು (1) ಅಶ್ರಯಾಸಿದ್ಧಿ (2) ಅಪಸಿದ್ಧಾಂತ (3) ಅಪ್ರಸಿದ್ಧ ವಿಶೇಷಣತಾ (4) ಸಿದ್ಧಸಾಧನತಾ (5) ಅನೈಕಾಂತಿಕ (6) ಅನಧ್ಯವಸಿತ (7) ಕಾಲಾತ್ಯಯಾಪದಿಷ್ಟ (8) ಪ್ರಕರಣ ಸಮ (9) ಸಪ್ರತಿಸಾಧನ (10) ಸಾಧ್ಯವೈಕಲ್ಯ (11) ಸಾಧನವೈಕಲ್ಯ (12) ಉಪಾಧಿ ಇತ್ಯಾದಿಗಳು ದೋಷಗಳೆಂದು ಹೇಳುವದಿಲ್ಲವೇ. ಇವೆಲ್ಲವು ಅನುಮಾನ ದೋಷಗಳೆಂದು ನಾವು ಅಂಗೀಕರಿಸುವೆವು.

**ಸತ್ಯ-** ನಿಮ್ಮ ಅನುಮಾನವನ್ನು ದೂಷಿಸಬೇಕಾದರೆ ನಿಮ್ಮ ನ್ಯಾಯಗಳನ್ನೇ ಅನುಸರಿಸಬೇಕು. ನಮ್ಮ ನ್ಯಾಯಗಳು ಪ್ರಯೋಜನಗಳಾಗುವುದಿಲ್ಲ. ನಾವು ಆಶ್ರಯಾಸಿದ್ಧಿಯನ್ನು ದೋಷವೆಂದು ಒಪ್ಪುವುದಿಲ್ಲ, ಇದನ್ನು ಪ್ರಮಾಣಲಕ್ಷಣದಲ್ಲಿ ಆಚಾರ್ಯರು ಪರಿಷ್ಕರಿಸಿರುತ್ತಾರೆ. ನೀವು ಅದನ್ನು ದೋಷವೆಂದು ಗ್ರಹಣಮಾಡಿರುವುದರಿಂದ ಪ್ರಕೃತಕ್ಕೆ ಅದು ದೋಷವೆಂದೇ ಇಟ್ಟುಕೊಳ್ಳುವೆನು. ನೀವು ಹೇಳಿದ ಇತರ ದೋಷಗಳು ವಿರೋಧಾದಿಗಳಲ್ಲೇ ಅಡಗಿದ್ದರೂ ಪ್ರಕೃತಕ್ಕೆ ಅವುಗಳೆಲ್ಲವೂ, ಬೇರೆ ಬೇರೆ ದೋಷಗಳೆಂದೇ ಇಟ್ಟುಕೊಳ್ಳುವೆನು.

**ಮಿಥ್ಯಾ-** ನಮ್ಮ ನ್ಯಾಯಗಳನ್ನು ಹೇಳಿ ಆಯಿತು. ಇನ್ನು ತಾವು ನಮ್ಮ ಅನುಮಾನದಲ್ಲಿ ತಪ್ಪುಗಳನ್ನು ಆರಿಸಬಹುದು.

**ಸತ್ಯ-** ನಿಮ್ಮ ಅನುಮಾನದಲ್ಲಿ ಎರಡು ಮಾತುಗಳಿಗೆ ನನಗೆ ಅರ್ಥವಾಗಲಿಲ್ಲ. ಅದನ್ನು ಮೊದಲು ಸ್ಪಷ್ಟಪಡಿಸಬೇಕೆಂದು ಪ್ರಾರ್ಥಿಸುವೆನು.

**ಮಿಥ್ಯಾ-** ಅವು ಯಾವ ಮಾತುಗಳು?

**ಸತ್ಯ-** ಹಿಂದೆ ಹೇಳಿದವುಗಳೇ, ಮಿಥ್ಯೆಯೆಂದರೇನು? ದೃಶ್ಯತ್ವವೆಂದರೇನು?

**ಮಿಥ್ಯಾ-** ಮಿಥ್ಯೆ ಯೆಂದರೆ ನಿಮಗೆ ಗೊತ್ತಿಲ್ಲವೇ? ಅದು ಸರ್ವಸಾಮಾನ್ಯವಾಗಿ ಉಪ ಯೋಗಿಸುವ ಮಾತಾಗಿದೆ.

**ಸತ್ಯ-** ನಾವು ಮಿಥ್ಯೆಯೆಂದರೆ ಸುಳ್ಳು ಎಂದು ಅರ್ಥಮಾಡುತ್ತೇವೆ. ಶಶವಿಷಾಣವು (ಮೊಲದ ಕೊಂಬು) ವಂಧ್ಯಾಸುತನು (ಬಂಜೆಯ ಮಗನು) ಗಗನಾರವಿಂದವು (ಆಕಾಶದಲ್ಲಿ ಹುಟ್ಟಿದ ಪುಷ್ಪವು), ಇತ್ಯಾದಿಗಳು ಅಸತ್ತುಗಳು ಸುಳ್ಳಾದವುಗಳು. ಇಂತಹುಗಳನ್ನು ನಾವು ಮಿಥ್ಯೆಯೆಂದು ಹೇಳುವೆವು.

**ಮಿಥ್ಯಾ-** ನಾನೂ ಅದೇ ಅರ್ಥವನ್ನು ಇಟ್ಟುಕೊಳ್ಳುವೆನು. ಅನುಮಾನಕ್ಕೇನ:ದೋಷ ಬಂತು.

**ಸತ್ಯ-** ಹಾಗಂದರೆ ಆಶ್ರಯಾಸಿದ್ಧಿಯೆಂಬ ದೋಷ ಬರುವುದಿಲ್ಲವೇ? ವಿಮತವೆಂಬ ಪದ ವನ್ನು ಸದ್ಯಃ ಬಿಟ್ಟು ಜಗತ್ತೆಂದು ಅದರ ಸ್ಥಾನದಲ್ಲಿ ಇಟ್ಟುಕೊಂಡರೆ ಪ್ರತಿಜ್ಞೆಯು ಹೀಗಾಗು ವುದು.

"ಜಗತ್ತು ಅಸತ್ತಾದದ್ದು" "ಜಗತ್ತು ಸುಳ್ಳಾದದ್ದು" ಜಗತ್ತು ಇಲ್ಲವೇ ಇಲ್ಲವೆಂದಾದರೆ ಆಶ್ರಯವೇ ಇಲ್ಲದೆಹೋಗುವುದು. ಅನುಮಾನದಲ್ಲಿ ಆಶ್ರಯವಿಲ್ಲದಿದ್ದರೆ ಆಶ್ರಯಾಸಿದ್ಧಿಯೆಂಬ ದೋಷವೆಂದು ನಿಮ್ಮ ಒಪ್ಪಿಗೆ ಇರುವುದರಿಂದ ನಮ್ಮ ಅರ್ಥವನ್ನು ಅಂಗೀಕರಿಸಿದರೆ ನಿಮ್ಮ ಅನು ಮಾನವು ದೋಷಗ್ರಸ್ತವಾಗುವುದು. ಅದಲ್ಲದೆ ನಿಮ್ಮ ಪೂರ್ವಾಚಾರ್ಯರು ಮಿಥ್ಯೆಯೆಂದರೆ ಸುಳ್ಳೆಂದು ಒಪ್ಪಲಿಲ್ಲ. ನೀವು ಈ ಅರ್ಥವನ್ನು ಅಂಗೀಕರಸಿದರೆ ಅವರನ್ನು ಕೈಬಿಟ್ಟಂತೆ ಆಗು ವುದು. ಇದೇ ಅಪಸಿದ್ಧಾಂತವೆಂಬ ದೋಷವು.

**ಮಿಥ್ಯಾ-** ನಾನು ಆಲೋಚಿಸದೆ ನಿಮ್ಮ ಅರ್ಥವನ್ನು ಒಪ್ಪುವೆನೆಂದು ಹೇಳಿ ಮೋಸ ಹೋದೆನು. ಮಿಥ್ಯೆಯೆಂದರೆ ಅನಿರ್ವಚನೀಯವೆಂದು ನಮ್ಮ ಪೂರ್ವಾಚಾರ್ಯರು ಹೇಳಿರು ತ್ತಾರೆ. ಆ ಅರ್ಥವನ್ನೇ ನೀವು ದೂಷಿಸಬೇಕು.

**ಸತ್ಯ-** ಆಗಲಿ, ಅನಿರ್ವಚನೀಯವೆಂದರೇನು?

**ಮಿಥ್ಯಾ-** ನಿರ್ವಚನಕ್ಕೆ ಅಂದರೆ ಅದು ಇಂತಹುದು ಅಂತಹುದು ಎಂದು ಮಾತು ಗಳಿಂದ ತಿಳಿಸುವುದಕ್ಕೆ ಅಸಾಧ್ಯವಾದದ್ದೆಂದರ್ಥವು.

**ಸತ್ಯ-** ಈಗ ನೀವು ಹೇಳಿದುದೇ ಒಂದು ವಿಧವಾದ ನಿರ್ವಚನವಲ್ಲವೇ? ನಿರ್ವಚನಕ್ಕೆ ಅಶಕ್ಯವೆಂದು ಮಾತುಗಳಿಂದಲ್ಲವೇ ತಿಳಿಸಬೇಕು. ಹಾಗೆ "ನಿರ್ವಚನಕ್ಕೆ ಇದು ಅಸಾಧ್ಯವು" ಎಂದು ಹೇಳಿದರೆ "ನಾನು ಮೂಕನು" ಎಂದಂತೆ ವಿರೋಧಬರುವುದಿಲ್ಲವೇ, ಇದಕ್ಕಲ್ಲವೇ ಸ್ವವ್ಯಾಹತಿ ಎಂಬುವದೋಷವೆಂದು ಹೇಳುವರು. ಮಾತುಗಳಿಂದ ತಿಳಿಸಿದರೆ ವಿರೋಧ ಬರು ತ್ತದೆ ಎಂದು ಮಾತನಾಡದೆ ಸುಮ್ಮನೆ ಇದ್ದರೆ, ಅನನುಭಾಷಣವೆಂಬ (ಪ್ರತ್ಯುತ್ತರ ಕೊಡದೆ ಇರೋಣ) ದೋಷವು ಬರುವುದು. ಆದುದರಿಂದ ಮಾತನಾಡಿದರೂ ತಪ್ಪು, ಮೌನವಾಗಿದ್ದರೂ ತಪ್ಪು ಆಗುವುದು.

**ಮಿಥ್ಯಾ-** ನಿರ್ವಚನಕ್ಕೆ ಅಸಾಧ್ಯವಾದದ್ದು ಅನಿರ್ವಚನೀಯವೆಂಪರೆ ಇದೇ ನಿರ್ವಚನ ಮಾಡಿದಂತೆ ಆಗುವುದೋ? ಎಂದಿಗೂ ಆಗಲಾರದು. ಹಾಗಾಗುವುದಾದರೆ ಪರಮಾತ್ಮನು ನಿರ್ಗುಣನೆಂದು ನಾವು ಹೇಳಿದರೆ, ಗುಣಾಭಾವವೇ ಒಂದು ಗುಣವೆಂದು ನೀವು ಏಕೆ ಅಂಗೀಕರಿಸುವುದಿಲ್ಲ. ಒಬ್ಬ ಮನುಷ್ಯನು ಅಜ್ಞನೆಂದರೆ, ನಿರ್ಧನನೆಂದರೆ ಅಜ್ಞತ್ವ, ನಿರ್ಧನತ್ವ ಇವುಗಳೇ ಒಂದು ವಿಧವಾದ ಜ್ಞಾನವು, ಧನವು ಎಂದು ಯಾರಾದರೂ ಹೇಳುವರೇ. ಅನಿರ್ವಚನೀಯವೆಂದರೆ ಇತರ ವಸ್ತುಗಳನ್ನು ನಿರ್ವಚನ ಮಾಡಿ ಹೇಳುವಂತೆ ಈ ಜಗತ್ತನ್ನು ನಿರ್ವಚನ ಮಾಡಿ ಹೇಳಲಾಗುವುದಿಲ್ಲವೆಂದರ್ಥವು.

**ಸತ್ಯ-** ಜ್ಞಾನ, ಧನ ಇಂತಹುಗಳಲ್ಲಿ ಅವುಗಳ ಅಭಾವವೇ ಭಾವರೂಪವಾದ ಜ್ಞಾನವೆಂದಾಗಲೀ, ಧನವೆಂದಾಗಲೀ ನಾವು ಹೇಳುವುದಿಲ್ಲ. ಜ್ಞಾನ, ಧನ ಇತ್ಯಾದಿಗಳು ಅವುಗಳ ಅಭಾವವು ಕೂಡ ನಿರ್ವಚನೀಯಗಳು. ಪುಸ್ತಕ ಬೇರೆ, 'ಪುಸ್ತಕ'ವೆಂಬ ಮಾತು ಬೇರೆ. ಕುರ್ಚಿ ಬೇರೆ, ಕುರ್ಚಿ ಎಂಬುವ ಮಾತು ಬೇರೆ. ಹೀಗೆ ವಸ್ತುಗಳಿಗೆ ಅವುಗಳನ್ನು ತಿಳಿಸುವ ಮಾತುಗಳಿಗೆ ವಾಚ್ಯ, ವಾಚಕ, ಸಂಬಂಧವಿರುವುದು. ಅನಿರ್ವಚನೀಯವೆಂಬ ಪದಾರ್ಥ ಒಂದು ಇದ್ದರೆ ಅದನ್ನು ನಿರ್ವಚನಮಾಡಬೇಕಾದರೆ 'ಅನಿರ್ವಚನೀಯ' ಎಂಬ ಮಾತಿನಿಂದಲೇ ತಿಳಿಸಬೇಕಲ್ಲದೆ ಬೇರೆ ಅಲ್ಲ. ಆದುದರಿಂದ 'ಪುಸ್ತಕ' 'ಕುರ್ಚಿ' ಹೇಗೆ ಆಯಾ ವಸ್ತುಗಳನ್ನು ನಿರ್ವಚನೆ ಮಾಡುವವೋ ಹಾಗೆಯೇ 'ಅನಿರ್ವಚನೀಯ' ವೆಂಬುದು ನಿರ್ವಚನ ಮಾಡುವುದೆಂದು ಹೇಳಬೇಕು, ಇದೇ ಸ್ವವ್ಯಾಹತಿ. ಇಗಲಿ,—ನೀವು ಅನಿರ್ವಚನೀಯವೆಂದರೆ ಇಂತಹುದು ಅಂತಹುದು ಎಂದು ಹೇಳುವುದಕ್ಕೆ ಅಶಕ್ಯವಾದದ್ದೆಂದು ಹೇಳಿದಿರಿ. ಅಂತಹ ಪದಾರ್ಥವು ಇದೆ, ಎಂದು ನಿಮಗೆ ಹೇಗೆ ಗೊತ್ತಾಯಿತು. ಪ್ರಪಂಚದಲ್ಲಿರುವ ಎಲ್ಲಾ ಪದಾರ್ಥಗಳು ನಿರ್ವಚನಕ್ಕೆ ಯೋಗ್ಯಗಳಾಗಿಯೇ ಇವೆ. ಯಾರಿಂದಲೂ ಇಂತಹುದು, ಅಂತಹುದು ಎಂದು ಹೇಳುವುದು ಅಸಾಧ್ಯವಾದ ಪದಾರ್ಥವನ್ನು ಯಾರೂ ನೋಡಿರುವುದಿಲ್ಲ. ಅದು ನಿಮ್ಮ ಕಲ್ಪನೆಯೇ ಆಗಿರುತ್ತದೆ. ಅಪ್ರಸಿದ್ಧವಾದದ್ದೆ (ಯಾರಿಗೂ ತಿಳಿಯದಿದ್ದದ್ದೇ) ಅನಿರ್ವಚನೀಯವೆಂದರೆ ಅಪ್ರಸಿದ್ಧವಿಶೇಷಣವೆಂಬ ದೋಷವು ತಗಲುತ್ತದೆ.

**ಮಿಥ್ಯಾ-** ಅನಿರ್ವಚನೀಯವೆಂದರೆ ನಿರ್ವಚನಕ್ಕೆ ಅನರ್ಹವೆಂದು ವಿಚಾರಮಾಡದೆ ಹೇಳಿದೆನು. ಅದರ ಅರ್ಥವು ಸದಸದ್ವಿಲಕ್ಷಣವೆಂದೇ ಆಗಿರುತ್ತದೆ. ಮಿಥ್ಯೆಯೆಂದರೆ ಅನಿರ್ವಚನೀಯವು ಅಂದರೆ ಸದಸದ್ವಿಲಕ್ಷಣವು ಎಂದು ತಾವು ತಿಳಿಯಬೇಕು.

**ಸತ್ಯ-** ಸದಸದ್ವಿಲಕ್ಷಣವೆಂದರೇನು?

**ಮಿಥ್ಯಾ-** ಸದ್ವಿಲಕ್ಷಣ, ಅಸದ್ವಿಲಕ್ಷಣ ಎಂದು ಅರ್ಥವು.

**ಸತ್ಯ-** ವಿಲಕ್ಷಣವೆಂದರೆ ಭಿನ್ನವೆಂದರ್ಥವಲ್ಲವೇ? ಜಗತ್ತು ಅಸತ್ತಿನಿಂದ ಭಿನ್ನವೆಂದು ನಾವು ಒಪ್ಪುವೆವು, ಇದನ್ನು ನಮಗೆ ಬೋಧಿಸುವುದು ಅಗತ್ಯವಿಲ್ಲ. ಪ್ರತಿವಾದಿಯು ಒಪ್ಪುವ ವಿಷಯವನ್ನು ಸಾಧಿಸುವುದಕ್ಕೆ ಹೊರಟರೆ ಸಿದ್ಧಸಾಧನವೆಂಬ ದೋಷವೆಂದು ಹೇಳುವರಲ್ಲವೇ.

**ಮಿಥ್ಯಾ-** ಹೌದು ಆದರೆ ಸದಸದ್ವಿಲಕ್ಷಣವೆಂದರೆ, ಸದ್ವಿಲಕ್ಷಣಬೇರೆ, ಅಸದ್ವಿಲಕ್ಷಣ ಬೇರೆ ಹೀಗೆ ಎರಡು ವಿಶೇಷಣಗಳನ್ನು ಹೇಳಿದನೆಂದು ನೀವು ಅಭಿಪ್ರಾಯ ಪಟ್ಟಿರುವಿರಿ. ಹಾಗಲ್ಲ. ಸದಸದ್ವಿಲಕ್ಷಣವೆಂದರೆ ಎರಡು ವಿಶೇಷಣಗಳು ಒಟ್ಟುಕೂಡಿರುವುದಕ್ಕೆ ಹೆಸರು.

**ಸತ್ಯ-** ಹಾಗಾದರೂ ಸಿದ್ಧಸಾಧನವೇ ಆಗುವುದು. ಈಗ ಪರ್ವತದಲ್ಲಿ ಒಬ್ಬನಿಗೆ ಬೆಂಕಿ ಇರುವುದು ತಿಳಿಯುವುದಿಲ್ಲ. ಆದರೆ ಅಲ್ಲಿ ಕಲ್ಲು ಇರುವುದುತಿಳಿದಿರುತ್ತದೆ, ಅವನಿಗೆ

ಪರ್ವತದಲ್ಲಿ ಕಲ್ಲು ಬೆಂಕಿ ಇವೆರಡು ಕೂಡಿ ಇರುತ್ತವೆ ಎಂದುಹೇಳಿದರೆ ಕಲ್ಲು ಇರುವುದು ಪೂರ್ವದಲ್ಲಿ ತಿಳಿದಿರುವುದರಿಂದ ಆ ಮಟ್ಟಿಗೆ ಸಿದ್ಧಸಾಧನವೇ ಆಗುವುದು. ಅದೇ ರೀತಿಯಾಗಿ ನಮಗೆ ಜಗತ್ತು ಅಸದ್ವಿಲಕ್ಷಣವೆಂದು ತಿಳಿದಿರುವುದರಿಂದ ಸದ್ವಿಲಕ್ಷಣದಿಂದ ಕೂಡಿದ ಅಸದ್ವಿಲಕ್ಷಣವೆಂದು ಬೋಧಿಸಿದರೆ ಸಿದ್ಧಸಾಧನವೇ ಆಗುವುದು.

**ಮಿಥ್ಯಾ**- ಸದ್ವಿಲಕ್ಷಣ ಅಸದ್ವಿಲಕ್ಷಣಗಳು ಕೂಡಿರುವದೆಂದರೆ ಎಣ್ಣೀ ನೀರಿನಂತೆ ಕೂಡಿರುವನಲ್ಲ. ಹಾಲುನೀರಿನಂತೆ ಕೂಡಿರುತ್ತದೆ ಎಂದು ತಿಳಿಯಬೇಕು. ಅವುಗಳನ್ನು ವಿಂಗಡಿಸುವುದಕ್ಕೆ ಬರುವುದಿಲ್ಲ. ಅವೆರಡು ಸೇರಿ ಅಖಂಡವಾದ ಒಂದೇ ವಿಶೇಷಣವಾಗುವುದು.

**ಸತ್ಯ**- ಹಾಗಾದರೂ ಸಿದ್ಧಸಾಧನವೇ ಆಗುವುದು. ಹಾಲು ನೀರುಸೇರಿದರೆ ಅದಕ್ಕೆ ಹಾಲೆಂದು ಹೇಗೆ ಹೆಸರು ಬರುವುದೋ, ಅದರಂತೆ ಸದ್ವಿಲಕ್ಷಣವು ಅಸದ್ವಿಲಕ್ಷಣವು ಒಟ್ಟಿ ಕೂಡಿ ವಿಂಗಡಿಸುವುದಕ್ಕೆ ಬಾರದಿದ್ದರೆ ಅದನ್ನು ಸದ್ವಿಲಕ್ಷಣವೆಂದೇ ಹೇಳಬೇಕು. ಅಂದರೆ ಸತ್ತಾದ ಪದಾರ್ಥದಿಂದ ಭಿನ್ನವೆಂದು ಆಯಿತು. ಇದಕ್ಕೆ ನಮ್ಮ ಒಪ್ಪಿಗೆ ಇದೆ. ಪರಮಾತ್ಮ, ಜೀವ, ಪ್ರಪಂಚದಲ್ಲಿರುವ ಅನಂತ ಪದಾರ್ಥಗಳು ಪರಸ್ಪರ ಭಿನ್ನವೆಂದು ನಾವು ಅಂಗೀಕರಿಸುವೆವು. ಆದುದರಿಂದ ಜಗತ್ತು ಸತ್ಯದಿಂದ ಭಿನ್ನವಾದದ್ದೆಂದು ಹೇಳಿದರೆ ಸಿದ್ಧಸಾಧನವೇ ಆಗುವುದು.

**ಮಿಥ್ಯಾ**- ಸದಸತ್ ಎಂದು ಯಾವುದು ಇರುವುದೋ, ಅದರಿಂದ ಭಿನ್ನವಾದದ್ದೇ ಸದಸದ್ವಿಲಕ್ಷಣವೆಂದು ಹೇಳುವೆನು.

**ಸತ್ಯ**- ಹಾಗಾದರೂ ಸಿದ್ಧಸಾಧನವೇ ಆಗುವುದು. ಜಗತ್ತು ಸದಸತ್ ಎಂದು ನಾವು ಒಪ್ಪುವುದಿಲ್ಲ. ಅದು ಸತ್ ಎಂದು ಹೇಳುವೆವು. ಆದುದರಿಂದ ಸದಸತ್ತಿನಿಂದ ಭಿನ್ನವೆಂದರೂ ದೋಷವು ತಪ್ಪುವುದಿಲ್ಲ.

**ಮಿಥ್ಯಾ**- ಸತ್ತು ಪರಬ್ರಹ್ಮ ಒಂದೇ. ಶಶವಿಷಾಣಾದಿಗಳು ಅಸತ್ತುಗಳು. ಸದಸದ್ವಿಲಕ್ಷಣವೆಂದರೆ ಇವೆರಡೂ ಅಲ್ಲದದು ಎಂದರ್ಥ.

**ಸತ್ಯ**- ಹಾಗಾದರೂ ಸಿದ್ಧಸಾಧನವೇ ಆಗುವುದು. ಪರಬ್ರಹ್ಮನಿಂದ ಜಗತ್ತು ಭಿನ್ನವೆಂದು ನಾವು ಒಪ್ಪುವೆವು. ಶಶವಿಷಾಣದಿಂದ ಭಿನ್ನವೆಂದು ಪೂರ್ವದಲ್ಲೇ ತಿಳಿಸಿರುವೆವು. ಆದುದರಿಂದ ದೋಷವು ತಪ್ಪಲಿಲ್ಲ.

**ಮಿಥ್ಯಾ**- ನಾವು ಹೇಳುವ ಸದಸದ್ವಿಲಕ್ಷಣದ ಪ್ರಕಾರಗಳೆಲ್ಲವು ನಿಮಗೆ ಸಿದ್ಧಸಾಧನವೇ ಆದರೆ ಯಾವ ಸದಸದ್ವಿಲಕ್ಷಣವು ನಿಮಗೆ ಅನಿಷ್ಟವೋ ಅದೇ ಮಿಥ್ಯೆಯೆಂದು ಹೇಳುವೆನು. ಇದಕ್ಕೇನು ದೋಷ ಹೇಳುತ್ತೀರಿ?

**ಸತ್ಯ**- ಸಿದ್ಧಸಾಧನವಿಲ್ಲವಾದರೂ ಪೂರ್ವದಲ್ಲಿ ಹೇಳಿದ ಇನ್ನೊಂದು ದೋಷವು ತಪ್ಪಲಿಲ್ಲ. ಹಿಂದೆ ಹೇಳಿದ ಪ್ರಕಾರಗಳಲ್ಲದ ಸದಸದ್ವಿಲಕ್ಷಣವು ನಮ್ಮ ಅನುಭವದಲ್ಲಿಲ್ಲ. ಮತ್ತು ನಿಮಗಾದರೂ ಅದು ಕೇವಲ ಮಾತುಗಳೇ ಹೊರತು ಅನುಭವಸಿದ್ಧಿಲ್ಲ. ಯಾರಿಗೂ ತಿಳಿಯದೇ ಇರುವ ಸದಸದ್ವಿಲಕ್ಷಣವನ್ನು ಕೈಕೊಂಡರೆ ಅಪ್ರಸಿದ್ಧವಿಶೇಷಣವೆಂಬ ದೋಷವು ತಗಲುವುದು. ಅದೂ ಅಲ್ಲದೆ ಒಂದೊಂದು ಸಲವೂ, ನೀವು 'ಸದ್ವಿಲಕ್ಷಣ' 'ಅಸದ್ವಿಲಕ್ಷಣ'ವೆಂದು ಹೇಳುವುದೇಕೆ? ವಾದಿ ಪ್ರತಿವಾದಿಗಳಿಗೆ ಜಗತ್ತು ಅಸದ್ವಿಲಕ್ಷಣವೆಂದು ಸಮ್ಮತಿ ಇರುವಲ್ಲಿ ಅದನ್ನು ಹೇಳುವುದು ವ್ಯರ್ಥವಲ್ಲವೇ. ಸದ್ವಿಲಕ್ಷಣವನ್ನು ಮಾತ್ರ ನೀವು ಸಾಧಿಸಿದರೆ ಸಾಕಾಗುವುದು.

**ಮಿಥ್ಯಾ-** ಹಾಗಾದರೆ ಮಿಥ್ಯೆಯೆಂದರೆ ಸತ್ಯವಿವೇಕವೆಂದು ಹೇಳುವೆನು.

**ಸತ್ಯ-** ಸತ್ಯವಿವೇಕವೆಂದರೇನು? ಸದ್ವಿಲಕ್ಷಣಕ್ಕೂ ಇದಕ್ಕೂ ಏನುಭೇಧವಿರುವುದು.

**ಮಿಥ್ಯಾ-** ಸದ್ವಿಲಕ್ಷಣವೆಂದರೆ ನಿಮಗೆ ಸಿದ್ಧಸಾಧನೆಯಾಗುವುದೆಂದು ಹೇಳಿದುದರಿಂದ ಸತ್ಯವಿವೇಕವೆಂದು ಹೇಳಬೇಕಾಯಿತು. ಅಂದರೆ ಸತ್ಯತ್ವಕ್ಕೆ ಅನಾಶ್ರಯುವಾದದು, ಸತ್ಯತೆ ಇಲ್ಲದುದು ಎಂದರ್ಥವು. ಸತ್ಯ ವಸ್ತುವಿನಿಂದ ಭಿನ್ನವಾದ ಇನ್ನೊಂದು ಸತ್ಯವಸ್ತು ಎಂದರ್ಥವಲ್ಲ.

**ಸತ್ಯ-** ಸತ್ಯತೆ ಇಲ್ಲದ್ದು ಎಂದರೆ ಅಸತ್ಯವೆಂದೇ ಅರ್ಥವಾಗುವುದು, ಸತ್ಯವೆಂದರೆ ಏನೆಂದು ಭಾವಿಸಿರುವಿರಿ.?

**ಮಿಥ್ಯಾ-** ಸತ್ಯವೆಂದರೆ ಪಾರಮಾರ್ಥಿಕ ಸತ್ಯವು. ಸತ್ಯತ್ವಕ್ಕೆ ಆಶ್ರಯುವಲ್ಲದದು ಸತ್ಯವಿವೇಕವು. ಇದೇ ಮಿಥ್ಯೆಯು. ಇಂತಹ ಮಿಥ್ಯೆಯೇ ಈ ಜಗತ್ತು.

**ಸತ್ಯ-** ಪಾರಮಾರ್ಥಿಕ ಸತ್ಯವೆಂದರೆ ಏನೆಂದು ನೀವು ತಿಳಿಸಬೇಕು.

**ಮಿಥ್ಯಾ-** ವ್ಯಾವಹಾರಿಕವಲ್ಲದದು ಪಾರಮಾರ್ಥಿಕವು.

**ಸತ್ಯ-** ಹಾಗಾದರೆ ಸತ್ಯವಿವೇಕವೆಂದರೆ ಅಪಾರಮಾರ್ಥಿಕವು. ವ್ಯಾವಹಾರಿಕವಲ್ಲದ್ದಲ್ಲವೆಂದು ಹೇಳಿದಂತೆ ಆಯಿತು. ಅಂದರೆ ವ್ಯಾವಹಾರಿಕವೆಂದೇ ಆಯಿತು. ಜಗತ್ತು ವ್ಯಾವಹಾರಿಕವೆಂದು (ವ್ಯವಹಾರಕ್ಕೆ ಯೊಗ್ಯವಾದದ್ದೆಂದು) ನಾವು ಒಪ್ಪುವೆವು. ಸಿದ್ಧಸಾಧನವು ತಪ್ಪಲಿಲ್ಲ.

**ಮಿಥ್ಯಾ-** ಉಭಯರೂ ಜಗತ್ತು ವ್ಯಾವಹಾರಿಕವೆಂದು ಒಪ್ಪಿದರೆ ಇನ್ನು ನಮ್ಮೊಳಗೆ ವಿವಾದವೇಕೆ? ವ್ಯಾವಹಾರಿಕವೆಂದರೆ ಏನು ಅರ್ಥಮಾಡುತ್ತೀರಿ.

**ಸತ್ಯ-** ನಮಗೆ ಪಾರಮಾರ್ಥಿಕ ಬೇರೆ, ವ್ಯಾವಹಾರಿಕ ಬೇರೆ ಹೀಗೆ ಎರಡು ವಿಧ ಸತ್ಯವಿಲ್ಲ. ಅರ್ಥಕ್ರಿಯಾಕಾರಿತ್ವವೇ ಸತ್ಯಕ್ಕೆ ಗುರುತು. ಯಾವ ಪದಾರ್ಥವು ಅದರ ಯೋಗ್ಯವಾದ ಕೆಲಸಕ್ಕೆ ಉಪಯೋಗಿಸುವುದೋ ಅದು ಸತ್ಯವೇ. ಪುಸ್ತಕವು ಓದುವುದಕ್ಕೂ, ಕುರ್ಚಿಯು ಕೂತುಕೊಳ್ಳುವುದಕ್ಕೂ ಉಪಯೋಗಿಸುವುವು. ಅವುಗಳು ಸತ್ಯಗಳು. ಮೊಲದ ಕೊಂಬು, ಆಕಾಶಪುಷ್ಪ ಇವುಗಳು ಯಾವ ಕೆಲಸಕ್ಕೂ ಬರುವುದಿಲ್ಲ. ಅವು ಮಾತುಗಳೇ ಸರಿ. ಅವು ಅಸತ್ಯಗಳು. ಅಸತ್ತಿಗೆ ಉತ್ಪತ್ತಿಸ್ಥಿತಿನಾಶಗಳು ಇಲ್ಲ. ಸತ್ತಿಗೆ ಉತ್ಪತ್ತಿಸ್ಥಿತಿನಾಶ ಇರುವುದು. ಗಡಿಗೆಯೇ ಮೊದಲಾದ ಕೆಲವು ಪದಾರ್ಥಗಳಿಗೆ ಸ್ವರೂಪತಃ ಉತ್ಪತ್ತಿನಾಶಗಳೂ, ಜೀವರಿಗೆ ದೇಹಸಂಬಂಧವಿಯೋಗರೂಪಗಳಾದ ಉತ್ಪತ್ತಿನಾಶಗಳೂ, ಪ್ರಕೃತಿಗೆ ವಿಕಾರತದ ಭಾವರೂಪಗಳಾದ ಉತ್ಪತ್ತಿವಿನಾಶಗಳೂ, ಇದೇ ರೀತಿಯಾಗಿ ಒಂದೊಂದು ವಿಧಗಳಾದ ಅಸ್ವತಂತ್ರ ಪದಾರ್ಥಗಳಿಗೆ ಒಂದೊಂದು ವಿಧಗಳಾದ ಉತ್ಪತ್ತಿ ನಾಶಗಳು ಇರುತ್ತವೆ. ಎಲ್ಲಾ ಪದಾರ್ಥಗಳಿಗೂ ಸ್ಥಿತಿಯು ಸಮಾನವಾದುದೇ ಸರಿ. ಮಣ್ಣು ಗಡಿಗೆಯಾಗುವುದು. ಗಡಿಗೆ ಒಡೆದರೆ ಮತ್ತು ಮಣ್ಣಾಗುವುದು. ಗಡಿಗೆಗೆ ಉತ್ಪತ್ತಿ ನಾಶಗಳು ಇರುವುವು. ಆದರೆ ಗಡಿಗೆಯು ಅಸತ್ಯವಲ್ಲ, ವಿಕಾರವು ಅಸತ್ಯವಲ್ಲ. ಜೀವನು ದೇಹ ಸಂಬಂಧದಿಂದ ಹುಟ್ಟುವನೆಂದು ಹೇಳಿಸಿಕೊಳ್ಳುವನು. ದೇಹವಿಯೋಗದಿಂದ ಮೃತನಾದನೆಂದೆನಿಸುವನು. ದೇಹಪ್ರಾಪ್ತಿವಿಯೋಗಗಳು ಅಸತ್ಯಗಳಲ್ಲ. ಅನಿತ್ಯವಾದದ್ದು ಅಸತ್ಯವೆಂದು ಹೇಳುವುದಕ್ಕೆ ಏನು ಪ್ರಮಾಣವಿರುವುದಿಲ್ಲ. ಆದುದರಿಂದ ಸತ್ಯವೆಂದರೆ ಅರ್ಥಕ್ರಿಯಾಕಾರಿತ್ವವೆಂಬುವ ಅರ್ಥವನ್ನು ಇಟ್ಟುಕೊಂಡರೆ ಸಿದ್ಧಸಾಧನವಾಗುವುದು. ಆ ಅರ್ಥವನ್ನು ಬಿಟ್ಟರೆ ಅಪಸಿದ್ಧಾಂತವಾಗುವುದು. ಏಕೆಂದರೆ ನಿಮ್ಮ ಪೂರ್ವಾಚಾರ್ಯರು ಜಗತ್ತಿಗೆ ಅರ್ಥಕ್ರಿಯಾಕಾರಿತ್ವವು ಒಪ್ಪಿರುತ್ತಾರೆ.

**ಮಿಥ್ಯಾ**- ಸತ್ಯವೆಂದರೆ ಅಬಾಧ್ಯವೆಂದರ್ಥವು. ಸತ್ಯವಿವೇಕವೆಂದರೆ ತದ್ಭಿನ್ನವು ಅಂದರೆ ಬಾಧ್ಯವು ಎಂದರ್ಥವು. ಇದೇ ಮಿಥ್ಯೆಯು.

**ಸತ್ಯ**- ಬಾಧ್ಯವೆಂದರೇನು? ಮೊದಲು ತಪ್ಪುಜ್ಞಾನಬಂದು ಅನಂತರ ಯಥಾರ್ಥ ಜ್ಞಾನ ಉಂಟಾಗುವುದಕ್ಕಲ್ಲವೇ ಬಾಧ್ಯವೆಂದು ಹೆಸರು. ಹೀಗೆಂದರೂ ಸಿದ್ಧಸಾಧನವೇ ಆಗುವುದು. ಬೌದ್ಧರು ಹೇಳುವಂತೆ ಜಗತ್ತು ಕ್ಷಣಿಕವೆಂದು ವಿಪರೀತ ಜ್ಞಾನಬರಬಹುದು, ಅಥವಾ ಚಾರ್ವಾಕನು ಹೇಳುವಂತೆ ಜಗತ್ತು ಬ್ರಹ್ಮನಿಂದ ಸೃಷ್ಟವಲ್ಲವೆಂದು ತಪ್ಪು ಜ್ಞಾನವು ಬರಬಹುದು. ಶಾಸ್ತ್ರವಿಚಾರದಿಂದ ಈ ವಿಪರೀತ ಜ್ಞಾನಗಳು ನಷ್ಟವಾಗಿ ಜಗತ್ತು ಸ್ಥಾಯಿ ಎಂದು ಬ್ರಹ್ಮನೇ ನಿಮಿತ್ತಕಾರಣನಾಗಿ ಉಳ್ಳದ್ದೆಂದು ನಿಶ್ಚಯುವಾಗುವುದು. ಆದುದರಿಂದ ಜಗತ್ತು ಬಾಧ್ಯವೆಂದು ನಾವು ಅಂಗೀಕರಿಸುವೆವು. ಸಿದ್ಧಸಾಧನವು ತಪ್ಪಲೇ ಇಲ್ಲ.

**ಮಿಥ್ಯಾ**- ಮಿಥ್ಯೆ ಯೆಂದರೆ ಇಂತಹುದು ಎಂದು ತಿಳಿಸುವುದು ನನಗೆ ಕಷ್ಟವಾಗಿದೆ. ಯಾವ ಅರ್ಥವನ್ನು ಹೇಳಿದರೂ ನೀವು ಅದಕ್ಕೆ ಇನ್ನೊಂದರ್ಥವನ್ನು ಕಲ್ಪಿಸುತ್ತಿರುವಿರಿ. ನಿರಾಕ್ಷೇಪವಾದ ಅರ್ಥವನ್ನು ಯೋಚಿಸಿ, ನಾಳೆ ನಿಮಗೆ ಹೇಳುವೆನು. ಇದು ಪ್ರಕೃತ ಇರಲಿ, 'ದೃಶ್ಯತ್ವ' ಅಂದರೆ ಸುಲಭವಷ್ಟೆ. ಅದು ಏಕೆ ನಿಮಗೆ ಅರ್ಥವಾಗಲಿಲ್ಲವೆಂದು ಹೇಳಿದಿರಿ.

**ಸತ್ಯ**- 'ದೃಶ್ಯತ್ವ'ವೆಂದರೆ ಶಬ್ದದ ಅರ್ಥವಾಗಲಿಲ್ಲವೆಂದು ಹೇಳಲಿಲ್ಲ. ದೃಶ್ಯತ್ವ, ಜ್ಞೇಯತ್ವ, ಪ್ರಮೇಯತ್ವ, (ತಿಳಿವಿಕೆತನ) ಇವುಗಳು ಪರ್ಯಾಯ ಪದಗಳಲ್ಲವೇ?

**ಮಿಥ್ಯಾ**- ಹೌದು. ಇದರಲ್ಲಿ ಮತ್ತೇನು ಕಷ್ಟ?

**ಸತ್ಯ**- ದೃಶ್ಯತ್ವವೆಂಬುವುದು ಸತ್ಯವಾದ ದೃಶ್ಯತ್ವವೇ, ಅಸತ್ಯವಾದ ದೃಶ್ಯತ್ವವೇ? ಅಥವಾ ಅನಿರ್ವಚನೀಯ ದೃಶ್ಯತ್ವವೇ?

**ಮಿಥ್ಯಾ**- ಯಾವುದು ಹೇಳಿದರೆ ಏನು ದೋಷವು ಬರುವುದು.

**ಸತ್ಯ**- ಹಾಗಾದರೆ ಕೇಳಬೇಕು. (1) ದೃಶ್ಯತ್ವವೆಂದರೆ ಅಸತ್ತಾದ ದೃಶ್ಯತ್ವವೆಂದು ಹೇಳೋಣ. ಆಗ ದೃಶ್ಯತ್ವವಿಲ್ಲವೆಂದು ಹೇಳಿದಂತಾಯಿತು. ಅನುಮಾನದಲ್ಲಿ ದೃಶ್ಯತ್ವವೆಂಬುವ ಹೇತುವು ಇಲ್ಲದೇ ಹೋದರೆ ಸ್ವರೂಪಾಸಿದ್ಧಿ ಎಂಬ ದೋಷವು ತಗುಲುವುದು. ಹೊಗೆಯು ಇಲ್ಲವಾದರೆ (ಅಸತ್ಯವಾದರೆ) ಬೆಂಕಿಯನ್ನು ಸಾಧಿಸುವುದು ಹೇಗೆ? (2) ದೃಶ್ಯತ್ವವು ಸತ್ಯವೆಂದರೆ ಬ್ರಹ್ಮನು ಒಂದು ಸತ್ಯವು, ದೃಶ್ಯತ್ವವೊಂದು ಸತ್ಯ. ಎರಡು ಸತ್ಯಗಳನ್ನು ಹೇಳಬೇಕಾಗುವುದರಿಂದ ಸತ್ಯವೊಂದೇ ಎಂಬೀ ಅದ್ವೈತಮತವು ಹಾಳಾಗಿ ದ್ವೈತಮತವೇ ಅಂಗೀಕರಿಸಬೇಕಾಗುವುದು. ಆಗ ಅಪಸಿದ್ಧಾಂತವೆಂಬ ದೋಷಬರುವುದು. (3) ಈ ಎರಡು ಪಕ್ಷಗಳನ್ನೂ ಬಿಟ್ಟು ದೃಶ್ಯತ್ವವು ಅನಿರ್ವಚನೀಯವೆಂದರೆ ಹಿಂದೆ ಹೇಳಿದ ದೋಷಗಳೆಲ್ಲವು ಪುನಃ ಪ್ರಾಪ್ತವಾಗುವುವು. ಅನಿರ್ವಚನೀಯವೆಂಬುವುದನ್ನು ನಾವು ಒಪ್ಪುವುದಿಲ್ಲವಾದಕಾರಣ ಸ್ವರೂಪಾಸಿದ್ಧಿಯು ತಪ್ಪುವುದಿಲ್ಲ.

**ಮಿಥ್ಯಾ**- ದೋಷಾರೋಪಣೆಯು ಅಂತ್ಯವಾಯಿತೇ? ಇನ್ನೇನಾದರೂ ಇರುವುದೇ?

**ಸತ್ಯ**- ಇನ್ನು ಅನೇಕದೋಷಗಳಿವೆ, ಕೆಲವನ್ನು ಮಾತ್ರ ಸಂಕ್ಷೇಪವಾಗಿ ಹೇಳಿಮುಗಿಸುವೆನು. ತಮಗೆ ಹೊತ್ತುಹೋಯಿತು. ಆಯಾಸವಾದಂತೆ ತೋರುವುದು.

**ಮಿಥ್ಯಾ**- ಆಯಾಸವೇನೂ ಇಲ್ಲ, ತಾವು ಶಾಸ್ತ್ರವಿಚಾರ ಮಾಡುತ್ತಿದ್ದರೆ ಆಯಾಸ ಪರಿಹಾರವೇ ಆಗುವುದು.

**ಸತ್ಯ-** ಪ್ರತ್ಯಕ್ಷವನ್ನಾಗಲೀ, ಆಗಮುವನ್ನಾಗಲೀ ಅನುಸರಿಸದ ಅನುಮಾನವು ನಿಷ್ಪ್ರಯೋಜನವು. ಮನಸ್ಸಿಗೆ ಬಂದಂತೆ ಅನುಮಾನಗಳನ್ನು ಕಲ್ಪಿಸುವುದಕ್ಕೆ ಶಕ್ಯವಾಗುವುದು. ತನ್ಮೂಲಕ ಯಥಾರ್ಥಜ್ಞಾನ ಉಂಟಾಗುತ್ತದೆಂದು ನಿಶ್ಚಯವಿಲ್ಲ. ಈಗ ನೋಡಬೇಕು.

| | A. | B. | C. | D. |
|---|---|---|---|---|
| (1) | ಜಗತ್ತು- | ಮಿಥ್ಯೆಯು, | ದೃಶ್ಯತ್ವದಿಂದ, | ಶುಕ್ತಿರಜತದಂತೆ. |
| (2) | ಜಗತ್ತು- | ಸತ್ಯವು, | ದೃಶ್ಯತ್ವದಿಂದ, | ಆತ್ಮನಂತೆ. |
| (3) | ಜಗತ್ತು- | ಸತ್ಯವು, | ಪ್ರತ್ಯಕ್ಷಾದಿಗಳಿಗೆ ವಿಷಯವಾದುದರಿಂದ, | ಆತ್ಮನಂತೆ. |
| (4) | ಆತ್ಮನು- | ಮಿಥ್ಯೆಯು, | ದೃಶ್ಯತ್ವದಿಂದ, | ಶುಕ್ತಿರಜತದಂತೆ. |

ಹೀಗೆ ಅನುಮಾನಗಳು ಮಾಡಲಾಗುತ್ತವೆ. ಇವುಗಳ ಪೈಕಿ ಪ್ರಥಮದಲ್ಲಿ ಹೇಳಿದುದು ಮಾತ್ರ ಸದನುಮಾನವೆಂದು ನಿಮ್ಮ ಸಮ್ಮತಿಯಿರುವುದು. ಆದರೆ ಒಂದನೆಯ ಅನುಮಾನವು ಸದನುಮಾನವಾದರೆ ಇತರಗಳು ಅಲ್ಲವೆಂಬುದಕ್ಕೆ ತಕ್ಕಕಾರಣವು ಇರುವುದಿಲ್ಲ. ಆತ್ಮನಲ್ಲಿ ದೃಶ್ಯತ್ವವದೆಯೆಂದು ಅಂಗೀಕರಿಸಬೇಕಾಗುವುದು. ಆತ್ಮನು ಜ್ಞಾನಕ್ಕೆ ವಿಷಯನಲ್ಲವೆಂದರೆ ಶಾಸ್ತ್ರಶ್ರವಣಾದಿಗಳು, ಅನುಮಾನಪ್ರಯೋಗಗಳು, ನಮ್ಮ ಚರ್ಚೆಯು ಎಲ್ಲವು ವ್ಯರ್ಥ ಕಂಠಶೋಷವಾಗುವುದು. ಆತ್ಮನಿಗೆ ದೃಶ್ಯತ್ವವು ಒಪ್ಪಿದರೆ ನಾಲ್ಕನೇ ಅನುಮಾನದಲ್ಲಿ ಹೇಳಿದಂತೆ ಆತ್ಮನು ಮಿಥ್ಯೆಯೆಂದು ಸಾಧಿಸಬಹುದು. ಆತ್ಮನು ಸತ್ಯನೆಂದು ನೀವು ಹೇಳುವುದರಿಂದ ನಾಲ್ಕನೆಯ ಅನುಮಾನವು ವಿಪರೀತಾರ್ಥವನ್ನು ಬೋಧಿಸುವುದು. ಅಲ್ಲದೆ ದೃಶ್ಯತ್ವವೆಂಬುವ ಹೇತುವು ಒಂದು ವಸ್ತುವು (ಆತ್ಮನು) ಸತ್ಯನೆಂದು, ಇನ್ನೊಂದು ವಸ್ತುವು (ಜಗತ್ತು) ಮಿಥ್ಯೆಯೆಂದು ಕೂಡ ಸಾಧಿಸುವುದು. ಇಂತಹ ಹೇತುವು ದುಷ್ಟವಲ್ಲವೇ? ಮತ್ತು ಸತ್ಯನಾದ ಆತ್ಮನನ್ನು ದೃಷ್ಟಾಂತವಾಗಿಟ್ಟುಕೊಂಡರೆ ಜಗತ್ತು ಸತ್ಯವೆಂದು ಸಾಧಿಸಬಹುದು. ದೃಶ್ಯತ್ವವು ಜಗನ್ಮಿಥ್ಯಾತ್ವಕ್ಕೂ ಸತ್ಯತ್ವಕ್ಕೂ ಕೂಡ ಸಾಧನವಾಗುವುದು. ಈ ದೋಷಕ್ಕೆ ಪ್ರಕರಣಸಮವೆಂದು ಹೆಸರು. ಹೇತುವನ್ನು ಬದಲಾಯಿಸಿದರೆ ಮೂರನೇ ಅನುಮಾನದಲ್ಲಿ ಹೇಳಿದಂತೆ ಜಗತ್ತು ಸತ್ಯವೆಂದು ಸಾಧಿಸಲಾಗುವುದು. ಹೀಗೆ ಅವಕಾಶ ಕೊಡುವುದಕ್ಕೆ ಸಪ್ರತಿಸಾಧನವೆಂದು ಹೆಸರು. ಮತ್ತು ಜಗತ್ತು ಇಲ್ಲವೆಂದರೆ ಅಥವಾ ಅನಿರ್ವಚನೀಯವೆಂದರೆ ಅನುಮಾನವು ಕೂಡ ಜಗತ್ತಿನಲ್ಲಿ ಅಡಗುವುದರಿಂದ ಅದು ಅಸತ್ಯವೆಂದಾಗಲೀ, ಅನಿರ್ವಚನೀಯವೆಂದಾಗಲೀ ಹೇಳಬೇಕಾಗುವುದು. ಅಂತು ಈ ಅನುಮಾನವು ಸತ್ಯವಲ್ಲವೆಂದು ಸಿದ್ಧವಾಯಿತು. ಇನ್ನು ಪ್ರತ್ಯಕ್ಷಕ್ಕೂ, "ವಿಶ್ವಂ ಸತ್ಯಂ" ಇತ್ಯಾದಿ ವೇದ ವಾಕ್ಯಗಳಿಗೂ, ನಿಮ್ಮ ಅನುಮಾನಕ್ಕೂ ವಿರೋಧವಿರುವುದರಿಂದ ಇದಕ್ಕೆ ಕಾಲಾತ್ಯಯಾಪದಿಷ್ಟವೆಂಬ ದೋಷವು ತಗಲುತ್ತದೆ. ಶುಕ್ತಿರಜತದಲ್ಲಿ ಅನಿರ್ವಚನೀಯತ್ವವಿಲ್ಲದಿರುವುದರಿಂದ ಸಾಧ್ಯವಾದ ಅನಿರ್ವಚನೀಯರೂಪಮಿಥ್ಯೆಯು ಇಲ್ಲ. ಸಾಧನವಾದ ಅನಿರ್ವಚನೀಯರೂಪದೃಶ್ಯತ್ವವು ಇರುವುದಿಲ್ಲ. ಈ ಮಿಥ್ಯಾತ್ವಾನುಮಾನವು, ಇವೇ ಮೊದಲಾದ ಅನೇಕ ದೋಷಗಳಿಗೆ ತೌರುಮನೆಯಾಗಿದೆ.

**ಮಿಥ್ಯಾ-** ರಾಯರೆ! ತಾವು ಹೇಳಿದ ದೋಷಗಳಿಗೆ ಉತ್ತರವನ್ನು ಕೊಡುವುದಕ್ಕೆ ನನಗೆ ಸಾಧ್ಯವಾಗದಿದ್ದರೂ, ನನ್ನ ಮನಸ್ಸಮಾಧಾನವಾಗಲಿಲ್ಲ. ನಮ್ಮ ಪೂರ್ವಾಚಾರ್ಯರು ಬುದ್ಧಿವಂತರಲ್ಲವೇ? ಈ ದೋಷಗಳು ಅವರಿಗೆ ಸ್ಫುರಿಸಲಿಲ್ಲವೇ? ಅದು ಏಕೆ ಈ ದುಷ್ಟಾನುಮಾನವನ್ನು ಅವರು ಅಷ್ಟು ಮುಖ್ಯವೆಂದು ಮಾಡಿಕೊಂಡರು.

**ಸತ್ಯ-** ಶುಕ್ತಿರಜತವೆಂಬ ದೃಷ್ಟಾಂತವೇ ಈ ಅನುಮಾನಕ್ಕೆ ಮೂಲಕಾರಣವು. ಇದನ್ನು ಸ್ವಲ್ಪ ವಿವರಿಸುವೆನು. ಲೋಕದಲ್ಲಿ ಸತ್ಯ, ಅಸತ್ಯ ಎಂದು ಎರಡೇ ಇರುವುವು. ನಿಮ್ಮ ಆಚಾರ್ಯರು ಮೂರನೇ ಪ್ರಕಾರವಾದ ಒಂದನ್ನು ಮಿಥ್ಯೆಯೆಂದು ಅಂಗೀಕರಿಸಿರುವುದರಿಂದ ಈ ಜಗತ್ತು ಅಂತಹ ಮಿಥ್ಯೆಯೆಂದು ಸಾಧಿಸುವುದಕ್ಕೆ ತೊಡಗಿದರು. ಶುಕ್ತಿಯಲ್ಲಿ ತೋರುವ ಬೆಳ್ಳಿಯು ಅಸತ್ಯವೇ ಹೊರತು ಸತ್ಯವಲ್ಲ, ಅನಿರ್ವಚನೀಯವೂ ಅಲ್ಲ. ಎಲ್ಲಾ ಪದಾರ್ಥಗಳಲ್ಲಿ ಯಾವುದಾದರೂ ಧರ್ಮಗಳು ಇದ್ದೇ ಇರುವುವು. ಅವು ಸಾಧಾರಣ ಧರ್ಮವೆಂದು, ಅಸಾಧಾರಣ ಧರ್ಮವೆಂದು ವಿಭಾಗಿಸಲಾಗುವುವು. ವಸ್ತುವಿನ ಯಥಾರ್ಥಜ್ಞಾನವು ಮುಖ್ಯವಾಗಿ ಅಸಾಧಾರಣಧರ್ಮದಿಂದಲೇ ಬರುವುದು. ಸಾಧಾರಣಧರ್ಮದ ಜ್ಞಾನಮಾತ್ರ ಬಂದರೆ ಅನೇಕವಾಗಿ ಸಂಶಯವೇ ಉಂಟಾಗುವುದು. ಕೆಲವು ಸಮಯದಲ್ಲಿ ದೋಷದಿಂದ ಆಯಾಯ ಪದಾರ್ಥದಲ್ಲಿರುವ ಅಸಾಧಾರಣ ಧರ್ಮವು ತೋರದೆ ಅದಕ್ಕೆ ಸಮಾನವಾದ ಇನ್ನೊಂದು ಪದಾರ್ಥದ ಅಭೇದವು ಅದರಲ್ಲಿ ತೋರುತ್ತದೆ. ದೋಷಯಾವುದೆಂದರೆ ಬೆಳ್ಳಿಗೂ ಶುಕ್ತಿಗೂ ಥಳಥಳಿಸುವಿಕೆ ಎಂಬುದು ಸಾಧಾರಣ ಅಥವಾ ಸಾಮಾನ್ಯ ಧರ್ಮವು. ಇದರಲ್ಲಿ ಅವುಗಳಿಗೆ ಹೋಲಿಕೆ ಇದೆ. ಹಗ್ಗಕ್ಕೂ, ಹಾವಿಗೂ ವಕ್ರತೆ, ಉದ್ದ ಇವುಗಳು ಸಾಮಾನ್ಯ ಧರ್ಮಗಳು. ಬಿಸಿಲಿನಲ್ಲಿ ಶುಕ್ತಿಯನ್ನು ನೋಡಿದಾಗ, ಕತ್ತಲೆಯಲ್ಲಿ ಹಗ್ಗವನ್ನು ನೋಡಿದಾಗ ಸಾಮಾನ್ಯವಾದ ಧರ್ಮಗಳು ಕಣ್ಣಿಗೆ ಬೀಳುತ್ತವೆ. ಇದೇ ದೋಷವು. ಇದರಿಂದ ಶುಕ್ತಿಯಲ್ಲಿರುವ ಶುಕ್ತಿತ್ವವೆಂಬ ಅಸಾಧಾರಣ ಧರ್ಮವು ತೋರದೆ, ಶುಕ್ತಿಯಲ್ಲಿ ರಜತಾಭೇದ ಜ್ಞಾನವೂ, ಹಗ್ಗದಲ್ಲಿ ಹಾವಿನ ಜ್ಞಾನವೂ ಬರುತ್ತದೆ. ಸಾದೃಶ್ಯವೇ ಇದಕ್ಕೆ ಕಾರಣವು. ಹಾಗಾದರೆ ಅವು ಶುಕ್ತಿ, ಹಗ್ಗವೆಂದು ಏಕೆ ತೋರುವುದಿಲ್ಲ ಎಂದು ಕೇಳಬಹುದು. ಸಾಮಾನ್ಯವಾದ ಧರ್ಮಗಳನ್ನು ನಾವು ಹೆಚ್ಚಾಗಿ ಬೆಳ್ಳಿಯಲ್ಲಿ, ಹಾವಿನಲ್ಲಿ ನೋಡಿರುತ್ತೇವೆ. ಮತ್ತು ಅವುಗಳು ಬೆಳ್ಳಿ ಹಾವುಗಳಿಗೆ ಸಾಮಾನ್ಯವಾದ ಧರ್ಮವೆಂದು ನಮ್ಮ ಅನುಭವವಿರುವುದು. ಆದುದರಿಂದ ಭ್ರಾಂತಿಯುಂಟಾಗುತ್ತದೆ. ಅಸಾಧಾರಣಧರ್ಮ ತಿಳಿದಕೂಡಲೇ ಭ್ರಾಂತಿಹೋಗಿ ಯಥಾರ್ಥಜ್ಞಾನವುಂಟಾಗುತ್ತದೆ. ನಮ್ಮ ಕಣ್ಣಿಗೂ, ಶುಕ್ತಿಗೂ ಸನ್ನಿಕರ್ಷವುಂಟಾಗುತ್ತದೆ ಹೊರತು ಬೆಳ್ಳಿಗೂ ಕಣ್ಣಿಗೂ ಸನ್ನಿಕರ್ಷವೇ ಇಲ್ಲ. ಬೆಳ್ಳಿಯ ಜ್ಞಾನವಿಲ್ಲದವನು ಶುಕ್ತಿಯನ್ನು ನೋಡಿದರೆ, ಬೆಳ್ಳಿ ಎಂದು ಭ್ರಮಿಸಲಾರನು. ಹಾವನ್ನೆಂದೂ ನೋಡದಿದ್ದವನು ಹಗ್ಗವನ್ನು ರಾತ್ರಿ ಕಾಲದಲ್ಲಿ ನೋಡಿದರೂ ಭ್ರಾಂತಿಯುಂಟಾಗಲಾರದು. ಹೋಲಿಕೆಯಿರುವ ಎರಡು ಸತ್ಯ ಪದಾರ್ಥಗಳ ಜ್ಞಾನವಿಲ್ಲದಿದ್ದರೆ ಭ್ರಮೆಯುಂಟಾಗುವುದಸಾಧ್ಯವು. ಅಂದರೆ ಇದು ಭ್ರಾಂತಿಯೆಂದು ತಿಳಿಯುವುದು ಅಸಾಧ್ಯವು. 'ನ ಕುತ್ರಾಪಿ ಸದೃಶಸತ್ಯವಸ್ತುದ್ವಯಂ ವಿನಾ ಭ್ರಮಃ' ಎಂದು ವಿಷ್ಣುತತ್ವನಿರ್ಣಯದಲ್ಲಿ ಆಚಾರ್ಯರು ಹೇಳಿದ್ದಾರೆ. ನಿಮ್ಮ ಮತದಲ್ಲಿ ಬ್ರಹ್ಮನೊಬ್ಬನೇ ಸತ್ಯನೆಂದು ಹೇಳುವುದರಿಂದ ಪ್ರಪಂಚದ ಜ್ಞಾನವು ಭ್ರಾಂತಿಯಾಗಿದ್ದರೆ ಅದು ಹೇಗೆ ಉಂಟಾಗುವುದು? ಬ್ರಹ್ಮನು ತನ್ನನ್ನು ತಾನೇ ನೋಡಿಕೊಂಡು, ತಾನು ಎಂದೂ ನೋಡದೆ ಇದ್ದ ಪ್ರಪಂಚವೆಂದು ಭ್ರಮಿಸುತ್ತಾನೆಂದು ಹೇಳಬೇಕಾಗುವುದು. ಇದು ಎಷ್ಟು ಅಯುಕ್ತವಾಗಿದೆಯೆಂದು ತಾವೇ ಯೋಚಿಸಬೇಕು. ಇನ್ನು ಭ್ರಾಂತಿಯು ಪರಾಧೀನತೆಯಿಂದಲೇ ಉಂಟಾಗುವುದು. ಸ್ವೇಚ್ಛೆಯಿಂದ ಉಂಟಾಗುವುದಿಲ್ಲ. ಕತ್ತಲೆಯೋ, ಹೆಚ್ಚು ಪ್ರಕಾಶವೋ, ಅಜ್ಞಾನವೋ ಇಂತಹ ಯಾವದಾದರೂ ಒಂದು ನಮ್ಮ ಆಧೀನವಲ್ಲದ ಕಾರಣದಿಂದಲೇ ಭ್ರಮೆಯುಂಟಾಗುವುದು. ನಾವು ಇಚ್ಛಿಸಿದರೂ, ಪ್ರಯತ್ನಪಟ್ಟರೂ ಹಗಲಿನಲ್ಲಿ ಹಗ್ಗವನ್ನೂ ಹಾವೆಂದು ಭ್ರಮಿಸಲು ಸಾಧ್ಯವಿಲ್ಲ. ಆಚಾರ್ಯರು ಛಾಂದೋಗ್ಯಭಾಷ್ಯದಲ್ಲಿ "ಅಸ್ವಾತಂತ್ರ್ಯಂ ಚ ಭ್ರಾಂತಸ್ಯ ನಿಶ್ಚಿತಮೇವ

ನ ಹಿ ಭ್ರಮಃ ಸ್ವೇಚ್ಛಯಾ ಯುಜ್ಯತೇ'' ಎಂದು ಹೇಳಿರುವರು. ಪರಮಾತ್ಮಾತಿರಿಕ್ತ ವಸ್ತುವಿಲ್ಲದಿದ್ದರೆ ಭ್ರಮೆಗೆ ಕಾರಣವೇ ಇಲ್ಲ. ಭ್ರಮೆಗೆ ಕಾರಣವಾದ ಅಜ್ಞಾನವೋ ಮತ್ತಾವುದೋ ಒಂದು ಇದ್ದರೆ, ಪರಮಾತ್ಮನು ಪರತಂತ್ರನೆಂದಾಗುವುದಲ್ಲದೆ ಅದ್ವೈತಹಾನಿಯೂ ಆಗುವುದು. ಮತ್ತು ಊರಿನಲ್ಲಿ ಒಬ್ಬ ಕುರುಡನಿದ್ದರೆ ಊರಿನವರೆಲ್ಲಾ ಕುರುಡರೆಂದು ಊಹಿಸಲಾಗುವುದೇ? ಗ್ರಾಮದಲ್ಲಿ ಒಬ್ಬ ಹುಚ್ಚನಿದ್ದರೆ ಪ್ರಪಂಚದ ಜನರೆಲ್ಲಾ ಹುಚ್ಚರೆಂದು ಅನುಮಾನಿಸಬಹುದೇ? ಈ ಅನುಮಾನಕಲ್ಪನೆಗಳು ಅಪಹಾಸ್ಯಗಳೇ ಆಗುವುವು. ಶುಕ್ತಿರಜತ, ರಜ್ಜುಸರ್ಪ ಇತ್ಯಾದಿ ನಾಲ್ಕು ಸ್ಥಲಗಳಲ್ಲಿ ನಮಗೆ ಭ್ರಮೆಯುಂಟಾದರೆ ಪ್ರಪಂಚವೇ ಮಿಥ್ಯೆಯೆಂದು ಹೇಳಬಹುದೇ? ಪ್ರಪಂಚವೆಲ್ಲವೂ ಮಿಥ್ಯೆಯಾದರೆ ನಮಗೆ ಇದು ಸತ್ಯವೆಂದಾಗಲೀ, ಅದು ಮಿಥ್ಯೆಯೆಂದಾಗಲೀ ಭೇದಜ್ಞಾನ ಬರುವುದು ಹೇಗೆ? ಇವೆಲ್ಲವನ್ನೂ ತಾವು ಯೋಚಿಸಿದರೆ ಮಿಥ್ಯಾತ್ವಾನುಮಾನವು ಅಸಂಗತವಾಗಿದೆಯೆಂದು ತಮಗೆ ತಿಳಿಯದೆ ಹೋಗದು.

**ಮಿಥ್ಯಾ-** ರಾಯರೇ! ತಮ್ಮನ್ನು ನೋಡಿ ಬಹಳಕಾಲವಾಯಿತು. ಹೀಗೆ ನೋಡಿ ಕುಶಲಪಶ್ನೆಮಾಡಿ ಹೋಗೋಣವೆಂದು ಬಂದೆನು. ಈ ಹೊತ್ತು ಸುದಿನವು. ಜಗತ್ತು ಮಿಥ್ಯೆಯೆಂಬುವ ನನ್ನ ಅಜ್ಞಾನವು ಪರಿಹಾರವಾಯಿತು. ತಾವು ನನಗೆ ದೊಡ್ಡ ಉಪಕಾರವನ್ನು ಮಾಡಿದಿರಿ. ತಮ್ಮ ಪುಸ್ತಕವನ್ನು ಕೊಟ್ಟರೆ, ಅದನ್ನು ಓದಿ ಉಳಿದ ಅಜ್ಞಾನ ಶೇಷವನ್ನು ಕಳೆದುಕೊಳ್ಳುವೆನು. ತಮಗೆ ಕಚೇರಿಗೆ ಹೋಗುವ ಹೊತ್ತಾಯಿತು. ನನಗೂ ಮನೆಯಲ್ಲಿ ಸ್ವಲ್ಪ ಕೆಲಸವಿದೆ. ಅಪ್ಪಣೆಯಾದರೆ ಬರುವೆನು.

**ಸತ್ಯ-** ಸಂತೋಷದಿಂದ ತಮಗೆ ಈ ಪುಸ್ತಕವನ್ನು ದಾನಮಾಡುವೆನು. ತಾವು ಇದನ್ನು ಚೆನ್ನಾಗಿ ಓದಿದರೆ ಜಗತ್ತು ಸತ್ಯವೆಂದು ನಿಶ್ಚಯವಾಗುವುದು. ಇಂತಹ ಜಗತ್ತನ್ನು ಸೃಷ್ಟಿಸಿ, ನಮ್ಮೆಲ್ಲರನ್ನೂ ರಕ್ಷಿಸುತ್ತಿರುವ ಪರಮಾತ್ಮನನ್ನು ನಾವು ಭಕ್ತಿಪೂರ್ವಕವಾಗಿ ಸೇವಿಸಬೇಕಲ್ಲವೇ. ನಮ್ಮೆಲ್ಲರಿಗೂ ಭಕ್ತಿಜ್ಞಾನಾದಿಗಳನ್ನು ದಯಪಾಲಿಸಲೆಂದು ಆ ಭಗವಂತನನ್ನು ಪ್ರಾರ್ಥಿಸಿ ವಂದಿಸೋಣ.

**ಉಭಯರು-**

''ಯೋ ದೃಶ್ಯತೇ ಸದಾನಂದನಿತ್ಯವ್ಯಕ್ತಚಿದಾತ್ಮನಾ ।
ನಿರ್ದೋಷಾಖಿಲಕಲ್ಯಾಣಗುಣಂ ವಂದೇ ರಮಾಪತಿಂ'' ॥

॥ ಶ್ರೀ ಕೃಷ್ಣಾರ್ಪಣಮಸ್ತು ॥

– ಮಧ್ವಮುನೀಂದ್ರದಾಸ.



ಶ್ರೀಃ

# ಪ್ರಪಂಚಮಿಥ್ಯಾತ್ವಾನುಮಾನಖಂಡನವು.



ಸದ್ವಿಶ್ವಸೃಷ್ಟಿಸ್ಥಿತಿನಾಶಹೇತುಂ ಕೃಷ್ಣಂ ಪುರಾಣಂ ವಿಹಗೇಶಕೇತುಂ ।
ನಮಾಮಿ ನಾಥಂ ವಿಧಿರುದ್ರವಂದ್ಯಂ ರಮಾಭಿರಾಮಂ ಸುಖತೀರ್ಥಹೃದ್ಯಂ ॥

ವಿಶ್ವಮಿಥ್ಯಾತ್ವಾನುಮಾನಖಂಡನಂ ದೇಶಭಾಷಯಾ ।
ವ್ಯಾಖ್ಯಾಮ್ಯಹಂ ಸತಾಂ ಪ್ರೀತ್ಯೈ ತಂತ್ರಿನಾರಾಯಣಾಭಿಧಃ ॥

**ಶ್ರೀಮದ್ಧನುಮದ್ಭೀಮಮಧ್ವಾಂತರ್ಗತರಾಮಕೃಷ್ಣವೇದವ್ಯಾಸಾತ್ಮಕ ಲಕ್ಷ್ಮೀಹಯಗ್ರೀವಾಯ ನಮಃ ॥ ಹರಿಃ ಓಂ ॥**

**ಮೂ ॥ ವಿಮತಂ ಮಿಥ್ಯಾ ದೃಶ್ಯತ್ವಾತ್ ಯದಿತ್ಥಂ ತತ್ತಥಾ ಯಥಾ ಸಂಪ್ರತಿಪನ್ನಂ ॥ ೧ ॥**

ಅ ॥ ವಿಮತಂ=ಸತ್ಯವೋ ಸುಳ್ಳೋ ಎಂದು ವಿವಾದ ವಿಷಯವಾದದ್ದು, ಮಿಥ್ಯಾ=ಮಿಥ್ಯೆಯು, ದೃಶ್ಯತ್ವಾತ್=ದೃಶ್ಯತ್ವವಿರುವುದರಿಂದ, ಯತ್, ಇತ್ಥಂ=ಯಾವುದು ದಶ್ಯವಾದದ್ದೋ, ತತ್, ತಥಾ=ಅದು ಹಾಗೆಯೇ ಮಿಥ್ಯೆಯಾದದು, ಯಥಾ=ಹೇಗೆ, ಸಂಪ್ರತಿಪನ್ನಂ=ಉಭಯವಾದಿಗಳಿಗೆ ಸಮ್ಮತವಾದ ಶುಕ್ತಿರಜತವೋ.

ತಾ ॥(1) ಈ ಪ್ರಕರಣದಲ್ಲಿ ಆಚಾರ್ಯರು ಆದಿಯಲ್ಲಿ ಮಂಗಲದ ನಿಬಂಧನೆಯನ್ನು ಮಾಡದಿದ್ದರೂ, ಕಾಯಿಕವೋ, ಮಾನಸಿಕವೋ ಯಾವುದೋ ಒಂದು ವಿಧವಾದ ಮಂಗಲವನ್ನು ಮಾಡಿ ಇರುತ್ತಾರೆಂದು ಊಹಿಸಬೇಕು. ಆಸ್ತಿಕಶಿಖಾಮಣಿಗಳಾದವರು ಮಂಗಲವನ್ನು ಮಾಡದೆ ಇರಲಾರರು. ಅಂತ್ಯದಲ್ಲಿ ಮಂಗಲದ ನಿಬಂಧನೆಯನ್ನು ಮಾಡಿರುವುದರಿಂದ ಆದಿಯಲ್ಲಿಯೂ ಮಾಡಿರುತ್ತಾರೆಂದು ನಿಶ್ಚಯವಾಗುವುದು.

(2) ಶ್ರೀ ವೇದವ್ಯಾಸರು ಬ್ರಹ್ಮಜಿಜ್ಞಾಸಾ ಮಾಡತಕ್ಕದ್ದೆಂದು ಪ್ರಥಮ ಸೂತ್ರದಲ್ಲಿ ಅಪ್ಪಣೆ ಕೊಟ್ಟರು. ಎರಡನೇ ಸೂತ್ರದಲ್ಲಿ "ಜನ್ಮಾದ್ಯಸ್ಯ ಯತಃ" ಎಂದು ಆ ಪರಬ್ರಹ್ಮನಿಗೆ ಜಗತ್ಸೃಷ್ಟ್ಯಾದಿ ಕಾರಣತ್ವವನ್ನು, ಲಕ್ಷಣತ್ವೇನ ಹೇಳಿದರು. ಜಗತ್ತು ಕಾರ್ಯವು, ಪರಬ್ರಹ್ಮನದಕ್ಕೆ ನಿಮಿತ್ತ ಕಾರಣನೆಂದು ಏರ್ಪಟ್ಟಿತು. ಕಾರಣನಾದ ಪರಬ್ರಹ್ಮನು ಸತ್ಯನೆಂದು ಎಲ್ಲಾ ಆಸ್ತಿಕಮತದವರೂ ಒಪ್ಪುತ್ತಾರೆ. ಆದರೆ ಕಾರ್ಯವಾದ ಜಗತ್ತಿನ ವಿಷಯದಲ್ಲಿ ಭಿನ್ನಾಭಿಪ್ರಾಯಗಳಿವೆ. ಮಣ್ಣು ಗಡಿಗೆ ಆದಂತೆ ಪರಮಾತ್ಮನೇ ಜಗತ್ತಿನ ಆಕಾರವನ್ನು ಹೊಂದುವನೆಂದು ಕೆಲವರು ಹೇಳುವರು. ಇವರು ಪರಿಣಾಮವಾದಿಗಳು (ರಾಮಾನುಜಾದಿಗಳು). ಇನ್ನು ಕೆಲವರು ಹಗ್ಗದಲ್ಲಿ ಹಾವಿನ ಜ್ಞಾನವುಂಟಾದಂತೆ ಸತ್ಯವಾದ ಬ್ರಹ್ಮನಲ್ಲಿ, ಮಿಥ್ಯೆಯಾದ ಜಗತ್ತು ತೋರುವುದೆಂದು ಹೇಳುವರು. ಹೀಗೆ ತೋರುವಿಕೆಯೇ ಸೃಷ್ಟಿಯು. ಇವರು ವಿವರ್ತವಾದಿಗಳು (ಶಾಂಕರರು). ಇನ್ನು ಕೆಲವರು ಬ್ರಹ್ಮನು ಸತ್ಯವಾದ ಪ್ರಕೃತಿಯನ್ನು ಉಪಾದಾನ ಮಾಡಿಕೊಂಡು, ಸತ್ಯವಾದ ಜಗತ್ಸೃಷ್ಟಿಯನ್ನು ಮಾಡುವನೆಂಬುವರು. ಇವರು ಸತ್ಯವಾದಿಗಳು (ಮಾಧ್ವರು). ಜಗತ್ಸೃಷ್ಟಿಯೆಂಬ ಕ್ರಿಯೆಯು ಬ್ರಹ್ಮನಿಗೆ ಲಕ್ಷಣವಾದರೆ ಕಾರ್ಯವಾದ ಜಗತ್ತು ಸತ್ಯವೇ ಆಗಬೇಕಾಗುವುದು. ಘಟಪಟಗಳನ್ನು ಮಾಡುವುದು ಕುಂಬಾರನಿಗೆ, ನೇಯುವವನಿಗೆ ಲಕ್ಷಣವೆಂದರೆ, ಆ ಘಟಪಟಗಳು [illegible]

ವಿಕೆಯು ಅಸತ್ಯವಾಗುವುದು. ಅಂದರೆ ಲಕ್ಷಣವೇ ಅಸತ್ಯವಾಗುವುದು. ಪರಬ್ರಹ್ಮನಿಗೆ ಜಗತ್ಸೃಷ್ಟ್ಯಾದಿಗಳ ಕಾರಣತ್ವವನ್ನು ಪ್ರತಿಪಾದಿಸುವ ಶ್ರುತಿಗಳಿವೆ. ಈ ಲಕ್ಷಣವು ಅಸತ್ಯವಾದರೆ ಶ್ರುತಿಗೆ ಅಪ್ರಾಮಾಣ್ಯವು ಬರುವುದು. ಶ್ರುತ್ಯರ್ಥವನ್ನು ನಿರ್ಣಯಿಸುವುದಕ್ಕಾಗಿ ವೇದವ್ಯಾಸರು ಸೂತ್ರಗಳನ್ನು ನಿರ್ಮಿಸಿದರು. ಆದುದರಿಂದ ಅವರ ಅಭಿಪ್ರಾಯವು ಜಗತ್ತು ಸತ್ಯವೆಂದೇ ಆಗಿರಬೇಕು. ಇದಕ್ಕೆ ವಿರುದ್ಧವಾದ ಅಭಿಪ್ರಾಯಗಳನ್ನು ಇತರರು ಹೇಳುವರು. ಅವುಗಳನ್ನು ದೂಷಿಸದೆ ಇದ್ದರೆ ಯಥಾರ್ಥವು ತಿಳಿಯಲಾರದು. ವಿವಾದಗ್ರಸ್ತವಾದವಿಷಯವನ್ನು ನಿರ್ಣಯಿಸಬೇಕಾದರೆ ಪ್ರಮಾಣಗಳಿಂದಲೇ ಮಾಡಬೇಕು. ಪ್ರತ್ಯಕ್ಷವು ಜಗತ್ತು ಸತ್ಯವೆಂದೇ ತಿಳಿಸುವುದು. ಅದು ವರ್ತಮಾನ ಕಾಲದಲ್ಲಿದ್ದ ಪದಾರ್ಥದ ಜ್ಞಾನವನ್ನು ಮಾತ್ರ ಉಂಟುಮಾಡುವುದು. ಅದ್ವೈತಿಗಳು ಸಹ ಇದನ್ನು ಒಪ್ಪಿ, ಇದಕ್ಕೆ ವ್ಯಾವಹಾರಿಕ ಸತ್ಯವೆಂದು ಒಂದು ಹೆಸರಿಟ್ಟಿರುವರು. ಜಗತ್ತು ಮಿಥ್ಯೆಯೆಂದು, ಬ್ರಹ್ಮಜ್ಞಾನೋದಯವಾದ ನಂತರ ತಿಳಿಯುವದೆಂದು ಅವರು ಹೇಳುವುದರಿಂದ ಅಂತಹ ಮಿಥ್ಯಾತ್ವವನ್ನು ಜ್ಞಾನೋದಯಕ್ಕೆ ಪೂರ್ವದಲ್ಲಿ ಪ್ರತಕ್ಷದಿಂದ ತಿಳಿಯಲು ಸಾಧ್ಯವಿಲ್ಲ. ಆದುದರಿಂದ ಜಗನ್ಮಿಥ್ಯಾತ್ವದಲ್ಲಿ ಪ್ರತ್ಯಕ್ಷವು ಪ್ರಮಾಣವಾಗುವುದಿಲ್ಲವೆಂದು ಅದ್ವೈತಿಗಳು ಒಪ್ಪುವ ವಿಷಯವಾಗಿದೆ. ಆಗಮದಿಂದಲೂ, ಅನುಮಾನದಿಂದಲೂ ಈ ವಿಷಯವನ್ನು ಸಾಧಿಸುವುದಕ್ಕೆ ಪ್ರಯತ್ನಿಸುವರು. ಆಗಮದಿಂದ ಸಾಧಿಸಲು ಶಕ್ಯವಲ್ಲ. ಹಾಗೆ ಸಾಧಿಸುವುದಾದರೆ ಆಗಮಕ್ಕೆ ಅನಾರಂಭಣೀಯತ್ವವು ಒದಗುವುದೆಂದು, ಮಾಯಾವಾದ ಖಂಡನದಲ್ಲಿ ನಿರೂಪಿಸಿ ಮತ್ತು ಆಗಮಗಳ ನಿಜವಾದ ಅಭಿಪ್ರಾಯವು ಜಗತ್ಸತ್ಯತ್ವದಲ್ಲೇ ಇರುತ್ತದೆ. ಎಂದು ಆಚಾರ್ಯರು ತೋರಿಸಿರುವುರು. ಇನ್ನು ಉಳಿದುದು ಅನುಮಾನವು. ಇದರಿಂದಲೂ ಅದ್ವೈತಿಗಳು ಜಗನ್ಮಿಥ್ಯಾತ್ವವನ್ನು ಸಾಧಿಸುವುದಕ್ಕೆ ಉದ್ಯೋಗ ಮಾಡುವರು. ಅದನ್ನು ಈ ಪ್ರಕರಣದಲ್ಲಿ ದೂಷಿಸುವರು.

(3) ಒಂದು ಪದಾರ್ಥವನ್ನು ನೋಡಿದರೆ ಇದು ಇಂತಹುದು ಎಂದು ಜ್ಞಾನಬರುವುದು. ಅದನ್ನೇ ಅನಂತರ ನೋಡಿ, ಇದು ಇನ್ನೊಂದು ವಸ್ತು, ಮುಂಚೆ ನಾವು ತಿಳಿದದ್ದು ತಪ್ಪು ಎಂದು ಜ್ಞಾನಬಂದರೆ ಅದಕ್ಕೆ ಬಾಧವೆಂದು ಹೆಸರು. ಮುಂಚಿನ ಜ್ಞಾನವು ಮಿಥ್ಯಾಜ್ಞಾನವು. ಆ ಪದಾರ್ಥವು ಮಿಥ್ಯೆಯು. ಉದಾಹರಣೆ—ಶುಕ್ತಿ ರಜತ, ರಜ್ಜು ಸರ್ಪ. ಒಂದು ಸತ್ಯ ಪದಾರ್ಥವಿಲ್ಲದಿದ್ದರೆ ಮಿಥ್ಯಾಜ್ಞಾನವು ಬರುವುದಿಲ್ಲ. ಹಗ್ಗವೇ ಇಲ್ಲದಿದ್ದರೆ, ಹಾವೆಂಬುವ ಮಿಥ್ಯಾಜ್ಞಾನಕ್ಕೂ ಅವಕಾಶವಿರುವುದಿಲ್ಲ. ಈ ಸತ್ಯ ಪದಾರ್ಥಕ್ಕೆ ಅಧಿಷ್ಠಾನವೆಂದು ಹೆಸರು. ತೋರುವಿಕೆಗೆ ಅಧ್ಯಾಸವೆಂದು ಹೆಸರು. ತೋರಿದ ಪದಾರ್ಥಕ್ಕೆ ಅಧ್ಯಸ್ತವೆಂದು ಹೆಸರು. ಶುಕ್ತಿಯು ಅಧಿಷ್ಠಾನ, ಬೆಳ್ಳಿಯು ಅಧ್ಯಸ್ತ.

(4) ದೃಶ್ಯತ್ವವೆಂದರೆ ಜ್ಞಾನಕ್ಕೆ ವಿಷಯವಾಗುವತನ ವೆಂದರ್ಥವು. ಕೇವಲ ಕಣ್ಣಿಗೆ ತಿಳಿಯುವತನವೆಂದರ್ಥವಲ್ಲ.

(5) ಶುಕ್ತಿಯನ್ನು ನೋಡಿ ರಜತವೆಂದು ಭ್ರಮಿಸುವೆವು. ಹಗ್ಗವನ್ನು ನೋಡಿ ಹಾವೆಂದು ಭ್ರಮಿಸುವೆವು. ಅನೇಕ ಸ್ಥಲಗಳಲ್ಲಿ ಹೀಗೆ ಭ್ರಾಂತಿಯುಂಟಾಗುವುದು. ಆದುದರಿಂದ ಎಲ್ಲೆಲ್ಲಿ ದೃಶ್ಯತ್ವವಿದೆಯೋ, ಅಲ್ಲಲ್ಲಿ ಮಿಥ್ಯಾತ್ವವಿದೆ ಎಂದು ಊಹಿಸಿ ಅದ್ವೈತಿಗಳು ಜಗನ್ಮಿಥ್ಯಾತ್ವವನ್ನು ಸಾಧಿಸುವುದಕ್ಕೆ ಈ ಅನುಮಾನವನ್ನು ಉಪಯೋಗಿಸುವರು.

(6) ಅನುಮಾನಕ್ಕೆ ವ್ಯಾಪ್ತಿಯೇ ಮೂಲವು. ನೂರಾರು ಸ್ಥಲಗಳಲ್ಲಿ ಹೊಗೆಯಿದ್ದಲ್ಲೆಲ್ಲಾ ಬೆಂಕಿಯಿರುವುದನ್ನು ಕಂಡು, ಮತ್ತು ಹೊಗೆಯಿದ್ದಲ್ಲಿ ಬೆಂಕಿಯಿಲ್ಲದೆ ಇದ್ದದನ್ನು ಎಲ್ಲಿಯೂ

ನೋಡದೆ ಇರುವುದರಿಂದ ವ್ಯಾಪ್ತಿಜ್ಞಾನವುಂಟಾಗುವುದು. ಅನಂತರ ಹೊಗೆಯನ್ನು ನೋಡಿದರೆ ಅಲ್ಲಿ ಬೆಂಕಿ ಇರಬೇಕೆಂದು ತಿಳಿಯುವೆವು. ಹೀಗೆ ದೃಶ್ಯತ್ವವಿದ್ದಲೆಲ್ಲಾ ಮಿಥ್ಯಾತ್ವವನ್ನು ನಾವು ನೋಡಲಿಲ್ಲ. ಕೆಲವು ಸ್ಥಲಗಳಲ್ಲಿ ಮಿಥ್ಯಾತ್ವವನ್ನು ಬಹುಸ್ಥಲಗಳಲ್ಲಿ ಸತ್ಯತ್ವವನ್ನು ಕಾಣುತ್ತೇವೆ. ಆದುದರಿಂದ ವ್ಯಾಪ್ತಿಯೇ ಇಲ್ಲ. ಅಲ್ಲದಿದ್ದರೆ ಉದಾಹರಣ ಸ್ಥಲದಲ್ಲಿ ಶುಕ್ತಿತ್ವವನ್ನು ಬಾಧಕಾನಂತರದಲ್ಲಿ ಏತರಿಂದ ತಿಳಿಯುವೆವು. ದೃಶ್ಯತ್ವದಿಂದಲೇ ಅಲ್ಲವೆ? ಒಬ್ಬಮನುಷ್ಯನಿಗೆ ಕೈಯಲ್ಲಿ ಆರುಬೆರಳು ಇದ್ದದ್ದು ನೋಡಿ, ಮನುಷ್ಯರಿಗೆಲ್ಲಾ ಆರುಬೆರಳಿದೆ ಎಂದು ಅನುಮಾನಮಾಡಬಹುದೇ? ''ಗೋಪಾಲನಿಗೆ ಆರುಬೆರಳಿದೆ ಮನುಷ್ಯತ್ವವಿರುವುದರಿಂದ ದೇವದತ್ತನಂತೆ'' ಈ ಅನುಮಾನಕ್ಕೂ ಮಿಥ್ಯಾತ್ವಾನುಮಾನಕ್ಕೂ ಏನು ಹೆಚ್ಚುಕಡಿಮೆ ಇಲ್ಲವಾದರೂ ಮಿಥ್ಯಾತ್ವಾನುಮಾನದಲ್ಲಿ ಇರುವ ಮುಖ್ಯವಾದ ದೋಷಗಳನ್ನು ತೋರಿಸುವುದಕ್ಕೋಸ್ಕರ ಈ ಪ್ರಕರಣವನ್ನು ಪ್ರಾರಂಭಮಾಡಿ ಅದ್ವೈತಿಗಳ ಅನುಮಾನವನ್ನು ಮೇಲೆ ಅನುವಾದ ಮಾಡಿದ್ದಾರೆ.

(7) ಈ ಅನುಮಾನ ಪ್ರಯೋಗದಲ್ಲಿ ಸರ್ವವೂ ಮಿಥ್ಯೆಯೆಂದು ಹೇಳಿದರೆ, ಸರ್ವದಲ್ಲಿ ಬ್ರಹ್ಮನೂ ಸೇರುವಪ್ರಯುಕ್ತ ಆತನು ಮಾತ್ರ ಮಿಥ್ಯಾಭೂತನಲ್ಲದಿರುವುದರಿಂದ ಪ್ರಮಾಣಬಾಧವೆಂಬ ದೋಷವುಬರುತ್ತದೆ. ಅಲ್ಲದೆ ಸರ್ವದಲ್ಲಿ ಶುಕ್ತಿರಜತವೂ ಸೇರಿರುವುದರಿಂದ ಅದಾದರೂ ಮಿಥ್ಯೆಯೆಂದು ಮೊದಲೇ ನಿಶ್ಚಯವಿರುವುದರಿಂದ ಸಿದ್ಧಸಾಧನವೆಂಬೀ ದೋಷವುಬರುತ್ತದೆ. ಈ ದೋಷಗಳು ಬರುವುವೆಂದೇ ಸರ್ವವೂ ಮಿಥ್ಯೆಯೆಂದು ಹೇಳದೆ'ವಿಮತಂ'ಎಂದು ಹೇಳಿರುತ್ತಾರೆ.

(8) ಇದೇ ಅನುಮಾನದಲ್ಲಿ ವಿಮತವು ಮಿಥ್ಯೆಯೆನದೆ ಆಕಾಶಾದಿಗಳು ಮಿಥ್ಯೆಯೆಂದರೆ ಆದಿಶಬ್ದಾರ್ಥವನ್ನು ಸಂಕೋಚಮಾಡದೆ ಎಲ್ಲಾವಸ್ತುಗಳನ್ನೂ ತೆಗೆದುಕೊಂಡರೆ ಪೂರ್ವೋಕ್ತಗಳಾದ ಬಾಧ, ಸಿದ್ಧಸಾಧನವೆಂಬೀ ಎರಡು ದೋಷಗಳೂ ತಪ್ಪಲಾರವು. ಏಕೆಂದರೆ 'ಆದಿ' ಪದದಲ್ಲಿ ಬ್ರಹ್ಮನು ಶುಕ್ತಿರಜತವೂ ಸೇರಬಹುದು. ಆದಿಪದಾರ್ಥವನ್ನು ಸಂಕೋಚಮಾಡುವ ಪಕ್ಷದಲ್ಲಿ ಯಾವ ಯಾವ ಪದಾರ್ಥಗಳು ಮಿಥ್ಯೆಯೆಂದು ಬಿಡಿಸಿಹೇಳಬೇಕಾಗುತ್ತದೆ. ಆ ಪಕ್ಷದಲ್ಲಿ ಪದಾರ್ಥಗಳು ಅನಂತಗಳಾದುದರಿಂದ ಅವುಗಳನ್ನು ಎಣಿಸತೀರದು. ಕಾರಣ ಆದಿಪದಾರ್ಥವು ಇಂತಹುದೇ ಎಂದು ಒಂದು ಅವಚ್ಛೇದಕವನ್ನು (ಅಂದರೆ ಸಂಗ್ರಹಿಸುವ ಧರ್ಮವನ್ನು) ಹೇಳಬೇಕಾಗುತ್ತದೆ. ಅಂತಹುದು ವಿವಾದ ವಿಷಯವಾದುದಕ್ಕಿಂತ ಬೇರೊಂದಲ್ಲ, ಆಕಾರಣದಿಂದಲೇ, ಆಕಾಶಾದಿಗಳು ಮಿಥ್ಯೆಯೆಂದು ಹೇಳದೆ ವಿಮತವು ಮಿಥ್ಯೆಯೆಂದು ಹೇಳಿರುತ್ತಾರೆ.

(9) ಈ ಪ್ರಯೋಗದಲ್ಲಿ ದೃಶ್ಯತ್ವರೂಪವಾದ ಹೇತುವಿಗೆ ಅನ್ವಯವ್ಯಾಪ್ತಿ, ವ್ಯತಿರೇಕವ್ಯಾಪ್ತಿ ಈ ಎರಡನ್ನೂ ತೋರಿಸಲು ಬರುತ್ತದೆ. ಹೀಗಿದ್ದರೂ ಯಾವ ಪ್ರಯೋಗದಲ್ಲಿ ಸುಲಭವಾದ ಅನ್ವಯವ್ಯಾಪ್ತಿಯನ್ನು ಹೇಳಬಹುದೋ ಅಲ್ಲಿ ವ್ಯತಿರೇಕವ್ಯಾಪ್ತಿಯನ್ನಂಗೀಕರಿಸುವುದು ಪ್ರಶಸ್ತವಲ್ಲವೆಂಬುದನ್ನು ಸೂಚಿಸಲಿಕ್ಕಾಗಿ 'ಯದಿತ್ಥಂ ತತ್ತಥಾ' ಅಂದರೆ ಯಾವುದು ತೋರತಕ್ಕುದೋ ಅದು ಮಿಥ್ಯೆಯೆಂದು ಅನ್ವಯವ್ಯಾಪ್ತಿಯನ್ನೇ ತೋರಿಸಿರುತ್ತಾರೆ.

(10) 'ಗೌರ್ನಪದಾ ಸ್ಪ್ರಷ್ಟವ್ಯಾ' ಅಂದರೆ- 'ಗೋವನ್ನು ಕಾಲಿನಿಂದ ಮುಟ್ಟ (ಮೆಟ್ಟ) ಬಾರದು' ಎಂದು ಸಾಮಾನ್ಯವಾಗಿ ಹೇಳಿದರೂ ಗೋವುಗಳೆಲ್ಲವನ್ನೂ ಕಾಲಿನಿಂದ ಮುಟ್ಟಬಾರದೆಂದು ಹೇಗೆ ಅರ್ಥವಾಗುತ್ತದೋ, ಹಾಗೆಯೇ'ಯತ್ ಇತ್ಥಂ ತತ್ ತಥಾ' ಎಂದು ಹೇಳಿದರೂ ದೃಶ್ಯವಾದುದೆಲ್ಲವೂ ಮಿಥ್ಯೆಯಾದುದೆಂದೇ ಅರ್ಥಾತ್ ಸಿದ್ಧವಾಗುವುದು, ಕಾರಣ 'ಯತ್ ಯತ್ ತತ್ ತತ್' ಎಂದು ದ್ವಿರುಕ್ತಿ ಹೇಳಿದಿದ್ದರೂ ದೋಷವಿಲ್ಲವು.

(11) ದೃಷ್ಟಾಂತೋಕ್ತಿಯಲ್ಲಿ ಶುಕ್ತಿರಜತಾದಿಗಳನ್ನು ತೋರಿಸಿದರೆ 'ದೃಷ್ಟಾಂತವು ಸಾಧ್ಯಶೂನ್ಯವಾಗಿದೆ' ಎಂಬಿತ್ಯಾದಿ ದೋಷಗಳನ್ನಾಶಂಕಿಸಬಹುದೆಂದು ಸಂಪ್ರತಿಪನ್ನಂ ಎಂದು ಹೇಳಿದ್ದಾರೆ. ಅಂದರೆ ದೃಶ್ಯವಾಗಿಯೂ, ಮಿಥ್ಯಾಭೂತವಾಗಿಯೂ ಉಭಯವಾದಿಗಳಿಗೆ ಎಲ್ಲಿ ನಿಶ್ಚಯವಿದೆಯೋ ಅಂತಹುದೇ 'ಸಂಪ್ರತಿಪನ್ನ' ಪದಾರ್ಥವು.

(12) ಯದ್ಯಪಿ, ಅದ್ವೈತಿಗಳು ತಮ್ಮ ಗ್ರಂಥದಲ್ಲಿ ಪ್ರತಿಜ್ಞಾದಿ ಐದು ಅವಯವಗಳುಳ್ಳ ಪ್ರಯೋಗವನ್ನೇ ತೋರಿಸಿರುವಪ್ರಯುಕ್ತ ಅದೇರೀತಿಯಾಗಿ ಆಚಾರ್ಯರೂ ಅನುವಾದಮಾಡ ಬೇಕಾಗಿದ್ದರೂ ಭಾಟ್ಟಮತದಲ್ಲಿ "ಮೂರೇ ಅವಯವಗಳು ಸಾಧಿಸಲಿಕ್ಕೆ ಉಪಯುಕ್ತಗಳೆಂದು ಒಪ್ಪಿರುವುದರಿಂದ" ("ವ್ಯವಹಾರೇ ಭಟ್ಟನಯಃ" ಎಂದು) ಭಾಟ್ಟಮತವನ್ನನುಸರಿಸಿರುವ ಅದ್ವೈತಿಗೂ ಪ್ರತಿಜ್ಞಾದಿ ಮೂರುವಾಕ್ಯದಿಂದ ಸಾಧಿಸುವಾಗ ಉಪನಯ, ನಿಯಮಗಳು ಪ್ರಕೃತಾರ್ಥ ಸಾಧನೆಯಲ್ಲಿ ಅನುಪಯುಕ್ತಗಳೇ ಆಗಿರುವುದರಿಂದ ಅನುವಾದಿಸಲಿಕ್ಕೂ ಅನರ್ಹ ಗಳೆಂದು ತಿಳಿಸುವುದಕ್ಕೂ ಐದು ಅವಯವಗಳನ್ನು ಪ್ರಯೋಗಿಸಿದರೆ ಪ್ರಯೋಗಿಸಿದವನಿಗೆ ಅಧಿಕವೆಂಬ ನಿಗ್ರಹ ಸ್ಥಾನವು ಬರುತ್ತದೆಂದು ಸೂಚಿಸುವುದಕ್ಕೂ ಪ್ರತಿಜ್ಞಾ, ಹೇತು, ಉದಾಹರಣ ಎಂಬೀ ಮೂರೇ ಅವಯವಗಳನ್ನು ಅನುವಾದ ಮಾಡಿರುವರು. ॥ ೧ ॥

ಈ ರೀತಿಯಾಗಿ ಅದ್ವೈತಿಗಳ ಅಭಿಪ್ರಾಯಾನುಸಾರವಾಗಿ ಅವರ ಅನುಮಾನವನ್ನು ಅನುವಾದಮಾಡಿ ಈಗ ಆ ಅನುಮಾನಪ್ರಯೋಗದಲ್ಲಿರುವ ದೋಷಗಳನ್ನು ತೋರಿಸಲುದ್ಯುಕ್ತರಾಗಿ ಮೊದಲು ಪ್ರತಿಜ್ಞೆಯಲ್ಲಿರತಕ್ಕ ದೋಷಗಳನ್ನು ಹೇಳುತ್ತಾರೆ—

**ಮೂ ॥ ಇತ್ಯುಕ್ತೇ ಜಗತೋಽಭಾವಾದಾಶ್ರಯಾಸಿದ್ಧಃ ಪಕ್ಷಃ ॥ ೨ ॥**

ಇತಿ, ಉಕ್ತೇ=ಮಾಯಾವಾದಿಗಳು ಈ ರೀತಿಯಾಗಿ ಅನುಮಾನವನ್ನು ಪ್ರಯೋಗಿಸಲು, ಜಗತಃ, ಅಭಾವಾತ್=ಅವರರೀತಿಯಿಂದ ಜಗತ್ತೇ ಇಲ್ಲದಿರುವುದರಿಂದ, ಪಕ್ಷಃ=ಅಂದರೆ ಪಕ್ಷದ ಒಂದುಭಾಗವಾದ ಮಿಥ್ಯಾತ್ವರೂಪಸಾಧ್ಯವು, ಆಶ್ರಯಾಸಿದ್ಧಃ=ಆಶ್ರಯವಿಲ್ಲದಿದ್ದದ್ದು ಆಗುತ್ತದೆ (ಎಂದು ಉತ್ತರವನ್ನು ಹೇಳತಕ್ಕದ್ದು).

(1) ಪರನು ಹೇಳಿದ ಪ್ರಕಾರವಾಗಿಯೇ ಈ ದೋಷಗಳು ಬರುತ್ತವೆಯಲ್ಲದೆ ಅತನು ಹೇಳದೆ ಇದ್ದುದನ್ನು ನಾವು ನಿರಾಕರಿಸಲಿಲ್ಲ ವೆಂದು ಸೂಚಿಸಲಿಕ್ಕಾಗಿ "ಉಕ್ತೇ" ಅಂದರೆ ಆತನ ವಚನ ನಿಮಿತ್ತವಾಗಿಯೇ ದೂಷಣವು ಎಂದು ಹೇಳಿರುತ್ತಾರೆ.

(2) ಇಲ್ಲಿ ಪರನು ಮಿಥ್ಯಾಶಬ್ದದಿಂದ ಅನಿರ್ವಚನೀಯಾದಿರೂಪ ಅರ್ಥವನ್ನು ಅಂಗೀಕರಿಸಿರುವ ಪ್ರಯುಕ್ತ ಆತನಿಗೆ ಅಸಮ್ಮತವಾದ ಅಸತ್ತೆಂಬ ಅರ್ಥವನ್ನು ಕಲ್ಪಿಸಿಕೊಂಡು ಆಶ್ರಯಾಸಿದ್ಧಿರೂಪದೋಷವನ್ನು ಹೇಳಿರುವ ಪ್ರಯುಕ್ತ ಇದು ಛಲೋತ್ತರವಾಯಿತೆಂದು ಹೇಳಕೂಡದು. ಏಕೆಂದರೆ- ಜಗತ್ತು ಮಿಥ್ಯೆಯೆಂದರೆ ಅಸತ್ತೆಂದು ಅರ್ಥವೋ? ಅನಿರ್ವಚನೀಯಾದಿರೂಪ ಅರ್ಥವೋ? ಎಂದು ವಿಕಲ್ಪಿಸಿ ಅಸತ್ತೆಂದು ಅಂಗೀಕಾರಮಾಡುವ ಪಕ್ಷದಲ್ಲಿ ಆಶ್ರಯಾಸಿದ್ಧಿರೂಪದೋಷವು ಬರುತ್ತದೆ ಎಂದು ಹೇಳಿದುದರಿಂದ ಛಲೋತ್ತರವನ್ನು ಕೊಟ್ಟಹಾಗಾಗಲಿಲ್ಲ. ಆದರೂ, ಪರನಿಗೆ ಅಭಿಮತವಾದ ಅರ್ಥಕ್ಕೇನೇ ದೋಷವನ್ನು ಹೇಳಬೇಕಲ್ಲದೆ ಅನಭಿಪ್ರೇತವಾದ ಅಸತ್ವಪಕ್ಷಕ್ಕೆ ದೋಷವನ್ನು ಹೇಳುವುದಕ್ಕೋಸ್ಕರ ವಿಕಲ್ಪಿಸಿದುದು ಅಸಂಗತವು ಎಂದು ಹೇಳಕೂಡದು. ಏಕೆಂದರೆ- ನಮ್ಮ ರೀತ್ಯಾ ಶುಕ್ತಿರಜತವು ಮಿಥ್ಯೆಯೆಂದರೆ ಅಸತ್ತೆಂದು ಅರ್ಥವು. ಪರರೀತ್ಯಾ ಅನಿರ್ವಚನೀಯವೆಂದರ್ಥವು. ಆತನ ಪಕ್ಷದಲ್ಲಿ ದೋಷವನ್ನು

ಹೇಳಿದರೆ ಆತನು "ನಿಮ್ಮ ರೀತ್ಯಾ ನಾನು ಹೇಳಿದ್ದಾಗಿರುತ್ತದೆ" ಹಾಗೂ "ನಾನು ಹೇಳದಿದ್ದ ಪಕ್ಷವನ್ನಿಟ್ಟುಕೊಂಡು ನೀವು ದೋಷವನ್ನು ಹೇಳಿದ್ದೀರಿ" ಎಂದು ಹೇಳಬಹುದು. ಅದಕ್ಕಾಗಿ ಹಾಗೆ ವಿಕಲ್ಪಿಸಿ ದೋಷವನ್ನು ಹೇಳಿದ್ದಾರೆ.

(3) ಅಲ್ಲದೆ ಇದೇ ಮೂಲದಿಂದ ಪರರ ಅನುಮಾನಕ್ಕೆ ಅಪಸಿದ್ಧಾಂತರೂಪ ದೋಷವೂ ಬರುತ್ತದೆ—

ಅ ॥ ಪಕ್ಷಃ=ಜಗತ್ತಿಗೆ ಅಸತ್ವರೂಪವಾದ ಪ್ರತಿಜ್ಞಾರ್ಥವು, ಜಗತಃ=ಪ್ರಪಂಚಕ್ಕೆ ಭಾವಾತ್=ಅಸದ್ವಿಲಕ್ಷಣವಾಗಿ ಅಂಗೀಕರಿಸಿದುದರಿಂದ, ಆಶ್ರಯಾಸಿದ್ಧಃ=ಪೂರ್ವಸಿದ್ಧಾಂತ ವಿರುದ್ಧವಾಯಿತು. ಅಂದರೆ ಅಪಸಿದ್ಧಾಂತವೆಂಬ ದೋಷವು ಬರುತ್ತದೆ. ಎಂದು ಹೇಳತಕ್ಕದು. ॥೨॥

ನಾವು ಜಗತ್ತು ಮಿಥ್ಯೆಯೆಂದರೆ ಅತ್ಯಂತ ಅಸತ್ತೆಂದು ಅಂಗೀಕಾರಮಾಡುವ ಪಕ್ಷದಲ್ಲಿ ಆಶ್ರಯಾಸಿದ್ಧಿ, ಅಪಸಿದ್ಧಾಂತ ಈ ದೋಷಗಳು ಬರಬಹುದು, ಆದರೆ ನಾವು ಹಾಗೆನದೆ ಜಗತ್ತು ಮಿಥ್ಯೆಯೆಂದರೆ ಅನಿರ್ವಚನೀಯವೆಂದೇ ಹೇಳುತ್ತೇವೆ, ಎಂದು ಪರರು ಹೇಳಿದರೆ ಆ ಪಕ್ಷದಲ್ಲಿ ಯೂ ದೋಷಗಳನ್ನು ಹೇಳುತ್ತಾರೆ.—

**ಮೂ ॥ ಅನಿರ್ವಚನೀಯಾಸಿದ್ಧೇರಪ್ರಸಿದ್ಧವಿಶೇಷಣಃ ॥ ೩ ॥**

ಅ ॥ ಅನಿರ್ವಚನೀಯಾಸಿದ್ಧೇಃ=ಅನಿರ್ವಚನೀಯವೆಂಬುವುದು ಸಿದ್ಧವಾಗದಿರುವುದರಿಂದ, [ಪಕ್ಷಃ=ಧರ್ಮಿಯಾಗಲಿ, ಸಾಧ್ಯಧರ್ಮವಿಶಿಷ್ಟ ಧರ್ಮಿರೂಪವಾಗಲಿ] ಅಪ್ರಸಿದ್ಧವಿಶೇಷಣಃ=ಅಪ್ರಸಿದ್ಧವಾದ ಮಿಥ್ಯಾತ್ವರೂಪವಾದ ವಿಶೇಷಣಭಾಗವುಳ್ಳದ್ದು (ಆಗುತ್ತದೆ).

ತಾ ॥ ಅನಿರ್ವಚನೀಯವೆಂದರೆ ಹೇಳಲಿಕ್ಕೆ ಬಾರದ್ದೆಂದು ಅರ್ಥವು. ಅಂತಹುದೊಂದು ಇದ್ದರೆ ಅದು ಈ ಅನುಮಾನವನ್ನು ಹೇಳುವುದಕ್ಕಿಂತ ಮುಂಚೆ ಸಿದ್ಧವಲ್ಲ, ಏಕೆಂದರೆ- ಸರ್ವವೂ ನಿರ್ವಚನಾರ್ಹವೇ ಆಗಿರುತ್ತದೆ. ಸರ್ವವೂ ನಿರ್ವಚನಾರ್ಹವೆಂದು ಅಂಗೀಕಾರಮಾಡದೆ ಅನಿರ್ವಚನೀಯತ್ವರೂಪ ಅರ್ಥವನ್ನು ಮಾತ್ರ ಅಂಗೀಕರಿಸಿದರೆ, ಸ್ವವ್ಯಾಹತಿ=ತಾನು ಅಂಗೀಕರಿಸಿದ ಮಾತಿಗೆ ಅಥವಾ ತಾನೇ ಹೇಳಿದ ಮಾತಿಗೆ ತನ್ನ ಮಾತಿನಿಂದಲೇ ವಿರೋಧವು ಬಂದರೆ ಅದಕ್ಕೆ ಸ್ವವ್ಯಾಹತಿಯೆಂದು ಹೆಸರು. ಉದಾ:-"ನಾನು ಮೂಕನು" ಯಾ "ನನ್ನ ತಾಯಿಯು ಬಂಜೆಯು"ಇತ್ಯಾದಿ ವಾಕ್ಯಗಳು. ಸ್ವವ್ಯಾಹತಿ ಯಾ ಮೂಕತ್ವರೂಪ ದೋಷವು ಪ್ರಾಪ್ತವಾಗುತ್ತದೆ. ಕಾರಣ, ಅನಿರ್ವಚನೀಯವೆಂಬುದೊಂದು ಪದಾರ್ಥವೇ ಅಪ್ರಸಿದ್ಧವಾದ ಕಾರಣ ಪಕ್ಷವಾದ ಜಗತ್ತು, ವಿಶೇಷಣವಾದ ಮಿಥ್ಯಾತ್ವಶೂನ್ಯವಾದುದಾಯಿತು. ಹಾಗೂ ಅನಿರ್ವಚನೀಯವೆಂಬ ಕಲ್ಪದಲ್ಲಿ ಪಕ್ಷವು(ಧರ್ಮಿಯು) ಅಪ್ರಸಿದ್ಧವಿಶೇಷಣವುಳ್ಳದ್ದೆಂದು ಹೇಳಿದಹಾಗಾಯಿತು. ॥ ೩ ॥

ಜಗತ್ತು ಅನಿರ್ವಚನೀಯವೆಂದರೆ ಸದಸದ್ವಿಲಕ್ಷಣವಾಗಿರುತ್ತದೆಂಬ ಅರ್ಥವಲ್ಲದೆ ಸರ್ವಥಾ ನಿರ್ವಚನಮಾಡಲಿಕ್ಕೆ ಅಸಾಧ್ಯವಾದುದೆಂದರ್ಥವಲ್ಲ. ಕಾರಣ, ಹಿಂದೆ ಹೇಳಿದ ದೋಷಗಳು ನಮಗೆ ತಟ್ಟಲಾರದೆಂದು ಅದ್ವೈತಿಗಳು ಹೇಳಿದರೆ ಆ ಪಕ್ಷವನ್ನೂ ದೂಷಿಸುತ್ತಾರೆ.—

**ಮೂ ॥ ಸದಸದ್ವೈಲಕ್ಷಣ್ಯೇ ಮಿಥ್ಯಾತ್ವೇ ಸಿದ್ಧಸಾಧನತಾ ॥ ೪ ॥**

ಅ ॥ ಮಿಥ್ಯಾತ್ವೇ=ಮಿಥ್ಯಾತ್ವವಾದರೂ, ಸದಸದ್ವೈಲಕ್ಷಣ್ಯೇ=ಸದಸದ್ಭೇದರೂಪವಾದ ಅನಿರ್ವಚನೀಯವೆಂದಗೀಕರಿಸಿದರೆ, ಸಿದ್ಧಸಾಧನತಾ=ಸಿದ್ಧಸಾಧನರೂಪದೋಷವು ಬರುತ್ತದೆ.

ತಾ ॥ (1) ಸದಸದ್ವಿಲಕ್ಷಣವೆಂದರೆ, ಸತ್ತಿನಿಂದಲೂ ಅಸತ್ತಿನಿಂದಲೂ ಭಿನ್ನವೆಂದರ್ಥವು. ಆ ಕಲ್ಪದಲ್ಲಿ ಜಗತ್ತು ಅಸತ್ತಿನಿಂದ ಬೇರೆಯೆಂದು ನಾವು ಅಂಗೀಕಾರ ಮಾಡಿರುವ ಪ್ರಯುಕ್ತ ಸಿದ್ಧಸಾಧನವೆಂಬೀ ದೋಷವು ಬರುತ್ತದೆ.

(2) ಹಾಗಾದರೆ ನಾವು ಸದ್ವೈಲಕ್ಷಣ್ಯದಿಂದ ಕೂಡಿಕೊಂಡು ಅಸದ್ವೈಲಕ್ಷಣ್ಯವನ್ನು ಸಾಧಿಸುತ್ತೇವೆ. ಕಾರಣ, ಪೂರ್ವೋಕ್ತ ದೋಷಗಳು ಕೂಡಲಾರವೆಂದು ಅದ್ವೈತಿಗಳು ಹೇಳಕೂಡದು. ಏಕೆಂದರೆ- ಸಿದ್ಧವಾದುದು ಅಸಿದ್ಧವಾದ ವಸ್ತುವಿನಿಂದ ಕೂಡಿಕೊಂಡು ಹೇಳಿದರೆ ಅದು ಅಸಿದ್ಧವಾಗದು. ಕಾರಣ, ಒಂದಂಶದಲ್ಲಂತೂ ಸಿದ್ಧಸಾಧನರೂಪ ದೋಷವು ತಪ್ಪಲಾರದು.

(3) ಹೀಗಾದರೂ, 'ಸದ್ವೈಲಕ್ಷಣ್ಯದಿಂದ ಕೂಡಿದ ಅಸದ್ವೈಲಕ್ಷಣ್ಯವನ್ನು ಸಾಧಿಸುತ್ತೇನೆ' ಎಂದರೂ ಒಂದು ಸದ್ವಸ್ತುವಿಗೆ ಮತ್ತೊಂದು ಸದ್ವಸ್ತುವಿನಿಂದ ಭೇದವೇಇರುವ ಪ್ರಯುಕ್ತ ಸಿದ್ಧಸಾಧನತಾದೋಷವು ಬಂದೇಬರುತ್ತದೆ.

(4) ಸದಸದ್ವೈಲಕ್ಷಣ್ಯವೆಂದರೆ- ಸತ್ವಾಸತ್ವಗಳಿಗೆ ಅಶ್ರಯುವಲ್ಲದಿರುವುದು, ಎಂದು ಅರ್ಥವನ್ನಿಟ್ಟುಕೊಂಡು ಪ್ರಪಂಚದಲ್ಲಿ ಸಾಧಿಸಿದರೆ ಅಂದರೆ ಪ್ರಪಂಚದಲ್ಲಿ ಸತ್ವಾಸತ್ವಗಳಿಲ್ಲವೆಂದು ಪರನು ಹೇಳಿದರೆ ಕೇವಲ ಸತ್ತೇ (ಯಥಾರ್ಥವೇ) ಆಗಿರುವ ಜಗತ್ತಿಗೆ ನಾವು ಸದಸತ್ವವನ್ನು ಒಪ್ಪದೆ ಇರುವುದರಿಂದ ಸದಸತ್ವಗಳಿಗೆ ಆಶ್ರಯುವಲ್ಲವೆಂದು ಮೊದಲೇ ನಮಗೆ ಸಿದ್ಧವಾಗಿದೆ. ಕಾರಣ ಸಿದ್ಧಸಾಧನತಾದೋಷವು ತಪ್ಪಲಾರದು.

(5) 'ಸತ್ವಕ್ಕೂ ಅಸತ್ವಕ್ಕೂ ಎರಡಕ್ಕೂ ಆಶ್ರಯುವಲ್ಲದಿದ್ದುದು' ಎಂದು ಸಾಧಿಸಿದರೂ ಸತ್ಯರೂಪವಾದ ಜಗತ್ತು ಅಸತ್ವಕ್ಕೆ ಆಶ್ರಯುವಲ್ಲವೆಂಬ ಅಂಶವು ನಮಗೆ ಸಿದ್ಧವಾಗಿರುವ ಪ್ರಯುಕ್ತ ಸಿದ್ಧಸಾಧನತಾ ದೋಷವು ಬಿಟ್ಟುಹೋಗದು.

(6) ಯಾವರೀತಿಯಿಂದಲೂ ಸತ್ವಕ್ಕೂ ಅಸತ್ವಕ್ಕೂ ಎರಡಕ್ಕೂ ಆಶ್ರಯುವಲ್ಲದಿರುವುದೇ ಸದಸದ್ವೈಲಕ್ಷಣ್ಯವು. ಅಂತಹುದೇ ಸದ್ವಾದಿಗಳಿಗೆ ಅನಿಷ್ಟವಾದುದು. ಆದುದರಿಂದ ಮಿಥ್ಯೆಯೆಂದರೆ ನಾನು ಅಂತಹುದನ್ನೇ ಹೇಳುತ್ತೇನೆ. ಎಂದರೂ ಎಲ್ಲಿಯೂ ಅಪ್ರಸಿದ್ಧವಾದ ಅರ್ಥವನ್ನೇ ಸಾಧಿಸಿದ್ದರಿಂದ ಅಪ್ರಸಿದ್ಧವಿಶೇಷಣರೂಪ ದೋಷವು ಬಂದೇ ಬರುತ್ತದೆ. ಅಲ್ಲದೆ, ಎಲ್ಲಾ ಸ್ಥಳದಲ್ಲಿಯೂ ಅಸದ್ವೈಲಕ್ಷಣ್ಯವನ್ನು ನಾನು ಒಪ್ಪಿರುವ ಪ್ರಯುಕ್ತ ತತ್ಸಾಧನವು ವ್ಯರ್ಥವಾಗಿ ಹೋಗುತ್ತದೆ.

(7) ಹಾಗಾದರೆ ಮಿಥ್ಯಾತ್ವವೆಂದರೆ 'ಸತ್ಯವಿವೇಕ' ಅಂದರೆ ಸತ್ಯದಿಂದ ಬೇರೆ ಯಾದುದು ಅಂಗೀಕರಿಸಿದ ಪ್ರಯುಕ್ತ ಹಿಂದೆಹೇಳಿದ ಯಾವುದೊಂದು ದೋಷವೂ ಬರುವುದಿಲ್ಲವೆಂದು ಭಾವಿಸಕೂಡದು. ಒಂದು ಸತ್ಯಪದಾರ್ಥದಲ್ಲಿಯೂ ಬೇರೊಂದು ಸತ್ಯಪದಾರ್ಥದಿಂದ ಭೇದವನ್ನು ನಾವು ಅಂಗೀಕರಿಸಿರುವುದರಿಂದ ಸಿದ್ಧಸಾಧನತಾದೋಷವು ತಪ್ಪುವುದಿಲ್ಲ.

(8) 'ಸತ್ಯವಿವೇಕ' ವೆಂದರೆ ಸತ್ಯತ್ವವನ್ನು ಆಶ್ರೈಸದೆ ಇದ್ದುದು, ಅಂದರೆ ಸತ್ಯತ್ವವು ಇಲ್ಲದಿರುವುದು ಎಂದೆನ್ನುವುದಾದರೆ, ಅಂತಹಸತ್ಯತ್ವದ ಸ್ವರೂಪವೆಂತಹುದು. ಅರ್ಥಕ್ರಿಯಾಕಾರಿತ್ವಾದಿ ರೂಪವೆಂದರೆ ಅಂತಹುದನ್ನು ಪ್ರಪಂಚದಲ್ಲಿ ಪರನೂ ಅಂಗೀಕಾರ ಮಾಡಿರುವ ಪ್ರಯುಕ್ತ ತದನಾಶ್ರಯತ್ವವನ್ನು ಸಾಧನೆಮಾಡಿದರೆ ಅಪಸಿದ್ಧಾಂತರೂಪ ದೋಷವು ಬರುವುದು.

(9) ಸತ್ಯತ್ವವೆಂದರೆ ಅಬಾಧ್ಯತ್ವವು. ಅದರ ವಿವೇಕವೆಂದರೆ ಅಭಾವವು. ಹಾಗೂ ಅಬಾಧ್ಯತ್ವಾಭಾವರೂಪವಾದ ಬಾಧ್ಯತ್ವರೂಪವಾದ (ಬಾಧಿಸಲ್ಪಡತಕ್ಕದು.) ಮಿಥ್ಯಾತ್ವವನ್ನೇ ಸಾಧಿಸುತ್ತೇನೆ. ಎಂದು ಹೇಳಿದರೆ—ಬಾಧಶಬ್ದಾರ್ಥವೆಂತಹುದು? ರೀತ್ಯಂತರದಿಂದ ತಿಳಿಯಲ್ಪಟ್ಟ ವಸ್ತುವನ್ನು ಚೆನ್ನಾಗಿ ತಿಳುಕೊಳ್ಳುವುದೇ ಬಾಧಶಬ್ದಾರ್ಥವೆಂದರೆ— ಬೌದ್ಧಮತವನ್ನನುಸರಿಸಿ ಕ್ಷಣಿಕವೆಂದು ತಿಳಿದ ಜಗತ್ತನ್ನು ವಿಶೇಷಾಕಾರವಾಗಿ ವಿಚಾರಮಾಡಿದ ಮೇಲೆ ಧ್ರುವವಾದ

ದ್ದೆಂದು (ಕ್ಷಣಿಕವಲ್ಲವೆಂದು) ತಿಳಿಯುವುದು ಬಾಧ್ಯವಾದ ಪ್ರಯುಕ್ತ ಇಂತಹ ಬಾಧ್ಯತ್ವವನ್ನು ಪ್ರಪಂಚದ ವಿಷಯದಲ್ಲಿ ನಾವು (ದ್ವೈತಿಗಳು) ಅಂಗೀಕರಿಸಿರುವ ಪ್ರಯುಕ್ತ ಸಿದ್ಧಸಾಧನತಾ ದೋಷವೇ ಬರುತ್ತದೆ.

(10) ಸತ್ಯತ್ವಕ್ಕೆ ಆಶ್ರಯವೆಂದು ತೋರುವ ಘಟಾದಿಗಳಲ್ಲಿ ಭೂತಭವಿಷ್ಯದ್ವರ್ತಮಾನ ಈ ತ್ರೈಕಾಲಿಕ ಸತ್ಯತ್ವವನ್ನು ನಿಷೇಧಿಸುವುದೇ ಬಾಧವೆಂದರೆ ಸತ್ಯತ್ವಸ್ವರೂಪನ್ನೇ ಯಾವ ರೀತಿ ಯಿಂದಲೂ ನಿರ್ವಚನ ಮಾಡಲಿಕ್ಕೆ ಬಾರದಿರುವ ಪ್ರಯುಕ್ತ ಅಂತಹ ಸತ್ಯತ್ವನಿಷೇಧವು ಬಾಧ ವೆಂದು ಹೇಳಕೂಡದು.

(11) ಅಥವಾ ಯತ್ಕಿಂಚಿತ್ಸತ್ಯತ್ವಸ್ವರೂಪವನ್ನು ಒಡಂಬಟ್ಟರೂ ಅಂತಹ ಸತ್ಸತ್ಯತ್ವ ನ್ನಾಶ್ರೈಸದೆ ಇದ್ದುದು ಎಂದು ಸಾಧಿಸಿದರೆ ಅತ್ಯಂತಾಸತ್ ಎಂದೇ ಹೇಳಿದ ಹಾಗಾಯಿತು. ಅಂತೂ ಆಶ್ರಯಾಸಿದ್ಧ್ಯಾದಿ ದೋಷಗಳು ತಿರುಗಿ ಪ್ರಾಪ್ತವಾದವು.

(12) ಹಾಗಾದರೆ ಸತ್ವವನ್ನು ಮಾತ್ರ ನಿಷೇಧಿಸುವೆವು (ಇರಕೂಡದೆಂದು ಹೇಳುವೆವು.) ಅಸತ್ವವನ್ನು ವಿಧಿಸುವುದಿಲ್ಲ. (ಅಂದರೆ ಅಸತ್ವವನ್ನು ಇರಬೇಕೆಂದು ಹೇಳುವುದಿಲ್ಲ), ಇಂತಹು ದೇ ಮಿಥ್ಯೆಯೆಂದರೂ ಸತ್ವನಿಷೇಧವೇ ಅಸತ್ವವಲ್ಲದೆ ಬೇರೆ ಇರುವುದಿಲ್ಲ. ಬೇರೆ ಇದೆ ಎಂದು ಹೇಳುವುದಾದರೂ ಸತ್ವವನ್ನು ನಿಷೇಧಿಸುವುದರಿಂದಲೇ ಆಶ್ರಯಾಸಿದ್ಧಿರೂಪದೋಷವು ಬಂದೇ ಬರುತ್ತದೆ.

(13) ಹಾಗಾದರೆ, ಪ್ರಪಂಚವು ವ್ಯಾವಹಾರಿಕ ಸತ್ಯವೆಂದು ಅಂಗೀಕರಿಸಿದ್ದ ಪ್ರಯುಕ್ತ ಆಶ್ರಯತ್ವವು ಉಪಪನ್ನವಾಗುತ್ತದೆ. ಕಾರಣ, ಆಶ್ರಯಾಸಿದ್ಧಿ ದೋಷವಿಲ್ಲ, ಎಂದು ಅದ್ವೈ ತಿಯು ಹೇಳುವ ಪಕ್ಷದಲ್ಲಿ ಪ್ರಪಂಚವು ವ್ಯಾವಹಾರಿಕ ಸತ್ಯವೆಂದರೆ ಎಂತಹುದು? 'ಘಟವು ಇದೆ' ಎಂಬೀ ರೀತಿಯಾಗಿರುವ ವ್ಯವಹಾರವನ್ನು ನಿರ್ವಹಿಸಲಿಕ್ಕೆ ಉಪಯುಕ್ತವಾಗಿರುವ ಸತ್ವವೇ ವ್ಯಾವಹಾರಿಕ ಸತ್ವವೆಂದು ಒಪ್ಪುವುದಾದರೆ ನಮ್ಮ (ದ್ವೈತಿಗಳ) ಇಷ್ಟವು ಸಿದ್ಧವಾಯಿತು. ಹೇಗೆಂದರೆ—ವ್ಯವಹಾರಕ್ಕುಪಯುಕ್ತವಾದ ಸತ್ಯತ್ವನನ್ನು ಪ್ರಪಂಚಕ್ಕೆ ಒಡಂಬಡುವುದರಿಂದ ಆಶ್ರಯಾಸಿದ್ಧಿ ದೋಷವು ಪರಿಹೃತವಾದರೂ, ಸತ್ಯತ್ವದ ನಿಷೇಧರೂಪವಾದ ಮಿಥ್ಯಾತ್ವವನ್ನು ಸಾಧಿಸಿದರೆ 'ಬಾಧ' ವೆಂಬೀ ದೋಷವು ಬರುವುದರಿಂದ ಅನುಮಾನವು ದುಷ್ಟವಾಯಿತು. ಅಂತೂ ನಮ್ಮ ಇಷ್ಟವು ಸಿದ್ಧವಾಯಿತು. ಅಲ್ಲದೆ, ವ್ಯವಹಾರಕ್ಕೆ ಅನುಪಯುಕ್ತವಾದುದೊಂದು ಸತ್ವವು ಇಲ್ಲವೇ ಇಲ್ಲ. ಸತ್ಯವಾದುದೆಲ್ಲವು ವ್ಯವಹಾರೋಪಯುಕ್ತವೇ. ಕಾರಣ, ಅದರಿಂದ ವ್ಯಾವರ್ತ್ಯವಾದುದು (ವ್ಯವಹಾರವನ್ನು ಬಿಟ್ಟು ಇರುವ ಸತ್ಯತೆಯು) ಇಲ್ಲದಿರುವುದರಿಂದ ವ್ಯಾವಹಾರಿಕವೆಂದು ವಿಶೇಷಣವೂ ವ್ಯರ್ಥವಾಯಿತು.

(14) ಅದೂ ಅಲ್ಲದೆ, ಆಶ್ರಯಾಸಿದ್ಧಿ ದೋಷ ಪರಿಹಾರಕ್ಕಾಗಿ ವ್ಯಾವಹಾರಿಕ ಸತ್ವ ವನ್ನಂಗೀಕರಿಸಿ ಅದರ ನಿಷೇಧರೂಪವಾದ ಮಿಥ್ಯಾತ್ವವನ್ನು ಸಾಧಿಸಿದರೆ ಬಾಧದೋಷ ಮಾತ್ರ ವಲ್ಲ, 'ಅಪಸಿದ್ಧಾಂತ'ವೆಂಬ ದೋಷವೂ ಬರುತ್ತದೆ.

(15) ಹಾಗಾದರೆ—ನಾನು (ಅದ್ವೈತಿ) ಪ್ರಪಂಚಕ್ಕೆ ಪಾರಮಾರ್ಥಿಕವಾದ ಸತ್ಯತ್ವವನ್ನು ನಿಷೇಧಿಸುತ್ತೇನೆ. ವ್ಯಾವಹಾರಿಕ ಸತ್ಯತ್ವವನ್ನು ನಿಷೇಧಿಸುವುದಿಲ್ಲ ಆದಕಾರಣ, ಹಿಂದಿನ ದೋಷಗಳು ಬರುವುದಿಲ್ಲ, ಎಂದು ಹೇಳುವುದಾದರೆ—ಅಂತಹ ಪಾರಮಾರ್ಥಿಕತ್ವವು ಎಂತ ಹುದು? ವ್ಯವಹಾರಕ್ಕೆ ಉಪಯುಕ್ತವಲ್ಲದುದು, ಎಂದರೆ ಅದನ್ನು ನಿಷೇಧಿಸಲಿ. ನಮ್ಮ ದ್ವೈತಿಗಳ ತಂಟೆಯೇ ಇಲ್ಲ, ಏಕೆಂದರೆ–ವ್ಯವಹಾರೋಪಯುಕ್ತವಾದುದನ್ನು ನಿಷೇಧಿಸಲಿಲ್ಲವಷ್ಟೆ. ಅಂತೂ

ವ್ಯವಹಾರೋಪಯುಕ್ತವೆಂದೇ ಪ್ರಾಪ್ತವಾಗುವುದರಿಂದ ಪ್ರಪಂಚ ಸತ್ಯವಾದಿಗಳಿಗೆ ಬಾಧಕವೇ ಇರಲಾರದು.

(16) ಹಾಗಲ್ಲ. ಪಾರಮಾರ್ಥಿಕವೆಂದರೆ ಅಬಾಧ್ಯವಾದುದು ಎಂದು ಅದ್ವೈತಿಯು ಹೇಳುವುದಾದರೂ, ಅಬಾಧ್ಯತ್ವ ನಿಷೇಧವೆಂದರೆ ಬಾಧ್ಯತ್ವವೇ ಆಯಿತು. ಬಾಧವೆಂದರೆ ಸತ್ಯತ್ವವನ್ನು ನಿಷೇಧಿಸುವಿಕೆಯಷ್ಟೆ. ಆಗ ಸತ್ಯಮಾತ್ರವನ್ನೇ ನಿಷೇಧಿಸುವುದಾದರೆ ವ್ಯಾವಹಾರಿಕ ಸತ್ವವೂ ಇಲ್ಲದೇ ಹೋಗಬೇಕಾಗುವುದು. ಪಾರಮಾರ್ಥಿಕ ಸತ್ವವನ್ನು ನಿಷೇಧಿಸುವಲ್ಲಿ, ಪಾರಮಾರ್ಥಿಕತ್ವದ ಜ್ಞಾನವುಂಟಾದರೆ ಅದರ ನಿಷೇಧರೂಪವಾದ ಬಾಧ್ಯಜ್ಞಾನವುಂಟಾಗಬಹುದು. ಬಾಧ್ಯಜ್ಞಾನವುಂಟಾದರೆ ಅಬಾಧ್ಯತ್ವರೂಪ ಪಾರಮಾರ್ಥಿಕತ್ವಜ್ಞಾನವುಂಟಾಗುತ್ತದೆ. ಹೀಗೆ ಅನ್ಯೋನ್ಯಾಶ್ರಯ ರೂಪದೋಷವು ಬರುತ್ತದೆ.

(17) ವ್ಯವಹಾರ ಕಾರಣವಾದ ಸತ್ವವು ವ್ಯವಹಾರಿಕಸತ್ವವೆಂದರೆ ಹಿಂದಿನ ದೋಷಗಳು ಬರುವ ಪ್ರಯುಕ್ತ ಅದ್ವೈತಿಯು ಭ್ರಮಸಿದ್ಧವಾದ ಸತ್ವವೇ ವ್ಯಾವಹಾರಿಕ ಸತ್ವವೆನ್ನುತ್ತೇನೆ. ಎಂದರೆ ಭ್ರಾಂತಿಸಿದ್ಧವಾದುದನ್ನೂ ಉಂಟೆಂದು ಅಂಗೀಕರಿಸುವುದಾದರೆ ಭ್ರಾಂತಿತ್ವವೇ ಕೂಡಲಾರದು. ಕಾರಣ ಅಂತಹ ಸತ್ವವೇ ಇಲ್ಲವೆಂದು ಹೇಳಿದಂತಾಯಿತು. ಅಂತೂ ಆಶ್ರಯಾಸಿದ್ಧಿಯು ತಪ್ಪಲಾರದು.

(18) ಹಾಗಾದರೆ, ಯಾವುದು ಪ್ರತೀತಿ(ಜ್ಞಾನ) ವಿಷಯವಾಗುತ್ತದೋ, ಅದೇ ಆಶ್ರಯವಾಗುತ್ತದೆ. ಸತ್ತಾದುದೇ ಆಶ್ರಯವಾಗಬೇಕೆಂದಿಲ್ಲ. ಕಾರಣ, ಸತ್ವವಿಲ್ಲದಿದ್ದರೂ ಪ್ರತೀತಿ ವಿಷಯವಾದುದರಿಂದ ಆಶ್ರಯಾಸಿದ್ಧಿಯನ್ನು ಹೇಳಕೂಡದು, ಎಂದು ಅದ್ವೈತಿಯು ಹೇಳಿದರೆ ಆಕಾಶಕಮಲದಲ್ಲಿ ಸುರಭಿತ್ವವನ್ನು ಸಾಧನೆ ಮಾಡುವಾಗ ಆ ಆಕಾಶಕಮಲದಲ್ಲಿ ಸತ್ವವಿಲ್ಲದಿರುವುದರಿಂದಲೇ ಆಶ್ರಯಾಸಿದ್ಧಿಯನ್ನು ಹೇಳುತ್ತೇವೆ. ದ್ವೈತಿಯು ಹೀಗೆ ಹೇಳಲು, ಅದ್ವೈತಿಯು ಅಲ್ಲಿಯೂ ಸತ್ವವಿಲ್ಲದಿರುವುದರಿಂದಲ್ಲ, ಪ್ರತೀತಿವಿಷಯವಾಗದಿರುವ ಪ್ರಯುಕ್ತವೇ ಆಶ್ರಯಾಸಿದ್ಧಿಯನ್ನು ಹೇಳಿದುದು. ಎಂದು ಆಕ್ಷೇಪಿಸಿದರೆ, 'ಗಗನಾರವಿಂದಂ ಸುರಭಿ ಅರವಿಂದತ್ವಾತ್' ಎಂದು ಆಕಾಶಕಮಲದಲ್ಲಿ ಅರವಿಂದತ್ವರೂಪ ಹೇತುವಿನಿಂದ ಸುರಭಿತ್ವವನ್ನು ಸಾಧಿಸಿದರೆ ಆಶ್ರಯಾಸಿದ್ಧಿರೂಪ ದೋಷವನ್ನು ಹೇಳದೇ ಹೋಗಬೇಕಾಗುವುದು. ಏಕೆಂದರೆ— ಆ ಗಗನಾರವಿಂದವು ಶಬ್ದದಿಂದ ಪ್ರತೀತಿವಿಷಯವೇ ಆಗಿರುತ್ತದೆ.

(19) ಹಾಗಾದರೆ 'ಬೇಡ, ಅಲ್ಲಿಯೂ ಆಶ್ರಯಾಸಿದ್ಧಿಯನ್ನು ಹೇಳಿದಿರುವುದೂ ನನಗೆ (ಅದ್ವೈತಿಗೆ)ಇಷ್ಟವೇ'ಎಂದರೆ- ಅಲ್ಲಿಯೂ ಯೋಗ್ಯವಾದ ಅನುಮಿತಿಯು ಹುಟ್ಟಬೇಕಾಗುವುದು.

(20) ಅಲ್ಲಿ ಯೋಗ್ಯವಾದ ಅನುಮಿತಿಯು ಹುಟ್ಟದಿರುವದಕ್ಕೆ ಆಶ್ರಯಾಸಿದ್ಧಿಯು ಕಾರಣವಲ್ಲ. ಪರಂತು, ಅನುಮಾನಕ್ಕೆ 'ವ್ಯಾಪ್ತಿ' 'ಪಕ್ಷಧರ್ಮತಾ' ಎಂಬೀ ಎರಡು ಅಂಗಗಳು ಕಾರಣಗಳಾಗಿರುತ್ತವೆ. ಪ್ರಕೃತ ವ್ಯಾಪ್ತಿಯು ಇಲ್ಲದಿರುವುದರಿಂದಲೇ ಪ್ರಮಾತ್ಮಕವಾದ) ಅನುಮಿತಿಯು ಹುಟ್ಟಲಿಲ್ಲ' ಎಂದು ಅದ್ವೈತಿಯು ಹೇಳುವುದು ಸರಿಯಲ್ಲ. ಏಕೆಂದರೆ— ವ್ಯಾಪ್ತ್ಯಾದಿ ಅಂಗಗಳನ್ನು ಬುದ್ಧಿಯಿಂದ ಕಲ್ಪಿಸಿಕೊಳ್ಳಬೇಕಾದುದರಿಂದ ಅಕಾಲ್ಪನಿಕವಾದ ಅಂಗವು ಎಲ್ಲಿಯೂ ಅದ್ವೈತಿಗೆ ಸಮ್ಮತವಲ್ಲ. ಬುದ್ಧಿಯಿಂದ ಕಲ್ಪಿಸಿಕೊಳ್ಳುವುದಾದರೆ ಎಲ್ಲಿಯೂ ಹೇಳಲು ಶಕ್ಯವಾಗುತ್ತದೆ. ಕಾರಣ, ವ್ಯಾಪ್ತ್ಯಾದ್ಯಂಗಗಳನ್ನು ಕಲ್ಪಿಸಿಕೊಂಡರೆ ಎಲ್ಲಾ ಹೇತುಗಳೂ ಯೋಗ್ಯಗಳೇ ಆಗಬೇಕಾಗುವುದು. ಕಲ್ಪಿಸಿ ಕೊಳ್ಳದಿದ್ದರೆ ಎಲ್ಲವೂ ದುಷ್ಟಗಳೇ ಆಗಬೇಕಾಗುವುದು. ಅಂತೂ ಹೇತುಗಳ ಯೋಗ್ಯಾಯೋಗ್ಯತೆಯಲ್ಲಿ ನಿಯಮವೇ ಇಲ್ಲದೆ ಹೋಗಬೇಕಾಗುವುದು.

(21) ಹಾಗಾದರೆ, 'ಎಲ್ಲಿ ವಾದಿ ಪ್ರತಿವಾದಿಗಳು ಅಂಗಗಳು ಇವೆಯೆಂದು ಅಂಗೀಕರಿಸಿರುವರೋ, ಅಂತಹ ಅನುಮಾನವು ಯೋಗ್ಯವಾದುದು. ಇತರವಾದುದು ದುಷ್ಟವು ಎಂಬೀ ನಿಯಮವಿರುತ್ತದೆ' ಎಂದು ಅದ್ವೈತಿಯು ಹೇಳಲಾಗದು.

ಆ ಪಕ್ಷದಲ್ಲಿ ಭ್ರಾಂತರಾದ ವಾದಿ ಪ್ರತಿವಾದಿಗಳಿಂದ ಕೂಡಿಕೊಂಡು ನಡಿಯುವ ವಾದದಲ್ಲಿ ವಸ್ತುತಃ ಹೇತುವು ದುಷ್ಟವಾದರೂ ಅಂಗಗಳುಂಟೆಂದು ಅವರು ಅಂಗೀಕರಿಸಿದೊಡನೇ ಯೋಗ್ಯವೆಂದಗೀಕರಿಸಬೇಕಾಗುವುದು. ವಸ್ತುತಃ ಯೋಗ್ಯವಾದರೂ ಅಂಗಗಳಿಲ್ಲವೆಂದಂಗೀಕರಿಸಿದೊಡನೇ ದುಷ್ಟವೆಂದೊಪ್ಪಿಕೊಳ್ಳಬೇಕಾಗುವುದು. ಅಂತೂ ಯೋಗ್ಯಾಯೋಗ್ಯಗಳನ್ನು ವಿಪರೀತ ತಿಳುಕೊಳ್ಳಬೇಕಾಗುವುದು. ಅದೂ ಅಲ್ಲದೆ, ಪ್ರಕೃತ ವಾದಿಯಾದ ಅದ್ವೈತಿಯು ಪ್ರಪಂಚ ಮಿಥ್ಯಾತ್ವ ಸಾಧಕವಾದ ಅನುಮಾನಕ್ಕೆ ಅಂಗಗಳುಂಟೆಂದು ಅಂಗೀಕರಿಸಿದರೂ ಪ್ರತಿವಾದಿಯಾದ ದ್ವೈತಿಯು ಒಡಂಬಡದಿರುವುದರಿಂದ ಆ ಅನುಮಾನವು ದುಷ್ಟವು ಆಗುವುದು.

(22) ಹಾಗಾದರೆ, ಯಾವುದು ಪ್ರತ್ಯಕ್ಷಪ್ರತೀತಿಗೆ ವಿಷಯವಾಗುವುದೋ, ಅಂತಹುದೇ ಆಶ್ರಯವಾಗುವುದು. ಪ್ರಕೃತ ಪ್ರಪಂಚವು ಪ್ರತ್ಯಕ್ಷವಾಗಿರುವುದರಿಂದ ಆಶ್ರಯವಾಗಿದೆ. ಗಗನಾರವಿಂದವಾದರೂ, ಪ್ರತ್ಯಕ್ಷವಾಗದಿರುವುದರಿಂದ ಅಲ್ಲಿ ಆಶ್ರಯಾಸಿದ್ಧಿಯನ್ನು ಹೇಳಬಹುದು. ಪ್ರಪಂಚದಲ್ಲಿ ಆಶ್ರಯಾಸಿದ್ಧಿಯನ್ನು ಹೇಳಕೂಡದೆಂದು ಅದ್ವೈತಿಯು ಹೇಳಿದರೆ ಅದು ಅಸಮಂಜಸವು. ಏಕೆಂದರೆ- ಪ್ರಪಂಚದಲ್ಲಿಯೂ ಅತೀಂದ್ರಿಯ (ಪ್ರತ್ಯಕ್ಷಪ್ರತೀತಿವಿಷಯವಾಗದಿರುವುದು.) ಭಾಗವಿರುವ ಪ್ರಯುಕ್ತ ಆಶ್ರಯಾಸಿದ್ಧಿಯು ಬರಲಡ್ಡಿಯಿಲ್ಲ.

(23) ಅದ್ವೈತಿಯು ಮೇಲೆಹೇಳಿದ ಆಶ್ರಯಾಸಿದ್ಧಿಯು ಯುಕ್ತವಲ್ಲವೆಂದು ಹೇಳುವದಕ್ಕಾಗಿ 'ಬಂಜೆಯ ಮಗನು ಮಾತನಾಡುವುದಿಲ್ಲ' ಎಂಬಲ್ಲಿ ಅಸತ್ತಾದ ಬಂಜೆಯಮಗನು ನಿಷೇಧಕ್ಕೆ ಆಶ್ರಯವಾಗುವನು. ಆರೀತಿಯಾಗಿ ಅಂಗೀಕರಿಸದಿದ್ದಲ್ಲಿ ಬಂಜೆಯಮಗನು ಮಾತನಾಡುತ್ತಾನೆಂದು ಹೇಳಬೇಕಾಗುವುದು. ಇದು ಸ್ವವ್ಯಾಹತವಾಗುವುದು. ಹೀಗಿರಲು ಸತ್ಯನಿಷೇಧರೂಪವಾದ ಮಿಥ್ಯಾತ್ವಕ್ಕೆ ವ್ಯಾವಹಾರಿಕ ಸತ್ವದಿಂದ ಕೂಡಿದ ಜಗತ್ತು ಆಶ್ರಯವಾಗಲಾರದೆಂದು ಹೇಗೆ ಹೇಳುವುದು' ಎಂದು ಆಕ್ಷೇಪಿಸಕೂಡದು. ಏಕೆಂದರೆ— ಅಸತ್ತು ನಿಷೇಧಕ್ಕೆ ಆಶ್ರಯವಾಗುತ್ತದೆಂದು ಅಂಗೀಕರಿಸಿದರೆ, ಪ್ರಪಂಚವು ಮಿಥ್ಯಾತ್ವರೂಪನಿಷೇಧಕ್ಕೆ ಆಶ್ರಯವಾಗುತ್ತದೆಂದು ಅಂಗೀಕರಿಸಿದರೆ, ಪ್ರಪಂಚವು ಮಿಥ್ಯಾತ್ವರೂಪನಿಷೇಧಕ್ಕೆ ಆಶ್ರಯವಾಗುವ ಪ್ರಯುಕ್ತ ಅಸತ್ತೆಂದೇ ಹೇಳಬೇಕಾಗುವುದು. ಆಶ್ರಯತ್ವವು ಕೂಡುವುದಕ್ಕೋಸ್ಕರ ವ್ಯಾವಹಾರಿಕ ಸತ್ವವನ್ನಂಗೀಕರಿಸಿದುದು ವ್ಯರ್ಥವೇ ಆಗಬೇಕಾಗುವುದು. ಅಲ್ಲದೆ, ಅಸತ್ತು ನಿಷೇಧಕ್ಕೆ ಆಶ್ರಯವಾಗುವುದಾದರೆ 'ವಂಧ್ಯಾಸುತಃ ಸುಂದರಃ' ಅಂದರೆ ಬಂಜೆಯಮಗನು ಸುಂದರನು ಎಂಬ ಸೌಂದರ್ಯರೂಪವಿಧಿಗೆ ಏತಕ್ಕೆ ಆಶ್ರಯನಾಗಲಾರನು. ವಿಧಿನಿಷೇಧಗಳಿಗೆ ಸ್ವರೂಪಸತ್ವವೆಂಬೀ ವಸ್ತುತ್ವವಿಷಯದಲ್ಲಿ ವಿಶೇಷವಿಲ್ಲವಷ್ಟೆ. ಅಂತೂ ಅಸತ್ತು ನಿಷೇಧಕ್ಕೆ ಮಾತ್ರ ಆಶ್ರಯವಾಗಿದೆ ಎಂಬಲ್ಲಿ ನಿಷೇಧಪದಗ್ರಹಣವು ವ್ಯರ್ಥವೇ ಆಯಿತು.

(24) ಇಷ್ಟೆಲ್ಲಾ ಸಾಧಿಸಿದುದೇನೋ ಸರಿಯೇ, ಆದರೆ- ನಮ್ಮ ದ್ವೈತಾನುಸಾರವಾಗಿ ಆಶ್ರಯಾಸಿದ್ಧಿಯು ದೋಷವಲ್ಲ, ಅಸತ್ತು ಆಶ್ರಯವಾಗುತ್ತದೆಂದು ಅಂಗೀಕರಿಸಿದ್ದರಿಂದ ಅದ್ವೈತಿಗೆ ಆಶ್ರಯಾಸಿದ್ಧಿಯು ದೋಷವಲ್ಲ. ಆದುದರಿಂದ ಅಂತಹ ದೋಷೋದ್ಭಾವನೆಯು ಆತನಿಗೆ ತಟ್ಟಲಾರದಷ್ಟೇ ಎಂದು ಶಿಷ್ಯನು ಶಂಕಿಸ ಬಹುದು. ಅದುಯುಕ್ತವಲ್ಲ, ಏಕೆಂದರೆ- ಯದ್ಯಪಿ ದ್ವೈತಿಯು ಬೌದ್ಧಮತವನ್ನವಲಂಬಿಸಿ ಆರೀತಿಯಾಗಿ ಅಂಗೀಕರಿಸಿರುವನು. ಆದರೆ ಸ್ವಾಭಾವಿಕ

ವಾಗಿ ಅದು ಆತನ ಸಿದ್ಧಾಂತವಲ್ಲ. ಏಕೆಂದರೆ- ಅಪ್ರತೀತವಾದ ಅಸತ್ತಿಗೂ ಆಶ್ರಯತ್ವವನ್ನಂಗೀಕರಿಸಿ ಆಶ್ರಯಾಸಿದ್ಧಿಗೆ ದೂಷಣತ್ವವನ್ನಂಗೀಕರಿಸದಿದ್ದರೆ ಅಸತ್ತಿಗೂ ಪ್ರತೀತಿಯುಂಟಾಗಬೇಕಾಗುವುದು. ಏವಂಚ ಆಶ್ರಯಾಸಿದ್ಧಿಯು ದೋಷವಾಗದೇ ಇರುವುದರಿಂದ ಪ್ರಪಂಚಕ್ಕೆ ಅಸತ್ವವನ್ನು ಅಂಗೀಕರಿಸಿದರೂ ಆಶ್ರಯತ್ವವು ಕೂಡುತ್ತದೆ. ಆ ಉದ್ದೇಶವಾಗಿ ಅಂದರೆ ಪ್ರಪಂಚಕ್ಕೆ ಆಶ್ರಯತ್ವವನ್ನು ಕೂಡಿಸುವುದಕ್ಕಾಗಿ ವ್ಯಾವಹಾರಿಕ ಸತ್ವವನ್ನು ಜಗತ್ತಿಗೆ ಒಡಂಬಟ್ಟದ್ದು ವ್ಯರ್ಥವಾಗಬೇಕಾಗುವುದು, ಹಾಗೂ ಅದ್ವೈತಮತದಿಂದ ಆಶ್ರಯಾಸಿದ್ಧಿಯು ದೋಷವಾದುದರಿಂದ ಅದನ್ನು ಪರನಿಗೆ ಹೇಳಿದುದು ಸಂಗತವೇ ಎಂದು ತಿಳಿಯಬೇಕು.

(25) 'ಹಾಗಾದರೆ, ಪ್ರಕಾರಾಂತರದಿಂದ ಮಿಥ್ಯಾತ್ವವನ್ನು ಪರಿಷ್ಕರಿಸುತ್ತೇನೆ. ಹೇಗೆಂದರೆ—'ಸ್ವಾಧಿಕರಣತ್ವೇನ ಪ್ರತೀಯಮಾನನಿಷ್ಠ ಅತ್ಯಂತಾಭಾವ ಪ್ರತಿಯೋಗಿತ್ವಂ' ಅಂದರೆ ಘಟಕ್ಕೆ ಅಧಿಕರಣವಾಗಿ ತೋರುವ ಭೂತಲದಲ್ಲಿ ಯಾವುದೊಂದು ಘಟಾತ್ಯಾಂತಾಭಾವವಿದೆಯೋ, ಅದಕ್ಕೆ ಪ್ರತಿಯೋಗಿಯು ಘಟವು. ಅಂತೂ ಯಾವ ಸ್ಥಳದಲ್ಲಿ ಉಂಟೆಂದು ಪ್ರತೀತವಾಗಿದೆಯೋ, ಅಲ್ಲಿಯೇ ಇಲ್ಲವೆಂದು ಹೇಳುವುದೇ ಮಿಥ್ಯಾತ್ವವು, ಎಂದು ಹೇಳುತ್ತೇನೆ.' ಎಂದು ಅದ್ವೈತಿಯು ಪ್ರಕಾರಾಂತರವನ್ನು ಹೇಳಿದರೆ ಅದೂ ಅಸಂಗತವೇ ಆಗುವುದು. ಏಕೆಂದರೆ- ಅತ್ಯಂತಾಭಾವ ಪ್ರತಿಯೋಗಿತ್ವವನ್ನು ಅಂದರೆ ಇದ್ದಲ್ಲಿಯೇ ಇಲ್ಲದಿರೋಣವನ್ನು ಘಟಾದಿ ಪ್ರಪಂಚಕ್ಕೆ ಸ್ವರೂಪತಃ ಎಂದು ಅಂಗೀಕರಿಸಿದರೆ ಅಸತ್ವವೇ ಪ್ರಾಪ್ತವಾಯಿತು. ಹೇಗೆಂದರೆ- ಶಶವಿಷಾಣವೂ ಸ್ವರೂಪತಃ ಅತ್ಯಂತಾಭಾವ ಪ್ರತಿಯೋಗಿಯಾಗಿರುತ್ತದೆ. ಅದು ಅಸತ್ತೂ ಆಗಿರುತ್ತದಷ್ಟೆ. ಅಸತ್ತಿನಿಂದ ಬೇರೆಯಾಗಿದ್ದು ಸತ್ವರೂಪದಿಂದ ಅತ್ಯಂತಾಭಾವ ಪ್ರತಿಯೋಗಿತ್ವವು ವಿವಕ್ಷಿತವೆಂದರೆ ಅಸತ್ವ ಪ್ರಾಪ್ತವಾಗದಿದ್ದರೂ ಅನಿರ್ವಚನೀಯತ್ವವು ಪ್ರಾಪ್ತವಾಯಿತು. ಈ ಎರಡು ಕಲ್ಪದಲ್ಲಿಯೂ ಹಿಂದೆ ಹೇಳಿರುವ ದೋಷಗಳು ತಪ್ಪಲಾರವು. ಅಂತೂ ಈ ಪ್ರಪಂಚ ಮಿಥ್ಯಾತ್ವಸಾಧಕ ಅನುಮಾನದಲ್ಲಿ ಮಿಥ್ಯಾತ್ವರೂಪ ಸಾಧ್ಯವನ್ನು ಯಾವ ರೀತಿಯಿಂದಲೂ ನಿರೂಪಿಸಲಿಕ್ಕೆ ಬಾರದಿರುವುದರಿಂದ 'ವಿಮತಂ ಮಿಥ್ಯಾ' ಎಂಬೀ ಪ್ರತಿಜ್ಞೆಯು ಅಸಂಗತವೇ ಆಗಿರುತ್ತದೆ. ॥ ೪ ॥

ಈ ಪ್ರಕಾರವಾಗಿ ಪ್ರತಿಜ್ಞೆಯ ದೋಷಗಳನ್ನು ಹೇಳಿ ಅದನ್ನು ನಿರಾಕರಿಸಿ ಈಗ ಹೇತುವನ್ನು ದೂಷಿಸುವರು. ಯೋಗ್ಯ ಅನುಮಿತಿ (ಅನುಮಾನದಿಂದ ಹುಟ್ಟುವಜ್ಞಾನ) ಯುಂಟಾಗಬೇಕಾದರೆ ಮೊದಲು ಲಿಂಗಜ್ಞಾನವಾಗಬೇಕು. ಎರಡನೇ ವ್ಯಾಪ್ತಿಸ್ಮರಣೆ ಆಗಬೇಕು. ಮೂರನೇದ್ದು ಬಾಧ ಸತ್ಪ್ರತಿಪಕ್ಷಗಳು ಇವೆಯೋ ಇಲ್ಲವೋ ಎಂದು ವಿಚಾರಮಾಡಬೇಕು. ಈ ಕ್ರಮದಿಂದ ದೋಷಗಳನ್ನು ತೋರಿಸುವವರಾಗಿ ಆದಿಯಲ್ಲಿ ಅಸಿದ್ಧಿಯನ್ನು ಹೇಳುವರು.—

**ಮೂ ॥ ದೃಶ್ಯತ್ವಾಭಾವಾದಸಿದ್ಧೋ ಹೇತುಃ ॥ ೫ ॥**

ಅ ॥ ದೃಶ್ಯತ್ವಾಭಾವಾತ್=ಪಕ್ಷದಲ್ಲಿ ದೃಶ್ಯತ್ವರೂಪಹೇತುವು ಇಲ್ಲದಿರುವುದರಿಂದ, ಹೇತುಃ=ವಚನಪ್ರತಿಪಾದ್ಯವಾದ ಲಿಂಗವು, ಅಸಿದ್ಧಃ=ಸ್ವರೂಪಾಸಿದ್ಧವಾಯಿತು.

ತಾ ॥ (1) ವ್ಯಾಪ್ತಿಸಾಮರ್ಥ್ಯದಿಂದ ಸಾಧ್ಯವನ್ನು ತಿಳಿಸಿಕೊಡುವ ಲಿಂಗವೇ ಹೇತುವು. ಅಂತಹ ಹೇತುವು ಅಸಿದ್ಧವಾದರೆ ಹೇತುವು ಆಭಾಸವಾಗುವುದರಿಂದ ಹೇತುತ್ವವೇ ಇಲ್ಲವೆಂದಾಗುವುದು. ಕಾರಣ, ಹೇತುವು ಅಸಿದ್ಧವು ಎಂಬೀ ನಿಮ್ಮ (ದ್ವೈತಿಗಳ) ವಚನವೇ ವ್ಯಾಹತವಾಗಿದೆಯೆಂದರೆ, ಅದ್ವೈತಿಯು ಅಭಿಮಾನದಿಂದ ಹೇತುವೆಂದು ಹೇಳಿದುದನ್ನೇ ನಾವು (ದ್ವೈತಿಗಳು) ಹೇತುವೆಂದು ಹೇಳಿದುದಲ್ಲದೆ ವಾಸ್ತವಿಕವಾದ ಹೇತು ಅಲ್ಲ. ಕಾರಣ ವ್ಯಾಹತಿಯಿರುವುದಿಲ್ಲ.

(2) ಇನ್ನು ಅದ್ವೈತಿಯು ಪ್ರಪಂಚವನ್ನು ಸತ್ಯವೆಂದು ಅಂಗೀಕರಿಸದೆ ಇರುವುದರಿಂದ ಮಿಥ್ಯಾತ್ವಕ್ಕೆ ಸಾಧಕವಾದ ದೃಶ್ಯತ್ವವೆಂಬಹೇತುವನ್ನು ಸತ್ಯವೆಂದು ಅಂಗೀಕರಿಸಲಾರನು. ಏಕೆಂದರೆ– ಆ ದೃಶ್ಯತ್ವದಲ್ಲಿ ದೃಶ್ಯತ್ವರೂಪಹೇತುವು ಸತ್ಯವಾದರೆ ಮಿಥ್ಯಾತ್ವರೂಪಸಾಧ್ಯವಿಲ್ಲದಿರುವುದರಿಂದ † ವ್ಯಭಿಚಾರವೆಂಬ ದೋಷವು ಬರುತ್ತದೆ. ದೃಶ್ಯತ್ವದಲ್ಲಿ ದೃಶ್ಯತ್ವರೂಪ ಹೇತುವೇ ಇಲ್ಲವೆಂದು ಹೇಳುವುದಾದರೆ ಹೇತುವಿನ ಜ್ಞಾನವೇ ಇಲ್ಲವೆಂದಾಯಿತು. ಹಾಗೂ(ಅಜ್ಞಾನಾಸಿದ್ಧಿ) * ಅಸಿದ್ಧಿರೂಪದೋಷವು ಬಂತು. ಆದುದರಿಂದ ದೃಶ್ಯತ್ವಹೇತುವೂ ಅಸತ್ತೆಂದೇ ಹೇಳಬೇಕಾಯಿತು. ಅಂತೂ ದೃಶ್ಯತ್ವವೇ ಇಲ್ಲದಿರುವ ಪ್ರಯುಕ್ತ ಹೇತುವಿಗೆ ಅಸಿದ್ಧಿದೋಷವು ತಪ್ಪಲಾರದು.

ಹಾಗಾದರೆ ದೃಶ್ಯತ್ವಹೇತುವು ಸತ್ಯವೂ ಅಸತ್ಯವೂ ಅಲ್ಲ. ಅನಿರ್ವಚನೀಯವೆಂದು ಹೇಳುತ್ತೇನೆ. ಕಾರಣ ಅಸಿದ್ಧಿದೋಷವು ಬರಲಾರದು ಎಂದರೆ—

**ಮೂ ॥ ಅನಿರ್ವಚನೀಯಾಸಿದ್ಧೇರೇವ ॥ ೬ ॥**

**ಅ ॥** ಸತ್ಯವೆಂದಾಗಲಿ ಅಸತ್ಯವೆಂದಾಗಲಿ ಹೇಳಲಿಕ್ಕೆ ಬಾರದಿರುವುದು ಅನಿರ್ವಚನೀಯವು. ಅಂತಹ ಅನಿರ್ವಚನೀಯವಾದ ದೃಶ್ಯತ್ವವು ಪ್ರಪಂಚದಲ್ಲಿ ನಮಗೆ ಸಿದ್ಧವಾಗಿಲ್ಲವಾದುದರಿಂದ ತಿರುಗಿಯೂ ಅಸಿದ್ಧಿದೋಷವೇ ಬರುವುದು.

**ತಾ ॥** ಅದ್ವೈತಿಯು ಹೀಗೆ ಆಕ್ಷೇಪಿಸಬಹುದು. "ಹಾಗಾದ ಪಕ್ಷದಲ್ಲಿ ಹೇತುವಾದ ದೃಶ್ಯತ್ವವು ಸತ್ಯವೆಂದಾಗಲಿ ಅನಿರ್ವಚನೀಯವೆಂದಾಗಲಿ ಹೇಳದೆ ಸಾಮಾನ್ಯವಾದ ದೃಶ್ಯತ್ವವನ್ನೇ ಹೇತುವನ್ನಾಗಿ ಹೇಳುತ್ತೇನೆ. ಇಂತಹುದು ಪ್ರಪಂಚದಲ್ಲಿ ವಾದಿಪ್ರತಿವಾದಿಗಳಿಬ್ಬರಿಗೂ ಸಮ್ಮತವಾಗಿದೆ. ಹೀಗೆ ಸಾಮಾನ್ಯವಾಗಿ ಹೇಳಿದ ಹೇತುವನ್ನು ವಿಶೇಷವಿಕಲ್ಪಿಸಿಕೊಂಡು ನಿರಾಕರಿಸುವುದಾದರೆ ಎಲ್ಲಾ ಅನುಮಾನಗಳನ್ನೂ ದೂಷಿಸಬಹುದು. ಹೇಗೆಂದರೆ – 'ಪರ್ವತವು ಬೆಂಕಿಯುಳ್ಳದ್ದು, ಹೊಗೆ ಇರುವುದರಿಂದ' ಎಂಬ ಒಳ್ಳೆಯ ಅನುಮಾನದಲ್ಲೂ ಈ ದೇಶಕಾಲಗಳಲ್ಲಿರುವ ಹೊಗೆಯು ಇರುವುದರಿಂದಲೋ? ಆ ದೇಶಕಾಲಗಳಲ್ಲಿದ್ದ ಹೊಗೆಯಿಂದಲೋ? ಎಂದು ವಿಕಲ್ಪಿಸಿ ಮೊದಲನೇ ಪಕ್ಷದಲ್ಲಿ ಅಂತಹ ಹೊಗೆಯು ದೃಷ್ಟಾಂತವಾದ ಅಡಿಗೆ ಮನೆಯಲ್ಲಿ ಇಲ್ಲವೆಂದೂ ಎರಡನೇ ಪಕ್ಷದಲ್ಲಿ ಪ್ರಕೃತಪಕ್ಷವಾದ ಪರ್ವತದಲ್ಲಿ ಇಲ್ಲವೆಂದೂ ದೂಷಿಸಲು ಬರುತ್ತದಷ್ಟೆ. ಆದಕಾರಣ ವಿಶೇಷವಾಗಿ ಇಟ್ಟು ಕೊಳ್ಳದೆ ಸಾಮಾನ್ಯವಾದ ಧೂಮವಿರುವುದರಿಂದಲೇ ಪರ್ವತವು ಬೆಂಕಿಯುಳ್ಳದೆಂದು ಸಾಧಿಸಬೇಕಾಗುತ್ತದೆ. ಅಂತೆಯೇ ಇಲ್ಲಿಯೂ ಸಾಮಾನ್ಯವಾದ ದೃಶ್ಯತ್ವವನ್ನು ಹೇತುವನ್ನಾಗಿ ಹೇಳುವುದರಿಂದ ಅಸಿದ್ಧಿಯು ಇರುವುದಿಲ್ಲ." ಈ ಆಕ್ಷೇಪಕ್ಕೆ ಇದೇ ಉತ್ತರವು. ಹೇಗಂದರೆ— ಧೂಮಾನುಮಾನದಲ್ಲಿ ಆ ಧೂಮ ಮತ್ತು ಈ ಧೂಮವೆಂದು ಎರಡು ಧೂಮಗಳಲ್ಲಿಯೂ ಸಾಮಾನ್ಯವಾದ ಧೂಮತ್ವವು ಇದೆ

---

† ಸಾಧ್ಯವಿಲ್ಲದಿರುವಲ್ಲಿ ಹೇತುವು ಬಂದರೆ ವ್ಯಭಿಚಾರವಾಗುತ್ತದೆ. 'ಪರ್ವತವು ಹೊಗೆಯುಳ್ಳದ್ದು, ಬೆಂಕಿ ಇರುವುದರಿಂದ'ಎಂದು ಸಾಧಿಸಿದರೆ ಕಬ್ಬಿಣ ಗೋಲನನ್ನು ಕಾಯಿಸಲು ಅದರಲ್ಲಿ ಬೆಂಕಿಯಿದ್ದರೂ ಹೊಗೆಯಿಲ್ಲದಿರುವುದರಿಂದ ಅನುಮಾನಕ್ಕೆ ವ್ಯಭಿಚಾರವೆಂದು ತಿಳಿಯತಕ್ಕದ್ದು.

* ಪಕ್ಷದಲ್ಲಿ ಹೇತುವು ಇಲ್ಲದೇಹೋದರೆ ಅಸಿದ್ಧಿದೋಷವು(ಸ್ವರೂಪಾಸಿದ್ಧಿಯು) ಬರುತ್ತದೆ. ಉದಾ:– ಕಬ್ಬಿಣದ ಗೋಲವು ಬೆಂಕಿಯುಳ್ಳದ್ದು ಹೊಗೆ ಇರುವುದರಿಂದ, ಇಲ್ಲಿ ಹೊಗೆಯು ಕಬ್ಬಿಣಗೋಲದಲ್ಲಿ ಇಲ್ಲದಿರುವುದರಿಂದ ಹೇತುವಿಗೆ ಸ್ವರೂಪಾಸಿದ್ಧಿದೋಷವು ಬಂತು.

ಎಂದು ಎಲ್ಲರೂ ಒಪ್ಪಿರುವರು. ಪ್ರಕೃತದಲ್ಲಿ ಅನಿರ್ವಚನೀಯವೆಂಬ ಒಂದು ಪದಾರ್ಥವೇ ನಾವು (ದ್ವೈತಿಗಳು) ಒಪ್ಪದೇ ಇರುವ ಕಾರಣ ಸತ್ಯ ಮತ್ತು ಅನಿರ್ವಚನೀಯ ದೃಶ್ಯತ್ವಗಳಲ್ಲಿ ಸಾಮಾನ್ಯವಾದ ದೃಶ್ಯತ್ವವು ವಾದಿಪ್ರತಿವಾದಿಗಳಿಬ್ಬರಿಗೂ ಸಮ್ಮತವಾಗಿರುವುದಿಲ್ಲ. ಆದ ಕಾರಣ ಅಸಿದ್ಧಿದೋಷವನ್ನು ಅದ್ವೈತಿಯು ಅನುಮಾನಕ್ಕೆ ಪರಿಹರಿಸಲು ಸಾಧ್ಯವಾಗಲಾರದು. ॥ ೬ ॥

ಇಷ್ಟಲ್ಲದೆ ಈ ಅನುಮಾನಕ್ಕೆ ವಿರೋಧವೆಂಬ ದೋಷವೂ ಬರುತ್ತದೆ.

**ಮೂ ॥ ಅನಿರ್ವಚನೀಯಾಸಿದ್ಧೇರೇವ ಸಪಕ್ಷಾಭಾವಾದ್ವಿರುದ್ಧಃ ॥ ೭ ॥**

ಅ ॥ ಅನಿರ್ವಚನೀಯಾಸಿದ್ಧೇರೇವ=ಅನಿರ್ವಚನೀಯವೆಂಬುದೊಂದು ಸಿದ್ಧಿಸದ್ದರಿಂದ, ಸಪಕ್ಷಾಭಾವಾತ್=ದೃಷ್ಟಾಂತವು ಇಲ್ಲದಂತಾದುದರಿಂದ, (ಹೇತುವು) ವಿರುದ್ಧಃ=ವಿರುದ್ಧವಾಯಿತು.

ತಾ ॥ ಅದ್ವೈತಿಯು ಆಶಂಕಿಸುವನು:- "ಸಾಧ್ಯಾಭಾವದಿಂದ ಹೇತುವು ವ್ಯಾಪ್ತವಾದರೆ ವಿರುದ್ಧವಾಗುತ್ತದೆ. ಉದಾ:- "ಘಟವು ನಿತ್ಯವಾಗಿದೆ ಹುಟ್ಟುವುದರಿಂದ" ಎಂಬಲ್ಲಿ ಯಾವು ದಾವುದು ಹುಟ್ಟುತಕ್ಕುದೋ ಅದೆಲ್ಲವೂ ಅನಿತ್ಯವೇ ಆಗಿರುತ್ತದೆಯಾದುದರಿಂದ ಈ ಪ್ರಯೋಗ ದಲ್ಲಿ ಹೇತುವು ಸಾಧ್ಯವಾದ ನಿತ್ಯತ್ವದ ಅಭಾವರೂಪವಾದ ಅನಿತ್ಯತ್ವದಿಂದಲೇ ವ್ಯಾಪ್ತವಾಗಿದೆ ಯಾದ ಕಾರಣ ಹುಟ್ಟುವುದರಿಂದ ಎಂಬ ಹೇತುವು ವಿರುದ್ಧವಾಗಿದೆ, ಅಲ್ಲದೆ ಸಪಕ್ಷವಿಲ್ಲದಿರುವು ದರಿಂದ ಹೇತುವು ವಿರುದ್ಧವಾಗಲಾರದು. ಹಾಗೂ ವಿರುದ್ಧವಾಗುವುದಾದರೆ ಕೇವಲವ್ಯತಿರೇಕಿ ಅನುಮಾನವೂ * ವಿರುದ್ಧವಾಗಬೇಕಾಯಿತು. ಅಲ್ಲಿಯೂ ಸಪಕ್ಷವು ಇಲ್ಲವಷ್ಟೆ. ಆದಕಾರಣ ಸಪಕ್ಷವಿಲ್ಲದಿರುವುದರಿಂದ ಹೇತುವು ವಿರುದ್ಧವಾಗುವುದು ಹೇಗೆ? ಹಾಗೂ ಅನಿರ್ವಚನೀಯವು ಅಸಿದ್ಧವಾದರೆ ಸಪಕ್ಷವು ಇಲ್ಲದೇ ಹೋಗುವುದು ಹೇಗೆ? ಮಿಥ್ಯಾತ್ವವೆಂದರೆ ಅನಿರ್ವಚನೀಯ ವೆಂದು ಹೇಳಲಿಲ್ಲ" ಹೀಗೆಂದರೆ 'ಮಿಥ್ಯಾ' ಎಂಬುವುದಕ್ಕೆ ಎಷ್ಟು ಅರ್ಥಗಳನ್ನು ಹೇಳಲು ಬರು ತ್ತದೋ, ಅಷ್ಟನ್ನೂ ನಾವು (ದ್ವೈತಿಗಳು) ಹಿಂದೆಯೇ ಅಸತ್ತು ಅಥವಾ ಅನಿರ್ವಚನೀಯ ಇವುಗ ಳಿಂದ ಬೇರೆಯಾಗುವುದಿಲ್ಲವೆಂದು ಹೇಳಿರುತ್ತೇವಷ್ಟೆ. ಅವುಗಳಲ್ಲಿ ಮಿಥ್ಯಾ ಎಂದರೆ ಅಸತ್ತು ಎಂತ

* ಕೇವಲ ವ್ಯತಿರೇಕಿ ಅನುಮಾನವೆಂದರೆ— ಅನುಮಾನದಲ್ಲಿ ಎಲ್ಲೆಲ್ಲಿ ಹೇತು (ಹೊಗೆ) ಇರುವುದೋ, ಅಲ್ಲಲ್ಲಿ ಸಾಧ್ಯ (ಬೆಂಕಿ) ಇರುತ್ತದೆ. ಎಂದು ಹೇಳುವುದು ಅನ್ವಯವ್ಯಾಪ್ತಿಯು. ಈ ವ್ಯಾಪ್ತಿಗೆ 'ಅಡಿಗೆ ಮನೆಯಂತೆ' ಎಂದು ದೃಷ್ಟಾಂತವನ್ನು ತೋರಿಸಲು ಬರುತ್ತದೆ. ಎಲ್ಲಿ ಬೆಂಕಿಯು ಇಲ್ಲವೋ ಅಲ್ಲಿ ಹೊಗೆಯೂ ಇಲ್ಲ. ಇದು ವ್ಯತಿರೇಕವ್ಯಾಪ್ತಿಯು, ಇದಕ್ಕೂ 'ಕೊಳದಂತೆ' ಎಂದು ದೃಷ್ಟಾಂತವನ್ನು ಹೇಳಲು ಬರುತ್ತದೆ. ಇನ್ನು ಯಾವ ಅನುಮಾನದಲ್ಲಿ ಅನ್ವಯ ದೃಷ್ಟಾಂತವಿಲ್ಲದ್ದರಿಂದ ಅನ್ವಯ ವ್ಯಾಪ್ತಿಯನ್ನು ತೋರಿಸಲು ಬರು ವುದಿಲ್ಲವೋ, ವ್ಯತಿರೇಕವ್ಯಾಪ್ತಿಯನ್ನು ಮಾತ್ರ ತೋರಿಸಲು ಬರುವುದೋ, ಅಂತಹ ಅನುಮಾನವು 'ಕೇವಲ ವ್ಯತಿರೇಕಿ' ಎಂದೆನಿಸುತ್ತದೆ. ಉದಾ:— 'ಪೃಥಿವಿಯು, ಜಲವೇ ಮೊದಲಾದವುಗಳಿಂದ ಭಿನ್ನವಾಗಿದೆ. ಗಂಧ ವಿರುವುದರಿಂದ, ಎಂಬಲ್ಲಿ 'ಯಾವುದು ಗಂಧವುಳ್ಳುದೋ ಅದು (ಪೃಥಿವಿಯಿಂದ) ಬೇರೆಯಾದ ಜಲಾದಿಗ ಳಿಂದ ಭಿನ್ನವಾಗಿದೆ' ಎಂದು ಅನ್ವಯವ್ಯಾಪ್ತಿಯನ್ನು ತೋರಿಸಲು ದೃಷ್ಟಾಂತವಿಲ್ಲ. ಪೃಥಿವಿಯೆಲ್ಲವೂ ಪಕ್ಷವೇ ಆಗಿದೆ. ಬೇರೆ ಅವುದರಲ್ಲೂ ಗಂಧವಿಲ್ಲವಷ್ಟೆ. ಕಾರಣ 'ಯಾವುದು ಜಲಾದಿಗಳಿಂದ ಭಿನ್ನವಲ್ಲವೋ, ಅದು ಗಂಧವುಳ್ಳುವಲ್ಲ' ಎಂದು ವ್ಯತಿರೇಕವ್ಯಾಪ್ತಿಯನ್ನು ಮಾತ್ರ ತೋರಿಸಲು ಬರುತ್ತದೆ. ಏಕೆಂದರೆ 'ನೀರಿನಂತೆ' ಎಂದು ದೃಷ್ಟಾಂತವನ್ನು ತೋರಿಸಲು ಬರುತ್ತದೆ. ಆದಕಾರಣ ಇಂತಹ ಅನುಮಾನಗಳು ಕೇವಲ ವ್ಯತಿರೇಕಿ ಗಳೆನಿಸುತ್ತವೆ. ಇವುಗಳು ಒಳ್ಳೇ ಅನುಮಾನಗಳೇ.

ಹೇಳಲು ಬರುವುದಿಲ್ಲ. ಹಾಗೆ ಹೇಳಿದರೆ ತಾನು (ಅದ್ವೈತಿಯು) ಅಂಗೀಕರಿಸಿದ ಮತಕ್ಕೆ ತಾನೇ ವಿರೋಧವಾಗಿ ಹೇಳುವಂತಹ ಅಪಸಿದ್ಧಾಂತವೇ ಮೊದಲಾದ ದೋಷಗಳು ಬರುತ್ತವೆಯಷ್ಟೆ. ಕಾರಣ, ಮಿಥ್ಯಾ ಎಂದರೆ ಅನಿರ್ವಚನೀಯವೆಂದು ಬಾಯಿಬಿಟ್ಟು ಹೇಳದಿದ್ದರೂ, ಆತನ ಅಭಿಪ್ರಾಯವು ಅನಿರ್ವಚನೀಯವೆಂದೇ ಇರುತ್ತದೆ. ಅಂತಹ ಅನಿರ್ವಚನೀಯವಾದುದೊಂದು ದೃಷ್ಟಾಂತವಾಗಬೇಕಾಯಿತು. ಆದಕಾರಣ ಅಂತಹ ಅನಿರ್ವಚನೀಯವೆಂದು ನಿಶ್ಚಿತವಾದ ಸಪಕ್ಷವಿಲ್ಲದಿರುವುದರಿಂದ ಆಕಾಶಾದಿ ಸಮಸ್ತವನ್ನು ಒಳಗೊಂಡ ಪ್ರಪಂಚದಿಂದ ಬೇರೆಯಾದ ಶುಕ್ತಿರಜತವೇ ಮೊದಲಾದವು ವಿಪಕ್ಷಗಳಾದುವು. ಅಲ್ಲಿ ಈ ದೃಶ್ಯತ್ವರೂಪಹೇತುವಿರುವುದರಿಂದ ಸಾಧ್ಯವಾದ ಮಿಥ್ಯಾತ್ವದ ಅಭಾವರೂಪವಾದ ಸತ್ಯತ್ವದಿಂದಲೇ ವ್ಯಾಪ್ತವಾಗಿದೆ. ಎಂದು ಹೇಳಬೇಕಾಗುವುದು. ಅಂದರೆ ಆವಿಯಲ್ಲಿ ಶುಕ್ತಿರಜತದಲ್ಲಿ ಮಿಥ್ಯಾತ್ವವನ್ನು ಅಂಗೀಕರಿಸಿದ ಅದ್ವೈತಿಯು ತನ್ನ ಅನುಮಾನಕ್ಕೆ ಸಪಕ್ಷವಿಲ್ಲವೆಂದು ಒಪ್ಪುವುದರಿಂದ, ಶುಕ್ತಿರಜತಕ್ಕೆ ಸತ್ಯತ್ವವನ್ನು ಒಪ್ಪಬೇಕಾಗುವುದು. ಕಾರಣ ಪರನ ಅನುಮಾನದಲ್ಲಿ ದೃಶ್ಯತ್ವಹೇತುವು ವಿರೋಧರೂಪದೋಷಯುಕ್ತವಾಯಿತು. ॥ ೭ ॥

ಅನುಮಾನಕ್ಕೆ ವಿರೋಧರೂಪ ದೋಷವನ್ನು ಹೇಳಿ ಈಗ ವ್ಯಭಿಚಾರದೋಷವನ್ನೂ ಹೇಳುತ್ತಾರೆ—

**ಮೂ ॥ ಆತ್ಮನೋಽಪಿ ದೃಶ್ಯತ್ವಾದನೈಕಾಂತಿಕಃ ॥ ೮ ॥**

ಅ ॥ (ಸಪಕ್ಷವಾದ ಶುಕ್ತಿರಜತ ಮೊದಲಾದುದಕ್ಕೆ ದೃಶ್ಯತ್ವವಿರುವಂತೆ) ಆತ್ಮನೋಽಪಿ= ಸತ್ಯವೆಂದಂಗೀಕರಿಸಿದ್ದ ಆತ್ಮನಿಗೂ ಕೂಡ, ದೃಶ್ಯತ್ವಾತ್=ದೃಶ್ಯತ್ವವಿರುವುದರಿಂದ, ಅನೈಕಾಂತಿಕಃ=ಸಾಧ್ಯವಿಲ್ಲದಿದ್ದಲ್ಲಿ ಇರೋಣವೆಂಬ ವ್ಯಭಿಚಾರ ದೋಷವು (ಹೇತುವಿಗೆ ಬರುತ್ತದೆ).

ತಾ ॥ ಆತ್ಮನಿಗೂ ದೃಶ್ಯತ್ವವಿರುವುದರಿಂದ ಎಂದು ಹೇಳಿರುವುದರಿಂದ ಸಪಕ್ಷವಾದ ಶುಕ್ತಿರಜತಕ್ಕೂ ದೃಶ್ಯತ್ವವಿದೆಯೆಂದು ಹೇಳಿದಂತಾಯಿತು. ಮೊದಲಿನ ವಾಕ್ಯದಲ್ಲಿ ಸಪಕ್ಷವೇ ಇಲ್ಲವೆಂದು ಹೇಳಿದುದಕ್ಕೂ ಈ ವಾಕ್ಯಕ್ಕೂ ವಿರೋಧವು ಬಂತೆಂದರೆ- ವಸ್ತುತಃ ಸಪಕ್ಷವಿಲ್ಲದಿದ್ದರೂ ಉಂಟೆಂದು ಅಂಗೀಕಾರಮಾಡಿಕೊಂಡು 'ಆತ್ಮನೋಽಪಿ' ಎಂದು ಹೇಳಿದ್ದಾಗಿರುತ್ತದೆ. ಅಥವಾ ವಸ್ತುತಃ ಸಪಕ್ಷವಿಲ್ಲದಿದ್ದರೂ ಪರನು ಅಂಗೀಕರಿಸಿದ್ದುದರಿಂದಲೇ ಅವನ ರೀತಿಯಾಗಿ ವ್ಯಭಿಚಾರದೋಷವನ್ನು ಹೇಳಿದ್ದಾಗಿರುತ್ತದೆ. ಆತ್ಮನಿಗೆ ದೃಶ್ಯತ್ವವನ್ನೂ ಆತನ ಕುರಿತೇ ಸಮರ್ಥಿಸುವುದು.

ಮಿಥ್ಯಾ ಎಂಬುದಕ್ಕೆ ಅಸತ್, ಅನಿರ್ವಚನೀಯ, ಸದ್ವಿವಿಕ್ತವೆಂದಾಗಲಿ ಅದ್ವೈತಿಗಳು ಹೇಳತಕ್ಕುದು. ಅನಿರ್ವಚನೀಯವೆಂದಂಗೀಕರಿಸಿದರೆ ಹೇತುವು ವಿರುದ್ಧವಾಗುತ್ತದೆ ಎಂದು ಹೇಳಿ ಉಳಿದ ಎರಡು ಪಕ್ಷಗಳಲ್ಲಿ ವ್ಯಭಿಚಾರವು ಈ ವಾಕ್ಯದಿಂದ ಹೇಳಲ್ಪಟ್ಟಿತು. ಆತ್ಮನಿಗೂ ದೃಶ್ಯತ್ವವಿರುವುದರಿಂದ ಈ ವ್ಯಭಿಚಾರರೂಪದೋಷವು ಹೇಳಲ್ಪಟ್ಟಿತಷ್ಟೆ. ಅಂತಹ ದೃಶ್ಯತ್ವವನ್ನೇ ಪರನು ಒಪ್ಪದಿದ್ದಲ್ಲಿ ಈ ದೋಷವು ತಪ್ಪಲಾರದು. ಆದರೆ ಆತ್ಮನಿಗೆ ದೃಶ್ಯತ್ವವನ್ನು ನಾವು ಸಮರ್ಥಿಸಿಯೇ ಈ ದೋಷವನ್ನು ಹೇಳಿದ್ದೇವೆಂದು ತಿಳಿಯಬೇಕು. ಆತ್ಮನು ಜ್ಞಾನವಿಷಯನು ಆಗದೆ ಹೋದರೆ ಆತನನ್ನು ತಿಳಿಯುವುದಕ್ಕಾಗಿಯೇ ಗುರುಗಳಮುಖದಿಂದ ಮಾಡತಕ್ಕ ವೇದಾಂತ ಶ್ರವಣಾದಿಗಳು ವ್ಯರ್ಥವೇ ಆಗಬೇಕಾಗುವುದು. ಮತ್ತು ಆತ್ಮಜ್ಞಾನವೇ ಇಲ್ಲದಿದ್ದರೆ ಆತ್ಮಜ್ಞಾನ ಸಾಧ್ಯವಾದ ಮೋಕ್ಷವೇ ಆಗದೆ ಹೋಗಬೇಕಾಯಿತು. ಇದೇ ಮೊದಲಾದ ಪ್ರಕಾರಗಳಿಂದ ಆ ಆತ್ಮನಿಗೆ ದೃಶ್ಯತ್ವಸಮರ್ಥನವನ್ನು ಟೀಕೆಯಿಂದಲೇ ತಿಳಿಯಬೇಕು. ॥ ೮ ॥

ಇನ್ನೂ ದೋಷಗಳನ್ನು ಹೇಳುತ್ತಾರೆ.

**ಮೂ ॥ ಜಗತೋऽಭಾವೇ ಅನುಮಾನಸ್ಯಾಪ್ಯಭಾವಃ ಇತಿ ತರ್ಕಬಾಧಿತತ್ವೇ ನಾನಧ್ಯವಸಿತಃ ॥ ೯ ॥**

ಅ ॥ ಜಗತಃ ಅಭಾವೇ=ಪ್ರಪಂಚವು ಸತ್ತಲ್ಲವೆಂದಾದರೆ, ಅನುಮಾನಸ್ಯಾಪ್ಯಭಾವಃ=ಜಗತ್ತಿನಲ್ಲಿ ಸೇರಿದ್ದ ಅನುಮಾನವು ಸತ್ತು ಅಲ್ಲವೆಂದಾಯಿತು, ಇತಿ=ಎಂದೀಪ್ರಕಾರವಾಗಿ, ತರ್ಕಬಾಧಿತತ್ವೇನ=ತರ್ಕದಿಂದ ಬಾಧಿಸಲ್ಪಡುವುದರಿಂದ, (ಹೇತುವು) ಅನಧ್ಯವಸಿತಃ=ಅನಧ್ಯವಸಿತವೆಂಬ ದೋಷಯುಕ್ತವಾಯಿತು.

ತಾ ॥(1) ಜಗತ್ತಿಗೆ ಸದ್ವಿವಿಕ್ತತ್ವವನ್ನಾಗಲೀ ಅನಿರ್ವಚನೀಯತ್ವವನ್ನಾಗಲೀ ಅದ್ವೈತಿಗಳು ಸಾಧಿಸುವವರಾದ ಕಾರಣ ಜಗತ್ತು ಇಲ್ಲವೆಂಬೀ ಮಾತು ಹೇಗೆ ಕೂಡುತ್ತದೆ? ಎಂದಾಕ್ಷೇಪಿಸಿದರೆ ಅನಿರ್ವಚನೀಯತ್ವವು ಎಲ್ಲಿಯೂ ಪ್ರಸಿದ್ಧವಲ್ಲ, ಸದ್ವಿವಿಕ್ತವೆಂದು ಹೇಳುವುದಾದರೂ ಅನಿರ್ವಚನೀಯ ಅಥವಾ ಅಸತ್ತು ಈ ಕಲ್ಪಗಳನ್ನು ಬಿಟ್ಟಿರುವುದಿಲ್ಲವಾದ ಕಾರಣ ಅಂತೂ ಅಸತ್ವವೇ ಸಿದ್ಧವಾಗುತ್ತದೆಯೆಂದು ಅಂಗೀಕರಿಸಿ 'ಜಗತೋऽಭಾವೇ' ಎಂದು ಮೂಲವು ಹೊರಟಿದೆ.

(2) 'ಜಗತ್ತಿಗೆ ಸತ್ವವಿಲ್ಲವಾದರೆ' ಎಂದೀರೀತಿಯಾಗಲೀ ಅರ್ಥಮಾಡುವ ಪ್ರಯುಕ್ತ ಮೂಲವು ಯುಕ್ತವಾಗುತ್ತದೆ.

(3) ಹೀಗಾದರೂ 'ಜಗತ್ತು ಇಲ್ಲವಾದರೆ ಅನುಮಾನವೂ ಇಲ್ಲವಾದೀತು' ಎಂಬೀ ವಿಷಯದಲ್ಲಿ ದೃಷ್ಟಾಂತವು ಇಲ್ಲದಿರುವುದರಿಂದ ವ್ಯಾಪ್ತಿಯೂ ಕೂಡಲಾರದು. ಕಾರಣ ಈ ರೀತಿಯಾಗಿ ಆಪಾದನವು ಹೇಗೆ ಕೂಡುವುದು? ಎಂದು ಕೇಳಿದರೆ- ಪ್ರಪಂಚವು ಮಿಥ್ಯೆಯಾದರೆ ಪ್ರಪಂಚದಲ್ಲಿ ಸೇರಿದ ಅನುಮಾನವೂ ಮಿಥ್ಯಾಭೂತವಾಗಬೇಕಾಯಿತು. 'ಬೆಕ್ಕಿನ ಕೋಡಿನಲ್ಲಿ ನೊಣವು ಕೂತದೆ' ಎಂಬಲ್ಲಿ ಬೆಕ್ಕಿನ ಕೋಡೇ ಸುಳ್ಳಾದುದರಿಂದ ನೊಣವು ಕೂತದ್ದು ಸುಳ್ಳಾಗುವಂತೆ, ಆದಕಾರಣ ದೃಷ್ಟಾಂತವೂ ವ್ಯಾಪ್ತಿಯೂ ಎರಡೂ ಇರುವುದರಿಂದ ಮೂಲದಲ್ಲಿ ಆಪಾದನೆ ಮಾಡಿರುದು ಯುಕ್ತವೇ. ಅಂತೂ ಮೂಲವು ಸಂಗತವೇ ಆಗುತ್ತದೆ.

(4) ಅಥವಾ ಪ್ರಪಂಚದಲ್ಲಿರುವ ದೃಶ್ಯತ್ವವು ಅದಕ್ಕೆ ಮಿಥ್ಯಾತ್ವವನ್ನು ಸಾಧಿಸಿಕೊಡುವುದಾದರೆ ವಿಶೇಷವಿಲ್ಲದಿರುವುದರಿಂದ ಅನುಮಾನಕ್ಕೂ ಮಿಥ್ಯಾತ್ವವನ್ನು ಸಾಧಿಸಿಕೊಡುವುದು.

(5) ಅದಲ್ಲದೆ ಜಗತ್ತು ಇಲ್ಲವೆಂದಾದರೆ ದೃಶ್ಯತ್ವರೂಪಹೇತುವೂ ಇಲ್ಲವೆಂದಾಯಿತು. ಅಂತೂ ಸ್ವರೂಪಾಸಿದ್ಧಿಯನ್ನೇ ಹೇಳಿದ ಹಾಗಾಯಿತು. ಇದು ಪೂರ್ವದಲ್ಲೇ ಉಕ್ತವಾಗಿದೆ. ಆದ ಕಾರಣ 'ಜಗತೋऽಭಾವಾತ್' ಎಂಬೀ ಮೂಲವಾಕ್ಯದಿಂದ ಹೆಚ್ಚಿಗೆ ಏನೂ ಹೇಳಿದ ಹಾಗಾಗಲಿಲ್ಲವಾದಕಾರಣ ಪುನರುಕ್ತಿಯಾಯಿತು ಎಂದು ಕೇಳಿದರೆ- ವ್ಯಾಪ್ತಿಯು ಇಲ್ಲದಿರುವುದರಿಂದ ಸ್ವರೂಪಾಸಿದ್ಧಿಯೆಂದು ಪೂರ್ವದಲ್ಲಿ ಹೇಳಿದ್ದಾಗಿರುತ್ತದೆ. ಈಗಲಾದರೋ ಅನುಮಾನಾಂಗಗಳು ಯಾವುದೂ ಇಲ್ಲದಿರುವುದರಿಂದ ಸಾಧ್ಯಸಾಧನೆಯಲ್ಲಿ ಹೇತುವು ಸಮರ್ಥವಾಗಲಾರದೆಂದು ಹೇಳುವುದಾದಕಾರಣ ಪುನರುಕ್ತಿಯು ಇರುವುದಿಲ್ಲ. ಈ ಅಭಿಪ್ರಾಯದಿಂದಲೇ ಅನುಮಾನವು ತರ್ಕಬಾಧಿತವಾಗುವುದರಿಂದ ಅನಧ್ಯವಸಿತವಾಯಿತೆಂದು ಹೇಳಿದ್ದಾಗಿರುತ್ತದೆ. ಯಾವ ಹೇತುವಿನಿಂದ ಸಾಧ್ಯವು ಸಿದ್ಧಿಸುವುದಿಲ್ಲವೋ, ಅಂತಹ ಹೇತುವು ಅನಧ್ಯವಸಿತವೆನಿಸುತ್ತದೆ. ಇದು ಎಲ್ಲಾ ದುಷ್ಟಹೇತುಗಳಿಗೂ ಸಮಾನವಾದುದರಿಂದ ವಿಶೇಷವೇನು? ಅಂದರೆ ಯಾವ ಹೇತುವು ಸಾಧ್ಯವನ್ನು ಸಾಧಿಸದೆ ಪಕ್ಷದಲ್ಲಿ ಮಾತ್ರವಿರುತ್ತದೋ ಅದು ಅನಧ್ಯವಸಿತವೇ,

ಪ್ರಕೃತವಾದರೂ ದೃಶ್ಯತ್ವಹೇತುವು ಪರಮತರೀತಿಯಿಂದ ಸಪಕ್ಷವಾದ ಶುಕ್ತಿರಜತದಲ್ಲಿಯೂ ಸಿದ್ಧಾಂತರೀತಿಯಿಂದ ವಿಪಕ್ಷನಾದ ಆತ್ಮನಲ್ಲಿಯೂ ಇರುವುದರಿಂದ ಹೇಗೆ ಅನಧ್ಯವಸಿತವೆಂದರೆ ಅಸಿದ್ಧದಿಂದ ಬೇರೆಯಾಗಿ ಯಾವ ಹೇತುವು ಸಾಧ್ಯವನ್ನು ಸಾಧಿಸುವುದಿಲ್ಲವೋ, ಅಂತಹ ಲಕ್ಷಣ ವುಳ್ಳದೆಂದು ತಿಳಿಯತಕ್ಕದು. ಅಲ್ಲದೆ ಅನಧ್ಯವಸಿತ ಹೇತುವಿಗೆ ಎಲ್ಲಿಡೆಯಲ್ಲೂ ಇದೇ ಲಕ್ಷಣ ವೆಂದೂ ತಿಳಿಯತಕ್ಕದು. ಉದಾ:- 'ಎಲ್ಲವೂ ಅನಿತ್ಯವಾಗಿದೆ, ಸತ್ತಾದುದರಿಂದ' ಎಂಬಲ್ಲಿ ಎಲ್ಲವೂ ಪಕ್ಷವಾದುದರಿಂದ ದೃಷ್ಟಾಂತವೇ ಇಲ್ಲದಂತಾಗಿದೆ. ಇದರಿಂದ ಹೇತುವು ಸಾಧ್ಯಜ್ಞಾ ನವನ್ನು ಹುಟ್ಟಿಸಲಾರದು. ಹಾಗೂ ಪಕ್ಷದಲ್ಲಿ ಸತ್ವರೂಪಹೇತುವು ಇರುವುದರಿಂದ ಅಸಿದ್ಧವೂ ಆಗುವುದಿಲ್ಲ. ಪ್ರಕೃತದಲ್ಲಿಯೂ ದೃಶ್ಯತ್ವಹೇತುವು ಪಕ್ಷದಲ್ಲಿರುವುದರಿಂದ ಅಸಿದ್ಧವಾಗದೆಯೂ ಮಿಥ್ಯಾತ್ವರೂಪಸಾಧ್ಯವನ್ನು ಸಾಧಿಸದೆ ಇರುವುದರಿಂದಲೂ ಮೇಲೆ ವಿವರಿಸಿದ ರೀತಿಯಿಂದ ಅನ ಧ್ಯವಸಿತವಾಗಿರುತ್ತದೆ. ಹೇತುವು ಪಕ್ಷದಲ್ಲೇ ಇರದೆ ಸಾಧ್ಯಜ್ಞಾನವನ್ನುಂಟುಮಾಡದಿರುವುದು ಅಸಿದ್ಧಿಯು. ಹೇತುವು ಪಕ್ಷದಲ್ಲಿ ಇದ್ದರೂ ವ್ಯಾಪ್ತಿಯು ಇಲ್ಲದಿರುವುದರಿಂದ ಸಾಧ್ಯಜ್ಞಾನವ ನ್ನುಂಟುಮಾಡದಿರುವುದು ಅನಧ್ಯವಸಿತವೆಂದು ಇವುಗಳಿಗೆ ಭೇದವು. ಇನ್ನೂ ವಿಶೇಷಾಂಶಗ ಳನ್ನೂ ಟೀಕಾದಿಗಳಿಂದ ತಿಳಿಯತಕ್ಕದು. ॥ ೯ ॥

ಅದೇ ಅನುಮಾನಕ್ಕೆ ಇನ್ನೂ ಬಾಧಾದಿ ದೋಷಗಳನ್ನು ಹೇಳುತ್ತಾರೆ.—

**ಮೂ ॥ ಪ್ರತ್ಯಕ್ಷಾದಿವಿರುದ್ಧತ್ವಾದ್ವಿಶ್ವಂ ಸತ್ಯಮಿತ್ಯಾದಿವಾಕ್ಯವಿರುದ್ಧತ್ವಾಚ್ಚ ಕಾಲಾತ್ಯಯಾಪದಿಷ್ಟಃ ॥ ೧೦ ॥**

**ಅ ॥** ಪ್ರತ್ಯಕ್ಷಾದಿವಿರುದ್ಧತ್ವಾತ್ = ಪ್ರತ್ಯಕ್ಷಾದಿ ಪ್ರಮಾಣವಿರುದ್ಧವಾದುದರಿಂದಲೂ, 'ವಿಶ್ವಂ ಸತ್ಯಂ' ಇತ್ಯಾದಿ ವಾಕ್ಯವಿರುದ್ಧತ್ವಾಚ್ಚ='ವಿಶ್ವಂ ಸತ್ಯಂ' ಎಂಬೀರೀತಿಯಾದ ಶ್ರುತಿಗ ಳಿಂದ ವಿರೋಧವು ಬರುವುದರಿಂದಲೂ, (ಅನುಮಾನವು) ಕಾಲಾತ್ಯಯಾಪದಿಷ್ಟಃ=* ಬಾಧಿ ತವಾಯಿತು.

**ತಾ ॥** (1) ಯಥಾಯೋಗ್ಯವಾಗಿ ಪ್ರತ್ಯಕ್ಷ, ಅನುಮಾನ, ಆಗಮಪ್ರಮಾಣಗಳಿಂದ ಸಿದ್ಧಗಳಾದ ಪದಾರ್ಥಗಳನ್ನೇ ಪಕ್ಷವನ್ನಾಗಿಟ್ಟುಕೊಂಡು ಅವುಗಳಲ್ಲಿ ಸಾಧ್ಯವನ್ನು ಸಾಧಿಸತ ಕ್ಕದ್ದು. ಪ್ರಮಾಣಗಳಾದರೂ ಜಗತ್ತಿಗೆ ಸತ್ಯತ್ವವನ್ನೇ ಹೇಳುತ್ತವೆ. ಅಂತಹ ಜಗತ್ತಿಗೆ ಮಿಥ್ಯಾ ತ್ವವನ್ನು ಸಾಧಿಸಿದರೆ ಪ್ರಮಾಣಬಾಧವು ತಪ್ಪಲಾರದಾದುದರಿಂದ ಅನುಮಾನವುಬಾಧಿತವಾಯಿತು.

(2) ಪ್ರಮಾಣಗಳಿಂದ ಜಗತ್ತು ಸತ್ಯವಾಗಿದೆಯೆಂದರೆ ಸತ್ಯತ್ವವೆಂದರೆ ಎಂತಹುದು? ಅಂದರೆ ಅದ್ವೈತಿಗಳು ಬ್ರಹ್ಮನಲ್ಲಿಎಂತಹ ಸತ್ಯತ್ವವನ್ನುಹೇಳುತ್ತಾರೋ ಅಂತಹ ಸತ್ಯತ್ವವನ್ನೇ ನಾವು (ದ್ವೈತಿಗಳು) ಪ್ರಪಂಚಕ್ಕೆ ಹೇಳುತ್ತೇವೆ. ಬ್ರಹ್ಮನಲ್ಲಾದರೋ ಕಾಲತ್ರಯದಲ್ಲೂ ಬಾಧಿಸಲ್ಪಡ ದಿರುವುದೇ ಸತ್ಯತ್ವವು. ಅಂತಹ ಸತ್ಯತ್ವವು ಪ್ರಪಂಚದಲ್ಲಿ ಪ್ರತ್ಯಕ್ಷಾದಿಗಳಿಂದ ಸಿದ್ಧವಾಗಿಲ್ಲವೆಂದು ಅದ್ವೈತಿಯು ಕೇಳುವುದಾದರೆ- ಇಂತಹ ಸತ್ಯತ್ವವು ಬ್ರಹ್ಮನಲ್ಲಾದರೂ ಹೇಗೆ ಸಿದ್ಧವಾಯಿತೆಂದು ನಾವು ಕೇಳುತ್ತೇವೆ. ಬ್ರಹ್ಮನಲ್ಲಿ 'ತತ್ಸತ್ಯಂ ಸ ಆತ್ಮಾ' ಇತ್ಯಾದಿಶ್ರುತಿಗಳಿಂದ ಸಿದ್ಧವಾಗುವು

---

*ಯಾವ ಹೇತುವು (ಯಾವ ಸಾಧ್ಯವನ್ನು) ಯಾವುದನ್ನು ಸಾಧಿಸುತ್ತದೋ ಆದರ ಅಭಾವವು ಪ್ರಮಾ ಣಾಂತರದಿಂದ ನಿಶ್ಚಿತವಾಗಿದ್ದರೆ ಆ ಹೇತುವು ಬಾಧಿತವಾಗುತ್ತದೆ. ಉದಾ:-'ಬೆಂಕಿಯು ಬಿಸಿಯಲ್ಲ, ಪದಾ ರ್ಥವಾದುದರಿಂದ' ಎಂಬಲ್ಲಿ ಬೆಂಕಿಯು ಬಿಸಿಯೆಂದು ಪ್ರತ್ಯಕ್ಷಸಿದ್ಧವಾದುದರಿಂದ 'ಪದಾರ್ಥವಾದುದರಿಂದ' ಎಂಬ ಹೇತುವು ಬಾಧಿತವೆನಿಸುತ್ತದೆ.

ದೆಂದು ಅದ್ವೈತಿಗಳು ಹೇಳಿದರೆ ಪ್ರಕೃತಪಕ್ಷವಾದ ಪ್ರಪಂಚದಲ್ಲೂ 'ವಿಶ್ವಂ ಸತ್ಯಂ' 'ಯಚ್ಚಿಕೇತ ಸತ್ಯಮಿತ್' ಇತ್ಯಾದಿಶ್ರುತಿಗಳಿಂದಲೇ ಸಿದ್ಧವಾಗುತ್ತದೆಂದು ನಾವು ಹೇಳುವೆವು. ಈ ಅಭಿಪ್ರಾಯದಿಂದಲೇ ಮೂಲದಲ್ಲಿ 'ವಿಶ್ವಂ ಸತ್ಯಂ' ಎಂದು ಶ್ರುತಿಯನ್ನು ತೋರಿಸಿರುತ್ತಾರೆ. ಇಲ್ಲವಾದರೆ ಮೊದಲು ಮೂಲದಲ್ಲಿ 'ಪ್ರತ್ಯಕ್ಷಾದಿ' ಎಂಬಲ್ಲಿ ಆದಿಪದದಿಂದ ಶ್ರುತಿಯೂ ಈ ಅಭಿಪ್ರಾಯವನ್ನು ತಿಳುಹಿಸುವುದಕ್ಕಾಗಿಯೇ ಪುನಃ 'ವಾಕ್ಯವಿರುದ್ಧತ್ವಾಚ್ಚ' ಎಂದು ಬೇರೆ ತೆಗೆದುಕೊಂಡಿರುತ್ತಾರೆ. ಇಲ್ಲವಾದರೆ ಪುನರುಕ್ತವಾಗುತ್ತಿತ್ತು.

(3) ಪ್ರತ್ಯಕ್ಷಾದಿಗಳಿಂದಲೇ ಜಗತ್ತಿಗೆ ಕಾಲತ್ರಯದಲ್ಲೂ ಬಾಧಿಸಲ್ಪಡುವುದಿಲ್ಲವೆಂಬ ಸತ್ಯತ್ವವು ಸಿದ್ಧವಾಗುತ್ತದೆಯೆಂದು ಆಚಾರ್ಯರು ಬೇರೆ ಕಡೆಗಳಲ್ಲಿ ಸಾಧಿಸಿರುವುದರಿಂದ ಇಲ್ಲಿ ಇಂತಹ ಸತ್ಯತ್ವವು ಶ್ರುತಿಯಿಂದ ಸಿದ್ಧವಾಗುತ್ತದೆಯೆಂದು ಏತಕ್ಕೆ ಹೇಳಿದರೆಂದರೆ ಪ್ರತ್ಯಕ್ಷವು ವರ್ತಮಾನವನ್ನು ಮಾತ್ರ ಗ್ರಹಿಸುತ್ತದೆಯೆಂಬುದನ್ನಂಗೀಕರಿಸಿಕೊಂಡು ಈ ರೀತಿಯಾಗಿ ಹೇಳಿರುತ್ತಾರೆಂದು ತಿಳಿಯತಕ್ಕದು.

(4) 'ವಿಶ್ವಂ ಸತ್ಯಂ' ಎಂಬಿತ್ಯಾದಿ ಶ್ರುತಿಯ ಅರ್ಥವು ಹೀಗಿರುತ್ತದೆ—

ವಿಶ್ವಂ ಸತ್ಯಂ ಮಘವಾನಾ ಯುವೋರಿದಾಪಶ್ಚನ ಪ್ರಮಿನಂತಿ ವ್ರತಂ ವಾಂ ।
ಪ್ರಭಾನ್ವಸ್ಯ ಮಹತೋ ಮಹಾನಿ ಸತ್ಯಾ ಸತ್ಯಸ್ಯ ಕರಣಾನಿ ವೋಚಂ ॥

ಋಗ್ವೇದ ೨-೨೪-೧೨.

ಅ ॥ ಮಘವಾನಾ = ಇಂದ್ರಾಬೃಹಸ್ಪತಿಗಳಿರಾ! ಯುವೋಃ=ನಿಮ್ಮ ರಕ್ಷಣೆಗೊಳಗಾದ, ವಿಶ್ವಂ=ಸಮಸ್ತ ಜಗತ್ತು, ಸತ್ಯಮಿತ್=ಸತ್ಯವೇ(ಆಗಿರುತ್ತದೆ). ವಾಂ=ನಿಮ್ಮ, ವ್ರತಂ=ಸತ್ಯಜಗನ್ನಿರ್ಮಾಣಾದಿ ವ್ಯಾಪಾರವನ್ನು, ಆಪಶ್ಚನ=ಜಲಾಭಿಮಾನಿ ದೇವತೆಗಳೂ ಕೂಡ, ಪ್ರಮಿನಂತಿ=ಚೆನ್ನಾಗಿ ತಿಳಿಯುತ್ತಾರೆ. ಮಹತಃ=ಸರ್ವೋತ್ತಮನಾದ, ಅಸ್ಯ=ಈ, ಸತ್ಯಸ್ಯ=ಸತ್ಯರೂಪಿಯಾದ ಪರಮಾತ್ಮನ, ಮಹಾನಿ=ಶ್ರೇಷ್ಠಗಳಾದ, ಕರಣಾನಿ=ಕರ್ಮಗಳನ್ನು, ಸತ್ಯಾ=ಯಥಾರ್ಥಗಳನ್ನಾಗಿ, ಪ್ರಾವೋಚಂ ಪ್ರ ನು=ಈಗಲೂ ಹೇಳುತ್ತಿರುವೆನು.

(5) ಯಚ್ಚಿಕೇತ ಸತ್ಯಮಿತ್ ತನ್ನ ಮೋಘಂ ॥ ಋಗ್ವೇದ ೧೦-೫೫-೬.

ಅ ॥ (ಶ್ರೀಹರಿಯು) ಯತ್=ಯಾವ ಜಗತ್ತನ್ನು, ಚಿಕೇತ=ಸೃಷ್ಟಿಸಿದನೋ, ತತ್=ಆ ಜಗತ್ತು, ಸತ್ಯಮಿತ್=ಯಥಾರ್ಥವಾದುದೇ. ಅರ್ಥಕ್ರಿಯಾದಿ ಅನುಪಯುಕ್ತವಾದುದು. (ಮಿಥ್ಯಾಭೂತವಾದುದು) ನ=ಅಲ್ಲ. ॥ ೧೦ ॥

**ಮೂ ॥ ರಜತಂ ದೃಷ್ಟಮಿತಿ ಭ್ರಮಮಾತ್ರತ್ವಾ'ದ್ವಿಮತಂ ಸತ್ಯಂ ದೃಶ್ಯತ್ವಾದಾತ್ಮವದಿ'ತ್ಯಪಿ ಪ್ರಯೋಜ್ಯತ್ವಾತ್ಪ್ರಕರಣಸಮಃ ॥ ೧೧ ॥**

ಅ ॥ ರಜತಂ=ಬೆಳ್ಳಿಯು, ದೃಷ್ಟಂ=ಕಾಣಲ್ಪಟ್ಟಿತು, ಇತಿ=ಹೀಗೆಂದು, ಭ್ರಮಮಾತ್ರತ್ವಾತ್=ಭ್ರಮೆಯಾದುದರಿಂದ, ವಿಮತಂ=ವಿವಾದ ವಿಷಯೀಭೂತವಾದ ಪ್ರಪಂಚವು, ಸತ್ಯಂ=ಕಾಲತ್ರಯದಲ್ಲೂ ಬಾಧಿಸಲ್ಪಡದಿರುವುದು, ದೃಶ್ಯತ್ವಾತ್=ತೋರುವುದರಿಂದ, ಆತ್ಮವತ್=ಬ್ರಹ್ಮನಂತೆ, ಇತ್ಯಪಿ=ಹೀಗೂ, ಪ್ರಯೋಜ್ಯತ್ವಾತ್=ಪ್ರಯೋಗಿಸಲು ಬರುವುದರಿಂದ (ಪರನ ಅನುಮಾನವು) ಪ್ರಕರಣಸಮಃ=* ಪ್ರಕರಣಸಮವೆಂಬ ದೋಷಯುಕ್ತವಾಯಿತು.

* ಅನುಮಿತಿಯನ್ನು ಪ್ರತಿಬಂಧಿಸತಕ್ಕ ಪ್ರತಿರೋಧವೆಂಬ ದೋಷವು ಎರಡು ವಿಧವು. (1) ವಾದಿಯು ಹೇತುವಿನಿಂದಲೇ ಸಾಧ್ಯಾಭಾವವನ್ನು ಸಾಧಿಸುವುದು. ಈ ಸಂದರ್ಭದಲ್ಲಿ ವಾದಿಯ ಹೇತುವಿಗೆ ಪ್ರಕರಣ

ತಾ ॥ (1) ಒಂದು ಹೇತುವಿನಿಂದ ಸಾಧಿಸತಕ್ಕ(ಬೇಕೆಂದಿರುವ)ವಿಷಯದ ಅಭಾವವನ್ನು ಮತ್ತೊಂದು ಹೇತುವು ಸಾಧಿಸಿದರೆ ಅಂತಹ ಹೇತುವು ಪ್ರತಿಪಕ್ಷಾನುಮಾನವೆನಿಸುತ್ತದೆ. ಮೊದಲನೆಯ ಹೇತುವು ಸತ್ಪ್ರತಿಪಕ್ಷತ್ವವೆಂಬ ದೋಷಯುಕ್ತವಾಗುತ್ತದೆ. ಇದರಲ್ಲೂ ಮೊದಲು ಯಾವ ಹೇತುವಿನಿಂದಲೇ ಸಾಧ್ಯವನ್ನು ಸಾಧಿಸಿದ್ದಾನೋ, ಅದೇ ಹೇತುವಿನಿಂದಲೇ ಸಾಧ್ಯಾಭಾವವನ್ನು ಸಾಧಿಸಲೂ ಬರುತ್ತದೆ. ಇಂತಹ ಹೇತುವಿಗೆ ಪ್ರಕರಣ ಸಮವೆಂದು ಹೆಸರು. ಬೇರೆ ಹೇತುವಿನಿಂದ ಸಾಧ್ಯಾಭಾವವನ್ನು ಸಾಧಿಸಲೂ ಬಹುದು. ಅದಕ್ಕೆ ಪ್ರತಿಪಕ್ಷಾನುಮಾನವೆಂದು ಹೆಸರು. ಪ್ರಕೃತ ಪರನು ಮಿಥ್ಯಾತ್ವವನ್ನು ಸಾಧಿಸಿದ ದೃಶ್ಯತ್ವರೂಪ ಹೇತುವಿನಿಂದಲೇ ಮಿಥ್ಯಾತ್ವದ ಅಭಾವವಾದ ಸತ್ಯತ್ವವನ್ನು ಸಾಧಿಸಲು ಬರುತ್ತದೆಯಾದುದರಿಂದ ಅದ್ವೈತಿಗಳ ಅನುಮಾನವು ಪ್ರಕರಣ ಸಮವಾಯಿತು. ಇಂತಹುದು ತನ್ನ ಸಾಧ್ಯವನ್ನು ಸಾಧಿಸಲಾರದು.

(2) ಅವರ ಅನುಮಾನಕ್ಕೆ ಪ್ರತಿರೋಧಭೂತವಾದ 'ವಿಮತಂ ಸತ್ಯಂ' ಎಂಬೀ ಅನುಮಾನದಲ್ಲಿ ದೃಷ್ಟಾಂತಭೂತನಾದ ಆತ್ಮನಿಗೆ ದೃಶ್ಯತ್ವವಿದೆಯೆಂದು ನಾವು (ದ್ವೈತಿಗಳು) ಸಮರ್ಥಿಸಿರುವುದರಿಂದ ದೃಷ್ಟಾಂತದಲ್ಲಿ ಸಾಧನವೈಕಲ್ಯ ಅಂದರೆ ಹೇತುವು ಇಲ್ಲದಿರುವಿಕೆಯೆಂಬ ದೋಷವು ಇರುವುದಿಲ್ಲ. ಅಂತೂ ಯಾವ ಹೇತುವಿನಿಂದ ಪ್ರಪಂಚಕ್ಕೆ ಮಿಥ್ಯಾತ್ವವನ್ನು ಸಾಧಿಸಲು ಪರನು ಹೊರಟಿರುವನೋ, ಅದೇ ಹೇತುವಿನಿಂದ ಪ್ರಪಂಚವು ಸತ್ಯವೆಂದು ಸಾಧಿಸಬಹುದಾಗಿದೆ.

(3) "ಸಾಧ್ಯವಿಲ್ಲದಿದ್ದಲ್ಲಿ ಹೇತುವು ಇದ್ದರೆ ವ್ಯಭಿಚಾರದೋಷವು ಬರುತ್ತದಷ್ಟೆ. ಪ್ರಕೃತ ನಿಮಗೆ (ದ್ವೈತಿಗಳಿಗೆ) ಸಾಧ್ಯವಾದ ಸತ್ಯತ್ವವಿಲ್ಲದೇ ಇರುವ ಶುಕ್ತಿರಜತದಲ್ಲಿ 'ರಜತವನ್ನು ಕಂಡೆನು' ಎಂಬೀ ಪ್ರತೀತಿಯ ಮೂಲಕ ದೃಶ್ಯತ್ವಹೇತುವು ಇರುವುದರಿಂದ ನಿಮ್ಮ ಅನುಮಾನಕ್ಕೆ ವ್ಯಭಿಚಾರದೋಷವು ಬರುತ್ತದೆ" ಎಂದು ಅದ್ವೈತಿಯು ಹೇಳುವುದಾದರೆ ಶುಕ್ತಿಯಲ್ಲಿ ರಜತವನ್ನು ಕಂಡೆನು ಎಂಬುವುದು ಕೇವಲ ಭ್ರಮವಾದುದರಿಂದ ಶುಕ್ತಿರಜತದಲ್ಲಿ ದೃಶ್ಯತ್ವಹೇತುವೇ ಇರುವುದಿಲ್ಲವಾದಕಾರಣ ವ್ಯಭಿಚಾರದೋಷವಿಲ್ಲ. ಶುಕ್ತಿರಜತದಲ್ಲಿ ದಶ್ಯತ್ವವು ಹೇಗೆ ಇಲ್ಲವೆಂದರೆ— ದೃಶ್ಯತ್ವವೆಂದರೆ ದೃಗ್ವಿಷಯತ್ವವು.

ಇಂದ್ರಿಯವು ಯಾವವಸ್ತುವಿನಲ್ಲಿ ಸಂಬದ್ಧವಾಗಿಯೇ ಯಾವಜ್ಞಾನವನ್ನು ಹುಟ್ಟಿಸುತ್ತದೋ, ಆ ಜ್ಞಾನಕ್ಕೆ ಆ ವಸ್ತುವೇ ವಿಷಯವು. ಅನಿತ್ಯಜ್ಞಾನಗಳಲ್ಲಿ ಹೀಗೆ ವ್ಯವಸ್ಥೆಯು. ಶುಕ್ತಿರಜತಜ್ಞಾನವಾದರೋ ಆರೋಪಿತ ರಜತದಲ್ಲಿ ಇಂದ್ರಿಯಸಂಬಂಧವಿಲ್ಲದೇ ಶುಕ್ತಿಯಲ್ಲಿ ಇಂದ್ರಿಯಸಂಬಂಧವುಂಟಾಗಿ ಹುಟ್ಟುವುದರಿಂದ ಅದಕ್ಕೆ ಶುಕ್ತಿಯೇ ವಿಷಯುವಲ್ಲದೆ ಅಸತ್ತಾದ ರಜತವಲ್ಲ. ಆದುದರಿಂದಲೇ ಒಂದನ್ನು ಮತ್ತೊಂದನ್ನಾಗಿ ವಿಷಯೀಕರಿಸುವುದರಿಂದ ಇದು ಭ್ರಮಜ್ಞಾನವೆನಿಸುತ್ತದೆ. ಹಾಗೂ ನಮಗೆ (ದ್ವೈತಿಗಳಿಗೆ) ಹೇತುವೆಂದು ಅಭಿಮತವಾದ ದೃಗ್ವಿಷಯತ್ವವು ಶುಕ್ತಿಯಲ್ಲೇ ಬಂತಲ್ಲದೆ ಶುಕ್ತಿರಜತದಲ್ಲಿ ಬರಲಿಲ್ಲವಾದ ಪ್ರಯುಕ್ತ ವ್ಯಭಿಚಾರದೋಷವು ಇಲ್ಲ. 'ರಜತವನ್ನು ಕಂಡೆ' ಎಂದು ಪ್ರತೀತಿಯ ಮೂಲಕ ದೃಶ್ಯತ್ವವು ಶುಕ್ತಿರಜತದಲ್ಲಿ ಭ್ರಮೆಯಿಂದ ತೋರುತ್ತದಲ್ಲದೆ ವಾಸ್ತವವಾಗಿ ಇರುವುದಿಲ್ಲ. ಹೀಗೆ, ಸಾಧ್ಯವಿಲ್ಲದಲ್ಲಿ ಹೇತುವು ಭ್ರಮೆಯಿಂದ ತೋರಿ ಅದಕ್ಕೆ ವ್ಯಭಿಚಾರವನ್ನು ಹೇಳುವುದಾದರೆ ಅನುಮಾನಪ್ರಮಾಣವೇ ಇಲ್ಲದಂತಾಗುವುದು. ಏಕೆಂದರೆ ಭ್ರಮೆಯಿಂದ ಕೊಳದಲ್ಲಿ ಹೊಗೆಯು ತೋರಿಬರಲು ಅಲ್ಲಿ ಬೆಂಕಿಯು

---

ಸಮವೆಂದು ಹೆಸರು. (2) ಇತರವಾದ ಹೇತುವಿನಿಂದ ಸಾಧ್ಯಾಭಾವವನ್ನು ಸಾಧಿಸಿದರೆ ವಾದಿಯ ಹೇತುವಿಗೆ ಸತ್ಪ್ರತಿಸಾಧನವೆಂದು ಹೆಸರು. ಇದನ್ನು ಸತ್ಪ್ರತಿಪಕ್ಷವೆಂದೂ ಹೇಳುತ್ತಾರೆ.

ಇರುವುದಿಲ್ಲವಾದ ಪ್ರಯುಕ್ತ ಒಪ್ಪಿಯುದಾದ ಧೂಮಾನುಮಾನಕ್ಕೂ ವ್ಯಭಿಚಾರವನ್ನು ಹೇಳಬಹುದಷ್ಟೆ. ಅಂತೂ ನಾವು (ದ್ವೈತಿಗಳು) ಪ್ರಯೋಗಿಸಿದ ಪ್ರತ್ಯನುಮಾನವು ನಿರ್ದುಷ್ಟವಾದುದರಿಂದ ಜಗತ್ತು ಮಿಥ್ಯೆಯೆಂದು ಸಾಧಿಸತಕ್ಕ ಅದ್ವೈತಿಗಳ ಅನುಮಾನವು ಪ್ರಕರಣಸಮಾಖ್ಯ ದೋಷಯುಕ್ತವಾಯಿತು. ॥ ೧೧ ॥

**ಮೂ ॥ ವಿಮತಂ ಸತ್ಯಂ ಪ್ರಮಾಣದೃಷ್ಟತ್ವಾದ್ಯದಿತ್ಥಂ ತತ್ತಥಾ ಯಥಾಽತ್ಮೇತಿ ಪ್ರಯೋಗಾತ್ಸತ್ಪ್ರತಿಸಾಧನಃ ॥ ೧೨ ॥**

ಅ ॥ ವಿಮತಂ=ಸತ್ಯಮಿಥ್ಯೆಗಳೆಂದು ವಿವಾದಕ್ಕೆ ವಿಷಯವಾದ ಜಗತ್ತು, ಸತ್ಯಂ=ಕಾಲತ್ರಯದಲ್ಲೂ ಅಬಾಧ್ಯವಾದುದು. ಪ್ರಮಾಣದೃಷ್ಟತ್ವಾತ್=ಪ್ರಮಾಣಗಳಿಂದ ಸಿದ್ಧವಾದುದರಿಂದ, ಯತ್ ಇತ್ಥಂ=ಯಾವುಯಾವುದು ಪ್ರಮಾಣಸಿದ್ಧವಾದುದೋ, ತತ್ ತಥಾ=ಅದದು ಕಾಲತ್ರಯದಲ್ಲೂ ಅಬಾಧ್ಯ (ಸತ್ಯ) ವಾದುದೇ. ಯಥಾ ಆತ್ಮಾ=ಆತ್ಮನಂತೆ. ಇತಿ ಪ್ರಯೋಗಾತ್=ಈ ರೀತಿಯಾಗಿ ಪ್ರಯೋಗವಿರುವುದರಿಂದ (ಪರರ ಹೇತುವು) ಸತ್ಪ್ರತಿಸಾಧನಃ=ಸತ್ಪ್ರತಿಪಕ್ಷಿತವಾಯಿತು.

ತಾ॥ (1) ಪ್ರಕೃತ ಹೇತುವಿನಲ್ಲಿ 'ದೃಷ್ಟತ್ವಾತ್' ಎಂದಿಷ್ಟೇ ಹೇಳಿದರೆ ಶುಕ್ತಿರಜತದಲ್ಲೂ ಒಂದು ವಿಧವಾದ ದೃಷ್ಟತ್ವವಿರುವುದರಿಂದ ಅಲ್ಲಿ ಹೇತುವಿಗೆ ವ್ಯಭಿಚಾರ ದೋಷವು ಬರಬಾರದೆಂದು 'ಪ್ರಮಾಣದೃಷ್ಟತ್ವಾತ್' ಎಂದು ಹೇಳಿರುವರು.

(2) ಹಿಂದಿನ ಅನುಮಾನದಲ್ಲಿ ವ್ಯಾಪ್ತಿಯನ್ನು ಹೇಳದೆ ಈ ಅನುಮಾನದಲ್ಲಿ 'ಯದಿತ್ಥಂ ತತ್ತಥಾ' ಎಂದು ವ್ಯಾಪ್ತಿಯನ್ನು ತೋರಿಸಲು ಕಾರಣವೇನೆಂದರೆ;ವ್ಯಾಪ್ತಿಯನ್ನು ಸರ್ವತ್ರ ಹೇಳಲೇಬೇಕೆಂಬ ನಿಯಮವಿಲ್ಲವೆಂದು ತಿಳಿಸಲಿಕ್ಕಾಗಿ ಎಂದು ತಿಳಿಯಬೇಕು.

(3) ಇನ್ನು ದೃಷ್ಟಾಂತಭೂತನಾದ ಬ್ರಹ್ಮನಲ್ಲಿ ಪ್ರಮಾಣದೃಷ್ಟತ್ವರೂಪ ಹೇತುವಿಲ್ಲವೆಂದು ವಾದಿಯು (ಅದ್ವೈತಿಗಳು) ಹೇಳುವುದಾದರೆ, ಸಮಸ್ತ ವೇದಾಂತಗಳೂ ವ್ಯರ್ಥವಾಗಬೇಕಾಗುವುದು. ಈ ವಿಷಯದಲ್ಲಿ ಹೆಚ್ಚಿನ ವಿಚಾರವನ್ನು ಟೀಕೆಯಿಂದಲೇ ತಿಳುಕೊಳ್ಳಬೇಕು.

ಈ ತನಕ ಪರಾನುಮಾನಕ್ಕೆ ಹೇಳಿದ ವಿರುದ್ಧ, ಅನೈಕಾಂತಿಕ, ಬಾಧ, ಸತ್ಪ್ರತಿಪಕ್ಷವೇ ಮೊದಲಾದ ದೋಷಗಳು ತಾರ್ಕಿಕ ರೀತಿಯಾಗಿಯೆಂದು ತಿಳಿಯತಕ್ಕದು. * ಸಿದ್ಧಾಂತ ರೀತ್ಯಾ ದೂಷಿಸತಕ್ಕ ಕ್ರಮವು ಬೇರೆಯೇ ಇರುತ್ತದೆ. ॥ ೧೨ ॥

ಹಾಗೂ ಪರಾನುಮಾನಕ್ಕೆ ದೃಷ್ಟಾಂತದೋಷವನ್ನು ಹೇಳಲುದ್ದೇಶಿಸಿ ಅದರಲ್ಲು ಹೇತುವು ಸಾಧ್ಯವನ್ನು ಸಾಧಿಸಲಿಕ್ಕೇ ಉಪಯುಕ್ತವಾದುದರಿಂದ ಸಾಧ್ಯವೇ ಪ್ರಧಾನವೆಂದು ಭಾವಿಸಿ ದೃಷ್ಟಾಂತದಲ್ಲಿ ಮೊದಲು ಸಾಧ್ಯವೈಕಲ್ಯವೆಂಬ ದೋಷವನ್ನು ಹೇಳುತ್ತಾರೆ-

---

* ಸಿದ್ಧಾಂತರೀತಿಯಾಗಿ ಅನುಮಾನದೋಷವು(ವಿರೋಧ) ಮೂರು ವಿಧವು. (1) ಪ್ರತಿಜ್ಞಾ ವಿರೋಧ, (2) ಹೇತುವಿರೋಧ, (3) ದೃಷ್ಟಾಂತವಿರೋಧವೆಂದು. ಪ್ರತಿಜ್ಞಾವಿರೋಧವು ಎರಡುವಿಧವು. ಪ್ರಮಾಣ ವಿರೋಧ, ಸ್ವವಚನವಿರೋಧವೆಂದು. ಪ್ರಮಾಣವಿರೋಧವೂ ಎರಡು ವಿಧವು. ಪ್ರಬಲಪ್ರಮಾಣ ವಿರೋಧ, ಸಮಬಲ ಪ್ರಮಾಣವಿರೋಧವೆಂದು. ಇತ್ಯಾದಿ ಕ್ರಮಗಳನ್ನು 'ಪ್ರಮಾಣಲಕ್ಷಣ' ಮೊದಲಾದ ಗ್ರಂಥಗಳಿಂದ ತಿಳಿಯತಕ್ಕುದು.

**ಮೂ ॥ ಶುಕ್ತಿರಜತಸ್ಯಾಪ್ಯನಿರ್ವಚನೀಯತ್ವಾಭಾವಾತ್ಸಾಧ್ಯವಿಕಲೋ ದೃಷ್ಟಾಂತಃ ॥ ೧೩ ॥**

ಅ ॥ ಶುಕ್ತಿರಜತಸ್ಯಾಪಿ=ದೃಷ್ಟಾಂತವಾದ ಶುಕ್ತಿರಜತಕ್ಕೂ ಕೂಡ, ಅನಿರ್ವಚನೀಯತ್ವಾಭಾವಾತ್=ಅನಿರ್ವಚನೀಯತ್ವರೂಪ ಮಿಥ್ಯಾತ್ವವು ಇಲ್ಲದಿರುವುದರಿಂದ, ದೃಷ್ಟಾಂತಃ=ಪರಾನುಮಾನಕ್ಕೆ ದೃಷ್ಟಾಂತವಾದ ಶುಕ್ತಿರಜತವು, ಸಾಧ್ಯವಿಕಲಃ=ಸಾಧ್ಯವಿಲ್ಲದುದಾಯಿತು.

ತಾ ॥ (1) ಅದ್ವೈತಿಗಳಿಗೆ ಅಭಿಮತವಾದ ಅನಿರ್ವಚನೀಯತ್ವರೂಪಮಿಥ್ಯಾತ್ವವು ಅವರ ದೃಷ್ಟಾಂತದಲ್ಲೇ ಇಲ್ಲದಿರುವಾಗ ಅದನ್ನು ದೃಷ್ಟಾಂತೀಕರಿಸಿಕೊಂಡು ಅಂತಹ ಮಿಥ್ಯಾತ್ವವನ್ನು ಪ್ರಪಂಚದಲ್ಲಿ ಸಾಧಿಸಲು ಸರ್ವಥಾ ಬರಲಾರದೆಂದು ತಿಳಿಸುವುದಕ್ಕಾಗಿ 'ಅಪಿ' ಶಬ್ದವನ್ನು ಕೊಟ್ಟಿರುತ್ತಾರೆ.

(2) ಇಲ್ಲಿ ಮಿಥ್ಯೆಯೆಂದರೆ ಅನಿರ್ವಚನೀಯವೆಂದು ಪರನು ಹೇಳಿಲ್ಲವೆಂದರೂ ಮಿಥ್ಯೆಯೆಂಬುವುದಕ್ಕೆ ಅಸತ್ತು ಎಂಬ ಅರ್ಥವನ್ನು ಆತನೂ ಒಡಂಬಡದಿರುವುದರಿಂದ ಸದ್ವಿವಿಕ್ತತ್ವಾದಿಗಳು ಅನಿರ್ವಚನೀಯರೂಪಗಳೇ ಆಗುವುದರಿಂದ ಅಂತೂ ಮಿಥ್ಯೆಯೆಂದರೆ ಅನಿರ್ವಚನೀಯವೆಂದೇ ಅದ್ವೈತಿಗಳ ಆಂತರಾಭಿಪ್ರಾಯವೆಂದು ತಿಳಿದು 'ಅನಿರ್ವಚನೀಯತ್ವಾಭಾವಾತ್' ಎಂದು ಹೇಳಿರುತ್ತಾರೆ. ॥ ೧೩ ॥

**ಮೂ ॥ ಉಕ್ತಪ್ರಕಾರೇಣ ದೃಶ್ಯತ್ವಾಭಾವಾತ್ಸಾಧನವಿಕಲಶ್ಚ ॥ ೧೪ ॥**

ಅ ॥ ಉಕ್ತಪ್ರಕಾರೇಣ='ರಜತವನ್ನು ಕಂಡೆನು' ಎಂದು ಪ್ರತೀತಿಯು ಕೇವಲ ಭ್ರಮವೆಂದು ಪೂರ್ವದಲ್ಲಿ ಹೇಳಿದ ರೀತಿಯಿಂದ, (ಶುಕ್ತಿರಜತದಲ್ಲಿ) ದೃಶ್ಯತ್ವಾಭಾವಾತ್=ದೃಗ್ವಿಷಯತ್ವವಿಲ್ಲದಿರುವುದರಿಂದ,(ದೃಷ್ಟಾಂತವು)ಸಾಧನ ವಿಕಲಶ್ಚ=ಹೇತುವಿಲ್ಲದುದೂ ಆಗಿರುತ್ತದೆ. ॥

**ಮೂ ॥ ಪ್ರಮಾಣವಿರುದ್ಧತ್ವಮುಪಾಧಿಃ ॥ ೧೫ ॥**

ಅ ॥ ಅದ್ವೈತಿಗಳ ಹೇತುವಿಗೆ, ಪ್ರಮಾಣವಿರುದ್ಧತ್ವಂ=ಪ್ರಮಾಣಕ್ಕೆ ವಿರುದ್ಧವಾಗಿರುವಿಕೆಯು ಅಂದರೆ ವಿಪರೀತ ಪ್ರಮಾಣಗಳಿಗೆ ವಿಷಯವಾಗಿರುವಿಕೆಯು ಎಂಬ, ಉಪಾಧಿಃ=ಉಪಾಧಿದೋಷವೂ ಬರುತ್ತದೆ.

ತಾ ॥ ಪ್ರಮಾಣವಿರುದ್ಧತ್ವರೂಪ *ಉಪಾಧಿಯು ಮಿಥ್ಯಾತ್ವವಿರುವ ಸ್ಥಳಗಳಲೆಲ್ಲಾ ಇರುತ್ತದೆ. ಕಾರಣ ಉಪಾಧಿಯು ಸಾಧ್ಯವ್ಯಾಪಕವಾಯಿತು. ದೃಶ್ಯತ್ವರೂಪ ಹೇತುವಿರುವ ಸ್ಥಳಗಳಲ್ಲೆಲ್ಲಾ ಇರುವುದಿಲ್ಲ. ದೃಶ್ಯತ್ವವಿರುವ ಪ್ರಪಂಚದಲ್ಲಿ ಪ್ರಮಾಣವಿರುದ್ಧತ್ವವೆಂಬ ಉಪಾಧಿಯು ಇರುವುದಿಲ್ಲ. ಶುಕ್ತಿರಜತದಲ್ಲಿ ಉಪಾಧಿಯು ಇರುತ್ತದೆ. ಆದ ಕಾರಣ ಈ ಉಪಾಧಿಯು ಸಾಧನಾವ್ಯಾಪಕವೂ ಆಯಿತು. ಅಂತೂ ಪರರ ದೃಶ್ಯತ್ವಹೇತುವು ಉಪಾಧಿರೂಪ ದೋಷದಿಂದೊಡಗೂಡಿದಪ್ರಯುಕ್ತ ದುಷ್ಟವಾಯಿತು. ॥ ೧೫ ॥

---

* ಸಾಧ್ಯವಿರುವಲ್ಲೆಲ್ಲಾ ಇದ್ದು ಸಾಧನವಿರುವ ಕಡೆಗಳಲ್ಲಿ ಕೆಲವು ಸ್ಥಳಗಳಲ್ಲಿ ಮಾತ್ರ ಇಲ್ಲದಿರುವುದು ಯಾವುದೊಂದು ಇರುತ್ತದೋ, ಅದು ಉಪಾಧಿಯೆಂದೆನಿಸುತ್ತದೆ. ಉದಾ:-'ಪರ್ವತವು ಹೊಗೆಯುಳ್ಳದ್ದು, ಬೆಂಕಿಯಿರುವುದರಿಂದ' ಎಂಬಲ್ಲಿ 'ಒದ್ದೆಕಟ್ಟಿಗೆಯ ಸಂಬಂಧವು' ಸಾಧ್ಯವಾದ ಹೊಗೆಯಿರುವಲ್ಲೆಲ್ಲಾ ಇದ್ದು ಹೇತುವಾದ ಬೆಂಕಿಯಿರುವ ಕಬ್ಬಿಣದ ಗೋಲಿಯಲ್ಲಿ ಇಲ್ಲದೆ ಇರುವುದರಿಂದ ಅದು ಉಪಾಧಿಯಾಯಿತು. ಇಂತಹ ಉಪಾಧಿಯಿಂದ ಹೇತುವು ವ್ಯಭಿಚರಿತವೂ ಸತ್ಪ್ರತಿಪಕ್ಷಿತವೂ ಆಗುತ್ತದೆ.

ಅನುಮಾನಪ್ರಯೋಗದಲ್ಲಿ ಸೇರಿದ ಪಕ್ಷ, ಹೇತು ಮೊದಲಾದುವುಗಳ ಸ್ವರೂಪಜ್ಞಾನವಾಗದಿದ್ದರೆ ಹೇಳಿದ ದೋಷಗಳ ಜ್ಞಾನವೂ ಚನ್ನಾಗಿ ಆಗಲಾರದಾದುದರಿಂದ ಕ್ರಮವಾಗಿ ಪಕ್ಷಾದಿಗಳ ಲಕ್ಷಣಗಳನ್ನು ಹೇಳುತ್ತಾರೆ.—

**ಮೂ ॥ ಸಾಧ್ಯಧರ್ಮವಿಶಿಷ್ಟಃ ಪಕ್ಷಃ ॥ ೧೬ ॥**

ಅ ॥ ಯಾವುದರ ಜ್ಞಾನವು ಹೇತುವಿನಿಂದ ಹುಟ್ಟಬೇಕೋ, ಅದಕ್ಕೆ ಸಾಧ್ಯಧರ್ಮವೆಂದು ಹೆಸರು. ಅಂತಹ ಸಾಧ್ಯಧರ್ಮದಿಂದ ಕೂಡಿರುವುದು ಪಕ್ಷವೆನಿಸುತ್ತದೆ. ॥ ೧೬ ॥

**ಮೂ ॥ ಸಾಧ್ಯಸಮಾನಧರ್ಮವಿಶಿಷ್ಟಃ ಸಪಕ್ಷಃ ॥ ೧೭ ॥**

ಅ ॥ ಸಾಧ್ಯಕ್ಕೆ ಸಮಾನವಾಗಿದ್ದು ಹೇತುವನ್ನು ಹೊರತು ಪ್ರತ್ಯಕ್ಷಾದಿಯಿಂದಲೇ ಯಾವುದು ನಿಶ್ಚಯವಾಗಿದೆಯೋ, ಅದು ಸಾಧ್ಯಸಮಾನ ಧರ್ಮವು. ಅಂತಹ ಸಾಧ್ಯಸಮಾನ ಧರ್ಮದಿಂದ ಕೂಡಿರುವುದು ಸಪಕ್ಷವೆನಿಸುತ್ತದೆ. ॥ ೧೭ ॥

**ಮೂ ॥ ಸಾಧ್ಯವಿಪರೀತಧರ್ಮವಿಶಿಷ್ಟೋ ವಿಪಕ್ಷಃ ॥ ೧೮ ॥**

ಅ ॥ ಸಾಧ್ಯವಾದ (ಅಗ್ನಿಮತ್ವಕ್ಕೆ ಅಂದರೆ ಅಗ್ನಿವುಳ್ಳತನಕ್ಕೆ ) ವಿರುದ್ಧವಾದದ್ದಕ್ಕೆ (ನಿರಗ್ನಿಕತ್ವ) ಅಂದರೆ ಅಗ್ನಿಶೂನ್ಯತನಕ್ಕೆ ಸಾಧ್ಯವಿಪರೀತ ಧರ್ಮವೆಂದು ಹೆಸರು. ಇಂತಹ ಸಾಧ್ಯವಿಪರೀತಧರ್ಮದಿಂದ ಕೂಡಿರುವುದು ವಿಪಕ್ಷವೆನಿಸುತ್ತದೆ. ॥ ೧೮ ॥

**ಮೂ ॥ ಪಕ್ಷವಚನಂ ಪ್ರತಿಜ್ಞಾ ॥ ೧೯ ॥**

ಅ ॥ ಯಾವ ಅರ್ಥವನ್ನು ಯಾವ ರೀತಿಯಲ್ಲಿ ಎಲ್ಲಿ ಪರನಿಗೆ ಬೋಧಿಸಬೇಕೋ, ಅದನ್ನು ಹೇಳುವುದಕ್ಕೆ ಪಕ್ಷವಚನವೆಂದು ಹೆಸರು. ಇದೇ ಪ್ರತಿಜ್ಞೆಯೆಂದೆನಿಸುತ್ತದೆ. ॥ ೧೯ ॥

**ಮೂ ॥ ಲಿಂಗಂ ಹೇತುಃ ॥ ೨೦ ॥**

ಅ ॥ ಲಿಂಗಂ=*ವ್ಯಾಪ್ತಿಯ ಸಾಮರ್ಥ್ಯದಿಂದ ಅಡಗಿದ್ದ ಅರ್ಥವನ್ನೂ ತಿಳುಹಿಸಿಕೊಡ ತಕ್ಕದ್ದು, ಹೇತುವು. ॥ ೨೦ ॥

**ಮೂ ॥ ನಿದರ್ಶನಂ ದೃಷ್ಟಾಂತಃ ॥ ೨೧ ॥**

ಅ ॥ ಹೇತುಸಾಧ್ಯಗಳಿಗೆ ಪೂರ್ವೋಕ್ತವಾದ ವ್ಯಾಪ್ತಿಯು ಎಲ್ಲಿ ತೋರಿಸಲ್ಪಡುತ್ತದೋ, ಅಂದರೆ ವ್ಯಾಪ್ತಿಗ್ರಹಣಸ್ಥಳವು ದೃಷ್ಟಾಂತವೆಂದೆನಿಸುತ್ತದೆ. ॥ ೨೧ ॥

ಅಂತೂ ಈ ವರೆಗೆ ಅದ್ವೈತಿಗಳು ಪ್ರಪಂಚವು ಮಿಥ್ಯಾಭೂತವಾದುದೆಂದು ಸಾಧಿಸುವುದಕ್ಕಾಗಿ ಪ್ರಯೋಗಿಸಿದ ಅನುಮಾನವು ಸಮಸ್ತ ಅನುಮಾನ ದೋಷಗಳಿಗೂ ಉದಾಹರಣೆಯಾಗಿದೆಯೆಂದೂ, ಪ್ರಪಂಚಮಿಥ್ಯಾತ್ವವನ್ನು ಇದರಿಂದ ಸಾಧಿಸಲು ಸಾಧ್ಯವಾಗದಾದ ಕಾರಣ

* ಅವ್ಯಭಿಚರಿತ (ವ್ಯಭಿಚಾರದೋಷವಿಲ್ಲದಿರುವ) ವಾದ ಹೇತುಸಾಧ್ಯಗಳ ಸಂಬಂಧವೇ 'ವ್ಯಾಪ್ತಿ' ಯೆಂದೆನಿಸುತ್ತದೆ. ಎಲ್ಲೆಲ್ಲಿ ಹೊಗೆಯುಂಟೋ ಅಲ್ಲಲ್ಲಿ ಬೆಂಕಿಯು ಇದೆ. ಎಂದು ಹೇಳಲು ಬರುವುದರಿಂದ ಹೊಗೆಗೆ ಬೆಂಕಿಯಿಂದ ವ್ಯಾಪ್ತಿಯು ಇರುತ್ತದೆ.

ಪ್ರಪಂಚವು ಸತ್ಯವೇ (ಪಾರಮಾರ್ಥಿಕ ಸತ್ಯವೇ) ಆಗಿರುವುದರಿಂದ 'ಜನ್ಮಾದ್ಯಸ್ಯ ಯತಃ' ಎಂಬಲ್ಲಿ ಹೇಳಿರುವ ಸತ್ಯ ಜಗಜ್ಜನ್ಮಾದಿಕರ್ತೃತ್ವರೂಪ ಲಕ್ಷಣವು ಪರಬ್ರಹ್ಮನಿಗೆ ಸಂಗತವೇ ಆಗಿರುವುದರಿಂದ ಅಂತಹ ಜ್ಞಾನಗಿಂದ ಅಧಿಕಾರಿಗಳಿಗೆ ಮುಕ್ತಿಯು ಆಗುವದೆಂದು ಪ್ರಕರಣಪ್ರಯೋಜನವನ್ನು ಸಮರ್ಥಿಸಿ ಆಚಾರ್ಯರು ಗ್ರಂಥದ ಅಂತ್ಯದಲ್ಲೂ ಶ್ರೀಹರಿಯನ್ನು ಸ್ತೋತ್ರ ನಮಸ್ಕಾರಗಳಿಂದ ಸಂತೋಷಗೊಳಿಸುತ್ತಾರೆ.

**ಮೂ ॥ ಯೋ ದೃಶ್ಯತೇ ಸದಾನಂದನಿತ್ಯವ್ಯಕ್ತಚಿದಾತ್ಮನಾ ।**
**ನಿರ್ದೋಷಾಖಿಲಕಲ್ಯಾಣಗುಣಂ ವಂದೇ ರಮಾಪತಿಂ ॥ ೨೨ ॥**

ಅ ॥ ಯಃ = ಯಾವ ಶ್ರೀಹರಿಯು, ಸದಾನಂದ ನಿತ್ಯವ್ಯಕ್ತಚಿದಾತ್ಮನಾ. ಸತ್= ನಿರ್ದುಷ್ಟವಾದ, ಆನಂದ=ಸುಖವು, ನಿತ್ಯ=ನಿರಂತರವೂ, ವ್ಯಕ್ತ=ಸ್ವಯಂಪ್ರಕಾಶವಾದ, ಚಿದಾತ್ಮನಾ=ಚಿದ್ರೂಪತ್ವದಿಂದ ಅಂದರೆ ಚಿದಾತ್ಮಕನಾಗಿ, ದೃಶ್ಯತೇ=ಕಾಣಲ್ಪಡುತ್ತಾನೋ (ಅಂತಹ), ನಿರ್ದೋಷಾಖಿಲ ಕಲ್ಯಾಣಗುಣಂ, ನಿರ್ದೋಷ=ದೋಷರಹಿತಗಳಾದ, ಅಖಿಲ=ಸಮಸ್ತಗಳಾದ, ಕಲ್ಯಾಣ=ಮಂಗಲರೂಪಗಳಾದ, ಗುಣಂ=ಗುಣಗಳುಳ್ಳ, ರಮಾಪತಿಂ=ಲಕ್ಷ್ಮೀಪತಿಯಾದ ಶ್ರೀಮನ್ನಾರಾಯಣನನ್ನು, ವಂದೇ=ನಮಸ್ಕರಿಸುತ್ತೇನೆ.

ತಾ ॥ 'ದೃಶ್ಯತೇ ತ್ವಗ್ರ್ಯಯಾ ಬುದ್ಧ್ಯಾ ಸೂಕ್ಷ್ಮಯಾ ಸೂಕ್ಷ್ಮದರ್ಶಿಭಿಃ' ಅಂದರೆ 'ಸೂಕ್ಷ್ಮಜ್ಞಾನಿಗಳಿಂದ ಶ್ರೇಷ್ಠವಾದ ಬುದ್ಧಿಯಿಂದ ಕಾಣಲ್ಪಡುತ್ತಾನಷ್ಟೆ.' ಎಂಬೀ ಶ್ರುತಿಯನ್ನು ಸೂಚಿಸುವುದಕ್ಕಾಗಿ 'ದೃಶ್ಯತೇ' ಎಂಬ ಪದವನ್ನು ಹೇಳಿರುತ್ತಾರೆ. ಹಾಗೂ ಹಿಂದಕ್ಕೆ ಆತ್ಮನಿಗೆ ಹೇಳಿದ ದೃಶ್ಯತ್ವವು ಶ್ರುತಿಪ್ರಸಿದ್ಧವೆಂದೂ ಉಪಪಾದಿಸಿದಂತಾಯಿತು. 'ರಮಾಪತಿಂ' ಎಂದು ಹೇಳಿರುವುದರಿಂದ ಸಕಲ ವಾಙ್ಮನಸ್ಸುಗಳಿಗೆ ಸ್ವಾಮಿನಿಯಾದ ಲಕ್ಷ್ಮೀದೇವಿಯನ್ನೂ ನಮಸ್ಕರಿಸಿದಂತಾಯಿತು. ॥ ೨೨ ॥

**ಈ ಪ್ರಕಾರವಾಗಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ ಪ್ರಪಂಚಮಿಥ್ಯಾತ್ವಾನುಮಾನಖಂಡನವು ಸಮಾಪ್ತವಾಯಿತು.**

**ಉತ್ಪತ್ತಿಸ್ಥಿತಿಭಂಗಂ ವಿಶ್ವಂ ಯಸ್ಮಾತ್ಪ್ರಪದ್ಯತೇ ಪುರುಷಾತ್ ।**
**ಸ ಜಯತಿ ಜಗತಾಮಂತರ್ಯಾಮೀ ಸ್ವಾಮೀ ರಮಾನಾಥಃ ॥**

**ತಂತ್ರಿನಾರಾಯಣೇನಾಸ್ಯ ವ್ಯಾಖ್ಯಾ ಕಾರ್ನಾಟಕೀ ಕೃತಾ ।**
**ಭೂಯಾತ್ಕುಸುಮಮಾಲೇವ ಮುದೇ ಮಾಧವ ಮಧ್ವಯೋಃ ॥**

॥ ಶ್ರೀಕೃಷ್ಣಾರ್ಪಣಮಸ್ತು ॥



॥ ಶ್ರೀಃ ॥

# ತತ್ವಸಂಖ್ಯಾನ ವ ತತ್ವವಿವೇಕ ಇವುಗಳಿಗೆ ಮುನ್ನುಡಿ



## ಶ್ರೀಮಧ್ವವಲ್ಲಭ ವೇದವ್ಯಾಸಾಯ ನಮಃ ॥

ಮೇಲಿನ ಎರಡು ಗ್ರಂಥಗಳು ಅನೇಕವಾಗಿ ಒಂದೇ ವಿಷಯವನ್ನು ಬೋಧಿಸುವುವು. ತತ್ವವಿವೇಕವು, ತತ್ವಸಂಖ್ಯಾನೋಕ್ತವಿಷಯಗಳಿಗೆ ಪ್ರಮಾಣರೂಪವಾಗಿ ಹೇಳಲ್ಪಟ್ಟಿದೆ ಎಂದು ಶ್ರೀಜಯತೀರ್ಥರು ಟೀಕೆಯಲ್ಲಿ ತಿಳಿಸಿರುವರು.

2. ಪಾಶ್ಚಾತ್ಯ ತತ್ವಜ್ಞರು ಕ್ಯಾಟಗೋರೀಸ್ (Categories) ಎಂದು ಹೇಳುವುದಕ್ಕೆ ಇಲ್ಲಿ ತತ್ವಗಳೆಂದು ಹೇಳಿರುವರು. ಸಂಶಯವು ಅನಿಶ್ಚಿತವಾದ ಜ್ಞಾನವು. ನಿಶ್ಚಿತವಾದ ಜ್ಞಾನವು ಯಥಾರ್ಥವಾಗಬಹುದು. ಅಥವಾ ಮಿಥ್ಯೆಯು ಆಗಬಹುದು. ಹಾವನ್ನು ನೋಡಿ, ಹಾವು ಎಂದು ತಿಳಿದರೆ ಅದು ಯಥಾರ್ಥಜ್ಞಾನವು. ಹಗ್ಗವನು ನೋಡಿ ಹಾವೆಂದು ತಿಳಿದರೆ ಅದು ಮಿಥ್ಯಾಜ್ಞಾನವು (ಭ್ರಾಂತಿಯು). ತತ್ಕಾಲಕ್ಕೆ ಮಿಥ್ಯಾಜ್ಞಾನವು ನಿಶ್ಚಿತಜ್ಞಾನವೇ ಆಗಿರುವುದು. ಉತ್ತರಕ್ಷಣದಲ್ಲಿ ಪ್ರಬಲ ಪ್ರಮಾಣದಿಂದ ಅದು ಹಾವಲ್ಲ, ಹಗ್ಗವೆಂದು ತಿಳಿಯುವುದು. ಮಿಥ್ಯಾಜ್ಞಾನವಿಷಯವನ್ನು, ತತ್ವದಲ್ಲಿ ಸೇರಿಸುವುದಿಲ್ಲ. ಯಥಾರ್ಥಜ್ಞಾನವಿಷಯವನ್ನುಮಾತ್ರ ತತ್ವವೆಂದು ಗ್ರಹಣಮಾಡಿರುತ್ತಾರೆ.

3. ನೈಯ್ಯಾಯಿಕರ ಹದಿನಾರು ಪದಾರ್ಥಗಳಲ್ಲಿ, ಪ್ರಮೇಯವು ಒಂದು ಪದಾರ್ಥವು. ಇದನ್ನು ಹನ್ನೆರಡು ವಿಧವಾಗಿ ವಿಭಾಗಿಸಿರುವರು. ವೈಶೇಷಿಕರು ಪದಾರ್ಥಗಳನ್ನು ಏಳುವಿಧವಾಗಿ ವಿಭಾಗಿಸಿರುವರು. ವೈಶೇಷಿಕರ ವಿಭಾಗವು ಪಾಶ್ಚಾತ್ಯರ ಕ್ಯಾಟಗೋರೀಸ್‌ಗಳಿಗೆ ಏಕದೇಶ ಸರಿಹೋಗುವುದು. ನೈಯ್ಯಾಯಿಕರ ಪದಾರ್ಥಗಳಾಗಲೀ, ಪ್ರಮೇಯಗಳಾಗಲೀ ಈ ಕ್ಯಾಟಗೋರೀಸುಗಳಿಗೆ ಸರಿಯಾಗುವುದಿಲ್ಲ. ವೈಶೇಷಿಕರು ಪದಾರ್ಥಗಳು (1) ದ್ರವ್ಯ (2) ಗುಣ (3) ಕರ್ಮ (4) ಸಾಮಾನ್ಯ (5) ವಿಶೇಷ (6) ಸಮವಾಯ (7) ಅಭಾವ. ಹೀಗೆ ಏಳು ಎಂದು ಹೇಳುವರು. ಇವುಗಳ ಪೈಕಿ ಶ್ರೀಮದಾಚಾರ್ಯರು ಸಮವಾಯವು, ಒಂದು ಪ್ರತ್ಯೇಕ ತತ್ವವೆಂದು ಅಂಗೀಕರಿಸುವುದಿಲ್ಲ. ಇತರ ಆರು ಪದಾರ್ಥಗಳನ್ನು ತತ್ವಗಳೆಂದು ಅಂಗೀಕರಿಸಿರುವರು. ಇವಲ್ಲದೆ ಇನ್ನು ನಾಲ್ಕು ವಿಧವಾದ ತತ್ವಗಳು ಇರುವುದೆಂದು ಬೋಧಿಸುವರು. ಅವು ಯಾವವೆಂದರೆ? (1) ವಿಶಿಷ್ಟ (2) ಅಂಶಿ (3) ಶಕ್ತಿ (4) ಸಾದೃಶ್ಯ. ಅಂತು ಆಚಾರ್ಯರು, ತತ್ವಗಳು, ಅಥವಾ ಪ್ರಮೇಯಗಳು (ಪದಾರ್ಥಗಳು) ಹತ್ತೇ ವಿಧವಾಗಿ ಇರುವುದೆಂದು ಉಪದೇಶಿಸಿರುತ್ತಾರೆ. ತತ್ವಸಂಖ್ಯಾನ, ತತ್ವವಿವೇಕಗಳಲ್ಲಿ ವಿಭಾಗಕ್ರಮವು ಬೇರೆಯಾಗಿರುತ್ತದೆ. ಪರಮಾತ್ಮನು, ಅತ್ಯುತ್ತಮನೆಂದೂ, ಸ್ವತಂತ್ರನೆಂದೂ ತಿಳಿಯುವುದೇ ಮೋಕ್ಷಕ್ಕೆ ಹೇತುವಾದ ಪ್ರಯುಕ್ತ ಪರಮಾತ್ಮನ, ಸರ್ವೋತ್ತಮತ್ವವನ್ನು, ಪ್ರತಿಪಾದಿಸುವ ವಿಭಾಗಕ್ರಮವನ್ನೇ ಈ ಗ್ರಂಥಗಳಲ್ಲಿ ಹೇಳಿರುವರು. ದ್ರವ್ಯಗಳು ಯಾವುವೆಂದರೆ- (1) ಪರಮಾತ್ಮ (2) ಲಕ್ಷ್ಮೀ (3) ಜೀವರು (4) ಅವ್ಯಾಕೃತಾಕಾಶ (5) ಪ್ರಕೃತಿ (6) ಸತ್ವರಜಸ್ತಮೋಗುಣಗಳು (7) ಮಹತ್ತತ್ವ (8) ಅಹಂಕಾರತತ್ವ (9) ಬುದ್ಧಿತತ್ವ (10) ಮನಸ್ಸು (11) ಇಂದ್ರಿಯಗಳು (12) ಮಾತ್ರೆಗಳು (13) ಪಂಚಭೂತಗಳು (14) ಬ್ರಹ್ಮಾಂಡ (15) ಅವಿದ್ಯೆಯು (16) ವರ್ಣಗಳು (17) ಅಂಧಕಾರ (18) ವಾಸನೆ (19) ಕಾಲ (20) ಪ್ರತಿಬಿಂಬ.

4. ಪ್ರಕೃತಿ ಅಂದರೆ ಅತಿಸೂಕ್ಷ್ಮವಾದ ಜಡಪದಾರ್ಥವು. ಮಣ್ಣಿನಿಂದ ಗಡಿಗೆ, ಮಡಿಕೆ, ಕುಂಬಾರನು ಮಾಡುವನು. ಬಂಗಾರದಿಂದ ಅಕ್ಕಸಾಲೆಯು ಆಭರಣಗಳನ್ನು ಮಾಡುವನು. ಇಲ್ಲಿ ಮಣ್ಣು ಭಂಗಾರವು. ಗಡಿಗೆ ಆಭರಣಗಳಾಗಿ, ವಿಕಾರವನ್ನು ಹೊಂದುವುದು, ಈ ವಿಕಾರಕ್ಕೇನೇ ಪರಿಣಾಮವೆಂದು ಹೆಸರಿರುವುದು. ಪ್ರಕೃತಿಯು ವಿಕಾರವನ್ನು ಹೊಂದುವುದು, ಆದರೆ ಅದು ಇನ್ನೊಂದು ವಸ್ತುವಿನಿಂದ ವಿಕಾರವಾದದ್ದಲ್ಲ. ಪ್ರಕೃತಿಗಿಂತಲೂ, ಸೂಕ್ಷ್ಮವಾದ ಉಪಾದಾನ ಪದಾರ್ಥವಿಲ್ಲ. ಗುಣತ್ರಯಗಳಿಂದ ಬ್ರಹ್ಮಾಂಡದ ವರೇಗೆ ಇರುವ ಎಲ್ಲಾ ದ್ರವ್ಯಗಳು ಕ್ರಮವಾಗಿ ಒಂದರಿಂದ ಇನ್ನೊಂದು ಪರಿಣಮಿಸಿದ್ದಾಗಿರುತ್ತದೆ. ಇವೆಲ್ಲವುಗಳಿಗೂ ಪ್ರಕೃತಿಯೇ ಮೂಲಾಧಾರವಾದರೂ, ಅವುಗಳು ಬೇರೆ ಬೇರೆ ಧರ್ಮಗಳುಳ್ಳವುಗಳಾದ ಪ್ರಯುಕ್ತ, ಪ್ರಮೇಯಗಳೆಂದು ದ್ರವ್ಯಗಳೆಂದು ವ್ಯವಹರಿಸಬೇಕಾಗುವುದು.

5. ಅವ್ಯಾಕೃತ ಆಕಾಶವೆಂದರೆ ವಿಕಾರ ಹೊಂದದೆ ಇರುವ ಆಕಾಶವೆಂದು ಹೆಸರು. ವಿಕಾರಹೊಂದಿ, ಪೃಥಿವಿ, ಅಪ್ ಮೊದಲಾದ ಪಂಚಭೂತಗಳಲ್ಲಿ, ಸೇರಿದುದು ಭೂತಾಕಾಶವು. ಅವ್ಯಾಕೃತಾಕಾಶವೆಂದರೆ ಇಂಗ್ಲೀಷಿನಲ್ಲಿ ಸ್ಪೇಸ್ ಎಂದು ಹೇಳುವುದು. ಇದು ಸಾಕ್ಷಿಗೇನೇ ಗೋಚರವಾಗುವುದು.

6. ಅವಿದ್ಯೆಯೆಂದರೆ ಭಾವರೂಪವಾದ ಅಜ್ಞಾನವು. ಅಂದರೆ ತಪ್ಪುಜ್ಞಾನವು. ಜೀವನಿಗೆ ಅನಾದಿಯಾದ ಸ್ವಾತಂತ್ರ್ಯಾಭಿಮಾನರೂಪವಾದ ಅಜ್ಞಾನವಿರುವುದು. ಇದಕ್ಕೇನೇ ಅವಿದ್ಯೆಯೆಂದು ಹೆಸರು ಅದ್ವೈತಿಗಳು ಹೇಳುವ ಅವಿದ್ಯೆಗೂ, ಇದಕ್ಕೂ ವ್ಯತ್ಯಾಸವಿದೆ. ಅವರು ಅವಿದ್ಯೆಯನ್ನು ಅನಿರ್ವಚನೀಯವೆಂದೂ, ಸದಸದ್ವಿಲಕ್ಷಣವೆಂದೂ ಹೇಳುವರು. ಈ ಅವಿದ್ಯೆಯು ಯಥಾರ್ಥವಾದದ್ದು. ಅನಿರ್ವಚನೀಯವಲ್ಲವು. ಮತ್ತು ಅವರು ಜೀವಬ್ರಹ್ಮೈಕ್ಯವನ್ನು ತಿಳಿಸದೆ ಇರುವುದಕ್ಕೆ ಕಾರಣವನ್ನು ಅವಿದ್ಯೆಯೆಂದು ಹೇಳುವರು. ಜೀವನಿಗೆ ತಪ್ಪಾದ ಸ್ವಾತಂತ್ರ್ಯಜ್ಞಾನವನ್ನು ಕೊಟ್ಟು, ಪರಮಾತ್ಮನ ದಾಸನೆಂಬ, ಭಾವವನ್ನು ಸ್ಪಷ್ಟಗೊಳಿಸದೆ ಇರುವುದು, ಅವಿದ್ಯೆಯಕೆಲಸವೆಂದು ದ್ವೈತಿಗಳು ಹೇಳುವರು.

7. ಪ್ರಕಾಶವಿಲ್ಲದಿರುವಿಕೆಯೇ ಅಂಧಕಾರವೆಂದು ಕೆಲವರ ಮತವು. ಇದು ಸರಿಯಲ್ಲ. ಅಂಧಕಾರವೆನ್ನುವುದು, ಪ್ರತ್ಯೇಕವಾದ ಒಂದು ದ್ರವ್ಯವೆಂದು ಬೋಧಿಸುವರು. ಅಂಧಕಾರಕ್ಕೂ, ಪ್ರಕಾಶಕ್ಕೂ ವಿರೋಧವಾದ ಧರ್ಮಗಳು ಇರುವುವು ಹೊರತು ಪ್ರಕಾಶಾಭಾವವೇ ಅಂಧಕಾರವಲ್ಲ. ವಾಸನೆಯೆಂದರೂ, ಸಂಸ್ಕಾರವೆಂದರೂ ಒಂದೇ ಅರ್ಥ. ಪೂರ್ವಾನುಭವರೂಪವಾದ ಮತ್ತು ಸ್ವಾಪ್ನಪದಾರ್ಥಗಳಿಗೆ, ಉಪಾದಾನಕಾರಣವಾದ ವಸ್ತುವೇ ವಾಸನೆಯು.

8. ಗುಣಗಳೆಂದರೆ ರೂಪ, ರಸ, ಗಂಧ, ಸ್ಪರ್ಶ, ಸಂಖ್ಯಾ, (1. 2. 3. ಇತ್ಯಾದಿ ಸಂಖ್ಯಾವ್ಯವಹಾರಕ್ಕೆ ಕಾರಣವಾದದ್ದು) ಪರಿಮಾಣ (ಇದು ಚಿಕ್ಕದು, ಅದು ದೊಡ್ಡದು, ಇದು ಗಿಡ್ಡ, ಅದು ಉದ್ದ ಈ ವ್ಯವಹಾರಕ್ಕೆ ಕಾರಣವಾದದ್ದು.) ಸಂಯೋಗ (ಎರಡು ವಸ್ತುಗಳು ಕೂಡಿವೆ ಎಂಬುವ ವ್ಯವಹಾರಕ್ಕೆ ಕಾರಣವಾದದ್ದು). ವಿಭಾಗ (ಎರಡು ವಸ್ತುಗಳು ಬೇರೆ ಬೇರೆಯಾಗಿವೆ ಎಂಬುವ ವ್ಯವಹಾರಕ್ಕೆ ಕಾರಣವಾದದ್ದು). ಪರತ್ವಾಪರತ್ವ (ಹಿಂದೆ ಮುಂದಿನ ಸಂಬಂಧವುಳ್ಳದ್ದು ಎಂಬೀವ್ಯವಹಾರಕ್ಕೆ ಕಾರಣವಾದದ್ದು). ದ್ರವತ್ವ, ಗುರುತ್ವ, ಸ್ನೇಹ, ಶಬ್ದ, ಬುದ್ಧಿ, ಸುಖ, ದುಃಖ, ಇಚ್ಛಾ, ದ್ವೇಷ, ಪ್ರಯತ್ನ, ಧರ್ಮಾಧರ್ಮ ಇತ್ಯಾದಿ ಅನೇಕಗಳು.

9. ಕರ್ಮವು ವಿಹಿತವೆಂದೂ, ನಿಷಿದ್ಧವೆಂದೂ, ಉದಾಸೀನವೆಂದೂ ಮೂರು ಪ್ರಕಾರವಾಗಿರುವುದು. ಅನೇಕ ಪದಾರ್ಥಗಳಿಗೆ ಸಾಮಾನ್ಯವಾಗಿರುವ ಧರ್ಮವು, ಸಾಮಾನ್ಯವು.

ಕ್ಷತ್ರಿಯರಿಗೆಲ್ಲಾ ಕ್ಷತ್ರಿಯತ್ವವು ಸಾಮಾನ್ಯವು. ಮನುಷ್ಯರಿಗೆ ಮನುಷ್ಯತ್ವವು ಸಾಮಾನ್ಯವು. ಅಂದರೆ ಒಂದೇ ಕ್ಷತ್ರಿಯತ್ವವು ಮನುಷ್ಯತ್ವವು ಇರುವದೆಂದಲ್ಲ. ಸಮಾನವಾದ, ಸದೃಶವಾದ ಆದರೆ ಭಿನ್ನವಾದ ಧರ್ಮವು. ಕ್ಷತ್ರಿಯರಲ್ಲಿ ಮನುಷ್ಯರಲ್ಲಿ ಇರುವುದೆಂದು ತಿಳಿಯುವುದೇ ಸಾಮಾನ್ಯವು. ಇದಕ್ಕೆ ಜಾತಿಯೆಂದೂ ಹೆಸರು.

10. ಭೇದವಿಲ್ಲದ ಸ್ಥಳದಲ್ಲಿ, ಭೇದವಿರುವಹಾಗೆ ತೋರಿಸುವ ಪದಾರ್ಥವು **ವಿಶೇಷವು.** ದೇವದತ್ತನು, ದಂಡವನ್ನು ಹಿಡಿದರೆ, ದಂಡಿ ಎಂದು ವ್ಯವಹರಿಸಿಕೊಳ್ಳುತ್ತಾನೆ. ದಂಡಿಗೂ ದೇವದತ್ತನಿಗೂ, ಭೇದವಿಲ್ಲವಾದರೂ ಭೇದವಿರುವಂತೆ ವ್ಯವಹಾರವು ಉಂಟಾಗುತ್ತದೆ. ಇದಕ್ಕೆ ಕಾರಣವಾದದ್ದು ವಿಶೇಷವು. ಇಲ್ಲಿ ದಂಡವು ವಿಶೇಷಣವು. ದೇವದತ್ತನಿಗೆ ವಿಶೇಷ್ಯನೆಂದು ಹೆಸರು.

11. ವಿಶೇಷದಿಂದ ಕೂಡಿದ, ವಿಶೇಷ್ಯಕ್ಕೆ ವಿಶಿಷ್ಟವೆಂದು ಹೆಸರು. ಇದು ಪ್ರತ್ಯೇಕ ಪದಾರ್ಥವೆಂದು ಆಚಾರ್ಯರು ಬೋಧಿಸುವರು. ವಿಶಿಷ್ಟವೆಂಬುದು ಪದಾರ್ಥಾಂತರವಲ್ಲ ವೆಂದು ಕೆಲವರ ಮತವು. ಇದನ್ನು ನಿರಾಕರಿಸಿ ವಿಶಿಷ್ಟವನ್ನು ಪದಾರ್ಥವೆಂದು, ಒಪ್ಪಬೇಕೆಂದು ಸಮರ್ಥಿಸಿರುವರು.

12. ಅಂಶಗಳು ಉಳ್ಳದ್ದು ಅಂಶಿ. ಕೆಲವರು **ಅಂಶಿ.** ಎಂಬುದು ಪದಾರ್ಥಾಂತರವಲ್ಲ ವೆಂದು ಹೇಳುವರು. ಒಂದು ವಸ್ತ್ರವು ಎಂಟು ಮೊಳ ಇದೆ ಎಂದರೆ, ಎಂಟು ವಿಭಾಗದಿಂದ ಕೂಡಿದೆ ಎಂದು ಜ್ಞಾನವು ಬರುವುದು. ವಸ್ತ್ರವು ನೂಲುಗಳಿಂದ ಮಾಡಲ್ಪಟ್ಟಿದೆ. ನೂಲುಗಳು ಅದರ ಅಂಶಗಳಾದರೂ, ಒಂದು ಮೊಳ ವಸ್ತ್ರ, ಒಂದುವಾರು ವಸ್ತ್ರ, ಇತ್ಯಾದಿ ವ್ಯವಹಾರಗಳಲ್ಲಿ ವಸ್ತ್ರಾಂಶದ ಜ್ಞಾನಬೇರೆಯಾಗಿಯೇ ಇರುವುದು.

13. **ಶಕ್ತಿ** ಅಂದರೆ ಕಾರ್ಯವನ್ನುಂಟುಮಾಡುವ ಕಾರಣದಲ್ಲಿರುವ ಅತೀಂದ್ರಿಯವಾದ ಒಂದು ಪದಾರ್ಥವು. ಭತ್ತವು ಪೈರಿಗೆ ಕಾರಣವು. ಆದರೆ ಭತ್ತವನ್ನು ಬೇಯಿಸಿದರೆ, ಅದು ಪೈರಾಗುವುದಿಲ್ಲ. ನೆಲ ಎಷ್ಟು ಸಾರವಂತವಾಗಿದ್ದರೂ, ನೀರು ಎಷ್ಟು ಧಾರಾಳವಾಗಿದ್ದರೂ, ಬೇಯಿಸಿದ ಭತ್ತವು ಫಲವನ್ನು ಕೊಡುವುದಿಲ್ಲ. ಅದರಲ್ಲಿದ್ದ ಸಾಮರ್ಥ್ಯವು ಹೋಗಿಬಿಟ್ಟಿತು. ಈ ಸಾಮರ್ಥ್ಯಕ್ಕೆ ಶಕ್ತಿಯೆಂದು ಹೆಸರು. ಮತ್ತು ಗಡಿಗೆಮಾಡಬೇಕಾದರೆ ಕುಂಬಾರನು ಒಂದು ದಂಡವನ್ನು ಉಪಯೋಗಿಸುವನು. ಈ ದಂಡದಲ್ಲಿ ಗಡಿಗೆಮಾಡುವುದಕ್ಕೆ ಬೇಕಾದ ಶಕ್ತಿಯಿರುತ್ತದೆ. ಇದು **ಸಹಜ ಶಕ್ತಿ.** ಮಹಾತ್ಮರಿಂದ ಪೂಜಿಸಲ್ಪಟ್ಟ, ವಿಗ್ರಹಾದಿಗಳಲ್ಲಿ ತೋರುವ ಶಕ್ತಿಯು **ಅಧೇಯಶಕ್ತಿ**ಯೆನಿಸಿಕೊಳ್ಳುತ್ತದೆ. ಪರಮಾತ್ಮನಲ್ಲಿ ಅಘಟನ ಘಟನಾ ಶಕ್ತಿಯು ಸಂಪೂರ್ಣವಾಗಿರುವುದು. ಕಣ್ಣಿಲ್ಲದೆ ನೋಡುವವನು, ಕಾಲಿಲ್ಲದೆ ಓಡುವವನು, ಅತಿ ಚಿಕ್ಕ ವಸ್ತುವಿನಲ್ಲಡಗುವವನು, ಅತಿ ದೊಡ್ಡದನ್ನು ಅತಿಕ್ರಮಿಸುವವನು, ಇದಕ್ಕೆ **ಅಚಿಂತ್ಯಶಕ್ತಿ** ಎಂದು ಹೆಸರು ಲಕ್ಷ್ಮಿಯಲ್ಲಿಯೂ, ದೇವಾದಿಗಳಲ್ಲಿಯೂ ಅವರ ಯೋಗ್ಯತಾನುಸಾರ ಅಚಿಂತ್ಯ ಶಕ್ತಿಯು ಕಂಡುಬರುವುದು.

14. **ಎರಡು** ವಸ್ತುಗಳಿಗೆ ಇರತಕ್ಕ ಹೋಲಿಕೆಯು **ಸಾದೃಶ್ಯವು.** ಇದನ್ನು ತಾರ್ಕಿಕರು ಬೇರೆ ಪದಾರ್ಥ**ವೆಂದು** ಒಪ್ಪುವುದಿಲ್ಲ. ಆದರೆ ಹೋಲಿಕೆ ಸಾದೃಶ್ಯವೆಂಬುವುದು ಬೇರೆ ಪ್ರಮೇಯವೆಂದು ಒಪ್ಪಲೇ ಬೇಕಾಗುವುದು. ಗೋವಿನಂತೆ ಗವಯವು ಇದೆ. ರಾಮನ ಹಾಗೆ ಕೃಷ್ಣನು ಇದ್ದಾನೆ. ಇತ್ಯಾದಿ ಜ್ಞಾನಕ್ಕೆ, ಅವುಗಳಲ್ಲಿರತಕ್ಕ ಧರ್ಮಗಳ ಹೋಲಿಕೆಯೇ ಕಾರಣವು. ಇದು ಒಂದು ಪ್ರತ್ಯೇಕ ಪ್ರಮೇಯವಾಗಿಯೇ ಇರುತ್ತದೆ.

15. ಈ ಹತ್ತು ಪದಾರ್ಥಗಳ ವಿಶೇಷಾಕಾರ ನಿರೂಪಣವು, ಇತರವಾದಿಗಳ ನಿರೂಪಣದ ಖಂಡನವು ಸಪ್ರಮಾಣವಾಗಿ ವೇದಗರ್ಭ ಪದ್ಮನಾಭಾಚಾರ್ಯರೆಂಬುವ ಜ್ಞಾನಿಗಳು, ಮಧ್ವ ಸಿದ್ಧಾಂತಸಾರವೆಂಬುವ ಗ್ರಂಥದಲ್ಲಿ ಮಾಡಿರುತ್ತಾರೆ. ಹಿಂದೆ ಹೇಳಿದಂತೆ ಈ ಹತ್ತು ಪದಾರ್ಥಗಳನ್ನೇ ಬೇರೆ ಕ್ರಮದಿಂದ ಈ ಪ್ರಕರಣಗಳಲ್ಲಿ ವಿಭಾಗಿಸಿರುತ್ತಾರೆ. ಪದರ್ಥಗಳ ಸಮಗ್ರ ನಿರೂಪಣೆಯು ಇತರ ಗ್ರಂಥಗಳನ್ನು ಓದಿ ತಿಳಿಯಬೇಕು.

**ಕರತಲಮಿಲಿತಾಮಲಕಪ್ರಖ್ಯಂ ಯಸ್ಯಾಖಿಲಂ ವಿಶ್ವಂ ।**
**ಕಮಲಾಪರಿವೃಢಮಮಲಂ ತಂ ವಂದೇ ವಂದ್ಯಪಾದಾಬ್ಜಂ ॥**

**॥ ಶ್ರೀ ಕೃಷ್ಣಾರ್ಪಣಮಸ್ತು ॥**

- ಮಧ್ವಮುನೀಂದ್ರದಾಸ.



|| ಶ್ರೀಃ ||

# ತತ್ತ್ವಸಂಖ್ಯಾನವು.



ವಂದೇ ಸತ್ಯವತೀ ಸೂನುಂ ಸಚ್ಚಿದಾನಂದವಿಗ್ರಹಂ ।
ಶ್ರೀಮಧ್ವಮುನಿಸಂಸೇವ್ಯಂ ಪಾದಪಂಕಜಮುನ್ನಹಂ ॥

**ಶ್ರೀಮದ್ಧನುಮದ್ಭೀಮಮಧ್ವಾಂತರ್ಗತ ರಾಮಕೃಷ್ಣವೇದವ್ಯಾಸಾತ್ಮಕ ಲಕ್ಷ್ಮೀಹಯಗ್ರೀವಾಯ ನಮಃ ॥ ಹರಿಃ ಓಂ ॥**

**ಮೂ ॥ ಸ್ವತಂತ್ರಮಸ್ವತಂತ್ರಂ ಚ ದ್ವಿವಿಧಂ ತತ್ತ್ವಮಿಷ್ಯತೇ ।
ಸ್ವತಂತ್ರೋ ಭಗವಾನ್ವಿಷ್ಣುರ್ಭಾವಾಭಾವೌ ದ್ವಿಧೇತರತ್ ॥ ೧ ॥**

ಅ ॥ ತತ್ತ್ವಂ=ತತ್ತ್ವವು, ಸ್ವತಂತ್ರಂ=ಸ್ವತಂತ್ರವು, ಅಸ್ವತಂತ್ರಂ ಚ=ಅಸ್ವತಂತ್ರವೂ, (ಇತಿ=ಹೀಗೆಂದು), ದ್ವಿವಿಧಂ=ಎರಡು ಪ್ರಕಾರವಾಗಿ, ಇಷ್ಯತೇ=ಸಮ್ಮತಿಸಲ್ಪಟ್ಟಿದೆ, (ತಿಳಿಯಲ್ಪಟ್ಟಿದೆ). ಸ್ವತಂತ್ರಃ=ಸ್ವತಂತ್ರನು, ಭಗವಾನ್=ಷಡ್ಗುಣಸಂಪನ್ನನಾದ, ವಿಷ್ಣುಃ=ಪರಮಾತ್ಮನು. ಇತರತ್=ಅನ್ಯವು (ಅಸ್ವತಂತ್ರವು), ಭಾವಾಭಾವೌ=ಭಾವ ಮತ್ತು ಅಭಾವ, (ಇತಿ=ಹೀಗೆಂದು), ದ್ವಿಧಾ=ಎರಡು ಪ್ರಕಾರವು.

ತಾ ॥ ಪರಮಾತ್ಮನು ಸ್ವತಂತ್ರನೂ, ಸರ್ವೋತ್ತಮನೂ, ನಿರ್ದೋಷನೂ, ಸಕಲ ಕಲ್ಯಾಣಗುಣಪರಿಪೂರ್ಣನೂ ಮತ್ತು ಜಗದುದಯಾದಿಗಳಿಗೆ ಕಾರಣಭೂತನೂ ಆಗಿರುವನೆಂದು ಮೋಕ್ಷಾಪೇಕ್ಷೆಯುಳ್ಳ ಪುರುಷನು ತಿಳಿದುಕೊಳ್ಳುವುದು ಅತ್ಯಾವಶ್ಯಕವೆಂದು ಸಕಲ ಸಚ್ಛಾಸ್ತ್ರಗಳು ಸಾರುತ್ತಿವೆ. ಇಂತಹ ಭಗವಜ್ಜ್ಞಾನಕ್ಕೆ ಭೇದ, ತಾರತಮ್ಯಗಳಿಂದ ಕೂಡಿದ ಈ ಜಗತ್ತಿನ ಜ್ಞಾನವು ಅಂಗಭೂತವಾಗಿರುವದರಿಂದ ಅದೂ ಆವಶ್ಯಕವೇ ಸರಿ. ಪರಾಪರತತ್ತ್ವಗಳೆನಿಸುವ ಪರಬ್ರಹ್ಮ, ಜಗತ್ತು ಇವುಗಳ ಭೇದ ತಾರತಮ್ಯಗಳು ಇತರ ಗ್ರಂಥಗಳಲ್ಲಿ ಅಲ್ಲಲ್ಲಿ ಹೇಳಲ್ಪಟ್ಟಿರುವುದರಿಂದ, ಪರಮ ದಯಾಳುಗಳಾದ ಶ್ರೀಮದಾಚಾರ್ಯವರ್ಯರು ಶಿಷ್ಯರ ಹಿತವನ್ನಿಚ್ಛಿಸಿದವರಾಗಿ ತತ್ತ್ವಗಳ ವಿಭಾಗಗಳನ್ನು ಏಕತ್ರ ತೋರಿಸುವ ಈ ಗ್ರಂಥವನ್ನು ರಚಿಸಿದರು. ತತ್ತ್ವಸಂಖ್ಯಾನವೆಂದರೆ ತತ್ತ್ವಗಳ ಗಣನೆ. ತತ್ತ್ವಗಳು ಅನಂತಗಳಾದಕಾರಣ ಅವುಗಳನ್ನು ವಿಭಾಗ ಮಾಡುವುವೇ ಗಣನೆಯಾಗಿರುತ್ತದೆ. (೧) ಶ್ರೀಮದಾಚಾರ್ಯರು ಇತರ ಗ್ರಂಥಾರಂಭದಲ್ಲಿ ಮಂಗಲಾಚರಣೆಯನ್ನು ಮಾಡಿದಂತೆ ಈ ಪ್ರಕರಣಾರಂಭದಲ್ಲೇಕೆ ಮಾಡಲಿಲ್ಲವೆಂಬ ಶಂಕೆಯನ್ನು ಜಯತೀರ್ಥರು ಎರಡು ವಿಧವಾಗಿ ಸಮಾಧಾನಮಾಡಿದ್ದಾರೆ. (i) ಪರಮಾಸ್ತಿಕಶಿಖಾಮಣಿಗಳಾದ ಆಚಾರ್ಯರು ಈ ಪ್ರಕರಣಾರಂಭದಲ್ಲಿಯೂ ಮಾನಸಿಕವಾದ ಮಂಗಳವನ್ನು ಮಾಡಿಯೇ ಇರುತ್ತಾರೆಂದು ಊಹಿಸಬೇಕು. ಅಲ್ಲದೆ (ii) "**ಮಂಗಲಂ ಭಗವಾನ್ವಿಷ್ಣುರ್ಮಂಗಲಂ ಮಧುಸೂದನಃ । ಮಂಗಲಂ (ದೇವಕೀಪುತ್ರೋ) ಪುಂಡರೀಕಾಕ್ಷೋ ಮಂಗಲಂ ಗರುಡಧ್ವಜಃ**" ಎಂಬೀ ಪ್ರಮಾಣಾನುಸಾರವಾಗಿ ಪರಮ ಮಂಗಳರೂಪನಾದ ಶ್ರೀಮನ್ನಾರಾಯಣನ ನಾಮಸಂಕೀರ್ತನೆಯನ್ನು "**ಸ್ವತಂತ್ರ**" ಶಬ್ದದಿಂದ ಗ್ರಂಥಾರಂಭದಲ್ಲಿ ಮಾಡಿರುತ್ತಾರಾದುದರಿಂದ ಬೇರೆ ಮಂಗಳವು ಅಗತ್ಯವಿರುವುದಿಲ್ಲ. (೨) ತತ್ತ್ವವೆಂದರೆ "**ಅನಾರೋಪಿತಂ, ಪ್ರಮಿತಿ ವಿಷಯಃ**" ಆರೋಪವಲ್ಲದ ಜ್ಞಾನವಿಷಯವು, ಅಂದರೆ ಭ್ರಮೆಗೆ ವಿಷಯವಾಗದೆ

ಇದ್ದದ್ದು, ಅಥವಾ ಯಥಾರ್ಥಜ್ಞಾನಕ್ಕೆ ವಿಷಯವಾದದ್ದು. ಭ್ರಮವೆಂದರೆ ಒಂದು ವಸ್ತುವನ್ನು ಇಂದ್ರಿಯಾದಿಗಳ ದೋಷದಿಂದ ಇನ್ನೊಂದು ವಸ್ತುವನ್ನಾಗಿ ತಿಳಿದುಕೊಳ್ಳೋಣವು. **ಉದಾ:**- ಹಗ್ಗವನ್ನು ಹಾವೆಂದು ತಿಳಿದುಕೊಳ್ಳೋಣ, ಮುತ್ತುಚಿಪ್ಪಿ (ಶುಕ್ತಿ) ಯನ್ನು ಬೆಳ್ಳಿಯೆಂದು ತಿಳಿದುಕೊಳ್ಳೋಣ. ಇಲ್ಲಿ ಹಾವು, ಬೆಳ್ಳಿ ಇವೆರಡು ತೋರಿದವುಗಳು ಇಲ್ಲದಿದ್ದ ವಸ್ತುಗಳಾದ ಕಾರಣ ತತ್ವಗಳಲ್ಲ. ಯಥಾರ್ಥಜ್ಞಾನಕ್ಕೆ ವಿಷಯವಾದುದೇ ತತ್ವವೆಂಬ ಅಭಿಪ್ರಾಯದಿಂದ **ತತ್ವವಿವೇಕ**ದಲ್ಲಿ ಆಚಾರ್ಯರು **'ತತ್ವಕ್ಕೆ' 'ಪ್ರಮೇಯ'**ವೆಂಬ ನಾಮವನ್ನು ಕೊಟ್ಟಿರುತ್ತಾರೆ. (೩) ಸ್ವತಂತ್ರಾಸ್ವತಂತ್ರ ತತ್ವಗಳ ಲಕ್ಷಣ:- (ಗುರುತು) (Definition). ತನ್ನ ಸ್ವರೂಪ, ಜ್ಞಾನ ಮತ್ತು ಚರ್ಯೆ ಇವುಗಳಲ್ಲಿ ಪರಾಪೇಕ್ಷೆಯಿಲ್ಲದೇ ಇರುವ ತತ್ವವು ಸ್ವತಂತ್ರವು. ಇವುಗಳಲ್ಲಿ ಪರಾಪೇಕ್ಷೆಯುಳ್ಳ ತತ್ವವು ಅಸ್ವತಂತ್ರವು. (೪) ತತ್ವವು ಭಾವಾಭಾವವೆಂದಾಗಲೀ, ಚೇತನಾಚೇತನವೆಂದಾಗಲೀ, ನಿತ್ಯಾನಿತ್ಯವೆಂದಾಗಲೀ ವಿಭಾಗಿಸಲು ಶಕ್ಯವಾಗಿದ್ದರೂ; ಹಾಗೆ ವಿಭಾಗಿಸದೆ ಸ್ವತಂತ್ರಾಸ್ವತಂತ್ರವೆಂಬೀ ಭಾಗವನ್ನು ಕೈಗೊಂಡು **ಶ್ರೀಮದಾಚಾರ್ಯರು** ಸರ್ವ ವಸ್ತುಗಳಿಂದ ಪ್ರತ್ಯೇಕಿಸಲ್ಪಟ್ಟ ಪರಬ್ರಹ್ಮನನ್ನು ಸ್ವತಂತ್ರನನ್ನಾಗಿ ತಿಳಿದುಕೊಳ್ಳುವುದೇ ಮುಕ್ತಿಗೆ ಸಾಧಕವಾದ ಮಾರ್ಗವೆಂಬುದನ್ನು ವ್ಯಕ್ತಗೊಳಿಸುತ್ತಾರೆ. ಅಷ್ಟಲ್ಲದೆ ಸ್ವತಂತ್ರತತ್ವಾಂಶದಲ್ಲಿ ವಿಭಾಗವು ಸಮಾಪ್ತಿಯಾಗುವುದರಿಂದ ಈ ವಿಭಾಗವು ಪ್ರಶಸ್ತವಾಗಿರುವುದು. (೫) ಸ್ವತಂತ್ರಾಸ್ವತಂತ್ರ ತತ್ವವನ್ನು ಒಪ್ಪತಕ್ಕ ಸಾಂಖ್ಯ ಮೊದಲಾದವರು ಹೇಳುವಂತೆ ಪ್ರಧಾನ (ಜಡಪ್ರಕೃತಿ) ಮೊದಲಾದವುಗಳು ಸ್ವತಂತ್ರ ತತ್ವವಲ್ಲವೆಂಬುದನ್ನು ತಿಳಿಯಪಡಿಸುವುದಕ್ಕೋಸ್ಕರ **'ಸ್ವತಂತ್ರೋ ಭಗವಾನ್ವಿಷ್ಣುಃ'** ಎಂಬ ವಚನವು ಹೊರಟಿದೆ. ವಿಷ್ಣುಃ ಅಂದರೆ ಸರ್ವವ್ಯಾಪ್ತನೆಂದು ಅರ್ಥವು. (೬) **ಭಾವಾಭಾವಗಳೆಂದರೆ** (ಪ್ರಮಾಣಗಳಿಂದ ಹುಟ್ಟತಕ್ಕ) ಪ್ರಾಥಮಿಕ ಜ್ಞಾನದಲ್ಲಿ "ಇದೆ" ಎಂತ ಯಾವುದು ತೋರುತ್ತದೋ, ಅದು ಭಾವವು ॥ "ಇಲ್ಲ"ವೆಂತ ಯಾವುದು ತೋರುತ್ತದೋ, ಅದು ಅಭಾವವು ॥ ಸ್ವರೂಪತಃ ಭಾವಾಭಾವಗಳು ವಿಧಿನಿಷೇಧರೂಪಗಳಾಗಿದ್ದರೂ, ರೂಪಾಂತರದಿಂದ ನಿಷೇಧ ವಿಧಿರೂಪಗಳಾಗುತ್ತವೆ. ಹೇಗೆಂದರೆ- "ಇದೆ" ಎಂಬುವುದು ವಿಧಿಯು, "ಇಲ್ಲ" ಎಂಬುವುದು ನಿಷೇಧವು. ಹೀಗಿರಲು ವಿಧಿರೂಪವಾದದ್ದೆಲ್ಲಾ ಭಾವವೆಂತ ಹೇಳಲಾಗುವುದಿಲ್ಲ. ಏಕೆಂದರೆ-"**ಘಟಾಭಾವ**ವಿದೆ" ಎಂಬೀ ಮೊದಲಾದ ಜ್ಞಾನಗಳಲ್ಲಿ ಅಭಾವವೂ ವಿಧಿರೂಪವಾಗಿ ತೋರುತ್ತದೆ. ಆದುದರಿಂದ ಪ್ರಥಮ ಜ್ಞಾನಕ್ಕೆ 'ಇದೆ' ಎಂತ ವಿಧಿರೂಪವಾಗಿ ಯಾವುದು ವಿಷಯವಾಗುತ್ತದೋ ಅದು ಭಾವವು. ಹೇಗೆಂದರೆ ಯಾವುದಾದರೊಂದು ವಸ್ತು ಮೊದಲು ತೋರುವಾಗ ಸ್ವರೂಪಮಾತ್ರ ತೋರುತ್ತದೆ; ಆ ಮೇಲೆ ಅದರ ವಿಶೇಷವು ತಿಳಿಯುತ್ತದೆ. ಆದುದರಿಂದ ಪ್ರಕೃತದಲ್ಲಿ ವಸ್ತುವಿಲ್ಲದಿರುವಾಗ 'ಇಲ್ಲಿ ಅದು ಇಲ್ಲ' ಎಂದು ನಿಷೇಧಜ್ಞಾನ ಬಂದು 'ಅದರ ಅಭಾವವುಂಟೆಂಬುವ ಜ್ಞಾನವು' ಮತ್ತೆ ಬರತಕ್ಕದ್ದಾದಕಾರಣ ಪ್ರಾಥಮಿಕವಾದ 'ಇದೆ' ಎಂಬ ಜ್ಞಾನಕ್ಕೆ ವಿಷಯವಾದದ್ದು ಭಾವವೆಂಬುದು ಸರಿಯಾದದ್ದು. (೭) ಏಕಕಾಲದಲ್ಲಿಯೇ ಭಾವವೂ, ಅಭಾವವೂ ಆಗಿರತಕ್ಕ ಭಾವಾಭಾವವೆಂಬ ವಸ್ತು ವೆಲ್ಲಿಯೂ ಇರುವುದಿಲ್ಲ. (೮) ಅಸ್ವತಂತ್ರಕ್ಕೆ ಮಾತ್ರ ಈ ಭಾವಾಭಾವವೆಂಬ ವಿಭಾಗವಿರತಕ್ಕದ್ದೆಂದು ಹೇಳದೆ ಇದ್ದುದರಿಂದ, ಪರಮಾತ್ಮನು ಭಾವಲಕ್ಷಣವನ್ನು ಒಳಗೊಂಡಿರುವುದರಿಂದ, ಭಾವವಾಗಿರುವುದರಲ್ಲಿ ವಿಭಾಗಕ್ರಮಕ್ಕೆ ದೋಷ ಬರುವುದಿಲ್ಲ. ಮತ್ತು ಸ್ವತಂತ್ರನೆಂತ ಹೇಳಿದ ಮಾತ್ರದಿಂದಲೇ ನಿತ್ಯನೆಂತಲೂ, ಚೇತನನೆಂತಲೂ, ದುಃಖರಹಿತನೆಂತಲೂ ಹೇಳಿದ ಹಾಗೆ ಆಯಿತು. ಆಚಾರ್ಯರು **ಮಹಾಭಾರತ ತಾತ್ಪರ್ಯನಿರ್ಣಯ** ಅಧ್ಯಾಯ ೩, ಶ್ಲೋಕ ೮೦ರಲ್ಲಿ **"ಕುತೋ ದುಃಖಂ ಸ್ವತಂತ್ರಸ್ಯ**

**ನಿತ್ಯಾನಂದೈಕರೂಪಿಣಃ |"** ಎಂದು ಹೇಳಿರುವರು. ಆನಂದಪೂರ್ಣನಾದ ಸ್ವತಂತ್ರನಿಗೆ ದುಃಖವು ಸರ್ವಾತ್ಮನಾ ಇಲ್ಲ. (೮) 'ಇಲ್ಲ' ಎಂಬ ಸರ್ವಾನುಭವಸಿದ್ಧವಾದ ಯಥಾರ್ಥಜ್ಞಾನಕ್ಕೆ ವಿಷಯವಾದ ಅಭಾವವನ್ನು ಅಂಗೀಕರಿಸದಿರುವ ಮತವು ಸರಿಯಲ್ಲ. ॥ ೧ ॥

**ಮೂ ॥ ಪ್ರಾಕ್ ಪ್ರಧ್ವಂಸಸದಾತ್ವೇನ ತ್ರಿವಿಧೋಽಭಾವ ಇಷ್ಯತೇ ।**
**ಚೇತನಾಚೇತನತ್ವೇನ ಭಾವೋಽಪಿ ದ್ವಿವಿಧೋ ಮತಃ ॥ ೨ ॥**

**ಅ ॥** ಪ್ರಾಕ್ ಪ್ರಧ್ವಂಸಸದಾತ್ವೇನ, ಪ್ರಾಕ್ತ್ವ=ಪೂರ್ವಕಾಲಸಂಬಂಧವು, ಪ್ರಧ್ವಂಸತ್ವ=ಉತ್ತರಕಾಲಸಂಬಂಧವು, ಸದಾತ್ವೇನ=ಸರ್ವಕಾಲಸಂಬಂಧವೂ ಇವುಗಳಿಂದ, (ಉಪಲಕ್ಷಿತಃ=ಕೂಡಿದ), ಅಭಾವಃ=ಅಭಾವವು, ತ್ರಿವಿಧಃ=ಮೂರುಪ್ರಕಾರವಾಗಿ, ಇಷ್ಯತೇ=ಸಮ್ಮತಿಸಲ್ಪಟ್ಟದೆ. ಭಾವೋಽಪಿ=ಭಾವವೂ ಕೂಡ, ಚೇತನಾಚೇತನತ್ವೇನ=ಚೇತನತ್ವ ಮತ್ತು ಅಚೇತನತ್ವ ಎಂಬೀ ಎರಡು ಧರ್ಮದಿಂದ, ದ್ವಿವಿಧಃ=ಎರಡು ಪ್ರಕಾರವೆಂದು, ಮತಃ=ಶಾಸ್ತ್ರಸಮ್ಮತವು.

**ತಾ ॥** (೧) ಅಭಾವನಿರೂಪಣವು ಭಾವನಿರೂಪಣೆಗಿಂತ ಅಲ್ಪವಾದುದರಿಂದ ಅಭಾವವನ್ನು ನಿರೂಪಿಸಿ, ಅನಂತರ ಭಾವವನ್ನು ನಿರೂಪಿಸುತ್ತಾರೆ. (೨) ಪ್ರಾಗಭಾವ, ಪ್ರಧ್ವಂಸಾಭಾವ ಸದಾ (ಅತ್ಯಂತಾ) ಭಾವಗಳಲ್ಲಿ ಪ್ರಾಗಭಾವವೆಂದರೆ, ಒಂದು ವಸ್ತು ಹುಟ್ಟಬೇಕಾದರೆ ಮುಂಚಿರತಕ್ಕ ಅಭಾವವು. ಅದು ನಷ್ಟವಾದ ಮೇಲಿರತಕ್ಕ ಅಭಾವವು ಪ್ರಧ್ವಂಸಾಭಾವವು. ಯಾವಾಗಲೂ ಇರತಕ್ಕ ಅಭಾವವು ಸದಾಭಾವವು. ಇವುಗಳಿಗೆ ಉದಾಹರಣೆ:—ದಂತಾಭಾವಾದಿಗಳು ಹೇಗೆಂದರೆ:—ಬಾಲ್ಯಾವಸ್ಥೆಯಲ್ಲಿರತಕ್ಕ ಹಲ್ಲುಗಳ ಅಭಾವವು ದಂತಪ್ರಾಗಭಾವವೆನಿಸುತ್ತದೆ. ಮುದಿತನದಲ್ಲಿ ಇರತಕ್ಕದ್ದು ದಂತಪ್ರಧ್ವಂಸಾಭಾವವು. ಪಕ್ಷಿ ಮೊದಲಾದುವುಗಳಲ್ಲಿ ದಂತದ ಅಭಾವವು ಸದಾಭಾವವು. (೩) ಅತ್ಯಂತಾಭಾವವೆಂಬ ಪ್ರಸಿದ್ಧ ಹೆಸರನ್ನು ಬಿಟ್ಟು, ಸದಾಭಾವವೆಂದು ಹೇಳಿದ್ದರಿಂದ ಈ ಅಭಾವವು ಯಾವಾಗಲೂ ಇರತಕ್ಕದ್ದೆಂದು ಇದರ ಲಕ್ಷಣವನ್ನು ತೋರಿಸಿದಂತಾಗುವುದು. (೪) ಚೇತನಾಚೇತನಗಳ ಲಕ್ಷಣ; ಜ್ಞಾನವುಳ್ಳದ್ದು ಚೇತನ. ಉದಾ:- ದೇವ, ನರ, ಪಶು, ಪಕ್ಷಿ, ಕ್ರಿಮಿಕೀಟಾದಿಗಳು ಮತ್ತು ಈಶ್ವರನೂ. ಜ್ಞಾನವಿಲ್ಲದ್ದು ಅಚೇತನವು. ಉದಾ:- ಕಲ್ಲು, ಮಣ್ಣು ಮುಂತಾದುವುಗಳು. ॥ ೨ ॥

**ಮೂ ॥ ದುಃಖಸ್ಪೃಷ್ಟಂ ತದಸ್ಪೃಷ್ಟಮಿತಿ ದ್ವೇಧೈವ ಚೇತನಮ್ ।**
**ನಿತ್ಯಾ ದುಃಖಾ ರಮಾಽನ್ಯೇ ತು ಸ್ಪೃಷ್ಟದುಃಖಾಸ್ಸಮಸ್ತಶಃ ॥ ೩ ॥**

**ಅ ॥** ಚೇತನಂ=ಚೇತನವು, ದುಃಖಸ್ಪೃಷ್ಟಂ=ದುಃಖಲೇಪವುಳ್ಳದ್ದು, ತದಸ್ಪೃಷ್ಟಂ=ಅದರ (ದುಃಖದ) ಲೇಪವಿಲ್ಲದೇ ಇದ್ದದ್ದು, ಇತಿ=ಹೀಗೆಂದು, ದ್ವೇಧೈವ=ಎರಡೇ ಪ್ರಕಾರವುಳ್ಳದ್ದು, ರಮಾ=ಲಕ್ಷ್ಮಿಯು, ನಿತ್ಯಾದುಃಖಾ=ಯಾವಾಗಲೂ ದುಃಖಲೇಪವಿಲ್ಲದೇ ಇರುವವಳು, ಅನ್ಯೇ=ಇತರರಾದ, ಸಮಸ್ತಶಃ=ಎಲ್ಲರೂ, ಸ್ಪೃಷ್ಟದುಃಖಾಃ=ದುಃಖಲೇಪವುಳ್ಳವರು, ತು=ನಿಶ್ಚಯವು.

**ತಾ ॥** (i) ಕಾಲತ್ರಯದಲ್ಲಿ ಎಷ್ಟು ಸ್ವಲ್ಪವಾದರೂ ದುಃಖಲೇಪವಿಲ್ಲದೇ ಇರತಕ್ಕವಳು ಮಹಾಲಕ್ಷ್ಮಿಯೊಬ್ಬಳೇ, ಬೇರೆ ಬ್ರಹ್ಮಾದಿಗಳೆಲ್ಲರೂ ಭೂತಭವಿಷ್ಯದ್ವರ್ತಮಾನಕಾಲಗಳಲ್ಲಿ ಯಾವುದಾದರೊಂದು ಕಾಲದಲ್ಲಿ ಸ್ವಲ್ಪವಾದರೂ ದುಃಖಲೇಪವುಳ್ಳವರಾದುದರಿಂದ ಅವರನ್ನೆಲ್ಲಾ ದುಃಖಸ್ಪೃಷ್ಟರಲ್ಲಿ ಸೇರಿಸಿದ್ದಾರೆ. ॥ ೩ ॥

**ಮೂ ॥ ಸ್ಪೃಷ್ಟದುಃಖಾ ವಿಮುಕ್ತಾಶ್ಚ ದುಃಖಸಂಸ್ಥಾ ಇತಿ ದ್ವಿಧಾ ।**
**ದುಃಖಸಂಸ್ಥಾ ಮುಕ್ತಿಯೋಗ್ಯಾ ಅಯೋಗ್ಯಾ ಇತಿ ಚ ದ್ವಿಧಾ ॥ ೪ ॥**

ಅ ॥ ಸ್ಪೃಷ್ಟದುಃಖಾಃ=ದುಃಖಲೇಪವುಳ್ಳವರು, ವಿಮುಕ್ತಾಃ=(ದುಃಖದಿಂದ) ಬಿಡುಗಡೆಹೊಂದಿದವರು, ದುಃಖಸಂಸ್ಥಾಃ=ದುಃಖದಲ್ಲಿರತಕ್ಕವರು, ಇತಿ ಚ=ಹೀಗೆಂದು, ದ್ವಿಧಾ=ಎರಡು ಪ್ರಕಾರ. ದುಃಖಸಂಸ್ಥಾಃ=ದುಃಖದಲ್ಲಿರತಕ್ಕವರು, ಮುಕ್ತಿಯೋಗ್ಯಾಃ=(ದುಃಖದಿಂದ) ಬಿಡುಗಡೆಗೆ ಯೋಗ್ಯರು, ಅಯೋಗ್ಯಾಃ=ಅದಕ್ಕೆ ಅಯೋಗ್ಯರು, ಇತಿ=ಹೀಗೆಂದು, ದ್ವಿಧಾ=ಎರಡುಪ್ರಕಾರ. ॥ ೪ ॥

**ಮೂ ॥ ದೇವರ್ಷಿಪಿತೃಪನರಾ ಇತಿ ಮುಕ್ತಾಸ್ತು ಪಂಚಧಾ ।**
**ಏವಂ ವಿಮುಕ್ತಿಯೋಗ್ಯಾಶ್ಚ ತಮೋಗಾಃ ಸೃತಿಸಂಸ್ಥಿತಾಃ ॥ ೫ ॥**
**ಇತಿ ದ್ವಿಧಾ ಮುಕ್ತ್ಯಯೋಗ್ಯಾ ದೈತ್ಯರಕ್ಷಃಪಿಶಾಚಕಾಃ ।**
**ಮರ್ತ್ಯಾಧಮಾಶ್ಚತುರ್ಧೈವ ತಮೋಯೋಗ್ಯಾಃ ಪ್ರಕೀರ್ತಿತಾಃ ॥ ೬ ॥**

ಅ ॥ ಮುಕ್ತಾಃ=ಮುಕ್ತಿ ಹೊಂದಿದವರು, (ಅಂದರೆ ಗತಕಲ್ಪದಲ್ಲಿ ಚತುರ್ಮುಖ ಬ್ರಹ್ಮನಿಂದ ಕೂಡಿಕೊಂಡು ವೈಕುಂಠಾದಿ ಲೋಕಗಳಿಗೆ ಹೋದವರು), ದೇವರ್ಷಿಪಿತೃಪನರಾಃ=(ದೇವ=ದೇವತೆಗಳು, ಋಷಿ=ಋಷಿಗಳು, ಪಿತೃ=ಪಿತೃಗಳು, ಪ=ಚಕ್ರವರ್ತಿಗಳು, ನರಾಃ=ಮನುಷ್ಯೋತ್ತಮರು), ಇತಿ=ಹೀಗೆಂದು, ಪಂಚಧಾ=ಐದು ಪ್ರಕಾರ, ತು=ನಿಶ್ಚಯವು. ವಿಮುಕ್ತಿಯೋಗ್ಯಾಶ್ಚ=ಮುಕ್ತಿಗೆ ಯೋಗ್ಯರಾದವರೂ ಕೂಡ (ಅಂದರೆ ಈಗ ಸಂಸಾರದಲ್ಲಿರತಕ್ಕವರಲ್ಲಿಯೂ, ಇನ್ನುಮೇಲೆ ಸೃಷ್ಟಿಗೆ ಬರತಕ್ಕವರಲ್ಲಿಯೂ ಮುಕ್ತಿಯೋಗ್ಯರಾದವರು), ಏವಂ=ಹೀಗೆಯೇ. (ಅಂದರೆ ವಿಮುಕ್ತರಂತೆ ದೇವರ್ಷಿಪಿತೃಪನರರೆಂದು ಐದು ಪ್ರಕಾರವು). ಮುಕ್ತ್ಯಯೋಗ್ಯಾಃ=ಮುಕ್ತಿಗೆ ಅಯೋಗ್ಯರಾದವರು, ತಮೋಗಾಃ=ದುಃಖರೂಪವಾದ ತಮಸ್ಸಿಗೆ (ಅಂದರೆ ಅಂಧಂತಮಸ್ಸಿಗೆ) ಯೋಗ್ಯರು, ಸೃತಿಸಂಸ್ಥಿತಾಃ=ಸಂಸಾರದಲ್ಲಿರತಕ್ಕವರು (ಅಂದರೆ ನಿತ್ಯಸಂಸಾರಿಗಳು), (ಈಗ ಸೃಷ್ಟರು ಇನ್ನುಮೇಲೆ ಸೃಷ್ಟಿಗೆ ಬರತಕ್ಕವರು), ಇತಿ=ಹೀಗೆಂದು, ದ್ವಿಧಾ=ಎರಡು ಪ್ರಕಾರ. ತಮೋಯೋಗ್ಯಾಃ=ತಮೋಯೋಗ್ಯರು, ದೈತ್ಯರಕ್ಷಃಪಿಶಾಚಕಾಃ, (ದೈತ್ಯ=ದೈತ್ಯರು, ರಕ್ಷಃ=ರಾಕ್ಷಸರು, ಪಿಶಾಚಕಾಃ=ಪಿಶಾಚರು), ಮರ್ತ್ಯಾಧಮಾಃ=ಮನುಷ್ಯಾಧಮರು, ಇತಿ=ಹೀಗೆಂದು, ಚತುರ್ಧೈವ=ನಾಲ್ಕು ಪ್ರಕಾರವಾಗಿಯೇ, ಪ್ರಕೀರ್ತಿತಾಃ=ಹೇಳಿಸಿಕೊಳ್ಳಲ್ಪಟ್ಟಿದ್ದಾರೆ.

ತಾ ॥ (೧) ಮುಕ್ತಿಯಲ್ಲಿಯೂ, ತಮಸ್ಸಿನಲ್ಲಿಯೂ, ಸಂಸಾರದಲ್ಲಿಯೂ ಭೇದ ಮತ್ತು ತಾರತಮ್ಯ ಉಂಟೆಂಬುದನ್ನು "ದೇವರ್ಷಿಪಿತೃಪನರಾ ದೈತ್ಯರಕ್ಷಃಪಿಶಾಚಕಾಃ" ಎಂಬೀ ಪ್ರಭೇದಗಳಿಂದ ತಿಳಿಯಪಡಿಸುತ್ತಾರೆ. ಈ ಗಣಗಳಲ್ಲಿಯೂ ಅವಾಂತರ ತಾರತಮ್ಯವು ಆದ್ಯಂತ ರಹಿತವಾಗಿರುವುದು. ಇದರಲ್ಲಿ "ಅನಾದ್ಯನಂತಂ ಹಿ ತಾರತಮ್ಯಂ ಚಿದಾತ್ಮನಾಮ್" ಎಂಬ ತಾತ್ಪರ್ಯನಿರ್ಣಯ ಅ. ೧ ಶ್ಲೋಕ ೯೭ರಲ್ಲಿ ಆಚಾರ್ಯರು ಚಿದಾತ್ಮರ ತಾರತಮ್ಯವು ಆದ್ಯಂತ ರಹಿತವಾಗಿರುವುದೆಂದು ಆಜ್ಞಾಪಿಸಿರುತ್ತಾರೆ. (೨) ಗಂಧರ್ವಾದಿಗಳಲ್ಲಿ ಮುಕ್ತರು ಮೇಲೆ ಹೇಳಿದ ದೇವಮನುಷ್ಯಾದಿಗಳಲ್ಲಿ ಸೇರಿರುತ್ತಾರೆ. ॥ ೫-೬ ॥

**ಮೂ ॥ ತೇ ಚ ಪ್ರಾಪ್ತಾಂಧತಮಸಃ ಸೃತಿಸಂಸ್ಥಾ ಇತಿ ದ್ವಿಧಾ ।**
**ನಿತ್ಯಾನಿತ್ಯವಿಭಾಗೇನ ತ್ರಿಧೈವಾಚೇತನಂ ಮತಮ್ ॥ ೭ ॥**

ಅ || ತೇ ಚ=ಆ ತಮೋಯೋಗ್ಯರೂ ಕೂಡ, ಪ್ರಾಪ್ತಾಂಧತಮಸಃ=ಹೊಂದಲ್ಪಟ್ಟ ಅಂಧಂತಮಸಸ್ಸುಳ್ಳವರು (ಗತಕಲ್ಪಗಳಲ್ಲಿ ಅಂಧಂತಮಸ್ಸಿಗೆ ಹೋಗಿ ಪುನರಾವೃತ್ತಿ ಇಲ್ಲದವರು), ಸೃತಿಸಂಸ್ಥಾಃ=ಸಂಸಾರದಲ್ಲಿರತಕ್ಕವರು, ಇತಿ=ಹೀಗೆಂದು, ದ್ವಿಧಾ=ಎರಡುಪ್ರಕಾರ. ಅಚೇತನಂ=ಅಚೇತನವು, ನಿತ್ಯಾನಿತ್ಯವಿಭಾಗೇನ=ನಿತ್ಯಾನಿತ್ಯ ಮತ್ತು ಅವುಗಳ ವಿಭಾಗ (ಅಂದರೆ ನಿತ್ಯಾನಿತ್ಯ, ನಿತ್ಯ ಮತ್ತು ಅನಿತ್ಯ) ಎಂಬ ವಿಭಾಗದಿಂದ, ತ್ರಿಧೈವ=ಮೂರು ಪ್ರಕಾರವಾಗಿಯೇ, ಮತಂ=ಸಮ್ಮತವು.

ತಾ || (೧) ಚೇತನರೆಲ್ಲರು ನಿತ್ಯರು, ಅಚೇತನ ಮಾತ್ರ ನಿತ್ಯಾನಿತ್ಯ ವಿಭಾಗವುಳ್ಳದ್ದು. (೨) ಸರ್ವವೂ ಕ್ಷಣಿಕವೆಂದೆನ್ನುವ ಬೌದ್ಧರು ನಿತ್ಯವನ್ನೂ, ಎಲ್ಲವೂ ಇದ್ದದ್ದೇ ಅಭಿವ್ಯಕ್ತವಾಗುವುದೆಂದು ಹೇಳತಕ್ಕ ಸಾಂಖ್ಯರು ಅನಿತ್ಯವನ್ನೂ, ಸರ್ವರೂ ವಿರುದ್ಧವಾದುದರಿಂದ ನಿತ್ಯಾನಿತ್ಯವನ್ನು ಅಂಗೀಕರಿಸುವುದಿಲ್ಲವಾದುದರಿಂದ, ಆಚಾರ್ಯರು ತ್ರಿಧೈವ ಎಂಬುವಲ್ಲಿ ನಿರ್ಧಾರಣಾರ್ಥಕವಾದ ಏವಕಾರದಿಂದ ಈ ವಿಭಾಗಗಳನ್ನು ದೃಢಪಡಿಸುತ್ತಾರೆ. || ೭ ||

**ಮೂ || ನಿತ್ಯಾ ವೇದಾಃ ಪುರಾಣಾದ್ಯಾಃ ಕಾಲಃ ಪ್ರಕೃತಿರೇವ ಚ ।**
**ನಿತ್ಯಾನಿತ್ಯಂ ತ್ರಿಧಾ ಪ್ರೋಕ್ತಮನಿತ್ಯಂ ದ್ವಿವಿಧಂ ಮತಮ್ || ೮ ||**
**ಅಸಂಸೃಷ್ಟಂ ಚ ಸಂಸೃಷ್ಟಮಸಂಸೃಷ್ಟಂ ಮಹಾನಹಮ್ ।**
**ಬುದ್ಧಿರ್ಮನಃ ಖಾನಿ ದಶ ಮಾತ್ರಾಭೂತಾನಿ ಪಂಚ ಚ || ೯ ||**

ಅ || ವೇದಾಃ=ವೇದಗಳು, ನಿತ್ಯಾಃ=ನಿತ್ಯಗಳು, ಪುರಾಣಾದ್ಯಾಃ=ಪುರಾಣವೇ ಮೊದಲಾದ ಪುರುಷನಿರ್ಮಿತ ಗ್ರಂಥಗಳು, (೧) ಕಾಲಃ=ಕಾಲವು, (೨) ಪ್ರಕೃತಿಃ=ಜಡಪ್ರಕೃತಿಯು, (೩) (ಇತಿ=ಈ ಪ್ರಕಾರ) ನಿತ್ಯಾನಿತ್ಯಂ=ನಿತ್ಯಾನಿತ್ಯವು, ತ್ರಿಧಾ=ಮೂರುಪ್ರಕಾರ, ಅನಿತ್ಯಂ=ಅನಿತ್ಯವು, ಅಸಂಸೃಷ್ಟಂ=ಸಂಸೃಷ್ಟವಲ್ಲದ್ದು, (ಅಂದರೆ ಚೆನ್ನಾಗಿ ಸೃಷ್ಟಿಮಾಡಲ್ಪಡದೆ ಇದ್ದದ್ದು), ಸಂಸೃಷ್ಟಂ=ಚೆನ್ನಾಗಿ ಸೃಷ್ಟಿಮಾಡಲ್ಪಟ್ಟದ್ದು, ಇತಿ=ಈ ಪ್ರಕಾರ, ದ್ವಿವಿಧಂ=ಎರಡುಪ್ರಕಾರವಾಗಿ, ಮತಂ=ಸಮ್ಮತವು, ಮಹಾನ್=ಮಹತ್ತತ್ವವು, ಅಹಂ=ಅಹಂಕಾರತತ್ವವು, ಬುದ್ಧಿಃ=ಬುದ್ಧಿತತ್ವವು, ಮನಃ=ಮನಸ್ಸು, ದಶ ಖಾನಿ=ದಶೇಂದ್ರಿಯುಗಳು, (ಅಂದರೆ ಕಣ್ಣು, ಕಿವಿ, ಮೂಗು, ತ್ವಕ್, ರಸನವೆಂಬ ಐದು ಜ್ಞಾನೇಂದ್ರಿಯುಗಳು, ವಾಕ್, ಪಾದ, ಪಾಣಿ, ಪಾಯು, ಉಪಸ್ಥಗಳೆಂಬ ಐದು ಕರ್ಮೇಂದ್ರಿಯುಗಳು), ಪಂಚಮಾತ್ರಾಃ=ಐದು ತನ್ಮಾತ್ರೆಗಳು, (ಅಂದರೆ ಪ್ರಥಿವೀತ್ಯಾದಿ ಐದು ಭೂತಗಳಿಗೆ ಕಾರಣಗಳಾದ, ಗಂಧ ತನ್ಮಾತ್ರೆ, ರಸ ತನ್ಮಾತ್ರೆ, ರೂಪ ತನ್ಮಾತ್ರೆ, ಸ್ಪರ್ಶ ತನ್ಮಾತ್ರೆ, ಮತ್ತು ಶಬ್ದ ತನ್ಮಾತ್ರೆ ಇವುಗಳು), ಪಂಚಭೂತಾನಿ ಚ=ಪ್ರಥಿವ್ಯಪ್ತೇಜೋವಾಯು ಆಕಾಶವೆಂಬ ಪಂಚಭೂತಗಳೂ ಕೂಡ ಇಪ್ಪತ್ತನಾಲ್ಕು ತತ್ವಗಳು, ಅಸಂಸೃಷ್ಟಂ=ಅಸಂಸೃಷ್ಟವು.

ತಾ || (೧) ನಿತ್ಯವೆಂದರೆ ಆದ್ಯಂತವಿಲ್ಲದ್ದು (ಉತ್ಪತ್ತಿ, ನಾಶವಿಲ್ಲದ್ದು) ಅವುಗಳು ವೇದಗಳು ಮತ್ತು ಐವತ್ತೊಂದು ಅಕಾರಾದಿ ವರ್ಣಗಳು ಮತ್ತು ಮಹಾಕಾಶವು. ಅನಿತ್ಯವೆಂದರೆ ಉತ್ಪತ್ತಿ, ನಾಶವುಳ್ಳದ್ದು. ಅವು ಮೇಲೆಹೇಳಿದ ಇಪ್ಪತ್ತನಾಲ್ಕು ಮಹದಾದಿತತ್ವಗಳು. ನಿತ್ಯಾನಿತ್ಯವು ಮೂರು ಪ್ರಕಾರ. (i) ಉತ್ಪತ್ತಿ ಯಿದ್ದು ನಾಶವಿಲ್ಲದ್ದು ಒಂದು ಪ್ರಕಾರ. ಅದು ಪುರಾಣಾದಿಗಳು. (ii) ಒಂದು ಭಾಗಕ್ಕೆ ಉತ್ಪತ್ತಿ ಇದ್ದು ಒಂದು ಭಾಗದಲ್ಲಿ ಇಲ್ಲದ್ದು ಇನೊಂದು ನಿತ್ಯಾನಿತ್ಯವು, ಅದು ಕಾಲ. ಅದಕ್ಕೆ ಒಂದಂಶದಲ್ಲಿ ಕ್ಷಣ, ಲವ, ದಿನಾದಿಗಳಿಗೆ

ಉತ್ಪತ್ಯಾದಿಗಳಿವೆ. ಆದರೆ ಮಹಾಕಾಲಕ್ಕೆ ಇರುವುದಿಲ್ಲ. (iii) ಸ್ವರೂಪಕ್ಕೆ ಉತ್ಪತ್ಯಾದಿಗಳಿಲ್ಲದೆ ಅವಸ್ಥೆಯಲ್ಲಿ ಮಾತ್ರ ಪ್ರಾಪ್ತಿ ಮತ್ತು ನಿವೃತ್ತಿ ಉಳ್ಳದ್ದು. ಮತ್ತೊಂದು ನಿತ್ಯಾನಿತ್ಯವು ಅದು ಜಡಪ್ರಕೃತಿ; ಅದರ ಸ್ವರೂಪವು ನಿತ್ಯವಾಗಿದ್ದು, ಅದರ ಅವಸ್ಥೆಯು ಮಾತ್ರ ಉತ್ಪತ್ತಿ ನಾಶವನ್ನು ಹೊಂದುತ್ತದೆ. ಅಂದರೆ ಜಡಪ್ರಕೃತಿಯು ಮಹತ್ತತ್ವಾದಿರೂಪ ಅವಸ್ಥೆಯನ್ನು ಹೊಂದಿ, ಪ್ರಳಯಕಾಲದಲ್ಲಿ ಪ್ರಕೃತಿಯಾಗಿಯೇ ಇರುತ್ತದೆ. ಆಗ ಮಹದಾದಿ ಅವಸ್ಥೆಯು ಮಾತ್ರ ನಾಶಹೊಂದುತ್ತದೆ. ॥ ೮-೯ ॥

**ಮೂ ॥ ಸಂಸೃಷ್ಟಮಂಡಂ ತದ್ಗಂ ಚ ಸಮಸ್ತಂ ಸಂಪ್ರಕೀರ್ತಿತಮ್ ।**
**ಸೃಷ್ಟಿಃ ಸ್ಥಿತಿಃ ಸಂಹೃತಿಶ್ಚ ನಿಯಮೋಽಜ್ಞಾನಬೋಧನೇ ॥ ೧೦ ॥**
**ಬಂಧೋ ಮೋಕ್ಷಃ ಸುಖಂ ದುಃಖಮಾವೃತಿರ್ಜ್ಯೋತಿರೇವ ಚ ।**
**ವಿಷ್ಣುನಾಸ್ಯ ಸಮಸ್ತಸ್ಯ ಸಮಾಸವ್ಯಾಸಯೋಗತಃ ॥ ೧೧ ॥**

**ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತಂ**
**ತತ್ವಸಂಖ್ಯಾನಂ ಸಂಪೂರ್ಣಂ.**

ಅ ॥ ಅಂಡಂ=ಬ್ರಹ್ಮಾಂಡವು, ತದ್ಗಂ=ಅದರಲ್ಲಿ ಸೇರಿದ, ಸಮಸ್ತಂ ಚ=ಹಿಂದೆ ಹೇಳಿದವುಗಳಲ್ಲದ ಸರ್ವವಸ್ತುವೂ ಕೂಡ, ಸಂಸೃಷ್ಟಂ=ಸಂಸೃಷ್ಟವೆಂದು, ಸಂಪ್ರಕೀರ್ತಿತಂ=ಹೇಳಲ್ಪಟ್ಟಿದೆ, ಸಮಸ್ತಸ್ಯ=ನಿಖಿಲವಾದ, ಅಸ್ಯ=ಈ ಪ್ರಪಂಚದ, ಸೃಷ್ಟಿಃ=ಉತ್ಪತ್ತಿಯು, ಸ್ಥಿತಿಃ=ಪಾಲನವು, ಸಂಹೃತಿಃ=ನಾಶವು, ನಿಯಮಃ=(ವ್ಯಾಪಾರಗಳಲ್ಲಿ) ಪ್ರೇರಣೆಯು, ಅಜ್ಞಾನಂ=ಅಜ್ಞಾನವು, ಬೋಧನೇ=ಜ್ಞಾನವು, ಬಂಧಃ=ಸಂಸಾರ ಬಂಧವು, ಮೋಕ್ಷಃ=ದುಃಖನಿವೃತ್ತಿಪೂರ್ವಕ ಸ್ವರೂಪಾವಿರ್ಭಾವವು, ಆವೃತಿಃ=ಬಾಹ್ಯಾಜ್ಞಾನವು, ಜ್ಯೋತಿರೇವ ಚ=ಬಾಹ್ಯಜ್ಞಾನವು (ಅಂದರೆ ಚಕ್ಷುರಾದೀಂದ್ರಿಯಗಳಿಂದ ಬರತಕ್ಕ ಹೊರಗಿನ ವಸ್ತುಜ್ಞಾನ) ಕೂಡ, ವಿಷ್ಣುನಾ=ಪರಮಾತ್ಮನಿಂದ, ಸಮಾಸವ್ಯಾಸಯೋಗತಃ, ಸಮಾಸ=ಸಂಕ್ಷೇಪವು, ವ್ಯಾಸ=ವಿಸ್ತಾರವೂ ಇವುಗಳ, ಯೋಗತಃ=(ಉಕ್ತಾರ್ಥಘಟನೋಪಾಯದಿಂದ) ಸಂಬಂಧದಿಂದ, ಭವತಿ=ಆಗುತ್ತದೆ, ಅಂದರೆಮೇಲೆ ಹೇಳಿದ ಹನ್ನೆರಡರಲ್ಲಿ ಯಾವ ವಸ್ತುವಿಗೆ ಎಷ್ಟು ಯೋಗ್ಯವೋ ಅಷ್ಟು ಪರಮಾತ್ಮನಿಂದ ಉಂಟಾಗುತ್ತದೆ.

ತಾ ॥ (೧) ಇಪ್ಪತ್ತನಾಲ್ಕು ಮಹದಾದಿ ತತ್ವಗಳು, ಸೂಕ್ಷ್ಮರೂಪವಿಂದ (ಪ್ರಕೃತಿರೂಪದಿಂದ) ನಿತ್ಯವಾಗಿದ್ದು, ಪ್ರಕೃತ್ಯಾದಿಗಳ ಅಂಶದಿಂದ ಪುಷ್ಟಗಳಾಗಿ ಮಾತ್ರ ಮಾಡಲ್ಪಡುವವಾದಕಾರಣ ಅಸಂಸೃಷ್ಟಗಳೆಂದು ಕರೆಯಲ್ಪಡುವುವು. ಬ್ರಹ್ಮಾಂಡ ಮತ್ತು ತದ್ಗತವಸ್ತುಗಳಾದರೂ ಹೀಗಿರದೆ ವಿಕಾರವನ್ನು ಹೊಂದುವುದರಿಂದ ಸಂಸೃಷ್ಟಗಳೆನಿಸಿಕೊಳ್ಳುತ್ತವೆ. ॥ ೧೦ ॥ ೧೧ ॥

ಗ್ರಂಥಸಾರ:- ಸರ್ವೋತ್ತಮನಾದ ಶ್ರೀಮನ್ನಾರಾಯಣನು ಸ್ವತಂತ್ರನು. ಅಸ್ವತಂತ್ರರಲ್ಲಿ ಶ್ರೇಷ್ಠಳು ಶ್ರೀರಮಾ. ಇತರರೆಲ್ಲಾ ಪರಮಾತ್ಮನಿಂದ ನಿಯಮ್ಯರಾಗಿದ್ದು, ಯೋಗ್ಯತಾನುಸಾರವಾಗಿ ಮುಕ್ತಿಗೂ, ತಮಸ್ಸಿಗೂ, ನಿತ್ಯಸಂಸಾರಕ್ಕೂ ಅರ್ಹರಾಗಿದ್ದು, ಅನಾದ್ಯನಂತವಾದ ಭೇದದಿಂದಲೂ, ತಾರತಮ್ಯದಿಂದಲೂ ಕೂಡಿದವರು. ಭೇದ ಮತ್ತು ತಾರತಮ್ಯ ಇವುಗಳಿಂದ ಕೂಡಿದ ತತ್ವಜ್ಞಾನವು ಮೋಕ್ಷಸಾಧನವು. ಇತರ ಶಾಸ್ತ್ರಗಳಲ್ಲಿಯೂ ಅಲ್ಲಲ್ಲಿ ಈ ತತ್ವವಿಭಾಗವೂ, ತಾರತಮ್ಯವೂ ಹೇಳಲ್ಪಟ್ಟಿದೆ ಎಂತ ಪ್ರಥಮತಃ ಅವತಾರಿಕೆಯಲ್ಲಿ ಹೇಳಿದೆ. ಉದಾಹರಣೆಗಾಗಿ ಗೀತಾಶ್ಲೋಕಗಳು ಈ ಕೆಳಗೆ ಬರೆಯಲ್ಪಟ್ಟವೆ.

ದ್ವಾವಿಮೌ ಪುರುಷೌ ಲೋಕೇ ಕ್ಷರಶ್ಚಾಕ್ಷರ ಏವ ಚ ।
ಕ್ಷರಃ ಸರ್ವಾಣಿ ಭೂತಾನಿ ಕೂಟಸ್ಥೋಽಕ್ಷರ ಉಚ್ಯತೇ ॥
ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ ॥

ಗೀತಾ ಅಧ್ಯಾಯ ೧೫, ಶ್ಲೋಕ ೧೬-೧೭.

ಅ ॥ ಸಮಸ್ತ ಭೂತಗಳು ಕ್ಷರಗಳು, ಅಂದರೆ ನಾಶವುಳ್ಳವುಗಳು. ತತ್ಪ್ರಯುಕ್ತ ದುಃಖಸ್ಪೃಷ್ಟಗಳು; ದುಃಖರಹಿತಳಾದ್ದರಿಂದ ಲಕ್ಷ್ಮಿಯು ಅಕ್ಷರಳು, ನಾಶರಹಿತಳು. ಈ ಕ್ಷರಾಕ್ಷರಗಳಿಗೆ ಉತ್ತಮನಾದ ಪರಮಾತ್ಮನು ಸ್ವತಂತ್ರನು.

"ನಮಸ್ತೇ ವಾಸುದೇವಾಯ ಶಾಂತಾನಂದಚಿದಾತ್ಮನೇ ।
ಅಧ್ಯಕ್ಷಾಯ ಸ್ವತಂತ್ರಾಯ ನಿರಪೇಕ್ಷಾಯ ಶಾಶ್ವತೇ ॥"

# ತತ್ವದವೃಕ್ಷ.

ತತ್ವ

ಸ್ವತಂತ್ರ. = ಭಗವಾನ್ವಿಷ್ಣು.

ಅಸ್ವತಂತ್ರ.

ಭಾವ. ಅಭಾವ.

ಚೇತನ, ಅಚೇತನ.

ಪ್ರಾಗಭಾವ. ಪ್ರಧ್ವಂಸಾಭಾವ. ಸದಾಭಾವ.

ದುಃಖಸ್ಪೃಷ್ಟ. ತದಸ್ಪೃಷ್ಟ = ರಮಾ.

ನಿತ್ಯ ವೇದಗಳು. ಅನಿತ್ಯ ನಿತ್ಯಾನಿತ್ಯ = ಪುರಾಣ, ಕಾಲ, ಪ್ರಕೃತಿ.

ವಿಮುಕ್ತ ದುಃಖಸಂಸ್ಥ

ಅಸಂಸೃಷ್ಟ. ಮಹಾದಾದಿ ೨೪ ತತ್ವಗಳು. ಸಂಸೃಷ್ಟ. ಅಂಡ, ತದ್ಗತ ಸಮಸ್ತವು.

ಮುಕ್ತಿಯೋಗ್ಯರು ಅಯೋಗ್ಯರು

ದೇವ ಋಷಿ ಪಿತೃ ಪ. ನರ

ತಮೋಯೋಗ್ಯರು. ಸೃತಿಸಂಸ್ಥರು:(ನಿತ್ಯಸಂಸಾರಿಗಳು = ಮಧ್ಯಮಮನುಷ್ಯರು).

ಪ್ರಾಪ್ತಾಂಧತಮಸರು ಸೃತಿಸಂಸ್ಥರು

ದೈತ್ಯರು ರಕ್ಷರು ಪಿಶಾಚರು ಮರ್ತ್ಯಾಧಮರು

॥ ಶ್ರೀ ಕೃಷ್ಣಾರ್ಪಣಮಸ್ತು ॥



|| ಶ್ರೀಃ ||

# ತತ್ತ್ವವಿವೇಕವು.

ಆನಂದಾದಿಗುಣೋದ್ರಿಕ್ತಂ ಸ್ವಾಶ್ರಿತಾನಂದದಾಯಕಂ ।
ಆನಂದಾತ್ಮಕಸದ್ದೇಹಂ ಭಜೇಽಹಂ ಬಾದರಾಯಣಂ ॥

**ಶ್ರೀಮದ್ಧನುಮದ್ಭೀಮಮಧ್ವಾಂತರ್ಗತ ರಾಮಕೃಷ್ಣ ವೇದವ್ಯಾಸಾತ್ಮಕ ಲಕ್ಷ್ಮೀಹಯಗ್ರೀವಾಯ ನಮಃ ॥ ಹರಿಃ ಓಂ ॥**

**ಮೂ ॥ ಸ್ವತಂತ್ರಂ ಪರತಂತ್ರಂ ಚ ಪ್ರಮೇಯಂ ದ್ವಿವಿಧಂ ಮತಂ ।**
**ಸ್ವತಂತ್ರೋ ಭಗವಾನ್ವಿಷ್ಣುರ್ನಿರ್ದೋಷಾಖಿಲಸದ್ಗುಣಃ ॥ ೧ ॥**

ಅ ॥ ಪ್ರಮೇಯಂ=ಯಥಾರ್ಥಜ್ಞಾನಕ್ಕೆ ವಿಷಯವಾದದ್ದು, ಸ್ವತಂತ್ರಂ=ಸ್ವತಂತ್ರವೆಂತಲೂ, ಪರತಂತ್ರಂ=ಪರಾಧೀನವೆಂತಲೂ, ಚೇತಿ=ಹೀಗೆಂದು, ದ್ವಿವಿಧಂ=ಎರಡುಪ್ರಕಾರವಾಗಿ, ಮತಂ=ಪ್ರಮಾಣ ಪ್ರಸಿದ್ಧವಾದುದು, ಸ್ವತಂತ್ರಃ=ಸ್ವತಂತ್ರನೂ, ಭಗವಾನ್=ಷಡ್ಗುಣೈಶ್ವರ್ಯಸಂಪನ್ನನಾದ, ವಿಷ್ಣುಃ=ವಿಷ್ಣುವು, (ಆತನು) ನಿರ್ದೋಷಾಖಿಲಸದ್ಗುಣಃ=ದೋಷಲೇಶವೂ ಇಲ್ಲದವನು ಮತ್ತು ಸಮಸ್ತ ಸದ್ಗುಣಪೂರ್ಣನು.

ತಾ ॥ ಹಿಂದಿನ ಪ್ರಕರಣವಾದ ತತ್ತ್ವಸಂಖ್ಯಾನದಲ್ಲಿ, ಶ್ರೀಮದಾಚಾರ್ಯರು ತತ್ತ್ವಗಳ ಗಣನೆ ಕ್ರಮವನ್ನು ಬೋಧಿಸಿದರು. ಅಲ್ಲಿ ಹೇಳಿರುವ ವಿಷಯಗಳಿಗೆ ಪ್ರಮಾಣಗಳಾಗಿ ಶ್ರೀ ವೇದವ್ಯಾಸಪ್ರಣೀತ ತತ್ತ್ವವಿವೇಕದಲ್ಲಿರುವ ವಾಕ್ಯಗಳನ್ನೇ ಈ ಪ್ರಕರಣದಲ್ಲಿ ಉದಾಹರಿಸಿರುತ್ತಾರೆ. ಆದುದರಿಂದ ಈ ಗ್ರಂಥಕ್ಕೆ ತತ್ತ್ವವಿವೇಕವೆಂಬ ನಾಮವು ಬಂದಿರುವುದು. ಉದ್ದೇಶ (ಹೆಸರು), ಲಕ್ಷಣ (ಮುಖ್ಯಗುರುತು), ವಿಭಾಗವು, (ವಿಂಗಡಿಸುವಿಕೆ), ಪರೀಕ್ಷೆ, (ವಿಚಾರ) ಇವುಗಳಿಂದ ಕೂಡಿದ ವಸ್ತುಜ್ಞಾನಕ್ಕೆ ವಿವೇಕವೆಂದು ಹೆಸರು. ಈ ಗ್ರಂಥದಲ್ಲಿ ಹೇಳಿದ ವಿಭಾಗಕ್ಕೂ, ತತ್ತ್ವಸಂಖ್ಯಾನದಲ್ಲಿ ಹೇಳಿದ ವಿಭಾಗಕ್ಕೂ ಸ್ವಲ್ಪ ವ್ಯತ್ಯಾಸವಿರುವುದಾಗಿ ತೋರಿದರೂ ಪರಸ್ಪರ ವಿರೋಧವು ಎಷ್ಟುಮಾತ್ರವೂ ಇಲ್ಲ. ಆಯಾಯ ಶ್ಲೋಕಾರ್ಥ ವಿವರಿಸುವಾಗ ಇದು ವಿಶದಮಾಡಲ್ಪಡುವುದು. ತತ್ತ್ವಸಂಖ್ಯಾನದಲ್ಲಿ ಗಣನೆಯೇ ಮುಖ್ಯ ವುದ್ದೇಶವಾದ ಕಾರಣ ತತ್ತ್ವವಿವೇ ಕದಲ್ಲಿ ಹೇಳಿದ ವಿಷಯಗಳು ಕೆಲವು ಅಲ್ಲಿ ಹೇಳಲ್ಪಡಲಿಲ್ಲ. ಚೇತನದ ತಾರತಮ್ಯವು ಈ ಪ್ರಕರಣದಲ್ಲಿ ಕಂಠೋಕ್ತವಾಗಿದೆ, ತತ್ತ್ವಸಂಖ್ಯಾನದಲ್ಲಿ ಅಡಗಿದೆ. ಗುಣಕ್ರಿಯಾದಿಗಳ ನಿರೂಪಣವು ಈ ಗ್ರಂಥದಲ್ಲಿ ಮಾತ್ರ ಹೇಳಲ್ಪಟ್ಟಿದೆ, ಚೇತನಾಚೇತನಗಳ ವಿಭಾಗಗಳು ತತ್ತ್ವಸಂಖ್ಯಾನದಲ್ಲಿ ವಿಸ್ತಾರವಾಗಿ ಹೇಳಲ್ಪಟ್ಟಿದೆ. ಇಲ್ಲಿ ಸಂಕ್ಷೇಪವಾಗಿದೆ, ಆದುದರಿಂದ ತತ್ತ್ವಜ್ಞಾನ ಲಾಭಕ್ಕೆ ಈ ಎರಡು ಗ್ರಂಥಗಳು ಆವಶ್ಯಕವಾಗಿರುತ್ತವೆ.

(೧) ಪ್ರಮೇಯವೆಂದು ತತ್ತ್ವದ ಉದ್ದೇಶವು, ಅಥವಾ ಹೆಸರು. ಪ್ರಮೇಯತ್ವವೆಂದು ತತ್ತ್ವದ ಲಕ್ಷಣವು, ಸ್ವತಂತ್ರ ಪರತಂತ್ರವೆಂದು ತತ್ತ್ವದ ವಿಭಾಗವು. ಮತಂ ಎಂಬುವುದರಿಂದ ಪರೀಕ್ಷೆಯು. (೨) ಪ್ರಮೇಯ, ತತ್ತ್ವ, ವಸ್ತು, ಸತ್, ಅರ್ಥ ಎಂಬೀ ಪದಗಳು ಸಮಾನಾರ್ಥಕಗಳು. (೩) ಭಗವಾನ್ ಎಂಬ ಶಬ್ದವು ಪೂಜಾರ್ಥವು. ನಿರ್ದೋಷಾಖಿಲಸದ್ಗುಣನೆಂದು ಸ್ವಾತಂತ್ರ್ಯೋಪಪಾದನೆಮಾಡಲ್ಪಟ್ಟಿತು. ಅಂದರೆ ಸ್ವತಂತ್ರ ಲಕ್ಷಣವನ್ನು ವಿವರಿಸಿದಂತಾ

ಯಿತು. (೪) ಪಾರತಂತ್ರ್ಯವು ಅಂದರೆ ಪರಾಧೀನತೆಯು ದೋಷವೆನಿಸಿಕೊಳ್ಳುತ್ತದೆ. ಅಥವಾ ಗುಣಪೂರ್ಣತೆಗೆ ಲೋಪವನ್ನುಂಟುಮಾಡುತ್ತದೆ. ಆದುದರಿಂದ ಸ್ವರೂಪ, ಜ್ಞಾನ, ಚೇಷ್ಟೆ ಇವುಗಳಲ್ಲಿ ಪರಾಪೇಕ್ಷೆಯುಳ್ಳ ಪರತಂತ್ರಕ್ಕೆ ನಿರ್ದೋಷಾಖಿಲಸದ್ಗುಣತ್ವವು ಕೂಡುವುದಿಲ್ಲ. (5) ಇತರ ವಿಶೇಷಾಂಶಗಳಿಗೆ ತತ್ವಸಂಖ್ಯಾನದ ಒಂದನೇ ಶ್ಲೋಕದ ಕೆಳಗಿನ ವಿಚಾರವನ್ನು ನೋಡಬೇಕು. ॥ ೧ ॥

**ಮೂ ॥ ದ್ವಿವಿಧಂ ಪರತಂತ್ರಂ ಚ ಭಾವೋಽಭಾವ ಇತೀರಿತಃ ।**
**ಪೂರ್ವಾಪರಸದಾತ್ವೇನ ತ್ರಿವಿಧೋಽಭಾವ ಇಷ್ಯತೇ ॥ ೨ ॥**

ಅ ॥ ಪರತಂತ್ರಂಚ=ಪರತಂತ್ರವು, ಭಾವೋಽಭಾವ ಇತಿ=ಭಾವವೆಂತಲೂ, ಅಭಾವವೆಂತಲೂ, ದ್ವಿವಿಧಂ=ಎರಡುಪ್ರಕಾರವೆಂದು, ಈರಿತಃ=(ಆಗಮದಲ್ಲಿ) ಹೇಳಲ್ಪಟ್ಟದೆ, ಅಭಾವಃ=ಅಭಾವವೂ, ಪೂರ್ವಾಪರಸದಾತ್ವೇನ=ಪೂರ್ವತ್ವೇನ=ಮುಂಚೆ ಇರೋಣದರಿಂದ, ಅಪರತ್ವೇನ=ಅನಂತರ ಇರೋಣದರಿಂದ, ಸದಾತ್ವೇನ=ಯಾವಾಗಲೂ ಇರೋಣದರಿಂದ, ತ್ರಿವಿಧಃ=ಮೂರುಪ್ರಕಾರವಾಗಿ, ಇಷ್ಯತೇ=ಪ್ರಾಜ್ಞರಿಂದ ಅಂಗೀಕರಿಸಲ್ಪಡುತ್ತದೆ.

ತಾ ॥ (೧) ಮುಖ್ಯವಾಗಿ ಅಸ್ತಿ=ಇದೆ ಎಂದು ಭಾವವು ವಿದಿತವಾಗುವುದು. ನಾಸ್ತಿ=ಇಲ್ಲ ಎಂದು ಅಭಾವವು ವಿದಿತವಾಗುವುದು. 'ಅದು ಇಲ್ಲಿ ಇಲ್ಲ' ಎಂಬಲ್ಲಿ ಅದು ಎನ್ನುವದು 'ಪ್ರತಿಯೋಗಿ'ಯೆಂದೂ, ಇಲ್ಲಿ ಎನ್ನುವದು 'ಅನುಯೋಗಿ'ಯೆಂದೂ, ಇಲ್ಲ ಎನ್ನುವದು 'ಅಭಾವ'ವೆಂದೂ ಶಾಸ್ತ್ರವ್ಯವಹಾರವಿದೆ. ಅಭಾವಕ್ಕೆ ಪ್ರತಿಯೋಗಿಯುಪ್ರಾಯಃಭಾವವು, ಪ್ರತಿಯೋಗಿಜ್ಞಾನವೇ ಮೊದಲು ಬಂದು, ಅಭಾವಜ್ಞಾನವು ಅನಂತರ ಬರುವುದು. ಸದಾ ಭಾವಕ್ಕೆ ಅಪ್ರಾಮಾಣಿಕವಾದ ಅಸತ್ತು ಪ್ರತಿಯೋಗಿಯಾಗಿರುತ್ತದೆ. (೨) 'ಈರಿತಃ' ಎಂಬುವುದರಿಂದ ಭಾವಾಭಾವವಿಭಾಗವನ್ನು ಒಪ್ಪದವರಿಗೆ ಆಗಮವಿರೋಧ ಬರುವುದು. ಎಂದು ಸೂಚಿತವಾಗುತ್ತದೆ.

**ಮೂ ॥ ಭಾವಾಭಾವಸ್ವರೂಪತ್ವಾನ್ನಾನ್ಯೋನ್ಯಾಭಾವತಾ ಪೃಥಕ್ ।**
**ಚೇತನೋಽಚೇತನಶ್ಚೇತಿ ಭಾವಶ್ಚ ದ್ವಿವಿಧಃ ಸ್ಮೃತಃ ॥ ೩ ॥**

ಅ ॥ ಅನ್ಯೋನ್ಯಾಭಾವತಾ=ಅನ್ಯೋನ್ಯಾಭಾವವು, ಭೇದವು, ಭಾವಾಭಾವಸ್ವರೂಪತ್ವಾತ್=ಭಾವ ಮತ್ತು ಅಭಾವ ಇವುಗಳ ಸ್ವರೂಪವಾದುದರ ದೆಸೆಯಿಂದ, ಪೃಥಕ್ ನ=ಪ್ರತ್ಯೇಕವಲ್ಲ, ಭಾವಶ್ಚ=ಭಾವವೂ ಕೂಡಾ, ಚೇತನಃ=ಜ್ಞಾನವುಳ್ಳದ್ದು, ಅಚೇತನಃ=ಜ್ಞಾನವಿಲ್ಲದ್ದು, ಚೇತಿ=ಎಂದು, ದ್ವಿವಿಧಃ=ಎರಡು ಪ್ರಕಾರವಾಗಿ, ಸ್ಮೃತಃ=ಪ್ರಸಿದ್ಧವು.

ತಾ ॥ (೧)'ಘಟವು ಪಟವಲ್ಲ'ಇಲ್ಲಿ ಘಟವು ಅನುಯೋಗಿಯು, ಪಟವು ಪ್ರತಿಯೋಗಿಯು ಅಲ್ಲ ಎನ್ನುವುದು ಅನ್ಯೋನ್ಯಾಭಾವವು. ಇದಕ್ಕೆ ಭೇದವೆಂದೂ ಹೆಸರು. ಇದು ಅನುಯೋಗಿರೂಪವಾಗಿದೆ. (೨) ತತ್ವಸಂಖ್ಯಾನದಲ್ಲಿ ಪ್ರಾಕ್-ಪ್ರಧ್ವಂಸ-ಸದಾಭಾವಗಳೆಂದು ಅಭಾವವು ಮೂರು ವಿಧವೆಂತ ಹೇಳಲ್ಪಟ್ಟಿತು. ಅದೇ ವಿಭಾಗವು ಇಲ್ಲಿ 'ಪೂರ್ವಾಪರ ಸದಾತ್ವೇನ' ಎಂಬುದರಿಂದ ಹೇಳಲ್ಪಟ್ಟದೆ. ಅನ್ಯೋನ್ಯಾಭಾವವು ಇವುಗಳಂತೆ ಪ್ರತ್ಯೇಕ ಪ್ರಮೇಯವಲ್ಲ. ಆದಕಾರಣ ಅಭಾವವು ತಾರ್ಕಿಕರು ಹೇಳುವಂತೆ ನಾಲ್ಕುವಿಧವಲ್ಲ. ಭೇದವು ವಸ್ತುಸ್ವರೂಪವೆಂದು ತೈತ್ತಿರೀಯ ಭಾಷ್ಯಾದಿಗಳಲ್ಲಿ ಸಮರ್ಥಿಸಿರುವರು. (೩) 'ಸ್ಮೃತಃ' ಎಂದು ಚೈತನ್ಯಾತಿರಿಕ್ತ ವಸ್ತು ಇಲ್ಲವೆನ್ನುವ ಮತವನ್ನು ನಿರಾಕರಿಸುತ್ತಾರೆ. ॥ ೩ ॥

ಮೂ ॥ ನಿತ್ಯಮುಕ್ತಶ್ಚ ಸೃತಿಯುಕ್ಪರತಂತ್ರೋಽಪಿ ಚೇತನಃ ।
ದ್ವಿಧೈವ ಶ್ರೀರ್ನಿತ್ಯಮುಕ್ತಾ ಸೃತಿಯುಕ್ಚ ದ್ವಿಧಾ ಮತಃ ॥ ೪ ॥

ಅ ॥ ಪರತಂತ್ರೋಽಪಿ=ಪರಾಧೀನವಾದರೂ, ಚೇತನಃ=ಚೇತನವು, ನಿತ್ಯಮುಕ್ತಃ=ಸದಾ ಸಂಸಾರಸಂಬಂಧರಹಿತವಾದುದು, ಸೃತಿಯುಕ್=ಸಂಸಾರಸಂಬಂಧವುಳ್ಳದ್ದು, (ಅಂದರೆ ಜೀವ) ಚೇತಿ ಎಂದು, ದ್ವಿಧೈವ=ಎರಡು ಪ್ರಕಾರವೇ. ಶ್ರೀಃ=ಲಕ್ಷ್ಮೀದೇವಿಯು, ನಿತ್ಯಮುಕ್ತಾ=ನಿತ್ಯಮುಕ್ತಳು. ಸೃತಿಯುಕ್=ಸಂಸಾರಸಂಬಂಧವುಳ್ಳದ್ದು, ದ್ವಿಧಾ=(ಮುಂದೆ ಹೇಳುವಂತೆ) ಎರಡು ಪ್ರಕಾರ, ಮತಃ=ಸಮ್ಮತವು.

ತಾ ॥ (೧) ರಮಾ ನಿತ್ಯಮುಕ್ತಳಾಗಿದ್ದಾಗ್ಯೂ ಪರಮಾತ್ಮನಿಗೆ ಅಧೀನಳು; ಆದುದರಿಂದ ಪರತಂತ್ರಳು. ಲಕ್ಷ್ಮೀವ್ಯತಿರಿಕ್ತರಾದ ಬ್ರಹ್ಮಾದಿಸರ್ವಜೀವರು ಸಂಸಾರಸಂಬಂಧವುಳ್ಳವರು. ಇವರು ಸರ್ವರೂ ಪರಮಾತ್ಮಾಧೀನರು. (೨) ಏವಕಾರದಿಂದ ಚೇತನರು ಎರಡು ಪ್ರಕಾರವೇ ಎಂದು ನಿರ್ಧಾರಣಮಾಡುವುದರಿಂದ, ಸಂಸಾರವು ಮಿಥ್ಯಾಭೂತವಾದ್ದರಿಂದ ಸರ್ವರೂ ನಿತ್ಯಮುಕ್ತರೆಂಬುವ ಮತವು ನಿರಸ್ತವಾಯಿತು. ॥ ೪ ॥

ಸಂಸಾರಸಂಬಂಧವುಳ್ಳವರ (ಸೃತಿಯುಜರ) ವಿಭಾಗವನ್ನು ಹೇಳುತ್ತಾರೆ—

ಮೂ ॥ ಮುಕ್ತೋಽಮುಕ್ತ ಇತಿ ಹ್ಯತ್ರ ಬ್ರಹ್ಮಾಂತಾ ಉತ್ತರೋತ್ತರಮ್ ॥
ಮುಕ್ತಾಃ ಶತಗುಣಾಃ ಪ್ರೋಕ್ತಾ ರಮಾ ತೇಭ್ಯೋಽಖಿಲೈರ್ಗುಣೈಃ ॥೫॥
ನಿತ್ಯಂ ಬಹುಗುಣೋದ್ರಿಕ್ತಾ ತತೋಽನಂತಗುಣೋ ಹರಿಃ ॥

ಅ ॥ ಮುಕ್ತಃ=ಸಂಸಾರದಿಂದ ತೊಲಗಿದವನು, ಅಮುಕ್ತಃ=ಸಂಸಾರದಲ್ಲಿರತಕ್ಕವನು, ಇತಿ=ಹೀಗೆಂದು, (ದ್ವಿಧಾ=ಎರಡುಪ್ರಕಾರವು), ಅತ್ರ=ಮುಕ್ತರಲ್ಲಿ, ಬ್ರಹ್ಮಾಂತಾ=ಚತುರ್ಮುಖನೇ ಕೊನೆಯಾಗಿರುವ, ಮುಕ್ತಾಃ=ಮುಕ್ತಿಯನ್ನುಹೊಂದಿದ ಜೀವರು, ಉತ್ತರೋತ್ತರಮ್=ಮುಂದೆ ಮುಂದೆಯಾಗಿ, ಅಂದರೆ ಒಬ್ಬರಿಗಿಂತ ಇನ್ನೊಬ್ಬರು, ಶತಗುಣಾಃ=ನೂರು ಆನಂದಾದಿಗುಣಗಳಲ್ಲಿ ಹೆಚ್ಚಾದವರೆಂದು, ಪ್ರೋಕ್ತಾಃ=ಹೇಳಲ್ಪಡುತ್ತಾರೆ. ಹಿ=ಪ್ರಸಿದ್ಧವು, ರಮಾ=ಲಕ್ಷ್ಮೀದೇವಿಯು, ತೇಭ್ಯಃ=ಬ್ರಹ್ಮಾಂತಮುಕ್ತರಿಗಿಂತ, ಅಖಿಲೈರ್ಗುಣೈಃ=ಅನೇಕಜ್ಞಾನಾದಿಗುಣಗಳಿಂದ, ನಿತ್ಯಂ=ಯಾವಾಗಲೂ, ಬಹುಗುಣೋದ್ರಿಕ್ತಾ=ಹೆಚ್ಚಿನಸಂಖ್ಯೆಯಿಂದ ಅಧಿಕವಾಗಿರುತ್ತಾಳೆ. ಹರಿಃ=ನಾರಾಯಣನು, ತತಃ=ನಿತ್ಯಮುಕ್ತಳಾದ ಲಕ್ಷ್ಮಿಯ ದೆಸೆಯಿಂದ, ಅನಂತಗುಣಃ=ಅಪರಿಮಿತಗುಣಗಳುಳ್ಳವನು.

ತಾ ॥ (೧) ಗುಣಗಳ ಸಂಖ್ಯೆಗಳಲ್ಲಾಗಲೀ ಅಥವಾ ಒಂದೇಗುಣದ ಪ್ರಮಾಣದಲ್ಲಾಗಲೀ ಮಹಾಲಕ್ಷ್ಮಿಯು ಚತುರ್ಮುಖಾದಿಮುಕ್ತರಿಗಿಂತಲೂ ಬಹಳ ಶ್ರೇಷ್ಠಳು. ಅಮುಕ್ತರಿಗಿಂತ ಶ್ರೇಷ್ಠಳೆಂದು ಬೇರೆ ಹೇಳುವುದು ಆವಶ್ಯಕವಿರುವುದಿಲ್ಲ. ಆ ಶ್ರೀಹರಿಯು ರಮಾದೇವಿಗಿಂತ ಗುಣಸಂಖ್ಯೆಗಳಲ್ಲಿಯೂ ಗುಣಪ್ರಮಾಣಗಳಲ್ಲಿಯೂ ಅನಂತಾನಂತಪಾಲು ಶ್ರೇಷ್ಠನಾಗಿರುತ್ತಾನೆ. ಆದುದರಿಂದ ಶ್ರೀಹರಿಗೆ ಸಮರು, ಅಧಿಕರು ಯಾರೂ ಇರುವುದಿಲ್ಲ. (೨) 'ಹಿ' ಶಬ್ದದಿಂದ ಆನಂದತಾರತಮ್ಯದಲ್ಲಿ 'ಯುವಾ ಸ್ಯಾತ್' ಎನ್ನುವ ತೈತ್ತಿರೀಯ ಶ್ರುತಿಯನ್ನು ಸೂಚಿಸುವರು. (೩)'ಬಹುಗುಣಾ' ಎಂಬಲ್ಲಿ ಗುಣಶಬ್ದವು ಗಣನಾರ್ಥವು ಅಂದರೆ ಸಂಖ್ಯೆ ಎಂದು ಅರ್ಥವು. (೪) ಸ್ವಾತಂತ್ರ್ಯವೇ ಮುಕ್ತಿಯೆನ್ನುವುದು ಕೆಲವರ ಮತವು, ಅದು ಸರಿಯಲ್ಲ, ಸ್ವರೂಪಾವಿರ್ಭಾವವೇ ಮುಕ್ತಿಯು. ಆದುದರಿಂದ ಮುಕ್ತರಾದರೂ ಚೇತನರು ಹರಿಯ ಅಧೀನರು, ಪರತಂತ್ರರು. ॥ ೫ ॥

ಮೂ || ಅಮುಕ್ತಾಸ್ತ್ರಿವಿಧಾಸ್ತತ್ರ ನೀಚಮಧ್ಯೋಚ್ಚ ಭೇದತಃ || ೩ ||
ಮುಕ್ತಿಯೋಗ್ಯಾಸ್ತತ್ರ ಚೋಚ್ಚಾ ನಿತ್ಯಾವರ್ತಾಸ್ತು ಮಧ್ಯಮಾಃ |
ನೀಚಾ ನಿತ್ಯತಮೋಯೋಗ್ಯಾಃ || ೭ ||

ಅ || ತತ್ರ=ಅವರಲ್ಲಿ, ಅಮುಕ್ತಾಃ=ಸಂಸಾರದಲ್ಲಿರುವ ಚೇತನರು, ನೀಚಮಧ್ಯೋಚ್ಚಭೋಧತಃ, ನೀಚ=ಅಧಮರು, ಮಧ್ಯ=ಮಧ್ಯಮರು, ಉಚ್ಚ=ಉತ್ತಮರು ಎನ್ನುವ, ಭೇದತಃ=ಭೇದದಿಂದ, ತ್ರಿವಿಧಾಃ=ಮೂರು ಪ್ರಕಾರವುಳ್ಳವರು, ತತ್ರ=ಈ ಮೂರುವಿಧ ಜೀವರಲ್ಲಿ, ಉಚ್ಚಾಸ್ತು=ಉತ್ತಮರೇ, ಮುಕ್ತಿಯೋಗ್ಯಾಃ=ಮುಕ್ತಿಯನ್ನುಹೊಂದತಕ್ಕವರು, ಮಧ್ಯಮಾಃ=ಮಧ್ಯಮರು, ನಿತ್ಯಾವರ್ತಾಃ=ನಿತ್ಯಸಂಸಾರಿಗಳು, ನೀಚಾಃ=ಅಧಮರು, ನಿತ್ಯತಮೋಯೋಗ್ಯಾಃ=ಅಂಧತಮಸ್ಸನ್ನು ಹೊಂದತಕ್ಕವರು.

ತಾ || (೧) ಅಮುಕ್ತರನ್ನು ಉತ್ತಮ, ಮಧ್ಯಮ, ಅಧಮರೆಂತ ವಿಭಾಗಮಾಡಿರುತ್ತಾರೆ. ಉತ್ತಮ ಅಧಮರ ಅವಾಂತರ ವಿಭಾಗ ಮತ್ತು ಮುಕ್ತ ಜೀವರ ಪ್ರಭೇದವನ್ನು ತತ್ವಸಂಖ್ಯಾನದಲ್ಲಿ ಹೇಳಿರುವರು. (೨) ಸಾಧನ ಮಾಡುವ ಎಲ್ಲಾ ಜೀವರಿಗೂ ಮುಕ್ತಿದೊರೆಯುವುದು ಎನ್ನುವ ಮತವು ನಿರಸ್ತವಾಯಿತು. ಉತ್ತಮರಿಗೆ ಮಾತ್ರ ಮುಕ್ತಿ ದೊರೆಯುವುದು. || ೭ ||

ಮೂ || ದ್ವಿಧೈವಾ ಚೇತನಂ ಮತಂ || ೭ || ನಿತ್ಯಾ ನಿತ್ಯತ್ವಭೇದೇನ ದೇಶಃ ಕಾಲಃ ಶ್ರುತಿಸ್ತಥಾ|| ಭೂತೇಂದ್ರಿಯ ಪ್ರಾಣಗುಣಸೂಕ್ಷ್ಮರೂಪಂ ಚ ನಿತ್ಯಕಂ||
|| ೮ || ಏಷಾಂ ವಿಕಾರೋಽನಿತ್ಯಃ ಸ್ಯಾನ್ನಿತ್ಯಾ ಏವ ಹಿ ಚೇತನಾಃ ||

ಅ || (ಅಚೇತನದ ಎರಡು ವಿಭಾಗವನ್ನು ಹೇಳುತ್ತಾರೆ—) ಅಚೇತನಂ=ಅಚೇತನವು, ನಿತ್ಯಾನಿತ್ಯತ್ವಭೇದೇನ, ನಿತ್ಯತ್ವ=ನಿತ್ಯವಾಗಿ ಇರೋಣವು, ಅನಿತ್ಯತ್ವ=ಹುಟ್ಟುನಾಶ ವಿರೋಣವು, ಅಥವಾ ನಾಶಮಾತ್ರ ಇರೋಣವು ಇವುಗಳ, ಭೇದೇನ=ಈ ಭೇದದಿಂದ ದ್ವಿಧೈವ=ಎರಡೇ ಪ್ರಕಾರವು, ಮತಂ=ಸಮ್ಮತವು, ದೇಶಃ=ಅವ್ಯಾಕೃತಾಕಾಶವು, ಕಾಲಃ=ಕಾಲಪ್ರವಾಹವು, ಶ್ರುತಿಃ=ವೇದವು ಮತ್ತು ಐವತ್ತೊಂದು ಅಕಾರಾದಿ ವರ್ಣಗಳು, ಭೂತ=ಪಂಚಭೂತಗಳು, ಇಂದ್ರಿಯ=ಪಂಚಜ್ಞಾನೇಂದ್ರಿಯಗಳು, ಪಂಚಕರ್ಮೇಂದ್ರಿಯಗಳು, ಮನಸ್ಸು ಕೂಡಿ ಹನ್ನೊಂದು ಇಂದ್ರಿಯಗಳು, ಪ್ರಾಣಃ=ಅಹಂಕಾರಕಾರ್ಯವಾದ ಶ್ವಾಸವಾಯುವು, ಗುಣ=ಸತ್ವರಜಸ್ತಮೋ ಗುಣಗಳು ಮತ್ತು ಶಬ್ದಸ್ಪರ್ಶಾದಿ ಪಂಚತನ್ಮಾತ್ರಗಳು, ಮಹದ್ ಅಹಂಕಾರಾದಿಗಳು, ಸೂಕ್ಷ್ಮರೂಪಂ ಚ=ಸೂಕ್ಷ್ಮಭಾಗವು, ನಿತ್ಯಕಮ್=ನಿತ್ಯವಾದುದು, ಏಷಾಂ=ಇವುಗಳ, ವಿಕಾರಃ=ವೃದ್ಧಿಯಾದ ಭಾಗವು, ಅನಿತ್ಯಃ=ಅನಿತ್ಯವು, ಸ್ಯಾತ್=ಆಗುವುದು, ಚೇತನಾಃ=ಚೇತನರು, ನಿತ್ಯಾ ಏವ=ನಿತ್ಯರೇ ಆಗಿರುವರು.

ತಾ || (೧) ಅಚೇತನವು ನಿತ್ಯ ಅನಿತ್ಯವೆಂದು ಎರಡು ಪ್ರಕಾರವಾಗಿ ಈ ಪ್ರಕರಣದಲ್ಲಿ ವಿಭಾಗಮಾಡಲ್ಪಟ್ಟಿದೆ. ತತ್ವಸಂಖ್ಯಾನ ಏಳನೇ ಶ್ಲೋಕದಲ್ಲಿ 'ನಿತ್ಯಾನಿತ್ಯವಿಭಾಗೇನ ತ್ರಿಧೈವಾಚೇತನಂ ಮತಮ್' ಎಂದು ಹೇಳಲ್ಪಟ್ಟಿದೆ. ಅಂದರೆ ನಿತ್ಯ, ಅನಿತ್ಯ, ನಿತ್ಯಾನಿತ್ಯ ಎಂದು ಮೂರು ಪ್ರಕಾರವಾಗಿ ಅಚೇತನವು ಅಲ್ಲಿ ವಿಭಾಗಮಾಡಲ್ಪಟ್ಟಿದೆ. ನಿತ್ಯಾನಿತ್ಯಗಳಾದ ಪುರಾಣಾದಿಗಳು ನಿತ್ಯಾಂಶವೂ, ಅನಿತ್ಯಾಂಶವೂ ಉಳ್ಳವುಗಳಾದಕಾರಣ, ಅವುಗಳ ನಿತ್ಯಾಂಶವನ್ನು ನಿತ್ಯದಲ್ಲಿಯೂ, ಅನಿತ್ಯಾಂಶವನ್ನು ಅನಿತ್ಯದಲ್ಲಿಯೂ ಸೇರಿಸಿದರೆ, ಅಚೇನವು ಎರಡು ಪ್ರಕಾರವೇ

ಆಗುವುದು. ಆದುದರಿಂದ ಈ ವಿಭಾಗದಲ್ಲಿ ಎರಡು ಪ್ರಕರಣಗಳಿಗೆ ಪರಸ್ಪರ ವಿರೋಧಬರುವುದಿಲ್ಲ. (ಉದಾ:-) ಕಾಲಪ್ರವಾಹವು ನಿತ್ಯ, ಮಾಸ, ಪಕ್ಷ, ದಿನ ಇವುಗಳು ಅನಿತ್ಯಗಳು, ಈ ಎರಡು ಅಂಶಗಳನ್ನು ಒಟ್ಟಿಗೆ ತೆಗೆದುಕೊಂಡರೆ ಕಾಲವು ನಿತ್ಯಾನಿತ್ಯವೆನ್ನಿಸಿಕೊಳ್ಳುವುದು. (೨) ಅಚೇತನವೆಲ್ಲವೂ ನಿತ್ಯವಲ್ಲ. ಎಲ್ಲವೂ ಅನಿತ್ಯವಲ್ಲ; ಕೆಲವು ನಿತ್ಯವೂ ಕೆಲವು ಅನಿತ್ಯವೂ ಆಗಿರುವುದರಿಂದ ಎರಡೇ ಪ್ರಕಾರವೆಂದು ತಿಳಿಸಿದ್ದಾರೆ. (೩) ಚೇತನರೆಲ್ಲಾ ನಿತ್ಯರು. ಸ್ವತಂತ್ರನಾದ ಪರಮಾತ್ಮನು ನಿತ್ಯನೆಂದು ಸಿದ್ಧವಾಗುತ್ತದೆ; ಅಭಾವವು ಅಚೇತನವು. ಪ್ರಾಗಭಾವಕ್ಕೆ ಅನಾದ್ಯನಿತ್ಯತ್ವವು ಪ್ರಧ್ವಂಸಾಭಾವಕ್ಕೆ ಸಾದಿನಿತ್ಯತ್ವವು, ಅತ್ಯಂತಾಭಾವಕ್ಕೆ ಅನಾದಿನಿತ್ಯತ್ವವು ಇರುವುವು. ॥ ೮ ॥

**ಮೂ ॥ ಗುಣಕ್ರಿಯಾಜಾತಿಪೂರ್ವಾ ಧರ್ಮಾಃಸರ್ವೇಽಪಿ ವಸ್ತುನಃ ॥ ೯ ॥**
**ರೂಪಮೇವ ದ್ವಿಧಂ ತಚ್ಚ ಯಾವದ್ವಸ್ತು ಚ ಖಂಡಿತಮ್ ॥**

ಅ ॥ ಗುಣಕ್ರಿಯಾಜಾತಿಪೂರ್ವಾಃ, ಗುಣ=ಗುಣವು, ಕ್ರಿಯಾ=ಕರ್ಮಗಳು, ಜಾತಿ=ಜಾತಿಯು, ಪೂರ್ವಾಃ=ಮೊದಲಾಗಿರುವ ಶಕ್ತಿ ಸಾದೃಶ್ಯ, ವಿಶಿಷ್ಟ ಇವುಗಳು, ಸರ್ವೇಽಪಿ=ಸಮಸ್ತಗಳಾದ, ಧರ್ಮಾಃ=ಧರ್ಮಗಳು, ವಸ್ತುನಃ=ಆಯಾಯ ವಸ್ತುವಿನ, ರೂಪಮೇವ=ಸ್ವರೂಪವೇ ಆಗಿರುತ್ತವೆ. ತಚ್ಚ=ಆ ಗುಣಕ್ರಿಯಾದಿಗಳು, ಯಾವದ್ವಸ್ತು=ವಸ್ತುವಿರುವತನಕ ಇರುವುವು, ಖಂಡಿತಂ=ವಸ್ತುವಿರುವಾಗಲೇ ನಷ್ಟವಾಗುವುವು. ಚೇತಿ=ಹೀಗೆಂದು, ದ್ವಿಧಂ=ಎರಡುಪ್ರಕಾರವಾದವುಗಳು.

ತಾ ॥ (೧) 'ಗುಣಕ್ರಿಯಾ' ಈ ಶ್ಲೋಕದ ಮೊದಲು ಹನ್ನೆರಡನೇ ಶ್ಲೋಕದವರೆಗೆ ಹೇಳುವ ವಿಷಯಗಳು ತತ್ವಸಂಖ್ಯಾನದಲ್ಲಿ ಹೇಳಲ್ಪಡಲಿಲ್ಲ. (೨) ಗುಣವೆಂದರೆ- ರೂಪ, ರಸ, ಗಂಧ ಇತ್ಯಾದಿ ಗುಣಗಳು. ಸತ್ವಾದಿ ತ್ರಿಗುಣಗಳನ್ನು ಎಂಟನೇ ಶ್ಲೋಕದಲ್ಲಿ ಹೇಳಿರುವೆವು. ಇಲ್ಲಿ ಗುಣ ಶಬ್ದಕ್ಕೆ ವಸ್ತುವಿನಲ್ಲಿರುವ ವಿಶೇಷ ವೆಂದು ಅರ್ಥವು. ಗುಣವುಳ್ಳ ವಸ್ತುವಿಗೆ ಗುಣಿಯೆನ್ನುವರು. (೩) ಕ್ರಿಯಾ, ಚೇತನಾಚೇತನಗಳಿಗೆ ಉಂಟಾಗುವ ಕದಲುವಿಕೆ, ಹೋಗುವಿಕೆ ಮುಂತಾದ ಯಾವತ್ತು ಕ್ರಿಯೆಗಳು. (೪) ಜಾತಿ-'ಬ್ರಾಹ್ಮಣತ್ವ ಕ್ಷತ್ರಿಯತ್ವ' ಇತ್ಯಾದಿ ಜಾತಿಗಳು, ಮನುಷ್ಯ, ಪಕ್ಷಿ, ಪಶು, ಕೀಟಾದಿ ಜಾತಿಗಳು, ಇನ್ನೂ ಎಲ್ಲಾ ತರದ ಜಾತಿವಿಶೇಷಗಳು. (೫) ಗುಣವಾಗಲೀ, ಕ್ರಿಯೆಯಾಗಲೀ, ಜಾತಿಯಾಗಲೀ, ಶಕ್ತಿ ಸಾದೃಶ್ಯ ಮೊದಲಾದ ಧರ್ಮಗಳಾಗಲೀ, ಒಂದು ವಸ್ತುವನ್ನು ಅನುಸರಿಸಿಕೊಂಡಿರುವವು. ಆ ವಸ್ತುವನ್ನು ಧರ್ಮಿ ಅಂದರೆ ಧರ್ಮವುಳ್ಳದ್ದು ಎಂದಾಗಲೀ, ದ್ರವ್ಯವೆಂದಾಗಲೀ ವ್ಯವಹರಿಸುವರು. (೬) ಈ ಗುಣಕ್ರಿಯಾದಿಗಳು ವಸ್ತುವಿರುವ ಎಲ್ಲಾ ಕಾಲವೂ ಇದ್ದು ವಸ್ತುನಾಶವಾದರೆ, ನಾಶವಾಗುವುವು ಕೆಲವು; ಇನ್ನು ಕೆಲವು ವಸ್ತುವಿರುವಾಗಲೇ ನಾಶವಾಗುವುವು. ಮೊದಲು ಹೇಳಿದ ಗುಣಕ್ರಿಯಾದಿಗಳು ಯಾವದ್ವಸ್ತುಗಳೆಂತಲೂ, ಎರಡನೇ ಹೇಳಿದ ಗುಣಕ್ರಿಯಾದಿಗಳು ಖಂಡಿತಗಳೆಂತಲೂ ವಿಭಾಗಿಸಲ್ಪಟ್ಟಿವೆ. ಉದಾ:- ದೇವದತ್ತನು ಮನುಷ್ಯಜಾತಿಗೆ ಸೇರಿರುವುದರಿಂದ ಅವನು ಇರುವವರೆಗೂ ಮನುಷ್ಯತ್ವವು ಯಾವದ್ವಸ್ತುವಾಗಿರುತ್ತದೆ. ಅವನು ಬ್ರಾಹ್ಮಣಜಾತಿಗೆ ಸೇರಿದ್ದರೂ ಬ್ರಾಹ್ಮಣ್ಯವು ಮಹಾಪಾತಕಗಳಿಂದ ನಷ್ಟವಾಗಬಹುದಾದಕಾರಣ ಅದು ಖಂಡಿತವು. (೭) ಖಂಡಿತಗಳು ಅಥವಾ ಯಾವದ್ವಸ್ತುಗಳು ಆದ ಎಲ್ಲಾ ಗುಣಕ್ರಿಯಾದಿಗಳು, ಅವುಗಳು ಅನುಸರಿಸಿಕೊಂಡಿರುವ ವಸ್ತುಗಳ ಸ್ವರೂಪಗಳೇ ಆಗಿರುತ್ತವೆ; ಅಂದರೆ ಆ ವಸ್ತುಗಳನ್ನು ಬಿಟ್ಟು ಪ್ರತ್ಯೇಕವಾಗಿರುವುದಿಲ್ಲ. ॥ ೯ ॥

**ಮೂ ॥ ಖಂಡಿತೇ ಭೇದ ಐಕ್ಯಂ ಚ ಯಾವದ್ವಸ್ತು ನ ಭೇದವತ್ ॥ ೧೦ ॥**
**ಖಂಡಿತಂ ರೂಪಮೇವಾತ್ರ ವಿಕಾರೋಽಪಿ ವಿಕಾರಿಣಃ ।**
**ಕಾರ್ಯಕಾರಣಯೋಶ್ಚೈವ ತಥೈವ ಗುಣತದ್ವತೋಃ ॥ ೧೧ ॥**
**ಕ್ರಿಯಾಕ್ರಿಯಾವತೋಸ್ತದ್ವತ್ತಥಾ ಜಾತಿವಿಶೇಷಯೋಃ ।**
**ವಿಶಿಷ್ಟಶುದ್ಧಯೋಶ್ಚೈವ ತಥೈವಾಂಶಾಂಶಿನೋರಪಿ ॥ ೧೨ ॥**

ಅ ॥ ಖಂಡಿತೇ=ಖಂಡಿತಸ್ಥಳದಲ್ಲಿ, ಭೇದಃ=ಭೇದವು, ಐಕ್ಯಂಚ=ಅಭೇದವೂಕೂಡಾ, (ಇರುವುದು) ಯಾವದ್ವಸ್ತು=ಹಿಂದೆಹೇಳಿದ ಯಾವದ್ವಸ್ತುವಾದಪದಾರ್ಥವು, ಭೇದವತ್=ಭೇದ ಉಳ್ಳದ್ದು, ನ ಅಲ್ಲವು, ॥ ೧೦ ॥ ಅತ್ರ=ಈ ತತ್ವದಲ್ಲಿ, ವಿಕಾರಃ=ಕಾರ್ಯದ್ರವ್ಯವು, ವಿಕಾರಿಣಃ= ಉಪಾದಾನಕಾರಣದ್ರವ್ಯದ, ಖಂಡಿತಮೇವ=ಖಂಡಿತವೇ ಆದ, ರೂಪಂ=ಸ್ವರೂಪವು, ಬಟ್ಟೆ ಖಂಡಿತಸ್ಥಳಗನ್ನು ತೋರಿಸುವರು, ಕಾರ್ಯಕಾರಣಯೋಶ್ಚೈವ=ಹಿಂದೆ ಹೇಳಿದ ಉಪಾದೇಯ ಉಪಾದಾನಕಾರಣಗಳಿಗೂ, ತಥೈವ=ಹಾಗೆ, ಗುಣತದ್ವತೋಃ=ಗುಣಗುಣಿಗಳಿಗೂ, ॥ ೧೧ ॥ ತದ್ವತ್=ಹಾಗೂ, ಕ್ರಿಯಾಕ್ರಿಯಾವತೋಃ, ಕ್ರಿಯಾ=ಚಲನೆ=(ಹಂದಾಡುವಿಕೆ) ಕ್ರಿಯಾ ವತೋಃ=ಚಲನೆಯುಳ್ಳವುಗಳಿಗೆ, ಜಾತಿವಿಶೇಷಯೋಃ ಜಾತಿ=(ಅನೇಕಗಳಲ್ಲಿ ಏಕರೀತಿಯಾದ ಧರ್ಮ) ಜಾತಿಯುಳ್ಳವುಗಳಿಗೂ. ವಿಶಿಷ್ಟಶುದ್ಧಯೋಶ್ಚೈವ, ವಿಶಿಷ್ಟ=ಯಾವದಾದರೊಂದರಿಂದ ಕೂಡಿರುವುದು, ಶುದ್ಧಯೋಶ್ಚೈವ=ವಿಶಿಷ್ಟಗಳಿಗೂ, ತಥೈವ=ಹಾಗೆಯೇ, ಅಂಶಾಂಶಿನೋರಪಿ= ಭಾಗಭಾಗವುಳ್ಳವುಗಳಿಗೂ, (ಹಿಂದೆ ಹೇಳಿದ ಭೇದವು, ಅಭೇದವು ಸಹ ಇರುವುದು.) ॥ ೧೨ ॥

ತಾ ॥ (೧) ಖಂಡಿತಸ್ಥಳಗಳಲ್ಲಿ ಭೇದಾಭೇದವು, ಯಾವದ್ವಸ್ತು ಭಾವಿಸ್ಥಳಗಳಲ್ಲಿ ಅತ್ಯಂತಭೇದವೆಂದು ಸಿದ್ಧಾಂತವು. ಬಟ್ಟೆಯನ್ನುವ ಕಾರ್ಯಕ್ಕೂ ಅದರ ಉಪಾದಾನ ಕಾರಣ ವಾದ ನೂಲುಗಳಿಗೂ ಭೇದಾಭೇದವು, ಏಕೆಂದರೆ- ಒಂದು ನೂಲಿನಿಂದ ಬಟ್ಟೆಗೆ ಭೇದವು, ಎಲ್ಲಾ ನೈದ ನೂಲುಗಳಿಂದ ಬಟ್ಟೆಗೆ ಅಭೇದವು, ಕಾರ್ಯಕಾರಣಗಳ ಸಂಬಂಧವು ಖಂಡಿತವಾ ದದ್ದು; ಯಾವದ್ವಸ್ತುವಲ್ಲ. ಏಕೆಂದರೆ- ಕೆಲವು ನೂಲುಗಳು ನಷ್ಟವಾದರೂ ವಸ್ತ್ರವಿರುವುದ ರಿಂದ ಖಂಡಿತ ಸಂಬಂಧವಾಗುತ್ತದೆ. (೨) ಪರಮಾಣುಗಳ ಸಮೂಹವೇ ಕೂಡಿ ಬಟ್ಟೆಯನ್ನಿಸಿ ಕೊಳ್ಳುತ್ತದೆ, ಅವಯವಗಳಿಂದ ಅತಿರಿಕ್ತವಾದ ಬಟ್ಟೆಯು ಇರುವುದಿಲ್ಲ, ಎನ್ನುವ ಬೌದ್ಧಮತವು ಸರಿಯಲ್ಲ. ಕಾರ್ಯಕ್ಕೂ ಕಾರಣಕ್ಕೂ ಅತ್ಯಂತ ಭೇದವನ್ನು ಹೇಳುವ ನೈಯ್ಯಾಯಿಕರ ಮತವು ಸರಿಯಲ್ಲ. (೩) ಅಯಾವದ್ದ್ರವ್ಯವೆಂದರೆ- ದ್ರವ್ಯವಿರುವಾಗಲೇ ನಷ್ಟವಾಗುವ ಅಥವಾ ಹೆಚ್ಚಾಗುವ ರೂಪಾದಿಗುಣಗಳಿಗೂ, ಆ ಗುಣಗಳುಳ್ಳ ಗುಣಿಗಳಿಗೂ ಭೇದಾಭೇದವು. ಉದಾ:- ಮಾವು ಕಾಯಿಯಾಗಿದ್ದಾಗ ಹಸುರಾಗಿರುವುದು. ಹಣ್ಣಾಗುವಾಗ ಹಳದಿ ಮತ್ತು ಕೆಂಪು ಬಣ್ಣ ಬರುವುದು. ಇಲ್ಲಿ ಗುಣಿಯಾದ ಮಾವು ನಷ್ಟವಾಗದಿದ್ದರೂ ಗುಣವು ನಷ್ಟವಾಗುವುದು. ಆದುದರಿಂದ ಆ ಗುಣವು ಖಂಡಿತವು, ಮತ್ತು ಆಗುಣಕ್ಕೂ, ಗುಣಿಗೂ ಭೇದಾಭೇದವು. (೪) ದ್ರವ್ಯವಿರುವ ಯಾವತ್ಕಾಲವು ಕೂಡಿದ್ದು ದ್ರವ್ಯದ ಸಂಗಡವೇ ನಷ್ಟವಾಗುವ ಗುಣಗಳು ಕೆಲವು. ಅವುಗಳಿಗೂ ಗುಣಿಗಳಿಗೂ ಅತ್ಯಂತಾ ಭೇದವು, ಹೇಗೆಂದರೆ- ಸುಣ್ಣಕ್ಕೂ ಅದಕ್ಕಿರುವ ಬಿಳಿಪಿಗೂ ಅತ್ಯಂತಾಭೇದವು, ಯಾವ ದ್ರವ್ಯಭಾವಿಯಾದುದು? (೫) ಕ್ರಿಯೆಗಳಿಗೂ ಕ್ರಿಯವುಳ್ಳವುಗಳಿಗೂ ಭೇದಾಭೇದವೋ ಅಥವಾ ಅತ್ಯಂತಾಭೇದವೋ ಸಂದರ್ಭಾನುಸಾರ ಹೇಳಬೇಕಾಗುತ್ತದೆ, ಖಂಡಿತವಾದ ಕಡೆ ಭೇದಾಭೇದವು. ಉದಾ:- ಅಚೇತನಗಳ ಚಲನೆ, ಮೊದಲಾದವುಗಳು, ಚೇತನರ ಬಾಹ್ಯಶರೀರದ ಕ್ರಿಯೆಗಳಿಗೂ ಚೇತನರಿಗೂ ಭೇದಾಭೇದ. ಸ್ವರೂಪದೇಹದ ಕ್ರಿಯೆ ಗಳಿಗೂ ಚೇತನರಿಗೂ, ಅತ್ಯಂತಾ ಭೇದವು (೬) ಬ್ರಾಹ್ಮಣತ್ವ ಮೊದಲಾದ ಜಾತಿಗಳಿಗೂ,